ಜ್ಯೋತಿಶ್ಶಾಸ್ತ್ರಾಬ್ಧಿಮಥನ | ಜಾತಶ್ರೀಪಂಡಿತಾಸಭಾಚಾರ್ಯ್ಯಾ || ಖ್ಯಾ
ತಶ್ರೀರೇಣುಕಗೋ | ತ್ರಾತುಲಜಲನಿಧಿಸುಧಾಂಶುವೆನೆಗರಪುರದೊಳ್ ||

ರಂಜಿಸಿದಂಸುಮನೋಜ್ಞಂ | ಮಂಜುಳತರರುದ್ರಶಾಸ್ತ್ರಿಯೆಂಬಗುಣಾಢ್ಯಂ ||
ಸಂಜನಿಸಿದನಾತನಸತಿ | ಕಂಜಮುಖಿಯಗರ್ಭದೊಳ್ಸಜಂಗಮಭೃತ್ಯಂ ||

ಕರಿಬಸವನೆಂಬನಾಮಂ | ಮೆರೆಯಲ್ತನಗೆಶಿವವಿಶ್ವಾರಾಧ್ಯನಧುರ್ಯಂ || ಗು
ರುಚರಣಸ್ಮರಣಾಂತಃ | ಕರಣಂಶಿವಶರಣಚರಣಸರಸಿಜಭೃಂಗಂ ||

ಸುಗುಣನಿಧಿವೀರಶೈವಾ | ಧ್ವಗಸಾಪರವೀರಸಂಗಪ್ರೋತ್ಸಾಹಿತನೊ || ಲ್ದಗ
ತಶಿವಗಣಕೃಪೆಯಿಂ | ಮಿಗೆಸದ್ವೃಷಭೇಂದ್ರವಿಜಯಸತ್ಕೃತಿಗೊಳ್ವಂ ||

ಸುಜನಾನಂದಿನಿಯೆಂಬಾ | ನಿಜನಾಮಮುರೆವಟೀಕೆಯಂ ರಚಿಯಿಸಿ ಸಾ || ಮ
ನ್ಯೈರಿಪಾದಯುಗ್ಮಾಂ | ಬುಜಕಂತದ್ಗ್ರಂಥರತ್ನವಳಿಗರ್ಪಿಸಿದಂ ||



ಶ್ರೀಮನ್ನಿಖಿಲಸತ್ಕವಿಕುಲತಿಲಕರಾಗಿಯೂ ವಿದ್ವಜ್ಜನಸಂಸ್ತೂಯಮಾನಾನ
ವದ್ಯವಾಗ್ವೈಖರೀವಿಭ್ರಾಜಮಾನರಾಗಿಯೂ ಶ್ರೀಮಚ್ಛಕ್ತಿವಿಶಿಷ್ಟಾದ್ವೈತಸಿದ್ಧಾಂತ
ಪಾರಾವಾರರಾಕಾನಿಶಾಕರರಾಗಿಯೂ ಉಭಯಕವಿತಾವಿಶಾರದೇತ್ಯಾದಿ ಬಿರುದಾಂಕಿತ
ರಾಗಿಯೂ ಇದ್ದ ಶ್ರೀಷಡಕ್ಷರಿ ಗುರುವರ್ಯರು ಶ್ರೀಮದ್ವೀರಶೈವಮತಸ್ಥಾಪನಾಚಾ
ರ್ಯರಾದ ರೇಣುಕಾರ್ಯರ ತನೂಭವರಾದ ರುದ್ರಮುನಿಸ್ವಾಮಿಗಳವರ ಮಠದಲ್ಲಿ
ದ್ದ ಉದ್ದಾನಸ್ವಾಮಿಗಳವರ ಕರಕಂಜಾತಸಂಜಾತರಾದ ಅನ್ನದಾನೀಶಸ್ವಾಮಿ
ಗಳ ಶಿಷ್ಯರಾಗಿ ದನುಗೂರಿನಲ್ಲಿದ್ದ ರೇವಣಸಿದ್ಧಸ್ವಾಮಿಗಳವರ ಕರಸಂಜಾ
ತರಾದ ಶ್ರೀ ಚಿಕವೀರಸ್ವಾಮಿಗಳವರ ಶಿಷ್ಯರಾಗಿ ಮೈಸೂರು
ಕೆಳಗೆ ಎಳಂದೂರೆಂಬ ಗ್ರಾಮದಲ್ಲಿದ್ದು ಬಾಲ್ಯವಯಸ್ಸಿನಲ್ಲಿಯೇ

* ಉತ್ಪಲಮಾಲಾವೃತ್ತಂ *

ಶ್ರೀಗಿರಿಜೇಶನಿಂದಧಿಕರೆಂಬ ಮಹಾಶರಣರ್ಕಳಂ
ಭೃಗಿಂ ! ಬಾಗಿರೆಪೀಠವಂನೆಗಳುತೆನ್ನಮನೋಂಬುಜ
ಮುಂಕೃಪಾಸುಧಾ ‖ ಸಾಗರನಪ್ಪಶಂಕರನಚಾ[illegible]
ಬುರುಹಂಗಳಂಶಿರೋ | ಭಾಗಕೆಶೇಖರಂಗೊಳಿಸುತಾಂ
ಪಡೆವೆಂಸಕಲಾರ್ಥಸಿದ್ಧಿಯಂ ‖ ... ‖೧‖

* ಶಾರ್ದೂಲವಿಕ್ರೀಡಿತವೃತ್ತಂ *

ಶ್ರೀಗೌರೀಶಪರಾವತಾರನಖಿಲಾಮ್ನಾಯಾವಳೀ
ಸಂಸ್ತುತಂ | ಯೋಗೀಶಾಮಲಮಾನಸಾಂಬುಜಮರಾ
ಳಂತತ್ತ್ವವಿದ್ಯಾರ್ಣವಂ ‖ ರಾಗಾರಣ್ಯದವಾನಲಂಶಿವ
ಮತಬೃಂದಾರಕೋರ್ವೀರುಹಂ | ರಾಗಂಬೆತ್ತುಮಗೀಗೆ
ಭಕ್ತಿಮತಿಯಂಸಾರಂವೃಷಾಧೀಶ್ವರಂ ‖ ... ‖೨‖

* ಕಂದಪದ್ಯಾ *

ಭಕ್ತೇಷ್ಟವರಪ್ರದನೆಂ | ಮುಕ್ತಿಯುದನ್ವರ್ಥ
ಮಪ್ಪತೆರದಿಂದಾವಂ ‖ ಭಕ್ತೋತ್ತಮಮಾದರಸನ |
ರಕ್ತಿಯಸುತನೆನಿಸಿಬುವಿಯಜನಮಂಪೊರೆದಂ ‖. ‖೩‖

ಆದೇವನಪದಕಮಲ | ಕ್ಕಾದರದಿಂಮಣಿದುಧನ್ಯ
ನಾದಂಗೆನಗಾ ‖ ಮೋದಂಬಡೆದಿಹಪರಸುಖ | ಸಾಧು
ಫಲಪ್ರಚಯವೀಗೆಕರಿವೃಷಭೇಂದ್ರಂ ‖ ... ‖೪‖

ಗಿರಿಸುತೆಯಿಂಸನ್ಮತಿಯಂ | ಕರಿಮುಖನಿಂವಿ
ಘ್ನಭಾವಮಂಧೀರತೆಯಂ | ವರವೀರಭದ್ರನಿಂ ಭಾ |
ಸುರಗುಹನಿಂ ಪಡೆವೆನೆರಗುತಧಿಕೋತ್ಸವಮಂ‖ ‖೫‖

ಇಕೊಂದು ಮನಸ್ಸಿದ



ವಕ್ತ್ರಾನುಗುಣವಾದ

ಪರಿಗ್ರಹಣಾತ... ಬ್ರಹ್ಮಶ್ರೀ. ಹೊ ॥ ವೆಂಕಟರಾಮಶಾಸ್ತ್ರಿಯೆಂಬುವರ ಸಹಾಯ ...ವಚ ಪರಿಶೋಧಿಸಿದೆವೆಂದು ೧೮೭೫ನೇ ಇಸವಿಯಲ್ಲಿ ಬೆಂಗಳೂರಿನ ಕರ್ಣಾಟಕಾಕ್ಷ ...ಶಾಲೆಯಲ್ಲಿ ಪ್ರಿಂಟುಮಾಡಿಸಿ, ತಾವು ಆ ಗ್ರಂಥಮುದ್ರಣಕ್ಕಾಗಿ ಬಹುಶ್ರಮವಂವಹಿಸಿದೆವೆಂಬ ಆತ್ಮಸ್ತುತಿಯಿಂದ ಭರಿತವಾದ ಪೀಠಿಕೆಯಂ ಬರೆದುಕೊಂಡಿಧಾರೆ. ಅವರಿಗಾಗ್ರಂಥಪರಿಷ್ಕರಣಶ್ರಮವು ನೂತನಗ್ರಂಥರಚನೆಗಿಂತಲೂ ಅಧಿಕವಾಗಿತ್ತಂತೆ. ಈ ಮಾತು ಇವರು ಮುದ್ರಣಮಾಡಿಸಿರುವ ಗ್ರಂಥವಂ ಆಮೂಲಾ...ಗಿ ಪರಿಶೋಧಿಸಿದ ವಿದ್ವಾಂಸರ ಬಳಿಯಲ್ಲಿ ಹಾಸ್ಯಕ್ಕಾಸ್ಪದವಾಗಿಥೆಯೇಹೊ... ಭೂಷಣಕಾರಿಯಾಗಿಲ್ಲ. ಈಗ ನಾನು ಯಾವ ಪ್ರಾಚೀನ ಪುಸ್ತಕ ಸಹಾಯ...ದಿಂ ತಿಳಿದಮಟ್ಟಿಗೆ ಶೋಧಿಸಿರುವೆನೋ ಆ ಪುಸ್ತಕವೂ ಇವರು ಮುದ್ರಣಮಾ...ವಕಾಲದಲ್ಲಿ ಇವರ ಬಳಿಯನ್ನೈದಿತ್ತೆಂದು ಕೇಳುತ್ತೇನೆ. ಈ ಮಹಾತ್ಮರು ಆ ಪುಸ್ತಕದಲ್ಲಿದ್ದಂತೆಯೇ ಮುದ್ರಣಮಾಡಿಸಿದ್ದರೂ ಅತ್ಯಂತೋಪಕೃತಿಯಂ ಮಾಡಿದಂತಾಗುತ್ತಿತ್ತು. ಅದಂ ಬಿಟ್ಟು ಕೆಲವುಕಡೆಯಲ್ಲಿ ತಿಳಿಯದ ದೋಷದಿಂದಲೋ ಇನ್ನಾವ ಮತದ್ವೇಷಾದಿಗಳ ಮೂಲಕದಿಂದಲೋ ಕವಿಯಾಶಯದಮೇಲೆ ದೃಷ್ಟಿಯನ್ನಿಡದೆ ಛಂದಸ್ಸಿಗೆ ಸರಿಯಾಗಿ ಅಪ್ರಕೃತಶಬ್ದಗಳನ್ನೆಲ್ಲಾ ಪರಿಪೂರ್ಣಗೊಳಿಸಿ ಗ್ರಂಥದ ಘನತೆಯಂ ಕೆಡಿಸಿ, ಅದಂ ನೋಡಿದ ವಿದ್ವಜ್ಜನರಿಗೆ ಪರಿತಾಪಜನಕವಾಗಿರುವಂತೆ ಮಾಡಿದ್ದುದನ್ನೂ, ಈ ಗ್ರಂಥವು ಪಂಡಿತರಿಗಲ್ಲದೆ ಇತರರಿಗೆ ಅರ್ಥವಾಗದೆ ತದರ್ಥಮಂ ತಿಳಿಯ...ಕುತೂಹಲದಿಂದ ವ್ಯಾಕುಲಿತರಾಗಿದ್ದ ಅನೇಕ ಜ...ನುಗಳ ಪ್ರಾರ್ಥನೆಯನ್ನೂ ನೋಡಿ..., ಈ ...ವಾದ ಕೊರತೆಯ...ಹೋಗಲಾಡಿಸಿ ಲೋಕೋಪಕಾರವಂ ಮಾಡಬೇಕೆಂಬ ಯಜಮಾನರಾದ ವೀರಸಂಗಪ್ಪರ ಅಭಿಪ್ರಾಯಾನುಸಾರವಾಗಿ ತತ್ಪ್ರೋತ್ಸಾಹಿತನಾದ ನಾನು ಒಂದೆರಡು ಪ್ರಾಚೀನಪುಸ್ತಕಗಳ ಸಹಾಯದಿಂದ ತಿಳಿದಮಟ್ಟಿಗೆ ಪರಿಶೋಧಿಸಿ ಶ್ರೀ ಶಿವಶರಣರ ಕೃಪಾಬಲದಿಂದ ಪ್ರತಿ...ಗೆ ಟೀಕೆಯಂ ಬರೆಯುವದಕ್ಕಾರಂಭಿಸಿ ಮೊದಲಿಂದ ೩ಂ ಆಶ್ವಾಸಗಳವರಿಗೂ ಪ...ಯೊಂದು ಪದಗಳನ್ನೂ ಅನ್ವಯಕ್ರಮವಾಗಿ ಹಿಂದೆಯೊಂದಾವ...ಬಂದಿದ್ದ ಸಾಧಾರಣಪದಗಳಿಗಲ್ಲದೆ ಉಳಿದ ಶಬ್ದಗಳೆಲ್ಲಕ್ಕೂ ಅರ್ಥಮಂ ಬರೆದುದರಿಂದ ಅದರಿವಿಗೆ ಸಾಂಗವಾಗಿ ಓದಿದವರಿಗೆ ತಕ್ಕಮಟ್ಟಿಗೆ ಅನ್ವಯಿಸುವ ಶಕ್ತಿಯುಂಟಾಗಿರುವುದೆಂದಾಲೋಚಿಸಿ ಉಳಿದ ಹನ್ನೆರಡು ಆಶ್ವಾಸಗಳಿಗೆ ಕಠಿಣವಾದ...ಗಳಿಗೆ ಮಾತ್ರ ಅರ್ಥವಂ ಬರೆದಿರುವೆನಲ್ಲದೆ ಕಠಿಣವಾಗಿದ್ದ ಕೆಲವುಕಡೆಗಳಲ್ಲಿ ಪು...ಟ್ಟಿಗೆ ಅವಯವಾರ್ಥವನ್ನೂ ಕೆಲವುಕಡೆಯಲ್ಲಿ ತಾತ್ಪರ್ಯವನ್ನೂ ಕೆಲವು ಆ...ಗಳನ್ನೂ ವಿಸ್ತರಿಸಿ ಈ ಟೀಕೆಗೆ "ಸುಜನಾನಂದಿನಿ" ಎಂಬ ಹೆಸರನ್ನಿಟ್ಟ...ು. ಆದರೆ ಅಲ್ಲಲ್ಲಿ ವ್ಯಾಕರಣವಿಷಯವನ್ನೂ ಅಲಂಕಾರವಿಷಯವನ್ನೂ ತ...ಗೆ ವಿಸ್ತರಿಸಿ ವಿದ್ಯಾರ್ಥಿಗಳಿಗೆ ಮತ್ತಷ್ಟು ಅನುಕೂಲ್ಯವನ್ನುಂಟುಮಾ

(೧೧ವರ್ಷ ವಯಸ್ಸಿನಲ್ಲಿಯೇ) ಕವಿತ್ವಶಕ್ತಿಯಂಪಡೆದು ಸಂಸ್ಕೃ
ಕೋಭಯಭಾಷೆಯಲ್ಲಿಯೂ ಶ್ಲಾಘ್ಯವಾದ ಕವಿತ್ವವಂ ಮಾಡುತ್ತಿರಲವರಶಕ್ತಿ
ರಿವಟ್ಟು ಆಕಾಲದ ವಿದ್ವಾಂಸರು "ಉಭಯಕವಿತಾವಿಶಾರದ" ನೆಂಬಬಿರು
ಕೊಟ್ಟರು. ಈ ಕವಿವರ್ಯರು ಕರ್ಣಾಟಭಾಷೆಯಲ್ಲಿ ರಾಜಶೇಖರ, ವೃಷಭೇ
ಜಯ, ಶಬರಶಂಕರವಿಳಾಸ ವೆಂಬ ಮೂರು ಗ್ರಂಥಗಳನ್ನೂ, ಸಂಸ್ಕೃತಭಾಷೆ
ಕವಿಕರ್ಣರಸಾಯನ, ಭಕ್ತಾಧಿಕ್ಯ, ಶಿವಾಧಿಕ್ಯಗಳೆಂಬ ಮೂರು ಗ್ರಂಥಗಳನ್ನು
ಚಿಸಿದರು. ಇವರ ಕರ್ಣಾಟಕ ಗ್ರಂಥಗಳೊಳಗೆ ರಾಜಶೇಖರವಿಲಾಸವೇ ಮೊ
ಯದು. ಆ ಗ್ರಂಥವು ಶಾಲೀವಾಹನಶಕ ೧೫೭೫ನೇ ಜಯಸಂವತ್ಸರದಲ್ಲಿ ವಿ
ಸಲ್ಪಟ್ಟುದು. ಈ ವೃಷಭೇಂದ್ರವಿಜಯವು ಶಾಲೀವಾಹನಶಕ ೧೫೯೩ನೇ
ಸಂವತ್ಸರದಲ್ಲಿ ವಿರಚಿಸಲ್ಪಟ್ಟುದು. (ಅಂದರೆ ರಾಜಶೇಖರವಂ ರಚಿಸಿದ ೧೮
ರ್ಷಗಳ ನಂತರ ಈ ಗ್ರಂಥವು ರಚಿಸಲ್ಪಟ್ಟುದು.) ಶಬರಶಂಕರವಿಳಾಸವು ರಚಿ
ಲ್ಪಟ್ಟ ಕ್ಲಿಪ್ತಕಾಲವು ಆ ಗ್ರಂಥದಲ್ಲಿ ತಿಳಿಸಲ್ಪಟ್ಟಿಲ್ಲ. ಆದರೆ ಆ ಗ್ರಂಥದ ಕೊ
ಯಲ್ಲಿ ತಾವು ರಾಜಶೇಖರ, ವೃಷಭೇಂದ್ರವಿಜಯ ಕವಿಕರ್ಣರಸಾಯನ ವೆಂಬ ಗ್ರಂ
ಥಗಳಂ ರಚಿಸಿರುವೆವೆಂದು ಹೇಳಿರುವದರಿಂದ ಈ ಮೂರು ಗ್ರಂಥಗಳೂ ರಚಿಸ
ಟ್ಟಮೇಲೆ ಶಬರಶಂಕರವಿಳಾಸವು ರಚಿಸಲ್ಪಟ್ಟಿದೆಂದು ತಿಳಿಯಬರುತ್ತೆ. ಕ
ರು ಆ ಶಬರಶಂಕರವಿಳಾಸದ ೫ನೇ ಆಶ್ವಾಸದಲ್ಲಿರುವ "ನೆರೆದೇಕಾದಶವರ್ಷದ |
ಯದೊಳಭವಪ್ರಸಾದಬೇಡಿಂ ಕವಿತಾ ॥ ತರುಣಿಮಡಪ್ಪಣಿದೇವನ | ನೆಂವಿಲ್ಲದೆವ
ಸಿದ್ಧಳಿರಿದೆನೆವಿಬುಧರ್" ಎಂಬ ೬೦ನೇ ಪದ್ಯದಾಧಾರದಿಂದ ಆ ಗ್ರಂಥವಂ ಷಡಕ್ಷ
ವರು ತಮ್ಮ ೧೧ನೇವರ್ಷದ ವಯಸ್ಸಿನಲ್ಲಿಯೇ ರಚಿಸಿದರೆಂದು ಹೇಳುತ್ತಾರೆ. ಅದ
ಪ್ಪು. ೧೧ನೇ ವರ್ಷದಲ್ಲಿ ತಮಗೆ ಕವಿತ್ವಶಕ್ತಿಯುಂಟಾಯಿತ್ತೆಂದು ಹೇಳು
ಆ ಪದ್ಯದಲ್ಲಿ ಸೂಚಿಸಿರುವ ಕವಿಯ ತಾತ್ಪರ್ಯ.

ಈ ವೃಷಭೇಂದ್ರವಿಜಯಗ್ರಂಥಪ್ರತಿಪಾದಿತವಾದ ಕಥಾಭಾಗವು ಆದಿ
ಶ್ರೀವೇದವ್ಯಾಸರಿಂದ ಹೇಳಲ್ಪಟ್ಟಿರುವ ಸ್ಕಾಂದಪುರಾಣದಲ್ಲೊಂದುಭಾಗವಾ
ಅದೇ ಭಾಗವನ್ನೇ ಪಾಲ್ಕುರಿಕೆಯ ಸೋಮನಾರಾಧ್ಯರು ಆಂಧ್ರಭಾಷೆಯಲ್ಲಿಯೂ
ಮಹಕವಿಗಳು ಕನ್ನಡದಲ್ಲಿ ಪರ್ಣಕಮಾರ್ಗವಾಗಿಯೂ ಶಂಕರಾರ್ಯರು ಸಂಸ್ಕೃ
ಷೆಯಲ್ಲಿಯೂ ವಿರಚಿಸಿದ್ದರು. ಅದೇ ಶರಣಚರಿತ್ರವನ್ನೇ ಈ ಷಡಕ್ಷರಿಕವಿಗ
ರ್ಣಾಟಭಾಷೆಯಲ್ಲಿ ವಸ್ತುಕರೂಪವಾಗಿ ವಿರಚಿಸಿರುತ್ತಾರೆ. ಈ ಗ್ರಂಥವು ಕ
ಟಭಾರತಾದಿಗಳಂತೆ ಭಾವಪ್ರಧಾನವೇ ಆಗಿರದೆ ಲಕ್ಷಣಬದ್ಧವಾದ ಉ
ರುತ್ತೆ. ಆದುದರಿಂದ ಪಂಡಿತಜನೈಕವೇದ್ಯವಾದ ಪ್ರಭಾವವುಳ್ಳ ಈ ಪ್ರ
ನ್ನು ಆಧುನಿಕಪಂಡಿತರು ಬಿ. ಎ. ಮುಂತಾದ ದೊಡ್ಡ ತರಗತಿಗಳ ನ
ಆಗಾಗ್ಯೆ ಸ್ವೀಕರಿಸುತ್ತಾರೆ. ಇಂತಪ್ಪಗ್ರಂಥವನ್ನು ಕಂ॥ ಟ॥ ಶ್ರೀ

ಮನಸ್ಸಿದ್ದಾಗ್ಯೂ ಗ್ರಂಥವು ವಿಸ್ತಾರವಾಗುವದೆಂಬ ಭೀತಿಯಿಂದಲೂ, ...ಣವಾದ ಕ್ರಯವಂ ನಿರ್ಣಯಿಸಿದರೆ ಕ್ರಯಾಧಿಕ್ಯದಿಂದ ಕೆಲವುಜನಗಳ ಔತ್ಸುಕ್ಯವು ಕಡಮೆಯಾಗುವದೆಂಬೂಹೆಯಿಂದಲೂ ಆರೀತಿಯುದ್ಯ...ವಿಲ್ಲದಂತಾಯಿತು. ಆದುದರಿಂದ ಈ ಪ್ರಥಮಮುದ್ರಣದಿಂದಾಯುತ್ತ ಪುಸ್ತಕಗಳೆಲ್ಲವೂ ತೀರಿದರೆ ದ್ವಿತೀಯ ಮುದ್ರಣಕಾಲದಲ್ಲಾದರೂ ಭಾ... ವ್ಯಾಕರಣಾಲಂಕಾರಾದಿ ವಿಶೇಷ ವಿಷಯವನ್ನೂ ವಿವರಿಸಬೇಕೆಂಬ ಸಂ...ಾಗಿರುತ್ತೇನೆ. ತತ್ಕಾರಣದಿಂ ಭಾಷಾಭಿಮಾನಿಗಳೂ ದೇಶಾಭಿಮಾನಿಗ...ಥವಂ ಪರಿಗ್ರಹಿಸಿ ಮುದ್ರಾಪಕರಿಗೆ ಪ್ರೋತ್ಸಾಹಪಡಿಸುವದಕ್ಕಾರಂಭಿ... ಪ್ರಾಚೀನಗ್ರಂಥಗಳು ಪರಿಶುದ್ಧಗಳಾಗಿ ಭಾಷೆಯು ಪ್ರಬಲಸ್ಥಿತಿಗೆ ಬರು...ೇಹ ವಿಲ್ಲವೆಂದು ನಂಬುವ

ಸುಜನವಿಧೇಯ,

ಯ್. ಆರ್. ಕರಿಬಸವಶಾಸ್ತ್ರಿ.







# ಈ ಗ್ರಂಥದಲ್ಲಿರುವ ಸಂಕೇತಗಳು.

## ಮೂ ಲ ದ ಲ್ಲಿ .

ಸ್ರಗ್ಧರಾವೃತ್ತಕ್ಕೆ ... ...
ಶಾರ್ದೂಲವಿಕ್ರೀಡಿತವೃತ್ತ. ... ...
ಉತ್ಪಲಮಾಲಾವೃತ್ತ. ... ...
ಚಂಪಕಮಾಲಾವೃತ್ತ. ... ...
ಮಹಾಸ್ರಗ್ಧರಾವೃತ್ತ. ... ...
ಮತ್ತೇಭವಿಕ್ರೀಡಿತವೃತ್ತ ... ... ಮತ್ತೇ. ಮತ್ತೇ
ಕಂದಪದ್ಯ. ... ...
ಲಲಿತಪದವೃತ್ತ ... ...
ಮಲ್ಲಿಕಾಮಾಲಾವೃತ್ತ ... ...
ವಚನ ... ...

## ಟೀ ಕೆ ಯ ಲ್ಲಿ .

ಒಂದು ದೀರ್ಘವಾದ ಸಮಸ್ತಪದವಿದ್ದರೆ ಆ ಸ್ಥಲಗಳಲ್ಲಿ ಅದರ ಆದ್ಯಂ
೩ ಅಕ್ಷರಗಳಂ ಮೊದಲುಬರೆದು ಮಧ್ಯೆ... ..........ಈ ವಿಧವಾದ ಚುಕ್ಕೆಗಳ
ನ್ನಿಟ್ಟು ಕೊನೆಯ ೨—೩ ಅಕ್ಷರಗಳು ಬರೆಯಲ್ಪಟ್ಟವೆ. ಅಂತಪ್ಪ ಸ್ಥಲಗ
ಳಲ್ಲಿ ಆ ಪದವಿರುವ ಮೂಲದ ಭಾಗವು ನೋಡಿ ಟೀಕೆಯಲ್ಲಿ ತೋರ್ಪಡಿಸಲ್ಪಟ್ಟ
ವ ಆದ್ಯಂತಾಕ್ಷರಗಳ ಮಧ್ಯದಲ್ಲಿರುವ ಪದವೆಲ್ಲವೂ ಒಂದೇ ಸಮಸ್ತಪದವೆಂ
ಹಿಸಿಕೊಳ್ಳುವದು.

### ಉ ದಾ ಹ ರ ಣೆ .

" ಗಂಗಾರಂಗತ್ತರಂಗಪ್ರಭವಕಣಗಣಸ್ಫಾರತಾರಾಪರೀತಸ್ವಾಂಗಾದ
ದ್ಯುತಿಪ್ರೋನ್ಮಿಳಿತನಿಜಜಟಾಜೂಟವಿಭ್ರಾಜಮಾನಂ " ಎಂಬುವದು ಒಂದೇ
ಸ್ತಪದವು. ಇದಿಷ್ಟನ್ನೂ ಬರೆದುಕೊಳ್ಳುವದಕ್ಕೆ ಬದಲಾಗಿ ಗಂಗಾ......
ವಿಭ್ರಾಜಮಾನಂ ಎಂದು ಬರೆಯಲ್ಪಟ್ಟಿರುತ್ತೆ.

ಕೆಲವು ಶಬ್ದಗಳಿಗೆ ಅವಯವಾರ್ಥವು ತಿಳಿಸಬೇಕಾದ ಸಂದರ್ಭದಲ್ಲಿ
ಲ್ಲಿರುವ ಆಯಾಯ ಪದಗಳ ಹಿಂಗಡೆಯಲ್ಲಿ * † ‡ § ¶ ಇತ್ಯಾದಿ ಚಿಹ್ನೆ
ಲೆದು ಟೀಕೆಯಡಿಯಲ್ಲಿರುವ ಗೆರೆಯ ಕೆಳಗೆ ಆಯಾಯ ಚಿಹ್ನಗಳನ್ನೇ ಬರೆದು
ಯ ಪದಗಳ ಅವಯವಾರ್ಥವು ವಿವರಿಸಲ್ಪಟ್ಟಧೆ.

ಅವಯವಾರ್ಥವೆನ್ನುವದಕ್ಕೆ ( ಅವ ) ಎಂದು ಸಂಕೇತಗೊಳಿಸಲ್ಪ

# ವಿಷಯಸೂಚಿಕಾ

| ವಿಷಯ | | | ಪುಟ |
|---|---|---|---|


ಸಂಪೂರ್ಣ.





# ಶುದ್ಧಾಶುದ್ಧ ಪತ್ರಿಕಾ.

| ಅಶುದ್ಧ | ಶುದ್ಧ | ಪುಟ | ಪಙ್ಕ್ತಿ |
|---|---|---|---|
| ಜೇಚೆಟ್ಟೇಯಿಂ | ಜೇಚೆಟ್ಟಯಿಂ | ೮ | ೮ |
| ಲುದ್ದಡರ್ಚುವ | ಲೊದ್ದಡರ್ಚುವ | ೧೧ | ೩ |
| ಕುಡಿದುಂ | ಕುಡಿದಂ | ೧೯ | ೪ |
| ಜಡೆ | ಜೆಡೆ | ೩೫ | ೨ |
| ಭವಮುಮಂತ | ಭವಮುಮಂತ | ೪೧ | ೨ |
| ಕಾರಣವ | ಕಾರಣನ | ೪೩ | ೮ |
| ಕೋಕದ | ಕೋಕನದ | ೪೫ | ೧ |
| ವೃಂದಂಕೊಂಡಾಡೆ | ವೃಂದಂಕಂಡುಕೊಂಡಾಡೆ | ೪೨ | ೫ |
| ಭೂಭವನ | ಭೂಭುವನ | ೫೩ | ೧ |
| ಮಧಿಯಾಂತ | ಮಧೀಯಾಂತ | ,, | ೬ |
| ಭೋಗಿಪೆಂ | ಭೋಗಿಪೆಂ | ,, | ೧೭ |
| ಸ್ತುತ್ಯ | ಸ್ತುತ್ಯ | ೫೫ | ೧ |
| ಪಟುವತಿ | ಪಟುಮತಿ | ,, | ೧೩ |
| ಅಭವಾಂಘ್ರಿ | ಅಭವಾಂಘ್ರಿ | ೫೬ | ೧೯ |
| ಕರಂ-ಅತ್ಯಂತವಾಗಿ, ಸದ್ಗುಣಾಶ್ರಯಂ, | ಆಗಮವೇದಿ-ಆಗಮಗಳಂ ತಿಳಿದವನು, ನಯಾನ್ವಿತಂ-ನ್ಯಾಯಸಂಪನ್ನನು, ಗುಣಾಕರಂ | | ೨೩ |
| ನು ‖ ಣ್ಪೊರದ | ನು \| ಣ್ಬರದೆ | ೫೮ | ೧ |
| ನುಣ್ಪೊರದ- ಮಧುರವಾದ, | ನುಣ್ಬರದೆ-ಮಧುರಸ್ವರದಿಂದ, | ,, | ೧೭ |
| ನೀಂನಿನ್ನನಪ್ಪ | ನಿನ್ನನ್ನನಪ್ಪ | ೬೧ | ೮ |
| ನಿನ್ನನಪ್ಪ | ನಿನ್ನನ್ನನಪ್ಪ | ,, | ೨೫ |
| ಮಾಡುಲುಂ | ಮಾಡಲುಂ | ೬೭ | ೨ |
| ಬಸಿರೊ | ಬಸುರೊ | ೬೪ | ೫ |
| ಆಬಸಿರೊಳ್ | ಆಬಸುರೊಳ್ | ,, | ೧೩ |
| ಮಾದಾರಸಂ | ಮಾದರಸಂ | ೬೩ | ೩ |
| ಪ್ರೆಳನಾಂ | ಪ್ರುಳನಾಂ | ೬೯ | ೨ |
| ಪೃ‖ | ಮತ್ತೇ‖ | ೭೧ | ೩ |

| ಅಶುದ್ಧ | ಶುದ್ಧ | ಪುಟ | ಪಙ್ತಿ |
|---|---|---|---|
| ಶಇದ | ಇದ | ೭೬ | ೯ |
| ಮಾಥ | ಮೂಥ | ೭೩ | ೧ |
| ಶಕಾಬ್ದ್ಯೈರಿಂ | ಶಕಾಬ್ದೈರಂ | ,, | ೯ |
| ಹಿತೋಪ | ಹಿತೋಪ | ೮೩ | ೧ |
| ಕೊಡುವ | ಕುಡುವ | ೧೧೭ | ೨ |
| ದುದರಮೆಗೆ | ದುದರಮುಗೆ | ,, | ೧೧ |
| ದೋಳ್ನಿರಪ | ದೊಳ್ನಿರಪ | ೧೧೯ | ೮ |
| ವಂತ್ರದ | ಮುಂತ್ರದ | ೧೨೦ | ೬ |
| ರೋಚಿಃಸ್ಸ್ವರ | ರೋಚಿಃಸ್ವ್ವರ | ೧೭೦ | ೧ |
| ತಿರ್ದನೀ | ತಿರ್ದಪ್ಪನೀ | ೧೭೫ | ೨ |
| ತ್ತಂತಾಳ್ದ | ತ್ತಂತದಂತಾಳ್ದ | ೧೮೮ | ೪ |
| ಗೊಪ್ಪ | ಗೊಳ್ಪ | ೧೯೫ | ೮ |
| ನುಸುರೆ | ನುಸಿರೆ | ೧೯೯ | ೧ |
| ಕೊಡುವ | ಕುಡುವ | ೨೦೨ | ೧೧ |
| ನುಳ್ಪವ | ಉಜ್ವವ | ,, | ೧೩ |
| ಪೇರ್ಮುಡಿಯ | ಪೆರ್ಮುಡಿಯ | ೨೧೦ | ೧೩ |
| ನವ್ಯಲೌಕಿಕ | ನನ್ಯಲೌಕಿಕ | ೨೧೬ | ೫ |
| ತನ್ಮುಗ್ದತೆಗೆ | ತನ್ಮುಗ್ಧತೆಗೆ | ೨೧೭ | ೫ |
| ತು । ಳದ | ತು । ಳ್ಕದ | ೨೧೮ | ೭ |
| ಕಲಾಮುಖಿ | ಕಲಾಮಾಲಿನಿ | ೨೨೪ | ೩೩ |
| ಪಪಙ್ತಿ | ಪಙ್ತಿ | ೨೨೬ | ೨ |
| ಪ್ರೊಕು | ಪ್ರೊಕ್ಷ್ಯ | ೨೩೧ | ೬ |
| ನೀಕ್ಷಿಸುತ್ತಮಿವಂ | ನೀಕ್ಷಿಸುತ್ತಮಿವಂ | ೨೩೩ | ೭ |
| ಪಸ್ತ್ರಮ | ವಸ್ತ್ರಮ | ೨೩೯ | ೧ |
| ನೆಂದುನಮುಗೆ | ನೆಂದನುಮೆಗೆ | ೨೪೨ | ೮ |
| ನುಗಿದಳಾಗಳ್ | ಸುಗಿದಳಾಗಳ್ | ೨೪೪ | ೨ |
| ಪೇರೊದ್ದಲೆಗ | ಪೆರೊದ್ದಲೆಗ | ೨೫೮ | ೧೨ |
| ಲಂಗಿಸಿ | ಲಿಂಗಿಸಿ | ೨೬೧ | ೧೧ |
| ದ್ಯೋಪಥಂ | ಜ್ಯೌಪಥಂ | ೨೬೪ | ೬ |
| ಜಿನಂಪ್ರಾಂ | ಜಿನಪ್ರಾಂ | ೨೬೫ | ೧೦ |

# ಶುದ್ಧಾಶುದ್ಧ ಪತ್ರಿಕಾ.

| ಅಶುದ್ಧ | ಶುದ್ಧ | ಪುಟ | ಪಙ್ಕ್ತಿ |
|---|---|---|---|
| ಜೇಚ್ಛೇಯಿಂ | ಜೇಚ್ಛೆಯಿಂ | ೮ | ೮ |
| ಲ್ದುಡರ್ಚುವ | ಲ್ದೊಡರ್ಚುವ | ೧೧ | ೩ |
| ಕುಡಿದುಂ | ಕುಡಿದಂ | ೨೯ | ೪ |
| ಜಡೆ | ಜೆಡೆ | ೩೫ | ೭ |
| ಭವಮುಮಂತ | ಭವಮುಮಂತೆ | ೪೧ | ೭ |
| ಕಾರಣವ | ಕಾರಣನೆ | ೪೩ | ೮ |
| ಕೋಕದ | ಕೋಕನದ | ೪೫ | ೧ |
| ವೃಂದಂಕೊಂಡಾಡೆ | ವೃಂದಂಕಂಡುಕೊಂಡಾಡೆ | ೪೭ | ೫ |
| ಭೂಭವನ | ಭೂಭುವನ | ೫೩ | ೧ |
| ಮದಿಯಾಂತ | ಮದೀಯಾಂತ | ,, | ೬ |
| ಭೋಗಿಪೇಂ | ಭೋಗಿಪೆಂ | ,, | ೧೨ |
| ಸ್ತುತ್ಯ | ಸ್ತುತ್ಯ | ೫೫ | ೧ |
| ಪಟುವತಿ | ಪಟುಮತಿ | ,, | ೧೩ |
| ಆಭವಾಂಘ್ರಿ | ಅಭವಾಂಘ್ರಿ | ೫[illegible] | ೧೯ |
| ಕರಂ-ಅತ್ಯಂತವಾಗಿ, ಸದ್ಗುಣಾಶ್ರಯಂ, | ಆಗಮವೇದಿ-ಆಗಮಗಳಂ ತಿಳಿದವನು, ನಯಾನ್ವಿತಂ-ನ್ಯಾಯಸಂಪನ್ನನು, ಗುಣಾಕರಂ | | ೨೩ |
| ನು ॥ ಣ್ಪೆರದ | ನು । ಣ್ಬರದೆ | ೫೮ | ೧ |
| ನುಣ್ಪೆರದ- ಮಧುರವಾದ, | ನುಣ್ಬರದೆ-ಮಧುರಸ್ವರದಿಂದ, | ,, | ೧೨ |
| ನೀಂನಿನ್ನನಪ್ಪ | ನಿನ್ನನ್ನನಪ್ಪ | ೬೧ | ೮ |
| ನಿನ್ನನಪ್ಪ | ನಿನ್ನನ್ನನಪ್ಪ | ,, | ೨೩ |
| ಮಾಡುಲುಂ | ಮಾಡಲುಂ | ೬೨ | ೭ |
| ಬಸಿರೊ | ಬಸುರೊ | ೬೪ | ೫ |
| ಆಬಸಿರೊಳ್ | ಆಬಸುರೊಳ್ | ,, | ೧೩ |
| ಮಾದಾರಸಂ | ಮಾದರಸಂ | ೬೭ | ೩ |
| ಪ್ರುಳಿನಾಂ | ಪ್ರುಳಿನಾಂ | ೬೯ | ೭ |
| ಪೃ॥ | ಮತ್ತೇ॥ | ೭೧ | ೩ |

| ಅಶುದ್ಧ | ಶುದ್ಧ | ಪುಟ | ಪಙ್ತಿ |
|---|---|---|---|
| ಶಿಇದ | ಇದ | ೫೬ | ೯ |
| ಮಾಢ | ಮೂಢ | ೫೩ | ೧ |
| ಶಕ್ರಾದ್ಯರಿಂ | ಶಕ್ರಾದ್ಯರು | ,, | ೯ |
| ಹಿತೋವ | ಹಿತೋಪ | ೭೩ | ೧ |
| ಕೊಡುವ | ಕುಡುವ | ೧೧೫ | ೨ |
| ದುದರವೆುಗೆ | ದುದರಮಗೆ | ,, | ೧೧ |
| ದೋಳ್ನಿರವ | ದೊಳ್ನಿರಪ | ೧೧೯ | ೭ |
| ವಂತ್ರದ | ಮುಂತ್ರದ | ೧೨೦ | ೬ |
| ರೋಚಿಃಸ್ಸ್ವರ | ರೋಚಿಃಸ್ವರ | ೧೫೦ | ೧ |
| ತಿರ್ದನೀ | ತಿರ್ದಪ್ಪನೀ | ೧೫೪ | ೨ |
| ತ್ತಂತಾಳ್ದು | ತ್ತಂತದಂತಾಳ್ದು | ೨೭೭ | ೮ |
| ಗೊಪ್ಪ | ಗೊಳ್ಪ | ೧೯೪ | ೭ |
| ನುಸುರಿ | ನುಸಿರಿ | ೧೯೯ | ೧ |
| ಕೊಡುವ | ಕುಡುವ | ೨೦೨ | ೧೧ |
| ನುಜ್ಞವ | ಉಜ್ಞವ | ,, | ೧೩ |
| ಪೇರ್ಮುಡಿಯ | ಪೆರ್ಮುಡಿಯ | ೨೧೦ | ೧೩ |
| ನವ್ಯಲೌಕಿಕ | ನನ್ಯಲೌಕಿಕ | ೨೧೬ | ೪ |
| ತನ್ಮುಗ್ಧತೆಗೆ | ತನ್ಮುಗ್ಧತೆಗೆ | ೨೧೫ | ೪ |
| ತು । ಳದ | ತು । ಳ್ಕದ | ೨೧೭ | ೫ |
| ಕಲಾಮುಖಿ | ಕಲಾಮಾಲಿನಿ | ೨೨೮ | ೩೩ |
| ಪಪಙ್ತಿ | ಪಙ್ತಿ | ೨೨೬ | ೨ |
| ಪ್ರೊಕು | ಪ್ರೊಕ್ಕು | ೨೩೧ | ೬ |
| ನೀಕ್ಷಿಸುತ್ತಮಿವಂ | ನೀಕ್ಷಿಸುತ್ತಮಿವಂ | ೨೩೩ | ೫ |
| ಪಸ್ತ್ರಮು | ವಸ್ತ್ರಮು | ೨೩೯ | ೧ |
| ನೊಂದುನಮಗೆ | ನೆಂದನುಮೆಗೆ | ೨೮೨ | ೭ |
| ನುಗಿದಳಾಗಳ್ | ಸುಗಿದಳಾಗಳ್ | ೨೮೮ | ೨ |
| ಪೇರ್ಬೊದಲೆಗ | ಪೆರ್ಬೊದಲೆಗ | ೨೪೭ | ೧೨ |
| ಲಂಗಿಸಿ | ಲಿಂಗಿಸಿ | ೨೬೧ | ೧೧ |
| ದ್ಯೋಪಧಂ | ಡ್ಯೌಪಧಂ | ೨೬೮ | ೬ |
| ಜಿನಂಪ್ರಾಂ | ಜಿನಪ್ರಾಂ | ೨೬೪ | ೧೦ |

| ಅಶುದ್ಧ | ಶುದ್ಧ | ಪುಟ | ಪಙ್ಕ್ತಿ |
|---|---|---|---|
| ಜಟಾಜೂಟಂ-ಮನೋಹರವಾದ ವಸ್ತ್ರ, | ಜಟಾಜೂಟಂ- ಪ್ರಕಾಶಿಸುವಜಡೆಮುಡಿ, ಉಗ್ರಾಜಿನಪ್ರಾಂಜುಳವಸ್ತ್ರಂ-ಭಯಂಕರವಾದಚರ್ಮದ ಮನೋಹರವಾದ ವಸ್ತ್ರ, | ,, | ೨೭ |
| ನಿರ್ಜ್ಜರಂ | ನಿರ್ಝರಂ | ೨೭೧ | ೪ |
| ನಾಂದಂ | ನಾದಂ | ೩೪೬ | ೫ |
| ಭೂ ॥ ಷಣ | ಭೂಷಣ | ೩೫೧ | ೧೩ |
| ಪಟುತಮೋರಾಯುಧ | ಪಟುಕಠೋರಾಯುಧ | ೩೫೪ | ೬ |
| ದಕ್ಷಮುಖ | ದಕ್ಷಮುಖ | ೩೫೫ | ೨ |
| ದ್ಧವಂಗೆ | ದ್ಧವಂಗೆ | ೩೫೮ | ೯ |
| ದರೆಯೂ | ದರೆಯೊ | ೩೭೪ | ೧೧ |
| ಶಲುಕೆ | ಶಲಾಕೆ | ೩೮೨ | ೯ |
| ಚಿತ್ತ್ರದೊಳ್ | ಚಿತ್ತ್ರದೊಳ್ | ೩೯೦ | ೪ |
| ನುಡಿಳ್ಗಾನಳ್ಕೆ | ನುಡಿಗಳ್ಗಾನಳ್ಕೆ | ೩೯೧ | ೧ |
| ಶಿರೋಃಣಿ | ಶಿರೋಮಣಿ | ೩೯೭ | ೪ |
| ಮಡಕೆಯ | ಮಡಕೆಯ | ೪೦೧ | ೧೧ |
| ಪೂಡವಿಯೊ | ಪೊಡವಿಯೊ | ೪೦೩ | ೭ |
| ಶಪರಿ | ಶಪರಿ | ೪೩೪ | ೮ |
| ನಗೆದಕಾಂಡ | ನೆಗೆದಕಾಂಡ | ೪೩೬ | ೭ |
| ಯುದ್ದ | ಯುದ್ಧ | ೪೪೬ | ೧೪ |
| ಕುನಿಕಿಲ್ಮೊವತ್ತು | ಕುನಿರೆಲ್ಮೊವ್ವತ್ತು | ೪೪೮ | ೧ |
| ಬೇಲಗಳಲ್ಲಿ | ಗಾಡಿಗಳಲ್ಲಿ | ,, | ೧೬ |
| ಅದೃಷ್ಟಸಂತಾನದಿಂ | ದೃಷ್ಟಸಂತಾನದಿಂ-ಉದಾಹರಣೆಗಳ ಗುಂಪಿನಿಂದ. | ೪೫೦ | ೨೦ |
| ಸಮುಸ್ಕಾರಮುಂ | ನಮುಸ್ಕಾರಮುಂ | ೪೫೬ | ೮ |
| ಕರಿಯುಂ | ಕುರಿಯುಂ | ೪೬೧ | ೧೩ |
| ಅಂತಭಿವನ | ಅಂತಭಿನವ | ೪೭೮ | ೧೦ |
| ವನಮುನಧಂ | ಧನಮುನವಂ | ೫೦೮ | ೧ |
| ಡಿಯನೆ | ಡಿಯನೆ | ೫೨೧ | ೧೧ |
| ಮುನ್ನಂ | ಮುನ್ನಂ | ೫೨೭ | ೧ |

| ಅಶುದ್ಧ | ಶುದ್ಧ | ಪುಟ | ಪಜ್ತಿ |
|---|---|---|---|
| ಸಹಸಮಣಿ | ಸಹಸ್ರಮಣಿ | ೫೦೪ | ೧೧ |
| ಥೆಗಣ | ಥಗಣ | ೫೬೨ | ೨ |
| ಸತ್ಸ್ನನೀತೇ | ಸತ್ಪ್ನನೀಶೇ | ೫೮೮ | ೭ |
| ಗುರುವಂಶಾ | ಗುರುವಂಶಾಂ | ೬೨೪ | ೧೨ |
| ಪದ್ಮನಿಗು | ಪದ್ಮಿನಿಗು | ೬೪೨ | ೧೨ |
| ಚರಿತ್ರದ | ಚಿತ್ರದ | ೭೪೪ | ೧೨ |
| ವಿದೂರಿಯು | ವಿದೂರೆಯು | ೭೪೭ | ೮ |
| ನಂತ್ರವಾತಡಿಂ | ನುತ್ರವ್ರಾತಡಿಂ | ೭೪೩ | ೫ |
| ಚ್ಛಾಛದನಗೆಯುದ್ದ | ಚ್ಛಾದನುಗೆಯುದ್ದ | ,, | ೭ |
| ಪತ್ನಿ | ಪತ್ನೀ | ೭೭೦ | ೫ |
| ವಂದಿತೆ | ವಂದಿತೇ | ,, | ,, |
| ಪಾದೆ | ಪಾದೇ | ,, | ೭ |
| ಭಂಜನೆ | ಭಂಜನೇ | ,, | ,, |
| ಮಾನ್ಯೆ | ಮಾನ್ಯೇ | ,, | ,, |
| ಭಾಷಿಣಿ | ಭಾಷಿಣೀ | ,, | ೨ |
| ನಿದ್ಧರಿಸು | ನಿರ್ದ್ಧರಿಸು | ೭೮೭ | ೧೭ |
| ಪ್ರೊರಮುಟ್ಟುಪ್ರೊ | ಪೊರಮುಟ್ಟುಪೋ | ,, | ,, |
| ನಾಳೆಯ್ತಂದಂ | ನಾಳ್ದಿಯ್ತಂದಂ | ೭೯೪ | ೯ |
| ಯಂತೆ | ಯುಂತೆ | ೭೯೯ | ೧ |
| ಪರಿ ॥ ಸು | ಪರಿ ॥ ಸ್ಪು | ೨೦೨ | ೮ |
| ಮೊಳರೆ | ಮೊಳರೆ | ೨೦೪ | ೨ |
| ಮುಂಡಳೀಕ | ಮುಂಡಳಿಕ | ೨೧೦ | ೧೩ |
| ಮೆಯ್ದ್ದಗದೆಂ | ಮೆಯ್ದ್ದಗೆದೆಂ | ೨೧೭ | ೨ |
| ತತ್ಪಾದಪಾದಪೂಜಾ | ತತ್ಪಾದಪೂಜಾ | ೨೧೯ | ೪ |
| ನಟುರ್ಚಿ | ನಟ್ಟುರ್ಚಿ | ೨೩೫ | ೨೨ |
| ದಷ್ಟ್ರಾಂಕುರಮ | ದಂಷ್ಟ್ರಾಂಕುರಮ | ೨೪೫ | ೫ |
| ಏನೆಕೇಳ್ದು | ಎನೆಕೇಳ್ದು | ೨೬೬ | ೨೦ |
| ತರ್ಜ್ಜಪ್ಪಂ | ತರ್ಜನೆ | ೨೨೪ | ೧೪ |
| ಳೊಳನ | ಳೊಳಪ್ಪಂ | ,, | ೧೫ |
| ಚಂಬತ್ಪಾರ್ಶ್ವಯಂ | ಚಂಚತ್ಪಾರ್ಶ್ವಯುಂ | ೨೨೫ | ೧೪ |

೩೩೩ನೇ ಪೇಜಿನ ಮೊದಲನೇಪಜ್ತಿಯಲ್ಲಿರುವ

"ವದುಂದುಭಿಯ" ಎಂಬುವದರ ಹಿಂದಕ್ಕೆ

"ವ ॥ ಅಂತಿಂತು ಮನ್ನಿಸಿ ಕಳುಪೆ ತಿರುಜ್ಞಾನಸಂಬಂಧೀಶನೀಶನೆಡೆಗೇಳ್ತಂದು ಪೊಂಗಿ ಪೊಡಮಟ್ಟು ಪೊಂದಾಳಮಂ ಪಿಡಿದು ನಿಂದು ॥ * * *

ಅಕ್ಕರಿಕೆವೃತ್ತ ॥ ಧೃತಶಶಿಶಕಲಂ ಕೃತಭುವನಕುಲಂ ಶತದಳನೇತ್ರನತಂ । ತತಗುಣಭರಣಂ ಜಿತದನುಜರಣಂ ಶ್ರುತಿಗಣವಂದ್ಯಪದಂ ॥ ವಿತರಣನಿಳಯಂ ಧೃತಫಣಿವಲಯಂ ಕ್ರತುಗತನಾಕಿಹರಂ । ರತಿಪತಿಹರಣಂ ಪ್ರತಿಭಜಶರಣಂ ನುತಗಿರಿಜಾರಮಣಂ ॥ ... ... ... ೬೫

ವ ॥ ಎಂದು ತುಂಬುರಾದಿಗಳಂ ಪಳಿಕೆಯ್ದು ಪಾಡೆ ಸಂಗೀತರಸಕ್ಕೆ ಶಂಕರಂ ಮಚ್ಚಿ ಮನಂದಂದು ಸರ್ವಸಿದ್ಧಿಪ್ರದಭಸ್ಮಘುಟಕೆಯುಮಂ ಗಗನಗಮನಮಣಿಮಯ ಮಂಟಪಮುಮಂ ಪೊನ್ನಂದಣಮುಮಂ ಮುಕ್ತಾತಪತ್ರಮುಮ ನಪರಿಮಿತಧನ ಕನಕವಸನಮಣಿಭರಣಾದಿಗಳನೀಯೆ ಕೊಂಡಲ್ಲಿಂ ಮಣಿಮಯಾಂದೋಳಸ್ಯಮನಡರ್ದು ತಳರ್ವಾಗಳೆತ್ತಿದ ಧವಳಾತಪದ್ರದ ಕೆಲಬಲದೊಳ್ಬೀಸುವ ಧವಳಚಾಮರದ ಸೂಸುವ ಸೀಗುರಿಯ ನವರತ್ನಮಾಲೆಯ ನಡೆದೋರಣದ ಮುಂದೆ ಮಿಳಿರ್ವ ವೃಷಭಧ್ವಜದ ಪಿಂದೆ ಬರ್ಪ ವಿಭುಧಕದಂಬದ ಮೊಳಗು" ಎಂದು ಸೇರಿಸಿಕೊಳ್ಳಬೇಕು.

| ಅಶುದ್ಧ | ಶುದ್ಧ | ಪುಟ | ಪಜ್ತಿ |
|---|---|---|---|
| ಶವಣ | ಸವಣ | ೩೩೯ | ೧೩ |
| ದೇಹಾರ್ಥರಕೆ | ದೇಹಾರ್ಥರಕ್ಷೆ | ೩೮೨ | ೫ |
| ಮಾದುದಲಿ | ಮಾದುದಲ್ಲಿ | ೩೮೩ | ೨೩ |
| ಶವಣ | ಶ್ರವಣ | ೩೮೫ | ೧೮ |
| ಪಿಶುನಶ | ಪಿಶುನಶ್ರ | ೩೮೬ | ೧೬ |
| ವಿರವ್ರತ | ವೀರವ್ರತ | ೩೮೮ | ೨ |
| ಯೆನಿಪ | ಯೆನಿಪ | ೮೧೩ | ೧೪ |
| ನಲ್ಲಿಗೆಯ್ತ | ಸಿಲ್ಲಿಗೆಯ್ತ | ೮೨೮ | ೧೩ |
| ಕ್ರತುನಾಥೆಂ | ಕ್ರತುನಾಥಂ | ೮೫೮ | ೮ |

ಸಂಪೂರ್ಣ.

ಓಂ



ಶ್ರೀಮದಸ್ಮದ್ಗುರುಮೇಧಾದಕ್ಷಿಣಾಮೂರ್ತಯೆ
ಪರಬ್ರಹ್ಮಣೇನಮಃ

# ಸಟೀಕವೃಷಭೇಂದ್ರವಿಜಯಂ

ಸ್ರಗ್ಧರಾವೃತ್ತ.

ಶ್ರೀಮತ್ಕಲ್ಯಾಣಭೂಭೃನ್ನುತಸುಕರಪದಂ ದಿವ್ಯಗಂಗಾಂಬಿಕಾಸ | ತ್ಪ್ರೇಮಾವಾ
ಸಂ ಗಣೇಂದ್ರಾನ್ವಿತಮುರುಮಹಿಮಾಧಾರ ಮಶ್ರಾಂತಸತ್ವಾ || ರಾಮಂ ಭೂತಿಪ್ರಯುಕ್ತಂ

---

ಕಂದ.

ಶ್ರೀಮದಚಲತನಯಾ ಪದ | ನಾಮಲ ವಿಧುವಲಯವರ್ಧಿತಾವಿರಳಮಹಾ ||
ಪ್ರೇಮಸುಧಾರ್ಣವನಾಶ್ರಿತ | ಕಾಮಫಲದನೆಸಗಲನಿಶಮೆಮ್ಮಭಿಮತಮಂ ||

ಉತ್ಪಲವೃತ್ತ.

ಶ್ರೀಯನುರಃಪ್ರದೇಶದೊಳು ಕೇಶವನಾಂತಿಹನೊಲ್ದು ಕುಂಕುಮ | ಶ್ರೀಯನ ಶೇಷನಿರ್ಜರನಿತಂಬಿನಿಯರ್ನ್ನಣೆಯಲ್ಲಿತಾಳ್ದಿಹರ್ || ಶ್ರೀಯನದಾವನಾತ್ಮಗಳವೊಳ್ಸಲೆತಾಳ್ದಮಹತ್ವದಿಂ ನುತಿ | ಶ್ರೀಯನವಂ ಸಮಂತೆಮಗೆ ಬೀರಲಿನಿಚ್ಚಮುಮಾಧವಂ ಶಿವಂ || * * * * * * * * * * * * *

ಟೀಕಾ.

ನಂದೀಶ್ವರಪರವಾದರ್ಥ.

ಶ್ರೀಮತ್ಕಲ್ಯಾಣಭೂಭೃನ್ನುತಸುಕರಪದಂ— ಶ್ರೀಮತ್- ಸಂಪದ್ಯುಕ್ತನಾದ, ಕಲ್ಯಾಣಭೂಭೃತ್- ಕಲ್ಯಾಣಪಟ್ಟಣಕ್ಕೆ ರಾಜನಾದ ಬಿಜ್ಜಳನಿಂದ, ನುತ- ಹೊಗಳಿಸಿಕೊಳ್ಳಲ್ಪಟ್ಟ, ಸುಕರ- ಭಕ್ತರಿಗೆಸುಲಭವಾದ, ಪದಂ- ಪಾದವುಳ್ಳ; ದಿವ್ಯಗಂಗಾಂಬಿಕಾಸತ್ಪ್ರೇಮಾವಾಸಂ- ದಿವ್ಯ- ಶ್ರೇಷ್ಠಳಾದ, ಗಂಗಾಂಬಿಕಾ— ಪತ್ನಿಯಾದಗಂಗಾಂಬಿಕೆಯ, ಸತ್ಪ್ರೇಮ- ಸಮೀಚೀನವಾದಪ್ರೀತಿಗೆ, ಆವಾಸಂ- ಆಶ್ರಯನಾದ; ಗಣೇಂದ್ರಾನ್ವಿತಂ- ಗಣಶ್ರೇಷ್ಠರೊಡನೆಕೂಡಿದ; ಉರುಮಹಿಮಾಧಾರಂ- ಅತ್ಯಂತ ಮಹತ್ವಾಸ್ಪದನಾದ; ಅಶ್ರಾಂತಸತ್ವಾರಾಮಂ- ಅಶ್ರಾಂತ- ಅತ್ಯಂತವಾಗಿ, ಸತ್ವ- ಸತ್ವಗುಣಕ್ಕೆ, ಆರಾಮಂ— ಕ್ರೀಡಾಸ್ಥಾನನಾ

ಪ್ರಣವರುಚಿ ಪರಾನಂದಧರ್ಮಂ ಸ್ವಲೀಲೋ । ದ್ದಾಮಂ ರಕ್ಷಿಪ್ಪುದೆಮ್ಮಂ ಬಿಡದನವರತಂ
ನಂದಿಕೇಶಂ ಮಹೇಶಂ ॥ ... ... ... ... .. ॥ ೧ ॥

ದ; ಭೂತಿಪ್ರಯುಕ್ತಂ- ಭಸ್ಮಲಿಪ್ತನಾದ; ಪ್ರಣವರುಚಿ- ಓಂಕಾರದಲ್ಲಿ ಪ್ರೀತಿಯುಳ್ಳ; ಪರಾನಂದಧರ್ಮಂ- ಪರಬ್ರಹ್ಮಾನಂದವುಳ್ಳವನೂ, ಧರ್ಮಸ್ವರೂಪನೂ ಆದ; ಸ್ವಲೀಲೋದ್ದಾಮಂ– ಸ್ವ- ತನ್ನ, ಲೀಲಾ- ವೃಷಭಾವತಾರಾದಿ ಲೀಲೆಗಳಿಂದ, ಉದ್ದಾಮಂ- ಉತ್ಕೃಷ್ಟನಾದ; ನಂದಿಕೇಶಂ- ನಂದೀಶ್ವರನು; ಬಿಡದೆ- ತಪ್ಪದೆ, ಎಮ್ಮಂ- ನಮ್ಮನ್ನು, ಅನವರತಂ- ನಿರಂತರದಲ್ಲೂ, ರಕ್ಷಿಪ್ಪುದು- ಸಂರಕ್ಷಿಸಲಿ.

ಪರಮೇಶ್ವರಪರವಾದರ್ಥ.

ಶ್ರೀಮತ್ಕಲ್ಯಾಣಭೂಭೃನ್ನುತಸುಕರಪದಂ- ಶ್ರೀಮತ್- ಕಾಂತಿಸಂಪನ್ನವಾದ, ಕಲ್ಯಾಣಭೂಭೃತ್- ಮೇರುಪರ್ವತವೇ, ನುತ-ಶ್ಲಾಘ್ಯವಾಗಿಯೂ, ಸುಕರ- ಸಮೀಚೀನವಾಗಿಯೂ ಇರುವ, ಪದಂ- ಸ್ಥಾನವಾಗುಳ್ಳ; ದಿವ್ಯಗಂಗಾಂಬಿಕಾಸತ್ಪ್ರೇಮಾವಾಸಂ–ದಿವ್ಯಗಂಗಾ-ದೇವಗಂಗೆಯೂ, ಅಂಬಿಕಾ-ಪಾರ್ವತಿಯೂ ಇವರುಗಳ, ಸತ್ಪ್ರೇಮ- ಸಮೀಚೀನವಾದ ಪ್ರೀತಿಗೆ, ಆವಾಸಂ-ಆಸ್ಪದನಾದ; ಗಣೇಂದ್ರಾನ್ವಿತಂ- ಗಣೇಂದ್ರ-ವಿಘ್ನೇಶ್ವರನಿಂದ, ಅನ್ವಿತಂ- ಕೂಡಿದ. ಉರುಮಹಿಮಾಧಾರಂ-ಉರು-ಅಧಿಕವಾದ, ಮಹಿ-ಭೂಮಿಯ, ಮಾ- ಸಂಪತ್ತಿಗೆ, ಆಧಾರಂ- ಆಶ್ರಯನಾದ, ಅಶ್ರಾಂತಸತ್ವಾರಾಮಂ–ಅಶ್ರಾಂತ- ನಿರಂತರವಾಗಿ, ಸತ್ವ- ಪ್ರಾಣಿಗಳಿಗೆ, ಆರಾಮಂ- ಆಶ್ರಯನಾದ; ಭೂತಿಪ್ರಯುಕ್ತಂ–ಭೂತಿ- ಅಣಿಮಾದ್ಯಷ್ಟೈಶ್ವರ್ಯದಿಂದ,ಪ್ರಯುಕ್ತಂ- ಕೂಡಿದ; ಪ್ರಣವರುಚಿ- ಪ್ರಣವದಿಂಪ್ರಕಾಶ್ಯನಾದ; ಪರಾನಂದಧರ್ಮಂ- ಉತ್ಕೃಷ್ಟವಾದ ಆನಂದವೇ ಸ್ವರೂಪವಾಗುಳ್ಳ; ಸ್ವಲೀಲೋದ್ದಾಮಂ- ತನ್ನ ಪಂಚವಿಂಶತಿ ಲೀಲೆಗಳಿಂದ ಶ್ರೇಷ್ಠನಾದ, ಮಹೇಶಂ- ಪರಮೇಶ್ವರನು ಬಿಡದೆ, ಎಮ್ಮಂ, ಅನವರತಂ, ರಕ್ಷಿಪ್ಪುದು.

(ಅಂದರೆ) ಕಲ್ಯಾಣಪಟ್ಟಣಕ್ಕೆ ದೊರೆಯಾದ ಬಿಜ್ಜಳನಿಂದ ಹೊಗಳಿಸಿಕೊಳ್ಳುವ ಪಾದಕಮಲಗಳುಳ್ಳವನಾಗಿಯೂ, ಗಂಗಾಂಬಿಕೆಗೆ ಪತಿಯಾಗಿಯೂ, ಗಣಶ್ರೇಷ್ಠರಿಂದ ಕೂಡಿರುವವನಾಗಿಯೂ, ಅತ್ಯಂತಮಹಿಮಾವಂತನಾಗಿಯೂ, ಸತ್ವಗುಣವಿಶಿಷ್ಟನಾಗಿಯೂ, ಭಸ್ಮಲಿಪ್ತನಾಗಿಯೂ, ಪ್ರಣವಧ್ಯಾನಾಸಕ್ತನಾಗಿಯೂ, ಬ್ರಹ್ಮಾನಂದವುಳ್ಳವನಾಗಿಯೂ, ಧರ್ಮಸ್ವರೂಪನಾಗಿಯೂ, ವೃಷಭೇಶ್ವರಾದಿ ಲೀಲೆಗಳಿಂದ ಉತ್ಕೃಷ್ಟನಾಗಿಯೂ, ಇರುವ ನಂದಿಕೇಶ್ವರನೂ ಮತ್ತು ಮೇರುಪರ್ವತವೇ ಆವಾಸವಾಗಿಯೂ, ದೇವಗಂಗೆ ಪಾರ್ವತಿ ಇವರಿಬ್ಬರಿಗೂ ಪತಿಯಾಗಿಯೂ, ಗಣಪತಿಯುಕ್ತನಾಗಿಯೂ, ಅತ್ಯಂತಭೂಸಂಪತ್ಕಾರಣನಾಗಿಯೂ, ಸಮಸ್ತಪ್ರಾಣಿಗಳನ್ನೂ ತನ್ನ ಕುಕ್ಷಿಸ್ಥಲದಲ್ಲೀಧರಿಸಿದವನಾಗಿಯೂ, ಅಣಿಮಾ, ಮಹಿಮಾ,ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವವೆಂಬ ಅಷ್ಟಸಿದ್ಧಿಗಳುಳ್ಳವನಾಗಿಯೂ, ಶಿವೋವಾಪ್ರಣವಃಪ್ರೋಕ್ತಃಪ್ರಣವೋವಾಶಿವಸ್ಮೃತಃ । ವಾಚ್ಯವಾಚಕಯೋರ್ಭೇದೋನಾತ್ಯಂತವಿಮೃಶ್ಯತೇ ॥ ಎಂಬಪ್ರಮಾಣಾನುಸಾರವಾಗಿ ಓಂಕಾರಪ್ರಕಾಶ್ಯನಾಗಿಯೂ, ಲೋಕೋತ್ತರಸಂತೋಷಸ್ವರೂಪನಾಗಿಯೂ, ಚಂದ್ರಧರ, ಉಮಾಮಹೇಶ್ವರ, ವೃಷಭವಾಹನ, ತಾಂಡವಮೂರ್ತಿ, ಗಿರಿಜಾನಾಥ, ಭಿಕ್ಷಾಟನಮೂರ್ತಿ, ಮದನಹರ, ಶ್ವೇತವರಪ್ರದ, ತ್ರಿಪುರಹರ, ಜಲಂಧರಹರ, ಬ್ರಹ್ಮಕಪಾಲಧರ, ದಕ್ಷಾಧ್ವರಹರ, ನೃಸಿಹ್ಮಹರ, ಅರ್ಧನಾರೀಶ್ವರ, ಕಿರಾತೇಶ್ವರ, ಕಂಕಾಳಧರ, ಚಂಡವರಪ್ರದ, ವಿಷಧರ, ವಿಷ್ಣುಚಕ್ರಪ್ರದ, ಗಜಾಸುರಹರ, ಗುಹಜನಕ, ಏಕಪಾದಮೂರ್ತಿ, ಸುಖಾವಹಮೂರ್ತಿ, ದಕ್ಷಿಣಾಮೂರ್ತಿ, ಉರುಲಿಂಗಮೂರ್ತಿ, ಎಂಬದಾಗಿ ೨೫ ಲೀಲೆಗಳನ್ನು ಮಾಡಿದವನಾಗಿಯೂ, ಇರುವ ಪರಮೇಶ್ವರನು; ನಮ್ಮನ್ನು ನಿರಂತರದಲ್ಲೂ ಸಂರಕ್ಷಿಸಲಿ ಎಂದುಗ್ರಂಥಕರ್ತನು ತಾನುಮಾಡಿದಗ್ರಂಥವುನಿರ್ವಿಘ್ನವಾಗಿಸಮಾಪ್ತಿಯಾಗುವದಕ್ಕೋಸ್ಕರ ಇಷ್ಟದೇವತಾನಮಸ್ಕಾರಾತ್ಮಕಮಂಗಳವನ್ನು ಮಾಡಿರುವನು. ... ... ... ॥ ೧ ॥

ಸ್ರ ॥ ಗಂಗಾರಂಗತ್ತರಂಗಪ್ರಭವಕಣಗಣಸ್ಫಾರತಾರಾಪರೀತ । ಸ್ವಾಂಗಾರ್ಧೇಂದು ದ್ಯುತಿಪ್ರೋನ್ಮಿಳಿತನಿಜಜಟಾಜೂಟವಿಭ್ರಾಜಮಾನಂ ॥ ಶೃಂಗಾರಾಸಾರಗೌರೀಕಬಳಿತಕಳಿ ತಾರ್ಧಾಂಗನುದ್ಯದ್ದಯಾದ್ರಾ । ಪಾಂಗುಮಾಂಗಲ್ಯಸಾಕಲ್ಯಮನೆಮಗೊಲವಿಂಮಾಳ್ಕೆನಿ ಚ್ಚಂತ್ರಿಣೇತ್ರಂ ॥ .. .. ... ... ... ॥೨॥

ಶಾ ॥ ವ್ಯಾನಮ್ರಾಮರಕಾಮಿನೀಜನಗಳದ್ಧಮ್ಮಿಲ್ಲಪುಷ್ಪಾಸವಂ । ತಾನೊಕ್ಕೊಪ್ಪಿ ರೆ ಪಾದಪೀಠದೊಳದಂ ತಳ್ತುಂಬ ಭೃಂಗಾಳಿ ಬೆ ॥ ಳ್ಪಾನುತ್ತಂ ನಖರೋಚಿಯಿಂ ತೊಳಪ ವೋಲ್ಗೈದಾನತವ್ರಾತದೋ । ಷಾನೀಕಾಪನಯಪ್ರದರ್ಶಿನಿಯೆನಿಪ್ಪೀಶಾನಿಗಾಂವಂದಿಪೆಂ॥

ಉ ॥ ಶುಂಭನಿಶುಂಭದರ್ಪಹರೆ ಶಂಬರವೈರಿಮನೋಗದ । ಸ್ತಂಭಿನಿ ಕುಂಭಿನೀಧರ

ಗಂಗಾ......... ವಿಭ್ರಾಜಮಾನಂ- ಗಂಗಾ- ದೇವಗಂಗೆಯ, ರಂಗತ್ತರಂಗ- ಚಲಿಸುವತೆರೆಗಳಿಂದ, ಪ್ರಭವ- ಹುಟ್ಟಿದ, ಕಣಗಣ- ಜಲಬಿಂದುಸಮೂಹವೆಂಬ, ಸ್ಫಾರತಾರಾ- ಬಹಳನಕ್ಷತ್ರಗಳಿಂದ, ಪರೀತ- ಸುತ್ತಲ್ಪಟ್ಟ, ಸ್ವಾಂಗ- ತನ್ನಶರೀರವುಳ್ಳ, ಅರ್ಧೇಂದು- ಅರ್ಧಚಂದ್ರನ, ದ್ಯುತಿ- ಕಾಂತಿಯಿಂದ, ಪ್ರೋನ್ಮಿಳಿತ- ಕೂಡಿದ, ನಿಜಜಟಾಜೂಟ- ಸ್ವಕೀಯವಾದ ಜಟಾಪಟಲದಿಂದ, ವಿಭ್ರಾಜಮಾನಂ- ಪ್ರಕಾಶಿಸುವ; ಶೃಂಗಾರ.........ಅರ್ಧಾಂಗಃ— ಶೃಂಗಾರಾಸಾರ- ಶೃಂಗಾರರಸಧಾರಾರೂಪಳಾದ, ಗೌರೀ- ಪಾರ್ವತಿಯಿಂದ, ಕಬಳಿತ- ಆಕ್ರಮಿಸಲ್ಪಟ್ಟದ್ದಾಗಿಯೂ, ಕಳಿತ- ಅಭಿನ್ನವಾಗಿ ಸೇರಲ್ಪಟ್ಟದ್ದಾಗಿಯೂ ಇರುವ, ಅರ್ಧಾಂಗಂ- ಅರ್ಧಶರೀರವುಳ್ಳ; (ಅಂದರೆ ಅರ್ಧನಾರೀಶ್ವರರೂಪನೆಂದರ್ಥ,) ಉದ್ಯದ್ದಯಾದ್ರಾಪಾಂಗಂ- ಉದ್ಯತ್- ಹುಟ್ಟುತ್ತಿರುವ, ದಯಾ- ಕರುಣಾರಸದಿಂದ, ಆರ್ದ್ರ- ತೋಯ್ದ, ಅಪಾಂಗಂ- ಕಡೆಗಣ್ಣುಗಳುಳ್ಳ; ತ್ರಿಣೇತ್ರಂ- ಸೂರ್ಯಚಂದ್ರಾಗ್ನಿಲೋಚನನಾದಪರಶಿವನು; ಎಮಗೆ- ನಮಗೆ; ಮಾಂಗಲ್ಯಸಾಕಲ್ಯಮಂ- ಸಕಲಮಂಗಳಗಳನ್ನು; ಒಲವಿಂ- ಪ್ರೀತಿಯಿಂದ; ನಿಚ್ಚಂ- ನಿರಂತರದಲ್ಲಿಯೂ; ಮಾಳ್ಕೆ- ಮಾಡಲಿ ॥೨॥

ವ್ಯಾನಮ್ರ......ಆಸವಂ— ವ್ಯಾನಮ್ರ- ನಮಸ್ಕರಿಸಿದ, ಅಮರಕಾಮಿನೀಜನ- ದೇವತಾಸ್ತ್ರೀಯರುಗಳ, ಗಳದ್ಧಮ್ಮಿಲ್ಲ- ಜಾರಿದತುರುಬುಗಳಲ್ಲಿರುವ, ಪುಷ್ಪ- ಹೂವುಗಳ, ಆಸವಂ- ಮಕರಂದರಸವು; ತಾಂ- ಅದು; ಪಾದಪೀಠದೊಳ್- ಚರಣಪೀಠದಲ್ಲಿ; ಒಕ್ಕು- ಸುರಿದು; ಒಪ್ಪಿರೆ- ಪ್ರಕಾಶಿಸಿರಲು; ಅದಂ- ಆ ಮಕರಂದವನ್ನು; ತಳ್ತು- ಮುತ್ತಿಕೊಂಡು; ಉಂಬ- ಪಾನಮಾಡುವ; ಭೃಂಗಾಳಿ- ಭ್ರಮರಗಳ ಪಙ್ಕ್ತಿಯು; ನಖರೋಚಿಯಿಂ- ಉಗುರುಗಳಕಾಂತಿಯಿಂದ; ಬೆಳ್ಪಾನುತ್ತಂ- ಧಾವಳ್ಯವನ್ನು ಹೊಂದುತ್ತ; ತೊಳಪವೋಲ್ಗೈದು- ಪ್ರಕಾಶಿಸುವಹಾಗೆಮಾಡಿ; ಆನತ...... ಪ್ರದರ್ಶಿನಿ— ಆನತ- ನಮಸ್ಕರಿಸಿದಭಕ್ತರ, ವ್ರಾತ- ಸಮೂಹದ, ದೋಷಾನೀಕ- ಪಾಪರಾಶಿಯ, ಅಪನಯ- ಹೋಗಲಾಡಿಸುವಿಕೆಯನ್ನು, ಪ್ರದರ್ಶಿನಿ- ತೋರಿಸುವಳು, ಎನಿಪ್ಪ- ಎನಿಸುವ, ಈಶಾನಿಗೆ- ಪಾರ್ವತಿಗೆ, ಆಂ- ನಾನು, ವಂದಿಪೆಂ- ನಮಸ್ಕರಿಸುತ್ತೇನೆ.

ದೇವತಾಸ್ತ್ರೀಯರುರು ನಮಸ್ಕರಿಸಿದಾಗ ಅವರು ಮುಡಿದಿದ್ದ ಪುಷ್ಪಗಳ ಮಕರಂದರಸವು ತನ್ನಚರಣಪೀಠದಮೇಲೆ ಸುರಿದಿರಲು ಅದನ್ನು ಪಾನಮಾಡುವದಕ್ಕಾಗಿ ಬಂದು ಆಚ್ಛಾದಿಸಿರುವ ತುಂಬಿಗಳನ್ನು ತನ್ನ ಪಾದನಖಗಳ ಕಾಂತಿಯಿಂದ ಬೆಳ್ಳಗೆಮಾಡುವ ವ್ಯಾಜದಿಂದ ಶರಣಾಗತರ ಪಾಪಗಳನ್ನು ಪರಿಹರಿಸುವೆನೆಂಬರ್ಥವನ್ನು ತೋರಿಸುವಳಾದ ಪಾರ್ವತಿಗೆ ನಮಸ್ಕರಿಸುತ್ತೇನೆಂದುತಾತ್ಪರ್ಯ. ... ॥೩॥

ಶುಂಭ...... ಹರೆ— ಶುಂಭನಿಶುಂಭರೆಂಬ ದೈತ್ಯರಗರ್ವವನ್ನು ನಾಶಮಾಡಿದ; ಶಂಬರ...... ಸ್ತಂಭಿನಿ—* ಶಂಬರವೈರಿವಧೂ- ಮನ್ಮಥನಹೆಂಡತಿಯಾದರತೀದೇವಿಯ, ಮನೋಗದ- ಮನಸ್ಸಿನದುಃಖವನ್ನು,

* (ಅವ) ಶಂಬರ- ಶಂಬರಾಸುರನಿಗೆ, ವೈರಿ- ಶತ್ರುವು. †(ಅವ) ಕುಂಭಿನೀ- ಭೂಮಿಯನ್ನು, ಧರ-

ಕುಮಾರಿ ಕುಮಾರಗಜಾಸ್ಯಮಾತೆ ನಿ ॥ ರ್ದಂಭತಪಃಪ್ರಲಬ್ಧಪಶುಪಾರ್ಧಕಳೇಬರೆ ಲೋಕ
ಧಾತ್ರಿ ವಿ । ಶ್ವಂಭರಜಂಭಭಿತ್ಪ್ರಣುತೆ ಪಾರ್ವತಿ ಪಾಲಿಪುದೆನ್ನನಂಬಿಕೆ ॥ ... ॥ ೪ ॥
ಚಂ ॥ ಶಿವನಡಿಗಳ್ಗೆ ಮುಂಬರಿದು ಕುಂಬಿಡುವಬ್ಜಭವಾದಿದೇವರೊ । ಪ್ಪುವಕನಕ
ಸ್ಫುರನ್ಮಕುಟಘಟ್ಟನದಿಂ ಸುರಿದೊಟ್ಟಿಲಾದರೇ ॥ ಣುವನಿರದೊಟ್ಟಿಕೊಂಡು ಕನಕಾಚಲದಂ
ತತಿರಮ್ಯನಾದದಾ । ನವಿಸರನಿರ್ಝರಂ ಗಜಮುಖಂ ಮಿಗೆಮಾಳ್ಕೆಮಗಿಷ್ಟಸಿದ್ಧಿಯಂ ॥ ೫ ॥
ಮ ॥ ಹರತೇಜಃಪುಂಜಪುಂಜೀಕೃತತನು ಸತತಮುಸ್ತಾರಕಾರಾತಿಧಾತ್ರೀ । ಧರಪು
ತ್ರೀಪುತ್ರ ನತ್ರಿಪ್ರಭವರುಚಿಯಶಸ್ತಾರಿ ವಿಸ್ತಾರಶಕ್ತಿ ॥ ಸ್ಫುರಿತಂ ಕ್ರೌಂಚಾಚಲಚ್ಛೇ

---

ಸ್ತಂಭಿನಿ- ನಿಲ್ಲಿಸಿದ; † ಕುಂಭಿನೀಧರಕುಮಾರಿ- ಹಿಮವಂತನಮಗಳಾದ; ಕುಮಾರ-ಷಣ್ಮುಖ, ‡ ಗಜಾಸ್ಯ ವಿಘ್ನೇಶ್ವರ, ಇವರಿಗೆ ಮಾತೆ- ತಾಯಿಯಾದ; ನಿರ್ದಂಭ........ಕಳೇಬರೆ— ನಿರ್ದಂಭ- ನಿಷ್ಕಪಟವಾದ, ತಪಃ- ತಪಸ್ಸಿನಿಂದ, ಪ್ರಲಬ್ಧ- ಪಡೆಯಲ್ಪಟ್ಟ, § ಪಶುಪ-ಶಿವನ, ಅರ್ಧಕಳೇಬರೆ- ಅರ್ಧಶರೀರವುಳ್ಳ; ಲೋಕಧಾತ್ರಿ—ಜಗನ್ಮಾತೆಯಾದ; ವಿಶ್ವಂಭರಜಂಭಭಿತ್ಪ್ರಣುತೆ- ¶ ವಿಶ್ವಂಭರ- ವಿಷ್ಣುವೇನು, $ ಜಂಭಭಿತ್- ದೇವೇಂದ್ರನೇನು ಇವರಿಂದ, ಪ್ರಣುತೆ- ಸ್ತುತಿಸಲ್ಪಟ್ಟ; ಅಂಬಿಕೆ- ಮಾತೆಯಾದ; ‖ ಪಾರ್ವತಿ- ಪಾರ್ವತಿಯೇ; ಎನ್ನಂ- ನನ್ನನ್ನು; ಪಾಲಿಪುದು- ರಕ್ಷಿಸುವದು. ॥ ೪ ॥

ಶಿವನ; ಅಡಿಗಳ್ಗೆ- ಪಾದಗಳಿಗೆ; ಕುಂಬಿಡುವ- ನಮಸ್ಕರಿಸುವ; ಅಬ್ಜಭವಾದಿದೇವರ- * ಅಬ್ಜಭವ- ಬ್ರಹ್ಮನೇ, ಆದಿ- ಮೊದಲಾಗುಳ್ಳ, ದೇವರ- ದೇವತೆಗಳ; ಒಪ್ಪುವ- ಪ್ರಕಾಶಿಸುವ; ಕನಕ........ಘಟ್ಟನದಿಂ—ಕನಕ- ಚಿನ್ನದ, ಸ್ಫುರನ್ಮಕುಟ- ಹೊಳೆಯುವ ಕಿರೀಟಗಳ, ಘಟ್ಟನದಿಂ- ತಗಲುವಿಕೆಯಿಂದ, ಸುರಿದು; ಒಟ್ಟಿಲಾದ- ರಾಶಿಯಾದ; ರೇಣುವಂ- ಧೂಳಿಯನ್ನು; ಇರದೆ- ಬಿಡದೆ; ಒಟ್ಟಿಕೊಂಡು- ಮೇಲೆಹಾಕಿಕೊಂಡು; ದಾನವಿಸರನಿರ್ಝರಂ-ಮದೋದಕಸಮುದಾಯವೆಂಬ ಗಿರಿನದಿಯುಳ್ಳವನಾದಕಾರಣವೇ, † ಕನಕಾಚಲದಂತೆ- ಮೇರುಪರ್ವತದಹಾಗೆ; ಅತಿರಮ್ಯನಾದ- ಬಹುಮನೋಹರನಾದ; ಗಜಮುಖಂ- ಗಣಪತಿಯು; ಎಮಗೆ; ಇಷ್ಟಸಿದ್ಧಿಯಂ- ಮನೋರಥಪ್ರಾಪ್ತಿಯನ್ನು; ಮಾಳ್ಕೆ- ಮಾಡಲಿ. ॥ ೫ ॥

ಹರ........ತನು— ಹರ- ಪರಮೇಶ್ವರನ, ತೇಜಃಪುಂಜ- ತೇಜೋರಾಶಿಗಳಿಂದ, ಪುಂಜೀಕೃತ ಸೇರಿಸಲ್ಪಟ್ಟ, ತನು- ಶರೀರವುಳ್ಳ (ಅಂದಗೆ ಆರುಭಾಗವಾದ ಶಿವನ ತೇಜೋರಾಶಿಗಳಾಗಿದ್ದು. ಪಾರ್ವತಿಯಿಂದ ಸೇರಿಸಿ ಏಕದೇಹವಾಗಿ ಮಾಡಲ್ಪಟ್ಟವನೆಂಬರ್ಥ.) ಸತತಮುಸ್ತಾರಕಾರಾತಿ- ಅಜ್ಞಾನದೊಡನೆಕೂಡಿದತಾರಕಾಸುರನಿಗೆ ಶತ್ರುವಾದ; * ಧಾತ್ರೀಧರಪುತ್ರೀ-ಪಾರ್ವತಿಗೆ, ಪುತ್ರಂ- ಸುತನಾದ; ಅತ್ರಿ.....ಸ್ತಾರಿ— † ಅತ್ರಿಪ್ರಭವ- ಚಂದ್ರನ, ರುಚಿ-ಪ್ರಕಾಶದಹಾಗೆ ಪ್ರಕಾಶವುಳ್ಳ, ಯಶಃ- ಕೀರ್ತಿಯುಳ್ಳ, ತಾರಿ- ತೋರುತ್ತಿರುವ; ವಿಸ್ತಾರಶಕ್ತಿಸ್ಫುರಿತಂ- ವಿಶಾಲವಾದಶಕ್ತ್ಯಾಯುಧದಿಂದ ಪ್ರಕಾಶಿಸುವ; ಕ್ರೌಂಚಾಚಲಚ್ಛೇದ

---

ಧರಿಸಿರುವದು. ‡ (ಅವ) ಗಜ- ಆನೆಯ, ಆಸ್ಯ- ಮುಖವುಳ್ಳವನು. § (ಅವ) ಪಶು- ವಿಷ್ಣು ಬ್ರಹ್ಮಾದಿಪಶುಗಳನ್ನು,ಪ- ರಕ್ಷಿಸುವವನು; ¶ (ಅವ) ವಿಶ್ವಂ- ಪ್ರಪಂಚವನ್ನು, ಭರ-ರಕ್ಷಿಸುವವನು, $ (ಅವ) ಜಂಭ- ಜಂಭಾಸುರನನ್ನು, ಭಿತ್- ಸಂಹರಿಸಿದವನು; ‖ (ಅವ) ಪರ್ವತರಾಜನಪುತ್ರಿಯು. ... ॥ ೪ ॥

* (ಅವ) ಅಬ್ಜ-ಕಮಲದಲ್ಲಿ, ಭವ- ಹುಟ್ಟಿದವನು. † (ಅವ) ಕನಕ- ಚಿನ್ನದ, ಅಚಲ,ಬೆಟ್ಟವು. ॥೫॥

* (ಅವ) ಧಾತ್ರೀ- ಭೂಮಿಯನ್ನು, ಧರ- ಧರಿಸಿರುವಪರ್ವತದ, ಪುತ್ರೀ- ಮಗಳು; † (ಅವ) ಅತ್ರಿ- ಅತ್ರಿಯೆಂಬಋಷಿಯಿಂದ, ಪ್ರಭವ- ಹುಟ್ಟಿದವನು. ... ... ... ॥ ೬ ॥

ದಕ ನಖಿಲಕಲಾಶಾಲಿ ಲೀಲಾಲಸತ್ಕೇ | ಕಿರಥಂ ಮತ್ಕಾವ್ಯಕೊಳ್ಪಂ ಕರುಣಿಸುಗೆ ಮಹೋ
ದಾರಸಾರಂ ಕುಮಾರಂ ‖ .. ... ... ... ... ‖ ೬ ‖

ಸ್ರ ‖ ರುದ್ರೋನ್ನಿದ್ರಾಳಿಕಾಕ್ಷಿಪ್ರಭವಶಿಖಿಶಿಖಾವಿರ್ಭವಜ್ಜಂಭಭಿದ್ರ | ತ್ನೋದ್ರಶ್ಮಿ
ಸ್ಫೂರ್ಜದುದ್ಭೀಷಣತಟದುರುದಂಷ್ಟ್ರಾಕರಾಳಾಸ್ಯಕಾಯಂ ‖ ರೌದ್ರೋದ್ರೇಕಪ್ರತಾ
ಪಪ್ರಶಮಿತಪಟುದಕ್ಷೇಷ್ಟಿಗಾಮರ್ತ್ಯದರ್ಪಂ | ಭದ್ರಶ್ರೀದಾನಿ ತಾನಕ್ಕೆಮಗೆ ದುರಿತವಿ
ದ್ರಾವಣಂ ವೀರಭದ್ರಂ ‖ .. ... ... ... ... ‖ ೭ ‖

ಮ ‖ ಶರಣಾನಂದಸುಧಾಬ್ಧಿಶೀತಕಿರಣಂ ಬ್ರಹ್ಮಾಚ್ಯುತೇಂದ್ರಾರ್ಚ್ಯಸ | ಚ್ಚರಣಂ
ಭಾವಭವಪ್ರಭಾವಹರಣಂ ನಿರ್ವಾಣಲಕ್ಷ್ಮೀಸುಖಾ ‖ ವರಣಂ ನಿಶ್ಚಲಚಿತ್ಸುಖಾಧಿಕರಣಂ ಕ

---

ಕಂ- ಕ್ರೌಂಚಪರ್ವತವನ್ನು ಸೀಳಿದ; ಅಖಿಲಕಲಾಶಾಲಿ- ಸಕಲವಿದ್ಯೆಗಳಿಂದಲೂ ಶೋಭಿಸುತ್ತಿರುವ; ಲೀಲಾಲಸತ್ಕೇಕಿರಥಂ— ಆಟಗಳಿಂದೊಪ್ಪುವ ನವಿಲೇ ವಾಹನವಾಗುಳ್ಳ; ಮಹೋದಾರಸಾರಂ- ಅಧಿಕವಾದ ದಾತೃಗಳಲ್ಲಿ ಶ್ರೇಷ್ಠನಾದ; ಕುಮಾರಂ- ಷಣ್ಮುಖನು; ಮತ್ಕಾವ್ಯಕೆ- ನನ್ನ ಗ್ರಂಥಕ್ಕೆ; ಒಳ್ಪಂ- ಶುಭವನ್ನು ಕರುಣಿಸುಗೆ-ದಯಪಾಲಿಸಲಿ. ‖ ೬ ‖

ರುದ್ರೋ........ಕಾಯಂ—ರುದ್ರ- ಶಿವನ, ಉನ್ನಿದ್ರ- ತೆರೆಯಲ್ಪಟ್ಟ, ಅಳಿಕಾಕ್ಷಿ- ಹಣೆಗಣ್ಣಿನಿಂದ ಪ್ರಭವ- ಜನಿಸಿದ, ಶಿಖಿ- ಅಗ್ನಿಯ, ಶಿಖಾ- ಜ್ವಾಲೆಯ ದೆಸೆಯಿಂದ, ಆವಿರ್ಭವತ್- ಅವತರಿಸಿದ್ದಾಗಿಯೂ, ಜಂಭಭಿದ್ರತ್ನ- ಇಂದ್ರನೀಲಮಣಿಯ, ಉತ್- ಅಧಿಕವಾದ, ರಶ್ಮಿ- ಕಾಂತಿಯೋಪಾದಿಯಲ್ಲಿ, ಸ್ಫೂರ್ಜತ್- ಹೊಳೆಯುವದಾಗಿಯೂ, ಉದ್ಭೀಷಣ- ಅತಿಭಯಂಕರವಾದ, ತಟಿತ್- ಮಿಂಚಿನಹಾಗೆ, ಉರು-ಉದ್ದವಾದ, ದಂಷ್ಟ್ರಾ- ಕೋರೆದಾಡೆಗಳಿಂದ, ಕರಾಳ- ಕ್ರೂರವಾದ, ಆಸ್ಯ- ಮುಖವುಳ್ಳದ್ದಾಗಿಯೂ ಇರುವ, ಕಾಯಂ- ದೇಹವುಳ್ಳ; ರೌದ್ರೋ......ದರ್ಪಂ— ರೌದ್ರ- ಭಯಂಕರತ್ವದ, ಉದ್ರೇಕ- ಹೆಚ್ಚಿಗೆಯುಳ್ಳ, ಪ್ರತಾಪ- ಪರಾಕ್ರಮದಿಂದ, ಪ್ರಶಮಿತ- ಅಡಗಿಸಲ್ಪಟ್ಟ, ಪಟುದಕ್ಷ- ಸಮರ್ಥನಾದ ದಕ್ಷಬ್ರಹ್ಮನ, ಇಷ್ಟಿ- ಯಜ್ಞಶಾಲೆಯನ್ನು, ಗ- ಹೊಂದಿದ, ಅಮರ್ತ್ಯ- ದೇವತೆಗಳ, ದರ್ಪಂ- ಗರ್ವವುಳ್ಳ; (ಅಂದರೆ) ದಕ್ಷಾಧ್ವರಕ್ಕೆ ಬಂದಿದ್ದ ದೇವತೆಗಳ ಕೊಬ್ಬನ್ನು ತನ್ನ ಶೌರ್ಯದಿಂದ ಅಡಗಿಸಿದವನೆಂದರ್ಥ. ದುರಿತವಿದ್ರಾವಣಂ- ಪಾಪವನ್ನು ಓಡಿಸುವ; ವೀರಭದ್ರಂ, ವೀರಭದ್ರೇಶ್ವರನು; ತಾಂ- ಎಮಗೆ; ಭದ್ರಶ್ರೀದಾನಿ- ಶುಭಸಮೃದ್ಧಿಪ್ರದಾಯಕನು; ಅಕ್ಕೆ- ಆಗಲಿ. ... ... ... ... ... ... ‖ ೭‖

ಶರಣಾ........ಕಿರಣಂ—ಶರಣ- ಭಕ್ತರ, ಆನಂದ- ಸಂತೋಷವೆಂಬ, ಸುಧಾಬ್ಧಿ- ಕ್ಷೀರಸಮುದ್ರಕ್ಕೆ, * ಶೀತಕಿರಣಂ- ಚಂದ್ರನಾದ; ಬ್ರಹ್ಮಾ......ಚರಣಂ—ಬ್ರಹ್ಮಾಚ್ಯುತೇಂದ್ರ- ಬ್ರಹ್ಮ ವಿಷ್ಣು ದೇವೇಂದ್ರರಿಂದ, ಅರ್ಚ್ಯ- ಪೂಜಿಸಲ್ಪಡುವದಕ್ಕೆ ಯೋಗ್ಯವಾದ, ಸಚ್ಚರಣಂ- ಸವಿಾಚೀನವಾದ ಪಾದಗಳುಳ್ಳ; ಭಾವಭವಪ್ರಭಾವಹರಣಂ— † ಭಾವಭವ- ಮನ್ಮಥನ, ಪ್ರಭಾವ- ಶಕ್ತಿಯನ್ನು, ಹರಣಂ- ಹೋಗಲಾಡಿಸುವ; ನಿರ್ವಾಣಲಕ್ಷ್ಮೀಸುಖಾವರಣಂ— ನಿರ್ವಾಣಲಕ್ಷ್ಮೀ- ಮೋಕ್ಷಲಕ್ಷ್ಮಿಯ; ಸುಖ- ಸೌಖ್ಯದ, ಆವರಣಂ- ಆಚ್ಛಾದನವುಳ್ಳ; (ಅಂದರೆ ಮೋಕ್ಷಾನಂದದಿಂದ ತುಂಬಲ್ಪಟ್ಟವನೆಂಬರ್ಥ.) ನಿಶ್ಚಲಚಿತ್ಸುಖಾಧಿಕರಣಂ- ನಿಶ್ಚಲ- ಸ್ಥಿರವಾದ, ಚಿತ್ಸುಖ- ಜ್ಞಾನಾನಂದಕ್ಕೆ, ಅಧಿಕರಣಂ- ಆಶ್ರಯನಾದ; ಕಲ್ಯಾಣಭಾಸ್ವದ್ಗುಣಾಭ

---

* (ಅವ.) ಶೀತ- ತಂಪಾದ, ಕಿರಣಂ- ಕಾಂತಿಯುಳ್ಳವನು, † (ಅವ) ಭಾವ- ಮನಸ್ಸಿನಲ್ಲಿ, ಭವ- ಹುಟ್ಟಿದವನು. ... ... ... ... ... ‖ ೮ ‖

ಲ್ಯಾಣಭಾಸ್ವದ್ಗುಣಾ । ಭರಣಂಶ್ರೀಬಸವೇಶನೊಲ್ದುಕರುಣಂಬೆತ್ತೀಗೆಸದ್ಭಕ್ತಿಯಂ ॥೮॥

ಶಾ ॥ ಮೋಹಧ್ವಾಂತದಿವಾಕರಂ ಪ್ರಬಳಮಾಯಾಭೀಕರಂ ಭವ್ಯಸಂ । ದೋಹಸ್ತುತ್ಯ ಗುಣಾಕರಂ ಘನಕೃಪಾರತ್ನಾಕರಂದುರ್ಮತ ॥ ವ್ಯೂಹಾಂಭೋಜಸುಧಾಕರಂ ಪ್ರಣತವೃಂದ ಶ್ರೀಕರಂಮಾಳ್ಕೆವೀ । ತಾಹಂಕಾರಸುಬೋಧ ಚೆನ್ನಬಸವಂಸುಜ್ಞಾನಸಂಪತ್ತಿಯಂ ॥೯॥

ಮ ॥ ಜಿತಮಾಯಂ ನಿರಪಾಯ ನನ್ವಿತಚಿದಂಗಂ ಸದ್ದಯಾಪಾಂಗನೂ । ರ್ಜಿತಶೀಲಂ ಶ್ರುತಿಮೂಲ ನಾತ್ತಶಿವಮಂತ್ರಂ ಪ್ರೋಕ್ತತಂತ್ರಂಕುಸಂ ॥ ಸೃತಿದೂರಂ ಗಣಸಾರನ ನ್ಯಸಮಯಾಹಂಕಾರಶಂಕಾಹರಂ । ಸತತಂ ಮಾಳ್ಕೆಮಗಲ್ಲಮಪ್ರಭುವರಂ ವೈರಾಗ್ಯಸೌಭಾಗ್ಯಮಂ ॥ ... ... ... ... ... ... ॥೧೦॥

---

ರಣಂ—ಕಲ್ಯಾಣ- ಮಂಗಳಕರಗಳಾದ, ಭಾಸ್ವದ್ಗುಣ- ಪ್ರಕಾಶಮಾನವಾದಸದ್ಗುಣಗಳೇ, ಆಭರಣಂ-ಭೂಷಣವಾಗುಳ್ಳ; ಶ್ರೀಬಸವೇಶಂ-ಸಂಪತ್ತಿನೊಡನೆಕೂಡಿದ ಬಸವೇಶ್ವರನು; ಒಲ್ದು-ಮೆಚ್ಚಿ; ಕರುಣಂಬೆತ್ತು-ಕಾರುಣ್ಯವನ್ನುಹೊಂದಿ; ಸದ್ಭಕ್ತಿಯಂ- ಉತ್ತಮವಾದಭಕ್ತಿಯನ್ನು; ಈಗೆ- ಕೊಡುವನಾಗಲಿ. ॥೮॥

ಮೋಹಧ್ವಾಂತದಿವಾಕರಂ—ಮೋಹ- ಅಜ್ಞಾನವೆಂಬ, ಧ್ವಾಂತ- ಕತ್ತಲೆಗೆ, * ದಿವಾಕರಂ- ಸೂರ್ಯನಾದ; ಪ್ರಬಳಮಾಯಾಭೀಕರಂ— ಪ್ರಬಳಮಾಯಾ- ಅಧಿಕವಾದಮಾಯೆಗೆ, ಭೀಕರಂ- ಭಯಂಕರನಾದ; ಭವ್ಯಸಂದೋಹಸ್ತುತ್ಯಗುಣಾಕರಂ—ಭವ್ಯ- ಪೂಜ್ಯರ, ಸಂದೋಹ- ಗುಂಪಿನಿಂದ, ಸ್ತುತ್ಯ- ಕೊಂಡಾಡುವದಕ್ಕೆ ಯೋಗ್ಯವಾದ, ಗುಣ- ಸದ್ಗುಣಗಳಿಗೆ, ಆಕರಂ- ಜನ್ಮಭೂಮಿಯಾದ; ಘನಕೃಪಾರತ್ನಾಕರಂ- ಘನಕೃಪಾ- ಅಧಿಕವಾದ ದಯಾರಸಕ್ಕೆ, † ರತ್ನಾಕರಂ- ಸಮುದ್ರನಾದ; ದುರ್ಮತವ್ಯೂಹಾಂಬೋಜಸುಧಾಕರಂ-ದುರ್ಮತ-ದುಷ್ಟಮತಗಳ, ವ್ಯೂಹ-ಸಮುದಾಯವೆಂಬ, ‡ ಅಂಭೋಜ - ಕಮಲಕ್ಕೆ, § ಸುಧಾಕರಂ-ಚಂದ್ರನಾದ; ಪ್ರಣತವೃಂದಶ್ರೀಕರಂ- ಪ್ರಣತವೃಂದ- ನಮ್ರರಾದಭಕ್ತರಗುಂಪಿಗೆ, ಶ್ರೀಕರಂ- ಸಂಪತ್ತನ್ನುಂಟುಮಾಡುವ; ವೀತಾಹಂಕಾರಸುಬೋಧಚೆನ್ನಬಸವಂ- ವೀತಾಹಂಕಾರ- ಅಹಂಕಾರವಿಲ್ಲದ, ಸುಬೋಧ- ಒಳ್ಳೇಜ್ಞಾನವುಳ್ಳ, ಚೆನ್ನಬಸವಂ- ಚೆನ್ನಬಸವೇಶ್ವರನು; ಸುಜ್ಞಾನಸಂಪತ್ತಿಯಂ- ಸಮೀಚೀನ ಜ್ಞಾನ ಸಂಪತ್ತನ್ನು; ಮಾಳ್ಕೆ- ಮಾಡಲಿ. ॥೯॥

ಜಿತಮಾಯಂ- ಮಾಯೆಯನ್ನುಗೆದ್ದ; ನಿರಪಾಯಂ- ನಾಶವಿಲ್ಲದ; ಅನ್ವಿತಚಿದಂಗಂ- ಜ್ಞಾನಾಂಗದೊಡನೆಕೂಡಿದ; ಸದ್ದಯಾಪಾಂಗಂ- ದಯಾರಸಭರಿತವಾದ ಕಡೆಗಣ್ಣುಗಳುಳ್ಳ; ಊರ್ಜಿತಶೀಲಂ- ಅಧಿಕವಾದಸದಾಚಾರವುಳ್ಳ; ಶ್ರುತಿಮೂಲಂ- ವೇದಗಳಿಗೆಕಾರಣನಾದ; ಆತ್ತಶಿವಮಂತ್ರಂ- ಆತ್ತ- ಪಡೆಯಲ್ಪಟ್ಟ, ಶಿವಮಂತ್ರಂ- ಪಂಚಾಕ್ಷರೀಮಂತ್ರವುಳ್ಳ, (ಅಂದರೆಮಂತ್ರಪ್ರತಿಪಾದ್ಯನೆಂಬರ್ಥವು) ಪ್ರೋಕ್ತಮಂತ್ರಂ- ಹೇಳಲ್ಪಟ್ಟಶೈವಾಗಮಗಳುಳ್ಳ; ಕುಸಂಸೃತಿದೂರಂ- ದುಷ್ಟಸಂಸಾರಕ್ಕೆ ದೂರನಾದ, ಗಣಸಾರಂ- ಪ್ರಮಥಶ್ರೇಷ್ಠನಾದ; ಅನ್ಯಸಮಯಾಹಂಕಾರಶಂಕಾಹರಂ— ಅನ್ಯಸಮಯ- ಅನ್ಯಮತದ, ಅಹಂಕಾರ- ಗರ್ವದಿಂದುಂಟಾದ, ಶಂಕಾ- ಭಯವನ್ನು, ಹರಂ- ಹೋಗಲಾಡಿಸುವ; ಅಲ್ಲಮಪ್ರಭುವರಂ- ಶ್ರೇಷ್ಠನಾದಅಲ್ಲಮಪ್ರಭುವು; ಎಮಗೆ- ನಮಗೆ; ವೈರಾಗ್ಯಸೌಭಾಗ್ಯಮಂ- ವೈರಾಗ್ಯಭಾಗ್ಯವನ್ನು; ಸತತಂ- ಯಾವಾಗಲೂ; ಮಾಳ್ಕೆ- ಮಾಡಲಿ. ... ... ... ... ... ॥೧೦॥

---

* (ಅವ) ಹಗಲನ್ನುಮಾಡುವನು; † (ಅವ) ರತ್ನಗಳಿಗೆ ಆಶ್ರಯವಾದದ್ದು; ‡ (ಅವ)ಅಂಭಃ-ನೀರಿನಲ್ಲಿ, ಜ- ಹುಟ್ಟುವದು; § (ಅವ) ಸುಧಾ- ಅಮೃತಮಯವಾದ, ಕರ- ಕಾಂತಿಯುಳ್ಳವನು. ॥೯॥

ಉ ॥ ಸದ್ಗುರುವಾದಿಗಾದಿಗುರುಜಂಗಮಕೋಟಿಗೆಮುಖ್ಯನಾದಭಾ, ಸ್ವದ್ಗುರುವಾಗ
ಮಂಗಳಡಿಗಾಣದೆಬೊಬ್ಬಿಡೆಪಾಟಗೆಯ್ಯದು ॥ ದ್ಯದ್ಗುರುಭಕ್ತದೇಹಿಕಲಸದ್ಗುರುಷಟ್ಸ್ಥಲ
ಚಿತ್ಕ್ರಿಯಾಸ್ಪದಂ,ಮದ್ಗುರುರೇಣುಕೇಶ್ವರಮಹಾಗುರುಮಾಳ್ಕೆಮಗಿಷ್ಟಸಿದ್ಧಿಯಂ॥೧೧॥

ಮ ॥ ನತನಾನಾನರನಾಥಮೌಳಿಘಟಿತಸ್ವಾರಾಣ್ಮಣೀಂದಿಂದಿರ। ಪ್ರತತಿಪ್ರಸ್ಫುರಿತಂ
ಗಳಿಷ್ಟ॥ ವರಸೌಗಂಧಾಸ್ಪದಂಗಳ್ಮಹಾ॥ ವ್ರತಭೃತ್ತಾಪಸಮಾನಸಾಮಳಸರೋವಾಸಾಶ್ರಿ
ತಶ್ರೀಗಳಾ । ಚತುರಾಚಾರ್ಯಪದಾಂಬುಜಂಗಳೆಮಗೀಗಾಮೋದಸಂದೋಹಮಂ ॥೧೨॥

ಉ ॥ ಖಂಡಿತದೃಪ್ತದುರ್ಮತವಿವಾದವಿಚಕ್ಷಣವಾದಕೋವಿದ । ರ್ದಂಡಿತಮಾನಸಾದಿ

---

ಸದ್ಗುರು- ಗುರುಶ್ರೇಷ್ಠನಾದ; ಆದಿಗೆ ಆದಿಗುರು- ಅನಾದಿಗುರುವಾದ; ಜಂಗಮಕೋಟಿಗೆ- ಅನೇಕಜಂಗಮರಿಗೆ, ಮುಖ್ಯನಾದ- ಅಗ್ರೇಸರನಾದ; ಭಾಸ್ವದ್ಗುರು- ಪ್ರಕಾಶಿಸುವ ಗುರುವಾದ; ಆಗಮಂಗಳ್- ಆಗಮಗಳು, ಅಡಿಗಾಣದೆ- ಪಾದವನ್ನು ಕಾಣದೆ, ಬೊಬ್ಬಿಡೆ- ಕೂಗುತ್ತಿರಲು, ಪಾಟಗೆಯ್ಯದ- ಸಾದೃಶ್ಯರಹಿತನಾದ, ಉದ್ಯದ್ಗುರು- ಶ್ರೇಷ್ಠಗುರುವಾದ; ಭಕ್ತದೇಹಿಕಲಸದ್ಗುರು—ಭಕ್ತದೇಹಿಕ- ಭಕ್ತನೇ ದೇಹವಾಗುಳ್ಳ; ಲಸದ್ಗುರು- ಪ್ರಕಾಶಮಾನವಾದ ಗುರುವಾದ; ಷಟ್ಸ್ಥಲಚಿತ್ಕ್ರಿಯಾಸ್ಪದಂ- ಷಟ್ಸ್ಥಲ- ಭಕ್ತ, ಮಾಹೇಶ್ವರ, ಪ್ರಸಾದಿ, ಪ್ರಾಣಲಿಂಗಿ, ಶರಣ, ಐಕ್ಯ, ಎಂಬ ಷಟ್ಸ್ಥಲಗಳಿಂದುಂಟಾದ, ಚಿತ್- ಜ್ಞಾನಕ್ಕೂ, ಕ್ರಿಯಾ- ಆಚಾರಕ್ಕೂ, ಆಸ್ಪದಂ- ಆಶ್ರಯನಾದ; ಮದ್ಗುರು- ನನ್ನ ಗುರುವಾದ; ರೇಣುಕೇಶ್ವರಮಹಾಗುರು- ರೇಣುಕಾಚಾರ್ಯರೆಂಬ ಮಹಾಗುರುವು; ಎಮಗೆ- ನಮಗೆ, ಇಷ್ಟಸಿದ್ಧಿಯಂ- ಇಷ್ಟಾರ್ಥಸಿದ್ಧಿಯನ್ನು; ಮಾಳ್ಕೆ- ಮಾಡಲಿ. ಎಂದು ಕವಿಯು ತನ್ನಗೋತ್ರಕ್ಕೆ ಆದಿಪುರುಷರಾದ ರೇವಣಸಿದ್ಧರೆಂಬ ಪರ್ಯಾಯನಾಮವುಳ್ಳ ರೇಣುಕಾಚಾರ್ಯರನ್ನು ಸ್ತುತಿಸಿರುವನು. ... ... ॥ ೧೧ ॥

ನತ......ಪ್ರಸ್ಫುರಿತಂಗಳ್— ನತ- ನಮಸ್ಕರಿಸುವ, ನಾನಾ- ಅನೇಕವಿಧರಾದ, * ನರನಾಥ- ರಾಜರುಗಳ, ಮೌಳಿ- ಕಿರೀಟದಲ್ಲಿ, ಘಟಿತ- ಕೆತ್ತಲ್ಪಟ್ಟ, † ಸ್ವಾರಾಣ್ಮಣಿ- ಇಂದ್ರನೀಲಮಣಿಗಳೆಂಬ, ಇಂದಿಂದಿರ- ತುಂಬಿಗಳ, ಪ್ರತತಿ- ಗುಂಪುಗಳಿಂದ, ಪ್ರಸ್ಫುರಿತಂಗಳ್- ಪ್ರಕಾಶಿಸಲ್ಪಟ್ಟ; ಇಷ್ಟ...... ಗಳ್- ಇಷ್ಟವರ- ಅಭೀಷ್ಟವಾದವರಗಳೆಂಬ, ಸೌಗಂಧ- ಸುಗಂಧಕ್ಕೆ, ಅಸ್ಪದಂಗಳ್- ಆಶ್ರಯಗಳಾದ; ಮಹಾ.........ಶ್ರೀಗಳ್ - ಮಹಾವ್ರತ- ಶ್ರೇಷ್ಠವಾದ ವ್ರತಗಳನ್ನು; ಭೃತ್- ಧರಿಸಿರುವ, ತಾಪಸ- ತಪಸ್ವಿಗಳ, ಮಾನಸ- ಮನಸ್ಸೆಂಬ, ಅಮಳ- ನಿರ್ಮಳವಾದ, ಸರಃ- ಕೊಳದಲ್ಲಿ, ವಾಸ- ಇರುವಿಕೆಯುಳ್ಳ; ಆಶ್ರಿತ- ಹೊಂದಿರುವ, ಶ್ರೀಗಳ್- ಲಕ್ಷ್ಮಿಯುಳ್ಳ; ಆಚತುರಾಚಾರ್ಯಪದಾಂಬುಜಂಗಳ್- ಆಚತುರಾಚಾರ್ಯ- ಪ್ರಸಿದ್ಧರಾದರೇಣುಕಾದಿಚತುರಾಚಾರ್ಯರ; ಪದಾಂಬುಜಂಗಳ್- ಪದ- ಪಾದಗಳೆಂಬ, ‡ ಅಂಬುಜಂಗಳ್- ಕಮಲಗಳು; ಎಮಗೆ- ನಮಗೆ, ಆಮೋದಸಂದೋಹಮಂ- ಆಮೋದ- ಸಂತೋಷವೆಂಬ (ಆಮೋದ- ಪರಿಮಳದ) ಸಂದೋಹಮಂ- ಸಮುದಾಯವನ್ನು; ಈಗೆ- ಕೊಡುವವುಗಳಾಗಲಿ. ।೧೨॥

ಖಂಡಿತ......ಕೋವಿದರ್- ಖಂಡಿತ- ನಿರಾಕರಿಸಲ್ಪಟ್ಟ, ದೃಪ್ತ- ಗರ್ವಿಷ್ಠರ, ದುರ್ಮತ- ಕುತ್ಸಿತಮತವಿಷಯಕವಾದ, ವಿವಾದ- ಪ್ರಸಂಗಗಳಲ್ಲಿ, ವಿಚಕ್ಷಣ- ಪ್ರೌಢವಾದ; ವಾದ- ಪ್ರಸಂಗಗಳಲ್ಲಿ, ಕೋವಿದರ್- ಸಮರ್ಥರಾದ; ದಂಡಿತ......ಪಾಲಕರ್- ದಂಡಿತ- ನಿಗ್ರಹಿಸಲ್ಪಟ್ಟ, ಮಾನಸ- ಮನಸ್ಸೇ, ಆದಿ- ಮೊದಲಾದ, ಕರಣ- ಇಂದ್ರಿಯವೇನು; ಅಂಗ- ಶರೀರವೇನು ಇವುಗಳುಳ್ಳ, ಮಹಾಶಿವಭಕ್ತ- ಶ್ರೇಷ್ಠರಾ

---

* (ಅವ) ನರ- ಮನುಷ್ಯರಿಗೆ,ನಾಥ- ಅಧಿಪತಿಯು; † (ಅವ) ಸ್ವಾರಾಟ್- ಸ್ವರ್ಗಕ್ಕೆ ಪತಿಯಾದ ಇಂದ್ರ, ಮಣಿ- ರತ್ನ ‡ (ಅವ) ಅಂಬು-ನೀರಿನಲ್ಲಿ, ಜ- ಹುಟ್ಟುವದು. ... ॥ ೧೨ ॥

ಕರಣಾಂಗಮಹಾಶಿವಶರಣ್ಣಪಾಲಕರ್ ॥ ಮಂಡಿತವೀರಶೈವಮತದಿವ್ಯಮಹತ್ವನಿದರ್ಶನಕ್ಷಮ। ರ್ಪಂಡಿತ ರೀವರಕ್ಕೆಮಗೆ ಮೂವರತೀವಮತಿಪ್ರಕಾಶಮಂ ॥ ... ... ॥೧೩॥

ಶಾ ॥ ಕಾಮಾರಾತಿನಿಕಾಮಕೋಮಲಪದಧ್ಯಾನಾಮೃತಾಸ್ವಾದನ । ಪ್ರೇಮಂ ಸೋಮಕರಾಮಳಪ್ರಭಯಶಶ್ರೀಮಂಡಿತಾಶೋತ್ಕರಂ ॥ ವ್ಯಾಮೋಹಾಮಯವೈದ್ಯನಾದ್ಯನಘಂ ಕ್ಷೇಮಂಕರು ನಾಗಮ । ತಾರ್ಕ್ಯಮರ್ತ್ಯಸ್ತುತಸಿದ್ಧರಾಮನೆಮಗೀಗತ್ಯೂರ್ಜಿತ ಶ್ರೇಯಮಂ ॥ ... .. ... ... ... ॥೧೪॥

ಉ ॥ ಭೂವಳಯಪ್ರಸಿದ್ಧಸುಖಭೋಗಮನೊಕ್ಕುವಿರಾಗಭಾವವೇ । ಭಾವದೊಳಾಗೆ ಭಾವಭವನಂಸಲೆಭಂಗಿಸಿಲಿಂಗಮಂಗದೊ ॥ ಳ್ತೀವೆನಿಜೇಚ್ಛೆಯಿಂಕದಳಿಪೊಕ್ಕುಶಿವೈಕ್ಯತೆಯಾಂತುನಿಂದಮಾ । ದೇವಿಯಪಾದಪಂಕರುಹಕಾರಡಿಯಾಗಿಪೆನೆನ್ನಚಿತ್ತಮಂ ॥೧೫॥

---

ಕರಣಶರಣರನ್ನು; ಪಾಲಕರ್- ರಕ್ಷಿಸುವ; ಮಂಡಿತ...... ಕ್ಷಮರ್- ಮಂಡಿತ- ಪೂಜ್ಯವಾದ; ವೀರಶೈವ ಮತ- ವೀರಶೈವಮತದ, ದಿವ್ಯಮಹತ್ವ- ಶ್ರೇಷ್ಠವಾದಮಹಿಮೆಯನ್ನು, ನಿದರ್ಶನ- ತೋರಿಸುವದರಲ್ಲಿ, ಕ್ಷಮರ್- ಸಮರ್ಥರಾದ; ಮೂವರ್- ಮೂರುಮಂದಿಗಳಾದ; ಪಂಡಿತರ್- ಶ್ರೀಪತಿಪಂಡಿತ ಮಂಚಣಪಂಡಿತ ಮಲ್ಲಿಕಾರ್ಜುನಪಂಡಿತರು; ಎಮಗೆ- ನಮಗೆ, ಅತೀವ- ಅಧಿಕವಾಗಿ; ಮತಿಪ್ರಕಾಶಮಂ- ಬುದ್ಧಿಪ್ರಕಾಶವನ್ನು; ಈವರ್- ಕೊಡುವವರು; ಅಕ್ಕೆ- ಆಗಲಿ. ... ... ... ॥೧೩॥

ಕಾಮಾರಾತಿ......ಪ್ರೇಮಂ- *ಕಾಮಾರಾತಿ- ಈಶ್ವರನ; ನಿಕಾಮ- ಅತ್ಯಂತವಾಗಿ, ಕೋಮಲ- ಮೃದುವಾದ, ಪದ- ಪಾದಗಳ, ಧ್ಯಾನ- ಧ್ಯಾನವೆಂಬ, ಅಮೃತ- ಅಮೃತರಸವನ್ನು; ಆಸ್ವಾದನ- ಸವಿಯುವದರಲ್ಲಿ; ಪ್ರೇಮಂ- ಪ್ರೀತಿಯುಳ್ಳ; ಸೋಮ...ಶೋತ್ಕರಂ— ಸೋಮ- ಚಂದ್ರನ; ಕರ- ಕಿರಣಗಳೋಪಾದಿಯಲ್ಲಿ, ಅಮಳ- ನಿರ್ಮಲವಾದ, ಪ್ರಭ- ಕಾಂತಿಯುಳ್ಳ, ಯಶಃ- ಕೀರ್ತಿಯು, ಶ್ರೀ- ಸಂಪತ್ತಿನಿಂದ, ಮಂಡಿತ- ಅಲಂಕರಿಸಲ್ಪಟ್ಟ, ಆಶಾ- ದಿಕ್ಕುಗಳ, ಉತ್ಕರಂ- ಸಮುದಾಯವುಳ್ಳ; ವ್ಯಾಮೋಹಾಮಯವೈದ್ಯಂ- ವ್ಯಾಮೋಹ- ಅಜ್ಞಾನವೆಂಬ, ಆಮಯ- ರೋಗಕ್ಕೆ, ವೈದ್ಯ- ಚಿಕಿತ್ಸಕನಾದ; ಆದ್ಯಂ- ಮೊದಲಿಗನಾದ, ಅನಘಂ- ಪಾಪರಹಿತನಾದ; ಕ್ಷೇಮಂಕರಂ- ಶುಭವನ್ನುಂಟುಮಾಡುವ; ನಾಗ...... ಸಿದ್ಧರಾಮಂ- ನಾಗ ಸರ್ಪಗಳಿಂದಲೂ, † ಮರ್ತ್ಯ- ಮನುಷ್ಯರಿಂದಲೂ, ‡ ಅಮರ್ತ್ಯ- ದೇವತೆಗಳಿಂದಲೂ, ಸ್ತುತ- ಕೊಂಡಾಡಲ್ಪಟ್ಟ, ಸಿದ್ಧರಾಮಂ- ಸಿದ್ಧರಾಮಯೋಗೀಶ್ವರನು; ಎಮಗೆ- ನಮಗೆ; ಅತ್ಯೂರ್ಜಿತಶ್ರೇಯಮಂ- ಅತ್ಯೂರ್ಜಿತ- ಅತ್ಯಧಿಕವಾದ, ಶ್ರೇಯಮಂ- ಶ್ರೇಯಸ್ಸನ್ನು; ಈಗೆ- ಕೊಡುವನಾಗಲಿ. ॥೧೪॥

ಭೂವಳಯಪ್ರಸಿದ್ಧಸುಖಭೋಗಮಂ—ಭೂವಳಯ- ಭೂಮಂಡಲದಲ್ಲಿ, ಪ್ರಸಿದ್ಧ- ಪ್ರಖ್ಯಾತವಾದ; ಸುಖಭೋಗಮಂ- ಸೌಖ್ಯಾನುಭವವನ್ನು; ಒಕ್ಕು- ತೂರಿ; (ಅಂದರೆ ತಿರಸ್ಕರಿಸಿ) ವಿರಾಗಭಾವವೇ- ವೈರಾಗ್ಯವೇ; ಭಾವದೊಳ್- ಮನಸ್ಸಿನಲ್ಲಿ; ಆಗೆ- ಉಂಟಾಗಲು; ಭಾವಭವನಂ- ಕಾಮನನ್ನು; ಸಲೆ- ಚೆನ್ನಾಗಿ; ಭಂಗಿಸಿ- ಜಯಿಸಿ; ಲಿಂಗಂ- ಇಷ್ಟಪ್ರಾಣಭಾವಲಿಂಗಗಳು; ಅಂಗದೊಳ್- ಸ್ಥೂಲಸೂಕ್ಷ್ಮಕಾರಣಾತ್ಮಕದೇಹಗಳಲ್ಲಿ; ತೀವೆ- ತುಂಬಲು; ನಿಜೇಚ್ಛೆಯಿಂ- ತನ್ನ ಇಚ್ಛೆಯಿಂದ; ಕದಳಿಪೊಕ್ಕು- ಬಾಳೇವನವನ್ನುಪ್ರವೇಶಿಸಿ; ಶಿವೈಕ್ಯತೆಯ- ಶಿವನೊಡನೆಏಕತ್ವವನ್ನು; ಆಂತು- ಪಡೆದು; ನಿಂದ- ನೆಲೆಗೊಂಡ; ಮಾದೇ

---

* (ಅವ) ಕಾಮ- ಮನ್ಮಥನಿಗೆ, ಅರಾತಿ- ಶತ್ರುವು. †. (ಅವ) ಸಾಯುವವರು. ‡ (ಅವ) ಸಾಯದೇ ಇರುವವರು; ... ... ... ... ... ॥೧೪॥

ಮ ॥ ಶಿವಪಕ್ಷೈಕತೆಯಾಂತು ಮೂರುಪದಮಂ ಕೈಕೊಂಡು ಮಾಲಿನ್ಯಮಂತವೆ । ಬಿಟ್ಟಂಗಮನಾಳ್ದಶೇಷಸುಮನಸ್ಸಂಸೇವ್ಯನಾಗುತ್ತಿಭ ॥ ಕ್ತವನೇಜಾಕರಭೃಂಗಶಂಭುಸತಿತಾನೆಂಬಳ್ಕರಿಂ ಭೃಂಗಿನಾ । ಮವಿಶೇಷಂಬಡೆದಿರ್ದ ಚಿತ್ರಚರಿತಂನಿಲ್ಕೆನ್ನ ಚಿತ್ತಾಬ್ಜದೊಳ್ ... ... ... ... ... ... ॥ ೧೯ ॥

ವಿಯ- ಅಕ್ಕಮಾದೇವಿಯ; ಪಾದಪಂಕರುಹಕೆ- ಪಾದ- ಪಾದವೆಂಬ, * ಪಂಕರುಹಕೆ- ಕಮಲಕ್ಕೆ ಎನ್ನಚಿತ್ತಮಂ- ನನ್ನಮನಸ್ಸನ್ನು; † ಆರಡಿ ಯಾಗಿಪೆಂ- ಭ್ರಮರವನ್ನಾಗಿ ಮಾಡುವೆನು. ॥ ೧೮ ॥

ಭೃಂಗೀಶಪರವಾದರ್ಥ.

ಶಿವಪಕ್ಷೈಕತೆಯಾಂತು- ಶಿವನೊಬ್ಬನಲ್ಲೇ ಪ್ರೀತಿಯನ್ನುಹೊಂದಿ, ಮೂರುಪದಮಂಕೈಕೊಂಡು- ಮೂರುಪಾದಗಳನ್ನು ಹೊಂದಿ; (ಅಥವಾ ಸಾಲೋಕ್ಯಾದಿಮೂರುಪದವಿಗಳನ್ನುಹೊಂದಿ) ಮಾಲಿನ್ಯಮಂ- ಮಾಯಾಸಂಬಂಧಿಯಾದಅಂಶವನ್ನು- ತವೆ- ಚೆನ್ನಾಗಿ, ಬಿಟ್ಟ- ಕಳೆದ;ಅಂಗಮಂ- ಶರೀರವನ್ನು, ಆಳ್ದು- ಪಡೆದು; ಅಶೇಷಸುಮನಸ್ಸಂಸೇವ್ಯನಾಗುತ್ತೆ- ಸಕಲದೇವತೆಗಳಿಂದ ಸೇವಿಸುವದಕ್ಕೆಯೋಗ್ಯನಾಗುತ್ತಾ; ತಾಂ- ತಾನು, ಭಕ್ತ...ಸತಿ—ಭಕ್ತ ಭಕ್ತರೆಂಬ; * ವನೇಜಾಕರ- ಕೊಳಕ್ಕೆ; ಭೃಂಗ- ಭ್ರಮರವಾದ; ಶಂಭು- ಶಿವನಿಗೆ, ಸತಿ- ಹೆಂಡತಿಯು, ಎಂಬಳ್ಕರಿಂ- ಹೀಗೆಂಬಪ್ರೀತಿಯಿಂದ; ನಾಮವಿಶೇಷಂಬಡೆದಿರ್ದ- ನಾಮಭೇದವನ್ನುಪಡೆದಿದ್ದ, ಚಿತ್ರಚರಿತಂ- ಆಶ್ಚರ್ಯಕರವಾದಚರಿತ್ರೆಯುಳ್ಳ; ಭೃಂಗಿ- ಭೃಂಗೀಶನೆಂಬಹೆಣ್ಣುದುಂಬಿಯು; ಎನ್ನ- ನನ್ನ, ಚಿತ್ತಾಬ್ಜದೊಳ್- ಚಿತ್ತ- ಹೃದಯವೆಂಬ, † ಅಬ್ಜದೊಳ್- ಕಮಲದಲ್ಲಿ,ನಿಲ್ಕೆ- ನಿಲ್ಲಲಿ.

ಭೃಂಗೀಪರವಾದರ್ಥ.

ಶಿವಪಕ್ಷೈಕತೆಯನಾಂತು- ಬಿಳುಪಾದಬಂದೇರೆಕ್ಕೆಯುಳ್ಳಭಾವವನ್ನುಹೊಂದಿ; ಮೂರುಪದಮಂಕೈಕೊಂಡು- ಮೂರುಪಾದಗಳನ್ನುಪಡೆದು; ಮಾಲಿನ್ಯಮಂ- ಕಪ್ಪನ್ನು, ತವೆ- ಚೆನ್ನಾಗಿ; ಬಿಟ್ಟ- ಕಳೆದ, ಅಂಗಮನಾಳ್ದು- ಶರೀರವನ್ನುಹೊಂದಿ, ಅಶೇಷಸುಮನಸ್ಸಂಸೇವ್ಯನಾಗುತ್ತೆ- ಸಕಲಪುಷ್ಪಗಳಿಂದಸೇವಿಸುವದಕ್ಕೆಯೋಗ್ಯವಾಗುತ್ತೆ (ಶಕ್ತಿಯಾದಪಾರ್ವತಿಯಪಕ್ಷವನ್ನು ಬಿಟ್ಟು ಶಿವಪಕ್ಷವನ್ನೇಆಶ್ರಯಿಸಿ ಮಾಯಾಂಶವನ್ನೆಲ್ಲಾಕಳೆದು ಶಿವಾನುಗ್ರಹದಿಂಮತ್ತೊಂದು ಪಾದವನ್ನುತಳೆದು ಅರ್ಧನಾರೀಶ್ವರನಾದ ಶಿವನದೇಹದಲ್ಲಿರುವ ಪಾರ್ವತಿಯಭಾಗವನ್ನುಬಿಟ್ಟು ಈಶ್ವರನದೇಹಭಾಗವನ್ನು ಪ್ರದಕ್ಷಿಣೆಮಾಡುವದಕ್ಕೋಸ್ಕರ ಭೃಂಗೀರೂಪದಿಂದಶಿವನದೇಹಭಾಗವನ್ನೇಭೇದಿಸಿದ್ದರಿಂದಭೃಂಗಿಎಂಬ ಹೆಸರನ್ನುಪಡೆದು) ಅಂಗಳಿಂಗೀಜ್ಞಾನರೂಪಸ್ಸತೀಜ್ಞೇಯಸ್ಶಿವಃಪತಿಃ । ಯತ್ಸೌಖ್ಯಂತತ್ಸಮಾವೇಶಾತ್ತದ್ವಾನ್ಶರಣನಾಮವಾನ್ ॥ ಅಂದರೆಲಿಂಗಾಂಗಸಾಮರಸ್ಯವುಳ್ಳವನಾಗಿಯೂ, ಶಿವಜ್ಞಾನವೇ ಸ್ವರೂಪವುಳ್ಳವನಾಗಿಯೂ, ತಾನುಸತಿ ಶಿವನೇಪತಿಎಂಬಭಾವನೆಯುಳ್ಳವನಾಗಿಯೂ, ಸತಿಪತಿಗಳಾದ ತವ್ಮಿಬ್ಬರಸಮಾನರೂಪಸಾಮರಸ್ಯಭೋಗದಿಂದುಂಟಾದಸೌಖ್ಯವುಳ್ಳವನೇ ಶರಣನೆನಿಸುವನು. ಎಂಬಪ್ರಮಾಣದಿಂದ ಪತಿಯಾದ ಶಂಭುವಿಗೆ ಶರಣರೂಪಸತಿಯಾಗಿರುವ ಭೃಂಗೀಶ್ವರನು ನನ್ನ ಧ್ಯಾನಗೋಚರನಾಗಲೆಂದು ತಾತ್ಪರ್ಯ. ನಾಮವಿಶೇಷಂಬಡೆದಿರ್ದ ಎಂಬುವಲ್ಲಿ ಭೃಂಗೀಶ್ವರನುತಾನು ಪುರುಷನಾಗಿದ್ದರೂ ಭೃಂಗಿಅಂದರೆ ಹೆಣ್ಣುದುಂಬಿ ಎಂಬ ನಾಮವನ್ನು ಪಡೆದಿರುವುದೇ ನಾಮವಿಶೇಷವು; ಮತ್ತು ಚಿತ್ರ ಚರಿತ್ರಂ ಎಂಬಲ್ಲಿ ಶಿವಪಕ್ಷೈಕತೆ ಅಂದರೆ ಶುಭ್ರವಾದ ಒಂದೇರೆಕ್ಕೆಯುಳ್ಳದರಭಾವವು, ಮೂ

* (ಅವ)ಪಂಕ- ಕೆಸರಿನಲ್ಲಿ, ರುಹ- ಹುಟ್ಟುವದು. † (ಅವ) ಆರುಕಾಲುಗಳುಳ್ಳದ್ದು. ॥೧೮॥

* (ಅವ) ವನೇ- ನೀರಿನಲ್ಲಿ, ಜ- ಹುಟ್ಟುವ ಕಮಲಗಳಿಗೆ, ಆಕರ- ಆಶ್ರಯವಾದದ್ದು; † (ಅವ) ಅಪ್- ನೀರಿನಲ್ಲಿ ಜ- ಹುಟ್ಟುವದು. ... ... ... ... ॥೧೯॥

ಉ ॥ ಶ್ರೀಕರವೀರಸಾಧುಸಹಕಾರ ನುದಂಚಿತಮುಕ್ತಕಂಸುಪ । ದ್ಮಾಕರನುದ್ಗಮ
ಪ್ರರುಚಿ ಮಂಜುಲತಾನ್ವಿತನೂರ್ಜಿತಾಗಮಾ ॥ ನೀಕನುತಂಮಹಾವಿರತಿಸಂಯುತನಾದುದ
ರಿಂದೆಸಾರ್ಥನಾ । ಮಾಕರನಾದತೋಂಟದಗುರೂತ್ತಮನೋರ್ವನೆಸತ್ಫಲಪ್ರದಂ ॥ ೧೭ ॥
ಮ ॥ ಅಕಳಂಕಾಗಮಯುಕ್ತ ನುಗ್ರರುಚಿಸನ್ಮಿತ್ರೋದಯಾಹ್ಲಾದಶಾ। ಲಿಕಲಾಪ್ರೂ

ರುಷಾದಗಳು: ಶುಭ್ರವಾದ ದೇಹವು; ಸಕಲಸುಮನಸ್ಸುಗಳಿಂದ ಸೇವಿಸಲ್ಪಡುವದು, ಇವುಗಳುಂಟಾಗಿರ್ಪ್ಪದೇ ಚಿತ್ರಚರಿತ್ರವು. ... ... ... ... ... ||೧೬||

**ತೋಂಟದಸ್ವಾಮಿಪಕ್ಷವಾದರ್ಥ.**

ಶ್ರೀಕರವೀರಸಾಧುಸಹಕಾರಂ—ಶ್ರೀಕರ ಸಂಪತ್ತನ್ನುಂಟುಮಾಡುವ, ವೀರ- । ವೇದಾಂತಜನ್ಯಂಯದ್ದಾಜ್ಞಾನಂವಿದ್ಯೇತಿಪರಿಕೀರ್ತ್ಯತೇ । ವಿದ್ಯಾಯಾಂರಮತೇತಸ್ಯಾಂವೀರಇತ್ಯಭಿಧೀಯತೇ ॥ ಎಂಬಪ್ರಮಾಣದಿಂದ ವೇದಾಂತವಿದ್ಯಾವಿನೋದಿಯೂ, ವೀರಶೈವಮತಪ್ರವಿಷ್ಟನಾದ ಬ್ರಹ್ಮಜ್ಞಾನಿಯೂ ಆದ; ಸಾಧು- ಸತ್ಪುರುಷರಿಗೆ, ಸಹಕಾರಂ- ಸಹಾಯವನ್ನುಂಟುಮಾಡುವ, ಉದಂಚಿತಮುಕ್ತಕಂ— ಉದಂಚಿತ- ಅತಿ ಪೂಜ್ಯನೂ, ಮುಕ್ತಕಂ- ಜೀವನ್ಮುಕ್ತನೂ ಆದ, ಸುಪದ್ಮಾಕರಂ- ಶ್ರೇಷ್ಠವಾದ ಸಂಪತ್ತುಗಳಿಗೆ ಆಸ್ಪದನಾದ (ಅಥವಾ ಮೋಕ್ಷಲಕ್ಷ್ಮಿಗೆ ಆಸ್ಪದನಾದ) ಉದ್ಗಮಪ್ರರುಚಿಮಂಜುಲತಾನ್ವಿತಂ— ಉದ್ಗಮ- ಉತ್ಪನ್ನವಾದ, ಪ್ರರುಚಿ- ಪ್ರಕೃಷ್ಟವಾದ ಶೈವತೇಜಸ್ಸಿನ, ಮಂಜುಲತಾ- ಮನೋಹರತ್ವದಿಂದ, ಅನ್ವಿತಂ- ಕೂಡಿದ, ಊರ್ಜಿತಾಗಮಾನೀಕನುತಂ— ಊರ್ಜಿತ- ಅಧಿಕವಾದ, ಆಗಮ- ಶೈವಾಗಮಗಳ, ಅನೀಕ- ಸಮುದಾಯದಿಂದ, ನುತಂ- ಕೊಂಡಾಡಲ್ಪಡುವ (ಅಂದರೆ ಸಕಲ ಶೈವಾಗಮಗಳನ್ನು ಬಲ್ಲವನು) ಆದುದರಿಂದ- ಆದಕಾರಣದಿಂದ, ಸಾರ್ಥನಾಮಾಕರನಾದ- ಅನ್ವರ್ಥವಾದ ಹೆಸರಿಗೆ ಆಶ್ರಯನಾದ, ತೋಂಟದಗುರೂತ್ತಮನೋರ್ವನೆ- ತೋಂಟದಾರ್ಯನೆಂಬ ಸಂಕೇತನಾಮವುಳ್ಳ ಗುರುಶ್ರೇಷ್ಠನೊಬ್ಬನೇ- ಸತ್ಫಲಪ್ರದಂ— ಸತ್- ಸಾಧುಗಳಿಗೆ, ಫಲಪ್ರದಂ- ಮೋಕ್ಷಫಲವನ್ನು ಕೊಡುವನು; ಅಥವಾ ಉತ್ತಮವಾದ ಇಷ್ಟಾರ್ಥವನ್ನು ಕೊಡುವವನು. * * * * * * * * *

**ತೋಟದಪಕ್ಷವಾದರ್ಥವು.**

ಶ್ರೀಕರವೀರಸಾಧುಸಹಕಾರಂ— ಶ್ರೀ- ಬಿಲ್ವವೃಕ್ಷವೇನು; ಕರವೀರ- ಕಣಿಗಲೆಗಿಡವೇನು; ಸಾಧುಸಹಕಾರ- ಮನೋಹರವಾದ ಸೀಮಾವಿನಮರವೇನು ಇವುಗಳುಳ್ಳ; ಉದಂಚಿತಮುಕ್ತಕಂ— ಉದಂಚಿತ- ಉನ್ನತಗಳಾದ; ಮುಕ್ತಕಂ- ಮುತ್ತುಗದ ಮರವುಳ್ಳ, * ಸುಪದ್ಮಾಕರಂ- ಮಂಗಳಕರವಾದ ಕೊಳಗಳುಳ್ಳ; ಉದ್ಗಮಪ್ರರುಚಿಮಂಜುಲತಾನ್ವಿತಂ— ಉದ್ಗಮ- ಕುಸುಮಗಳ, ಪ್ರರುಚಿ- ಒಳ್ಳೇಕಾಂತಿಯಿಂದ, ಮಂಜು- ಮನೋಹರಗಳಾದ, ಲತಾ- ಬಳ್ಳಿಗಳಿಂದ, ಅನ್ವಿತಂ- ಕೂಡಿದ; ಊರ್ಜಿತಾಗಮಾನೀಕನುತಂ— ಊರ್ಜಿತ- ಉನ್ನತಗಳಾದ, † ಅಗಮ- ವೃಕ್ಷಗಳ, ಅನೀಕ- ಗುಂಪುಗಳಿಂದ, ನುತಂ- ಶ್ಲಾಘ್ಯವಾದ; ಮಹಾವಿರತಿಸಂಯುತಂ— ಮಹತ್- ಅಧಿಕವಾದ, ವಿ- ಪಕ್ಷಿಗಳ, ರತಿ- ಪ್ರೀತಿಯಿಂದ, ಸಂಯುತಂ- ಕೂಡಿರುವ, ಸತ್ಫಲಪ್ರದಂ- ಒಳ್ಳೇಫಲವನ್ನು ಕೊಡುವ. ... ... ... ... ||೧೭||

**ಸೋಮನಾಥನಪರವಾದರ್ಥ.**

ಅಕಳಂಕಾಗಮಯುಕ್ತಂ— ಅಕಳಂಕ- ದೋಷರಹಿತಗಳಾದ, ಆಗಮ- ಶೈವಾಗಮಗಳಿಂದ, ಯು

* (ಅವ) ಪದ್ಮ-ಕಮಲಗಳಿಗೆ, ಆಕರಂ- ಆಶ್ರಯವಾದದ್ದು. † (ಅವ) ಸಂಚಾರಮಾಡದೇಇರುವವುಗಳು. ... ... ... ... ... ... ||೧೭||

ರ್ಣನಜಸ್ರನನ್ವಿತಜಡತ್ವಾಭಾವನಾತ್ಮೀಯಪಾ ॥ ದಕೃತೋಪಾಶ್ರಿತಸಾಧುಚಕ್ರಸುಖನಾಗಿ
ರ್ದುಂಲಸತ್ಸೋಮನಾ । ಮಕನಾದಾಗುರುಸೋಮನಾಥನೆಮಗೀಗುದ್ಯತ್ಸುಧಾವಾಣಿಯಂ ॥
ಚಂ ॥ ಕವಿತೆಯನೊಲ್ದುಡರ್ಚುವಕವೀಂದ್ರರರಕ್ಷಿಪದುಷ್ಕವಿತ್ವಮಂ । ತವಿಪಗು
ಣಂಗಳಿಂದೆಕವಿತಾಚತುರಾನನನೆಳ್ಗೆವೆತ್ತ ಸ ॥ ತ್ಕವಿಕುಲಚಕ್ರವರ್ತಿ ಕವಿರಾಜಶಿರೋಮ
ಣಿಯೆಂಬಪೆಂಪುಸಂ । ಭವಿಸಿದಸತ್ಕವೀಶ್ವರಹರೀಶ್ವರನೀಗೆಮಗೀಪ್ಸಿತಾರ್ಥಮಂ ॥ ೧೯ ॥

ಕ್ತಂ- ಕೂಡಿದ, ಉಗ್ರರುಚಿ—ಉಗ್ರ- ಶಿವನಲ್ಲಿ; ರುಚಿ- ವಿಶ್ವಾಸವುಳ್ಳ, ಸನ್ಮಿತ್ರೋದಯಾಹ್ಲಾದಶಾಲಿ—ಸನ್ಮಿತ್ರ- ಉತ್ತಮರಾದ ಮಿತ್ರರ, ಆಹ್ಲಾದ- ಸಂತೋಷದಿಂದ, ಶಾಲಿ- ಪ್ರಕಾಶಿಸುವ, ಅಜಸ್ರಂ- ಯಾವಾಗಲೂ, ಕಲಾಪೂರ್ಣಂ- ಜ್ಞಾನದಿಂದ ಪೂರ್ಣನಾದ, (ಅಥವಾ ಸಕಲವಿದ್ಯಗಳಿಂದ ತುಂಬಿದ) ಅನ್ವಿತಜಡತ್ವಾಭಾವಂ— ಅನ್ವಿತ- ಕೂಡಿದ, ಜಡತ್ವ- ಅಜ್ಞಾನದ, ಅಭಾವಂ- ಇಲ್ಲದಿರುವಿಕೆಯುಳ್ಳ, (ಅಂದರೆ ಅಜ್ಞಾನರಹಿತನೆಂದರ್ಥ) ಆತ್ಮೀಯ......ಸುಖಂ— ಆತ್ಮೀಯಪಾದ- ತನ್ನ ಪಾದಗಳಿಂದ, ಕೃತ- ಮಾಡಲ್ಪಟ್ಟ, ಉಪಾಶ್ರಿತ- ಆಶ್ರಯಿಸಿದ, ಸಾಧು- ಸತ್ಪುರುಷರ, ಚಕ್ರ- ಗುಂಪಿನಸಂಬಂಧವಾದ,ಸುಖಂ- ಸುಖವುಳ್ಳ; ಅಂದರೆ ತನ್ನನ್ನಾಶ್ರಯಿಸಿದವರಿಗೆ ಸುಖವನ್ನುಂಟುಮಾಡುವನೆಂದರ್ಥ. ಲಸತ್ಸೋಮನಾಮಕನಾದ—ಲಸತ್- ಒಪ್ಪುವ, ಸೋಮನಾಮಕನಾದ- ಸೋಮನೆಂದು ಹೆಸರುಳ್ಳವನಾದ, ಆಗುರುಸೋಮನಾಥಂ- ಆಗುರುವಾದ ಸೋಮನಾರಾಧ್ಯನು, ಎಮಗೆ- ನಮಗೆ, ಉದ್ಯತ್ಸುಧಾವಾಣಿಯಂ—ಉದ್ಯತ್- ಅಧಿಕವಾದ, ಸುಧಾವಾಣಿಯಂ- ಅಮೃತಮಯವಾದವಾಕ್ಕನ್ನು, ಈಗೆ-ಕೊಡುವವನಾಗಲಿ. * * * * * *

ಸೋಮನಪರವಾದರ್ಥ.

ಅಕಳಂಕಾಗಮಯುಕ್ತಂ- ಅಕಳಂಕಪ್ರಾಪ್ತಿಯೊಡನೆ ಕೂಡಿದವನು, ಉಗ್ರರುಚಿ- ತೀಕ್ಷ್ಣವಾದ ಕಾಂತಿಯುಳ್ಳ, ಸನ್ಮಿತ್ರ- ಶ್ರೇಷ್ಠನಾದಸೂರ್ಯನ, ಉದಯ- ಉತ್ಪತ್ತಿಯಿಂದುಂಟಾದ, ಆಹ್ಲಾದ- ಸಂತೋಷದಿಂದ, ಶಾಲಿ- ಒಪ್ಪುವನು, ಅಜಸ್ರಂ- ನಿತ್ಯದಲ್ಲೂ, ಕಲಾಪೂರ್ಣಂ- ಷೋಡಶಕಲೆಗಳಿಂದ ಪೂರ್ಣನು, ಅನ್ವಿತಜಡತ್ವಾಭಾವಂ— ಅನ್ವಿತ- ಕೂಡಿದ, ಜಡತ್ವ- ಜಲವುಳ್ಳದರಭಾವದ, ಅಭಾವಂ- ಇಲ್ಲದಿರುವಿಕೆಯುಳ್ಳವನು, (ಅಂದಗೆ ಜಲರಹಿತನೆಂಬರ್ಥವು) ಆತ್ಮೀಯ......ಸುಖನಾಗಿರ್ದುಂ— ಆತ್ಮೀಯ- ತನ್ನ ಸಂಬಂಧಿಗಳಾದ, ಪಾದ- ಕಿರಣಗಳಿಂದ, ಕೃತ- ಮಾಡಲ್ಪಟ್ಟ, ಉಪಾಶ್ರಿತ- ಆಶ್ರಯಿಸಿದ, ಸಾಧುಚಕ್ರ- ಸಾಧ್ಯವಾದ ಚಕ್ರವಾಕಪಕ್ಷಿಗಳ, ಸುಖಂ- ಸುಖವುಳ್ಳವನು, ಆಗಿರ್ದುಂ- ಆಗಿದ್ದೂಕೂಡ, ಅಂದರೆ ತನ್ನ ಕಿರಣಗಳಿಂದ ಚಕ್ರವಾಕಪಕ್ಷಿಗಳಿಗೆ ಸುಖವನ್ನುಂಟುಮಾಡುವನಾಗಿಯೂಕೂಡ, ಲಸತ್ಸೋಮನಾಮಕನಾದ- ಪ್ರಕಾಶಿಸುವ ಸೋಮನೆಂಬ ಹೆಸರುಳ್ಳ. ... ... ... ॥ ೧೮ ॥

ಕವಿತೆಯಂ- ಕವಿತ್ವವನ್ನು, ಒಲ್ದು- ಪ್ರೀತಿಸಿ, ಒಡರ್ಚುವ- ಉಪಕ್ರಮಿಸುವ, ಕವೀಂದ್ರರ- ಕವೀಶ್ವರರನ್ನು, ರಕ್ಷಿಪ- ಸಂರಕ್ಷಿಸುವ; ದುಷ್ಕವಿತ್ವಮಂ- ದುಷ್ಕಾವ್ಯವನ್ನು, ತವಿಪ- ನಾಶಮಾಡುವ; ಗುಣಂಗಳಿಂದೆ- ಸದ್ಗುಣಗಳಿಂದ, ಕವಿತಾ * ಚತುರಾನನ ಎಳ್ಗೆವೆತ್ತ- ಕವಿತ್ವದಲ್ಲಿ ಬ್ರಹ್ಮನೆಂಬದಾಗಿ ಪ್ರಸಿದ್ಧಿಯನ್ನು ಹೊಂದಿದ; ಸತ್ಕವಿಕುಲಚಕ್ರವರ್ತಿ- ಕವಿಶ್ರೇಷ್ಠರ ಸಮೂಹಕ್ಕೆ ಸಾರ್ವಭೌಮನಾದ, ಕವಿರಾಜಶಿರೋಮಣಿ- ಕವೀಶ್ವರರ ಶಿರೋರತ್ನವು; ಎಂಬ ಪೆಂಪು- ಹೀಗೆಂಬ ಮಹಿಮೆಯು, ಸಂಭವಿಸಿದ- ಪ್ರಾಪ್ತವಾದ; ಸತ್ಕವೀಶ್ವರಹರೀಶ್ವರಂ- ಹರೀಶ್ವರನೆಂಬ ಸತ್ಕವಿಶ್ರೇಷ್ಠನು, ಎಮಗೆ; ಈಪ್ಸಿತಾರ್ಥಮಂ- ಇ

* (ಅವ) ಚತುರ- ನಾಲ್ಕಾದ, ಆನನ- ಮುಖಗಳುಳ್ಳವನು. ... ... ॥೧೯॥

ಕಂ ॥ ಅವಿಚಲಿತಖಲಮದಾಚಲ । ಪವಿಯಂ ಪ್ರಣುತಪ್ರಬಂಧಪಂಕಜವಿಲಸ ॥ ದ್ರವಿಯಂ ಘಲದಂಕಮಹಾ । ಕವಿಯಂಘನರಾಘವಾಂಕನಂನುತಿಗೆಯ್ವೆಂ ॥ ... ॥ ೨೦ ॥

ಕಂ ॥ ವರಮಲಯಕ್ಷ್ಮಾಭೃತ್ಸಂ । ಚರಣಂಸಂಸರ್ಗಮುದಿತಸುಮನೋಬಾಣಂ ॥ ಹರಿದೇವಸಖಂಭೃತಪ । ದ್ಮರಸಂಸುಕವಿತ್ವಪವನನಾದೃತಭೀಮಂ ॥ ... ॥ ೨೧ ॥

ಉ ॥ ಭೂರಜಮಂಸುವರ್ಣರಜಮಾಗಿಸಿನುಣ್ಮಣಿಗೆಯ್ದುಸಾರವಾ । ರ್ಧಾರೆಯ ತುಂ ತುರಂಶಿಖಿಯಸಂಬರದೊಳ್ಮಗೆಕಟ್ಟಮಾರುತಾ ॥ ಧಾರದೆಸಗ್ಗಕ್ಕೆಯ್ದಿನಭಮಂನುಡಿಸುತ್ತೆ ಧಷ್ಟಾರ್ಥವನ್ನು; ಈಗೆ- ಕೊಡುವನಾಗಲಿ, ... ... ... ... ॥ ೧೯ ॥

ಅವಿಚಲಿತಖಲಮದಾಚಲಪವಿಯಂ— ಅವಿಚಲಿತ- ಚಲಿಸದೇಇರುವ, ಖಲ- ದುರ್ಜನನ, ಮದ- ಮದವೆಂಬ, * ಅಚಲ- ಬೆಟ್ಟಕ್ಕೆ, ಪವಿಯಂ- ವಜ್ರಾಯುಧವಾದ, ಪ್ರಣುತ......ರವಿಯಂ— ಪ್ರಣುತಪ್ರಬಂಧ- ಶ್ಲಾಘ್ಯವಾದ ಕಾವ್ಯಗಳೆಂಬ, † ಪಂಕಜ- ಕಮಲಗಳಿಗೆ, ವಿಲಸದ್ರವಿಯಂ- ಪ್ರಕಾಶಿಸುವ ಸೂರ್ಯನಾದ, ಘಲದಂಕಮಹಾಕವಿಯಂ- ಘಲದಂಕನೆಂಬ ಬಿರುದುಳ್ಳ ಮಹಾಕವಿಯಾದ, ಘನರಾಘವಾಂಕನಂ- ಶ್ರೇಷ್ಠನಾದ ರಾಘವಾಂಕನೆಂಬ ಕವಿಯನ್ನು; ನುತಿಗೆಯ್ವೆಂ- ಸ್ತೋತ್ರಮಾಡುವೆನು. ... ... ॥ ೨೦ ॥

## ಕವಿತ್ವಪರವಾದರ್ಥ.

ಕವಿತ್ವವು ವರಮಲಯಕ್ಷ್ಮಾಭೃತ್ಸಂಚರಣಂ— ವರ- ಶ್ರೇಷ್ಠನಾದ, ಮಲಯ * ಕ್ಷ್ಮಾಭೃತ್- ಮಲಯರಾಜನಲ್ಲಿ, ಸಂಚರಣಂ- ಪ್ರಚಾರವುಳ್ಳದ್ದು; ಸಂಸರ್ಗಮುದಿತಸುಮನೋಬಾಣಂ— ಸಂಸರ್ಗ- ಸಂಬಂಧದಿಂದ, ಮುದಿತ- ಸಂತೋಷಪಡಿಸಲ್ಪಟ್ಟ, ಸುಮನೋಬಾಣಂ- ವಿದ್ವಾಂಸನಾದ ಬಾಣಕವಿಯುಳ್ಳದ್ದು; ಹರಿದೇವಸಖಂ- ಹರೀಶ್ವರದೇವರಿಗೆ ಇಷ್ಟವಾದದ್ದು; ಭೃತಪದ್ಮರಸಂ— ಭೃತ- ರಕ್ಷಿಸಲ್ಪಟ್ಟ, ಪದ್ಮರಸಂ- ಪದ್ಮರಸಕವಿಯುಳ್ಳದ್ದು; ಆದೃತಭೀಮಂ- ಪ್ರೀತಿಪಡಿಸಲ್ಪಟ್ಟ ಭೀಮಕವಿಯುಳ್ಳದ್ದು. * * * *

## ವಾಯುಪರವಾದರ್ಥ.

ವರ- ಶ್ರೇಷ್ಠವಾದ, ಮಲಯ † ಕ್ಷ್ಮಾಭೃತ್- ಮಲಯಪರ್ವತದಲ್ಲಿ, ಸಂಚರಣಂ- ಸಂಚರಿಸುವ; ಸಂಸರ್ಗ- ಸಂಬಂಧದಿಂದ, ಮುದಿತ- ಸಂತೋಷಪಡಿಸಲ್ಪಟ್ಟ, ‡ ಸುಮನೋಬಾಣಂ- ಮನ್ಮಥನುಳ್ಳದ್ದು; ಹರಿದೇವಸಖಂ- ಅಗ್ನಿದೇವರಿಗೆ ಮಿತ್ರವಾದದ್ದು; ಭೃತಪದ್ಮರಸಂ— ಭೃತ- ಧರಿಸಲ್ಪಟ್ಟ; ಪದ್ಮರಸಂ- ಕಮಲದರಸವುಳ್ಳದ್ದು; ಆಧೃತಭೀಮಂ- ಆಧೃತ- ಆದರಿಸಲ್ಪಟ್ಟ; ಭೀಮಂ- ಭೀಮಸೇನನುಳ್ಳದ್ದು. (ಅಂದರೆ) ನನ್ನಕವಿತ್ವವು ಮಲಯರಾಜ, ಬಾಣ, ಪದ್ಮರಸ, ಹರಿದೇವ, ಭೀಮ, ಇವರುಗಳಿಂದ ಶ್ಲಾಘ್ಯವಾದದ್ದೆಂದು ಕವಿಯ ತಾತ್ಪರ್ಯ. ... ... ... ... ... ॥ ೨೧ ॥

ಭೂರಜಮಂ- ಭೂಮಿಯಧೂಳಿಯನ್ನು, ಸುವರ್ಣರಜಮಾಗಿಸಿ- ಚಿನ್ನದ ಹುಡಿಯನ್ನುಮಾಡಿ, ಸಾರವಾರ್ಧಾರೆಯ- ಶ್ರೇಷ್ಠವಾದಜಲಸಂಘಾತದ, ತುಂತುರಂ- ಹನಿಗಳನ್ನು, ನುಣ್ಮಣಿಗೆಯ್ದು- ನುಣ್ಣಗಿರುವ ರತ್ನಗಳನ್ನು ಮಾಡಿ, ಮಿಗೆ- ಹೆಚ್ಚಾಗಿ, ಶಿಖಿಯಂ- ಬೆಂಕಿಯನ್ನು, ಅಂಬರದೊಳ್- ಬಟ್ಟೆಯಲ್ಲಿ, ಕಟ್ಟಿ; ಮಾರುತಾಧಾರದೆ- ವಾಯುವಿನ ಆಶ್ರಯದಿಂದ, ಸಗ್ಗಕೆ- ಸ್ವರ್ಗಕ್ಕೆ, ಏದಿ-ಹೋಗಿ; ನಭಮಂನುಡಿಸುತ್ತೆ-

* (ಅವ) ಸಂಚರಿಸದೇಇರುವದು. † (ಅವ) ಪಂಕ- ಕೆಸರಿನಲ್ಲಿ, ಜ- ಹುಟ್ಟುವದು. ॥ ೨೦ ॥

* (ಅವ) ಕ್ಷ್ಮಾ- ಭೂಮಿಯನ್ನು, ಭೃತ್- ಪಾಲಿಸುವನು; † (ಅವ) ಕ್ಷ್ಮಾ- ಭೂಮಿಯನ್ನು, ಭೃತ್- ಧರಿಸಿರುವದು. ‡ (ಅವ) ಸುಮನಃ- ಪುಷ್ಪಗಳೇ, ಬಾಣಂ- ಬಾಣವಾಗುಳ್ಳವನು. ॥ ೨೧ ॥

ರಾದಿಭೂತದೊ । ಳ್ಚಾರುಮಹತ್ವಮಂಮೆರೆದರೀಗೆಮಗಾರ್ಯ್ಯರತಿಪ್ರಭಾವಮಂ॥ ॥೨॥

ವ.॥ಶಿವನೇದೈವವೆನುತ್ತೆ ತೋರಿನಿಜಮಂದೂದಟ್ಟಿಸಂಪ್ರೀತಿಯಿಂ। ಶಿವನಂ ಮೇಣ್ಶಿವನಿಂವರಂಬಡೆದುಮೆಯ್ಯಿತ್ತುಶಿವಂಗದ್ಭುತಾ॥ಯುವಮಾದಂಶಿವನತ್ತಣಿಂಪಡೆದುಯೋಷಿದ್ಭಾವದಿಂದೊಂದುತಂ। ಶಿವನಂಕೂರ್ತೊಡನಾಡಿನಾಡೆಶಿವನೊಳ್ಸಂದಾದ್ಯರೇಂಹೃದ್ಯರೋ ॥೩॥

ಚ ॥ ಧನವನಿತಾತನೂಭವಮನಸ್ತನುಮುಖ್ಯಮನೀಶಭಕ್ತಿಭಾ । ವನೆಯೊಡಗೂಡಿಕೊಟ್ಟುತಣಿವೈದದೆಜಂಗಮಲಿಂಗಮೂರ್ತಿಗ ॥ ಳ್ಗನುನಯದಿಂದೆಶಂಭುಕೃಪೆಯಿಂಪಡೆದೀಶ್ವರಲೋಕಕೈದಿದ। ತ್ಯನುಪಮಭಾವರಂಭಜಿಪೆನಳ್ಕರೊಳಾನರುವತ್ತುಮೂವರಂ ॥೪॥

ಚಂ ॥ ನಡೆದುದೆಸತ್ಪಥಂನುಡಿದುದೇಶಿವಮಂತ್ರಮೊರಲ್ದುದರ್ಶನಂ । ಬಡೆದನೆಮು

---

ಆಕಾಶವನ್ನು ಮಾತನಾಡಿಸುತ್ತಾ, (ಅಂದರೆ ಆಕಾಶದಿಂದ ಸಾಕ್ಷಿಯಂ ಹೇಳಿಸುತ್ತಾ), ಹೀಗೆ, ಧರಾದಿಭೂತದೊಳ್- ಭೂಮಿ ಮೊದಲಾದ ಪಂಚಭೂತಗಳಲ್ಲಿ, ಚಾರುಮಹತ್ವಮಂ ಮೆರೆದರ್, ಮನೋಹರವಾದ ಮಹಿಮೆಗಳನ್ನು ತೋರಿಸಿದ, ಆರ್ಯ್ಯರ್-ಪೂಜ್ಯರು; ಎಮಗೆ-ನಮಗೆ, ಅತಿಪ್ರಭಾವಮಂ-ಅಧಿಕವಾದ ಮಹಿಮೆಯನ್ನು; ಈಗೆ- ಕೊಡುವವರಾಗಲಿ. ... ... ... ... ... ॥೨॥

ಶಿವನೇ- ಪರಮೇಶ್ವರನೇ, ದೈವಂ- ದೇವರು, ಎನುತ್ತೆ- ಹೀಗೆನ್ನುತ್ತೆ, ನಿಜಮಂ- ಯಾಥಾರ್ಥ್ಯವನ್ನು, ತೋರಿ- ತೋರಿಸಿ; ಸಂಪ್ರೀತಿಯಿಂ- ಸಮೀಚೀನವಾದ ಪ್ರೇಮದಿಂದ, ಶಿವನಿಂ- ಪರಮೇಶ್ವರನಿಂದ, ವರಂಬಡೆದು- ವರವನ್ನು ಹೊಂದಿ, ಶಿವನಂ- ಪರಮೇಶ್ವರನನ್ನು, ದೂದಟ್ಟಿ- ಸೇವೆಗೆ ಕಳುಹಿಸಿ; ಆ ಶಿವಂಗೆ- ಆ ಪರಮೇಶ್ವರನಿಗೆ; ಮೆಯ್ಯಿತ್ತು- ದೇಹವನ್ನೇ ಸಮರ್ಪಿಸಿ; ಶಿವನತ್ತಣಿಂ- ಪರಶಿವನ ದೆಸೆಯಿಂದ; ಅದ್ಭುತಾಯುವಂ- ಆಶ್ಚರ್ಯಕರವಾದ ಆಯುಸ್ಸನ್ನು, ಆದಂ- ಅತ್ಯಂತವಾಗಿ; ಪಡೆದು- ಹೊಂದಿ; ಯೋಷಿದ್ಭಾವದಿಂದೆ- ಸ್ತ್ರೀರೂಪದಿಂದ, ಶಿವನಂ; ಒಂದುತಂ- ಸೇರುತ್ತಾ; ಕೂರ್ತು- ಪ್ರೀತಿಸಿ, ಒಡನೆ- ಸಂಗಡ, ಆಡಿ- ಆಟವಾಡಿ; ನಾಡೆ- ಚೆನ್ನಾಗಿ, ಸಂದ- ಏಕತ್ವಮಂ ಪಡೆದ; ಆದ್ಯರ್- ಪುರಾತನರು, ಏಂಹೃದ್ಯರೋ- ಏನುಮನೋಹರರೋ. ... ... ... ... ... ... ॥೩॥

ಧನ......ಮುಖ್ಯಂ— ಧನ- ದ್ರವ್ಯವೇನು, ವನಿತಾ- ಪತ್ನಿಯೇನು, * ತನೂಭವ- ಪುತ್ರನೇನು, ಮನಃ- ಮನಸ್ಸೇನು, ತನು- ಶರೀರವೇನು ಇವುಗಳೇ, ಮುಖ್ಯಮಂ- ಮೊದಲಾದವುಗಳನ್ನು, ಜಂಗಮಲಿಂಗಮೂರ್ತಿಗಳ್ಗೆ- ಶ್ಲೋ॥ ಜ್ಞಾನಂತ್ವತಿಶಯಾದ್ಯೇತುಶಿವಂವಿಶ್ವಪ್ರಕಾಶಕಂ । ಸ್ವಸ್ವರೂಪತಯಾಯೇತುಜಂಗಮಾ ಇತಿಕೀರ್ತಿತಾಃ ॥ ಇಂತು ಜಂಗಮಂಗಳೂ ॥ ಪೀಠಿಕಾಪರಮಾಶಕ್ತಿರ್ಲಿಂಗಂಸಾಕ್ಷಾತ್ಪರಶ್ಶಿವಃ । ಶಿವಶಕ್ತಿಸಮಾಯೋಗಂ ವಿಶ್ವಂಲಿಂಗಂತದುಚ್ಯತೇ ॥ ಇಂತಿ ಲಿಂಗಮೂರ್ತಿಗಳ್ಗೂ, ಈಶಭಕ್ತಿಭಾವನೆಯೊಡಗೂಡಿ- ಶಿವಭಕ್ತಿಭಾವನೆಯಿಂದ ಕೂಡಿಕೊಂಡು; ಅನುನಯದಿಂದೆ- ಯಥಾಶಾಸ್ತ್ರೀಯವಾಗಿ; ಕೊಟ್ಟು- ಸಮರ್ಪಿಸಿ; ತಣಿವೈದದೆ- ತೃಪ್ತಿಯನ್ನು ಹೊಂದದೆ; ಶಂಭುಕೃಪೆಯಿಂ- ಪರಮೇಶ್ವರನ ದಯವನ್ನು, ಪಡೆದು- ಹೊಂದಿ; ಈಶ್ವರಲೋಕಕೆ- ಕೈಲಾಸಕ್ಕೆ; ಐದಿದ- ಹೋದಂಥಾ, ಅತ್ಯನುಪಮಭಾವರಂ- ಅಸದೃಶವಾದ ರೀತಿಯುಳ್ಳ; ಅರುವತ್ತುಮೂವರಂ-ಅರುವತ್ತುಮೂರುಪುರಾತನರನ್ನು; ಆಂ- ನಾನು; ಅಳ್ಕರೊಳ್- ಪ್ರೀತಿಯಿಂದ; ಭಜಿಪೆಂ- ಧ್ಯಾನಿಸುವೆನು. ... ... ... ... ॥೪॥

ನಡೆದುದೆ-ಹೋದದ್ದೇ; ಸತ್ಪಥಂ-ಸನ್ಮಾರ್ಗವು; ನುಡಿದುದೇ-ಹೇಳಿದ್ದೇ; ಶಿವಮಂತ್ರಂ- ಶಿವಮಂತ್ರ

---

* ತನೂ- ಶರೀರದಲ್ಲಿ, ಭವ- ಹುಟ್ಟಿದವನು. ... ... ... ... ॥೪॥

ಕ್ತನಿರ್ದ್ದನೆಲೆಯೇಘನಕಾಶಿಯೊಡರ್ಚಿದುಜ್ಜುಗಂ ॥ ಮೃಡಪದಸೇವೆಪೊಕ್ಕಮಡುವಗ್ಗದ ತೀರ್ಥಮೆನಿಪ್ಪಪೇರ್ಮೆಸಂ। ಗಡಿಸಿದಸತ್ಪುರಾತನರಮೆಲ್ಲಡಿನಿಲ್ಕೆಮದಂತರಂಗದೊಳ್ ॥೨೫॥

ಚಂ ॥ ಶಿವಕೃತಿಯಲ್ಲದನ್ಯಕೃತಿಯಂಸಲೆಕೇಳದಕೂರ್ಮೆಯಳ್ತಿಯಿಂ। ಶಿವನುತಿಯಲ್ಲದನ್ಯನುತಿಯಂಮಿಗೆಮಾಡದಪೇರ್ಮೆಯೊಚ್ಚತಂ ॥ ಶಿವಪಥಮಲ್ಲದನ್ಯಪಥದೊಳ್ಪದವಿಕ್ಕದನಲ್ಮೆನೈಜಮಾ। ದವಿಕಲವೀರಶೈವಗಣದೊಲ್ಮೆಯನಾಂಪನದೇಂಕೃತಾರ್ಥನೋ॥ ॥೨೬॥

ಮ॥ ಪರಮಾಮ್ನಾಯಶಿರೋರಹಸ್ಯಗದಿತಂಶೈವಾಗಮಾಂತೋದಿತಂ। ಗುರುಮಾರ್ಗಾಗತಮುತ್ತಮೋತ್ತಮತರಂಕೈವಲ್ಯಕಲ್ಪದ್ರುಮಂ ॥ ದುರಿತಾರಣ್ಯದವಾನಲಂಶಿವಕೃಪಾಂಭಃಪೂರಧಾರಾಧರಂ। ಹರನಿಷ್ಠಾನಿಧಿವೀರಶೈವಸಮಯಂಬೆಳ್ಚೆರ್ಕೆಮಚ್ಚಿತ್ತದೊಳ್॥ ೨೭

---

ಪುಲಕಲ್ದು-ಪ್ರೀತಿಸಿ; ದರ್ಶನಂಬಡೆದನೆ- ನೋಡಿದವನೇ; ಮುಕ್ತಂ-ಸಂಸಾರಮುಕ್ತನು; ಇರ್ದ್ದನೆಲೆಯೇ-ಅವರಿದ್ದಸ್ಥಲವೇ; ಘನಕಾಶಿ- ಶ್ರೇಷ್ಠವಾದ ಕಾಶೀಕ್ಷೇತ್ರವು; ಒಡರ್ಚಿದ- ಆರಂಭಿಸಿದ; ಉಜ್ಜುಗಂ- ಕಾರ್ಯವು; ಮೃಡಪದಸೇವೆ- ಪರಮೇಶ್ವರನ ಪಾದಸೇವೆಯು; ಪೊಕ್ಕ- ಪ್ರವೇಶಿಸಿದ, ಮಡು- ಪ್ರವಾಹವು; ಅಗ್ಗದ- ಶ್ರೇಷ್ಠವಾದ, ತೀರ್ಥಂ- ತೀರ್ಥವು; ಎನಿಪ್ಪ- ಹೀಗೆನ್ನುವ, ಪೇರ್ಮೆ- ಆಧಿಕ್ಯವು; ಸಂಗಡಿಸಿದ- ಸೇರಿದ, ಸತ್ಪುರಾತನರ- ಶ್ರೇಷ್ಠರಾದ ಪುರಾತನರ; ಮೆಲ್ಲಡಿ- ಮೃದುವಾದ ಪಾದವು; ಮದಂತರಂಗದೊಳ್- ನನ್ನಮನಸ್ಸಿನಲ್ಲಿ, ನಿಲ್ಕೆ- ನಿಲ್ಲಲಿ. ... ... ... ... ॥ ೨೫ ॥

ಶಿವಕೃತಿಅಲ್ಲದೆ- ಶಿವನಮೇಲೆ ಹೇಳಿದಕಾವ್ಯವುಹೊರತಾಗಿ, ಅನ್ಯಕೃತಿಯಂ- ಇತರದೇವತಾಸರ ವಿಷಕವಾದಕಾವ್ಯವನ್ನು; ಸಲೆ- ಚೆನ್ನಾಗಿ, ಕೇಳದ- ಕೇಳದೇ ಇರುವ, ಕೂರ್ಮೆ- ಪ್ರೀತಿಯು; ಅಳ್ತಿಯಿಂ- ಪ್ರೀತಿಯಿಂದ, ಶಿವನುತಿಯಲ್ಲದೆ- ಪರಶಿವನ ಸ್ತೋತ್ರವಲ್ಲದೆ, ಅನ್ಯನುತಿಯಂ- ಇತರರ ಸ್ತೋತ್ರವನ್ನು, ಮಿಗೆ- ಅಧಿಕವಾಗಿ, ಮಾಡದ- ಮಾಡದೇ ಇರುವ, ಪೇರ್ಮೆ- ಆಧಿಕ್ಯವು, ಒಚ್ಚತಂ- ಚೆನ್ನಾಗಿ, ಶಿವಪಥಮಲ್ಲದೆ- ಶೈವಮಾರ್ಗವಲ್ಲದೆ, ಅನ್ಯಪಥದೊಳ್- ಮತ್ತೊಂದುಮಾರ್ಗದಲ್ಲಿ, ಪದವ- ಪಾದವನ್ನು, ಇಕ್ಕದ- ಇಡದೇ ಇರುವ; ನಲ್ಮೆ- ಪ್ರೀತಿಯು; ನೈಜಂಆದ- ಸ್ವಭಾವಸಿದ್ಧವಾದ; ಅವಿಕಲವೀರಶೈವಗಣದ- ಅವಿಕಲ- ಪೂರ್ಣವಾದ, ವೀರಶೈವಗಣದ- ವೀರಶೈವರ ಸಮೂಹದ, ಒಲ್ಮೆಯಂ- ಪ್ರೀತಿಯನ್ನು, ಆಂಪಂ- ಹೊಂದುವನು, ಅದೇಂಕೃತಾರ್ಥನೋ- ಅದೇನುಧನ್ಯನೋ ॥ ... ... ... ॥ ೨೬ ॥

ಪರಮಾಮ್ನಾಯಶಿರೋರಹಸ್ಯಗದಿತಂ- ಪರಮ-ಶ್ರೇಷ್ಠವಾದ, ಆಮ್ನಾಯಶಿರಃ- ಉಪನಿಷತ್ತುಗಳಲ್ಲಿರುವ, ರಹಸ್ಯ-ತತ್ವಾರ್ಥಗಳಿಂದ, ಗದಿತಂ-ಹೇಳಲ್ಪಟ್ಟ; ಶೈವಾಗಮಾಂತೋದಿತಂ-ಶೈವಾಗಮ-ಶಿವಾಗಮಗಳ, ಅಂತ- ಕೊನೆಯಲ್ಲಿ, ಉದಿತಂ- ಪ್ರತಿಪಾದಿತವಾದ; ಗುರುಮಾರ್ಗಾಗತಂ- ಗುರೂಪದೇಶಕ್ರಮದಿಂದ ಬಂದ, ಉತ್ತಮೋತ್ತಮತರಂ-ಸರ್ವೋತ್ಕೃಷ್ಟವಾದ, ಕೈವಲ್ಯಕಲ್ಪದ್ರುಮಂ- ಮೋಕ್ಷಕ್ಕೆಕಲ್ಪವೃಕ್ಷವಾದ, ದುರಿತಾರಣ್ಯ * ದವಾನಲಂ- ಪಾಪವೆಂಬಕಾಡಿಗೆಕಾಳ್ಗಿಚ್ಚಾದ, ಶಿವಕೃಪಾಂಭಃಪೂರಧಾರಾಧರಂ- ಶಿವಕೃಪಾಂಭಃಪೂರ-ಶಿವನ ಕೃಪೆಯೆಂಬ ಜಲಪ್ರವಾಹಕ್ಕೆ, † ಧಾರಾಧರಂ-ಮೇಘವಾದ; (ಅಂದರೆಈಶ್ವರನಕೃಪಾಶ್ರಯವಾದ), ಹರನಿಷ್ಠಾನಿಧಿವೀರಶೈವಸಮಯಂ-ಹರನಿಷ್ಠಾ-ಶಿವಭಕ್ತಿಗೆ, ನಿಧಿ-ಜನ್ಮಸ್ಥಾನವಾದ; ವೀರಶೈವಸಮಯಂ- ವೀರಶೈವಮತವು; ಮಚ್ಚಿತ್ತದೊಳ್- ನನ್ನ ಹೃದಯದಲ್ಲಿ; ಬೆಳ್ಚೆರ್ಕೆ-ಏರಕವಾಗಿರಲಿ. ॥೨೭॥

---

* (ಅವ) ದವ- ಕಾಡಿನ, ಅನಲಂ- ಬೆಂಕಿಯು, † (ಅವ) ಧಾರಾ- ಜಲಧಾರೆಯನ್ನು ಧರಂ- ಧರಿಸಿರುವದು. ... ... ... ... ... ... ॥ ೨೭ ॥

ಮ ‖ ಮೊದಲೊಳ್ಸೋಮಗುರೂತ್ತಮಂಸರಸವಾಕ್ಚಾತುರ್ಯದಿಂದಾಂಧ್ರದೇ । ಶದ
ಭಾಷಾಕ್ರಮದಿಂವೃಷೇಂದ್ರಕೃತಿಯಂತಾಂಮಾಡಿದಂಭಕ್ತಿಯಿಂ ‖ ದದನಾಭೀಮಕವೀಶ್ವರಂ
ನೆಗಳ್ದನಾದಂವರ್ಣಕಪ್ರೌಢಿಯಿಂ । ದದನುದ್ಯದ್ರುಚಿಸಂಸ್ಕೃತೋಕ್ತಿಯೊಳಪೇಳ್ದಂಶಂ
ಕರಾರ್ಯೋತ್ತಮಂ ‖ ... ... ... ... ... ‖ ೨೮ ‖

ಮಹಾಸ್ರ ‖ ಪದಪಿಂದಾದ್ಯರ್ಕಳಿಂತಿಂತತುಳಸರಸಶಬ್ದಾರ್ಥಸಂದರ್ಭದಿಂಕೋ । ವಿ
ದರೆಲ್ಲರ್ಮೆಚ್ಚೆಬರ್ದಿಂನೆಗಳ್ದಬಸವಪೌರಾಣಮಂಬೇರೆಮೇಣ್ಪೇ ‖ ಳ್ವುದುಹಾಸ್ಯಕ್ಕಾಸ್ಪ
ದಂಬೆಳ್ತನಮನುಚಿತಮಂತಾದೊಡಂತದ್ಗಣಸ್ತೋ । ಮದಜಾನಂಸಾರ್ವುದೀವ್ಯಾಜದಿನೆ
ನುತಿದನಾಂಪೇಳಲುದ್ಯುಕ್ತನಾದೆಂ ‖ ... ... ... ... ‖೨೯‖

ಚಂ ‖ ಶಿವಹೃದಯಾಬ್ಜಪೀಠನಿಲಯಂಬಸವಂಶಿವಕೀರ್ತಿಚಂದ್ರಿಕಾ । ಕುವಲಯಬಂ
ಧುವಲ್ತೆಬಸವಂಶಿವಸದ್ಗುಣರತ್ನಮಾಲಿಕಾ ‖ ಪ್ರವಿಮಳಸೂತ್ರಮುದ್ಘಬಸವಂಶಿವದಿವ್ಯಮ

---

ಮೊದಲೊಳ್- ಪೂರ್ವದಲ್ಲಿ, ವೃಷೇಂದ್ರಕೃತಿಯಂ- ವೃಷಭೇಶ್ವರನ ಕಾವ್ಯವನ್ನು, ಸೋಮಗುರೂತ್ತಮಂ- ಸೋಮನಾರಾಧ್ಯರೆಂಬ ಗುರುಶ್ರೇಷ್ಠನು, ತಾಂ- ತಾನು, ಸರಸವಾಕ್ಚಾತುರ್ಯದಿಂದೆ— ಸರಸ- ಶೃಂಗಾರಾದಿರಸವಿಶಿಷ್ಟವಾದ, ವಾಕ್ಚಾತುರ್ಯದಿಂದೆ– ವಾಕ್ಪ್ರೌಢಿಮೆಯಿಂದ, ಆಂಧ್ರದೇಶದ; ಭಾಷಾಕ್ರಮದಿಂ- ಭಾಷಾರೀತಿಯಿಂದ, ಮಾಡಿದಂ– ವಿರಚಿಸಿದನು; ಅದಂ- ಆ ಗ್ರಂಥವನ್ನು, ಆ ಭೀಮಕವೀಶ್ವರಂ- ಪ್ರಸಿದ್ಧನಾದ ಭೀಮಕವೀಶ್ವರನು, ವರ್ಣಕಪ್ರೌಢಿಯಿಂ– ವರ್ಣಕ- ಪದ್ಯರೂಪಕಾವ್ಯದ, ಪ್ರೌಢಿಯಿಂ- ಕೌಶಲ್ಯದಿಂದ; ಆದಂ- ಚೆನ್ನಾಗಿ, ನೆಗಳ್ದಂ- ಮಾಡಿದನು; ಅದಂ- ಆಗ್ರಂಥವನ್ನು, ಶಂಕರಾರ್ಯೋತ್ತಮಂ- ಶಂಕರಾರ್ಯನೆಂಬ ಕವಿಯು, ಉದ್ಯದ್ರುಚಿಸಂಸ್ಕೃತೋಕ್ತಿಯೊಳ್-- ಉದ್ಯತ್- ಅಧಿಕವಾಗಿ, ರುಚಿ- ಪ್ರೀತಿಯುಳ್ಳ, ಸಂಸ್ಕೃತೋಕ್ತಿಯೊಳ್- ಸಂಸ್ಕೃತಭಾಷಾರೂಪದಿಂದ, ಪೇಳ್ದಂ- ಹೇಳಿದನು. ... ‖೨೮‖

ಪದಪಿಂದೆ- ಪ್ರೀತಿಯಿಂದೆ, ಆದ್ಯರ್ಕಳ್- ಪೂರ್ವಿಕರು, ಇಂತಿಂತು- ಈ ಉಪಪ್ರಕಾರವಾಗಿ, ಅತುಳಸರಸಶಬ್ದಾರ್ಥಸಂದರ್ಭದಿಂ- ಅತುಳ- ಅಧಿಕವಾದ, ಸರಸ- ಶೃಂಗಾರಾದಿರಸಗಳೊಡನೆ ಕೂಡಿದ, ಶಬ್ದಾರ್ಥ- ಶಬ್ದಾರ್ಥಗಳ, ಸಂದರ್ಭದಿಂ- ಸೇರುವಿಕೆಯಿಂದ, ಕೋವಿದರ್ಎಲ್ಲರ್- ವಿದ್ವಾಂಸರೆಲ್ಲರು, ಮೆಚ್ಚೆ- ಒಪ್ಪಲು, ಬರ್ದಿಂ- ಜಾಣ್ಮೆಯಿಂದ; ನೆಗಳ್ದ- ಮಾಡಿದ, ಬಸವಪೌರಾಣಮಂ- ಬಸವೇಶ್ವರ ಪುರಾಣವನ್ನು, ಬೇರೆ- ಪ್ರತ್ಯೇಕವಾಗಿ, ಮೇಣ್- ಮತ್ತೂ, ಪೇಳ್ವುದು- ಹೇಳುವದು, ಹಾಸ್ಯಕ್ಕೆ- ಪರಿಹಾಸ್ಯಕ್ಕೆ, ಆಸ್ಪದಂ- ಆಶ್ರಯವು, ಬೆಳ್ತನಂ- ಬೆಪ್ಪತನವು, ಅನುಚಿತಂ- ಅಯೋಗ್ಯವು ಅಂತಾದೊಡಂ- ಹಾಗಾದರೂ, ತದ್ಗಣಸ್ತೋಮದ- ಆಪ್ರಮಥಸಮೂಹದ, ಜಾನಂ- ಧ್ಯಾನವು, ಸಾರ್ವುದು- ಪ್ರಾಪ್ತವಾಗುವದು, ಎನುತೆ- ಹೀಗೆನ್ನುತ್ತಾ, ಈವ್ಯಾಜದಿಂ- ಈನೆವದಿಂದ, ಆಂ- ನಾನು, ಪೇಳಲ್- ಹೇಳುವದಕ್ಕೆ, ಉದ್ಯುಕ್ತನಾದೆಂ- ಪ್ರಯತ್ನಪಟ್ಟೆನು, ... ... ... ... ... ... ‖೨೯‖

ಬಸವಂ- ಬಸವೇಶ್ವರನು, ಶಿವಹೃದಯಾಬ್ಜಪೀಠನಿಲಯಂ- ಶಿವ- ಈಶ್ವರನ; ಹೃದಯಾಬ್ಜಪೀಠ- ಹೃದಯಕಮಲವೆಂಬಪೀಠವೇ, ನಿಲಯಂ- ಮನೆಯಾಗುಳ್ಳವನು, ಶಿವ......ಬಂಧುವು- ಶಿವಕೀರ್ತಿ- ಈಶ್ವರನ ಯಶಸ್ಸೆಂಬ; ಚಂದ್ರಿಕಾ- ಬೆಳದಿಂಗಳಿಗೆ, * ಕುವಲಯಬಂಧುವು- ಚಂದ್ರನು, (ಅಂದರೆ ಈಶ್ವರನ ಕೀರ್ತಿಗೆ

---

* (ಅವ) ಕುವಲಯ- ನೈದಿಲೆಗಳಿಗೆ, ಬಂಧುವು- ಮಿತ್ರನು.

ಹತ್ವಭರ್ಮ್ಯಹ । ರ್ಮ್ಯವಿದಿತನೂತ್ನರತ್ನಕಲಶಂಬಸವಂಶಿವವಕ್ತ್ರದರ್ಪಣಂ ॥ ॥೩೦॥

ಚಂ ॥ ಬಸವನನಾದಿಮೂರ್ತಿಯೆನಿಪಂಬಸವಂಜಗದಾದಿಕಾರಣಂ । ಬಸವನನಂತಕೀರ್ತಿಬಸವಂಭವಮೇಘಮಹಾಸಮೀರಣಂ ॥ ಬಸವನಶೇಷಬಂಧುಬಸವಂಶಿವಭಕ್ತಮುಖಾಂಬುಜಾರುಣಂ । ಬಸವನಖರ್ವಗರ್ವ ಪರವಾದಿಜನಾಂಬುಜಮತ್ತವಾರಣಂ ... ॥ ೩೧ ॥

ಚಂ ॥ ಬಸವನನಾಮಮಂ ನೆನೆವುತಂಬಸವೇಶನಕೀರ್ತನಂಗಳಂ । ಪಸರಿಸಿಪಾಡುತಂಬಸವನುಜ್ವಲಮೂರ್ತಿಯನೊಲ್ದುಜಾನಿಸು ॥ ತ್ತೆಸೆವನರಂಗೆಜನ್ಮತತಿಯುಂಟೆಜಡಸ್ಥಿತಿಯುಂಟೆಪಾತಕ । ಪ್ರಸರಮದುಂಟೆಮೃತ್ಯುಭಯಮುಂಟೆಮದಾಂಧತೆಯುಂಟೆಧಾತ್ರಿಯೊಳ್ ॥

ಮ ॥ ವಪುರುದ್ಯತ್ಪ್ರಭೆಯಿಂದೆ ಬಿಂದು ವಿಳಸನ್ನಾದಂ ಠಣತ್ಕಾರದಿಂ । ಲಪನಪ್ರದ್ಯುತಿಸಾರದಿಂ ಕಳೆ ಚಳನ್ನೇತ್ರತ್ರಿಭಾಗಂಗಳಿಂ ॥ ದುಪಮಾತೀತಗುಣತ್ರಯಂ ಬಸವನಿಂ

---

ಕಾರಣನಾದವನೆಂದರ್ಥ.) ಬಸವಂ; ಶಿವ........ಸೂತ್ರಂ- ಶಿವಸದ್ಗುಣ- ಶಿವನ ದಯಾದಿಸದ್ಗುಣಗಳೆಂಬ, ರತ್ನಮಾಲಿಕಾ- ರತ್ನಹಾರಕ್ಕೆ, ಪ್ರವಿಮಳಸೂತ್ರಂ- ನಿರ್ಮಲತಂತುವಾದವನು, ಉದ್ಧ- ಶ್ರೇಷ್ಠನಾದ, ಬಸವಂ; ಶಿವ......ಕಲಶಂ- ಶಿವದಿವ್ಯಮಹತ್ವ- ಈಶ್ವರನ ಪೂಜ್ಯವಾದ ಮಹಿಮೆಯೆಂಬ; ಭರ್ಮ್ಯಹರ್ಮ್ಯ- ಚಿನ್ನದ ಉಪ್ಪರಿಗೆಗೆ, ವಿದಿತ- ಪ್ರಸಿದ್ಧವಾಗಿಯೂ, ನೂತ್ನ- ನೂತನವಾಗಿಯೂ ಇರುವ, ರತ್ನಕಲಶಂ- ಮಣಿಮಯಕಲಶವಾದವನು, ಬಸವಂ;ಶಿವ ಕ್ತ್ರದರ್ಪಣಂ- ಶಿವವಕ್ತ್ರ- ಶಿವನಮುಖಕ್ಕೆ; ದರ್ಪಣಂ- ಕನ್ನಡಿಯಾದವನು; ಅಲ್ತೆ-ಅಲ್ಲವೆ. ... ... ... ... ... ... ॥೩೦॥

ಬಸವಂ- ಬಸವೇಶ್ವರನು; ಅನಾದಿಮೂರ್ತಿ- ಆದಿರಹಿತನು; ಬಸವಂ; ಜಗದಾದಿಕಾರಣಂ- ಪ್ರಪಂಚಕ್ಕೆ ಮೂಲಕಾರಣನು; ಬಸವಂ; ಅನಂತಕೀರ್ತಿ- ಅಪರಿಮಿತವಾದ ಯಶಸ್ಸುಳ್ಳವನು; ಬಸವಂ; ಭವಮೇಘಮಹಾಸಮೀರಣಂ- ಭವಮೇಘ- ಜನ್ಮವೆಂಬಮೋಡಕ್ಕೆ, ಮಹಾಸಮೀರಣಂ- ದೊಡ್ಡಗಾಳಿಯಾದವನು, ಬಸವಂ; ಅಶೇಷಬಂಧು- ಎಲ್ಲರಿಗೂ ನೆಂಟನಾದವನು, ಬಸವಂ; ಶಿವಭಕ್ತಮುಖಾಂಬುಜಾರುಣಂ-ಶಿವಭಕ್ತಮುಖಾಂಬುಜ- ಶಿವಭಕ್ತರಮುಖವೆಂಬಕಮಲಕ್ಕೆ, ಅರುಣಂ- ಸೂರ್ಯನಾದವನು, ಬಸವಂ; ಅಖರ್ವ......ವಾರಣಂ- ಅಖರ್ವಗರ್ವ- ಹೆಚ್ಚಾದ ಗರ್ವವುಳ್ಳ; ಪರವಾದಿಜನ- ವಿರೋಧಿಗಳಾದ ವಾದಿಜನಗಳೆಂಬ, ಅಂಬುಜ- ಕಮಲಗಳಿಗೆ; ಮತ್ತವಾರಣ- ಮದಗಜವಾದವನು. ... ... ॥೩೧॥

ಧಾತ್ರಿಯೊಳ್- ಭೂಮಿಯಲ್ಲಿ, ಬಸವನ- ಬಸವೇಶ್ವರನ; ನಾಮಮಂ- ಹೆಸರನ್ನು, ನೆನೆವುತಂ- ಸ್ಮರಿಸುತ್ತಾ, ಬಸವೇಶನ; ಕೀರ್ತನಂಗಳಂ- ಸ್ತೋತ್ರಪದ್ಯಗಳನ್ನು, ಪಸರಿಸಿ- ವಿಸ್ತರಿಸಿ, ಪಾಡುತಂ- ಹಾಡುತ್ತಾ; ಬಸವನ; ಉಜ್ವಲಮೂರ್ತಿಯಂ- ಪ್ರಕಾಶಮಾನವಾದ ಆಕಾರವನ್ನು, ಒಲ್ದು- ಪ್ರೀತಿಸಿ, ಜಾನಿಸುತ್ತೆ- ಧ್ಯಾನಿಸುತ್ತಾ, ಎಸೆವ- ಪ್ರಕಾಶಿಸುವ, ನರಂಗೆ- ಮನುಷ್ಯನಿಗೆ, ಜನ್ಮತತಿ- ಭವಸಂತತಿಯು, ಉಂಟೆ; ಜಡಸ್ಥಿತಿ- ಅಜ್ಞಾನದ ಇರುವಿಕೆಯು, ಉಂಟೆ; ಅದುಪಾತಕಪ್ರಸರಂ- ಆ ಪಾಪದ ಗುಂಪು, ಉಂಟೆ; ಮೃತ್ಯುಭಯಂ- ಅಪಮೃತ್ಯುವಿನ ದೆಸೆಯಿಂದ ಭಯವು, ಉಂಟೆ; ಮದಾಂಧತೆ- ಗರ್ವದಿಂದುಂಟಾದ ಕುರುಡುತನವು, ಉಂಟೆ. ... ... ... ... ... ॥೩೨॥

ಬಸವನಿಂದೆ- ಬಸವೇಶ್ವರನಿಂದ, ಅಂದು- ಆ ಸೃಷ್ಟಿಕಾಲದಲ್ಲಿ, ವಪುರುದ್ಯತ್ಪ್ರಭೆಯಿಂದೆ- ವಪುಃ- ಶರೀರದ, ಉದ್ಯತ್ಪ್ರಭೆಯಿಂದೆ- ಅಧಿಕವಾದಕಾಂತಿಯಿಂದ- ಬಿಂದು- ಬಿಂದುವೂ, ಠಣತ್ಕಾರದಿಂ- ಠಣತ್ಕಾರವೆಂಬಕಂಠಧ್ವನಿಯಿಂದ, ವಿಳಸನ್ನಾದಂ ಪ್ರಕಾಶಮಾನವಾದನಾದವೂ, ಲಪನಪ್ರದ್ಯುತಿಸಾರದಿಂ- ಲಪನ- ಮುಖದ, ಪ್ರದ್ಯುತಿಸಾರದಿಂ- ಅಧಿಕವಾದಕಾಂತಿಯುಸಾರಾಂಶದಿಂದ; ಕಳೆ- ಕಳೆಯೂ, ಚಳನ್ನೇತ್ರತ್ರಿಭಾ

ಮಂದಾದವೆಂದ್ಯೆದೆಪೇ । ಳ್ದಪರಾರ್ಯರ್ಪೆರತೇನೊತಾನೆಪರಬೊಮ್ಮಂದಲ್ವೃಷಾಧೀಶ್ವರಂ ॥
ಕಂ ॥ ಪ್ರಮಥಪ್ರಥಮಾಚಾರ್ಯಂ । ಕುಮತತಮಸ್ಸೂರ್ಯನಾರ್ಯನತುಳಿತಕಾರ್ಯಂ ॥
ನಮದಮರವರ್ಯನಭವಾ । ಗಮಧುರ್ಯಂ ಬಸವರಾಜನನುಪಮಶೌರ್ಯಂ ॥ ... ॥೩೪॥
ಸ್ರ ॥ತಾರಾಗಕ್ಷೀರವಾರಾಕರಮಳಯಜಮಂದಾರಡಿಂಡೀರಹಾರ । ಸ್ಮೇರೇಂದ್ರೇಭೇಂ
ದ್ರಹೀರಾಮಳಕಮಳಮರಾಳೋರುಸೀರಾಂಕನಾಕಾ ॥ ಗಾರಾಹಾರಾರವಿಂದೋದ್ಭವಯು
ವತಿಶರದಭ್ರಾರಿಧಾರಾಧರಾಂಭೋ । ಜಾರಾತಿಸ್ಫಾರಗೌರಪ್ರಭೆಸುಭಗಯಶಃಕಾಂತಿರುಂದ್ರಂ
ವೃಷೇಂದ್ರಂ ॥ ... ... ... ... ... ... ॥೩೫॥

---

ಗಂಗಳಿಂದೆ- ಚಳನ್ನೇತ್ರ- ಚಂಚಲವಾದಕಣ್ಣುಗಳ,ತ್ರಿಭಾಗಂಗಳಿಂದೆ- ಕರೇಗುಡ್ಡೆ, ಬಿಳೀಗುಡ್ಡೆ, ಕೆಂಪುರೇಖೆ ಇವುಗಳೆಂಬಮೂರುಭಾಗಂಗಳಿಂದ, ಉಪಮಾತೀತಗುಣತ್ರಯಂ- ಉಪಮಾತೀತ- ಸಾಮ್ಯವಿಲ್ಲದ; ಗುಣತ್ರಯಂ- ಸತ್ವ, ರಜಸ್ಸು, ತಮಸ್ಸು- ಎಂಬಮೂರುಗುಣಗಳು, ಆದವು- ಉಂಟಾದವು; ಎಂದು. ಹೀಗೆಂಬದಾಗಿ, ಆರ್ಯರ್- ಶ್ರೇಷ್ಠರು; ಐದೆ- ಚೆನ್ನಾಗಿ; ಪೇಳ್ದಪರ್- ಹೇಳುವರು, ಪೆರತೇನೊ- ಇನ್ನು ಬೇರೆಹೇಳತಕ್ಕದ್ದೇನೋ? ವೃಷಾಧೀಶ್ವರಂ- ಬಸವೇಶ್ವರನು; ತಾನೆ- ಆತನೇ, ಪರಬೊಮ್ಮಂ- ಪರಬ್ರಹ್ಮವು, ದಲ್- ನಿಶ್ಚಯವು॥ ನಾದಬಿಂದುಕಳೆಗಳಿಗೆಲಕ್ಷಣವು ॥ ಸಮುದ್ರ, ದೇವದುಂದುಭಿ, ಮೇಘ, ಮದ್ದಳೆ, ಕಹಳೆ, ಶಂಖ, ಘಂಟೆ, ಕೊಳಲು, ವೀಣೆ, ಗೆಜ್ಜೆ, ಭ್ರಮರ, ಇವುಗಳಧ್ವನಿಯಂತೆ ಅನಾಹತಚಕ್ರದಲ್ಲಿ ಮೊರೆಯುವದೇನಾದವು. ಹವಳ, ಮಿಂಚು, ಚಿನ್ನ, ರತ್ನ, ನಕ್ಷತ್ರ, ಸೂರ್ಯ, ಚಂದ್ರಾದಿಗಳಗುಂಪಿನಂತೆ ನಾನಾಬಣ್ಣಗಳನ್ನು ತೋರುತ್ತಾ ತ್ರಿಕೂಟಸ್ಥಾನದಲ್ಲಿ ಪ್ರಕಾಶಮಾನವಾಗಿರುವದೇಬಿಂದು. ಅನೇಕರಂಧ್ರಗಳುಳ್ಳ ಕುಂಭದೊಳಗಣ ನಿಶ್ಚಲವಾದ ದೀಪದಬೆಳಗುರಂಧ್ರಗಳಮುಖದಿಂದ ಹೊರಟು ಪಸರಿಸುವಂತೆಶರೀರದ ಇಂದ್ರಿಯಗಳ ಮುಖಗಳಲ್ಲಿಹೊಳೆದು ಜಡರೂಪವಾದ ಪ್ರಪಂಚವೆಂಬ ದೃಶ್ಯಪದಾರ್ಥಗಳ ಸ್ವರೂಪವನ್ನು ಬೇರೆಬೇರೆತೋರಿಸುವಜ್ಞಾನಪ್ರಕಾಶವೇಕಲೆಯು. ... ... ... ... ... ॥೩೩॥

ಬಸವರಾಜಂ- ಬಸವೇಶ್ವರನು; ಪ್ರಮಥಪ್ರಥಮಾಚಾರ್ಯಂ- ಪ್ರಮಥರುಗಳಿಗೆ ಮುಖ್ಯಾಚಾರ್ಯನು; ಕುಮತತಮಸ್ಸೂರ್ಯಂ- ದುಷ್ಟಮತಗಳೆಂಬ ಕತ್ತಲೆಗೆ ಸೂರ್ಯನು; ಆರ್ಯಂ- ಪೂಜ್ಯನು; ಅತುಳಿತಕಾರ್ಯಂ- ಅಸದೃಶವಾದ ಕಾರ್ಯವುಳ್ಳವನು; ನಮದಮರವರ್ಯಂ- ನಮತ್- ನಮಸ್ಕರಿಸುವ, ಅಮರವರ್ಯಂ- ದೇವಶ್ರೇಷ್ಠರುಳ್ಳವನು; ಅಭವಾಗಮಧುರ್ಯಂ- ಶೈವಾಗಮಗಳಲ್ಲಿ ಸಮರ್ಥನು; ಅನುಪಮಶೌರ್ಯಂ- ಅಧಿಕವಾದ ಶೌರ್ಯವುಳ್ಳವನು. ... ... ... ... ... ॥೩೪॥

ವೃಷೇಂದ್ರಂ- ವೃಷಭೇಶ್ವರನು; ತಾರಾಗ...ರುಂದ್ರಂ- ತಾರಾಗ- ಬೆಳ್ಳಿಯಬೆಟ್ಟ, ಕ್ಷೀರವಾರಾಕರ- ಕ್ಷೀರಸಮುದ್ರ, ಮಳಯಜ- ಶ್ರೀಗಂಧ; ಮಂದಾರ- ಕಲ್ಪವೃಕ್ಷ, ಡಿಂಡೀರ–ನೊರೆ, ಹಾರ- ಮುತ್ತಿನಸರ, ಸ್ಮೇರ- ಮುಗುಳ್ನಗೆ, ಇಂದ್ರೇಭೇಂದ್ರ- ಐರಾವತ, ಹೀರ- ವಜ್ರಮಣಿ, ಅಮಳಕಮಳ– ಬಿಳೀತಾವರೆ, ಮರಾಳ- ಹಂಸಪಕ್ಷಿ, ಉರು * ಸೀರಾಂಕ- ಶ್ರೇಷ್ಠನಾದ ಬಲರಾಮ, † ನಾಕಾಗಾರಾಹಾರ- ದೇವತೆಗಳಿಗಾಹಾರವಾದ ಅಮೃತವು, ‡ ಅರವಿಂದೋದ್ಭವಯುವತಿ– ಬ್ರಹ್ಮನಹೆಂಡತಿಯಾದಸರಸ್ವತಿ, ಶರದಭ್ರ ರಿಧಾರಾಧರ- ಶರತ್ಕಾಲದಮೇಘ, ಅಂಭೋಜಾರಾತಿ- ಚಂದ್ರ, ಇವುಗಳೋಪಾದಿಯಲ್ಲಿ, ಸ್ಫಾರ- ವಿಸ್ತಾರ

---

* (ಅವ) ಸೀರ- ನೇಗಲೇ, ಅಂಕ- ಚಿಹ್ನೆಯಾಗುಳ್ಳವನು. † (ಅವ) ನಾಕ- ಸ್ವರ್ಗವೇ, ಅಗಾರ- ಮನೆಯಾಗುಳ್ಳ ದೇವತೆಗಳಿಗೆ, ಆಹಾರ- ಆಹಾರವು. ‡ (ಅವ) ಅರವಿಂದ- ಕಮಲದಲ್ಲಿ, ಉದ್ಭವ-

ಚಂ ॥ಶರಣರಕೈಯಕೈಪಿಡಿಯನಾದಿಯಜಂಗಮಭಕ್ತನೀಶಭ । ಕ್ತರಸುರಧೇನುಶಂ
ಕರನ ನಚ್ಚಿನವಾಹನ ಮನ್ಯವಾದಿವಾ ॥ ರ್ಧರಚಯಚಂಡಮಾರುತ ನಿಳಾತಳಪಾವನರು
ದ್ರಮೂರ್ತಿವಿ । ಸ್ಫುರಿತಕಳಾಪ್ರಪೂರ್ತಿಬಸವಂಭವಸಾಗರಕುಂಭಸಂಭವಂ ॥ ... ॥೩೬॥

ಕಂ ॥ ಆದೇವನಘನಮಹಿಮೆಯ । ನಾದೇವಾಚಾರ್ಯ ಫಣಿಪವಾಕ್ಪ ಸಹಸ್ರ ॥ಕ್ಕಾ
ದೊಡಮೇಂಬಣ್ಣಿಸಲಳ । ವಾದಪ್ಪುದೆ ಪೊಗಳ್ವೆನೆಂದುನೆನೆವವನೆಗ್ಗಂ ॥ ... ॥೩೭॥

ಕಂ ॥ ಎಂದರಿದುಂ ಪೊಗಳ್ವುದೇ । ಕೆಂದೊಡೆಶಿಶುವಾಣಿಪೆತ್ತರ್ಗಂ ಮಚ್ಚಿಪಪ್ಪೋ ॥
ಲ್ತಂದೆಬಸವಂಗರಿಯದೇ । ನೆಂದೊಡಮದುಲಾಲ್ಯಮೆನ್ನನುಡಿಯಪ್ಪುದರಿಂ ॥ ... ॥೩೮॥

ಕಂ ॥ ನುತಪೂರ್ಣ ಗುಣಾಂಬರಸಂ । ವೃತರಾಜಂಗಂಬರಾಂಚಲದಗುಣವಿ ವಂ ॥

---

ವಾದ, ಗೌರಪ್ರಭ- ಬಿಳುಪಾದ ಕಾಂತಿಯುಳ್ಳ, ಸುಭಗ- ಮನೋಹರವಾದ, ಯಶಃ- ಕೀರ್ತಿಯ, ಕಾಂತಿ- ಕಳೆಯುಳ್ಳದ, ರುಂದ್ರಂ- ಅಧಿಕನು; ಅಂದರೆ ನಿರ್ಮಲವಾದ ಕೀರ್ತಿಯುಳ್ಳವನೆಂಬರ್ಥವು. ॥೩೫॥

ಬಸವಂ- ಬಸವೇಶ್ವರನು, ಶರಣರ- ಶಿವಶರಣರ, ಕೈಯ- ಹಸ್ತದ, ಕೈಪಿಡಿ- ಕನ್ನಡಿಯು; ಅನಾದಿಯಜಂಗಮಭಕ್ತಂ- ಆದಿಯಿಲ್ಲದ ಜಂಗಮರಿಗೆ ಭಕ್ತನು; ಈಶಭಕ್ತರ- ಶಿವಭಕ್ತರಿಗೆ, * ಸುರಧೇನು- ಕಾಮಧೇನುವು; ಶಂಕರನ- ಪರಮೇಶ್ವರನ, ನಚ್ಚಿನವಾಹನಂ- ಪ್ರೀತಿಪಾತ್ರವಾದವಾಹನವು; ಅನ್ಯ......ಮಾರುತಂ— ಅನ್ಯ- ಅನ್ಯಮತಸ್ಥರ, ವಾದ- ವಾದಗಳೆಂಬ, ವಾರ್ಧರಚಯ- ಮೇಘಗಳ ಗುಂಪಿಗೆ, ಚಂಡಮಾರುತಂ- ಪ್ರಚಂಡವಾಯುವು; ಇಳಾ......ಮೂರ್ತಿ—ಇಳಾತಳ- ಭೂಮಂಡಲಕ್ಕೆ, ಪಾವನ- ಪರಿಶುದ್ಧವಾದ, ರುದ್ರಮೂರ್ತಿ- ರುದ್ರಸ್ವರೂಪನು; ವಿಸ್ಫುರಿತಕಳಾಪ್ರಪೂರ್ತಿ— ವಿಸ್ಫುರಿತ- ಪ್ರಕಾಶಮಾನವಾದ, ಕಳಾಪ್ರಪೂರ್ತಿ- ಸಂಪೂರ್ಣಜ್ಞಾನವಿದ್ಯೆಯುಳ್ಳವನು; ಭವ......ಸಂಭವಂ— ಭವ- ಜನ್ಮವೆಂಬ, ಸಾಗರ- ಸಮುದ್ರಕ್ಕೆ, † ಕುಂಭಸಂಭವಂ-ಅಗಸ್ತ್ಯನು. ... ... ... ॥೩೬॥

ಆದೇವನ- ಆಬಸವೇಶ್ವರನ, ಘನಮಹಿಮೆಯುಂ- ಅಧಿಕವಾದಮಹತ್ವವನ್ನು; ಆದೇವಾ... ಕ್ಕಾದೊಡಂ— * ಆದೇವಾಚಾರ್ಯ- ಬೃಹಸ್ಪತಿಯೇನು, ಫಣಿಪ- ಆದಿಶೇಷನೇನು, † ವಾಕ್ಪ- ಬ್ರಹ್ಮನೇನು, ಇವರುಗಳ, ಸಹಸ್ರಕ್ಕೆಆದೊಡಂ- ಸಾವಿರಕ್ಕಾದರೂ, (ಅಂದರೆ ಅನೇಕಬೃಹಸ್ಪತಿ ಆದಿಶೇಷ ಬ್ರಹ್ಮರುಗಳಾದರೂ) ಬಣ್ಣಿಸಲ್- ವರ್ಣಿಸುವದಕ್ಕೆ, ಅಳವು- ಶಕ್ತಿಯು, ಆದಪುದೇಂ- ಉಂಟಾಗುವದೇ ? ಪೊಗಳ್ವೆಂ- ಸ್ತೋತ್ರಮಾಡುವೆನು; ಎಂದು;ನೆನೆವವಂ- ಯೋಚಿಸುವವನು, ಎಗ್ಗಂ- ಹೆಡ್ಡನು. ... ॥೩೭॥

ಎಂದು; ಅರಿದುಂ- ತಿಳಿದುಕೊಂಡು; (ಆಂ) ಅದೇಕೆ-ಯಾತಕ್ಕೋಸ್ಕರ, ಪೊಗಳ್ವೆಂಎಂದೊಡೆ-ಸ್ತೋತ್ರಮಾಡುವೆನೆಂದರೆ; ಶಿಶುವಾಣಿ- ಅರ್ಭಕವಚನವು, ಪೆತ್ತರ್ಗಂ- ತಂದೆತಾಯಿಗಳನ್ನು, ಮಚ್ಚಿಪಪ್ಪೋಲ್- ಮೆಚ್ಚಿಸುವಹಾಗೆ, ತಂದೆಬಸವಂಗೆ- ಪಿತೃವಾದ ಬಸವೇಶ್ವರನಿಗೆ, ಅರಿಯದೆ- ತಿಳಿಯದೆ, ಏನೆಂದೊಡಂ- ಏನೆಂದಾಗ್ಯೂ, ಎನ್ನ; ಅದುನುಡಿ,-ಆಮಾತು, ಲಾಲ್ಯಂ-ಶ್ಲಾಘ್ಯವು, ಅಪ್ಪುದರಿಂ- ಆಗುವದರಿಂದ, (ಪೊಗಳ್ವೆಂ)

ನುತ........ರಾಜಂಗೆ—ನುತ- ಶ್ಲಾಘ್ಯವಾದ, ಪೂರ್ಣ- ಸಂಪೂರ್ಣವಾದ, ಗುಣ- ಎಳೆಗಳುಳ್ಳ, ಅಂಬರ- ವಸ್ತ್ರದಿಂದ; ಸಂವೃತ- ಸುತ್ತಲ್ಪಟ್ಟ; ರಾಜಂಗೆ- ದೊರೆಗೆ; (ಅಂದರೆ ಶ್ರೇಷ್ಠವಾದವಸ್ತ್ರಗ

---

ಹುಟ್ಟಿದ ಬ್ರಹ್ಮನಿಗೆ, ಯುವತಿ- ಪತ್ನಿಯು. ... ... ... ... ॥೩೫॥

* (ಅವ) ಸುರ-ದೇವತೆಗಳ, ಧೇನು-ಹಸುವು. † (ಅವ) ಕುಂಭ-ಕಲಶದಲ್ಲಿ, ಭವ-ಹುಟ್ಟಿದವನು ॥೩೬॥

* (ಅವ) ದೇವ- ದೇವತೆಗಳಿಗೆ, ಆಚಾರ್ಯ- ಗುರುವು. † (ಅವ) ಸರಸ್ವತಿಗೆ ಪತಿಯು. ॥೩೭॥

ತತಿರತಿಯಿಂಶ್ರುತಿನುತಘನ । ಮತಿಬಸವಂಗಲ್ಪನುತಿಯ ನೊಲ್ದರ್ಪಿಸುವೆಂ ॥ ... ॥೩೯॥

ಕಂ ॥ ಮತಿನುತಿ ಕಿರಿದಾದೊಡಮೇಂ। ಕೃತಿಪತಿಕಿರಿಯನೆವೃಷೇಂದ್ರನಾತನಬಲದಿಂ॥ ಕ್ಷಿತಿಗತಿಶಯಮಾದಪ್ಪುದಿದು । ರತಿಪತಿಕೈಕೊಂಡಕುಸುಮಬಾಣವತೆರದಿಂ ॥ ॥೪೦॥

ಕಂ ॥ ಧರ್ಮಸ್ವರೂಪನಾನತ । ಶರ್ಮಪ್ರದನೆನಿಪ ಬಸವರಾಜನಕೃತಿಯಂ ॥ ಕೂರ್ಮೆಯಿನುಸಿರ್ದೊಡೆಕೇಳದ । ರಾರ್ಮಚ್ಚದರಾರ್ಮಹೋತ್ಸವಮಬಡೆಯದರಾರ್ ॥ ॥೪೧॥

ಮಹಾಸ್ರ ॥ ವಿಲಸತ್ಕರ್ಪೂರಸಾರಾಂಬುವನೆರೆವುದೆಬರ್ಬೂರವೃಕ್ಷಕ್ಕೆಚಂದ್ರೋ। ಪಲಭಾಸ್ವದ್ದರ್ಪಣಂದೋರ್ಪುದೆವನಚರವಕ್ತ್ರಕ್ಕೆಮತ್ತೇಭಕುಂಭ ॥ ಸ್ಥಲಮುಕ್ತಾದಾಮಮಂಕಟ್ಟುವುದೆಕರಭಕಂಠಕ್ಕೆ ಪೇಳೀವುದೇವಂ । ಜುಲವಾಗ್ವಿಸ್ತಾರಸಾರಸ್ವತಮನ ಳಿವದೈವಕ್ಕೆಧಾತ್ರೀವಿದಗ್ಧರ್ ॥ ... ... ... ... ॥೪೨॥

---

ಳಿಂದಲಂಕೃತನಾದ ರಾಜನಿಗೆಂಬರ್ಥವು;) ಅಂಬರಾಂಚಲದ- ವಸ್ತ್ರದಕೊನೆಯ; ಗುಣವ- ಎಳೆಯನ್ನು, ಈವತೆ- ಕೊಡುವಂತೆ; ರತಿಯಿಂ- ಪ್ರೀತಿಯಿಂದ; ಶ್ರುತಿ......ಬಸವಂಗೆ-ಶ್ರುತಿನುತ- ವೇದಗಳಿಂದಕೊಂಡಾಡಲ್ಪಟ್ಟ, ಘನಮತಿ- ಶ್ರೇಷ್ಠವಾದ ಬುದ್ಧಿಯುಳ್ಳ; ಬಸವಂಗೆ; ಅಲ್ಪನುತಿಯಂ- ಸ್ವಲ್ಪವಾದಸ್ತೋತ್ರವನ್ನು, ಒಲ್ದು- ಪ್ರೀತಿಸಿ, ಅರ್ಪಿಸುವೆಂ- ಸಮರ್ಪಿಸುವೆನು. ... ... ॥೩೯॥

ಮತಿ- ನನ್ನ ಬುದ್ಧಿಯು, ನುತಿ- ನಾನು ಮಾಡುವ ಸ್ತೋತ್ರವು; ಕಿರಿದಾದೊಡಂ- ಸ್ವಲ್ಪವಾದಾಗ್ಯೂ; ಏಂ- ಏನುಕೊರತೆ? ಕೃತಿಪತಿ- ಕಾವ್ಯಕ್ಕೆ ಪತಿಯಾದ; ವೃಷಭೇಂದ್ರಂ- ಬಸವೇಶ್ವರನು; ಕಿರಿಯನೇ- ಸಾಮಾನ್ಯನೇ? ಆತನಬಲದಿಂ- ಆಬಸವೇಶ್ವರನಸಹಾಯದಿಂದ; ಇದು- ಈಕಾವ್ಯವು; ರತಿಪತಿ-ಮನ್ಮಥನು ಕೈಕೊಂಡ-ಗ್ರಹಿಸಿದ, ಕುಸುಮಬಾಣದ ತೆರದಿಂ- ಹೂವಿನಬಾಣದೋಪಾದಿಯಲ್ಲಿ, ಕ್ಷಿತಿಗೆ- ಭೂಮಿಗ್ಯೆ, ಅತಿಶಯಂ- ಅಧಿಕವು; ಆದಪುದು- ಆಗುವದು. ... ... ... ॥೪೦॥

ಧರ್ಮಸ್ವರೂಪಂ- ಸತ್ಕ್ರಿಯಗಳೇ ಸ್ವರೂಪವಾಗುಳ್ಳವನು; ಆನತಶರ್ಮಪ್ರದಂ- ಶರಣಾಗತರಿಗೆ ಸುಖವನ್ನುಂಟುಮಾಡುವವನು; ಎನಿಪ್ಪ- ಹೀಗೆಹೇಳಲ್ಪಡುವ; ಬಸವರಾಜನ- ಬಸವೇಶ್ವರನ; ಕೃತಿಯಂ- ಕಾವ್ಯವನ್ನು; ಕೂರ್ಮೆಯಿಂ- ಪ್ರೀತಿಯಿಂದ; ಉಸಿರ್ದೊಡೆ- ಹೇಳಲು; ಕೇಳದರಾರ್- ಯಾರುತಾನೇ ಕೇಳುವದಿಲ್ಲ? ಮಚ್ಚದರಾರ್- ಯಾರುತಾನೇಶ್ಲಾಘಿಸುವದಿಲ್ಲ? ಮಹೋತ್ಸವಂಬಡೆಯದರಾರ್- ಯಾರುತಾನೇ ಸಂತೋಷಪಡುವದಿಲ್ಲ? ... ... ... ... ॥೪೧॥

ಬರ್ಬೂರವೃಕ್ಷಕ್ಕೆ- ಬೊಬ್ಬಳೀಮರಕ್ಕೆ; ವಿಲಸತ್ಕರ್ಪೂರಸಾರಾಂಬುವಂ- ವಿಳಸತ್ಕರ್ಪೂರ- ಹೊಳೆಯುವ ಪಚ್ಚಕರ್ಪೂರದ, ಸಾರಾಂಬುವಂ- ಶ್ರೇಷ್ಠವಾದ ಉದಕವನ್ನು, ಎರೆವುದೆ- ಎರೆಯಬಹುದೆ? ವನಚರವಕ್ತ್ರಕ್ಕೆ- ಕಪಿಯಮುಖಕ್ಕೆ; ಚಂದ್ರೋಪಲಭಾಸ್ವದ್ದರ್ಪಣಂದೋರ್ಪುದೆ- ಚಂದ್ರೋಪಲ- ಚಂದ್ರಕಾಂತರತ್ನದ, ಭಾಸ್ವದ್ದರ್ಪಣಂದೋರ್ಪುದೆ- ಪ್ರಕಾಶಮಾನವಾದ ಕನ್ನಡಿಯನ್ನು ತೋರಿಸಬಹುದೇ? ಕರಭಕಂಠಕ್ಕೆ- ಒಂಟೆಯ ಕತ್ತಿಗೆ; ಮತ್ತೇಭಕುಂಭಸ್ಥಲಮುಕ್ತಾದಾಮಮಂ- ಮತ್ತೇಭ- ಮದಗಜದ, ಕುಂಭಸ್ಥಲ- ಕುಂಭಸ್ಥಲದಲ್ಲಿರುವ, ಮುಕ್ತಾ- ಮುತ್ತುಗಳ, ದಾಮಮಂ- ಮಾಲಿಕೆಯನ್ನು, ಕಟ್ಟುವುದೆ- ಕಟ್ಟಬಹುದೆ? ಧಾತ್ರೀವಿದಗ್ಧರ್- ಭೂಮಿಯಲ್ಲಿರುವ ವಿದ್ವಾಂಸರು; ಅಳಿವದೈವಕ್ಕೆ- ನಾಶವಾಗುವ ದೇವರಿಗೆ; ಮಂಜುಳವಾಗ್ವಿಸ್ತಾರಸಾರಸ್ವತಮಂ- ಮಂಜುಳವಾಕ್- ಮನೋಹರವಾದ ಶಬ್ದಗಳಿಂದ, ವಿಸ್ತಾರ- ಅಧಿಕವಾದ, ಸಾರಸ್ವತಮಂ- ಕವಿತ್ವವನ್ನು; ಈವುದೇ- ಕೊಡಬಹುದೆ? ಪೇಳ್- ಹೇಳು. ॥೪೨॥

ಚಂ ॥ ಪರಮಸುಧಾಸಮುದ್ರಮಿರೆಪಲ್ವಲಮಂಸುರರಾಜರತ್ನಮೊಂ । ದಿರೆತೆಗಳಾಂತ
ಗಾಜುಮಣಿಯಂಶರಭೇಂದ್ರಮಿರಲ್ಸೃಗಾಲನಂ ॥ ಪರಿನುತಿಪಂದಮಲ್ತೆನುತೆ ದೇವನರಸ್ತುತಿ
ಯಂಬಿಸುಟ್ಟುಶಂ । ಕರನಡಿಗಳ್ಗೆಸರ್ವರರಿವುತ್ತಿರೆಜಿಹ್ವೆಯನೊಲ್ದುಮಾರಿದೆಂ॥ ॥೪೩॥

ಮಹಾಸ್ರ ॥ ಇಳೆಯೊಳ್ಮೇಣ್ಪುಟ್ಟಪುಟ್ಟುತ್ತಳಿವನರರಮೇಲುಬ್ಬಿಕಬ್ಬಂಗಳಂ
ಬಿ । ಚ್ಚಳಿಸುತ್ತಂತಮ್ಮದಗ್ಧೋದರವಪೊರೆಯಲೆಂದಕ್ಕಟಾಕೆಟ್ಟರನ್ಯ ॥ ರ್ಪಳಿದಂತಪ್ಪ
ಲ್ಪಧೀಮಂತರನಸಮವೃಷಾಧೀಶನಂನಿತ್ಯನುನಿ । ರ್ಮಳನಂಕೊಂಡಾಡಿಪೇಳ್ವೆಂಕೃತಿಯ
ನೊಸಗೆಯಿಂಕೇಳ್ವುದೊಲ್ದೀಶಭಕ್ತರ್ ॥ ... ... ... ॥೪೪॥

ಕಂ ॥ ಸರಸತರಕಾವ್ಯಮಾನಸ । ಸರಸಿಯೊಳಾಡುವವಿದಗ್ಧವಿಮಳಮರಾಳಂ ॥ ಪರಿ
ತಂದುಸೇವಿಪುದೆಪಾ । ಮರಬಕನಿಕರಾತ್ತಕುಕವಿಕೃತಿಪಲ್ವಲಮಂ ॥ ॥೪೫॥

ಮಹಾಸ್ರ ॥ ರಸಭಾವಂಪಿಂಗೆಶೈಥಿಲ್ಯಮುದವಯುವದೊಳ್ತೀವೆಸದ್ರೀತಿವೃತ್ತಿ । ಪ್ರಸ

---

ಪರಮಸುಧಾಸಮುದ್ರಂ- ಉತ್ತಮವಾದ ಹಾಲಿನ ಸಮುದ್ರವು; ಇರೆ- ಇರಲು; ಪಲ್ವಲಮಂ- ಅಲ್ಪ ಸರಸ್ಸನ್ನು; ಸುರರಾಜರತ್ನಂ- ಇಂದ್ರನ ಚಿಂತಾರತ್ನವು, ಒಂದಿರೆ- ದೊರೆದಿರಲು; ತೆಗಳಾಂತ- ನಿಂದಿತವಾದ, ಗಾಜುಮಣಿಯಂ- ಗಾಜಿನಮಣಿಯನ್ನು; ಶರಭೇಂದ್ರಂ- ಶ್ರೇಷ್ಠವಾದ ಶರಭಮೃಗವು, ಇರಲ್- ಇರಲು, ಸೃಗಾಲನಂ- ನರಿಯನ್ನು; ಪರಿನುತಿಪ- ಹೊಗಳುವ, ಅಂದಂ- ರೀತಿಯು, ಅಲ್ತೆ- ಅಲ್ಲವೇ? ಎನುತೆ- ಎನುತ್ತ; ದೇವನರಸ್ತುತಿಯಂ- ದೇವ- ದೇವರುಗಳ, ನರ- ಮನುಷ್ಯರುಗಳ, ಸ್ತುತಿಯಂ- ಸ್ತೋತ್ರವನ್ನು; ಬಿಸುಟ್ಟು- ಬಿಟ್ಟು; ಸರ್ವರ್‌ಅರಿವುತ್ತಿರೆ- ಸರ್ವರೂ ತಿಳಿಯುವಹಾಗೆ; ಶಂಕರನ- ಶಿವನ, ಅಡಿಗಳ್ಗೆ-ಪಾದಗಳಿಗೆ, ಜಿಹ್ವೆಯಂ- ನಾಲಿಗೆಯನ್ನು;ಒಲ್ದು- ಪ್ರೀತಿಯಿಂದ, ಮಾರಿದೆಂ- ಮಾರಿದೆನು. ॥೪೩॥

ಅನ್ಯರ್- ಕೆಲವರು; ತಮ್ಮ; ದಗ್ಧೋದರವ- ಕೆಟ್ಟಹೊಟ್ಟೆಯನ್ನು, ಪೊರೆಯಲೆಂದು- ಸಾಕಬೇಕೆಂದು, ಉಬ್ಬಿ- ಉತ್ಸಾಹಪಟ್ಟು, ಇಳೆಯೊಳ್ ಭೂಮಿಯಲ್ಲಿ, ಮೇಣ್- ಮತ್ತು, ಪುಟ್ಟಪುಟ್ಟುತ್ತ- ಹುಟ್ಟಿಹುಟ್ಟುತ್ತ, ಅಳಿವ- ಸಾಯುವ, ನರರಮೇಲೆ- ಮನುಷ್ಯರಮೇಲೆ, ಕಬ್ಬಂಗಳಂ- ಕಾವ್ಯಗಳನ್ನು, ಬಿಚ್ಚಳಿಸುತ್ತಂ- ವಿಸ್ತರಿಸುತ್ತ, ಕೆಟ್ಟರ್- ಕೆಟ್ಟುಹೋದರು, ಅಕ್ಕಟ- ಅಯ್ಯೋ! ಅಂತಪ್ಪ- ಅಪ್ರಕಾರವಾದ, ಅಲ್ಪಧೀಮಂತರಂ- ಅಲ್ಪವಿದ್ವಾಂಸರನ್ನು, ಪಳಿದು- ನಿರಾಕರಿಸಿ, ನಿತ್ಯನಂ- ಶಾಶ್ವತನಾದ, ನಿರ್ಮಳನಂ- ಪಾಪರಹಿತನಾದ, ವೃಷಾಧೀಶನಂ- ವೃಷಭೇಶ್ವರನನ್ನು; ಕೊಂಡಾಡಿ- ಸ್ತೋತ್ರಮಾಡಿ, ಕೃತಿಯಂ- ಕಾವ್ಯವನ್ನು, ಪೇಳ್ವೆಂ- ಹೇಳುವೆನು, ಈಶಭಕ್ತರ್- ಶಿವಭಕ್ತರು, ಒಲ್ದು- ಪ್ರೀತಿಸಿ, ಒಸಗೆಯಿಂ- ಉತ್ಸಾಹದಿಂದ, ಕೇಳ್ವುದು- ಕೇಳುವದು. ... ... ... ... ... ॥೪೪॥

ಸರಸ........ಸರಸಿಯೊಳ್- ಸರಸತರಕಾವ್ಯ- ಅತ್ಯಂತರಸಭರಿತವಾದ ಕಾವ್ಯವೆಂಬ, ಮಾನಸಸರಸಿಯೊಳ್- ಮಾನಸನಾಮಕವಾದ ಕೊಳದಲ್ಲಿ, ಆಡುವ- ಕ್ರೀಡಿಸುವ; ವಿದಗ್ಧವಿಮಲಮರಾಳಂ- ವಿದಗ್ಧ- ವಿದ್ವಾಂಸನೆಂಬ; ವಿಮಲಮರಾಳಂ- ನಿರ್ಮಲವಾದ ಹಂಸಪಕ್ಷಿಯು; ಪರಿತಂದು-ನಡೆದುಬಂದು; ಪಾಮರ......ಪಲ್ವಲಮಂ—ಪಾಮರ- ಮೂಢರೆಂಬ, ಬಕ- ಕೊಕ್ಕರೆಗಳ, ನಿಕರ- ಗುಂಪಿನಿಂದ, ಆತ್ತ- ಪಡೆಯಲ್ಪಟ್ಟ, ಕುಕವಿಕೃತಿ- ಅಲ್ಪಕವಿಗಳ ಕಾವ್ಯವೆಂಬ, ಪಲ್ವಲಮಂ- ಸ್ವಲ್ಪನೀರುಳ್ಳ ಕಟ್ಟೆಯನ್ನು; ಸೇವಿಪುದೇ- ಸೇವಿಸೀತೆ? (ಸೇವಿಸುವದಿಲ್ಲವೆಂದರ್ಥ.) ... ... ... ॥೪೫॥

ಅಧಮಕೃತಿಪರವಾದರ್ಥ.

ರಸಭಾವಂ— ರಸ- ಶೃಂಗಾರಾದಿನವರಸಗಳು, ಭಾವಂ- ಅಭಿಪ್ರಾಯವು, ಪಿಂಗೆ- ಹೋಗಲು;

ರಂಗೆಂಟಾಗೆಧಾತುಸ್ಥಿತಿಜಗುಳೆಪದಂಗೆಟ್ಟುದೋಷಾಳಿಯೊಳ್ಮೇ ॥ ಳಸಿಮೇಣ್ದೂರೀಕೃತೇ
ಷ್ಟಧ್ವನಿಯೆನಿಸಿವಲಂಶಯ್ಯೆಗಿಂಬಾಗಿರಾರಾ । ಜಿಸದಾದಂಬರ್ದಿಯಂಪ್ರೋಲ್ತಧಮಕೃತಿ ರ
ಸಜ್ಞರ್ಗನಾದೇಯಮಲ್ತೆ ॥ ... ... ... ... ॥ ೪೬ ॥

ಚಂ ॥ ಬೆರೆಯದಿರೋವ್ರೊಬಿಂಕಮಿನಿತೇಕೆಪರೋದಿತಕಾವ್ಯಬೃಂದದೊ। ಳ್ಸರೆವಿಡಿ
ದರ್ಥಶಬ್ದತತಿಯಂ ಸಮೆದೊಂದಳಿಗಬ್ಬಮಂಕಡಂ ॥ ದುರುಮರಿಗೆಯ್ವಮಾಳ್ಕೆಯೊಳೆದು
ಷ್ಕವಿನೀಂನದನೋದಿಮೆಚ್ಚಿಸು। ತ್ತಿರಿಕೆಯಗಾಂಪರಂಬರಿದೆಬಿರ್ರನೆಬೀಗುವೆಬಲ್ಲರೊಲ್ವರೆ॥

ಶೈಥಿಲ್ಯಂ- ಅಪುಷ್ಟಾರ್ಥವು; (ಅಂದರೆ ಪ್ರಕೃತಕ್ಕೆ ಅನುಪಯುಕ್ತವಾದರ್ಥವು) ಅದು- ತಾನು; ಅವಯವ
ದೊಳ್- ಕಾವ್ಯದಂಗದಲ್ಲಿ, ತೀವೆ- ತುಂಬಲು; ಸದ್ರೀತಿವೃತ್ತಿಪ್ರಸರಂ— ಸತ್- ಸಮೀಚೀನವಾದ, ರೀತಿ-
ವೈದರ್ಭ್ಯಾದಿರೀತಿಗಳೇನು, ವೃತ್ತಿ- ಕೈಶಿಕ್ಯಾದಿವೃತ್ತಿಗಳೇನು, ಇವುಗಳ, ಪ್ರಸರಂ-ಸಮುದಾಯವು, ಗೆಂಟಾ
ಗೆ- ದೂರವಾಗಲು; ಧಾತುಸ್ಥಿತಿ— ಧಾತು- ಕ್ರಿಯಾಪದಪ್ರಕೃತಿಗಳ, ಸ್ಥಿತಿ- ಇರುವಿಕೆಯು, ಜಗುಳೆ- ಜಾ
ರಲು, ಪದಂಗೆಟ್ಟು- ಪದಗಳುಕೆಟ್ಟು, ದೋಷಾಳಿಯೊಳ್- ಕಾವ್ಯದೋಷಗಳಸಮುದಾಯದಲ್ಲಿ, ಮೇಳಸಿ-
ಸೇರಿ; ಮೇಣ್- ಮತ್ತು; ದೂರೀಕೃತೇಷ್ಟಧ್ವನಿ—ದೂರೀಕೃತ-ದೂರವಾಗಿಮಾಡಲ್ಪಟ್ಟ, ಇಷ್ಟಧ್ವನಿ-
ಹಿತವಾದಧ್ವನ್ಯರ್ಥವುಳ್ಳದ್ದು; (ಅಂದಗೆ ಧ್ವನ್ಯರ್ಥವಿಲ್ಲದ್ದು) ಎನಿಸಿ, ವಲಂ-ಚೆನ್ನಾಗಿ, ಶಯ್ಯೆಗೆ-ಪದಶಯ್ಯೆಗೆ,
ಇಂಬಾಗಿ- ಆಸ್ಪದವಾಗಿ, ರಾರಾಜಿಸದೆ- ಪ್ರಕಾಶಿಸದೆ, ಆದಂ- ಅತ್ಯಂತವಾಗಿ, ಬರ್ದೆಯಂ- ವೃದ್ಧಸ್ತ್ರೀ
ಯನ್ನು, ಪೋಲ್ತು- ಹೋಲಿದ, ಅಧಮಕೃತಿ- ಕುತ್ಸಿತಕಾವ್ಯವು, ರಸಜ್ಞರ್ಗೆ- ರಸಿಕರ್ಗೆ, ಅನಾದೇಯಂ-
ಅಂಗೀಕರಿಸುವದಕ್ಕೆ ಯೋಗ್ಯವಲ್ಲದ್ದು, ಅಲ್ತೆ- ಅಲ್ಲವೆ? * * * * * *

ವೃದ್ಧಾಂಗನಾಪರವಾದರ್ಥವು.

ರಸಭಾವಂ- ಅನುರಾಗಚೇಷ್ಟೆಯು, ಪೇಗೆ-ಹೋಗಲು; ಶೈಥಿಲ್ಯಂ-ಸಡಿಲುವಿಕೆಯು, ಅದು-ತಾನು,
ಅವಯವದೊಳ್-ಅಂಗದಲ್ಲಿ, ತೀವೆ-ತುಂಬಲು; ಸದ್ರೀತಿವೃತ್ತಿಪ್ರಸರಂ—ಸದ್ರೀತಿ-ಮನೋಹರವಾದ ಗೇಯಾ
ಗಳ, ವೃತ್ತಿ- ವರ್ತನೆಗಳ, ಪ್ರಸರಂ- ಪ್ರಸರಣೆಯು, ಗೆಂಟಾಗೆ; ಧಾತುಸ್ಥಿತಿ-ರಸಾದಿಸಪ್ತಧಾತುಗಳ ಇರು
ವಿಕೆಯು; ಜಗುಳೆ; ಪದಂಗೆಟ್ಟು- ಕಾಲ್ಗೆಟ್ಟು, ದೋಷಾಳಿಯೊಳ್- ವಾತಾದಿದೋಷಗಳಿಂದ, ಮೇಳಸಿ-
ಕೂಡಿ; ಮೇಣ್- ಮತ್ತು; ದೂರೀಕೃತೇಷ್ಟಧ್ವನಿ— ದೂರೀಕೃತ- ದೂರವಾಗಿಮಾಡಲ್ಪಟ್ಟ, ಇಷ್ಟ
ಧ್ವನಿ- ಪ್ರಿಯವಾದ ಶಬ್ದವುಳ್ಳವಳು, ಎನಿಸಿ- ಎನಿಸಿಕೊಂಡು, ವಲಂ- ಚೆನ್ನಾಗಿ, ಶಯ್ಯೆಗೆ- ಹಾಸಿಗೆಗೆ, ಇಂ
ಬಾಗಿ-ಯೋಗ್ಯಳಾಗಿ, ರಾರಾಜಿಸದೆ-ಒಪ್ಪದೆ,ಆದಂ; ರಸಜ್ಞರ್ಗೆ-ಅನುರಾಗಿಗಳಿಗೆ;ಅನಾದೇಯಂ;ಅಲ್ತೆ ॥೪೬॥

ಓವ್ರೊ ದುಷ್ಕವಿ- ಎಲಎಲಾ ಕುಕವಿಯೇ, ನೀಂ- ನೀನು, ಬೆರೆಯದಿರು- ಬೆರತುಕೊಳ್ಳಬೇಡ, ಬಿಂಕಂ-
ಗರ್ವವು, ಇನಿತೇಕೆ- ಇಷ್ಟೇತಕ್ಕೆ, ಪರೋದಿತಕಾವ್ಯಬೃಂದದೊಳ್- ಅನ್ಯರಿಂದ ಹೇಳಲ್ಪಟ್ಟ ಕಾವ್ಯಗಳಸ
ಮುದಾಯದಲ್ಲಿ; ಅರ್ಥಶಬ್ದತತಿಯಂ- ಶಬ್ದಾರ್ಥಗಳ ಗುಂಪನ್ನು, ಸೆರೆವಿಡಿದು- ಸೆರೆಯನ್ನುಹಿಡಿದು, (ಅಂದ
ರೆ ಅನ್ಯಕವಿತ್ವದ ಶಬ್ದಗಳನ್ನು ತೆಗದುಕೊಂಡು) ಕಡಂದುರು; ಕಡಜವು, ಮರಿಗೆಯ್ವಮಾಳ್ಕೆಯೊಳೆ- ಮರಿ
ಯನ್ನುಮಾಡುವರೀತಿಯಲ್ಲಿ, ಒಂದಳಿಗಬ್ಬಮಂ- ಒಂದಾನೊಂದುಕುತ್ಸಿತಕಾವ್ಯವನ್ನು, ಸಮೆದು- ಮಾಡಿ, ಅ
ದಂ- ಆಕಾವ್ಯವನ್ನು, ಓದಿ; ಅರಿಕೆಯಗಾಂಪರಂ- ಸ್ವಲ್ಪತಿಳಿದ ಮೂಢರನ್ನು, ಮೆಚ್ಚಿಸುತ್ತೆ- ಸಂತೋಷ
ಪಡಿಸುತ್ತ, ಬರಿದೆ- ಸುಮ್ಮನೆ, ಬಿರ್ರನೆಬೀಗುವೆ- ಬಿಗಿಯಾಗಿ ಉಬ್ಬುವೆ; ಬಲ್ಲರ್- ತಿಳಿದವರು, ಒಲ್ವರೇ-
ಪ್ರೀತಿಸುವರೇ? ... ... ... ... ... ॥೪೭॥

ಕಂ ॥ ಸಸ್ಮಿತಚಂಪಕಮಳಿಯುನ । ಪಸ್ಮಾರಿಯನತುಳವ ದ್ಯರುತಿಯಳಲಿಪ್ಪುದೇಂ॥
ವಿಸ್ಮಯಮೆಚಂದ್ರರುಚಿಘೋ । ರಸ್ಮರಪೀಡಿತನನಮಳಕವಿಕೃತಿಖಳನಂ ॥ ॥೪೮॥

ಕಂ ॥ ಕೃತಿಯಂನಿಂದಿಪಖಳನಾ । ಕೃತಿಯಂತಿರೆನೆಗಳಲಾಪ್ಪನೇಕುಸುಮಸಮು ॥
ನ್ನತಮಾಲೆಗೀಳ್ವಕಪಿಸ । ನ್ನುತಮಾಲೆಯನಂತೆನೆಗಳಲೇನಾರ್ದಪುದೇ ॥ ॥೪೯॥

ಕಂ ॥ ಕೃತಿವನಿತಾವಿರತರ್ಸಂ । ತತಕೋಪಕೃಶಾನುತಪ್ತರಪವಾದಜಪ ॥ ಸ್ಥಿತಿ
ಚತುರರ್ಖಲತಾಪಸ । ರತನುಮದರ್ಗುಣವಿಮುಕ್ತಿಭಾಜನರಲ್ತೆ ॥ ... ॥೫೦॥

ಕಂ ॥ ತುಳಿದೊಡೆಮುಳಿದಗಿವ್ಪುದುಫಣಿ । ತುಳಿಯದೊಡಂಜವದಿನಗಿವನಿವನೆಂದುಭ
ಯಾ ॥ ಕುಳಮಗಿದಪ್ಪುದಿಳೆಕಂಡಾ । ಗಳೆಖಳನಂಕ್ರೋಧವಿಜಿತದಾವಾನಳನಂ ॥೫೧॥

ಕಂ ॥ ಬಳವದ್ವಿಧುವಂನೊಣೆದಾ । ಗಳೆವಗುಳ್ದುಗುಳ್ದಪುದುರಾಹುಬಳರಹಿತನು

---

ಸಸ್ಮಿತಚಂಪಕಂ- ಅರಳಿದ ಸಂಪಗೆಯು, ಅಳಿಯುಂ- ತುಂಬಿಯನ್ನು; ಅತುಳವಾದ್ಯರುತಿ- ಅಧಿಕವಾಹವಾದ್ಯಧ್ವನಿಯು, ಅಪಸ್ಮಾರಿಯುಂ-ಮೊಲನಾಗರುಳ್ಳವನನ್ನು, ಚಂದ್ರರುಚಿ- ಬೆಳದಿಂಗಳು; ಘೋರಸ್ಮರಪೀಡಿತನಂ- ಕ್ರೂರನಾದ ಮನ್ಮಥನಿಂದ ಬಾಧಿಸಲ್ಪಟ್ಟವನನ್ನು; ಅಮಳಕವಿಕೃತಿ- ನಿರ್ಮಲವಾದಕವಿಯಕಾವ್ಯವು, ಖಳನಂ- ದುರ್ಜನನನ್ನು; ಅಳಲಿಪುದು- ದುಃಖಪಡಿಸುವದು, ವಿಸ್ಮಯಮೆಯೇಂ- ಆಶ್ಚರ್ಯವೇನು? ॥೪೮॥

ಕೃತಿಯಂ- ಕಾವ್ಯವನ್ನು, ನಿಂದಿಪ- ದೂಷಿಸುವ, ಖಳಂ- ನೀಚನು, ಆಕೃತಿಯಂತಿರೆ- ಆಕಾವ್ಯದಹಾಗೆ,ನೆಗಳಲ್- ಮಾಡಲು, ಆರ್ಪನೇ- ಸಮರ್ಥನಾಗುವನೇ? (ಸಮರ್ಥನಲ್ಲ.) (ಹ್ಯಾಗಂದರೆ) ಕುಸುಮಸಮುನ್ನತಮಾಲೆಗೀಳ್ವ— ಕುಸುಮ- ಪುಷ್ಪಗಳ, ಸಮುನ್ನತ- ಉತ್ತಮವಾದ, ಮಾಲೆಗೀಳ್ವ- ಮಾಲಿಕೆಯನ್ನು ಕೀಳುವ, ಕಪಿ- ಕೋತಿಯು, ಅಂತೆ- ಹಾಗೆ, ಸನ್ನುತಮಾಲೆಯಂ- ಶ್ಲಾಘ್ಯವಾದ ಮಾಲಿಕೆಯನ್ನು, ನೆಗಳಲ್- ಮಾಡುವದಕ್ಕೆ, ಆರ್ದಪುದೆಯೇಂ- ಸಮರ್ಥವಾದೀತೇಏನು? ... ... ॥೪೯॥

ಕೃತಿವನಿತಾವಿರತರ್— ಕೃತಿವನಿತಾ- ಕವಿತ್ವವೆಂಬ ಸ್ತ್ರೀಯಲ್ಲಿ, ವಿರತರ್- ಆಸೆಯಿಲ್ಲದ, ಸಂತತ...ತಪ್ತರ್— ಸಂತತ- ಯಾವಾಗಲೂ, ಕೋಪಕೃಶಾನು- ಕೋಪವೆಂಬ ಬೆಂಕಿಯಿಂದ, ತಪ್ತರ್- ಸುಡಲ್ಪಟ್ಟ; ಅಪವಾದಜಪಸ್ಥಿತಿಚತುರರ್— ಅಪವಾದಜಪ- ಪರದೂಷಣೆಯೆಂಬಜಪದ, ಸ್ಥಿತಿ- ಇರುವಿಕೆಯಲ್ಲಿ, ಚತುರರ್- ನಿಪುಣರಾದ; ಅತನುಮದರ್- ಅಧಿಕವಾದಮದವುಳ್ಳ, (ತಪಸ್ವಿಗಳಪರವಾಗಿ ತನುಮದವಿಲ್ಲದವರೆಂದರ್ಥ) ಖಲತಾಪಸರ್- ದುರ್ಜನರೆಂಬ ತಪಸ್ವಿಗಳು, ಗುಣವಿಮುಕ್ತಿಭಾಜನರ್— ಗುಣವಿಮುಕ್ತಿ- ಸದ್ಗುಣಗಳಬಿಡುಗಡೆಯೆಂಬ- ಮುಕ್ತಿ- ಮೋಕ್ಷಕ್ಕೆ. ಭಾಜನರಲ್ತೆ- ಪಾತ್ರರಲ್ಲವೇ? (ಅಂದರೆ ಸ್ತ್ರೀಯರಲ್ಲಿ ಆಸೆಯಿಲ್ಲದವರಾಗಿಯೂ,ಪಂಚಾಗ್ನಿಯಿಂದತಪಿಸಲ್ಪಟ್ಟವರಾಗಿಯೂ, ಮಂತ್ರಜಪದಲ್ಲಿ ನಿಪುಣರಾಗಿಯೂ,ಇರುವ ಪ್ರಸಿದ್ಧರಾದ ತಪಸ್ವಿಗಳ ಧರ್ಮಗಳು ದುರ್ಜನರಲ್ಲಿಯೂ ಇರುವದರಿಂದ ದುರ್ಜನರೂಕೂಡ ಒಂದುವಿಧವಾದ ತಪಸ್ವಿಗಳೆಂಬುತಾತ್ಪರ್ಯವು.) ... ... ... ... ॥೫೦॥

ಫಣಿ- ಸರ್ಪವು, ತುಳಿದೊಡೆ- ತುಳಿದರೆ, ಮುಳಿದು- ಕೋಪಿಸಿಕೊಂಡು, ಅಗಿವುದು- ಕಚ್ಚುವದು; ಇಳೆ- ಪ್ರಪಂಚದ ಜನವು, ಕ್ರೋಧವಿಜಿತದಾವಾನಲನಂ- ಕ್ರೋಧ- ಕೋಪದಿಂದ, ವಿಜಿತ- ಜಯಿಸಲ್ಪಟ್ಟ, ದಾವಾನಲನಂ- ಕಾಳ್ಗಿಚ್ಚುಳ್ಳ, ಖಳನಂ- ದುರ್ಜನನನ್ನು, ಕಂಡಾಗಳೆ- ಕಂಡಕೂಡಲೆ, ಇವಂ- ಇವನು, ತುಳಿಯದೊಡಂ- ತುಳಿಯದೇಇದ್ದಾಗ್ಯೂ, ಜವದಿಂ- ಶೀಘ್ರದಿಂದ, ಅಗಿವನೆಂದು- ಕಚ್ಚುವನೆಂದು,ಭಯಾಕುಳಂ- ಭಯದಿಂದಚಂಚಲವಾಗಿ, ಅಗಿದಪುದು- ಹೆದರುವದು. ... ... ... ॥೫೧॥

ರಾಹು- ರಾಹುವೆಂಬಗ್ರಹವು, ಬಳವದ್ವಿಧುವಂ- ಬಲಿಷ್ಠನಾದ ಚಂದ್ರನನ್ನು, ನೊಣೆದು- ನುಂಗಿ, ಆ

ಮಂ ॥ ಖಳರಾಹುನುಂಗಿಮುಗುಳ್ದಂ । ತುಳುಪದುಗಡರಾಹುವಿಂದಿದೇನಗ್ಗಳವೋ ॥೫೨॥

ಉ ॥ ಒತ್ತರದಂತಿರೊತ್ತಿಗರದಂತಿರೆ ಪೀಡಿಸಿ ಬಗ್ಗದಂತೆ ಬೆಂ । ಬತ್ತಿ ಕರಂಭಯಂಬಡಿಸಿ ಜತ್ತುಕದಂತೆಕಡಂಗಿ ಕಾಡಿ ಬ ॥ ಲ್ಗುತ್ತದಮಾಳ್ಕೆಯಿಂ ಒಡಲನಕ್ಕೊಡಲಾಗಿಸಿ ಲೋಕಮೆಲ್ಲಮಂ । ತುತ್ತಲೊಡರ್ಚಿ ನಿಂದಖಳನಂಜವದಿಂಜವನೇಕೆನುಂಗನೋ ॥೫೩॥

ಕಂ ॥ ಸುಜನಜನವದನವನಜಂ । ಕುಜನವಚಸ್ತುಹಿನಹತಿಗೆಕೊರಗಿರೆವಿಬುಧ ॥ ವ್ರಜಹಿತನುತಿರವಿರುಚಿಪಾ । ಯ್ದುಜಗನ್ನುತಮೆನಿಸಿಸೊಂಪನದನೈದಿಸುಗುಂ ॥೫೪॥

ಕಂ ॥ ಬೇವಿಂಗೆರಗುವಕಾಕಂ । ಮಾವಿಂಗೆರಗುಗುಮೆಗಿಳಿಯವೊಲ್ದುಷ್ಕೃತಿಯಂ ॥ ಸೇವಿಪಗಾವಿಲನತುಳಕ । ಳಾವಿತ್ಕೃತಿಯನುಭವಕ್ಕೆಬಗೆದಂದಪನೇ .. ॥೫೫॥

ಕಂ ॥ ಕೃತಿಬಸವಪುರಾಣಂಕೃತಿ । ಪತಿಬಸವಂಕೃತಿಯನುಸಿರ್ದವಂಶಿವಕವಿಸಾ ॥ ರತರಷಡಕ್ಷರಿದೇವಂ । ಕೃತಿಪಾಲಕರಭವಭಕ್ತರೆನೆಮುಚ್ಚಿದರಾರ್ ॥ . ... ॥೫೬॥

---

ಗಳೆ- ಕೊಡಲೆ, ಮುಗುಳ್ದು- ಪುನಃ, ಉಗುಳ್ದಪುದು- ಉಗಿವುದು; ಖಳರಾಹು- ದುರ್ಜನನೆಂಬ ರಾಹುವು, ಬಳರಹಿತನುಮಂ- ಬಲಹೀನನನ್ನೂ ಕೊಡ, ನುಂಗಿ; ಅಂತು- ಆ ಚಂದ್ರನೋಪಾದಿಯಲ್ಲಿ, ಉಳುಪದುಗಡ–ಉಳಿಸುವದಿಲ್ಲವಷ್ಟೆ, ರಾಹುವಿಂದೆ- ರಾಹುಗಿಂತಲೂ, ಇದು- ಈ ದುರ್ಜನನೆಂಬರಾಹುವು, ಏನಗ್ಗಳವೋ- ಏನು ದೊಡ್ಡದೋ! ... ... ... ... ... ॥೫೨॥

ಒತ್ತರದಂತಿರೆ- ಇಕ್ಕಳದೋಪಾದಿಯಲ್ಲಿ, ಒತ್ತಿ- ಅಮುಕಿ; ಗರದಂತಿರೆ- ಗ್ರಹದೋಪಾದಿಯಲ್ಲಿ, ಪೀಡಿಸಿ- ಬಾಧಿಸಿ; ಬಗ್ಗದಂತೆ- ಹುಲಿಯಹಾಗೆ, ಬೆಂಬತ್ತಿ- ಬೆನ್ನಟ್ಟಿ; ಕರಂ- ಹೆಚ್ಚಾಗಿ, ಭಯಂಬಡಿಸಿ- ಭಯಪಡಿಸಿ; ಜತ್ತುಕದಂತೆ- ಕರಡಿಯಹಾಗೆ, ಕಡಂಗಿ- ಉಲ್ಲಾಸದಿಂದ, ಕಾಡಿ- ತೊಂದರೆಪಡಿಸಿ; ಬಲ್ಗುತ್ತದಮಾಳ್ಕೆಯಿಂ- ಬಲವಾದರೋಗದೋಪಾದಿಯಲ್ಲಿ, ಒಡಲ- ಶರೀರವನ್ನು,ಬಡತನಕ್ಕೆ- ಕ್ಷಯಕ್ಕೆ, ಒಡಲಾಗಿಸಿ- ಗುರಿಮಾಡಿ, ಲೋಕಮೆಲ್ಲಮಂ- ಎಲ್ಲಾಜಗತ್ತನ್ನು, ತುತ್ತಲು- ನುಂಗುವದಕ್ಕೆ, ಒಡರ್ಚಿ- ಸಿದ್ಧವಾಗಿ, ನಿಂದ- ನಿಂತಿರುವ, ಖಲನಂ- ದುರ್ಜನನನ್ನು; ಜವಂ- ಯಮನು, ಜವದಿಂ- ಶೀಘ್ರದಿಂದ, ಏಕೆನುಂಗನೋ- ಯಾತಕ್ಕೆ ನುಂಗುವದಿಲ್ಲವೋ? ... ... ... ... . ... ॥೫೩॥

ಸುಜನಜನವದನವನಜಂ- ಸುಜನಜನ- ಉತ್ತಮಜನದ, ವದನವನಜಂ- ಮುಖವೆಂಬಕಮಲವು; ಕುಜನವಚಸ್ತುಹಿನಹತಿಗೆ- ಕುಜನ- ನೀಚರ, ವಚಸ್ತುಹಿನ- ಮಾತುಗಳೆಂಬಹಿಮದ, ಹತಿಗೆ- ಏಟಿಗೆ, ಕೊರಗಿರೆ- ಬಾಡಿರಲು; ವಿಬುಧ........ರುಚಿ- ವಿಬುಧವ್ರಜ- ವಿದ್ವಾಂಸರ ಗುಂಪಿನ, ಹಿತನುತಿ- ಇಷ್ಟವಾದಸ್ತೋತ್ರವೆಂಬ, ರವಿರುಚಿ- ಸೂರ್ಯನ ಕಿರಣವು; ಪಾಯ್ದು- ನುಗ್ಗಿ (ಅಂದರೆಹರಡಿಕೊಂಡು) ಅದಂ- ಆಮುಖಕಮಲವನ್ನು; ಜಗನ್ನುತಮೆನಿಸಿ- ಜಗತ್ತಿನಲ್ಲಿ ಶ್ಲಾಘ್ಯವಾದದ್ದು ಎಂದುಹೇಳಿಸಿ; ಸೊಂಪಂ- ಕಾಂತಿಯನ್ನು; ಐದಿಸುಗುಂ- ಹೊಂದಿಸುವದು. ... ... ... ... ॥೫೪॥

ಬೇವಿಂಗೆ- ಬೇವಿನಮರಕ್ಕೆ, ಎರಗುವ- ಬೀಳುವ; ಕಾಕಂ- ಕಾಗೆಯು; ಗಿಳಿಯವೊಲ್- ಗಿಳಿಯಂತೆ, ಮಾವಿಂಗೆ- ಮಾವಿನಮರಕ್ಕೆ; ಎರಗುಗುಮೆ- ಬಿದ್ದೀತೆ? ದುಷ್ಕೃತಿಯಂ- ಕುತ್ಸಿತಕವಿತ್ವವನ್ನು, ಸೇವಿಪ- ಓದಿಕೇಳುವ,ಗಾವಿಲಂ- ಮೂಢನು, ಅತುಳಕಳಾವಿತ್ಕೃತಿಯಂ- ಅತುಳಕಳಾವಿತ್–ಸಮಸ್ತವಿದ್ಯಗಳನ್ನೂ ಬಲ್ಲವನ, ಕೃತಿಯ- ಕಾವ್ಯದ, ಅನುಭವಕ್ಕೆ- ತಿಳುವಳಿಕೆಗೆ, ಬಗೆದಂದಪನೇ- ಮನಸ್ಸನ್ನುತಗುವನೇ? ॥೫೫॥

ಕೃತಿ- ಕಾವ್ಯವು, ಬಸವಪುರಾಣಂ- ಬಸವಪುರಾಣವು; ಕೃತಿಪತಿ- ಕಾವ್ಯಕ್ಕೆ ಪತಿಯು, ಬಸವಂ- ಬಸವೇಶ್ವರನು; ಕೃತಿಯಂ- ಕಾವ್ಯವನ್ನು, ಉಸಿರ್ದವಂ- ಹೇಳಿದವನು, ಶಿವಕವಿಸಾರತರಷಡಕ್ಷರಿದೇವಂ-

ಕಂ ॥ ಬರ್ಪಿಸೆಯೆರಸವಿಸರಮಂ । ಪೊರ್ದಿದಕೊಂಕಾಂತನುಡಿಯನನುಮತದತ್ತಂ ॥
ತಿರ್ದುಗೆವಿಬುಧರ್ನಂದನ । ಮಿರ್ದಲ್ಲಿಗೆತಿರ್ದುವಂತೆತಟನೀಜಳಮಂ ॥ ... ॥೫೭॥

ಮಹಾಸ್ರ ॥ ಗುರುಕರ್ಣಶ್ರಾವ್ಯಮುಚ್ಛೃಂಖಲಖಲಜನಭೀಷ್ಮಂಲಸದ್ಭೀಮಧರ್ಮ।
ಸ್ಫುರಿತಂ ಪಾಷಂಡಹೃಚ್ಛಲ್ಯಗುಣಗಣಯುತಂಚಂದ್ರಿಕಾಪಾಂಡುಕೀರ್ತ್ಯಾ ॥ ಕರಮುದ್ಯ

---

ಶಿವಕವಿಗಳಲ್ಲಿ ಅತ್ಯಂತಶ್ರೇಷ್ಠನಾದ ಷಡಕ್ಷರಿದೇವನು; ಕೃತಿಪಾಲಕರ್- ಕಾವ್ಯವನ್ನುಪರಿಪಾಲನೆಮಾಡು ವವರು, ಅಭವಭಕ್ತರ್- ಶಿವಭಕ್ತರು; ಎನೆ- ಹೀಗೆನ್ನಲು; ಆರ್ಮಚ್ಚದರ್- ಮೆಚ್ಚದಿರುವವರ್ಯಾರು? (ಎಲ್ಲ ರೂ ಮೆಚ್ಚುವರೆಂದರ್ಥ.) ... ... ... ... ॥೫೮॥

ನಂದನಂ- ತೋಟವು, ಇರ್ದಲ್ಲಿಗೆ- ಇದ್ದಕಡೆಗೆ, ತಟನೀಜಳಮಂ- ಹೊಳೆಯ ನೀರನ್ನು, ತಿರ್ದುವಂತೆ- ತಿರುಗಿಸುವಹಾಗೆ, ಬರ್ದಿಸೆಯೆ- ಚಮತ್ಕಾರವು ಪ್ರಕಾಶವಾಗಲು, ರಸವಿಸರಮಂ- ಶೃಂಗಾರಾದಿರಸಗಳ ಸಮುದಾಯವನ್ನು, ಪೊರ್ದಿದ- ಹೊಂದಿದ, ಕೊಂಕಾಂತನುಡಿಯಂ- ವಕ್ರವಾದ ಮಾತುಗಳನ್ನು, ವಿಬುಧರ್- ವಿದ್ವಾಂಸರು, ಅನುಮತದತ್ತಂ- ತಮ್ಮ ಅಭಿಪ್ರಾಯವಿದ್ದ ಕಡೆಗೆ, ತಿರ್ದುಗೆ- ತಿದ್ದಲಿ. ॥೫೭॥

## ವೃಷಭೇಂದ್ರವಿಜಯಪರವಾದರ್ಥ.

ಇದುಪುರಾಣಂ- ಈ ಪುರಾಣವು, ಗುರುಕರ್ಣಶ್ರಾವ್ಯಂ- ಪೂಜ್ಯರಕವಿಗಳಿಂದ ಕೇಳುವದಕ್ಕೆಯೋಗ್ಯವಾದದ್ದು; ಉಚ್ಛೃಂಖಲ......ಭೀಷ್ಮಂ- ಉಚ್ಛೃಂಖಲಖಲಜನ- ಅಪ್ರತಿಹತರಾದದುರ್ಜನರಿಗೆ, ಭೀಷ್ಮಂ ಭಯಂಕರವಾದದ್ದು; ಲಸದ್ಭೀಮಧರ್ಮಸ್ಫುರಿತಂ- ಲಸತ್- ಪ್ರಕಾಶಿಸುವ, ಭೀಮಧರ್ಮ- ಶಿವಧರ್ಮಗಳಿಂದ, ಸ್ಫುರಿತಂ- ಪ್ರಕಾಶಿಸಲ್ಪಟ್ಟದ್ದು; ಪಾಷಂಡ...... ಯುತಂ- ಪಾಷಂಡ- ಸರ್ವದೇವತಾಬೆನ್ನಿಗಳುಳ್ಳಮತಸ್ಥರ, ಹೃತ್- ಹೃದಯಕ್ಕೆ, ಶಲ್ಯ- ಶೂಲವಾಗಿರುವ, ಗುಣಗಣ- ಶಿವೈಕಧ್ಯೇಯತಾದಿಸದ್ಗುಣಗಳಿಂದ, ಯುತಂ- ಕೂಡಿದ್ದು; ಚಂದ್ರಿಕಾಪಾಂಡುಕೀರ್ತ್ಯಾಕರಂ- ಚಂದ್ರಿಕಾಪಾಂಡು- ಬೆಳದಿಂಗಳೋಪಾದಿಯಲ್ಲಿಬಿಳುಪಾದ, ಕೀರ್ತಿ- ಯಶಸ್ಸಿಗೆ, ಆಕರಂ- ಆಶ್ರಯವಾದದ್ದು, ಉದ್ಯತ್...... ವಿಜಯಕಂ- ಉದ್ಯತ್- ಅಧಿಕವಾದ, ವಾದಿ- ಮತಾಂತರದವರ, ವಾದ- ಪ್ರಸಂಗಗಳ, ಪ್ರಚಯ- ಗುಂಪನ್ನು, ವಿಜಯಕಂ- ಜಯಿಸುವಂಥಾದ್ದು; ಸೋಮ......ಚರಿತಂ- ಸೋಮವಂಶಾನುಗ- ಶಿವಕುಲೋತ್ಪನ್ನರಾದಭಕ್ತರ, ಶ್ರೀಚರಿತಂ- ಪ್ರಕಾಶಮಾನವಾದ ಚರಿತ್ರೆಯುಳ್ಳದ್ದು; ನಾನಾಸುಪರ್ವಾಶ್ರಿತಂ- ಅನೇಕದೇವತೆಗಳಿಂದ ಪ್ರಾರ್ಥಿತವಾದದ್ದು: ಪದಶೋಭಾಧುರೀಣಂ- ಸಾಲೋಕ್ಯಾದಿಪದಗಳ ಪ್ರಕಾಶವನ್ನುವಹಿಸಿರುವಂಥಾದ್ದು. * * *

## ಭಾರತಪರವಾದರ್ಥ.

ಪುರಾಣಂ- ಭಾರತಪುರಾಣವು, ಗುರುಕರ್ಣಶ್ರಾವ್ಯಂ- ಶ್ರಾವ್ಯರಾದ ದ್ರೋಣಕರ್ಣರುಳ್ಳದ್ದು; ಉಚ್ಛೃಂಖಲಖಲಜನಭೀಷ್ಮಂ- ಉಚ್ಛೃಂಖಲ- ಅಪ್ರತಿಹತರಾದ, ಖಲಜನ- ದುರ್ಜನರಾದ ದುರ್ಯೋಧನಾದಿಗಳೂ, ಭೀಷ್ಮಂ- ಭೀಷ್ಮಾಚಾರ್ಯನೂಉಳ್ಳದ್ದು; ಲಸದ್ಭೀಮಧರ್ಮಸ್ಫುರಿತಂ- ಲಸತ್- ಪ್ರಕಾಶಮಾನರಾದ, ಭೀಮಧರ್ಮ- ಭೀಮನಿಂದಲೂ ಧರ್ಮರಾಯನಿಂದಲೂ, ಸ್ಫುರಿತಂ- ಪ್ರಕಾಶಿಸಲ್ಪಟ್ಟದ್ದು; ಶಲ್ಯಗುಣಗಣಯುತಂ- ಶಲ್ಯ- ಶಲ್ಯನ, ಗುಣಗಣ- ಗುಣಸಮೂಹದಿಂದ, ಯುತಂ- ಕೂಡಿರುವದು; ಚಂದ್ರಿಕಾಪಾಂಡುಕೀರ್ತ್ಯಾಕರಂ- ಚಂದ್ರಿಕಾ- ಬೆಳದಿಂಗಳೋಪಾದಿಯಲ್ಲಿರುವ, ಪಾಂಡುಕೀರ್ತಿ- ಪಾಂಡುರಾಯನಕೀರ್ತಿಗೆ, ಆಕರಂ- ಸ್ಥಾನವಾದದ್ದು, ಉದ್ಯತ್......ವಿಜಯಕಂ—ಉದ್ಯತ್- ಅಧಿಕವಾಗಿ, ವಾದಿ- ಹೇಳುವ, ವಾದ- ವೀರವಾದಗಳ, ಪ್ರಚಯ- ಸಮುದಾಯವುಳ್ಳ, ವಿಜಯಕಂ- ಅರ್ಜುನನುಳ್ಳದ್ದು; ಸೋಮ......

ದ್ವಾದಿವಾದಪ್ರಚಯವಿಜಯಕಂ ಸೋಮವಂಶಾನುಗಶ್ರೀ । ಚರಿತಂ ನಾನಾಸುಪರ್ವಾಶ್ರಿತ
ಮಿದು ಪದಶೋಭಾಧುರೀಣಂ ಪುರಾಣಂ ॥ .. ... ... ॥೫೮॥

ಚಂ ॥ ವಿರಸತೆ ತಾರಕಾವಳಿಯೊಳನ್ವಿತದೋಷತೆ ಚಂದ್ರನೊಳ್ಗುಣೋ । ತ್ಕರರಹಿತ
ಸ್ವಭಾವಮದು ದುರ್ಜನನೊಳ್ಗತಭಾವಜಾತಿಭಾ ॥ ಸುರತೆ ಜರಾವಿಕೀರ್ಣಜನದೊಳ್ಜ
ಡವೃತ್ತಿ ಸರೋಜರಾಜಿಯೊ । ಳ್ಪರಿಗತಮಾದುದಲ್ಲದೆ ಮದೀಯಮಹಾಕೃತಿಯಲ್ಲಿತೋ
ರ್ಕುಮೇ ॥ ... ... ... ... ॥೫೯॥

ಚಂ ॥ ಸರಸತರಪ್ರಸನ್ನವದನಂ ಬುಧಸನ್ನುತಸಾರವೃತ್ತಿವಿ । ಸ್ಫುರಿತಮುದಾತ್ತ

---

ಚರಿತಂ- ಸೋಮವಂಶಾನುಗ- ಚಂದ್ರಕುಲೋತ್ಪನ್ನರಾದ ಅರಸುಗಳ, ಶ್ರೀಚರಿತಂ- ಸಂಪತ್ತಿನಚರಿತ್ರೆಯುಳ್ಳದ್ದು; ನಾನಾಸುಪರ್ವಾಶ್ರಿತಂ-- ನಾನಾ- ಅನೇಕವಿಧವಾದ, ಸುಪರ್ವ- ಶ್ರೇಷ್ಠವಾದ ಪರ್ವಗಳಿಂದ, ಆಶ್ರಿತಂ- ಆಶ್ರಯಿಸಲ್ಪಟ್ಟದ್ದು; ಪದಶೋಭಾಧುರೀಣಂ- ಪದಗಳಚಾತುರ್ಯವನ್ನುಧರಿಸಿಕೊಂಡಿರುವಂಥಾದ್ದು. ... ... ... ... ... ॥೫೮॥

ವಿರಸತೆ- ಭೂಸ್ಪರ್ಶವಿಲ್ಲದಿರೋಣವು, ತಾರಕಾವಳಿಯೊಳ್- ನಕ್ಷತ್ರಗಳಗುಂಪಿನಲ್ಲಿ; ಅನ್ವಿತದೋಷತೆ- ರಾತ್ರಿಯೊಡನೆಕೂಡಿರುವಿಕೆಯು, ಚಂದ್ರನೊಳ್- ಚಂದ್ರನಲ್ಲಿ; ಗುಣೋತ್ಕರರಹಿತಸ್ವಭಾವಂ— ಗುಣೋತ್ಕರ- ಸದ್ಗುಣಗಳ ಸಮುದಾಯದಿಂದ, ರಹಿತ- ಹೀನವಾದ, ಸ್ವಭಾವಂ- ಸ್ವರೂಪವು, ಅದು- ತಾನು, ದುರ್ಜನನೊಳ್- ದುರ್ಜನನಲ್ಲಿ; ಗತಭಾವಜಾತಿಭಾಸುರತೆ—ಗತ- ಕಳೆದುಹೋದ, ಭಾವಜ- ಕಾಮನಿಂದುಂಟಾದ, ಅತಿಭಾಸುರತೆ- ಅತ್ಯಂತ ಮನೋಹರತ್ವವು, ಜರಾವಿಕೀರ್ಣಜನದೊಳ್—ಜರಾ- ಮುಪ್ಪಿನಿಂದ, ವಿಕೀರ್ಣ- ವ್ಯಾಪಿಸಿರುವ, ಜನದೊಳ್- ಜನದಲ್ಲಿ; ಜಡವೃತ್ತಿ— ಜಡ- ನೀರಿನಲ್ಲಿ, ವೃತ್ತಿ- ಇರುವಿಕೆಯು, ಸರೋಜರಾಜಿಯೊಳ್- ಕಮಲದಗುಂಪಿನಲ್ಲಿ; ಪರಿಗತಮಾದುದು- ಹೊಂದಿತು; ಅಲ್ಲದೆ- ಹಾಗಲ್ಲದೆ, ಮದೀಯಮಹಾಕೃತಿಯಲ್ಲಿ- ನನ್ನ ಉತ್ಕೃಷ್ಟವಾದಕಾವ್ಯದಲ್ಲಿ, ವಿರಸತೆ- ಶೃಂಗಾರಾದಿರಸಗಳಿಲ್ಲದಿರುವಿಕೆಯೂ, ಅನ್ವಿತದೋಷತೆ- ನಿರರ್ಥಕತ್ವಾದಿದೋಷಗಳೊಡನೆಕೂಡಿರೋಣವೂ; ಗುಣೋತ್ಕರರಹಿತಸ್ವಭಾವಂ- ಸೌಕುಮಾರ್ಯಾದಿಕಾವ್ಯಗುಣಗಳ ಸಮುದಾಯದಿಂದ ಬಿಟ್ಟಿರುವಸ್ವಭಾವವೂ; ಗತಭಾವಜಾತಿಭಾಸುರತೆ- ಭಾವಾರ್ಥ ಕವಿತಾಜಾತಿಗಳಿಂದುಂಟಾದ ಮನೋಹರತ್ವಾಭಾವವೂ; ಜಡವೃತ್ತಿ- ಅಪ್ರೌಢವಾದಕೈಶಿಕ್ಯಾದಿವೃತ್ತಿಗಳೂ, ತೋರ್ಕುಮೆ- ತೋರೀತೇ? ... ... ... ॥೫೯॥

ಈನವಕಾವ್ಯಂ- ಈನೂತನವಾದ ಕಾವ್ಯವು, ಇಳಾತಳಾಗ್ರದೊಳ್- ಭೂಮಂಡಲದಲ್ಲಿ, ಬಂಧುರಬಸವೇಶನಂತೆ- ಮನೋಹರನಾದ ಬಸವೇಶ್ವರನಹಾಗೆ, ಎಸೆವುದು-ಪ್ರಕಾಶಿಸುವದು;

ಕಾವ್ಯಪರವಾದರ್ಥ.

ಸರಸತರಪ್ರಸನ್ನವದನಂ—ಸರಸತರ- ಅಧಿಕವಾಗಿ ನವರಸದೊಡನೆಕೂಡಿರುವದಾಗಿಯೂ, ಪ್ರಸನ್ನ- ಪ್ರಸಾದವೆಂಬ ಕಾವ್ಯಗುಣದೊಡನೆ ಕೂಡಿರುವದಾಗಿಯೂ, ಇರುವ, ವದನ- ಆರಂಭವುಳ್ಳದ್ದು; ಬುಧಸನ್ನುತಸಾರವೃತ್ತಿವಿಸ್ಫುರಿತಂ--ಬುಧಸನ್ನುತ- ವಿದ್ವಾಂಸರಿಂದ ಶ್ಲಾಘಿಸಲ್ಪಟ್ಟ, ಸಾರವೃತ್ತಿ- ಕೈಶಿಕ್ಯಾದಿವೃತ್ತಿಗಳಿಂದ, ವಿಸ್ಫುರಿತಂ- ಪ್ರಕಾಶಿಸಲ್ಪಟ್ಟದ್ದು; ಉದಾತ್ತಸಾರಗುಣಂ—ಉದಾತ್ತ- ಉದಾತ್ತಾಲಂಕಾರವೇನು, ಸಾರಗುಣ- ಮಾಧುರ್ಯಾದಿಗುಣಗಳೇನು ಇವುಗಳುಳ್ಳದ್ದು; ಅನ್ವಿತಲಕ್ಷಣಲಕ್ಷಿತಂ— ಅನ್ವಿತ- ಹೊಂದಿರುವ, ಲಕ್ಷಣ- ವ್ಯಾಕರಣಾದಿನಿಬಂಧನೆಗಳಿಂದ, ಲಕ್ಷಿತಂ- ಕೂಡಲ್ಪಟ್ಟದ್ದು; ಸುಭಾವರುಚಿ—ಸುಭಾವ- ಸ

ಸಾರಗುಣಮನ್ವಿತಲಕ್ಷಣಲಕ್ಷಿತಂಸುಭಾ ॥ ವರುಚಿನಿರಸ್ತದೋಷನಿವಹಂಶಿವತಾಯುತಮ ರ್ಥದಾಯಿಬಂ । ಧುರಬಸವೇಶನಂತೆಸೆವುದೀನವಕಾವ್ಯಮಿಳಾತಳಾಗ್ರದೊಳ್॥ ॥ ೬೦ ॥

ಮಲ್ಲಿಕಾಮಾಲಾ ॥ ಶ್ರೀಲಸದ್ಗುಣಬದ್ಧವಾಕ್ಸುಮನಃಪ್ರತಾನಮನೋಹರಂ । ಲಾ ಲಿತೋತ್ಪಲಮಾಲೆ ಚಂಪಕಮಾಲೆಮಂಜುಲಮಲ್ಲಿಕಾ ॥ ಮಾಲೆ ಕಾಂಚನಮಾಲೆ ಪೃಥ್ವೀವಿರಾ ಜಿತಂ ಲಲಿತಂತಟ । ನ್ಮಾಲೆಯಾಮಣಿಮಾಲೆಯಂತಿರೆಮತ್ಕೃತಿಪ್ರಮದಾದೃತಂ ॥ ೬೧ ॥

ಚಂ ॥ ಬಸವಕುಮಾರ ಲಿಂಗಸುಖಸಾರ ಭವತ್ಕೃತಿಗೊಳ್ಪುಸದ್ರಸ । ಪ್ರಸರಮ್ಮ

---

ವಿಶಾಬೇನಭಾವಗಳ, ರುಚಿ- ಕಾಂತಿಯುಳ್ಳದ್ದು; ನಿರಸ್ತದೋಷನಿವಹಂ- ಕಾವ್ಯದೋಷವಿಲ್ಲದ್ದು; ಶಿವತಾ ಯುತಂ- ಶುಭಚಯದೊಡನೆಕೂಡಿರುವದು, ಅರ್ಥದಾಯಿ- ಶ್ರೇಷ್ಠವಾದ ಶಬ್ದಾರ್ಥಗಳನ್ನುಕೊಡುವದು.

## ಬಸವೇಶಪರವಾದರ್ಥ.

ಸರಸತರಪ್ರಸನ್ನವದನಂ— ಸರಸತರ- ಅತ್ಯಂತಮನೋಹರವಾದ, ಪ್ರಸನ್ನ- ನಿರ್ಮಲವಾದ, ವದ ನಂ- ಮುಖವುಳ್ಳವನು, ಬುಧ......ವಿಸ್ಫುರಿತಂ— ಬುಧಸನ್ನುತ- ದೇವತೆಗಳಿಂದ ಕೊಂಡಾಡಲ್ಪಟ್ಟ, ಸಾರ ವೃತ್ತಿ- ಶ್ರೇಷ್ಠವಾದ ವರ್ತನದಿಂದ, ವಿಸ್ಫುರಿತಂ- ಪ್ರಕಾಶಿಸಲ್ಪಟ್ಟವನು; ಉದಾತ್ತಸಾರಗುಣಂ- ಅತ್ಯಂ ತಶ್ರೇಷ್ಠವಾದ ಗುಣವುಳ್ಳವನು, ಅನ್ವಿತಲಕ್ಷಣಲಕ್ಷಿತಂ—ಅನ್ವಿತ- ಕೂಡಿರುವ, ಲಕ್ಷಣ- ಶೈವಚಿನ್ಹೆಗಳಿಂದ, ಲಕ್ಷಿತಂ- ಗುರುತಾಗಿಮಾಡಲ್ಪಟ್ಟವನು; ಸುಭಾವರುಚಿ- ಸದ್ಭಾವವುಳ್ಳವರಲ್ಲಿ ಪ್ರೀತಿಯುಳ್ಳವನು; ನಿರಸ್ತ ದೋಷನಿವಹಂ- ಹೋಗಲಾಡಿಸಲ್ಪಟ್ಟ ಸಮಸ್ತದೋಷಗಳುಳ್ಳವನು; ಶಿವತಾಯುತಂ- ಶಿವಧರ್ಮದೊಡನೆಕೂ ಡಿದವನು; ಅರ್ಥದಾಯಿ- ಇಷ್ಟಾರ್ಥವನ್ನು ಕೊಡುವವನು. ॥೬೦॥

ಶ್ರೀ.........ಮನೋಹರಂ—ಶ್ರೀ- ಶುಭದೊಡನೆಕೂಡಿದ, ಲಸದ್ಗುಣ- ಪ್ರಕಾಶಮಾನವಾದ ಮಾ ಧುರ್ಯಾದಿಗುಣವೆಂಬ ತಂತುವಿನಿಂದ, ಬದ್ಧ- ಕಟ್ಟಲ್ಪಟ್ಟ, ವಾಕ್- ಶಬ್ದಗಳೆಂಬ, ಸುಮನಃಪ್ರತಾನ- ಪು ಷ್ಪಗಳ ಸಮೂಹದಿಂದ, ಮನೋಹರಂ- ರಮ್ಯವಾದ; ಲಾಲಿತೋತ್ಪಲಮಾಲೆ- ಶ್ಲಾಘ್ಯವಾದ ಉತ್ಪಲ ಮಾಲಾವೃತ್ತವೂ, (ನೈದಿಲೆ ಹೂವಿನಮಾಲಿಕೆಯೂ,) ಚಂಪಕಮಾಲೆ- ಚಂಪಕಮಾಲಾವೃತ್ತವೂ, (ಸಂಪಗೆ ಹೂವಿನಮಾಲಿಕೆಯೂ,) ಮಂಜುಲಮಲ್ಲಿಕಾಮಾಲೆ- ಮನೋಹರವಾದ ಮಲ್ಲಿಕಾಮಾಲಾವೃತ್ತವೂ, (ಮಲ್ಲಿ ಗೆ ಹೂವಿನಮಾಲಿಕೆಯೂ,) ಕಾಂಚನಮಾಲೆ- ಕಾಂಚನಮಾಲಾವೃತ್ತವೂ, (ಸುರಹೊನ್ನೆಹೂವಿನಮಾಲಿಕೆ ಯೂ) ಪೃಥ್ವೀ- ಪೃಥ್ವೀವೃತ್ತವೂ, ವಿರಾಜಿತಂ- ಪ್ರಕಾಶಿಸುವ, ಲಲಿತಂ- ಲಲಿತಪದವೃತ್ತವೂ, ತಟಿನ್ಮಾ ಲೆ-ತಟಿನ್ಮಾಲೆ ಎಂಬವೃತ್ತವೂ, (ಪೃಥ್ವೀ- ವಿಸ್ತಾರವಾದ, ವಿರಾಜಿತಂ- ಪ್ರಕಾಶಿಸುವ,ಲಲಿತಂ— ಮನೋಹರ ವಾದ, ತಟಿನ್ಮಾಲೆ- ಮಿಂಚಿನಮಾಲಿಕೆಯಹಾಗಿರುವ ಮಾಲಿಕೆಯೂ,) ಆ ಮಣಿಮಾಲೆಯಂತಿಗೆ- ಆರತ್ನಮಾ ಲಿಕೆಯಂತೆ ಒಪ್ಪಲು; ಮತ್ಕೃತಿಪ್ರಮದಾದೃತಂ— ನನ್ನ ಕಾವ್ಯವೆಂಬ ಸ್ತ್ರೀಯಿಂದ ಗ್ರಹಿಸಲ್ಪಟ್ಟಿತು. (ಮೃದುವಾದ ಸೂತ್ರದಿಂದಕಟ್ಟಿದ ಮಲ್ಲಿಕಾದಿಕುಸುಮಮಾಲೆಗಳಿಂದಲೂ ಸುವರ್ಣಮಾಲೆಯಿಂದಲೂ ರತ್ನ ಮಾಲೆಗಳಿಂದಲೂ ಅಲಂಕೃತೆಯಾದ ಯೌವನವತಿಯಂತೆ ಈ ಕೃತಿಯು ಮಾಧುರ್ಯಾದಿಗುಣಗಳಿಂದ ಬದ್ಧ ವಾದ ಶಬ್ದಸಮೂಹಗಳಿಂದ ಕೂಡಿದ ಉತ್ಪಲಮಾಲೆಯೇಮೊದಲಾದ ವೃತ್ತಗಳಿಂದ ರಮ್ಯವಾದದ್ದು ಎಂ ದು ತಾತ್ಪರ್ಯವು. ... ... ... ... ... . ॥೬೧॥

ಕುಮಾರ- ಶಿವಪುತ್ರನಾದ, ಲಿಂಗಸುಖಸಾರ, ಶಿವಾನುಭವದಿಂದುಂಟಾದ ಆನಂದಸಾರವುಳ್ಳ; ಬಸವ- ಎಲೌಬಸವೇಶ್ವರನೇ; ಭವತ್ಕೃತಿಗೆ- ನಿನ್ನಕಾವ್ಯಕ್ಕೆ, ಒಳ್ಪು- ಸವಿಾಚೀನತ್ವವು; ಸದ್ರಸಪ್ರಸರಮ್ಮದೂ

ದೂಕ್ತಿ ಚೆಲ್ವೆನಿಸೆ ಸಂತಸಮುಣ್ಮೆ ನಿರಂತರಾಯದಿಂ ‖ ದೆಸಗಿಮದೀಯಹೃತ್ಕಮಲದೊ
ಳ್ನೆಲೆಗೊಂಡಿದನೊಲ್ದು ಪೂರ್ಣಮಾ । ಗಿಸುಕರುಣಾರ್ದ್ರವೀಕ್ಷಣದಿ ನೆನ್ನ ನಿರೀಕ್ಷಿಸಿರಕ್ಷಿ
ಸಳ್ತಿಯಿಂ ‖ ... .. ... ... .. ‖೬೦‖

ಕಂ‖ ಈಹಿತಫಲಪ್ರದರನತಿ । ಮೋಹಮಹಾತಿಮಿರಮಿಹಿರನಿಭರಂಮದ್ಭ‖ ಕ್ತೋ
ಹಿಮಮಾಧಿಕ ಎಂಬುವ । ನೂಹಿಸಿನುತಿಗೆಯ್ವೆನಭವನಿಂದಗ್ಗಳರಂ ‖ ... ‖೬೩‖

ಸ್ರ ‖ ತುಂಗತ್ವಂಗತ್ತರಂಗಪ್ರತಿಫಲಿತತಟತ್ವತ್ತಟತ್ಸ್ವರ್ಣಭೂಷಾ । ಸಂಗಾಂ
ಗಾಂಭಃಕಣೋದ್ಯನ್ಮಣಿಗಣತರಳೀಭೂತಕೂರ್ಮೇಂದ್ರರತ್ನಂ ‖ ಪಿಂಗಾಬ್ಜಸ್ಫಾರರೇಣು

---

ಕ್ತಿ- ಸತ್- ಸಮೀಚೀನಗಳಾದ, ರಸ- ಶೃಂಗಾರಾದಿರಸಗಳ, ಪ್ರಸರ- ಸಮೂಹದಿಂದ, ಮೃದು- ಕೋಮಲವಾದ, ಉಕ್ತಿ- ಮಾತು; ಚೆಲ್ವೆನಿಸೆ- ಮನೋಹರವಾದದ್ದು ಎನಿಸಲು; ಸಂತಸಂ- ಸಂತೋಷವು, ಉಣ್ಮೆ- ಉಂಟಾಗಲು; ನಿರಂತರಾಯದಿಂ- ನಿರ್ವಿಘ್ನವಾಗಿ, ಎಸಗಿ- ಮಾಡಿ, ಮದೀಯಹೃತ್ಕಮಲದೊಳ್- ನನ್ನ ಹೃದಯಕಮಲದಲ್ಲಿ, ನೆಲೆಗೊಂಡು- ವಾಸಮಾಡಿ, ಒಲ್ದು- ಪ್ರೀತಿಸಿ, ಪೂರ್ಣಮಾಗಿಸು- ಸಂಪೂರ್ಣ ಮಾಡು. ಎನ್ನ- ಎನ್ನನ್ನು, ಕರುಣಾರ್ದ್ರವೀಕ್ಷಣದಿಂ- ದಯಾಸಿಕ್ತವಾದನೋಟದಿಂದ, ನಿರೀಕ್ಷಿಸಿ- ನೋಡಿ, ಅಳ್ತಿಯಿಂ- ಪ್ರೀತಿಯಿಂದ, ರಕ್ಷಿಸು- ಪರಿಪಾಲಿಸು. ‖ ಬಸವೇಶ್ವರನು ಶಿವಕುಮಾರನೆನ್ನುವದಕ್ಕೆಪ್ರಮಾಣ ‖ ಶಿವಭಕ್ತ್ಯಮೃತಾಸ್ವಾದಚೇತಸೇಶಿವಜನ್ಮನೆ । ನಮಶ್ಶ್ರೀನಂದಿನಾಥಾಯಶಂಕರಾಪರಮೂರ್ತಯೆ‖ ‖೬೦‖

"ಮದ್ಭಕ್ತಃ- ನನ್ನಭಕ್ತನು, ಮಮ- ನನಗೂ, ಅಧಿಕೋಹಿ; ಅಧಿಕನಲ್ಲವೆ" ಎಂಬುದಾ ಹೀಗೆಂಬಶಿವವಚನವನ್ನು, (ಅಂ) ಊಹಿಸಿ- ಆಲೋಚಿಸಿ, ಈಹಿತಫಲಪ್ರದರಂ- ಇಷ್ಟಪ್ರಸಿದಫಲವನ್ನುಕೊಡುವ; ಅತಿ... ನಿಭರಂ- ಅತಿಮೋಹ- ಅಧಿಕವಾದ ಅಜ್ಞಾನವೆಂಬ, ಮಹಾತಿಮಿರ- ದೊಡ್ಡಕತ್ತಲೆಗೆ, ಮಿಹಿರನಿಭರಂ- ಸೂರ್ಯಸದೃಶರಾದ; ಅಭವನಿಂದೆ- ಶಿವನಿಗಿಂತಲೂ, ಅಗ್ಗಳರಂ- ಶ್ರೇಷ್ಠರಾದಶಿವಶರಣರನ್ನು, ನುತಿಗೆಯ್ವೆಂ— ಸ್ತೋತ್ರಮಾಡುವೆನು. ... ... ... ... ‖೬೩‖

ತುಂಗ......ರತ್ನಂ— ತುಂಗ- ಉನ್ನತಗಳಾದ, ತ್ವಂಗತ್- ಚಂಚಲಗಳಾದ, ತರಂಗ- ತೆರೆಗಳಲ್ಲಿ,ಪ್ರತಿಫಲಿತ- ಪ್ರತಿಬಿಂಬಿಸಿದ, ತಟಿತ್ವತ್- ಮೇಘಗಳಲ್ಲಿರುವ, ತಟಿತ್-ಮಿಂಚುಗಳೆಂಬ, ಸ್ವರ್ಣಭೂಷಾ- ಸುವರ್ಣಾಭರಣಗಳ, ಸಂಗ- ಸಂಬಂಧವುಳ್ಳ, ಅಂಗ- ಅವಯವಗಳುಳ್ಳವನಾದ, ಅಂಭಃಕಣ- ಜಲಬಿಂದುಗಳೆಂಬ, ಉದ್ಯನ್ಮಣಿಗಣ- ಶ್ರೇಷ್ಠವಾದರತ್ನಸಮುದಾಯಗಳಿಗೆ,ತರಳೀಭೂತ- ಮಧ್ಯನಾಯಕವಾಗಿರುವ,ಕೂರ್ಮೇಂದ್ರರತ್ನಂ- ಶ್ರೇಷ್ಠವಾದ ಆಮೆಯೆಂಬ ಇಂದ್ರನೀಲರತ್ನವುಳ್ಳವನಾದ; ಪಿಂಗಾಬ್ಜ........ವೃತಂ— ಪಿಂಗಳಾಬ್ಜ- ಹೊಂಬಣ್ಣವಾದ ತಾವರೆಹೂವುಗಳ, ಸ್ಫಾರರೇಣು- ವಿಸ್ತಾರವಾದ ರೇಣುಗಳೆಂಬ, ಸ್ಫುಟಕನಕಪಟ-ವ್ಯಕ್ತವಾದ ಪೀತಾಂಬರದಿಂದ, ಪ್ರಾವೃತಂ- ಆಚ್ಛಾದಿಸಲ್ಪಟ್ಟವನಾದ; ಮತ್ಸ್ಯಲೀಲಾಪಾಂಗಂ— ಮತ್ಸ್ಯ- ಮೀನುಗಳೆಂಬ, ಲೀಲಾಪಾಂಗಂ- ವಿಲಾಸದೊಡನೆ ಕೂಡಿದ ಕಡೆಗಣ್ಣುಳ್ಳವನಾದ, ಭೂಭೃತ್ಕಿರೀಟಂ- ಪರ್ವತವೆಂಬ ಕಿರೀಟವುಳ್ಳವನಾದಕಾರಣವೆ, ಪ್ರಕಟಿತತಟಿನೀಮೋಹಮುದ್ರಂ— ಪ್ರಕಟಿತ- ಸ್ಪಷ್ಟವಾಗಿ ತಿಳಿಸಲ್ಪಟ್ಟ, ತಟಿನೀ- ನದಿಗಳೆಂಬ ಸ್ತ್ರೀಯರ, ಮೋಹಮುದ್ರಂ- ಮೋಹಪಡಿಸುವ ಚೆನ್ನೆಯುಳ್ಳ, ಸಮುದ್ರಂ- ಸಮುದ್ರನು, ಒಪ್ಪುಗುಂ- ಪ್ರಕಾಶಿಸುವನು. ಅಂದರೆ ಚಂಚಲವಾದ ತೆರೆಗಳಲ್ಲಿ ಪ್ರತಿಬಿಂಬಿಸಿರುವ ಮಿಂಚುಗಳೆಂಬ ಸುವರ್ಣಾಭರಣಗಳಿಂದಲೂ, ವಿಶಾಲವಾದ ಕೂರ್ಮವೆಂಬ ಮಧ್ಯನಾಯಕರತ್ನದಿಂದ ಸುಂದರವಾದ ಜಲಬಿಂದುಗಳ ಶ್ರೇಣಿಯೆಂಬ ಮಣಿಮಾಲಿಕೆಯಿಂದಲೂ, ಪೊಂಬಣ್ಣವಾದ ಕಮಲದ ಪರಾಗವೆಂಬ ಪೀತಾಂಬರದಿಂದಲೂ, ಪರ್ವತವೆಂಬ ಕಿರೀಟದಿಂದಲೂ, ಚಂಚಲವಾದ ಮತ್ಸ್ಯಗಳೆಂಬ ಲೀಲಾಪಾಂ

ಸ್ಫಟಿಕನಕವಟಪ್ರಾವೃತಂಮತ್ಸ್ಯಲೀಲಾ । ಪಾಂಗು ಭೂಭೃತ್ಕಿರೀಟಂ ಪ್ರಕಟತತೆತಟನೀ
ಮೋಹಮುದ್ರಂಸಮುದ್ರಂ ॥ ... ... ... ... ॥ ೬೪ ॥

ಮಹಾಸ್ರ ॥ ವಿಳಸತ್ಕಲ್ಲೋಲ ಲೋಲಾಚಲಚಲದುರುನಾಗಾಳಿನಾಗಾಳಿರತ್ನೋ ।
ಜ್ವಳಭೋಗಾಭೋಗಭಾಸ್ವಜ್ಜಲಜಲಚರಚಕ್ರಾಂಕಚಕ್ರಾಂಕಯುಕ್ತಂ ॥ ಕಳಹಂಸೀರಾ
ಜಿರಾಜತ್ಕಮಳಕಮಳಸಂಜಾತಸಂಜಾತಗಂಧಾ । ಕುಳಸಿಂಧುಸ್ಫಾರಪಾರಂಪ್ರಬಳಘುಳು
ಘುಳುಧ್ವಾನರೌದ್ರಂಸಮುದ್ರಂ ॥ ... ... ... ॥ ೬೫ ॥

ಮ ॥ ಹರಿಶಯ್ಯಾಗೃಹಮರ್ಕಮಜ್ಜನಸರಂಗೋತ್ರಾರಿಭೀತಾಚಲೋ । ತ್ಕರವ
ಜ್ಞಾತನಿವಾಸಮಿಂದಿರೆಯಜನ್ಮಸ್ಥಾನಮುದ್ರತ್ನದಾ ॥ ಕರಮೌರ್ವಾಗ್ನಿಯಪಾನಕಂ ಪರಿಖ
ರಕ್ಷೋದುರ್ಗಕಾನೀಲಪು । ಷ್ಕರಲಕ್ಷ್ಮೀಮುಕುರಂದಲೊಪ್ಪುಗುಮಿಳಾಶ್ರೀಗಾಗರಂಸಾ
ಗರಂ ॥ ... ... ... ... ॥ ೬೬ ॥

---

ಗಗಳಿಂದಲೂ, ಅಲಂಕೃತನಾಗಿ ನದೀನಾರಿಯರನ್ನು ಮೋಹಗೊಳಿಸುತ್ತಿರುವನೋ ಎಂಬಹಾಗೆ ಸಮುದ್ರ
ನು ಒಪ್ಪುತ್ತಿರುವನೆಂದು ತಾತ್ಪರ್ಯ. ... ... ... ... ॥೬೪॥

ಸಮುದ್ರಂ- ಸಮುದ್ರವು, ವಿಳಸತ್......ಯುಕ್ತಂ— ವಿಳಸತ್ಕಲ್ಲೋಲ- ಪ್ರಕಾಶಮಾನವಾದ
ದೊಡ್ಡತೆರೆಗಳಿಂದಲೂ, ಲೋಲಾಚಲ- ಚಂಚಲಗಳಾದ ಪರ್ವತಗಳೋಎಂಬಹಾಗೆ, ಚಲತ್- ಚಲಿಸುವ,
ಉರು- ಉನ್ನತಗಳಾದ, ನಾಗಾಳಿ- ಆನೆಗಳ ಗುಂಪುಗಳಿಂದಲೂ, ನಾಗಾಳಿ- ಸರ್ಪಸಮೂಹದ, ರತ್ನ-ಮಣಿಗ
ಳಿಂದ, ಉಜ್ವಳ- ಪ್ರಕಾಶಮಾನಗಳಾದ, ಭೋಗ- ಹೆಡೆಗಳ, ಆಭೋಗ- ಆಧಿಕ್ಯದಿಂದಲೂ, ಭಾಸ್ವತ್-ಹೊ
ಳೆಯುವ, ಜಲ- ನೀರಿನಿಂದಲೂ, ಜಲಚರ- ಮತ್ಸ್ಯಾದಿಜಲಚರಗಳಿಂದಲೂ, ಚಕ್ರಾಂಕ- ಚಕ್ರವಾಕಪಕ್ಷಿಗ
ಳಿಂದಲೂ, ಚಕ್ರಾಂಕ- ಚಕ್ರಾಯುಧವೇ ಚಿಹ್ನೆಯಾಗುಳ್ಳ ವಿಷ್ಣುವಿನಿಂದಲೂ, ಯುಕ್ತಂ- ಕೂಡಿದ್ದು; ಕ
ಳ......ಪಾರಂ— ಕಳಹಂಸೀರಾಜಿ- ರಾಜಹಂಸಸ್ತ್ರೀಪಕ್ಷಿಗಳಪಙ್ತಿಯಿಂದಲೂ, ರಾಜತ್ಕಮಳ- ಪ್ರಕಾಶ
ಮಾನಗಳಾದ ಲಕ್ಷ್ಮಿಯುಳ್ಳ, ಕಮಲಸಂಜಾತ- ಕಮಲಗಳ ಗುಂಪಿನಿಂದ, ಸಂಜಾತ- ಉಂಟಾದ, ಗಂಧ- ವಾ
ಸನೆಯಿಂದ, ಆಕುಳ- ತುಂಬಿದ, ಸಿಂಧು- ನದಿಗಳಿಂದ, ಸ್ಫಾರ- ವಿಸ್ತಾರವಾದ, ಪಾರಂ- ತೀರವುಳ್ಳದ್ದು; ಪ್ರ
ಬಳ......ರೌದ್ರಂ— ಪ್ರಬಳಘುಳುಘುಳುಧ್ವಾನ- ಅಧಿಕವಾದ ಘುಳುಘುಳು ಎಂಬ ಧ್ವನಿಯಿಂದ; ರೌ
ದ್ರಂ- ಭಯಂಕರವಾದದ್ದು. ... ... ... ... ॥೬೫॥

ಸಾಗರಂ- ಸಮುದ್ರವು, ಹರಿಶಯ್ಯಾಗೃಹಂ— ಹರಿ- ವಿಷ್ಣುವಿಗೆ, ಶಯ್ಯಾಗೃಹಂ- ಮಲಗುವಮ
ನೆಯಾಗಿಯೂ; ಅರ್ಕಮಜ್ಜನಸರಂ— ಅರ್ಕ- ಸೂರ್ಯನಿಗೆ, ಮಜ್ಜನಸರಂ- ಸ್ನಾನದ ಕೊಳವಾಗಿಯೂ;
ಗೋತ್ರಾರಿಭೀತಾಚಲೋತ್ಕರದ— ಗೋತ್ರಾರಿ- ಇಂದ್ರನದೆಸೆಯಿಂದ, ಭೀತ- ಭಯಪಟ್ಟ, ಅಚಲ- ಪ
ರ್ವತಗಳ, ಉತ್ಕರದ- ಗುಂಪಿಗೆ, ಅಜ್ಞಾತನಿವಾಸಂ- ರಹಸ್ಯಸ್ಥಳವಾಗಿಯೂ; ಇಂದಿರೆಯ- ಲಕ್ಷ್ಮಿಗೆ, ಜ
ನ್ಮಸ್ಥಾನಂ- ಜನನಸ್ಥಾನವಾಗಿಯೂ; ಉದ್ರತ್ನದ- ಶ್ರೇಷ್ಠವಾದ ರತ್ನಗಳ, ಆಕರಂ- ಗಣಿಯಾಗಿಯೂ;
ಔರ್ವಾಗ್ನಿಯ- ಬಡಬಾಗ್ನಿಗೆ, ಪಾನಕಂ- ಪಾನಕವಾಗಿಯೂ; ರಕ್ಷೋದುರ್ಗಕೆ- ರಾಕ್ಷಸರ ಕೋಟೆಗೆ, ಪರಿ
ಖೆ-ಅಗಳ್ತೆಯಾಗಿಯೂ, ಆನೀಲಪುಷ್ಕರಲಕ್ಷ್ಮೀಮುಕುರಂ—ಆನೀಲ-ಎಲ್ಲಾಕಡೆಯಲ್ಲಿಯೂ ಕಪ್ಪಾಗಿರುವ,
ಪುಷ್ಕರ- ಆಕಾಶವೆಂಬ, ಲಕ್ಷ್ಮೀ- ಲಕ್ಷ್ಮೀದೇವಿಗೆ, ಮುಕುರಂ- ಕನ್ನಡಿಯಾಗಿಯೂ; ಇಳಾಶ್ರೀಗೆ-ಭೂಮಿ
ಯ ಸಂಪತ್ತಿಗೆ, ಆಗರಂ- ಮಂದಿರವಾಗಿಯೂ, ಎಸೆಗುಂ- ಪ್ರಕಾಶಿಸುವದು, ದಲ್- ನಿಶ್ಚಯವು. ॥೬೬॥

ಉ ॥ ಪೂಸಿದಬೂದಿಬೆಳ್ನೊರೆಜಟಾವಳಿವಿದ್ರುಮಮಂಬುಜಂಮುಖಂ । ಭಾಸುರಕಕ್ಷಪಾಲಿಕೆಪಡಂಗಳಿಮಾಲೆಜಪಾಕ್ಷಮಾಲೆಯು ॥ ದ್ಭಾಸಿಪಜೋಗವಟ್ಟಗೆ ತಟೀವನರೇಖೆಯದಾಗೆಜೋಗಿಯಂ । ತಾಸರಿದೀಶನಾತ್ತತಟಿದಬ್ದಮೃಗಾಹಿತಚರ್ಮನೊಪ್ಪಿದಂ॥ ॥ ೬೭ ॥

ಕಂ॥ ಕುಡಿದಂ ಕುಂಭಜನೆನ್ನಂ । ಕಡೆದಂಗಡಚಕ್ರಿಕಟ್ಟಿತಡೆದಂ ರಘುಜಂ ॥ ಪಡೆದೆಂ ಭಂಗಮನೆಂದಾ । ಕಡಲಳ್ವಂತೂರ್ಮಿಘುಳುಘುಳುಧ್ವನಿಯೆಸೆಗುಂ ॥ ... ॥ ೬೮ ॥

ಚಂ ॥ ತರಣಿಗತಿಪ್ರಯುಕ್ತಮುಡುಪಾಂಚಿತಮಂಬರದಂತೆಚಕ್ರಬಂ । ಧುರಮನುಕೂಲಹೃದ್ಯಕಮಲಂ ಕಮಲೇಕ್ಷಣನಂತೆ ಸದ್ರಸಾ ॥ ಕರವಿಬುಧೇಪ್ಸಿತಾರ್ಥದನುದಾತ್ತಗು

---

ಬೆಳ್ನೊರೆ- ಬಿಳೀನೊರೆಯೇ, ಪೂಸಿದಬೂದಿ- ಬಳಿದ ವಿಭೂತಿಯು; ವಿದ್ರುಮಂ- ಹವಳಗಳೇ, ಜಟಾವಳಿ- ಜಡೆಗಳ ಗುಂಪು; ಅಂಬುಜಂ- ಕಮಲವೇ, ಮುಖಂ- ಮುಖವು; ಪಡಂಗೆ- ಹಡಗೇ, ಭಾಸುರಕಕ್ಷಪಾಲಿಕೆ— ಭಾಸುರ- ಹೊಳೆಯುವ, ಕಕ್ಷಪಾಲಿಕೆ- ಕಂಕುಳಜೋಳಿಗೆಯು; ಅಳಿಮಾಲೆ- ತುಂಬಿಗಳಸಾಲೇ, ಜಪಾಕ್ಷಮಾಲೆ- ಜಪಸರವು; ತಟೀವನರೇಖೆ— ತಟೀ- ತೀರದಲ್ಲಿರುವ, ವನ- ಮರಗಳ, ರೇಖೆ- ಪಙ್ಕ್ತಿಯೇ, ಉದ್ಭಾಸಿಪ- ಹೊಳೆಯುವ, ಜೋಗವಟ್ಟಗೆ- ಯೋಗವಟ್ಟಯು- ಅದು- ತಾನು, ಆಗೆ- ಆಗಲು, ಆತ್ತತಟಿದಬ್ದಮೃಗಾಹಿತಚರ್ಮಂ— ಆತ್ತ- ಪಡೆಯಲ್ಪಟ್ಟ, ತಟಿತ್- ಮಿಂಚುಗಳುಳ್ಳ, ಅಬ್ದ- ಮೇಘವೇ, ಮೃಗಾಹಿತಚರ್ಮಂ- ಹುಲಿಯಚರ್ಮವಾಗುಳ್ಳ, ಆ ಸರಿದೀಶಂ- ಆ ಸಮುದ್ರನು, ಜೋಗಿಯಂತೆ- ಯೋಗಿಯೋಪಾದಿಯಲ್ಲಿ, ಒಪ್ಪಿದಂ- ಪ್ರಕಾಶಿಸಿದನು. ... ... ... ॥೬೭॥

ಕುಂಭಜಂ-ಅಗಸ್ತ್ಯನು, ಎನ್ನಂ-ನನ್ನನ್ನು, ಕುಡಿದಂ-ಪಾನಮಾಡಿದನು; ಚಕ್ರಿ-ಹರಿಯು, ಕಡೆದಂಗಡ- ಮಥಿಸಿದನಲ್ಲವೇ, * ರಘುಜಂ- ರಾಮನು, ಕಟ್ಟಿತಡೆದಂಗಡ- ಸೇತುವೆಯನ್ನುಕಟ್ಟಿ ತಡೆದನಲ್ಲವೇ; (ಆದ್ದರಿಂದ) ಭಂಗಮಂ- ಪರಾಜಯವನ್ನು, (ತೆರೆಯನ್ನು) ಪಡೆದೆಂ- ಹೊಂದಿದೆನು; ಎಂದು- ಹೀಗೆಂಬದಾಗಿ, ಆಕಡಲ್- ಆಸಮುದ್ರವು, ಅಳ್ವಂತೆ- ಅಳುವಹಾಗೆ, ಊರ್ಮಿಘುಳುಘುಳುಧ್ವನಿ -- ಊರ್ಮಿ- ತೆರೆಗಳ, ಘುಳುಘುಳುಧ್ವನಿ- ಘುಳುಘುಳುಎಂಬಶಬ್ದವು, ಎಸೆಗುಂ- ಪ್ರಕಾಶಿಸುವದು. ... ॥೬೮॥

ಸಾಗರಂ- ಸಮುದ್ರವು, ಅಂಬರದಂತೆ- ಆಕಾಶದಹಾಗೆ, (ಅಂಬರ) ತರಣಿಗತಿಪ್ರಯುಕ್ತಂ—ತರಣಿಗತಿ-ಸೂರ್ಯನಗಮನದಿಂದ, ಪ್ರಯುಕ್ತಂ-ಕೂಡಿರುವದು; ಉಡುಪಾಂಚಿತಂ-ಉಡುಪ-ಚಂದ್ರನಿಂದ, ಅಂಚಿತಂ-ಪೂಜ್ಯವಾದದ್ದು; (ಸಾಗರ) ತರಣಿಗತಿಪ್ರಯುಕ್ತಂ—ತರಣಿಗತಿ-ಹಡಗುಗಳಸಂಚಾರದಿಂದ, ಪ್ರಯುಕ್ತಂ; ಉಡುಪಾಂಚಿತಂ—ಉಡುಪ- ತೆಪ್ಪಗಳಿಂದ, ಅಂಚಿತಂ- ಕೂಡಿರುವದು; ಕಮಲೇಕ್ಷಣನಂತೆ- ಹರಿಯಂತೆ, (ಕಮಲೇಕ್ಷಣ) ಚಕ್ರಬಂಧುರಂ—ಚಕ್ರ- ಚಕ್ರಾಯುಧದಿಂದ, ಬಂಧುರಂ- ಮನೋಹರನಾದವನು; ಅನುಕೂಲಹೃದ್ಯಕಮಲಂ— ಅನುಕೂಲ- ಸ್ವಾಧೀನಳಾದ, ಹೃದ್ಯ- ಸುಂದರಿಯಾದ, ಕಮಲಂ-ಲಕ್ಷ್ಮಿಯುಳ್ಳವನು; (ಸಾಗರ) ಚಕ್ರಬಂಧುರಂ- ಚಕ್ರವಾಕಪಕ್ಷಿಗಳಿಂದ, ಬಂಧುರಂ; ಅನುಕೂಲಹೃದ್ಯಕಮಲಂ—ಅನುಕೂಲ-ದಡಗಳಲ್ಲಿ, ಹೃದ್ಯ- ಮನೋಹರಗಳಾದ, ಕಮಲಂ- ತಾವರೆಹೂವುಗಳುಳ್ಳದ್ದು; ಘನಕಾವ್ಯದಂತೆ- ಉತ್ತಮವಾದ ಕಾವ್ಯದಹಾಗೆ, (ಕಾವ್ಯ) ಸದ್ರಸಾಕರವಿಬುಧೇಪ್ಸಿತಾರ್ಥದಂ— ಸತ್- ಶ್ರೇಷ್ಠವಾದ, ರಸ- ಶೃಂಗಾರಾದಿರಸಗಳಿಗೆ, ಆಕರ- ಆಸ್ಪದವಾಗಿರುವ, ವಿಬುಧ- ವಿದ್ವಾಂಸರುಗಳಿಗೆ, ಈಪ್ಸಿತಾರ್ಥದಂ- ಇಚ್ಛಿಸಲ್ಪಟ್ಟ ಅಭಿಪ್ರಾಯವನ್ನು ಕೊಡುವಂಥಾದ್ದು; ಉದಾತ್ತಗುಣಂ— ಉದಾತ್ತ- ಉತ್ಕೃಷ್ಟವಾದ, ಗುಣಂ- ಕಾಂತಿಮೊದಲಾದ ಗುಣಗಳುಳ್ಳದ್ದು; (ಸಾಗರ) ಸದ್ರಸಾಕರವಿಬುಧೇಪ್ಸಿತಾರ್ಥದಂ— ಸತ್- ಶ್ರೇ

---

* (ಅಥ) ರಘುಕುಲದಲ್ಲಿ ಹುಟ್ಟಿದವನು. ... ... ... ॥೬೮॥

ಣಾಘನಕಾವ್ಯಮತೆಪು । ಷ್ಕರಯುತಮುದ್ಧಭದ್ರಮಿಭದಂತೆವಿರಾಜಿತಮಾಯ್ತು ಸಾಗರಂ॥

ಚಂ॥ ಸುಳಿನೊರೆಬುದ್ಬುದಂ ಸಿಡಿವಸೀರ್ವನಿ ಪೆರ್ಗರೆ ಗುಣ್ಪು ಪೆಂಪು ಶೈ। ವಳಮಳಿ ಪಂಕಜಂ ಪವಳಮಾನೆ ನೆಗಳ್ಗಿರಿಯಾವೆ ಪಾವು ಮೀ॥ ನ್ಜಳಧರವೀಧಿ ಕಂಬುತತಿ ಮುತ್ತು ಖಗಾಳಿ ವಹಿತ್ರಮೌರ್ವನ। ಗ್ಗಳಿಸಿರೆ ತನ್ನೊಳೊಪ್ಪಿತದು ಸಿಂಧು ಸಸಿಂಧು ಸುಬಂಧು ಚಕ್ರಿಯ ॥೨೦॥

ವ ॥ ಮತ್ತಮಿಂತನಂತಶೋಭಾಕರಮಾದ ರತ್ನಾಕರಮಧ್ಯದಲ್ಲಿ ॥

ಚಂ ॥ ಇದು ಹಿಮದಿಂ ಮುಸುಂಕಿದ ಹಿಮಾಚಲಮಲ್ತು ದುಗ್ಧವಾರ್ಧಿಪೂ । ರದೊಳ್ ಮುಳುಂಗಿ ಮುನ್ನ ಬೆಳರ್ವಣ್ಣದೊಳೊಂದಿದ ಮಂದರಾದ್ರಿಯ ॥ ಲ್ತು ದು ಶಶಿಕಾಂತಿಪಾರದವಿಲಿಪ್ತ ಸುವರ್ಣಮಹೀಧರೇಂದ್ರಮ । ಲ್ತು ದು ಬೆಳಗಾಂತ ರೌಪ್ಯನಗಮೆಂದೆನಿಸಿರ್ದುದು ತಾರಭೂಧರಂ ॥ ... ... .. ... ... ॥ ೨೧ ॥

---

ಷ್ಟವಾದ, ರಸ- ಜಲಗುಣಕ್ಕೆ, ಆಕರ- ಆಶ್ರಯವಾದದ್ದು; ವಿಬುಧ- ದೇವತೆಗಳಿಗೆ, ಈಪ್ಸಿತಾರ್ಥದಂ- ಇಷ್ಟಾರ್ಥವನ್ನು ಕೊಡುವದು. (ಅಂದರೆ ಸಮುದ್ರಮಥನಕಾಲದಲ್ಲಿ ದೇವತೆಗಳಿಗೆ ಮನೋರಥವನ್ನು ಕೊಟ್ಟದ್ದು) ಉದಾತ್ತಗುಣಂ— ಉತ್- ಅಧಿಕವಾಗಿ, ಆತ್ತ- ಪಡೆಯಲ್ಪಟ್ಟ, ಗುಣಂ- ರತ್ನಾಕರತ್ವವೇ ಮೊದಲಾದಗುಣಗಳುಳ್ಳದ್ದು; ಇಭದಂತೆ- ಆನೆಯಂತಾಗಿ, (ಇಭ) ಪುಷ್ಕರಯುತಂ— ಪುಷ್ಕರ- ಸೊಂಡಿಲತುದಿಯಿಂದ, ಯುತಂ- ಕೂಡಿರುವದು; ಉದ್ಧಭದ್ರಂ—ಉದ್ಧ- ಶ್ರೇಷ್ಠವಾದ, ಭದ್ರಂ- ಮಂಗಳಗುಣಗಳುಳ್ಳದ್ದು; (ಸಾಗರ) ಪುಷ್ಕರಯುತಂ- ಉದಕದಿಂದಕೂಡಿರುವದು; ಉದ್ಧಭದ್ರಂ- ಉದ್ಧ- ಶ್ರೇಷ್ಠವಾದ; ಭದ್ರಂ- ರತ್ನಾದಿಮಂಗಳದ್ರವ್ಯಗಳುಳ್ಳದ್ದು; (ಈಪ್ರಕಾರವಾಗಿ) ವಿರಾಜಿತಮಾಯ್ತು- ಪ್ರಕಾಶಿಸಿತು. ॥ ೧೯ ॥

ತನ್ನೊಳ್- ತನ್ನಲ್ಲಿ, ಸುಳಿ; ನೊರೆ; ಬುದ್ಬುದಂ- ಗುಳ್ಳೆಯು; ಸಿಡಿವ- ಹಾರುವ, ಸೀರ್ವನಿ- ಸಣ್ಣಹನಿಯು; ಪೆರ್ಗರೆ- ದೊಡ್ಡದಡವು; ಗುಣ್ಪು- ಆಳವು; ಪೆಂಪು- ಆಧಿಕ್ಯವು; ಶೈವಳಂ- ಪಾಚೆಯು; ಅಳಿ- ತುಂಬಿಯು; ಪಂಕಜಂ- ಕಮಲವು; ಪವಳಂ- ಹವಳವು; ಆನೆ- ಆನೆಯು; ನೆಗಳ್- ಮೊಸಳೆಯು; ಗಿರಿ- ಬೆಟ್ಟವು; ಆವೆ- ಆಮೆಯು; ಪಾವು- ಹಾವು; ಮೀನ್; ಜಳಧರವೀಧಿ- ಮೇಘಪಙ್ಕ್ತಿಯು; ಕಂಬುತತಿ- ಶಂಖಗಳಸಮೂಹವು; ಮುತ್ತು; ಖಗಾಳಿ- ಪಕ್ಷಿಗಳಲ್ಪೈನು; ವಹಿತ್ರಂ- ಹಡಗು; ಔರ್ವಂ- ಬಡಬಾಗ್ನಿಯು; ಅಗ್ಗಳಿಸಿರೆ- ಅಧಿಕವಾಗಿರಲು; ಸಸಿಂಧು- ನದಿಗಳಿಂದ ಕೂಡಿರುವ, ಚಕ್ರಿಯ- ವಿಷ್ಣುವಿನ, ಸುಬಂಧು- ಒಳ್ಳೆನೆಂಟನಾದ; ಅದುಸಿಂಧು- ಆ ಸಮುದ್ರವು, ಒಪ್ಪಿತು- ಪ್ರಕಾಶಿಸಿತು. ... ... ॥೨೦॥

ವ ॥ ಮತ್ತಂ- ಮತ್ತು, ಇಂತು- ಈಪ್ರಕಾರವಾಗಿ, ಅನಂತಶೋಭಾಕರಮಾದ- ಅತ್ಯಂತ ಕಾಂತಿಗೆ ಆಸ್ಪದವಾದ, ರತ್ನಾಕರಮಧ್ಯದಲ್ಲಿ- ಸಮುದ್ರದಮಧ್ಯದಲ್ಲಿ. * * * * * * * * *

ಇದುತಾರಭೂದರಂ- ಈ ಕೈಲಾಸಪರ್ವತವು, ಹಿಮದಿಂ- ಮಂಜಿನಿಂದ, ಮುಸುಂಕಿದ- ಮುಚ್ಚಿದ, ಹಿಮಾಚಲಂ- ಹಿಮವತ್ಪರ್ವತವು, ಅಲ್ತು- ಅಲ್ಲವು; ದುಗ್ಧವಾರ್ಧಿಪೂರದೊಳ್- ಕ್ಷೀರಸಮುದ್ರದ ಪ್ರವಾಹದಲ್ಲಿ, ಮುನ್ನ- ಪೂರ್ವದಲ್ಲಿ, ಮುಳುಂಗಿ- ಮುಳುಗಿ, ಬೆಳರ್ವಣ್ಣದೊಳ್- ಶುಭ್ರಕಾಂತಿಯೊಡನೆ, ಒಂದಿದ- ಕೂಡಿದ, ಮಂದರಾದ್ರಿ- ಮಂದರಪರ್ವತವು, ಅಲ್ತು; ಶಶಿ......ಧರೇಂದ್ರಂ- ಶಶಿಕಾಂತಿ- ಬೆಳದಿಂಗಳೆಂಬ, ಪಾರದ- ಪಾದರಸದಿಂದ, ವಿಲಿಪ್ತ- ಬಳಿಯಲ್ಪಟ್ಟ, ಸುವರ್ಣಮಹೀಧರೇಂದ್ರಂ- ಮೇರುಪರ್ವತವು; ಅಲ್ತು- ಅಲ್ಲವು; ಬೆಳಗಾಂತ- ಕಾಂತಿಯನ್ನು ಪಡೆದ, ರೌಪ್ಯನಗಂ- ಬೆಳ್ಳಿಬೆಟ್ಟವು; ಎಂದು; ಎನಿಸಿರ್ದುದು- ಎನಿಸಿಕೊಂಡಿರುವದು. ... ... ... ... ... ॥೨೧॥

ಚಂ॥ ಸಸಿಗಜಿರಂ ಬಳಲ್ಚಿ ಶಶಿಕಾಂತದಕಾಂತಿಯುನೀಳ್ದುಕೊಂಡು ಬೆ। ಳ್ಪಸದಳಮಾದಸಾರದೆಯಮೈವೆಳಗಂತೆಗೆದಿಂಗಡಲ್ಗೆರಂ ॥ ಜಿಸುವಸಿತದ್ಯುತಿಪ್ರಸರಮಂಕವರ್ದೊಂದನೆ ಮಾಡಿಬೊಮ್ಮನೊ । ಲ್ದೆಸಗಿದಕೈಲಮೋ ಎನಿಸಿ ಪಜ್ಜಳಿಸಿರ್ದುದು ತಾರಭೂಧರಂ ॥ ೩೦ ॥

ಚಂ ॥ ಸುರತರುವಲ್ಲದನ್ಯತರುವಾಸುಕಿಯಲ್ಲದಪಾವುತಳ್ತಿಸಿ । ದ್ಧರಸಮದಲ್ಲದಿರ್ದಸಲಿಲಂ ಸುಮನೋಮಣಿಯಲ್ಲದಿರ್ದಕ ॥ ಲ್ಸುರಪಶುವಲ್ಲದನ್ಯಪಶುನಿರ್ಜರವಲ್ಲರಿಯಲ್ಲದಿರ್ದವ। ಲ್ಲರಿಮುನಿವೃಂದಮಲ್ಲದಮೃಗವ್ರಜಮಿಲ್ಲ ತದದ್ರಿಯಗ್ರದೊಳ್॥ ... ... ॥ ೩೩ ॥

ಉ ॥ ಮಲ್ಲಿಗೆಗೆತ್ತು ತಾರಗೆಯನಾಗಳೆಕೊಯ್ಯಲೊಡರ್ಚುವರ್ಸಮು । ತ್ಫುಲ್ಲಸಿತಾಬ್ಜಮೆಂದುಶಶಿಯಂತಿರಿಯಲ್ಬಗೆದಂದುನೋಡುವ ॥ ರ್ಸಲ್ಲಲಿತಾರುಣಾರುಣಕರೋತ್ಕರಮಂತಳಿರ್ಗೆತ್ತುಪಾಣಿಯಂ । ಮೆಲ್ಲನೆನೀಡುವರ್ಗಿರಿಯತಪ್ಪಲೊಳೊಪ್ಪುವಸಿದ್ಧಮುಗ್ಧೆಯರ್ ॥ ... ... ... ... ... ... ॥ ೩೪ ॥

---

ಬೊಮ್ಮಂ- ಬ್ರಹ್ಮನು, ಸಗದಿರಂ- ಚಂದ್ರನಕಾಂತಿಯನ್ನು, ಬಳಲ್ಚಿ- ಬಳಲಿಸಿ; ಶಶಿಕಾಂತದಕಾಂತಿಯಂ- ಚಂದ್ರಕಾಂತಶಿಲೆಯಕಾಂತಿಯನ್ನು, ಈಳ್ದುಕೊಂಡು- ಎಳೆಕೊಂಡು; ಬೆಳ್ಪಸದಳಮಾದ- ಹೆಚ್ಚಾದ ಬಿಳಿಕಾಂತಿಯುಳ್ಳ, ಸಾರದೆಯ- ಸರಸ್ವತಿಯ, ಮೈವೆಳಗಂ- ಶರೀರದಕಾಂತಿಯನ್ನು, ತೆಗೆದು- ತೆಗೆದುಕೊಂಡು; ಇಂಗಡಲ್ಗೆ- ಕ್ಷೀರಸಮುದ್ರದ, ರಂಜಿಸುವ- ಪ್ರಕಾಶಿಸುವ, ಸಿತದ್ಯುತಿಪ್ರಸರಮಂ- ಬಿಳೀಕಾಂತಿಯ ಸಮೂಹವನ್ನು, ಕವರ್ದು- ಗೋರಿಕೊಂಡು; ಒಂದನೆಮಾಡಿ- ಒಟ್ಟುಮಾಡಿ, ಒಲ್ದು- ಪ್ರೀತಿಯಿಂದ, ಎಸಗಿದ- ಮಾಡಿದ, ಕೈಲಮೋ- ಪರ್ವತವೋ, ಎನಿಸಿ- ಎನಿಸಿಕೊಂಡು, ತಾರಭೂಧರಂ- ಕೈಲಾಸಪರ್ವತವು, ಪಜ್ಜಳಿಸಿರ್ದುದು- ಪ್ರಕಾಶಮಾನವಾಗಿರುವದು. ... ... ... ॥ ೩೦ ॥

ತದದ್ರಿಯ- ಆಕೈಲಾಸಪರ್ವತದ, ಅಗ್ರದೊಳ್- ಮೇಲುಗಡೆಯಲ್ಲಿ, ಸುರತರುವಲ್ಲದ- ಕಲ್ಪವೃಕ್ಷವಲ್ಲದ, ಅನ್ಯತರು- ಉಳಿದಸಾಧಾರಣವಾದ ಮರಗಳು; ವಾಸುಕಿಯಲ್ಲದ- ಆದಿಶೇಷನಲ್ಲದ, ಪಾವು- ಹಾವು; ತಳ್ತ- ತುಂಬಿದ, ಸಿದ್ಧರಸಮದಲ್ಲದಿರ್ದ- ಸಿದ್ಧರಸವಲ್ಲದಿರುವ, ಸಲಿಲಂ- ನೀರು; ಸುಮನೋಮಣಿಯಲ್ಲದಿರ್ದ- ಚಿಂತಾರತ್ನವಲ್ಲದಿರುವ, ಕಲ್- ಕಲ್ಲು; ಸುರಪಶುವಲ್ಲದ- ಕಾಮಧೇನುವಲ್ಲದ, ಅನ್ಯಪಶು- ಉಳಿದ ಸಾಧಾರಣವಾದ ಗೋವುಗಳು, * ನಿರ್ಜರವಲ್ಲರಿಯಲ್ಲದಿರ್ದ- ಕಲ್ಪಲತೆಯಲ್ಲದೇ ಇರುವ, ವಲ್ಲರಿ- ಬಳ್ಳಿಯು; ಮುನಿವೃಂದಮಲ್ಲದ- ಋಷಿಗಳ ಸಮೂಹವಲ್ಲದ, ಮೃಗವ್ರಜಂ- ಮೃಗಗಳಗುಂಪು; ಇಲ್ಲ- ಇಲ್ಲವು, (ಅಂದರೆ ಆಪರ್ವತದಲ್ಲಿ ಕಾಮಧೇನು, ಕಲ್ಪವೃಕ್ಷ, ಚಿಂತಾರತ್ನ ಮುಂತಾದವುಗಳಿರುವವೇಹೊರತು ಸಾಧಾರಣವಾದ ಗೋವು, ಮರ, ಕಲ್ಲುಗಳಿರಲಿಲ್ಲವೆಂದು ತಾತ್ಪರ್ಯ.) ... ... ... ॥ ೩೩ ॥

ಗಿರಿಯ- ಪರ್ವತದ, ತಪ್ಪಲೊಳ್- ತಪ್ಪಲಲ್ಲಿ, ಒಪ್ಪುವ- ಪ್ರಕಾಶಿಸುವ, ಸಿದ್ಧಮುಗ್ಧೆಯರ್- ಮೂಢೆಯರಾದ ದೇವತಾಸ್ತ್ರೀಯರು, ತಾರಗೆಯುಂ- ನಕ್ಷತ್ರವನ್ನು, ಮಲ್ಲಿಗೆಗೆತ್ತು- ಮಲ್ಲಿಗೆಹೂವೆಂದುತಿಳಿದು; ಆಗಳೆ- ಕೂಡಲೇ, ಕೊಯ್ಯಲ್- ಕೊಯ್ಯುವದಕ್ಕೆ,ಒಡರ್ಚುವರ್- ಉಪಕ್ರಮಿಸುವರು; ಶಶಿಯಂ- ಚಂದ್ರನನ್ನು, ಸಮುತ್ಫುಲ್ಲಸಿತಾಬ್ಜಂ- ಅರಳಿದಬಿಳಿತಾವರೆಯು, ಎಂದು; ತಿರಿಯಲ್- ಎತ್ತುವದಕ್ಕೆ, ಬಗೆದಂದು- ಮನಸ್ಸನ್ನು ತಂದು, ನೋಡುವರ್; ಸಲ್ಲ......ತ್ಕರಮಂ- ಸಲ್ಲಲಿತ- ಮನೋಹರವಾದ,ಅರುಣ- ಕೆಂಪಾದ, ಅರುಣ- ಸೂರ್ಯನ, ಕರ- ಕಿರಣಗಳ, ಉತ್ಕರಮಂ- ಗುಂಪನ್ನು; ತಳಿರ್ಗೆತ್ತು- ಚಿಗುರೆಂದುತಿಳಿದು; ಪಾಣಿಯಂ- ಕೈಯನ್ನು, ಮೆಲ್ಲನೆ- ಮೆಲ್ಲಗೆ, ನೀಡುವರ್- ಚಾಚುವರು. ... ... ॥ ೩೪ ॥

---

* (ಅವ) ನಿರ್ಜರ- ಮುಪ್ಪಿಲ್ಲದೇ ಇರುವ ದೇವತೆಗಳ, ವಲ್ಲರಿ- ಬಳ್ಳಿ. ... ... ॥ ೩೩ ॥

ಚಂ ‖ ನಗವನದಾತಕಾಂತಿಮಿಗೆತೀವೆಬೆಳರ್ತುನಭಃಪ್ರದೇಶದೊ | ಳ್ನೆಗೆತರುತಬ್ಜಬಿಂ
ಬಮೆನಿಸಿರ್ದ್ದನಭೋಮಣಿದೇವಗಂಗೆಯು | ಲ್ಲೊಗೆವಸರೋಜರಾಜಿಗವಿಕಾಸತೆಯಂ ಪ
ಡೆದಲ್ಲಿನೈದಿಲೊ | ಳ್ನಗೆಯನೊಡರ್ಚ್ಚುವಂನಿಜವಿಕಾರಮರಾತ್ಯಪಹಾಸ್ಯಕಾರಣಂ ‖ ೨೫ ‖

ಚಂ ‖ ತಿಳಿಗೊಳದಲ್ಲಿಮಿಂದು ತಳೆದುಜ್ವಳರತ್ನವಿಭೂಷಣಂಗಳಂ | ತೊಳಗುವಚಿ
ತ್ರಚೀನವಸನಂಗಳನುಟ್ಟು ತುರುಂಬಿಪುಷ್ಪಸಂ | ಕುಳಮನನೂನರಾಗರಸದಿಂ ಹರಿಚಂ
ದನದಣ್ಪನಾಂತುಸಂ | ಚಳಿಸುವರಲ್ಲಿಸಿದ್ಧಸುರಕಿನ್ನರದಂಪತಿಗಳ್ವಿಲಾಸದಿಂ ‖ ೨೬ ‖

ಮ ‖ ನೆರೆದಲ್ಲಲ್ಲಿಸುರೋರ್ವಿಜಾತದಡಿಯೊಳ್ಚಂದ್ರಾಶ್ಮಪೀಠಂಗಳೊ | ಳ್ತರದಿಂಮಂ
ಡಿಸಿನೋಡುವಾಡುವಕಳೋಪನ್ಯಾಸಮಂಮಾಡುವಾ | ದರದಿಂಪಾಡುವಕಾಡುವಳ್ತಿಯೊದವಿಂ
ಕೊಂಡಾಡುವಾನಂದನಿ | ರ್ಭರಲೀಲಾಪರತಂತ್ರರಿರ್ಪ್ಪರದರೊಳ್ಗಂಧರ್ವಯಕ್ಷಾದಿಗಳ್ ‖ ೨೭ ‖

ಮ ‖ ನದಿಯಿಂನಂದನದಿಂ ಲತಾಭವನದಿಂನಾನಾಮೃಗವ್ರಾತದಿಂ | ಸೊವೆಯಿಂಸಿದ್ಧರ

---

ನಗದ- ಕೈಲಾಸಪರ್ವತದ, ಅವದಾತಕಾಂತಿ- ಬಿಳೀಕಾಂತಿಯು, ಮಿಗೆ- ಹೆಚ್ಚಾಗಿ, ತೀವೆ- ತುಂಬಲು; ಬೆಳರ್ತು- ಬೆಳ್ಪಾಗಿ, ನಭಃಪ್ರದೇಶದೊಳ್- ಆಕಾಶಮಂಡಲದಲ್ಲಿ, ನಭೋಮಣಿ- ಸೂರ್ಯನು, ನೆಗೆತರುತ್ತೆ- ಹುಟ್ಟಿಬರುತ್ತ, ಅಬ್ಜಬಿಂಬಂ- ಚಂದ್ರಮಂಡಲವು, ಎನಿಸಿರ್ದ್ದಂ; ದೇವಗಂಗೆಯುಲ್ಲಿ- ಆಕಾಶಗಂಗೆಯಲ್ಲಿ, ಒಗೆದ- ಹುಟ್ಟಿರುವ; ಸರೋಜರಾಜಿಗೆ- ಕಮಲಗಳಗುಂಪಿಗೆ, ಅವಿಕಾಸತೆಯಂ- ವಿಕಾಸಾಭಾವವನ್ನು, ಪಡೆದು- ಉಂಟುಮಾಡಿ, ಅಲ್ಲಿ- ದೇವಗಂಗೆಯಲ್ಲಿ, ನೈದಿಲೊಳ್- ಬಿಳಿದಾವರೆಯಲ್ಲಿ, ನಗೆಯಂ- ಸಗೋಣವನ್ನು, (ಅರಳುವಿಕೆಯನ್ನು) ಒಡರ್ಚ್ಚುವಂ- ಉಂಟುಮಾಡುವನು; ನಿಜವಿಕಾರಂ- ತನ್ನ ವಿಕಾರವು, ಅರಾತ್ಯಪಹಾಸ್ಯಕಾರಣಂ- ಅರಾತಿ- ಶತ್ರುವಿನ, ಅಪಹಾಸ್ಯ- ನಗೆಗೆ, ಕಾರಣಂ- ಕಾರಣವು. ... ‖೨೫‖

ಅಲ್ಲಿ- ಆಪರ್ವತದಲ್ಲಿ; ಸಿದ್ಧಸುರಕಿನ್ನರದಂಪತಿಗಳ್- ಸಿದ್ಧ ಸುರ ಕಿನ್ನರ ಜಾಯಾಪತಿಗಳು, ತಿಳಿಗೊಳದಲ್ಲಿ- ನಿರ್ಮಲವಾದ ಸರೋವರದಲ್ಲಿ, ಮಿಂದು- ಸ್ನಾನವಂಮಾಡಿ; ಉಜ್ವಳರತ್ನವಿಭೂಷಣಂಗಳಂ- ಪ್ರಕಾಶಮಾನಗಳಾದ ರತ್ನಾಭರಣಗಳನ್ನು, ತಳೆದು- ಧರಿಸಿ; ತೊಳಗುವ- ಪ್ರಕಾಶಿಸುವ, ಚಿತ್ರಚೀನವಸನಂಗಳಂ- ನಾನಾವರ್ಣಗಳಾದ ಪಟ್ಟವಸ್ತ್ರಗಳನ್ನು, ಉಟ್ಟು- ಉಟ್ಟುಕೊಂಡು; ಪುಷ್ಪಸಂಕುಳಮಂ- ಹೂವುಗಳ ಸಮೂಹವನ್ನು, ತುರುಂಬಿ- ಮುಡಿಕೊಂಡು; ಅನೂನರಾಗರಸದಿಂ- ಅಧಿಕವಾದ ಸಂತೋಷರಸದಿಂದ ಹರಿಚಂದನದ- ಶ್ರೀಗಂಧದ, ಅಣ್ಪಂ- ಲೇಪನೆಯನ್ನು, ಆಂತು- ಧರಿಸಿ; ವಿಲಾಸದಿಂ- ಲೀಲೆಯಿಂದ; ಸಂಚಳಿಸುವರ್- ಸಂಚರಿಸುವರು. ... ... ... ... ... ‖೨೬‖

ಅದರೊಳ್- ಆಪರ್ವತದಲ್ಲಿ, ಅಲ್ಲಲ್ಲಿ- ಆಯಾಯಸ್ಥಳದಲ್ಲಿ, ನೆರೆದು- ಕೂಡಿ, ಸುರೋರ್ವಿಜಾತದ- ಕಲ್ಪವೃಕ್ಷದ, ಅಡಿಯೊಳ್- ಮೂಲದಲ್ಲಿ, ಚಂದ್ರಾಶ್ಮಪೀಠಂಗಳೊಳ್- ಚಂದ್ರಕಾಂತಶಿಲೆಯ ಗದ್ದುಗೆಯಲ್ಲಿ, ತರದಿಂ- ಲೈನಾಗಿ, ಮಂಡಿಸಿ- ಕುಳಿತುಕೊಂಡು; ನೋಡುವ; ಆಡುವ- ಆಟವಾಡುವ; ಕಳೋಪನ್ಯಾಸಮಂ- ವಿದ್ಯಾಲಾಪಗಳನ್ನು, ಮಾಡುವ; ಆದರದಿಂ- ಪ್ರೀತಿಯಿಂದ, ಪಾಡುವ- ಹಾಡುವ; ಅಳ್ತಿಯ- ಪ್ರೀತಿಯ, ಒದವಿಂ- ಪ್ರಾಪ್ತಿಯಿಂದ, ಕಾಡುವ- ಪೀಡಿಸುವ; ಕೊಂಡಾಡುವ- ಹೊಗಳುವ; ಆನಂದ........ ತಂದ್ರರ್- ಆನಂದನಿರ್ಭರ- ಸಂತೋಷಾತಿಶಯದಿಂದುಂಟಾದ, ಲೀಲಾ- ವಿಲಾಸದಿಂದ, ಪರತಂತ್ರರ್- ಅಸ್ವಾಧೀನರಾದ; ಗಂಧರ್ವಯಕ್ಷಾದಿಗಳ್, ಗಂಧರ್ವ ಯಕ್ಷ ಮುಂತಾದವರು; ಇರ್ಪ್ಪರ್- ಇರುವರು. ‖೨೭‖

ತಾರಾಚಲಂ- ಕೈಲಾಸಪರ್ವತವು, ನದಿಯಿಂ- ಹೊಳೆಯಿಂದಲೂ; ನಂದನದಿಂ- ತೋಟದಿಂದಲೂ; ಲ

ಸಂಗಳಿಂ ಸುರಭಿಯಿಂ ಕಾಂತಾರಸಂತಾನದಿಂ ॥ ಮುದದಿಂದೊಪ್ಪುವಸಿದ್ಧರಿಂದಿವಿಜರಿಂಗಂ
ಧರ್ವರಿಂ ಯಕ್ಷರಿಂ । ಪದಪಂ ತಾಳ್ದಗಣೇಂದ್ರರಿಂಮುನಿಗಳಿಂಚೆಲ್ವಾಯ್ತು ತಾರಾಚಲಂ ॥

ಉ ॥ ಆಗಿರಿಯೆಂಬರೌಪ್ಯಮಯಲಿಂಗಕೆಕಾಲಮೆನಿಪ್ಪಪೂಜಕಂ । ರಾಗದೆಕಾಮಧೇ
ನುವಿನಪಾಲ್ಸರಿಯಿಂದಭಿಷೇಕಿಸುತ್ತನೀ ॥ ಡಾಗದೆಚಂದ್ರಿಕಾಧವಳವಸ್ತ್ರಮನರ್ಪಿಸಿಪೂ
ಜೆಗೆಯ್ದುತಾ । ರಾಗಣಪುಷ್ಪದಿಂ ಬೆಳಗುವಂಶಶಿಮಂಡಲಮೆಂಬದೀಪಮಂ ॥ ॥೭೯॥

ಚಂ॥ ಮಿಸುಪಗೃಹಸ್ಥನಂತೆನವನಂದನಶಾಲಿಸದಾರವಿಭ್ರಮಂ । ಕುಸುಮಪತಾಕನಂ
ತೆ ಸುಮನೋರತಿಶೋಭಿಶುಕಾದಿಸೇವಿತಂ ॥ ವಸುಧೆಯಧೀಶನಂತೆಭೃತವಾಹಿನಿಹೃದ್ಯಸು
ರಾಗಮಂಡಿತಂ । ಬಿಸಜಜನಂತೆಹಂಸಯುತಮನ್ವಿತಸತ್ಪಥಮಲ್ತೆತನ್ನಗಂ ॥ ॥೮೦॥

---

ತಾಭನನದಿಂ- ಬಳ್ಳಿಯುಮಂಟಪದಿಂದಲೂ; ನಾನಾಮೃಗವ್ರಾತದಿಂ- ಅನೇಕಮೃಗಸಮೂಹದಿಂದಲೂ; ಸೊದೆಯಿಂ- ಅಮೃತದಿಂದಲೂ; ಸಿದ್ಧರಸಂಗಳಿಂ- ಸಿದ್ಧರಸಗಳಿಂದಲೂ; ಸುರಭಿಯಿಂ- ಕಾಮಧೇನುವಿನಿಂದಲೂ; ಕಾಂತಾರಸಂತಾನದಿಂ- ಅರಣ್ಯಸಮೂಹದಿಂದಲೂ; ಮುದದಿಂ- ಸಂತೋಷದಿಂದ, ಒಪ್ಪುವ- ಪ್ರಕಾಶಿಸುವ, ಸಿದ್ಧರಿಂ; ದಿವಿಜರಿಂ; ಗಂಧರ್ವರಿಂ; ಯಕ್ಷರಿಂ; ಪದಪಂ- ಪ್ರೀತಿಯನ್ನು, ತಾಳ್ದ- ಧರಿಸಿದ, ಗಣೇಂದ್ರರಿಂ- ಗಣೇಶ್ವರರಿಂದಲೂ; ಮುನಿಗಳಿಂ- ಋಷಿಗಳಿಂದಲೂ, ಚೆಲ್ವಾಯ್ತು- ಮನೋಹರವಾಯಿತು ।೭೮॥

ಆಗಿರಿಯೆಂಬ- ಆಪರ್ವತವೆಂಬ, ರೌಪ್ಯಮಯಲಿಂಗಕೆ- ಬೆಳ್ಳಿಯಲಿಂಗಕ್ಕೆ, ಕಾಲಮೆನಿಪ್ಪ- ಕಾಲವೆಂಬ, ಪೂಜಕಂ- ಅರ್ಚಕನು, ರಾಗದೆ- ಪ್ರೀತಿಯಿಂದ, ಕಾಮಧೇನುವಿನ, ಪಾಲ್ಸರಿಯಿಂದೆ- ಹಾಲಿನಮಳೆಯಿಂದ, ಅಭಿಷೇಕಿಸುತ್ತೆ- ಅಭಿಷೇಕವಮಾಡುತ್ತ; ನೀಡಾಗದೆ- ಹೆಚ್ಚಾಗದೆ; ಚಂದ್ರಿಕಾಧವಳವಸ್ತ್ರಮಂ- ಚಂದ್ರಿಕಾ- ಬೆಳದಿಂಗಳೆಂಬ, ಧವಳವಸ್ತ್ರಮಂ- ಶುಭ್ರವಸ್ತ್ರವನ್ನು, ಅರ್ಪಿಸಿ- ಸಮರ್ಪಣೆಯಂ ಮಾಡಿ; ತಾರಾಗಣಪುಷ್ಪದಿಂ- ನಕ್ಷತ್ರಗಳಸಮೂಹವೆಂಬ ಹೂವುಗಳಿಂದ, ಪೂಜೆಗೆಯ್ದು- ಅರ್ಚನೆಯಂಮಾಡಿ; ಶಶಿಮಂಡಲವೆಂಬ- ಚಂದ್ರಬಿಂಬವೆಂಬ, ದೀಪಮಂ- ದೀಪವನ್ನು, ಬೆಳಗುವಂ- ಎತ್ತುವನು. ॥೭೯॥

ತನ್ನಗಂ- ಆಬೆಟ್ಟವು, ಗೃಹಸ್ಥನಂತೆ- ಸಂಸಾರಿಯಹಾಗೆ, ॥ ಗೃಹಸ್ಥ ॥ ನವನಂದನಶಾಲಿ— ನವನಂದನ- ನೂತನರಾದ ಮಕ್ಕಳುಗಳಿಂದ, ಶಾಲಿ- ಪ್ರಕಾಶಿಸುವನು; ಮತ್ತು ಸದಾರವಿಭ್ರಮಂ— ಸದಾರ- ಪತ್ನಿಯೊಡನೆಕೂಡಿರುವ; ವಿಭ್ರಮಂ- ವಿಲಾಸವುಳ್ಳವನು, ॥ ನಗ ॥ ನವನಂದನಶಾಲಿ- ನವನಂದನ- ನೂತನವಾದ ತೋಟಗಳಿಂದ, ಶಾಲಿ, ಸದಾರವಿಭ್ರಮಂ— ಸದಾ- ಯಾವಾಗಲೂ, ರವಿ- ಸೂರ್ಯನ, ಭ್ರಮಂ- ಸುತ್ತುವಿಕೆಯುಳ್ಳದ್ದು; ಕುಸುಮಪತಾಕನಂತೆ— ಮನ್ಮಥನಂತೆ, ॥ ಮನ್ಮಥ ॥ ಸುಮನೋರತಿ- ಒಳ್ಳೇಮನಸ್ಸುಳ್ಳ ರತಿದೇವಿಯಿಂದ, ಶೋಭಿ- ಪ್ರಕಾಶಿಸುವನು, ಶುಕಾದಿಸೇವಿತಂ— ಶುಕ- ಗಿಣಿಗಳೇ, ಆದಿ- ಮೊದಲಾಗುಳ್ಳ ಪಕ್ಷಿಗಳಿಂದ, ಸೇವಿತಂ- ಸೇವಿಸಲ್ಪಟ್ಟವನು, ॥ ನಗ ॥ ಸುಮನೋರತಿಶೋಭಿ— ಸುಮನಃ- ದೇವತೆಗಳ, ರತಿ- ಇಷ್ಟದಿಂದ, ಶೋಭಿ; ಶುಕಾದಿಸೇವಿತಂ- ಶುಕ- ಶುಕಮುನಿಯೇ, ಆದಿ- ಮೊದಲಾಗುಳ್ಳಋಷಿಗಳಿಂದ, ಸೇವಿತಂ; ವಸುಧೆಯಧೀಶನಂತೆ- ರಾಜನಂತೆ, ॥ ರಾಜ ॥ ಭೃತವಾಹಿನಿ- ಭೃತ- ತನ್ನಿಂದ ಪೋಷಿತವಾದ, ವಾಹಿನಿ- ಸೈನ್ಯವುಳ್ಳವನು, ಹೃದ್ಯಸುರಾಗಮಂಡಿತಂ— ಹೃದ್ಯ- ಮನೋಹರವಾದ, ಸುರಾಗ- ಒಳ್ಳೇಪ್ರೀತಿಯಿಂದ, ಮಂಡಿತಂ- ಅಲಂಕೃತನು, ॥ ನಗ ॥ ಭೃತವಾಹಿನಿ- ಭೃತ- ವಹಿಸಲ್ಪಟ್ಟ, ವಾಹಿನಿ- ನದಿಗಳುಳ್ಳದ್ದು, ಹೃದ್ಯಸುರಾಗಮಂಡಿತಂ— ಹೃದ್ಯ- ಮನೋಹರಗಳಾದ, ಸುರಾಗ- ಕಲ್ಪವೃಕ್ಷಗಳಿಂದ, ಮಂಡಿತಂ ಬಿಸಜಜನಂತೆ- ಬ್ರಹ್ಮನಂತೆ, ॥ ಬ್ರಹ್ಮ ॥ ಹಂಸಯುತಂ- ಹಂಸಪಕ್ಷಿಯೊಡನೆಕೂಡಿದವನು, ಅನ್ವಿತಸತ್ಪಥಂ- ಅನ್ವಿತ- ಹೊಂದಿರುವ, ಸತ್ಪಥಂ- ಸನ್ಮಾರ್ಗವುಳ್ಳವನು, ॥ ನಗ ॥ ಹಂಸಯುತಂ- ಪರಮಹಂಸರಿಂದಕೂಡಿ

ವ ‖ ಎಂಬನೆಗಳ್ತೆಗೆಡೆಯಾಗಿಸಾರತರಮಾದತಾರಾಚಲದಗ್ರದೇಶಭಾಸುರಮೆನಿಸಿ.

‖ ಚಂ ‖ ತೊಳಗಿದುದಭ್ರಮಂಡಲಮನಳ್ಕಿರಿವಟ್ಟಳೆಕೇತುವೀಧಿಮಂ । ಡಳಿಸಿದಚಂದ್ರಕಾಂತ ಮಣಿಸಾಲಮುದಗ್ರಸುವರ್ಣಹರ್ಮ್ಯಮು ‖ ಜ್ಜ್ವಳಿಸುವರಾಜವೀಧಿರಮಣೀಯಗೃಹಾವ ಳಿರಮ್ಯರತ್ನಮಂ । ಜುಳರುಚಿಗೋಪುರಂಮಿಸುಗೆತನ್ನೊಳಗೀಶಪುರಂಮನೋಹರಂ ‖೮೧‖

ಮ ‖ ಅದನಾರ್ಬಣ್ಣಿಪರರ್ಕಕೋಟರುಚಿಯಂಕೈಕೊಂಡುಸಂಪೂರ್ಣಸಂ । ಪದ ಮಂತಾಳ್ದುಮಹಾಮಹತ್ವದೆವಿಳಾಸಂಬೆತ್ತುಸರ್ವೋರ್ವಿಗ ‖ ಗ್ಗದಶೃಂಗಾರಮನಾಳ್ದು ಬಣ್ಣಿಪೊಡತರ್ಕ್ಯಂತಾನಿದೆಂದೆಂಬಸೌ । ಖ್ಯದೆಕಣ್ಗೊಪ್ಪುವಕಾಲಕಾಲಪುರಮುಂಕಲ್ಯಾಣ ವಿಸ್ತಾರಮಂ‖ ... ... ... ... ... ... ‖೮೨‖

ಚಂ ‖ ಮಿಸುಗುವತತ್ಪುರೀಪ್ರಮದೆಯಾನನದಂತೆನಿತಾಂತಕಾಂತಿವೆ । ತ್ತೆಸೆವಬೆಡಂ

---

ದ್ದು, ಅನ್ವಿತಸತ್ಪಥಂ- ಅನ್ವಿತ- ಕೂಡಿರುವ, ಸತ್ಪಥಂ- ಆಕಾಶವುಳ್ಳದ್ದು. ... ‖೮೦‖

ವ ‖ ಎಂಬ- ಹೀಗೆಂಬ, ನೆಗಳ್ತೆಗೆ- ಪ್ರಸಿದ್ಧಿಗೆ, ಎಡೆಯಾಗಿ- ಆಸ್ಪದವಾಗಿ, ಸಾರತರಮಾದ- ಅತ್ಯಂತಶ್ರೇಷ್ಠವಾದ, ತಾರಾಚಲದ- ಕೈಲಾಸಪರ್ವತದ, ಅಗ್ರಪ್ರದೇಶಭಾಸುರಂ- ಮೇಲುಭಾಗದಲ್ಲಿ ಪ್ರಕಾಶಮಾನವಾದದ್ದು; ಎನಿಸಿ- ಎನಿಸಿಕೊಂಡು. * * * * * * *

ಅಭ್ರಮಂಡಲಮಂ- ಮೇಘಮಂಡಲವನ್ನು, ಅಳ್ಕಿರಿವ- ಪೀಡಿಸುವ, ಅಟ್ಟಳೆ- ಅಟ್ಟಣೆಯು, ಕೇತುವೀಧಿ- ಧ್ವಜಗಳಸಾಲು, ಮಂಡಳಿಸಿದ- ಬಟುವಾಗಿರುವ, ಚಂದ್ರಕಾಂತಮಣಿಸಾಲಂ— ಚಂದ್ರಕಾಂತಮಣಿ- ಚಂದ್ರಕಾಂತಶಿಲೆಯ, ಸಾಲಂ- ಪ್ರಾಕಾರವು, ಉದಗ್ರಸುವರ್ಣಹರ್ಮ್ಯಂ— ಉದಗ್ರ- ಉನ್ನತವಾದ, ಸುವರ್ಣಹರ್ಮ್ಯಂ- ಚಿನ್ನದ ಉಪ್ಪರಿಗೆಯು, ರಮಣೀಯಗೃಹಾವಳಿ— ರಮಣೀಯ- ಮನೋಹರಗಳಾದ, ಗೃಹಾವಳಿ- ಮನೆಗಳಸಾಲು, ರಮ್ಯರತ್ನಮಂಜುಳಮಣಿಗೋಪುರಂ— ರಮ್ಯರತ್ನ- ಶ್ರೇಷ್ಠವಾದರತ್ನಗಳ, ಮಂಜುಳ- ಮನೋಹರವಾದ, ರುಚಿ- ಕಾಂತಿಗಳುಳ್ಳ, ಗೋಪುರಂ- ಪಟ್ಟಣದಬಾಗಿಲು, ತನ್ನೊಳಗೆ- ತನ್ನಲ್ಲಿ, ಮಿಸುಗೆ- ಪ್ರಕಾಶಿಸಲು, ಮನೋಹರಂ- ಸುಂದರವಾದ, ಈಶಪುರಂ- ಶಿವನಪಟ್ಟಣವು, ತೊಳಗಿದುದು- ಪ್ರಕಾಶಿಸಿತು. ... ... ... ... ‖೮೧‖

ಅರ್ಕಕೋಟಿರುಚಿಯಂ- ಅನೇಕಸೂರ್ಯರ ಕಾಂತಿಯನ್ನು, ಕೈಕೊಂಡು- ಹೊಂದಿ, ಸಂಪೂರ್ಣಸಂಪದಮಂ- ಅತ್ಯಂತೈಶ್ವರ್ಯವನ್ನು, ತಾಳ್ದು- ಧರಿಸಿ; ಮಹಾಮಹತ್ವದೆ- ಮಹಿಮಾತಿಶಯದಿಂದ, ವಿಳಾಸಂಬೆತ್ತು- ಸೊಬಗನ್ನುಹೊಂದಿ; ಸರ್ವೋರ್ವಿಗೆ- ಸಕಲಲೋಕಕ್ಕೆ, ಅಗ್ಗದ- ಶ್ರೇಷ್ಠವಾದ, ಶೃಂಗಾರಮಂ- ಸಿಂಗರವನ್ನು, ಆಳ್ದು- ಪಡೆದು; ತಾಂ- ಇದು; ಬಣ್ಣಿಪೊಡೆ- ವರ್ಣಿಸುವದಕ್ಕೆ; ಅತರ್ಕ್ಯಂ- ಊಹಿಸುವದಕ್ಕಾಗದು; ಎಂಬ— ಹೀಗೆಂಬ, ಸೌಖ್ಯದೆ- ಸುಖದಿಂದ, ಕಣ್ಗೆ; ಒಪ್ಪುವ- ಪ್ರಕಾಶಿಸುವ; ಕಲ್ಯಾಣವಿಸ್ತಾರಮಂ- ಅತ್ಯಂತಮಂಗಳವುಳ್ಳ, * ಕಾಲಕಾಲಪುರಮುಂ- ಶಿವನಪಟ್ಟಣವನ್ನು, ಬಣ್ಣಿಪರ್ ಆರ್- ವರ್ಣಿಸುವರ್‍ಯಾರು? ... ... ... ... ... ‖೮೨‖

ಮಿಸುಗುವ- ಪ್ರಕಾಶಿಸುವ, ತತ್ಪುರೀಪ್ರಮದೆಯ- ಆಕೈಲಾಸಪಟ್ಟಣವೆಂಬ ಸ್ತ್ರೀಯ; ಆನನದಂತೆ- ಮುಖದಹಾಗೆ, ನಿತಾಂತಕಾಂತಿವೆತ್ತು- ಅಧಿಕವಾದ ಪ್ರಕಾಶವಂ ಪಡೆದು; ಎಸೆವ- ಪ್ರಕಾಶಿಸುವ; ಬೆಡಂಗಿನ- ಬೆಡಗುಳ್ಳ, ಅಂತಪುರದ- ರಾಣಿವಾಸದ, ಅಗ್ರದ- ಮುಂಭಾಗದಲ್ಲಿರುವ, ಚಾರುಸಭಾನಿವಾಸದೊ

---

* (ಅವ) ಕಾಲ- ಯಮನಿಗೆ- ಕಾಲ- ನಾಶಕನಾದಶಿವನ, ಪುರ- ಪಟ್ಟಣವು. ... ‖೮೩‖

ಗಿನುತವುರದಗ್ರದಚಾರುಸಭಾನಿವಾಸದೊಳ್ ॥ ಕುಸುಮಶರಾರಿಮಂಜುಮಣಿಮಂಡಿತದಿವ್ಯ ಮೃಗೇಂದ್ರಪೀಠದೊ।ಳ್ಬಿಸಜಭವಾದಿಗಳ್ಪೊಗಳೆರಂಜಿಸುತಿರ್ದನುದಾತ್ತಲೀಲೆಯಿಂ ॥೮೩॥

ಮಹಾಸ್ರ ॥ ನೆರೆದೇಳ್ತಂದಿರ್ದುದಾಸ್ಥಾನದೊಳರರೆವಸುವ್ರಾತಮಿಂದ್ರಾದಿದಿಕ್ಪಾ। ಲರವೊತ್ತಂ ಚಾರಣೌಘಂ ತುರಗಮುಖಚಯಂಸಿದ್ಧವೃಂದಂಸುಸಾಧ್ಯೋ ॥ತ್ಕರಮುದ್ಯದ್ಯಕ್ಷಸಂಘಂ ಮುನಿವಿತತಿ ಮನುಶ್ರೇಣಿರುದ್ರಾಳಿಯಬ್ಜೋ। ದರವಾರಂ ಪದ್ಮಜಾತಪ್ರತತಿಗಣಕುಲಂವೇದವಿದ್ಯಾಪ್ರತಾನಂ ॥ ... ... ... ... ॥೮೪॥

ಚಂ ॥ ಜಡೆಮುಡಿಚಂದ್ರರೇಖೆ ಪಣೆಗಣ್ಕೊರಲೊಳ್ಗರೆಸರ್ಪಕುಂಡಲಂ। ಪಿಡಿದಮಿಗಂ ತ್ರಿಶೂಲಮಭಯಂವರಮೊಪ್ಪುವಪಾಣಿ ನಾಗರೊ ॥ ಳ್ಪೊಡವೆಸೆವದ್ರಿಜಾತೆಪೊದೆದುಟ್ಟಜಿನಾಂಬರಮಿಂದುಕೋಟಿಯಂ । ಜಡಿವನಿಜಾಂಗಕಾಂತಿಯಡಿಗಣ್ಬೊಬಗೊಂದಿರೆಶೂಲಿಯೊಪ್ಪಿದಂ ॥ ... ... ... ... ... ... ॥೮೫॥

ಳ್- ಮನೋಹರವಾದ ಸಭಾಸ್ಥಳದಲ್ಲಿ, * ಕುಸುಮಶರಾರಿ- ಪರಮೇಶ್ವರನು, † ಬಿಸಜಭವಾದಿಗಳ್- ಬ್ರಹ್ಮಾದಿದೇವತೆಗಳು, ಪೊಗಳೆ- ಹೊಗಳುತ್ತಿರಲು; ಮಂಜು......... ಪೀಠದೊಳ್- ಮಂಜು- ಮನೋಹರಗಳಾದ, ಮಣಿ- ರತ್ನಗಳಿಂದ, ಮಂಡಿತ- ಅಲಂಕರಿಸಲ್ಪಟ್ಟ, ದಿವ್ಯ- ಶ್ರೇಷ್ಠವಾದ, ಮೃಗೇಂದ್ರಪೀಠದೊಳ್- ಸಿಂಹಾಸನದಲ್ಲಿ; ಉದಾತ್ತಲೀಲೆಯಿಂ- ಉತ್ಕೃಷ್ಟವಾದ ವಿಲಾಸದಿಂದ, ರಂಜಿಸುತಿರ್ದಂ- ಪ್ರಕಾಶಿಸುತ್ತಿದ್ದನು. ... ... ... ... ... ॥೮೩॥

ಆಸ್ಥಾನದೊಳ್- ಸಭಾಸ್ಥಳದಲ್ಲಿ, ವಸು- ಅಷ್ಟವಸುಗಳ, * ವ್ರಾತಂ; ಇಂದ್ರಾದಿದಿಕ್ಪಾಲಕರ- ಇಂದ್ರನೇಮೊದಲಾದ ಅಷ್ಟದಿಕ್ಪಾಲಕರುಗಳ, * ಮೊತ್ತಂ; ಚಾರಣೌಘಂ- ಚಾರಣ- ಹೊಗಳುವದೇವತೆಗಳ, * ಓಘಂ; ತುರಗಮುಖ- ಕಿನ್ನರರ, * ಚಯಂ; ಸಿದ್ಧ- ಸಿದ್ಧರ, * ವೃಂದಂ; ಸುಸಾಧ್ಯ- ಸಮೀಚೀನರಾದಸಾಧ್ಯರ, * ಉತ್ಕರಂ; ಉದ್ಯತ್- ಶ್ರೇಷ್ಠರಾದ, ಯಕ್ಷ- ಯಕ್ಷರ, * ಸಂಘಂ; ಮುನಿ- ಋಷಿಗಳ, * ವಿತತಿ; ಮನು- ಮನುಗಳ, * ಶ್ರೇಣಿ;ರುದ್ರ- ಪೋಡಶರುದ್ರರ, * ಆಳಿ; ಅಬ್ಜೋದರ- ವಿಷ್ಣುಗಳ, * ವಾರಂ; ಪದ್ಮಜಾತ- ಬ್ರಹ್ಮರ, * ಪ್ರತತಿ; ಗಣ- ಪ್ರಮಥರ, * ಕುಲಂ; ವೇದವಿದ್ಯಾ- ವೇದಗಳೆಂಬವಿದ್ಯೆಗಳ, * ಪ್ರತಾನಂ; ನೆರೆದು- ಕೂಡಿ; ಏಳ್ತಂದಿರ್ದುದು- ಬಂದಿದ್ದುದು, ಅರರೆ- ಆಶ್ಚರ್ಯ! ... ... ... ... ... ... ॥೮೪॥

ಜಡೆಮುಡಿ- ಜಟಾಬಂಧವು; ಚಂದ್ರರೇಖೆ- ಚಂದ್ರಕಲೆಯು; ಪಣೆಗಣ್- ಲಲಾಟನೇತ್ರವು; ಕೊರಲೊಳ್- ಕಂಠದಲ್ಲಿರುವ, ಒಳ್ಗರೆ- ಮನೋಹರವಾದ ಕಪ್ಪು; ಸರ್ಪಕುಂಡಲಂ- ಸರ್ಪಕರ್ಣಾಭರಣವು; ಪಿಡಿದ- ಹಿಡಿದಿರುವ, ಮಿಗಂ- ಮೃಗವು; ತ್ರಿಶೂಲಂ- ತ್ರಿಶೂಲವು; ಅಭಯಂ- ನಂಬುಗೆಯು; ವರಂ- ವರಪ್ರದಾನವು, ಒಪ್ಪುವ- ಪ್ರಕಾಶಿಸುವ, ಪಾಣಿ- ಹಸ್ತವು; ನಾಗರ- ಸರ್ಪಗಳ; ಒಳ್ತೊಡವು- ಒಳ್ಳೇವಡವೆಯು, ಎಸೆವ- ಪ್ರಕಾಶಿಸುವ, ಅದ್ರಿಜಾತೆ- ಪಾರ್ವತಿಯು; ಪೊದೆದ- ಹೊದ್ದುಕೊಂಡಿರುವ, ಉಟ್ಟ- ಉಟ್ಟುಕೊಂಡಿರುವ, ಅಜಿನಾಂಬರಂ- ಚರ್ಮವಸ್ತ್ರವು; ಇಂದುಕೋಟಿಯುಂ- ಅನೇಕ ಚಂದ್ರರನ್ನು, ಜಡಿವ- ತಿರಸ್ಕರಿಸುವ

* (ಅವ) ಕುಸುಮ- ಹೂವುಗಳೇ, ಶರ- ಬಾಣವಾಗುಳ್ಳ ಮನ್ಮಥನಿಗೆ, ಅರಿ- ಶತ್ರುವಾದವನು,
† (ಅವ) ಬಿಸ- ತಾವರೇದಂಟಿನಲ್ಲಿ, ಜ- ಹುಟ್ಟುವಕಮಲದದೆಸೆಯಿಂದ, ಭವ- ಹುಟ್ಟಿದವನು. ॥೮೩॥
* (ಅವ) ಸಮೂಹವೆಂಬರ್ಥವುಳ್ಳವುಗಳು. ... ... ... ॥೮೪॥

ಮ ॥ ಪರಮಾನಂದಮಯಂ ಪ್ರಸನ್ನವದನಂಪಾಟೀರಡಿಂಡೀರಪಾಂ | ಡುರವರ್ಣಂ
ಫಣಿಭೂಷಣಂ ಪ್ರಬಳಮಾಯಾಭೀಷಣಂ ಭಕ್ತಸಾ ॥ ಗರಸಂಪೂರ್ಣಸುಧಾಕರಂ ಘನಕೃ
ಪಾರತ್ನಾಕರಂಚಂದ್ರಶೇ | ಖರನಾಸ್ಥಾನದೊಳೊಪ್ಪಿದಂಪ್ರಣತಸಾರಶ್ರೀಕರಂಶಂಕರಂ ॥
ಮ॥ ತೆಗೆದುತ್ಸಂಗದೊಳಿಟ್ಟು ಮೈದಡವುತಂಕ್ರೌಂಚಾರಿಯಂಭೃಂಗಿಯಂ| ನಗೆಪೊ
ಣ್ಮುತ್ತಿರೆ ನೋಡುತಂಶಿವೆಯ ವೀಣಾಲಾಪಮಂಕೇಳುತಂ ॥ ಬಿಗಿದಪ್ಪುತ್ತೆಗಜಾಸ್ಯನಂ
ನಲವಿನಿಂ ಮುಂದಿಟ್ಟುಮುಂಡಾಡುತಂ | ಮೃಗಭೃನ್ಮೌಳಿಗಣಂಗಳುತ್ಸವಕಡರ್ಪಾಗಿರ್ದ
ನಾಸ್ಥಾನದೊಳ್॥ ... ... ... ... ... ... ॥೮೩॥
ಮ॥ ಪೆರಸಾರ್ಕೋಣಪ ನೂಂಕದಿರ್ಸುರಪಲಕ್ಷ್ಮೀನಾಥನೀಂಕಾಣ್ಕೆಯಂ | ನೆರೆನೀ
ಡುತಕಸುತಮಿರ್ಗಳಪದಿರ್ವಾಣೀಶಬಂದೀಗಳೊ ॥ ಲ್ದಿರಗೈನಿತ್ತ್ತಪಮೆಲ್ಲನೈದುಪವನಾಪ

---

ನಿಜಾಂಗಕಾಂತಿ-ತನ್ನ ದೇಹದಕಾಂತಿಯು; ಅಡಿಗೆಣ್- ಪಾದದಲ್ಲಿರುವನೇತ್ರವು; ಸೊಬಗೊಂಪಿರೆ- ಸೌಂದರ್ಯ ವನ್ನು ಹೊಂದಿರಲು; ಶೂಲಿ- ಪರಮೇಶ್ವರನು, ಒಪ್ಪಿದಂ- ಪ್ರಕಾಶಿಸಿದನು. ... ॥೮೪॥

* ಮೃಗಭೃನ್ಮೌಳಿ- ಪರಮೇಶ್ವರನು, ಆಸ್ಥಾನದೊಳ್- ಸಭೆಯಲ್ಲಿ, † ಕ್ರೌಂಚಾರಿಯಂ- ಷಣ್ಮುಖನನ್ನು, ತೆಗೆದು- ತೆಗೆದುಕೊಂಡು, ಉತ್ಸಂಗದೊಳ್- ತೊಡೆಯಲ್ಲಿ, ಇಟ್ಟು, ಮೈದಡವುತಂ- ಮೈಯನ್ನು ಸವರುತ್ತ; ನಗೆ-ನಗುವಿಕೆಯು, ಪೊಣ್ಮುತ್ತಿರೆ-ಹೆಚ್ಚುತ್ತಿರಲು; ಭೃಂಗಿಯಂ- ಭೃಂಗೀಶ್ವರನನ್ನು, ನೋಡುತಂ- ನೋಡುತ್ತ; ಶಿವೆಯು- ಪಾರ್ವತಿಯು, ವೀಣಾಲಾಪಮಂ- ವೀಣಾವಚನಗಳನ್ನು,ಕೇಳುತಂ- ಕೇಳುತ್ತ; ‡ ಗಜಾಸ್ಯನಂ- ವಿಘ್ನೇಶ್ವರನನ್ನು, ಬಿಗಿದು- ಗಾಢವಾಗಿ, ಅಪ್ಪುತ್ತೆ- ಆಲಿಂಗಿಸುತ್ತ, ನಲವಿನಿಂ- ಪ್ರೀತಿಯಿಂದ, ಮುದ್ದಿಟ್ಟು- ಮುತ್ತುಗೊಟ್ಟು, ಮುಂಡಾಡುತಂ- ಅಧಿಕವಾಗಿ ಆದರಿಸುತ್ತ; ಗಣಂಗಳ- ಪ್ರಮಥರ,ಉತ್ಸವಕೆ; ಅಡರ್ಪಾಗಿರ್ದಂ- ಆಶ್ರಯನಾಗಿದ್ದನು. ... ... ... ೮೬॥

ಪರಮಾನಂದಮಯಂ- ಉತ್ಕೃಷ್ಟವಾದ ಆನಂದಸ್ವರೂಪನಾದ; ಪ್ರಸನ್ನವದನಂ— ಪ್ರಸನ್ನ- ನಿರ್ಮಲವಾದ, ವದನಂ- ಮುಖವುಳ್ಳ; ಪಾಟೀರ........ ವರ್ಣಂ- ಪಾಟೀರ- ಶ್ರೀಗಂಧ; ಡಿಂಡೀರ- ನೊರೆ, ಇವುಗಳೋಪಾದಿಯಲ್ಲಿ, ಪಾಂಡುರ- ಶುಭ್ರವಾದ, ವರ್ಣಂ- ಕಾಂತಿಯುಳ್ಳ; ಫಣಿಭೂಷಣಂ- ಸರ್ಪಾಭರಣವುಳ್ಳ; ಪ್ರಬಳಮಾಯಾಭೀಷಣಂ—ಪ್ರಬಳಮಾಯಾ- ಅಧಿಕವಾದಮಾಯೆಗೆ, ಭೀಷಣಂ- ಭಯಂಕರನಾದ, ಭಕ್ತ......ಸುಧಾಕರಂ, ಭಕ್ತ- ಭಕ್ತರೆಂಬ, ಸಾಗರ- ಸಮುದ್ರಕ್ಕೆ, ಸಂಪೂರ್ಣ ಸುಧಾಕರಂ- ಪೂರ್ಣಚಂದ್ರನಾದ, ಘನಕೃಪಾರತ್ನಾಕರಂ- ಅಧಿಕವಾದ ಕರುಣಾರಸಕ್ಕೆ ಸಮುದ್ರನಾದ; ಚಂದ್ರಶೇಖರಂ- ಚಂದ್ರನೇ ಶಿರೋಭೂಷಣವಾಗುಳ್ಳ; ಪ್ರಣತಸಾರಶ್ರೀಕರಂ—ಪ್ರಣತ- ನಮ್ರರಾದವರಿಗೆ, ಸಾರಶ್ರೀಕರಂ- ಮೋಕ್ಷಲಕ್ಷ್ಮಿಯನ್ನುಂಟುಮಾಡುವ; ಶಂಕರಂ- ಪರಮೇಶ್ವರನು, ಆಸ್ಥಾನದೊಳ್- ಸಭೆಯಲ್ಲಿ;ಒಪ್ಪಿದಂ ॥೮೩॥

ಅಲ್ಲಿ- ಆಸಭಾಸ್ಥಲದಲ್ಲಿ, ಆಕಾಲದೊಳ್- ಆಸಮಯದಲ್ಲಿ,ಮಾಕಾಳಂ- ಮಹಾಕಾಳನು, ಕೋಣಪ- ಎಲೋನೈರುತಿಯೇ, ಪೆರಸಾರ್- ಹಿಂದಕ್ಕೆನಡೆ; ಸುರಪ- ದೇವೇಂದ್ರನೇ, ನೂಂಕದಿರ್- ನೂಕಬೇಡ; ಲಕ್ಷ್ಮೀನಾಥ- ವಿಷ್ಣುವೇ, ನೀಂ- ನೀನು, ಕಾಣ್ಕೆಯಂ; ನೆರೆ- ಚೆನ್ನಾಗಿ, ನೀಡು- ಕೊಡು; ಅಂತಕ- ಯಮ

---

* (ಅವ) ಮೃಗ- ಜಿಂಕೆಯನ್ನು, ಭೃತ್- ಧರಿಸಿರುವಚಂದ್ರನೇ, ಮೌಳಿ- ಕಿರೀಟದಲ್ಲುಳ್ಳವನು.
† (ಅವ) ಕ್ರೌಂಚ- ಕ್ರೌಂಚನಾಮಕವಾದ ಪರ್ವತಕ್ಕೆ, ಅರಿ- ಶತ್ರುವು. ‡ (ಅವ) ಗಜ- ಆನೆಯು, ಆಸ್ಯ- ಮುಖವುಳ್ಳವನು. ... ... ... ... ... ... ॥೮೬॥

ದ್ಮಿತ್ತಚಂದ್ರಂಗೆನೀಂ| ತೆರಪಂಮಾಡೆನುತಲ್ಲಿಕೂಪೆಡಿದಂಮಾಕಾಳನಾಕಾಲದೊಳ್ ॥೮೮॥

ಕಂ॥ ಪಸರಿಸಿದುದಿಂದ್ರಚಾಪದ | ಪೊಸಪರಿಯಂವಿನಮದಮರಮಣಿಮಕುಟದಸೊಂ॥
ಪೆಸೆವಪಸುರ್ವರಲಕಿಸುವರ | ಲಸದೃಶರುಚಿನೀಲಪಾದಪೀಠಾಂಬುದದೊಳ್॥ ॥೮೯॥

ವ ॥ ಇಂತನಂತಾನಂತಸಂತಾನಕಮಾದೊಡಂಪೊಗಳಲಸದಳಮಾದದಿವ್ಯಸಭೆಯೊಳ್ ದೇವದೇವಂನಿರತಿಶಯಪರಮವೈಭವಂಮಿಗೆಕಣ್ಗೆಮಂಗಳಮಾಗಿಮನಕ್ಕೆಮನೋಹರಮೆನಿಸಿರಂಜಿಸಿರ್ದ್ದನಿತರೊಳೋಲಗಮಂಪರಿಯಿಸಿನಿಜಾಂತಃಪುರಕ್ಕೆಯ್ತಂದೊಳವಳಯದಚಿಂತಾಮಣಿಗೆಲಸದಕರುಮಾಡದೊಳ್ಗಣನಿವಹಂಬೆರಸುನಿಜಾರ್ಧಾಂಗಿಯೊಡನೆ ಭದ್ರಾಸನಮನಲಂಕರಿಸಿಮೂರ್ತಿಗೊಂಡುಪರಿಮಿತಾಸ್ಥಾನನಾಗಿಪ್ಪರ್ಗಳ್॥ * * * * * *

ಚಂ ॥ ಪೊಳೆವಮುಖೇಂದುಚಂದ್ರಿಕೆಯಿದೆಂಬಿನಮುಣ್ಮಿರೆಮಂದಹಾಸಮು | ಜ್ಜ್ವಳಿ

---

ನೇ, ಸಂತಮಿರ್- ಸುಮ್ಮನಿರು; ವಾಣೀಶ- ಬ್ರಹ್ಮನೇ, ಗಳಪದಿರ್- ಕೂಗಬೇಡ; ವಿತ್ತಪ- ಕುಬೇರನೇ, ಈಗಳ್- ಈಗ, ಒಲ್ದು- ಪ್ರೀತಿಸಿ, ಬಂದು, ಎರಗೈ- ನಮಸ್ಕರಿಸು; ಪವನಾ- ವಾಯುವೇ, ಮೆಲ್ಲನೈದು- ಮೆಲ್ಲಗೆಹೋಗು; ಪದ್ಮಿತ್ತ- ಸೂರ್ಯನೇ, ನೀಂ, ಚಂದ್ರಂಗೆ, ತೆಪಂಮಾಡು- ಅವಕಾಶವನ್ನುಕೊಡು; ಎನುತೆ, ಜಡಿದಂ- ಬೆದರಿಸಿದನು. ... ... ... ... ... ... ೮೮॥

ವಿನಮದಮರಮಣಿಮಕುಟದ— ವಿನಮತ್- ನಮಸ್ಕರಿಸುವ, ಅಮರ- ದೇವತೆಗಳ, ಮಣಿಮಕುಟದ- ರತ್ನಕಿರೀಟಗಳ, ಸೊಂಪೆಸೆವ- ಮನೋಹರವಾದ, ಪಸುರ್ವರಲ- ಪಚ್ಚೆಮಣಿಗಳ, ಕಿಸುವರಲ- ಕೆಂಪಾದರತ್ನಗಳ, ಅಸದೃಶರುಚಿ- ಅಧಿಕವಾದಕಾಂತಿಯು, ನೀಲಪಾದಪೀಠಾಂಬುದದೊಳ್— ನೀಲ- ನೀಲರತ್ನದ, ಪಾದಪೀಠ- ಪಾದವಿನ್ಯಾಸಾರ್ಹವಾದ ಪೀಠವೆಂಬ, ಅಂಬುದದೊಳ್- ಮೇಘದಲ್ಲಿ, ಇಂದ್ರಚಾಪದ- ಇಂದ್ರನಬಿಲ್ಲಿನ, ಪೊಸಪರಿಯಂ- ನೂತನವಾದರೀತಿಯನ್ನು; ಪಸರಿಸಿದುದು- ಉಂಟುಮಾಡಿತು. ॥೮೯॥

ಇಂತು- ಈಪ್ರಕಾರವಾಗಿ, ಅನಂತಾನಂತಸಂತಾನಕಂ ಆದೊಡಂ- ಅನೇಕ ಆದಿಶೇಷರಗುಂಪಾಗಿದ್ದರೂ, ಪೊಗಳಲ್- ಹೊಗಳುವವಕ್ಕೆ, ಅಸದಳಮಾದ- ಅಸಾಧ್ಯವಾದ; ದಿವ್ಯಸಭೆಯೊಳ್- ಶ್ರೇಷ್ಠವಾದ ಸಭೆಯಲ್ಲಿ, ನಿರತಿಶಯಪರಮವೈಭವಂ- ನಿರತಿಶಯ- ಅತ್ಯಧಿಕವಾದ, ಪರಮ- ಉತ್ಕೃಷ್ಟವಾದ, ವೈಭವ- ಸಂಪತ್ತುಳ್ಳ, ದೇವದೇವಂ- ಪರಮೇಶ್ವರನು, ಮಿಗೆ- ಅಧಿಕವಾಗಿ, ಕಣ್ಗೆ-ಮಂಗಳಮಾಗಿ, ಮಂಗಳಕರವಾಗಿ; ಮನಕ್ಕೆ, ಮನೋಹರಂ, ಎನಿಸಿ; ರಂಜಿಸಿರ್ದು- ಪ್ರಕಾಶಿಸುತ್ತಿದ್ದು, ಅನಿತರೊಳ್- ಅಷ್ಟರಲ್ಲಿ, ಓಲಗಮಂ- ಸಭಾಜನರನ್ನು, ಪರಿಯಿಸಿ- ಕಳುಹಿಸಿ; ನಿಜಾಂತಃಪುರಕ್ಕೆ-ತನ್ನರಾಣಿವಾಸಕ್ಕೆ, ಎಯ್ತಂದು- ಬಂದು, ಒಳವಳಯದ- ಒಳಭಾಗದಲ್ಲಿರುವ, ಚಿಂತಾಮಣಿಗೆಲಸದ, ಚಿಂತಾಮಣಿಯಿಂದಮಾಡಿರುವಕೆಲಸವುಳ್ಳ, ಕರುಮಾಡದೊಳ್- ಉಪ್ಪರಿಗೆಯಲ್ಲಿ, ಗಣನಿವಹಂಬೆರಸು- ಪ್ರಮಥರುಗಳೊಡನೆಕೂಡಿ, ನಿಜಾರ್ಧಾಂಗಿಯೊಡನೆ- ತನ್ನ ಅರ್ಧಶರೀರಿಣಿಯಾದ ಪಾರ್ವತಿಯೊಡನೆ, ಭದ್ರಾಸನಮಂ- ಪೀಠವನ್ನು, ಅಲಂಕರಿಸಿ; ಮೂರ್ತಿಗೊಂಡು- ಕುಳಿತುಕೊಂಡು; ಪರಿಮಿತಾಸ್ಥಾನನಾಗಿ- ತಕ್ಕಷ್ಟುಸಭಾಜನರುಳ್ಳವನಾಗಿ, ಇಪ್ಪರ್ಗಳ್-ಇರುವಕಾಲದಲ್ಲಿ.

ಮಂದಹಾಸಂ- ಮುಗುಳ್ನಗೆಯು, ಪೊಳೆವ- ಪ್ರಕಾಶಿಸುವ, ಮುಖೇಂದುಚಂದ್ರಿಕೆ—ಮುಖ- ಮುಖವೆಂಬ, ಇಂದು- ಚಂದ್ರನ, ಚಂದ್ರಿಕೆ- ಬೆಳದಿಂಗಳು, ಎಂಬಿನಂ- ಎನ್ನುವಹಾಗೆ, ಉಣ್ಮಿರೆ- ಉಂಟಾಗಿರಲು, ಭಸ್ಮಲೇಪನಂ- ವಿಭೂತಿಯಲೇಪನವು, ಉಜ್ಜ್ವಳಿತನಿಜಾಂಗಕಾಂತಿ- ಉಜ್ವಳಿತ- ಹೊಳೆಯುವ, ನಿಜಾಂಗ- ತನ್ನದೇಹದ, ಕಾಂತಿ- ಪ್ರಕಾಶವು, ಬಳಿದಂತೆ- ಬಳಿದಹಾಗೆ, ವಿರಾಜಿಸೆ- ಪ್ರಕಾಶಿಸಲು; ಮಿಳಿರ್ವ- ಚಲಿಸುವ, ಜಟಾಳಿ- ಜಡೆಗಳಗುಂಪು, ದೇಹತರು- ಶರೀರವೆಂಬ ಮರವು, ಬೀಳಲ- ಮರದ ಜಡೆಯನ್ನು, ಬಿಟ್ಟ

ತನಿಜಾಂಗಕಾಂತಿಬಲಿದಂತೆವಿರಾಜಿಸೆಭಸ್ಮಲೇಪನಂ ॥ ಮಿಳಿರ್ವಜಟಾಳಿದೇಹತರುವಿಂ ಳಿಲಬಿಟ್ಟವೊಲೊಪ್ಪೆಶೈವನಿ । ಶ್ಚಳಮತಿನಾರದಂಸಭೆಗೆಬಂದನಪಾರಕಳಾವಿಶಾರದಂ॥ .. ॥೬೦॥

ವ ॥ ಅಂತೇಳ್ತಂದುಸಿಂಧುಬಂಧುರಜಟಾಜೂಟನಂಘ್ರಿಪೀಠಂನಿಜನಿಟಿಲತಟಮಂ ಸೋಂಕೆಸಾತ್ವಿಭಕ್ತಿವೆರಸುದಂಡಪ್ರಣಾಮಂಗೆಯ್ದೆಳ್ದು ನಿಂದುಮುನ್ನಮೆಸುತಿಗೆಯ್ದಿರ್ದ ತನ್ನಬೃಹತಿಯೆಂಬಬೃಹದ್ವೀಣೆಯಂತೆಗೆದು ಸರಸರವಮಂಕುರಿಸೆತಾನಮಾನಂದೋರಿರಾಗದಿಂರಾಗಮಂಬಾಜಿಸಿ ... ... ... ... ... ...

॥ ಜಯಮಂಗಳಮಯನಿಷ್ಕಳ । ಜಯಕುಂಜರಮದಭಂಜನ । ಜಯಬಂಧುರವಿಷಕಂಧರ । ಜಯನೂತನವೃಷಕೇತನ । ಜಯಭೀಷಣಫಣಿಭೂಷಣ । ಜಯರಾಜಿತಸುರಪೂಜಿತಜಯದಾರುಣಖಲವಾರಣ । ಜಯಕಿಂಕರಚಯಶಂಕರ ।ಜಯದೇವಶಿವನಮಸ್ತೇನಮಃ॥

ವ॥ ಎಂದುಸನ್ನುತಿಗೆಯ್ದುಕೈಮುಗಿದುನಿಂದಮುನಿವರನಂಮನೋಜಹರಂನೋಡಿ

---

ಪೊಲ್- ಬಿಟ್ಟಿರುವಹಾಗೆ, ಒಪ್ಪೆ; ಶೈವನಿಶ್ಚಲಮತಿ- ಶೈವ- ಶೈವಮತದಲ್ಲಿ, ನಿಶ್ಚಲಮತಿ- ಸ್ಥಿರವಾದ ಬುದ್ಧಿಯುಳ್ಳ; ಅಪಾರಕಳಾವಿಶಾರದಂ— ಅಪಾರಕಳಾ- ಸಕಲವಿದ್ಯೆಗಳಲ್ಲಿ; ವಿಶಾರದಂ- ನಿಪುಣನಾದ; ನಾರದಂ- ನಾರದರ್ಷಿಯು, ಸಭೆಗೆ, ಬಂದಂ. ... ... ... ... ... ॥೬೦॥

ಅಂತು- ಆಪ್ರಕಾರವಾಗಿ, ಏಳ್ತಂದು- ಬಂದು, ಸಿಂಧು........ ಜೂಟನ- ಸಿಂಧು- ದೇವಗಂಗೆಯಿಂದ ಬಂಧುರ- ಮನೋಹರವಾದ, ಜಟಾಜೂಟನ- ಜಟಾಮಕುಟವುಳ್ಳಶಿವನ, ಅಂಘ್ರಿಪೀಠಂ- ಪಾದಪೀಠವು, ನಿಜನಿಟಿಲತಟಮಂ- ತನ್ನಹಣೆಯಪ್ರದೇಶವನ್ನು, ಸೋಂಕೆ- ಸೋಕಲು; ಸಾತ್ವಿಕಭಕ್ತಿವೆರಸು- ರೋಮಾಂಚ ಗದ್ಗದಮೊದಲಾದಸಾತ್ವಿಕಭಕ್ತಿಯೊಡನೆಕೂಡಿ, ದಂಡಪ್ರಣಾಮಂಗೆಯ್ದು- ದಂಡದೋಪಾದಿಯಲ್ಲಿನಮಸ್ಕರಿಸಿ. ಏಳ್ದು- ಎದ್ದು, ನಿಂದು- ನಿಂತುಕೊಂಡು, ಮುನ್ನಮೆ- ಪೂರ್ವದಲ್ಲೇ, ಸುತಿಗೆಯ್ದಿರ್ದ- ಶೃತಿಮಾಡಿದ್ದ; ತನ್ನ, ಬೃಹತಿಯೆಂಬ, ಬೃಹದ್ವೀಣೆಯಂ- ದೊಡ್ಡವೀಣೆಯನ್ನು, ತೆಗೆದು, ಸರಸರವಂ- ಮಧುರಸ್ವರವು, ಅಂಕುರಿಸೆ- ಹುಟ್ಟುವಹಾಗೆ, ತಾನಮಾನಂದೋರಿ- ಗೀತವಿಶೇಷಗಳ ಪ್ರಮಾಣವನ್ನುತೋರಿಸಿ, ರಾಗದಿಂ- ಪ್ರೀತಿಯಿಂದ, ರಾಗಮಂ- ಬಾಜಿಸಿ. * * * * * * * * * * * *

ಮಂಗಳಮಯ- ಮಂಗಳಸ್ವರೂಪನೇ, ಜಯ-ಸರ್ವೋತ್ಕೃಷ್ಟನಾಗು; ನಿಷ್ಕಳ- ಕಳಾರಹಿತನೇ ಜಯ; ಕುಂಜರಮದಭಂಜನ- ಗಜಾಸುರನಗರ್ವವನ್ನುನಾಶಮಾಡಿದವನೇ, ಜಯ; ಬಂಧುರವಿಷಕಂಧರ- ಬಂಧುರ- ಮನೋಹರವಾದ, ವಿಷ- ಗರಳವೇ, ಕಂಧರ- ಕಂಠದಲ್ಲುಳ್ಳವನೇ, ಜಯ; ನೂತನವೃಷಕೇತನ- ನೂತನವಾದವೃಷಭವೇಧ್ವಜದಲ್ಲುಳ್ಳವನೇ, ಜಯ; ಭೀಷಣಫಣಿಭೂಷಣ- ಭಯಂಕರವಾದಸರ್ಪಗಳೇಆಭರಣವಾಗುಳ್ಳವನೇ, ಜಯ; ರಾಜಿತಸುರಪೂಜಿತ- ಪ್ರಕಾಶವಾನರಾದ ದೇವತೆಗಳಿಂದ ಪೂಜ್ಯನಾದವನೇ, ಜಯ; ದಾರುಣಖಲವಾರಣ- ಭಯಂಕರರಾದ ದುರ್ಜನಗನ್ನು ನಾಶಮಾಡುವನೇ, ಜಯ; ಕಿಂಕರಚಯಶಂಕರ- ಸೇವಕಜನಗಳಸಮೂಹಕ್ಕೆ ಸುಖವನ್ನುಂಟುಮಾಡುವನೇ, ಜಯ; ದೇವ- ಸ್ವಾಮಿಯಾದ, ಶಿವ- ಪರಮೇಶ್ವರನೇ, ತೇ- ನಿನಗೋಸ್ಕರ, ನಮಃ-ನಮಸ್ಕಾರವು, ನಮಃ. ... ... ...

ಎಂದು; ಸನ್ನುತಿಗೆಯ್ದು- ಸ್ತೋತ್ರವನ್ನುಮಾಡಿ, ಕೈಮುಗಿದು, ನಿಂದ, ಮುನಿವರನಂ- ನಾರದರ್ಷಿಯನ್ನು, ಮನೋಜಹರಂ- ಮನ್ಮಥನನ್ನು ನಾಶಮಾಡಿದಪರಮೇಶ್ವರನು, ನೋಡಿ; ಕಾರುಣ್ಯಮಂ- ದಯೆಯನ್ನು, ನೀಡಿ- ಇಟ್ಟು, ಮತ್ತಂ, ಅವನಿಂ- ಆನಾರದರ್ಷಿಯಿಂದ, ಮರ್ತ್ಯಲೋಕವೃತ್ತಾಂತಮಂ- ಭೂಲೋಕದವಾರ್ತೆಯನ್ನು, ಕೇಳಲ್- ಕೇಳುವದಕ್ಕೋಸ್ಕರ, ಉತ್ಸವಿಸಿ- ಉತ್ಸವಪಟ್ಟು, ನಿಜಮನೋಹರ

ಕಾರುಣ್ಯಮಂನೀಡಿ ವತ್ತಮವನಿಂ ಮರ್ತ್ಯಲೋಕವೃತ್ತಾಂತಮಂಕೇಳಲುತ್ಸವಿಸಿ ನಿಜಮನೋಹರೆಯನಗೆಮೊಗಮಂನೋಡಲೊಡಂಬಿಕೆಮನೋರಮಣನಿಂಗಿತಮನರಿದು ನಾರದನ ಮೊಗದಾವರೆಯುಂನೋಡಿ ॥ * * * * * * * * * * *

ಕಂ ॥ ಆವಾವದೇಶಮಂಪರಿ । ಭಾವಿಸಿನೀಂಬಂದೆಮುನಿಪಮನುಜಾವನಿಯೊ ॥ ಳ್ಪಾವನಶಿವಭಕ್ತಿಲಸ । ದ್ಭಾವಾನ್ವಿತರೊಳರೆಪೇಳ್ವುದೆಂದುಮೆಕೇಳ್ದಳ್ ॥ ॥೯೦॥

ವ ॥ ಎಂದುಕೇಳಲೊಡಂ ಮುನ್ನಮಾಂಬಿನ್ನವಿಸಲೆಂದಿದ್ದ ಕಜ್ಜದುಜ್ಜವಣೆಗೆಮೃಡಾಣಿಯನುಡಿಸಹಾಯಮಾದುದುಸಮಯಂಬಡೆದೆನೆಂದು ಸಡಗರಿಸಿನಾರದಂನೇರವಂದುಮಾರಹರಂಗಮಂಬಿಕೆಗಂಮುಗುಳ್ದೆರಗಿರಯ್ಯಮೆನೆಕೈಯಂಮುಗಿದುನಿಂದು ॥ ॥೯೧॥

ಕಂ॥ ಅವಧರಿಪುದುಬಿನ್ನಪಮಂ । ಕುವಲಯಸಖಮೌಳಿದೇವಿಯರ್ಕೇಳ್ದಿರವಂ ॥ ವಿವರಿಪೆನೆಲ್ಲಾಭುವನದೆ । ಶಿವಭಕ್ತಿವಿಶೇಷಮಾಗಿವರ್ತಿಪುದೀಗಳ್॥ ... ... ॥೯೨॥

ಕಂ॥ನರಲೋಕಮೊಂದರೊಳ್ಪುರ। ಹರಭಕ್ತಿಯತೀವಗಪ್ತಮಾಗಿರ್ದಪುದು॥ರ್ಪರೆ

---

ಯ- ತನ್ನಪ್ರಾಣಕಾಂತೆಯಾದಪಾರ್ವತಿಯ, ನಗೆಮೊಗಮಂ- ನಗುವಿಕೆಯಿಂದಕೂಡಿದ ಮುಖವನ್ನು, ನೋಡಲ್, ಒಡನೆ- ಕೂಡಲೇ, ಅಂಬಿಕೆ- ಪಾರ್ವತಿಯು, ಮನೋರಮಣನ- ಪ್ರಾಣಪ್ರಿಯನಾದ ಪರಮೇಶ್ವರನ, ಇಂಗಿತಮಂ- ಮನೋಭಿಪ್ರಾಯವನ್ನು, ಅರಿದು- ತಿಳಿದು, ನಾರದನ- ನಾರದರ್ಷಿಯ, ಮೊಗದಾವರೆಯಂ- ಮುಖಕಮಲವನ್ನು, ನೋಡಿ. * * * * * * * * * * * *

ಮುನಿಪ- ನಾರದಮುನಿಯೇ, ನೀಂ- ಆವಾವದೇಶಮಂ- ಯಾವಯಾವದೇಶಗಳನ್ನು, ಪರಿಭಾವಿಸಿ- ಸಂಚರಿಸಿ, ಬಂದೆ- ಬರುವಂಥವನಾದೆ, ಮನುಜಾವನಿಯೊಳ್- ಭೂಲೋಕದಲ್ಲಿ; ಪಾವನ...... ನ್ವಿತರ್- ಪಾವನ- ಪರಿಶುದ್ಧವಾದ, ಶಿವಭಕ್ತಿ- ಶಿವಭಕ್ತಿಯಿಂದ, ಲಸತ್- ಪ್ರಕಾಶಮಾನವಾದ, ಭಾವ- ಮನಸ್ಸಿನಿಂದ, ಅನ್ವಿತರ್- ಕೂಡಿದವರು, ಒಳರೆ- ಇದ್ದಾರೆಯೇ, ಪೇಳ್ವುದು- ಹೇಳುವದು, ಎಂದು, ಉಮೆ- ಪಾರ್ವತಿಯು, ಕೇಳ್ದಳ್. ... ... ... ... ... ॥೯೦॥

ಎಂದು, ಕೇಳಲ್, ಒಡಂ- ಕೂಡಲೇ, ಮುನ್ನಂ- ಮೊದಲೇ, ಆಂ- ನಾನು, ಬಿನ್ನವಿಸಲೆಂದು- ವಿಜ್ಞಾಪಿಸಿಕೊಳ್ಳಬೇಕೆಂದು, ಇರ್ದ, ಕಜ್ಜದ, ಕಾರ್ಯದ, ಉಜ್ಜವಣೆಗೆ- ಆರಂಭಕ್ಕೆ, ಮೃಡಾಣಿಯ- ಪಾರ್ವತಿಯ, ನುಡಿ- ಮಾತು, ಸಹಾಯಂ- ಸಹಾಯಕರವಾದದ್ದು, ಆದುದು- ಆಯಿತು, ಸಮಯಂಬಡೆದೆಂ- ಕಾಲವನ್ನು ಹೊಂದಿದೆನು; ಎಂದು, ಸಡಗರಿಸಿ- ಸಂಭ್ರಮಪಟ್ಟು, ನಾರದಂ, ಅಂದು- ಆಕಾಲದಲ್ಲಿ, ಮಾರಹರಂಗಂ- ಪರಮೇಶ್ವರನಿಗೂ, ಅಂಬಿಕೆಗಂ- ಪಾರ್ವತಿಗೂ, ಮುಗುಳ್ದು- ವುತ್ತು, ಎರಗಿ- ನಮಸ್ಕರಿಸಿ, ರಯ್ಯಮೆನೆ- ಮನೋಹರವಾಗುವಹಾಗೆ,ಕೈಯ್ಯಂಮುಗಿದು, ನಿಂದು. * * * * *

* ಕುವಲಯಸಖಮೌಳಿ- ಪರಮೇಶ್ವರನೇ, ಬಿನ್ನಪಮಂ- ವಿಜ್ಞಾಪನೆಯನ್ನು, ಅವಧರಿಪುದು- ಸಾವಧಾನದಿಂದ ಲಾಲಿಸುವದು, ದೇವಿಯರ್- ಪಾರ್ವತೀದೇವಿಯವರು, ಕೇಳ್ದ, ಇರವಂ- ರೀತಿಯನ್ನು, ವಿವರಿಪೆಂ- ವಿಸ್ತರಿಸುವೆನು; ಎಲ್ಲಾಭುವನದೆ- ಸಮಸ್ತಲೋಕದಲ್ಲಿಯೂ, ಈಗಳ್- ಈಗ, ಶಿವಭಕ್ತಿ- ಹರಭಕ್ತಿಯು, ವಿಶೇಷಮಾಗಿ- ಅಧಿಕವಾಗಿ, ವರ್ತಿಪುದು- ಇರುವದು. ... ... ॥೯೨॥

ನರಲೋಕಂಬಂದರೊಳ್- ಮರ್ತ್ಯಲೋಕಬಂದರಲ್ಲಿ, ಪುರಹರಭಕ್ತಿ- ಶಿವಭಕ್ತಿಯು, ಅತೀವಗು

---

* (ಅವ) ಕುವಲಯ- ನೈದಿಲೆಗಳಿಗೆ, ಸಖ- ಮಿತ್ರನಾದಚಂದ್ರನೇ, ಮೌಳಿ-ಕಿರೀಟದಲ್ಲುಳ್ಳವನು.

ಯೊಳ್ತೋರ್ಪಶಿವೈಕ್ಯ | ರ್ಪರಿರಂಜಿಸಿದಪರಜಸ್ರಮಪ್ರಕಟತೆಯಿಂ ॥ ... ॥೯೩॥

ಚಂ॥ ಪರಶಿವನಿಷ್ಠರಲ್ಲಿಪೆರರೊಳ್ನುಡಿಯಾಡದೆಗೂಢಭಾವದಿಂ | ದರೆಬರುದಾತ್ತವೃತ್ತರಿರುತಿರ್ದಪರಲ್ಲಿಕೆಲಂಬರನ್ಯರಿ ॥ ರ್ಪಿರವನವಂಬಿರ್ದುತಮ್ಮಬಗೆಗಾಣಿಸದಂತವರಂತೆರಂಜಿಪ | ರ್ಪೆರರವಶಭಾವದಿಂಪೆರರಿಳಾಸ್ಥಿತಿಯುಂಮರೆದೊಲ್ಲರನ್ಯಮಂ ॥ ... ॥೯೪॥

ವ॥ ಅಂತೆಸೆದಿರ್ದಪುವವರ್ದೃಷ್ಟಪ್ರತ್ಯಯಮಂತೋರದಿರ್ಪುದರಿಂಜಡಬುದ್ಧಿಜನನಿವಹಂನಂಬುಗೆಸಂಭವಿಸದಜ್ಞತೆಗಡರ್ಪಾಗಿರ್ಪುದಂತರಿಂಭಕ್ತಿಭಾವಮುಂ ಗುರುಹರಚರಪ್ರಭಾವಮುಂ ಸುಜ್ಞಾನಾನುಭವಮುಮಂತವಿರಳಮುಮಸ್ಪಷ್ಟಮುಮಾಗಿರ್ದಪುದಿವಂಪ್ರತಿಷ್ಠೆಗೆಯ್ದಾಗುಪ್ತಭಕ್ತರಂಕೃತಾರ್ಥರಂಮಾಡಿಕರುಣಿಸಲ್ಕೆ ॥ * *

ಕಂ॥ ಪುರಹರಕೃಪೆಯಿಂನೀವವ | ತರಿಸಿಧರಾಂಗನೆಯನಂಘ್ರಿಸಂಸ್ಪರ್ಶನದಿಂ ॥ ಪರಿಶುದ್ಧಿಗೊಳಿಸಿಪಸರಿಪು | ದುರುಭಕ್ತಿಜ್ಞಾನಮತಮಹತ್ತ್ವಸ್ಥಿತಿಯಂ ॥ ... ॥೯೫॥

---

ಪ್ತಮಾಗಿ- ಅತ್ಯಂತ ಗೂಢವಾಗಿ, ಇರ್ದಪುದು- ಇರುವದು; ಉರ್ವರೆಯೊಳ್- ಭೂಮಿಯಲ್ಲಿ, ತೋರ್ಪ- ಪ್ರಕಾಶಿಸುವ, ಶಿವೈಕ್ಯರ್- ಶಿವನೊಡನೆ ಏಕತ್ವವುಳ್ಳವರು, ಅಜಸ್ರಂ- ಯಾವಾಗಲೂ, ಅಪ್ರಕಟತೆಯಿಂ- ಗುಪ್ತವಾಗಿ, ಪರಿರಂಜಿಸಿದಪರ್- ಪ್ರಕಾಶಿಸುವರು. ... ... ... ॥೯೩॥

ಅಲ್ಲಿ- ಆಮರ್ತ್ಯಲೋಕದಲ್ಲಿ, ಪರಶಿವನಿಷ್ಠರ್- ಶಿವನಲ್ಲಿ ಭಕ್ತಿಯುಳ್ಳ, ಉದಾತ್ತವೃತ್ತರ್- ಉತ್ಕೃಷ್ಟವಾದ ನಡತೆಯುಳ್ಳ, ಅರೆಬರ್- ಕೆಲವರು, ಪೆರರೊಳ್- ಮತ್ತೊಬ್ಬರಸಂಗಡ, ನುಡಿಯಾಡದೆ- ಮಾತನಾಡದೆ, ಗೂಢಭಾವದಿಂದೆ- ಗುಪ್ತತ್ವದಿಂದ, ಇರುತಿರ್ದಪರ್- ಇರುವರು; ಕೆಲಂಬರ್- ಕೆಲವರು, ಅನ್ಯರ- ಮತ್ತೊಬ್ಬರ, ಇರ್ಪ, ಇರವಂ- ರೀತಿಯನ್ನು, ಅವಂಬಿರ್ದು- ಹೊಂದಿ, ತಮ್ಮ, ಬಗೆಗಾಣಿಸದಂತೆ- ರೀತಿಯು ಕಾಣಿಸದಹಾಗೆ, ಅವರಂತೆ- ಇತರರಂತೆಯೇ, ರಂಜಿಪರ್- ಪ್ರಕಾಶಿಸುವರು; ಪೆರರ್- ಮತ್ತೆ ಕೆಲವರು, ಪರವಶಭಾವದಿಂ- ಆನಂದಪರವಶತ್ವದಿಂದ, ಇಳಾಸ್ಥಿತಿಯಂ- ಭೂಸ್ಥಿತಿಯನ್ನು, ಮರೆದು- ಮರೆತು, ಅನ್ಯಮಂ- ಮತ್ತೊಂದನ್ನು, ಒಲ್ಲರ್- ಅಪೇಕ್ಷಿಸರು. ... ... ... ॥೯೪॥

ಅವರ್, ಅಂತು- ಆಪ್ರಕಾರವಾಗಿ, ಎಸೆದು- ಪ್ರಕಾಶಿಸಿ, ಇರ್ದುದರಿಂ, ಇರ್ದಾಗ್ಯೂ, ದೃಷ್ಟಪ್ರತ್ಯಯಮಂ-ಪ್ರತ್ಯಕ್ಷಪ್ರಮಾಣವನ್ನು,ತೋರದಿರ್ಪುದರಿಂ-ಪ್ರಕಾಶಪಡಿಸದೇಇರುವದರಿಂದ, ಜಡಬುದ್ಧಿಜನನಿವಹಂ ಮೂಢಬುದ್ಧಿಯುಳ್ಳಜನಗಳಸಮೂಹವು, ನಂಬುಗೆ ಸಂಭವಿಸದ- ನಂಬುಗೆಹುಟ್ಟದಿರುವ, ಅಜ್ಞತೆಗೆ- ಮೂಢತ್ವಕ್ಕೆ, ಅಡರ್ಪಾಗಿ- ಆಶ್ರಯವಾಗಿ, ಇರ್ಪುದು- ಇರುವದು, ಅಂತರಿಂ- ಆದಕಾರಣದಿಂದ, ಭಕ್ತಿಭಾವಮುಂ, ಭಕ್ತಿಯೂ, ಗುರುಹರಚರಪ್ರಭಾವಮುಂ- ಗುರುಲಿಂಗಜಂಗಮಮಹತ್ತ್ವವೂ, ಸುಜ್ಞಾನಾನುಭವಮುಂ, ಪರಬ್ರಹ್ಮಜ್ಞಾನದಿಂದುಂಟಾದಅನುಭವವೂ, ಅಂತು- ಆಪ್ರಕಾರವಾಗಿ, ಅವಿರಳಮುಂ-ಅಲ್ಪವಾದದ್ದು, ಅಸ್ಪಷ್ಟಮುಂ- ಗುಪ್ತವಾದದ್ದು, ಆಗಿ, ಇರ್ದಪುದು- ಇರುವದು; ಇವಂ- ಇವುಗಳನ್ನು, ಪ್ರತಿಷ್ಠೆಗೆಯ್ದು- ಪ್ರಚುರಮಾಡಿ, ಆಗುಪ್ತಭಕ್ತರಂ- ಆಗೂಢರಾಗಿರುವಭಕ್ತರನ್ನು, ಕೃತಾರ್ಥರಂ- ಧನ್ಯರನ್ನಾಗಿ, ಮಾಡಿ, ಕರುಣಿಸಲ್ಕೆ- ದಯಪಾಲಿಸುವದಕ್ಕೋಸ್ಕರ. * * * *

ಪುರಹರ- ಪರಮೇಶ್ವರನೇ, ಕೃಪೆಯಿಂ- ದಯೆಯಿಂದ, ನೀವ್, ಅವತರಿಸಿ- ಅವತಾರಮಾಡಿ, ಧರಾಂಗನೆಯಂ- ಭೂಕಾಂತೆಯನ್ನು, ಅಂಘ್ರಿಸಂಸ್ಪರ್ಶನದಿಂ- ಪಾದದಸೋಂಕಿನಿಂದ- ಪರಿಶುದ್ಧಿಗೊಳಿಸಿ-ಪವಿತ್ರಮಾಡಿ, ಉರು......ಸ್ಥಿತಿಯಂ- ಉರು- ಅಧಿಕವಾದ, ಭಕ್ತಿ- ಶಿವಭಕ್ತಿಯೇನು-ಜ್ಞಾನ-ಸುಜ್ಞಾನವೇನು, ಮತಮಹತ್ತ್ವ- ಶಿವಮತಮಹಿಮೆಯೇನು ಇವುಗಳ, ಸ್ಥಿತಿಯಂ, ಪಸರಿಪುದು- ವಿಸ್ತರಿಸುವದು. ॥೯೫॥

ಕಂ॥ ಎಂದಾ ಮುನಿ ಬಿನ್ನವಿಸಿದೊಡ್ । ಇಂದುಧರಂ ಪರಮಹರ್ಷಮಂ ತಳೆದೆನಗಂ ॥ ನಂದೀ
ಶಂಗಂ ಭೇದಮ । ದೊಂದದು ಮದ್ರೂಪನೀತನಂ ಕೇಳ್ಪಿದಪೆಂ ॥ ... ... ... ॥೯೬॥

ಕಂ॥ ಈ ನಂದಿನಾಥನಿಂ ಸದೆ । ದಾನಂದಂಬಡೆವುದಲ್ತೆ ಜಗಮಪರಶಿವಂ ॥ ತಾನೆನಿಪೀ
ತಂ ಭಕ್ತಿಜ್ಞಾನಶಿವಾಚಾರಮಂ ಪ್ರತಿಷ್ಠಪನಿಳೆಯೊಳ್ ॥ ... ... ॥೯೭॥

ಕಂ॥ ಎಂದೊಡೆ ಶಿವನಾಗಳ್ಗಿರಿ । ನಂದನೆ ಮನ್ನಾಥ ಭಕ್ತದೇಹಿಕನಾನೆಂ॥ ಬಂದವ್ರೊನೋ
ಳ್ಪೊಡಭೇದಂ । ಸಂದುದೊ ನಂದಿಯೊಳೆನನ್ನಿವೇಳೆನಗೆಂದಳ್॥ ... ... ... ॥೯೮॥

ವ ॥ ಎಂದು ದೇವಿಯಕ್ಕರಿಂ ಬೆಸಗೊಳಲೊಡಂ ॥

ಚಂ ॥ ಬಗೆವ್ರೊಡೆ ಭಕ್ತದೇಹಿಕನೆನಿಪ್ಪೆನೆನಿಪ್ಪೆನಿದಕ್ಕೆ ದೇವಿ ಸಂ । ದೆಗಮೆ ಸಮಸ್ತ
ದೇವತತಿ ಬಲ್ಲುದಿದಂ ನಿಜಭಕ್ತರಾತ್ಮನಾ ॥ ನೆಗಡಬಳಿಕ್ಕಮಿಂತಿದರೊಳೊಂದು ವಿಶೇಷಮನೊ
ಲ್ದು ಪೇಳ್ದಪೆಂ । ನಗಸುತೆ ಕೇಳ್ವುದೆಂತೆ ಶಿಲಾದನೆನಿಪ್ಪ ಮುನೀಂದ್ರನಾದಿಯೊಳ್ ॥ ೯೯ ॥

---

ಎಂದು, ಆಮುನಿ- ಆನಾರದರ್ಷಿಯು, ಬಿನ್ನವಿಸಿದೊಡೆ- ವಿಜ್ಞಾಪಿಸಲಾಗಿ, ಇಂದುಧರಂ- ಪರಮೇ
ಶ್ವರನು, ಪರಮಹರ್ಷಮಂ- ಅತ್ಯಂತಸಂತೋಷವನ್ನು, ತಳೆದು- ಧರಿಸಿ, ಎನಗಂ- ನನಗೂ, ನಂದೀಶಂ
ಗಂ- ನಂದೀಶ್ವರನಿಗೂ, ಅದು ಭೇದಂ- ಭೇದವು, ಒಂದದು- ಹೊಂದುವದಿಲ್ಲ, ಮದ್ರೂಪನ- ನನ್ನಸ್ವರೂಪ
ನಾದ, ಈತನಂ- ಇವನನ್ನು, ಕೇಳ್ಪಿದಪೆಂ- ಕೇಳಿಸುವೆನು. ... ... ... ॥೯೬॥

ಈನಂದಿನಾಥನಿಂದೆ- ಈನಂದೀಶ್ವರನಿಂದ, ಜಗಂ- ಲೋಕವು, ಸದಾ- ನಿರಂತರದಲ್ಲೂ, ಆನಂದಂಬಡೆವು
ದಲ್ತೆ- ಸಂತೋಷವನ್ನುಹೊಂದುವದಲ್ಲವೇ; ತಾಂ, ಅಪರಶಿವಂ- ದ್ವಿತೀಯಶಂಭುವು, ಎನಿಪ- ಎನಿಸು
ವ, ಈತಂ- ಇವನು, ಇಳೆಯೊಳ್- ಭೂಮಿಯಲ್ಲಿ, ಭಕ್ತಿಜ್ಞಾನಶಿವಾಚಾರಮಂ- ಭಕ್ತಿ- ಶಿವಭಕ್ತಿಯು,
ಜ್ಞಾನ- ಬ್ರಹ್ಮಜ್ಞಾನವು, ಶಿವಾಚಾರಮಂ- ಶಿವಾಚಾರವು ಇವುಗಳಾದವುಗಳನ್ನು, ಪ್ರತಿಷ್ಠಪಂ- ಅಭಿವೃದ್ಧಿ
ಪಡಿಸುವನು. ... ... ... ... ... ... ... ॥೯೭॥

ಶಿವಂ- ಪರಮೇಶ್ವರನು, ಎಂದೊಡೆ- ಹೀಗೆನ್ನಲು, ಆಗಳ್- ಆಕಾಲದಲ್ಲಿ- ಗಿರಿನಂದನೆ- ಪಾರ್ವತಿ
ಯು, ಮನ್ನಾಥ- ನನ್ನಪತಿಯಾದಪರಮೇಶ್ವರನೇ "ಆಂ- ನಾನು, ಭಕ್ತದೇಹಿಕಂ- ಭಕ್ತನೇದೇಹವಾಗುಳ್ಳವ
ನು" ಎಂಬ- ಹೀಗೆಂಬ, ಅಂದವೊ- ರೀತಿಯೋ, ನೋಳ್ಪೊಡೆ- ವಿಚಾರಮಾಡಿದರೆ, ನಂದಿಯೊಳ್- ನಂದೀಶ್ವ
ರನಲ್ಲಿ, ಅಭೇದಂ- ಭೇದರಾಹಿತ್ಯವು, ಸಂದುದೊ- ಹೊಂದಿರುವದೋ, ಎನಗೆ- ನನಗೆ, ನನ್ನಿವೇಳ್- ನಿಶ್ಚ
ಯವನ್ನು ಹೇಳು, ಎಂದಳ್. ... ... ... ... ॥೯೮॥

ಎಂದು, ದೇವಿ- ಪಾರ್ವತಿಯು, ಅಕ್ಕರಿಂ- ಪ್ರೀತಿಯಿಂದ, ಬೆಸಗೊಳಲ್- ಕೇಳಿಕೊಳ್ಳಲು, ಒಡಂ-
ಆಕ್ಷಣವೇ. * * * * * * * * * * * * * * * * * *

ಬಗೆವ್ರೊಡೆ- ವಿಚಾರಮಾಡಿದರೆ, (ಆಂ) ಭಕ್ತದೇಹಿಕಂ- ಭಕ್ತನೇದೇಹವಾಗುಳ್ಳವನು; ಎನಿಪ್ಪೆಂ- ಎನಿಸಿ
ಕೊಳ್ಳುವೆನು, ಎನಿಪ್ಪೆನ್, ಇದಕ್ಕೆ, ದೇವಿ- ಪಾರ್ವತಿಯೇ, ಸಂದೆಗಮೆ- ಸಂದೇಹವೆ; ಇದಂ- ಈವಿಷಯವ
ನ್ನು, ಸಮಸ್ತದೇವತತಿ- ಎಲ್ಲಾ ದೇವತಾಸಮೂಹವು, ಬಲ್ಲುದು- ತಿಳಿದಿರುವದು, ಆನೆ- ನಾನೇ, ನಿಜಭಕ್ತ
ರ- ತನ್ನಭಕ್ತರ, ಆತ್ಮಂಗಡ- ಆತ್ಮನಲ್ಲವೆ; ಬಳಿಕ್ಕಂ- ಅನಂತರದಲ್ಲಿ, ಇಂತು- ಈಪ್ರಕಾರವಾಗಿ, ಇದರೊ
ಳ್- ಇದರಲ್ಲಿ, ಒಂದುವಿಶೇಷಮಂ- ಒಂದುವಿಶೇಷವನ್ನು, ಒಲ್ದು- ಪ್ರೀತಿಸಿ, ಪೇಳ್ದಪೆಂ- ಹೇಳುತ್ತೇನೆ; ನ
ಗಸುತೆ- ಪಾರ್ವತಿಯೇ, ಕೇಳ್ವುದು- ಕೇಳುವದು; ಎಂತೆನೆ- ಹ್ಯಾಗೆಂದರೆ, ಶಿಲಾದನೆನಿಪ್ಪ- ಶಿಲಾದನಾ

ಮ॥ ಪರಮಶ್ರೀಗಿರಿಯಲ್ಲಿದಾನವವರಾಶಾಭಾಗದೊಳ್ನಿಂದುಮ । ಚ್ಚರಣಧ್ಯಾನದೆಕಂ
ದಮೂಲಫಲಪರ್ಣಾಂಭೋಮರುತ್ಸೋಮಭಾ ॥ ಸ್ಕರತೇಜಂಗಳನೊಲ್ದುಸೇವಿಸಿತಪಸ್ತ
ಪ್ತಾಂಗನಾಗಿರ್ದ್ದುವ । ತ್ಸರಕೋಟಿತ್ರಯಮಂಕರಂಕಳಪಿದಂಯೋಗಪ್ರಭಾವಾನ್ವಿತಂ ॥
ಕಂ ॥ ಮುನಿಪತಿಮತ್ತಂಸರ್ಷಪ । ದನಿತೆನಿಸುವಶಿಲೆಯನೊಲ್ದುಸೇವಿಸಿತಪಮಂ ॥
ಘನಮೆನೆನೆಗಳುತೆಕಳೆದಂ । ಬಿನದದೆಶತಕೋಟಿವತ್ಸರಂಗಳನಾಗಳ್ ॥ ... ॥೧೦೧॥
ಕಂ॥ ಆಮುನಿಯುದ್ದಾಮತಪೋ । ದಾಮಂಪಿಡಿದೆಳೆಯೆಬಂದುಕರುಣಿಸಿನಿಜಮಂ ॥
ಪ್ರೇಮದೊಳೆತೋರಿನಿನ್ನಯ । ಕಾಮಿತವರವಾವುದೀಗಳದನೊರೆಯೆಂದಂ ... ॥೧೦೨॥

ವ॥ ಎನಲೊಡನಾಶಿಲಾದನಾದರದಿಂ ಪಾದಕಮಲದೊಳ್ಸೈಗೆಡದು ಭಕ್ತಿಪರವಶಂ ಪರಮಹರ್ಷದಿಂ ಸನ್ನುತಿಗೆಯ್ದೆಳ್ದುನಿಟಲತಟಘಟಿತಕರಪುಟನಾಗಿ ದೇವದೇವ ನಿರತಿಶಯಭವದ್ಭಕ್ತಿಸುಧಾರಸಪಾತ್ರನಂ ಶಿವಸಮಯವನಜವನಮಿತ್ರನಂ ನಿನ್ನನ್ನನಪ್ಪಪು

---

ಮಥೇಯಮುಳ್ಳ, ಮುನೀಂದ್ರಂ- ಋಷಿಶ್ರೇಷ್ಠನು, ಆದಿಯೊಳ್- ಪೂರ್ವದಲ್ಲಿ. ... ... ॥೯೯

ಪರಮಶ್ರೀಗಿರಿಯಲ್ಲಿ- ಉತ್ಕೃಷ್ಟವಾದ ಶ್ರೀಶೈಲದಲ್ಲಿ, ದಾನವಪರಾಶಾಭಾಗದೊಳ್- ನೈಋತ್ಯದಿಕ್ಕಿನಲ್ಲಿ, ಮಚ್ಚರಣಧ್ಯಾನದೆ- ನನ್ನಪಾದಧ್ಯಾನದಿಂದ, ನಿಂದು- ನಿಂತುಕೊಂಡು, ಕಂದ........ ತೇಜಂಗಳಂ- ಕಂದ- ಗಡ್ಡೆ, ಮೂಲ- ಗೆಣಸು, ಫಲ- ಹಣ್ಣು, ಪರ್ಣ- ಎಲೆ, ಅಂಭಃ- ನೀರು, ಮರುತ್- ಗಾಳಿ, ಸೋಮಭಾಸ್ಕರತೇಜಂಗಳಂ- ಬೆಳದಿಂಗಳು ಬಿಸಲು ಇವುಗಳನ್ನು, ಸೇವಿಸಿ- ಆಹಾರಮಾಡಿ; ತಪಸ್ತಪ್ತಾಂಗಂ- ತಪಸ್ಸಿನಿಂದ ಸಂತಾಪಪಡಿಸಲ್ಪಟ್ಟ ಶರೀರವುಳ್ಳವನು; ಯೋಗಪ್ರಭಾವಾನ್ವಿತಂ- ಯೋಗಮಹತ್ವದಿಂದ ಕೂಡಿದವನು, ಆಗಿರ್ದ್ದು- ಆಗಿದ್ದು, ವತ್ಸರಕೋಟಿತ್ರಯಮಂ- ಮೂರುಕೋಟಿವರ್ಷಗಳನ್ನು, ಕರಂ- ಅತ್ಯಂತವಾಗಿ, ಕಳಪಿದಂ- ಕಳೆದನು. ... ... ... ... ॥೧೦೦॥

ಮತ್ತಂ- ಅನಂತರ, ಮುನಿಪತಿ- ಶಿಲಾದರ್ಷಿಯು, ಸರ್ಷಪದನಿತೆನಿಸುವ- ಸಾಸಿವೆಯಷ್ಟಿನ, ಶಿಲೆಯಂ- ಕಲ್ಲನ್ನು, ಒಲ್ದು- ಪ್ರೀತಿಯಿಂದ, ಸೇವಿಸಿ- ತಿಂದು, ತಪಮಂ- ತಪಸ್ಸನ್ನು, ಘನಮೆನೆ- ಅಧಿಕವಾಗುವಹಾಗೆ, ನೆಗಳುತೆ- ಮಾಡುತ್ತ; ಬಿನದದೆ- ವಿನೋದದಿಂದ, ಆಗಳ್- ಆಕಾಲದಲ್ಲಿ, ಶತಕೋಟಿವತ್ಸರಂಗಳಂ- ನೂರುಕೋಟಿವರ್ಷಗಳನ್ನು, ಕಳೆದಂ- ಕಳೆದನು ... ... ... ॥೧೦೧॥

ಆಮುನಿಯ- ಆಶಿಲಾದಮುನಿಯು; ಉದ್ದಾಮತಪೋದಾಮಂ- ಅಧಿಕವಾದ ತಪಸ್ಸೆಂಬಹಗ್ಗವು, (ಎನ್ನಂ) ಪಿಡಿದು, ಎಳೆಯೆ- ಎಳೆಯಲು, (ಆಂ) ಬಂದು, ಕರುಣಿಸಿ- ದಯೆಯಂಮಾಡಿ, ನಿಜಮಂ- ತನ್ನ ಯಥಾರ್ಥಸ್ವರೂಪವನ್ನು, ಪ್ರೇಮದೊಳೆ- ಪ್ರೀತಿಯಿಂದ, ತೋರಿ- ತೋರಿಸಿ, ನಿನ್ನಯ- ನಿನ್ನ, ಕಾಮಿತವರಂ- ಕಾಂಕ್ಷಿತವಾದವರವು, ಆವುದು- ಯಾವದು, ಈಗಳ್- ಈಗ, ಅದಂ, ಒರೆ- ಹೇಳು, ಎಂದಂ- ಎಂದೆನು.

ಎನಲ್- ಹೀಗೆನ್ನಲು, ಒಡನೆ- ಕೂಡಲೇ; ಆಶಿಲಾದಂ, ಆದರದಿಂ- ಪ್ರೀತಿಯಿಂದ, ಪಾದಕಮಲದೊಳ್- ಚರಣಾಬ್ಜದಲ್ಲಿ, ಸೈಗೆಡದು- ನಮಸ್ಕರಿಸಿ, ಭಕ್ತಿಪರವಶಂ- ಭಕ್ತಿಯಿಂದ ಅಸ್ವಾಧೀನನಾಗಿ, ಪರಮಹರ್ಷದಿಂ- ಅತ್ಯಂತಸಂತೋಷದಿಂದ, ಸನ್ನುತಿಗೆಯ್ದು- ಸ್ತೋತ್ರವನ್ನುಮಾಡಿ, ಎಳ್ದು- ಎದ್ದು, ನಿಟಲ... ಪುಟಂ- ನಿಟಿಲತಟ- ಹಣೆಯಪ್ರದೇಶದಲ್ಲಿ, ಘಟಿತ- ಸೇರಿಸಲ್ಪಟ್ಟ, ಕರಪುಟಂ- ಹಸ್ತತಲವುಳ್ಳವನು, ಆಗಿ; ದೇವದೇವ- ದೇವರಿಗೆ ದೇವನಾದ ಪರಮೇಶ್ವರನೇ, ನಿರತಿ........ ಪಾತ್ರನಂ- ನಿರತಿಶಯ- ಅತ್ಯಧಿಕವಾದ, ಭವದ್ಭಕ್ತಿ- ನಿನ್ನ ಭಕ್ತಿಯೆಂಬ, ಸುಧಾರಸ- ಅಮೃತಕ್ಕೆ, ಪಾತ್ರನಂ- ಪಾತ್ರನಾದ, (ಅಂದರೆ ಶಿವಭ

ತ್ರನಂ ಬಗೆದು ಬಯಸಿ ತಪಂಗೆಯ್ದೆ ನೀಗಳಭವ ಭವಾದೃಶತನಯನಂ ಕೊರ್ತು ಕರು
ಣಿಪುದೆನಗೆಂದು ಬೇಡಿ ಮತ್ತಮಿಂತೆಂದಂ ‖ * * * * * * *

ಕಂ‖ ಅನುಪಮಗುಣಗಣಸಂಯುತ | ನೆನಿಸಿದೊಡಂ ನಿಮ್ಮ ಭಕ್ತಿಯೊಂದಿಲ್ಲದೊಡಾ ‖
ತನಯನೆರಿಪು ವೆನಗವನಂ | ಕನಲ್ಕೆಯಿಂ ತರಿದು ಬಿಸುಡುವೆಂ ಪುರಮಥನಾ ‖ ‖ ೧೦೩ ‖

ಕಂ ‖ ಅದರಿಂ ತ್ವದೀಯಮಂಜುಳ | ಪದಪದ್ಮಪರಾಗಭೃಂಗನೆನಿಸುವ ಸುತನಂ ‖ ಪ
ಡೆದೀವುದಲ್ಲದೊಡೆಮಿ | ಕ್ಕುದವೊಲ್ಲೆಂ ವರವನದ್ರಿಜಾತಾರಮಣಾ ‖ ... ‖ ೧೦೪ ‖

ವ| ಎಂದ ಶಿಲಾದನ ಭಕ್ತಿಭಾವಕ್ಕೆ ಮಚ್ಚಿ ಮನಂದಂದು. * * * *

ಚಂ‖ ಪರಿಕಿಪೊಡಾದಿಕಾರಣವನಾದಿ ಸದಾದಿಯೆನಿಪ್ಪ ಮತ್ಕಳಾ | ಭರಿತನನೆನ್ನ ಚಿ
ತ್ಪರಮಧರ್ಮನಿಜಾಂಗನನಾ ಚತುರ್ಯುಗ ‖ ಸ್ಫುರಿತ ಸುಧರ್ಮಪಾದನನಪಾರಕೃಪಾಕರನಂ ದ್ವಿತೀ
ಯಶಂಕರನನನಂತಸದ್ಗುಣನನೆನ್ನಯ ವಾಹನರೂಪನಾದನಂ ‖ ... ... ‖೧೦೫‖

---

ಕ್ತಿಗಾಶ್ರಯನಾದ,) ಶಿವ........ಮಿತ್ರನ— ಶಿವಸಮಯ- ಶಿವಮತವೆಂಬ, ವನಜವನ- ಕಮಲವನಕ್ಕೆ, ಮಿತ್ರನಂ- ಸೂರ್ಯನಾದ, ನಿನ್ನನ್ನಸಪ್ಪ- ನಿನ್ನಹಾಗಿರುವ, ಪುತ್ರನಂ- ಮಗನನ್ನು, ಬಗೆದು- ಯೋಚಿಸಿ, ಬಯಸಿ- ಇಚ್ಛೈಸಿ; ಈಗಳ್- ಈಗ, ತಪಂಗೆಯ್ದೆಂ- ತಪಸ್ಸನ್ನು ಮಾಡಿದೆನು; ಅಭವ- ಭವರಹಿತನಾದ ಪರಶಿವನೇ, ಕೊರ್ತು- ಪ್ರೀತಿಸಿ, ಭವಾದೃಶತನಯನಂ- ನಿನ್ನಂಥಾ ಪುತ್ರನನ್ನು, ಎನಗೆ, ಕರುಣಿಪುದು- ದಯಪಾಲಿಸುವದು; ಎಂದು, ಬೇಡಿ- ಯಾಚಿಸಿ, ಮತ್ತಂ- ಇನ್ನೂ, ಇಂತು- ವಕ್ಷ್ಯಮಾಣಪ್ರಕಾರವಾಗಿ, ಎಂದಂ- ಹೇಳಿದನು. * * * * * * * * * *

ಪುರಮಥನ- ಪರಮೇಶ್ವರನೇ, ಅನುಪಮಗುಣಗಣಸಂಯುತಂ- ಅಸದೃಶವಾದ ಸದ್ಗುಣಗಳ ಸಮೂಹದಿಂದ ಕೂಡಿದವನು, ಎನಿಸಿದೊಡಂ- ಎನಿಸಿಕೊಂಡಿದ್ದಾಗ್ಯೂ, ನಿಮ್ಮಭಕ್ತಿ— ನಿಮ್ಮಲ್ಲಿಭಕ್ತಿಯು, ಒಂದು, ಇಲ್ಲದೊಡೆ- ಇಲ್ಲದಿದ್ದಗೆ; ಆತನಯನೆ- ಅಂಥಾಪುತ್ರನೆ, ಎನಗೆ, ರಿಪು- ಶತ್ರುವು; [ಅವನಂ- ಅಂಥಾಮಗನನ್ನು, ಕನಲ್ಕೆಯಿಂ- ಕೋಪದಿಂದ, ತರಿದು ಬಿಸುಡುವೆಂ- ಕತ್ತರಿಸಿಬಿಡುವೆನು. ... ... ‖೧೦೩‖

ಅದರಿಂ— ಆಕಾರಣದಿಂದ, ಅದ್ರಿಜಾತಾರಮಣಾ- ಪಾರ್ವತೀಪತಿಯಾದ ಶಿವನೇ, ತ್ವದೀಯ......ಭೃಂಗಂ- ತ್ವದೀಯ- ನಿನ್ನ ಸಂಬಂಧವಾದ, ಮಂಜುಳ- ಮನೋಹರವಾದ, ಪದ- ಪಾದವೆಂಬ, ಪದ್ಮ- ಕಮಲದ, ಪರಾಗ- ಧೂಳಿಗೆ, ಭೃಂಗಂ- ಭ್ರಮರನು, ಎನಿಸುವ- ಎಂದು ಹೇಳಿಸಿಕೊಳ್ಳುವ, ಸುತನಂ- ಮಗನನ್ನು, ಪಡೆದು- ಪ್ರೀತಿಸಿ, ಈವುದು- ಕೊಡುವದು; ಅಲ್ಲದೊಡೆ- ಹಾಗಲ್ಲದಿದ್ದರೆ; ಮಿಕ್ಕುದಂ ವರವಂ- ಉಳಿದ ವರವನ್ನು, ಒಲ್ಲೆಂ- ಇಚ್ಛೈಸುವದಿಲ್ಲವು. ... ... ..... ..... ... ‖೧೦೪‖

ಎಂದ, ಶಿಲಾದನ, ಭಕ್ತಿಭಾವಕ್ಕೆ, ಮಚ್ಚಿ, ಮನಂದಂದು- ಮನಸ್ಸಿಗೆ ತಂದುಕೊಂಡು, * * *

ಪರಿಕಿಪೊಡೆ- ವಿಚಾರಮಾಡಿದರೆ, ಆದಿಕಾರಣಂ- ಜಗತ್ತಿಗೆ ಮುಖ್ಯಕಾರಣನಾದ, ಸದಾದಿ- ಸತ್ತಾದಿಗಳಿಗೆ ಮೂಲನಾದ, ಮತ್ಕಳಾಭರಿತನಂ- ನನ್ನ ಕಳೆಯಿಂದ ತುಂಬಿರುವ; ಎನ್ನ; ಚಿತ್ಪರಮಧರ್ಮನಿಜಾಂಗನಂ— ಚಿತ್- ಜ್ಞಾನದ, ಪರಮಧರ್ಮ- ಉತ್ಕೃಷ್ಟವಾದ ಸ್ವಭಾವವೇ, ನಿಜ- ತನ್ನ, ಅಂಗನಂ- ಶರೀರವಾಗುಳ್ಳ; ಆ........ಪಾದನಂ- ಆ ಚತುರ್ಯುಗ- ಆ ನಾಲ್ಕು ಯುಗಗಳಲ್ಲಿ, ಸ್ಫುರಿತ- ಪ್ರಕಾಶಿಸುವ, ಸುಧರ್ಮ- ಅಹಿಂಸಾದಿಧರ್ಮಗಳೇ, ಪಾದನಂ- ಪಾದವಾಗುಳ್ಳ, ಅಪಾರಕೃಪಾಕರನಂ- ಅತ್ಯಂತದಯಾಸ್ಪದನಾದ; ದ್ವಿತೀಯಶಂಕರನಂ- ದ್ವಿತೀಯಶಂಭುವಾದ; ಅನಂತಸದ್ಗುಣನಂ- ಅಪರಿಮಿತವಾದ ಸದ್ಗುಣಗಳುಳ್ಳ; ಎನ್ನಯ- ನನ್ನ; ವಾಹನರೂಪನಾದನಂ- ವಾಹನಸ್ವರೂಪನಾದ; ... ... ... ‖೧೦೫‖

ಶ್ರೀ

ಸೋಮಶೇಖರಾಯ ಪರಬ್ರಹ್ಮಣೇನಮಃ

# ದ್ವಿತೀಯಾಶ್ವಾಸಂ.

ಶ್ರೀವಾಙ್ನುತಗಿರಿತನಯಾ| ಲಾವಣ್ಯರಸಾಂಬುರಾಶಿಹಂಸಂಜಗದು || ದ್ಭಾವನಕರವೃಷಭಧ್ವಜ | ನಾವಗವೆ ಮಗೀಗೆಸೌಖ್ಯಮಂಶಿವಲಿಂಗಂ || ... ... ||೧||

ಮ|| ವಿಳಸನ್ಮಾತೆಮಹಾಷಡಕ್ಷರಿಮಹೇಶಂತಂಡೆಸದ್ಭಕ್ತಿಬೆ | ನ್ನೊಳೆಬಂದಳ್ನವನೀತವಿಶಚರಣಧ್ಯಾನಂಶಿವಜ್ಞಾನಮು || ಜ್ಜ್ವಳಪೀಯೂಷರಸಂತೊದಳ್ಶ್ರುತಿಶಿರೋವಾಕ್ಯಂಶಿವಾಚಾರಮಿಂ | ಪೆಳಸಿರ್ದರ್ಭಕಲೀಲೆಯಾಗೆಬಳೆದಂನಂದೀಶನಾನಂದದಿಂ || ... ||೨||

ಕಂ|| ಸುತನಶಿವಭಕ್ತಿಭಾವದಿ | ನತುಳಿತಮುದಯುಕ್ತನಾದನೈದೆಶಿಲಾದಂ || ಸತತಗಣಾನುದಿತನಂ | ದಿತಪೋಭರಮಾನಲೆಂದುಬಗೆದಂದಿರ್ದಂ || ... ... ||೩||

---

ಶ್ರೀ......... ಹಂಸಂ- ಶ್ರೀ- ಲಕ್ಷ್ಮಿಯಿಂದಲೂ, ವಾಕ್- ಸರಸ್ವತಿಯಿಂದಲೂ, ನುತ- ಕೊಂಡಾಡಲ್ಪಟ್ಟ; ಗಿರಿತನಯ- ಪಾರ್ವತಿಯ, ಲಾವಣ್ಯರಸ- ಕಾಂತಿವಿಶೇಷವೆಂಬ, ಅಂಬುರಾಶಿ- ಸಮುದ್ರಕ್ಕೆ, ಹಂಸಂ- ಹಂಸಪಕ್ಷಿಯಾದ; ಜಗದುದ್ಭಾವನಕರ- ಲೋಕೋತ್ಪತ್ತಿಯನ್ನುಂಟುಮಾಡುವ; ವೃಷಭಧ್ವಜಂ- ವೃಷಭನೇಧ್ವಜದಲ್ಲುಳ್ಳ; ಶಿವಲಿಂಗಂ- ಪರಮೇಶ್ವರನು, ಅವಗಂ- ನಿರಂತರದಲ್ಲೂ, ಎಮಗೆ- ನಮಗೆ, ಸೌಖ್ಯಮಂ- ಸುಖವನ್ನು, ಈಗೆ- ಕೊಡುವಂತಾವನಾಗಲಿ. ... ... ... ... ||೧||

ಮಹಾಷಡಕ್ಷರಿ- ಅಧಿಕವಾದ ಷಡಕ್ಷರಿಮಂತ್ರವೇ, ವಿಳಸನ್ಮಾತೆ- ಪ್ರಕಾಶಮಾನಳಾದ ತಾಯಿಯು; ಮಹೇಶಂ- ಪರಮೇಶ್ವರನೇ, ತಂದೆ; ಸದ್ಭಕ್ತಿ- ಸಮೀಚೀನವಾದ ಭಕ್ತಿಯೇ, ಬೆನ್ನೊಳೆಬಂದಳ್- ಸಹೋದರಿಯು; ಈಶಚರಣಧ್ಯಾನಂ- ಶಿವಪಾದಧ್ಯಾನವೇ, ನವನೀತಂ- ಬೆಣ್ಣೆಯು; ಶಿವಜ್ಞಾನಂ- ಶಿವನಸಂಬಂಧವಾದಜ್ಞಾನವೇ, ಉಜ್ವಳಪೀಯೂಷರಸಂ— ಉಜ್ವಳ- ಪ್ರಕಾಶಮಾನವಾದ, ಪೀಯೂಷರಸಂ- ಅಮೃತರಸವು; ಶ್ರುತಿಶಿರೋವಾಕ್ಯಂ- ಉಪನಿಷದ್ವಾಕ್ಯವೇ, ತೊದಳ್- ತೊದಳುಮಾತು; ಶಿವಾಚಾರಂ- ಶಿವಾಚಾರವೇ, ಇಂಪೆಳಸಿರ್ದ- ಮನೋಹರವಾದ, ಅರ್ಭಕಲೀಲೆ- ಬಾಲಲೀಲೆಯು; ಆಗೆ; ನಂದೀಶಂ- ನಂದೀಶ್ವರನು, ಆನಂದದಿಂ- ಸಂತೋಷದಿಂದ, ಬಳೆದಂ- ವೃದ್ಧಿಯಾದನು. ... ... ... ||೨||

ಶಿಲಾದಂ, ಸುತನ, ಶಿವಭಕ್ತಿಭಾವದಿಂ, ಐದೆ- ಚೆನ್ನಾಗಿ, ಅತುಳಿತಮುದಯುಕ್ತಂ- ಅತ್ಯಂತಸಂತೋಷವಿಶಿಷ್ಟನು, ಆದಂ; ಅಂದು- ಆಕಾಲದಲ್ಲಿ, ಸತತ......... ನಂದಿ- ಸತತ- ನಿರಂತರದಲ್ಲೂ, ಗಣ- ಪ್ರಮಥರಿಂದ, ಆನಂದಿತ- ಸಂತೋಷಪಡಿಸಲ್ಪಟ್ಟ, ನಂದಿ- ನಂದೀಶ್ವರನು, ತಪೋಭರಮಂ- ಅಧಿಕವಾದ ತಪಸ್ಸನ್ನು, ಆನಲೆಂದು- ಪೊಂದಬೇಕೆಂಬದಾಗಿ, ಬಗೆದಂ- ಯೋಚಿಸಿ, ಇರ್ದಂ- ಇದ್ದನು. ... ||೩||

ಕಂ॥ ನಂದೀಶಂ ಸನ್ಮುದದೊಡ | ನಂದೀಶನನೆನ್ನನಪ್ಪಿ ಬಗೆಯೊಳ್ತಪದೊ ॥ ಳ್ನಿಂದಂತಪಸ್ವಿ ಪರನಿವ | ನಿಂದಂ ಪೆರನಾವನೆಂಬಿನಂ ಭುವನಜನಂ ॥ ... ... ॥೪॥

ಮ॥ ಬಳೆದಾಲಂ ಮಳೆಗಾಲದೊಳ್ಪೊಳೆಯುತೀರಂ ತೀರದಾಮಾಗೆಯೊ | ಳ್ಬಳವದ್ಗ್ರೀಷ್ಮ ಮಹೋಷ್ಮಕಾಲದೆ ಮಿಳತ್ಪಂಚಾಗ್ನಿಮಧ್ಯಂ ಸಮು ॥ ಜ್ಜ್ವಳವಾಸಂ ತನಗಾಗೆ ನಿಂದು ಮುನಿವೃಂದಂ ಕೊಂಡಾಡೆ ನಿ | ಶ್ಚಳಚಿತ್ತಂ ಘನಸತ್ವನುಗ್ರತಪಮಂ ನಂದೀಶ್ವರಂ ಮಾಡಿದಂ ॥೫॥

ಮ॥ ಧರೆಯುಲ್ಲಾಡೆ ಕುಲಾಚಲಂ ಕುಸಿಯೆ ಕೂರ್ಮಂ ಕುಗ್ಗೆ ನಾಗೇಂದ್ರಕಂ | ಧರಮೊಪ್ಪಂಗೆಡೆ ದಿಗ್ವರರ್ಬೆದರೆ ಚಂದ್ರಾದಿತ್ಯರಾತ್ಮಾಂಶುಗುಂ ॥ ದಿರೆ ಧಾತ್ರಂ ಬಗೆಗೆಟ್ಟು ಬಾಯ್ಬಿಡೆ ಮುಕುಂದಂ ಕುಂದೆ ಕಂಗೆಟ್ಟು ನಿ | ರ್ಜರರಳ್ಕುತ್ತಿರೆ ತತ್ತಪೋದ್ಯುತಿಯದೇಂ ಪರ್ಬಿತ್ತೊ ಮೂಲೋಕಮಂ ॥ ... ... ... ... ... ... ॥೬॥

ವ॥ ಆಗಳಾನಿರವಧಿಕತಪಃಪ್ರಭಾವಮಂ ಕಂಡು ಮುಕುಂದಶತಾನಂದಸಂಕ್ರಂದನಾದಿಗಳ್

---

ನಂದೀಶಂ, ಅಂದು, ಸನ್ಮುದದೊಡಂ- ಸಮೀಚೀನವಾದ ಪ್ರೀತಿಯಿಂದ, ಈಶನಂ- ಸ್ವಾಮಿಯಾದ, ಎನ್ನಂ- ನನ್ನನ್ನು, ಬಗೆಯೊಳ್- ಮನಸ್ಸಿನಲ್ಲಿ, ಅಪ್ಪಿ- ಆಲಿಂಗಿಸಿ, ಭುವನಜನಂ- ಭೂಜನಗಳು, ಇವನಿಂದಂ- ಇವನಿಗಿಂತಲೂ, ಪರಂ- ಉತ್ಕೃಷ್ಟನಾದ, ತಪಸ್ವಿ- ಋಷಿಯು, ಪೆರಂ- ಮತ್ತೊಬ್ಬನು, ಆವಂ? ಎಂಬಿನಂ- ಎನ್ನುವಹಾಗೆ, ತಪದೊಳ್- ತಪಸ್ಸಿನಲ್ಲಿ, ನಿಂದು. ... ... ... ... ॥೪॥

ಮಳೆಗಾಲದೊಳ್, ಬಳೆದ- ವೃದ್ಧಿಹೊಂದಿದ, ಆಲಂ- ಆಲದಮರವು; ತೀರದ- ಅಧಿಕವಾದ, ಆಮಾಗೆಯೊಳ್- ಮಾಗೆಕಾಲದಲ್ಲಿ, ಪೊಳೆಯುತೀರಂ- ಹೊಳೆಯದಡವು; ಬಳ........ ಕಾಲದೆ- ಬಳವತ್- ಪ್ರಬಲವಾದ, ಗ್ರೀಷ್ಮ- ಗ್ರೀಷ್ಮರ್ತುವಿನ, ಮಹೋಷ್ಮಕಾಲದೆ- ಅತ್ಯುಷ್ಣಕಾಲದಲ್ಲಿ, ಪಂಚಾಗ್ನಿಮಧ್ಯಂ- ಪಂಚಾಗ್ನಿಗಳಮಧ್ಯವು, (ಅಂದರೆ ತನ್ನ ನಾಲ್ಕುದಿಕ್ಕುಗಳಲ್ಲೂ ಅಗ್ನಿಯನ್ನಿಟ್ಟು ಸೂರ್ಯನನುನಿರೀಕ್ಷಿಸುವದು.) ಸಮುಜ್ಜ್ವಳವಾಸಂ- ಪ್ರಕಾಶಮಾನವಾದವಾಸವು, ತನಗೆ- ನಂದೀಶ್ವರನಿಗೆ, ಆಗೆ; ನಿಂದು, ಮುನಿವೃಂದಂ- ಋಷಿಸಮೂಹವು, ಕಂಡು, ಕೊಂಡಾಡೆ- ಹೊಗಳಲು, ನಿಶ್ಚಳಚಿತ್ತಂ- ಚಲಿಸದಮನಸ್ಸುಳ್ಳ, ಘನಸತ್ವಂ- ಅಧಿಕವಾಗಿ ಸತ್ವಗುಣಭರಿತನಾದ, ನಂದೀಶ್ವರಂ- ಉಗ್ರತಪಮಂ- ಕ್ರೂರವಾದತಪಸ್ಸನ್ನು, ಮಾಡಿದಂ. ॥೫॥

ಧರೆ- ಭೂಮಿಯು, ಅಲ್ಲಾಡೆ; ಕುಲಾಚಲಂ- ಕುಲಪರ್ವತವು, ಕುಸಿಯೆ- ಕುಸಿಯಲು; ಕೂರ್ಮಂ- ಆದಿಕೂರ್ಮನು, ಕುಗ್ಗೆ- ಕುಗ್ಗಲು; ನಾಗೇಂದ್ರಕಂಧರಂ- ಆದಿಶೇಷನಕಂಠವು, ಒಪ್ಪಂಗೆಡೆ- (ತಗ್ಗಲು) ದಿಗ್ವರರ್- ಅಷ್ಟದಿಕ್ಪಾಲಕರು, ಬೆದರೆ- ಭಯಪಡಲು; ಚಂದ್ರಾದಿತ್ಯರ್- ಚಂದ್ರಸೂರ್ಯರು, ಆತ್ಮಾಂಶುಗುಂದಿರೆ- ಕಾಂತಿಹೀನರಾಗಿರಲು: ಧಾತ್ರಂ- ಬ್ರಹ್ಮನು, ಬಗೆಗೆಟ್ಟು ಬುದ್ಧಿತೋರದೆ, ಬಾಯ್ಬಿಡೆ- ಬಾಯ್ಬಿಡಲು; ಮುಕುಂದಂ- ವಿಷ್ಣುವು,ಕುಂದೆ- ಕೊರಗಲು;ನಿರ್ಜರರ್- ದೇವತೆಗಳು, ಕಂಗೆಟ್ಟು, ಅಳ್ಕುತ್ತಿರೆ- ಬೆದರುತ್ತಿರಲು; ತತ್ತಪೋದ್ಯುತಿ- ಆನಂದೀಶ್ವರನ ತಪೋಜ್ವಾಲೆಯು, ಮೂಲೋಕಮಂ- ಮೂರುಲೋಕವನ್ನು, ಅದೇಂಪರ್ಬಿತ್ತೊ- ಏನುವಿಸ್ತರಿಸಿತೋ? ... ... ... ॥೬॥

ಆಗಳ್, ಮುಕುಂದ...... ನಾದಿಗಳ್— ಮುಕುಂದ- ವಿಷ್ಣುವು, ಶತಾನಂದ- ಬ್ರಹ್ಮ, ಸಂಕ್ರಂದನ- ದೇವೇಂದ್ರ ಇವರುಗಳೇ, ಆದಿಗಳ್- ಮೊದಲಾದ ದೇವತೆಗಳು, ಆನಿರವಧಿಕತಪಃಪ್ರಭಾವಂಗಂಡು- ಅತ್ಯಂತವಾದ ತಪೋಮಹತ್ವವೆನ್ನುತಿಳಿದು; ಸ್ವಪದ..... ಮನಸ್ಕರ್— ಸ್ವಪದ- ತಮ್ಮಪದವಿಗಳ, ಭಂಗ- ನಾಶದ, ಶಂಕಾ- ಊಹೆಯಿಂದುಂಟಾದ, ಆತಂಕ- ಭಯದೊಡನೆ ಕೂಡಿದ, ಮನಸ್ಕರ್- ಮನಸ್ಸುಳ್ಳವರಾಗಿ,

ಸ್ವಪದಭಾಗಕುಕಾತುಕಮನಸ್ಕರೊಳಗೊಳಗಡವಳಲ್ಕುಸಗಲೊಡನತಿಪ್ರಯತ್ನದಿಂದಾನಿರ್ದ್ದೆಡೆಗೆಪರಿತಂದುಕಟ್ಟಿದಿರೊಳ್ದಾಸಭಾವದಿಂದಂಡಪ್ರಣಾಮಂಗೆಯ್ದು * * * * *

ಲಲಿತ ॥ ಮಂಗಳಗುಣಾಕರಕುರಂಗಧರಶೇಖರಭುಜಂಗಪತಿಭೂಷಣಶುಭಾಂಗನಿಜಲೀಲಾ । ಧಾಂಗಭೃತಲೋಕರವಿಜಾಂಗಭವಭೀಕರಪತಂಗಶತಕೋಟರುಚಿಸಂಗತಸುದುಗ್ರ್ಗ॥ ಲಿಂಗನಕಳೇವರಮತಂಗಜಮಹಾಸುರವಿಭಂಗನಿಟಲಾಕ್ಷಹೃದಯಂಗಮಚರಿತ್ರೋ।ತ್ತುಂಗಮುನಿಪೂಜಿತರಥಾಂಗಧರಸೇವಿತಸುಗಾಂಗಜಲಜೂಟಶಿವಲಿಂಗಜಯದೇವ॥ ॥೭॥

ವ॥ ಎಂದುಸನ್ನುತಿಗೆಯ್ದುಸಾಷ್ಟಾಂಗವೆರಗಿ ಪೊಡೆವಡುದುನಿಂದನಿಲಿಂಪರಪರಿಮ್ಲಾನವದನಮಂನೀಡುಂನೋಡುತ್ತುಮಿವರಕಾರ್ಪಣ್ಯೋಕ್ತಿಕಿವಿದಾಗದಮುನ್ನಂಕರುಣಿಸೆನೆಂದಿಂತೆಂದೆಂ॥ * *

ಚಂ॥ ಪರತರನಂದಿನಾಥನತಪಃಸ್ಥಿತಿಯತ್ತಣಿಸಿಂತುಭೀತರ । ಪ್ಪರೆಬಡಿಮಾತನಿಂ

---

ಒಳಗೊಳಗೆ, ಅಡವಳಲ್- ಸಂತಾಪವು, ಮಸಗಲ್- ಉಂಟಾಗಲು, ಒಡನೆ- ಕೂಡಿ, ಅತಿಪ್ರಯತ್ನದಿಂದ- ಅತ್ಯಂತಪ್ರಯತ್ನಪೂರ್ವಕವಾಗಿ, ಆಂ ಇರ್ದ್ದೆಡೆಗೆ- ನಾನಿದ್ದ ಸ್ಥಳಕ್ಕೆ, ಪರಿತಂದು- ಬಂದು, ಕಟ್ಟಿದಿರೊಳ್- ಮುಂಭಾಗದಲ್ಲಿ,ದಾಸಭಾವದಿಂ- ಭಕ್ತಿಯಿಂದ, ದಂಡಪ್ರಣಾಮಂಗೆಯ್ದು- ದಂಡದೋಪಾದಿಯಲ್ಲಿನಮಸ್ಕರಿಸಿ.

ಮಂಗಳಗುಣಾಕರ- ಶುಭಗುಣಾಶ್ರಯನಾದ; * ಕುರಂಗಧರಶೇಖರ- ಚಂದ್ರನೇಶಿರೋಭೂಷಣವಾಗುಳ್ಳ; ಭುಜಂಗಪತಿಭೂಷಣ- ಆದಿಶೇಷನೇಆಭರಣವಾಗುಳ್ಳ; ಶುಭಾಂಗ- ಮಂಗಳಕರವಾದ ಶರೀರವುಳ್ಳ; ನಿಜ......ಲೋಕ— ನಿಜ- ತನ್ನ, ಲೀಲಾಧಾಂಗ- ವಿಲಾಸವಿಶಿಷ್ಟವಾದ ಕಡೆಗಣ್ಣಿನಿಂದ, ಭೃತ- ರಕ್ಷಿಸಲ್ಪಟ್ಟ, ಲೋಕ- ಜಗತ್ತುಳ್ಳ; † ರವಿಜಾಂಗಭವಭೀಕರ- ಯಮಮನ್ಮಥರಿಗೆ ಭಯಂಕರನಾದ; ಪತಂಗ......ಸಂಗತ— ಪತಂಗಶತಕೋಟಿ- ಅನೇಕಸೂರ್ಯ್ಯರ, ರುಚಿ- ಕಾಂತಿಯುಳ್ಳಾಗಿರುವಕಾಂತಿಯಿಂದ, ಸಂಗತ- ಕೂಡಿದ; ಸುದುಗ್ರ್ಗಾಲಿಂಗನಕಳೇವರ— ಸುದುಗ್ರ್ಗಾ- ಸವಿಾಚೀನಳಾದಪಾರ್ವತಿಯ, ಆಲಿಂಗನ- ಆಲಿಂಗನದೊಡನೆಕೂಡಿದ; ಕಳೇವರ- ಶರೀರವುಳ್ಳ; ಮತಂಗಜಮಹಾಸುರವಿಭಂಗ- ಗಜಾಸುರನನ್ನುನಾಶಮಾಡಿದ; ನಿಟಲಾಕ್ಷ- ಹಣೆಯಲ್ಲಿನೇತ್ರವುಳ್ಳ; ಹೃದಯಂಗಮಚರಿತ್ರ- ಮನೋಹರವಾದಚರಿತ್ರವುಳ್ಳ; ಉತ್ತುಂಗಮುನಿಪೂಜಿತ- ಶ್ರೇಷ್ಠರಾದ ಋಷಿಗಳಿಂದಪೂಜ್ಯನಾದ; ‡ ರಥಾಂಗಧರಸೇವಿತ ವಿಷ್ಣುವಿನಿಂದಸೇವಿಸಲ್ಪಟ್ಟ; ಸುಗಾಂಗಜಲಜೂಟ— ಸುಗಾಂಗಜಲ- ಸವಿಾಚೀನವಾದ ಗಂಗಾನದಿಯುದಕದಿಂಕೂಡಿದ, ಜೂಟ- ಜಟಾಮಕುಟವುಳ್ಳ; ದೇವ- ಸ್ವಾಮಿಯಾದ,ಶಿವಲಿಂಗ, ಜಯ. ... ... ... ... ॥೭॥

ಎಂದು, ಸನ್ನುತಿಗೆಯ್ದು, ಸಾಷ್ಟಾಂಗವೆರಗಿ ಪೊಡೆವಡುದು- ಪಚ್ಚೆಯಾಗಿ, ನಿಂದ, ನಿಲಿಂಪರ- ದೇವತೆಗಳ, ಪರಿಮ್ಲಾನವದನಮಂ- ಬಾಡಿದಮುಖವನ್ನು, ನೀಡುಂ- ಅಧಿಕವಾಗಿ, ನೋಡುತ್ತುಂ, ಇವರ, ಕಾರ್ಪಣ್ಯೋಕ್ತಿ- ದೈನ್ಯದಿಂದುಂಟಾದಮಾತು, ಕಿವಿದಾಗದಮುನ್ನಂ- ಕೇಳಿಸುವದಕ್ಕಿಂತಪೂರ್ವವೇ,ಕರುಣಿಸೆ- ದಯಪಾಲಿಸುವೆನು, ಎಂದು, ಇಂತು- ವಕ್ಷ್ಯಮಾಣಪ್ರಕಾರವಾಗಿ, ಎಂದೆಂ. * * * * * * * * * *

ಪರತರನಂದಿನಾಥನ- ಉತ್ಕೃಷ್ಟನಾದನಂದೀಶ್ವರನ, ತಪಸ್ಸ್ಥಿತಿಯತ್ತಣಿಂ- ತಪಸ್ಸಿನಸ್ಥಿರುವಿಕೆಯುದೆಸೆಯಿಂದ, ಇಂತು- ಈಪ್ರಕಾರವಾಗಿ, ಭೀತರ್- ಭಯಾಕ್ರಾಂತರು, ಅಪ್ಪರೇ- ಆಗಬಹುದೇ ? ಆತನಿಂದೆ- ಆ

---

* (ಅವ) ಕುರಂಗ- ಜಿಂಕೆಯನ್ನು, ಧರ- ಧರಿಸಿರುವ, ಚಂದ್ರನೇ, ಶೇಖರ. † (ಅವ) ರವಿ- ಸೂರ್ಯನಿಂದ, ಜ- ಹುಟ್ಟಿದ ಯಮನು, ಅಂಗ- ಶರೀರದಿಂದ, ಭವ- ಹುಟ್ಟಿದ ಮನ್ಮಥನು ಇವರಿಗೆ, ಭೀಕರ. ‡ (ಅವ) ರಥಾಂಗ- ಚಕ್ರವನ್ನು, ಧರ- ಧರಿಸಿರುವ ವಿಷ್ಣುವಿನಿಂದ, ಸೇವಿತ. ... ... ॥೭॥

ದೊಗೆದಭೀತಿಯನಾವುನಿನಿಮ್ಮ ಭಾಗ್ಯಮಂ॥ಪರಿಕಿಸೆಚಿತ್ತದೊಳ್ನೆನೆವನೇಘನಮಾತನಮ್ಮೈ ಮೆಯೆನ್ನಸು । ಸ್ಥಿರತರಮಾದಭಾಗ್ಯದಿರವಿಂಗಮವಂಮನಮಿಕ್ಕನೊಚ್ಚತಂ ॥ ... ॥೮॥

ಕಂ॥ ಎನ್ನಯಸುಭಕ್ತಿಯುತನವ । ನೆನ್ನಾತ್ಮಂಬಗೆವನಲ್ತುನಿಮ್ಮಯಪದಮಂ ॥ಖಿ ನ್ನತೆಯನುಳಿದುನಿರ್ಜರ । ರಿನ್ನಿರಿವೆಂದಾಗಳಭಯಹಸ್ತಮನಿತ್ತಂ ॥ .. ॥೯॥

ವ ॥ ಅಂತಾದೊಡಮವರ್ಗೆಸಂಶಯಂಪರಿವಡದಿರಲೊಡಮವರ್ಗೂಡಿನಂದೀಶ್ವರಂತ ಪಂಗೆಯ್ವತಾಣಕಾನೆಳ್ತಂದುಸನ್ನಿಧಿಯೊಳ್ಪ್ರಸನ್ನತೆವೆತ್ತುನಿಂದಿರ್ದಾಗಳ್ ॥ * *

ಚಂ ॥ಸುರರಗಭೀರಭೇರಿಯರವಂಸುರಭೂಜದಪುಷ್ಪವೃಷ್ಟಿಭಾ । ಸುರರವಮೈದೆ ಜಕ್ಕುಲಿಸೆಕರ್ಣಮನೊಯ್ಯನೆನಂದಿನೇತ್ರಪಂ ॥ ಕರುಹದಸಂಪುಟಂದೆರೆದಭೀಕ್ಷಿಸಿಜಾನಿಪ ಮೂರ್ತಿಯಂತಿರಾ । ನಿರೆತನುಸಾತ್ವಿಕಂನಿಮಿರೆಸಾರ್ದುಧರಿತ್ರಿಗೆಮೆಯ್ಯನಿಕ್ಕಿದಂ ॥೧೦॥

ವ॥ ಅಂತುಭಕ್ತಿಭರದಿನೆರಗುವಂತೆರಗಿಕರಕಂಜಮಂಮುಗಿದುನಿಂದು ॥ * * *

---

ನಂದೀಶ್ವರನಿಂದ, ಒಗೆದ- ಉಂಟಾದ, ಭೀತಿಯಂ, ಬಿಡಿಂ- ಬಿಡಿರಿ; ಪರಿಕಿಸೆ- ವಿಚಾರಮಾಡಿದರೆ, ಆಮುನಿ- (ನಂದೀಶ್ವರನು) ಚಿತ್ತದೊಳ್- ಮನಸ್ಸಿನಲ್ಲಿ, ನಿಮ್ಮಭಾಗ್ಯಮಂ- ನಿಮ್ಮಐಶ್ವರ್ಯವನ್ನು, ನೆನೆವನೇ- ಅಪೇಕ್ಷಿ ಸುವನೇ? ಆತನ, ಮೈಮೆ- ಮಹಿಮೆಯು, ಘನಂ- ದೊಡ್ಡದು; ಅವಂ, ಎನ್ನ, ಸುಸ್ಥಿರತರಮಾದ- ಅತ್ಯಂ ತಸ್ಥಿರವಾದ, ಭಾಗ್ಯದ, ಇರುವಿಂಗಂ- ಇರುವಿಕೆಗೂಕೂಡ, ಮನಮಿಕ್ಕಂ- ಮನಸ್ಸನ್ನುಕೊಡನು, ಒಚ್ಚ ತಂ- ನಿಶ್ಚಯವು. ... ... ... ... ... ॥೮॥

ಎನ್ನಯ, ಸುಭಕ್ತಿಯುತಂ- ಸಮೀಚೀನವಾದ ಭಕ್ತಿಯಿಂಕೂಡಿದ, ಎನ್ನಾತ್ಮಂ- ನನ್ನಪ್ರಾಣಸ್ವರೂ ಪನಾದ, ಅವಂ, ನಿಮ್ಮಯ, ಪದಮಂ- ಪದವಿಯನ್ನು, ಬಗೆವಂ- ಯೋಚಿಸುವನು, ಅಲ್ತು- ಅಲ್ಲವು; ನಿರ್ಜ ರರ್- ದೇವತೆಗಳಿರಾ, ಇನ್ನು- ಇನ್ನುಮೇಲೆ, ಖಿನ್ನತೆಯಂ- ವ್ಯಸನವನ್ನು, ಉಳಿದು- ಬಿಟ್ಟು, ಇರಿಂ-ಇರುವ ವರಾಗಿರಿ; ಎಂದು, ಆಗಳ್, ಅಭಯಹಸ್ತಮಂ, ಇತ್ತಂ- ಕೊಟ್ಟನು. ... ... ॥೯॥

ಅಂತಾದೊಡಂ- ಹಾಗಾದಾಗ್ಯೂ, ಅವರ್ಗೆ- ದೇವತೆಗಳಿಗೆ, ಸಂಶಯಂ- ಸಂದೇಹವು, ಪರಿವಡದೆ- ನಾ ಶವಾಗದೆ, ಇರಲ್, ಅವರ್ಗೂಡಿ- ಅವರೊಡನೆಕೂಡಿಕೊಂಡು, ಒಡಂ- ಸಂಗಡಲೇ, ನಂದೀಶ್ವರಂ, ತಪಂಗೆ ಯ್ವ- ತಪಸ್ಸನ್ನುಮಾಡುವ, ತಾಣಕೆ- ಸ್ಥಲಕ್ಕೆ, ಎಳ್ತಂದು- ಬಂದು, ಸನ್ನಿಧಿಯೊಳ್- ಸಮೀಪದಲ್ಲಿ, ಪ್ರ ಸನ್ನತೆವೆತ್ತು- ಪ್ರಸನ್ನನಾಗಿ, ನಿಂದಿರ್ದಾಗಳ್- ನಿಂತಿರುವ ಕಾಲದಲ್ಲಿ. * * * * * *

ಸುರರ- ದೇವತೆಗಳ, ಗಭೀರಭೇರಿಯರವಂ- ಗಂಭೀರವಾದನಗಾರಿಯಶಬ್ದವು, ಸುರಭೂಜದ- ಕ ಲ್ಪವೃಕ್ಷದ, ಪುಷ್ಪವೃಷ್ಟಿ- ಹೂವಿನ ಮಳೆಯ, ಭಾಸುರರವಂ- ಪ್ರಕಾಶಮಾನವಾದಶಬ್ದವು, ಐದೆ- ಹೆ ನ್ನಾಗಿ, ಕರ್ಣಮಂ- ಕಿವಿಯನ್ನು, ಒಯ್ಯನೆ- ಮೆಲ್ಲಗೆ, ಜಕ್ಕುಳಿಸೆ- ಚಕ್ಕಳಗುಳಿಯನ್ನುಮಾಡಲು; ನಂದಿ, ನೇತ್ರಪಂಕರುಹದ- ನಯನಕಮಲದ, ಸಂಪುಟಂದೆರೆದು- ರಪ್ಪೆಯನ್ನುತೆಗೆದು, ಅಭೀಕ್ಷಿಸಿ- ನೋಡಿ, ಜಾನಿ ಪ- ಧ್ಯಾನಮಾಡುವ, ಮೂರ್ತಿಯಂತೆ- ಮೂರ್ತಿಯಹಾಗೆ, ಆಂ, ಇರೆ; ತನು- ದೇಹವು, ಸಾತ್ವಿಕಂ- ರೋ ಮಾಂಚಾದಿಸಾತ್ವಿಕಗುಣಗಳು, ನಿಮಿರೆ- ಉಂಟಾಗಿರಲು, ಸಾರ್ದು- ಸಮೀಪಕ್ಕೆಬಂದು, ಧರಿತ್ರಿಗೆ- ಭೂಮಿ ಗೆ, ಮೆಯ್ಯಂ- ದೇಹವನ್ನು, ಇಕ್ಕಿದಂ (ನಮಸ್ಕರಿಸಿದನು.) ... ... ... ॥೧೦॥

ಅಂತು, ಭಕ್ತಿಭರದಿಂ- ಭಕ್ತಿಯಭಾರದಿಂದ, ಎರಗುವಂತೆ- ಬಗ್ಗುವಹಾಗೆ, ಎರಗಿ- ನಮಸ್ಕರಿಸಿ, ಕರ ಕಂಜಮಂ- ಹಸ್ತಕಮಲವನ್ನು, ಮುಗಿದು, ನಿಂದು, * * * * * *

ಉತ್ಸಾಹವೃತ್ತಂ ॥ ಅಂಬುಜಾಂಬಕಾಂಬಕಾಂಬುಜಾಂಕಪಾದಪದ್ಮರೋಲಂಬನೀಲಕಂಧರಾಂಧಕಾಂಧಕಾರಸೂರಹೇ ॥ ರಂಬತಾತಶುಂಭದಂಬರಾಂಬರಾಂಗಮಂಗಳಾಲಂಬಸಾಂಬಕುಂಭಿಶೈಲಶಂಬಪಾಹಿಶಂಕರಾ॥ ... ... ... ... ॥೧೧॥

ವ ॥ ಎಂದುಪೊಗಳ್ದು ಪರಮಾನಂದಪಯೋರಾಶಿಯೊಳವಗಾಹವಿರ್ದ್ದನಂದಿಯುನಾನಂದದಿನವಲೋಕನಂಗೆಯ್ದು. * * * * * * * * * * * *

ಕಂ॥ ಎನ್ನಣುಗನಂದಿಕೇಶ್ವರ। ನಿನ್ನಗ್ಗದತಪಕೆಮೆಚ್ಚಿದೆಂಮನದೊಲವಿಂ॥ ನಿನ್ನಿಷ್ಟವಾವುದದನೆರೆ ।ಯಾಂನಿನಗಿರಪೀವೆನೀಗಳೆಂದಾನುಸಿರ್ದೆಂ ॥ ... ... ॥೧೨॥

ವ॥ ಎನೆಪರಮವೈರಾಗ್ಯನಿಧಿನಂದೀಶ್ವರಂಮುಕುಂದಾದಿಗಳ್ವಿಸ್ಮಯಂಬಡುತ್ತಮಿರೆ ದರಸ್ಮಿತಮುಖಾಂಬುಜನಾಗುತ್ತಿಂತೆಂದು॥ * * * * * * * * *

ಚಂ ॥ನೆಗಳ್ದಸುಧಾಬ್ಧಿಯೊಳ್ರಮಿಯಿಪಂಚೆಗೆಪಲ್ವಲದಾಸೆಯುಂಟಪೆಂ।ಪೊಗೆದಮೃತಾನ್ನದಿಂತಣಿದವಂಗಳಿಯಂಬಿಲದಿಚ್ಛೆಯುಂಟೆಕೂ॥ ರ್ಪುಗಲದೆಯುಷ್ಮದಂಘ್ರಿಭಜನೋನ್ನ

---

ಅಂಬು......... ಪದ್ಮ- ಅಂಬುಜಾಂಬಕ- ಕಮಲವೇ ನೇತ್ರವಾಗುಳ್ಳವಿಷ್ಣುವಿನ, ಅಂಬಕ- ನೇತ್ರವೆಂಬ, ಅಂಬುಜ- ಕಮಲವೇ, ಅಂಕ- ಗುರುತಾಗುಳ್ಳ, ಪಾದಪದ್ಮ- ಚರಣಕಮಲವುಳ್ಳ; ರೋಲಂಬನೀಲಕಂಧರ— ರೋಲಂಬ- ತುಂಬಿಯೋಪಾದಿಯಲ್ಲಿ, ನೀಲ- ಕಪ್ಪಾದ, ಕಂಧರ- ಕಂಠವುಳ್ಳ; ಅಂಧಕಾಂಧಕಾರಸೂರ— ಅಂಧಕ- ಅಂಧಕಾಸುರನೆಂಬ, ಅಂಧಕಾರ- ಕತ್ತಲೆಗೆ, ಸೂರ- ಸೂರ್ಯನಾದ; ಹೇರಂಬತಾತ- ವಿಘ್ನೇಶ್ವರನಿಗೆ ತಂದೆಯಾದ; ಶುಂಭ......... ರಾಂಗ- ಶುಂಭತ್- ಪ್ರಕಾಶಮಾನವಾದ, ಅಂಬರ- ಅಂತರಿಕ್ಷವೆಂಬ, ಅಂಬರ- ವಸ್ತ್ರವೇ, ಅಂಗ- ಶರೀರದಲ್ಲುಳ್ಳ; ಮಂಗಳಾಲಂಬ- ಮಂಗಳಕ್ಕೆ ಆಶ್ರಯನಾದ; ಸಾಂಬ- ಪಾರ್ವತಿಯೊಡನೆಕೂಡಿದ; ಕುಂಭಿಶೈಲಶಂಬ- ಕುಂಭಿ- ಗಜಾಸುರನೆಂಬ, ಶೈಲ- ಪರ್ವತಕ್ಕೆ, ಶಂಬ- ವಜ್ರಾಯುಧನಾದ; ಶಂಕರಾ, ಪಾಹಿ- ರಕ್ಷಿಸು. ... ... ... ... ... ॥೧೧॥

ಎಂದು, ಪೊಗಳ್ದು- ಹೊಗಳಿ, ಪರಮಾನಂದಪಯೋರಾಶಿಯೊಳ್- ಪರಮಾನಂದ- ಉತ್ಕೃಷ್ಟವಾದಸಂತೋಷವೆಂಬ, ಪಯೋರಾಶಿಯೊಳ್- ಸಮುದ್ರದಲ್ಲಿ, ಅವಗಾಹವಿರ್ದ್ದ- ಮುಳುಗಿದ್ದ, ನಂದಿಯುಂ, ಆನಂದದಿಂ- ಸಂತೋಷದಿಂದ, ಅವಲೋಕನಂಗೆಯ್ದು- ನೋಡಿ. * * * * *

ಎನ್ನಣುಗ- ನನ್ನಮಗನಾದ, ನಂದಿಕೇಶ್ವರ- ನಂದಿಕೇಶ್ವರನೇ, ನಿನ್ನ, ಅಗ್ಗದತಪಕೆ- ಶ್ರೇಷ್ಠವಾದ ತಪಸ್ಸಿಗೆ, ಮೆಚ್ಚಿದೆಂ; ಮನದೊಲವಿಂ- ಮನಃಪೂರ್ವಕವಾಗಿ, ನಿನ್ನಿಷ್ಟಂ- ನಿನ್ನಿಷ್ಟೆಯು, ಆವುದು, ಅದು, ಎರೆ- ಬೇಡು, ಆಂ- ನಾನು, ನಿನಗೆ, ಇರದೆ- ತಪ್ಪದೆ, ಈಗಳ್- ಈಗಲೇ, ಈವೆಂ- ಕೊಡುವೆನು, ಎಂದು, ಉಸಿರ್ದೆಂ- ಹೇಳಿದೆನು. ... ... ... ... ... ... ॥೧೨॥

ಎನೆ; ಪರಮವೈರಾಗ್ಯನಿಧಿ- ಉತ್ಕೃಷ್ಟವಾದ ವಿರಕ್ತಿಗೆ ನಿಕ್ಷೇಪನಾದ, ನಂದೀಶ್ವರಂ, ಮುಕುಂದಾದಿಗಳ್- ವಿಷ್ಣುಮುಂತಾದದೇವತೆಗಳು, ವಿಸ್ಮಯಂಬಡುತ್ತಂ-|ಆಶ್ಚರ್ಯಪಡುತ್ತ, ಇರೆ, ದರಸ್ಮಿತಮುಖಾಂಬುಜಂ- ಮಂದಹಾಸದಿಂದಕೂಡಿದ ಮುಖಕಮಲವುಳ್ಳವನು, ಆಗುತೆ, ಇಂತು, ಎಂದಂ. * * * *

ಶಂಕರಾ, ನೆಗಳ್ದ- ಪ್ರಸಿದ್ಧವಾದ, ಸುಧಾಬ್ಧಿಯೊಳ್- ಕ್ಷೀರಸಮುದ್ರದಲ್ಲಿ, ರಮಿಯಿಪ- ಕ್ರೀಡಿಸುವ, ಅಂಚೆಗೆ- ಹಂಸಪಕ್ಷಿಗೆ, ಪಲ್ವಲದ- ಕುಂಟೆಯ, ಆಸೆ, ಉಂಟೆ? ಪೆಂಪೊಗೆದ- ಅತಿಶಯವಾದ, ಅಮೃತಾನ್ನದಿಂ- ಅಮೃತಮಿಶ್ರವಾದಅನ್ನದಿಂದ, ತಣಿದವಂಗೆ- ತೃಪ್ತನಾದವನಿಗೆ, ಅಳಿಯ- ಅಲ್ಪವಾದ, ಅಂಬ

ತಭಾಗ್ಯದೆಬಾಳ್ವವಂಗೆದ । ಲ್ಬಗೆವೊಡೆಬೇರೆಬೇಳ್ಪವರದೀಪ್ಸೆಯದುದುಗವುಂಟೆಶಂಕರಾ ॥

ಕಂ ॥ ಪರಮಕೃಪಾಕರನಿನ್ನಯ । ಚರಣಾಬ್ಜದಭಕ್ತಿಭಾಗ್ಯಭೋಗಮದೆಂದುಂ ॥ ಸ್ಥಿರಮಕ್ಕೆಮಿಕ್ಕವಿಪದಾ । ಕರಫಲಪದಭೋಗಮೆನಗಜಸ್ರಮನಿಷ್ಟಂ ॥ ... ॥೧೪॥

ವ॥ ಎಂದುನಿಜಪದಾನತರಾದಹರಿವಿರಿಂಚಾದಿಗಳಸಂದೆಗಂಪರಿಯೆಮನ್ನಣೆಯಿಂಬಿನ್ನವಿಸಲೊಡನಾನಂದಿಯನಾನಂದಂಮಿಗೆಬಿಗಿಯಪ್ಪಿ ಮುದ್ದಿಸಿ ಸುರೇಂದ್ರರೋಲಯಿಸಲೊಡಂ ಪ್ರಮೋದದಿಂ ಪ್ರಮಥೇಂದ್ರಪಟ್ಟಮಂಕಟ್ಟಿಕಟ್ಟಳ್ಕರಿಂಸರ್ವಜ್ಞತೆಯುಮಂನಿಶ್ಚಲಭಕ್ತಿಯುಮನಿತ್ತುಮನ್ನಿಸಿ ॥ * * * * * * * * * * * * *

ಕಂ॥ ಘನಸತ್ವವಿಮಲಗುಣಪಾ । ವನವಿಗ್ರಹಮಾಣದೆನ್ನಬಗೆಗೊಪ್ಪುವವಾ ॥ ಹನವಾಗಿರೆಂದುಬೆಸಸು। ತ್ತನಿಬರುಮೊಡನೈದೆರಜತಗಿರಿಗೇಳ್ತಂದೆಂ ॥ ... ... ॥೧೫॥

ಕಂ ॥ ಅಂದಿಂದಂಶ್ರೀಗಿರಿಯೊ । ಳ್ನಂದಿತಪಂಗೆಯ್ದತಾಣಮದುಪೆಸರ್ವಡೆದಾ ॥ ನಂದಸಿಧಿನಂದಿಮಂಡಲ । ಮೆಂದೆನಿಸುಗುಮಾಶ್ರಿತರ್ಗ್ಗೆಮುಕ್ತಿಕ್ಷೇತ್ರಂ॥ ... ... ॥೧೬॥

---

ಲದ- ಅಂಬಲಿಯ, ಇಚ್ಛೆ, ಉಂಟೆ? ಕೂರ್ಪು- ಪ್ರೀತಿಯು, ಅಗಲದೆ- ಬಿಡದೆ, ಯುಷ್ಮದಂಘ್ರಿಭಜನೋನ್ನತಭಾಗ್ಯದೆ- ಯುಷ್ಮತ್- ನಿಮ್ಮ, ಅಂಘ್ರಿಭಜನ- ಪಾದಸೇವೆಯೆಂಬ, ಉನ್ನತ- ಅಧಿಕವಾದ, ಭಾಗ್ಯದೆ ಐಶ್ವರ್ಯದಿಂದ, ಬಾಳ್ವವಂಗೆ- ಬದುಕುವವನಿಗೆ, ಬಗೆವೊಡೆ- ವಿಚಾರಿಸಿನೋಡಿದರೆ, ಬೇರೆ- ಪ್ರತ್ಯೇಕವಾಗಿ, ಬೇಳ್ಪ- ಬೇಡುವ, ವರದ, ಈಪ್ಸೆಯ- ಇಚ್ಛೆಯ, ದುದುಗಂ- ವ್ಯಸನವು, ಉಂಟೆ? ... ॥೧೩॥

ಪರಮಕೃಪಾಕರ- ಉತ್ಕೃಷ್ಟವಾದದಯೆಗೆ ಆಶ್ರಯನಾದಪರಮೇಶ್ವರನೇ, ನಿನ್ನಯ, ಚರಣಾಬ್ಜದ- ಪಾದಕಮಲದ, ಭಕ್ತಿಭಾಗ್ಯಭೋಗಂ- ಭಕ್ತಿಯೆಂಬಐಶ್ವರ್ಯದಸುಖವು, ಅದು, ಎಂದುಂ- ಯಾವಾಗಲೂ, ಸ್ಥಿರಂ- ಶಾಶ್ವತವಾಗಿ, ಅಕ್ಕೆ- ಆಗಲಿ, ಮಿಕ್ಕ- ಉಳಿದ, ವಿಪದಾಕರ- ವಿಪತ್ತಿಗಾಶ್ರಯವಾದ, ಫಲ ಫಲವುಳ್ಳ, ಪದ- ಪದವಿಯ, ಭೋಗಂ;ಎನಗೆ- ಅಜಸ್ರಂ- ನಿರಂತರದಲ್ಲೂ, ಅನಿಷ್ಟಂ- ಇಷ್ಟವಲ್ಲವು. ॥೧೪॥

ಎಂದು, ನಿಜಪದಾನತರಾದ- ತನ್ನಪಾದದಲ್ಲಿ ನಮಸ್ಕರಿಸಿರುವ, ಹರಿವಿರಿಂಚಾದಿಗಳ- ವಿಷ್ಣುಬ್ರಹ್ಮಾದಿದೇವತೆಗಳ, ಸಂದೇಹಂ-ಸಂದೇಹವು, ಪರಿಯೆ- ನಾಶವಾಗುವಹಾಗೆ, ಬಿನ್ನವಿಸಲ್-ವಿಜ್ಞಾಪಿಸಲು, ಒಡಂ- ಕೂಡಲೇ, ಆನಂದಂ- ಸಂತೋಷವು, ಮಿಗೆ- ಹೆಚ್ಚಾಗಲು, ಆನಂದಿಯಂ- ಆನಂದೀಶ್ವರನನ್ನು, ಬಿಗಿಯಪ್ಪಿ- ಬಿಗಿಯಾಗಿ ಆಲಿಂಗಿಸಿ, ಮುದ್ದಿಸಿ- ಮುದ್ದಾಡಿ, ಸುರೇಂದ್ರರ್- ದೇವಶ್ರೇಷ್ಠರು, ಓಲಯಿಸಲ್- ಸಭೆಗೂಡಲು; ಒಡಂ- ಕೂಡಲೇ, ಪ್ರಮೋದದಿಂ- ಸಂತೋಷದಿಂದ, ಪ್ರಮಥೇಂದ್ರಪಟ್ಟಮಂ- ಗಣಾಧಿಪಪಟ್ಟವನ್ನು, ಕಟ್ಟಿ, ಕಟ್ಟಳ್ಕರಿಂ- ಅತಿಪ್ರೀತಿಯಿಂದ, ಸರ್ವಜ್ಞತೆಯುಮಂ- ಸರ್ವಜ್ಞತ್ವವನ್ನೂ, ನಿಶ್ಚಲಭಕ್ತಿಯುಮಂ- ನಿಶ್ಚಂಚಲವಾದ ಭಕ್ತಿಯನ್ನೂಕೂಡ, ಇತ್ತು- ಕೊಟ್ಟು, ಮನ್ನಿಸಿ. * * * *

ಘನಸತ್ವ- ಅತ್ಯಂತಸತ್ವಗುಣವುಳ್ಳ, ವಿಮಲಗುಣ- ನಿರ್ಮಲವಾದಗುಣಗಳುಳ್ಳ, ಪಾವನವಿಗ್ರಹ- ಪರಿಶುದ್ಧವಾದ ಶರೀರವುಳ್ಳ ನಂದೀಶ್ವರನೇ, ಮಾಣದೆ- ತಪ್ಪದೆ, ಎನ್ನಬಗೆಗೆ- ನನ್ನಮನಸ್ಸಿಗೆ, ಒಪ್ಪುವ- ಪ್ರಕಾಶಿಸುವ, ವಾಹನಂ, ಆಗಿ, ಇರು, ಎಂದು, ಬೆಸಸುತ್ತೆ- ಆಜ್ಞಾಪಿಸುತ್ತ, ಅನಿಬರುಂ- ಅಷ್ಟುಜನವೂ, ಒಡನೆ- ಸಂಗಡ, ಐದೆ- ಬರಲು, ರಜತಗಿರಿಗೆ- ಕೈಲಾಸಕ್ಕೆ, ಏಳ್ತಂದೆಂ- ಬಂದೆನು. ... ... ॥೧೫॥

ಅಂದಿಂದಂ- ಆಕಾಲದಿಂದಲೂ, ಶ್ರೀಗಿರಿಯೊಳ್- ಶ್ರೀಶೈಲದಲ್ಲಿ, ನಂದಿ, ತಪಂಗೆಯ್ದ- ತಪಸ್ಸನ್ನುಮಾಡಿದ, ಅದಂ:ತಾಣಂ- ಆಸ್ಥಾನವು, ಪೆಸರ್ವಡೆದು- ಪ್ರಸಿದ್ಧಿಯನ್ನು ಹೊಂದಿ, ಆನಂದ........ ಮಂಡಲಂ-

ವ॥ಎಂದುನಾರದನಾಕರ್ಣಿಸಿನಲವೇರಿಪೊಗಳುತ್ತಿರೆಶಿವಮನಿರೂಪಿಸೆನಗಜಾತೆಕೇಳ್ದು ಕೌತುಕಾಂಬುಧಿಯೊಳಾಳ್ದುಪತಿಪಾದಪಲ್ಲವಮಂಪಿಡಿದೇಳ್ದು ಸಂದಣಿಪಾನಂದದಿಂಮುಂದೆ ನಿಂದಿರ್ದ್ದನಂದಿಯಂನೋಡಿ ॥ * * * * * * * * * * *

ಮ ॥ ಮೃಗಭೃತ್ಖಂಡಕಪರ್ದನಿನ್ನೊಳವಿಭಿನ್ನಂನಂದಿತಾನಕ್ಕುಮೆಂ ।ಬಗಭೀರೋಕ್ತಿಯೆಸತ್ಯಮಲ್ಲದೊಡಿವಂಗೀರೂಪವೀಭಕ್ತಿಯು ॥ ಜ್ಜುಗಮೀವೈಭವಮೀಪವಿತ್ರತನು ಸೌಂದರ್ಯಮೀಶಾಂತಿಯೀ ।ಸುಗುಣಾಲಂಕೃತಿಯೀಮಹತ್ವದೊದವೀನೈಪುಣ್ಯಮೇಂಸಾಗ್ರ್ಗಮೇ ॥ ... ... ... ... .. ॥೧೭॥

ವ॥ ಎಂದಿನಿಯಳ್ಬಗೆದಂತೆ ನುಡಿದ ಕರ್ಣಾಮೃತಪ್ರಾಯಮಾದ ಮೆಲ್ನುಡಿಗೆ ಮುದಂದಳೆದು ಶಿವಂ ತಾನಿಂತು ನಿರವಿಸಿದ ನಿಜಕಥಾಕೌತುಕಮನಾಲಿಸಿ ಭಯಭಕ್ತಿಯಿಂದಂತಂತೆ ಕಂಪಿಸಿ ಸಾತ್ವಿಕಂನಿಮಿರೆ ಸಾಷ್ಟಾಂಗಮೆರಗಿ ಕರಾರವಿಂದಮಂಮುಗಿದು ಸರಸೋಕ್ತಿಯಿಂ ನುತಿಯಿಪ ನಂದೀಶ್ವರನಂಕೃಪಾವಲೋಕನದಿನವಲೋಕಿಸಿ ಬಿಗಿಯಪ್ಪಿ ನಿಜಪ್ರ

---

ಆನಂದನಿಧಿ- ಸಂತೋಷಕ್ಕೆ ನಿಕ್ಷೇಪನಾದ, ನಂದಿ- ನಂದೀಶ್ವರನ, ಮಂಡಲಂ; ಆಶ್ರಿತರ್ಗೆ- ಆಶ್ರೈಸಿದವರಿಗೆ, ಮುಕ್ತಿಕ್ಷೇತ್ರಂ- ಮುಕ್ತಿಯನ್ನುಂಟುಮಾಡುವ ಕ್ಷೇತ್ರವು, ಎಂದು, ಎನಿಸುಗುಂ. ... ॥೧೬॥

ಎಂದು, ನಾರದಂ, ಆಕರ್ಣಿಸಿ- ಕೇಳಿ, ನಲವೇರಿ- ಸಂತೋಷಹೆಚ್ಚಿ, ಪೊಗಳುತ್ತಿರೆ- ಹೊಗಳುತ್ತಿರುಹಾಗೆ, ಶಿವಂ, ನಿರೂಪಿಸೆ- ಹೇಳಲು, ನಗಜಾತೆ- ಪಾರ್ವತಿಯು,ಕೇಳ್ದು, ಕೌತುಕಾಂಬುಧಿಯೊಳ್, ಆಳ್ದು- ಮುಳುಗಿ, ಪತಿ- ನಾಥನಾದಪರಮೇಶ್ವರನ, ಪಾದ- ಚರಣವೆಂಬ,ಪಲ್ಲವಮಂ-ತೆಪ್ಪವನ್ನು, ಪಿಡಿದು, ಏಳ್ದು- ಎದ್ದು, ಸಂದಣಿಪ-ಗುಂಪಾದ, ಆನಂದದಿಂ-ಸಂತೋಷದಿಂದ, ಮುಂದೆ, ನಿಂದು, ಇರ್ದ್ದ, ನಂದಿಯಂ,ನೋಡಿ.

ಮೃಗಭೃತ್ಖಂಡಕಪರ್ದ- ಚಂದ್ರಕಲೆಯೇಜಡೆಯಲ್ಲುಳ್ಳಪರಮೇಶ್ವರನೇ, ನಿನ್ನೊಳ್, ನಂದಿ, ತಾಂ, ಅವಿಭಿನ್ನಂ- ಭೇದವಿಲ್ಲದಿರುವನು, ಅಕ್ಕುಂ, ಎಂಬ, ಗಭೀರೋಕ್ತಿಯೆ- ಗಂಭೀರವಾದಮಾತೇ, ಸತ್ಯಂ, ಅಲ್ಲದೊಡೆ- ಹಾಗಿಲ್ಲದ ಪಕ್ಷದಲ್ಲಿ, ಇವಂಗೆ- ಈನಂದೀಶ್ವರನಿಗೆ, ಈರೂಪಂ, ಈಭಕ್ತಿಯ, ಉಜ್ಜುಗಂ- ಉದ್ಯೋಗವು, ಈ ವೈಭವಂ, ಈ ಪವಿತ್ರತನು- ಈಪರಿಶುದ್ಧವಾದ ಶರೀರವು, ಈ ಸೌಂದರ್ಯಂ, ಈಶಾಂತಿ, ಈಸುಗುಣಾಲಂಕೃತಿ- ಈಸದ್ಗುಣಾಲಂಕಾರವು, ಈಮಹತ್ವದ,ಒದವು- ಪ್ರಾಪ್ತಿಯು, ಈನೈಪುಣ್ಯಂ- ಈಜಾಣ್ಮೆಯು,ಸಾಗ್ರ್ಗಮೆಎಂ- ಉಂಟಾದೀತೇನು? ... ... ... ... ... ॥೧೭॥

ಎಂದು, ಇನಿಯಳ್- ಪ್ರಿಯಳು, ಬಗೆದು- ಯೋಚಿಸಿ, ಅಂತೆ-ಆಪ್ರಕಾರವಾಗಿ, ನುಡಿದ, ಕರ್ಣಾಮೃತಪ್ರಾಯಮಾದ- ಕಿವಿಗೆ ಅಮೃತರಸದಂತಿರುವ, ಮೆಲ್ನುಡಿಗೆ- ಮೃದುವಾದಮಾತಿಗೆ, ಮುದಂದಳೆದು- ಸಂತೋಷವಂಪಡೆದು, ಶಿವಂ, ತಾಂ, ಇಂತು- ಈಪ್ರಕಾರವಾಗಿ, ನಿರವಿಸಿದ-ಹೇಳಿದ, ನಿಜಕಥಾಕೌತುಕಮಂ- ಕುತೂಹಲವನ್ನುಂಟುಮಾಡುವ ತನ್ನಕಥೆಯನ್ನು, ಆಲಿಸಿ- ಕೇಳಿ, ಭಯಭಕ್ತಿಯಿಂದೆ- ಭಯದಿಂದಲೂ ಭಕ್ತಿಯಿಂದಲೂ, ಅಂತಂತೆ- ಹಾಗೆಹಾಗೆ, ಕಂಪಿಸಿ- ನಡುಗಿ, ಸಾತ್ವಿಕಂ, ನಿಮಿರೆ, ಸಾಷ್ಟಾಂಗಂ- ಅಷ್ಟಾಂಗದಿಂಕೂಡಿ, ಎರಗಿ- ನಮಸ್ಕರಿಸಿ; ಕರಾರವಿಂದಮಂ- ಹಸ್ತಕಮಲವನ್ನು, ಮುಗಿದು, ಸರಸೋಕ್ತಿಯಿಂ- ಮಧುರವಾದಮಾತಿನಿಂದ, ನುತಿಯಿಪ- ಸ್ತೋತ್ರಮಾಡುವ, ನಂದೀಶ್ವರನಂ, ಕೃಪಾವಲೋಕನದಿಂ- ದಯಾವಿಶಿಷ್ಟವಾದನೋಟದಿಂದ, ಅವಲೋಕಿಸಿ- ನೋಡಿ, ಬಿಗಿಯಪ್ಪಿ- ಗಾಢವಾಗಿಆಲಿಂಗಿಸಿ, ನಿಜಪ್ರಸಾದಮಂ- ತನ್ನ ಅನುಗ್ರಹವನ್ನು, ಇತ್ತು- ಕೊಟ್ಟು, ಮನ್ನಿಸುತ್ತಂ- ಮನ್ನಣೆಮಾಡುತ್ತ, ಭೂಭುವನಪಾವನನಿಮಿತ್ತಮಾಗಿಯುಂ- ಭೂಲೋಕವನ್ನು ಪರಿಶುದ್ಧಿಮಾಡುವದಕ್ಕೋಸ್ಕರಲೂ, ಭಕ್ತಹಿತಾರ್ಥಮಾಗಿಯುಂ, ಭಕ್ತ

ಸಾದಮನಿತ್ತು ಮನ್ನಿಸುತ್ತುಂ ಭೂಭೃ ವನಪಾವನಸನಿಮಿತ್ತಮಾಗಿಯುಂ ಭಕ್ತಹಿತಾರ್ಥಮಾಗಿಯುಂ ಮನುಜಲೋಕದೊಳ್ಬಸವನಾಮದಿನುದ್ಭವಿಸಿ ಸದ್ಭಕ್ತಿಸುಜ್ಞಾನಸದ್ಧರ್ಮಮಂ ಪ್ರಕಾಶಿಸಿ ಭವದೀಯಮಹಿಮೆ ಸರ್ವೋರ್ವಿಗರಿದೆನಿಸೆ ಮದೀಯಮತಮಹತ್ವಮುಮಂ ಮೆರೆವುದೆಂದು ನಿರೂಪಿಸೆ ತದಾಜ್ಞೆಯಂ ಮಹಾಪ್ರಸಾದಮೆಂದು ಶಿರಶ್ಶೇಖರಂಗೆಯ್ದು ಶೈಲಾದಿಯಾಗಳಿಂತೆಂದಂ * * * * * * * * * * * * * *

ಸ್ರ॥ ಎಲ್ಲಾಲೋಕಕ್ಕೆನೀನೋರ್ವನೆಪತಿಪರಿಪೂರ್ಣಂಮದೀಯಾಂತರಾತ್ಮಂ।ಸಲ್ಲೀಲಾಶಾಲಿಯಂತಪ್ಪುದರಿನಿದೆನಗೀಲೋಕಮಾಲೋಕಮೆಂಬೀ ॥ ಸಲ್ಲಾಪಕ್ಕೆಂಬುತಾನೆತ್ತಣದಭವಭವತ್ಪಾದಸದ್ಭಕ್ತಿಭಾವಂ । ಮುಲ್ಲಾಭಂಮರ್ತ್ಯದೊಳ್ಕುಂದದವೊಲೆಸಪ್ಪುದೊಂದುಜ್ಜುಗಂನಿನ್ನದಲ್ತೆ ॥ ... ... ... ... ... ॥೧೪॥

ವ॥ ಎಂದುಬಿನ್ನವಿಸಿದನಂದಿಯನಯೋಕ್ತಿಗೇಳ್ದಿಂದುಧರನಿಂತೆಂದಂ॥ * * *

ಚಂ॥ ಘನಗುರುವಾಗಿಚಿತ್ಸುಖವನೀವೆನನಾಮಯಲಿಂಗವಾಗಿಪಾವನವಪುರಿಂದ್ರಿಯಾದಿಮುಖದೊಳ್ನೆಲೆಗೊಂಡೊಡನಿರ್ದ್ದುಭೋಗಿಪೆಂ ॥ ವಿನುತಚರಾಂಗನಾಗಿನಿನಗಿತ್ತಪೆನೊಪ್ಪುವಸುಪ್ರಸಾದಮಂ । ನಿನಗೆಗಣಂಗಳಂಕಳುಪುವೆಂದರೆಗೆಂನಸುವನ್ನರಾದರಂ ॥ ॥೧೫॥

---

ರಿಗೆ ಹಿತವನ್ನುಂಟುಮಾಡುವದಕ್ಕೋಸ್ಕರಲೂ, ಮನುಜಲೋಕದೊಳ್- ಮರ್ತ್ಯಲೋಕದಲ್ಲಿ, ಬಸವನನಾಮದಿಂ- ಬಸವನೆಂಬಹೆಸರಿನಿಂದ, ಉದ್ಭವಿಸಿ- ಅವತರಿಸಿ, ಸದ್ಭಕ್ತಿಸುಜ್ಞಾನಸದ್ಧರ್ಮಮಂ, ಪ್ರಕಾಶಿಸಿ, ಭವದೀಯಮಹಿಮೆ- ನಿನ್ನ ಮಹತ್ವವು, ಸರ್ವೋರ್ವಿಗೆ- ಸಮಸ್ತಭೂಮಿಗೆ, ಅರಿದು- ಅಸಾಧ್ಯವು, ಎನಿಸೆ, ಮದೀಯಮತಮಹತ್ವಮುಮಂ- ನನ್ನಮತದ ಮಹಿಮೆಯನ್ನು, ಮೆರೆವುದು- ಪ್ರಚುರಪಡಿಸುವದು; ಎಂದು, ನಿರೂಪಿಸೆ; ತದಾಜ್ಞೆಯಂ- ಆಪರಶಿವನ ಅಪ್ಪಣೆಯನ್ನು, ಮಹಾಪ್ರಸಾದಂ, ಎಂದು, ಶಿರಶ್ಶೇಖರಂಗೆಯ್ದು- ಶಿರೋಭೂಷಣವನ್ನಾಗಿ ಮಾಡಿಕೊಂಡು, ಶೈಲಾದಿ- ಶಿಲಾದಋಷಿಯಮಗನು, ಆಗಳ್, ಇಂತೆಂದಂ. * *

ಅಭವ, ಎಲ್ಲಾಲೋಕಕ್ಕೆ, ನೀಂಒರ್ವನೆ- ನೀನೊಬ್ಬನೆ, ಪತಿ; ಪರಿಪೂರ್ಣಂ- ಸರ್ವವ್ಯಾಪಕನು; ಮದೀಯಾಂತರಾತ್ಮಂ- ನನ್ನಪ್ರಾಣಸ್ವರೂಪನು; ಸಲ್ಲೀಲಾಶಾಲಿ- ಸಮೀಚೀನವಾದ ಲೀಲೆಗಳಿಂ ಪ್ರಕಾಶಿಸುವನು; ಅಂತಪ್ಪುದರಿಂ- ಹಾಗಿರುವದರಿಂದ, ಇದು, ಎನಗೆ, ಈಲೋಕಂ ಆಲೋಕಂ, ಎಂಬ, ಈ ಸಲ್ಲಾಪಕ್ಕೆ- ಈಮಾತಿಗೆ, ಇಂಬು- ಆಶ್ರಯವು, ತಾಂ, ಎತ್ತಣದು- ಎಲ್ಲಿರುವದು; ಭವತ್ಪಾದ ಸದ್ಭಕ್ತಿಭಾವಂ— ಭವತ್- ನಿನ್ನ, ಪಾದ- ಚರಣದ, ಸದ್ಭಕ್ತಿಭಾವಂ- ಸಮೀಚೀನವಾದ ಭಕ್ತಿಸ್ಥಿತಿಯು, ಮಲ್ಲಾಭಂ- ನನ್ನ ಪ್ರಾಪ್ತಿಯು, ಮರ್ತ್ಯದೊಳ್- ಮರ್ತ್ಯಲೋಕದಲ್ಲಿ, ಕುಂದದವೊಲ್- ನಾಶವಾಗದಹಾಗೆ, ಎಸಪುದು- ಮಾಡುವದು, ಒಂದುಜ್ಜುಗಂ- ಒಂದುಕಾರ್ಯವು, ನಿನ್ನದಲ್ತೆ- ನಿನ್ನದಲ್ಲವೇ. ... ... .... ॥೧೪॥

ಎಂದು,ಬಿನ್ನವಿಸಿದ, ನಂದಿಯ,ನಯೋಕ್ತಿಗೇಳ್ದು- ಮಧುರವಚನವನ್ನುಕೇಳಿ,ಇಂದುಧರಂ, ಇಂತೆಂದಂ.

ನಿನಗೆ, ಘನಗುರು, ಆಗಿ, ಚಿತ್ಸುಖಮಂ-ಜ್ಞಾನಸುಖವನ್ನು, ಈವೆಂ- ಕೊಡುವೆನು; ಅನಾಮಯಲಿಂಗಂ- ಭವರೋಗರಹಿತಮಾದಲಿಂಗವು, ಆಗಿ,ಪಾವನ...ಮುಖದೊಳ್—ಪಾವನ-ಪರಿಶುದ್ಧವಾದ, ವಪುಃ-ಶರೀರವೇನು, ಇಂದ್ರಿಯ- ಇಂದ್ರಿಯಗಳೇನು ಇವುಗಳೇ, ಆದಿ- ಮೊದಲಾದವುಗಳ, ಮುಖದೊಳ್- ಮುಖದಿಂದ, ನೆಲೆಗೊಂಡು- ವಾಸವಾಗಿ, ಒಡನೆ, ಇರ್ದ್ದು, ಭೋಗಿಪೆಂ- ಸುಖಿಸುವೆನು; ವಿನುತಚರಾಂಗಂ-ಶ್ಲಾಘ್ಯವಾದ ಜಂಗಮರೂಪನು, ಆಗಿ, ನಿನಗೆ, ಒಪ್ಪುವ -ಪ್ರಕಾಶಿಸುವ, ಸುಪ್ರಸಾದಮಂ, ಇತ್ತಪೆಂ- ಕೊಡುವೆನು; ಎನ್ನ,ಅಸುವನ್ನರಾದರಂ- ಪ್ರಾಣಸ್ವರೂಪರಾದ, ಗಣಂಗಳಂ, ಧರೆಗೆ- ಭೂಮಿಗೆ,ಕಳುಪುವೆಂ- ಕಳುಹಿಸುವೆನು.

ಕಂ ॥ ಅದರಿಂದೆನ್ನಯಕೂರ್ಮೆಯ । ವಡಪದುನಿನಗರಿಯಲಕ್ಕುಮವನಿಯೊಳೆನೆತ॥
ನ್ಮದನಹರನಂಘ್ರಿಗೆರಗುತೆ । ಮುದದಿಂಬೀಳ್ಕೊಂಡುನಂದಿಶಿವಗಣಸಹಿತಂ ... ॥೨೦॥

ಮ॥ ಶಿವಪಾದಾಂಭೋಜಮಂಭಾಸುರನಿಜಹೃದಯಾವಾಸದೊಳ್ಧ್ಯಾನಿಸುತ್ತಂ। ಸುವಿ
ವೇಕಂಬೆತ್ತುತತ್ಸೂಕ್ತಿಗಳಪುರುಳನಂತಂತೆತಾಂಭಾವಿಸುತ್ತಂ। ದಿವಿಜೇಂದ್ರಂಮಾರ್ಗದೊ
ಳ್ಮಾಳ್ಪತುಳಯಜನಮಂಪ್ರೀತಿಯಿಂಕೈಕೊಳುತ್ತಂ । ದವನೀಭಾಗಕ್ಕೆಬರ್ಪುದ್ಯಜ್ಜಗ
ದೊಳೆಸೆದನಾನಂದಸಾಂದ್ರಂವೃಷೇಂದ್ರಂ ॥ ... ... ... ॥೨೧॥

ವ॥ ಅಂತೇಳ್ತರುತ್ತಿರ್ಪನ್ನೆಗಮಿತ್ತಲತಿಮನೋಹರಮಾದಜಂಬೂದ್ವೀಪದಲ್ಲಿ.

ಮಾಲಿನೀ ॥ ಕಟಕವಿಪಿನಹಸ್ತೀಂದ್ರಾಜಿನಂಚಂದ್ರಗಂಗಾ । ಘಟಿತಶಿಖರಶೀರ್ಷಂ

---

ಅದರಿಂದೆ, ಎನ್ನಯ- ನನ್ನ, ಕೂರ್ಮೆಯ- ಅನುರಾಗವಿಶಿಷ್ಟವಾದ, ಅದುಪಡವು- ಆಪ್ರೀತಿಯು, ನಿನಗೆ, ಅವನಿಯೊಳ್- ಭೂಮಿಯಲ್ಲಿ, ಅರಿಯಲ್- ತಿಳಿಯುವದಕ್ಕೆ,ಅಕ್ಕುಂ, ಎನೆ, ನಂದಿ, ತನ್ಮದನಹರನ-ಆಪರಶಿವನ, ಅಂಘ್ರಿಗೆ- ಪಾದಕ್ಕೆ, ಎರಗುತೆ- ನಮಸ್ಕರಿಸುತ್ತ, ಮುದದಿಂ- ಸಂತೋಷದಿಂದ, ಬೀಳ್ಕೊಂಡು- ಅಪ್ಪಣೆಯಂಪಡೆದು, ಶಿವಗಣಸಹಿತಂ- ಶಿವಗಣಗಳೊಡನೆಕೂಡಿ. ... ... ... ॥೨೦॥

ಆನಂದಸಾಂದ್ರಂ- ಸಂತೋಷಪರಿಪೂರ್ಣನಾದ, ವೃಷೇಂದ್ರಂ- ಬಸವೇಶ್ವರನು, ಶಿವಪಾದಾಂಭೋಜಮಂ- ಪರಶಿವನ ಪಾದಕಮಲವನ್ನು, ಭಾಸುರನಿಜಹೃದಯಾವಾಸದೊಳ್- ಪ್ರಕಾಶಮಾನವಾದ ತನ್ನ ಹೃದಯಸ್ಥಲದಲ್ಲಿ, ಧ್ಯಾನಿಸುತ್ತಂ- ಧ್ಯಾನಮಾಡುತ್ತ, ಸುವಿವೇಕಂಬೆತ್ತು- ಅತ್ಯಂತವಿವೇಕಶಾಲಿಯಾಗಿ, ತತ್ಸೂಕ್ತಿಗಳ- ಆಪರಮೇಶ್ವರನವಚನಗಳ, ಪುರುಳಂ- ಸಾರವನ್ನು,ಅಂತಂತೆ- ಹಾಗೆಹಾಗೆ, ಭಾವಿಸುತ್ತಂ- ಯೋಚಿಸುತ್ತ, ದಿವಿಜೇಂದ್ರಂ- ದೇವೇಂದ್ರನು, ಮಾರ್ಗದೊಳ್- ದಾರಿಯಲ್ಲಿ, ಮಾಳ್ಪ- ಮಾಡುವ, ಅತುಳಯಜನಮಂ- ಅಸದೃಶವಾದ ಪೂಜೆಯನ್ನು, ಪ್ರೀತಿಯಿಂ, ಕೈಕೊಳುತ್ತ- ಸ್ವೀಕರಿಸುತ್ತ, ಅಂದು- ಆಕಾಲದಲ್ಲಿ, ಅವನೀಭಾಗಕ್ಕೆ-ಭೂತಲಕ್ಕೆ, ಬರ್ಪ, ಉದ್ಯಜ್ಜಗದೊಳ್-ಉದ್ಯೋಗದಿಂದ, ಎಸೆದಂ-ಪ್ರಕಾಶಿಸಿದನು. ॥೨೧॥

ಅಂತು, ಏಳ್ತರುತ್ತಿರ್ಪನ್ನೆಗಂ- ಬರುತ್ತಿರುವಷ್ಟರಲ್ಲಿ, ಇತ್ತಲ್- ಅತಿಮನೋಹರವಾದ, ಜಂಬೂದ್ವೀಪದಲ್ಲಿ. * * * * * * * * * * *

ಆಶ್ರೀಗಿರೀಂದ್ರಂ- ಆ ಶ್ರೀಶೈಲವು, * ನಿಟಿಲನಯನನಂತೆ- ಪರಶಿವನಹಾಗೆ, ಒಪ್ಪಿದ್ದುದು-ಮನೋಹರವಾಗಿತ್ತು. * * * * * * *

### ಶ್ರೀಶೈಲವರವಾದರ್ಥ.

ಕಟಕ......ಜಿನಂ— ಕಟಕವಿಪಿನ- ತಪ್ಪಲಿನಲ್ಲಿರುವ ಅರಣ್ಯವೆಂಬ, ಹಸ್ತೀಂದ್ರಾಜಿನಂ- ಗಜಚರ್ಮವುಳ್ಳದ್ದು; ಚಂದ್ರ......ಶೀರ್ಷಂ— ಚಂದ್ರ- ಚಂದ್ರನೇನು, ಗಂಗಾ- ದೇವಗಂಗೆಯೇನು, ಇವುಗಳಿಂದ, ಘಟಿತ- ಸೇರಲ್ಪಟ್ಟ, ಶಿಖರ- ಕೋಡುಗಲ್ಲೆಂಬ, ಶೀರ್ಷಂ- ಶಿರಸ್ಸುಳ್ಳದ್ದು; ವ್ಯೋಮಕೇಶಾಭಿರಾಮಂ— ವ್ಯೋಮಕೇಶ- ಪರಶಿವನಿಂದ, ಅಭಿರಾಮಂ- ಮನೋಹರವಾದದ್ದು; ಪಟು........ಸಿದ್ಧಂ- ಪಟು- ಸಮರ್ಥವಾದ, ಮತಿ- ಬುದ್ಧಿಯುಳ್ಳ, ವಿಬುಧೇಂದ್ರ, ವಿದ್ವದ್ವರರಿಂದ, ಸ್ತುತ್ಯ- ಹೊಗಳಲ್ಪಡುವದಕ್ಕೆಯೋಗ್ಯವಾದ, ಪಾದ- ಸಮೀಪಪರ್ವತಗಳಿಂದ, ಪ್ರಸಿದ್ಧಂ- ಪ್ರಸಿದ್ಧವಾದದ್ದು. * * * * * *

---

* (ಅವ) ನಿಟಿಲ- ಹಣೆಯಲ್ಲಿ, ನಯನ- ನೇತ್ರವುಳ್ಳವನು, ... ... ॥೨೨॥

ವ್ಯೋಮಕೇಶಾಭಿರಾಮಂ ॥ ಪಟುಮತಿವಿಬುಧೇಂದ್ರಸಂಸ್ತುತ್ಯಪಾದಪ್ರಸಿದ್ಧಂ । ನಿಟಲನಯನನಂತೊಪ್ಪಿದುರ್ದ್ದಾಶ್ರೀಗಿರೀಂದ್ರಂ॥ ... ... ... ॥೨॥

ಕಂ ॥ ಶ್ರೀಯಂಚಕ್ರಿಗೆಸುವಚಶ್ರೀಯಂಬಿಧಿಗತುಳಕಾಮ್ಯಫಲಪದಮೋಕ್ಷ ॥ ಶ್ರೀಯುಂಮುನುಮುನಿಗಳ್ಗೊಲ್ದೀಯಲೊಡಂಶ್ರೀಗಿರೀಂದ್ರಮಾದುದುಪೆಸರಿಂ ॥೩॥

ವ ॥ ಆಗಿರಿಯಪಶ್ಚಿಮದಿಶಾಭಾಗದಲ್ಲಿ * * * * * * * * *

ಮ॥ ಪೊಳೆಯಿಂದಂಪರಿಕಾಲ್ಗಳಿಂದೆಕಳಮಕ್ಷೇತ್ರಂಗಳಿಂನಂದನಾ । ವಳಿಯಿಂದೈಕ್ಷವವಾಟಯಿಂಪ್ರವಿಳಸತ್ಪಾನೀಯಶಾಲಾಳಿಯಿಂ ॥ ಬೆಳೆಯಿಂತಳ್ತಪೊಲಂಗಳಿಂಕಮಲಕಲ್ಹಾರಾಂಕಕಾಸಾರದಿಂ । ವಿಳಸದ್ಗ್ರಾಮಶಿವಾಲಯಪ್ರಕರದಿಂಚೆಲ್ವಾಯ್ತುಕರ್ಣಾಟಕಂ ॥೪॥

ವ ॥ ಆಕರ್ಣಾಟಶ್ರೀಯಸೌಭಾಗ್ಯಸಾರಕೋಶಾಗಾರಮೆನಿಸಿ. * * * *

---

ಪರಶಿವಪುರವಾದರ್ಥ.

ಹಸ್ತ್ಯುದ್ರಾಜಿನಂ— ಗಜಚರ್ಮವುಳ್ಳವನು; ಚಂದ್ರಗಂಗಾಘಟಿತಶೀರ್ಷಂ- ಚಂದ್ರ ಗಂಗೆ ಇವರಿಂದ ಕೂಡಿದ ಶಿರಸ್ಸುಳ್ಳವನು; ವ್ಯೋಮಕೇಶಾಭಿರಾಮಂ- ಆಕಾಶವೇಕೇಶವಾಗಿರುವದರಿಂಮನೋಹರನಾದವನು; ಪಟು......ಪ್ರಸಿದ್ಧಂ— ಪಟುಮತಿ,ವಿಬುಧೇಂದ್ರ- ದೇವಶ್ರೇಷ್ಠರಿಂದ, ಸ್ತುತ್ಯ- ಹೊಗಳಲ್ಪಡುವದಕ್ಕೆಯೋಗ್ಯವಾದ, ಪಾದ- ಚರಣವುಳ್ಳೋಣದರಿಂದ, ಪ್ರಸಿದ್ಧಂ. ... ... ॥೨॥

* ಚಕ್ರಿಗೆ- ವಿಷ್ಣುವಿಗೆ, ಶ್ರೀಯಂ-ಲಕ್ಷ್ಮಿಯನ್ನು, ಬಿಧಿಗೆ- ಬ್ರಹ್ಮನಿಗೆ, ಸುವಚಶ್ರೀಯಂ- ವಚೋಲಕ್ಷ್ಮಿಯನ್ನೂ, ಮುನುಮುನಿಗಳ್ಗೆ- ಅತುಳಕಾಮ್ಯಫಲಮಂ— ಅತುಳ- ಅಸದೃಶವಾದ,ಕಾಮ್ಯ-ಇಚ್ಛೈಸುವದಕ್ಕೆಯೋಗ್ಯವಾದ, ಫಲ- ಫಲಕ್ಕೆ, ಪದ- ಸ್ಥಾನವಾದ, ಮೋಕ್ಷಶ್ರೀಯಂ- ಮೋಕ್ಷಲಕ್ಷ್ಮಿಯನ್ನೂ, ಒಲ್ದು- ಪ್ರೀತಿಸಿ, ಈಯಲ್- ಕೊಡಲು, ಒಡಂ- ಕೂಡಲೇ, ಪೆಸರಿಂ-ಶ್ರೀಗಿರೀದ್ರಂ-ಶ್ರೀಶೈಲವು, ಆದುದು. (ಅಂದರೆ) ಈ ಪರ್ವತವು ವಿಷ್ಣುಬ್ರಹ್ಮಾದಿಗಳಿಗೆ ಒಂದೊಂದುವಿಧವಾದ ಶ್ರೀಯನ್ನು ಕೊಟ್ಟಿರುವದರಿಂದ ಶ್ರೀಗಿರಿಯೆಂಬ ಹೆಸರುಳ್ಳದ್ದಾಯಿತೆಂದು ತಾತ್ಪರ್ಯವು ... ... ... ... ॥೩॥

ಆಶ್ರೀಗಿರಿಯ, ಪಶ್ಚಿಮದಿಶಾಭಾಗದಲ್ಲಿ- ಪಡುವಣದಿಕ್ಕಿನಲ್ಲಿ. * * * * * * * *

ಕರ್ಣಾಟಕಂ- ಕರ್ಣಾಟಕದೇಶವು, ಪೊಳೆಯಿಂದಂ, ಪರಿಕಾಲ್ಗಳಿಂದೆ- ಹರಿಯುವಕಾಲಿವೆಗಳಿಂದಲೂ, ಕಳಮಕ್ಷೇತ್ರಂಗಳಿಂ- ಬತ್ತದಗದ್ದೆಗಳಿಂದಲೂ, ನಂದನಾವಳಿಯಿಂದೆ- ಉಪವನಪಜ್ಕ್ತಿಗಳಿಂದಲೂ, ಐಕ್ಷವವಾಟಿಯಿಂ- ಕಬ್ಬಿನಗದ್ದೆಗಳಿಂದಲೂ, ಪ್ರವಿಳಸತ್ಪಾನೀಯಶಾಲಾಳಿಯಿಂ- ಪ್ರಕಾಶಮಾನವಾದ ಅರವಂಟಿಗೆಗಳ ಪಜ್ಕ್ತಿಯಿಂದಲೂ, ಬೆಳೆಯಿಂ- ಪೈರುಗಳಿಂದ, ತಳ್ತ- ತುಂಬಿದ, ಪೊಲಂಗಳಿಂ- ಹೊಲಗಳಿಂದಲೂ, ಕಮಲಕಲ್ಹಾರಾಂಕಕಾಸಾರದಿಂ— ಕಮಲ- ತಾವರೆ, ಕಲ್ಹಾರ- ಸುಗಂಧವಿಶಿಷ್ಟವಾದತಾವರೆ ಇವುಗಳೇ, ಅಂಕ- ಚಿಹ್ನೆಯಾಗುಳ್ಳ, (ಅಂದರೆ ಕಮಲಕಲ್ಹಾರಗಳಿಂ ಭರಿತಮಾದ) ಕಾಸಾರದಿಂ- ಸರೋವರದಿಂದಲೂ, ವಿಳ... ಪ್ರಕರದಿಂ- ವಿಳಸತ್- ಪ್ರಕಾಶಿಸುವ, ಗ್ರಾಮ, ಶಿವಾಲಯ-- ಶಿವದೇವಸ್ಥಾನ ಇವುಗಳ, ಪ್ರಕರದಿಂ- ಸಮೂಹದಿಂದಲೂ, ಚೆಲ್ವಾಯ್ತು- ಮನೋಹರವಾಯ್ತು. ... ... ... ... ॥೪॥

ಆಕರ್ಣಾಟಶ್ರೀಯ- ಆಕರ್ಣಾಟದೇಶಲಕ್ಷ್ಮಿಯ, ಸೌಭಾಗ್ಯ- ಐಶ್ವರ್ಯಕ್ಕೆ, ಸಾರ- ಶ್ರೇಷ್ಠವಾದ, ಕೋಶಾಗಾರಂ- ಬೊಕ್ಕಸದ ಮನೆಯು, ಎನಿಸಿ. * * * * * * * * * * *

---

* (ಅವ) ಚಕ್ರಾಯುಧವುಳ್ಳವನು. ... ... ... ॥೩॥

ಮಲ್ಲಿಕಾ || ತುಂಗಸಾಲವಿಶಾಲವೀಧಿಸನಾಥಮುನ್ನತಕೇತನಾ | ಲಿಂಗಿತೋಜ್ಜ್ವಳ
ಹರ್ಮ್ಯಮಂಬರಚುಂಬಿಗೋಪುರಮಂಡಿತಂ || ಮಂಗಳಾಕರಲಿಂಗಮಂದಿರಮಂಜುಳಂಕ
ರಮೊಪ್ಪಿತಾ | ತಿಂಗಳೇಶ್ವರಬಾಗವಾಡಿಯೆನಿಪ್ಪುದೊಂದುಮಹಾಪುರಂ|| ... ||೧೫||

ಚಂ|| ಪರಮಪವಿತ್ರವಂಶನಭವಾಂಘ್ರಿಸರೋರುಹಸಾರಭೃಂಗನೀ| ಶ್ವರಭಜಕಪ್ರಮೋ
ದಕರನುಜ್ಜ್ವಳಕೀರ್ತಿಯುತಂತ್ರಯೀವಿದಾಂ|| ವರನೆನಿಸಿರ್ಪ್ಪನಾಪುರದೊಳಾಗಮವೇದಿನ
ಯಾನ್ವಿತಂಗುಣಾ | ಕರನೆನಿಸಿರ್ದ್ದಮಂಡಿಗೆಯಮಾದರಸಂಗುರುಶೈವಭೂಸುರಂ|| ||೧೬||

ಉ|| ಆತನಧರ್ಮಪತ್ನಿಪತಿಭಕ್ತಿವಿರಾಜಿತೆಪಾವನಾಂಗಿಸು | ಶ್ರೌತಶಿವಾಂಘ್ರಿಪದ್ಮಭ
ಜನಪ್ರಿಯೆಸೌಮ್ಯಗುಣಾಭಿರಾಮೆವಿ || ಖ್ಯಾತೆಮೃದುಸ್ಮಿತದ್ಯುತಿಸುಧಾರ್ದ್ರವಚೋನ್ವಿತೆ
ಮಾದಲಾಂಬೆಯೆಂ | ಬಾತರಳಾಕ್ಷಿರುಜಿಪಳಲಂಪಿನರೂಪುವಿಳಾಸದೇಳ್ಗೆಯಿಂ ... ||೧೭||

---

ತುಂಗ...... ಸನಾಥಂ- ತುಂಗ- ಉನ್ನತಗಳಾದ, ಸಾಲ- ಕೋಟೆಗಳುಳ್ಳ, ವಿಶಾಲ- ವಿಸ್ತಾರವಾದ, ವೀಧಿ- ಬೀದಿಗಳಿಂದ, ಸನಾಥಂ- ಕೂಡಿದ; ಉನ್ನತ......ಹರ್ಮ್ಯಂ- ಉನ್ನತ- ಉದ್ದವಾದ,ಕೇತನ- ಧ್ವಜಗಳಿಂದ, ಆಲಿಂಗಿತ- ಆಲಿಂಗಿಸಲ್ಪಟ್ಟ, ಉಜ್ಜ್ವಳ- ಪ್ರಕಾಶಮಾನವಾದ, ಹರ್ಮ್ಯಂ- ಉಪ್ಪರಿಗೆಗಳುಳ್ಳ; ಅಂಬರ........ಮಂಡಿತಂ- ಅಂಬರಚುಂಬಿ- ಅಂತರಿಕ್ಷವನ್ನುಮುಟ್ಟುತ್ತಲಿರುವ, ಗೋಪುರ- ಪಟ್ಟಣದ ಬಾಗಿಲುಗಳಿಂದ, ಮಂಡಿತಂ- ಅಲಂಕರಿಸಲ್ಪಟ್ಟ; ಮಂಗಳಾ...... ಮಂಜುಳಂ- ಮಂಗಳ- ಶುಭಕ್ಕೆ. ಆಕರ- ಆಶ್ರಯವಾದ, ಲಿಂಗಮಂದಿರ- ಶಿವದೇವಸ್ಥಾನಗಳಿಂದ, ಮಂಜುಳಂ- ಮನೋಹರವಾದ; ಆತಿಂಗಳೇಶ್ವರಬಾಗವಾಡಿಯೆನಿಪ್ಪುದು- ಬಾಗವಾಡಿಯೆಂಬಹೆಸರುಳ್ಳ, ಒಂದುಮಹಾಪುರಂ- ಒಂದುದೊಡ್ಡಪಟ್ಟಣವು, ಕರಂ- ಚೆನ್ನಾಗಿ, ಒಪ್ಪಿತಂ. ... ... ... ... ... ... ||೧೫||

ಆಪುರದೊಳ್- ಆಬಾಗವಾಡಿಯೆಂಬಪಟ್ಟಣದಲ್ಲಿ, ಮಂಡಿಗೆಯಮಾದರಸಂ, ಪರಮಪವಿತ್ರವಂಶಂ- ಅತ್ಯಂತಪರಿಶುದ್ಧವಾದವಂಶವುಳ್ಳವನು, ಆಭವಾಂಘ್ರಿ......ಭೃಂಗಂ— ಅಭವ- ಪರಮೇಶ್ವರನ, ಅಂಘ್ರಿಸರೋರುಹ- ಪಾದಕಮಲಕ್ಕೆ, ಸಾರ- ಶ್ರೇಷ್ಠವಾದ, ಭೃಂಗಂ- ಭ್ರಮರನಾದವನು; ಈಶ್ವರಭಜಕಪ್ರಮೋದಕರಂ—ಈಶ್ವರಭಜಕ- ಶಿವಭಕ್ತರಿಗೆ, ಪ್ರಮೋದಕರಂ- ಸಂತೋಷವನ್ನುಂಟುಮಾಡುವನು; ಉಜ್ಜ್ವಳಕೀರ್ತಿಯುತಂ- ಪ್ರಕಾಶಿಸುವಯಶಸ್ಸಿನಿಂದಕೂಡಿದವನು; ತ್ರಯೀವಿದಾಂವರಂ— ಮೂರುವೇದಗಳನ್ನು ತಿಳಿದವರಲ್ಲಿಶ್ರೇಷ್ಠನಾದವನು, ಕರಂ- ಅತ್ಯಂತನಾಗಿ, ಸದ್ಗುಣಾಶ್ರಯಂ, ಎನಿಸಿ, ಇರ್ದ್ದ, ಗುರುಶೈವಭೂಸುರಂ- ಶೈವಬ್ರಾಹ್ಮಣಶ್ರೇಷ್ಠನಾದವನು, ಎನಿಸಿ, ಇರ್ಪ್ಪಂ. ... ... ||೧೬||

ಆತನ, ಧರ್ಮಪತ್ನಿ- ಧರ್ಮಪತ್ನಿಯಾದ; ಪತಿಭಕ್ತಿವಿರಾಜಿತೆ- ಪತಿಯಲ್ಲಿ ಭಕ್ತಿಯಿಂದ ಪ್ರಕಾಶಿಸುವ;ಪಾವನಾಂಗಿ- ಪರಿಶುದ್ಧವಾದ ದೇಹವುಳ್ಳ; ಸುಶ್ರೌತಶಿವಾಂಘ್ರಿಪದ್ಮಭಜನಪ್ರಿಯೆ- ಶ್ಲಾಘ್ಯವಾದ ಪರಶಿವನ ಪಾದಕಮಲಧ್ಯಾನದಲ್ಲಿ ಆಸಕ್ತಿಯುಳ್ಳ; ಸೌಮ್ಯಗುಣಾಭಿರಾಮೆ-ಶಾಂತಿಗುಣದಿಂಮನೋಹರಳಾದ; ವಿಖ್ಯಾತೆ- ಪ್ರಸಿದ್ಧಳಾದ; ಮೃದು...ನ್ವಿತೆ- ಮೃದುಸ್ಮಿತ- ಮಂದಹಾಸದ, ದ್ಯುತಿ- ಕಾಂತಿಯೆಂಬ, ಸುಧಾ- ಅಮೃತದಿಂದ, ಆರ್ದ್ರ- ಸಿಕ್ತವಾದ, ವಚಃ- ಮಾತಿನಿಂದ, ಅನ್ವಿತೆ- ಕೂಡಿದ; ಮಾದಲಾಂಬೆಯೆಂಬ, ಆತರಳಾಕ್ಷಿ- ಚಂಚಲವಾದ ನೇತ್ರವುಳ್ಳ ಸ್ತ್ರೀಯು, ಅಲಂಪಿನ- ಅಧಿಕವಾದ, ರೂಪುವಿಳಾಸದ, ಏಳ್ಗೆಯಿಂ- ಅಭಿವೃದ್ಧಿಯಿಂದ, ರುಜಿಪಳ್- ಪ್ರಕಾಶಿಸುವಳು. ... ... ... ... ... ||೧೭||

ಕಂ ॥ ಹರಪೂಜೆಗೆಯ್ವುತಂ ಶಂ । ಕರಶರಣರನಳ್ತಿಯಿಂ ಸಮರ್ಚಿಸುತಗಜಾ॥ ವರ ಚರಿತಂಗಳನತ್ಯಾ। ದರದಿಂದಾಕರ್ಣಿಸುತ್ತಮವರೊಪ್ಪಿರ್ದರ್ ॥ ... ... ॥೨೮॥

ವ॥ ಅಂತಿರುತ್ತಮಿರ್ದೊಂದುದಿವಸಂ ಮಾದಲಾಂಬಿಕೆ ಮೃಕಂಡುಶಿಲಾದಾದಿ ಚರಿತ್ರಂಗಳ ನಾಕರ್ಣಿಸುತ್ತಂ ತನಗೆ ತನಯ ರಿಲ್ಲದಿರ್ಪುದರಿಂ ಮರುಗಿ ಮನಂಗುಂದಿಬಿಸುಸುಯ್ದು ಮನೋರಮಣನೊಡನಿಂತೆಂದಳ್॥ * * * * * * * * *

ಕಂ॥ ನಳಿನಂಬಳೆಯದಪೊಳೆಯೆಳೆ । ಗಿಳಿಬಳೆಯದಚೂತಲತಿಕೆಬಾಲಮರಾಳಂ ॥ ಬಳೆಯದಸರಸಿಸುಗರ್ಭಂ । ಬಳೆಯದಬಾಲಕಿಯಪೊಡೆನಿರರ್ಥಕಮಲ್ತೆ ॥ ... ॥೨೯॥

ಕಂ॥ ಮಣಿಯಿಲ್ಲದಮೇಖಲೆದಿನ । ಮಣಿಯಿಲ್ಲದಗಗನಮಂಚೆಯಿಲ್ಲದಪುಳಿನಂ ॥ ಗುಣಮಿಲ್ಲದಸಿರಿಯೊಲವಿಂ । ಕುಣಿವರ್ಭಕನಿಲ್ಲದಂಗಣಂ ಮಂಜುಳಮೇ ॥ ... ... ॥೩೦॥

ಚಂ॥ ಸರಸಿಜದಲ್ಲಿ ಸಿಲ್ಕಿದಳಿಯಂತೆ ಜಿನುಂಗಿ ಸರೋಜಕೋರಕಂ। ಬಿರಿವವೊಲೊರ್ಮೆ ಮೆಲ್ನಗೆಯನೊಯ್ಯನೆ ಸೂಸಿ ಮರಾಳಶಾಬದಂ ॥ ತಿರೆಸೊಬಗಾಂತು ದಟ್ಟಡಿಯನಿಟ್ಟೆಳೆಗನ್ನ

---

ಅವರ್- ಆ ದಂಪತಿಗಳು, ಹರಪೂಜೆಗೆಯ್ವುತಂ- ಶಿವಪೂಜೆಯನ್ನು ಮಾಡುತ್ತ, ಶಂಕರಶರಣರಂ- ಶಿವಶರಣರನ್ನು, ಅಳ್ತಿಯಿಂ- ಪ್ರೀತಿಯಿಂದ, ಸಮರ್ಚಿಸುತೆ- ಪೂಜಿಸುತ್ತ, ಅಗಜಾವರಚರಿತಂಗಳಂ- ಶಿವನ ಚರಿತ್ರೆಗಳನ್ನು, ಅತ್ಯಾದರದಿಂದೆ- ಅತಿಪ್ರೀತಿಯಿಂದ, ಆಕರ್ಣಿಸುತ್ತುಂ- ಕೇಳುತ್ತ, ಒಪ್ಪಿ, ಇರ್ದರ್. ॥೨೮॥

ಅಂತು, ಇರುತ್ತಂ, ಇರ್ದು, ಒಂದುದಿವಸಂ, ಮಾದಲಾಂಬಿಕೆ, ಮೃಕಂಡುಶಿಲಾದಾದಿಚರಿತ್ರಂಗಳಂ- ಮೃಕಂಡುಮುನಿ ಶಿಲಾದ ಮುಂತಾದವರ ಚರಿತ್ರೆಗಳನ್ನು, ಆಕರ್ಣಿಸುತ್ತಂ- ಕೇಳುತ್ತ, ತನಗೆ, ತನಯರ್- ಮಕ್ಕಳು, ಇಲ್ಲದಿರ್ಪುದರಿಂ- ಇಲ್ಲದಿರುವದರಿಂದ, ಮರುಗಿ- ದುಃಖಪಟ್ಟು, ಮನಂಗುಂದಿ- ಮನಸ್ಸಿಳಿದು, ಬಿಸುಸುಯ್ದು- ಬಿಚ್ಚನೆನಿಟ್ಟುಸಿರುಬಿಟ್ಟು, ಮನೋರಮಣನೊಡನೆ- ಪ್ರಾಣಪ್ರಿಯನಾದ ಮಾದರಸನೊಡನೆ, ಇಂತು, ಎಂದಳ್. * * * * * * * * * * * * * * *

ನಳಿನಂ- ಕಮಳವು, ಬಳೆಯದ- ಬಳೆಯದಿರುವ, ಪೊಳೆ; ಎಳೆಗಿಳಿ- ಬಾಲಶುಕವು, ಬಳೆಯದ, ಚೂತಲತಿಕೆ- ಮಾವಿನಕೊಂಬೆಯು; ಬಾಲಮರಾಳಂ- ಹಂಸಪಕ್ಷಿಯಮರಿಯು, ಬಳೆಯದ, ಸರಸಿ- ಸರೋವರವು; ಸುಗರ್ಭಂ- ಒಳ್ಳೇಗರ್ಭವು, ಬಳೆಯದ, ಬಾಲಕಿಯ- ಹುಡುಗಿಯ, ಪೊಡೆ- ಹೊಟ್ಟೆಯು, ನಿರರ್ಥಕಂ- ನಿಷ್ಪ್ರಯೋಜನವಾದದ್ದು, ಅಲ್ತೆ- ಅಲ್ಲವೇ? ... ... ... ... ... ॥೨೯॥

ಮಣಿ- ರತ್ನವು, ಇಲ್ಲದ, ಮೇಖಲೆ- ಕಾಂಚಿಯು; ದಿನಮಣಿ- ಸೂರ್ಯನು, ಇಲ್ಲದ, ಗಗನಂ- ಆಕಾಶವು; ಅಂಚೆ- ಹಂಸಪಕ್ಷಿಯು, ಇಲ್ಲದ, ಪುಳಿನಂ- ಮಳಲಿನಗುಡ್ಡೆಯು; ಗುಣಂ- ಸದ್ಗುಣವು, ಇಲ್ಲದ, ಸಿರಿ- ಐಶ್ವರ್ಯವು; ಒಲವಿಂ- ಪ್ರೀತಿಯಿಂದ, ಕುಣಿವ, ಅರ್ಭಕಂ- ಶಿಶುವು, ಇಲ್ಲದ, ಅಂಗಣಂ- ಮನೆಯಪ್ರದೇಶವು, ಮಂಜುಳಮೇ- ಮನೋಹರವೆ? ... ... ... ... ... ... ... ॥೩೦॥

ಸರಸಿಜದಲ್ಲಿ- ಕಮಲದಲ್ಲಿ, ಸಿಲ್ಕಿದ- ಸಿಕ್ಕಿದ, ಅಳಿಯಂತೆ- ತುಂಬಿಯಹಾಗೆ, ಜಿನುಂಗಿ- ಶಬ್ದಮಾಡಿ; ಸರೋಜಕೋರಕಂ- ಕಮಲದಮೊಗ್ಗು, ಬಿರಿವವೊಲ್- ಅರಳುವಹಾಗೆ, ಒರ್ಮೆ- ಒಂದಾವರ್ತಿ, ಮೆಲ್ನಗೆಯಂ- ಮಂದಹಾಸವನ್ನು, ಒಯ್ಯನೆ- ಮೆಲ್ಲಗೆ, ಸೂಸಿ- ಪ್ರಸರಿಸಿ; ಮರಾಳಶಾಬದಂತಿರೆ- ಹಂಸಪಕ್ಷಿಯಮರಿಯಹಾಗೆ, ಸೊಬಗಾಂತು- ಸೊಗಸನ್ನು ಹೊಂದಿ, ದಟ್ಟಡಿಯಂ- ತಪ್ಪುಹೆಜ್ಜೆಯನ್ನು, ಇಟ್ಟು, ಎಳೆಗನ್ನಡಪಕ್ಕಿ

ಡವಕ್ಕಿಯಂತೆನು | ಣ್ಪೆರೆದತೊದಳ್ ತೊಡಂಕೆನುಡಿದಾಡುವಕಂದನನೆಂದುಕಾಣ್ಬೆನೋ ||೩೧||

ಮತ್ತೇ|| ಪಲವಾಳಾಪದೊಳೇನೊಚೆಲ್ವಣುಗನಂಕಟ್ಟಕ್ಕರಿಂದೆತ್ತಿಪೆಂ| ಪಲರ್ವನ್ನಂಬಿಗಿ
ದಪ್ಪಿದಿರ್ದನಳಿದೋಳ್ತಾಂಬಂಜೆದೋಳ್ ನೋಡದಿ|| ರ್ಪಲರ್ಗಣ್ತಾಂಬಲೆಗಣ್ಸುರಾಗರಸದೊ
ಳ್ಪಂಬೀರುತಂಜೋಗುಳಂ |ನಲವಿಂಪಾಡದಪೆಣ್ಣಬಾಯ್ಬಿಲದಬಾಯಾತ್ತೆಂದೊಡೇಂಸಾಲದೆ||

ವ.|| ಎಂದುತನೂಭವಲಾಭಲೋಭದಿಂ ನುಡಿದನಿಜರಮಣಿಯ ದೀನಾನನಮಂಕಂಡು
ಮಾದರಸಂ ಮ್ಲಾನಮುಖನಾಗುತಿಂತೆಂದಂ * * * * * * * *

ಚಂ|| ಪಡೆಯದೆಬರ್ಕುಮೇಸುತನವಕ್ತ್ರಮನೀಕ್ಷಿಪಲಲ್ಲಿಗೆಯ್ವನು | ಣ್ಪಿಡಿದನುರಾ
ಗದಿಂನಗಿಸುವಳ್ಕರೊಳಪ್ಪುವನೆತ್ತಿಯೊಡ್ಡಿಚೈ || ಗುಡುವವಿಳಾಸದಿಂಚುಬುಕಮಂಪಿಡಿದೆ
ತ್ತಿಕಡಂಗಿಮುದ್ದಿಸು| ತ್ತಡಿಗಡಿಗಂತೊದಳ್ನುಡಿಯನಾಲಿಪಸೈಪುಸರೋರುಹೇಕ್ಷಣೆ||೩೩||

ಕಂ||ಈಸಿರಿಯೀನರುಜೌವನ| ವೀಸುಭಗತೆಯೀವಿಳಾಸಮೀಸಕಳಕಳಾ| ಭ್ಯಾಸಂ
ಸುತನಂಪಡೆಯದ | ದೂಸರಿನಿನಿತುಂನಿರರ್ಥಮಲ್ತೆಮೃಗಾಕ್ಷೀ || ... ... ||೩೪||

---

ಯಂತೆ- ಗಿಣಿಯುಮರಿಯಹಾಗೆ, ನುಣ್ಪೆರದ- ಮಧುರವಾದ, ತೊದಳ್- ತೊದಳುಮಾತು, ತೊಡಂಕೆ- ತಡೆಯುತ್ತಿರಲು; ನುಡಿದು- ಮಾತನಾಡಿ, ಆಡುವ- ಆಟವಾಡುವ, ಕಂದನಂ- ಮಗನನ್ನು, ಎಂದು- ಯಾವಾಗ; ಕಾಣ್ಬೆನೋ- ಕಾಣುವೆನೋ? ... ... ... ... ... ... ||೩೧||

ಪಲವುಆಲಾಪದೊಳ್- ಅನೇಕವಚನದಿಂದ, ಏನೊ- ಏನುಪ್ರಯೋಜನ; ಚೆಲ್ವಣುಗನಂ- ಸುಂದರನಾದಮಗನನ್ನು, ಕಟ್ಟಕ್ಕರಿಂದೆ- ಅತಿಪ್ರೀತಿಯಿಂದ, ಎತ್ತಿ- ಎತ್ತಿಕೊಂಡು,ಪೇವು-ಅತಿಶಯವು, ಅಲರ್ವನ್ನಂ- ಹೆಚ್ಚುವಹಾಗೆ, ಬಿಗಿದು- ಗಟ್ಟಿಯಾಗಿ, ಅಪ್ಪದಿರ್ದ- ಆಲಿಂಗಿಸದಿರುವ,ನಳಿದೋಳ್- ಕೋಮಲವಾದತೋಳು, ತಾಂ, ಬಂಜೆದೋಳ್- ಬಂಜೆಯತೋಳು; ನೋಡದಿರ್ಪ- ನೋಡದಿರುವ, ಅಲರ್ಗಣ್- ಪುಷ್ಪದಂತಿರುವನೇತ್ರವು, ತಾಂ, ಬಲೆಗಣ್- ಬಲೆಯಂತಿರುವಕಣ್ಣು; ಸುರಾಗರಸದ- ಸಮೀಚೀನವಾದಪ್ರೀತಿರಸದ,ಬಳ್ಪಂ- ಸಮೀಚೀನತ್ವವನ್ನು, ಬೀರುತಂ, ಜೋಗುಳಂ- ಜೋಗುಳಪದವನ್ನು, ನಲವಿಂ- ಸಂತೋಷದಿಂದ, ಪಾಡದ- ಹಾಡದಿರುವ, ಪೆಣ್ಣ- ಸ್ತ್ರೀಯ, ಬಾಯ್- ತಾಂ, ಬಿಲದಬಾಯ್- ಬಿಲದಹಾಗಿರುವಬಾಯಿ, ಎಂದೊಡೆ, ಸಾಲದೆಏಂ- ಸಾಲುವದಿಲ್ಲವೇ? ... ... ... ... ... ||೩೨||

ಎಂದು- ತನೂಭವಲಾಭಲೋಭದಿಂ- ಪುತ್ರಪ್ರಾಪ್ತಿಯಆಸೆಯಿಂದ, ನುಡಿದ- ಹೇಳಿದ, ನಿಜರಮಣಿಯ- ತನ್ನಪತ್ನಿಯ, ದೀನಾನನಮಂ- ದೈನ್ಯವಿಶಿಷ್ಟವಾದಮುಖವನ್ನು, ಕಂಡು- ನೋಡಿ, ಮಾದರಸಂ- ಮ್ಲಾನಮುಖಂ- ಬಾಡಿದಮುಖವುಳ್ಳವನು, ಆಗುತೆ- ಇಂತೆಂದು. * * * * * * * *

ಸರೋರುಹೇಕ್ಷಣೆ- ಕಮಲಾಕ್ಷಿಯೆ! ಸುತನವಕ್ತ್ರಮಂ- ಮಗನಮುಖವನ್ನು, ಈಕ್ಷಿಪ- ನೋಡುವ; ಲಲ್ಲಿಗೆಯ್ವ- ಮುದ್ದಾಡುವ, ನುಣ್ಪಿಡಿದು- ಮಧುರವಾಗಿ, ಅನುರಾಗದಿಂ- ಪ್ರೀತಿಯಿಂದ, ನಗಿಸುವ; ಅಳ್ಕರೊಳ್- ಪ್ರೀತಿಯಿಂದ, ಅಪ್ಪುವ- ಆಲಿಂಗಿಸುವ; ನೆತ್ತಿಯ, ಒಡ್ಡಿ- ಚಾಚಿ, ಚೈಗುಡುವ- ಚೈಎಂದು ಹೇಳುವ, ವಿಳಾಸದಿಂ- ಲೀಲೆಯಿಂದೆ, ಚುಬುಕವಂ- ಗಲ್ಲವನ್ನು, ಪಿಡಿದು, ಎತ್ತಿ, ಕಡಂಗಿ- ಕುತೂಹಲಪಟ್ಟು, ಮುದ್ದಿಸುತ್ತೆ- ಮುದ್ದಿಡುತ್ತ, ಅಡಿಗಡಿಗಂ- ಬಾರಿಬಾರಿಗೂ, ತೊದಳ್ನುಡಿಯಂ- ತೊದಳುಮಾತನ್ನು, ಆಲಿಪ- ಕೇಳುವ, ಸೈಪು- ಪುಣ್ಯವು, ಪಡೆಯದೆ- ಪಡೆದುಕೊಳ್ಳದೆ, ಬರ್ಕುಮೇ- ಬರುವದೆ? ||೩೩||

ಮೃಗಾಕ್ಷಿ- ಜಿಂಕೆಯಕಣ್ಣಿನಹಾಗೆ ಕಣ್ಣುಳ್ಳವಳೇ! ಈಸಿರಿ- ಈ ಐಶ್ವರ್ಯವು, ಈನರುಜೌವನಂ- ಈಲಿ

ವ॥ ಎಂದು ನಿರ್ವೇದಂಬಟ್ಟೀರ್ವರುಮಾಳೋಚಿಸಿ ಕತಿಪಯಪುತ್ರಕಾಮವ್ರತಂಗ ಳಂತಳೆದುಂ ಕೆಲವು ನೋಂಪಿಯನಲಂಪಿನಿಂ ಮಾಡಿಯುಂ ಮನೋರಥಂ ದೊರೆಯದಿರೆ ದೊರೆವೆತ್ತ ಶಾಸ್ತ್ರವಯೋವೃದ್ಧರಿಂ ಪ್ರಾರ್ಥನೆಯಂ ನೋಡಿಸುತ್ತಂ ನಂದೀಶ್ವರನ ನೋಂಪಿಯಿಂ ನಂದನೋದಯಂ ಸಮನಿಪುದೆಂಬುದಂ ನಿರ್ಧರಿಸಿ ನಂಬಿ ನಲವೇರಿ ನಿಜಪುರಪುರೋಭಾಗ ಭಾಸುರಶಿವಾಲಯಕ್ಕೆ ಸಂಭ್ರಮದಿನೇಳ್ತಂದು ನಂದೀಶ್ವರನಂ ಕಂಡು ಕೊಂಡಾಡಿ ದಂಡಪ್ರಣಾಮಂಗೆಯ್ದು ಖಂಡಿತೋತ್ಸವಂ ಮಿಗೆ ಸೋಮವಾರಾದಿಯಾಗಿ ನವದಿವಸಂ ನೋಂಪಿಗೆಯ್ದು ಮರುದಿವಸದುದಯದೊಳಾ ವೃಷೇಂದ್ರಂಗೆ ಮಡದಿವೆರಸಿ ಸಡಗರಿಸಿ॥ * * * *

ರಗಳೆ॥ ದಧಿಮಧುಸುಧಾಸರ್ಪಿರೈಕ್ಷವರಸಂಗಳಿಂ । ವಿಧುವಿಮಳಮಲಯಜಹಿಮಾಂಬುಪೂರಂಗಳಿಂ । ಸಾರಕಾಶ್ಮೀರಘನಸಾರಗಂಧಂಗಳಿಂ । ಸಾರಸಾರಾತಿಸಿತಧವಳಾಕ್ಷತಂಗಳಿಂ । ಭೂರಿಕಲ್ಹಾರಕರವೀರಕುಸುಮಂಗಳಿಂ। ಚಾರುರುಚಿಖಚಿತನವಮೃದುಳವಸ್ತ್ರಂ

---

ಧಿಕೆಯ ಯೌವ್ವನವು, ಈ ಸುಗುಣತೆ- ಈ ಸೌಂದರ್ಯವು, ಈ ವಿಳಾಸಂ- ಈ ಲೀಲೆಯು, ಈ ಸಕಳಕಳಾಭ್ಯಾಸಂ- ಈ ಸಮಸ್ತವಿದ್ಯಾಭ್ಯಾಸವು, ಇನಿತುಂ- ಇಷ್ಟೂ, ಸುತನಂ- ಮಗನನ್ನು, ಪಡೆಯದ- ಹೊಂದದಿರುವ, ದೂಸರಿಂ- ದುಃಖದಿಂದ, ನಿರರ್ಥಮಲ್ತೆ- ನಿಷ್ಪ್ರಯೋಜನವಲ್ಲವೇ? ... ... ... ॥೩೪॥

ಎಂದು, ಈರ್ವರುಂ, ನಿರ್ವೇದಂಬಟ್ಟು- ದುಃಖಪಟ್ಟು, ಆಲೋಚಿಸಿ, ಕತಿಪಯಪುತ್ರಕಾಮವ್ರತಂಗಳಂ- ಕೆಲವು ಪುತ್ರೇಚ್ಛಾವ್ರತಗಳನ್ನು, ತಳೆದುಂ- ಧರಿಸಿ ಕೂಡ, ಕೆಲವು ನೋಂಪಿಯುಂ- ಕೆಲವು ನೋಂಪಿಗಳನ್ನು, ಅಲಂಪಿನಿಂ- ಅತಿಶಯವಾಗಿ, ಮಾಡಿಯುಂ, ಮನೋರಥಂ ದೊರೆಯದಿರೆ- ಅಭಿಲಾಷೆಯು ಪೂರೈಸದಿರಲು; ದೊರೆವೆತ್ತ- ಪ್ರಸಿದ್ಧರಾದ, ಶಾಸ್ತ್ರವಯೋವೃದ್ಧರಿಂ- ಶಾಸ್ತ್ರಜ್ಞರಾಗಿಯೂ ವೃದ್ಧರಾಗಿಯೂ ಇರುವವರಿಂದ, ಪ್ರಾರ್ಥನೆಯುಂ- ದೇವತಾಪ್ರಾರ್ಥನೆಗಳನ್ನು, ನೋಡಿಸುತ್ತ- ನೋಡಿಸಿ, ನಂದೀಶ್ವರನ, ನೋಂಪಿಯಿಂ, ನಂದನೋದಯಂ- ಪುತ್ರಾವಿರ್ಭಾವವು, ಸಮನಿಪುದು- ಉಂಟಾಗುವದು, ಎಂಬುದಂ- ಹೀಗೆನ್ನುವದನ್ನು, ನಿರ್ಧರಿಸಿ- ನಿಶ್ಚೈಸಿ, ನಂಬಿ, ನಲವೇರಿ- ಸಂತೋಷಪಟ್ಟು, ನಿಜ..... ಶಿವಾಲಯಕ್ಕೆ- ನಿಜಪುರ- ತಮ್ಮ ಪಟ್ಟಣದ, ಪುರೋಭಾಗ- ಮುಂದುಗಡೆಯಲ್ಲಿ, ಭಾಸುರ- ಪ್ರಕಾಶಮಾನವಾದ, ಶಿವಾಲಯಕ್ಕೆ- ಶಿವದೇವಸ್ಥಾನಕ್ಕೆ, ಸಂಭ್ರಮದಿಂ- ಸಡಗರದಿಂದ, ಏಳ್ತಂದು- ಬಂದು, ನಂದೀಶ್ವರನಂ, ಕಂಡು, ಕೊಂಡಾಡಿ- ಹೊಗಳಿ, ದಂಡಪ್ರಣಾಮಂಗೆಯ್ದು- ದಂಡದಂತೆ ನಮಸ್ಕರಿಸಿ, ಅಖಂಡಿತೋತ್ಸವಂ- ಅತ್ಯಂತೋತ್ಸವವು, ಮಿಗೆ- ಹೆಚ್ಚಾಗಲು; ಸೋಮವಾರಾದಿಯಾಗಿ- ಸೋಮವಾರ ಮೊದಲ್ಗೊಂಡು, ನವದಿವಸಂ- ಒಂಭತ್ತು ದಿವಸದ ಪರ್ಯಂತರ, ನೋಂಪಿಗೆಯ್ದು- ನೋಂಪಿಯಂ ಮಾಡಿ, ಮರುದಿವಸದ, ಉದಯಸಮಯದೊಳ್- ಸೂರ್ಯೋದಯಕಾಲದಲ್ಲಿ, ಮಡದಿವೆರಸಿ- ಪತ್ನಿಯೊಡನೆ ಕೂಡಿಕೊಂಡು, ಸಡಗರಿಸಿ- ಸಂಭ್ರಮಗೊಂಡು, ಆ ವೃಷೇಂದ್ರಂಗೆ. * * * * * * * * * * * * * * * * *

ದಧಿ........ರಸಂಗಳಿಂ- ದಧಿ- ಮೊಸರು, ಮಧು- ಜೇನುತುಪ್ಪ, ಸುಧಾ- ಹಾಲು, ಸರ್ಪಿಃ- ತುಪ್ಪ, ಐಕ್ಷವರಸಂಗಳಿಂ- ಕಬ್ಬಿನರಸ ಇವುಗಳಿಂದಲೂ; ವಿಧು........ಪೂರಂಗಳಿಂ- ವಿಧು- ಪಚ್ಚಕರ್ಪೂರ, ವಿಮಳ- ನಿರ್ಮಲವಾದ, ಮಲಯಜ- ಶ್ರೀಗಂಧ, ಇವುಗಳಿಂ ಕೂಡಿದ, ಹಿಮಾಂಬುಪೂರಂಗಳಿಂ- ಶೀತಲವಾದ ಜಲದಿಂದಲೂ: ಸಾರಸಾರಾತಿಸಿತಧವಳಾಕ್ಷತಂಗಳಿಂ— ಸಾರಸಾರಾತಿ- ಕಮಲಕ್ಕೆ ಶತ್ರುವಾದ ಚಂದ್ರನ ಹಾಗೆ, ಸಿತ- ಶುಭ್ರವಾದ, ಧವಳಾಕ್ಷತಂಗಳಿಂ; ಭೂರಿ- ಅನೇಕವಾದ, ಕಲ್ಹಾರ- ಸುಗಂಧವಿಶಿಷ್ಟವಾದ ಕಮಲ, ಕರವೀರ- ಕಣಿಗಲೆ, ಕುಸುಮಂಗಳಿಂ- ಹೂವುಗಳಿಂದಲೂ; ಚಾರು- ಮನೋಹರವಾದ, ರುಚಿ-

ಗಳಿಂ । ಕಮಳಬಕವಕುಳಚಂಪಕಕುಸುಮದಾಮದಿಂ । ದಮನಮರುವಕಬಿಲ್ವಪಲ್ಲವಸ್ತೋಮದಿಂ । ರುಚಿರತರಸೌರಭದಶಾಂಗಧೂಪಂಗಳಿಂ । ರುಚಿನಿಚಯನಿಚಿತಘನಸಾರದೀಪಂಗಳಿಂ । ಶುಚಿರುಚಿಸುಗಂಧಪಯಸಾಜ್ಯಭೋಜ್ಯಾಳಿಯಿಂ । ಪ್ರಚುರಪನಸಾಮ್ರಕದಳಾದಿಫಲಪಾಳಿಯಿಂ ।ವಿಮಳಹಿಮಮಿಳದಧಿಕಮಧುರತಾಂಬೂಲದಿಂ । ಕಮನೀಯತಪನೀಯಮಣಿಭರಣಜಾಲದಿಂ । ತತವಿತತಘನಸುಷಿರಮೃದುಮಧುರನಾದದಿಂ । ವಿತತನುತನರ್ತಕೀನರ್ತನವಿನೋದದಿಂ । ವಿವಿಧೋಪಚಾರದಿಂವಿಪುಳನುತಿಸಾರದಿಂ । ನವವಿಧಸುಭಕ್ತಿಯಿಂನವ್ಯತರಯುಕ್ತಿಯಿಂ । ಶಿವಧರ್ಮರೂಪನಂಶಿಷ್ಟಹೃದ್ದೀಪನಂ । ಪ್ರವಿಮಳಕಳಾಪನಂಪ್ರಥಿತನಿರ್ಲೇಪನಂ । ಜಗದವನಶೀಲನಂಜಂಗಮವಿಲೋಲನಂ। ನಿಗಮಾಂತವೇದ್ಯನಂನಿತ್ಯನಿರವದ್ಯನಂ । ಘನನಂದಿಕೇಶನಂಗಮನಮುದಿತೇಶನಂ । ವಿನಯಗುಣಭಾಸುರಂವಿಧಿತ

---

ಕಾಂತಿಯಿಂದ, ಖಚಿತ- ವ್ಯಾಪ್ತವಾದ, ನವ- ನೂತನವಾದ, ಮೃದುಳ- ಕೋಮಲವಾದ, ವಸ್ತ್ರಂಗಳಿಂ; ಕಮಳ, ಬಕ- ಗೋಳೀಹೂವು, ವಕುಳ- ಬಕುಳದಹೂವು, ಚಂಪಕಕುಸುಮ-ಸಂಪಗೆಹೂವು, ಇವುಗಳ, ದಾಮದಿಂ- ಮಾಲಿಕೆಯಿಂದಲೂ; ದಮನ- ದವನ, ಮರುವಕ- ಮರುಗ, ಬಿಲ್ವ- ಬಿಲ್ವಪತ್ರೆ, ಇವುಗಳ, ಪಲ್ಲವ- ಚಿಗುರಿನ, ಸ್ತೋಮದಿಂ- ಗುಂಪಿನಿಂದಲೂ; ರುಚಿರತರ- ಅತಿಮನೋಹರವಾದ, ಸೌರಭ- ಪರಿಮಳ ವಿಶಿಷ್ಟವಾದ, ದಶಾಂಗ- ದಶಾಂಗದ, ಧೂಪಂಗಳಿಂ- ಧೂಪಗಳಿಂದಲೂ; ರುಚಿ- ಕಾಂತಿಗಳ, ನಿಚಯ- ಸಮೂಹದಿಂದ, ನಿಚಿತ- ವ್ಯಾಪ್ತವಾದ, ಘನಸಾರ- ಸಚ್ಚಕರ್ಪೂರದ, ದೀಪಂಗಳಿಂ- ದೀಪಗಳಿಂದಲೂ; ಶುಚಿ- ಪರಿಶುದ್ಧವಾದ, ರುಚಿ- ಸ್ವಾದವುಳ್ಳ, ಸುಗಂಧ- ಸುರಭಿವಿಶಿಷ್ಟವಾದ, ಪಯಃ- ಹಾಲುಳ್ಳ,ಸಾಜ್ಯ- ತುಪ್ಪದಿಂಕೂಡಿದ, ಭೋಜ್ಯ- ಪದಾರ್ಥಗಳ, ಆಳಿಯಿಂ- ಸಮೂಹದಿಂದಲೂ; ಪ್ರಚುರ- ಪ್ರಸಿದ್ಧವಾದ, ಪನಸ- ಹಲಸು, ಆಮ್ರ- ಮಾವು, ಕದಳಿ- ಬಾಳೆ, ಇವುಗಳೇ, ಆದಿ- ಮೊದಲಾದ, ಫಲ- ಹಣ್ಣುಗಳ, ಆಳಿಯಿಂ; ವಿಮಳ- ನಿರ್ಮಲವಾದ, ಹಿಮ- ಪಚ್ಚಕರ್ಪೂರದಿಂದ, ಮಿಳತ್- ಕೂಡಿದ, ಅಧಿಕ- ಅತ್ಯಂತವಾಗಿ, ಮಧುರ- ಸೀಯಾದ, ತಾಂಬೂಲದಿಂ; ಕಮನೀಯ- ಮನೋಹರವಾದ, ತಪನೀಯ- ಸುವರ್ಣದ, ಮಣಿಭರಣ- ರತ್ನಾಭರಣಗಳ, ಜಾಲದಿಂ- ಸಮೂಹದಿಂದಲೂ; ತತ- ತಂತ್ರೀವಾದ್ಯ, ವಿತತ- ವಿಸ್ತಾರವಾದ, ಘನ- ಕಂಚಿನವಾದ್ಯ, ಸುಷಿರ- ಕೊಳಲು ಮುಂತಾದ ಬಿದುರಿನವಾದ್ಯ, ಇವುಗಳ, ಮೃದು- ಕೋಮಲವಾಗಿಯೂ, ಮಧುರ- ಮನೋಹರವಾಗಿಯೂ ಇರುವ, ನಾದದಿಂ- ಶಬ್ದದಿಂದಲೂ; ವಿತತ- ಪ್ರಸಿದ್ಧವಾದ, ನರ್ತಕೀ- ನಾಟ್ಯಗಾತಿಯರ, ನರ್ತನವಿನೋದದಿಂ- ನಾಟ್ಯವಿನೋದದಿಂದಲೂ; ವಿವಿಧೋಪಚಾರದಿಂ- ನಾನಾವಿಧವಾದ ಉಪಚಾರಗಳಿಂದಲೂ; ವಿಪುಳನುತಿಸಾರದಿಂ- ಶ್ರೇಷ್ಠವಾದ ಅನೇಕ ಸ್ತೋತ್ರಗಳಿಂದಲೂ; ನವವಿಧಸುಭಕ್ತಿಯಿಂ- ಒಂಭತ್ತುವಿಧವಾದ ಭಕ್ತಿಯಿಂದಲೂ; (ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ, ಆತ್ಮನಿವೇದನ, ಎಂಬುವದೇ ನವವಿಧವಾದ ಭಕ್ತಿ) ನವ್ಯತರಯುಕ್ತಿಯಿಂ- ಅತಿನೂತನವಾದ ಯುಕ್ತಿಯಿಂದಲೂ; ಶಿವಧರ್ಮರೂಪನಂ- ಶಿವನಧರ್ಮಸ್ವರೂಪನಾದ; ಶಿಷ್ಟಹೃದ್ದೀಪನಂ- ಸತ್ಪುರುಷರ ಹೃದಯದಲ್ಲಿ ಪ್ರಕಾಶಿಸುವ; ಪ್ರವಿಮಳಕಳಾಪನಂ- ನಿರ್ಮಲವಾದ ಆಭರಣವುಳ್ಳ; ಪ್ರಥಿತನಿರ್ಲೇಪನಂ- ವಿಸ್ತಾರವಾದಮಾಯಾಲೇಪದಿಂ ರಹಿತನಾದ; ಜಗದವನಶೀಲನಂ- ಜಗತ್ತನ್ನುರಕ್ಷಿಸುವ ಸ್ವಭಾವವುಳ್ಳ; ಜಂಗಮವಿಲೋಲನಂ- ಜಂಗಮರಲ್ಲಾಸಕ್ತನಾದ; ನಿಗಮಾಂತವೇದ್ಯನಂ-ಉಪನಿಷತ್ತುಗಳಿಂ ತಿಳಿಯುವದಕ್ಕೆ ಯೋಗ್ಯನಾದ; ನಿತ್ಯನಿರವದ್ಯನಂ- ಶಾಶ್ವತನಾಗಿಯೂ ದೋಷರಹಿತನಾಗಿಯೂ ಇರುವ; ಗಮನಮುದಿತೇಶನಂ- ಸಂಚರಿಸುವಿಕೆಯಿಂದ ಸಂತೋಷಪಡಿಸಲ್ಪಟ್ಟ ಪರಶಿವನುಳ್ಳ, ಘನನಂದಿಕೇಶನಂ-

ವಿಧಿಭೂಸುರು ! ರಾಜಿತವಧೂಯುತುರಮ್ಯಮತಿಸಂಯುತಂ । ಪೂಜಿಸಿದನೊಲ್ಮೆಯಿಂಪು ತ್ರಾರ್ಥಿನಲ್ಮೆಯಿಂ ॥ ... ... .. ... ... *

ವ॥ ಅಂತು ಪೂಜಿಸುತ್ತುಮವನವನಿವಿನಿಹಿತೋತ್ತಮಾಂಗನಾಗಿ ಪೊಡಮಟ್ಟುಕ ರಾರವಿಂದಮುಂಮುಗಿದುನಿಂದು॥ * * * * * * * * * * * *

ಚಂ॥ ಪರಮುದಯಾಸಮುದ್ರಪವಮಾನಸಖಾಂಬಕರೂಪಪಾಪಸಂ। ಹರಹರವಾಹಪಾಲಿತಜಗತ್ತ್ರಯಘೋರಭವಾಂಧಕಾರಭಾ ॥ ಸ್ಕರಭಜಕಪ್ರತಾನಸುರಭೂರುಹಪೂರ್ಣಗು ಣಾಭಿರಾಮುಮಂ । ದರಧರವಂದನೀಯಗಣನಾಯಕನಂದಿತನಂದಿಕೇಶ್ವರಾ॥ ... ॥೩೪॥

ಕಂ॥ ನೀಂನಿನ್ನನಪ್ಪಸುತನಂ। ಮನ್ನಾಥವೃಷೇಂದ್ರಕೊರ್ತುಕರುಣಿಪುದೆನಗಾಂ॥ ನಿನ್ನಯಪೆಸರಿಟ್ಟಪೆನೆನು । ತಂನಲನಿಂಬೇಡಿಕೊಂಡನಾಮಾದರಸಂ ॥ .. ... ॥೩೬॥

ವ॥ ಆಗಳ್ ॥ ಕಂ ॥ ನೆರೆದಜನವೊಲ್ದುನೋಡು । ತ್ತಿರೆದಕ್ಷಿಣಶೃಂಗದಿಂದೆಯುಲರು

---

ದೊಡ್ಡವನಾದ ನಂದೀಶ್ವರನನ್ನು; ವಿನಯಗುಣಭಾಸುರ- ಸಮ್ಯಕ್ತ್ವದಿಂ ಪ್ರಕಾಶಿಸುವ; ವಿದಿತವಿಧಿಭೂಸುರಂ— ವಿದಿತ- ತಿಳಿಯಲ್ಪಟ್ಟ, ವಿಧಿ- ವಿಧಾನವುಳ್ಳ, ಭೂಸುರಂ- ಬ್ರಾಹ್ಮಣನಾದ; ಮಾದರಸನಂ, ರಾಜಿತವಧೂಯುತಂ- ಪ್ರಕಾಶಿಸುವ ಪತ್ನಿಯಿಂಕೂಡಿದವನಾಗಿ, ರಮ್ಯಮತಿಸಂಯುತಂ- ಮನೋಹರವಾದ ಬುದ್ಧಿಯಿಂಕೂಡಿ, ಒಲ್ಮೆಯಿಂ- ಪ್ರೀತಿಯಿಂದ, ಪುತ್ರಾರ್ಥಿ- ಪುತ್ರಾಪೇಕ್ಷೆಯುಳ್ಳವನಾಗಿ, ನಲ್ಮೆಯಿಂ- ಪ್ರೀತಿಯಿಂದ, ಪೂಜಿಸಿದಂ. ... ... ... ... ... ... ... *

ಅಂತು, ಪೂಜಿಸುತ್ತಂ, ಅವಂ,ಅವನಿವಿನಿಹಿತೋತ್ತಮಾಂಗಂ, ಭೂಮಿಯಲ್ಲಿಡಲ್ಪಟ್ಟಶಿರಸ್ಸುಳ್ಳವನು, ಆಗಿ; ಪೊಡಮಟ್ಟು- ನಮಸ್ಕರಿಸಿ, ಕರಾರವಿಂದಮುಂ- ಹಸ್ತಕಮಲವನ್ನು, ಮುಗಿದು, ನಿಂದು. * *

ಪರಮುದಯಾಸಮುದ್ರ- ಉತ್ಕೃಷ್ಟವಾದಕೃಪಾರಸಕ್ಕೆ ಸಮುದ್ರನಾದ; * ಪವಮಾನಸಖಾಂಬಕರೂಪ- ಈಶ್ವರಸ್ವರೂಪನಾದ; ಪಾಪಸಂಹರ- ಪಾಪನಾಶಕನಾದ; ಹರವಾಹ- ಪರಮೇಶ್ವರನಿಗೆ ವಾಹನನಾದ; ಪಾಲಿತಜಗತ್ತ್ರಯ-ರಕ್ಷಿಸಲ್ಪಟ್ಟ ಮೂರುಲೋಕವುಳ್ಳ; ಘೋರಭವಾಂಧಕಾರಭಾಸ್ಕರ- ಭಯಂಕರವಾದ ಸಂಸಾರವೆಂಬಕತ್ತಲೆಗೆ ಸೂರ್ಯನಾದ; ಭಜಕಪ್ರತಾನಸುರಭೂರುಹ- ಧ್ಯಾನಿಸುವ ಜನಗಳ ಸಮೂಹಕ್ಕೆ ಕಲ್ಪವೃಕ್ಷನಾದ; ಪೂರ್ಣಗುಣಾಭಿರಾಮ- ಸಂಪೂರ್ಣವಾದ ಸದ್ಗುಣಗಳಿಂದ ಮನೋಹರನಾದ; ಮಂದರಧರವಂದನೀಯ- ವಿಷ್ಣುವಿನಿಂದ ನಮಸ್ಕರಿಸಲ್ಪಡುವದಕ್ಕೆ ಯೋಗ್ಯನಾದ; ಗಣನಾಯಕನಂದಿತ- ಶಿವಗಣಗಳಿಂದ ಸಂತೋಷಪಡಿಸಲ್ಪಟ್ಟ, ನಂದಿಕೇಶ್ವರಾ- ನಂದಿಕೇಶ್ವರನೇ. ॥೩೪॥

ಮನ್ನಾಥ- ನನ್ನಸ್ವಾಮಿಯಾದ, ವೃಷೇಂದ್ರ; ನೀಂ; ನಿನ್ನನಪ್ಪ-ನಿನ್ನಹಾಗಿರುವ, ಸುತನಂ- ಮಗನನ್ನು,ಕೊರ್ತು- ಪ್ರೀತಿಸಿ, ಎನಗೆ- ನನಗೆ; ಕರುಣಿಪುದು- ದಯಪಾಲಿಸುವದು; ಆಂ, ನಿನ್ನಯ,ಪೆಸರ- ಹೆಸರನ್ನು, ಇಟ್ಟಪೆಂ- ಇಡುವೆನು; ಎನುತಂ, ಆಮಾದರಸಂ, ನಲವಿಂ- ಸಂತೋಷದಿಂದ, ಬೇಡಿಕೊಂಡಂ- ಪ್ರಾರ್ಥಿಸಿಕೊಂಡನು. ... ... ... ... ... ... ... ॥೩೬॥

ನೆರೆದ- ಕೂಡಿದ, ಜನಂ- ಜನಗಳು, ಒಲ್ದು- ಪ್ರೀತಿಸಿ, ನೋಡುತ್ತಿರೆ; ವೃಷಭಂ- ವೃಷಭೇಶ್ವರನು, ದಕ್ಷಿಣಶೃಂಗದಿಂದೆ- ಬಲಗಡೆಯಕೊಂಬಿನಿಂದ, ಅಲರಂ-ಪುಷ್ಪವನ್ನು, ಕರುಣಿಸಿದಂ- ದಯಪಾಲಿಸಿದನು; ಅ

---

* (ಅವ) ಪವಮಾನ- ವಾಯುವಿಗೆ, ಸಖ-ಮಿತ್ರನಾದ ಅಗ್ನಿಯೇ, ಅಂಬಕ. ... ... ॥೩೪॥

ವೃಷಭು ॥ ಕರುಣಿಸಿದನಷಂದ್ವಿಜಪತಿ । ತರುಣಿಗೆಕುಡೆಮಣಿದುಕಬರಿಯೊಳ್ ತಳೆದಳವಳ್॥

ವ ॥ ಅನಂತರಂ ಜಾಯಾಪತಿಗಳೀರ್ವರುಂ ಲಬ್ಧವರಪ್ರಸನ್ನಾನನರ್ ಪರಮಾನಂದದಿಂ ನಂದಿಕೇಶ್ವರಂಗೆ ಬಲವಂದೆರಗಿ ಬೀಳ್ಕೊಂಡು ನಿಜಮಂದಿರಕ್ಕೆಳ್ತಂದು ಶಿವಗಣಾರಾಧನಂಗೆಯ್ದು ಶಿವಪುರಾಣಂಗಳನಾಕರ್ಣಿಸುತ್ತಂ ನಂದಿಕೇಶನಂ ಜಾನಿಸುತ್ತಂ ಸುಖಿಮಿರುತ್ತಿರೆ ॥ * * * * * * * * * * * * * * *

ಮ॥ ಸ್ರ॥ ನಿಜಪಾದಾಂಭೋಜಸಂಸ್ಪರ್ಶನದೆಧರಣಿಯಂಪಾವನಂಗೆಯ್ಯಲುಂಭ| ಕ್ತಜನವ್ರಾತಾವನಾರ್ಥಂಶಿವನೊರೆದಮಹಾಕಾರ್ಯಮಂಮಾಡಲುಂತ॥ದ್ಭಜನಕ್ಕೊಲ್ದಿತ್ತ ಪುತ್ರತ್ವವಹನವರಮಂಕಾಯಲುಂಬಂದುಪೊಕ್ಕಂ । ದ್ವಿಜರಾಜಸ್ತ್ರೀಯ ಪುಣ್ಯೋದರಮನವನಿಳಾಭಾಮಿನೀಭಾಗಧೇಯಂ ॥ ... ... ... ... ॥೩೮॥

ಲಲಿತವೃತ್ತ ॥ ಶಂಕರಕುಮಾರಕವಿಶಂಕಟವಿಹಾರಕಕಲಂಕಮತದೂರಹರಸಂಕಥನಕರ್ಣಾ । ಲಂಕರಣಶೈವಮತಪಂಕರುಹಭಾಸ್ಕರಭಯಂಕರಯಮಾಪಹನಿರಂಕುಶಚರಿತ್ರಾ ॥

---

ದಂ, ದ್ವಿಜಪತಿ- ಬ್ರಾಹ್ಮಣಶ್ರೇಷ್ಠನಾದಮಾದರಸನು, ತರುಣಿಗೆ- ಪತ್ನಿಗೆ, ಕುಡೆ- ಕೊಡಲು, ಅವಳ್- ಮಾದಲಾಂಬಿಯು ಮಣಿದು- ನಮಸ್ಕರಿಸಿ, ಕಬರಿಯೊಳ್- ಕೇಶದಲ್ಲಿ, ತಳೆದಳ್- ಧರಿಸಿದಳು. ... ॥೩೭॥

ಅನಂತರಂ, ಜಾಯಾಪತಿಗಳ್ಈರ್ವರುಂ- ಸತಿಪತಿಗಳಿಬ್ಬರೂ, ಲಬ್ಧವರಪ್ರಸನ್ನಾನನರ್— ಲಬ್ಧ- ಪಡೆಯಲ್ಪಟ್ಟ, ವರ- ವರವುಳ್ಳವರಾದಕಾರಣವೇ, ಪ್ರಸನ್ನ- ನಿರ್ಮಲವಾದ, ಆನನರ್- ಮುಖವುಳ್ಳವರಾಗಿ; ಪರಮಾನಂದದಿಂ- ಉತ್ಕೃಷ್ಟವಾದ ಸಂತೋಷದಿಂದ, ನಂದೀಶ್ವರಂಗೆ, ಬಲವಂದು- ಪ್ರದಕ್ಷಿಣೆಯಂಮಾಡಿ, ಎರಗಿ- ನಮಸ್ಕರಿಸಿ, ಬೀಳ್ಕೊಂಡು ಅಪ್ಪಣೆಯಂತೆಗೆದುಕೊಂಡು, ನಿಜಮಂದಿರಕ್ಕೆ- ತಮ್ಮಮನೆಗೆ, ಎಳ್ತಂದು- ಬಂದು, ಶಿವಗಣಾರಾಧನಂಗೆಯ್ದು- ಶಿವಗಣಂಗಳಪೂಜೆಯಂಮಾಡಿ; ಶಿವಪುರಾಣಂಗಳಂ, ಆಕರ್ಣಿಸುತ್ತಂ-ಕೇಳುತ್ತ, ನಂದಿಕೇಶನಂ,ಜಾನಿಸುತ್ತಂ- ಧ್ಯಾನಮಾಡುತ್ತ, ಸುಖಿಮ- ಸುಖವಾಗಿ, ಇರುತ್ತಿರೆ. * *

ಇಳಾಭಾಮಿನೀಭಾಗಧೇಯಂ- ಭೂಕಾಂತೆಯ ಭಾಗ್ಯಸ್ವರೂಪನಾದ, ಅವಂ- ಆ ವೃಷಭೇಶ್ವರನು, ನಿಜಪಾದಾಂಭೋಜಸಂಸ್ಪರ್ಶನದೆ- ತನ್ನಚರಣಕಮಲದಸೋಂಕಿನಿಂದ, ಧರಣಿಯಂ- ಭೂಮಿಯನ್ನು, ಪಾವನಂಗೆಯ್ಯಲುಂ- ಪರಿಶುದ್ಧಿಮಾಡುವದಕ್ಕೂ, ಭಕ್ತಜನವ್ರಾತಾವನಾರ್ಥಂ- ಭಕ್ತರಸಮುದಾಯವನ್ನು ಪಾಲಿಸುವದಕ್ಕೂ, ಶಿವಂ- ಪರಶಿವನು, ಒರೆದ- ಅಪ್ಪಣೆಕೊಡಿಸಿದ, ಮಹಾಕಾರ್ಯಮಂ- ದೊಡ್ಡಕಾರ್ಯವನ್ನು, ಮಾಡಲುಂ- ನೆರವೇರಿಸುವದಕ್ಕೂ; ತದ್ಭಜನಕ್ಕೆ- ಆದಂಪತಿಗಳಿಂದಮಾಡಲ್ಪಟ್ಟಸೇವೆಗೆ, ಒಲ್ದು- ಪ್ರೀತಿಸಿ, ಇತ್ತ- ಕೊಟ್ಟ, ಪುತ್ರತ್ವವಹನವರಮಂ- ಪುತ್ರಭಾವವನ್ನು ವಹಿಸುವ ವರವನ್ನು, ಕಾಯಲುಂ- ಕಾಪಾಡುವದಕ್ಕೂ, ದ್ವಿಜರಾಜಸ್ತ್ರೀಯ- ಬ್ರಾಹ್ಮಣಶ್ರೇಷ್ಠನಾದ ಮಾದರಸನ ಪತ್ನಿಯ, ಪುಣ್ಯೋದರಮಂ- ಪರಿಶುದ್ಧವಾದ ಗರ್ಭವನ್ನು, ಪೊಕ್ಕಂ. ... ... ... ... ॥೩೮॥

ಶಂಕರಕುಮಾರಕ- ಶಿವಪುತ್ರನಾದ; ವಿಶಂಕಟವಿಹಾರಕ- ವಿಸ್ತಾರವಾಗಿ ವಿಹರಿಸುವ; ಕಲಂಕಮತದೂರ- ದೋಷವಿಶಿಷ್ಟವಾದಮತಗಳಿಂದೂರನಾದ; ಹರಸಂಕಥನಕರ್ಣಾಲಂಕರಣ- ಶಿವಕಥೆಗಳೇಕರ್ಣಾಭರಣವಾಗುಳ್ಳ; ಶೈವಮತಪಂಕರುಹಭಾಸ್ಕರ- ಶೈವಮತವೆಂಬಕಮಲಕ್ಕೆಸೂರ್ಯನಾದ;ಭಯಂಕರಯಮಾಪಹ- ಭಯಂಕರನಾದ ಯಮನನ್ನು ನಾಶಮಾಡುವ; ನಿರಂಕುಶಚರಿತ್ರ- ನಿರ್ದುಷ್ಟವಾದಚರಿತ್ರವುಳ್ಳ; ಸಂಕಲಿತಕಾಯಮಕರಾಂಕಮದಮರ್ದನ—ಸಂಕಲಿತ- ಕೂಡಿದ, ಕಾಯ- ಶರೀರವುಳ್ಳ, * ಮಕರಾಂಕ- ಮನ್ಮಥನ,

ಸುಕಲಿತಕಾಯಮಕರಾಂಕಮದಮರ್ದನಮೃಗಾಂಕಧರಸೇವಕಸುಖಂಕರಕಟಾಕ್ಷಾ । ಹಂಕರಣದೂರಶಿವಕಿಂಕರಚಯಾನ್ವಿತಮೃಡಾಂಕನಗಣಾಧಿಪವಿಶಂಕಬಸವೇಶಾ ॥ ... ॥೩೯॥

ಮತ್ತೆ॥ ಪರಮಾನಂದಪಯಸ್ತರಂಗಿಣಿಲಸತ್ಕಲ್ಯಾಣಿವಾಣೀಮೃದುಸ್ವರವೀಣಾರಣಿತಪ್ರಣೀತಘಣಿತಿಪ್ರಸ್ತಾವದತ್ತಾವಧಾ ॥ ನೆರಮಾಪಾಣಿಪಯೋಜದತ್ತಫಣಿವಲ್ಲೀಪತ್ರೆಶರ್ವಾಣಿಗೀ । ರ್ವರಪದ್ಮೇಕ್ಷಣವಂದ್ಯೆದೇವಿಪೊರೆಯೆನ್ನಂಭೂಧರೇಂದ್ರಾತ್ಮಜೆ॥ ... ॥೪೦॥

ಗದ್ಯ॥ ಇದು ವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತವರಮಶಿವಲಿಂಗಪಾದಾರವಿಂದಪರಾಗಭಸಿತಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಪಡಕ್ಷರಿದೇವಭಕ್ತಿವಿರಚಿತಶ್ರೀಮದ್ಬಸವರಾಜವಿಜಯಮಹಾಪುರಾಣದೊಳ್ ಬಸವಾವತಾರವರ್ಣನಂ ದ್ವಿತೀಯಾಶ್ವಾಸಂ ಸಮಾಪ್ತಂ॥ * * * * * * * * * * * * * *

ದ್ವಿತೀಯಾಶ್ವಾಸಂ ಸಂಪೂರ್ಣಂ.

---

ಮದ- ಗರ್ವವನ್ನು, ಮರ್ದನ- ನಾಶಮಾಡುವ; ಮೃಗಾಂಕಧರಸೇವಕಸುಖಂಕರಕಟಾಕ್ಷ- ಶಿವಭಕ್ತರಿಗೆಸುಖವನ್ನುಂಟುಮಾಡುವ ಕಡೆಗಣ್ಣಿನನೋಟವುಳ್ಳ; ಅಹಂಕರಣದೂರ- ಅಹಂಕಾರಕ್ಕೆ ದೂರನಾಗಿರುವ; ಶಿವಕಿಂಕರಚಯಾನ್ವಿತ- ಶಿವಭಕ್ತರಿಂಕೂಡಿರುವ; ಮೃಡಾಂಕನ- ಪರಮೇಶ್ವರನಚಿಹ್ನವುಳ್ಳ, ಗಣಾಧಿಪ- ಗಣಶ್ರೇಷ್ಠನಾದ, ವಿಶಂಕ- ಭಯರಹಿತನಾದ, ಬಸವೇಶಾ. ... ... ... ... ॥೩೯॥

ಪರಮಾನಂದಪಯಸ್ತರಂಗಿಣಿ- ಉತ್ಕೃಷ್ಟವಾದ ಸಂತೋಷವೆಂಬ ಜಲಕ್ಕೆನದಿಯಾದ; ಲಸತ್ಕಲ್ಯಾಣಿ- ಪ್ರಕಾಶಮಾನವಾದ ಮಂಗಳಸ್ವರೂಪಿಣಿಯಾದ; ವಾಣೀ.........ವಧಾನೆ—ವಾಣೀ- ಸರಸ್ವತಿಯ, ಮೃದುಸ್ವರ- ಮಧುರಶಬ್ದವುಳ್ಳ, ವೀಣಾ- ವೀಣೆಯ, ರಣಿತ- ಶಬ್ದದಿಂದ, ಪ್ರಣೀತ- ಉತ್ಪನ್ನವಾದ, ಘಣಿತಿ- ಮಾತುಗಳ, ಪ್ರಸ್ತಾವ- ಪ್ರಸ್ತಾಪದಲ್ಲಿ, ದತ್ತ- ಕೊಡಲ್ಪಟ್ಟ, ಅವಧಾನೆ- ಚಿತ್ತೈಕಾಗ್ರತೆಯುಳ್ಳ; ರಮಾಪಾಣಿಪಯೋಜದತ್ತಫಣಿವಲ್ಲೀಪತ್ರೆ— ರಮಾ- ಲಕ್ಷ್ಮಿಯ, ಪಾಣಿಪಯೋಜ- ಹಸ್ತಕಮಲದಿಂದ, ದತ್ತ- ಕೊಡಲ್ಪಟ್ಟ, ಫಣಿವಲ್ಲೀಪತ್ರೆ- ನಾಗವಲ್ಲೀಪತ್ರವುಳ್ಳ, (ಅಂದರೆ ತಾಂಬೂಲವುಳ್ಳ;) ಶರ್ವಾಣಿ- ಶಿವಪತ್ನಿಯಾದ, ಗೀರ್ವರಪದ್ಮೇಕ್ಷಣವಂದ್ಯೆ-ಗೀರ್ವರ- ಬ್ರಹ್ಮ, ಪದ್ಮೇಕ್ಷಣ- ವಿಷ್ಣುಇವರಿಂದ, ವಂದ್ಯೆ- ನಮಸ್ಕರಿಸಲ್ಪಡುವದಕ್ಕೆ ಯೋಗ್ಯಳಾದ; ಭೂಧರೇಂದ್ರಾತ್ಮಜೆ- ಪರ್ವತರಾಜಪುತ್ರಿಯಾದ, ದೇವಿ; ಎನ್ನಂ, ಪೊರೆ- ರಕ್ಷಿಸು. ... ... ... ... ... ... ... ॥೪೦॥

---

* (ಅವ) ಮಕರ- ಮೊಸಳೆಯೇ, ಅಂಕ- ಚಿಹ್ನವಾಗುಳ್ಳವನು. * * * * * ॥೩೯॥

ಎರಡನೆಯ ಆಶ್ವಾಸವು ಸಂಪೂರ್ಣವು.

ಶ್ರೀ

ಉಮಾಮಹೇಶ್ವರಾಯ ಪರಬ್ರಹ್ಮಣೇನಮಃ

# ತೃತೀಯಾಶ್ವಾಸಂ.

ಕಂ॥ ಶ್ರೀಕರಗಿರಿಜಾಹೃದಯಾ । ಬ್ಜಾಕರಕೇಳೀಮರಾಳನಖಿಳಕಳಾಶೋ ॥ ಭಾಕರ
ನಭಿನವಗುಣರ । ತ್ನಾಕರನೆಮಗೀಗೆಸೌಖ್ಯಮಂಶಿವಲಿಂಗಂ॥ ... ... ... ॥೧॥

ಚಂ॥ ಬಳೆದುದುತೆಳ್ವಸಿರ್ಕ್ರಮದಳಿದ್ಯುತಿಯಂತಳೆದತ್ತುಬಾಸೆಬೆ । ಳ್ವೆಳಗುಪಗಿಲ್ತು
ದಂಗದೆಕರಂಗಿದುದುತ್ಕುಚಚೂಚುಕಂಸಮು॥ಜ್ಜ್ವಳವದನಂಬೆಳರ್ತುದುವಳಿತ್ರಯಮಿಲ್ಲ
ನಿಸಿತ್ತುಚಂದ್ರಮಂ। ಡಲಮಧುರಾಸ್ಯೆಗಾಬಸಿರೊಳಾಳ್ದುದುಮೆಲ್ನಡೆಮಂದಭಾವಮಂ ॥೨॥

ಕಂ॥ ಒಳಗೆಸೆವವೃಷಭನಂಗದ । ಬೆಳರ್ವಣ್ಣಂಪೊರಗೆತೀವಿತೆನೆಪೊಸವೆಳ್ಪು ॥ ಜ್ಜ್ವ
ಳಿಸಿದುದುತನುವಿನೊಳ್ಕೆ । ಮಳೆಗೆಶಶಾಂಕಾಂಶುಮುಗಿಲನಾವರಿಸುವವೊಲ್॥ ॥೩॥

---

ಶ್ರೀಕರ......ಮರಾಳಂ- ಶ್ರೀಕರ- ಸಂಪತ್ತನ್ನುಂಟುಮಾಡುವ,ಗಿರಿಜಾ- ಪಾರ್ವತೀದೇವಿಯ,ಹೃದಯ- ಮನಸ್ಸೆಂಬ, ಅಬ್ಜಾಕರ-ಸರೋವರಕ್ಕೆ, ಕೇಳೀಮರಾಳಂ- ಕ್ರೀಡಿಸುವಹಂಸಪಕ್ಷಿಯಾದ;ಅಖಿಳಕಳಾಶೋಭಾಕರಂ—ಅಖಿಳಕಳಾ- ಸಮಸ್ತವಿದ್ಯೆಗಳ, ಶೋಭಾ- ಕಾಂತಿಗೆ,ಆಕರಂ- ಆಶ್ರಯನಾದ;ಅಭಿನವಗುಣರತ್ನಾಕರಂ- ನೂತನವಾದ ಸದ್ಗುಣಗಳಿಗೆ ಸಮುದ್ರನಾದ, ಶಿವಲಿಂಗಂ, ಎಮಗೆ, ಸೌಖ್ಯಮಂ-ಈಗೆ. ॥೧॥

ಚಂದ್ರಮಂಡಲಮಧುರಾಸ್ಯೆಗೆ- ಚಂದ್ರಮಂಡಲದೋಪಾದಿಯಲ್ಲಿ ಮನೋಹರವಾದ ಮುಖವುಳ್ಳಮಾದಲಾಂಬಿಕೆಗೆ, ಆಬಸಿರೊಳ್- ಗರ್ಭವಹನಕಾಲದಲ್ಲಿ, ತೆಳ್ವಸಿರ್- ತೆಳುವಾದಹೊಟ್ಟೆಯು, ಕ್ರಮದೆ- ದಿನೇದಿನೇ, ಬಳೆದುದು- ವೃದ್ಧಿಯಾಯಿತು; ಬಾಸೆ- ರೋಮರಾಜಿಯು, ಅಳಿದ್ಯುತಿಯಂ- ತುಂಬಿಯಕಾಂತಿಯನ್ನು, (ಕಪ್ಪುಕಾಂತಿಯನ್ನು) ತಳೆದತ್ತು- ಧರಿಸಿತು; ಅಂಗದೆ- ದೇಹದಲ್ಲಿ, ಬೆಳ್ವೆಳಗು— ಬಿಳುಪಾದಕಾಂತಿಯು, ಪಗಿಲ್ತುದು- ಹಬ್ಬಿತು; ಉತ್ಕುಚಚೂಚುಕಂ- ಉನ್ನತವಾದ ಸ್ತನಗಳ ತೊಟ್ಟು, ಕರಂಗಿದುದು- ಕಪ್ಪಗಾಯಿತು; ಸಮುಜ್ಜ್ವಳವದನಂ- ಪ್ರಕಾಶಿಸುವ ಮುಖವು, ಬೆಳರ್ತುದು- ಬೆಳ್ಳಗಾಯಿತು; ವಳಿತ್ರಯಂ- ತ್ರಿವಳಿಗಳು, ಇಲ್ಲೆನಿಸಿತು- ಇಲ್ಲವಾಯಿತು; ಮೆಲ್ನಡೆ- ಮಂದಗಮನವು, ಮಂದಭಾವಮಂ- ಅತಿಮಂದತ್ವವನ್ನು, ಆಳ್ದುದು- ಹೊಂದಿತು. ... ... ... ... ... ... ॥೨॥

* ಶಶಾಂಕಕರಂ- ಚಂದ್ರಕಿರಣವು, ಮುಗಿಲಂ- ಮೇಘವನ್ನು,ಆವರಿಸುವವೊಲ್-ವ್ಯಾಪಿಸುವಹಾಗೆ, ಒಳಗೆ- ಉದರದಲ್ಲಿ, ಎಸೆವ- ಪ್ರಕಾಶಿಸುವ, ವೃಷಭನ, ಅಂಗದ- ದೇಹದ,ಬೆಳರ್ವಣ್ಣಂ- ಧಾವಳ್ಯವು,ಪೊರಗೆ, ತೀವಿತು- ತುಂಬಿತು; ಎನೆ, ಕೋಮಳೆಗೆ- ಮೃದ್ವಂಗಿಯಾದ ಮಾದಲಾಂಬಿಕೆಗೆ, ತನುವಿನೊಳ್- ದೇಹದಲ್ಲಿ, ಪೊಸವೆಳ್ಪು- ನೂತನವಾದ ಶುಭ್ರಕಾಂತಿಯು, ಉಜ್ಜ್ವಳಿಸಿದುದು- ಪ್ರಕಾಶಿಸಿತು. ... ... ॥೩॥

---

* (ಅವ) ಶಶ- ಮೊಲವೇ, ಅಂಕ- ಚಿಹ್ನವಾಗುಳ್ಳವನು. ... ... ... ... ... ॥೩॥

ಮ॥ ಘನವೇಣೀರಾಹುಗಂಜುತ್ತವಳವದನಚಂದ್ರಂಸುಧಾಸಾರಮಂತೀ । ವಿನಿತಾಂತಂ
ಲಾಕ್ಷೆಯಿಂಮುದ್ರಿಸುತಿರಿಸಿದಗಾಂಗೇಯಕುಂಭಂಗಳೋಮ ॥ ಬ್ಬರ್ನದಂಪೀರ್ದಳ್ಕಿಸಲ್ಕಾ
ರದೆಕರಮುಗುಳುತ್ತಿರ್ಪ್ಪ ಚಕ್ರಂಗಳೋಪೇ।ಳೆನೆಕಣ್ಗಿಂಬಾದುವಿಂದಿಂದಿರಮಳಿನಲಸಚ್ಚೂ
ಚುಕಂಗಳ್ ಕುಚಂಗಳ್ ॥ ... ... ... ... ... ॥೪॥

ಕಂ॥ ಹರಯೋಗವಾಂತವೃಷಭನ।ಕರಿಯಾಲಿಯಕಾಂತಿಯೊಳಗಣಿಂಕುಚಮುಖದೊ ॥
ಳ್ಪರಕಲಿಸಿಪ್ಪೊಣ್ಮಿದತ್ತೆನೆ। ಗುರುಕುಚಚೂಚುಕದಮೇಚಕದ್ಯುತಿಮೆರೆಗುಂ ... ॥೫॥

ಕಂ॥ ಮಂದಗತಿಯುಮರೆವುಂನಡು । ಗೆಂದುಂಕುಂದದದರಿದ್ರಭಾವಂಪರಿದ ॥ ತ್ತೆಂದೆ
ನೆಶಿವಧರ್ಮ್ಮಾಶ್ರಯ । ದಿಂದಂಪರಿಪಡದದೋಷಮಾವುದೊಧರೆಯೊಳ್॥ ... ... ॥೬॥

ಕಂ॥ ಗುರುಕುಚಮಾಗುರುಜಠರಂ । ಗುರುಜಘನಂಮಿಸುಗೆಬಾಲೆಗುರುವೆನಿಸಿದ್ದರ್
ಳ್ ॥ ವರಹಂಸಸುಗತಿಗೆಜಗ । ದ್ಗುರುತನ್ನೊಳ್ನೆಲಸಿನಿಂದಕಾರಣದಿಂದಂ ॥ ... ॥೭॥

---

ಅವಳ- ಮಾದಲಾಂಬೆಯ, ವದನಚಂದ್ರಂ- ಮುಖವೆಂಬಚಂದ್ರನು, ಘನವೇಣೀರಾಹುಗೆ- ಉದ್ದವಾದ ಜಡೆಯೆಂಬ ರಾಹುವಿನಿಂದ, ಅಂಜುತ್ತೆ- ಭಯಪಡುತ್ತ, ಸುಧಾಸಾರಮಂ- ಅಮೃತರಸಧಾರೆಯನ್ನು, ತೀವಿ-ತುಂಬಿ, ನಿತಾಂತಂ- ಚೆನ್ನಾಗಿ, ಲಾಕ್ಷೆಯಿಂ- ಅರಗಿನಿಂದ, ಮುದ್ರಿಸುತೆ- ಮುದ್ರೆಯಂಹಾಕುತ್ತ, ಇರಿಸಿದ- ಇಟ್ಟ, ಗಾಂಗೇಯಕುಂಭಂಗಳೋ- ಚಿನ್ನದಕಲಶಗಳೋ; ಅದಂಮಬ್ಬರ್ನಂ- ಆಕತ್ತಲೆಯನ್ನು, ಪೀದರ್ು- ಪಾನಮಾಡಿ, ಅಳ್ಕಿಸಲ್ಕಾರದೆ- ಅರಗಿಸಿಕೊಳ್ಳಲಾರದೆ, ಕರಂ- ಅತ್ಯಂತವಾಗಿ, ಉಗುಳುತ್ತಿರ್ಪ್ಪ, ಚಕ್ರಂಗಳೋ- ಚಕ್ರವಾಕಪಕ್ಷಿಗಳೋ; ಪೇಳ್, ಎನೆ, ಇಂದಿಂದಿರಲಸಚ್ಚೂಚುಕಂಗಳ್- ಭ್ರಮರಗಳೋ ಪಾದಿಯುಲ್ಲಿ ಪ್ರಕಾಶಮಾನವಾದ ತೊಟ್ಟುಗಳುಳ್ಳ, ಕುಚಂಗಳ್- ಸ್ತನಗಳು, ಕಣ್ಗೆ, ಇಂಬಾದುವು- ಮನೋಹರವಾದವು. ... ... ... ... ... ॥೪॥

ಹರಯೋಗವಾಂತ- ಶಿವಯೋಗವನ್ನುಹೊಂದಿದ, ವೃಷಭನ, ಕರಿಯಾಲಿಯ- ಕರಿಯಗುಡ್ಡೆಯ, ಕಾಂತಿಬಳಗಣಿಂ- ಒಳಗಿನಿಂದ, ಕುಚಮುಖದೊಳ್- ಕುಚಗಳಮಾರ್ಗವಾಗಿ, ಪರಕಲಿಸಿ- ವ್ಯಾಪಿಸಿ, ಪೊಣ್ಮಿದತ್ತು- ಹೊರಟಿತು; ಎನೆ, ಗುರುಕುಚಚೂಚುಕದ- ದಪ್ಪವಾದಸ್ತನಗಳತೊಟ್ಟಿನ, ಮೇಚಕದ್ಯುತಿ- ಕಪ್ಪುಕಾಂತಿಯು, ಮೆರೆಗುಂ- ಪ್ರಕಾಶಿಸುವದು. ... ... ... ... ॥೫॥

ಮಂದಗತಿ- ಮಂದಗಮನವು, ಅಮರೆ- ಪ್ರಾಪ್ತವಾಗುವಹಾಗೆ, ಮುಂ- ಪೂರ್ವದಲ್ಲಿ, ನಡುಗೆ- ಮಧ್ಯಕ್ಕೆ, ಎಂದುಂಕುಂದದ- ಎಂದಿಗೂನಾಶವಾಗದ, ದರಿದ್ರಭಾವಂ- ದರಿದ್ರತ್ವವೂ, (ಕಾರ್ಶ್ಯವೂ,) ಪರಿದತ್ತು- ನಾಶವಾಯಿತು, ಎಂದೆನೆ, ಶಿವಧರ್ಮ್ಮಾಶ್ರಯದಿಂದಂ- ಶಿವಧರ್ಮಸ್ವರೂಪನಾದ ವೃಷಭೇಶ್ವರನ ಆವಾಸದಿಂದ, (ಶಿವಧರ್ಮ್ಮದ ಆಶ್ರಯದಿಂದ) ಪರಿಪಡದ- ನಾಶವಾಗದ, ದೋಷಂ, ಧರೆಯೊಳ್- ಭೂಮಿಯಲ್ಲಿ, ಆವುದೊ- ಯಾವದೋ? ... ... ... ... ... ... ... ॥೬॥

ಜಗದ್ಗುರು- ಜಗತ್ತಿಗೆಗುರುವಾದ ವೃಷಭೇಶ್ವರನು, ತನ್ನೊಳ್, ನೆಲಸಿ- ಸ್ಥಿರವಾಗಿ, ನಿಂದಕಾರಣದಿಂದಂ- ನಿಂತನಿಮಿತ್ತದಿಂದ, ಬಾಲೆ- ಮಾದಲಾಂಬಿಕೆಯು, ಗುರುಕುಚಂ- ಗುರುವಾದ, (ದಪ್ಪವಾದ) ಕುಚವು, ಆಗುರುಜಠರಂ- ದಪ್ಪವಾದ ಹೊಟ್ಟೆಯು, ಗುರುಜಘನಂ- ದಪ್ಪವಾದ ಕಟಿಪಶ್ಚಾದ್ಭಾಗವು, ಮಿಸುಗೆ- ಪ್ರಕಾಶಿಸಲು, ವರಹಂಸಸುಗತಿಗೆ- ಶ್ರೇಷ್ಠವಾದ ಹಂಸಪಕ್ಷಿಯಗಮನಕ್ಕೆ, ಗುರು- ಆಚಾರ್ಯಳು, ಎನಿಸಿ, ಇರ್ದ್ದಳ್. ... ... ... ... ... ... ... ॥

ಕಂ|| ಶಿವಚರಿತವನಾಕರ್ಣಿಪ | ಶಿವನಡಿಯಂ ಪೂಜೆಗೆಯ್ವ ಬಯಕೆ ಕರಂ ಸಂ || ಭವಿಸಿ
ದುದು ಸತಿಗೆ ನೆಲಸಿರೆ | ಶಿವಭಕ್ತಂ ಬಸಿರೊಳುಳಿದ ಬಯಕೆಗಳೊಳವೆ || ... ... ||೮||

ಕಂ|| ಓಗಡಿಕೆಯಂಗವೇದನೆ | ಯಾಗುಳಿಪತಿಜಡತೆ ನಸುಬಳಲ್ಕೆಯ ನೋಟಂ || ಬಾ
ಗುಳದ ಬಗೆ ನಿತಂಬಿನಿ | ಗಾಗಲೆ ಬಸಿರೊಳ್ ವೃಷೇಂದ್ರನಿರೆ ಘನಮಹಿಮಂ || ... ||೯||

ಕಂ|| ವರಮುಶಿವಯೋಗಿ ವೃಷಭೇ | ಶ್ವರನಾ ಮಾದಾಂಬೆಯಮಳಗರ್ಭಾಶ್ರಮದೊಳ್ ||
ಹರಚರಣಧ್ಯಾನಮನಾಂ | ತಿರುತಿರ್ದಂ ಮುಗಿದ ಕೈಗಳಿರೆ ಪೆರೆನೊಸಲೊಳ್ || ... ||೧೦||

ಕಂ|| ವಿಮಳಶರದಭ್ರದೊಳ್ಳೀ | ತಮಯೂಖಂ ರಾಜಹಂಸಶಿಶು ಧವಳಲಸ || ತ್ಕಮಳ
ದೊಳವಳಯದೊಳ್ಮಿಸು | ಪ ಮಾಳ್ಕೆಯಿಂ ಬಸವರಾಜನೆಸೆದಂ ಬಸಿರೊಳ್ || ... ||೧೧||

ವ|| ಲಸದಾಜ್ಞಾಚಕ್ರದುದ್ಯದ್ದ್ವಿದಳಸಲಿಲರುಟ್ಕರ್ಣಿಕಾಮಧ್ಯದೊಳ್ತೋ | ರ್ಪ
ಸಹಸ್ರಾರ್ಕಪ್ರಭಾಭಾಸುರವಿಮಳಸದೋಂಕಾರಪೀಠಸ್ಥ ಚಿದ್ರೂ || ಪಸಮುದ್ಯಲ್ಲಿಂಗಮಂ

---

ಶಿವಭಕ್ತಂ, ಬಸಿರೊಳ್- ಉದರದಲ್ಲಿ, ನೆಲಸಿ, ಇರೆ, ಸತಿಗೆ- ಮಾದಲಾಂಬಿಕೆಗೆ, ಶಿವಚರಿತವಂ, ಆಕರ್ಣಿಪ-ಕೇಳುವ, ಶಿವನ, ಅಡಿಯಂ- ಪಾದವನ್ನು, ಪೂಜೆಗೆಯ್ವ- ಪೂಜಿಸುವ, ಬಯಕೆ- ಇಚ್ಛೆಯು, ಕರಂ-ಚೆನ್ನಾಗಿ, ಸಂಭವಿಸಿದುದು- ಉತ್ಪನ್ನವಾಯಿತು; ಉಳಿದ, ಮಿಕ್ಕ, ಬಯಕೆಗಳ್, ಒಳವೆ- ಉಂಟೇ? ||೮||

ಘನಮಹಿಮಂ- ಅತ್ಯಂತಮಹತ್ತ್ವವುಳ್ಳ; ವೃಷೇಂದ್ರಂ, ಬಸಿರೊಳು- ಉದರದಲ್ಲಿ, ಆಗಲೆ, ಇರೆ, ನಿತಂಬನಿಗೆ- ಮಾದಲಾಂಬಿಕೆಗೆ, ಓಗಡಿಕೆ, ಅಂಗವೇದನೆ- ಮೈಯ್ನೋವು, ಆಗುಳಿಪ- ಆಗುಳಿಸುವ, ಅತಿಜಡತೆ-ಅತಿಮಾಂದ್ಯವು, ನಸುಬಳಲ್ಕೆಯ- ಸ್ವಲ್ಪ ಆಯಾಸವಿಶಿಷ್ಟವಾದ, ನೋಟಂ; ಬಾಗುಳದ- ವ್ಯಾಕುಲವಾದ, ಬಗೆ- ಮನಸ್ಸು, (ಆದುದು.) ... ... ... ... ... ... ||೯||

ವರಶಿವಯೋಗಿ- ಉತ್ಕೃಷ್ಟನಾದ ಶಿವಯೋಗಿಯಾದ, ವೃಷಭೇಶ್ವರಂ, ಆ ಮಾದಾಂಬೆಯ, ಅಮಳಗರ್ಭಾಶ್ರಮದೊಳ್- ನಿರ್ಮಲವಾದ ಗರ್ಭವೆಂಬ ಆಶ್ರಮದಲ್ಲಿ, ಪೆರೆನೊಸಲೊಳ್- ಚಂದ್ರನೋಪಾದಿಯಲ್ಲಿರುವ ಹಣೆಯಲ್ಲಿ, ಮುಗಿದ, ಕೈಗಳ್, ಇರೆ, ಹರಚರಣಧ್ಯಾನಮಂ- ಶಿವಪಾದಧ್ಯಾನವನ್ನು, ಆಂತು- ಹೊಂದಿ, ಇರುತಿರ್ದಂ. ... ... ... ... ... ... ... ||೧೦||

ವಿಮಳಶರದಭ್ರದೊಳ್- ನಿರ್ಮಲವಾದ ಶರತ್ಕಾಲದ ಮೇಘದಲ್ಲಿ, ಶೀತಮಯೂಖಂ- ಚಂದ್ರನೂ; ಧವಳಲಸತ್ಕಮಳದ- ಬಿಳುಪಾದ ತಾವರೇಹೂವಿನ, ಒಳವಳಯದೊಳ್- ಒಳಭಾಗದಲ್ಲಿ, ರಾಜಹಂಸಶಿಶು- ರಾಜಹಂಸಪಕ್ಷಿಯ ಮರಿಯೂ; ಮಿಸುಪ- ಪ್ರಕಾಶಿಸುವ, ಮಾಳ್ಕೆಯಿಂ- ರೀತಿಯಿಂದ, ಬಸಿರೊಳ್- ಉದರದಲ್ಲಿ, ಬಸವರಾಜಂ, ಎಸೆದಂ, ... ... ... ... ... ... ... ||೧೧||

ಸಮಧಿಗತಶಿವಾದ್ವೈತವಿದ್ಯಾಬ್ಧಿಚಂದ್ರಂ— ಸಮಧಿಗತ- ಹೊಂದಿದ, ಶಿವಾದ್ವೈತವಿದ್ಯಾ- ಶಿವಾದ್ವೈತವಿದ್ಯೆಯೆಂಬ, ಅಬ್ಧಿ- ಸಮುದ್ರಕ್ಕೆ, ಚಂದ್ರಂ- ಚಂದ್ರನಾದ ವೃಷಭೇಶ್ವರನು, ಲಸದಾಜ್ಞಾಚಕ್ರದ- ಪ್ರಕಾಶಿಸುವ ಆಜ್ಞಾಚಕ್ರದ, ಉದ್ಯದ್ದ್ವಿದಳಸಲಿಲರುಟ್ಕರ್ಣಿಕಾಮಧ್ಯದೊಳ್— ಉದ್ಯತ್- ಅಧಿಕವಾದ, ದ್ವಿದಳ- ಎರಡುದಳವುಳ್ಳ, ಸಲಿಲರುಟ್- ಕಮಲದ, ಕರ್ಣಿಕಾ- ಕರ್ಣಿಕೆಯ (ತಾವರೇಹೂವಿನ ಮಧ್ಯದಲ್ಲಿರುವ ಕಾಯಿ) ಮಧ್ಯದೊಳ್, ತೋರ್ಪ- ಪ್ರಕಾಶಿಸುವ, ಸಹಸ್ರಾ........ ಲಿಂಗಮಂ- ಸಹಸ್ರಾರ್ಕ- ಸಹಸ್ರಸೂರ್ಯರ, ಪ್ರಭಾ- ಕಾಂತಿಯೋಪಾದಿಯಲ್ಲಿರುವ ಕಾಂತಿಯಿಂದ, ಭಾಸುರ- ಪ್ರಕಾಶಮಾನವಾದ, ವಿಮಳ- ನಿರ್ಮಲವಾದ, ಸತ್- ಸಮೀಚೀನವಾದ, ಓಂಕಾರಪೀಠಸ್ಥ- ಓಂಕಾರಪೀಠದಲ್ಲಿರುವ, ಚಿದ್ರೂಪ- ಜ್ಞಾ

ಜಾನಿಸುತೆನಿಜಮನಃಪ್ರಾಣವೊಂದಾಗೆಸೌಖ್ಯ । ಪ್ರಸರಂಬೆತ್ತೊಪ್ಪುತಿರ್ದ್ದಂ ಸಮ
ಧಿಗತಶಿವಾದ್ವೈತವಿದ್ಯಾಬ್ಧಿಚಂದ್ರಂ॥ ... ... ... ... ॥೧೨॥

ಕಂ॥ ಸುದತಿಯಸುಗರ್ಭಧವಳಾಂ । ಗದಸೊಂಪಂನೋಡಿನಲಿದನಾಮಾದಾರಸಂ ॥ಬಿ
ದುವನೊಳಗಿಟ್ಟುಬೆಳ್ಪೇ । ರಿದದೆಸೆಗಂಡಾಚಕೋರನುತ್ಸವಿಸುವವೋಲ್ ॥ ... ॥೧೩॥

ವ॥ ಆಗಳವಂನಂದಿಕೇಶ್ವರನಿತ್ತಮೋಘವರಮಂನೆನೆದುತ್ಸಾಹಮನಸ್ಕನಾಗಿರೆ *

ಕಂ॥ ಬಾಂಗೆರೆಯಮೀಂಗಳಂಮುಂ । ನುಂಗಿಕರಂಪಸಿವಡಂಗದಬ್ಧಿಯಮೀನಂ ॥ನುಂ
ಗಲೆರಗಿದುದುನಾಡೆಪ । ತಂಗಂತಾನೆನಿಸಿಮುಳುಗಿದುದುಪಡುಗಡಲೊಳ್ ॥ ... ॥೧೪॥

ಚಂ॥ ಮಿಸುಗುವಸಂಜೆಗೆಂಪುತಳಿರಂತಿರೆತಾರಗೆಪುಷ್ಪದಂತೆರಂ। ಜಿಸೆಪೊಸಮುಬ್ಬ
ದಕ್ಕೆರಗಿದಾರಡಿಯಂತಿರೆತಾರಕಾಧ್ವಮಂ ॥ ಬಸದೃಶವೃಕ್ಷದೊಳ್ಪವಳವಣ್ಣಮನಾಳ್ದನಿವ
ಣ್ಣೆದೆಂಬಪೆಂ । ಪಸದಳಮಾಗೆತಾಂಕ್ರಮದೆಕಾಣಿಸುತಿರ್ದ್ದುದುಚಂದ್ರಮಂಡಲಂ ॥ ॥೧೫॥

---

ನಸ್ವರೂಪವಾದ, ಸಮುದ್ಯಲ್ಲಿಂಗಮಂ- ಶ್ರೇಷ್ಠವಾದ ಲಿಂಗವನ್ನು, ಜಾನಿಸುತೆ- ಧ್ಯಾನಮಾಡುತ್ತ, ನಿಜಮನಃಪ್ರಾಣಂ- ತನ್ನಮನಸ್ಸೂ ಪ್ರಾಣವೂ, ಒಂದಾಗೆ- ಸೇರಲು, ಸೌಖ್ಯಪ್ರಸರಂಬೆತ್ತು- ಅತ್ಯಂತಸೌಖ್ಯವನ್ನುಹೊಂದಿ, ಒಪ್ಪುತಿರ್ದ್ದಂ- ಪ್ರಕಾಶಿಸುತ್ತಿದ್ದನು. ... ... ... ... ॥೧೨॥

ಆಮಾದರಸಂ, ಸುದತಿಯ- ಮಾದಲಾಂಬೆಯ, ಸುಗರ್ಭಧವಳಾಂಗದ— ಸು– ಸಮೀಚೀನವಾದ, ಗರ್ಭ- ಗರ್ಭದಿಂದ, ಧವಳ- ಶುಭ್ರವಾದ, ಅಂಗದ- ಶರೀರದ, ಸೊಂಪಂ- ಚಂದವನ್ನು, ನೋಡಿ, ಬಿದುವಂ- ಚಂದ್ರನನ್ನು, ಒಳಗೆ, ಇಟ್ಟು, ಬೆಳ್ಪೇರಿದ- ಶುಭ್ರವಾದ, ದೆಸೆಗಂಡು- ದಿಕ್ಕನ್ನುನೋಡಿ, ಆಚಕೋರಂ- ಚಕೋರಪಕ್ಷಿಯು, ಉತ್ಸವಿಸುವವೋಲ್- ಸಂತೋಷಪಡುವಹಾಗೆ, ನಲಿದಂ- ಸಂತೋಷಪಟ್ಟನು. ॥೧೩॥

ಆಗಳ್, ಅವಂ- ಮಾದರಸನು, ನಂದಿಕೇಶ್ವರಂ- ನಂದೀಶ್ವರನು, ಇತ್ತ, ಅಮೋಘವರಮಂ- ವ್ಯರ್ಥವಾಗದವರವನ್ನು, ನೆನೆದು- ಸ್ಮರಿಸಿ, ಉತ್ಸಾಹಮನಸ್ಕಂ- ಉತ್ಸಾಹವಿಶಿಷ್ಟವಾದ ಮನಸ್ಸುಳ್ಳವನು, ಆಗಿರೆ. * * * * * * * * * * * * * * * * *

ಪತಂಗಂ- ಸೂರ್ಯನು (ಪಕ್ಷಿಯು) ಬಾಂಗೆರೆಯ- ಆಕಾಶವೆಂಬಕೆರೆಯ, ಮೀಂಗಳಂ- ನಕ್ಷತ್ರಗಳನ್ನು (ಮೀನುಗಳನ್ನು) ಮುಂನುಂಗಿ-ಮೊದಲುನುಂಗಿ, ಕರಂ- ಚೆನ್ನಾಗಿ, ಪಸಿವು- ಕ್ಷುದ್ಬಾಧೆಯು, ಅಡಂಗದೆ- ನಾಶವಾಗದೆ, ಅಬ್ಧಿಯಮೀನಂ- ಸಮುದ್ರದಲ್ಲಿರುವ ಮೀನನ್ನು, ನಾಡೆ- ಚೆನ್ನಾಗಿ, ನುಂಗಲ್- ನುಂಗುವದಕ್ಕೆ, ಎರಗಿದುದು- ಬೀಳುವಂಥಾದ್ದಾಯಿತು; ಎನಿಸಿ, ತಾಂ- ಆಸೂರ್ಯಮಂಡಲವು, ಪಡುಗಡಲೊಳ್- ಪಶ್ಚಿಮಸಮುದ್ರದಲ್ಲಿ, ಮುಳುಗಿದುದು- ಮುಳುಗಿತು. ... ... ... ... ॥೧೪॥

ಮಿಸುಗುವ- ಪ್ರಕಾಶಿಸುವ, ಸಂಜೆಗೆಂಪು- ಸಂಧ್ಯಾರುಣ್ಯವು, ತಳಿರಂತಿರೆ- ಚಿಗುರಿನ ಹಾಗಿರಲು; ತಾರಗೆ- ನಕ್ಷತ್ರವು, ಪುಷ್ಪದಂತೆ- ಹೂವಿನಹಾಗೆ, ರಂಜಿಸೆ- ಪ್ರಕಾಶಿಸಲು; ಪೊಸಮುಬ್ಬರ- ನೂತನವಾದ ಕತ್ತಲೆಯು, ಅದಕ್ಕೆ- ಆಪುಷ್ಪಕ್ಕೆ, ಎರಗಿದ- ಮೇಲೆಬಿದ್ದ, ಆರಡಿಯಂತೆ- ಭ್ರಮರದಹಾಗೆ, ಇರೆ- ಇರಲು; ತಾರಕಾಧ್ವಮೆಂಬ- ಆಕಾಶವೆಂಬ, ಅಸದೃಶವೃಕ್ಷದೊಳ್- ಸದೃಶವಿಲ್ಲದ ಮರದಲ್ಲಿ, ಪವಳವಣ್ಣಮಂ- ಹವಳದ ಬಣ್ಣವನ್ನು, ಆಳ್ದ- ಹೊಂದಿದ, ಇನಿವಣ್ಣು- ಮಧುರವಾದಹಣ್ಣು, ಇದು, ಎಂಬ, ಪೆಂಪು, ಅಸದಳಂಆಗೆ- ಅಧಿಕವಾಗಲು; ತಾಂಚಂದ್ರಮಂಡಲಂ, ಕ್ರಮದೆ, ಕಾಣಿಸುತಿರ್ದ್ದುದು- ಪ್ರಕಾಶಿಸುತ್ತಿತ್ತು. ... ... ... ... ... ॥೧೫॥

ಕಂ॥ ಆರಾತ್ರಿಯೊಳಭವಾಂಘ್ರಿಯ । ನಾರಾಧಿಸಿತತ್ಪ್ರಸಾದಮಂಸವಿದೊಲವಿಂ ॥ನಾ
ರೀಮಣಿಕೆಳದಿಯರೊಡ । ನೋರಂತಿರೆಪವಡಿಸಿರ್ದ್ದಳಿರ್ಪ್ಪನ್ನೆವರಂ ॥ ... ... ॥೧೬॥

ಕಂ॥ ಕುಶಲಮತಿವೃಷಭರಾಜಂ । ಶಶಿವದನೆಯಮುಗ್ಗುಲಲ್ಲಿಮನದೊಲವಿಂದಂ ॥ ಶಿಶುಭಾ
ವಮಾಂತುಮೆರೆದಂ । ಪಶುಪತಿಯಪದಾಂಬುಜಾತಮಂಜಾನಿಸುತಂ ॥ ... ... ॥೧೭॥

ಮತ್ತೇ॥ ಬಲಗಣ್ಕತ್ತಿದುದೀಶಭಕ್ತರಧರಾಶ್ರೀಗಾದುದುತ್ಸಾಹಮು । ಜ್ಜ್ವಲಮಾದ
ತ್ತಿನಬಿಂಬಮೆಣ್ದೆಸೆವಿಕಾಸಂಬೆತ್ತುದೋರಂತೆತೆ ॥ ಬೆಲರೂದಿತ್ತು ಪಳಚ್ಚನಾದವುಸರೋ
ನದ್ಯಂಬುಗಳ್ ನುದನಾ । ವಲಿಸೊಂಪೇರಿದುದಂಕುರೋದ್ಗಮಫಲಪ್ರಚ್ಛನ್ನಶಾಖಾಳಿಯಿಂ॥೧೮

ವ॥ ಆಗಳ್ಕಪ್ಪಡಿಯೊಳೊಪ್ಪಿರ್ಪ್ಪಸಂಗಮೇಶ್ವರನುಮಾಸಮನ್ವಿತನಾಗಿತನ್ನ ನಚ್ಚಿ
ನಗಣಂಗಳ್ವೆರಸಿ ಬಿನದದಿಂಬಿಜಯಂಗೆಯ್ದು ನಿಜಕುಮಾರನಪ್ಪಬಸವನಂ ನಿಡುನೇಹದಿಂ
ನಿರೀಕ್ಷಿಸಿಮುದಂದಳೆದುಗಿರಿಸುತೆಗೆ ತೋರಿ ಗಣಂಗಳೊಡನೆ ತನ್ಮಹಿಮೆಯಂಬಿತ್ತರಿಸು
ತ್ತಮಿರ್ದ್ದ * * * * * * * * * * * * * * *

---

ಆರಾತ್ರಿಯೊಳ್, ನಾರೀಮಣಿ- ಸ್ತ್ರೀಶ್ರೇಷ್ಠಳಾದ ಮಾದಲಾಂಬೆಯು, ಅಭವಾಂಘ್ರಿಯಂ- ಶಿವಪಾದವನ್ನು, ಆರಾಧಿಸಿ- ಪೂಜಿಸಿ; ತತ್ಪ್ರಸಾದಮಂ- ಶಿವಪ್ರಸಾದವನ್ನು, ಸವಿದು- ಭುಂಜಿಸಿ; ಒಲವಿಂ- ಪ್ರೀತಿಯಿಂದ, ಕೆಳದಿಯರೊಡಂ- ಸಖಿಯರಸಂಗಡ, ಓರಂತಿರೆ- ಚೆನ್ನಾಗಿ, ಪವಡಿಸಿರ್ದ್ದಳ್- ಮಲಗಿದ್ದಳು, ಇರ್ಪ್ಪನ್ನೆವರಂ- ಹೀಗಿರುವಷ್ಟರಲ್ಲಿ. ... ... ... ... ... ॥೧೬॥

ಕುಶಲಮತಿ- ಚತುರಬುದ್ಧಿಯುಳ್ಳ, ವೃಷಭರಾಜಂ, ಶಿಶುಭಾವಮಂ- ಶಿಶುತ್ವವನ್ನು, ಆಂತು- ಧರಿಸಿ, ಮನದ, ಒಲವಿಂ- ಪ್ರೀತಿಯಿಂದ, ಪಶುಪತಿಯ- ಪರಶಿವನ, ಪದಾಂಬುಜಾತಮಂ- ಪಾದಕಮಲವನ್ನು, ಜಾನಿಸುತಂ- ಧ್ಯಾನಮಾಡುತ್ತ, ಶಶಿವದನೆಯ- ಚಂದ್ರಮುಖಿಯಾದ ಮಾದಲಾಂಬೆಯ, ಮಗ್ಗುಲಲ್ಲಿ, ಮೆರೆದಂ- ಪ್ರಕಾಶಿಸಿದನು. ... ... ... ... ... ... ... ॥೧೭॥

ಈಶಭಕ್ತರ- ಶಿವಭಕ್ತರ, ಬಲಗಣ್, ಕೆತ್ತಿದುದು- ಚಲಿಸಿತು; ಧರಾಶ್ರೀಗೆ- ಭೂಲಕ್ಷ್ಮಿಗೆ, ಉತ್ಸಾಹಂ ಆದುದು; ಇನಬಿಂಬಂ- ಸೂರ್ಯಮಂಡಲವು, ಉಜ್ಜ್ವಲಮಾದತ್ತು- ಪ್ರಕಾಶಮಾನವಾಯಿತು; ಎಣ್ದೆಸೆ- ಎಂಟುದಿಕ್ಕುಗಳು, ವಿಕಾಸಂಬೆತ್ತುದು- ನಿರ್ಮಲವಾದವು; ಓರಂತೆ- ಮೆಲ್ಲಗೆ, ತಂಬೆಲರ್- ತಂಪುಗಾಳಿಯು, ಊದಿತ್ತು- ಬೀಸಿತು; ಸರೋನದ್ಯಂಬುಗಳ್, ಕೊಳ ಹೊಳೆಗಳಲ್ಲಿರುವ ನೀರುಗಳು, ಪಳಚ್ಚನೆ- ನಿರ್ಮಲವಾಗಿ, ಆದುವು; ನಂದನಾವಳಿ- ಉಪವನಪಙ್ತಿಯು, ಅಂಕುರೋ......ಳಿಯಿಂ- ಅಂಕುರ- ಮೊಳಕೆ, ಉದ್ಗಮ- ಹೂವು, ಫಲ- ಹಣ್ಣು, ಇವುಗಳಿಂದ, ಪ್ರಚ್ಛನ್ನ- ವ್ಯಾಪ್ತವಾದ, ಶಾಖ- ಕೊಂಬೆಗಳ, ಆಳಿಯಿಂ- ಪಙ್ತಿಯಿಂದ, ಸೊಂಪೇರಿದುದು- ಸೊಗಸಾಯಿತು. ... ... ... ... ... ॥೧೮॥

ಆಗಳ್, ಕಪ್ಪಡಿಯೊಳ್, ಒಪ್ಪಿ, ಪ್ರಕಾಶಿಸಿ, ಇರ್ಪ್ಪ; ಸಂಗಮೇಶ್ವರಂ, ಉಮಾಸಮನ್ವಿತಂ- ಪಾರ್ವತೀಸಮೇತನು, ಆಗಿ, ತನ್ನ, ನಚ್ಚಿನ- ಪ್ರೀತಿಪಾತ್ರರಾದ, ಗಣಂಗಳ್ವೆರಸಿ- ಗಣಂಗಳೊಡನೆಕೂಡಿ; ಬಿನದದಿಂ- ವಿನೋದದಿಂದ, ಬಿಜಯಂಗೆಯ್ದು- ದಯಮಾಡಿಸಿ, ನಿಜಕುಮಾರನಪ್ಪ- ತನ್ನಮಗನಾದ, ಬಸವನಂ, ನಿಡುನೇಹದಿಂ- ಅತ್ಯಂತ ಪ್ರೀತಿಯಿಂದ, ನಿರೀಕ್ಷಿಸಿ- ನೋಡಿ, ಮುದಂದಳೆದು- ಸಂತೋಷವನ್ನುಹೊಂದಿ, ಗಿರಿಸುತೆಗೆ- ಪಾರ್ವತಿಗೆ, ತೋರಿ, ಗಣಂಗಳೊಡನೆ, ತನ್ಮಹಿಮೆಯಂ- ಆಬಸವೇಶ್ವರನ ಮಹತ್ತ್ವವನ್ನು, ಬಿತ್ತರಿಸುತ್ತಂ- ವಿಸ್ತರಿಸುತ್ತ, ಇರ್ದ್ದ. * * * * * * * * * * *

ಚ॥ ಪರಮಕೃಪಾರಸಾರ್ದ್ರನಯನಾಂಚಲದಿಂನಡೆನೋಡಿಪಾಣಿಪಂ । ಕರುಹಮನಿಟ್ಟುಮಸ್ತಕದೊಳುದ್ಧವಿಭೂತಿಯನೊಲ್ದುಫಾಲದೊ ॥ ಳ್ಧರಿಯಿಸಿಲಿಂಗಸಂಗತನಿಜಾಂಗನನಾಗಿಸಿಮೂಲಮಂತ್ರಮಂ । ತರುಣನಕರ್ಣದೊಳ್ತಿಳುಪಿದೀಕ್ಷೆಯನಿತ್ತನದಂ ಸದಾಶಿವಂ ॥

ವ॥ ಆಗಳಂತುಶಿವಂ ಶಿವದೀಕ್ಷೆಯನೊಡಚ್ಚೈಸಿ ಬಸವನಂ ಮುಂತಾಡಿಮುದ್ದಿಸಿ ಮೂರ್ಧಾಘ್ರಾಣಂಗೆಯ್ದುಪರಮಾನಂದದಿಂ ಪರಸಿ ಗಿರಿಸುತೆವೆರಸಿ ಕಪ್ಪಡಿಗೆಬಿಜಯಂಗೆಯ್ದನನ್ನೆವರಮಿತ್ತಲ್॥ * * * * * * * * * * * * * *

ಕಂ ॥ ಸುರನದಿಯತಡಿಯಪುಳಿನಾಂ । ತರದೊಳ್ಮರಿಯಂಚೆಮಿಸುಪವೋಲ್ಕಂಗೆಸೆದಂ ॥ ತರುಣಂಜನನಿಯಪಕ್ಕದ । ಸರಸಿಜದಳಧವಳಮೃದುಳಶಯ್ಯಾತಳದೊಳ್ ॥೨೦॥

ಕಂ॥ ತರುಣನಕಾಯದ್ಯುತಿಯೆಂ । ಬರುಣಾತಪಮಳುರೆಕಮಲಮಲರ್ವಂತಿರೆತ ॥ ತ್ತರುಣಿನಿಜನಯನಸಂಪುಟ । ಮಲರುತ್ತಿರೆಕಂಡಳಾಗಳಾಬಾಲಕನಂ ॥ ... ... ॥೨೧॥

ವ॥ ಅಂತು ಕಂಡೆದೆಪವ್ವನೆಪಾರಿದಂತಾಗೆವಿಸ್ಮಯಂಬೆತ್ತು ಕೇಳದೊಳೊರಗಿರ್ದ್ದ ಕೆಳದಿ

---

ಅವಂ, ಸದಾಶಿವಂ, ಪರಮಕೃಪಾರಸಾರ್ದ್ರನಯನಾಂಚಲದಿಂ— ಪರಮಕೃಪಾರಸ- ಉತ್ಕೃಷ್ಟವಾದ ದಯಾರಸದಿಂದ, ಆರ್ದ್ರ- ನನೆದ, ನಯನಾಂಚಲದಿಂ- ಕಡೆಗಣ್ಣಿನಿಂದ, ನಡೆ- ಚೆನ್ನಾಗಿ, ನೋಡಿ; ಮಸ್ತಕದೊಳ್- ಶಿರಸ್ಸಿನಲ್ಲಿ, ಪಾಣಿಪಂಕರುಹಮಂ- ಹಸ್ತಕಮಲವನ್ನು, ಇಟ್ಟು, ಒಲ್ದು- ಪ್ರೀತಿಸಿ, ಫಾಲದೊಳ್- ಹಣೆಯಲ್ಲಿ, ಉದ್ಧವಿಭೂತಿಯಂ- ಶ್ರೇಷ್ಠವಾದ ವಿಭೂತಿಯನ್ನು, ಧರಿಯಿಸಿ, ಲಿಂಗಸಂಗತನಿಜಾಂಗನಂ— ಲಿಂಗ- ಶಿವಲಿಂಗದಿಂದ, ಸಂಗತ- ಕೂಡಿದ, ನಿಜ- ತನ್ನ, ಅಂಗನಂ- ಶರೀರವುಳ್ಳವನನ್ನಾಗಿ, ಆಗಿಸಿ- ಮಾಡಿ, ತರುಣನ- ಬಾಲನ, ಕರ್ಣದೊಳ್-ಕಿವಿಯಲ್ಲಿ, ಮೂಲಮಂತ್ರಮಂ- ಷಡಕ್ಷರಮಂತ್ರವನ್ನು, ತಿಳುಪಿ- ಉಪದೇಶವಂಮಾಡಿ, ದೀಕ್ಷೆಯಂ- ಶಿವದೀಕ್ಷೆಯನ್ನು, ಇತ್ತಂ- ಕೊಟ್ಟನು. ... ॥೧೯॥

ಆಗಳ್, ಇಂತು- ಈಪ್ರಕಾರವಾಗಿ, ಶಿವಂ, ಶಿವದೀಕ್ಷೆಯಂ, ಒಡಚ್ಚೈಸಿ- ಮಾಡಿ, ಬಸವನಂ, ಮುಂತಾಡಿ,ತಬ್ಬಿಕೊಂಡು, ಮುದ್ದಿಸಿ- ಮೂರ್ಧಾಘ್ರಾಣಂಗೆಯ್ದು- ಶಿರಸ್ಸನ್ನು ಮೂಸಿನೋಡಿ, ಪರಮಾನಂದದಿಂ- ಅತ್ಯಂತಸಂತೋಷದಿಂದ,ಪರಸಿ- ಆಶೀರ್ವಾದಮಂಮಾಡಿ, ಗಿರಿಸುತೆವೆರಸಿ- ಪಾರ್ವತಿಯೊಡನೆಕೂಡಿ, ಕಪ್ಪಡಿಗೆ, ಬಿಜಯಂಗೆಯ್ದಂ- ಪ್ರಯಾಣಮಾಡಿದನು, ಅನ್ನೆವರಂ-ಅಷ್ಟರಲ್ಲಿ, ಇತ್ತಲ್- ಈಕಡೆಯಲ್ಲಿ * *

ಸುರನದಿಯ- ದೇವಗಂಗೆಯ, ತಡಿಯ- ದಡದಲ್ಲಿರುವ, ಪುಳಿನಾಂತರದೊಳ್- ಮಳಲಿನಪ್ರದೇಶದಲ್ಲಿ, ಮರಿಯಂಚೆ- ಹಂಸಪಕ್ಷಿಯ ಮರಿಯು, ಮಿಸುಪವೋಲ್- ಪ್ರಕಾಶಿಸುವಹಾಗೆ; ತರುಣಂ- ಬಾಲನು, ಜನನಿಯ- ತಾಯಿಯಾದಮಾದಲಾಂಬೆಯ, ಪಕ್ಕದ- ಪಾರ್ಶ್ವದಲ್ಲಿರುವ, ಸರಸಿಜ......ತಳದೊಳ್— ಸರಸಿಜ- ಕಮಲದ, ದಳ- ಎಸಳಿನೋಪಾದಿಯಲ್ಲಿ, ಧವಳ- ಶುಭ್ರವಾದ, ಮೃದುಳ- ಕೋಮಲವಾದ, ಶಯ್ಯಾತಳದೊಳ್- ಹಾಸಿಗೆಯಲ್ಲಿ, ಕಂಗೆಸೆದಂ- ಕಣ್ಣಿಗೆಮನೋಹರನಾದನು. ... ... ... ॥೨೦॥

ತರುಣನ- ಬಾಲನ, ಕಾಯದ್ಯುತಿಯೆಂಬ- ಶರೀರದ ಕಾಂತಿಯೆಂಬ, ಅರುಣಾತಪಂ— ಸೂರ್ಯನಕಿರಣವು, ಅಳುರೆ- ಅಧಿಕವಾಗಲು; ಕಮಲಂ- ತಾವರೆಹೂವು, ಅಲರ್ವಂತಿರೆ- ಅರಳುವಹಾಗೆ, ನಿಜನಯನಸಂಪುಟಂ— ನಿಜ- ತನ್ನ, (ಮಾದಲಾಂಬೆಯ) ನಯನಸಂಪುಟಂ- ನೇತ್ರಗಳರೆಪ್ಪೆಯು, ಅಲರುತ್ತಿರೆ- ವಿಕಸಿಸುತ್ತಿರಲು, ತತ್ತರುಣಿ- ಆ ಮಾದಲಾಂಬೆಯು, ಆಗಳ್, ಆಬಾಲಕನಂ, ಕಂಡಳ್. ... ... ॥೨೧॥

ಅಂತು, ಕಂಡು, ಎದೆ- ಹೃದಯವು, ಪವ್ವನೆ- ಜಾಗ್ರತೆಯಾಗಿ, ಪಾರಿದಂತೆ- ಹಾರಿದಹಾಗೆ,ಗೆ ಆವಿ,

ಯರನಬ್ಬರಿಸುತೆಬ್ಬಿರ್ಸಿಕೆಲವಲದಕುಲವೃದ್ಧೆಯರಂಕರೆದುನಿಜವಲ್ಲಭನಂಬರಿಸಿ ಬಳಸಿಕೆದ
ರ್ದ ಮಂದಾರದರಲ್ಗಳೆಂಬ ನಕ್ಷತ್ರಂಗಳನಡುವೆ ಮಿಸುವಬಾಲೇಂದುವಂತೆಸೆವಭಸಿತಲಸಿತ
ಲಲಾಟನಂರುದ್ರಾಕ್ಷಮಾಲಾಲಂಕೃತನಿಜಗ್ರೀವನಂ ಶಿವಲಿಂಗಸಂಗತೋರಸ್ಥಳನಂ ಮಂದಸ್ಮಿ
ತಮುಖಾಂಬುಜನಂ ನಳಿನದಳನೇತ್ರನಂ ಚಿತ್ರಚರಿತ್ರನಂ ಪವಿತ್ರಗಾತ್ರನಂ ಪುತ್ರನಂತೋ
ರಿಸುತ್ತಂಸಂಗಮೇಶ್ವರಂಬಂದೆಸಗಿಪೋದುದಂ ಸ್ವಪ್ನದೊಳ್ಕಂಡುದನೆಲ್ಲಮನೆಲ್ಲರ್ಕೇಳ್ದ
ಚ್ಚರಿವಡೆಯೆ ಮಾದಾಂಬಿಕೆ ನಿಜಪತಿಯೊಡನೆ ಬಿತ್ತರಿಸೆಕೇಳ್ದತ್ಯಂತಕೌತುಕಂಬಟ್ಟು ಮಾ
ದಿರಾಜಂ ಮನದೊಸಗೆಮಿಗೆ ಶಿಶುಮಹಿಮೆಗೆ ತಲೆದೂಗಿ ನಂದೀಶ್ವರಂಗೆಬಾಯಿನಂಗಳುಪಿ ಶಿ
ವಾರಾಧನಂಗೆಯ್ದು ಯಥೋಚಿತಕ್ರಿಯೆಯಿಂ ಮೆರೆದು ಬಸವನನೇಮದಿಂದೊಗೆದನಪ್ಪುದ
ರಿಂ ಬಸವನೆಂದು ನಾಮಕರಣಂಗೆಯ್ದು ಜಾತ್ಯಂಧಂ ಕಣ್ಪಡೆದಂತೆ ದರಿದ್ರಂ ಸುರರತ್ನಮಂಕಂ

---

ಸ್ಮಯಂಬೆತ್ತು- ಆಶ್ಚರ್ಯವಂಹೊಂದಿ, ಕೆಲದೊಳ್- ಪಾರ್ಶ್ವದಲ್ಲಿ, ಒರಗಿ, ಮಲಗಿ, ಇರ್ದ್ದ, ಕೆಳದಿಯರಂ- ಸಖಿಯರನ್ನು, ಅಬ್ಬರಿಸುತೆ- ಕೂಗುತ್ತ, ಎಬ್ಬಿರ್ಸಿ, ಕೆಲವಲದ- ಆಚೆ ಈಚೆನ, ಕುಲವೃದ್ಧೆಯರಂ- ವೃದ್ಧೆಯರಾದ ಪತಿವ್ರತಾಸ್ತ್ರೀಯರನ್ನು, ಕರೆದು- ಬರಮಾಡಿ, ನಿಜವಲ್ಲಭನಂ- ತನ್ನ ಪತಿಯಾದ ಮಾದರಸನನ್ನು, ಬರಿಸಿ- ಬರಮಾಡಿ; ಬಳಸಿ- ಸುತ್ತಲೂ, ಕೆದರ್ದ- ಚೆಲ್ಲಿರುವ, ಮಂದಾರದ- ಕಲ್ಪವೃಕ್ಷದ, ಅರಲ್ಗಳೆಂಬ- ಹೂವುಗಳೆಂಬ, ನಕ್ಷತ್ರಂಗಳ, ನಡುವೆ- ಮಧ್ಯದಲ್ಲಿ, ಮಿಸುಪ- ಪ್ರಕಾಶಿಸುವ, ಬಾಲೇಂದುವಂತೆ- ಬಾಲಚಂದ್ರನಹಾಗೆ, ಎಸೆವ- ಪ್ರಕಾಶಿಸುವ; ಭಸಿತಲಸಿತಲಲಾಟನಂ- ಭಸಿತ- ಭಸ್ಮದಿಂದ, ಲಸಿತ- ಪ್ರಕಾಶಮಾನವಾದ, ಲಲಾಟನಂ- ಹಣೆಯುಳ್ಳ, ರುದ್ರಾಕ್ಷಮಾಲಾಲಂಕೃತನಿಜಗ್ರೀವನಂ— ರುದ್ರಾಕ್ಷಮಾಲಾ- ರುದ್ರಾಕ್ಷಮಾಲಿಕೆಗಳಿಂದ, ಅಲಂಕೃತ- ಅಲಂಕರಿಸಲ್ಪಟ್ಟ, ನಿಜ- ತನ್ನ, ಗ್ರೀವನಂ- ಕಂಠವುಳ್ಳ, ಶಿವಲಿಂಗಸಂಗತೋರಸ್ಥಲನಂ— ಶಿವಲಿಂಗ- ಶಿವಲಿಂಗದಿಂದ, ಸಂಗತ- ಕೂಡಿದ, ಉರಸ್ಥಲನಂ- ಎದೆಯುಳ್ಳ; ಮಂದಸ್ಮಿತಮುಖಾಂಬುಜನಂ— ಮಂದಸ್ಮಿತ- ಮುಗುಳ್ನಗೆಯಿಂಕೂಡಿದ, ಮುಖಾಂಬುಜನಂ- ಮುಖಕಮಲವುಳ್ಳ; ನಳಿನದಳನೇತ್ರನಂ— ನಳಿನದಳ- ಕಮಲದ ಎಸಳಿನೋಪಾದಿಯಲ್ಲಿರುವ, ನೇತ್ರನಂ- ಕಣ್ಣುಳ್ಳ; ಚಿತ್ರಚರಿತ್ರನಂ- ಆಶ್ಚರ್ಯಕರವಾದಚರಿತ್ರವುಳ್ಳ; ಪವಿತ್ರಗಾತ್ರನಂ- ಪರಿಶುದ್ಧವಾದ ಶರೀರವುಳ್ಳ ಪುತ್ರನಂ-ಬಾಲನನ್ನು, ತೋರಿಸುತ್ತಂ, ಸಂಗಮೇಶ್ವರಂ, ಬಂದು, ಎಸಗಿ- ಮಾಡಿ, ಪೋದುದಂ- ಹೋದದ್ದನ್ನೂ, ಸ್ವಪ್ನದೊಳ್, ಕಂಡುದಂ, ಎಲ್ಲಮಂ, ಎಲ್ಲರ್- ಸರ್ವರೂ, ಕೇಳ್ದು- ಕೇಳಿ, ಅಚ್ಚರಿವಡೆಯೆ-ಆಶ್ಚರ್ಯಪಡುವಹಾಗೆ, ಮಾದಾಂಬಿಕೆ, ನಿಜಪತಿಯೊಡನೆ, ತನ್ನ ಗಂಡನಾದ ಮಾದರಸನೊಡನೆ, ಬಿತ್ತರಿಸೆ-ವಿಸ್ತರಿಸಲು; ಮಾದಿರಾಜಂ- ಮಾದರಸನು, ಕೇಳ್ದು, ಅತ್ಯಂತಕೌತುಕಂಬಟ್ಟು- ಅತ್ಯಂತಾಶ್ಚರ್ಯವಂಹೊಂದಿ, ಮನದ- ಮನಸ್ಸಿನ, ಒಸಗೆ- ಉತ್ಸವವು, ಮಿಗೆ- ಅಧಿಕವಾಗಲು; ಶಿಶುಮಹಿಮೆಗೆ- ಬಾಲಕನಮಹತ್ತ್ವಕ್ಕೆ, ತಲೆದೂಗಿ- ಶಿರಸ್ಸನ್ನುತೂಗಿ, ನಂದೀಶ್ವರಂಗೆ, ಬಾಯಿನಂಗಳುಪಿ- ಬಾಗಿನವನ್ನು ಕಳುಹಿಸಿ; ಶಿವಾರಾಧನಂಗೆಯ್ದು- ಶಿವಪೂಜೆಯನ್ನು ಮಾಡಿ, ಯಥೋಚಿತಕ್ರಿಯೆಯಿಂ- ಯಥಾಯೋಗ್ಯವಾದ ಕರ್ಮದಿಂದ, ಮೆರೆದು, ಪ್ರಕಾಶಮಾನನಾಗಿ; ಬಸವನ, ನೇಮದಿಂ- ಅನುಗ್ರಹದಿಂದ, ಒಗೆದನಪ್ಪುದರಿಂ- ಹುಟ್ಟಿದವನಾದುದರಿಂದ, ಬಸವಂ, ಎಂದು, ನಾಮಕರಣಂಗೆಯ್ದು- ನಾಮಕರಣವಂಮಾಡಿ, ಜಾತ್ಯಂಧಂ- ಹುಟ್ಟುಕುರುಡನು, ಕಣ್ಪಡೆದಂತೆ- ಕಣ್ಣನ್ನುಹೊಂದಿದಹಾಗೆ, ದರಿದ್ರಂ- ದೀನನು, ಸುರರತ್ನಮಂ- ಚಿಂತಾರತ್ನವನ್ನು, ಕಂಡಂತೆ-ಕಂಡಹಾಗೆ, ಸರುಜಂ- ರೋಗಿಯು, ಸಂಜೀವನಮಂ- ಸಂಜೀವನವೆಂಬ ಮೂಲಿಕೆಯನ್ನು, ಸವಿದಂತೆ– ತಿಂದಹಾಗೆ,ಪರಮಾನಂದರಸಪರಿ

ಡುತೆ ಸರುಜು ಸಂಜೀವನಮುಂಸವಿದಂತೆ ಪರಮಾನಂದ ರಸಪರಿಪ್ಲುತಮನಸ್ಕನಾಗಿರ್ದ್ದ ನಾಗಳ್ * * * * * * * * * * * * * * *

ವೃ ॥ ಶಿವಧರ್ಮಂಶಿಶುರೂಪನಾಳ್ದುದೊಶಿವಾ ಚಾರಂಧರಾಭಾಗದೊ । ಳ್ಕುವರಂತಾನೆನಿಸಿತ್ತೊ ಸಾರಶಿವತೇಜಂ ಮೂರ್ತಿಗೊಂಡಿರ್ದುದೋ ॥ ಶಿವನಾನಂದದಲಂಪುತಾನೆಬಲಿದೊಪ್ಪಂಬೆತ್ತುದೋಪೇಳಿಮೆಂ । ಬ ವಿಚಾರಕ್ಕೆಡೆಯಾಗಿ ರಂಜಿಸಿದನಾನಂದೀಶನಾ ಬಾಲ್ಯದೊಳ್ ॥ ... ... ... ... ... ... ॥೧॥

ಕಂ॥ ಜಗದೊಳಗಣಶಿಶುಗಳಬಗೆ । ವೃಗದಮಹಾಮಹಿಮಶಿಶುವಿದೆಂದಳ್ಕರೊಳಾ ॥ ಮೃಗನಯನೆನೋಡಿಸಂತಸ । ಮೊಗೆತರೆಪೊಗಳ್ದಪ್ಪುತೆಯ್ದೆಮುದ್ದಿಸುತಿರ್ದಳ್ ॥೩॥

ವ॥ ಅಂತು ಮುದ್ದಿಸಿಮುಂಡಾಡಿ ಪನ್ನೆರಡನೆಯದಿನದೊಳ್ಸನ್ನುತೋತ್ಸವದಿಂಮಿಗೆ ರನ್ನದೊಟ್ಟಿಲನಿಟ್ಟುಕಟ್ಟಳ್ಕರಿಂನಲಿದು॥ * * * * * * * * * * *

ಚಂ॥ ಸುಲಲಿತರೂಪಜೋಸುಗುಣಮಂದಿರಜೋಸುಕೃತಾತ್ಮಜೋಸಮು। ಜ್ಜ್ವಲಶಿವಧರ್ಮಜೋಸರಸವಾಙ್ಮಯಜೋಸಕಳೇಶಜೋನಿರಾ॥ಕುಲಮತಿಯುಕ್ತಜೋನಿಗಮಸ

---

ಪ್ಲುತಮನಸ್ಕಂ— ಪರಮ- ಉತ್ಕೃಷ್ಟವಾದ, ಆನಂದರಸ- ಸಂತೋಷರಸದಿಂದ, ಪರಿಪ್ಲುತ- ವ್ಯಾಪ್ತವಾದ, ಮನಸ್ಕಂ- ಮನಸ್ಸುಳ್ಳವನು, ಆಗಿರ್ದ್ದಂ, ಆಗಳ್. * * * * * * * * *

ಶಿವಧರ್ಮಂ, ಶಿಶುರೂಪಂ- ಮಗುವಿನಸ್ವರೂಪವನ್ನು, ಆಳ್ದುದೊ- ಹೊಂದಿತೋ; ಶಿವಾಚಾರಂ, ಧರಾಭಾಗದೊಳ್- ಭೂತಲದಲ್ಲಿ, ತಾಂ, ಕುಮಾರಂ, ಶಿಶುವು, ಎನಿಸಿತ್ತೊ-ಎನಿಸಿಕೊಂಡಿತೋ; ಸಾರಶಿವತೇಜಂ- ಶ್ರೇಷ್ಠವಾದಪರಮೇಶ್ವರನತೇಜಸ್ಸು, ಮೂರ್ತಿಗೊಂಡು- ಶರೀರವನ್ನುಹೊಂದಿ, ಇರ್ದುದೋ; ಶಿವನಾನಂದದ- ಸಂತೋಷದ, ಅಲಂಪು- ಆಧಿಕ್ಯವು, ತಾನೆ, ಬಲಿದು, ಒಪ್ಪಂಬೆತ್ತುದೋ- ಮನೋಹರವಾಯಿತೋ; ಪೇಳಿಂ- ಹೇಳಿರಿ, ಎಂಬ, ವಿಚಾರಕ್ಕೆ, ಎಡೆಯಾಗಿ- ಆಸ್ಪದವಾಗಿ, ನಂದೀಶಂ, ಆಬಾಲ್ಯದೊಳ್- ಆ ಶೈಶವಾವಸ್ಥೆಯಲ್ಲಿ, ರಂಜಿಸಿದಂ-ಪ್ರಕಾಶಿಸಿದನು. ... ... ... ... ॥೧॥

ಆಮೃಗನಯನೆ- ಮಾದಲಾಂಬಿಕೆಯು, ಇದು- ಈಮಗುವು, ಜಗದೊಳಗಣಶಿಶುಗಳ-ಜಗತ್ತಿನಲ್ಲಿರುವ ಮಕ್ಕಳುಗಳ, ಬಗೆವುಗದ- ರೀತಿಯನ್ನುಹೊಂದದ, ಮಹಾಮಹಿಮಶಿಶು- ಅತ್ಯಂತಮಹತ್ತ್ವವುಳ್ಳಶಿಶುವು, ಎಂದು, ಅಳ್ಕರೊಳ್- ಪ್ರೀತಿಯಿಂದ, ನೋಡಿ, ಸಂತಸಂ- ಸಂತೋಷವು, ಒಗೆತರೆ- ಹುಟ್ಟಲು, ಪೊಗಳ್ದು- ಹೊಗಳಿ, ಅಪ್ಪುತೆ- ಆಲಿಂಗಿಸುತ್ತ, ಎಯ್ದೆ- ಚೆನ್ನಾಗಿ, ಮುದ್ದಿಸುತೆ- ಮುದ್ದಾಡುತ್ತ, ಇರ್ದಳ್ ॥೩॥

ಅಂತು, ಮುದ್ದಿಸಿ, ಮುಂಡಾಡಿ, ಆಲಂಗಿಸಿ, ಪನ್ನೆರಡನೆಯದಿನದೊಳ್- ಹನ್ನೆರಡನೆಯದಿವಸದಲ್ಲಿ, ಸನ್ನುತೋತ್ಸವದಿಂ- ಸನ್ನುತ- ಶ್ಲಾಘ್ಯವಾದ, ಉತ್ಸವದಿಂ, ಮಿಗೆ-ಚೆನ್ನಾಗಿ, ರನ್ನದೊಟ್ಟಿಲಂ- ರತ್ನದತೊಟ್ಟಿಲನ್ನು; ಇಟ್ಟು, ಕಟ್ಟಳ್ಕರಿಂ, ಅತಿಪ್ರೀತಿಯಿಂದ, ನಲಿದು- ಸಂತೋಷಪಟ್ಟು. * * * *

ಸುಲಲಿತ- ಮನೋಹರವಾದ, ರೂಪ- ಆಕಾರವುಳ್ಳವನೇ, ಜೋ; ಸುಗುಣಮಂದಿರ- ಸದ್ಗುಣಗಳಿಗಾಶ್ರಯನಾದವನೇ, ಜೋ; ಸುಕೃತಾತ್ಮ- ಪುಣ್ಯಸ್ವರೂಪನೇ, ಜೋ; ಸಮುಜ್ಜ್ವಲಶಿವಧರ್ಮ- ಸಮುಜ್ಜ್ವಲ-ಪ್ರಕಾಶಮಾನವಾದ, ಶಿವಧರ್ಮ- ಶಿವಧರ್ಮಸ್ವರೂಪನೇ,ಜೋ; ಸರಸವಾಙ್ಮಯ- ಮನೋಹರನಾದ ವಾಕ್ಸ್ವರೂಪನೇ, ಜೋ; ಸಕಳೇಶ- ಸಮಸ್ತಕ್ಕೂಸ್ವಾಮಿಯಾದವನೇ, ಜೋ; ನಿರಾಕುಳಮತಿಯುಕ್ತ- ನಿಶ್ಚಂಚಲವಾದಬುದ್ಧಿಯಿಂದ ಕೂಡಿದವನೇ, ಜೋ; ನಿಗಮಸನ್ನುತ- ವೇದಗಳಿಂದ ಹೊಗಳಲ್ಪಟ್ಟವ

ನ್ನುತಜೋ೦ನಿರವದ್ಯಮೂರ್ತಿಜೋ । ಬಲರಿಪುವಂದ್ಯಜೋಬಸವಜೋವಿಭುಜೋಯೆನುತೊ ಪ್ಪಿ ತೂಗಿದಳ್ ॥ ... ... ... ... .. ... ॥೭೪॥

ಮಲ್ಲಿಕಾಮಾಲಾ ॥ ಮಂಗಳಾನ್ವಿತಜೋ ಮಹೀನುತಜೋ ಮಹಾವ್ರತಜೋ ಸು ರೋ । ತ್ತುಂಗಸೇವಿತಜೋ ಶುಚಿಸ್ಮಿತಜೋ ಸುಖಾಶ್ರಿತಜೋ ಸದಾ ॥ ಜಂಗಮಪ್ರಿಯ ಜೋ ಜಗನ್ಮಯಜೋ ಜಿತಸ್ಮರಜೋ ಯೆನು । ತ್ತಂಗನಾಮಣಿಜೋಗುಳಂಗಳಪಾಡಿ ತೂಗಿದಳಳ್ಕರಿಂ॥ .. ... ... ... ... ... ॥೭೫॥

ಮತ್ತೇ॥ ಶಿವನನುಜಾನಿಸುವಂತೆಕಣ್ಮುಗಿವನಂದೋರೋರ್ಮೆಮಾಯಾಪ್ರಪಂ । ಚಮಿದೆ ಲ್ಲಂಜಡಮೆಂದುನೋಡಿನಗುವಂತೋರೋರ್ಮೆಮಂದಸ್ಮಿತೋ ॥ ತ್ಸವಮಂಬೀರುವನೊತ್ತಿ ಬಳ್ಪಿಡಿದವೊಲ್ಸದ್ಭಕ್ತಿಯುಂಮುಟ್ಟನಾ । ಡುವನೋರೋರ್ಮೆಕರಂಗಳಂತಳೆಯೆತನ್ಮಾ ಮಾಂಬೆಯಾನಂದಮಂ ॥ ... ... ... ... ... ॥೭೬॥

ಕಂ॥ ಮುನಿಜನಮಾನಸಾಬ್ಜದೊಳೆತಾನೆಸೆವಂದಮನಿಲ್ಲಿತೋರ್ಪನೆಂ । ದೆನಿಸುತೆಕು ಳ್ಳಿರುತ್ತೆಸೆವನುರ್ವಿಗೆರಾಗಮನಿತ್ತುಮಲ್ಲಮೆ ॥ ಲ್ಲನೆನಡೆವಂತೆದಟ್ಟಡಿಯನೊಲ್ದಿಡುವಂಶಿವ

ನೇ, ಜೋ; ನಿರವದ್ಯಮೂರ್ತಿ- ನಿರ್ದುಷ್ಟವಾದಶರೀರವುಳ್ಳವನೇ, ಜೋ; ಬಲರಿಪುವಂದ್ಯ * ಬಲರಿಪು- ದೇವೇಂದ್ರನಿಂದ, ವಂದ್ಯ- ನಮಸ್ಕರಿಸಲ್ಪಡುವದಕ್ಕೆ ಯೋಗ್ಯನಾದವನೇ, ಜೋ; ಬಸವ, ಜೋ; ವಿಭು- ಪ್ರಭುವೇ, ಜೋ; ಎನುತೆ, ಒಪ್ಪಿ- ಪ್ರಕಾಶಿಸಿ, ತೂಗಿದಳ್. ... ... ... ॥೭೪॥

ಅಂಗನಾಮಣಿ- ಸ್ತ್ರೀಶ್ರೇಷ್ಠಳಾದಮಾದಲಾಂಬಿಕೆಯು, ಅಳ್ಕರಿಂ-ಪ್ರೀತಿಯಿಂದ, ಮಂಗಳಾನ್ವಿತ- ಶುಭಯುಕ್ತನಾದವನೇ, ಜೋ; ಮಹೀನುತ- ಭೂಜನದಿಂದಕೊಂಡಾಡಲ್ಪಟ್ಟವನೇ, ಜೋ; ಮಹಾವ್ರತ ಅಧಿಕವಾದ ನಿಯಮವುಳ್ಳವನೇ, ಜೋ; ಸುರೋತ್ತುಂಗಸೇವಿತ- ದೇವಶ್ರೇಷ್ಠರಿಂದಸೇವಿಸಲ್ಪಟ್ಟವನೇ ಜೋ; ಶುಚಿಸ್ಮಿತ- ಶುಭ್ರವಾದಮುಗುಳ್ನಗೆಯುಳ್ಳವನೇ, ಜೋ; ಸುಖಾಶ್ರಿತ, ಸುಖಕ್ಕೆಆಶ್ರಯನಾದವ ನೇ, ಜೋ; ಸದಾ- ನಿರಂತರದಲ್ಲೂ, ಜಂಗಮಪ್ರಿಯ- ಜಂಗಮರಲ್ಲಿಪ್ರೀತಿಯುಳ್ಳವನೇ, ಜೋ; ಜಗನ್ಮ ಯ- ಜಗತ್ಸ್ವರೂಪನಾದವನೇ, ಜೋ;ಜಿತಸ್ಮರ- ಜಯಿಸಲ್ಪಟ್ಟಮನ್ಮಥನುಳ್ಳವನೇ,ಜೋ; ಎನುತ್ತೆ,ಜೋ ಗುಳಂಗಳ, ಪಾಡಿ, ತೂಗಿದಳ್. ... ... ... ... ... ॥೭೫॥

ಅಂದು, ತನ್ಮಾಮಾಂಬೆ, ಆನಂದಮಂ- ಸಂತೋಷವನ್ನು, ತಳೆಯುವಹಾಗೆ, (ಬಸವಂ) ಶಿವನಂ, ಜಾ ನಿಸುವಂತೆ- ಧ್ಯಾನಿಸುವಹಾಗೆ, ಓರೋರ್ಮೆ- ಒಂದಾವರ್ತಿ, ಕಣ್ಮುಗಿವಂ- ಕಣ್ಣನ್ನುಮುಚ್ಚುವನು; ಮಾಯಾ ಪ್ರಪಂಚಂ- ಮಾಯಾವಿಶಿಷ್ಟವಾದ, ಇದುಪ್ರಪಂಚಂಎಲ್ಲಂ- ಈಪ್ರಪಂಚವೆಲ್ಲವೂ, ಜಡಂ- ಜಡಾತ್ಮಕವಾ ದದ್ದು; ಎಂದು ನೋಡಿ, ನಗುವಂತೆ, ಓರೋರ್ಮೆ, ಮಂದಸ್ಮಿತೋತ್ಸವಮಂ- ಮುಗುಳ್ನಗೆಯ ಉತ್ಸವವ ನ್ನು, ಬೀರುವಂ- ಪ್ರಸರಿಸುವನು; ಸದ್ಭಕ್ತಿಯುಂ, ಒತ್ತಿ, ಬಳ್ಪಿಡಿದವೊಲ್- ಬಿಗಿಯಾಗಿಹಿಡಿದಹಾಗೆ, ಓ ರೋರ್ಮೆ, ಕರಂಗಳಂ- ಹಸ್ತಗಳನ್ನು, ಮುಟ್ಟಮಾಡುವಂ- ಮುಷ್ಟಿಯನ್ನುಹಿಡಿಯುವನು. ... ॥೭೬॥

ತಾಂ- ಬಸವೇಶ್ವರನು, ಮುನಿಜನಮಾನಸಾಬ್ಜದೊಳೆ— ಮುನಿಜನ- ಋಷಿಜನರ, ಮಾನಸ- ಮನ ಸ್ಸೆಂಬ, ಅಬ್ಜದೊಳೆ- ಕಮಲದಲ್ಲಿ, ಎಸೆವ- ಪ್ರಕಾಶಿಸುವ, ಅಂದಮಂ- ರೀತಿಯನ್ನು, ಇಲ್ಲಿ, ತೋರ್ಪೆಂ, ಎಂದು, ಎನಿಸುತೆ, ಕುಳ್ಳಿರುತ್ತೆ, ಕುಳಿತುಕೊಂಡಿರುತ್ತ, ಎಸೆವಂ, ಉರ್ವಿಗೆ- ಭೂಮಿಗೆ, ರಾಗಮಂ- ಆ

* (ಅವ) ಬಲ- ಬಲಾಸುರನಿಗೆ, ಅರಿ- ಶತ್ರುವಾದವನು. * * * * * * ॥೭೪॥

ತಂತ್ರವಾಕ್ಯವೊಂ । ದೆನಿಜವುದಲ್ಲವೆಲ್ಲತೊವಳೆಂಬವೊಲುಣ್ಮೆತೊದಳ್ವಿನೋದಿಪಂ ॥೭೭॥
ಕಂ॥ ಉಮ್ಮಳಿಪುದುಪೊಡೆಮುಗುಳ್ವುದು । ಕೆಮ್ಮುವುದಳ್ವುದುಜಿನುಂಗುವುದುಸು
ಯ್ವುದುಜಾ॥ಡ್ಯಂಮೊಳೆವುದೆಂಬಬಗೆಗ। ಳ್ಸಮ್ಮನಿಸವುಬಸವನಲ್ಲಿಶೈಶವದಶೆಯೊಳ್ ॥೭೮॥
ಉ॥ ಎನ್ನಯತಂದೆಬಾರ ಮಿಸುಪೆನ್ನಸುಧಾನಿಧಿಮುದ್ದ ನೀವುದೆಂ । ದೆನ್ನರಸಂಚೆ
ನೀಂನಡೆಯುದೆನ್ನಯಕಣ್ಮಲರಚ್ಚ ಸೈಪೆನೋ॥ ಡೆನ್ನಯರಾಜಕೀರನುಡಿಯೆನ್ನಸುರತ್ನಮೆ
ಕುಳ್ಳಿರೆಂದುಚಿ । ತ್ತಂನಲವೇರೆಮಾತೆಬಗಿದಪ್ಪ ತೆಮುದ್ದಿಪಳಾಕುಮಾರನಂ॥ ॥೭೯॥
ಚಂ॥ ಅರಳೆಲೆಭಾಳದೊಳ್ಕುಣಿಯೆಕರ್ಣದೊಳಾಡೆಸುವರ್ಣಕುಂಡಲಂ । ಚರಣದಗು
ಜ್ಜುಗೆಜ್ಜೆರ್ಝುಣಿರೆಂದೆನೆನೂಪುರದಿಂಚರಂಪಳಂ ॥ ಚಿರೆವೊಳೆವಲ್ಕರುಮಿನುಗೆಚೆಲ್ವಮುಗು
ಳ್ನಗೆಮುದ್ದುವೀರೆಕ। ಣ್ಬರಿಗೆಡೆಯಾಗಿಮಾತೆಯಕರಾಂಬುಜತಾಳಕೆನರ್ತಿಪಂಸುತಂ ॥೮೦॥
ಮ॥ ಸ್ರ॥ ಮಲಯೋರ್ವೀಭೃತ್ಪಟೀರಪ್ರಬಳವನದೊಳುದ್ಯದ್ವಿಪೇಂದ್ರಾರ್ಭಕಂ

---

ರುಣ್ಯವನ್ನು, (ಪ್ರೀತಿಯನ್ನು) ಇತ್ತು- ಕೊಟ್ಟು, ಮೆಲ್ಲಮೆಲ್ಲನೆ, ನಡೆವಂತೆ, ದಟ್ಟಡಿಯಂ- ತಪ್ಪುಹೆಜ್ಜೆಯನ್ನು, ಒಲ್ದು, ಇಡುವಂ; ಶಿವತಂತ್ರವಾಕ್ಯಂ- ಶಿವಾಗಮವಾಕ್ಯವು, ಒಂದೆ, ನಿಜಂ- ಸತ್ಯವು, ಅದಲ್ಲದೆ, ಎಲ್ಲ, ತೊದಳ್- ಸುಳ್ಳು, ಎಂಬವೊಲ್, ತೊದಳ್- ತೊದಳುಮಾತು, ಉಣ್ಮೆ, ಉಂಟಾಗಲು, ವಿನೋದಿಪಂ- ಆಡುವನು. ... ... ... ... ... ... ... ॥೭೭॥

ಬಸವನಲ್ಲಿ, ಶೈಶವದಶೆಯೊಳ್- ಬಾಲ್ಯಾವಸ್ಥೆಯಲ್ಲಿ, ಪೊಡೆ- ಹೊಟ್ಟೆಯು, ಉಮ್ಮಳಿಪುದು- ಉಬ್ಬರಿಸುವದು, ಮುಗುಳ್ವುದು- ಇಳಿಯುವದು, ಕೆಮ್ಮುವದು, ಅಳ್ವುದು, ಜಿನುಂಗುವುದು- ಜೀಗುಟ್ಟುವದು, ಸುಯ್ವುದು- ನಿಟ್ಟುಸಿರಂಬಿಡುವದು; ಜಾಡ್ಯಂ- ರೋಗವು, ಮೊಳೆವುದು- ಹುಟ್ಟುವದು, ಎಂಬ- ಬಗೆಗಳ್- ರೀತಿಗಳು, ಸಮ್ಮನಿಸವು- ಉಂಟಾಗುವದಿಲ್ಲವು. ... ... ... ॥೭೮॥

ಮಾತೆ- ತಾಯಿಯಾದಮಾದಲಾಂಬೆಯು, ಆಕುಮಾರನಂ, ಎನ್ನಯತಂದೆ, ಬಾರ- ಬಾ, ಮಿಸುಪ- ಪ್ರಕಾಶಿಸುವ, ಎನ್ನ, ಸುಧಾನಿಧಿ- ಕ್ಷೀರಸಮುದ್ರವೇ, ಮುದ್ದನೀವುದು- ಮುತ್ತನ್ನುಕೊಡು, ಎಂದು, ಎನ್ನ ಅರಸಂಚೆ- ರಾಜಹಂಸವೇ, ನೀಂ, ನಡೆಯುದು- ನಡೆಯುವದು; ಎನ್ನಯ, ಕಣ್ಮಲರ- ನೇತ್ರಪುಷ್ಪದ, ಅಚ್ಚಸೈಪೆ- ನಿರ್ಮಲವಾದಪುಣ್ಯವೇ, ನೋಡು; ಎನ್ನಯ, ರಾಜಕೀರ- ಅರಗಿಣಿಯೇ, ನುಡಿ- ಮಾತನಾಡು; ಎನ್ನ, ಸುರತ್ನಮೆ- ಸಮೀಚೀನವಾದ ರತ್ನವೇ, ಕುಳ್ಳಿರ್— ಕುಳಿತುಕೋ; ಎಂದು, ಚಿತ್ತಂ- ಮನಸ್ಸು, ನಲವೇರೆ- ಸಂತೋಷವನ್ನು ಹೊಂದುವಹಾಗೆ, ಬಿಗಿದಪ್ಪುತೆ- ಬಿಗಿಯಾಗಿಆಲಿಂಗಿಸುತ್ತ, ಮುದ್ದಿಪಳ್- ಮುದ್ದಾಡುವಳು. ... ... ... ... ... ... ... ॥೭೯॥

ಅರಳೆಲೆ- (ಆಭರಣವಿಶೇಷವು) ಭಾಳದೊಳ್- ಹಣೆಯಲ್ಲಿ, ಕುಣಿಯೆ; ಸುವರ್ಣಕುಂಡಲಂ- ಚಿನ್ನದಕರ್ಣಕುಂಡಲವು, ಕರ್ಣದೊಳ್- ಕಿವಿಯಲ್ಲಿ, ಆಡೆ; ಚರಣದ- ಕಾಲಿನಲ್ಲಿರುವ, ಗುಜ್ಜುಗೆಜ್ಜೆ- ಸಣ್ಣಗೆಜ್ಜೆಗಳು, ಝುಣಿರ್‌ಎಂದೆನೆ- ಝುಣಿರ್‌ಎಂದುಶಬ್ದವನ್ನುಮಾಡುತ್ತಿರಲು; ನೂಪುರದ- ಪಾದಕಟಕದ, ಇಂಚರಂ-ಮಧುರಸ್ವರವು, ಪಳಂಚಿರೆ- ಸಂಘಟಿಸಿರಲಾಗಿ; ಮೊಳೆವಲ್- ತಲೆದೋರುತ್ತಲಿರುವಹಲ್ಲುಗಳು, ಕರಂ- ಚೆನ್ನಾಗಿ,ಮಿನುಗೆ, ಪ್ರಕಾಶಿಸಲು;ಚೆಲ್ವ- ಮನೋಹರವಾದ, ಮುಗುಳ್ನಗೆ- ಮಂದಹಾಸವು, ಮುದ್ದುವೀರೆ- ಪ್ರೀತಿಯನ್ನುಂಟುಮಾಡುತ್ತಿರಲು, ಕಣ್ಬರಿಗೆ- ನೇತ್ರಚಲನೆಗೆ, ಎಡೆಯಾಗಿ- ಆಸ್ಪದನಾಗಿ, ಮಾತೆಯ, ಕರಾಂಬುಜತಾಳಕೆ- ಕಮಲದೋಪಾದಿಯಲ್ಲಿರುವಹಸ್ತದತಾಳಕ್ಕೆ- ಸುತಂ, ನರ್ತಿಪಂ— ಕುಣಿಯುವನು. ॥೮೦॥

ಮಲಯೋ......ವನದೊಳ್— ಮಲಯೋರ್ವೀಭೃತ್- ಮಲಯಪರ್ವತದ, ಪಟೀರಪ್ರಬಳವನದೊ

ಪ್ರೋ। ಜ್ವಳಪೂರ್ವಾದ್ರೀಂದ್ರದೊಳ್ಭಾಸುರತರುಣದಿನಾಧೀಶಬಿಂಬಂಸುಧಾಬ್ಧಿ ॥ ಸ್ಥಳ
ದೊಳ್ಬಾಲಂಮರಾಳಂಬಳೆವವೊಲವನೀನಿರ್ಜರಾಗಾರದೊಳ್ತಾಂ । ಬಳೆದಂಭದ್ರಂಪ್ರಕಾಶಂ
ಶುಚಿತೆಬಳೆವಿನಂಕೂಡೆನಂದೀಶದೇವಂ ॥ .. ... ... ॥೩೧॥

ವ॥ ಅಂತು ಬಳೆವಬಸವರಸಂಗೆ ಗರ್ಭಾಷ್ಟಮಾಬ್ದಂಸಂಪ್ರಾಪ್ತಮಾಗೆ ಮಾದಿರಾ
ಜಂ ಮೌಹೂರ್ತಿಕರಂಬರಿಸಿ ತರುಣಂಗುಪನಯನೋಚಿತವಾಸರಮಂ ವಿಚಾರಿಸುತ್ತಮಿ
ರ್ಪ್ಪಾಗಳದನರಿದವನ ಬೆಳ್ತನಕ್ಕೆ ಬೆಕ್ಕಸಂಬಟ್ಟು ॥ * * * * * * *

ಕಂ॥ ಘನಸಂಭ್ರಮುಮೇನಿದುಪೇಳ್ । ಜನಕನಿಜಸ್ಥಿತಿಯನೆಂದುಬೆಸಗೊಳೆಬಸವಂ ॥
ತನುಭವನಿನಗುಪನಯನದ । ದಿನಮಾದುದುಮಾಳ್ಪೆನೆಂದನಾಮಾದರಸಂ ॥ ... ॥೩೨॥

ವ ॥ಎನೆಬಸವರಾಜಂಮುಗುಳ್ನಗೆನಕ್ಕು ॥ * * * * * * * *

ಕಂ॥ ಒಡಲುಪವಾಸದಪೆರ್ಚ್ಚಿಂ । ದಡರ್ದುದೊಘನಪೈತ್ಯಮಕಟನಿನ್ನಯಶಿರಮಂ॥
ಮೃಡನೆನಗೆಸಗಿದದೀಕ್ಷೆಯ । ನೆಡೆಯೊಳ್ಮರೆದೀಗಳೇನನಾಳೋಚಿಸಿದೈ ... ॥೩೩॥

---

ಳ್- ಶ್ರೀಗಂಧದ ದೊಡ್ಡಕಾಡಿನಲ್ಲಿ, ಉದ್ಯದ್ದ್ವಿಪೇಂದ್ರಾರ್ಭಕಂ- ಶ್ರೇಷ್ಠವಾದ ಆನೆಯುಮರಿಯು; ಬಳೆವಿನಂ- ಬಳೆಯುವಹಾಗೂ; ಪ್ರೋಜ್ವಳಪೂರ್ವಾದ್ರೀಂದ್ರದೊಳ್- ಪ್ರಕಾಶಮಾನವಾದ ಪೂರ್ವಾಚಲದಲ್ಲಿ, ಭಾಸುರತರುಣದಿನಾಧೀಶಬಿಂಬಂ- ಪ್ರಕಾಶಮಾನವಾದಬಾಲಸೂರ್ಯನಮಂಡಲವು, ಬಳೆವಿನಂ; ಸುಧಾಬ್ಧಿಸ್ಥಳದೊಳ್— ಕ್ಷೀರಸಮುದ್ರಪ್ರದೇಶದಲ್ಲಿ, ಬಾಲಂಮರಾಳಂ— ಹಂಸಪಕ್ಷಿಯಮರಿಯು, ಬಳೆವವೊಲ್, ಅವನೀಶ್ವರಾಗಾರದೊಳ್- ಬ್ರಾಹ್ಮಣನಾದ ಮಾದರಸನಮನೆಯಲ್ಲಿ, ತಾಂ ನಂದೀಶದೇವಂ- ಆಬಸವೇಶ್ವರನು, (ಕ್ರಮವಾಗಿ) ಭದ್ರಂ- ಮಂಗಳವು, ಪ್ರಕಾಶಂ- ತೇಜಸ್ಸು, ಶುಚಿತೆ- ಪಾರಿಶುದ್ಧ್ಯವು, ಕೂಡೆ- ಸೇರಿಕೊಂಡು, ಬಳೆವಿನಂ- ಬಳೆಯುವಹಾಗೆ- ಬಳೆದಂ- ವೃದ್ಧಿಯಾದನು. ... ... ... ॥೩೧॥

ಅಂತು, ಬಳೆವ, ಬಸವರಾಜಂಗೆ, ಗರ್ಭಾಷ್ಟಮಾಬ್ದಂ- ಜನನಾದಿಯಾಗಿ ಎಂಟುವರ್ಷಗಳವಯಸ್ಸು, ಸಂಪ್ರಾಪ್ತಮಾಗೆ-ದೊರೆಕೊಳ್ಳಲು, ಮಾದಿರಾಜಂ, ಮೌಹೂರ್ತಿಕರಂ-ಜೋಯಿಸರನ್ನು, ಬರಿಸಿ- ಬರಮಾಡಿ, ತರುಣಂಗೆ- ಪುತ್ರನಿಗೆ, ಉಪನಯನೋಚಿತವಾಸರಮಂ- ಉಪನಯನಕರ್ಮವನ್ನುಮಾಡುವುದಕ್ಕೆ ಯೋಗ್ಯವಾದದಿವಸವನ್ನು, ವಿಚಾರಿಸುತ್ತಂ. ಇರ್ಪ್ಪಾಗಳ್- ಇರುವಪ್ಪುಗಲ್ಲಿ ,ಅದಂ, ಅರಿದು- ತಿಳಿದು, ಅವನ- ತಂದೆಯಾದಮಾದರಸನ, ಬೆಳ್ತನಕ್ಕೆ- ಅಜ್ಞತ್ವಕ್ಕೆ, ಬೆಕ್ಕಸಂಬಟ್ಟು- ಆಶ್ಚರ್ಯಪಟ್ಟು* * * * * *

ಜನಕ- ತಂದೆಯೇ;ಇದುಘನಸಂಭ್ರಮಂ- ಈಅಧಿಕವಾದಸಡಗರವು, ಏಂ,ನಿಜಸ್ಥಿತಿಯಂ- ಯಥಾರ್ಥಸ್ಥಿತಿಯನ್ನು, ಪೇಳ್, ಎಂದು, ಬಸವಂ, ಬೆಸಗೊಳೆ- ಕೇಳಲು, ಆಮಾದರಸಂ; ತನುಭವ- ಮಗನೇ, ನಿನಗೆ, ಉಪನಯನದದಿನಂ- ಉಪನಯನವನ್ನು ಮಾಡುವದಕ್ಕೆಯೋಗ್ಯವಾದದಿವಸವು, ಆದುದು-ಪ್ರಾಪ್ತವಾಯಿತು, ಮಾಳ್ಪೆಂ, ಎಂದಂ. ... ... ... ... ... ... ... ॥೩೨॥

ಎನೆ- ಹೀಗೆನಲು, ಬಸವರಾಜಂ, ಮುಗುಳ್ನಗೆನಕ್ಕು. * * * * *

ಒಡಲ- ಹೊಟ್ಟೆಯ, ಉಪವಾಸದ. ಪೆರ್ಚ್ಚಿಂದೆ- ಆಧಿಕ್ಯದಿಂದ, ಘನಪೈತ್ಯಂ- ಅಧಿಕವಾದಪಿತ್ತವು, ನಿನ್ನಯ, ಶಿರಮಂ- ತಲೆಯನ್ನು, ಅಡರ್ದುದೊ- ಹತ್ತಿತೋ; ಅಕಟ- ಅಯ್ಯೋ, ಮೃಡಂ-ಪರಮೇಶ್ವರನು, ಎಡೆಯೊಳ್- ಈಸ್ಥಳದಲ್ಲಿ- ಎನಗೆ, ಎಸಗಿದ- ಮಾಡಿದ, ದೀಕ್ಷೆಯಂ- 'ಶಿವದೀಕ್ಷೆಯನ್ನು, ಮರೆದು, ಈಗಳ್, ಏನಂ,ಆಳೋಚಿಸಿದೈ- ಯೋಚಿಸಿದಯ್ಯಾ. ... ... ... ... ॥೩೩॥

ಕಂ॥ಹರದೀಕ್ಷೆಯನಾಂತಮಹಿಮಂ । ಪರದೀಕ್ಷೆಯನಾಸೆಗೆಯ್ವನೇಬಿಡುಧರಣೀ ॥ ಶ್ವ
ರಪಟ್ಟಂಬಡೆದೊಪ್ಪುವ । ನರಪತಿಯಾಮಿಕ್ಕಪದಕೆಬಗೆದಂಡಪನೇ॥ ... ॥೩೪॥

ಕಂ ॥ ವಿಮಳಶಿವಭಕ್ತಿವಡೆದು । ತ್ತಮನಿಡುವನೆಮನವನನ್ಯಭಕ್ತಿಗೆಸುಮನೋ ॥
ದ್ರುಮದನೆಳಲೊಂದಿದವನ । ಲ್ಪಮಹೀಜದಬಳಿಯನೆಳಲನೇಂಸಾರ್ದಪನೇ ... ॥೩೫॥

ಕಂ॥ಶಿವಮತಮನೊಲ್ದುಸೇವಿಪ । ಶಿವಭಕ್ತಂಭವಿಮತಕ್ಕೆಬಗೆದಾರಂಕೇ ॥ ಳ್ಪ್ರ
ವಿಮುಳಸಂಜೀವನವಮಂ । ಸವಿದಾತಂಕ್ಷುದ್ರರಸಮನೇನೊಲ್ದಪನೆ ॥ ... ॥೩೬॥

ಕಂ॥ಹರಸೇವೆಗೆಯ್ವಸುಕೃತಿಗೆ । ಸುರಸೇವೆಯನೊಲ್ದುಮಾಳ್ಪವಂಸಮನೆಮಹಾ ॥
ಗಿರಿಯಂಸೇವಿಪಸಿಹ್ಮಕೆ । ಮೊರಡಿಯಸೇವಿಪ್ಪವೊಲನದೇಂಪಾಸಟಿಯೇ ॥ ... ॥೩೭॥

ರಥೋದ್ಧತವೃತ್ತ॥ರುದ್ರಮುದ್ರೆವಡೆದಾತನಂಗದೊಳ್ । ಕ್ಷುದ್ರಮುದ್ರೆಗೆಳಸಂಧರಿ
ತ್ರಿಯೊಳ್ ॥ ಭದ್ರಮಾದನೃಪಚಿಹ್ನಮಾಂತವಂ । ಶೂದ್ರಚಿಹ್ನಧರನಾಗಲೊಲ್ವನೇ॥ ॥೩೮॥

ವ॥ ಎಂದುನುಡಿವ ಬಸವರಾಜನ ಭಕ್ತಿರಸವಿಸರವಿಲುಳಿತಾಲಾಪಮಂ ಕೇಳ್ದುತದಾಶ
ಯಮನನುಸರಿಸುತಾದರಮಿಗೆ ಮಾದರಸನಿಂತೆಂದಂ ॥ * * * * * * *

---

ಹರದೀಕ್ಷೆಯ- ಶಿವದೀಕ್ಷೆಯನ್ನು- ಆಂತ- ಹೊಂದಿದ, ಮಹಿಮಂ- ಮಹಾತ್ಮನು, ಪರದೀಕ್ಷೆಯಂ- ಅ ನ್ಯವಾದದೀಕ್ಷೆಯನ್ನು, ಆಸೆಗೆಯ್ವನೇ- ಅಪೇಕ್ಷಿಸುವನೇ, ಬಿಡು; ಧರಣೀಶ್ವರಪಟ್ಟಂಬಡೆದು- ರಾಜಪಟ್ಟವ ನ್ನುಹೊಂದಿ, ಒಪ್ಪುವ- ಪ್ರಕಾಶಿಸುವ- ನರಪತಿ- ರಾಜನು, ಆಮಿಕ್ಕಪದಕೆ- ಆಳುಳಿದಪದವಿಗೆ, ಬಗೆದಂಡಪ ನೇ— ಮನಸ್ಸನ್ನಿಡುವನೇ. ... ... ... ... ... ॥೩೪॥

ವಿಮಳಶಿವಭಕ್ತಿವಡೆದ- ನಿರ್ಮಲವಾದಶಿವಭಕ್ತಿಯನ್ನುಹೊಂದಿದ, ಉತ್ತಮಂ, ಅನ್ಯಭಕ್ತಿಗೆ- ಇತರದೇ ವಭಕ್ತಿಗೆ, ಮನವಂ- ಮನಸ್ಸನ್ನು, ಇಡುವನೆ; ಸುಮನೋದ್ರುಮದ- ಕಲ್ಪವೃಕ್ಷದ, ನೆಳಲೊಂದಿದವಂ-ಛಾ ಯೆಯನ್ನುಆಶ್ರಯಿಸಿದವನು, ಅಲ್ಪಮಹೀಜದ- ಸಾಧಾರಣವಾದ ಮರದ, ಬಳಿಯ- ಸಮೀಪದ, ನೆಳಲಂ,ಸಾ ರ್ದಪನೇಂ-ಹೊಂದುವನೇನು. ... ... ... ... ॥೩೫॥

ಶಿವಮತಮಂ, ಒಲ್ದು- ಪ್ರೀತಿಸಿ, ಸೇವಿಪ, ಶಿವಭಕ್ತಂ, ಭವಿಮತಕ್ಕೆ- ಅಲಿಂಗಿಮತಕ್ಕೆ, ಬಗೆದಾರಂ- ಮನಸ್ಸನ್ನುಕೊಡುವನಿಲ್ಲವು, ಕೇಳ್, ಪ್ರವಿಮಳಸಂಜೀವನವಮಂ—ನಿರ್ಮಲವಾದಸಂಜೀವನವನ್ನು, ಸವಿದಾ ತಂ- ತಿಂದವನು,ಕ್ಷುದ್ರರಸಮಂ- ನೀಚವಾದಮೂಲಿಕಾರಸವನ್ನು, ಒಲ್ದಪನೇಂ- ಸೇವಿಸುವನೇ. ॥೩೬॥

ಹರಸೇವೆಗೆಯ್ವ- ಶಿವನಸೇವೆಯನ್ನುಮಾಡುವ, ಸುಕೃತಿಗೆ- ಪುಣ್ಯಶಾಲಿಗೆ, ಸುರಸೇವೆಯ—ಸಾಧಾ ರಣ ದೇವತೆಗಳ ಸೇವೆಯನ್ನು, ಒಲ್ದು, ಮಾಳ್ಪವಂ-ಮಾಡುವನು, ಸಮನೆ-ಸದೃಶನೇ; ಮಹಾಗಿರಿಯಂ- ದೊಡ್ಡಪರ್ವತವನ್ನು, ಸೇವಿಪ- ಸಿಹ್ಮಕೆ, ಮೊರಡಿಯ- ಸಣ್ಣಗುಡ್ಡವನ್ನು, ಸೇವಿಪ್ಪ, ಅದು, ವೊಲಂ, ಪಾ ಸಟಿಯೇಂ- ಸಮಾನವೇ. ... ... ... ... ॥೩೭॥

ಅಂಗದೊಳ್- ಶರೀರದಲ್ಲಿ, ರುದ್ರಮುದ್ರೆವಡೆದಾತಂ- ರುದ್ರನಚಿಹ್ನೆಯನ್ನು ಧರಿಸಿದವನು, ಕ್ಷುದ್ರಮು ದ್ರೆಗೆ- ನೀಚವಾದ ಇತರಚಿಹ್ನೆಗಳನ್ನು ಧರಿಸುವದಕ್ಕೆ, ಎಳಸಂ- ಅಪೇಕ್ಷಿಸುವದಿಲ್ಲವು; ಧರಿತ್ರಿಯೊಳ್-ಭೂಮಿ ಯಲ್ಲಿ, ಭದ್ರಮಾದ- ಮಂಗಳಕರವಾದ, ನೃಪಚಿಹ್ನಮಾಂತವಂ- ರಾಜಚಿಹ್ನೆಯನ್ನು ಧರಿಸಿದವನು, ಶೂದ್ರಚಿ ಹ್ನಧರಂ- ಶೂದ್ರಚಿಹ್ನವನ್ನುಧರಿಸಿದವನು, ಆಗಲ್- ಆಗುವದಕ್ಕೆ, ಒಲ್ವನೇ- ಅಪೇಕ್ಷಿಸುವನೇ. ॥೩೮॥

ಎಂದು, ನುಡಿವ-ಹೇಳುವ, ಬಸವರಾಜನ, ಭಕ್ತಿ......ಲಾಪಮಂ-ಭಕ್ತಿರಸ-ಭಕ್ತಿಯೆಂಬರಸದ,ವಿಸರ- ಸಮೂಹದಿಂದ, ವಿಲುಳಿತ ವ್ಯಾಪ್ತವಾದ, ಆಲಾಪಮಂ-ಮಾತನ್ನು, ಮಾದರಸಂ, ಕೇಳ್ದು, ತದಾಶಯಮಂ- ಅವನಮನೋಭಿಪ್ರಾಯವನ್ನು, ಅನುಸರಿಸುತೆ, ಆದರಂ- ಪ್ರೀತಿಯು- ಮಿಗೆ- ಹೆಚ್ಚಾಗಲು,ಇಂತೆಂದಂ.

ಕಂ ॥ ದ್ವಿಜಮುದ್ರೆಯೆಂಬುದಭವನ । ನಿಜಮುದ್ರೆದಲನ್ಯಮುದ್ರೆಯಲ್ತಿದರಿರವಂ ॥
ಸುಜನಜನವನಧಿರಾಕಾ । ತ್ರಿಜಪೇಳ್ವೆಂಕೇಳ್ವುದಾಗ್ರಹಮನುಳಿದೀಗಳ್ ॥ ... ॥೩೯॥

ಮ॥ ಸ್ರ॥ ಮುರಭಿತ್ಕೇಶಂಗಳಿಂಮಾಡಿದಪುರಿಯುಪವೀತಂತದಂಗಾಸ್ಥಿದಂಡಂ । ಕರದಾಷಾಢಂನೃಸಿಹ್ಮಾಜಿನಮದುಪದಪಿಂತಾಳ್ದಕೃಷ್ಣಾಜಿನಂಭಾ॥ ಸುರಭಿಕ್ಷಾಪಾತ್ರಪದ್ಮೋದ್ಭವನಪೃಥುಕಪಾಲಂವಲಂತಾನಿದಾಶಾಂ । ಕರಚಿಹ್ನಂಪುತ್ರ ಗಾಯತ್ರಿಗೆಹರನಧಿದೈವಂ ದ್ವಿಜಂಭರ್ಗನಂಶಂ ॥ ... ... ... ... ... ॥೪೦॥

ಕಂ॥ ಪವನಸಖಂರುದ್ರಾಂಗಂ । ಕುವರಮಖಾನಲಸಮರ್ಚ್ಯನೀಶನಿದೆಲ್ಲಂ ॥ ಪ್ರವಿದಿತಮಾಮ್ನಾಯದೊಳಿದ । ನವಧರಿಸಿ ಕುಮಾರಮಾಳ್ಪುದೆನ್ನಭಿಮತಮಂ ॥ ... ॥೪೧॥

ಕಂ॥ ಶಇದನರಿದೊಡೆಪಳಿಯದಿರ । ರ್ಸದಮಳಗುಣವಿಪ್ರರದರಿನೆನ್ನಯನುಡಿಯಂ ॥ ಪಡೆದಪ್ಪುಗೆಯ್ವುದೆಂದೆನೆ । ಮೃದುಹಸನಂಮಿಸುಗೆಬಸವರಾಜಂನುಡಿದಂ ॥ ॥೪೨॥

ದ್ವಿಜಮುದ್ರೆ- ಬ್ರಾಹ್ಮಣಚಿಹ್ನವು, ಎಂಬುದು, ಅಭವನ- ಪರಮೇಶ್ವರನ, ನಿಜಮುದ್ರೆ- ಸ್ವಕೀಯವಾದಚಿಹ್ನೆಯು; ಅನ್ಯಮುದ್ರೆ-ಇತರದೇವತಾಚಿಹ್ನೆಯು, ಅಲ್ತು-ಅಲ್ಲವು; ದಲ್-ನಿಶ್ಚಯ; ಸುಜನ...ತ್ರಿಜ-ಸುಜನಜನ-ಸತ್ಪುರುಷರೆಂಬ, ವನಧಿ- ಸಮುದ್ರಕ್ಕೆ- ರಾಕಾತ್ರಿಜ- ಪೂರ್ಣಚಂದ್ರನಾದಬಸವೇಶ್ವರನೇ- ಇದರ- ಇರವಂ- ರೀತಿಯನ್ನು, ಪೇಳ್ವೆಂ, ಆಗ್ರಹಮಂ- ಸಿಟ್ಟನ್ನು, ಉಳಿದು- ಬಿಟ್ಟು, ಈಗಳ್‌ಕೇಳ್ವುದು-ಕೇಳುವದು. ... ... ... ... ... ॥೩೯॥

ಪುತ್ರ- ಎಲೈಮಗನೇ, * ಮುರಭಿತ್ಕೇಶಂಗಳಿಂ-ವಿಷ್ಣುವಿನಕೂದಲಿನಿಂದ, ಮಾಡಿದ, ಪುರಿ ದಾರವೇ, ಉಪವೀತಂ- ಯಜ್ಞೋಪವೀತವು; ತದಂಗಾಸ್ಥಿದಂಡಂ- ಆವಿಷ್ಣುವಿನಶರೀರದಲ್ಲಿ ದಂಡದಂತಿರುವಮೂಳೆಯೇ, ಕರದ- ಹಸ್ತದ, ಆಷಾಢಂ- ಮುತ್ತುಗದದಂಡವು; ಅದುನೃಸಿಹ್ಮಾಜಿನಂ- ಆನೃಸಿಹ್ಮನಚರ್ಮವೇ, ಪದಪಿಂ- ಪ್ರೀತಿಯಿಂದ, ತಾಳ್ದ-ಧರಿಸಿದ,ಕೃಷ್ಣಾಜಿನಂ;ಪದ್ಮೋದ್ಭವನ, ಬ್ರಹ್ಮನ, ಪೃಥುಕಪಾಲಂ-ವಿಶಾಲವಾದತಲೆಯಚಿಪ್ಪೇ, ಭಾಸುರಭಿಕ್ಷಾಪಾತ್ರೆ- ಪ್ರಕಾಶಿಸುವಭಿಕ್ಷಾಪಾತ್ರೆಯು; ತಾಂ, ಇದು, ಆಶಾಂಕರಚಿಹ್ನಂ- ಶಿವಸಂಬಂಧವಾದಚಿಹ್ನೆಯು,ವಲಂ- ನಿಶ್ಚಯ; ಗಾಯತ್ರಿಗೆ-ಗಾಯತ್ರಿಯಮಂತ್ರಕ್ಕೆ, ಹರಂ- ಪರಶಿವನು, ಅಧಿದೈವಂ- ಅಧಿಪತಿಯು; ದ್ವಿಜಂ- ಬ್ರಾಹ್ಮಣನು, ಭರ್ಗನ- ಪರಶಿವನ, ಅಂಶಂ- ಅಂಶೋದ್ಭೂತನು. ... ... ... ... ... ... ॥೪೦॥

ಕುವರ- ಎಲೈಪುತ್ರನೇ, ಪವನಸಖಂ- ಅಗ್ನಿಯು, ರುದ್ರಾಂಗಂ-ರುದ್ರನಶರೀರವು; ಈಶಂ- ಪರಮೇಶ್ವರನು, ಮಖಾನಲಸಮರ್ಚ್ಯಂ- ಯಜ್ಞಾಗ್ನಿಯಮುಖದಿಂದಪೂಜ್ಯನು: ಇದೆಲ್ಲಂ- ಈವಿಷಯವೆಲ್ಲವೂ, ಆಮ್ನಾಯದೊಳ್- ವೇದದಲ್ಲಿ,ಪ್ರವಿದಿತಂ- ಪ್ರಸಿದ್ಧವಾಗಿರುವದು; ಇದಂ, ಅವಧರಿಸಿ- ವಿಚಾರಕ್ಕೆತಂದು, ಎನ್ನ, ಅಭಿಮತಮಂ- ಇಚ್ಛೆಯನ್ನು, ಮಾಳ್ಪುದು- ನೆರವೇರಿಸುವದು. ... ... ॥೪೧॥

ಇದು- ಈವಿಷಯವನ್ನು, ಸದಮಳಗುಣವಿಪ್ರರ್, ಸದ್ಗುಣಭರಿತರಾದಬ್ರಾಹ್ಮಣರು, ಅರಿದೊಡೆ-ತಿಳಿದರೆ, ಪಳಿಯದೆ- ದೂಷಿಸದೆ, ಇರರ್- ಇರುವದಿಲ್ಲ; ಅದರಿಂ- ಆದುದರಿಂದ, ಎನ್ನಯ, ನುಡಿಯಂ- ಮಾತನ್ನು, ಪಡೆದು- ಪ್ರೀತಿಸಿ, ಅಪ್ಪುಗೆಯ್ವುದು- ಅಂಗೀಕರಿಸುವದು; ಎಂದೆನೆ; ಬಸವರಾಜಂ, ಮೃದುಹಸನಂ-ಮುಗುಳ್ನಗೆಯು, ಮಿಸುಗೆ- ಪ್ರಕಾಶಿಸಲು, ನುಡಿದಂ- ಹೇಳಿದನು. ... ... ॥೪೨॥

* (ಅವ) ಮುರ- ಮುರನೆಂಬರಾಕ್ಷಸನನ್ನು, ಭಿತ್-ಭೇದಿಸಿದವನು. ... ... ॥೪೦॥

ಕಂ॥ ಎಲೆತಾತ ವಮೂಢಜನದೊಡ । ನಲಸದೆನೀನಾಡಿ ಮೂಢತೆಗೆಪಕ್ಕಾದೈ ॥ ನೆಲೆಯರಿಯದನಿನ್ನ ಮನೋ । ಮಲಿನಂ ಪರಿವಂತಿರೊರೆವೆನಾಲಿಸು ನಿಜಮಂ ॥ ... ॥ ೪೩ ॥

ಶಾ॥ ಶ್ರೀಲೀಲಾಕರಕ್ಳೃಪ್ತಕೇಶವಲಸತ್ಕೇಶಕ್ಕೆ ರಂಡಾಂಗನಾ । ವ್ಯಾಲೋಲತ್ಕರಕ್ಳೃಪ್ತತಂತುಹರನಿರ್ಭಗ್ನತ್ರಿಪದ್ವಿಷ್ಣುಕಂ ॥ ಕಾಳಕ್ಕಲ್ಪನೃಭಗ್ನವನ್ಯತರುಕಾಷ್ಠಂ ವೀರವಿಧ್ವಸ್ತಗ । ರ್ವಾಲಂಕಾರನೃಸಿಹ್ಮಚರ್ಮಕೆ ಪುಳಿಂದಧ್ವಸ್ತಕೃಷ್ಣಾಜಿನಂ॥ ... ॥೪೪॥

ಮತ್ತೇ॥ ವಿತತಾಮ್ನಾಯಸರೋಜಸಂಭವಶಿರಃಪಾತ್ರಕ್ಕೆ ತಾರ್ಣಪ್ರಕಲ್ಪಿತಪರ್ಣಸ್ಫುಟಕಾಖ್ಯಪಾತ್ರೆ ಸಮಮೆಂಬೈ ತಾತ ನಿನ್ನಜ್ಞತಾ ॥ ಸ್ಥಿತಿಗಾಂ ವಿಸ್ಮಿತನಾದಪಂ ಮಗುಳೆ ತದ್ಗಾಯತ್ರಿಗಂಗಾಧಿದೇ । ವತೆಗಳ್ ಭೇರೆನೆ ಪಂಚವರ್ಣಶಿವಸನ್ಮಂತ್ರಕ್ಕದೇಂ ಸಾಟಿಯೇ॥೪೫॥

ಮತ್ತೇ॥ ಶಿವನಾತ್ಮಪ್ರಭುವಾಗೆ ಲೆಕ್ಕಿಸದೆ ಕಂಜಾಕ್ಷಾಜಶಕ್ರಾದ್ಯರಿಂ । ತವೆಬಾಳ್ವಂದ್ವಿ

---

ಎಲೆತಾತ- ಎಲೈತಂದೆಯೇ, ನೀಂ, ಮೂಢಜನದೊಡನೆ, ಅಲಸದೆ-ಆಲಸ್ಯಪಡದೆ, ಆಡಿ, ಮೂಢತೆಗೆ-ಮೌಢ್ಯಕ್ಕೆ, ಪಕ್ಕಾದೈ- ಆಸ್ಪದನಾದೆ, ನೆಲೆಯ- ನಿಜಾಂಶವನ್ನು, ಅರಿಯದ- ತಿಳಿಯದ, ನಿನ್ನ, ಮನೋಮಲಿನಂ- ಮನಸ್ಸಿನ ಮಾಲಿನ್ಯವು, ಪರಿವಂತಿರೆ- ನಾಶವಾಗುವಹಾಗೆ, ಒರೆವೆಂ- ಹೇಳುವೆನು; ನಿಜಮಂ- ನಿಶ್ಚಯವನ್ನು, ಆಲಿಸು-ಕೇಳು. ... ... ... ... ... ॥೪೩॥

ಶ್ರೀ......ಕೇಶಕ್ಕೆ— ಶ್ರೀ- ಲಕ್ಷ್ಮಿಯ, ಲೀಲಾ- ವಿಲಾಸವಿಶಿಷ್ಟವಾದ, ಕರ- ಹಸ್ತದಿಂದ, ಕ್ಳೃಪ್ತ- ಸೆಳೆಯಲ್ಪಟ್ಟ, ಕೇಶವ- ವಿಷ್ಣುವಿನ, ಲಸತ್-ಪ್ರಕಾಶಮಾನವಾದ, ಕೇಶಕ್ಕೆ-ಕೂದಲಿಗೆ, ರಂಡಾ... ...ತಂತು— ರಂಡಾಂಗನಾ- ವಿಧವೆಯರ, ವ್ಯಾಲೋಲತ್- ಚಂಚಲವಾದ, ಕರ- ಹಸ್ತದಿಂದ, ಕ್ಳೃಪ್ತ- ಹೊಸೆಯಲ್ಪಟ್ಟ, ತಂತು- ದಾರವು; ಹರ......ಕಂಕಾಳಕ್ಕೆ— ಹರ- ಪರಶಿವನಿಂದ, ನಿರ್ಭಗ್ನ- ಮುರಿಯಲ್ಪಟ್ಟ, ತ್ರಿಪತ್- ತ್ರಿಪಾದವುಳ್ಳ, ವಿಷ್ಣು- ವಿಷ್ಣುವಿನ, ಕಂಕಾಳಕ್ಕೆ- ಮೂಳೆಗೆ, ಅಲ್ಪ......ಕಾಷ್ಠಂ— ಅಲ್ಪನೃಭಗ್ನ- ಅಲ್ಪಮನುಷ್ಯನಿಂದ ಮುರಿಯಲ್ಪಟ್ಟ, ವನ್ಯತರು- ಕಾಡುಮರದ, ಕಾಷ್ಠಂ- ಕಟ್ಟಿಗೆಯು; ವೀರ......ಚರ್ಮಕೆ— ವೀರ- ವೀರಭದ್ರೇಶ್ವರನಿಂದ, ವಿಧ್ವಸ್ತ- ನಾಶಮಾಡಲ್ಪಟ್ಟ, ಗರ್ವ- ಅಹಂಕಾರವೇನು, ಅಲಂಕಾರ- ಅಲಂಕಾರವೇನು ಇವುಗಳುಳ್ಳ, ನೃಸಿಹ್ಮ- ನರಸಿಹ್ಮನ, ಚರ್ಮಕೆ, ಪುಳಿಂದಧ್ವಸ್ತಕೃಷ್ಣಾಜಿನಂ— ಪುಳಿಂದ- ಬೇಡರಿಂದ, ಧ್ವಸ್ತ- ನಾಶಮಾಡಲ್ಪಟ್ಟ, ಕೃಷ್ಣ- ಚಿತ್ರವರ್ಣವಾದಜಿಂಕೆಯ, ಅಜಿನಂ- ಚರ್ಮವು. ... ... ... ... ... ॥೪೪॥

ವಿತತಾ......ಪಾತ್ರಕ್ಕೆ— ವಿತತ- ಪ್ರಸಿದ್ಧವಾದ, ಆಮ್ನಾಯ- ವೇದವುಳ್ಳ, ಸರೋಜಸಂಭವ- ಬ್ರಹ್ಮನ, ಶಿರಃಪಾತ್ರಕ್ಕೆ- ಕಪಾಲಕ್ಕೆ, ತಾರ್ಣ......ಪಾತ್ರೆ—ತಾರ್ಣ- ತೃಣಸಂಬಂಧವಾದ, ಪ್ರಕಲ್ಪಿತ- ಮಾಡಲ್ಪಟ್ಟ, ಪರ್ಣ- ಎಲೆಯ, ಸ್ಫುಟಕಾಖ್ಯಪಾತ್ರೆ- ದೊನ್ನೆಯು; ಸಮಮೆಂಬೈ-ಸದೃಶವೆಂದುಹೇಳುವೆ, ತಾತ- ತಂದೆಯೇ, ನಿನ್ನ, ಅಜ್ಞತಾಸ್ಥಿತಿಗೆ- ಮೂಢತ್ವದಇರುವಿಕೆಗೆ, ಆಂ, ವಿಸ್ಮಿತಂ- ಆಶ್ಚರ್ಯಯುಕ್ತನು,ಆದಪೆಂ- ಆಗುವೆನು; ಮಗುಳೆ- ಮತ್ತು, ತದ್ಗಾಯತ್ರಿಗೆ-ಆಗಾಯತ್ರೀಮಂತ್ರಕ್ಕೆ, ಅಂಗಾಧಿದೇವತೆಗಳ್- ಅವಯವಾಧಿದೇವತೆಗಳು, ಭೇರೆ, ಎನೆ; ಪಂಚವರ್ಣಶಿವಸನ್ಮಂತ್ರಕ್ಕೆ- ಪಂಚಾಕ್ಷರೀಮಂತ್ರಕ್ಕೆ, ಅದು- ಆಗಾಯತ್ರಿಯು, ಸಾಟಿಯೇಂ- ಸದೃಶವೇ. (ಅಂದರೆ. ಪಂಚಾಕ್ಷರೀಮಂತ್ರವು ಶಿವನಂಶವು; ಗಾಯತ್ರೀಮಂತ್ರವು ಶಕ್ತಿಯಂಶವು.) ... ... ... ... ... ॥೪೫॥

ಶಿವಂ- ಪರಮೇಶ್ವರನು, ಆತ್ಮಪ್ರಭು- ತನಗೆಸ್ವಾಮಿಯು, ಆಗೆ- ಆಗಿರಲು, ಕಂಜಾಕ್ಷಾಜಶಕ್ರಾದ್ಯರಂ— ಕಂಜಾಕ್ಷ- ವಿಷ್ಣು ಅಜ- ಬ್ರಹ್ಮ. ಶಕ್ರ- ಇಂದ್ರ ಇವರುಗಳೇ ಆದ್ಯರಂ- ಮೊದಲಾಗುಳ್ಳವರನ್ನು,

ಜನೀಶನಂಶವಾಳಿದಾತಂ ಪ್ರಾಕೃತಂಪಾವಕಂ ॥ ಶಿವನಂಗಂಗಡವೀರಭದ್ರ ಹೃತಜಿಹ್ವಂ ಏ
ಳದೆಂತಾದನ । ಜ್ಞಾನಿವಿಮೋಹಾಸ್ಪದನಾದನಿನ್ನನುಡಿಗೊಲ್ದಾಂ ನೆಂತುಮುಯ್ಯಾಂತಪೆಂ॥೪೬॥

ಕಂ॥ ಪರಮಶಿವತತ್ವಚಿದ್ರಸ । ಭರಿತನನೇಗೆಯ್ವುದಜ್ಞಜನದುರ್ವಚನಂ ॥ ಸುರು
ಚಿರರುಚಿಭಾಸುರಭಾ । ಸ್ಕರನಂಕೌಶಿಕವಿರಾವಮೇಗೆಯ್ದಪುದೋ ॥ ... ॥ ೪೭ ॥

ಕಂ॥ ತಾಪಸದಧೀಚಿಗೌತಮ । ಶಾಪಾನಲದಗ್ಧರೊಗೆದುಕಲಿಯುಗದೊಳಸ॥ ದ್ವ್ಯಾ
ಪಾರರತರ್ನಿಂದಿಪ । ರೇಪ್ಪೊಳ್ತುಂಗಿರಿಶಭಕ್ತರಂಭೂತಳದೊಳ್ ॥ ... ... ॥ ೪೮ ॥

ಚಂ ॥ ಮುನಿಪದಧೀಚಿಗೌತಮಮುಖರ್ಶಿವಭಕ್ತರಜಸ್ರಮೀದ್ವಿಜಾಂ । ಕನಮನ
ವಜ್ಞೆಗೆಯ್ಯದೊಡಲೊಳ್ತಳೆದಿರ್ದಪರೆಂಬೆಯಪ್ಪೊಡಂ ॥ ವಿನಿಯುತಮಾದುದಾದಿಯೊಳ್
ಕೇಳವರ್ಗಾದ್ವಿಜಮುದ್ರೆಮತ್ತೆಪಾ । ವನಶಿವಮುದ್ರೆಯುಕ್ತಮದುಮುನ್ನಭವಾಂಕಮ
ನೊಲ್ದುತಾಳ್ದವಂ॥ ... ... ... ... ... ॥ ೪೯ ॥

---

ಲೆಕ್ಕಿಸದೆ- ಎಣಿಸದೆ, ತವೆ, ಬಾಳ್ವಂ- ಬದುಕುವವನು, ಈಶನಂಶಂ-ಶಿವಾಂಶೋದ್ಭೂತನಾದ, ದ್ವಿಜಂ- ಬ್ರಾಹ್ಮಣನು; ಉಳಿದಾತಂ- ಮಿಕ್ಕವನು, ಪ್ರಾಕೃತಂ- ಪ್ರಾಕೃತಬ್ರಾಹ್ಮಣನು; ಪಾವಕಂ- ಅಗ್ನಿಯು,(ನಿನ್ನ ಮಾತಿನಂತೆ) ಶಿವನ, ಅಂಗಂಗಡ– ಶರೀರವಲ್ಲವೇ; ವೀರಭದ್ರಹೃತಜಿಹ್ವಂ—ವೀರಭದ್ರ- ವೀರಭದ್ರೇಶ್ವರನಿಂದ, ಹೃತ-ಸಂಹರಿಸಲ್ಪಟ್ಟ, ಜಿಹ್ವಂ- ನಾಲಿಗೆಯುಳ್ಳವನು, ಅದು, ಎಂತಾದಂ- ಹ್ಯಾಗಾದನು; ಅಜ್ಞಾನಿವಿಮೋಹಾಸ್ಪದನಾದ- ಮೂಢರ ಅಜ್ಞಾನಕ್ಕೆ ಆಶ್ರಯನಾದ, ನಿನ್ನ, ನುಡಿಗೆ- ಮಾತಿಗೆ, ಒಲ್ದು- ಪ್ರೀತಿಸಿ, ಆಂ, ಎಂತುಂ-ಹ್ಯಾಗೆ,-ಮುಯ್ಯಾಂತಪೆಂ- ಪುರಸ್ಕರಿಸುವೆನು ... ... ... ॥೪೬॥

ಪರಮಶಿವತತ್ವಚಿದ್ರಸಭರಿತನಂ—ಪರಮ-ಉತ್ಕೃಷ್ಟವಾದ, ಶಿವತತ್ವಚಿದ್ರಸ-ಪರಬ್ರಹ್ಮಜ್ಞಾನರಸದಿಂದ, ಭರಿತನಂ- ಪೂರ್ಣನಾದವನನ್ನು, ಅಜ್ಞಜನದುರ್ವಚನಂ—ಅಜ್ಞಜನ- ಮೂಢರ, ದುರ್ವಚನಂ-ದುಷ್ಟವಾದಮಾತು, ಏಗೆಯ್ವುದು- ಏನುಮಾಡುವದು; ಸುರು......ಭಾಸ್ಕರನಂ— ಸುರುಚಿರ- ಅತ್ಯಂತಮನೋಹರವಾದ, ರುಚಿ- ಕಿರಣಗಳಿಂದ, ಭಾಸುರ- ಪ್ರಕಾಶಮಾನನಾದ, ಭಾಸ್ಕರನಂ-ಸೂರ್ಯನನ್ನು, ಕೌಶಿಕವಿರಾವಂ- ಗೂಬೆಯ ಕೆಟ್ಟಕೂಗು, ಏಗೆಯ್ವಪುದೋ- ಏನುಮಾಡುವದೋ. ... ॥೪೭॥

ತಾಪಸ........ದಗ್ಧರ್—ತಾಪಸದಧೀಚಿಗೌತಮ- ದಧೀಚಿ ಗೌತಮರ್ಷಿಗಳ, ಶಾಪಾನಲ-ಶಾಪಾಗ್ನಿಯಿಂದ, ದಗ್ಧರ್- ಸುಡಲ್ಪಟ್ಟವರು, ಕಲಿಯುಗದೊಳ್, ಒಗೆದು- ಹುಟ್ಟಿ, ಅಸದ್ವ್ಯಾಪಾರರತರ್- ದುಷ್ಟವಾದ ನಡತೆಯುಳ್ಳಾಸಕ್ತರಾಗಿ, ಎಪ್ಪೊಳ್ತುಂ- ಯಾವಾಗಲೂ, ಭೂತಳದೊಳ್- ಭೂಲೋಕದಲ್ಲಿ, ಗಿರಿಶಭಕ್ತರಂ- ಶಿವಭಕ್ತರನ್ನು ನಿಂದಿಪರ್- ದೂಷಿಸುವರು. ... ... ... ॥೪೮॥

ಅಜಸ್ರಂ- ನಿರಂತರದಲ್ಲೂ, ಶಿವಭಕ್ತರ್- ಶಿವಭಕ್ತರಾದ, ಮುನಿಪದಧೀಚಿಗೌತಮಮುಖರ್- ದಧೀಚಿಗೌತಮಮೊದಲಾದಋಷಿಗಳು, ಈ ದ್ವಿಜಾಂಕನಮಂ- ಈ ಪ್ರಾಕೃತಬ್ರಾಹ್ಮಣಚಿಹ್ನವನ್ನು, ಅವಜ್ಞೆಗೆಯ್ಯದೆ-ತಿರಸ್ಕರಿಸದೆ, ಒಡಲೊಳ್- ದೇಹದಲ್ಲಿ, ತಳೆದು- ಧರಿಸಿ, ಇರ್ದಪರ್, ಎಂಬೆಯಪ್ಪೊಡಂ-ಹೀಗೆಂದರೂ, ಕೇಳ್, ಅವರ್ಗೆ- ಆ ಗೌತಮಾದಿಗಳಿಗೆ,ಆ ದ್ವಿಜಮುದ್ರೆ- ಆ ಪ್ರಾಕೃತಬ್ರಾಹ್ಮಣಚಿಹ್ನವು, ಆದಿಯೊಳೆ- ಮೊದಲಲ್ಲಿ, ವಿನಿಯುತಮಾದುದು- ಪ್ರಾಪ್ತವಾಯಿತು; ಮತ್ತೆ- ಪುನಃ, ಶಿವಮುದ್ರೆ- ಶೈವಚಿಹ್ನವು, (ವಿನಿಯುತಂ, ಆದುದು) ಅದು, ಯುಕ್ತಂ- ಉಚಿತವು; ಮುನ್ನ- ಪೂರ್ವದಲ್ಲಿ, ಅಭವಾಂಕನಮಂ- ಶೈವಚಿಹ್ನವನ್ನು, ಒಲ್ದು-ಪ್ರೀತಿಸಿ, ತಾಳ್ದವಂ ಧರಿಸಿದವನು ... ... ... ॥೪೯॥

ಮತ್ತೇ॥ತಳೆಯಲ್ಸಲ್ಲದುವಿಪ್ರಮುದ್ರೆಯನದಂಮೇಣ್ರಾಜಚಿಹ್ನಾಂಕಿತಂ।ತಳೆಯಲ್ತಕ್ಕನೆಶೂದ್ರವೇಷಮನಣಂತಚ್ಛೂದ್ರಚಿಹ್ನಾಂಕಿತಂ ॥ ತಳೆಯಲ್ತಕ್ಕನಿಳೇಶವೇಷದಿರವಂ ಕೇಳಂತೆತತ್ತಾಪಸರ್ ತಳೆದರ್ಶೈವಮನೀಶದೀಕ್ಷೆವಡೆದಾನೀಮೌಂಜಿಯಂ ತಾಳ್ವೆನೇ॥೫೦॥

ಕಂ॥ ಪರಮಶಿವಭಕ್ತಿಯೆನಿಸುವ । ಸುರಗಂಗೆಯನುಳಿದುಭವದೆಬರ್ಪಿತರಸುರೋ॥ತ್ಕರದಮತಭಕ್ತಿಯೆನಿಸುವ । ಮರೀಚಿಯಂಮಾಣದೀಂಟಲಾನೆಳಸುವನೆ॥ ... ॥೫೧॥

ಮತ್ತೇ॥ ಘನರುದ್ರಾಕ್ಷೆಯನಾಂಪಕಂತದೊಳೆಮೌಂಜೀತಂತುವಂಲಿಂಗಭ । ಕ್ತನಮಸ್ಕೃತ್ಯುಪಯೋಗಫಲದೆಧರಾಮರ್ತ್ಯಪ್ರಣಾಮಂಗಳಂ ॥ ಮನುಕೋಟಿಪ್ರಭುಪಂಚವರ್ಣಮನುಜಾಪಂಗೆಯ್ವಸದ್ವಾಣಿಯಿಂ । ದನಲಾಜಾಚ್ಯುತಮಂತ್ರಮಂತಳೆಯಲಾನಲ್ಮಾಡಲಾನಾರ್ಪೆನೇ ॥ ... ... ... ... ... ...॥ ೫೨ ॥

ವ॥ ಎಂದುಸಿರ್ದ ಬಸವರಾಜನಂಮಾದಿರಾಜಂನೋಡಿ ಮನುನೊಂದುಮಗನೆಪಿರಿಯ

---

ಮೇಣ್- ಪುನಃ, ಅದಂ ವಿಪ್ರಮುದ್ರೆಯಂ- ಆ ಪ್ರಾಕೃತಬ್ರಾಹ್ಮಣಚಿಹ್ನವನ್ನು, ತಳೆಯಲ್- ಧರಿಸುವದಕ್ಕೆ, ಆಗದು- ಆಗಲಾರದು; ರಾಜಚಿಹ್ನಾಂಕಿತಂ- ಅರಸನಚಿಹ್ನದಿಂದ ಕೂಡಿದವನು, ಅಣಂ- ಸ್ವಲ್ಪವಾದರೂ, ಶೂದ್ರವೇಷಮಂ- ಶೂದ್ರನ ಅಲಂಕಾರವನ್ನು, ತಳೆಯಲ್- ಧರಿಸುವದಕ್ಕೆ, ತಕ್ಕನೇ- ಯೋಗ್ಯನೇ- ತಚ್ಛೂದ್ರಚಿಹ್ನಾಂಕಿತಂ- ಆ ಶೂದ್ರಚಿಹ್ನವುಳ್ಳವನು, ಇಳೇಶವೇಷದ- ರಾಜಾಲಂಕಾರದ, ಇರವಂ- ರೀತಿಯನ್ನು, ತಳೆಯಲ್- ಧರಿಸುವದಕ್ಕೆ, ತಕ್ಕಂ- ಯೋಗ್ಯನು; ಕೇಳ್, ಅಂತೆ- ಹಾಗೆ, ತತ್ತಾಪಸರ್-ಆ ಗೌತಮಾದಿಋಷಿಗಳು, ಶೈವಮಂ- ಶೈವಚಿಹ್ನವನ್ನು, ತಳೆದರ್- ಧರಿಸಿದರು; ಆಂ- ನಾನು, ಈಶದೀಕ್ಷೆವಡೆದು- ಶಿವದೀಕ್ಷೆಯನ್ನುಹೊಂದಿ, ಈ ಮೌಂಜಿಯಂ-ಮುಂಜಾತೃಣದಿಂದಮಾಡಿದ ಈ ದಾರವನ್ನು, ತಾಳ್ವೆನೇ- ಧರಿಸುವೆನೇ. ... ... ... ... ... ॥೫೦॥

ಆಂ, ಪರಮಶಿವಭಕ್ತಿಯೆನಿಸುವ- ಉತ್ಕೃಷ್ಟವಾದಶಿವಭಕ್ತಿಯೆಂಬ, ಸುರಗಂಗೆಯಂ- ದೇವಗಂಗಾಜಲವನ್ನು, ಉಳಿದು- ಬಿಟ್ಟು, ಭವದೆ- ಸಂಸಾರದಲ್ಲಿ, ಬರ್ಪ, ಇತರಸುರೋತ್ಕರದ- ಉಳಿದದೇವತಾಸಮೂಹದ, ಮತ- ಮತದ, ಭಕ್ತಿಎನಿಸುವ- ಭಕ್ತಿಯೆಂಬ, ಮರೀಚಿಯಂ-ಮರೀಚೀಜಲವನ್ನು ಮಾಣದೆ-ತಪ್ಪದೆ, ಈಂಟಲ್- ಕುಡಿಯುವದಕ್ಕೆ, ಎಳಸುವೆನೇ- ಅಪೇಕ್ಷಿಸುವೆನೇ. ... ... ... ॥೫೧॥

ಆಂ, ಘನರುದ್ರಾಕ್ಷೆಯಂ- ಶ್ರೇಷ್ಠವಾದರುದ್ರಾಕ್ಷೆಯನ್ನು, ಆಂಪ- ಧರಿಸುವ, ಕಂಠದೊಳೆ- ಕತ್ತಿನಲ್ಲಿ, ಮೌಂಜೀತಂತುವಂ- ಮೌಂಜಿಯದಾರವನ್ನು, ತಳೆಯಲ್- ಧರಿಸುವದಕ್ಕೆ; ಲಿಂಗಭಕ್ತನಮಸ್ಕೃತ್ಯುಪಯೋಗಫಲದೆ— ಲಿಂಗಭಕ್ತ- ಶಿವಭಕ್ತರನ್ನು, ನಮಸ್ಕೃತಿ- ನಮಸ್ಕರಿಸುವದಕ್ಕೆ, ಉಪಯೋಗ- ಉಪಯುಕ್ತವಾದ, ಫಲದೆ- ಹಣೆಯಲ್ಲಿ, ಧರಾಮರ್ತ್ಯಪ್ರಣಾಮಂಗಳಂ— ಧರಾಮರ್ತ್ಯ- ಭೂಜನರಿಗೆ, ಪ್ರಣಾಮಂಗಳಂ-ನಮಸ್ಕಾರಗಳನ್ನು, ಆನಲ್- ಹೊಂದುವದಕ್ಕೆ; ಮನುಕೋಟಿ- ಅನೇಕ ಮಂತ್ರಗಳಿಗೆ, ಪ್ರಭು- ಶ್ರೇಷ್ಠವಾದ, ಪಂಚವರ್ಣಮನು-ಪಂಚಾಕ್ಷರೀಮಂತ್ರವನ್ನು, ಜಾಪಂಗೆಯ್ವ-ಜಪಿಸುವ, ಸದ್ವಾಣಿಯಿಂದೆ- ಸಮೀಚೀನವಾದವಾಕ್ಕಿನಿಂದ, ಅನಲಾಜಾಚ್ಯುತಮಂತ್ರಮಂ- ಅಗ್ನಿ ಬ್ರಹ್ಮ ವಿಷ್ಣುದೇವತಾಕವಾದ ಮಂತ್ರವನ್ನು, ಮಾಡಲ್- ಜಪಿಸುವದಕ್ಕೆ, ಆರ್ಪೆನೇ- ಸಮರ್ಥನಾಗುವೆನೇ. ... ॥೫೨॥

ಎಂದು, ಉಸಿರ್ದ- ಹೇಳಿದ, ಬಸವರಾಜನಂ, ಮಾದಿರಾಜಂ, ನೋಡಿ, ಮನಂನೊಂದು, ಮಗನೆ, ಎಲ್ಲರ್‌ಪಿರಿಯರ್- ದೊಡ್ಡವರೆಲ್ಲರೂ, ನಡೆದ, ನಡವಳಿಯಂ- ನಡತೆಯನ್ನು, ಬಲ್ಲೆಂ, ಎಂಬುದು, ಬಲ್ಲತನಂ-

ರೆಲ್ಲರ್ನಡೆದ ನಡವಳಿಯನೊಲ್ಲೆನೆಂಬುದು ಬಲ್ಲತನಮಲ್ತು ವರ್ಣಾಶ್ರಮಕ್ರಮದಿನಿರ್ದು ವೈ
ದಿಕಶೈವಭಕ್ತಿಯನೇಕಂಗೆಯ್ದಾಚರಿಸಿ ಶಿವಕೃಪೆವಡೆಯಲಕ್ಕುಮಿದನವಜ್ಞೆಗೆಯ್ಯದಂಗೀ
ಕರಿಪುದೆನೆಕೇಳ್ದು ಬಸವರಾಜಂ ಪ್ರಹಸನಂಗೆಯ್ದು ॥ * * * * * * *

ಕಂ॥ ನರೆಯಂ ತೆರೆಯಂತನುವೊ । ಳ್ಧರಿಯಿಸಿದಜಡರ್ಕಳೆಲ್ಲಪಿರಿಯರೆಪಿರಿಯರ್ ॥ ಪರ
ರಮಶಿವಭಕ್ತಿನಿಷ್ಠಾ । ಚರಣಶಿವಜ್ಞಾನಶಿವಮತವ್ರತನಿರತರ್ ॥ ... ... ॥೫೩॥

ಕಂ॥ ಶಿವಪಂಚವರ್ಣಮಿರೆಬೇ । ರೆವರ್ಣಮೇಕೆಮಗೆಶಂಭುಪಾದಾಶ್ರಮಮೊಂ ॥ ದವಿ
ರತನಿರೆಮಿಕ್ಕಾಶ್ರಮ । ನಿವಹಂತಾನೇಕೆಲಿಂಗಪೂಜಾಯಜ್ಞಂ ॥ ... ... ॥೫೪॥

ಚಂ ॥ ಸೊಗಯಿಸೆ ಮತ್ತೆಯಜ್ಞದೊಲವೇಕೆ ಪೊದಳ್ದಿರೆ ಲಿಂಗಸೂತ್ರಮು ।
ಜ್ಜುಗಿಸುವಯಜ್ಞಸೂತ್ರಚಿರವೇಕೆಮರಲ್ದಿರೆ ಭಸ್ಮಲೇಪಮ ॥ ಬ್ಧಿಗತನದೀಜಲಸ್ನಪನ
ಮೇಕೆ ಜಟಾವಳಿಮಸ್ತಕಾಗ್ರದೊ । ಳ್ನೆಗಳ್ದಿರೆ ಬೇರೆತಳ್ತಶಿಖೆಯೇಕೆವಿಮುಕ್ತಿಗಿವಲ್ತೆ
ಕಾರಣಂ ॥ ... ... ... ... ... ... ॥೫೫॥

---

ಪ್ರೌಢಿಮೆಯು, ಅಲ್ತು- ಅಲ್ಲವು, ವರ್ಣಾಶ್ರಮಕ್ರಮದಿಂ- ವರ್ಣ, ಆಶ್ರಮಗಳ ಕ್ರಮದಿಂದ, ಇರ್ದು, ವೈದಿಕಶೈವಭಕ್ತಿಯಂ- ವೈದಿಕವಾದ ಶಿವಭಕ್ತಿಯನ್ನು, ಏಕಂಗೆಯ್ದು- ಒಂದನ್ನಾಗಿತಿಳಿದು, ಆಚರಿಸಿ, ಶಿವಕೃಪೆವಡೆಯಲ್- ಶಿವನದಯವನ್ನು ಹೊಂದುವದಕ್ಕೆ, ಅಕ್ಕುಂ-ಆಗುವದು;ಇದಂ, ಅವಜ್ಞೆಗೆಯ್ಯದೆ-ತಿರಸ್ಕರಿಸದೆ, ಅಂಗೀಕರಿಪುದು; ಎನೆ, ಕೇಳ್ದು, ಆ ಬಸವರಾಜಂ, ಪ್ರಹಸನಂಗೆಯ್ದು- ನಕ್ಕು. * * * *

ತನುವೊಳ್- ಶರೀರದಲ್ಲಿ, ನರೆಯುಂ, ನರೆಕೂದಲನ್ನು, ತೆರೆಯುಂ- ಸುಕ್ಕನ್ನು, ಧರಿಸಿದ, ಜಡರ್ಕಳೆಲ್ಲ- ಅಜ್ಞಾನಿಗಳೆಲ್ಲ, ಪಿರಿಯರೆ- ದೊಡ್ಡವರೇ; ಪರಮ......ನಿರತರ್- ಪರಮ- ಉತ್ಕೃಷ್ಟವಾದ, ಶಿವಭಕ್ತಿ- ಶಿವನಭಕ್ತಿಯಲ್ಲಿ, ನಿಷ್ಠಾ- ನಂಬಿಕೆಯುಳ್ಳ, ಆಚರಣ- ನಡತೆಯುಳ್ಳ, ಶಿವಜ್ಞಾನ- ಈಶ್ವರನಜ್ಞಾನವೇನು, ಶಿವಮತ- ಶಿವನಮತವೇನು, ವ್ರತ- ಶಿವವ್ರತವೇನು ಇವುಗಳಲ್ಲಿ, ನಿರತರ್- ಆಸಕ್ತರಾದವರು, ಪಿರಿಯರ್- ದೊಡ್ಡವರು. ... ... ... ... ... ॥೫೩॥

ಎಮಗೆ, ಶಿವಪಂಚವರ್ಣಂ- ಶಿವಪಂಚಾಕ್ಷರೀಮಂತ್ರವು, ಇರೆ; ಬೇರೆ- ಪ್ರತ್ಯೇಕವಾಗಿ, ವರ್ಣಂ-ಅಕ್ಷರವು (ವರ್ಣವು) ಏಕೆ; ಶಂಭುಪಾದಾಶ್ರಮಂ- ಶಂಭುಪಾದ- ಶಿವನಚರಣವೆಂಬ, ಆಶ್ರಮಂ- ಮುನಿಸ್ಥಾನವು (ಆಶ್ರಮವು), ಅವಿರತಂ-ನಿರಂತರದಲ್ಲೂ, ಇರೆ, ಮಿಕ್ಕ- ಉಳಿದ, ಆಶ್ರಮನಿವಹಂ- ಮುನಿಸ್ಥಾನಸಮೂಹವು, (ಆಶ್ರಮಗಳಸಮೂಹವು)ತಾಂ,ಏಕೆ; ಲಿಂಗಪೂಜಾಯಜ್ಞಂ- ಶಿವಲಿಂಗಪೂಜೆಯೆಂಬಯಜ್ಞವು. ॥೫೪॥

ಸೊಗಯಿಸೆ-ಮನೋಹರವಾಗಿರಲು, ಮತ್ತೆ,ಯಜ್ಞದ-ಗೋಸೋಮಾದಿಯಜ್ಞದ,ಒಲವು-ಪ್ರೀತಿಯು, ಏಕೆ; ಲಿಂಗಸೂತ್ರಂ- ಶಿವಲಿಂಗವೆಂಬ ಯಜ್ಞೋಪವೀತವು, ಪೊದಳ್ದಿರೆ- ಪ್ರಸಿದ್ಧವಾಗಿರಲು, ಉಜ್ಜುಗಿಸುವ- (ಈಗ) ಉದ್ಯೋಗಪಡುವ, ಯಜ್ಞಸೂತ್ರದ- ತಂತುಮಯವಾದಯಜ್ಞೋಪವೀತದ, ಇರವು- ಇರುವಿಕೆಯು- ಏಕೆ;ಭಸ್ಮಲೇಪಂ- ಭಸ್ಮದಲೇಪನವು, ಮರಲ್ದಿರೆ-ಲಿಪ್ತವಾಗಿರಲು; ಅಬ್ಧಿಗತನದೀಜಲಸ್ನಪನಂ- ಅಬ್ಧಿ- ಸಮುದ್ರವನ್ನು. ಗತ- ಹೊಂದಿದ, ನದೀಜಲ- ಹೊಳೆಯನೀರಿನ, ಸ್ನಪನಂ– ಸ್ನಾನವು, ಏಕೆ; ಜಟಾವಳಿ- ಜಡೆಗಳಪಙ್ತಿಯು, ಮಸ್ತಕಾಗ್ರದೊಳ್- ಶಿರಸ್ಸಿನಮೇಲ್ಗಡೆಯಲ್ಲಿ, ನೆಗಳ್ದಿರೆ- ಉಂಟಾಗಿರಲು, ಬೇರೆ, ತಳ್ತ- ಸೇರಿರುವ, ಶಿಖೆ- ಜುಟ್ಟು, ಏಕೆ; ಇವು- ಈ ಪೂರ್ವೋಕ್ತವಾದ ಪಂಚಾಕ್ಷರೀಜಪಾನುಷ್ಠಾನಾದಿ ಧರ್ಮಗಳು, ವಿಮುಕ್ತಿಗೆ-ಮೋಕ್ಷಕ್ಕೆ, ಕಾರಣಂ, ಅಲ್ತೆ- ಅಲ್ಲವೇ. ... ... ... ॥೫೫॥

ಮತ್ತೇ॥ಗುರುಮಾರ್ಗಸ್ಥಿತಿಬೇರೆದೀಕ್ಷೆಯವಿಧಾನಂಬೇರೆನಿತ್ಯವ್ರತಾ।ಚರಣಂಬೇ
ರೆಕಳೇವರಾನುಗತಚಿಹ್ನಂಬೇರೆಪೂಜಾಕ್ರಮ॥ಸ್ಫುರಣಂಬೇರೆನಿಜೇಷ್ಟಮಂತ್ರಜಪದೈ
ವಂಬೇರೆಕೇಳ್ವೀರಶೈ।ವರಸಾಮರ್ತ್ಯರೊಳಂತಿರಲ್ಬಳಿಕಿವಕ್ಕೇಕತ್ವಮೆಂತಪ್ಪುದೋ॥೫೬॥

ಕಂ॥ ಬಹುದೈವಭಜನತತ್ಪರ। ಮಹೀಸುರಕ್ರಿಯೆಪಣಾಂಗನಾಪ್ರತಿನಿಧಿಕೇ॥ ಳ
ಹಿಕಂಕಣೈಕನಿಷ್ಠಾ।ವಹಶರಣಕ್ರಿಯೆಯೆಸಾಧ್ವಿಗೆಣೆಯೆನಿಸಿಕ್ಕುರ್ಗಂ॥ ... ॥೫೭॥

ಕಂ॥ಉಪನಯನಂಬಡೆದನೆಶುಕ।ನುಪಲಬ್ಧಹರಪ್ರಸಾದಚಂಡೇಶಂನಿ॥ನ್ನುಪನಯನಂ
ಬಡೆದವರವರ್ಗುಪಮಾನರೆಪೇಳ್ಮಹತ್ವಸತ್ವಸ್ಥಿತಿಯೊಳ್॥ ... ... ॥೫೮॥

ಕಂ॥ನೀಂಬುದ್ಧಿವಂತನಾದೊಡೆ। ಪಂಬಲಿಸದೆಪಲವನಂಬಿಕಾರಮಣನಪಾ॥ದಾಂಬುಜ
ಮಂಸಲೆಭಜಿಸುತೆ।ನಂಬಿರೆನಿನ್ನಿಷ್ಟಸಿದ್ಧಿಯಪ್ಪುದಮೋಘಂ॥ ... ॥೫೯॥

ಕಂ॥ ನೆರೆದಬಹುಕೋಟಿಜನ್ಮಾಂ। ತರಾರ್ಜಿತಂಸುಕೃತರಾಶಿಫಲಿಸುವಪದದೊ॥

---

ವೀರಶೈವರಸಾಮರ್ತ್ಯರೊಳ್- ವೀರಶೈವಬ್ರಾಹ್ಮಣರಲ್ಲಿ, ಗುರುಮಾರ್ಗಸ್ಥಿತಿ- ಗುರುವಿನರೀತಿಯ ಇರುವಿಕೆಯು, ಬೇರೆ; ದೀಕ್ಷೆಯ- ಶಿವದೀಕ್ಷೆಯ- ವಿಧಾನಂ- ವಿಧಿಯು, ಬೇರೆ; ನಿತ್ಯವ್ರತಾಚರಣಂ-ನಿತ್ಯದಲ್ಲೂ ಶಿವಪೂಜಾವ್ರತವನ್ನಾಚರಿಸುವಿಕೆಯು, ಬೇರೆ; ಕಳೇವರಾನುಗತಚಿಹ್ನಂ— ಕಳೇವರ- ಶರೀರದಲ್ಲಿ, ಅನುಗತ- ಪ್ರಾಪ್ತವಾದ, ಚಿಹ್ನಂ- ಚಿಹ್ನವು, ಬೇರೆ; ಪೂಜಾಕ್ರಮಸ್ಫುರಣಂ— ಪೂಜಾಕ್ರಮ-ಪೂಜಾರೀತಿಯ, ಸ್ಫುರಣಂ- ಪ್ರಕಾಶಿಸುವಿಕೆಯು, ಬೇರೆ;ನಿಜೇಷ್ಟಮಂತ್ರಜಪದೈವಂ— ನಿಜ- ಸ್ವಕೀಯವಾದ, ಇಷ್ಟಮಂತ್ರಜಪ- ಪಂಚಾಕ್ಷರೀಮಂತ್ರಜಪಕ್ಕೆ, ದೈವಂ-ಅಧಿದೇವತೆಯು, ಬೇರೆ; ಇಂತು, ಇರಲ್, ಬಳಿಕ, ಇವಕ್ಕೆ-ವೀರಶೈವಬ್ರಾಹ್ಮಣಧರ್ಮಕ್ಕೂ, ಪ್ರಾಕೃತಬ್ರಾಹ್ಮಣಧರ್ಮಕ್ಕೂ, ಏಕತ್ವಂ-ಒಂದೇಭಾವವು, ಎಂತು-ಹ್ಯಾಗೆ, ಅಪ್ಪುದೋ- ಆಗುವದೋ. ... ... ... ... ॥೫೬॥

ಬಹು......ಕ್ರಿಯೆ— ಬಹುದೈವ- ಅನೇಕದೇವತೆಗಳ, ಭಜನ- ಪೂಜೆಯಲ್ಲಿ, ತತ್ಪರ- ಆಸಕ್ತರಾದ, ಮಹೀಸುರ- ಬ್ರಾಹ್ಮಣರ, ಕ್ರಿಯೆ- ಕರ್ಮವು, ಪಣಾಂಗನಾಪ್ರತಿನಿಧಿ-ಸೂಳೆಗೆ ಸದೃಶವಾದದ್ದು; ಕೇಳ್- ಅಹಿ......ಕ್ರಿಯೆ— ಅಹಿಕಂಕಣೈಕ- ಪರಶಿವನೊಬ್ಬನಲ್ಲೇ, ನಿಷ್ಠಾವಹ- ನಂಬಿಕೆಯನ್ನು ಹೊಂದಿರುವ, ಶರಣ- ಶಿವಶರಣರ, ಕ್ರಿಯೆ- ಕರ್ಮವು, ಸಾಧ್ವಿಗೆ- ಪತಿವ್ರತೆಗೆ, ಎಣೆ- ಸದೃಶವು, ಎನಿಸಿ, ಇರ್ಕ್ಕುರ್ಗಂ. ॥೫೭॥

ಶುಕ- ಶುಕಋಷಿಯು, ಉಪನಯನಂಬಡೆದನೆ- ಉಪನಯನವನ್ನುಹೊಂದಿದನೇ; ಉಪಲಬ್ಧಹರಪ್ರಸಾದಚಂಡೇಶಂ- ಉಪಲಬ್ಧ- ಪಡೆಯಲ್ಪಟ್ಟ, ಹರ- ಪರಮೇಶ್ವರನ, ಪ್ರಸಾದ- ಅನುಗ್ರಹವುಳ್ಳ, ಚಂಡೇಶಂ- ಚಂಡೇಶನು, ಉಪನಯನಂಬಡೆದನೆ; ನಿನ್ನ, ಉಪನಯನಂಬಡೆದವರ್- ಉಪನಯನವನ್ನುಹೊಂದಿದವರು, ಅವರ್ಗೆ- ಆಶುಕಚಂಡೇಶರಿಗೆ, ಮಹತ್ವಸತ್ವಸ್ಥಿತಿಯೊಳ್- ಮಹಿಮೆಯುಶಕ್ತಿಯುವಿಷಯದಲ್ಲಿ, ಸಮಾನರೆ-ಸದೃಶರೇ. ... ... ... ... ... ... ... ... ॥೫೮॥

ನೀಂ, ಬುದ್ಧಿವಂತಂ, ಆದೊಡೆ- ಆದರೆ, ಪಲವಂ- ಅನೇಕವನ್ನು, ಪಂಬಲಿಸದೆ- ಚಿಂತಿಸದೆ, ಅಂಬಿಕಾರಮಣನ- ಪರಮೇಶ್ವರನ, ಪಾದಾಂಬುಜಮಂ- ಚರಣಕಮಲವನ್ನು, ಸಲೆ, ಭಜಿಸುತೆ- ಪೂಜಿಸುತ್ತ, ನಂಬಿ, ಇರೆ, ನಿನ್ನ, ಇಷ್ಟಸಿದ್ಧಿ- ಇಷ್ಟಾರ್ಥಸಿದ್ಧಿಯು, ಅಮೋಘಂ- ವ್ಯರ್ಥವಾಗದಹಾಗೆ, ಅಪ್ಪುದು- ಆಗುವದು. ... ... ... ... ... ॥೫೯॥

ನೆರೆದ-ಪ್ರಾಪ್ತವಾದ, ಬಹುಕೋಟಿಜನ್ಮಾಂತರಾರ್ಜಿತಂ- ಅನೇಕಕೋಟಿಜನ್ಮಗಳಿಂದಸಂಪಾದಿಸಿದ, ಸುಕೃತರಾಶಿ- ಪುಣ್ಯಸಮೂಹವು, ಫಲಿಸುವ, ಪದದೊಳ್- ಸ್ಥಳದಲ್ಲಿ, ಘನ.....ಚಿಂತಾರತ್ನಂ- ಘನ-ಶ್ರೇ

ಳ್ದೊರೆಕೊಳ್ವುದಲ್ತೆ ಘನಶಾಂ | ಕರಭಕ್ತಿ ಸಮೀಹಿತಾರ್ಥಚಿಂತಾರತ್ನಂ ... ||೬೦||

ಕಂ ||ಭವಮರಣಮಳಿಯದಮರರ | ಭವನಂತಿರೆ ಭವವಿಮುಕ್ತಿಗೊಡಲಾರ್ಪರೆ ಮಾ| ರವಕೂಪಜಲಂಗಳ್ಜಾ | ಹ್ನವಿಯಂಬುವಿನಂತೆ ತೃಷೆಯನೇಂ ಕಳೆದಪುವೇ ... ||೬೧||

ಚಂ || ಎನಗೆ ಪಿತಂ ಮಹೇಶನಗಜಾತೆಯೆ ಮಾತೆ ಶಿವೈಕ್ಯಭಕ್ತಿಸಂ | ಜನಿತಮಹಾಸುಖಾ ನುಭವರೆನ್ನಯಬಾಂಧವರಿಂದುಮೌಳಿಲಾಂ|ಛನಧರರೆನ್ನನಾಳ್ವೆಸಕೆನೇಮಿಸುವಾಣ್ಮರುಮೇ ಶ್ವರಾಂಘ್ರಿಸೇ | ವನಮಸಮಾನಭಾಗ್ಯಮಮರ್ದೀಶ್ವರಭಕ್ತಿಯೆ ಮುಕ್ತಿಸಂಪದಂ ||೬೨||

ವ || ಎಂದುಳ್ಳುದನುಪಚಾರಮಿಲ್ಲದುಸಿರ್ದ ಬಸವರಾಜನಭಕ್ತಿಭಾವಕ್ಕೆ ವಿಸ್ಮಯಂಬಟ್ಟು ತನ್ಮುಖಸುಧಾಕರನಿಂದೊಗೆತಂದ ಸೂಕ್ತಿಚಂದ್ರಿಕೆಯಿನಜ್ಞಾನತಮಂ ಪರಿಯೆ ಮನಃಕುಮುದಮಲರೆ ಸುಜ್ಞಾನಪರಿಮಳಂ ಪಸರಿಸೆ ಸಮಾನಧರ್ಮಿಣಿಯೆನಿಪ ವಿವೇಕನಿಧಿಯಾದ ಮಾದಾಂಬಿಕೆಗೆ ಮುದಮನೊಡರ್ಚಲಿಂತೆಂದಂ * * * * * * * * *

---

ಷ್ಟಮಾದ, ಶಾಂಕರಭಕ್ತಿ- ಶಿವಭಕ್ತಿಯೆಂಬ, ಸಮೀಹಿತಾರ್ಥಚಿಂತಾರತ್ನಂ- ಇಷ್ಟಾರ್ಥವನ್ನುಂಟುಮಾಡುವ ಚಿಂತಾಮಣಿಯು, ದೊರೆಕೊಳ್ವುದಲ್ತೆ-ಪ್ರಾಪ್ತವಾಗುವದಲ್ಲವೇ. ... ... ||೬೦||

ಭವಮರಣಂ- ಜನನಮೃತಿಗಳು, ಅಳಿಯದ- ನಾಶವಾಗದ, ಅಮರರ್- ದೇವತೆಗಳು, ಅಭವನಂತಿಗೆ- ಭವರಹಿತನಾದಪರಶಿವನಹಾಗೆ, ಭವವಿಮುಕ್ತಿಗೊಡಲ್- ಸಂಸಾರಮೋಚನವನ್ನು ಕೊಡುವದಕ್ಕೆ, ಆರ್ಪರೆ- ಸಮರ್ಥರಾದಾರೆ; ಮಾರವಕೂಪಜಲಂಗಳ್- ಚೌಳುಮಣ್ಣಿನಪ್ರದೇಶದಲ್ಲಿರುವಬಾವಿಯನೀರು, ಜಾಹ್ನವಿಯ- ಗಂಗಾನದಿಯ, ಅಂಬುವಿನಂತೆ- ಉದಕದಹಾಗೆ, ತೃಷೆಯಂ- ನೀರಡಿಕೆಯನ್ನು, ಕಳೆದಪುವೇಂ- ಹೋಗಲಾಡಿಸುವವೇ. ... ... ... ... ... ... ||೬೧||

ಎನಗೆ, ಮಹೇಶಂ- ಪರಮೇಶ್ವರನು, ಪಿತಂ- ತಂದೆಯು; ನಗಜಾತೆಯೆ- ಪಾರ್ವತಿಯೆ, ಮಾತೆ- ತಾಯಿಯು; ಶಿವೈಕ್ಯ.....ಭವರ್- ಶಿವೈಕ್ಯ- ಶಿವನೊಡನೆ ಏಕತ್ವವನ್ನು ಹೊಂದಿದ, ಭಕ್ತಿ- ಭಕ್ತಿಯಿಂದ, ಸಂಜನಿತ- ಉತ್ಪನ್ನವಾದ, ಮಹಾಸುಖ- ಅಧಿಕವಾದಸೌಖ್ಯವನ್ನು, ಅನುಭವರ್- ಅನುಭವಿಸುವವರು, ಎನ್ನಯ ಬಾಂಧವರ್- ಬಂಧುಗಳು; ಇಂದುಮೌಳಿಲಾಂಛನಧರರ್- ಈಶ್ವರನಚಿಹ್ನವನ್ನು ಧರಿಸಿರುವವರು, ಎನ್ನಂ, ಆಳ್ವೆಸಕೆ- ಭೃತ್ಯಕಾರ್ಯಕ್ಕೆ, ನೇಮಿಸುವ, ಆಣ್ಮರ್- ಅಧಿಪತಿಗಳು; ಉಮೇಶ್ವರಾಂಘ್ರಿಸೇವನಂ- ಉಮಾಮಹೇಶ್ವರಚರಣಭಜನೆಯು, ಅಸಮಾನಭಾಗ್ಯಂ- ಅಸದೃಶವಾದಐಶ್ವರ್ಯವು; ಅಮರ್ದ- ಪ್ರಾಪ್ತವಾದ, ಈಶ್ವರಭಕ್ತಿಯೆ- ಶಿವಭಕ್ತಿಯೇ, ಮುಕ್ತಿಸಂಪದಂ- ಮೋಕ್ಷಸಂಪತ್ತು. ... ... ...||೬೨||

ಎಂದು, ಉಳ್ಳುದಂ- ಮನೋಭಿಪ್ರಾಯವನ್ನು, ಉಪಚಾರವಿಲ್ಲದೆ-ಉಪಚಾರೋಕ್ತಿಯಿಲ್ಲದೆ,ಉಸಿರ್ದ- ಹೇಳಿದ, ಬಸವರಾಜನ, ಭಕ್ತಿಭಾವಕ್ಕೆ- ಭಕ್ತಿಯಸ್ಥಿತಿಗೆ(ಪಾದರಸಂ)ವಿಸ್ಮಯಂಬಟ್ಟು- ಆಶ್ಚರ್ಯಪಟ್ಟು, ತನ್ಮುಖಸುಧಾಕರನಿಂದೆ- ಆಬಸವೇಶ್ವರನಮುಖವೆಂಬ ಚಂದ್ರನಿಂದ, ಒಗೆತಂದ- ಹುಟ್ಟಿದ, ಸೂಕ್ತಿಚಂದ್ರಿಕೆಯಿಂ- ಸೂಕ್ತಿ- ಸಮೀಚನವಾದವಚನವೆಂಬ, ಚಂದ್ರಿಕೆಯಿಂ- ಬೆಳ್ದಿಂಗಳಿಂದ, ಅಜ್ಞಾನತಮಂ-ಅಜ್ಞಾನವೆಂಬಅಂಧಕಾರವು, ಪರಿಯೆ- ನಾಶವಾಗಲು, ಮನಃಕುಮುದಂ- ಮನಸ್ಸೆಂಬನೈದಿಲೆಯು, ಅಲರೆ- ವಿಕಸನವಾಗಲು; ಸುಜ್ಞಾನಪರಿಮಳಂ- ಸಮೀಚನವಾದಜ್ಞಾನವೆಂಬಸುಗಂಧವು, ಪಸರಿಸೆ- ಹರಡಿಕೊಳ್ಳಲು, ಸಮಾನಧರ್ಮಿಣಿಎನಿಪ- ಸಮಾನಳಾದಧರ್ಮಪತ್ನಿಯೆನಿಸಿಕೊಳ್ಳುವ, ವಿವೇಕನಿಧಿಯಾದ- ವಿಚಾರಕ್ಕೆ ನಿಕ್ಷೇಪಳಾದ, ಮಾದಾಂಬಿಕೆಗೆ, ಮುದಮಂ- ಸಂತೋಷವನ್ನು, ಒಡರ್ಚಲ್- ಉಂಟುಮಾಡುವದಕ್ಕೋಸ್ಕರ, ಇಂತೆಂದಂ.

ಚಂ॥ ತರುಣಿ ಹಿತೋಪದೇಶಮಿದು ಪುತ್ರನಿವಂ ಶಿವನಂಶನೀತನೆ । ಮ್ಮುರುತರಭಾಗ್ಯದಿಂ ಕುವರನೆಂದೆನಿಸಿದ್ದನಿನಿತ್ತೆ ಸಾಲ್ಗುಂ ॥ ಧರಣಿ ಪುನೀತಮಾದುದಿವನುದ್ಭವಮಾತ್ರದೆ ಧನ್ಯರಾದೆವಾ । ವಿರದೆಮದೀಯವಂಶಮಲರ್ದತ್ತು ಪಿತೃವ್ರಜಕಾದುದುತ್ಸವಂ ॥೬೩॥

ವ॥ ಎಂದು ಕೃತಾರ್ಥಭಾವಮನಪ್ಪುಗೆಯ್ದಾತ್ಮನಿರೋಧದೊಳಶಕ್ತರಾದ ಮಾದಾಂಬಿಕಾಮಾದಿರಾಜರಂ ಸಮುಚಿತೋಕ್ತಿಯಿಂ ಸಂತಮಿರಿಸಿ ಬೀಳ್ಕೊಂಡು ನಿಜಸಹೋದರಿಯಪ್ಪ ದಿವ್ಯಜ್ಞಾನಿ ನಾಗಲಾಂಬೆಯನೊಡಗೊಂಡು ದುಷ್ಕರ್ಮಕಾನನದಾವಾನಲಂ ಕರುಣಾರಸಸಮುದ್ರಂ ಶಿವಭಕ್ತಿಸಾಮ್ರಾಜ್ಯಧುರಂಧರಂ ಬಸವರಾಜಂ ಬಾಗವಾಡಿಯ ರಾಜವೀಧಿಯೊಳ್ ಬರುತ್ತುಮಲ್ಲಿ ಶಿವಭಕ್ತಪ್ರತಿಹಾರಕನೋರ್ವನ ವೃಷಧ್ವಜಾಲಂಕೃತಮಪ್ಪ ಗೃಹದ್ವಾರಮಂ ಕಂಡಿದು ಭಕ್ತಮಂದಿರಮಕ್ಕುಮೆಂದೊಳಗಣ್ಗೆಯ್ತಂದವಂ ಮಾಳ್ಪ ಜಂಗಮಾರ್ಚನೆಗೆ ಸಾತ್ವಿಕಂ ನಿಮಿರೆ ಸಂತಸಂಬಟ್ಟು ಪರಸ್ಪರಪ್ರಣಯಪ್ರಣಾಮಾನಂತರಮಲ್ಲಿ ನೆರೆದ ಶರ

---

ತರುಣಿ- ಎಲೈ ಪತ್ನಿಯೇ, ಇದು- ಈತನಿಂದ ಹೇಳಲ್ಪಟ್ಟ ವಚನವು, ಹಿತೋಪದೇಶಂ- ಹಿತವಾದ ಬೋಧೆಯು; ಇವಂ ಪುತ್ರಂ- ಈ ಮಗನು, ಶಿವಾಂಶಂ- ಈಶ್ವರಾಂಶೋದ್ಭೂತನು; ಈತಂ, ಎಮ್ಮ, ಉರುತರಭಾಗ್ಯದಿಂ- ಅತ್ಯಧಿಕವಾದ ಪುಣ್ಯದಿಂದ, ಕುವರಂ, ಎಂದು, ಎನಿಸಿದ್ದಂ- ಹೇಳಿಸಿಕೊಂಡು ಇದ್ದನು; ಇನಿತ್ತೆ- ಇಷ್ಟೇ, ಸಾಲ್ಗುಂ- ಸಾಕು; ಇವನ, ಉದ್ಭವಮಾತ್ರದೆ- ಉತ್ಪತ್ತಿಮಾತ್ರದಿಂದಲೇ, ಧರಣಿ- ಭೂಮಿಯು, ಪುನೀತಂ- ಪರಿಶುದ್ಧವಾದದ್ದು, ಆದುದು; ಆವ್, ಇರದೆ- ತಪ್ಪದೆ, ಧನ್ಯರ್, ಕೃತಾರ್ಥರು, ಆದೆವ್; ಮದೀಯವಂಶಂ- ನಮ್ಮ ಸಂತತಿಯು, ಅಲರ್ದತ್ತು- ಪ್ರಕಾಶಮಾನವಾಯಿತು; ಪಿತೃವ್ರಜಕೆ- ಪಿತೃಸಮೂಹಕ್ಕೆ, ಉತ್ಸವಂ- ಸಂತೋಷವು, ಆದುದು. ... ... ... ... ... ॥೬೩॥

ಎಂದು, ಕೃತಾರ್ಥಭಾವಮಂ- ಧನ್ಯತ್ವವನ್ನು, ಅಪ್ಪುಗೆಯ್ದು- ಹೊಂದಿ, ಆತ್ಮನಿರೋಧದೊಳ್- ತನ್ನನ್ನು ತಡೆಯುವದರಲ್ಲಿ, ಅಶಕ್ತರಾದ, ಮಾದಾಂಬಿಕಾಮಾದಿರಾಜರಂ, ದುಷ್ಕರ್ಮಕಾನನದಾವಾನಲಂ- ದುಷ್ಕರ್ಮ ಪಾಪವೆಂಬ, ಕಾನನ- ಅರಣ್ಯಕ್ಕೆ, ದಾವಾನಲಂ- ಕಾಳ್ಕಿಚ್ಚಾದ, ಕರುಣಾರಸಸಮುದ್ರಂ- ದಯಾರಸಕ್ಕೆ ಸಮುದ್ರನಾದ, ಶಿವಭಕ್ತಿಸಾಮ್ರಾಜ್ಯಧುರಂಧರಂ- ಶಿವಭಕ್ತಿಯೆಂಬ ರಾಜ್ಯಾಧಿಪತ್ಯದ ಭಾರವಾಹಕನಾದ, ಬಸವರಾಜಂ, ಸಮುಚಿತೋಕ್ತಿಯಿಂ- ಯೋಗ್ಯವಾದ ವಚನದಿಂದ, ಸಂತಮಿರಿಸಿ- ಸಮಾಧಾನಪಡಿಸಿ, ಬೀಳ್ಕೊಂಡು- ಕಳುಹಿಸಿಕೊಂಡು, ನಿಜಸಹೋದರಿಯಪ್ಪ- ತನ್ನ ಸಹಜಾತೆಯಾದ, ದಿವ್ಯಜ್ಞಾನಿನಾಗಲಾಂಬೆಯಂ- ಶ್ರೇಷ್ಠವಾದ ತಿಳುವಳಿಕೆಯುಳ್ಳ ನಾಗಲಾಂಬಿಕೆಯನ್ನು, ಒಡಗೊಂಡು- ತನ್ನೊಡನೆ ಕರೆದುಕೊಂಡು, ಬಾಗವಾಡಿಯ- ಬಾಗವಾಡಿಯೆಂಬ ಪಟ್ಟಣದ, ರಾಜವೀಧಿಯೊಳ್- ರಾಜಮಾರ್ಗದಲ್ಲಿ, ಬರುತ್ತಂ, ಅಲ್ಲಿ, ಓರ್ವನ ಶಿವಭಕ್ತಪ್ರತಿಹಾರಕನ- ಒಬ್ಬ ಶಿವಭಕ್ತನಾದ ದ್ವಾರಪಾಲಕನ, ವೃಷಧ್ವಜಾಲಂಕೃತಮಪ್ಪ- ವೃಷಭಧ್ವಜದಿಂದಲಂಕರಿಸಲ್ಪಟ್ಟ, ಗೃಹದ್ವಾರಮಂ- ಮನೆಯ ಬಾಗಿಲನ್ನು, ಕಂಡು, ಇದು, ಭಕ್ತಮಂದಿರಂ- ಶಿವಭಕ್ತರ ಮನೆಯು, ಅಕ್ಕುಂ- ಆದೀತು, ಎಂದು, ಒಳಗಣ್ಗೆ- ಮನೆಯೊಳಕ್ಕೆ, ಎಯ್ತಂದು- ಬಂದು, ಅವಂ- ಆ ಭಕ್ತನು, ಮಾಳ್ಪ- ಮಾಡುವ, ಜಂಗಮಾರ್ಚನೆಗೆ- ಜಂಗಮಪೂಜೆಗೆ, ಸಾತ್ವಿಕಂ- ರೋಮಾಂಚಾದಿ ಸಾತ್ವಿಕಗುಣವು, ನಿಮಿರೆ- ಉಂಟಾಗಲು; ಸಂತಸಂಬಟ್ಟು- ಸಂತೋಷವನ್ನು ಹೊಂದಿ, ಪರಸ್ಪರಪ್ರಣಯಪ್ರಣಾಮಾನಂತರಂ- ಒಬ್ಬರಿಗೊಬ್ಬರು ವಿಶ್ವಾಸದಿಂದ ನಮಸ್ಕರಿಸಿದನಂತರದಲ್ಲಿ, ಅಲ್ಲಿ, ನೆರೆದ- ಕೂಡಿರ್ದ್ದ, ಶರಣಗಣದೊಡಂ- ಶರಣಸಮೂಹದೊಡನೆ, ಅವಂ, ಮಾಳ್ಪ, ಸತ್ಕಾರಮಂ- ಸೇವೆಯನ್ನು, ಕೈ

ಣಗಣದೊಡನವಂಮಾಳ್ಪಸತ್ಕಾರಮಂಕೈಕೊಳುತ್ತಂಶಿವಾನುಭವಗೋಷ್ಠಿಯೊಳ್ಸುಖಮಿರುತ್ತಂನಿಜಗುರುನಾಥನಪ್ಪಸಂಗಮೇಶ್ವರನಂನೆನೆದು ತದ್ದರ್ಶನಂಗೆಯ್ಯಲೆಳಸಿನಿಜಸಹೋದರಿವೆರಸಿಸರ್ವಸಂಭ್ರಮಂಮಿಗೆಕಪ್ಪಡಿಗೆಳ್ತರಲುದ್ಯುಕ್ತನಾಗಿ * * * * *

ಮ॥ಸ್ರ॥ದೆಸೆಯಂದೃಕ್ಪ್ರಸರತ್ಪ್ರಭಾಪ್ರಸರದಿಂಪಾದಾಬ್ಜವಿನ್ಯಾಸದಿಂ।ರಸೆಯಂಮಾರುತನಂಕಲೇವರದಸೋಂಕಿಂ ಪಾವನಂಗೆಯ್ವುತಂ॥ ಜಸಮಂಬೀರುತೆ ಜಂಗಮಾಳಿಯೊಡನತ್ಯಾನಂದದಿಂದೈದೆಸಂ। ತಸದಿಂದೇಳ್ತರುತಿರ್ದನಲ್ಲಿಬಸವಂತದ್ದರ್ಶನೋತ್ಕಂಠೆಯಿಂ॥೬೪॥

ವ॥ಅಂತೇಳ್ತರುತ್ತಮಿರೆಯಿರೆ ಸಂಗಮೇಶ್ವರಗೃಹಬಹಿರ್ದ್ವಾರಸಮುನ್ನತಕನತ್ಕನಕಕಲಶಕಲಿತಗೋಪುರಂ ಗೋಚರಿಸೆ ಜಯಜಯಪ್ರಣಾದಂಗೆಯ್ದು ಕರಾಂಬುಜಮನಡಿಗಡಿಗೆಮುಗಿವುತ್ತಂ ಸಾತ್ವಿಕಭಕ್ತಿಸಂಪತ್ತಿವೆತ್ತು ಸಡಗರಿಸಿ ತದ್ಧ್ಯಾನಪರಾಯಣಂತತ್ಕ್ಷೇತ್ರಮಂ ಪುಗುತರ್ಪಾಗಳಾಪುರದಭಕ್ತಜನಂಗುಡಿಗಟ್ಟಿ ಪರಮಸಂಭ್ರಮದಿನಿದಿರ್ಗೊ

---

ಕೊಳುತ್ತಂ - ಸ್ವೀಕರಿಸುತ್ತ, ಶಿವಾನುಭವಗೋಷ್ಠಿಯೊಳ್- ಶಿವಜ್ಞಾನಿಗಳಸಭೆಯಲ್ಲಿ,ಸುಖಂ- ಸುಖವಾಗಿ, ಇರುತ್ತಂ, ನಿಜಗುರುನಾಥನಪ್ಪ- ತನಗೆಗುರುಶ್ರೇಷ್ಠನಾದ, ಸಂಗಮೇಶ್ವರನಂ, ನೆನೆದು- ಸ್ಮರಿಸಿ, ತದ್ದರ್ಶನಂಗೆಯ್ಯಲ್- ಆಸಂಗಮೇಶ್ವರನದರ್ಶನವನ್ನು ಮಾಡುವದಕ್ಕೋಸ್ಕರ, ಎಳಸಿ- ಅಪೇಕ್ಷಿಸಿ, ನಿಜಸಹೋದರಿವೆರಸಿ- ನಾಗಲಾಂಬಿಕೆಯೊಡನೆಕೂಡಿ, ಸರ್ವಸಂಭ್ರಮಂ- ಎಲ್ಲಾಸಡಗರವು, ಮಿಗೆ-ಹೆಚ್ಚಾಗಲು, ಕಪ್ಪಡಿಗೆ, ಏಳ್ತರಲ್- ಬರುವದಕ್ಕೋಸ್ಕರ, ಉದ್ಯುಕ್ತಂ, ಆಗಿ. * * * * * *

ಬಸವಂ, ಸಂತಸದಿಂ, ದೃಕ್ಪ್ರಸರತ್ಪ್ರಭಾಪ್ರಸರದಿಂ, ದೃಕ್- ನೇತ್ರಗಳಿಂದ, ಪ್ರಸರತ್- ಹೊರಡುತ್ತಿರುವ, ಪ್ರಭಾ- ಕಾಂತಿಗಳ, ಪ್ರಸರದಿಂ- ಸಮೂಹದಿಂದ, ದೆಸೆಯಂ- ದಿಕ್ಕುಗಳನ್ನು, ಪಾವನಂಗೆಯ್ವುತಂ- ಪರಿಶುದ್ಧವನ್ನುಮಾಡುತ್ತ; ಪದಾಬ್ಜವಿನ್ಯಾಸದಿಂ- ಚರಣಕಮಲವನ್ನಿಡುವಪರಿಂದ, ರಸೆಯಂ ಭೂಮಿಯನ್ನು, ಪಾವನಂಗೆಯ್ವುತಂ; ಕಲೇವರದ- ಶರೀರದ, ಸೋಂಕಿಂ- ಸ್ಪರ್ಶನದಿಂದ, ಮಾರುತನಂ- ವಾಯುವನ್ನು ಪಾವನಂಗೆಯ್ವುತಂ; ಜಸಮಂ- ಕೀರ್ತಿಯನ್ನು, ಬೀರುತ್ತೆ- ಹರಡುತ್ತ, ಜಂಗಮಾಳಿ- ಜಂಗಮಸಮೂಹವು, ಒಡಂ- ಸಂಗಡ, ಅತ್ಯಾನಂದದಿಂದೆ- ಅತಿಸಂತೋಷದಿಂದ, ಐದೆ- ಬರಲು, ತದ್ದರ್ಶನೋತ್ಕಂಠೆಯಿಂ- ಆಸಂಗಮೇಶ್ವರನದರ್ಶನದಲ್ಲಿ ಕುತೂಹಲದಿಂದ, ಏಳ್ತರುತಿರ್ದಂ- ಬರುತ್ತಿದ್ದನು ॥೬೪॥

ಅಂತು, ಏಳ್ತರುತ್ತಂ, ಬರುತ್ತ, ಇರೆಯಿರೆ- ಇರುತ್ತಿರಲು; ಸಂಗಮೇಶ್ವರ...... ಗೋಪುರಂ- ಸಂಗಮೇಶ್ವರಗೃಹ- ಸಂಗಮೇಶ್ವರದೇವಸ್ಥಾನದ- ಬಹಿರ್ದ್ವಾರ- ಹೊರಬಾಗಿಲಿನಲ್ಲಿರುವ, ಸಮುನ್ನತ- ಉದ್ದವಾದ, ಕನತ್- ಹೊಳೆಯುತ್ತಲಿರುವ, ಕನಕಕಲಶ- ಚಿನ್ನದಕಲಶಗಳಿಂದ, ಕಲಿತ- ಕೂಡಿದ, ಗೋಪುರಂ, ಗೋಚರಿಸೆ- ಕಾಣಲು, (ಬಸವಂ) ಜಯಜಯಪ್ರಣಾದಂಗೆಯ್ದು- ಜಯಜಯವೆಂಬಶಬ್ದವನ್ನುಮಾಡಿ, ಕರಾಂಬುಜಮಂ, ಅಡಿಗಡಿಗೆ- ಅಲ್ಲಿ ಗಲ್ಲಿಗೆ, ಮುಗಿವುತ್ತಂ; ಸಾತ್ವಿಕಭಕ್ತಿಸಂಪತ್ತಿವೆರಸು- ರೋಮಾಂಚಾದಿ ಸೂಚಿತವಾದ ಭಕ್ತ್ಯಾಧಿಕ್ಯದಿಂಕೂಡಿ; ಸಡಗರಿಸಿ-ಸಂಭ್ರಮಪಟ್ಟು, ತದ್ಧ್ಯಾನಪರಾಯಣಂ- ಆಸಂಗಮೇಶ್ವರಧ್ಯಾನದಲ್ಲಾಸಕ್ತನಾಗಿ, ತತ್ಕ್ಷೇತ್ರಮಂ- ಆದೇವಸ್ಥಾನದಪುಣ್ಯಸ್ಥಲವನ್ನು, ಪುಗುತರ್ಪಾಗಳ್- ಪ್ರವೇಶಿಸುವಕಾಲದಲ್ಲಿ, ಆಪುರದ, ಭಕ್ತಜನಂ, ಗುಡಿಗಟ್ಟಿ- ಗುಂಪುಕೂಡಿ, ಪರಮಸಂಭ್ರಮದಿಂ- ಇದಿರ್ಗೊಳುತ್ತಂ, ಇರೆ, ಶಿವಗಣಸಮೇತಂ- ಶಿವಗಣಂಗಳೊಡನೆಕೂಡಿ, ಸಮುದಿತಾನಂದದಿಂ- ಉತ್ಪನ್ನವಾದ ಸಂತೋಷದಿಂದ, ಬಂದು, ತನ್ಮಂದಿರ...... ದೇಶದೊಳ್- ತನ್ಮಂದಿರ- ಆದೇವಾಲಯದ, ಬಂಧುರ-

ಳುತ್ತಮಿರೆ ಶಿವಗಣಸಮೇತಂ ಸಮುಚಿತಾನಂದದಿಂ ಬಂದು ತನ್ಮಂದಿರಬಂಧುರದ್ವಿತೀಯ ದ್ವಾರದೇಶದೊಳ್ನಿಂದು ನಿರೀಕ್ಷಿಪಾಗಳ್ ॥ * * * * * * * * * *

ಚಂ॥ ಮಿಳಿರ್ವವೃಷಧ್ವಜಂಕನಕಗೋಪುರಮಿಂದುಶಿಲಾವಿಶಾಲಮುಂ । ಜುಳರುಚಿಸಾಲಮುನ್ಮಣಿಕನತ್ಕಳಶಂನವನೀಲ ಕುಟ್ಟಿಮಂ ॥ ತೊಳಗುವರತ್ನದೀಪ ಮುರುಧೂಪಮು ದಂಚಿತಪುಷ್ಪಮಾಲೆಮುಂ । ಗಳಕರತೂರ್ಯನಾದಮಮರ್ದೊಪ್ಪಿರೆ ತೋರಿದುದಾ ಶಿವಾಲಯಂ॥ .. ... ... ... ... .. ॥೬೫॥

ವ ॥ಅದನಭೀಕ್ಷಿಸುತ್ತಮಾವೃಷಭರಾಜಂಮುಂದಣ್ಗೆ ಬರೆವರೆ ಪನ್ನಗಧರನೆನ್ನಣುಗಂಬಂದನೆಂದುನ್ನತೋತ್ಸವಂ ನಿಮಿರೆ ॥ * * * * * * * * * *

ಮತ್ತೇ॥ ತೊಳಗುತ್ತಿರ್ಪ್ಪಲಸತ್ಪ್ರಸನ್ನವದನಂಭಸ್ಮ ತ್ರಿಪುಂಡ್ರಂ ಸಮುಜ್ವಳರುದ್ರಾಕ್ಷವಿಭೂಷಣಂ ಭಸಿತಲಿಪ್ತಾಂಗಂಜಟಾಮಂಡಲಂ ॥ ಗಳರಾಜದ್ಘನಲಿಂಗಸಜ್ಜಿಕೆ ಮಿಳತ್ಕಾಷಾಯ ಚೇಲಂ ಸುಮಂ । ಜುಳಮಾಗೊಪ್ಪಿರೆ ಮುನ್ನಿನಂತೆ ಗುರುರೂಪಂ ತಾಳ್ದು ಮೈದೋರಿದಂ ॥ ... ... ... ... ... ॥೬೬॥

---

ಮನೋಹರವಾದ, ದ್ವಿತೀಯದ್ವಾರದೇಶದೊಳ್- ಎರಡನೇಬಾಗಿಲಿನಲ್ಲಿ, ನಿಂದು, ನಿರೀಕ್ಷಿಪಾಗಳ್- ನೋಡುವಕಾಲದಲ್ಲಿ. * * * * * * * * * * * * * * * * *

ಮಿಳಿರ್ವ- ಅಳ್ಳಾಡುವ, ವೃಷಧ್ವಜಂ, ಕನಕಗೋಪುರಂ-ಚಿನ್ನದಗೋಪುರವು- ಇಂದು......ಸಾಲಂ- ಇಂದುಶಿಲಾ- ಚಂದ್ರಕಾಂತಶಿಲೆಯಿಂದಮಾಡಲ್ಪಟ್ಟ, ವಿಶಾಲ- ವಿಸ್ತಾರವಾದ, ಮಂಜುಳ- ಮನೋಹರವಾದ, ರುಚಿ- ಕಾಂತಿಯುಳ್ಳ, ಸಾಲಂ- ಪ್ರಾಕಾರವು; ಉನ್ಮಣಿಕನತ್ಕಳಶಂ- ಉತ್ಕೃಷ್ಟವಾದರತ್ನಗಳಿಂದ ಹೊಳೆಯುತ್ತಲಿರುವಕಳಶವು; ನವನೀಲಕುಟ್ಟಿಮಂ- ನೂತನವಾದ ಇಂದ್ರನೀಲರತ್ನದನಿಬದ್ಧಭೂಮಿಯು; ತೊಳಗುವ- ಪ್ರಕಾಶಿಸುವ, ರತ್ನದೀಪಂ- ರತ್ನದೀಪವು, ಉರುಧೂಪಂ- ಉತ್ಕೃಷ್ಟವಾದಧೂಪವು, ಉದಂಚಿತಪುಷ್ಪಮಾಲೆ- ಉತ್ಕೃಷ್ಟವಾದಹೂವಿನಮಾಲಿಕೆಯು, ಮಂಗಳಕರತೂರ್ಯನಾದಂ- ಶುಭಕರವಾದವಾದ್ಯಧ್ವನಿಯು, ಅಮರ್ದು- ಸೇರಿ, ಒಪ್ಪಿರೆ- ಪ್ರಕಾಶಿಸಲು, ಆಶಿವಾಲಯಂ, ತೋರಿಪುದು. ... ॥೬೫॥

ಆವೃಷಭರಾಜಂ- ಅದಂ, ಅಭೀಕ್ಷಿಸುತ್ತಂ- ನೋಡುತ್ತ, ಮುಂದಣ್ಗೆಬರೆವರೆ- ಮುಂದಕ್ಕೆಬರಲು, ಎನ್ನಣುಗಂ- ನನ್ನಮಗನು, ಬಂದಂ, ಎಂದು, ಪನ್ನಗಧರಂ- ಪರಮೇಶ್ವರನು, ಉನ್ನತೋತ್ಸವಂ- ಅಧಿಕವಾದ ಸಂತೋಷವು, ನಿಮಿರೆ- ಉಂಟಾಗಲು. * * * * * * * * * * * * *

ತೊಳಗುತ್ತಿರ್ಪ್ಪ- ಹೊಳೆಯುತ್ತಿರುವ, ಲಸತ್ಪ್ರಸನ್ನವದನಂ- ಪ್ರಕಾಶಿಸುವನಿರ್ಮಲವಾದಮುಖವು, ಭಸ್ಮತ್ರಿಪುಂಡ್ರಂ, ಸಮುಜ್ವಳರುದ್ರಾಕ್ಷವಿಭೂಷಣಂ— ಸಮುಜ್ವಳ- ಪ್ರಕಾಶಮಾನವಾದ, ರುದ್ರಾಕ್ಷವಿಭೂಷಣಂ- ರುದ್ರಾಕ್ಷಾಭರಣವು, ಭಸಿತಲಿಪ್ತಾಂಗಂ- ಭಸ್ಮದಿಂದಲೇಪಿಸಲ್ಪಟ್ಟಶರೀರವು, ಜಟಾಮಂಡಲಂ- ಜಟಾವಲಯವು, ಗಳರಾಜದ್ಘನಲಿಂಗಸಜ್ಜಿಕೆ— ಗಳ- ಕೆತ್ತಿನಲ್ಲಿ, ರಾಜತ್- ಪ್ರಕಾಶಿಸುವ, ಘನಲಿಂಗ- ಶ್ರೇಷ್ಠವಾದಲಿಂಗದ, ಸಜ್ಜಿಕೆ- ಕರಡಿಗೆಯು, ಮಿಳತ್ಕಾಷಾಯಚೇಲಂ— ಮಿಳತ್- ಕೂಡಿರು ಕಾಷಾಯಚೇಲಂ- ಕಾವಿಯುವಸ್ತ್ರವು, ಸುಮಂಜುಳಮಾಗಿ- ಅತ್ಯಂತಮನೋಹರವಾಗಿ, ಒಪ್ಪಿರೆ, ಮುನ್ನಿನಂತೆ- ಜನನಕಾಲದಲ್ಲಿ, ಬಂದಿದ್ದಹಾಗೆ, ಗುರುರೂಪಂ, ತಾಳ್ದು, ಮೈದೋರಿದಂ- ಪ್ರತ್ಯಕ್ಷನಾದನು. ... ... ... ... ... ... ॥೬೬॥

ವ || ಆತಾಪಸವೇಷದೀಶನಂ ಕಟ್ಟಿದಿರೊಳ್ಕಂಡು * * * * * * *

ಮತ್ತೇ || ಕರಣಂಗಳ್ಕಳೆಯೇರೆ ಕೌತುಕರಸಂ ಪೆಂಪೇರೆ ರೋಮಾಂಚನಂ | ಕರಕಂಪಂ ಸುಖಬಾಷ್ಪಮುಣ್ಮೆ ಮಣಿದಾನಂದಾಬ್ಧಿಮೆಯ್ವೆರ್ಚೆ ಶಂ || ಕರ ಸರ್ವೇಶ್ವರ ಸಂಗಮೇಶ್ವರ ಮದೀಯಾತ್ಮೇಶ ನಿನ್ನಂಘ್ರಿಪಂ | ಕರುಹಂಗಂಡು ಕೃತಾರ್ಥನಾದೆನೆನುತಂ ಕೊಂಡಾಡಿದಂ ಭಕ್ತಿಯಿಂ || ... ... ... ... ... ||೬೭||

ವ || ಅಂತು ಕೂರ್ಮೆವೆರಸಿ ಕೊಂಡಾಡುವ ಬಸವರಾಜನ ನಸಮನಯನಂ ಕೃಪಾರಸತರಂಗಿತಕಟಾಕ್ಷದಿನವಲೋಕನಂಗೆಯ್ದು ತೆಗೆದು ಬಿಗಿಯಪ್ಪಿ ಬೋಳೈಸಿ ಭಸಿತಮಂ ಧರಿಯಿಸಿ ಪರಸುತೇಕಾಂತಮನಿತ್ತು ಕೆಲದೊಳ್ಕುಳ್ಳಿರಿಸಿಕೊಂಡು || * * * * *

ಚಂ || ಮಗನೆ ಮನೋರಥಂ ನಿನಗದಾವುದು ಪೇಳೆನೆ ಬೇರೆ ಪೇಳ್ವುದೇಂ | ಜಗದಧಿನಾಥ ನಿನ್ನ ಪದಭಕ್ತಿಯೆ ಮನ್ಮನದಿಷ್ಟಮಂತದಂ || ನೆಗಳ್ವ ರವೆಂತು ಬೋಧಿಪುದು ಸತ್ಕೃಪೆಯಿಂದೆನೆ ಮೆಚ್ಚಿ ಜೊನ್ನಮಂ | ಮೊಗಸಸಿ ತುಳ್ಕಿದಂತಿರೆ ರದದ್ಯುತಿ ಕೂರ್ತೊರೆದಂ ಮಹೇಶ್ವರಂ ||

---

ಆತಾಪಸವೇಷದ- ಋಷಿಯ ವೇಷವುಳ್ಳ, ಈಶನಂ, ಕಟ್ಟಿದಿರೊಳ್- ಮುಂಭಾಗದಲ್ಲಿ, ಕಂಡು. * *

ಕರಣಂಗಳ್- ಇಂದ್ರಿಯಗಳು, ಕಳೆಯೇರೆ- ಉತ್ಸಾಹಪಡಲು- ಕೌತುಕರಸಂ- ಪ್ರೀತಿರಸವು, ಪೆಂಪೇರೆ- ಅಧಿಕವಾಗಲು, ರೋಮಾಂಚನಂ- ಪುಳಕವು, ಕರಕಂಪಂ- ಕೈನಡುಕವು, ಸುಖಬಾಷ್ಪಂ- ಸಂತೋಷದಿಂದುಂಟಾದ ಕಣ್ಣೀರು, ಉಣ್ಮೆ- ಉಂಟಾಗಲು, ಮಣಿದು- ನಮಸ್ಕರಿಸಿ. ಆನಂದಾಬ್ಧಿ- ಸಂತೋಷಸಮುದ್ರವು, ಮೆಯ್ವೆರ್ಚೆ- ಅಧಿಕವಾಗಲು, ಶಂಕರ- ಸುಖವನ್ನುಂಟುಮಾಡುವನೇ, ಸರ್ವೇಶ್ವರ- ಸಕಲಕ್ಕೂ ಸ್ವಾಮಿಯಾದವನೇ, ಸಂಗಮೇಶ್ವರ, ಮದೀಯಾತ್ಮೇಶ- ನನ್ನ ಪ್ರಾಣೇಶ್ವರನೇ, ನಿನ್ನ, ಅಂಘ್ರಿಪಂಕರುಹಂಗಂಡು- ಚರಣಕಮಲವನ್ನು ಕಂಡು, ಕೃತಾರ್ಥಂ- ಧನ್ಯನು, ಆದೆಂ; ಎನುತಂ, ಭಕ್ತಿಯಿಂ, ಕೊಂಡಾಡಿದಂ- ಹೊಗಳಿದನು. ... ... ... ... ... ... ||೬೭||

ಅಂತು, ಕೂರ್ಮೆವೆರಸಿ- ಪ್ರೀತಿವಿಶಿಷ್ಟನಾಗಿ, ಕೊಂಡಾಡುವ- ಹೊಗಳುವ, ಬಸವರಾಜನಂ * ಅಸಮನಯನಂ- ಪರಮೇಶ್ವರನು, ಕೃಪಾರಸತರಂಗಿತಕಟಾಕ್ಷದಿಂ- ಕೃಪಾರಸ- ಕರುಣಾರಸದಿಂದ, ತರಂಗಿತ- ತೆರೆಯುಳ್ಳದ್ದಾಗಿ ಮಾಡಲ್ಪಟ್ಟ, ಕಟಾಕ್ಷದಿಂ- ಕಡೆಗಣ್ಣೋಟದಿಂದ, ಅವಲೋಕನಂಗೆಯ್ದು- ನೋಡಿ, ತೆಗೆದು, ಬಿಗಿಯಪ್ಪಿ- ಗಟ್ಟಿಯಾಗಿ ಆಲಂಗಿಸಿ, ಬೋಳೈಸಿ- ತಲೆಯನ್ನು ಸವರಿ, ಭಸಿತಮಂ, ಧರಿಯಿಸಿ, ಪರಸುತೆ- ಆಶೀರ್ವದಿಸುತ್ತ, ಏಕಾಂತಮಂ- ರಹಸ್ಯವನ್ನು, ಇತ್ತು, ಕೆಲದೊಳ್- ಪಾರ್ಶ್ವದಲ್ಲಿ, ಕುಳ್ಳಿರಿಸಿಕೊಂಡು. * * * * * * * * * * * * * * * *

ಮಗನೆ, ನಿನಗೆ, ಮನೋರಥಂ- ಇಷ್ಟವು, ಅದಾವುದು; ಪೇಳ್, ಎನೆ; ಜಗದಧಿನಾಥ-ಜಗತ್ತಿಗೆ ಅಧಿಪತಿಯಾದವನೇ, ಬೇರೆ- ಪೇಳ್ವುದೇಂ- ಹೇಳತಕ್ಕದ್ದೇನು; ನಿನ್ನ, ಪದಭಕ್ತಿಯೆ, ಪಾದದಲ್ಲಿ ಭಕ್ತಿಯೇ, ಮನ್ಮನದ- ನನ್ನ ಮನಸ್ಸಿಗೆ, ಇಷ್ಟಂ; ಅಂತು, ಅದಂ ಆಭಕ್ತಿಯನ್ನು, ನೆಗಳ್ವ- ಮಾಡುವ, ಇರವು- ರೀತಿಯು, ಎಂತು- ಹ್ಯಾಗೆ; ಸತ್ಕೃಪೆಯಿಂದೆ- ಒಳ್ಳೆದಯದಿಂದ, ಬೋಧಿಪುದು- ತಿಳಿಸುವದು, ಎನೆ, ಮೆಚ್ಚಿ- ಶ್ಲಾಘಿಸಿ, ಮೊಗಸಸಿ- ಮುಖವೆಂಬ ಚಂದ್ರನು, ಜೊನ್ನಮಂ- ಬೆಳದಿಂಗಳನ್ನು, ತುಳ್ಕಿದಂತೆ- ಚೆಲ್ಲಿದಹಾಗೆ, ರದದ್ಯುತಿ- ಹಲ್ಲಿನಕಾಂತಿಯು, ಇರೆ, ಮಹೇಶ್ವರಂ, ಕೂರ್ತು- ಪ್ರೀತಿಸಿ, ಒರೆದಂ- ಹೇಳಿದನು. ||೬೮||

---

* (ಅವ) ಅಸಮ- ವಿಷಮವಾದ, ನಯನ- ನೇತ್ರವುಳ್ಳವನು, ಅಂದರೆ ತ್ರಿನೇತ್ರನೆಂದರ್ಥ. * *

ಕಂ ॥ ಎಲೆಬಸವಹರಿಮುಖಾಮರ । ಕುಲಕ್ಕಲಭ್ಯಂ ಮದೀಯಪದಭಕ್ತಿಸಮು । ಜ್ವಲಸಕಲಫಲಪದಂಗಳ । ನೆಲೆವನೆಪರಮುಕ್ತಿಹರ್ಮ್ಯಕಿದುಸೋಪಾನಂ ... ...॥೭೯॥

ಕಂ ॥ ಶ್ರವಣಸ್ತವನಸ್ಮರಣಾಂ । ಘ್ರಿವನಜಸೇವಾಭಿನಮನಪೂಜಾಸಖಭಾ ॥ ವಸಿದಿ ತದಾಸ್ಯಾತ್ಮಾರ್ಪಣ । ನವವಿಧಮಿದುಭಕ್ತಿಲಕ್ಷಣಂಬಸವೇಶಾ ॥ .. ... ॥೮೦॥

ಕಂ ॥ ಆವೆಡೆಯೊಳಾವವಸ್ತುವೊ । ಳಾವಗಮೆಡೆವಿಡದೆಸಮಧಿಕಪ್ರೇಮಮುಂಟದುಂ ॥ ಟಾವಿಪುಳಪ್ರೇಮರಸಂ । ತೀವಿಮದಂಘ್ರಿಯೊಳೆನಿಲೆಸುಭಕ್ತಿಯೆನಿಕ್ಕುಂ ... ॥೮೧॥

ಚಂ ॥ ಶರನಿಧಿಜಾನುದಘ್ನಮುರಿವಗ್ನಿಹಿಮಂಘನಮೃತ್ಯುತೊಳ್ತುಭೀ । ಕರತರ ಮೇಘವಹ್ನಿಕುಸುಮಂಗರಳಂಸೊದೆಕರ್ಮಪಾಶಮಂ ॥ ಬುರುಹಗುಣಂಸರೋಜಭವದುರ್ಲಿಪಿವಾರ್ಲಿಪಿಕಾಯಜಂತೃಣಾಂ। ಕುರಮಣಿಮಾದಿಸಿದ್ಧಿಯಣುವಪ್ಪುದುಭಕ್ತಿರತಂಗೆಲೋಕದೊಳ್ ॥ ... ... ... ... ... ... ... ॥೮೨॥

ಮತ್ತೇ॥ ಪರನಿಂದಾಪರವಸ್ತುಜಾತಪರಕಾಂತಾಕಾಂಕ್ಷೆಯಂನಾಣ್ಬುದಸಾ। ಪರವೆಂ

---

ಎಲೆಬಸವ, ಮದೀಯಪದಭಕ್ತಿ- ನನ್ನಚರಣಭಕ್ತಿಯು, ಹರಿಮುಖಾಮರಕುಲಕ್ಕೆ- ವಿಷ್ಣುಮುಂತಾದದೇವತೆಗಳಸಮೂಹಕ್ಕೆ, ಅಲಭ್ಯಂ- ಹೊಂದಲ್ಪಡುವದಕ್ಕಶಕ್ಯವಾದದ್ದು; ಸಮು..... ವನೆ- ಸಮುಜ್ವಲ- ಪ್ರಕಾಶವಾನವಾದ, ಸಕಲ- ಸಮಸ್ತವಾದ, ಫಲಪದ- ಪುರುಷಾರ್ಥಗಳ, ನೆಲೆವನೆ- ಆವಾಸಭೂಮಿಯು; ಇದು- ಈಭಕ್ತಿಯು, ಪರಮುಕ್ತಿಹರ್ಮ್ಯಕೆ- ಉತ್ಕೃಷ್ಟವಾದಮೋಕ್ಷವೆಂಬಉಪ್ಪರಿಗೆಗೆ, ಸೋಪಾನಂ- ಹಂತವು. ... ... ... ... ... ॥೭೯॥

ಬಸವೇಶಾ, ಶ್ರವಣ......ವಿಧಂ- ಶ್ರವಣ- (ಶಿವಕಥೆಗಳನ್ನು)ಕೇಳುವಿಕೆ, ಸ್ತವನ- ಸ್ತೋತ್ರಮಾಡುವಿಕೆ,ಸ್ಮರಣ- ಸ್ಮರಿಸುವಿಕೆ, ಅಂಘ್ರಿವನಜಸೇವಾ- ಪಾದಕಮಲವನ್ನುಸೇವಿಸುವಿಕೆ, ಅಭಿನಮನ- ನಮಸ್ಕರಿಸುವಿಕೆ, ಪೂಜಾ- ಅರ್ಚಿಸುವಿಕೆ, ದಾಸ್ಯ- ಭೃತ್ಯತ್ವವನ್ನುವಹಿಸುವಿಕೆ, ಆತ್ಮಾರ್ಪಣ- ತನ್ನನ್ನೇಸಮರ್ಪಿಸುವಿಕೆ (ಎಂಬ)ನವವಿಧಂ- ಒಂಬತ್ತುವಿಧವಾದ, ಇದು, ಭಕ್ತಿಲಕ್ಷಣಂ. ... ... ... ... ॥೮೦॥

ಆವೆಡೆಯೊಳ್- ಯಾವಸ್ಥಲದಲ್ಲಿ, ಆವವಸ್ತುವೊಳ್- ಯಾವಪದಾರ್ಥದಲ್ಲಿ, ಆವಗಂ- ನಿರಂತರದಲ್ಲೂ, ಎಡೆವಿಡದೆ- ತಪ್ಪದೆ, ಅದುಸಮಧಿಕಪ್ರೇಮಂ- ಆಅಪಾರವಾದಪ್ರೀತಿಯು, ಉಂಟು- ಇರುವದೋ,ಆವಿಪುಳಪ್ರೇಮರಸಂ- ಆ ವಿಶಾಲವಾದಪ್ರೀತಿರಸವು, ಮದಂಘ್ರಿಯೊಳ್- ನನ್ನಪಾದದಲ್ಲಿ, ತೀವಿ- ವ್ಯಾಪಿಸಿ- ನಿಲೆ- ನಿಂತುಕೊಳ್ಳಲು; ಸುಭಕ್ತಿ, ಎನಿಕ್ಕುಂ ... ... ... ... ... ... ... ... ॥೮೧॥

ಭಕ್ತಿರತಂಗೆ- ಭಕ್ತಿಯಲ್ಲಾಸಕ್ತಿಯುಳ್ಳವನಿಗೆ, ಲೋಕದೊಳ್,ಶರನಿಧಿ-ಸಮುದ್ರವು, ಜಾನುದಘ್ನಂ- ಮೊಣಕಾಲಿನುದ್ದದಿಂದದಾಟುವದಕ್ಕೆಯೋಗ್ಯವಾದದ್ದು; ಉರಿವಗ್ನಿ- ಉರಿಯುವಬೆಂಕಿಯು, ಹಿಮಂ- ಹಿಮಸದೃಶವಾದದ್ದು; ಘನಮೃತ್ಯು- ದೊಡ್ಡಮೃತ್ಯುವು, ತೊಳ್ತು- ದಾಸಿಯು;ಭೀಕರತರಮೇಘವಹ್ನಿ- ಅತಿಭಯಂಕರವಾದಸಿಡಿಲು, ಕುಸುಮಂ-ಪುಷ್ಪಸದೃಶವಾದದ್ದು; ಗರಳಂ- ವಿಷವು, ಸೊದೆ- ಅಮೃತಸದೃಶವಾದದ್ದು;-ಕರ್ಮಪಾಶಂ-ಸಂಸಾರಕರ್ಮವೆಂಬಹಗ್ಗವು, ಅಂಬುರುಹಗುಣಂ- ತಾವರೆಯನೂಲಿಗೆಸದೃಶವಾದದ್ದು; ಸರೋಜಭವದುರ್ಲಿಪಿ- ಬ್ರಹ್ಮನ ದುಷ್ಟವಾದಬರವಣಿಗೆಯು, ವಾರ್ಲಿಪಿ- ನೀರಿನಲ್ಲಿಬರೆವಬರವಣಿಗೆಗೆಸದೃಶವಾದದ್ದು; ಕಾಯಜಂ- ಮನ್ಮಥನು, ತೃಣಾಂಕುರಂ-ಹುಲ್ಲಿನಮೊಳಕೆಗೆ ಸದೃಶನಾದವನು, ಅಣಿಮಾದಿಸಿದ್ಧಿ ಅಣಿಮಾದ್ಯಷ್ಟೈಶ್ವರ್ಯಗಳು, ಅಣು- ಸೂಕ್ಷ್ಮವಾದದ್ದು; ಅಪ್ಪುದು. ... ... ... ॥೮೨॥

ಪರ......ಕಾಂಕ್ಷೆಯಂ- ಪರನಿಂದಾ- ಅನ್ಯದೂಷಣೆ, ಪರವಸ್ತುಜಾತ-ಅನ್ಯಪದಾರ್ಥಸಮೂಹ, ಪರ

ಮುಂ ಪರದೈವಮುಂ ನೆನೆಯದಾಶಾಪಾಶಮುಂ ಕೀಳ್ತು ಸ ॥ ದ್ಗುರುವಿಂಗಂಗಮನಿತ್ತು ಲಿಂಗಕೆ ಮ
ನಂದೆತ್ತೊಲ್ಮೆಯಿಂ ಜಂಗಮೋ । ತ್ಕರಕರ್ಥಾರ್ಪಣಮಂ ನಿಮಿರ್ಚಿ ಮೆರೆವಾತಂ ತಾನೆ ಭಕ್ತೋ
ತ್ತಮಂ ॥ ... ... ... ... ... ... ॥೨೩॥

ಮತ್ತೇ॥ ಕುಲಮುಂ ಕೂರ್ಮೆಯನಂದಮಂ ಸುಗುಣಮಂ ಸದ್ವಿದ್ಯೆಯಂ ಸತ್ಯಮಂ । ಸಲೆ ತಾಂ
ನೋಡದೆ ಬಂದ ಜಂಗಮಕೆ ಸಾಕ್ಷಾದಿಂದುಭೃದ್ಬುದ್ಧಿಯಂ ॥ ಬಲಿದಾರೋಗಿಸಲಿತ್ತು ಶೇಷ
ಮನದು ಕೈಕೊಂಡು ತತ್ಪ್ರೀತಿಯಿಂ । ಸಲಿಸುತ್ತಿಪ್ಪುದೆ ಭಕ್ತಿಲಕ್ಷಣಗುಣಂ ಕೇಳ್ಭಕ್ತ
ಚೂಡಾಮಣಿ ... ... ... ... ... ... ॥೨೪॥

ಕಂ ॥ ಇದು ಭಕ್ತಿಮಾರ್ಗಮಿದರೊ । ಳ್ಪದುಳಂ ನಡೆ ಶೈವಮತಮನುದ್ಧರಿಸು ತೊಡಂ ॥
ಕಿದ ಪರಸಮಯಮನೊರಸ । ಗ್ಗದ ಮಹಿಮೆಯನಿಳೆಯೊಳೆಯ್ದೆ ಪಸರಿಸು ಬಸವಾ ॥೨೫॥

ಕಂ ॥ ಚರಲಿಂಗವೇನನೆರೆದೊಡೆ । ಭರದಿಂ ಕುಡು ಜಡಿದು ಬಡಿದು ಬಾಧಿಸಿದೊಡಮಾ ॥ ಚ
ರಲಿಂಗದಡಿಯನೆಡೆವಿಡ । ದಿರು ಸುಪಥಂ ನಿನಗಿದಲ್ತೆ ಬಸವಕುಮಾರಾ ॥ ... ॥೨೬॥

---

ಕಾಂತಾ- ಅನ್ಯಸ್ತ್ರೀ, ಇವುಗಳಲ್ಲಿ, ಕಾಂಕ್ಷೆಯಂ- ಇಚ್ಛೆಯನ್ನು, ಮಾಣ್ದು- ಬಿಟ್ಟು, ಸಾದರಂ-ಪ್ರೀತಿಯಿಂದಕೂಡಿ, ಎಂದುಂ- ಯಾವಾಗಲೂ,ಪರದೈವಮಂ- ಅನ್ಯದೈವವನ್ನು, ನೆನೆಯದೆ-ಧ್ಯಾನಿಸದೆ,ಆಶಾಪಾಶಮಂ- ಆಸೆಯೆಂಬಹಗ್ಗವನ್ನು, ಕೀಳ್ತು- ಕಿತ್ತು, ಸದ್ಗುರುವಿಂಗೆ- ಗುರುಶ್ರೇಷ್ಠನಿಗೆ, ಅಂಗಮಂ- ಶರೀರವನ್ನು, ಇತ್ತು-ಕೊಟ್ಟು, ಲಿಂಗಕೆ, ಮನಂದೆತ್ತು- ಮನಸ್ಸನ್ನುಕೊಟ್ಟು, ಒಲ್ಮೆಯಿಂ- ಪ್ರೀತಿಯಿಂದ, ಜಂಗಮೋತ್ಕರಕೆ- ಜಂಗಮರಸಮೂಹಕ್ಕೆ, ಅರ್ಥಾರ್ಪಣಮಂ- ದ್ರವ್ಯಸಮರ್ಪಣೆಯನ್ನು, ನಿಮಿರ್ಚಿ- ಮಾಡಿ, ಮೆರೆವಾತಂ- ಪ್ರಕಾಶಿಸುವನು, ತಾನೆ- ಆತನೇ, ಭಕ್ತೋತ್ತಮಂ- ಭಕ್ತ- ಶ್ರೇಷ್ಠನು. ... ॥೨೩॥

ಭಕ್ತಚೂಡಾಮಣಿ- ಭಕ್ತರಲ್ಲಿ ಶಿರೋರತ್ನಸ್ವರೂಪನಾದವನೇ, ಕೇಳ್, ಬಂದಜಂಗಮಕೆ- ಬಂದಜಂಗಮರ, ಕುಲಮಂ- ಸಂತತಿಯನ್ನು- ಕೂರ್ಮೆಯಂ- ಪ್ರೀತಿಯನ್ನು, ಅಂದಮಂ- ಸೌಂದರ್ಯವನ್ನು, ಸುಗುಣಮಂ- ಸದ್ಗುಣವನ್ನು, ಸದ್ವಿದ್ಯೆಯಂ- ಒಳ್ಳೇವಿದ್ಯೆಯನ್ನು, ಸತ್ಯಮಂ- ಯಾಥಾರ್ಥ್ಯವನ್ನು, ಸಲೆ, ತಾಂ, ನೋಡದೆ-ಪರೀಕ್ಷಿಸದೆ, ಸಾಕ್ಷಾತ್-ಪ್ರತ್ಯಕ್ಷವಾಗಿ, ಇಂದುಭೃದ್ಬುದ್ಧಿಯಂ-ಪರಮೇಶ್ವರನೆಂಬಬುದ್ಧಿಯನ್ನು, ಬಲಿದು- ಬಲಪಡಿಸಿ, ಆರೋಗಿಸಲ್-ಭುಂಜಿಸುವದಕ್ಕೆ, ಇತ್ತು-(ಆಹಾರವನ್ನು)ಕೊಟ್ಟು, ಅದುಶೇಷಮಂ- ಆಶೇಷಪ್ರಸಾದವನ್ನು, ಕೈಕೊಂಡು- ಸ್ವೀಕರಿಸಿ, ತತ್ಪ್ರೀತಿಯಿಂ- ಅದರಲ್ಲಿಪ್ರೀತಿಯಿಂದ, ಸಲಿಸುತ್ತ- ಭುಂಜಿಸುತ್ತ, ಇಪ್ಪುದೆ, ಭಕ್ತಿಲಕ್ಷಣಗುಣಂ- ಭಕ್ತಿಸ್ವಭಾವಗುಣವು. ... ... ... ... ॥೨೪॥

ಬಸವಾ, ಇದು, ಭಕ್ತಿಮಾರ್ಗಂ- ಭಕ್ತಿಸರಣಿಯು, ಇದರೊಳ್- ಈಮಾರ್ಗದಲ್ಲಿ, ಪದುಳಂನಡೆ- ಸಂತೋಷದಿಂನಡೆದುಕೊ; ಶೈವಮತಮಂ- ಶಿವಮತವನ್ನು, ಉದ್ಧರಿಸು- ಉದ್ಧಾರಮಾಡು; ತೊಡಂಕಿದ- ಪ್ರತಿರೋಧಿಸಿದ, ಪರಸಮಯಮಂ- ಅನ್ಯಮತವನ್ನು, ಒರಸು- ನಾಶಮಾಡು; ಇಳೆಯೊಳ್- ಭೂಮಿಯಲ್ಲಿ, ಎಯ್ದೆ- ಚೆನ್ನಾಗಿ, ಅಗ್ಗದ- ಹೆಚ್ಚಾದ, ಮಹಿಮೆಯಂ- ಮಹತ್ವವನ್ನು, ಪ್ರಸರಿಸು- ವಿಸ್ತರಿಸು. ... ॥೨೫॥

ಕುಮಾರಾ- ಪುತ್ರನಾದ, ಬಸವ; ಚರಲಿಂಗಂ- ಜಂಗಮಲಿಂಗವು- ಏನಂ- ಯಾವದನ್ನು, ಎರೆದೊಡಂ- ಯಾಚೆಸಿದಾಗ್ಯೂ, ಭರದಿಂ-ಜಾಗರೂಕತೆಯಿಂದ, ಕುಡು; ಜಡಿದು-ಗರ್ಜಿಸಿ, ಬಡಿದು-ಹೊಡೆದು, ಬಾಧಿಸಿದೊಡಂ- ಪೀಡಿಸಿದಾಗ್ಯೂ, ಆಚರಲಿಂಗದ, ಅಡಿಯಂ- ಪಾದವನ್ನು, ಎಡೆವಿಡದೆ- ಬಿಡದೆ, ಇರು; ನಿನಗೆ, ಇದು, ಸುಪಥಮಲ್ತೆ- ಸನ್ಮಾರ್ಗವಲ್ಲವೇ. ... ... ... ... ... ... ... ... ... ... ॥೨೬॥

ಮ ॥ ಸ್ರ ॥ ಧರಿಸೊಳ್ಪಿಂ ಭೂತಿರುದ್ರಾಕ್ಷೆಗಳನನುದಿನಂ ದೇಶಿಕೇಂದ್ರಾಂಘ್ರಿಯುಗಂ ।
ಸ್ಮರಿಸುದ್ಯಲ್ಲಿಂಗಮುಂ ಪೂಜಿಸು ಚರಪರಿಷತ್ಸೇವೆಗೆಯ್ ತತ್ಪ್ರಸಾದ ॥ ಸ್ಫುರಿತಶ್ರೀಪಾದತೀ
ರ್ಥಂ ದಳೆ ಜಪಿಸು ಸದೋಂಕಾರಸಂಯುಕ್ತಪಂಚಾ । ಕ್ಷರಮಂ ಶಿಷ್ಟೋಪದೇಶಾರ್ಥಮಿದೆನೆದ
ರೆಯೊಳ್ ವೀರಶೈವಾಬ್ಧಿಚಂದ್ರಾ ॥ ... ... .. ... ॥೭೭॥

ವ ॥ ಎಂದೊರೆದು ಚರವೇಷದೀಶ್ವರಂ ಕಾರುಣ್ಯಂಗೆಯ್ದು ಶಿವಾಲಯದೊಳಗಣ್ಗೆ ಪೊಕ್ಕು ತಲ್ಲಿಂಗದೊಳಡಂಗೆ ಕಂಡು ಕೆಲವಲದ ಮಾಹೇಶ್ವರರ್ ಕೌತುಕಂಬಟ್ಟು ಬಸವನತಿಶಯಪ್ರಭಾವಮುಂ ಮಗುಳ್ದು ಮಗುಳ್ದು ಕೊಂಡಾಡುತ್ತಮಿರೆ ॥ * * * * * *

ಮ ॥ ಸ್ರ ॥ ಗುರುರೂಪಂ ಸಂಗಮೇಶಂ ತನಗೊರೆದುಪದೇಶೋಕ್ತಿವಾರ್ಬಿಂದು ಮುತ್ತಾಗಿ ।
ಗಿರೆ ಚೇತಶ್ಶುಕ್ತಿಯೊಳ್ ಕೌತುಕರಸಭರಿತಂ ಭಕ್ತರೊಡ್ಡೋಲಗಂ ತ ॥ ಳ್ತಿರೆ ತಾನೊಪ್ಪಿರ್ದನ
ಭ್ಯರ್ಚಿತಹರಚರಣಂ ಶಂಭುಲೀಲಾಕಥಾಬಂ । ಧುರಸಿಂಧೂದ್ಯತ್ಸಮುದ್ರಂ ಶರಣಗಣಪದಾಂ
ಭೋಜಪೂಜಾವಿತಂದ್ರಂ ॥ ... ... ... ... ... ॥೭೮॥

ಲಲಿತ ॥ ಆಖುಪತಿವಾಹನವಿಶಾಖನುತ ನೀತ ಮೃಡಲೇಖನಲಿಪಿಜ್ಞ ಜಿತಭೂಖಲ ಫ

---

ವೀರಶೈವಾಬ್ಧಿಚಂದ್ರಾ- ವೀರಶೈವಮತವೆಂಬ ಸಮುದ್ರಕ್ಕೆ ಚಂದ್ರನಾದವನೇ, ದರೆಯೊಳ್, ಇದು, ಶಿಷ್ಟೋಪದೇಶಾರ್ಥಂ- ಸತ್ಪುರುಷರತಿಳುವಳಿಕೆಗೋಸ್ಕರ, ಎನೆ; ಅನುದಿನಂ- ಪ್ರತಿದಿವಸದಲ್ಲೂ, ಒಳ್ಪಿಂ- ಚೆನ್ನಾಗಿ, ಭೂತಿರುದ್ರಾಕ್ಷೆಗಳಂ-ವಿಭೂತಿರುದ್ರಾಕ್ಷೆಗಳನ್ನು-ಧರಿಸು; ದೇಶಿಕೇಂದ್ರಾಂಘ್ರಿಯುಗಂ- ಗುರುಶ್ರೇಷ್ಠನಪಾದವನ್ನು, ಸ್ಮರಿಸು; ಉದ್ಯಲ್ಲಿಂಗಮುಂ-ಶ್ರೇಷ್ಠವಾದ ಲಿಂಗವನ್ನು, ಪೂಜಿಸು; ಚರಪರಿಷತ್ಸೇವೆಗೆಯ್— ಚರಪರಿಷತ್- ಜಂಗಮಸಮೂಹದ, ಸೇವೆಗೆಯ್-ಸೇವೆಯನ್ನುಮಾಡು; ತತ್ಪ್ರಸಾದಸ್ಫುರಿತಶ್ರೀಪಾದತೀರ್ಥಂದಳೆ- ಆ ಜಂಗಮರ ಪ್ರಸಾದ ಪ್ರಕಾಶಿಸುವ ಪಾದತೀರ್ಥ ಇವುಗಳನ್ನು ಧರಿಸು, ಸದೋಂಕಾರಸಂಯುಕ್ತಪಂಚಾಕ್ಷರಮಂ- ಸಮೀಚೀನವಾದ ಪ್ರಣವದಿಂ ಕೂಡಿದ ಪಂಚಾಕ್ಷರೀಮಂತ್ರವನ್ನು, ಜಪಿಸು. ॥೭೭॥

ಎಂದು, ಚರವೇಷದ- ಜಂಗಮವೇಷಧಾರಿಯಾದ, ಈಶ್ವರಂ, ಕಾರುಣ್ಯಂಗೆಯ್ದು- ದಯೆಯನ್ನು ಮಾಡಿ- ಒರೆದು- ಹೇಳಿ, ಶಿವಾಲಯದ, ಒಳಗಣ್ಗೆ- ಒಳಗಡೆಗೆ,ಪೊಕ್ಕು, ತಲ್ಲಿಂಗದೊಳ್- ಆದೇವಸ್ಥಾನದಲ್ಲಿದ್ದ ಲಿಂಗದಲ್ಲಿ, ಅಡಂಗೆ- ಐಕ್ಯವಾಗಲು, ಕೆಲವಲದ- ಉಭಯಪಾರ್ಶ್ವಗಳಲ್ಲಿರುವ, ಮಾಹೇಶ್ವರರ್, ಕಂಡು, ಕೌತುಕಂಬಟ್ಟು- ಆಶ್ಚರ್ಯಪಟ್ಟು, ಬಸವನ, ಅತಿಶಯಪ್ರಭಾವಮುಂ- ಅಧಿಕವಾದ ಶಕ್ತಿಯನ್ನು, ಮಗುಳ್ದು ಮಗುಳ್ದು- ತಿರುತಿರುಗಿ, ಕೊಂಡಾಡುತ್ತ- ಹೊಗಳುತ್ತ, ಇರೆ. * * * * * *

ಗುರುರೂಪಂ- ಗುರುಸ್ವರೂಪನಾದ, ಸಂಗಮೇಶಂ, ತನಗೆ, ಒರೆದ, ಹೇಳಿದ, ಉಪದೇಶೋಕ್ತಿವಾರ್ಬಿಂದು-ಬೋಧಾವಚನವೆಂಬ ಜಲಬಿಂದುವು, ಚೇತಶ್ಶುಕ್ತಿಯೊಳ್-ಮನಸ್ಸೆಂಬ ಮುತ್ತಿನ ಚಿಪ್ಪಿನಲ್ಲಿ,ಮುತ್ತಾಗಿ, ಇರೆ; ಕೌತುಕರಸಭರಿತಂ- ಉತ್ಸವವಿಶಿಷ್ಟನಾದ, ಅಭ್ಯರ್ಚಿತಹರಚರಣಂ- ಪೂಜಿಸಲ್ಪಟ್ಟ ಶಿವಪಾದವುಳ್ಳ, ಶಂಭು......ಸಮುದ್ರಂ—ಶಂಭು-ಪರಶಿವನ, ಲೀಲಾಕಥಾ- ಪಂಚವಿಂಶತಿಲೀಲಾಕಥೆಗಳೆಂಬ, ಬಂಧುರ- ಮನೋಹರವಾದ, ಸಿಂಧು- ನದಿಗಳಿಗೆ, ಉದ್ಯತ್ಸಮುದ್ರಂ- ದೊಡ್ಡಸಮುದ್ರನಾದ, ಶರಣ......ವಿತಂದ್ರಂ- ಶರಣಗಣ- ಶರಣಸಮೂಹದ, ಪದಾಂಭೋಜ- ಪಾದಕಮಲದ, ಪೂಜಾ- ಅರ್ಚನೆಯಲ್ಲಿ, ವಿತಂದ್ರಂ- ಆಸಕ್ತನಾದ, ತಾಂ- ಆ ಬಸವೇಶ್ವರನು, ಭಕ್ತರ, ಒಡ್ಡೋಲಗಂ-ಸಭೆಯು, ತಳ್ತಿರೆ-ಸೇರಿರಲು, ಒಪ್ಪಿರ್ದಂ.॥೭೮॥

ಆಖು......ನುತ- * ಆಖುಪತಿವಾಹನ- ಗಣಪತಿ, ವಿಶಾಖ- ಷಣ್ಮುಖ ಇವರಿಂದ, ನುತ- ಹೊಗಳಿಸಿ

---

* (ಅಥ) ಆಖು- ಮೂಷಿಕಗಳಿಗೆ, ಪತಿ- ನಾಥನಾದಹೆಗ್ಗಣವೇ, ವಾಹನ- ವಾಹನವಾಗುಳ್ಳವನು.

ಣಾಭೃನ್ಮೇಖಲ ಸುಧಾಕರಮಯೂಖ ನಿಶಿತಾಂಘ್ರಿಸುಮಹಾಖುರಕೃತಾರಿಹೃದಯಾಖನ
ನಕೃತ್ಯಾ ॥ ಲೇಖಪತಿಪದ್ಮಜಮಹಾಖಗರಥಾರ್ಚ್ಯ ಶುಭರೇಖಪದ ಸೂರಿಸುರಶಾಖಿ ಯಮಿ
ಜಿಹ್ವಾ । ಲೇಖಲಿಖಿತಾಭಿಧ ದಿಶಾಖಚಿತಕೀರ್ತಿ ಪೊರೆ ಶೇಖರಿತಶೀತಕರರೇಖಬಸವೇಶಾ ॥

ಮಾಲಿನೀವೃತ್ತ ॥ ನಮದಮರವಧೂಟೀಕುಂತಳಸ್ನಿಗ್ಧಕಾಂತಿ । ದ್ಯುಮಣಿತನುಭ
ವಾಂಭಶ್ಶೋಭಮಾನಾಂಘ್ರಿಪದ್ಮೇ ॥ ಸಮುದಿತಗುಣವಾಣೀಪಾಣಿವೀಣಾನಿನಾದ। ಪ್ರಮು
ದಿತೆ ದಯೆಯಿಂದಂ ಗೌರಿರಕ್ಷಿಪ್ಪುದೆನ್ನಂ॥ ... ... ... ॥೪೦॥

ಕೊಳ್ಳಲ್ಪಟ್ಟ; ನೀತ- ಯೋಗ್ಯನಾದ; ಮೃಡಲೇಖನಲಿಪಿಜ್ಞ- ಶಿವಪ್ರೇರಿತವಾದ ಪತ್ರದ ಬರವಣಿಗೆಯನ್ನು ತಿಳಿದ; ಜಿತಭೂಖಲ- ಜೈಸಲ್ಪಟ್ಟ ಭೂಮಿಯಲ್ಲಿರುವ ದುರ್ಜನರುಳ್ಳ; ಫಣಾಭೃನ್ಮೇಖಲ- ಸರ್ಪದ ಉಡಿದಾರವುಳ್ಳ, ಸುಧಾಕರಮಯೂಖ- ಚಂದ್ರನಕಾಂತಿಯಂತಿರುವಕಾಂತಿಯುಳ್ಳ; ನಿಶಿತಾ......ಕೃತ್ಯಾ—ನಿಶಿತ- ತೀಕ್ಷ್ಣವಾದ, ಅಂಘ್ರಿಸುಮಹಾಖುರ- ಪಾದದದೊಡ್ಡಗೊರಸುಗಳಿಂದ, ಕೃತ- ಮಾಡಲ್ಪಟ್ಟ, ಅರಿಹೃದಯ- ಶತ್ರುಜನಹೃದಯದ,ಆಖನನಕೃತ್ಯಾ-ಎಲ್ಲಾಕಡೆಯಲ್ಲಿಯೂ ಅಗೆಯುವಕಾರ್ಯವುಳ್ಳ;ಲೇಖ......ರಥಾರ್ಚ್ಯ- † ಲೇಖಪತಿ- ಇಂದ್ರ, ಪದ್ಮಜ- ಬ್ರಹ್ಮ, ‡ ಮಹಾಖಗರಥ-ವಿಷ್ಣು ಇವರಿಂದ, ಅರ್ಚ್ಯ-ಪೂಜಿಸಲ್ಪಡುವದಕ್ಕೆ ಯೋಗ್ಯನಾದ; ಶುಭರೇಖಪದ-ಮಂಗಳಕರವಾದಗೆರೆಗಳಿಂದ ಕೂಡಿದಚರಣವುಳ್ಳ; ಸೂರಿಸುರಶಾಖಿ—ಸೂರಿ- ವಿದ್ವಾಂಸರಿಗೆ, ಸುರಶಾಖಿ- ಕಲ್ಪವೃಕ್ಷನಾದ; ಯಮಿ......ಅಭಿಧ—ಯಮಿ- ಋಷಿಗಳ, ಜಿಹ್ವಾ- ನಾಲಿಗೆ ಯೆಂಬ, ಲೇಖ- ಪತ್ರದಲ್ಲಿ, ಲಿಖಿತ- ಬರೆಯಲ್ಪಟ್ಟ, ಅಭಿಧ- ನಾಮಧೇಯವುಳ್ಳ- ದಿಶಾಖಚಿತಕೀರ್ತಿ- ದಿಕ್ಕುಗಳಲ್ಲಿವ್ಯಾಪ್ತವಾದಕೀರ್ತಿಯುಳ್ಳ; ಶೇಖರಿತಶೀತಕರರೇಖ—ಶೇಖರಿತ-ಶಿರೋಭೂಷಣವಾಗಿಮಾಡಲ್ಪಟ್ಟ, ಶೀತಕರ- ಚಂದ್ರನ, ರೇಖ- ಕಲೆಯುಳ್ಳ, ಬಸವೇಶಾ; ಪೊರೆ- ಸಂರಕ್ಷಿಸು. ... ... ... ... ॥೩೯॥

ನಮದ......ಪದ್ಮೇ— ನಮತ್- ನಮಸ್ಕರಿಸುವ, ಅಮರವಧೂಟೀ- ದೇವತಾಸ್ತ್ರೀಯರ, ಕುಂತಳ- ಕೇಶಗಳ, ಸ್ನಿಗ್ಧ-ಮನೋಹರವಾದ, ಕಾಂತಿ- ಕಾಂತಿಯೆಂಬ, * ದ್ಯುಮಣಿತನುಭವಾ- ಯಮುನಾನದಿಯ, ಅಂಭಃ- ಜಲದಲ್ಲಿ, ಶೋಭಮಾನ- ಪ್ರಕಾಶಿಸುವ, ಅಂಘ್ರಿಪದ್ಮೇ- ಪಾದಕಮಲವುಳ್ಳ, ಸಮುದಿತ...ಪ್ರಮುದಿತೆ— ಸಮುದಿತ- ಶ್ರೇಷ್ಠವಾದ, ಗುಣ- ತಂತಿಯಿಂದಕೂಡಿದ, ವಾಣಿಪಾಣೀವೀಣಾ- ಸರಸ್ವತಿಯಹಸ್ತದಲ್ಲಿರುವವೀಣೆಯ, ನಿನಾದ- ಶಬ್ದದಿಂದ, ಪ್ರಮುದಿತೆ- ಸಂತೋಷಪಡಿಸಲ್ಪಟ್ಟ, ಗೌರಿ, ಎನ್ನಂ, ದಯೆಯಿಂದಂ, ರಕ್ಷಿಪ್ಪುದು ... ... ... ... ... ... ॥೪೦॥

† (ಅವ) ಲೇಖ-ದೇವತೆಗಳಿಗೆ, ಪತಿ- ಸ್ವಾಮಿಯು. ‡ (ಅವ) ಮಹಾಖಗ-ಪಕ್ಷಿಗಳಲ್ಲಿ ಶ್ರೇಷ್ಠನಾದಗರುಡನೇ, ರಥ- ವಾಹನವಾಗುಳ್ಳವನು. ... ... ... ... ॥೩೯॥

* (ಅವ) ದ್ಯುಮಣಿ- ಅಂತರಿಕ್ಷರತ್ನನಾದ ಸೂರ್ಯನ, ತನುಭವಾ- ಮಗಳು. ... ॥೪೦॥

---

ಮೂರನೆಯ ಆಶ್ವಾಸವು ಸಂಪೂರ್ಣವು.

---

ಗದ್ಯ॥ ಇದು ವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತ ಪರಮಶಿವಲಿಂಗಪಾದಾರವಿಂದಪರಾಗಭಸಿತಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದ ಶ್ರೀಷಡಕ್ಷರಿದೇವಭಕ್ತಿವಿರಚಿತ ಶ್ರೀಮದ್ಬಸವರಾಜವಿಜಯಮಹಾಪುರಾಣದೊಳ್ ಬಸವಾಭ್ಯುದಯವರ್ಣನಂ ತೃತೀಯಾಶ್ವಾಸಂ ಸಮಾಪ್ತಂ ॥ * * * * * * * * * * * * * * *

ತೃತೀಯಾಶ್ವಾಸಂ ಸಂಪೂರ್ಣಂ.

# ಶ್ರೀ

ವೃಷಭಾರೂಢಾಯ ಪರಬ್ರಹ್ಮಣೇನಮಃ

## ಚತುರ್ಥಾಶ್ವಾಸಂ.

### ದೇಶಾದಿವರ್ಣನಂ.

ಕಂ॥ ಶ್ರೀತುಹಿನಗಿರಿಸುತಾಮುಖ। ಶೀತಾಂಶುಮಯೂಖಮುದಿತಚತುರಚಕೋರಂ॥
ಗೌತಮಶುಕಮುಖಮುನಿಪ। ವ್ರಾತಸ್ತುತನೀಗೆ ಸೌಖ್ಯಮಂ ಶಿವಲಿಂಗಂ ॥ ... ॥೧॥

ಶ್ರೀ......ಚಕೋರಂ- ಶ್ರೀ- ಸಂಪತ್ಕರಳಾದ, * ತುಹಿನಗಿರಿಸುತಾ-ಪಾರ್ವತಿಯ, ಮುಖ- ಮುಖವೆಂಬ, ಶೀತಾಂಶು- ಚಂದ್ರನ, ಮಯೂಖ- ಕಾಂತಿಯಿಂದ, ಮುದಿತ- ಸಂತೋಷಪಡಿಸಲ್ಪಟ್ಟ, ಚತುರ- ಕುಶಲವಾದ, ಚಕೋರಂ- ಚಕೋರಪಕ್ಷಿಯಾದ; ಗೌತಮ...... ಸ್ತುತಂ- ಗೌತಮ, ಶುಕ, ಇವರುಗಳೇ ಮುಖ- ಮೊದಲಾದ, ಮುನಿಪ- ಋಷಿಶ್ರೇಷ್ಠರ, ವ್ರಾತ- ಸಮೂಹದಿಂದ, ಸ್ತುತಂ- ಸ್ತೋತ್ರಮಾಡಲ್ಪಟ್ಟ, ಶಿವಲಿಂಗಂ, ಸೌಖ್ಯಮಂ, ಈಗೆ. ... ... ... .. ... ॥೧॥

* (ಅವ) ತುಹಿನಗಿರಿ- ಹಿಮವತ್ಪರ್ವತದ, ಸುತಾ-ಮಗಳು. ... ... ॥೧॥

ಕಂ॥ ಸ್ವರ್ಣಗಿರಿದಕ್ಷಿಣಾಶೆಯೊ। ಳರ್ಣವವಸನಾವೃತಕ್ಷಮಾವನಿತಾಸಂ ॥ ಪೂರ್ಣ
ರುಚಿಶೇಖರಮಿದೆನೆ। ಕರ್ಣಾಟಕದೇಶಮೆಸೆದುದತಿರುಚಿರತರಂ॥ ... ... ... ॥೨॥
ಮತ್ತೇ॥ಬೆಳೆತೀವಿದ್ದರ್ಪೊಲಂಮರಾಳನಿವಹಂತೀವಿದ್ದ ಸದ್ವ್ಯಾಳಿಮಂ। ಜುಳಪುಷ್ಪಾ
ಳಿಫಲಾಳಿತೀವಿದಬನಂಪದ್ಮಾಳಿತೀವಿದ್ದ ತಂ ॥ ಗೊಳಮೆಂದುಂಕುಮುದಾಳಿತೀವಿದತಟಾ
ಕಂದಂತಿಕಂಠೀರವಾ। ವಳಿತೀವಿದ್ದ ನಗೋಪಕಂಠವಿಪಿನಂತೀವಿಪ್ಪುದಾದೇಶದೊಳ್॥೩॥
ಮ॥ಸ್ರ॥ ಪರಿಕಾಲಲ್ಲಿಪಣ್ತುಪ್ಪುವಪೊಸಬನಮಲ್ಲಲ್ಲಿಮಲ್ಲೀಲತಾಮಂ। ದಿರಮಂತಲ್ಲ
ಲ್ಲಿತೂಗುಂದೆನೆಯಕಳಮಮಲ್ಲಲ್ಲಿಕಾಸಾರಮಲ್ಲ ॥ ಲ್ಲಿರಸಾಸಾರೇಕ್ಷುವಾಟೀಕುಳವಿಳಸನಮಲ್ಲ
ಲ್ಲಿಪಾನೀಯಶಾಲೋ। ತ್ಕರದೊಳ್ಪಲ್ಲಲ್ಲಿನಿಚ್ಚಂಮೆರೆವುದೆನೆಸುಖಾವಾಸಮಾದೇಶಮಲ್ತೆ॥೪॥
ವ॥ ಮತ್ತಮಾಜನಪದಂಸುರಲೋಕದಂತೆನಿಮಿಷನಿಷೇವ್ಯಭುವನದಿವ್ಯಸಿಂಧುಸ

ಸ್ವರ್ಣಗಿರಿದಕ್ಷಿಣಾಶೆಯೊಳ್— ಸ್ವರ್ಣಗಿರಿ- ಮೇರುಪರ್ವತದ, ದಕ್ಷಿಣಾಶೆಯೊಳ್- ತೆಂಕಣದಿಕ್ಕಿನಲ್ಲಿ, ಅತಿರುಚಿರತರಂ- ಅತ್ಯಂತಮನೋಹರವಾದ, ಕರ್ಣಾಟಕದೇಶಂ, ಇದು, ಅರ್ಣವ......ಶೇಖರಂ— ಅರ್ಣವ- ಸಮುದ್ರವೆಂಬ, ವಸನ- ವಸ್ತ್ರದಿಂದ, ಆವೃತ- ಆವರಿಸಲ್ಪಟ್ಟ, ಕ್ಷಮಾವನಿತಾ-ಭೂಕಾಂತೆಯ, ಸಂಪೂರ್ಣರುಚಿ- ಸಂಪೂರ್ಣವಾದಕಾಂತಿಯಿಂದಕೂಡಿದ, ಶೇಖರಂ - ಶಿರೋಭೂಷಣವು, ಎನೆ, ಎಸೆದುದು- ಪ್ರಕಾಶಿಸಿತು. ... ... ... ... ... ... ... ॥೨॥

ಆದೇಶದೊಳ್,ಬೆಳೆತೀವಿದ್ದ— ಪೈರುಗಳಿಂದತುಂಬಿರುವ, ಪೊಲಂ- ಹೊಲವು; ಮರಾಳನಿವಹಂ- ಹಂಸಪಕ್ಷಿಗಳಸಮೂಹವು, ತೀವಿದ್ದ- ತುಂಬಿಕೊಂಡಿರುವ, ಸದ್ವ್ಯಾಳಿ- ಹೊಳೆಗಳಪಙ್ತಿಯು, ಮಂಜುಳಪುಷ್ಪಾಳಿ- ಮನೋಹರವಾದಹೂವುಗಳಪಙ್ತಿಯು, ಫಲಾಳಿ- ಹಣ್ಣುಗಳಪಙ್ತಿಯು, ತೀವಿದ, ಬನಂ-ವನವು; ಪದ್ಮಾಳಿ- ಕಮಲಸಮೂಹವು; ತೀವಿದ್ದ, ತಂಗೊಳಂ- ತಂಪಾದಸರೋವರವು; ಎಂದುಂ- ಯಾವಾಗಲೂ, ಕುಮುದಾಳಿ- ನೈದಿಲೆಗಳಸಮೂಹವು, ತೀವಿದ, ತಟಾಕಂ- ಕೆರೆಯು; ದಂತಿಕಂಠೀರವಾವಳಿ- ಆನೆ, ಸಿಹ್ಮ, ಇವುಗಳ ಸಮೂಹವು; ತೀವಿದ್ದ, ನಗೋಪಕಂಠವಿಪಿನಂ- ಪರ್ವತದ ಸಮೀಪದಲ್ಲಿರುವ ಅರಣ್ಯವು, ತೀವಿಪ್ಪುದು- ತುಂಬಿರುವದು. ... ... ... ... ॥೩॥

ಅಲ್ಲಲ್ಲಿ, ಪರಿಕಾಲ್- ಹರಿಯುವಕಾಲುವೆಯು; ಅಲ್ಲಲ್ಲಿ, ಪಣ್ತು- ಹಣ್ಣನ್ನುಬಿಟ್ಟು, ಒಪ್ಪುವ, ಪೊಸಬನಂ- ನೂತನವಾದತೋಟವು; ಅಲ್ಲಲ್ಲಿ, ಮಲ್ಲೀಲತಾಮಂದಿರಂ- ಮಲ್ಲಿಕಾಲತಾಗೃಹವು; ಅಂತು, ಅಲ್ಲಲ್ಲಿ, ತೂಗುಂದೆನೆಯ- ತೂಗುತ್ತಿರುವತೆನೆಗಳುಳ್ಳ, ಕಳಮ- ಬತ್ತದಗದ್ದೆಗಳು; ಅಲ್ಲಲ್ಲಿ, ಕಾಸಾರಂ- ಸರೋವರವು; ಅಲ್ಲಲ್ಲಿ, ರಸಾಸಾರೇಕ್ಷುವಾಟೀಕುಳವಿಳಸನಂ-ರಸಾಸಾರ- ರಸದಧಾರೆಯುಳ್ಳ, ಇಕ್ಷುವಾಟೀ- ಕಬ್ಬಿನಗದ್ದೆಗಳ, ಕುಳ- ಸಮೂಹದ, ವಿಳಸನಂ- ಪ್ರಕಾಶಿಸುವಿಕೆಯು; ಅಲ್ಲಲ್ಲಿ, ಪಾನೀಯಶಾಲೋತ್ಕರದ- ಅರವಟ್ಟಿಗೆಗಳಸಮೂಹದ, ಒಳ್ಪು- ಸಮೀಚೀನತ್ವವು; ನಿಚ್ಚಂ- ನಿರಂತರದಲ್ಲೂ, ಮೆರೆವುದು- ಪ್ರಕಾಶಿಸುವದು, ಎನೆ, ಆದೇಶಂ, ಸುಖಾವಾಸಂ- ಸುಖಕ್ಕೆ ಆಶ್ರಯವಾದದ್ದು, ಅಲ್ತೆ. ... ... ॥೪॥

ಮತ್ತಂ, ಆಜನಪದಂ- ಆದೇಶವು, ಸುರಲೋಕದಂತೆ- ಸ್ವರ್ಗದಹಾಗೆ, (ಸ್ವರ್ಗ) ಅನಿಮಿಷ......ಸಮೇತಮುಂ— ಅನಿಮಿಷ- ದೇವತೆಗಳಿಂದ, ನಿಷೇವ್ಯ- ಸೇವಿಸಲ್ಪಡುವದಕ್ಕೆಯೋಗ್ಯವಾದ, ಭುವನ- ಜಲವುಳ್ಳ, ದಿವ್ಯಸಿಂಧು- ದೇವಗಂಗಾನದಿಯಿಂದ, ಸಮೇತಮುಂ- ಕೂಡಿರುವದು; ಸುರು......ನಾಶ್ರಿತಮುಂ— ಸುರುಚಿರ- ಮನೋಹರವಾಗಿ, ಶಾಲಿ- ಒಪ್ಪುತ್ತಲಿರುವ, ಸಂತಾನ- ಕಲ್ಪವೃಕ್ಷಗಳುಳ್ಳ, ನಂದನ- ನಂದನವನದಿಂದ, ಆಶ್ರಿತಮುಂ- ಆಶ್ರಯಿಸಲ್ಪಟ್ಟಿರುವದು;(ದೇಶ) ಅನಿಮಿಷ- ಮೀನುಗಳಿಂದ,ನಿಷೇವ್ಯ-ಸೇವಿಸಲ್ಪಡು

ಮೇತಮುಂ, ಸುರುಚಿರಶಾಲಿಸಂತಾನನಂದನಾಶ್ರಿತಮುಂ; ಕಮಳದಂತೆ ಸದಾರಮಾನವವಿಭವಾಳಿಯುಕ್ತಮುಂ, ಕಮಲಾಭಿರಾಮಮುಂ; ನಭೋವಲಯದಂತೆ ಖಗರಾಜಸೌಮ್ಯಗುರುಕುಜಾನ್ವಿತಮುಂ, ಸುರಾಗಸುಮನಸ್ಸುರಭಿಗೋಪಲೋಕಾಂತಮುಂ; ಸುರನದೀತಟದಂತೆ ದಿವ್ಯಾನೇಕಪಾಮರೀಜನಕಲಿತಮುಂ, ಕಮಲಾಧಿವಾಸರಾಜಹಂಸರಮಣೀಯಮುಂ; ರಸಾತಳದಂತೆ ಸದಾಶೇಷಭೋಗಿಭೋಗಮನೋಜ್ಞಮುಂ, ಸುಪ್ರತೀಕಬಲಿಸಾರ್ವಭೌ

---

ಮದಕ್ಕೆ ಯೋಗ್ಯವಾದ, ಭುವನ- ನೀರುಳ್ಳ, ದಿವ್ಯ- ಶ್ರೇಷ್ಠವಾದ, ಸಿಂಧು- ನದಿಗಳಿಂದ, ಸಮೇತಮುಂ; ಸುರುಚಿರ- ಮನೋಹರವಾದ, ಶಾಲಿ- ಬತ್ತದಗದ್ದೆಗಳ, ಸಂತಾನ- ಸಮೂಹ, ನಂದನ- ಉಪವನ ಇವುಗಳಿಂದ, ಆಶ್ರಿತಮುಂ; ಕಮಳದಂತೆ (ಕಮಳ) ಸದಾರಮಾನವವಿಭವಾಳಿಯುಕ್ತಮುಂ—ಸದಾ- ಯಾವಾಗಲೂ, ರಮಾ-ಲಕ್ಷ್ಮಿಯು, ನವ-ನೂತನವಾದ, ವಿಭವ- ವೈಭವ, ಅಳಿ-ಭ್ರಮರಗಳು, ಇವುಗಳಿಂದ,ಯುಕ್ತಮುಂ- ಕೂಡಿರುವದು;(ದೇಶ)ಸದಾರ- ಪತ್ನಿಯಿಂದಕೂಡಿರುವ, ಮಾನವ- ಮನುಷ್ಯರ, ವಿಭವ- ವೈಭವದ,ಆಳಿ-ಸಮೂಹದಿಂದ,ಯುಕ್ತಮುಂ- ಕೂಡಿರುವದು ;ಕಮಲಾಭಿರಾಮಮುಂ - ಸಂಪತ್ತಿನಿಂದಮನೋಹರವಾದದ್ದು; ನಭೋವಲಯದಂತೆ- ಅಂತರಿಕ್ಷಮಂಡಲದಹಾಗೆ,(ಅಂತರಿಕ್ಷ)ಖಗರಾಜಸೌಮ್ಯಗುರುಕುಜಾನ್ವಿತಮುಂ— ಖಗ- ಸೂರ್ಯ, ರಾಜ- ಚಂದ್ರ, ಸೌಮ್ಯ- ಬುಧ, ಗುರು- ಬೃಹಸ್ಪತಿ, ಕುಜ- ಅಂಗಾರಕ, ಇವರಿಂದ, ಅನ್ವಿತಮುಂ- ಕೂಡಿರುವದು;ಸುರಾಗ- ಕಲ್ಪವೃಕ್ಷ, ಸುಮನಸ್ಸುರಭಿ- ಕಾಮಧೇನು ಇವುಗಳಿಂಕೂಡಿದ, ಗೋಪಲೋಕ- ಸ್ವರ್ಗಲೋಕದಿಂದ, ಅಂತಮುಂ- ಮನೋಹರವಾದದ್ದು; (ದೇಶ) ಖಗರಾಜ- ಶ್ರೇಷ್ಠವಾದ ಪಕ್ಷಿಗಳಿಂದ, ಸೌಮ್ಯ- ಸುಂದರವಾದ, ಗುರುಕುಜ- ದೊಡ್ಡಮರಗಳಿಂದ, ಅನ್ವಿತಮುಂ; ಸುರಾಗ- ಸಮಿಾಚೀನವಾದ ಪ್ರೀತಿಯುಳ್ಳ, ಸುಮನಃ- ವಿದ್ವಾಂಸರಿಂದ, ಸುರಭಿ- ಮನೋಹರವಾದದ್ದು; ಗೋಪಲೋಕ- ಗೋಪಾಲಕಸಮೂಹದಿಂದ, ಅಂತಮುಂ- ಮನೋಹರವಾದದ್ದು; ಸುರನದೀತಟದಂತೆ- ದೇವಗಂಗಾನದಿಯದಡದಹಾಗೆ, (ದೇವಗಂಗಾ ನದೀತಟ) ದಿವ್ಯಾನೇಕಪಾಮರೀಜನಕಲಿತಮುಂ— ದಿವ್ಯಾನೇಕಪ- ಐರಾವತ, ಅಮರೀಜನ- ದೇವತಾಸ್ತ್ರೀಯರು ಇವರಿಂದ, ಕಲಿತಮುಂ- ಕೂಡಿರುವದು; ಕಮಲಾಧಿವಾಸರಾಜಹಂಸರಮಣೀಯಮುಂ— ಕಮಲ- ತಾವರೆಯೇ, ಅಧಿವಾಸ- ಆಶ್ರಯವಾಗುಳ್ಳ, ರಾಜಹಂಸ- ರಾಜಹಂಸಪಕ್ಷಿಗಳಿಂದ, ರಮಣೀಯಮುಂ- ಮನೋಹರವಾದದ್ದು; (ದೇಶ) ದಿವ್ಯ- ಶ್ರೇಷ್ಠವಾದ, ಅನೇಕಪಾಮರೀಜನ- ಅನೇಕ ಗದ್ದೇಕಾಯುವಸ್ತ್ರೀಯರಿಂದ, ಕಲಿತಮುಂ; ಕಮಲಾ- ಐಶ್ವರ್ಯಕ್ಕೆ, ಅಧಿವಾಸ- ಆಶ್ರಯವಾದ, ರಾಜಹಂಸ- ರಾಜಶ್ರೇಷ್ಠನಿಂದ, ರಮಣೀಯಮುಂ; ರಸಾತಳದಂತೆ- ಪಾತಾಳಲೋಕದಹಾಗೆ, (ಪಾತಾಳ) ಸದಾ- ನಿರಂತರದಲ್ಲೂ, ಅಶೇಷ- ಸಮಸ್ತವಾದ, ಭೋಗಿ- ಸರ್ಪಗಳ, ಭೋಗ-ಶರೀರಗಳಿಂದ, ಮನೋಜ್ಞಮುಂ; ಸುಪ್ರತೀಕಬಲಿಸಾರ್ವಭೌಮರಂಜಿತಮುಂ- ಸುಪ್ರತೀಕ- ಈಶಾನದಿಕ್ಕಿನಲ್ಲಿರುವದಿಗ್ಗಜವೇನು, ಬಲಿ- ಬಲಿಚಕ್ರವರ್ತಿಯೇನು, ಸಾರ್ವಭೌಮ- ಕುಬೇರದಿಕ್ಕಿನಲ್ಲಿರುವದಿಗ್ಗಜವೇನುಇವುಗಳಿಂದ, ರಂಜಿತಮುಂ; (ದೇಶ)ಅಶೇಷ- ಬಹುಳವಾದ, ಭೋಗಿ- ಸ್ರಕ್ಚಂದನವನಿತಾದಿಭೋಗವುಳ್ಳಜನಗಳ, ಭೋಗ- ಸುಖದಿಂದ, ಮನೋಜ್ಞಮುಂ; ಸು- ಸಮೀಚನವಾದ, ಪ್ರತೀಕ- ಪರರಾಯರಿಂದಕೊಡಲ್ಪಟ್ಟಕಪ್ಪದಿಂದ ಕೂಡಿದ, ಸಾರ್ವಭೌಮ- ಚಕ್ರವರ್ತಿಯಿಂದ, ರಂಜಿತಮುಂ; ವೈದ್ಯಮಂತ್ರದಂತೆ, (ವೈದ್ಯಮಂತ್ರ)ಸರೋಗತಾಪಚಲನಮರುದಾಡಂಬರಮುಂ- ಸರೋಗ- ರೋಗದಿಂದಕೂಡಿರುವನ, ತಾಪ- ಸಂತಾಪವೇನು, ಚಲನ- ಕಂಪನವೇನು, ಮರುತ್- ವಾಯುವೇನುಇವುಗಳಿಂದುಂಟಾದ, ಆಡಂಬರಮುಂ- ಆರ್ಭಟವುಳ್ಳದ್ದು; ಬೀ

ಮರಂಜಿತಮುಂ; ವೈದ್ಯಮಂತ್ರದಂತೆ ಸರೋಗತಾಪಚಲನಮರುದಾಡಂಬರಮುಂ, ಬೀಜ ನ್ಯಾಸದಿಗ್ಬಂಧಬಲಿರಕ್ಷಾಕ್ರಿಯಾಕರಮಹಾಕರಣಮುಂ; ಸಮುದ್ರದಂತೆ ವಿಬುಧೇಷ್ಟಪ್ರ ದಮು ಮನಂತಾತಿಶಯೋದಂಚಿತಮು ಮೆನಿಸಿದ್ದುದಂತುಮಲ್ಲದೆ. * * * *

ಚಂ ॥ ಘನಕರದಂಡಕಂಟಕಜಡಸ್ಥಿತಿಪಂಕಜಷಂಡದೊಳ್ಕಟು । ಸ್ವನಮಲಿನತ್ವಚಾ ಪಲತೆವಾರಿದದೊಳ್ ಜನತಾಪಕೃತ್ಪ್ರವ ॥ ರ್ತನಮಕುಲೀನವೃತ್ತಿಯಹಿಮಾಂಶುವಿನೊ ಳ್ಪೃಥುಕೋಪರಾಗಮೋ। ಹನಕರಣಂಗೃಹಸ್ಥನೊಳೆತೋರ್ಪುದು ನೋಳ್ಪೊಡದಲ್ಲಿತೋ ರ್ಕುಮೇ ॥ ... ... ... ... .. ... ॥೫॥

ಕಂ॥ ಅಡಿಮುಡಿವಿಡಿವುದು ಮುಳಿಸಿನ । ಮಡದಿಯನೊಲಿಸು ವರೊಳಣ್ಮೆತಡೆಯೊಡೆ

---

ಜ......ಕರಣಮುಂ- ಬೀಜನ್ಯಾಸ- ಬೀಜಗಳನ್ನಿಡುವದು, ದಿಗ್ಬಂಧ- ತಡೆಗಟ್ಟುವದು, ಬಲಿ- ಭೂತಯಜ್ಞ, ರಕ್ಷಾಕ್ರಿಯಾ- ರಕ್ಷಣಕರ್ಮ ಇವುಗಳಿಗೆ, ಆಕರ- ಆಶ್ರಯವಾದ, ಮಹತ್- ಅಧಿಕವಾದ, ಫಲಕರ್ಮವುಂ- ಫಲಕರ್ಮವುಳ್ಳದ್ದು : (ದೇಶ)ಸರಃ- ಸರೋವರವನ್ನು, ಗತ- ಹೊಂದಿದ, ಅಪಚಲನ- ಚಲನರಹಿತವಾದ, ಮರುತ್- ವಾಯುವಿನ, ಆಡಂಬರಮುಂ; ಆಧಿಕ್ಯವುಳ್ಳದ್ದು; ಬೀಜನ್ಯಾಸ-ಬೀಜಗಳನ್ನುಬಿತ್ತುವಿಕೆಯೇನು,ದಿಗ್ಬಂಧ- ಬೇಲಿಯೇನು,ಬಲಿ- ಭೂತಗಳಿಗೆಹಾಕುವಬಲಿಯೇನುಇವುಗಳೇಆದಿಯಾದ, ರಕ್ಷಾಕ್ರಿಯ-ಸಂರಕ್ಷಣಕರ್ಮಗಳಿಗೆ,ಆಕರ- ಆಸ್ಪದವಾದ, ಮಹಾಫಲಕರಣಮುಂ- ಅಧಿಕವಾದ ಫಲೋದ್ಯೋಗವುಳ್ಳದ್ದು; ಸಮುದ್ರದಂತೆ, (ಸಮುದ್ರ) ವಿಬುಧೇಷ್ಟಪ್ರದಮುಂ-ವಿಬುಧ-ದೇವತೆಗಳ,ಇಷ್ಟಪ್ರದಮುಂ-ಇಷ್ಟಾರ್ಥವನ್ನುಕೊಟ್ಟದ್ದು; ಅನಂತಾತಿಶಯೋದುಚಿತಮುಂ- — ಅನಂತ- ಆದಿಶೇಷನ, ಅತಿಶಯ- ಮಲಗುವಿಕೆಯಿಂದ, ಉದಂಚಿತಮುಂ- ಕೂಡಿರುವದು; (ದೇಶ) ವಿಬುಧೇಷ್ಟಪ್ರದಮುಂ- ವಿಶೇಷವಾಗಿ ವಿದ್ವಾಂಸರ ಇಷ್ಟಾರ್ಥವನ್ನು ಕೊಡುವದು; ಅನಂತ- ಅಧಿಕವಾದ, ಅತಿಶಯ- ಉತ್ಕರ್ಷದಿಂದ, ಉದಂಚಿತಮುಂ; ಎನಿಸಿ, ಇದ್ದುದು, ಅಂತುಮಲ್ಲದೆ- ಹಾಗಲ್ಲದೆ. * * * * * * * * * * * * * * *

ಘನ......ಸ್ಥಿತಿ— ಘನ- ಸಾಂದ್ರವಾದ, ಕರದಂಡ- ದಂಟು- ಕಂಟಕ- ಮುಳ್ಳು, ಜಡಸ್ಥಿತಿ- ನೀರಿನಲ್ಲಿರುವಿಕೆಯು, ಪಂಕಜಷಂಡದೊಳ್— ಕಮಲಸಮೂಹದಲ್ಲಿ; ಕಟು...... ಲತೆ— ಕಟುಸ್ವನ- ಕಠಿಣವಾದಶಬ್ದ, ಮಲಿನತ್ವ- ಕಪ್ಪು, ಚಾಪಲತೆ- ಲತೆಯಂತಿರುವ ಇಂದ್ರನಧನುಸ್ಸು,ವಾರಿದದೊಳ್-ಮೇಘದಲ್ಲಿ; ಜನತಾಪಕೃತ್ಪ್ರವರ್ತನಂ- ಜನರಿಗೆಸಂತಾಪವನ್ನುಂಟುಮಾಡುವವೃತ್ತಿಯು,ಅಕುಲೀನವೃತ್ತಿ-ಭೂಮಿಯಲ್ಲಿಲ್ಲದಿರುವಿಕೆಯು, ಅಹಿಮಾಂಶುವಿನೊಳ್- ಸೂರ್ಯನಲ್ಲಿ; ಪೃಥುಕೋಪರಾಗಮೋಹನಕರಣಂ— ಪೃಥುಕ- ಶಿಶುಗಳಲ್ಲಿ, ಉಪರಾಗ- ಪ್ರೀತಿಯು, ಮೋಹನ- ಮೋಹಿಸುವ, ಕರಣಂ- ಇಂದ್ರಿಯವು, ಗೃಹಸ್ಥನೊಳ್- ಗೃಹಸ್ಥನಲ್ಲಿ; ತೋರ್ಪುದು-ಪ್ರಕಾಶಿಸುವದು; ನೋಳ್ಪೊಡೆ- ವಿಚಾರಿಸಿದರೆ,ಅಲ್ಲಿ- ಆದೇಶದಲ್ಲಿ, ಘನ- ದೊಡ್ಡದಾದ, ಕರದಂಡಕಂಟಕ- ಯಮನಿಂದುಂಟಾದಕಂಟಕವು, ಜಡಸ್ಥಿತಿ- ಮೂಢರಾಗಿರುವಿಕೆಯು; ಕಟುಸ್ವನ— ಕ್ರೂರಧ್ವನಿಯು, ಮಲಿನತ್ವ- ಪಾಪವು, ಚಾಪಲತೆ- ಚಿತ್ತಚಾಂಚಲ್ಯವು; ಜನತಾಪಕೃತ್ಪ್ರವರನಂ— ಜನತಾ- ಜನಸಮೂಹಕ್ಕೆ, ಅಪಕೃತ್- ಅಪಕಾರವನ್ನುಮಾಡುವ, ಪ್ರವರ್ತನಂ- ನಡತೆಯು; ಅಕುಲೀನವೃತ್ತಿ— ದುಷ್ಕುಲಪ್ರಸೂತರನಡತೆಯು; ಪೃಥು- ವಿಶಾಲವಾದ, ಕೋಪ— ಕೋಪದಲ್ಲಿ, ರಾಗ— ಪ್ರೀತಿಯುಮೋಹನಕರಣಂ- ದುಷ್ಕರ್ಮದಲ್ಲಿಮೋಹಪಡಿಸುವಿಕೆಯು; ತೋರ್ಕುಮೇ— ಕಾಣುವದೇ. ... ॥೫॥

ಅಡಿಮುಡಿವಿಡಿವುದು- ಕಾಲು ಕೂದಲು ಇವುಗಳನ್ನುಹಿಡಿಯುವದು, ಮುಳಿಸಿನ— ಕೋಪವುಳ್ಳ, ಮಡ

ಯೆಂಬಾ ‖ ನುಡಿಗಾರುಡದೊಳ್ಬಸಿರೊ । ಳ್ಕಡಿಪೊಡೆವಾತೆಸೆವುದಲ್ಲದಿಲ್ಲಾನಾಡೊಳ್ ‖೬‖

ವ‖ ಮತ್ತಮಾಮನೋಜ್ಞದೇಶಾಂತರಾಳದಲ್ಲಿ. * * * * * *

ಮತ್ತೇ‖ ಅಳಿಮಾಲಾಹರಿನೀಲಮಾಲಿಕೆಬೆಡಂಗಂಬೀರೆಡಿಂಡೀರಮಂ । ಜುಳಪಾಟೀರ ವಿಲೇಪನಂಮಿಸುಗೆಚಂಚತ್ಕಾಂಚನಾಬ್ಜಾಸ್ಯಮಂ ‖ ಡಳಮಿಂಬಾಗಿರೆಬಾಳೆಗಣ್ಪೊಳೆಯೆ ತಾಳ್ದಂಭೋಜಸದ್ರೇಣುಸಂ । ಕುಳಪೀತಾಂಬರಮಂಸರಿದ್ವಧುರಥಾಂಗೋರೋಜೆಕಣ್ಗೊಪ್ಪಿದಳ್ ‖ ... ... ... ... ... ... ‖೭‖

ವ‖ ಮತ್ತಂ‖ಚಂ‖ ಪರೆದಳಕಾಳಿಮೇಗಣಳಿಮಾಲೆಮರಂದಕಣಾಂಕಪಂಕಜಂ। ಸುರುಚಿರ ಘರ್ಮವಾಷ್ಕಣಮುಖಂಶಿಥಿಲತ್ವಮನಾಳ್ದನೀವಿಸಾ‖ ಲ್ದೆರೆನರುಸುಯ್ಯೆಲರ್ಸುಳಿವಪೆಲರ್ಗನ

---

ವಿಯಂ– ಪತ್ನಿಯನ್ನು, ಒಲಿಸುಪಗೊಳ್- ಪ್ರೀತಿಪಡಿಸುವರಲ್ಲಿ. ಅಣ್ಮಿ- ಅದಿಮಿ, ತಡೆ, ಬಡಿ, ಎಂಬ, ಆನುಡಿ, ಆಮಾತು, ಗಾರುಡದೊಳ್- ಗಾರುಡಮಂತ್ರದಲ್ಲಿ; ಕಡಿಪೊಡೆವಾತು–ವಳಿಗಳು ಹೊಟ್ಟೆಯೆಂಬಮಾತು, ಬಸಿರೊಳ್- ಕುಕ್ಷಿಯಲ್ಲಿ; ಎಸೆವುದು; ಅಲ್ಲದೆ, ಆನಾಡೊಳ್- ಆದೇಶದಲ್ಲಿ, ಅಡಿವಂಡಿವಿಡಿವುದು– ಬಡತನದಿಂದ ಮತ್ತೊಬ್ಬರ ಕಾಲನ್ನುಕಟ್ಟುವದು. ಕೋಪದಿಂದ ಅಸ್ವರಕೇಶವನ್ನುಗ್ರಹಿಸುವದು. ಅಣ್ಮಿ– ಪರಾಕ್ರಮಯುಕ್ತನಾಗಿ, ತಡೆ- ತಡೆದುಕೋ, ಒಡೆ, ಎಂಬ, ಆನುಡಿ, ಕಡಿಪೊಡೆವಾತು- ಕತ್ತರಿಸು ಹೊಡೆ ಎಂಬ ಮಾತು, ಇಲ್ಲ. ... ... / ... ... ... ‖೬‖

ಮತ್ತಂ, ಆಮನೋಜ್ಞದೇಶಾಂತರಾಳದಲ್ಲಿ– ಆಮನೋಹರವಾದ ಕರ್ಣಾಟದೇಶದಮಧ್ಯದಲ್ಲಿ. *

ರಥಾಂಗೋರೋಜೆ- ಚಕ್ರವಾಕಪಕ್ಷಿಯೆಂಬ ಸ್ತನವುಳ್ಳ, ಸರಿದ್ವಧು– ನದಿಯೆಂಬಸ್ತ್ರೀಯು,ಅಳಿಮಾಲಾಹರಿನೀಲಮಾಲಿಕೆ— ಅಳಿ- ಭ್ರಮರಗಳ, ಮಾಲಾ– ಪಜ್ತಿಯೆಂಬ, ಹರಿನೀಲಮಾಲಿಕೆ– ಇಂದ್ರನೀಲರತ್ನದ ಮಾಲಿಕೆಯು, ಬೆಡಂಗಂಬೀರೆ— ಆಶ್ಚರ್ಯವನ್ನುಂಟುಮಾಡುತ್ತಿರಲು; ಡಿಂಡೀರ...... ವಿಲೇಪನಂ- ಡಿಂಡೀರ– ನೊರೆಯೆಂಬ, ಮಂಜುಳ-ಮನೋಹರವಾದ,ಪಾಟೀರವಿಲೇಪನಂ– ಶ್ರೀಗಂಧದಲೇಪನವು, ಮಿಸುಗೆ– ಪ್ರಕಾಶಿಸಲು; ಚಂಚತ್ಕಾಂಚನಾಬ್ಜಾಸ್ಯಂ—ಚಂಚತ್– ಹೊಳೆಯುತ್ತಿರುವ,ಕಾಂಚನಾಬ್ಜ- ಚಿನ್ನದಬಣ್ಣದಕಮಲವೆಂಬ, ಆಸ್ಯಮಂಡಲಂ– ಮುಖವಲಯವು, ಇಂಬಾಗಿರೆ- ಸುಂದರವಾಗಿರಲು,ಬಾಳೆಗಣ್- ಬಾಳೆಮೀನೆಂಬನೇತ್ರವು, ಪೊಳೆಯೆ-ಪ್ರಕಾಶಿಸಲು; ಅಂಭೋಜ........ ಪೀತಾಂಬರಮಂ— ಅಂಭೋಜ– ಕಮಲಗಳ, ಸದ್ರೇಣು- ಒಳ್ಳೇಧೂಳಿಯ, ಸಂಕುಳ- ಸಮೂಹವೆಂಬ, ಪೀತಾಂಬರಮಂ- ಪೀತವರ್ಣವಾದವಸ್ತ್ರವನ್ನು, ತಾಳ್ದು– ಧರಿಸಿ,ಕಣ್ಗೆ, ಒಪ್ಪಿದಳ್. ... ... ‖೭‖

ತಾಂ- ಆನದಿಯು, ಮೇಗಣ- ಮೇಲ್ಗಡೆಯಲ್ಲಿರುವ, ಅಳಿಮಾಲೆ- ತುಂಬಿಗಳಲೈನೇ,ಪರೆದ- ಹರಡಿರುವ, ಅಳಕಾಳಿ- ಮುಂಗುರುಳಿನಲೈನು; ಮರಂದಕಣಾಂಕಪಂಕಜಂ— ಮರಂದಕಣ- ಮಕರಂದಬಿಂದುಗಳೇ, ಅಂಕ- ಚಿನ್ಹವಾಗುಳ್ಳ, ಪಂಕಜಂ- ತಾವರೆಯೇ, ಸುರುಚಿರಘರ್ಮವಾಷ್ಕಣಮುಖಂ— ಸುರುಚಿರ-ಮನೋಹರವಾದ, ಘರ್ಮವಾಷ್ಕಣ- ಬೆವರಿನಹನಿಯುಳ್ಳ, ಮುಖಂ; ಸಾಲ್ದೆರೆ- ಲೈನಾಗಿರುವತೆರೆಗಳೇ, ಶಿಥಿಲತ್ವಮಂ- ಸಡಿಲುವಿಕೆಯನ್ನು, ಆಳ್ದ- ಹೊಂದಿದ, ನೀವಿ- ನಿರಿಯು; ಸುಳಿವ- ಸಂಚರಿಸುವ, ಎಲರ್- ಗಾಳಿಯೇ, ನರುಸುಯ್ಯೆಲರ್- ಪರಿಮಳವಿಶಿಷ್ಟವಾದ ಶ್ವಾಸವು; ಉದ್ವಯಶ್ಚರಣಪದಂ— ಉತ್- ಅಧಿಕವಾದ, ವಯಃ- ಪಕ್ಷಿಗಳ, ಚರಣಪದಂ- ಕಾಲುಹಜ್ಜೆಯ ಗುರುತುಳ್ಳ, ಪುಳಿಲ್- ಮಳಲುಗುಡ್ಡೆಯೇ, ಸಸಖಾಂಕನಿತಂಬಂ- ನಖಕ್ಷತದಿಂಕೂಡಿದಕಟಿಪಶ್ಚಾದ್ಭಾಗವು; ಮಿಸುಗೆ- ರತಾಂತಕಾಂತೆವೋಲ್- ರತಿಕ್ರೀಡೆ

ಖಾಂಕನಿತಂಬಮುದ್ವಯು। ಶ್ಚರಣಪದಂಪ್ರಳಿಲ್ಕ್ರಸುಗೆತಾನೆಸೆದತ್ತು ರತಾಂತಕಾಂತೆಪ್ರೋಲ್॥
ಕ ॥ ಜಳನಿಧಿಪಡೆದೊಡೆಮುತ್ತಂ। ಸುಲಲಿತಶುಕ್ತಿಯೊಳೆಪುರುಡಿನಿಂಪಡೆದಪ್ರುದೀ॥
ಪ್ರೊಳೆನಳಿನಶುಕ್ತಿಯೊಳ್ಮಂ। ಜುಳನೀಲಮನೆಸಿಸಿಸಿಂದವಾರಡಿಯುದರೊಳ್॥ ... ॥೯॥
ಕಂ॥ ಪಡೆದಬುಜಕರಾಡುಂದಾ। ಳಿಡುವಂಗಡರಾತ್ರಿಗೆಂದಜುಜವದಿಂದಾ॥ ಯೆಡೆಗೆಯ್ದ
ಲಂಚೆಯಿಟ್ಟವ್ರೊ। ಳಡೆಗೆಡೆಗರಸಂಚೆಪ್ರೊಳೆಯತೀರದೊಳೆಸಗುಂ॥ ... ... ॥೧೦॥
ಕಂ॥ ಪ್ರೊಳೆದೆರೆಯಕೋಳ್ಗೆತೊಲಗಿವ। ನಳಿನಮನೆತುಡುಂಕಲ ತುರಿಸುವಳಿಪ್ರೋ
ಲ್ಗುಂ॥ಮುಳಿದುಕೆಲಕೊಲವಿನಿಯುಳು।ಜ್ವಳವದನಮನಮರ್ದುಚುಂಬಸಲ್ತವಕಿಪನಂ॥೧೧॥
ಕಂ॥ ಎಲೆಪಚ್ಚೆಯಪಲ್ಲಣಮು।ಳ್ಗಲರ್ದಬ್ಜಂಛತ್ರಮಡರ್ದನೊರೆಝಲ್ಲಿತಡಂ॥ಗಲಿಸೆಸೆ
ಯೆರಾಜಹಂಸಂ। ನಲವಿಂತೆರೆಗುದುರೆಯೇರಿಕುಣಿಯಿಪನದರೊಳ್॥ .. ॥೧೨॥
ಕಂ॥ ಕಮಲಾಸನನೆನ್ನಯಪತಿ। ಕಮಲಜನೆಂದಾತನಂತೆತಾನುಂಹಂಸಂ॥ ಕಮಲಾಸ
ನನಾದುದುವಿಭು। ಸಮನೆನಿಸುವೆನೆಂಬಬಗವಿಜಾತಿಗನೈಜಂ॥ ... ... ... ॥೧೩॥

... ... ... ... ॥೮॥
ಯಂಮಾಡಿದಸ್ತ್ರೀಯಹಾಗೆ, ಎಸೆದತ್ತು.

ಜಳನಿಧಿ, ಸಮುದ್ರವು, ಸುಲಲಿತಶುಕ್ತಿಯೊಳೆ- ಮನೋಹರವಾದ ಮುತ್ತಿನಚಿಪ್ಪಿನಲ್ಲಿ, ಮುತ್ತಂ- ಮುತ್ತಿನಮಣಿಯನ್ನು, ಪಡೆದೊಡೆ- ಪಡೆಯಲಾಗಿ, ಈಪ್ರೊಳೆ- ಈ ನದಿಯು, ಪುರುಡಿನಿಂ- ಸ್ಪರ್ಧೆಯಿಂದ, ನಳಿನಶುಕ್ತಿಯೊಳ್- ತಾವರೆಯೆಂಬ ಮುತ್ತಿನಚಿಪ್ಪಿನಲ್ಲಿ, ಮಂಜುಳನೀಲಮಂ- ಮನೋಹರವಾದ ಇಂದ್ರನೀಲರತ್ನವನ್ನು,ಪಡೆದಪುದು, ಎನಿಸಿ, ಆರಡಿ-ಭ್ರಮರಗಳು,ಅದರಲ್ಲಿ-ಆಹೊಳೆಯಲ್ಲಿರುವ ಕಮಲಗಳಲ್ಲಿ, ನಿಂದವು.

ಅಜಂ- ಬ್ರಹ್ಮನು, ಪಡೆದ- ತನ್ನನ್ನು ಹೆತ್ತ, ಅಬುಜಕೆ- ಕಮಲಕ್ಕೆ, ರಾಜಂ- ಚಂದ್ರನು, ರಾತ್ರಿಗೆ ರಾತ್ರಿಯಲ್ಲಿ, ದಾಳಿಡುವಂಗಡ- ಲಗ್ಗೆಮಾಡುವನಲ್ಲವೇ, ಎಂದು, ಜವದಿಂದೆ- ವೇಗವಾಗಿ, ಆಯೆಡೆಗೆ- ಆ ಕಮಲವಿರುವಸ್ಥಲಕ್ಕೆ, ಎಯ್ದಲ್- ಹೋಗುವದಕ್ಕೋಸ್ಕರ, ಅಂಬೆಯಿಟ್ಟವೊಲ್- ಅಂಬೆಯನ್ನು ಮಡಗಿದ ಹಾಗೆ, (ಟಪಾಲ್) ಪ್ರೊಳೆಯ, ತೀರದೊಳ್- ದಡದಲ್ಲಿ, ಎಡೆಗೆಡೆಗೆ- ಅಲ್ಲಿಗಲ್ಲಿಗೆ, ಅರಸಂಚೆ- ರಾಜಹಂಸಪಕ್ಷಿಗಳು, ಎಸೆಗುಂ. ... ... ... ... ... ॥೧೦॥

ಪ್ರೊಳೆದೆರೆಯ- ನದಿಯಲ್ಲಿರುವತೆರೆಯ, ಕೋಳ್ಗೆ- ಬಾಧೆಯಿಂದ, ತೊಲಗಿದ-ಒಂದುಪಾರ್ಶ್ವಕ್ಕೆಹೋದ, ನಳಿನಮನೆ- ಕಮಲವನ್ನು, ತುಡುಂಕಲ್- ಗ್ರಹಿಸುವದಕ್ಕೋಸ್ಕರ, ಆತುರಿಸುವ-ಕುತೂಹಲಪಡುವ, ಅಳಿ- ಭ್ರಮರವು: ಮುಳಿದು- ಕೋಪಿಸಿ, ಕೆಲಕೆ- ಒಂದುಕಡೆಗೆ, ಒಲೆವ- ತಿರುಗಿಕೊಳ್ಳುವ, ಇನಿಯಳ- ಪ್ರಿಯಳ, ಉಜ್ವಳವದನಮಂ- ಮನೋಹರವಾದ ಮುಖವನ್ನು, ಅಮರ್ದು- ಸೇರಿ, ಚುಂಬಿಸಲ್-ಚುಂಬಿಸುವದಕ್ಕೆ, ತವಕಿಪನಂ- ಕುತೂಹಲಪಡುತ್ತಿರುವ ಪುರುಷನನ್ನು, ಪೋಲ್ಗುಂ-ಹೋಲುವದು. ... ॥೧೧॥

ಎಲೆ- ಕಮಲಪತ್ರವು, ಪಚ್ಚೆಯ, ಪಲ್ಲಣಂ- ಹಲ್ಲಣವು; ಉಳ್ಗಲರ್ದ- ವಿಕಸನವಾದ, ಅಬ್ಜಂ- ಕಮಲವು, ಛತ್ರಂ; ಅಡರ್ದ- ವ್ಯಾಪ್ತವಾದ, ನೊರೆ, ಜಲ್ಲಿ- ಜಾಲರಿಯು; ತಡಂಗಲಿಸಿ-ಕೂಡಿ, ಎಸೆಯೆ- ಪ್ರಕಾಶಿಸಲು; ರಾಜಹಂಸಂ- ರಾಜಹಂಸಪಕ್ಷಿಯೆಂಬ ರಾಜಶ್ರೇಷ್ಠನು, ನಲವಿಂ- ಸಂತೋಷದಿಂದ, ತೆರೆಗುದುರೆಯ- ತೆರೆಯೆಂಬ ಕುದುರೆಯನ್ನು, ಏರಿ- ಹತ್ತಿ, ಅದರೊಳ್- ಆನದಿಯಲ್ಲಿ, ಕುಣಿಯಿಪಂ. ... ॥೧೨॥

ಹಂಸಂ, ಎನ್ನಯ, ಪತಿ- ಸ್ವಾಮಿಯಾದ, ಕಮಲಜಂ- ಬ್ರಹ್ಮನು, ಕಮಲಾಸನಂ- ಕಮಲವೇಪೀಠವಾಗುಳ್ಳವನು, ಎಂದು, ಆತನಂತೆ- ಆಬ್ರಹ್ಮನಹಾಗೆ, ತಾನುಂ- ಹಂಸಪಕ್ಷಿಯೂ, ಕಮಲಾಸನಂ,ಆದುದು; ವಿಜಾತಿಗೆ- ನೀಚಜಾತಿಗೆ,(ಪಕ್ಷಿಜಾತಿಗೆ) ವಿಭುಸಮನೆನಿಸುವೆಂ- ಪ್ರಭುಸದೃಶನೆನಿಸಿಕೊಳ್ಳುವೆನು, ಎಂಬ,ಬಗೆ, ಯೋಚನೆಯು, ನೈಜಂ- ಸ್ವಭಾವಸಿದ್ಧವಾದದ್ದು. ... ... ... ॥೧೩॥

ವ॥ ಇಂತನವಧಿಕಸೌಂದರ್ಯಮನಾಳ್ದ ತರಂಗಿಣಿಯ ತಟನಿಕಟಪ್ರದೇಶದಲ್ಲಿ * *

ಕಂ॥ ವರರತ್ನಗರ್ಭೆತನ್ನಯ । ಸಿರಿಯಂದರೆಗರುಪಲೆಂದುಪಸುರ್ವರಲಕರೋ ॥ ತ್ಕರಮಂಕೆದರ್ದಪೊಲತಿಭಾ । ಸುರಮಾಯ್ತುಪಸುಪ್ಪುವೆತ್ತಕಳಮಕ್ಷೇತ್ರಂ ॥ ॥೧೪॥

ಕಂ॥ ಮಡಿಯುದಕದೆಮಾರ್ಪೊಳೆಡಿರೆ। ಬಿಡದೇಳ್ದಶುಕಾಳಿಕೆಳಗಿವೆತ್ತಣವೆನುತಂ ॥ ನಡೆನೋಡಿಕೌತುಕದೆತಲೆ । ಗೊಡಪುವುವೆನೆಬಾಗಿತೂಪಕಳಮೆಗಳೆಸೆಗುಂ ॥ ॥೧೫॥

ಕಂ॥ ವರಪುಣ್ಯನದಿಯಕಾಲಂ । ಚಿರಕಾಲಂಸೇವೆಗೆಯ್ದಪುಣ್ಯದೆಪೋಪಂ ॥ ತಿರೆಸ ಗ್ಗಕೆಗದ್ದೆಗಳಂ । ಬರಕೊಗೆದಾಡುವಶುಕಾಳಿಯೇನೊಪ್ಪಿದುದೋ ॥ ... ॥೧೬॥

ಮತ್ತೇ॥ ಮದನಂತನ್ನಯತಾಯಸಾರಗೃಹಮಂಸೊಂಪೇರಿಪಂಸೂರ್ಯನೆಂ । ಬುದ ರಿಂದಾತನತೇರ್ಗೆವಾಜಿಯೊಳವೇಳನ್ನೊಂದರಿಂದಲ್ಲದಾ ॥ ಗದುತಾನೊಲ್ದುದನಾಯ್ದುಕೊ॥ ಳ್ಳಲೆನುತಾತ್ಮೀಯಾಶ್ವಸಂದೋಹಮಂ । ಪದಪಿಂದಟ್ಟದನೆಂಬವೋಲ್‌ಶುಕಚಯಂಚೆಲ್ವಾದು ದಾಕಾಶದೊಳ್ ॥ .. ... ... ... ... ॥೧೭॥

---

ಇಂತು,ಅನವಧಿಕಸೌಂದರ್ಯಮಂ- ಅತ್ಯಂತಸೌಂದರ್ಯವನ್ನು, ಆಳ್ದ- ಹೊಂದಿ, ತರಂಗಿಣಿಯ- ನದಿಯ, ತಟನಿಕಟಪ್ರದೇಶದಲ್ಲಿ- ದಡದಸಮೀಪದಲ್ಲಿ. * * * * * * * * * *

ವರರತ್ನಗರ್ಭೆ- ಶ್ರೇಷ್ಠವಾದಭೂಮಿಯು, ತನ್ನಯ, ಸಿರಿಯಂ- ಸಂಪತ್ತನ್ನು, ದರೆಗೆ- ಭೂಜನ ಕ್ಕೆ, ಅರುಪಲೆಂದು- ತಿಳುಯಿಸಬೇಕೆಂದು, ಪಸುರ್ವರಲ- ಪಚ್ಚೇರತ್ನದ, ಕರೋತ್ಕರಮಂ- ಕಾಂತಿಯಸ ಮೂಹವನ್ನು, ಕೆದರ್ದವೊಲ್- ಚೆಲ್ಲಿದಹಾಗೆ, ಪಸುಪ್ಪುವೆತ್ತ- ಹಸುರಾಗಿರುವ, ಕಳಮಕ್ಷೇತ್ರಂ- ಬತ್ತದ ಗದ್ದೆಯು, ಭಾಸುರಮಾಯ್ತು- ಪ್ರಕಾಶಿಸಿತು. ... ... ... ... ॥೧೪॥

ಬಿಡದೆ-ತಪ್ಪದೆ, ಏಳ್ದ- ಹಾರಿದ, ಶುಕಾಳಿ- ಗಿಳಿಗಳಸೈನು, ಮಡಿಯ- ಗದ್ದೆಯಮಡಿಯಲ್ಲಿರುವ, ಉದ ಕದೆ- ನೀರಿನಲ್ಲಿ, ಮಾರ್ಪೊಳೆದು- ಪ್ರತಿಬಿಂಬಿಸಿ, ಇರೆ; ಬಾಗಿ- ಬಗ್ಗಿ, ತೂಪ- ತೂಗಾಡುವ, ಕಳಮೆಗಳ್- ಬತ್ತದಪೈರುಗಳು, ಕೆಳಗೆ- ಅಧೋಭಾಗದಲ್ಲಿ, ಇವು- ಈಗಿಳಿಗಳು, ಎತ್ತಣವು- ಎಲ್ಲಿಯವು, ಎನುತಂ,ನಡೆ- ಚೆನ್ನಾಗಿ, ನೋಡಿ, ಕೌತುಕದೆ- ಆಶ್ಚರ್ಯದಿಂದ, ತಲೆಗೊಡಪುವು- ತಲೆಯನ್ನು ಅಲ್ಲಾಡಿಸುವವು, ಎನೆ, ಎಸೆಗುಂ. ... ... ... ... ... ... ... ॥೧೫॥

ಗದ್ದೆಗಳ್- ಬತ್ತದಗದ್ದೆಗಳು, ವರಪುಣ್ಯನದಿಯ- ಶ್ರೇಷ್ಠವಾಗಿಯೂ ಪರಿಶುದ್ಧವಾಗಿಯೂ ಇರುವ ಹೊಳೆಯ, ಕಾಲಂ- ಪಾದವನ್ನು, (ಕಾಲಿವೆಯನ್ನು) ಚಿರಕಾಲಂ- ಬಹುಕಾಲದಿಂದ, ಸೇವೆಗೆಯ್ದ- ಸೇವಿಸಿದುದರಿಂದುಂಟಾದ, ಪುಣ್ಯದೆ-ಸುಕೃತದಿಂದ, ಸಗ್ಗಕೆ- ಸ್ವರ್ಗಕ್ಕೆ, ಪೋಪಂತಿರೆ- ಹೋಗುವಹಾಗೆ, ಅಂಬರಕೆ-ಆಕಾಶಕ್ಕೆ,ಒಗೆದಾಡುವ-ಹಾರಾಡುವ, ಶುಕಾಳಿ-ಗಿಳಿಗಳ ಸಮೂಹವು, ಏನೊಪ್ಪಿದುದೋ. ॥೧೬॥

ಮದನಂ- ಮನ್ಮಥನು, ತನ್ನಯ, ತಾಯ- ಮಾತೆಯಾದ ಲಕ್ಷ್ಮಿಯ, ಸಾರಗೃಹಮಂ-ಶ್ರೇಷ್ಠ ವಾದ ಮನೆಯನ್ನು, (ಕಮಲವನ್ನು) ಸೂರ್ಯಂ, ಸೊಂಪೇರಿಪಂ- ಚೆಲ್ವಾಗಿಸುವನು; ಎಂಬುದರಿಂದೆ,ಆತನ- ಆ ಸೂರ್ಯನ, ತೇರ್ಗೆ- ರಥಕ್ಕೆ, ಏಳುವಾಜಿ- ಏಳುಕುದರೆಗಳು, ಒಳವು- ಇರುವವು, ಇನ್ನೊಂದರಿಂದಲ್ಲದೆ- ಮ ತ್ತೊಂದು ಕುದುರೆಯಿದ್ದಲ್ಲದೆ, ಆಗದು- ಆಗುವದಿಲ್ಲ; ತಾಂ- ಆ ಸೂರ್ಯನು, ಒಲ್ದುದಂ- ಪ್ರೀತಿಸಿದ್ದನ್ನು, ಆಯ್ದುಕೊಳ್ಳಲಿ- ಎನುತಂ, ಆತ್ಮೀಯಾಶ್ವಸಂದೋಹಮಂ- ತನ್ನ ವಾಹನಗಳ ಸಮೂಹವನ್ನು, ಪದಪಿಂ ದೆ- ಪ್ರೀತಿಯಿಂದ, ಅಟ್ಟಿದಂ- ಕಳುಹಿಸಿದನು; ಎಂಬವೋಲ್- ಎಂಬಹಾಗೆ, ಶುಕಚಯಂ- ಆಕಾಶದೊ ಳ್,ಚೆಲ್ವಾದುದು. ... ... ... ... ... ... ... ॥೧೭॥

ಚಂ॥ ನಡುನಸುಬಳ್ಕೆ ಬಟ್ಟಮೊಲೆ ಮೇಲುದನೆತ್ತೆ ನಿತಂಬಮಂಡಲಂ । ಪೊಡರೆ ಕಟಾಕ್ಷ
ರೋಚಿ ಕವಿದೊತ್ತೆ ಕುರುಳ್ಕುಣಿದಾಡೆ ತೋರ ಸೋ॥ ರ್ಮುಡಿ ಕಡುಜಾರೆ ನುಣ್ದೊಡೆ ಕದಕ್ಕದಿ
ಸುತ್ತಿರೆ ಬಂದು ನಿಂದು ಪೆ । ಣ್ಗಡಣಮದಲ್ಲಿ ಪಾರಿಪುದು ಕೈರವದಿಂದಿಡುತಂ ಶುಕಾಳಿಯಂ॥೧೮॥

ಕಂ॥ ತಾವರೆಯ ನೂಲ ಪುರಿಯುಮ । ರ್ದಾವನರುಹದಳದ ಪಟ್ಟೆಗವಣೆಯೊಳಧಟಂ ॥
ತೀವುತೆ ನೈದಿಲ್ಮೊಗ್ಗೆಯ । ನಾವನಿತಾತತಿ ಶುಕಾಳಿಯಂ ಬಿಡದಿಡುಗುಂ ॥ ... ॥೧೯॥

ಕಂ॥ ಮೇಲಾಂತು ಸೋಗೆಯಂ ಪೊಸ। ಪಾಲಾಂತು ಸುಪರ್ವಮಾಂತು ಪಶುವಂ ಗಿರಿಯಂ॥
ಲೀಲಾವಹಭಾರತಮುಂ ॥ ಪೋಲುತ್ತುಂ ಮೆರೆದುದಲ್ಲಿ ಪುಂಡ್ರೇಕ್ಷುವನಂ ... ॥೨೦॥

ಕಂ॥ ಮೂಜಗಮಂ ಗೆಲಲೆಸಪ ಮ । ನೋಜಂಗೆ ಶರಾಸನಂಗಳಂ ಪಲವನಿಳಾ ॥ ಶ್ರೀಜ
ತನದೆ ಪಡೆದಿಟ್ಟವೊಲೋಜೆಯಿನೆಸೆದಿರ್ದುದಿಕ್ಷುಕಾಂಡಕದಂಬಂ॥ ... ... ॥೨೧॥

ಕಂ॥ ಅನಿಲಹತಿಗೆಲೆಗಳೊರಸಿದೊ । ಡೆನಿತಾಂತಂ ಸೀಳ್ದ ಕಬ್ಬಿನಿಂ ಪಾಯ್ದುಗುತಿ॥
ರ್ಪ್ಪ ನಿರಸದ ಪೊನಲಂ ಸಾನೆ। ಲ್ದೆನೆಡಿಂದರಗಿಳಿಗಳೀಂಟಿ ತಣಿವುವಜಸ್ರಂ ... ... ॥೨೨॥

---

ನಡು– ಮಧ್ಯವು, ನಸುಬಳ್ಕೆ- ಸ್ವಲ್ಪಬಳುಕಲು, ಬಟ್ಟಮೊಲೆ- ಗುಂಡಾಗಿರುವ ಮೊಲೆಯು, ಮೇಲುದಂ- ಮೇಲ್ಸೆರಗನ್ನು, ಎತ್ತೆ- ನೂಕಲು; ನಿತಂಬಮಂಡಲಂ- ಕಟಿಪಶ್ಚಾದ್ಭಾಗವು, ಪೊಡರೆ-ಉಬ್ಬಲು; ಕಟಾಕ್ಷರೋಚಿ– ಕಡೆಗಣ್ಣನೋಟದಕಾಂತಿಯು, ಕವಿದೊತ್ತೆ– ವ್ಯಾಪಿಸಿಕೊಂಡುನುಗ್ಗಲು; ಕುರುಳ್- ಮುಂಗುರುಳು, ಕುಣಿದಾಡೆ-ಚಲಿಸಲು; ತೋರ- ದಪ್ಪವಾದ, ಸೋರ್ಮುಡಿ- ಉದ್ದವಾದಕೇಶಬಂಧವು, ಕಡುಜಾರೆ- ಶಿಥಿಲವಾಗಲು; ನುಣ್ದೊಡೆ- ನುಣುಪಾದ ತೊಡೆಯು; ಕದಕ್ಕದಿಸುತ್ತಿರೆ- ನಡುಗುತ್ತಿರಲು; ಅದು ಪೆಣ್ಗಡಣಂ- ಆ ಸ್ತ್ರೀಸಮೂಹವು, ಅಲ್ಲಿ- ಆಗದ್ದೆಗಳಲ್ಲಿ, ಬಂದು, ನಿಂದು, ಶುಕಾಳಿಯಂ, ಕೈರವದಿಂದೆ- ಬಿಳೀನೈದಿಲೆಯಿಂದ, ಇಡುತ್ತಂ- ಹೊಡೆಯುತ್ತ, ಪಾರಿಪುದು- ಹಾರಿಸುವದು. ... ॥೧೮॥

ತಾವರೆಯ- ಕಮಲದ, ನೂಲ, ಪುರಿ- ದಾರವು, ಅಮರ್ದ- ಸೇರಿದ, ಆ ವನರುಹದಳದ- ಆ ಕಮಲದೆಸಳಿನ, ಪಟ್ಟೆಗವಣೆಯೊಳ್– ಬಟ್ಟೆಯ ಕವಣೆಯಲ್ಲಿ, ನೈದಿಲ್ಮೊಗ್ಗೆಯಂ- ನೈದಿಲೆಯಮೊಗ್ಗನ್ನು, ತೀವುತೆ- ಇಡುತ್ತ, ಅಧಟಂ- ಪರಾಕ್ರಮದಿಂದ, ಆವನಿತಾತತಿ-ಆಸ್ತ್ರೀಸಮೂಹವು, ಶುಕಾಳಿಯಂ, ಬಿಡದೆ, ಇಡುಗುಂ- ಹೊಡೆಯುವದು. ... ... ... ... ॥೧೯॥

ಅಲ್ಲಿ, ಪುಂಡ್ರೇಕ್ಷುವನಂ- ಕಬ್ಬಿನಗದ್ದೆಯು, ಮೇಲೆ, ಸೋಗೆಯಂ- ಗರಿಯನ್ನು, (ಗಂಡುನವಿಲನ್ನು) ಆಂತು-ಧರಿಸಿ, ಗಿರಿಯಂ-ಪರ್ವತವನ್ನು, ಪೋಲುತ್ತುಂ; ಪೊಸಪಾಲ-ನೂತನವಾದರಸವನ್ನು, (ಕ್ಷೀರವನ್ನು) ಆಂತು, ಪಶುವಂ- ಹಸುವನ್ನು, ಪೋಲುತ್ತುಂ; ಸುಪರ್ವವ- ಒಳ್ಳೇಗಂಟನ್ನು, (ಸಂಧಿವಿರಾಮಸ್ಥಲವನ್ನು) ಆಂತು,ಲೀಲಾವಹಭಾರತಮುಂ-ವಿಲಾಸವನ್ನುಂಟುಮಾಡುವ ಭಾರತಗ್ರಂಥವನ್ನು,ಪೋಲುತ್ತುಂ-ಮೆರೆದುದು.

ಮೂಜಗಮಂ- ಮೂರುಲೋಕವನ್ನು, ಗೆಲಲ್- ಜೈಸುವದಕ್ಕೆ, ಎಸಪ- ಉಜ್ಜುಗಿಸುವ, ಮನೋಜಂಗೆ- ಮನ್ಮಥನಿಗೆ, ಇಳಾಶ್ರೀ- ಭೂಲಕ್ಷ್ಮಿಯು, ಪಲವಂ ಶರಾಸನಂಗಳಂ– ಅನೇಕಧನುಸ್ಸುಗಳನ್ನು, ಜತನದೆ- ಜಾಗರೂಕತೆಯಿಂದ, ಪಡೆದು- ಹೊಂದಿ, ಇಟ್ಟವೊಲ್- ಇಟ್ಟಿರುವಹಾಗೆ, ಇಕ್ಷುಕಾಂಡಕದಂಬಂ- ಕಬ್ಬಿನದಂಡಗಳಸಮೂಹವು, ಓಜೆಯಿಂ– ಕ್ರಮವಾಗಿ, ಎಸೆದಿರ್ದುದು. ... ... ॥೨೧॥

ಅನಿಲಹತಿಗೆ- ಗಾಳಿಯಪೆಟ್ಟಿಗೆ, ಎಲೆಗಳ್- ಸೋಗೆಗಳು, ಒರಸಿದೊಡೆ- ತಿಕ್ಕಲು, ನಿತಾಂತಂ-ಅಧಿಕವಾಗಿ, ಸೀಳ್ದ, ಕಬ್ಬಿನಿಂ, ಪಾಯ್ದು- ದುಮುಕಿ, ಉಗುತಿರ್ಪ್ಪ- ಸುರಿಯುತ್ತಿರುವ, ಇನಿರಸದ- ಮಧುರವಾದಹಾಲಿನ, ಪೊನಲಂ- ಪ್ರವಾಹವನ್ನು, ಆನೆಲ್ದೆನೆದಿಂದ- ಆ ಬತ್ತದತೆನೆಯನ್ನುತಿಂದ, ಅರಗಿಳಿಗಳ್- ರಾಜಶುಕಗಳು, ಈಂಟಿ- ಕುಡಿದು, ಅಜಸ್ರಂ- ಯಾವಾಗಲೂ, ತಣಿವುವು- ತೃಪ್ತಿಪಡುವವು. ... ॥೨೨॥

ಕಂ॥ ಚಪಳಕಕಪಿಕೆಡಪೆತೆಂಗಿನ । ವಿಪುಳಫಲಂಬೀಳ್ದುಸೀಳ್ದುಸುರಿವೆಳನೀರಾ ॥ ವು ಪವನದಕಾಲ್ಗಳೊಳ್ತೀವಿ । ವಿಪರಿಯೆನೀರುಂಬುದಲ್ಲಿಹಸ್ತಿಕದಂಬಂ ॥ ... ॥೧೩॥

ವ ॥ ಇಂತುಸಕಲಜನಮನೋನಯನಮನೋಜ್ಞಲೀಲಾಭವನಮಾದಿಕ್ಷುವನಸೀಮಾಸಮೀಪಭಾಸುರಭೂಭಾಮಿನೀಸೀಮಂತೋಪಮಾನಮಾದ ಮಾರ್ಗದಿಕ್ಕೆಲದೊಳ್ ॥

ಮತ್ತೇ॥ ಕದಳೀಸ್ತಂಭದಕಂಬದಿಂಕುಸುಮಮಾಲಾಬಂಧದಿಂಚಂದನಾ । ಮ್ರದಳಾಬದ್ಧವಿತಾನದಿಂದೆಕೊಳವೇರ್ಕೆರ್ಗಟ್ಟನಿಂಕೈತಕಾ ॥ ಚ್ಛದಳಛಾದನದಿಂಕನತ್ಕಮಳಘಂಟಾಪಙ್ಕ್ತಿಯಿಂಪುಷ್ಪಗು। ಚ್ಛದಪೊಂಬಾಳೆಯಚಾಮರಪ್ರಕರದಿಂರಮ್ಯಂಪ್ರಪಾಮಂಟಪಂ॥

ವ॥ ಆಮಂಟಪದೊಳ್ ॥ * * * * * * *

ಕಂ॥ ತಳಿರ್ಜೊಂಪದೋವರಿಯತ । ತ್ಪುಳಿಲೆಡೆಯೊಳ್ಮಿಸುಪಚಂದ್ರಕಾಂತದಘಟದೊ ॥ ಳ್ಕುಳಿರ್ವಾಲಿನೀರನಬಳಾ । ವಳಿತಣ್ಗರಗದೊಳೆತೀವಿಪಥಿಕರ್ಗೆರೆಗುಂ ॥ ॥೧೫॥

---

ಚಪಳಕಪಿ- ಚಂಚಲವಾದ ಕಪಿಗಳು, ಕೆಡಪೆ- ಕೆಡವಲು, ತೆಂಗಿನ, ವಿಪುಳಫಲಂ- ದೊಡ್ಡಕಾಯಿಗಳು, ಬೀಳ್ದು- ಬಿದ್ದು, ಸೀಳ್ದು- ಒಡೆದು, ಸುರಿವ- ಸ್ರವಿಸುವ, ಎಳೆನೀರ್, ಉಪವನದ- ಉದ್ಯಾನವ, ಕಾಲ್ಗಳೊಳ್- ಕಾಲಿವೆಗಳಲ್ಲಿ, ತೀವಿ- ತುಂಬಿ, ಪರಿಯೆ- ಹರಿಯಲು, ಅಲ್ಲಿ- ಆಕಾಲಿವೆಯಲ್ಲಿ, ಹಸ್ತಿಕದಂಬಂ- ಆನೆಗಳಸಮೂಹವು, ನೀರುಂಬುದು- ಜಲಪಾನವನ್ನುಮಾಡುವದು. ... ... ... ॥೧೩॥

ಇಂತು, ಸಕಲ......ಮಾದ- ಸಕಲಜನ- ಸಮಸ್ತಜನಗಳ, ಮನೋನಯನ- ಮನಸ್ಸು ನೇತ್ರ ಇವುಗಳಿಗೆ, ಮನೋಜ್ಞಲೀಲಾಭವನಮಾದ, ಮನೋಹರಕ್ರೀಡಾಗೃಹವಾದ, ಇಕ್ಷುವನದ- ಕಬ್ಬಿನಗದ್ದೆಯ; ಸೀಮಾ......ಮಾದ- ಸೀಮಾಸಮೀಪ- ಎಲ್ಲೆಯಬಳಿಯಲ್ಲಿ, ಭಾಸುರ- ಪ್ರಕಾಶಿಸುವ, ಭೂಭಾಮಿನೀಸೀಮಂತೋಪಮಾನಮಾದ- ಭೂಕಾಂತೆಯ ಬೈತಲೆಗೆ ಸದೃಶವಾದ, ಮಾರ್ಗದ, ಇಕ್ಕೆಲದೊಳ್- ಉಭಯಪಾರ್ಶ್ವಗಳಲ್ಲಿ. * * * * * * * * * * * * * * * *

ಪ್ರಪಾಮಂಟಪಂ- ಅರವಟ್ಟಿಗೆಯು, ಕದಳೀಸ್ತಂಭದ- ಬಾಳೆಗಂಬದಿಂಮಾಡಿರುವ, ಕಂಬದಿಂ; ಕುಸುಮಮಾಲಾಬಂಧದಿಂ- ಹೂವಿನಮಾಲಿಕೆಯ ಕಟ್ಟುವಿಕೆಯಿಂದಲೂ; ಚಂದನಾಮ್ರದಳಾಬದ್ಧವಿತಾನದಿಂ— ಚಂದನ- ಶ್ರೀಗಂಧ, ಆಮ್ರ- ಮಾವು, ಇವುಗಳ, ದಳ- ಪತ್ರಗಳಿಂದ, ಆಬದ್ಧ- ಕಟ್ಟಲ್ಪಟ್ಟ, ವಿತಾನದಿಂದೆ- ಮೇಲ್ಕಟ್ಟಿನಿಂದಲೂ; ಕೊಳವೇರ್ಕೆರ್ಗಟ್ಟನಿಂ- ಲಾವಂಚದಗೋಡೆಗಳಿಂದಲೂ; ಕೈತಕಾಚ್ಛದಳಛಾದನದಿಂ- ಬಿಳೀತಾವರೆಗರಿಗಳ ಮೇಲುಹೊದಿಕೆಯಿಂದಲೂ; ಕನತ್ಕಮಳಘಂಟಾಪಙ್ಕ್ತಿಯಿಂ— ಕನತ್- ಹೊಳೆಯುವ, ಕಮಳಘಂಟಾಪಙ್ಕ್ತಿಯಿಂ- ತಾವರೆಹೂವುಗಳೆಂಬ ಗಂಟೆಗಳಸ್ಲೈನಿಂದಲೂ; ಪುಷ್ಪಗುಚ್ಛದ- ಹೂವಿನ ಗೊಂಚಲಿನ, ಪೊಂಬಾಳೆಯ- ಹೊಂಬಾಳೆಯ, ಚಾಮರಪ್ರಕರದಿಂ- ಚಾಮರಗಳ ಸಮೂಹದಿಂದಲೂ; ರಮ್ಯಂ- ಮನೋಹರವಾದದ್ದು. ... ... ... ... ... ॥೧೪॥

ಆಮಂಟಪದೊಳ್- ಆಪಾನೀಯಶಾಲೆಯಲ್ಲಿ. * * * * * * * * * *

ತಳಿರ್ಜೊಂಪದ- ಚಿಗುರಿನಗುಚ್ಛದ, ಓವರಿಯ- ಸಮೀಪದಲ್ಲಿರುವ, ತತ್ಪುಳಿಲೆಡೆಯೊಳ್- ಆಮಳಲುಗುಡ್ಡೆಯ ಸ್ಥಳದಲ್ಲಿ, ಮಿಸುಪ- ಪ್ರಕಾಶಿಸುವ, ಚಂದ್ರಕಾಂತದ- ಚಂದ್ರಕಾಂತಶಿಲೆಯಿಂದಮಾಡಿದ, ಘಟದೊಳ್— ಕೊಡದಲ್ಲಿ, ಕುಳಿರ್ವ- ತಣ್ಣಗಿರುವ, ಆಲಿನೀರಂ- ನಿರ್ಮಲವಾದಜಲವನ್ನು, ತಣ್ಗರಗದೊಳ್- ತಂಪಾದಪಾನಪಾತ್ರೆಯಲ್ಲಿ, ತೀವಿ- ತುಂಬಿ, ಅಬಳಾವಳಿ- ಸ್ತ್ರೀಸಮೂಹವು, ಪಥಿಕರ್ಗೆ- ಮಾರ್ಗಸ್ಥರಿಗೆ, ಎರೆಗುಂ- ಕುಡಿಯುವದಕ್ಕೆ ಹೊಯ್ಯುವದು ... ... ... ॥೧೫॥

ಚಂ ॥ತರಳನವೋರ್ವನಾತ್ಮಕರತೋಯದೊಳಾಕೆಯವಕ್ತ್ರಲೋಚನಾ। ಧರರದಚೆಲ್ವನಾಸಿಕೆಗಳಂದದಮಾಪ್ರೊರ್ಳಪೀಕ್ಷಿಸುತ್ತೆ ತ ॥ ತ್ಪರಿಮಳಕಿಟ್ಟನೀರರುಹಕೈರವಪಾಟಲಕುಂದಚಂಪಕ। ಸ್ಫುರಿತಸುಮಾಳಿಗೆತ್ತು ನಡೆನೋಡಿದನೀಂಟದೆಪಾಣಿವಾರಿಯಂ ॥೭೬॥

ವ॥ ಪೆರತೊಂದರವಟ್ಟಿಗೆಯೊಳೋರ್ವನೋರ್ವಳ್ನೀರೆರೆವಾಗಳವಳಂಕಂಡು * *

ಕಂ॥ ಕರಗದಜಲಮಿದುಮುಖಹಿಮ। ಕರಗದಮಂಮಾಣಿಸಲ್ಕೆಸಾಲ್ವುದುಮೇಣೀ॥ ಕರಗದಕಾಮನಹತಿಯಿಂ। ಕರಗದವೊಲ್ಮಾಳ್ಪುದೆನ್ನನೆಲೆಮೃಗನಯನೇ ... ॥೭೭॥

ವ॥ ಎಂದುಮನೋರಥಂ ಬಡೆದಿರ್ದನಲ್ಲಿ ಮತ್ತೊರ್ವಳ್ ಧೂರ್ತದೂತಿ * *

ಮ॥ಸ್ರ॥ ಎಲೆಗೇಬಾಯಾರಿಬಂದಂಪಥಿಕನಿವನಪೂರ್ವಂಗಡೀತಂಗೆಹೇಮೋ। ಜ್ವಲರಂಭಾಸ್ತಂಭಭಾಸ್ವದ್ವಿಪುಳಪುಳಿನಮಂಕುಳ್ಳಿರಲ್ಕಿತ್ತುಕಂಠ॥ ಸ್ಥಳದೊಳ್ಚಂಚನ್ಮೃಣಾ

---

ಅದೋರ್ವಂತರಳಂ- ಅದೊಬ್ಬ ಹುಡುಗನು, ಆತ್ಮಕರತೋಯದೊಳ್-ತನ್ನಕೆಯ್ಯಲ್ಲಿರುವನೀರಿನಲ್ಲಿ, ಆಕೆಯ- ಆನೀರೆರೆವಸ್ತ್ರೀಯ, ವಕ್ತ್ರ......ನಾಸಿಕೆಗಳ— ವಕ್ತ್ರ- ಮುಖ,ಲೋಚನ- ಕಣ್ಣು, ಅಧರ- ತುಟಿ, ರದ- ಹಲ್ಲು, ನಾಸಿಕೆಗಳ- ಮೂಗು ಇವುಗಳ, ಅಂದದ- ಚೆನ್ನಾದ, ಪ್ರೊರ್ಳಪ- ಪ್ರತಿಬಿಂಬವನ್ನು, ಈಕ್ಷಿಸುತ್ತೆ- ನೋಡುತ್ತ, ತತ್ಪರಿಮಳಕೆ- ಆನೀರಿನಲ್ಲಿ ಪರಿಮಳವನ್ನುಂಟುಮಾಡುವದಕ್ಕೆ, ಇಟ್ಟ, ನೀರ...... ಗೆತ್ತು- ನೀರರುಹ- ಕಮಲ, ಕೈರವ- ಬಿಳೀನೈದಿಲೆ, ಪಾಟಲ- ಪಾದರಿ, ಕುಂದ- ಮೊಲ್ಲೆ, ಚಂಪಕ- ಸಂಪಗೆ ಇವುಗಳ, ಸುಮಾಳಿಗೆತ್ತು- ಹೂವುಗಳೆಂದುತಿಳಿದು, ಪಾಣಿವಾರಿಯಂ- ಹಸ್ತದಲ್ಲಿರುವ ಜಲವನ್ನು, ಈಂಟದೆ- ಕುಡಿಯದೆ, ನಡೆ- ಚೆನ್ನಾಗಿ, ನೋಡಿದಂ. ... ... ... ॥೭೬॥

ಪೆರತೊಂದುಅರವಟ್ಟಿಗೆಯೊಳ್- ಮತ್ತೊಂದುಪಾನೀಯಶಾಲೆಯಲ್ಲಿ, ಓರ್ವಳ್- ಒಬ್ಬಳು, ನೀರೆರೆವಾಗಳ್- ನೀರನ್ನು ಹೊಯುತ್ತಿರುವಕಾಲದಲ್ಲಿ; ಅವಳಂ, ಓರ್ವಂ, ಕಂಡು. * * * * * *

ಎಲೆಮೃಗನಯನೆ- ಜಿಂಕೆಯಕಣ್ಣಿನಂತಿರುವ ಕಣ್ಣುಳ್ಳ ಎಲೈಸ್ತ್ರೀಯೆ, ಇದುಕರಗದಜಲಂ- ಈಪಾನಪಾತ್ರೆಯಲ್ಲಿರುವನೀರು, ಮುಖಹಿಮಕರಗದಮಂ— ಮುಖಹಿಮಕರ- ಮುಖಚಂದ್ರನ,ಗದಮಂ- ರೋಗವನ್ನು, ಮಾಣಿಸಲ್ಕೆ- ಹೋಗಲಾಡಿಸುವದಕ್ಕೆ, ಸಾಲ್ವುದು- ಸಮರ್ಥವಾಗುವದು; ಮೇಣ್- ಮತ್ತು, ಈಕರಗದ- ಈಕೆಮ್ಮಿಯಾಗದಿರುವ, ಕಾಮನಹತಿಯಿಂ- ಮನ್ಮಥನಿಂದುಂಟಾದ ಬಾಧೆಯಿಂದ, ಎನ್ನಂ, ಕರಗದವೊಲ್- ಕೃಶನಾಗದಹಾಗೆ, ಮಾಳ್ಪುದು- ಮಾಡಬೇಕು. ... ... ... ॥೭೭॥

ಎಂದು, ಮನೋರಥಂಬಡೆದು- ಇಷ್ಟಾರ್ಥವನ್ನುಹೊಂದಿ, ಇರ್ದನ್; ಅಲ್ಲಿ, ಮತ್ತೊರ್ವಳ್, ಧೂರ್ತದೂತಿ- ವಂಚಕಳಾದ ದೂತಿಯು. * * * * * * * * * * * * * *

ಎಲೆಗೇ- ಎಲೈಸ್ತ್ರೀಯೇ, ಪಥಿಕಂ- ಮಾರ್ಗಸ್ಥನು,ಬಾಯಾರಿ- ನೀರಡಿಕೆಯುಳ್ಳವನಾಗಿ, ಬಂದಂ, ಇವಂ, ಅಪೂರ್ವಂಗಡ- ಪೂರ್ವದಲ್ಲಿ ಯಾವಾಗಲೂ ಬರದಿದ್ದವನಲ್ಲವೇ, ಈತಂಗೆ, ನೀಂ, ಹೇಮೋ...... ಪುಳಿನಮಂ- ಹೇಮ- ಸುವರ್ಣದಂತೆ, ಉಜ್ವಲ- ಪ್ರಕಾಶಮಾನವಾದ, ರಂಭಾಸ್ತಂಭ- ಬಾಳೇಕಂಬವು, ಭಾಸ್ವತ್- ಪ್ರಕಾಶಿಸುವ; ವಿಪುಳ- ವಿಶಾಲವಾದ, ಪುಳಿನಮಂ- ಮಳಲುಗುಡ್ಡೆಯನ್ನು, (ತೊಡೆಯನ್ನು, ಕಟಿಪ್ರದೇಶ್ಚಾದ್ಭಾಗವನ್ನು) ಕುಳ್ಳಿರಲ್ಕೆ- ಕೂತುಕೊಳ್ಳುವದಕ್ಕೆ, ಇತ್ತು- ಕೊಟ್ಟು, ಕಂಠಸ್ಥಳದೊಳ್- ಕತ್ತಿನಲ್ಲಿ, ಚಂಚನ್ಮೃಣಾಳಂಗಳಂ— ಚಂಚತ್- ಮನೋಹರವಾದ, ಮೃಣಾಳಂಗಳಂ- ತಾವರೆಯ ದಂಟನ್ನು, (ತೋಳುಗಳನ್ನು) ಇಳುಪಿ- ಇಟ್ಟು, ಸರೋ...... ಬುವಂ- ಸರೋಜಾರಿಬಿಂಬ- ಚಂದ್ರಮಂಡಲದ, ಉಜ್ವಲತ್- ಪ್ರಕಾಶಿಸುವ, ಮಂಜುಳ- ಮನೋಹರವಾದ, ಪೀಯೂಷ- ಅಮೃತರ್ದಂತಿರುವ, ಅಂಬು

ಳಂಗಳನಿಳುಪಿಸರೋಜಾರಿಬಿಂಬೋಜ್ವಳಸ್ಮಂ | ಜುಳಪೀಯೂಷಾಂಬುವಂ ನೀಂಕುಡಿಯ
ಲೆರೆವುದೆಂದೊಳ್ಪನಾಡುತ್ತಮಿರ್ದ್ದಳ್॥ ... ... ... ... ॥೨೮॥

ಕಂ॥ ಎಳನೀರ್ಗಳತನಿಗಬ್ಬಿನ| ತಿಳಿರಸದರಸಾಲಪಕ್ವಫಲಸಾರದನ ॥ ಲ್ಗಳಲಬಹು
ವಿಧದಪಾನಂ | ಗಳನಲ್ಲಲ್ಲೆರೆವರಾಪ್ರಪಾಪಾಲಿಕೆಯರ್॥ ... .. ॥೨೯॥

ವ॥ ಇಂತಗಣಿತಶೋಭಾವರೇಣ್ಯಮಾದ ತದ್ದೇಶಶ್ರೀಯ ಸೌಭಾಗ್ಯಭವನಮೆನಿಸಿ.

ಉ॥ ಕ್ಷೋಣಿತಳಕ್ಕೆಪೆಂಪೆಸೆಯೆಕಂಗೊಳಿಸಿದ್ದುದುನೈಜಕಾಂತಿಸಂ| ಪ್ರೀಣಿತಲೋ
ಕಲೋಚನಮಹಾಮಣಿಹರ್ಮ್ಯಕದಂಬಗೋಪುರ ॥ ಶ್ರೇಣಿಮನೋಜ್ಞವೀಥಿಪರಮೋತ್ಸ
ವಮಂಜುಳಮಂದಿರಾಳಿಕ | ಲ್ಯಾಣಪುರಂಸಮಗ್ರವಿಭವಾನ್ವಿತಮೂರ್ಜಿತಮಂಗಳಾಕರಂ ॥
ಚಂಹತಬಲವಾಸಮಾದುದಮರಾವತಿಯೈಲಬಿಲಪ್ರಭಾವಸಂ | ಗತಿಗೆಡೆಯಾಯ್ತುನೋ

---

ಸಂ- ಜಲವನ್ನು, (ಅಧರರಸವನ್ನು) ಕುಡಿಯಲ್- ಪಾನಮಾಡುವದಕ್ಕೆ, ಎರೆವುದು; ಎಂದು, ಒಳ್ಪಂ- ಚ
ತುರವಾದಮಾತನ್ನು, ಆಡುತ್ತಂ, ಇರ್ದ್ದಳ್. ... ... ... ॥೨೮॥

ಅಲ್ಲಲ್ಲಿ, ಆಪ್ರಪಾಪಾಲಿಕೆಯರ್- ಅರವಟ್ಟಗೆಯಲ್ಲಿ ನೀರೆರೆಯುವಸ್ತ್ರೀಯರು. ಎಳನೀರ್ಗಳ, ತನಿಗ
ಬ್ಬಿನ- ಬಲಿತಕಬ್ಬಿನ, ತಿಳಿರಸದ -ನಿರ್ಮಲವಾದರಸದ, ರಸಾಲಪಕ್ವಫಲಸಾರದ- ಪಕ್ವವಾದಮಾವಿನಹಣ್ಣಿನ
ರಸದ, ನಲ್ಗಳಲ- ಒಳ್ಳೇಸಜ್ಜಿಗೆಯ, ಬಹುವಿಧದ- ಅನೇಕಪ್ರಕಾರಗಳಾದ, ಪಾನಂಗಳಂ- ಪಾನದ್ರವ್ಯಗಳ
ನ್ನು, ಎರೆವರ್. ... ... ... ... ... ॥೨೯॥

ಇಂತು, ಅಗಣಿತಶೋಭಾವರೇಣ್ಯಮಾದ- ಅಧಿಕವಾದ ಶೋಭೆಯಿಂದ ಶ್ರೇಷ್ಠವಾದ, (ಶ್ಲೋ ॥
ನೀಚೇವಯಾಧಿಕೆಸ್ಪರ್ಧಾಶೌರ್ಯೋತ್ಸಾಹೇಜದಕ್ಷತಾ | ಯತ್ರಪ್ರಕಟನಂಯಾತಿಸಾಶೋಭೇತಿಪ್ರಕೀರ್ತಿ
ತಾ) ತದ್ದೇಶಶ್ರೀಯ-ಆದೇಶಲಕ್ಷ್ಮಿಯ, ಸೌಭಾಗ್ಯಭವನಂ-ಸೌಭಾಗ್ಯಕ್ಕೆ ಆಶ್ರಯವಾದದ್ದು,ಎನಿಸಿ. * *

ಸಮಗ್ರವಿಭವಾನ್ವಿತಂ- ಸಂಪೂರ್ಣವಾದವೈಭವದಿಂದಕೂಡಿದ, ಊರ್ಜಿತಮಂಗಳಾಕರಂ- ಪ್ರಬಲ
ವಾದ ಮಂಗಳಗಳಿಗೆ ಆಶ್ರಯವಾದ, ನೈಜ.....ಪುರಂ— ನೈಜಕಾಂತಿ- ತನ್ನಕಾಂತಿಯಿಂದ, ಸಂಪ್ರೀ
ಣಿತ- ಸಂತೋಷಪಡಿಸಲ್ಪಟ್ಟ, ಲೋಕ- ಜನರ, ಲೋಚನ- ನೇತ್ರವುಳ್ಳ, ಮಹಾಮಣಿಹರ್ಮ್ಯ- ದೊ
ಡ್ಡದಾದರತ್ನದ ಉಪ್ಪರಿಗೆಗಳ, ಕದಂಬ- ಸಮೂಹ, ಗೋಪುರ- ಗೋಪುರಗಳ, ಶ್ರೇಣಿ-ಪಙ್ತಿ, ಇವುಗಳಿಂ
ದ, ಮನೋಜ್ಞ- ಮನೋಹರವಾದ, ವೀಥಿ- ಬೀದಿಗಳಲ್ಲಿ, ಪರಮ- ಉತ್ಕೃಷ್ಟವಾದ, ಉತ್ಸವ- ಉತ್ಸ
ವದಿಂದ, ಮಂಜುಳ- ಮನೋಹರವಾದ, ಮಂದಿರ- ಮನೆಗಳ, ಆಳಿ- ಪಙ್ತಿಯುಳ್ಳ, ಕಲ್ಯಾಣಪುರಂ- ಕ
ಲ್ಯಾಣಪಟ್ಟಣವು, ಕ್ಷೋಣಿತಳಕ್ಕೆ-ಭೂತಲಕ್ಕೆ, ಪೆಂಪು-ಅತಿಶಯವು, ಎಸೆಯೆ, ಕಂಗೊಳಿಸಿ-ಮನೋಹರವಾ
ಗಿ, ಇರ್ದ್ದುದು. ... ... ... ... ... ॥೩೦॥

ಅಮರಾವತಿ, ಹತಬಲವಾಸಂ—ಹತ- ಸಂಹರಿಸಲ್ಪಟ್ಟ, ಬಲ- ಸೈನ್ಯಕ್ಕೆ, ವಾಸಂ- ಆಶ್ರಯವಾದ
ದ್ದು, ( * ಹತಬಲ- ಇಂದ್ರನಿಗೆ, ವಾಸಂ, ) ಆದುದು; ಅಳಕಾವತಿ, ನೋಳ್ಪೊಡೆ- ವಿಚಾರಿಸಿದರೆ, ಐಲಬಿ
ಲಪ್ರಭಾವಸಂತತಿಗೆ— ಐಲ- ಭೂಸಂಬಂಧವಾದ, ಬಿಲ- ರಂಧ್ರಗಳ, ಪ್ರಭಾವ- ತೇಜಸ್ಸಿನ, ಸಂಗತಿಗೆ-
ಸಂಬಂಧಕ್ಕೆ, ( † ಐಲಬಿಲ-ಕುಬೇರನ, ಪ್ರಭಾವ-ಪರಾಕ್ರಮದ, ಸಂಗತಿಗೆ, ) ಎಡೆಯಾಯ್ತು-ಆಸ್ಪದವಾ
ಯಿತು; ಭೋಗವತಿ- ಜಿಹ್ಮಗತಿದ್ವಿಜಿಹ್ವಸಂತತಿಗೆ- ಜಿಹ್ಮಗತಿ- ವಕ್ರಮಾರ್ಗವುಳ್ಳವರು, (ಅಂದರೆ) ಧರ್ಮಶಾ

---

* (ಅವ) ಹತ- ಸಂಹರಿಸಲ್ಪಟ್ಟ, ಬಲ- ಬಲಾಸುರನುಳ್ಳವನು. † (ಅವ) ಇಲಬಿಲೆಯೆಂಬಸ್ತ್ರೀ

ಳೆಪ್ಪಡಳಕಾವತಿಜಿಹ್ಮಗತಿ ದ್ವಿಜಿಹ್ವಸಂ ॥ ತತಿಗಮರ್ದಿಕ್ಕೆಭೋಗವತಿಯೆಂದೆನಿಸಿದ್ದುದೆನುತ್ತೆಸದ್ಬಲ । ಸ್ಥಿತಿನುತಗೇಹಸಾಧುಯುತಮಾಪ್ಪುರವೇಳಿಪ್ಪುದಾಪುರಂಗಳಂ ॥೩೧॥

ವ॥ ಆಪುರವನತಿದೂರವಬಹಿಃಪ್ರದೇಶಮಂಬಳಸಿ. * * * * * * *

ಕಂ॥ ನಂದನನಿಭಮಾಶ್ರಿತಮಾ । ನಂದನಮಧಿಗತಸಮಸ್ತದಂಪತಿನಿವಹಾ ॥ ನಂದನಮಾಪ್ಪೊಳಲಬಹಿ । ರ್ನಂದನಮೆಸೆದುದುನವೀನವೈಭವದಿಂದಂ॥ ... .. ॥೩೨॥

ಉ॥ ಚೆಂದಳಿರಾಂತಶೋಕೆಮಣಿಮಂಟಪಮಾರಡಿತಳ್ತಮಾಮರಂ । ಕುಂದದನೀಲಹರ್ಮ್ಯಮೆಳೆಮೊಗ್ಗೆಗಳೊಪ್ಪುವಮಲ್ಲಿಕಾಲತಾ॥ ವೃಂದಮೆಮುತ್ತುತೆತ್ತಿಸಿದಬಲ್ಮನೆಕೇತಕಿಸುತ್ತುವೇಲಿಕ । ಕ್ಕುಂದರಿಯಾಂತಕೋಟೆಮದನಂಗನೆಕಂಗೊಳಿಸಿದ್ದುದಾವನಂ ॥೩೩॥

ಚಂ॥ ಅಲರ್ಗುಡಿಚಾಮರಂನೆಗೆವಪೂವುಡಿಸೀಗುರಿತುಂಬಿಯಿಂಚರಂ। ಸುಲಲಿತಗಾನ

---

ಸ್ತ್ರವಿರುದ್ಧಮಾರ್ಗವುಳ್ಳವರು, ದ್ವಿಜಿಹ್ವ- ಸುಳ್ಳನಾಡುವವರು, ಇವರುಗಳ, ಸಂತತಿಗೆ-ಸಮೂಹಕ್ಕೆ, (ಜಿಹ್ಮಗತಿ-ಡೊಂಕಾದ ಗಮನವುಳ್ಳ, ‡ ದ್ವಿಜಿಹ್ವ-ಸರ್ಪಗಳ, ಸಂತತಿಗೆ,) ಅಮರ್ದ, ಇಕ್ಕೆ, ಆಶ್ರಯವು; ಎಂದು, ಎನಿಸಿರ್ದುದು; ಎನುತ್ತೆ, ಸದ್ಬಲ......ಯುತಂ— ಸದ್ಬಲಸ್ಥಿತಿ- ಒಳ್ಳೇಸೈನ್ಯದಇರುವಿಕೆಯು, ನುತಗೇಹ- ಶ್ಲಾಘ್ಯವಾದಮನೆಗಳು, ಸಾಧು- ಸತ್ಪುರುಷರು, ಇವರಿಂ, ಯುತಂ- ಕೂಡಿದ, ಆಪುರಂ- ಆಕಲ್ಯಾಣ ಪಟ್ಟಣವು, ಆಪುರಂಗಳಂ- ಮೇಲೆ ತಿಳಿಸಿದ ಅಮರಾವತ್ಯಾದಿ ಪತ್ತನಗಳನ್ನು, ಪ್ಪುದು- ತಿಸರ್ಕರಿಸುವದು. ... ... ... ... ... ... ॥೩೧॥

ಆಪುರದ, ಅನತಿದೂರದ- ಸಮೀಪದಲ್ಲಿರುವ, ಬಹಿಃಪ್ರದೇಶಮಂ-ಹೊರಗಣ ಅಂಗಣವನ್ನು, ಬಳಸಿ, ನಂದನನಿಭ- ಇಂದ್ರನಉಪವನಕ್ಕೆ ಸದೃಶವಾದ, ಆಶ್ರಿತಮಾನಂದನಂ— ಆಶ್ರಿತ-ಆಶ್ರಯಸಲ್ಪಟ್ಟ, * ಮಾನಂದನಂ- ಮನ್ಮಥನುಳ್ಳ, ಅಧಿಗತಸಮಸ್ತದಂಪತಿನಿವಹಾನಂದನಂ- ತನ್ನನ್ನು, ಹೊಂದಿದ ನಿಖಿಲದಂಪತಿಗಳ ಸಮೂಹಕ್ಕೆ ಸಂತೋಷವನ್ನುಂಟುಮಾಡುವ, ಆಪ್ಪೊಳಲ- ಆ ಪಟ್ಟಣದ, ಬಹಿರ್ನಂದನಂ- ಹೊರಗಿರುವ ಉಪವನವು, ನವೀನವೈಭವದಿಂದಂ- ನೂತನವಾದ ವಿಭವದಿಂದ,ಎಸೆದುದು. ... ॥೩೨॥

ಚೆಂದಳಿರಾಂತ- ಕೆಂಪುಚಿಗುರನ್ನು ಹೊಂದಿರುವ, ಅಶೋಕೆ- ಅಶೋಕವೃಕ್ಷವು, ಮಣಿಮಂಟಪಂ- ರತ್ನದಮಂಟಪವು, ಆರಡಿತಳ್ತ- ಭ್ರಮರಗಳಿಂದವ್ಯಾಪ್ತವಾದ, ಮಾಮರಂ- ಮಾವಿನಮರವು, ಕುಂದದ- ದೊಡ್ಡದಾದ, ನೀಲಹರ್ಮ್ಯಂ- ಇಂದ್ರನೀಲರತ್ನದ ಉಪ್ಪರಿಗೆಯು, ಎಳೆಮೊಗ್ಗೆಗಳ್- ಎಳೇಮೊಗ್ಗುಗಳು, ಒಪ್ಪುವ, ಮಲ್ಲಿಕಾಲತಾವೃಂದಮೆ- ಮಲ್ಲಿಗೆಬಳ್ಳಿಯಸಮೂಹವೇ, ಮುತ್ತುತೆತ್ತಿಸಿದ- ಮುಕ್ತಾಖಚಿತವಾದ, ಬಲ್ಮನೆ- ಬಲವಾದಮನೆಯು, ಕೇತಕಿಸುತ್ತುವೇಲಿ- ತಾಳೇಮರಗಳಬೇಲಿಯೇ, ಕಕ್ಕುಂದರಿಯಾಂತ- ಇಕ್ಕಟ್ಟಾದ, ಕೋಟೆ; ಎನೆ, ಆವನಂ, ಕಂಗೊಳಿಸಿದ್ದುದು- ಮನೋಹರವಾಗಿತ್ತು. ... ॥೩೩॥

ಅಲರ್ಗುಡಿ- ಪುಷ್ಪಗುಚ್ಛವೇ, ಚಾಮರು; ನೆಗೆವ- ಹಾರುವ, ಪೂವುಡಿ- ಪರಾಗವೇ, ಸೀಗುರಿ- ಮುಖರ್ಭಾಲು; ಕೋಕಿಲನಿಸ್ವನಂ- ಕೋಗಿಲೆಯಕೂಗೇ, ಉಗ್ಗಡಣೆ-ಹೊಗಳುವಿಕೆಯು, (ಆಗಿ,) ಇಂಬುವೆತ್ತು- ಮನೋಹರವಾಗಿ, ಇರಲ್ಕೆ- ಇರಲಾಗಿ, ಒಲಿವ- ಅಲ್ಲಾಡುವ, ಲತಾಳಿ- ಬಳ್ಳಿಗಳಲ್ಲೈನೇ, ನರ್ತಕಿಯರ್- ನಾಟ್ಯಗಾತಿಯರು; ಒಳ್ದಳಿರಾಂತ- ಒಳ್ಳೇಚಿಗುರನ್ನುಹೊಂದಿದ, ರಸಾಲಭೂಪಂ- ಮಾವಿನಮರವೇ,

---

ಯಪುತ್ರನು. ‡ (ಅವ) ದ್ವಿಜಿಹ್ವ- ಎರಡುನಾಲಿಗೆಯುಳ್ಳವುಗಳು. ... ... ॥೩೧॥

* (ಅವ) ಮಾ-ಲಕ್ಷ್ಮಿಯ, ನಂದನಂ- ಪುತ್ರನು. ... ... ... ॥೩೨॥

ಮುಗ್ಗಡಣೆಕೋಕಿಲನಿಸ್ವನಮಿಂಬುವೆತ್ತಿರ। ಲ್ಕೊಲೆವಲತಾಳನರ್ತಕಿಯ ರೊಳ್ತಳಿರಾಂತರ ಸಾಲಭೂಜಮು। ಜ್ವಳಮಣಿಪೀಠಮಾಗೆಬನಮೋಲಗಶಾಲೆಯೊಲಾಯ್ತು ಕಾವನಾ ॥೩೬॥

ಚಂ॥ ಅಳಿಕುಳಮಿಂದ್ರನೀಲಮಣಿರಾಜಿ ಪಸುರ್ಮಿಡಿಪಚ್ಚೆ ಪಲ್ಲವಾ। ವಳಿ ಪವಳಂಗಳೊಬ್ಬುಳಿ ಮಡಲ್ತೆಳೆಮಲ್ಲಿಗೆಯಚ್ಚಮೊಗ್ಗೆ ಪ॥ ಜ್ಜಳಿಸುವಮುತ್ತು ಕೆಂಬೊಗರನಾಳ್ದಫಳಂ ಪೊಸರನ್ನಮಾಗೆ ಮುಂ। ಜಳತರಪಂಚರತ್ನಗೃಹಮಾದುದು ಕಾಮನೃಪಂಗೆ ಮಾಮರಂ॥ ... ... ... ... ... ... ॥೩೭॥

ಉ॥ ನೆತ್ತಿಯಜುಂಜುಮೇಗಣಳಿಮಾಲೆಕರಾಸಿಯೆ ನೀಳ್ದಕೊಂಬುಮೆ। ಯ್ವೆತ್ತಿದಪುಷ್ಪರೇಣು ಪೊಸರಕ್ಕೆಶುಕಂಗಿಳಿದಾಳಿಗೇಣ್ಕೊನ॥ ಮತ್ತಪಿಕಸ್ವನಂ ಕಳಕಳಂಪೊಸಪೂಗುಡಿಜಲ್ಲಿಚೆಂದಳಿ। ರ್ಸುತ್ತಿದಕಾಸೆಯಾಗೆಗೆಲವಂದುದುಬೀರನನೊಂದುಮಾಮರಂ॥೩೮॥

ಚಂ॥ ವಿರಹಿವಿರೋಧಿಯಂತವಿಸಲೆಯ್ದುವ ಚೈತ್ರಚಮೂವರಂಗೆ ಸಾ। ದರಮತಿದರ್ಪಕಪ್ರಭುಕುಡಲ್ಪಿಡಿಸಿರ್ದ್ದನವೇಂದ್ರಗೋಪಮುಂ॥ ಹರಿಮಣಿಮಾಲೆಯುಂಗಿಳಿಯ

---

ಉಜ್ವಳಮಣಿಪೀಠಂ- ಮನೋಹರವಾದ ಆಸನವು, ಆಗೆ, ಬನಂ, ಕಾವನಾ- ಮನ್ಮಥನ, ಓಲಗಶಾಲೆಯೊಲ್- ಸಭಾಸ್ಥಲದಹಾಗೆ, ಆಯ್ತು. ... ... ... ... ॥೩೪॥

ಅಳಿಕುಳಂ- ಭ್ರಮರಸಮೂಹವು, ಇಂದ್ರನೀಲಮಣಿರಾಜಿ- ಇಂದ್ರನೀಲರತ್ನದ ಪಙ್ತಿಯು; ಪಸುರ್ಮಿಡಿ- ಹಸುರಾದಹೀಚು, ಪಚ್ಚೆ; ಪಲ್ಲವಾವಳಿ- ಚಿಗುರುಗಳಸಮೂಹವು, ಪವಳಂಗಳ-ಹವಳಗಳ, ಒಬ್ಬುಳಿ- ಸಮೂಹವು; ಮಡಲ್ತ- ಹಬ್ಬಿದ, ಎಳೆಮಲ್ಲಿಗೆಯ, ಅಚ್ಚಮೊಗ್ಗೆ- ಸ್ವಚ್ಛವಾದಮೊಗ್ಗುಗಳೇ, ಪಜ್ಜಳಿಸುವ- ಪ್ರಕಾಶಿಸುವ, ಮುತ್ತು; ಕೆಂಬೊಗರು- ಕೆಂಪುಕಾಂತಿಯನ್ನು, ಆಳ್ದ-ಹೊಂದಿದ, ಫಳಂ- ಹಣ್ಣುಗಳು, ಪೊಸರನ್ನಂ- ನೂತನವಾದರತ್ನವು, ಆಗೆ; ಮಾಮರಂ, ಕಾಮನೃಪಂಗೆ-ಮದನರಾಜನಿಗೆ, ಪಂಚರತ್ನದಗೃಹಂ- ಪಂಚರತ್ನಖಚಿತವಾದ ಮನೆಯು, ಆದುದು. ... ... ... ॥೩೭॥

ಮೇಗಣ- ಮೇಲಿರುವ, ಅಳಿಮಾಲೆ- ಭ್ರಮರಪಙ್ತಿಯೇ, ನೆತ್ತಿಯ- ತಲೆಯಲ್ಲಿರುವ, ಜುಂಜು- ವಕ್ರವಾದ ಕೂದಲು; ನೀಳ್ದಕೊಂಬೆ- ಉದ್ದವಾದ ಕೊಂಬೆಯೇ, ಕರಾಸಿ- ಹಸ್ತದಲ್ಲಿರುವಕತ್ತಿಯು; ಮೆಯ್ವೆತ್ತಿದ-ದೇಹದಲ್ಲಿವ್ಯಾಪಿಸಿರುವ, ಪುಷ್ಪರೇಣು-ಹೂವಿನಧೂಳಿಯೇ, ಪೊಸರಕ್ಕೆ-ನೂತನವಾದಭಸ್ಮವು; ಶುಕಂ- ಗಿಳಿಯೇ, ಗಿಳಿದಾಳಿ; ಕೊನರ್- ಕೊಂಬೆಯತುದಿಯೇ, ಗೇಣ್- ಸುರಗಿಯು; ಮತ್ತಪಿಕಸ್ವನಂ- ಮದವಿಶಿಷ್ಟವಾದ ಕೋಗಿಲೆಯಶಬ್ದವೇ, ಕಳಕಳಂ- ಕೋಲಾಹಲಶಬ್ದವು; ಪೊಸಪೂಗಡಿ- ನೂತನವಾದ ಹೂವಿನಗೊಂಚಲೇ, ಜಲ್ಲಿ- ಜಾಲರಿಯು; ಚೆಂದಳಿರ್- ಕೆಂಪಾದಚಿಗುರೇ, ಸುತ್ತಿದ, ಕಾಸೆ, ಆಗೆ; ಒಂದುಮಾಮರಂ, ಬೀರನು- ಪರಾಕ್ರಮಶಾಲಿಯನ್ನು, ಗೆಲವಂದುದು- ಗೆದ್ದಿತು. (ಅಂದರೆ ತಿರಸ್ಕರಿಸಿತು) ... ॥೩೮॥

ಕರಮೆನೆ- ಮನೋಹರವಾಗುವಹಾಗೆ- ಶಾಖೆತಳ್ತ- ಕೊಂಬೆಯಲ್ಲಿ ತುಂಬಿರುವ, ತಳಿರಿಂದೆ- ಚಿಗುರಿನಿಂದಲೂ, ಅಳಿಯಿಂ- ತುಂಬಿಯಿಂದಲೂ, ಗಿಳಿಯಿಂ- ನಿರಾಕುಳಂ- ನಿಬಿಡವಾದ, ಆಮ್ರಂ- ಮಾವಿನಮರವು, ವಿರಹಿವಿರೋಧಿಯಂ- ವಿಯೋಗಿಗಳೆಂಬ ಶತ್ರುಗಳನ್ನು, ತವಿಸಲ್- ನಾಶಪಡಿಸುವದಕ್ಕೋಸ್ಕರ, ಎಯ್ದುವ- ಹೋಗುವ, ಚೈತ್ರಚಮೂವರಂಗೆ-ವಸಂತನೆಂಬ ದಳವಾಯಿಗೆ, ಸಾದರಮತಿ- ಪ್ರೀತಿಯಿಂದಕೂಡಿದಬುದ್ಧಿಯುಳ್ಳ, ದರ್ಪಕಪ್ರಭು-ಮನ್ಮಥನೆಂಬರಾಜನು, ಕುಡಲ್- ಕೊಡುವದಕ್ಕೋಸ್ಕರ, ಪಿಡಿಸಿರ್ದ್ದ-

ತಾಳಿಯುನಾಂತವೊಲಾವು ವೊಪ್ಪುಗುಂ । ಕರವೆನೆ ಶಾಖೆತಳ್ತ ಶಳರಿಂದಳಿಯುಂಗಿಳಿಯಿಂ ನಿರಾಕುಳಂ॥ ... .. .. ... ... ... ॥೩೭॥

ಉತ್ಸಾಹವೃತ್ತ ॥ ಶ್ಯಾಮಳಾಂಗವಾಗಿತೀವಿತಳ್ತಭೃಂಗಬೃಂದದಿಂ । ಕೋಮಳ ಪ್ರವಾಳಶಾಖೆಯೆಂಬದೀರ್ಘಶುಂಡದಿಂ ॥ ವಾಮವಾಗಿತಾಳ್ದಮಾಕರಂದದಾನವಾರಿಯಿಂ । ಕಾಮಸಾಮಜೋಪಮಾನವಾದುದೊಂದುಮಾಮರಂ॥ * * * * * ॥೩೮॥

ಕಂ॥ ಬಂದಿಂದಿರಬೃಂದಂನಿಂ । ದೊಂದಿಮುಸುಂಕಿನೀಲಪಟದಂತಿರೆಮಾ ॥ ಕಂದಂಮ ಧುಮತ್ತಂಬಲ । ನಂದದೆರಂಜಿಸಿದುದುದ್ಗಮಪ್ರಜಧವಳಂ॥ ... ... ... ॥೩೯॥

ಉ ॥ ಚೆಂದಳಿರ್ಗೆಂಪು ಮೇಲೆಪೊಸಸಿಂದುರದಂತಿರೆ ತಳ್ತಕೊಂಬುಕೈ । ಯಂ ದಮನಾನೆ ಕೋರಕರದಂ ತನಗೊಪ್ಪಿರೆ ನಾಗಬಂಧದಂ ॥ ತೊಂದಿರೆ ಸುತ್ತಮಲ್ಲಿಗೆ ಮದಂ ಮಕರಂದಮದಾಗೆ ಕರ್ಣಮಿಂ । ದಿಂದಿರಬೃಂದಮೆಂದೆನಿಸೆ ದಂತಿಮುಖಂಗೆಣೆಯಾಯ್ತು ಮಾಮರಂ॥ ... .. ... .. ... ... ॥೪೦॥

---

ಹಿಡಿಸಿರುವ, ನವೇಂದ್ರಗೋಪಮಂ-ನೂತನವಾದ ಕೆಂಪುಗಳನ್ನು, ಹರಿಮಣಿ ಮಾಲೆಯಂ- ಇಂದ್ರನೀಲರತ್ನದ ಮಾಲಿಕೆಯನ್ನು, ಗಿಳಿಯತಾಳಿಯಂ- ಆಂತವೊಲ್- ಧರಿಸಿದಹಾಗೆ, ಒಪ್ಪುಗುಂ. ... ॥೩೭॥

ಒಂದು ಮಾಮರಂ, ತೀವಿ- ತುಂಬಿ, ತಳ್ತ- ವ್ಯಾಪಿಸಿದ, ಭೃಂಗಬೃಂದದಿಂ- ತುಂಬಿಗಳಗುಂಪಿನಿಂದ, ಶ್ಯಾಮಳಾಂಗಮಾಗಿ- ಕಪ್ಪಾದದೇಹವುಳ್ಳದ್ದಾಗಿ, ಕೋಮಳಪ್ರವಾಳಶಾಖೆಯೆಂಬ- ಮೃದುವಾದ ಚಿಗುರುಗಳುಳ್ಳಕೊಂಬೆಯೆಂಬ, ದೀರ್ಘಶುಂಡದಿಂ- ಉದ್ದವಾದ ಸೊಂಡಿಲಿಂದ; ವಾಮಮಾಗಿ- ಮನೋಹರವಾಗಿ, ತಾಳ್ದ- ಧರಿಸಿದ, ಮಾಕರಂದದಾನವಾರಿಯಿಂ- ಮಕರಂದವೆಂಬ ಮದೋದಕದಿಂದ, ( ಕೂಡಿ ) ಕಾಮಸಾಮಜೋಪಮಾನಂ- ಮನ್ಮಥನ ಆನೆಗೆಸದೃಶವಾದದ್ದು, ಆದುದು. ... ... ॥೩೮॥

ಉದ್ಗಮಪ್ರಜಧವಳಂ- ಹೂವುಗಳ ಗುಂಪಿನಿಂದ ಶುಭ್ರವಾದ, ಮಧುಮತ್ತಂ- ಮಕರಂದಭರಿತವಾದ, ಮಾಕಂದಂ- ಮಾವಿನಮರವು, ಬಂದ, ಇಂದಿಂದಿರಬೃಂದಂ-ಭ್ರಮರಗಳಸಮೂಹವು, ನಿಂದು, ಒಂದಿ, ಮುಸುಂಕಿ-ಆಚ್ಛಾದಿಸಿ, ನೀಲಪಟದಂತೆ- ಕಪ್ಪುಬಟ್ಟೆಯಹಾಗೆ, ಇರೆ; ಉದ್ಗಮಪ್ರಜಧವಳಂ- ಹೂವುಗಳಗುಂಪಿನಿಂತೆ ಶುಭ್ರನಾದ, ಮಧುಮತ್ತಂ- ಮದ್ಯಪಾನದಿಂದಮದಿಸಿದ, ಬಲನಂದದೆ- ಬಲರಾಮನಹಾಗೆ, ರಂಜಿಸಿದುದು. 'ನೀಲಾಂಬರೋರೌಹಿಣೇಯಃ' ಎಂದು ಕೋಶವಚನವಿರುವದರಿಂದಲೂ, 'ಹಲಿಪ್ರಿಯಾ' ಎಂದು ಮದ್ಯಕ್ಕೆ ನಾಮವಿರುವದರಿಂದಲೂ, ಬಲರಾಮನಲ್ಲಿ ಕಪ್ಪುಬಟ್ಟೆಯನ್ನು ಧರಿಸಿರುವಿಕೆಯೂ, ಮದ್ಯಪಾನವೂ ವ್ಯಕ್ತವಾಗಿರುವದು. ... ... ... ... ... ॥೩೯॥

ಚೆಂದಳಿರ್ಗೆಂಪು- ಕೆಂಪಾದಚಿಗುರಿನ ಆರುಣ್ಯವು, ಮೇಲೆ, ಪೊಸಸಿಂದುರದಂತೆ- ಹೊಸದಾದ ಚಂದ್ರದ ಹುಡಿಯಂತೆ, ಇರೆ; ತಳ್ತ, ಕೊಂಬು-ಕೊಂಬೆಯು, ಕೈಯಂದಮಂ-ಸೊಂಡಲಿನಚಂದವನ್ನು, ಆನೆ- ಹೊಂದಲು; ತನಗೆ, ಕೋರಕರದಂ– ಮೊಗ್ಗೆಂಬಕೊಂಬು, ಒಪ್ಪಿಗೆ; ಅದುಮಕರಂದಂ- ಆ ಮಕರಂದವು, ಮದಂ- ಮದೋದಕವು, ಆಗೆ; ಇಂದಿಂದಿರಬೃಂದಂ- ಭ್ರಮರಗಳಸಮೂಹವು, ಕರ್ಣಂ- ಕಿವಿಯು, ಎಂದೆನಿಸ; ಮಾಮರಂ, * ದಂತಿಮುಖಂಗೆ- ಗಣಪತಿಗೆ, ಎಣೆಯಾಯ್ತು- ಸದೃಶವಾಯ್ತು. ... ॥೪೦॥

---

* (ಅವ) ದಂತಿ- ಆನೆಯು, ಮುಖ- ಮುಖವುಳ್ಳವನು. ... ... ॥೪೦॥

ಕಂ ॥ ನಲಿದುಮಧುವೀಂಟಸೊರ್ಕ್ಕಿಂ । ದಲೆದೊಡೆಸುಮನಃಪ್ರತಾನಮಂಮಧುವಳಿ
ಸಂ॥ಕುಳಮಂಕಟ್ಟಿಟ್ಟವೊಲಿರೆ। ಫಲವೃಂದಂಪಣ್ತನೇರಿಲೆಸೆದುದುಬನದೊಳ್ ... ॥೪೧॥

ಕಂ ॥ ಸಸಿತನ್ನಪೆಸರವಿಲ್ಲಿಯ । ಸಸಿಗಳೆನುತ್ತವಕೆಪಚ್ಚೆಗಳಸದೊಳ್ಸುಧಾ ॥ ರಸ
ಮಂತೀವಿತ್ತೊಡದಂ ।ಪೊಸತೆನೆಪೊತ್ತಂತೆಕಾತತೆಂಗೆಸೆದಿರ್ಕ್ಕುಂ॥ ... ... ॥೪೨॥

ಕಂ॥ ಮೇಲೆಯುಬ್ಬುವಖೇಚರಿಯರ। ಕಾಲಲತಿಗೆತಾಂಗೆಕೆಂಕಮಾಳ್ದವೊಪೇಳೆಂ॥ಬಾಲಾ
ಪಂಮಿಗೆಮಿಸುಗಿದು । ವಾಲೋಕಕಕೆಂಪನಾಳ್ದಪೂಗಫಲಂಗಳ್॥ ... ... ॥೪೩॥

ಕಂ॥ ಬಿರಯಿಗಳಸುಯ್ಯಬಿಸುಪಿಂ । ಬಿರಿದುಗಜರಾಜಮಣಿಕರಂಡಕಮೆಂಬಂ ॥ ತಿರೆ
ಬಿರಿದದಾಡಿಮಂಕೆಂ । ಬರಲುಗುವಂತುಗುವುದದರಬೀಜಸಮಾಜಂ ... ... . ॥೪೪॥

ಚಂ ॥ ಅಳಿಮದನಂಗೆಬಿಲ್ಲತಿರುವಾಗಿಬಳಲ್ದವಿವೆಂದುಚೈತ್ರನು ।ಮ್ಮಳಿಸುತವಕ್ಕೆಸಾ
ರಮಧುದೀವಿತರಂಗೊಳಿಸಿಟ್ಟಬೆಳ್ಳಿಯೊ ॥ ಳ್ಪಳುಕಿನಪೊನ್ನಬಟ್ಟಲಸುಪಾತ್ರೆಯವೊತ್ತ

---

(ಅಳಿಸಂಕುಳಂ) ಮಧುವ- ಮದ್ಯವನ್ನು, (ಮಕರಂದವನ್ನು,) ಈಂಟಿ- ಪಾನಮಾಡಿ, ನಲಿದು- ಸಂತೋಷಪಟ್ಟು, ಸೊರ್ಕ್ಕಿಂದೆ- ಮದದಿಂದ, ಸುಮನಃಪ್ರತಾನಮಂ- ವಿದ್ವಾಂಸರಸಮೂಹವನ್ನು, (ಹೂವುಗಳಸಮೂಹವನ್ನು,) ಅಲೆದೊಡೆ- ಪೀಡಿಸಲಾಗಿ, ಮಧು- ವಸಂತನು, ಅಳಿಸಂಕುಲಮಂ- ತುಂಬಿಗಳಗುಂಪನ್ನು, ಕಟ್ಟಿ, ಇಟ್ಟವೊಲ್, ಫಲವೃಂದಂ- ಹಣ್ಣುಗಳಗುಂಪು, ಇರೆ; ಬನದೊಳ್, ಪಣ್ತ- ಹಣ್ಣನ್ನು ಬಿಟ್ಟ ನೇರಿಲ್- ನೇರಿಲಮರವು, ಎಸೆದುದು. ... ... ... ॥೪೧॥

ಸಸಿ- ಚಂದ್ರನು, ಇಲ್ಲಿಯಸಸಿಗಳ್- ಈ ವನದಲ್ಲಿರುವ ಸಸಿಗಳು, ತನ್ನ, ಪೆಸರವು- ಹೆಸರುಳ್ಳವುಗಳು, ಎನುತ್ತೆ, ಅವಕೆ- ಆಸಸಿಗಳಿಗೆ, ಪಚ್ಚೆಗಳಸದೊಳ್- ಪಚ್ಚೆಯಿಂಮಾಡಿದಕಳಸದಲ್ಲಿ, ಸುಧಾರಸಮಂ- ಅಮೃತವನ್ನು, ತೀವಿ- ತುಂಬಿ, ಇತ್ತೊಡೆ- ಕೊಡಲಾಗಿ, ಅದಂ- ಆಕಳಸವನ್ನು, ಪೊಸತೆನೆ- ಅಪೂರ್ವವಾಗುವಹಾಗೆ, ಪೊತ್ತಂತೆ- ಹೊತ್ತುಕೊಂಡಿರುವಹಾಗೆ, ಕಾತ- ಕಾಯನ್ನುಬಿಟ್ಟಿರುವ, ತೆಂಗು- ತೆಂಗಿನಮರವು, ಎಸೆದಿರ್ಕ್ಕುಂ, ... ... ... ... ... ॥೪೨॥

ಮೇಲೆ, ಎಱ್ಬುವ- ಸಂಚರಿಸುವ, ಖೇಚರಿಯರ-ದೇವತಾಸ್ತ್ರೀಯರ, ಕಾಲ- ಪಾದದಲ್ಲಿಹಚ್ಚಿರುವ ಅಲತಿಗೆ- ಅರಗಿನರಸವು, ತಾಗೆ- ಸೋಕಲು, ಕೆಂಕಮಾಳ್ದವೋ-ಕೆಂಪಾದವೋ, ಪೇಳ್, ಎಂಬ, ಆಲಾಪಂ- ಸಂಭಾಷಣೆಯು, ಮಿಗೆ- ಅಧಿಕವಾಗಲು, ಕೆಂಪಂ- ಆರುಣ್ಯವನ್ನು, ಆಳ್ದ, ಪೂಗಫಲಂಗಳ್- ಅಡಕೆಯ ಕಾಯಿಗಳು, ಆಲೋಕಕ್ಕೆ- ನೋಟಕ್ಕೆ, ಮಿಸುಗಿದುವು- ಪ್ರಕಾಶಿಸಿದವು. ... ... ॥೪೩॥

ಬಿರಯಿಗಳ- ವಿರಹಿಗಳ, ಸುಯ್ಯ- ನಿಟ್ಟುಸುರಿನ, ಬಿಸುಪಿಂ- ಔಷ್ಣ್ಯದಿಂದ, ಬಿರಿದ, ಅಂಗಜರಾಜ ಮಣಿಕರಂಡಕಂ- ಮನ್ಮಥರಾಜನ ರತ್ನದಬರಣಿಯು, ಎಂಬಂತೆ, ಬಿರಿದ, ದಾಡಿಮಂ- ದಾಳಿಂಬದಹಣ್ಣು, ಇರೆ; ಕೆಂಬರಲ್- ಕೆಂಪುರತ್ನಗಳು, ಉಗುವಂತೆ- ಸುರಿಯುವಹಾಗೆ, ಅದರ- ಆದಾಳಿಂಬದಹಣ್ಣಿನ, ಬೀಜಸಮಾಜಂ- ಬೀಜಸಮುದಾಯವು, ಉಗುವುದು- ಸುರಿಯುವದು. ... ... ... ॥೪೪॥

ಮಲ್ಲಿಯ- ಮಲ್ಲಿಗೆಯ, ಕರ್ಣಿಕಾರದ- ಬೆಟ್ಟದಾವರೆಯ, ಉಳ್ಳಲರ್- ಹೂವುಗಳು, ಇವು ಅಳಿ- ಈಭ್ರಮರಗಳು, ಮದನಂಗೆ, ತಿರುವಾಗಿ- ಸಿಂಜಿನಿಯಾಗಿ, ಬಳಲ್ದವು, ಆಯಾಸಪಟ್ಟವು, ಎಂದು- ಚೈತ್ರಂ- ವಸಂತನು, ಉಮ್ಮಳಿಸುತೆ- ಚಿಂತಿಸುತ್ತ, ಅವಕ್ಕೆ- ಆತುಂಬಿಗಳಿಗೆ, ಸಾರಮಧುದೀವಿ- ಶ್ರೇಷ್ಠವಾದ ಮಕರಂದವನ್ನು ತುಂಬಿ, ತರಂಗೊಳಿಸಿ- ಲೈನಾಗಿ, ಇಟ್ಟ, ಬೆಳ್ಳಿಯ, ಒಳ್ಪಳುಕಿನ- ಒಳ್ಳೇಸ್ಫಟಿಕದ, ಪೊನ್ನ-

ದವೆಲ್ವನಾಳ್ದುಕಂ । ಗೊಳಿಸಿದುದುಳ್ಳಲರ್ಸುಪಯೂಥಿಯಮಲ್ಲಿಯಕರ್ಣಿಕಾರದಾ ॥೪೫॥

ಕಂ॥ ಬನಗಳ್ತ್ತಲೆಯೊಳ್ತೊಳಗುವ । ಕನಕಪ್ರಭಚಂಪಕಪ್ರದೀಪಕದಂಬ ॥ ಕ್ಕನಿ
ಶಂಸುಗಿದೋಡುವಭೃಂ । ಗನಿಚಯಮುಂತಿಮಿರದುರುಳಿಯಾಗಲೆವೇಳ್ಕುಂ ... ॥೪೬॥

ಚಂ॥ ತೊಳಗುವಸಂಜೆಗೆಂಪೆನಿಸೆಚೆಂದಳಿರ್ಗೆಂಪುಮಡಲ್ತಮಲ್ಲಿಯ । ರ್ಗಳನವಕುಟ್ಮ
ಲಾಳಿಯುಡುರಾಜಿಯೊಲೊಪ್ಪೆಮದಾಳಿಬೃಂದಮ ॥ ಲ್ಲಿಳಿಪೆಮಬ್ಬಿನಂತಿರೆವನಾಭ್ರದೊಳೆ
ಳ್ದುಪರಾಗರೇಖೆಯು । ಜ್ವಳಿಪುದುಧೂಮಕೇತುವೆನೆಕಣ್ಗೆವಿಯೋಗಿಜನವ್ರತಾನದಾ ॥೪೭॥

ಕಂ ॥ಬನದೆಡೆವಂದತತ್ಪುರದಮುಗ್ಧವಧೂನಿವಹಕ್ಕೆಮಾರಭೂ । ಪನಬೆಸದಿಂದೆವಂದ
ಗತಿಯಂಕಳಹಂಸೆಮದಾಳಿಮಂಜುಳ ॥ಸ್ವನಮನುದಾರತಾರರವಮಂಕಳಕಂಠನನೂನವಾಣಿ
ಯಂ । ಘನಶುಕಮಿಂಗೊರಲ್ದನಿಯನೊಲ್ದುಪದೇಶಿಪುದಲ್ಲಿಪಾರಿವಂ ॥ ... ॥೪೮॥

ಮತ್ತೇ ॥ ಗಿಳಿನೀನೋಡೆಲೆತುಂಬಿಪಾಡುನರುಗಂಪಂಕಾಣ್ಕೆಗೆಯ್ಬಂದುಮಂ । ಜುಳ

---

ಸುವರ್ಣದ, ಬಟ್ಟಲ- ಬಟ್ಟಲಿನ, ಸುಪಾತ್ರೆಯು- ಒಳ್ಳೇಪಾತ್ರೆಯು, ಮೊತ್ತದ- ಸಮೂಹದ, ಎಲ್ವಂ- ಆ
ಳ್ದು, ಕಂಗೊಳಿಸಿದ್ದುದು. ... ... ... ... ॥೪೫॥

ಬನಗಳ್ತಲೆಯೊಳ್- ವನವೆಂಬಕತ್ತಲೆಯಲ್ಲಿ, ತೊಳಗುವ- ಪ್ರಕಾಶಿಸುವ, ಕನಕಪ್ರಭಚಂಪಕಪ್ರದೀಪ
ಕದಂಬಕ್ಕೆ— ಕನಕ- ಸುವರ್ಣದ, ಪ್ರಭ- ಕಾಂತಿಯಂತಿರುವ ಕಾಂತಿಯುಳ್ಳ, ಚಂಪಕ- ಸಂಪಗೆಹೂವೆಂಬ,
ಪ್ರದೀಪ- ಪ್ರಕೃಷ್ಟವಾದದೀಪಗಳ, ಕದಂಬಕ್ಕೆ- ಸಮೂಹಕ್ಕೆ, ಅನಿಶಂ- ನಿರಂತರದಲ್ಲೂ, ಸುಗಿದು- ಭ
ಯಪಟ್ಟು, ಓಡುವ, ಭೃಂಗನಿಚಯಮುಂ- ತುಂಬಿಯಸಮೂಹವೂಕೂಡ, ತಿಮಿರದ- ಕತ್ತಲೆಯ, ಉರುಳಿ
ಯಾಗಲೆವೇಳ್ಕುಂ— ಸಮೂಹವೇ ಆಗಬಹುದು. ... ... ... ॥೪೬॥

ಚೆಂದಳಿರ್ಗೆಂಪು, ತೊಳಗುವ, ಸುಂಜೆಗೆಂಪು, ಎನಿಸೆ; ಮಡಲ್ತ- ಹಬ್ಬಿದ, ಮಲ್ಲಿಯ- ಮಲ್ಲಿಗೆಬಳ್ಳಿಯ,,
ಅಲರ್ಗಳ- ಹೂವುಗಳ, ನವಕುಟ್ಮಲಾಳಿ- ಹೊಸಮೊಗ್ಗುಗಳಸಮೂಹವು, ಉಡುರಾಜಿಯೊಲ್- ನಕ್ಷತ್ರಪ
ಙ್ತಿಯಂತೆ, ಒಪ್ಪೆ; ಮದಾಳಿಬೃಂದಂ- ಮದವಿಶಿಷ್ಟವಾದ ತುಂಬಿಗಳಗುಂಪು, ಅಲ್ಲಿ, ಇಳಿಪ, ಮಬ್ಬಿನಂತೆ-
ಕತ್ತಲೆಯಂತೆ, ಇರೆ; ವನಾಭ್ರದೊಳ್- ವನವೆಂಬ ಅಂತರಿಕ್ಷದಲ್ಲಿ, ಎಳ್ದು, ಪರಾಗರೇಖೆ ಧೂಳಿಯಗೆರೆಯು;
ಧೂಮಕೇತು, ಎನೆ; ವಿಯೋಗಿಜನವ್ರತಾನದ- ವಿರಹಿಜನಗಳಸಮೂಹದ, ಕಣ್ಗೆ- ಉಜ್ವಳಿಪುದು- ಪ್ರಕಾ
ಶಿಸುವದು. ... ... .. ... ... ॥೪೭॥

ಬನದೆಡೆವಂದ- ವನದಸಮೀಪಕ್ಕೆ ಬಂದ, ತತ್ಪುರದ- ಆಕಲ್ಯಾಣಪಟ್ಟಣದ, ಮುಗ್ಧವಧೂನಿವಹ
ಕ್ಕೆ,- ಮುಗ್ಧಸ್ತ್ರೀಯರಗುಂಪಿಗೆ, ಮಾರಭೂಪನ- ಮನ್ಮಥರಾಜನ, ಬೆಸದಿಂದೆ- ಆಜ್ಞೆಯಿಂದ, ಅಲ್ಲಿ- ಆ
ವನದಲ್ಲಿ, ಕಳಹಂಸೆ- ಅವ್ಯಕ್ತಮಧುರಧ್ವನಿಯುಳ್ಳ ಹಂಸಪಕ್ಷಿಯು, ಮಂದಗತಿಯಂ- ಮೆಲ್ನಡೆಯನ್ನು; ಮ-
ದಾಳಿ- ಮದವಿಶಿಷ್ಟವಾದಭ್ರಮರವು, ಮಂಜುಳಸ್ವನಮಂ- ಮನೋಹರವಾದಶಬ್ದವನ್ನು: ಕಳಕಂಠಂ-
ಕೋಗಿಲೆಯು, ಉದಾರತಾರರವಮಂ- ಉತ್ಕೃಷ್ಟವಾದಉಚ್ಚೈರ್ಧ್ವನಿಯನ್ನು; ಘನಶುಕಂ, ಅನೂನ
ವಾಣಿಯಂ- ಶ್ರೇಷ್ಠವಾದಮಾತನ್ನು; ಪಾರಿವಂ- ಕಪೋತಪಕ್ಷಿಯು, ಇಂಗೊರಲ್ದನಿಯಂ- ಮಧುರವಾ
ದ ಕಂಠಶಬ್ದವನ್ನು; ಒಲ್ದು- ಪ್ರೀತಿಸಿ, ಉಪದೇಶಿಪುದು- ಬೋಧಿಸುವದು. ... ॥೪೮॥

ಅಲ್ಲಿ, ಉದ್ಯಾನಸ್ಮರಾಸ್ಥಾನದೊಳ್- ಆಉಪವನವೆಂಬ ಮನ್ಮಥಸಭೆಯಲ್ಲಿ, ಕೋಕಿಳಚಂಚತ್ಪ್ರತಿ
ಹಾರಕಂ- ಕೋಗಿಲೆಯೆಂಬ ಚಪಲದ್ವಾರಪಾಲಕನು, ಗಿಳಿ, ನೀಂ, ಓಡು; ಎಲೆತುಂಬಿ, ಪಾಡು- ಹಾಡು;

ಮಂದ ನಿಲಕೇಕಿನರ್ತಿಸುಲಸನ್ಮಾಕಂದಮೇಬಾಣಸು ॥ ಕುಳಮಂನೀಡುವಸುತರಾಜಮಣಿ ಯೆಂದಾದರ್ದಮತ್ತಲ್ಲಿಕೋ । ಕಿಳಚಂಚತ್ಪ್ರತಿಹಾರಕಂಜಡಿಗುಮುದ್ಯಾನಸ್ಮರಾಸ್ಥಾನದೊಳ್ ॥ ... ... ... ... ... ... ॥೪೯॥

ಚಂ ॥ ರತಿಮದನರ್ಕಳಂ ಪದೆದು ಪೂಜಿಸಲೆಂದುವಸಂತರಾಜನು । ನ್ನತಮೆನೆತಾನೆನಿರ್ಮಿಸಿನಪೂವಿನಕಾವಣದಂತೆರಂಜಿಸಿ ॥ ತ್ತತುಳತವಾಗಿಪೂತಪೊಸವೊಲ್ಲೆಯುಮಾಧವಿಯುಉದ್ಘಯೂಥಿಕಾ । ಲತಿಕೆಯುಮಾಲತೀಲತೆಯುಮಲ್ಲಿಗೆವಳ್ಳಿಯುಚೆಲ್ವಚಪ್ಪರಂ ॥ ... ॥೫೦॥

ಚಂ॥ ಎಲರಿರದೂದೆಝುಲ್ಲನುಗುತಿರ್ಪ್ಪಲರೊಳ್ಮಳೆಪುಷ್ಪವೃಂದದಿಂ । ಸುರಿವಮರಂದಶೀಕರಮೆಮಂಜುವಿಯೋಗಿಯಕಾಯಕಾಯಜಾ ॥ ಗ್ನಿರುಚಿಯಕಾಯ್ಪುಬೇಸಗೆಯದಾಗಿರೆಕುಂದದುಕೇಕಿಯಾಟಮುಂ । ಸರಸಿಯಕೈರವಾವಳಿಯಸಮ್ಮದಮುಂಮುದಮುಂಸರೋಜದಾ ॥ ... ... ... ... ... ... ॥೫೧॥

ಚಂ ॥ ತಿಳಿಗೊಳದಲ್ಲಿಸುತ್ತಿಸುಳಿದೆತ್ತಿಸರೋಜವರಾಗಪೂಗಮಂ । ತಳೆದೆಳೆದುಂಬಿಬೆಂಬಳಿಯೊಳಟ್ಟೆಮರಾಳದಮಯ್ಯತುಪ್ಪಳಂ ॥ ತುಳಿದೆಣೆವಕ್ಕಿಕೂಟದೊಳುರುಳ್ಚಿದ

---

ಮಂಜುಳಮಂದಾನಿಲ- ಮನೋಹರನಾದಮಂದಮಾರುತನೇ, ಬಂದು- ಕಾಣ್ಕೆಗೆಯ್- ಕಾಣ್ಕೆಯನ್ನು ತಂದುಕೊಡು; ಕೇಕಿ- ನವಿಲೇ, ನರ್ತಿಸು- ನಾಟ್ಯಮಾಡು; ಲಸನ್ಮಾಕಂದಮೇ- ಪ್ರಕಾಶಿಸುವ ಮಾವಿನಮರವೇ, ಬಾಣಸಂಕುಳಮಂ- ಬಾಣಗಳಗುಂಪನ್ನು, ನೀಡು- ಕೊಡು; ವಸಂತರಾಜ, ಮಣಿ- ನಮಸ್ಕರಿಸು; ಎಂದು, ಆರ್ದ್ರಾರ್ದ- ಗಟ್ಟಿಯಾಗಿ ಕೂಗಿಕೂಗಿ, ಮತ್ತೆ, ಜಡಿಗುಂ- ಬೆದರಿಸುವದು. ... ... ॥೪೯॥

ಅತುಳತಮಾಗಿ- ಅಸದೃಶವಾಗಿ, ಪೂತ- ಹೂವನ್ನುಬಿಟ್ಟಿರುವ, ಪೊಸವೊಲ್ಲೆಯು, ಮಾಧವಿಯು- ವಸಂತದೂತೀಲತೆಯು, ಉದ್ಘಯೂಥಿಕಾಲತಿಕೆಯು-ಶ್ರೇಷ್ಠವಾದಕಾಡುಮಲ್ಲಿಗೆಬಳ್ಳಿಯು, ಮಾಲತೀಲತೆಯು- ಜಾಜೀಬಳ್ಳಿಯು, ಮಲ್ಲಿಗೆವಳ್ಳಿಯು, ಚೆಲ್ವ- ಸುಂದರವಾದ, ಚಪ್ಪರಂ, ವಸಂತರಾಜಂ, ರತಿಮದನರ್ಕಳಂ, ಪದೆದು- ಪ್ರೀತಿಸಿ, ಪೂಜಿಸಲೆಂದು- ಪೂಜಿಸಬೇಕೆಂದು, ಉನ್ನತಮೆನೆ- ದೊಡ್ಡದಾಗಿ, ತಾನೆ, ನಿರ್ಮಿಸಿದ- ರಚಿಸಿದ, ಪೂವಿನಕಾವಣದಂತೆ- ಹೂವಿನಚಪ್ಪರದಹಾಗೆ, ರಂಜಿಸಿತ್ತು. ... ... ॥೫೦॥

ಎಲರ್- ಗಾಳಿಯು, ಇರದೆ- ಬಿಡದೆ, ಊದೆ- ಬೀಸಲು, ಝುಲ್ಲನೆ, ಉಗುತಿರ್ಪ್ಪ- ಸುರಿಯುತ್ತಿರುವ, ಅಲರ್- ಹೂವೇ, ಒಳ್ಮಳೆ, ಆಗಿ, ಇರೆ; ಕೇಕಿಯ- ನವಿಲಿನ, ಆಟವುಂ; ಪುಷ್ಪವೃಂದದಿಂ- ಹೂವಿನಗುಂಪಿನಿಂದ, ಸುರಿವ, ಮರಂದಶೀಕರಮೆ- ಮಕರಂದದಹನಿಗಳೇ, ಮಂಜು- ಹಿಮವು, ಆಗಿ, ಇರೆ; ಸರಸಿಯ- ಸರೋವರದಲ್ಲಿರುವ, ಕೈರವಾವಳಿಯ- ಬಿಳೀನೈದಿಲೆಗಳಸಮೂಹದ, ಸಮ್ಮದಮುಂ- ಸಂತೋಷವೂ; ವಿಯೋಗಿಯ- ವಿರಹಿಯ, ಕಾಯಕಾಯಜಾಗ್ನಿರುಚಿಯ- ಶರೀರದಲ್ಲಿರುವ ಮನ್ಮಥಾಗ್ನಿಜ್ವಾಲೆಯು, ಕಾಯ್ಪು- ಔಷ್ಣ್ಯವು, ಅದುಬೇಸಗೆ, ಆಗಿ, ಇರೆ,ಸರೋಜದಾ- ಕಮಲದ, ಮುದಮುಂ- ಸಂತೋಷವೂ, ಕುಂದದು- ಕಮ್ಮಿಯಾಗದು. ... ... ... ... ... ... ॥೫೧॥

ಮಂದಮಾರುತಂ- ತಿಳಿಗೊಳದಲ್ಲಿ, ಸುತ್ತಿ, ಸುಳಿದು- ಸಂಚರಿಸಿ, ಸರೋಜವರಾಗಪೂಗಮಂ- ಕಮಲದಧೂಳಿಯ ಸಮೂಹವನ್ನು, ಎತ್ತಿ, ತಳೆದು- ಧರಿಸಿ; ಎಳೆದುಂಬಿ- ಬಾಲಭ್ರಮರವು, ಬೆಂಬಳಿಯೊಳ್- ಹಿಂಗಡೆಯಲ್ಲಿ, ಅಟ್ಟೆ- ಅಟ್ಟಿಕೊಂಡುಬರಲು; ಮರಾಳದ- ಹಂಸಪಕ್ಷಿಯ, ಮೆಯ್ಯ-ದೇಹದ, ತುಪ್ಪುಳಂ- ರೋಮವನ್ನು, ತುಳಿದು; ಎಣೆವಕ್ಕಿಕೂಟದೊಳ್- ಚಕ್ರವಾಕಪಕ್ಷಿಗಳ ಸುರತಸಮಯದಲ್ಲಿ, ಉರುಳ್ಚಿದ- ಜಾ

ನುಣ್ಣಗರಿಯೊಳ್ತೊಡಂಕಿನು । ಣ್ಪುಳಿಲಮದೊರ್ಟಲಲ್ಲೆಡಪಿಮೆಲ್ಲನೆಪಾಯ್ವುದುಮಂದವಾ
ರುತಂ ॥ ... ... ... ... ... ... ॥೫೧॥

ಚಂ॥ ವಿದಳಿತಕಂಜಪುಂಜಪರಿಪಿಂಜರರೇಣುಗಣಾಂಗರಾಗಷ । ಟ್ಪದಪಟಲೀಸುವರ್ಣ
ಮಣಿಕಿಂಕಿಣಿಕಾಳಿಯನಂಬುಜಾಕರಾ ॥ ಭ್ಯುದಿತತರಂಗವಾರಿಕಣಮೌಕ್ತಿಕಮಾಲೆಯನಾವ
ಸಂತನಿ । ತ್ತುದನುರಿತಾಳ್ದುತತ್ಸುತನವೋಲ್ಸುಳಿಗುಂಪವನಮಂದಮಾರುತಂ ॥ ॥೫೩॥

ಚಂ॥ ಮದನನಬಾಣಶಾಲೆಮಧುಪಂಗಳಭೋಜನಶಾಲೆಮಲ್ಲಿಕಾ । ಸುದತಿಯಲಾಸ್ಯಶಾ
ಲೆಮದಕೋಕಿಲವೃಂದದಗೀತಶಾಲೆಪೆಂ ॥ ಪೊಪಸಿದತಾಮ್ರತುಂಡಕುಳದಗ್ಗದಪಾಠದಪಟ್ಟ
ಶಾಲೆಪಿಂ । ಗದರತಿಚಿತ್ರಶಾಲೆಮಧುಭೂಭುಜನೋಲಗಶಾಲೆಮಾಮರಂ ॥ ... ॥೫೪॥

ಮತ್ತೇ ॥ ಸುಮನೋಧರ್ಮಯುತಂಸದಾಳಿಗುಣಯುಕ್ತಂಕಾಮನೇಂಕಾಯ್ವುದಂ।
ದಮೆಬೆಂಗೊಟ್ಟವಿಯೋಗಿವೃಂದಕೆಮಹೇಶದ್ವೇಷಿತಾನಾಗಲ ॥ ಕ್ಕುಮೆಪೇಳೆಂದಿನಿಯಳ್ಗೆ

ರಿಬಿದ್ದ, ನುಣ್ಣಗರಿಯೊಳ್ ನುಣುಪಾದಗರಿಯಲ್ಲಿ, ತೊಡಂಕಿ- ತಗಲಿ; ನುಣ್ಪುಳಿಲ- ನುಣ್ಣಗಿರುವಪುಳಿಲಿನ, ಒಟ್ಟಲಲ್ಲಿ- ಗುಡ್ಡೆಯಲ್ಲಿ, ಎಡಪಿ- ಎಡವಿ; ಮೆಲ್ಲನೆ, ಪಾಯ್ವುದು- ಬೀಸುವದು. ... ॥೫೧॥

ವಸಂತಂ, ಇತ್ತುದಂ- ಕೊಟ್ಟನು; ವಿದಳಿತ......ಕಾಳಿಯಂ— ವಿದಳಿತ- ವಿಕಸಿತಗಳಾದ, ಕಂಜ- ಕಮಲಗಳ, ಪುಂಜ- ಸಮೂಹದ, ಪಿಂಜರ- ಹೊಂಬಣ್ಣವಾದ, ರೇಣು- ಧೂಳಿಯ, ಗಣ- ಸಮೂಹದ, ಅಂಗರಾಗ-ಅನುಲೇಪನವುಳ್ಳ, ಷಟ್ಪದ- ತುಂಬಿಗಳ, ಪಟಲೀ- ಗುಂಪೆಂಬ, ಸುವರ್ಣಮಣಿಕಿಂಕಿಣಿಕಾ- ರತ್ನಖಚಿತವಾದ ಚಿನ್ನದಗೆಜ್ಜೆಗಳ, ಆಳಿಯಂ- ಪಙ್ಕ್ತಿಯನ್ನು, ಅಂಬುಜಾ...... ಮಾಲೆಯಂ— ಅಂಬುಜಾಕರ- ಸರೋವರದಲ್ಲಿ, ಅಭ್ಯುದಿತ- ಉತ್ಪನ್ನವಾದ, ತರಂಗ- ತೆರೆಗಳ, ವಾರಿಕಣ- ನೀರಿನಹನಿಗಳೆಂಬ, ಮೌಕ್ತಿಕ ಮಾಲೆಯಂ- ಮುತ್ತಿನಮಾಲೆಯನ್ನು, ವನಮಂದಮಾರುತಂ, ತಾಳ್ದು- ತತ್ಸುತನವೋಲ್- ಆವಸಂತನ ಮಗನಹಾಗೆ, ಸುಳಿಗುಂ- ಸಂಚರಿಸುವದು. ... ... ... ... ... ।೫೩॥

ಮಾಮರಂ, ಮದನನ, ಬಾಣಶಾಲೆ- ಬಾಣವನ್ನಿಡುವಮನೆಯು; ಮಧುಪಂಗಳ- ತುಂಬಿಗಳ, ಭೋಜನಶಾಲೆ- ಊಟದಮನೆಯು; ಮಲ್ಲಿಕಾಸುದತಿಯ- ಮಲ್ಲಿಗೆಬಳ್ಳಿಯೆಂಬಸ್ತ್ರೀಯ, ಲಾಸ್ಯಶಾಲೆ- ನರ್ತನ ಗೃಹವು; ಮದಕೋಕಿಲವೃಂದದ- ಮದವಿಶಿಷ್ಟವಾದ ಕೋಗಿಲೆಗಳಗುಂಪಿನ, ಗೀತಶಾಲೆ- ಹಾಡುವಮನೆಯು; ಪೆಂಪೊದವಿದ- ಪ್ರಸಿದ್ಧವಾದ, * ತಾಮ್ರತುಂಡಕುಳದ- ಗಿಳಿಗಳಗುಂಪಿನ, ಅಗ್ಗದ- ಶ್ರೇಷ್ಠವಾದ, ಪಾಠದಪಟ್ಟಶಾಲೆ- ವೇದಿಕೆಯು; ಪಿಂಗದ- ಕಮ್ಮಿಯಾಗದ, ರತಿಚಿತ್ರಶಾಲೆ- ರತಿಯ ಚಿತ್ರಗೃಹವು; ಮಧುಭೂಭುಜನ- ವಸಂತರಾಜನ, ಓಲಗಶಾಲೆ- ಸಭಾಸ್ಥಲವು. ... ... ... ।೫೪॥;

ಶುಕಂ- ಗಂಡುಗಿಳಿಯು, ಮಾಕಂದಶಾಖಾಗ್ರದೊಳ್- ಮಾವಿನಮರದ ಕೊಂಬೆಯಮೇಲೆ, ಇನಿಯಳ್ಗೆ- ಪ್ರಿಯಳನ್ನುಕುರಿತು, ರಮಣೀರತ್ನಮೆ- ಸ್ತ್ರೀರತ್ನವೇ, ಕೇಳ್, ಸುಮನೋಧರ್ಮಯುತಂ- ವಿದ್ವದ್ಧರ್ಮದಿಂಕೂಡಿರುವ, (ಪುಷ್ಪಧನುಸ್ಸಿನಿಂಕೂಡಿರುವ,) ಸದಾಳಿಗುಣಯುಕ್ತಂ- ಸತ್ಪುರುಷಸಮೂಹದ ಗುಣಗಳಿಂಕೂಡಿರುವ, (ನಿರಂತರದಲ್ಲೂಭ್ರಮರಸಿಂಜಿನಿಯಿಂದಕೂಡಿದ,) ಕಾಮಂ, ಬೆಂಗೊಟ್ಟ- ವಿಮುಖರಾದ, ವಿಯೋಗಿವೃಂದಕೆ- ವಿರಹಿಗಳಸಮೂಹಕ್ಕೆ, ಕಾಯ್ವುದು- ಕೋಪಿಸಿಕೊಳ್ಳುವದು, ಅಂದಮೇಂ- ಚಂದವೇ; ತಾಂ- ಮಹೇಶದ್ವೇಷಿ- ಪರಮೇಶ್ವರನಲ್ಲಿ ವೈರವುಳ್ಳವನು, ಆಗಲಕ್ಕುಮೆ- ಆಗುವದಕ್ಕಾದೀತೇ; ಮಧುಸಂ

* (ಅವ) ತಾಮ್ರ- ಕೆಂಪಾದ, ತುಂಡ- ಮುಖವುಳ್ಳವುಗಳು ಅಂದರೆಕೆಂಪುಕೊಕ್ಕುಗಳುಳ್ಳವೆಂದರ್ಥ। ೫೪॥

ಪೇಳ್ದುದುಶುಕಂಮಾಕಂದಶಾಖಾಗ್ರದೊ । ಳ್ರಮಣೀರತ್ನವೆ ಕೇಳ್ಗುಣಾಳವಧುಸಂಗತ್ಯ ನ್ವಿತಂಗಿರ್ಕುಮೇ ॥ ... ... ... ... ... ॥೫೫॥

ಚಂ॥ ಅಳಿರುತಿಕಿಂಕಿಣೀಕ್ವಣಿತಮಾಗಲತಾಂತಮರಂದಲಾಲೆಕಂ । ಗೊಳಿಸೆತಮಾಲಪ ಲ್ಲವಶಿಖಂಡಕಮೊಪ್ಪಿರೆಕೀರವಾಣಿಸಂ ॥ ಗಳಿಸಿದಮುಗ್ಧಜಲ್ಪಿತಮದಾಗಿರೆತೂಗಿಪೆಳೆಗಾ ಯ್ಗಳೆಂಬಕುಂ । ಡಲಮುಮದರ್ಾಡೆನಂದನನಮೆನಂದನಮಾದುದುಚೈತ್ರರಾಜನಾ ॥ ॥೫೬॥

ಕಂ॥ ಅತನುತನೂದರಿಯಸಮು । ನ್ನತಕುಚಘಟಘರ್ಷಣಕ್ರಿಯಾಚ್ಯುತಘುಸೃ ಣಾಂ ॥ ಚಿತರೇಣುಕವಿದುದೆನೆಶೋ । ಭಿತಮಾದುದುಸುರಿದಸುರಯಿಯಲರಪರಾಗಂ ॥೫೭॥

ವ॥ ಆವನಮಧ್ಯಪ್ರದೇಶದಲ್ಲಿ ॥ * * * * * * * * * * *

ಕಂ॥ ವರಚಕ್ರಚಕ್ರರಂಗ । ತ್ತರಂಗಕಳಕಳನಿರಾಜಿರಾಜಿತಮಂಭ ॥ ಶ್ಚರಚರದಳಿ ದಳಿತದಳೋ । ತ್ಕರಮಧುಮಧುರಾಂಬುಜಾಂಬುವಂಬುಜಷಂಡಂ ॥ ... ... ॥೫೮॥

ಕಂ॥ ಸರದಚ್ಛವಿಯುತಮಬ್ಜಾ । ಭಿರಾಮಮಂಭಶ್ಚರೇಕ್ಷಣದ್ಯುತಿಸುರಸಾ ॥ ಕರ

ಗತ್ಯನ್ವಿತಂಗೆ- ಮಧ್ಯಸಹವಾಸದಿಂಕೂಡಿದವನಿಗೆ, ( ವಸಂತಸಹವಾಸದಿಂಕೂಡಿದವನಿಗೆ, ) ಗುಣಾಳಿ- ಸ ದ್ಗುಣಪಜ್ತಿಯು, ಇರ್ಕುಮೇ. ... ... ... ... ... ... ॥೫೫॥

ಅಳಿರುತಿ- ಭ್ರಮರಶಬ್ದವು, ಕಿಂಕಿಣೀಕ್ವಣಿತಂ- ಸಣ್ಣಗಂಟೆಗಳಶಬ್ದವು, ಆಗೆ; ಲತಾಂತಮರಂದಲಾ ಲೆ— ಲತಾಂತ- ಪುಷ್ಪಗಳ, ಮರಂದ- ಮಕರಂದವೆಂಬ, ಲಾಲೆ- ಜೊಲ್ಲು, ಕಂಗೊಳಿಸೆ; ತಮಾಲಪಲ್ಲವಶಿ ಖಂಡಕಂ— ತಮಾಲ- ಹೊಂಗೆಯ, ಪಲ್ಲವ- ಚಿಗುರೆಂಬ, ಶಿಖಂಡಕಂ- ಕೇಶವು, ಒಪ್ಪಿರೆ; ಅದುಕೀರವಾ ಣಿ- ಆಗಿಳಿಗಳಮಾತು, ಸಂಗಳಿಸಿದ- ಪ್ರಾಪ್ತವಾದ, ಮುಗ್ಧಜಲ್ಪಿತಂ- ಮುದ್ದುಮಾತು, ಆಗಿರೆ; ತೂಗಿ- ತೂಗಾಡುವ, ಎಳೆಗಾಯ್ಗಳೆಂಬ, ಕುಂಡಲಂ- ಕರ್ಣಕುಂಡಲವು, ಅಮರ್ದಾಡೆ- ಜೋಲಾಡುತ್ತಿರಲು; ನಂ ದನಮೆ- ತೋಟವೇ, ಚೈತ್ರರಾಜನಾ, ನಂದನಂ- ಪುತ್ರನು, ಆದುದು. ... ... ॥೫೬॥

ಸುರಿದ, ಸುರಯಿಯಲರ- ಸುರಗಿಯಹೂವಿನ, ಪರಾಗಂ- ದೂಳಿಯು, * ಅತನುತನೂದರಿಯ- ರತಿ ಯ, ಸಮು...... ರೇಣು— ಸಮುನ್ನತ- ದಪ್ಪವಾದ, ಕುಚಘಟ- ಘಟಗಳಂತಿರುವ ಸ್ತನಗಳ, ಘರ್ಷ ಣಕ್ರಿಯಾ- ತಿಕ್ಕುವಿಕೆಯಿಂದ, ಚ್ಯುತ- ಜಾರಿದ, ಘುಸೃಣ- ಕುಂಕುಮಕೇಸರಿಯ, ಅಂಚಿತರೇಣು- ಶ್ರೇ ಷ್ಠವಾದದೂಳಿಯು, ಕವಿದುದು- ಆಛಾದಿಸಿತು, ಎನೆ, ಶೋಭಿತಂ- ಪ್ರಕಾಶಿಸುವದು, ಆದುದು. ॥೫೭॥

ಅಂಬುಜಷಂಡಂ- ಸರೋವರವು, ವರ...... ರಾಜಿತಂ— ವರ- ಶ್ರೇಷ್ಠವಾದ, ಚಕ್ರಚಕ್ರ- ಚ ಕ್ರವಾಕಪಕ್ಷಿಗಳ ಸಮೂಹವೇನು, ರಂಗತ್ತರಂಗ- ಚಂಚಲಗಳಾದತೆರೆಗಳೇನು, ಕಳಕಳನಿರಾಜಿ- ಕೋಲಾ ಹಲಧ್ವನಿಯಿಂಕೂಡಿದ ಪಕ್ಷಿಗಳಪಜ್ತಿಯೇನು, ಇವುಗಳಿಂದ, ರಾಜಿತಂ- ಪ್ರಕಾಶಿಸುವದು; ಅಂಭ......ಜಾಂ ಬು— ಅಂಭಶ್ಚರ- ಮೀನುಗಳು, ಚರದಳಿ- ಸಂಚರಿಸುವಭ್ರಮರಗಳು, ಇವುಗಳಿಂದ, ದಳಿತ- ಅರಳಲ್ಪ ಟ್ಟ, ದಳ- ಎಸಳುಗಳ, ಉತ್ಕರ- ಸಮೂಹವುಳ್ಳ, ಮಧು- ಮಕರಂದದಿಂದ, ಮಧುರ- ಮನೋಹರವಾದ, ಅಂಬುಜ- ಕಮಲಗಳುಳ್ಳ, ಅಂಬು- ನೀರುಳ್ಳದ್ದು. ... ... ... ... ॥೫೮॥

ಸರದಚ್ಛವಿಯುತಂ— ಸರತ್- ಸಂಚರಿಸುವ, ಅಚ್ಛವಿ- ಹಂಸಪಕ್ಷಿಗಳಿಂದ, ಯುತಂ- ಕೂಡಿದ, (ದಂತಕಾಂತಿಯಿಂಕೂಡಿದ,) ಅಬ್ಜಾಭಿರಾಮಂ- ಕಮಲಗಳಿಂದಮನೋಹರವಾದ, (ಚಂದ್ರನೋಪಾದಿಯಲ್ಲಿ

* (ಅವ) ಅತನು- ಮನ್ಮಥನ, ತನೂದರಿ- ಸಣ್ಣಗಿರುವನಡುವುಳ್ಳಸ್ತ್ರೀಯು. ... ... ॥೫೭॥

ಮುದ್ಭ್ರಮರಕಮಾನವ । ಸರಸಿವನಶ್ರೀಯವದನಮೆನೆ ಸೊಗಯಿಸುಗುಂ ॥ ... ॥೪೯॥

ಚಂ ॥ ಕೆಲಬಲದಲ್ಲಿ ತೋರ್ಪರುಣಪಂಕಜಪಾಣಿಗಳಲ್ಲಿ ಚಕ್ರಚ । ಕ್ರಲಸಿತಹಂಸಶಂಖ ಯುಗವೊಂದಿರೆ ಪೀತಪಟಂಬೊಲಂಬುಜೋ ॥ ಜ್ವಲರಜವೊಂದಿದಂಬು ಸೊಗಸಾಂತಿರೆ ನೀಲಸ ರೋಜರಾಜಿಮಂ । ಜುಲತನುಕಾಂತಿಯಾಗೆ ವನಮಾಲಿಯೊಲೊಪ್ಪಿದುದಲ್ಲಿ ಪೂಗೊಳಂ ॥೬೦॥

ಚಂ॥ ವಿತತವಿಪಕ್ಷಸಂಚಲಿತಜೀವನಮನ್ವಿತಜಾಡ್ಯಕಂಟಕ । ಸ್ಥಿತಿಕಲಿತಂ ಸಭಂಗಮ ಳಿಯಾಸೆಯೊಳೊಂದಿದ ಪಂಕಜಾಕರ ॥ ಕ್ಷಿತಿಪತಿ ನಿರ್ಯದಂಬುಕಣಬಾಷ್ಪಕಣಂಗಳನಲ್ಲಿ ಸೂ ಸಿದಂ । ತತಗುಣಮಿತ್ರಜಾಯೆಯೊಡಗೂಡಿದದೋಷಿಗಿದೊಂದು ಚೋದ್ಯಮೇ ... ॥೬೧॥

---

ಮನೋಹರವಾದ, ) ಉಂಭೆಶ್ಚರೀಕ್ಷಣದ್ಯುತಿ— ಅ ಭಶ್ಚರ- ಮೀನುಗಳ, ಈಕ್ಷಣ- ನೇತ್ರದ, ದ್ಯುತಿ- ಕಾಂತಿಯುಳ್ಳ, ( ಮೀನುಗಳಂತಿರುವ ನೇತ್ರಕಾಂತಿಯುಳ್ಳ, ) ಸುರಸಾಕರಂ- ಸಮೀಚೀನವಾದ ನೀರಿಗಾಶ್ರಯವಾದ, ( ಸಮೀಚೀನವಾದ ಲಾವಣ್ಯರಸಕ್ಕೆ ಆಶ್ರಯವಾದ,) ಉದ್ಭ್ರಮರಕಂ- ಉತ್ಕೃಷ್ಟವಾದ ಭ್ರಮರಗಳುಳ್ಳ, ( ಉತ್ಕೃಷ್ಟವಾದಮುಂಗುರುಳುಗಳುಳ್ಳ, ) ಅನವಸರಸಿ- ಅನೂತನವಾದಸರೋವರವು, ವನಶ್ರೀಯ- ವನಲಕ್ಷ್ಮಿಯ, ವದನಮೆನೆ- ಮುಖವೋ ಎಂಬಹಾಗೆ, ಸೊಗಯಿಸುಗುಂ- ಪ್ರಕಾಶಿಸುವದು. ... ... ... ... ... ... ॥೪೯॥

ಅಲ್ಲಿ, ಪೂಗೊಳಂ- ಕೆಲಬಲದಲ್ಲಿ, ಉಭಯಪಾರ್ಶ್ವಗಳಲ್ಲಿ, ತೋರ್ಪ, ಅರುಣಪಂಕಜಪಾಣಿಗಳಲ್ಲಿ- ಕೆಂದಾವರೆಗಳೆಂಬಹಸ್ತಗಳಲ್ಲಿ, ಚಕ್ರ......ಯುಗಂ— ಚಕ್ರ- ಚಕ್ರವಾಕಪಕ್ಷಿಯೆಂಬ, ಚಕ್ರ- ಚಕ್ರಾಯುಧವೇನು, ಲಸಿತ- ಪ್ರಕಾಶಿಸುವ, ಹಂಸ- ಹಂಸಪಕ್ಷಿಯೆಂಬ, ಶಂಖ- ಶಂಖವೇನು, ಇವುಗಳ, ಯುಗಂ- ಯುಗ್ಮವು, ಒಂದಿರೆ; ಅಂಬುಜೋಜ್ವಲರಜಂ- ಕಮಲದಪ್ರಕಾಶಮಾನವಾದದೂಳಿಯು, ಒಂದಿದ, (ಅಂದರೆಕಮಲದ ದೂಳಿಯಿಂದವ್ಯಾಪ್ತವಾದ,) ಅಂಬು- ಜಲವು, ಪೀತಪಟಂಬೊಲ್, ಪೀತವರ್ಣದವಸ್ತ್ರದಂತೆ ಸೊಗಸಾಂತಿರೆ- ಸೊಗಸಾಗಿರಲು; ನೀಲಸರೋಜರಾಜಿ- ಕನ್ನೈದಿಲೆಗಳಪಙ್ತಿಯು, ಮಂಜುಲತನುಕಾಂತಿ- ಮನೋಹರವಾದ ಶರೀರದಕಾಂತಿಯು, ಆಗೆ; ವನಮಾಲಿಯೊಲ್- ವಿಷ್ಣುವಿನಂತೆ, ಒಪ್ಪಿದುದು. ... ॥೬೦॥

ವಿತತವಿಪಕ್ಷಸಂಚಲಿತಜೀವನಂ— ವಿತತ- ಅನೇಕರಾದ, ವಿಪಕ್ಷ- ಶತ್ರುಗಳಿಂದ, ಸಂಚಲಿತ- ಚಂಚಲವಾದ, ಜೀವನಂ- ಪ್ರಾಣವುಳ್ಳ (ವಿತತ- ವಿಸ್ತಾರವಾದ, ವಿ-ಪಕ್ಷಿಗಳ- ಪಕ್ಷ-ರೆಕ್ಕೆಯಿಂದ, ಸಂಚಲಿತ- ಚಲಿಸಲ್ಪಟ್ಟ, ಜೀವನಂ- ಜಲವುಳ್ಳ,) ಅನ್ವಿತಜಾಡ್ಯಕಂಟಕಸ್ಥಿತಿ— ಅನ್ವಿತ- ಕೂಡಿದ, ಜಾಡ್ಯ- ಜಲತ್ವವುಳ್ಳ, ಕಂಟಕಸ್ಥಿತಿ- ತಾವರೆದಂಟಿನಲ್ಲಿರುವ ಮುಳ್ಳಿನಇರುವಿಕೆಯಿಂದ, ಕಲಿತಂ, (ಅನ್ವಿತ- ಕೂಡಿದ, ಜಾಡ್ಯ- ಜಡತ್ವವುಳ್ಳ, ಕಂಟಕ- ಕಂಟಕದ, ಸ್ಥಿತಿ- ಇರುವಿಕೆಯಿಂದ, ಕಲಿತಂ- ಕೂಡಿದ,) ಸಭಂಗಂ- ಪರಾಜಯದಿಂಕೂಡಿದ, (ತೆರೆಯಿಂಕೂಡಿದ,) ಅಳಿಯಾಸೆಯೊಳ್ ಒಂದಿದ- ದುರಾಸೆಯಿಂದಕೂಡಿದ, (ಅಳಿಯ-ತುಂಬಿಯ, ಆಸೆಯೊಳ್-ಇಚ್ಛೆಯಿಂದ, ಒಂದಿದ,)ಪಂಕಜಾಕರಕ್ಷಿತಿಪತಿ- ಸರೋವರವೆಂಬ ರಾಜನು, ನಿರ್ಯದಂಬುಕಣಬಾಷ್ಪಕಣಂಗಳಂ— ನಿರ್ಯತ್-ಹೊರಡುತ್ತಿರುವ- ಅಂಬುಕಣ- ನೀರಿನಹನಿಯೆಂಬ,ಬಾಷ್ಪಕಣಂಗಳಂ-ಕಣ್ಣೀರಿನಹನಿಗಳನ್ನು, ಅಲ್ಲಿ, ಸೂಸಿದಂ- ಚೆಲ್ಲಿದನು; ತತಗುಣಮಿತ್ರಜಾಯೆಯೊಡಗೂಡಿದ- ತತ- ವಿಸ್ತಾರವಾದ,ಗುಣ- ಸದ್ಗುಣಗಳುಳ್ಳ, ಮಿತ್ರಜಾಯೆಯೊಡಗೂಡಿದ- ಸ್ನೇಹಿತನಪತ್ನಿಯೊಡನೆಕೂಡಿದ, (ತತ- ವಿಸ್ತಾರವಾದ, ಗುಣ- ತಂತುವಿನಿಂದಕೂಡಿದ, ಮಿತ್ರಜಾಯೆಯ- ಸೂರ್ಯನಪತ್ನಿಯಾದಕಮಲಲತೆಯ, ಒಡಗೂಡಿದ,)ದೋಷಿಗೆ, ಇದು- ಈಕಣ್ಣೀರನ್ನುಸುರಿಸುವಿಕೆಯು, ಒಂದುಚೋದ್ಯಮೇ- ಒಂದಾಶ್ಚರ್ಯವೇ. ... ॥೬೧॥

ಕಂ॥ ಕಂದರ್ಪಂಕಾಸಿರಿಸಿದ। ಕುಂದದಬಿರಯಿಗಳುರೋಸ್ರದಿಂತೋಯ್ದುವಿಷ ॥ದಿಂ
ದೂಡಿದನಿಜಶರಮೆನೆ । ಪೊಂದಾವರೆಯರುಣನಳಿನಮುತ್ಪಳಮೆಸೆಗುಂ ... ॥೬೨॥

ಕಂ॥ ಶರನಿಧಿನಿದ್ರಿತನಾಗಿರೆ । ಹರಿಸಿರಿವಿರಹಾಗ್ನಿದಗ್ಧೆಸಾರ್ತಂದುಸರೋಂ ॥ ಬು
ರುಹದೊಳೆನೆಲಸೆಭೃಂಗೋ । ತ್ಕರಮದುತಜ್ಜನಿತಧೂಮಮೆನೆನಗೆದೆಸಗುಂ ॥ ॥೬೩॥

ಕಂ॥ ಅರುಣಾಬ್ಜದಳದೊಳೆಗಗಿದ । ವರಮಧುಕರತರುಣನೆಸೆದುದಾಸುಸಿಲೊ ॥
ಳ್ಭಾಸ್ಕರನೆಸಗಿದದಂತಕ್ಷತ । ದಿರವೆನೆಪದ್ಮಿನಿಯಪಲ್ಲವಾಧರದೆಡೆಯೊಳ್ ॥ ... ॥೬೪॥

ಕಂ॥ ಎಳೆವಾಳೆಗಣ್ಣಬೆಳಗು । ಜ್ವಳಿಸೆಕರಂನೋಡಿಸರಸಿತೆರೆದೋಳೆತ್ತು ॥ ತ್ತೆಳ
ಸಿನೊರೆಮಾಲೆಯಂತಂ ।ದಿಳುಪಿದಳಾರಾಜಹಂಸಕಂಧರದೆಡೆಯೊಳ್॥ ... ... ॥೬೫॥

ಕಂ॥ ಕರದಂಡಾತಿಪ್ರಿಯನೀ । ಮರಾಳನಕಟೀವಿಜಾತಿಜಂಗಾದುದುಭಾ ॥ ಸುರರಾ
ಜಹಂಸನಾಮಂ । ಪರಿಕಿಸೆವಿಧಿಬಲದಿನಾವುದಾಗದೊಜಗದೊಳ್ ॥ ... .. ॥೬೬॥

ಮತ್ತೆ॥ಇದುಪ್ರುತೊಪ್ಪುವಚೂತಮಲ್ತುಸುಮನೋಡಂತಾವಳಂನೋಳ್ಪೊಡಿಂ।
ತಿದುಪದ್ಮಾಕರಮಲ್ತುನಿರ್ಜರಸುಧಾಕಾಸಾರಮಿಂತೊಪ್ಪುವಿಂ ॥ ತಿದುಪಣ್ತೆವಿದನೇರಿಲ

---

ಕಂದರ್ಪಂ- ಮನ್ಮಥನು, ಕಾಸಿ- ಇರಿಸಿದ, ನಿಜಶರಂ- ತನ್ನಬಾಣವು, ಎನೆ, ಪೊಂದಾವರೆ; ಕುಂದದ- ಅಧಿಕವಾದ, ಬಿರಯಿಗಳ- ವಿರಹಿಗಳ, ಉರೋಸ್ರದಿಂ- ವಕ್ಷಸ್ಥಳದ ರಕ್ತದಿಂದ, ತೋಯ್ದು- ನನೆದ, ನಿಜಶರಂ- ಎನೆ, ಅರುಣನಳಿನಂ- ಕೆಂಪುಕಮಲವು; ವಿಷದಿಂದೂಡಿದ- ವಿಷದಿಂದವ್ಯಾಪ್ತವಾದ, ನಿಜಶರಂ, ಎನೆ, ಉತ್ಪಳಂ- ಕನ್ನೈದಿಲೆಯು, ಎಸೆಗುಂ. ... ... ... ... ... ॥೬೨॥

ಹರಿ- ವಿಷ್ಣುವು, ಶರನಿಧಿನಿದ್ರಿತಂ- ಸಮುದ್ರದಲ್ಲಿ ನಿದ್ರೆಮಾಡುವವನು, ಆಗಿರೆ; ಸಿರಿ- ಲಕ್ಷ್ಮಿಯು, ವಿರಹಾಗ್ನಿದಗ್ಧೆ- ವಿರಹಾಗ್ನಿಯಿಂದಸುಡಲ್ಪಟ್ಟವಳಾಗಿ, ಸಾರ್ತಂದು- ಬಂದು, ಸರೋಂಬುರುಹದೊಳ್- ಸರೋವರದಲ್ಲಿರುವಕಮಲದಲ್ಲಿ, ನೆಲಸೆ- ವಾಸಮಾಡಲು; ಅದುಭೃಂಗೋತ್ಕರಂ- ಆಕಮಲದಮೇಲೆ ಸಂಚರಿಸುವ ತುಂಬಿಗಳ ಗುಂಪು, ನೆಗೆದು-ಹಾರಿ, ತಜ್ಜನಿತಧೂಮಮೆನೆ- ಆಲಕ್ಷ್ಮಿಯ ವಿರಹಾಗ್ನಿಯಿಂದುತ್ಪನ್ನವಾದ ಹೊಗೆಯೋಎಂಬಹಾಗೆ, ಎಸೆಗುಂ. ... ... ... ... ... ॥೬೩॥

ಆಸುಸಿಲೊಳ್- ಆಸುರತಕಾಲದಲ್ಲಿ, ಪದ್ಮಿನಿಯ- ಕಮಲಲತೆಯೆಂಬಸ್ತ್ರೀಯ, ಪಲ್ಲವಾಧರದ- ಚಿಗುರೆಂಬತುಟಿಯ, ಎಡೆಯೊಳ್- ಸ್ಥಳದಲ್ಲಿ, ಭಾಸ್ಕರಂ- ಸೂರ್ಯನು, ಎಸಗಿದ- ಮಾಡಿದ, ದಂತಕ್ಷತದ- ಹಲ್ಲಿನಗಾಯದ, ಇರವು- ರೀತಿಯು, ಎನೆ, ಅರುಣಾಬ್ಜದಳದೊಳ್- ಕೆಂಪುಕಮಲದಎಸಳನಲ್ಲಿ, ಎರಗಿದ- ಹಾರಿಕುಳಿತಿರುವ, ವರಮಧುಕರತರುಣಂ- ಶ್ರೇಷ್ಠವಾದತುಂಬಿಯಮರಿಯು, ಎಸೆದುದು, ... ... ॥೬೪॥

ಸರಸಿ- ಸರೋವರವೆಂಬಸ್ತ್ರೀಯು, ಎಳೆವಾಳೆಗಣ್ಣ, ಎಳೆದಾದ ಬಾಳೆಮೀನೆಂಬಕಣ್ಣಿನ, ಬೆಳಗು- ಕಾಂತಿಯು, ಉಜ್ವಳಿಸೆ- ಪ್ರಕಾಶಿಸುವಹಾಗೆ, ಕರಂ- ಚೆನ್ನಾಗಿ, ನೋಡಿ, ತೆರೆದೋಳ- ತರಂಗವೆಂಬಬಾಹುವನ್ನು, ಎತ್ತುತ್ತೆ, ಎಳಸಿ- ಅಪೇಕ್ಷಿಸಿ, ಆರಾಜಹಂಸಕಂಧರದ- ಆರಾಜಶ್ರೇಷ್ಠನಕತ್ತಿನ, (ಆರಾಜಹಂಸಪಕ್ಷಿಯಕತ್ತಿನ,) ಎಡೆಯೊಳ್- ಸ್ಥಳದಲ್ಲಿ, ನೊರೆಮಾಲೆಯಂ- ನೊರೆಯೆಂಬಮಾಲಿಕೆಯನ್ನು, ತಂದು, ಇಳುಪಿದಳ್- ಇಟ್ಟಳು. ... ... ... ... ... ... ... ॥೬೫॥

ಈಮರಾಳಂ- ಈ ಹಂಸಪಕ್ಷಿಯು, ಕರದಂಡಾತಿಪ್ರಿಯಂ— ಕರದಂಡ- ಹಸ್ತದಿಂದಹಿಂಸೆಮಾಡುವವರಲ್ಲಿ, ಅತಿಪ್ರಿಯಂ- ಅತಿಪ್ರೀತಿವುಳ್ಳದ್ದು; (ಕರದಂಡ-ಕಮಲದದಂಟಿನಲ್ಲಿ, ಅತಿಪ್ರಿಯಂ,) ಈವಿಜಾತಿಜಂಗೆ-

ಲ್ತು ಮಣಿವೃಂದಂತಳ್ತ ನಾಕದ್ರುಮೇ । ಣಿದುವೌರಪ್ರಮದಾಳಿಯಲ್ತು ಪುರುಹೂತಾಂತಃ ಪುರಸ್ತ್ರೀಜನಂ ॥ ... ... ... ... ... ॥೬೭॥

ವ॥ ಎನಿಸಿ. ಕಂ॥ ಪ್ರಮದಾಳವಿಪುಳರಂಭಾ । ಸುಮನಸ್ಸ್ಥಿತಿಭಾಸ್ವದಪ್ಸರೋಗಣ ದಿವ್ಯ ॥ ದ್ರುಮಮಹಿತಂಬನಮನ್ವ । ರ್ಥಮನಾಳ್ದುದುನಂದನಾಭಿಧ ನಮನೆನಿಕುಂ ॥

ವ॥ ಇಂತು ಭುವನಜನಮನೋಜ್ಞಮಾದ ವನಮಾಲಾವಳಯದಿಂದವೊಳಗೆ * *

ಕಂ॥ ಜಳಕೇಳಿಗೆಯ್ವಪನ್ನಗ । ವಿಳಾಸಿನೀಜನದನೆತ್ತಿಮಣಿಗಳವೆತ್ತಂ ॥ ತೊಳಗಿ

---

ಈನೀಚಜಾತಿಯಲ್ಲಿ ಹುಟ್ಟಿದವನಿಗೆ, (ಈ ಪಕ್ಷಿಜಾತಿಯಲ್ಲಿಹುಟ್ಟಿದವನಿಗೆ,) ಭಾಸುರರಾಜಹಂಸನಾಮಂ- ಪ್ರಕಾಶಮಾನವಾದ ರಾಜಶ್ರೇಷ್ಠನೆಂಬಹೆಸರು, (ಪ್ರಕಾಶಿಸುವ ಅರಸಂಚೆಯೆಂಬಹೆಸರು,) ಆದುದು, ಅಕಟ- ಅಯ್ಯೋ, ಪರಿಕಿಸೆ- ಪರೀಕ್ಷಿಸಿನೋಡಿದರೆ, ಜಗದೊಳ್- ಲೋಕದಲ್ಲಿ, ವಿಧಿಬಲದಿಂ- ದೈವಬಲದಿಂದ, (ಬ್ರಹ್ಮನಬಲದಿಂದ,) ಆವುದು, ಆಗದೋ- ಆಗುವದಿಲ್ಲವೋ. ... ... ... ॥೬೬॥

ಇದು, ಪೂತಂ- ಹೂವನ್ನುಬಿಟ್ಟ, ಒಪ್ಪುವ, ಚೂತಂ- ಮಾವಿನಮರವು, ಅಲ್ತು- ಅಲ್ಲವು- * ಸುಮನೋದಂತಾವಳಿಂ- ಐರಾವತವು, ನೋಳ್ಪೊಡೆ- ಇಂತು- ಇದು, ಪದ್ಮಾಕರಂ- ಸರೋವರವು, ಅಲ್ತು; ನಿರ್ಜರಸುಧಾಕರಂ- ದೇವತೆಗಳ ಅಮೃತಸರೋವರವು, ಇಂತೊಪ್ಪುವ, ಇದು, ಪಣ್ತೀವಿದ- ಹಣ್ಣಿನಿಂದತುಂಬಿರುವ, ನೇರಿಲ್- ನೇರಿಲಮರವು, ಅಲ್ತು; ಮಣಿವೃಂದಂತಳ್ತ- ರತ್ನಸಮುದಾಯದಿಂವ್ಯಾಪ್ತವಾದ, ನಾಕದ್ರು- ಕಲ್ಪವೃಕ್ಷವು; ಮೇಣ್- ಮತ್ತು, ಇಂತು, ಇದು, ಪೌರಪ್ರಮದಾಳಿ-ಪಟ್ಟಣದಸ್ತ್ರೀಸಮೂಹವು, ಅಲ್ತು; ಪುರುಹೂತಾಂತಃಪುರಸ್ತ್ರೀಜನಂ-- * ಪುರುಹೂತ- ಇಂದ್ರನ, ಅಂತಃಪುರಸ್ತ್ರೀಜನಂ- ರಾಣಿವಾಸದಲ್ಲಿರುವಸ್ತ್ರೀಯರುಗಳು. ... ... ... ... ॥೬೭॥

ಪ್ರಮದಾ......ಸ್ಥಿತಿ— ಪ್ರಮದಾಳಿ- ಅಧಿಕವಾಗಿಮದವಿಶಿಷ್ಟಗಳಾದ ಭ್ರಮರಗಳುಳ್ಳ, ವಿಪುಳ ವಿಶಾಲಗಳಾದ, ರಂಭಾಸುಮನಃ- ಬಾಳೆಹೂವಿನ, ಸ್ಥಿತಿ- ಇರುವಿಕೆಯುಳ್ಳದ್ದು; (ಪ್ರಮದಾಳಿ- ಸಂತೋಷದಿಂಕೂಡಿದಸಖಿಯರಿಂದ, ವಿಪುಳ- ವಿಸ್ತೃತಳಾದ, ರಂಭಾ- ರಂಬೆಯೆಂಬಅಪ್ಸರಸ್ತ್ರೀಯು, ಸುಮನಃ- ದೇವತೆಗಳು, ಇವರ, ಸ್ಥಿತಿ- ಇರುವಿಕೆಯುಳ್ಳದ್ದು,) ಭಾಸ್ವ...... ಮಹಿತಂ— ಭಾಸ್ವತ್- ಪ್ರಕಾಶಿಸುವ ಅಪ್- ಜಲವುಳ್ಳ, ಸರಃ- ಸರೋವರಗಳ, ಗಣ- ಸಮೂಹವು, ದಿವ್ಯದ್ರುಮ- ಶ್ರೇಷ್ಠವಾದಮರಗಳು, ಇವುಗಳಿಂದ, ಮಹಿತಂ- ಅತಿಹಿತವಾಗಿರುವ; (ಭಾಸ್ವತ್- ಪ್ರಕಾಶಿಸುವ, ಅಪ್ಸರೋಗಣ- ಅಪ್ಸರಸ್ತ್ರೀಸಮುದಾಯವು, ದಿವ್ಯದ್ರುಮ- ಕಲ್ಪವೃಕ್ಷ, ಇವುಗಳಿಂದ, ಮಹಿತಂ- ಪೂಜ್ಯವಾದ,) ವನಂ- ಪುರೋಪವನವು, ಅನ್ವರ್ಥಮಂ— ಸಾರ್ಥಕವಾದ, ನಂದನಾಭಿಧಾನಮಂ— ನಂದನವೆಂಬ, (ಸ್ವರ್ಗದಲ್ಲಿರುವ ಉಪವನವೆಂಬ,) ಅಭಿಧಾನಮಂ- ಹೆಸರನ್ನು, ಆಳ್ದುದು- ಹೊಂದಿತು, ಎನಿಕುಂ. ... ... ... ... ॥೬೮॥

ಇಂತು- ಭುವನಜನಮನೋಜ್ಞಮಾದ- ಭೂಜನರಿಗೆ ಮನೋಹರವಾದ, ವನಮಾಲಾವಳಯದಿಂದಂ- ವನಪಙ್ತಿಯ ಮಂಡಲದಿಂದ,ಒಳಗೆ- ಒಳಗಡೆಯಲ್ಲಿ. * * * * * * * * * * *

ಜಲಕೇಳಿಗೆಯ್ವ- ಜಲಕ್ರೀಡೆಯನ್ನುಮಾಡುವ, ಪನ್ನಗವಿಳಾಸಿನೀಜನದ-- ನಾಗಕನ್ಯಕೆಯರ, ನೆತ್ತಿವಣಿಗಳ್- ನೆತ್ತಿಯಲ್ಲಿರುವರತ್ನಗಳು, ಅವು, ಎತ್ತಂ- ಎಲ್ಲಾಕಡೆಯಲ್ಲೂ, ತೊಳಗಿಗೆ- ಪ್ರಕಾಶಿಸುತ್ತಿರಲಾ

---

* (ಅವ) ಸುಮನಃ- ದೇವತೆಗಳ, ದಂತಾವಳಿಂ- ಆನೆಯು. † (ಅವ) ಯಜ್ಞಗಳಲ್ಲಿ ಅನೇಕಾವರ್ತಿ ಕರೆಯಲ್ಪಡುವವನು. ... ... ... ... ॥೬೭॥

ರೆಪುರರಮೆ ತಳೆದು । ಜ್ವಳಮಣಿಕಾಂಚಿಯವೊಲಾಯ್ತು ಪರಿಖಾವಳಯಂ ॥ ... ॥೬೯॥

ಶಾ ॥ ದ್ವೀಪಂಗಳ್ತತವೀಥಿಗಳ್ಕುಧರವೃಂದಂ ಸೌಧವೃಂದಂಸುಧಾ । ಕೂಪಾರಂನೃ
ಪಮಂದಿರಂಜನಪದಂಗಳ್ಕೇರಿಗಳ್ಮೇರುತ ॥ ದ್ದೂಬ್ಬಪಾಗಾರಸುವರ್ಣಹರ್ಮ್ಯಮೆನೆಭೂಲೋ
ಕಂಬೊಲಿಂಬಾದಶೋ । ಭಾಪೂರ್ಣೋರುಪುರಕ್ಕೆ ಸಾಲಮದುಲೋಕಾಲೋಕದಂತೊ
ಪ್ಪುಗುಂ ॥ ... ... ... ... ... ... ॥೭೦॥

ಮತ್ತೇ॥ ಪರಿಖಾವಾರಿಯೊಳೊಯ್ಯನೇಳ್ದು ತೆರೆಗೊಂಡೀಸಾಡಿಸಲ್ಲೀಲೆಯಿಂ। ಪರಿದಾ
ಸಾಲಮನೇರಿಮೇಲೆಸೆವಪೀಯೂಷಾಂಶುವಂರಾತ್ರಿಯೊ ॥ ಳ್ಭರದಿಂಕಂಡುತುಡುಂಕಲವ್ವಳಿ
ಸುವಾಗಳ್ಮಧ್ಯಸಾರಂಗವೊಂ । ದಿರೆತದ್ಭೀತಿಯಿನೆಯ್ದೆಮೆಯ್ದೆಗೆಯುದಾಪಾತಾಳವಾತಾ
ಶನಂ ॥ ... ... ... ... ... ... ॥೭೧॥

ಕಂ ॥ ಬಿರುವಿಸಿಲಕೋಳ್ಗೆಸೈರಿಸ । ಲರಿಯದೆತತ್ಸೌಧಕೇತುಗಳಬಳಿನೆಳಲಂ ॥ ನೆರೆ

---

ಗಿ, ಪರಿಖಾವಳಯಂ- ಗುಂಡಾಗಿರುವ ಕಂದಕವು, ಪುರರಮೆ- ಪಟ್ಟಣವೆಂಬ ಲಕ್ಷ್ಮಿಯು, ತಳೆದ- ಧರಿಸಿದ, ಉಜ್ವಳಮಣಿಕಾಂಚಿಯವೊಲ್— ಉಜ್ವಳ- ಪ್ರಕಾಶಮಾನವಾದ, ಮಣಿಕಾಂಚಿಯವೊಲ್- ರತ್ನಖಚಿತವಾದ ಒಡ್ಯಾಣದಹಾಗೆ, ಆಯ್ತು. ... ... ... ... ... ॥೬೯॥

ತತವೀಥಿಗಳ್- ವಿಸ್ತಾರವಾದ ಬೀದಿಗಳು, ದ್ವೀಪಂಗಳ್; ಸೌಧವೃಂದಂ ಉಪ್ಪರಿಗೆಗಳ ಸಮೂಹವು, ಕುಧರವೃಂದಂ- * ಕುಧರ- ಪರ್ವತಗಳ, ವೃಂದಂ- ಸಮೂಹವು; ನೃಪಮಂದಿರಂ- ರಾಜಗೃಹವು, ಸುಧಾಕೂಪಾರಂ- ಕ್ಷೀರಸಮುದ್ರವು; ಕೇರಿಗಳ್, ಜನಪದಂಗಳ್- ದೇಶಗಳು; ತದೂಬ್ಬಪಾಗಾರಸುವರ್ಣಹರ್ಮ್ಯಂ— ತದೂಬ್ಬಪಾಗಾರ- ಆ ಅರಮನೆಯು, ಸುವರ್ಣಹರ್ಮ್ಯಂ- ಚಿನ್ನದುಪ್ಪರಿಗೆಯು, ಮೇರು- ಮೇರುಪರ್ವತವು, ಎನೆ; ಭೂಲೋಕಂಬೊಲ್- ಭೂಲೋಕದಹಾಗೆ, ಇಂಬಾದ- ಮನೋಹರವಾದ, ಶೋಭಾಪೂರ್ಣೋರುಪುರಕ್ಕೆ— ಶೋಭಾಪೂರ್ಣ- ಕಾಂತಿಯಿಂದ ಸಂಪೂರ್ಣವಾದ, ಉರುಪುರಕ್ಕೆ- ಅಧಿಕವಾದ ಪಟ್ಟಣಕ್ಕೆ, ಅದುಸಾಲಂ- ಆ ಕೋಟೆಯು, ಲೋಕಾಲೋಕದಂತೆ- ಚಕ್ರವಾಳಪರ್ವತದಹಾಗೆ, ಒಪ್ಪುಗುಂ- ಪ್ರಕಾಶಿಸುವದು. ... ... ... ... ॥೭೦॥

ಆಪಾತಾಳ * ವಾತಾಶನಂ- ಆಪಾತಾಳಲೋಕದಲ್ಲಿರುವ ಸರ್ಪವು, ಪರಿಖಾವಾರಿಯೊಳ್- ಕಂದಕದ ನೀರಿನಲ್ಲಿ, ಏಳ್ದು- ಎದ್ದು, ತೆರೆಗೊಂಡು- ತೆರೆಯನ್ನನುಸರಿಸಿ, ಈಸಾಡಿ, ಸಲ್ಲೀಲೆಯಿಂ- ಸಮೀಚೀನವಾದ ವಿಲಾಸದಿಂದ, ಪರಿದು- ಹೋಗಿ, ಸಾಲಮಂ- ಕೋಟೆಯನ್ನು, ಏರಿ- ಹತ್ತಿ, ಮೇಲೆ- ಮೇಲ್ಗಡೆಯಲ್ಲಿ, ಎಸೆವ- ಪ್ರಕಾಶಿಸುವ, † ಪೀಯೂಷಾಂಶುವಂ- ಚಂದ್ರನನ್ನು, ರಾತ್ರಿಯೊಳ್- ಭರದಿಂ- ಜಾಗ್ರತೆಯಾಗಿ, ಕಂಡು, ತುಡುಂಕಲ್- ಗ್ರಹಿಸುವದಕ್ಕೋಸ್ಕರ, ಅವ್ವಳಿಸುವಾಗಳ್- ಆತುರಪಡುವಷ್ಟರಲ್ಲಿ, ಮಧ್ಯಸಾರಂಗಂ- ಮಧ್ಯದಲ್ಲಿ ಜಿಂಕೆಯು, ಒಂದಿರೆ- ಸೇರಿರಲು, ತದ್ಭೀತಿಯಿಂ- ಆ ಜಿಂಕೆಯ ಭಯದಿಂದ, ಎಯ್ದೆ- ಚೆನ್ನಾಗಿ, ಮೆಯ್ದೆಗೆವುದು- ದೇಹವನ್ನು ಹಿಂದೆಗೆಯುವದು. ... ... ... ... ॥೭೧॥

ಖಚರಿ- ದೇವತಾಸ್ತ್ರೀಯು, ಬಿರುವಿಸಿಲ- ಅಧಿಕವಾದ ಬಿಸಿಲಿನ, ಕೋಳ್ಗೆ- ಬಾಧೆಯನ್ನು, ಸೈರಿಸಲ್ ಅರಿಯದೆ- ಸಹಿಸಲಾರದೆ, ತತ್ಸೌಧಕೇತುಗಳ- ಆ ಪಟ್ಟಣದ ಉಪ್ಪರಿಗೆಗಳಲ್ಲಿರುವ ಧ್ವಜಪಟಗಳ, ಬಳಿ

---

* (ಅವ) ಕು- ಭೂಮಿಯನ್ನು, ಧರ- ಧರಿಸಿರುವದು. ... ... ॥೭೦॥

* (ಅವ) ವಾತ- ಗಾಳಿಯೇ, ಅಶನಂ- ಅನ್ನವಾಗುಳ್ಳದ್ದು. † (ಅವ) ಪೀಯೂಷ- ಅಮೃತಮಯವಾದ, ಅಂಶು- ಕಿರಣವುಳ್ಳವನು. ... ... ... ... ... ॥೭೧॥

ಸಾರ್ದುಖಚರಿಮುತ್ತಿನ । ಕಿರುಪುತ್ತಳಿಯಂತೆಬೆಮರ್ಗಳರೆಕಂಗೆಸೆದಳ್ ॥ ... ॥೭೦॥
ಕಂ ॥ ಇದುಮುಗಿಲಿದುಕೇತನಪಟ । ಮಿದುರವಿಯಿದುಕನಕಕಲಶನಿದುಶಶಿಯಿದು
ಕ ॥ ಟ್ಟದಮುಕುರಮೆಂಬಬಗೆಸ । ಲ್ಲದುತತ್ತತ್ಕಾಲದಲ್ಲಿಹರ್ಮ್ಯಾಗ್ರಿಮದೊಳ್ ॥ ॥೭೩॥
ಕಂ ॥ ಕನಕಮಯಹರ್ಮ್ಯರುಚಿತೆ । ಕ್ಕನೆತೀವಿರೆಮಿಸುನಿವಣ್ಣಮಾಳ್ದಿರೆನಭಮಾ॥
ಘನಗಗನಕೇಶನದರಿಂ । ಜನಮರಿಯೆಹಿರಣ್ಯಕೇಶನೆನಿಸಿದನಲ್ತೆ ॥ ... ... ॥೭೪॥
ಕಂ ॥ ಮಣಿದೆನೆಗಳೆಡೆಯೆಡೆಯೊಳುಡು । ಗಣಮಿರುಳೊಳ್ನುಸುಳ್ದುಪಾಲ್ಗಡಲಕಡೆ
ವಾಗ ॥ ಳ್ಫಣಿಪನನುಣಿವೆಡೆಯೆಡೆಯೊಳ । ಗಣಿತಂಮುಕ್ತಾಳಿನೆಗೆವಭಾವಮನಾಳ್ಗುಂ॥೭೫॥
ಕಂ ॥ ನೀಲಪಟಕೇತುವಂಗಗ । ನಾಲಂಬಿಯನಂಬುಜಾಪ್ತನಿದುರಾಹುವೆನು ॥ತ್ತಾ
ಲೋಕಿಸಿಭಯಮುತ್ತುವಿ । ಶಾಲಾಭ್ರದೆದಕ್ಷಿಣೋತ್ತರಾಯಣನಾದಂ ॥ ... ॥೭೬॥
ಮ॥ಸ್ರ॥ ನೃಪಸೇವಾಯಾತಪೃಥ್ವೀಪತಿಸುತವೃತತತ್ಪುರ್ಯಪ್ರಣಾದಂಪೆಯಃಪಾ । ನಪರಿ

ನೆಳಲಂ- ಸವಿಸಾಪದಲ್ಲಿರುವ ಛಾಯೆಯನ್ನು, ನೆರೆ, ಸಾರ್ದು- ಹೊಂದಿ, ಬೆಮರ್ಗಳ್- ಬೆವರಿನ ಹನಿಗಳು, ಇರೆ- ದೇಹದಲ್ಲಿ ತುಂಬಿರಲು; ಮುತ್ತಿನ, ಕಿರುಪುತ್ತಳಿಯಂತೆ- ಚಿಕ್ಕಗೊಂಬೆಯಹಾಗೆ, ಕಂಗೆಸೆದಳ್- ಕಣ್ಣಿಗೆ ಪ್ರಕಾಶಿಸಿದಳು. ... ... ... ... ... ॥೭೦॥

ಕನಕಮಯಹರ್ಮ್ಯರುಚಿ- ಕನಕಮಯ- ಸುವರ್ಣವಿಕಾರವಾದ, ಹರ್ಮ್ಯ- ಉಪ್ಪರಿಗೆಗಳ, ರುಚಿ- ಕಾಂತಿಯು, ತೆಕ್ಕನೆ- ಸಾಂದ್ರವಾಗಿ, ತೀವಿರೆ- ತುಂಬಿರಲು, ನಭಂ- ಅಂತರಿಕ್ಷವು, ಮಿಸುನಿವಣ್ಣಮಾಳ್ದಿರೆ- ಹೊಂಬಣ್ಣವನ್ನು ಹೊಂದಿರಲು, ಅದರಿಂ, ಆಘನಗಗನಕೇಶಂ- ಸಾಂದ್ರವಾದ ಆಕಾಶವೇ ಕೇಶವಾಗುಳ್ಳ ಪರಶಿವನು, ಜನಂ, ಅರಿಯೆ- ತಿಳಿಯುತ್ತಿರಲಾಗಿ, ಹಿರಣ್ಯಕೇಶಂ- ಚಿನ್ನವೇ ಕೇಶವಾಗುಳ್ಳವನು, (ಹಿರಣ್ಯವರ್ಣವಾದ ಕೇಶವುಳ್ಳವನು,) ಎನಿಸಿದನಲ್ತೆ- ಎಂದು ಹೇಳಿಸಿಕೊಂಡನಲ್ಲವೇ. ... ... ॥೭೩॥

ಹರ್ಮ್ಯಾಗ್ರಿಮದೊಳ್- ಉಪ್ಪರಿಗೆಯ ಮೇಲ್ಗಡೆಯಲ್ಲಿ, ತತ್ತತ್ಕಾಲದಲ್ಲಿ- ಆಯಾಯಾಕಾಲಗಳಲ್ಲಿ, ಇದು- ಈ ಪರಿದೃಶ್ಯಮಾನವಾದದ್ದು, ಮುಗಿಲ್- ಮೋಡವು, ಇದು, ಕೇತನಪಟಂ- ಧ್ವಜಪಟವು; ಇದು, ರವಿ- ಸೂರ್ಯನು, ಇದು, ಕನಕಕಲಶಂ- ಚಿನ್ನದಕಲಶವು; ಇದು, ಶಶಿ- ಚಂದ್ರನು, ಇದು, ಕಟ್ಟದ- ಧ್ವಜಪಟಕ್ಕೆಕಟ್ಟಿರುವ, ಮುಕುರಂ- ಕನ್ನಡಿಯು; ಎಂಬ, ಬಗೆ- ಯೋಚನೆಯು, ಸಲ್ಲದು- ಉಂಟಾಗುವದಿಲ್ಲವು. ... ... ... ... ... ... ... ... ॥೭೪॥

ಮಣಿದೆನೆಗಳ- ರತ್ನದಕೋಟೆದೆನೆಗಳ, ಎಡೆಯೆಡೆಯೊಳ್- ಸಂದುಗಳಲ್ಲಿ, ಉಡುಗಣಂ- ನಕ್ಷತ್ರಸಮೂಹವು, ಇರುಳೊಳ್- ರಾತ್ರಿಯಲ್ಲಿ, ನುಸುಳ್ದು- ನುಗ್ಗಿ; ಪಾಲ್ಗಡಲ- ಕ್ಷೀರಸಮುದ್ರವನ್ನು, ಕಡೆವಾಗಳ್- ಮಥಿಸುವಕಾಲದಲ್ಲಿ, ಫಣಿಪನ- ಆದಿಶೇಷನ, ಪೆಡೆಯ- ಹೆಡೆಯ, ಎಡೆಯೆಡೆಯೊಳ್- ಅವಕಾಶಗಳಲ್ಲಿ, ಅಗಣಿತಂ- ಗಣನಾತೀತವಾದ, ಮುಕ್ತಾಳಿ- ಮುತ್ತುಗಳ ಸಮೂಹವು, ನೆಗೆವ- ಹಾರುವ, ಭಾವಮಂ- ರೀತಿಯನ್ನು, ಆಳ್ಗುಂ- ಹೊಂದುವವು. ... ... ... ... ॥೭೫॥

ಅಂಬುಜಾಪ್ತಂ- ಸೂರ್ಯನು, ಗಗನಾಲಂಬಿಯಂ- ಅಂತರಿಕ್ಷವನ್ನಾಶ್ರಯಿಸಿರುವ, ನೀಲಪಟಕೇತುವಂ ಕಪ್ಪುಬಟ್ಟೆಯುಳ್ಳಧ್ವಜವನ್ನು, ಆಲೋಕಿಸಿ- ನೋಡಿ, ಇದು, ರಾಹು- ರಾಹುಗ್ರಹವು, ಎನುತ್ತೆ, ಭಯಮುತ್ತು- ಭಯಾಕ್ರಾಂತನಾಗಿ, ವಿಶಾಲಾಭ್ರದೆ- ವಿಸ್ತಾರವಾದಂತರಿಕ್ಷದಲ್ಲಿ, ದಕ್ಷಿಣೋತ್ತರಾಯಣಂ- ದಕ್ಷಿಣದಿಕ್ಕನ್ನು ಕುರಿತು ಗಮಿಸುವನು ಉತ್ತರದಿಕ್ಕನ್ನುಕುರಿತು ಗಮಿಸುವವನು, ಆದಂ. ... ॥೭೬॥

ತತ್ಪುರೀರಾಜಮಾರ್ಗಂ- ಆಪಟ್ಟಣದ ರಾಜವೀಧಿಯು, ನೃಪ.........ಪ್ರಣಾದಂ— ನೃಪ- ರಾ

ಪ್ರಸ್ಪಂದಗಂಧದ್ವಿಪಗಣಘನಘಂಟಾಪ್ರಘೋಷಃ ಪಣಸ್ತ್ರೀ ॥ ವಿಪುಳಾಗಾರಸ್ಥಳೀನಿ ರ್ಗತವಿಟಪಟಲೀಕಾಯಸೌರಭ್ಯವಾಂಛಾ । ಚಪಲಾಳಿಧ್ವಾನಮಿಂಬಾಗಿರೆಕರಮೆಸೆಗುಂತತ್ಪು ರೀರಾಜಮಾರ್ಗಂ ॥ ... ... ... ... ... ॥೭೭॥

ಚಂ ॥ ತಳಿರೊಡೆದಂತೆಕಾಂತೆಯರಕಾಲ್ಗಳಲಕ್ತಕದಿಂದೆಕುಟ್ಮಳಂ । ದಳೆದವೊಲಾಲ ತಾಂಗಿಯರಪಾದನಖಪ್ರಭೆಯಿಂದೆಪೂತುಕಂ ॥ ಗೊಳಪವೊಲಾವಿಲಾಸಿನಿಯರಕ್ಷಿಯಬೆಳ್ಪ ಳಗಿಂದೆತಳ್ತುಮಂ । ಜುಳನೃಪವೀಥಿವಲ್ಲಿಮೆರೆದತ್ತುವಿಧೂಪಲಭಿತ್ತಿರುಗ್ಜಳಂ ॥ ॥೭೮॥

ಕಂ ॥ ಪುರರಮೆಸೋದರಶಶಿಯಂ । ಕೊರಗಿಪರವಿಯಂಪರಾಭವಿಸಲೆಂದುವಿಭಾ ॥ ಕರ ಶತಮುಂಪಡೆದಂದದೆ । ಕರಮೆಸೆದುದುಮಿಸುಪಕಂಚುಗಾರರಪಸರಂ ॥ ... ॥೭೯॥

ಕಂ ॥ ಒರೆಮೆಪಸರಿಸಿದಪೊಸಪೊ । ನ್ನರಜಂಧೃತಘುಸೃಣಮೆನಿಸೆಪುರರಮೆಯಪ

---

ಜನ, ಸೇವಾ- ಸೇವೆಗೋಸ್ಕರ, ಆಯಾತ- ಬಂದಂಥಾ, ಪೃಥ್ವೀಪತಿಸುತ- ರಾಜಪುತ್ರರನ್ನು, ವೃತ- ಆವರಿಸಿರುವ, ತೂರ್ಯ- ವಾದ್ಯಗಳ, ಪ್ರಣಾದಂ- ಅಧಿಕವಾದಶಬ್ದವು, ಪಯಃಪಿ-.........ಪ್ರಘೋಷಂ—ಪಯಃಪಾನ- ನೀರಂಕುಡಿಯುವದರಲ್ಲಿ, ಪರ- ಆಸಕ್ತಗಳಾದಕಾರಣವೇ, ಪ್ರಸ್ಪಂದ- ಹೋಗುತ್ತಿರುವ, ಗಂಧ- ಗರ್ವವಿಶಿಷ್ಟಗಳಾದ, ದ್ವಿಪ- ಆನೆಗಳ, ಗಣ- ಸಮೂಹದ, ಘನಘಂಟಾ- ದೊಡ್ಡಗಂಟೆಗಳ, ಪ್ರಘೋಷಂ- ಅಧಿಕವಾದ ಶಬ್ದವು; ಪಣಸ್ತ್ರೀ.........ಧ್ವಾನಂ— ಪಣಸ್ತ್ರೀ- ವಾರಾಂಗನೆಯರ, ವಿಪುಳಾಗಾರ- ವಿಶಾಲವಾದಮನೆಗಳ, ಸ್ಥಳ- ಪ್ರದೇಶದಿಂದ, ನಿರ್ಗತ- ಹೊರಟ, ವಿಟಪಟಲೀ- ವಿಟರಸಮೂಹದ, ಕಾಯ- ಶರೀರದಲ್ಲಿರುವ, ಸೌರಭ್ಯ- ಪರಿಮಳದಲ್ಲಿ, ವಾಂಛಾ- ಇಚ್ಛೆಯಿಂದ, ಚಪಲ- ಚಂಚಲಗಳಾದ, ಅಳಿ- ಭ್ರಮರಗಳ, ಧ್ವಾನಂ- ಶಬ್ದವು; ಇಂಬಾಗಿರೆ- ಮನೋಹರವಾಗಿರಲು; ಕರಂ- ಚೆನ್ನಾಗಿ, ಎಸೆಗುಂ. ... ... ... ... ... ॥೭೭॥

ವಿಧೂಪಲಭಿತ್ತಿರುಗ್ಜಳಂ- ವಿಧೂಪಲ- ಚಂದ್ರಕಾಂತಶಿಲೆಯ, ಭಿತ್ತಿ- ಗೋಡೆಗಳ, ರುಕ್- ಕಾಂತಿಯೆಂಬ, ಜಳಂ- ನೀರುಳ್ಳ, ಮಂಜುಳನೃಪವೀಥಿವಲ್ಲಿ— ಮಂಜುಳ- ಮನೋಹರವಾದ, ನೃಪವೀಥಿವಲ್ಲಿ- ರಾಜಮಾರ್ಗವೆಂಬ ಬಳ್ಳಿಯು, ಕಾಂತೆಯರ- ಸ್ತ್ರೀಯರ, ಕಾಲ್ಗಳ- ಪಾದಗಳಲ್ಲಿಲೇಪಿಸಿರುವ, ಅಲಕ್ತಕದಿಂದೆ- ಅರಗಿನಿಂದ, ತಳ್ತು- ವ್ಯಾಪ್ತವಾಗಿ, ತಳಿರ್ವೊಡೆದಂತೆ- ಚಿಗುರನ್ನುಹೊಂದಿದಹಾಗೆ; ಆಲತಾಂಗಿಯರ- ಬಳ್ಳಿಯಂತಿರುವ ದೇಹವುಳ್ಳ ಸ್ತ್ರೀಯರ, ಪಾದನಖಪ್ರಭೆಯಿಂದೆ- ಕಾಲುಗುರಕಾಂತಿಯಿಂದ, ತಳ್ತು, ಕುಟ್ಮಳಂದಳೆದವೊಲ್- ಮೊಗ್ಗನ್ನುಹೊಂದಿದಹಾಗೆ, ಆವಿಲಾಸಿನಿಯರ- ಸ್ತ್ರೀಯರ, ಅಕ್ಷಿಯ- ಕಣ್ಣುಗಳ, ಬೆಳ್ಪಳಗಿಂದೆ- ಶುಭ್ರವಾದ ಕಾಂತಿಯಿಂದ, ತಳ್ತು, ಪೂತು- ಹೂವನ್ನುಬಿಟ್ಟು, ಕಂಗೊಳಪವೊಲ್- ಪ್ರಕಾಶಿಸುವಹಾಗೆ, ಮೆರೆದತ್ತು- ತೋರಿತು. ... ... ... ॥೭೮॥

ಪುರರಮೆ- ಪಟ್ಟಣಲಕ್ಷ್ಮಿಯು, ಸೋದರಶಶಿಯಂ— (ತನ್ನ)ಒಡಹುಟ್ಟಿದಚಂದ್ರನನ್ನು, ಕೊರಗಿಪ- ಕಾಂತಿಹೀನನನ್ನಾಗಿ ಮಾಡುವ, ರವಿಯಂ- ಸೂರ್ಯನನ್ನು,ಪರಾಭವಿಸಲೆಂದು- ಜೈಸಬೇಕೆಂದು, ವಿಭಾಕರಶತಮಂ-ಅನೇಕ ಸೂರ್ಯರನ್ನು, ಪಡೆದಂದದೆ- ಹೊಂದಿದಹಾಗೆ, ಮಿಸುಪ- ಪ್ರಕಾಶಿಸುವ, ಕಂಚುಗಾರರ, ಪಸರಂ-ಅಂಗಡಿಯು,ಕರಂ,ಎಸೆದುದು. ... ... ... ... ॥೭೯॥

ಒರೆಮೆ- ಒರೆಹುನ್ನಿಕ್ಕಲು, ಪಸರಿಸಿದ- ಹರಡಿಕೊಂಡಿರುವ, ಪೊಸಪೊನ್ನರಜಂ- ನೂತನವಾದಚಿನ್ನದಧೂಳಿಯು,ಧೃತಘುಸೃಣಂ-ಧರಿಸಲ್ಪಟ್ಟ ಕುಂಕುಮಕೇಸರಿಯು,ಎನಿಸೆ, ಪೊಂಗಳ- ಚಿನ್ನದ, ಒಟ್ಟಿಲ್- ರಾಶಿಯು, ಪುರರಮೆಯ- ನಗರಲಕ್ಷ್ಮಿಯ, ಪಯೋಧರದಂತೆ- ಸ್ತನಗಳಹಾಗೆ, ಪರಿರಂಜಿಸೆ- ಪ್ರಕಾಶಿಸಲು,

ಯೋ ॥ ಧರದಂತೆಪ್ರೊಂಗಳೊಟ್ಟ । ಲ್ಪರಿರಂಜಿಸೆಸೊನ್ನೆವರದವಸರುಮೆಸೆಗುಂ ॥ ॥೮೦॥

ಕಂ॥ ನೆಲದಳಕಿಳಿದಹಿರಾಜನ। ತಲೆವಣಿಯಂಜಲದೊಳಾಳ್ದಕೌಸ್ತುಭಮಂಕೆ॥ ಣ್ಬೊ
ಲನಾಗದಸುರಮಣಿಯಂ । ಸಲೆಪಳಕೆಯ್ದೆಸೆಗುಮಲ್ಲಿಗುಣಮಣಿವಸರಂ ॥ ... ॥೮೧॥

ಮತ್ತೆ ॥ ಕುಮುದಾಮೋದಮನಪ್ಪಿದಿಂದುಕಿರಣಂಪಂಕೇಜಸೌರಭ್ಯಸಂ । ಕ್ರಮ
ಣಂಬೊಂದಿದಬಾಲಭಾನುರುಚಿಮಲ್ಲೀಜಾತಿಕುಂದಾಳಿಗಂ ॥ ಧಮನಾಳ್ದಂಧತಮಂಪ್ರೊಣರ್ಕೆ
ಗುರುರಾಶೀಭೂತಮಾಗಿರ್ಪವೊಲ್ । ಹಿಮದೊಟ್ಟಲ್ಘುಸೃಣೋತ್ಕರಂಮೃಗಮದೋದ್ಯ
ದ್ರಾಶಿಕಣ್ಗೊಪ್ಪುಗುಂ ॥ ... ... ... ... ॥೮೨॥

ಕಂ ॥ ಇಟ್ಟಣಿಸಿನಡೆವಕಾಂತೆಯ । ರಿಟ್ಟೆಡೆವೊಲೆಯೊರಸೆಸುರಿದಕುಂಕುಮರಜಮಂ॥
ಪಟ್ಟಗಜಂನಿಜಕುಂಭದೊ। ಳೊಟ್ಟಿಕೊಳುತ್ತಲ್ಲಿಗಂಧಗಜಮೆನಿಸಿರ್ಕುಂ॥ ... ॥೮೩॥

ಕಂ ॥ ನಗೆವೆಳಗಿಂಕೈರವಮಂ । ಸೊಗಯಿಪಕರತಳದಕಾಂತಿಯಿಂಜಳರುಹಮಂ ॥
ನಗಿಸಿನರುಸುಯ್ಯಕಂಪಿಂ । ಮಿಗೆಪ್ರೊರೆದವನಲ್ಲಿಮಾರುವರ್ಮಾನಿನಿಯರ್॥ ... ॥೮೪

---

ಸೊನ್ನೆವರದವಸರಂ- ಚಿನ್ನಗಾರರಅಂಗಡಿಯು, ಮೆರೆಗುಂ. ... ... ... ॥೮೦॥

ಅಲ್ಲಿ- ಆ ಪಟ್ಟಣದಲ್ಲಿ, ಗುಣಮಣಿವಿಸರಂ- ಸದ್ಗುಣದಿಂಕೂಡಿದ, (ದಾರದಿಂಕೂಡಿದ,) ರತ್ನಗಳಂಗಡಿಯು, ನೆಲದಳಕ್ಕೆ- ಪಾತಾಳಕ್ಕೆ, ಇಳಿದ, ಅಹಿರಾಜನ- ಆದಿಶೇಷನ, ತಲೆವಣಿಯಂ- ಹೆಡೆಯಲ್ಲಿರುವ ರತ್ನವನ್ನು, ಜಲದೊಳ್- ನೀರಿನಲ್ಲಿ, ಆಳ್ದ- ಮುಳುಗಿದ, ಕೌಸ್ತುಭಮಂ- ಕೌಸ್ತುಭಮಣಿಯನ್ನು, ಕಣ್ಬೊಲನಾಗದ- ಕಣ್ಣಿಗೆಗೋಚರವಾಗದ, ಸುರಮಣಿಯಂ- ಚಿಂತಾಮಣಿಯನ್ನು, ಸಲೆ- ಚೆನ್ನಾಗಿ, ಪಳಕೆಯ್ದು- ತಿರಸ್ಕರಿಸಿ, ಎಸೆಗುಂ. ... ... ... .. ॥೮೧॥

ಕುಮುದಾಮೋದಮಂ- ಬಿಳೀನೈದಿಲೆಗಳ ಪರಿಮಳವನ್ನು, ಅಪ್ಪಿದ- ಹೊಂದಿದ, ಇಂದುಕಿರಣಂ- ಚಂದ್ರನಕಾಂತಿಯು; ಪಂಕೇಜಸೌರಭ್ಯಸಂಕ್ರಮಣಂಬೊಂದಿದ— ಪಂಕೇಜ- ಕಮಲಗಳ, ಸೌರಭ್ಯ- ಪರಿಮಳದ, ಸಂಕ್ರಮಣಂಬೊಂದಿದ- ಸಂಬಂಧವನ್ನುಹೊಂದಿದ, ಬಾಲಭಾನುರುಚಿ- ಎಳೆಬಿಸಲು; ಮಲ್ಲೀಜಾತಿಕುಂದಾಳಿಗಂಧಮಂ— ಮಲ್ಲೀ- ಮಲ್ಲಿಗೆ, ಜಾತಿ- ಜಾಜಿ, ಕುಂದ- ಮೊಲ್ಲೆಹೂವು ಇವುಗಳ, ಆಳಿ- ಪಙ್ತಿಯ, ಗಂಧಮಂ- ಪರಿಮಳವನ್ನು, ಆಳ್ದ- ಹೊಂದಿದ, ಅಂಧತಮಂ- ಗಾಢಾಂಧಕಾರವು; ಪ್ರೊಣರ್ಕೆಗೆ- ಯುದ್ಧಕ್ಕೋಸ್ಕರ, ಉರುರಾಶೀಭೂತಂ, ಆಗಿರ್ಪವೊಲ್— ದೊಡ್ಡಗುಡ್ಡೆಗಳಾಗಿರುವಹಾಗೆ, ಹಿಮದ- ಪಚ್ಚಕರ್ಪೂರದ, ಒಟ್ಟಲ್- ರಾಶಿಯು, ಘುಸೃಣೋತ್ಕರಂ- ಕುಂಕುಮಕೇಸರಿಯ ರಾಶಿಯು, ಮೃಗಮದೋದ್ಯದ್ರಾಶಿ- ಕಸ್ತೂರಿಯ ರಾಶಿಯು, ಕಣ್ಗೆ, ಒಪ್ಪುಗುಂ. ... ... ... ॥೮೨।

ಇಟ್ಟಣಿಸಿ- ಸಾಂದ್ರವಾಗಿ, ನಡೆವ- ಹೋಗುವ, ಕಾಂತೆಯರ- ಸ್ತ್ರೀಯರ, ಇಟ್ಟೆಡೆವೊಲೆ- ಇಕ್ಕಟ್ಟಾದ ಸ್ತನಗಳು, ಒರಸೆ- ಒಂದಕ್ಕೊಂದುಘರ್ಷಿಸಲು, ಸುರಿದ, ಕುಂಕುಮರಜಮಂ- ಕುಂಕುಮಕೇಸರಿಯ ಧೂಳಿಯನ್ನು, ಪಟ್ಟಗಜಂ- ಪಟ್ಟದಾನೆಯು, ನಿಜಕುಂಭದೊಳ್- ತನ್ನಕುಂಭಸ್ಥಲದಲ್ಲಿ, ಒಟ್ಟಿಕೊಳುತ್ತೆ-ಸುರಿದುಕೊಳ್ಳುತ್ತ, ಗಂಧಗಜಂ- ಪರಿಮಳದಿಂದಕೂಡಿದ, (ಗರ್ವದಿಂಕೂಡಿದ.) ಆನೆಯು, ಎನಿಸಿ, ಇರ್ಕುಂ. ... ... ... ... ... ॥೮೩॥

ಅಲ್ಲಿ, ಮಾನಿನಿಯರ್- ಸ್ತ್ರೀಯರು, ನಗೆವೆಳಗಿಂ- ನಗುವಿಕೆಯ ಕಾಂತಿಯಿಂದ, ಕೈರವಮಂ- ಬಿಳಿನೈದಿಲೆಯನ್ನು, ಸೊಗಯಿಪ- ಪ್ರಕಾಶಿಸುವ, ಕರತಳದ- ಹಸ್ತಪ್ರದೇಶದ, ಕಾಂತಿಯಿಂ, ಜಳರುಹಮಂ- ಕಮಲವನ್ನು; ನಗಿಸಿ- ವಿಕಾಸಪಡಿಸಿ, ನರುಸುಯ್ಯ- ಪರಿಮಳವಿಶಿಷ್ಟವಾದ ನಿಶ್ವಾಸದ, ಕಂಪಿಂ- ವಾಸನೆಯಿಂದ, ಮಿಗೆ, ಪೊರೆದು- ತುಂಬಿ, ಅವಂ- ಆಹೂವುಗಳನ್ನು. ಮಾರುವರ್. ... ... ॥೮೪॥

ಕಂ ॥ ಸಾಲಿಡಿದಳಿಕವಿದಿರೆಪ್ರೊ । ಮಾಲೆಯನನುರ್ದೆತ್ತಿ ಪಿಡಿದಕಾಮಿನಿಯೋರ್ವಳ್ ॥ ಲೀಲೆಯಿನಲರ್ವಿಲ್ಲಂಪ್ರೊ । ಗೋಲಂಗಿರದೆತ್ತಿಕೊಡುವರತಿಯಂಪೋಲ್ತಳ್ ॥ ॥೮೫॥

ಉ ॥ ಮಲ್ಲಿಗೆಯೊರ್ಬ್ಬರಂಮಿಸುಪಮೊಲ್ಲೆಯಮೊಗ್ಗೆಯಪಿಂಡುಗಂಕಣಂ । ಪಲ್ಲವದಿಂಪುವೆತ್ತಪದಕಂಸುರಹೊನ್ನೆಯಕಂಠಮಾಲಿಕಂ । ಕೆಲ್ಲಿಯಕರ್ಣಪೂರಮದಿರ್ಮುತ್ತೆಯಬಾಪುರಿಚಾರುಚಂಪಕೋ । ತ್ಪಲ್ಲದನೇವುರಂ ಮೆರೆವಪೂವಿನಸಂತೆಕರಂಮನೋಹರಂ ॥ ... ... ... ... .. ॥೮೬॥

ಕಂ ॥ ಮೊಗಸಿರಿನೆಯ್ದಿಲಪೊಸಮ । ಲ್ಲಿಗೆಯಲರ್ಗಳವಾಲೆವಿಡಿದವೊಲ್ಕಣ್ವೆಳಗುಂ॥ ನಗೆವೆಳಗುಂಪಸರಿಸೆಬಗೆ । ಮಿಗಪೋಲ್ತಳ್ಮಾಲೆಗಾರ್ತಿಯಲರಂಗಡಿಯಂ ॥ ... ॥೮೭॥

ವ॥ ಇಂತನಂತವಸ್ತು ವಿಸ್ತಾರನೂತನಶೋಭಾಸ್ಪದಮಾದ ಪುರಮಧ್ಯಪ್ರದೇಶದಲ್ಲಿ

ಕಂ ॥ ಬಳಸಿದಸಾಲದತೆನೆದಳ । ಮೊಳಗಣಪೊಂಮಾಡಮಮರ್ದಕರ್ಣಿಕೆಮಣಿಮಂ॥ ಗಳಕಳಶಕಾಂತಿಮಧುವೆನೆ । ಜಳರುಹಮೆನಿಸಿದುದುರಮೆಗೆಭೂವರಭವನಂ ॥ ॥೮೮॥

---

ಪೂಮಾಲೆಯಂ- ಹೂವಿನಮಾಲಿಕೆಯನ್ನು, ಸಾಲಿಡಿದ- ಲೈನಾದ, ಅಳಿ- ಭ್ರಮರಗಳು, ಕವಿದಿರೆ-ಆಚ್ಛಾದಿಸಿರಲು, ಅಮರ್ದು- ಸೇರಿಸಿ, ಎತ್ತಿಪಿಡಿದ- ಮೇಲಕ್ಕೆತ್ತಿಹಿಡಿದಿರುವ, ಓರ್ವಳ್‌ಕಾಮಿನಿ- ಒಬ್ಬಸ್ತ್ರೀಯು, ಪೂಗೋಲಂಗೆ- ಮನ್ಮಥನಿಗೆ, ಅಲರ್ವಿಲ್ಲಂ- ಪುಷ್ಪಧನುಸ್ಸನ್ನು, ಇರದೆ- ಬಿಡದೆ, ಎತ್ತಿಕೊಡುವ, ರತಿಯಂ- ರತೀದೇವಿಯನ್ನು, ಪೋಲ್ತಳ್- ಸರಿಹೋಲಿದಳು. ... ... ... ॥೮೫॥

ಮಲ್ಲಿಗೆಯ- ಒರ್ಬ್ಬರಂ- ಒಂದುಸರವು, ಮಿಸುಪ- ಪ್ರಕಾಶಿಸುವ, ಮೊಲ್ಲೆಯ- ಮೊಗ್ಗೆಯ, ಪಿಂಡುಗಂಕಣಂ- ದಂಡೆಗಂಕಣವು, ಪಲ್ಲವದ- ಚಿಗುರಿನ, ಇಂಪುವೆತ್ತ- ಮನೋಹರವಾದ, ಪದಕಂ, ಸುರಹೊನ್ನೆಯ, ಕಂಠಮಾಲೆ- ಕಂಠಾಭರಣವು, ಕಂಕೆಲ್ಲಿಯ- ಅಶೋಕಪುಷ್ಪದ, ಕರ್ಣಪೂರಂ- ಕರ್ಣಾಭರಣವು, ಅದಿರ್ಮುತ್ತೆಯ- ವಸಂತದೂತಿಕೆಯ, ಬಾಪುರಿ- ಬಾಹುಪುರಿಯು, ಚಾರುಚಂಪಕೋತ್ಪಲ್ಲದ, ಮನೋಹರವಾದ ಸಂಪಗೆಹೂವಿನ, ನೇವುರಂ- ಪಾದಕಟಕವು, ಇವುಗಳು,ಮೆರೆವ- ಪ್ರಕಾಶಿಸುವ, ಪೂವಿನಸಂತೆ- ಹೂವಿನ ವ್ಯಾಪಾರಸ್ಥಲವು, ಕರಂ, ಮನೋಹರಂ, (ಆದುದು.) ... ... ... ॥೮೬॥

ಮೊಗಸಿರಿ- ಮುಖಲಕ್ಷ್ಮಿಯು, ನೈದಿಲ, ಅಲರ್ಗಳ- ಹೂವುಗಳ, ಮಾಲೆವಿಡಿದವೊಲ್- ಮಾಲಿಕೆಯನ್ನುಹಿಡಿದಹಾಗೆ, ಕಣ್ವೆಳಗುಂ- ನೇತ್ರಕಾಂತಿಯೂ; ಪೊಸಮಲ್ಲಿಗೆಯ- ನೂತನವಾದ ಮಲ್ಲಿಗೆಯ, ಅಲರ್ಗಳ- ಹೂವುಗಳ, ಮಾಲೆವಿಡಿದವೊಲ್- ನಗೆವೆಳಗುಂ- ನಗುವಿಕೆಯಕಾಂತಿಯೂ; ಬಗೆವುಗೆ ಮನೋಹರವಾಗುವಹಾಗೆ, ಪಸರಿಸೆ- ವಿಸ್ತಾರವಾಗಲು, ಮಾಲೆಗಾರ್ತಿ- ಹೂವಾಡಿಗರವಳು, ಅಲರಂಗಡಿಯಂ- ಹೂವಿನಂಗಡಿಯನ್ನು, ಪೋಲ್ತಳ್. ... ... ... ... ... ॥೮೭॥

ಇಂತು, ಅನಂತ......ಆಸ್ಪದಂ— ಅನಂತ- ಅಪರಿಮಿತವಾದ, ವಸ್ತು- ಪದಾರ್ಥಗಳ, ವಿಸ್ತಾರ- ವೈಶಾಲ್ಯದಿಂದ, ನೂತನಶೋಭಾ- ಅಪೂರ್ವವಾದಕಾಂತಿಗೆ, ಆಸ್ಪದು- ಆಶ್ರಯವಾದದ್ದು, ಆದ- ಆಗಿರುವ,ಆಪುರಮಧ್ಯಪ್ರದೇಶದಲ್ಲಿ. * * * * * * * * * * * * * * *

ಬಳಸಿದ- ಸುತ್ತಿಕೊಂಡಿರುವ, ಸಾಲದ- ಕೋಟೆಯ, ತೆನೆ- ತೆನೆಗಳು, ದಳಂ- ಎಸಳುಗಳು, ಒಳಗಣ- ಒಳಗಿರುವ, ಪೊಂಮ್ಮಾಡಂ- ಚಿನ್ನದುಪ್ಪರಿಗೆಯು, ಅಮರ್ದ- ಸೇರಿದ, ಕರ್ಣಿಕೆ-ಮಧ್ಯದಲ್ಲಿರುವಕರ್ಣಿಕೆಯು, ಮಣಿಮಂಗಳಕಲಶಕಾಂತಿ- ರತ್ನಖಚಿತವಾದ ಮಂಗಳಕರವಾದ ಕಲಶಗಳಕಾಂತಿಯು,ಮಧು- ಮಕರಂದವು, ಎನೆ, ಭೂವರಭವನಂ- ಅರಮನೆಯು, ರಮೆಗೆ- ಲಕ್ಷ್ಮಿಗೆ ಜಳರುಹಂ-ಮನೆಯಾದಕಮಲವು,ಎನಿಸಿದುದು. ... ... ... ... ॥೮೮॥

ಕಂ ॥ ಆಭವನದೊಳೆಸೆದಿರ್ಪ್ಪಂ । ಭೂಭಾಮಿನಿಯಾಣ್ಮನತುಳಮದಯುತರಿಪುಮ॥
ತ್ತೇಭನೃಗೇಂದ್ರಂಸಾಂದ್ರಯ । ಶೋಭರಿತಾಶಂಪುರಂದರೋನ್ನತವಿಭವಂ ॥ ॥೪೯॥
ಮತ್ತೇ ॥ ಸಿರಿಯೊಳ್ಶ್ರೀಪತಿಯಂತೆದಾನಗುಣದೊಳ್ಮಂದಾರಭೂಜಾತದಂ । ತರಿವಿ
ಧ್ವಂಸನದೊಳ್ಸುರೇಂದ್ರಸುತನಂತೌಜ್ವಲ್ಯದೊಳ್ಧ್ವಸ್ತಶಂ ॥ ಬರನೆಂಬಂತೆವಿದಗ್ಧತಾವಿ
ಭವದೊಳ್ವಾಣೀಶನಂತಿರ್ಪ್ಪನು । ರ್ವರೆಯೊಳ್ತಳ್ತವಲೋಕಮಾನಲಲನಾದೃಕ್ಕಜ್ಜಳಂಬಿ
ಜ್ಜಳಂ ॥ ... ... ... ... ... ... ॥೫೦॥
ಚಂ॥ ಕರತಳಖಡ್ಗಕೃತ್ತರಿಪುರಕ್ತರಸಾರ್ದ್ರಮಹೀತಳೋಪ್ತನಿ । ರ್ಭರಹತಕುಂ
ಭಿಕುಂಭನಿಪತನ್ನವಮೌಕ್ತಿಕಬೀಜಜಾತವಿ ॥ ಸ್ಫುರಿತಯಶೋಲಸಲ್ಲತೆಸುಧಾಂಶುಕರಚ್ಛ
ಲದಿಂದೆಪರ್ಬ್ಬಿಭಾ । ಸುರಭಗಣೇಂದುಪುಷ್ಪಫಲಸಂಗತಮಾದುದುತನ್ನರೇಂದ್ರನಾ ॥೫೧॥
ಮ॥ ಸ್ರ॥ ಅತಿದೃಪ್ತಾರಾತಿಯೋಬಿಜ್ಜನದವದನಪೂರ್ಣೇಂದುಮಂಮಂದಹಾಸ ।

ಆಭವನದೊಳ್- ಆ ಮನೆಯಲ್ಲಿ, ಅತುಳ.........ನೃಗೇಂದ್ರಂ— ಅತುಳ- ಅಸದೃಶವಾದ, ಮ
ದ- ಗರ್ವದಿಂದ, ಯುತ- ಕೂಡಿದ, ರಿಪು- ಶತ್ರುಗಳೆಂಬ ಮತ್ತೇಭ- ಮದಗಜಗಳಿಗೆ, ನೃಗೇಂದ್ರಂ- ಸಿಂಹ
ರೂಪನಾದ, ಸಾಂದ್ರಯಶೋಭರಿತಾಶಂ- ನಿಬಿಡವಾದ ಕೀರ್ತಿಯಿಂದ ತುಂಬಿದ ದಿಕ್ಕುಗಳುಳ್ಳ, ಪುರಂದರೋ
ನ್ನತವಿಭವಂ- ಇಂದ್ರನ ಉತ್ಕೃಷ್ಟವಾದ ವೈಭವಕ್ಕೆ ಸದೃಶವಾದ ವೈಭವವುಳ್ಳ, ಭೂಭಾಮಿನಿಯಾಣ್ಮಂ,
ಭೂಕಾಂತಾಪತಿಯಾದ ರಾಜನು, ಎಸೆದು, ಇರ್ಪ್ಪಂ ... ... ... ... ॥೪೯॥

ಅವಲೋಕ.........ಕಜ್ಜಳಂ— ಅವಲೋಕಮಾನ- ನೋಡುವ, ಲಲನಾ-ಸ್ತ್ರೀಯರ, ದೃಕ್-
ನೇತ್ರಗಳಿಗೆ, ಕಜ್ಜಳಂ- ಕಾಡಿಗೆಯಂತಿರುವ, ಬಿಜ್ಜಳಂ- ಬಿಜ್ಜಳರಾಜನು, ಉರ್ವರೆಯೊಳ್- ಭೂಮಿಯ
ಲ್ಲಿ, ತಳ್ತು- ಸೇರಿ, ಸಿರಿಯೊಳ್- ಐಶ್ವರ್ಯವಿಷಯದಲ್ಲಿ, ಶ್ರೀಪತಿಯಂತೆ- ವಿಷ್ಣುವಿನಹಾಗೆ, ದಾನಗುಣ
ದೊಳ್- ವಿತರಣವಿಷಯದಲ್ಲಿ, ಮಂದಾರಭೂಜಾತದಂತೆ- ಕಲ್ಪವೃಕ್ಷದಹಾಗೆ, ಅರಿವಿಧ್ವಂಸನದೊಳ್- ಶ
ತ್ರುಗಳನ್ನು ನಾಶಪಡಿಸುವ ವಿಷಯದಲ್ಲಿ, ಸುರೇಂದ್ರಸುತನಂತೆ- ಅರ್ಜುನನಹಾಗೆ, ಔಜ್ವಲ್ಯದೊಳ್-
ಸೌಂದರ್ಯವಿಷಯಸಲ್ಲಿ, * ಧ್ವಸ್ತಶಂಬರನೆಂಬಂತೆ- ಮನ್ಮಥನೆಂಬುವಹಾಗೆ, ವಿದಗ್ಧತಾವಿಭವದೊಳ್- ವಿ
ದ್ವದ್ವೈಭವವಿಷಯದಲ್ಲಿ, ವಾಣೀಶನಂತೆ- ಬ್ರಹ್ಮನಹಾಗೆ, ಇರ್ದ್ದಂ. ... ... ॥೫೦॥

ತನ್ನರೇಂದ್ರನ- ಆ ಬಿಜ್ಜಳರಾಜನ, ಕರ......ಲತೆ— ಕರತಳ- ಹಸ್ತಪ್ರದೇಶವಲ್ಲಿರುವ, ಖಡ್ಗ- ಕ
ತ್ತಿಯಿಂದ, ಕೃತ್ತ- ಕತ್ತರಿಸಲ್ಪಟ್ಟ, ರಿಪು- ಶತ್ರುಗಳ, ರಕ್ತರಸ- ರಕ್ತಜಲದಿಂದ, ಆರ್ದ್ರ- ಸಿಕ್ತವಾದ,
ಮಹೀತಳ- ಭೂತಳದಲ್ಲಿ, ಉಪ್ತ- ನೆಡಲ್ಪಟ್ಟ, ನಿರ್ಭರ- ಅಧಿಕವಾಗಿ, ಹತ- ನಾಶವಾದ, ಕುಂಭಿ- ಆನೆಗಳ,
ಕುಂಭ- ಕುಂಭಸ್ಥಲದದೆಸೆಯಿಂದ, ನಿಪತತ್- ಬಿದ್ದ, ನವ- ನೂತನವಾದ, ಮೌಕ್ತಿಕ- ಮುತ್ತುಗಳೆಂಬ,
ಬೀಜ- ಬೀಜಗಳಿಂದ, ಜಾತ- ಉತ್ಪನ್ನವಾದ, ವಿಸ್ಫುರಿತ- ಪ್ರಕಾಶಿಸುವ, ಯಶೋಲಸಲ್ಲತೆ- ಕೀರ್ತಿಯಂ
ಬಹೊಳೆಯುವಬಳ್ಳಿಯು, ಸುಧಾಂಶುಕರಚ್ಛಲದಿಂದೆ- ಬೆಳದಿಂಗಳೆಂಬ ವ್ಯಾಜದಿಂದ, ಪರ್ಬ್ಬಿ- ಹಬ್ಬಿ, ಭಾ
ಸುರ.........ಸಂಗತಂ— ಭಾಸುರ- ಪ್ರಕಾಶಿಸುವ, ಭಗಣ- ನಕ್ಷತ್ರಗಳಸಮೂಹವೇನು, ಇಂದು-
ಚಂದ್ರನೇನುಇವುಗಳೆಂಬ, ಪುಷ್ಪ- ಹೂವು, ಫಲ- ಹಣ್ಣು, ಇವುಗಳಿಂದ, ಸಂಗತ-ಆದುದು- ಕೂಡಿರುವ
ದಾಯಿತು. ... ... ... ... ... ... ॥೫೧॥

ಅವನ- ಆ ಬಿಜ್ಜಳನ, ಶುಂಭತ್ಪ್ರತಾಪಾರ್ಕಬಿಂಬಂ- ಹೊಳೆಯುವ ಪರಾಕ್ರಮವೆಂಬ ಸೂರ್ಯಮಂ

* (ಅವ). ಧ್ವಸ್ತ- ನಾಶಮಾಡಲ್ಪಟ್ಟ, ಶಂಬರಂ-ಶಂಬರಾಸುರನುಳ್ಳವನು. ... ... ॥೫೦॥

ದ್ಯುತಿಚಂಚಜ್ಜ್ಯೋತ್ಸ್ನೆಯುಂಪಾರಿಸಿಕೊರಗಿಸುತಂಹಾರಮುಕ್ತಾಳಿತಾರಾ ॥ ತತಿಯಂ
ತಾಂಮಾಜಿಸುತ್ತಂಹೃದಯದಿನಕರಗ್ರಾವದೊಳ್ತಾಪವಹ್ನಿ । ಸ್ಥಿತಿಯಂಮೆಯ್ವೆರ್ಚಿಸು
ತ್ತಂಮೆರೆದುದವನಶುಂಭತ್ಪ್ರತಾಪಾರ್ಕಬಿಂಬಂ ॥ ... ... ॥೯೨॥

ಕಂ ॥ ನಡುಗುಗುಮಾನೃಪಖಡ್ಗಂ। ನಡುಗದಮುನ್ನಾಂತರಿಪುಗಳಸುವವನಸಿಯಿಂ ॥
ಕಡಿಯದಮುನ್ನಂತೃಣಮಂ। ಕಡಿದಪುದರಿವರ್ಗಮೆನೆಪರಾಕ್ರಮಮೆನಿತೋ ॥ ॥೯೩॥

ಕಂ ॥ ಇನವಂಶಜತನ್ನೃಪತಿಯ । ಘನರುಚಿಕರವಾಳದಿಂದೆಮಡಿದಹಿತರ್ತಾ ॥
ವಿನಮಂಡಲಮಂಭೇದಿಪ । ರೆನೆಮಡಿದೊಡಮರಿವಿರೋಧಮಂಬಿಟ್ಟಪನೆ ॥ ... ॥೯೪॥

ಕಂ ॥ ಧರಣಿಪನಸಿದೂತಿರಿಪೂ । ತ್ಕರಮಂಸುರನಾರಿಯರ್ಕಳೊಳ್ನೆರಪಲ್ಸಾ ॥
ರ್ದಿರದೀಳ್ದುಕೊಳ್ವಳಾರಿಪು । ಶಿರೋಧಿಗತರಕ್ತಬಿಂದುಮಣಿಮಾಲಿಕೆಯಂ ॥ ॥೯೫॥

---

ಡಲವು, ತಾಂ, ಅತಿ.........ಜನದ— ಅತಿದೃಪ್ತ- ಅತ್ಯಂತವಾಗಿ ಕೊಬ್ಬಿದ, ಅರಾತಿ- ಶತ್ರುಗಳ, ಯೋಷಿಜ್ಜನದ- ಸ್ತ್ರೀಯರುಗಳ, ಮಂದ.........ಜ್ಯೋತ್ಸ್ನೆಯಂ— ಮಂದಹಾಸ- ಮುಗುಳ್ನಗೆಯ, ದ್ಯುತಿ– ಕಾಂತಿಯೆಂಬ, ಚಂಚತ್- ಹೊಳೆಯುವ, ಜ್ಯೋತ್ಸ್ನೆಯಂ- ಬೆಳ್ದಿಂಗಳನ್ನು, ಪಾರಿಸಿ- ಹೋಗಲಾಡಿಸಿ, ವದನಪೂರ್ಣೇಂದುವಂ- ಮುಖವೆಂಬಚಂದ್ರನನ್ನು, ಕೊರಗಿಸುತಂ- ಕಾಂತಿಹೀನನನ್ನಾಗಿಮಾಡುತ್ತ, ಹಾರಮುಕ್ತಾಳಿತಾರಾತತಿಯಂ— ಹಾರ- ಕಂಠಹಾರದಲ್ಲಿರುವ, ಮುಕ್ತಾಳಿ- ಮುತ್ತುಗಳ ಲೈನೆಂಬ, ತಾರಾತತಿಯಂ- ನಕ್ಷತ್ರಗಳಸಮೂಹವನ್ನು, ಮಾಜಿಸುತ್ತಂ- ಇಲ್ಲದಂತೆಮಾಡುತ್ತ, ಹೃದಯದಿನಕರಗ್ರಾವದೊಳ್- ಮನಸ್ಸೆಂಬಸೂರ್ಯಕಾಂತಶಿಲೆಯಲ್ಲಿ, ತಾಪವಹ್ನಿಸ್ಥಿತಿಯಂ- ಸಂತಾಪಾಗ್ನಿಯ ಇರುವಿಕೆಯನ್ನು ಮೆಯ್ವೆರ್ಚಿಸುತ್ತಂ- ಅಭಿವೃದ್ಧಿಪಡಿಸುತ್ತ, ಮೆರೆದುದು. ... ... ... ॥೯೨॥

ಆನೃಪಖಡ್ಗಂ- ಆ ಬಿಜ್ಜಳರಾಜನಕತ್ತಿಯು, ನಡುಗದಮುನ್ನಂ- ಅಲ್ಲಾಡುವದಕ್ಕಿಂತಲೂ ಪೂರ್ವದಲ್ಲೇ, ಆಂತ- ಇದಿರಾದ, ರಿಪುಗಳ– ಶತ್ರುಗಳ, ಅಸು- ಪ್ರಾಣವು, ನಡುಗುಗುಂ- ಕಂಪಿಸುವದು; ಅವಂ- ಆ ರಾಜನು, ಅಸಿಯಿಂ- ಕತ್ತಿಯಿಂದ, ಕಡಿಯದಮುನ್ನಂ- ಕತ್ತರಿಸದಿರುವದಕ್ಕಿಂತಲೂ ಮೊದಲೇ, ಅರಿವರ್ಗಂ- ಶತ್ರುಸಮೂಹವು, ತೃಣಮಂ- ಹುಲ್ಲನ್ನು, ಕಡಿದಪುದು- ಕಚ್ಚುವದು; ಎನೆ- ಹೀಗೆನ್ನಲು ಎನಿತು ಪರಾಕ್ರಮಮೋ- ಎಷ್ಟುಶೌರ್ಯವೋ. ... ... ... ... ... ॥೯೩॥

ಇನವಂಶ.........ಕರವಾಳದಿಂದೆ— ಇನವಂಶಜ- ಸೂರ್ಯವಂಶದಲ್ಲಿಹುಟ್ಟಿದ, ತನ್ನೃಪತಿ- ಆ ರಾಜನ, ಘನರುಚಿ- ಅಧಿಕವಾದತೇಜಸುಳ್ಳ, ಕರವಾಳದಿಂದೆ– ಕತ್ತಿಯಿಂದ, ಮಡಿದ- ಸತ್ತ, ಅಹಿತರ್- ಶತ್ರುಗಳು, ತಾವ್, ಇನಮಂಡಲಮಂ- ಸೂರ್ಯಮಂಡಲವನ್ನು, ಭೇದಿಪರ್- ಭೇದಿಸುವರು, ಎನೆ, ಅರಿ- ಶತ್ರುವು, ಮಡಿದೊಡಂ- ಸತ್ತರೂ, ಅರಿವಿರೋಧಮಂ- ಶತ್ರುವೈರವನ್ನು, ಬಿಟ್ಟಪನೇ- ಬಿಡುವನೇ.

ಯುದ್ಧದಲ್ಲಿ ಕಾದು ಮೃತನಾದವನು ಸೂರ್ಯಮಂಡಲವಂ ಭೇದಿಸಿಕೊಂಡು ವೀರಸ್ವರ್ಗಮಂ ಹೊಂದುವನೆಂದು ಶಾಸ್ತ್ರಸಿದ್ಧವು. ... ... ... ... ... ॥೯೪॥

ಧರಣಿಪನ- ಬಿಜ್ಜಳರಾಜನ, ಅಸಿದೂತಿ ಕತ್ತಿಯೆಂಬ ಕುಂಟಣಿಯು, ರಿಪೂತ್ಕರಮಂ- ಶತ್ರುಸಮೂಹವನ್ನು, ಸುರನಾರಿಯರ್ಕಳೊಳ್- ದೇವತಾಸ್ತ್ರೀಯರುಗೊಡನೆ, ನೆರಪಲ್- ಸೇರಿಸುವದಕ್ಕೋಸ್ಕರ, ಸಾರ್ದು- ಸಮೀಪಕ್ಕೆಹೋಗಿ, ಇರದೆ- ಬಿಡದೆ, ಆರಿಪುಶಿರೋಧಿಗತರಕ್ತಬಿಂದುಮಣಿಮಾಲಿಕೆಯಂ— ಅರಿಪು- ಆ ಶತ್ರುಗಳ, ಶಿರೋಧಿ- ಕಂಠವನ್ನು, ಗತ- ಹೊಂದಿದ, ರಕ್ತಬಿಂದು- ರಕ್ತದಹನಿಗಳೆಂಬ, ಮಣಿಮಾಲಿಕೆಯಂ- ರತ್ನದಸರವನ್ನು, ಈಳ್ದುಕೊಳ್ವಳ್- ಕಳಬೆಕೊಳ್ಳುವಳು. ... ... ॥೯೫॥

ವ ॥ ಎಂಬ ಗಂಭೀರಪ್ರತಾಪಮಿಂಬುವಡೆಯೆನೆಗಳ್ತೆವೆತ್ತ ನರೇಂದ್ರಂಗೆ ॥ * *
ಮತ್ತೀ॥ ನಯಸಂಪನ್ನನಧೀತಶಾಸ್ತ್ರನಿಚಯಂನಾನಾಕಲಾಶಾಲಿದು ।ರ್ಣಯದೂ
ರಂಶುಚಿಶೂರನೂರ್ಜಿತಯಶಂಶುದ್ಧಾನ್ವಯಂಕಾರ್ಯನಿ॥ರ್ಣಯಧುರ್ಯಂಶಿವಭಕ್ತನೊಲ್ಪಸಚಿ
ವಂತಾನಾದನಾವಮಾದಲಾಂ।ಬಿಯತಮ್ಮಂಬಲದೇವನೆಂಬನನಘಂಗಾಂಭೀರ್ಯರತ್ನಾಕರಂ॥೯೬॥
ಕಂ ॥ ಗುರುಮಂತ್ರಜಪಪರಾಯಣ । ನುರುತರಕವಿವಿನುತನಾಗಿಯುಂಬಲದೇವಂ ॥
ಗುರುಮಂತ್ರದಕವಿವಚನದ।ಪರಿಯುಂಪಳಿಕೆಯ್ದುಮೆರೆವನೇನಚ್ಚರಿಯೋ॥ ... ॥೯೭॥
ಕಂ ॥ ಆಮಂತ್ರಿವರನಸುತೆಮದ । ಸಾಮಜಮೃದುಯಾನೆಮಾನನಿಧಿಸಕಲಕಲಾ ॥
ಭೂಮಿಕೆಗಂಗಾಂಬಿಕೆಯೆಂ । ಬಾಮೃಗಮದಗಂಧಿಜವ್ವನಂಬಡೆದೆಸೆದಳ್ ॥ ... ॥೯೮॥
ಕಂ ॥ ವದನರುಚಿಯಿಂದೆಪರಿಭವಿ । ಸದಿರೆಮ್ಮಯಪತಿಯನೆಂದುತಾರಾಂಗನೆಯ ॥

---

ಎಂಬ, ಗಂಭೀರಪ್ರತಾಪಂ- ಅಗಾಧವಾದ ಪರಾಕ್ರಮವು, ಎಂಬುವಡೆಯೆ- ಮನೋಹರವಾಗಿರಲು, ನೆಗಳ್ತೆವೆತ್ತ- ಪ್ರಸಿದ್ಧಿಯುಂಪಡೆದ, ನರೇಂದ್ರಂಗೆ- ಬಿಜ್ಜಳರಾಜನಿಗೆ. * * * * * * * *

ನಯಸಂಪನ್ನಂ- ನೀತಿಯುಕ್ತನಾದ, ಅಧೀತಶಾಸ್ತ್ರನಿಚಯಂ— ಅಧೀತ- ಅಭ್ಯಸಿಸಲ್ಪಟ್ಟ, ಶಾಸ್ತ್ರನಿಚಯಂ- ಶಾಸ್ತ್ರಸಮೂಹವುಳ್ಳ, ನಾನಾಕಲಾಶಾಲಿ- ಅನೇಕವಿದ್ಯೆಗಳಿಂದೊಪ್ಪುತ್ತಿರುವ, ದುರ್ಣಯದೂರಂ- ದುಷ್ಟನೀತಿದೂರನಾದ, ಶುಚಿ- ಪರಿಶುದ್ಧನಾದ, ಶೂರಂ- ಪರಾಕ್ರಮಶಾಲಿಯಾದ, ಊರ್ಜಿತಯಶಂ- ಅಧಿಕವಾದಕೀರ್ತಿಯುಳ್ಳ, ಶುದ್ಧಾನ್ವಯಂ- ಪರಿಶುದ್ಧವಾದವಂಶವುಳ್ಳ, ಕಾರ್ಯನಿರ್ಣಯಧುರ್ಯಂ- ಕಾರ್ಯನಿರ್ವಾಹಸಮರ್ಥನಾದ, ಶಿವಭಕ್ತಂ, ಬಲದೇವನೆಂಬ, ಅನಘಂ- ಪಾಪರಹಿತನಾದ,ಗಾಂಭೀರ್ಯರತ್ನಾಕರಂ-ಗಂಭೀರತ್ವಕ್ಕೆಸಮುದ್ರನಾದ, ಆಮಾದಲಾಂಬಿಕೆಯತಮ್ಮಂ, ತಾಂ- ಅವನು, ಒಲ್ಪ- ಪ್ರೀತಿಪಾತ್ರನಾದ, ಸಚಿವಂ- ಮಂತ್ರಿಯು, ಆದಂ. ... ... ... ... ... ॥೯೬॥

ಬಲದೇವಂ- ಬಲದೇವಮಂತ್ರಿಯು, ಗುರುಮಂತ್ರಜಪಪರಾಯಣಂ— ಗುರು- ಬೃಹಸ್ಪತ್ಯಾಚಾರ್ಯನ, ಮಂತ್ರಜಪ- ಮಂತ್ರಾನುಷ್ಠಾನದಲ್ಲಿ- ಪರಾಯಣಂ- ಆಸಕ್ತನಾದವನು, (ಗುರುಮಂತ್ರಜಪ- ಗುರೂಪದಿಷ್ಟಮಂತ್ರಜಪದಲ್ಲಿ, ಪರಾಯಣಂ,) ಉರುತರಕವಿವಿನುತಂ— ಉರುತರ- ಉತ್ಕೃಷ್ಟನಾದ, ಕವಿ- ಶುಕ್ರಾಚಾರ್ಯನಿಂದ- ವಿನುತಂ- ಸ್ತೋತ್ರಮಾಡಿಸಿಕೊಳ್ಳಲ್ಪಟ್ಟವನು, (ಉರುತರ- ಉತ್ಕೃಷ್ಟರಾದ, ಕವಿ- ಕವಿಗಳಿಂದ ವಿನುತಂ,) ಆಗಿಯುಂ- ಆಗಿದ್ದಾಗ್ಯೂ, ಗುರುಮಂತ್ರದ- ಬೃಹಸ್ಪತಿಯಮಂತ್ರದ, (ಅಧಿಕವಾದ ಆಲೋಚನೆಯು,) ಕವಿವಚನದ- ಶುಕ್ರಾಚಾರ್ಯನವಮಾತಿನ, (ಶುಕ್ರನೀತಿಯ, ಕವಿಗಳಮಾತಿನ,) ಪರಿಯಂ- ರೀತಿಯನ್ನು, ಪಳಿಕೆಯ್ದು- ತಿರಸ್ಕರಿಸಿ, ಮೆರೆವಂ- ಪ್ರಕಾಶಿಸುವನು, ಏನಚ್ಚರಿಯೋ- ಏನಾಶ್ಚರ್ಯವೋ! ... ... ... ... ... ... ... ॥೯೭॥

ಮದಸಾಮಜಮೃದುಯಾನೆ— ಮದಸಾಮಜ- ಮದಗಜದ, ಮೃದು- ಮೆಲ್ಲಿತಾದ, ಯಾನೆ- ಗಮನದಂತಿರುವ ಗಮನವುಳ್ಳ, ಮಾನನಿಧಿ- ಗೌರವಕ್ಕೆನಿಕ್ಷೇಪಳಾದ, ಸಕಲಕಲಾಭೂಮಿಕೆ- ಸಮಸ್ತವಿದ್ಯೆಗಳಿಗೂ ಚಿತ್ರಪಟಳಾದ, ಗಂಗಾಂಬಿಕೆಯೆಂಬ, ಆಮೃಗಮದಗಂಧಿ- ಕಸ್ತೂರಿಯಗಂಧವುಳ್ಳ, ಆ ಮಂತ್ರಿವರನಸುತೆ- ಆ ಬಲದೇವಮಂತ್ರಿಯ ಪುತ್ರಿಯು, ಜವ್ವನಂಬಡೆದು- ಯೌವನವನ್ನುಹೊಂದಿ, ಎಸೆದಳ್- ಪ್ರಕಾಶಿಸಿದಳು. ... ... ... ... ... ... ... ॥೯೮॥

ತಾರಾಂಗನೆಯರ್- ನಕ್ಷತ್ರಗಳೆಂಬಸ್ತ್ರೀಯರು, ಎಮ್ಮಯಪತಿಯಂ- ನಮ್ಮ ವಲ್ಲಭನಾದಚಂದ್ರನನ್ನು, ವದನರುಚಿಯಿಂದೆ- ಮುಖಕಾಂತಿಯಿಂದ, ಪರಿಭವಿಸದಿರ್- ತಿರಸ್ಕರಿಸಬೇಡ, ಎಂದು, ಸುದತಿಯು- ಗಂ

ರ್ಸುದತಿಯ ಪದಯುಗಕೊಲ್ದಿರ । ಗಿದರೆಂಬುದನಿಂಬುಗೆಯ್ದುವವಳಡಿಯುಗುರ್ಗಳ್ ॥೯೯॥
ಕಂ ॥ ಎಳೆಯಳ ಕಣೆಕಾಲ್ತೊಡೆಯೊಳ । ವಳಯದಿನಿಳತಂದು ಮಿಸುಪ ಮದನನರಾ
ಗೋಜ್ವಳಪಲ್ಲವಶರಮೆನೆ ಬಗೆ। ಗೊಳಿಸಿದುದರುಣಾಂಶುರುಚಿರಪದತಳಮವಳಾ ॥೧೦೦॥
ಕಂ ॥ ಲಲನೆಯ ನುಣ್ದೊಡೆಯ ಸಮು । ಜ್ವಲರುಚಿಯಂ ಪಡೆಯಲೆಳಸಿ ನಾರಂ ಪದೆದು॥
ಟ್ಟಲಸದೆ ನೀರೀಂಟುತೆ ಸಲೆ । ನೆಲಸಿರ್ದುವಲ್ತೆ ಬಾಳೆಗಳ್ ಬನದೆಡೆಯೊಳ್॥ ... ॥೧೦೧॥
ಕಂ ॥ ಮುರಿದಿಳಿದ ವೇಣಿಕಾಬಂ । ಧುರಯಮುನಾನದಿಯ ಪೂರ್ಣಪುಳಿನಸ್ಥಳದಂ ॥
ತಿರೆ ಕರಮೆಸೆದುದು ಘನಪೀ । ವರಜಘನಂ ಚಕಿತತರುಣಹರಿಣೀಕ್ಷಣೆಯಾ ॥ ॥೧೦೨॥
ಕಂ ॥ ಬಡಬಾಸೆಯೆಂಬ ಕಾರೊರೆ । ಯೊಡನಿರೆ ದಿಗ್ವಿಜಯಕರ್ಚಿಸಲ್ಮದನಂ ತಾಂ ॥ ಪಿಡಿ
ದಸಿಯನುರ್ಚಿನಿಲಿಸಿದ । ಬೆಡಂಗನಾಳ್ದುದು ತನೂದರಿಯ ತನುಮಧ್ಯಂ ॥ ... ॥೧೦೩॥
ಕಂ ॥ ಗುರುಕುಚಘರ್ಷಣನಿಪತಿತ । ಸುರುಚಿರಕುಂಕುಮಪರಾಗಮನುರ್ದಿರೆ ಕನ

---

ಗಾಂಬಿಕೆಯ, ಪದಯುಗಕೆ- ಪಾದಯುಗ್ಮಕ್ಕೆ, ಒಲ್ದು- ಪ್ರೀತಿಸಿ, ಎರಗಿದರ್- ನಮಸ್ಕರಿಸಿದರು, ಎಂಬುದು, ಅವಳ- ಗಂಗಾಂಬಿಕೆಯ, ಅಡಿಯ- ಪಾದದ, ಉಗುರ್ಗಳ್, ಇಂಬುಗೆಯ್ದುವು- ಆಶ್ರಯಿಸಿದವು. ॥೯೯॥

ಎಳೆಯಳ- ಗಂಗಾಂಬಿಕೆಯ, ಕಣೆಕಾಲ್ತೊಡೆಯ- ಕಣೆಕಾಲಿಂಬಬತ್ತಳಿಕೆಯ, ಒಳವಳಯದಿಂ- ಒಳಭಾಗದಿಂದ, ಇಳಿತಂದು- ಇಳಿದು, ಮಿಸುಪ- ಪ್ರಕಾಶಿಸುವ, ಮದನನ- ಮನ್ಮಥನ, ರಾಗೋಜ್ವಳಪಲ್ಲವಶರಂ— ರಾಗ- (ಪ್ರೀತಿಯಿಂದ) ಆರುಣ್ಯದಿಂದ, ಉಜ್ವಳ- ಪ್ರಕಾಶಮಾನವಾದ, ಪಲ್ಲವಶರಂ- ಚಿಗುರಿನಬಾಣವು, ಎನೆ, ಅವಳ, ಅರುಣಾಂಶುರುಚಿರಪದತಳಂ— ಅರುಣಾಂಶು- ಕೆಂಬೆಳಗಿನಿಂದ. ರುಚಿರ- ಮನೋಹರವಾದ, ಪದತಳಂ- ಪಾದದಹೆಜ್ಜೆಯು, ಕೆಂಗೊಳಿಸಿದುದು- ಮನೋಹರವಾಯಿತು. ... ... ॥೧೦೦॥

ಬಾಳೆಗಳ್- ಬಾಳೆಗಿಡಗಳು, ಲಲನೆಯ- ಗಂಗಾಂಬಿಕೆಯ, ನುಣ್ದೊಡೆಯ- ನುಣುಪಾದ ತೊಡೆಯ, ಸಮುಜ್ವಲರುಚಿಯಂ- ಪ್ರಕಾಶವಾನವಾದಕಾಂತಿಯನ್ನು, ಪಡೆಯಲ್- ಹೊಂದುವದಕ್ಕೋಸ್ಕರ, ಎಳಸಿ- ಅಪೇಕ್ಷಿಸಿ, ಪದೆದು- ಪ್ರೀತಿಸಿ, ನಾರಂ, ಉಟ್ಟು, ಅಲಸದೆ- ಆಲಸ್ಯವಂಹೊಂದದೆ, ನೀರ- ಜಲವನ್ನು, ಈಂಟುತೆ- ಕುಡಿಯುತ್ತ, ಬನದೆಡೆಯೊಳ್- ವನಸ್ಥಲದಲ್ಲಿ, ಸಲೆ- ಚೆನ್ನಾಗಿ, ನೆಲಸಿ- ವಾಸವಾಗಿ, ಇರ್ದುವಲ್ತೆ- ಇರುವವಲ್ಲವೇ. ... ... ... ... ... ॥೧೦೧॥

ಮುರಿದು- ತಿರುಗಿ, ಇಳಿದ, ವೇಣಿಕಾಬಂಧುರಯಮುನಾನದಿಯ- ಜಡೆಯೆಂಬ ಮನೋಹರವಾದ ಕಾಳಿಂದೀನದಿಯ, ಪೂರ್ಣಪುಳಿನಸ್ಥಳದಂತಿರೆ- ಸಂಪೂರ್ಣವಾದ ಮಳಲಗುಡ್ಡೆಯಹಾಗೆ, ಚಕಿತತರುಣಹರಿಣೀಕ್ಷಣೆಯ— ಚಕಿತ- ಭಯಪಟ್ಟ, ತರುಣ- ಯೌವನಸ್ಥವಾದ, ಹರಿಣ- ಜಿಂಕೆಯ, ಈಕ್ಷಣೆಯ- ಕಣ್ಣಿನಂತಿರುವ ಕಣ್ಣುಳ್ಳಗಂಗಾಂಬಿಕೆಯ, ಘನಪೀವರಜಘನಂ- ಉನ್ನತವಾಗಿಯೂ ದಪ್ಪವಾಗಿಯೂ ಇರುವ ಕಟಿಪಶ್ಚಾದ್ಭಾಗವು, ಎಸೆದುದು- ಪ್ರಕಾಶಿಸಿತು. ... ... ... ॥೧೦೨॥

ತನೂದರಿಯ- ಕೃಶವಾದನಡುವುಳ್ಳಗಂಗಾಂಬಿಕೆಯ, ತನುಮಧ್ಯಂ-ಸಣ್ಣನಡುವು, ಬಡಬಾಸೆಯೆಂಬ- ಸಣ್ಣಗಿರುವರೋಮರಾಜಿಯೆಂಬ, ಕಾರೊರೆ- ಕಪ್ಪಾದ ಒರೆಯು, (ಕತ್ತಿಯನ್ನಿಡುವಚೀಲ) ಒಡನೆ- ಸಂಗಡಲೇ, ಇರೆ, ಮದನಂ- ಮನ್ಮಥನು, ತಾಂ, ಪಿಡಿದ, ಅಸಿಯಂ- ಕತ್ತಿಯನ್ನು, ದಿಗ್ವಿಜಯಕೆ- ವಿಜಯಯಾತ್ರೆಗಾಗಿ, ಅರ್ಚಿಸಲ್- ಪೂಜಿಸುವದಕ್ಕೋಸ್ಕರ, ಉರ್ಚಿ- ಒರೆಯಿಂದೀಚೆಗೆತೆಗೆದು, ನಿಲಿಸಿದ, ಬೆಡಂಗಂ, ಸೊಗಸನ್ನು, ಆಳ್ದುದು- ಹೊಂದಿತು. ... ... ... ... ॥೧೦೩॥

ಸತಿಯ- ಗಂಗಾಂಬಿಕೆಯ, ನಾಭಿ- ಹೊಕ್ಕುಳು, ಗುರು......ಪರಾಗಂ—ಗುರುಕುಚ- ದಪ್ಪವಾದ

ಕಾಂ ॥ಬುರುಹಮದುತರಳಮಣಿರವಿ । ಕಿರಣದಿನಲರ್ದಂತೆನಾಭಿಮೆರೆದುದುಸತಿಯಾ॥೧೧೪॥

ಕಂ॥ ಹಾರರುಚಿಸುಧೆಯನೀಂಟಲ್ । ಸಾರೆಯೊಳೆಸೆದಿರ್ದ್ದನಾಭಿವಲ್ಮೀಕದೆಕಾ ॥ಳೋ
ರಗಶಿಶುನೆಗೆದೇಳ್ದವೊಲ್ । ಹಾರಮಣಿಯಬಾಸೆಬಗೆಗದೇಂಸೊಗಯಿಸಿತೋ ॥ ॥೧೧೫॥

ಕಂ॥ ಎಲೆನಡುಬಡವಾಗದಿರೆಂ । ದಲರ್ಗಂಬಂಬರೆದಸುಮರಜೋರಕ್ಷೆಯಮಂ ॥ ಜುಳ
ರೇಖೆಗಳೆನೆಮೆರೆಗುಂ । ವಲಿಗಳ್ಕೋಮಲೆಗೆಹಾರರುಚಿಮಿಳಿತಂಗಳ್ ॥ ... ॥೧೧೬॥

ಕಂ ॥ ತರುಣಿಯಕುಚಕುಟ್ಮಲಭಾ । ಸುರತೆಯನಾನಲ್ಸರೋಜಮುಕುಳಂಕುಶವಿ ॥
ಷ್ಟರದಲ್ಲಿನೆಲಸಿನೆಗಳ್ವಂ । ತಿರಳಿಧ್ವನಿಮಿಷದೆಮಂತ್ರಜಪಮಾಂತೆಸೆಗುಂ॥ ... ॥೧೧೭॥

ಕಂ ॥ ಎಳೆಯಮೃಣಾಳಮನಾಕೋ । ಮಳೆಯಭುಜಂಜಯಿಸೆಭಯದೆನೀರ್ವುಗುತ
ದುಕು ॥ ಟ್ಮಳಿತಾರುಣಾಬ್ಜಮಿಷದಂ । ಜಳಿಯಂನಳಿತೋಳ್ಗೆಮಾಳ್ಪುದಾಶಶಿವಂಖಿಯಾ॥

ಕಂ ॥ ಹರನೊಲ್ಲನೆಮ್ಮನೀಕೆಯ । ಕರಾಬ್ಜದಗ್ರಪುನೆಸಾರ್ದುಸಲ್ವೆವೆವಂಗೆಂ ॥ ಡಿರ

---

ಸ್ತನಗಳ, ಘರ್ಷಣ- ಪರಸ್ಪರವಾಗಿತಿಕ್ಕುವಿಕೆಯಿಂದ, ನಿಪತಿತ-ಬಿದ್ದ, ಸುರುಚಿರ- ಮನೋಹರವಾದ, ಕುಂಕುಮ- ಕುಂಕುಮಕೇಸರಿಯು, ಪರಾಗಂ- ಧೂಳಿಯು, ಅಮರ್ದಿರೆ-ಹತ್ತಿಕೊಂಡಿರಲಾಗಿ, ಅದು ಕನಕಾಂಬುರುಹಂ- ಆ ಸುವರ್ಣವರ್ಣವಾದಕಮಲವು, ತರಳಮಣಿರವಿಕಿರಣದಿಂ- ಹಾರಮಧ್ಯನಾಯಕರತ್ನವೆಂಬ ಸೂರ್ಯನಕಾಂತಿಯಿಂದ, ಅಲರ್ದಂತೆ- ವಿಕಸಿಸಿದಹಾಗೆ, ಮೆರೆದುದು. ... ... ... ॥೧೧೪॥

ಆರಮಣಿಯ, ಬಾಸೆ- ರೋಮಪಜ್ತಿಯು, ಸಾರೆಯೊಳ್- ಸಮೀಪದಲ್ಲಿ, ಎಸೆದಿರ್ದ್ದ- ಪ್ರಕಾಶಮಾನವಾಗಿದ್ದ, ನಾಭಿವಲ್ಮೀಕದೆ- ಹೊಕ್ಕುಳೆಂಬಹುತ್ತದಲ್ಲಿದ್ದ, ಕಾಳೋರಗಶಿಶು- ಕರಿಯಹಾವಿನಮರಿಯು, ಹಾರರುಚಿಸುಧೆಯಂ- ಮುಕ್ತಾಹಾರದ ಕಾಂತಿಯೆಂಬಮೃತರಸವನ್ನು, ಈಂಟಲ್- ಕುಡಿಯುವದಕ್ಕೆ, ನೆಗೆದೇಳ್ದವೊಲ್- ಮೇಲಕ್ಕೆಹಾರಿಎದ್ದಹಾಗೆ, ಬಗೆಗೆ- ಮನಸ್ಸಿಗೆ, ಅದೇಂಸೊಗಯಿಸಿತೋ— ಅದೇನು ಮನೋಹರವಾಯಿತೋ. ... ... ... ... ॥೧೧೫॥

ಕೋಮಲೆಗೆ- ಮೃದುಲಳಾದ ಗಂಗಾಂಬಿಕೆಯ ಸಂಬಂಧಿಗಳಾದ, ಹಾರರುಚಿಮಿಳಿತಂಗಳ್- ಮುತ್ತಿನ ಹಾರದಕಾಂತಿಯಿಂಕೂಡಿರುವ, ವಲಿಗಳ್- ತ್ರಿವಳಿಗಳು, ಅಲರಂಬಂ- ಮನ್ಮಥನು, ಎಲೆನಡು- ಎಲೈಮಧ್ಯವೇ, ಬಡವಾಗದಿರ್- ಕೃಶವಾಗಬೇಡ, ಎಂದು, ಬರೆದ, ಸುಮರಜೋರಕ್ಷೆಯ- ಹೂವಿನ ಧೂಳಿಯೆಂಬ ಭಸ್ಮದ, ಮಂಜುಲರೇಖೆಗಳೆನೆ- ಮನೋಹರವಾದ ಗೆರೆಗಳೆಂಬುವಹಾಗೆ, ಮೆಗೆಗುಂ. ... ॥೧೧೬॥

ಸರೋಜಮುಕುಳಂ- ಕಮಲದ ಮೊಗ್ಗುಗಳು, ತರುಣಿಯ- ಗಂಗಾಂಬಿಕೆಯ, ಕುಚಕುಟ್ಮಲಭಾಸುರತೆಯಂ- ಮೊಗ್ಗುಗಳಂತಿರುವಸ್ತನಗಳಪ್ರಕಾಶಕತ್ವವನ್ನು, ಆನಲ್- ಹೊಂದುವದಕ್ಕೋಸ್ಕರ, ಕುಶವಿಷ್ಟರದಲ್ಲಿ- ದರ್ಭಾಸನದಲ್ಲಿ, (ಜಲಪೀಠದಲ್ಲಿ) ನೆಲಸಿ- ಕುಳಿತು, ಅಳಿಧ್ವನಿಮಿಷದೆ- ತುಂಬಿಯಶಬ್ದವೆಂಬ ವ್ಯಾಜದಿಂದ, ಮಂತ್ರಜಪಮಾಂತು- ಮಂತ್ರಾನುಷ್ಠಾನವಂಹೊಂದಿ, ನೆಗಳ್ವಂತಿರೆ- ಮಾಡುವಹಾಗೆ, ಎಸೆಗುಂ. ... ... ... ... ॥೧೧೭॥

ಆಕೋಮಳೆಯ, ಭುಜಂ- ಬಾಹುವು, ಎಳೆಯ, ಮೃಣಾಳಮಂ- ತಾವರೆಯದಂಟನ್ನು, ಜಯಿಸೆ, ಅದು- ಆಮೃಣಾಳವು, ಭಯದೆ, ನೀರ್ವುಗುತೆ- ನೀರನ್ನುಹೊಕ್ಕು, ಆಶಶಿಮುಖಿಯ- ಚಂದ್ರನಂತಿರುವಮುಖವುಳ್ಳ ಗಂಗಾಂಬಿಕೆಯ, ನಳಿತೋಳ್ಗೆ- ಕೋಮಲವಾದಬಾಹುವಿಗೆ, ಕುಟ್ಮಳಿತಾರುಣಾಬ್ಜಮಿಷದ- ಮೊಗ್ಗಾಗಿ ಮಾಡಲ್ಪಟ್ಟ ಕೆಂಪುಕಮಲಗಳವ್ಯಾಜವುಳ್ಳ, ಅಂಜಳಿಯಂ,ಮಾಳ್ಪುದು. ... ... ॥೧೧೮॥

ಎಮ್ಮಂ- ನಮ್ಮನ್ನು, ಹರಂ- ಪರಶಿವನು, ಒಲ್ಲಂ- ಸ್ವೀಕರಿಸುವದಿಲ್ಲವು, (ಆದುದರಿಂದ) ಈಕೆಯ-

ದೆಳಸಿಸಾರ್ದಕೈತಕ | ವರದಳಮೆನೆಮೆರೆದುದವಳಕರರುಹನಿಚಯಂ ॥ ... ॥೧೦೯॥

ಕಂ ॥ ವರಮಂದ್ರಮಧ್ಯತಾರ | ಸ್ವರಸೀಮಾರೇಖೆಯೆನಿಸೆಮೂಗೆರೆಲಾವ ॥ ಣ್ಯರಸಾಬ್ಧಿಯೊಳಮರ್ದೆಸೆದುದು | ಪರಿಕಲಿತಸುವರ್ಣಶಂಖಮೆನೆಗಳಮವಳಾ ॥ ... ॥೧೧೦॥

ಕಂ ॥ ವದನೇಂದುವಿಧುರಿತಂಸಲಿ | ಲದೊಳಂಬುಜಮಳ್ಕಿಪೊಕ್ಕುರಾಕಾಶಶಿಮೂ ॥ ಡಿದೊಡದನಾಕೆಯಮೊಗಮೆಂ | ದದುನೋಡಲ್ಕಗಿದುಮುಗಿವುದಿನ್ನುಂಮುನ್ನಂ ॥ ॥೧೧೧॥

ಕಂ ॥ ವದನೇಂದುಮನರ್ಚಿಸಿದಂ | ಮದನಂದಿಗ್ವಿಜಯಕೆಂದುಬಂಧುಗೆಯಲರಿಂ ॥ ದಿಮನಿಜಮೆನಿಸಿವಿರಾಜಿಸಿ | ದುದುಚಂದ್ರಾನನೆಯಬಿಂಬರುಚಿಲಸದಧರಂ ॥ ... ॥೧೧೨॥

ಕಂ ॥ ಕುಂದುವಮೊಲ್ಲೆಯಮುಗುಳಂ | ಕುಂದದಮುಗುಳೆಂದುನುಡಿವುದನುಚಿತಮಿಳೆಯೊಳ್ ॥ ಕುಂದದಚಂದದದಶನಂ| ಕುಂದದಮುಗುಳಲ್ತೆತನ್ಮೃದುಸ್ಮಿತಲತೆಯಾ ॥೧೧೩॥

ಕಂ ॥ ಮೂವಣ್ಣಕ್ಕೀಡಪ್ಪಂ | ತಾವರೆವಗೆಯೊಂದೆದಿನದೊಳೆನುತದನಿಳಕ್ಕೆ ॥ ದಾವ

---

ಗಂಗಾಂಬಿಕೆಯು, ಕರಾಬ್ಜದ- ಹಸ್ತಕಮಲದ, ಅಗ್ರಮನೆ- ಮುಂಭಾಗವನ್ನು, ಸಾರ್ದು-ಹೊಂದಿ, ಅವಂಗೆ- ಆ ಶಿವನಿಗೆ, ಸಲ್ವೆವು- ಯೋಗ್ಯವಾಗುವೆವು, ಎಂದು, ಇರದೆ, ಎಳಸಿ- ಅಪೇಕ್ಷಿಸಿ, ಸಾರ್ದ- ಹೊಂದಿದ, ಕೈತಕ ವರದಳಂ- ಶ್ರೇಷ್ಠವಾದ ತಾಳೇಹೂವಿನಗರಿಗಳು, ಎನೆ, ಅವಳ, ಕರರುಹನಿಚಯಂ- ಉಗುರುಗಳಸಮೂಹವು, ಮೆರೆದುವು. ... ... ... ... ... ॥೧೦೯॥

ಅವಳ, ಮೂಗೆರೆ- ಕತ್ತಿನಲ್ಲಿರುವ ಮೂರುಗೆರೆಯು, ವರಮಂದ್ರಮಧ್ಯತಾರಸ್ವರಸೀಮಾರೇಖೆ- ಶ್ರೇಷ್ಠವಾದ ಗಂಭೀರಧ್ವನಿ ಮಧ್ಯಧ್ವನಿ ಉಚ್ಚೈರ್ಧ್ವನಿ ಇವುಗಳ ಎಲ್ಲೆಯಗೆರೆಯು, ಎನಿಸೆ, ಗಳಂ-ಕಂಠವು, ಲಾವಣ್ಯರಸಾಬ್ಧಿಯೊಳ್- ಕಾಂತಿವಿಶೇಷವೆಂಬ ರಸದ (ಉದಕದ) ಸಮುದ್ರದಲ್ಲಿ, ಪರಿಕಲಿತಸುವರ್ಣಶಂಖಂ- ಸೇರಿರುವ ಹೊಂಬಣ್ಣವಾದ ಶಂಖವು, ಎನೆ, ಅಮರ್ದು- ಯೋಗ್ಯವಾಗಿ, ಎಸೆದುದು. ॥೧೧೦॥

ವದನೇಂದುವಿಧುರಿತಂ- ಗಂಗಾಂಬಿಕೆಯ ಮುಖಚಂದ್ರನಿಂದ ವಿಹ್ವಲವಾದ, ಅಂಬುಜಂ- ಕಮಲವು, ಅಳ್ಕಿ- ಭಯಪಟ್ಟು, ಸಲಿಲದೊಳ್-ನೀರಿನಲ್ಲಿ, ಪೊಕ್ಕು, ರಾಕಾಶಶಿ-ಪೂರ್ಣಚಂದ್ರನು, ಮೂಡಿದೊಡಂ-ಹುಟ್ಟಿದಾಗ್ಯೂ, ಅದಂ- ಆ ಚಂದ್ರನನ್ನು, ಆಕೆಯ- ಗಂಗಾಂಬಿಕೆಯ, ಮೊಗಂ ಎಂದು, ನೋಡಲ್ಕೆ, ಅಗಿದು- ಭಯಪಟ್ಟು, ಇನ್ನುಂ- ಈಗಲೂ, ಮುನ್ನಂ- ಮುಂದಕ್ಕೂ, ಮುಗಿದಪುದು-ಮೊಗ್ಗಾಗಿರುವವು. ॥೧೧೧॥

ಮದನಂ, ದಿಗ್ವಿಜಯಕೆಂದು- ದಿಗ್ವಿಜಯಕ್ಕಾಗಿ ಹೋಗಬೇಕೆಂದು, ವದನೇಂದುವಂ- ಗಂಗಾಂಬಿಕೆಯ ಮುಖಚಂದ್ರನನ್ನು, ಬಂಧುಗೆಯಲರಿಂದೆ- ಬಂಧುಗೆಹೂವಿನಿಂದ, (ಕೆಂಪುಗೋಜಾಹೂವು) ಅರ್ಚಿಸಿದಂ- ಪೂಜಿಸಿದನು, ಇದು, ನಿಜಂ, ಎನಿಸಿ, ಚಂದ್ರಾನನೆಯ, ಬಿಂಬರುಚಿಲಸದಧರಂ- ತೊಂಡೇಹಣ್ಣಿನಕಾಂತಿಯಂತಿರುವ ಕಾಂತಿಯುಳ್ಳ ತುಟಿಯು, ವಿರಾಜಿಸಿದುದು. ... ... ... ॥೧೧೨॥

ಇಳೆಯೊಳ್- ಭೂಮಿಯಲ್ಲಿ, ಕುಂದುವ- ಕಾಂತಿಹೀನವಾದ, ಮೊಲ್ಲೆಯಮುಗುಳಂ- ಮೊಲ್ಲೆಯಮೊಗ್ಗನ್ನು, ಕುಂದದಮುಗುಳ್- ಕೊರಗದಿರುವಮೊಗ್ಗು, (ಮೊಲ್ಲೆಯಮೊಗ್ಗು) ಎಂದು, ನುಡಿವುದು- ಹೇಳುವದು, ಅನುಚಿತಂ, ಕುಂದದ- ಕಾಂತಿಹೀನವಾಗದ, ಚಂದದ- ಮನೋಹರವಾದ, ದಶನಂ- ಹಲ್ಲುಗಳು, ತನ್ಮೃದುಸ್ಮಿತಲತೆಯ,- ಆ ಗಂಗಾಂಬಿಕೆಯ ಮಂದಹಾಸವೆಂಬಬಳ್ಳಿಯ, ಕುಂದದಮುಗುಳಲ್ತೆ- ಕೊರಗದ ಮೊಗ್ಗು, (ಮೊಲ್ಲೆಯಮೊಗ್ಗಲ್ಲವೇ) ... ... ... ॥೧೧೩॥

ತಾವರೆವಗೆ- ಕಮಲಕ್ಕೆ ಶತ್ರುವಾದ ಚಂದ್ರನು, ಒಂದೆದಿನದೊಳ್- ಒಂದೇದಿವಸದಲ್ಲಿ, ಮೂವಣ್ಣಕ್ಕೆ- ಮೂರುಬಣ್ಣಕ್ಕೆ, ಈಡಪ್ಪಂ- ಆಸ್ಪದನಾಗುವನು, ಎನುತೆ, ಅವನಿತೆಯ, ಅದುನುಣ್ಣದಪು- ಆನ್ನುಣುಪ್ಪಾದ

ನಿತೆಯಸುಣ್ಣದಪದು । ಭಾವಿಸೆಶಾಶ್ವತನಿಜಪ್ರಕಾಶದಿನೆಸೆಗುಂ ॥ ... ... ॥೧೧೪॥

ಕಂ ॥ ಸಲೆಕನ್ನಪುರದಚೆನ್ನೈ । ದಿಲಲರ್ಮೇಲೆನಯೆತಳ್ತುಪೂವೆನೆಕರ್ಣಂ ॥ ನಲಿದಿ
ರ್ಮಡಿಸಿದತನ್ಮಂ। ಜುಳನಾಳದಚೆಲ್ವನಾಳ್ದುದಾಶಶಿಮುಖಿಯಾ ॥ ... ... ॥೧೧೫॥

ಕಂ ॥ ತರುಣಿಯನಾಸಿಕದಂಡದ । ಬಿರಿಮುಗುಳಂಪಡೆವೆನೆಂದುಸಂಪಗೆಪಲವಂ ॥ ಬಿ
ರಿಮುಗುಳಂಪಡೆದದಕಿದು । ಸರಿಪಾರದೆನುತ್ತೆಮುಗುಳ್ದುಪಡೆದಪುದಿನ್ನುಂ ॥ ॥೧೧೬॥

ಕಂ ॥ ಎಲೆಕರ್ಣಮೆಕನ್ನವುರಂ । ಸಲೆನಿನಗಾದಪ್ಪೆವಲ್ತೆಬಿಡುಬಿಡುಕನ್ನೈ ॥ ದಿಲಕ
ನ್ನವುರಮನೆಂದವ। ನಲೆದಪ್ಪುವೆನೆಮೆರೆದುವಾಯತಾಕ್ಷಿಗಳವಳಾ ॥ ... ... ॥೧೧೭॥

ಕಂ ॥ ವದನಾಂಬುಜದೊಳ್ನೆರೆತೀ । ವಿದಲಾವಣ್ಯಾಂಬುಪೂರದೆಳೆದೆರೆಪಕ್ಷ್ಮಾ ॥ ಗ್ರದ
ಪಡಿನೆಳಲೊಳ್ತಳ್ತಂ । ದದೆಘೀರ್ಘೇಕ್ಷಣೆಗೆಪುಬ್ಬುದೇಂಸೊಗಯಿಸಿತೋ ॥ ॥೧೧೮॥

ಕಂ ॥ ಅಳಿಕಚಭರನೀಲಾಂಬುದ। ದೊಳವಳಯುಗನರ್ಧಮೊಗೆದುಕಾಣಿಪರುಚಿಮಂ ॥
ಜುಳಶಶಿಯೆಂಬವಿಳಾಸಮ । ನೆಳೆಯುಳಪಣೆತಳೆದುಕಣ್ಗೆದೇಂತೊಳಗಿದುದೋ ॥ ॥೧೧೯॥

---

ಕೆನ್ನೆಯು, ಭಾವಿಸೆ- ವಿಚಾರಿಸಲಾಗಿ, ಶಾಶ್ವತನಿಜಪ್ರಕಾಶದಿಂ- ಸ್ಥಿರವಾದತನ್ನ ಕಾಂತಿಯಿಂದ, ಅದಂ- ಆ ಚಂದ್ರನನ್ನು, ಇಳಿಕೈದು- ತಿರಸ್ಕರಿಸಿ, ಎಸೆಗುಂ. ... ... ... ... ॥೧೧೪॥

ಸಲೆ- ಚೆನ್ನಾಗಿ, ಕನ್ನವುರದ- ಕರ್ಣಾಭರಣಾರ್ಹವಾದ, ಚೆನ್ನೈದಿಲಲರ್- ಕೆಂಪುನೈದಿಲೆಯಹೂವು, ಮೇಲೆ- ಮೇಲ್ಗಡೆಯಲ್ಲಿ, ತಳ್ತು- ಸೇರಿರುವ, ಪೂವೆನೆ- ಹೂವೆಂಬುವಹಾಗೆ, ಎಸೆಯೆ, ಆಶಶಿಮುಖಿಯ, ಕರ್ಣಂ- ಕಿವಿಯು, ನಲಿದು- ಪ್ರೀತಿಸಿ, ಇರ್ಮಡಿಸಿದ- ಎರಡಾಗಿಮಡಿಸಿರುವ, ತನ್ಮಂಜುಳನಾಳದ- ಆನೈದಿಲೆಯದಂಟಿನ, ಚೆಲ್ವಂ- ಸೌಂದರ್ಯವನ್ನು, ಆಳ್ದುದು- ಹೊಂದಿತು. ... ... ॥೧೧೫॥

ಸಂಪಗೆ- ಸಂಪಗೆಯಮರವು, ತರುಣಿಯ- ಗಂಗಾಂಬಿಕೆಯ, ನಾಸಿಕದಂಡದ- ಮೂಗಿನಂತಿರುವ, ಬಿರಿಮುಗುಳಂ- ಅರಳಿದಹೂವನ್ನು, ಪಡೆವೆನೆಂದು- ಪಡೆಯುತ್ತೇನೆಂದು, ಪಲವಂ ಬಿರಿಮುಗುಳಂ-ಅನೇಕಹೂವುಗಳನ್ನು, ಪಡೆದು- ಹೊಂದಿ, ಅದಕೆ- ಆನಾಸಿಕಕ್ಕೆ, ಇದು- ಈಹೂವು- ಸರಿಪಾರದು- ಸದೃಶವಾಗಲಾರದು, ಎನುತ್ತೆ, ಮುಗುಳ್ದು ಪುನಃ, ಇನ್ನುಂ- ಈಗಲೂ, ಪಡೆದಪುದು- ಬಿಡುತ್ತಿರುವದು. ... ॥೧೧೬॥

ಎಲೆಕರ್ಣಮೆ- ಎಲೆಕಿವಿಯೇ, ನಿನಗೆ, (ನಾವು) ಕನ್ನವುರಂ- ಕರ್ಣಾಭರಣವು, ಆದಪ್ಪೆವಲ್ತೆ-ಆಗುವೆವಲ್ಲವೇ, ಕನ್ನೈದಿಲ- ಕಪ್ಪುನೈದಿಲೆಯು, ಕನ್ನವುರಮಂ- ಕರ್ಣಾಭರಣವನ್ನು, ಬಿಡು ಬಿಡು, ಎಂದು, ಅದಂ- ಆ ನೈದಿಲೆಯನ್ನು, ಅಲೆದಪುವು- ಪೀಡಿಸುವವು. ಎನೆ, ಅವಳ, ಆಯತಾಕ್ಷಿಗಳ್- ದೀರ್ಘವಾದಕಣ್ಣುಗಳು, ಮೆರೆದುವು. ... ... ... ... ... ॥೧೧೭॥

ವದನಾಂಬುಜದೊಳ್- ಮುಖಕಮಲದಲ್ಲಿ, ನೆರೆ- ಚೆನ್ನಾಗಿ, ತೀವಿದ, ತುಂಬಿದ, ಲಾವಣ್ಯಾಂಬುಪೂರದ- ಕಾಂತಿವಿಶೇಷವೆಂಬ ಉದಕಪ್ರವಾಹದ, ಎಳದೆರೆ- ಸಣ್ಣತೆರೆಯು, ಪಕ್ಷ್ಮಾಗ್ರದ- ರೆಪ್ಪೆಯ ತುದಿಯ, ಪಡಿನೆಳಲೊಳ್- ಪ್ರತಿಛಾಯೆಯಲ್ಲಿ, ತಳ್ತಂದದೆ- ಸೇರಿದಹಾಗೆ, ದೀರ್ಘೇಕ್ಷಣೆಗೆ- ವಿಶಾಲವಾದ ನೇತ್ರವುಳ್ಳ ಗಂಗಾಂಬಿಕೆಗೆ, ಪುಬ್ಬು- ಹುಬ್ಬು, ಅದೇಂಸೊಗಯಿಸಿತೋ-ಅದೇನುಮನೋಹರವಾಯಿತೋ ॥೧೧೮॥

ಅಳಿಕಚಭರನೀಲಾಂಬುದದ— ಅಳಿಕಚಭರ- ತುಂಬಿಯಂತಿರುವ ಕೇಶಪಾಶವೆಂಬ, ನೀಲಾಂಬುದದ- ಕಪ್ಪುಮೋಡದ, ಒಳವಳಯದಿಂ- ಒಳಗಡೆಯಿಂದ, ಅರ್ಧಂ- ಅರ್ಧಭಾಗವು, ಒಗೆದು- ಉದ್ಭವಿಸಿ, ಕಾಣಿಪತೋರ್ಪಡುವ, ರುಚಿಮಂಜುಳಶಶಿ- ಕಾಂತಿಯಿಂದ ಮನೋಹರನಾದ ಚಂದ್ರನು, ಎಂಬ, ವಿಲಾಸಮಂ- ಲೀಲೆಯನ್ನು, ಎಳೆಯುಳ- ಗಂಗಾಂಬಿಕೆಯ, ಪಣೆ-ಹಣೆಯು, ತಳೆದು-ಧರಿಸಿ, ಕಣ್ಗೆ, ಅದೇಂತೊಳಗಿದುದೋ- ಅದೇನು ಶೋಭಿಸಿತೋ. ... ... ... ... ॥೧೧೯॥

ಕಂ॥ ಮುಡಿಗಟ್ಟಿದಾಗಳಾಕೆಯ । ಮುಡಿಯಂದಳಿಸೋಲ್ಬು ಕೇಕಿಕಡುಮುಳಿಸಿಂದಂ॥
ಜಡೆವೆಣೆದೊಡಾಗಳಾಕೆಯ । ಜಡೆಯಂದದಫಣಿಯನಮಮನೊಣೆಪ್ಪುದಿನ್ನುಂ ॥ ॥೧೨॥

ಉ॥ ಅಂಬುಜವಕ್ತ್ರಚಾರುಕುಮುದೇಕ್ಷಣೆಶೈವಲರೋಮರಾಜಿರೋ । ಲಂಬಕಚಾಭಿರಾಮೆವಲಿವೀಚಿವಿರಾಜಿತೆಸಾರಸೈಕತಾ ॥ ಡಂಬರವಲ್ಲಸಜ್ಜಘನೆಹಂಸಮದಾಲಸಯಾನೆತಾನಗಂ । ಗಾಂಬಿಕೆಯಪ್ಪುದೇನರಿದೆಮಂಗಳರೂಪಮಹಾಪ್ರಭಾವದಿಂ ॥೧೩॥

ಚಂ॥ ಕಮಲಿನಿಯಂತೆಪೂರ್ಣಗುಣರಂಜಿತೆನಂದನಭೂಮಿಯಂತೆವಿ । ದ್ರುಮವಿಲಸಲ್ಲ

---

ಮುಡಿಗಟ್ಟಿದಾಗಳ್- ಕೇಶವನ್ನು ಗಂಟಿಕ್ಕಿದಕಾಲದಲ್ಲಿ, ಆಕೆಯ- ಗಂಗಾಂಬಿಕೆಯ, ಮುಡಿಯಂದಳಿ- ತಲೆಗಂಟಿನ ಸೊಗಸಿಗೆ, ಕೇಕಿ- ನವಿಲು, ಸೋಲ್ತು- ಜಿತವಾಗಿ, ಜಡೆವೆಣೆದೊಡೆ- ಜಡೆಯನ್ನು ಹೆಣೆದರೆ, ಆಗಳ್- ಆ ಕಾಲದಲ್ಲಿ, ಕಡುಮುಳಿಸಿಂದಂ- ಅಧಿಕವಾದ ಸಿಟ್ಟಿನಿಂದ, ಆಕೆಯ, ಜಡೆಯಂದದ- ಜಡೆಯ ಆಕಾರವುಳ್ಳ, ಫಣಿಯಂ- ಸರ್ಪವನ್ನು, ಇನ್ನುಂ- ಈಗಲೂ, ನೊಣೆದಪುದು- ಭಕ್ಷಿಸುವದು, ಅಮಮ!॥೧೨॥

ಅಂಬುಜವಕ್ತ್ರ- ಕಮಲದಂತಿರುವ ಮುಖವುಳ್ಳ, (ಮುಖದಂತಿರುವ ಕಮಲವುಳ್ಳ,) ಚಾರುಕುಮುದೇಕ್ಷಣೆ- ಮನೋಹರವಾದ ನೈದಿಲೆಯಂತಿರುವ ಕಣ್ಣುಳ್ಳ, (ನೇತ್ರದಂತಿರುವ ನೈದಿಲೆಯುಳ್ಳ,) ಶೈವಲರೋಮರಾಜಿ- ಪಾಸೆಯಂತಿರುವ ರೋಮಪಜ್ತಿಯುಳ್ಳ, (ರೋಮಪಜ್ತಿಯಂತಿರುವ ಪಾಸೆಯುಳ್ಳ,) ರೋಲಂಬಕಚಾಭಿರಾಮೆ— ರೋಲಂಬಕಚ- ಭ್ರಮರದಂತಿರುವ ಕೇಶದಿಂದ, (ಕೇಶದಂತಿರುವ ಭ್ರಮರಗಳಿಂದ,) ಅಭಿರಾಮೆ- ಮನೋಹರಳಾದ, ವಲಿವೀಚಿವಿರಾಜಿತೆ— ವಲಿವೀಚಿ- ತೆರೆಗಳಂತಿರುವ ತ್ರಿವಳಿಗಳಿಂದ, (ತ್ರಿವಳಿಗಳಂತಿರುವ ತೆರೆಗಳಿಂದ,) ವಿರಾಜಿತೆ- ಪ್ರಕಾಶಮಾನಳಾದ, ಸಾರ.........ಜಘನೆ— ಸಾರ- ಶ್ರೇಷ್ಠವಾದ, ಸೈಕತಾಡಂಬರವಲ್ಲಸಜ್ಜಘನೆ- ಮಳಲುಗುಡ್ಡೆಯಂತಿರುವ ಆಧಿಕ್ಯವುಳ್ಳ, ಪ್ರಕಾಶಮಾನವಾದ ಕಟಿಪಶ್ಚಾದ್ಭಾಗವುಳ್ಳ, (ಕಟಿಪಶ್ಚಾದ್ಭಾಗದಂತಿರುವ ಮಳಲುಗುಡ್ಡೆಯ ಆಧಿಕ್ಯವುಳ್ಳ, ) ಹಂಸಮದಾಲಸಯಾನೆ— ಹಂಸ- ಹಂಸಪಕ್ಷಿಯ, ಮದ- ಗರ್ವದಿಂದ, ಅಲಸ- ಮಂದವಾದ, ಯಾನೆ- ಗಮನದಂತಿರುವಗಮನವುಳ್ಳ, (ಹಂಸಪಕ್ಷಿಯಗರ್ವದಿಂದ ಮೆಲ್ಲಿತ್ತಾದ ನಡಗೆಯುಳ್ಳ,) ತಾನೆ- ಆಕೆಯೇ, ಮಂಗಳರೂಪಮಹಾಪ್ರಭಾವದಿಂ— ಮಂಗಳರೂಪ- ಮಂಗಳಕರವಾದ ಆಕಾರವೇನು, ಮಹಾಪ್ರಭಾವದಿಂ- ಅಧಿಕವಾದ ಮಹಿಮೆಯೇನು, ( ಮಹತ್- ಅಧಿಕವಾದ, ಅಪ್- ಜಲದ, ಪ್ರಭಾವ- ಪ್ರಕೃಷ್ಟವಾದಸ್ಥಿತಿಯೇನು,) ಇವುಗಳಿಂದ, ಗಂಗಾಂಬಿಕೆ- ಮಾತೆಯಾದ ಗಂಗಾದೇವಿಯು, (ಗಂಗಾಂಬಿಕೆಯೆಂಬಅಭಿಧಾನವುಳ್ಳವಳು,) ಅಪ್ಪುದು- ಆಗುವದು, ಅರಿದೇಂ- ಅಸಾಧ್ಯವೇ, ಗಂಗಾಂಬಿಕೆಯು ಪರವಾಗಿ ಕಮಲವೆಂಬ ಮುಖವುಳ್ಳವಳು. ಕುಮುದವೆಂಬನೇತ್ರವುಳ್ಳವಳು ಈರೀತಿಯಾಗಿಯೂ ಮಾಡಬಹುದು. ... ... ॥೧೩॥

ದೇವಿ- ಗಂಗಾಂಬಿಕೆಯು, ಕಮಲಿನಿಯಂತೆ- ಕಮಲಲತೆಯಹಾಗೆ, ಪೂರ್ಣಗುಣರಂಜಿತೆ- ಸಂಪೂರ್ಣವಾದ ಸದ್ಗುಣಗಳಿಂದ ಪ್ರಕಾಶಮಾನಳಾದವಳು, (ಸಂಪೂರ್ಣವಾದ ತಂತುವಿನಿಂಮನೋಹರವಾದದ್ದು) ನಂದನಭೂಮಿಯಂತೆ- ಉಪವನಸ್ಥಳದಹಾಗೆ, ವಿದ್ರುಮ- ಹವಳದ, ವಿಲಸತ್- ಪ್ರಕಾಶಿಸುವ, ಲತಾ- ಬಳ್ಳಿಯಂತಿರುವ, ಅಧರೆ- ತುಟಿಯುಳ್ಳವಳು, ವಿದ್ರುಮವಿಲಸಲ್ಲತಾಧರೆ—(ವಿ- ಪಕ್ಷಿಗಳಿಂಕೂಡಿರುವ, ದ್ರುಮ-ಮರಗಳೇನು, ಲಸತ್- ಪ್ರಕಾಶಮಾನವಾದ, ಲತಾ- ಬಳ್ಳಿಗಳೇನು ಇವುಗಳನ್ನು, ಧರ- ಧರಿಸಿಕೊಂಡಿರುವದು) ನಭಸ್ಥಲಿಯಂತೆ- ಅಂತರಿಕ್ಷಪ್ರದೇಶದಹಾಗೆ, ಸುರಾಜಹಂಸಮಂದಮಹಿತಯಾನೆ—ಸು- ಸಮೀಚೀನವಾದ, ರಾಜಹಂಸ- ರಾಜಹಂಸಪಕ್ಷಿಯ, ಮಂದ- ಮೆಲ್ಲಿತ್ತಾದ, ಮಹಿತ- ಶ್ರೇಷ್ಠವಾದ, ಯಾನೆ- ನಡಗೆಯಂತಿರುವ ನಡಗೆಯುಳ್ಳವಳು, (ಸು- ಸಮೀಚೀನವಾದ, ರಾಜ- ಚಂದ್ರ, ಹಂಸ- ಸೂರ್ಯ, ಮಂದ-ಶನಿ ಇವರುಗಳ,

ತಾಧರೆನಭಸ್ಥಳಿಯಂತೆರಾಜಹಂಸಮಂ ॥ ದಮಹಿತಯಾನೆಸಾರಕೃತಿಯಂತೆಸುಲಕ್ಷಣಭಾವ
ವೃತ್ತಿಸಂ। ಕ್ರಮೆನದಿಯಂತೆದಲ್ಭುವನವಿಶ್ರುತೆಯೆಂದೆನದೇವಿಯೊಪ್ಪಿದಳ್॥ ॥೧೨॥

ವ॥ ಇಂತೆಸೆವ ಗಂಗಾಂಬಿಕೆಯ ನಿರುಪಮಾನ ರೂಪಾತಿಶಯಮಂ ಬಲದೇವ ನವ
ಲೋಕಿಸುತ್ತ ಮಿಾಕನ್ನಿಕೆಯ ಸೌಂದರ್ಯ ಸೌಶೀಲ್ಯಕ್ಕೆ ತಕ್ಕವರನಾವನೋ ಯೆಂದು
ನಿಜಮನೋಹರಿಯೊಡನಾಲೋಚಿಸುತಿರ್ದನಿತರೋಳ್ನೆನೆದಿಂತೆಂದಂ ॥ * * * *

ಉ ॥ ಎನ್ನಯತಂಗಿಯಾತ್ಮಭವನೋರ್ವನಪೂರ್ವಗುಣಂಮಹತ್ವಮಂ । ಪನ್ನಗ
ಧಾರಿಯಿಂಪಡೆದುಕಪ್ಪಡಿಯೊಳ್ನೆಲಸಿರ್ಪನಾತನೀ ॥ ಕನ್ನೆಗೆತಕ್ಕವಲ್ಲಭನಮಂಗಿರದೀವೆನೆ
ನುತ್ತೆಶೈವಸಂ । ಪನ್ನಬಲಾಧಿಪಂಬಸವನಲ್ಲಿಗೆಬಂದನಮಂವಿಳಾಸದಿಂ ॥ ... ॥೧೩॥

ವ॥ ಇಂತು ಸಕಲವೈಭವಂಮಿಗೆ ಬಂದು ಗಣಸಭಾಸ್ಥಿತಬಸವರಾಜಂಗೆ ಭಕ್ತಿಯಿಂದೆ
ಣಗಿ ಕನ್ಯಾರತ್ನಮಂ ಕೈಕೊಳ್ವುದೆಂದು ವಿಭೂತಿವೀಟಿಕೆವೆರಸಿಕಾಣ್ಕೆಗೆಯ್ದು ಮಗುಳ್ದು
ನಿಜರಾಜಧಾನಿಯಂ ಪೊಕ್ಕುಮಯಮಾಂಡವ್ಯರಂಪಳಿವ ಗೃಹಮಹತ್ತರರಿಂ ತತ್ಕಲ್ಯಾಣ

---

ಮಹಿತ- ಪೂಜ್ಯವಾದ, ಯಾನೆ- ಗಮನವುಳ್ಳದ್ದು,) ಸಾರಕೃತಿಯಂತೆ- ಶ್ರೇಷ್ಠವಾದಕಾವ್ಯದಹಾಗೆ, ಸುಲಕ್ಷ
ಣಭಾವವೃತ್ತಿಸಂಕ್ರಮೆ— ಸು- ಸಮಿಾಚೀನವಾದ, ಲಕ್ಷಣ- ಸಾಮುದ್ರಿಕಾಲಕ್ಷಣವೇನು, ಭಾವವೃತ್ತಿ-ಮ
ನೋಭಿಪ್ರಾಯವರ್ತನವೇನು ಇವುಗಳ, ಸಂಕ್ರಮೆ— ಸಂಬಂಧವುಳ್ಳವಳು, (ಸು- ಸಮಿಾಚೀನವಾದ, ಲಕ್ಷಣ-
ವ್ಯಾಕರಣಶಾಸ್ತ್ರವೇನು, ಭಾವ- ತಾತ್ಪರ್ಯವೇನು, ವೃತ್ತಿ- ಕೈಶಿಕ್ಯಾದಿವೃತ್ತಿಗಳೇನು, ಇವುಗಳ- ಸಂಕ್ರ
ಮೆ- ಸಂಬಂಧವುಳ್ಳದ್ದು,) ನದಿಯಂತೆ- ಹೊಳೆಯಹಾಗೆ, ಭುವನವಿಶ್ರುತೆ- ಲೋಕಪ್ರಸಿದ್ಧಳಾದವಳು, (ನೀ
ರಿನಿಂದಪ್ರಸಿದ್ಧವಾದದ್ದು) ಎಂದೆನೆ, ಒಪ್ಪಿದಳ್, ದಲ್- ನಿಶ್ಚಯ, ... ... ॥೧೨॥

ಇಂತು, ಎಸೆವ- ಗಂಗಾಂಬಿಕೆಯ, ನಿರುಪಮಾನರೂಪಾತಿಶಮಂ- ಅಸದೃಶವಾದರೂಪಾಧಿಕ್ಯವನ್ನು,
ಬಲದೇವಂ- ತಂದೆಯಾದ ಬಲದೇವಮಂತ್ರಿಯು, ಅವಲೋಕಿಸುತ್ತಂ-ನೋಡುತ್ತ, ಈ ಕನ್ನಿಕೆಯ- ಈ ಹು
ಡುಗಿಯ, ಸೌಂದರ್ಯಸೌಶೀಲ್ಯಕ್ಕೆ-ಸುಂದರತ್ವಸದಾಚಾರಸಂಪನ್ನತ್ವಕ್ಕೆ, ತಕ್ಕ-ಯೋಗ್ಯನಾದ, ವರಂ- ಅ
ನುಕೂಲಪತಿಯು, ಆವನೋ, ಎಂದು, ನಿಜಮನೋಹರಿಯೊಡನೆ- ಮನೋಜ್ಞಳಾದ ತನ್ನಪತ್ನಿಯೊಡನೆ, ಆ
ಲೋಚಿಸುತಿರ್ದ, ಅನಿತರೊಳ್- ಅಷ್ಟರಲ್ಲಿ, ನೆನೆದು- ಸ್ಮರಿಸಿಕೊಂಡು, ಇಂತೆಂದಂ. * * * *

ಅಪೂರ್ವಗುಣಂ- ನೂತನವಾದಗುಣಗಳುಳ್ಳ, ಎನ್ನಯತಂಗಿಯ- ನನ್ನಸಹೋದರಿಯ, ಆತ್ಮಭವಂ-
ಪುತ್ರನಾದ, ಓರ್ವಂ- ಒಬ್ಬನು, ಪನ್ನಗಧಾರಿಯಿಂ- ಪರಶಿವನಿಂದ, ಮಹತ್ವಮಂ-ಮಹಿಮೆಯನ್ನು, ಪಡೆದು-
ಹೊಂದಿ, ಕಪ್ಪಡಿಯೊಳ್, ನೆಲಸಿ- ವಾಸವಾಗಿ, ಇರ್ಪಂ, ಆತಂ, ಈ ಕನ್ನಿಕೆಗೆ, ತಕ್ಕ- ಯೋಗ್ಯನಾದ, ವಲ್ಲ
ಭಂ- ಪತಿಯು, ಅವಂಗೆ, ಇರದೆ- ತಪ್ಪದೆ, ಈವೆಂ- ಕೊಡುವೆನು, ಎನುತ್ತೆ, ಅವಂ- ಶೈವಸಂಪನ್ನಬಲಾ
ಧಿಪಂ- ಶೈವರಿಂಕೂಡಿದ ಆ ಬಲದೇವನು, ವಿಳಾಸದಿಂ, ಬಸವನಲ್ಲಿಗೆ-ಬಸವೇಶ್ವರನಿರುವ ಸ್ಥಳಕ್ಕೆ, ಬಂದಂ

ಅಂತು- ಹಾಗೆ, ಸಕಳವೈಭವಂ- ಸಮಸ್ತವಿಭವವು, ಮಿಗೆ- ಅಧಿಕವಾಗಲು, ಬಂದು, ಗಣಸಭಾಸ್ಥಿತ
ಬಸವರಾಜಂಗೆ- ಶಿವಗಣಸಭೆಯಲ್ಲಿ ಕುಳಿತಿರುವ ಬಸವೇಶ್ವರನಿಗೆ, ಭಕ್ತಿಯಿಂದೆ, ಎರಗಿ- ನಮಸ್ಕರಿಸಿ,
ಕನ್ಯಾರತ್ನಮಂ- ಸ್ತ್ರೀರತ್ನವನ್ನು, ಕೈಕೊಳ್ವುದು- ಸ್ವೀಕರಿಸುವದು, ಎಂದು, ವಿಭೂತಿವೀಟಿಕೆವೆರಸಿ-
ವಿಭೂತಿವೀಳಯದಿಂಕೂಡಿ, ಕಾಣ್ಕೆಗೆಯ್ದು- ಕಾಣ್ಕೆಯಂಕೊಟ್ಟು, ಮಗುಳ್ದು- ಪುನಃ,ನಿಜರಾಜಧಾನಿಯಂ-
ತನ್ನಪಟ್ಟಣವನ್ನು, ಪೊಕ್ಕು- ಪ್ರವೇಶಿಸಿ, ಮಯಮಾಂಡವ್ಯರಂ- ಅಸುರಸುರರ ಬಡಗಿಗಳನ್ನು, ಪಳಿವ-
ತಿರಸ್ಕರಿಸುವ, ಗೃಹಮಹತ್ತರರಿಂ- ಶಿಲ್ಪಶಾಸ್ತ್ರಜ್ಞರಿಂದ, ತತ್ಕಲ್ಯಾಣಕ್ಕೆ- ಆ ಬಸವೇಶ್ವರನ ವಿವಾಹ

ಕ್ಕೆ ಕಲ್ಯಾಣದೊಳ್ಕಲ್ಯಾಣಮಂಟಪಮಂ ರಚಿಯಿಸುತ್ತಿರ್ದನಾಪ್ರಸ್ತಾವದೊಳ್ * *

ಮತ್ತೇ॥ಬಲದೇವಂಪಡೆದಿತ್ತಕನ್ನಿಕೆಗೆಭಾಸ್ವದ್ದೀಕ್ಷೆಯುಂಮಾಡಿಸು । ತ್ತೊಲವಿಂಸಂಗಮದೇವಸದ್ಗುರುವಿನಿಂತತ್ಪಾದಪದ್ಮಾರ್ಚನಾ ॥ ಚಲವೃತ್ತಂಶುಭಚಿತ್ತನೊಪ್ಪಿದನುದಾತ್ತಂಸಚ್ಚಿದಾನಂದಸಂ । ಕಲಿತಾತ್ಮಂಕರುಣಾರ್ದ್ರಶುದ್ಧಹೃದಯಂಸಿದ್ಧಾಂತವಿದ್ಯಾಧರಂ ॥

ಲಲಿತಪದ ॥ ಜಂಗಮಪದಾರ್ಚಕಭುಜಂಗಮವಿಭೂಷಹೃದಯಂಗಮಚರಿತ್ರಗಣಸಂಗಮವಿಲೋಲಾ । ನಂಗಮದಭಂಜನಶುಭಾಂಗಮುನಿರಂಜನಪತಂಗಜವಿಮರ್ದನಸುಧಾಂಗಧರವಾಹಾ ॥ ಮಂಗಳಗುಣಾನ್ವಿತರಥಾಂಗಧರಸೇವಿತಕುರಂಗಧರಕಾಂತರುಚಿಸಂಗತದಯಾರ್ದ್ರಾ । ಪಾಂಗಪೊರೆಯೆನ್ನನವಿಭಂಗವಪುರಾತ್ತಶಿವಲಿಂಗಗಣಹೃನ್ನಳಿನಭೃಂಗಬಸವೇಶಾ ॥ ... ... ... ... .. .. ॥೧೨೫॥

ಕ್ಕೊಸ್ಕರ, ಕಲ್ಯಾಣದೊಳ್- ಕಲ್ಯಾಣಪಟ್ಟಣದಲ್ಲಿ, ಕಲ್ಯಾಣಮಂಟಪಮಂ- ವಿವಾಹಮಂಟಪವನ್ನು, ರಚಿಯಿಸುತ್ತಿರ್ದಂ- ಮಾಡಿಸುತಿದ್ದನು, ಆಪ್ರಸ್ತಾವದೊಳ್- ಆಕಾಲದಲ್ಲಿ. * * * * * *

ಶುಭಚಿತ್ತಂ-ಮಂಗಳಮನಸ್ಕನಾದ, ಉದಾತ್ತಂ- ಉತ್ಕೃಷ್ಟನಾದ, ಸಚ್ಚಿದಾನಂದಸಂಕಲಿತಾತ್ಮಂ- ಸತ್, ಚಿತ್, ಆನಂದ ಇವುಗಳಿಂದಕೂಡಿದ ಆತ್ಮನುಳ್ಳ, ಕರುಣಾರ್ದ್ರಶುದ್ಧಹೃದಯಂ- ದಯಾರಸಸಿಕ್ತವಾದ ಪರಿಶುದ್ಧವಾದಚಿತ್ತವುಳ್ಳ, ಸಿದ್ಧಾಂತವಿದ್ಯಾಧರಂ- ಶೈವಸಿದ್ಧಾಂತವಿದ್ಯೆಯನ್ನು ಧರಿಸಿರುವ, ಬಲದೇವಂ, ಪಡೆದು- ಪ್ರೀತಿಯಿಂದ, ಇತ್ತ- ಕೊಟ್ಟ, ಕನ್ನಿಕೆಗೆ, ಸಂಗಮದೇವಸದ್ಗುರುವನಿಂ- ಗುರುಶ್ರೇಷ್ಠನಾದಸಂಗಮೇಶ್ವರನಿಂದ, ಒಲವಿಂ- ಪ್ರೀತಿಯಿಂದ, ಭಾಸ್ವದ್ದೀಕ್ಷೆಯಂ-ಪ್ರಕಾಶಮಾನವಾದಶಿವದೀಕ್ಷೆಯನ್ನು, ಮಾಡಿಸುತ್ತ, ತತ್ಪಾದಪದ್ಮಾರ್ಚನಾಚಲವೃತ್ತಂ— ತತ್- ಆಸಂಗಮೇಶ್ವರನ, ಪಾದಪದ್ಮಾರ್ಚನ- ಚರಣಕಮಲಪೂಜೆಯವಿಷಯದಲ್ಲಿ, ಅಚಲ- ನಿಶ್ಚಂಚಲವಾದ, ವೃತ್ತಂ- ವರ್ತನವುಳ್ಳವನಾಗಿ, ಒಪ್ಪಿದಂ. ೧೨೪॥

ಜಂಗಮಪದಾರ್ಚಕ- ಜಂಗಮರ ಪಾದಪೂಜೆಯನ್ನು ಮಾಡುವ, ಭುಜಂಗಮವಿಭೂಷ-ಸರ್ಪಾಭರಣಭೂಷಿತನಾದ, ಹೃದಯಂಗಮಚರಿತ್ರ-ಮನೋಹರವಾದ ಚರಿತವುಳ್ಳ,ಗಣಸಂಗಮವಿಲೋಲ- ಶಿವಗಣಗಳಸಂಬಂಧದಲ್ಲಿಆಸಕ್ತನಾದ, ಅನಂಗಮದಭಂಜನ- ಮನ್ಮಥನ ಗರ್ವವನ್ನು ನಾಶಪಡಿಸುವ, ಶುಭಾಂಗ- ಮಂಗಳಕರವಾದಶರೀರವುಳ್ಳ, ಮುನಿರಂಜನ-ಋಷಿಗಳನ್ನು ಸಂತೋಷಪಡಿಸುವ, * ಪತಂಗಜವಿಮರ್ದನ- ಯಮನನ್ನು ನಾಶಪಡಿಸಿದ, ಸುಧಾಂಗಧರವಾಹ— ಸುಧಾಂಗಧರ- ಚಂದ್ರನನ್ನು ಧರಿಸಿದ ಪರಶಿವನಿಗೆ, ವಾಹ- ವಾಹನನಾದ, ಮಂಗಳಗುಣಾನ್ವಿತ- ಮಂಗಳಕರಗಳಾದ ಸದ್ಗುಣಗಳಿಂದಕೂಡಿದ, ರಥಾಂಗಧರಸೇವಿತ- † ರಥಾಂಗಧರ- ವಿಷ್ಣುವಿನಿಂದ, ಸೇವಿತ- ಸೇವಿಸಲ್ಪಟ್ಟ, ಕುರಂಗಧರಕಾಂತರುಚಿಸಂಗತ— ಕುರಂಗಧರ- ಚಂದ್ರನ, ಕಾಂತ- ಮನೋಹರವಾದ, ರುಚಿ- ಕಾಂತಿಯಂತಿರುವ ಕಾಂತಿಯಿಂದ, ಸಂಗತ- ಕೂಡಿದ, ದಯಾರ್ದ್ರಾಪಾಂಗ- ಕರುಣಾಸಿಕ್ತವಾದ ಕಡೆಗಣ್ಣೋಟವುಳ್ಳ, ಅವಿಭಂಗವಪುರಾತ್ತಶಿವಲಿಂಗ— ಅವಿಭಂಗ- ನಾಶರಹಿತವಾದ, ವಪುಃ- ಶರೀರದಲ್ಲಿ, ಆತ್ತ- ಪಡೆಯಲ್ಪಟ್ಟ, ಶಿವಲಿಂಗ- ಶಿವಲಿಂಗವುಳ್ಳ, ಗಣಹೃನ್ನಳಿನಭೃಂಗ- ಪ್ರಮಥಗಣಗಳ ಹೃದಯಕಮಲಕ್ಕೆ ಭ್ರಮರನಾದ, ಅಂದರೆ, ಗಣಧ್ಯೇಯನಾದ, ಬಸವೇಶ, ಎನ್ನಂ- ಪೊರೆ- ರಕ್ಷಿಸು. .... .... ... .... .... ॥೧೨೫॥

* (ಅವ) ಪತಂಗ- ಸೂರ್ಯನ ದೆಸೆಯಿಂದ, ಜ- ಹುಟ್ಟಿದವನು, ಯಮ. † (ಅವ) ರಥಾಂಗ- ಚಕ್ರವನ್ನು, ಧರ- ಧರಿಸಿರುವನು, ವಿಷ್ಣು. ... ... ... ॥೧೨೫॥

ಹರಿಣಪ್ಲುತ ॥ ಕಮಳನಯನೇ ಕಂಜಾತಾಸ್ಯೇ ಕಳಾಧರಧಾರಿಣೀ । ವಿಮಳಚರಿತೇ ವಿದ್ಯಾರೂಪೇ ವಿಪತ್ಕುಳಹಾರಿಣಿ ॥ ಶಮಿತಶಮನೇ ಶೈವಾಧಾರೇ ಶಿವೇತರವಾರಿಣೀ । ದಮಿಸು ಭವಮಂ ಧರ್ಮಾಕಾರೇ ದಯಾವತಿ ಪಾರ್ವತೀ ॥ (ಸಾ) ಭಯಮಂ ॥ ॥೧೨೬॥

ಗದ್ಯ ॥ ಇದು ವಿನಮದಖಿಳಸುರಾಸುರೇಂದ್ರ ಮಕುಟತಟಘಟಿತ ಮಣಿಗಣಾಗಣಿತ ರುಚಿನಿಚಯ ತರುಣಾರುಣಾತಪ ಪರಿಲಸಿತ ಪರಮಶಿವಲಿಂಗ ಪಾದಾರವಿಂದ ಪರಾಗಭಸಿತ ಭೂಸುರ ಲಲಾಟಪಟ್ಟ ಸರಸಜನಮಾನಿತೋಭಯ ಕವಿತಾವಿಶಾರದ ಶ್ರೀಷಡಕ್ಷರಿದೇವವಿರಚಿತ ಶ್ರೀಮದ್ವೃಷಭರಾಜ ಮಹಾಪುರಾಣದೊಳ್ ದೇಶಾದಿವರ್ಣನಂ ಚತುರ್ಥಾಶ್ವಾಸಂ ಸಮಾಪ್ತಂ ॥ .. ... ... .. ... ... ... *

ಚತುರ್ಥಾಶ್ವಾಸಂ ಸಂಪೂರ್ಣಂ.

---

ಶ್ರೀಃ

ತಾಂಡವವಿನೋದಾಯ ಪರಬ್ರಹ್ಮಣೇ ನಮಃ

## ಪಂಚಮಾಶ್ವಾಸಂ.

ಬಸವೇಶ್ವರವಿವಾಹಾದಿವರ್ಣನಂ.

ಕಂ ॥ ಶ್ರೀಮದಗಜೇಕ್ಷಣೋತ್ಪಲ । ಸೋಮಂ ಸೋಮಾಂಕನಭವನತಿಶಯವಿಭವಂ ॥

---

ಕಮಳನಯನೇ- ಜಿಂಕೆಯನೇತ್ರದಂತಿರುವನೇತ್ರವುಳ್ಳ, ಕಂಜಾತಾಸ್ಯೇ-ಕಮಲದಂತಿರುವ ಮುಖವುಳ್ಳ, ಕಳಾಧರಧಾರಿಣೀ— ಕಳಾಧರ- ಚಂದ್ರನನ್ನು, ಧಾರಿಣೀ- ಧರಿಸಿರುವ, ವಿಮಳಚರಿತೇ- ನಿರ್ಮಲವಾದಚರಿತ್ರವುಳ್ಳ, ವಿದ್ಯಾರೂಪೇ- ವಿದ್ಯಾಸ್ವರೂಪಳಾದ, ವಿಪತ್ಕುಳಹಾರಿಣೀ- ಆಪತ್ಸಮೂಹವಂನಾಶಪಡಿಸುವ, ಶಮಿತಶಮನೇ- ನಾಶಮಾಡಲ್ಪಟ್ಟಯಮನುಳ್ಳ, ಶೈವಾಧಾರೇ-ಶಿವಭಕ್ತರಿಗಾಶ್ರಯಳಾದ,ಶಿವೇತರವಾರಿಣೀ- ಅಮಂಗಳವಂಹೋಗಲಾಡಿಸುವ, ಧರ್ಮಾಕಾರೇ- ಧರ್ಮಸ್ವರೂಪಿಣಿಯಾದ, ದಯಾವತಿ-ಕೃಪಾಶಾಲಿನಿಯಾದ, ಪಾರ್ವತೀ- ಪರ್ವತರಾಜಪುತ್ರಿಯೇ, ಭವಮಂ- ಪಾಪವನ್ನು, (ಸಾ) ಭಯಮಂ- ಸಂಸಾರಭಯ, ಅಥವಾ ಮೃತ್ಯುಭಯವನ್ನು, ದಮಿಸು- ನಾಶಪಡಿಸು. ... ... ... ॥೧೨೬॥

ನಾಲ್ಕನೆಯ ಆಶ್ವಾಸಂ ಸಂಪೂರ್ಣವು.

---

ಐದನೆಯ ಆಶ್ವಾಸಪ್ರಾರಂಭಃ.

ಶ್ರೀಮದಗಜೇಕ್ಷಣೋತ್ಪಲಸೋಮಂ— ಶ್ರೀಮತ್- ಸಂಪದ್ಯುಕ್ತಳಾದ, ಅಗಜಾ- ಪಾರ್ವತಿಯ, ಈಕ್ಷಣ- ನೇತ್ರಗಳೆಂಬ, ಉತ್ಪಲ- ನೈದಿಲೆಗಳಿಗೆ, ಸೋಮಂ- ಚಂದ್ರನಾದ, ಸೋಮಾಂಕಂ— ಸೋಮ- ಚಂದ್ರನೇ, ಅಂಕಂ- ಚಿಹ್ನವಾಗುಳ್ಳ, ಅಂದರೆ ಚಂದ್ರಧರನೆಂದರ್ಥ. ಅಭವಂ- ಭವರಹಿತನಾದ, ಅತಿಶಯವಿಭವಂ- ಅಧಿಕವಾದವೈಭವವುಳ್ಳ,ಕಾಮದನಾಮಂ- ಇಷ್ಟಾರ್ಥವನ್ನುಂಟುಮಾಡುವ ನಾಮಧೇಯವುಳ್ಳ, ಅಂದರೆ

ಕಾವುದನಾಮುಂದೇವಲ । ಲಾವುಂಪ್ೊರೆಗೆಮ್ಮನಾವಗಂಶಿವಲಿಂಗಂ ॥ ... ... ॥೧॥

ಚಂ ॥ ಮರಕತಭಿತ್ತಿಕಾಂಚನದವೇದಿಕೆವಿದ್ರುಮತೋರಣಂಸುರೇ । ಶ್ವರಮಣಿಕು ಟ್ಟಿಮುಂತೊಳಪಮುತ್ತಿನಲಂಬಣಮಾಲಿಕಾನಕಾಂ ॥ ಬರದವಿತಾನಮಿಂದುಮಣಿಪುತ್ರಿಕೆಬ ಜ್ಜರದಾರವಂದಮೆ । ಳ್ತರದಮಣಿಧ್ವಜಂಮಿಸುಗೆಕಂಗೊಳಿಸಿತ್ತುವಿವಾಹಮಂಟಪಂ ॥೨॥

ಮ॥ ಸ್ರ॥ ಪೊಸಜಾಗಂಪೂರ್ಣಕುಂಭಂದಧಿಮಧುಸುಧೆಮಾಧೂಫಲಂದೂರ್ವೆಶಂಖಂ। ಬಿಸಸೂತ್ರಂಲಾಜೆನಾನಾಕುಸುಮವಿಸರಮಾರ್ದ್ರಾಕ್ಷತಂಶುಕ್ತಿರತ್ನ ॥ ಪ್ರಸರಂಪುಂಡ್ರೇ ಕ್ಷುದಂಡಂಶಶಿಮಣಿಮುಕುರಂರೋಚನಂಪೂಗಪುಷ್ಪಂ । ಘುಸೃಣಂಮಾಣಿಕ್ಯದೀಪಂಮಿ ಸುಗೆಬಗೆಗೆಚೆಲ್ವಾದುದುದ್ವಾಹಗೇಹಂ ॥ ... ... ... ॥೩॥

ಕಂ॥ ಅತಿಮಂಗಳಮತಿಮಂಜುಳ । ಮತಿರುಚಿಮಯಮತಿವಿಶಾಲಮತಿಚಿತ್ರಮಿದೆಂ॥ ಬತಿಶಯಮನಾಳ್ದುಭುವನ । ಸ್ತುತಮೆನಿಸಿನೆಗಳ್ತೆವೆತ್ತುದುದ್ವಾಹಗೃಹಂ ॥ ॥೪॥

ವ ॥ ಇಂತನೂನಶೋಭಾವಹಮಪ್ಪಂತಿರುದ್ವಾಹಮಂಟಪಮನಲಂಕರಿಸಿ ರಾಜ

---

ಪರಶಿವನನಾಮೋಚ್ಚಾರಣದಿಂ ಸಕಲೇಷ್ಟಾರ್ಥಸಿದ್ಧಿಯಪ್ಪುದೆಂದರ್ಥ. ದೇವಲಲಾಮಂ-ದೇವತಾಶ್ರೇಷ್ಠನಾದ, ಶಿವಲಿಂಗಂ, ಎಮ್ಮಂ, ಆವಗಂ- ನಿರಂತರದಲ್ಲೂ, ಪೊರೆಗೆ- ರಕ್ಷಿಸಲಿ. ... ... ॥೧॥

ಮರಕತಭಿತ್ತಿ- ಮರಕತರತ್ನದಗೋಡೆಯೂ, ಕಾಂಚನದ- ಸುವರ್ಣವಿಕಾರವಾದ, ವೇದಿಕೆ- ಜಗತಿಯೂ, ವಿದ್ರುಮತೋರಣಂ- ಹವಳದತೋರಣವು, ಸುರೇಶ್ವರಮಣಿಕುಟ್ಟಿಮಂ— ಸುರೇಶ್ವರಮಣಿ- ಇಂದ್ರನೀಲರತ್ನದ, ಕುಟ್ಟಿಮಂ- ನಿಬದ್ಧಭೂಮಿಯೂ, ತೊಳಪ-ಪ್ರಕಾಶಿಸುವ, ಮುತ್ತಿನ, ಲಂಬಣಮಾಲಿ- ಲೈನಾಗಿ ತೂಗಿಬಿಟ್ಟಿರುವ ಮಾಲಿಕೆಯೂ, ಕಾನಕಾಂಬರದ- ಹೊಂಬಣ್ಣವಾದಬಟ್ಟೆಯ, ವಿತಾನಂ- ಮೇಲ್ಕಟ್ಟು, ಇಂದುಮಣಿಪುತ್ರಿಕೆ- ಚಂದ್ರಕಾಂತಶಿಲೆಯಗೊಂಬೆಯೂ, ಬಜ್ಜರದಾರವಂದಂ- ವಜ್ರದ ದ್ವಾರಬಂಧನವು, ಎಳ್ತರದ- ಉನ್ನತವಾದ, ಮಣಿಧ್ವಜಂ- ರತ್ನಖಚಿತವಾದ ಧ್ವಜವು, ಮಿಸುಗೆ, ವಿವಾಹಮಂಟಪಂ, ಕಂಗೊಳಿಸಿತ್ತು- ಪ್ರಕಾಶಿಸಿತು. ... ... ... ... ॥೨॥

ಪೊಸಜಾಗಂ- ಹೊಸದಾದಜಾಗರೆಯೂ, ಪೂರ್ಣಕುಂಭಂ- ಜಲಪೂರಿತವಾದಕಲಶ,ದಧಿ-ಮೊಸರು,ಮಧು-ಜೇನುತುಪ್ಪ, ಸುಧೆ- ಹಾಲು, ಮಾಧೂಫಲಂ- ಮಾದಲದಹಣ್ಣು, ದೂರ್ವೆ- ಗರುಕೆ- ಶಂಖಂ, ಬಿಸಸೂತ್ರಂ-ತಾವರೆದಂಟಿನ ನೂಲು, ಲಾಜೆ- ಬತ್ತದರಳು, ನಾನಾಕುಸುಮವಿಸರಂ- ಅನೇಕ ವಿಧವಾದ ಪುಷ್ಪಗಳ ಸಮೂಹವು, ಆರ್ದ್ರಾಕ್ಷತಂ- ಹಸಿಯಕ್ಷತೆ, ಶುಕ್ತಿ- ಮುತ್ತಿನ ಚಿಪ್ಪು, ರತ್ನಪ್ರಸರಂ- ರತ್ನಗಳಸಮೂಹವು, ಪುಂಡ್ರೇಕ್ಷುದಂಡಂ- ಕಬ್ಬಿನ ಜಲ್ಲೆಯೂ, ಶಶಿಮಣಿಮುಕುರಂ- ಚಂದ್ರಕಾಂತಶಿಲೆಯ ಕನ್ನಡಿಯೂ, ರೋಚನಂ- ಗೋರೋಚನವು, ಪೂಗಪುಷ್ಪಂ- ಅಡಕೇಹೂವು, (ಹೊಂಬಾಳೆ) ಘುಸೃಣಂ-ಕುಂಕುಮಕೇಸರಿ, ಮಾಣಿಕ್ಯದೀಪಂ- ರತ್ನದೀಪವು, ಮಿಸುಗೆ, ಉದ್ವಾಹಗೇಹಂ- ಮದುವೆಯಮನೆಯೂ, ಬಗೆಗೆ- ಮನಸ್ಸಿಗೆ, ಚೆಲ್ವಾದುದು-ಸುಂದರವಾಯ್ತು. ... ... ... ... ... ॥೩॥

ಇದು, ಅತಿಮಂಗಳಂ- ಅತಿಶುಭವುಳ್ಳದ್ದು, ಅತಿಮಂಜುಳಂ- ಅತಿಮನೋಹರವಾದದ್ದು, ಅತಿರುಚಿಮಯಂ- ಅತಿಕಾಂತಿವಿಕಾರವಾದದ್ದು, ಅತಿವಿಶಾಲಂ- ಅತಿವಿಸ್ತಾರವಾದದ್ದು, ಅತಿಚಿತ್ರಂ- ಅತ್ಯಾಶ್ಚರ್ಯಕರವು, ಎಂಬ, ಅತಿಶಯಮಂ, ಆಳ್ದು, ಭುವನಸ್ತುತಂ- ಲೋಕಶ್ಲಾಘ್ಯವಾದದ್ದು, ಎನಿಸಿ, ಉದ್ವಾಹಗೃಹಂ- ನೆಗಳ್ತೆವೆತ್ತುದು- ಪ್ರಸಿದ್ಧವಾಯಿತು. ... ... ... ... ॥೪॥

ಇಂತು, ಅನೂನಶೋಭಾವಹಮಪ್ಪಂತಿರೆ- ಅತ್ಯಧಿಕಕಾಂತಿವಿಶಿಷ್ಟವಾಗುವಹಾಗೆ, ಉದ್ವಾಹಮಂಟ

ವೀಧಿಯಂ ಸಿಂಗರಿಸಿ ಶಿವಭಕ್ತಬಂಧುಜನಸಮೇತಂ ದಂಡನಾಥಾಗ್ರಣಿ ಕಪ್ಪಡಿಗೇಳ್ತಂ
ದು ಗಣಸಭೆಯೊಳ್ಶಿವಕಥಾಗೋಷ್ಠಿಯೊಳ್ಸುಖಮಿರ್ದ್ದ ಬಸವರಾಜನಂಕಂಡುಮೆಯ್ಯಿ
ಕ್ಕಿ ಕಯ್ಯಂಮುಗಿದು ವಿವಾಹಕಾರ್ಯವಿಜ್ಞಾಪನಾನಂತರಂ ಪಣ್ಣಿಬಂದಗಂಧಸಿಂಧುರ
ದ ಪೂರ್ವಾಸನದೊಳ್ಗಂಗಾಂಬಿಕೆವೆರಸಿ ಮೂರ್ತಿಗೊಳಿಸಿ ಮುಂದೆ ಸಂದಣಿಪವಂದಿಮಾ
ಗಧರ ಜಯಜಯಪ್ರಣಾದಮುಂ ಪಟುಪಟಹಶಂಖತಾಳಮುರಜಾಮೃದಂಗ ಬಹುಳಕಹ
ಳಾನಾದಮುಂ ದಶದಿಶೆಯಂ ಪಸರಿಸೆ ಪರಮೋತ್ಸಾಹದಿಂ ಸಮುಚಿತವಾಹನ ಸುಖಾಸನಂ
ಗಳನೇರಿ ಶಿವಗಣಕದಂಬವೊಡನೆಯ್ತರೆ ನಿಜರಾಜಧಾನಿಯಂ ಪುಗಿಸಿ ಮಣಿಗಣಗ್ರಥಿತ
ತೋರಣ ಕುಸುಮಮಾಲಾಲಂಕೃತಮಾದ ರಾಜವೀಧಿಯೊಳ್ಕರೆದುತರ್ಪ್ಪಾಗಳ್ ॥ * *

ಚಂ ॥ ನುಡಿಸುವವೀಣೆಯಂಕೆಲದೊಳಿಕ್ಕಿವಿಲಾಸದನೆತ್ತದಾಟಮಂ । ಬಿಡುತೆಮ
ನೋಜನಾಗಮಮನೋದುವರಂನಿಲವೇಳ್ದುದೇಶಿಯಿಂ ॥ ಪಡರ್ದಸುಲಾಸ್ಯಮಂತೊರೆದು
ಭೂಷಣವೃಂದಮನಾಂತುಬೇಗದಿಂ । ಮಡದಿಯರೆಯ್ದಿನಿಂದುನೆಲೆವಾಡದೊಳೀಕ್ಷಿಸಿದರ್ವೃ
ಷೇಂದ್ರನಂ ॥ ... ... ... ... ... ... ॥೫॥

---

ಪಮಂ- ಅಲಂಕರಿಸಿ, ರಾಜವೀಧಿಯಂ, ಸಿಂಗರಿಸಿ, ದಂಡನಾಥಾಗ್ರಣಿ- ಮಂತ್ರಿಶ್ರೇಷ್ಠನಾದಬಲದೇವನು, ಶಿವಭಕ್ತಬಂಧುಜನಸಮೇತಂ- ಶಿವಭಕ್ತರಾದ ನಂಟರೊಡನೆಕೂಡಿ, ಕಪ್ಪಡಿಗೆ, ಏಳ್ತಂದು- ಬಂದು, ಗಣಸಭೆಯೊಳ್, ಶಿವಕಥಾಗೋಷ್ಠಿಯಲ್ಲಿ- ಶಿವಕಥಾಸಲ್ಲಾಪದಿಂದ, ಸುಖಂ- ಸುಖವಾಗಿ, ಇರ್ದ, ಬಸವರಾಜನಂ, ಕಂಡು, ಮೆಯ್ಯಿಕ್ಕಿ- ನಮಸ್ಕರಿಸಿ, ಕೆಯ್ಯಂಮುಗಿದು, ವಿವಾಹಕಾರ್ಯವಿಜ್ಞಾಪನಾನಂತರಂ- ಮದುವೆಯಕೆಲಸವನ್ನು ಬಿನ್ನೈಸಿದಮೇಲೆ, ಪಣ್ಣಿಬಂದ- ಸನ್ನದ್ಧವಾಗಿ ಬಂದಿರುವ, ಗಂಧಸಿಂಧುರದ- ಮದಗಜದ, ಪೂರ್ವಾಸನದೊಳ್- ಬೆನ್ನಿನಮೇಲಿರುವ ಪೀಠದಲ್ಲಿ, ಗಂಗಾಂಬಿಕೆವೆರಸಿ- ಗಂಗಾಂಬಿಕಾಸಹಿತವಾಗಿ, ಮೂರ್ತಿಗೊಳಿಸಿ- ಕುಳ್ಳಿರಿಸಿ, ಮುಂದೆ, ಸಂದಣಿಪ- ಗುಂಪಾಗಿರುವ, ವಂದಿಮಾಗಧ- (ವಂದಿಗಳು, ಪರಾಕ್ರಮಮಂ ಹೊಗಳುವವರು, ಮಾಗಧರು, ವಂಶಾವಳಿಗಳನ್ನೋದುವವರು.) ಇವರುಗಳ ಜಯಜಯಪ್ರಣಾದಮುಂ-ಜಯಜಯವೆಂಬಶಬ್ದವೂ, ಪಟು......ನಾದಮುಂ— ಪಟು- ಸಮರ್ಥವಾದ, ಪಟಹ- ತಮ್ಮಟೆ, ಶಂಖ,ತಾಳ, ಮುರಜಾ- ಡೋಲು, ಮೃದಂಗ- ಮದ್ದಲೆ, ಬಹುಳ- ಅಧಿಕವಾದ, ಕಹಳಾ-ಕೊಂಬುಗಳ, ನಾದವುಂ, ದಶದಿಶೆಯಂ- ಹತ್ತುದಿಕ್ಕಿನಲ್ಲೂ, ಪಸರಿಸೆ- ಹರಡಿಕೊಳ್ಳಲು, ಪರಮೋತ್ಸಾಹದಿಂ- ಅತ್ಯಧಿಕಸಂತೋಷದಿಂದ, ಸಮುಚಿತವಾಹನಸುಖಾಸನಂಗಳಂ- ಯೋಗ್ಯವಾದ ವಾಹನಗಳ ಸುಖಕರವಾದ ಆಸನಗಳನ್ನು, ಏರಿ- ಹತ್ತಿ, ಶಿವಗಣಕದಂಬಂ- ಶಿವಗಣಸಮೂಹವು, ಒಡನೆ- ಸಂಗಡಲೆ, ಏಳ್ತರೆ- ಬರಲು, ನಿಜರಾಜಧಾನಿಯಂ, ಪುಗಿಸಿ- ಪ್ರವೇಶಮಾಡಿಸಿ, ಮಣಿಗಣಗ್ರಥಿತತೋರಣಮಾಲಾಲಂಕೃತವಾದ— ಮಣಿಗಣ- ರತ್ನಸಮೂಹದಿಂದ, ಗ್ರಥಿತ- ಕಟ್ಟಲ್ಪಟ್ಟ, ಕುಸುಮಮಾಲಾ- ಹೂವಿನಮಾಲಿಕೆ ಇವುಗಳಿಂದ, ಅಲಂಕೃತಮಾದ, ರಾಜವೀಧಿಯೊಳ್, ಕರೆದುತರ್ಪಾಗಳ್ * * * * * * * * * * * * * *

ಮಡದಿಯರ್- ಸ್ತ್ರೀಯರು, ನುಡಿಸುವ- ಬಾಜಿಸುವ, ವೀಣೆಯಂ, ಕೆಲದೊಳ್- ಪಾರ್ಶ್ವದಲ್ಲಿ, ಇಕ್ಕಿ, ವಿಲಾಸದ- ಲೀಲಾರ್ಥವಾದ, ನೆತ್ತದಾಟವಂ- ಪಗಡೆಯಾಟವನ್ನು, ಬಿಡುತೆ, ಮನೋಜನಾಗಮಮಂ- ಮನ್ಮಥಶಾಸ್ತ್ರವನ್ನು, ಓದುವರಂ- ಓದುತ್ತಿರುವವರನ್ನು, ನಿಲವೇಳ್ದು- ನಿಲ್ಲಿಸಿ, ದೇಶಿಯ-ನಾಟ್ಯಭೇದದ, ಇಂಪಡರ್ದ- ಮಧುರವಾದ, ಸುಲಾಸ್ಯಮಂ- ಸಮೀಚೀನವಾದ ನರ್ತನವನ್ನು, ತೊರೆದು- ಬಿಟ್ಟು, ಭೂಷಣವೃಂದಮಂ- ಆಭರಣಸಮೂಹವನ್ನು, ಆಂತು- ಧರಿಸಿ, ಬೇಗದಿಂ, ಐದಿ- ಬಂದು, ನೆಲೆವಾಡದೊಳ್- ಮಾಡದಲ್ಲಿ, ನಿಂದು, ವೃಷೇಂದ್ರನಂ, ಈಕ್ಷಿಸಿದರ್- ನೋಡಿದರು. ... ... ... ॥೫॥

ಮತ್ತಂ ॥ ಹರಿನೀಲಾಂಚಿತಹರ್ಮ್ಯದೊಳ್ಮುಗಿಲಮಿಂಚೆಂಬಂತೆಸೌವರ್ಣಭಾ । ಸುರಸೌಧಾಗ್ರದೆಹೇಮಪಂಕಜದಲಕ್ಷ್ಮೀದೇವಿಯೆಂಬಂತೆಬಂ ॥ ಧುರಮಾಣಿಕ್ಯದಬಳ್ಳಿಮಾಡದೆ ತಳತ್ತ್ರೀವಿರ್ದಚೂತಾಗ್ರದಂ । ಬುರುಹಾಕ್ಷಾತ್ಮಜಪತ್ನಿಯಂತೆಸೆದುನೋಡುತ್ತಿರ್ದರ್ ರಬ್ಜಾಕ್ಷಿಯರ್ ॥ ... ... ... ... ॥೬॥

ಚಂ॥ ಬಡನಡುಬಳ್ಕೆಪೀನಜಘನಂಜಡಿವುತ್ತಿರೆಬಿಣ್ಪನಾಳ್ದಪೊಂ । ಗೊಡಮೊಲೆಗಳ್ಕದಕ್ಕದಿಸೆಸೋರ್ಮುಡಿಜಾರೆಮುಖೇಂದುಕಾಂತಿಧೀಂ ॥ಕಿಡೆ ಕಡೆಗಣ್ಗದಿರ್ಪರಿದುಮುಂಬರಿವುತ್ತಿರೆಪೌರನಾರಿಯರ್ । ಗಡಣದೆಸೆಜ್ಜೆಮಾಡವೆಡೆಗೈದಿವೃಷೇಂದ್ರನನಂದುನೋಡಿದರ್ ॥

ಚಂ॥ಜತಿಗುಡೆನೂಪುರಧ್ವನಿಪದಾಬ್ಜನಖದ್ಯುತಿನರ್ತನಕ್ಕೆ ರಂ । ಜಿತಕುಚವಲ್ಗನಂನಿಮಿರೆ ಕಂಪಿಸೆಪೀನನಿತಂಬಬಿಂಬ ಮಂ ॥ ಚಿತವ ಣಿಕಾಂಚಿಯಿಂಚರದೊಳೊಂದಿಪಳಂಚಿರೆ ಶಿಂಜಿತಂ ಕಳಾ। ವತಿ ಪೆರಳೋರ್ವಳೆಯ್ದಿಜವದಿಂ ನಡೆನೋಡಿದಳಾವೃಷೇಂದ್ರನಂ ॥ ॥೮॥

---

ಅಬ್ಜಾಕ್ಷಿಯರ್- ಕಮಲದಂತಿರುವ ನೇತ್ರವುಳ್ಳಸ್ತ್ರೀಯರು, ಹರಿನೀಲಾಂಚಿತಹರ್ಮ್ಯದೊಳ್- ಇಂದ್ರನೀಲರತ್ನದ ಶ್ರೇಷ್ಠವಾದ ಉಪ್ಪರಿಗೆಯಲ್ಲಿ, (ನಿಂದು) ಮುಗಿಲ-ಮೋಡದಲ್ಲಿರುವ, ಮಿಂಚು ಎಂಬಂತೆ-ಮಿಂಚೆನ್ನುವಹಾಗೂ, ಸೌವರ್ಣಭಾಸುರಸೌಧಾಗ್ರದೆ_ಚಿನ್ನದ ಪ್ರಕಾಶಮಾನವಾದುಪ್ಪರಿಗೆಯಲ್ಲಿ, ಹೇಮಪಂಕಜದ-ಸುವರ್ಣಕಮಲದಲ್ಲಿರುವ, ಲಕ್ಷ್ಮೀದೇವಿಯೆಂಬಂತೆ-ಲಕ್ಷ್ಮಿಯಹಾಗೂ, ಬಂಧುರಮಾಣಿಕ್ಯದ_ಮನೋಹರವಾದ ರತ್ನದ, ಬಳ್ಳಿಮಾಡದೆ-ಬಳ್ಳಿಯಂತಿರುವವಸಾಡದಲ್ಲಿ, ತಳಿರ್ತೀವಿರ್ದ-ಚಿಗುರಿನಿಂತುಂಬಿರುವ, ಚೂತಾಗ್ರದ- ಮಾವಿನಮರದಮೇಲಿರುವ, * ಅಂಬುರುಹಾಕ್ಷಾತ್ಮಜಪತ್ನಿಯಂತೆ- ರತೀದೇವಿಯಹಾಗೆ, ಎಸೆದು, ನೋಡುತ್ತಿರ್ದರ್. ... ... ... ... ... ॥೬॥

ಪೌರನಾರಿಯರ್- ಪಟ್ಟಣದಲ್ಲಿರುವ ಸ್ತ್ರೀಯರು, ಬಡನಡು- ಸಣ್ಣನಡುವು, ಬಳ್ಕೆ- ಬಳುಕುತ್ತಿರಲು, ಪೀನಜಘನಂ- ದಪ್ಪವಾದ ಕಟಿಪಶ್ಚಾದ್ಭಾಗವು, ಜಡಿವುತ್ತಿರೆ, ಬಿಣ್ಪಂ- ದಪ್ಪವನ್ನು, ಆಳ್ದ- ಹೊಂದಿದ, ಪೊಂಗೊಡಮೊಲೆಗಳ್- ಸುವರ್ಣಕಲಶದಂತಿರುವ ಸ್ತನಗಳು, ಕದಕ್ಕದಿಸೆ- ಕುಣಿಯುತ್ತಿರಲಾಗಿ, ಸೋರ್ಮುಡಿ- ಉದ್ದವಾದಕೇಶವು, ಜಾರೆ- ಶಿಥಿಲವಾಗುತ್ತಿರಲು, ಮುಖೇಂದುಕಾಂತಿ- ಮುಖಚಂದ್ರನಪ್ರಕಾಶವು, ಧೀಂಕಿಡೆ- ಮುಂದಕ್ಕೆ ಕುಪ್ಪಳಿಸುತ್ತಿರಲು, ಕಡೆಗಣ್ಗದಿರ್- ಕಡೆಗಣ್ಣಿನಕಾಂತಿಯು, ಪರಿದು- ಸಂಚರಿಸಿ, ಮುಂಬರಿವುತ್ತಿರೆ- ಮುಂದಕ್ಕೆ ಹೋಗುತ್ತಿರಲು, ಗಡಣದೆ- ಗುಂಪಾಗಿ, ಸೆಜ್ಜೆಮಾಡವೆಡೆಗೆ- ಸಜ್ಜೆಯಮಾಡದಬಳಿಗೆ, ಐದಿ-ಬಂದು, ಅಂದು, ವೃಷೇಂದ್ರನಂ, ನೋಡಿದರ್. ... ... ... ।೭॥

ಪೆರಳೋರ್ವಳ್‌ಕಳಾವತಿ- ಮತ್ತೊಬ್ಬ ವಿದ್ಯಾವತಿಯು, ಪದಾಬ್ಜನಖದ್ಯುತಿನರ್ತನಕ್ಕೆ— ಪದಾಬ್ಜ-ಪಾದಕಮಲದ, ನಖ- ಉಗುರುಗಳ, ದ್ಯುತಿ- ಕಾಂತಿಯ, ನರ್ತನಕ್ಕೆ- ಕುಣಿಯುವಿಕೆಗೆ, ನೂಪುರಧ್ವನಿ-ಪಾದಕಟಕದ ಶಬ್ದವು, ಜತಿಗುಡೆ- ಲಯವನ್ನು ಕೊಡುತ್ತಿರಲು, ರಂಜಿತಕುಚವಲ್ಗನಂ- ಪ್ರಕಾಶಿಸುವ ಮೊಲೆಗಳ ನಡುಗುವಿಕೆಯು, ನಿಮಿರೆ- ಉಂಟಾಗಲು, ಪೀನನಿತಂಬಬಿಂಬಂ_ ದಪ್ಪವಾದ ಕಟಿಪಶ್ಚಾದ್ಭಾಗವು, ಕಂಪಿಸೆ- ಅದರಲು, ಶಿಂಜಿತಂ- ಆಭರಣಶಬ್ದವು, ಅಂಚಿತಮಣಿಕಾಂಚಿಯ- ಶ್ರೇಷ್ಠವಾದರತ್ನದೊಡ್ಯಾಣದ, ಇಂಚರದೊಳ್- ಮಧುರಸ್ವರದೊಡನೆ, ಪಳಂಚಿರೆ- ಸಂಬಂಧಿಸಿರಲಾಗಿ, ಜವದಿಂ- ವೇಗದಿಂದ, ಐದಿ, ಆ ವೃಷೇಂದ್ರನಂ, ನಡೆ- ಚೆನ್ನಾಗಿ, ನೋಡಿದಳ್. ... ... ... ... ... ॥೮॥

---

* (ಅವ) ಅಂಬುರುಹ- ಕಮಲವೇ, ಅಕ್ಷ- ನೇತ್ರವಾಗುಳ್ಳ ವಿಷ್ಣುವಿನ, ಆತ್ಮಜ- ಪುತ್ರನಾದಮನ್ಮಥನ, ಪತ್ನಿ- ಹೆಂಡತಿಯು, ರತಿಯು. ... ... ... ... ॥೬॥

ವೀಥಿಯಂ ಸಿಂಗರಿಸಿ ಶಿವಭಕ್ತಬಂಧುಜನಸಮೇತಂ ದಂಡನಾಥಾಗ್ರಣಿ ಕಪ್ಪಡಿಗೇಳ್ತಂದು ಗಣಸಭೆಯೊಳ್ಶಿವಕಥಾಗೋಷ್ಠಿಯೊಳ್ಸುಖಮಿರ್ದ್ದ ಬಸವರಾಜನಂಕಂಡುಮೆಯ್ಯಿಕ್ಕಿ ಕಯ್ಯಂಮುಗಿದು . ವಿವಾಹಕಾರ್ಯವಿಜ್ಞಾಪನಾನುತರಂ ಪಣ್ಣಿಬಂದಗಂಧಸಿಂಧುರದ ಪೂರ್ವಾಸನದೊಳ್ಗಂಗಾಂಬಿಕೆವೆರಸಿ ಮೂರ್ತಿಗೊಳಿಸಿ ಮುಂದೆ ಸಂದಣಿಪವಂದಿಮಾಗಧರ ಜಯಜಯಪ್ರಣಾದಮುಂ ಪಟುಪಟಹಶಂಖತಾಳಮುರಜಾಮೃದಂಗ ಬಹುಳಕಹಳಾನಾದಮುಂ ದಶದಿಶೆಯಂ ಪಸರಿಸೆ ಪರಮೋತ್ಸಾಹದಿಂ ಸಮುಚಿತವಾಹನ ಸುಖಾಸನಂಗಳನೇರಿ ಶಿವಗಣಕದಂಬವೊಡನೇಳ್ತರೆ ನಿಜರಾಜಧಾನಿಯಂ ಪುಗಿಸಿ ಮಣಿಗಣಗ್ರಥಿತ ತೋರಣ ಕುಸುಮಮಾಲಾಲಂಕೃತಮಾದ ರಾಜವೀಥಿಯೊಳ್ಕರೆದುತರ್ಪ್ಪಾಗಳ್ ‖ * *

ಚಂ ‖ ನುಡಿಸುವವೀಣೆಯಂಕೆಲದೊಳಿಕ್ಕಿವಿಲಾಸದನೆತ್ತದಾಟಮಂ । ಬಿಡುತೆಮನೋಜನಾಗಮಮನೋದುವರಂನಿಲವೇಳ್ದುದೇಶಿಯಿಂ ‖ ಪಡರ್ದಸುಲಾಸ್ಯಮಂತೊರೆದು ಭೂಷಣವೃಂದಮನಾಂತುಬೇಗದಿಂ । ಮಡದಿಯರ್ಬೈದಿನಿಂದುನೆಲೆವಾಡದೊಳೀಕ್ಷಿಸಿದರ್ವೃಷೇಂದ್ರನಂ ‖ ... ... ... ... ... ... ‖೪‖

ಪಮಂ- ಅಲಂಕರಿಸಿ, ರಾಜವೀಥಿಯಂ, ಸಿಂಗರಿಸಿ . ದಂಡನಾಥಾಗ್ರಣಿ- ಮಂತ್ರಿಶ್ರೇಷ್ಠನಾದಬಲದೇವನು, ಶಿವಭಕ್ತಬಂಧುಜನಸಮೇತಂ- ಶಿವಭಕ್ತರಾದ ನಂಟರೊಡನೆಕೂಡಿ, ಕಪ್ಪಡಿಗೆ, ಏಳ್ತಂದು- ಬಂದು, ಗಣಸಭೆಯೊಳ್, ಶಿವಕಥಾಗೋಷ್ಠಿಯಲ್ಲಿ- ಶಿವಕಥಾಸಲ್ಲಾಪದಿಂದ, ಸುಖಂ- ಸುಖವಾಗಿ, ಇರ್ದ್ದ, ಬಸವರಾಜನಂ, ಕಂಡು, ಮೆಯ್ಯಿಕ್ಕಿ- ನಮಸ್ಕರಿಸಿ, ಕಯ್ಯಂಮುಗಿದು, ವಿವಾಹಕಾರ್ಯವಿಜ್ಞಾಪನಾನಂತರಂ- ಮದುವೆಯಕೆಲಸವನ್ನು ಬಿನ್ನೈಸಿದಮೇಲೆ, ಪಣ್ಣಿಬಂದ- ಸನ್ನದ್ಧವಾಗಿ ಬಂದಿರುವ, ಗಂಧಸಿಂಧುರದ- ಮದಗಜದ, ಪೂರ್ವಾಸನದೊಳ್- ಬೆನ್ನಿನಮೇಲಿರುವ ಪೀಠದಲ್ಲಿ,ಗಂಗಾಂಬಿಕೆವೆರಸಿ— ಗಂಗಾಂಬಿಕಾಸಹಿತವಾಗಿ, ಮೂರ್ತಿಗೊಳಿಸಿ- ಕುಳ್ಳಿರಿಸಿ, ಮುಂದೆ, ಸಂದಣಿಪ- ಗುಂಪಾಗಿರುವ, ವಂದಿಮಾಗಧ- (ವಂದಿಗಳು, ಪರಾಕ್ರಮವುಂ ಹೊಗಳುವವರು, ಮಾಗಧರು, ವಂಶಾವಳಿಗಳನ್ನೋದುವವರು.) ಇವರುಗಳ ಜಯಜಯಪ್ರಣಾದಮುಂ-ಜಯಜಯವೆಂಬಶಬ್ದವೂ, ಪಟು......ನಾದಮುಂ— ಪಟು- ಸಮರ್ಥವಾದ, ಪಟಹ- ತಮ್ಮಟೆ, ಶಂಖ,ತಾಳ, ಮುರಜಾ- ಡೋಲು, ಮೃದಂಗ- ಮದ್ದಲೆ, ಬಹುಳ- ಅಧಿಕವಾದ, ಕಹಳಾ-ಕೊಂಬುಗಳ, ನಾದಮುಂ, ದಶದಿಶೆಯಂ- ಹತ್ತುದಿಕ್ಕಿನಲ್ಲೂ, ಪಸರಿಸೆ- ಹರಡಿಕೊಳ್ಳಲು, ಪರಮೋತ್ಸಾಹದಿಂ- ಅತ್ಯಧಿಕಸಂತೋಷದಿಂದ, ಸಮುಚಿತವಾಹನಸುಖಾಸನಂಗಳಂ- ಯೋಗ್ಯವಾದ ವಾಹನಗಳ ಸುಖಕರವಾದ ಆಸನಗಳನ್ನು, ಏರಿ- ಹತ್ತಿ, ಶಿವಗಣಕದಂಬಂ- ಶಿವಗಣಸಮೂಹವು, ಒಡನೆ- ಸಂಗಡಲೆ, ಏಳ್ತರೆ- ಬರಲು, ನಿಜರಾಜಧಾನಿಯಂ, ಪುಗಿಸಿ- ಪ್ರವೇಶಮಾಡಿಸಿ, ಮಣಿಗಣಗ್ರಥಿತತೋರಣಮಾಲಾಲಂಕೃತವಾದ— ಮಣಿಗಣ- ರತ್ನಸಮೂಹದಿಂದ, ಗ್ರಥಿತ- ಕಟ್ಟಲ್ಪಟ್ಟ, ಕುಸುಮಮಾಲಾ- ಹೂವಿನಮಾಲಿಕೆ ಇವುಗಳಿಂದ, ಅಲಂಕೃತಮಾದ, ರಾಜವೀಥಿಯೊಳ್, ಕರೆದುತರ್ಪಾಗಳ್ * * * * * * * * * * * * * *

ಮಡದಿಯರ್- ಸ್ತ್ರೀಯರು, ನುಡಿಸುವ- ಬಾಜಿಸುವ, ವೀಣೆಯಂ, ಕೆಲದೊಳ್- ಪಾರ್ಶ್ವದಲ್ಲಿ, ಇಕ್ಕಿ, ವಿಲಾಸದ- ಲೀಲಾರ್ಥವಾದ, ನೆತ್ತದಾಟವಂ- ಪಗಡೆಯಾಟವನ್ನು, ಬಿಡುತೆ, ಮನೋಜನಾಗಮಮಂ- ಮನ್ಮಥಶಾಸ್ತ್ರವನ್ನು, ಓದುವರಂ- ಓದುತ್ತಿರುವವರನ್ನು, ನಿಲವೇಳ್ದು- ನಿಲ್ಲಿಸಿ, ದೇಶಿಯ-ನಾಟ್ಯಭೇದದ, ಇಂಪಡರ್ದ- ಮಧುರವಾದ, ಸುಲಾಸ್ಯಮಂ- ಸಮೀಚೀನವಾದ ನರ್ತನವನ್ನು, ತೊರೆದು- ಬಿಟ್ಟು, ಭೂಷಣವೃಂದಮಂ- ಆಭರಣಸಮೂಹವನ್ನು, ಆಂತು- ಧರಿಸಿ, ಬೇಗದಿಂ,ಬಿದಿ- ಬಂದು, ನೆಲೆವಾಡದೊಳ್- ಮಾಡದಲ್ಲಿ, ನಿಂದು, ವೃಷೇಂದ್ರನಂ, ಈಕ್ಷಿಸಿದರ್- ನೋಡಿದರು. ... ... ... ‖೪‖

ಮತ್ತಂ ॥ ಹರಿನೀಲಾಂಚಿತಹರ್ಮ್ಯದೊಳ್ಮುಗಿಲಮಿಂಚೆಂಬಂತೆಸೌವರ್ಣಭಾ । ಸುರಸೌಧಾಗ್ರದೆಹೇಮಪಂಕಜದಲಕ್ಷ್ಮೀದೇವಿಯೆಂಬಂತೆಬಂ ॥ ಧುರಮಾಣಿಕ್ಯದಬಳ್ಳಿಮಾಡದೆ ತಳಿತ್ತಿರ್ದೀವಿರ್ದಚೂತಾಗ್ರದಂ । ಬುರುಹಾಕ್ಷಾತ್ಮಜಪತ್ನಿಯಂತೆಸೆದುನೋಡುತ್ತಿರ್ದರ ಬ್ಜಾಕ್ಷಿಯರ್ ॥ ... ... ... ... ‖೬‖

ಚಂ॥ ಬಡನಡುಬಳ್ಕೆಪೀನಜಘನಂಜಡಿವುತ್ತಿರೆಬಿಣ್ಪನಾಳ್ದಪೊಂ । ಗೊಡವೊಲೆಗಳ್ಕದಕ್ಕದಿಸೆಸೋರ್ಮುಡಿಜಾರೆಮುಖೇಂದುಕಾಂತಿಧೀಂ ॥ ಕಿಡೆ ಕಡೆಗಣ್ಣದಿರ್ಪರಿದುಮುಂಬರಿವುತ್ತಿರೆಪೌರನಾರಿಯರ್ । ಗಡಣದೆಸೆಜ್ಜೆಮಾಡದೆಡೆಗೈದಿವೃಷೇಂದ್ರನನಂದುನೋಡಿದರ್ ॥

ಚಂ॥ಜತಿಗುಡೆನೂಪುರಧ್ವನಿಪದಾಬ್ಜನಖದ್ಯುತಿನರ್ತನಕ್ಕೆರಂ । ಜಿತಕುಚವಲ್ಗನಂ ನಿಮಿರೆ ಕಂಪಿಸೆಪೀನನಿತಂಬಬಿಂಬ ಮಂ ॥ ಚಿತಮಣಿಕಾಂಚಿಯಿಂಚರದೊಳೊಂದಿಪಳಂಚಿರೆ ಶಿಂಜಿತಂ ಕಳಾ। ವತಿ ಪೆರಳೋರ್ವಳೆಯ್ದಿಜವದಿಂ ನಡೆನೋಡಿದಳಾವೃಷೇಂದ್ರನಂ ॥ ‖೮‖

ಅಬ್ಜಾಕ್ಷಿಯರ್- ಕಮಲದಂತಿರುವ ನೇತ್ರವುಳ್ಳಸ್ತ್ರೀಯರು, ಹರಿನೀಲಾಂಚಿತಹರ್ಮ್ಯದೊಳ್- ಇಂದ್ರನೀಲರತ್ನದ ಶ್ರೇಷ್ಠವಾದ ಉಪ್ಪರಿಗೆಯಲ್ಲಿ, (ನಿಂದು) ಮುಗಿಲ-ಮೋಡದಲ್ಲಿರುವ, ಮಿಂಚು ಎಂಬಂತೆ-ಮಿಂಚಿನಂತೆಯೂ, ಸೌವರ್ಣಭಾಸುರಸೌಧಾಗ್ರದೆ_ಚಿನ್ನದ ಪ್ರಕಾಶಮಾನವಾದುಪ್ಪರಿಗೆಯಲ್ಲಿ, ಹೇಮಪಂಕಜದ-ಸುವರ್ಣಕಮಲದಲ್ಲಿರುವ, ಲಕ್ಷ್ಮೀದೇವಿಯೆಂಬಂತೆ-ಲಕ್ಷ್ಮಿಯಹಾಗೂ, ಬಂಧುರಮಾಣಿಕ್ಯದ_ಮನೋಹರವಾದ ರತ್ನದ, ಬಳ್ಳಿಮಾಡದೆ-ಬಳ್ಳಿಯಂತಿರುವಮಾಡದಲ್ಲಿ, ತಳಿರ್ತಿರ್ದ-ಚಿಗುರಿನಿಂತುಂಬಿರುವ, ಚೂತಾಗ್ರದ- ಮಾವಿನಮರದಮೇಲಿರುವ, * ಅಂಬುರುಹಾಕ್ಷಾತ್ಮಜಪತ್ನಿಯಂತೆ- ರತೀದೇವಿಯಹಾಗೆ, ಎಸೆದು, ನೋಡುತ್ತಿರ್ದರ್· ... ... ... ... ... ‖೬‖

ಪೌರನಾರಿಯರ್- ಪಟ್ಟಣದಲ್ಲಿರುವ ಸ್ತ್ರೀಯರು, ಬಡನಡು- ಸಣ್ಣನಡುವು, ಬಳ್ಕೆ- ಬಳುಕುತ್ತಿರಲು, ಪೀನಜಘನಂ- ದಪ್ಪವಾದ ಕಟಿಪಶ್ಚಾದ್ಭಾಗವು, ಜಡಿವುತ್ತಿರೆ, ಬಿಣ್ಪಂ- ದಪ್ಪವನ್ನು, ಆಳ್ದ- ಹೊಂದಿದ, ಪೊಂಗೊಡಮೊಲೆಗಳ್- ಸುವರ್ಣಕಲಶದಂತಿರುವ ಸ್ತನಗಳು, ಕದಕ್ಕದಿಸೆ- ಕುಣಿಯುತ್ತಿರಲಾಗಿ, ಸೋರ್ಮುಡಿ- ಉದ್ದವಾದಕೇಶವು, ಜಾರೆ- ಶಿಥಿಲವಾಗುತ್ತಿರಲು, ಮುಖೇಂದುಕಾಂತಿ- ಮುಖಚಂದ್ರನಪ್ರಕಾಶವು, ಧೀಂಕಿಡೆ- ಮುಂದಕ್ಕೆ ಕುಪ್ಪಳಿಸುತ್ತಿರಲು, ಕಡೆಗಣ್ಣದಿರ್- ಕಡೆಗಣ್ಣಿನಕಾಂತಿಯು, ಪರಿದು- ಸಂಚರಿಸಿ, ಮುಂಬರಿವುತ್ತಿರೆ- ಮುಂದಕ್ಕೆ ಹೋಗುತ್ತಿರಲು, ಗಡಣದೆ- ಗುಂಪಾಗಿ, ಸೆಜ್ಜೆಮಾಡದೆಡೆಗೆ- ಸೆಜ್ಜೆಯುಪ್ಪರಿಗೆ ಮಾಡದಬಳಿಗೆ, ಐದಿ-ಬಂದು, ಅಂದು, ವೃಷೇಂದ್ರನಂ, ನೋಡಿದರ್. ... ... ... ।೭‖

ಪೆರಳೋರ್ವಳ್‌ಕಳಾವತಿ- ಮತ್ತೊಬ್ಬ ವಿದ್ಯಾವತಿಯು, ಪದಾಬ್ಜನಖದ್ಯುತಿನರ್ತನಕ್ಕೆ— ಪದಾಬ್ಜ-ಪಾದಕಮಲದ, ನಖ- ಉಗುರುಗಳ, ದ್ಯುತಿ- ಕಾಂತಿಯ, ನರ್ತನಕ್ಕೆ- ಕುಣಿಯುವಿಕೆಗೆ, ನೂಪುರಧ್ವನಿ-ಪಾದಕಟಕದ ಶಬ್ದವು, ಜತಿಗುಡೆ- ಲಯವನ್ನು ಕೊಡುತ್ತಿರಲು, ರಂಜಿತಕುಚವಲ್ಗನಂ- ಪ್ರಕಾಶಿಸುವ ಮೊಲೆಗಳ ನಡುಗುವಿಕೆಯು, ನಿಮಿರೆ- ಉಂಟಾಗಲು, ಪೀನನಿತಂಬಬಿಂಬಂ- ದಪ್ಪವಾದ ಕಟಿಪಶ್ಚಾದ್ಭಾಗವು, ಕಂಪಿಸೆ- ಅದರಲು, ಶಿಂಜಿತಂ- ಆಭರಣಶಬ್ದವು, ಅಂಚಿತಮಣಿಕಾಂಚಿಯ- ಶ್ರೇಷ್ಠವಾದರತ್ನದೊಡ್ಯಾಣದ, ಇಂಚರದೊಳ್- ಮಧುರಸ್ವರದೊಡನೆ, ಪಳಂಚಿರೆ- ಸಂಬಂಧಿಸಿರಲಾಗಿ, ಜವದಿಂ- ವೇಗದಿಂದ, ಐದಿ, ಆ ವೃಷೇಂದ್ರನಂ, ನಡೆ- ಚೆನ್ನಾಗಿ, ನೋಡಿದಳ್. ... ... ... ... ... ‖೮‖

* (ಅವ) ಅಂಬುರುಹ- ಕಮಲವೇ, ಅಕ್ಷ- ನೇತ್ರವಾಗುಳ್ಳ ವಿಷ್ಣುವಿನ, ಆತ್ಮಜ- ಪುತ್ರನಾದಮನ್ಮಥನ, ಪತ್ನಿ- ಹೆಂಡತಿಯು, ರತಿಯು. ... ... ... ... ‖೬‖

ಚಂ ॥ ಬಸವನನೀಕ್ಷಿಪುಜ್ಜುಗದಸಂಭ್ರಮದಿಂ ತೊಡವಾಂಪಕಾಂತೆ ತಾ । ನಸವಸ
ದಿಂದೆ ಮಲ್ಲಿಗೆಯಮಾಲೆಯಕಂಠದೆ ಕಂಠಮಾಲೆಯಂ ॥ ಮಿಸುಪಕಚೌಘದೊಳ್ತಳೆದು ಕ
ತ್ತುರಿಯಂತೆಗೆದೆಚ್ಚುಕಣ್ಗೆ ನು । ಣ್ಣೊಸಲೊಳೆತಿರ್ದಿಕಜ್ಜಳಮ ನಂಗನೆಯರ್ನಗೆ
ಬಂದುನೋಡಿದಳ್ ॥ ... ... ... ... ॥೯॥

ವ ॥ ಅಲ್ಲಿಪೆರಳೋರ್ವಳ್ ॥ ಉ ॥ ಅಕ್ಕನಿರೀಕ್ಷಿಸೀಬಸವನಂದಿನನಂದಿ ಯ
ಮರ್ತ್ಯರಂಕನ । ಲ್ದಿಕ್ಕಿದಶಿಂಶುಮಾರನನುರುಳ್ಚಿದವೈಗಲಿ ಬಂದನಿಂದುಲೋ ॥ ಕಕ್ಕೆಹಿ
ತಾರ್ಥಮಾಗಿ ಪರಮೇಶ್ವರವಾಹನರೂಪನೆಂದುಕೈ । ಮಿಕ್ಕುಕರಂಗಳಂಮುಗಿವುತಾಳಿಗೆ
ತೋರಿಸಿದಳ್ವೃಷೇಂದ್ರನಂ ॥ ... ... ... ... ॥೧೦॥

ಮತ್ತೇ ॥ ಪುರನಾರೀನಯನಾಂಚಳಸ್ಮಿತಲಸದ್ಬಿಂಬಾಧರಪ್ರಾಂಶು ಸ್ಸೈ । ವರಿ
ದೊಂದಾಗಿ ಕಳಿಂದಜಾಮರನದೀಶೋಣಾಪಗಾವಾರಿಗ ॥ ಳ್ಬೆರಸಿರ್ದ್ದಂದಮನಾನೆ ಸತ್ತಿಗೆ
ಸಿತಾಂಭೋಜಂಬೊಲಿಂಬಾಗೆ ಚಾ । ಮರವೃಂದಂನೆಗೆದಲ್ಲಿ ಪಾರುವಮರಾಳವ್ರಾತದಂತೊ

---

ತೊಡವಾಂಪ- ಆಭರಣಮಂ ಧರಿಸಿಕೊಳ್ಳುತ್ತಿದ್ದ, ಕಾಂತೆ- ಸ್ತ್ರೀಯು, ತಾಂ, ಬಸವನಂ, ಈಕ್ಷಿಪ- ನೋಡುವ, ಉಜ್ಜುಗದ, ಸಂಭ್ರಮದಿಂ- ಸಡಗರದಿಂದ, ಅಸವಸದಿಂದೆ- ಜಾಗ್ರತೆಯಾಗಿ, ಮಲ್ಲಿಗೆಯಮಾಲೆಯ- ಮಲ್ಲಿಗೆಹೂವಿನಸರವನ್ನು, ಕಂಠದೆ- ಕತ್ತಿನಲ್ಲೂ, ಕಂಠಮಾಲೆಯಂ- ಕತ್ತಿನಲ್ಲಿಡುವ ಮುಕ್ತಾಹಾರವನ್ನು, ಮಿಸುಪ, ಕಚೌಘದೆ- ಕೇಶಸಮೂಹದಲ್ಲೂ, ತಳೆದು- ಧರಿಸಿ, ಕತ್ತುರಿಯಂ, ತೆಗೆದು, ಕಣ್ಗೆ, ಎಚ್ಚು- ಹತ್ತಿಸಿ, ಕಜ್ಜಳಮಂ- ಕಾಡಿಗೆಯನ್ನು, ನುಣ್ಣೊಸಲೊಳ್- ನುಣುಪಾದಹಣೆಯಲ್ಲಿ, ತಿರ್ದಿ, ಅಂಗನೆಯರ್- ನಗೆ-ನಗುತ್ತಿರಲಾಗಿ, ಬಂದು, ನೋಡಿದಳ್. ... ... ... ... ॥೯॥

ಅಲ್ಲಿ, ಪೆರಳೋರ್ವಳ್ ಮತ್ತೊಬ್ಬಳು. * * * * * * * * * * * *

ಅಕ್ಕ, ನಿರೀಕ್ಷಿಸು- ನೋಡು, ಪರಮೇಶ್ವರವಾಹನರೂಪಂ- ಶಿವನವಾಹನಸ್ವರೂಪನಾದ ಈ ಬಸವಂ, ಅಂದಿನ- ಪೂರ್ವಯುಗದ, ನಂದಿ- ನಂದೀಶ್ವರನು, ಅಮರ್ತ್ಯರಂ- ದೇವತೆಗಳನ್ನು, ಕನಲ್ದು- ಕೋಪಿಸಿ, ಇಕ್ಕಿದ- ನಾಶಪಡಿಸಿದ, ಶಿಂಶುಮಾರನಂ- ಶಿಂಶುಮಾರನೆಂಬ ರಾಕ್ಷಸನನ್ನು, ಉರುಳ್ಚಿದ- ಪ್ರಾಣವಂಕಳೆದು ಕೆಡವಿದ, ವೈಗಲಿ- ಪರಾಕ್ರಮಶಾಲಿಯು, ಲೋಕಕ್ಕೆ, ಹಿತಾರ್ಥಮಾಗಿ, ಇಂದು, ಬಂದಂ, ಎಂದು,ಕೈಮಿಕ್ಕು- ಅಧಿಕವಾಗಿ, ಕರಂಗಳಂ, ಮುಗಿವುತೆ, ಆಳಿಗೆ- ಸಖಿಗೆ, ವೃಷೇಂದ್ರನಂ, ತೋರಿಸಿದಳ್. ॥೧೦॥

ಪುರ.....ಪ್ರಾಂಶು—ಪುರನಾರೀ– ಪಟ್ಟಣದಸ್ತ್ರೀಯರ, ನಯನಾಂಚಳ- ಕಣೆಗಣ್ಣಿನ, ಸ್ಮಿತ- ಮುಗುಳ್ನಗೆಯ, ಲಸತ್- ಹೊಳೆಯುವ, ಬಿಂಬಾಧರ- ತೊಂಡೇಹಣ್ಣಿನಂತಿರುವತುಟಿಯ-, ಪ್ರಾಂಶು- ಅಧಿಕವಾದ ಕಾಂತಿಯು, ಸ್ಯೈಪರಿದು- ಸಂಚರಿಸಿ, ಒಂದಾಗಿ- ಸೇರಿ, ಕಳಿಂದ.....ವಾರಿಗಳ್— ಕಳಿಂದಜಾ- ಯಮುನಾನದಿ, ಅಮರನದೀ- ಗಂಗಾನದಿ, ಶೋಣಾಪಗಾ- ಶೋಣಾನದಿ, ಇವುಗಳ, ವಾರಿಗಳ್- ಜಲಗಳು, ಬೆರಸಿ,ಇರ್ದ್ದ, ಅಂದಮಂ- ರೀತಿಯನ್ನು, ಆನೆ- ಹೊಂದಲು, ಸತ್ತಿಗೆ- ಛತ್ರವು, ಸಿತಾಂಭೋಜಂಬೊಲ್- ಬಿಳಿಕಮಲದಹಾಗೆ, ಇಂಬಾಗೆ- ಮನೋಹರವಾಗಲು, ಚಾಮರವೃಂದಂ-ಚಾಮರಗಳಗುಂಪು, ನೆಗೆದು, ಅಲ್ಲಿ, ಪಾರುವ, ಮರಾಳವ್ರಾತದಂತೆ, ಹಂಸಪಕ್ಷಿಗಳಗುಂಪಿನಹಾಗೆ, ಒಪ್ಪುಗುಂ. ಕಾಳಿಂದೀನದಿಯ ಉದಕವು ಕಪ್ಪಾಗಿಯೂ, ಗಂಗಾಜಲವು ಶುಭ್ರವಾಗಿಯೂ, ಶೋಣಾನದಿಯಜಲವು ಕೆಂಪಾಗಿಯೂ, ಇರುವವರಿಂದ ಸ್ತ್ರೀಯರಕಪ್ಪಾದಅಪಾಂಗಕಾಂತಿಯೂ ಬಿಳುಪಾದ ಮುಗುಳ್ನಗೆಯ ಕಾಂತಿಯೂ, ಕೆಂಪಾದ ತುಟಿಯ ಕಾಂತಿಯೂ ಕ್ರಮವಾಗಿ ಅವುಗಳೊಡನೆ ಉಪಮಿಸಲ್ಪಟ್ಟವೆ. ಇಲ್ಲಿ ಸ್ತ್ರೀಯರ ಅಪಾಂಗಕಾಂತಿಯುಕಪ್ಪಾ

ಪ್ಪುಗುಂ ॥ .. ... ... ... ॥೧೧॥

ವ ॥ ಮತ್ತಮಲ್ಲಿ ॥ ಮತ್ತೇ॥ ನೆಲೆಮಾಡಂಗಳನೇರಿನೋಳ್ಪಲಲನಾಸಂದೋಹದಕ್ಷಿಪ್ರಭಾ। ವಲಿ ಪುಷ್ಪಾಂಜಲಿಯಾಗೆ ಮಂಗಳಮಹಾಗೇಹಂಗಳಿಂಪೌರಮಂ ॥ ಜುಳಕಾಂತಾತತಿ ಯೆತ್ತುವಾರತಿ ಪದಪ್ರಾಂಚನ್ನಖಾದರ್ಶಸಂ। ಕುಲದೊಳ್ಬಿಂಬಿಸಿ ಪೂಜೆಗೇರಿಸಿದಚಾಂಪೇಯಕ್ಕೆತೋಡಪ್ಪಿನಂ ॥ ... ... ... ... ॥೧೨॥

ಕಂ ॥ ಅರೆವೆರೆಯನಾನೆಪಶುಪತಿ । ನೆರೆವೆರೆಯಂತಾಳ್ದನಿಲ್ಲಿಬಸವನೆನಿಪ್ಪಾ ॥ ತೆರನಂ ಪ್ರಕಟಿಸೆ ಮಕುಟದೆ । ಮಿರುಗುವಮುಕ್ತಾತಪತ್ರವೊಸೆದೇಳ್ತಂದಂ ॥ ... ॥೧೩॥

ಮತ್ತೇ ॥ ಮೃದುಯಾನಂಗಜಯಾನಮಂಜರಿಯೆ ಲೋಲಾಪಾಂಗಶುಭ್ರಾಂಶುಪೆ। ರ್ಚಿದಚಂದ್ರಾತಪಮಂಪಗಲ್ನೆರಪೆ ವೃತ್ತೋತ್ತುಂಗವಕ್ಷೋಜಕುಂ ॥ ಭದಬಿಣ್ಪಿಂನಡುಬಳ್ಕೆ ರತ್ನಕಳಶಾದರ್ಶಂಗಳಂತಾಳ್ದುತಾ । ನಿಡಿರ್ವಂದತ್ತುರುಭೂಷಣದ್ಯುತಿಯುತಾಂ

---

ಗಿತ್ತೆಂದು ವರ್ಣಿಸಲ್ಪಟ್ಟಿದೆ. ಕೆಲವುಕಡೆಯಲ್ಲಿ ಶುಭ್ರವಾಗಿತ್ತೆಂದು ವರ್ಣಿಸುವದೂಉಂಟು. ... ॥೧॥

ನೆಲೆಮಾಡಂಗಳಂ- ಮಾಡಗಳನ್ನು, ಏರಿ- ಹತ್ತಿ, ನೋಳ್ಪ, ಲಲನಾಸಂದೋಹದ- ಸ್ತ್ರೀಸಮೂಹದ, ಅಕ್ಷಿಪ್ರಭಾವಲಿ- ನೇತ್ರಕಾಂತಿಪುಂಜವು, ಪುಷ್ಪಾಂಜಲಿ, ಆಗೆ, ಮಂಗಳಮಹಾಗೇಹಂಗಳಿಂ- ಮಂಗಳಕರಗಳಾದ ದೊಡ್ಡಮನೆಗಳಿಂದ ಬಂದ, ಪೌರಮಂಜುಲಕಾಂತಾತತಿ- ಮನೋಹರವಾದ ಪಟ್ಟಣದಸ್ತ್ರೀಯರಗುಂಪು, ಎತ್ತುವ, ಆರತಿ- ದೀಪದಾರತಿಯು, ಪದಪ್ರಾಂಚನ್ನಖಾದರ್ಶಸಂಕುಲದೊಳ್— ಪದ, ಪಾದಗಳಲ್ಲಿರುವ, ಪ್ರಾಂಚನ್ನಖ- ಹೊಳೆಯುವ ಉಗುರುಗಳೆಂಬ, ಆದರ್ಶ- ಕನ್ನಡಿಗಳ, ಸಂಕುಲದೊಳ್- ಸಮೂಹದಲ್ಲಿ, ಬಿಂಬಿಸಿ- ಪ್ರತಿಫಲಿಸಿ, ಪೂಜೆಗೆ, ಏರಿಸಿದ- ಧರಿಸಿರುವ, ಚಾಂಪೇಯಕ್ಕೆ- ಸಂಪಗೆಹೂವಿಗೆ, ತೋಡಪ್ಪಿನಂ- ಸದೃಶವಾಗುವಹಾಗೆ, (ಮೆರೆದುದು,) ಅಂದರೆ ಬಸವೇಶ್ವರನಿಗೆ ಸ್ತ್ರೀಯರು ಬೆಳಗುವ ಆರತಿಗಳ ದೀಪಜ್ವಾಲೆಯು ಆತನ ಪಾದನಖದಲ್ಲಿ ಬಿಂಬಿಸಿ ಪಾದಾರ್ಚನೆಗೋಸ್ಕರ ಸಂಪಗೇಹೂವನ್ನುಧರಿಸಿದಂತೆಯೂ,ನಿರೀಕ್ಷಿಸುತ್ತಿರುವ ಸ್ತ್ರೀಯರ ನೇತ್ರಕಾಂತಿಗಳು ಆತನಿಗೆಪುಷ್ಪಾಂಜಲಿಯಂ ಮಾಡಿದಂತೆಯೂ ಕಾಣಿಸುತ್ತಿತ್ತೆಂದು ತಾತ್ಪರ್ಯವು. ... ... ... ... ॥೧೨॥

ಮಕುಟದೆ- ಕಿರೀಟದಸಮೀಪದಲ್ಲಿ, ಮಿರುಗುವ- ಹೊಳೆಯುವ, ಮುಕ್ತಾತಪತ್ರಂ- ಮುತ್ತಿನ ಛತ್ರವು, ಪಶುಪತಿ-ಪರಮೇಶ್ವರನು, (ವಿಷ್ಣ್ವಾದ್ಯಾಃಪಶವಃಪ್ರೋಕ್ತಾಃ) ಎಂಬ ಪ್ರಮಾಣದಿಂದ ವಿಷ್ಣುಬ್ರಹ್ಮಾದಿಪಶುಗಳಿಗೆ ಸ್ವಾಮಿಯಾದ ಪರಶಿವನು. ಅರೆವೆರೆಯಂ- ಅರ್ಧಚಂದ್ರನನ್ನು, ಆನೆ- ಧರಿಸಲು, ಇಲ್ಲಿ, ಬಸವಂ, ನೆರೆವೆರೆಯಂ— ಪೂರ್ಣಚಂದ್ರನನ್ನು, ತಾಳ್ದಂ, ಎನಿಪ್ಪ, ಆತೆರನಂ, ಪ್ರಕಟಿಸೆ- ವಿಸ್ತರಿಸಲು, ಒಸೆದು,- ಪ್ರೀತಿಸಿ, ಏಳ್ತಂದಂ. ... ... ... ... ॥೧೩॥

ಉರುಭೂಷಣದ್ಯುತಿಯುತಾಂಗಂ- ಅಧಿಕವಾದ ಆಭರಣದ ಕಾಂತಿಯಿಂದ ಕೂಡಿದ ಶರೀರವುಳ್ಳ, ಶೈವಕಾಂತಾಜನಂ- ಶಿವಭಕ್ತಸ್ತ್ರೀಸಮೂಹವು, ರತ್ನಕಲಶಾದರ್ಶಂಗಳಂ- ರನ್ನದ ಕಲಶಕನ್ನಡಿಗಳನ್ನು, ತಾಳ್ದು— ಧರಿಸಿ, ಮೃದುಯಾನಂ- (ತಮ್ಮ) ಮೆಲ್ಲಿತಾದ ನಡಗೆಯು, ಗಜಯಾನಮಂ— ಆನೆಯ ನಡಗೆಯನ್ನು, ಜರಿಯೆ, ಲೋಲಾಪಾಂಗಶುಭ್ರಾಂಶು- ಚಂಚಲವಾದ ಕಡೆಗಣ್ಣಿನ ಬಿಳುಪಾದ ಕಾಂತಿಯು, ಪೆರ್ಚಿದ- ಅಧಿಕವಾದ, ಚಂದ್ರಾತಪಮಂ- ಬೆಳ್ದಿಂಗಳನ್ನು, ಪಗಲ್ನೆರಪೆ- ಹಗಲಿನಲ್ಲಿರುವಂತೆ ಮಾಡಲು, (ಅಂದಗೆ ಚಂದ್ರಕಿರಣದ ಪ್ರಕಾಶವಂಕೊರಗಿಸಲು,) ವೃತ್ತೋತ್ತುಂಗವಕ್ಷೋಜಕುಂಭದ- ಗುಂಡಾಗಿಯೂ, ದಪ್ಪವಾಗಿಯೂ ಇರುವ ಕುಂಭಸದೃಶವಾದ ಮೊಲೆಗಳ, ಬಿಣ್ಪಿಂ- ಸ್ಥೂಲತ್ವದಿಂದುಂಟಾದ ಭಾರದಿಂದ, ನಡುಬಳ್ಕೆ,

ಗಂಶೈವಕಾಂತಾಜನಂ ॥ ... ... ... ... ॥೧೮॥

ವ॥ ಅಂತೆಳ್ತಂದ ಕಾಂತಾಜನಕ್ಕೆ ಕಟಾಕ್ಷದಿಂ ಕಾರುಣ್ಯಮಂ ನೀಡುತ್ತಂಬಂದು
ಸಚಿವಂ ಕೈಗುಡೆ ತನ್ಮಂದಿರದ್ವಾರದೇಶದೊಳ್ವನಿತೆವೆರಸು ಗಜೇಂದ್ರಸ್ಕಂಧದಿಂ ನಿಳೆಗವತ
ರಿಸಿ ತದ್ಗೃಹಮಂ ಪೊಕ್ಕು ಶಿವಗಣಪದಾಂಬುವಿಂ ಮಂಗಳಮಜ್ಜನಂಗೆಯ್ದು ಶಿವಪ್ರ
ಸಾದಿತ ದಿವ್ಯಪ್ರಸಾದಮಂ ತಳೆದು ಬಸವಂ ರಂಜಿಸಿರ್ಪನ್ನೆಗಮಾಬಲದೇವನ ಬೆಸನದಿಂ ಸ
ಖೀಜನಮೆಳ್ತಂದು ಸಡಗರಂಬೆರಸು ಸುರಲತೆಗೆ ಸುರನಾರಿಯರ್ಸುರಭಿಪಯಮಂ ಸುರಿ
ವಂತೆ ಸುರಭಿಸಲಿಲದಿಂ ಜಳಕಂಬೊಗಿಸಿ ದಿನಲಕ್ಷ್ಮಿಗೆ ರವಿಕಿರಣಮನುಡಿಸುವಂತೆ ಕನಕಾಂ
ಬರಮಂ ನಿರಿವಿಡಿದುಡಿಸಿಯುಂ ಕಾರಮುಂಬನಿಯಿಂ ತಳ್ತ ಮಯೂರನ ಸಿರಿಯನೊಳಗು
ಗೊಳಿಸಿ ತೋರಮುಡಿಯೊಳ್ಮಲ್ಲಿಗೆಯಂ ತುರುಂಬಿಯುಂ ಕುಚಕೋಕಯುಗಕ್ಕೆ ಮು
ಖಚಂದ್ರನತ್ತಣಿಂ ಭೀತಿ ಬೇಡೆಂದೆಳೆವಿಸಿಲ ಗವಸಣಿಗೆದೊಡಿಪಂತೆ ಮಿಸುನಿರವಕೆಯಂ
ತೊಡಿಸಿಯುಂ ಕುರುಳ್ದುಂಬಿಗಳ್ಗೆ ನಳಿನಪರಾಗದ ಮೇವನಿಕ್ಕುವಂತೆ ಬೈತಲೆಯೊಳ್ಸಿಂ

---

ತಾಂ- ಸ್ತ್ರೀಸಮೂಹವು, ಇದಿರ್ವಂದತ್ತು- ಬಸವೇಶ್ವರನಿಗೆದುರಾಗಿ ಬಂದಿತು. ... ... ॥೧೮

ಬಸವಂ, ಅಂತು, ಎಳ್ತಂದ, ಕಾಂತಾಜನಕ್ಕೆ, ಕಟಾಕ್ಷದಿಂ- ಕಡೆಗಣ್ಣೋಟದಿಂದ, ಕಾರುಣ್ಯಮಂ- ದಯೆಯನ್ನು ನೀಡುತ್ತಂ- ಮಾಡುತ್ತ, ಬಂದು, ಸಚಿವಂ- ಬಲದೇವಮಂತ್ರಿಯು, ಕೈಗುಡೆ- ಹಸ್ತಲಾಗವನ್ನು ಕೊಡಲು, ತನ್ಮಂದಿರದ್ವಾರದೇಶದೊಳ್- ಆತನ ಮನೆಯ ಬಾಗಿಲಲ್ಲಿ, ವನಿತೆವೆರಸು- ಪತ್ನೀಸಮೇತನಾಗಿ, ಗಜೇಂದ್ರಸ್ಕಂಧದಿಂ- ಆನೆಯ ಭುಜಶಿರಸ್ಸಿನದೆಸೆಯಿಂದ, ಇಳೆಗೆ- ಭೂಮಿಗೆ, ಅವತರಿಸಿ- ಇಳಿದು, ತದ್ಗೃಹಮಂ- ಆ ಮಂತ್ರಿಯ ಮನೆಯನ್ನು, ಪೊಕ್ಕು, ಶಿವಗಣಪದಾಂಬುವಿಂ- ಶಿವಗಣಂಗಳ ಪಾದೋದಕದಿಂದ, ಮಂಗಳಮಜ್ಜನಂಗೆಯ್ದು- ಮಂಗಳಸ್ನಾನವನ್ನುಮಾಡಿ, ಶಿವಪ್ರಸಾದಿತದಿವ್ಯಪ್ರಸಾದಮಂ- ಈಶ್ವರನಿಂದನುಗ್ರಹಿಸಲ್ಪಟ್ಟ ಉತ್ಕೃಷ್ಟವಾದ ಪ್ರಸಾದವನ್ನು, ತಳೆದು- ಧರಿಸಿ, ರಂಜಿಸಿ- ಪ್ರಕಾಶಿಸಿ, ಇರ್ಪನ್ನೆಗಂ- ಇರುವಷ್ಟರಲ್ಲಿ, ಆ ಬಲದೇವನ, ಬೆಸನದಿಂ- ಆಜ್ಞೆಯಿಂದ, ಸಖೀಜನಂ, ಎಳ್ತಂದು, ಸಡಗರಂಬೆರಸು- ಸಂಭ್ರಮಯುಕ್ತವಾಗಿ, ಸುರನಾರಿಯರ್- ದೇವತಾಸ್ತ್ರೀಯರು, ಸುರಲತೆಗೆ- ಕಲ್ಪಲತೆಗೆ, ಸುರಭಿಪಯಮಂ- ಕಾಮಧೇನುವಿನ ಹಾಲನ್ನು, ಸುರಿವಂತೆ, ಸುರಭಿಸಲಿಲದಿಂ- ಪರಿಮಳವಿಶಿಷ್ಟವಾದ ನೀರಿನಿಂದ, ಜಳಕಂಬೊಗಿಸಿ- ಸ್ನಾನವಂಮಾಡಿಸಿ, ದಿನಲಕ್ಷ್ಮಿಗೆ- ದಿವಸವೆಂಬ ಲಕ್ಷ್ಮಿಗೆ, ರವಿಕಿರಣಮಂ- ಸೂರ್ಯನ ಬಿಸಿಲನ್ನು, ಉಡಿಸುವಂತೆ, ಕನಕಾಂಬರಮಂ- ಹೊಂಬಣ್ಣವಾದ ಸೀರೆಯನ್ನು, ನಿರಿವಿಡಿದು, ಉಡಿಸಿಯುಂ, ಕಾರಮುಂಬನಿಯಿಂ- ಮುಂಗಾರಿನ ಹನಿಯಿಂದ, ತಳ್ತ- ವ್ಯಾಪ್ತವಾದ, ಮಯೂರನ- ನವಿಲಿನ, ಸಿರಿಯಂ- ಸಂಪತ್ತನ್ನು, ಒಳಗುಗೊಳಿಸಿ- ಹೊಂದಿಸಿ, ತೋರಮುಡಿಯೊಳ್- ದಪ್ಪವಾದ ಕೇಶಬಂಧದಲ್ಲಿ, ಮಲ್ಲಿಗೆಯಂ- ಮಲ್ಲಿಗೆಹೂವನ್ನು, ತುರುಂಬಿಯುಂ- ತುಂಬಿಯೂ, ಕುಚಕೋಕಯುಗಕ್ಕೆ, ಮೊಲೆಗಳೆಂಬೆರಡುಚಕ್ರವಾಕಪಕ್ಷಿಗಳಿಗೆ, ಮುಖಚಂದ್ರನತ್ತಣಿಂ- ಮುಖಚಂದ್ರನದೆಸೆಯಿಂದ, ಭೀತಿ, ಬೇಡ, ಎಂದು, ಎಳೆವಿಸಿಲ- ಬಾಲಾತಪದ, ಗವಸಣಿಗೆದೊಡಿಪಂತೆ- ಮೇಲುಮುಸುಕನ್ನು ಹೊದಿಸುವಹಾಗೆ, ಮಿಸುನಿಯ- ಸುವರ್ಣದ, ರವಕೆಯಂ- ತೊಡಿಸಿಯುಂ, ಕುರುಳ್ದುಂಬಿಗಳ್ಗೆ- ಕೂದಲೆಂಬ ಭ್ರಮರಗಳಿಗೆ, ನಳಿನಪರಾಗದ- ಕಮಲದ ಧೂಳಿಯ, ಮೇವಂ- ಆಹಾರವನ್ನು, ಇಕ್ಕುವಂತೆ, ಬೈತಲೆಯೊಳ್, ಸಿಂದುರಮಂ- ಚಂದ್ರದ ಹುಡಿಯನ್ನು, ಅಮರ್ಚೆಯುಂ- ಹತ್ತಿಸಿಯೂ, ವದನಾಂಬುಜಂ- ಮುಖಕಮಲವು, ಸೆರೆಗೆಯ್ದ- ಸೆರೆಹಿಡಿದಿರುವ, ಬಾಲೇಂದುವು- ಎಳೆಚಂದ್ರನು, ಎನಿಸಿ, ನೊಸಲೊಳ್- ಹಣೆಯಲ್ಲಿ, ಭಸಿತಲಸಿತ

ದುರಮನವುರ್ಚಿಯುಂ ವದನಾಂಬುಜಂ ಸೆರೆಗೆಯ್ದ ಬಾಲೇಂದುವೆನಿಸಿ ನೊಸಲೊಳ್ಬಸಿ
ತಲಸಿತತಿಲಕಮಂ ತಿದ್ದಿಯುಂ ಕಪೋಲಶಶಿಯನೋಲಗಿಪ ತಾರಕದಂಬವೆನಿಸಿ ಪೊಸ
ಮುತ್ತಿನೋಲೆಯಂ ಪಾಲೆಯೊಳಳವಡಿಸಿಯುಂ ಕಟಾಕ್ಷರುಚಿಲತೆ ಮುಗುಳಂಪಡೆದುದೆಂಬಿ
ನಂ ತೋರಮುತ್ತಿನ ಬಾವುಲಿಯಂ ಕೊನೆಗೊಡಂಕೆಯೊಳ್ ತೊಡರ್ಚಿಯುಮಧರಪಲ್ಲ
ವರುಚಿ ಸಂಧ್ಯಾರಾಗದೊಳುದಯಿಸಿದ ಶುಕ್ರನೆನಿಸಿ ನವೀನಮೌಕ್ತಿಕನಾಸಾಭರಣಮನಲಂ
ಕರಿಸಿಯುಂ ತುರುಗೆವೆಗಪ್ಪುರ್ಕವಲ್ತು ಕುಡಿಗೊಂಡುದೆನಿಸಿ ನಿಡುಗಣ್ಗಂಜನಮನೆರ್ಚಿ
ಸೋಗೆಯುಂ ರೇಖೆಗೊಳಿಸಿಯುಂ ಮುಖೇಂದುವಿಂದಧಃಕೃತನಾದ ಚಂದ್ರನೆನಿಸಿ ನುಣ್ಪೊ
ಸಲ್ಗೆ ರನ್ನದಾಳಿಯನಾಳಿಸಿಯುಂ ಪೂರ್ಣಕುಂಭಮಂ ವಿಚಕಿಲಮುಕುಳಮಾಲೆಯಿನ
ರ್ಚಿಪಂತೆ ಕುಚಕುಂಭದೊಳ್ಮುಕ್ತಾಹಾರಮಂ ನೆಲೆಗೊಳಿಸಿಯುಂ ಮರಲ್ದ ಕೆಂದಾವರೆಯಂ
ನೊರೆಮಾಲೆ ಬಳಸಿದುದೆನಿಸಿ ಕರಮೂಲದೊಳ್ಮುತ್ತಿನ ಕಂಕಣಮಂ ಕೈಗೊಳಿಸಿಯುಂ
ಮಲರಂಬನತಳಿರಂಬುಗಳ್ಗೆ ರನ್ನದಣಸಂಬಂಧಿಪಂತಂಗುಲಿಗಳೊಳ್ ರನ್ನದುಂಗುರಂಗಳಂ
ಸಂಗಳಿಸಿಯುಂ ರೋಹಣಾಚಲಂ ಮಣಿಮಾಲೆಯಂತಾಳ್ದುದೆನಿಸಿ ಗುರುನಿತಂಬಬಿಂಬಾ

---

ತಿಲಕಮಂ- ಪ್ರಕಾಶಿಸುವ ಭಸ್ಮರೇಖೆಯನ್ನು, ತಿದ್ದಿಯುಂ, ಕಪೋಲಶಶಿಯಂ- ಕೆನ್ನೆಯೆಂಬ ಚಂದ್ರನನ್ನು, ಓಲಗಿಪ- ಸೇವಿಸುವ, ತಾರಾಕದಂಬಂ- ನಕ್ಷತ್ರಸಮೂಹವು, ಎನಿಸಿ, ಪೊಸಮುತ್ತಿನ, ಓಲೆಯಂ, ಪಾಲೆಯೊಳ್- ಕಿವಿಯಹಾಲೆಯಲ್ಲಿ, ಅಳವಡಿಸಿಯುಂ- ಸೇರಿಸಿಯೂ, ಕಟಾಕ್ಷರುಚಿಲತೆ- ಕಡೆಗಣ್ಣಿನಕಾಂತಿಯೆಂಬ ಬಳ್ಳಿಯು, ಮುಗುಳಂ- ಮೊಗ್ಗನ್ನು, ಪಡೆದುದು, ಎಂಬಿನಂ, ತೋರ- ದಪ್ಪವಾದ, ಮುತ್ತಿನ- ಬಾವುಲಿಯಂ- ಕೊನೆಗೊಡಂಕೆಯೊಳ್- ಕಿವಿಯ ಕೊನೆಯಲ್ಲಿ, ತೊಡರ್ಚಿಯುಂ-ಸಿಕ್ಕಿಸಿಯೂ, ಅಧರಪಲ್ಲವರುಚಿಸಂಧ್ಯಾರಾಗದೊಳ್- ಚಿಗುರಿನಂತಿರುವ ತುಟಿಯ ಕಾಂತಿಯೆಂಬ ಸಂಜೆಗೆಂಪಿನಲ್ಲಿ, ಉದಯಿಸಿದ- ಹುಟ್ಟಿದ, ಶುಕ್ರಂ- ಶುಕ್ರನಕ್ಷತ್ರವು, ಎನಿಸಿ, ನವೀನಮೌಕ್ತಿಕನಾಸಾಭರಣಮಂ- ಹೊಸದಾದ ಮುತ್ತಿನ ಮೂಗುತಿಯನ್ನು, ಅಲಂಕರಿಸಿಯುಂ, ತುರುಗೆವೆಗಪ್ಪು- ಗುಂಪಾದ ರೆಪ್ಪೆಗಳ ಕಪ್ಪುಕಾಂತಿಯು, ಕವಲ್ತು- ಕವಲನ್ನುಬಿಟ್ಟು, ಕುಡಿಗೊಂಡುದು- ಅಭಿವೃದ್ಧಿಯಾಯಿತು, ಎನಿಸಿ, ನಿಡುಗಣ್ಗೆ- ದೀರ್ಘವಾದ ನೇತ್ರಕ್ಕೆ, ಅಂಜನಮಂ- ಕಾಡಿಗೆಯನ್ನು, ಎರ್ಚಿ- ಹತ್ತಿಸಿ, ಸೋಗೆಯಂ, ರೇಖೆಗೊಳಿಸಿಯುಂ- ಗೀರಿನಂತೆ ಬರೆದೂ, ಮುಖೇಂದುವಿಂದೆ, ಅಧಃಕೃತನಾದ- ತಿರಸ್ಕರಿಸಲ್ಪಟ್ಟ, ಚಂದ್ರಂ, ಎನಿಸಿ, ನುಣ್ಪೊಗರಲ್ಗೆ- ನುಣುಪಾದ ಕತ್ತಿಗೆ, ರನ್ನದಾಳಿಯಂ- ರತ್ನದ ತಾಳಿಯನ್ನು, ಆಳಿಸಿಯುಂ- ಸೇರಿಸಿಯೂ, ಪೂರ್ಣಕುಂಭಮಂ-ತುಂಬಿದ ಕೊಡವನ್ನು, ವಿಚಕಿಲಮುಕುಲಮಾಲೆಯಿಂ- ಮಲ್ಲಿಗೆಮೊಗ್ಗಿನ ಸರದಿಂದ, ಅರ್ಚಿಪಂತೆ- ಪೂಜಿಸುವಹಾಗೆ, ಕುಚಕುಂಭದೊಳ್, ಮುಕ್ತಾಹಾರಮಂ, ನೆಲೆಗೊಳಿಸಿಯುಂ- ಧರಿಸಿಯೂ, ಅರಲ್ದ- ವಿಕಸಿತವಾದ, ಕೆಂದಾವರೆಯಂ- ಕೆಂಪುಕಮಲವನ್ನು, ನೊರೆಮಾಲೆ- ನೊರೆಗಳಸ್ರೈನು, ಬಳಸಿದುದು- ಸುತ್ತಿಕೊಂಡಿತು, ಎನಿಸಿ, ಕರಮೂಲದೊಳ್- ಮುಂಗಯ್ಯಲ್ಲಿ, ಮುತ್ತಿನ, ಕಂಕಣಮಂ- ಕಡಗವನ್ನು, ಕೈಗೊಳಿಸಿಯುಂ- ಅಲಂಕರಿಸಿಯೂ, ಅಲರಂಬನ- ಮನ್ಮಥನ, ತಳಿರಂಬುಗಳ್ಗೆ- ಚಿಗುರಿನ ಬಾಣಗಳಿಗೆ, ರನ್ನದ, ಅಣಸಂ, ಬಂಧಿಪಂತೆ- ಕಟ್ಟುವಹಾಗೆ, ಅಂಗುಲಿಗಳೊಳ್- ಬೆರಳುಗಳಲ್ಲಿ, ರನ್ನದ, ಉಂಗುರಂಗಳಂ- ಸಂಗಳಿಸಿಯುಂ, ರೋಹಣಾಚಲಂ- ರೋಹಣನಾಮಕವಾದ ಬೆಟ್ಟವು, ಮಣಿಮಾಲೆಯಂ- ರತ್ನಮಾಲಿಕೆಯನ್ನು, ತಾಳ್ದುದು, ಎನಿಸಿ, ಗುರುನಿತಂಬಬಿಂಬಾಗ್ರದೊಳ್- ದಪ್ಪವಾದ ಕಟಿಪಶ್ಚಾದ್ಭಾಗದಮೇಲೆ, ರತ್ನರಶನಾಸೂತ್ರಮಂ- ಮಣಿಖಚಿತವಾದ ಕಟಿಸೂತ್ರವನ್ನು, ಬಿಗಿದು, ಬಂಧಿಸಿಯುಂ- ಕಟ್ಟಿಯೂ, ನುಣ್ಪೊಡೆಗಳೆಂಬ, ಪೊಂಬಾಳೆಗಂಬ

ಗ್ರದೊಳ್ ರತ್ನರಶನಾಸೂತ್ರಮಂ ಬಿಗಿದು ಬಂಧಿಸಿಯುಂ ನುಣ್ದೊಡೆಗಳೆಂಬ ಪೊಂಬಾಳೆಗಂಬಕ್ಕೆ ಕುಂಕುಮರಜದಾಲವಾಲಮಂ ಸವೆದಂತೆ ಕನತ್ಕನಕಮಯ ಮಂಜೀರಮಂ ಪದಾಗ್ರದೊಳ್ಸಂಗಳಿಸಿಯುಮಿಂತು ಸಿಂಗರದ ಸೀಮೆಯೆನಿಪ ಗಂಗಾಂಬಿಕೆಗೆ ಪಸದನಂಗೊಳಿಸಲೊಡನೆ ॥ * * * * * * * * * * * * * *

ಚಂ ॥ ಮಣಿಗಳನೆಯ್ದೆ ಕಾತಸುರವಲ್ಲರಿಯಂತಿರೆ ದಿವ್ಯರತ್ನಭೂ | ಷಣದಿನುದರ್ಕ
ಕಾಂತಿವಳೆದಬ್ಜನಿಯಂತೆ ಸುವರ್ಣಚೇಲದಿಂ ॥ ಕ್ಷಣರುಚಿಯಾಂತಕಾರಸಿರಿಯಂತೆ ಕನನ್ಮ
ಣಿಕಾಂಚಿಯಿಂದೆ ಪಾ ॥ ರ್ವಣಶಶಿವಕ್ತ್ರೆ ಕಾವನಧಿದೇವತೆಯಂತಿರೆ ಕಣ್ಗೆ ತೋರಿದಳ್ ॥೧೫॥

ಮತ್ತಂ ॥ ಪೊಳೆವಂಗಕ್ಕಳವಟ್ಟರೂಪು ಪೊಸರೂಪಂ ಬಣ್ಣವಿಟ್ಟೊಂದಿದು | ಜ್ವಲ
ತಾರುಣ್ಯಮಲಂಪುವೆತ್ತ ನವತಾರುಣ್ಯಕ್ಕೆ ಮುಯ್ಯಾಂತಮಂ ॥ ಜುಳಭಾವಂ ನವಭಾವಮಂ
ಬಳೆಯಿಪುದ್ಯತ್ಪ್ರೌಢಿಯಾಪ್ರೌಢಿಯಿಂ | ಕೆಳೆಗೊಂಡಿರ್ಪ್ಪ ಶಿವೈಕ್ಯಭಕ್ತಿಸುಗುಣಂ ಪೆಂ
ಪಾಂತುವಾ ಕಾಂತೆಯ ॥ ... ... ... ... ॥೧೬॥

ಚಂ ॥ ಪರಸೆ ಗಣಂಗಳಾದರಿಸೆ ಭಕ್ತಜನಂ ಪದಪಿಂದೆ ಬಂದು ನಿಂ | ದಿರೆ ವೃಷಭೇಂದ್ರ

---

ಕ್ಕೆ- ಸುವರ್ಣವರ್ಣವಾದ ಬಾಳೆಯಕಂಬಕ್ಕೆ, ಕುಂಕುಮರಜದ- ಕುಂಕುಮಕೇಸರಿಯ ದೂಳಿಯ, ಆಲವಾಲಮಂ- ಪಾತಿಯನ್ನು, ಸವೆದಂತೆ- ಮಾಡುವಹಾಗೆ, ಕನತ್ಕನಕಮಯಮಂಜೀರಮಂ- ಹೊಳೆಯುವ ಚಿನ್ನದ ಪಾದಕಟಕವನ್ನು, ಪದಾಗ್ರದೊಳ್- ಪಾದದಕೊನೆಯಲ್ಲಿ, ಸಂಗಳಿಸಿಯುಂ, ಇಂತು, ಸಿಂಗರದ- ಶೃಂಗಾರಕ್ಕೆ, ಸೀಮೆ- ಎಲ್ಲೆಯು ಅಥವಾ ದೇಶವು, ಎನಿಪ, ಗಂಗಾಂಬಿಕೆಗೆ, ಪಸದನಂಗೊಳಿಸಲ್- ಅಲಂಕರಿಸಲು, ಒಡನೆ. * * * * * * * * * * * * * * * * *

ಪಾರ್ವಣಶಶಿವಕ್ತ್ರೆ- ಹುಣ್ಣಿಮೆಯ ಚಂದ್ರನಂತಿರುವ ಮುಖವುಳ್ಳ ಗಂಗಾಂಬಿಕೆಯು, ಮಣಿಗಳಂ- ರತ್ನಗಳಿಂದ, ಎಯ್ದೆ- ಚೆನ್ನಾಗಿ, (ತಳ್ತು) ಕಾತಸುರವಲ್ಲರಿಯಂತಿರೆ, ಕಾಯನ್ನು ಬಿಟ್ಟ ಕಲ್ಪಲತೆಯಹಾಗೆ, ದಿವ್ಯರತ್ನಭೂಷಣದಿಂ- ಶ್ರೇಷ್ಠವಾದ ರನ್ನದೊಡವುಗಳಿಂದ, (ತಳ್ತು) ಉದರ್ಕಕಾಂತಿವಳೆದ, ಅಧಿಕವಾದ ಸೂರ್ಯನಕಾಂತಿಯನ್ನು ಧರಿಸಿರುವ, ಅಬ್ಜನಿಯಂತೆ- ಕಮಲದ ಬಳ್ಳಿಯಹಾಗೆ, ಸುವರ್ಣಚೇಲದಿಂ- ಹೊಂಬಣ್ಣವಾದ ಸೀರೆಯಿಂದ, (ತಳ್ತು) ಕ್ಷಣರುಚಿಯಾಂತ- ಮಿಂಚನ್ನುಧರಿಸಿರುವ, ಕಾರಸಿರಿಯಂತೆ- ವರ್ಷಾಕಾಲಲಕ್ಷ್ಮಿಯಹಾಗೆ, ಕನನ್ಮಣಿಕಾಂಚಿಯಿಂದೆ- ಹೊಳೆಯುವರತ್ನದಒಡ್ಯಾಣದಿಂದ, (ತಳ್ತು) ಕಾವನ, ಅಧಿದೇವತೆಯಂತಿರೆ- ಅಭಿಮಾನದೇವತೆಯಹಾಗೆ, ಕಣ್ಗೆ, ತೋರಿದಳ್. ... ... ॥೧೫॥

ಆಕಾಂತೆಯ, ಪೊಳೆವ, ಅಂಗಕ್ಕೆ, ಅಳವಟ್ಟ- ಸದೃಶವಾದ, ರೂಪು, ಪೊಸರೂಪಂ, ಬಣ್ಣವಿಟ್ಟು- ಪ್ರಕಾಶಗೊಳಿಸಿ, ಒಂದಿದ, ಉಜ್ಜ್ವಳತಾರುಣ್ಯಂ- ಹೊಳೆಯುವ ಯೌವನವು, ಅಲಂಪುವೆತ್ತ- ಅಧಿಕವಾದ, ನವತಾರುಣ್ಯಕ್ಕೆ- ಮುಯ್ಯಾಂತ- ಮರ್ಯಾದೆಮಾಡುತ್ತಿರುವ, ಮಂಜುಳಭಾವಂ- ಮನೋಹರವಾದ ಮನಸ್ಸು; ನವಭಾವಮಂ- ಬಳೆಯಿಪ- ಅಭಿವೃದ್ಧಿಗೊಳಿಸುವ, ಉದ್ಯತ್ಪ್ರೌಢಿ- ಅಧಿಕವಾದ ಕುಶಲತೆಯು, ಆಪ್ರೌಢಿಯುಂ, ಕೆಳೆಗೊಂಡು- ಜೊತೆಗೊಂಡು, ಇರ್ಪ, ಶಿವೈಕ್ಯಭಕ್ತಿಸುಗುಣಂ- ಶಿವನೊಡನೆ ಏಕತ್ವವಂ ಹೊಂದಿರುವ ಭಕ್ತಿಗುಣವು, ಪೆಂಪಾಂತುವು-ಅಧಿಕವಾಗಿದ್ದವು. ... ... ... ॥೧೬॥

ಗಣಂಗಳ್, ಪರಸೆ- ಆಶೀರ್ವದಿಸುತ್ತಿರಲು, ಭಕ್ತಜನಂ, ಆದರಿಸೆ- ಪ್ರೀತಿಪಡುತ್ತಿರಲು, ಪದಪಿಂದೆ- ಸಂತೋಷದಿಂದ, ವೃಷಭೇಂದ್ರಂ, ಬಂದು, ಆ ಪಸೆಯಮಂಟಪದೊಳ್- ಮದುವೆಯಮಂಟಪದಲ್ಲಿ, ನಿಂದಿರೆ, ಬಲದೇವಮಂತ್ರಿ, ಭಾಸುರತರವೈಭವಂ- ಪ್ರಕಾಶಮಾನವಾದ ವಿಭವವು, ಮಿಗೆ- ಹೆಚ್ಚಾಗಲು, ಅಂದು,

ನಾವ ನೆಯಮಪಂಎಪದೊಪ್ಪಲದೇವಮಂತ್ರಿ ಭಾ ॥ ಸುರತರವೈಭವಂಘಿಗೆ ತನೂಜೆಯನಂ ದೊಡಗೊಂಡುಬಂದು ಭ । ಕ್ತರಮತನೇತುಪಂತಿರೆವಿವಾಹವನಚ್ಚರಿಯಾಗಿಮಾಡಿದಂ ॥

ವ॥ ಅಂತು ಪರಮಸಂಭ್ರಮದಿಂ ವಿವಾಹಂಗೆಯ್ದು ಕುಡಿತೆವ್ರೊಂಗಳಿಂಮಣಿಭರಣ ಕನಕವಸನಗಂಧಮಾಲ್ಯಾದಿಗಳಿಂ ಗಣಾರಾಧನಂಗೆಯ್ದು ಬಲನಾಯಕಂ ನಿಜರಮಣಿವೆರಸಿ ಪರಮೋತ್ಸಾಹದಿಮಿಪ್ಪರ್ನ್ನೆಗಮಾಬಸವರಾಜು ಶಿವಗಣಪದಾಬ್ಜಂ ಶಿರಶ್ಶೇಖರವಾಗೆಯುಂ ದೃಢವ್ರತಂಕಂಕಣಾಧಾರಮನಿನಿಸಿಯುಂ ಸಹಜಸದ್ಗುಣವೆಂಬ ಮಣಿಭೂಷಣಂ ತೊಳತೊಳಗೆಯುಂ ಶಿವನಿಷ್ಠೆಯೆಂಬ ಕಠಾರಿಸುಕರಸ್ಥಿತಿವಡೆದು ವಿಜೃಂಭಿಸೆಯುಂ ಸಂಸೃತಿವಿಕಾರ ಕಾಂಡಪಟವನೋಸರಿಸೆಯುಂ ಶರಣಕೃಪಾರಸ ಧಾರಾಪೂರ್ವಕಂ ದ್ವಿತೀಯವಿವಾ

---

ತನೂಜೆಯಂ- ಮಗಳನ್ನು, ಒಡಗೊಂಡು-- ಸಂಗಡಕರೆದುಕೊಂಡು, ಬಂದು, ಭಕ್ತರ, ಮತವೆಂತು ಟು- ಅಭಿಪ್ರಾಯವುಸ್ಯಾಗೋ, ಅಂತಿರೆ- ಹಾಗೆ, ವಿವಾಹಮಂ- ಅಚ್ಚರಿಯಾಗಿ- ಆಶ್ಚರ್ಯಕರವಾಗಿ, ಮಾಡಿದಂ. ... ... ... ... ... ||೧೭||

ಈ ವಿವಾಹಕಾರ್ಯವು ಸಂಸ್ಕೃತಬಸವೇಶ್ವರಪುರಾಣದಲ್ಲಿ ವಿಸ್ತಾರವಾಗಿ ಹೇಳಲ್ಪಟ್ಟಿರುವದದೆಂತೆಂದೊಡೆ.

ನಿರ್ವರ್ತಿತೇಷು ಪೂರ್ವೇದ್ಯುರ್ವಾಗ್ದಾನಾದಿಷುಕರ್ಮಸು । ಬಸವಂಗೃಹಮಾಯಾತಂ ವರಂಕನ್ಯಾರ್ಥಿನಂಮುದಾ । ಮಧುಪರ್ಕೇಣಾರ್ಘ್ಯಯಿತ್ವಾಬಲದೇವೋದ್ವಿಜಾಗ್ರಣೀಃ । ವೀರಮಾಹೇಶ್ವರಾಂಸ್ತತ್ರ ಪೂಜಯಿತ್ವಾವಿಶೇಷತಃ । ಸರ್ವಾಲಂಕಾರಸಂಯುಕ್ತಾಂನವ್ಯವಸ್ತ್ರೋಪವೇಷ್ಟಿತಾಂ । ಮಹೋಜ್ವಲಾಂಗೀಂಸೌಭಾಗ್ಯ ದೇವತಾಮಿವಶೋಭಿತಾಂ । ಸುಶೀಲಾಂಭಾಗ್ಯಸಂಪನ್ನಾಂ ಗಂಗಾಂಬಾಂವರವರ್ಣಿನೀಂ । ತಸ್ಮೈವಮಹಾತ್ಮನೇಪ್ರಾದಾದ್ವಾರಾಸಂಕಲ್ಪಪೂರ್ವಕಂ । ಶುಭೇಮುಹೂರ್ತೇಸಂಪ್ರಾಪ್ತೇಜೃಂಭಿತೇವಾದ್ಯಘೋಷಣೇ । ಮಂತ್ರಾರವೇಚಸಂಕೀರ್ಣೇ ಭಿಜನೇಸ್ವಸ್ತಿವಾದಿನಿ । ಅರ್ಚಯಿತ್ವಾಥಮಾಂಗಲ್ಯಾಂ ಬಸವೇಶೋಮಹಾಮತಿಃ । ಗಂಗಾಂಬಾಯಾಃಕಂಠದೇಶೇ ಬಬನ್ಧಾತಿಮನೋಹರೆ । ಆಚಾರ್ಯೈಸ್ಸಹಋತ್ವಿಗ್ಭಿರ್ದಂಪತ್ಯೋರುತ್ತಮಾಂಗಕೆ । ಪ್ರೋಕ್ಷಿತೇಪಂಚಕಲಶತೀರ್ಥೇನಚಮಹೀಯಸಾ । ಉಮಾಮಹೇಶಾಸಂಪೂಜ್ಯಪಾಣಿಗ್ರಹಣಮಾಚರತ್ । ಶೇಷಾಣಿರಪ್ಪುಪ್ಯಾದಿಕರ್ಮಾಣ್ಯಪಿಯಥಾವಿಧಿ ॥ ವಿಧಾಯಸಾಂಗವಾರ್ಶ್ಯಾತಾಮಾಶಿಷಶ್ಚಿರಸಾಪರ್ವ । ಪ್ರದದೌಶಿವಭಕ್ತೇಭ್ಯಃಸ್ವರ್ಣರತ್ನಾಂಬರಾದಿಕಂ ॥

ಬಲನಾಯಕಂ- ಬಲದೇವಮಂತ್ರಿಯು, ಅಂತು, ಪರಮಸಂಭ್ರಮದಿಂ- ಅತಿಸಡಗರದಿಂದ, ವಿವಾಹಂಗೆಯ್ದು, ಕುಡಿತೆವ್ರೊಂಗಳಿಂ- ಒಂದೊಂದುಬಗಸಿ ಚಿನ್ನದ ಹಣಗಳಿಂದಲೂ, ಮಣಿಭರಣಕನಕವಸನಗಂಧಮಾಲ್ಯಾದಿಗಳಿಂ, ಗಣಾರಾಧನಂಗೆಯ್ದು, ನಿಜರಮಣಿವೆರಸಿ- ತನ್ನಪತ್ನಿಯೊಡನೆ ಕೂಡಿ, ಪರಮೋತ್ಸಾಹದಿಂ- ಅತಿಸಂತೋಷದಿಂದ, ಇರ್ಪರ್ನ್ನೆಗಂ- ಇರುವಷ್ಟರಲ್ಲಿ, ಆಬಸವರಾಜಂ, ಶಿವಗಣಪದಾಬ್ಜಂ- ಶಿವಗಣಂಗಳ ಪಾದಕಮಲವು, ಶಿರಶ್ಶೇಖರಂ- ಶಿರೋಭೂಷಣವು, ಆಗೆಯುಂ, ದೃಢವ್ರತಂ- ಸ್ಥಿರವಾದ ಶಿವಪೂಜಾವ್ರತವು, ಕಂಕಣಾಧಾರಂ, ಎನಿಸೆಯುಂ, ಸಹಜಸದ್ಗುಣವೆಂಬ- ಸ್ವಭಾವಸಿದ್ಧವಾದ ಸುಗುಣವೆಂಬ, ಮಣಿಭೂಷಣಂ, ತೊಳತೊಳಗೆಯುಂ, ಶಿವನಿಷ್ಠೆಯೆಂಬ- ಈಶ್ವರನಲ್ಲಿ ಶ್ರದ್ಧೆಯೆಂಬ, ಕಠಾರಿ, ಸುಕರಸ್ಥಿತಿವಡೆದು- ಹಸ್ತದಲ್ಲಿರುವದಾಗಿ, ವಿಜೃಂಭಿಸೆಯುಂ- ಶೋಭಿಸಲು, ಸಂಸೃತಿವಿಕಾರಕಾಂಡಪಟಂ- ಸಂಸಾರವಿಕಾರವೆಂಬ ತೆರೆಯಬಟ್ಟೆಯು, ಓಸರಿಸೆಯುಂ- ಓರೆಯಾಗಲು, ಶರಣಕೃಪಾರಸಧಾರಾಪೂರ್ವಕಂ- ಶಿವಶರಣರ ದಯಾರಸವೆಂಬ ನೀರಿನಧಾರೆಯಿಂಸಹಿತವಾಗಿ, ದ್ವಿತೀಯವಿವಾಹಮನೆ- ಎರಡನೆಯ ಮದುವೆಯಂ

ಹಮೆನೆ ಭಕ್ತಿವನಿತೆಯಂ ಕಟ್ಟಳ್ಕರಿಂ ಕೈಕೊಂಡು ಮಗುಳ್ದು ರಮಣಿವೆರಸಿ ಹರಗಣ
ಪ್ರಕರವೊಡವರೆ ಪರಮವೈಭವದಿಂ ಕಪ್ಪಡಗೆಳ್ತಂದು ಕರುಣಾಸಿಂಧುವಪ್ಪ ನಿಜಗುರು
ವಂ ಕಂಡು ಪೊಡಮಟ್ಟು ತತ್ಪಾದಸಪರ್ಯೆಗೆಯ್ವುತ್ತಂ ಸುಖದೊಳಿರುತ್ತಮಿರ್ದನಿತ್ತ
ಲ್ ಕೆಲವಾನುಂವತ್ಸರಂಗಳ್ ಸಲ್ಲುತ್ತಮಿರೆ. * * * * * * * * *

ಕಂ ॥ ಬಸವಂಗೆ ಮಗಳನರ್ಪಿಸಿ । ದೊಸಗೆಯು ನೀಶಂಗೆಬಿನ್ನವಿಸಲೆಯ್ದಿದವೋ ॥
ಲಸಮಬಲದೇವ ನೆಯ್ದಿದ । ನಸದೃಶಕೈಲಾಸವಾಸಮಂಬಳಿಕಾಗಳ್ ॥ ... ॥೧೮॥

ಕಂ ॥ ಬಲದೇವ ನೆನ್ನಬಲಭುಜ । ಬಲದೇವಂ ಪೋದನೆಂದು ಮರುಗುತೆ ಧರಣೀ ॥
ಲಲನಾಪತಿ ಬಿಜ್ಜಳ ನುಸು । ರೆಲರುಷ್ಣಮ ನುಗುಳೆ ಸುಯ್ದು ಮಗುಳ್ದಿಂತೆಂದಂ ॥೧೯॥

ಕಂ ॥ ಇನ್ನೆನ್ನಯಸಾಮ್ರಾಜ್ಯ ಸ । ಮುನ್ನತಿ ನಿಷ್ಕಂಟಕತ್ವದಿಂ ನಡೆದಪುದಾ ॥
ರಿಂನುತಸದ್ಗುಣಬಲಸಂ । ಪನ್ನಂ ಬಲದೇವನನ್ನನಾವನೊ ಧರೆಯೊಳ್ ॥ .. ॥೨೦॥

ವ ॥ ಎಂದು ಚಿಂತಿಸಿ ಪಳಯಿಪ ಬಿಜ್ಜಳಂಗೆ ಕೆಲದೊಳಿರ್ದ ಕಳಾವಿದರ್ಕೈದಾ
ವರೆಗಳಂ ಮುಗಿದು ॥ * * * * * * * *

---

ಬಂತೆ, ಭಕ್ತಿವನಿತೆಯಂ- ಶಿವಭಕ್ತಿಯೆಂಬ ಸ್ತ್ರೀಯನ್ನು, ಕಟ್ಟಳ್ಕರಿಂ- ಅತಿಪ್ರೀತಿಯಿಂದ, ಕೈಕೊಂಡು- ಪರಿಗ್ರಹಿಸಿ, ಮಗುಳ್ದು- ಪುನಃ, ರಮಣಿವೆರಸಿ- ಪತ್ನಿಯಾದ ಗಂಗಾಂಬಿಕೆಯೊಡನೆಕೂಡಿ, ಹರಗಣಪ್ರಕರಂ- ಶಿವಗಣಂಗಳ ಸಮೂಹವು, ಒಡವರೆ- ಸಂಗಡಬರಲು, ಪರಮವೈಭವದಿಂ- ಕಪ್ಪಡಿಗೆ, ಎಳ್ತಂದು, ಕರುಣಾಸಿಂಧುವಪ್ಪ- ದಯಾರಸಕ್ಕೆ ಸಮುದ್ರರೂಪನಾದ, ನಿಜಗುರುವಂ- ತನ್ನಗುರುವಾದ ಸಂಗಮೇಶ್ವರನನ್ನು, ಕಂಡು, ಪೊಡಮಟ್ಟು- ನಮಸ್ಕರಿಸಿ, ತತ್ಪಾದಸಪರ್ಯೆಗೆಯ್ವುತ್ತಂ- ಆ ಗುರುಪಾದಪೂಜೆಯನ್ನುಮಾಡುತ್ತ, ಸುಖದೊಳ್, ಇರುತ್ತಂ, ಇರ್ಪಂ ಇತ್ತಲ್- ಈಕಡೆಯಲ್ಲಿ, ಕೆಲವಾನುಂವತ್ಸರಂಗಳ್- ಕೆಲವುವರ್ಷಗಳು, ಸಲ್ಲುತ್ತಂ- ಕಳೆಯುತ್ತ, ಇರೆ. * * * * * * * * * * *

ಬಳಿಕ, ಆಗಳ್, ಅಸಮಬಲದೇವಂ- ಅಸದೃಶನಾದ ಬಲದೇವಮಂತ್ರಿಯು, ಬಸವಂಗೆ, ಮಗಳಂ, ಅರ್ಪಿಸಿದ- ಕೊಟ್ಟ, ದಸಗೆಯಂ- ಉತ್ಸಾಹವನ್ನು, ಈಶಂಗೆ- ಬಿನ್ನವಿಸಲ್- ವಿಜ್ಞಾಪಿಸುವದಕ್ಕೋಸ್ಕರ, ಎಯ್ದಿದವೋಲ್- ಹೋದಹಾಗೆ, ಅಸದೃಶಕೈಲಾಸಮಂ- ಎಣೆಯಿಲ್ಲದ ಕೈಲಾಸಪದವಿಯನ್ನು, ಎಯ್ದಿದಂ. ... ... ... ... ... ॥೧೮॥

ಧರಣೀಲಲನಾಪತಿಬಿಜ್ಜಳಂ- ಭೂಕಾಂತೆಗೆ ವಲ್ಲಭನಾದಬಿಜ್ಜಳರಾಜನು, ಎನ್ನ, ಬಲಭುಜಬಲದೇವಂ, ಬಲವೋಳಿನಶಕ್ತಿಗೆ ಅಧಿಪತಿಯಾದ, ಬಲದೇವಂ- ಬಲದೇವಮಂತ್ರಿಯು, ಪೋದಂ, ಎಂದು, ಮರುಗುತೆ- ದುಃಖಪಡುತ್ತ, ಉಸುರೆಲರ್- ಉಸುರಿನಗಾಳಿಯು. ಉಷ್ಣಮಂ- ಔಷ್ಣ್ಯವನ್ನು, ಉಗುಳೆ- ಬಿಡುತ್ತಿರಲು, ಸುಯ್ದು- ನಿಟ್ಟುಸುರನ್ನುಬಿಟ್ಟು, ಮಗುಳ್ದು, ಇಂತೆಂದಂ. ... ... ॥೧೯॥

ಇನ್ನು, ಎನ್ನಯ, ಸಾಮ್ರಾಜ್ಯಸಮುನ್ನತಿ, ರಾಜ್ಯಭಾರದ ಔನ್ನತ್ಯವು, ನಿಷ್ಕಂಟಕತ್ವದಿಂ- ನಿರ್ವಿಘ್ನವಾಗಿ, ಆರಿಂ, ನಡೆವಪುದು, ಬಲದೇವನನ್ನಂ- ಬಲದೇವಮಂತ್ರಿಗೆ ಸದೃಶನಾದ, ನುತಸದ್ಗುಣಬಲಸಂಪನ್ನಂ- ಶ್ಲಾಘ್ಯವಾದ ಸದ್ಗುಣಗಳೇನು ಶಕ್ತಿಯೇನು ಇವುಗಳಿಂದಕೂಡಿದವನು, ಧರೆಯೊಳ್, ಆವನೋ- ಯಾವನಿರುವನೋ ? ... ... ... ... ... ॥೨೦॥

ಎಂದು, ಚಿಂತಿಸಿ, ಪಳಯಿಪ- ಪ್ರಲಾಪಿಸುತ್ತಿರುವ, ಬಿಜ್ಜಳಂಗೆ, ಕೆಲದೊಳ್- ಪಕ್ಕದಲ್ಲಿ, ಇರ್ದ, ಕಳಾವಿದರ್- ವಿದ್ವಾಂಸರುಗಳು, ಕೈದಾವರೆಗಳಂ- ಹಸ್ತಕಮಲಗಳನ್ನು, ಮುಗಿದು. * * * * *

ಚಂ ॥ ಅವಧರಿಸೆಮ್ಮ ಬಿನ್ನಪಮನುರ್ವಿಪ ತದ್ಬಲದೇವನಾತ್ಮಸಂ । ಭವೆಯ ವ ರಂಕಳಾನಿಪುಣ ನುತ್ತಮಕೀರ್ತಿಯುತಂ ಧರಿತ್ರಿಗೊ ॥ ಪ್ಪುವ ಘನಕಪ್ಪಡಿಸ್ಥಲದೊ ಳೀಶವರಂಬಡೆದಿರ್ದ್ದಪಂ ಗುಣಾ । ರ್ಣವ ನವನಾಗೆ ನಿನ್ನಸಚಿವಂ ನಿನಗಾರೆಣೆವರ್ಪ್ಪರು ರ್ವಿಯೊಳ್ ॥ ... ... ... ... .. ... ॥೧೧॥

ವ॥ ಎಂದು ಬಿನ್ನವಿಸೆ ತನ್ಮಹಿಮೆಯಂ ಮುನ್ನಮೆ ಕೇಳ್ದು ಬಲ್ಲನಪ್ಪುದರಿಂದವಂ ದಿರೊಡನಾತನಂ ಕರೆದುತನ್ನಿಮೆಂದುಸಿರಲೊಡನವರ್ಕಪ್ಪಡಿಗೇಳ್ತಂದು ಗಣಸಭೆಯೊಳಿರ್ದ ಗುಣನಿಧಿಬಸವರಾಜಂಗೆ ಪೊಡಮಟ್ಟು ಬಿಜ್ಜಳನೆಂದುದನೆಲ್ಲಮಂ ಬಿನ್ನಪಂಗೆಯ್ದವಂಕ ಳುಪಿದ ಮಣಿಭೂಷಣಾವಳಿಗಳನಲಂಕರಿಸಿ ಪಟ್ಟಗಜಮಸ್ತಕದೊಳ್ಮೂರ್ತಿಗೊಳಿಸಿ ಪರಮ ವೈಭವಂ ಮಿಗೆ ನಿಜರಾಜಧಾನಿಯಂಪುಗಿಸಿ ಕರೆದು ತರ್ಪ್ಪಾಗಳ್ ॥ * * * * *

ಮಂದಾನಿಲರಗಳೆ ॥ ಆವೇಳೆಯೊಳತಿಸಂಭ್ರಮಮೆಸದಿರೆ । ಪೂವಲಿಪುರವೀಧಿಗಳೊ ಳ್ಪರೆದಿರೆ।ಜಲ್ಲಿಯ ಪಟ್ಟೆಯಮುಕುರದತೋರಣ । ಮಲ್ಲಲ್ಲಿನೆಗಳ್ದಿರೆ ಮಣಿಕೀರಣ । ಗೆಲಸದ ಕುರುಜುಗಳೊಪ್ಪಂಬಡೆದಿರೆ । ಮಳಯಜಘುಸೃಣಪಚೆಳೆಯುಂನೆರೆದಿರೆ । ಮುಂಗಡೆನಂದಿಧ್ವ ಜವೊಲೆಯುತ್ತಿರೆ । ಪಿಂಗಡೆರಾಜಸುತರ್ಪರೆಪೇಳ್ತಿರೆ । ಕೆಲವಲದೊಳ್ಮದಗಜಹಯವಾಹಂ

---

ಉರ್ವಿಪ- ಎಲೈರಾಜನೇ, ಎಮ್ಮ, ಬಿನ್ನಪಮಂ- ವಿಜ್ಞಾಪನೆಯನ್ನು, ಅವಧರಿಸು- ಲಾಲಿಸು, ತದ್ಬ ಲದೇವನ- ಆತ್ಮಸಂಭವೆಯ- ಮಗಳ, ವರಂ- ಪತಿಯಾದ, ಕಲಾನಿಪುಣಂ- ವಿದ್ಯಾಕುಶಲನಾದ, ಉತ್ತಮ ಕೀರ್ತಿಯುತಂ- ಉತ್ಕೃಷ್ಟವಾದ ಯಶಸ್ಸಿನಿಂದಕೂಡಿದ, ಗುಣಾರ್ಣವಂ- ಸದ್ಗುಣಗಳಿಗೆ ಸಮುದ್ರರೂ ಪನಾದ ಬಸವೇಶ್ವರನು, ಧರಿತ್ರಿಗೆ- ಭೂಮಿಯಲ್ಲಿ, ಒಪ್ಪುವ, ಘನಕಪ್ಪಡಿಸ್ಥಲದೊಳ್, ಈಶವರಂಬಡೆದು, ಇರ್ಪ್ಪಂ, ಅವಂ, ನಿನ್ನ, ಸಚಿವಂ- ಮಂತ್ರಿಯು, ಆಗೆ, ಉರ್ವಿಯೊಳ್- ಭೂಮಿಯಲ್ಲಿ, ನಿನಗೆ, ಆರ್ ಎಣೆವ ರ್ಪರ್- ಯಾರುಸದೃಶರಾಗುವರು ? ... ... ... ... ।೧೧॥

ಎಂದು, ಬಿನ್ನವಿಸೆ, ತನ್ಮಹಿಮೆಯಂ- ಆ ಬಸವೇಶ್ವರನ ಮಹತ್ವವನ್ನು, ಮುನ್ನಮೆ- ಪೂರ್ವದಲ್ಲೇ, ಕೇಳ್ದು, ಬಲ್ಲನಪ್ಪುದರಿಂದೆ- ತಿಳಿದಿರುವನಾದುದರಿಂದ, ಅವಂದಿರೊಡನೆ- ಆ ವಿದ್ವಾಂಸರೊಡನೆ, ಆತನಂ- ಬ ಸವೇಶ್ವರನನ್ನು, ಕರೆದುತನ್ನಿಂ- ಕರೆದುಕೊಂಡುಬನ್ನಿರಿ, ಎಂದು, ಉಸಿರಲ್- ಒಡನೆ- ಕೂಡಲೇ, ಅವರ್, ಕಪ್ಪಡಿಗೆ, ಏಳ್ತಂದು, ಗಣಸಭೆಯೊಳ್, ಇರ್ದ್ದ, ಗುಣನಿಧಿಬಸವರಾಜಂಗೆ- ಸದ್ಗುಣಗಳಿಗೆ ನಿಕ್ಷೇಪರೂಪನಾ ದ ಬಸವೇಶ್ವರನಿಗೆ, ಪೊಡಮಟ್ಟು, ಬಿಜ್ಜಳಂ, ಎಂದುದುಎಲ್ಲಮಂ- ಹೇಳಿದಮಾತೆಲ್ಲವನ್ನೂ, ಬಿನ್ನಪಂಗೆ ಯ್ದು, ಅವಂ- ಬಿಜ್ಜಳನು, ಕಳುಪಿದ, ಮಣಿಭೂಷಣಾದಿಗಳಿಂ, ಅಲಂಕರಿಸಿ, ಪಟ್ಟಗಜಮಸ್ತಕದೊಳ್- ಪ ಟ್ಟದಾನೆಯ ತಲೆಯಮೇಲೆ, ಮೂರ್ತಿಗೊಳಿಸಿ- ಕುಳ್ಳಿರಿಸಿ, ಪರಮವೈಭವಂ, ಮಿಗೆ- ಹೆಚ್ಚಾಗಲು, ನಿಜರಾ ಜಧಾನಿಯಂ, ಪುಗಿಸಿ, ಕರೆದುತರ್ಪ್ಪಾಗಳ್. * * * * * * * * * * * *

ಆವೇಳೆಯೊಳ್, ಅತಿಸಂಭ್ರಮಂ ಎಸೆದಿರೆ, ಪುರವೀಧಿಗಳೊಳ್- ಪಟ್ಟಣದ ಬೀದಿಗಳಲ್ಲಿ, ಪೂವಲಿ, ಅಂ ಜಲಿಯಿಂದೆರಚಿದ ಹೂವುಗಳು, ಪರೆದಿರೆ- ಹರಡಿರಲು, ಝಲ್ಲಿಯ- ಝೂಲರಿಯೇನು, ಪಟ್ಟೆ- ರೇಶ್ಮೆಯಬಟ್ಟೆ ಯೇನು, ಮುಕುರದ- ಕನ್ನಡಿಯೇನು ಇವುಗಳ, ತೋರಣಂ, ಅಲ್ಲಲ್ಲಿಗೆ, ನೆಗಳ್ದಿರೆ- ಮಾಡಿರಲು, (ಅಂದರೆ ಕಟ್ಟಿರಲು,) ಮಣಿಕೀರಣಗೆಲಸದ- ರನ್ನದ ಸಣ್ಣಗೆಲಸದ, ಕುರುಜುಗಳ್- ಒಡ್ಡುಗಳು, ಒಪ್ಪಂಬಡೆದಿರೆ- ಮನೋಹರವಾಗಿರಲು, ಮಲಯಜಘುಸೃಣದ- ಶ್ರೀಗಂಧ ಕುಂಕುಮಕೇಸರಿ ಇವುಗಳ, ಚಳೆಯಂ, ನೆರೆದಿರೆ, ಮುಂಗಡೆ, ನಂದಿಧ್ವಜಂ, ಒಲೆಯುತ್ತಿರೆ- ಬಳುಕುತ್ತಿರಲು, ಪಿಂಗಡೆ, ರಾಜಸುತರ್, ಪರೆದು- ಗುಂಪುಕೂಡಿ,

ನಲಿದೇಳ್ತರುತಿರೆ ಶರಣಸಮೂಹಂ । ಮುತ್ತಿನಸತ್ತಿಗೆಮೊತ್ತಂಬೆತ್ತಿರೆ । ಸುತ್ತಿತುರಂಗಿಗಳೊತ್ತರಿಸುತ್ತಿರೆ । ಮುಂದೆಸೆಯೊಳ್ಭೇರೀಧ್ವನಿಸಿಮಿರ್ದಿರೆ । ವಂದಿಗಳುಘ್ಘಡಣೆಗಳೊಪ್ಪುತ್ತಿರೆ । ಪಳಹದಶಂಖದಕಹಳೆಯನಿನದಂ । ಮೊಳಗುತ್ತಿರೆದಶದಿಶೆಯೊಳ್ಬಿನದಂ । ಬಡೆದಾಡುವನರ್ತಕಿಯರವೃಂದಂ । ಗುಡಿನಡೆತೋರಣದೋರಣದಂದಂ । ಸೊಗಯಿಪತಾಳದಮೇಳದನಾದಂ । ಬಗೆಗೊಳೆಬುಧಜಯಜಯರವಮಾದಂ । ಬೀಸುವಚಾಮರವೀಜನವೊತ್ತಂ । ಸೂಸುವಸೀಗುರಿಮಿಸುಗಿರೆಸುತ್ತಂ । ತುರುಗಿದಪೊಂದಳೆಗಳಬಳಿನೆಳಲೊಳ್ । ನೆರೆಬರ್ಪ್ಪಗಣಂಗಳಕಳಕಳದೊಳ್ । ವಿನಯಕಲಾಪಂ ತನುಗುಣಲೋಪಂ । ಶಿವಮಯಭಾವಂ ಭವವನದಾವಂ । ಶರಣಲಲಾಮಂ ಪರಮತಭೀಮಂ । ಗಣಕೃತತೋಷಂ ಗುಣಮಣಿಭೂಷಂ । ದುರಿತವಿದೂರಂ ಪರಹಿತಧೀರಂ । ಪ್ರಶಮಿತಮಾರಂ ಪಶುಪಕುಮಾರಂ । ವರಬಸವೇಶಂ ಕರುಣಾವೇಶಂ । ಗುರುಸಂಭ್ರಮದಿಂ ಬರುತೊಪ್ಪಿರ್ದ್ದಂ ॥ ... * ... ವ ॥ ಅಗಳ್ ॥ ಮತ್ತೇ ॥ ಮದಹಸ್ತಿಪ್ರಕರಂಕುಲಾದ್ರಿಚಯಮೆಂಬಂತೈದೆಸ

---

ಏಳ್ತರೆ- ಬರುತ್ತಿರಲು, ಕೆಲವಲದೊಳ್- ಉಭಯಪಾರ್ಶ್ವಗಳಲ್ಲಿ, ಮದಗಜಹಯವಾಹಂ- ಆನೆ ಕುದುರೆಗಳ ವಾಹನಗಳುಳ್ಳ, ಶರಣಸಮೂಹಂ, ನಲಿದು ಸಂತೋಷದಿಂದ, ಏಳ್ತರುತಿರೆ, ಮುತ್ತಿನಸತ್ತಿಗೆ- ಮುತ್ತಿನ ಛತ್ರಗಳು, ಮೊತ್ತಂಬೆತ್ತಿರೆ- ಗುಂಪಾಗಿರಲು, ತುರಂಗಿಗಳ್- ರಾವುತರು, ಸುತ್ತಿ, ಒತ್ತರಿಸುತ್ತಿರೆ, ಮುಂದೆಸೆಯೊಳ್- ಭೇರೀಧ್ವನಿ- ನಗಾರಿಯಶಬ್ದವು, ನಿಮಿರ್ದಿರೆ- ಅಧಿಕವಾಗಿರಲು, ವಂದಿಗಳ- ಸ್ತುತಿಪಾಠಕರ, ಉಘ್ಘಡಣೆಗಳ್- ಕೋಲಾಹಲವು, ಒಪ್ಪುತ್ತಿರೆ, ಪಳಹದ- ತಮ್ಮಟೆಯ, ಶಂಖದ, ಕಹಳೆಯ- ಕೊಂಬಿನ, ನಿನದಂ- ಶಬ್ದವು, ದಶದಿಶೆಯೊಳ್- ಹತ್ತುದಿಕ್ಕಿನಲ್ಲೂ, ಮೊಳಗುತ್ತಿರೆ- ಧ್ವನಿಮಾಡುತ್ತಿರಲು, ಬಿನದಂಬಡೆದು- ವಿನೋದವನ್ನುಹೊಂದಿ, ಆಡುವ- ಕುಣಿಯುವ, ನರ್ತಕಿಯರ- ನಾಟ್ಯಗಾತಿಯರ, ಬೃಂದಂ- ಗುಂಪು, ಗುಡಿನಡೆತೋರಣದ- ಬಚ್ಚರಣೆಯನಡೆತೋರಣಗಳ, ಓರಣದ- ಪಜ್ತಿಯ, ಅಂದಂ- ಸೊಗಸು, ಸೊಗಯಿಪ, ತಾಳದ, ಮೇಳದ, ನಾದಂ- ಧ್ವನಿಯು, ಬಗೆಗೊಳೆ- ಮನೋಹರವಾಗಿರಲು, ಬುಧಜಯಜಯರವಂ- ವಿದ್ವಾಂಸರಜಯಜಯವೆಂಬ ಶಬ್ದವು, ಆದಂ- ಅತ್ಯಂತವಾಗಿ, ಬೀಸುವ, ಚಾಮರವೀಜನವೊತ್ತಂ- ಚಾಮರಬೀಸಣಿಗೆ ಇವುಗಳಗುಂಪು, ಸೂಸುವ- ಹಾಕುವ, ಸೀಗುರಿ, ಮೊರ್ಛಾಲು, ಮಿಸುಗಿರೆ, ಸುತ್ತಂ- ಎಲ್ಲಾಕಡೆಯಲ್ಲೂ, ತುರುಗಿದ- ತುಂಬಿದ, ಪೊಂದಳೆಗಳ- ಚಿನ್ನದ ಛತ್ರಗಳ, ಬಳಿನೆಳಲೊಳ್- ಸಮೀಪದ ನೆಳಲಿನಲ್ಲಿ, ನೆರೆ, ಬರ್ಪ, ಗಣಂಗಳ, ಕಳಕಳದೊಳ್- ಕೋಲಾಹಲದಿಂದ, ವಿನಯಕಲಾಪಂ- ವಿನಯಗುಣವೇ ಆಭರಣವಾಗುಳ್ಳ, ತನುಗುಣಲೋಪಂ- ದೇಹಸಂಬಂಧವಾದ ರೋಗಾದಿಗುಣಗಳ ನಾಶವುಳ್ಳ- ಶಿವಮಯಭಾವಂ- ಮಂಗಳವಿಕಾರವಾದಭಿಪ್ರಾಯವುಳ್ಳ, ಭವವನದಾವಂ- ಪಾಪವೆಂಬಕಾಡಿಗೆ ಕಾಡ್ಗಿಚ್ಚಾದ, ಶರಣಲಲಾಮಂ- ಶಿವಶರಣೋತ್ತಮನಾದ, ಪರಮತಭೀಮಂ- ಶಿವೇತರಮತಗಳಿಗೆ ಭಯಂಕರನಾದ, ಗಣಕೃತತೋಷಂ- ಶಿವಗಣಂಗಳಿಗುಂಟುಮಾಡಲ್ಪಟ್ಟ ಸಂತೋಷವುಳ್ಳ, ಗುಣಮಣಿಭೂಷಂ- ಸದ್ಗುಣಗಳೆಂಬ ರತ್ನಾಭರಣವುಳ್ಳ, ದುರಿತವಿದೂರಂ- ಪಾಪಕ್ಕೆದೂರನಾದ, ಪರಹಿತಧೀರಂ- ಪರೋಪಕಾರದಲ್ಲಿ ಸಮರ್ಥನಾದ, ಪ್ರಶಮಿತಮಾರಂ- ನಾಶಮಾಡಲ್ಪಟ್ಟಮನ್ಮಥನುಳ್ಳ, ಪಶುಪಕುಮಾರಂ- ಪರಶಿವನಿಗೆ ಪುತ್ರನಾದ, ಕರುಣಾವೇಶಂ- ದಯಾರಸದಪ್ರವೇಶವುಳ್ಳ, (ಅಂದರೆ ದಯಾಭರಿತನಾದ,) ಬಸವೇಶಂ, ಗುರುಸಂಭ್ರಮದಿಂ, ಅಧಿಕವಾದ ಸಡಗರದಿಂದ, ಬರುತೆ, ಒಪ್ಪಿರ್ದ್ದಂ. * * * * * * * * * * * * * *

ಮದಹಸ್ತಿಪ್ರಕರಂ- ಮದ್ದಾನೆಗಳ ಗುಂಪು, ಕುಲಾದ್ರಿಚಯಂ- ಕುಲಾಚಲಗಳು, ಎಂಬಂತೆ, ಐದೆ ಸದ್ವಾಜಿಬೃಂದದ- ಒಳ್ಳೇಕುದುರೆಗಳ ಗುಂಪಿನ, ಹೇಷಾರಸಿತಕ್ಕೆ- ಶಬ್ದಕ್ಕೆ, ಭಾನುರಥದ- ಸೂರ್ಯನ ತೇ

ದ್ವಾಜಿಪ್ರಿಂ । ದವಹೇಷಾರಸಿತಕ್ಕೆ ಭಾನುರಥದಶ್ವಂಬೆರ್ಚ್ಚೆ ಚಂಚದ್ರಥೌ ॥ ಘದಚೀತ್ಕಾ ರರವಮ ದಿಶಾವಿವರಮಂ ಪೂರೈಸೆ ಭೂಪಾಲನೊ । ಲ್ದಿದಿರ್ವಂದಂ ಭಟರಾಜಿಸಂದಣಿಸೆ ಪ್ರೊ ರ್ಲ್ಲೋದ್ಯತ್ಸಮುತ್ಸಾಹದಿಂ ॥ .. ... ... ... ॥೨೦॥

ವ ॥ ಅಂತಿದಿರ್ಗೊಂಡು ಬಿಜ್ಜಳನೃಪಂ ಬಸವರಾಜನಂ ಕಣ್ಬುಂಬಿ ನೋಡಿ ಮನ ದೊಳುತ್ಸವಿಸಿ ಕೂರ್ಮೆಯಿಂ ಕೊಂಡಾಡಿ ಮೃದುಮಧುರ ಸಲ್ಲಾಪದಿಂ ಯಥೋಚಿತವಿನ ಯಮಂ ಮೆರೆದು ನಿಜಮಂದಿರಕ್ಕೆ ಕೈಗೊಟ್ಟು ಕರೆದೊಯ್ದು ಮಣಿಪೀಠದೊಳ್ಮೂರ್ತಿ ಗೊಳಿಸಿ ತಾನುಂ ಸಮುಚಿತಾಸನಾರೂಢನಾಗಿ ಸುರೇಂದ್ರವೈಭವಮ ಮಿಗೆ ನರೇಂದ್ರನೊ ಡ್ಡೋಲಗಂಗೊಟ್ಟೊಪ್ಪುತ್ತಮಿರ್ಪನ್ನೆಗಂ ॥ * * * * * * * * *

ಕಂ ॥ ಹರಲಿಖಿತಲಿಪಿವಿರಾಜಿತ । ಮರಸನಸಭೆಯಲ್ಲಿ ಬೀಳ್ದುದಾಕಸ್ಮಿಕದಿಂ । ಸುರ ಮಾರ್ಗದತ್ತಣಿಂ ಭಾ । ಸುರಲೇಖನಮೊಂದು ಶಂಕರಪ್ರೇರಣೆಯಿಂ ॥ ... ... ॥೨೩॥

ವ ॥ ಆಲೇಖನಮ ನರಸನಾಶ್ಚರ್ಯಮಾನಸಂ ಕಂಡು ನಿಜಕರಾಗ್ರದಿಂ ನೆಗಪಿ ತೆಗೆ ದೋದಲುಜ್ಜುಗಿಸೆ ನೋಳ್ಪನ ಮಾಲಿಪಿಯದೃಷ್ಟಪೂರ್ವ ಮಶಕ್ಯಮಾಗೆ ಕೆಲದೊಳಿ

---

ರಿನ, ಅಶ್ವಂ- ಕುದುರೆಗಳು, ಬೆರ್ಚ್ಚೆ- ಭಯಪಡಲು, ಚಂಚದ್ರಥೌಘದ- ಚಪಲವಾದ ರಥಸಮೂಹದ, ಚೀ ತ್ಕಾರರವಂ- ಚೀರೆಂಬಶಬ್ದವು, ದಿಶಾವಿವರಮಂ- ಸಮಸ್ತದಿಕ್ಕುಗಳ ಸಂದನ್ನು, ಪೂರೈಸೆ- ತುಂಬಿಕೊಳ್ಳ ಲು, ಭಟರಾಜಿ- ಕಾಲಾಳುಗಳಸೈನ್ಯ, ಸಂದಣಿಸೆ- ಗುಂಪಾಗಿರಲು, ಭೂಪಾಲಂ- ಬಿಜ್ಜಳನು, ಒಲ್ದು- ಪ್ರೀ ತಿಸಿ, ಉದ್ಯತ್ಸಮುತ್ಸಾಹದಿಂ- ವೃದ್ಧಿಹೊಂದುತ್ತಿರುವ ಸಂತೋಷದಿಂದ, ಇದಿರ್ವಂದಂ. ... ॥೨೦॥

ಬಿಜ್ಜಳನೃಪಂ, ಬಸವರಾಜನಂ, ಅಂತು, ಇದಿರ್ಗೊಂಡು, ಕಣ್ಬುಂಬಿ- ಪೂರ್ಣನೇತ್ರದಿಂದ, ನೋ ಡಿ; (ಅಂದರೆ ಮನಃಪೂರ್ವಕವಾಗಿ ಚೆನ್ನಾಗಿ ನೋಡಿ ಯೆಂದರ್ಥ.) ಮನದೊಳ್, ಉತ್ಸವಿಸಿ, ಕೂರ್ಮೆಯಿಂ- ಪ್ರೀತಿಯಿಂದ, ಕೊಂಡಾಡಿ- ಹೊಗಳಿ, ಮೃದುಮಧುರಸಲ್ಲಾಪದಿಂ- ಕೋಮಲವಾಗಿಯೂ ಮನೋಹರ ವಾಗಿಯೂ ಇರುವ ಮಾತಿನಿಂದ, ಯಥೋಚಿತವಿನಯಮಂ- ಯಥಾಯೋಗ್ಯವಾದ ವಿನಯಗುಣವನ್ನು, ಮೆ ರೆದು- ತೋರ್ಪಡಿಸಿ, ಕೈಗೊಟ್ಟು- ಹಸ್ತಲಾಗವಂಕೊಟ್ಟು, ನಿಜಮಂದಿರಕ್ಕೆ- ತನ್ನಮನೆಗೆ, ಕರೆದೊ ಯ್ದು- ಕರೆದುಕೊಂಡುಹೋಗಿ, ಮಣಿಪೀಠದೊಳ್- ರತ್ನಖಚಿತವಾದ ಆಸನದಲ್ಲಿ, ಮೂರ್ತಿಗೊಳಿಸಿ- ಕು ಳ್ಳಿರಿಸಿ, ತಾನುಂ, ಸಮುಚಿತಾಸನಾರೂಢನಾಗಿ- ಯೋಗ್ಯವಾದ ಪೀಠದಲ್ಲಿ ಕುಳಿತುಕೊಂಡು, ಸುರೇಂದ್ರ ವೈಭವಮಂ- ಇಂದ್ರನ ವಿಭವಕ್ಕಿಂತಲೂ ಮಿಗೆ- ಹೆಚ್ಚಾಗುವಹಾಗೆ, ನರೇಂದ್ರಂ- ಬಿಜ್ಜಳರಾಜನು, ಒಡ್ಡೋ ಲಗಂಗೊಟ್ಟು- ಸಭೆಯಂಮಾಡಿ, ಒಪ್ಪುತ್ತಂ,ಇರ್ಪನ್ನೆಗಂ. * * * * * * * * *

ಹರಲಿಖಿತಲಿಪಿವಿರಾಜಿತಂ- ಈಶ್ವರನಿಂದ ಬರೆಯಲ್ಪಟ್ಟ ಬರವಣಿಗೆಯಿಂದ ಪ್ರಕಾಶಿಸುವ, ಒಂದುಭಾ ಸುರಲೇಖನಂ- ಮನೋಹರವಾದೊಂದುಪತ್ರವು, ಶಂಕರಪ್ರೇರಣೆಯಿಂ- ಶಿವಾನುಗ್ರಹದಿಂದ, ಆಕಸ್ಮಿಕದಿಂ- ಅಕಸ್ಮಾತ್ತಾಗಿ, ಸುರಮಾರ್ಗದತ್ತಣಿಂ- ಆಕಾಶದದೆಸೆಯಿಂದ, ಅರಸನ, ಸಭೆಯಲ್ಲಿ, ಬೀಳ್ದುದು. ॥೨೩॥

ಆಲೇಖನಮಂ- ಪತ್ರವನ್ನು, ಅರಸಂ, ಕಂಡು, ಆಶ್ಚರ್ಯಮಾನಸಂ- ಅಚ್ಚರಿಯಿಂಕೂಡಿದ ಮನಸ್ಸು ಳ್ಳವನಾಗಿ, ನಿಜಕರಾಗ್ರದಿಂ- ತನ್ನ ಕಯ್ಯಿಂದ, ನೆಗಪಿ- ಎತ್ತಿ, ತೆಗೆದು, ಬಿಚ್ಚಿ, ಓದಲ್, ಉಜ್ಜುಗಿಸಿ- ಪ್ರ ಯತ್ನಿಸಿ, ನೋಳ್ಪನಂ- ನೋಡುವಾಗ, ಆಲಿಪಿ, ಅದೃಷ್ಟಪೂರ್ವಂ- ಪೂರ್ವದಲ್ಲಿ ಯಾವಾಗಲೂ ಕಾಣಲ್ಪ ಡದೇಇರುವದು, ಅಶಕ್ಯಂ- ತಿಳಿಯುವದಕ್ಕಸಾಧ್ಯವಾದದ್ದು, ಆಗೆ- ಆಗಲು, ಕೆಲದೊಳ್- ಪಕ್ಕದಲ್ಲಿ, ಇ

ರ್ದ್ಧ ನಾನಾದೇಶೀಯಬಹುಲಿಪಿವಿಚಕ್ಷಣರಾದ ಕರಣಿಕರಂ ಕರೆದವರಿಂದಿರ ಕರಾಗ್ರದೊಳೀಯು ಲೊಡನಾಲೇಖನವಂ ನವರುವೋದಲರಿಯದೆ ಬೆರಗಾಗಿ ಬೆಬ್ಬಳಿವೋಗಿ ॥ * * * *

ಕಂ ॥ ಉರಗಪತಿ ವಿಧಿ ಬೃಹಸ್ಪತಿ । ಹರಿ ಗುಹ ಗಜವದನರಲ್ಲದಿದನೋದಲ್ಬ ॥ ಲ್ಲ ರುಮೊಳರೆ ದರೆಯೊಳಿದು ಶಾಂ । ಕರಲಿಪಿ ತಿಳಿದೋದಲೆಮಗೆ ಸಾಧ್ಯಮೆ ನೃಪತೀ ॥ ॥೨೪॥

ವ ॥ ಎಂದರಸನ ಮುಂಗಡೆಯೊಳಿರಿಸ ಲೊಡನೀಲೇಖನಮ ನವನೋದುವನವಂಗೆ ಸರ್ವಾಧ್ಯಕ್ಷತೆಯ ನಿತ್ತಪೆ ನನ್ನಿಯೆಂದಿಳಾಧಿಪತಿಯೆಂಬುದು ಮಾಗಳಾಶಿವಲಿಖಿತಪತ್ರಿಕೆಯಂ ಬಸವರಾಜ ನೋಜೆಯಿಂತೆಗೆದು ಶಿರದೊಳಿಟ್ಟು ಮಣಿದು ॥ * * * * *

ಚಂ ॥ ಗಳಗಳನೋದಿದಂ ಕ್ಷಣದೊಳಾಲಿಪಿಯಂ ಸಭೆಕೇಳ್ದು ವಿಸ್ಮಯಂ । ಗೊಳೆ ನೃಪನೀಕ್ಷಿಸುತ್ತೆ ಪಿರಿದುಂ ಪೊಗಳುತ್ತಿರೆ ಪತ್ರಿಕಾರ್ಥಮಂ ॥ ತಿಳಿದು ನರೇಂದ್ರ ನಿನ್ನ ಹರಿಪೀಠದಧಃಸ್ಥಲದೊಳ್ನಿಧಾನಮುಂ । ಜ್ಜ್ವಳತರಮಿರ್ಕು ಮೆಂದೊರೆದಗುಳ್ಚಿದ ನುತ್ಸವದಿಂ ವೃಷಾಧಿಪಂ ॥ ... ... ... ... ... ॥೨೫॥

ವ ॥ ಅಂತಗುಳ್ಚಿ ಮುಚ್ಚಳಂಬಿರ್ಚಿ ನರೇಂದ್ರಾದಿಗಳ್ನೋಡುತ್ತಮಿರೆ । * *

---

ರ್ದ್ಧ, ನಾನಾದೇಶೀಯಬಹುಲಿಪಿವಿಚಕ್ಷಣರಾದ- ಅನೇಕದೇಶಗಳ ಮಾತಿನ ಬರವಣಿಗೆಗಳಲ್ಲಿ ಕುಶಲರಾದ, ಕರಣಿಕರಂ- ಗಣಿಕರನ್ನು, ಕರೆದು, ಅವರಿಂದಿರ- ಅವರುಗಳ, ಕರಾಗ್ರದೊಳ್- ಈಯಲ್- ಕೊಡಲು, ಒಡನೆ, ಅವರು, ಆಲೇಖನಮಂ, ಓದಲ್- ಓದುವದಕ್ಕೆ, ಅರಿಯದೆ- ತಿಳಿಯದೆ, ಬೆರಗಾಗಿ, ಬೆಬ್ಬಳಿವೋಗಿ, ಭಯದಿಂದ ಸ್ತಂಭೀಭೂತರಾಗಿ. * * * * * * * * * * * * * * *

ನೃಪತಿ- ರಾಜನೇ, ಉರಗ........ ವದನರಲ್ಲದೆ— ಉರಗಪತಿ- ಆದಿಶೇಷ, ವಿಧಿ- ಬ್ರಹ್ಮ, ಬೃಹಸ್ಪತಿ- ದೇವಗುರು, ಹರಿ- ವಿಷ್ಣು, ಗುಹ- ಷಣ್ಮುಖ, ಗಜವದನರಲ್ಲದೆ- ವಿಘ್ನೇಶ್ವರ ಇವರುಗಳು ಹೊರತಾಗಿ, ಇದಂ- ಈ ಪತ್ರವನ್ನು, ಓದಲ್, ಬಲ್ಲರುಂ- ತಿಳಿದಿರುವರೂ, ದರೆಯೊಳ್- ಭೂಮಿಯಲ್ಲಿ, ಒಳರೆ- ಇದ್ದಾರೆಯೋ ? ಇದು, ಶಾಂಕರಲಿಪಿ- ಈಶ್ವರನ ಬರವಣಿಗೆಯು, (ಇದಂ,) ತಿಳಿದು, ಓದಲ್, ಎಮಗೆ- ಸಾಧ್ಯಮೇ ? ... ... ... ... ... ॥೨೪॥

ಎಂದು, ಅರಸನ, ಮುಂಗಡೆಯೊಳ್, ಇರಿಸಲ್, ಒಡನೆ- ಕೂಡಲೇ, ಇಳಾಧಿಪತಿ- ಬಿಜ್ಜಳರಾಜನು, ಈಲೇಖನಮಂ, ಆವಂ, ಓದುವಂ, ಅವಂಗೆ, ಸರ್ವಾಧ್ಯಕ್ಷತೆಯಂ- ಸಮಸ್ತಾಧಿಕಾರವನ್ನೂ, ಇತ್ತಪೆಂ-ಕೊಡುವೆನು, ನನ್ನಿ- ನಿಶ್ಚಯವು, ಎಂದು, ಎಂಬುದುಂ- ಹೇಳಲು, ಆಗಳ್, ಬಸವರಾಜಂ, ಆ ಶಿವಲಿಖಿತಪತ್ರಿಕೆಯಂ, ಓಜೆಯಿಂ- ಶ್ರದ್ಧೆಯಿಂದ, ತೆಗೆದು, ಶಿರದೊಳ್, ಇಟ್ಟು, ಮಣಿದು-ನಮಸ್ಕರಿಸಿ. * * * *

ವೃಷಾಧಿಪಂ, ಕ್ಷಣದೊಳ್, ಆಲಿಪಿಯಂ, ಗಳಗಳನೆ- ತಡಮಾಡದೆ, ಓದಿದಂ, ಸಭೆ- ಸಭೆಯಲ್ಲಿರುವ ಜನವು, ಕೇಳ್ದು, ವಿಸ್ಮಯಂಗೊಳೆ- ಆಶ್ಚರ್ಯಪಡುತ್ತಿರಲು, ನೃಪಂ, ಈಕ್ಷಿಸುತ್ತೆ— ನೋಡುತ್ತ, ಪಿರಿದುಂ- ಹೆಚ್ಚಾಗಿ, ಪೊಗಳುತ್ತಿರೆ, ಪತ್ರಿಕಾರ್ಥಮಂ- ಆಲೇಖನದಭಿಪ್ರಾಯವನ್ನು, ತಿಳಿದು, ನರೇಂದ್ರ- ರಾಜನೇ, ನಿನ್ನ, ಹರಿಪೀಠದ- ಸಿಂಹಾಸನದ, ಅಧಃಸ್ಥಲದೊಳ್- ಕೆಳಗಡೆಯಲ್ಲಿ, ಉಜ್ಜ್ವಳತರಂ- ಅತಿಪ್ರಕಾಶಮಾನವಾದ, ನಿಧಾನಂ- ನಿಕ್ಷೇಪವು, ಇರ್ಕುಂ, ಎಂದು, ಒರೆದು- ಹೇಳಿ, ಉತ್ಸವದಿಂ, ಅಗುಳ್ಚಿದಂ- ಅಗಿಸಿದನು.

ಅಂತು, ಅಗುಳ್ಚಿ, ಮುಚ್ಚುಳಂಬಿರ್ಚಿ— ಮೇಲಿಮುಚ್ಚಿದ ಮುಸುಕನ್ನು ತೆಗೆದು, ನರೇಂದ್ರಾದಿಗಳ್- ನೋಡುತ್ತಂ,ಇರೆ. * * * * * * * * * * * * * * * * *

ಕಂ॥ ಕ್ಷಣರುಚಿ ಚಿರರುಚಿಯಕ್ಕುಂ । ದಜನಣಿಯರ ಮಾಡಿಪ್ಪನನೆ ತಮೋಭಯದೆ ನ
ಭೋಮಣಿ ನಿಜರುಚಿಯಂ ಪೊಳ್ದಪ್ಪೊಲೆಣೆಗೆಟ್ಟ ಸುವರ್ಣರಾಶಿ ಯೆಸೆಯಿಸಿತೋ॥

ಕಂ ॥ ಒಳಗಮರ್ದ ಪೊನ್ನರಾಶಿಯು । ನಿಳೆ ತಳೆದು ಸುವರ್ಣಗರ್ಭೆಯೆನಿಸಿದಳಾಗಳ್ ॥
ನಳಿನಭವ ನಾತ್ಮದೇವತೆ । ಕುಳಮಾಗೆ ತದೀಯನಾಮಮುಮಂ ತಾಳ್ದಿದಪೊಲ್ ॥ ॥೧೪॥

ಕಂ ॥ ವಿತ್ತಮಿದು ಭೂಪ ಚಾಳೋ । ಕ್ಯೋತ್ತಮಕುಲದರಸರಿಟ್ಟ ನಿಧಿಗಣನೆ
ಯೊಳೆಂಬತ್ತೆಂಟುಕೋಟಿ ಮಿಸುಪುದೆ । ನುತ್ತಂ ತೋರಿಸಿದ ನವನಿಪಂಗೆ ವೃಷೇಂದ್ರಂ॥

ವ ॥ ಆಗಳ್ ಪೊಂಗಳ್ ವೃಷೇಂದ್ರಕರಸ್ಪರ್ಶಪ್ರಭಾವದಿಂ ದ್ವಿಗುಣಿತವಾಗಿ ಪೆರ್ಚೆ
ನೃಪಂ ಕಂಡು ಸಾದ್ಭುತಾಂತಃಕರಣಂ ನನೆಕೊನೆವೋಗಿ ರಾಗಿಸಿ ಮಹಾಪುರುಷನೀಬಸ
ವಂ ಬರೆವರೆ ಮುನ್ನಮೆಮಗೆ ಸಂಪದಂ ಸಮನಿಸಿದುದೆಂದು ನಿಜಪಾರ್ಶ್ವವರ್ತಿ ಮಂತ್ರಿ
ಮಂಡಳಿಕರೊಳ್ ಕೊಂಡಾಡಿ ಬಸವರಾಜನಂ ನೋಡಿ ದೇವ ನೀನಪ್ಪೊಡೆ ಜಗದ್ಧಿತಾರ್ಥಮ
ವತರಿಸಿದಮಹಾಮಹಿಮಸಂಗಮೇಶ್ವರಸಾಕ್ಷಾತ್ಕಾರಂ ಬಡೆದ ಮಹಾಪುರುಷಂ ಪುರಾಕೃ

---

* ಕ್ಷಣರುಚಿ- ಮಿಂಚು, ಚಿರರುಚಿ- ಬಹಳಕಾಲವಿರುವ ಕಾಂತಿಯುಳ್ಳದ್ದು, ಅಕ್ಕು, ಎಂದು ಅಜಂ- ಬ್ರಹ್ಮನು, ಅಣಿಯರಂ- ಕ್ರಮವಾಗಿ, ಇಪ್ಪಂ, ಎನೆ, † ನಭೋಮಣಿ- ಸೂರ್ಯನು, ತಮೋಭಯದೆ- ಕತ್ತಲೆ ಯುಗ್ರಹದಭೀತಿಯಿಂದ, ನಿಜರುಚಿಯಂ- ತನ್ನಕಿರಣವನ್ನು, ಪೊಳ್ದಪೊಲ್- ಭೂಮಿಯಲ್ಲಿ ಹೂತಿರುವಹಾಗೆ, ಎಣೆಗೆಟ್ಟ- ಅಸದೃಶವಾದ, ಸುವರ್ಣರಾಶಿ, ಎಸೆಯಿಸಿತೋ. ... ... ॥೧೩॥

ಒಳಗೆ, ಅಮರ್ದ- ಸೇರಿರುವ, ಪೊನ್ನ- ಸುವರ್ಣದ, ರಾಶಿಯಂ, ಇಳೆ, ತಳೆದು, ಆಗಳ್, ಸುವರ್ಣ ಗರ್ಭೆ- ಚಿನ್ನವೇ ಹೊಟ್ಟೆಯಲ್ಲುಳ್ಳವಳು, ಎನಿಸಿದಳ್, ನಳಿನಭವಂ- ಬ್ರಹ್ಮನು, ಆತ್ಮದೇವತೆ- ತಮ್ಮ ಮನೆ ದೇವರು. ಕುಳಂ- ವಂಶಾನುಗತವು,ಆಗೆ, ತದೀಯನಾಮಮುಮಂ- ಆಹಿರಣ್ಯಗರ್ಭೆಯ ಹೆಸರನ್ನು,ತಾಳ್ದಿದಪೊಲ್- ಧರಿಸಿದಹಾಗೆ, (ಹಿರಣ್ಯಗರ್ಭಂ ಎನಿಸಿದಂ.) ... ... ... ... ॥೧೪॥

ವೃಷೇಂದ್ರಂ, ಅವನಿಪಂಗೆ- ಬಿಜ್ಜಳರಾಜನನ್ನುಕುರಿತು, ಭೂಪ, ಇದುವಿತ್ತಂ- ಈ ದ್ರವ್ಯವು, ಚಾಳೋಕ್ಯೋತ್ತಮಕುಲದ- ಚಾಳೋಕ್ಯವಂಶೋದ್ಭೂತರಾದ, ಅರಸರ್, ಇಟ್ಟ, ನಿಧಿ- ನಿಕ್ಷೇಪವು, ಗಣನೆಯೊಳ್- ಎಣಿಸುವಲ್ಲಿ, ಎಂಬತ್ತೆಂಟುಕೋಟಿ, ಮಿಸುಪುದು- ಪ್ರಕಾಶಿಸುವದು, ಎನುತ್ತಂ, ತೋರಿಸಿದಂ.

ಆಗಳ್, ಪೊಂಗಳ್- ಚಿನ್ನದ ನಾಣ್ಯಗಳು,ವೃಷೇಂದ್ರಕರಸ್ಪರ್ಶಪ್ರಭಾವದಿಂ- ಬಸವೇಶ್ವರನಹಸ್ತವು ಸೋಂಕಿದಮಹಿಮೆಯಿಂದಲೇ, ದ್ವಿಗುಣಿತಂಆಗಿ- ಎರಡರಷ್ಟಾಗಿ, ಪೆರ್ಚೆ, ನೃಪಂ, ಕಂಡು, ಸಾದ್ಭುತಾಂತಃಕರಣಂ- ಆಶ್ಚರ್ಯಯುಕ್ತವಾದ ಮನಸ್ಸುಳ್ಳವನಾಗಿ, ನನೆಕೊನೆವೋಗಿ- ಅಧಿಕವಾಗಿ ಸಂತೋಷಿಸಿ, ರಾಗಿಸಿ- ಪ್ರೀತಿಪಟ್ಟು, ಮಹಾಪುರುಷಂ, ಈಬಸವಂ, ಬರೆವರೆ- ಬರಲಾಗಿ, ಮುನ್ನಂ, (ಈತನಿಗಧಿಕಾರವಂ ಕೊಡುವದಕ್ಕಿಂತಲೂ ಪೂರ್ವವೇ) ಎಮಗೆ, ಸಂಪದಂ, ಸಮನಿಸಿದುದು- ಪ್ರಾಪ್ತವಾಯಿತು, ಎಂದು, ನಿಜಪಾರ್ಶ್ವವರ್ತಿಮಂತ್ರಿಮಂಡಳಿಕರೊಳ್- ತನ್ನ ಪಕ್ಕದಲ್ಲಿರುವ ಮಂತ್ರಿಸಾಮಾಜಿಕರೊಡನೆ, ಕೊಂಡಾಡಿ, ಬಸವರಾಜನಂ, ನೋಡಿ, ದೇವ, ನೀನಪ್ಪೊಡೆ- ನೀನಾದರೋ, ಜಗದ್ಧಿತಾರ್ಥಂ- ಲೋಕಕ್ಕೆ ಹಿತವನ್ನುಂಟುಮಾಡುವದಕ್ಕೋಸ್ಕರ, ಅವತರಿಸಿದ- ಬಂದ; ಮಹಾಮಹಿಮಸಂಗಮೇಶ್ವರಸಾಕ್ಷಾತ್ಕಾರಂಬಡೆದ- ಅತ್ಯಂತ ಮಹಾತ್ಮನಾದ ಸಂಗಮೇಶ್ವರನ ಪ್ರತ್ಯಕ್ಷತ್ವವನ್ನು ಹೊಂದಿದ, ಮಹಾಪುರುಷಂ; ಪುರಾಕೃ

---

* (ಅವ) ಸ್ವಲ್ಪಕಾಲವಿರುವ ಕಾಂತಿಯುಳ್ಳದ್ದು. † (ಅವ) ಅಂತರಿಕ್ಷಕ್ಕೆ ರತ್ನನು. ॥೧೫॥

ತಮಗೀಯಪುಣ್ಯಪ್ರಭಾವದಿಂ ಲಬ್ಧನಾದೆ ಯಂತರಿಂದೆನ್ನ ಸಾಮ್ರಾಜ್ಯಕ್ಕೆ ನಿಷ್ಕಂಟಕಮಪ್ಪಂತೆ ದಂಡಾಧಿಪತ್ಯಮಂ ಕೈಕೊಳ್ವುದೆಂದನುನಯಂಮಿಗೆ ನುಡಿದೊಡಂಬಡಿಸಿ ಪರಮಸಂಭ್ರಮದಿಂ ದಂಡನಾಥಪಟ್ಟಮಂ ಕಟ್ಟಲೊಡನೆ ॥ * * * * * * *

ಕಂ ॥ ವಸುಧಾಕಾಂತೆಗೆ ಪೊಸಸಂ । ತಸವೊಗೆದುದು ಶರಣತತಿಮುದುಂದಳೆದುದು
ಬೆ ॥ ಳ್ಜಸಮೆಣ್ದೆಸೆವರಿದುದು ಖಲ । ವಿಸರಂ ಕೊರಗಿದುದು ವಿಬುಧರುತ್ಸವಮಾಂತರ್ ॥

ವ ॥ ಮತ್ತಮಾಗಳರಸಂನಿಜಸಾಮ್ರಾಜ್ಯಭಾರಮನಪ್ಪುಕೆಯ್ಸಲಿಂತೆಂದಂ॥ * *

ಮತ್ತೇಭ ॥ ಘನದಾನದ್ವಿಪರಾಜಿ ಸಪ್ತಶತಿಯೆಳ್ನೂರ್ಸತ್ವಸಲ್ಲಕ್ಷಣಾಂ । ಗನಿಯುಕ್ತಾತಿಜವಾಶ್ವವೃಂದ ಮಿದುಪನ್ನಿರ್ಚ್ಛಾಸಿರಂ ದಂಡಿಯೊಳ್ ॥ ಳ್ಮೊನೆದೋರ್ಪಾಳ್ಗಳಸೇಣಿ ಪನ್ನೆರಡುಲಕ್ಷಂ ದುರ್ಮದಾರಾತಿರಾ । ಜನಿಕಾಯಾಜಿತದುರ್ಗವರ್ಗಮೆ ಶತಂ ಕಲ್ಯಾಣ ಮೀಪಟ್ಟಣಂ ॥ ... ... ... .. ... ... ॥೩೦॥

ಕಂ ॥ ಮೂವತ್ತುಕೋಟಿಪೊಂಗಳ್ । ಭಾವಿಪುವೊಡನಂತಕೋಟಿಧಾನ್ಯೋತ್ಕರದಿಂ ॥
ತೀವಿರ್ದ ರಾಶಿಲಕ್ಷಂ । ಭೂವಿನುತಾನರ್ಘದಿವ್ಯಮಣಿಭರಣಂಗಳ್ ॥ ... ॥೩೧॥

---

ತಮಗೀಯಪುಣ್ಯಪ್ರಭಾವದಿಂ- ಪೂರ್ವಜನ್ಮದಲ್ಲಿ ನಾನುಮಾಡಿದ್ದ ಪುಣ್ಯಾಶಕ್ತಿಯಿಂದ, ಲಬ್ಧನಾದೆ- ಪ್ರಾಪ್ತನಾಗಿರುವೆ, ಅಂತರಿಂದೆ- ಆದುದರಿಂದ, ಎನ್ನ, ಸಾಮ್ರಾಜ್ಯಕ್ಕೆ- ರಾಜ್ಯಭಾರಕ್ಕೆ, ನಿಷ್ಕಂಟಕಂ- ನಿರ್ವಿಘ್ನವು, ಅಪ್ಪಂತೆ, ದಂಡಾಧಿಪತ್ಯಮಂ- ದಂಡನಾಥಪಟ್ಟವನ್ನು. (ಸರ್ವಶಾಸನಾಧಿಕಾರ) ಕೈಕೊಳ್ವುದು- ಅಂಗೀಕರಿಸುವದು, ಎಂದು, ಅನುನಯಂ- ವಿನಯವು, ಮಿಗೆ, ನುಡಿದು, ಒಡಂಬಡಿಸಿ- ಸಮ್ಮತಿಪಡಿಸಿ, ಪರಮಸಂಭ್ರಮದಿಂ- ಅತ್ಯಂತಸಡಗರದಿಂದ, ದಂಡನಾಥಪಟ್ಟಮಂ,ಕಟ್ಟಲ್, ಒಡನೆ. * * * *

ವಸುಧಾಕಾಂತೆಗೆ- ಭೂಮಿಯೆಂಬ ಸ್ತ್ರೀಗೆ, ಪೊಸಸಂತಸಂ- ನೂತನವಾದ ಸಂತೋಷವು, ಒಗೆದುದು, ಶರಣತತಿ, ಮುದುಂದಳೆದುದು, ಬೆಳ್ಜಸಂ- ಶುಭ್ರವಾದ ಕೀರ್ತಿಯು, ಎಣ್ದೆಸೆವರಿದುದು- ಎಂಟುದಿಕ್ಕುಗಳಲ್ಲೂ ವ್ಯಾಪಿಸಿತು, ಖಲವಿಸರಂ- ದುರ್ಜನಸಮೂಹವು, ಕೊರಗಿದುದು- ಕಾಂತಿಗುಂದುವದಾಯಿತು, ವಿಬುಧರ್- ವಿದ್ವಾಂಸರು, ಉತ್ಸವಮಾಂತರ್- ಸಂತೋಷವಂ ಹೊಂದಿದರು. ... ॥೨೯॥

ಮತ್ತಂ, ಆಗಳ್, ಅರಸಂ, ನಿಜಸಾಮ್ರಾಜ್ಯಭಾರಮಂ, ಅಪ್ಪುಕೆಯ್ಸಲ್- ಬಸವೇಶ್ವರನು ಅಂಗೀಕರಿಸುವಂತೆ ಮಾಡುವದಕ್ಕೋಸ್ಕರ, ಇಂತೆಂದಂ. * * * * * * * * * *

ಘನದಾನದ್ವಿಪರಾಜಿ- ಶ್ರೇಷ್ಠಗಳಾದ ಮದ್ದಾನೆಗಳ ಗುಂಪು, ಸಪ್ತಶತಿ, ಏಳ್ನೂರು; ಸತ್ವ......
...ವೃಂದಂ— ಸತ್ವ- ಬಲ, ಸಲ್ಲಕ್ಷಣಾಂಗ- ಒಳ್ಳೆಸುಳಿ ಮುಂತಾದಲಕ್ಷಣಗಳುಳ್ಳ, ಅಂಗ- ಶರೀರದಿಂದ, ನಿಯುಕ್ತ- ಕೂಡಿದ, ಅತಿಜವ- ಅತಿವೇಗಸಂಪನ್ನಗಳಾದ, ಅಶ್ವವೃಂದಂ- ಕುದುರೆಗಳಗುಂಪು, ಇದು, ಪನ್ನಿರ್ಚ್ಛಾಸಿರಂ- ಹನ್ನೆರಡುಸಾವಿರ; ದಂಡಿಯೊಳ್- ಯುದ್ಧದಲ್ಲಿ, ಮೊನೆದೋರ್ಪ- ಪರಾಕ್ರಮವಂ ತೋರಿಸುವ, ಆಳ್ಗಳ, ಸೇಣಿ- ಗುಂಪು, ಪನ್ನೆರಡುಲಕ್ಷಂ; ದುರ್ಮದಾ......... ವರ್ಗಮೆ— ದುರ್ಮದ- ದುಷ್ಟವಾದ ಗರ್ವದಿಂಕೂಡಿದ, ಅರಾತಿರಾಜ- ಶತ್ರುರಾಜರ, ನಿಕಾಯ- ಗುಂಪಿನಿಂದ, ಅಜಿತ- ಜೈಸಲ್ಪಡದೇಇರುವ, ದುರ್ಗ- ಕೋಟೆಗಳ, ವರ್ಗಮೆ- ಗುಂಪೇ, ಶತಂ- ನೂರು; ಕಲ್ಯಾಣಂ, ಈಪಟ್ಟಣಂ, ಇರ್ಕುಂ. ॥೩೦॥

ಮೂವತ್ತುಕೋಟಿಪೊಂಗಳ್- ಮೂವತ್ತು ಕೋಟಿ ಚಿನ್ನದ ನಾಣ್ಯಗಳು, ಭಾವಿಸುವೊಡೆ- ಯೋಚಿಸಿದರೆ, ಅನಂತಕೋಟಿಧಾನ್ಯೋತ್ಕರದಿಂ, ತೀವಿರ್ದ- ತುಂಬಿರುವ, ರಾಶಿ, ಲಕ್ಷಂ, ಭೂವಿನುತಾನರ್ಘದಿವ್ಯಮಣಿಭರಣಂಗಳ್— ಭೂವಿನುತ- ಭೂಜನಶ್ಲಾಘ್ಯವಾದ, ಅನರ್ಘ- ಅಮೂಲ್ಯವಾದ, ದಿವ್ಯ- ಶ್ರೇಷ್ಠಗಳಾದ, ಮಣಿಭರಣಂಗಳ್— ರತ್ನಖಚಿತವಾದ ಆಭರಣಗಳು. ... ... ॥೩೧॥

ಕಂ॥ ಇಳೆಗಧಿಕರೆನಿಪಸತ್ತ್ವಾ । ಮಳಮತಿಗಳ್ಸತ್ಕುಲಕ್ರಮಾಗತ ರತ್ಯು ॥ ಜ್ಜ್ವ
ಳಭಾಂಡಾಗಾರಸ್ಥಿತಿ । ಗಳವಟ್ಟಧಿಕಾರಿಮಂತ್ರಿಗಳ್ಪನ್ನಿರ್ವರ್ ॥ ... ... ॥೩೨॥

ಕಂ ॥ ಎನಗುಳ್ಳೀಸರ್ವಸ್ವಮು । ನನುನಯದಿಂ ನಿನ್ನ ಕರದೊಳಿತ್ತೆಂ ಬಲದೇ ॥ ವ
ನ ಮಾಳ್ಕೆಯಿಂದೆ ಪಾಲಿಪು । ದನವರತಂ ಬಸವ ಮಾಳ್ಪುದೆನ್ನಭಿಮತಮಂ ॥ ॥೩೩॥

ವ ॥ ಎಂದೆಲ್ಲವನೊಚ್ಚತಮೊಪ್ಪುಗೊಟ್ಟು ಪ್ರೇಮಂಮಿಗೆ ಸುವಸನ ಧನ ಕನಕ ಮಣಿ ಭೂಷಣಂಗಳನಗಣಿತಂಗಳಂ ಸಮರ್ಪಿಸುತ್ತೆನ್ನಂ ನಾವಾಗಳುಂ ಪರಿಪಾಲಿಪುದೆಂದ ನರೇಂದ್ರಂಗೆ ವೃಷೇಂದ್ರನಿಂತೆಂದಂ ॥ * * * * * * * * * * *

ಕಂ ॥ ಭುವನಾವಳಿಯಂ ಪಾಲಿಪ । ಶಿವಂಗೆ ನೃಪ ನಿನ್ನ ನೋರ್ವನಂ ಪೊರೆವುದು
ಭಾ ॥ ರವೆ ಭಯಭಕ್ತಿಯೊಳೊಂದಿರ್ ಶಿವಭಕ್ತರೊಳೊಲ್ದು ನಿನ್ನ ನಭವಂ ಪೊರೆವಂ ॥

ಮತ್ತೇ ॥ ಕಡಲಂಪೀರ್ವ ರಡರ್ತುತುತ್ತಿಡುವರುಗ್ರೌರ್ವಾಗ್ನಿಯಂಪಾಯ್ದುಪೊ ।
ಯ್ದೊಡೆವರ್ಭೂರಿಕುಲಾಚಲಂಗಳ ನಿಳಾಕಾಶಂಗಳಂಪಲ್ಲಟಂ ॥ ಬಡಿಪ ರ್ಲೆಕ್ಕಿಸರಚ್ಯುತಾಬ್ಜ
ಭವದೇವೇಂದ್ರಾದಿದೇವರ್ಕಳಂ । ಮೃಡಭಕ್ತರ್ಪೃಥುಶಕ್ತಿಯುಕ್ತರವರೊಳ್ನೀಂಗರ್ವ

ಇಳೆಗೆ, ಅಧಿಕರ್, ಎನಿಪ, ಸತ್ತ್ವಾಮಳಮತಿಗಳ್— ಸತ್ತ್ವ- ಶಾಂತಿಗುಣದಿಂದ, ಅಮಳ- ನಿರ್ಮಲವಾದ, ಮತಿಗಳ್- ಬುದ್ಧಿಯುಳ್ಳ, ಸತ್ಕುಲಕ್ರಮಾಗತರ್- ಒಳ್ಳೇವಂಶ ಪಾರಂಪರ್ಯವನ್ನನುಸರಿಸಿಬಂದಿರುವ, ಅತ್ಯುಜ್ವಳಭಾಂಡಾಗಾರಸ್ಥಿತಿಗೆ- ಅತಿಮನೋಹರವಾದ ಬೊಕ್ಕಸದಲ್ಲಿರುವದಕ್ಕೆ, ಅಳವಟ್ಟ- ಯೋಗ್ಯರಾದ, ಅಧಿಕಾರಿಮಂತ್ರಿಗಳ್, ಪನ್ನಿರ್ವರ್- ಹನ್ನೆರಡುಮಂದಿಗಳು. ... ... ॥೩೨॥

ಬಸವ, ಎನಗೆ, ಉಳ್ಳ- ಇರುವ, ಈಸರ್ವಸ್ವಮಂ- ಪೂರ್ವೋಕ್ತವಾದ ಸಕಲವಸ್ತುವನ್ನು, ಅನುನಯದಿಂ- ವಿನಯದಿಂದ, ನಿನ್ನ, ಕರದೊಳ್- ಕಯ್ಯಲ್ಲಿ, ಇತ್ತೆಂ, ಬಲದೇವನ, ಮಾಳ್ಕೆಯಿಂದೆ- ರೀತಿಯಿಂದ, ಅನವರತಂ- ಯಾವಾಗಲೂ, ಪಾಲಿಪುದು, ಎನ್ನ, ಅಭಿಮತಮಂ ಇಷ್ಟವನ್ನು, ಮಾಳ್ಪುದು. ॥೩೩॥

ಎಂದು, ಎಲ್ಲವಂ, ಒಚ್ಚತಂ- ಚೆನ್ನಾಗಿ, ಒಪ್ಪುಗೊಟ್ಟು- ಒಪ್ಪಿಸಿ, ಪ್ರೇಮಂ- ಪ್ರೀತಿಯು, ಮಿಗೆ- ಹೆಚ್ಚಾಗಲು, ಅಗಣಿತಂಗಳಂ- ಎಣಿಸಲಸದಳಗಳಾದ, ಸುವಸನಧನಕನಕಮಣಿಭೂಷಣಂಗಳಂ, ಸಮರ್ಪಿಸುತ್ತೆ, ಎನ್ನಂ, ಆವಾಗಳುಂ- ನಿರಂತರದಲ್ಲೂ, ಪರಿಪಾಲಿಪುದು, ಎಂದ, ನರೇಂದ್ರಂಗೆ- ಬಿಜ್ಜಳರಾಜನಿಗೆ, ವೃಷೇಂದ್ರಂ, ಇಂತೆಂದಂ. * * * * * * * * * * * * * * *

ನೃಪ-ರಾಜನೇ,ಭುವನಾವಳಿಯಂ-ಅನೇಕಲೋಕಗಳನ್ನು,ಪಾಲಿಪ,ಶಿವಂಗೆ,ಓರ್ವನಂನಿನ್ನಂ-ನಿನ್ನೊಬ್ಬನನ್ನು, ಪೊರೆವುದು-ರಕ್ಷಿಸುವದು, ಭಾರವೆ? ಶಿವಭಕ್ತರೊಳ್-ಶಿವಭಕ್ತರವಿಷಯದಲ್ಲಿ,ಭಯಭಕ್ತಿಯೊಳ್-ಭಯದಿಂದಲೂ ಭಕ್ತಿಯಿಂದಲೂ, ಒಂದಿರ್- ಕೂಡಿರು, ಅಭವಂ- ಭವರಹಿತನಾದ ಪರಶಿವನು, ನಿನ್ನಂ, ಪೊರೆವಂ.

ಪೃಥುಶಕ್ತಿಯುಕ್ತರ್- ಅಧಿಕವಾದ ಶಕ್ತಿಯಿಂದ ಕೂಡಿದ, ಮೃಡಭಕ್ತರ್- ಶಿವಭಕ್ತರು, ಕಡಲಂ- ಸಮುದ್ರವನ್ನು, ಪೀರ್ವರ್- ಕುಡಿಯುವರು, ಉಗ್ರೌರ್ವಾಗ್ನಿಯಂ- ಭಯಂಕರವಾದ ಬಡಬಾಗ್ನಿಯನ್ನು, ಅಡರ್ತು- ಸೇರಿಸಿ, ತುತ್ತಿಡುವರ್- ಕಬಳವನ್ನಾಗಿ ಮಾಡಿಕೊಳ್ಳುವರು, ಭೂರಿಕುಲಾಚಲಂಗಳಂ- ಅನೇಕಗಳಾದ ಕುಲಪರ್ವತಗಳನ್ನು, ಪಾಯ್ದು- ಮೇಲೆಬಿದ್ದು, ಪೊಯ್ದು- ಹೊಡೆದು, ಒಡೆವರ್- ಚೂರುಚೂರು ಮಾಡುವರು, ಇಳಾಕಾಶಂಗಳಂ- ಭೂಮ್ಯಂತರಿಕ್ಷಗಳನ್ನು, ಪಲ್ಲಟಂಬಡಿಪರ್- ವ್ಯತ್ಯಸ್ತಗಳಂಮಾಡುವರು ಅಚ್ಯುತಾಬ್ಜಭವದೇವೇಂದ್ರಾದಿದೇವರ್ಕಳಂ— ಅಚ್ಯುತ- ವಿಷ್ಣು, ಅಬ್ಜಭವ- ಬ್ರಹ್ಮ, ದೇವೇಂದ್ರ, ಇವರುಗಳೇ ಆದಿ- ಮೊದಲಾದ, ದೇವರ್ಕಳಂ, ಲೆಕ್ಕಿಸರ್- ಗಣನೆಮಾಡುವದಿಲ್ಲವು, ಅವರೊಳ್- ಆಶಿವಶರಣ

ಮುಂಮಾಡದಿರ್ ‖ ... ... ... ... ... ... ‖೩೫‖

ಮತ್ತೆ‖ ಪ್ರಜೆಯಂಪಾಲಿಸುವಲ್ಲಿಸತ್ಕೃಪೆ ಯರಾತಿವ್ರಾತದೊಳ್ಕಾಯ್ಪು ಶಿ । ಷ್ಟ ಜನಸ್ತೋಮದೊಳೊಲ್ಮೆ ಸಂಗರದೊಳುದ್ಯದ್ವಿಕ್ರಮಂ ಸದ್ಬುಧ ‖ ವ್ರಜದೊಳ್ಮನ್ನಣೆ ಭಕ್ತಿವೃತ್ತಿ ಶಿವಭಕ್ತವ್ರಾತದೊ ಳ್ನಿಗ್ರಹಂ । ಕುಜನಶ್ರೇಣಿಯೊ ಳಿಂತಿವಂ ಬಿಡದಿರೆಂದುಂ ಬಿಜ್ಜಳಕ್ಷ್ಮಾಪತಿ ‖ ... ... ... ... ... ‖೩೬‖

ವ ‖ ಎಂದು ಯಥೋಚಿತಹಿತೋಪದೇಶಮ ನೊರೆದಂತಃಪುರಕ್ಕೆ ಬಿಜ್ಜಳನಂ ಬೀಳ್ಕೊಟ್ಟು ತತ್ಪೂರ್ವಕಲ್ಪಿತಮಾದ ಗಣಿತಮಣಿಗಣ ಖಚಿತಕನಕಮಯ ಭವನವಿವಿಧವಿಭವಸೌಧಪ್ರಾಕಾರಪ್ರಕರಪ್ರಮದಾವನ ಪರಿವೃತ ಮಣಿಕಲಶರುಚಿನಿಚಯ ಕವಚಿತಗಗನತಳಮಂಗಳಾಯತನಘನಮನೋಜ್ಞಸೌಭಾಗ್ಯ ಸಂಪೂರ್ಣತರಮೆನಿಸಿದ ಬಲದೇವನಂತಪುರಮಂ ನಿಜರಮಣಿವೆರಸಿ ಬಸವರಾಜಂ ಪುಗುತುಂದೊಡವಂದ ಸಕಳದಂಡನಾಥಮಂಡಳಿಕರಂ ವಿನಯದಿಂ ಕಳುಪಿ ಪರವೋತ್ಸವದಿಂ ಶಿವಗಣಸಪರ್ಯೆಯಿನಿರುತ್ತ ಮೊಂದುದಿನಂ ಗಣಿಕರಂ ಬರಿಸಿ ಸಾಮ್ರಾಜ್ಯಸ್ಥಿತಿಯನೆಲ್ಲಮ ತನ್ಮುಖದಿನರಿದಾತ್ಮಾಯತ್ತಮಂಮಾ

---

ರಲ್ಲಿ, ನೀಂ, ಗರ್ವಮಂ, ಮಾಡದಿರ್- ಮಾಡಬೇಡಿರಿ. ... ... ... ‖೩೫‖

ಬಿಜ್ಜಳಕ್ಷ್ಮಾಪತಿ- ಬಿಜ್ಜಳರಾಜನೇ, ಪ್ರಜೆಯಂ, ಪಾಲಿಸುವಲ್ಲಿ- ರಕ್ಷಿಸುವವಿಷಯದಲ್ಲಿ, ಸತ್ಕೃಪೆ; ಅರಾತಿವ್ರಾತದೊಳ್- ಶತ್ರುಸಮೂಹದಲ್ಲಿ, ಕಾಯ್ಪು- ಕೋಪವು, ಶಿಷ್ಟಜನಸ್ತೋಮದೊಳ್- ಸತ್ಪುರುಷರಸಮೂಹದಲ್ಲಿ, ಒಲ್ಮೆ- ಪ್ರೀತಿಯು, ಸಂಗರದೊಳ್- ಯುದ್ಧದಲ್ಲಿ, ಉದ್ಯದ್ವಿಕ್ರಮಂ- ಅಧಿಕವಾದ ಪರಾಕ್ರಮವು, ಸದ್ಬುಧವ್ರಜದೊಳ್- ಶ್ರೇಷ್ಠರಾದ ವಿದ್ವಾಂಸರಸಮೂಹದಲ್ಲಿ, ಮನ್ನಣೆ- ಮರ್ಯಾದೆಯು, ಶಿವಭಕ್ತವ್ರಾತದೊಳ್- ವೀರಶೈವರಸಮೂಹದಲ್ಲಿ, ಭಕ್ತಿವೃತ್ತಿ- ಭಕ್ತಿಯಿಂದಕೂಡಿರೋಣವು, ಇಂತು- ಇವಂ- ಈ ಗುಣಗಳನ್ನು, ಎಂದುಂ- ಯಾವಾಗಲೂ, ಬಿಡದಿರ್. ... ... ... ... ‖೩೬‖

ಎಂದು, ಯಥೋಚಿತಹಿತೋಪದೇಶಮಂ- ತಕ್ಕಷ್ಟು ಹಿತಬೋಧೆಯನ್ನು, ಒರೆದು- ಹೇಳಿ, ಬಿಜ್ಜಳನಂ, ಅಂತಃಪುರಕ್ಕೆ, ಬೀಳ್ಕೊಟ್ಟು- ಕಳುಹಿಸಿ, ತತ್ಪೂರ್ವಕಲ್ಪಿತಮಾದ-ಅದಕ್ಕಿಂತಲೂಪೂರ್ವದಲ್ಲೇಮಾಡಲ್ಪಟ್ಟಿರುವ, ಅಗಣಿತ......ಸಂಪೂರ್ಣತರಂ— ಅಗಣಿತ-ಅಸಂಖ್ಯಾತವಾದ,ಮಣಿಗಣ- ರತ್ನಸಮೂಹದಿಂದ, ಖಚಿತ- ಕೆತ್ತಲ್ಪಟ್ಟ, ಕನಕಮಯ- ಸುವರ್ಣವಿಕಾರವಾದ, ಭವನ- ಮನೆಯು, ವಿವಿಧ- ನಾನಾಪ್ರಕಾರವಾದ, ವಿಭವ- ವೈಭವಗಳುಳ್ಳ, ಸೌಧ- ಉಪ್ಪರಿಗೆಗಳೇನು, ಪ್ರಾಕಾರಪ್ರಕರ- ಸುತ್ತಣಗೋಡೆಗಳಗುಂಪೇನು. ಪ್ರಮದಾವನ- ಸ್ತ್ರೀಯರಕ್ರೀಡಾರ್ಥವಾದಉಪವನವೇನು, ಇವುಗಳಿಂದ, ಪರಿವೃತ- ಸುತ್ತುವರಿಯಲ್ಪಟ್ಟ, ಮಣಿಕಲಶ- ರನ್ನಗಲಸಗಳ, ರುಚಿನಿಚಯ- ಕಾಂತಿಸಮೂಹದಿಂದ, ಕವಚಿತ- ಆಚ್ಛಾದಿಸಲ್ಪಟ್ಟ, ಗಗನತಳ- ಆಕಾಶಪ್ರದೇಶವುಳ್ಳ, ಮಂಗಳಾಯತನ- ಮಂಗಳಕರಗಳಾದದೇವಸ್ಥಾನಗಳುಳ್ಳ, ಅಥವಾ ಶಿವಪೂಜಾಗೃಹವುಳ್ಳ, ಘನ- ಸಾಂದ್ರವಾದ, ಮನೋಜ್ಞ -ಮನೋಹರವಾದ,ಸೌಭಾಗ್ಯ- ಸೌಂದರ್ಯದಿಂದ, ಸಂಪೂರ್ಣತರಂ- ಅತ್ಯಂತವಾಗಿಪೂರ್ಣವಾದದ್ದು, ಎನಿಸಿದ, ಬಲದೇವನ, ಅಂತಃಪುರಮಂ- ಅಂತಃಪುರವನ್ನು, ನಿಜರಮಣಿವೆರಸಿ- ತನ್ನಪತ್ನಿಯೊಡನೆಕೂಡಿ, ಬಸವರಾಜಂ, ಪುಗುತೆ, ಅಂದು, ಒಡವಂದ- ಸಂಗಡಬಂದಂಥಾ, ಸಕಳದಂಡನಾಥಮಂಡಳಿಕರಂ- ಸಮಸ್ತಮಂತ್ರಿಸಾಮಾಜಿಕರನ್ನು, ವಿನಯದಿಂ, ಕಳುಪಿ, ಪರವೋತ್ಸವದಿಂ ಶಿವಗಣಸಪರ್ಯೆಯಿಂ- ಶಿವಗಣಂಗಳಪೂಜೆಯಿಂದ, ಇರುತ್ತಂ- ಒಂದುದಿನಂ,ಗಣಿಕರಂ- ಲೇಖಕರನ್ನು, ಬರಿಸಿ, ತನ್ಮುಖದಿಂ- ಅವರಮುಖದಿಂದ, ಎಲ್ಲಮಂಸಾಮ್ರಾಜ್ಯಸ್ಥಿತಿಯಂ, ಅರಿದು-ತಿಳಿದು, ಆತ್ಮಾಯತ್ತಮಂ-ಸ್ವಾ

ಡಿ ಯಥಾಕ್ರಮಂ ನಿಯೋಜಿಸಿ ನಿರ್ವಾಹಂಗೆಯ್ದು॥ * * * * * * * *

ಮತ್ತೇ ॥ ಕುಲಗೋತ್ರಾಂಚಿತವೈಭವಂ ಬಲಯುತಂ ಮಾನೋನ್ನತಂ ಸಮ್ಮದೋ । ಜ್ಜ್ವಲನೆಂಬೀಳ್ಗೆಯನಿತ್ತಂ ನಿಂಬಸವನೀಭೂಜಾನಿಗೀತಂಗೆ ದಲ್ ॥ ಕುಲಗೋತ್ರಾರಿ ಕರಂ ವಿನಷ್ಟಬಲನೆಲ್ಲಾಗಳ್ವಿಮಾನಸ್ಥಿತಂ । ಸಲೆ ಸಂಕ್ರಂದನನಿಂದ್ರನೆಂದೆನಿಸಿದಾ ತನ್ಮಂತ್ರಿಯೇಂ ಸಾಟಿಯೆ ॥ ... ... ... ... ... ॥೩೩॥

ಕಂ ॥ ಹರಿನಂದನಭಂಜನ ನಹಿ । ಮರುಚಿಸುತಾರಾತಿ ವಿಜಯ ನಾತ್ತಸುಭದ್ರಂ ॥ ವರಭೀಮಧರ್ಮಯುತನಾ । ಗಿರುತಂ ನರನಲ್ತು ಬಸವನೆನಿಸಿದನಲ್ತೆ ॥ ... ॥೩೪॥

ಕಂ ॥ ಪರಮಶಿವಧರ್ಮ ವಿಬುಧೋ । ತ್ಕರನುತಪದಪದ್ಮ ನಾತ್ತಲೈಂಗ್ಯಂಶ್ರುತಿಪ್ರ।

---

ಧೀನವನ್ನು,ಮಾಡಿ,ಯಥಾಕ್ರಮಂ-ಕ್ರಮವನ್ನತಿಕ್ರಮಿಸದೆ, ನಿಯೋಜಿಸಿ- ಆಜ್ಞಾಪಿಸಿ, ನಿರ್ವಾಹಂಗೆಯ್ದು

ಈ ಬಸವಂ, ಭೂಜಾನಿಗೆ- ಭೂಮಿಯೊಡೆಯನಾಗುಳ್ಳಬಿಜ್ಜಳನಿಗೆ, ಕುಲಗೋತ್ರಾಂಚಿತವೈಭವಂ- ಸತ್ಕುಲಸದ್ಗೋತ್ರಪೂಜ್ಯವಾದವೈಭವ ಇವುಗಳುಳ್ಳವನು; ಬಲಯುತಂ-ಶಕ್ತಿಸಮನ್ವಿತನಾದವನು, ಮಾನೋನ್ನತಂ- ಮರ್ಯಾದೆಯಿಂಶ್ರೇಷ್ಠನಾದವನು; ಸಮ್ಮದೋಜ್ವಲಂ- ಸಂತೋಷದಿಂಪ್ರಕಾಶಿಸುವನು; ಎಂಬ, ಪೆಸರಂ- ಪ್ರಸಿದ್ಧಿಯನ್ನು, ಇತ್ತಂ, ದಲ್- ನಿಶ್ಚಯ; ಇಂದ್ರಂ, ಕುಲಗೋತ್ರಾರಿ-ವಂಶ ಗೋತ್ರಇವುಗಳಿಗೆ, ಶತ್ರುವು (ಕುಲಾಚಲಗಳಿಗೆ ಶತ್ರುವು) ಕರಂ-ಅತ್ಯಂತವಾಗಿ, ವಿನಷ್ಟಬಲಂ- ನಷ್ಟವಾದಶಕ್ತಿಯುಳ್ಳವನು,(ನಾಶಮಾಡಲ್ಪಟ್ಟಬಲಾಸುರನುಳ್ಳವನು) ಎಲ್ಲಾಗಳ್- ಯಾವಾಗಲೂ, ವಿಮಾನಸ್ಥಿತಂ- ವಿಗತವಾದ ಮಾನವುಳ್ಳವನು, (ದೇವಯಾನದಲ್ಲಿರುವನು) ಸಲೆ- ಚೆನ್ನಾಗಿ, ಸಂಕ್ರಂದನಂ- ಚೆನ್ನಾಗಿರೋದಿಸುವನು (ಶತ್ರುಗಳನ್ನು ದುಃಖಪಡಿಸುವವನು) ಎಂದು, ಎನಿಸಿದ- ಹೇಳಿಸಿದ, ಆತನ್ಮಂತ್ರಿ- ಅವನಮಂತ್ರಿಯಾದ ಬೃಹಸ್ಪತ್ಯಾಚಾರ್ಯನು, ಈತಂಗೆ- ಬಸವೇಶ್ವರನಿಗೆ ಸಾಟಿಯೇಂ- ಸದೃಶನೇ ? ... ... ॥೩೩॥

ಬಸವಂ, ಹರಿನಂದನಭಂಜನಂ- ಇಂದ್ರನ ವನವನ್ನು ನಾಶಮಾಡಿದವನು, (ಮನ್ಮಥನನ್ನು ನಾಶಮಾಡಿದವನು) ಅಹಿಮರುಚಿಸುತಾರಾತಿ— * ಅಹಿಮರುಚಿಸುತ-ಕರ್ಣನಿಗೆ, ಅರಾತಿ- ಶತ್ರುವು, († ಅಹಿಮರುಚಿಸುತ- ಯಮನಿಗೆ, ಅರಾತಿ- ಶತ್ರುವು) ವಿಜಯಂ- ವಿಜಯನೆಂಬನಾಮವುಳ್ಳವನು, (ಜಯಶೀಲನು) ಆತ್ತಸುಭದ್ರಂ- ಪಡೆಯಲ್ಪಟ್ಟಸುಭದ್ರಾದೇವಿಯುಳ್ಳವನು, (ಪಡೆಯಲ್ಪಟ್ಟಸನ್ಮಂಗಳವುಳ್ಳವನು) ವರಭೀಮಧರ್ಮಯುತಂ- ಶ್ರೇಷ್ಠರಾದ ಭೀಮಸೇನ ಧರ್ಮರಾಯರುಗಳಿಂದ ಕೂಡಿದವನು, (ಶ್ರೇಷ್ಠವಾದಶಿವಧರ್ಮದಿಂದ ಕೂಡಿದವನು) ಆಗಿ, ಇರುತಂ, ನರಂ- ಅರ್ಜುನನು, ಅಲ್ತು, ಎನಿಸಿದಂ, ಅಲ್ತೆ- ಅಲ್ಲವೇ ? ... ॥೩೪॥

ಪರಮ......ಪದ್ಮಂ—ಪರಮ- ಉತ್ಕೃಷ್ಟವಾದ, ಶಿವಧರ್ಮ- ಶಿವಧರ್ಮಪುರಾಣವೆಂನು, ವಿಬುಧ- ವಿದ್ವಾಂಸರ, ಉತ್ಕರ- ಸಮೂಹದಿಂದ, ನುತ- ಶ್ಲಾಘ್ಯವಾದ, ಪದ- ಶಬ್ದಗಳುಳ್ಳ, ಪದ್ಮಂ- ಪದ್ಮಪುರಾಣವೇನು- ಇವುಗಳುಳ್ಳ, (ಪರಮ- ಉತ್ಕೃಷ್ಟವಾದ, ಶಿವಧರ್ಮ- ಶಿವಧರ್ಮಸ್ವರೂಪನಾದ, ವಿಬುಧೋತ್ಕರ- ದೇವಸಮೂಹದಿಂದ, ನುತ- ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ, ಪದಪದ್ಮಂ- ಪಾದಕಮಲವುಳ್ಳ,) ಆತ್ತಲೈಂಗ್ಯಂ- ಪಡೆಯಲ್ಪಟ್ಟ ಲೈಂಗ್ಯಪುರಾಣವುಳ್ಳ, (ಪಡೆಯಲ್ಪಟ್ಟಲಿಂಗಸಂಬಂಧವುಳ್ಳ,) ಶ್ರುತಿಪುಷ್ಕರಜಾದಿತ್ಯಂ—ಶ್ರುತಿ- ಕಿವಿಗಳೆಂಬ, ಪುಷ್ಕರಜ- ಕಮಲಗಳಿಗೆ, ಆದಿತ್ಯಂ- ಸೂರ್ಯರೂಪವಾದ ಆದಿತ್ಯಪುರಾಣವುಳ್ಳವನು, (ಶ್ರುತಿ- ವೇದಗಳೆಂಬ, ಪುಷ್ಕರಜ- ಕಮಲಗಳಿಗೆ- ಆದಿತ್ಯಂ- ಸೂರ್ಯನು,) ಶೈವಾತಿರುಚಿರವೃಷಭಂ- ಶಿವಪುರಾ

---

* (ಅವ) ಅಹಿಮರುಚಿ-ಸೂರ್ಯನಿಗೆ, ಸುತ- ಮಗನಾದಕರ್ಣನಿಗೆ, ಅರಾತಿ- ಶತ್ರುವು. † (ಅವ) ಅಹಿಮರುಚಿ- ಸೂರ್ಯನಿಗೆ, ಸುತ- ಮಗನಾದಯಮನಿಗೆ, ಅರಾತಿ-ಶತ್ರುವು. ... ... ॥೩೪॥

ಷ್ಕರಜಾದಿತ್ಯಂ ಶೈವಾ । ತಿರುಚಿರವೃಷಭಂ ಪುರಾಣಪುರುಷಂ ಧರೆಯೊಳ್ ॥ ॥೩೯॥

ವ॥ ಎಂಬಪೊಗಳ್ತೆಗಡರ್ಪಾಗಿ ಪೆಂಪುವಡೆದು ಮತ್ತಂ ಜಗತ್ಕರ್ತಂ ಪೆರನೋರ್ವನುಂಟೆಂಬುದನಧಃಕರಿಸಿ ಶಿವನೋರ್ವನೆ ಕರ್ತನೆಂಬುದಂ ಪ್ರತಿಷ್ಠಿಸಿಯುಂ ಕರ್ಮದ್ವಯಮಂ ನೆಲೆಗಳೆದು ಚಿತ್ಕ್ರಿಯಾದ್ವಯಮನಂಗೀಕರಿಸಿಯುಂ ತನುತ್ರಯವೃತ್ತಿಯಂ ಪರಿದು ಲಿಂಗತ್ರಯಮನಂಗಂಗೊಳಿಸಿಯುಂ ಚತುಃಕರಣವ್ಯಾಪಾರಮಂ ತೊಳ್ದು ಚತುರ್ವಿಧವಾಗ್ವೃತ್ತಿಯಂ ಪ್ರಣವಾತ್ಮಕಂ ಮಾಡಿಯುಂ ಪಂಚಕ್ಲೇಶಮಂ ದೂರೀಕರಿಸಿ ಪಂಚಾಚಾರಮನವಲಂಬಿಸಿಯುಂ ಷಡಿಂದ್ರಿಯವರ್ತನಮನುಳಿದು ಷಡಕ್ಷರಮನಕ್ಷರಚಕ್ರಾದಿಗಳೊಳಮರ್ಚಿಯುಂ ಸಪ್ತವ್ಯಸನಮನಪೋಹಿಸಿ ಸಪ್ತಸೋಪಾನಕ್ರಮದೊಳಾಚರಿಸಿಯು ಮಷ್ಟಮದಮನಪಹರಿಸುತ್ತಷ್ಟಾವರಣಮನುಪಸೇವಿಸಿಯುಂ ನವಜೀವಗುಣಮಂ ಮೀರಿ ನವಲಿಂಗಾನುಸಂಧಾನವನಿಂಬುಗೊಳಿಸಿಯುಂ ದಶಪವನಧರ್ಮಮಂ ತೆಮುಳ್ದು ದಶನಾದದೊಳ್ತ್ರಸಮಂ ಮೇಳೈಸಿಯುಮನನ್ಯಸಾಮಾನ್ಯಮಹಿಮೆಯಂ ತಳೆದು ಮತ್ತಂ ನಿತ್ಯಶಿವರಾತ್ರಿಗೆಯ್ವದು

---

ಣದಿಂದಮನೋಹರನಾದ, (ಶಿವಭಕ್ತರಲ್ಲಿಮನೋಹರನಾದ) ಬಸವೇಶ್ವರನು,ಧರೆಯೊಳ್, ಪುರಾಣಪುರುಷಂ- ಪ್ರರಾಣರೂಪನಾದ ಪುರುಷನು. (ಆದಿಪುರುಷನು) ... ... ... ॥೩೯॥

ಎಂಬ, ಪೊಗಳ್ತೆಗೆ- ಪ್ರಸಿದ್ಧಿಗೆ, ಅಡರ್ಪಾಗಿ- ಆಶ್ರಯನಾಗಿ,ಪೆಂಪುವಡೆದು- ಆಧಿಕ್ಯವಂಹೊಂದಿ,ಮತ್ತಂ;ಜಗತ್ಕರ್ತಂ, ಪೆರನೋರ್ವಂ- ಮತ್ತೊಬ್ಬನು,ಉಂಟು, ಎಂಬುದಂ, ಅಧಃಕರಿಸಿ-ತಿರಸ್ಕರಿಸಿ, ಶಿವನೋರ್ವನೆ, ಕರ್ತಂ, ಎಂಬುದಂ,ಪ್ರತಿಷ್ಠಿಸಿಯುಂ-ಸ್ಥಾಪಿಸಿಯೂ,ಕರ್ಮದ್ವಯಮಂ- ಸುಕೃತದುಷ್ಕೃತಕರ್ಮಗಳನ್ನು, ನೆಲೆಗಳೆದು- ಮೂಲೋತ್ಪಾಟನೆಯಂಮಾಡಿ, ಚಿತ್ಕ್ರಿಯಾದ್ವಯಮಂ- ಲಿಂಗಾಂಗಸಾಮರಸ್ಯವನ್ನು, ಅಂಗೀಕರಿಸಿಯುಂ, ತನುತ್ರಯವೃತ್ತಿಯಂ- ಸ್ಥೂಲಸೂಕ್ಷ್ಮಕಾರಣದೇಹವ್ಯಾಪಾರವನ್ನು, ಪರಿದು, ಲಿಂಗತ್ರಯಮಂ- ಇಷ್ಟಪ್ರಾಣಭಾವಲಿಂಗಗಳನ್ನು, ಅಂಗಂಗೊಳಿಸಿಯುಂ- ಅಂಗವನ್ನಾಗಿಮಾಡಿ, ಚತುಃಕರಣವ್ಯಾಪಾರಮಂ- ಮನೋಬುದ್ಧಿ ಚಿತ್ತಾಹಂಕಾರಚತುಃಕರಣಗಳವ್ಯಾಪಾರವನ್ನು, ತೊಳ್ದು- ಮೆಟ್ಟಿ, ಚತುರ್ವಿಧವಾಗ್ವೃತ್ತಿಯಂ- ಪರಾ ಪಶ್ಯಂತಿ ಮಧ್ಯಮಾ ವೈಖರಿಯೆಂಬ ವಾಗ್ವೃತ್ತಿಗಳನ್ನು, ಪ್ರಣವಾತ್ಮಕಂಮಾಡಿಯುಂ- ಓಂಕಾರರೂಪವನ್ನಾಗಿಮಾಡಿ, ಪಂಚಕ್ಲೇಶಮಂ- ಅವಿದ್ಯಾ ಅಸ್ಮಿತ ರಾಗ ದ್ವೇಷ ಅಭಿನಿವೇಶವೆಂಬವುಗಳನ್ನು, ದೂರೀಕರಿಸಿ,ಪಂಚಾಚಾರಮಂ- ಸದಾಚಾರ, ಭೃತ್ಯಾಚಾರ, ಶಿವಾಚಾರ, ಗಣಾಚಾರ, ನಿಯತಾಚಾರಗಳನ್ನು, ಅವಲಂಬಿಸಿಯುಂ, ಷಡಿಂದ್ರಿಯವರ್ತನಮಂ- ತ್ವಕ್ ಚಕ್ಷು ಶ್ರೋತ್ರ ಜಿಹ್ವಾ ಆಘ್ರಾಣ ಮನಸ್ಸುಗಳವ್ಯಾಪಾರವನ್ನು, ಉಳಿದು- ಬಿಟ್ಟು, ಷಡಕ್ಷರಮಂ, ಅಕ್ಷರಚಕ್ರಾದಿಗಳೊಳ್ (ಅಂದರೆ ಆಧಾರಚಕ್ರದಲ್ಲಿನಕಾರವನ್ನೂ, ಸ್ವಾಧಿಷ್ಠಾನಚಕ್ರದಲ್ಲಿ ಮಕಾರವನ್ನೂ, ಮಣಿಪೂರಚಕ್ರದಲ್ಲಿಶಿಕಾರವನ್ನೂ, ಅನಾಹತಚಕ್ರದಲ್ಲಿ ವಾಕಾರವನ್ನೂ, ವಿಶುದ್ಧಿಚಕ್ರದಲ್ಲಿ ಯಕಾರವನ್ನೂ, ಆಜ್ಞಾಚಕ್ರದಲ್ಲಿ ಪ್ರಣವಾಕಾರವನ್ನು, ಅಮರ್ಚಿಯುಂ- ಸೇರಿಸಿಯೂ, ಸಪ್ತವ್ಯಸನಮಂ- ತನುವ್ಯಸನ, ಮನೋವ್ಯಸನ, ಧನವ್ಯಸನ, ರಾಜ್ಯವ್ಯಸನ, ವಿಶ್ವವ್ಯಸನ, ಉತ್ಸಾಹವ್ಯಸನ, ಸೇವಕವ್ಯಸನಗಳನ್ನು, ಅಪೋಹಿಸಿ- ಹೋಗಲಾಡಿಸಿ, ಸಪ್ತಸೋಪಾನಕ್ರಮದೊಳ್- ಸುಖೇಚ್ಛೆ, ವಿಚಾರಣೆ, ತನುಮಾನಸ, ಸತ್ವಾಪತ್ತಿ, ಸಂಸಕ್ತಿ, ಪದಾರ್ಥಭಾವನೆ, ತುರ್ಯಗಾಮಿಕ್ರಮದಿಂದ, ಆಚರಿಸಿಯೂ, ಅಷ್ಟಮದಮಂ- ಧನಮದ, ಕುಲಮದ, ಛಲಮದ, ಯೌವನಮದ, ರೂಪಮದ, ವಿದ್ಯಾಮದ, ರಾಜ್ಯಮದ, ತಪೋಮದಗಳನ್ನು. ಅಪಹರಿಸುತ್ತೆ, ಅಷ್ಟಾವರಣಮಂ- ಗುರು, ಲಿಂಗ,ಜಂಗಮ, ಪ್ರಸಾದ, ಪಾದೋದಕ, ವಿಭೂತಿ,ರುದ್ರಾಕ್ಷ, ಮಂತ್ರಗಳನ್ನು ಉಪಸೇವಿ

ಮಂ ಶಿವಭಕ್ತರ್ಶಿವನೆಂದಿರ್ಪುದುಮಂ ಶರಣರೊಳ್ಪಿರಿದುಕಿರಿದನಾಡದುದುಮಂ ಜಂಗಮಕ್ಕೇನುಮಂ ವಂಚನೆಮಾಡದುದುಮಂ ಹರಭಕ್ತರಸಲುಗೆಯಂಸಲಿಪ್ಪುದುಮಂ ಪರಸಮಯಗರ್ವಮಂನಿಲಿಪ್ಪುದುಮಂ ಶರಣರೇನೆಂದೊಡಂ ಮರುಮಾತುಗೊಡದಪ್ಪುಕೆಯ್ವುದುಮಂ ಚರಲಿಂಗಮೇಪ್ರಾಣಲಿಂಗಮೆಂದಿರ್ಪುದುಮಂ ಪರವಾದಿಜನಮಂಸೋಲಿಪ್ಪುದುಮಂ ಮೃಡಂಗೆಜಯಂಗೊಡದೆ ಮೃಡಭಕ್ತರ್ಗ್ಗೆಗೆಲಂಗೊಟ್ಟುಮಣಿಪ್ಪುದುಮಂ ಶರಣನಿಂದೆಗೇಳದುದುಮಂ ಶಿವೈಕಭಕ್ತಿಯನಲರ್ಚುಪ್ಪುದುಮಂ ಸರ್ವೋರ್ವಿಯೊಳ್ಸದಾಚಾರಮಂಬಳೆಯಿಪ್ಪುದುಮಂ ಪರಮತಮಾರ್ಗಮಂಗಣನೆಗೊಳ್ಳದುದುಮಂ ನುಡಿದುತಪ್ಪದುದುಮಂ ನಡೆದುಪಡಂಮೆಟ್ಟದುದುಮಂ ನಿತ್ಯವ್ರತಮೆನಿಸಿಪೂಣ್ದುಕೈಕೊಂಡು ಪರಪುರುಷಾರ್ಥನಿಧಿ ಪರಮಪುರುಷಂ ಬಸವರಸ ನೊಪ್ಪುತ್ತಮಿರೆಯಿರೆ ತನ್ಮಹಿಮೆಯಂಕೇಳ್ದು ॥ * * * *

ಮಲ್ಲಿಕಾಮಾಲಾವೃತ್ತಂ ॥ ಲಾಳ ಕೊಂಕಣ ಸಿಂಧು ಘೂರ್ಜರ ಕೇರಳಾಂಗ ಕಳಿಂಗ

---

ಸಿಯುಂ, ನವಜೀವಗುಣಮಂ- ಬುದ್ಧಿ, ಸುಖ, ದುಃಖ, ಇಚ್ಛೆ, ಯತ್ನ, ಧರ್ಮ, ಅಧರ್ಮ, ಭಾವನೆ, ದ್ವೇಷವೆಂಬಗುಣಗಳನ್ನು,ವಿಚಾರಿ,ನವಲಿಂಗಾನುಸಂಧಾನಮಂ- ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ, ಇಷ್ಟಲಿಂಗ, ಪ್ರಾಣಲಿಂಗ, ಭಾವಲಿಂಗಾನುಸಂಧಾನವನ್ನು, ಇಂಬುಗೊಳಿಸಿಯುಂ-ಆಶ್ರಯಗೊಳಿಸಿಯೂ, ದಶಪವನಧರ್ಮಮಂ- ಪ್ರಾಣ,ಅಪಾನ,ಸಮಾನ,ಉದಾನ, ವ್ಯಾನ, ನಾಗ, ಕೂರ್ಮ, ಕೃಕರ, ದೇವದತ್ತ, ಧನಂಜಯವೆಂಬ ದಶವಾಯುಗಳಧರ್ಮವನ್ನು, ತೆಮರ್ದು-ತಿಳಿದು,ದಶನಾದದೊಳ್- ಸ್ವರನಿರ್ಘೋಷಣ, ನಿರ್ಣಯಧ್ವನಿ, ಘಂಟಾಧ್ವನಿ, ಕಹಳಾಧ್ವನಿ,ಶಂಖಧ್ವನಿ, ಮೇಘಧ್ವನಿ, ಮೃದಂಗಧ್ವನಿ, ಭೇರೀಧ್ವನಿ, ಮಂತ್ರಧ್ವನಿ, ಅವ್ಯಕ್ತಪ್ರಣವಧ್ವನಿಗಳಲ್ಲಿ, ಮನಮಂ, ಮೇಳೈಸಿಯುಂ- ಸೇರಿಸಿಯೂ, ಅನನ್ಯಸಾಮಾನ್ಯಮಹಿಮೆಯಂ-ಅನ್ಯರಿಗಸಾಧ್ಯವಾದಮಹತ್ವವನ್ನು, ತಳೆದು, ಮತ್ತಂ,ನಿತ್ಯಶಿವರಾತ್ರಿಗೆಯ್ವುದುಮಂ- ನಿತ್ಯವಾದ ಶಿವರಾತ್ರಿವ್ರತವನ್ನಾಚರಿಸುವದನ್ನೂ, ಶಿವಭಕ್ತರ್, ಶಿವಂ, ಎಂದು, ಇರ್ಪುದುಮಂ, ಶರಣರೊಳ್, ಪಿರಿದುಕಿರಿದಂ- ದೊಡ್ಡದು ಚಿಕ್ಕದೆಂಬ ಭಾವನೆಯಿಂದುಂಟಾದವಚನವನ್ನು, ಆಡದುದುಮಂ, ಜಂಗಮಕ್ಕೆ, ಏನುಮಂ- ಯಾವದನ್ನೂ, ವಂಚನೆಮಾಡದುದುಮಂ, ಹರಭಕ್ತರ, ಸಲುಗೆಯಂ- ಇಚ್ಛೆಯನ್ನು, ಸಲಿಪುದುಮಂ, ಪರಸಮಯಗರ್ವಮಂ- ಅನ್ಯಮತದವರಹಂಕಾರವನ್ನು, ನಿಲಿಪುದುಮಂ, ಶರಣರ್, ಏನೆಂದೊಡಂ, ಮರುಮಾತುಗೊಡದೆ- ಪ್ರತಿಯಾಗಿಹೇಳದೆ, ಅಪ್ಪುಕೆಯ್ವುದುಮಂ- ಅಂಗೀಕರಿಸುವದನ್ನೂ, ಚರಲಿಂಗಮೇ- ಜಂಗಮಲಿಂಗವೇ, ಪ್ರಾಣಲಿಂಗಂ,ಎಂದು, ಇರ್ಪುದುಮಂ, ಪರವಾದಿಜನಮಂ, ಸೋಲಿಪುದುಮಂ, ಮೃಡಂಗೆ, ಜಯಂಗೊಡದೆ, ಮೃಡಭಕ್ತರ್ಗೆ- ಶಿವಭಕ್ತರಿಗೆ, ಗೆಲಂಗೊಟ್ಟು-ಜಯವನ್ನುಕೊಟ್ಟು, (ಅಂದರೆ ಶಿವನಿಗಿಂತಲೂ ಶಿವಭಕ್ತರಧಿಕವೆಂಬಭಾವನೆಯಂಹೊಂದಿ) ಮಣಿವುದುಮಂ- ನಮಸ್ಕರಿಸುವದನ್ನೂ, ಶರಣನಿಂದೆಗೇಳದುದುಮಂ, ಶಿವೈಕಭಕ್ತಿಯಂ-ಶಿವಭಕ್ತಿಯೊಂದನ್ನೇ, ಅಲರ್ಚುವುದುಮಂ, ಸರ್ವೋರ್ವಿಯೊಳ್, ಶಿವಾಚಾರಮಂ, ಬಳಯಿಪುದುಮಂ-ಹೆಚ್ಚಿಸುವದನ್ನೂ, ಪರಮತಮಾರ್ಗಮಂ, ಗಣನೆಗೊಳ್ಳದುದುಮಂ- ಎಣಿಸದಿರುವದನ್ನೂ, ನುಡಿದು-ಹೇಳಿ, ತಪ್ಪದುದುಮಂ, ನಡೆದು- ಮುಂದಕ್ಕೆಹೋಗಿ, ಪೆಡಂಮೆಟ್ಟದುದುಮಂ-ಹಿಮ್ಮೆಟ್ಟದಿರುವದನ್ನೂ, ನಿತ್ಯವ್ರತಂ, ಎನಿಸಿ, ಪೂಣ್ದು- ಪ್ರತಿಜ್ಞೆಗೈದು,ಕೈಕೊಂಡು-ಸ್ವೀಕರಿಸಿ, ಪರಪುರುಷಾರ್ಥನಿಧಿ- ಉತ್ಕೃಷ್ಟವಾದ ಪುರುಷಾರ್ಥಗಳಿಗೆ ನಿಕ್ಷೇಪರೂಪನಾದ, ಪರಮಪುರುಷಂ,ಬಸವರಸಂ, ಒಪ್ಪುತ್ತಂ, ಇರೆಯಿರೆ- ಇರಲಾಗಿ, ತನ್ಮಹಿಮೆಯಂ- ಆಬಸವೇಶ್ವರನಮಾಹಾತ್ಮ್ಯವನ್ನು,ಕೇಳ್ದು * *

ಲಾಳ..........ದೇಶದ, ಭಕ್ತರ್, ಆ ವೃಷಭೇಂದ್ರಂ, ಇರ್ಪ, ಎಡೆಗೆ- ಸ್ಥಲಕ್ಕೆ, ಐದಿದರ್-

ವಾಂ | ಚಾಳ ಪಾಂಡ್ಯತುರುಷ್ಕ ಭೋಟ ವಿದರ್ಭ ಬರ್ಬರ ವಂಗನೇ || ಪಾಳ ಕೋಸಲ ಹೂಣ ಮಾಳವ ಗೌಳ ಚೋಳ ವರಾಳಬಂ | ಗಾಳ ದೇಶದ ಭಕ್ತರಾ ವೃಷಭೇಂದ್ರನಿ ರ್ವಿಡೆಗೈದಿದರ್|| .. .. ... .. ... ... ||೪೦||

ತರಳವೃತ್ತಂ || ಕರ ಮುರಃಸ್ಥಳಿ ಮಸ್ತಕಂಗಳ ಮಾಸ್ಯ ಮೊಪ್ಪುವಕಕ್ಷೆಯೊಳ್ | ಧರಿಸಿ ಲಿಂಗಮಂ ತು ಭೂತಿಶಿವಾಕ್ಷಮಾಲೆಯನಂಗದೊಳ್ || ಕರಣಧರ್ಮಮನೊತ್ತಿ ನಿರ್ಮಳವೀರಶೈವಸುಮಾರ್ಗದೊಳ್ | ಚರಿಸಿ ರಂಜಿಪರೈದಿದರ್ವೃಷಭೇಂದ್ರದರ್ಶನತತ್ಪರರ್ ||

ಮಹಾಸ್ರ || ಶಿವಪೂಜಾನಿಷ್ಠ ರಂಗೇಂದ್ರಿಯಗುಣರಹಿತ ರ್ಜಂಗಮಪ್ರೇಮಧಾಮ | ರ್ಭವಿಸಂಗತ್ಯಾಗಿಗಳ್ಭಾಸುರಗುಣನಿಧಿಗಳ್ಸತ್ಯಸಂಪನ್ನ ರಾಶಾ || ರ್ತಿವಿದೂರ ರ್ವೀರಶೈವಾಗಮನಿಗಮವಿದ ರ್ಮಾನಿಗಳ್ಮೌನಿಗಳ್ಯಂ | ಭವಭಕ್ತಿಪ್ರಾಂಜುಳ ರ್ಭೂಮಹಿತಮಹಿಮರೇಳ್ತಂದರಾನಂದದಿಂದಂ || ... ... ... ... ||೪೧||

ಮಹಾಸ್ರ || ನೊಸಲೊಳ್ಭಸ್ಮತ್ರಿಪುಂಡ್ರಂ ತೊಳಗೆ ಗಳದೊಳಂಬಾಗೆರುದ್ರಾಕ್ಷಮಾಲಾ | ವಿಸರಂ ಚೆಲ್ವಾಗೆಬಂಬಲ್ಜಡೆಮುಡಿ ಸುಲಿಪಲ್ಶೋಭೆಯಂಬೀರೆ ದಂಡಂ || ಭಸಿತಾಧಾರಂ ಬಹಿರ್ವಾಸಮುಮಮರ್ದಿರೆ ಲಿಂಗಾಂಗಸಂಯುಕ್ತಯೋಗಿ | ಪ್ರಸರಂ ಬಂದಿರ್ದುದೋ ರಂತೆಸೆದು ಬಸವಸಂದರ್ಶನೋತ್ಕಂಠೆಯಿಂದಂ|| ... ... ... ||೪೨||

---

ಬಂದರು. ... ... ... ... ... ||೪೦||

ಕರಂ- ಹಸ್ತ, ಉರಃಸ್ಥಳಿ- ಎದೆ, ಮಸ್ತಕಂ- ಶಿರಸ್ಸು, ಗಳಂ- ಕತ್ತು, ಆಸ್ಯಂ- ಬಾಯಿ, ಒಪ್ಪುವ, ಕಕ್ಷೆಯೊಳ್- ಕಂಕುಳು ಈ ಸ್ಥಳಗಳಲ್ಲಿ, ಲಿಂಗಮಂ, ಧರಿಸಿ, ಅಂಗದೊಳ್,ಭೂತಿರುದ್ರಾಕ್ಷಮಾಲೆಯಂ- ಭಸ್ಮ ರುದ್ರಾಕ್ಷಮಾಲಿಕೆಗಳನ್ನು, ಆಂತು, ಕರಣಧರ್ಮಮಂಒತ್ತಿ- ಇಂದ್ರಿಯನಿಗ್ರಹಮಂಮಾಡಿ, ನಿರ್ಮಳವೀರಶೈವ ಸುಮಾರ್ಗದೊಳ್, ಚರಿಸಿ- ಆಚರಿಸಿ, ರಂಜಿಪರ್- ಪ್ರಕಾಶಿಸುವ ಶಿವಭಕ್ತರು, ವೃಷಭೇಂದ್ರದರ್ಶನತತ್ಪರರ್- ಬಸವೇಶ್ವರನದರ್ಶನದಲ್ಲಾಸಕ್ತರಾಗಿ, ಐದಿದರ್. ... ... ... ... ||೪೧||

ಶಿವಪೂಜಾನಿಷ್ಠರ್- ಶಿವಪೂಜೆಯಲ್ಲಿಶ್ರದ್ಧೆಯುಳ್ಳ, ಅಂಗೇಂದ್ರಿಯಗುಣರಹಿತರ್-ತನುಗುಣ ಇಂದ್ರಿಯಗುಣಗಳಿಂದರಹಿತರಾದ, ಜಂಗಮಪ್ರೇಮಧಾಮರ್- ಜಂಗಮಪ್ರೀತಿಗೆ ಸ್ಥಾನಭೂತರಾದ, ಭವಿಸಂಗತ್ಯಾಗಿಗಳ್- ಲಿಂಗಹೀನರಸಂಗವಂಬಿಟ್ಟ, ಭಾಸುರಗುಣನಿಧಿಗಳ್- ಮನೋಹರವಾದ ಸುಗುಣಗಳಿಗೆನಿಕ್ಷೇಪರಾದ, ಸತ್ಯಸಂಪನ್ನರ್, ಆಶಾರ್ತಿವಿದೂರರ್- ಆಶಾದುಃಖರಹಿತರಾದ, ವೀರಶೈವಾಗಮನಿಗಮವಿದರ್, ಮಾನಿಗಳ್- ಗೌರವವುಳ್ಳ, ಮೌನಿಗಳ್- ಮೌನವ್ರತವುಳ್ಳ, ಶಾಂಭವಭಕ್ತಿಪ್ರಾಂಜುಳರ್- ಶಿವಭಕ್ತಿಯಿಂಮನೋಹರರಾದ, ಭೂಮಹಿತಮಹಿಮರ್- ಭೂಜನದಿಂಪೂಜ್ಯವಾದ ಮಾಹಾತ್ಮ್ಯವುಳ್ಳವರು, ಆನಂದದಿಂದಂ, ಏಳ್ತಂದರ್. ... ... ... ... ... ... ||೪೧||

ನೊಸಲೊಳ್- ಹಣೆಯಲ್ಲಿ, ಭಸ್ಮ ತ್ರಿಪುಂಡ್ರಂ, ತೊಳಗೆ- ಪ್ರಕಾಶಿಸಲು, ಗಳದೊಳ್-ಕತ್ತಿನಲ್ಲಿ, ರುದ್ರಾಕ್ಷಮಾಲಾವಿಸರಂ, ಇಂಬಾಗೆ- ಮನೋಹರವಾಗಲು, ಬಂಬಲ್ಜಡೆಮುಡಿ- ಗುಂಪಾದಜಡೆಕಟ್ಟು, ಚೆಲ್ವಾಗೆ, ಸುಲಿಪಲ್- ಶುಭ್ರವಾದ ಹಲ್ಲುಗಳು, ಶೋಭೆಯಂ- ಕಾಂತಿಯನ್ನು, ಬೀರೆ- ಎರಚಲು, ದಂಡಂ, ಭಸಿತಾಧಾರಂ- ಭಸ್ಮದಕರಡಿಗೆಯು, ಬಹಿರ್ವಾಸಮುಂ, ಅಮರ್ದು- ಇರೆ, ಲಿಂಗಾಂಗಸಂಯುಕ್ತಯೋಗಿಪ್ರಸರಂ- ಲಿಂಗಾಂಗಸಾಮರಸ್ಯವುಳ್ಳ ಯೋಗಿಗಳಗುಂಪು, ಓರಂತೆ- ಚೆನ್ನಾಗಿ, ಎಸೆದು, ಬಸವಸಂದರ್ಶನೋತ್ಕಂಠೆಯಿಂದಂ-ಬಸವೇಶ್ವರನದರ್ಶನವಲ್ಲಿ ಕುತೂಹಲದಿಂದ, ಬಂದಿರ್ಪುದು. ... ... ... ||೪೨||

ವ॥ ಅಂತೇಳ್ತರ್ಪುದುಮಾಗಳ್ಪನ್ನೀರ್ಚಳೆಪದಿಂ ಕತ್ತುರಿಯಸಾರಣೆಯಿಂ ಪೊಸಮುತ್ತಿನ ರಂಗವಲ್ಲಿಯಿಂ ಧವಳಚಾಮರಪಲ್ಲವಪ್ರಕರಮುಕುರನಿಕರಮಣಿಗಣಗ್ರಥಿತಾಗಣಿತತೋರಣಂಗಳಿಂ ಪಸದನಂಗೊಳಿಸಿ ರಾಜಿತಮಾದ ರಾಜವೀಧಿಯೊಳೆತ್ತಿದಪತಾಕೆಗಳ ಸೂಸುವಸೀಗುರಿಗಳ ಬೀಸುವಚಾಮರಂಗಳ ಸೊಗಯಿಪಧವಳಾತಪತ್ರಂಗಳ ನವರತ್ನದನಡೆತೋರಣಂಗಳ ಕನ್ನೆಯರ್ಪಿಡಿದುತರ್ಪಪೊಂಗಳಸರನ್ನಗನ್ನಡಿಗಳ ದಿಕ್ಪಾಲಕರಕರ್ಣಕುಹರಮಂ ಪೊಕ್ಕು ಜಕ್ಕುಲಿಸಿ ಘೂರ್ಮಿಪ ಪಟುಪಟಹಮೃದುಮೃದಂಗ ಶಂಖತಾಳಕಹಳಾಬಹುಳನಾದಂಗಳ ಪೊಗಳ್ವವಂದಿಮಾಗಧರಪ್ರತಾನದ ಸಂದಣಿಪಮಹೇಶ್ವರರ ಗಗನದೊಳ್ಕುಣಿವಬಾದರಾಯಣಬಾಹುವಿನ ಪಿರಿಯಸಿರಿ ಕಂಗೊಳಿಸೆ ನಡೆಮಡಿವೆರಸುತಡಿಗಡಿಗೆ ಪುಷ್ಪಾಂಜಲಿಗುಡುತೆ ಜಯಘಂಟಕಾರವದೊಳುಘೇರವಂ ತಡಂಗಲಿಸಿ ದಿಗಂತಕ್ಕೆ ಧೀಂಕಿಡೆ ಸಡಗರದಿನಿದಿರ್ಗೊಂಡು ಕಂಡುಕೊಂಡಾಡಿದಂಡಪ್ರಣಾಮಂಗೆಯ್ದು ನಿಜಗೃಹಮಂಪುಗಿಸಿ ಮಣಿವಿಷ್ಟರದೊಳ್ಮೂರ್ತಿಗೊಳಿಸಿ ಧನಕನಕಮಣಿಭೂಷಣಸುವಸನವಾಹನಾದಿಗಳಿನವರವರಿಷ್ಟಮೆಂತಿರ್ದುದಂತೋಜೆಯಿಂಪೂಜಿಸಿ ದಾಸೋಹಂಭಾವಂಬಡೆದು ಪಾದೋದಕಪ್ರಸಾದಂಬಡೆದು ಸೇವಿಸಿ ಸರಸತರಸಾತ್ವಿಕಭಕ್ತಿವೆರಸಿ ತದೀಯಸುಖಗೋಷ್ಠಿಯೊಳ್ಸಂದು ಮತ್ತಮಿರದೆ॥

---

ಅಂತು, ಎಳ್ತರ್ಪುದುಂ- ಬರಲು, ಆಗಳ್, ಪನ್ನೀರ್ಚಳೆಪದಿಂ- ಪನ್ನೀರಿನಚಳೆಯಿಂದಲೂ, ಕತ್ತುರಿಯ, ಸಾರಣೆಯಿಂ, ಪೊಸಮುತ್ತಿನ, ರಂಗವಲ್ಲಿಯಿಂ, ಧವಳ......ತೋರಣಂಗಳಿಂ—ಧವಳ- ಶುಭ್ರವಾದ, ಚಾಮರ, ಪಲ್ಲವ- ಚಿಗುರುಗಳ, ಪ್ರಕರ- ಗುಂಪು, ಮುಕುರ- ಕನ್ನಡಿಗಳ, ನಿಕರ- ಸಮೂಹ, ಮಣಿಗಣ- ರತ್ನಸಮೂಹದಿಂದ, ಗ್ರಥಿತ- ಕಟ್ಟಲ್ಪಟ್ಟ, ಅಗಣಿತ- ಅಸಂಖ್ಯಾಕಗಳಾದ, ತೋರಣಂಗಳಿಂ, ಪಸದನಂಗೊಳಿಸಿ- ಅಲಂಕರಿಸಿ, ರಂಜಿತಮಾದ, ರಾಜವೀಧಿಯೊಳ್, ಎತ್ತಿದ, ಪತಾಕೆಗಳ- ಧ್ವಜಗಳ, ಸೂಸುವ- ಹಾಕುವ, ಸೀಗುರಿಗಳ- ಮೂರ್ಛಾಲುಗಳ, ಬೀಸುವ, ಚಾಮರಂಗಳ, ಸೊಗಯಿಪ, ಧವಳಾತಪತ್ರಂಗಳ-ಶ್ವೇತಛತ್ರಗಳ, ನವರತ್ನದ, ನಡೆತೋರಣಂಗಳ, ಕನ್ನೆಯರ್- ಸ್ತ್ರೀಯರು, ಪಿಡಿದು, ತರ್ಪ, ಪೊಂಗಳಸರನ್ನಗನ್ನಡಿಗಳ, ದಿಕ್ಪಾಲಕರ, ಕರ್ಣಕುಹರಂಗಳು- ಕಿವಿಯರಂಧ್ರಗಳನ್ನು, ಪೊಕ್ಕು, ಜಕ್ಕುಲಿಸಿ-ಚಕ್ಕಲಗುಳಿಯನ್ನಿಕ್ಕಿ, ಘೂರ್ಮಿಪ- ಧ್ವನಿಮಾಡುವ, ಪಟು......ನಾದಂಗಳ— ಪಟು- ಸಮರ್ಥವಾದ, ಪಟಹ- ತಮ್ಮಟೆ, ಮೃದು- ಕೋಮಲವಾದ, ಮೃದಂಗ- ಮದ್ದಲೆ, ಶಂಖ, ತಾಳ, ಕಹಳಾ- ಕೊಂಬು, ಇವುಗಳ, ಬಹುಳ-ಅಧಿಕವಾದ, ನಾದಂಗಳ- ಶಬ್ದಗಳ, ಪೊಗಳ್ವ, ವಂದಿಮಾಗಧರ- ಸ್ತುತಿಪಾಠಕಭಟ್ಟರಾಜರುಗಳ, ಪ್ರತಾನದ- ಗುಂಪಿನ, ಸಂದಣಿಪ- ಗುಂಪಾಗಿರುವ, ಮಾಹೇಶ್ವರರ, ಗಗನದೊಳ್, ಕುಣಿವ, ಬಾದರಾಯಣನ-ವ್ಯಾಸನ, ಬಾಹುವಿನ- ತೋಳಿನ, ಪಿರಿಯ- ಅಧಿಕವಾದ, ಸಿರಿ- ಸಂಪತ್ತು, ಕಂಗೊಳಿಸೆ, ನಡೆಮಡಿವೆರಸುತೆ, ಅಡಿಗಡಿಗೆ- ಹೆಜ್ಜೆಹೆಜ್ಜೆಗೆ, ಪುಷ್ಪಾಂಜಲಿಗುಡುತ್ತೆ, ಜಯಘಂಟಕಾರವದೊಳ್- ಜಯಘಂಟಾನಾದದೊಡನೆ, ಉಘೇರವಂ- ಉಘೇಎಂಬಶಬ್ದವು, ತಡಂಗಲಿಸಿ- ಸೇರಿ, ದಿಗಂತಕ್ಕೆ, ಧೀಂಕಿಡೆ- ಲಂಘಿಸಲು, ಸಡಗರದಿಂ, ಇದಿರ್ಗೊಂಡು, ಕಂಡು- ನೋಡಿ, ಕೊಂಡಾಡಿ, ದಂಡಪ್ರಣಾಮಂಗೆಯ್ದು- ದಂಡದಂತೆನಮಸ್ಕರಿಸಿ, ನಿಜಗೃಹಮಂ, ಪುಗಿಸಿ, ಮಣಿವಿಷ್ಟರದೊಳ್-ರತ್ನಖಚಿತವಾದಪೀಠದಲ್ಲಿ, ಮೂರ್ತಿಗೊಳಿಸಿ-ಕುಳ್ಳಿರಿಸಿ, ಧನಕನಕಮಣಿಭೂಷಣ ಸುವಸನವಾಹನಾದಿಗಳಿಂ, ಅವರವರ, ಇಷ್ಟಂ, ಎಂತಿರ್ದುದು, ಅಂತು, ಓಜೆಯಿಂ- ಕ್ರಮವಾಗಿ, ಪೂಜಿಸಿ, ದಾಸೋಹಂಭಾವಂಬಡೆದು-ನಾನುಸೇವಕನೆಂಬಭಾವನೆಯನ್ನುಹೊಂದಿ, ಪಾದೋದಕಪ್ರಸಾದಂಬಡೆದು, ಸೇವಿಸಿ, ಸರಸತರಸಾತ್ವಿಕಭಕ್ತಿವೆರಸಿ- ಮನೋಹರವಾದರೋಮಾಂಚಾದಿಗಳಿಂಸೂಚಿತವಾದಭಕ್ತಿಯಿಂಕೂಡಿ, ತದೀಯಸುಖಗೋಷ್ಠಿಯೊಳ್- ಅವರುಗಳಸುಖಾಲಾಪದಲ್ಲಿ, ಸಂದು, ಮತ್ತಂ, ಇರದೆ. * *

ಚಂ ॥ ಸೊಗಯಿಪದಿವ್ಯಷಡ್ರಸಸುಭೋಜನದಿಂ ಘನಸಾರಗಂಧವೀ । ಟಿಗಳಿನ ಪೂ
ರ್ವಕುಂಕುಮಮೃಗೋದ್ಭವಚಂದನಗಂಧಲೇಪದಿಂ ॥ ಮಗಮಗಿಪಚ್ಛಪೂಸರದೆ ಚಾರುತ
ರಾಂಬರದಿಂ ದನರ್ಘ್ಯರ । ತ್ನಗಣವಿಭೂಷಣಾಳಿಗಳಿ ನರ್ಚಿಸಿದಂ ಚರಲಿಂಗವೃಂದಮಂ ॥

ಚಂ ॥ ಹರಿಸದೆನೋಡಿನೋಡಿಸುಖವಾರ್ಧಿಯೊಳಾಳುತೆಮೂಡಿಮೂಡಿಸಾ । ದರಮು
ರೆಪಾಡಿಪಾಡಿಪದಪೂಜನಮಂಮಿಗೆಮಾಡಿಮಾಡಿಭ ॥ಕ್ತಿರತಿಯಕೂಡಿಕೂಡಿನಿಜದೇಹಮನಂ
ಘ್ರಿಗೆನೀಡಿನೀಡಿಶಾಂ । ಕರಗಣವೃಂದಮಂಭಜಿಸಿತತ್ಕೃಪೆಯಂಪಡೆದಂವೃಷಾಧಿಪಂ ॥೪೫॥

ಉ.॥ ಕಾಮಸುಖಾರ್ಥಿಗಳ್ಗೆನವಯೌವನರೂಪವಿಳಾಸಯುಕ್ತಸ । ತ್ಕಾಮಿನಿಯು
ರ್ಕಳಂ ದ್ರವಿಣರಾಶಿಯ ನಲ್ಲಿಧನಾರ್ಥಿಗಳ್ಗೆ ದಿ ॥ ವ್ಯಾಮಳಭೂಷಣಾವಳಿಯನಾಭರಣಾರ್ಥಿಚ
ಯಕ್ಕೆ ಲಿಂಗಪೂ । ಜಾಮತಿಗಳ್ಗೆ ಲಿಂಗಯಜನೋಚಿತವಸ್ತುವನೀವ ನಳ್ತಿಯಿಂ ॥೪೬॥

ಕಂ ॥ ವ್ರತಶೀಲಪರಾಯಣಸಂ । ತತಿಗಾವ್ರತಶೀಲಮಂ ಕರಂಸಲಿಸುತೆ ಭೂ ॥ ಪತಿ
ಭೋಗಮನೆರೆದರನು । ನ್ನತತರರಾಜೋಪಚಾರದಿಂ ಪೂಜಿಸಿದಂ ॥ ... ॥೪೭॥

---

ಸೊಗಯಿಪ, ದಿವ್ಯಷಡ್ರಸಸುಭೋಜನದಿಂ- ಶ್ರೇಷ್ಠವಾದಷಡ್ರಸಯುಕ್ತವಾದಆಹಾರಗಳಿಂದಲೂ. ಅಪೂರ್ವಕುಂಕುಮಮೃಗೋದ್ಭವಚಂದನಲೇಪದಿಂ- ನೂತನವಾದ ಕುಂಕುಮಕೇಸರಿ ಕಸ್ತೂರಿ ಶ್ರೀಗಂಧ ಇವುಗಳಲೇಪನದಿಂದಲೂ, ಮಗಮಗಿಪ- ಪರಿಮಳಿಸುವ, ಅಚ್ಛಪೂಸರದೆ- ಸ್ವಚ್ಛವಾದಹೂವಿನಮಾಲೆಗಳಿಂದಲೂ, ಚಾರುತರಾಂಬರದಿಂದೆ- ಅತಿಮನೋಹರವಾದವಸ್ತ್ರಗಳಿಂದಲೂ, ಅನರ್ಘ್ಯರತ್ನಗಣವಿಭೂಷಣಾಳಿಗಳಿಂ- ಅಮೂಲ್ಯಗಳಾದ ರನ್ನದೊಡವುಗಳಿಂದಲೂ, ಚರಲಿಂಗವೃಂದಮಂ- ಜಂಗಮಲಿಂಗಸಮೂಹವನ್ನು, ಅರ್ಚಿಸಿದಂ. ... ... ... ... ... ॥೪೪॥

ವೃಷಾಧಿಪಂ, ಹರಿಸದೆ- ಸಂತೋಷದಿಂದ, ನೋಡಿನೋಡಿ, ಸುಖವಾರ್ಧಿಯೊಳ್- ಸಂತೋಷಸಮುದ್ರದಲ್ಲಿ, ಆಳುತೆ- ಮುಳುಗುತ್ತ, ಮೂಡಿಮೂಡಿ- ಎದ್ದುಎದ್ದು, ಸಾದರಂ- ಪ್ರೀತಿಪೂರ್ವಕವಾಗಿ, ಉರೆ- ಹೆಚ್ಚಾಗಿ, ಪಾಡಿಪಾಡಿ, ಪದಪೂಜನಮಂ, ಮಿಗೆ, ಮಾಡಿಮಾಡಿ, ಭಕ್ತಿರತಿಯ- ಶಿವಭಕ್ತಿಯಲ್ಲಿ ಆಸಕ್ತಿಯನ್ನು, ಕೂಡಿಕೂಡಿ, ನಿಜದೇಹಮಂ, ಅಂಘ್ರಿಗೆ- ಜಂಗಮಪಾದಕ್ಕೆ, ನೀಡಿನೀಡಿ,- ಚಾಚಿಚಾಚಿ, ಶಾಂಕರಗಣವೃಂದಮಂ- ಶಿವಗಣಂಗಳ ಸಮೂಹವನ್ನು, ಭಜಿಸಿ- ಸೇವಿಸಿ, ತತ್ಕೃಪೆಯಂ- ಅವರಕಾರುಣ್ಯವನ್ನು, ಪಡೆದಂ ... ... ... ... ॥೪೫॥

ಕಾಮಸುಖಾರ್ಥಿಗಳ್ಗೆ— ಮನ್ಮಥಸುಖವನ್ನಪೇಕ್ಷಿಸಿದವರಿಗೆ, ನವ......ಕಾಮಿನಿಯರ್ಕಳಂ— ನವ- ನೂತನನಾದ, ಯೌವನ, ರೂಪ, ವಿಳಾಸ, ಇವುಗಳಿಂದ, ಯುಕ್ತ- ಕೂಡಿದ, ಸತ್ಕಾಮಿನಿಯರ್ಕಳಂ- ಶ್ರೇಷ್ಠರಾದ ಸ್ತ್ರೀಯರನ್ನು, ಅಲ್ಲಿ, ಧನಾರ್ಥಿಗಳ್ಗೆ- ಧನವಂಬೇಡಿದವರಿಗೆ, ದ್ರವಿಣರಾಶಿಯಂ- ದ್ರವ್ಯದರಾಶಿಯನ್ನು, ಆಭರಣಾರ್ಥಿಚಯಕ್ಕೆ; ತೊಡವುಗಳಂಬೇಡಿದವರಿಗೆ, ದಿವ್ಯಾಮಳಭೂಷಣಾವಳಿಯಂ- ಶ್ರೇಷ್ಠವಾದ ನಿರ್ಮಲಗಳಾದ ಆಭರಣಗಳನ್ನು, ಲಿಂಗಪೂಜಾಮತಿಗಳ್ಗೆ- ಶಿವಪೂಜೆಯಂಮಾಡಬೇಕೆಂದು ಬುದ್ಧಿಯುಳ್ಳವರಿಗೆ, ಲಿಂಗಯಜನೋಚಿತವಸ್ತುವಂ- ಶಿವಪೂಜೆಗೆ ಯೋಗ್ಯವಾದ ಪದಾರ್ಥವನ್ನು, ಅಳ್ತಿಯಿಂ- ಪ್ರೀತಿಯಿಂದ, ಇತ್ತಪಂ. ... ... ... ... ... ॥೪೬॥

ವ್ರತಶೀಲಪರಾಯಣಸಂತತಿಗೆ- ವ್ರತಗಳು ಸದಾಚಾರ ಇವುಗಳಲ್ಲಾಸಕ್ತರಾದವರಿಗೆ, ಆ ವ್ರತಶೀಲಮಂ, ಕರಂ- ಚೆನ್ನಾಗಿ, ಸಲಿಸುತೆ- ನೆರವೇರಿಸುತ್ತ, ಭೂಪತಿಭೋಗಮಂ- ರಾಜಸುಖವನ್ನು, ಎರೆದರಂ- ಬೇಡಿದವರನ್ನು, ಉನ್ನತತರರಾಜೋಪಚಾರದಿಂ- ಅತ್ಯಧಿಕವಾದರಾಜೋಪಚಾರದಿಂದ, ಪೂಜಿಸಿದಂ. ॥೪೭॥

ಕಂ ॥ ಚೆನ್ನೆಸೆವಸೂಳೆಮೇಳದ । ಬಿನ್ನಣದಭುಜಂಗಜಂಗಮೋತ್ಕರಮಿರ್ಪ್ಪಂ ॥ ಪ
ನ್ನೆರಡುಸಾಸಿರಂಬಳಿ । ಕಿನ್ನುಳಿದರ ನಾರೊಲೆಕ್ಕಿಸಲ್ಕೆಸಮರ್ಥರ್ ॥ ... ॥೪೮॥

ಕಂ ॥ ಅನಿಬರ್ಗೆಂದುಂಕುಂದದೆ । ಮನಕ್ಕೆ ಪರಿತುಷ್ಟಿಯಪ್ಪಿನಂ ಬಗೆದುದನೊ ॥
ಲ್ದನುನಯದಿನಿತ್ತು ಮನ್ನಿಪ । ನನವಧಿಗುಣನಿಧಿಶಿವೈಕ್ಯಜನಮಂದಾರಂ॥ ... ॥೪೯॥

ಮತ್ತೇ ॥ ಸುಜನಾಸ್ಯಾಬ್ಜವನಂಪೊದಳ್ದಲರೆ ಮೋಹೇಂದೀವರಂಕುಂದೆಚಿ । ತ್ತ
ಜದರ್ಪಾಂಧತಮಃಕರಂಪರಿಯೆ ದುರ್ದಾಂತೋಡುಗಳ್ಕಂದೆಭ ॥ ಕ್ತಜನಸ್ವಾಂತವಿಲೋಚ
ನಕ್ಕೆವಿಷಯಂಸರ್ವಾರ್ಥಮಪ್ಪಂತೆವಾ । ಡಿ ಜಗದ್ವಂದ್ಯವೃಷಾರ್ಕನಭ್ಯುದಯಮಂ ಕೈ
ಕೊಂಡುಕಣ್ಗೊಪ್ಪಿದಂ ॥ ... ... ... ... ... ॥೫೦॥

ಚಂ॥ ಬಸವನನೂನದಾನಗುಣದೇಳ್ಗೆಯನಾಲಿಸಿ ದೇವಧೇನು ತ । ನ್ನೆಸಕಮಡಂಗಿಲ
ಜ್ಜೆಮಿಗೆ ಪಾಲ್ಪೆಗೆದಿರ್ದುದು ನೈಜಮಲ್ಲದಂ ॥ ದೊಸೆದಮೃತಾಂಧಸರ್ಮಖದೆಬೆಳ್ಪಸುಧಾ
ಜ್ಯಸಕ್ಕೆ ಮೋರೆವಾಂ । ತಸವಸದಿಂದೆ ಬಂದೆಳಸಿ ಸೇವಿಸರೆಂತೊ ತದೀಯಧೂಮಮಂ ॥

ಚೆನ್ನೆಸೆವ- ಸುಂದರರಾದ, ಸೂಳೆಮೇಳದ- ವೇಶ್ಯಾಸ್ತ್ರೀಸಂಗವುಳ್ಳ, ಬಿನ್ನಣದ- ವಿನೋದಿಗಳಾದ, ಭುಜಂಗಜಂಗಮೋತ್ಕರಂ- ವಿಟಜಂಗಮಸಮೂಹವು- ಪನ್ನೆರಡುಸಾವಿರಂ, ಇರ್ಪ್ಪಂ, ಬಳಿಕ, ಇನ್ನು, ಉಳಿದರಂ, ಲೆಕ್ಕಿಸಲ್ಕೆ- ಎಣಿಸುವದಕ್ಕೆ, ಆರೊಸಮರ್ಥರ್. ... ... ... ॥೪೮॥

ಅನವಧಿ......ಮಂದಾರಂ— ಅನವಧಿ- ಅನಂತವಾದ, ಗುಣ- ಸದ್ಗುಣಗಳಿಗೆ, ನಿಧಿ- ನಿಕ್ಷೇಪನಾದ, ಶಿವೈಕ್ಯಜನ- ಶಿವನೊಡನೆ ಏಕತ್ವವಂಪೊಂದಿದ, ಜನ- ಜಂಗಮರಿಗೆ, ಮಂದಾರಂ- ಕಲ್ಪವೃಕ್ಷನಾದ ಬಸವೇಶ್ವರನು, ಅನಿಬರ್ಗೆ- ಅಷ್ಟುಜಂಗಮರಿಗೂ, ಎಂದುಂ- ಯಾವಾಗಲೂ,ಕುಂದದೆ- ತಪ್ಪದೆ, ಮನಕ್ಕೆ- ಪರಿತುಷ್ಟಿ- ಸಂತೋಷವು, ಅಪ್ಪಿನಂ, ಬಗೆದುದಂ- ಬಯಸಿದುದನ್ನು, ಒಲ್ದು, ಅನುನಯದಿಂ- ಇತ್ತು, ಮನ್ನಿಪಂ- ಮನ್ನಿಸುವನು. ... ... ... ... ॥೪೯॥

ಜಗದ್ವಂದ್ಯವೃಷಾರ್ಕಂ- ಜಗಜ್ಜನದಿಂದನಮಸ್ಕರಿಸಲ್ಪಡುವದಕ್ಕೆ ಯೋಗ್ಯನಾದ ಬಸವೇಶ್ವರನೆಂಬ ಸೂರ್ಯನು, ಸುಜನಾಸ್ಯಾಬ್ಜವನಂ- ಸತ್ಪುರುಷರ ಮುಖವೆಂಬ ಕಮಲದವನವು, ಪೊದಳ್ದು, ಅಲರೆ- ವಿಕಸಿಸಲು, ಮೋಹೇಂದೀವರಂ- ಅಜ್ಞಾನವೆಂಬನೈದಿಲೆಯು, ಕುಂದೆ- ಕೊರಗಲು, ಚಿತ್ತಜದರ್ಪಾಂಧತಮಂ- ಮನ್ಮಥನಅಹಂಕಾರವೆಂಬ ಗಾಢಾಂಧಕಾರವು,ಕರಂ- ಅತ್ಯಂತವಾಗಿ,ಪರಿಯೆ- ನಾಶವಾಗಲು, ದುರ್ದಾಂತೋಡುಗಳ್- ದುರ್ಜನರೆಂಬನಕ್ಷತ್ರಗಳು, ಕಂದೆ- ಕಾಂತಿಹೀನವಾಗಲು, ಭಕ್ತಜನಸ್ವಾಂತವಿಲೋಚನಕ್ಕೆ- ಶಿವಭಕ್ತಜನರ ಮನಸ್ಸೆಂಬನೇತ್ರಗಳಿಗೆ, ಸರ್ವಾರ್ಥಂ- ಸಮಸ್ತಇಷ್ಟಾರ್ಥವು, (ಸಕಲಪದಾರ್ಥವು) ವಿಷಯಂ- ಗೋಚರವಾದದ್ದು, ಅಪ್ಪಂತೆ, ಮಾಡಿ, ಅಭ್ಯುದಯಮಂ- ಅಭಿವೃದ್ಧಿಯನ್ನು, ಕೈಕೊಂಡು— ಹೊಂದಿ, ಕಣ್ಗೆ, ಒಪ್ಪಿದಂ. ... ... ... ... ॥೫೦॥

ದೇವಧೇನು- ಕಾಮಧೇನುವು, ಬಸವನ, ಅನೂನದಾನಗುಣದ- ಅಧಿಕವಾದ ದಾನದ, ಏಳ್ಗೆಯಂ- ಅಭಿವೃದ್ಧಿಯನ್ನು, ಆಲಿಸಿ, ತನ್ನೆಸಕಂ- ತನ್ನಉಜ್ಜುಗವು, ಅಡಂಗಿ, ಲಜ್ಜೆ- ನಾಚಿಕೆಯು, ಮಿಗೆ- ಹೆಚ್ಚಾಗಲು, ಪಾಲ್ಪೆಗೆದು- ಹಾಲ್ಕರೆಯುವದನ್ನು ಬಿಟ್ಟು, ಇರ್ದ್ದುದು, ನೈಜಂ, ಅಲ್ಲದೆ- ಹಾಗಲ್ಲದಪಕ್ಷದಲ್ಲಿ, ಅಂದು, ಅಮೃತಾಂಧಸರ್- ದೇವತೆಗಳು, ಮಖದೆ- ಯಜ್ಞದಲ್ಲಿ, ಬೆಳ್ಪ- ಹವಿಸ್ಸನ್ನೀಯುವ, ಸುಧಾಜ್ಯರಸಕ್ಕೆ- ಹಾಲು ತುಪ್ಪಕ್ಕೆ, ಒಸೆದು- ಪ್ರೀತಿಸಿ, ಅಸವಸದಿಂದೆ- ಜಾಗರೂಕತೆಯಿಂದ, ಬಂದು, ಎಳಸಿ- ಅಪೇಕ್ಷಿಸಿ, ಮೋರೆವಾಂತು- ಮುಖವನ್ನು ಚಾಚಿ, ತದೀಯಧೂಮಮಂ- ಆ ಹೋಮದ ಹೊಗೆಯನ್ನು, ಎಂತುಸೇವಿಸರ್- ಹ್ಯಾಗೆಸೇವಿಸುವರು ? ... ... ... ... ... ॥೫೧॥

ಕಂ॥ ನೆಗಳ್ದಕರಸ್ಪರ್ಶನದಿಂ । ಸೊಗಯಿಪಸುರಮಣಿಯನೊಲ್ದುಸೋಲಿಸುತೆನ್ನಂ॥
ಬಗೆಯದೆ ನೂಂಕಿದನೆನುತಂ । ಜಗದೊಳ್ವೃಷಕೀರ್ತಿವನಿತೆ ದೂರಿದಳವನಂ॥ ... ॥೫೨॥

ಕಂ ॥ ದೆಸೆದೀವಿದಬಸವಯಶೋ । ವಸನಮನಿರದಾಂತು ತಾಂದಿಗಂಬರನಾಗು ॥ ತ್ತ
ಸಮಾಕ್ಷಂತೆಗೆದಿಟ್ಟ । ಪೊಸಸಮ್ಮಂ ತೋರ್ಪ್ಪದುಂಬರಛಲದಿಂದಂ ॥ ... ॥೫೩॥

ಉ ॥ ವಾರಿಜಸಂಭವಾಂಡಮಕಳಂಕಗುಣಾಂಕವೃಷೇಂದ್ರನುದ್ಯಶಃ । ಪೂರಮಳುಂ
ಬಮಾಗಿ ಸಲೆ ತೆಕ್ಕನೆ ತೀವೆ ಬೆಳರ್ತು ಚಂದ್ರಮಃ ॥ ಸ್ಫಾರಮರಾಳಶಾಬಮೊಳಗೊಂದಿರೆ ತ
ದ್ವಿಧಿಶಕ್ತಿಹಂಸಿಯಾ । ಧಾರಪಯಃಪ್ರವಾಹದೊಳಗಿಕ್ಕಿದ ತತ್ತಿಯವೊಲ್ವಿರಾಜಿಕುಂ ॥
ವ ॥ ಮತ್ತಮಲ್ಲಿ ॥ ಉ ॥ ನಾಗಲದೇವಿಯಲ್ಲೊಗೆದು ಜಂಗಮಶೇಷದಿನಂಗಲಿಂ
ಗಸಂ । ಯೋಗಮನಾವೃಷೇಂದ್ರನುಪದೇಶದಿನಾಳ್ದುಶಿವಾನುಭೂತಿಚೇ ॥ ತೋಗತಮಾಗೆ
ವಾದಿಗಳನಂಜಿಸಿ ಭಂಜಿಸಿ ಗೆಲ್ದು ಬೆಳ್ಜಸಂ । ನಾಗನರಾದಿಲೋಕದೊಳೆತೀವಿರೆ ಚೆನ್ನವೃ
ಷಾಂಕನೊಪ್ಪಿದಂ ॥ ... ... ... ... ... ॥೫೫॥

ಮಹಾಸ್ರ ॥ ನುತಶೀಲಂ ಭಕ್ತಲೋಲಂ ಕರಣಗುಣವಿನಿರ್ಮುಕ್ತ ನೀಶಾನುರಕ್ತಂ ।

---

ನೆಗಳ್ದ- ಪ್ರಸಿದ್ಧವಾದ, ಕರಸ್ಪರ್ಶನದಿಂ, ಸೊಗಯಿಪ, ಸುರಮಣಿಯಂ- ಚಿಂತಾರತ್ನವನ್ನು, ಒ
ಲ್ದು, ಸೋಲಿಸುತೆ, ಎನ್ನಂ, ಬಗೆಯದೆ- ಆಲೋಚಿಸದೆ, ನೂಂಕಿದಂ- ತಳ್ಳಿದನು, ಎನುತಂ, ಜಗದೊಳ್,
ವೃಷಕೀರ್ತಿವನಿತೆ- ಬಸವೇಶ್ವರನ ಯಶಸ್ಸೆಂಬ ಸ್ತ್ರೀಯು, ಅವನಂ- ಬಸವೇಶ್ವರನನ್ನು, ದೂರಿದಳ್.

ದೆಸೆದೀವಿದ- ಎಲ್ಲಾದಿಕ್ಕುಗಳಲ್ಲೂ ತುಂಬಿದ, ಬಸವಯಶೋವಸನಮಂ- ಬಸವೇಶ್ವರನ ಕೀರ್ತಿಯೆಂ
ಬ ವಸ್ತ್ರವನ್ನು, * ಅಸಮಾಕ್ಷಂ- ಪರಮೇಶ್ವರನು, ತಾಂ, ಇರದೆ, ಆಂತು- ಧರಿಸಿ, ದಿಗಂಬರಂ- ದಿಕ್ಕೇ
ವಸ್ತ್ರವಾಗುಳ್ಳವನು, ಆಗುತ್ತೆ, ತೆಗೆದು, ಇಟ್ಟ, ಆಪೊಸಸಮ್ಮಂ- ಆ ನೂತನವಾದ ಚರ್ಮವು, ಅಂಬರಛ
ಲದಿಂದಂ- ಆಕಾಶವೆಂಬ ವ್ಯಾಜದಿಂದ, ತೋರ್ಪ್ಪದು. ... ... ... ... ॥೫೩॥

ಅಕಳಂಕಗುಣಾಂಕವೃಷೇಂದ್ರನ- ನಿರ್ದುಷ್ಟಗುಣಭರಿತನಾದ ಬಸವೇಶ್ವರನ, ಉದ್ಯಶಃಪೂರಂ- ಅ
ಧಿಕವಾದ ಕೀರ್ತಿಯೆಂಬ ಪ್ರವಾಹವು, ಅಳುಂಬಮಾಗಿ- ಹೆಚ್ಚಾಗಿ, ಸಲೆ, ತೆಕ್ಕನೆ- ಸಾಂದ್ರವಾಗಿ, ತೀವೆ-ತುಂ
ಬಲು, ವಾರಿಜಸಂಭವಾಂಡಂ- ಬ್ರಹ್ಮಾಂಡವು, ಬೆಳರ್ತು- ಬೆಳ್ಳಗಾಗಿ, ಚಂದ್ರಮಃಸ್ಫಾರಮರಾಳಶಾಬಂ- ಚಂ
ದ್ರನೆಂಬ ಪ್ರಕಾಶಿಸುವ ಹಂಸಪಕ್ಷಿಯ ಮರಿಯು, ಒಳಗೆ- ಬ್ರಹ್ಮಾಂಡದಲ್ಲಿ, ಒಂದಿರೆ, ತದ್ವಿಧಿಶಕ್ತಿಹಂಸಿ- ಆ
ಬ್ರಹ್ಮನ ಶಕ್ತಿಯೆಂಬ ಹೆಣ್ಣುಹಂಸಪಕ್ಷಿಯ ಮರಿಯು, ಪಯಃಪ್ರವಾಹದೊಳ್- ಆಧಾರವಾಗಿರುವ ಜಲ
ಪ್ರವಾಹದಲ್ಲಿ, ಇಕ್ಕಿದ, ತತ್ತಿಯವೊಲ್- ಮೊಟ್ಟೆಯಹಾಗೆ, ವಿರಾಜಿಕುಂ- ಪ್ರಕಾಶಿಸುವದು. ॥೫೪॥

ಚೆನ್ನವೃಷಾಂಕಂ- ಚೆನ್ನಬಸವೇಶ್ವರನು, ಜಂಗಮಶೇಷದಿಂ- ಜಂಗಮಪ್ರವಾಹದಿಂದ, ನಾಗಲದೇವಿ
ಯಲ್ಲಿ- ನಾಗಲಾಂಬಿಕೆಯಲ್ಲಿ, ಒಗೆದು- ಆವಿರ್ಭವಿಸಿ, ಆವೃಷೇಂದ್ರನ, ಉಪದೇಶದಿಂ, ಅಂಗಲಿಂಗಸಂಯೋ
ಗಮಂ, ಆಳ್ದು, ಶಿವಾನುಭೂತಿ- ಶಿವಾನುಭವವು, ಚೇತೋಗತಂ- ಹೃದ್ಗತವಾದದ್ದು, ಆಗೆ, ವಾದಿಗಳಂ-
ಪರಸಮಯವಾದಿಗಳನ್ನು, ಅಂಜಿಸಿ- ಭಯಪಡಿಸಿ, ಭಂಜಿಸಿ- ನಾಶಮಾಡಿ, ಗೆಲ್ದು, ನಾಗನರಾದಿಲೋಕದೊ
ಳೆ-ಪಾತಾಳಭೂಮಿ ಮೊದಲಾದ ಲೋಕಗಳಲ್ಲಿ, ಬೆಳ್ಜಸಂ- ಶುಭ್ರವಾದ ಕೀರ್ತಿಯು, ತೀವಿರೆ, ಒಪ್ಪಿದಂ. ॥೫೫॥

(ಚೆನ್ನಬಸವೇಶ್ವರಂ,) ನುತಶೀಲಂ- ಶ್ಲಾಘ್ಯವಾದ ಸದಾಚಾರವುಳ್ಳವನು, ಭಕ್ತಲೋಲಂ- ಶಿವಭಕ್ತರ
ಲ್ಲಾಸಕ್ತನು, ಕರಣಗುಣವಿನಿರ್ಮುಕ್ತಂ- ಇಂದ್ರಿಯಗುಣಗಳಿಂ ಬಿಡಲ್ಪಟ್ಟವನು, (ಅಂದರೆ ಜಿತೇಂದ್ರಿಯ

---

* (ಅವ) ವಿಷಮವಾದ ಕಣ್ಣುಳ್ಳವನು ... ... ... ... ॥೫೩॥

ಜಿತಕಾಮಂ ಚಿತ್ಸ್ವಧಾಮಂ ಶಿವಸಮರಸಸದ್ಭಾವ ನುದ್ಯತ್ಪ್ರಭಾವಂ ॥ ಭೃತಲಿಂಗಂ ಸಾಧುಸಂಗಂ ಪ್ರಮುದಿತಗಣಸಂದೋಹ ನುದ್ವೀತಮೋಹಂ । ಮತಿಧುರ್ಯಂ ಯೋಗಿವರ್ಯಂ ವಿತತಘನದಯಾಸಾರ ನತ್ಯಂತಧೀರಂ ॥ ... ... ... ॥೫೬॥

ಚಂ॥ ಅಚಳಿತಸತ್ಯಭಾಷಣ ನಪಾಕೃತಲೌಕಿಕಮಾರ್ಗ ನತ್ಯಪೂ । ರ್ವಚರಿತ ನನ್ಯಕರ್ಮರಹಿತಂ ತ್ರಿವಿಧೇಶ್ವರಶೇಷಭೋಗಿ ಸ ॥ ತ್ಪ್ರಜೆಯಪರಿಸ್ತುತಂ ಗುರುಪರಾಯಣ ನನ್ವಿತಮೂಲಮಂತ್ರಸ । ದ್ರುಚಿ ನವಲಿಂಗಸಂಗತನಿಜಾಂಗ ನನಂಜನಭಕ್ತರಂಜನಂ॥೫೭॥

ಕಂ ॥ ಗುರುಮೂರ್ತಿಬಸವರಾಜನ । ಚರಣಾಂಬುರುಹಕ್ಕೆ ಮಣಿದು ಮಗುಳ್ದೆರಗಿ ಗುಣಾ ॥ ಕರ ಚೆನ್ನಬಸವ ನಾಗುರು । ವರನುತಿಯಂ ಪ್ರಮುದಮಲರೆ ಮಾಡಿದನಾಗಳ್ ॥

ಚಂ ॥ ಶಿವನುತಸಾರದಿವ್ಯಗುಣಹಾರ ಪರಾಪರತತ್ವಧೀರ ಶಾಂ । ಭವನಿಜರೂಪ ಚಿದ್ಘನಕಲಾಪ ನಿರಾಕೃತಪುಷ್ಪಚಾಪ ದು ॥ ರ್ಭವವನದಾವ ಲಿಂಗಮಯಭಾವ ಮಹಾ

ನು) ಈಶಾನುರಕ್ತಂ, ಜಿತಕಾಮಂ- ಜೈಸಲ್ಪಟ್ಟ ಕಾಮವುಳ್ಳವನು, ಚಿತ್ಸ್ವಧಾಮಂ- ಜ್ಞಾನಾಶ್ರಯನು- ಶಿವಸಮರಸಸದ್ಭಾವಂ- ಪರಶಿವನೊಡನೆ ಸಾಮರಸ್ಯವಂ ಹೊಂದಿರುವ ಚಿತ್ತವುಳ್ಳವನು, ಉದ್ಯತ್ಪ್ರಭಾವಂ, ಅತ್ಯಂತಮಹಿಮೆಯುಳ್ಳವನು, ಭೃತಲಿಂಗಂ- ಧರಿಸಲ್ಪಟ್ಟ ಶಿವಲಿಂಗವುಳ್ಳವನು, ಸಾಧುಸಂಗಂ- ಸತ್ಪುರುಷಸಹವಾಸವುಳ್ಳವನು, ಪ್ರಮುದಿತಗಣಸಂದೋಹಂ- ಸಂತೋಷಪಡಿಸಲ್ಪಟ್ಟ ಶಿವಗಣಂಗಳುಳ್ಳವನು, ಉದ್ವೀತಮೋಹಂ- ಅಜ್ಞಾನರಹಿತನು, ಮತಿಧುರ್ಯಂ- ಅತಿಬುದ್ಧಿಶಾಲಿಯು, ಯೋಗಿವರ್ಯಂ- ಶಿವಯೋಗಿಗಳಲ್ಲಿ ಶ್ರೇಷ್ಠನು, ವಿತತಘನದಯಾಸಾರಂ- ಅಧಿಕವಾದ ಕೃಪಾಸಾರಸ್ಯವುಳ್ಳವನು, ಅತ್ಯಂತಧೀರಂ. ॥೫೬॥

ಅಚಳಿತಸತ್ಯಭಾಷಣಂ- ಅಡಿತಪ್ಪದ ಸತ್ಯವಾಕ್ಕುಳ್ಳವನು, ಅಪಾಕೃತಲೌಕಿಕಮಾರ್ಗಂ- ಲೌಕಿಕಮಾರ್ಗವಂ ತಿರಸ್ಕರಿಸಿದವನು, ಅತ್ಯಪೂರ್ವಚರಿತಂ, ಅನ್ಯಕರ್ಮರಹಿತಂ- ಶಿವಪೂಜಾಕರ್ಮವಲ್ಲದ ಕರ್ಮವನ್ನು ಮಾಡದವನು, ತ್ರಿವಿಧೇಶ್ವರಶೇಷಭೋಗಿ- ಗುರು ಲಿಂಗ ಜಂಗಮಪ್ರಸಾದವನ್ನು ಉಪಭೋಗಿಸುವನು, ಸತ್ಪ್ರಜೆಯಪರಿಸ್ತುತಂ- ಸತ್ಪುರುಷರಿಂ ಕೊಂಡಾಡಲ್ಪಟ್ಟವನು, ಗುರುಪರಾಯಣಂ- ಗುರುವಿನಲ್ಲನುರಕ್ತನು, ಅನ್ವಿತ........ಸದ್ರುಚಿ— ಅನ್ವಿತ— ಕೂಡಿದ, ಮೂಲಮಂತ್ರ- ಷಡಕ್ಷರಮಂತ್ರದಲ್ಲಿ ಸತ್- ಸಮಾಚೀನವಾದ, ರುಚಿ- ಪ್ರೀತಿಯುಳ್ಳವನು, ನವಲಿಂಗಸಂಗತನಿಜಾಂಗಂ- ಆಚಾರಗುರುಲಿಂಗಾದಿ ನವವಿಧಲಿಂಗಸಮೇತವಾದ ಶರೀರವುಳ್ಳವನು, ಅನಂಜನಭಕ್ತರಂಜನಂ- ಮಾಯಾರಹಿತನಾದ ಪರಶಿವನ ಭಕ್ತರನ್ನು ಸಂತೋಷಪಡಿಸುವವನು. ... ... ... ... ... ॥೫೭॥

ಗುಣಾಕರಚೆನ್ನಬಸವಂ- ಗುರುಮೂರ್ತಿಬಸವರಾಜನ, ಚರಣಾಂಬುರುಹಕ್ಕೆ, ಮಣಿದು, ನಮಸ್ಕರಿಸಿ, ಮಗುಳ್ದು- ಪುನಃ, ಎರಗಿ- ನಮಸ್ಕರಿಸಿ, ಪ್ರಮುದಂ- ಸಂತೋಷವು, ಅಲರೆ- ಹೆಚ್ಚಾಗಲು, ಆಗಳ್- ಆಗುರುವರನುತಿಯಂ- ಆ ಗುರುಶ್ರೇಷ್ಠನಾದ ಬಸವೇಶ್ವರನ ಸ್ತೋತ್ರವನ್ನು, ಮಾಡಿದಂ. ॥೫೮॥

ಶಿವನುತ- ಈಶ್ವರನಿಂ ಕೊಂಡಾಡಲ್ಪಟ್ಟ, ಸಾರದಿವ್ಯಗುಣಹಾರ- ಅತಿಶ್ರೇಷ್ಠವಾದ ಸದ್ಗುಣಗಳೇ ಹಾರವಾಗುಳ್ಳ, ಪರಾಪರತತ್ವ- ಪರತತ್ವಸ್ವರೂಪನಾದ, ಧೀರ- ಧೈರ್ಯಶಾಲಿಯಾದ, ಶಾಂಭವನಿಜರೂಪ-ಈಶ್ವರಸ್ವರೂಪನಾದ, ಚಿದ್ಘನಕಲಾಪ- ಜ್ಞಾನವೇ ಶ್ರೇಷ್ಠವಾದ ಆಭರಣವಾಗುಳ್ಳ, ನಿರಾಕೃತಪುಷ್ಪಚಾಪ- ಅಧಃಕರಿಸಲ್ಪಟ್ಟ ಮನ್ಮಥನುಳ್ಳ, ದುರ್ಭವವನದಾವ- ಕೆಟ್ಟಸಂಸಾರವೆಂಬ ಕಾಡಿಗೆ ಕಾಳ್ಕಿಚ್ಚಾದ, ಲಿಂಗಮಯಭಾವ-ಲಿಂಗೈಕ್ಯವಾದ ಮನಸ್ಸುಳ್ಳ, ಮಹಾಗುರುಮೂರ್ತಿ, ದೇವ, ಗೌರವಸುಪಥಪ್ರಕಾಶ-ಗುರುತ್ವಮಾರ್ಗದಲ್ಲಿಪ್ರಕಾಶಿಸುವ, ಚಿನ್ನಿಧಿಕೋಶ- ಚಿತ್ತೆಂಬ ನಿಕ್ಷೇಪಕ್ಕೆ ಬೊಕ್ಕಸದಂತಿರುವ, ವೃಷೇಶ

ಕಂ॥ ನೆಗಳ್ದ ಕರಸ್ಪರ್ಶನದಿಂ । ಸೊಗಯಿಪ ಸುರಮಣಿಯನೊಲ್ದು ಸೋಲಿಸುತೆನ್ನಂ॥ ಬಗೆಯದೆ ನೂಂಕಿದನೆನುತಂ । ಜಗದೊಳ್ವೃಷಕೀರ್ತಿವನಿತೆ ದೂರಿದಳವನಂ॥ ... ॥೫೨॥

ಕಂ ॥ ದೆಸೆದೀವಿದಬಸವಯಶೋ । ವಸನಮನಿರದಾಂತು ತಾಂದಿಗಂಬರನಾಗು ॥ ತ್ತ ಸಮಾಕ್ಷಂತೆಗೆದಿಟ್ಟಾ । ಪೊಸಸಮ್ಮಂ ತೋರ್ಪುದುಂಬರಥಲದಿಂದಂ ॥ ... ॥೫೩॥

ಉ ॥ ವಾರಿಜಸಂಭವಾಂಡಮಕಳಂಕಗುಣಾಂಕವೃಷೇಂದ್ರನುದ್ಯಶಃ । ಪೂರಮಳಂಬಮಾಗಿ ಸಲೆ ತೆಕ್ಕನೆ ತೀವೆ ಬೆಳರ್ತು ಚಂದ್ರಮಃ ॥ ಸ್ಫಾರಸುರಾಳಶಾಬಮೊಳಗೊಂದಿರೆ ತದ್ವಿಧಿಶಕ್ತಿಹಂಸಿಯಾ । ಧಾರಪಯಃಪ್ರವಾಹದೊಳಗಿಕ್ಕಿದ ತತ್ತಿಯವೊಲ್ವಿರಾಜಿಕುಂ ॥ ವ ॥ ಮತ್ತಮಲ್ಲಿ ॥

ಉ ॥ ನಾಗಲದೇವಿಯಲ್ಲೊಗೆದು ಜಂಗಮಶೇಷದಿನಂಗಲಿಂಗಸಂ । ಯೋಗಮನಾವೃಷೇಂದ್ರನುಪದೇಶದಿನಾಳ್ದು ಶಿವಾನುಭೂತಿಚೇ ॥ ತೋಗತಮಾಗೆ ವಾದಿಗಳನಂಜಿಸಿ ಭಂಜಿಸಿ ಗೆಲ್ದು ಬೆಳ್ಜಸಂ । ನಾಗನರಾದಿಲೋಕದೊಳೆತೀವಿರೆ ಚೆನ್ನವೃಷಾಂಕನೊಪ್ಪಿದಂ ॥ ... ... ... ... ... ॥೫೫॥

ಮಹಾಸ್ರ ॥ ನುತಶೀಲಂ ಭಕ್ತಲೋಲಂ ಕರಣಗುಣವಿನಿರ್ಮುಕ್ತ ನೀಶಾನುರಕ್ತಂ ।

---

ನೆಗಳ್ದ- ಪ್ರಸಿದ್ಧವಾದ, ಕರಸ್ಪರ್ಶನದಿಂ, ಸೊಗಯಿಪ, ಸುರಮಣಿಯಂ- ಚಿಂತಾರತ್ನವನ್ನು, ಒಲ್ದು, ಸೋಲಿಸುತೆ, ಎನ್ನಂ, ಬಗೆಯದೆ- ಆಲೋಚಿಸದೆ, ನೂಂಕಿದಂ- ತಳ್ಳಿದನು, ಎನುತಂ, ಜಗದೊಳ್, ವೃಷಕೀರ್ತಿವನಿತೆ- ಬಸವೇಶ್ವರನ ಯಶಸ್ಸೆಂಬ ಸ್ತ್ರೀಯು, ಅವನಂ- ಬಸವೇಶ್ವರನನ್ನು, ದೂರಿದಳ್.

ದೆಸೆದೀವಿದ- ಎಲ್ಲಾದಿಕ್ಕುಗಳಲ್ಲೂ ತುಂಬಿದ, ಬಸವಯಶೋವಸನಮಂ- ಬಸವೇಶ್ವರನ ಕೀರ್ತಿಯೆಂಬ ವಸ್ತ್ರವನ್ನು, * ಅಸಮಾಕ್ಷಂ- ಪರಮೇಶ್ವರನು, ತಾಂ, ಇರದೆ, ಆಂತು- ಧರಿಸಿ, ದಿಗಂಬರಂ- ದಿಕ್ಕೇ ವಸ್ತ್ರವಾಗುಳ್ಳವನು, ಆಗುತ್ತ, ತೆಗೆದು, ಇಟ್ಟ, ಆಪೊಸಸಮ್ಮಂ- ಆ ನೂತನವಾದ ಚರ್ಮವು, ಅಂಬರಥಲದಿಂದಂ- ಆಕಾಶವೆಂಬ ವ್ಯಾಜದಿಂದ, ತೋರ್ಪುದು. ... ... ... ... ॥೫೩॥

ಅಕಳಂಕಗುಣಾಂಕವೃಷೇಂದ್ರನ- ನಿರ್ದುಷ್ಟಗುಣಭರಿತನಾದ ಬಸವೇಶ್ವರನ, ಉದ್ಯಶಃಪೂರಂ- ಅಧಿಕವಾದ ಕೀರ್ತಿಯೆಂಬ ಪ್ರವಾಹವು, ಅಳುಂಬಮಾಗಿ- ಹೆಚ್ಚಾಗಿ, ಸಲೆ, ತೆಕ್ಕನೆ- ಸಾಂದ್ರವಾಗಿ, ತೀವೆ-ತುಂಬಲು, ವಾರಿಜಸಂಭವಾಂಡಂ- ಬ್ರಹ್ಮಾಂಡವು,ಬೆಳರ್ತು- ಬೆಳ್ಳಗಾಗಿ, ಚಂದ್ರಮಃಸ್ಫಾರಸುರಾಳಶಾಬಂ- ಚಂದ್ರನೆಂಬ ಪ್ರಕಾಶಿಸುವ ಹಂಸಪಕ್ಷಿಯ ಮರಿಯು, ಒಳಗೆ- ಬ್ರಹ್ಮಾಂಡದಲ್ಲಿ, ಒಂದಿರೆ, ತದ್ವಿಧಿಶಕ್ತಿಹಂಸಿ- ಆ ಬ್ರಹ್ಮನ ಶಕ್ತಿಯೆಂಬ ಹೆಣ್ಣುಹಂಸಪಕ್ಷಿಯ ಮರಿಯು, ಪಯಃಪ್ರವಾಹದೊಳ್- ಆಧಾರವಾಗಿರುವ ಜಲಪ್ರವಾಹದಲ್ಲಿ, ಇಕ್ಕಿದ, ತತ್ತಿಯವೊಲ್- ಮೊಟ್ಟೆಯಹಾಗೆ, ವಿರಾಜಿಕುಂ- ಪ್ರಕಾಶಿಸುವದು. ॥೫೪॥

ಚೆನ್ನವೃಷಾಂಕಂ- ಚೆನ್ನಬಸವೇಶ್ವರನು, ಜಂಗಮಶೇಷದಿಂ- ಜಂಗಮಪ್ರಸಾದದಿಂದ, ನಾಗಲದೇವಿಯಲ್ಲಿ- ನಾಗಲಾಂಬಿಕೆಯಲ್ಲಿ, ಒಗೆದು- ಆವಿರ್ಭವಿಸಿ, ಆವೃಷೇಂದ್ರನ, ಉಪದೇಶದಿಂ, ಅಂಗಲಿಂಗಸಂಯೋಗಮಂ, ಆಳ್ದು, ಶಿವಾನುಭೂತಿ- ಶಿವಾನುಭವವು, ಚೇತೋಗತಂ- ಹೃದ್ಗತವಾದದ್ದು, ಆಗೆ, ವಾದಿಗಳಂ- ಪರಸಮಯವಾದಿಗಳನ್ನು, ಅಂಜಿಸಿ- ಭಯಪಡಿಸಿ, ಭಂಜಿಸಿ- ನಾಶಮಾಡಿ,ಗೆಲ್ದು, ನಾಗನರಾದಿಲೋಕದೊಳೆ-ಪಾತಾಳಭೂಮಿ ಮೊದಲಾದ ಲೋಕಗಳಲ್ಲಿ, ಬೆಳ್ಜಸಂ- ಶುಭ್ರವಾದ ಕೀರ್ತಿಯು,ತೀವಿರೆ, ಒಪ್ಪಿದಂ.॥೫೫॥

(ಚೆನ್ನಬಸವೇಶ್ವರಂ,) ನುತಶೀಲಂ- ಶ್ಲಾಘ್ಯವಾದ ಸದಾಚಾರವುಳ್ಳವನು, ಭಕ್ತಲೋಲಂ- ಶಿವಭಕ್ತರಲ್ಲಾಸಕ್ತನು, ಕರಣಗುಣವಿನಿರ್ಮುಕ್ತಂ- ಇಂದ್ರಿಯಗುಣಗಳಿಂ ಬಿಡಲ್ಪಟ್ಟವನು, (ಅಂದರೆ ಜಿತೇಂದ್ರಿಯ

---

* (ಅವ) ವಿಷಮವಾದ ಕಣ್ಣುಳ್ಳವನು ... ... ... ... ॥೫೩॥

ಜಿತಕಾಮಂ ಚಿತ್ಸುಧಾಮಂ ಶಿವಸಮರಸಸದ್ಭಾವ ನುದ್ಯತ್ಪ್ರಭಾವಂ ‖ ಭೃತಲಿಂಗಂ ಸಾಧುಸಂಗಂ ಪ್ರಮುದಿತಗಣಸಂದೋಹ ನುದ್ವೀತಮೋಹಂ । ಮತಿಧುರ್ಯಂ ಯೋಗಿವರ್ಯಂ ವಿತತಘನದಯಾಸಾರ ನತ್ಯಂತಧೀರಂ ‖ ... ... ... ‖೫೬‖

ಚಂ‖ ಅಚಳಿತಸತ್ಯಭಾಷಣ ನಪಾಕೃತಲೌಕಿಕಮಾರ್ಗ ನತ್ಯಪೂ । ರ್ವಚರಿತ ನನ್ಯಕರ್ಮರಹಿತಂ ತ್ರಿವಿಧೇಶ್ವರಶೇಷಭೋಗಿ ಸ ‖ ತ್ಪ್ರಜೆಯಪರಿಸ್ತುತಂ ಗುರುಪರಾಯಣ ನನ್ವಿತಮೂಲಮಂತ್ರಸ । ದ್ರುಚಿ ನವಲಿಂಗಸಂಗತನಿಜಾಂಗ ನನಂಜನಭಕ್ತರಂಜನಂ‖೫೭‖

ಕಂ ‖ ಗುರುಮೂರ್ತಿ ಬಸವರಾಜನ । ಚರಣಾಂಬುರುಹಕ್ಕೆ ಮಣಿದು ಮಗುಳ್ದೆರಗಿ ಗುಣಾ ‖ ಕರ ಚೆನ್ನಬಸವ ನಾಗುರು । ವರನುತಿಯಂ ಪ್ರಮುದದಮಲರೆ ಮಾಡಿದನಾಗಳ್ ‖

ಚಂ ‖ ಶಿವನುತಸಾರದಿವ್ಯಗುಣಹಾರ ಪರಾಪರತತ್ವಧೀರ ಶಾಂ । ಭವನಿಜರೂಪ ಚಿದ್ಘನಕಲಾಪ ನಿರಾಕೃತಪುಷ್ಪಚಾಪ ದು ‖ ರ್ಭವವನದಾವ ಲಿಂಗಮಯಭಾವ ಮಹಾ

---

ನು) ಈಶಾನುರಕ್ತಂ, ಜಿತಕಾಮಂ- ಜೈಸಲ್ಪಟ್ಟ ಕಾಮವುಳ್ಳವನು, ಚಿತ್ಸುಧಾಮಂ- ಜ್ಞಾನಾಶ್ರಯನು- ಶಿವಸಮರಸಸದ್ಭಾವಂ- ಪರಶಿವನೊಡನೆ ಸಾಮರಸ್ಯವಂ ಹೊಂದಿರುವ ಚಿತ್ತವುಳ್ಳವನು, ಉದ್ಯತ್ಪ್ರಭಾವಂ, ಅತ್ಯಂತಮಹಿಮೆಯುಳ್ಳವನು, ಭೃತಲಿಂಗಂ- ಧರಿಸಲ್ಪಟ್ಟ ಶಿವಲಿಂಗವುಳ್ಳವನು, ಸಾಧುಸಂಗಂ- ಸತ್ಪುರುಷಸಹವಾಸವುಳ್ಳವನು, ಪ್ರಮುದಿತಗಣಸಂದೋಹಂ- ಸಂತೋಷಪಡಿಸಲ್ಪಟ್ಟ ಶಿವಗಣಂಗಳುಳ್ಳವನು, ಉದ್ವೀತಮೋಹಂ- ಅಜ್ಞಾನರಹಿತನು, ಮತಿಧುರ್ಯಂ- ಅತಿಬುದ್ಧಿಶಾಲಿಯು, ಯೋಗಿವರ್ಯಂ- ಶಿವಯೋಗಿಗಳಲ್ಲಿ ಶ್ರೇಷ್ಠನು, ವಿತತಘನದಯಾಸಾರಂ- ಅಧಿಕವಾದ ಕೃಪಾಸಾರಸ್ಯವುಳ್ಳವನು, ಅತ್ಯಂತಧೀರಂ. ‖೫೬‖

ಅಚಳಿತಸತ್ಯಭಾಷಣಂ- ಆಡಿತಪ್ಪದ ಸತ್ಯವಾಕ್ಕುಳ್ಳವನು, ಅಪಾಕೃತಲೌಕಿಕಮಾರ್ಗಂ- ಲೌಕಿಕಮಾರ್ಗವಂ ತಿರಸ್ಕರಿಸಿದವನು, ಅತ್ಯಪೂರ್ವಚರಿತಂ, ಅನ್ಯಕರ್ಮರಹಿತಂ- ಶಿವಪೂಜಾಕರ್ಮವಲ್ಲದ ಕರ್ಮವನ್ನು ಮಾಡದವನು, ತ್ರಿವಿಧೇಶ್ವರಶೇಷಭೋಗಿ- ಗುರು ಲಿಂಗ ಜಂಗಮಪ್ರಸಾದವನ್ನು ಉಪಭೋಗಿಸುವನು, ಸತ್ಪ್ರಜೆಯಪರಿಸ್ತುತಂ- ಸತ್ಪುರುಷರಿಂ ಕೊಂಡಾಡಲ್ಪಟ್ಟವನು, ಗುರುಪರಾಯಣಂ- ಗುರುವಿನಲ್ಲನುರಕ್ತನು, ಅನ್ವಿತ.........ಸದ್ರುಚಿ— ಅನ್ವಿತ— ಕೂಡಿದ, ಮೂಲಮಂತ್ರ- ಷಡಕ್ಷರಮಂತ್ರದಲ್ಲಿ,ಸತ್- ಸಮೀಚೀನವಾದ, ರುಚಿ- ಪ್ರೀತಿಯುಳ್ಳವನು, ನವಲಿಂಗಸಂಗತನಿಜಾಂಗಂ- ಆಚಾರಗುರುಲಿಂಗಾದಿ ನವವಿಧಲಿಂಗಸಮೇತವಾದ ಶರೀರವುಳ್ಳವನು, ಅನಂಜನಭಕ್ತರಂಜನಂ- ಮಾಯಾರಹಿತನಾದ ಪರಶಿವನ ಭಕ್ತರನ್ನು ಸಂತೋಷಪಡಿಸುವನು. ... ... ... ... ... ‖೫೭‖

ಗುಣಾಕರಚೆನ್ನಬಸವಂ- ಗುರುಮೂರ್ತಿಬಸವರಾಜನ, ಚರಣಾಂಬುರುಹಕ್ಕೆ, ಮಣಿದು, ನಮಸ್ಕರಿಸಿ, ಮಗುಳ್ದು- ಪುನಃ, ಎರಗಿ- ನಮಸ್ಕರಿಸಿ, ಪ್ರಮುದಂ- ಸಂತೋಷವು, ಅಲರೆ- ಹೆಚ್ಚಾಗಲು, ಆಗಳ್- ಆಗುರುವರನುತಿಯುಂ- ಆ ಗುರುಶ್ರೇಷ್ಠನಾದ ಬಸವೇಶ್ವರನ ಸ್ತೋತ್ರವನ್ನು, ಮಾಡಿದಂ. ‖೫೮‖

ಶಿವನುತ- ಈಶ್ವರನಿಂ ಕೊಂಡಾಡಲ್ಪಟ್ಟ, ಸಾರದಿವ್ಯಗುಣಹಾರ- ಅತಿಶ್ರೇಷ್ಠವಾದ ಸದ್ಗುಣಗಳೇ ಹಾರವಾಗುಳ್ಳ, ಪರಾಪರತತ್ವ- ಪರತತ್ವಸ್ವರೂಪನಾದ, ಧೀರ- ಧೈರ್ಯಶಾಲಿಯಾದ, ಶಾಂಭವನಿಜರೂಪ-ಈಶ್ವರಸ್ವರೂಪನಾದ, ಚಿದ್ಘನಕಲಾಪ- ಜ್ಞಾನವೇ ಶ್ರೇಷ್ಠವಾದ ಆಭರಣವಾಗುಳ್ಳ, ನಿರಾಕೃತಪುಷ್ಪಚಾಪ- ಅಧಃಕರಿಸಲ್ಪಟ್ಟ ಮನ್ಮಥನುಳ್ಳ, ದುರ್ಭವವನದಾವ- ಕೆಟ್ಟಸಂಸಾರವೆಂಬ ಕಾಡಿಗೆ ಕಾಳ್ಕಿಚ್ಚಾದ, ಲಿಂಗಮಯಭಾವ-ಲಿಂಗೈಕ್ಯವಾದ ಮನಸ್ಸುಳ್ಳ, ಮಹಾಗುರುಮೂರ್ತಿ, ದೇವ, ಗೌರವಸುಪಥಪ್ರಕಾಶ-ಗುರುತ್ವಮಾರ್ಗದಲ್ಲಿಪ್ರಕಾಶಿಸುವ, ಚಿನ್ನಿಧಿಕೋಶ- ಚಿತ್ತೆಂಬ ನಿಕ್ಷೇಪಕ್ಕೆ ಬೊಕ್ಕಸದಂತಿರುವ, ವೃಷೇಶ

ಗುರುಮೂರ್ತಿ ದೇವ ಗೆಲೆ । ಲವಸುಂ ಸಘಸ್ಪ್ರಕಾಶ ಜಯ ಚಿನ್ನಿಧಿಕೋಶ ವೃಷೇಶಸಂತತಂ ‖

ಮತ್ತಂ‖ ಪರಮಶ್ರೀಗುರುಮೂರ್ತಿ ಪಾವನಪರಂಜ್ಯೋತಿಃಸ್ಫುರದ್ರೂಪಭಾ । ಸುರಸಚ್ಚಿದ್ರಸಪೂರ್ಣ ನಿಷ್ಕಳ ಕಳಾಸಂಯುಕ್ತ ಸಂಸಾರದು ‖ ಸ್ತರ ನೀರಾಕರಕರ್ಣಧಾರ ದುರಿತಧ್ವಾಂತಾರ್ಕ ನಿನ್ನಂಘ್ರಿ । ಪಂಕೇರುಹಂಗಳ್ಶರಣಂಗಳಕ್ಕೆಮಗಜಸ್ರಂ ಶ್ರೀವೃಷಾಧೀಶ್ವರ ‖ .. ... ... ... ... ... ‖೬೦‖

ಚಂ‖ ಪರಶಿವಭಕ್ತಿವಾರ್ಧಿಪರಿವರ್ಧನಶೀತಮಯೂಖ ಸತ್ಕೃಪಾ । ಕರ ವಿಪುಳಪ್ರಭಾವ ಚರಲಿಂಗಸಮರ್ಚನಲೋಲ ಕಾಲಸಂ ‖ ಹರಣಪರಾವತಾರ ಪರಮಾರ್ಥವಿಶಾರದಸಾರಸದ್ಗುಣಾ । ಭರಣ ಪವಿತ್ರಗಾತ್ರ ಶರಣಾಗೆಮಗನ್ವಿತಮಂಗಳೋದಯ ‖ ‖೬೧‖

ವ‖ ಎಂದಿಂತು ಭಕ್ತಿಮಿಗೆ ಸನ್ನುತಿಗೆಯ್ದು ಗುರುಪ್ರಸಾದಂಬಡೆದು ಶಿವಾನಂದರಸಪರಿಪ್ಲುತಮಾನಸಂ ಚಿನ್ನಿಧಿ ಚೆನ್ನಬಸವಣ್ಣನುನ್ನತೋತ್ಸವದಿನೊಪ್ಪುತ್ತಮಿರ್ಪಿನಮಲ್ಲಿ ಪೆರತೊಂದುವಾಸರದೊಳ್ಬಸವರಾಜನೀಶಾರ್ಚನಂಗೆಯ್ದನಂತರಮನಿಮಿಷೇಕ್ಷಣದಿಂ ಶಿವಲಿಂಗಮಂ ನಿರೀಕ್ಷಿಸುತ್ತಮಾಲಿಂಗದೊಳಪೂರ್ವತರರೂಪಾಂತರಂಮಾರ್ಪೊಳೆಯೆ ವಿ

---

ಸಂತತಂ- ಯಾವಾಗಲೂ, ಜಯ. ... ... ... ... ‖೫೯‖

ಪರಮಶ್ರೀಗುರುಮೂರ್ತಿ, ಪಾವನಪರಂಜ್ಯೋತಿಃಸ್ಫುರದ್ರೂಪ, ಭಾಸುರಸಚ್ಚಿದ್ರಸಪೂರ್ಣ- ಪ್ರಕಾಶಿಸುವ ಸಚ್ಚಿದಾನಂದಸಂಪೂರ್ಣನಾದ, ನಿಷ್ಕಳ- ನಿರಾಕಾರನಾದ,ಕಳಾಸಂಯುಕ್ತ- ಸಕಲವಿದ್ಯಾಸಂಪನ್ನನಾದ, ಸಂಸಾರದುಸ್ತರನೀರಾಕರಕರ್ಣಧಾರ- ಸಂಸಾರವೆಂಬ ದಾಟುವದಕ್ಕಸಾಧ್ಯವಾದ ಸಮುದ್ರಕ್ಕೆ ನಾವಿಕನಾದ, ದುರಿತಧ್ವಾಂತಾರ್ಕ- ಪಾಪವೆಂಬ ಕತ್ತಲೆಗೆ ಸೂರ್ಯನಾದ, ಶ್ರೀವೃಷಾಧೀಶ್ವರ, ನಿನ್ನ, ಅಂಘ್ರಿಪಂಕೇರುಹಂಗಳ್, ಎಮಗೆ, ಅಜಸ್ರಂ- ನಿರಂತರದಲ್ಲೂ, ಶರಣಂಗಳ್- ಸಂರಕ್ಷಕಗಳು, ಅಕ್ಕೆ- ಆಗಲಿ.

ಪರ..............ಮಯೂಖ— ಪರ- ಉತ್ಕೃಷ್ಟವಾದ, ಶಿವಭಕ್ತಿ- ಶಿವಭಕ್ತಿಯೆಂಬ, ವಾರ್ಧಿ- ಸಮುದ್ರವನ್ನು, ಪರಿವರ್ಧನ- ಅಭಿವೃದ್ಧಿಪಡಿಸುವವಿಷಯದಲ್ಲಿ, ಶೀತಮಯೂಖ-ಚಂದ್ರರೂಪನಾದ, ಸತ್ಕೃಪಾಕರ- ಸಮೀಚೀನವಾದ ದಯಾರಸಕ್ಕಾಶ್ರಯನಾದ, ವಿಪುಳಪ್ರಭಾವ- ವಿಸ್ತಾರವಾದ ಮಹಿಮೆಯುಳ್ಳ, ಚರಲಿಂಗಸಮರ್ಚನಲೋಲ- ಜಂಗಮಲಿಂಗವಂ ಪೂಜಿಸುವದರಲ್ಲಾಸಕ್ತನಾದ, ಕಾಲಸಂಹರಣಪರಾವತಾರ- ಯಮನಾಶಕನಾದ ಪರಶಿವನ ಅವತಾರನಾದ, ಪರಮಾರ್ಥವಿಶಾರದ- ತತ್ವಾರ್ಥಸಮರ್ಥನಾದ, ಸಾರಸದ್ಗುಣಾಭರಣ, ಪವಿತ್ರಗಾತ್ರ- ಪರಿಶುದ್ಧವಾದ ಶರೀರವುಳ್ಳ, ಅನ್ವಿತಮಂಗಳೋದಯ- ಮಂಗಳಾಭಿವೃದ್ಧಿಯಿಂ ಕೂಡಿದ ಬಸವೇಶ್ವರನೇ, ಎಮಗೆ, ಶರಣಾಗು- ಸಂರಕ್ಷಕನಾಗು. ... ... ‖೬೧‖

ಎಂದು, ಇಂತು, ಮಿಗೆ, ಸನ್ನುತಿಗೆಯ್ದು, ಗುರುಪ್ರಸಾದಂಬಡೆದು, ಶಿವಾನಂದರಸಪರಿಪ್ಲುತಮಾನಸಂ- ಶಿವಾನಂದರಸದಿಂ ವ್ಯಾಪ್ತವಾದ ಮನಸ್ಸುಳ್ಳ, ಚಿನ್ನಿಧಿ- ಚಿತ್ತಿಗೆ ನಿಕ್ಷೇಪನಾದ, ಚೆನ್ನಬಸವಣ್ಣಂ, ಉನ್ನತೋತ್ಸವದಿಂ, ಒಪ್ಪುತ್ತಂ, ಇರ್ಪಿನಂ, ಅಲ್ಲಿ, ಪೆರತೊಂದುವಾಸರದೊಳ್- ಮತ್ತೊಂದುದಿವಸದಲ್ಲಿ, ಬಸವರಾಜಂ, ಈಶಾರ್ಚನಂಗೆಯ್ದನಂತರಂ, ಅನಿಮಿಷೇಕ್ಷಣದಿಂ- ರೆಪ್ಪೆಯಂ ಹಾಕದಿರುವ ನೋಟದಿಂದ, ಶಿವಲಿಂಗಮಂ, ನಿರೀಕ್ಷಿಸುತ್ತಂ- ನೋಡುತ್ತ, ಆಲಿಂಗದೊಳ್, ಅಪೂರ್ವತರರೂಪಾಂತರಂ- ಪೂರ್ವದಲ್ಲಿ ಕಾಣಲ್ಪಡದ ಮತ್ತೊಂದುರೂಪು, ಮಾರ್ಪೊಳೆಯೆ- ಪ್ರತಿಫಲಿಸಲು, ವಿಸ್ಮಯಂಬಟ್ಟು- ಆಶ್ಚರ್ಯಪಟ್ಟು, ನೋಡುವಾಗಳ್, ಓರ್ವಂತಾಂಬೂಲವಾಹಕಂ- ಒಬ್ಬವೀಳಯದವನು, ಜವದಿಂ- ವೇಗವಾಗಿ, ಪರಿತಂದು- ಬಂದು, ಕೈದಾವರೆಗಳಂ- ಹಸ್ತಕಮಲಗಳನ್ನು, ಮುಗಿದು, ದೇವ, ಮುಕ್ತಕೇಶಂ- ಬಿಚ್ಚಲ್ಪಟ್ಟಿರುವ ಕೂದಲುಳ್ಳ

ಸ್ಮಿಯುಂಬಟ್ಟು ನೋಡುವಾಗಳ್ ತಾಂಬೂಲವಾಹಕನೊರ್ವಂ ಜವದಿಂ ಪರಿತಂದು ಕೈದಾವರೆಗಳಂ ಮುಗಿದು ದೇವ ಮುಕ್ತಕೇಶನಲಕ್ಷಿತತನುಚ್ಛಾಯಂ ಚೀರಾಂಬರಾವೃತಂ ಧೂಳಿಧೂಸರಕಳೇವರನಜಸ್ರಪರಿಸ್ರವದಾನಂದಬಾಷ್ಪಜಲಕಲಿತನಿರ್ನಿಮೇಷಾಕ್ಷಿನಿರೀಕ್ಷಿತಕರತಳಸ್ಥಿತಶಿವಲಿಂಗನಗಣಿತವಾಪೀಕೂಪತಟಾಕಾನೋಕಹಸರಿತ್ಸಮುದ್ರಭೂಭೂಧರಾದಿಸದೃಶಗಮನಂ ಸಮಾಯುತಕರಿತುರಗಾದಿದೂರೋತ್ಸೃಷ್ಟಪುರೋಭಾಗನಿಜಗಮನಾನುಕೂಲಪವನಗಮನಂ ಗಗನಭಾಗವಿವೃತಪತ್ರಪತತ್ರಿವರಪ್ರಕರಪರಿಷೇವ್ಯಮಾಣಂ ಜಯಜಯರವಮುಖರನಿಖಿಲದಿಶಾಮುಖನುಂ ಪದಪಯೋಜವಿನ್ಯಾಸಪವಿತ್ರಿತಕ್ಷೇತ್ರತೀರ್ಥಸಮಾಜಂ ಕಟಾಕ್ಷವೀಕ್ಷಣಮಾತ್ರವಿನಿರ್ಧೂತಭೂತಜಾತತಮಸ್ಸಮೂಹನೆನಿಸಿ ನೆಗಳ್ತೆವೆತ್ತ ಶಿವಯೋಗಿಸಾರ್ವಭೌಮನೊರ್ವಂ ದ್ವಾರದೇಶದೊಳೆಳ್ತಂದಿರ್ದಪನೆಂಬುದಂ ಕೇಳ್ದು ಬಂದು ಪೊಸಸಂತಸದಿಂ ನಿರಿರ್ಗೊಳಲೊಡಲ್ ಗುಡಿಗಟ್ಟಿದಂತೆ ರೋಮೋದ್ಗಮಂ ನಿಮಿರೆಯುಂ ಶಿವಾನಂದರಸಂ ತನುವಂ ತೀವಿ ಪೊರಸೂಸಿದತ್ತೆನೆ ಸಂತಸಗಂಬನಿಗಳಿಂ ಕಣ್ಮೆ ಭಕ್ತಿಸುಖಕ್ಕೆ ಸಮ

---

ವನು, ಅಲಕ್ಷಿತತನುಚ್ಛಾಯಂ- ಕಾಣಲ್ಪಡದಿರುವ ಶರೀರದ ನೆಳಲುಳ್ಳವನು, ಚೀರಾಂಬರಾವೃತಂ- ನಾರುಮಡಿಯಂ ಸುತ್ತಿಕೊಂಡಿರುವವನು, ಧೂಳಿಧೂಸರಕಳೇವರಂ- ಧೂಳಿಯಿಂದ ಮಲಿನವಾದ ಶರೀರವುಳ್ಳವನು, ಅಜಸ್ರ......... ಶಿವಲಿಂಗಂ— ಅಜಸ್ರ- ನಿರಂತರದಲ್ಲೂ ಪರಿಸ್ರವತ್- ಸುರಿಯುತ್ತಿರುವ, ಆನಂದಬಾಷ್ಪಜಲ- ಸಂತೋಷದಿಂದುಂಟಾದ ಕಣ್ಣೀರಿನಿಂದ, ಕಲಿತ- ಕೂಡಿದ, ನಿರ್ನಿಮೇಷಾಕ್ಷಿ- ರೆಪ್ಪೆಯನ್ನಿಕ್ಕದ ಕಣ್ಣಿನಿಂದ, ನಿರೀಕ್ಷಿತ- ನೋಡಲ್ಪಟ್ಟ, ಕರತಳಸ್ಥಿತ- ಹಸ್ತದಲ್ಲಿರುವ, ಶಿವಲಿಂಗಂ- ಶಿವಲಿಂಗವುಳ್ಳವನು, ಅಗಣಿತ......... ಗಮನಂ— ಅಗಣಿತ- ಅಸಂಖ್ಯಾಕೆಗಳಾದ, ವಾಪೀ- ತೋಟದ ಬಾವಿ, ಕೂಪ- ಬಾವಿ, ತಟಾಕ- ಕೊಳ, ಅನೋಕಹ- ಮರ, ಸರಿತ್- ಹೊಳೆ, ಸಮುದ್ರ, ಭೂ, ಭೂಧರ- ಪರ್ವತ ಇವುಗಳೇ, ಆದಿ- ಮೊದಲಾಗುಳ್ಳವುಗಳಿಗೆ, ಸದೃಶ- ಸಮಾನವಾದ, ಗಮನಂ- ನಡಗೆಯುಳ್ಳವನು, ಸಮಾ.........ಗಮನಂ— ಸಮಾಯುತ- ಅಧಿಕವಾದ, ಕರಿತುರಗ- ಆನೆ ಕುದುರೆಗಳಿಂದ, ದೂರ- ದೂರದಲ್ಲಿ, ಉತ್ಸೃಷ್ಟ- ಬಿಡಲ್ಪಟ್ಟ, ಪುರೋಭಾಗ- ಮುಂಗಡೆಯುಳ್ಳ, ನಿಜ- ತನ್ನ, ಗಮನ- ನಡಗೆಗೆ, ಅನುಕೂಲ- ಅನುಕೂಲವಾದ, ಪವನಗಮನಂ- ವಾಯುಸಂಚಾರವುಳ್ಳವನು, ಗಗನ...... ಪರಿಷೇವ್ಯಮಾಣಂ— ಗಗನಭಾಗ- ಆಕಾಶದಲ್ಲಿ, ವಿವೃತ- ವಿಸ್ತರಿಸಲ್ಪಟ್ಟ, ಪತ್ರ- ರೆಕ್ಕೆಗಳುಳ್ಳ, ಪತತ್ರಿವರ- ಶ್ರೇಷ್ಠವಾದ ಹಕ್ಕಿಗಳ, ಪ್ರಕರ- ಗುಂಪಿನಿಂದ, ಪರಿಷೇವ್ಯಮಾಣಂ- ಸೇವಿಸಲ್ಪಡುತ್ತಿರುವನು, ಜಯ......ಮುಖನುಂ— ಜಯಜಯರವ- ಜಯಜಯವೆಂಬ ಶಬ್ದದಿಂದ, ಮುಖರ- ಶಬ್ದಾಯಮಾನವಾದ, ನಿಖಿಲದಿಶಾಮುಖನುಂ- ಸಮಸ್ತದಿಗಗ್ರಗಳುಳ್ಳವನು, ಪದ......... ಸಮಾಜಂ— ಪದಪಯೋಜ- ಚರಣಕಮಲದ, ವಿನ್ಯಾಸ- ಇಡುವಿಕೆಯಿಂದ, ಪವಿತ್ರಿತ- ಪರಿಶುದ್ಧವಾಗಿ ಮಾಡಲ್ಪಟ್ಟ, ಕ್ಷೇತ್ರ, ತೀರ್ಥ, ಇವುಗಳ, ಸಮಾಜಂ- ಸಮೂಹವುಳ್ಳವನು, ಕಟಾಕ್ಷ......... ಸಮೂಹಂ— ಕಟಾಕ್ಷವೀಕ್ಷಣಮಾತ್ರ- ಕಡೆಗಣ್ಣೋಟವೊಂದರಿಂದ, ವಿನಿರ್ಧೂತ- ಹೋಗಲಾಡಿಸಲ್ಪಟ್ಟ, ಭೂತಜಾತ- ಪ್ರಾಣಿಸಮೂಹದ, ತಮಸ್ಸಮೂಹಂ- ಅಜ್ಞಾನಾಂಧಕಾರಸಮೂಹವುಳ್ಳವನು, ಎನಿಸಿ, ನೆಗಳ್ತೆವೆತ್ತ- ಪ್ರಸಿದ್ಧಿಯಂ ಹೊಂದಿದ, ಓರ್ವಂಶಿವಯೋಗಿಸಾರ್ವಭೌಮಂ- ಒಬ್ಬ ಶಿವಯೋಗೀಶ್ವರನು, ದ್ವಾರದೇಶದೊಳ್- ಬಾಗಿಲಲ್ಲಿ, ಎಳ್ತಂದು- ಬಂದು, ಇರ್ದಂ, ಎಂಬುದಂ, ಕೇಳ್ದು, ಪೊಸಸಂತಸದಿಂ- ಇನಿರ್ಗೊಳಲ್, ಒಡಲ್,- ಶರೀರವು, ಗುಡಿಗಟ್ಟಿದಂತೆ- ತೋರಣವಂ ಕಟ್ಟಿದಂತೆ, ರೋಮೋದ್ಗಮಂ- ರೋಮಾಂಚನವು, ನಿಮಿರೆಯುಂ- ಉಂಟಾಗಲು, ಶಿವಾನಂದರಸಂ, ತನುವಂ, ತೀವಿ- ತುಂಬಿ, ಪೊರಸೂಸಿದತ್ತು-

ಸುಖಮಲ್ಲಿಯುಮಿಲ್ಲೆಂಬಂತೆ ಕರಕಂಪನಂನೆಗಳೆ ಮಹಾನುಭಾವನಿದಿರೊಳ್ತನುಭಾವಮಲ್ಲಿ ಯದೆನಿಸಿ ಪಾರವಶ್ಯಂ ಮಿಗೆ ಸಾತ್ವಿಕಭಕ್ತಿಯಿಂ ಸಡಗರಿಸಿ ಗಣಸಮಿತಿಸಮೇತಂ ಬಂದು ಕಟ್ಟದಿರೊಳ್ಕಂಡು ಸಾಷ್ಟಾಂಗಮೆರಗಿ ಮಹೋತ್ಸವದಿನೊಡಗೊಂಡುಪೋಗಿ ನಿಜಗೃಹದ ಸಮುನ್ನತಾಸನದೊಳ್ಕೈಗೊಟ್ಟು ಮೂರ್ತಿಗೊಳಿಸಿ ಜಳಗಂಧಕುಸುಮಧೂಪದೀಪಾದಿ ಯಿಂ ಪದಾಬ್ಜಮಂಪೂಜಿಸಿ ಕೂರ್ಮೆಯಿಂ ಕೊಂಡಾಡಿ ಪಾಡಿ ನಿತ್ಯತೃಪ್ತನೆಂಬುದಂ ಭಕ್ತಿ ಪಾರವಶ್ಯದಿಂ ಮೆರೆವ ತೃಪ್ತಿಗೆಯ್ಯಲೆಳಸಿ ಬಸವಂ ಮಿಸುನಿಯಡ್ಡಣಿಗೆಯೊಳ್ಪೊಂಬರಿ ಯಾಣಮನಮರ್ಚಿ ನಾನಾಶಾಕೋಪದಂಶವ್ಯಂಜನಸೂಪಾಪೂಪಘೃತಾದಿಸಮೇತ ಮಮೃತೋಪಮಾನಾನ್ನರಾಶಿಯಂ ಗಡಣಿಸಿ ನಿಜಕರದಿಂ ನಾಳಿಕೇರಫಲಪ್ರಮಾಣಕಬಳಂಗೆಯ್ದು॥

ಕಂ ॥ ಸುರಗಿಯ ಚೌಡಯ್ಯಂ ಶಂ । ಕರಂಗೆ ತುತ್ತುಗಳನೀವತೆರದಿಂ ಬಸವಂ ॥ ಗುರುಕಬಳಂಗಳನಿತ್ತೊಡೆ । ಹರಾರ್ಪಣಂಗೆಯ್ದು ಸವಿದನಲ್ಲಮದೇವಂ ॥ ... ॥೬೧॥

ಕಂ ॥ ಲಕ್ಷಾಶೀತಿಸಹಸ್ರಸ । ಲಕ್ಷಣಚರತತಿಗೆ ಸವೆದ ಸಕಳಾನ್ನಮನಂ ॥ ದಾಕ್ಷಣ ಮ ಸವಿದನೆಂತುಟೊ । ಕುಕ್ಷಿಯತೆರಪನೆ ಗಣಂಗಳಾಪ್ರಭುದೇವಂ ॥ ... ॥೬೨॥

---

ಹೊರಕ್ಕೆಚೆಲ್ಲಿತು, ಎನೆ, ಸಂತಸಗಂಬನಿಗಳ್- ಆನಂದಾಶ್ರುಗಳು, ಉಣ್ಮೆ, ಭಕ್ತಿಸುಖಕ್ಕೆ, ಸಮಸುಖಂ, ಎಲ್ಲಿಯುಂ, ಇಲ್ಲ, ಎಂಬಂತೆ, ಕರಕಂಪನಂ- ಕೈನಡುಗುವಿಕೆಯು, ನೆಗಳೆ, ಮಹಾನುಭಾವನ- ಅಧಿಕವಾದ ಭಾವದ, (ಮಹಾತ್ಮನ) ಇದಿರೊಳ್, ತನುಭಾವಂ- ಸ್ವಲ್ಪವಾದ ಭಾವವು, (ದೇಹಭಾವವು) ಎಲ್ಲಿಯದು, ಎನಿಸಿ, ಪಾರವಶ್ಯಂ- ಮೂರ್ಛೆಯು, ಮಿಗೆ, ಸಾತ್ವಿಕಭಕ್ತಿಯಿಂ- ರೋಮಾಂಚಾದಿಸೂಚಿತವಾದ ಸಾತ್ವಿಕಭಕ್ತಿಯಿಂದ, ಸಡಗರಿಸಿ, ಗಣಸಮಿತಿಸಮೇತಂ- ಶಿವಗಣಸಮೂಹದೊಡಗೂಡಿ, ಬಂದು, ಕಟ್ಟದಿರೊಳ್- ಮುಂಗಡೆಯಲ್ಲಿ, ಕಂಡು, ಸಾಷ್ಟಾಂಗಂ, ಎರಗಿ, ಮಹೋತ್ಸವದಿಂ, ಒಡಗೊಂಡು, ಪೋಗಿ, ನಿಜಗೃಹದ, ಸಮುನ್ನತಾಸನದೊಳ್- ಉನ್ನತವಾದ ಶೂನ್ಯಸಿಂಹಾಸನದಲ್ಲಿ, ಕೈಗೊಟ್ಟು, ಮೂರ್ತಿಗೊಳಿಸಿ- ಕುಳ್ಳಿರಿಸಿ, ಜಳಗಂಧಕುಸುಮಧೂಪದೀಪಾದಿಯಿಂ- ಪದಾಬ್ಜಮಂ, ಪೂಜಿಸಿ, ಕೂರ್ಮೆಯಿಂ- ಪ್ರೀತಿಯಿಂದ, ಕೊಂಡಾಡಿ, ಪಾಡಿ, ನಿತ್ಯತೃಪ್ತಂ- ಸದಾತೃಪ್ತನು, ಎಂಬುದಂ, ಭಕ್ತಿಪಾರವಶ್ಯದಿಂ, ಮೆರೆದು- ಪ್ರಕಾಶಪಡಿಸಿ, ತೃಪ್ತಿಗೆಯ್ಯಲ್- ತೃಪ್ತಿಪಡಿಸುವದಕ್ಕೋಸ್ಕರ, ಎಳಸಿ, ಬಸವಂ, ಮಿಸುನಿಯ- ಚಿನ್ನದ, ಅಡ್ಡಣಿಗೆಯೊಳ್- ತೇವಟಿಗೆಯಲ್ಲಿ, ಪೊಂಬರಿಯಾಣಮಂ- ಚಿನ್ನದ ಭೋಜನ ಪಾತ್ರವನ್ನು, ಅಮರ್ಚಿ- ಇರಿಸಿ, ನಾನಾ......

...ಸಮೇತಂ— ನಾನಾ- ಅನೇಕವಿಧಗಳಾದ, ಶಾಕ- ಕಾಯಿಪಲ್ಯಗಳು, ಉಪದಂಶ- ಉಪ್ಪಿನಕಾಯಿ, ವ್ಯಂಜನ- ತೊಗೆ, ಸೂಪ- ಬೇಳೇಹುಳಿ, ಅಪೂಪ- ಕಜ್ಜಾಯ, ಘೃತ- ತುಪ್ಪ, ಇವುಗಳೇ, ಆದಿ- ಮೊದಲಾದವುಗಳಿಂ, ಸಮೇತಂ- ಕೂಡಿದ, ಅಮೃತೋಪಮಾನಾನ್ನರಾಶಿಯಂ, ಗಡಣಿಸಿ- ರಾಶಿಹಾಕಿಸಿ, ನಿಜಕರದಿಂ- ನಾಳಿಕೇರಫಲಪ್ರಮಾಣಕಬಳಂಗೆಯ್ದು, ತೆಂಗಿನಕಾಯಿನ ಗಾತ್ರದ ತುತ್ತುಗಳನ್ನು ಮಾಡಿ. * * *

ಸುರಗಿಯಚೌಡಯ್ಯಂ, ಶಂಕರಂಗೆ, ತುತ್ತುಗಳಂ, ಈವತೆರದಿಂ- ಕೊಡುವಂತೆ, ಬಸವಂ, ಗುರುಕಬಳಂಗಳಂ- ದಪ್ಪತುತ್ತುಗಳನ್ನು, ಇತ್ತೊಡೆ- ಕೊಡಲು, ಅಲ್ಲಮದೇವಂ- ಅಲ್ಲಮಪ್ರಭುವು, ಹರಾರ್ಪಣಂಗೆಯ್ದು- ಶಿವನಿಗೆ ಸಮರ್ಪಿಸಿ, ಸವಿದಂ-ಭುಂಜಿಸುವನು. ... ... ... ॥೬೧॥

ಲಕ್ಷಾಶೀತಿಸಹಸ್ರಸಲಕ್ಷಣಚರತತಿಗೆ- ಸಲ್ಲಕ್ಷಣಸಂಪನ್ನರಾದ ಲಕ್ಷದೆಂಬತ್ತು ಸಾವಿರ ಜಂಗಮರಿಗೋಸ್ಕರ, ಸವೆದ- ಮಾಡಿದ, ಸಕಳಾನ್ನಮಂ, ಅಂದು, ಪ್ರಭುದೇವಂ, ಆಕ್ಷಣಮೆ- ಆಕಬಳವನ್ನು ಕೊಟ್ಟ ಸ್ವಲ್ಪಕಾಲದಲ್ಲೇ, ಗಣಂಗಳ್, ಕುಕ್ಷಿಯ- ಹೊಟ್ಟೆಯ, ತೆರಪು- ಅವಕಾಶವು, ಎಂತುಟೋ- ಎಂಥಾದ್ದೋ, ಎನೆ, ಸವಿದಂ. ... ... ... ... ... ॥೬೨॥

ಮತ್ತೇ ॥ ಗಗನಂ ಬಾಯ್ದೆರೆದಂದದಿಂದೆ ಸಕಲಾನ್ನವ್ರಾತಮಂ ಕೊಂಡ ಚಿ | ದ್ಗಗನಾಕಾರನ ಪೇರ್ಮೆಗದ್ಭುತಭಯಾಕ್ರಾಂತಾತ್ಮನಾಗುತ್ತೆ ಕ್ಷೈ ॥ ಮಿಗೆ ತತ್ತೃಪ್ತಿಗುಪಾಯಮಂ ಬಸವ ನೊಲ್ದಾಲೋಚಿಸುತ್ತಿರ್ಪ್ಪವೇ | ಳೆಗೆ ಬಂದಂ ಚಿದಭಿನ್ನಚೆನ್ನಬಸವಂ ಕಲ್ಯಾಣಕಲ್ಪದ್ರುಮಂ ॥ ... ... .. ... ... ॥೬೪॥

ವ ॥ ಅಂತೇಳ್ತಂದು ಬಸವನ ಪೊರೆಯೊಳ್ನಿಂದು ಮೆಲ್ಲನಿಂತೆಂದಂ ॥ * * *

ಕಂ ॥ ಬಡಬಶಿಖಿ ನೆಯ್ಯಸೀರ್ಪನಿ | ಗಡಣದೆ ತಣಿದಪುದೆ ಪದ್ಮಜಾಂಡಾವಳಿಯಂ ॥ ಕಡೆಗಾಲದೆ ನುಂಗಲ್ಬಾ | ಯ್ವಿಡುವೀಘನಮಹಿಮ ನನ್ನಿಂ ತಣಿದಪನೆ ॥ ... ॥೬೫॥

ಕಂ ॥ ನೀನೋಗರ ಮುಪದಂಶಕ | ಮಾನಾಗಿರೆ ಕೊಂಡು ತಣಿದಪಂ ನಡೆಯೆಂದಾ ॥ ಮಾನನಿಧಿ ನುಡಿಯೆ ಬಸವಂ | ತಾನಂತೆಸಗಿದೊಡೆ ತಣಿದನಾಪ್ರಭುದೇವಂ ॥ ॥೬೬॥

ಕಂ ॥ ಅನಲನೊಳಕೊಂಡ ಹವಿಯಿಂ | ದನಿಮಿಷತತಿ ತೃಪ್ತಿವಡೆವವೊಲ್ಪ್ರಭುಸವಿದ ॥ ನ್ನನಿಕಾಯದಿಂದೆ ತಣಿದೊ | ಯ್ಯನೆ ಜಂಗಮವಿತತಿ ತೇಗಿಬೀಗಿದುದಾಗಳ್ ॥೬೭॥

ವ ॥ ಅಂತು ಮಾಚರತತಿಯಂ ತಣಿಪಿ ಮತ್ತಂ ತಾಂ ವಿಶ್ವೋದರನಪ್ಪುದರಿಂ ನಿಜತೃಪ್ತಿಯಿಂ ವಿಶ್ವಮಂತೃಪ್ತಿವಡಿಸಿ ಬಿಡವೀರ್ವ್ವರು ಬಿಗಿದಪ್ಪಿ ಮುಂಡಾಡಿ ಕೊಂಡಾಡಿ ಕಾ

---

ಗಗನಂ- ಆಕಾಶವು, ಬಾಯ್ದೆರದಂದದಿಂದೆ- ಬಾಯನ್ನು ಬಿಟ್ಟಂತೆ, ಸಕಲಾನ್ನಮಂ, ಕೊಂಡ, ಚಿದ್ಗಗನಾಕಾರನ- ಜ್ಞಾನಾಕಾಶಸ್ವರೂಪನಾದ ಪ್ರಭುವಿನ, ಪೇರ್ಮೆಗೆ,ಬಸವಂ, ಅದ್ಭುತಭಯಾಕ್ರಾಂತಾತ್ಮಂ- ಆಶ್ಚರ್ಯಭೀತಿಗಳಿಂ ಕೂಡಿದ ಆತ್ಮವುಳ್ಳವನು, ಆಗುತ್ತೆ, ಕ್ಷೈಮಿಗೆ, ತತ್ತೃಪ್ತಿಗೆ- ಆ ಪ್ರಭುವನ್ನು ತೃಪ್ತಿಗೊಳಿಸುವದಕ್ಕೋಸ್ಕರ, ಉಪಾಯಮಂ, ಒಲ್ದು, ಆಲೋಚಿಸುತ್ತಿರ್ಪ್ಪ, ವೇಳೆಗೆ, ಕಲ್ಯಾಣಕಲ್ಪದ್ರುಮಂ- ಕಲ್ಯಾಣಪಟ್ಟಣದ ಕಲ್ಪವೃಕ್ಷನಾದ, ಚಿದಭಿನ್ನಚೆನ್ನಬಸವಂ- ಜ್ಞಾನರೂಪನಾದ ಚೆನ್ನಬಸವೇಶ್ವರನು, ಬಂದಂ. ... ... ... ... ... ॥೬೪॥

ಅಂತು. ಏಳ್ತಂದು, ಬಸವನ, ಪೊರೆಯೊಳ್- ಸಮೀಪದಲ್ಲಿ, ನಿಂದು, ಮೆಲ್ಲನೆ, ಇಂತೆಂದಂ. * *

ಬಡಬಶಿಖಿ- ಬಡಬಾಗ್ನಿಯು, ನೆಯ್ಯ- ತುಪ್ಪದ, ಸೀರ್ಪನಿಗಡಣದೆ- ಸಣ್ಣಹನಿಯ ಗುಂಪಿನಿಂದ, ತಣಿದಪುದೆ- ತೃಪ್ತಿಯಂ ಹೊಂದುವದೇ ? ಕಡೆಗಾಲದೆ- ಪ್ರಳಯಕಾಲದಲ್ಲಿ, ಅಜಾಂಡಾವಳಿಯಂ- ಬ್ರಹ್ಮಾಂಡಸಮೂಹವೆಲ್ಲವನ್ನು, ನುಂಗಲ್- ನುಂಗುವದಕ್ಕೆ. ಬಾಯ್ಬಿಡುವ, ಈಘನಮಹಿಮಂ, ಅನ್ನದಿಂ, ತಣಿದಪನೆ- ತೃಪ್ತಿಗೊಳ್ಳುವನೇ ? ... ... ... ... ... ॥೬೫॥

ನೀಂ, ಓಗರಂ, ಆಂ, ಉಪದಂಶಕಂ- ಉಪ್ಪಿನಕಾಯಿ, ಆಗಿರೆ, ಕೊಂಡು- ಸ್ವೀಕರಿಸಿ, ತಣಿದಪಂ- ತೃಪ್ತಿಬಡುವೆನು, ನಡೆ, ಎಂದು, ಆಮಾನನಿಧಿ- ಮಾನಕ್ಕೆ ನಿಕ್ಷೇಪನಾದ ಚೆನ್ನಬಸವೇಶ್ವರನು, ನುಡಿಯೆ, ಬಸವಂ,ತಾಂ, ಅಂತು, ಎಸಗಿದೊಡೆ- ಮಾಡಲು, ಆ ಪ್ರಭುದೇವಂ, ತಣಿದಂ- ತೃಪ್ತಿಗೊಂಡನು. ॥೬೬॥

ಅನಲಂ- ಅಗ್ನಿಯು, ಒಳಕೊಂಡ- ಸ್ವೀಕರಿಸಿದ, ಹವಿಯಿಂದೆ- ಯಜ್ಞದ ಹವಿಸ್ಸಿನಿಂದ, ಅನಿಮಿಷತತಿ- ದೇವಸಮೂಹವು, ತೃಪ್ತಿವಡೆವವೊಲ್, ಪ್ರಭು, ಸವಿದ, ಅನ್ನನಿಕಾಯದಿಂದೆ, ಜಂಗಮವಿತತಿ- ಜಂಗಮಸಮುದಾಯವು, ತಣಿದು, ಒಯ್ಯನೆ, ಆಗಳ್, ತೇಗಿ, ಬೀಗಿದುದು– ಆನಂದಗೊಂಡಿತು. ... ॥೬೭॥

ಅಂತು, ಆಚರತತಿಯಂ- ಜಂಗಮಸಮೂಹವನ್ನು, ತಣಿಪಿ, ಮತ್ತಂ, ತಾಂ, ವಿಶ್ವೋದರಂ- ಪ್ರಪಂಚವೇ ಹೊಟ್ಟೆಯಲ್ಲುಳ್ಳವನು, ಅಪ್ಪುದರಿಂ, ನಿಜತೃಪ್ತಿಯಿಂ, ವಿಶ್ವಮಂ- ಪ್ರಪಂಚವೆಲ್ಲವನ್ನು, (ಅಂದರೆ ಸಕಲಪ್ರಾಣಿವರ್ಗವನ್ನೂ) ತೃಪ್ತಿವಡಿಸಿ, ಬಿಡವೆ, ಈರ್ವರಂ- ಬಸವೇಶ್ವರ ಚೆನ್ನಬಸವೇಶ್ವರರನ್ನು, ಬಿಗಿದು,

ರುಣ್ಯಮುಂ ನೀಡಿ ಮೆಚ್ಚಿಂ ಮುಚ್ಚಲರಿಯದೆ ತನ್ನಂ ನೊಚ್ಚತಂ ಗೊಟ್ಟಾನಂದಿಸಿ ತತ್ಪ್ರ
ಭುವರಂ ಬಸವನನಭೀಕ್ಷಿಸಿ ॥ * * * * * * * * * * * *

ಉ ॥ ಎನ್ನ ಮನಕ್ಕೆ ಸಂತಸಮನಿತ್ತುದು ನಿನ್ನ ಮೃದೂಕ್ತಿ ನಿನ್ನ ಮಾ । ನೋನ್ನ
ತಿ ನಿನ್ನ ಸಜ್ಜನತೆ ನಿನ್ನ ಗಭೀರತೆ ನಿನ್ನ ಸತ್ಯಸಂ ॥ ಪನ್ನತೆ ನಿನ್ನ ಧರ್ಮರತಿ ನಿನ್ನ ಮಹಾಮ
ತಿ ನಿನ್ನ ಸುವ್ರತಂ । ನಿನ್ನ ಸುವೃತ್ತಿ ನಿನ್ನ ಬಗೆ ನಿನ್ನಯ ಭಕ್ತಿರಸಂ ವೃಷಾಧಿಪ ॥೬೮॥

ಕಂ ॥ ಪೊಂಗೆ ಪೊಸಮಿನುಗು ರನ್ನಕೆ । ರಂಗು ಸುಧಾರುಚಿಗೆ ಜೊನ್ನ ಮವಿನಾಭಾ
ವಂ ॥ ಸಂಗಳಿಸಿ ಮಿಸುಪ ತೆರದಿಂ । ಕಂಗೊಳಿಪುದು ಭಕ್ತಿ ನಿನ್ನೊಳೆಲೆ ಬಸವೇಶಾ ॥೬೯॥

ಕಂ ॥ ಶಿವನಿಂದರ್ಗಳದೈವಂ । ಶಿವಮಂತ್ರದಿನಧಿಕಮಂತ್ರ ಮಿಲ್ಲಂತೆ ಗುಣಾ ॥ ರ್ಣವ
ಬಸವನಿಂದೆ ಪಿರಿಯಂ । ಪ್ರವಿಮಳಶಿವಭಕ್ತ ನಾವನೀ ವಸುಮತಿಯೊಳ್ ॥ ... ॥೭೦॥

ಚಂ ॥ ಹರಮತಕಲ್ಪಭೂರುಹಕೆ ಬೀಜ ಮುಮಾಧವ ಕೀರ್ತಿಪುಷ್ಪಮಂ । ಜರಿಗೆ
ಸುಗಂಧಸಾರ ಮಭವಾಗಮ ಪದ್ಮಕೆ ಪಂಕಜಾಕರಂ ॥ ಗಿರಿಶಘನಪ್ರಭಾವರವಿಗಿಂದ್ರದಿಶಾದ್ರಿ
ಮಹೇಶಭಕ್ತಿವ । ಲ್ಲರಿಗೆ ಸದಾಲವಾಲ ಮೆನಿಸಿರ್ದನಿವಂ ಬಸವಂ ಧರಿತ್ರಿಯೊಳ್ ॥ ॥೭೧॥

ಕಂ ॥ ಈ ವಸುಮತಿಯೊಳ್ ಶರಣ । ರ್ಗೀವ ಸುಮತಿ ಬಗೆದ ಭಾಗ್ಯತತಿಯ ನಜಸ್ರಂ॥

---

ಅಪ್ಪ, ಮುಂಡಾಡಿ– ಮುದ್ದಾಡಿ, ಕೊಂಡಾಡಿ, ಕಾರುಣ್ಯಮುಂ, ನೀಡಿ- ಕೊಟ್ಟು, ಮೆಚ್ಚಿಂ– ತಾನು ಮೆಚ್ಚಿ ದುದನ್ನು, ಮುಚ್ಚಲ್, ಅರಿಯದೆ, ತನ್ನಂ, ಒಚ್ಚತಂಗೊಟ್ಟು– ಉಚಿತವನ್ನಾಗಿತ್ತು, ಆನಂದಿಸಿ, ತತ್ಪ್ರಭು ವರಂ– ಬಸವನು, ಅಭೀಕ್ಷಿಸಿ- ನೋಡಿ. * * * * * * * * * * * * *

ವೃಷಾಧಿಪ, ನಿನ್ನ, ಮೃದೂಕ್ತಿ- ಕೋಮಲವಾದ ಮಾತು, ನಿನ್ನ ಮಾನೋನ್ನತಿ, ನಿನ್ನ, ಸಜ್ಜನತೆ, ನಿನ್ನ, ಗಭೀರತೆ- ಗಾಂಭೀರ್ಯವು, ನಿನ್ನ, ಸತ್ಯಸಂಪನ್ನತೆ, ನಿನ್ನ, ಧರ್ಮರತಿ- ಧರ್ಮದಲ್ಲಾಸಕ್ತಿಯುಂ, ನಿನ್ನ, ಮಹಾಮತಿ, ನಿನ್ನ, ಸುವ್ರತಂ, ನಿನ್ನ, ಸುವೃತ್ತಿ- ಸದ್ವರ್ತನವು, ನಿನ್ನ, ಬಗೆ- ಮನಸ್ಸು, ನಿನ್ನಯ, ಭಕ್ತಿ ರಸಂ- ಎನ್ನ, ಮನಕ್ಕೆ, ಸಂತಸಮಂ, ಇತ್ತುದು. ... ... ... ... ॥೬೮॥

ಎಲೆಬಸವೇಶ, ಪೊಂಗೆ- ಚಿನ್ನಕ್ಕೆ, ಪೊಸಮಿನುಗು- ನೂತನವಾದ ಕಾಂತಿಯು, ರನ್ನಕೆ- ರತ್ನಕ್ಕೆ, ರಂ ಗು– ಬಣ್ಣವು, ಸುಧಾರುಚಿಗೆ- ಚಂದ್ರನಿಗೆ, ಜೊನ್ನಂ– ಬೆಳ್ದಿಂಗಳು, ಅವಿನಾಭಾವಂ- ಸದಾಬಿಡದೇ ಇರೋ ಣವು, ಸಂಗಳಿಸಿ, ಮಿಸುಪ, ತೆರದಿಂ, ನಿನ್ನೊಳ್, ಭಕ್ತಿ, ಕಂಗೊಳಿಪುದು. ... ... ॥೬೯॥

ಶಿವನಿಂದೆ, ಅರ್ಗ್ಗಳದೈವಂ- ಅಧಿಕವಾದ ದೇವರು, ಶಿವಮಂತ್ರದಿಂ, ಅಧಿಕಮಂತ್ರಂ, ಇಲ್ಲ, ಅಂತೆ, ವ ಸುಮತಿಯೊಳ್- ಭೂಮಿಯಲ್ಲಿ, ಗುಣಾರ್ಣವಬಸವನಿಂದೆ- ಸದ್ಗುಣಗಳಿಗೆ ಸಮುದ್ರರೂಪನಾದ ಬಸವೇಶ್ವ ರನಿಗಿಂತಲೂ, ಪಿರಿಯಂ– ಅಧಿಕನಾದ, ಪ್ರವಿಮಳಶಿವಭಕ್ತಂ, ಆವಂ? ... ... ॥೭೦॥

ಧರಿತ್ರಿಯೊಳ್, ಇವಂಬಸವಂ, ಹರಮತಕಲ್ಪಭೂರುಹಕೆ- ವೀರಶೈವಮತವೆಂಬ ಕಲ್ಪವೃಕ್ಷಕ್ಕೆ, ಬೀ ಜಂ, ಉಮಾಧವಕೀರ್ತಿಪುಷ್ಪಮಂಜರಿಗೆ- ಪರಶಿವನಯಶಸ್ಸೆಂಬ ಹೂವಿನಗೊಂಚಲಿಗೆ, ಸುಗಂಧಸಾರಂ- ಶ್ರೇ ಷ್ಠವಾದ ಪರಿಮಳವು, ಅಭವಾಗಮಪದ್ಮಕೆ- ಶೈವಾಗಮಂಗಳೆಂಬ ಕಮಲಕ್ಕೆ, ಪಂಕಜಾಕರಂ- ಸರೋವರ ವು, ಗಿರಿಶಘನಪ್ರಭಾವರವಿಗೆ- ಪರಶಿವನ ಅಧಿಕವಾದ ಪರಾಕ್ರಮವೆಂಬ ಸೂರ್ಯನಿಗೆ, ಇಂದ್ರದಿಶಾದ್ರಿ- ಪೂ ರ್ವಾಚಲವು, ಮಹೇಶಭಕ್ತಿವಲ್ಲರಿಗೆ- ಶಿವಭಕ್ತಿಯೆಂಬ ಬಳ್ಳಿಗೆ, ಎಸೆವ, ಆಲವಾಲಂ- ಪಾತಿಯು, ಎನಿಸಿ, ಇರ್ದಂ

ವಿಶ್ವಗುರುವೃಷಭೇಂದ್ರಂ- ಜಗದ್ಗುರುವಾದ ಬಸವೇಶ್ವರನು, ಈವಸುಮತಿಯೊಳ್- ಭೂಮಿಯಲ್ಲಿ, ಶರಣರ್ಗೆ, ಬಗೆದ- ಅಪೇಕ್ಷಿಸಿದ, ಭಾಗ್ಯತತಿಯಂ, ಈವ, ಸುಮತಿ- ಒಳ್ಳೆಯಬುದ್ಧಿಯುಳ್ಳವನು, ಅಜಸ್ರಂ

ಭಾವಿಪರ ಬಗೆಯೊಳಿರ್ಪನು । ಭಾವಿ ಪರಮನಲ್ತೆ ವಿಶ್ವಗುರು ವೃಷಭೇಂದ್ರಂ ॥ ॥೭೦॥

ವ ॥ ಎಂದುಬಸವನಂ ಪೊಗಳ್ದು ಚೆನ್ನಬಸವನಂ ನಿರೀಕ್ಷಿಸಿ ॥ * * * *

ಕಂ ॥ ಬಸವಪ್ರಸಾದಶರಧಿಯೊ । ಳೊಸೆದೊಗೆದೆಸೆದಿರ್ದ ಚೆನ್ನಬಸವಶಶಾಂಕಂ ॥ ಪಸರಿಸೆ ಚಿತ್ಕಾಮುದಿಯಂ । ರಸೆಯೊಳಲರ್ಚಿದುದು ಶರಣಹೃತ್ಕೈರವಮಂ॥ ... ॥೭೩॥

ಕಂ ॥ ಗುಣಮನೊಳಕೆಯ್ವುದುಚಿತಂ । ಮಣಿ ಮಹಿಯೊಳ್ಬಸವನೆಂಬಶಿವಗಣಚಿಂತಾ ॥ ಮಣಿಯ ನೊಳಕೆಯ್ದು ಮಿಸುಗಿದು । ದಣಿಯುರಮೀ ಚೆನ್ನಬಸವಗುಣಮಿದು ಚಿತ್ರಂ॥ ... ... ... ... ... ... ... ॥೭೪॥

ವ॥ ಎಂದಿರ್ವ್ವರುಮಂ ಪ್ರಭುವರಂ ಪೊರೆಯುಗಣನಿವಹದೊಳ್ಪೊರೆಯೇರಿ ಪೊಗಳ್ದನಗೆನಿರ್ವ್ವಂಚಕತ್ವದಿಂ ತನ್ನನಿತ್ತು ತೃಪ್ತಿಗೆಯ್ದ ಮಹಾಮಹಿಮನೀಬಸವನಲ್ಲದೆ ಪೆರನಾವನೆಂದು ಮತ್ತೆ ನುತಿಯಿಸುತ್ತಿರೆ ಬಸವನಾಪ್ರಭುವಿಂಗೆ ಭಯಭಕ್ತಿಯಿನೆರಗಿ ಕಿಂಕರತೆಯನಪ್ಪುಕೆಯ್ದು ನಿಟಿಲತಟಘಟಿತಕರಪುಟನಾಗಿ ದೇವ ವಿಶ್ವೋದರನೆನಿಪ ನಿಮಗೆತೃಪ್ತಿಗೆಯ್ಯಲಾನೆನಿತರವನೆಂದಾ ಪ್ರಸ್ತುತಕ್ಕೆ ಪುರಾವೃತ್ತಾಂತಮ ನೊಂದಂ ಬಿನ್ನಪಂಗೆಯ್ದನೆಂತೆನೆ ॥ * * * * * * * * * * * * * * * * *

---

ಯಾವಾಗಲೂ, ಭಾವಿಪರ- ಧ್ಯಾನಿಸುವರ, ಬಗೆಯೊಳ್-- ಮನಸ್ಸಿನಲ್ಲಿ, ಇರ್ಪ, ಅನುಭಾವಿ- ಅನುಭಾವವುಳ್ಳ, ಪರಮನಲ್ತೆ-ಪರಮಾತ್ಮನಲ್ಲವೇ ? ... ... ... ... ॥೭೦॥

ಎಂದು, ಬಸವನಂ, ಪೊಗಳ್ದು, ಚೆನ್ನಬಸವನು, ನಿರೀಕ್ಷಿಸಿ- ನೋಡಿ, * * * * * *

ಬಸವಪ್ರಸಾದಶರಧಿಯೊಳ್- ಬಸವೇಶ್ವರನ ಪ್ರಸಾದವೆಂಬ ಸಮುದ್ರದಲ್ಲಿ, ಒಸೆದು, ಒಗೆದು- ಹುಟ್ಟಿ, ಇರ್ದ, ಚೆನ್ನಬಸವಶಶಾಂಕಂ- ಚೆನ್ನಬಸವೇಶ್ವರನೆಂಬ ಚಂದ್ರನು, ಚಿತ್ಕಾಮುದಿಯಂ- ಜ್ಞಾನವೆಂಬಬೆಳ್ದಿಂಗಳನ್ನು, ರಸೆಯೊಳ್- ಭೂಮಿಯಲ್ಲಿ, ಪಸರಿಸೆ, ಶರಣಹೃತ್ಕೈರವಮಂ- ಶರಣರ ಹೃದಯವೆಂಬ ಬಿಳಿನೈದಿಲೆಯನ್ನು, ಅಲರ್ಚಿದುದು. ... ... ... ॥೭೩॥

ಮಹಿಯೊಳ್, ಮಣಿ- ರತ್ನವು, ಗುಣಮಂ- ತಂತುವನ್ನು, ಒಳಕೆಯ್ವುದು- ಒಳಗುಮಾಡಿಕೊಳ್ಳುವದು, ಉಚಿತಂ; ಬಸವನೆಂಬ, ಶಿವಗಣಚಿಂತಾಮಣಿಯಂ- ಚಿಂತಾರತ್ನವನ್ನು, (ಶ್ಲೇಷೆ) ಈಚೆನ್ನಬಸವಗುಣಂ— ಗುಣಂ- ತಂತುವು, (ಸದ್ಗುಣವು,) ಒಳಕೆಯ್ದು- ಒಳಗುಮಾಡಿಕೊಂಡು, (ಸ್ವಾಧೀನಪಡಿಸಿಕೊಂಡು) ಅಣಿಯುರಂ- ಚೆನ್ನಾಗಿ, ಮಿಸುಗಿದುದು, ಇದು, ಚಿತ್ರತರಂ- ಅತ್ಯಾಶ್ಚರ್ಯವು. ... ... ॥೭೪॥

ಎಂದು, ಈರ್ವ್ವರುಮಂ, ಪ್ರಭುವರಂ, ಪೊರೆಯು- ಸಮೀಪದಲ್ಲಿರುವ, ಗಣನಿವಹದೊಳ್- ಪೊರೆಯೇರಿ- ಸಂತೋಷಮಂಪೊಂದಿ, ಪೊಗಳ್ದು, ಎನಗೆ, ನಿರ್ವ್ವಂಚಕತ್ವದಿಂ- ವಂಚನೆಯಂಮಾಡದೆ, ತನ್ನಂ, ಇತ್ತು, ತೃಪ್ತಿಗೆಯ್ದು, ಮಹಾಮಹಿಮಂ, ಈಬಸವಂ, ಅಲ್ಲದೆ, ಪೆರಂ- ಮತ್ತೊಬ್ಬನು, ಆವಂ? ಎಂದು, ಮತ್ತೆ, ನುತಿಯಿಸುತ್ತಿರೆ, ಬಸವಂ, ಆಪ್ರಭುವಿಂಗೆ, ಭಯಭಕ್ತಿಯಿಂ, ಎರಗಿ, ಕಿಂಕರತೆಯಂ, ಅಪ್ಪುಗೆಯ್ದು, ನಿಟಿಲತಟಘಟಿತಕರಪುಟಂ- ಹಣೆಯಲ್ಲಿ ಸೇರಿಸಲ್ಪಟ್ಟ ಹಸ್ತಯುಗ್ಮವುಳ್ಳವನು, ಆಗಿ, ದೇವ, ವಿಶ್ವೋದರಂ, ಎನಿಪ, ನಿಮಗೆ, ತೃಪ್ತಿಗೆಯ್ಯಲ್- ತೃಪ್ತಿಗೊಳಿಸುವದಕ್ಕೆ, ಆಂ, ಎನಿತರವಂ- ಎಷ್ಟರವನು? ಎಂದು, ಆಪ್ರಸ್ತುತಕ್ಕೆ- ಆಸಂದರ್ಭಕ್ಕೆ, ಒಂದುಪುರಾವೃತ್ತಾಂತಮಂ- ಪೂರ್ವದಲ್ಲಿ ನಡೆದ ಒಂದು ವಾರ್ತೆಯನ್ನು, ಬಿನ್ನಪಂಗೆಯ್ದಂ, ಎಂತೆನೆ, * * * * * * * * * * * * * * * * *

ಉ॥ ತಾರಗಿರೀಂದ್ರದಗ್ರದೊಳೆ ಶಂಕರನೋರ್ಮೆ ವಿಳಾಸದಿಂದೆ ವಿ। ಸ್ತಾರಸಭಾನಿವಿಷ್ಟ ನೊಸೆದೊಪ್ಪಿರೆ ತತ್ಪದಸೇವೆಗೆಯ್ಯಲೆಂ ॥ ದಾರಮಣೀಯಲೀಲೆಮಿಗೆ ಪಾರ್ವತಿ ತಾಂ ಬರುತಲ್ಲಿ ಕಂಡಳ। ಬ್ಜಾರಿಕಿರೀಟನಂತೆಸೆವ ಸತ್ಪ್ರಮಥರ್ಕಳದಿವ್ಯರೂಪಮಂ॥ ॥೭೫॥

ವ॥ ಅಂತು ಕಂಡಾಜಗದಂಬಿಕೆಗಿವರ್ಂದಿರೊಳ್ ಶಿವನಾವನೋ ಎಂಬಸಂದೆಗಂ ಪುಟ್ಟಲನಿತರೊಳದಂ ತಿಳಿದು ಗಣಂಗಳ್ನಿಜರೂಪಮಂ ಮರಸಿ ॥ * * * * * *

ಚಂ॥ ಹರಿ ಕರಿ ವಾಜಿ ವಾನರ ವರಾಹ ತರಕ್ಷು ಶಶಾಜಗೋಬಿಡಾ। ಲ ರುರುವೃಕೋಷ್ಟ್ರಸೈರಿಭಭುಜಂಗಮರಾಳಮಯೂರತಾರ್ಕ್ಷ್ಯಕೇ॥ಸರಿರಿಪುಕುಕ್ಕುಟಾದಿಮುಖಮಂ ತಳೆದೀಶವಿಲಕ್ಷಣಾಂಗರಾ। ಗಿರೆ ಗಿರಿ ಜಾತೆ ಕಂಡು ಮಣಿದಳ್ನಿಜವಲ್ಲಭನಂಘ್ರಿಗಳ್ತಿಯಿಂ ॥

ಕಂ॥ ಇಂಗಿತಮರಿದಾಪ್ರಮಥಗ। ಣಂಗಳ್ನೆಗಳ್ದಂದಮಂ ಸಮಂತೊರೆದವರ್ಗಾಂ॥ಸಾಂಗಮೆನೆ ಮಾಳ್ಪೆ ನೌತಣ। ಮಂ ಗುಣನಿಧಿ ಬೆಸಸೆನುತ್ತಮಂಬಿಕೆನುಡಿದಳ್ ॥ ೭೭॥

ವ॥ ಇಂತೆಂದು ನುಡಿದು ಮಂದಸ್ಮಿತಾಸ್ಯನಾದ ಸರ್ವಜ್ಞನನುಜ್ಞೆಯಂ ಪಡೆದು ಸಡ

---

* ತಾರಗಿರೀಂದ್ರದ- ಕೈಲಾಸಪರ್ವತದ, ಅಗ್ರದೊಳೆ, ಶಂಕರಂ, ಓರ್ಮೆ, ವಿಳಾಸದಿಂದೆ, ವಿಸ್ತಾರಸಭಾನಿವಿಷ್ಟಂ- ವಿಶಾಲವಾದ ಸಭೆಯಲ್ಲಿ ಕುಳಿತಿರುವನಾಗಿ, ಒಸೆದು, ಒಪ್ಪಿರೆ, ಪಾರ್ವತಿ, ತತ್ಪಾದಸೇವೆಗೆಯ್ಯಲೆಂದು- ಆ ಪರಶಿವನ ಪಾದಪೂಜೆಯನ್ನು ಮಾಡಬೇಕೆಂದು, ಆರಮಣೀಯಲೀಲೆ- ಆ ಮನೋಹರವಾದ ವಿಲಾಸವು, ಮಿಗೆ- ಹೆಚ್ಚಾಗಲು, ತಾಂ, ಬರುತ್ತೆ, ಅಲ್ಲಿ, † ಅಬ್ಜಾರಿಕಿರೀಟನಂತೆ- ಪರಶಿವನಹಾಗೆ, ಎಸೆವ, ಸತ್ಪ್ರಮಥರ್ಕಳ, ದಿವ್ಯರೂಪಮಂ, ಕಂಡಳ್. ... ... ... ... ॥೭೫॥

ಅಂತು, ಕರಂ, ಆಜಗದಂಬಿಕೆಗೆ- ಜಗನ್ಮಾತೆಗೆ, ಇವರ್ಂದಿರೊಳ್- ಇವರಲ್ಲಿ, ಶಿವಂ, ಆವನೋ, ಎಂಬ, ಸಂದೆಗಂ- ಸಂದೇಹವು, ಪುಟ್ಟಿದ, ಅನಿತರೊಳ್- ಅಷ್ಟರಲ್ಲಿ, ಅದಂ, ಗಣಂಗಳ್, ತಿಳಿದು, ನಿಜರೂಪಮಂ- ತಮ್ಮಾಕಾರವನ್ನು, ಮರಸಿ. * * * * * * * * * * * * * *

ಹರಿ........ಮುಖಮಂ— ಹರಿ- ಸಿಂಹ, ಕರಿ-ಆನೆ, ವಾಜಿ-ಕುದುರೆ, ವಾನರ-ಕಪಿ, ವರಾಹ-ಹಂದಿ, ತರಕ್ಷು- ಹುಲಿ, ಶಶ- ಮೊಲ, ಅಜ- ಆಡು,ಗೋ-ವೃಷಭ, ಬಿಡಾಲ- ಕೋತಿ, ರುರು- ಜಿಂಕೆ, ವೃಕ- ತೋಳ, ಉಷ್ಟ್ರ- ಒಂಟೆ, ಸೈರಿಭ- ಕೋಣ, ಭುಜಂಗ- ಸರ್ಪ, ಮರಾಳ- ಹಂಸಪಕ್ಷಿ, ಮಯೂರ- ನವಿಲು, ತಾರ್ಕ್ಷ್ಯ- ಗರುಡ, ಕೇಸರಿರಿಪು- ಶಾರ್ದೂಲ, ಕುಕ್ಕುಟ- ಕೋಳಿ, ಇವುಗಳೇ, ಆದಿ- ಮೊದಲಾದ ಪ್ರಾಣಿಗಳ, ಮುಖಮಂ- ಮುಖವಂತಿರುವ ಮುಖವನ್ನು, ತಳೆದು, ಈಶವಿಲಕ್ಷಣಾಂಗರ್- ಪರಶಿವನ ರೂಪದಿಂ ಭಿನ್ನವಾದ ಲಕ್ಷಣವುಳ್ಳವರು, ಆಗಿ, ಇರೆ, ಗಿರಿಜಾತೆ- ಕಂಡು, ನಿಜವಲ್ಲಭನ- ತನ್ನ ಪತಿಯ, ಅಂಘ್ರಿಗೆ, ಅಳ್ತಿಯಿಂ- ಪ್ರೀತಿಯಿಂದ, ಮಣಿದಳ್. ... ... ... ... ॥೭೬॥

ಆಪ್ರಮಥಗಣಂಗಳ್, ಇಂಗಿತಮಂ- ತನ್ನ ಮನೋಭಿಪ್ರಾಯವನ್ನು, ಅರಿದು, ನೆಗಳ್ದ- ಮಾಡಿದ, ಅಂದಮಂ- ರೀತಿಯನ್ನು, ಸಮಂತು- ಚೆನ್ನಾಗಿ, ಒರೆದು- ಹೇಳಿ, ಅವರ್ಗೆ, ಆಂ, ಸಾಂಗಮೆನೆ, ಔತಣಮಂ ಮಾಳ್ಪೆಂ, ಗುಣನಿಧಿ- ಸದ್ಗುಣಗಳಿಗೆ ನಿಕ್ಷೇಪನಾದ ಪರಶಿವನೇ, ಬೆಸಸು- ಆಜ್ಞಾಪಿಸು, ಎನುತ್ತಂ, ಅಂಬಿಕೆ, ನುಡಿದಳ್. ... ... ... ... ... ॥೭೭॥

(ಪಾರ್ವತಿಯು) ಇಂತೆಂದು, ನುಡಿದು, ಮಂದಸ್ಮಿತಾಸ್ಯನಾದ- ಮುಗುಳ್ನಗೆಯಿಂದ ಕೂಡಿದ ಮುಖ

---

* (ಅವ) ತಾರ- ಬೆಳ್ಳಿಯ, ಗಿರೀಂದ್ರ- ಪರ್ವತವು. † (ಅವ) ಅಬ್ಜ- ಕಮಲಗಳಿಗೆ, ಅರಿ-ಶತ್ರುವಾದ ಚಂದ್ರನೇ ಕಿರೀಟಂ- ಕಿರೀಟವಾಗುಳ್ಳವನು. ... ... ... ... ॥೭೫॥

ಗರಂ ಮಿಕ್ಕು ಭಾರ್ಗವೀಭಾರತೀಮುಖಸಖೀಜನಸಮೇತ ಮಂತಪುರಕ್ಕೆಯ್ತಂದು ಗಣವೃಂದಕ್ಕೆ ವಿಭೂತಿಗೊಟ್ಟನಂತರಂ ॥ * * * * * * * * * * *

ಚಂ॥ಬರಿಸಿದಳಲ್ಲಿಗಂಬಿಕೆ ಮರುನ್ನದಿಯಂ ವನದೇವತಾಳಿಯಂ। ಸುರದುಘಮಂ ದಿಶಾಂಗನೆಯರಂ ಸುರಸಿದ್ಧವಧೂಕದಂಬಮಂ ॥ ಪುರಹರಮಿತ್ರನಂ ಸಸಖಮಾರುತನಂ ಮಧುವಾರ್ಧಿರಿಕ್ತಸಾ । ಗರಚಯಮಂ ಮುನಿಪ್ರಮದೆಯರ್ಕಳ ನಿಂದುವ ನಾವಸಂತನಂ ॥೭೮॥

ವ ॥ ಅಂತು ಬರಿಸಲೊಡನವರೆಲ್ಲರ್ದೇವಿಗಾನಂದನಿರ್ಭರರಾಗಿಪೊಡಮಟ್ಟು ಬೆಸನೇನೆಂದು ಸಾಂಜಲಿಪುಟರ್ಸಾಲ್ಗೊಂಡು ನಿಲೆ ಪೆಸರ್ಗೊಂಡನಂದಿಗು ಕರೆದು ತತ್ತದುದ್ಯೋಗಕರ್ಮಂಗಳೊಳಂಬಿಕೆ ಪುರುಳರಿದು ನಿಯೋಜಿಸೆ ॥ * * * * * * * *

ಚಂ ॥ ಸುರಭಿಸುಧಾರಸಪ್ರತಿಮಪಾನ್ಯಕದಂಬಮನಲ್ಲಿ ಮಾಡಿದ।ಳ್ಸುರನದಿ ದೇವಭೂಜಮಧುರೋಜ್ಜ್ವಲಸಾರಫಲಪ್ರತಾನಮಂ ॥ ನೆರಪಿದರಲ್ಲಿ ತಂದುವನದೇವಿಯ ರಬ್ಧಿಸಮಾಮೃತಾಜ್ಯಭಾ । ಸುರದಧಿವೃಂದಮಂ ಸುರದುಘಂ ಕರೆದತ್ತು ದಿಗೀಶಪತ್ನಿಯರ್ ॥ ॥೭೯॥

ಚಂ ॥ ಗಿರಿಸುತೆ ಪೇಳ್ದಕಜ್ಜಮನೊಡರ್ಚಿದರೆಲ್ಲೆಡೆಯೊಳ್ಸುರಾಂಗನೋ । ತ್ಕರಮಿ

---

ಪುಳ್ಳವನಾದ, ಸರ್ವಜ್ಞನ- ಈಶ್ವರನ, ಅನುಜ್ಞೆಯಿಂ- ಅಪ್ಪಣೆಯನ್ನು, ಪಡೆದು, ಸಡಗರಂ, ಮಿಕ್ಕು, ಭಾರ್ಗವೀಭಾರತೀಮುಖಸಖೀಜನಸಮೇತಂ- ಲಕ್ಷ್ಮಿ ಸರಸ್ವತಿ ಮುಂತಾದ ಸಖಿಯರೊಡನೆ ಕೂಡಿ, ಅಂತಪುರಕ್ಕೆ, ಏಳ್ತಂದು, ಗಣವೃಂದಕ್ಕೆ, ವಿಭೂತಿಗೊಟ್ಟನಂತರಂ- ಭೋಜನಕ್ಕೋಸ್ಕರ ವಿಭೂತಿವೀಳಯವನ್ನು ಕೊಟ್ಟಮೇಲೆ. * * * * * * * * * * * * * * * * *

ಅಂಬಿಕೆ, ಅಲ್ಲಿಗೆ- ಆ ಪಾಕಶಾಲೆಗೆ, ಮರುನ್ನದಿಯಂ- ದೇವಗಂಗೆಯನ್ನು, ವನದೇವತಾಳಿಯಂ, ಸುರದುಘಮಂ- ಕಾಮಧೇನುವನ್ನು, ದಿಶಾಂಗನೆಯರಂ, ಸುರಸಿದ್ಧವಧೂಕದಂಬಮಂ, ಪುರಹರಮಿತ್ರನಂ- ಕುಬೇರನನ್ನು, ಸಸಖಮಾರುತನಂ- ತನ್ನ ಸ್ನೇಹಿತನಾದ ಅಗ್ನಿಯಿಂದ ಕೂಡಿದ ವಾಯುವನ್ನು, ಮಧುವಾರ್ಧಿರಿಕ್ತಸಾಗರಚಯಮಂ— ಮಧುವಾರ್ಧಿ- ಜೇನುತುಪ್ಪದ ಸಮುದ್ರ, ರಿಕ್ತಸಾಗರಚಯಮಂ- ನೀರಿಲ್ಲದ ಸಮುದ್ರಗಳನ್ನು, ಮುನಿಪ್ರಮದೆಯರ್ಕಳಂ- ಋಷಿಸ್ತ್ರೀಯರನ್ನು, ಇಂದುವಂ- ಚಂದ್ರನನ್ನು, ಆವಸಂತನಂ, ಬರಿಸಿದಳ್. ... ... ... ... ... ॥೭೮॥

ಅಂತು, ಬರಿಸಲ್,ಒಡನೆ,ಅವರೆಲ್ಲರ್, ಆನಂದನಿರ್ಭರರ್- ಅತ್ಯಂತಸಂತೋಷವುಳ್ಳವರು, ಆಗಿ, ದೇವಿಗೆ– ಪಾರ್ವತಿಗೆ, ಪೊಡಮಟ್ಟು- ನಮಸ್ಕರಿಸಿ, ಬೆಸಂ- ಅಪ್ಪಣೆಯು, ಏಂ, ಎಂದು, ಸಾಂಜಲಿಪುಟರ್- ಕೈಮುಗಿದು, ಸಾಲ್ಗೊಂಡು- ಲೈನಾಗಿ, ನಿಲೆ, ಅಂಬಿಕೆ, ಅವಂದಿರಂ- ಅಮ್ಮಜನರನ್ನು, ಪೆಸರ್ಗೊಂಡು- ಹೆಸರಂ ಹಿಡಿದು, ಕರೆದು,ಪುರುಳ-ಅವರವರಶಕ್ತಿಯನ್ನು,ಅರಿದು,ತತ್ತದುದ್ಯೋಗಕರ್ಮಂಗಳೊಳ್,ನಿಯೋಜಿಸೆ.

ಸುರನದಿ, ಅಲ್ಲಿ, ಸುರಭಿಸುಧಾರಸಪ್ರತಿಮಪಾನ್ಯಕದಂಬಮಂ- ಕಾಮಧೇನುವಿನ ಹಾಲಿಗೆ ಸದೃಶವಾದ ಮಾಧುರ್ಯವುಳ್ಳ ಪಾಯಸಾದಿಪಾನದ್ರವ್ಯಗಳ ಸಮೂಹವನ್ನು, ಮಾಡಿದಳ್, ಅಲ್ಲಿ,ವನದೇವಿಯರ್, ದೇವಭೂಜಮಧುರೋಜ್ಜ್ವಲಸಾರಫಲಪ್ರತಾನಮಂ- ಕಲ್ಪವೃಕ್ಷದ ಮಧುರವಾಗಿಯೂ ಮನೋಹರವಾಗಿಯೂ ಶ್ರೇಷ್ಠವಾಗಿಯೂ ಇರುವ ಹಣ್ಣುಗಳನ್ನು, ತಂದು, ನೆರಪಿದರ್- ಸೇರಿಸಿದರು, ಸುರದುಘಂ- ಕಾಮಧೇನುವು, ಅಬ್ಧಿಸಮಾಮೃತಾಜ್ಯಭಾಸುರದಧಿವೃಂದಮಂ- ಸಮುದ್ರಕ್ಕೆ ಸದೃಶವಾದಷ್ಟು ಹಾಲು ತುಪ್ಪ ಮೊಸರು ಇವುಗಳನ್ನು, ಕರೆದತ್ತು, ದಿಗೀಶಪತ್ನಿಯರ್- ದಿಕ್ಪಾಲಕರ ಪತ್ನಿಯರು. ... ॥೭೯॥

ಗಿರಿಸುತೆ, ಪೇಳ್ದ, ಕಜ್ಜಮಂ- ಕಾರ್ಯವನ್ನು, ಒಡರ್ಚಿದರ್- ಮಾಡಿದರು, ಸುರಾಂಗನೋತ್ಕರಂ-ದೇ

ಶದಲ್ಲಿಗಲ್ಲಿಗೆಡೆಗಜ್ಜಮನುಜ್ಜುಗಿಸಿತ್ತು ಬೆಂಜನಂ ॥ ಸುರಭಿತವಪ್ಪವೋಲ್ ನೆಗಳ್ವವಸ್ತುಗಳಂ ಶಿವಮಿತ್ರನಿತ್ತನೊ । ಪ್ಪಿರೆ ಸಮೆದಂ ಸುಪಾಕಮನದಂ ಪವಮಾನಸಖಂ ಸಮೀರಣಂ॥ ... ... ... ... ... ... ... ॥೮೦॥

ಉ ॥ ಬೀಸಿದನಾಸುರಾಂಗನೆಯರಂಗದಸೇದೆಯಡಂಗೆಸಾರಮಂ । ಸೂಸಿದವಬ್ಧಿಗಳ್ಮುನಿವಧೂತತಿಸಿಂಗರಿಸಿತ್ತು ಭೋಜನೋಲ್ಲಾಸದಶಾಲೆಯಂ ಹಿಮಕರಂಚಳೆಯಂಗುಡುತಿರ್ದನೆತ್ತಲುಂ । ಭಾಸುರಮಾಗೆಪೂದಳಿರಚೆಪ್ಪರಮಂ ಸಮೆದಂ ವಸಂತಕಂ॥ ॥೮೧॥

ಉ॥ ಓದನರಾಶಿಯೊಪ್ಪಿದುದು ರೌಪ್ಯನಗಕ್ಕೆಣೆಯಾಗಿ ಖಾದ್ಯಸಂ । ಪಾದಿತರಾಶಿಮಿಂಚಿದುದು ಕಾಂಚನಭೂಧರದಂತೆ ಕಣ್ಗೆ ॥ ಚೆಲ್ವಾದುದು ವಿಂಧ್ಯಪರ್ವತವಿದೆಂದೆನೆ ಬೆಂಜನರಾಸಿ ತುಂಬಿತಾ । ಮೋದಮಜಾಂಡಮಂಡಲಮನಿಂಗಡಲಂತೆಸೆದತ್ತು ಪಾಯಸಂ ॥ ॥೮೨॥

ವ ॥ ಇಂತತಿವಿಚಿತ್ರಮೆನೆ ಖಾದ್ಯಭೋಜ್ಯಾದಿಪಂಚವಿಧಾಹಾರಮಂ ನೆಗಳ್ದು ಭವಾನಿ ನಿಜಕಟಾಕ್ಷದಿಂ ನೋಡಿ ನೆನೆದು ನಾನಾವಿಧಪಾನ್ಯಭೋಜ್ಯರಸರಸಾಯನಂಗಳ ನೊಡವಿಸಿ ಸಜ್ಜೀಕೃತಂಗೆಯ್ದಾ ಪ್ರಮಥರು ಬಿಡಯಂಗೆಯ್ಸಿ ತರಲೆಂದು ಕಿರಿಯಗಣನಾಥನೋರ್ವನು ಕರೆದುಪೋಗೆಂದು ಬೆಸಸಲೊಡಂ ॥ * * * * * * * * * * *

---

ವಸ್ತ್ರೀಸಮೂಹವು, ಎಲ್ಲಿಡೆಯೊಳ್- ಎಲ್ಲಾಸ್ಥಳದಲ್ಲೂ, ಇರದೆ- ತಪ್ಪದೆ, ಅಲ್ಲಲ್ಲಿಗೆ, ಎಡೆಗಜ್ಜಮಂ- ಎಡೆಯ ಕಾರ್ಯವನ್ನು, ಉಜ್ಜುಗಿಸಿತ್ತು, ಶಿವಮಿತ್ರಂ- ಕುಬೇರನು, ಬೆಂಜನಂ- ನಂಜುಕೊಳ್ಳುವ ಪದಾರ್ಥಗಳು,ಸುರಭಿತಂ- ಪರಿಮಳವಿಶಿಷ್ಟವಾದದ್ದು, ಅಪ್ಪವೋಲ್- ನೆಗಳ್ವ- ಮಾಡುವ, ವಸ್ತುಗಳಂ- ಪದಾರ್ಥಗಳನ್ನು, ಇತ್ತಂ,ಅದಂ, ಪವಮಾನಸಖಂ- ಅಗ್ನಿಯು, ಒಪ್ಪಿರೆ, ಸುಪಾಕಮಂ-ಒಳ್ಳೆಯಅಡಿಗೆಯನ್ನು, ಸಮೆದಂ- ಮಾಡಿದನು, ಸಮೀರಣಂ-ವಾಯುವು. ... ... ... ... ॥೮೦॥

ಸುರಾಂಗನೆಯರ, ಅಂಗದ, ಸೇದೆ- ಬೆವರು, ಅಡಂಗೆ- ನಾಶವಾಗುವಹಾಗೆ, ಬೀಸಿದಂ, ಅಬ್ಧಿಗಳ್, ಸಾರಮಂ- ಜಲವನ್ನು, ಸೂಸಿದವು- ಚೆಲ್ಲಿದವು, ಮುನಿವಧೂತತಿ, ಭೋಜನೋಲ್ಲಾಸದ, ಶಾಲೆಯಂ, ಸಿಂಗರಿಸಿತ್ತು, ಹಿಮಕರಂ- ಚಂದ್ರನು, ಎತ್ತಲುಂ, ಚಳೆಯಂಗುಡುತೆ, ಇರ್ದಂ, ವಸಂತಕಂ, ಭಾಸುರಂ, ಆಗೆ, ಪೂದಳಿರ- ಹೂವು ಚಿಗುರು ಇವುಗಳ, ಚೆಪ್ಪರಮಂ, ಸಮೆದಂ- ಮಾಡಿದನು. ... ... ॥೮೧॥

ಓದನರಾಶಿ- ಅನ್ನದ ಗುಡ್ಡೆಯು, ರೌಪ್ಯನಗಕ್ಕೆ- ಕೈಲಾಸಪರ್ವತಕ್ಕೆ, ಎಣೆಯಾಗಿ, ಒಪ್ಪಿದುದು,ಖಾದ್ಯಸಂಪಾದಿತರಾಶಿ- ಭಕ್ಷ್ಯಗಳ ಗುಡ್ಡೆಯು, ಕಾಂಚನಭೂಧರದಂತೆ- ಮೇರುಪರ್ವತದಹಾಗೆ, ಮಿಂಚಿದುದು- ಪ್ರಕಾಶಿಸಿತು, ಬೆಂಜನರಾಸಿ- ನಂಜುಕೊಳ್ಳುವ ವಸ್ತುಗಳ ರಾಶಿಯು, ಇದು, ವಿಂಧ್ಯಪರ್ವತಂ, ಎಂದೆನೆ, ಕಣ್ಗೆ, ಚೆಲ್ವಾದುದು, ಆಮೋದಂ- ಆಹಾರದ್ರವ್ಯಗಳ ಗಂಧವು, ಅಜಾಂಡಮಂಡಲಮಂ- ಬ್ರಹ್ಮಾಂಡವಲಯವನ್ನು, ತುಂಬಿತು, ಪಾಯಸಂ, ಇಂಗಡಲಂತೆ- ಕ್ಷೀರಸಮುದ್ರದಹಾಗೆ,ಎಸೆದತ್ತು. ... ... ॥೮೨॥

ಇಂತು, ಅತಿವಿಚಿತ್ರಂ, ಎನೆ, ಖಾದ್ಯಭೋಜ್ಯಾದಿಪಂಚವಿಧಾಹಾರಮಂ— ಖಾದ್ಯ, ಭೋಜ್ಯ, ಲೇಹ್ಯ, ಪಾನ್ಯ, ಭಕ್ಷ್ಯಗಳನ್ನು, ನೆಗಳ್ದು, ಭವಾನಿ, ನೆನೆದು- ಅಲ್ಲಿಲ್ಲದವುಗಳಂಸ್ಮರಿಸಿ, ನಾನಾವಿಧಪಾನ್ಯಭೋಜ್ಯರಸರಸಾಯನಂಗಳಂ- ಅನೇಕ ವಿಧಗಳಾಗಿಯೂ ವಿಶೇಷವಾಗಿಯೂ ಇರುವ ಭೋಜ್ಯರಸರಸಾಯನಂಗಳನ್ನು, ಒಡವಿಸಿ, ಸಜ್ಜೀಕೃತಂಗೆಯ್ದು- ಸಿದ್ಧಗೊಳಿಸಿ, ಆಪ್ರಮಥರಂ, ಬಿಜಯಂಗೆಯ್ಸಿತರಲೆಂದು, ಬಿಜಮಾಡಿಸಬೇಕೆಂದು, ಕಿರಿಯಗಣನಾಥನೋರ್ವನಂ- ಒಬ್ಬ ಸಣ್ಣಗಣಶ್ರೇಷ್ಠನನ್ನು, ಕರೆದು, ಪೋಗು, ಎಂದು, ಬೆಸಸಲ್, ಒಡಂ- ಕೂಡಲೇ. * * * * * * * * * * * * *

ಕಂ ॥ ಜನನಿ ಪಸಿವಾದುದೆಮ್ಮಯ । ಘನಲಿಂಗಕೆ ತೃಪ್ತಿಗೆಯ್ದು ಪೋದಪೆನಾಂ ನೋ ॥ ಜನಮುಂ ನೀಡೆನೆ ಲಿಂಗಾ । ರ್ಚನೆಗೆಯ್ಸಿ ಗಿರೀಂದ್ರಜಾತೆ ಭೋಜ್ಯಾವಳಿಯಂ ॥೮೩॥

ಚಂ ॥ ಗಡಣಿಸೆ ಶೇನತೇನಮೊಡನರ್ಪಿಸುತಂ ನಿಜಲಿಂಗಮೂರ್ತಿಗೊ । ಲ್ದೊಡನೊಡನದ್ರಿತುಂಗಶಿಖರಾಕೃತಿಯಗ್ಗದತುತ್ತಮೆತ್ತಿ ವಂ ॥ ಗಡಿಸಿದ ಭೋಜ್ಯವಸ್ತುನಿವಹಂ ಬರಿದಪ್ಪಿನಮಲ್ಲಿ ವಿಸ್ಮಯಂ । ಬಡೆ ಸಕಲಾಮರರ್ಸವಿದನಾಗಣಬಾಲಕ ನಾತ್ಮಲೀಲೆಯಿಂ ॥

ವ ॥ ಆಗಳ್ ॥ ತರಳವೃತ್ತಂ ॥ ಪ್ರಮಥಸಂಕಲತೃಪ್ತಿಗಾಂ ಸಮೆದನ್ನಮೆಲ್ಲ ಮನೋರ್ವ್ವ ನೀ । ಪ್ರಮಥಬಾಲಕ ನುಂಡನೇವೆ ನೆನುತ್ತೆ ವಿಸ್ಮಯಮಾಂತುಮಾ ॥ ರಮಣಿ ನಾಣ್ಚಿ ನಿಜೇಶನಲ್ಲಿಗೆ ಬಂದುಪೇಳ್ದದನೆಲ್ಲಮು । ನಮಿಸೆ ದೈನ್ಯದಿ ನಂದು ಸಸ್ಮಿತನಾದನಿಂದುಕಳಾಧರಂ ॥ ... ... ... ... ... ... ॥೮೫॥

ವ ॥ ಆಗಳಂತು ಸಸ್ಮಿತನಾಗಿ ನಿಜರಮಣಿಯಂ ಭುವನೈಕಪತಿ ಸಂತಪಿಟ್ಟು ತೊಡೆಯೆಡೆಗೆ ತೊಡವಂಮಾಡಿ ಸವಿನಯಮಿಂತೆಂದಂ ॥ * * * * * * * *

ಮ ॥ ಸ್ರ॥ ನಿರವದ್ಯ ರ್ನಿತ್ಯತೃಪ್ತ ರ್ನಿರವಧಿವಿಭವ ರ್ನಿರ್ಭಯ ರ್ನಿಷ್ಕಳಂಕ । ರ್ನಿರಪಾಯ ರ್ನಿರ್ಮಲಾಂಗ ರ್ನಿರುಪಮಮಹಿಮ ರ್ನೀರಜಾಕ್ಷಾದಿಸೇವ್ಯರ್ ॥ ನಿರಘಾಖ್ಯ ರ್ನೀತ

---

ಜನನಿ- ತಾಯೇ, ಎಮ್ಮಯ, ಘನಲಿಂಗಕೆ, ಪಸಿವು, ಆದುದು, ಆಗಿ, ತೃಪ್ತಿಗೆಯ್ದು, ಪೋದಪೆಂ- ಪೋಗುವೆನು, ಭೋಜನಮುಂ, ನೀಡು,ಎನೆ,ಗಿರೀಂದ್ರಜಾತೆ, ಲಿಂಗಾರ್ಚನೆಗೆಯ್ಸಿ, ಭೋಜ್ಯಾವಳಿಯಂ॥೮೩॥

ತೇನತೇನಂ- ಮೇಲಿಮೇಲೆ, ಗಡಣಿಸೆ- ರಾಸಿಯಂಹಾಕಲು, ಒಡನೆ, ಆಗಣಬಾಲಕಂ, ನಿಜಲಿಂಗಮೂರ್ತಿಗೆ, ಅರ್ಪಿಸುತಂ, ಒಲ್ದು, ಒಡನೊಡನೆ, ಅದ್ರಿತುಂಗಶಿಖರಾಕೃತಿಯ- ಬೆಟ್ಟದ ದಪ್ಪವಾದ ಶಿಖರದ ಗಾತ್ರವುಳ್ಳ, ಅಗ್ಗದ- ದೊಡ್ಡದಾದ, ತುತ್ತಂ, ಎತ್ತಿ, ವಂಗಡಿಸಿದ-ಗುಂಪುಕೊಡಿಸಿದ್ದ, ಭೋಜ್ಯವಸ್ತುನಿವಹಂ, ಬರಿದಪ್ಪಿನಂ- ನಿಶ್ಶೇಷವಾಗುವಹಾಗೆ, ಅಲ್ಲಿ, ಸಕಲಾಮರರ್- ಸಮಸ್ತದೇವತೆಗಳು, ವಿಸ್ಮಯಂಬಡೆ- ಆಶ್ಚರ್ಯಬಡಲು, ಆತ್ಮಲೀಲೆಯಿಂ, ಸವಿದಂ. ... ... ... ... ॥೮೪॥

ಉಮಾರಮಣಿ-ಪಾರ್ವತೀದೇವಿಯು, ಆಂ, ಪ್ರಮಥಸಂಕುಲತೃಪ್ತಿಗೆ, ಗಣಸಮೂಹವಂ ತೃಪ್ತಿಗೊಳಿಸುವದಕ್ಕೋಸ್ಕರ, ಸಮೆದ-ಮಾಡಿದ, ಅನ್ನಮೆಲ್ಲಮಂ, ಈ ಪ್ರಮಥಬಾಲಕನೋರ್ವ್ವಂ, ಉಂಡಂ, ಏವೆ- ಏನುಮಾಡಲಿ, ಎನುತ್ತೆ, ವಿಸ್ಮಯಮಾಂತು, ನಾಣ್ಚಿ, ನಿಜೇಶನಲ್ಲಿಗೆ- ತನ್ನಪತಿಯಾದಪರಶಿವನಿರುವಸ್ಥಳಕ್ಕೆ, ಬಂದು, ಅದಂಎಲ್ಲಮಂ, ಪೇಳ್ದು, ದೈನ್ಯದಿಂ, ನಮಿಸೆ, ಅಂದು, ಇಂದುಕಳಾಧರಂ, ಸಸ್ಮಿತಂ- ಮುಗುಳ್ನಗೆಯಿಂದ ಕೂಡಿದವನು, ಆದಂ. ... ... ... ... ॥೮೫॥

ಆಗಳ್, ಭುವನೈಕಪತಿ- ಜಗತ್ತೆಲ್ಲಕ್ಕೂತಾನೊಬ್ಬನೇ ಈಶ್ವರನಾದ ಪರಶಿವನು, ಅಂತು, ಸಸ್ಮಿತಂ, ಆಗಿ, ನಿಜರಮಣಿಯಂ, ಸಂತಮಿಟ್ಟು- ಸಮಾಧಾನಪಡಿಸಿ, ತೊಡೆಯೆಡೆಗೆ- ತೊಡೆಯಸ್ಥಳಕ್ಕೆ, ತೊಡವಂಮಾಡಿ-ಆಭರಣವಮಾಡಿ,(ಅಂದರೆ ತೊಡೆಯಮೇಲೆಕುಳ್ಳಿರಿಸಿಕೊಂಡು) ಸವಿನಯಂ, ಇಂತೆಂದಂ. * *

ಸರೋಜಾಯತಾಕ್ಷಿ- ಕಮಲದಳದಂತೆ ದೀರ್ಘವಾದಕಣ್ಣುಳ್ಳ ಪಾರ್ವತಿಯೇ, ಕೇಳ್, ಪ್ರಮಥಗಣವರರ್, ನಿರವದ್ಯರ್- ದೋಷರಹಿತರು, ನಿತ್ಯತೃಪ್ತರ್- ಸದಾತೃಪ್ತಿಯುಳ್ಳವರು, ನಿರವಧಿವಿಭವರ್- ಕೊನೆಯಿಲ್ಲವ ವೈಭವವುಳ್ಳವರು, ನಿರ್ಭಯರ್, ನಿಷ್ಕಳಂಕರ್, ನಿರಪಾಯರ್- ಯಾವಅಪಾಯವೂಇಲ್ಲದವರು, ನಿರ್ಮಲಾಂಗರ್, ನಿರುಪಮಮಹಿಮರ್- ಅಸದೃಶವಾದಮಹತ್ವವುಳ್ಳವರು, ನೀರಜಾಕ್ಷಾದಿಸೇವ್ಯರ್-ವಿಷ್ಣುಮೊದಲಾದ ದೇವತೆಗಳಿಂದ ಸೇವಿಸಲ್ಪಡುವದಕ್ಕೆ ಯೋಗ್ಯರಾದವರು,ನಿರಘಾಖ್ಯರ್- ಪಾಪರಹಿತವಾದನಾಮಧೇ

ಯುಕ್ತ ರ್ನಿರತಿಶಯಗುಣ ರ್ನೀರುಜ ರ್ನಿಶ್ಚಿತಾರ್ಥ ರ್ | ನಿರಸಂಗ ರ್ನಿತ್ಯಮುಕ್ತ ರ್ಪ್ರಮ ಥಗಣವರರ್ ಕೇಳ್ಸರೋಜಾಯತಾಕ್ಷೆ ॥ ... ... ... ॥೮೬॥

ಕಂ ॥ ಜಪಜಭವಾಂಡಾವಳಿಯಂ | ಕಡೆಗಣ್ಣವಲೋಕಮಾತ್ರದಿಂ ಪುಟ್ಟಿಪಸೈ ॥ ತಿ ಡುವಪಡಲಿಡಿಪ ಲೀಲೆಯ | ನೊಡಪ್ಪುವ ರ್ಪ್ರಮಥರಳವಡೇಂ ಕೇವಳಮೆ ॥ ॥೮೭॥

ಚಂ॥ ಒಡೆವರಜಾಂಡಮಂ ಕುಡಿವರಂಬುಧಿಯಂ ಪಿಡಿವರ್ಪ್ರಳಯಾಗ್ನಿಯಂ | ತೊಡುವರ ನಂತನಂ ಪೊಸೆವರಂತಕನಂ ಜಡಿವರ್ವಿಧಾತ್ರನಂ ॥ ಸುಡುವರನಂಗನಂ ಮಿಡಿವರರ್ಕನ ನಾಂ ತಿಡುವರ್ಕುಲಾದ್ರಿಯಂ | ಕಡಿವರಿದಿರ್ಚಿದೈತ್ಯತತಿಯಂ ಪ್ರಮಥರ್ಕಮಳೋಜ್ಜ್ವಳಾನನೆ॥

ಕಂ ॥ ಅಸುವೆನಗೆಶರಣ ರಾನವ | ರಸು ನನ್ನಿಸರೋಜಜಾಂಡತತಿಯುರುಳ್ದೊಡ ವಿಶಾ ॥ ಬಿಸಜಾಕ್ಷಾದಿಗ ಳಳಿದೊಡ | ಮಸಮಾನ ರ್ಶರಣರಳಿಯರಿಭಗಲತಿಯಾಸೆ॥ ॥೮೮॥

ಕಂ॥ ಶ್ರುತಿತತಿಗಳರಸಿಕಾಣದ | ವಿತತಮಹೋನ್ನತಮದೀಯಮಹಿಮೆಯ ನರಿವ॥ ರ್ನುತಶರಣರವರಮಹಿಮೋ| ನ್ನತಿಯಂ ಪೆರರರಿಯರಾನೆ ಬಲ್ಲೆನಪರ್ಣೆ॥ ... ॥೯೦॥

ಶಾ॥ ಲಿಂಗಾಲಿಂಗಿತಮಂಗಳಾಂಗಮಹಿತ ರ್ಲಿಂಗಾಭಿಮಾನಾನ್ವಿತ | ರ್ಲಿಂಗಾನಂದರ

---

ಯವುಳ್ಳವರು, ನೀತಿಯುಕ್ತರ್, ನಿರತಿಶಯಗುಣರ್, ನೀರುಜರ್- ರೋಗರಹಿತರು,ನಿಶ್ಚಿತಾರ್ಥರ್- ನಿಶ್ಚಯಿ ಸಲ್ಪಟ್ಟ ತತ್ತ್ವಾರ್ಥವುಳ್ಳವರು, ನಿರಸಂಗರ್-ಕಾಮರಹಿತರು, ನಿತ್ಯಮುಕ್ತರ್-ಸದಾಸಂಸಾರಮುಕ್ತರು ॥೮೬॥

ಜಲಜಭವಾಂಡಾವಳಿಯಂ- ಬ್ರಹ್ಮಾಂಡಸಮೂಹವನ್ನು, ಕಡೆಗಣ್ಣ, ಅವಲೋಕಮಾತ್ರದಿಂ- ನೋ ಟದಿಂದಲೇ, ಪುಟ್ಟಿಪ, ಸೈತಿಡುವ- ಪಾಲಿಸುವ, ಪಡಲಿಡಿಪ-ದುಃಖಪಡಿಸುವ, ಲೀಲೆಯಂ, ಒಡರ್ಚುವರ್- ಉಂಟುಮಾಡುವ, ಪ್ರಮಥರ, ಅದುಅಳವು- ಆ ಸಾಮರ್ಥ್ಯವು, ಕೇವಳಮೇಂ- ಸಾಮಾನ್ಯವೇ ? ॥೮೭॥

ಕಮಳೋಜ್ವಳಾನನೆ- ತಾವರೆಯಹೂವಿನಂತೆ ಮನೋಹರವಾದ ಮುಖವುಳ್ಳ ಪಾರ್ವತಿಯೇ,ಪ್ರಮಥ ರ್ಕಳ್, ಅಜಾಂಡಮಂ- ಬ್ರಹ್ಮಾಂಡವನ್ನು, ಒಡೆವರ್, ಅಂಬುಧಿಯಂ- ಸಮುದ್ರವನ್ನು, ಕುಡಿವರ್,ಲಯಾ ಗ್ನಿಯಂ- ಪ್ರಳಯಕಾಲದ ಅಗ್ನಿಯನ್ನು, ಪಿಡಿವರ್, ಅನಂತನಂ- ಆದಿಶೇಷನನ್ನು, ತೊಡುವರ್- ಆಭರಣ ಮಂಮಾಡಿಕೊಳ್ಳುವರು, ಅಂತಕನಂ- ಯಮನನ್ನು, ಪೊಸೆವರ್, ವಿಧಾತ್ರನಂ-ಬ್ರಹ್ಮನನ್ನು,ಜಡಿವರ್-ಭಯ ಪಡಿಸುವರು, ಅನಂಗನಂ- ಮನ್ಮಥನನ್ನು, ಸುಡುವರ್, ಅರ್ಕನಂ- ಸೂರ್ಯನನ್ನು, ಮಿಡಿವರ್- ಕೈಬೆರಳಿನಿಂ ದ ಚಿಮ್ಮುವರು, ಕುಲಾದ್ರಿಯಂ- ಕುಲಾಚಲಗಳನ್ನು, ಆಂತು- ಗ್ರಹಿಸಿ, ಇಡುವರ್, ದೈತ್ಯತತಿಯಂ- ರಾ ಕ್ಷಸರಗುಂಪನ್ನು, ಇದಿರ್ಚಿ- ಎದುರಾಗಿ, ಕಡಿವರ್- ಕತ್ತರಿಸುವರು. ... ... ॥೮೮॥

ಇಭಗತಿಯಾಸೆ- ಶ್ರೇಷ್ಠವಾದಆನೆಯು ನಡೆಯುತ್ತಿರುವ ನಡೆಯುಳ್ಳಪಾರ್ವತಿಯೇ, ಶರಣರ್, ಎನ ಗೆ, ಅಸು- ಪ್ರಾಣರೂಪರು, ಆಂ, ಅವರ- ಶರಣರ, ಅಸು- ಪ್ರಾಣವು, ನನ್ನಿ- ನಿಶ್ಚಯ, ಸರೋಜಜಾಂಡ ತತಿ- ಬ್ರಹ್ಮಾಂಡಸಮೂಹವು, ಉರುಳ್ದೊಡಂ- ನಾಶವಾದರೂ, ಈ ಬಿಸಜಾಕ್ಷಾದಿಗಳ್- ವಿಷ್ಣುಮೊದಲಾದ ದೇವತೆಗಳು,ಅಳಿದೊಡಂ-ನಾಶವಾದಾಗ್ಯೂ,ಅಸಮಾನರ್-ಅಸದೃಶರಾದ,ಶರಣರ್,ಅಳಿಯರ್-ನಾಶವಾಗರು.

ಅಪರ್ಣೆ, ಶ್ರುತಿತತಿಗಳ್- ವೇದಸಮೂಹಗಳು, ಅರಸಿ- ಅಪೇಕ್ಷಿಸಿ, ಕಾಣದ, ವಿತತಮಹೋನ್ನತಮ ದೀಯಮಹಿಮೆಯಂ- ಅಧಿಕವಾದನನ್ನಮಾಹಾತ್ಮ್ಯವನ್ನು, ನುತಶರಣರ್,ಅರಿವರ್- ತಿಳಿಯುವರು, ಅವರ, ಮಹಿಮೋನ್ನತಿಯಂ, ಪೆರರ್-ಮತ್ತೊಬ್ಬರು, ಅರಿಯರ್-ತಿಳಿಯರು,ಆನೆ, ಬಲ್ಲೆಂ. ... ॥೯೦॥

ಶೃಂಗಾರಸಂಗರಾಸ್ಪದೆ- ಶೃಂಗಾರರಸದ ಸಕಲ ಸ್ಥಿರಾಂಶಕ್ಕೆ ಆಶ್ರಯಳಾದ ಪಾರ್ವತಿಯೇ,ಮದೀಯ ಶರಣರ್- ನನ್ನ ಶರಣರು, ಲಿಂಗಾಲಿಂಗಿತಮಂಗಳಾಂಗಮಹಿತರ್- ಶಿವಲಿಂಗದಿಂದಾಶ್ರಯಸಲ್ಪಟ್ಟ ಮಂಗಳ

ಸಾರ್ದ್ರಸಾರಹೃದಯರ್ಲಿಂಗಾರ್ಚನಾತತ್ಪರ ॥ ರ್ಲಿಂಗಾಲೋಕವಿಲೋಕನಾತಿಚತುರರ್ಲಿಂಗಾರ್ಪಿತಾಸ್ವಾದಿಗಳ್ । ಲಿಂಗಪ್ರಾಣಯುತರ್ಮಹೀಯಶರಣರ್ಶೃಂಗಾರಸಾರಾಸ್ಪದೇ ॥ ||೯೨||

ಕಂ ॥ ಎಂದಭವನೊರೆಯೆ ಹಿಮಗಿರಿ । ನಂದನೆ ಬಗೆದುದು ಕೇಳ್ದು ತನ್ಮಹಿಮೆಯ ನಾ ॥ ನಂದನಿಧಿ ಭಾವಿಸುತ್ತೆ ನಿಜ । ಸಂದೇಹಮ ನುಳಿದು ರಮಣನೊಡನೊಪ್ಪಿರ್ದಳ್ ||೯೧||

ಮಲ್ಲಿಕಾಮಾಲಾವೃತ್ತಂ ॥ ಆಡಲೇಂ ಗಣಬಾಲಕಂಗೆ ಜಗತ್ತ್ರಯಾಂಬಿಕೆ ತೃಪ್ತಿಯಂ । ಮಾಡಲಾರದೆ ನಿಂದಳೆಂದೆನೆ ದೇವ ವಿಶ್ವಕುಟುಂಬಮಂ ॥ ನಾಡೆ ರಕ್ಷಿಪ ಚಿನ್ಮಯಪ್ರಭುಲಿಂಗ ಕೇಳ್ನಿನಗಾಂ ಕರಂ । ಮಾಡಲಾರ್ಪೆನೆ ತೃಪ್ತಿಯಂ ಜಿತಮಾಯ ಪೂರ್ಣಕೃಪಾನಿಧಿ ॥ ... ... ... ... ... ||೯೩||

ಮ ॥ ಸ್ರ ॥ ನತಕಲ್ಪೋರ್ವಿಜ ನಾನಾಗಮನಿಗಮರಹಸ್ಯಾರ್ಥಸಾರ ಪ್ರಕಾಶಾನ್ವಿತ ಸತ್ಯಾಲಾಪ ಸಂತರ್ಜಿತಮದನಗಣಾನಂದ ಪೀಯೂಷವಾರಾ ॥ ಶಿ ತತಪ್ರದ್ಯೋತಶೀತಪ್ರಭ ಭವನಿವಹಧ್ವಾಂತಮಾರ್ತಂಡ ನಿತ್ಯಾ । ದ್ಭುತಲೀಲಾವಾಸ ಭಾಸ್ವತ್ಪ್ರಭುವೆ ವಿಭುವೆ ರಕ್ಷಿಪ್ಪುದೆಂದಂ ವೃಷೇಂದ್ರಂ ॥ ... ... ... ... ||೯೪||

---

ಕರವಾದಶರೀರದಿಂದ ಪೂಜ್ಯರಾದವರು, ಲಿಂಗಾಭಿಮಾನಾನ್ವಿತರ್- ಲಿಂಗದಲ್ಲೀ ಪ್ರಣಯವುಳ್ಳವರು, ಲಿಂಗಾನಂದರಸಾರ್ದ್ರಸಾರಹೃದಯರ್- ಶಿವಲಿಂಗದಿಂದುಂಟಾದ ಸಂತೋಷರಸದಿಂದ ನೆನೆದಿರುವ ಮನಸ್ಸುಳ್ಳವರು, ಲಿಂಗಾರ್ಚನಾತತ್ಪರರ್- ಶಿವಲಿಂಗಪೂಜೆಯಂ ಮಾಡುವದರಲ್ಲಿ ಆಸಕ್ತರು, ಲಿಂಗಾಲೋಕವಿಲೋಕನಾತಿಚತುರರ್- ಶಿವಲಿಂಗದರ್ಶನದಲ್ಲತಿಕುಶಲರು, ಲಿಂಗಾರ್ಪಿತಾಸ್ವಾದಿಗಳ್- ಶಿವಲಿಂಗಕ್ಕೆ ಸಮರ್ಪಿಸಿದ ವಸ್ತುವನ್ನು ಸ್ವೀಕರಿಸತಕ್ಕವರು, ಲಿಂಗಪ್ರಾಣಯುತರ್- ಲಿಂಗವೇ ಪ್ರಾಣವಾಗುಳ್ಳವರು. ... ... ||೯೧||

ಎಂದು, ಅಭವಂ, ಒರೆಯೆ- ಹೇಳಲು, ಆನಂದನಿಧಿ, ಹಿಮಗಿರಿನಂದನೆ- ಹಿಮವತ್ಪರ್ವತಪುತ್ರಿಯಾದ ಪಾರ್ವತಿಯು, ಬಗೆದಂದು- ಮನಃಪೂರ್ವಕವಾಗಿ, ಕೇಳ್ದು, ತನ್ಮಹಿಮೆಯಂ- ಆ ಶರಣರ ಮಾಹಾತ್ಮ್ಯವನ್ನು, ಭಾವಿಸುತ್ತೆ- ಆಲೋಚಿಸುತ್ತ, ನಿಜಸಂದೇಹಮಂ, ಉಳಿದು, ರಮಣನೊಡನೆ, ಒಪ್ಪಿ, ಇರ್ದಳ್. ||೯೨||

ಜಗತ್ತ್ರಯಾಂಬಿಕೆ- ಮೂರು ಲೋಕಕ್ಕೂ ತಾಯಿಯಾದ ಪಾರ್ವತಿಯು, ಗಣಬಾಲಕಂಗೆ, ತೃಪ್ತಿಯಂ, ಮಾಡಲಾರದೆ, ನಿಂದಳ್, ಎಂದೆನೆ, ಆಡಲೇಂ, ಹೇಳುವದೇನು? ದೇವ, ಕೇಳ್, ವಿಶ್ವಕುಟುಂಬಮಂ- ಪ್ರಪಂಚದ ಸಕಲಜೀವಿಗಳನ್ನು, ನಾಡೆ- ಚೆನ್ನಾಗಿ, ರಕ್ಷಿಪ, ಜಿತಮಾಯ- ಮಾಯೆಯನ್ನು ಗೆದ್ದ, ಪೂರ್ಣಕೃಪಾನಿಧಿ, ಚಿನ್ಮಯ-ಚಿತ್ಸ್ವರೂಪನಾದ, ಪ್ರಭುಲಿಂಗ- ಪ್ರಭುಸ್ವಾಮಿಯೇ, ನಿನಗೆ, ಆಂ,ತೃಪ್ತಿಯಂ, ಕರಂ, ಮಾಡಲ್, ಆರ್ಪೆನೆ- ಸಮರ್ಥನೇ? ... ... ... ... ... ||೯೩||

ವೃಷೇಂದ್ರಂ, ನತಕಲ್ಪೋರ್ವಿಜ- ನಮಸ್ಕರಿಸಿದ ಜನರಿಗೆ ಕಲ್ಪವೃಕ್ಷನಾದ, ನಾನಾಗಮನಿಗಮರಹಸ್ಯಾರ್ಥಸಾರಪ್ರಕಾಶಾನ್ವಿತ— ನಾನಾಗಮನಿಗಮರಹಸ್ಯಾರ್ಥ- ಅನೇಕಗಳಾದ ಆಗಮಗಳು ವೇದಗಳುಇವುಗಳ ಗೂಢಾರ್ಥದಿಂದ, ಸಾರ-ಶ್ರೇಷ್ಠವಾದ- ಪ್ರಕಾಶ- ಕಾಂತಿಯಿಂದ, ಅನ್ವಿತ- ಕೂಡಿದ, ಸತ್ಯಾಲಾಪ, ಸಂತರ್ಜಿತಮದನ- ಭಯಪಡಿಸಲ್ಪಟ್ಟ ಮನ್ಮಥನುಳ್ಳ, ಗಣಾ........ಶೀತಪ್ರಭ—ಗಣ- ಶಿವಗಣಂಗಳ, ಆನಂದ- ಸಂತೋಷವೆಂಬ,ಪೀಯೂಷವಾರಾಶಿ- ಕ್ಷೀರಸಮುದ್ರಕ್ಕೆ, ತತ-ವಿಸ್ತರಿಸಲ್ಪಟ್ಟ, ಪ್ರದ್ಯೋತ- ಕಾಂತಿಯುಳ್ಳ, (ಅಂದರೆ ಪೂರ್ಣನಾದ,) ಶೀತಪ್ರಭ-ಚಂದ್ರನಾದ, (ಅಂದರೆ ಶಿವಗಣಂಗಳಿಗೆ ಸಂತೋಷವರ್ಧಕನಾದ,) ಭವನಿವಹಧ್ವಾಂತಮಾರ್ತಂಡ- ಪಾಪಸಮೂಹವೆಂಬ ಕತ್ತಲೆಗೆ ಸೂರ್ಯನಾದ,ನಿತ್ಯಾದ್ಭುತಲೀಲಾವಾಸ- ಶಾಶ್ವತವಾಗಿಯೂ ಆಶ್ಚರ್ಯಕರವಾಗಿಯೂ ಇರುವ ವಿಲಾಸಗಳಿಗಾಶ್ರಯನಾದ ಭಾಸ್ವತ್ಪ್ರಭುವೆ, ವಿಭುವೆ, ರಕ್ಷಿಪ್ಪುದು,ಎಂದಂ. ... ... ... ... ... ||೯೪||

ವ ॥ ಎಂದುಭಕ್ತಿಭರದಿಂ ಸ್ತೋತ್ರಂಗೆಯ್ವ ಬಸವನು ನೋಡಿ॥ * * * *

ಕಂ ॥ ನಿನ್ನ ನೆನಗಿತ್ತೆ ಮೊದಲೆ ದ । ಲೆನ್ನಂ ನಿನಗಿತ್ತೆ ನೀಗಳೆನ್ನಿಂ ನೀನ ॥ ತ್ಯುನ್ನತವಿತರಣಗುಣಸಂ । ಪನ್ನಂ ನಿನ್ನನ್ನರೊಳರೆ ದಾನಿಗಳಳಿಯೊಳ್ ॥ ... ॥೯೫॥

ವ ॥ ಎಂದುಪೊಗಳ್ದು ಸುರಭಿ ಸುರತರು ಚಿಂತಾಮಣಿಗಳಂಗಣದೊಳ್ನೆಲೆಗೊಳ್ವಂತೆ ನಿಜಪ್ರಸಾದಮಂ ಕರುಣಿಸಿ ವಾಕ್ಸಿದ್ಧಿಮನಸ್ಸಿದ್ಧ್ಯಾದಿಸಿದ್ಧಿಗಳುಮನಿತ್ತು ನೆನೆದಂತೆ ಸರ್ವಮಂ ನಿರ್ವಹಿಸೆಂದು ವರಂಗೊಟ್ಟು ಮುನ್ನುಳ್ಳನಳಿನಗಂಧಮಂ ಪಸರಿಪರವಿಯಂತನಾದಿಸಂಸಿದ್ಧಮಾದ ತದೀಯಶಿವಜ್ಞಾನಮನುಜ್ಜ್ವಲಂಗೆಯ್ದು ಬಸವನಂ ನಿರುಪಮಾನಶಿವಾನುಭಾವಸುಧಾತರಂಗಿಣಿಯೊಳವಗಾಹಂಗೆಯ್ಸಿ ಸುಖಮಿರಿಸಿ ॥ * * * * *

ಮತ್ತೀ॥ ತೆಗೆದಪ್ಪುತ್ತೆ ವೃಷೇಂದ್ರನಂ ಬಿಗಿದು ತಳ್ಕೈಸುತ್ತೆ ಸಂಪ್ರೀತಿ ಕೈ । ಮಿಗೆ ಪಾದಾನತನಾದ ಚೆನ್ನವೃಷನಂ ಶ್ರೀಮಾಚಿದೇವಾದಿವೀ ॥ ರಗಣಾನೀಕಕೆ ಬೀರಿ ತನ್ನ ಕೃಪೆಯುಂ ಸರ್ವೋತ್ಸವಂಗೆಯ್ದು ಪೂ । ರ್ಣಗಭೀರಂ ಪ್ರಭುವೈದಿದಂ ನಿಜರಹಸ್ಯಾಕಾರವಿಸ್ತಾರಮಂ॥ ... ... ... ... ... ... ॥೯೬॥

ವ॥ ಅನಂತರಂ ॥ ಮ ॥ ಸ್ರ ॥ ಬಗೆಯೊಳ್ತಾಂಭಾವಿಸುತ್ತಂ ಪ್ರಭುಪದಯುಗಮಂ ತತ್ಪ್ರಶಸ್ತಪ್ರಭಾವೋ । ಕ್ತಿಗಳಂ ಸಂಪಾದಿಸುತ್ತಂ ಶರಣನಿವಹದೊಳ್ಜಂಗಮಾ

---

ಎಂದು, ಭಕ್ತಿಭರದಿಂ- ಅತ್ಯಂತಭಕ್ತಿಯಿಂದ, ಸ್ತೋತ್ರಂಗೆಯ್ವ, ಬಸವನಂ,ನೋಡಿ. * * *

ಮೊದಲೆ, ನಿನ್ನಂ, ಎನಗೆ, ಇತ್ತೆ, ದಲ್- ನಿಶ್ಚಯ, ಈಗಳ್, ಎನ್ನಂ, ನಿನಗೆ, ಇತ್ತೆಂ, ಎನ್ನಿಂ- ನನಗಿಂತಲೂ, ನೀಂ, ಅತ್ಯುನ್ನತವಿತರಣಗುಣಸಂಪನ್ನಂ- ಅತ್ಯಧಿಕವಾದ ಗುಣದಿಂದ ಕೊಡಿದವನು, ನಿನ್ನನ್ನರ್- ನಿನ್ನಂಥಾ, ದಾನಿಗಳ್- ದಾನವಂತರು, ಇಳೆಯೊಳ್, ಒಳರೆ, ಉಂಟೆ. ... ... ॥೯೫॥

ಎಂದು, ಪೊಗಳ್ದು, ಸುರಭಿಸುರತರುಚಿಂತಾಮಣಿಗಳ್- ಕಾಮಧೇನು ಕಲ್ಪವೃಕ್ಷ ಚಿಂತಾರತ್ನಗಳು, ಅಂಗಣದೊಳ್- ಬಸವೇಶ್ವರನ ವಾಸಸ್ಥಲದಲ್ಲಿ, ನೆಲೆಗೊಳ್ವಂತೆ- ಸ್ಥಿರವಾಗುವಂತೆ, ನಿಜಪ್ರಸಾದಮಂ- ತನ್ನ ಅನುಗ್ರಹವನ್ನು, ಕರುಣಿಸಿ, ವಾಕ್ಸಿದ್ಧಿಮನಸ್ಸಿದ್ಧ್ಯಾದಿಸಿದ್ಧಿಗಳುಮಂ, ಇತ್ತು, ನೆನೆಸಿದಂತೆ- ಮನಸ್ಸಿನಲ್ಲಿ ಸ್ಮರಿಸಿದಂತೆ, ಸರ್ವಮಂ, ನಿರ್ವಹಿಸು, ಎಂದು, ವರಂಗೊಟ್ಟು, ಮುನ್ನುಳ್ಳ- ಮೊದಲಿದ್ದ, ನಳಿನಗಂಧಮಂ- ಕಮಲದ ಪರಿಮಳವನ್ನು, ಪಸರಿಪ- ಹರಡುವ, ರವಿಯಂತೆ, ಅನಾದಿಸಂಸಿದ್ಧಮಾದ, ತದೀಯಶಿವಜ್ಞಾನಮಂ- ಆ ಬಸವೇಶ್ವರನ ಶಿವಜ್ಞಾನವನ್ನು, ಉಜ್ಜ್ವಲಂಗೆಯ್ದು- ಪ್ರಕಾಶಗೊಳಿಸಿ, ಬಸವನಂ, ನಿರುಪಮಶಿವಾನುಭಾವಸುಧಾತರಂಗಿಣಿಯೊಳ್- ಅಸದೃಶವಾದ ಶಿವಾನುಭವವೆಂಬ ಅಮೃತಪ್ರವಾಹದಲ್ಲಿ, ಅವಗಾಹಂಗೆಯ್ಸಿ- ಮುಳುಗಿಸಿ, ಸುಖಂ- ಸುಖವಾಗಿ, ಇರಿಸಿ. * * * * * * * * *

ಪೂರ್ಣಗಭೀರಂ, ಪ್ರಭು, ವೃಷೇಂದ್ರನಂ, ತೆಗೆದು, ಅಪ್ಪುತ್ತೆ, ಪಾದಾನತನಾದ-ಪಾದಕ್ಕೆ ನಮಸ್ಕರಿಸಿದ, ಚೆನ್ನವೃಷನಂ, ಸುಪ್ರೀತಿ, ಕೈಮಿಗೆ- ಹೆಚ್ಚಾಗಲು, ಬಿಗಿದು, ತಳ್ಕೈಸುತ್ತೆ-ಆಲಂಗಿಸುತ್ತ, ಶ್ರೀಮಾಚಿದೇವಾದಿವೀರಗಣಾನೀಕಕೆ, ತನ್ನಕೃಪೆಯುಂ, ಬೀರಿ, ಸರ್ವೋತ್ಸವಂಗೆಯ್ದು, ನಿಜರಹಸ್ಯಾಕಾರವಿಸ್ತಾರಮಂ- ತನ್ನ ಗುಪ್ತವಾದ ಆಕಾರದ ವೈಶಾಲ್ಯವನ್ನು, (ಅಂದರೆ ನಿರಾಕಾರತ್ವವನ್ನು,) ಐದಿದಂ. ॥೯೬॥

ಉರು........ ಚಂದ್ರಂ— ಉರು- ಅಧಿಕವಾದ, ಶಿವಾಚಾರ- ವೀರಶೈವಾಚಾರವೆಂಬ ವಿಸ್ತಾರ- ವಿಶಾಲವಾದ, ತಾರಾಧ್ವ- ಆಕಾಶವನ್ನು, ಗತ- ಹೊಂದಿದ, ಸ್ಫೀತ- ಅಧಿಕವಾದ, ಅಮೃತ- ಅಮೃತಮಯವಾದ, ಪ್ರಸ್ಫುರಿತ- ಪ್ರಕಾಶಿಸುವ, ರುಚಿ- ಕಾಂತಿಗಳುಳ್ಳ, ಕಳಾಃ- ಷೋಡಶಕಲೆಗಳಿಂದ, ಸಾಂದ್ರ— ಸಂಪೂ

ನೀಕವಮಂ ಕೈ ॥ ಮಿಗೆ ನಿತ್ಯಾರಾಧಿಸುತ್ತಂ ಮೆರೆದ ನುರುಶಿವಾಚಾರವಿಸ್ತಾರತಾರಾ । ಧ್ವಗತಸ್ಫೀತಾಮೃತಪ್ರಸ್ಫುರಿತರುಚಿಕಳಾಸಾಂದ್ರಚಂದ್ರಾ ನೃಪೇಂದ್ರಾ ॥ ... ೯೭॥

ಕಂ॥ ಪ್ರಭುಕಥನಮನಿದನಾವಂ । ಸುಭಕ್ತಿಯಿಂದೋದುವಂ ಮುದಂಮಿಗೆ ಕೇಳ್ವಂ॥ ಶುಭಸಂವಿದ್ವೈರಾಗ್ಯಮ । ನಭಿಮತಮಂ ಪಡೆವ ನವನಿಳಾಮಂಡಲದೊಳ್ ॥ ॥೯೮॥

ಲಲಿತಪದವೃತ್ತಂ ॥ ಋಗ್ಯಜುರಭಿಸ್ತುತ ವಿರಾಗ್ಯಧಿಕ ಪದ್ಮಸಮದೃಗ್ಯುಗಳ ಭಕ್ತಕೃತಭಾಗ್ಯಚಯ ನಿತ್ಯಾ । ರೋಗ್ಯ ನಿರವದ್ಯ ಬಹುಭೋಗ್ಯ ನಿಗಮಪ್ರಬಲಯುಗ್ಯ ಪುರಭಿದ್ಭಜನಯೋಗ್ಯಜನಲೋಲ ॥ ಪ್ರಾಗ್ಯಮಿಸಮಿಕ್ಷ್ಯ ದಶದಿಗ್ಯುತಯಶಸ್ಕ ಮನುವಾಗ್ಯಜನ ರಾಗಕೃತಶುಗ್ಯಮಹಭಾಗ । ಸ್ಪೃಗ್ಯತಿವರೇಣ್ಯ ಜಲಮುಗ್ಯದುಕುಲೇಶಶಿತಿರುಗ್ಯುಗುರುಕಂಠ ಜಯ ಮೃಗ್ಯ ಬಸವೇಶ ॥ ... ... .. ॥೯೯॥

ಭುಜಂಗಪ್ರಯಾತವೃತ್ತಂ ॥ ಗಿರೀಂದ್ರಾತ್ಮಜಾತೇ ಕರೀಂದ್ರಾಸ್ಯಮಾತೇ । ಸುರೇಂ

---

ರ್ಣನಾದ, ಚಂದ್ರಾ- ಚಂದ್ರನಾದ, ನೃಪೇಂದ್ರಾ, ತಾಂ, ಪ್ರಭುಪದಯುಗವಮಂ, ಬಗೆಯೊಳ್- ಮನಸ್ಸಿನಲ್ಲಿ ಭಾವಿಸುತ್ತಂ- ಧ್ಯಾನಿಸುತ್ತ, ತತ್ಪ್ರಶಸ್ತಪ್ರಭಾವೋಕ್ತಿಗಳಂ- ಆ ಪ್ರಭುವರನ ಪರಿಶುದ್ಧವಾಗಿಯೂಮಹಿಮಾಯುಕ್ತಗಳಾಗಿಯೂ ಇರುವಮಾತುಗಳನ್ನು, ಶರಣನಿವಹದೊಳ್, ಸಂವಾದಿಸುತ್ತಂ, ಜಂಗಮಾನೀಕಮಂ-ಜಂಗಮಸಮೂಹವನ್ನು, ಕೈಮಿಗೆ, ನಿತ್ಯಾರಾಧಿಸುತ್ತಂ, ನಿತ್ಯದಲ್ಲೂ ಪೂಜಿಸುತ್ತ, ಮೆರೆದಂ.॥೯೭॥

ಇದಂ, ಪ್ರಭುಕಥನಮಂ, ಆವಂ, ಸುಭಕ್ತಿಯಿಂದೆ, ಓದುವಂ, ಮುದಂಮಿಗೆ-ಸಂತೋಷಾತಿಶಯದಿಂದ, ಕೇಳ್ವಂ, ಅವಂ, ಇಳೆಯೊಳ್, ಶುಭಸಂವಿದ್ವೈರಾಗ್ಯಮಂ—ಶುಭ- ಮಂಗಳಗಳೇನು, ಸಂವಿತ್- ಸುಜ್ಞಾನವೇನು, (ಅಥವಾ ಸದಾಚಾರವೇನು,) ವೈರಾಗ್ಯಮಂ ಅಭಿಮತಮಂ-ಸಕಲೇಷ್ಟಾರ್ಥವನ್ನು,ಪಡೆವಂ.॥೯೮॥

ಋಗ್ಯಜುರಭಿಸ್ತುತ- ಋಗ್ವೇದಯಜುರ್ವೇದಗಳಿಂದ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ,ವಿರಾಗ್ಯಧಿಕ- ವಿರಕ್ತರಲ್ಲಿ ಶ್ರೇಷ್ಠನಾದ, ಪದ್ಮಸಮದೃಗ್ಯುಗಳ- ಕಮಲಗಳಿಗೆಸದೃಶವಾದ ನೇತ್ರದ್ವಯವುಳ್ಳ, ಭಕ್ತಕೃತಭಾಗ್ಯಚಯ- ಭಕ್ತರಿಗೋಸ್ಕರಮಾಡಲ್ಪಟ್ಟ ಐಶ್ವರ್ಯಸಮೂಹವುಳ್ಳ, ನಿತ್ಯಾರೋಗ್ಯ- ಸದಾಆರೋಗ್ಯವುಳ್ಳ, ನಿರವದ್ಯಬಹುಭೋಗ್ಯ- ನಿರ್ದುಷ್ಟಗಳಾದ ಅನೇಕಭೋಗ್ಯವಸ್ತುಗಳುಳ್ಳ, ನಿಗಮಪ್ರಬಲಯುಗ್ಯ ಪುರಭಿದ್ಭಜನಯೋಗ್ಯಜನಲೋಲ— ನಿಗಮ— ವೇದಗಳೆಂಬ, ಪ್ರಬಲ- ಅತ್ಯಂತಬಲವುಳ್ಳ, ಯುಗ್ಯ- ಕುದುರೆಗಳುಳ್ಳ, ಪುರಭಿತ್- ತ್ರಿಪುರವಂಭೇದಿಸಿದ ಪರಮೇಶ್ವರನ, ಭಜನ- ಪೂಜೆಯಿಂದ, ಯೋಗ್ಯ- ಯೋಗ್ಯರಾದ, ಜನ- ಜನರಲ್ಲಿ, ಲೋಲ— ಆಸಕ್ತನಾದ, ಪ್ರಾಗ್ಯಮಿಸಮಿಕ್ಷ್ಯ- ಪ್ರಾಚೀನರಾದ ಋಷಿಗಳಿಂದ ನೋಡಲ್ಪಡುವದಕ್ಕೆ ಯೋಗ್ಯನಾದ, ದಶದಿಗ್ಯುತಯಶಸ್ಕ- ಹತ್ತುದಿಕ್ಕುಗಳಲ್ಲೂಕೂಡಿರುವ ಕೀರ್ತಿಯುಳ್ಳ, ಮನುವಾಗ್ಯಜನರಾಗ- ಮಂತ್ರವಾಕ್ಪೂಜೆಯಲ್ಲಿಪ್ರೀತಿಯುಳ್ಳ, ಕೃತಶುಗ್ಯಮಹಭಾಗಸ್ಪೃಕ್— ಕೃತ- ಉಂಟುಮಾಡಲ್ಪಟ್ಟ, ಶುಕ್- ದುಃಖವುಳ್ಳ, ಯಮ- ಯಮನನ್ನು, ಹ- ನಾಶಮಾಡಿದಪರಶಿವನ, ಭಾಗಸ್ಪೃಕ್- ಅಂಶವನ್ನುಸೋಂಕಿದ, (ಅಂದರೆ ಸರ್ವರಿಗೂ ದುಃಖಕರನಾದ ಯಮನನ್ನು ನಾಶಮಾಡಿದ ಪರಮೇಶ್ವರನ, ಅಂಶೋದ್ಭೂತನಾದ) ಯತಿವರೇಣ್ಯ- ಋಷಿಗಳಲ್ಲಿಶ್ರೇಷ್ಠನಾದ, ಜಲಮುಗ್ಯದುಕುಲೇಶಶಿತಿರುಗ್ಯುಗುರುಕಂಠ— ಜಲಮುಕ್- ಮೇಘ, ಯದುಕುಲೇಶ- ಯಾದವರಿಗೆ ಸ್ವಾಮಿಯಾದಕೃಷ್ಣ, ಇವುಗಳೋಪಾದಿಯಲ್ಲಿ, ಶಿತಿ- ಕಪ್ಪಾದ,ರುಕ್- ಕಾಂತಿಯಿಂದ, ಯುಕ್- ಕೂಡಿದ, ಉರು- ವಿಶಾಲವಾದ, ಕಂಠ- ಕೊರಲುಳ್ಳ, ಮೃಗ್ಯ- ದಿವ್ಯಜ್ಞಾನದಿಂ ಹುಡುಕಲ್ಪಡುವದಕ್ಕೆಯೋಗ್ಯನಾದ, ಬಸವೇಶ, ಜಯ. ॥೯೯॥

ಗಿರೀಂದ್ರಾತ್ಮಜಾತೇ, ಕರೀಂದ್ರಾಸ್ಯಮಾತೇ-ವಿಘ್ನೇಶ್ವರನಿಗೆತಾಯಿಯಾದ,ಸುರೇಂದ್ರಾತ್ಮರೋಚಿಃ

ದಾಶ್ಮರೋಚಃಸ್ಫುರನ್ಮಂಜುಳಶ್ರೀ ॥ ಕುರಂಗಾಂಕಮೌಲೀ ಹರಾಂಗಾರ್ಧಶಾಲೀ । ವರಾಂಭೋಜಪಾಣೀ ಜಯಶ್ರೀಮೃಡಾಣೀ ॥ ... ... ... ॥೧೦೦॥

ಗದ್ಯಂ ॥ ಇದುವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತಭಾಸುರಲಲಾಟಪಟ್ಟಸತಸಜನಮಾನಿಶೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಪ್ರಭುದೇವಾಗಮನವರ್ಣನಂ ಪಂಚಮಾಶ್ವಾಸಂಸಮಾಪ್ತಂ ॥ ... ... ... ... ... ... *

ಪಂಚಮಾಶ್ವಾಸಂಸಂಪೂರ್ಣಂ.

---

ಶ್ರೀಃ

---

ಗಿರಿಜಾವಲ್ಲಭಾಯಪರಬ್ರಹ್ಮಣೇನಮಃ.

## ಷಷ್ಠಾಶ್ವಾಸಂ.

### ಚೋರಾದಿಕಥನಂ.

ಕಂ ॥ ಶ್ರೀಮದಪರ್ಣಾನನನವ । ತಾಮರಸಾಮೋದಮದಮಧುವ್ರತ ನಭವಂ ॥ ಕಾಮಗಜಸಾಮಜಾರಿ ನ । ತಾಮರಕುಜ ನೀಗೆ ಸೌಖ್ಯಮಂ ಶಿವಲಿಂಗಂ ॥ ... ॥೧॥

---

ಸ್ಫುರನ್ಮಂಜುಳಶ್ರೀ- ಇಂದ್ರನೀಲರತ್ನದಕಾಂತಿಯಂತೆ ಪ್ರಕಾಶಿಸುವ ಮನೋಹರವಾದಕಾಂತಿಯುಳ್ಳ, ಕುರಂಗಾಂಕಮೌಳೀ— * ಕುರಂಗಾಂಕ-ಚಂದ್ರನೇ, ಮೌಳೀ- ಕಿರೀಟದಲ್ಲುಳ್ಳ, ಹರಾಂಗಾರ್ಧಶಾಲೀ- ಶಿವನ ಅರ್ಧಶರೀರದಿಂದೊಪ್ಪುತ್ತಲಿರುವ, ವರಾಂಭೋಜಪಾಣೀ- ಶ್ರೇಷ್ಠವಾದಕಮಲದಂತಿರುವ ಹಸ್ತವುಳ್ಳ, ಶ್ರೀಮೃಡಾಣೀ, ಜಯ. ... ... ... ... ॥೧೦೦॥

ಐದನೆಯ ಆಶ್ವಾಸವು ಸಂಪೂರ್ಣವು.

---

ಆರನೆಯಆಶ್ವಾಸಪ್ರಾರಂಭಃ.

ಶ್ರೀಮದ......ವ್ರತಂ— ಶ್ರೀಮತ್, ಅಪರ್ಣಾ- ಪಾರ್ವತಿಯ, ಆನನ- ಮುಖವೆಂಬ, ನವ- ನೂತನವಾದ, ತಾಮರಸ- ಕಮಲದ, ಆಮೋದ- ಪರಿಮಳಕ್ಕೆ, ಮದಮಧುವ್ರತಂ- ಮದಿಸಿದ ಭ್ರಮರನಾದ, ಕಾಮಗಜಸಾಮಜಾರಿ— ಕಾಮ- ಮನ್ಮಥನೆಂಬ,ಗಜ- ಆನೆಗೆ, * ಸಾಮಜಾರಿ- ಸಿಹ್ಮನಾದ, ನತಾಮರಕುಜಂ- ನಮಸ್ಕರಿಸಿದವರಿಗೆ ಕಲ್ಪವೃಕ್ಷನಾದ, ಅಭವಂ- ಭವರಹಿತನಾದ, ಶಿವಲಿಂಗಂ, ಸೌಖ್ಯಮಂ, ಈಗೆ.

---

* (ಅವ)ಕುರಂಗ- ಜಿಂಕೆಯೇ, ಅಂಕ- ಚಿಹ್ನವಾಗುಳ್ಳವನು. ... ... ॥೧೦೦॥

* (ಅವ) ಸಾಮಜ- ಆನೆಗಳಿಗೆ, ಅರಿ- ಶತ್ರುವು. ... ... ... ॥೧॥

ಕಂ ॥ ಪ್ರಭುವಿನ ಕೃಪೆಯಿಂದನುಪಮ । ವಿಭೂತಿಯಂ ಪಡೆದು ನಾಡೆ ಲಿಂಗತ್ರಯು
ಮಂ ॥ ವಿಭವದಿ ನರ್ಚಿಸುತಂ ಘನ । ಶುಭಚರಿತಂ ಬಸವನೊಪ್ಪುತಿರ್ಪನ್ನೆವರಂ॥ ॥೨॥
ಕಂ ॥ ಹರಭಕ್ತರ ವೇಷದೆ ಬಸ । ವರಸನಮನೆವೊಕ್ಕು ಧನಮನೀಳ್ದಪೆವೆನುತಂ ॥
ಪುರದ ಪೊಸಚೋರರೋರಂ । ತಿರೆ ತಳೆದರ್ಮಿಸುಪ ಭಕ್ತಲಾಂಛನದಿರನಂ ॥ ... ॥೩॥
ಚಂ ॥ ತನುಮಲಿನಂ ವಿಭೂತಿಯವಿಲೇಪನದಿಂಮರೆಯಾಗೆ ಕೈತವಂ । ವಿನುತಶಿವಾ
ಕ್ಷಮಾಲೆಯಿನಡಂಗಿರೆ ವಸ್ತ್ರದೆಕಟ್ಟಲಿಂಗಮೆಂ ॥ ದೆನೆ ಕರಿದಾದನುಣ್ಬದಣೆಗಾಯ ನ
ಮರ್ಚುತೆ ಕಂಠದಲ್ಲಿ ಮೆ ।ಲ್ಲನೆ ಬಸವಾಲಯಾಂತರಮ ನಂತವರೊಲ್ದೊಳಪೊಕ್ಕರದ್ಭುತ೦॥
ವ ॥ ಆಗಳವರ್ ಕೃತಕವೇಷದಿನೊಳಪೊಕ್ಕು ಬಸವನಂ ಕಂಡವನತರಾಗೆ ಬಸವನಾ
ಕಪಟವಟುಗಳಂ ನೋಡಿ ತಸ್ಕರರೆಂದರಿದೆಂತಾದೊಡ ಮೆಮ್ಮಂತಪುರಮಂ ಭವಿಗಳ್ಪ್ರವೇ
ಶಿಸಲಾಗದಿವರ್ಪುರಾಕೃತಮಹಾತಪಃಕ್ಷಪಿತಕಲ್ಮಷರಾಗಲ್ವೇಳ್ಕು ಮಲ್ಲದೊಡೆಂತಿಲ್ಲಿಗೇಳ್ತ
ರ್ಪರೆಂದು ನಿರ್ಧರಿಸಿ ಕುಳ್ಳಿರಿಸಿ ಮೊಗವಂ ನಿರೀಕ್ಷಿಸಿ ॥ * * * * * * *
ಕಂ ॥ ಇದೆಜಲಗಂಧೋದ್ಗಮತತಿ । ಬೆದರದೆ ಶಿವಲಿಂಗಪೂಜೆಯಂ ಮಾಡಿ ಮೆನು ॥

---

ಘನಶುಭಚರಿತಂ- ಶ್ರೇಷ್ಠವಾಗಿಯೂ ಮಂಗಳಕರವಾಗಿಯೂ ಇರುವಚರಿತ್ರವುಳ್ಳ, ಬಸವಂ, ಪ್ರಭು ವಿನ, ಕೃಪೆಯಿಂದೆ, ಅನುಪಮವಿಭೂತಿಯಂ- ಅಸದೃಶವಾದ ಐಶ್ವರ್ಯವನ್ನು, ಪಡೆದು, ನಾಡೆ- ಚೆನ್ನಾಗಿ, ಲಿಂಗತ್ರಯಮಂ- ಇಷ್ಟಪ್ರಾಣಭಾವಲಿಂಗಗಳನ್ನು, ವಿಭವದಿಂ, ಅರ್ಚಿಸುತಂ, ಒಪ್ಪುತೆ, ಇರ್ಪನ್ನೆವರಂ- ಇರುವಷ್ಟರಲ್ಲಿ. ... ... ... ॥೨॥

## ಚೋರರ ಕಥೆ.

ಪುರದ- ಕಲ್ಯಾಣಪಟ್ಟಣದಲ್ಲಿದ್ದ ಪೊಸಚೋರರ್- ಹೊಸಕಳ್ಳರು, ಹರಭಕ್ತರ, ವೇಷದೆ, ಬಸವರಸನ, ಮನೆವೊಕ್ಕು, ಧನಮಂ, ಈಳ್ದಪೆವು- ಕಸುಕೊಳ್ಳುವೆವು, ಎನುತಂ, ಓರಂತಿರೆ- ಚೆನ್ನಾಗಿ, ವಿಸುಪ, ಭಕ್ತಲಾಂಛನದ-ಶಿವಭಕ್ತಚಿಹ್ನೆಯ, ಇರವಂ- ರೀತಿಯನ್ನು,ತಳೆದರ್. ... ... ... ॥೩॥

ವಿಭೂತಿಯ ವಿಲೇಪನದಿಂ, ತನುಮಲಿನಂ-ದೇಹದಕೊಳೆಯು,ಮರೆಯಾಗೆ, ವಿನುತಶಿವಾಕ್ಷಮಾಲೆಯಿಂ, ಕೈತವಂ- ಕಪಟೋದ್ಯೋಗವು, ಅಡಂಗಿರೆ, ಲಿಂಗಮೆಂದೆನೆ, ಕರಿದಾದ, ನುಣ್ಬದಣೆಗಾಯಂ, ವಸ್ತ್ರದೆ, ಕಟ್ಟಿ, ಕಂಠದಲ್ಲಿ, ಅಮರ್ಚುತೆ- ಸೇರಿಸುತ್ತ, ಮೆಲ್ಲನೆ, ಅಂತು, ಅವರ್, ಬಸವಾಲಯಾಂತರಮಂ- ಬಸವೇಶ್ವರನಮನೆಯೊಳಗಡೆಗೆ, ಒಲ್ದು, ಒಳಪೊಕ್ಕರ್. ... ... ... ॥೪॥

ಆಗಳ್, ಅವರ್- ಆಕಳ್ಳರು, ಕೃತಕವೇಷದಿಂ- ಕಪಟವೇಷದಿಂದ, ಒಳಪೊಕ್ಕು,ಬಸವನಂ, ಕಂಡು, ಅವನತರ್- ನಮಸ್ಕರಿಸಿದವರು, ಆಗೆ, ಬಸವಂ, ಆಕಪಟವಟುಗಳಂ, ನೋಡಿ, ತಸ್ಕರರ್- ಕಳ್ಳರು, ಎಂದು, ಅರಿದು, ಎಂತಾದೊಡಂ- ಹ್ಯಾಗಾದಾಗ್ಯೂ, ಭವಿಗಳ್ ಎಮ್ಮ, ಅಂತಪುರಮಂ, ಪ್ರವೇಶಿಸಲ್, ಆಗದು, ಇವರ್, ಪುರಾಕೃತಮಹಾತಪಃಕ್ಷಪಿತಕಲ್ಮಷರ್- ಪೂರ್ವಜನ್ಮದಲ್ಲಿಮಾಡಲ್ಪಟ್ಟ ಅಧಿಕವಾದ ತಪಸ್ಸಿನಿಂದನಾಶಗೊಳಿಸಲ್ಪಟ್ಟ ಪಾಪವುಳ್ಳವರು, ಆಗಲ್ವೇಳ್ಕುಂ- ಆಗಿರಬಹುದು, ಅಲ್ಲದೊಡೆ, ಇಲ್ಲಿಗೆ, ಎಂತುಏಳ್ತರ್ಪರ್- ಹ್ಯಾಗೆಬರುವರು? ಎಂದು, ನಿರ್ಧರಿಸಿ, ಕುಳ್ಳಿರಿಸಿ, ಮೊಗವಂ, ನಿರೀಕ್ಷಿಸಿ. * * * * * *

ಉದಧಿಗಭೀರಂ– ಸಮುದ್ರದಂತೆ ಗಾಂಭೀರ್ಯವುಳ್ಳ, ಬಸವಂ, ಜಲಗಂಧೋದ್ಗಮತತಿ– ನೀರು ಗಂಧ ಹೂವುಗಳ ಸಮೂಹವು, ಇದೆ; ಬೆದರದೆ, ಶಿವಲಿಂಗಪೂಜೆಯಂ, ಮಾಡಿಂ- ಮಾಡಿರಿ, ಎನುತ್ತೆ, ಪದಪಿಂತಂ,

ತ್ತುದಧಿಗಭೀರಂ । ಬಸವಂ ಪದಪಿಂಡಂ ನುಡಿಯೆ ಕಳ್ವರಳ್ಕಿದರಾಗಳ್ ॥ ... ॥೫॥

ವ॥ ಅಂತಳ್ಕಿ ಬಳ್ಕಿ ಕೈನಡುಗೆ ಮೈಬೆಮರಿ ಬೆಳರುತ್ತು ಬೆಬ್ಬಳಿವೋಗಿ ॥ * *

ಉತ್ಸಾಹವೃತ್ತಂ ॥ ಪೊಲ್ಲಮಪ್ಪ ಬಂದಿಗೋತು ಬಂದೆವಿಲ್ಲಿಗಕ್ಕಟಿಲ್ಲಿಲ್ಲ ಲಿಂಗಮೆಮ್ಮಜೀವಕೆಂದೆನೂರು ತೀವಿತೆಂ ॥ ದಲ್ಲಿಗಂಟನುರ್ಚ್ಚಿ ಬಿರ್ಚ್ಚಿ ನೋಡೆತತ್ಫಲಂಗಳೆಂ।ಕೆಲ್ಲ ಲಿಂಗರೂಪನಾಳ್ದುವಾ ವೃಷೇಂದ್ರನಿಚ್ಛೆಯಿಂ ॥ ... ... ... ॥೬॥

ಕಂ ॥ ಭಯಮಳಿಯೆ ಸಿತಗರತಿವಿ । ಸ್ಮಯಮಾಂತಾಲಿಂಗಮಂ ಸಮಂತರ್ಚ್ಚಿಸಿ ದು ॥ ರ್ನ್ನಯಮನುಳಿದೆನೆದರೀ ಚೆ । ನ್ನಯಬಸವನಿನಿದು ಶಿವೈಕ್ಯತತಿಗಚ್ಚರಿಯೆ ॥ ॥೭॥

ಕಂ ॥ ಮುನ್ನೊರ್ವ್ವನಭವಭಕ್ತಂ । ತನ್ನಪೆಸರ್ಮಲ್ಲಿಸೆಟ್ಟಿಯೆನೆ ಪೆಸರ್ವ್ವಡೆದಾ ತಂನ ಗಜೇಶನನರ್ಚ್ಚಿಸು । ತುಂನಿಯಮದಿನುಣ್ಬನಲ್ಲದಂದುಣಲೊಲ್ಲಂ ॥ ... ॥೮॥

ವ॥ ಆವಣಿಗ್ವರನಂತಿರುತ್ತಮಿರ್ದ್ದೊಂದುದಿವಸಂ ನಿಜಬಂಧುಜನಸಮೇತಂ ಪರದುಗೆಯ್ಯಲೆಂದು ಪರದೇಶಕ್ಕೆಗಡಣದೆಳ್ತುಗಳೊಳ್ನಾನಾಧಾನ್ಯಂಗಳಂ ಪೇರಿಕೊಂಡುನಡೆತರ್ಪ್ಪಾಗಳೆಡೆವಟ್ಟೆಯೊಳೆಲ್ಲಿಯುಂ ಲಿಂಗದರ್ಶನಂಸಮನಿಸದಿರಲೊಡನನೇಕೋಪವಾಸಂ ಪತ್ತಿ ಬಳ

ನುಡಿಯೆ, ಕಳ್ವರ್, ಆಗಳ್, ಅಳ್ಕಿದರ್- ಭಯಪಟ್ಟರು. ... ... ... ॥೫॥

ಅಂತು, ಅಳ್ಕಿ- ಬೆದರಿ, ಬಳ್ಕಿ- ಸಂಕಟಗೊಂಡು, ಕೈ, ನಡುಗೆ, ಮೈ, ಬೆಮರೆ, ಬೆಳರುತ್ತು- ಭಯಪಟ್ಟು, ಬೆಬ್ಬಳಿವೋಗಿ- ಸ್ತಂಭೀಭೂತರಾಗಿ. * * * * * * * * * * * *

ಪೊಲ್ಲಂಅಪ್ಪ, ನೀಚವಾದ, ಬಂದಿಗೆ, ಕಳ್ಳತನಕ್ಕೆ, ಓತು- ಅಪೇಕ್ಷಿಸಿ, ಇಲ್ಲಿಗೆ, ಬಂದೆವು, ಅಕ್ಕಟ! ಇಲ್ಲಿ, ಲಿಂಗಂ, ಇಲ್ಲ, ಎಮ್ಮ, ಜೀವಕೆ- ಪ್ರಾಣಕ್ಕೆ, ಇಾದೆ, ನೂರು- ಶತವರ್ಷವು, ತೀವಿತು- ತುಂಬಿತು, (ಅಂದರೆ ಪ್ರಾಣನಿರ್ಗಮನವೇಳೆಯಾಯಿತು) ಎಂದು, ಅಲ್ಲಿ, ಗಂಟಂ, ಉರ್ಚ್ಚಿ, ಬಿರ್ಚ್ಚಿ, ನೋಡೆ, ತತ್ಫಲಂಗಳ್- ಆ ಬದನೇಕಾಯಿಗಳು, ಆ ವೃಷೇಂದ್ರನ, ಇಚ್ಛೆಯಿಂ, ಅಂತೆ, ಎಲ್ಲ,ಲಿಂಗರೂಪಂ, ಆಳ್ದುವು. ... ॥೬॥

ಈ ಚೆನ್ನಯಬಸವನಿಂ, ಸಿತಗರ್- ನೀಚರು, ಭಯಂ, ಅಳಿಯೆ- ನಾಶವಾಗಲು, ಅತಿವಿಸ್ಮಯಮಾಂತು, ಲಿಂಗಮಂ,ಸಮಂತು- ಚೆನ್ನಾಗಿ, ಅರ್ಚ್ಚಿಸಿ, ದುರ್ನ್ನಯಮಂ- ದುರ್ನ್ನೀತಿಯನ್ನು. ಉಳಿದು- ಬಿಟ್ಟು. ಎನೆದರ್, ಇದು- ಈ ಕಾರ್ಯವಂನಾಡುವಿಕೆಯು, ಶಿವೈಕ್ಯತತಿಗೆ- ಶಿವನೊಡನೆ ಏಕತ್ವವಂ ಹೊಂದಿರುವವರಿಗೆ, ಅಚ್ಚರಿಯೆ? ... ... ... ... ॥೭॥

## ಮಲ್ಲಿಸೆಟ್ಟಿಯ ಕಥೆ.

ಮುನ್ನ- ಪೂರ್ವದಲ್ಲಿ, ಓರ್ವ್ವಂ, ಅಭವಭಕ್ತಂ- ಶಿವನಲ್ಲಿ ಭಕ್ತಿಯುಳ್ಳವನು, ತನ್ನ, ಪೆಸರ್, ಮಲ್ಲಿಸೆಟ್ಟಿ, ಎನೆ, ಪೆಸರ್ವ್ವಡೆದು, ಆತಂ, ನಿಯಮದಿಂ, ನಗಜೇಶನಂ- ಪರಶಿವನನ್ನು, ಅರ್ಚ್ಚಿಸುತಂ, ಉಣ್ಬಂ- ಊಟವಂ ಮಾಡುವನು, ಅಲ್ಲದುದು- ಆ ಶಿವನಪೂಜೆಯಂ ಮಾಡದದಿವಸದಲ್ಲಿ, ಉಣಲೊಲ್ಲಂ. ... ॥೮॥

ಆವಣಿಗ್ವರಂ- ಆ ಶ್ರೇಷ್ಠನಾದ ವರ್ತ್ತಕನು, ಅಂತು, ಇರುತ್ತಂ, ಇರ್ಪ್ಪ, ಒಂದುದಿವಸಂ, ನಿಜಬಂಧುಜನಸಮೇತಂ, ಪರದುಗೆಯ್ಯಲೆಂದು- ವ್ಯಾಪಾರವಂಮಾಡಬೇಕೆಂದು, ಪರದೇಶಕ್ಕೆ, ಗಡಣದ- ಗುಂಪಾದ, ಎಳ್ತುಗಳೊಳ್, ನಾನಾಧಾನ್ಯಗಳಂ, ಪೇರಿಕೊಂಡು, ನಡೆತರ್ಪಾಗಳ್- ಬರುತ್ತಿರುವಕಾಲದಲ್ಲಿ, ಎಡೆವಟ್ಟೆಯೊಳ್- ಮಧ್ಯಮಾರ್ಗದಲ್ಲಿ, ಎಲ್ಲಿಯುಂ, ಲಿಂಗದರ್ಶನಂ, ಸಮನಿಸದೆ- ಉಂಟಾಗದೆ, ಇರಲ್, ಒಡನೆ, ಅನೇಕೋಪವಾಸಂ, ಪತ್ತಿ, ಬಳಲ್ದು- ಆಯಾಸಪಟ್ಟು, ಬಂದು, ಒಂದಾರಾಮಸ್ಥಾನದೊಳ್- ಒಂದುಪವನ

ಲ್ದು ಬಂದೊಂದಾರಾಮ ಸ್ಥಾನದೊಳ್ಬೀಡಿಕೆಯಂ ಬಿಟ್ಟು ಸೆಟ್ಟಿ ಲಿಂಗಾಲಯಮನಿಲ್ಲಿನೋಡಿ
ಮೆಂಬುದು ಮೊಡನಾಡಿಗಳರಸಿ ಕಾಣದೆ ॥ * * * * * * * * * *

ಕಂ ॥ ಕಡುಪಸಿವಡಸಿದು ದೀತಂ । ಗೆಡರ್ದುದು ಕಣ್ಬೇನೆ ಮೇಲೆವೃದ್ಧಂ ॥ ಬಿಸಿಲು
ರ್ಗ್ಗಡಮಿವನಿಂದುಣದಿರ್ದೊಡೆ । ಮಡಿಗುಂ ನಿಜಮೆಂದವರ್ಕರಂ ಚಿಂತಿಸಿದರ್ ॥ ... ॥೯॥

ವ ॥ ಆಗಳೊಂದು ಪುಲ್ದೇಗುಲಮನವಸರಸವಸದಿಂ ರಚಿಯಿಸಿ ಬಳ್ಳಮನೊಂದಂ ತಂದ
ಪಾಜ್ಮುಖಮಾಗಿ ನಟ್ಟು ಕಾಡಲರ್ಗೊಂಚಲ್ಗಳಿಂ ಪೂಜೆಗೆಯ್ದು ಲಿಂಗವೀಯೆಡೆಯೊಳ್ನಿನ್ನ
ಪುಣ್ಯದಿನಿರ್ದುದೆಂದು ಸೆಟ್ಟಿಯಂ ಕೈಗೊಟ್ಟು ಕರೆದು ತಂದೊಳಗಣ್ಗೆ ಪುಗಿಸಲೊಡನಾ
ಪ್ರಸ್ಥಮಂ ಲಿಂಗಮೆಂದು ಭಾವಿಸಿ ॥ * * * * * * * * * * *

ವಂಶಸ್ಥವೃತ್ತಂ ॥ ನಮಃಶಿವಾಯಾದ್ರಿಸುತಾಪ್ರಿಯಾಯ ತೇ । ನಮೋಸ್ತು ಶಾಂ
ತಾಯ ಭವಾಯತೇಎನು ॥ ತ್ತಮಂದಸದ್ಭಕ್ತಿಪರಂ ವಣಿಗ್ವರಂ । ಪ್ರಮೋದದಿಂ ಕೀರ್ತಿ
ಸಿ ಮೆಯ್ಯನಿಕ್ಕಿದಂ ॥ ... ... ... ... ... ॥೧೦॥

ಕಂ ॥ ಆವಣಿಜನ ಸದ್ಭಕ್ತಿಯ । ಭಾವದಿ ನದು ಲಿಂಗಮಾಯ್ತು ಬಳ್ಳಂ ಮುದದಿಂ ॥
ಸೇವಿಸುತಾತಂ ಮರಳ್ದುವ । ನಾವಾಸದೆ ಭುಂಜಿಸಿರ್ದ ಸಿರ್ಪನ್ನೆವರಂ ॥ ... ॥೧೧॥

ವ ॥ ಆಗಳಾತನಬಂಧುಗಳ್ಬಳಸಿ ನೆರೆದಿರ್ಪ್ಪುದುಮವಂದಿರೊಳ್ಮೈದುನನಾದೋರ್ವ
ನಾಸೆಟ್ಟಿಯಂ ನೋಡಿ॥ * * * * * * * *

---

ದಲ್ಲಿ, ಬೀಡಿಕೆಯಂ, ಬಿಟ್ಟು, (ಇಳಿದು) ಸೆಟ್ಟಿ, ಇಲ್ಲಿ, ಲಿಂಗಾಲಯಮಂ, ನೋಡಿಂ- ನೋಡಿರಿ, ಎಂಬುದುಂ,
ಒಡನಾಡಿಗಳ್-ಸಂಗಡಬಂದಿದ್ದವರು, ಅರಸಿ- ಹುಡುಕಿ, ಕಾಣದೆ. * * * * * * * *

ಈತಂಗೆ- ಈ ಮಲ್ಲಿಸೆಟ್ಟಿಗೆ, ಕಡುಪಸಿವು- ಅಧಿಕವಾದ ಹೊಟ್ಟೆಯಹಸಿವು, ಅಡಸಿಸುದು, ಕಣ್ಬೇನೆ-
ನೇತ್ರರೋಗವು, ಅಡರ್ದುದು, ಮೇಲೆ- ಇದರಮೇಲೆ, ವೃದ್ಧಂ, ಬಿಸಿಲ, ಉರ್ಗ್ಗಡಂ- ಆಧಿಕ್ಯವು, ಇವಂ, ಇಂ
ದು, ಉಣದಿರ್ದೊಡೆ, ಮಡಿಗುಂ-ಸಾಯುವನು. ನಿಜಂ, ಎಂದು, ಅವರ್, ಕರಂ-ಅತ್ಯಂತವಾಗಿ, ಚಿಂತಿಸಿದರ್.

ಆಗಳ್, ಅವರ್, ಒಂದುಪುಲ್ದೇಗುಲಮಂ- ಹುಲ್ಲಿನದೇವಸ್ಥಾನವನ್ನು, ಅಸವಸದಿಂ- ಅವಸರದಿಂದ,
ರಚಿಯಿಸಿ, ಒಂದುಬಳ್ಳಮಂ- ಧಾನ್ಯವನ್ನಳೆಯುವ ಬಳ್ಳವನ್ನು,:ತಂದು, ಅಪಾಜ್ಮುಖಮಾಗಿ- ತಲೆಕೆಳಗಾಗಿ, ನ
ಟ್ಟು, ಕಾಡಲರ್ಗೊಂಚಲ್ಗಳಿಂ- ಕಾಡುಹೂವುಗಳಗೊಂಚಲಿನಿಂದ, ಪೂಜೆಗೆಯ್ದು, ಲಿಂಗಂ, ಈಯೆಡೆಯೊಳ್,
ನಿನ್ನ, ಪುಣ್ಯದಿಂ, ಇರ್ದುದು, ಎಂದು, ಸೆಟ್ಟಿಯಂ, ಕೈಗೊಟ್ಟು, ಕರೆದುತಂದು, ಒಳಗಣ್ಗೆ-ದೇವಸ್ಥಾನದೊ
ಳಗಡೆಗೆ, ಪುಗಿಸಲ್, ಒಡನೆ, ಆಪ್ರಸ್ಥಮಂ- ಆಬಳ್ಳನನ್ನು, ಲಿಂಗಂ, ಎಂದು, ಭಾವಿಸಿ. * * * *

ಅಮಂದಸದ್ಭಕ್ತಿಪರಂ- ಅಧಿಕವಾದ ಸುಭಕ್ತಿಯಿಂಶ್ರೇಷ್ಠನಾದ, ವಣಿಗ್ವರಂ,ಅದ್ರಿಸುತಾಪ್ರಿಯಾ
ಯ- ಪಾರ್ವತೀಪತಿಯಾದ,ಶಿವಾಯ- ಮಂಗಳರೂಪನಾದ, ತೇ- ನಿನಗೋಸ್ಕರ, ನಮಃ,ಶಾಂತಾಯ, ಭವಾ
ಯ,ತೇ, ನಮಃ, ಅಸ್ತು- ಆಗಲಿ, ಎನುತ್ತೆ, ಪ್ರಮೋದದಿಂ-ಸಂತೋಷದಿಂದ,ಕೀರ್ತಿಸಿ, ಮೆಯ್ಯಂ, ಇಕ್ಕಿ
ದಂ-ನಮಸ್ಕರಿಸಿದನು. ... ... ... ... ॥೧೦॥

ಆವಣಿಜನ, ಸದ್ಭಕ್ತಿಯ, ಭಾವದಿಂ-ಭಾವನೆಯಿಂದ, ಅದುಬಳ್ಳಂ, ಲಿಂಗಂ, ಆಯ್ತು, ಅಂತು, ಮುದ
ದಿಂ,ಸೇವಿಸುತೆ, ಮರಳ್ದು, ವನಾವಾಸದೆ-ವನಸ್ಥಲದಲ್ಲಿ,ಭುಂಜಿಸಿ, ಇರ್ದಂ, ಇರ್ಪ್ಪನ್ನೆವರಂ-ಇರುವಷ್ಟರಲ್ಲಿ.

ಆಗಳ್, ಆತನ, ಬಂಧುಗಳ್, ಬಳಸಿ, ನೆರೆದು- ಕೂಡಿ, ಇರ್ಪ್ಪುದುಂ, ಅವಂದಿರೊಳ್- ಅವರಲ್ಲಿ, ಮೈ
ದುನನಾದ, ಓರ್ವಂ, ಆಸೆಟ್ಟಿಯಂನೋಡಿ. * * * * * * * * * * * *

ಕಂ॥ ಭಾವನನೇಮಂ ಲೇಸಾ । ಯ್ತೋ ವಿಧದಿಂ ನಟ್ಟ ಬಳ್ಳವುಂ ಲಿಂಗವೆನು ॥ ತ್ತೋ ವ್ವೋವ್ವೊ ಸೇವಿಸುತೆ ಬಂ । ದಾವಾಸದೊಳುಂಡನೆಂದು ಮಿಗೆನಗುತಾಗಳ್ ॥ ... ॥೧೨॥

ಕಂ॥ ಅಳಿಯಲ್ವೇಳ್ಕುಂ ಧಾನ್ಯಮ । ನಿಳೆಯೊಳ್ನಟ್ಟರ್ದ್ದ ಬಳ್ಳಮಂ ತನ್ನಿವೆನು॥ ತ್ತುಳಿದರನೀಕ್ಷಿಸುತೆನೆ ಬ । ಲ್ಮಳಿಸೇರಿದುದಲ್ಲಿ ಮಲ್ಲಿಸೆಟ್ಟಿಯ ಮನದೊಳ್ ॥ ॥೧೩॥

ಕಂ ॥ ಎಲೆಮೂಢ ಲಿಂಗಮಂ ನೀಂ । ಪೊಲೆವಾತಿಂ ಬಳ್ಳವೆಂಬುದಕ್ಕುಮೆ ಸೊರ್ಕ್ಕಿಂ। ದುಲಿಯದಿರೆಂದವನೊಡವರೆ । ಛಲದಿಂ ಬಂದಭವನೆಂಬುದಂಕಾಣಿಸಿದಂ ॥ ... ॥೧೪॥

ವ॥ ಆಗಳಾದೇವರಂ ಬಳ್ಳಂ ಬಳ್ಳದಾಕೃತಿಯಲಿಂಗಮಾದುದಕ್ಕೆ ವಿಸ್ಮಯಂಬಟ್ಟೀಭಾವಂ ಮಹಾನುಭಾವನೆಂದು।ಪೊಗಳ್ದೆರಗೆ ತದ್ಬಂಧುಜನಮುಂ ಮಣಿದಾಮಲ್ಲಿಸೆಟ್ಟಿಯಂ ಗುರುಭಾವದಿಂ ಭಜಿಸುತ್ತಮಿರ್ದುದಾಪ್ರಸ್ಥಲಿಂಗಮೀಗಳುಂ ಬಳ್ಳೇಶ್ವರಾಭಿಧಾನದಿಂ ದಿರ್ದ್ದಪ್ಪುದಂತುಮಲ್ಲದೆಯುಂ * * * * * * * * *

ಮತ್ತೀ ॥ ಧರಣೀಭಾಗದೆ ಕಾಟಕೋಟನೆನಿಪ್ಪೊರ್ವ್ವಂ ಗೊಲ್ಲನೇಳ್ತಂದು ಸಾ । ದರ ಮೊಂದಾಡಿನ ಪಿಳ್ಕೆಯಂ ಮಿಸುಪಲಿಂಗಂ ತಾನಿದಿಂತೆಂದು ಸ್ಸೈ ॥ ತಿರಿಸುತ್ತಂ ದೃಢಭಾವದಿಂ ಕರೆದುಪಾಲಂ ಮೇಲೆ ಕುಂಭಂಗಳಿಂ । ಸುರಿವುತ್ತಂ ನಡೆ ನೋಡುತಂ ಕುಣಿವುತಂ

---

ನಟ್ಟ, ಬಳ್ಳಮಂ, ಲಿಂಗಂ, ಎನುತ್ತೆ, ಸೇವಿಸುತೆ, ಬಂದು, ಆವಾಸದೊಳ್,ವಾಸಸ್ಥಲದಲ್ಲಿ, ಉಂಡಂ, ಓವೋವೋ! ಈವಿಧದಿಂ- ಈಪ್ರಕಾರವಾಗಿ ಮಾಡಿದುದರಿಂದ, ಭಾವನ, ನೇಮಂ- ವ್ರತವು, ಲೇಸಾಯ್ತು- ಒಳ್ಳೆಯದಾಯಿತು, ಎಂದು, ನಗುತೆ, ಆಗಳ್. ... ... ... ... ॥೧೨॥

ಧಾನ್ಯಮಂ, ಅಳೆಯಲ್ವೇಳ್ಕುಂ- ಅಳೆಯಬೇಕು, ಇಳೆಯೊಳ್-ಭೂಮಿಯಲ್ಲಿ, ನಟ್ಟರ್ದ್ದ, ಬಳ್ಳಮಂ, ತನ್ನಿಂ, ಎನುತ್ತೆ, ಉಳಿದರಂ- ಮಿಕ್ಕವರನ್ನು, ಈಕ್ಷಿಸುತೆ, ಎನೆ- ಹೀಗೆನ್ನಲು, ಅಲ್ಲಿ, ಮಲ್ಲಿಸೆಟ್ಟಿಯ, ಮನದೊಳ್, ಬಲ್ಮಳಿಸು- ಅಧಿಕವಾದ ಕೋಪವು, ಏರಿದುದು- ಹತ್ತಿತು. ... ... ॥೧೩॥

ಎಲೆಮೂಢ, ನೀಂ, ಲಿಂಗಮಂ, ಪೊಲೆವಾತಿಂ- ನೀಚವಚನದಿಂದ, ಬಳ್ಳಂ, ಎಂಬುದು, ಅಕ್ಕುಮೆ? ಸೊರ್ಕ್ಕಿಂದೆ- ಗರ್ವದಿಂದ, ಉಲಿಯದಿರ್- ಕೂಗಬೇಡ, ಎಂದು, ಅವಂ, ಒಡವರೆ- ಕೂಡಿಬರಲು, ಛಲದಿಂ, ಬಂದು, ಅಭವಂ, ಎಂಬುದಂ, ಕಾಣಿಸಿದು. ... ... ... ॥೧೪॥

ಆಗಳ್, ಬಳ್ಳಂ, ಬಳ್ಳದಾಕೃತಿಯ, ಲಿಂಗಂ, ಆದುದಕ್ಕೆ, ಆದೇವರಂ-ಆಮೈದುನನು,ವಿಸ್ಮಯಂಬಟ್ಟು, ಈಭಾವಂ- ಈನನ್ನ ಭಾವನು, ಮಹಾನುಭಾವಂ, ಎಂದು, ಪೊಗಳ್ದು, ಎರಗೆ- ನಮಸ್ಕರಿಸಲು,ತದ್ಬಂಧುಜನಮುಂ,- ಅವನ ನಂಟರಸಮೂಹವೂಕೂಡ, ಮಣಿದು- ನಮಸ್ಕರಿಸಿ,ಆಮಲ್ಲಿಸೆಟ್ಟಿಯಂ, ಗುರುಭಾವದಿಂ, ಭಜಿಸುತ್ತಂ- ಸೇವಿಸುತ್ತ, ಇರ್ದ್ದುದು, ಆಪ್ರಸ್ಥಲಿಂಗಂ, ಈಗಲುಂ, ಬಳ್ಳೇಶ್ವರಾಭಿಧಾನದಿಂ- ಬಳ್ಳೇಶ್ವರನೆಂಬ ಹೆಸರಿನಿಂದ, ಇರ್ದ್ದಪುದು, ಅಂತುಮಲ್ಲದೆಯುಂ. * * * * * * * * * *

## ಕಾಟಕೋಟನಕಥೆ.

ಧರಣೀಭಾಗದೆ- ಭೂತಳದಲ್ಲಿ, ಕಾಟಕೋಟಂ, ಎನಿಪ, ಒರ್ವ್ವಂಗೊಲ್ಲಂ, ಏಳ್ತಂದು, ಸಾದರಂ- ಪ್ರೀತಿಪೂರ್ವಕವಾಗಿ, ಒಂದುಆಡಿನ, ಪಿಳ್ಕೆಯಂ- ಹಿಕ್ಕೆಯನ್ನು, ತಾಂ, ಇದು, ಮಿಸುಪ-ಪ್ರಕಾಶಿಸುವ, ಲಿಂಗಂ, ಇಂತೆಂದು, ಸೈತಿರಿಸುತ್ತಂ- ಮೆಲ್ಲಗಿಡುತ್ತ, ದೃಢಭಾವದಿಂ- ನಿಶ್ಚಂಚಲವಾದ ಮನಸ್ಸಿನಿಂದ,ಪಾಲಂ- ಹಾಲನ್ನು, ಕರೆದು, ಕುಂಭಂಗಳಿಂ, ಮೇಲೆ- ಆ ಹಿಕ್ಕೆಯ ಮೇಲೆ, ಸುರಿವುತ್ತಂ,ಕೊರ್ರು-ಪ್ರೀತಿಸಿ,ನಡೆ-ಚೆನ್ನಾಗಿ,

ಕೂರೊತ್ತುಪ್ಪುತಿರ್ಪನ್ನೆಗಂ ॥ ... .. ... .. ॥೧೫॥

ಮ॥ ಸ್ರ॥ ಪಿತನಾಗಳ್ಬಂದು ಪಾಲಂ ಬರಿದೆ ಸುರಿದು ಪಾಳ್ಮಾಡುತಿರ್ದನೀಡು । ರ್ಮ
ತಿಪುತ್ರಂ ಪಿಳ್ಕೆಗೆಂದಾರ್ದೊದೆದು ಜರಿಯೆ ತಲ್ಲಿಂಗಮಂ ಕಂಡು ಕೋಪಾ ॥ ವೃತಚಿತ್ತಂ
ಬೇಗದಿಂ ಕೈಗೊಡಲಿಯನಧಟಂದೆತ್ತಿ ಪೊಯ್ದಿಕ್ಕಿದಂ ತ । ತ್ಪಿತನಂ ಧೊಪ್ಪೆಂದು ಮುಂ
ಡಂ ಕೆಡೆಯೆ ತಲೆ ಕರಂ ಬೀಳ್ವಿನಂ ಕಾಟಕೋಟಂ ॥ ... ... ॥೧೬॥

ಮತ್ತೇ ॥ ಪಿತನಂ ಕೋಪಕೃತಾಪರಾಧಯುತನಂ ಕೊಂದಿಕ್ಕಲೆಂದಾ ಮಹಾ । ಮ
ತಿ ಕೈಕೊಂಡು ಕುಠಾರಮಂ ಜಡಿಯೆ ಕೈಲಾಸಸ್ಫುರದ್ದ್ವಾರಕ॥ಲ್ಪಿತಸಾರಾರ್ಗ್ಗಳಮರ್ಗ್ಗಳಂ
ಶಿಥಿಲಮಾಯ್ತಾರ್ದ್ದೆತ್ತೆ ಪಿಂದಣ್ಗೆ ಪೋ । ಯ್ತತುಳಾಟೋಪದೆಪೊಯ್ಯೆ ಕಳ್ಕನೆ ಕವಾಟಂ
ಬಿರ್ಚ್ಚಿತೇಂ ಚಿತ್ರಮೊ ॥ ... ... ... ... ... ॥೧೭॥

ಕಂ॥ ಹರಭಕ್ತಕಾಟಕೋಟ । ಸ್ಫುರಿತಕರಸ್ಪರ್ಶಪೂತಪರಶುಪ್ರಹತಂ ॥ ಪರಿದೋ
ಡೆ ಪಾಪತತಿ ನಿ । ರ್ಜ್ಜರಪುರಮಂ ಪೊಕ್ಕು ಮಿಕ್ಕು ಸುಖದಿಂದಿರ್ದಂ॥ ... ॥೧೮॥

ತರಳವೃತ್ತಂ ॥ ಕುರಿಯಪಿಳ್ಕೆಯನಿಂತು ಭಾವಿಸಿ ಲಿಂಗಮಂಮಿಗೆ ಮಾಡಿದಂ । ಮೆ

---

ನೋಡುತಂ, ಕುಣಿವುತಂ, ಒಪ್ಪುತೆ, ಇರ್ಪನ್ನೆಗಂ. ... ... ... ... ॥೧೫॥

ಆಗಳ್, ಪಿತಂ- ತಂದೆಯು, ಬಂದು, ಈದುರ್ಮತಿಪುತ್ರಂ- ದುಷ್ಟಬುದ್ಧಿಯುಳ್ಳ ಈ ಮಗನು, ಪಿಳ್ಕೆಗೆ- ಹಿಕ್ಕೆಗೆ, ಪಾಲಂ, ಬರಿದೆ- ವ್ಯರ್ಥವಾಗಿ, ಸುರಿದು, ಪಾಳ್ಮಾಡುತಿರ್ದಪಂ- ಹಾಳ್ಮಾಡುತಿರುವನು, ಎಂದು, ಆರ್ದ್ದು- ಗಟ್ಟಿಯಾಗಿ ಕೂಗಿ, ತಲ್ಲಿಂಗಮಂ, ಒದೆದು, ಜರಿಯೆ, ಕಾಟಕೋಟಂ, ಕಂಡು, ಕೋಪಾವೃತಚಿತ್ತಂ- ಕೋಪದಿಂದಾವರಿಸಲ್ಪಟ್ಟ ಮನಸ್ಸುಳ್ಳವನಾಗಿ, ಬೇಗದಿಂ, ಕೈಗೊಡಲಿಯುಂ, ಅಧಟಿಂದೆ- ಶೌರ್ಯದಿಂದ, ಎತ್ತಿ, ತತ್ಪಿತನಂ, ಮುಂಡಂ- ತಲೆಯಿಲ್ಲದ ದೇಹವು, ಧೊಪ್ಪೆಂದು, ಕೆಡೆಯೆ- ಬೀಳುವಂತೆ, ತಲೆ- ರುಂಡವು, ಕರಂ- ಚೆನ್ನಾಗಿ, ಬೀಳ್ವಿನಂ- ಕೆಳಕ್ಕೆ ಬೀಳುವಂತೆ, ಪೊಯ್ದಿಕ್ಕಿದಂ-ಹೊಡೆದಿಟ್ಟನು. ... ... ॥೧೬॥

ಆಮಹಾಮತಿ- ಅಧಿಕವಾದ ಬುದ್ಧಿಯುಳ್ಳ ಆ ಕಾಟಕೋಟನು, ಕೋಪಕೃತಾಪರಾಧಯುತನಂ- ಕೋಪದಿಂದ ಮಾಡಲ್ಪಟ್ಟ ಅಪರಾಧದಿಂದ ಕೂಡಿದ, ಪಿತನಂ, ಕೊಂದಿಕ್ಕಲೆಂದು- ಕೊಂದುಹಾಕಬೇಕೆಂದು, ಕುಠಾರಮಂ- ಕೊಡಲಿಯುನ್ನು, ಕೈಕೊಂಡು- ತೆಗೆದುಕೊಂಡು, ಜಡಿಯೆ- ಅಳ್ಳಾಡಿಸಲು, ಕೈಲಾಸ...... ... ಸಾರಾರ್ಗ್ಗಳಂ— ಕೈಲಾಸ- ಕೈಲಾಸಪರ್ವತದ, ಸ್ಫುರಿತ- ಪ್ರಕಾಶಿಸುವ, ದ್ವಾರ- ಬಾಗಿಲಿಗೆ, ಕಲ್ಪಿತ- ಮಾಡಲ್ಪಟ್ಟ, ಸಾರ- ಶ್ರೇಷ್ಠವಾದ, ಅರ್ಗ್ಗಳಂ- ಪ್ರತಿಬಂಧವಾಗುಳ್ಳ, ಅರ್ಗ್ಗಳಂ- ಲಾಳಮುಂಡಿಗೆಯು, ಶಿಥಿಲಮಾಯ್ತು, ಆರ್ದ್ದು- ಕೂಗಿಕೊಂಡು, ಎತ್ತೆ, ಪಿಂದಣ್ಗೆ- ಹಿಂದಕ್ಕೆ, ಪೋಯ್ತು, ಅತುಳಾಟೋಪದೆ- ಅಧಿಕವಾದಾಡಂಬರದಿಂದ, ಪೊಯ್ಯೆ- ಹೊಡೆಯಲು, ಕಳ್ಕನೆ, ಕವಾಟಂ- ಕದವು, ಬಿರ್ಚ್ಚಿತು, ಏಂಚಿತ್ರಮೋ- ಏನಾಶ್ಚರ್ಯವೋ? ... ... ... ... ... ॥೧೭॥

ಹರ........ ಪ್ರಹತಂ— ಹರಭಕ್ತ- ಶಿವಭಕ್ತನಾದ, ಕಾಟಕೋಟ- ಕಾಟಕೋಟನ, ಸ್ಫುರಿತ- ಪ್ರಕಾಶಿಸುವ, ಕರಸ್ಪರ್ಶ- ಹಸ್ತದ ಸೋಂಕುವಿಕೆಯಿಂದ, ಪೂತ- ಪರಿಶುದ್ಧವಾದ, ಪರಶು- ಕೊಡಲಿಯಿಂದ, ಪ್ರಹತಂ- ಹೊಡೆಯಲ್ಪಟ್ಟ ತಂದೆಯು, ಪಾಪತತಿ, ಪರಿದು, ಓಡೆ, ನಿರ್ಜ್ಜರಪುರಮಂ- ಅಮರಾವತಿಯನ್ನು, ಪೊಕ್ಕು, ಮಿಕ್ಕು, ಸುಖದಿಂದೆ, ಇರ್ದಂ. ... ... ... ॥೧೮॥

ಇಳಾಗ್ರದೊಳ್, ಕಾಟಕೋಟಂ, ಕುರಿಯ, ಪಿಳ್ಕೆಯುಂ, ಇಂತು, ಭಾವಿಸಿ, ಮಿಗೆ, ಲಿಂಗಮಂ, ಮಾ

ರೆಯೆ ತನ್ನನುಮಾಧವಂ ಕಲಿಕಾಟಕೋಟ ನಿಳಾಗ್ರದೊಳ್ ॥ ಮಿರುಪ ಜೋಳದ ರಾಶಿಯಂ ಘನಲಿಂಗಮೆಂದೆನೆ ಮೈಮೆ ಕ । ಣ್ದೆರೆಯೆ ಬಾಹುಪುರಾಶ್ರಯಾಶ್ರಿತ ಬೊಮ್ಮಿದೇವ ನೊಡರ್ಚಿದಂ ॥ ... ... ... .. ... ... ॥೧೯॥

ಮಾಲಿನೀವೃತ್ತಂ ॥ ಅವರತೆರದಿನೀಗ ಳ್ತಾಳ್ದವಾರ್ತಾಕಮಂ ಶಾಂ । ಭವಘನತರಲಿಂಗಂ ಗೆಯ್ದನೀಚೋರರಂ ದು ॥ ರ್ಭವಿಗಳೆನಿಪರಂ ದಲ್ಭಕ್ತರಂ ಮಾಡಿದಂ ಮೇ । ಣವನಿಯೊಳೆ ವೃಷೇಂದ್ರಂ ಭಕ್ತಿಸೌಭಾಗ್ಯಸಾಂದ್ರಂ ॥ ... ... ॥೨೦॥

ಕಂ ॥ ಶರಣರ ಸದ್ಭಾವಮೆ ಶಂ । ಕರನಿರ್ಪೆಡೆಯಲ್ತೆ ಪರಮಭಕ್ತಾಳಿಗಿದೇಂ ॥ ಪಿರಿದೆ ಬಸವಂಗೆ ನಿಜಮಿದು । ಪರಿಕಿಪ್ರೊಡೆಂದಲ್ಲಿ ಭಕ್ತರುತ್ಸವಮಾಂತರ್ ॥ ... ॥೨೧॥

ವ ॥ ಇಂತು ಭಕ್ತಿಪ್ರಭಾವಮಂ ತಿಳಿದಾನಂದಿಪ ಗಣಂಗಳ್ವೆರಸು ವಿತರಣಜಿತಪಾರಿಜಾತ ನೊಪ್ಪುತ್ತಮಿರ್ದೊಂದುದಿವಸ ಮುದಯಸಮಯದೊಳ್ ಲಿಂಗಸಮರ್ಪಿತತೈಲಾಭ್ಯಂಗಮನೆಸಗುವಾಗಳ್ ಮಾಹೇಶ್ವರನೋರ್ವಂ ಬಂದು ಲಿಂಗಾರ್ಚನೆಯರಂಗವಲ್ಲಿಗೆ ಪತ್ತುಕಂಡುಗಮುತ್ತುಗಳನರ್ಥಿಸಿದಪೆನೀವುದೆಂದು ಬೇಡಲೊಡಂ ॥ * * * * * *

ಉ ॥ ಜೋಳದರಾಶಿಯಂ ಶಿವಪಸಾಯದನಿರ್ಮಳದಿವ್ಯದೃಷ್ಟಿಯಿಂ । ಮೇಳಿಸಿ ನೋಡೆ ಪ್ರೋಚ್ಚಪೊಸಮುತ್ತಿನರಾಶಿಯದಾಗೆ ಭಕ್ತರಾಂ ॥ ದೋಳಿತಮಸ್ತಕರ್ಪೊಗಳೆ ಕೊ

---

ಡಿದಂ, ತನ್ನಂ- ಆಕಾಟಕೋಟನನ್ನು, ಉಮಾಧವಂ, ಮೆರೆಯೆ, ಲಿಂಗಮಂ- ಲಿಂಗೈಕ್ಯನನ್ನು, ಮಾಡಿದಂ, ಬಾಹುಪುರಾಶ್ರಯಾಶ್ರಿತಬೊಮ್ಮಿದೇವಂ- ಬಾಹೂರಿನ ಬೊಮ್ಮಿದೇವನು, ಮೈಮೆ, ಕಣ್ದೆರೆಯೆ, ಮಿರುಪ- ಪ್ರಕಾಶಿಸುವ, ಜೋಳದ, ರಾಶಿಯಂ, ಘನಲಿಂಗಂ, ಎಂದೆನೆ, ಒಡರ್ಚಿದಂ. ... ... ॥೧೯॥

ಅವರ, ತೆರದಿಂ- ರೀತಿಯಿಂದ, ಅವನಿಯೊಳೆ, ಭಕ್ತಿಸೌಭಾಗ್ಯಸಾಂದ್ರಂ- ಭಕ್ತಿಯೆಂಬ ಐಶ್ವರ್ಯದಿಂದ ಸಂಪೂರ್ಣನಾದ, ವೃಷೇಂದ್ರಂ, ಈಗಳ್, ತಾಳ್ದ- ಚೋರರು ಧರಿಸಿದ, ವಾರ್ತಾಕಮಂ- ಬದನೆಯಕಾಯಿಯನ್ನು, ಶಾಂಭವಘನತರಲಿಂಗಂಗೆಯ್ದಂ- ಶಿವಲಿಂಗವಂ ಮಾಡಿದನು; ಮೇಣ್- ಮತ್ತು, ದುರ್ಭವಿಗಳ್, ಎನಿಪರಂ, ಈಚೋರರಂ, ದಲ್- ನಿಶ್ಚಯವಾಗಿ, ಭಕ್ತರಂ- ಶಿವಭಕ್ತರನ್ನು, ಮಾಡಿದಂ. ... ॥೨೦॥

ಶರಣರ, ಸದ್ಭಾವಮೆ- ಸವಿಾಚೀನವಾದ ಮನೋವೃತ್ತಿಯೇ, ಶಂಕರಂ, ಇರ್ಪ್ಪ, ಎಡೆಯಲ್ತೆ, ಪರಮಭಕ್ತಾಳಿಗೆ, ಇದು, ಪಿರಿದೇಂ? ಪರಿಕಿಪೊಡೆ- ವಿಚಾರಿಸಿದರೆ, ಬಸವಂಗೆ, ಇದು, ನಿಜಂ- ಸ್ವಭಾವಸಿದ್ಧವಾದದ್ದು, ಎಂದು, ಅಲ್ಲಿ, ಭಕ್ತರ್, ಉತ್ಸವಮಾಂತರ್. ... ... ... ... ॥೨೧॥

ಇಂತು, ಭಕ್ತಿಪ್ರಭಾವಮಂ, ತಿಳಿದು, ಆನಂದಿಪ, ಗಣಂಗಳ್ವೆರಸು— ಗಣಂಗಳಿಂದ ಕೂಡಿಕೊಂಡು, ವಿತರಣಜಿತಪಾರಿಜಾತಂ- ದಾನಗುಣದಿಂದ ಜೈಸಲ್ಪಟ್ಟ ಕಲ್ಪವೃಕ್ಷವುಳ್ಳ ಬಸವೇಶ್ವರನು, ಒಪ್ಪುತಂ, ಇರ್ದು, ಒಂದುದಿವಸಂ, ಉದಯಸಮಯದೊಳ್- ಪ್ರಾತಃಕಾಲದಲ್ಲಿ, ಲಿಂಗಸಮರ್ಪಿತತೈಲಾಭ್ಯಂಗಮಂ- ಶಿವಲಿಂಗಕ್ಕೆ ಸಮರ್ಪಿಸಲ್ಪಟ್ಟ ತೈಲಸ್ನಾನವನ್ನು, ಎಸಗುವಾಗಳ್- ಮಾಡುವಕಾಲದಲ್ಲಿ, ಓರ್ವಂಮಾಹೇಶ್ವರಂ, ಬಂದು, ಲಿಂಗಾರ್ಚನೆಯರಂಗವಲ್ಲಿಗೆ- ಲಿಂಗಪೂಜೆಯಂ ಮಾಡುವ ಸ್ಥಲದಲ್ಲಿ ರಂಗವಲ್ಲಿಯನ್ನಿಡುವದಕ್ಕೆ, ಪತ್ತುಕಂಡುಗಮುತ್ತುಗಳಂ, ಅರ್ಥಿಸಿದಪೆಂ- ಬೇಡುವೆನು, ಈವುದು, ಎಂದು, ಬೇಡಲ್, ಒಡಂ- ಕೂಡಲೇ. *

ವೃಷಾದಿಪಂ, ಶಿವಪಸಾಯದ- ಶಿವಾನುಗ್ರಹದಿಂದುಂಟಾದ, ನಿರ್ಮಳದಿವ್ಯದೃಷ್ಟಿಯಿಂ, ಜೋಳದ, ರಾಶಿಯಂ, ನೋಡೆ, ಅದು, ಪ್ರೋಚ್ಚಪೊಸಮೊತ್ತಿನ-ಅತಿ ನೂತನವಾದ ಮುತ್ತುಗಳ, ರಾಶಿ, ಆಗೆ, ಭಕ್ತರ್, ಆಂದೋಳಿತಮಸ್ತಕರ್- ತೂಗುತ್ತಿರುವ ತಲೆಯುಳ್ಳವರಾಗಿ, ಪೊಗಳೆ, ದೇವ, ಯಥೇಷ್ಟಂ- ಇಷ್ಟವಾದ

ಳ್ವುದು ದೇವ ಯಥೇಷ್ಟಮೆಂದು ಮು | ಕ್ತಾಳಿಯ ರಾಶಿಯಂ ಮಣಿದವಂಗದ ನರ್ಪಿಸಿ
ದಂ ವೃಷಾಧಿಪಂ ‖ ... ... ... ... ... ‖೨೨‖

ಚಂ ‖ ಮೊರಟದಬಂಕನೆಂಬಶರಣಂ ಶಿವಪೂಜಕನೋರ್ವ ನೈದೆ ನ | ಟ್ಟಿರುಳೊಳೆ ತ
ನ್ನಗೇಹಕವನಂಘ್ರಿಗೆ ವಂದಿಸಿ ಲಿಂಗಪೂಜೆಯಂ ‖ ವಿರಚಿಪುದಯ್ಯ ನೀಮೆನೆ ಕೊರಂಟಿನ
ಬಿಲ್ವದಳಂಗಳಂ ಪ್ರಸೂ | ತಿರಹಿತಗೋಪಯೋರಸವ ನೀಯಭವಾರ್ಚನೆಗೆಂದನಾಚರಂ ‖

ವ ‖ ಎನೆ ಮಹಾಪ್ರಸಾದವೆಂದು ಭೋಂಕನೆ ಬಂಕಿದೇವನಾ ಭಕ್ತನಡಿದಾವರೆಯಂ
ಕರ್ಚಿ ತತ್ತೀರ್ಥೋದಕಮಂ ಮನೆಯ ಮುಂದಣಬರಡಾಕಳ್ಗಮದಂ ಕಟ್ಟರ್ದ ಗುಣಯುತ
ಸ್ಥಾಣುಗಂ ತಳಿಯೆ ‖ * * * * * * * *

ಕಂ ‖ ಕರುವಿಲ್ಲದ ಪಸು ಪಾಲಂ | ಕರೆದುದಳುಂಬಂ ಕೊರಂಟು ಬಿಲ್ವದಳಂಗಳ್ ‖ ತು
ರುಗೆ ಚಿಗುರ್ತುದವೆರಡಂ | ನೆರೆ ಕೊಟ್ಟಾವ್ರತಿಗೆ ಪೂಜೆಗೆಯ್ಸಿದನಾಗಳ್ ‖ ... ‖೨೪‖

ಕಂ ‖ ಎಂದೊರೆವ ಕಥೆಯ ನಾಲಿಪೆ | ವಿಂದಿಲ್ಲಿವೃಷೇಂದ್ರನೆರೆದ ಭಕ್ತಂಗೆ ಮನು ‖
ದಂದುರೆಜೋಳದರಾಶಿಯ | ನಂದದ ಮುತ್ತುಗಳ ರಾಶಿಯಂ ನೆಗಳ್ದಿತ್ತಂ‖ ... ‖೨೫‖

ವ ‖ ಇಂತಪ್ಪ ಮಹಿಮೆಯಂ ಕಣ್ಣಾರೆಕಂಡೆವೆಂದು ಸರ್ವರುಂ ಪೊಗಳುತ್ತಮಿರೆ ನೆ

---

ಷ್ಟ, ಕೊಳ್ಳುವುದು, ಎಂದು, ಮಣಿದು- ನಮಸ್ಕರಿಸಿ, ಅವಂಗೆ- ಆ ಮಹೇಶ್ವರನಿಗೆ, ಅದಂ ಮುಕ್ತಾಳಿಯ
ರಾಶಿಯುಂ, ಅರ್ಪಿಸಿದಂ. ... ... ... ... ‖೨೨‖

ಮೊರಟದಬಂಕಯ್ಯನಕಥೆ.

ಮೊರಟದಬಂಕಂ, ಎಂಬ, ಶರಣಂ, ತನ್ನ, ಗೇಹಕೆ- ಮನೆಗೆ, ನಟ್ಟಿರುಳೊಳ್- ಅರ್ಧರಾತ್ರಿಯಲ್ಲಿ, ಓರ್ವಂ, ಶಿವಪೂಜಕಂ, ಐದೆ- ಬರಲು, ಅವನ, ಅಂಘ್ರಿಗೆ, ವಂದಿಸಿ, ಅಯ್ಯ, ನೀಂ, ಲಿಂಗಪೂಜೆಯಂ, ವಿರಚಿಪುದು- ಮಾಡುವದು, ಎನೆ, ಆಚರಂ- ಆ ಜಂಗಮನು, ಅಭವಾರ್ಚನೆಗೆ- ಕೊರಂಟಿನ- ಒಣಗಿದ ಕೊರಟೆನ, ಬಿಲ್ವದಳಂಗಳು, ಪ್ರಸೂತಿರಹಿತಗೋಪಯೋರಸವಂ- ಕರುವನ್ನೀಯದ ಹಸುವಿನ ಹಾಲನ್ನು, ಈಯ್- ಕೊಡು ಎಂದಂ. ... ... ... ... ... ‖೨೩‖

ಎನೆ, ಬಂಕಿದೇವಂ, ಮಹಾಪ್ರಸಾದಂ, ಎಂದು, ಭೋಂಕನೆ- ಜಾಗ್ರತೆಯಾಗಿ, ಆಭಕ್ತನ, ಅಡಿದಾವರೆಯುಂ- ಪಾದಕಮಲವನ್ನು, ಕರ್ಚಿ- ತೊಳೆದು, ತತ್ತೀರ್ಥೋದಕಮಂ, ಮನೆಯಮುಂದಣಬರಡಾಕಳ್ಗಂ- ಮನೆಯಮುಂದಿದ್ದ ಗೊಡ್ಡಿಯಾದ ಹಸುವಿಗೂ, ಅದಂ- ಆ ಹಸುವನ್ನು, ಕಟ್ಟರ್ದ, ಗುಣಯುತಸ್ಥಾಣುಗಂ- ಹಗ್ಗದಿಂದ ಕೂಡಿರುವ ಮೋಟುಮರಕ್ಕೂ, ತಳಿಯೆ-ಸೇಚಿಸಲು. * * * * * * *

ಕರು, ಇಲ್ಲದ, ಪಸು, ಅಳುಂಬಂ- ಅಧಿಕವಾಗಿ, ಪಾಲಂ, ಕರೆದುದು; ಕೊರಂಟು, ಬಿಲ್ವದಳಂಗಳ್, ತುರುಂಗೆ- ತುಂಬಿಕೊಳ್ಳುವಂತೆ, ಚಿಗುರ್ತುದು; ಆಗಳ್, ಅವೆರಡಂ, ನೆರೆ- ಚೆನ್ನಾಗಿ, ಆವ್ರತಿಗೆ- ಆ ನಿಯಮವುಳ್ಳ ಜಂಗಮನಿಗೆ, ಕೊಟ್ಟು, ಪೂಜೆಗೆಯ್ಸಿದಂ. ... ... ... ... ‖೨೪‖

ಎಂದು, ಒರೆವ, ಕಥೆಯಂ, ಆಲಿಪೆವು- ಕೇಳುವೆವು, ಇಂದು, ಇಲ್ಲಿ, ವೃಷೇಂದ್ರಂ, ಎರೆದ- ಬೇಡಿದ, ಭಕ್ತಂಗೆ, ಮನಂದಂದು- ಮನಃಪೂರ್ವಕವಾಗಿ, ಉರೆ- ಚೆನ್ನಾಗಿ, ಜೋಳದ, ರಾಶಿಯಂ, ಅಂದದ- ಮನೋಹರವಾದ, ಮುತ್ತುಗಳರಾಶಿಯಂ, ನೆಗಳ್ದು- ಮಾಡಿ, ಇತ್ತಂ. ... ... ... ‖೨೫‖

ಲಲಾಟೇಕ್ಷಣದಾನ.

ಇಂತಪ್ಪ, ಮಹಿಮೆಯಂ, ಕಣ್ಣಾರೆಕಂಡೆವು- ಪ್ರತ್ಯಕ್ಷವಾಗಿ ನೋಡಿದೆವು, ಎಂದು, ಸರ್ವರುಂ, ಪೊಗ

23

ಗಳ್ತೆವೆತ್ತು ಮತ್ತಂ ಭಕ್ತರ್ಗೆ ಚಿತ್ರಮಾಗೆ ಬಸವಂ ವಿತರಣವಿಳಾಸಮಂ ಮೆರೆವುತ್ತೆ ಮಿ
ರೆ ಸಂಗಮನಾಥಂ ಜಂಗಮರೂಪಂ ದಳೆದರ್ಥಿಪಳ್ತಯಿನೆಳ್ತಂದು ನಿಂದು ॥ * * *

ಕಂ ॥ ಅತಿದಾನಿಬಸವರಾಜನ । ನತನುಹರಂ ಕಾಲ್ಗೆ ಕಣ್ಣನೆರೆದನೆ ಪಣೆಗ ॥ ದ್ಭು
ತನಯನಮನೆರೆದಂ ಘನ । ವಿತರಣಿಯಂ ಬೇಳ್ಪನಲ್ಪವಸ್ತುವನೆರೆಯಂ ॥ ... ॥೧೬॥

ವ ॥ ಆಗಳ್ ॥ ಕಂ॥ ಮಾಯಾವಿ ದೇವ ನಿನ್ನಯ । ಮಾಯೆಯ ನಾಂ ಬಲ್ಲೆನ
ಮಮ ನಿನಗಂಜೆ ನೆಸು ॥ ತ್ತಾಯತಿಯ ವದನಕಮಲ । ಛಾಯೆಯ ಕನ್ನಡಿಯ ನೆತ್ತಿ ಪಿಡಿ
ದಂ ಬಸವಂ ॥ ... ... ... ... ... ... ॥೧೭॥

ಉತ್ಸಾಹವೃತ್ತಂ ॥ ಅಲ್ಲಿ ಕಂಡು ಭಾಳನೇತ್ರಮಂ ಮನೋಜಮರ್ದನಂ । ಗೆಲ್ಲವಾರಿ
ಸೋಲ್ತು ನಾಣ್ಚುತೋಡಿ ಪೋಗುತಿರ್ಪಿನಂ ॥ ಸಲ್ಲದೋಡುವಂದಮಿಂತು ಸಂಗಮೇಶ ಬಂ
ದೆನಿ । ಲ್ನಿಲ್ಲಿದೇಕೆ ಬೇರೆ ಬೇಳ್ಪವಸ್ತುವಾವುದಿತ್ತಪೆಂ ॥ ... ... ॥೧೮॥

ವ॥ ಎಂದು ಬಸವಂ ಮುಟ್ಟ ಮೊದಲಿಸಿ ನಿಲಿಸಿ॥ * * * *

ಉ॥ ಚೋಳನ ಮಾಳ್ಕೆಯಿಂ ಕನಕವೃಷ್ಟಿಯನರ್ಥಿಸೆ ನಯ್ಯ ನಂಬಿವೋ। ಲ್ಸೂಳೆ
ಯ ಮಂದಿರಕ್ಕೆ ನಡೆದಾಡಿಸೆ ನಾಂ ಸಿರಿಯಾಳನಂದದಿಂ ॥ ಬಾಳನ ಜೀವಮಂ ಬಯಸೆ ನಕ್ಷ

---

ಳುತ್ತಂ, ಇರೆ, ಬಸವಂ, ನೆಗಳ್ತೆನೆತ್ತು- ಪ್ರಸಿದ್ಧಿಯಂ ಹೊಂದಿ, ಮತ್ತಂ, ಭಕ್ತರ್ಗೆ, ಚಿತ್ರಂ-ಆಶ್ಚರ್ಯವು, ಆಗೆ-ಉಂಟಾಗುವಂತೆ, ವಿತರಣವಿಳಾಸಮಂ- ದಾನಲೀಲೆಯನ್ನು, ಮೆರೆವುತ್ತಂ- ಪ್ರಕಾಶಪಡಿಸುತ್ತ, ಇರೆ, ಸಂಗಮನಾಥಂ, ಜಂಗಮರೂಪಂದಳೆದು, ಅರ್ಥಿಪ- ಯಾಚಿಸುವ, ಅಳ್ತಿಯಿಂ- ಪ್ರೀತಿಯಿಂದ, ಎಳ್ತಂದು- ಬಂದು, ನಿಂದು. * * * * * * * * * * * * * * * *

ಅತನುಹರಂ- ಮದನಧ್ವಂಸಿಯಾದ ಪರಮೇಶ್ವರನು, ಅತಿದಾನಿಬಸವರಾಜನಂ- ಅತ್ಯಂತ ದಾನಗುಣವುಳ್ಳ ಬಸವೇಶ್ವರನನ್ನು, ಕಾಲ್ಗೆ, ಕಣ್ಣಂ, ಎರೆದನೆ- ಯಾಚಿಸಿದನೇ? ಪಣೆಗೆ, ಅದ್ಭುತನಯನಮಂ, ಎರೆದಂ, ಘನವಿತರಣಿಯಂ- ದಾನಿಶ್ರೇಷ್ಠನನ್ನು, ಬೇಳ್ಪಂ- ಬೇಡುವವನು, ಅಲ್ಪವಸ್ತುವಂ- ಎರೆಯಂ- ಬೇಡುವದಿಲ್ಲವು. ... ... ... ... ... ॥೧೬॥

ಬಸವಂ, ಮಾಯಾವಿ- ಕಪಟವೇಷವುಳ್ಳ, ದೇವ, ನಿನ್ನಯ, ಮಾಯೆಯಂ, ಆಂ, ಬಲ್ಲೆಂ, ಅಮಮ! ನಿನಗೆ, ಅಂಜೆಂ- ಭಯಪಡುವದಿಲ್ಲವು; ಎನುತ್ತೆ, ಆಯತಿಯ, ವದನಕಮಲಛಾಯೆಯ- ಮುಖಕಮಲಪ್ರತಿಬಿಂಬಮಂ ವ್ಯಕ್ತಪಡಿಸುವ, ಕನ್ನಡಿಯಂ, ಎತ್ತಿ, ಪಿಡಿದಂ. ... ... ... ॥೧೭॥

ಮನೋಜಮರ್ದನಂ, ಅಲ್ಲಿ- ಕನ್ನಡಿಯಲ್ಲಿ, ಭಾಳನೇತ್ರಮಂ- ಪಣೆಗಣ್ಣನ್ನು, ಕಂಡು, ಗೆಲ್ಲವು- ಜಯವು, ಆರಿ- ನಾಶವಾಗಿ, ಸೋಲ್ತು, ನಾಣ್ಚುತ್ತೆ, ಓಡಿಪೋಗುತೆ, ಇರ್ಪಿನಂ- ಇರುವಲ್ಲಿ, ಸಂಗಮೇಶ, ಇಂತು, ಇದು ಓಡುವ ಅಂದಂ, ಸಲ್ಲದು-ಉಚಿತವಾದುದಲ್ಲವು, ಬಂದೆ, ನಿಲ್, ನಿಲ್, ಇದೇಕೆ? ಬೇಳ್ಪ-ಯಾಚಿಸಬೇಕಾದ, ವಸ್ತು. ಆವುದು, (ಅದಂ) ಬೇಡಿ, ಇತ್ತಪೆಂ. ... ... ... ... ॥೧೮॥

ಎಂದು, ಬಸವಂ, ಮುಟ್ಟ, ಮೊಡಲಿಸಿ- ಹಗಿಸಿ, ನಿಲಿಸಿ. * * * * * * * *

ಅಯ್ಯ! ಆಂ, ಚೋಳನ- ಕರಿಕಾಲಚೋಳನ. ಮಾಳ್ಕೆಯಿಂ- ರೀತಿಯಿಂದ, ಕನಕವೃಷ್ಟಿಯಂ- ಚಿನ್ನದ ಮಳೆಯನ್ನು, ಅರ್ಥಿಸೆಂ- ಬೇಡುವದಿಲ್ಲವು, ನಂಬಿವೋಲ್- ಸೂಳೆಯ, ಮಂದಿರಕ್ಕೆ-ಮನೆಗೆ, ನಡೆದಾಡಿಸೆಂ, ಸಿರಿಯಾಳನಂದದಿಂ, ಬಾಳನ- ಪುತ್ರನ, ಜೀವಮಂ-ಪ್ರಾಣವನ್ನು, ಬಯಸೆಂ, ಅಭ್ರಾಳಕದಾಸನಂತೆ- ದೇವರದಾಸಯ್ಯನಂತೆ, ಅಕ್ಷಯಭಾಗ್ಯಮಂ- ನಿಧಿಯನ್ನು, ಒರ್ಮೆ- ಒಂದಾವರ್ತಿಯೂ, ಬೇಡೆಂ, ದೇವ!

ಯಭಾಗ್ಯಮನೋರ್ಮೆ ಜೇಡ ಸ|ಭ್ರಾಳಕದಾಸನಂತೆಪರೆಯಕ್ಕೆಳಸಂಶಿವಗುಂಡನಂತೆವೋಲ್‖

ಮತ್ತೇ ‖ ಶಿವನೀನೀವ ಸುರೇಂದ್ರಭೋಗಸುಖಮೋಕ್ಷಪ್ರಾಪ್ತಿಗಳ್ಮಾಣ್ಗಿ ನಿ | ನ್ನವರೊಲ್ದುಂಡುಳುಪಿರ್ದ ಶೇಷಮೆನಗುಂಟೆಂದೆಂದು ಮಾಶೇಷಮಂ ‖ ಸವಿದಾನಂದಮನಾಳ್ದು ಮಿಕ್ಕಸುಖಮೊಂದಂಬಾಳ್ತೆಗೆಯ್ಯೆಂ ಕೃಪಾ | ರ್ಣವ ಪೀಯೂಷಮನುಂಡವಂ ಬಗೆವನೇ ಪೇಳಾರನಾಳಾಂಬುವಂ ‖ ... ... ... ... ... ‖೩೦‖

ವ ‖ ಅಂತುಮಲ್ಲದೆಯುಂ ‖ ಮತ್ತೇ ‖ ಗಿರಿಜಾವಲ್ಲಭ ನಿಮ್ಮ ಮಜ್ಜನದಭೃತ್ಯಂ ಗೊಲ್ಲಳಂ ಕಾಲಸಂ | ಹರಕೇಳ್ಪೂವಡಿಗಂಗಡಾ ನಿಮಗೆ ಭಾಸ್ವತ್ಪುಷ್ಪದತ್ತಂ ಕೃಪಾ ‖ ಕರ ಪೂಮಾಲಿಯನಾಗಿಪಳ್ನಿಮಗೆ ತಾಂ ರೇಚವ್ವೆ ಕಣ್ಣಪ್ಪ ನೀಶ್ವರ ನಿಮ್ಮಳ್ಕರ ಪೂಜಕಂ ನಿಮಗಖಂಡಜ್ಯೋತಿಯಂ ಭಕ್ತಿಯಿಂ ‖ ... ... ‖೩೦‖

ಕಂ ‖ ಸಲೆ ಬೆಳಗುವವಂ ದೀವದ | ಕಲಿನಾಥಂ ದೇವ ನಿಮ್ಮದೀವಟಿಗಂ ನೃ ‖ ಗಲಿ ಕಡವಲನಂಬಿ ಮಹಾ | ಬಲ ನಿಮಗೊಳ್ಮುತ್ತಿನಾರತಿಯ ನೊಲವಿಂದಂ ‖ ... ‖೩೧‖

ಸ್ರ ‖ ಪಾಡುತ್ತಂ ಸೋಮಿದೇವಂ ಬೆಳಗುವ ನನಿಶಂ ಜ್ಞಾನಸಂಬಂಧಿ ನಿಮ್ಮಂ | ನೋಡುತ್ತಂ ಭೂತಿಯಂ ನೀಡುತೆ ಪರಸುವವಂ ನವ್ಯಗಂಧಾನುಲೇಪಂ ‖ ಮಾಪುತ್ತಂ ನಿಮ್ಮ ಚಿತ್ತಂಬಡೆವವ ನಣುಮೂರ್ತಿಶ್ವರಂ ಧೂಪಮಂ ಕೊಂ | ಡಾಡುತ್ತಂ ಮಾಚಿದೇವಂ ನಿಮಗೆ ಸಲಿಪವಂ ಘಂಟಿಕಾನಾದಕಾರಂ ‖ ... ... ... ‖೩೨‖

---

ಗುಂಡನಂತೆವೋಲ್, ಪರೆಯಕ್ಕೆ- ಪ್ರಾಯಕ್ಕೆ, ಎಳಸಂ- ಅಪೇಕ್ಷಿಸುವದಿಲ್ಲ. ... ‖೭೯‖

ಶಿವ, ನೀಂ, ಈವ, ಸುರೇಂದ್ರಭೋಗಸುಖಮೋಕ್ಷಪ್ರಾಪ್ತಿಗಳ್, ಮಾಣ್ಗಿ, ಹಾಗಿರಲಿ; ನಿನ್ನವರ್- ನಿನ್ನಭಕ್ತರು, ಒಲ್ದು, ಉಂಡು, ಉಳುಪಿರ್ದ- ಮಿಗಿಸಿರುವ, ಶೇಷಂ- ಪ್ರಸಾದವು, ಎನಗೆ, ಉಂಟು, ಎಂದೆಂದುಂ- ಯಾವಾಗಲೂ, ಆ ಶೇಷಮಂ, ಸವಿದು, ಆನಂದಮಂ, ಆಳ್ದು- ಹೊಂದಿ, ಮಿಕ್ಕ, ಸುಖಮೊಂದಂ, ಉಳಿದ ಯಾವದೊಂದುಸುಖವನ್ನೂ, ಬಾಳ್ತೆಗೆಯ್ಯೆಂ- ಇಚ್ಛೈಸುವದಿಲ್ಲ, ಕೃಪಾರ್ಣವ- ದಯಾರಸಕ್ಕೆ ಸಮುದ್ರನಾದಶಿವನೇ! ಪೀಯೂಷಮಂ- ಅಮೃತವನ್ನು, ಉಂಡವಂ, ಆರನಾಳಾಂಬುವಂ- ಅಕ್ಕಿಯಂತೊಳೆದನೀರನ್ನು, ಬಗೆವನೇ- ಇಚ್ಛೈಸುವನೇ? ಪೇಳ್. ... ... ... ‖೩೦‖

ಗಿರಿಜಾವಲ್ಲಭ! ಗೊಲ್ಲಳಂ- ಕಾಟಕೋಟನು, ನಿಮ್ಮ, ಮಜ್ಜನದ-ಸ್ನಾನವಂಮಾಡಿಸುವ, ಭೃತ್ಯಂ- ಆಳು, ಕಾಲಸಂಹರ- ಯಮಧ್ವಂಸಿಯಾದ ಶಿವನೇ! ಕೇಳ್, ಭಾಸ್ವತ್ಪುಷ್ಪದತ್ತಂ, ನಿಮಗೆ, ಪೂವಡಿಗಂಗಡಾ- ಹೂವಾಡಿಗನಲ್ಲವೇ? ಕೃಪಾಕರ! ರೇಚವ್ವೆ, ತಾಂ, ನಿಮಗೆ, ಪೂಮಾಲೆಯಂ ಆಗಿಪಳ್- ಹೂವಿನಮಾಲೆಯನ್ನು ಧರಿಸುವವಳು, ಈಶ್ವರ! ಕಣ್ಣಪ್ಪಂ,ನಿಮ್ಮ, ಅಳ್ಕರ- ಪ್ರೀತಿಪಾತ್ರನಾದ, ಪೂಜಕಂ- ಪೂಜಾರಿಯು; ದೇವ! ದೀಪದಕಲಿನಾಥಂ,ನಿಮಗೆ, ಭಕ್ತಿಯಿಂ,ಅಖಂಡಜ್ಯೋತಿಯಂ, ಸಲೆ,ಬೆಳಗುವವಂ; ನೃಗಲಿ, ಸಮರ್ಥನಾದ, ಕಡವಲನಂಬಿ, ನಿಮ್ಮ, ದೀವಟಿಗಂ-ದೀವಟಿಗೆಯನ್ನು ಹಿಡಿಯುವವನು; ಮಹಾಬಲ! ಸೋಮಿದೇವಂ, ಪಾಡುತ್ತಂ, ಒಲವಿಂದಂ- ಪ್ರೀತಿಯಿಂದ, ನಿಮಗೆ, ಒಳ್ಮುತ್ತಿನ, ಆರತಿಯಂ, ಬೆಳಗುವವಂ; ಜ್ಞಾನಸಂಬಂಧಿ, ಅನಿಶಂ- ನಿರಂತರದಲ್ಲೂ, ನಿಮ್ಮಂ, ನೋಡುತ್ತಂ, ಭೂತಿಯಂ,ನೀಡುತೆ- ಕೊಡುತ್ತ, ಪರಸುವವಂ-ಆಶೀರ್ವದಿಸುವವನು; ಅಣುಮೂರ್ತಿಶ್ವರಂ, ಗಂಧಾನುಲೇಪಂಮಾಡುತ್ತ, ನಿಮ್ಮ, ಚಿತ್ತಂಬಡೆವವಂ- ಮನಸ್ಸನ್ನಾಕರ್ಷಿಸುವವನು; ಮಾಚಿದೇವಂ, ಕೊಂಡಾಡುತ್ತ, ನಿಮಗೆ, ಧೂಪವಂ, ಸಲಿಪವಂ ಹರ! ಓಹಿಲಂ, ಒಲವಿಂದೆ, ನಿಮಗೆ, ಘಂಟಿಕಾನಾದಕಾರಂ- ಘಂಟಾನಾದವಂಮಾಡುವವನು; ಅರಿವಾಳಂ,

ಕಂ ॥ ಹರ ನಿಮಗೋಹಿಲನೊಲವಿಂ । ದರಿವಾಳಂ ಭಕ್ತನೈದೆ ಪಡಿಗೊಡುವವ ನ॥ ಚ್ಚರಿಮಿಗೆ ರೇಚಣ್ಣಂ ಕ । ರ್ಪುರವೀಳಯ ನಿತ್ತು ನಿಮ್ಮ ನೋಲಗಿಸುವವಂ ॥ ॥೩೪॥

ಶಾ॥ಬಂಕಂ ಪಾಲ್ಗರೆವಂ ಶಶಾಂಕಧರ ಪಾಲಂ ಕಾಸಿ ಕಾದಣ್ಣೆವಾ । ಲಿಂ ಕೋಳೂರೆಳೆ ವೆ ಣ್ಕರಂ ತಣಿಪುವ ಳ್ನಿಮ್ಮಂ ಮಹಾದೇವ ನಿ॥ ಶ್ಯಂಕಂ ಶಂಕರದಾಸಯ್ಯಂ ನಿಮಗೆ ಕಟ್ಟಾ ಳ್ಮಂಚಣ್ಣಂ ಕೂರ್ಪಿನಾ|ಲಿಂಕಂ ಚೆಂಗಳೆ ಪಾಕಕರ್ತ್ರಿ ಸಿರಿಯಾಳಂಸೂಪಕಾರೋತ್ತಮಂ॥

ಶಾ ॥ ಹೊನ್ನಯ್ಯಂ ನಿಮಗೊಲ್ದು ಗಿಂಡಿವಿಡಿವಾತಂ ಮಾರಯ್ಯಂ ಕಾಷ್ಠವಾ । ಹಂ ನೀರಾಜನದಾತ್ರಿ ದೇವ ನಿಮಗಾಸೋಮವ್ವೆ ಚೋಳೋರ್ವಿಪಾ ॥ ಲಂನಣ್ಪಿಂ ಪರಿಯಾ ಣಮಂ ಗಡಣಿಪಾತಂ ಪಾಕಸುಸ್ವಾದಮಂ । ಚೆನ್ನಯ್ಯಂ ತಿಳಿವಾತ ನೊಳ್ಪುಣಿಸನೀವ ಳ್ವೀ ರಚೋಳವ್ವೆ ಕೇಳ್ ॥ ... ... ... ... ... ॥೩೬॥

ಸ್ರ ॥ ಬಂಕಯ್ಯಂ ಸುಂಕಿಗಂ ಕೇಳ್ನಿಮಗಿರುಳತಳಾರಂಗಡಾ ಶೈವರಾತ್ರೀ । ಸಂಕ ಯ್ಯಂ ಶಂಕರಯ್ಯಂ ಸರಸಮಧುರರಾಗಂಗಳಂ ಪಾಡುವಾತಂ ॥ ಪುಂಕೊಂಡೋರಂತೆ ನಿ ಮ್ಮಂನಗಿಪನೆ ಕಲಿಯೆಂಬಂ ಭವತ್ಸ್ತಾವಕಂ ನಿ । ಶ್ಶಂಕಂ ವಾಗೀಶ್ವರಂ ವೈಣಿಕ ನಮಳಗು ಣಂ ಮಾದಿರಾಜಾರ್ಯನಲ್ತೆ ॥ ... ... ... ... ॥೩೭॥

ಮಲ್ಲಿಕಾಮಾಲಾ॥ ಮಲ್ಲಿಕಾರ್ಜುನಪಂಡಿತಂ ಕವಿ ಸಾಮವೇದಿ ಪುರೋಹಿತಂ । ಮಲ್ಲಿ

---

ಭಕ್ತಂ, ಅಚ್ಚರಿ, ಮಿಗೆ, ನೆರೆ- ಚೆನ್ನಾಗಿ, ಪಡಿಗೊಡುವವಂ; ರೇಚಣ್ಣಂ, ಕರ್ಪುರವೀಳಯಂ, ಇತ್ತು, ನಿಮ್ಮ, ಓಲಗಿಸುವವಂ. ... ... ... ... ॥೩೪॥

ಶಶಾಂಕಧರ- ಚಂದ್ರಧರನೇ! ಬಂಕಂ- ಬಂಕಯ್ಯನು, ಪಾಲ್ಗರೆವಂ; ಕೋಳೂರ, ಎಳೆವೆಣ್- ಬಾಲೆಯು, ಪಾಲಂ, ಕಾಸಿ, ಕಾದ, ಅಣ್ಣೆವಾಲಿಂ- ಮಧುರವಾದ ಹಾಲಿನಿಂದ, ಕರಂ- ಚೆನ್ನಾಗಿ, ನಿಮ್ಮಂ, ತಣಿಪುವಳ್- ತೃಪ್ತಿಪಡಿಸುವಳು; ಮಹಾದೇವ! ನಿಶ್ಶಂಕಂ- ನಿರ್ಭೀಕನಾದ, ಶಂಕರದಾಸಯ್ಯಂ, ನಿಮಗೆ, ಕಟ್ಟಾಳ್- ಭಟನು; ಮಂಚಣ್ಣಂ, ಕೂರ್ಪಿನ- ಪ್ರೀತಿಪಾತ್ರನಾದ, ಆಲಿಂಕಂ- ದಾಸನು; ಚೆಂಗಳೆ, ಪಾಕಕರ್ತ್ರಿ- ಅಡಿಗೆಯುವಳು; ಸಿರಿಯಾಳಂ, ಸೂಪಕಾರೋತ್ತಮಂ- ಭಕ್ಷ್ಯಾದಿಗಳಂಮಾಡುವದರಲ್ಲಿ ಉತ್ತಮನು.

ಹೊನ್ನಯ್ಯಂ, ಒಲ್ದು, ನಿಮಗೆ, ಗಿಂಡಿವಿಡಿವಾತಂ; ಮಾರಯ್ಯಂ,ಕಾಷ್ಠವಾಹಂ-ಕಟ್ಟಿಗೆಯನ್ನು ಹೊರುವವನು; ದೇವ! ಆಸೋಮವ್ವೆ, ನಿಮಗೆ, ನೀರಾಜನದಾತ್ರಿ-ನೀರಾಜನವನ್ನೆತ್ತುವಳು, ಚೋಳೋರ್ವಿಪಾಲಂ, ಕಲಿಕಾಲಚೋಳರಾಜನು, ನಣ್ಪಿಂ- ಪ್ರೀತಿಯಿಂದ, ಪರಿಯಾಣಮಂ- ಭೋಜನಪಾತ್ರೆಯನ್ನು, ಗಡಣಿಪಾತಂ- ಜೊತೆಗೊಳಿಸುವವನು; ಚೆನ್ನಯ್ಯಂ, ಪಾಕಸುಸ್ವಾದಮಂ- ಅಡಿಗೆಯರುಚಿಯನ್ನು, ತಿಳಿವಾತಂ; ವೀರಚೋಳವ್ವೆ, ಒಳ್ಪುಣಿಸಂ- ಒಳ್ಳೆಯಆಹಾರವನ್ನು, ಈವಳ್. ... ... ॥೩೬॥

ಕೇಳ್, ಬಂಕಯ್ಯಂ, ಸುಂಕಿಗಂ- ಸುಂಕದವನು; ಶೈವರಾತ್ರೀಸಂಕಯ್ಯಂ- ಶಿವರಾತ್ರಿಸಂಕಣ್ಣನು, ನಿಮಗೆ, ಇರುಳ- ರಾತ್ರಿಯ, ತಳಾರಂಗಡಂ- ತಳವಾರನಲ್ಲವೇ? ಶಂಕರಯ್ಯಂ, ಸರಸಮಧುರರಾಗಂಗಳಂ, ಪಾಡುವಾತಂ; ಕವಿ, ಎಂಬನೆ- ಕವಿಕೆಂಪನೇ, ಪುಂಕೊಂಡು, ಓರಂತೆ- ಚೆನ್ನಾಗಿ, ನಗಿಪಂ- ನಗಿಸುವವನು; ನಿಶ್ಶಂಕಂ, ವಾಗೀಶ್ವರಂ, ಭವತ್ಸ್ತಾವಕಂ, ನಿನ್ನಸ್ತುತಿಪಾಠಕನು; ಅಮಲಗುಣಂ-ನಿರ್ಮಲವಾದಸದ್ಗುಣಗಳುಳ್ಳ, ಮಾದಿರಾಜಾರ್ಯಂ, ವೈಣಿಕನಲ್ತೆ- ವೀಣೆಯಂಬಾಜಿಸುವವನಲ್ಲವೇ ? ... ॥೩೭॥

ಮಲ್ಲಿಕಾರ್ಜುನಪಂಡಿತಂ, ಕವಿ; ಸಾಮವೇದಿ, ಪುರೋಹಿತಂ; ಮಲ್ಲಿಸೆಟ್ಟಿಯು, ನಿನ್ನ, ಕೊಟ್ಟಗೆಯಾತಂ; ಉದ್ಭಟಂ, ಅಂಕಿತಮಾಲೆಯಂ- ಚರಿತಗಳನ್ನು, ನಿಲ್ಲದೆ, ಓದುವಂ; ಕಳಿಚಂಡಯ್ಯಂ- ಸಮರ್ಥನಾದ

ಸೆಟ್ಟಿಯೆ ನಿನ್ನಕೊಟ್ಟಿಗೆ ಯಾತನಂಕಿತಮಾಲೆಯಂ ॥ ನಿಲ್ಲದೋದುವ ಸುದ್ಭಟಂ ಕಲಿಚಂಡ
ಯಂ ಪಶುಪಾಲಕಂ । ಕಲ್ಲಯಂ ಘನಗಾರುಡಂ ಮೃಗಯಾಚರಂ ಪಟುಜೊಮ್ಮಯಂ॥೩೮॥

ಕಂ ॥ನಯಯುತನಾಪ್ಯನಮಿತ್ತಂ । ಡಿಯೆ ಬೆಜ್ಜಂ ನಿನಗೆ ನಂಬಿ ಯೊಡನಾಡಿಯುಂ
ಮಾ ॥ ಪ್ರಿಯದೇವರದಾಸಯ್ಯಂ । ನಿಯತಂ ಬಹುಧಾನ್ಯಕೋಶಪಾಲಕ ನಲ್ತೆ ॥ ॥೩೯॥

ಮ ॥ ಸ್ರ ॥ ಗಣನಾಥಂ ಸುಪ್ರಧಾನಂ ನಿನಗಧಿಕಹಿತಂ ಭೋಗಯಂ ಕೇಶಿರಾಜಂ ।
ಗಣಕಂ ಗೇಹಕ್ಕೆ ಸಮ್ಮಾರ್ಜನೆಯನೆಸಗುವಳ್ನಂಬಿ ಪೌರಾಣಿಕಂ ಸ ॥ ದ್ಗುಣಧಾಮಂ
ಮಾಯಿದೇವಂ ಮತಿಯುತಜಗದೇವಂ ಭವದ್ದಂಡನಾಥಂ । ರಣದೊಳ್ಗೆಲ್ವಂಕನೇಣಾಧಿಪತಿ
ಪಡಿವಳಂ ಚೇರಮಂ ಚಂದ್ರಮೌಳಿ॥ ... ... ... ... ॥೪೦॥

ಮತ್ತೇ ॥ ನೆಗಳ್ದಮ್ಮವ್ವೆಯೆ ದಾದಿ ರುದ್ರಪಶುಪಂ ತ್ರ್ಯಸ್ಮೃತ್ಯುಹೃನ್ಮಂತ್ರವಾ । ದಿ
ಗಭೀರಂ ಮಲಯಾಧಿಪಂ ನಿನಗೆ ಸಾಮಂತಂ ಭವನ್ಮುದ್ರೆಯುಂ ॥ ಡಿಗೆಕಾರಂ ಗಡ ಕಿನ್ನರಂ
ಮಡಿಯನೀವಂ ಮಾಚಯಂ ನಿನ್ನಪೊ । ರ್ದುಗೆಕಾರಂ ಮಿಗೆ ರಾಮಯಂ ಸುರಗಿಕಾರಂ
ಚೌಡಯಂ ಶಂಕರ ॥ ... ... ... ... ॥೪೧॥

ಚಂ॥ ಹರನಿನಗಲ್ಲಮಪ್ರಭುವೆ ಸತ್ಪ್ರಭು ಧೀರಹಲಾಯುಧಂ ಭವ । ದ್ವರನಯಶಿಕ್ಷ
ಕಂ ಕರುಳಕೇತಯನಂಕದವಂ ಪ್ರಸಾದಿ ಭಾ ॥ ಸುರಮತಿ ಬಿಬ್ಬಬಾಚವಿಭು ಕುಂಬರ ನಗ್ಗ

---

ಚಂಡಯ್ಯನು, ಪಶುಪಾಲಕಂ- ಗೋಪಾಲಕನು, ಕಲ್ಲಯಂ, ಘನಗಾರುಡಂ- ಗಾರುಡಿಗನು; ಪಟುಜೊ
ಮ್ಮಯಂ- ಸಮರ್ಥನಾದಜೊಮ್ಮಯ್ಯನು, ಮೃಗಯಾಚರಂ- ಬೇಟೆಯವನು. ... ॥೩೮॥

ನಯಯುತನಾಪ್ಯನಮಿತ್ತಂಡಿಯೆ, ನಿಮಗೆ, ಬೆಜ್ಜಂ- ವೈದ್ಯನು; ನಂಬಿ, ಒಡನಾಡಿಯುಂ- ಸಂಗ
ಡಗಾರನು; ಆಪ್ರಿಯದೆ ವರದಾಸಯ್ಯಂ, ನಿಯತಂ- ಸ್ಥಿರನಾದ, ಬಹುಧಾನ್ಯಕೋಶಪಾಲಕನಲ್ತೆ- ಅಧಿಕ
ವಾದ ಧಾನ್ಯದ ಬೊಕ್ಕಸವಂ ಕಾಯುವವನಲ್ಲವೇ? ... ... ... ... ॥೩೯॥

ಗಣನಾಥಂ, ನಿನಗೆ, ಸುಪ್ರಧಾನಂ; ಭೋಗಯಂ, ಅಧಿಕಹಿತಂ- ಅತ್ಯಂತಹಿತನು; ಕೇಶಿರಾಜಂ, ಗ
ಣಕಂ- ಲೆಕ್ಕದವನು; ನಂಬಿ, ಗೇಹಕ್ಕೆ- ಮನೆಗೆ, ಸಮ್ಮಾರ್ಜನೆಯಂ- ಸಾರಣೆಯನ್ನು, ಎಸಗುವಳ್-ಮಾ
ಡುವವಳು; ಸದ್ಗುಣಧಾಮಂ- ಸುಗುಣಾಶ್ರಯನಾದ, ಮಾಯಿದೇವಂ, ಪೌರಾಣಿಕಂ; ಮತಿಯುತಜಗ
ದೇವಂ- ಬುದ್ಧಿವಂತನಾದ ಜಗದೇವನು, ಭವದ್ದಂಡನಾಥಂ- ನಿನ್ನ ಮಂತ್ರಿಯು; ಏಣಾಧಿಪತಿ, ರಣದೊ
ಳ್- ಯುದ್ಧದಲ್ಲಿ, ಗೆಲ್ವ, ಅಂಕಂ- ಬಿರುದುಳ್ಳವನು; ಚಂದ್ರಮೌಳಿ! ಚೇರಮಂ, ಪಡಿವಳಂ- ಸೈನ್ಯಾಧಿ
ಕಾರಿಯು. ... ... ... ... ॥೪೦

ನೆಗಳ್ದ-ಪ್ರಸಿದ್ಧಳಾದ, ಅಮ್ಮವ್ವೆಯೆ, ದಾದಿ; ರುದ್ರಪಶುಪಂ, ತ್ರ್ಯಸ್ಮೃತ್ಯುಹೃನ್ಮಂತ್ರವಾದಿ-ನಿನ್ನ
ಅಪಮೃತ್ಯುವಂ ಹೋಗಲಾಡಿಸುವ ಯೋಚನೆಯಂ ಹೇಳುವವನು; ಗಭೀರಂ-ಗಂಭೀರನಾದ, ಮಲಯಾ
ಧಿಪಂ, ನಿನಗೆ, ಸಾಮಂತಂ- ಪಾಳಯಗಾರನು; ಕಿನ್ನರಂ, ಭವನ್ಮುದ್ರೆಯು-ನಿನ್ನ ಮುದ್ರೆಯು, ಉಂಡಿಗೆಕಾ
ರಂ-ಉಂಡಿಗೆಯನ್ನೊತ್ತುವವನು, ಮಾಚಯಂ, ಮಡಿಯಂ, ಈವಂ; ಮಿಗೆ, ರಾಮಯಂ, ನಿನ್ನ, ಪೊರ್ದು
ಗೆಕಾರಂ-ಏಕಾಂತದವನು; ಶಂಕರ! ಚೌಡಯ್ಯಂ, ಸುರಗಿಕಾರಂ-ಕತ್ತಿಯಂ ಹಿಡಿಯುವಚಾಕರನು. ॥೪೧॥

ಹರ, ನಿನಗೆ, ಅಲ್ಲಮಪ್ರಭುವೆ, ಸತ್ಪ್ರಭು- ಸಮೀಚೀನನಾದ ಸರ್ವಾಧಿಕಾರಿಯು; ಧೀರಹಲಾಯು
ಧಂ, ಭವದ್ವರನಯಶಿಕ್ಷಕಂ- ನಿನಗೆ ಶ್ರೇಷ್ಠವಾದ ನೀತಿಯಂ ಹೇಳುವವನು;ಕರುಳಕೇತಯಂ, ಅಂಕದವಂ-
ಅಂಕದ ಬಾಗಿಲಂ ಕಾಯುವವನು; ಭಾಸುರಮತಿ- ಪ್ರಕಾಶಿಸುವ ಬುದ್ಧಿಯುಳ್ಳ, ಬಿಬ್ಬಿಬಾಚವಿಭು, ಪ್ರಸಾ

ದಗುಂಡಯಂ ಗುಣಾ । ಕರನುತಕಕ್ಕಯ್ಯಂ ನಿನಗೆಯಾಮಿಕ ನಲ್ತೆ ಮನೋಜಭುಜನ ॥
ಕಂ ॥ ಆರೂರ ಚೊಕ್ಕನಾಥಂ । ಮಾರಾಂತಕ ನಿನ್ನ ಸಹಣಿಯಿರಿವತ್ತ್ನವಂ ॥ ವಾರ
ಣಶಿಕ್ಷಕ ನಮಳಾ । ಚಾರಂ ಬಸವಾಭಿಧಂ ಭವತ್ಪ್ರತಿಹಾರಂ ॥ ... ... ॥೪೩॥
ಕಂ ॥ ವಿನಿಯೋಗದರೆಮ್ಮ ಪುರಾ । ತನ ರಿಂತಿಂತಮರ್ದು ಮೆರೆಯೆ ನಿನ್ನರಸುತ
ನ ॥ ಕ್ಕಿನಿತುಂಟೆ ಕೊರತೆ ಯಾನವ । ರನುಚರ ನೆನಗಾವವಸ್ತು ದುರ್ಲಭ ಮಭವ ॥೪೪॥
ಕಂ ॥ ಸ್ಮರಹರ ನಾಲ್ಕನೆಯಕ್ಷಿಯು । ನೆರೆ ಜೇಡಾರನೆಯುವೊಗಮು ನರ್ಥಿಸು ಶೋ
ಭಾ ॥ ಕರನವಮಾಂಗಮು ನಾದೊಡ । ಮಿರದಿತ್ತಪೆ ನೀಗಳಂಜೆ ನಿದಕೆ ಪುರಾರೀ ॥೪೫॥
ಕಂ ॥ ಭವದಷ್ಟಮೂರ್ತಿಗ ಳ್ಮಾ । ಧವವಿಧಿಮುಖರೊಗೆಯದಂದು ಮೆನಗಾಳ್ದಂ
ನೀಂ ॥ ಭವದೀಯಭೃತ್ಯನಾಂ ಜೇರೆ ವಿಚಾರಿಪುದೇನೊ ಮದನಮದವಿಧ್ವಂಸಿ ॥ ॥೪೬॥
ವ ॥ ಎಂದು ವೃಷೇಂದ್ರಂ ಪೊಣರ್ಕೆಯಿಂ ನುಡಿಯೆಸಂಗಮೇಶ್ವರಂ ಕೇಳ್ದು ತದ್ಭ
ಕ್ತಿಸುಧಾರಸಮಂ ಸವಿದಂತೆ ಸಂತುಷ್ಟನಾಗಿ ನಿರುಪಮದಯಾರಸಮಿಳಿತಕಟಾಕ್ಷದಿ ನಡ
ರೆನೋಡಿ ಕಾರುಣ್ಯಮಂ ನೀಡಿ ಪಿರಿದಾನಂದಿಸುತ್ತ ಮಿರೆಯಿರೆ ॥ * * * * *

---

ದಿ; ಅಗ್ಗದ- ಶ್ರೇಷ್ಠನಾದ, ಗುಂಡಯ್ಯಂ, ಕುಂಬರಂ- ಕುಂಭಗಳಂ ಮಾಡಿಕೊಡುವವನು; ಮನೋಜಭು
ಜನ! ಗುಣಾಕರನುತಕಕ್ಕಯ್ಯಂ- ಸದ್ಗುಣಗಳಿಗಾಶ್ರಯನಾದ ಶ್ಲಾಘ್ಯನಾದ ಕಕ್ಕಯ್ಯನು, ನಿನಗೆ, ಯಾಮಿ
ಕನಲ್ತೆ- ಕಾಲವಂ ತಿಳಿಯಪಡಿಸುವವನಲ್ಲವೆ? ... ... ... ... ... ॥೪೨॥

ಮಾರಾಂತಕ! ಆರೂರಚೊಕ್ಕನಾಥಂ, ನಿನ್ನ, ಸಹಣಿ- ಕುದುರೆಯ ಸಹಣಿಗಾರನು; ಅವಂ, ಇರಿವ
ತ್ತ್ನಂ, ವಾರಣಶಿಕ್ಷಕಂ- ಆನೆಗಳಂ ತಿದ್ದುವವನು; ಅಮಳಾಚಾರಂ- ನಿರ್ಮಲವಾದ ಆಚಾರವುಳ್ಳ, ಬಸವಾಭಿ
ಧಂ- ಬಸವನೆಂಬ ಹೆಸರುಳ್ಳವನು, ಭವತ್ಪ್ರತಿಹಾರಂ-ನಿನ್ನ ಕಂಚುಕಿಯು. ... ... ॥೪೩॥

ಅಭವ! ಎಮ್ಮ, ಪುರಾತನರ್, ಇಂತಿಂತು- ಈ ಈ ಪ್ರಕಾರವಾಗಿ, ವಿನಿಯೋಗದವರ್- ಸೇವಕರಾಗಿ,
ಅಮರ್ದು-ಸೇರಿ, ಮೆರೆಯೆ- ಪ್ರಕಾಶಿಸುತ್ತಿರಲು, ನಿನ್ನ, ಅರಸುತನಕ್ಕೆ, ಇನಿತು- ಇಷ್ಟು ಕೊರತೆ, ಉಂಟೆ?
ಆಂ, ಅವರ- ಆ ಪುರಾತನರ, ಅನುಚರಂ- ಸೇವಕನು, ಎನಗೆ, ಆವವಸ್ತು, ದುರ್ಲಭಂ? ... ॥೪೪॥

ಸ್ಮರಹರ! ನಾಲ್ಕನೆಯ, ಅಕ್ಷಿಯಂ- ಕಣ್ಣನ್ನು, ಎರೆ- ಬೇಡು; ಆರನೆಯ, ಮೊಗಮಂ, ಬೇ
ಡು; ಶೋಭಾಕರನವಮಾಂಗಮನಾದೊಡಂ- ಕಾಂತಿಗಾಶ್ರಯನಾದ ಒಂಭತ್ತನೆಯ ದೇಹವನ್ನಾದರೂ,
ಅರ್ಥಿಸು- ಯಾಚಿಸು; ಈಗಳ್, ಇರದೆ- ಬಿಡದೆ, ಇತ್ತಪೆಂ; ಪುರಾರಿ! ಇದಕೆ, ಅಂಜೆಂ- ಭಯಪಡು
ವದಿಲ್ಲ. ... ... ... ... ... ... ॥೪೫॥

ಮದನಮದವಿಧ್ವಂಸಿ! ಭವದಷ್ಟಮೂರ್ತಿಗಳ್- ನಿನ್ನ ಪೃಥಿವ್ಯಾದಿಯಾದ ಎಂಟುಶರೀರಗಳು, ಮಾ
ಧವವಿಧಿಮುಖರ್- ವಿಷ್ಣು ಬ್ರಹ್ಮ ಮೊದಲಾದ ದೇವತೆಗಳು, ಒಗೆಯದಂದುಂ- ಹುಟ್ಟದಿರುವಕಾಲದಲ್ಲೂ,
ಎನಗೆ– ನನ್ನನ್ನು, ಆಳ್ದಂ- ಪರಿಪಾಲಿಸಿದವನು, ನೀಂ; ಆಂ, ಭವದೀಯಭೃತ್ಯಂ-ನಿನ್ನ ಆಳು; ಬೇರೆ, ವಿಚಾ
ರಿಪುದು, ಏನೊ? ... ... ... ... ... ॥೪೬॥

ಎಂದು, ವೃಷೇಂದ್ರಂ, ಪೊಣರ್ಕೆಯಿಂ- ಪ್ರತಿಭಟತ್ವದಿಂದ, ನುಡಿಯೆ, ಸಂಗಮೇಶ್ವರಂ, ಕೇಳ್ದು,ಸ
ದ್ಭಕ್ತಿಸುಧಾರಸಮಂ, ಸವಿದಂತೆ, ಸಂತುಷ್ಟಂ, ಆಗಿ, ನಿರುಪಮದಯಾರಸಮಿಳಿತಕಟಾಕ್ಷದಿಂ- ಅಸದೃಶ
ವಾದ ಕೃಪೆಯಿಂ ಕೂಡಿದ ಕಡೆಗಣ್ಣೋಟದಿಂದ, ಅಡರೆನೋಡಿ- ಚೆನ್ನಾಗಿನೋಡಿ, ಕಾರುಣ್ಯಮಂ, ನೀಡಿ,
ಪಿರಿದು- ಅಧಿಕವಾಗಿ, ಆನಂದಿಸುತ್ತಂ, ಇರೆಯಿರೆ. * * * * * * * * * * *

ಮ. ॥ ಸ್ರ ॥ ಶಿವ ನಿಂತೀಳ್ತಂದು ಭಾಳೇಕ್ಷಣನ ನೆರೆಯೆ ತಾಂ ಕೊಟ್ಟು ತನ್ಮಾಯೆಯಂ ತೊಳ್ದು ವಿಳಾಸಂಬೆತ್ತು ಸದ್ಭಕ್ತಿಯಿಂ ನಭವನ ನೋರಂತೆ ಗೆಲ್ದೊಪ್ಪಿದಂ ಶಾಂಭವಲೀಲಾಮೂರ್ತಿ ಕೀರ್ತಿದ್ಯುತಿಜಿತಹಿಮಕರ್ಪೂರಪಾಟೀರದುಗ್ಧಾರ್ಣವತಾರಾಹೀರಹಾರಾಮರಕರಿಹರಿಶಯ್ಯಾಹಿಚಂದ್ರಂ ವೃಷೇಂದ್ರಂ ॥ ... ... ॥೮೨॥

ಲಲಿತಪದವೃತ್ತಂ॥ ರಾಘವವಿಬೋಧಕ ಮಹಾಘಟಭವಸ್ತುತ ಯಶೋಘಟಿತದಿಕ್ತಟ ಸುಧೀಘನಜನಸ್ಮೇನೋಘ । ಪಾಪಘಮದಸಂಹೃತಿನಿದಾಘ ಕರುಣಾಮೃತರಸೌಘಪರಿಪೂರ್ಣದೃಗ ಮೋಘವರದಾತ ॥ ಮೇಘರುಚಿಕಂಧರ ವಿಲಾಘವಚರಿತ್ರ ಸುಕಲಾಘಟನಧೀರ ಮುನಿಸೌಘಕೃತನಿತ್ಯ ! ಶ್ಲಾಘ ಭವಸಂಚಯಘನಾಘನಸಮೀರ ಪೊರೆ ಭೂಘಟಕುಲಾಲ ವಿಜಿತಾಘ ಬಸವೇಶ ॥ ... .. ... ... ॥೮೩॥

ಲಯಗ್ರಾಹಿವೃತ್ತಂ ॥ ದರಸ್ಮಿತವಿರಾಜಿತಸರೋರುಹವರಾನನೆ ಸುರೇಶ್ವರವಿರಿಂಚವಿನುತೇ । ಪುರತ್ರಯಹರಪ್ರಿಯೆ ನಿರಂತರಗುರುಸ್ತನಭರಾನ್ವಿತೆ ಪುರಾತನಮತೇ ॥ ಮು

---

ಶಿವಂ, ಇಂತು, ಏಳ್ತಂದು, ಭಾಳೇಕ್ಷಣನುಂ- ಹಣೆಗಣ್ಣನ್ನು, ನೆರೆಯೆ-ಬೇಡಲು,ಶಾಂಭವಲೀಲಾಮೂರ್ತಿ- ಈಶ್ವರವಿಲಾಸಸ್ವರೂಪನಾದ, ಕೀರ್ತಿ......ಚಂದ್ರಂ— ಕೀರ್ತಿ- ಯಶಸ್ಸಿನ, ದ್ಯುತಿ-ಕಾಂತಿಯಿಂದ. ಜಿತ- ಜೈಸಲ್ಪಟ್ಟ, ಹಿಮ, ಕರ್ಪೂರ, ಪಾಟೀರ- ಶ್ರೀಗಂಧ, ದುಗ್ಧಾರ್ಣವ- ಕ್ಷೀರಸಮುದ್ರ, ತಾರಾ- ನಕ್ಷತ್ರ, ಹೀರ- ವಜ್ರ, ಹಾರ- ಮುಕ್ತಾಹಾರ, ಅಮರಕರಿ- ಐರಾವತ, ಹರಿಶಯ್ಯಾಹಿ- ವಿಷ್ಣುವಿನಹಾಸಿಗೆಯಾಗಿರುವ ಆದಿಶೇಷ, ಚಂದ್ರಂ-ಚಂದ್ರ ಇವರುಗಳುಳ್ಳ, ವೃಷೇಂದ್ರಂ, ತಾಂ, ಕೊಟ್ಟು, ತನ್ಮಾಯೆಯಂ- ಆ ಶಿವನಮಾಯೆಯನ್ನು, ತೊಳ್ದು- ಮೆಟ್ಟಿ, ವಿಳಾಸಂಬೆತ್ತು, ಸದ್ಭಕ್ತಿಯಿಂ, ಅಭವನಂ, ಓರಂತೆ- ಚೆನ್ನಾಗಿ,ಗೆಲ್ದು,ಒಪ್ಪಿದಂ. ... ... ... ... ... ॥೮೨॥

ರಾಘವವಿಬೋಧಕ- ರಾಮನಿಗೆ ಜ್ಞಾನೋಪದೇಶವಂಮಾಡಿದ, ಮಹಾಘಟಭವಸ್ತುತ- ಶ್ರೇಷ್ಠನಾದ ಅಗಸ್ತ್ಯರ್ಷಿಯಿಂ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ, ಯಶೋಘಟಿತದಿಕ್ತಟ- ಕೀರ್ತಿಯಿಂದ ತುಂಬಿದ ದಿಕ್ಪ್ರದೇಶಗಳುಳ್ಳ, ಸುಧೀ......ನಿದಾಘ— ಸುಧೀಘನಜನ- ವಿದ್ವಾಂಸರೆಂಬ ಶ್ರೇಷ್ಠರಾದಜನಗಳ, ಏನಃ- ಪಾಪವೆಂಬ, ಮಾಘ- ಶಿಶಿರಕಾಲದ, ಮದ- ಗರ್ವದ, ಸಂಹೃತಿ— ಸಂಹರಣವಿಷಯದಲ್ಲಿ, ನಿದಾಘ- ಗ್ರೀಷ್ಮಕಾಲನಾದ, ಕರುಣಾಮೃತರಸೌಘಪರಿಪೂರ್ಣದೃಕ್- ದಯೆಯೆಂಬ ಅಮೃತರಸಪ್ರವಾಹದಿಂದ ಸಂಪೂರ್ಣವಾದ ನೇತ್ರವುಳ್ಳ, ಅಮೋಘವರದಾತ- ವ್ಯರ್ಥವಾಗದ ವರಗಳನ್ನು ಕೊಡುವ, ಮೇಘರುಚಿಕಂಧರ- ಮೋಡದ ಕಾಂತಿಯಂತಿರುವ ಕಾಂತಿಯುಳ್ಳ ಕಂಠವುಳ್ಳ, ವಿಲಾಘವಚರಿತ್ರ- ಲಾಘವರಹಿತವಾದಚರಿತ್ರವುಳ್ಳ, ಸುಕಲಾಘಟನಧೀರ- ಸದ್ವಿದ್ಯೆಯನ್ನುಪದೇಶಿಸುವದರಲ್ಲಿ ಸಮರ್ಥನಾದ, ಮುನಿಸೌಘಕೃತನಿತ್ಯಶ್ಲಾಘ- ಋಷಿಶ್ರೇಷ್ಠರಿಂದ ಮಾಡಲ್ಪಟ್ಟ ಶಾಶ್ವತವಾದ ಶ್ಲಾಘನೆಯುಳ್ಳ, ಭವಸಂಚಯಘನಾಘನಸಮೀರಣ- ಪಾಪಸಮೂಹವೆಂಬ ಮೇಘಕ್ಕೆ ವಾಯುರೂಪನಾದ, ಭೂಘಟಕುಲಾಲ- ಭೂಮಿಯೆಂಬ ಕುಂಭಕ್ಕೆ ಕುಂಭಕಾರನಾದ (ಅಂದರೆ ಭೂನಿರ್ಮಾತೃವಾದ,) ವಿಜಿತಾಘ- ಜೈಸಲ್ಪಟ್ಟ ಪಾಪವುಳ್ಳ, ಬಸವೇಶ, ಪೊರೆ. ॥೮೩॥

ದರಸ್ಮಿತವಿರಾಜಿತಸರೋರುಹವರಾನನೆ- ಮಂದಹಾಸದಿಂದ ಪ್ರಕಾಶಿಸುವ ಕಮಲದಂತಿರುವ ಮುಖವುಳ್ಳ, ಸುರೇಶ್ವರವಿರಿಂಚವಿನುತೇ- ಇಂದ್ರ ಬ್ರಹ್ಮ ಇವರಿಂ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ, ಪುರತ್ರಯಹ

---

* (ಅವ). ಕಲಶದಲ್ಲಿ ಹುಟ್ಟಿದವನು. ... ... ... ॥೮೪॥

ರಾಂತಕಪುರೋಗಮವರಪ್ರದೆ ಸುರಕ್ಷಿತಚರಾಚರೆ ಪರಾಕ್ಷರಮಯೀ । ನಿರಾಮಯೆ ನಿರಾಕುಳೆ ನಿರರ್ಗಳೆ ನಿರಂಜನೆ ಧರಾಧರಸುತೇ ಜಯಜಯ ॥ ... ... ॥೪೯॥

ಗದ್ಯಂ ॥ ಇದು ವಿನಮದಖಿಳಸುರಾಸುರೇಂದ್ರಮುಕುಟತಟಘಟಿತಮಣಿಗಣಾಗಣಿತರುಚಿನಿಚಯಿತರುಣಾರುಣಾತಪಪರಿಲಸಿತ ಪರಮಶಿವಲಿಂಗಪಾದಾರವಿಂದಪರಾಗಭಸಿತಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಸಂಗಮೇಶ್ವರಲಲಾಟೇಕ್ಷಣದಾನಕಥನಂ ಷಷ್ಠಾಶ್ವಾಸಂ ಪರಿಸಮಾಪ್ತಂ॥ .. ... ... ... .. *

ಷಷ್ಠಾಶ್ವಾಸಂ ಸಂಪೂರ್ಣಂ.

ಶ್ರೀಃ

ಭಿಕ್ಷಾಟನವಿನೋದಾಯ ಪರಬ್ರಹ್ಮಣೇನಮಃ.

## ಸಪ್ತಮಾಶ್ವಾಸಂ.

### ಗೋ ಪಿ ಕಾ ಧಿ ಕ ಥ ನಂ.

ಕಂ॥ ಶ್ರೀಹೈಮವತೀಹೃದಯಕು । ತೂಹಲಕರದಿವ್ಯರೂಪ ನವ್ಯಯನಭವಂ॥ ಮೋಹಾಂಧಕಾರರವಿ ವೃಷ । ವಾಹಂ ಪೊರೆಗೆಮ್ಮ ನಾವಗಂ ಶಿವಲಿಂಗಂ ॥ .. ... ॥೧॥

ರಪ್ರಿಯೆ- ಈಶ್ವರನಿಗೆ ಪ್ರೀತಿಪಾತ್ರಳಾದ, ನಿರಂತರಗುರುಸ್ತನಭರಾನ್ವಿತೆ- ಸದಾ ದಪ್ಪವಾದ ಕುಚಗಳಿಂ ಕೂಡಿರುವ, ಪುರಾತನಮತೇ- ಪುರಾತನರಿಂ ಪೂಜಿತಳಾದ, * ಮುರಾಂತಕಪುರೋಗಮವರಪ್ರದೆ- ವಿಷ್ಣು ಮುಂತಾದ ದೇವತೆಗಳಿಗೆ ವರಗಳನ್ನು ಕೊಡುವ, ಸುರಕ್ಷಿತಚರಾಚರೆ- ಚೆನ್ನಾಗಿ ಪಾಲಿಸಲ್ಪಟ್ಟ ಸ್ಥಾವರ ಜಂಗಮಗಳುಳ್ಳ, ಪರಾಕ್ಷರಮಯೀ-ಓಂಕಾರರೂಪಿಣಿಯಾದ, ನಿರಾಮಯೆ-ಭವರೋಗರಹಿತಳಾದ, ನಿರಾಕುಳೆ-ವ್ಯಾಕುಲರಹಿತಳಾದ, ನಿರರ್ಗಳೆ- ತಡೆಯಿಲ್ಲದಿರುವ, ನಿರಂಜನೆ- ಅಜ್ಞಾನರಹಿತಳಾದ, ಧರಾಧರಸುತೇ-ಪರ್ವತ ಪುತ್ರಿಯೇ, ಜಯಜಯ. ... ... ... ... ... ॥೪೯॥

ಆರನೆಯ ಆಶ್ವಾಸವು ಸಂಪೂರ್ಣವು.

ಏಳನೆಯ ಆಶ್ವಾಸಪ್ರಾರಂಭಃ.

ಶ್ರೀ- ......ರೂಪಂ— ಶ್ರೀ ಸಂಪದ್ಯುಕ್ತಳಾದ,ಹೈಮವತೀ- ಪಾರ್ವತಿಯ, ಹೃದಯ- ಮನಸ್ಸಿಗೆ, ಕುತೂಹಲಕರ- ನೋಡುವಅಪೇಕ್ಷೆಯನ್ನುಂಟುಮಾಡುವ, ದಿವ್ಯ- ಶ್ರೇಷ್ಠವಾದ, ರೂಪಂ- ಆಕಾರವುಳ್ಳ, ಅವ್ಯಯಂ- ನಾಶರಹಿತನಾದ, ಅಭವಂ- ಭವರಹಿತನಾದ, ಮೋಹಾಂಧಕಾರರವಿ- ಅಜ್ಞಾನವೆಂಬ ಕತ್ತಲೆಗೆ ಸೂರ್ಯನಾದ,ವೃಷವಾಹಂ-ವೃಷಭೇಶ್ವರನೇ ವಾಹನವಾಗುಳ್ಳ, ಶಿವಲಿಂಗಂ, ಎಮ್ಮಂ,ಆವಗಂ, ಪೊರೆಗೆ ॥೧॥

* (ಅವ) ಮುರಾಸುರನನ್ನು ನಾಶಪಡಿಸಿದವನು. ... ... ... ॥೪೯॥

ಮ ॥ ಸ್ರ॥ ಮಣಿಪೀಠಾರೂಢ ನುದ್ಯತ್ಸಚಿವಚಯಸಮಾಸೇವ್ಯಮಾನಂ ವರಸ್ತ್ರೀ॥ ಕ್ವಣದಂಚತ್ಕಂಕಣಕ್ವಾಣಯುತಕರತಳಾಂದೋಳಿತೋಚ್ಚಾಮರಂ ಭೂ ॥ ಷಣಕಾಂತಿ ಪ್ರಾಂಜುಳಾಂಗಂ ಬುಧನುತ ನತುಳೋದ್ದಾಮಸಾಮಂತಭೂಭೃ । ದ್ಗಣಕೋಟೀರಾಂಶುನೀ ರಾಜಿತ ನತುಳಕಳಾಮಂಜುಳಂ ಬಿಜ್ಜಳೇಂದ್ರಂ ॥ ... ... ... ॥೨॥

ಕಂ ॥ ಓಲಗದೊಳೊಪ್ಪುತಿರೆತ । ದ್ಭೂಬಲನಾಥವಸಭಾಸರೋನಿಧಿಹಂಸಂ ॥ ಲೀಲೆ ಯಿನೆಸೆವನುಮಾವರ । ಲೋಲಂಸದ್ಭಕ್ತಪುಂಗವಂಬಸವೇಶಂ ॥ ... ॥೩॥

ವ ॥ ಅಂತೆಸೆಯುತ್ತಮಿರ್ದು ॥ * * * * * *

ಕಂ ॥ ಅರಸಂ ನಡೆನೋಡುತ್ತಿರೆ । ಕರಯುಗಮಂ ನೆಗಪಿ ಬಸವನಾಕಸ್ಮಿಕದಿಂ ॥ ತರುಣಿಯುಗಪೋಗದು ನಿಲ್ಲೆಂ । ದುರವಣಿಸುತ್ತೆತ್ತೆ ಕಂಡು ನಕ್ಕ ನಿಳೇಶಂ ॥ ॥೪॥

ವ ॥ ಅಂತು ನಗುತ್ತಿರ್ದಿರ್ದ್ದದೇಂ ವಿಸ್ಮಯಂ ಬೊಟ್ಟನನಿತುಭಸಿತವ ನಿಟ್ಟವಂಗೆ ಬೆಟ್ಟದನಿತು ಮರುಳ್ತನಮೆಂಬುದು ನಿಮ್ಮೊಳ್ಕಾಣಲಾದುದು ಬಸವ ಕರಯುಗಳಮಂ ನೆಗಪಿ ಸಡಗರಿಸಿ ಪಿಡಿದುದೇನೆಂದು ತನ್ನರೇಂದ್ರಂ ಕೇಳಲೊಡನೆ॥ * * * * * *

---

ಅತುಳಕಳಾಮಂಜುಳಂ- ಅಸದೃಶಗಳಾದ ವಿದ್ಯೆಗಳಿಂ ಮನೋಹರನಾದ, ಮಣಿಪೀಠಾರೂಢಂ— ರತ್ನಖಚಿತವಾದ ಪೀಠದಲ್ಲಿ ಕುಳಿತಿರುವ, ಉದ್ಯತ್ಸಚಿವಚಯಸಮಾಸೇವ್ಯಮಾನಂ- ಶ್ರೇಷ್ಠರಾದ ಮಂತ್ರಿಗಳ ಸಮೂಹದಿಂದ ಸೇವಿಸಲ್ಪಡುವ, ವರಸ್ತ್ರೀ...............ಚಾಮರಂ— ವರಸ್ತ್ರೀ- ಶ್ರೇಷ್ಠರಾದ ಸ್ತ್ರೀಯರ, ಕ್ವಣತ್- ಧ್ವನಿಮಾಡುತ್ತಿರುವ, ಅಂಚತ್-ಶ್ರೇಷ್ಠವಾದ, ಕಂಕಣ- ಕಡಗಗಳ, ಕ್ವಾಣ- ಶಬ್ದದಿಂದ, ಯುತ- ಕೂಡಿದ, ಕರತಳ- ಹಸ್ತಪ್ರದೇಶದಿಂದ, ಆಂದೋಳಿತ- ತೂಗಾಡಿಸಲ್ಪಟ್ಟ, ಉಚ್ಚಾಮರಂ- ಅಧಿಕವಾದ ಚಾಮರಗಳುಳ್ಳ, ಭೂಷಣಕಾಂತಿಪ್ರಾಂಜುಳಾಂಗಂ- ಆಭರಣಗಳ ಪ್ರಕಾಶದಿಂದ ಮನೋಹರವಾದ ಶರೀರವುಳ್ಳ, ಬುಧನುತಂ- ವಿದ್ವಾಂಸರಿಂದ ಕೊಂಡಾಡಲ್ಪಟ್ಟ, ಅತುಳೋ.........ನೀರಾಜಿತಂ— ಅತುಳ- ಅಸದೃಶರಾದ, ಉದ್ದಾಮ- ಶ್ರೇಷ್ಠರಾದ, ಸಾಮಂತಭೂಭೃತ್- ಆಶ್ರಿತರಾಜರ, ಗಣ- ಸಮೂಹದ, ಕಿರೀಟ- ಕಿರೀಟಗಳ, ಅಂಶು- ಕಾಂತಿಯಿಂದ, ನೀರಾಜಿತಂ- ಆರತಿಯೆತ್ತಲ್ಪಟ್ಟ, ಬಿಜ್ಜಳೇಂದ್ರಂ. ... ... ... ... ... ॥೨॥

ಓಲಗದೊಳ್, ಒಪ್ಪುತ್ತಿ, ಇರೆ, ತದ್ಭೂಬಲನಾಥವಸಭಾಸರೋನಿಧಿಹಂಸಂ— ತದ್ಭೂಬಲನಾಥವ- ಆ ಬಿಜ್ಜಳರಾಜನ, ಸಭಾ- ಸಭೆಯೆಂಬ, ಸರೋನಿಧಿ- ಸಮುದ್ರಕ್ಕೆ, ಹಂಸಂ-ಹಂಸಪಕ್ಷಿಯಾದ, ಉಮಾವರಲೋಲಂ-ಈಶ್ವರನಲ್ಲಾಸಕ್ತಿಯುಳ್ಳ, ಸದ್ಭಕ್ತಪುಂಗವಂ- ಸದ್ಭಕ್ತರಲ್ಲಿ ಶ್ರೇಷ್ಠನಾದ, ಬಸವೇಶಂ, ಲೀಲೆಯಿಂ, ಎಸೆದಂ. ... ... ... ... ... ॥೩॥

ಅರಸಂ, ನಡೆ, ನೋಡುತ್ತಿರೆ, ಬಸವಂ, ಆಕಸ್ಮಿಕದಿಂ— ಅಕಸ್ಮಾತ್ತಾಗಿ, ಕರಯುಗಮಂ- ಎರಡುಕಯ್ಗಳನ್ನು, ನೆಗಪಿ- ಎತ್ತಿ, ತರುಣಿ- ಸ್ತ್ರೀಯೇ! ಉಗವೆ ಬೀಳದೆ, ಒಗೆದುನಿಲ್-ಎದ್ದುನಿಲ್ಲು; ಎಂದು, ಉರವಣಿಸುತ್ತೆ- ಸಿದ್ಧಪಡಿಸುತ್ತೆ, ಎತ್ತೆ, ಇಳೇಶಂ- ರಾಜನು, ಕಂಡು, ನಕ್ಕಂ. ... ... ॥೪॥

ಅಂತು, ನಗುತ್ತೆ, ಇರ್ದ್ದಿರ್ದ್ದು- ಇದೇಂವಿಸ್ಮಯಂ- ಇದೇನಾಶ್ಚರ್ಯ? ಬೊಟ್ಟನನಿತುಭಸಿತವಂ- ಒಂದು ಬೊಟ್ಟನಷ್ಟು ವಿಭೂತಿಯನ್ನು, ಇಟ್ಟವಂಗೆ- ಧರಿಸಿದವನಿಗೆ, ಬೆಟ್ಟದನಿತುಮರುಳ್ತನಂ- ಬೆಟ್ಟದಷ್ಟು ಹುಚ್ಚುತನ; ಎಂಬುದು, ನಿಮ್ಮೊಳ್, ಕಾಣಲಾದುದು- ಕಂಡುಬಂದಿತು, ಬಸವ! ಕರಯುಗಳಮಂ, ನೆಗಪಿ, ಸಡಗರಿಸಿ, ಸಂಭ್ರಮಂಗೊಂಡು, ಪಿಡಿದುದೇಂ? ಎಂದು, ತನ್ನರೇಂದ್ರಂ, ಕೇಳಲ್, ಒಡನೆ. * * *

24

ಕಂ ॥ ಉಸಿರಲ್ಕಾಗದು ನಿಜಗುಣ । ವಿಸರಮ ನುಸಿರದೊಡೆ ನಗುವುದೀಸಭೆಯೆನು
ತಂ ॥ ಬೆಸಗೊಂಡರಸಂಗೆಂದಂ । ಬಸವಂ ಕೇಳ್ನೃಪತಿನಿನ್ನ ಪಟ್ಟಣದೆಡೆಯೊಳ್ ॥೫॥

ಕಂ ॥ ಪರಮತ್ರಿಪುರಾಂತಕಮಂ । ದಿರಕ್ಕೆ ಪೂರ್ವದೊಳೆಮರೆವುದರೆಗಾವುದದೊಳ್॥
ಸುಧುಚಿರಕಪಿಲೇಶ್ವರನೆಂ । ಬುರುಲಿಂಗಂ ಮೇಣದಕ್ಕೆ ತಾಪಸನೋರ್ವಂ ॥ ... ॥೬॥

ಚಂ ॥ ಅಮೃತಘಟೀಸಹಸ್ರದಭಿಷೇಕಮನಾಗಿಸೆ ಭಕ್ತಿಯಿಂದೆ ತ । ದ್ವಿಮಳಸುಧಾ
ರಸಂ ಪರಿದು ಕೋಳ್ಗಸರೇಳ್ದಿರೆ ಬೀಡಿಯಲ್ಲಿ ಗೋ ॥ ಪಮಹಿಳೆ ತಕ್ರವಿಕ್ರಯಕೆ ತಾನಳೆ
ವೊತ್ತು ಬರುತ್ತೆ ಜಾರಿ ಕ । ರ್ದಮದೆ ನಿಜಾಂಘ್ರಿಬೀಳ್ವಪಥದೊಳ್ಬಸವಾ ಎನುತೆನ್ನ
ನಾಮಮಂ ॥ ... ... ... ... ... ... ॥೭॥

ಕಂ॥ ಪಿಡಿದತಿದೈನ್ಯದಿ ನೆನ್ನಂ । ಪಿಡಿದೆತ್ತೆನೆ ತಕ್ರಭಾಂಡಮುರುಳದಮುನ್ನಂ ॥ ಪಿ
ಡಿದೆತ್ತಿದೆ ನಾಕೆಯು ನೆನೆ । ಕಡುಚೋದ್ಯಂ ಬಟ್ಟು ನೃಪತಿ ಬರಿಸಿದನವಳಂ ॥ ॥೮॥

ಛಂದೋವೃತ್ತಂ ॥ ಪಂಕಸಂಕಲಿತವಾಮಕರಾಬ್ಜಂ ತಕ್ರಘಟಾಂಚಿತಮಂಸಕಂ ।
ಸಂಕದೋಲೆ ಜಲಪಂಕಕಣಂ ತಳ್ತಂಚಿನಚೇಲ ಮರಲ್ಗಳಂ ॥ ನೂಂಕಿ ಬಿಟ್ಟ ಮುಡಿ ಘರ್ಮ

---

ನಿಜಗುಣವಿಸರಮಂ- ತನ್ನ ಸದ್ಗುಣಸಮೂಹವನ್ನು, ಉಸಿರಲ್ಕೆ- ಹೇಳುವದಕ್ಕೆ, ಆಗದು; ಉಸಿರ ದೊಡೆ- ಹೇಳದಿದ್ದರೆ, ಈಸಭೆ, ನಗುವುದು, ಎನುತಂ, ಬೆಸಗೊಂಡ- ಕೇಳಿದ, ಅರಸಂಗೆ, ಬಸವಂ, ಎಂದಂ, ನೃಪತಿ! ಕೇಳ್, ನಿನ್ನ, ಪಟ್ಟಣದ, ಎಡೆಯೊಳ್-ಸಮೀಪದಲ್ಲಿ. ... ... ... ॥೫॥

ಪರಮತ್ರಿಪುರಾಂತಕಮಂದಿರಕ್ಕೆ- ಉತ್ಕೃಷ್ಟವಾದ ತ್ರಿಪುರಾಂತಕೇಶ್ವರದೇವಸ್ಥಾನಕ್ಕೆ, ಪೂರ್ವ ದೊಳೆ, ಪೂರ್ವದಿಕ್ಕಿನಲ್ಲಿ, ಅರೆಗಾವುದದೊಳ್,ಸುರುಚಿರಕಪಿಲೇಶ್ವರನೆಂಬ, ಉರುಲಿಂಗಂ, ಮೆರೆವುದು, ಮೇ ಣ್,ಅದಕ್ಕೆ, ಓರ್ವಂ,ತಾಪಸಂ- ಋಷಿಯು. ... ... ... ... ॥೬॥

ಭಕ್ತಿಯಿಂದೆ, ಅಮೃತಘಟೀಸಹಸ್ರದ- ಸಹಸ್ರಕುಂಭದಹಾಲಿನ, ಅಭಿಷೇಕಮಂ, ಆಗಿಸೆ, ತದ್ವಿಮಳ ಸುಧಾರಸಂ- ಆನಿರ್ಮಲವಾದ ಹಾಲು, ಪರಿದು, ಬೀದಿಯಲ್ಲಿ, ಕೋಳ್ಗೆಸರ್-ಶೀತವಂಬಕೆಸರು, ಏಳ್ದಿರೆ, ಗೋ ಪಮಹಿಳೆ- ಗೋಪಾಲಕಸ್ತ್ರೀಯು, ತಾಂ, ತಕ್ರವಿಕ್ರಯಕೆ- ಮಜ್ಜಿಗೆಯಂ ಮಾರುವದಕ್ಕೋಸ್ಕರ, ಅಳೆವೊತ್ತು- ಮಜ್ಜಿಗೆಯಂ ಹೊತ್ತುಕೊಂಡು, ಬರುತ್ತೆ, ಕರ್ದಮದೆ- ಕೆಸರಿನಲ್ಲಿ, ಜಾರಿ, ನಿಜಾಂಘ್ರಿ- ತ ನ್ನಕಾಲು, ಬೀಳ್ವಪಥದೊಳ್- ಬೀಳುವಸಂದರ್ಭದಲ್ಲಿ, ಬಸವಾ ! ಎನುತೆ, ಎನ್ನ, ನಾಮಮಂ. ... ॥೭॥

ಪಿಡಿದು, ಅತಿದೈನ್ಯದಿಂ, ಎನ್ನಂ, ಪಿಡಿದು, ಎತ್ತು, ಎನೆ, ತಕ್ರಭಾಂಡಂ- ಮಜ್ಜಿಗೆಯ ಮಡಕೆಯು, ಉರುಳದಮುನ್ನಂ- ಉರುಳದಿರುವದಕ್ಕಿಂತಲೂ ಪೂರ್ವದಲ್ಲೇ, ಆಕೆಯಂ, ಪಿಡಿದು, ಎತ್ತಿದೆಂ, ಎನೆ, ನೃಪ ತಿ, ಕಡುಚೋದ್ಯಂಬಟ್ಟು- ಅತ್ಯಾಶ್ಚರ್ಯಪಟ್ಟು, ಅವಳಂ- ಆ ಗೋಪಿಯನ್ನು, ಬರಿಸಿದಂ- ಬರಮಾ ಡಿಸಿದನು. ... ... ... ... ॥೮॥

ಪಂಕಸಂಕಲಿತವಾಮಕರಾಬ್ಜಂ— ಪಂಕ- ಕೆಸರಿನಿಂದ, ಸಂಕಲಿತ- ಕೂಡಿದ, ವಾಮಕರಾಬ್ಜಂ- ಕ ಮಲದಂತಿರುವ ಎಡಗಯ್ಯು, ತಕ್ರಘಟಾಂಚಿತಂ- ಮಜ್ಜಿಗೆಯ ಕುಂಭದಿಂದ ಕೂಡಿದ, ಅಂಸಕಂ- ಹೆಗಲು, ಸಂಕದ- ಶಂಖದಿಂದಮಾಡಿರುವ, ಓಲೆ- ಕರ್ಣಾಭರಣವು, ಜಲಪಂಕಕಣಂತಳ್ತ-ನೀರಿನ ಕೆಸರಿನಿಂದ ವ್ಯಾಪ್ತ ವಾದ, ಅಂಚಿನ, ಚೇಲಂ- ಸೀರೆಯು, ಅಲರ್ಗಳಂ- ಹೂವ್ಗಳನ್ನು, ನೂಂಕಿಬಿಟ್ಟ, ಮುಡಿ- ಕೇಶಬಂಧನವು, ಘರ್ಮಜಲಾರ್ದ್ರಂ- ಬೆಮರಿನಿಂದ ನೆನೆದಿರುವ, ಭಾಳವಿಭೂತಿ- ಹಣೆಯಲ್ಲಿರುವಭಸ್ಮವು, ಶಿವಾಕ್ಷಮಾಲಾಂಕೆ

ಜಲಾರ್ದ್ರಂ ಭಾಳವಿಭೂತಿ ಶಿವಾಕ್ಷಮಾ । ಲಾಂಕಿತಂ ಗಳಮದೊಪ್ಪಿರೆ ಬಂದ ಳ್ಗೋಪವಧೂಟ ವಿಳಾಸದಿಂ ॥ ... ... ... ... ... ॥೯॥

ವ ॥ ಅಂತೇಳ್ತಂದು ಬಸವಂಗ ಮರಸಂಗಂ ವಿನಯಾವನತೆಯಾಗಿ ನಿಂದು॥ * *

ಕಂ ॥ ಬೆಸಗೊಳೆ ಬಿಜ್ಜಳಭೂಪಂ । ಬಸವಂ ಮುನ್ನೊರೆದ ತೆರದಿ ನಿನಿಸುಳಿಯದೆ ಚೈ॥ ಕ್ಯಸಮೊದವೆ ಸಭೆಗೆ ಗೊಲ್ಲಿತಿ । ಯುಸಿರ್ದಳ್ತನ್ನೃಪತಿಗಾದಕಜ್ಜಮ ನಾಗಳ್॥೧೦॥

ವ ॥ ಅಂತು ಮಾಗೋಪಿ ಸವಿಸ್ತರಮುಸಿರ್ದಲ್ಲಿ ತನಗಾದ ಕುರುಪುಗಳಂ ತೋರೆಕೆಂಡು ॥ * * * * * * * * *

ಕಂ ॥ ಎಲೆಗೋಪಿ ಯೆನ್ನಸಭೆಯೊಳ್ । ನೆಲಸಿರ್ದ್ದಿರ್ದಂತೆ ನಿನ್ನ ಘಟಮಂ ಬಸವಂ ॥ ನಲಿದೆತ್ತಿದುದರಿದೆನೆ ಭೂ । ಲಲನೇಶಗೆ ಗೋಪಕಾಂತೆ ಮಗುಳ್ದಿಂತೆಂದಳ್ ॥ ॥೧೧॥

ಕಂ ॥ ಮುನ್ನೊರ್ವ್ವ ನಭವಭಕ್ತಂ । ಪೊನ್ನಾಂಬಲನಾಥನೆಂಬ ಪೆಸರಿಂದೆಸೆದಂ ॥ಪೊನ್ನಾಂಬಲಪುರದಲ್ಲಿ ಜ । ಗನ್ನುತಗುಣರತ್ನಭೂಷಣಂ ಕೇಳರಸ ॥ ... ॥೧೨॥

ಕಂ ॥ ಹರನಂ ಪೂಜಿಸುತಂ ಸಾ । ಸಿರಕುಸುಮಂಗಳಿ ನಜಸ್ರಮೊಪ್ಪುತ್ತಿರ್ದ್ದ ॥ ವರಭಕ್ತಂ ಪೂಪಿರಿಯ । ಲ್ಕರಂಡಮಂ ಕೊಂಡು ಪುಷ್ಪವನಕೇಳ್ತಂದಂ ॥ ॥೧೩॥

ಚಂ ॥ ಸುರಯಿಯರಲ್ಗಳಂ ಮಿಸುಪಸಂಪಗೆವೂಗಳ ನಿಂಪುವೆತ್ತಮಾ । ದರಿಯ ಲ

---

ತಂ- ರುದ್ರಾಕ್ಷಿಯಸರದಿಂದ ಕೂಡಿದ, ಗಳಂ- ಕಂಠವು, ಅದು, ಒಪ್ಪಿರೆ, ಗೋಪವಧೂಟ-ಗೋಪಿಕಾಸ್ತ್ರೀಯು, ವಿಳಾಸದಿಂ, ಬಂದಳ್. ... ... ... ... ॥೯॥

ಅಂತು, ಏಳ್ತಂದು, ಬಸವಂಗಂ,ಅರಸಂಗಂ,ವಿನಯಾವನತೆಯಾಗಿ- ವಿನಯದಿಂದನಮಸ್ಕರಿಸಿ,ನಿಂದು.

ಬಿಜ್ಜಳಭೂಪಂ, ಬೆಸಗೊಳೆ- ಕೇಳಲು, ಗೊಲ್ಲಿತಿ, ಬಸವಂ, ಮುನ್ನ, ಒರೆದ- ಹೇಳಿದ, ತೆರದಿಂ- ರೀತಿಯಿಂದ, ಇನಿಸು- ಇಷ್ಟು, ಉಳಿಯದೆ- ಬಿಡದೆ, ಸಭೆಗೆ, ಸಭೆಯಲ್ಲಿರುವಜನಕ್ಕೆ, ಚೈಕ್ಯಸಂ- ಆಶ್ಚರ್ಯವು,ಒದವೆ-ಉಂಟಾಗುವಂತೆ, ತನ್ನೃಪತಿಗೆ- ಆರಾಜನಿಗೆ, ಆಗಳ್, ಆದ,ಕಜ್ಜಮಂ-ಕಾರ್ಯವನ್ನು,ಉಸಿರ್ದಳ್.॥೧೦॥

ಅಂತು, ಆಗೋಪಿ, ಸವಿಸ್ತರಂ, ಉಸಿರ್ದು, ಅಲ್ಲಿ, ತನಗೆ, ಆದ, ಕುರುಪುಗಳಂ-ಗುರುತುಗಳನ್ನು, ತೋರೆ, ಕೆಂಡು. * * * * * * * * * * * * * * *

ಎಲೆಗೋಪಿ! ಬಸವಂ, ಎನ್ನ, ಸಭೆಯೊಳ್, ನೆಲಸಿ- ಕುಳಿತು, ಇರ್ದ್ದಿರ್ದಂತೆ, ನಿನ್ನ, ಘಟಮಂ, ನಲಿದು, ಎತ್ತಿದುದು, ಅರಿದು- ಅಸಾಧ್ಯವು, ಎನೆ, ಭೂಲಲನೇಶಗೆ- ರಾಜನಿಗೆ, ಗೋಪಕಾಂತೆ, ಮಗುಳ್ದು, ಇಂತೆಂದಳ್. ... ... ... ... ॥೧೧॥

## ಪೊನ್ನಾಂಬಲನಾಥನ ಕಥೆ.

ಅರಸ, ಕೇಳ್, ಮುನ್ನ, ಪೊನ್ನಾಂಬಲಪುರದಲ್ಲಿ, ಜಗನ್ನುತಗುಣರತ್ನಭೂಷಣಂ- ಲೋಕಶ್ಲಾಘ್ಯಗಳಾದ ಸದ್ಗುಣಗಳೆಂಬಾಭರಣವುಳ್ಳ, ಓರ್ವಂ, ಅಭವಭಕ್ತಂ, ಪೊನ್ನಾಂಬಲನಾಥಂ, ಎಂಬ, ಪೆಸರಿಂದೆ, ಎಸೆದಂ.

ಅಜಸ್ರಂ- ನಿರಂತರದಲ್ಲೂ, ಸಾಸಿರಕುಸುಮಂಗಳಿಂ- ಸಹಸ್ರ ಪುಷ್ಪಗಳಿಂದ, ಹರನಂ, ಪೂಜಿಸುತಂ, ಒಪ್ಪುತ್ತ, ಇರ್ದ್ದ, ಆ ವರಭಕ್ತಂ, ಶ್ರೇಷ್ಠನಾದ ಶಿವಭಕ್ತನು, ಪೂದಿರಿಯಲ್-ಹೂವನ್ನೆತ್ತುವದಕ್ಕೋಸ್ಕರ, ಕರಂಡಮಂ- ಹೂವಿನ ಕುಕ್ಕೆಯನ್ನು, ಕೊಂಡು- ತೆಗೆದುಕೊಂಡು, ಪುಷ್ಪವನಕ್ಕೆ,ಏಳ್ತಂದಂ.॥೧೩॥

ಸುರಯಿಯರಲ್ಗಳಂ- ಸುರಗಿಯ ಹೂವ್ವಗಳನ್ನು, ಮಿಸುಪ, ಸಂಪಗೆವೂಗಳಂ, ಇಂಪುವೆತ್ತ- ಮ

ತಾಂತಮಂ ವಿಚಕಿಲಪ್ರಸವಂಗಳ ನರ್ಕ್ಕಪುಷ್ಪಮಂ ‖ ಸುರುಚಿರಮಾಧವೀಕುಸುಮಮಂ ಕಮಲೋದ್ಗಮಮಂ ಸುಗಂಧಬಂ | ಧುರಕುಮುದಪ್ರಸೂನಕುಲಮಂ ನವಬಿಲ್ವದಳಪ್ರತಾನಮಂ ‖ ... ... ... ... ‖೧೪‖

ಮತ್ತೇ ‖ ಪದಪಿಂ ಕೊಯ್ದು ಕರಂಡಕಂ ಜಡಿಯೆ ತೀವ್ರುತ್ತುಂ ತಾಳ್ದು ತ | ಳ್ವದೆ ಬರ್ಪಲ್ಲಿ ನಿಜಾಂಘ್ರಿ ಜಾರೆ ಕೆಸರೊಳ್ ಮನ್ನಾಥ ದೇವೇಶ ಶಂ ‖ ಭು ದಯಾವಾರ್ಧಿ ಚಿದಂಬರೇಶ ಪಿಡಿ ಯೆಂದಾಭಕ್ತನಂ ಬೀಳದಂ | ದದೆ ಬಂದೆತ್ತಿದ ನೀಶ ನಾಗಿರಿಶ ನುತೆನ್ನಂ ವೃಷಾಧೀಶ್ವರಂ ‖ ... ... .. ... ‖೧೫‖

ಕಂ ‖ ಪಿಡಿದೆತ್ತಿದ ನಳಿದೀವಿದ | ಕೊಡನೊಡನೆ ಮಹಾಮಹಾತ್ಮ ನೀತನ ಪೆಂಪಂ ‖ ನುಡಿಯಲಸದಳ ಮದೆಂತೆನೆ | ಪೊಡವಿಯೊಳೆ ಸುವರ್ಣ್ನವಲ್ಲಿಯೆಂಬಾಪುರದೊಳ್ ‖ ‖೧೬‖

ಚಂ ‖ ಕರಮೆಸೆದಿರ್ಪ ನೋರ್ವ ನನಘಂ ತನುಧರ್ಮವಿಮುಕ್ತ ನುತ್ತರೋ | ತ್ತರಶಿವಯೋಗಧುರ್ಯ ನಕಳಂಕಮಹಾಮತಿ ಸಿದ್ಧರಾಮ ನೆಂ ‖ ಬುರುತರತಾಪಸಂ ಶತಸಹಸ್ರನವೀನಶಿವಾಲಯಂಗಳಂ | ವಿರಚಿಸಿ ಮಲ್ಲಿಕಾರ್ಜುನನ ನಲ್ಲಿಗೆ ತಂದು ಮಹತ್ತ್ವಮಂಡಿತಂ ‖

ಕಂ ‖ ಪಣೆಗಣ್ಣ ಪರಮಗುಣನಿಧಿ | ಮಣಿಮಕುಟದ ಮಹಿಮ ನಮಳಚಿನ್ಮಯನಿ

---

ಮನೋಹರವಾದ, ಪಾದರಿಯ, ಲತಾಂತಮಂ- ಹೂವನ್ನು, ವಿಚಕಿಲಪ್ರಸವಂಗಳಂ- ಮಲ್ಲಿಗೆಯ ಹೂವ್ಗಳನ್ನು, ಅರ್ಕ್ಕಪುಷ್ಪಮಂ- ಯಕ್ಕೆದಹೂವನ್ನು, ಸುರುಚಿರಮಾಧವೀಕುಸುಮಮಂ-ಮನೋಹರವಾದ ವಸಂತಮಾಲತೀಪುಷ್ಪವನ್ನು, ಕಮಲೋದ್ಗಮಮಂ- ತಾವರೆಯ ಹೂವನ್ನು, ಸುಗಂಧಬಂಧುರಕುಮುದಪ್ರಸೂನಕುಲಮಂ- ಪರಿಮಳವಿಶಿಷ್ಟವಾದ ನೈದಿಲೆಹೂವುಗಳ ಸಮೂಹವನ್ನು, ನವಬಿಲ್ವದಳಪ್ರತಾನಮಂ.

ಪದಪಿಂ- ಪ್ರೀತಿಯಿಂದ, ಕೊಯ್ದು, ಕರಂಡಕಂ- ಹೂವಿನ ಭರಣಿಯು, ಜಡಿಯೆ- ಜಗ್ಗುವಂತೆ, ತೀವುತ್ತೆ- ತುಂಬುತ್ತ, ಅಂತು, ಅದಂ, ತಾಳ್ದು, ತಳ್ವದೆ- ನಿಲ್ಲದೆ, ಬರ್ಪಲ್ಲಿ, ಕೆಸರೊಳ್, ನಿಜಾಂಘ್ರಿ- ತನ್ನ ಪಾದವು, ಜಾರೆ, ಮನ್ನಾಥ- ನನಗೆ ಸ್ವಾಮಿಯಾದ! ದೇವೇಶ! ಶಂಭು! ದಯಾವಾರ್ಧಿ! ಚಿದಂಬರೇಶ! ಪಿಡಿ, ಎಂದ-ಹೀಗೆಹೇಳಿದ, ಆಭಕ್ತನಂ, ಬೀಳದಂದದೆ-ಬೀಳದಂತೆ, ಆ ಗಿರಿಶಂ, ಕೈಲಾಸವಾಸಿಯಾದ, ಈಶಂ, ಬಂದು, ಎತ್ತಿದಂ, ಅಂತು, ಎನ್ನಂ, ವೃಷಾಧೀಶ್ವರಂ. ... ... ... ‖೧೫‖

ಅಳಿದೀವಿದ- ಮಜ್ಜಿಗೆಯಿಂ ತುಂಬಿದ್ದ, ಕೊಡನ, ಒಡನೆ, ಪಿಡಿದು, ಎತ್ತಿದಂ, ಮಹಾಮಹಾತ್ಮಂ-ಅತ್ಯಂತಮಹಿಮೆಯುಳ್ಳ, ಈತನ, ಪೆಂಪಂ- ಅತಿಶಯವನ್ನು, ನುಡಿಯಲ್, ಅಸದಳಂ- ಅಸಾಧ್ಯವು; ಅದೆಂತೆನೆ, ಪೊಡವಿಯೊಳೆ- ಭೂಮಿಯಲ್ಲಿ, ಸುವರ್ಣವಲ್ಲಿ, ಎಂಬ, ಆಪುರದೊಳ್. ... ... ‖೧೬‖

## ಸಿದ್ಧರಾಮಶಿವಯೋಗಿಯ ಕಥೆ.

ಅನಘಂ- ಪಾಪರಹಿತನಾದ, ತನುಧರ್ಮವಿಮುಕ್ತಂ- ದೇಹಗುಣದಿಂದ ರಹಿತನಾದ, ಉತ್ತರೋತ್ತರಶಿವಯೋಗಧುರ್ಯಂ- ಉನ್ನತಸ್ಥಿತಿಯಲ್ಲಿರುವ ಶಿವಯೋಗದಲ್ಲಿ ಸಮರ್ಥನಾದ, ಅಕಳಂಕಮಹಾಮತಿ- ನಿರ್ದುಷ್ಟವಾದ ಮಹಾ ಬುದ್ಧಿಯುಳ್ಳ, ಮಹತ್ತ್ವಮಂಡಿತಂ- ಮಹಿಮಾಲಂಕೃತನಾದ, ಸಿದ್ಧರಾಮಂ, ಎಂಬ, ಓರ್ವಂ, ಉರುತರತಾಪಸಂ- ಶ್ರೇಷ್ಠನಾದ ತಪಸ್ವಿಯು, ಶತಸಹಸ್ರನವೀನಶಿವಾಲಯಂಗಳಂ- ವಿರಚಿಸಿ, ಅಲ್ಲಿಗೆ, ಮಲ್ಲಿಕಾರ್ಜುನನಂ, ತಂದಂ. ... ... ... ... ‖೧೭‖

ಪಣೆಗಣ್ಣ- ಹಣೆಯಲ್ಲಿ ಕಣ್ಣುಳ್ಳ, ಪರಮಗುಣನಿಧಿ, ಮಣಿಮಕುಟದ, ಮಹಿಮಂ,ಅಮಳಚಿನ್ಮಯಂ-

ರ್ದಂ ‖ ಗಣಸಭೆಯೊಳೋರ್ಮೆ ಸುಮನೋ | ಗಣಸನ್ನುತಸಿದ್ಧರಾಮ ನಭಿನವಭೀಮಂ ‖

ವ ‖ ಆಗಳಾಶಿವಯೋಗಿಲಲಾಮನಂ ಸಕಲಮಾಹೇಶ್ವರ ರ್ಕೊಂಡಾಡಿ ‖ * * *

ಚಂ ‖ ಅನುದಿನ ಮೀಶಲೋಕಕೆ ಮಹಾಶಿವಯೋಗದೊಳೈದಿ ಮಾರಮ | ರ್ದನನ ಸಮೀಪದೊಳ್ ಪ್ರಮಥಗೋಷ್ಠಿಯೊಳೊಂದಿ ಶಿವಾನುಭಾವಸೇ ‖ ವನೆಯು ನೊಡರ್ಚಿ ಬರ್ಪೆಗಡ ನೀಂ ಬಿತದಲ್ಲಿಯು ಮೀವೃಷೇಂದ್ರನಿ | ರ್ಪನೆ ನೆಲೆವೇಳ್ವುದೆಮ್ಮೊಡನೆನುತ್ತ ಮ ವರ್ಬೆಸಗೊಂಡರಾತನಂ ‖ ... ... ... ... ‖೯‖

ವ ‖ ಎಂದವರ್ಬೆಸಗೊಳ್ವಿನ ಮಾಕೈಲಾಸಕ್ಕೆ ಪೋಗಿ ಬಸವನಿರ್ಪುದಂ ತಿಳಿದೇಳ್ತಂ ದು ನಿಮ್ಮಡಿಗಾಂ ಬಿನ್ನವಿಪೆ ನೆಂದು ಸಿದ್ಧರಾಮಂ ನುಡಿದು ‖ * * * * * *

ಸುತ್ತೇ ‖ ನೆಗೆದಂ ತತ್‌ಕ್ಷಣದೊಳ್ದಿನೇಶರುಚಿಯಂ ತಳ್ಪೊಯ್ಯೆ ಕಾಯಾಂಶು ಕೈ | ಮಿಗೆ ತಾರಾಪಥದಲ್ಲಿ ಬರ್ಪದಿವಿಜ ರ್ಸಂಪ್ರೀತಿಯಿಂ ಪೂಜೆಗೆ ‖ ಯ್ಯೆ ಗಣಾನೀಕ ಮಭೀಕ್ಷಿಸುತ್ತೆ ಮುದದಿಂ ಕೊಂಡಾಡೆ ಕೈಲಾಸಮಂ | ಪುಗುತಂದದ್ರಿಜೆಯಾಣ್ಮನಿರ್ಪ ಸಭೆಯಂ ಪ್ರೊಕ್ಕಂ ಮಹೋತ್ಸಾಹದಿಂ ‖ ... ... ... ... ‖೨೦‖

ವ ‖ ಅಂತು ಪೊಕ್ಕು ನಿರೀಕ್ಷಿಸಾಗಳ್ ‖ ಸ್ರ ‖ ಪಿಂಗಾಕ್ಷಂ ಭರ್ಗ ನುಗ್ರಂ ಶ ಮನದಮನ ನಿಂದ್ರಾರಿ ಗಂಗೋತ್ತಮಾಂಗಂ | ತುಂಗಾಂಗಂ ಧೂಮವರ್ಣಂ ವಿಧಿಮದಹರ

---

ನಿರ್ಮಲವಾದ ಜ್ಞಾನಸ್ವರೂಪನಾದ, ಅಭಿನವಭೀಮಂ- ನೂತನಪರಶಿವಸ್ವರೂಪನಾದ, ಸುಮನೋಗಣಸನ್ನುತಸಿದ್ಧರಾಮಂ- ದೇವಗಣದಿಂ ಶ್ಲಾಘ್ಯನಾದ ಸಿದ್ಧರಾಮನು, ಓರ್ಮೆ, ಗಣಸಭೆಯೊಳ್, ಇರ್ದಂ. ‖೧೮‖

ಆಗಳ್, ಆಶಿವಯೋಗಿಲಲಾಮನಂ-ಶಿವಯೋಗಿಶ್ರೇಷ್ಠನನ್ನು, ಸಕಲಮಾಹೇಶ್ವರರ್, ಕೊಂಡಾಡಿ.

ನೀಂ, ಅನುದಿನಂ- ಪ್ರತಿದಿವಸದಲ್ಲಿಯೂ, ಮಹಾಶಿವಯೋಗದೊಳ್- ಅಧಿಕವಾದ ಶಿವಯೋಗದಿಂದ, ಈಶಲೋಕಕೆ, ಐದಿ- ಹೋಗಿ, ಮಾರಮರ್ದನನ, ಸಮೀಪದೊಳ್, ಪ್ರಮಥಗೋಷ್ಠಿಯೊಳ್- ಪ್ರಮಥಸಭೆಯಲ್ಲಿ, ಒಂದಿ- ಸೇರಿ, ಶಿವಾನುಭಾವಸೇವನೆಯುಂ, ಒಡರ್ಚಿ- ಮಾಡಿ, ಬರ್ಪೆಗಡ- ಬರುತ್ತೀಯಲ್ಲವೇ? ಅಲ್ಲಿಯುಂ-ಆ ಕೈಲಾಸದಲ್ಲಿಯೂ, ಈವೃಷೇಂದ್ರಂ, ಇರ್ಪನೇ? ನಮ್ಮೊಡನೆ-ನೆಲೆವೇಳ್ವುದು-ನಿಶ್ಚಯವಾಗಿ ಹೇಳಬೇಕು; ಎನುತ್ತಂ, ಅವರ್- ಆತನಂ- ಆ ಸಿದ್ಧರಾಮಯೋಗಿಯನ್ನು, ಬೆಸಗೊಂಡರ್. ... ‖೧೯‖

ಎಂದು, ಅವರ್, ಬೆಸಗೊಳ್ವಿನಂ, ಆಕೈಲಾಸಕ್ಕೆ, ಪೋಗಿ, ಬಸವಂ, ಇರ್ಪುದಂ, ತಿಳಿದು,ಏಳ್ತಂದು, ನಿಮ್ಮಡಿಗೆ- ನಿಮ್ಮ ಪಾದಕ್ಕೆ, ಆಂ, ಬಿನ್ನವಿಪೆಂ, ಎಂದು, ಸಿದ್ಧರಾಮಂ, ನುಡಿದು. * * * * *

ತತ್‌ಕ್ಷಣದೊಳ್, ನೆಗೆದಂ, ಕಾಯಾಂಶು- ದೇಹದ ಕಾಂತಿಯು, ಕೈಮಿಗೆ- ಅಧಿಕವಾಗಿ, ದಿನೇಶರುಚಿಯಂ- ಸೂರ್ಯನ ಪ್ರಕಾಶವನ್ನು, ತಳ್ಪೊಯ್ಯೆ- ಹಿಂದಕ್ಕೆ ತಳ್ಳುತ್ತಿರಲು, ತಾರಾಪಥದಲ್ಲಿ- ಅಂತರಿಕ್ಷದಲ್ಲಿ, ಬರ್ಪ, ದಿವಿಜರ್- ದೇವತೆಗಳು, ಸಂಪ್ರೀತಿಯಿಂ, ಪೂಜೆಗೆಯ್ಯೆ; ಗಣಾನೀಕಂ- ಪ್ರಮಥಗಣ ಸಮುದಾಯವು, ಅಭೀಕ್ಷಿಸುತ್ತೆ- ನೋಡುತ್ತ; ಮುದದಿಂ, ಕೊಂಡಾಡೆ, ಅಂದು, ಕೈಲಾಸಮಂ, ಪುಗುತೆ, ಅದ್ರಿಜೆಯ- ಪಾರ್ವತಿಯ, ಆಣ್ಮಂ- ಪತಿಯಾದ ಪರಶಿವನು, ಇರ್ಪ, ಸಭೆಯಂ, ಮಹೋತ್ಸಾಹದಿಂ, ಪೊಕ್ಕಂ. ‖೨೦‖

ಅಂತು, ಪೊಕ್ಕು, ನಿರೀಕ್ಷಿಸಾಗಳ್. * * * * * * * * * * * *

ಪಿಂಗಾಕ್ಷಂ, ಭರ್ಗಂ, ಉಗ್ರಂ, ಶಮನದಮನಂ, ಇಂದ್ರಾರಿ, ಗಂಗೋತ್ತಮಾಂಗಂ, ತುಂಗಾಂಗಂ, ಧೂಮವರ್ಣಂ, ವಿಧಿಮದಹರಂ, ಉಗ್ರಾಕ್ಷಂ, ಆದಿತ್ಯವರ್ಣಂ, ಭೃಂಗೀಶಂ, ನಾರಸಿಂಹಪ್ರಹರಂ, ಅತನುಭ

ನುಗ್ರಾಕ್ಷನಾದಿತ್ಯವರ್ಣ್ಣಂ ॥ ಭೃಂಗೀಶಂ ನಾರಸಿಹ್ಮಪ್ರಹರ ನತನುಭಸ್ಮಾಂಗ ನಭ್ರಾಂಗಕಂ
ಮಾ । ತಂಗಪ್ರಧ್ವಂಸಿ ಯುಂಡಾಭರಣ ನಚಲಮಾಲಾಧರಂ ಶಂಕುಕರ್ಣ್ಣಂ ॥ ... ॥೨೧॥
ಮಲ್ಲಿಕಾಮಾಲಾ ॥ ದಂಡಪಾಣಿ ಮಹಾಬಲಂ ಮುಖಮರ್ದ್ದನಂ ಶಿಖಿಲೋಚನಂ । ಪುಂ
ಡರೀಕಹರಂ ಪುರಾರಿ ಶಿಖಂಡಿ ಧೂರ್ಜಟಿ ರೇಣುಕಂ ॥ ಚಂಡಬಾಹು ಹುತಾಶಶಾಸನ ನದ್ರಿ
ಪಾತ ನನಕ್ಷರಂ । ರುಂಡಮಾಲಿ ಕಪಾಲಿ ಶೂಲಧರಂ ಧರಾಧರಕುಂಡಲಂ ॥ .. ॥೨೨॥
ಚಃ॥ ಶರಭಮುಖಂ ಮೃಗೇಂದ್ರವದನಂ ತುರಗಾಸ್ಯನಿಭಾನನಂ ಮಹಾ । ಗಿರಿಲಪನಂ
ಕುರುಂಗರಿಪುತುಂಡ ನಹೀಶ್ವರವಕ್ತ್ರ ನಭ್ರಮೂ ॥ ವರರದಖಂಡನಂ ಕ್ಷಿತಿವಿಯತ್ತ್ರಳತಾ
ಳ ನನಂತ ನಂಬುಜೋ । ದರರಥಪಕ್ಷಭಂಗ ನಿನನೇತ್ರನಿಪಾತನ ನಿಂದುಪೇಷಣಂ ॥೨೩॥
ಮತ್ತೇ ॥ ವಿಕಟಾಂಗಂ ಬಡಬಾನಲಂ ಡಮರುಹಸ್ತಂ ಮೇಘನಾದಂ ಕರೋ । ಟ
ಕರಂ ದಿಗ್ವರಭಂಜನಂ ವಿಜಯಕರ್ಣ್ಣಂ ದೈತ್ಯವಿಧ್ವಂಸಿ ದಾ ॥ ರುಕ ನುಕ್ಷಧ್ವಜ ನಪ್ರಮೇ
ಯ ನನಲಾಂಗಂ ನಾಗರಾಜಾಂಗುಲೀ । ಯಕ ನೂರ್ಧ್ವೇಕ್ಷಣ ನಂಧಕಾರಿ ವಿಷಭಕ್ಷಂ ದಕ್ಷ
ಕೋಲಾಹಲಂ ॥ ... ... ... ॥೨೪॥
ಮ ॥ ಸ್ರ ॥ ಬಲಕಾಯಂ ವೀರರುದ್ರಂ ಸುಖಕರ ನಸಿತಗ್ರೀವ ನಭ್ರಾಳಕಂ ಪಿಂ । ಗ
ಲ ನೀಶಾನಂ ಮಹಾನಾಟ್ಯಕ ನಭವ ನಜೇಯಂ ಗುಹಂ ವೀರಭದ್ರಂ ॥ ಜ್ವಲದಂಗಂ ಕ್ರೂರ
ದಂಷ್ಟ್ರಂ ಕಲವಿಕರಣ ನಾತ್ಮೇಶ್ವರಂ ವಿಶ್ವಪಾಲಂ । ಕುಲಿಶಾಂಗಂ ಶಂಭು ಮೃತ್ಯುಂಜ
ಯ ನರುಣಜಟಂ ಧೀವರಂ ಕಾಲರುದ್ರಂ ॥ .. ... ... ॥೨೫॥
ವ ॥ ಇವರ್ಮೊದಲಾದಗಣಿತಗಣನಿವಹಮಲ್ಲದೆಯುಂ ॥ * * * * * *

---

ಸ್ಮಾಂಗಂ, ಅಭ್ರಾಂಗಕಂ, ಮಾತಂಗಪ್ರಧ್ವಂಸಿ, ಅಂಡಾಭರಣಂ, ಅಚಲಮಾಲಾಧರಂ, ಶಂಕುಕರ್ಣ್ಣಂ. ॥೨೧॥

ದಂಡಪಾಣಿ, ಮಹಾಬಲಂ, ಮುಖಮರ್ದ್ದನಂ, ಶಿಖಿಲೋಚನಂ, ಪುಂಡರೀಕಹರಂ, ಪುರಾರಿ- ಶಿಖಂಡಿ, ಧೂರ್ಜಟಿ, ರೇಣುಕಂ, ಚಂಡಬಾಹು, ಹುತಾಶಶಾಸನಂ, ಅದ್ರಿಪಾತಂ, ಅನಕ್ಷರಂ, ರುಂಡಮಾಲಿ, ಕಪಾಲಿ, ಶೂಲಧರಂ, ಧರಾಧರಕುಂಡಲಂ. ... ... ... ... ॥೨೨॥

ಶರಭಮುಖಂ, ಮೃಗೇಂದ್ರವದನಂ, ತುರಗಾಸ್ಯನಿಭಾನನಂ,ಮಹಾಗಿರಿಲಪನಂ,ಕುರಂಗರಿಪುತುಂಡಂ- ಅಹೀಶ್ವರವಕ್ತ್ರಂ, ಅಭ್ರಮೂವರರದಖಂಡನಂ, ಕ್ಷಿತಿವಿಯತ್ತ್ರಳತಾಳಂ, ಅನಂತಂ, ಅಂಬುಜೋದರರಥಪಕ್ಷಭಂಗಂ, ಇನನೇತ್ರನಿಪಾತನಂ, ಇಂದುಪೇಷಣಂ. ... ... ... .. ॥೨೩॥

ವಿಕಟಾಂಗಂ, ಬಡಬಾನಲಂ, ಡಮರುಹಸ್ತಂ, ಮೇಘನಾದಂ, ಕರೋಟಿಕರಂ, ದಿಗ್ವರಭಂಜನಂ, ವಿಜಯಕರ್ಣ್ಣಂ, ದೈತ್ಯವಿಧ್ವಂಸಿ, ದಾರುಕಂ, ಉಕ್ಷಧ್ವಜಂ, ಅಪ್ರಮೇಯಂ, ಅನಲಾಂಗಂ, ನಾಗರಾಜಾಂಗುಲೀಯಕಂ, ಊರ್ಧ್ವೇಕ್ಷಣಂ, ಅಂಧಕಾರಿ,ವಿಷಭಕ್ಷಂ, ದಕ್ಷಕೋಲಾಹಲಂ. ... ... ॥೨೪॥

ಬಲಕಾಯಂ, ವೀರರುದ್ರಂ, ಸುಖಕರಂ, ಅಸಿತಗ್ರೀವಂ, ಅಭ್ರಾಳಕಂ, ಪಿಂಗಲಂ,ಈಶಾನಂ, ಮಹಾನಾಟ್ಯಕಂ, ಅಭವಂ, ಅಜೇಯಂ, ಗುಹಂ, ವೀರಭದ್ರಂ, ಜ್ವಲದಂಗಂ,ಕ್ರೂರದಂಷ್ಟ್ರಂ, ಕಲವಿಕರಣಂ, ಆತ್ಮೇಶ್ವರಂ, ವಿಶ್ವಪಾಲಂ, ಕುಲಿಶಾಂಗಂ, ಶಂಭು, ಮೃತ್ಯುಂಜಯಂ, ಅರುಣಜಟಂ, ಧೀವರಂ, ಕಾಲರುದ್ರಂ. ..., ... ... ... ... ॥೨೫॥

ಇವರ್ಮೊದಲಾದ, ಅಗಣಿತಗಣನಿವಹಂ-ಅಸಂಖ್ಯಾಕವಾದ ಗಣಸಮೂಹವು, ಅಲ್ಲದೆಯುಂ. * *

ಮ ॥ ಸ್ರ ॥ ಶುಕ ಸೂತಾಗಸ್ತ್ಯ ಕಣ್ವ ದ್ರುಹಿಣಜ ಕಣಭುಗ್ವ್ಯಾಘ್ರಪಾದಾತ್ರಿ ಮೈತ್ರೇಯಕ ಭಾರದ್ವಾಜ ಶಾತಾತಪ ಕಪಿಲ ಕಣಾದಾನಿಲಾದಾಕ್ಷಪತ್ಕೌಶಿಕ ಮಾರ್ಕಂಡೇಯ ವತ್ಸಚ್ಯವನ ಭೃಗು ರುರು ವ್ಯಾಸಮುಖ್ಯಂ ಮುನೀಂದ್ರ ಪ್ರಕರಂ ಸಾಲ್ಗೊಂಡು ವೇದಸ್ತವದಿ ನಭವನಂ ಕೀರ್ತಿಸುತ್ತಿರ್ದ್ದಾಗಳ್ ॥ .. ... ॥೭೬॥

ಚಂ ॥ ಹರಿ ವಿಧಿಜಿಷ್ಣು ವಹ್ನಿ ಶಮನಂ ದನುಜಂ ವರುಣಂ ಪ್ರಭಂಜನಂ ಹರಸಖನೀಶ ನಬ್ಜಸಖ ನಿಂದು ಕುಜಂ ಬುಧ ಜೀವ ಕಾವ್ಯ ಭಾಸ್ಕರಸುತ ರಾಹು ಕೇತುಗಳ ನಂತಮುಖಾಹಿಗ ಳಾಶ್ವಿನೇಯ ರಚ್ಚರ ರಸುರ ರ್ಸುರರ್ವ ಸುಗ ಳೋಲಗಿಸಿರ್ದ್ದರುಮಾಧಿನಾಥನಂ ॥ ... ... ... .. ... ॥೭೭॥

ಚಂ ॥ ಗರುಡರಪಾಳಿ ಗಂಧರರತಿಂತಿಣಿ ಸಿದ್ಧರಪಜ್ಜೆ ಚಾರುಕಿನ್ನರರತೆರಳ್ಕೆ ಕಿಂಪುರುಷರೊಬ್ಬುಳಿ ಗುಹ್ಯಕರೊರ್ಗ್ಗು ಸಾಧ್ಯರುತ್ಕರ ಮೆಡೆಗೊಂಡಚಾರಣರಜಂಗುಳಿ ಯಕ್ಷರವಂಗಡಂ ಮಯೂರರಪಡೆ ವೇದಪೂರುಷರದೊಂದುಳಿ ಯಲ್ಲಿ ಕರಂ ಮನೋಹರಂ॥

ವ ॥ ಆಗಳ್ ॥ ಉ ॥ ಕಾಲನಮುಂದೆ ತೋಳನೊಲೆದೆತ್ತಿ ದಿನೇಶನಮುಂದೆ ತನ್ನ ಕಣ್ಣಾಲೆಯ ನೊತ್ತಿ ಮೆಳ್ಳಿಸಿ ವಿರಿಂಚಿವಧೂಟಿಯಮುಂದೆ ಮೂಗಿನೊಳ್ ಳ್ಳಾಬ್ಬಲಿ

---

ಶುಕ......ಮುಖ್ಯಂ—ಶುಕ, ಸೂತ, ಅಗಸ್ತ್ಯ, ಕಣ್ವ, ದ್ರುಹಿಣಜ, ಕಣಭುಕ್, ವ್ಯಾಘ್ರಪಾದ, ಅತ್ರಿ, ಮೈತ್ರೇಯಕ, ಭಾರದ್ವಾಜ, ಶಾತಾತಪ, ಕಪಿಲ, ಕಣಾದ, ಅನಿಲಾದ, ಅಕ್ಷಪತ್, ಕೌಶಿಕ, ಮಾರ್ಕಂಡೇಯ, ವತ್ಸ, ಚ್ಯವನ, ಭೃಗು, ರುರು, ವ್ಯಾಸ, ಇವರುಗಳೇ, ಮುಖ್ಯಂ- ಮೊದಲಾಗುಳ್ಳ, ಮುನೀಂದ್ರಪ್ರಕರಂ- ಋಷಿಶ್ರೇಷ್ಠರ ಸಮೂಹವು, ಆಗಳ್,ಸಾಲ್ಗೊಂಡು, ವೇದಸ್ತವದಿಂ, ಅಭವನಂ, ಕೀರ್ತಿಸುತ್ತ, ಇರ್ಪ್ಪುದು. ... ... ... ... ... ॥೭೬॥

ಹರಿ, ವಿಧಿ, ಜಿಷ್ಣು- ಇಂದ್ರ, ವಹ್ನಿ, ಶಮನಂ- ಯಮನು, ದನುಜ- ನೈಋತನು, ವರುಣಂ, ಪ್ರಭಂಜನಂ- ವಾಯುವು, ಹರಸಖಂ- ಕುಬೇರನು, ಈಶಂ, ಅಬ್ಜಸಖಂ- ಸೂರ್ಯನು, ಇಂದು, ಕುಜಂ, ಬುಧ, ಜೀವ- ಬೃಹಸ್ಪತಿ, ಕಾವ್ಯ- ಶುಕ್ರ, ಭಾಸ್ಕರಸುತ- ಶನಿ, ರಾಹು, ಕೇತುಗಳ್, ಅನಂತಮುಖಾಹಿಗಳ್- ಆದಿಶೇಷನೇ ಮೊದಲಾದ ಸರ್ಪಗಳು, ಆಶ್ವಿನೇಯರ್-ಅಶ್ವಿನೀದೇವತೆಗಳು, ಅಚ್ಚರರ್- ಅಪ್ಸರರು, ಅಸುರರ್- ರಾಕ್ಷಸರು, ಸುರರ್- ದೇವತೆಗಳು, ಮಸುಗಳ್, ಉಮಾಧವನಂ, ಓಲಗಿಸಿ, ಇರ್ದ್ದರ್. ... ॥೭೭॥

ಅಲ್ಲಿ- ಆಸಭೆಯಲ್ಲಿ, ಗರುಡರ, ಪಾಳಿ, ಗಂಧರರ-ಗಂಧರ್ವರ, ತಿಂತಿಣಿ, ಸಿದ್ಧರ, ಪಜ್ಜೆ, ಚಾರುಕಿನ್ನರರ, ತೆರಳ್ಕೆ, ಕಿಂಪುರುಷರ, ಒಬ್ಬುಳಿ, ಗುಹ್ಯಕರ, ಒರ್ಗು, ಸಾಧ್ಯರ, ಉತ್ಕರಂ, ಎಡೆಗೊಂಡ- ದಟ್ಟವಾಗಿ ತುಂಬಿರುವ,ಚಾರಣರ,ಜಂಗುಳಿ, ಯಕ್ಷರ, ವಂಗಡಂ, ಮಯೂರರ,ಪಡೆ,ವೇದಪೂರುಷರ, ದೊಂದುಳಿ,ಕರಂ, ಮನೋಹರಂ. (ಇಲ್ಲಿ ಪಾಳಿ, ತಿಂತಿಣಿ, ಮುಂತಾದ ಶಬ್ದಗಳು ಸಮುದಾಯವಾಚಕಗಳೆಂದರಿವುದು.) ॥೭೮॥

ಭೃಂಗಿ- ಭೃಂಗೀಶ್ವರನು, ಕಾಲನ- ಯಮನ, ಮುಂದೆ,ತೋಳಂ, ಒಲೆದು- ಅಳ್ಳಾಡಿಸಿ, ಎತ್ತಿ,ದಿನೇಶನ- ಸೂರ್ಯನ, ಮುಂದೆ, ತನ್ನ, ಕಣ್ಣಾಲೆಯುಂ-ಕಣ್ಣಿನ ಗುಡ್ಡೆಯನ್ನು,ಒತ್ತಿ- ಅಮುಕಿ, ಮೆಳ್ಳಿಸಿ, ವಿರಿಂಚಿವಧೂಟಿಯ- ಬ್ರಹ್ಮನ ಪತ್ನಿಯಾದ ಸರಸ್ವತಿಯ, ಮುಂದೆ,ಮೂಗಿನೊಳ್, ತರ್ಜನಿಯುಂ- ತರ್ಜನಿಯು ಬೆರಲನ್ನು, ಚಾಳಿಸುತೆ- ಅಳ್ಳಾಡಿಸುತ್ತ, ಇಟ್ಟು, ದಕ್ಷನ, ಮುಂದೆ, ಮಂಡೆಯುಂ-ಶಿರಸ್ಸನ್ನು, ಆಡಿಸಿ- ಅಳ್ಳಾಡಿಸಿ, ಜ್ವಾಲೆಯ, ಮುಂದೆ, ಕೈಗೊಡಪಿ- ಕೆಯ್ಯನ್ನೊಡರಿ, ಕರಂ, ಕುಣಿದಾಡುತೆ, ಒಪ್ಪಿದಂ, (ಭೃಂಗಿಯು ಯಮನಮುಂದೆ ತೋಳನ್ನೆತ್ತಿದುದರಿಂದ ಈಶ್ವರನಿಂದ ಯಮನಿಗುಂಟಾದ ಬಾಹುಛೇದಸ್ಮರಣೆಯನ್ನೂ,

ಸುತಿಬ್ಬ ತರ್ಜನಿಯನಾಡಿಸಿ ದಕ್ಷನಮುಂದೆ ಮುಂಡೆಯಂ | ಜ್ವಾಲೆಯಮುಂದೆ ಕೈಗೊಡ
ಪಿ ಭೃಂಗಿ ಶರಂ ಕುಣಿದಾಡುತಿಸ್ಪಿದಂ ‖ ... ... ... ‖೨೯‖

ಕಂ‖ ಎಡೆವಕ್ಕದೊಳಬ್ಜಾಕ್ಷಂ | ಜಡಜಭವಂ ಬಲದಪಕ್ಕದೊಳ್ನುತಿಗೆಯ್ಯೆ ‖ ತೊ
ಡನಿರೆ ಕಣ್ಗೆಸೆದಿರ್ದಂ | ಮೃಡನದ್ರಿಜೆವೆರಸಿ ದಿವ್ಯಸಿಹ್ಮಾಸನದೊಳ್ ‖ ... ‖೩೦‖

ಮಲ್ಲಿಕಾಮಾಲಾ ‖ ಪಾಡಿತುಂಬುರನಾರದರ್ನವಗಾನವಂ ಮಿಗೆ ರಂಭೆತಾಂ | ನಾಡೆ ಲಾ
ಸ್ಯಮನೋಜೆಯಿಂ ಘನಮಂತ್ರದೇವಿಯರಣ್ಮಿ ಕೊಂ ‖ ಡಾಡೆ ವಿಷ್ಣುವಿರಿಂಚಿಪತ್ನಿಯ ರಿ
ಕ್ಕೆಲಂಗಳೊಳಿಕ್ಕೆ ಕೈ | ನೀಡಿ ಭಾಸುರಚಾಮರಂಗಳ ನದ್ರಿಜಾಧವನೊಪ್ಪಿದಂ ‖ ‖೩೧‖

ವ ‖ ಆಸಮಯದೊಳ್ಸಿದ್ಧರಾಮಯೋಗೀಂದ್ರ ನಾದರಂಮಿಗೆ ಪೊಡಮಟ್ಟು ಕರಾಂ
ಜಲಿವೆರಸು ಸನ್ನುತಿಗೆಯ್ಯುತ್ತಮಿರೆ ‖ * * * * * *

ಕಂ ‖ ಬಾರಯ್ಯ ಸಿದ್ಧರಾಮ ದ | ಯಾರಸನಿಧಿ ಭಕ್ತರೈದೆ ಸುಖಮಿರ್ಪ್ಪರೆ ಪೇ ‖
ಳ್ಧಾರುಣಿಯೊಳೆಂದು ಕೇಳೆ ಪು | ರಾರಿ ಮುದಂಬೆತ್ತು ಸಿದ್ಧರಾಮಂ ನುಡಿದಂ ‖ ‖೩೨‖

ಕಂ ‖ ಭವದೀಯಕೃಪೆಯಿ ನೆಲ್ಲ | ರ್ಭವಹರ ಸುಖಮಿರ್ಪ್ಪರಲ್ಲಿ ಭಕ್ತರ್ಬಸವಂ ‖ ಶಿವ

---

ಸೂರ್ಯನ ಮುಂದೆ ಕಣ್ಣನ್ನು ಮಿಟ್ಕಿಸಿದುದರಿಂದ,ಆತನ ಪುತ್ರನಾದ ಶನಿಯುಜನನವಾಗಲು ಸೂರ್ಯನಿಗುಂಟಾ
ದ ನೇತ್ರಹಾನಿಯುಸ್ಮರಣೆಯನ್ನೂ, ಸರಸ್ವತಿಯ ಮುಂದೆ ಮೂಗಿನ ಮೇಲೆ ಬೆರಲನ್ನಿರಿಸಿದುದರಿಂದ, ಆಕೆಗೆ
ವೀರಭದ್ರೇಶ್ವರನಿಂದ ದಕ್ಷನಯಾಗಶಾಲೆಯಲ್ಲುಂಟಾದ ನಾಸಿಕಾಛೇದಸ್ಮರಣೆಯನ್ನೂ, ದಕ್ಷನ ಮುಂದೆ ಶಿರ
ಸ್ಸನ್ನು ಅಳ್ಳಾಡಿಸಿದುದರಿಂದ ಆತನಿಗೆ ವೀರಭದ್ರೇಶ್ವರನಿಂದುಂಟಾದ ಶಿರಚ್ಛೇದಸ್ಮರಣೆಯನ್ನೂ,ಜ್ವಾಲೆಯ
ಮುಂದೆ ಕೈಯ್ಯನ್ನಲ್ಲಾಡಿಸಿದುದರಿಂದ, ವೀರಭದ್ರೇಶ್ವರನಿಂದುಂಟಾದ ಜಿಹ್ವಾಚ್ಛೇದಸ್ಮರಣೆಯನ್ನೂ, ಉಂ
ಟುಮಾಡಿ ಪರಿಹಾಸಂಗೆಯ್ದು ಸರ್ವರಿಗೂ ವಿನೋದಗೊಳಿಸುತ್ತಿದ್ದನೆಂದು ತಾತ್ಪರ್ಯ. ... ‖೨೯‖

ಎಡವಕ್ಕದೊಳ್- ವಾಮಪಾರ್ಶ್ವದಲ್ಲಿ, ಅಬ್ಜಾಕ್ಷಂ- ವಿಷ್ಣುವು,ಬಲದಪಕ್ಕದೊಳ್- ದಕ್ಷಿಣಪಾರ್ಶ್ವದ
ಲ್ಲಿ, ಜಡಜಭವಂ- ಬ್ರಹ್ಮನು, ನುತಿಗೆಯ್ಯುತ್ತೆ, ಒಡನೆ, ಇರೆ, ಮೃಡಂ, ಅದ್ರಿಜೆವೆರಸಿ- ಪಾರ್ವತೀಸಮೇತ
ನಾಗಿ, ದಿವ್ಯಸಿಹ್ಮಾಸನದೊಳ್, ಕಣ್ಗೆ, ಎಸೆದು, ಇರ್ದಂ. ... ... ... ‖೩೦‖

ತುಂಬುರನಾರದರ್, ನವಗಾನವಂ, ಪಾಡೆ; ರಂಭೆ, ತಾಂ, ಮಿಗೆ, ಲಾಸ್ಯಮಂ- ನರ್ತನವನ್ನು, ಓಜೆ
ಯಿಂ- ಮನೋಹರವಾಗಿ, ಆಡೆ; ಘನಮಂತ್ರದೇವಿಯರ್- ಶ್ರೇಷ್ಠರಾದ ಮಂತ್ರಾಧಿದೇವತೆಗಳು, ಅಣ್ಮಿ-
ಪರಾಕ್ರಮವಿಶಿಷ್ಟರಾಗಿ, ಕೊಂಡಾಡೆ; ವಿಷ್ಣುವಿರಿಂಚಿಪತ್ನಿಯರ್- ವಿಷ್ಣುಪತ್ನಿಯಾದ ಲಕ್ಷ್ಮಿಯೂ ಬ್ರ
ಹ್ಮಪತ್ನಿಯಾದ ಸರಸ್ವತಿಯೂ, ಇಕ್ಕೆಲಂಗಳೊಳ್- ಉಭಯಪಾರ್ಶ್ವಗಳಲ್ಲಿಯೂ, ಕೈನೀಡಿ,ಭಾಸುರಚಾಮ
ರಂಗಳಂ, ಇಕ್ಕೆ- ಹಾಕಲು, ಅದ್ರಿಜಾಧವಂ, ಒಪ್ಪಿದಂ ... ... ... ‖೩೧‖

ಆಸಮಯದೊಳ್, ಸಿದ್ಧರಾಮಯೋಗೀಂದ್ರಂ, ಆದರಂ- ಪ್ರೀತಿಯು, ಮಿಗೆ- ಹೆಚ್ಚಾಗಲು, ಪೊ
ಡಮಟ್ಟು- ನಮಸ್ಕರಿಸಿ, ಕರಾಂಜಲಿವೆರಸು- ಕೈಮುಗಿದು, ಸನ್ನುತಿಗೆಯ್ಯುತ್ತಂ, ಇರೆ. * * *

ದಯಾರಸನಿಧಿ- ಕೃಪಾರಸಕ್ಕೆ ನಿಕ್ಷೇಪವಾದ, ಸಿದ್ಧರಾಮ! ಬಾರಯ್ಯ; ಧಾರುಣಿಯೊಳ್, ಭಕ್ತರ್,ಐ
ದೆ- ಚೆನ್ನಾಗಿ, ಸುಖಂ- ಸುಖವಾಗಿ, ಇರ್ಪರೇ? ಪೇಳ್, ಎಂದು, ಪುರಾರಿ, ಕೇಳೆ, ಸಿದ್ಧರಾಮಂ, ಮುದಂಬೆ
ತ್ತು- ಸಂತೋಷವಂ ಹೊಂದಿ, ನುಡಿದಂ. ... ... ... ... ‖೩೨‖

ಭವಹರ! ಅಲ್ಲಿ- ಆ ಭೂಲೋಕದಲ್ಲಿ, ಭವದೀಯಕೃಪೆಯಿಂ- ನಿನ್ನ ದಯೆಯಿಂದ, ಎಲ್ಲರ್, ಸುಖಂ-ಸು

ಲೋಕದೊಳುಂಟೆಂಬುದ । ನವಧರಿಸುತೆ ಬರ್ಪುದೆಂದು ಕೇಳುಪಿದರೆನ್ನಂ ॥ ... ॥೩೩॥

ವ॥ ಎನೆ ಸರ್ವ್ವಗತಂ ಬಸವನಿಲ್ಲದೆಡೆಯಾವುದಂತಾದೊಡ ಮಳುಂಬಮುಮರ್ಕ್ಕಿವೆತ್ತು॥

ಕಂ॥ ಎಸೆವಷ್ಟಾವರಣದೊಳಂ । ಮಿಸುಪಮಹಾಭಕ್ತರಲ್ಲಿಯುಂ ಪ್ರಮಥಗಣ ॥ ಪ್ರಸರದೊಳ ಮೆನ್ನೊಳಂ ರಂ । ಜಿಸುವಂ ಬಸವಂ ವಿದಗ್ಧ ನೀನರಿಯದುದೆ ॥ ... ॥೩೪॥

ಉ ॥ ಎಂದು ಪುರಾರಿ ತನ್ನಹೃದಯಾಂಬುಜಮಂ ತೆರೆದಲ್ಲಿ ನೋಳ್ಪ ಗೋ । ವಿಂದ ವಿರಿಂಚಿಮುಖ್ಯ ರರರೇ ಜಯಜಯ್ಯೆನುತಲ್ಲಿ ಸಾಂಜಲಿ ॥ ಸ್ಪಂದಲಲಾಟರಾಗಿ ನುತಿಸುತ್ತಿರೆ ತೋರಿಸಿದಂ ಗಣೇಂದ್ರ ರಾ । ನಂದಿಸಿ ನೋಡೆ ಸಿದ್ಧಪತಿಗೊಲ್ದು ವೃಷೇಂದ್ರನ ನಾವೃಷಧ್ವಜಂ ॥ ... ... ... ... ... ... ॥೩೫॥

ಕಂ ॥ ಹರನಹೃದಯಾಬ್ಜದೊಳ್ಕ । ಸುರರೂಪಂ ಬಸವನೊಪ್ಪಿದಂ ಕರಲಿಂಗ ॥ ಸ್ಥಿರದೃಷ್ಟಿ ಜಂಗಮಾಂಘ್ರಿಗೆ । ಶರಣೆನುತಂ ಭಸ್ಮಲಿಪ್ತಕಾಯ ನಜೇಯಂ ॥ ॥೩೬॥

ಮತ್ತೇ ॥ ಸ್ಥಿರಪದ್ಮಾಸನ ನರ್ಧಕುಟ್ಮಲಿತನೇತ್ರಂ ಶಂಕರಧ್ಯಾನನಿ । ರ್ಭರಸಂಜಾತ ಸುಖಾಶ್ರು ಫುಲ್ಲನಳಿನಸ್ಮೇರಾನನಂ ಭಸ್ಮಭಾ ॥ ಸುರಭಾಳಂ ಗಳಮಸ್ತಕಾದಿವಿಲಸದ್ರು

---

ಖವಾಗಿ, ಇರ್ಪ್ಪರ್; ಬಸವಂ, ಶಿವಲೋಕದೊಳ್, ಉಂಟು, ಎಂಬುದಂ, ಅವಧರಿಸುತೆ- ನಿರ್ಧರಿಸಿಕೊಂಡು, ಬರ್ಪ್ಪುದು, ಎಂದು, ಭಕ್ತರ್, ಎನ್ನಂ, ಕೇಳುಪಿದರ್ ... ... ... ... ॥೩೩॥

ಎನೆ, ಸರ್ವ್ವಗತಂ- ಸರ್ವವ್ಯಾಪಿಯಾದ, ಬಸವಂ, ಇಲ್ಲದ, ಎಡೆ- ಸ್ಥಲವು,ಆವುದು? ಅಂತಾದೊಡಂ-ಹಾಗಾದಾಗ್ಯೂ, ಅಳುಂಬಂ- ಅಧಿಕವಾಗಿ, ಅಮರ್ಕ್ಕಿವೆತ್ತು- ಸೇರಿ. * * * * * * * *

ಬಸವಂ, ಎಸೆವ, ಅಷ್ಟಾವರಣದೊಳಂ- ಗುರು, ಲಿಂಗ, ಜಂಗಮ, ಪ್ರಸಾದ, ಪಾದೋದಕ, ವಿಭೂತಿ, ರುದ್ರಾಕ್ಷ, ಮಂತ್ರಗಳೆಂಬ ಅಷ್ಟಾವರಣಗಳಲ್ಲಿಯೂ, ಮಿಸುಪ- ಪ್ರಕಾಶಿಸುವ, ಮಹಾಭಕ್ತರಲ್ಲಿಯುಂ, ಪ್ರಮಥಗಣಪ್ರಸರದೊಳಂ, ಎನ್ನೊಳಂ- ನನ್ನಲ್ಲಿಯೂ, ರಂಜಿಸುವಂ, ವಿದಗ್ಧ- ಪ್ರೌಢನಾದ ಸಿದ್ಧರಾಮನೇ! (ಇದು) ನೀಂ, ಅರಿಯದುದೆ- ತಿಳಿಯದೇಇರುವದೇ? ... ... ... ॥೩೪॥

ಎಂದು, ಪುರಾರಿ, ತನ್ನ, ಹೃದಯಾಂಬುಜಮಂ- ಹೃದಯಕಮಲವನ್ನು, ತೆರೆದು- ಬಿಚ್ಚಿ, ನೋಳ್ಪ, ಗೋವಿಂದವಿರಿಂಚಿಮುಖ್ಯರ್- ವಿಷ್ಣುಬ್ರಹ್ಮಾದಿದೇವತೆಗಳು, ಅರರೇ? ಜಯಜಯ್, ಎನುತೆ,ಅಲ್ಲಿ- ಆಸಭೆಯಲ್ಲಿ, ಸಾಂಜಲಿಸ್ಪಂದಲಲಾಟರಾಗಿ- ಹಣೆಯಲ್ಲಿ ಕೈಜೋಡಿಸಿದವರಾಗಿ, ನುತಿಸುತ್ತಿ, ಇರೆ, ಗಣೇಂದ್ರರ್,ಆನಂದಿಸಿ, ನೋಡೆ, ಆವೃಷಧ್ವಜಂ- ವೃಷಭೇಶ್ವರನೇ ಧ್ವಜದಲ್ಲುಳ್ಳಪರಶಿವನು, ಅಲ್ಲಿ- ಆಹೃದಯಕಮಲದಲ್ಲಿ, ವೃಷೇಂದ್ರನಂ, ಸಿದ್ಧಪತಿಗೆ- ಸಿದ್ಧರಾಮನಿಗೆ, ಒಲ್ದು, ತೋರಿಸಿದಂ. ... ... ॥೩೫॥

ಭಾಸುರರೂಪಂ, ಅಜೇಯಂ, ಜಯಿಸುವದಕ್ಕಾಗದ, ಬಸವಂ, ಹರನ, ಹೃದಯಾಬ್ಜದೊಳ್, ಕರಲಿಂಗಸ್ಥಿತದೃಷ್ಟಿ- ಹಸ್ತದಲ್ಲಿರುವ ಲಿಂಗದಲ್ಲಿಟ್ಟಿರುವ ನೋಟವುಳ್ಳವನಾಗಿ, ಜಂಗಮಾಂಘ್ರಿಗೆ, ಶರಣ್, ಎನುತಂ, ಭಸ್ಮಲಿಪ್ತಕಾಯಂ- ಭಸ್ಮದಿಂದ ಲೇಪಿಸಲ್ಪಟ್ಟ ದೇಹವುಳ್ಳವನಾಗಿ, ಒಪ್ಪಿದಂ. ... ॥೩೬॥

ಕಲ್ಯಾಣಕಲ್ಪದ್ರುಮಂ- ಕಲ್ಯಾಣಪಟ್ಟಣಕ್ಕೆ ಕಲ್ಪವೃಕ್ಷನಾದ ಬಸವೇಶ್ವರನು, ಸ್ಥಿರಪದ್ಮಾಸನಂ- ಶಾಶ್ವತವಾದ ಪದ್ಮಾಸನವುಳ್ಳವನಾಗಿ, ಅರ್ಧಕುಟ್ಮಲಿತನೇತ್ರಂ- ಅರ್ಧವಾಗಿಬಿಡಲ್ಪಟ್ಟಕಣ್ಣುಳ್ಳವನಾಗಿ, ಶಂಕರಧ್ಯಾನನಿರ್ಭರಸಂಜಾತಸುಖಾಶ್ರು- ಈಶ್ವರಧ್ಯಾನಾಧಿಕ್ಯದಿಂದುದ್ಭವಿಸಿದ ಸಂತೋಷದಿಂ ಹುಟ್ಟಿದ ಕಣ್ಣೀರುಳ್ಳವನಾಗಿ, ಫುಲ್ಲನಳಿನಸ್ಮೇರಾನನಂ- ವಿಕಸಿತವಾದ ಕಮಲದಂತಿರುವ ಮುಗುಳ್ನಗೆಯಿಂ ಕೂಡಿದ ಮುಖವುಳ್ಳವನಾಗಿ, ಭಸ್ಮಭಾಸುರಭಾಳಂ- ವಿಭೂತಿಯಿಂ ಪ್ರಕಾಶಿಸುವ ಹಣೆಯುಳ್ಳವನಾಗಿ, ಗಳಮಸ್ತಕಾದಿ

ದ್ರಾಕ್ಷಮಾಲಂ ಪ್ರಭಾ । ಕರಕಾಯಂ ಕಳೆವೆತ್ತು ಕಂಗೊಳಿಸಿದಂ ಕಲ್ಯಾಣಕಲ್ಪದ್ರುಮಂ॥
ವ ॥ ಆಗಳಂತಿರ್ಪ ಬಸವನಂ ಮುಕುಂದಶತಾನಂದಸಂಕ್ರಂದನಾದಿಸುರರ್ಕಂಡು ಕೌ
ತುಕಂಬಟ್ಟು ಭಕ್ತಿಪಾರವಶ್ಯದಿಂ ಸಾರೆವಂದು ನಿಂದೆರಗಿ ಬದ್ಧಾಂಜಲಿಗಳಾಗಿ ॥ * *
ಚಂ॥ ಪ್ರಮಥಗಣಾಂಬುಜಾತದಿವಸೇಂದ್ರ ವೃಷೇಂದ್ರ ಶಿವೈಕ್ಯಭಕ್ತಿಸಂ । ಕ್ರಮಣ
ನಿಜಾಂತರಂಗ ಪರಮೋಕ್ಷಕರೋಕ್ಷವರಸ್ವರೂಪ ದು ॥ ರ್ದಮರಿಪುವರ್ಗಭಂಜನ ನಿರಂಜ
ನ ದಿವ್ಯಶಿವಪ್ರಸನ್ನಹೃ । ತ್ಕಮಲನಿವಾಸ ವಾಸಿತಜಗತ್ರಯ ರಕ್ಷಿಪುದೆಮ್ಮನಾವಗಂ ॥
ಕಂ । ಬಸವ ಜಯಜಯ ರವಾನನ । ಬಿಸರುಹ ರಾಜಿವಿಜರಿಂತು ಪೊಗಳುತ್ತಿರೆ
ಶೈ ॥ ಲಸುತೆಗೆ ವಿಸ್ಮಯವೊದವಿರೆ । ಪೊಸತೆಂದಾಸಿದ್ಧರಾಮು ನೀಕ್ಷಿಸುತಿರ್ದ್ದಂ ॥೩೯॥
ಕಂ ॥ ಗುರುಹರಚರಸ್ವರೂಪಕ । ಚರಾಚರವ್ಯಾಪಿ ತಾಪಸೇಂದ್ರ ಮನೋಮಂ ॥
ದಿರ ಬಸವರಾಜ ಶರಣೆಂ । ಬ ರವಂ ಪೊಣ್ಮಿದುದು ಸಿದ್ಧರಾಮುನ ವೊಗದೊಳ್ ॥ ॥೪೦॥
ಚಂ ॥ ಪುರಹರ ನದ್ರಿಜಾತೆಯಲರ್ದಾನನಮಂ ನೀಡುನೇಹದಿಂದೆ ಕೇ । ಕರಸುಧೆ

ವಿಲಸದ್ರುದ್ರಾಕ್ಷಮಾಲಂ- ಕಂಠ ಶಿರಸ್ಸು ಮುಂತಾದ ಸ್ಥಲಗಳಲ್ಲಿ ಪ್ರಕಾಶಿಸುವ ರುದ್ರಾಕ್ಷಮಾಲಿಕೆಗಳುಳ್ಳವನಾಗಿ, ಪ್ರಭಾಕರಕಾಯಂ- ಕಾಂತಿಗಾಶ್ರಯವಾದ ಶರೀರವುಳ್ಳವನಾಗಿ, ಕಳೆವೆತ್ತು- ತೇಜೋವಿಶಿಷ್ಟನಾಗಿ, ಕಂಗೊಳಿಸಿದಂ. ... ... ... ... ... ||೩೭||

ಆಗಳ್, ಅಂತು, ಇರ್ಪ್ಪ, ಬಸವನಂ, ಮುಕುಂದಶತಾನಂದಸಂಕ್ರಂದನಾದಿಸುರರ್-ವಿಷ್ಣುಬ್ರಹ್ಮೇಂದ್ರಾದಿ ದೇವತೆಗಳು, ಕಂಡು, ಕೌತುಕಂಬಟ್ಟು-ಆಶ್ಚರ್ಯಪಟ್ಟು, ಭಕ್ತಿಪಾರವಶ್ಯದಿಂ-ಭಕ್ತಿಯಿಂದುಂಟಾದ ಮೂರ್ಛೆಯಿಂದ, ಸಾರೆವಂದು- ಸಮೀಪಕ್ಕೆ ಬಂದು, ನಿಂದು,ಎರಗಿ- ನಮಸ್ಕರಿಸಿ, ಬದ್ಧಾಂಜಲಿಗಳ್,ಜೋಡಿಸಿದಕೆಯ್ಯುಳ್ಳವರು, ಆಗಿ. * * * * * * * * * * * * * *

ಪ್ರಮಥಗಣಾಂಬುಜಾತದಿವಸೇಂದ್ರ-ಪ್ರಮಥಗಣಂಗಳೆಂಬಕಮಲಗಳಿಗೆ ಸೂರ್ಯನಾದ, ಶಿವೈಕ್ಯಭಕ್ತಿಸಂಕ್ರಮಣನಿಜಾಂತರಂಗ- ಶಿವನೊಡನೆ ಏಕತ್ವವಂ ಹೊಂದಿರುವ ಭಕ್ತಿಯಸಂಬಂಧವುಳ್ಳ ತನ್ನಮನಸ್ಸುಳ್ಳ, ಪರಮೋಕ್ಷಕರ- ಉತ್ಕೃಷ್ಟವಾದ ಮುಕ್ತಿಯನ್ನುಂಟುಮಾಡುವ, ಉಕ್ಷವರಸ್ವರೂಪ- ವೃಷಭೇಶ್ವರಸ್ವರೂಪನಾದ, ದುರ್ದಮರಿಪುವರ್ಗಭಂಜನ- ದುಷ್ಟಗಳಾದ ಅರಿಷಡ್ವರ್ಗಗಳನ್ನು ನಾಶಪಡಿಸಿದ, ನಿರಂಜನ- ಮಾಯಾರಹಿತನಾದ, ದಿವ್ಯಶಿವಪ್ರಸನ್ನಹೃತ್ಕಮಲನಿವಾಸ- ಈಶ್ವರನ ಶ್ರೇಷ್ಠವಾಗಿಯೂ ನಿರ್ಮಲವಾಗಿಯೂ ಇರುವ ಹೃದಯಕಮಲದಲ್ಲಿ ವಾಸಿಸುವ,ವಾಸಿತಜಗತ್ತ್ರಯ-ತನ್ನಲ್ಲಿವಾಸಮಾಡಿಕೊಂಡಿರುವ ಮೂರುಲೋಕವುಳ್ಳ, ವೃಷೇಂದ್ರ! ಎಮ್ಮಂ, ಆವಗಂ- ನಿರಂತರದಲ್ಲಿಯೂ, ರಕ್ಷಿಪುದು. ... ... ||೩೮||

ಬಸವಜಯಜಯರವಾನನಬಿಸರುಹರ್- ಬಸವ! ಜಯಜಯ ಎಂಬ ಧ್ವನಿಯಿಂದಕೂಡಿದ ಮುಖಕಮಲವುಳ್ಳ, ಆದಿವಿಜರ್- ಆದೇವತೆಗಳು, ಇಂತು, ಪೊಗಳುತ್ತಿ, ಇರೆ; ಶೈಲಸುತೆಗೆ- ಪಾರ್ವತಿಗೆ, ವಿಸ್ಮಯಂ- ಆಶ್ಚರ್ಯವು, ಒದಗಿ- ಪ್ರಾಪ್ತವಾಗಿ, ಇರೆ; ಆಸಿದ್ಧರಾಮಂ, ಪೊಸತು, ಎಂದು, ನಿರೀಕ್ಷಿಸುತೆ, ಇರ್ದ್ದಂ. ||೩೯||

ಸಿದ್ಧರಾಮನ,ಮೊಗದೊಳ್-ಮುಖದಲ್ಲಿ, ಗುರುಹರಚರಸ್ವರೂಪಕ, ಗುರು, ಲಿಂಗ, ಜಂಗಮ, ಇವುಗಳಸ್ವರೂಪನಾದ, ಚರಾಚರವ್ಯಾಪಿ- ಸ್ಥಾವರಜಂಗಮವ್ಯಾಪಿಯಾದ, ತಾಪಸೇಂದ್ರಮನೋಮಂದಿರ- ಋಷಿಶ್ರೇಷ್ಠರ ಮನಸ್ಸೇ ಮನೆಯಾಗುಳ್ಳ, ಬಸವರಾಜ! ಶರಣ್; ಎಂಬ, ರವಂ, ಪೊಣ್ಮಿದುದು- ಉದ್ಭವಿಸಿತು.

ಪುರಹರಂ, ಅದ್ರಿಜಾತೆಯ- ಪಾರ್ವತಿಯ, ಅಲರ್ದ- ವಿಕಸಿತವಾದ, ಆನನಮಂ-ಮುಖವನ್ನು, ನಿಡುನೇಹದಿಂದೆ- ಅಧಿಕವಾದ ಪ್ರೀತಿಯಿಂದ, ಕೇಕರಸುಧೆ- ಕಡೆಗಣ್ಣೋಟವೆಂಬಅಮೃತವು, ಸೂಸೆ- ಚೆಲ್ಲುವಂತೆ,

ಸೂಸೆ ನೋಡಿ ನುಡಿದಂ ಪ್ರಿಯೆ ನೋಡಿವನೇಳ್ಗೆವೆತ್ತಭಿ ॥ ಕ್ತಿರಸದ ಪೆಂಪ ನೀತನ ಮಹತ್ತ್ವಮ ನೀತನ ಚೆಲ್ವ ನೀತನ| ಚ್ಚರಿಯ ಚರಿತ್ರದುನ್ನತಿಯ ನೀತನ ಗಾಡಿಯ ನೆಂದು ನಲ್ಮೆಯಿಂ ॥ ... ... ... ... ... ... ॥೪೧॥

ವ ॥ ಮತ್ತಮಿಂತೆಂದಂ ॥ ಉ ॥ ಆನೆ ವೃಷೇಂದ್ರನಾನೆ ನಗಜಾತೆ ಚರಾಚರರಕ್ಷಣಾರ್ಥ । ಮನ್ಯೂನಮದೀಯ ಮಾನಸದೊಳಿರ್ಪನಿವಂ ಬಿಡದಿರ್ಪ ನೀಮಹಾ ॥ ಜ್ಞಾನಿಯ ಹೃತ್ಸರೋರುಹದೊಳೀತ ನನಾದಿ ಸದಾದಿ ಚಿದ್ಘನಂ । ನೀನರಿದಿರ್ಪುದೆನ್ನಸುವಿವಂ ಬಸವಂಗಸು ವಾ ನಿವಂಗೆ ಕೇಳ್ ॥ ... ... ... ॥೪೨॥

ಚಂ ॥ ನೆಗಳ್ದ ಜಗತ್ತ್ರಯಕ್ಕೆ ಗುರು ವಾ ನಿವ ನಾಭುವನಾಳಿಗೊಪ್ಪ ನೀ । ವ ಗಣಿತದಾನಿ ಯಾಂ ಭುವನಶಿಕ್ಷಕ ನೀತನೆ ತತ್ಸುರಕ್ಷಕಂ ॥ ಬಗೆವೊಡೆ ಮುಕ್ತಿಗಾನರಸ ನೀತನೆ ಭಕ್ತಿಗೆ ಪಟ್ಟಬದ್ಧನಾಂ । ಸೊಗಯಿಪ ಭಕ್ತವತ್ಸಲ ನಿವಂ ಘನಭಕ್ತಿನಿದಾನ ನದ್ರಿಜೆ ॥ ... .. ... ... ... ॥೪೩॥

ಶಾ ॥ ಭಕ್ತಪ್ರಾಣ ನಿವಂ ಸರೋಜಮುಖಿ ಕೇಳ್ಭಕ್ತಾಂಗನಾಂ ಸಂತತಂ । ವ್ಯಕ್ತಂ ಜಂಗಮ ನೀತನೀ ಭುವನಕಾಂ ಲಿಂಗಂ ದ್ವಿತೀಯೇಶ್ವರಂ ॥ ಸೂಕ್ತಂ ಮೇಣಿವನೀಶ್ವರಂ

---

ನೋಡಿ, ಪ್ರಿಯೆ! ಇವನ- ಈ ಬಸವೇಶ್ವರನ, ಏಳ್ಗೆವೆತ್ತ- ಅಭಿವೃದ್ಧವಾದ, ಭಕ್ತಿರಸದ, ಪೆಂಪಂ- ಆಧಿಕ್ಯವನ್ನು, ಈತನ, ಮಹತ್ತ್ವಮಂ- ಮಹಿಮೆಯನ್ನು, ಈತನ, ಚೆಲ್ವಂ- ಸೌಂದರ್ಯವನ್ನು, ಈತನ, ಅಚ್ಚರಿಯ- ಆಶ್ಚರ್ಯಕರವಾದ, ಚರಿತ್ರದ, ಉನ್ನತಿಯಂ, ಈತನ, ಗಾಡಿಯಂ- ಸೊಬಗನ್ನು, ನೋಡು, ಎಂದು, ನಲ್ಮೆಯಿಂ- ಪ್ರೀತಿಯಿಂದ, ನುಡಿದಂ. ... ... ... ... ॥೪೧॥

ಅಗಜಾತೆ! ಆನೆ- ನಾನೆ, ವೃಷೇಂದ್ರಂ, ಆದೆಂ; ಇವಂ- ಈ ಬಸವೇಶ್ವರನು, ಚರಾಚರರಕ್ಷಣಾರ್ಥಂ, ಅನ್ಯೂನಮದೀಯಮಾನಸದೊಳ್- ನಿರ್ದುಷ್ಟವಾದ ನನ್ನ ಮನಸ್ಸಿನಲ್ಲಿ ಇರ್ಪಂ; (ಆಂ) ಈ ಮಹಾಜ್ಞಾನಿಯ, ಹೃತ್ಸರೋರುಹದೊಳ್, ಬಿಡದೆ– ತಪ್ಪದೆ, ಇರ್ಪೆಂ; ಈತಂ, ಅನಾದಿ- ಆದಿರಹಿತನು, ಸದಾದಿ- ಸತ್ಪುರುಷರಲ್ಲಿ ಆದಿಪುರುಷನು; ಚಿದ್ಘನಂ- ಜ್ಞಾನಸಾಂದ್ರನಾದವನು; ಇವಂ, ಎನ್ನ, ಅಸು- ಪ್ರಾಣವು, ಆಂ, ಇವಂಗೆ, ಬಸವಂಗೆ, ಅಸು; ಕೇಳ್, (ಇದಂ) ನೀಂ, ಅರಿದಿರ್ಪುದು- ತಿಳಿದಿರುವದು. ... ॥೪೨॥

ಅದ್ರಿಜೆ! ಆಂ, ನೆಗಳ್ದ- ಪ್ರಸಿದ್ಧವಾದ, ಜಗತ್ತ್ರಯಕ್ಕೆ, ಗುರು; ಇವಂ, ಆ ಭುವನಾಳಿಗೆ, ಒಪ್ಪಂ- ಸಮಾನತ್ವವನ್ನು, ಈವ, ಅಗಣಿತದಾನಿ–ಎಣಿಸಲಾಗದ ದಾನಗುಣವುಳ್ಳವನು, ಆಂ, ಭುವನಶಿಕ್ಷಕಂ- ಪ್ರಪಂಚವನ್ನು ಶಿಕ್ಷಿಸುವವನು; ಈತನೆ, ತತ್ಸುರಕ್ಷಕಂ-ಆ ಪ್ರಪಂಚವನ್ನು ಚೆನ್ನಾಗಿ ಪಾಲಿಸುವವನು; ಬಗೆವೊಡೆ- ವಿಚಾರಿಸಿದರೆ, ಆಂ, ಮುಕ್ತಿಗೆ, ಅರಸಂ- ಪತಿಯು, ಈತನೆ, ಭಕ್ತಿಗೆ, ಪಟ್ಟಬದ್ಧಂ-ಪಟ್ಟವನ್ನು ಕಟ್ಟಿಕೊಂಡಿರುವವನು; ಆಂ, ಸೊಗಯಿಪ- ಪ್ರಕಾಶಿಸುವ, ಭಕ್ತವತ್ಸಲಂ-ಭಕ್ತರಲ್ಲಿ ಪ್ರೀತಿಯುಳ್ಳವನು; ಇವಂ, ಘನಭಕ್ತಿನಿದಾನಂ- ಶ್ರೇಷ್ಠವಾದ ಭಕ್ತಿಗೆ ಆದಿಕಾರಣನು. ... ... ... ॥೪೩॥

ಸರೋಜಮುಖಿ- ಕಮಲವದನೆಯಾದ ಪಾರ್ವತಿಯೇ! ಕೇಳ್; ಇವಂ, ಭಕ್ತಪ್ರಾಣಂ- ಭಕ್ತರೇ ಪ್ರಾಣವಾಗುಳ್ಳವನು; ಆಂ, ಸಂತತಂ, ಭಕ್ತಾಂಗಂ- ಭಕ್ತರೇ ದೇಹವಾಗುಳ್ಳವನು; ಈತಂ, ಈ ಭುವನಕೆ- ಈ ಪ್ರಪಂಚಕ್ಕೆ, ವ್ಯಕ್ತಂ- ಸ್ಫುಟನಾದ, ಜಂಗಮಂ; ಆಂ, (ಈ ಭುವನಕೆ) ಲಿಂಗಂ; ಮೇಣ್-ಮತ್ತು, ಇವಂ, ದ್ವಿತೀಯೇಶ್ವರಂ- ದ್ವಿತೀಯಶಂಭುವು; ಬಗೆವೊಡೆ, ಆಂ, ಈಶ್ವರಂ, (ಸೂಕ್ತಂ- ಸಮಾನವಾದಮಾತು,) ಮದ್ಭಕ್ತಿಯಿಂದೆ- ನನ್ನ ಭಕ್ತಿಯಿಂದ, ಅಪ್ಪ- ಆಗುವ, ಸನ್ಮುಕ್ತಿಶ್ರೀ- ಶ್ರೇಷ್ಠವಾದ ಮೋಕ್ಷಲಕ್ಷ್ಮಿಯು, ಈ

ಬಗೆವೊಡಾಂ ಮದ್ಭಕ್ತಿಯಿಂದಪ್ಪಸ । ನ್ಮಕ್ತಿ ಶ್ರೀ ನೆನೆದಾಕ್ಷಣಂ ದೊರೆಗು ಮಿನಂದೀ । ನಂ ಪಾರ್ವತಿ ॥ .. ... ... ... ॥೪೪॥

ಕಂ ॥ ವಸುಧೆಯೊಳೆ ಶಂಭುನಾಮಂ । ಮಿಸುಪುದು ಕೇಳೆಮಗಜಸ್ರ ಮಿವೃಷಭೇಂ । ದ್ರಂ ॥ ಗೆಸೆಗುಂ ದ್ವಿತೀಯಶಂಭು । ಪ್ರಸರದ್ಘನನಾಮ ಮುತ್ಪಳಪ್ರಭನಯನೆ ॥೪೫॥

ಕಂ ॥ ಎನಗರ್ಥಪ್ರಾಣಾದಿಯ । ನನವದ್ಯ ರ್ಭಕ್ತ ರೀವರೊರೊಂದೆಡೆಯೊಳ್ ॥ ಘ । ನಮಹಿಮ ನೀವೃಷೇಂದ್ರಂ । ಮನದೊಲವಿಂದೀವ ನಾವಗಂ ವನಜಮುಖಿ ॥ ॥೪೬॥

ಕಂ ॥ ಮನ್ಮಹಿಮೆಯ ನಿವ ನರಿವಂ । ಸನ್ಮತಿ ಮೇಣವನ ಮಹಿಮೆಯುಂ ಮೃಗಧರ । ಭಾ ॥ ಸ್ವನ್ಮುಖಿ ಯಾನರಿವೆಂಹಿಮ । ವನ್ಮಹಿಧರಪುತ್ರಿ ಪೆರರದೇ ನರಿದಪರೆ ॥ ॥೪೭॥

ಕಂ॥ ಆವಂ ಬಸವಾಕ್ಷರಮಂ । ಭಾವಮಿಗೆ ನುಡಿವ ನವನ ವದನಮೆ ಸದನಂ ॥ ದೇ । ವಿ ಯೆಮಗೆಮ್ಮಸತ್ಪ್ರಮ । ಥಾವಳಿ ಗಿದು ನನ್ನಿ ಪನ್ನಗಾಯತವೇಣಿ ॥ ... ॥೪೮॥

ಉ ॥ ಶ್ರೀಗುರು ಲಿಂಗ ಜಂಗಮ ವಿಭೂತಿ ಶಿವಾಕ್ಷಿ ಪದಾಂಬು ಶೇಷ ವೇ । ದಾಗಮ । ಸಿದ್ಧಮಂತ್ರ ವರಭಕ್ತಿ ಸಮನ್ವಿತನಾಗಿ ತನ್ಮಹೀ ॥ ಭಾಗದೊಳರ್ಪನಾವ ನವನೀಬಸವೇ

---

ನಂದೀಶನಂ, ನೆನೆದಾಕ್ಷಣಂ- ಸ್ಮರಿಸಿದಕೊಡಲೇ, ದೊರೆಗುಂ- ಪ್ರಾಪ್ತವಾಗುವದು. ... ॥೪೪॥

ಉತ್ಪಳಪ್ರಭನಯನೆ- ನೈದಿಲೆಯಕಾಂತಿಯಂತಿರುವ ಕಾಂತಿಯುಳ್ಳನೇತ್ರವುಳ್ಳವಳೇ ! ಕೇಳ್; ವಸುಧೆಯೊಳೆ- ಭೂಮಿಯಲ್ಲಿ, ಅಜಸ್ರಂ- ಯಾವಾಗಲೂ, ಎಮಗೆ, ಶಂಭುನಾಮಂ, ಶಂಭುವೆಂಬಹೆಸರು, ಮಿಸುಪುದು- ಪ್ರಕಾಶಿಸುವದು; ಈ ವೃಷಭೇಂದ್ರಂಗೆ, ದ್ವಿತೀಯಶಂಭುಪ್ರಸರದ್ಘನನಾಮಂ- ಎರಡನೇ ಶಂಭುವೆಂಬ ಪ್ರಸಿದ್ಧವಾದ ಶ್ರೇಷ್ಠವಾದಹೆಸರು, ಎಸೆಗುಂ. ... ... ... ॥೪೫॥

ವನಜಮುಖಿ- ಕಮಲವದನೆಯೇ ! ಅನವದ್ಯಭಕ್ತರ್- ನಿರ್ದುಷ್ಟರಾದಭಕ್ತರು, ಒರೊಂದೆಡೆಯೊಳ್- ಒಂದೊಂದುಕಾಲದಲ್ಲಿ, ಎನಗೆ, ಅರ್ಥಪ್ರಾಣಾದಿಯಂ- ದ್ರವ್ಯಪ್ರಾಣಮೊದಲಾದವುಗಳನ್ನು, ಈವರ್- ಕೊಡುವರು; ಘನಮಹಿಮಂ, ಈ ವೃಷೇಂದ್ರಂ, ಮನದ- ಮನಃಪೂರ್ವಕವಾದ, ಒಲವಿಂ- ಪ್ರೀತಿಯಿಂದ, ಆವಗಂ- ಯಾವಾಗಲೂ, (ಅರ್ಥಪ್ರಾಣಾದಿಯಂ) ಈವಂ. ... ... ॥೪೬॥

ಮೃಗಧರಭಾಸ್ವನ್ಮುಖಿ- ಚಂದ್ರನಂತೆ ಮನೋಹರವಾದ ಮುಖವುಳ್ಳ,ಹಿಮವನ್ಮಹಿಧರಪುತ್ರಿ- ಹಿಮವತ್ಪರ್ವತಪುತ್ರಿಯೇ !ಮೇಣ್- ಮತ್ತು, ಸನ್ಮತಿ- ಸಮೀಚೀನವಾದಬುದ್ಧಿಯುಳ್ಳ, ಇವಂ- ಈ ಬಸವೇಶ್ವರನು, ಮನ್ಮಹಿಮೆಯಂ- ನನ್ನಮಾಹಾತ್ಮ್ಯವನ್ನು, ಅರಿವಂ- ತಿಳಿಯುವನು; ಇವನಮಹಿಮೆಯಂ, ಆಂ, ಅರಿವೆಂ- ತಿಳಿಯುವೆನು; ಪೆರರ್-ಮಿಕ್ಕವರು, ಅದ, ಅರಿದಪರೇ- ತಿಳಿಯುವರೇ ? ... ॥೪೭॥

ಪನ್ನಗಾಯತವೇಣಿ- ಸರ್ಪದಂತೆ ದೀರ್ಘವಾದಜಡೆಯುಳ್ಳ, ದೇವಿ ! ಆವಂ, ಬಸವಾಕ್ಷರಮಂ- ಬಸವ ಎಂಬ ಅಕ್ಷರಗಳನ್ನು, ಭಾವಮಿಗೆ- ಮನಃಪೂರ್ವಕವಾಗಿ, ನುಡಿವಂ- ಉಚ್ಚರಿಸುವನೋ, ಅವನ, ವದನಮೆ- ಮುಖವೇ, ಎಮಗೆ, ಎಮ್ಮ, ಸತ್ಪ್ರಮಥಾವಳಿಗೆ, ಶ್ರೇಷ್ಠರಾದ ಪ್ರಮಥರಸಮೂಹಕ್ಕೆ, ಸದನಂ-ಮನೆಯು, ನನ್ನಿ- ನಿಶ್ಚಯ. ... ... ... ... ... ॥೪೮॥

ತನ್ಮಹೀಭಾಗದೊಳ್- ಆ ಭೂಲೋಕದಲ್ಲಿ, ಆವಂ, ಶ್ರೀ......... ಸಮನ್ವಿತಂ— ಶ್ರೀ- ಸುಜ್ಞಾನಸಂಪದ್ಯುಕ್ತನಾದ, ಗುರು, ಲಿಂಗ, ಜಂಗಮ, ವಿಭೂತಿ, ಶಿವಾಕ್ಷಿ- ರುದ್ರಾಕ್ಷಿ, ಪದಾಂಬು- ಪಾದೋದಕ, ಶೇಷ- ಪ್ರಸಾದ, ವೇದಾಗಮಸಿದ್ಧಮಂತ್ರ- ವೇದಾಗಮಗಳಲ್ಲಿ ಪ್ರಸಿದ್ಧವಾದ ಶಿವಮಂತ್ರ, ವರಭಕ್ತಿ, ಇವುಗಳಿಂದ, ಸಮನ್ವಿತಂ- ಕೂಡಿದವನು, ಆಗಿ, ಇರ್ಪ್ಪಂ, ಅವಂ, ಈ ಬಸವೇಶ್ವರನ, ಅಂಶಂ- ಅಂಶೋದ್ಭ

ಶ್ವರನಂಶಮಕ್ಕುಮೇ । ಣಾಗಳು ಮೆನ್ನೊಳಿರ್ಪ್ಪತೆರದಿಂದೆಸೆವಂ ಬಸವಂ ಸುಭಕ್ತರೊಳ್
ವ॥ ಎಂದಗಜೆಗಾನಂದಪೊದವೆ ಸಿದ್ಧರಾಮಂ ಶ್ರದ್ಧೆಯಿಂ ಮಣಿಯೆ ಬಸವನ ನಿಜಸ್ವ
ರೂಪಮಂ ಬರೆದು ಪೇಳಿ ಅನಿತರೊಳ್ತನ್ನ ಹೃದಯನಳಿನದೊಳ್ತೊಳಗಿ ಬೆಳಗುವಾಬಸವನಂ ನೋ
ಡಿ ಮರ್ತ್ಯಲೋಕದೊಳ್ಸದ್ಭಕ್ತರೆನಿಬರೊಳರೆಂದು ಬೆಸಗೊಳೆ ಕೇಳ್ದು ಕೈದಾವರೆಗಳಂ
ಮುಗಿದು ॥ * * * * * * * * * * * * * * *

ಕಂ॥ ಸರ್ವೇಶ ಭಕ್ತನೆನಿಪವ । ನೋರ್ವನು ಮಣಿ ಮಿಲ್ಲಮಹಿಯೊಳಾನೇಭಕ್ತಂ ॥
ಸರ್ವ್ವರ್ಭಕ್ತರ್ಮನಸಿಜ । ಗರ್ವಾಪಹ ನಿನಗೆ ಸಮರೆನಿಪ್ಪುದರಿಂದಂ ॥ ... ॥೫೦॥

ಕಂ॥ ಆವಾವಭವದೊಳಾದೊಡ । ಮಾವಗಮಗಜೇಶ ಕೇಳ್ಪ್ರಸಾದತ್ರಯಸಂ ॥ ಸೇ
ವನೆಯೆ ಸಾಲ್ಗು ಮಿದು ಪರಿ । ಭಾವಿಸೆ ಕೈವಲ್ಯಸುಖದಿ ನರ್ಗ್ಗಳಮಲ್ತೆ ॥ ... ॥೫೧॥

ಕಂ ॥ ಖಗಮೃಗಪಿಪೀಲಿಕಾದಿಯೊ । ಳೊಗೆದೊಡ ಮಾಶರಣವಿತತಿ ಸವಿದೊಕ್ಕುದ
ನುಂ ॥ ಅಗಲದ ಸವಿದೊರೆಕೊಂಡೊಡೆ । ಮಿಗೆ ಸಂಸೃತಿಲೇಸುಗಡಧನಂಜಯನಯನ॥೫೨॥

ವ ॥ ಸ್ರ ॥ ಎನೆ ಕೇಳ್ದಾನಂದದಿಂದಾಬಸವನ ನಭವಂ ಸತ್ಕೃಪಾಪೂರಿತಾಲೋ।

---

ತನು, ಅಕ್ಕುಂ; ಮೇಣ್- ಮತ್ತು, ಬಸವಂ, ಎನ್ನೊಳೆ, ಇರ್ಪ್ಪತೆರದಿಂದೆ- ಇರುವ ರೀತಿಯಿಂದ, ಸುಭಕ್ತ
ರೊಳ್- ಶ್ರೇಷ್ಠರಾದ ಆಭಕ್ತರಲ್ಲಿ, ಆಗಳುಂ-ನಿರಂತರದಲ್ಲೂ, ಎಸೆವಂ. ... ... ॥೪೯॥

ಎಂದು, ಅಗಜೆಗೆ- ಪಾರ್ವತಿಗೆ, ಆನಂದಂ, ಒದವೆ- ಉಂಟಾಗಲು, ಸಿದ್ಧರಾಮಂ, ಶ್ರದ್ಧೆಯಿಂ- ವಿಶ್ವಾ
ಸದಿಂದ, ಮಣಿಯೆ- ನಮಸ್ಕರಿಸಲು, ಬಸವನ, ನಿಜಸ್ವರೂಪಮಂ, ಬರೆದು- ಹೇಳಿ, ಅನಿತರೊಳ್- ಅಷ್ಟ
ರಲ್ಲಿ, ತನ್ನ, ಹೃದಯನಳಿನದೊಳ್- ಹೃದಯಕಮಲದಲ್ಲಿ, ತೊಳಗಿ- ನಿರ್ಮಲವಾಗಿ, ಬೆಳಗುವ- ಪ್ರಕಾಶಿಸುವ,
ಆಬಸವನಂ, ನೋಡಿ, ಮರ್ತ್ಯಲೋಕದೊಳ್- ಭೂಲೋಕದಲ್ಲಿ, ಸದ್ಭಕ್ತರ್, ಎನಿಬರ್- ಎಷ್ಟುಮಂದಿಗ
ಳು, ಒಳರ್- ಇರುವರು? ಎಂದು, ಬೆಸಗೊಳೆ- ಕೇಳಲು, ಕೇಳ್ದು- ಅದಂಕೇಳಿ, ಕೈದಾವರೆಗಳಂ, ಮುಗಿದು.

ಮನಸಿಜಗರ್ವಾಪಹ- ಮನ್ಮಥನ ಅಹಂಕಾರವನ್ನು ನಾಶಮಾಡಿದ, ಸರ್ವೇಶ ! ಮಹಿಯೊಳ್, ಸರ್ವ
ರ್, ಭಕ್ತರ್, ನಿನಗೆ, ಸಮರ್- ಸದೃಶರು, ಎನಿಪ್ಪುದರಿಂದಂ, ಭಕ್ತಂ, ಎನಿಪವಂ, ಓರ್ವನುಂ- ಒಬ್ಬನೂ,ಅ
ಣಂ- ಸ್ವಲ್ಪವೂ, ಇಲ್ಲ; ಆನೇ- ನಾನೇ, ಭಕ್ತಂ. ... ... ... ... ॥೫೦॥

ಅಗಜೇಶ-ಪಾರ್ವತೀಪತಿಯೇ ! ಕೇಳ್, ಆವಾವಭವದೊಳಾದೊಡಂ- ಯಾವಯಾವಜನ್ಮದಲ್ಲಾದರೂ,
ಆವಗಂ- ನಿರಂತರದಲ್ಲಿಯೂ, ಪ್ರಸಾದತ್ರಯಸಂಸೇವನೆಯೆ- ಶುದ್ಧ, ಸಿದ್ಧ, ಪ್ರಸಿದ್ಧವೆಂಬ ತ್ರಿವಿಧವಾದ
ಪ್ರಸಾದವಂಸೇವಿಸುವಿಕೆಯೇ,ಸಾಲ್ಗುಂ- ಸಾಕು; ಇದು- ಈಪ್ರಸಾದಸೇವನೆಯು, ಪರಿಭಾವಿಸೆ- ವಿಚಾರಿಸ
ಲು,ಕೈವಲ್ಯಸುಖದಿಂ-ಮೋಕ್ಷಸುಖಕ್ಕಿಂತಲೂ, ಅರ್ಗಳಮಲ್ತೆ- ಅಧಿಕವಾದುದಲ್ಲವೇ? ... ॥೫೧॥

ಧನಂಜಯನಯನ- ಅಗ್ನಿನೇತ್ರವುಳ್ಳವನೇ ! ಖಗಮೃಗಪಿಪೀಲಿಕಾದಿಯೊಳ್- ಪಕ್ಷಿ ಮೃಗ ಇರುವೆ ಮೊ
ದಲಾದ ಜನ್ಮಗಳಲ್ಲಿ, ಒಗೆದೊಡಂ- ಹುಟ್ಟಿದಾಗ್ಯೂ, ಆಶರಣವಿತತಿ- ಆಶಿವಶರಣಸಮೂಹವು,ಸವಿದು- ಸೇವಿ
ಸಿ, ಒಕ್ಕುದಂ- ಸುರಿದುದನ್ನು, ಉಂಡು, ಅಗಲದ-ಎಡೆಬಿಡದ, ಸವಿ- ಮಾಧುರ್ಯವು, ದೊರೆಕೊಂಡೊಡೆ-ಪ್ರಾ
ಪ್ತವಾದರೆ, ಮಿಗೆ- ಅಧಿಕವಾಗಿ, ಸಂಸೃತಿ- ಸಂಸಾರವು, ಲೇಸುಗಡ- ಒಳ್ಳೆಯದಲ್ಲವೇ ? ... ॥೫೨॥

ಎನೆ- ಹೀಗೆಹೇಳಲು, ಅಭವಂ, ಕೇಳ್ದು, ಆನಂದದಿಂದೆ, ಆ ಬಸವನಂ, ಸತ್ಕೃಪಾಪೂರಿತಾಲೋಕನ
ದಿಂ- ಸಮೀಚೀನವಾದದಯೆಯಿಂದ ತುಂಬಿದನೋಟದಿಂದ, ನೋಡಿ, ಬಳಿಕ, ತಾಂ, ಅದಂ- ಆನಡೆದಕೃತ್ಯವೆ
ಲ್ಲವನ್ನೂ, ತೋರಿಸೆ; ಸಿದ್ಧರಾಮಂ, ಅಂದು, ಎಲ್ಲಮಂ, ಕಂಡು, ಸದ್ಭಕ್ತಿನಿಯುಕ್ತಂ- ಒಳ್ಳೆಯಭಕ್ತಿಯಿಂ

ಕನಪಿಂದಂ ನೋಡಿ ತಾಂ ತೋರಿಸೆ ಬಳಿಕದನಂತೆಲ್ಲಮಂ ಕಂಡು ಸದ್ಭಕ್ತಿನಿಯುಕ್ತಂ ಸಿ
ದ್ಧರಾಮಂ ಪೊಗಳ್ದೆರಗುತೆ ಬೀಳ್ಕೊಂಡು ಭೂಲೋಕಕೇಳ್ತಂ । ಅನವದ್ಯಂ ಸ್ವರ್ಣವಲ್ಲೀ
ಪುರಮಂ ನೊಲವಿನಿಂ ಪೊಕ್ಕು ಭಕ್ತಾಳಿಗಾಗಳ್ ॥ ... ... ॥೫೩॥

ಕಂ॥ ಶಿವಲೋಕದೊಳಂ ಬಸವಂ । ಶಿವಹೃದಯಾಂಬುಜದೊಳಿರ್ದಪಂ ಕಂಡೆ ನೆನು ॥
ತ್ತವಿಕಲಮತಿ ಯೆಲ್ಲಮುಮಂ । ವಿವರಿಸೆ ಕೇಳ್ದಲ್ಲಿ ಶರಣ ರುತ್ಸವಮಾಂತರ್ ॥ ॥೫೪॥

ವ॥ ಅಂತು ಸಮುತ್ಸುಕಾಂತರಂಗರಾದ ಶರಣರ್ಬಸವ ನೆಂತಿರ್ದಪ ನೆಂದು ಬೆಸಗೊಳೆ॥

ಚಂ॥ ನಿಜಹೃದಯಾಂಬುಜಾತಮ ನಲರ್ಚಿ ವೃಷೇಂದ್ರನ ನಿಲ್ಲಿ ನೋಡಿ ಮಂ । ಗಜ
ಹರಮಾನಸಾಂಬುಜದೊ ಳಿಂತೆಸೆದಿರ್ದ ನೆನುತ್ತೆ ತೋರಿಸು ॥ ತ್ತಜರ ನನಾಮಯಂ ನೆಗ
ಳ್ದ ತದ್ಘನವೃತ್ತಮ ನೈದೆ ಪೇಳ್ದ ನ । ತ್ರಿಜಧರಭಕ್ತರೊ ಳ್ನೃಪತಿ ಕಂಡೆ ನಿದೆಲ್ಲಮ
ನಲ್ಲಿ ಚೆಚ್ಚರಂ ॥ ... .. ... ... ॥೫೫॥

ಚಂ॥ ವರಗುರುಸಿದ್ಧರಾಮವಿಭುವಿಂದರಿದೆಂ ನೃಪ ಕೇಳ್ವೃಷೇಂದ್ರನೆ । ಳ್ತರದಮ
ಹತ್ತ್ವಮಂ ಬಗೆವೊಡಿಂತು ವಿರಾಜಿಸೆ ಪೆಂಪನಾಳ್ದ ಭಾ ॥ ಸುರಬಸವಂ ತ್ವದೀಯಸಭೆ
ಯಲ್ಲಿರುತಂ ಪಿಡಿದೆತ್ತಿದಂ ನಿಜ । ಸ್ಮರಣದಿ ನೆನ್ನ ನೊರ್ಗ್ಗಡಿಸದಂದದಿ ನೆಂಬುದಿದೊಂದು
ಚೋದ್ಯಮೋ ॥ ... ... ... ... ॥೫೬॥

---

ದ ಕೂಡಿದವನಾಗಿ, ಪೊಗಳ್ದು, ಎರಗುತೆ- ನಮಸ್ಕರಿಸುತ್ತ, ಬೀಳ್ಕೊಂಡು-ಪರಮೇಶ್ವರನಿಂದ ಅಪ್ಪಣೆಯಂ ತೆಗೆದುಕೊಂಡು, ಅನವದ್ಯಂ- ನಿರ್ದುಷ್ಟನಾದ ಸಿದ್ಧರಾಮನು, ಭೂಲೋಕಕ್ಕೆ, ಏಳ್ತಂದು, ಸ್ವರ್ಣವಲ್ಲೀ ಪುರವಂ, ಒಲವಿನಿಂ- ಪ್ರೀತಿಯಿಂದ, ಪೊಕ್ಕು, ಆಗಳ್, ಭಕ್ತಾಳಿಗೆ. ... ... ॥೫೩॥

ಶಿವಲೋಕದೊಳಂ- ಕೈಲಾಸದಲ್ಲಿಯೂ, ಬಸವಂ, ಶಿವಹೃದಯಾಂಬುಜದೊಳ್- ಈಶ್ವರನಹೃದಯ ಕಮಲದಲ್ಲಿ, ಇರ್ದಪಂ- ಇರುವನು, ಕಂಡೆಂ- ನೋಡಿದೆನು; ಎನುತ್ತೆ, ಅವಿಕಲಮತಿ- ಅವಿಚ್ಛಿನ್ನವಾದಬುದ್ಧಿ ಯುಳ್ಳ ಸಿದ್ಧರಾಮನು, ಎಲ್ಲಮುಮಂ- ಕೈಲಾಸದಲ್ಲಿ ನಡೆದ ಕಾರ್ಯವೆಲ್ಲವನ್ನೂ, ವಿವರಿಸೆ- ವಿಸ್ತರಿಸಲು, ಅಲ್ಲಿ, ಶರಣರ್, ಕೇಳ್ದು, ಉತ್ಸವಮಾಂತರ್. ... ... ... ॥೫೪॥

ಅಂತು, ಸಮುತ್ಸುಕಾಂತರಂಗರಾದ- ಕುತೂಹಲವಿಶಿಷ್ಟರಾದ, ಶರಣರ್, ಬಸವಂ, ಎಂತು- ಹ್ಯಾಗೆ,ಇರ್ದಪಂ? ಎಂದು ಬೆಸಗೊಳೆ- ಕೇಳಲು. * * * * * * * * * * * *

ಅಜರಂ- ಜರಾರಹಿತನಾದ, ಅನಾಮಯಂ- ರೋಗರಹಿತನಾದ ಸಿದ್ಧರಾಮನು, ನಿಜಹೃದಯಾಂಬುಜಾತಮಂ-ತನ್ನ ಹೃದಯಕಮಲವನ್ನು, ಅಲರ್ಚಿ- ಬಿಚ್ಚಿ, ಇಲ್ಲಿ, ವೃಷೇಂದ್ರನಂ, ನೋಡಿಂ-ನೋಡಿರಿ; ಅಂಗಜಹರಮಾನಸಾಂಬುಜದೊಳ್- ಪರಮೇಶ್ವರನ ಹೃದಯಕಮಲದಲ್ಲಿ, ಇಂತು, ಎಸೆದಿರ್ದಂ, ಎನುತ್ತೆ, ತೋರಿಸುತ್ತೆ, ನೆಗಳ್ದ- ಪ್ರಸಿದ್ಧವಾದ, ತದ್ಘನವೃತ್ತಮಂ- ಆ ಬಸವೇಶ್ವರನಶ್ರೇಷ್ಠವಾದ ವೃತ್ತಾಂತವನ್ನು, ಅತ್ರಿಜಧರಭಕ್ತರೊಳ್- ಚಂದ್ರಶೇಖರನಾದ ಈಶ್ವರನಭಕ್ತರೊಡನೆ, ಐದೆ- ಚೆನ್ನಾಗಿ, ಪೇಳ್ದಂ; ನೃಪತಿ- ಬಿಜ್ಜಳರಾಜನೇ! ಇದೆಲ್ಲಮಂ, ಅಲ್ಲಿ- ಆ ಶಿವಶರಣರಸಭೆಯಲ್ಲಿ, ಚೆಚ್ಚರಂ- ಶೀಘ್ರವಾಗಿ, ಕಂಡೆಂ. ॥೫೫॥

ನೃಪ! ಕೇಳ್; ವರಗುರುಸಿದ್ಧರಾಮವಿಭುವಿಂದೆ, ವೃಷೇಂದ್ರನ, ಎಳ್ತರದ-ಉತ್ಕೃಷ್ಟವಾದ, ಮಹತ್ತ್ವಮಂ, ಅರಿದೆಂ- ತಿಳಿದೆನು; ಬಗೆವೊಡೆ, ಇಂತು, ವಿರಾಜಿಸಿ-ಪ್ರಕಾಶಿಸಿ, ಪೆಂಪಂ-ಆಧಿಕ್ಯವನ್ನು, ಆಳ್ದು- ಹೊಂದಿದ, ಭಾಸುರಬಸವಂ, ತ್ವದೀಯಸಭೆಯಲ್ಲಿ- ನಿನ್ನ ಸಭೆಯಲ್ಲಿ, ಇರುತಂ, ನಿಜಸ್ಮರಣದಿಂ- ತನ್ನನ್ನು ಸ್ಮರಿಸಿದುದರಿಂದ, ಎನ್ನಂ, ಒರ್ಗ್ಗುಡಿಸದಂದದಿಂ- ಬೀಳದಂತೆ, ಪಿಡಿದು, ಎತ್ತಿದಂ, ಎಂಬುದು, ಇದು, ಒಂದು ಚೋದ್ಯಮೋ- ಒಂದಾಶ್ಚರ್ಯವೇ? ... ... ... ... ... ॥೫೬॥

ವ॥ ಎಂದು ವೃಷೇಂದ್ರವೃತ್ತಾಂತಮನುಸುರೆ ಭೂಪಂ ಕೇಳ್ದು ಮೆಚ್ಚಿ ಗೋಪಾಂಗನೆಗನರ್ಘ್ಯಮಣಿಭೂಷಣದಿವ್ಯಾಂಬರಂಗಳ ನಿತ್ತು ಸರ್ವಮಯನಣುಗಂ ಬಸವರಾಜಂ ಸರ್ವಮಯನೆನಿಪ್ಪುದಿದಾವಕೌತುಕಮೆಂದು ನಿರ್ಧರಿಸಿ ಸಭಾಸದರೊಡನೆ ಮುಗುಳ್ದು ಪೊಗಳ್ದಗಣಿತಾನರ್ಘ್ಯಮಣಿಭೂಷಣಂಗಳಂ ಸಮರ್ಪಿಸಿ ಬಸವಂಗೆ ಕರಾರವಿಂದಮಂ ಮುಗಿದು ನಿಜಗೃಹಕ್ಕೆ ಬೀಳ್ಕೊಡಲೊಡನೆ॥ * * * * * * * * * *

ಮ॥ ಸ್ರ॥ ಕವಿಗಳ್ಕಯ್ಯೆತ್ತಿ ಕೈವಾರಿಸೆ ಬುಧನಿವಹಂ ನಾಡೆ ಕೊಂಡಾಡೆ ಬಂದಿರ್ದವನೀಶರ್ವಿಸ್ಮಯಾಂತಃಕರಣರೆರಗೆ ಮಾಹೇಶ್ವರರ್ಮಾಣದತ್ಯು॥ತ್ಸವದಿಂದಾಲಿಂಗಿಸುತ್ತಂ ಪರಸೆ ಪರಮಸದ್ಭಕ್ತಿಸಂಪತ್ತಿಸಂಪೂ। ರ್ಣವಿಳಾಸಂ ಬಂದು ಶುದ್ಧಾಂತದೊಳೆಸೆದನಿಳಾಭಾಮಿನೀಭಾಗಧೇಯಂ॥ .. ... ... ... ॥೫೭॥

ಲಲಿತಪದವೃತ್ತಂ॥ ಮಾಚವಿಭುಸನ್ನುತಸದಾಚರಣ ವಾದಿಮದಮೋಚನಸಮರ್ಥ ವರಬಾಚಯದಯಾರ್ದ್ರ। ಲೋಚನಸಮೀಕ್ಷ್ಯ ಯಮಿಗೋಚರಪದಾಬ್ಜ ಶಿವವಾಚಕಸಮನ್ವಿತ ಚರಾಚರಸುರಕ್ಷ॥ ಖೇಚರಪರಿಸ್ತುತ ಕಳಾಚತುರ ಧೈರ್ಯವಿಜಿತಾಚಲ ವಿತ

---

ಎಂದು, ವೃಷೇಂದ್ರವೃತ್ತಾಂತಮಂ, ಉಸುರೆ- ಹೇಳಲು, ಭೂಪಂ, ಕೇಳ್ದು, ಗೋಪಾಂಗನೆಗೆ-ಗೋಪಿಗೆ, ಅನರ್ಘ್ಯಮಣಿಭೂಷಣದಿವ್ಯಾಂಬರಂಗಳಂ-ಅಮೂಲ್ಯಗಳಾದ ಆಭರಣಗಳು ಶ್ರೇಷ್ಠಗಳಾದ ವಸ್ತ್ರಗಳನ್ನು, ಇತ್ತು, ಸರ್ವಮಯನಣುಗಂ-ಸರ್ವಸ್ವರೂಪನಾದ ಶಿವನ ಪುತ್ರನಾದ, (ಸರ್ವರೂಪನಾಗಿಯೂ, ಅಣುವ್ಯಾಪಿಯಾಗಿಯೂ, ಇರುವ) ಬಸವರಾಜಂ, ಸರ್ವಮಯಂ-ಸರ್ವವ್ಯಾಪಿಯು, ಎನಿಪ್ಪುದು, ಇದಾವಕೌತುಕಂ-ಇದೇನಾಶ್ಚರ್ಯವು! ಎಂದು, ನಿರ್ಧರಿಸಿ, ಸಭಾಸದರೊಡನೆ, ಮುಗುಳ್ದು-ಪುನಃ, ಪೊಗಳ್ದು, ಬಸವಂಗೆ, ಅಗಣಿತಾನರ್ಘ್ಯಮಣಿಭೂಷಣಂಗಳಂ- ಅಸಂಖ್ಯಾಕಗಳಾದ ಅಮೂಲ್ಯರತ್ನಾಭರಣಗಳನ್ನು, ಸಮರ್ಪಿಸಿ, ಕರಾರವಿಂದಮಂ, ಮುಗಿದು, ನಿಜಗೃಹಕ್ಕೆ, ಬೀಳ್ಕೊಡಲ್- ಕಳುಹಿಸಿಕೊಡಲು, ಒಡನೆ. * * *

ಕವಿಗಳ್, ಕಯ್ಯೆತ್ತಿ, ಕೈವಾರಿಸೆ- ಸ್ತುತಿಸಲು; ಬುಧನಿವಹಂ- ವಿದ್ವತ್ಸಮೂಹವು, ನಾಡೆ- ಚೆನ್ನಾಗಿ, ಕೊಂಡಾಡೆ; ಬಂದಿರ್ದ- ಸಭೆಗೆ ಬಂದಿದ್ದ, ಅವನೀಶರ್- ರಾಜರು, ವಿಸ್ಮಯಾಂತಃಕರಣರ್-ಆಶ್ಚರ್ಯಯುಕ್ತವಾದ ಮನಸ್ಸುಳ್ಳವರಾಗಿ, ಎರಗೆ- ನಮಸ್ಕರಿಸಲು; ಮಾಹೇಶ್ವರರ್, ಮಾಣದೆ- ಬಿಡದೆ, ಅತ್ಯುತ್ಸವದಿಂದೆ- ಅತ್ಯಂತಕುತೂಹಲದಿಂದ, ಆಲಿಂಗಿಸುತ್ತಂ, ಪರಸೆ- ಆಶೀರ್ವದಿಸಲು; ಪರಮಸದ್ಭಕ್ತಿಸಂಪತ್ತಿಸಂಪೂರ್ಣವಿಳಾಸಂ- ಉತ್ಕೃಷ್ಟವಾದ ಸದ್ಭಕ್ತಿಯೆಂಬ ಸಂಪತ್ತಿನಿಂದ ತುಂಬಿದ ವಿಲಾಸವುಳ್ಳ, ಇಳಾಭಾಮಿನೀಭಾಗಧೇಯಂ- ಭೂಕಾಂತೆಯ ಭಾಗ್ಯಸ್ವರೂಪನಾದ ಬಸವೇಶ್ವರನು, ಬಂದು, ಶುದ್ಧಾಂತದೊಳ್- ಅಂತಃಪುರದಲ್ಲಿ, ಎಸೆದಂ. ... ... ... ... ... ॥೫೭॥

ಮಾಚವಿಭುಸನ್ನುತಸದಾಚರಣ- ಮಾಚಿದೇವನಿಂದ ಶ್ಲಾಘ್ಯವಾದ ಒಳ್ಳೆಯ ನಡತೆಯುಳ್ಳ, ವಾದಿಮದಮೋಚನಸಮರ್ಥ- ಪರವಾದಿಗಳ ಗರ್ವವಂ ನಾಶಪಡಿಸುವದರಲ್ಲಿ ಸಮರ್ಥನಾದ, ವರಬಾಚಯದಯಾರ್ದ್ರಲೋಚನಸಮೀಕ್ಷ್ಯ- ಶ್ರೇಷ್ಠನಾದ ಬಾಚಯ್ಯನ ಕೃಪಾರಸಸಿಕ್ತವಾದ ನೇತ್ರದಿಂದ ನೋಡಲ್ಪಡುವದಕ್ಕೆ ಯೋಗ್ಯನಾದ, ಯಮಿಗೋಚರಪದಾಬ್ಜ- ಋಷಿಗಳಿಗೆ ಪ್ರತ್ಯಕ್ಷವಾದ ಪಾದಕಮಲವುಳ್ಳ; ಶಿವವಾಚಕಸಮನ್ವಿತ- ಈಶ್ವರನಾಮೋಚ್ಚಾರಣೆಯಿಂ ಕೂಡಿದ, ಚರಾಚರಸುರಕ್ಷ- ಸ್ಥಾವರಜಂಗಮಪಾಲಕನಾದ, ಖೇಚರಪರಿಸ್ತುತ- ದೇವತೆಗಳಿಂದ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ, ಕಳಾಚತುರ- ವಿದ್ಯಾಕೌಶಲ್ಯವುಳ್ಳ, ಧೈರ್ಯವಿಜಿತಾಚಲ- ಧೈರ್ಯಗುಣದಿಂದ ಜೈಸಲ್ಪಟ್ಟ ಪರ್ವತವುಳ್ಳ, (ಅಂದರೆ ಪರ್ವತಕ್ಕಿಂತಲೂ ದೃಢವಾದ ಧೈ

ರ್ಜ್ಜಿತ ವಿರೋಚನಜ ಮಾಯಾ । ಮೋಚಕ ಸುತತ್ವನಿಧಿ ಸೂಚಕವಚಸ್ಕ ಪೊರೆ ಕೀಚಕರಿಪುಪ್ರಿಯಸುವಾಚ ಬಸವೇಶ ॥ ... ... ... ... ॥೫೪॥

ಮಲ್ಲಿಕಾಮಾಲಾ॥ ಅಂಬುಜಾನನೆ ಕಂಬುಕಂಧರೆ ಕುಂಭಿನೀಧರನಂದಿನೀ । ಶಂಬರಾಹಿತಶಾಸನಪ್ರಿಯೆ ಶುಂಭದಾನವಮರ್ದ್ದಿನೀ ॥ ಶಂಬಪಾಣಿ ವಿಧಾತೃವಿಷ್ಣುಕುಟುಂಬಿನೀಪರಿಪಾಲಿನೀ । ತುಂಬುರಾಜಜಗಾನಲೋಲೆ ಮದಂಬೆ ರಕ್ಷಿಪುದೀಶ್ವರೀ ॥ ... ॥೫೫॥

ಗದ್ಯಂ ॥ ಇದುವಿನವದಖಿಳಸುರಾಸುರೇಂದ್ರಮುಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಬಸವಸರ್ವಗತತ್ವಕಥನಂ ಸಪ್ತಮಾಶ್ವಾಸಂ ಪರಿಸಮಾಪ್ತಂ ॥ ... ... ... ... ... ... *

ಸಪ್ತಮಾಶ್ವಾಸಂ ಸಂಪೂರ್ಣಂ.

---

ರ್ಯವುಳ್ಳವನೆಂದರ್ಥ,) ವಿತರ್ಜಿತವಿರೋಚನಜ— ವಿತರ್ಜಿತ- ಭಯಪಡಿಸಲ್ಪಟ್ಟ, * ವಿರೋಚನಜ- ಯಮನುಳ್ಳ; ಮಾಯಾಮೋಚಕ- ಅಜ್ಞಾನನಾಶಕನಾದ, ಸುತತ್ವನಿಧಿಸೂಚಕವಚಸ್ಕ- ಸಮೀಚೀನವಾದ ಪರಮಾತ್ಮನಂ ಸೂಚಿಸುವ ವಚನವುಳ್ಳ, † ಕೀಚಕರಿಪುಪ್ರಿಯಸುವಾಚ— ಕೀಚಕರಿಪುಪ್ರಿಯ-ಪರಮೇಶ್ವರನೊಡನೆ, ಸುವಾಚ- ಸಮೀಚೀನವಾದ ಸಂಭಾಷಣೆಯುಳ್ಳ, ಬಸವೇಶ! ಪೊರೆ. ... ... ॥೫೪॥

ಅಂಬುಜಾನನೆ- ಕಮಲಮುಖಿಯಾದ, ಕಂಬುಕಂಧರೆ- ಶಂಖದಂತಿರುವ ಕಂಠವುಳ್ಳ, ಕುಂಭಿನೀಧರನಂದಿನೀ- ಪರ್ವತರಾಜನಿಗೆ ಸಂತೋಷಕಾರಿಣಿಯಾದ, ಶಂಬರಾಹಿತಶಾಸನಪ್ರಿಯೆ— ಶಂಬರಾಹಿತ- ಮನ್ಮಥನನ್ನು, ಶಾಸನ- ನಿಗ್ರಹಿಸಿದ ಪರಮೇಶ್ವರನ, ಪ್ರಿಯೆ-ಪ್ರೀತಿಪಾತ್ರಳಾದ, ಶುಂಭದಾನವಮರ್ದಿನೀ-ಶುಂಭಾಸುರನನ್ನು ನಾಶಪಡಿಸಿದ, ಶಂಬಪಾಣಿವಿಧಾತೃವಿಷ್ಣುಕುಟುಂಬಿನೀಪರಿಪಾಲಿನೀ— * ಶಂಬಪಾಣಿ- ಇಂದ್ರ, ವಿಧಾತೃ- ಬ್ರಹ್ಮ, ವಿಷ್ಣು, ಇವರುಗಳ, ಕುಟುಂಬಿನೀ- ಪತ್ನಿಯರನ್ನು, ಪರಿಪಾಲಿನೀ- ರಕ್ಷಿಸುವ, ತುಂಬುರಾಜಜಗಾನಲೋಲೆ- ತುಂಬುರ, † ಅಜಜ- ನಾರದ, ಇವರುಗಳ, ಗಾನ- ಗೀತದಲ್ಲಿ,ಲೋಲೆ- ಆಸಕ್ತಳಾದ, ಮದಂಬೆ- ನನ್ನತಾಯಿಯಾದ, ಈಶ್ವರೀ! ರಕ್ಷಿಪುದು. ... ... ... ॥೫೫॥

---

ಏಳನೆಯ ಆಶ್ವಾಸವು ಸಂಪೂರ್ಣವು.

---

* (ಅವ) ವಿರೋಚನ- ಸೂರ್ಯನ- ದೆಸೆಯಿಂದ, ಜ- ಹುಟ್ಟಿದವನು. † (ಅವ) ಕೀಚಕ- ಕೀಚಕನಿಗೆ, ರಿಪು- ಶತ್ರುವಾದ ಭೀಮನಲ್ಲಿ, ಪ್ರಿಯ- ಪ್ರೀತಿಯುಳ್ಳವನು, ಪರಮೇಶ್ವರನು. ... ॥೫೪॥

* (ಅವ) ಶಂಬ- ವಜ್ರಾಯುಧವೇ, ಪಾಣಿ- ಹಸ್ತದಲ್ಲುಳ್ಳವನು. † (ಅವ) ಅಜ- ಬ್ರಹ್ಮನಿಂದ ಜ-ಹುಟ್ಟಿದವನು. ... ... ... ... ೫೫

ಶ್ರೀಃ.

ಮದನಾಂತಕಾಯ ಪರಬ್ರಹ್ಮಣೇನಮಃ.

## ಅಷ್ಟಮಾಶ್ವಾಸಂ.

### ವಿ ಟ ಜಂ ಗ ಮ ಕ ಥ ನಂ.

ಕಂ॥ ಶ್ರೀಪರ್ವತೇಂದ್ರತನಯಾ | ಲಾಪಸುಧಾಪೂರ್ಣಕರ್ಣನಭವಂ ಘನಚಿ | ದ್ರೂಪಂ ವಿಧುರೋಪಂ ಗಿರಿ | ಚಾಪಂ ಪೊರೆಗೆಮ್ಮನಾವಗಂ ಶಿವಲಿಂಗಂ ॥ ... ॥೧॥

ಮತ್ತೇ॥ ಬಸವಾಧೀಶ್ವರನೊಂದುವಾಸರದೊಳೆಲ್ಲಾಮಂತ್ರಿಗಳ್ಕೂಡಿ ರಂ | ಜಿಸಿ ಧಾತ್ರೀಶನ ನೇಮದಿಂ ಬಹುಬಲಕ್ಕೋರಂದದಿಂ ಜೀವಿತ ॥ ಪ್ರಸರಂದಿರ್ದಲೊಡರ್ಚುತೊಪ್ಪಿರೆ ಬಳಿಕ್ಕಂತಲ್ಲಿಗೇಳ್ತಂದು ದ | ಟ್ಟಸುತಂ ನಿಂದು ಭುಜಂಗಜಂಗಮನದೋರ್ವಂ ತದ್ವೃಷಾಧೀಶನಂ ॥ ... ... ... ... ... ॥೨॥

ಕಂ॥ ಪೇಳಿಗೆದೀವಿದ ಪೊಂಗಳ | ಜಾಳಿಗೆಗಳ ಕುಡುಕುಡಲ್ಲದೊಡೆ ಬಿಡೆ ನಾನೆಂ ॥ ಬಾಳಾಪಂಗೇಳ್ದಲ್ಲವ | ನಾಳೋಚಿಸದಿತ್ತನುದವಂಗೆ ವೃಷೇಂದ್ರಂ ॥ ... ॥೩॥

ವ॥ ಅಂತೀಯಲೊಡ ಮಳ್ಕಜಂಬಟ್ಟು ಕರಿಯಕೇಶವಂ ಕಾಳಿಮರಸಂ ಕಸವ ನುಗ್ರ

---

ಎಂಟನೆಯ ಆಶ್ವಾಸಪ್ರಾರಂಭಃ.

ಶ್ರೀ.........ರ್ಣಂ— ಶ್ರೀ- ಸಂಪದ್ಯುಕ್ತಳಾದ, ಪರ್ವತೇಂದ್ರತನಯಾ-ಪಾರ್ವತಿಯ, ಆಲಾಪ-ವಚನವೆಂಬ, ಸುಧಾ- ಅಮೃತದಿಂದ, ಪೂರ್ಣ- ಸಂಪೂರ್ಣವಾದ, ಕರ್ಣಂ- ಕಿವಿಯುಳ್ಳ, ಅಭವಂ- ಭವರಹಿತನಾದ, ಘನಚಿದ್ರೂಪಂ- ಶ್ರೇಷ್ಠವಾದ ಜ್ಞಾನಸ್ವರೂಪನಾದ, ವಿಧುರೋಪಂ- ವಿಷ್ಣುವೇ ಬಾಣವಾಗುಳ್ಳ, ಗಿರಿಚಾಪಂ- ಪರ್ವತವೇ ಧನುಸ್ಸಾಗುಳ್ಳ, ಶಿವಲಿಂಗಂ, ಎಮ್ಮಂ, ಆವಗಂ, ಪೊರೆಗೆ. ... ॥೧॥

ಒಂದುವಾಸರದೊಳ್- ಒಂದುದಿವಸದಲ್ಲಿ, ಬಸವಾಧೀಶ್ವರಂ, ಎಲ್ಲಾಮಂತ್ರಿಗಳ್, ಕೂಡಿ, ರಂಜಿಸಿ, ಧಾತ್ರೀಶನ- ಬಿಜ್ಜಳರಾಜನ, ನೇಮದಿಂ- ಆಜ್ಞೆಯಿಂದ, ಬಹುಬಲಕ್ಕೆ- ಅಧಿಕವಾದ ಸೈನ್ಯಕ್ಕೆ, ಓರಂದದಿಂ- ಒಂದುರೀತಿಯಿಂದ, ಜೀವಿತಪ್ರಸರಂದಿರ್ದಲ್- ಸಂಬಳವಂ ಕೊಡುವದಕ್ಕೋಸ್ಕರ, ಒಡರ್ಚುತೆ- ಉಜ್ಜುಗಿಸುತ್ತ, ಒಪ್ಪಿರೆ, ಬಳಿಕ್ಕೆ, ಅಂತು, ಅಲ್ಲಿಗೆ, ಅದೋರ್ವಂಭುಜಂಗಜಂಗಮಂ- ಅದೊಬ್ಬ ವಿಟಜಂಗಮನು, ಏಳ್ತಂದು, ದಟ್ಟಸುತಂ-ಅಡ್ಡಲಾಗಿ ನಿಂದು, ತದ್ವೃಷಾಧೀಶನಂ. ... ... ... ॥೨॥

ಪೇಳಿಗೆದೀವಿದ- ಪೆಟ್ಟಿಗೆಯಲ್ಲಿ ತುಂಬಿರುವ, ಪೊಂಗಳ- ಹೊನ್ನುಗಳ, ಜಾಳಿಗೆಗಳಂ- ಚೀಲಗಳನ್ನು, ಕುಡುಕುಡು- ಬೇಗಕೊಡು, ಅಲ್ಲದೊಡೆ- ಕೊಡದಿದ್ದಲ್ಲಿ, ಆಂ, ಬಿಡೆಂ, ಎಂಬ, ಆಲಾಪಂಗೇಳ್ದು- ವಚನವನ್ನು ಕೇಳಿ, ವೃಷೇಂದ್ರಂ, ಆಳೋಚಿಸದೆ, ಅಂದು, ಅವಂಗೆ- ಆಜಂಗಮನಿಗೆ, ಎಲ್ಲವಂ-ಹಣವೆಲ್ಲವನ್ನೂ ಇತ್ತಂ.

ಅಂತು, ಈಯಲ್- ಕೊಡಲು, ಒಡಂ- ಕೊಡಲೇ, ಕರಿಯಕೇಶವಂ, ಕಾಳಿಮರಸಂ, ಕಸವಂ, ಉಗ್ರ

ಚಂದಿ ಮೈಲಾರಂ ಮಂಚಿಗಂ ಕುಂದತಮಿ ಯೆಂಬರೆಲ್ಲ ರ್ಮೆಳಂಗೊಂಡು ಕೊಂಡೆಗಕ್ಕೆ ನಾಲಗೆಯ ತಿಂತೆ ಮಸಗೆ ನರೇಂದ್ರನೆಡೆಗೈದಿ ನಿಂದೆರಗಿ ಕರಂಗಳಂ ಮುಗಿದು ॥ * * *

ಕಂ ॥ ಕೇಳರಸ ನಿನ್ನ ಪೊಸಪೊಂ । ಜಾಳಿಗೆಗಳ ನೊಡೆದು ಮುದ್ರೆಯಂ ವಿಟಭಕ್ತಂ॥ ಕೇಳೆ ಬಸವಣ್ಣ ನಿತ್ತಂ । ಪೇಳಿಗೆ ಬರಿದಾದು ದೊಗೆದುದೆಮಗಧಿಕಭಯಂ ॥ ... ॥೪॥

ವ॥ಎಂದು ಪಿಸುಣರ್ಪಿಸುಣಾಡೆ ನೃಪಂಕೇಳ್ದು ಕನಲ್ಕೆಗೊಂಡು ಬಸವರಸನಂಬರಿಸಿ*

ಚಂ ॥ ಸ್ಥಿರಗುಣಿಯೆಂದು ಸತ್ಯನಿಧಿಯೆಂದು ಪರಾರ್ಥಮ ನೆಂತುಮೊಲ್ಲದ । ತ್ಯುರುಶುಚಿಯೆಂದು ನಂಬಿ ನಿನಗಾನೆನಗುಳ್ಳುದನೆಲ್ಲಮಂ ಸಮು ॥ ದ್ಧರಿಸೆನುತಿತ್ತುದಕ್ಕೆ ಫಲಮಾದುದು ಲೇಸ ನೊಡರ್ಚಿದೈ ಗುಣಾ ! ಕರ ನಿನಗಾರ್ಸಮಾನ ರೊಡೆದೆನ್ನಯ ಮುದ್ರೆಯ ನಚ್ಚಪೊಂಗಳಂ ॥ ... ... ... .. ... ॥೫॥

ಕಂ ॥ ಬೇಡಿದ ಭುಜಂಗಭಕ್ತಂ । ಗಾಡಂಬರದಿಂದೆ ಕೊಟ್ಟೆ ನಿನ್ನಿಚ್ಛೆಯೊಳಿ ॥ ನ್ನಾಡಲದೇಂ ಪರಧನಮಂ । ನೀಡುಂ ನಿನ್ನಂತೆ ಕೊಡುವ ದಾನಿಗಳೊಳರೆ ॥ ... ॥೬॥

ಕಂ॥ ಇಂದಿತ್ತ್ತಪೊಂಗಳಂ ಬಗೆಬಂದಂ । ತಿರೆ ಬಸವ ನಾಳೆ ಬೇಡಿದ ಭಕ್ತಂ ॥ ಗಂದಂಮಿಗೆ ಮದ್ರಾಜ್ಯಮ । ನೊಂದಿನಿಸುಳಿಯದವೊಲೀಯನುಳ್ಳವನಲ್ತೆ ॥ .. ॥೭॥

---

ಚಂದಿ, ಮೈಲಾರಂ, ಮಂಚೆಗಂ, ಕುಂದತಮಿ, ಎಂಬರ್, ಎಲ್ಲರ್, ಅಳ್ಕಜಂಗೊಂಡು– ಅಸೂಯೆಪಟ್ಟು, ಮೇಳಂಗೊಂಡು- ಗುಂಪಾಗಿ, ಕೊಂಡೆಯಕ್ಕೆ- ಚಾಡಿಯಂ ಹೇಳುವದಕ್ಕೋಸ್ಕರ,ನಾಲಿಗೆಯ,ತಿಂತೆ- ತೀಂಟಿಯು, ಮಸಗೆ- ಹೆಚ್ಚಾಗಲು, ನರೇಂದ್ರನೆಡೆಗೆ- ಬಿಜ್ಜಳನಬಳಿಗೆ, ಐದಿ-ಹೋಗಿ, ಕರಂಗಳಂ, ಮುಗಿದು. *

ಅರಸ! ಕೇಳ್; ವಿಟಭಕ್ತಂ, ಕೇಳೆ, ಬಸವಣ್ಣಂ, ಮುದ್ರೆಯಂ. ಒಡೆದು, ನಿನ್ನ, ಪೊಸಪೊಂಜಾಳಿಗೆಗಳಂ- ಹೊಸದಾದ ಹೊನ್ನಿನಚೀಲಗಳನ್ನು, ಇತ್ತಂ, ಪೇಳಿಗೆ– ಪೆಟ್ಟಿಗೆಯು, ಬರಿದಾದುದು; ಎಮಗೆ, ಅಧಿಕಭಯಂ, ಒಗೆದುದು- ಹುಟ್ಟಿತು. ... ... ... ... ॥೪॥

ಎಂದು, ಪಿಸುಣರ್- ಚಾಡಿಕೋರರು, ಪಿಸುಣಾಡೆ- ಚಾಡಿಯನ್ನು ಹೇಳಲು; ನೃಪಂ, ಕೇಳ್ದು, ಕನಲ್ಕೆಗೊಂಡು- ಕೋಪವಂಹೊಂದಿ, ಬಸವರಸನಂ, ಬರಿಸಿ- ಬರಮಾಡಿ. * * * * * * *

ಗುಣಾಕರ– ಸದ್ಗುಣಾಶ್ರಯನಾದ ಬಸವೇಶ್ವರನೇ ! ಸ್ಥಿರಗುಣಿ- ಶಾಶ್ವತವಾದ ಸದ್ಗುಣವುಳ್ಳವನು, ಎಂದು, ಸತ್ಯನಿಧಿ- ಯಥಾರ್ಥವಾದಿತ್ವಕ್ಕೆ ನಿಕ್ಷೇಪನು, ಎಂದು, ಪರಾರ್ಥಮಂ- ಅನ್ಯದ್ರವ್ಯವನ್ನು, ಎಂತುಂ- ಪ್ರಯಾಸದಿಂದಲೂ, ಒಲ್ಲದ- ಅಪೇಕ್ಷಿಸದ, ಅತ್ಯುರುಶುಚಿ- ಅತ್ಯಂತಪರಿಶುದ್ಧನು, ಎಂದು, ನಂಬಿ, ಆಂ, ಎನಗುಳ್ಳುದುಎಲ್ಲಮಂ-ನನಗಿರುವ ಸರ್ವಸ್ವವನ್ನೂ, ಉದ್ಧರಿಸು, ಎನುತೆ, ನಿನಗೆ, ಇತ್ತುದಕ್ಕೆ, ಫಲಂ, ಆದುದು: ಲೇಸಂ- ಒಳ್ಳೆಯಕಾರ್ಯವನ್ನು, ಒಡರ್ಚಿದೈ- ಮಾಡಿದೆಯಯ್ಯಾ; ನಿನಗೆ, ಸಮಾನರ್, ಆರ್? ಎನ್ನಯ, ಮುದ್ರೆಯಂ, ಒಡೆದು, ಅಚ್ಚಪೊಂಗಳಂ ... ... ... ॥೫॥

ಬೇಡಿದ, ಭುಜಂಗಭಕ್ತಂಗೆ- ವಿಟಭಕ್ತನಿಗೆ, ನಿನ್ನಿಚ್ಛೆಯೊಳ್- ನಿನ್ನಇಚ್ಛೆಯಿಂದ, ಆಡಂಬರದಿಂದೆ- ಸಡಗರದಿಂದ, ಕೊಟ್ಟೆ; ಇನ್ನು, ಆಡಲ್, ಅದೇಂ- ಆಡುವದೇನು? ನಿನ್ನಂತೆ, ಪರಧನಮಂ, ನೀಡುಂ-ಚೆನ್ನಾಗಿ, ಕೊಡುವ, ದಾನಿಗಳ್, ಒಳರೇ- ಉಂಟೇ? ... ... ... ॥೬॥

ಬಸವ! ಇಂದು- ಈದಿವಸ, ಬಗೆಬಂದಂತಿರೆ–ಮನಸ್ಸುಬಂದಂತೆ, ಪೊಂಗಳಂ, ಇತ್ತೆ–ಕೊಟ್ಟೆ, ನಾಳೆ, ಬೇಡಿದ,ಭಕ್ತಂಗೆ, ಅಂದುಮಿಗೆ- ಚೆನ್ನಾಗಿ, ಮದ್ರಾಜ್ಯಮಂ- ನನ್ನರಾಜ್ಯವನ್ನು, ಒಂದಿನಿಸು- ಒಂದಿಷ್ಟು, ಉಳಿಯದವೊಲ್- ಮಿಗದಂತೆ, ಈಯನುಳ್ಳವನಲ್ತೆ- ಕೊಡುವದಕ್ಕೆಮನಸ್ಸುಳ್ಳವನಲ್ಲವೇ? ... ॥೭॥

ಕಂ॥ ಪಳಿಗಂಜದೆಮ್ಮ ನರಪತಿ । ಮುಳಿದವ ನೆಂದೆಣಿಸದನ್ಯಧನಮನದೆಂತುಂ ॥ ಕೊ
ಳಲೊಲ್ಲೆನೆಂಬ ನೇಮಮ । ನೆಳಸದೆ ಪಾಳ್ಗೆಯ್ದ ಕೋಶಮಂ ಬಸವೇಶ ॥ ... ॥೮॥

ವ॥ ಎಂದು ನುಡಿವರಸನಾಗ್ರಹೋಕ್ತಿಗೆ ಮಹಿಮಾಕರಂ ಮುಗುಳ್ನಗೆನಕ್ಕು ॥ *

ಕಂ॥ ಎಲೆನೃಪತಿ ನೀತಿದಪ್ಪಿದ । ಪಲವುಂ ನುಡಿಗಳ ನದೇಕೆ ನುಡಿದಪೆ ಭುವನಾ॥
ವಲಿಗರಸನಪ್ಪ ಶಿವನು । ನಲಿದರ್ಚಿಪ ಶರಣರನ್ಯಧನಕೆಳಸುವರೆ॥ ... ... ॥೯॥

ಚಂ ॥ ಸುರಭಿ ಸುರದ್ರುಮಂ ಸುರಸುರತ್ನ ಮಿವೆಲ್ಲಮು ಮೀಯಲಾರದ । ತ್ಯುರು
ತರಸಂಪದಸ್ಥಿತಿಯ ನೀವ ಮಹೇಶ್ವರಭಕ್ತಿಯಾಂತ ಸ ॥ ತ್ಪುರುಷ ನದೆಂತು ಪೇಳ್ಪರಧ
ನಕ್ಕೆಳಸಿರ್ಪ ನಪಾರದುಗ್ಧಸಾಗರದೆವಿಹಾರಿಪಂಚೆ ಕಿರುವೆಂಚೆಯವಾರಿಗೆ ಚಿತ್ತಮೀವುದೆ॥

ಉ ॥ ಸಾರಸುಧಾಮರೀಚಿರುಚಿಯಂ ತೆಗೆದೀಂಟುವ ಜೊನ್ನವಕ್ಕಿ ವಿ । ಸ್ತಾರ
ತಮಸ್ಸಮೂಹ ಮನದೇಂ ಬರೆಪೀರ್ವುದೆ ಚೂತಪಲ್ಲವೋ । ದಾರರಸಂಗಳಂ ಸವಿವ
ಕೋಗಿಲೆಮೆಲ್ವುದೆ ವೇಣುಪತ್ರಮಂ । ಮಾರಹರಪ್ರಸಾದಭಜಕಂ ಕವರ್ದಪ್ಪನೆಲೋಗರ
ರ್ಥಮಂ ॥ ... .. ... ... ... ॥೧೧॥

---

ಪಳಿಗೆ- ದೂಷಣೆಗೆ, ಅಂಜದೆ- ಬೆದರದೆ, ಎಮ್ಮ, ನರಪತಿ- ರಾಜನು, ಮುಳಿದಪಂ- ಕೋಪಿಸಿಕೊಳ್ಳು ವನು, ಎಂದು, ಎಣಿಸದೆ- ಆಲೋಚಿಸದೆ, ಅನ್ಯಧನಮಂ, ಅದೆಂತುಂ- ಅದುಹ್ಯಾಗಾದರೂ, ಕೊಳಲೊಲ್ಲೆಂ- ತೆಗೆದುಕೊಳ್ಳುವದಿಲ್ಲ, ಎಂಬ,ನೇಮಮಂ- ನಿಯಮವನ್ನು, ಎಳಸದೆ- ಅಪೇಕ್ಷಿಸದೆ, ಬಸವೇಶ! ಕೋಶಮಂ- ಬೊಕ್ಕಸವನ್ನು, ಪಾಳ್ಗೆಯ್ದೆ- ಹಾಳ್ಮಾಡಿದೆ. ... ... ... ॥೮॥

ಎಂದು, ನುಡಿದ, ಅರಸನ, ಆಗ್ರಹೋಕ್ತಿಗೆ- ಕೋಪದಿಂದಕೊಡಿದಮಾತಿಗೆ, ಮಹಿಮಾಕರಂ- ಮಹ ತ್ವಕ್ಕೆ ಆಶ್ರಯನಾದ ಬಸವೇಶ್ವರನು, ಮುಗುಳ್ನಗೆನಕ್ಕು. * * * * * * * * *

ಎಲೆ ನೃಪತಿ! ನೀತಿದಪ್ಪಿದ- ನ್ಯಾಯವಲ್ಲದ, ಪಲವುಂನುಡಿಗಳಂ- ಅನೇಕವಚನಗಳನ್ನು, ಅದೇಕೆನು ಡಿದಪೆ? ಭುವನಾವಲಿಗೆ- ಲೋಕಸಮುದಾಯಕ್ಕೆ, ಅರಸಂ, ಅಪ್ಪ, ಶಿವನಂ, ನಲಿದು- ಸಂತೋಷದಿಂದ, ಅ ರ್ಚಿಪ- ಪೂಜಿಸುವ, ಶರಣರ್, ಅನ್ಯಧನಕೆ- ಮತ್ತೊಬ್ಬನದ್ರವ್ಯಕ್ಕೆ, ಎಳಸುವರೆ- ಅಪೇಕ್ಷಿಸುವರೇ? ॥೯॥

ಸುರಭಿ- ಕಾಮಧೇನು, ಸುರದ್ರುಮಂ- ಕಲ್ಪವೃಕ್ಷ, ಸುರಸುರತ್ನಂ- ಚಿಂತಾರತ್ನ, ಇವೆಲ್ಲಮುಂ, ಈ ಯಲಾರದ- ಕೊಡಲಾರದ, ಅತ್ಯುರುತರಸಂಪದಸ್ಥಿತಿಯಂ- ಅತ್ಯಧಿಕವಾದಸಂಪತ್ತನ್ನು,ಈವ, ಕೊಡುವ, ಮಹೇಶ್ವರಭಕ್ತಿಯ- ಶಿವಭಕ್ತಿಯನ್ನು, ಆಂತ- ಹೊಂದಿದ, ಸತ್ಪುರುಷಂ, ಪರಧನಕ್ಕೆ, ಅದೆಂತು- ಅದು ಹ್ಯಾಗೆ, ಎಳಸಿ- ಅಪೇಕ್ಷಿಸಿ, ಇರ್ಪಂ? ಅಪಾರದುಗ್ಧಸಾಗರದೆ- ಅನಂತವಾದಕ್ಷೀರಸಮುದ್ರದಲ್ಲಿ,ವಿಹಾರಿಪ- ಕ್ರೀಡಿಸುವ, ಅಂಚೆ- ಹಂಸಪಕ್ಷಿಯು, ಕಿರುವೆಂಚೆಯ- ಸಣ್ಣಕೊಂಟೆಪು, ವಾರಿಗೆ- ನೀರಿಗೆ, ಚಿತ್ತಮೀವುದೆ- ಮನಸ್ಸಂಕೊಡುವದೇ? ಪೇಳ್. ... ... ... ... ॥೧೦॥

ಸಾರಸುಧಾಮರೀಚಿರುಚಿಯಂ- ಶ್ರೇಷ್ಠವಾದ ಚಂದ್ರನಕಾಂತಿಯನ್ನು, ತೆಗೆದು, ಈಂಟುವ- ಕುಡಿ ಯುವ, ಅದು ಜೊನ್ನವಕ್ಕಿ- ಆ ಚಕೋರಪಕ್ಷಿಯು, ವಿಸ್ತಾರತಮಸ್ಸಮೂಹಮಂ- ವಿಶಾಲವಾದ ಅಂಧಕಾ ರದ ಗುಂಪನ್ನು, ಬರೆಪೀರ್ವುದೇಂ- ಚೆನ್ನಾಗಿಕುಡಿಯುವದೇ? ಚೂತಪಲ್ಲವೋದಾರರಸಂಗಳಂ- ಮಾವಿನಚಿ ಗುರಿನಶ್ರೇಷ್ಠವಾದ ರಸಗಳನ್ನು, ಸವಿವ, ಕೋಗಿಲೆ, ವೇಣುಪತ್ರಮಂ ಬಿದುರಿನ ಸೋಗೆಯನ್ನು, ಮೆಲ್ವು ದೆ- ತಿನ್ನುವದೇ? ಮಾರಹರಪ್ರಸಾದಭಜಕಂ- ಪರಮೇಶ್ವರಪ್ರಸಾದಮಂ ಸೇವಿಸುವವನು, ಲೋಗರ- ಅನ್ಯ ರ, ಅರ್ಥಮಂ- ದ್ರವ್ಯವನ್ನು, ಕವರ್ದಪ್ಪನೆ- ಬಾಚಿಕೊಳ್ಳುವನೇ? ... ... ॥೧೧॥

ಚಂ || ಸಸಿ ಬಿಸಿಯಾಡೊಡಂ ತರಣಿ ತಣ್ಗಿದೊಡಂ ಘನಕಾಂಚನಾದ್ರಿ ಕಂ| ಪಿಸಿದೊ
ಡ ಮೌರ್ವವಹ್ನಿ ಬಿಸುಪಾರಿದೊಡಂ ನಿಗಮೋಕ್ತಿಯೊಳ್ತೊದ || ಳ್ಮಸಗಿದೊಡಂ ಕಡಲ್ಬ
ರೆತೊಡಂ ಗಗನಂ ಪಡಲಿಟ್ಟೊಡಂ ದಿಶಾ | ವಸನನ ಭಕ್ತರನ್ಯಧನಕೊಲ್ದಳುಪ ರ್ಸತತಂ
ಮಹೀಪತಿ || ... ... ... .. ||೧೨||

ಕಂ || ಇದುನನ್ನಿನಿನ್ನಬಂಡಾ | ರದಲೆಕ್ಕದವಸ್ತುವಂವಿಚಾರಿಪುದಣುಮಾ || ತ್ರದಧ
ನಮರೆಯಾದೊಡಮಾಂ | ಮದನಾರಿಯಭಕ್ತನಲ್ತುಬಿಜ್ಜಳನೃಪತಿ || ... ||೧೩||

ಕಂ|| ಅವರೊಡವೆಯನವರ್ಗಿತ್ತೆಂ | ಶಿವ ನರಿವಂ ನಿನ್ನ ವಸ್ತುವಿತ್ತವನಲ್ತು|| ಲ್ತವ
ರೆಂತುಕೊಳ್ವ ರಾನೆಂ| ತುವಿಚಾರಿಪ್ಪೊಡೀವೆ ನರಸ ನಿನ್ನಯಧನಮಂ || .. ||೧೪||

ಕಂ || ಈಗಳೆ ನಿನ್ನಯ ಸಂಶಯ | ಪೂಗಂ ಪರಿವಂತೆ ತೋರ್ಪೆನೆಂದಾ ಬಸವಂ ||
ಬೇಗದೊಳೆ ತರಿಸಿದಂ ಭಾಂ | ಡಾಗಾರದ ಪೊನ್ನಪೇಟಕಾಸಮುದಯಮಂ || ||೧೫||

ಕಂ || ಕರೆಯಿಸಿದಂ ಗಣಕಾಳಿಯ | ನರಸನ ಸಂದೆಗದಕೀಲ ನುರ್ಚುವತೆರದಿಂ || ಭ
ರದಿಂ ಕೀಲ್ಗಳೆದಿಡಿದು | ಪ್ಪರಿಸುವ ಪೇಳಿಗೆಯ ಪೊಂಗಳಂ ಕಾಣಿಸಿದಂ || ... ||೧೬||

---

ಮಹೀಪತಿ- ರಾಜನೇ! ಸಸಿ- ಚಂದ್ರನು, ಬಿಸಿಯಾಡೊಡಂ- ಉಷ್ಣವುಳ್ಳವನಾದಾಗ್ಯೂ, ತರಣಿ-ಸೂರ್ಯನು, ತಣ್ಗಿದೊಡಂ- ಔಷ್ಣ್ಯವಂಬಿಟ್ಟು ತಂಪಾದಾಗ್ಯೂ, ಘನಕಾಂಚನಾದ್ರಿ- ದೊಡ್ಡದಾದ ಮೇರುಪರ್ವತವು,ಕಂಪಿಸಿದೊಡಂ- ನಡುಗಿದರೂ, ಔರ್ವವಹ್ನಿ- ಬಡಬಾಗ್ನಿಯು, ಬಿಸುಪಾರಿದೊಡಂ- ಬಿಸಿಯನ್ನುಬಿಟ್ಟಾಗ್ಯೂ,ನಿಗಮೋಕ್ತಿಯೊಳ್- ವೇದವಾಕ್ಯದಲ್ಲಿ, ತೊದಳ್- ಸುಳ್ಳು,ಮಸಗಿದೊಡಂ-ಉಂಟಾದಾಗ್ಯೂ, ಕಡಲ್-ಸಮುದ್ರವು, ಬರೆತೊಡಂ- ಒಣಗಿದಾಗ್ಯೂ, ಗಗನಂ- ಆಕಾಶವು,ಪಡಲಿಟ್ಟೊಡಂ- ಕಿತ್ತುಬಿದ್ದಾಗ್ಯೂ, ಸತತಂ-ಯಾವಾಗಲೂ, ದಿಶಾವಸನನ- ದಿಗಂಬರನಾದ ಪರಶಿವನ, ಭಕ್ತರ್, ಅನ್ಯಧನಕೆ, ಒಲ್ದು- ಅಪೇಕ್ಷಿಸಿ, ಅಳುಪರ್- ಕೆಡಿಸುವದಿಲ್ಲವು. ... ... ... ... ||೧೨||

ಬಿಜ್ಜಳನೃಪತಿ! ಇದು, ನನ್ನಿ- ನಿಶ್ಚಯ; ನಿನ್ನ, ಬಂಡಾರದ, ಲೆಕ್ಕದ, ವಸ್ತುವಂ- ಪದಾರ್ಥವನ್ನು, ವಿಚಾರಿಪುದು, ಅಣುಮಾತ್ರದಧನಂ, ಅರೆಯಾದೊಡಂ- ಕಮ್ಮಿಯಾದಾಗ್ಯೂ, ಆಂ, ಮದನಾರಿಯ- ಶಿವನ, ಭಕ್ತಂ, ಅಲ್ತು, ಅಲ್ಲವು. ... ... ... ... ||೧೩||

ಅರಸ! ಅವರ- ಆ ಜಂಗಮರ, ಒಡವೆಯಂ- ವಸ್ತುವನ್ನು, ಅವರ್ಗೆ, ಇತ್ತೆಂ; ಶಿವಂ, ಅರಿವಂ- ತಿಳಿಯುವನು; ನಿನ್ನ, ವಸ್ತುವ, ಇತ್ತವಂ- ಕೊಟ್ಟವನು, ಅಲ್ತುಅಲ್ತು; ವಿಚಾರಿಪ್ಪೊಡೆ, ಅವರ್- ಆಜಂಗಮರು, ನಿನ್ನಯ,ಧನವಂ, ಎಂತುಕೊಳ್ವರ್- ಹ್ಯಾಗೆತೆಗೆದುಕೊಂಡಾರು? ಆಂ, ಎಂತುಈವೆಂ- ಹ್ಯಾಗೆಕೊಡುವೆನು? ... ... ... ... ||೧೪||

ಈಗಳೆ, ನಿನ್ನಯ, ಸಂಶಯಪೂಗಂ- ಸಂದೇಹಸಮೂಹವು, ಪರಿವಂತೆ- ತೊಲಗುವಂತೆ, ತೋರ್ಪೆಂ, ಎಂದು, ಆ ಬಸವಂ, ಬೇಗದೊಳೆ, ಭಾಂಡಾಗಾರದ- ಬಂಡಾರದ, ಪೊನ್ನ- ಹೊನ್ನಿನ, ಪೇಟಿಕಾಸಮುದಯಮಂ-ಪೆಟ್ಟಿಗೆಗಳಗುಂಪನ್ನು, ತರಿಸಿದಂ. ... ... ... ||೧೫||

ಗಣಕಾಳಿಯಂ- ಲೆಕ್ಕದವರಸಮೂಹವನ್ನು, ಕರೆಯಿಸಿದಂ, ಅರಸನ, ಸಂದೆಗದ- ಸಂದೇಹದ, ಕೀಲಂ- ಬಂಧನವನ್ನು, ಉರ್ಚುವ- ಬಿಡಿಸುವ, ತೆರದಿಂ- ರೀತಿಯಿಂದ, ಭರದಿಂ-ಶೀಘ್ರವಾಗಿ, ಕೀಲ್ಗಳೆದು-ಬೀಗ ಮಂತೆಗೆದು, ಇಡಿದು- ತುಂಬಿ, ಉಪ್ಪರಿಸುವ-ಹೆಚ್ಚುತ್ತಿರುವ, ಪೇಳಿಗೆಯ- ಪೆಟ್ಟಿಗೆಯಲ್ಲಿರುವ, ಪೊಂಗಳಂ- ಹೊನ್ನುಗಳನ್ನು, ಕಾಣಿಸಿದಂ. ... ... .. ... ||೧೬||

ವ ‖ ಅಂತು ತನ್ನ ತೇಜಃಪುಂಜದಂತೆ ಬರೆಪದ ಲಕ್ಕಕ್ಕರ್ಗಳಂ ಮಿಕ್ಕ ಪೊಂಗಳಂ ತೋರಿಸೆ ಬಿಜ್ಜಳಂ ಸಭಾಸದರೊಡನೆ ಕಂಡು ಕೌತುಕಂಗೊಂಡು ಪಿಸುಣ್ಗಡೆದ ಖಳಗಂ ತರ್ಜನಂಗೆಯ್ದು ಮತ್ಪುರದೊಳಿನ್ನಾವನಾದೊಡ ಮಿಂತು ಬಸವನು ಕೊರ್ತ್ತು ಪಿಸುಣ್ಗಡಿಯೆ ಜಿಹ್ವಾಛೇದನಂಗೆಯ್ಸಿದಪೆ ನೆಂದು ಪ್ರೊಣ್ದು ನುಡಿದು ಬಸವಮಹಿಮೆಯಂ ಬಗೆದಂದು ಕೀರ್ತ್ತಿಪಾಗಳ್ ‖ * * * * * * * * * * * * * *

ಸ್ರ ‖ ಮುನ್ನೊರ್ವಂ ಭಕ್ತವರ್ಯಂ ಮಧುರೆಯಧಿಪಪಾಂಡ್ಯಂಗೆ ಸನ್ಮಂತ್ರಿಯಾಗಿ ।
ರ್ದ್ದೌನ್ನತ್ಯಂ ಮಿಕ್ಕಪಂ ಭಾಸುರಹಯಚಯಮಂಕೊಳ್ಳೆನುತ್ತಿತ್ತಗಣ್ಯಂ ‖ ಪೊನ್ನೆಲ್ಲಂ
ತೀರೆ ಕೊಟ್ಟಾಶರಣಗಣಕೆ ಮೇಣ್ಜಂಬುಕವ್ರಾತಮಂ ವ್ಯ । ತ್ಪನ್ನಂ ಭಾಸ್ವತ್ತುರಂ
ಗೋತ್ಕರಮ ನೆಸಗಿ ಕೊರ್ತ್ತಿತ್ತನಾಚೊಕ್ಕನಾಥಂ ‖ ... ... ‖೧೭‖

ಕಂ‖ ಅದರಿಂ ಶಿವಭಕ್ತರ್ಗ್ಗಿಂ । ತಿದು ಘನಮಲ್ತೆಂದು ಶರಣರುಲಿವುತ್ತಿರೆ ಸ ‖ ನ್ಮು
ದಮುಲರೆ ಕೈಮುಗಿದು ಭೂ । ಸುದತೀಶಂ ಬಸವರಾಜನಂ ಕೀರ್ತ್ತಿಸುತಂ ‖ ... ‖೧೮‖

ಕಂ‖ ದಿನಮಣಿಗೆ ದೀವಿಗೆಯ ನಾ । ಘನರೋಹಣಗಿರಿಗೆ ರನ್ನಮಂ ಕುಡುವವೊಲಾ‖
ಜನಪತಿ ಬಸವಂಗಿತ್ತಂ । ಕನಕಾಂಬರಮಂ ಮನೋಜ್ಞಮಣಿಭೂಷಣಮಂ ‖ ‖೧೯‖

---

ಅಂತು, ತನ್ನ, ತೇಜಃಪುಂಜದಂತೆ- ಕಾಂತಿಸಮುದಾಯದಹಾಗೆ, ಬರೆಪದ-ಬರೆದಿರುವ, ಲೆಕ್ಕಕ್ಕೆ - ಲೆಕ್ಕಕ್ಕಿಂತಲೂ, ಅರ್ಗಳಂ- ಅಧಿಕವಾಗಿ, ಮಿಕ್ಕ- ಉಳಿದಿರುವ, ಪೊಂಗಳಂ, ತೋರಿಸೆ, ಬಿಜ್ಜಳಂ, ಸಭಾಸದರೊಡನೆ- ಸಭಿಕರೊಡನೆ, ಕಂಡು- ನೋಡಿ, ಕೌತುಕಂಗೊಂಡು-ಆಶ್ಚರ್ಯಪಟ್ಟು, ಪಿಸುಣ್ಗಡೆದ-ಚಾಡಿಯಂಹೇಳಿದ, ಖಳರಂ- ನೀಚರನ್ನು, ತರ್ಜನಂಗೆಯ್ದು- ಭಯಪಡಿಸಿ, ಮತ್ಪುರದೊಳ್- ನನ್ನ ಪಟ್ಟಣದಲ್ಲಿ; ಇನ್ನು, ಆವನಾದೊಡಂ, ಇಂತು, ಬಸವನಂ, ಕೊರ್ತ್ತು, ಪಿಸುಣ್ಗಡೆಯೆ-ಚಾಡಿಯಂಹೇಳಿದರೆ, ಜಿಹ್ವಾಛೇದನಂಗೆಯ್ಸಿದಪೆಂ- ನಾಲಿಗೆಯಂ ಕತ್ತರಿಸುವೆನು, ಎಂದು, ಪ್ರೊಣ್ದು- ಪ್ರತಿಜ್ಞೆಯಂಮಾಡಿ, ನುಡಿದು, ಬಸವಮಹಿಮೆಯಂ, ಬಗೆದಂದು- ಯೋಚಿಸಿ, ಕೀರ್ತ್ತಿಪಾಗಳ್. * * * * * * * * * *

ಮುನ್ನ, ಒರ್ವಂಭಕ್ತವರ್ಯಂ, ಮಧುರೆಯ- ಮಧುರಾಪಟ್ಟಣದ, ಅಧಿಪಪಾಂಡ್ಯಂಗೆ- ದೊರೆಯಾದ ಪಾಂಡ್ಯರಾಜನಿಗೆ, ಸನ್ಮಂತ್ರಿಯಾಗಿ, ಇರ್ದ್ದು, ಔನ್ನತ್ಯಂ-ಉನ್ನತಪದವಿಯು, ಮಿಕ್ಕು-ಅಧಿಕವಾಗಿ, ಅಪಂ- ಆರಾಜನು, ಭಾಸುರಹಯಚಯಮಂ-ಮನೋಹರವಾದ ಕುದುರೆಗಳಸಮೂಹವನ್ನು, ಕೊಳ್-ತೆಗೆದುಕೋ, ಎನುತ್ತೆ, ಇತ್ತು, ಅಗಣ್ಯಂ-ಗಣನಾತೀತನಾದ, ಪೊನ್ನೆಲ್ಲಂ-ಧನವೆಲ್ಲವೂ, ಆ ಶರಣಗಣಕೆ, ಕೊಟ್ಟು, ತೀರೆ- ತೀರಿಹೋಗಲು, ಮೇಣ್, ವ್ಯುತ್ಪನ್ನಂ- ಕುಶಲನಾದ, ಆಚೊಕ್ಕನಾಥಂ- ಚೊಕ್ಕನಾಥನೆಂಬ ಆಭಕ್ತನು, ಜಂಬುಕವ್ರಾತಮಂ- ನರಿಗಳ ಸಮೂಹವನ್ನು, ಭಾಸ್ವತ್ತುರಂಗೋತ್ಕರಮಂ- ಪ್ರಕಾಶಿಸುವ ಕುದುರೆಗಳ ಸಮೂಹವನ್ನಾಗಿ, ಎಸಗಿ-ಮಾಡಿ, ಕೊರ್ತ್ತು, ಇತ್ತಂ. ... ... ... ... ‖೧೭‖

ಅದರಿಂ, ಶಿವಭಕ್ತರ್ಗ್ಗೆ, ಇಂತಿದು-ಈಪ್ರಕಾರವಾಗಿ ಮಾಡಿದ ಕಾರ್ಯವು, ಘನಂ-ದೊಡ್ಡದು, ಅಲ್ತು, ಎಂದು, ಶರಣರ್, ಉಲಿವುತ್ತಿರೆ-ಘೋಷಿಸುತ್ತಿರಲು, ಭೂಸುದತೀಶಂ-ಭೂಕಾಂತಾಪತಿಯಾದ ಬಿಜ್ಜಳನು, ಸನ್ಮುದಂ-ಶ್ರೇಷ್ಠವಾದ ಸಂತೋಷವು, ಅಲರೆ-ಹೆಚ್ಚಾಗಲು, ಕೈಮುಗಿದು, ಬಸವರಾಜನಂ, ಕೀರ್ತ್ತಿಸುತಂ.

ದಿನಮಣಿಗೆ- ಸೂರ್ಯನಿಗೆ, ದೀವಿಗೆಯಂ, ಆಘನರೋಹಣಗಿರಿಗೆ- ಆ ಶ್ರೇಷ್ಠವಾದ ರೋಹಣಾಚಲಕ್ಕೆ, ರನ್ನಮಂ- ರತ್ನವನ್ನು, ಕುಡುವವೊಲ್- ಕೊಡುವಂತೆ, ಆಜನಪತಿ- ಬಿಜ್ಜಳನು, ಬಸವಂಗೆ, ಕನಕಾಂಬರಮಂ- ಪೀತಾಂಬರವನ್ನು, ಮನೋಜ್ಞಮಣಿಭೂಷಣಮಂ, ಇತ್ತಂ. ... ... ‖೧೮‖

ವ॥ ಅಂತಿತ್ತು ಸತ್ಕರಿಸಿ ವಿನಯದಿಂತನ್ಮಂದಿರಕ್ಕೆ ಬಸವನಂ ಬೀಳ್ಕೊಟ್ಟು ತಾನು ಮಂತವುರಮಂಪೊಕ್ಕಿರ್ದ ನಾಗಳ್ ॥ * * * * * *

ಉ॥ ಪಲ್ಲವಜಂಗಮಂ ಪಣವಧೂಟಿಯ ಗೇಹದೊಳಿರ್ದು ಬೇಯಕೆಂ । ದಿಲ್ಲ ಧನಂಗಳಂ ಬಸವ ನಿತ್ತಪನೀಗಳೆ ಬೇಡಿ ತರ್ಪುದೆಂ ॥ ದಲ್ಲಿಯ ಚೇಟಿಯಂ ಕಳುಪೆ ತದ್ಗೃಹಕ್ಕೈದುತೆ ದೂತಿ ಕಂಡಳಾ। ಫುಲ್ಲಸರೋಜನೇತ್ರೆ ಬಸವಾಂಗನೆಯುಟ್ಟಮನೋಜ್ಞಚೇಲಮಂ॥

ವ॥ ಅಂತು ಕಂಡದರಚೆಲ್ವಿಂಗೆ ಬೆರಗುವಟ್ಟು ತಲೆದೂಗಿ ಪಣಮಂ ಬೇಳ್ಪುದ ನುಳಿದು ತನ್ನೆರೆಯುಳಿರ್ದ ಗೃಹಕ್ಕೆ ಜವದಿಂ ಮಗುಳ್ದೈತಂದು ಸಡಗರಿಸಿ ನಿಂದು ॥ * *

ಮತ್ತೇ॥ ನಿನಗೇನಂದಪೆ ನಕ್ಕ ಚಿತ್ರತರಮಂ ಗಂಗಾಂಬಿಕಾದೇವಿ ಯು । ಟ್ಟನವೀನಾಂಬರದಂದಮಂ ಪೊಗಳ್ವೊಡಾನೈದೆಂ ನಯಂ ಕಾಂತಿ ಚೆ ॥ ಲ್ವಿನಲಂಪಪ್ಪಿದ ತದ್ದುಕೂಲಕೆಣೆಯಿಲ್ಲೆಲ್ಲಿಯುಂ ದಿವ್ಯವ । ಸ್ತ್ರನಿಕಾಯಂಗಳೊಳೈದೆ ನೋಳ್ಪೊಡೆ ವಲಂ ನಿನ್ನಾಣೆ ಚಂದ್ರಾನನೆ ॥ ... ... ... ... ... ॥೨೧॥

ವ॥ ಅಂತುಮಲ್ಲದೆಮ್ಮವರ್ಪಲ್ಲವಜಂಗಮಾವಳಿಯಿಂ ನುಪಾರ್ಜನಂಗೆಯ್ದುದವಿಸಿರ್ದ॥

ಮತ್ತೇ॥ ಪಳಿ ಪಟ್ಟಾವಳಿ ಮೇಘರಂಜಿತವರಾಜಂ ಪಿಂಜರಾಂಗಂ ಲತಾ । ವಳಿ ಚಿ

---

ಅಂತು, ಇತ್ತು, ಬಸವನಂ, ವಿನಯದಿಂ, ಸತ್ಕರಿಸಿ- ಉಪಚರಿಸಿ, ತನ್ಮಂದಿರಕ್ಕೆ-ಆಬಸವೇಶ್ವರನಮನೆಗೆ, ಬೀಳ್ಕೊಟ್ಟು, ತಾನುಂ, ಅಂತವುರಮಂ, ಪೊಕ್ಕು, ಇರ್ದಂ, ಆಗಳ್. * * * * * *

ಪಲ್ಲವಜಂಗಮಂ- ವಿಟಜಂಗಮನು, ಪಣವಧೂಟಿಯ- ಸೂಳೆಯ, ಗೇಹದೊಳ್-ಮನೆಯಲ್ಲಿ, ಇರ್ದು, ಇಂದು- ಈ ದಿವಸ, ಬೀಯಕೆ- ವೆಚ್ಚಕ್ಕೆ, ಇಲ್ಲ, ಬಸವಂ, ಧನಂಗಳಂ, ಇತ್ತಪಂ- ಕೊಡುವನು, ಈಗಳೆ, ಬೇಡಿ, ತರ್ಪುದು, ಎಂದು, ಅಲ್ಲಿಯ, ಚೇಟಿಯಂ- ದಾಸಿಯನ್ನು, ಕಳುಪೆ, ದೂತಿ, ತದ್ಗೃಹಕೆ- ಆ ಬಸವೇಶ್ವರನ ಮನೆಗೆ, ಐದುತೆ- ಹೋಗಿ, ಆಫುಲ್ಲಸರೋಜನೇತ್ರೆ- ವಿಕಸಿತವಾದ ಕಮಲದಂತಿರುವ ಕಣ್ಣುಳ್ಳ, ಬಸವಾಂಗನೆ- ಬಸವೇಶ್ವರನ ಪತ್ನಿಯಾದ ಗಂಗಾಂಬಿಕೆಯ, ಉಟ್ಟ, ಮನೋಜ್ಞಚೇಲಮಂ- ಮನೋಹರವಾದ ಸೀರೆಯನ್ನು, ಕಂಡಳ್. ... ... ... ... ॥೨೦॥

ಅಂತು, ಕಂಡು, ಅದರ- ಆ ಸೀರೆಯ, ಚೆಲ್ವಿಗೆ- ಸೊಗಸಿಗೆ, ಬೆರಗುವಟ್ಟು- ಬೆರಗಾಗಿ,ತಲೆದೂಗಿ,ಪಣಮಂ, ಬೇಳ್ಪುದಂ- ಬೇಡುವದನ್ನು, ಉಳಿದು- ಬಿಟ್ಟು, ತನ್ನ, ಎರೆಯಳ್- ಒಡತಿಯು, ಇರ್ದ, ಗೃಹಕ್ಕೆ, ಜವದಿಂ, ಶೀಘ್ರವಾಗಿ, ಮಗುಳ್ದು- ಪುನಃ, ಐತಂದು, ಸಡಗರಿಸಿ, ಸಂಭ್ರಮಂಗೊಂಡು, ನಿಂದು. * *

ಅಕ್ಕ! ಚಿತ್ರತರಮಂ- ಅತ್ಯಾಶ್ಚರ್ಯವನ್ನು, ನಿನಗೆ, ಏನೆಂದಪೆಂ- ಏನುಹೇಳಲಿ! ಗಂಗಾಂಬಿಕಾದೇವಿ, ಉಟ್ಟ, ನವೀನಾಂಬರದ, ಅಂದಮಂ, ಪೊಗಳ್ವೊಡೆ, ಆಂ, ಐದೆಂ- ಸಮರ್ಥಳಾಗಲಾರೆನು, ಚಂದ್ರಾನನೆ! ನಯಂ-ಮೃದುಲತ್ವವು, ಕಾಂತಿ, ಚೆಲ್ವಿನ, ಅಲಂಪು- ಆಧಿಕ್ಯವು, ಅಪ್ಪಿದ- ಹೊಂದಿರುವ, ತದ್ದುಕೂಲಕೆ-ಆ ಪಟ್ಟೆಸೀರೆಗೆ, ಎಲ್ಲೆಲ್ಲಿಯುಂ- ಯಾವಯಾವಸ್ಥಲದಲ್ಲಿಯೂ, ದಿವ್ಯವಸ್ತ್ರನಿಕಾಯಗಳೊಳ್-ಶ್ರೇಷ್ಠವಾದ ಸೀರೆಗಳ ಸಮೂಹದಲ್ಲಿ, ಐದೆ, ನೋಳ್ಪೊಡೆ, ನಿನ್ನಾಣೆ, ಎಣೆ- ಸದೃಶವಾದದ್ದು, ಇಲ್ಲ, ವಲಂ- ನಿಶ್ಚಯ.

ಅಂತುಂ- ಹಾಗೂ, ಅಲ್ಲದೆ, ಎಮ್ಮವರ್- ನಮ್ಮ ಸೂಳೆಯರು, ಪಲ್ಲವಜಂಗಮಾವಳಿಯಿಂ- ವಿಟಜಂಗಮಸಮೂಹದಿಂದ, ಉಪಾರ್ಜನಂಗೆಯ್ದು- ಸಂಪಾದಿಸಿ, ಬದವಿಸಿ- ಕೊಡಿಸಿ, ಇರ್ದ. * * * *

ಪಳಿ, ಪಟ್ಟಾವಳಿ, ಮೇಘರಂಜಿತವರಾಜಂ-ಮೇಘದಂತೆ ಪ್ರಕಾಶಿಸುವ ವರಾಜವು, ಪಿಂಜರಾಂಗಂ, ಲತಾವಳಿ, ಚಿತ್ರಾವಳಿ, ದೇವಪಟ್ಟಿ, ಕುರುವಿಂದಾಭಂ- ಕುರುವಿಂದ ರತ್ನದ ಕಾಂತಿಯುಳ್ಳದ್ದು, ಕುರಂಗಾಕ್ಷಿ-

ತ್ರಾವಳಿ ದೇವಪಟ್ಟೆ ಕರುವಿಂದಾಭಂ ಕುರಂಗಾಕ್ಷಿ ಪಿಂ ॥ ಗಳಿ ಚಂದ್ರಾತಪ ಮಿಂದ್ರಗೋ ಪ ಮಮರಾಗಂ ಚೀನಚಿತ್ರಾಂಬರಂ । ತಳಿರ್ವ್ವಣ್ಣಂ ಮಣಿವಟ್ಟೆ ರುದ್ರತಿಲಕಂ ಕಾಂಭೋಜ ಗೌರಂ ಪ್ರಿಯಂ ॥ ... ... ... ... ... ॥೨೨॥

ಉ ॥ ಭಾವಜವಲ್ಲಭಂ ದಸರಿ ದಾಸಣವಟ್ಟೆ ತಮಾಲವಟ್ಟೆ ನೇ । ತ್ರಾವಳಿ ರಾಯಸೇ ಖರ ಮಗಾವಳಿ ಮಾದಳ ಮಾನೆವಜ್ಜೆ ಸೂ ॥ ತ್ರಾವಳಿ ಪಚ್ಚೆವಣ್ಣ ಮುದಯಾರುಣಮಂ ಜನಲೇಖೆ ಶಾಲಿ ಹಂ । ಸಾವಳಿ ದೇವತಾವಳಿ ಶುಕಾವಳಿ ಘೂರ್ಜ್ಜರಿ ಕಾಂಚನಾಂಬರಂ ॥೨೩॥

ಕಂ ॥ ಇಂತಿವುಮೊದಲಾದಂಬರ । ಸಂತತಿ ಸರಿಯಲ್ತದಕ್ಕೆ ಭಾಮಿನಿ ಭಾವಂ ॥ ತಾಂ ತಳರ್ದು ಬೇರೆ ಶಿವಗಣ । ಚಿಂತಾಮಣಿಬಸವ ನೀವನಂಬರಮನದಂ ॥ ... ॥೨೪॥

ಮತ್ತೇ ॥ ಎನೆ ಕೇಳ್ದಾಪಣಕಾಂತೆ ದೂತಿಗೆ ಪಸಾಯಂಗೊಟ್ಟು ತಜ್ಜಂಗಮಾ । ನನಮಂ ಪ್ರೇಮದೆ ನೋಡಿ ಬೋಸರಿಸಿ ಮಂದಸ್ಮೇರಮಂ ಬೀರಿ ಮು ॥ ದ್ದಿನಮಾತಿಂ ಪ್ರಿಯ ಬೇಡಿ ತದ್ಬಸವನಿಂ ತಂದಿತ್ತು ಗಂಗಾಂಬೆಯು । ಟ್ಟ ನವೀನಾಂಬರಮಂ ಕರಂ ಮೆ ರೆವುದೆನ್ನೊಳ್ಸಂದ ಸಂಪ್ರೀತಿಯಂ ॥ .. ... ... ॥೨೫॥

ವ ॥ ಎನೆ ಪಲ್ಲವಚರ ನುಲ್ಲಾಸಂಬೆತ್ತಂತೆಗೆಯ್ವೆನಿದಾವಗಹನಮೆಂದಾಕ್ಷಣಂ ಬಸ ವನೆಡೆಗೇಳ್ತಂದು ॥ * * * * * * * * * * * * * *

---

ಜಿಂಕೆಯ ಕಣ್ಣಿನ ಹಾಗೆ ಚಿತ್ರವುಳ್ಳದ್ದು, ಪಿಂಗಳಿ- ಕಪಿಶವರ್ಣವಾದದ್ದು, ಚಂದ್ರಾತಪಂ-ಚಂದ್ರಕಾಂತಿಯಂ ತಿರುವ ಕಾಂತಿಯುಳ್ಳದ್ದು, ಇಂದ್ರಗೋಪಂ- ಇಂದ್ರನೀಲರತ್ನದಂತಿರುವದು, ಅಮರಾಗಂ- ಮೇರುಪರ್ವತದ ಚಿತ್ರವುಳ್ಳದ್ದು, ಚೀನಚಿತ್ರಾಂಬರಂ- ಪಟ್ಟೆಯ ಚಿತ್ರವಸ್ತ್ರವು, ತಳಿರ್ವ್ವಣ್ಣಂ- ಚಿಗುರಿನ ಬಣ್ಣವುಳ್ಳದ್ದು, ಮಣಿಪಟ್ಟೆ- ರತ್ನಖಚಿತವಾದ ಪಟ್ಟೆಸೀರೆ, ರುದ್ರತಿಲಕಂ- ಈಶ್ವರನ ತಿಲಕದಂತಿರುವ ಚಿತ್ರವುಳ್ಳದ್ದು, ಪ್ರಿಯಂ- ಪ್ರೀತಿಪಾತ್ರವಾದ, ಕಾಂಭೋಜಗೌರಂ. ... ... ... ... ॥೨೨॥

ಭಾವಜವಲ್ಲಭಂ, ದಸರಿ, ದಾಸಣವಟ್ಟೆ, ತಮಾಲವಟ್ಟೆ, ನೇತ್ರಾವಳಿ, ರಾಯಸೇಖರಂ, ಅಗಾವಳಿ,ಮಾದಳಂ,ಆನೆವಜ್ಜೆ, ಸೂತ್ರಾವಳಿ, ಪಚ್ಚೆವಣ್ಣಂ, ಉದಯಾರುಣಂ, ಅಂಜನಲೇಖೆ, ಶಾಲಿ, ಹಂಸಾವಳಿ, ದೇವತಾವಳಿ, ಶುಕಾವಳಿ, ಘೂರ್ಜ್ಜರಿ, ಕಾಂಚನಾಂಬರಂ. ... ... ... ... ॥೨೩॥

ಇಂತು, ಇವುಮೊದಲಾದ, ಅಂಬರತತಿ- ಸೀರೆಗಳ ಸಮೂಹವು, ಅದಕ್ಕೆ- ಆ ಗಂಗಾಂಬಿಕೆಯುಟ್ಟಿದ್ದ ಸೀರೆಗೆ, ಸರಿ, ಅಲ್ತು, ಭಾಮಿನಿ! ಭಾವಂ- ಭಾವನಾದ, ತಾಂ- ಆತನು, ತಳರ್ದು- ಹೋಗಿ, ಬೇಡಿ, ಶಿವಗಣಚಿಂತಾಮಣಿ, ಬಸವಂ, ಅದಂಅಂಬರಮಂ- ಆ ಸೀರೆಯನ್ನು, ಈವಂ. ... ... ॥೨೪॥

ಎನೆ, ಆಪಣಕಾಂತೆ- ಆ ಸೂಳೆಯು, ಕೇಳ್ದು, ದೂತಿಗೆ, ಪಸಾಯಂಗೊಟ್ಟು- ಬಹುಮಾನವಸ್ತುವಂ ಕೊಟ್ಟು, ಪ್ರೇಮದೆ, ತಜ್ಜಂಗಮಾನನಮಂ- ಆ ಜಂಗಮನ ಮುಖವನ್ನು, ನೋಡಿ, ಬೋಸರಿಸಿ- ಕಪಟಾನುರಾಗವಂ ತೋರಿಸಿ, ಮಂದಸ್ಮೇರಮಂ-ಮುಗುಳ್ನಗೆಯನ್ನು, ಬೀರಿ, ಮುದ್ದಿನಮಾತಿಂ,ಪ್ರಿಯ! ಗಂಗಾಂಬಿಕೆ, ಉಟ್ಟ, ನವೀನಾಂಬರಮಂ, ಬೇಡಿ, ಬಸವನಿಂ, ತಂದು, ಇತ್ತು, ಎನ್ನೊಳ್, ಸಂದ-ಸಂಬಂಧಿಸಿದ,ಸಂಪ್ರೀತಿಯಂ, ಕರಂ- ಚೆನ್ನಾಗಿ, ಮೆರೆವುದು- ಪ್ರಕಾಶಪಡಿಸಬೇಕು. ... ... ॥೨೫॥

ಎನೆ, ಪಲ್ಲವಚರಂ- ವಿಟಜಂಗಮನು, ಉಲ್ಲಾಸಂಬೆತ್ತು, ಅಂತೆಗೆಯ್ವೆಂ-ಹಾಗೆಯೇಮಾಡುವೆನು, ಇದು, ಆವಗಹನಂ- ಯಾವಅಸಾಧ್ಯವಾದಕಾರ್ಯವು? ಎಂದು, ಆಕ್ಷಣಂ, ಬಸವನ, ಎಡೆಗೆ- ಬಳಿಗೆ, ಎಯ್ತಂದು. *

ಚಂ॥ ಕುಡು ಬಸವೇಶ ನಿನ್ನ ಸತಿಯುಟ್ಟತಿನೂತನದಿವ್ಯವಸ್ತ್ರಮಂ । ಬಿಡದೆಮಗೆಂದೊಡುತ್ಸವಿಸಿ ದೇವ ಚರೇಂದ್ರಮಹಾಪ್ರಸಾದಮೆಂ ॥ ದುಡುಪತಿವಕ್ತ್ರೆಯಂ ಬರಿಸಿದಂ ನಿಜವಲ್ಲಭೆಯಂ ಸಭಾಸ್ಥಳ । ಕ್ಕಡರ್ದನುರಾಗದಿಂಬಸವನಾಗಳೆ ಭಕ್ತಿಯದೇನಳುಂಬಮೊ॥

ಮ॥ ಸ್ರ ॥ ಮುಡಿಗಂಪಿಂಗಾರ್ದು ಸಾರ್ತಂದೆರಗೆ ಪರಮೆಗಳ್ಮಂದಯಾನಕ್ಕೆ ರಾಗಂ । ಬಡೆದಾದಂ ಪಿಂದೆ ಪಿಂದೈತರೆ ಸಮದಮರಾಳಾಳಿ ವಕ್ತ್ರೇಂದುವಿಂ ಧೀಂ ॥ ಕಿಡೆ ಲೋಲಾಪಾಂಗರುಕ್ಚಂದ್ರಿಕೆ ನಿಜಪೃಥುವಕ್ಷೋಜಭಾರಕ್ಕಳುಂಬಂ । ನಡು ಮೆಲ್ಪಿಂ ಬಳ್ಕೆ ಬಂದಾಬಸವನಿದಿರೊಳಾ ದೇವಿ ನಿಂದಿರ್ದಳಾಗಳ್ ॥ ... .. ॥೧೬॥

ಮತ್ತೇ ॥ ರತಿಯಂ ಗೆಲ್ವ ಮನೋಜ್ಞರೂಪವತಿಯಂ ಲಿಂಗಾರ್ಚನಾಸಕ್ತಸ । ನ್ಮತಿಯಂ ಪೂರ್ಣ್ಣಕಳಾವಿಳಾಸವತಿಯಂ ಪ್ರಾಣೇಶಸದ್ಭಕ್ತ್ಯರುಂ ॥ ಧತಿಯಂ ಪೂಜಿತ ಜಂಗಮಪ್ರತತಿಯಂ ಮಾಂಗಲ್ಯಸಾಕಲ್ಯಸಂ । ಗತಿಯಂ ಶ್ರೀವೃಷಭೇಂದ್ರನಾತ್ಮಸತಿಯಂನೋಡುತ್ತೆ ಸಂಪ್ರೀತಿಯಿಂ ॥ ... ... ... ... ... ॥೧೭॥

ಮತ್ತೇ ॥ ನುಡಿದಂ ಭಾಮಿನಿ ಭಕ್ತಿಯಿಂ ಕುಡುಕುಡೀದೇವಂಗೆ ನೀನುಟ್ಟಚೆ । ಲ್ವಡರ್ದೀದಿವ್ಯದುಕೂಲಮಂ ಜವದಿ ನೆಂದುದ್ವೀತಲಜ್ಜಂ ಮಹಾ ॥ ಮೃಡಭಕ್ತಿಸ್ಥಿರಚಿತ್ತ

---

ಬಸವೇಶ! ನಿನ್ನ, ಸತಿ, ಉಟ್ಟ, ಅತಿನೂತನದಿವ್ಯವಸ್ತ್ರಮಂ, ಬಿಡದೆ, ಎಮಗೆ, ಕುಡು; ಎಂದೊಡೆ, ಬಸವಂ, ಉತ್ಸವಿಸಿ- ಸಂತೋಷಪಟ್ಟು, ದೇವ! ಚರೇಂದ್ರ- ಜಂಗಮಶ್ರೇಷ್ಠನೇ! ಮಹಾಪ್ರಸಾದಂ, ಎಂದು, ಅಡರ್ದ- ಏರಿದ, ಅನುರಾಗದಿಂ, ಉಡುಪತಿವಕ್ತ್ರೆಯಂ- ಚಂದ್ರಮುಖಿಯಾದ, ನಿಜವಲ್ಲಭೆಯಂ- ತನ್ನಪತ್ನಿಯನ್ನು, ಆಗಳೆ, ಸಭಾಸ್ಥಳಕ್ಕೆ, ಬರಿಸಿದಂ, ಅದುಭಕ್ತಿ, ಆ ಬಸವೇಶ್ವರನಭಕ್ತಿಯು, ಏಂಅಳುಂಬಮೋ- ಏನುಅಧಿಕವಾದದ್ದೋ ? ... ... ... ... ॥೧೫॥

ಆಗಳ್, ಪರಮೆಗಳ್- ಭ್ರಮರಗಳು, ಮುಡಿಗಂಪಿಂಗೆ- ಕೇಶಪಾಶದಪರಿಮಳಕ್ಕೆ, ಆರ್ದು -ಕೂಗಿಕೊಂಡು, ಸಾರ್ತಂದು- ಸಮೀಪಕ್ಕೆಬಂದು, ಎರಗೆ- ಬೀಳಲು; ಸಮದಮರಾಳಾವಳಿ- ಮದವಿಶಿಷ್ಟಗಳಾದ ಹಂಸಪಕ್ಷಿಗಳ ಪಙ್ಕ್ತಿಯು, ಮಂದಯಾನಕ್ಕೆ-ಗಂಗಾಂಬಿಕೆಯಮೆಲ್ಲನಡಗೆಯಲ್ಲಿ, ರಾಗಂಬಡೆದು- ಅನುರಾಗವಂಹೊಂದಿ, ಆದಂ- ಅತ್ಯಂತವಾಗಿ, ಪಿಂದೆಪಿಂದೆ, ಐತರೆ- ಬರಲು; ಲೋಲಾಪಾಂಗರುಕ್ಚಂದ್ರಿಕೆ- ಚಂಚಲವಾದಕಡೆಗಣ್ಣಿನಕಾಂತಿಯೆಂಬ ಬೆಳ್ದಿಂಗಳು, ವಕ್ತ್ರೇಂದುವಿಂ- ಮುಖಚಂದ್ರನಿಂದ, ಧೀಂಕಿಡೆ- ಹಾರಲು, ನಿಜಪೃಥುವಕ್ಷೋಜಭಾರಕ್ಕೆ- ದಪ್ಪವಾದ ತನ್ನ ಸ್ತನಗಳಭಾರಕ್ಕೆ, ನಡು, ಅಳುಂಬಂ- ಅಧಿಕವಾಗಿ, ಮೆಲ್ಪಿಂ- ಮೆಲ್ಲಗೆ ಬಳ್ಕೆ; ಆದೇವಿ, ಬಂದು, ಆ ಬಸವನ, ಇದಿರೊಳ್- ಮುಂಭಾಗದಲ್ಲಿ, ನಿಂದಿರ್ದಳ್. ... ॥೧೬॥

ಶ್ರೀವೃಷಭೇಂದ್ರಂ, ರತಿಯಂ, ಗೆಲ್ವ,ಮನೋಜ್ಞರೂಪವತಿಯಂ-ಮನೋಹರವಾದಸೌಂದರ್ಯವುಳ್ಳ, ಲಿಂಗಾರ್ಚನಾಸಕ್ತಸನ್ಮತಿಯಂ- ಶಿವಲಿಂಗಪೂಜೆಯಲ್ಲಿ ಆಸಕ್ತವಾದಬುದ್ಧಿಯುಳ್ಳ, ಪೂರ್ಣಕಳಾವಿಳಾಸವತಿಯಂ- ಸಂಪೂರ್ಣವಾದವಿದ್ಯಾವಿಲಾಸವುಳ್ಳ, ಪ್ರಾಣೇಶಸದ್ಭಕ್ತ್ಯರುಂಧತಿಯಂ- ಪ್ರಾಣಕಾಂತನಲ್ಲಿರುವ ಭಕ್ತಿಯವಿಷಯದಲ್ಲಿ ಅರುಂಧತಿಯಂತಿರುವ, ಪೂಜಿತಜಂಗಮಪ್ರತತಿಯಂ- ಅರ್ಚಿಸಲ್ಪಟ್ಟ ಜಂಗಮಸಮೂಹವುಳ್ಳ, ಮಾಂಗಲ್ಯಸಾಕಲ್ಯಸಂಗತಿಯಂ- ಸಮಸ್ತಮಂಗಳಸಮೂಹಸಂಬಂಧವುಳ್ಳ, ಆತ್ಮಸತಿಯಂ- ತನ್ನಪತ್ನಿಯನ್ನು, ಸಂಪ್ರೀತಿಯಿಂ, ನೋಡುತ್ತೆ. ... ... ... ॥೧೭॥

ಭಾಮಿನಿ! ಈದೇವಂಗೆ, ನೀಂ, ಉಟ್ಟ, ಚೆಲ್ವಡರ್ದ, ಈದಿವ್ಯದುಕೂಲಮಂ- ಈ ಶ್ರೇಷ್ಠವಾದಪಟ್ಟೆಯಸೀರೆಯನ್ನು, ಜವದಿಂ- ಶೀಘ್ರವಾಗಿ, ಕುಡುಕುಡು, ಎಂದು, ನುಡಿದಂ; ಆಸಾಧನದೊಳ್, ಮೃಢಭ

ನೇಳ್ದು ಬಸವಂ ಗಂಗಾಂಬಿಕಾದೇವಿಯು | ಟ್ಟುಡಿಯಂ ಮುಟ್ಟೆ ಸೆರಂಗನೀಳ್ದು ಸೆಳೆದೊ ಟ್ಟುತ್ತಿರ್ದ್ದ ನಾಸ್ಥಾನದೊಳ್ ‖ ... ... ... ... ‖೨೯‖

ಕಂ ‖ ಸೆಳೆದೊಡೆ ಬಳೆದುದು ಮತ್ತಂ | ಸೆಳೆದೊಡೆ ಮತ್ತಂತೆ ಬಳೆವುತಿರ್ದ್ದುದು ರು ಚಿಮಂ ‖ ಜುಳವಸನಂ ಬಸವನ ಕೈ| ದಳಸೋಂಕಿನಮಹಿಮೆ ಮಹಿಗೆ ಸಾಧಾರಣಮೆ ‖೩೦‖

ಕಂ‖ ಬಸವೇಶಕರಸವಿಾರಣ | ದೆಸಕದೆ ಕುಮುದಾಕ್ಷಿ ಕೋಕಕುಚೆಬಿಸಜಸಮು ‖ ಲ್ಲಸಿತಾನನೆ ಗಂಗಾಂಬಿಕೆ | ವಸನತರಂಗಪ್ರತಾನಮಂ ತಳೆದೆಸೆದಳ್ ‖ ... ‖೩೧‖

ಚಂ ‖ ಧರಿಸಿದಭೂಷಣಾವಳಿಯ ಮುತ್ತು ಮುಗುಳ್ನಗೆಗಣ್ಣರಲ್ಪರಲ್ | ಕರತ ಳವೊಳ್ದಳಿ ರ್ಕುರುಳಬಂಬಲೆ ತಳ್ತಳಿವಿಂಡು ಲೋಹಿತಾ ‖ ಧರಮೆಳೆನುಣ್ದಳಿ ರ್ಫಲಮು ರೋಜಮದಾಗಿರೆ ನವ್ಯಕಲ್ಪಪ | ಲ್ಲರಿಯವೊಲಾ ವೃಷೇಂದ್ರವಧು ವಿತ್ತಳನಂತವಿಚಿತ್ರವ ಸ್ತ್ರಮಂ ‖ ... ... ... ... ... ‖೩೨‖

ಕಂ ‖ ಸೆಳೆವಿಂಚಪ್ಪಿದಶಾರದ | ಜಳಧರಮೆಂಬಂತೆ ಪೊಂಜೆರಂಗಮರ್ದಸಿತೋ ‖

---

ಕ್ತಿಸ್ಥಿರಚಿತ್ತಂ- ಶಿವಭಕ್ತಿಯಲ್ಲಿ ದೃಢವಾದ ಮನಸ್ಸುಳ್ಳ, ಬಸವಂ, ಉದ್ವೀತಲಜ್ಜಂ- ಹೋದನಾಚಿಕೆಯುಳ್ಳ ವನಾಗಿ,ಏಳ್ದು, ಗಂಗಾಂಬಿಕಾದೇವಿ, ಉಟ್ಟ, ಉಡಿಯಂ- ಸೀರೆಯನ್ನು, ಮುಟ್ಟಿ, ಸೆರಗಂ, ಈಳ್ದು- ತೂ ದು, ಸೆಳೆದು- ಆಕರ್ಷಿಸಿ, ಒಟ್ಟುತ್ತಿರ್ದ್ದಂ- ಗುಡ್ಡೆಯಂಹಾಕುತ್ತಿದ್ದನು. ... ... ‖೨೯‖

ಸೆಳೆದೊಡೆ- ಎಳೆಯಲಾಗಿ, ಮತ್ತಂ, ಬಳೆದುದು; ಸೆಳೆದೊಡೆ, ಮತ್ತಂ, ರುಚಿಮಂಜುಳವಸನಂ- ಕಾಂ ತಿಯಿಂದ ಮನೋಹರವಾದ ಸೀರೆಯು, ಬಳೆವುತಿರ್ದುದು; ಬಸವನ, ಕೈದಳಸೋಂಕಿನ- ಹಸ್ತಪ್ರದೇಶದ ಸೋಂಕುವಿಕೆಯ, ಮಹಿಮೆ, ಮಹಿಗೆ, ಸಾಧಾರಣಮೆ ? ... ... ... ‖೩೦‖

ಕುಮುದಾಕ್ಷಿ- ನೈದಿಲೆಯಂತಿರುವ ನೇತ್ರವುಳ್ಳ, (ನೈದಿಲೆಯೆಂಬನೇತ್ರವುಳ್ಳ,) ಕೋಕಕುಚೆ- ಚಕ್ರವಾ ಕಪಕ್ಷಿಗಳಂತಿರುವಸ್ತನಗಳುಳ್ಳ, (ಚಕ್ರವಾಕಗಳೆಂಬಸ್ತನಗಳುಳ್ಳ) ಬಿಸಜಸಮುಲ್ಲಸಿತಾನನೆ-ಕಮಲದಂತೆಪ್ರಕಾ ಶಮಾನವಾದ ಮುಖವುಳ್ಳ, (ಕಮಲವೆಂಬಪ್ರಕಾಶಮಾನವಾದಮುಖವುಳ್ಳ) ಗಂಗಾಂಬಿಕೆ- ಗಂಗಾಂಬಿಕೆಯು, (ಗಂಗಾನದಿಯು) ಬಸವೇಶಕರಸವಿಾರಣದ- ಬಸವೇಶ್ವರನಹಸ್ತದಿಂದುದ್ಭವಿಸಿದವಾಯುವಿನ, ಎಸಕದೆ-ಉ ಜ್ಜುಗದಿಂದ, (ಅಂದರೆ ಬೀಸುವಿಕೆಯಿಂದ) ವಸನತರಂಗಪ್ರತಾನಮಂ- ತೆರೆಯಂತಿರುವ ಸೀರೆಗಳಸಮೂಹವ ನ್ನು, (ಸೀರೆಯಂತಿರುವತೆರೆಗಳಸಮೂಹವನ್ನು) ತಳೆದು, ಎಸೆದಳ್. ... ... ‖೩೧‖

ಧರಿಸಿದ, ಭೂಷಣಾವಳಿಯ, ಮುತ್ತು, ಮುಗುಳ್- ಮೊಗ್ಗುಗಳು; ನಗೆಗಣ್- ವಿಕಸಿತವಾದನೇತ್ರ ವು, ಅರಲ್ದ- ವಿಕಸಿತವಾಗಿರುವ, ಅರಲ್- ಹೂವು; ಕರತಳಂ- ಹಸ್ತಪ್ರದೇಶವು, ಒಳ್ದಳಿರ್- ಒಳ್ಳೆಯಚಿಗು ರು; ಕುರುಳ- ಕೇಶದ, ಬಂಬಲೆ- ಸಮೂಹವೇ, ತಳ್ತ, ಅಳಿವಿಂಡು- ಭ್ರಮರಸಮೂಹವು; ಲೋಹಿತಾಧರಂ- ಕೆಂಪಾದತುಟಿಯು, ಎಳೆನುಣ್ದಳಿರ್- ಎಳೆಯದಾಗಿಯೂ ನುಣುಪಾಗಿಯೂ ಇರುವ ಚಿಗುರು; ಉರೋಜಂ- ಸ್ತನವು; ಅದು, ಫಲಂ- ಹಣ್ಣು, ಆಗಿ, ಇರೆ, ಆವೃಷೇಂದ್ರವನಿತೆ- ಆ ಬಸವೇಶ್ವರನಪತ್ನಿಯು, ನವ್ಯಕಲ್ಪ ವಲ್ಲರಿಯವೊಲ್- ನೂತನವಾದ ಕಲ್ಪಲತೆಯಂತೆ, ಅನಂತವಿಚಿತ್ರವಸ್ತ್ರಮಂ- ಅಪರಿಮಿತವಾದ ಚಿತ್ರವರ್ಣ ವಾದಸೀರೆಗಳನ್ನು,ಇತ್ತಳ್. ... ... ... ... ‖೩೨‖

ನಳಿನಾಕ್ಷಿಯ- ಕಮಲದಂತಿರುವನೇತ್ರವುಳ್ಳಗಂಗಾಂಬಿಕೆಯ, ಪೊಂಜೆರಂಗಮರ್ದ- ಸುವರ್ಣಮಯವಾ ದ ಸೆರಗಿನಿಂದಕೂಡಿರುವ, ಸಿತೋಜ್ವಲವಸನಂ- ಶುಭ್ರವಾಗಿಪ್ರಕಾಶಿಸುವ ಸೀರೆಯು, ನಿತಂಬಧರಣೀಧರದೊ ಳ್- ಕಟಿಪಶ್ಚಾದ್ಭಾಗವೆಂಬ ಪರ್ವತಪ್ರದೇಶದಲ್ಲಿ, ಸೆಳೆವಿಂಚಪ್ಪಿದ-ಸೂಕ್ಷ್ಮವಾದಮಿಂಚಿನಿಂದಕೂಡಿದ, ಶಾ

ಜ್ಜ್ವಳವಸನಂ ಕೆಂಗೆಸೆದುದು । ನಳಿನಾಕ್ಷಿಯ ಘನನಿತಂಬಧರಣೀಧರದೊಳ್ ॥ ॥೩೩॥

ವ ॥ ಅಂತೊಪ್ಪುವಂಬರದೊಟ್ಟಲಂ ದೇವ ಯಥೇಷ್ಟಂ ಕೊಳ್ವುದೆಂದಾಪಲ್ಲವಚ ರಂಗೆ ಮನಂ ತಣಿಯೆ ಸಮರ್ಪಿಸೆ ಸರ್ವಜನಂ ಕಂಡು ವಿಸ್ಮಯಂಗೊಂಡು ಕೊಂಡಾಡುತ್ತಿರೆ ಶರಣರ್ಸಾದರ ಮಭೀಕ್ಷಿಸಿ ॥ * * * * * * * * * * * *

ಚಂ॥ ಪೊಡವಿಯೊಳಿಂತಿದೊಂದರಿದೆ ಭಕ್ತಜನಕ್ಕೆ ತಪಸ್ವಿ ಬೇಡೆ ಪು। ನ್ನಿಡುಗುಡಿ ನಾಥ ನೀಯನೆ ನಿಜಾಂಗನೆಯುಟ್ಟನವೀನಚೇಲಮಂ॥ತಡೆಯದೆ ಪನ್ನೆರಳ್ಬರಿಸ ಮುಂದಮರ ಲ್ದುರೆನೆಯ್ದ ವಸ್ತ್ರಮಂ। ಕುಡನೆ ಚರೋತ್ತಮಂಗೆಳಸಿ ಜಾಡರದಾಸನತೀವಭಕ್ತಿಯಿಂ॥

ಮತ್ತೇ॥ ಪಸೆನಿಂದಾತ್ಮಜೆಯಂದಮಾಳ್ದ ಮುಡಿಯಂ ಕೊಯ್ದೀಯನೇ ಬೇಡೆ ತಾ ॥ ಪಸನಾಥಂಗುರೆ ಮಾನಕಂಜ ನವನೀಶಂ ಸಿಂಧುಬಲ್ಲಾಳನಂ ॥ ಬೊಸೆದಾತ್ಮಾಂಗನೆಯಂ ಸ ಮರ್ಪಿಸನೆ ಕೂರ್ತಯ್ಯಂಗೆ ಭೂಭಾಗದೊಳ್ । ಪಸರಂಬೆತ್ತಳಿಪಾರೆ ಪಲ್ಲವಚರೇಂದ್ರಂಗ ಳ್ಕರಿಂ ಪೊಂಗಳಂ ॥ ... ... ... ... ॥೩೫॥

ಕಂ ॥ ಮೊನೆಯಧರ ನೀಯನೇ ಬಹು । ಧನಧಾನ್ಯಾವಳಿಯ ನೊಪ್ಪಿಸನೆ ಬಲ್ಬರದೊ ಳ್ ॥ ಘನಶರಣತತಿಗೆ ಗುಣನಿಧಿ । ಯೆನಿಪಿಡುಗುಡಿಯಲ್ಲಿ ಮೆರೆವ ಪೆರ್ಮ್ಮಡಿಯ ಕರಂ ॥೩೬॥

ವ ॥ ಎಂದೆಣಿಸುತ್ತಂ ಗಣಮಹಿಮೆಯ ನಣಿಯರಂ ಪೊಗಳುತ್ತಮಿರೆ ॥ * *

---

ರದಜಳಧರಂ- ಶರತ್ಕಾಲದಲ್ಲಿರುವ ಮೋಡವು, ಎಂಬಂತೆ, ಕೆಂಗೆಸೆದುದು. ... ... ॥೩೩॥

ಅಂತು, ಒಪ್ಪುವ, ಅಂಬರದ- ಸೀರೆಯ, ಒಟ್ಟಲಂ- ಸಮೂಹವನ್ನು, ದೇವ, ಯಥೇಷ್ಟಂ, ಕೊ ಳ್ವುದು, ಎಂದು, ಆಪಲ್ಲವಚರಂಗೆ- ಆ ವಿಟಜಂಗಮನಿಗೆ, ಮನಂ, ತಣಿಯೆ- ತೃಪ್ತಿಪಡುವಂತೆ,ಸಮರ್ಪಿಸೆ, ಸರ್ವಜನಂ, ಕಂಡು, ವಿಸ್ಮಯಂಗೊಂಡು- ಆಶ್ಚರ್ಯವಂ ಹೊಂದಿ, ಕೊಂಡಾಡುತ್ತಿರೆ, ಶರಣರ್, ಸಾದರಂ- ಪ್ರೀತಿಯಿಂಕೂಡಿ, ಅಭೀಕ್ಷಿಸಿ- ನೋಡಿ. * * * * * * * * * * * *

ಪೊಡವಿಯೊಳ್-ಭೂಮಿಯಲ್ಲಿ, ಇಂತು, ಇದು, ಒಂದು, ಭಕ್ತಜನಕ್ಕೆ- ಶಿವಭಕ್ತರಿಗೆ, ಅರಿದೆ- ಅಸಾ ಧ್ಯವೇ? ಮುನ್ನ- ಪೂರ್ವದಲ್ಲಿ, ತಪಸ್ವಿ, ಬೇಡೆ, ಇಡುಗುಡಿನಾಥಂ, ನಿಜಾಂಗನೆ- ತನ್ನ ಪತ್ನಿಯು, ಉಟ್ಟ, ನವೀನಚೇಲಮಂ- ಹೊಸಸೀರೆಯನ್ನು, ಈಯನೆ? ತಡೆಯದೆ- ತಪ್ಪದೆ, ಪನ್ನೆರಳ್ಬರಿಸಂ- ಹನ್ನೆರಡುವರ್ಷ ವು, ಅಂದಂ- ಚೆಂದವು, ಅರಲ್ದು- ಹೆಚ್ಚಾಗಿ, ಉರೆ- ಚೆನ್ನಾಗಿ, ನೆಯ್ದ, ವಸ್ತ್ರಮಂ, ಜಾಡರದಾಸಂ, ಅತೀವಭಕ್ತಿಯಿಂ, ಎಳಸಿ- ಅಪೇಕ್ಷಿಸಿ, ಚರೋತ್ತಮಂಗೆ- ಜಂಗಮಶ್ರೇಷ್ಠನಿಗೆ, ಕುಡನೆ? ... ॥೩೪॥

ಬೇಡೆ- ಯಾಚಿಸಲು, ತಾಪಸನಾಥಂಗೆ- ಋಷಿಶ್ರೇಷ್ಠನಿಗೆ, ಮಾನಕಂಜಂ, ಪಸೆನಿಂದ- ಹಸೆಯಲ್ಲಿ ನಿಂತಿದ್ದ, ಆತ್ಮಜೆಯ- ಪುತ್ರಿಯ, ಅಂದಮಾಳ್ದ-ಮನೋಹರವಾದ, ಮುಡಿಯಂ- ಕೇಶವನ್ನು, ಕೊಯ್ದು, ಈಯನೇ? ಸಿಂಧುಬಲ್ಲಾಳಂ, (ಎಂಬ) ಅವನೀಶಂ- ರಾಜನು, ಅಂದು, ಕೂರ್ತ- ಅಪೇಕ್ಷಿಸಿದ, ಅಯ್ಯಂಗೆ, ಒಸೆದು, ಆತ್ಮಾಂಗನೆಯಂ- ತನ್ನ ಪತ್ನಿಯನ್ನು, ಸಮರ್ಪಿಸನೆ? ಪಸರಂಬೆತ್ತ- ವಿಸ್ತಾರವಾದ, ಅಳಿ- ದು ರಾಸೆಯು, ಪಾರೆ- ನಾಶವಾಗುವಂತೆ, ಮೊನೆಯಧರಂ, ಪಲ್ಲವಚರೇಂದ್ರಂಗೆ- ವಿಟಜಂಗಮನಿಗೆ, ಪೊಂಗಳಂ, ಈಯನೇ? ಗುಣನಿಧಿ, ಎನಿಪ, ಇಡುಗುಡಿಯಲ್ಲಿ- ಇಡುಗುಡಿಎಂಬ ಪುರದಲ್ಲಿ, ಮೆರೆವ, ಪೆರ್ಮ್ಮಡಿಯ ಕರಂ, ಬ ಲ್ಬರದೊಳ್- ಅಧಿಕವಾದ ಬರಗಾಲದಲ್ಲಿ, ಘನಶರಣತತಿಗೆ, ಬಹುಧನಧಾನ್ಯಾವಳಿಯಂ, ಒಪ್ಪಿಸನೆ? ॥೩೬॥

ಎಂದು, ಎಣಿಸುತ್ತಂ- ಆಲೋಚಿಸುತ್ತ, ಗಣಮಹಿಮೆಯಂ, ಅಣಿಯರಂ- ಮನೋಹರವಾಗಿ, ಪೊ ಗಳುತ್ತಂ, ಇರೆ * * * * * * * * * * * * * * * * *

ಕಂ ॥ ಆದಿವ್ಯಾಂಬರಮೊಟ್ಟಿಲ । ನಾದೇವಂ ಕೊಂಡು ಬಸವನಂ ಪರಸಿ ಮಹಾ ॥
ಮೋದದು ಮಿಗೆ ಪೋದಂ ಸವಿ । ನೋದಂ ಗಣಿಕಾಲಯಕ್ಕೆ ಸಂಭ್ರಮದಿಂದಂ ॥ ॥೩೭॥

ಕಂ ॥ ಪರಮಪತಿವ್ರತೆಯರ ಕುಲ । ಗುರು ಬಸವನ ಭಕ್ತಿಯಿಂದೆ ಮಾನೋನ್ನತಿ
ಯೊ॥ಸರಿಸದೆ ಸಭೆಯೊಳ್ಮಹಿಮೆಯ । ನಿರದಾಂತೇಳ್ತಂದು ದೇವಿ ಗೃಹಮಂ ಪೊಕ್ಕಳ್॥

ವ ॥ ಅನಂತರಮಾಬಸವರಾಜಂ ಗಣಸಮೇತಂ ನಿಜಾಂತಃಪುರಂಬೊಕ್ಕು ಸುಖಮಿ
ರ್ಪಿನ ಮಲ್ಲಿಗೊರ್ವ್ವ ಪಲ್ಲವಚರ ನೇಳ್ತಂದು ಮಾದೇವಿಯ ಮಣಿತಾಟಂಕಮಂ ಕಂಡುಬೇಡೆ॥

ಕಂ॥ ಘಳಿಲನೆ ರಮಣಿಯ ಕಿವಿಯೊಳ್ । ಥಳಥಳಿಪ ಮಣಿಪ್ರಕಾಶಮಂಡಿತಕನಕೋ ॥
ಜ್ಜ್ವಳಕುಂಡಲಮಂ ತೆಗೆದಾ । ಗಳೆ ಕೊಟ್ಟನವಂಗೆ ಭಕ್ತಜನಮಂದಾರಂ ॥ ॥೩೯॥

ವ ॥ ಅಂತಿತ್ತು ಬಸವಂ ಶಿವಗೋಷ್ಠಿಯೊಳಿರುತ್ತಮಿರ್ಪ್ಪಾಗಳ್॥ * * * *

ಕಂ ॥ ಎನ್ನಣುಗನ ನೆನ್ನಂ ಬಸ । ವಂ ನಿಜವಿತರಣದೆ ತೇಜದಿಂ ಗೆಲ್ವನೆನು ॥ ತ್ತಂ
ನಾಣ್ಚುತಧೋಮುಖನಾ । ದಂನಿಜಮೆನೆ ಸೂರ್ಯನಿಳಿದನಸ್ತಾಚಲದೊಳ್ ॥ ... ॥೪೦॥

ಕಂ ॥ ಇನವಿರಹಿಣಿ ಪದ್ಮಿನಿ ಜೀ । ವನಮುರೆ ನಿಜಕಂಠಗತಮದಾಗಿರೆ ಮೊಳ್ಗಾ ॥

---

ಆದೇವಂ- ಆ ಜಂಗಮನು, ಆದಿವ್ಯಾಂಬರದ- ಆಶ್ರೇಷ್ಠವಾದ ಸೀರೆಯ, ಒಟ್ಟಿಲಂ- ರಾಸಿಯನ್ನು, ಕೊಂಡು- ತೆಗೆದುಕೊಂಡು, ಮಹಾಮೋದಂ- ಅಧಿಕವಾದ ಸಂತೋಷವು, ಮಿಗೆ- ಹೆಚ್ಚಾಗಲು, ಬಸವನಂ, ಪರಸಿ- ಆಶೀರ್ವದಿಸಿ, ಸವಿನೋದಂ- ವಿಲಾಸಯುಕ್ತನಾಗಿ, ಸಂಭ್ರಮದಿಂದಂ, ಗಣಿಕಾಲಯಕ್ಕೆ- ಸೂಳೆಯಮನೆಗೆ, ಪೋದಂ. ... ... ... ... ॥೩೭॥

ಪರಮಪತಿವ್ರತೆಯರ, ಕುಲಗುರು- ವಂಶಾಚಾರ್ಯಳಾದ, ದೇವಿ- ಗಂಗಾಂಬಿಕೆಯು, ಬಸವನ, ಭಕ್ತಿಯಿಂದೆ, ಸಭೆಯೊಳ್, ಮಾನೋನ್ನತಿ- ಮಾನಾಧಿಕ್ಯವು, ಓಸರಿಸದೆ- ಜಾರದಂತೆ, ಮಹಿಮೆಯುಂ,ಅಂತು, ಇರದೆ, ಏಳ್ತಂದು, ಗೃಹಮಂ, ಪೊಕ್ಕಳ್. ... ... ... ... ॥೩೮॥

ಅನಂತರಂ, ಆಬಸವರಾಜಂ, ಗಣಸಮೇತಂ, ನಿಜಾಂತಃಪುರಂಬೊಕ್ಕು, ಸುಖಂ, ಇರ್ಪ್ಪಿನಂ- ಇರುವಲ್ಲಿ, ಅಲ್ಲಿಗೆ, ಓರ್ವ್ವ, ಪಲ್ಲವಚರಂ, ಏಳ್ತಂದುಂ, ಆದೇವಿಯ- ಗಂಗಾಂಬಿಕೆಯ, ಮಣಿತಾಟಂಕಮಂ- ರತ್ನಖಚಿತವಾದ ಓಲೆಯನ್ನು, ಕಂಡು, ಬೇಡೆ. * * * * * * * * * * * * *

ಭಕ್ತಜನಮಂದಾರಂ- ಭಕ್ತರಿಗೆ ಕಲ್ಪವೃಕ್ಷನಾದ ಬಸವೇಶ್ವರನು, ರಮಣಿಯ, ಕಿವಿಯೊಳ್- ಥಳಥಳಿಪ- ಹೊಳೆಯುವ, ಮಣಿ........ ಕುಂಡಲಮಂ— ಮಣಿ- ರತ್ನಗಳ, ಪ್ರಕಾಶ- ಕಾಂತಿಯಿಂದ, ಮಂಡಿತ- ಅಲಂಕೃತವಾದ, ಕನಕ- ಚಿನ್ನದ, ಉಜ್ಜ್ವಳಕುಂಡಲಮಂ- ಪ್ರಕಾಶಿಸುವ ಕರ್ಣಾಭರಣವನ್ನು, ಘಳಿಲನೆ- ಶೀಘ್ರವಾಗಿ, ತೆಗೆದು, ಆಗಳೆ, ಅವಂಗೆ- ಆ ಭಕ್ತನಿಗೆ, ಕೊಟ್ಟಂ. ... ... ॥೩೯॥

ಅಂತು, ಬಸವಂ, ಇತ್ತು, ಶಿವಗೋಷ್ಠಿಯೊಳ್- ಶಿವಗಣಂಗಳ ಸಭೆಯಲ್ಲಿ, ಇರುತ್ತಂ,ಇರ್ಪ್ಪಾಗಳ್.

ಎನ್ನಣುಗನಂ- ನನ್ನ ಮಗನಾದ ಕರ್ಣನನ್ನು, ಬಸವಂ, ನಿಜವಿತರಣದೆ- ತನ್ನ ದಾನಗುಣದಿಂದ, ಎನ್ನಂ, ತೇಜದಿಂ— ತೇಜಸ್ಸಿನಿಂದ, ಗೆಲ್ವಂ, ಎನುತ್ತೆ, ಸೂರ್ಯಂ,ನಾಣ್ಚುತೆ-ಲಜ್ಜೆಗೊಳುತ್ತ, ಅಧೋಮುಖಂ- ತಗ್ಗಿಸಿದ ಮುಖವುಳ್ಳವನು, (ಪಾತಾಳಕ್ಕಭಿಮುಖನಾದವನು)ಆದಂ, ನಿಜಂ, ಎನೆ, ಅಸ್ತಾಚಲದೊಳ್ ಪಶ್ಚಿಮಾದ್ರಿಯಲ್ಲಿ, ಇಳಿದಂ. ... ... ... ... ... ॥೪೦॥

ಇನವಿರಹಿಣಿ- ಸೂರ್ಯನೆಂಬ ನಾಯಕನ ವಿರಹವುಳ್ಳ, ಪದ್ಮಿನಿ- ಕಮಲಲತೆಯೆಂಬ ಸ್ತ್ರೀಯು, ಅದು ಜೀವನಂ- ಆಪ್ರಾಣವು, (ಆ ಜಲವು) ಕಂಠಗತಂ- ಕತ್ತನ್ನು ಹೊಂದಿರುವದು, ಆಗಿರೆ,ತುಂಬಿವೆರಸಿ- ಭ್ರಮ

ವನತೆ ಮುಗುಳ್ಚುವ ಕಣ್ಣಿಂ | ದೆನಿಸಿರ್ದುದು ತುಂಬಿವೆರಸಿ ಮುಗಿವಂಭೋಜಂ ||೪೧||

ಕಂ || ಅರಿರಾಜಂ ಬಂದಪನೆ | ನ್ನರಸಂ ಪಡುಗಡಲೊಳಳಿದ ಸೇಗೆಯ್ದಪೆನೆಂ || ದರ ವಿಂದಿನಿ ಯುಮ್ಮಳದು | ಬ್ಬರದಿಂ ಕಣ್ಮುಚ್ಚಿದಂತೆ ಮುಗಿದುದು ನಳಿನಂ || ... ||೪೨||

ಕಂ || ಪವನವಣಿಗ್ವೆರ ನಳಿವಾ | ಸವಮಣಿಗಳ ಪಸರವಿಕ್ಕಿ ಪಗಲಳಿಯೆ ಸಮಂ || ತದನವುರೆ ನಳಿನವೆಂಬೊ | ಪ್ಪುವಕಟ್ಟಳಿಯೊಳಗೆ ತೀವಿ ಕಟ್ಟಿದನಾಗಳ್ || ||೪೩||

ಕಂ || ಪಗೆಯ ಕೆಳೆಗೊಂಡ ಪದ್ಮಿನಿ | ನಗೆಗುಂದಿದಳವನಡಂಗೆ ಕೋಕಾನೀಕಂ || ಬ ಗೆಗುಂದಿದುದೆಂದಣಕದೆ | ನಗುವಂತೆವೊಲಲರ್ದುದುತ್ಪಳಂ ತಿಳಿಗೊಳದೊಳ್ || ||೪೪||

ಸ್ರ || ತಾರಾಮಾರ್ಗಸ್ಥಳೀಭಾಮಿನಿ ಮಲಿನತಮಸ್ತಸ್ಕರಂ ಬದ್ಧಚಕ್ಷು | ಸ್ಸಾರಶ್ರೀ ಹಾರಿ ಯೇಳ್ತಂದಪನೆನುತ ಭಯಂಬಟ್ಟು ಮುಂಕಂಡು ಪದ್ಮಾ || ಗಾರಂ ಮುಚ್ಚಿರ್ಪುದಂ ಪದ್ಮಿನಿ ದಿನಮಣಿಯಂ ಬೇಗದಿಂ ಕಟ್ಟುತಂ ಸಂ | ಧ್ಯಾರಾಗಾರಮ್ಯವಕ್ತಾಂಬರದಿ ನೆಪರರ

---

ರದಿಂ ಕೂಡಿಕೊಂಡು, ಮುಗಿಪ- ಮೊಗ್ಗಾಗುವ, ಅಂಭೋಜಂ- ಕಮಲವು, ಮಂರ್ಛಾವನತೆ- ಪಾರವಶ್ಯ ಹಿಂದ ಬಗ್ಗಿದ ಪದ್ಮಿನಿಯೆಂಬ ಸ್ತ್ರೀಯು, ಮುಗುಳ್ಚುವ- ಮುಚ್ಚುವ, ಕಣ್ಣು, ಎಂದು, ಎನಿಸಿ,ಇರ್ದುದು.

ಅರಿರಾಜಂ- ಶತ್ರುರಾಜನು, (ಶತ್ರುವಾದ ಚಂದ್ರನು) ಬಂದಪಂ, ಎನ್ನ, ಅರಸಂ- ನಾಯಕನು, (ಸೂರ್ಯನು) ಪಡುಗಡಲೊಳ್- ಪಶ್ಚಿಮಸಮುದ್ರದಲ್ಲಿ, ಅಳಿದಂ, ಏಗೆಯ್ದಪೆಂ- ಏನುಮಾಡಲಿ? ಎಂದು, ಅರ ವಿಂದಿನಿ- ಕಮಲಲತೆಯೆಂಬ ಸ್ತ್ರೀಯು, ಉಮ್ಮಳದ- ಚಿಂತೆಯು, ಉಬ್ಬರದಿಂ- ಆಧಿಕ್ಯದಿಂದ, ಕಣ್ಮುಚ್ಚಿದಂ ತೆ, ನಳಿನಂ- ಕಮಲವು, ಮುಗಿದುದು- ಮೊಗ್ಗಾಯಿತು. ... ... ... ||೪೨||

ಪವನವಣಿಗ್ವರಂ- ವಾಯುವೆಂಬ ಶ್ರೇಷ್ಠನಾದ ವರ್ತಕನು, ಅಳಿವಾಸವಮಣಿಗಳ- ಭ್ರಮರಗಳೆಂಬ ಇಂದ್ರನೀಲರತ್ನಗಳ, ಪಸರವಿಕ್ಕಿ- ಅಂಗಡಿಯನ್ನಿಕ್ಕಿ, ಪಗಲ್- ಹಗಲು, ಅಳಿಯೆ- ನಾಶವಾಗಲು, ಅವಂ- ಆರತ್ನಗಳನ್ನು, ಸಮಂತು- ಚೆನ್ನಾಗಿ, ನಳಿನಮೆಂಬ- ಕಮಲವೆಂಬ, ಒಪ್ಪುವ, ಕಟ್ಟಣಿಯೊಳಗೆ- ಕಂಟ್ಲಿಯ ಚೀಲದಲ್ಲಿ, ಅವುರೆ- ಸೇರಿರುವಂತೆ, ತೀವಿ- ತುಂಬಿ, ಆಗಳ್, ಕಟ್ಟಿದಂ. ... ... ||೪೩||

ಪಗೆಯ- ಶತ್ರುವಾದ ಸೂರ್ಯನನ್ನು, ಕೆಳೆಗೊಂಡ- ಪ್ರಿಯನನ್ನಾಗಿ ಮಾಡಿಕೊಂಡ, ಪದ್ಮಿನಿ-ಕಮಲಲತೆ ಯು, ಅವಂ- ಆ ಸೂರ್ಯನು, ಅಡಂಗೆ– ಅಸ್ತನಾಗಲು, ನಗೆಗುಂದಿದಳ್- ಸಂತೋಷಹೀನಳಾದಳು, (ವಿಕ ಸನವಂ ಬಿಟ್ಟಳು) ಕೋಕಾನೀಕಂ- ಚಕ್ರವಾಕಪಕ್ಷಿಯ ಸಮುದಾಯವು, ಬಗೆಗುಂದಿದುದು- ಮನಸ್ಸಂ ಕುಂ ದೆಗೆಯಿತು, (ಅಂದರೆ ಉತ್ಸಾಹಭಂಗವಂ ಹೊಂದಿತು) ಎಂದು- ಅಣಕದೆ- ಉಪಹಾಸದಿಂದ, (ಅಂದರೆ ಗೇಲಿ ಮಾಡುವದರಿಂದ) ನಗುವಂತೆವೊಲ್, ತಿಳಿಗೊಳದೊಳ್- ನಿರ್ಮಲವಾದ ಸರೋವರದಲ್ಲಿ, ಉತ್ಪಳಂ- ನೈದಿಲೆ ಯು, ಅಲರ್ದುದು. ... ... ... ... ||೪೪||

ತಾರಾಮಾರ್ಗಸ್ಥಳೀಭಾಮಿನಿ- ಅಂತರಿಕ್ಷವೆಂಬ ಸ್ತ್ರೀಯು,ಬದ್ಧಚಕ್ಷುಸ್ಸಾರಶ್ರೀಹಾರಿ— ಬದ್ಧ-ಕ ಟ್ಟಲ್ಪಟ್ಟ, ಚಕ್ಷುಃ- ನೇತ್ರವುಳ್ಳವನಾಗಿ, ಸಾರ- ಶ್ರೇಷ್ಠವಾದ, ಶ್ರೀ- ಸಂಪತ್ತನ್ನು, ಹಾರಿ- ಅಪಹರಿಸು ವ, (ಅಂದರೆ ಅನ್ಯರಿಗೆ ಕಣ್ಣನ್ನು ಕಟ್ಟಿ ಐಶ್ವರ್ಯವನ್ನಪಹರಿಸಿಕೊಂಡು ಹೋಗುವ) (ಕಟ್ಟಲ್ಪಟ್ಟ ನೇತ್ರ ದ ಶ್ರೇಷ್ಠವಾದ ಕಾಂತಿಯನ್ನಪಹರಿಸುವ) ಮಲಿನತಮಸ್ತಸ್ಕರಂ- ಕಪ್ಪಾದ ಅಂಧಕಾರವೆಂಬಕಳ್ಳನು,ಏಳ್ತಂ ದಪಂ-ಬರುವನು, ಎನುತೆ, ಭಯಂಬಟ್ಟು, ಪದ್ಮಿನಿ- ಕಮಲಲತೆಯೆಂಬ ಸ್ತ್ರೀಯು, ಪದ್ಮಾಗಾರಂಮುಚ್ಚಿ ರ್ದುದು- ಬೊಕ್ಕಸವಂ ಮುಚ್ಚಿಕೊಂಡಿದ್ದುದನ್ನು, (ಲಕ್ಷ್ಮಿಗೆ ಮನೆಯಾದ ಕಮಲವು ಮೊಗ್ಗಾಗಿರುವ ದನ್ನು) ಮುಂಕಂಡು- ಮೊದಲುನೋಡಿ, ದಿನಮಣಿಯಂ- ದಿನರತ್ನವನ್ನು, (ಸೂರ್ಯನನ್ನು) ಬೇಗದಿಂ, ಸಂ

ತ್ನಾಕರಕ್ಕಿಟ್ಟಳಾಗಳ್ ‖ ... ... ... ... ‖೪೫‖

ಕಂ ‖ ಭುವನೋತ್ತರದೇಶದೊಳಾ । ಡುವ ವಿಹಂಗಳ್ಗೆಳಸಿ ಕಾಲಧೀವರನಾಗಳ್ ।
ತವಕದೆ ಬೀಸಿದ ಕಾರ್ಬಲೆ । ಭುವನವು ನಾವರಿಸಿದಂತೆ ಕವಿದುದು ತಿಮಿರಂ ‖ ‖೪೬‖

ವ ‖ ಆಗಳ್ ‖ ಮ‖ ಸ್ರ‖ ನವಸಂಧ್ಯಾರಾಗರಕ್ತಾಂಬುಜನಿವಹಮನರ್ಪಲ್ದರ್ಪಿಸು
ತ್ತೊಂದಲರ್ಕುಂ । ದೆ ವಿಯತ್ಪದ್ಮಾಕ್ಷನಸ್ತಾರುಣನಯನಾಂಭೋಜದಿಂ ದಸ್ತಭೂಭೃ ‖
ಚ್ಛಿವಲಿಂಗಾರಾಧನಂಗೆಯ್ದೊಲಿಸಿ ಪಡೆದ ಚಕ್ರಂಬೊಲಿಂಬಾಯ್ತು ಲೋಕ । ಸ್ತವನೀಯಂ
ಪ್ರಾಂಶು ದೃಪ್ಯತ್ತಿಮಿರದನುಭವದ್ರಾವಕಂ ಚಂದ್ರಬಿಂಬಂ ‖ .. ... ‖೪೭‖

ಚಂ‖ ಅಮೃತಕರಂ ಚಕೋರತತಿ ಗಭ್ರಸರೋವರ ಕಬ್ಜ ನಾನಿಶಾ । ರಮಣಿಗೆ ರಾ
ಜ ನುತ್ಪಳನಿಗೊಪ್ಪುವಚಂದ್ರ ನಿದಿರ್ಕಿದಂಧಕಾ ‖ ರ ಮೆನಿಪರಕ್ಕಸಂಗೆವಿಧು ನಲ್ಮೆಗಡರ್ಪ
ನಿಸಿರ್ದತಾರಕಾ । ಪ್ರಮದೆಗೆ ಮಚ್ಚುಗಾಣಿಪಕಳಾನಿಧಿ ಯಾದಮೃಗಾಂಕನೊಪ್ಪಿದಂ‖೪೮‖

ಚಂ‖ ಪಸಿದ ಚಕೋರಚಾತಕಚಯಂ ನಲಿದಿಂಟೆ ವಿಧೂಪಲಂಗಳಿಂ। ದೊಸರ್ವಜಲಂ

---

ಧ್ಯಾರಾಗಾರಮ್ಯರಕ್ತಾಂಬರದಿಂ- ಸಂಧ್ಯಾಕಾಲದ ಆರುಣ್ಯವೆಂಬ ಕೆಂಪುಬಟ್ಟೆಯಿಂದ, ಕಟ್ಟುತಂ ಆಗಳ್, ಅಪರರತ್ನಾಕರಕ್ಕೆ- ಪಶ್ಚಿಮಸಮುದ್ರಕ್ಕೆ, ಇಟ್ಟಳ್. ... ... ... ‖೪೫‖

ಕಾಲಧೀವರಂ- ಕಾಲವೆಂಬ ಬೆಸ್ತನು, ಭುವನೋತ್ತರದೇಶದೊಳ್- ಭೂಲೋಕದಮೇಲ್ಗಡೆಯಲ್ಲಿ, (ಜಲದ ಮೇಲುಭಾಗದಲ್ಲಿ) ಆಡುವ- ಚರಿಸುವ, ವಿಹಂಗಳ್ಗೆ- ನಕ್ಷತ್ರಗಳಿಗೆ, (ಮೀನುಗಳಿಗೆ) ಎಳಸಿ- ಅಪೇಕ್ಷಿಸಿ, ಆಗಳ್, ತವಕದೆ- ಕುತೂಹಲದಿಂದ, ಬೀಸಿದ, ಕಾರ್ಬಲೆ- ಕಪ್ಪಾದ ಬಲೆಯು, ಭುವನಮಂ- ಲೋಕವನ್ನು, (ಜಲವನ್ನು) ಆವರಿಸಿದಂತೆ- ತಿಮಿರಂ- ಅಂಧಕಾರವು, ಕವಿದುದು- ಆಚ್ಛಾದಿಸಿತು. ... ‖೪೬‖

ವಿಯತ್ಪದ್ಮಾಕ್ಷಂ- ಅಂತರಿಕ್ಷವೆಂಬ ವಿಷ್ಣುವು, ನವಸಂಧ್ಯಾರಾಗರಕ್ತಾಂಬುಜನಿವಹಮಂ-ನೂತನವಾದ ಸಂಧ್ಯಾರುಣ್ಯವೆಂಬ ಕೆಂಪಾವರೆಗಳ ಸಮೂಹವನ್ನು, ಒಲ್ದು, ಅರ್ಪಿಸುತೆ, ಒಂದಲರ್- ಒಂದು ಹೂವು, ಕುಂದೆ- ಕಮ್ಮಿಯಾಗಲು, ಅಸ್ತಾರುಣನಿಜನಯನಾಂಭೋಜದಿಂದೆ- ಅಸ್ತಂಗತನಾಗುವ ಸೂರ್ಯನೆಂಬ ತನ್ನ ನೇತ್ರಕಮಲದಿಂದ, ಅಸ್ತಭೂಭೃಚ್ಛಿವಲಿಂಗಾರಾಧನಂಗೆಯ್ದು- ಅಸ್ತಪರ್ವತವೆಂಬ ಶಿವಲಿಂಗವಂ ಪೂಜಿಸಿ, ಒಲಿಸಿ- ಪರಮೇಶ್ವರನಂಮೆಚ್ಚಿಸಿ, ಪಡೆದ, ಚಕ್ರಂಬೊಲ್- ಚಕ್ರಾಯುಧದಂತೆ, ಲೋಕ...........ದ್ರಾವಕಂ— ಲೋಕ- ಪ್ರಪಂಚದ ಜನದಿಂದ, ಸ್ತವನೀಯ- ಸ್ತೋತ್ರಮಾಡಿಸಿಕೊಳ್ಳುವದಕ್ಕೆ ಯೋಗ್ಯವಾದ, ಪ್ರಾಂಶು- ಪ್ರಕೃಷ್ಟವಾದ ಕಾಂತಿಯುಳ್ಳ; ದೃಪ್ಯತ್- ಕೊಬ್ಬಿದ, ತಿಮಿರ- ಅಂಧಕಾರವೆಂಬ, ದನುಭವ- ರಾಕ್ಷಸನನ್ನು, ದ್ರಾವಕಂ- ಓಡಿಸುವ, ಚಂದ್ರಬಿಂಬಂ, ಇಂಬಾಯ್ತು- ಮನೋಹರವಾಯ್ತು. ‖೪೭‖

ಚಕೋರತತಿಗೆ- ಚಕೋರಪಕ್ಷಿಗಳಸಮೂಹಕ್ಕೆ, ಅಮೃತಕರಂ- ಅಮೃತವನ್ನುಂಟುಮಾಡುವವನು, (ಅಮೃತಮಯವಾದ ಕಿರಣವುಳ್ಳವನು) ಅಭ್ರಸರೋವರಕೆ- ಅಂತರಿಕ್ಷವೆಂಬ ಕೊಳಕ್ಕೆ, ಅಬ್ಜಂ- ಕಮಲವು, (ಚಂದ್ರನು) ಆನಿಶಾರಮಣಿಗೆ- ಆ ರಾತ್ರಿಯೆಂಬ ಸ್ತ್ರೀಗೆ, ರಾಜಂ- ಅರಸನು, (ಚಂದ್ರನು) ಉತ್ಪಳಿನಿಗೆ- ನೈದಿಲೆಯ ಬಳ್ಳಿಯೆಂಬ ಸ್ತ್ರೀಗೆ, ಒಪ್ಪುವ, ಚಂದ್ರಂ- ಆಹ್ಲಾದಕಾರಿ, (ಚಂದ್ರ) ಇದಿರ್ಕಿದ- ಇದಿರಾದ,ಅಂಧಕಾರಂ, ಎನಿಪ, ರಕ್ಕಸಂಗೆ- ರಾಕ್ಷಸನಿಗೆ, ವಿಧು- ವಿಷ್ಣುವು, (ಚಂದ್ರನು) ನಲ್ಮೆಗೆ- ಪ್ರೀತಿಗೆ, ಅಡರ್ಪು- ಆಶ್ರಯಳು, ಎನಿಸಿ, ಇರ್ದ, ತಾರಕಾಪ್ರಮದೆಗೆ- ನಕ್ಷತ್ರವೆಂಬ ಸ್ತ್ರೀಗೆ, ಮಚ್ಚುಗಾಣಿಪ- ಮೆಚ್ಚಿಗೆಯನ್ನುಂಟುಮಾಡುವ, ಕಳಾನಿಧಿ- ಕಳಾಶಾಸ್ತ್ರಕ್ಕೆ ನಿಕ್ಷೇಪನಾದ, (ಷೋಡಶಕಲೆಗಳಿಗೆ ನಿಧಿಯಾದವನು)ಮೃಗಾಂಕಂ- ಚಂದ್ರನು, ಒಪ್ಪಿದಂ. ... ... ... ... ‖೪೮‖

ಪಸಿದ, ಚಕೋರಚಾತಕಚಯಂ-ಚಕೋರಪಕ್ಷಿಗಳೆಂಬ ಚಾತಕಪಕ್ಷಿಗಳ ಸಮುದಾಯವು, ನಲಿದು-ಸಂ

ಪ್ರೊನಲ್ವರಿಯೆ ಸಾಲ್ವಿಡಿದುಯ್ಯಲನಾಡುವಂಗನಾ॥ ವಿಸರದ ತೋರಸೋರ್ಮುಡಿನವಿಲ್ನೆಗೆದಾಡೆ ಸುಧಾಂಶುಬಿಂಬಮಿಂ । ಬಸದೃಶಗೌರನೀರದಮದೇಂ ಸುರಿದತ್ತೊ ಸುಧಾಂಶುವೃಷ್ಟಿಯಂ॥

ಚಂ ॥ ಹರಿಹರಿದದ್ರಿಕುಂಭದಿ ನೊರಲ್ತೊಗೆದಿಂದುವೆನಿಪ್ಪಗಸ್ತ್ಯನ । ಚ್ಚರಿವಿಗೆ ನೀಳ್ದ ತನ್ನಕರದಿಂ ಪೊಗೆದಂಧತಮಸ್ಸಮುದ್ರಮಂ ॥ ತುರಿಪದಿ ನೀಂಟುತಾಗಲೆಡೆಸಿಲ್ಕಿದ ಮುತ್ತುಗಳಂ ತೆರಳ್ಚಿ ಪು । ಷ್ಕರಪಡೆಯಲ್ಲಿ ತುಂತುರಿದವೋಲ್ ತುರುಗಿರ್ದುದು ತಾರಕೋತ್ಕರಂ ॥ ... ... ... ... ॥೫೦॥

ಮ ॥ ಸ್ರ ॥ ಮೃಗಭೂ ಕಾಶ್ಮೀರ ದಿವ್ಯಾಗರು ಮಲಯಜ ಮುಖ್ಯಾನುಲೇಪಂಗಳಂ ಕಂ । ಪೊಗೆವುದ್ಯತ್ಪುಷ್ಪಮಾಲಾವಳಿಯ ನಮಳತಾಂಬೂಲಭೂಷಾಂಬರಶ್ರೇ ॥ ಣಿಗಳಂ ವೇಶ್ಯಾರತಕ್ಕೈದುವ ವಿಟಚರಸಂದೋಹಕೊಲ್ದೀವುತಂ ಕೈ । ಮಿಗೆ ಕಣ್ಗೊಪ್ಪಿರ್ದ ನಾ ವೇಳೆಯೊಳೆ ವಿತರಣಾನಂದಸಾಂದ್ರಂ ವೃಷೇಂದ್ರಂ ॥ ... ... ॥೫೧॥

ಲಲಿತಪದವೃತ್ತಂ ॥ ಪಂಚಜನಭಂಜನವಿರಿಂಚಿಮುಖನಿರ್ಜರಸಮಂಚಿತಪದಾಂಬು

---

ತೋಪಮಪಟ್ಟು, ಈಂಟೆ- ಕುಡಿಯಲು, ವಿಧು ಶಿಲೆಗಳಿಂದೆ- ಚಂದ್ರಕಾಂತಶಿಲೆಗಳಿಂದ, ಒಸರ್ವ- ಸ್ರವಿಸುವ, ಜಲಂ, ಪೊನಲ್ವರಿಯೆ- ಪ್ರವಾಹವಾಗಿ ಹರಿಯಲು; ಸಾಲ್ವಿಡಿದು- ಲೈನಾಗಿ, ಉಯ್ಯಲಂ- ಉಯ್ಯಾಲೆಯನ್ನು, ಆಡುವ, ಅಂಗನಾವಿಸರದ- ಸ್ತ್ರೀಸಮೂಹದ, ತೋರ- ದಪ್ಪವಾದ, ಸೋರ್ಮುಡಿನವಿಲ್- ಉದ್ದವಾದ ಕೇಶಪಾಶವೆಂಬ ನವಿಲು, ನೆಗೆದಾಡೆ-ಕುಣಿದಾಡಲು; ಸುಧಾಂಶುಬಿಂಬಂ-ಚಂದ್ರಮಂಡಲವು, ಎಂಬ, ಅಸದೃಶಗೌರನೀರದಂ-ಅಸಮಾನವಾದ ಬಿಳಿಯಮೋಡವು, ಸುಧಾಂಶುವೃಷ್ಟಿಯಂ-ಅಮೃತಕಿರಣವೆಂಬಮಳೆಯನ್ನು, ಅದೇಂ ಸುರಿದತ್ತೊ. ... ... ... ... ॥೪೯॥

ಹರಿಹರಿದದ್ರಿಕುಂಭದಿಂ— ಹರಿಹರಿತ್- ಇಂದ್ರದಿಕ್ಕಿನಲ್ಲಿರುವ, ಅದ್ರಿ- ಪರ್ವತವೆಂಬ, ಕುಂಭದಿಂ- ಕಲಶದಿಂದ, ಒರಲ್ತು- ಪ್ರೀತಿಸಿ, ಒಗೆದ- ಹುಟ್ಟಿದ, ಇಂದು, ಎನಿಪ್ಪ, ಅಗಸ್ತ್ಯಂ, ಅಚ್ಚರಿ, ಮಿಗೆ, ತನ್ನ, ಕರದಿಂ- ಹಸ್ತದಿಂದ, (ಕಿರಣದಿಂದ) ಅಂಧತಮಸ್ಸಮುದ್ರಮಂ- ಗಾಢಾಂಧಕಾರವೆಂಬ ಸಮುದ್ರವನ್ನು, ಪೊಗೆದು, ತುರಿಪದಿಂ- ತ್ವರೆಯಿಂದ, ಈಂಟುತೆ- ಕುಡಿಯುತ್ತ, ಆಗಲ್, ಎಡೆಸಿಲ್ಕಿದ- ಮಧ್ಯದಲ್ಲಿಸಿಕ್ಕಿದ, ಮುತ್ತುಗಳಂ, ತೆರಳ್ಚಿ- ನಾಲಿಗೆಯಿಂಬೇರ್ಪಡಿಸಿ, ಪುಷ್ಕರದ- ಆಕಾಶದ, ಎಡೆಯಲ್ಲಿ, ತುಂತುರಿದವೋಲ್- ಥೂ ಥೂ ಎಂದು ಉಗುಳಿರುವಂತೆ, ತಾರಕೋತ್ಕರಂ- ನಕ್ಷತ್ರಸಮೂಹವು, ತುರುಗಿ-ತುಂಬಿ, ಇರ್ದುದು. ॥೫೦॥

ವಿತರಣಾನಂದಸಾಂದ್ರಂ- ದಾನಮಾಡುವದರಿಂದುಂಟಾದಸಂತೋಷದಿಂ ಪೂರ್ಣನಾದ, ವೃಷೇಂದ್ರಂ, ಆವೇಳೆಯೊಳೆ, ವೇಶ್ಯಾರತಕ್ಕೆ- ಸೂಳೆಯರ ರತಿಕ್ರೀಡೆಗೆ, ಐದುವ- ಹೋಗುವ, ವಿಟಚರಸಂದೋಹಕೆ- ವಿಟಜಂಗಮಸಮೂಹಕ್ಕೆ, ಮೃಗ........ಅನುಲೇಪಂಗಳಂ— ಮೃಗಭೂ- ಕಸ್ತೂರಿ, ಕಾಶ್ಮೀರ-ಕುಂಕುಮಕೇಸರಿ, ದಿವ್ಯಾಗುರು- ಶ್ರೇಷ್ಠವಾದ ಕೃಷ್ಣಾಗುರು, ಮಲಯಜ- ಶ್ರೀಗಂಧ, ಇವುಗಳೇ, ಮುಖ್ಯ- ಮೊದಲಾದ, ಅನುಲೇಪಂಗಳಂ-ಲೇಪನದ್ರವ್ಯಗಳನ್ನು, ಕಂಪೊಗೆವ- ಪರಿಮಳವಂಬೀರುವ, ಉದ್ಯತ್ಪುಷ್ಪಮಾಲಾವಳಿಯಂ- ಶ್ರೇಷ್ಠವಾದ ಹೂವಿನ ಮಾಲಿಕೆಯಸಮೂಹವನ್ನು, ಅಮಲತಾಂಬೂಲಭೂಷಾಂಬರಶ್ರೇಣಿಗಳಂ- ನಿರ್ಮಲವಾದ ತಾಂಬೂಲ ಆಭರಣ ವಸ್ತ್ರ ಇವುಗಳ ಸಮೂಹವನ್ನು, ಒಲ್ದು- ಕೈಮಿಗೆ- ಹೆಚ್ಚಾಗಿ, ಈವುತಂ, ಕಣ್ಗೆ, ಒಪ್ಪಿ, ಇರ್ದಂ. ... ... ... ... ॥೫೧॥

ಪಂಚ......ಪದಾಂಬುಜ — * ಪಂಚಜನಭಂಜನ- ವಿಷ್ಣು, ವಿರಿಂಚಿ-ಬ್ರಹ್ಮ, ಇವರುಗಳೇ, ಮುಖ-

---

* (ಅವ)ಸಮುದ್ರದಲ್ಲಿ ಸಂಚರಿಸುತ್ತಿದ್ದ ಪಂಚಜನ ಎಂಬ ರಾಕ್ಷಸನನ್ನುನಾಶಪಡಿಸಿದವನು,ವಿಷ್ಣುವು.

ಜ ಏನುಚಿತಮನೋಜ । ಪ್ರಾಂಚಿತಕೃಪಾರಸದೃಗಂಚಲ ಶಿವೈಕ್ಯಗಣಸಂಚಿತನಿಧಾನ ಯ
ಮಿಸಂಚಯವರೇಣ್ಯ ॥ ಕಾಂಚನನಗೇಂದ್ರತಟಸಂಚರಣಶೀಲಸಮುದಂಚಿತಮಹತ್ತ್ವಮ
ಣಿಕಂಚುಕ ಚರೌಘವಂಚಕ ಬುಧಪ್ರಣುತಚಂಚದಮಲಾಂಗ ಪ್ರೋರೆ ಪಂಚಮುಖಮಂ
ತ್ರರಸನಾಂಚಲ ವೃಷೇಂದ್ರ ॥ ... ... ... ... ॥೫೦॥

ರಥೋದ್ಧತವೃತ್ತಂ ॥ ಸೋಮಧಾಮರುಚಿಲೋಚನಾಂಚಲೇ । ಭೀಮವಾಮವಪು
ರನ್ವಿತೋಜ್ಜ್ವಲೇ ॥ ಹೇಮದಾಮಸುಭುಜಾತಿಮಂಜುಲೇ । ಶ್ರೀಮಹೋಮೆಜಯಸರ್ವ
ಮಂಗಲೇ ॥ ... ... ... ... ॥೫೧॥

ಗದ್ಯಂ ॥ ಇದು ವಿನಮದಖಿಳಸುರಾಸುರೇಂದ್ರಮುಕುಟತಟಘಟಿತಮಣಿಗಣಾಗಣಿತರು
ಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತಭಾಸುರ
ಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀ
ಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಬಸವವಿತರಣವಿಳಾಸಕಥನಮಷ್ಟಮಾಶ್ವಾ
ಸಂ ಪರಿಸಮಾಪ್ತಂ ॥ ... ... ... ... ... ... *

---

## ಅಷ್ಟಮಾಶ್ವಾಸಂ ಸಂಪೂರ್ಣಂ.

---

ಮೊದಲಾಗುಳ್ಳ, ನಿರ್ಜರ- ದೇವತೆಗಳಿಂದ, ಸಮಂಚಿತ- ಪೂಜಿಸಲ್ಪಟ್ಟ, ಪದಾಂಬುಜ- ಪಾದಕಮಲವುಳ್ಳ, ವಿಮಂಚಿತಮನೋಜ- ವಂಚಿಸಲ್ಪಟ್ಟಮನ್ಮಥನುಳ್ಳ, ಪ್ರಾಂಚಿತಕೃಪಾರಸದೃಗಂಚಲ— ಪ್ರಾಂಚಿತ- ಕೊಡಿದ, ಕೃಪಾರಸ- ದಯಾರಸವುಳ್ಳ, ದೃಗಂಚಲ- ಕಡೆಗಣ್ಣುಳ್ಳ; ಶಿವೈಕ್ಯಗಣಸಂಚಿತನಿಧಾನ-ಶಿವನೊಡನೆ ಏಕತ್ವವಂ ಹೊಂದಿದಗಣಂಗಳಿಂದ ಸಂಪಾದಿಸಲ್ಪಟ್ಟ ನಿಕ್ಷೇಪನಾದ, ಯಮಿಸಂಚಯವರೇಣ್ಯ- ಋಷಿಸಮೂಹದಲ್ಲಿಶ್ರೇಷ್ಠನಾದ; ಕಾಂಚನನಗೇಂದ್ರತಟಸಂಚರಣಶೀಲ- ಮೇರುಪರ್ವತದತಪ್ಪಲಿನಲ್ಲಿ ಸಂಚರಿಸುವಸ್ವಭಾವುಳ್ಳ; ಸಮುದಂಚಿತಮಹತ್ತ್ವಮಣಿಕಂಚುಕ-ಉತ್ಕೃಷ್ಟವಾದ ಮಹಿಮೆಯೆಂಬ ರತ್ನಕವಚವುಳ್ಳ, ಚರೌಘವಂಚಕ- ಜಂಗಮಸಮೂಹಕ್ಕೆ ವಂಚನೆಯಂಮಾಡದ, ಬುಧಪ್ರಣುತಚಂಚದಮಲಾಂಗ- ವಿದ್ವಾಂಸರಿಂ ಹೊಗಳಲ್ಪಟ್ಟ ಹೊಳೆಯುವ ನಿರ್ಮಲವಾದಶರೀರವುಳ್ಳ; ಪಂಚಮುಖಮಂತ್ರರಸನಾಂಚಲ- ಶಿವಮಂತ್ರವೇ ನಾಲಿಗೆಯ ತುದಿಯಲ್ಲುಳ್ಳ, ವೃಷೇಂದ್ರ, ಪೊರೆ. ... ... ... ॥೫೦॥

ಸೋಮಧಾಮರುಚಿಲೋಚನಾಂಚಲೆ— ಸೋಮ- ಚಂದ್ರನ, ಧಾಮ- ಕಾಂತಿಯಂತಿರುವ, ರುಚಿ- ಕಾಂತಿಯುಳ್ಳ, ಲೋಚನಾಂಚಲೆ- ಕಡೆಗಣ್ಣುಳ್ಳ, ಭೀಮವಾಮವಪುರನ್ವಿತೋಜ್ವಲೇ- ಪರಮೇಶ್ವರನ ಎಡಗಡೆಯಶರೀರದಿಂದ ಕೂಡಿ ಮನೋಹರ -ದ, ಹೇಮದಾಮಸುಭುಜಾತಿಮಂಜುಲೇ- ಸುವರ್ಣಮಾಲೆಯಂತಿರುವ ತೋಳಿನಿಂಮನೋಹರಳಾದ, ಸರ್ವಮಂಗಲೇ- ಸಕಲಮಂಗಳಸ್ವರೂಪಿಣಿಯಾದ, ಶ್ರೀಮಹೋಮೆ— ಶ್ರೀ- ಷಡ್ಗುಣೈಶ್ವರ್ಯಯುಕ್ತಳಾದ, ಮಹತ್- ಪೂಜ್ಯಳಾದ, ಉಮೆ ! ಜಯ. ... ॥೫೧॥

ಎಂಟನೆಯ ಆಶ್ವಾಸವು ಸಂಪೂರ್ಣವು.

---

# ಶ್ರೀಃ.

ಕಾಲಕಾಲಾಯ ಪರಬ್ರಹ್ಮಣೇನಮಃ.

## ನವಮಾಶ್ವಾಸಂ.

### ಮುಗ್ಧಕಥನಂ.

ಕಂ॥ ಶ್ರೀಗೌರೀಪ್ರೇಮಸುಧಾ । ಸಾಗರಪೂರ್ಣೇಂದುಸಸ್ಮಿತಾಮಳವದನಾ ॥ ಭೋ
ಗಂ ಭೋಗೀಶ್ವರಧರ । ನಾಗಮನುತ ನೀಗೆ ಸೌಖ್ಯಮಂ ಶಿವಲಿಂಗಂ ॥ ... ॥೧॥
ಕಂ ॥ ಗುಣನಿಧಿ ಬಸವಂ ವಿಟಚರ ಗಣಮಂ ಗಣಿಕಾಲಯಕ್ಕೆ ಕಳುಪ್ಪುವಪದದೊಳ್॥
ಪ್ರಣುತಮಹಿಮಾಕರಂ ಚಿ । ನ್ಮಣಿಮುಕುರಂ ಬಂದ ನೋರ್ವನ ಚಳಶಿವೈಕ್ಯಂ ॥ ॥೨॥
ಕಂ ॥ ಸರ್ವೇಂದ್ರಿಯಲಿಂಗಯುತಂ । ದುರ್ವಿಷಯವಿದೂರ ಸನ್ಯಲೌಕಿಕವಿಮುಖಂ ॥
ದರ್ವೀಕರಧರಶರಣ ನ । ಖರ್ವಗುಣಂ ಮುಗ್ಧಸಂಗನೆಂಬ ಮಹಾತ್ಮಂ ॥ ... ॥೩॥

---

ಒಂಭತ್ತನೆಯಆಶ್ವಾಸಪ್ರಾರಂಭಃ.

ಶ್ರೀ.........ಆಭೋಗಂ— ಶ್ರೀಗೌರೀ- ಸಂಪದ್ಯುಕ್ತಳಾದ ಪಾರ್ವತಿಯ, ಪ್ರೇಮ- ಅನುರಾಗವೆಂಬ, ಸುಧಾಸಾಗರ- ಕ್ಷೀರಸಮುದ್ರಕ್ಕೆ, ಪೂರ್ಣೇಂದು- ಪೂರ್ಣಚಂದ್ರನಂತಿರುವ, ಸಸ್ಮಿತ- ಮುಗುಳ್ನಗೆಯಿಂಕೂಡಿದ, ಅಮಳ- ನಿರ್ಮಲವಾದ, ವದನಾಭೋಗಂ- ಮುಖಮಂಡಲವುಳ್ಳ, ಭೋಗೀಶ್ವರಧರಂ- ಆದಿಶೇಷನಂಧರಿಸಿರುವ, ಆಗಮನುತಂ, ಶಿವಲಿಂಗಂ, ಸೌಖ್ಯಮಂ, ಈಗೆ. ... ... ... ॥೧॥

ಗುಣನಿಧಿ, ಬಸವಂ, ವಿಟಚರಗಣಮಂ, ಗಣಿಕಾಲಯಕ್ಕೆ- ಸೂಳೆಯರಮನೆಗೆ, ಕಳುಪುವ, ಪದದೊಳ್- ಉಜ್ಜುಗದಲ್ಲಿ, ಪ್ರಣುತಮಹಿಮಾಕರಂ- ಶ್ಲಾಘ್ಯವಾದ ಮಹತ್ತ್ವಕ್ಕಾಶ್ರಯನಾದ, ಚಿನ್ಮಣಿಮುಕುರಂ- ಜ್ಞಾನಕ್ಕೆ ರತ್ನದ ಕನ್ನಡಿಯಾದ, ಅಚಳಿತಶಿವೈಕ್ಯಂ— ಅಚಳಿತ- ನಿಶ್ಚಂಚಲವಾದ,ಶಿವೈಕ್ಯಂ- ಶಿವನೊಡನೆ ಏಕತ್ವವಂ ಹೊಂದಿದ, ಓರ್ವಂ, ಬಂದಂ. ... ... ... ... ॥೨॥

ಸರ್ವೇಂದ್ರಿಯಲಿಂಗಯುತಂ- ಆಯಾಯ ಇಂದ್ರಿಯಗಳಲ್ಲಿ ಆಯಾಯಲಿಂಗದಿಂ ಕೂಡಿರುವ, (ಅಂದರೆ ಶ್ರೋತ್ರದಲ್ಲಿ ಪ್ರಸಾದಲಿಂಗ, ತ್ವಕ್ಕಿನಲ್ಲಿ ಚರಲಿಂಗ, ದೃಕ್ಕಿನಲ್ಲಿ ಶಿವಲಿಂಗ, ಜಿಹ್ವೆಯಲ್ಲಿ ಗುರುಲಿಂಗ, ಹೃದಯದಲ್ಲಿ ಮಹಾಲಿಂಗ, ಈಪ್ರಕಾರದಲ್ಲಿ ನೆಲೆಗೊಳಿಸಿದ) ದುರ್ವಿಷಯದೂರಂ- ದುಷ್ಟಗಳಾದ ಸ್ವಚ್ಛಂದನಾಡಿವಿಷಯಗಳಿಗೆ ದೂರನಾದ, ಅನ್ಯಲೌಕಿಕವಿಮುಖಂ- ಬೇರೆಯಾದ ಲೌಕಿಕವಿಷಯದಲ್ಲಿ ಪ್ರವೇಶಿಸದ- * ದರ್ವೀಕರಧರಶರಣಂ- ಶಿವಶರಣನಾದ, ಅಖರ್ವಗುಣಂ- ಅಧಿಕವಾದ ಗುಣವುಳ್ಳ, ಮುಗ್ಧಸಂಗಂ, ಎಂಬ, ಮಹಾತ್ಮಂ. ... ... ... ... ... ॥೩॥

---

* (ಅವ) ದರ್ವೀಕರ- ಸೌಟನೋಪಾದಿಯಲ್ಲಿರುವ ಹೆಡೆಯೇಹಸ್ತವಾಗುಳ್ಳದ್ದು ಸರ್ಪ, ಅದನ್ನು ಧರಿಸಿರುವವನು ಪರಮೇಶ್ವರನು. ... ... ... ... ॥೩॥

ವ॥ ಅಂತೆೞ್ತಂದಲ್ಲಿ ಕುಸುಮಾನುಲೇಪನತಾಂಬೂಲಾದಿವೆರಸು ಸೂಳೆಗೆಯ್ತಕ್ಕೆ ಪೋಪಚರನಿಕರಮಂ ನಿರೀಕ್ಷಿಸಿ ಶೂಲಿಪೂಜೆಗೆಪೋಪಂದಮೆಂದು ಬಗೆದು ತಾನುಂ ಪೋಗಲೆಳಸಿ ಮುನ್ನೆಂದು ಮನಂಗಕೇಳಿಯ ನರಿಯದಮುಗ್ಧಂ ಮುಗ್ಧಸಂಗಯ್ಯಂ ಬಸವನಿದಿರ್ಗೆವಂದವಂದಿರೊಡನಾನುಂ ಸೂಳೆಗೆಯ್ತಕ್ಕೆ ಪೋದಪೆನೆನ್ನಂ ಕಳುಪಲ್ವೇೞ್ಕುಮೆನೆಕೇಳ್ದು ಬಸವಂ ತನ್ಮುಗ್ಧತೆಗೆ ಮುಗುಳ್ನಗೆನಕ್ಕು ॥ * * * * * * * *

ಕಂ ॥ ಪೋದಪಿರೆ ಪೋಗಿ ಮೆಂದ । ತ್ಯಾದರದೆ ಸುಗಂಧಮಾಲ್ಯಭೂಷಣರುಚಿರಾ ॥ ಚ್ಛಾದನವಿಭೂಷಣಂಗಳಿ । ನಾದೇವನ ನೊಲ್ದು ತಾನೆಸಿಂಗರಿಸುತ್ತಂ ॥ ... ॥೪

ಚಂ ॥ ಕುಸುಮವಿಲೇಪನಾದಿಬಹುವಸ್ತುಗಳಂ ಮಿಗೆ ಕೊಟ್ಟು ನುಣ್ಪವೆ । ತ್ತೆಸೆವನ ನೋರ್ವನಂ ಚರನ ನೊಲ್ದನುಯಾಯಿಯನಿತ್ತು ಜಾಣ್ಮೆರಂ ॥ ಜಿಸುವ ಮಹೇಶಭಕ್ತಿಯುತೆಯಾದ ಪಣಾಂಗನೆಯಾಲಯಕ್ಕೆ ತಾ । ನೊಸೆದು ವಿನೋದದಿಂ ಕಳುಪಿದಂ ಬಸವಂ ಘನಮುಗ್ಧಸಂಗನಂ ॥ ... ... .. ... ॥೫॥

ವ ॥ ಅಂತು ಕಳುಪೆ ಕಡುಸಡಗರಂಬೆತ್ತು ॥ * * * * * * * *

ಚಂ ॥ ತಳರ್ವವಿಳಾಸಿನೀಜನದ ಕಾಂಚಿಯಗೆಜ್ಜೆಯ ಪಿಂಡುಗಂಕಣಂ । ಗಳ ಪೊಳಪಾಂತ ನೇವುರದ ತುಂಬಿ ತುರುಂಬಿದಪೂಗೆ ಮೇಲೆ ಮಂ ॥ ಡಳಿಪಳವಿಂಡಿನಿಂಚರಮೆ ತೆಕ್ಕ

---

ಅಂತು, ಎೞ್ತಂದು, ಅಲ್ಲಿ, ಕುಸುಮಾನುಲೇಪತಾಂಬೂಲಾದಿವೆರಸು– ಹೂವು ಗಂಧ ತಾಂಬೂಲಮುಂತಾದವುಗಳಿಂ ಕೂಡಿ, ಸೂಳೆಗೆಯ್ತಕ್ಕೆ- ವೇಶ್ಯಾರತಕ್ಕೆ, ಪೋಪ, ಚರನಿಕರಮಂ- ಜಂಗಮಸಮೂಹವನ್ನು, ನಿರೀಕ್ಷಿಸಿ, ಶೂಲಿಪೂಜೆಗೆ- ಶಿವಪೂಜೆಗೆ, ಪೋಪ, ಅಂದಂ- ರೀತಿಯು, ಎಂದು, ಬಗೆದು-ಯೋಚಿಸಿ, ತಾನುಂ, ಪೋಗಲ್- ಹೋಗುವದಕ್ಕೆ, ಎಳಸಿ-ಅಪೇಕ್ಷಿಸಿ, ಮುನ್ನ, ಎಂದುಂ, ಅನಂಗಕೇಳಿಯಂ-ಮದನಕ್ರೀಡೆಯನ್ನು ಅರಿಯದ, ಮುಗ್ಧಸಂಗಯ್ಯಂ, ಬಸವನ, ಇದಿರ್ಗೆವಂದು, ಅವಂದಿರೊಡನೆ-ಆಜಂಗಮರೊಡನೆ, ಆನುಂ,ಸೂಳೆಗೆಯ್ತಕ್ಕೆ- ವೇಶ್ಯಾರತಕ್ಕೆ, ಪೋದಪೆಂ. ಎನ್ನಂ, ಕಳುಪಲ್ವೇೞ್ಕುಂ, ಎನೆ, ಬಸವಂ, ಕೇಳ್ದು, ತನ್ಮುಗ್ಧತೆಗೆ– ಆ ಮುಗ್ಧಸಂಗಯ್ಯನ ಲೌಕಿಕವಿಷಯಾಜ್ಞತ್ವಕ್ಕೆ, ಮುಗುಳ್ನಗೆನಕ್ಕು. * * * * *

ಪೋದಪಿರೆ- ಹೋಗುವಿರಾ? ಪೋಗಿಂ-ಹೋಗಿರಿ,ಎಂದು, ಅತ್ಯಾದರದೆ, ಸುಗಂಧಮುಖ್ಯಭೂಷಣರುಚಿರಾಚ್ಛಾದನವಿಭೂಷಣಂಗಳಿಂ- ಮನೋಹರವಾದ ಗಂಧ ಹೂವಿನಸರವಸ್ತ್ರ ಆಭರಣ ಇವುಗಳಿಂದ, ತಾನೆ- ಬಸವೇಶ್ವರನೇ, ಆದೇವನಂ- ಆ ಮುಗ್ಧಸಂಗದೇವನನ್ನು, ಒಲ್ದು, ಸಿಂಗರಿಸುತ್ತಂ. ... ॥೪॥

ಬಸವಂ, ಕುಸುಮವಿಲೇಪನಾದಿಬಹುವಸ್ತುಗಳಂ, ಮಿಗೆ, ಕೊಟ್ಟು,ನುಣ್ಪವೆತ್ತು-ನಯಯುಕ್ತನಾಗಿ, ಎಸೆವನಂ, ಓರ್ವನಂ, ಚರನಂ- ಒಬ್ಬಸೇವಕನನ್ನು, ಅನುಯಾಯಿಯಂ- ಜೊತೆಯಲ್ಲಿಹೋಗುವವನನ್ನಾಗಿ,ಒಲ್ದು, ಇತ್ತು, ಜಾಣ್ಮೆ- ಕೌಶಲ್ಯವು, ರಂಜಿಸುವ, ಮಹೇಶಭಕ್ತಿಯುತೆಯಾದ- ಶಿವಭಕ್ತಿಯಿಂಕೂಡಿದ, ಪಣಾಂಗನೆಯ- ಸೂಳೆಯ, ಆಲಯಕ್ಕೆ- ಮನೆಗೆ, ತಾಂ- ಬಸವೇಶ್ವರನು, ಒಸೆದು, ಘನಮುಗ್ಧಸಂಗನಂ, ವಿನೋದದಿಂ, ಕಳುಪಿದಂ. ... ... ... ... ॥೫॥

ಅಂತು, ಕಳುಪೆ, ಕಡುಸಡಗರಂಬೆತ್ತು-ಬಹುಸಡಗರಂಗೊಂಡು. * * * * * * *

ತಳರ್ವ- ಹೋಗುವ, ವಿಳಾಸಿನೀಜನದ- ಸ್ತ್ರೀಜನದ, ಕಾಂಚಿಯ- ಒಡ್ಯಾಣದ, ಗೆಜ್ಜೆಯ, ಪಿಂಡುಗಂಕಣಂಗಳ- ಗುಂಪಾದ ಕೈಬಳೆಗಳ, ಪೊಳಪಾಂತ- ಕಾಂತಿಯಂಹೊಂದಿದ, ನೇವುರದ- ಪಾದಕಟಕದ, ತುಂಬಿತುರುಂಬಿದ- ತಲೆಯಲ್ಲಿಮುಡಿದಿರುವ,ಪೂಗೆ-ಹೂವಿಗೆ, ಮೇಲೆ,ಮಂಡಳಿಪ- ಗುಂಪಾಗಿಸುತ್ತಿರುವ, ಅಳಿವಿಂಡಿ

ನೆ ತೀವಿದ ಸೂಳೆಗೇರಿ ಕಂ | ಗೊಳಿಸಿರೆ ನೋಡುತಂ ನಡೆದ ನೀಶ್ವರಪಾದಸರೋಜಷಟ್ಪದಂ॥
ಚಂ॥ ಪಳಿಕಿನಭಿತ್ತಿ ಬಜ್ಜರದಸೆಜ್ಜೆ ವಿಧೂಪಳರಮ್ಯಕುಟ್ಟಿಮಸ್ಥಳ | ಮಮರೇಂದ್ರನೀಲಮಯವೇದಿಕೆ ಪಚ್ಚೆಯಬಳ್ಳಿ ಮಾಡಮ॥ ಗ್ಗಳಿಸಿದಪದ್ಮರಾಗದಕನತ್ಕಳಶಂ ಪೊಸಪೊನ್ನಗಂಟೆ ಕಂ|ಗೊಳಿಸುವ ವಿದ್ರುಮಾವಳಿಯ ತೋರಣ ಮೊಪ್ಪುವಸೂಳೆಗೇರಿಯೊಳ್॥
ಚಂ॥ ಇದು ಮದನೇಂದ್ರಜಾಲಿಕನೊಡರ್ಚಿದ ಕೌತುಕಮೆಂದು ನಿಂದುನೋ | ಳ್ಪದು ವಿಟರಾಜಿ ರಮ್ಯಮಣಿಹರ್ಮ್ಯದಮೇಲೆ ನವೀನಶಂಖದ ॥ ಗ್ರದೊಳೊಗೆದಿರ್ದ ಪಂಕಜದೊಳುಳ್ಳಲರ್ದುತ್ಪಳದೊಳ್ಪೊದಳ್ದು ತು | ಳ್ಕದ ತಿಳಿಜೊನ್ನಮಂ ಪೆರೆಯ ನಪ್ಪಿನಿಲುಂಬಿದ ಭೃಂಗಮಾಲೆಯಂ ॥ ... ... ... ... ॥೪॥
ವ ॥ ಮತ್ತಮಲ್ಲಿ ವಿದಗ್ಧೆ ನಿಜಸಖಿಗೆ ಬುದ್ಧಿವೇಳ್ದಳದೆಂತೆನೆ ॥ * * * *
ಚಂ॥ ಪೊಸಸರದಲ್ಲಿ ಪಾಡು ಪಿರಿದೀವನಕೇಳಿಯೊಳೊಂದು ಸದ್ರವಂ | ಮಿಸುಗಿರೆ ಕಾ

---

ನ- ಭ್ರಮರಸಮುದಾಯದ, ಇಂಚರಮೆ- ಮಧುರಸ್ವರವೇ, ತೆಕ್ಕನೆ- ಸಾಂದ್ರವಾಗಿ, ತೀವಿದ- ತುಂಬಿರುವ, ಸೂಳೆಗೇರಿ, ಕಂಗೊಳಿಸಿ, ಇರೆ, ಈಶ್ವರಪಾದಸರೋಜಷಟ್ಪದಂ- ಶಿವನಪಾದಕಮಲಕ್ಕೆ ಭ್ರಮರನಾದ ಮುಗ್ಧಸಂಗದೇವನು, ನೋಡುತಂ, ನಡೆದಂ. ... ... ... ॥೩॥

ಪಳಿಕಿನ- ಸ್ಫಟಿಕದ, ಭಿತ್ತಿ- ಗೋಡೆಯು, ಬಜ್ಜರದ- ವಜ್ರದ, ಸೆಜ್ಜೆ, ವಿಧೂಪಳರಮ್ಯಕುಟ್ಟಿಮಸ್ಥಳಂ- ಚಂದ್ರಕಾಂತಶಿಲೆಯ ಮನೋಹರವಾದ ನಿಬದ್ಧಭೂಮಿ, ಅಮರೇಂದ್ರನೀಲಮಯವೇದಿಕೆ- ಇಂದ್ರನೀಲರತ್ನದಜಗತಿ, ಪಚ್ಚೆಯ, ಬಳ್ಳಿಮಾಡಂ- ಮಾಡವು, ಅಗ್ಗಳಿಸಿದ- ಅಧಿಕವಾದ, ಪದ್ಮರಾಗದ, ಕನತ್ಕಳಶಂ- ಹೊಳೆಯುವಕಳಶವು, ಪೊಸಪೊನ್ನ, ಗಂಟೆ, ಕಂಗೊಳಿಸುವ, ವಿದ್ರುಮಾವಳಿಯ- ಹವಳಗಳಸ್ತೈನಿನ, ತೋರಣಂ- ಒಪ್ಪುವ, ಸೂಳೆಗೇರಿಯೊಳ್. ... ... ... ॥೭॥

ವಿಟರಾಜಿ, ರಮ್ಯಮಣಿಹರ್ಮ್ಯದಮೇಲೆ-ಮನೋಹರವಾದರತ್ನದಉಪ್ಪರಿಗೆಯಮೇಲೆ,ನವೀನಶಂಖದ- ನೂತನವಾದಸಂಕಿನ, ಅಗ್ರದೊಳ್- ಮೇಲ್ಗಡೆಯಲ್ಲಿ, ಒಗೆದಿರ್ದ, ಪಂಕಜದೊಳ್- ಕಮಲದಲ್ಲಿ, ಉಳ್ಳಲರ್ದ- ವಿಕಸಿತವಾದ, ಉತ್ಪಳದೊಳ್- ನೈದಿಲೆಯಹೂವಿನಲ್ಲಿ, ಪೊದಳ್ದು, ತುಳ್ಕಿದ, ತಿಳಿಜೊನ್ನಮಂ- ನಿರ್ಮಲವಾದ ಚಂದ್ರಿಕೆಯುಳ್ಳ, ಪೆರೆಯಂ- ಚಂದ್ರನನ್ನು, ಅಪ್ಪಿ, ನಿಲುಂಬಿದ- ಆಶ್ರಯಿಸಿರುವ, ಭೃಂಗಮಾಲೆಯಂ- ಭ್ರಮರಪಙ್ತಿಯನ್ನು, ಇದು,ಮದನೇಂದ್ರಜಾಲಿಕಂ- ಮನ್ಮಥನೆಂಬಇಂದ್ರಜಾಲವಿದ್ಯೆಯುಳ್ಳವನು, ಒಡರ್ಚಿದ- ಮಾಡಿರುವ, ಕೌತುಕಂ- ಆಶ್ಚರ್ಯವು, ಎಂದು, ನಿಂದು, ನೋಳ್ಪದು (ಅಂದರೆ ರತ್ನಾಭರಣಯುಕ್ತವಾದ ವಕ್ಷಃಪ್ರದೇಶದ ಮೇಲಿರುವಕಂಠದ ಮೇಲ್ಗಡೆಯಲ್ಲಿರುವ ಮುಖದಲ್ಲಿರುವ ಕಣ್ಣುಗಳ ಕಾಂತಿಯಿಂ ಕೂಡಿದ ಹಣೆಯ ಮೇಲಿರುವ ಕುರುಳುಗಳುಳ್ಳ ಸ್ತ್ರೀಯರನ್ನು ನೋಡುತಿದ್ದರೆಂದು ಭಾವವು.) ... ॥೪॥

ಮತ್ತಂ, ಅಲ್ಲಿ- ಆಸೂಳೆಗೇರಿಯಲ್ಲಿ, ವಿದಗ್ಧೆ- ಪ್ರೌಢಾಂಗನೆಯು, ನಿಜಸಖಿಗೆ, ಬುದ್ಧಿವೇಳ್ದಳ್, ಅದು, ಎಂತೆನೆ. * * * * * * * * * * * * * * * * *

ಮದಾಳಿ- ನನ್ನ ಸಖಿಯೇ! ಪೊಸಸರದಲ್ಲಿ- ನೂತನವಾದ ಸ್ವರದಲ್ಲಿ, ಪಾಡು; ಪಿರಿದು- ಹೆಚ್ಚಾಗಿ, ಈವನ- ಕೊಡುವವನ, ಕೇಳಿಯೊಳ್, ಒಂದು- ಸೇರು; ಸದ್ರವಂ- ಸವಿಶಾಬೇಸಪಾದನುರಾಗವು, ಮಿಸುಗಿರೆ, ಕಾಮಧರ್ಮಗುಣವೃತ್ತಿಯಂ- ಮನ್ಮಥಧರ್ಮಗುಣಗಳ ವರ್ತನವನ್ನು, ಆಳ್ದಿರ್, ಅಸಾರಗಂಧಮಂ- ಶ್ರೇಷ್ಠವಲ್ಲದಗರ್ವವನ್ನು, ಬಿಸುಡು; ಮನೋಜ್ಞಪದ್ಮಸುಮ್ನನೋರುಬೆಯಂ- ಮನೋಹರರಾದ ಐಶ್ವರ್ಯವಂತರಾದ ವಿದ್ವಾಂಸರಲ್ಲಿ ಪ್ರೀತಿಯನ್ನು, ಪಡೆ; ಪಾರುಗೆಯ್ತಮಂ- ಕಾಮೋದ್ದೀಪನೆಯನ್ನು, ಪೊಸಯಿಸಿ- ಹೆಚ್ಚಿಸಿ, ಕಾದಲರೊಳ್- ನಾಯಕರೊಡನೆ, ಇಂಬರಿದು- ಸಮಯವಂ ತಿಳಿದು, ಸೋಂಕಿ, ಸೌಖ್ಯಮಂ, ಒಂದು,

ಮಧರ್ಮಗುಣವೃತ್ತಿಯನಾಳ್ದ ರಸಾರಗಂಧಮಂ॥ ಬಿಸುಡು ಮನೋಜ್ಞಪದ್ಮಸುಮನೋ
ರುಚಿಯುಂಪಡೆ ಪಾರುಗೆಯ್ತಮಂ । ಪೊಸಯಿಸಿ ಸೋಂಕಿ ಕಾದಲರೊಳಿಂಬರಿದೊಂದು ಮ
ದಾಳಿ ಸೌಖ್ಯಮಂ ॥ .. ... ... ... ॥೯॥

ವ ॥ ಇಂತನೂನಶೋಭಾವರೇಣ್ಯಮಾದ ಮದನಮದಮಧುಕರಮಾಲತೀಮಾಲೆಯುಂ
ತೆಸೆವ ಗಣಿಕಾವಾಟಯುಂ ಪೊಕ್ಕು ತನ್ನಿತುಂಬಿನಿಯ ಮಣಿಮಯಮಂದಿರಬಂಧುರಾಂಗಣ
ಮ ನವಂ ಪುಗುತಂದಾಗಳ್ ॥ * * * * * * * * * * * *

ಚಂ ॥ ಅಳಿಕುಳಕುಂತಳಂ ಪೆರೆನೊಸಲ್ಕುಮುದೇಕ್ಷಣ ಮಬ್ಜವೈರಿಮಂ । ಡಳವದ
ನಂ ಪ್ರವಾಳಮಧುರಾಧರ ಮಂದದಕಂಬುಕಂಠ ಮು ॥ ಜ್ಜ್ವಳಕಳಶಸ್ತನಂ ನವಲತಾತ
ನುಮಧ್ಯ ಮಿಭೇಂದ್ರಕುಂಭಮಂ । ಜುಳಕಟ ಬಾಳೆನುಣ್ದೊಡೆ ವಿರಾಜಿಪಕಾಮಿನಿ ಕಂಡ
ಳಾತನು ॥ ... ... ... ... ... ॥೧೦॥

ಮ॥ ಸ್ರ॥ ವಿಳಸತ್ಸೀಮಂತರತ್ನಸ್ಫುಟಫಣಮಣಿವೇಣೀಲತಾಭೋಗಿ ತನ್ಮಂ । ಜುಳ

---

(ಮತ್ತು ಇಲ್ಲಿ ಶಬ್ದಶಕ್ತಿಯಿಂದ ತೋರುವ ಮತ್ತೊಂದರ್ಥವೆಂತೆಂದೊಡೆ) ಮದಾಳಿ- ಮದವಿಶಿಷ್ಟವಾದಭ್ರ
ಮರವೇ! ಪೊಸಸರದಲ್ಲಿ- ನೂತನವಾದ ಕೊಳದಲ್ಲಿ, ಪಾಡು, ಪಿರಿದು, ಈವನಕೇಳಿಯೊಳ್- ಈ ಕಮಲವನ
ಕ್ರೀಡೆಯಲ್ಲಿ, ಒಂದು; ಸದ್ರವಂ- ಸಮೀಚೀನವಾದ ಶಬ್ದವು, ಮಿಸುಗಿ, ಇರೆ, ಕಾಮಧರ್ಮಗುಣವೃತ್ತಿಯಂ-
ಮನ್ಮಥನ ಧನುಸ್ಸಿನ ಸಿಂಜಿನಿಯವರ್ತನವನ್ನು,ಆಳ್ದರ್, ಅಸಾರಗಂಧಮಂ- ಶ್ರೇಷ್ಠವಲ್ಲದಪರಿಮಳವನ್ನು,
ಬಿಸುಡು; ಮನೋಜ್ಞಪದ್ಮಸುಮನೋರುಚಿಯುಂ- ಮನೋಹರವಾದ ಕಮಲದ ಹೂವಿನಲ್ಲಿ ಪ್ರೀತಿಯನ್ನು,
ಪಡೆ; ಪಾರುಗೆಯ್ತಮಂ- ಹಾರುವ ಕಾರ್ಯವನ್ನು, ಪೊಸಯಿಸಿ- ಬಲಪಡಿಸಿ, ಇಂಬರಿದು- ಅವಕಾಶವಂ ತಿಳಿ
ದು, ಕಾದಲರೊಳ್- ಮಕರಂದಭರಿತವಾದ ಹೂವಿನಲ್ಲಿ, ಸೋಂಕಿ, ಸೌಖ್ಯಮಂ, ಒಂದು. ... ॥೯॥

ಇಂತು, ಅನೂನಶೋಭಾವರೇಣ್ಯಮಾದ- ನೂತನವಾದ ಕಾಂತಿಯಿಂದ ಶ್ರೇಷ್ಠವಾದ, ಮದನಮದ
ಮಧುಕರಮಾಲತೀಮಾಲೆಯಂತೆ- ಮನ್ಮಥನೆಂಬ ಮಡಿಸಿದ ಭ್ರಮರಕ್ಕೆ ಜಾಜೀಹೂವಿನ ಮಾಳಿಕೆಯ ಹಾಗೆ,
ಎಸೆವ, ಗಣಿಕಾವಾಟಿಯುಂ- ಸೂಳೆಗೇರಿಯನ್ನು, ಪೊಕ್ಕು, ತನ್ನಿತಂಬನಿಯ- ಆಬಸವೇಶ್ವರನಿಂದ ಸೂಚಿ
ಸಲ್ಪಟ್ಟದ್ದ ಸೂಳೆಯ, ಮಣಿಮಯಮಂದಿರಬಂಧುರಾಂಗಣಮಂ- ರತ್ನವಿಕಾರವಾದ ಮನೆಯ ಮನೋಹ
ರವಾದ ಮುಂದಣಪ್ರದೇಶವನ್ನು, ಪುಗುತಂದಳಗಳ್. * * * * * * * * * *

ಅಳಿಕುಳಕುಂತಳಂ- ಭ್ರಮರಗಳಸಮೂಹದಂತಿರುವ ಕೇಶವು, ಪೆರೆನೊಸಲ್- ಚಂದ್ರನಂತಿರುವ ಹಣೆ
ಯು, ಕುಮುದೇಕ್ಷಣಂ- ನೈದಿಲೆಯಂತಿರುವ ಕಣ್ಣು,ಅಬ್ಜವೈರಿಮಂಡಳವದನಂ- ಚಂದ್ರಮಂಡಳದಂತಿರುವ
ಮುಖವು, ಪ್ರವಾಳಮಧುರಾಧರಂ-ಹವಳದಂತೆ (ಬೆಗರಿನಂತೆ) ಮನೋಹರವಾದ ತುಟಿಯು, ಅಂದದ, ಕಂ
ಬುಕಂಠಂ- ಸಂಕಿನಂತಿರುವಕತ್ತು, ಉಜ್ಜ್ವಳಕಳಶಸ್ತನಂ, ನವಲತಾತನುಮಧ್ಯಂ-ನೂತನವಾದಬಳ್ಳಿಯರ
ತೆ ಕೃಶವಾದ ನಡುವು, ಇಭೇಂದ್ರಕುಂಭಮಂಜುಳಕಟಿ— ಇಭೇಂದ್ರ- ಶ್ರೇಷ್ಠವಾದ ಆನೆಯ, ಕುಂಭ-
ಕುಂಭಸ್ಥಲದಂತೆ, ಮಂಜುಳ- ಮನೋಹರವಾದ, ಕಟಿ- ಕಟಿಪಶ್ಚಾದ್ಭಾಗವು, ಬಾಳೆನುಣ್ದೊಡೆ- ಬಾಳೆಗಂ
ಬದಂತಿರುವ ತೊಡೆಯು, ವಿರಾಜಿಪ, ಕಾಮಿನಿ, ಆತನಂ, ಕಂಡಳ್, ಅಂದರೆ ಶುಭವಸ್ತುಸಮನ್ವಿತಳಂತೆ ಇದಿ
ರ್ಗೊಂಡಳೆಂದು ತಾತ್ಪರ್ಯ. ... ... ... ... ... ॥೧೦॥

ವಿಳ......ಭೋಗಿ— ವಿಳಸತ್- ಪ್ರಕಾಶಿಸುವ, ಸೀಮಂತರತ್ನ- ಬೈತಲೆಯರತ್ನವೆಂಬ, ಸ್ಫುಟ-
ವ್ಯಕ್ತವಾದ, ಫಣಮಣಿ- ಹೆಡೆಯಲ್ಲಿರುವರತ್ನವುಳ್ಳ, ವೇಣೀಲತಾ- ಬಳ್ಳಿಯಂತಿರುವಜಡೆಯೆಂಬ,ಭೋಗಿ- ಸ

ಪಾದೋದ್ಯನ್ನಖಪ್ರದ್ಯುತಿಸುಧೆಗೆರಗಿರ್ಪಂತೆ ಬೆಲ್ವಾಗೆ ನೇತ್ರಾಂ ॥ ಚಲತೇಜಃಪುಷ್ಪದಿಂ
ಪೂಜಿಸಿ ಮಣಿದ ಪಣಸ್ತ್ರೀಯ ಭಾಳೇಂದುಗತ್ಯು । ಜ್ಜ್ವಳಭಸ್ಮಜ್ಯೋತ್ಸ್ನೆಯಂ
ಸಂಗಳಿಸಿ ಪರಸಿದಂ ಮುಗ್ಧಸಂಗಾರ್ಯನಾಗಳ್॥ ... .. ... ॥೧೧॥

ವ॥ ಅನಂತರ ಮಾವಾರಾಂಗನೆ ಕೈಗೊಟ್ಟು ಬಿಜಯಂಗೆಯ್ಸಿ ನಿಜನಿಕೇತನಮನೊಳಪುಗಿಸೆ ಮುಗ್ಧದೇವಂ ನಿರೀಕ್ಷಿಪಾಗಳ್ ಕುಸುಮಶರಕೇಳಿನಿಳಯಾಂತರಾಳದೊಳ್ ನೆಗಳ್ತೆವೆತ್ತ ಸುವರ್ಣಮಯಮಂಜುಳಪಂಜರಾಂತರಾಂಚಿತಮೃದುಮಧುರವಚನಚಯರುಚಿರತರಸುಭಗತನುಶುಕಶಾರಿಕಾನಿಕಾಯಮುಂ ವಿಶದಶಶಿಮಣಿಮಯಕುಟ್ಟಿಮಸ್ಥಳಪ್ರತಿಬಿಂಬಕದಂಬಾಡಂಬರದ್ವಿಗುಣಿತವಿಳಾಸವಿಶಾಲರುಚಿಶಾಲಿಸಾಲಭಂಜಿಕಾನಿಕುರುಂಬಮುಂ ಮದಮಧುಕರಪ್ರಕರಝುಂಕೃತಿಸಂಕಲಿತವಿತತಾಮಂದಮಕರಂದರಸರಜೋರಾಜಿರಂಜಿತಕುಸುಮಮಾಲಾಸಂತಾನವಿತಾನಮುಂ ಚಂಚತ್ಕಾಂಚನಪೀಠಿಕಾರೂಢವಿಮಳಹಿಮಮಿಳಿತಮಧುರತ

---

ರ್ಪವು, ತನ್ಮಂಜುಳಪಾದೋದ್ಯನ್ನಖಪ್ರದ್ಯುತಿಸುಧೆಗೆ- ಆ ಮುಗ್ಧಸಂಗದೇವನ ಮನೋಹರವಾದ ಪಾದದ ಉಗುರಿನ ಅಧಿಕವಾದಕಾಂತಿಯೆಂಬ ಅಮೃತಕ್ಕೋಸುಗ, ಎರಗಿ, ಇರ್ದಂತೆ, ಬೆಲ್ವಾಗೆ, ನೇತ್ರಾಂಚಲತೇಜಃಪುಷ್ಪದಿಂ- ಕಡೆಗಣ್ಣಿನಕಾಂತಿಯೆಂಬಹೂವಿನಿಂದ, ಪೂಜಿಸಿ, ಮಣಿದ- ನಮಸ್ಕರಿಸಿದ, ಪಣಸ್ತ್ರೀಯ- ಸೂಳೆಯ, ಭಾಳೇಂದುಗೆ- ಹಣೆಯೆಂಬಚಂದ್ರನಿಗೆ. ಮುಗ್ಧಸಂಗಾರ್ಯಂ, ಆಗಳ್, ಅತ್ಯುಜ್ಜ್ವಳಭಸ್ಮಜ್ಯೋತ್ಸ್ನೆಯಂ- ಅತ್ಯಂತಮನೋಹರವಾದ ಭಸ್ಮವೆಂಬ ಬೆಳ್ದಿಂಗಳನ್ನು, ಸಂಗಳಿಸಿ- ಸೇರಿಸಿ, ಪರಸಿದಂ. ॥೧೧॥

ಅನಂತರಂ, ಆವಾರಾಂಗನೆ, ಕೈಗೊಟ್ಟು, ಬಿಜಯಂಗೆಯ್ಸಿ-ಕರೆದುಕೊಂಡು, ನಿಜನಿಕೇತನಮಂ-ತನ್ನ ಮನೆಯನ್ನು, ಒಳಪುಗಿಸೆ, ಮುಗ್ಧದೇವಂ, ನಿರೀಕ್ಷಿಪಾಗಳ್; ಕುಸುಮಶರಕೇಳಿನಿಳಯಾಂತರಾಳದೊಳ್- ಮದನಕ್ರೀಡೆಯಮನೆಯ ಒಳಗಡೆಯಲ್ಲಿ, ನೆಗಳ್ತೆವೆತ್ತ, ಸುವರ್ಣ......ನಿಕಾಯಮುಂ—ಸುವರ್ಣಮಯ- ಚಿನ್ನದ, ಮಂಜುಳ- ಮನೋಹರವಾದ, ಪಂಜರ- ಗೂಡಿನ, ಅಂತರ- ಒಳಗೆ, ಉಚಿತ- ಶ್ಲಾಘ್ಯವಾದ, ಮೃದು- ಕೋಮಲವಾದ, ಮಧುರ- ಇಂಪಾದ, ವಚನ- ಮಾತುಗಳ, ಚಯ- ಸಮೂಹದಿಂದ, ರುಚಿರತರ- ಅತಿಮನೋಹರವಾದ, ಸುಭಗತನು- ಸುಂದರವಾದಶರೀರವುಳ್ಳ, ಶುಕ- ಗಂಡುಗಿಳಿ, ಶಾರಿಕಾ- ಹೆಣ್ಣುಗಿಳಿ ಇವುಗಳ, ನಿಕಾಯಮುಂ- ಸಮೂಹವೂ; ವಿಶದ......ನಿಕುರುಂಬಮುಂ— ವಿಶದ- ನಿರ್ಮಲವಾದ, ಶಶಿಮಣಿಮಯ- ಚಂದ್ರಕಾಂತಶಿಲೆಯ, ಕುಟ್ಟಿಮಸ್ಥಳ- ನಿಬದ್ಧಭೂಮಿಯಲ್ಲಿರುವ, ಪ್ರತಿಬಿಂಬ- ಪ್ರತಿಛಾಯೆಗಳ, ಕದಂಬ- ಸಮೂಹದ, ಆಡಂಬರ- ಆಧಿಕ್ಯದಿಂದ, ದ್ವಿಗುಣಿತ- ಎರಡುಭಾಗಹೆಚ್ಚಿಸಲ್ಪಟ್ಟ, ವಿಳಾಸ- ಲೀಲೆಯಿಂದ, ವಿಶಾಲ- ವಿಸ್ತಾರವಾದ, ರುಚಿ- ಕಾಂತಿಯಿಂದ, ಶಾಲಿ- ಒಪ್ಪುತ್ತಿರುವ, ಸಾಲಭಂಜಿಕಾ- ಬೊಂಬೆಗಳ, ನಿಕುರಂಬಮುಂ; ಮದ......ವಿತಾನಮುಂ—ಮದಮಧುಕರಪ್ರಕರ-ಮದಿಸಿದಭ್ರಮರಗಳ ಸಮುದಾಯದ, ಝುಂಕೃತಿ- ಝುಂಕಾರದಿಂದ, ಸಂಕಲಿತ- ಕೂಡಿದ, ವಿತತ- ವಿಸ್ತಾರವಾದ, ಅಮಂದ- ಅಧಿಕವಾದ, ಮಕರಂದರಸ- ಮಕರಂದವೇನು, ರಜೋರಾಜಿ- ಪರಾಗಸಮುದಾಯವೇನು ಇವುಗಳಿಂದ, ರಂಜಿತ- ಪ್ರಕಾಶಿಸುವ, ಕುಸುಮಮಾಲಾ- ಹೂವಿನಮಾಲಿಕೆಗಳ, ಸಂತಾನವಿತಾನಮುಂ- ಅವಿಚ್ಛಿನ್ನವಾದ ಸಮೂಹವೂ; ಚಂಚತ್...............ವರ್ಗಮುಂ— ಚಂಚತ್- ಹೊಳೆಯುವ, ಕಾಂಚನಪೀಠಿಕಾ- ಚಿನ್ನದ ಮಣೆಯನ್ನು, ಆರೂಢ- ಹತ್ತಿರುವ, (ಅಂದರೆ ಚಿನ್ನದ ಮಣೆಯಮೇಲಿರಿಸಿರುವ) ವಿಮಳ- ನಿರ್ಮಲವಾದ, ಹಿಮ- ಪಚ್ಚಕರ್ಪೂರದಿಂದ, ಮಿಳಿತ- ಕೂಡಿದ, ಮಧುರತರ- ಅತಿಸ್ವಾದವುಳ್ಳ, ತಾಂಬೂಲ- ತಾಂಬೂಲದ, ಪರಿಕರ- ಸಾಮಗ್ರಿಗಳಿಂದ, ಪರಿಮಿಳಿತ- ಕೂಡಿದ, ಮಣಿಮಯಪಾತ್ರವರ್ಗಮುಂ- ರತ್ನದ ಪಾತ್ರೆಗಳ ಸಮೂಹವೂ;

ರತಾಂಬೂಲಪರಿಕರಪರಿಮಿಳಿತಮಣಿಮಯಪಾತ್ರವರ್ಗಮುಂ ಕನಕಕಮಳಕುಮುದಕಲ್ಹಾರೋಶೀರಕರ್ಪೂರಸುರಭಿತಶಿಶಿರಮಧುರಸಲಿಲಸಂಭೃತಕನಕಭೃಂಗಾರವಾರಮುಂ ಶ್ಲಕ್ಷ್ಣತರಭಿತ್ತಿಚಿತ್ರಿತಚಿತ್ರತರಚಿತ್ರಸಂದೋಹಮುಂ ಗೃಹಮಧ್ಯಕುಡ್ಯಮಂಡಿತಾನರ್ಘಮಣಿಮಯಸರ್ವಾಂಗದರ್ಶಕದಿವ್ಯರುಚಿನವ್ಯದರ್ಪಣಮುಂ ಮೃಗಮದಕಾಶ್ಮೀರಯಕ್ಷಕರ್ದಮರಸಭರಿತಕರಿವಿಷಾಣಕರಂಡಕಸಮುದಾಯಮುಂ ದ್ರಾಕ್ಷಾದಾಡಿಮಕಪಿತ್ಥಫಲಪಾನಸಖರ್ಜೂರರಸಾಯನಪುಂಡ್ರೇಕ್ಷುಖಂಡಕದಂಬಕಲಿತಕಾಂಚನಾಮತ್ರಪಾತ್ರಪ್ರಕರಮುಂ ವೀಣಾವೇಣುವಲ್ಲಕೀಕುಸುಮಮಾಲಾತಾಲವೃಂತಾಕ್ಷಫಲಕಮಣಿಪಾದುಕಾದಿಪರಿಕರಪ್ರಕರಮುಂ ಕಂಗೊಳಿಸಿರ್ದುದಲ್ಲಿ ॥ * * * * * * * * * * * * * * *

ಚಂ॥ ವಿಮಳಮರಾಳತೂಳಮೃದುತಲ್ಪವಿಭಾಸಿ ಮಣಿಪ್ರತಾನಸಂ। ಕ್ರಮಿತವಿತಾನಮಂಜುಳಮಮಂದಸುಗಂಧಲತಾಂತಮಾಲಿಕಾ॥ ಸಮುದಯಶೋಭಿ ಹೇಮಮಯಕಾಂಡಪಟಪ್ರವಿರಾಜಮಾನಮಂ। ದಮನಮರ್ದಪ್ಪಿ ತೋರಿದುದು ಕಾಂಚನಮಂಚಮದೊಂದು ಚೆಲ್ವಿನಿಂ॥

---

ಕನಕ......ವಾರಮುಂ— ಕನಕಕಮಳ, ಕುಮುದ, ಕಲ್ಹಾರ- ಸುಗಂಧವಿಶಿಷ್ಟವಾದ ಕಮಲ, ಉಶೀರ- ಮುಡಿವಾಳ, ಕರ್ಪೂರ- ಪಚ್ಚಕರ್ಪೂರ, ಇವುಗಳಿಂದ, ಸುರಭಿತ- ಪರಿಮಳವಿಶಿಷ್ಟವಾಗಿಮಾಡಲ್ಪಟ್ಟ, ಶಿಶಿರ- ಶೀತಲವಾದ, ಮಧುರ- ಇಂಪಾದ, ಸಲಿಲ- ಜಲದಿಂದ, ಸಂಭೃತ- ತುಂಬಲ್ಪಟ್ಟ, ಕನಕ- ಚಿನ್ನದ, ಭೃಂಗಾರು- ಗಿಂಡಿಗಳ, ವಾರಮುಂ; ಶ್ಲಕ್ಷ್ಣ........ಸಂದೋಹಮುಂ— ಶ್ಲಕ್ಷ್ಣತರ- ಅತಿಸೂಕ್ಷ್ಮವಾಗಿ, ಭಿತ್ತಿ- ಗೋಡೆಗಳಲ್ಲಿ, ಚಿತ್ರಿತ- ಚಿತ್ರಿಸಲ್ಪಟ್ಟ, ಚಿತ್ರತರ- ನಾನಾವಿಧವಾದ, ಚಿತ್ರ- ಚಿತ್ರಗಳ, ಸಂದೋಹಮುಂ; ಗೃಹ........ದರ್ಪಣಮುಂ— ಗೃಹಮಧ್ಯ- ಮನೆಯಮಧ್ಯದ, ಕುಡ್ಯ- ಗೋಡೆಯಲ್ಲಿ, ಮಂಡಿತ- ಅಲಂಕರಿಸಲ್ಪಟ್ಟ, ಅನರ್ಘ- ಅಮೂಲ್ಯವಾದ, ಮಣಿಮಯ- ರತ್ನವಿಕಾರವಾದ, ಸರ್ವಾಂಗದರ್ಶಕ- ದೇಹವೆಲ್ಲವೂಕಾಣಿಸುವ, ದಿವ್ಯ- ಶ್ರೇಷ್ಠವಾದ, ರುಚಿ-ಕಾಂತಿಯಿಂದ, ನವ್ಯ- ನೂತನವಾದ, ದರ್ಪಣಮುಂ- ಕನ್ನಡಿಯೂ; ಮೃಗಮದ........ಸಮುದಾಯಮುಂ— ಮೃಗಮದ- ಕಸ್ತೂರಿ, ಕಾಶ್ಮೀರ- ಕುಂಕುಮಕೇಸರಿ, ಇವುಗಳ, ಯಕ್ಷಕರ್ದಮರಸ- ಕೊಟುಗಂದದಿಂದ, ಭರಿತ- ತುಂಬಿದ, ಕರಿವಿಷಾಣ- ಆನೆಯ ಕೊಂಬಿನ, ಕರಂಡಕಾ- ಭರಣಿಗಳ, ಸಮುದಾಯಮುಂ, ದ್ರಾಕ್ಷಾ........ಪ್ರಕರಮುಂ— ದ್ರಾಕ್ಷಾ, ದಾಡಿಮ, ಕಪಿತ್ಥಫಲ- ಬೇಲದಹಣ್ಣು ಇವುಗಳ, ಪಾನ- ಪಾನಕವೇನು, ಸಖರ್ಜೂರರಸಾಯನ- ಖರ್ಜೂರದಿಂ ಕೂಡಿದ ರಸಾಯನವೇನು, ಪುಂಡ್ರೇಕ್ಷುಖಂಡ- ಶ್ರೇಷ್ಠವಾದ ಕಬ್ಬಿನ ತುಣುಕುಗಳ, ಕದಂಬ- ಸಮೂಹದಿಂದ, ಕಲಿತ- ಕೂಡಿದ, ಕಾಂಚನ- ಚಿನ್ನದ, ಅಮತ್ರಪಾತ್ರ- ಪಾನಪಾತ್ರೆಗಳ, ಪ್ರಕರಮುಂ; ವೀಣಾ.........ಪ್ರಕರಮುಂ— ವೀಣಾ, ವೇಣುವಲ್ಲಕೀ- ಬಿದುರಿನವೀಣೆ, ಕುಸುಮಮಾಲಾ, ತಾಲವೃಂತ- ಬೀಸಣಿಗೆ, ಅಕ್ಷಫಲ- ಪಗಡೆಯಾಟದ ಹಲಗೆ, ಮಣಿಪಾದುಕಾ- ರನ್ನದ ಪಾವುಗೆ, ಇವುಗಳೇ, ಆದಿ- ಮೊದಲಾದ, ಪರಿಕರ- ಸಾಮಗ್ರಿಗಳ, ಪ್ರಕರಮುಂ, ಅಲ್ಲಿ, ಕಂಗೊಳಿಸಿ, ಇರ್ದುದು. * * * * * * *

ವಿಮಳಮರಾಳತೂಳಮೃದುತಲ್ಪವಿಭಾಸಿ- ನಿರ್ಮಲವಾದಹಂಸಪಕ್ಷಿಯರೋಮದಿಂದ ಮಾಡಿದ ಮೃದುವಾದ ಹಾಸಿಗೆಯಿಂದ ಪ್ರಕಾಶಿಸುವ, ಮಣಿಪ್ರತಾನಸಂಕ್ರಮಿತವಿತಾನಮಂಜುಳಂ-ರತ್ನಸಮೂಹದಿಂದಕೂಡಿದ ಮೇಲ್ಕಟ್ಟಿನಿಂ ಮನೋಹರವಾದ, ಅಮಂದಸುಗಂಧಲತಾಂತಮಾಲಿಕಾಸಮುದಯಶೋಭಿ- ಅಧಿಕವಾದ ಪರಿಮಳವುಳ್ಳ ಹೂವಿನ ಮಾಲೆಗಳ ಸಮೂಹದಿಂದ ಪ್ರಕಾಶಿಸುವ, ಹೇಮಮಯಕಾಂಡಪಟಪ್ರವಿರಾಜಮಾನಂ- ಚಿನ್ನದ ತೆರೆಬಟ್ಟೆಯಿಂದ ಪ್ರಕಾಶಿಸುವ, ಕಾಂಚನಮಂಚಂ, ಅಂದಮಂ, ಅಮರ್ದಪ್ಪಿ-ಹೊಂದಿ, ಅದೊಂದು ಚೆಲ್ವಿನಿಂ, ತೋರಿದುದು. ... ... ... ... ॥೧೨॥

ವ॥ ಆಮನೋಜ್ಞಸುವರ್ಣಪರ್ಯಂಕಮಂ ಶಂಕರಸಮರ್ಚನೋಚಿತಮಂಟಪಮಕ್ಕುಮೆಂಬವನೇರಲೊಲ್ಲದೆ ತನ್ನಿಕಟದೊಳ್ಪಾಸಿರ್ದ ಮಣಿಕಂಬಳಾಸನದೊಳ್ಕುಳ್ಳಿರ್ದು ಪರಿಮಳಾಂಬುವಿಂ ನಿಜಪಾದಪ್ರಕ್ಷಾಳನಂಗೆಯ್ದು ಪಾದೋದಕಂಬಳೆದು ಭಕ್ತಿವೆರಸಿ ನಿಂದಿರ್ದ ಗಣಿಕಾಕಾಂತೆಯಾನನಮನವಲೋಕನಂಗೆಯ್ದು॥ * * * * * * * *

ಕಂ॥ ಎಲೆಭಕ್ತೆ ನಿನ್ನಮೆಯ್ಯೊಳ್ ಸುಲಲಿತಭಸಿತಾನುಲೇಪನಂ ರುದ್ರಾಕ್ಷಾ ॥ ವಳಿ
ಕೊರಲೊಳ್ಶಿರದೊಳ್ಜಡೆ । ನೆಲಸದ ಬಗೆಯೇಂ ಮೃಗಾಕ್ಷಿ ಪೇಳೆನಗೀಗಳ್ ॥ ॥೧೩॥

ವ॥ ಎಂಬ ತನ್ಮುಗ್ಧೋಕ್ತಿಗೇಳ್ದು ವಿದಗ್ಧೆಯಂತಸ್ಮಿತೆಯಾಗಿ॥ * * *

ಕಂ॥ ಪಳವಿಯಬಣ್ಣದಭಸಿತಮ । ನಿಳೆಯೊಳ್ದ್ವೀಪಾಂತರಾಗತಮ ನನವರತಂ॥
ತಳೆದಿರ್ಪೆಂ ನೋಡೆಂದಾ । ಗಳೆ ತನ್ನೊಡಲರಿಸಿನಮ ನವಳ್ತೋರಿಸಿದಳ್ ॥ ... ॥೧೪॥

ಶಾ॥ಕ್ಷೀರಾಂಭೋಧಿಯತೀರದೊಳ್ಜನಿಸಿ ನುಣ್ಪಿಂದಾನನಂದೋರದಾ । ಕಾರಂ ತಳ್ತಿರೆ ರಂಜಿಪೀಬಿಳಿಯರುದ್ರಾಕ್ಷಾಳಿಯಂ ತಾಳ್ದಿನೆಂ ॥ ದಾರಾಜಾನನೆ ತೋರಿಸುತ್ತೆಸೆವಮುಕ್ತಾಹಾರಮಂ ಮುಗ್ಧನಂ । ಗಾರಾಧ್ಯಂಗೆ ಶಿವಪ್ರಸಾದಕುಸುಮಂದಾಳಲ್ಕಚಾರ್ಧಂಗಳಂ॥

ಕಂ॥ ಉಳುಪಿ ನಿಮಿರ್ಚಿದಜೆಡೆಯಂ । ತಳೆದಿರ್ಪೆ ನಿದೊಂದನೀಕ್ಷಿಸೆಂದೊಲವಿಂದಂ ॥
ಕಳಭಮೃದುಯಾನೆ ನಿಜಮಂ । ಜುಳಷಟ್ಪದನೀಲವೇಣಿಯಂ ಕಾಣಿಸಿದಳ್ ॥ ॥೧೫॥

---

ಆಮನೋಜ್ಞಸುವರ್ಣಪರ್ಯಂಕಮಂ,- ಆ ಮನೋಹರವಾದ ಚಿನ್ನದ ಮಂಚವನ್ನು, ಶಂಕರಸಮರ್ಚನೋಚಿತಮಂಟಪಂ- ಶಿವನಂಪೂಜಿಸುವದಕ್ಕೆಯೋಗ್ಯವಾದ ಮಂಟಪವು, ಅಕ್ಕುಂ-ಆಗಿರಬಹುದು, ಎಂದು, ಅದು, ಏರಲೊಲ್ಲದೆ- ಹತ್ತದೆ, ತನ್ನಿಕಟದೊಳ್- ಆ ಮಂಚದ ಸಮೀಪದಲ್ಲಿ, ಪಾಸಿರ್ದ್ದ, ಮಣಿಕಂಬಳಾಸನದೊಳ್- ರತ್ನಕಂಬಳಿಯ ಆಸನದಲ್ಲಿ, ಕುಳ್ಳಿರ್ದು, ಪರಿಮಳಾಂಬುವಿಂ- ಸುಗಂಧವಿಶಿಷ್ಟವಾದ ಜಲದಿಂದ, ನಿಜಪಾದಪ್ರಕ್ಷಾಳನಂಗೆಯ್ದು-ತನ್ನ (ಮುಗ್ಧಸಂಗದೇವನ) ಪಾದಮಂತೊಳೆದು, ಪಾದೋದಕಂಬಳೆದು, ಭಕ್ತಿವೆರಸಿ, ನಿಂದಿರ್ದ್ದ, ಗಣಿಕಾಕಾಂತೆಯ, ಆನನಮಂ-ಮುಖವನ್ನು, ಅವಲೋಕನಂಗೆಯ್ದು- ನೋಡಿ. *

ಮೃಗಾಕ್ಷಿ, ಎಲೆಭಕ್ತೆ! ನಿನ್ನ, ಮೆಯ್ಯೊಳ್- ದೇಹದಲ್ಲಿ, ಸುಲಲಿತಭಸಿತಾನುಲೇಪನಂ, ಕೊರಲೊಳ್- ಕಂಠದಲ್ಲಿ, ರುದ್ರಾಕ್ಷಾವಳಿ, ಶಿರದೊಳ್, ಜಡೆ, ನೆಲಸದ- ಉಂಟಾಗಿರದ, ಬಗೆಯೇಂ- ರೀತಿಯೇನು? ಈಗಳ್, ಎನಗೆ, ಪೇಳ್. ... ... ... ... ॥೧೩॥

ಎಂಬ, ತನ್ಮುಗ್ಧೋಕ್ತಿಗೇಳ್ದು, ವಿದಗ್ಧೆ- ಪ್ರೌಢೆಯಾದಆಸೂಳೆಯು, ಅಂತಸ್ಸ್ಮಿತೆಯಾಗಿ-ಒಳಗಡೆ ಮುಗುಳ್ನಗೆಯುಳ್ಳವಳಾಗಿ. * * * * * * * * * * * * * * *

ಅವಳ್, ಇಳೆಯೊಳ್, ದ್ವೀಪಾಂತರಾಗತಮಂ-ಅನ್ಯದ್ವೀಪದಿಂದಬಂದ, ಪಳದಿಯಬಣ್ಣದ, ಭಸಿತಮಂ, ಅನವರತಂ,ತಳೆದು, ಇರ್ಪೆಂ,ನೋಡು,ಎಂದು,ಆಗಳೆ,ತನ್ನ,ಒಡಲ ಶರೀರದಲ್ಲಿರುವ,ಅರಿಸಿನಮಂ,ತೋರಿಸಿದಳ್.

ಆರಾಜಾನನೆ- ಆ ಚಂದ್ರಮುಖಿಯು, ಕ್ಷೀರಾಂಭೋಧಿಯ, ತೀರದೊಳ್, ಜನಿಸಿ, ನುಣ್ಪಿಂದೆ, ಆನನಂದೋರದ- ಮುಖವುಕಾಣದ, ಆಕಾರಂ, ತಳ್ತಿರೆ- ಹೊಂದಿರಲು, ರಂಜಿಪ, ಈಬಿಳಿಯರುದ್ರಾಕ್ಷಾಳಿಯಂ, ತಾಳ್ದಿಂ, ಎಂದು, ಮುಗ್ಧಸಂಗಾರಾಧ್ಯಂಗೆ, ಎಸೆವ, ಮುಕ್ತಾಹಾರಮಂ,ತೋರಿಸುತ್ತೆ,ಶಿವಪ್ರಸಾದಕುಸುಮಂ ದಾಳಲ್, ಕಚಾರ್ಧಂಗಳಂ- ಅರ್ಧಕೇಶಗಳನ್ನು, ಉಳುಪಿ, ನಿಮಿರ್ಚಿದ-ಮಾಡಿರುವ, ಇದೊಂದು, ಜಡೆಯಂ, ತಳೆದು,ಇರ್ಪೆಂ, ಈಕ್ಷಿಸು, ಎಂದು, ಕಳಭಮೃದುಯಾನೆ-ಮದಗಜಗಮನವುಳ್ಳಆಸ್ತ್ರೀಯು, ನಿಜಮಂಜುಳಷಟ್ಪದನೀಲವೇಣಿಯಂ- ಮನೋಹರವಾದ ಭ್ರಮರಗಳಂತೆ ಕಪ್ಪಾದ ತನ್ನ ಜಡೆಯನ್ನು, ಕಾಣಿಸಿದಳ್.

ಕಂ ॥ ಭವಿದ್ವಿಷ್ಟಪಾತ ಮೆನ್ನವ । ಯವನಿವಹಮನಂಟದಂತೆ ಸರ್ವಾಂಗಕ್ಕೊ ॥
ಪ್ಪುವಕೌಪೀನಮನಾಂತೆಂ । ವಿವರಿಪುದೆಂದುಟ್ಟ ಪಟ್ಟೆಯಂ ತೋರಿಸಿದಳ್ ॥ ॥೧೭॥

ಕಂ ॥ ಪರಮಶಿವಭಕ್ತಿಭಾಸುರ । ಗಿರಿಜಾತೆಯ ಸಾಂಪ್ರದಾಯದಿಂ ಬಂದುದು ಬಂ ॥
ಧುರಶಿವಲಾಂಛನಮಿದನಾಂ । ಧರಿಸಿರ್ದಪೆ ನೆಮ್ಮವರ್ಗಮವನೀತಳದೊಳ್ ॥ ... ॥೧೮॥

ಕಂ ॥ ಸಾರಶ್ರೀಗಿರಿಯೊಳ್ ದ್ರಾ । ಕ್ಷಾರಾಮದೊಳೆಸೆವ ಕಾಂಚಿಯೊಳ್ನೆಲಸಿರ್ಪ್ಪಂ ॥
ಗೌರೀಧೃತಶಿವಲಾಂಛನ । ಧಾರಣದಿ ನುಮೇಶನಂಘ್ರಿಯಂ ಭಜಿಯಿಸುತಂ ॥ ॥೧೯॥

ಕಂ ॥ ಎಮಗನವರತಂ ಜಂಗಮ । ನಿವಹಂ ಪ್ರಾಣ ಮವರ ಸೇವಾರತಿ ಸಂ ॥
ಭ್ರಮಮಲ್ಲದೆ ಪೆರತೊಂದು । ದ್ಯಮಮಿಲ್ಲಿದು ನನ್ನಿ ಯೆಂದವಳ್ನುಡಿಯಲೊಡಂ ॥ ॥೨೦॥

ಕಂ॥ಬಗೆಗೊಂಡು ಕೇಳ್ದು ನೋಡು । ತ್ತಗಲದೆ ಶಿವಶಿವ ವಿಚಿತ್ರಮೀಲಾಂಛನ ಮೀ॥
ಸುಗುಣೆಯ ಚರಿತ್ರ ಮೆಂದಾ । ಮುಗುದಂ ಸಾಶ್ಚರ್ಯಮುದಮ ನಾಳ್ದೆಸೆದಿರ್ದಂ ॥೨೧॥

ವ ॥ ಅಂತೆಸೆದಿರ್ದನಿತರೊಳ್ಲಿಂಗಾರ್ಚನೆಗೆಯ್ಯಲುಜ್ಜುಗಿಸಿದ ಮುಗ್ಧಸಂಗಮದೇವ ನಿಂಗಿತಮನರಿ ದಾವಂದದಿನಾದೊಡ ಮೀದೇವಂಗೆ ಸಂತಸಮ ನೊಡರ್ಚುವುದೇ ಕಜ್ಜಮೆಂ ದು ನಿರ್ಧರಿಸಿ ತತ್ಪೂಜಾನಿಯೋಗಕ್ಕೆ ಬೇಗದಿ ನಾವಾರಾಂಗನೆ ನಿಯಾಮಿಸೆ ಸಾದರಂಮಿಗೆ

---

ಭವಿದ್ವಿಷ್ಟಪಾತಂ- ಲಿಂಗಹೀನರ ನೋಟವು, ಎನ್ನ, ಅವಯವನಿವಹಮಂ, ಅಂಟದಂತೆ, ಸರ್ವಾಂಗ
ಕ್ಕೆ, ಒಪ್ಪಿದ, ಕೌಪೀನವಂ, ಆಂತೆಂ, ವಿವರಿಪುದು-ಪರಿಶೀಲನೆಮಾಡಬಹುದು, ಎಂದು,ಉಟ್ಟ, ಪಟ್ಟೆಯಂ-
॥೧೭॥
ಪಟ್ಟೆಯಸೀರೆಯನ್ನು, ತೋರಿಸಿದಳ್. ... ... ... ...
ಪರಮಶಿವಭಕ್ತಿಭಾಸುರಗಿರಿಜಾತೆಯ, ಸಾಂಪ್ರದಾಯದಿಂ- ಬಹುಕಾಲದಿಂ ಬಂದನಡತೆಯಿಂದ, ಬಂದು
ದು, ಬಂಧುರಶಿವಲಾಂಛನಂ, ಇದಂ,ಆಂ, ಧರಿಸಿ, ಇರ್ದಪೆಂ, ಎಮ್ಮ, ವರ್ಗಂ-ಸಮೂಹವು, ಅವನೀತಳದೊಳ್.
ಸಾರಶ್ರೀಗಿರಿಯೊಳ್- ಶ್ರೇಷ್ಠವಾದಶ್ರೀಶೈಲದಲ್ಲಿ, ದ್ರಾಕ್ಷಾರಾಮದೊಳ್, ಎಸೆವ, ಕಾಂಚಿಯೊಳ್,
ಗೌರೀಧೃತಶಿವಲಾಂಛನಧಾರಣದಿಂ-ಪಾರ್ವತಿಯಿಂದ ಧರಿಸಲ್ಪಟ್ಟ ಶಿವಲಾಂಛನಗಳಧಾರಣೆಯಿಂದ, ಉಮೇ
॥೧೯॥
ಶನ, ಅಂಘ್ರಿಯಂ, ಭಜಿಯಿಸುತಂ, ನೆಲಸಿ, ವಾಸಮಾಡಿಕೊಂಡು, ಇರ್ಪ್ಪಂ. ...
ಎಮಗೆ, ಅನವರತಂ, ಜಂಗಮನಿವಹಂ, ಪ್ರಾಣಂ, ಅವರ, ಸೇವಾರತಿಸಂಭ್ರಮಂ ಅಲ್ಲದೆ- ಸೇವೆಯ
ಆಸಕ್ತಿಯಿಂದುಂಟಾದ ಸಡಗರವಲ್ಲದೆ, ಪೆರತೊಂದು- ಮತ್ತೊಂದು, ಉದ್ಯಮಂ- ಉದ್ಯೋಗವು, ಇಲ್ಲ, ಇ
॥೨೦॥
ದು, ನನ್ನಿ- ನಿಶ್ಚಯ; ಕೇಳ್, ಎಂದು, ಅವಳ್, ನುಡಿಯಲ್, ಒಡಂ- ಕೂಡಲೇ. ...
ಮುಗುದಂ- ಮುಗ್ಧನು, ಬಗೆಗೊಂಡು- ಮನಃಪೂರ್ವಕವಾಗಿ, ಕೇಳ್ದು, ಅಗಲದೆ- ಚಿತ್ತವನ್ನೆಳೆವಿಡ
ದೆ, ನೋಡುತ್ತ, ಶಿವಶಿವ! ಈ ಲಾಂಛನಂ- ಚಿಹ್ನವು, ಈಸುಗುಣೆಯ, ಚರಿತ್ರಂ, ಚಿತ್ರಂ- ಆಶ್ಚರ್ಯಕರವಾದ
ದ್ದು; ಎಂದು, ಸಾಶ್ಚರ್ಯಂ-ಅಚ್ಚರಿಯಿಂ ಕೂಡಿದವನಾಗಿ,ಮುದಮಂ-ಸಂತೋಷವನ್ನು, ಆಳ್ದು,ಎಸೆದಿರ್ದಂ
ಅಂತು, ಎಸೆದು, ಇರ್ದ್ದ, ಅನಿತರೊಳ್- ಅಷ್ಟರಲ್ಲಿ, ಲಿಂಗಾರ್ಚನೆಗೆಯ್ಯಲ್, ಉಜ್ಜುಗಿಸಿದ, ಮುಗ್ಧ
ಸಂಗಮದೇವನ, ಇಂಗಿತಮಂ- ಮನೋಭಿಪ್ರಾಯವನ್ನು, ಅರಿದು- ತಿಳಿದು, ಆವಂದದಿಂ ಆದೊಡಂ-ಯಾವ
ರೀತಿಯಿಂದಲಾದರೂ, ಈದೇವಂಗೆ, ಸಂತಸಮಂ, ಒಡರ್ಚುವುದೆ- ಉಂಟುಮಾಡುವದೇ, ಕಜ್ಜಂ- ಕಾರ್ಯವು,
ಎಂದು, ನಿರ್ಧರಿಸಿ, ತತ್ಪೂಜಾನಿಯೋಗಕ್ಕೆ- ಆ ಮುಗ್ಧದೇವನ ಶಿವಪೂಜೆಯ ಸೇವೆಗೋಸುಗ, ಬೇಗದಿಂ,ಆ
ವಾರಾಂಗನೆ, ನಿಯಾಮಿಸೆ, ಸಾದರಂ, ಮಿಗೆ, ಸಂಭ್ರಮಿಸಿ, ಮೃಗಮದಾಮೋದೆ, ಎಂಬವಳ್, ಭೂಕಾಂತೆ
ಗೆ, ಅನುಲೇಪನಂಗೊಳಿಪಂತೆ, ಸುರಭಿಜಳಮಿಳಿತಗೋಮಯಾನುಲೇಪನಂಗೆಯ್ದು- ಪರಿಮಳವಿಶಿಷ್ಟವಾದ

ಸಂಭ್ರಮಿಸಿ ಮೃಗಮದಾಮೋದೆ ಯೆಂಬವಳ್ ಭೂಕಾಂತೆಗನುಲೇಪನಂಗೊಳಿಪಂತೆ ಸುರಭಿಜಳಮಿಳಿತಗೋಮಯಾನುಲೇಪನಂಗೆಯ್ದು ಚೌಕಮಂ ರಚಿಯಿಸೆಯುಂ ಶಶಿಲೇಖೆಯೆಂಬವಳ್ಮಹೀಲತೆಪೂತುದೆನಿಸಿ ಮೌಕ್ತಿಕಚೂರ್ಣದಿಂ ವಿವಿಧಕುಸುಮಾಕೃತಿಕಲಿತರಂಗವಲ್ಲಿಯನೊಡರ್ಚೆಯುಂ ತರಂಗಿಣಿಯೆಂಬವಳ್ಮುಗ್ಧದೇವಾಂಗೆ ಧರಾವಧುಭಕ್ತಿಯಿಂ ಕಳಶಂಬೊತ್ತಳೆನಿಸಿ ಸುರಭಿಶೀತಳಮಧುರವಾರಿಪೂರಿತಕನಕಕಲಶಮನಮರ್ಚೆಯುಂ ಗೌರಿಯೆಂಬವಳ್ರವಿಬಿಂಬಮನಧಃಕರಿಪಕಾಂತಿಮಯಕನಕಚಷಕಸಂದೋಹಮಂ ಪೊಂಬರಿಯಾಣದೊಳಿಂಬುಗೊಳಿಸೆಯುಂ ವಸಂತಲತೆಯೆಂಬವಳ್ ದರದಳಿತಕಮಳಕುಮುದಕಲ್ಹಾರಬಕವಕುಳತಿಲಕಕಿಂಶುಕಮಲ್ಲಿಕಾಚಂಪಕಾದಿಕುಸುಮಬಿಲ್ವಾದಿಪಲ್ಲವಪ್ರತಾನಮಂ ಸರಗೊಳಿಸಿ ಕರಂಡಕಂದೀವಿಪಿಡಿದು ನಿಂದಿರೆಯುಂ ಕಾಶ್ಮೀರಮಂಜರಿಯೆಂಬವಳ್ ವಿಮಳಹಿಮಕಾಶ್ಮೀರಮಲಯಜಂಗಳಿಂ ಘುಟ್ಟಮಗುಳ್ಚಿದಘುಟ್ಟಿಯಂ ಶುಕ್ತಿಯೊಳಿರಿಸಿ ಕೆಲದೊಳಿಡೆಯುಂ ನಕ್ಷತ್ರಮಾಲೆಯೆಂಬವಳ್ ಧವಳಾಕ್ಷತಂಗಳಂ ಪರಿಸರದೊಳಿರಿಸೆಯುಂ ಜ್ಯೋತಿಷ್ಮತಿಯೆಂಬವಳ್ಪೇರುರಿಯಾರತಿಯನೋರಂತೆಪಿಡಿದು ಬೆಳಗೆಯುಂ ಸುರಭಿಯೆಂಬವಳ್ಸುಗಂಧಧೂಪಮಂ ಪರಪೆಯುಂ ಚೋಳಿಕಾದೇವಿ

---

ನೀರಿನಿಂದಕೂಡಿದ ಹಸುವಿನಸಗಣದಿಂದ ಸಾರಿಸಿ, ಚೌಕಮಂ, ರಚಿಯಿಸೆಯುಂ; ಶಶಿಲೇಖೆ, ಎಂಬವಳ್, ಮಹೀಲತೆ- ಭೂಮಿಯೆಂಬ ಬಳ್ಳಿಯು, ಪೂತುದು- ಹೂವನ್ನು ಬಿಟ್ಟಿತು, ಎನಿಸಿ, ಮೌಕ್ತಿಕಚೂರ್ಣದಿಂ- ಮುತ್ತಿನಹುಡಿಯಿಂದ, ವಿವಿಧಕುಸುಮಾಕೃತಿಕಲಿತರಂಗವಲ್ಲಿಯಂ- ನಾನಾವಿಧಗಳಾದ ಹೂವುಗಳ ಆಕಾರದಂತಿರುವ ಆಕಾರವಿಂದ ಕೂಡಿದ ರಂಗವಲ್ಲಿಯನ್ನು, ಒಡರ್ಚೆಯುಂ; ತರಂಗಿಣಿ, ಎಂಬವಳ್, ಮುಗ್ಧದೇವಾಂಗೆ, ಧರಾವಧು- ಭೂಕಾಂತೆಯು, ಭಕ್ತಿಯಿಂ, ಕಳಶಂಬೊತ್ತಳ್- ಕಳಶವನ್ನು ಹೊತ್ತುನಿಂತಿರುವಳು, ಎನಿಸಿ, ಸುರಭಿಶೀತಳಮಧುರವಾರಿಪೂರಿತಕನಕಕಲಶಮಂ- ಪರಿಮಳವಿಶಿಷ್ಟವಾಗಿಯೂ ತಂಪಾಗಿಯೂ ಸೀಯಾಗಿಯೂ ಇರುವ ನೀರಿನಿಂದ ತುಂಬಿದ ಚಿನ್ನದ ಕೊಡಗಳನ್ನು, ಅಮರ್ಚೆಯುಂ; ಗೌರಿ, ಎಂಬವಳ್, ರವಿಬಿಂಬಮಂ- ಸೂರ್ಯಮಂಡಳವನ್ನು, ಅಧಃಕರಿಪ- ತಿರಸ್ಕರಿಸುವ, ಕಾಂತಿಮಯ- ತೇಜೋರೂಪವಾದ, ಕನಕಚಷಕಸಂದೋಹಮಂ- ಚಿನ್ನದಪಾನಪಾತ್ರೆಗಳ ಸಮೂಹವನ್ನು, ಪೊಂಬರಿಯಾಣದೊಳ್- ಚಿನ್ನದ ಭೋಜನಪಾತ್ರದಲ್ಲಿ, ಇಂಬುಗೊಳಿಸಿಯುಂ- ಇರಿಸಿಯೂ; ವಸಂತಲತೆ, ಎಂಬವಳ್, ದರ......ಪ್ರತಾನಮಂ—ದರ- ಸ್ವಲ್ಪವಾಗಿ, ದಳಿತ- ಅರಳಿದ, ಕಮಳ, ಕುಮುದ- ನೈದಿಲೆ, ಕಲ್ಹಾರ-ಸುಗಂಧಿಕಮಲ, ಬಕ, ವಕುಳ- ಪಗಡೆ, ತಿಲಕ- ಕ್ಷುರಕ, ಕಿಂಶುಕ- ಮುತ್ತುಗ, ಮಲ್ಲಿಕಾ, ಚಂಪಕ, ಇವುಗಳೇ, ಆದಿ- ಮೊದಲಾದ, ಕುಸುಮ- ಹೂವುಗಳ, ಬಿಲ್ವಾದಿಪಲ್ಲವ-ಬಿಲ್ವಮುಂತಾದ ಚಿಗುರುಗಳ, ಪ್ರತಾನಮಂ, ಸರಗೊಳಿಸಿ, ಕರಂಡಕಂದೀವಿ- ಹೂವಿನಪುಟ್ಟಿಯಲ್ಲಿತುಂಬಿ, ಪಿಡಿದು, ನಿಂದಿರೆಯುಂ; ಕಾಶ್ಮೀರಮಂಜರಿ, ಎಂಬವಳ್, ವಿಮಳಹಿಮಕಾಶ್ಮೀರಮಲಯಜಂಗಳಿಂ— ವಿಮಳ- ನಿರ್ಮಲವಾದ, ಹಿಮ-ಪಚ್ಚಕರ್ಪೂರ, ಕಾಶ್ಮೀರ-ಕುಂಕುಮಕೇಸರಿ, ಮಲಯಜಂಗಳಿಂ- ಶ್ರೀಗಂಧ ಇವುಗಳಿಂದ, ಘುಟ್ಟಮಗುಳ್ಚಿದ- ಗಟ್ಟಿಯಂಮಾಡಿದ, ಘುಟ್ಟಿಯಂ- ಬಿಲ್ಲೆಯನ್ನು, ಶುಕ್ತಿಯೊಳ್-ಮುತ್ತಿನಚಿಪ್ಪಿನಲ್ಲಿ, ಇರಿಸಿ, ಕೆಲದೊಳ್-ಒಂದುಪಕ್ಕದಲ್ಲಿ ಇಡೆಯುಂ; ನಕ್ಷತ್ರಮಾಲೆ, ಎಂಬವಳ್, ಧವಳಾಕ್ಷತಂಗಳಂ, ಪರಿಸರದೊಳ್- ಸಮೀಪದಲ್ಲಿ, ಇರಿಸೆಯುಂ; ಜ್ಯೋತಿಷ್ಮತಿ, ಎಂಬವಳ್, ಪೇರುರಿಯ- ಅಧಿಕವಾಗಿಜ್ವಾಲೆಯುಳ್ಳ, ಆರತಿಯಂ-ಓರಂತೆ-ಚೆನ್ನಾಗಿ, ಪಿಡಿದು, ಬೆಳಗೆಯುಂ; ಸುರಭಿ, ಎಂಬವಳ್, ಸುಗಂಧಧೂಪಮಂ, ಪರಪೆಯುಂ- ಹರಡಲು; ಚೋಳಿಕಾದೇವಿ, ಎಂಬವಳ್, ಮಧುರತರೋಪಹಾರಮಂ- ಅತಿ ಸೀಯಾದ ಆಹಾರಗಳನ್ನು, ನೆಗಳ್ಚಿ- ಮಾಡಿ, ಗಪಕಿಸೆಯುಂ- ಗುಂಪುಕೂಡಿಸಲು, ಕಲಾಮುಖಿ, ಎಂಬವಳ್,

ಯೆಂಬವಳ್ಮಧುರತರೋಪಹಾರಮಂನೆಗಳ್ಚುಗಡಣಿಸೆಯುಂ ಕಲಾವಮಾಲಿನಿಯೆಂಬವಳ್ಕರ್ಪೂರತಾಂಬೂಲಮಂಸಮರ್ಪಿಸೆಯುಂ ಭಾನುಮತಿಯೆಂಬವಳ್ಸಾರನೀರಾಜನಮನೆತ್ತಿವಿರಾಜಿಸೆಯುಂ ಸಂಗೀತಮಂಗಲೆಯೆಂಬವಳ್ಸಂಗೀತಮಂಪಾಡೆಯುಂ ತಾಳವಿದ್ಯಾಧರಿಯೆಂಬವಳ್ ತಾಳಮನೊತ್ತೆಯುಂ ಚಮತ್ಕಾರಿಣಿಯೆಂಬವಳ್ ಮೃದಂಗಮಂಬಾಜಿಸೆಯುಂ ಭರತಭಾರತಿಯೆಂಬವಳ್ನವೀನಮೆನಿಸಿನರ್ತಿಸೆಯುಮಾಪಣಾಂಗನೆಪರಮಭಕ್ತಿಯಿಂ ವಿವಿಧೋಪಚಾರಮಂನಿಮಿರ್ಚೆಯುಮನುಪಮಾನಂದರಸನಿಮಗ್ನಮಾನಸಂ ಮುಗ್ಧದೇವಂ ಶಿವಲಿಂಗಪೂಜೆಯಂ ನೆಗಳುತ್ತಮಿರೆಯಿರೆ ॥ * * * * * * * * * * * *

ಸ್ರ ॥ ಕೂಜತ್ಕಾದಂಬಚಕ್ರಪ್ರಮುಖವಿರವನಿರ್ಭಿನ್ನದ್ರಕಂಜಾತಪುಂಜ | ಭ್ರಾಜದ್ಗಂಧಾನುಬಂಧಂ ರತಿರಮಣರಣಶ್ರಾಂತಕಾಂತಾಕದಂಬೋ ॥ ರೋಜಶ್ರೀಖಂಡಮಿಶ್ರಶ್ರಮಜಲಕಣಿಕಾಹಾರಚೋರಂ ಪಣಸ್ತ್ರೀ | ರಾಜದ್ಧಮ್ಮಿಲ್ಲಮಾಲಾಸ್ಖಲಿತಗತಿಯುತಂ ಮಾರುತಂ ತೀಡಿತಾಗಳ್ ॥ ... ... ... ... ॥೨೦॥

ಕಂ॥ ಸರ್ವಸ್ವಾಪಹರಂ ರವಿ । ಪೂರ್ವಾಶೆಯೊಳ್ಬಿದಿ ರಾಜವಸುದೆಗೆದವನೆಂ ॥ ದುರ್ವಿ

---

ರ್ಪೂರತಾಂಬೂಲಮಂ- ಪಚ್ಚಕರ್ಪೂರದಿಂಕೂಡಿದ ತಾಂಬೂಲವನ್ನು, ಸಮರ್ಪಿಸೆಯುಂ; ಭಾನುಮತಿ,ಎಂಬವಳ್, ಸಾರನೀರಾಜನಮಂ- ಶ್ರೇಷ್ಠವಾದ ಆರತಿಯನ್ನು, ಎತ್ತಿ, ವಿರಾಜಿಸೆಯುಂ; ಸಂಗೀತಮಂಗಲೆ ಎಂಬವಳ್, ಸಂಗೀತಮಂ, ಪಾಡೆಯುಂ; ತಾಳವಿದ್ಯಾಧರಿ, ಎಂಬವಳ್, ತಾಳಮಂ, ಒತ್ತೆಯುಂ; ಚಮತ್ಕಾರಿಣಿ, ಎಂಬವಳ್, ಮೃದಂಗಮಂ- ಮದ್ದಲೆಯನ್ನು, ಬಾಜಿಸೆಯುಂ; ಭರತಭಾರತಿ, ಎಂಬವಳ್, ನವೀನಮ್ಎನಿಸಿ, ನರ್ತಿಸೆಯುಂ; ಆಪಣಾಂಗನೆ-ಆಸೂಳೆಯು,ಪರಮಭಕ್ತಿಯಿಂ, ವಿವಿಧೋಪಚಾರಮಂ,ನಿಮಿರ್ಚೆಯುಂ- ನೆರವೇರಿಸಲು, ಅನುಪಮಾನಂದರಸನಿಮಗ್ನಮಾನಸಂ- ಅಸದೃಶವಾದ ಸಂತೋಷವೆಂಬ ಜಲದಲ್ಲಿ ಮುಳುಗಿದಮನಸ್ಸುಳ್ಳ, ಮುಗ್ಧದೇವಂ, ಶಿವಲಿಂಗಪೂಜೆಯಂ, ನೆಗಳುತ್ತಂ-ಮಾಡುತ್ತ, ಇರೆಯಿರೆ. * * *

ಕೂಜತ್...........ಬಂಧಂ— ಕೂಜತ್- ಕೂಗುತ್ತಿರುವ, ಕಾದಂಬ- ಅವ್ಯಕ್ತಮಧುರಸ್ವರವುಳ್ಳ ಹಂಸ, ಚಕ್ರ, ಇವುಗಳೇ, ಪ್ರಮುಖ- ಮೊದಲಾದ, ವಿ- ಪಕ್ಷಿಗಳ, ರವ- ಶಬ್ದದಿಂದ, ನಿರ್ಭಿದ್ರ- ಹೋದ ನಿದ್ರೆಯುಳ್ಳ, (ವಿಕಸಿತಗಳಾದ) ಕಂಜಾತ- ಕಮಲಗಳ, ಪುಂಜ- ಸಮೂಹದ, ಭ್ರಾಜತ್-ಪ್ರಕಾಶಿಸುವ, ಗಂಧ- ಪರಿಮಳದ, ಅನುಬಂಧಂ- ಸಂಬಂಧವುಳ್ಳ, ರತಿ......ಚೋರಂ— ರತಿರಮಣರಣ- ಮದನಯುದ್ಧದಿಂದ, ಶ್ರಾಂತ- ಬಳಲಿದ, ಕಾಂತಾ- ಸ್ತ್ರೀಯರ, ಕದಂಬ- ಸಮೂಹದ, ಉರೋಜ- ಸ್ತನಗಳಲ್ಲಿರುವ, ಶ್ರೀಖಂಡ- ಶ್ರೀಗಂಧದಿಂದ, ಮಿಶ್ರ- ಕೂಡಿದ, ಶ್ರಮಜಲ- ಸ್ವೇದೋದಕದ, ಕಣಿಕಾ- ಹನಿಗಳೆಂಬ,ಹಾರ- ಮುಕ್ತಾಹಾರಕ್ಕೆ, ಚೋರಂ- ಕಳ್ಳನಾದ,ಪಣಸ್ತ್ರೀರಾಜದ್ಧಮ್ಮಿಲ್ಲಮಾಲಾಸ್ಖಲಿತಗತಿಯುತಂ— ಪಣಸ್ತ್ರೀ- ಸೂಳೆಯರ, ರಾಜತ್- ಪ್ರಕಾಶಿಸುವ, ಧಮ್ಮಿಲ್ಲ- ಮುಡಿಯಲ್ಲಿರುವ, ಮಾಲಾ- ಪುಷ್ಪಮಾಲಿಕೆಯಿಂದ, (ಅಥವಾ ಪಜ್ತಿಯಿಂದ) ಸ್ಖಲಿತ- ಜಾರಿದ, ಗತಿ- ಗಮನದಿಂದ, ಯುತಂ- ಕೂಡಿದ,ಮಾರುತಂ- ವಾಯುವು, ಆಗಳ್, ತೀಡಿತು- ಬೀಸಿತು. ... ... ... ... ... ॥೨೦॥

ಸರ್ವಸ್ವಾಪಹರಂ— ಸರ್ವಸ್ವ- ಸಕಲಸ್ವತ್ತನ್ನು, ಅಪಹರಂ- ಅಪಹರಿಸುವ, (ಸರ್ವ- ಸಕಲರ,ಸ್ವಾಪ- ನಿನಿದ್ರೆಯನ್ನು, ಹರಂ- ನಾಶಪಡಿಸುವ) ರವಿ- ಸೂರ್ಯನು, ಪೂರ್ವಾಶೆಯೊಳ್- ಪೂರ್ವದಿಕ್ಕಿನಲ್ಲಿ, ಐದಿ- ಬಂದು, ರಾಜವಸುದೆಗೆದಪಂ- ದೊರೆಯ ದ್ರವ್ಯವನ್ನು ತೆಗೆದುಕೊಳ್ಳುವನು, (ಚಂದ್ರನ ಕಿರಣಮಂ ಬಿಡಿಸುವನು) ಎಂದು- ಉರ್ವಿಗೆ- ಭೂಮಿಗೆ, ಕೂಗಿಟ್ಟಪುದು- ಕೂಗಿಹೇಳುವದು; ಎನೆ, ಕೊರ್ವಿದ-ಕೊಬ್ಬಿದ, ಕುಕ್ಕು

ಗೆ ಕೂಗಿಟ್ಟಪ್ಪುದೆನೆ । ಕೊರ್ವಿದ ಕುಕ್ಕುಟನಿಕಾಯ ಮೇಂಕೂಗಿದುದೋ ॥ ॥೨೩॥

ಚಂ ॥ ಬಿರಿವ ಸರೋರುಹಂ ಮುಗಿವಕೈರವಪಙ್ಕ್ತಿ ಕುಕಿಲ್ವಪಕ್ಕಿ ಗಾ । ವರಿಪ ಮದಾಳಿ ಯಂಕುರಿಪಮೆಲ್ಲೆಲ ರೊಂದುವಜೋಡುವಕ್ಕಿ ಮೈ ॥ ಗರೆವುಡುರಾಜಿ ರಂಜಿಸು ವಸಂಜೆ ಯಡಂಗುವ ಜೊನ್ನದೇಳ್ಗೆ ಕಾ । ತರಿಪಚಕೋರ ಮುರ್ಬ್ಬಳಿವಸಾಗರ ಮೊಪ್ಪುವಸುಪ್ರಭಾತದೊಳ್ ॥ ... ... ... ... ॥೨೪॥

ಚಂ ॥ ಅಳಿಶಿಶುಗಬ್ಜಕೋರಕಪಯೋಧರಮಂ ಪಡೆದಿತ್ತು ಪದ್ಮತಂ । ಡುಳಮನ ಕೊಟ್ಟು ವೀಚಿಭುಜದಿಂದೆಳೆಯಂಚೆಯ ನಟ್ಟ ಪದ್ಮಿನೀ ॥ ದಳಮೆನಿಪ್ಪೊಂದು ತೊಟ್ಟಿಲೊಳೆಪಟ್ಟಿರಿಸುತ್ತೆ ರಥಾಂಗಶಾಬಮಂ । ಗಳಿಲನೆತೂಗುತಂ ಸರಸಿ ಪೋಲ್ತುಳನೇಕಸುತೋಪಯುಕ್ತೆಯಂ ॥ ... .. ... ... ॥೨೫॥

ಕಂ॥ ಉದಯಗಿರಿಶೃಂಗದಂಡಾ । ಗ್ರದೊಳೆತ್ತಿದ ದಿವಸರಮೆಯ ರುಚಿಮಯಮಾ ॥ ಣಿಕ್ಯದ ಸತ್ತಿಗೆಯೆನಿಸಿದುದು । ರ್ವಿದಕೆಂಬೆಳಗಡರ್ದುತೋರ್ಪ ದಿನಮಣಿಬಿಂಬಂ ॥೨೬॥

ಮತ್ತೇ ॥ ಶ್ರುತಿನಾದಂ ಚರಣಾಯುಧಧ್ವನಿ ಶಿವಾಗಾರಾಳಿತೂರ್ಯಸ್ವನಂ । ತತತೂರ್ಯಸ್ವನ ಮಿಂದುಸಿಂಧುಜಲಮಗ್ನಂ ನಾಳಿಕಾಪಾತ್ರಮು ॥ ದ್ಗತಭೃಂಗೀರುತಿ ಶೋಭನಂ ನೆ

---

ನಿಕಾಯಂ- ಕೋಳಿಗಳ ಸಮೂಹವು, ಏಂಕೂಗಿದುದೋ. ... ... ... ॥೨೩॥

ಬಿರಿವ- ಅರಳುವ, ಸರೋರುಹಂ- ಕಮಲ, ಮುಗಿವ- ಮೊಗ್ಗಾಗುವ, ಕೈರವಪಙ್ಕ್ತಿ- ಬಿಳಿಯನೈದಿಲೆಗಳಸಾಲೂ, ಕುಕಿಲ್ವ- ಶಬ್ದಮಂ ಮಾಡುವ, ಪಕ್ಕಿ, ಗಾವರಿಪ- ಧ್ವನಿಮಾಡುವ, ಮದಾಳಿ- ಮದಿಸಿದಭ್ರಮರ, ಅಂಕುರಿಪ- ತಲೆದೋರುವ, ಮೆಲ್ಲೆಲರ್- ಮಂದಮಾರುತ,ಒಂದುವ- ಕೂಡುವ, ಜೋಡುವಕ್ಕಿ- ಚಕ್ರವಾಕಪಕ್ಷಿ, ಮೈಗರೆವ- ಅಡಗುವ, ಉಡುರಾಜಿ- ನಕ್ಷತ್ರಪಙ್ಕ್ತಿ, ರಂಜಿಸುವ, ಸಂಜೆ- ಸಂಧ್ಯಾಕಾಲ, ಅಡಂಗುವ, ಜೊನ್ನದ- ಬೆಳ್ದಿಂಗಳ, ಏಳ್ಗೆ- ಆಧಿಕ್ಯ, ಕಾತರಿಪ- ಭಯಪಡುವ, ಚಕೋರಂ, ಉರ್ಬ್ಬಳಿವ- ಹೆಚ್ಚಿದ್ದ ನೀರಿಳಿಯುತ್ತಿರುವ, ಸಾಗರಂ- ಸಮುದ್ರವು, ಒಪ್ಪುವ, ಸುಪ್ರಭಾತದೊಳ್- ಸವಿಶೇಷವಾದ ಪ್ರಾತಃಕಾಲದಲ್ಲಿ. ... ... ... ... ... ॥೨೪॥

ಸರಸಿ- ಕೊಳವೆಂಬ ಸ್ತ್ರೀಯು, ಅಳಿಶಿಶುಗೆ- ಭ್ರಮರವೆಂಬ ಅರ್ಭಕನಿಗೆ, ಅಬ್ಜಕೋರಕಪಯೋಧರಮಂ- ಕಮಲದ ಮೊಗ್ಗೆಂಬ ಸ್ತನವನ್ನು, ಪಡೆದು- ಪ್ರೀತಿಸಿ, ಇತ್ತು, ಪದ್ಮತಂಡುಳಮನೆ- ಕಮಲದಕ್ಕಿಯನ್ನು, ಕೊಟ್ಟು, ವೀಚಿಭುಜದಿಂದೆ- ತೆರೆಯೆಂಬ ತೋಳನಿಂದ, ಎಳೆಯಂಚೆಯಂ- ಬಾಲಹಂಸಪಕ್ಷಿಯನ್ನು, ಅಟ್ಟ, ರಥಾಂಗಶಾಬಮಂ- ಚಕ್ರವಾಕಪಕ್ಷಿಯ ಮರಿಯನ್ನು, ಪದ್ಮಿನೀದಳಂ- ಕಮಲದೆಲೆಯೆಂಬ, ಒಂದು ತೊಟ್ಟಿಲೊಳೆ, ಪಟ್ಟಿರಿಸುತ್ತೆ- ಮಲಗಿಸುತ್ತ, ಗಳಿಲನೆ- ಶೀಘ್ರವಾಗಿ, ತೂಗುತಂ, ಅನೇಕಸುತೋಪಯುಕ್ತೆಯಂ- ಬಹಳ ಮಂದಿ ಪುತ್ರರಿಂ ಕೂಡಿರುವ ಸ್ತ್ರೀಯನ್ನು, ಪೋಲ್ತಳ್. ... ... ॥೨೫॥

ಉರ್ವಿದ- ಹೆಚ್ಚಿದ, ಕೆಂಬೆಳಗು- ಕೆಂಪುಕಾಂತಿಯು, ಅಡರ್ದು,ತೋರ್ಪ, ದಿನಮಣಿಬಿಂಬಂ- ಸೂರ್ಯಮಂಡಲವು, ಉದಯಗಿರಿದಂಡಾಗ್ರದೊಳ್- ಉದಯಪರ್ವತವೆಂಬ ದೊಣ್ಣೆಯಮೇಲೆ, ಎತ್ತಿದ, ದಿವಸರಮೆಯ- ದಿನಲಕ್ಷ್ಮಿಯ, ರುಚಿಮಯಮಾಣಿಕ್ಯದ- ಕಾಂತಿವಿಕಾರವಾದ ರತ್ನದ, ಸತ್ತಿಗೆ- ಛತ್ರವು, ಎನಿಸಿದುದು.

ಚರಣಾಯುಧಧ್ವನಿ- ಕೋಳಿಗಳ ಕೂಗು, ಶ್ರುತಿನಾದಂ- ವೇದಘೋಷವು; ಶಿವಾಗಾರಾಳಿತೂರ್ಯಸ್ವನಂ- ಶಿವದೇವಸ್ಥಾನಗಳಲ್ಲಿ ಮಾಡುವ ವಾದ್ಯಧ್ವನಿಯು,ತತತೂರ್ಯಸ್ವನಂ- ವಿಸ್ತಾರವಾದ ವಾದ್ಯಧ್ವನಿಯು; ಸಿಂಧುಜಲಮಗ್ನಂ- ಸಮುದ್ರದನೀರಿನಲ್ಲಿ ಮುಳುಗಿದ, ಇಂದು- ಚಂದ್ರನು, ನಾಳಿಕಾಪಾತ್ರಂ- ಮೆಟ್ಟಕ್ಕಿ

ರೆಯೆ ತಾಂ ಕೈಗೂಡಿದ ಳ್ಪದ್ಮಿನೀ । ಸತಿ ಸಂಧ್ಯಾರುಚಿ ಜಾರೆ ಕಾಂಡಪಟದಂತಾರಾಗವಾರ್ತಂಡನೊಳ್ ॥ ... ... ... ... ॥೨೩॥

ಕಂ॥ ಹರಿಣಾಂಕಂ ತೆಗೆದೋಡು । ತ್ತಿರೆ ಪಶ್ಚಿಮಗಿರಿಯಮರೆಗೆ ಗಗನಾಟವಿಯೊಳ್ ॥ ನೆರೆಮಡುಗಳನಿಟ್ಟೊರಸುತೆ । ಪರೆದುವು ಬೆಯದರ್ಕ್ಕಳಂತಿರರ್ಕ್ಕಕರಂಗಳ್ ॥ ॥೨೪

ವ ॥ ಆಗಳ್ಮುಗ್ಧಸಂಗಮದೇವ ನುಷಃಕಾಲಶಿವಪೂಜಾಸಮಾಪ್ತ್ಯನಂತರ ಮಲ್ಲಿಂ ದೆಳ್ದು ಬಸವನೆಡೆಗೆಳ್ತಂದು ತನ್ನಿಂ ಮಾನಿತಂ । ಸಂಭ್ರಮಂ ಮಿಗೆ ಗಣಸಮುದಯಕ್ಕೆ ನಗೆಯಂಪಸರಿಸಿ ॥ * * * * * * * * * * * * * * * * *

ಮತ್ತೇ ೧ ॥ ಅವನೇನೇಳ್ವುದೊ ಸೂಳೆಗೆಯ್ತದೆ ಪೊದಳ್ದಾನಂದದೊಂದಂದಮಂ ಮದನಾರಾತಿಯೆ ಬಲ್ಲನೆನ್ನೊಡನೆ ನೀನೈತಂದುದಿಲ್ಲಯ್ಯ ತ ॥ ಳ್ವದೆನೀಂ ಬಂದೊಡೆ ತತ್ಸುಖಂ ನಿನಗಮಕ್ಕುಂ ನಿನ್ನನಾವೇಳೆಯೊ । ಳ್ವದಪಿಂದಾಂ ನೆನೆದೆಂ ವೃಷೇಂದ್ರಗಣಿಕಾಸದ್ಭಕ್ತಿಯತ್ಯದ್ಭುತಂ ॥ ... ... ... ... ॥೨೫॥

ಚಂ ॥ ಪಳದಿಯಬಣ್ಣದುಜ್ಜ್ವಲವಿಭೂತಿಯಲಿಪ್ತಿ ಸುಧಾಬ್ಧಿತೀರದೊಳ್ । ಬಳೆದಮರ್ದಂಗದಿಂದೊಗೆದ ನೂತ್ನಶಿವಾಕ್ಷಿಯಮಾಲೆ ದೀರ್ಘಕುಂ ॥ ತಳಕೃತಮಾದುದೊಂದೆ

---

ಯಃಕುಕ್ಕೆಉನ್ನತಭೃಂಗೀರುತಿ- ಅಧಿಕವಾದ ಜೇನ್ನೊಣದುಂಬಿಗಳ ಶಬ್ದವು, ಶೋಭನಂ- ಶೋಭನದ ಹಾಡುಗಳು;ನೆರೆಯೆ- ಕೂಡಲು, ಸಂಧ್ಯಾರುಚಿ- ಸಂಜೆಯಕೆಂಪು, ಕಾಂಡಪಟದಂತೆ- ತೆರೆಯ ಬಟ್ಟೆಯಂತೆ, ಜಾರೆ, ಪದ್ಮಿನೀಸತಿ- ಕಮಲಲತೆಯೆಂಬ ಸ್ತ್ರೀಯು, ತಾಂ,ಆರಾಗವಾರ್ತಂಡನೊಳ್- ವಿಶೇಷವಾದ ಅನುರಾಗದಿಂ ಕೂಡಿದ, (ಅರುಣ್ಯದಿಂಕೂಡಿದ) ಸೂರ್ಯನೊಡನೆ, ಕೈಗೂಡಿದಳ್- ಪಾಣಿಗ್ರಹಣವಂ ಮಾಡಿದಳು. ॥೨೩॥

ಹರಿಣಾಂಕಂ- ಚಂದ್ರನು, ಪಶ್ಚಿಮಗಿರಿಯ, ಮರೆಗೆ,ತೆಗೆದು- ನಿಲ್ಲದೆ,ಓಡುತ್ತಿರೆ;ಅರ್ಕಕರಂಗಳ್- ಸೂರ್ಯನ ಕಿರಣಗಳು, ಬೆಯದರ್ಕ್ಕಳಂತಿರೆ- ಬೇಡರಂತೆ, ಗಗನಾಟವಿಯೊಳ್- ಆಕಾಶವೆಂಬ ಕಾಡಿನಲ್ಲಿ, ನೆರೆದು,ಉಡುಗಳಂ- ನಕ್ಷತ್ರಗಳನ್ನು, ಇಟ್ಟು, ಕೆರದಿಂಹೊಡೆದು, ಒರಸುತೆ- ತೀಡುತ , ಪರೆದುವು- ಹರಡಿಕೊಂಡವು.

ಆಗಳ್, ಮುಗ್ಧಸಂಗಮದೇವಂ, ಉಷಃಕಾಲಶಿವಪೂಜಾಸಮಾಪ್ತ್ಯನಂತರಂ- ಬೆಳಗಿನ ಜಾವದ ಶಿವಪೂಜೆಯು ಪೂರೈಸಿದಮೇಲೆ, ಅಲ್ಲಿಂದೆ, ಎಳ್ದು, ಬಸವನ, ಎಡೆಗೆ- ಬಳಿಗೆ, ಎಳ್ತಂದು, ತನ್ನಿಂಮಾನಿತಂ- ಆಬಸವೇಶ್ವರನಿಂದ ಸನ್ಮಾನಿಸಲ್ಪಟ್ಟವನಾಗಿ, ಸಂಭ್ರಮಂ, ಮಿಗೆ, ಗಣಸಮುದಾಯಕ್ಕೆ,ನಗೆಯಂ, ಪಸರಿಸಿ. *

ವೃಷೇಂದ್ರ! ಸೂಳೆಗೆಯ್ತದೆ- ಸೂಳೆಯರತಿಕ್ರೀಡೆಯುಲ್ಲಿ, ಪೊದಳ್ದ- ಉದ್ಭವಿಸಿದ, ಆನಂದದ, ಅದಂ ಒಂದುಅಂದಮಂ- ಅದೊಂದುರೀತಿಯನ್ನು, ಏನೇಳ್ವುದೊ- ಏನುಹೇಳುವದೋ! ಮದನಾರಾತಿಯೆ-ಈಶ್ವರನೇ, ಬಲ್ಲಂ; ಅಯ್ಯ! ಎನ್ನೊಡನೆ, ನೀಂ, ಐತಂದುದಿಲ್ಲ- ಬರಲಿಲ್ಲ; ತಳ್ವದೆ- ತಪ್ಪದೆ, ನೀಂ, ಬಂದೊಡೆ, ತತ್ಸುಖಂ, ನಾನು ಅನುಭವಿಸಿದ ಆ ಸೌಖ್ಯವು, ನಿನಗುಂ, ಅಕ್ಕುಂ; ಆಂ, ಆವೇಳೆಯೊಳೆ- ಆ ಆನಂದಪಡುವಕಾಲದಲ್ಲಿ, ನಿನ್ನಂ, ನೆನೆದೆಂ- ಸ್ಮರಿಸಿಕೊಂಡೆನು; ಗಣಿಕಾಸದ್ಭಕ್ತಿ- ಸೂಳೆಯು ಮಾಡಿದ ಒಳ್ಳೆಯಭಕ್ತಿಯು,ಅತ್ಯದ್ಭುತಂ. ... ... ... ... ॥೨೫॥

ಆಕೆಗೆ, ಪಳದಿಯಬಣ್ಣದ, ಉಜ್ಜ್ವಳವಿಭೂತಿಯ, ಲಿಪ್ತಿ- ಲೇಪನವು, ಸುಧಾಬ್ಧಿತೀರದೊಳ್- ಕ್ಷೀರಸಮುದ್ರದ ದಡದಲ್ಲಿ, ಬಳೆದು, ಅಮರ್ದ, ಅಂಗದಿಂದೆ,ಒಗೆದ, ನೂತ್ನಶಿವಾಕ್ಷಿಯಮಾಲೆ-ಹೊಸರುದ್ರಾಕ್ಷಿಮಾಲಿಕೆ, ದೀರ್ಘಕುಂತಳಕೃತಂ- ಉದ್ದವಾದ ಕೇಶದಿಂದ ಮಾಡಲ್ಪಟ್ಟದ್ದು, ಆದುದು, ಒಂದೆಜೆಡೆ, ಬಾಹ್ಯಜನೇಕ್ಷಣಾ- ಹೊರಗಣಜನದ ನೋಟವು, ಮೈಪೊಳೆ, ಅಂಬರದಂತೆ, ಬಿಗಿದು, ಉಟ್ಟ ಕೈಪು- ಕೌಪೀನವು,

ಜೆಡೆ ಬಾಹ್ಯಜನೇಕ್ಷಣಮಂಟುದಂತೆ ವ್ಯೆ । ಯೊಳೆ ಬಿಗಿದುಟ್ಟುಕೈವು ಶಿವಲಾಂಛನವಾಕೆಗ
ದೇನಳುಂಬವೊ ॥ ... ... ... ... ॥೩೦॥

ಕಂ ॥ ಆವಶಿವಾಗಮವಚನದಿ । ನಾವಧುನಿರ್ಧರಿಸಿ ತಳೆದಳೋ ಬೆಳರ್ವಣ್ಣಂ ॥ ತೀವಿ
ದರುದ್ರಾಕ್ಷಿಯ ಮಣಿ । ಯಾವಗ ಮೆಸೆದಿರ್ಪ್ಪುದವಳನಾಸಾಗ್ರಮದೊಳ್ ॥ ॥೩೧॥

ಮ ॥ ಸ್ರ ॥ ಗಿರಿಜಾತಾಸಾಂಪ್ರದಾಯಾಗತನವಶಿವಚಿಹ್ನಂಗಳಿಂತೆಲ್ಲಮೆಂದಾ । ದರ
ದಿಂತದ್ವೇಶ್ಯೆ ಪೇಳ್ದಳ್ ಬಳಿಕ ಕಮಳಪೂಜಾಬಸನ್ಮಂಟಪಂ ಬಿ ॥ ತ್ತರದಿಂ ಕಣ್ಗೊಪ್ಪು
ತಿರ್ಕುಂ ಸಕಲಪರಿಜನಂ ಶೈವಚಿಹ್ನಾಂಕಿತಂ ಕೇ । ಳಿರುಳೆಲ್ಲಂ ಸೂಳೆಗೆಯ್ದಂ ಬಸವ ತವೆ
ತದಾವಾಸದೊಳ್ ಪ್ರೀತಿಯಿಂದಂ ॥ ... ... ... ... ॥೩೨॥

ಕಂ॥ ಪಗಲಿರುಳೆನ್ನದೆ ರಾಗಂ । ಮಿಗೆ ಸೊಬಗಿಂ ಸೂಳೆಗೆಯ್ದ ಸುಖವೊಂದೆವಲಂ ॥
ನೆಗಳ್ದರೆ ಮಿಕ್ಕಸುಖಂಗಳ್ । ಸೊಗಯಿಸುವುವೆ ಬಸವ ಭಕ್ತಸಂತತಿಗಿಳೆಯೊಳ್ ॥೩೩॥

ಕಂ ॥ ಆವಂ ಗುರುಚರಭಕ್ತನ । ದಾವಂ ಶಿವಸುಪ್ರಸಾದಭಾಜನ ನಾವಂ ॥ ಪಾವನ
ಗುಣಸಂಯುತ ನವ । ನೀವಿಧದಿಂ ಸೂಳೆಗೆಯ್ದನಾಗನೆ ಮುನ್ನಂ ॥ ... ॥೩೪॥

ಕಂ ॥ ಎನಿತೆನಿತು ಕಾಲವಂ ನೀಂ । ಮನದೊಲವಿಂ ಸೂಳೆಗೆಯ್ತಮಂ ನೆಗಳ್ದಿಯೊ
ಪೇಳ್ ॥ ನಿನಗಂತಲ್ಲದೊಡಕ್ಕುಮೆ । ಘನತರಶಿವಭಕ್ತಿ ಸಂಪದಂ ಬಸವೇಶ ॥ ॥೩೫॥

---

ಅದು, ಶಿವಲಾಂಛನಂ, ಏಂಅಳುಂಬಮೋ- ಏನುಅಧಿಕವಾದದ್ದೋ? ... ... ॥೩೦॥

ಆವಧು- ಆ ಸ್ತ್ರೀಯು, ಆವಶಿವಾಗಮವಚನದಿಂ, ನಿರ್ಧರಿಸಿ, ತಳೆದಳೋ? ಅವಳ- ನಾಸಾಗ್ರಮದೊಳ್- ಮೂಗಿನತುದಿಯಲ್ಲಿ, ಬೆಳರ್ವಣ್ಣಂದೀವಿದ- ಬಿಳಿಯಬಣ್ಣದಿಂ ವ್ಯಾಪ್ತವಾದ, ರುದ್ರಾಕ್ಷಿಯಮಣಿ,ಆವಗಂ- ನಿರಂತರದಲ್ಲೂ, ಎಸೆದಿರ್ಪ್ಪುದು. ... ... ... ... ॥೩೧॥

ತದ್ವೇಶ್ಯೆ- ಆಸೂಳೆಯು, ಇಂತು, ಎಲ್ಲಂ, ಗಿರಿ........ಚಿಹ್ನಂಗಳ್— ಗಿರಿಜಾತಾ- ಪಾರ್ವತಿಯ, ಸಾಂಪ್ರದಾಯ- ಅನುಕ್ರಮದಿಂದ, ಆಗತ- ಬಂದ, ನವ- ನೂತನವಾದ, ಶಿವಚಿಹ್ನಂಗಳ್,ಎಂದು, ಆದರದಿಂ, ಪೇಳ್ದಳ್; ಬಳಿಕಂ, ಅವಳ,ಪೂಜಾಸನ್ಮಂಟಪಂ- ಶಿವಪೂಜೆಯುಪ್ರಕಾಶಿಸುವ ಮಂಟಪವು,ಬಿತ್ತರದಿಂ- ವೈಶಾಲ್ಯದಿಂದ, ಕಣ್ಗೆ, ಒಪ್ಪುತಿರ್ಕುಂ; ಸಕಲಪರಿಜನಂ- ಸಮಸ್ತಸೇವಕಜನವು, ಶೈವಚಿಹ್ನಾಂಕಿತಂ- ಶಿವಚಿಹ್ನೆಯಿಂದ ಕೂಡಿರುವದು; ಬಸವ! ಕೇಳ್, ತದಾವಾಸದೊಳ್- ಆ ಸೂಳೆಯುಮನೆಯಲ್ಲಿ,ಇರುಳೆಲ್ಲಂ- ರಾತ್ರಿಯೆಲ್ಲವೂ, ಪ್ರೀತಿಯಿಂದಂ, ತವೆ- ಚೆನ್ನಾಗಿ, ಸೂಳೆಗೆಯ್ದಂ. ... ... ... ॥೩೨॥

ಬಸವ! ಇಳೆಯೊಳ್, ಭಕ್ತಸಂತತಿಗೆ- ಭಕ್ತರಸಮೂಹಕ್ಕೆ, ಪಗಲ್ಇರುಳ್ಎನ್ನದೆ-ಹಗಲುರಾತ್ರಿಯೆಂದು ಶಂಕಿಸದೆ, ರಾಗಂ, ಮಿಗೆ, ಸೊಬಗಿಂ- ಸೊಗಸಿಂದ, ಸೂಳೆಗೆಯ್ದ, ಸುಖಂ, ಒಂದೆ, ವಲಂ-ನಿಶ್ಚಯವಾಗಿ, ನೆಗಳ್ದ- ಉಂಟಾಗಿ, ಇಗೆ, ಮಿಕ್ಕ, ಸುಖಂಗಳ್,ಸೊಗಯಿಸುವುವೆ? ... ... ॥೩೩॥

ಆವಂ, ಗುರುಚರಭಕ್ತಂ- ಗುರುಜಂಗಮರಲ್ಲಿ ಭಕ್ತಿಯುಳ್ಳವನೋ; ಅದಾವಂ, ಶಿವಸುಪ್ರಸಾದಭಾಜನಂ- ಪರಶಿವನ ಒಳ್ಳೆಯುಪ್ರಸಾದಕ್ಕೆ ಪಾತ್ರನೋ, ಆವಂ, ಪಾವನಗುಣಸಂಯುತಂ- ಪರಿಶುದ್ಧವಾದ ಗುಣದಿಂ ಕೂಡಿರುವನೋ; ಅವಂ, ಮುನ್ನಂ, ಈವಿಧದಿಂ, ಸೂಳೆಗೆಯ್ದಂ, ಆಗನೆ-ಹೀಗೆ ಸೂಳೆಯುಕೆಯ್ತವನ್ನು ಮಾಡದಿರುವನೇ? ... ... ... ... ... ॥೩೪॥

ಬಸವೇಶ! ನೀಂ, ಎನಿತೆನಿತುಕಾಲವಂ- ಎಷ್ಟೆಷ್ಟುಕಾಲದಲ್ಲಿ, ಮನದ, ಒಲವಿಂ- ಪ್ರೀತಿಯಿಂದ,ಸೂಳೆಗೆಯ್ತಮಂ, ನೆಗಳ್ದಿಯೊ- ಮಾಡಿದೆಯೋ, ಪೇಳ್, ಅಂತು, ಅಲ್ಲದೊಡೆ– ಹಾಗೆ ಸೂಳೆಗೆಯ್ತವಂ ಮಾಡದಿದ್ದರೆ, ನಿನಗೆ, ಘನತರಶಿವಭಕ್ತಿಸಂಪದಂ, ಅಕ್ಕುಮೆ– ಆದೀತೇ? ... ... ॥೩೫॥

ವ॥ ಎಂದಿಂತೆಲ್ಲಮನುಸಿರ್ದ ಮುಗ್ಧಸಂಗಾರ್ಯನ ಮುಗ್ಧಾಲಾಪಮಂ ಕೇಳ್ದು ಭುಜಂಗಜಂಗಮವಿಸರಂ ಹಸನರಸಮಿಳಿತಾನನಮಾಗೆ ಬಸವಂ ಮಂದಸ್ಮಿತಮುಖಾಂಬುಜಂ ಚೆನ್ನಬಸವಾನನಮಂ ನಿರೀಕ್ಷಿಸಿ ಮನೋವಾಕ್ಕಾಯಂಗಳೊಳ್ ಶಿವಧ್ಯಾನಶಿವಮಂತ್ರಜಪಶಿವಯಜನಂಗಳಲ್ಲದೆ ಪೆರತೊಂದನರಿಯದ ಮುಗ್ಧಂ ಮುಗ್ಧಸಂಗಯ್ಯನಿವಂಗಿದು ಯುಕ್ತಮೆಂದು ತತ್ಪ್ರಭಾವಮಂ ಪೊಗಳುತ್ತಿರೆ ಚೆನ್ನಬಸವನಾಶ್ಚರ್ಯಂಮಿಗೆ ಕೇಳ್ದು ಪುರಾತನರೊಳಿವನಂತಪ್ಪಮುಗ್ಧಭಕ್ತರೊಳರೆ ಬೆಸಸಿ ಮೆಂದಾಬಸವಂಗೆರಗಿ ಕೈದಾವರೆಗಳಂ ಮುಗಿದು ಭಕ್ತಿಯಿಂ ಬೆಸಗೊಳಲೊಡನೆ॥ * * * * * * * * * *

ಕಂ॥ ದರೆಯೊಳ್ಮುನ್ನೊಳರೆಮ್ಮಯ। ಪುರಾತನ ರ್ಮುಗ್ಧರಭವಬೋಧವಿದಗ್ಧರ್॥
ಕರುಣಾಕರರೆಂದಾಬಸ। ವರಸಂ ತತ್ಕಥೆಯ ನೊರೆಯಲುದ್ಯತನಾದಂ॥ ... ॥೩೦॥

ವ॥ ಅದೆಂತೆನೆ॥ ಕಂ॥ ವಸುಧೆಗೆ ತೊಡವೆನಿಸುತೆ ರಂ। ಜಿಸುವೆಲವೂರೆಂಬಪೊಳ
ಲೊಳೊಪ್ಪುವನೋರ್ವಂ॥ ಪೊಸತೆನಿಪ ರುದ್ರಪಶುಪತಿ। ವೆಸರಿಂದೆ ಗುಣಪ್ರಯುಕ್ತ
ನೀಶ್ವರಭಕ್ತಂ॥ ... ... ... ... ॥೩೧॥

ಕಂ॥ ಅವನೊಂದುದಿನದೊಳೋರ್ವಂ। ಶಿವನನಿಕೇತನದೊಳೋದೆ ಕಥಿಕಂ ಭುವನ॥

---

ಎಂದು, ಇಂತು, ಎಲ್ಲಮಂ, ಉಸಿರ್ದ, ಮುಗ್ಧಸಂಗಾರ್ಯನ, ಮುಗ್ಧಾಲಾಪಮಂ, ಭುಜಂಗಜಂಗಮವಿಸರಂ- ವಿಟಜಂಗಮಸಮೂಹವು, ಕೇಳ್ದು, ಹಸನರಸಮಿಳಿತಾನನಂ- ನಗುವಿಕೆಯಿಂದ ಕೂಡಿದ ಮುಖವುಳ್ಳದ್ದು, ಆಗೆ, ಬಸವಂ, ಮಂದಸ್ಮಿತಮುಖಾಂಬುಜಂ- ಮುಗುಳ್ನಗೆಯಿಂ ಕೂಡಿದ ಮುಖಕಮಲವುಳ್ಳವನಾಗಿ, ಚೆನ್ನಬಸವಾನನಮಂ, ನಿರೀಕ್ಷಿಸಿ- ನೋಡಿ, ಇವಂ ಮುಗ್ಧಸಂಗಯ್ಯಂ, ಮನೋವಾಕ್ಕಾಯಂಗಳೊಳ್- ಶಿವಧ್ಯಾನಶಿವಮಂತ್ರಜಪಶಿವಯಜನಂಗಳ್‌ಅಲ್ಲದೆ- (ಅಂದರೆ ಮನಸ್ಸಿಗೆ ಶಿವಧ್ಯಾನ, ವಾಕ್ಕಿಗೆ ಶಿವಮಂತ್ರಾನುಷ್ಠಾನ, ದೇಹಕ್ಕೆ ಶಿವಪೂಜೆಯಲ್ಲದೆ) ಪೆರತೊಂದಂ- ಮತ್ತೊಂದನ್ನು, ಅರಿಯದ, ಮುಗ್ಧಂ- ಅಜ್ಞಾತಲೌಕಿಕವಿಷಯಕನಾದವನು, ಇವಂಗೆ, ಇದು- ಈಗುಣವು,ಯುಕ್ತಂ-ಉಚಿತವಾದದ್ದು; ಎಂದು, ತತ್ಪ್ರಭಾವಮಂ- ಅವನಮಹಿಮೆಯನ್ನು, ಪೊಗಳುತ್ತಿರೆ, ಚೆನ್ನಬಸವಂ, ಕೇಳ್ದು, ಆಶ್ಚರ್ಯಂ, ಮಿಗೆ- ಹೆಚ್ಚಾಗಲು ಪುರಾತನರೊಳ್, ಇವನಂತಪ್ಪ- ಈಮುಗ್ಧಸಂಗಯ್ಯನಂತಹ, ಮುಗ್ಧಭಕ್ತರ್, ಒಳರೆ- ಉಂಟೇ? ಬೆಸಸಿ-ಅಪ್ಪಣೆಕೊಡಿಸಿ, ಎಂದು, ಆಬಸವಂಗೆ, ಎರಗಿ- ನಮಸ್ಕರಿಸಿ, ಕೈದಾವರೆಗಳಂ, ಮುಗಿದು,ಭಕ್ತಿಯಿಂ, ಬೆಸಗೊಳಲ್- ಕೇಳಿಕೊಳ್ಳಲು,ಒಡನೆ. * * * * * * * * * * * * * *

ದರೆಯೊಳ್, ಮುನ್ನ- ಪೂರ್ವದಲ್ಲಿ, ಅಭವಬೋಧವಿದಗ್ಧರ್-ಶಿವಜ್ಞಾನದಿಂ ಪ್ರೌಢರಾದ, ಕರುಣಾಕರರ್, ಮುಗ್ಧರ್, ಎಮ್ಮಯ, ಪುರಾತನರ್, ಒಳರ್- ಇದ್ದರು; ಎಂದು, ಆಬಸವರಸಂ, ತತ್ಕಥೆಯಂ- ಆ ಮುಗ್ಧರಕಥೆಯನ್ನು, ಒರೆಯಲ್- ಹೇಳುವದಕ್ಕೆ, ಉದ್ಯತಂ- ಉಜ್ಜುಗಿಸಿದವನು, ಆದಂ. ... ।೩೦॥

## ರುದ್ರಪಶುಪತಿಗಳ ಕಥೆ.

ವಸುಧೆಗೆ- ಭೂಮಿಗೆ, ತೊಡವು- ಆಭರಣವು, ಎನಿಸುತೆ, ರಂಜಿಸುವ, ಎಲವೂರ್, ಎಂಬ, ಪೊಳಲೊಳ್- ಪಟ್ಟಣದಲ್ಲಿ, ಪೊಸತು, ಎನಿಪ, ರುದ್ರಪಶುಪತಿವೆಸರಿಂದೆ, ಗುಣಪ್ರಯುಕ್ತಂ, ಈಶ್ವರಭಕ್ತಂ, ಓರ್ವಂ, ಒಪ್ಪುವಂ. ... ... ... ... ... ।೩೧॥

ಒಂದುದಿನದೊಳ್, ಶಿವನ, ನಿಕೇತನದೊಳ್- ದೇವಸ್ಥಾನದಲ್ಲಿ, ಓರ್ವಂಕಥಿಕಂ- ಒಬ್ಬ ಕಥೆಯಂಹೇಳು

ಸ್ತುವನೀಯಾಶಿವಪುರಾಣಮನು । ನವಿಕಲಮತಿ ಯೊಲ್ದು ಕೇಳುತಿರ್ದಂ ಸಭೆಯೊಳ್ ॥ ॥೩೮॥

ಮ ॥ ಸ್ರ ॥ ಸುರರೆಲ್ಲರ್ ಕೂಡಿ ಭೋಗೀಶ್ವರಗುಣಮಿಳಿತಂ ಮಂದರಂ ಮಂತುಗೋಲಾ । ಗಿರೆ ದುಗ್ಧಾಂಭೋಧಿಯಂ ಮೇಣ್ಕಡೆಯೆ ಕಡೆಯೊಳಂಭೋಧರಶ್ಯಾಮಘೋರಂ ॥ ಗರಳಂ ಪುಟ್ಟಿರ್ದು ಸರ್ವಾಮರರನಳರ್ದು ಬೆಂಬತ್ತೆ ಕಂಡುತದಂ ಶಂ । ಕರನಾಗಳ್ನುಂಗಿ ಲೋಕಾವಳಿಯ ಪೊರೆವನೆಂಬುಕ್ತಿಯಂ ಕೇಳ್ದನಾಗಳ್ ॥ ... ... ॥೩೯॥

ವ ॥ ಅಂತದಂಕೇಳ್ದು ಬೆದರಿ ಬೆಬ್ಬಳಿವೋಗಿ ॥ * * * * * * *

ಕಂ॥ ಹರಹರ ಹರನುಂಡನೆ ತ । ದ್ಗರಳಮ ನಿದು ನಿಜಮೆ ಪೇಳ್ವುದೆನೆ ಕಥಿಕಂ ಬಿ॥ತ್ತರಿಸಿದ ನಿದು ನಿಜಮಾಶಂ । ಕರನುಂಡು ಘೋರಗರಳಮಂ ಶ್ರುತಿಸಿದ್ಧಂ ॥ ॥೪೦॥

ಮತ್ತೇ॥ ಎನೆ ಕೇಳ್ದಕ್ಕಟ ಕೆಟ್ಟೆ ನೆನ್ನಶಿವ ನೆನ್ನಾತ್ಮೇಶನೋವೋವೊ ಕೆ । ಮ್ಮನೆ ಹಾಲಾಹಲಮಂ ಮರುಳ್ತನದ ಪೆರ್ಚಿಂ ನುಂಗಿದಂ ನುಂಗಿ ಜೀ ॥ ವನಮಂ ಕೊಂಡುಳಿದಪ್ಪ ನೆಂತೊ ಗತಿ ಯಾರ್ತನ್ನಂಘ್ರಿಯಂ ನಂಬಿ ನ । ಚ್ಚಿ ನಿತಾಂತಂ ಬಿಡಪಿರ್ದವಂಗೆನಗೆ ನುತಾತ್ರ್ಕಂದನಂಗೆಯ್ವುತಂ ॥ ... ... ... ॥೪೧॥

ಚಂ ॥ ಅತಿಸುಕುಮಾರ ಸೋಮಧರ ನೆತ್ತ ಭಯಂಕರಕಾಲಕೂಟಮಂ । ಮತಿಮಿ

---

ವವನು, ಭುವನಸ್ತವನೀಯಶಿವಪುರಾಣಮಂ- ಲೋಕಸ್ತುತ್ಯವಾದಶಿವನ ಪುರಾಣವನ್ನು, ಸಭೆಯೊಳ್,ಒದೆ, ಅವಂ- ಆರುದ್ರಪಶುಪತಿಯು, ಅವಿಕಲಮತಿ- ಮತ್ತೊಂದುಕಡೆ ಚಲಿಸದಬುದ್ಧಿಯುಳ್ಳವನಾಗಿ, ಒಲ್ದು-ಪ್ರೀತಿಸಿ, ಕೇಳುತ್ತ,ಇರ್ದಂ. ... ... ... ... ... ॥೩೮॥

ಆಗಳ್, ಭೋಗೀಶ್ವರಗುಣಮಿಳಿತಂ- ಆದಿಶೇಷನೆಂಬ ಹಗ್ಗದಿಂ ಕೂಡಿದ, ಮಂದರಂ- ಮಂದರಪರ್ವತವು, ಮಂತುಗೋಲ್ ಕಡೆಯುವಕೋಲು, ಆಗಿ, ಇರೆ, ಸುರರ್, ಎಲ್ಲರ್, ಕೂಡಿ, ದುಗ್ಧಾಂಭೋಧಿಯಂ- ಕ್ಷೀರಸಮುದ್ರವನ್ನು, ಮೇಣ್- ಮತ್ತು, ಕಡೆಯೆ, ಕಡೆಯೊಳ್, ಅಂಭೋಧರಶ್ಯಾಮಘೋರಂ- ಮೇಘದಂತೆ ಕಪ್ಪಾಗಿ ಭಯಂಕರವಾಗಿರುವ, ಗರಳಂ- ವಿಷವು, ಪುಟ್ಟಿ, ಸರ್ವಾಮರರಂ- ಸಕಲದೇವತೆಗಳನ್ನು, ಅಳರ್ದು- ಮುಸುಕಿ, ಬೆಂಬತ್ತೆ- ಬೆನ್ನಂಟಲು, ಆಗಳ್, ಶಂಕರಂ, ಅಂತು, ಅದಂ- ಆ ವಿಷವನ್ನು, ಕಂಡು, ನುಂಗಿ, ಲೋಕಾವಳಿಯುಂ, ಪೊರೆದಂ, ಎಂಬ, ಉಕ್ತಿಯಂ, ಕೇಳ್ದಂ. ... ... ॥೩೯॥

ಅಂತು, ಅದಂ, ಕೇಳ್ದು, ಬೆದರಿ, ಬೆಬ್ಬಳಿವೋಗಿ- ಬೆರಗಾಗಿ. * * * * * * *

ಹರಹರ!! ಹರಂ- ತದ್ಗರಳಮಂ- ಆ ವಿಷವನ್ನು, ಉಂಡನೆ? ಇದು, ನಿಜಮೆ, ಪೇಳ್ವುದು, ಎನೆ, ಕಥಿಕಂ, ಬಿತ್ತರಿಸಿದಂ- ವಿಸ್ತರಿಸಿದನು, ಆಶಂಕರಂ, ಘೋರಗರಳಮಂ- ಭಯಂಕರವಾದ ವಿಷವನ್ನು,ಉಂಡಂ, ಇದು- ಈಮಾತು, ನಿಜಂ, ಶ್ರುತಿಸಿದ್ಧಂ- ವೇದಪ್ರಸಿದ್ಧವಾದದ್ದು. ... ... ॥೪೦॥

ಎನೆ- ಹೀಗೆನಲು, ಕೇಳ್ದು, ಅಕ್ಕಟ! ಕೆಟ್ಟೆಂ, ಎನ್ನ, ಶಿವಂ, ಎನ್ನ, ಆತ್ಮೇಶಂ- ಪ್ರಾಣಾಧಿಪತಿಯಾದವನು, ಓ ಓವೊ!! ಕೆಮ್ಮನೆ- ಸುಮ್ಮನೆ, ಮರುಳ್ತನದ- ಹುಚ್ಚುತನದ, ಪೆರ್ಚಿಂ, ಹಾಲಾಹಲಮಂ- ವಿಷವನ್ನು, ನುಂಗಿದಂ, ನುಂಗಿ- ವಿಷಮಂ ಕುಡಿದು, ಜೀವನಮಂ- ಪ್ರಾಣವನ್ನು, ಕೊಂಡು- ಧರಿಸಿ, ಎಂತು ಉಳಿದಪನೋ ಹ್ಯಾಗೆಉಳಿಯುವನೋ? ತನ್ನ, ಅಂಘ್ರಿಯಂ, ನಂಬಿ,ನಚ್ಚಿ, ನಿತಾಂತಂ-ಅತ್ಯಂತವಾಗಿ, ಬಿಡದೆ, ಇರ್ದವಂಗೆ, ಎನಗೆ, ಗತಿ, ಆರ್? ಎನುತ್ತೆ, ಆಕ್ರಂದನಂಗೆಯ್ವುತಂ- ಗೋಳಾಡುತ್ತ. ... ॥೪೧॥

ಅತಿಸುಕುಮಾರಸೋಮಧರಂ- ಅತಿಕೋಮಲನಾದ ಚಂದ್ರಶೇಖರನು, ಎತ್ತ- ಎಲ್ಲಿ? ಭಯಂಕರಕಾಲಕೂಟಮಂ, ಮತಿ, ಮಿಗೆ, ಪೀರ್ವುದು- ಕುಡಿಯುವದು, ಎತ್ತ? ಲೋಕದೋಳ್, ಸುಧೆಯಂ ಹಾಲನ್ನುತೆ

ಗೆ ಪಿರ್ವ್ವದೆತ್ತ ಸುಧೆಯಂ ತೆಗೆದುಂಬಮರಾಳನೆತ್ತ ಮಾ ॥ ರುತಸಖನಾಳ್ದ ದಳ್ಳುರಿಯ ನೀಂಟುವುದೆತ್ತ ನಿಪೀತಚಂದ್ರಿಕಾ । ಮೃತಸುಚಕೋರನೆತ್ತ ಬಿಸಿಲುಂಕುಡಿವಂದವಮದೆತ್ತ ಲೋಕದೊಳ್ ॥ ... ... ... .. ॥೪೦॥

ಮತ್ತೇ ॥ ಗರಳಜ್ವಾಲೆಯಧೂಮರಾಜಿಪೊಗೆ ಕಣ್ಣಿಂತಿರ್ದುದೋ ಪಾಣಿಪಂ । ಕರುಹಂಮೇಣ್ಪಿಡಿದೌಂಕಿದಂದೆನಿತು ತಾಂಕಂದಿರ್ದುದೋ ನುಂಗೆ ನುಂ ॥ ಗೊರಲುಂ ಜಿಹ್ವೆಯುಮಾವಿಷಾಗ್ನಿಯುರಿಯಿಂದೇನಾದುದೋ ಕುಕ್ಷಿಯೊಳ್ । ಭರದಿಂ ಪೊಕ್ಕು ಪಾಡಲ್ತಿಸಿತ್ತೆಸಗಿತೋ ಸಂತಾಪಮಂ ದೇವನ ॥ ... ... ... ॥೪೩॥

ಚಂ ॥ ಗರಳಮನುಣ್ಬುದಂ ಬಿಡಿಸದೇಕೆ ನಗಾತ್ಮಜೆ ಸುಮ್ಮನಿರ್ದೆ ರು । ದ್ರರೆ ಗಣವರ್ಯರೇ ವಿಷಮನೀಂಟುವವೇಳೆಯೊಳೆತ್ತಲಯ್ಯ ಪೋ ॥ ದಿರಿ ಕರಿವಕ್ತ್ರ ಷಣ್ಮುಖರೆ ತಂದೆ ಬಿಸಂಗೊಳೆ ನೋಡುತಿರ್ಪ್ಪದೇ । ಪರಿಹೃತಿಗೆಯ್ಯದಕ್ಕಟ ಪಂಚಮುಖನಪ್ಪುದೆ ವೀರಭದ್ರನೀಂ ॥ ... ... ... ... ॥೪೪॥

ಕಂ ॥ ಸುರರೆಲ್ಲರಳಿದರೇಂ ಪು । ಟ್ಟರೆ ನಿನ್ನನ್ನರ್ಕಳೊಗೆವರೇ ಮೃತಿಗಂಜು ॥ ತ್ತಿರ ದಯ್ಯೋ ವಿಷಮವಿಷಮಂ । ಪುರಹರ ನೀನುಂಡೆ ಯೆಂತುಜೀವಿಪೆ ಯಕಟ ॥ ॥೪೫॥

ಕಂ ॥ ಜರೆ ರೋಗಂ ಮೃತಿ ನಿನ್ನಯ । ಶರೀರಮಂ ಸೋಂಕದಂತೆ ನಿಯತಿಯೊಳಾ

---

ಗೆದು, ಉಂಬ, ಮರಾಳಂ- ಹಂಸಪಕ್ಷಿಯು, ಎತ್ತ? ಮಾರುತಸಖಂ- ಅಗ್ನಿಯು, ಆಳ್ದ- ಹೊಂದಿದ, ದಳ್ಳುರಿಯಂ- ಹೆಜ್ವಾದಜ್ವಾಲೆಯನ್ನು, ಈಂಟುವುದು- ಕುಡಿಯುವದು, ಎತ್ತ? ನಿಪೀತಚಂದ್ರಿಕಾಮೃತಸುಚಕೋರಂ— ನಿಪೀತ- ಪಾನಮಾಡಲ್ಪಟ್ಟ, ಚಂದ್ರಿಕಾಮೃತ- ಬೆಳ್ದಿಂಗಳಿನಮೃತವುಳ್ಳ, ಸುಚಕೋರಂ, ಎತ್ತ? ಬಿಸಿಲಂ, ಕುಡಿವ, ಅಂದಂ, ಅದು, ಎತ್ತ? ... ... ... ॥೪೦॥

ಗರಳಜ್ವಾಲೆಯ- ವಿಷದುರಿಯ, ಧೂಮರಾಜಿ- ಹೊಗೆಯುಲ್ಬಿನ, ಪೊಗೆ, ದೇವನ, ಕಣ್ಣಿ, ಎಂತು- ಹ್ಯಾಗೆ, ಇರ್ದುದೋ! ಮೇಣ್, ಪಿಡಿದು, ಔಂಕಿದಂದು- ಅದಿಮಿದಕಾಲದಲ್ಲಿ, ಪಾಣಿಪಂಕರುಹಂ, ತಾಂ, ಎನಿತು- ಎಷ್ಟು, ಕಂದಿ, ಇರ್ದುದೋ! ನುಂಗೆ, ನುಂಗೊರಲುಂ- ನುಣುಪಾದ ಕಂಠವೂ, ಜಿಹ್ವೆಯುಂ- ನಾಲಿಗೆಯೂ, ಆವಿಷಾಗ್ನಿಯ, ಉರಿಯಿಂದೆ, ಏನಾದುದೋ! ಕುಕ್ಷಿಯೊಳ್, ಹೊಟ್ಟೆಯಲ್ಲಿ, ಪಡಲ್ತು- ಹಬ್ಬಿ, ಎನಿತು ಸಂತಾಪಮಂ, ಎಸಗಿತೋ- ಮಾಡಿತೋ! ... ... ... ... ॥೪೩॥

ನಗಾತ್ಮಜೆ- ಪಾರ್ವತಿಯೇ! ಗರಳಮಂ, ಉಣ್ಬುದಂ, ಬಿಡಿಸದೆ, ಸುಮ್ಮನೆ, ಏಕೆ, ಇರ್ದೆ? ರುದ್ರರೆ! ಗಣವರ್ಯರೇ! ಅಯ್ಯ! ವಿಷಮಂ, ಈಂಟುವ, ವೇಳೆಯೊಳ್, ಎತ್ತಲ್- ಯಾವಕಡೆಗೆ, ಪೋದರಿ? ಕರಿವಕ್ತ್ರ ಷಣ್ಮುಖರೆ- ಗಣಪತಿಷಣ್ಮುಖರೇ! ತಂದೆ, ಬಿಸಂಗೊಳೆ- ವಿಷಮಂ ಸ್ವೀಕರಿಸುತ್ತಿರಲು, ಪರಿಹೃತಿಗೆಯ್ಯದೆ- ತಪ್ಪಿಸದೆ, ನೋಡುತೆ, ಇರ್ಪ್ಪದೇ? ಅಕ್ಕಟ- ಅಯ್ಯೋ! ವೀರಭದ್ರ! ನೀಂ, ಪಂಚಮುಖಂ- ಈ ವಿಷಯದಲ್ಲಿ ಮುಖವಂ ಹಿಂತೆಗೆದವನು, ಅಪ್ಪುದೇ? ... ... ... ... ॥೪೪॥

ಪುರಹರ! ಎಲ್ಲರ್ ಸುರರ್- ಅಳಿದರೇಂ- ಸತ್ತರೇನು? ಪುಟ್ಟರೆ- ಪುನಃ ಜನಿಸರೇ? ನಿನ್ನರ್ಕಳ್- ನಿನ್ನಂತವರು, ಒಗೆವರೆ- ಹುಟ್ಟುವರೇ? ಮೃತಿಗೆ- ಸಾವಿಗೆ, ಅಂಜುತ್ತಿರದೆ- ಭಯಪಡುತ್ತಿರವೆ, ಅಯ್ಯೋ! ವಿಷಮವಿಷಮಂ- ಸಮವಲ್ಲದ ವಿಷವನ್ನು, ನೀಂ, ಉಂಡೆ, ಅಕಟ! ಎಂತುಜೀವಿಪೆ? ... ॥೪೫॥

ಜರೆ- ಮುಪ್ಪು, ರೋಗಂ, ಮೃತಿ - ಸಾವು, ನಿನ್ನಯ, ಶರೀರಮಂ, ಸೋಂಕದಂತೆ, ನಿಯತಿಯೊಳ್-ನಿಯಮದಿಂದ, ಆಂ, ಬಲ್ದು, ಇರದೆ- ತಪ್ಪದೆ, ಪಂಚಾಕ್ಷರಜಪಮಂ, ಎಸಗಿದಪೆಂ- ಮಾಡುತ್ತೇನೆ. ವಿಷ

ನೊ ॥ ಲ್ದಿರವೆಸಗಿದಪೆಂ ಪಂಚಾ । ಕ್ಷರಜಪಮಂಕೇಳ್ವೆ ನೆಂತೊವಿಷಮಿಾಂಟಿದುದಂ ॥೪೬॥

ವ॥ ಎಂದು ಪಲುಂಬಿ ಪಳಯಿಸುತ್ತೆನ್ನಾಳ್ದಂ ಗರಳಂಗೊಂಡನೆಂಬುದ ನಾಲಿಪ್ಪುದರಿಂ ಮರಣಮೇ ಲೇಸೆಂದು ರುದ್ರಪಶುಪತಿಯಗಾಧಕೂಪದೊಳ್ಬೀಳ್ವನಿತರೊಳ್ತದ್ಭಕ್ತಿಭಾವಕ್ಕೆ ಮೆಚ್ಚಿ ಶಂಕರಂ ಪ್ರಮಥರುದ್ರಾದಿಗಣದಿವಿಜಗಣಸಮೇತಂ ಪ್ರಸನ್ನನಾಗಿ ಕರತಳದಿಂ ಪಿಡಿದುನೆಗಪಿ ಬೋಳೈಸಿ ಮೆಚ್ಚಿದೆ ನೊಚ್ಚತಂ ವರಮಂ ಬೇಡೆನೆ ಭಕ್ತಂ ಪದಾರವಿಂದಕ್ಕೆರಗಿ ಕರಾಂಜಲಿಗೆಯ್ದು ॥ * * * * * * * * * * * *

ಕಂ ॥ ಆವಾವವರಮನೊಲ್ಲೆ ನು । ಮಾವರ ನೀಂಪೀರ್ದವಿಷಮ ನುಗುಳುಗಳು ಗುಳ್ದಂ ॥ ಈವರದ ಕೋಟಿಯಂ ನೀಂ । ಭಾವಜಹರ ನಿಟ್ಟನೆನಗೆ ಕೊಟ್ಟವನಲ್ತೆ ॥೪೭॥

ಕಂ ॥ ಫಣಿಧರ ನೀಂಬಿಸಮುಂಡುದ । ನಣುಮಾತ್ರಂ ಕೇಳಲಾರೆ ನುಗುಳುಗಳೆಂದಾ॥ ಗುಣನಿಧಿ ಹರಿವಿಧಿಮುಖಸುರ । ಗಣಮಗಿವಿನ ಮುಸಿರೆ ಶಂಕರಂ ನಗುತೆಂದಂ ॥ ॥೪೮॥

ಕಂ॥ ನಂಜಿನ ಭಯಮೆನಗುಂಟೆಂ । ದಂಜದಿರೆಲೆಮಗನೆ ನೋಳ್ಪುದೆನ್ನಯಕೊರಲೊಳ್ ॥ ರಂಜಿಸುವಂಜನವರ್ಣದ । ಮಂಜಿನ ಸೀರ್ಪನಿಯೊಳೆಸೆವ ಹಾಲಾಹಲಮಂ ॥ ॥೪೯॥

ವ॥ ಏಗೆಯ್ದಪ್ಪುದೆನ್ನನಿದೆಂದಭವಂ ನುಡಿಯಲೊಡಂ ಕೇಳ್ದು ರುದ್ರಪಶುಪತಿ ತ

---

ವಿಷಮಿಾಂಟಿದುದಂ, ಎಂತುಕೇಳ್ವೆನೊ? ... ... ... ... ॥೪೬॥

ಎಂದು, ಪಲುಂಬಿ- ಹಂಬಲಿಸಿ, ಪಳಯಿಸುತ್ತೆ-ಪ್ರಲಾಪಮಾಡುತ್ತ,ಎನ್ನಆಳ್ದಂ- ನನ್ನ ಸ್ವಾಮಿಯು, ಗರಳಂಗೊಂಡು, ಎಂಬುದಂ, ಆಲಿಪುದರಿಂ- ಕೇಳುವದಕ್ಕಿಂತಲೂ, ಮರಣಮೇ, ಲೇಸು- ಒಳ್ಳೆಯದು, ಎಂದು, ರುದ್ರಪಶುಪತಿ, ಅಗಾಧಕೂಪದೊಳ್- ಆಳವಾದ ಬಾವಿಯಲ್ಲಿ, ಬೀಳ್ವನಿತರೊಳ್- ಬೀಳುವಷ್ಟರಲ್ಲಿ, ಶಂಕರಂ, ತದ್ಭಕ್ತಿಭಾವಕ್ಕೆ- ಆರುದ್ರಪಶುಪತಿಯ ಭಕ್ತಿಯಿಂ ಕೂಡಿರುವಿಕೆಗೆ, ಮೆಚ್ಚಿ, ಪ್ರಮಥರುದ್ರಾದಿಗಣದಿವಿಜಗಣಸಮೇತಂ, ಪ್ರಸನ್ನಂ, ಆಗಿ, ಕರತಳದಿಂ, ಪಿಡಿದು, ನೆಗಪಿ, ಎತ್ತಿ, ಬೋಳೈಸಿ- ತಲೆಯಂ ಸವರಿ, ಒಚ್ಚತಂ- ಚೆನ್ನಾಗಿ, ಮೆಚ್ಚಿದೆಂ, ವರಮಂ, ಬೇಡು, ಎನೆ, ಭಕ್ತಂ, ಪದಾರವಿಂದಕ್ಕೆ, ಎರಗಿ, ಕರಾಂಜಲಿಗೆಯ್ದು-ಕೈಮುಗಿದು. * * * * * * * * * * * * * * * *

ಉಮಾವರ! ಆವಾವವರಮಂ, ಒಲ್ಲೆಂ; ನೀಂ, ಪೀರ್ದ- ಕುಡಿದ, ವಿಷಮಂ, ಉಗುಳ್ ಉಗುಳ್, ಉಗುಳ್ದಅಂದು- ಉಗುಳಿದಾಗ, ಭಾವಜಹರ, ನೀಂ, ಈವರದಕೋಟಿಯಂ- ಇಂತಾಕೋಟಿವರಗಳನ್ನು, ಎನಗೆ, ಕೊಟ್ಟವಂ, ಅಲ್ತೆ. ... ... ... ... ॥೪೭॥

ಫಣಿಧರ- ಸರ್ಪಧಾರಿಯಾದ ಶಿವನೇ, ನೀಂ, ಬಿಸಮುಂಡುದಂ- ವಿಷಪಾನಮಾಡಿದುದನ್ನು, ಅಣುಮಾತ್ರಂ, ಕೇಳಲಾರೆಂ, ಉಗುಳ್, ಉಗುಳ್, ಎಂದು, ಆಗುಣನಿಧಿ- ಸದ್ಗುಣಗಳಿಗೆ ನಿಕ್ಷೇಪನಾದ ಆ ರುದ್ರಪಶುಪತಿಯು, ಹರಿವಿಧಿಮುಖಸುರಗಣಂ, ಅಗಿವಿನಂ- ಭಯಪಡುವಂತೆ, (ಯಾಕೆಂದರೆ ಪರಶಿವನು ವಿಷವನ್ನುಗುಳಿದರೆ ಪುನಃ ಪೂರ್ವದಂತೆ ನಮಗೆ ಏನುಬಾಧೆಯುಂಟಾಗುವದೋಎಂದು) ಉಸಿರೆ- ಹೇಳಲು, ಶಂಕರಂ, ನಗುತೆ, ಎಂದಂ. ... ... ... ... ॥೪೮॥

ಎಲೆಮಗನೆ, ಎನಗೆ, ನಂಜಿನ- ವಿಷದ, ಭಯಂ, ಉಂಟು, ಎಂದು, ಅಂಜದಿರ್- ಭಯಪಡದೇಇರು; ಎನ್ನಯ, ಕೊರಲೊಳ್- ಕತ್ತಿನಲ್ಲಿ, ರಂಜಿಸುವ, ಅಂಜನವರ್ಣದ-ಕಪ್ಪಾದ, ಮಂಜಿನ, ಸೀರ್ಪನಿಯೊಲ್- ಸಣ್ಣ ಹನಿಯಂತೆ, ಎಸೆವ, ಹಾಲಾಹಲಮಂ- ವಿಷವನ್ನು, ನೋಳ್ಪುದು. ... ... ॥೪೯॥

ಇದು, ಎನ್ನಂ, ಏಗೆಯ್ದಪುದು- ಏನುಮಾಡುವದು? ಎಂದು, ಅಭವಂ, ನುಡಿಯಲ್, ರುದ್ರಪಶುಪತಿ,

ದ್ಗರಳಶೀಕರಮ ನಭೀಕ್ಷಿಸಿ ॥ * * * * * * * * * * * *

ಕಂ ॥ ಇದುದಿನದಿನದೊ ಳ್ಬಳೆಬಳೆ ! ದುದರಮ ನೊಳಪುಗದೆ ಮಾಣ್ದಪುದೆ ಪೊ ಕ್ಕಾಗಳ್ ॥ ಪದುಳಮಿರಲೀವುದೇ ನಿ । ನ್ನ ದಯಾನಿಧಿ ಬಿಟ್ಟು ಕಳೆವುದೀಗಳೆ ಗರಮಂ ॥

ಕಂ॥ ಬಿಡದೊಡೆ ಕೇಳೆನ್ನಸುವಂ । ಬಿಡುವೆಂ ಬಿಡದಂದಮೆಂತು ನೋೞ್ಪನೆ ನಿನಗ ॥ ಪ್ಪಡವಳಲನೆಂದು ಕೂರಸಿ । ವಿಡಿದಂ ಮೃತಿಗಮರರಳ್ಕೆ ಪೊಗಳೆ ಗಣಂಗಳ್ ॥ ॥೫೧॥

ವ ॥ ಅಂತು ತನ್ನಂ ಪರಿಚ್ಛೇದನಂಗೆಯ್ಯಲುಜ್ಜುಗಿಸಿದ ಭಕ್ತವರನ ನೇಹದ ಬಗೆಗೆ ಮೆಚ್ಚಿ ಮದನಹರಂ ಕಾರುಣ್ಯದಿ ನೀಕ್ಷಿಸುತ್ತ ಮಿವಂ ವಿಷಮ ನುಗುಳದಿರೆ ಸಾಯದಿರಂ ವಿಷಮನುಗುಳೆ ಭುವನಂ ಬೇಯದಿರದೇಗೆಯ್ವೆ ನೆಂದು ಭಕ್ತಹಿತಭುವನಹಿತಕಾರ್ಯದ್ವಂ ದ್ವದೊ ಳಾಂದೋಳಿಪಮನಮ ನೊಂದೆಡೆಗೊಂದಿಸಿ ನೆನೆದುಭಯಹಿತಾರ್ಥಮಾಗಿ ಶಿವ ನಿಂತೆಂದಂ ॥ * * * * * * * * * * * * * * * *

ಕಂ॥ ಪ್ರಮಥವರರಾಣೆ ನಿನ್ನಾ । ಣೆ ಮಗನೆ ಗಳವಿಷದಿ ನಳಿಯೆ ನಳಿಯೆಂ ದಿಟ ಮೌ॥ ರ್ವಮಹಾಶಿಖಿನಂದಿದಪುದೆ । ಹಿಮಕಣದಿ ನೆನುತ್ತೆ ಶಂಭು ನಂಬುಗೆಗೊಟ್ಟಂ ॥ ॥೫೨॥

ವ॥ ಅಂತು ನಂಬುಗೆಯಿತ್ತಿದುಮಂ ನಂಬದೊಡೆನ್ನ ಬಲದೊಡೆಯನೇರಿ ಕೊರಲಂ ನಿ

---

ಕೇಳ್ದು, ಒಡಂ- ತತ್‌ಕ್ಷಣದಲ್ಲೇ,ತದ್ಗರಳಶೀಕರಮಂ- ಆವಿಷದ ಹನಿಯನ್ನು,ಅಭೀಕ್ಷಿಸಿ-ನೋಡಿ. * *

ದಯಾನಿಧಿ, ಇದು- ಈವಿಷದ ಹನಿಯು, ದಿನದಿನದೊಳ್, ಬಳೆಬಳೆದು, ಉದರಮಂ- ಹೊಟ್ಟೆಯನ್ನು, ಒಳಪುಗದೆ- ಒಳಕ್ಕೆ ಪ್ರವೇಶಿಸದೆ, ಮಾಣ್ದಪುದೆ- ಬಿಡುವದೇ? ಪೊಕ್ಕು- ಪ್ರವೇಶಿಸಿದ, ಆಗಳ್- ಆಕಾಲದಲ್ಲಿ, ನಿನ್ನ, ಪದುಳಂ- ಸುಖವಾಗಿ, ಇರಲ್, ಈವುದೇ- ಅವಕಾಶವಂ ಕೊಡುವದೇ? ಈಗಳೆ,,ಗರಮಂ_ ವಿಷವ ನ್ನು, ಬಿಟ್ಟು, ಕಳೆವುದು- ಕತ್ತಿನಿಂ ತೆಗೆದುಬಿಸಾಡಬೇಕು. ... .... ... ॥೫೦॥

ಕೇಳ್, ಬಿಡದೊಡೆ- ವಿಷವನ್ನು ಬಿಡದಿದ್ದರೆ, ಎನ್ನ, ಅಸುವಂ-ಪ್ರಾಣವನ್ನು, ಬಿಡುವೆಂ; ಬಿಡದ, ಅಂ ದವು- ರೀತಿಯು, ಎಂತು- ಹ್ಯಾಗೆ? ನಿನಗೆ, ಅಪ್ಪ, ಅಡವಳಲಂ- ವ್ಯಥೆಯನ್ನು, ನೋೞ್ಪನೆ? ಎಂದು, ಅಮರ ರ್, ಅಳ್ಕೆ- ಭಯಪಡಲು, ಮೃತಿಗೆ- ಮರಣಕ್ಕೋಸ್ಕರ,,ಗಣಂಗಳ್, ಪೊಗಳೆ, ಕೂರಸಿವಿಡಿದಂ- ತೀಕ್ಷ್ಣವಾ ದ ಕತ್ತಿಯಂ ಹಿಡಿದನು. ... ... ... ... ..., ॥೫೧॥

ಅಂತು, ತನ್ನಂ, ಪರಿಚ್ಛೇದನಂಗೆಯ್ಯಲ್– ಕತ್ತರಿಸುವದಕ್ಕೋಸ್ಕರ, ಉಜ್ಜುಗಿಸಿದ- ಪ್ರಯತ್ನಪ ಟ್ಟ, ಭಕ್ತವರನ, ನೇಹದ- ಪ್ರಣಯವಿಶಿಷ್ಟವಾದ, ಬಗೆಗೆ- ಮನಸ್ಸಿಗೆ, ಮದನಹರಂ, ಮೆಚ್ಚಿ- ಶ್ಲಾಘಿಸಿ, ಕಾರುಣ್ಯದಿಂ, ಈಕ್ಷಿಸುತ್ತಂ_ನೋಡುತ್ತ, ವಿಷಮಂ, ಉಗುಳದಿರೆ- ಉಗುಳದಿದ್ದರೆ, ಇವಂ—ಈಭಕ್ತನು, ಸಾ ಯದಿರಂ- ಸಾಯದೇಇರುವದಿಲ್ಲ; ವಿಷಮಂ, ಉಗುಳೆ- ಉಗುಳಿದರೆ, ಭುವನಂ, ಬೇಯದೆ-ಸುಟ್ಟುಹೋಗದೆ, ಇರದು; ಏಗೆಯ್ವೆಂ- ಏನುಮಾಡಲಿ? ಎಂದು, ಶಿವಂ, ಭಕ್ತಹಿತಭುವನಹಿತಕಾರ್ಯದ್ವಂದ್ವದೊಳ್- ಆ ಭಕ್ತನಿಗೆ ಹಿತವನ್ನು ಮಾಡಬೇಕೆಂಬ ಪ್ರಪಂಚಕ್ಕೆ ಹಿತವಂಮಾಡದೇಕೆಂಬ ಎರಡುಕಾರ್ಯಗಳಲ್ಲೂ, ಆಂದೋಳಿಪ- ತೂ ಗಾಡುವ, ಮನಮಂ, ಒಂದೆಡೆಗೆ- ಒಂದುಕಡೆಗೆ, ಒಂದಿಸಿ— ಸೇರಿಸಿ, ಉಭಯಹಿತಾರ್ಥಮಾಗಿ- ಭಕ್ತಭುವನವೆ ರಡರಹಿತಕ್ಕೋಸ್ಕರ, ನೆನೆದು, ಇಂತೆಂದಂ. * * * * * * * * * * *

ಮಗನೆ! ಪ್ರಮಥವರರ, ಆಣೆ, ನಿನ್ನ, ಆಣೆ, ಗಳವಿಷದಿಂ- ಕತ್ತಿನಲ್ಲಿರುವವಿಷದಿಂದ, ಅಳಿಯೆಂ- ಸಾ ಯುವದಿಲ್ಲ; ಅಳಿಯೆಂ, ದಿಟಂ- ನಿಶ್ಚಯ; ಔರ್ವಮಹಾಶಿಖಿ- ಬಡಬಾಗ್ನಿಯು, ಹಿಮಕಣದಿಂ- ಮಂಜಿನಹನಿ ಯಿಂದ, ನಂದಿದಪುದೆ- ಆರುವದೇ? ಎನುತ್ತೆ, ಶಂಭು, ನಂಬುಗೆಗೊಟ್ಟಂ- ಭರವಸವನ್ನುಕೊಟ್ಟನು. ॥೫೨॥

ಶಂಕರಂ, ಅಂತು, ನಂಬುಗೆಯಿತ್ತು, ಇದುಮಂ- ಇದನ್ನೂ, ನಂಬದೊಡೆ- ನಂಬದಿದ್ದರೆ, ಎನ್ನ, ಬಲ

ಚ್ಚಂ ನಿರೀಕ್ಷಿಸುತ್ತಿರೆಂದು ನುಡಿದೊಡಂಬಡಿಸುತವನ ನಂಕಾಲಂಕಾರನಂ ಶಂಕರುಮಾಡೆ॥

ಕಂ ॥ ಕರವಾಲ ನುರ್ಚ್ಚಿ ಪಿಡಿದೀ । ಶ್ವರನಂಕಮ ನೇರಿ ಕೊರಲ ನೀಕ್ಷಿಸುತುತ್ಕಂ ॥ ಧರರುದ್ರಪಶುಪನಿರ್ಪಂ । ಗರಳಂ ಮಿಡುಕಿದೊಡೆ ಮಡಿವೆ ನೆಂದತಿಮುಗ್ಧಂ ॥ ॥೫೩॥

ಕಂ ॥ ವರರುದ್ರಪಶುಪತಿಯ ಸ । ಚ್ಚರಿತನು ನಿಂತೊರೆದು ಚೆನ್ನಬಸವಂಗೆ ಗುಣಾ ॥ ಕರಬಸವಂ ಮಗುಳ್ದೋರ್ವ್ವನ । ಶರಣನ ಸತ್ಕಥೆಯ ನೊರೆವೆ ನೆಂದಿಂತೆಂದಂ ॥೫೪॥

ಕಂ ॥ ತಿರುನೀಲನಕ್ಕನೆನಿಪೀ । ಶ್ವರಭಕ್ತಂ ದ್ರವಿಡದೇಶದೊಳ್ನೆಲಸಿರ್ಪಂ ॥ ಪರಮಗುಣಾನ್ವಿತ ನಾತನ । ತರುಣಿ ಸುಶೀಲಾಭಿಧಾನದಿಂ ಕಂಗೊಳಿಪಳ್ ॥ ... ॥೫೫॥

ಮತ್ತೇ ॥ ಪರಮಾನಂದದಿ ನೊಂದುವಾಸರದೊಳಾಭಕ್ತಂ ಶಿವಾಗಾರದೊಳ್ । ವರಲಿಂಗಾರ್ಚ್ಚನಮಂ ನೆಗಳ್ಚುತಿರೆ ತಲ್ಲಿಂಗಾಗ್ರದೊಳ್ಪತ್ತಿ ಪೇ ॥ ರ್ಪರಿತರ್ಪೊಂದು ಸೆಲಂದಿಯಂ ಜವದಿ ನಾಗಳ್ಕಂಡು ತತ್ಕಾಂತೆ ಬಾ । ಯೆರಲಿಂ ತೂಪಿರಿದಳ್ಭಯಾಕುಲಿತೆ ಗಂಡಂ ಕಂಡ ನಾಕಜ್ಜಮಂ॥ ... ... ... ... ॥೫೬॥

ಚಂ ॥ ಎಲೆಯೆಲೆ ದೋಷದೂಷಿತೆ ದುರಾತ್ಮಿಕೆ ಲಿಂಗದ ಪಾವನಾಂಗಮಂ । ತೊಲಗದೆ ಬಾಯುಗುಳ್ಪಡಿಯೆ ತೂಂತಿರಿದಪ್ಪೆವರಾಕಿ ಪಾರೆನು ॥ ತ್ತಲೆದುಲಿದಾಕೆಯಂ ನಿಳಯ

---

ದೊಡೆಯಂ, ಏರಿ- ಹತ್ತಿ, ಕೊರಲಂ- ಕತ್ತನ್ನು, ನಿಚ್ಚಂ- ಯಾವಾಗಲೂ, ನಿರೀಕ್ಷಿಸುತ್ತ, ಇರ್, ಎಂದು, ನುಡಿದು, ಒಡಂಬಡಿಸುತೆ, ಆತನಂ- ಆಭಕ್ತನನ್ನು, ಅಂಕಾಲಂಕಾರನಂ- ತೊಡೆಗೆ ಭೂಷಣನನ್ನಾಗಿ, ಮಾಡೆ, (ಅಂದರೆ ತೊಡೆಯಮೇಲೆ ಕುಳ್ಳಿರಿಸಿಕೊಳ್ಳಲು) * * * * * * * * * * *

ಅತಿಮುಗ್ಧಂ, ಉತ್ಕಂಧರರುದ್ರಪಶುಪಂ- ಮೇಲಕ್ಕೆತ್ತಿದ ಕತ್ತುಳ್ಳ ರುದ್ರಪಶುಪತಿಯು, ಗರಳಂ- ವಿಷವು, ಮಿಡುಕಿದೊಡೆ- ಕತ್ತನ್ನು ಬಿಟ್ಟು ಚಲಿಸಿದರೆ, ಮಡಿವೆಂ- ಸಾಯುವೆನು,ಎಂದು,ಕರವಾಲಂ- ಕತ್ತಿಯನ್ನು,ಉರ್ಚ್ಚಿ- ಬಿಚ್ಚಿ, ಪಿಡಿದು, ಈಶ್ವರನ, ಅಂಕಮಂ- ತೊಡೆಯನ್ನು,ಏರಿ,ಕೊರಲಂ, ಈಕ್ಷಿಸುತ್ತ, ಇರ್ಪ್ಪಂ.

ಗುಣಾಕರಬಸವಂ, ಇಂತು, ಚೆನ್ನಬಸವಂಗೆ, ವರರುದ್ರಪಶುಪತಿಯ, ಸಚ್ಚರಿತಮಂ, ಒರೆದು- ಹೇಳಿ, ಮಗುಳ್ದು- ಮತ್ತೆ, ಓರ್ವ್ವನ, ಶರಣನ, ಸತ್ಕಥೆಯಂ, ಒರೆವೆಂ, ಎಂದು, ಇಂತೆಂದಂ. ... ॥೫೪॥

## ನಕ್ಕನಯ್ಯನಾರಕಥೆ.

ತಿರುನೀಲನಕ್ಕಂ, ಎನಿಪ, ಈಶ್ವರಭಕ್ತಂ, ಪರಮಗುಣಾನ್ವಿತಂ- ಶ್ರೇಷ್ಠವಾದ ಗುಣಗಳಿಂ ಕೂಡಿದವನಾಗಿ, ದ್ರವಿಡದೇಶದೊಳ್- ನೆಲಸಿ- ವಾಸವಾಗಿ, ಇರ್ಪ್ಪಂ; ಆತನ, ತರುಣಿ- ಪತ್ನಿಯು, ಸುಶೀಲಾಭಿಧಾನದಿಂ- ಸುಶೀಲೆಎಂಬ ಹೆಸರಿನಿಂದ, ಕಂಗೊಳಿಪಳ್. ... ... ... ॥೫೫॥

ಒಂದುವಾಸರದೊಳ್- ಒಂದು ದಿವಸದಲ್ಲಿ, ಆಭಕ್ತಂ, ಪರಮಾನಂದದಿಂ, ಶಿವಾಗಾರದೊಳ್- ಶಿವದೇವಸ್ಥಾನದಲ್ಲಿ, ವರಲಿಂಗಾರ್ಚ್ಚನಮಂ- ಶ್ರೇಷ್ಠವಾದ ಲಿಂಗಪೂಜೆಯನ್ನು, ನೆಗಳ್ಚುತಿರೆ- ಮಾಡುತ್ತಿರಲು. ಆಗಳ್- ಆಕಾಲದಲ್ಲಿ, ತಲ್ಲಿಂಗಾಗ್ರದೊಳ್- ಆ ಲಿಂಗದ ಮೇಲ್ಗಡೆಯಲ್ಲಿ, ಪತ್ತಿ- ಹತ್ತಿ, ಪೇರ್, ಪರಿತರ್ಪ್ಪ- ಹರಿದುಬರುವ, ಒಂದುಸೆಲಂದಿಯಂ- ಒಂದು ಜೇಡ ಹುಳುವನ್ನು, ತತ್ಕಾಂತೆ- ಅವನ ಪತ್ನಿಯು, ಜವದಿಂ- ಶೀಘ್ರವಾಗಿ, ಕಂಡು, ಭಯಾಕುಲಿತೆ- ಭಯದಿಂದ ವ್ಯಾಕುಲವಿಶಿಷ್ಟಳಾಗಿ, ಬಾಯ, ಎರಲಿಂ-ಗಾಳಿಯಿಂದ,ತೂಪಿರಿದಳ್- ಊದಿದಳು, ಗಂಡಂ, ಆಕಜ್ಜಮಂ- ಆಕಾರ್ಯವನ್ನು, ಕಂಡಂ. ... ... ॥೫೬॥

ದೋಷದೂಷಿತೆ- ಪಾಪವಿಶಿಷ್ಟಳಾದ, ದುರಾತ್ಮಿಕೆ- ದುಷ್ಟಳಾದ, ಎಲೆಎಲೆ! ಲಿಂಗದ ಪಾವನಾಂಗಮಂ- ಪರಿಶುದ್ಧವಾದ ಶರೀರವನ್ನು, ತೊಲಗದೆ- ಬಿಡದೆ; ಬಾಯ, ಉಗುಳ್, ಪಡಿಯೆ- ಪಿಡಿಯುವಂತೆ,

ದಿಂ ಪೊರಗಿಕ್ಕಿ ನಿರೀಕ್ಷಿಪಾಗಳಾಲಲನೆ ಬಿಗುರ್ತು ತೊಂತಿರಿಯದಿರ್ದು ತದೀಯಕಳೇವರಾರ್ಧದೊಳ್ ‖ ... .. ... ... ‖೫೭‖

ಕಂ ‖ ಕರ್ಪೂರದ ಮಣಿಗಣಮೆನೆ ತೋರ್ಪನವಸ್ಫೋಟಕಂಗಳಿರೆ ಕಾಣುತ್ತಂ ‖ ಸರ್ಪಧರಭಕ್ತನುತ್ಸವ । ಮಿರ್ಪಡಗೆ ವಿಷಾದದಿಂದೆ ಬಿಸುಸುಯ್ದಾಗಳ್ ‖ ... ‖೫೮‖

ಕಂ ‖ ತೊಂತಿರಿದು ಹಿತಮು ನೆಸಗಿದ । ಕಾಂತೆಯ ಕಡೆನೂಂಕಿ ಪೊಲ್ಲದೆಸಗಿದೆ ನೆಂದಾ ‖ ಚಿಂತಾಭರಿತಂ ಭರದಿಂ । ತಾಂ ತರುಣಿಯ ಪೊರೆಗೆ ಬಂದು ಪೊಡಮಡುತೆಂದಂ ‖೫೯‖

ಕಂ ‖ ಪರಮಶಿವಭಕ್ತೆ ನಿನ್ನಯ । ಪರಿಯಂ ಮುನ್ನರಿಯದಕಟ ಜಡಿದೆಂ ಬಡಿದೆಂ ‖ ತರಳಾಕ್ಷಿ ನಿನಗೆ ತಪ್ಪಂ । ಕರಮೆಸಗಿದೆನ್ನವೋಲ್ ದುರಾತ್ಮಕರೊಳರೆ ‖ ... ‖೬೦‖

ಕಂ ‖ ಪೆರೆದಲೆಯ ನಂಗದೊಳ್ತೊಂ । ತಿರಿದೆಡೆಯೊಳ್ನೀಂ ಮೃಗಾಕ್ಷಿ ಪುಗುಳಿಲ್ಲುಳಿದಾ ‖ ತೆರಪಿನೊಳೊಗೆದುದು ಬಂದದ । ನುರೆ ತೊಂತಿರಿದೊರಸಿ ಕಳೆ ಕಳಾಧರವದನೆ ‖

ಮತ್ತಂ ‖ ಎನೆ ಕೇಳ್ದು ತನಕಾಂತೆ ನೊಂದು ಮನದೊಳ್ಮದ್ದೇವ ದೇವಂಗೆ ನೋ । ವೆ

---

ತೊಂತಿರಿದಪ್ಪೆ- ಉರುಬುವೆ, ಪರಾಕಿ- ನೀಚೆಯೇ ! ಪೋರ್- ಹೋಗು, ಎನುತ್ತೆ, ಅಲೆದು- ಪೀಡಿಸಿ, ಉಲಿದು- ಕೂಗಿ, ಆಕೆಯಂ, ನಿಳಯದಿಂ- ಮನೆಯಿಂದ, ಪೊರಗೆ-ಹೊರಕ್ಕೆ, ಇಕ್ಕಿ- ಕಳುಹಿಸಿ, ನಿರೀಕ್ಷಿಪಾಗಳ್- ನೋಡುವಕಾಲದಲ್ಲಿ, ಆಲಲನೆ- ಆ ಸ್ತ್ರೀಯು, ಬಿಗುರ್ತು- ಭಯಪಟ್ಟು, ತೊಂತಿರಿಯದೆ, ಇರ್ದು, ತದೀಯ ಕಳೇವರಾರ್ಧದೊಳ್- ಆ ಲಿಂಗದ ಅರ್ಧಶರೀರದಲ್ಲಿ. ... ... ... ‖೫೭‖

ಕರ್ಪೂರದ- ಕರ್ಪೂರದಿಂದ ಮಾಡಿರುವ, ಮಣಿಗಣಂ- ಮಣಿಗಳ ಸಮೂಹವು, ಎನೆ, ತೋರ್ಪ, ನವಸ್ಫೋಟಕಂಗಳ್- ನೂತನವಾದ ಗುಳ್ಳೆಗಳು, ಇರೆ, ಸರ್ಪಧರಭಕ್ತಂ- ಆ ಶಿವಭಕ್ತನು, ಕಾಣುತ್ತಂ, ಉತ್ಸವಂ, ಇರ್ಪಡಗೆ- ಕುಂದಲು, ವಿಷಾದದಿಂದೆ- ಮನಃಕ್ಲೇಶದಿಂದ, ಬಿಸುಸುಯ್ದು- ಬೆಚ್ಚನೆ ನಿಟ್ಟುಸಿರಂ ಬಿಟ್ಟು, ಆಗಳ್. ... ... ... ... ... ‖೫೮‖

ತೊಂತಿರಿದು- ತುಂತಿರಿನಿಂ ಕೂಡಿರುವಂತೆ ಉರುಬಿ, ಹಿತಮಂ, ಎಸಗಿದ, ಕಾಂತೆಯಂ, ಕಡೆನೂಂಕಿ- ಆಚೆಗೆ ನೂಂಕಿ, ಪೊಲ್ಲದ- ಉಚಿತವಲ್ಲದುದನ್ನು, ಎಸಗಿದೆಂ- ಮಾಡಿದೆನು, ಎಂದು ಆಚಿಂತಾಭರಿತಂ, ಭರದಿಂ- ಶೀಘ್ರವಾಗಿ, ತಾಂ, ತರುಣಿಯ- ಪತ್ನಿಯ, ಪೊರೆಗೆ- ಸಮೀಪಕ್ಕೆ, ಬಂದು, ಪೊಡಮಡುತೆ- ನಮಸ್ಕರಿಸುತ್ತ, ಎಂದಂ. ... ... ... ... ... ‖೫೯‖

ಪರಮಶಿವಭಕ್ತೆ ! ನಿನ್ನಯ, ಪರಿಯಂ- ರೀತಿಯನ್ನು, ಮುನ್ನ- ಮೊದಲಲ್ಲಿ, ಅರಿಯದೆ, ಅಕಟ- ಅಯ್ಯೋ ! ಜಡಿದೆಂ- ಭಯಪಡಿಸಿದೆನು, ಬಡಿದೆಂ- ಹೊಡೆದೆನು; ತರಳಾಕ್ಷಿ- ಚಂಚಲವಾದ ಕಣ್ಣುಳ್ಳವಳೇ ! ನಿನಗೆ ಕರಂ- ಅತ್ಯಂತವಾಗಿ, ತಪ್ಪಂ, ಎಸಗಿದೆಂ- ಮಾಡಿದೆನು; ಎನ್ನವೋಲ್- ನನ್ನಂತೆ, ದುರಾತ್ಮಕರ್- ದುಷ್ಟರಾದವರು, ಒಳರೆ- ಇರುವರೆಯೇ? ... ... ... ... ‖೬೦‖

ಮೃಗಾಕ್ಷಿ- ಜಿಂಕೆಯ ಕಣ್ಣಿನಂತಿರುವ ಕಣ್ಣುಳ್ಳ, ಕಳಾಧರವದನೆ- ಚಂದ್ರಮುಖಿಯೇ ! ನೀಂ * ಪೆರೆದಲೆಯನ- ಈಶ್ವರನ, ಅಂಗದೊಳ್, ತೊಂತಿರಿದ, ಎಡೆಯೊಳ್- ಸ್ಥಳದಲ್ಲಿ, ಪುಗುಳ್- ಗುಳ್ಳೆಯು, ಇಲ್ಲ; ಉಳಿದ- ಮಿಕ್ಕ, ಆ ತೆರಪಿನೊಳ್- ಸ್ಥಳದಲ್ಲಿ, ಒಗೆದುದು- (ಗುಳ್ಳೆಯು) ಹುಟ್ಟಿತು, (ನೀಂ) ಬಂದು, ಅದಂ, ಉರೆ- ಅಧಿಕವಾಗಿ, ತೊಂತಿರಿದು, ಒರಸಿ- ತಿಕ್ಕಿ, ಕಳೆ- ಹೋಗಲಾಡಿಸು. ... ... ‖೬೧‖

ಎನೆ, ಆತನ, ಕಾಂತೆ, ಕೇಳ್ದು, ಮನದೊಳ್, ನೊಂದು, ಮದ್ದೇವದೇವಂಗೆ- ನನಗೆ ಸ್ವಾಮಿಯಾದ

---

* (ಅವ) ಪೆರೆ- ಚಂದ್ರನು, ತಲೆಯ- ಶಿರಸ್ಸಿನಲ್ಲುಳ್ಳವನು. ... ... ‖೬೧‖

ನಿತಾಯ್ತೋ ಪುಗುಳಿಂದೆಕೆಟ್ಟೆನೆನುತಂ ಕೋಪಾತುರಂ ಬಯ್ದೊಡಂ ॥ ಮುನಿಸಿಂ ಪೊಯ್ದೊ
ಡ ಮೋವ್ರೊ ತೂಂತಿರಿಯದಾನೇಕಿಲ್ಲಿಗೇಳ್ತಂದೆ ನೆಂ । ದು ನಿತಾಂತಂ ಪೊನಲಾಗೆ ಕಣ್ಬ
ನಿಯಳುತ್ತೈತಂದು ತಲ್ಲಿಂಗದ ॥ ... ... ... ॥೬೨॥

ಮತ್ತೇ॥ ಕೆಲದೊಳ್ನಿಂದು ನಿರೀಕ್ಷಿಸುತ್ತೆ ನಿಬಿಡಸ್ಫೋಟಂಗಳಂ ಕಂಡು ಕಾ ।
ದಲನುಂ ತಾನು ಮಮಂದಶೋಕರಸದೊಳ್ತೇಂಕಾಡುತಂ ಪುಷ್ಪಕೋ ॥ ಮಲಲಿಂಗಾಂಗ
ದೊಳಾಯ್ತು ಬಲ್ಪುಗುಳಿದೆನ್ನಿಂ ಮುನ್ನಮೇಗಯ್ವೆನೆಂ । ದು ಲಸತ್ಖಡ್ಗದೆ ತನ್ನಗೋ
ಣ್ಗೊರೆಯೆ ಕೂರ್ಪಿಂ ಮಚ್ಚಿದಂ ಶಂಕರಂ ॥ ... ... ... ॥೬೩॥

ವ॥ ಅಂತು ಮಹೇಶ್ವರಂ ದಿವಿಜಗಣಗಣೇಂದ್ರಸಹಿತಂ ತನ್ಮುಗ್ಧಭಕ್ತಿಗೊಲವಿಂ ಪ್ರ
ತ್ಯಕ್ಷಮಾಗಿ ವರಮನಿತ್ತಪೆಂ ಬೇಡಿ ಮೆನೆ ಜಾಯಾಪತಿಗಳ್ ಸಾಷ್ಟಾಂಗಮೆರಗಿ ಬದ್ಧಾಂ
ಜಲಿಗಳಾಗಿ ॥ * * * * * * * * * * * * * * *

ಕಂ॥ ಇನ್ನೆಮಗೆ ಬೇರೆವರಮೇಂ । ನಿನ್ನಯ ತನುಸುಖದೊಳಿರೆ ನಿರೀಕ್ಷಿಪುದೆವರಂ॥
ಭಿನ್ನವರಂಗಳನರ್ಥಿಸೆ । ನಿನ್ನಂಘ್ರಿಯನೊಲ್ಲದಿರ್ದರಾಗವೆ ನಿಜದಿಂ ॥ .. ॥೬೪॥

ಕಂ॥ ಭವ ಭವದಂಘ್ರಿಸ್ಮರಣಮ । ವಿರತ ಮಿರ್ಕೆಮಗೆ ನಿನ್ನಗಣರುಂ ನೀನುಂ॥
ಪ್ರವಿತತಸುಖಮಿರ್ಪುದೆಬೇ । ಳ್ಪ ವರಂ ಬೇರಿಲ್ಲ ಬಾಲಚಂದ್ರಾಭರಣ ॥ ... ॥೬೫॥

---

ದೇವರಿಗೆ, ಪುಗುಳಿಂದೆ- ಗುಳ್ಳೆಯಿಂದ, ಎನಿತುನೋವ್- ಎಷ್ಟುಬಾಧೆಯು, ಅಯ್ತೋ! ಕಟ್ಟೆಂ, ಇನಿಯಂ-ಪತಿಯು, ಕೋಪಾತುರಂ- ಕೋಪಾಸಕ್ತನಾಗಿ, ಬಯ್ದೊಡಂ, ಮುನಿಸಿಂ- ಸಿಟ್ಟಿನಿಂದ, ಪೊಯ್ದೊಡಂ- ಹೊಡೆದಾಗ್ಯೂ, ಆಂ, ತೂಂತಿರಿಯದೆ, ಇಲ್ಲಿಗೆ, ಏಕೆವಳ್ತಂದೆಂ- ಏಕೆಬಂದೆನೋ? ಓವೊ! ಎಂದು, ನಿತಾಂತಂ-ಅತ್ಯಂತವಾಗಿ, ಕಣ್ಬನಿ-ಬಾಷ್ಪೋದಕದಕಣಗಳು, ಪೊನಲ್-ಪ್ರವಾಹವು, ಆಗೆ; ಅಳುತ್ತೆ, ಐತಂದು, ತಲ್ಲಿಂಗದ.

ಕೆಲದೊಳ್- ಪಾರ್ಶ್ವದಲ್ಲಿ, ನಿಂದು, ನಿರೀಕ್ಷಿಸುತ್ತೆ, ನಿಬಿಡಸ್ಫೋಟಂಗಳಂ- ದಟ್ಟವಾಗಿರುವ ಗುಳ್ಳೆಗಳನ್ನು, ಕಂಡು, ಕಾದಲನುಂ- ಪತಿಯೂ, ತಾನುಂ, ಅಮಂದಶೋಕರಸದೊಳ್- ಹೆಚ್ಚಾದ ದುಃಖಸಮುದ್ರದಲ್ಲಿ, ತೇಂಕಾಡುತಂ- ತೇಲಾಡುತ್ತ, ಪುಷ್ಪಕೋಮಲಲಿಂಗಾಂಗದೊಳ್- ಹೂವಿನಂತೆ ಮೃದುವಾದ ಲಿಂಗದದೇಹದಲ್ಲಿ, ಇದುಬಲ್ಪುಗುಳ್- ಈ ಬಲವಾದ ಗುಳ್ಳೆಗಳು, ಮುನ್ನ, ಮೊದಲು, ಎನ್ನಿಂ, ಆಯ್ತು, ಏಗೆಯ್ವೆಂ- ಏನುಮಾಡೋಣ? ಎಂದು, ಲಸತ್ಖಡ್ಗದೆ- ಪ್ರಕಾಶಿಸುವ ಕತ್ತಿಯಿಂದ, ತನ್ನ, ಗೋಣ್ಗೊರೆಯೆ- ಕತ್ತನ್ನು ಕೊಯ್ಯಲು, ಶಂಕರಂ, ಕೂರ್ಪಿಂ- ಪ್ರೀತಿಯಿಂದ, ಮಚ್ಚಿದಂ. ... ... ॥೬೩॥

ಅಂತು, ಮಹೇಶ್ವರಂ, ದಿವಿಜಗಣಗಣೇಂದ್ರಸಹಿತಂ- ದೇವತಾಸಮೂಹ ಗಣಶ್ರೇಷ್ಠರು ಇವರುಗಳಿಂ ಕೂಡಿದವನಾಗಿ, ತನ್ಮುಗ್ಧಭಕ್ತಿಗೆ- ಅವರಮೂಢಭಕ್ತಿಗೆ, ಒಲವಿಂ- ಪ್ರೀತಿಯಿಂದ, ಪ್ರತ್ಯಕ್ಷಂ, ಆಗಿ, ವರಮಂ, ಇತ್ತಪೆಂ, ಬೇಡಿಂ- ಕೇಳಿರಿ, ಎನೆ, ಜಾಯಾಪತಿಗಳ್- ಹೆಂಡತಿಗಂಡಂದಿಗು, ಸಾಷ್ಟಾಂಗಂ, ಎರಗಿ, ಬದ್ಧಾಂಜಲಿಗಳ್, ಆಗಿ. * * * * * * * * * * * * * * *

ಇನ್ನು, ಎಮಗೆ, ಬೇರೆ, ವರಂ, ಏಂ? ನಿನ್ನಯ, ತನು- ದೇಹವು, ಸುಖದೊಳ್, ಇರೆ, ನಿರೀಕ್ಷಿಪುದೆ-ನೋಡುವದೇ, ವರಂ; ಭಿನ್ನವರಂಗಳಂ- ಬೇರೆವರಗಳನ್ನು, ಅರ್ಥಿಸೆ- ಬೇಡಿದರೆ, ನಿಜಮಂ, ನಿನ್ನ, ಅಂಘ್ರಿಯಂ-ಪಾದವನ್ನು, ಒಲ್ಲದಿರ್ದರ್- ಇಚ್ಛೈಸದವರು, ಆಗವೆ- ಆಗುವದಿಲ್ಲವೇ? ... ... ॥೬೪॥

ಬಾಲಚಂದ್ರಾಭರಣ! ಭವ! ಇದುಭವದಂಘ್ರಿಸ್ಮರಣಂ- ಈ ನಿನ್ನ ಪಾದಸ್ಮರಣೆಯು, ಎಮಗೆ, ಅವಿರತಂ- ನಿರಂತರದಲ್ಲೂ, ಇರ್ಕೆ- ಇರಲಿ, ನಿನ್ನ, ಗಣರುಂ- ಪ್ರಮಥರೂ, ನೀನುಂ, ಪ್ರವಿತತಸುಖಂ- ವಿಸ್ತಾರವಾದ ಸುಖವುಳ್ಳವರಾಗಿ, ಇರ್ಪುದೆ, ಬೇಳ್ಪ- ಬೇಡುವ, ವರಂ, ಬೇರೆ, ಇಲ್ಲ. ... ... ॥೬೫॥

ವ ॥ ಎಂದು ಬಿನ್ನೈಸಲೊಡನೆ ॥ ತರಳವೃತ್ತಂ ॥ ಹರಿ ವಿರಿಂಚಿ ಪುರಂದರಾದಿ
ಗಳಂದು ತನ್ನಿಜಭಕ್ತಿಗ । ಚ್ಚರಿಯನಾನೆ ಗಣಾಳ ಸಂತಸವೊಂದಿ ಕೀರ್ತಿಸೆ ಸತ್ಕೃಪಾ ॥
ಶರಧಿ ಯಲ್ಲಿಮುಳುಂಗಿ ಸುತ್ತವರಂ ಮಹಾನಿಜಮೋಕ್ಷಭಾ । ಸುರಸುಖಸ್ಥಿತಿಯಿತ್ತು ಮ
ನ್ನಿಸಿದಂ ಮನೋಭವಮರ್ದನಂ ॥ ... ... ... ॥೬೬॥

ವ ॥ ಎಂದೀಕಥೆಯ ನುಸಿರ್ದು ಮತ್ತಂ ಕೇಳ್ವುದೆಂದಿಂತೆಂದಂ ॥ * * * *

ಮತ್ತೇ ॥ ವಿಳಸದ್ಬಾಹ್ಯವನೋಪರಮ್ಯಪರಿಖಾಪೂರ್ಣಾಂಬುಜಾತಾಂಬುಜೋ ।
ತ್ಪಳಕಲ್ಹಾರಸುಗಂಧಿಚುಂಬಿತನಭಶ್ಚಂದ್ರಾಶ್ಮಸಾಲಂ ಸಮು ॥ ಜ್ಜ್ವಳರತ್ನಾಲಯಹರ್ಮ್ಯ
ಮಂಟಪಶಿವಾಗಾರಾಮಿತಶ್ರೀಯುತಂ । ಕಳೆವೆತ್ತಗ್ಗಳವಾಗಿ ರಂಜಿಪುದು ಕೋಳೂರೆಂಬ
ಸತ್ಪಟ್ಟಣಂ ॥ ... ... ... ... ॥೬೭॥

ಕಂ ॥ ಆಪಟ್ಟಣದೊಳಗಿರ್ಪಂ । ಗೋಪಧ್ವಜಪಾದಪೂಜಕಂ ಮೃದುಮಧುರಾ ॥ ಳಾ
ಪಂ ಸದ್ಗುಣನಿವಹಕ । ಳಾಪಂ ಶಿವದೇವ ನೆಂಬ ಭಕ್ತನದೋರ್ವಂ ॥ ... ॥೬೮॥

ಕಂ ॥ ಅವನ ತನುಜಾತೆ ಸುಂದರಿ । ಕುವಲಯದಳನಯನ ಕೋಮಲಾಂಗಿ ಸುಧಾ

---

ಎಂದು, ಬಿನ್ನೈಸಲ್- ವಿಜ್ಞಾಪಿಸಿಕೊಳ್ಳಲು, ಒಡನೆ-ಕೂಡಲೇ. * * * * * * *

ಹರಿವಿರಿಂಚಿಪುರಂದರಾದಿಗಳ್- ವಿಷ್ಣು ಬ್ರಹ್ಮ ಇಂದ್ರ ಮೊದಲಾದವರುಗಳು, ಅಂದು, ತನ್ನಿಜಭಕ್ತಿಗೆ- ಆ ರುದ್ರಪಶುಪತಿಯ ಭಕ್ತಿಗೆ, ಅಚ್ಚರಿಯಂ, ಆನೆ- ಹೊಂದಲು, ಗಣಾಳಿ, ಸಂತಸವೊಂದಿ, ಕೀರ್ತಿಸೆ- ಹೊಗಳಲು, ಮನೋಭವಮರ್ದನಂ- ಮದನಹರನಾದ ಪರಶಿವನು, ಅವರಂ- ಆ ಮುಗ್ಧರನ್ನು, ಸತ್ಕೃಪಾ ಶರಧಿಯಲ್ಲಿ- ಸವಿಾಚೀನವಾದ ದಯೆಯೆಂಬ ಸಮುದ್ರದಲ್ಲಿ, ಮುಳುಂಗಿಸುತ್ತೆ, ಮಹಾನಿಜಮೋಕ್ಷಭಾಸುರ ಸುಖಸ್ಥಿತಿಯಿತ್ತು, ಅಧಿಕವಾಗಿಯೂ ಸ್ಥಿರವಾಗಿಯೂ ಮನೋಹರವಾಗಿಯೂ ಇರುವ ಮುಕ್ತಿಸುಖವನ್ನು ಕೊಟ್ಟು, ಮನ್ನಿಸಿದಂ.॥೬೬॥ ಎಂದು,ಈಕಥೆಯಂ, ಉಸಿರ್ದು,ಮತ್ತಂ,ಕೇಳ್ವುದು,ಎಂದು, ಇಂತೆಂದಂ. *

## ಕೋಳೂರು ಕೊಡಗೂಸಿನ ಕಥೆ.

ವಿಳಸತ್......ಸುಗಂಧಿ— ವಿಳಸತ್- ಪ್ರಕಾಶಿಸುವ, ಬಾಹ್ಯವನ- ಪಟ್ಟಣದ ಹೊರಗಿರುವ ಉಪವನದ, ಉಪರಮ್ಯ- ಸವಿಾಪದಲ್ಲಿ ಮನೋಹರವಾದ, ಪರಿಖಾ- ಕಂದಕದಲ್ಲಿ, ಪೂರ್ಣ- ತುಂಬಿರುವ, ಅಂಬು- ನೀರಿನಲ್ಲಿ, ಜಾತ- ಹುಟ್ಟಿದ, ಅಂಬುಜ-ಕಮಲ, ಉತ್ಪಳ-ನೈದಿಲೆ, ಕಲ್ಹಾರ- ಸುಗಂಧವಿಶಿಷ್ಟವಾದ ಕಮಲ ಇವುಗಳ, ಸುಗಂಧಿ- ಸವಿಾಚೀನವಾದ ಪರಿಮಳವುಳ್ಳ, ಚುಂಬಿತನಭಶ್ಚಂದ್ರಾಶ್ಮಸಾಲಂ— ಚುಂಬಿತ- ಸೋಂಕಲ್ಪಟ್ಟ, ನಭಃ- ಅಂತರಿಕ್ಷವುಳ್ಳ, ಚಂದ್ರಾಶ್ಮ- ಚಂದ್ರಕಾಂತಶಿಲೆಯ,ಸಾಲಂ- ಕೋಟೆಯುಳ್ಳ, ಸಮುಜ್ಜ್ವಳ......ಶ್ರೀಯುತಂ— ಸಮುಜ್ಜ್ವಳ- ಪ್ರಕಾಶಮಾನವಾದ, ರತ್ನ- ರತ್ನಗಳ, ಆಲಯ- ಮನೆಗಳು, ಹರ್ಮ್ಯ- ಉಪ್ಪರಿಗೆಗಳು, ಮಂಟಪ, ಶಿವಾಗಾರ- ಶಿವದೇವಸ್ಥಾನಗಳು, ಇವುಗಳ, ಅಮಿತ- ಅಗಣ್ಯವಾದ, ಶ್ರೀ- ಕಾಂತಿಯಿಂದ, ಯುತಂ-ಕೂಡಿದ, ಕೋಳೂರು, ಎಂಬ, ಸತ್ಪಟ್ಟಣಂ,ಕಳೆವೆತ್ತು-ತೇಜೋವಿಶಿಷ್ಟವಾಗಿ, ಅಗ್ಗಳಂ ಆಗಿ- ಶ್ರೇಷ್ಠವಾಗಿ, ರಂಜಿಪುದು. ... ... ... ॥೬೭॥

ಆಪಟ್ಟಣದೊಳಗೆ, ಗೋಪಧ್ವಜಪಾದಪೂಜಕಂ— * ಗೋಪಧ್ವಜ- ಈಶ್ವರನ, ಪಾದಪೂಜಕಂ, ಮೃದುಮಧುರಾಳಾಪಂ- ಕೋಮಲವಾಗಿಯೂ ಇಂಪಾಗಿಯೂ ಇರುವ ಮಾತುಳ್ಳ, ಸದ್ಗುಣನಿವಹಕಳಾಪಂ- ಸುಗುಣಸಮೂಹವೆಂಬಾಭರಣವುಳ್ಳ, ಶಿವದೇವಂ, ಎಂಬ, ಅದೋರ್ವಂ, ಭಕ್ತಂ, ಇರ್ಪಂ. ... ॥೬೮॥

ಅವನ, ತನುಜಾತೆ, ಸುಂದರಿ, ಕುವಲಯದಳನಯನೆ- ನೈದಿಲೆಯ ಎಸಳಂತಿರುವ ಕಣ್ಣುಳ್ಳವಳು,

---

* (ಅವ) ಗೋಪ- ವೃಷಭೇಶ್ವರನೇ ಧ್ವಜ ಧ್ವಜದಲ್ಲುಳ್ಳವನು. ... ... ॥೬೮॥

ಮಾ ॥ ರ್ದ್ರವವಿನಯವಾಣಿ ಮೃದುಹಸಿ । ತೆ ವನೇರುಹವದನೆ ಕನ್ನೆ ಕಂಗೊಳಿಸಿರ್ಪಳ್ ॥೬೯॥

ವ ॥ ಆಶಿವದೇವ ನೊಂದುದಿನಂ ದೇವಕಾರ್ಯನಿಮಿತ್ತಂ ಗೃಹಿಣಿವೆರಸಿ ನೆರೆಯೂರ್ಗೆ ತೆರಳಲುಜ್ಜುಗಿಸಿ ತನುಜೆಯಂ ಕರೆದು ಮೈದಡವಿ ಗಲ್ಲಂಪಿಡಿದು ಮುದ್ದಿಸಿ ನಿಡುನೇಹದಿಂ ನಿರೀಕ್ಷಿಸಿ ಮನೆಗಾಪಿಂಗಿರಿಸಲಿಂತೆಂದು ॥ * * * * * * * * * *

ಚಂ ॥ ಮಗಳೆ ಮನೋಜ್ಞಮಾತೆ ಮರೆದೊರ್ಮೆಯುಂ ಮಾಡದಿರಕ್ಕ ಮಕ್ಕಳೊ । ಳ್ಪುಗದಿರು ಪಿತ್ತಲೋವರಿಯನೊರ್ವಳೆಪೋಗದಿ ರೆತ್ತಲುಂ ಮನಂ ॥ ಬುಗುವದುಕೂಲ ಮುಂ ಮಿಸುನಿಬೊಂಬೆಯು ನೊಪ್ಪುವಭೂಷಣಂಗಳಂ । ಬಗೆಮಿಗೆ ತಂದು ನಾಳೆ ನಿನಗಿತ್ತಪೆ ನಾಂ ಮನೆಗಾದಿರೊಪ್ಪದಿಂ ॥ ... ... ... ॥೭೦॥

ಕಂ ॥ ಶಿವನಿಳಯಕ್ಕೈದಿ ತನೂ । ಭವೆ ನೀಂ ಪ್ರಸ್ಥೈಕಮಿತದ ಕಪಿಲೆಯ ಪಾಲಂ ॥ ಶಿವಲಿಂಗಕೆ ಪೊಳ್ತರಿದೊ । ಪ್ಪುವ ತೆರದಿಂ ಸಲಿಸಿ ಸಲಿಪುದೆನ್ನೀ ವ್ರತಮಂ ॥ ॥೭೧॥

ವ ॥ ಎಂದು ಮಗಳ್ಗೆ ಬುದ್ಧಿವೇಳ್ದು ನಿಜರಮಣಿವೆರಸಿ ಬೇರೂರ್ಗವಂ ಪೋದಾಗಳ್ಪರಿಮಳೋದಕದಿಂ ಜಳಕಂಬೊಕ್ಕು ದಟಿಂಬಮನುಟ್ಟು ನೊಸಲೊಳ್ಬಸಿತಮಂ ತಳೆದು ಸಿಂಗರಿಸುತ್ತಂ ಶಿವನಿಯಮಿತಕಪಿಲಾಕ್ಷೀರಮಂ ಕಮ್ಮನಿನಿದಪ್ಪಂತೆ ಕಾಯ್ಸಿ ಬಳ್ಳದಿನಳೆ

---

ಕೋಮಲಾಂಗಿ, ಸುಧಾವನಾರ್ದ್ರವವಿನಯವಾಣಿ- ಅಮೃತದಂತಿರುವ ಮೃದುತ್ವವಿಶಿಷ್ಟವಾದ ವಿನಯವಚನವುಳ್ಳವಳು, ಮೃದುಹಸಿತೆ- ಮಂದಹಾಸವುಳ್ಳವಳು, ವನೇರುಹವದನೆ- ಕಮಲಮುಖಿಯಾದವಳು, ಕನ್ನೆ- ಮದುವೆಯಾಗದವಳು, ಕಂಗೊಳಿಸಿ, ಇರ್ಪಳ್. ... ... ... ॥೬೯॥

ಆಶಿವದೇವಂ, ಒಂದುದಿನಂ, ದೇವಕಾರ್ಯನಿಮಿತ್ತಂ- ದೇವರಕಾರ್ಯಕ್ಕೋಸ್ಕರ, ಗೃಹಿಣಿವೆರಸಿ- ಹೆಂಡತಿಯೊಡಗೂಡಿ, ನೆರೆಯೂರ್ಗೆ- ಗ್ರಾಮಾಂತರಕ್ಕೆ, ತೆರಳಲ್- ಹೋಗುವದಕ್ಕೆ, ಉಜ್ಜುಗಿಸಿ- ಪ್ರಯತ್ನಿಸಿ, ತನುಜೆಯಂ- ಮಗಳನ್ನು, ಕರೆದು, ಮೈದಡವಿ- ಮಯ್ಯನ್ನುಸವರಿ, ಗಲ್ಲಂಪಿಡಿದು, ಮುದ್ದಿಸಿ, ನಿಡುನೇಹದಿಂ- ಅಧಿಕವಾದ ಪ್ರೀತಿಯಿಂದ, ನಿರೀಕ್ಷಿಸಿ, ಮನೆಗಾಪಿಂಗೆ- ಮನೆಯಂ ಕಾಯುವದಕ್ಕೆ, ಇರಿಸಲ್- ಇರಿಸುವದಕ್ಕೋಸ್ಕರ, ಇಂತೆಂದಂ. * * * * * * * * * * * * * * *

ಮಗಳೆ! ಮನೋಜ್ಞಮಾತೆ-ಮನೋಹರವಾದತಾಯಿಯೇ! ಅಕ್ಕ! ಮರೆದು,ಓರ್ಮೆಯುಂ, ಮಕ್ಕಳೊಳ್, ಆಡದೆ, ಇರ್; ಪಿತ್ತಲ, ಓವರಿಯಂ- ಪ್ರದೇಶವನ್ನುಕುರಿತು, ಪುಗದೆ- ಪ್ರವೇಶಿಸದೆ, ಇರ್, ಓರ್ವಳೆ, ಎತ್ತಲುಂ- ಯಾವಕಡೆಗೂ, ಪೋಗದೆ, ಇರ್, ಆಂ, ಮನಂಬುಗುವ- ಮನೋಹರವಾದ, ದುಕೂಲಮಂ- ಪಟ್ಟೆಯಸೀರೆಯನ್ನು, ಮಿಸುನಿಬೊಂಬೆಯುಂ- ಚಿನ್ನದ ಬೊಂಬೆಯನ್ನು, ಒಪ್ಪುವ, ಭೂಷಣಂಗಳಂ, ಬಗೆಮಿಗೆ, ಮನಸ್ಸಂವಿಾರಿ, ತಂದು, ನಾಳೆ, ನಿನಗೆ, ಇತ್ತಪೆಂ, ಒಪ್ಪದಿಂ- ನೆಟ್ಟಗೆ, ಮನೆಗಾದಿರ್. ... ॥೭೦॥

ತನೂಭವೆ, ಮಗಳೇ! ನೀಂ, ಶಿವನಿಳಯಕ್ಕೆ- ಶಿವದೇವಸ್ಥಾನಕ್ಕೆ, ಐದಿ- ಹೋಗಿ, ಪ್ರಸ್ಥೈಕಮಿತದ- ಬಂದುಬಳ್ಳದಳತೆಯ, ಕಪಿಲೆಯ- ಕಪಿಲವರ್ಣದ, (ಕೆಂಪು ಬಿಳುಪು ಮಿಶ್ರವಾದ ಬಣ್ಣದ) ಹಸುವಿನ, ಪಾಲಂ, ಶಿವಲಿಂಗಕೆ, ಪೊಳ್ತರಿದು- ಕಾಲವಂ ತಿಳಿದು, ಒಪ್ಪುವ, ತೆರದಿಂ- ರೀತಿಯಿಂದ, ಸಲಿಸಿ- ಸಮರ್ಪಿಸಿ, ಎನ್ನ, ಈವ್ರತಮಂ, ಸಲಿಪುದು-ನೆರವೇರಿಸುವದು. ... ... ... ॥೭೧॥

ಎಂದು, ಅವಂ- ಆ ಶಿವದೇವನು, ಮಗಳ್ಗೆ, ಬುದ್ಧಿವೇಳ್ದು, ನಿಜರಮಣಿವೆರಸಿ- ತನ್ನ ಪತ್ನಿಯೊಡನೆ ಕೂಡಿ, ಬೇರೂರ್ಗೆ- ಮತ್ತೊಂದೂರಿಗೆ, ಪೋದ, ಆಗಳ್, ಕೊಡಗೂಸು, ಪರಿಮಳೋದಕದಿಂ- ಸುಗಂಧ ವಿಶಿಷ್ಟವಾದ ನೀರಿನಿಂದ, ಜಳಕಂಬೊಕ್ಕು- ಸ್ನಾನವಂ ಮಾಡಿ, ದಟಿಂಬವಂ- ಮಡಿಯನ್ನು, ಉಟ್ಟು, ನೊ

ದು ಪೊಯ್ದು ಪೊಂಬಟ್ಟಲ್ದಿವಿ ಧವಳವಸ್ತ್ರಮನಿರ್ಮಡಿಕೆಯಿಂ ಮುಸುಂಕಿ ಸಡಗರದಿ ನೇಳ್ತಂದು ಶಿವಾಲಯಮಂ ಪೊಕ್ಕು ಕಲ್ಲಿನಾಥನಂ ಕಂಡೆರಗಿ ಮುಂದೆ ಪಾಲ್ವಟ್ಟಲಿನಿಟ್ಟು ದೇವ ಪಸಿದೆ ಪಾಲ್ಗುಡಿವುದೆಂದುಸಿರ್ದು ಕೊಡಗೂಸು ಕಂಬಮುಂ ಮರೆಗೊಂಡು ನಿಂದಿರ್ದ್ದಿನಿ ಸಾನುಂಬೇಗದಿಂ ಮಗುಳ್ದು ನೋಳ್ಪನ ಮಾಪಾಲ್ವಟ್ಟಲಿರ್ದಂತಿರೆ ಪೆಳಗ್ದು ಮನಂನೊಂದು ಮರುಗಿ ॥ * * * * * * * * * * * * * * * * *

ಕಂ ॥ ದಡದಡಿಪೆರ್ದೆ ಬಿಸಿಮುಸಗುವ । ನಿಡುಸು ಯ್ಕಂಪಿಪಕರಂಗ ಳಿರ್ಪ್ಪುಡುಗಿದಬಾ ಯ್ ॥ ಗುಡುಗುಡನೆಸುರಿವಕಣ್ಬನಿ।ಯೊಡನಿರೆ ಕೊಡಗೂಸು ನೋಡಿ ಲಿಂಗಮನಾಗಳ್॥೭೦॥

ಕಂ ॥ ಏಂಕಾರಣ ಮಿಾಪಾಲಂ । ನೀಂ ಕುಡಿಯದೆ ಸುಮ್ಮನಿರ್ಪ್ಪ ಯಕಟಕಟೆನಗಾ ॥ ತಂಕಮ ನಾಗಿಪುದುಚಿತಮೆ । ಶಂಕರ ನೀಂ ಪೇಳ್ವುದೆಂದು ಮಗುಳ್ದಿಂತೆಂದಳ್ ॥ ॥೭೩॥

ಮತ್ತ ॥ ಪಸಿಯೇನಾಗದೊ ದೇವ ಕೇಳ್ನಿನಗೆ ಪಾಲೇಂ ಕಾಯದೋ ಪೊತ್ತಿತೋ। ಬಿಸುಪಾರಿರ್ದ್ದುದೊ ಕಮ್ಮನಾಗದೊ ತನಿತ್ತಂಪೇರದೋ ಕಣ್ಗೆರಂ ॥ ಜಿಸದೋ ಮೇಣ್ಪೊಗೆಸುತ್ತಿದತ್ತೊ ಪೆರರಿಂಕಣ್ಣಿಂಜಲಾದತ್ತೊ ಬ । ಳ್ಬಿಸಿಯಾಗಿರ್ದ್ದುದೊ ಮಿಾಸಲೋಸರಿಸಿ

---

ಸಲೊಳ್- ಹಣೆಯಲ್ಲಿ,ಭಸಿತಮಂ, ತಳೆದು, ಸಿಂಗರಿಸುತ್ತಂ, ಶಿವನಿಯಮಿತಕಪಿಲಾಕ್ಷೀರಮಂ- ಶಿವನಿಗೋಸ್ಕರ ನೇಮಿಸಲ್ಪಟ್ಟ ಕಪಿಲಗೋವಿನ ಹಾಲನ್ನು, ಕಮ್ಮನೆ- ಸುವಾಸನೆಯಾಗಿ, ಇನಿದು- ಮಧುರವಾದದ್ದು, ಅಪ್ಪಂತೆ, ಕಾಯಿಸಿ, ಬಳ್ಳದಿಂ, ಅಳೆದು, ಪೊಯ್ದು, ಪೊಂಬಟ್ಟಲ್ದಿವಿ- ಚಿನ್ನದ ಬಟ್ಟಲಿನಲ್ಲಿ ತುಂಬಿ, ಧವಳವಸ್ತ್ರಮಂ- ಬಿಳಿಯಬಟ್ಟೆಯನ್ನು, ಇರ್ಮಡಿಕೆಯಿಂ- ಎರಡುಮಡಿಕೆಯಿಂದ, ಮುಸುಂಕಿ- ಮುಚ್ಚಿ, ಸಡಗರದಿಂ, ಏಳ್ತಂದು, ಶಿವಾಲಯಮಂ, ಪೊಕ್ಕು, ಕಲ್ಲಿನಾಥನಂ, ಕಂಡು, ಎರಗಿ, ಮುಂದೆ, ಪಾಲ್ವಟ್ಟಲಂ- ಹಾಲಿನ ಬಟ್ಟಲನ್ನು, ಇಟ್ಟು, ದೇವ! ಪಸಿದೆ, ಪಾಲ್ಗುಡಿವುದು, ಎಂದು,ಉಸಿರ್ದು, ಕಂಬಮಂ, ಮರೆಗೊಂಡು, ನಿಂದಿರ್ದು, ಇನಿಸಾನುಂಬೇಗದಿಂ- ಸ್ವಲ್ಪಹೊತ್ತಿನಲ್ಲಿ, ಮಗುಳ್ದು- ಪುನಃ, ನೋಳ್ಪನಂ-ನೋಡುವಲ್ಲಿ, ಆಪಾಲ್ವಟ್ಟಲ್, ಇರ್ದಂತೆ, ಇರೆ, ಪೆಳರ್ದು- ಭಯಪಟ್ಟು, ಮನಂನೊಂದು- ಮನಸ್ಸಿನಲ್ಲಿ ನೊಂದುಕೊಂಡು, ಮರುಗಿ- ದುಃಖಿಸಿ. * * * * * * * * * * * * * * * * *

ಕೊಡಗೂಸು, ದಡದಡಿಪ- ಬಡಿದುಕೊಳ್ಳುವ, ಎರ್ದೆ- ಹೃದಯವು, ಬಿಸಿಮುಸಗುವ- ಹೆಚ್ಚಾಗಿ ಬಿಸಿಯಾದ, ಸುಯ್- ಉಸುರು, ಕಂಪಿಪ- ನಡಗುವ, ಕರಂಗಳ್, ಇರ್ಪ್ಪ- ಯಥಾಸ್ಥಿತಿಯು, ಉಡುಗಿದ- ನಾಶವಾದ, (ಅಂದರೆ ನಿರ್ದ್ರವವಾದ) ಬಾಯ್, ಗುಡುಗುಡನೆ, ಸುರಿವ, ಕಣ್ಬನಿ, ಒಡನೆ- ಕೂಡಿ, ಇರೆ, ಆಗಳ್, ಲಿಂಗಮಂ, ನೋಡಿ. ... ... ... ... ॥೭೦॥

ಶಂಕರ! ನೀಂ, ಈಪಾಲಂ, ಏಂಕಾರಣಂ, ಕುಡಿಯದೆ, ಸುಮ್ಮನೆ, ಇರ್ಪ್ಪೆ? ಅಕಟಕಟ!! ಎನಗೆ, ನೀಂ, ಆತಂಕಮಂ-ಬಾಧೆಯನ್ನು,ಆಗಿಪುದು,"ಉಚಿತಮೆ? ಪೇಳ್ವುದು, ಎಂದು, ಮಗುಳ್ದು, ಇಂತು, ಎಂದಳ್.

ದೇವ! ಕೇಳ್, ನಿನಗೆ, ಪಸಿವು- ಕ್ಷುಪ್ಪ್ರಬುಧೆಯು, ಆಗದೊವಿ- ಆಗುವದಿಲ್ಲವೇನು? ಪಾಲ್, ಕಾಯದೋವಿ? ಪೊತ್ತಿತೋ- ಬಹಳ ಕಾದು ಹೊತ್ತುಕೊಂಡಿತೋ? ಬಿಸುಪು- ಬೆಚ್ಚಗಿರುವಿಕೆಯು, ಆರಿ, ಇರ್ದುದೋ? ಕಮ್ಮನೆ- ಸುವಾಸನೆಯುಳ್ಳದ್ದಾಗಿ, ಆಗದೋ? ತನಿತ್ತು- ತನಿಯಾಗಿ, (ಅಥವಾ ಹೆಚ್ಚಾಗಿ,) ಇಂಪು- ಮಾಧುರ್ಯವು, ಏರದೋ? ಕಣ್ಗೆ, ರಂಜಿಸದೋ- ಶೋಭಿಸುವದಿಲ್ಲವೋ? ಮೇಣ್, ಪೊಗೆ, ಸುತ್ತಿದತ್ತೊ? ಪೆರರಿಂ- ಅನ್ಯರಿಂದ, ಕಣ್ಣಿಂಜಲ್- ದೃಷ್ಟಿದೋಷವು, ಆದತ್ತೊ? ಬಳ್ಬಿಸಿಯಾಗಿ- ಅತ್ಯಂತಬಿಸಿಯಾಗಿ, ಇರ್ದುದೊ? ಮಿಾಸಲ್, (ಅಂದರೆ ಒಬ್ಬನಿಗೋಸ್ಕರಲೇಎಂದು ಕುರಿತು ಇಟ್ಟಿದ್ದುದನ್ನು ಅನ್ಯನಿಗೆ ಸಲಿಸದಿರು

ತೋ ಪೇಳೆಂಟಡಿರ್ಪಂದವಂ ‖ .. ... ... ... ‖೨೪‖

ಕಂ ‖ ಮನಮೆಳಸಿನೋಡಿದೆನೆ ನ । ಲ್ಗಿನೆಯಂ ಬೇರ್ಕೆಯ್ದುತಂದೆನೇ ಪಾಲನಿದಂ ‖
ಮನೆಯುಲ್ಲಿತಡಂಗೆಯ್ದೆನೆ । ನೆನೆದೆನೆ ಪೆರತೊಂದನೇಕೆ ಕುಡಿಯೆ ಪುರಾರೀ ‖ ... ‖೨೫‖

ಕಂ ‖ ಬಿಸುಪಾರಿದೊಡೇಂ ಸವಿಸಮ । ನಿಸುಗುಮೆ ಬಗೆದಂದು ಜವದಿ ನೀಂಟಯ್ಯ
ಸುಧಾ ‖ ರಸಮಂ ನೀಂ ಬಯಸಿದುದಂ । ಬೆಸಸೀಗಳೆ ನಿನಗೆ ಪೋಗಿ ತಂದಪೆನಭವ ‖೨೬‖

ಕಂ‖ ಪೊಸಸಕ್ಕರೆಯಂ ನವಮಧು । ರಸಮಂ ನರುನೆಯ್ಯ ನೆನೆವಕದಳಿಯಫಲಮಂ‖
ರಸನೆಯೆಳಸಿದುದ ನೆನ್ನೊಳ್ । ಬೆಸಸೀಗಳೆ ನಿನಗೆ ತಂದಪೆಂ ಶಶಿಮೌಳೀ‖ ... ‖೨೭‖

ಕಂ ‖ ಪುರಿಗಡುಬು ತರಗು ಚಕ್ಕುಲಿ । ಕರಂಜಿಗಾ ಯತಿರಸಂ ಚಿಗುಳಿ ಲಡ್ಡುಗೆ ಸ‖
ಕ್ಕರೆ ಪೇಣಿ ಯೊಳವು ಮನ್ಮಂ । ದಿರದೊಳ್ನೀಂ ಬಯಸೆ ಪೋಗಿ ತಂದಪೆ ನೀಗಳ್ ‖೨೮‖

ಕಂ ‖ ಪಾಲೊಡನಾರೋಗಿಪೆ ನೆನೆ । ಲೀಲೆಯೊಳಾಂಪೋಗಿ ತರ್ಪೆ ನೋಗರಮನಿವ
ಳ್ ‖ ಬಾಲಕಿ ಪುಸಿನುಡಿದಪ ಳೆಂ। ದಾಲೋಚಿಸದಿರು ಪರೀಕ್ಷಿಸೆನ್ನಯ ಗುಣಮಂ ‖ ‖೨೯‖

ಮಲ್ಲಿಕಾಮಾಲಾ ‖ ಎನ್ನಮಾತ ನುಪೇಕ್ಷೆಗೆಯ್ಯದೆ ಪಾಲ ನೀಂಟಿದೊಡಯ್ಯ ಕೇಳ್ ।
ನಿನ್ನ ನಾಂ ಕರೆದೊಯ್ವೆ ನೊಪ್ಪುವ ವೀರಭದ್ರನ ತೇರ್ಗೆ ಸಂ ‖ ಪನ್ನಮುದ್ಗರು ಪರ್ಬಕೆ

---

ವದು) ಓಸರಿಸಿತೋ- ತಪ್ಪಿತೋ? ಈಂಟದೆ- ಕುಡಿಯದೆ, ಇರ್ಪ, ಅಂದಮಂ- ರೀತಿಯನ್ನು, ಪೇಳ್ ‖೨೪‖

ಪುರಾರಿ! ಇದಂಪಾಲುಂ, ಮನಂ, ಎಳಸಿ- ಅಪೇಕ್ಷಿಸಿ, ನೋಡಿದೆನೆ? ನಲ್ಗಿನೆಯಂ-ಒಳ್ಳೆಯಹಿಕೆನೆಯನ್ನು, ಬೇರ್ಕೆಯ್ದು- ಬೇರೆಮಾಡಿ, ತಂದೆನೇ? ಮನೆಯಲ್ಲಿ, ತಡಂಗೆಯ್ದೆನೇ? ಪೆರತು ಒಂದಂ- ಮತ್ತೊಂದನ್ನು, ನೆನೆದೆನೆ? ಏಕೆ ಕುಡಿಯೆ? ... ... ... ... ... ‖೨೫‖

ಬಿಸುಪು- ಬೆಚ್ಚಗಿರುವಿಕೆಯು, ಆರಿದೊಡೆ, ಸವಿ- ಮಾಧುರ್ಯವು, ಸಮನಿಸುಗುಮೇ- ಪ್ರಾಪ್ತವಾಗುವದೇ? ಬಗೆದಂದು- ಮನಸ್ಸಂತಂದು, ಜವದಿಂ- ಬೇಗನೆ, ಸುಧಾರಸಮಂ- ಹಾಲನ್ನು, ಈಂಟಯ್ಯ- ಕುಡಿಯಯ್ಯಾ; ನೀಂ, ಬಯಸಿದುದಂ- ಇಚ್ಛೈಸಿದುದನ್ನು, ಬೆಸಸು- ಆಜ್ಞಾಪಿಸು, ಅಭವ! ಈಗಳೆ, ಪೋಗಿ, ನಿನಗೆ, ತಂದಪೆಂ. ... ... ... ... ... ‖೨೬‖

ರಸನೆ- ನಾಲಗೆಯು, ಎಳಸಿದುದಂ- ಅಪೇಕ್ಷಿಸಿದ, ಪೊಸಸಕ್ಕರೆಯಂ, ನವಮಧುರಸಮಂ- ಜೇನುತುಪ್ಪವನ್ನು, ನರುನೆಯ್ಯಂ- ಸುಗಂಧವಿಶಿಷ್ಟವಾದ ತುಪ್ಪವನ್ನು,ಎಸೆವಕದಳಿಯಫಲಮಂ- ಶೋಭಿಸುವಬಾಳೆಯಹಣ್ಣನ್ನು, ಶಶಿಮೌಳಿ- ಚಂದ್ರಚೂಡನೇ! ಎನ್ನೊಳ್ ಬೆಸಸು,ಈಗಳೆ,ನಿನಗೆ,ತಂದಪೆಂ. ... ‖೨೭‖

ಮನ್ಮಂದಿರದೊಳ್-ನಮ್ಮ ಮನೆಯಲ್ಲಿ, ಪುರಿಗಡುಬು, ತರಗು, ಚಕ್ಕುಲಿ, ಕರಂಜಿಗಾಯ್, ಅತಿರಸಂ- ಅತ್ಯಂತರುಚಿಯುಳ್ಳ, ಚಿಗುಳಿ, ಲಡ್ಡುಗೆ, ಸಕ್ಕರೆ, ಪೇಣಿ, ಒಳವು- ಇರುವವು, ನೀಂ, ಬಯಸೆ- ಇಚ್ಛೈಸಿದರೆ, ಈಗಳ್, ಪೋಗಿ, ತಂದಪೆಂ. ... ... ... ... ‖೨೮‖

ಓಗರಮಂ— ಅನ್ನವನ್ನು, ಪಾಲೊಡನೆ, ಆರೋಗಿಪೆಂ- ಭುಂಜಿಸುವೆನು, ಎನೆ, ಆಂ, ಲೀಲೆಯೊಳ್, ವಿಳಾಸದಿಂದ, ಪೋಗಿ, ತರ್ಪೆಂ, ಇವಳ್, ಬಾಲಕಿ- ಹುಡುಗಿಯು, ಪುಸಿನುಡಿದಪಳ್- ಸುಳ್ಳನ್ನು ಹೇಳುವಳು, ಎಂದು, ಆಲೋಚಿಸದೆ, ಇರು, ಎನ್ನಯ, ಗುಣಮಂ, ಪರೀಕ್ಷಿಸು. ... ... ‖೨೯‖

ಇಂದುಕಲಾಧರ! ಎನ್ನ, ಮಾತಂ, ಉಪೇಕ್ಷೆಗೆಯ್ಯದೆ- ತಿರಸ್ಕರಿಸದೆ, ಪಾಲಂ, ಈಂಟಿದೊಡೆ, ಅಯ್ಯ! ಕೇಳ್, ನಿನ್ನಂ, ಆಂ, ಒಪ್ಪುವ, ವೀರಭದ್ರನ, ತೇರ್ಗೆ- ರಥೋತ್ಸವಕ್ಕೆ, ಪರ್ಬಕೆ- ಹಬ್ಬಕ್ಕೆ, ಕರೆದುಒಯ್ವೆಂ- ಕರೆದುಕೊಂಡುಹೋಗುವೆನು, ಸಂಪನ್ನಮುದ್ಗರು- ಸಮೃದ್ಧನಾದ ನನ್ನೊಡೆಯನೇ! ಎನ್ನಯ, ತಂದೆ,ನಾ

ನ್ನಯ ತಂದೆ ನಾಳೆನಗೀವ ರ । ತ್ನೋನ್ನತಾಭರಣಂಗಳಂ ನಿನಗೀವೆ ನಿಂದುಕಳಾಧರ॥೯೦॥

ವ ॥ ಎಂದಡಿಗೆರಗಿ ಮರುಗಿ ಬಾಯಳಿದು ಪಲವುದದಿ ನೊಡಂಬಡಿಸಿದೊಡಂ ತುಟಿ ಮಿಡುಕದುಗ್ರಂ ಸುಮ್ಮನಿರೆ ಮನಂ ನೊಂದು ತಲ್ಲಣಿಸಿ ಮಲ್ಲಳಿಗೊಂಡು ॥ * * *

ಮತ್ತೇ ॥ ನುಡಿಯಂ ಪೊಲ್ಗುಡಿಯುಂ ಮಹೇಶ ನಕಟನ್ನೇಗೆಯ್ವೆ ನೆಂದಳ್ತು ಬಾ । ಯ್ವಿಡುತಂ ಸುರ್ರನೆ ಸುಯ್ಯುತಂ ಸುಗಿವುತಂ ಬೆಳ್ಳಾಗುತಂ ಬೆರ್ಚಿ ಸೈ ॥ ಗೆಡೆವುತ್ತಂ ಬಿಡವೇಳ್ದು ಡೆಂಡಣಿಸುತಂ ಬಾಯಾರುತಂ ಬಳ್ಕುತಂ । ನೆಡೆವುತ್ತಂ ಕೊಡಗೂಸು ಕೋಟಲೆಗೆ ಪಕ್ಕಾಗಿರ್ದಳಾವೇಳೆಯೊಳ್ ॥ ... ... ... ... ॥೯೧॥

ವ ॥ ಇಂತು ಪಿರಿದುವಿಷಾದಂಬಡೆದು ಪೊಲ್ಗುಡಿಯದ ನಿನಗೆನ್ನ ಹರಣಮಂ ಸಮರ್ಪಿಪೆನೆಂದು ಮರಣೋದ್ಯತೆಯಾಗಿ ಮುಂತಣಶಿಲಾಸ್ತಂಭಮಂ ಶಿರಮೊಡ್ಡಿ ಘುಳಿಲನೆ ಪಾಯಲೊಡನೆ ॥ * * * * * * * * * * * * * * *

ಕಂ॥ ನಂದನೆ ನೊಂದಪ ಳೆಂದೊ । ಲ್ದಿಂದುಧರಂ ಪಿಡಿದು ನೆಗಪಿ ನಿಜಕರದಿ ನವಳ್ ॥ ತಂದಣ್ಣಿವಾಲ ನೀಂಟದ । ನಂದಂ ಮಿಗೆ ಭಕ್ತವತ್ಸಲಂ ಬಳಿಕಾಗಳ್ ॥ ... ॥೯೨॥

---

ಳೆ, ಎನಗೆ, ಈವ- ಕೊಡುವ, ರತ್ನೋನ್ನತಾಭರಣಂಗಳಂ- ಮಣಿಖಚಿತಗಳಾದ ಶ್ರೇಷ್ಠಗಳಾದ ಒಡವೆಗಳನ್ನು, ನಿನಗೆ, ಈವೆಂ. ... ... ... ... ... ॥೯೦॥

ಎಂದು, ಅಡಿಗೆ- ಪಾದಕ್ಕೆ, ಎರಗಿ, ಮರುಗಿ- ಸಂತಾಪಪಟ್ಟು, ಬಾಯ್, ಅಳಿದು- (ಅಂದರೆ ಸ್ವರವು ಕುಂದಿ) ಪಲವುಅಂದದಿಂ- ಅನೇಕ ರೀತಿಯಿಂದ, ಒಡಂಬಡಿಸಿದೊಡಂ- ಸಮಾಧಾನಪಡಿಸಿದಾಗ್ಯೂ, ಉಗ್ರಂ- ಪರಶಿವನು, ತುಟಿಮಿಡುಕದೆ- ತುಟಿಯುಂ ಅಲ್ಲಾಡದೆ, ಸುಮ್ಮನೆ, ಇರೆ, ಮನಂ, ನೊಂದು, ತಲ್ಲಣಿಸಿ- ಭಯದಿಂದ ನಡುಗಿ, ಮಲ್ಲಳಿಗೊಂಡು- ನೆರೆಗಾಗಿ. * * * * * * * * * * * *

ಆವೇಳೆಯೊಳ್- ಕೊಡಗೂಸು, ಮಹೇಶಂ, ನುಡಿಯಂ- ಮಾತನಾಡುವದಿಲ್ಲ, ಪೊಲ್ಗುಡಿಯಂ, ಅಕಟ! ಇನ್ನು, ಏಗೆಯ್ವೆಂ- ಏನು ಮಾಡಲಿ? ಎಂದು, ಅಳ್ತು, ಬಾಯ್ವಿಡುತಂ- ಬಾಯಂ ಬಿಡುತ್ತ, ಸುರ್ರನೆ, ಸುಯ್ಯುತಂ- ನಿಟ್ಟುಸುರಂಬಿಡುತ್ತ, ಸುಗಿವುತಂ- ಭಯಪಡುತ್ತ, ಬೆಳ್ಳಾಗುತಂ- ಮರುಳಾಗುತ್ತ, ಬೆರ್ಚಿ, ಸೈಗೆಡೆವುತ್ತಂ- ನಿಂತಿದ್ದಹಾಗೆಯೇ ಬೀಳುತ್ತ, ಬಿಡದೆ, ಏಳ್ದು, ಡೆಂಡಣಿಸುತಂ- ದಡಗುಟ್ಟುತ್ತ, ಬಾಯಾರುತಂ, ಬಳ್ಕುತಂ- ಬಳುಕಾಡುತ್ತ, ನೆಡೆವುತ್ತಂ- ಭಯಪಡುತ್ತ, ಕೋಟಲೆಗೆ, ಮನೋವ್ಯಥೆಗೆ ಪಕ್ಕಾಗಿ- ಆಸ್ಪದಳಾಗಿ, ಇರ್ದಳ್. ... ... ... ... ... ॥೯೧॥

ಇಂತು, ಪಿರಿದು- ಹೆಚ್ಚಾಗಿ, ವಿಷಾದಂಬಡೆದು- ಮನಃಕ್ಲೇಶವಂ ಹೊಂದಿ, ಪೊಲ್ಗುಡಿಯದ, ನಿನಗೆ, ಎನ್ನ, ಹರಣಮಂ- ಪ್ರಾಣವನ್ನು, ಸಮರ್ಪಿಪೆಂ, ಎಂದು, ಮರಣೋದ್ಯತೆಯಾಗಿ- ಸಾಯುವದಕ್ಕುದ್ಯುಕ್ತೆಳಾಗಿ, ಮುಂತಣಶಿಲಾಸ್ತಂಭಮಂ- ಮುಂದಿರುವ ಕಲ್ಲಿನ ಕಂಬವನ್ನು, ಶಿರಮೊಡ್ಡಿ- ತಲೆಯನ್ನು ಚಾಚಿ, ಘುಳಿಲನೆ- ಬೇಗನೆ, ಪಾಯಲ್- ಡಿಕ್ಕಿಹಾಕಲು, ಒಡನೆ. * * * * * * * * * *

ಇಂದುಧರಂ, ನಂದನೆ- ಮಗಳು, ನೊಂದಪಳ್, ಎಂದು, ಒಲ್ದು- ಪ್ರೀತಿಸಿ,ನಿಜಕರದಿಂ- ತನ್ನ ಕಯ್ಯಿಂದ, ಪಿಡಿದು, ನೆಗಪಿ- ಮೇಲಕ್ಕೆತ್ತಿ, ಅವಳ್, ತಂದ, ಅಣ್ಣಿವಾಲಂ - ಮಧುರವಾದ ಹಾಲನ್ನು, ಭಕ್ತವತ್ಸಲಂ- ಭಕ್ತರಲ್ಲಿ ವಾತ್ಸಲ್ಯವುಳ್ಳ ಪರಶಿವನು, ಅಂದಂಮಿಗೆ- ಮನೋಹರವಾಗಿ, ಈಂಟಿದಂ, ಬಳಿಕೆ, ಆಗಳ್. ... ... ... ... ... ... ॥೯೨॥

ಚಂ ॥ ಎಳೆನಗೆ ಯುಣ್ಮೆ ಮುದ್ದುಮೊಗದೊಳ್ ಸುಧೆಯಿಂದಭಿಷೇಕಿಪಂತೆ ಕಂ । ಬೆ
ಳಗಡರ್ದೊಪ್ಪೆ ಲಿಂಗತನುವಂ ಕೊಡಗೂಸು ಮನೋನುರಾಗಸ ॥ ಮ್ಮಿಳಿತವಿನೋದದಿಂ ಪ
ಸುಳೆ ಯಾನೆನುತಂ ಸುಧೆಯಿಂಟಲೊಲ್ಲದು । ಮ್ಮಳಮ ನೊಡರ್ಚಿ ಕಾಡಿದೆಗಡೆಂದೆನೆ ನಕ್ಕ
ನಹೀಂದ್ರಭೂಷಣಂ ॥ ... ... ... ... ॥೮೩॥

ಕಂ ॥ ಜನಕಂ ಬಂದೊಡೆ ಪೇಳ್ದಪೆ । ನಿನಿತೆಲ್ಲಮ ನಯ್ಯ ಮರೆಯದಿ ರ್ಬಳಿಕೆನಗಂ ॥
ನಿನಗಂ ಸಂವಾದಮದುಂ । ಟೆನುತಂ ಪೊಡಮಟ್ಟು ನಗುತೆ ಮನೆಗೇಳ್ತಂದಳ್ ॥ ॥೮೪॥

ಕಂ ॥ ಬಾಲೆಯ ನುಣ್ನುಡಿ ಬಟ್ಟಲ । ಪಾಲಿಂದಿನಿದಾಗೆ ಕಿವಿಗೆ ಪಾಲ್ಗುಡಿಯದೆ ಮು ॥
ನ್ನಾಲಲನೆಯ ಮುಗ್ಧೋಕ್ತಿಯ । ನಾಲಿಸಿದೆಂ ಮುದದಿ ನೆಂದು ನುಮೆಗೆ ಮಹೇಶಂ ॥೮೫॥

ಕಂ ॥ ಪಾಲಂ ತಂದನುದಿನ ಮಾ । ಬಾಲೆ ಪೊದಳ್ದೀಂಟೆ ಗಿರಿಶ ನಿರದೈದುಗು ಮಾ ॥
ತ್ಮಾಲಯಕೆ ಮುಗ್ಧಭಕ್ತಿ ಸ । ಮಾಲಂಬಿತಚಿತ್ತೆ ಮತ್ತ ಮಿಂತೊಂದುದಿನಂ ॥ ॥೮೬॥

ಕಂ ॥ ಬೇರೂರ್ಗೆ ಪೋದಪಿತ ನಾ । ದಾರಿಯೊಳೈತರುತೆ ಬರಿಯ ಬಟ್ಟಲ್ವಿಡಿದಂ ॥
ದೋರಂತೆ ಬರ್ಪ ಸುತೆಯಂ । ಸಾರೆಯೊಳೀಕ್ಷಿಸುತೆ ನಾಡೆ ಕೆರಳ್ದಿಂತೆಂದಂ ॥ ॥೮೭॥

ಕಂ ॥ ಎಲೆತರುವಲಿ ಬಟ್ಟಲ ಪಾ । ಲ್ನೆಲಕೊಕ್ಕುದೊ ನೀನೆ ಪೀರ್ದೆಯೋ ಪೇಳದನು ॥

---

ಕೊಡಗೂಸು, ಮುದ್ದುಮೊಗದೊಳ್- ಪ್ರೀತಿಯನ್ನುಂಟುಮಾಡುವ ಮುಖದಲ್ಲಿ, ಎಳೆನಗೆ- ಮಂದ ಹಾಸವು, ಉಣ್ಮೆ- ಉಂಟಾಗಲು, ಕಂಬೆಳಗು- ಕಣ್ಣಿನ ಕಾಂತಿಯು, ಲಿಂಗತನುವಂ- ಲಿಂಗದ ಶರೀರವನ್ನು, ಅಡರ್ದು- ಹತ್ತಿ, ಸುಧೆಯಿಂದೆ- ಹಾಲಿನಿಂದ, ಅಭಿಷೇಕಿಪಂತೆ, ಒಪ್ಪೆ-ಪ್ರಕಾಶಿಸಲು, ಮನೋನುರಾಗಸಮ್ಮಿಳಿತವಿನೋದದಿಂ- ಮನಸ್ಸಿನಲ್ಲಿರುವ ಪ್ರೇಮದಿಂದ ಕೂಡಿದ ಸಂತೋಷದಿಂದ, ಆಂ, ಪಸುಳೆ-ಮಗುವು, ಎನುತಂ, ಸುಧೆಯೀಂಟಲೊಲ್ಲದೆ- ಹಾಲನ್ನು ಕುಡಿಯದೆ, ಉಮ್ಮಳಮಂ- ಮನೋವ್ಯಥೆಯನ್ನು, ಒಡರ್ಚಿ- ಉಂಟುಮಾಡಿ, ಕಾಡಿದೆಗಡ- ಪೀಡಿಸದೆಯುಲ್ಲವೇ? ಎಂದೆನೆ, ಅಹೀಂದ್ರಧರ- ಶೇಷನನ್ನು ಧರಿಸಿರುವ ಪರಮೇಶ್ವರನು, ನಕ್ಕಂ. ... ... ... ... ... ॥೮೩॥

ಅಯ್ಯ! ಜನಕಂ- ತಂದೆಯು, ಬಂದೊಡೆ, ಇನಿತೆಲ್ಲಮಂ- ಇಷ್ಟೆಲ್ಲವನ್ನೂ, ಪೇಳ್ದಪೆಂ, ಮರೆಯದೆ, ಇರ್ ಬಳಿಕೆ, ಎನಗಂ, ನಿನಗಂ, ಅದುಸಂವಾದಂ- ಆ ವಿವಾದವು, ಉಂಟು, ಎನುತಂ, ಪೊಡಮಟ್ಟು- ನಮಸ್ಕರಿಸಿ, ನಗುತೆ, ಮನೆಗೆ,ಏಳ್ತಂದಳ್. ... ... ... ... ॥೮೪॥

ಮಹೇಶಂ- ಉಮೆಗೆ- ಪಾರ್ವತಿಯನ್ನು ಕುರಿತು, ಬಾಲೆಯ- ಹುಡುಗಿಯ, ನುಣ್ನುಡಿ- ಮೃದುವಾದ ಮಾತು, ಕಿವಿಗೆ, ಬಟ್ಟಲ, ಪಾಲಿಂದೆ- ಹಾಲಿಗಿಂತಲೂ, ಇನಿದು- ಮಧುರವಾದದ್ದು, ಆಗೆ, ಪಾಲ್ಗುಡಿಯದೆ, ಮುನ್ನ, ಆಲಲನೆಯ- ಆ ಸ್ತ್ರೀಯ, ಮುಗ್ಧೋಕ್ತಿಯಂ, ಮುದದಿಂ, ಆಲಿಸಿದೆಂ- ಕೇಳಿದೆನು, ಎಂದಂ.

ಮತ್ತಂ, ಮುಗ್ಧಭಕ್ತಿಸಮಾಲಂಬಿತಚಿತ್ತೆ- ಮೂಢಭಕ್ತಿಯಿಂದಾಶ್ರಯಿಸಲ್ಪಟ್ಟ ಮನಸ್ಸುಳ್ಳ, ಆಬಾಲೆ, ಅನುದಿನಂ- ಪ್ರತಿದಿವಸದಲ್ಲೂ, ಪಾಲಂ, ತಂದು, ಗಿರಿಶಂ, ಈಂಟೆ- ಕುಡಿಯಲು, ಎರೆದು- ಹುಯ್ದು, ಆತ್ಮಾಲಯಕೆ- ತಮ್ಮ ಮನೆಗೆ, ಐದುಗುಂ- ಹೋಗುವಳು, ಇಂತು, ಒಂದುದಿನಂ. ... ॥೮೬॥

ಬೇರೂರ್ಗೆ, ಪೋದ, ಪಿತಂ, ಆದಾರಿಯೊಳ್, ಐತರುತೆ- ಬರುತ್ತ, ಬರಿಯ- ಹಾಲಿಲ್ಲದ, ಬಟ್ಟಲ್ವಿಡಿದು- ಬಟ್ಟಲಂ ಹಿಡಿದು, ಅಂದು, ಓರಂತೆ- ಚೆನ್ನಾಗಿ, ಬರ್ಪ, ಸುತೆಯಂ, ಸಾರೆಯೊಳ್- ಸಮೀಪದಲ್ಲಿ, ಈಕ್ಷಿಸುತೆ, ನಾಡೆ- ಚೆನ್ನಾಗಿ, ಕೆರಳ್ದು- ಕೋಪಿಸಿ, ಇಂತೆಂದಂ. ... ... ॥೮೭॥

ಎಲೆತರುವಲಿ- ಎಲೆ ಹುಡುಗಿಯೇ! ಇದುಬರಿಯಬಟ್ಟಲ್, ಕರದೊಳ್, ಇದೆ;ಬಟ್ಟಲಪಾಲ್, ನೆಲಕೆ, ಒಕ್ಕುದೊ- ಸುರಿದುಹೋಯಿತ್ತೋ? ನೀನೆ, ಪೀರ್ದೆಯೋ-ಕುಡಿದುಕೊಂಡೆಯೋ? ನಲಿದು- ಸಂತೋಷಿಸಿ,

ಕ್ಕಲಿಸದೊಡನಾಡಿಗಳ್ಗೀಂ। ನಲಿದೆರೆದೆಯೊ ಬರಿಯ ಬಟ್ಟಲಿದು ವಿದೆ ಕರದೊಳ್ ॥೮೮॥

ವ॥ ಎಂದಾಗ್ರಹಿಸಿ ಜನಕಂನುಡಿಯೆ ಬಿಗುರ್ತು ನಿಂದು ॥ * * * * *

ಕಂ॥ ನೀಂ ಬೆಸಸಿದಂತೆ ಬಟ್ಟ। ಲ್ದುಂಬಿ ಸುಧಾರಸವು ನೊಯ್ದು ಮುಂದಿಡೆ ಸವಿ

ದಂ॥ ತ್ರ್ಯಂಬಕನೆಲೆಜನಕ ಬಳಿ। ಕ್ಕಂ ಬರಿವಟ್ಟಲನೆ ಕೊಂಡು ಬಂದಪೆ ನೀಗಳ್ ॥೮೯॥

ಕಂ॥ ಅನುದಿನ ಮಿಂತಾರೋಗಿಪ। ನಿನಿವಾಲಂ ಶೂಲಿ ನನ್ನಿ ತೊದಳಲ್ಲೆನೆ ತ॥

ಜ್ಜನಕಂ ಪಾಲಂ ಶಿವನು। ಣ್ಬನೆ ಪುಸಿಪುಸಿ ಯೆಂದು ತನ್ನೊಳಂದಿಂತೆಂದಂ॥ ॥೯೦॥

ಕಂ॥ ಅತಿವೃದ್ಧಭಕ್ತತತಿ ಸಂ। ತತಮುಂ ಪ್ರಾರ್ಥಿಸಿದೊಡುಣ್ಬುದದು ದುರ್ಲಭ

ವಿಾ॥ ಶಿತಿಗಳ ನೇನುಮ ನರಿಯದ।ಮತಿರಹಿತೆಯ ಮಾತುಗೇಳ್ದು ಪಾಲ್ಗುಡಿದಪನೆ॥೯೧॥

ವ॥ ಎಂದು ಬಗೆವುತ್ತಂ ಶಿವಂಗಿವ ಳ್ಪಾಲ್ಗುಡಿಯಿಪ್ಪುದಂ ನಾಳೆ ನೋಳ್ಪೆನೆಂದು ನಿ

ರ್ಧರಿಸಿ ಮಗಳ್ಗೂಡಿ ನಿಜಗೃಹಂಬೊಕ್ಕಿರ್ದು ಮರುದಿನದುದಯದೊಳೆಂದಿನಂತಳೆದಪಾಲಂ

ಪೊಂಬಟ್ಟಲ್ದೀವಿ ತಳೆದ ನಂದನೆಯುಂ ಮುಂದಿಟ್ಟೆಳ್ತಂದು ಶಿವದೇವಂ ಶಿವನಿದಿರೊಳ್ನಿಂ

ದು ನಿರೀಕ್ಷಿಸುತ್ತಿರೆ ಕೊಡಗೂಸು ಮೃಡಂಗೆರಗಿ ಪಾಲಂ ಮುಂದಿಟ್ಟು ಕೈಮುಗಿದಾರೋ

ಗಿಪುದೆಂದು ಬಿನ್ನವಂಗೆಯ್ಯೆ॥ * * * * * * * * * * * *

---

ಒಡನಾಡಿಗಳ್ಗೆ- ಸಂಗಡಗಾರರಿಗೆ, ಎರೆದೆಯೊಪಂ- ಕುಡಿಯುವದಕ್ಕೆ ಹುಯ್ದೆಯೋ? ಇದಂ, ಉಕ್ಕಲಿಸದೆ-ವ ರೆಮಾಚದೆ, ಪೇಳ್. ... ... ... ... ... ॥೮೮॥

ಎಂದು, ಜನಕಂ, ಆಗ್ರಹಿಸಿ- ಕೋಪಿಸಿ, ನುಡಿಯೆ, ಬಿಗುರ್ತು-ಭಯಪಟ್ಟು ನಿಂದು. * * *

ಎಲೆಜನಕ! ನೀಂ,ಬೆಸಸಿದಂತೆ- ಆಜ್ಞಾಪಿಸಿದಹಾಗೆ,ಸುಧಾರಸಮಂ- ಹಾಲನ್ನು,ಬಟ್ಟಲ್ದುಂಬಿ- ಬಟ್ಟಲಲ್ಲಿ ತುಂಬಿ,ಒಯ್ದು- ತೆಗೆದುಕೊಂಡು ಹೋಗಿ,ಮುಂದೆ, ಇಡೆ, ತ್ರ್ಯಂಬಕಂ- ಮುಕ್ಕಣ್ಣನಾದ ಪರಶಿವನು, ಸವಿದಂ- ಪಾನಮಾಡಿದನು, ಬಳಿಕ್ಕಂ,ಈಗಳ್, ಬರಿವಟ್ಟಲನೆ, ಕೊಂಡುಬಂದಪೆಂ-ತೆಗೆದುಕೊಂಡುಬರುವೆನು.

ಅನುದಿನಂ, ಇಂತು, ಶೂಲಿ- ಶೂಲಾಯುಧವಂ ಧರಿಸಿರುವ ಶಿವನು, ಇನಿವಾಲಂ- ಮಧುರವಾದ ಹಾಲನ್ನು, ಆರೋಗಿಪಂ- ಸ್ವೀಕರಿಸುವನು, ನನ್ನಿ- ನಿಶ್ಚಯ; ತೊದಳ್- ಸುಳ್ಳು,ಅಲ್ಲ,; ಎನೆ, ತಜ್ಜನಕಂ- ಅವಳ ತಂದೆಯು, ಶಿವಂ, ಪಾಲಂ, ಉಣ್ಬನೆ? ಪುಸಿಪುಸಿ- ಸುಳ್ಳುಸುಳ್ಳು; ಎಂದು, ಅಂದು, ತನ್ನೊಳ್, ಇಂತೆಂದಂ

ಈಶಿತಿಗಳಂ- ಈ ಕರೆಗೊರಲನಾದ ಪರಶಿವನು, ಅತಿವೃದ್ಧಭಕ್ತತತಿ- ಅತ್ಯಂತವಾಗಿ ಮುದುಕರಾದಭಕ್ತರ ಸಮೂಹವು, ಸಂತತಮುಂ- ಯಾವಾಗಲೂ, ಪ್ರಾರ್ಥಿಸಿದೊಡಂ, ಉಣ್ಬುದು, ಅದು,ದುರ್ಲಭಂ; ಏನುಮಂ- ಏನನ್ನೂ, ಅರಿಯದ- ತಿಳಿಯದ, ಮತಿರಹಿತೆಯ- ಬುದ್ಧಿಯಿಲ್ಲದವಳ, ಮಾತುಗೇಳ್ದು- ಮಾತನ್ನುಕೇಳಿ; ಪಾಲ್ಗುಡಿದಪನೆ? ... ... ... ... ... ॥೯೧॥

ಎಂದು, ಬಗೆವುತ್ತಂ- ಯೋಚಿಸುತ್ತ, ಇವಳ್, ಶಿವಂಗೆ, ಪಾಲ್ಗುಡಿಯಿಪುದಂ, ನಾಳೆ, ನೋಳ್ಪೆಂ,ಎಂದು, ನಿರ್ಧರಿಸಿ- ನಿಶ್ಚಯಿಸಿ, ಮಗಳ್ಗೂಡಿ, ನಿಜಗೃಹಂಬೊಕ್ಕು- ತನ್ನಮನೆಗೆ ಹೋಗಿ, ಇರ್ದು. ಮರುದಿನದ- ಮಾರನೇ ದಿವಸದ, ಉದಯದೊಳ್- ಪ್ರಾತಃಕಾಲದಲ್ಲಿ, ಎಂದಿನಂತೆ- ಪ್ರತಿನಿತ್ಯದ ಹಾಗೆ, ಪಾಲಂ, ಅಳೆದು, ಪೊಂಬಟ್ಟಲ್ದೀವಿ- ಚಿನ್ನದ ಬಟ್ಟಲಿನಲ್ಲಿ ತುಂಬಿ, ತಳೆದ- ಧರಿಸಿದ,ನಂದನೆಯುಂ- ಮಗಳನ್ನು, ಶಿವದೇವಂ, ಮುಂದಿಟ್ಟು- ಮುಂದೆಬಿಟ್ಟುಕೊಂಡು, ಎಳ್ತಂದು, ಶಿವನ, ಇದಿರೊಳ್, ನಿಂದು, ನಿರೀಕ್ಷಿಸುತ್ತೆ, ಇರೆ,ಕೊಡಗೂಸು, ಮೃಡಂಗೆ, ಎರಗಿ, ಪಾಲಂ, ಮುಂದೆ, ಇಟ್ಟು, ಕೈಮುಗಿದು, ಆರೋಗಿಪುದು, ಎಂದು, ಬಿನ್ನವಂಗೆಯ್ಯೆ-ವಿಜ್ಞಾಪಿಸಿಕೊಳ್ಳಲು. * * * * * * * * * * * * *

ಕಂ ॥ ಹರ ನಾಭಕ್ತಿಯ ಮಹಿಮೆಯ । ಪರಿಯಂ ದರೆಗರುಪಲೆಂದು ಪಾಲ್ಗುಡಿಯದಿ
ಸೈ ॥ ತಿರೆ ಸುರ್ಕ್ಕಿ ಸುಗಿದಳಾಗಳ್ । ತರಳೆ ಪಿತಂ ಕಂಡು ಕಾಯ್ದು ಸುತೆಗಿಂತೆಂದಂ ॥೯೨॥

ಕಂ ॥ ಕುಡಿಕುಡಿದು ನೀನೆ ಸುಧೆಯಂ । ಮೃಡ ನೀಂಟುಗು ಮೆಂದು ನುಡಿದೆ ಪು
ಸಿಯಂ ನಿನ್ನಂ ॥ ಕಡಿದಿಕ್ಕದೆ ಮಾಣ್ಬೆನೆ ಕೇ । ಳ್ಕಡುಪಾತಕಿ ಯೆಂದು ತಂದೆಯರೆಯಟ್ಟ
ಲೊಡಂ ॥ ... ... ... ... ... ॥೯೩॥

ಮಲ್ಲಿಕಾಮಾಲಾ ॥ ಹಾ ಮಹೇಶ್ವರ ಹಾ ಮದೀಶ್ವರ ನೀನೆ ಸದ್ಗತಿ ಕಾಯ್ವುದೆಂ ।
ದಾಮಹಾಭಯಕಂಪಿತಾಂಗಿ ಯೊರಲ್ಚಿ ಬಾಯ್ಬಿಡೆ ಬೇಗದಿಂ ॥ ಸೋಮಶೇಖರ ನಂಜ
ದಿರ್ತನುಜಾತೆ ಯೆಂದಭಯಂಗುಡು । ತ್ತಾಮನೋಜ್ಞ ಸುಧಾರಸಂಗುಡಿದಂ ಕೃಪಾನಿಧಿ
ಶಂಕರಂ॥ ... ... ... ... ... ॥೯೪॥

ಕಂ ॥ ಆಕೊಡಗೂಸಂ ಕರುಣಾ । ಲೋಕದೆ ನಡೆ ನೋಡಿ ತೆಗೆದು ಬಿಗಿದಪ್ಪುತೆ
ಗೌ॥ ರೀಕಾಂತಂ ತನ್ನೊಡಲೊಳ್ । ಜೋಕೆಯಿ ನೊಳಪುಗಿಸೆ ಪುಗುವ ಮಗಳಂ ಜನಕಂ ॥

ಕಂ ॥ ಕಂಡೆಲೆ ಪೋಗದಿರೆನುತಂ । ಚಂಡಿಕೆವಿಡಿದೆಳೆಯೆ ಶಿಖೆಯೆ ಪೊರಗುಳಿದಿರೆ ಭೂ॥
ಮಂಡಲಮಚ್ಚರಿವಡೆ ಮುಂ । ಕೊಂಡಾಕೊಡಗೂಸು ಲಿಂಗದೊಳಪೊಕ್ಕಿರ್ದಳ್ ॥ ॥೯೬॥

---

ಹರಂ, ಆಭಕ್ತಿಯ, ಮಹಿಮೆಯ- ಮಹತ್ವದ, ಪರಿಯಂ- ರೀತಿಯನ್ನು, ದರೆಗೆ- ಭೂಮಿಗೆ, ಅರುಪ ಲೆಂದು- ತಿಳಿಯಿಸಬೇಕೆಂದು, ಪಾಲ್ಗುಡಿಯದೆ, ಸೈತಿರೆ- ಸುಮ್ಮನಿರಲು, ತರಳೆ- ಹುಡುಗಿಯು, ಆಗಳ್, ಸುರ್ಕಿ- ಸಂಕೋಚವಂ ಹೊಂದಿ, ಸುಗಿದಳ್- ಭಯಪಟ್ಟಳು, ಪಿತಂ, ಕಂಡು, ಕಾಯ್ದು- ಕೋಪಗೊಂಡು, ಸುತೆಗೆ, ಇಂತೆಂದಂ. ... ... ... ... ... ॥೯೨॥

ಕಡುಪಾತಕಿ- ಅತಿಪಾಪಿನಿಯೆ! ನೀನೆ, ಸುಧೆಯಂ- ಹಾಲನ್ನು,ಕುಡಿಕುಡಿದು, ಮೃಡಂ, ಈಂಟುಗುಂ ಪಾನಮಾಡುವನು, ಎಂದು, ಪುಸಿಯಂ, ನುಡಿದೆ; ಕೇಳ್; ನಿನ್ನಂ, ಕಡಿದುಇಕ್ಕದೆ- ಕತ್ತರಿಸಿ ಹಾಕದೆ, ಮಾಣ್ಬೆನೆ- ಬಿಡುವೆನೇ? ಎಂದು, ತಂದೆ, ಅರೆಯಟ್ಟಲ್-ಓಡಿಸಿಕೊಂಡುಬರಲು,ಒಡಂ, ಕೂಡಲೇ. ... ॥೯೩॥

ಹಾ! ಮಹೇಶ್ವರ! ಹಾ! ಮದೀಶ್ವರ- ನನ್ನ ಸ್ವಾಮಿಯೇ! ನೀನೆ, ಸದ್ಗತಿ- ಒಳ್ಳೆಯಪ್ರಾಪ್ಯಸ್ಥಾನನು; ಕಾಯ್ವುದು- ಪಾಲಿಸುವದು, ಎಂದು, ಆಮಹಾಭಯಕಂಪಿತಾಂಗಿ- ಅತ್ಯಂತ ಭೀತಿಯಿಂದ ನಡುಗುತ್ತಿರುವ ದೇಹವುಳ್ಳ ಆ ಕೊಡಗೂಸು, ಒರಲ್ಚಿ- ಪ್ರಲಾಪಿಸಿ, ಬಾಯ್ಬಿಡೆ, ಬೇಗದಿಂ— * ಸೋಮಶೇಖರಂ- ಪರಮೇಶ್ವರನು, ತನುಜಾತೆ- ಮಗಳೇ! ಅಂಜದಿರ್- ಭಯಪಡದಿರು; ಎಂದು, ಅಭಯಂಗುಡುತ್ತೆ- ನಿರ್ಭೀಕತೆಯನ್ನು ಕೊಡುತ್ತ, ಕೃಪಾನಿಧಿ- ದಯೆಗೆ ನಿಕ್ಷೇಪನಾದ,ಶಂಕರಂ, ಆಮನೋಜ್ಞ ಸುಧಾರಸಂಗುಡಿದಂ- ಆ ಮನೋಹರವಾದ ಹಾಲನ್ನು ಕುಡಿದನು. ... ... ... ॥೯೪॥

ಗೌರೀಕಾಂತಂ, ಆಕೊಡಗೂಸಂ, ಕರುಣಾಲೋಕದೆ- ದಯಾವಿಶಿಷ್ಟವಾದ ನೋಟದಿಂದ, ನಡೆ, ಚೆನ್ನಾಗಿ, ನೋಡಿ, ತೆಗೆದು, ಬಿಗಿದು, ಅಪ್ಪುತೆ- ಆಲಂಗಿಸುತ್ತ, ತನ್ನ,ಒಡಲೊಳ್- ದೇಹದಲ್ಲಿ,ಜೋಕೆಯಿಂ- ಎಚ್ಚರದಿಂದ, ಒಳಪುಗಿಸೆ; ಪುಗುವ- ಒಳಕ್ಕೆ ಹೋಗುವ, ಮಗಳಂ, ಜನಕಂ- ತಂದೆಯು. ... ॥೯೫॥

ಕಂಡು, ಎಲೆ! ಪೋಗದೆ, ಇರ್; ಎನುತಂ, ಚಂಡಿಕೆವಿಡಿದು- ಕೇಶವಂ ಹಿಡಿದು, ಎಳೆಯೆ. ಶಿಖೆಯೆ-ಕೂದಲೇ, ಪೊರಗೆ, ಉಳಿದು, ಇರೆ, ಭೂಮಂಡಲಂ, ಅಚ್ಚರಿವಡೆ- ಆಶ್ಚರ್ಯಪಡಲು, ಆಕೊಡಗೂಸು,ಮುಂಕೊಂಡು- ತ್ವರೆಪಟ್ಟು, ಲಿಂಗದ, ಒಳಪೊಕ್ಕು, ಇರ್ದಳ್. ... ... ... ॥೯೬॥

---

* (ಅವ) ಸೋಮ- ಚಂದ್ರನೇ, ಶೇಖರ- ಶಿರೋಭೂಷಣವಾಗುಳ್ಳವನು. ... ॥೯೪

ಕಂ॥ ಅಮರ್ದಮಮಳಮುಗ್ಧಭಕ್ತಿಯೊ । ಳಮರ್ದಂ ತನಗಿತ್ತ ಮುಗ್ಧಭಕ್ತೆಗೆ ಸೊಗಯಿ ॥ ಪ್ಪಮರ್ದನೊಸೆದಿತ್ತನಘಹರ ।ನಮರ್ದುಣಿಗಳ್ಪೊಗಳೆನಲಿಯೆಶರಣಸಮೂಹಂ॥

ಕಂ ॥ ಷಣ್ಮಾಸಕೊರ್ಮೆ ಲಿಂಗದೊ । ಳುಣ್ಮುವ ಕುಂತಳಮನೀಗಳುಂ ಕತ್ತರಿಪರ್॥ ಪೆಣ್ಮಣಿಗಿಂತೆಸಗಿದ ನುಮೆ । ಯಾಣ್ಮಂ ತಾನಿದು ಸಮಸ್ತಭುವನಪ್ರಥಿತಂ ॥ ॥೯೭॥

ವ ॥ ಅಂತುಮಲ್ಲದೆಯುಂ ॥ ಕಂ ॥ ಹರಚರಣಸ್ಮರಣಾಂತಃ । ಕರಣೆ ಗುಣಾಭರಣೆಬಿಜ್ಜಮಾದೇವಿವೆಸರ್ ॥ ಕರಮೆಸೆವ ಭಕ್ತೆಯೋರ್ವಳ್ । ಧರಣೀತಳದೊಳ್ನೆಗಳ್ತೆವೆತ್ತೆಸೆದಿರ್ದಳ್॥ ... ... ... ... .. ॥೯೯॥

ವ ॥ ಆಮುಗ್ಧಭಕ್ತೆಯೊಂದುದಿವಸಂ ॥ * * * * * * * * *

ಕಂ ॥ ನಟ್ಟನಿರೀಕ್ಷಣೆ ಕದಪಿನೊ । ಳಿಟ್ಟಕರಂ ಕುಂದಿದಾನನಂ ಕದಡಿಹಸಂ ॥ ಗೆಟ್ಟಮನ ಮಿರೆ ವಿಷಾದಂ । ಪುಟ್ಟೆ ಕರಂ ಶಂಕರಂಗವಳ್ಚಿಂತಿಸಿದಳ್ ॥ ... ॥೧೦೦॥

ಕಂ॥ ಸತಿಯುಂ ಸುತರುಂಹಿತರುಂ । ನುತವಿನಿಯೋಗದರುಮೊಳರಿಳಾಧರತನಯಾ ॥ ಪತಿಗಾತ್ಮಜನನಿಯಿಲ್ಲ । ದ್ಭುತಮಿದುತಾನೊಗೆದನೆಂತೊತಾಯಿಲ್ಲದನಂ ॥ ... ॥೧೦೧॥

---

ಅಘಹರಂ- ಪಾಪನಾಶಕನಾದ ಶಿವನು, * ಅಮರ್ದುಣಿಗಳ್- ದೇವತೆಗಳು, ಪೊಗಳೆ, ಶರಣಸಮೂಹಂ, ನಲಿಯೆ- ಸಂತೋಷಪಡುತ್ತಿರಲು, ಅಮರ್ದ- ಪ್ರಾಪ್ತವಾದ, ಅಮಳಮುಗ್ಧಭಕ್ತಿಯೊಳ್-ನಿರ್ಮಲವಾದ ಮೂಢಭಕ್ತಿಯಿಂದ, ತನಗೆ, ಅಮರ್ದಂ- ಹಾಲನ್ನು, ಇತ್ತ- ಕೊಟ್ಟ, ಮುಗ್ಧಭಕ್ತೆಗೆ, ಸೊಗಯಿಪ್ಪ-ಪ್ರಕಾಶಿಸುವ, ಅಮರ್ದಂ- ಮೋಕ್ಷವನ್ನು, ಒಸೆದು- ಪ್ರೀತಿಸಿ, ಇತ್ತಂ! ... ... ॥೯೬॥

ಷಣ್ಮಾಸಕ್ಕೆ- ಆರುತಿಂಗಳಿಗೆ, ಓರ್ಮೆ- ಒಂದಾವರ್ತಿ, ಲಿಂಗದೊಳ್, ಉಣ್ಮುವ- ಆವಿರ್ಭವಿಸುವ, ಕುಂತಳಮಂ- ಕೇಶವನ್ನು, ಈಗಳುಂ, ಕತ್ತರಿಪರ್; ಉಮೆಯುಆಣ್ಮಂ- ಪಾರ್ವತೀಪತಿಯು, ಪೆಣ್ಮಣಿಗೆ- ಸ್ತ್ರೀರತ್ನಳಾದ ಕೊಡಗೂಸಿಗೆ, ಇಂತು- ಈ ಪೂರ್ವೋಕ್ತಪ್ರಕಾರವಾಗಿ, ಎಸಗಿದಂ- ಮಾಡಿದನು, ಇದು, ತಾಂ, ಸಮಸ್ತಭುವನಪ್ರಥಿತಂ- ಎಲ್ಲಾ ಲೋಕದಲ್ಲೂ ಪ್ರಸಿದ್ಧವಾದದ್ದು. ... ... ॥೯೭॥

## ಬಿಜ್ಜಮಾದೇವಿಯ ಕಥೆ.

ಹರಚರಣಸ್ಮರಣಾಂತಃಕರಣೆ- ಪರಶಿವನ ಪಾದಧ್ಯಾನದಿಂಕೂಡಿದ ಮನಸ್ಸುಳ್ಳ, ಗುಣಾಭರಣೆ, ಬಿಜ್ಜಮಾದೇವಿವೆಸರ್- ಬಿಜ್ಜಮಾದೇವಿಯೆಂಬ ಹೆಸರು, ಕರಂ- ಚೆನ್ನಾಗಿ,ಎಸೆವ- ಶೋಭಿಸುವ, ಓರ್ವಳ್, ಭಕ್ತೆ, ಧರಣೀತಲದೊಳ್, ನೆಗಳ್ತೆವೆತ್ತು- ಪ್ರಸಿದ್ಧಿಯಂ ಹೊಂದಿ, ಎಸೆದು, ಇರ್ದಳ್. ... ॥೯೯॥

ಆಮುಗ್ಧಭಕ್ತೆ, ಒಂದುದಿವಸಂ. * * * * * * * * * * * * *

ಕದಪಿನೊಳ್- ಕೆನ್ನೆಯಲ್ಲಿ, ಇಟ್ಟ, ಕರಂ- ಹಸ್ತವು, ಕುಂದಿದ- ಕಾಂತಿರಹಿತವಾದ, ಆನನಂ- ಮುಖವು, ಕದಡಿ- ಕಲಕಿಕೊಂಡು, ಹಸಂಗೆಟ್ಟ- ಒಪ್ಪಗೆಟ್ಟ, ಮನಂ, ಇರೆ, ವಿಷಾದಂ- ಮನಃಕ್ಲೇಶವು, ಪುಟ್ಟೆ, ಅವಳ್, ನಟ್ಟನಿರೀಕ್ಷಣೆ- ನಿಶ್ಚಂಚಲವಾಗಿ ಒಂದೇ ಸ್ಥಲದಲ್ಲಿ ನಿಂತ ನೋಟವುಳ್ಳವಳಾಗಿ, ಶಂಕರಂಗೆ- ಈಶ್ವರನ ವಿಷಯದಲ್ಲಿ, ಚಿಂತಿಸಿದಳ್- ಆಲೋಚಿಸಿದಳು. ... ... ... ॥೧೦೦॥

ಇಳಾಧರತನಯಾಪತಿಗೆ- ಪರಶಿವನಿಗೆ, ಸತಿಯುಂ- ಪತ್ನಿಯೂ, ಸುತರುಂ, ಹಿತರುಂ, ನುತವಿನಯೋಗದರುಂ- ಶ್ಲಾಘ್ಯರಾದ ಸೇವಕರೂ,ಒಳರ್- ಇರುವರೆ; ಆತ್ಮಜನನಿ- ತನ್ನ ತಾಯು, ಇಲ್ಲ; ತಾಯ್, ಇಲ್ಲದವಂ, ತಾಂ, ಎಂತುಒಗೆದನೋ- ಹ್ಯಾಗೆಹುಟ್ಟಿದನೋ? ಅದ್ಭುತಂ- ಆಶ್ಚರ್ಯ! ... ॥೧೦೧

---

* (ಅವ) ಅಮೃತವನ್ನುಣ್ಣುವಸ್ವಭಾವವುಳ್ಳವರು. ... ... ... ॥೯೬ ॥

ಕಂ ॥ ಭೂತಪತಿ ಯೊಗೆವುದುಂ ತ । ನ್ಮಾತೆ ವಲಂ ಮಡಿದಳಕ್ಕು ಮಲ್ಲದೊಡಾತಂ ॥
ಪ್ರೇತಾವಾಸದೊ ಳಾಡುವ । ಭೂತಂಗಳ ಕೂಡೆ ವಿಹರಣಂಗೆಯ್ದಪನೆ ॥ .. ॥೧೦೨॥

ಕಂ ॥ ಜೆಡೆಗಟ್ಟಿದ ಶಿರಮುಂ ಕೆಂ । ಪಡರ್ದಕ್ಷಿಯು ಮೈದೆ ಧೂಳಿವಡೆದಂಗಮು ಮಿ॥
ರ್ಪುಡುಗಿದಮೈಯು ಮದೇಂ ಕ । ನ್ನಡಿಸವೆ ಕರಿಮುಖಪಿತಂಗೆ ತಾಯಿಲ್ಲದವಂ ॥ ॥೧೦೩॥

ತರಳವೃತ್ತಂ ॥ ಜನನಿಯುಳ್ಳೊಡೆ ಸರ್ಪದಾಭರಣಂಗಳಂ ತಲೆಮಾಲೆಯಂ । ತನಯ
ನಂ ತೊಡಲೀವಳೇ ಬಿಸಗೊಂಬುದಂ ತಿರಿದುಂಬುದಂ ॥ ಮುನಿದು ಮಾಣಿಸದಿರ್ಪಳೇ ಕರಿಕೃ
ತ್ತಿಯುಂ ಪುಲಿಸಮ್ಮಮಂ । ತನುಗೆ ತಾಂ ಪೊದೆವಂತೆ ಮಾಳ್ಪಳೆ ಬುದ್ಧಿಗೆಟ್ಟಿರೆತಾಳ್ವಳೆ॥

ಕಂ॥ ಮನೆಮನೆವಾಳ್ತೆಯ ನೇನಂ । ನೆನೆಯದೆ ತೊಡೆಜೆಡೆಯೊಳಾಗಳುಂ ಕುಳ್ಳಿರ್ದಾ॥
ವನಿತೆಯರಿರವಿಂಗ ಸಮಾ । ಕ್ಷನ ತಾಯ್ತಾನುಳ್ಳೊಡೆಂತು ಮೇಂ ಸೈರಿಪಳೆ ॥ ॥೧೦೫॥

ಮತ್ತೇ॥ ಕಲಿಪಾರ್ಥಂ ಧನುವಿಂದೆ ಪೊಯ್ದ ನೊದೆದಂ ಕಾಲಿಂ ಪುಳಿಂದಂ ಮಹಾ।
ಬಲಸಾಂಖ್ಯಂ ಬಿರುಗಲ್ಗಳಿಂದೆ ಬಿಡದಿಟ್ಟಂ ಬಾಣ ನೋವ್ರೋವ್ರೊ ಬಾ ॥ ಗಿಲ ಕಾಪಿಂಗಿರದೇ
ಳ್ದು ನೇಮಿಸಿದನಂದಾನಂಬಿ ದೂದಟ್ಟ ಕಾ । ಳ್ಗೆಲಸಂಗಯ್ಸಿದ ನಯ್ಯೊ ದೇಸಿಗ ನಿವಂ ತಾ

---

ಭೂತಪತಿ- ಪರಶಿವನು, ಒಗೆವುದುಂ- ಹುಟ್ಟಲು, ತನ್ಮಾತೆ-ಅವನ ತಾಯು, ಮಡಿದಳ್- ಸತ್ತವಳು, ಅಕ್ಕುಂ- ಆಗಿರುವಳು, ವಲಂ- ನಿಶ್ಚಯ, ಅಲ್ಲದೊಡೆ, ಆತಂ, ಪ್ರೇತಾವಾಸದೊಳ್- ಸ್ಮಶಾನದಲ್ಲಿ, ಆಡುವ ಭೂತಗಳಕೂಡೆ- ಪಿಶಾಚಿಗಳೊಡನೆ, ವಿಹರಣಂಗೆಯ್ದಪನೆ-ಕ್ರೀಡಿಸುವನೇ? ... ॥೧೦೨॥

ಕರಿಮುಖಪಿತಂಗೆ— * ಕರಿಮುಖ- ವಿನಾಯಕನ, ಪಿತಂಗೆ- ತಂದೆಯಾದ ಶಿವನಿಗೆ, ಜೆಡೆಗಟ್ಟಿದ, ಶಿರಮುಂ, ಕೆಂಪಡರ್ದ- ಕೆಂಪಾದ, ಅಕ್ಷಿಯುಂ- ಕಣ್ಣು, ಐದೆ- ಚೆನ್ನಾಗಿ, ಧೂಳಿವಡೆದ- ಧೂಳಿನಿಂದವ್ಯಾಪ್ತವಾದ, ಅಂಗಮುಂ- ಅವಯವೂ, ಇರ್ಪು- ಯಥಾಸ್ಥಿತಿಯು, ಉಡುಗಿದ- ನಾಶವಾದ, ಮೆಯ್ಯುಂ- ಶರೀರವೂ, ತಾಯ್, ಇಲ್ಲದುದಂ, ಅದೇಂಕನ್ನಡಿಸವೆ- ಪ್ರಕಾಶಪಡಿಸುವದಿಲ್ಲವೇನು? ... ॥೧೦೩॥

ಜನನಿ- ತಾಯು, ಉಳ್ಳೊಡೆ- ಇದ್ದರೆ, ಸರ್ಪದ, ಆಭರಣಂಗಳಂ- ತೊಡವುಗಳನ್ನು, ತಲೆಮಾಲೆಯಂ- ರುಂಡಮಾಲೆಯನ್ನು, ತನಯನಂ-ಮಗನನ್ನು, ತೊಡಲ್ಈವಳೆ- ತೊಡಿಸಗೊಡುವಳೇ? ಬಿಸಗೊಂಬುದಂ- ವಿಷಪಾನಮಾಡುವದನ್ನು, ತಿರಿದು- ಯಾಚಿಸಿ, ಉಂಬುದಂ, ಮುನಿದು- ಕೋಪಿಸಿ, ಮಾಣಿಸದೆ- ಬಿಡಿಸದೆ, ಇರ್ಪಳೇ? ಕರಿಕೃತ್ತಿಯುಂ- ಆನೆಯ ಚರ್ಮವನ್ನು, ಪುಲಿಸಮ್ಮಮುಂ- ಹುಲಿಯಚರ್ಮವನ್ನು, ತನುಗೆ- ದೇಹಕ್ಕೆ, ಪೊದೆವಂತೆ- ಹೊದ್ದುಕೊಳ್ಳುವಹಾಗೆ, ತಾಂ, ಮಾಳ್ಪಳೆ? ಬುದ್ಧಿಗೆಟ್ಟು- ಮತಿಹೀನನಾಗಿ, ಇರೆ, ತಾಳ್ವಳೆ- ತಡೆಯುವಳೇ? ... ... ... ... ... ॥೧೦೪॥

ಮನೆಮನೆವಾಳ್ತೆಯುಂ- ಮನೆಯ ಸಂಸಾರವ್ಯಾಪಾರವನ್ನು, ಏನು, ನೆನೆಯದೆ- ಯೋಚಿಸದೆ, ತೊಡೆಜೆಡೆಯೊಳಗ, ಕುಳ್ಳಿರ್ದ್ದ, ಆವನಿತೆಯರ- (ಅಂದರೆ ಗೌರೀಗಂಗೆಯರ) ಇರವಿಂಗೆ-ರೀತಿಗೆ, ಅಸಮಾಕ್ಷನ- ಶಿವನ, ತಾಯ್, ತಾಂ, ಉಳ್ಳೊಡೆ, ಎಂತುಂ- ಹ್ಯಾಗಾದರೂ, ಸೈರಿಪಳೇಂ? ... ॥೧೦೫॥

ಕಲಿಪಾರ್ಥಂ- ಸವ್ಯಸಾಚಿಯಾದ ಅರ್ಜುನನು, ಧನುವಿಂದೆ- ಬಿಲ್ಲಿನಿಂದ,ಪೊಯ್ದಂ-ಹೊಡೆದನು, ಪುಳಿಂದಂ- ಬೇಡನು, (ಕನ್ನಪ್ಪ) ಕಾಲಿಂ, ಒದೆದಂ; ಮಹಾಬಲಸಾಂಖ್ಯಂ- ಅತ್ಯಂತ ಬಲಶಾಲಿಯಾದ ಸಾಂಖ್ಯನು, ಬಿಡದೆ- ತಪ್ಪದೆ, ಬಿರುಗಲ್ಗಳಿಂದೆ- ಬಿರುಸಾದ ಕಲ್ಲುಗಳಿಂದ, ಇಟ್ಟಂ- ಹೊಡೆದನು; ಬಾಣಂ, ಓವ್ರೋವ್ರೊ! ಇರದೆ- ತಪ್ಪದೆ, ಬಾಗಿಲಕಾಪಿಂಗೆ- ಬಾಗಿಲಂ ಕಾಯುವದಕ್ಕೆ, ಏಳ್ದು, ನೇಮಿಸಿದಂ; ಅಂದು, ಆನಂಬಿ, ದೂದಟ್ಟ- ಸೇವಕನನ್ನಾಗಿ ಮಾಡಿ, ಕಾಳ್ಗೆಲಸಂಗೆಯ್ಸಿದಂ- ಕೆಟ್ಟಕೆಲಸವಂ ಮಾಡಿಸಿದನು, ಅಯ್ಯೊ! ಇವಂದೇಸಿ

---

* (ಅವ) ಕರಿ- ಆನೆಯ, ಮುಖ- ಮೊಗವುಳ್ಳವನು. ... ... ॥೧೦೩॥

ಯುಳ್ಳೊಡಿಂತಪ್ಪನೆ ॥ ... .. .. ... ॥೧೦೬॥

ಕಂ ॥ ತನಿವಾಲಿಂ ಘೃತದಿಂ ಕರು । ಇನಿಸುಂ ಬಾಲ್ಯದೊಳೆ ನಾಂದುದಿಲ್ಲದರಿಂ ತಾ ॥
ನೆನಿತು ತಿರಿದುಂಡೊಡಂ ಪಸು । ವನುಗೆಡದಿರೆ ಬಸಿರ್ಗೆ ಬಿಟ್ಟಯೆಸಗಿದನಲ್ತೆ ॥ ॥೧೦೭॥

ವ ॥ ಎಂದು ಪಲವಂದದಿಂ ಪಲುಂಬಿ ಪಳಯಿಸಿ ಜನನಿ ಯಿಲ್ಲದ ದೇಸಿಕಂಗಾನಾದೊಡಂ ಜನನಿಯಾಗಿ ಪೊರೆದಪ್ಪೆನೆಂದು ನೇಹದಿಂ ನೆನೆದು ಶಿಶುಭಾವದಿಂ ನಿಜಲಿಂಗಮ ನವಲೋಕಿಪುದು ಮನಿತರೊಳಾಲಿಂಗ ಮಾಭಕ್ತಿಯು ನಿಳೆಯೊಳ್ಮೆರೆಯಲೆಳಸಿ ಶಿಶುರೂಪಮ ನಾಳ್ದು ತೊಡೆಯೆಡೆಯೊಳ್ಪಟ್ಟಿರೆ ಕಂಡುನನೆಕೊನೆವೋಗಿ ಮುಟ್ಟಮುದ್ದಿಸುತಮಿರೆಯಿರೆ

ಕಂ॥ ಅರೆಮುಗಿವಕಣ್ಗಳುಂ ಬಿದಿ । ರ್ವರುಣಾಂಘ್ರಿಕರಂಗಳುಂ ವಿರಾಜಿಸೆ ವೀಣಾ ॥
ಸ್ವರದಂತಿರೆ ದನಿ ರೋದಿಪ । ತರುಣಂಗಾಜನನಿ ಮೊಲೆಯ ನೂಡಿದಳಾಗಳ್ ॥ ॥೧೦೮॥

ಕಂ ॥ ತರಿಸಿಪೊಸತೊಟ್ಟಲಂ ಪ । ಟ್ಟಿರಿಸಿ ಕುಮಾರಕನ ನದರ ಮೃದುತಳ್ಪದೊ
ಳಾ ॥ ದರಿಸಿ ನಡೆ ನೋಡಿ ಪಾಡಿದ । ಳರವಿಂದದಳಾಕ್ಷಿ ಗಾಡಿಮಿಗೆ ಮೃದುರವದಿಂ । ॥೧೦೯॥

ತ್ರಿವಿಧಿ ॥ ಪಾವನಾತ್ಮಕ ಪನ್ನಗೇಂದ್ರಕಲಾಪ ಜೋ ಜೋ । ಚಂದ್ರಕ । ಲಾವತಂಸಕ ಚಂಚದುಜ್ಜ್ವಲರೂಪ ಜೋ ಜೋ । ಚಂಡತಾಂಡವ ಚಾಲಿತಾಬ್ಜಭವಾಂಡ ಜೋ

---

ಗಂ- ಈ ಗುರೂತ್ತಮನು, ತಾಯ್ ಉಳ್ಳೊಡೆ, ಇಂತು ಅಪ್ಪನೆ- ಹೀಗಾಗುವನೇ? ... ॥೧೦೬॥

ಬಾಲ್ಯದೊಳೆ, ತನಿವಾಲಿಂ- ಕಾಸಿದಹಾಲಿಂದ, ಘೃತದಿಂ- ತುಪ್ಪದಿಂದ, ಕರುಳ್, ಇನಿಸುಂ- ಇಷ್ಟು, ನಾಂದುದಿಲ್ಲ- ನನೆಯಲಿಲ್ಲ; ಅದರಿಂ, ತಾಂ, ಎನಿತು,ತಿರಿದು, ಉಂಡೊಡಂ, ಪಸು-ಕ್ಷುದ್ಬಾಧೆಯು, ಅನುಗೆಡದೆ- ನಾಶವಾಗದೆ, ಇರೆ, ಬಸಿರ್ಗೆ-ಹೊಟ್ಟೆಗೋಸ್ಕರ, ಬಿಟ್ಟಯೆಸಗಿದನಲ್ತೆ-ಬಿಟ್ಟಿಕೆಲಸವಂಮಾಡಿದನಲ್ಲವೇ ?

ಎಂದು, ಪಲವಂದದಿಂ- ಅನೇಕರೀತಿಯಿಂದ, ಪಲುಂಬಿ- ಹಂಬಲಿಸಿ, ಪಳಯಿಸಿ- ಪ್ರಳಾಪವಮಾಡಿ, ಜನನಿ, ಇಲ್ಲದ, ದೇಸಿಕಂಗೆ, ಆನಾದೊಡಂ, ಜನನಿ, ಆಗಿ, ಪೊರೆದಪ್ಪೆಂ- ಸಾಕುವೆನು; ಎಂದು, ನೇಹದಿಂ- ಪ್ರೀತಿಯಿಂದ, ನೆನೆದು- ಯೋಚಿಸಿ, ಲಿಂಗಮಂ, ಶಿಶುಭಾವದಿಂ- ಮಗುವಿನರೀತಿಯಿಂದ, ಅವಲೋಕಿಪುದುಂ- ನೋಡಲು, ಅನಿತರೊಳ್-ಅಷ್ಟರಲ್ಲಿ, ಆಲಿಂಗಂ, ಆ ಭಕ್ತಿಯುಂ, ಇಳೆಯೊಳ್- ಭೂಮಿಯಲ್ಲಿ; ಮೆರೆಯಲ್- ಪ್ರಕಾಶಗೊಳಿಸುವದಕ್ಕೋಸ್ಕರ, ಎಳಸಿ- ಅಪೇಕ್ಷಿಸಿ, ಶಿಶುರೂಪಮಂ- ಮಗುವಿನ ಆಕಾರವನ್ನು,ಆಳ್ದು- ಹೊಂದಿ, ತೊಡೆಯ, ಎಡೆಯೊಳ್-ಸ್ಥಲದಲ್ಲಿ, ಪಟ್ಟು- ಮಲಗಿ, ಇರೆ, ಕಂಡು, ನನೆಕೊನೆವೋಗಿ- ಅತ್ಯಂತ ಸಂತೋಷವಂಹೊಂದಿ, ಮುಟ್ಟಿ, ಮುದ್ದಿಸುತ್ತಂ, ಇರೆಯಿರೆ-ಇರುತ್ತಿರಲು. * * * * * *

ಅರೆಮುಗಿವ- ಅರ್ಧಮುಚ್ಚುವ, ಕಣ್ಗಳುಂ, ಬಿದಿರ್ವ- ಸುತ್ತಲೂಚಲಿಸುವ, ಅರುಣಾಂಘ್ರಿಕರಂಗಳುಂ- ಕೆಂಪಾದ ಕಾಲುಕೈಗಳು, ವಿರಾಜಿಸೆ, ದನಿ- ಶಬ್ದವು,ವೀಣಾಸ್ವರದಂತಿರೆ- ವೀಣೆಯಶಬ್ದದಹಾಗಿರಲು, ರೋದಿಪ- ಅಳುವ, ತರುಣಂಗೆ-ಮಗನಿಗೆ, ಆಜನನಿ, ಆಗಳ್, ಮೊಲೆಯುಂ,ಊಡಿದಳ್-ಕುಡಿಸಿದಳು. ॥೧೦೮॥

ಅರವಿಂದದಳಾಕ್ಷಿ- ಕಮಲದಎಸಳಿನಂತಿರುವಕಣ್ಣುಳ್ಳ ಬಿಜ್ಜಮಾದೇವಿಯು, ಪೊಸತೊಟ್ಟಲಂ, ತರಿಸಿ, ಕುಮಾರಕನಂ, ಅದರ- ಆ ತೊಟ್ಟಲಿನ, ಮೃದುತಳ್ಪದೊಳ್- ಕೋಮಲವಾದ ಹಾಸಿಗೆಯಲ್ಲಿ, ಪಟ್ಟಿರಿಸಿ, ಮಲಗಿಸಿ, ಆದರಿಸಿ- ಪ್ರೀತಿಸಿ, ನಡೆ- ಚೆನ್ನಾಗಿ, ನೋಡಿ, ಮಿಗೆ- ಹೆಚ್ಚಾಗಿ, ಮೃದುರವದಿಂ- ಕೋಮಲವಾದ ಶಬ್ದದಿಂದ, ಪಾಡಿದಳ್ ... ... ... ... ॥೧೦೯॥

ಪಾವನಾತ್ಮಕ- ಪರಿಶುದ್ಧವಾದಶರೀರವುಳ್ಳವನೇ! ಪನ್ನಗೇಂದ್ರಕಲಾಪ- ಶ್ರೇಷ್ಠಂಗಳಾದ ಸರ್ಪಗಳೇ ಆಭರಣವಾಗುಳ್ಳವನೇ! ಚಂಚದುಜ್ಜ್ವಲರೂಪ- ಥಳಥಳಿಸುವ ಪ್ರಕಾಶಮಾನವಾದ ಆಕಾರವುಳ್ಳವನೇ! ಜೋಜೋ; ಚಂಡತಾಂಡವಚಾಲಿತಾಬ್ಜಭವಾಂಡ- ಸಮರ್ಥವಾದನರ್ತನದಿಂದಸಂಚಲಿಸಲ್ಪಟ್ಟ ಬ್ರಹ್ಮಾಂಡ

ಜೋ | ದಂಡಿತ | ದಂಡಪಾಣಿ ಫಣೀಂದ್ರಕುಂಡಲಗಂಡ ಜೋ ಜೋ | ಪ್ರಣವಸಾರಸರೋಜರಾಜಮರಾಳ ಜೋ ಜೋ | ಮಂಗಳ | ಗುಣಸಮುದ್ರ ಮುನೀಂದ್ರಸನ್ನುತಿಲೋಲ ಜೋ ಜೋ | ದಕ್ಷಯಾಗಸಮಾಗತಾಮರಮರ್ದಿ ಜೋ ಜೋ | ದಂತಿತ | ರಕ್ಷುರಾಕ್ಷಸಕೃತ್ತಿವಸ್ತ್ರ ಕಪರ್ದಿ ಜೋ ಜೋ | ಅಂಬುಜಾಂಬಕಲೋಚನಾಂಬುಜಪಾದ ಜೋ ಜೋ | ಪುಷ್ಪಕ | ಳಂಬದರ್ಪವಿಭಂಗ ಜಲ್ಪಿತವೇದ ಜೋ ಜೋ ॥ * ... * .. * ...

ವ॥ ಎಂದಿಂತು ಜೋಗುಳಂಪಾಡೆ ರೋದನಮ ನುಳಿದೊಯ್ಯನೆ ನಿದ್ರೆಗೆಯ್ದಿರ್ದನಿತರೊಳಾ ಶಿಶು ವಿಕಸಿತವಿಲೋಚನಮಾಗೆ ಕಂಡಾಜನನಿ ಸಂತಸಂದಾಳ್ದು ತೆಗೆದು ಬಿಗಿದಪ್ಪಿ ಮೊಲೆಯೂಡಿ ಮುಂಡಾಡಿ ಮುದ್ದಿಸಿ ॥ * * * * * * * * * *

ಮತ್ತೆ ॥ ತಿಳಜಾಭ್ಯಂಗಮ ನಳ್ಕರಿಂ ರಚಿಸಿ ಮಂದೋಷ್ಣಾಂಬುವಿಂ ಮಜ್ಜನಂ | ಗೊಳಿಸುತ್ತಂಕದೊಳಿಟ್ಟು ಕಣ್ಗವಿಗಳಂ ಸೈತೂದಿ 'ದಿವ್ಯಾಂಬರಾಂ ॥ ಚಳದಿಂ ಮೈಯೊರಸುತ್ತೆ ಮೈದಿಗುರ ನಿಟ್ಟಾಗಳ್ನಿಶಾಚೂರ್ಣದಿಂ | ದಳಿಕಂದೇವಿ ಸುರಕ್ಷೆಯಂ ಪೊರೆದಳಾ

---

ವುಳ್ಳವನೇ! ಜೋಜೊ; ದಂಡಿತದಂಡಪಾಣಿ— ದಂಡಿತ- ಶಿಕ್ಷಿಸಲ್ಪಟ್ಟ, * ದಂಡಪಾಣಿ- ಯಮನುಳ್ಳವನೇ! ಫಣೀಂದ್ರಕುಂಡಲಗಂಡ- ಶ್ರೇಷ್ಠವಾದಸರ್ಪಗಳ ಕರ್ಣಕುಂಡಲದಿಂದ ಕೂಡಿದ ಕಪೋಲವುಳ್ಳವನೇ! ಜೋಜೊ; ಪ್ರಣವಸಾರಸರೋಜರಾಜಮರಾಳ- ಓಂಕಾರವೆಂಬ ಶ್ರೇಷ್ಠವಾದ ಕಮಲಕ್ಕೆ ರಾಜಹಂಸಪಕ್ಷಿಯಾದವನೇ! ಜೋಜೊ; ಮಂಗಳಗುಣಸಮುದ್ರ- ಶುಭಕರಗಳಾದ ಸದ್ಗುಣಗಳಿಗೆ ಸಮುದ್ರರೂಪನಾದವನೇ! ಮುನೀಂದ್ರಸನ್ನುತಿಲೋಲ- ಋಷೀಶ್ವರರಿಂದ ಮಾಡಲ್ಪಟ್ಟ ಸ್ತೋತ್ರದಲ್ಲಿ ಆಸಕ್ತನಾದವನೇ; ಜೋಜೊ; ದಕ್ಷಯಾಗಸಮಾಗತಾಮರಮರ್ದಿ- ದಕ್ಷಬ್ರಹ್ಮನ ಯಜ್ಞಕ್ಕೆ ಬಂದಿದ್ದ ದೇವತೆಗಳನ್ನು ಪೀಡಿಸಿದವನೇ! ಜೋಜೊ; ದಂತಿತರಕ್ಷುರಾಕ್ಷಸಕೃತ್ತಿವಸ್ತ್ರ- ಗಜಾಸುರ ವ್ಯಾಘ್ರಾಸುರರ ಚರ್ಮವೇ ವಸ್ತ್ರವಾಗುಳ್ಳವನೇ! ಕಪರ್ದಿ-ಜಟಾಜೂಟವುಳ್ಳವನೇ! ಜೋಜೊ; ಅಂಬುಜಾಂಬಕಲೋಚನಾಂಬುಜಪಾದ— † ಅಂಬುಜಾಂಬಕ- ವಿಷ್ಣುವಿನ, ಲೋಚನಾಂಬುಜ- ನೇತ್ರಕಮಲವೇ, ಪಾದ- ಚರಣದಲ್ಲುಳ್ಳವನೇ! ಜೋಜೊ; ಪುಷ್ಪಕಳಂಬದರ್ಪವಿಭಂಗ— ‡ ಪುಷ್ಪಕಳಂಬ- ಮನ್ಮಥನ, ದರ್ಪ- ಅಹಂಕಾರವನ್ನು, ವಿಭಂಗ- ನಾಶಪಡಿಸಿದವನೇ! ಜಲ್ಪಿತವೇದ- ಹೇಳಲ್ಪಟ್ಟವೇದವುಳ್ಳವನೇ !. ಜೋಜೊ. * ... * ... * ...

ಎಂದು, ಇಂತು, ಜೋಗುಳಂಪಾಡೆ- ಜೋಗುಳವನ್ನುಹಾಡಲು, ರೋದನಮಂ- ಅಳುವಿಕೆಯನ್ನು, ಉಳಿದು- ಬಿಟ್ಟು, ಒಯ್ಯನೆ- ಮೆಲ್ಲಗೆ, ನಿದ್ರೆಗೆಯ್ದಿರ್ದ, ಅನಿತರೊಳ್, ಆ ಶಿಶು, ವಿಕಸಿತವಿಲೋಚನಂ- ತೆರೆದಕಣ್ಣುಳ್ಳದ್ದು, ಆಗೆ, ಆಜನನಿ, ಕಂಡು, ಸಂತಸಂದಾಳ್ದು, ತೆಗೆದು, ಬಿಗಿದು, ಅಪ್ಪಿ-ಆಲಿಂಗಿಸಿ, ಮೊಲೆಯೂಡಿ- ಮೊಲೆಯನುಣಿಸಿ, ಮುಂಡಾಡಿ- ತಬ್ಬಿತೂಗಾಡಿ, ಮುದ್ದಿಸಿ- ಮುತ್ತನ್ನುಕೊಟ್ಟು. * * * *

ಆಮಾದೇವಿ- ಬಿಜ್ಜಮಾದೇವಿಯು, ಅಳ್ಕರಿಂ- ಪ್ರೀತಿಯಿಂದ, ತಿಳಜಾಭ್ಯಂಗಮಂ- ಎಣ್ಣೆಯುಸ್ನಾನವನ್ನು, ರಚಿಸಿ- ಮಾಡಿ, ಮಂದೋಷ್ಣಾಂಬುವಿಂ- ಸ್ವಲ್ಪ ಬೆಚ್ಚಗಿರುವನೀರಿನಿಂದ, ಮಜ್ಜನಂಗೊಳಿಸುತ್ತೆ- ಸ್ನಾನವಮಾಡಿಸುತ್ತ, ಅಂಕದೊಳ್- ತೊಡೆಯಲ್ಲಿ, ಇಟ್ಟು, ಕಣ್ಕಿವಿಗಳಂ, ಸೈತೂದಿ- ಚೆನ್ನಾಗಿಊದಿ, ದಿವ್ಯಾಂಬರಾಂಚಳದಿಂ- ಶ್ರೇಷ್ಠವಾದವಸ್ತ್ರದಕೊನೆಯಿಂದ, ಮೈಯೊರಸುತ್ತೆ, ಆಗಳ್, ನಿಶಾಚೂರ್ಣದಿಂ-

---

* (ಅವ) ದಂಡ- ದೊಣ್ಣೆಯೇ, ಪಾಣಿ- ಕೈಯ್ಯಲ್ಲುಳ್ಳವನು. † (ಅವ) ಅಂಬುಜ- ಕಮಲವೇ, ಅಂಬಕ- ಕಣ್ಣಾಗುಳ್ಳವನು. ‡ (ಅವ) ಪುಷ್ಪ- ಹೂವೇ, ಕಳಂಬ- ಬಾಣವಾಗುಳ್ಳವನು. ... *

---

ಮಾದೇವಿ ತಪ್ಪಾಲನಂ ‖ ... ... ... ... ‖೧೧೦‖

ಕಂ ‖ ಚೆಣ್ಣನ ಚೆಲ್ವಿಂಗನ್ಯರ । ಕಣ್ಣಿಂಜಲ್ತಾಗೆ ತಾರುಗುಂ ತನು ವೆನುತಾ ‖ ವೆ ಣ್ಣಾತ್ಮಪದಾಂಗುಷ್ಠದ । ಮಣ್ಣಿಂ ಶಿಶುವಿಂಗೆ ತಿಲಕಮಂ ನಿರಚಿಸಿದಳ್ ‖ ‖೧೧೧‖

ಕಂ ‖ ಪರಿಮಳಿಪ ನವಘೃತದೊಳೊಡ । ವೆರಸುತ್ತಿನಿವಾಲ ನೆರೆವುತಂಗುಳಮು ಷ್ಟಿಂ ‖ ಕರದಂಗುಲಿಯಿಂ ದೊತ್ತುತ । ಸರಸಿರುಹಸುಗಂಧಿ ಯೋವಿದಳ್ಬಾಲಕನಂ ‖೧೧೨‖

ವುತ್ತೇ ‖ ನಗಿಸುತ್ತಳ್ಳೆಯನೊಲ್ದು ಜಕ್ಕುಲಿಸಿ ಮುದ್ದಂ ಬೇಡುತಂ ವಕ್ತ್ರ ಮಂ । ನಗೆಗಣ್ಣಿಂ ನಡೆನೋಡುತಂ ಮುದವನಾಳ್ದಪ್ಪುತ್ತೆ ಸಂಪ್ರೀತಿ ಕೈ ‖ ಮಿಗೆ ಬಿಣ್ಪಿಂ ತೊರೆವೆಚ್ಚ ಪಾಯ್ವವೊಲೆವಾಲಂ ತೀವಿ ಬಾಯ್ಗೂಡುತಂ । ಬಗೆವೆರ್ಚುತ್ತೆಳೆ ಗೂಸನಿಂತು ಬಿಡದೋವುತ್ತಿರ್ದಳಾವೇಳೆಯೊಳ್ ‖ ... ... ‖೧೧೩‖

ಚಂ ‖ ಭವರಹಿತಂ ಭವಂ ಭುವನವಲ್ಲಭ ನಾಕೆಯ ಭಕ್ತಿಗೊಲ್ದು ಶೈ । ಶವಮನಮ ರ್ಚಿ ಕೈಕೊಳುತೆ ತತ್ಕೃತಬಾಲ್ಯಹಿತೋಪಚಾರಮಂ ‖ ವಿವಿಧವಿನೋದನಾಟಕಮ ನಾ ಳ್ದೆಸೆದಂಗಡ ಭಕ್ತವತ್ಸಲಂ ! ಭುವನದೆ ಭಕ್ತರಿಚ್ಛೆವಿಡಿದಾಪರಿಜಂ ತಳೆದಂದ ಮೊಪ್ಪದೇ‖

---

ಅರಿಸಿನದಹುಡಿಯಿಂದ, ಮೈದಿಗುರಂ- ಮೈಯಲೇಪನೆಯನ್ನು, ಇಟ್ಟು, ಸುರಕ್ಷೆಯಂ- ಒಳ್ಳೆಯಭಸ್ಮವನ್ನು, ದಳಕೆಂದೀವಿ- ಹಣೆಯಲ್ಲಿಧರಿಸಿ, ತಪ್ಪಾಲನು, ಪೊರೆದಳ್- ಸಾಕಿದಳು. ... ... ‖೧೧೦‖

ಚೆಣ್ಣನ- ಚಿಕ್ಕಹುಡುಗನ, ಚೆಲ್ವಿಂಗೆ- ಸೌಂದರ್ಯಕ್ಕೆ, ಅನ್ಯರ, ಕಣ್ಣಿಂಜಲ್- ದೃಷ್ಟಿದೋಷವು, ತಾಗೆ- ತಗಲಿದರೆ, ತನು- ಶರೀರವು, ತಾರುಗುಂ- ಕಂದುವದು; ಎನುತೆ, ಆಪೆಣ್- ಆಮಾದೇವಿಯು, ಆತ್ಮಪದಾಂಗುಷ್ಠದ- ತನ್ನ ಚರಣದ ಹೆಬ್ಬೆಟ್ಟಿನ, ಮಣ್ಣಿಂ, ಶಿಶುವಿಂಗೆ, ತಿಲಕಮಂ- ಹಣೆಯುಬಟ್ಟನ್ನು, ವಿರಚಿಸಿದಳ್- ಮಾಡಿದಳು. ... ... ... ... ... ‖೧೧೧‖

ಸರಸಿರುಹಸುಗಂಧಿ- ಕಮಲದಸುವಾಸನೆಯಂತಿರುವ ಪರಿಮಳವುಳ್ಳ ಮಾದೇವಿಯು, ಪರಿಮಳಿಪನವಘೃತದೊಳ್- ಕಂಪಾದ ಹೊಸತುಪ್ಪದೊಡನೆ, ಇನಿವಾಲಂ- ಸೀಯಾದ ಹಾಲನ್ನು,ಒಡವೆರಸುತ್ತೆ- ಬೆರಸುತ್ತ, ಎರೆವುತಂ- ಕುಡಿಸುತ್ತ, ಅಂಗುಳ- ಗಂಟಲಿನ, ಮುಷ್ಟಿಂ-ಗುಪ್ಪೆಯನ್ನು, ಕರದ, ಅಂಗುಲಿಯಿಂದೆ-ಬೆಟ್ಟಿನಿಂದ, ಒತ್ತುತೆ- ಅಮುಕುತ್ತ, ಬಾಲಕನಂ, ಓವಿದಳ್- ಪಾಲಿಸಿದಳು. ... ... ‖೧೧೨‖

ಅಳ್ಳೆಯಂ- ಪಕ್ಕೆಯನ್ನು, ಒಲ್ದು, ಜಕ್ಕುಲಿಸಿ- ಚಕ್ಕಲಗುಳಿಯನ್ನಿಕ್ಕಿ, ನಗಿಸುತ್ತೆ, ಮುದ್ದಂ, ಬೇಡುತಂ- ಕೇಳುತ್ತ, ವಕ್ತ್ರಮಂ- ಮೊಗವನ್ನು, ನಡೆ, ನೋಡುತಂ, ಮುದಮಂ, ಆಳ್ದು- ಹೊಂದಿ, ಅಪ್ಪುತೆ- ಆಲಿಂಗಿಸುತ್ತ, ಸಂಪ್ರೀತಿ- ಅನುರಾಗವು, ಕೈಮಿಗೆ- ಹೆಚ್ಚಾಗಲು, ಬಿಣ್ಪಿಂ- ಸ್ಥೌಲ್ಯದಿಂದ, ತೊರೆದು- ಬಿಟ್ಟು, ಎಚ್ಚು- ಚಿಮ್ಮಿ, ಪಾಯ್ವ- ಹಾರುವ, ಮೊಲೆವಾಲು, ಬಾಯ್ಗೆ, ತೀವಿ- ಸೇರಿಸಿ, ಊಡುತಂ-ಕುಡಿಸುತ್ತ, ಬಗೆವೆರ್ಚುತ್ತೆ-ಮನಸ್ಸಿಗೆಉತ್ಸಾಹವೇರುತ್ತ, ಆವೇಳೆಯೊಳ್, ಎಳೆಗೂಸಂ, ಇಂತು, ಬಿಡದೆ, ಓವುತ್ತೆ- ಸಾಕುತ್ತ, ಇರ್ದಳ್. ... ... ... ... ... ‖೧೧೩‖

ಭವರಹಿತಂ- ಉತ್ಪತ್ತಿರಹಿತನಾದ, ಭುವನವಲ್ಲಭಂ- ಲೋಕೇಶ್ವರನಾದ, ಭವಂ, ಆಕೆಯ, ಭಕ್ತಿಗೆ, ಒಲ್ದು, ಶೈಶವನಂ- ಬಾಲ್ಯಾವಸ್ಥೆಯನ್ನು, ಅಮರ್ಚಿ- ಅಳವಡಿಸಿಕೊಂಡು, ತತ್ಕೃತಬಾಲ್ಯಹಿತೋಪಚಾರಮಂ- ಅವಳಿಂದಮಾಡಲ್ಪಟ್ಟ ಬಾಲ್ಯಾವಸ್ಥೆಗೆ ತಕ್ಕ ಉಪಚಾರಗಳನ್ನು, ಕೈಕೊಳುತೆ- ಸ್ವೀಕರಿಸುತ್ತ, ಭಕ್ತವತ್ಸಲಂ, ವಿವಿಧವಿನೋದನಾಟಕಮಂ- ನಾನಾಪ್ರಕಾರಗಳಾದ ಲೀಲಾನಾಟಕಗಳನ್ನು, ಆಳ್ದು, ಎಸೆದಂಗಡ- ಪ್ರಕಾಶಿಸಿದನಲ್ಲವೇ? ಭುವನದೆ, ಭಕ್ತರ, ಇಚ್ಛೆವಿಡಿದು- ಇಷ್ಟವನ್ನನುಸರಿಸಿ, ಆಪರಿಜಂ- ಆ ಆಕಾರವನ್ನು, ತಳೆದ-ಧರಿಸಿದ, ಅಂದಂ-ರೀತಿಯು, ಒಪ್ಪದೇ? ... ... ‖೧೧೪‖

ಮತ್ತೇ ॥ ಕೆಳೆಯಂ ನಂಬಿಗೆ ಗುಂಡಯ್ಯಂಗೆ ನಟ ನಾದಯ್ಯಂಗೆ ವೇಳಾಚರಂ । ವಿಳ
ಸದ್ವೀರಗಣೇಶ್ವರಂಗೆಸವಶಿಷ್ಯಂ ತಂದೆ ಚಂಡಂಗೆ ನಿ ॥ ಶ್ಚಳಭಾವಂ ಗುರುಲಿಂಗಯೋಗಿಗೆ
ವರಂ ತಾನಾದನಂದಿಂದು ವ । ತ್ಸಳಭಾವಂ ಮಿಗೆ ವತ್ಸನಾಪನಭವಂಮಾದೇವಿಗಾನಂದದಿಂ॥

ವ ॥ ಎಂದಿಂತು ಭಕ್ತನಿವಹಂ ಬಣ್ಣಿಸುತ್ತ ಮಿರ್ಪಿನ ಮಾಮಹಾದೇವಂ ಮಹಾ
ದೇವಿಯ ಮಹಿಮೆಯಂ ಮಹಿಯೊಳ್ ಪ್ರಕಟಂಗೆಯ್ಯಲೆಳಸಿ॥ * * * * * *

ಕಂ॥ ಕಣ್ಣುಂ ಮೊಗಮುಂ ಬೆರತಿರೆ । ತಣ್ಣನೆ ಕೈಕಾಲ್ಗಳಿರೆ ನಿಜೋದರ ಮಾಗಳ್॥
ತಿಣ್ಣಂ ಮದಾಗುತ್ತಿರೆ ಮು । ಕ್ಕಣ್ಣಂ ಮೋಲೆಯೊಲ್ಲದಂಗದಳವರೆತಿರ್ದಂ ॥ ॥೧೧೮॥

ಚಂ॥ಪಡಿದೆರೆದಂತೆ ಪಾರಿತೆರ್ದೆ ಕಾಣ್ಬುದು ಮಾಕೆಶುಗಾದವಸ್ಥೆಯಂ। ನಡುಗಿ ಬೆಮ
ರ್ತು ಸುಯ್ದುಳವುಗೆಟ್ಟೊಳಗಾರಿ ಬಳಲ್ದಳಲ್ದು ಬಾ ॥ ಯ್ವಿಡುತೆಲೆಕಂದ ಕೆಟ್ಟೆನಕಟೇನೊ
ಡವಿರ್ದುದೊ ರೋಗ ಮೇಕೆ ನಿ । ನ್ನೊಡಲಿದಿಂತುಟಾದುದೆನುತಂ ಕೆ ಮನೋಗದದಿಂ ಪ
ಲುಂಬಿದಳ್ ॥ ... ... ... ... ॥೧೧೯॥

ಚಂ॥ ಎಳೆನಗೆ ಯುಣ್ಮೆ ಮುದ್ದುಮೊಗದೊಳ್ಮೊಳೆವ ಲ್ನಗೆವಳ್ಳಿ ತಾಳ್ದ ಕು । ಟ್ಮ
ಳಮೆನೆ ತೋರೆ ಬಾಯ್ದೆರೆವುತಂ ಮೊಲೆಯುಂಬ ಮರಳ್ದುನೋಳ್ಪ ಸಂ ॥ ಗಳಿಸೆ ತೊದ

ಅಂದು; ನಂಬಿಗೆ- ನಂಬ್ಯಣ್ಣನಿಗೆ, ಕೆಳೆಯಂ- ಸ್ನೇಹಿತನು; ಗುಂಡಯ್ಯಂಗೆ, ನಟಂ- ನರ್ತಕನು; ಆದ
ಯ್ಯಂಗೆ, ವೇಳಾಚರಂ- ಕಾಲಸೂಚಕನು; ವಿಳಸದ್ವೀರಗಣೇಶ್ವರಂಗೆ, ಎಸೆವ, ಶಿಷ್ಯಂ; ಚಂಡಂಗೆ, ತಂದೆ;
ನಿಶ್ಚಳಭಾವಂ- ನಿಶ್ಚಂಚಲವಾದಮನಸ್ಸುಳ್ಳ, ಗುರುಲಿಂಗಯೋಗಿಗೆ, ತಾಂ, ವರಂ, ಆದಂ, ಇಂದು, ಅಭವಂ,
ಆನಂದದಿಂ, ಮಾದೇವಿಗೆ, ವತ್ಸಲಭಾವಂ, ವಾತ್ಸಲ್ಯವು, ಮಿಗೆ-ಹೆಚ್ಚಾಗಲು, ವತ್ಸಂ-ಶಿಶುವು, ಆದಂ.॥೧೧೭॥
ಎಂದು, ಇಂತು, ಭಕ್ತನಿವಹಂ, ಬಣ್ಣಿಸುತ್ತಂ, ಇರ್ಪಿನಂ- ಇರುತ್ತಿರುವಲ್ಲಿ, ಆಮಹಾದೇವಂ, ಮ
ಹಾದೇವಿಯ, ಮಹಿಮೆಯಂ, ಮಹಿಯೊಳ್ ಭೂಮಿಯಲ್ಲಿ, ಪ್ರಕಟಂಗೆಯ್ಯಲ್- ಪ್ರಸಿದ್ಧಿಗೊಳಿಸುವದಕ್ಕೋ
ಸ್ಕರ, ಎಳಸಿ-ಅಪೇಕ್ಷಿಸಿ. * * * * * * * * * * * * * *
ಕಣ್ಣುಂ, ಮೊಗಮುಂ, ಬೆರತು- ಶುಷ್ಕವಾಗಿ, ಇರೆ, ಕೈಕಾಲ್ಗಳ್, ತಣ್ಣನೆ, ಇರೆ, ನಿಜೋದರಂ- ತ
ನ್ನ ಹೊಟ್ಟೆಯು, ಅದು, ಆಗಳ್, ತಿಣ್ಣಂ-ದಪ್ಪವಾದದ್ದು, ಆಗುತ್ತೆ, ಇರೆ, ಮುಕ್ಕಣ್ಣಂ- ತ್ರಿಲೋಚನನು,
ಮೊಲೆಯೊಲ್ಲದೆ, ಅಂಗದ, ಅಳವು- ಶಕ್ತಿಯು, ಅರೆತು- ಕ್ಷೀಣವಾಗಿ, ಇರ್ದಂ. ... ॥೧೧೮॥
ಆಕೆಶುಗೆ, ಆದ, ಅವಸ್ಥೆಯಂ, ಕಾಣ್ಬುದಂ- ನೋಡಲು, ಎರ್ದೆ- ಹೃದಯವು, ಪಡಿದೆರೆದಂತೆ- ಕದವಂ
ಬಿಚ್ಚಿದಂತೆ, ಪಾರಿತು; ಆಕೆ, ನಡುಗಿ, ಬೆಮರ್ತು, ಸುಯ್ದು-ನಿಟ್ಟುಸುರಂಬಿಟ್ಟು, ಅಳವುಗೆಟ್ಟು, ಶಕ್ತಿಗುಂ
ದಿ, ಒಳಗೆ- ಹೃದಯದಲ್ಲಿ, ಆರಿ- ಒಣಗಿ, ಬಳಲ್ದು- ಆಯಾಸಪಟ್ಟು, ಅಳಲ್ದು, ಅತ್ತು, ಬಾಯ್ವಿಡುತೆ, ಎಲೆ
ಕಂದ! ಕೆಟ್ಟೆಂ; ಅಕಟ! ರೋಗಂ, ಏಂಒಡವಿರ್ದುದೊ– ಏನುಪ್ರಾಪ್ತವಾಯಿತೋ? ನಿನ್ನ, ಒಡಲ್, ಹೊ
ಟ್ಟೆಯು, ಇಂತುಟು- ಹೀಗೆ, ಏಕೆ ಆದುದು? ಎನುತೆ, ಮನೋಗದದಿಂ- ಮನೋರೋಗದಿಂದ, ಪಲುಂಬಿದ
ಳ್- ಹಂಬಲಿಸಿದಳು. ... ... ... ... ... ॥೧೧೯॥

ಎಳೆನಗೆ- ಮಂದಹಾಸವು, ಮುದ್ದುಮೊಗದೊಳ್- ಪ್ರೀತಿಯನ್ನುಂಟುಮಾಡುವಮುಖದಲ್ಲಿ, ಉಣ್ಮೆ-
ಉಂಟಾಗಲು, ಮೊಳೆವಲ್- ತಲೆಯಿಕ್ಕುವಹಲ್ಲು, ನಗೆವಳ್ಳಿ- ನಗುವಿಕೆಯೆಂಬಬಳ್ಳಿಯು, ತಾಳ್ದ, ಕುಟ್ಮಳಂ-
ಮೊಗ್ಗು, ಎನೆ, ತೋರೆ- ಪ್ರಕಾಶಿಸಲು, ಬಾಯ್ದೆರೆಯುತಂ- ಬಾಯ್ಬಿಡುತ್ತ, ಮೊಲೆಯುಂಬ, ಮರಳ್ದು- ತಿ
ರುಗಿ, ನೋಳ್ಪ, ತೊದಳ್, ಸಂಗಳಿಸೆ- ಸಂಬಂಧಿಸಲು, ವಿನೋದಿಪ- ಬಿನದಪಡುವ, ಕರಾಂಗುಳಿಯಂ- ಕೈಬೆ

ಳ್ವನೋವಿಪ ಕರಾಂಗುಲಿಯುಂ ಪಿಡಿದೇಳ್ವ ನಿಲ್ವ ಕಂ। ಗೊಳಿಪ ಕುಮಾರ ನಿನ್ನ ತನುಗಾ
ದ ಬಳಲ್ಕೆಯನೆಂತುನೋಳ್ಪೆನೊ ॥ ... ... ... ॥೧೧೮॥

ಕಂ ॥ ಪಲವೆಡೆಯೊಳ್ ವಿಷಮಾನ್ನಮ । ನಲಸದೆ ತಿರಿದುಂಡ ಕಾಲದೊಳ್ ಘನಹಾಲಾ ॥
ಹಲಮುಂ ಸವಿದಂದಿಲ್ಲದ । ಬಲವದ್ರುಜೆ ಯೀಗಳೇಂಗೆದುದೇಂ ಕಾರಣಮೊ ॥ ॥೧೧೯॥

ಕಂ॥ ಅಂಜೆ ಬೆಳಗಾದುದೆಂದು ಜ । ನಂ ಜಗದೊಳ್ ನುಡಿವ ತೆರದೆ ನಿನಗೆ ಗದಂಗಳ್ ॥
ಸಂಜನಿಪುವೆಂದು ಪಿರಿದಾ । ನಂಜುತ್ತಿರೆ ಬಂದುದುಗ್ರರುಜೆ ಸುಕುಮಾರಾ ॥ ॥೧೨೦

ಉ ॥ ಎನ್ನಯ ಜೀವರತ್ನ ಮಿದು ಕರ್ರನೆ ಕಂದಿದು ದೆನ್ನ ರನ್ನದೊ । ಳ್ಗನ್ನಡಿ ಮಾ
ಸಿದತ್ತು ಕೊರಗಿರ್ದಪು ದೆನ್ನಯ ಪುಷ್ಪಮಾಲೆ ಯಾ ॥ ಯ್ದೆನ್ನ ಸುಧಾರಸಂ ಬರೆಯಲಿ
ರ್ದಪುದಯ್ಯೋ ಎನುತ್ತೆ ಶೋಕರಾ । ವ ನ್ನೆಲೆವೆರ್ಚೆ ತತ್ಸುತನ ನೀಕ್ಷಿಸಿ ಸೂಸಿದ ಳಂಬ
ಕಾಂಬುವಂ ॥ ... ... ... ... ॥೧೨೧

ರಥೋದ್ಧತ ॥ ಸಂತವಿರ್ದ ಶಿಶುಗಾಯ್ತು ರೋಗ ಮಿ । ನ್ನೆಂತು ಮಾಳ್ಪೆ ನಿದಕೌ
ಷಧಂಗಳಂ ॥ ಮುಂತೆ ಬಲ್ಲ ರಣಮಿಲ್ಲ ಮೆಂದವಳ್ । ಚಿಂತೆಯಾಂತು ಬಗೆಗುಂದಿ ಕಂದಿದಳ್ ॥

ವ ॥ ಅಂತು ಕಂದಿ ಕುಂದಿ ಮಾದೇವಿ ಮನಮುರುಗಿ ಮತ್ಪ್ರಾಣಸನ್ನಿಭನಾದ ಮ
ಗಂಗಾದ ಬಳಲ್ಕೆಯಂ ನೋಳ್ಪುದರಿಂ ಮರಣಮೇ ಲೇಸೆಂದು ಹರಣಂಗಳೆಯ ಲುಜ್ಜುಗಿಸಿ

---

ಟ್ಟನ್ನು, ಪಿಡಿದು, ಏಳ್ವ, ನಿಲ್ವ- ನಿಂತುಕೊಳ್ಳುವ, ಕಂಗೊಳಿಪ, ಕುಮಾರ! ನಿನ್ನ, ತನುಗೆ, ಆದ, ಬಳಲ್ಕೆ
ಯಂ- ಆಯಾಸವನ್ನು, ಎಂತುನೋಳ್ಪೆನೊ- ಹ್ಯಾಗೆನೋಡುವೆನು? ... ... ॥೧೧೮॥

ಪಲವೆಡೆಯೊಳ್- ಅನೇಕಸ್ಥಲದಲ್ಲಿ, ಅಲಸದೆ- ಆಲಸ್ಯಪಡದೆ, ವಿಷಮಾನ್ನಮಂ-ಕದನ್ನವನ್ನು, ತಿರಿ
ದು- ಬೇಡಿ, ಉಂಡ, ಕಾಲದೊಳ್, ಘನಹಾಲಾಹಲಮುಂ- ಅಧಿಕವಾದವಿಷವನ್ನು, ಸವಿದಂದು- ಪಾನಮಾಡಿ
ದಾಗ, ಇಲ್ಲದ, ಬಲವದ್ರುಜೆ-ಬಲವಾದರೋಗವು,ಈಗಳ್, ಏಂಕಾರಣಂಬಗೆದುದೋ-ಏನುಕಾರಣಹುಟ್ಟಿತೋ?

ಅಂಜೆ- ಭಯಪಡುತ್ತಿರಲು, ಬೆಳಗು, ಆದುದು, ಎಂದು; ಜನಂ, ಜಗದೊಳ್, ನುಡಿವತೆರದೆ- ಹೇಳುವ
ರೀತಿಯಿಂದ, ನಿನಗೆ, ಗದಂ- ರೋಗವು, ಸಂಜನಿಪುದು- ಹುಟ್ಟುವದು, ಎಂದು, ಆಂ, ಪಿರಿದು-ಹೆಚ್ಚಾಗಿ, ಅಂ
ಜುತ್ತೆ, ಇರೆ, ಸುಕುಮಾರ, ಉಗ್ರರುಜೆ- ಭಯಂಕರವಾದ ರೋಗವು, ಬಂದುದು. ... ॥೧೨೦॥

ಎನ್ನಯ, ಜೀವರತ್ನಂ- ಪ್ರಾಣಮಣಿಯಾದ, ಇದು- ಈಶಿಶುವು, ಕರ್ರನೆ, ಕಂದಿದುದು- ಕಾಂತಿಹೀನ
ವಾಯ್ತು; ಎನ್ನ, ರನ್ನದ- ರತ್ನದ, ಒಳ್ಗನ್ನಡಿ- ಒಳ್ಳೆಯಕನ್ನಡಿಯು, ಮಾಸಿದತ್ತು- ಮಲಿನವಾಯ್ತು; ಎ
ನ್ನಯ, ಪುಷ್ಪಮಾಲೆ, ಕೊರಗಿ- ಬಾಡಿ, ಇರ್ದಪುದು; ಎನ್ನ, ಸುಧಾರಸಂ- ಹಾಲು, ಕಾಯ್ದು, ಬರೆಯಲ್-
ಸುಂಡುಕೊಳ್ಳುವದಕ್ಕೆ, ಇರ್ದಪುದು; ಅಯ್ಯೋ! ಎನುತ್ತೆ, ಶೋಕರಾವಂ- ದುಃಖಧ್ವನಿಯು, ನೆಲೆವೆರ್ಚೆ-ಹೆ
ಚ್ಚಾಗಿ, ತತ್ಸುತನಂ, ಈಕ್ಷಿಸಿ, ನೋಡಿ, ಅಂಬಕಾಂಬುವಂ-ಕಣ್ಣೀರನ್ನು, ಸೂಸಿದಳ್-ಸುರಿಸಿದಳು. ॥೧೨೧॥

ಸಂತವ- ಸುಮ್ಮನೆ, ಇರ್ದ, ಶಿಶುಗೆ, ರೋಗಂ, ಆಯ್ತು; ಇನ್ನು, ಇದಕೆ- ಈ ರೋಗಕ್ಕೆ, ಔಷಧಂಗ
ಳಂ, ಎಂತುಮಾಳ್ಪೆಂ- ಹ್ಯಾಗೆಮಾಡಲಿ; ಬಲ್ಲರ್- ತಿಳಿದವರು, ಮುಂತೆ- ಮೊದಲೇ, ಅಣಂ- ಸ್ವಲ್ಪವೂ, ಇ
ಲ್ಲಂ; ಎಂದು, ಅವಳ್, ಚಿಂತೆಯಾಂತು, ಬಗೆಗುಂದಿ-ಮನಸ್ಸುಕೊರಗಿ, ಕಂದಿದಳ್. ... ॥೧೨೨॥

ಅಂತು, ಮಾದೇವಿ, ಕಂದಿ- ಕಾಂತಿಹೀನಳಾಗಿ, ಕುಂದಿ- ಕೊರಗಿ, ಮನಮುರುಗಿ- ಮನಸ್ಸಿನಲ್ಲಿದುಃಖ
ಪಟ್ಟು, ಮತ್ಪ್ರಾಣಸನ್ನಿಭಂ- ನನ್ನ ಪ್ರಾಣಕ್ಕೆ ಸದೃಶನು, ಆದ, ಮಗಂಗೆ, ಆದ ಉಂಟಾದ, ಬಳಲ್ಕೆಯಂ-
ಆಯಾಸವನ್ನು, ನೋಳ್ಪುದರಿಂ- ನೋಡುವದಕ್ಕಿಂತಲೂ, ಮರಣಮೇ- ಸಾಯುವದೇ, ಲೇಸು-ಒಳ್ಳೇದು;

ಕರತಳದಿಂ ಕರವಾಳ ನಡಸಿ ಪಿಡಿದು ತನ್ನ ಕೊರಲಂ ಕೋರೆವಾಗಳಾ ಬಾಲಬಾಲೇಂದುಧರಂ ಮೆಚ್ಚಿ ಹೋ ಹೋ ಎಂದು ಮರಣದುಜ್ಜುಗವುಂ ನಿವಾರಿಸಿ ॥ * * * *

ಮ ॥ ಸ್ರ ॥ ವಿಳಸದ್ಬಾಲೇಂದು ಬಂಬಲ್ಜೆಡೆ ಸುರನದಿ ಭಾಳೇಕ್ಷಣಂ ಭೋಗಿಭೂಷಾ । ವಳಿ ನೀಲಗ್ರೀವ ಮುದ್ಯತ್ಪರಶು ಮೃಗವರಾಭೀತಿಭೃತ್ಪಾಣಿಗಳ್ರ್ಮಂ ॥ ಜುಳ ಭಸ್ಮಾಲೇಪ ಮುಗ್ರಾಜಿನದ ಪೊದಿಕೆ ಕಾಲ್ಗಣ್ಣು ಮಾದೇವಿ ತನ್ನೊಳ್ । ತೊಳಗುತ್ತಂ ತೋರೆ ಕಣ್ಗೊಪ್ಪಿದ ನಮಳನಿಜಾಕಾರದಿಂ ಚಂದ್ರಚೂಡಂ ॥ ... ... ॥೧೦೩॥

ವ॥ ಆಗಳಂತು ತರುಣತರುಣೇಂದುಧರಂ ಸಕಲಗಣಸುರಗಣಸಮೇತಂ ಪ್ರತ್ಯಕ್ಷನಾಗಿ॥

ಕಂ ॥ ಎನಗಂ ಸುರನಿವಹಕ್ಕಂ । ಜನನುತೆ ನಿಜದಿಂದೆ ನೀನೆಪಿರಿಯಬ್ಬೆ ಯೆನು । ತ್ತನುನಯದಿಂ ಕೊಂಡಾಡುತೆ । ನಿನಗಾವುದು ವರ ಮಭೀಷ್ಟ ಮುದ ನೊರೆ ಯೆಂದು ॥

ಕಂ॥ ಆನುಡಿಗೇಳ್ದನುರಾಗಿಸಿ । ಮಾನಿನಿ ನಸುನಗುತೆ ವರಮ ನಾವುವ ನೊಲ್ಲೆಂ ॥ ನೀನರುಜನಾಗಿ ಸುಖಮಿರೆ । ಭೂನುತವರಕೋಟಿ ಬಂದುದಿಂದೆನಗೆಂದಳ್ ॥ ॥೧೦೫॥

ಮ ॥ಸ್ರ॥ ಎನೆ ಕೇಳ್ದಾನಂದದಿಂದು ತೆಗೆದು ಬಿಗಿದು ತಳ್ಕೈಸಿ ಕೇಳ್ಮಾತೆ ಯೆನ್ನೀ॥

---

ಎಂದು, ಹರಣಂಗಳೆಯಲ್- ಪ್ರಾಣವನ್ನು ಕಳೆದುಕೊಳ್ಳುವದಕ್ಕೆ, ಉಜ್ಜುಗಿಸಿ- ಪ್ರಯತ್ನಿಸಿ, ಕರತಳದಿಂ- ಹಸ್ತದಿಂದ, ಕರವಾಳಂ- ಕತ್ತಿಯನ್ನು, ಅಡಸಿ- ಸೇರಿಸಿ, ಪಿಡಿದು, ತನ್ನ, ಕೊರಲಂ-ಕತ್ತನ್ನು, ಕೋರೆವಾಗಳ್- ಕುಯ್ಯುವಕಾಲದಲ್ಲಿ, ಆಬಾಲಬಾಲೇಂದುಧರಂ- ಆಬಾಲಕನಾಗಿದ್ದ ಚಂದ್ರಶೇಖರನು, ಮೆಚ್ಚಿ, ಹೋಹೋ! ಎಂದು, ಮರಣದ, ಉಜ್ಜುಗವುಂ, ನಿವಾರಿಸಿ- ತಪ್ಪಿಸಿ. * * * * * * * * *

ಚಂದ್ರಚೂಡಂ, ತನ್ನೊಳ್, ವಿಳಸದ್ಬಾಲೇಂದು- ಪ್ರಕಾಶಿಸುವಬಾಲಚಂದ್ರನು, ಬಂಬಲ್ಜೆಡೆ- ಗುಂಪಾದಜಡೆಯು, ಸುರನದಿ- ದೇವಗಂಗೆ, ಭಾಳೇಕ್ಷಣಂ- ಹಣೆಗಣ್ಣು, ಭೋಗಿಭೋಷಾವಳಿ- ಸರ್ಪಾಭರಣಸಮೂಹ, ನೀಲಗ್ರೀವಂ- ಕರೆಗೊರಲು, ಉದ್ಯತ್......ಪಾಣಿಗಳ್— ಉದ್ಯತ್ಪರಶು, ಶ್ರೇಷ್ಠವಾದ ಕೊಡಲಿ, ಮೃಗವರಾಭೀತಿಭೃತ್ಪಾಣಿಗಳ್— ಮೃಗವರ- ಶ್ರೇಷ್ಠವಾದಜಿಂಕೆ, ಅಭೀತಿಭೃತ್- ಅಭಯಪ್ರದಾನಮುಗಳನ್ನು, ಭೃತ್- ಧರಿಸಿರುವ, ಪಾಣಿಗಳ್- ಹಸ್ತಗಳು, ಮಂಜುಳಭಸ್ಮಾಲೇಪಂ-ಮನೋಹರವಾದ ವಿಭೂತಿಯಲೇಪನವು, ಉಗ್ರಾಜಿನದ- ಭಯಂಕರವಾದ ಚರ್ಮದ, ಪೊದಿಕೆ- ಕಾಲ್ಗಣ್- ಪಾದದಲ್ಲಿರುವ ಕಣ್ಣು, ಉ ಮಾದೇವಿ- ಪಾರ್ವತಿ, ತೊಳಗುತ್ತಂ- ಪ್ರಕಾಶಿಸುತ್ತ, ತೋರೆ- ಕಾಣಿಸಲು, ಅಮಳನಿಜಾಕಾರದಿಂ- ನಿರ್ಮಲವಾದಸ್ವರೂಪದಿಂದ,ಕಣ್ಗೆ, ಒಪ್ಪಿದಂ. ... ... ... ॥೧೦೩॥

ಆಗಳ್, ಇಂತು, ತರುಣತರುಣೇಂದುಧರಂ-ಬಾಲನಾಗಿದ್ದ ಬಾಲಚಂದ್ರಧರನು, ಸಕಲಗಣಸುರಗಣಸಮೇತಂ-ಸಮಸ್ತ ಪ್ರಮಥಸಮೂಹ ದೇವಸಮೂಹದೊಡನೆ ಕೂಡಿ, ಪ್ರತ್ಯಕ್ಷಂ- ದೃಗ್ಗೋಚರನು, ಆಗಿ.

ಜನನುತೆ- ಸರ್ವಜನಶ್ಲಾಘ್ಯಳಾದ ಮಾದೇವಿಯೇ! ಎನಗಂ- ಸುರನಿವಹಕ್ಕಂ- ದೇವಸಮೂಹಕ್ಕೂ, ನೀನೇ, ನಿಜದಿಂದೆ, ಪಿರಿಯಬ್ಬೆ, ದೊಡ್ಡತಾಯಿ; ಎನುತ್ತೆ, ಅನುನಯದಿಂ- ವಿಶ್ವಾಸದಿಂದ, ಕೊಂಡಾಡುತೆ, ನಿನಗೆ, ಅಭೀಷ್ಟಂ-ಇಷ್ಟವಾದ, ವರಂ, ಆವುದು? ಅದಂ, ಒರೆ- ಹೇಳು,ಎಂದು. ... ॥೧೦೪॥

ಮಾನಿನಿ- ಸ್ತ್ರೀಯು, ಆನುಡಿಗೇಳ್ದು, ಅನುರಾಗಿಸಿ, ನಸುನಗುತೆ- ಸ್ವಲ್ಪನಗುತ್ತ, ಆವುದಂವರಮಂ- ಯಾವವರವನ್ನೂ, ಒಲ್ಲೆಂ; ನೀಂ, ಅರುಜಂ-ರೋಗವಿಲ್ಲದವನು, ಆಗಿ, ಸುಖಂ- ಸುಖವಾಗಿ, ಇರೆ, ಭೂನುತವರಕೋಟಿ- ಭೂಶ್ಲಾಘ್ಯವಾದ ಕೋಟಿವರವು, ಇದು, ಎನಗೆ, ಬಂದುದು, ಎಂದಳ್. ॥೧೦೫॥

ಎನೆ, ಗಿರೀಶಂ, ಕೇಳ್ದು, ಆನಂದದಿಂದಂ, ತೆಗೆದು, ಬಿಗಿದು, ತಳ್ಕೈಸಿ- ತಬ್ಬಿ, ಮಾತೆ! ತಾಯೇ! ಕೇ

ತನು ನಿನ್ನಂತಪ್ಪ ತಾಯೊಪ್ಪಿರೆ ಗದರಹಿತಂ ಬಾಳ್ವುದೇಂ ಚೋದ್ಯಮೇ ಪೇ ॥ ಳೆನುತಂ ನಿತ್ಯತ್ವ ಮಿತ್ತಂ ಗಿರಿಶ ನೊಸೆದುಮಾದೇವಿಗಂದಿಂತು ವಿಶ್ವಾ । ವನಶೀಲಂ ಪೇಳ್ದ ನಾಗ ಳ್ಗಣತತಿಗೆ ಶಿವಾನಂದಸಾಂದ್ರಂ ವೃಷೇಂದ್ರಂ ॥ ... .. ||೧೨೬||

ರಥೋದ್ಧತ ॥ ಮುಗ್ಧಸಂಗವಿಭುಸಚ್ಚರಿತ್ರಮಂ । ಸ್ನಿಗ್ಧಭಕ್ತಿ ವಿಗೆ ಕೇಳ್ದವಂ ಸುಧಾ ॥ ರುಗ್ಧರೋರುಕೃಪೆಯಿಂದೆ ಮೋಕ್ಷಸ । ವ್ಯಗ್ಧರಿತ್ರಿಗರಸಾಗಿ ರಂಜಿಪಂ ||೧೨೭||

ಕಂ॥ ರುದ್ರಪಶುಪತಿಯ ಕಥೆಯಂ ಸದ್ರುಚಿಯಿಂದೋದೆ ಕೇಳೆ ಪಠಿಯಿಸೆ ಸಕಲೋ॥ ಪದ್ರವ ಮಳಿಗುಂ ಕೈಲಾ । ಸಾದ್ರಿಯೊಳತ್ಯಧಿಕಗಣಪದಂ ಸಮನಿಸುಗುಂ ॥ ||೧೨೮||

ಕಂ ॥ ತಿರುನೀಲನಕ್ಕಮಾಹೇ । ಶ್ವರಚರಿತಮ ನಾವನೋದುವಂ ಕೇಳ್ವಂ ಬಿ ॥ ತ್ತರಿಪ ನವಂಗೀಶಂ ಭಾ । ಸುರನಿಜಪದಮಿತ್ತು ಪೊರೆವನೆಂಬುದುಸಿದ್ಧಂ ॥ ||೧೨೯||

ಕಂ ॥ ಕೊಡಗೂಸಿನ ಸತ್ಕಥೆಯಂ । ಬಿಡದಾವಂ ಬರೆವ ನಾವ ನೋದುವ ನಾವಂ ॥ ಸಡಗರದಿಂ ಕೇಳ್ವ ನವಂ । ಪಡೆವಂ ಪರಮೇಶ್ವರಪ್ರಸಾದಾಮೃತಮಂ ॥ ... ||೧೩೦||

ಕಂ ॥ ಬಿಜ್ಜಮಹಾದೇವಿಯ ಗುಣ । ಸಜ್ಜನಸನ್ನುತಚರಿತ್ರಮಂ ಕೇಳ್ವಮಹಾ॥

---

ಳ್, ನಿನ್ನಂತಪ್ಪ- ನಿನ್ನಂಥಾ, ತಾಯ್, ಒಪ್ಪಿ, ಇರೆ, ಎನ್ನ, ಈತನು, ಗದರಹಿತಂ- ರೋಗವಿಲ್ಲದವನಾಗಿ, ಬಾಳ್ವುದು- ಬದುಕುವದು, ಚೋದ್ಯಮೇಂ- ಆಶ್ಚರ್ಯವೇನು? ಪೇಳ್; ಎನುತಂ, ಒಸೆದು- ಪ್ರೀತಿಸಿ, ಮಾದೇವಿಗೆ, ನಿತ್ಯತ್ವಮಿತ್ತಂ- ಸ್ಥಿರಂಜೀವಿತ್ವವನ್ನುಕೊಟ್ಟನು, ಎಂದು, ಆಗಳ್,ವಿಶ್ವಾವನಶೀಲಂ- ಪ್ರಪಂಚವನ್ನು ಸಂರಕ್ಷಿಸುವ ಸ್ವಭಾವವುಳ್ಳ, ಶಿವಾನಂದಸಾಂದ್ರಂ- ಪರಬ್ರಹ್ಮಾನಂದದಿಂದ ಸಂಪೂರ್ಣನಾದ, ವೃಷೇಂದ್ರಂ, ಗಣತತಿಗೆ- ಪ್ರಮಥಗಣಸಮೂಹವನ್ನು ಕುರಿತು, ಇಂತು, ಪೇಳ್ದಂ. ... ... ||೧೨೬||

ಮುಗ್ಧಸಂಗವಿಭುಸಚ್ಚರಿತ್ರಮಂ, ಸ್ನಿಗ್ಧಭಕ್ತಿ- ಪೂರ್ಣವಾದ ಭಕ್ತಿಯುಳ್ಳ, ವಿಗೆ, ಕೇಳ್ವವಂ, ಸುಧಾರುಗ್ಧರೋರುಕೃಪೆಯಿಂದೆ— ಸುಧಾರುಗ್ಧರ- ಚಂದ್ರಧರನ, ಉರುಕೃಪೆಯಿಂದೆ- ಹೆಚ್ಚಾದ ದಯೆಯಿಂದ, ಮೋಕ್ಷಸವ್ಯಗ್ಧರಿತ್ರಿಗೆ- ಮುಕ್ತಿಯೆಂಬ ಒಳ್ಳೆಯಭೂಮಿಗೆ, ಅರಸಾಗಿ- ರಾಜನಾಗಿ,ರಂಜಿಪಂ. ||೧೨೭||

ರುದ್ರಪಶುಪತಿಯ, ಕಥೆಯಂ, ಸದ್ರುಚಿಯಿಂದೆ- ಸವಿಶೇಷವಾದ ಪ್ರೀತಿಯಿಂದ, ಓದೆ, ಕೇಳೆ, ಪಠಿಯಿಸೆ- ಓದಿಸಲು, ಸಕಲೋಪದ್ರವಂ- ಸಮಸ್ತ ಬಾಧೆಗಳು, ಅಳಿಗುಂ- ನಾಶವಾಗುವದು; ಕೈಲಾಸಾದ್ರಿಯೊಳ್, ಅತ್ಯಧಿಕಗಣಪದಂ- ಅತ್ಯಂತ ಶ್ರೇಷ್ಠವಾದ ಪ್ರಮಥಸ್ಥಾನವು, ಸಮನಿಸುಗುಂ- ಪ್ರಾಪ್ತವಾಗುವದು ... ... ... ... ... ||೧೨೮||

ತಿರುನೀಲನಕ್ಕಮಾಹೇಶ್ವರಚರಿತಮಂ, ಆವಂ, ಓದುವಂ, ಕೇಳ್ವಂ, ಬಿತ್ತರಿಪಂ, ಆವಂಗೆ, ಈಶಂ, ಭಾಸುರಪದಮಿತ್ತು- ಮನೋಹರವಾದ ಸ್ಥಾನವನ್ನು ಕೊಟ್ಟು, (ಅಂದಗೆ ಕೈಲಾಸಪದವಿ) ಪೊರೆವಂ, ಎಂಬುದು, ಸಿದ್ಧಂ. ... ... ... ... ... ||೧೨೯||

ಕೊಡಗೂಸಿನ, ಸತ್ಕಥೆಯಂ, ಆವಂ, ಬಿಡದೆ, ಬರೆವಂ, ಆವಂ, ಓದುವಂ, ಆವಂ, ಸಡಗರದಿಂ- ಸಂಭ್ರಮದಿಂದ, ಕೇಳ್ವಂ, ಅವಂ, ಪರಮೇಶ್ವರಪ್ರಸಾದಾಮೃತಮಂ- ಶಿವಾನುಗ್ರಹವನ್ನೂ, ಮೋಕ್ಷವನ್ನೂ, (ಅಥವಾ ಶಿವಾನುಗ್ರಹವೆಂಬಮೃತವನ್ನು) ಪಡೆವಂ. ... ... ... ||೧೩೦||

ಬಿಜ್ಜಮಹಾದೇವಿಯ, ಗುಣಸಜ್ಜನಸನ್ನುತಚರಿತ್ರಮಂ- ಸದ್ಗುಣಯುಕ್ತರಾದಜನರಿಂದ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ ಚರಿತ್ರೆಯನ್ನು, ಕೇಳ್ವ, ಮಹಾಸಜ್ಜನತತಿಗೆ, ಸಮಸ್ತಜಗಜ್ಜನಕಂ- ಸಮಸ್ತಲೋಕಕ್ಕೂ ತಂದೆಯಾದ ಶಿವನು, ಒಲ್ದು- ಪ್ರೀತಿಸಿ, ಜನನಾಮಯಮಂ- ಜನ್ಮರೋಗವನ್ನು, ತವಿಪಂ- ನಾಶ

ಕರತಳದಿಂ ಕರವಾಳ ನಡಸಿ ಪಿಡಿದು ತನ್ನ ಕೊರಲಂ ಕೊರೆವಾಗಳಾ ಬಾಲಬಾಲೇಂದುಧರಂ
ಮುಚ್ಚಿ ಹೋ ಹೋ ಎಂದು ಮರಣದುಜ್ಜುಗಮಂ ನಿವಾರಿಸಿ ॥ * * * * *

ಮ ॥ ಸ್ರ ॥ ವಿಳಸದ್ಬಾಲೇಂದು ಬಂಬಲ್ಜಡೆ ಸುರನದಿ ಭಾಳೇಕ್ಷಣಂ ಭೋಗಿಭೂ
ಷಾ । ವಳಿ ನೀಲಗ್ರೀವ ಮುದ್ಯತ್ಪರಶು ಮೃಗವರಾಭೀತಿಭೃತ್ಪಾಣಿ ಗಳ್ಕ್ರಂ ॥ ಜುಳ ಭಸ್ಮಾ
ಲೇಪ ಮುಗ್ರಾಜಿನದ ಪೊದಿಕೆ ಕಾಲ್ಗಣ್ಣು ಮಾದೇವಿ ತನ್ನೊಳ್ । ತೊಳಗುತ್ತಂ ತೋರೆ
ಕಣ್ಗೊಪ್ಪಿದ ನಮಳನಿಜಾಕಾರದಿಂ ಚಂದ್ರಚೂಡಂ ॥ ... ... ॥೧೦೩॥

ವ॥ ಆಗಳಿಂತು ತರುಣತರುಣೇಂದುಧರಂ ಸಕಲಗಣಸುರಗಣಸಮೇತಂ ಪ್ರತ್ಯಕ್ಷನಾಗಿ॥

ಕಂ ॥ ಎನಗಂ ಸುರನಿವಹಕ್ಕಂ । ಜನನುತೆ ನಿಜದಿಂದೆ ನೀನೆ ಪಿರಿಯಬ್ಬೆ ಯೆನು ।
ತ್ತನುನಯದಿಂ ಕೊಂಡಾಡುತೆ । ನಿನಗಾವುದು ವರ ಮಭೀಷ್ಟ ಮದ ನೊರೆ ಯೆಂದು ॥

ಕಂ॥ ಆನುಡಿಗೇಳ್ದನುರಾಗಿಸಿ । ಮಾನಿನಿ ನಸುನಗುತೆ ವರಮ ನಾವುವ ನೊಲ್ಲೆಂ ।
ನೀನರುಜನಾಗಿ ಸುಖಮಿರೆ । ಭೂನುತವರಕೋಟಿ ಬಂದುದಿಂದೆನಗೆಂದಳ್ ॥ ॥೧೦೫॥

ಮ ॥ಸ್ರ॥ ಎನೆ ಕೇಳ್ದಾನಂದದಿಂದಂ ತೆಗೆದು ಬಗಿದು ತಳ್ಕೈಸಿ ಕೇಳ್ಮಾತೆ ಯೆನ್ನೀ॥

---

ಎಂದು, ಹರಣಂಗಳೆಯಲ್- ಪ್ರಾಣವನ್ನು ಕಳೆದುಕೊಳ್ಳುವದಕ್ಕೆ, ಉಜ್ಜುಗಿಸಿ- ಪ್ರಯತ್ನಿಸಿ, ಕರತಳದಿಂ- ಹಸ್ತದಿಂದ, ಕರವಾಳಂ- ಕತ್ತಿಯನ್ನು, ಅಡಸಿ- ಸೇರಿಸಿ, ಪಿಡಿದು, ತನ್ನ, ಕೊರಲಂ-ಕತ್ತನ್ನು, ಕೊರೆವಾಗಳ್- ಕುಯ್ಯುವಕಾಲದಲ್ಲಿ, ಆಬಾಲಬಾಲೇಂದುಧರಂ- ಆಬಾಲಕನಾಗಿದ್ದ ಚಂದ್ರಶೇಖರನು, ಮುಚ್ಚಿ, ಹೋಹೋ! ಎಂದು, ಮರಣದ, ಉಜ್ಜುಗಮಂ, ನಿವಾರಿಸಿ- ತಪ್ಪಿಸಿ. * * * * * * * * * *

ಚಂದ್ರಚೂಡಂ, ತನ್ನೊಳ್, ವಿಳಸದ್ಬಾಲೇಂದು- ಪ್ರಕಾಶಿಸುವಬಾಲಚಂದ್ರನು, ಬಂಬಲ್ಜಡೆ- ಗುಂಪಾದಜಡೆಯು, ಸುರನದಿ- ದೇವಗಂಗೆ, ಭಾಳೇಕ್ಷಣಂ- ಹಣೆಗಣ್ಣು, ಭೋಗಿಭೋಷಾವಳಿ- ಸರ್ಪಾಭರಣಸಮೂಹ, ನೀಲಗ್ರೀವಂ- ಕರಿಗೊರಲು, ಉದ್ಯತ್......ಪಾಣಿಗಳ್— ಉದ್ಯತ್ಪರಶು, ಶ್ರೇಷ್ಠವಾದ ಕೊಡಲಿ, ಮೃಗವರಾಭೀತಿಭೃತ್ಪಾಣಿಗಳ್— ಮೃಗವರ- ಶ್ರೇಷ್ಠವಾದಜಿಂಕೆ, ಅಭೀತಿಭೃತ್- ಅಭಯಪ್ರದಾನಗಳನ್ನು, ಭೃತ್- ಧರಿಸಿರುವ, ಪಾಣಿಗಳ್- ಹಸ್ತಗಳು, ಮಂಜುಳಭಸ್ಮಾಲೇಪಂ-ಮನೋಹರವಾದ ವಿಭೂತಿಯಲೇಪನವು, ಉಗ್ರಾಜಿನದ- ಭಯಂಕರವಾದ ಚರ್ಮದ, ಪೊದಿಕೆ- ಕಾಲ್ಗಣ್- ಪಾದದಲ್ಲಿರುವ ಕಣ್ಣು, ಉಮಾದೇವಿ- ಪಾರ್ವತಿ, ತೊಳಗುತ್ತಂ- ಪ್ರಕಾಶಿಸುತ್ತ, ತೋರೆ- ಕಾಣಿಸಲು, ಅಮಳನಿಜಾಕಾರದಿಂ- ನಿರ್ಮಲವಾದಸ್ವರೂಪದಿಂದ, ಕಣ್ಗೆ, ಒಪ್ಪಿದಂ. ... ... ... ॥೧೦೩॥

ಆಗಳ್, ಇಂತು, ತರುಣತರುಣೇಂದುಧರಂ-ಬಾಲನಾಗಿದ್ದ ಬಾಲಚಂದ್ರಧರನು, ಸಕಲಗಣಸುರಗಣಸಮೇತಂ-ಸಮಸ್ತ ಪ್ರಮಥಸಮೂಹ ದೇವಸಮೂಹದೊಡನೆ ಕೂಡಿ, ಪ್ರತ್ಯಕ್ಷಂ- ದೃಗ್ಗೋಚರನು, ಆಗಿ.

ಜನನುತೆ- ಸರ್ವಜನಶ್ಲಾಘ್ಯಳಾದ ಮಾದೇವಿಯೇ! ಎನಗಂ- ಸುರನಿವಹಕ್ಕಂ- ದೇವಸಮೂಹಕ್ಕೂ, ನೀನೇ, ನಿಜದಿಂದೆ, ಪಿರಿಯಬ್ಬೆ, ದೊಡ್ಡತಾಯಿ; ಎನುತ್ತೆ, ಅನುನಯದಿಂ- ವಿಶ್ವಾಸದಿಂದ, ಕೊಂಡಾಡುತೆ, ನಿನಗೆ, ಅಭೀಷ್ಟಂ-ಇಷ್ಟವಾದ, ವರಂ, ಆವುದು? ಅದಂ, ಒರೆ- ಹೇಳು,ಎಂದಂ. ... ॥೧೦೪॥

ಮಾನಿನಿ- ಸ್ತ್ರೀಯು, ಆನುಡಿಗೇಳ್ದು, ಅನುರಾಗಿಸಿ, ನಸುನಗುತೆ- ಸ್ವಲ್ಪನಗುತ್ತ, ಆವುದಂ ವರಮಂ- ಯಾವವರವನ್ನೂ, ಒಲ್ಲೆಂ; ನೀಂ, ಅರುಜಂ- ರೋಗವಿಲ್ಲದವನು, ಆಗಿ, ಸುಖಂ- ಸುಖವಾಗಿ, ಇರೆ, ಭೂನುತವರಕೋಟಿ- ಭೂಶ್ಲಾಘ್ಯವಾದ ಕೋಟಿವರವು, ಇಂದು, ಎನಗೆ, ಬಂದುದು, ಎಂದಳ್. ॥೧೦೫॥

ಎನೆ, ಗಿರೀಶಂ, ಕೇಳ್ದು, ಆನಂದದಿಂದಂ, ತೆಗೆದು, ಬಿಗಿದು, ತಳ್ಕೈಸಿ- ತಬ್ಬಿ, ಮಾತೆ! ತಾಯೇ! ಕೇ

ತನು ನಿನ್ನಂತಪ್ಪ ತಾಯೊಪ್ಪಿರೆ ಗದರಹಿತಂ ಬಾಳ್ವುದೇಂ ಚೋದ್ಯಮೇಂ ಪೇ ॥ ಳೆನುತಂ ನಿತ್ಯತ್ವಮಿತ್ತಂ ಗಿರಿಶ ನೊಸೆದು ಮಾದೇವಿಗಂ ಇಂತು ವಿಶ್ವಾ । ವನಶೀಲಂ ಪೇಳ್ದನಾಗ ಳ್ಗಣತತಿಗೆ ಶಿವಾನಂದಸಾಂದ್ರಂ ವೃಷೇಂದ್ರಂ ॥ ... .. ॥೧೨೨॥

ರಥೋದ್ಧತ ॥ ಮುಗ್ಧಸಂಗವಿಭುಸಚ್ಚರಿತ್ರಮಂ । ಸ್ನಿಗ್ಧಭಕ್ತಿ ವಿನೆ ಕೇಳ್ದವಂ ಸುಧಾ ॥ ರುಗ್ಧರೋರುಕೃಪೆಯಿಂದೆ ಮೋಕ್ಷಸ । ಮ್ಯಗ್ಧರಿತ್ರಿಗರಸಾಗಿ ರಂಜಿಪಂ ॥೧೨೩॥

ಕಂ॥ ರುದ್ರಪಶುಪತಿಯ ಕಥೆಯಂ ಸದ್ರುಚಿಯಿಂದೋದೆ ಕೇಳೆ ಪಠಿಯಿಸೆ ಸಕಲೋ॥ ಪದ್ರವ ಮಳಿಗುಂ ಕೈಲಾ । ಸಾದ್ರಿಯೊಳತ್ಯಧಿಕಗಣಪದಂ ಸಮನಿಸುಗುಂ ॥ ॥೧೨೪॥

ಕಂ ॥ ತಿರುನೀಲನಕ್ಕಮಾಹೇ । ಶ್ವರಚರಿತಮನಾವನೋದುವಂ ಕೇಳ್ವಂ ಬಿ ॥ ತ್ತರಿಪನವಂಗೀಶಂ ಭಾ । ಸುರನಿಜಪದಮಿತ್ತು ಪೊರೆವನೆಂಬುದು ಸಿದ್ಧಂ ॥ ॥೧೨೫॥

ಕಂ ॥ ಕೊಡಗೂಸಿನ ಸತ್ಕಥೆಯಂ । ಬಿಡದಾವಂ ಬರೆವ ನಾವನೋದುವನಾವಂ ॥ ಸಡಗರದಿಂ ಕೇಳ್ವನವಂ । ಪಡೆವಂ ಪರಮೇಶ್ವರಪ್ರಸಾದಾಮೃತಮಂ ॥ ... ॥೧೨೬॥

ಕಂ ॥ ಬಿಜ್ಜಮಹಾದೇವಿಯ ಗುಣ । ಸಜ್ಜನಸನ್ನುತಚರಿತ್ರಮಂ ಕೇಳ್ವಮಹಾ॥

---

ಳ್, ನಿನ್ನಂತಪ್ಪ- ನಿನ್ನಂಥಾ, ತಾಯ್, ಒಪ್ಪಿ, ಇರೆ, ಎನ್ನ, ಈತನು, ಗದರಹಿತಂ- ರೋಗವಿಲ್ಲದವನಾಗಿ, ಬಾಳ್ವುದು- ಬದುಕುವದು, ಚೋದ್ಯಮೇಂ- ಆಶ್ಚರ್ಯವೇನು? ಪೇಳ್; ಎನುತಂ, ಒಸೆದು- ಪ್ರೀತಿಸಿ, ಮಾದೇವಿಗೆ, ನಿತ್ಯತ್ವಮಿತ್ತಂ- ಸ್ಥಿರಂಜೀವಿತ್ವವನ್ನು ಕೊಟ್ಟನು; ಎಂದು, ಆಗಳ್, ವಿಶ್ವಾವನಶೀಲಂ- ಪ್ರಪಂಚವನ್ನು ಸಂರಕ್ಷಿಸುವ ಸ್ವಭಾವವುಳ್ಳ, ಶಿವಾನಂದಸಾಂದ್ರಂ- ಪರಬ್ರಹ್ಮಾನಂದದಿಂದ ಸಂಪೂರ್ಣನಾದ, ವೃಷೇಂದ್ರಂ, ಗಣತತಿಗೆ- ಪ್ರಮಥಗಣಸಮೂಹವನ್ನು ಕುರಿತು, ಇಂತು, ಪೇಳ್ದಂ. ... ... ॥೧೨೨॥

ಮುಗ್ಧಸಂಗವಿಭುಸಚ್ಚರಿತ್ರಮಂ, ಸ್ನಿಗ್ಧಭಕ್ತಿ- ಪೂರ್ಣವಾದ ಭಕ್ತಿಯು, ವಿನೆ, ಕೇಳ್ದವಂ, ಸುಧಾರುಗ್ಧರೋರುಕೃಪೆಯಿಂದೆ— ಸುಧಾರುಗ್ಧರ- ಚಂದ್ರಧರನ, ಉರುಕೃಪೆಯಿಂದೆ- ಹೆಚ್ಚಾದ ದಯೆಯಿಂದ, ಮೋಕ್ಷಸಮ್ಯಗ್ಧರಿತ್ರಿಗೆ- ಮುಕ್ತಿಯೆಂಬ ಒಳ್ಳೆಯಭೂಮಿಗೆ, ಅರಸಾಗಿ- ರಾಜನಾಗಿ, ರಂಜಿಪಂ. ॥೧೨೩॥

ರುದ್ರಪಶುಪತಿಯ, ಕಥೆಯಂ, ಸದ್ರುಚಿಯಿಂದೆ- ಸಮೀಚೀನವಾದ ಪ್ರೀತಿಯಿಂದ, ಓದೆ, ಕೇಳೆ, ಪಠಿಯಿಸೆ- ಓದಿಸಲು, ಸಕಲೋಪದ್ರವಂ- ಸಮಸ್ತ ಬಾಧೆಗಳು, ಅಳಿಗುಂ- ನಾಶವಾಗುವದು; ಕೈಲಾಸಾದ್ರಿಯೊಳ್, ಅತ್ಯಧಿಕಗಣಪದಂ- ಅತ್ಯಂತ ಶ್ರೇಷ್ಠವಾದ ಪ್ರಮಥಸ್ಥಾನವು, ಸಮನಿಸುಗುಂ- ಪ್ರಾಪ್ತವಾಗುವದು ... ... ... ... ... ॥೧೨೪॥

ತಿರುನೀಲನಕ್ಕಮಾಹೇಶ್ವರಚರಿತಮಂ, ಆವಂ, ಓದುವಂ, ಕೇಳ್ವಂ, ಬಿತ್ತರಿಪಂ, ಆವಂಗೆ, ಈಶಂ, ಭಾಸುರಪದಮಿತ್ತು- ಮನೋಹರವಾದ ಸ್ಥಾನವನ್ನು ಕೊಟ್ಟು, (ಅಂದರೆ ಕೈಲಾಸಪದವಿ) ಪೊರೆವಂ, ಎಂಬುದು, ಸಿದ್ಧಂ. ... ... ... ... ... ॥೧೨೫॥

ಕೊಡಗೂಸಿನ, ಸತ್ಕಥೆಯಂ, ಆವಂ, ಬಿಡದೆ, ಬರೆವಂ, ಆವಂ, ಓದುವಂ, ಆವಂ, ಸಡಗರದಿಂ- ಸಂಭ್ರಮದಿಂದ, ಕೇಳ್ವಂ, ಅವಂ, ಪರಮೇಶ್ವರಪ್ರಸಾದಾಮೃತಮಂ- ಶಿವಾನುಗ್ರಹವನ್ನೂ, ಮೋಕ್ಷವನ್ನೂ, (ಅಥವಾ ಶಿವಾನುಗ್ರಹವೆಂಬಮೃತವನ್ನು) ಪಡೆವಂ. ... ... ... ॥೧೨೬॥

ಬಿಜ್ಜಮಹಾದೇವಿಯ, ಗುಣಸಜ್ಜನಸನ್ನುತಚರಿತ್ರಮಂ- ಸದ್ಗುಣಯುಕ್ತರಾದಜನರಿಂದ ಸ್ತೋತ್ರ ಮಾಡಿಸಿಕೊಳ್ಳಲ್ಪಟ್ಟ ಚರಿತ್ರೆಯನ್ನು, ಕೇಳ್ವ, ಮಹಾಸಜ್ಜನತತಿಗೆ, ಸಮಸ್ತಜಗಜ್ಜನಕಂ- ಸಮಸ್ತಲೋಕಕ್ಕೆ ತಂದೆಯಾದ ಶಿವನು, ಒಲ್ದು- ಪ್ರೀತಿಸಿ, ಜನನಾಮಯಮಂ- ಜನ್ಮರೋಗವನ್ನು, ತವಿಪಂ- ನಾಶ

ಸಜ್ಜನತತಿಗೆ ಸಮುಸ್ತಜ । ಗಜ್ಜನಕಂ ತವಿಪ ನೋಲ್ಪ ಜನನಾಮಯಮಂ ॥೧೩೧॥

ಪುಷ್ಪಲತಾಗ್ರವೃತ್ತಂ ॥ ಸುರರಾಜರತ್ನಮಕುಟಾಂಶುಮಂಜರೀ । ಪರಿರಮ್ಯಪಾದೆ ದುರಿತಾಬ್ಜಕುಂಜರೀ ॥ ಮರುದಿಂದ್ರವೈರಿಚಯಹೃದ್ಭಯಂಕರೀ । ಪೊರೆಯೆನ್ನ ನಿಂದು ಧರಜಾಯೆಶಂಕರೀ ॥ ... ... ... ... ॥೧೩೨॥

ಲಲಿತಪದವೃತ್ತಂ ॥ ಸ್ವಚ್ಛಮತಿಮಜ್ಜನವಿಪಚ್ಛಮನ ವಿಶ್ರುತಜಗಚ್ಛರಣ ತತ್ವವಿದ ನಿಚ್ಛಮುನಿವಂದ್ಯಾ । ರಿಚ್ಛಲನಿವಾರಕ ಘೃಣಿಚ್ಛುರಿತವಿಗ್ರಹ ಶರಚ್ಛಶಿಸುಧಾಬ್ಧಿಧವಳಚ್ಛವಿಯಶಸ್ಕ ॥ ಸಚ್ಛುಭವರಪ್ರದ ದಿಶಾಚ್ಛದಹೃತಪ್ರಬಲಕಚ್ಛಪಸದೃಕ್ಷ ವಿಲಸಚ್ಛಮದಮಾಂಕಾ । ತುಚ್ಛಪರವಾದಿವಚನಚ್ಛಿದ ಘದೂರ ಪೊರೆ ಯಚ್ಛಶಿವಭಾವ ಜಿತಹೃಚ್ಛಯ ವೃಷೇಂದ್ರ ॥ ... .. ... ॥೧೩೩॥

---

ಮಾಡುವೆನು. ... ... ... ... ... ॥೧೩೧॥

ಸುರ......ಪಾದೆ— ಸುರರಾಜ- ದೇವಶ್ರೇಷ್ಠರ, ರತ್ನಮಕುಟ- ಮಣಿಖಚಿತವಾದ ಕಿರೀಟಗಳ, ಅಂಶು- ಕಾಂತಿಯೆಂಬ, ಮಂಜರೀ- ಪುಷ್ಪಗುಚ್ಛದಿಂದ, ಪರಿರಮ್ಯ- ಮನೋಹರವಾದ, ಪಾದೆ- ಚರಣವುಳ್ಳ; ದುರಿತಾಬ್ಜಕುಂಜರೀ— ದುರಿತ- ಪಾಪವೆಂಬ, ಅಬ್ಜ- ಕಮಲಕ್ಕೆ, ಕುಂಜರೀ- ಆನೆಯಾದ,ಮರುದಿಂದ್ರವೈರಿಚಯಹೃದ್ಭಯಂಕರೀ— ಮರುತ್- ದೇವತೆಗಳು, ಇಂದ್ರ ಇವರುಗಳಿಗೆ, ವೈರಿ- ಶತ್ರುಗಳಾದ ರಾಕ್ಷಸರ, ಚಯ- ಸಮೂಹದ, ಹೃತ್- ಹೃದಯಕ್ಕೆ, ಭಯಂಕರೀ- ಭೀಕರಳಾದ, ಇಂದುಧರಜಾಯೆ- ಈಶ್ವರನಪತ್ನಿಯಾದ, ಶಂಕರೀ- ಸುಖಂಕರಿಯೇ! ಎನ್ನಂ, ಪೊರೆ. ... ... ... ॥೧೩೨॥

ಸ್ವಚ್ಛ......ವಿಶ್ರುತ— ಸ್ವಚ್ಛ- ನಿರ್ಮಲವಾದ, ಮತಿಮತ್- ಬುದ್ಧಿಯುಳ್ಳ,ಜನ- ಜನರ, ವಿಪತ್- ಆಪತ್ತನ್ನು, ಶಮನ- ನಾಶಪಡಿಸುವದರಲ್ಲಿ, ವಿಶ್ರುತ- ಪ್ರಸಿದ್ಧನಾದ, ಜಗಚ್ಛರಣ- ಲೋಕಸಂರಕ್ಷಕನಾದ, ತತ್ವವಿತ್- ಪರತತ್ವವನ್ನು ತಿಳಿದ, ಅನಿಚ್ಛಮುನಿವಂದ್ಯ- ಇಚ್ಛಾರಹಿತರಾದ ಋಷಿಗಳಿಂದ ನಮಸ್ಕರಿಸಲ್ಪಡುವದಕ್ಕೆ ಯೋಗ್ಯನಾದ, ಅರಿಚ್ಛಲನಿವಾರಕ- ಶತ್ರುಗಳ ಕಪಟವನ್ನು ನಾಶಪಡಿಸುವ, ಘೃಣಿಚ್ಛುರಿತವಿಗ್ರಹ— ಘೃಣಿ- ಕಾಂತಿಯಿಂದ, ಛುರಿತ- ವ್ಯಾಪ್ತವಾದ, ವಿಗ್ರಹ - ಶರೀರವುಳ್ಳ, ಶರಚ್ಛಶಿಸುಧಾಬ್ಧಿಧವಳಚ್ಛವಿಯಶಸ್ಕ— ಶರಚ್ಛಶಿ- ಶರತ್ಕಾಲದ ಚಂದ್ರ, ಸುಧಾಬ್ಧಿ- ಕ್ಷೀರಸಮುದ್ರ, ಇವುಗಳೋಪಾದಿಯಲ್ಲಿ, ಧವಳ- ಶುಭ್ರವಾದ, ಯಶಸ್ಕ- ಕೀರ್ತಿಯುಳ್ಳ, ಸಚ್ಛುಭವರಪ್ರದ- ಒಳ್ಳೆಯಮಂಗಳಕರಗಳಾದ ವರಗಳನ್ನು ಕೊಡುವ; ದಿಶಾಚ್ಛದ- ದಿಕ್ಕೇ ವಸ್ತ್ರವಾಗುಳ್ಳ,ಹೃತಪ್ರಬಳಕಚ್ಛಪಸದೃಕ್ಷ— ಹೃತ- ಸಂಹರಿಸಲ್ಪಟ್ಟ, ಪ್ರಬಳ- ಬಲಶಾಲಿಯಾದ, ಕಚ್ಛಪ- ಕೂರ್ಮವುಳ್ಳ ಈಶ್ವರನೊಡನೆ, ಸದೃಕ್ಷ- ಸಮಾನನಾದ, ವಿಲಸಚ್ಛಮದಮಾಂಕಾ— ವಿಲಸತ್- ಪ್ರಕಾಶಿಸುವ, ಶಮ- ಶಾಂತಿ, ದಮ- ಇಂದ್ರಿಯ ನಿಗ್ರಹ ಇವುಗಳೇ, ಅಂಕ-ಚಿಹ್ನವಾಗುಳ್ಳ, ತುಚ್ಛಪರವಾದಿವಚನಚ್ಛಿತ್— ತುಚ್ಛ - ಕುತ್ಸಿತರಾದ, ಪರವಾದಿ- ಅನ್ಯಮತವಾದಿಗಳ, ವಚನ- ಮಾತನ್ನು, ಛಿತ್- ಛೇದಿಸುವ, ಅಘದೂರ- ಪಾಪಕ್ಕೆ ದೂರನಾದ, ಅಚ್ಛಶಿವಭಾವ- ನಿರ್ಮಲವಾದ ಶಿವನಿಂ ದುಕ್ತವಾದ ಮನಸ್ಸುಳ್ಳ, ಜಿತಹೃಚ್ಛಯ- ಜೈಸಲ್ಪಟ್ಟ ಮನ್ಮಥನುಳ್ಳ, ವೃಷೇಂದ್ರ! ಪೊರೆ. ॥೧೩೩॥

ಒಂಭತ್ತನೇದು ಆಶ್ವಾಸವು ಸಂಪೂರ್ಣವು.

ಗದ್ಯ ॥ ಇದು ವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಸರಾಗಭಸಿತಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಮುಗ್ಧಸಂಗಾರ್ಯದುಪ್ರಶುಪತಿತಿರುನೀಲನಕ್ಕಸುಶೀಲಾಕನ್ಯಕಾಮಹಾದೇವಿಕಥಾವರ್ಣನಂ ನವಮಾಶ್ವಾಸಂ ಪರಿಸಮಾಪ್ತಂ ॥

ನವಮಾಶ್ವಾಸಂ ಸಂಪೂರ್ಣಂ.

---

# ಶ್ರೀಃ

ತ್ರಿಪುರಾಂತಕಾಯ ಪರಬ್ರಹ್ಮಣೇನಮಃ.

## ದಶಮಾಶ್ವಾಸಂ

---

ದೀಪದಕಲಿಯಾರಾಧಿಕಥನಂ.

ಕಂ ॥ ಶ್ರೀಮೇನಕಾತ್ಮಜಾನಯ । ನಾಮಳರುಚಿಧವಳಿತೇಭಚರ್ಮಾಂಬರನು ॥ ದ್ದಾಮಗುಣಧಾಮನಮರಲ । ಲಾಮಂ ಪೊರೆಗೆಮ್ಮನಾವಗಂ ಶಿವಲಿಂಗಂ ॥ ... ॥೧॥

---

ಹತ್ತನೆಯ ಆಶ್ವಾಸಪ್ರಾರಂಭಃ.

ಶ್ರೀ......ಚರ್ಮಾಂಬರಂ— ಶ್ರೀ- ಸಂಪದ್ಯುಕ್ತಳಾದ, * ಮೇನಕಾತ್ಮಜಾ- ಪಾರ್ವತಿಯ, ನಯನ- ನೇತ್ರಗಳ, ಅಮಳ- ನಿರ್ಮಲವಾದ, ರುಚಿ- ಕಾಂತಿಯಿಂದ, ಧವಳಿತ- ಶುಭ್ರವಾಗಿ ಮಾಡಲ್ಪಟ್ಟ, ಇಭಚರ್ಮಾಂಬರಂ- ಗಜ ಚರ್ಮ ವಸ್ತ್ರವುಳ್ಳ, ಉದ್ದಾಮಗುಣಧಾಮಂ- ಉತ್ಕೃಷ್ಟವಾದ ಗುಣಗಳಿಗೆ ಸ್ಥಾನಭೂತನಾದ, ಅಮರಲಲಾಮಂ- ದೇವಶ್ರೇಷ್ಠನಾದ, ಶಿವಲಿಂಗಂ, ಎಮ್ಮಂ, ಆವಗಂ, ಪೊರೆಗೆ. ... ॥೧॥

---

* (ಅವ) ಮೇನಕಾ- ಹಿಮವಂತನ ಪತ್ನಿಯಾದ ಮೇನಕೆಗೆ, ಆತ್ಮಜಾ- ಮಗಳು. ... ॥೧॥

ವ ॥ ಅದಲ್ಲದೆಯುಂ ಮಿನ್ನುಂ ಕೇಳ್ವುದೆಂದು ಬಸವರಸ ನಿಂತೆಂದಂ ॥ * * *

ಮತ್ತೇ॥ ಪ್ರೊಳೆಯಿಂದಂ ಪರಿಕಾಲ್ಗಳಿಂದೆ ಕಳಮಕ್ಷೇತ್ರಂಗಳಿಂ ನಂದನಾ । ವಳಿಯಿಂ ದಿಕ್ಷುಕದಂಬಕಾದಳ ವನವ್ರಾತಂಗಳಿಂ ಚೆಲ್ವಪ್ರೂ ॥ ಗೊಳದಿಂ ಸಂಪದದೇಳ್ಗೆವೆತ್ತ ವಿಳ ಸದ್ಗ್ರಾಮಂಗಳಿಂ ಲಿಂಗಮಂ । ಗಳಗೇಹಂಗಳಿ ನಾಗಳುಂ ಮಿಸುಪುದಾಚೋಳಕ್ಷಮಾ ಮಂಡಲಂ ॥ ... ... ... .. ... ॥೨॥

ವ ॥ ತನ್ಮಹೀರಮಣೀರಮಣೀಯಮಣಿಮುಕುರಮೆನಿಸಿ ॥ * * * * *

ಮ॥ ಸ್ರ॥ ಪುರಮಧ್ಯೋದ್ಯಾನಕೇಳೀನಗಘನಜಘನಾಭೋಗೆ ಭೂಲಕ್ಷ್ಮಿ ತಾಳ್ದಂ। ಬರಮೆಂಬಂತಾಗೆ ಸಾಲಂ ಸಜಳಪರಿಖೆ ಕಾಂಚೀಕಲಾಪಂಬೊಲಿಂಬಾ ॥ಗಿರೆ ಪಾಥಃಪಕ್ಷಿಕೋಲಾಹಲರುತಿ ವಿಳಸದ್ಭಗ್ಮಹರ್ಮ್ಯಪ್ರಭಾವಿ । ಸ್ಫುರಿತಾಭ್ರಂ ಪೊಂಜೆಳಂಬಂ ಮಿಸುಪವೊಲಿರೆ ಕಾಂಚೀಪುರಂ ಕಣ್ಗೆ ತೋರ್ಕುಂ ॥ ... ... ... ॥೩॥

ಕಂ ॥ ಆನಗರದೊಳೆಸದಿರ್ಪಂ । ಮೀನಧ್ವಜದರ್ಪಭಂಜನಪ್ರಿಯಭಕ್ತಂ ॥ ಮಾನಿತಕಲಿಯಾರಾಖ್ಯನ । ನೂನಗುಣಾಭರಣ ನತುಳಸಂಪದದಿಂದಂ ॥ .. ... ॥೪॥

---

ಅದಲ್ಲದೆಯುಂ, ಇನ್ನುಂ, ಕೇಳ್ವುದು. ಎಂದು, ಬಸವರಸಂ, ಇಂತೆಂದಂ. * * * * *

ಆಚೋಳಕ್ಷಮಾಮಂಡಲಂ- ಆಚೋಳದೇಶವು, ಪ್ರೊಳೆಯಿಂದಂ, ಪರಿಕಾಲ್ಗಳಿಂದೆ- ಹರಿಯುವ ಕಾಲುವೆಗಳಿಂದ, ಕಳಮಕ್ಷೇತ್ರಂಗಳಿಂ- ಬತ್ತದಗದ್ದೆಗಳಿಂದ, ನಂದನಾವಳಿಯಿಂದೆ- ತೋಟಗಳ ಲೈನಿಂದ, ಇಕ್ಷುಕದಂಬಕಾದಳವನ— ಇಕ್ಷು- ಕಬ್ಬು, ಕದಂಬ- ಕಡಹ, ಕಾದಳ- ಬಾಳೆಯು, ವನ- ತೋಟಗಳ, ವ್ರಾತಂಗಳಿಂ-ಚೆಲ್ವಪ್ರೂಗೊಳದಿಂ- ಸುಂದರವಾದ ಹೂಗೊಳದಿಂದ, ಸಂಪದದ- ಐಶ್ವರ್ಯದ, ಏಳ್ಗೆವೆತ್ತ-ಆಧಿಕ್ಯವಂ ಹೊಂದಿದ, ವಿಳಸದ್ಗ್ರಾಮಂಗಳಿಂ- ಪ್ರಕಾಶಮಾನವಾದ ಊರುಗಳಿಂದ, ಲಿಂಗಮಂಗಳಗೇಹಂಗಳಿಂ- ಶಿವಲಿಂಗಗಳಿಂದ ಶುಭಕರಗಳಾದ ಮನೆಗಳಿಂದ, (ಅಂದರೆ ಶಿವದೇವಸ್ಥಾನಗಳಿಂದ) ಆಗಳುಂ- ನಿರಂತರದಲ್ಲೂ, ಮಿಸುಪುದು- ಪ್ರಕಾಶಿಸುವದು. ... ... ... ... ... ॥೨॥

ತನ್ಮಹೀರಮಣೀಯಮಣಿಮುಕುರಂ- ಆ ಭೂಕಾಂತೆಯ ಮನೋಹರವಾದ ರನ್ನಗನ್ನಡಿ, ಎನಿಸಿ. *

ಪುರ......ಭೋಗೆ— ಪುರ- ಪಟ್ಟಣದ. ಮಧ್ಯ- ಮಧ್ಯದಲ್ಲಿರುವ, ಉದ್ಯಾನ- ಉಪವನಗಳಲ್ಲಿರುವ, ಕೇಳೀನಗ- ಕ್ರೀಡಾಪರ್ವತಗಳೆಂಬ, ಘನ- ಸಾಂದ್ರವಾದ, ಜಘನಾಭೋಗೆ- ಕಟಿಪ್ರದೇಶಭಾಗವುಳ್ಳ, ಭೂಲಕ್ಷ್ಮಿ- ಭೂಮಿಯೆಂಬ ಲಕ್ಷ್ಮಿಯು, ತಾಳ್ದ. ಅಂಬರಂ- ವಸ್ತ್ರವು, ಎಂಬಂತೆ, ಸಾಲಂ- ಕೋಟೆಯು, ಆಗೆ; ಪಾಥಃಪಕ್ಷಿಕೋಲಾಹಲರುತಿ— ಪಾಥಃಪಕ್ಷಿ- ನೀರಹಕ್ಕಿಗಳ, ಕೋಲಾಹಲರುತಿ- ಕಲಕಲಶಬ್ದವುಳ್ಳ, ಸಜಳಪರಿಖೆ- ನೀರಿನಿಂದ ಕೂಡಿದ ಕಂದಕವು, ಕಾಂಚೀಕಲಾಪಂಬೋಲ್; ಒಡ್ಯಾಣದಹಾಗೆ, ಇಂಬಾಗಿ- ಮನೋಹರವಾಗಿ, ಇರೆ; ವಿಳಸದ್ಭಗ್ಮಹರ್ಮ್ಯಪ್ರಭಾವಿಸ್ಫುರಿತಾಭ್ರಂ— ವಿಳಸತ್- ಶೋಭಿಸುವ, ಭಗ್ಮಹರ್ಮ್ಯ- ಚೆನ್ನದುಪ್ಪರಿಗೆಗಳ, ಪ್ರಭಾ- ಕಾಂತಿಯಿಂದ,, ವಿಸ್ಫುರಿತ- ಪ್ರಕಾಶಿಸುವ, ಅಭ್ರಂ- ಮೇಘವು, ಪೊಂಜೆಳಂಬಂ-ಸುವರ್ಣಮಯವಾದ ಮೇಲುಮುಸುಕು, ಮಿಸುಪವೊಲ್, ಇರೆ; ಕಾಂಚೀಪುರಂ, ಕಣ್ಗೆ, ತೋರ್ಕುಂ. ॥೩॥

ಆನಗರದೊಳ್, ಮೀನಧ್ವಜದರ್ಪಭಂಜನಪ್ರಿಯಭಕ್ತಂ— ಮೀನಧ್ವಜ- ಮನ್ಮಥನ, ದರ್ಪ- ಗರ್ವವನ್ನು, ಭಂಜನ- ನಾಶಪಡಿಸಿದಶಿವನ, ಪ್ರಿಯಭಕ್ತಂ- ಆಪ್ತಭಕ್ತನಾದ, ಅನೂನಗುಣಾಭರಣನು- ಅಧಿಕವಾದ ಗುಣಗಳೇ ಆಭರಣವಾಗುಳ್ಳ, ಮಾನಿತಕಲಿಯಾರಾಖ್ಯಂ-ಸಕಲರಿಂದಲೂಸನ್ಮಾನಿಸಿಕೊಳ್ಳಲ್ಪಟ್ಟ ಕಲಿಯಾರನೆಂಬ ಹೆಸರುಳ್ಳವನು, ಅತುಳಸಂಪದದಿಂದಂ- ಅಸದೃಶವಾದ ಐಶ್ವರ್ಯದಿಂದ, ಎಸೆದು, ಇರ್ಪ್ಪಂ. ... ॥೪॥

ವ || ಆಭಕ್ತನೊಂದುದಿನಂ ಪಗಲ್ಬೇರೂರ್ಗೆ ಪೋಗುತೆಡೆವಟ್ಟೆಯ ನಟ್ಟಡವಿಯೊ
ಳೊಂದುಜೀರ್ಣಾಲಯದೊಳ್ ಶಿವಲಿಂಗಮಿರೆ ಕಂಡು ಬಗೆ ಬೆದರಿ ಬೆಬ್ಬಳಿವೋಗಿ ತನ್ನೊ
ಳಿಂತೆಂದು || * * * * * * * * * * * * * * * *

ಚಂ || ಕೆಡೆದುದು ಮಂಟಪಂ ಜರಿದು ಬೀಳ್ದುದು ಸುತ್ತಿದ ಕಲ್ಲಕೋಂಟೆ ಕೀ | ಲ್ಸ
ಡಿಲೆ ಕದಂಗಳೆಲ್ಲ ಪಳೆದಾಗಿ ಕರಂ ಪಡಲಿಟ್ಟುವಯ್ಯೊ ಕ || ಲ್ಗುಡಿಯಿದು ಮೇಲೆಬೀಳ್ದಪು
ದೊ ಬಲ್ಲವರಾರತಿಜೀರ್ಣಮಕ್ಕಟ | ನ್ನೊಡೆಯನದೇಕೆ ತಾಂ ನೆಲಸಿದಂ ಬಿಡದೋರ್ವನೆ
ಗಾಂಪನಂದದಿಂ || ... ... ... ... ||೫||

ಕಂ || ಅರೆಮೆಯ್ಯೊಳೆಂದುಮಗಲದ | ಗಿರಿಸುತೆಯಂ ಕಾಣೆನಳ್ಕಿ ಶಿವಲಿಂಗದೆ ಮೈ ||
ಗರೆದಳೊ ಸಲೆ ಸೇವಿಪ ಸಹ | ಚರರೋರ್ವರುಮಿಲ್ಲದೋರ್ವನೇ ಶಿವನಿರ್ಪಂ || ||೬||

ಕಂ || ಪಳೆಗೊಂದೆ ಬೀಳ್ದು ಪೊಸಪು | ಲ್ಗಳಪೊದರೊಳ್ತನ್ನನೆತ್ತುವವರಿಲ್ಲದೆ
ಮೇಣ್ || ಬಳಲುತ್ತಿರ್ದಪುದೀಮಂ | ಗಳಲಿಂಗಂ ಪೂಜೆಗೊಂಡ ಕುರುಪಣಮಿಲ್ಲಂ ||೭||

ವ || ಅಂತುಮಲ್ಲದೆಯುಂ || ಉ || ಸೊರ್ಕಿದ ದೈತ್ಯರಂ ಸದೆದ ನಂಧಕನಂ ತು
ಳಿದಂ ಪುರಾಂಗಜಾ | ತಾರ್ಕಜರಂ ಕನಲ್ದುರುಪಿದಂ ಮಖದೂಟಕೊರಲ್ದುಖಂಡ ದೇ ||ವರ್ಕ

ಆಭಕ್ತಂ, ಒಂದುದಿನಂ, ಪಗಲ್- ಹಗಲುವೇಳೆಯಲ್ಲಿ, ಬೇರೂರ್ಗೆ- ಮತ್ತೊಂದೂರಿಗೆ, ಪೋಗುತ್ತೆ, ಎ
ಡೆವಟ್ಟೆಯ- ಮಧ್ಯಮಾರ್ಗದ, ನಟ್ಟಡವಿಯೊಳ್- ಕಾಡಿನಮಧ್ಯದಲ್ಲಿ, ಒಂದು ಜೀರ್ಣಾಲಯದೊಳ್- ಶಿಥಿಲ
ವಾದ ಒಂದು ಗುಡಿಯಲ್ಲಿ, ಶಿವಲಿಂಗಂ, ಇರೆ, ಕಂಡು, ಬಗೆ- ಮನಸ್ಸು, ಬೆದರಿ, ಬೆಬ್ಬಳಿವೋಗಿ-ಸ್ತಂಭೀಭೂ
ತನಾಗಿ, ತನ್ನೊಳ್- ತನ್ನಮನಸ್ಸಿನಲ್ಲಿ, ಇಂತು, ಎಂದಂ. * * * * * * * * * *
ಮಂಟಪಂ, ಕೆಡೆದುದು- ಬಿದ್ದಿತು; ಸುತ್ತಿದ- ಸುತ್ತಹಾಕಿರುವ, ಕಲ್ಲ, ಕೋಂಟೆ, ಜರಿದು-ಜಾರಿ, ಬೀ
ಳ್ದುದು; ಕೀಲ್, ಸಡಿಲೆ- ಶಿಥಿಲವಾಗಲು, ಕದಂಗಳೆಲ್ಲ, ಪಳೆದಾಗಿ- ಹಳೆದಾಗಿ, ಕರಂ- ಅತ್ಯಂತವಾಗಿ, ಪಡಲಿ
ಟ್ಟುವು- ಬಿದ್ದವು; ಅಯ್ಯೊ! ಇದು ಕಲ್ಗುಡಿ, ಮೇಲೆ-ಲಿಂಗದಮೇಲೆ, ಬೀಳ್ದಪುದೊ- ಬೀಳುವದೋ? ಬಲ್ಲವ
ರ್- ತಿಳಿದವರು, ಆರ್? ಅತಿಜೀರ್ಣಂ- ಅತ್ಯಂತಶಿಥಿಲವಾದದ್ದು! ಅಕ್ಕಟ! ಎನ್ನ, ಒಡೆಯಂ-ಸ್ವಾಮಿಯು,
ತಾಂ, ಬಿಡದೆ- ತಪ್ಪದೆ, ಓರ್ವನೆ, ಗಾಂಪನ- ಮೂಢನ, ಅಂದದಿಂ- ರೀತಿಯಿಂದ, ಅದೇಕೆನೆಲಸಿದಂ- ಯಾಕೆ
ವಾಸಿಸಿದನು. ... ... ... ... ||೫||
ಅರೆಮೆಯ್ಯೊಳ್- ಅರ್ಧದೇಹದಲ್ಲಿ, ಎಂದುಂ- ಯಾವಾಗಲೂ, ಅಗಲದ- ಬಿಡದಿದ್ದ, ಗಿರಿಸುತೆಯಂ-
ಪಾರ್ವತಿಯನ್ನು, ಕಾಣೆಂ; ಅಳ್ಕಿ- ಹೆದರಿ, ಶಿವಲಿಂಗದೆ- ಲಿಂಗದಲ್ಲಿ, ಮೈಗರೆದಳೊ- ಅಡಗಿಕೊಂಡಳೋ? ಸ
ಲೆ- ಚೆನ್ನಾಗಿ, ಸೇವಿಪ, ಸಹಚರರ್- ಸೇವಕರು, ಓರ್ವರುಂ, ಇಲ್ಲದೆ, ಶಿವಂ, ಓರ್ವನೇ, ಇರ್ಪ್ಪಂ. ||೬||
ಪಳೆಗೊಂದೆ- ಹಳೆಯದಾದಬಸವನು, ಪೊಸಪುಲ್ಗಳ- ಹೊಸದಾದಹುಲ್ಲಿನ, ಪೊದರೊಳ್- ಹೊದರಿನಲ್ಲಿ,
ಬೀಳ್ದು, ತನ್ನಂ, ಎತ್ತುವವರ್, ಇಲ್ಲದೆ, ಮೇಣ್ ಬಳಲುತ್ತೆ-ಆಯಾಸಪಡುತ್ತ, ಇರ್ದಪುದು; ಈಮಂಗಳಲಿಂ
ಗಂ- ಈ ಶುಭಕರವಾದ ಲಿಂಗವು, ಪೂಜೆಗೊಂಡ- ಪೂಜೆಯಂಮಾಡಿಸಿಕೊಂಡ, ಕುರುಪು- ಚಿಹ್ನವು, ಅಣಂ-
ಸ್ವಲ್ಪವೂ, ಇಲ್ಲಂ. ... ... ... ... ... ||೭||
ಈಶ್ವರಂ, ಸೊರ್ಕಿದ- ಕೊಬ್ಬಿದ, ದೈತ್ಯರಂ- ರಾಕ್ಷಸರನ್ನು, ಸದೆದಂ- ಕೊಂದನು; ಅಂಧಕನಂ- ಅಂಧ
ಕಾಸುರನನ್ನು, ತುಳಿದಂ; ಪುರಾಂಗಜಾತಾರ್ಕಜರಂ—ಪುರ- ತ್ರಿಪುರ, ಅಂಗಜಾತ-ಮನ್ಮಥ, ಅರ್ಕಜರಂ- ಯ
ಮ ಇವರುಗಳನ್ನು, ಕನಲ್ದು- ಕೋಪಿಸಿ, ಉರುಪಿದಂ-ಸುಟ್ಟನು; ಮಖದ- (ದಕ್ಷನ) ಯಜ್ಞದ, ಊಟಕೆ,

ಳನಿಕ್ಕಿದಂ ದ್ವಿಪಸುರಾರಿಮೃಗಾರಿಗಳಂ ಪೊರಳ್ಚಿ ತ । ತ್ಕರ್ಕಶಚರ್ಮಮಂ ಸುಲಿದ ನಬ್ಜ ಜನೊಳ್ದಲೆಗೊಯ್ದ ನೀಶ್ವರಂ ॥ .. ... ... ॥೮॥

ಚಂ ॥ ಪಗೆವರನಂತ ರಂತರಿ ನಿವಂ ಪಳಿವಾಳ್ಗುಡಿಯಲ್ಲಿ ಕಜ್ಜದು । ಜ್ಜುಗಮಿನಿತಿಲ್ಲದಿಂತು ನೆಲಸಿರ್ದಪನೋರ್ವನೆ ವೈರದಿಂದವ ॥ ರ್ಗೆಮಿಗೆ ತತ್ಕುಲೋದ್ಭವರು ಮೇನನೊಡರ್ಚುವರೆಂದು ಬಲ್ಲರಾ ।ರ್ಮುಗುದನ ನೀತನಂ ಬಿಡದೆ ಕಾದಪೆ ನೆಚ್ಚರೊಳೊಂದಿಚೆಚ್ಚರಂ॥

ಕಂ॥ ಪಗೆವರಿನಿಬರ್ಕಳಿರೊಡ್ಡ। ಮಗಿಯದೆ ಲೆಕ್ಕಿಸದೆ ಘೋರವಿಪಿನಾಂತರದೊಳ್ ॥ ನಗಜಾಧಿಪನೇಂ ಧೀರನೊ । ನೆಗಳ್ದೋರ್ವನೆ ನಿಂದ ನಿಲ್ಲಿ ಪಾಳ್ದೇಗುಲದೊಳ್ ॥ ॥೧೦॥

ವ ॥ ಅಂತಾದೊಡ ಮಾನುಂ ಸಹಾಯನಾಗಿ ಕಾದಪೆ ನೆಂದು ನಿರ್ಧರಿಸಿ ತನಗುಳ್ಳ ಧನಕನಕಾದಿವಸ್ತುವೆಲ್ಲಮ ನವಚಂಕತ್ವದಿಂ ತರಿಸಿ ತದ್ದ್ರವ್ಯಮಂ ವೆಚ್ಚಿಸಿ ದೃಢತರಮನೋಜ್ಞಶಿವಾಲಯಶಿಖರಗೋಪುರದ್ವಾರಬಂಧಕವಾಟಮಂಟಪಪ್ರಕರಪ್ರಾಕಾರಪ್ರತೋಳಿಕಪರಿಖಾದಿಗಳಂ ಸಾಂಗಮೆನೆ ರಚಿಯಿಸಿಯುಂ ಪೇರ್ಗೊತ್ತಳಂಗಳೊಳ್ಪರಿಯ ಪಿರಂಗಿಗಳನಮರ್ಚಿಯುಂ ಪಲದೆನೆಗಳೊಳಂಬುಗಂಡಿಗಳ ನೊಡರ್ಚಿಯುಂ ಜಸಿಬಸಿದ ಪೇರ್ಗೋಡೆಗ

---

ಒರಲ್ದು- ಪ್ರೀತಿಸಿ, ಬಂದ, ದೇವರ್ಕಳಂ, ಇಕ್ಕಿದಂ- ಬಡಿದನು, ದ್ವಿಪಸುರಾರಿಮೃಗಾರಿಗಳ೦— ದ್ವಿಪಸುರಾರಿ- ಗಜಾಸುರ, ಮೃಗಾರಿಗಳಂ- ವ್ಯಾಘ್ರಾಸುರ ಇವರುಗಳನ್ನು, ಪೊರಳ್ಚಿ- ಹೊರಳಿಸಿ, ತತ್ಕರ್ಕಶಚರ್ಮಮಂ- ಅವರ ಕಠಿಣವಾದ ತೊಗಲನ್ನು, ಸುಲಿದಂ- ಕಳಚಿದನು, ಅಬ್ಜಜನ- ಬ್ರಹ್ಮನ, ಒಳ್ದಲೆಗೊಯ್ದಂ- ಒಳ್ಳೆಯ ಶಿರಸ್ಸನ್ನು ಕೊಯ್ದನು. ... ... ... ... ॥೮॥

ಪಗೆವರ್- ವೈರಿಗಳು, ಅನಂತರ್- ಅನೇಕರು, ಅಂತರಿಂ- ಆದುದರಿಂದ, ಇವಂ- ಈಶಿವನು, ಓರ್ವನೆ, ಪಳಿವಾಳ್ಗುಡಿಯಲ್ಲಿ, ಕಜ್ಜದ- ಕಾರ್ಯದ, ಉಜ್ಜುಗಂ- ಉದ್ಯೋಗವು, ಇನಿತು- ಇಷ್ಟೂ, ಇಲ್ಲದೆ, ಇಂತು,ನೆಲಸಿ- ವಾಸವಾಗಿ, ಇರ್ದಪಂ; ವೈರದಿಂ- ಹಗೆತನದಿಂದ, ಅವರ್- ಆ ಶತ್ರುಗಳು, ತತ್ಕುಲೋದ್ಭವರುಂ- ಆ ಶತ್ರುಗಳ ವಂಶೋತ್ಪನ್ನರೂ, ಏನಂ, ಒಡರ್ಚುವರ್- ಮಾಡುವರು? ಎಂದು, ಬಲ್ಲವರ್, ಆರ್? ಮುಗುದನಂ-ಈತನಂ- ಏನನ್ನೂ ಅರಿಯದ ಈ ಶಿವನನ್ನು,ಬಿಡದೆ- ತಪ್ಪದೆ, ಎಚ್ಚರೊಳ್- ಜಾಗರೂಕತೆಯಿಂದ, ಒಂದಿ, ಚೆಚ್ಚರಂ- ಶೀಘ್ರವಾಗಿ, ಕಾದಪೆಂ- ಕಾದುಕೊಂಡಿರುವೆನು. ... ... ॥೯॥

ಇನಿಬರ್ಕಳ್‌ಪಗೆವರ್- ಇಷ್ಟುಮಂದಿ ಶತ್ರುಗಳು, ಇರೊಡ್ಡಂ, ನಗಜಾಧಿಪಂ- ಪಾರ್ವತೀ ಪತಿಯು, ಅಗಿಯದೆ- ಭಯಪಡದೆ, ಲೆಕ್ಕಿಸದೆ- ಗಣನೆಮಾಡದೆ, ಘೋರವಿಪಿನಾಂತರದೊಳ್- ಭಯಂಕರವಾದ ಕಾಡಿನ ಮಧ್ಯದಲ್ಲಿ, ಇಲ್ಲಿ, ಪಾಳ್ದೇಗುಲದೊಳ್- ಹಾಳುದೇವಸ್ಥಾನದಲ್ಲಿ, ನೆಗಳ್ದು- ವ್ಯಕ್ತವಾಗಿ, ಓರ್ವನೆ, ನಿಂದಂ, ಏಂ ಧೀರನೋ? ... ... ... ... ... ॥೧೦॥

ಅಂತುಆದೊಡಂ- ಹಾಗಾದಾಗ್ಯೂ, ಆನುಂ, ಸಹಾಯಂ, ಆಗಿ, ಕಾದಪೆಂ, ಎಂದು, ಆಭಕ್ತಂ- ಆಕೆಳಿಯೂರನು, ನಿರ್ಧರಿಸಿ- ನಿಶ್ಚೈಸಿ, ತನಗೆ, ಉಳ್ಳ, ಧನಕನಕಾದಿವಸ್ತುವೆಲ್ಲಮಂ, ಅವಂಚಕತ್ವದಿಂ- ವಂಚನೆಯಿಲ್ಲದೆ, ತರಿಸಿ, ತದ್ದ್ರವ್ಯಮಂ, ವೆಚ್ಚಿಸಿ- ಕರ್ಚುಮಾಡಿ, ದೃಢ......ಆದಿಗಳಂ— ದೃಢತರ- ಅತಿಗಟ್ಟಿಯಾದ, ಮನೋಜ್ಞ- ಮನೋಹರವಾದ, ಶಿವಾಲಯ- ದೇವಸ್ಥಾನ, ಶಿಖರ- ಕಲಶ, ಗೋಪುರ, ದ್ವಾರಬಂಧ- ಚೌಕಟ್ಟು, ಕವಾಟ- ಕದ, ಮಂಟಪಪ್ರಕರ, ಪ್ರಾಕಾರ- ಕೋಟೆ, ಪ್ರತೋಳಿಕಾ-ದೊಡ್ಡಬೀದಿ, ಪರಿಖಾ- ಕಂದಕ, ಇವುಗಳೇ, ಆದಿಗಳಂ- ಮೊದಲಾದವುಗಳನ್ನು,ಸಾಂಗಂ-ಸಂಪೂರ್ಣವಾದದ್ದು, ಎನೆ, ರಚಯಿಸಿಯುಂ ಮಾಡಿಸಿಯೂ, ಪೇರ್ಗೊತ್ತಳಂಗಳೊಳ್- ದೊಡ್ಡಕೊತ್ತಳಗಳಲ್ಲಿ, (ಕೊತ್ತಳವೆಂದರೆ ಕೋಟೆಗಳ ಮೇಲ್ಗಡೆ

ಳುಮಂ ಕಲ್ಗುಂಡು ಕವಣೆ ಪುರಿಮುಳ್ಮುರ್ಪುದಿದಿ ಮೊದಲಾದುದೆಲ್ಲಮುಮನ ನೆಡೆಗಡೆಗೆ ತರಂ ಗೊಳಿಸಿಯುಂ ಪುರಮಧ್ಯದೊಳಗಾಧವಾಪೀಕೂಪಸರೋವರೋದ್ಯಾನಪುಷ್ಪಾರಾಮಂಗ ಳಂ ನಿಮಿರ್ಚಿಯುಂ ಮನವಧಿಕನಾನಾಧಾನ್ಯಲವಣಮರೀಚಾದಿವಸ್ತುಸಂಗ್ರಹಮಂ ಸಮ ಕಟ್ಟಿಯುಂ ಲೋಕತ್ರಯದೊಳಾಕ್ರಮಿಸಲಾವಂಗ ಮಶಕ್ಯಮೆಂಬಂತೆ ದುರ್ಗಮಂಬಲಿಪು ತ್ತ ಮಾಭಕ್ತನಾಗಳ್ ॥ * * * * * * * * * * * * *

ವನಮಯೂರವೃತ್ತಂ ॥ ಕೂರಸಿಯನಾಂತು ಬರೆ ವೀರಭಟವರ್ಗಂ । ಭೇರಿಜಯಘಂ ಟೆಗಳ ಭೂರಿರವದಿಂದಂ ॥ ಕಾರಿರುಳೊಳೆಚ್ಚರಿಸು ತೋರಣದೆ ಸುತ್ತು । ತ್ತಾರುತುರೆ ದುರ್ಗಮ ನುದಾರಮತಿಕಾದಂ ॥ ... ... ... ॥೧೧॥

ಕಂ ॥ ಎತ್ತಿದಪಂಜುಗ ಳುರಿವೆಳ । ಗೆತ್ತಂ ಮಿಸುಗುವಿನ ಮೆಳ್ಚರೆಳ್ಚರೆನುತ್ತಂ ॥ ಬಿತ್ತರದಿ ನಾರ್ದು ತಿರುಗುತೆ । ಸುತ್ತಂ ಸಲೆ ಕೋಂಟೆಗಾದ ನಚಳಿತಧೀರಂ ॥ ॥೧೨॥

ವ ॥ ಅಂತು ಬೆಳಗಪ್ಪನ್ನೆಗಂ ಕಾದು ಪಲಕೆಲವುದಿನಂಗಳಂ ಸಲಿಸುತ್ತಿರೆ ನಿಜಧನ ಮನಿತುಂ ತೀರೆ ಸಂಬಳಂ ಬತೆಯುದೊಡನೆ ಕೋಂಟೆಗಾವ ಸುಭಟರೆಲ್ಲ ರ್ಬಿಟ್ಟು ಪೋಗೆಧೈ

ಯಲ್ಲಿ ಪಿರಂಗಿಗಳನ್ನಿಡುವದಕ್ಕೆ ಮಾಡಿರುವ ಸಂದು) ಪಿರಿಯಪಿರಂಗಿಗಳಂ- ದೊಡ್ಡಪಿರಂಗಿಗಳನ್ನು, ಅವು ರ್ಚಿಯುಂ- ಸೇರಿಸಿಯೂ. ಪಲದೆನೆಗಳೊಳ್- ಅನೇಕ ಕೋಟದೆನೆಗಳಲ್ಲಿ,ಅಂಬುಗಂಡಿಗಳಂ-ಬಾಣಗಳನ್ನಿಡುವ ರಂಧ್ರಗಳನ್ನು,ಒಡರ್ಚಿಯುಂ- ಮಾಡಿಸಿಯೂ, ದಸಿಬಸಿದ-ದಸಿಯುಂ ಮಾಡಿದ,ಪೇರ್ಬೊಲೆಗಳುಮಂ- ದೊಡ್ಡ ತೊಲೆಗಳನ್ನೂ, ಕಲ್, ಗುಂಡು, ಕವಣೆ, ಪುರಿಮುಳ್- ಹುರಿದು ಕಾಸಿ ಎರಚುವ ಮುಳ್ಳು, ಮದ್ದುದಿದಿ- ಮದ್ದಿನ ಶಿದಿ, ಮೊದಲಾದುದೆಲ್ಲಮುಮಂ, ಎಡೆಗಿಡೆಗೆ- ಅಲ್ಲಲ್ಲಿಗೆ, ತರಂಗೊಳಿಸಿಯುಂ- ಲೈನಾಗಿ ಮಡಗಿ ಯೂ. ಪುರಮಧ್ಯದೊಳ್, ಅಗಾಧ......ರಾಮಂಗಳು— ಅಗಾಧ- ಆಳವಾದ- ವಾಪೀ- ತೋಟದ ಭಾವಿ ಕೂಪ- ಮನೆಯ ಭಾವಿ, ಸರೋವರ, ಉದ್ಯಾನಪುಷ್ಪಾರಾಮಂಗಳಂ- ಹೂಡೆ ೯ೀಟಗಳನ್ನು,ನಿಮಿರ್ಚಿಯುಂ- ಮಾಡಿಸಿಯೂ, ಅನವಧಿಕ......ಸಂಗ್ರಹಮಂ—ಅನವಧಿಕ- ಅಪಾರವಾದ, ನಾನಾಧಾನ್ಯ, ಲವಣ- ಉಪ್ಪು, ಮರೀಚ- ಮೆಣಸು, ಇವುಗಳೇ, ಆದಿ- ಮೊದಲಾದ, ವಸ್ತು- ಪದಾರ್ಥಗಳ, ಸಂಗ್ರಹಮಂ- ಕೂಡಿಸುವಿಕೆ ಯನ್ನು, ಸಮಕಟ್ಟಿದುಂ- ಸಮಗೊಳಿಸಿಯೂ, ಲೋಕತ್ರಯದೊಳ್,ಆಕ್ರಮಿಸಲ್, ಆವಂಗಂ- ಯಾವ ನಿಗೂ, ಅಶಕ್ಯಂ, ಎಂಬಂತೆ, ದುರ್ಗಮಂ- ಕೋಟೆಯನ್ನು, ಬಲಿಪುತ್ತಂ- ಬಲಪಡಿಸುತ್ತ,ಆಗಳ್. * *

ಉದಾರಮತಿ- ಉತ್ಕೃಷ್ಟವಾದ ಬುದ್ಧಿಯುಳ್ಳ ಕಲಿಯಾರನು, ಇರುಳೊಳ್- ರಾತ್ರಿಯಲ್ಲಿ ವೀರಭಟ ವರ್ಗಂ- ಪರಾಕ್ರಮಶಾಲಿಗಳಾದ ಕಾಲಾಳ್ಗಳು, ಕೂರಸಿಯಂ- ತೀಕ್ಷ್ಣವಾದ ಕತ್ತಿಯನ್ನು, ಆಂತು- ಧರಿ ಸಿ, ಬರೆ- ಕೂಡಿಬರಲು, ಭೇರಿಜಯಘಂಟೆಗಳ- ಭೇರಿ-ನಗಾರಿ, ಜಯಘಂಟೆಗಳ- ಜಯಸೂಚಕವಾದ ಗಂಟೆ ಇವುಗಳ, ಭೂರಿರವದಿಂದಂ- ಬಹಳವಾದ ಶಬ್ದದಿಂದ, ಎಚ್ಚರಿಸುತೆ- ಎಚ್ಚರವಂಹೇಳುತ್ತ, ಓರಣದೆ- ಕ್ರಮ ವಾಗಿ, ಸುತ್ತುತ್ತೆ, ಆರುತೆ- ಗಟ್ಟಿಯಾಗಿ ಕೂಗುತ್ತ, ಉರೆ, ದುರ್ಗಮಂ- ಕೋಟೆಯನ್ನು, ಕಾದಂ. ॥೧೧॥

ಅಚಳಿತಧೀರಂ- ಚಂಚಲವಾಗದ ಧೈರ್ಯವುಳ್ಳ ಕಲಿಯಾರನು, ಎತ್ತಿದ, ಪಂಜುಗಳ, ಉರಿವೆಳಗು- ಉರಿ ಯ ಬೆಳಕು, ಎತ್ತಂ— ಎಲ್ಲಾಕಡೆಯಲ್ಲೂ, ಮಿಸುಗುವಿನಂ- ಪ್ರಕಾಶಿಸುವಂತೆ, ಎಳ್ಚರ್ಎಳ್ಚರ್- ಎಚ್ಚರವ ಚ್ಚರ, ಎನುತ್ತಂ, ಬಿತ್ತರದಿಂ- ವಿಸ್ತಾರವಾಗಿ,ಆರ್ದು, ಸುತ್ತಂ,ತಿರುಗುತೆ, ಸಲೆ-ಚೆನ್ನಾಗಿ, ಕೋಂಟೆಗಾದಂ.

ಬೆಳಗು, ಅಪ್ಪನ್ನೆಗಂ- ಆಗುವವರೆಗೂ, ಅಂತು, ಕಾದು, ಪಲಕೆಲವುದಿನಂಗಳಂ, ಸಲಿಸುತ್ತೆ- ನೆರವೇ ರಿಸುತ್ತ, ಇರೆ, ನಿಜಧನಂ- ತನ್ನ ದ್ರವ್ಯವು; ಅನಿತುಂ- ಎಲ್ಲವೂ, ತೀರೆ, ಕೋಂಟೆಗಾವಸುಭಟರ್ ಎಲ್ಲರ್ ,ಸಂ

ರ್ಯಂಗುಂದದೋರ್ವನೆ ಬಹುಬಲಮಿರ್ಪುದೆಂಬಂತಾಳ್ವೇರಿಯ ಮೇಲೆ ನಿಶೆಯೊಳ್ಗಳಬಳಂ ದೋರಿ ಗರ್ಜಿಸಿ ॥ * * * * * * * * * * * * *

ಕಂ॥ ಉಡಿಗಂಟೆ ಢಣಢಣಧ್ವನಿ । ಗುಡೆ ಘುಲಘುಲಕೆಂದು ಫಲಕ ಮುಲಿವುತ್ತಿರೆ ಕಾ॥ ಲ್ದೊಡರದು ಝಣಝಣಿಸುತ್ತಿರೆ । ಪಿಡಿದಸಿಯಂ ಪಂಜ ನಲ್ಲಿ ಬೆಳಗುತ್ತಿರ್ಪಂ ॥ ॥೧೩॥

ವ॥ ಆಗಳ್ತಾಂ ಸಂಗ್ರಹಂಗೆಯ್ದೆಣ್ಣೆಯೆಲ್ಲಂ ತೀರಲೊಡನಿಂಧನಂಗಳಂ ತಂದು ಪೊತ್ತಿಕ್ಕಿ ಪೇರುರಿಗೆಯ್ದು ಪಿಡಿದು ಮುನ್ನಿನಂತಬ್ಬರಿಸಿ ಬೊಬ್ಬೆಗೊಟ್ಟು ಕತಿಪಯದಿನಂಗಳುಂ ಕಳೆಯೆ ಕಾವುತ್ತಿರಲೊಡನಡುಗರ್ಬ್ಬಗಳುಂಸವೆಯೆ ಮರಂ ಕೊರಂಟು ಪುಲ್ಸರವಿ ಪೊದೆದ ವಸನಂಮೊದಲಾದವರಿಂ ಪೊತ್ತಿಸಿದುರಿಗಳಂ ಪ್ರಜ್ವಳಿಸುತಂತೆಂತೆ ಕೋಂಟೆಗಾವುತ್ತ ಮಿರ್ಪಿನಮದುವುಂ ಸವೆಯಲೊಡನೆ ॥ * * * * * * * * *

ಕಂ॥ ಉರಿವೆಳಗಿಲ್ಲದೆ ಮರ್ಬ್ಬು ! ವರಿಸಲ್ಕಿದೆ ರಿಪುಗಳರಿದೊಡೇಂ ಮೋಸಂಗೆಯ್ವರೊ ಸಾಧನ ಮಿದಕಿಲ್ಲಂ । ದುರವಣಿಸುತೆ ನೆನೆದ ನೊಂದುಪಾಯಮನಾಗಳ್ ॥ ॥೧೪॥

ಕಂ ॥ ತಲೆನವಿರಂ ಪೊತ್ತಿಸಿ ಕ । ಳ್ತಲೆಯಂ ಕಡೆಗಣಿಪೆನೆಂದು ಬಗೆದಾಭಕ್ತಂ ॥ ನೆಲೆವೆರ್ಚ್ಚಿದ ಧೈರ್ಯ್ಯದಿ ನು । ಜ್ಜ್ವಲಕಚಮಂ ಪೊಸದು ಜಡೆಯೊಡರ್ಚ್ಚಿದ ನಾಗಳ್ ॥೧೫॥

---

ಬಳಂಬಡೆಯದೆ, ಬಿಟ್ಟು, ಪೋಗೆ, ಧೈರ್ಯ್ಯಂಗುಂದದೆ- ಧೈರ್ಯ್ಯವು ಕಮ್ಮಿಯಾಗದೆ, ಓರ್ವನೆ, ಬಹುಬಲಂ- ಬಹಳ ಸೈನ್ಯವು, ಇರ್ಪ್ಪುದು, ಎಂಬಂತೆ, ಆಳ್ವೇರಿಯ- ಬತೇರಿಯ, ಮೇಲೆ, ನಿಶೆಯೊಳ್- ರಾತ್ರಿಯಲ್ಲಿ, ಗಳಬಳಂದೋರಿ- ಗದ್ದಲವಂ ಮಾಡಿ, ಗರ್ಜ್ಜಿಸಿ. * * * * * * * * * * * * *

ಉಡಿಗಂಟೆ- ನಡುವಿನಲ್ಲಿ ಸುತ್ತಿರುವ ಗಂಟೆಗಳು, ಢಣಢಣಧ್ವನಿಗುಡೆ- ಢಣಢಣವೆಂಬ ಶಬ್ದವಂ ಮಾಡಲು, ಫಲಕಂ- ಹಲಗೆಯು, ಘುಲಘುಲಕೆ, ಎಂದು, ಉಲಿವುತ್ತೆ- ಶಬ್ದವಂ ಮಾಡುತ್ತ, ಇರೆ,ಅದು, ಕಾಲ್ದೊಡರ್- ಆ ಕಾಲಿನಲ್ಲಿರುವ ಪೆಂಡೆಯು, ಝಣಝಣಿಸುತ್ತೆ- ಇರೆ, ಅಸಿಯಂ- ಕತ್ತಿಯನ್ನು, ಪಿಡಿದು, ಅಲ್ಲಿ,ಪಂಜಂ, ಬೆಳಗುತ್ತೆ, ಇರ್ದಂ. ... ... ... ... ॥೧೩॥

ಆಗಳ್, ತಾಂ, ಸಂಗ್ರಹಂಗೆಯ್ದ, ಎಣ್ಣೆಯೆಲ್ಲಂ, ತೀರಲ್, ಒಡಂ- ಕೂಡಲೇ, ಇಂಧನಂಗಳಂ-ಸೌದೆಗಳನ್ನು, ತಂದು, ಪೊತ್ತಿಕ್ಕಿ, ಪೇರುರಿಗೆಯ್ದು- ದೊಡ್ಡಉರಿಯಂ ಮಾಡಿ, ಪಿಡಿದು, ಮುನ್ನಿನಂತೆ, ಅಬ್ಬರಿಸಿ- ಆರ್ಭಟಿಸಿ, ಬೊಬ್ಬೆಗೊಟ್ಟು- ಕೋಲಾಹಲವಂಮಾಡಿ, ಕತಿಪಯದಿನಂಗಳುಂ-ಕೆಲವುದಿವಸಗಳೂ, ಕಳೆಯೆ, ಕಾವುತ್ತೆ, ಇರಲ್, ಒಡನೆ, ಅಡುಗರ್ಬ್ಬಗಳುಂ- ಸೌದೆಯೂ, ಸವೆಯೆ- ತೀರಲು,ಮರಂ, ಕೊರಂಟು- ಕೊರಡು, ಪುಲ್, ಸರವಿ- ಹಗ್ಗ, ಪೊದೆದ- ಹೊದ್ದಿದ್ದ, ವಸನಂ- ಬಟ್ಟೆ, ಮೊದಲಾದವರಿಂ, ಪೊತ್ತಿಸಿದ, ಉರಿಗಳಿಂ, ಪ್ರಜ್ವಳಿಸುತೆ- ಬೆಳಕುಮಾಡುತ್ತ, ಅಂತಂತೆ- ಹಾಗೆಹಾಗೆ,ಕೋಂಟೆಗಾವುತ್ತಂ, ಇರ್ಪಿನಂ, ಅದುವುಂ, ಸವೆಯಲ್, ಒಡನೆ. * * * * * * * * * * * * * *

ಉರಿವೆಳಗು, ಇಲ್ಲದೆ, ಮರ್ಬ್ಬು-ಕತ್ತಲೆಯು, ಆವರಿಸಲ್ಕೆಇರೆ- ಆಚ್ಛಾದಿಸುವದಕ್ಕುದ್ಯುಕ್ತವಾಗಿರಲು? ರಿಪುಗಳ್- ಶತ್ರುಗಳು, ಅರಿದೊಡೆ- ತಿಳಿದರೆ, ಏಂಮೋಸಂಗೆಯ್ವರೊ- ಏನು ಕಪಟವನ್ನು ಮಾಡುವರೋ, ಇದಕೆ, ಸಾಧನಂ- ಸಹಾಯದ್ರವ್ಯವು, ಇಲ್ಲ, ಎಂದು, ಉರವಣಿಸುತೆ- ಸನ್ನದ್ಧನಾಗುತ್ತ, ಆಗಳ್, ಒಂದುಉಪಾಯಮಂ, ನೆನೆದಂ. ... ... ... ... ... ॥೧೪॥

ಆಭಕ್ತಂ, ತಲೆನವಿರಂ- ತಲೆಯಕೂದಲನ್ನು, ಪೊತ್ತಿಸಿ, ಕಳ್ತಲೆಯಂ, ಕಡೆಗಣಿಪೆಂ- ಕೊನೆಸೇರಿಸುವೆನು, ಎಂದು, ಬಗೆದು- ಆಲೋಚಿಸಿ, ನೆಲೆವೆರ್ಚ್ಚಿದ- ಅತ್ಯಂತವಾಗಿ ಹೆಚ್ಚಿದ, ಧೈರ್ಯದಿಂ,ಉಜ್ಜ್ವಲಕಚಮಂ- ಪ್ರಕಾಶಮಾನವಾದ ಕೂದಲನ್ನು, ಪೊಸೆದು- ಹೊಸೆದು, ಆಗಳ್, ಜಡೆಯೊಡರ್ಚ್ಚಿದಂ- ಜಡೆಯಂ ಮಾಡಿದನು.

ವ ॥ ಅಂತು ಜೆಡೆವೆಣೆದಾತ್ಮಕಚೌಘಮುಂ ಸೊಡರ್ವತ್ತಿಸಿ ಪೆರ್ವೆಳಗುಗೆಯ್ದಾಳ್ವೇರಿಯ ಮೇಲೆ ತಿರುಗುತ್ತಮಿರೆ॥ * * * * * * * * * * * *

ಚಂ ॥ ಧಗಧಗಧಂಧಗದ್ಧ್ವನಿಸಮೃದ್ಧಸಮುದ್ಧತವಿಸ್ಫುಲಿಂಗಸಂ । ಘಗತಧನಂಜಯಂ ನಿಮಿರ್ದು ದಳ್ಳುರಿ ಸೂಸೆ ಶಿರೋಜವೃಂದಮಂ ॥ ಬಗೆವಿಗೆ ಪೊತ್ತ ನೆತ್ತಿಯ ಸರೋಜದ ಜೋತಿಯೆ ಪೊಣ್ಮಿದಂತೆ ನೆ । ಟ್ಟಗೆ ನೆಗೆದೀಳ್ದು ಚುರ್ಚುತಿರೆ ಭಕ್ತನ ಮಸ್ತಕಮಂ ಕ್ಷಣಾರ್ಧದೊಳ್ ॥ .. ... ... ... ॥೧೩॥

ಉತ್ಸಾಹವೃತ್ತಂ॥ ಇಂದುದೇವಸಿಂಧುಜೂಟ ನದ್ರಿಜಾಸಮನ್ವಿತಂ । ನಂದಿವಾಹ ನಗ್ನಿಲೋಚನಂ ಫಣೀಂದ್ರಭೂಷಣಂ ॥ ಕುಂದಚಂದನಾರ್ಜುನಾಂಗ ನುಗ್ರನೀಲಕಂಧರಂ । ಚಂದದಿಂ ಪ್ರಸನ್ನನಾಗಿ ಮುಂದೆ ನಿಂದ ನೀಶ್ವರಂ ॥ .. ... ॥೧೪॥

ವ ॥ ಅಂತು ಶಿವಂ ಪ್ರಸನ್ನನಾಗಿ ಕಡೆಗಣ್ಣ ಕರುಣಾರಸ ವರ್ಷದೊಳ್ತಲೆನವಿರುರಿಯಂ ನಂದೆವೋಯ್ದಳ್ದಿ ತೆಗೆದು ಬಿಗಿದಾಲಿಂಗಿಸಿ ಬೋಳೈಸಿ ನುತಿಸಿ ನಿನ್ನನಿಶ್ಚಳಭಕ್ತಿವೃತ್ತಿಗಾನೊಚ್ಚತಂ ಮಚ್ಚಿದೆಂ ವರಮಂ ಬೇಳ್ಪುದೆನೆ ಭಕ್ತಂ ಮಂದಸ್ಮಿತಮುಖಾರವಿಂದನಾಗಿ ಪೊಡಮಡುತಿಂತೆಂದಂ ॥ * * * * * * * * * * * *

---

ಅಂತು, ಆತ್ಮಕಚೌಘಮಂ- ತನ್ನ ಕೂದಲ ಸಮೂಹವನ್ನು, ಜೆಡೆವೆಣೆದು, ಸೊಡರ್ವತ್ತಿಸಿ-ದೀಪವಂ ಹತ್ತಿಸಿ, ಪೆರ್ವೆಳಗುಗೆಯ್ದು- ದೊಡ್ಡ ಬೆಳಕನ್ನುಮಾಡಿ,ಆಳ್ವೇರಿಯ,ಮೇಲೆ, ತಿರುಗುತ್ತಂ, ಇರೆ. * *

ಧಗ........ ಧನಂಜಯಂ— ಧಗಧಗಧಂಧಗಧ್ವನಿ- ಧಗಧಗವೆಂಬ ಶಬ್ದದಿಂದ, ಸಮೃದ್ಧ- ಅಭಿವೃದ್ಧಿಯನ್ನೈದಿದ, ಸಮುದ್ಧತ- ಮೇಲಕ್ಕೆ, ನೆಗೆದ, ವಿಸ್ಫುಲಿಂಗ- ಕಿಡಿಗಳ, ಸಂಘ- ಸಮೂಹವನ್ನು,ಗತ– ಹೊಂದಿದ, ಧನಂಜಯಂ- ಅಗ್ನಿಯು, ನಿಮಿರ್ದು- ಉದ್ದವಾಗಿ, ದಳ್ಳುರಿ- ಹೆಚ್ಚಾದ ಜ್ವಾಲೆಯು, ಸೂಸೆ- ಪ್ರಸರಿಸುತ್ತಿರಲು, ಶಿರೋಜವೃಂದಮಂ- ಕೂದಲಿನ ಸಮೂಹವನ್ನು, ಬಗೆವಿಗೆ- ಮನೋಹರವಾಗಿ, ಪೊತ್ತ, ನೆತ್ತಿಯ, ಸರೋಜದ- ಕಮಲದಲ್ಲಿರುವ, ಜೋತಿಯೆ- ಪರಂಜ್ಯೋತಿಯೇ, ಪೊಣ್ಮಿದಂತೆ- ಹೊರಕ್ಕೆ ಹೊರಟಂತೆ, ನೆಟ್ಟನೆ, ನೆಗೆದು- ಹಾರಿ, ಈಳ್ದು- ಇಳಿದು, ಭಕ್ತನ, ಮಸ್ತಕಮಂ, ಚುರ್ಚುತಿರೆ- ಸುಡುತ್ತಿರಲು, ಕ್ಷಣಾರ್ಧದೊಳ್- ಅರ್ಧಕ್ಷಣದಲ್ಲಿ. ... ... ... ॥೧೩॥

ಇಂದುದೇವಸಿಂಧುಜೂಟಂ— ಇಂದು- ಚಂದ್ರ, ದೇವಸಿಂಧು- ದೇವಗಂಗೆ, ಇವುಗಳೇ, ಜೂಟಂ- ಜೆಡೆಯುಳ್ಳುಳ್ಳ, ಅದ್ರಿಜಾಸಮನ್ವಿತಂ- ಪಾರ್ವತಿಯಿಂ ಕೂಡಿದ, ನಂದಿವಾಹಂ, ಅಗ್ನಿಲೋಚನಂ, ಫಣೀಂದ್ರಭೂಷಣಂ, ಕುಂದಚಂದನಾರ್ಜುನಾಂಗಂ— ಕುಂದ- ಮೊಲ್ಲೆಯ ಹೂವು, ಚಂದನ- ಶ್ರೀಗಂಧ, ಇವುಗಳಂತೆ, ಅರ್ಜುನ- ಶುಭ್ರವಾದ, ಅಂಗಂ- ಶರೀರವುಳ್ಳ, ಉಗ್ರನೀಲಕಂಧರಂ- ಭಯಂಕರವಾದ ಕಪ್ಪುಕತ್ತುಳ್ಳ,ಈಶ್ವರಂ, ಪ್ರಸನ್ನಂ, ಆಗಿ, ಮುಂದೆ, ನಿಂದಂ. ... ... ... ... ॥೧೪॥

ಅಂತು, ಶಿವಂ, ಪ್ರಸನ್ನಂ, ಆಗಿ, ಕಡೆಗಣ್ಣ, ಕರುಣಾರಸವರ್ಷದೊಳ್- ದಯಾರಸದ ಮಳೆಯಿಂದ, ತಲೆನವಿರ- ತಲೆಗೂದಲಿನ, ಉರಿಯಂ- ಜ್ವಾಲೆಯನ್ನು, ನಂದೆವೋಯ್ದು- ಆರಿಹೋಗುವಂತೆ ಹೊಯ್ದು, ಅಳ್ದಿ- ಅದ್ದಿ, ತೆಗೆದು, ಬಿಗಿದು, ಆಲಿಂಗಿಸಿ, ಬೋಳೈಸಿ- ತಲೆಯಂ ಸವರಿ, ನುತಿಸಿ- ಸ್ತೋತ್ರಮಂ ಮಾಡಿ, ನಿನ್ನ, ನಿಶ್ಚಳಭಕ್ತಿವೃತ್ತಿಗೆ- ಸ್ಥಿರವಾದ ಭಕ್ತಿವ್ಯಾಪಾರಕ್ಕೆ, ಆಂ, ಒಚ್ಚತಂ- ಚೆನ್ನಾಗಿ, ಮೆಚ್ಚಿದೆಂ, ವರಮಂ, ಬೇಳ್ಪುದು, ಎನೆ, ಭಕ್ತಂ, ಮಂದಸ್ಮಿತಮುಖಾರವಿಂದಂ- ಮುಗುಳ್ನಗೆಯಿಂ ಕೂಡಿದ ಮುಖಕಮಲವುಳ್ಳವನು, ಆಗಿ,ಪೊಡಮಡುತ್ತ-ನಮಸ್ಕರಿಸುತ್ತ,ಇಂತೆಂದಂ. * * * * * * * * *

ಕಂ ॥ ನಿನ್ನ ಪದಪದ್ಮಸೇವಾ । ಸನ್ನುತಿ ಸಾಮ್ರಾಜ್ಯಮೆನಗೆ ತೀವಿರೆ ಪೆರತೊಂ ।
ದಿನ್ನಾವುದೆರೆವ ವರಮದ । ರಿ ನ್ನೀನೀವನ್ಯವರಮನೊಲ್ಲೆನುಮೇಶ ॥ ... ॥೧೮॥

ಕಂ ॥ ಪೊಡವಿಗತಿಶಯದದುರ್ಗಂ । ಮೃಡಕೇಳ್ಕೈಲಾಸ ಮಲ್ಲಿ ಬಾಳ್ವುದನುಳಿದೀ ।
ಯಡವಿಯೊಳಿರ್ಪುದು ಯುಕ್ತಮೆ । ಬಡವನವೋಲ್ಪೋಪ ಮಲ್ಲಿಗೇಳ್ಜವದಿಂದಂ ॥೧೯॥

ವ ॥ ಎಂಬನಿತರೊಳ್ಬಂದ ನವೀನಮಣಿಮಯಪುಷ್ಪಕಮ ನವ ನಭವನೊಡನೇರಿ ಮೃಡಾಗಾರಸಹಿತಂ ಕೈಲಾಸಕ್ಕೆ ತಳರ್ದಲ್ಲಿರುತ್ತಮಿರೆ ನಿರೀಕ್ಷಿಸಿ॥ * * * * *

ಕಂ ॥ ಆಕಲಿಯಾರಾಖ್ಯನ ನಾ । ಲೋಕೈಕಮಹೇಶ ನೊಲ್ದು ಕೊಂಡಾಡಿ ಗಣಾ ॥
ನೀಕದೊಡನೈದೆ ಪೊಗಳ್ದು ಪ । ನಾಕಿ ಸುರರ್ಪೊಗಳೆ ನಿತ್ಯನಿಜಪದಮಿತ್ತಂ ॥ ॥೨೦॥

ಕಂ ॥ ಎಂದಿಂತು ದೀಪದಕಲಿಯ । ಚೆಂದದ ಕಥನಮ ನುದಾರಮತಿಯೊರೆವುತೆ ಮ ॥
ತ್ತೊಂದುಮೃಡಭಕ್ತಕಥನನು । ನುಡಿದೊರೆದಂ ಬಸವರಾಜನೆಂತೆನೆ ದರೆಯೊಳ್ ॥ ॥೨೧॥

ಕಂ॥ಮಂಡಿತಮಹಿಮೆಯನಿರದೊಳ । ಕೊಂಡಾಕಾಂಚಿಯೊಳೆ ದುರಿತಸರಸಿಜವನವೇ॥
ತಂಡವರಂ ನಾಟ್ಯನಮಿ । ತ್ತಂಡಿ ಯೆನಿಪ್ಪೊರ್ವ ನಿರ್ಪನೀಶ್ವರಭಕ್ತಂ ॥ ॥೨೨॥

---

ಉಮೇಶ! ನಿನ್ನ, ಪದಪದ್ಮಸೇವಾಸನ್ನುತಿಸಾಮ್ರಾಜ್ಯಂ- ಪಾದಕಮಲವಂ ಸೇವಿಸುವದು ಸ್ತೋತ್ರಮಂಮಾಡುವದೆಂಬ ದೊರೆತನವು, ಎನಗೆ, ತೀವಿರೆ- ಪ್ರಾಪ್ತವಾಗಿರಲು, ಪೆರತೊಂದು, ಎರೆವ- ಬೇಡುವ, ವರಮಾವುದು? ಅದರಿಂ- ಆದುದರಿಂದ, ನೀಂ, ಈವ, ಅನ್ಯವರಮಂ, ಒಲ್ಲೆಂ. ... ... ॥೧೮॥

ಮೃಡ, ಕೇಳ್, ಕೈಲಾಸಂ, ಪೊಡವಿಗೆ- ಭೂಮಿಗೆ, ಅತಿಶಯದ, ದುರ್ಗ್ಗಂ- ಅನ್ಯರಿಂ ಹೊಂದುವದಕ್ಕಸಾಧ್ಯವಾದದ್ದು, ಅಲ್ಲಿ, ಬಾಳ್ವುದಂ- ಬದುಕುವದನ್ನು, ಉಳಿದು-ಬಿಟ್ಟು, ಬಡವನವೋಲ್, ಈಯಡವಿಯೊಳ್, ಇರ್ಪುದು, ಯುಕ್ತಮೆ- ಯೋಗ್ಯವಾದದ್ದೇ? ಅಲ್ಲಿಗೆ- ಆ ಕೈಲಾಸಕ್ಕೆ, ಪೋಪಂ- ಹೋಗೋಣ, ಜವದಿಂ- ಶೀಘ್ರವಾಗಿ, ಏಳ್. ... ... ... ... ॥೧೯॥

ಎಂಬ, ಅನಿತರೊಳ್- ಅಷ್ಟರಲ್ಲಿ, ಬಂದ, ನವೀನಮಣಿಮಯಪುಷ್ಪಕಮಂ-ಹೊಸರನ್ನದ ದೇವಯಾನವನ್ನು, ಅವಂ- ಆ ಕಲಿಯಾರನು, ಅಭವನೊಡನೆ, ಏರಿ-ಹತ್ತಿ, ಮೃಡಾಗಾರಸಹಿತಂ- ದೇವಸ್ಥಾನಸಹಿತವಾಗಿ, ಕೈಲಾಸಕ್ಕೆ, ತಳರ್ದು- ಹೊರಟು, ಅಲ್ಲಿ, ಇರುತ್ತಂ,ಇರೆ,ನಿರೀಕ್ಷಿಸಿ. * * * * * * *

ಆಲೋಕೈಕಮಹೇಶಂ- ಆ ಲೋಕಗಳೆಲ್ಲಕ್ಕೂ ಒಬ್ಬನೇ ಸ್ವಾಮಿಯಾದ, ಪಿನಾಕಿ- ಪಿನಾಕನಾಮಕವಾದ ಧನುಸ್ಸುಳ್ಳ ಶಿವನು, ಆಕಲಿಯಾರಾಖ್ಯನಂ, ಒಲ್ದು, ಗಣಾನೀಕದೊಡಂ- ಪ್ರಮಥಗಣಗಳೊಡನೆ,ಕೊಂಡಾಡಿ, ಐದೆ, ಪೊಗಳ್ದು, ಸುರರ್, ಪೊಗಳೆ, ನಿತ್ಯನಿಜಪದಮಿತ್ತಂ- ಶಾಶ್ವತವಾದ ತನ್ನ ಸ್ಥಾನವನ್ನುಕೊಟ್ಟನು, (ಅಂದಗೆ ಸಾಮೀಪ್ಯವಂ ಕೊಟ್ಟನು) ... ... ... ॥೨೦॥

ನಾಟ್ಯನಮಿತ್ತಂಡಿಯ ಕಥೆ.

ಎಂದು, ಇಂತು, ಉದಾರಮತಿ- ಉತ್ಕೃಷ್ಟವಾದ ಬುದ್ಧಿಯುಳ್ಳ, ಬಸವರಾಜಂ, ದೀಪದಕಲಿಯ, ಚೆಂದದ, ಕಥನಮಂ, ಒರೆವುತೆ-ಹೇಳುತ್ತ, ಮತ್ತೊಂದು ಮೃಡಭಕ್ತಕಥನಮಂ, ಅಂದು, ಒರೆದಂ, ಎಂತೆಂದ್ಯಾಗೆ, ಎನೆ, ದರೆಯೊಳ್. ... ... ... ... ॥೨೧॥

ಆಕಾಂಚಿಯೊಳೆ, ಮಂಡಿತಮಹಿಮೆಯಂ- ಅಲಂಕೃತವಾದ ಮಹತ್ತ್ವವನ್ನು, ಇರದೆ- ತಪ್ಪದೆ, ಒಳಕೊಂಡು- ಹೊಂದಿ, ದುರಿತಸರಸಿಜವನವೇತಂಡವರಂ- ಪಾಪವೆಂಬ ಕಮಲದವನಕ್ಕೆ ದೊಡ್ಡಆನೆಯಾದ, ನಾಟ್ಯನಮಿತ್ತಂಡಿ, ಎನಿಪ್ಪ, ಓರ್ವಂ, ಈಶ್ವರಭಕ್ತಂ. ಇರ್ಪಂ. ... ... ॥೨೨॥

ವ ॥ ಆಮುಗ್ಧಭಕ್ತನೊಂದುದಿನ ಮೇಕಾಮ್ರನಾಥಾಲಯಕ್ಕೆಯ್ತಂದಲ್ಲಿ ಮಿಸುಪ ತಾಂಡವಮೂರ್ತಿಯ ಮೂರ್ತಿಯಂ ಕಂಡಾರ್ತಿವಟ್ಟು ನೋಡಿ ತಳಮಳಗೊಂಡು ಕಳವಳಿಸಿ ಮರುಗಿ ತತ್ಪೂಜಕನಪ್ಪ ಪಾರ್ವನಂ ಕರೆದವನೊಡನಿಂತೆಂದಂ ॥ * * * *

ಮತ್ತೇ ॥ ತನುಮೂದಾಣದೆ ಕೊಂಕಿದತ್ತುರುಗಿವತ್ತೀಮಧ್ಯಮೀವಕ್ತ್ರಜೀ । ವನಜಾತಂ ಬರೆತಿರ್ಪುದಯ್ಯೊ ನುಲಿಗೊಂಡತ್ತೀಕೊರಲ್ಪಾದಮೊಂ ॥ ದು ನಿತಾಂತಂ ನೆಗೆದಿರ್ಪುದಲ್ಲಿ ಮಗುಳೊಂದೂರಿರ್ಪುದೀಧಾತ್ರಿಯೊಳ್ । ನಿನಗೇವೇಳ್ದಪೆ ನೀಂ ಶಿರಂ ಕೆಲಕೆ ಬಾಗಿತ್ತಕ್ಕಟೀಪಾಣಿಗಳ್ ॥ ... ... ... .. ॥೬೩॥

ಕಂ ॥ ಕೆಲಕೆಲಕೆ ಕೊಂಕಿನೂಂಕಿದು । ವಲರ್ಗಣ್ದಕ್ಕಾಲಿವೀಳ್ದುವೀಜಡೆಮುಡಿ ಬ ॥ ಟ್ಟೊಲೆದಪ್ಪುದಿದಾವರೋಗಂ । ಬಲಿದುದು ಪಶುಪತಿಗೆ ಪೇಳ್ವುದೆನಗೀಗಳ್ ॥ ॥೬೪॥

ವ ॥ ಎನೆ ಕೇಳ್ದಾಸಿತಗಪಾರ್ವನಂತಸ್ಸ್ಮಿತನಾಗಿ ಗಂಗಾಧರಂಗೆ ಮಹಾವಾತರೋಗಂ ಸಮನಿಸಿದುದದರಿಂ ನೋಡಲಿಂತಾದುದೆಂದುಸಿರೆ ಭಕ್ತಂ ಕೇಳ್ದಡವಳಲ್ಗೊಂಡೀರುಜೆ ಮಾಣ್ಬಂತೆಗೆಯ್ವರೊಳರೆ ಯೆನಲೊಡಮಾನೆ ಮಾಣ್ಬಂತೆಗೆಯ್ಯಲ್ಬಲ್ಲೆಂ ನೆನೆ ಬಾಯ್ವಿಡುತಾತಂಗಿಂತೆಂದಂ ॥ * * * * * * * * * * * * *

---

ಆಮುಗ್ಧಭಕ್ತಂ, ಒಂದುದಿನಂ, ಏಕಾಮ್ರನಾಥಾಲಯಕ್ಕೆ- ಏಕಾಮ್ರನಾಥೇಶ್ವರನ ದೇವಸ್ಥಾನಕ್ಕೆ, ಎಯ್ತಂದು, ಅಲ್ಲಿ, ಮಿಸುಪ, ತಾಂಡವಮೂರ್ತಿಯ, ಮೂರ್ತಿಯಂ- ಶರೀರವನ್ನು, ಕಂಡು, ಆರ್ತಿವಟ್ಟು- ಮನೋವ್ಯಥೆಯಂ ಹೊಂದಿ, ನೋಡಿ, ತಳಮಳಗೊಂಡು- ವ್ಯಾಕುಲವಿಶಿಷ್ಟನಾಗಿ, ಕಳವಳಿಸಿ- ಸಂಕಟಪಟ್ಟು, ಮರುಗಿ- ದುಃಖಿಸಿ, ತತ್ಪೂಜಕನಪ್ಪ- ಆ ದೇವರಂ ಪೂಜಿಸುವ, ಪಾರ್ವನಂ- ಹಾರ್ವನನ್ನು, ಕರೆದು, ಅವನೊಡನೆ, ಇಂತೆಂದಂ. * * * * * * * * * * * * * * *

ತನು- ದೇಹವು, ಮೂದಾಣದೆ- ಮೂರುಸ್ಥಲದಲ್ಲಿ, ಕೊಂಕಿದತ್ತು- ಡೊಂಕಾಯಿತು, ಈಮಧ್ಯಂ-ಈ ನಡುವು, ಉರುಗಿದತ್ತು- ತಿರುಗಿಕೊಂಡಿತು, ಈವಕ್ತ್ರಜೀವನಜಾತಂ- ಈ ಮುಖದ ರಸವೆಲ್ಲವೂ, ಬರೆತು- ಒಣಗಿ, ಇರ್ಪುದು; ಅಯ್ಯೋ! ಈಕೊರಲ್, ನುಲಿಗೊಂಡತ್ತು ನುಲಿದುಕೊಂಡಿತು; ಒಂದುಪಾದಂ, ನಿತಾಂತಂ- ಅತ್ಯಂತವಾಗಿ, ನೆಗೆದು- ಮೇಲಕ್ಕೆದ್ದು, ಇರ್ಪುದು, ಅಲ್ಲಿ, ಮಗುಳೊಂದು- ಮತ್ತೊಂದು ಪಾದವು, ಧಾತ್ರಿಯೊಳ್- ಭೂಮಿಯಲ್ಲಿ, ಊರಿ,ಇರ್ಪುದು; ನಿನಗೆ, ಏವೇಳ್ದಪೆಂ-ಏನುಹೇಳಲಿ! ಈಶಿರಂ- ಈತಲೆಯು, ಕೆಲಕೆ- ಒಂದುಕಡೆಗೆ, ಬಾಗಿತ್ತು- ಬಗ್ಗಿತು; ಅಕ್ಕಟ! ಈಪಾಣಿಗಳ್- ಈಕೈಗಳು. ... ॥೬೩॥

ಕೆಲಕೆಲಕೆ- ಒಂದೊಂದುಕಡೆಗೆ, ಕೊಂಕಿ- ಡೊಂಕಾಗಿ, ನೂಂಕಿದವು- ಚಾಚಲ್ಪಟ್ಟಿರುವವು, ಅಲರ್ಗಣ್- ಪುಷ್ಪದಂತಿದ್ದ ಕಣ್ಣುಗಳು, ದಕ್ಕಾಲಿವೀಳ್ದವು-ಜೋಲುಬಿದ್ದವು,ಈಜಡೆಮುಡಿ, ಬಿಟ್ಟು- ಬಿಚ್ಚಿಕೊಂಡು, ಒಲೆದಪುದು- ಅಳ್ಳಾಡುವದು; ಪಶುಪತಿಗೆ, ಇದಾವರೋಗಂ, ಬಲಿದುದು- ವೃದ್ಧಿಯನ್ನೈದಿತು? ಇದಂ, ಎನಗೆ, ಈಗಳ್, ಪೇಳ್ವುದು. ... ... ... ... ॥೬೪॥

ಎನೆ, ಆಸಿತಗಪಾರ್ವಂ- ವಂಚಕನಾದ ಆ ಹಾರ್ವನು, ಕೇಳ್ದು, ಅಂತಸ್ಸ್ಮಿತನಾಗಿ- ಒಳಗೆ ಮುಗುಳ್ನಗೆನಕ್ಕು, ಗಂಗಾಧರಂಗೆ, ಮಹಾವಾತರೋಗಂ- ಅಧಿಕವಾದ ವಾಯುರೋಗವು, ಸಮನಿಸಿದುದು- ಪ್ರಾಪ್ತವಾಯ್ತು, ಅದರಿಂ, ನೋಡಲ್, ಇಂತು, ಆದುದು; ಎಂದು, ಉಸಿರೆ- ಹೇಳಲು, ಭಕ್ತಂ, ಕೇಳ್ದು, ಅಡವಳಲ್ಗೊಂಡು- ದುಃಖವಂ ಹೊಂದಿ, ಈರುಜೆ- ಈ ರೋಗವು, ಮಾಣ್ಬಂತೆಗೆಯ್ವರ್- ಬಿಟ್ಟುಹೋಗುವಂತೆ ಮಾಡುವವರು,ಒಳರೆ-ಇರ್ಧಾರೆಯೋ? ಎನಲ್, ಒಡಂ- ಕೂಡಲೇ, ಆನೆ, ಮಾಣ್ಬಂತೆಗೆಯ್ಯಲ್- ಬಿಟ್ಟುಹೋಗುವಂತೆ ಮಾಡುವದಕ್ಕೆ, ಬಲ್ಲೆಂ, ಎನ್ನನೆ, ಬಾಯ್ವಿಡುತೆ, ಆತಂಗೆ-ಆ ಹಾರ್ವನಿಗೆ,ಇಂತೆಂದಂ. * *

ಕಂ ॥ ಎನಗುಳ್ಳರ್ಥಮನನಿತುಂ । ನಿನಗಿತ್ತಪೆನೀಗಳೀಗದಂ ಮಾಣ್ದೊಡೆ ಮ ॥
ದ್ವನಿತೆಯುಂ ಮಣುಗನುಂ ಮಾನುಂ । ನಿನಗೆ ವಲಂ ತೊಳ್ತರಾಗಿ ಸೇವಿಪೆವನಿಶಂ ॥೧೫॥

ವ ॥ ಎಂದು ಚೆಲ್ಲವೆತ್ತಾ ಪಾರ್ವನನೆಲ್ಲಂದದಿ ನೊಡಂಬಡಿಸಿ ನಿಜಾಲಯದೊಳುಳ್ಳ ಸರ್ವಸ್ವಮಂ ವಿಕ್ರಯಂಗೆಯ್ದೊದವಿಸಿದನಿತುಂಧನಮುಮಂ ಕೊಟ್ಟು ಬೆಜ್ಜಂಗೆಯ್ವುದೆನೆ ತದ್ಧನಮನವಂ ಕೊಂಡು ಸಡಗರಿಸಿ ಮತ್ತಾರುಂ ಕಾಣದಂತೆ ರಹಸ್ಯಸ್ಥಾನದೊಳೇರಂಡಾರ್ಕಾದಿಪರ್ಣಚಿತ್ರಮೂಲಾದಿವಿಚಿತ್ರಮೂಲಿಕಾದ್ಯೌಷಧಂಗಳ್ವೆರಸಿ ವಾತಹರತೈಲಮಂ ಕಾಯಿಸಿ ತಂದು ತದಂಗಕ್ಕೆ ಲೇಪಿಸಿಯುಂ ಡೊಂಕಿದೆಡೆಯ ಸಂದುಸಂದುಗಳೊಳ್ಕಟ್ಟಿ ಪೊಟ್ಟಣಂಗಳಂ ಕಾಯ್ಸಿ ಪಿಡಿದೊತ್ತಿಯುಂ ವಾತವಾರಣೌಷಧಸಹಸಂತಪ್ತಸಲಿಲಂಗಳನಭಿಷೇಚನಮೆಸಗಿಯುಮಿಂತು ಪಲಕೆಲವುದಿವಸಂ ನಾನಾವಿಧಚಿಕಿತ್ಸೆಯನೊಡರ್ಚುತಿರೆ ಶಿವನೊಡಲ್ಗುಣಮಿಲ್ಲದೆಂದಿನಂತಿರೆ ನಾಪ್ಯನಮಿತ್ತಂಡಿ ಕಂಡುಬಸವಳಿದು ಬಾಯಾರಿಮರುಗಿ॥

ಕಂ॥ ಗುಣಮನಿತಿಲ್ಲಂ ಕೇಳ್ ಬ್ರಾ । ಹ್ಮಣ ನಿನ್ನೀಬೆಜ್ಜದಿಂದೆ ಶೂಲಿಗದೇಂಕಾ ॥
ರಣಮೆನೆ ರೋಗಮಸಾಧ್ಯಂ । ಗುಣನಿಧಿ ವೈದ್ಯರ್ಗೆ ದೆಂದು ನುಡಿದಂ ಪಾರ್ವಂ ॥೧೬॥

ಎನಗೆ,ಉಳ್ಳ- ಇರುವ,ಅನಿತುಂಧನಮಂ-ಅಷ್ಟು ಹಣವನ್ನೂ,ಈಗಳ್, ನಿನಗೆ, ಇತ್ತಪೆಂ-ಕೊಡುವೆನು, ಈಗದಂ- ಈ ರೋಗವು,ಮಾಣ್ದೊಡೆ- ಬಿಟ್ಟುಹೋದರೆ,ಮದ್ವನಿತೆಯುಂ-ನನ್ನ ಹೆಂಡತಿಯೂ,ಅಣುಗನುಂ-ಮಗನೂ, ಆನುಂ- ನಾನೂ, ನಿನಗೆ, ವಲಂ- ನಿಶ್ಚಯವಾಗಿ, ತೊಳ್ತರ್- ದಾಸರು, ಆಗಿ,ಅನಿಶಂ, ಸೇವಿಪೆವ್.

ಎಂದು, ಚೆಲ್ಲವೆತ್ತ- ನಂಬಿಸಿ ತಿನ್ನುವ, ಆಪಾರ್ವನಂ, ಎಲ್ಲಂದದಿಂ- ಎಲ್ಲಾರೀತಿಯಿಂದಲೂ, ಒಡಂಬಡಿಸಿ- ಸಮ್ಮತಿಪಡಿಸಿ, ನಿಜಾಲಯದೊಳ್, ಉಳ್ಳ, ಸರ್ವಸ್ವಮಂ- ಸಮಸ್ತಸ್ವತ್ತನ್ನೂ, ವಿಕ್ರಯಂಗೆಯ್ದು- ಮಾರಿ, ಒದವಿಸಿದ- ಸೇರಿಸಿದ, ಅನಿತುಂಧನಮುಮಂ- ಅಷ್ಟು ಹಣವನ್ನೂ, ಕೊಟ್ಟು, ಬೆಜ್ಜಂಗೆಯ್ವುದು- ಔಷಧವಂ ಮಾಡುವದು, ಎನೆ, ಅವಂ- ಆ ಪಾರ್ವನು, ತದ್ಧನಮಂ, ಕೊಂಡು, ಸಡಗರಿಸಿ, ಮತ್ತೆ,ಇನ್ನು, ಆರುಂ, ಕಾಣದಂತೆ, ರಹಸ್ಯಸ್ಥಾನದೊಳ್- ಗುಟ್ಟಾದ ಸ್ಥಲದಲ್ಲಿ, ಏರಂಡಾ.......ಳ್ವೆರಸಿ–ಏರಂಡ- ಅರಳು, ಅರ್ಕ- ಯಕ್ಕ, ಇವುಗಳೇ, ಆದಿ- ಮೊದಲಾದವುಗಳ, ಪರ್ಣ- ಎಲೆಗಳೇನು, ಚಿತ್ರಮೂಲ- ಚಿತ್ರಮೂಲವೆಂಬ ಬೇರೇ, ಆದಿ-ಮೊದಲಾದ, ವಿಚಿತ್ರ- ನಾನಾವಿಧವಾದ, ಮೂಲಿಕಾ-ಮೂಲಿಕೆಗಳೇ, ಆದಿ– ಮೊದಲಾದ, ಔಷಧಂಗಳ್ವೆರಸಿ- ಔಷಧಗಳೊಡನೆ ಕೂಡಿ, ವಾತಹರತೈಲಮಂ- ವಾಯುರೋಗವಂ ಹೋಗಲಾಡಿಸುವ ಎಣ್ಣೆಯನ್ನು, ಕಾಯ್ಸಿ, ತಂದು, ತದಂಗಕ್ಕೆ- ಆ ತಾಂಡವಮೂರ್ತಿಯ. ದೇಹಕ್ಕೆ, ಲೇಪಿಸಿಯುಂ. ಕೊಂಕಿದ- ಡೊಂಕಾದ, ಎಡೆಯ- ಸ್ಥಲದ, ಸಂದುಸಂದುಗಳೊಳ್, ಪೊಟ್ಟಣಂಗಳಂ- ಬಟ್ಟೆಯ ಪೊಟ್ಟಣಗಳನ್ನು, ಕಟ್ಟಿ, ಕಾಯ್ಸಿ- ಬೆಂಕಿಯಲ್ಲಿ ಕಾಸಿ, ಪಿಡಿದು, ಒತ್ತಿಯುಂ; ವಾತವಾರಣೌಷಧಸಹಸಂತಪ್ತಸಲಿಲಂಗಳಂ- ವಾಯುರೋಗವಂ ಹೋಗಲಾಡಿಸುವ ಔಷಧಂಗಳೊಡನೆ ಕಾಸಿದ ನೀರನ್ನು, ಅಭಿಷೇಚನಮೆಸಗಿಯುಂ- ಸ್ನಾನಮಾಡಿಸಿಯೂ, ಇಂತು, ಪಲಕೆಲವುದಿವಸಂ, ನಾನಾವಿಧಚಿಕಿತ್ಸೆಯಂ- ಅನೇಕಪ್ರಕಾರವಾದ ರೋಗಹರಣಕವಾದ ಪ್ರತಿಕ್ರಿಯೆಯನ್ನು, ಒಡರ್ಚುತೆ- ಮಾಡುತ್ತ, ಇರೆ, ಶಿವನ, ಒಡಲ್– ದೇಹವು, ಗುಣಂ, ಇಲ್ಲದೆ, ಎಂದಿನಂತೆ, ಇರೆ, ಆ ನಾಪ್ಯನಮಿತ್ತಂಡಿ, ಕಂಡು, ಬಸವಳಿದು- ಪರವಶನಾಗಿ, ಬಾಯಾರಿ- ಬಾಯೊಣಗಿ, ಮರುಗಿ- ದುಃಖಪಟ್ಟು. * * * * * * * * * * * * * * *

ಬ್ರಾಹ್ಮಣ! ಕೇಳ್, ನಿನ್ನ, ಬೆಜ್ಜದಿಂದೆ- ವೈದ್ಯದಿಂದ, ಶೂಲಿಗೆ, ಅನಿತುಗುಣಂ-ಇಷ್ಟುಗುಣವೂ,ಇಲ್ಲಂ, ಇದೇಂಕಾರಣಂ? ಎನೆ, ಪಾರ್ವಂ, ಗುಣನಿಧಿ- ಸದ್ಗುಣಗಳಿಗೆ ನಿಕ್ಷೇಪನಾದವನೇ! ಇದುರೋಗಂ, ವೈದ್ಯರ್ಗೆ, ಅಸಾಧ್ಯಂ, ಎಂದು, ನುಡಿದಂ. ... ... ... ... ॥೧೬॥

ವ ॥ ಎಂಬುದು ಮಾಭಕ್ತಂ ಕೇಳ್ದು ಹಾ ಎಂದು ಹಮ್ಮದಂಬೋಗಿ ಮಗುಳ್ದು ಮೆಲ್ಲನೆಳ್ಚತ್ತು ಮನಂನೊಂದು ಮರುಗಿ ॥ * * * * * * * * *

ಕಂ ॥ ಮಾಣಮಗಡರೋಗವಿದಂ । ಪ್ರಾಣಂಗಳೆಯದಿರನೆಂತಿದಂ ನೋಳ್ಪೆಂ ಮ ॥
ತ್ಪ್ರಾಣಮನದರಿಂ ಮುನ್ನಮೆ । ಮಾಣದೆ ಬಿಟ್ಟಪೆ ನೆನುತ್ತೆ ನೆನೆದಂ ಭಕ್ತಂ ॥೨೭॥

ವ ॥ ಅಂತು ನೆನೆದು ನಿಶ್ಚೈಸಿ ಧೈರ್ಯಯುತನಾಗಿ ಕರಾಳಖಡ್ಗಮಂ ಕರತಳದಿಂ ಪಿಡಿದು ಜಡಿದು ಜವದಿಂ ತನ್ನ ಕೊರಲ್ಗಮರ್ಚಿ ಶಿವಂಗಿದಿರ್ಚಿ ನಿಂದು ॥ * * * *

ಕಂ॥ ಗರಿಲನೆ ಕೊರೆಯದ ಮುನ್ನಂ । ಶಿರಮಂ ಶಂಕರನದೇಂ ಕೃಪಾಳುವೊ ಹೋ ॥
ಎಂ ॥ ದುರವಣಿಸಿ ನಿಲಿಸಿ ತತ್ಕರ । ಕರಾಳಕರವಾಳಮಂ ಕರಂ ಬಿಸುಟಾಗಳ್ ॥ ॥೨೮॥

ಮ॥ ಸ್ರ॥ ಸೆಳೆಮಿಂಚಂ ಪೋಲ್ವ ಬಂಬಲ್ಜಡೆ ನಗೆಮೊಗ ಮರ್ಕೇಂದುವಹ್ನಿತ್ರಿಣೇ
ತ್ರಂ । ವಿಳಸಚ್ಚಂದ್ರಾರ್ಧಮಭ್ರಾಪಗೆ ಮಿಸುಪಜಟಾಜೂಟ ಮುಗ್ರಾಜಿನಂ ಪಾಂ ॥ ಜು
ಳವಸ್ತ್ರಂ ಸರ್ಪಹಾರಂ ವರಪರಶುಮೃಗಾಭೀತಿಭೃತ್ಪಾಣಿಗಳ್ಕಂ । ಗೊಳಿಸುತ್ತಂ ತೋ
ರೆತಾನೊಪ್ಪಿದ ನತುಳಕಳಾಪೂರ್ಣಕೋಶಂ ಮಹೇಶಂ॥ ... ... ॥೨೯॥

ವ॥ಇಂತುಮಾರಮಣಂ ಪ್ರಸನ್ನನಾಗಿ ಮುಗ್ಧಭಕ್ತನಂಮುಂಡಾಡಿಮುದ್ದುಗೆಯ್ದು॥

---

ಎಂಬುದುಂ- ಹೀಗೆಹೇಳುತಲು, ಆಭಕ್ತಂ, ಕೇಳ್ದು, ಹಾ! ಎಂದು, ಹಮ್ಮದಂಬೋಗಿ- ಮೂರ್ಛೆಯಂ ಹೊಂದಿ, ಮಗುಳ್ದು- ಪುನಃ, ಮೆಲ್ಲನೆ,ಎಳ್ಚತ್ತು-ಎಚ್ಚರವಂಹೊಂದಿ, ಮನಂನೊಂದು, ಮರುಗಿ. * *

ರೋಗಂ, ಮಾಣದುಗಡ- ಬಿಡುವದಿಲ್ಲವಷ್ಟೆ! ಇವಂ- ಈಶಿವನು, ಪ್ರಾಣಂಗಳೆಯದೆ- ಪ್ರಾಣವನ್ನು ಬಿಡದೆ, ಇರಂ- ಇರುವದಿಲ್ಲ; ಎಂತು, ನೋಳ್ಪೆಂ- ನೋಡುವೆನು; ಅದರಿಂ, ಮತ್ಪ್ರಾಣಮಂ- ನನ್ನಪ್ರಾಣ ವನ್ನು, ಮುನ್ನಮೆ- ಮೊದಲೇ, ಮಾಣದೆ- ತಪ್ಪದೆ, ಬಿಟ್ಟಪೆಂ- ಎನುತ್ತೆ, ಭಕ್ತಂ, ನೆನೆದಂ- ಯೋಚಿಸಿದನು.

ಅಂತು, ನೆನೆದು, ನಿಶ್ಚೈಸಿ, ಧೈರ್ಯಯುತಂ,ಆಗಿ, ಕರಾಳಖಡ್ಗಮಂ- ಭಯಂಕರವಾದ ಕತ್ತಿಯನ್ನು, ಕರತಳದಿಂ- ಹಸ್ತಪ್ರದೇಶದಿಂದ, ಪಿಡಿದು, ಜಡಿದು- ಅಳ್ಳಾಡಿಸಿ, ಜವದಿಂ– ಶೀಘ್ರವಾಗಿ, ತನ್ನ, ಕೊರಲ್ಗೆ- ಕತ್ತಿಗೆ, ಅಮರ್ಚಿ- ಸೇರಿಸಿ, ಶಿವಂಗೆ, ಇದಿರ್ಚಿ- ಇದಿರಾಗಿ, ನಿಂದು. * * * * * * * *

ಗರಿಲನೆ- ವೇಗವಾಗಿ, ಶಿರಮಂ, ಕೊರೆಯದ, ಮುನ್ನಂ, ಶಂಕರಂ, ಅದೇಂಕೃಪಾಳುವೊ- ಅದೇನುದ ಯಾಶಾಲಿಯೋ, ಹೋ! ಎಂದು, ಉರವಣಿಸಿ- ಸನ್ನದ್ಧನಾಗಿ, ನಿಲಿಸಿ, ತತ್ಕರಕರಾಳಕರವಾಳಮಂ- ಅವನಕೈಯ್ಯಲ್ಲಿರುವ ಭಯಂಕರವಾದ ಕತ್ತಿಯನ್ನು, ಕರಂ, ಬಿಸುಟು- ಬಿಸಾಡಿ, ಆಗಳ್. ... ॥೨೮॥

ಸೆಳೆಮಿಂಚಂ- ಸೂಕ್ಷ್ಮವಾದ ಮಿಂಚನ್ನು, ಪೋಲ್ವ, ಬಂಬಲ್ಜಡೆ- ಗುಂಪಾದಜಡೆ, ನಗೆಮೊಗಂ-ನಗುವಿಕೆಯಿಂ ಕೂಡಿದ ಮುಖ, ಅರ್ಕೇಂದುವಹ್ನಿತ್ರಿಣೇತ್ರಂ– ಸೂರ್ಯ ಚಂದ್ರ ಅಗ್ನಿಗಳ ಮುಕ್ಕಣ್ಣುಗಳು, ವಿಳಸಚ್ಚಂದ್ರಾರ್ಧಂ- ಪ್ರಕಾಶಿಸುವ ಅರ್ಧ ಚಂದ್ರ, ಅಭ್ರಾಪಗೆ- ಆಕಾಶಗಂಗೆ, ಮಿಸುಪ ಜಟಾಜೂಟಂ- ಮನೋಹರವಾದ ವಸ್ತ್ರ, ಸರ್ಪಹಾರಂ, ಪರಶುಮೃಗಾಭೀತಿಭೃತ್ಪಾಣಿಗಳ್- ಖಡ್ಗ ಜಿಂಕೆ ಅಭಯದಾನಗಳನ್ನು ಧರಿಸಿರುವ ಹಸ್ತಗಳು, ಕಂಗೊಳಿಸುತ್ತಂ, ತೋರೆ, ಅತುಳಕಳಾಪೂರ್ಣಕೋಶಂ- ಅಸದೃಶವಾದವಿದ್ಯೆಗಳಿಗೆ ಸಂಪೂರ್ಣವಾದ ಬೊಕ್ಕಸನಾದ, ಮಹೇಶಂ, ತಾಂ, ಒಪ್ಪಿದಂ. ... ... ॥೨೯॥

ಇಂತು, ಉಮಾರಮಣಂ, ಪ್ರಸನ್ನಂ, ಆಗಿ, ಮುಗ್ಧಭಕ್ತನಂ, ಮುಂಡಾಡಿ- ತಬ್ಬಿ ತೂಗಾಡಿ, ಮುದ್ದುಗೆಯ್ದು. * * * * * * * * * * * * * * * * *

ಕಂ ॥ ಎರೆ ವರಮು ನೀವೆನೆನೆ ಮು । ಗ್ಧರ ದೇವ ಯಥೇಚ್ಛಮೆಂದು ಬೆಸಸೆ ಗಿರೀ
ಶಂ ॥ ಶರಣಂ ತಚ್ಚರಣನವಾಂ । ಬುರುಹದ್ವಯಕೆರಗಿ ಭಕ್ತಿಯಿಂದಿಂತೆಂದಂ ॥ ॥೩೦॥

ಕಂ॥ ವರಮಂತಿರ್ಕ್ಕದು ನಿನ್ನಯ । ಶರೀರಮಿಂತೇಕೆ ಕೊಂಕಿದುದು ಬಂದತಿದು ॥ ಸ್ತ
ರರೋಗ ಮಾವುದಿಂತಿದು । ಪರಿಹರಿಪುದು ನನ್ನಿ ವೇಳ್ವುದೆನಗೆ ಗಿರೀಶ ॥ ॥೩೧॥

ಕಂ ॥ ಎನೆ ನಗುತೆ ಶಂಭು ನಿನ್ನಯ । ಘನಭಕ್ತಿಯೆ ಬೆಜ್ಜಮಾಯ್ತು ರೋಗಮ
ದಿಲ್ಲಿ ॥ ಲ್ಲೆನುತಂ ತಾಂಡವಮೂರ್ತಿಯ । ತನುವಂ ತಾಂ ಸಸಿನೆಗೆಯ್ದು ಮಗೋವಿತ್ತಂ ॥

ವ॥ ಆಗಳಾಭಕ್ತಂ ನೇರಿತ್ತಾದ ಶಿವನ ವಿಗ್ರಹಮಂ ಕಂಡೆನ್ನಾಳ್ದಂಗೆ ರೋಗಂ ಮಾ
ಣ್ದುದಾಂ ಬರ್ದುಂಕಿದೆ ನೆಂದಳವಿಗಳಿದಾನಂದಮ ನೊಳಕೊಂಡು ಮಗುಳ್ದು ಮಣಿದು ।

ಕಂ ॥ ಮುನ್ನೇಂಕಾರಣ ಮಕ್ಕಟ । ನಿನ್ನಂಗಂ ಕೊಂಕುವೆತ್ತು ಸೆಡೆದುರುಗಿದುದಿಂ॥
ದೆನ್ನೊಡನೆ ನನ್ನಿವೇಳೆನೆ । ಪನ್ನಗಧರ ನಿಂತು ನಾಟ್ಯಮಾಡಿದೆನೆಂದಂ ॥ ... ॥೩೨॥

ವ॥ ಎನೆ ಕೇಳ್ದು ನಾಟ್ಯನಮಿತ್ತಂಡಿ ಕೌತುಕಂಬಟ್ಟು ನಾಟ್ಯಮ ನೀಗಳಾಂ ನೋ
ಡಿದಪೆಂ ತೋರಿಮೆನೆ ಶಿವಂ ತನ್ನ ತಾಂಡವಮ ನವಂಗೆ ತೋರಲುಜ್ಜುಗಿಸಿ ॥ * * *

ಚಂ ॥ ಪುಲಿದೊವಲಂದವಾಳ್ದ ಪೊಸಕಾಸೆ ವಿರಾಜಿಸೆ ಮತ್ತದೈತ್ಯಸಂ । ಕುಲದ ಶಿ

---

ಎಲೆ ಮುಗ್ಧರದೇವ! ವರಮಂ, ಯಥೇಚ್ಛಂ-ಇಷ್ಟವಾದಷ್ಟನ್ನು, ಎರೆ-ಬೇಡು, ಈವೆಂ; ಎಂದು, ಗಿರೀಶಂ, ಬೆಸಸೆ- ಆಜ್ಞಾಪಿಸಲು, ಶರಣಂ, ತಚ್ಚರಣನವಾಂಬುರುಹದ್ವಯಕೆ, ಎರಗಿ, ಭಕ್ತಿಯಿಂದೆ, ಇಂತು,ಎಂದಂ. ... ... ... ... ... ॥೩೦॥

ಅದುವರಂ,ಇಂತು;ಇರ್ಕೆ-ಇರಲಿ; ನಿನ್ನಯ, ಶರೀರಂ, ಇಂತು,ಏಕೆಕೊಂಕಿದುದು-ಏಕೆಡೊಂಕಾಯ್ತು? ಬಂದ, ಅತಿದುಸ್ತರರೋಗಂ- ಅತ್ಯಸಾಧ್ಯವಾದರೋಗವು, ಆವುದು? ಇಂತು,ಇದು, ಪರಿಹರಿಪುದು-ಪರಿಹರಿಸಲ್ಪಡತಕ್ಕದ್ದು, ಗಿರೀಶ! ಎನಗೆ, ನನ್ನಿವೇಳ್ವುದು- ನಿಶ್ಚಯವಂಹೇಳಬೇಕು. ... ॥೩೧॥

ಎನೆ, ಶಂಭು, ನಗುತೆ, ನಿನ್ನಯ, ಘನಭಕ್ತಿಯೆ-ಸಾಂದ್ರವಾದಭಕ್ತಿಯೇ, ಬೆಜ್ಜಂ-ಔಷಧವು, ಆಯ್ತು, ಅದುರೋಗಂ, ಇಲ್ಲ ಇಲ್ಲ, ಎನುತಂ, ತಾಂಡವಮೂರ್ತಿಯ, ತನುವಂ, ತಾಂ, ಸಸಿನೆಗೆಯ್ದು- ನೆಟ್ಟಗೆಮಾಡಿ, ಅವಂಗೆ- ಆಭಕ್ತನಿಗೆ, ಬಲವಿತ್ತಂ- ಇಷ್ಟವಂನೆರವೇರಿಸಿದನು. ... ... ॥೩೦॥

ಆಗಳ್, ಆಭಕ್ತಂ, ನೇರಿತ್ತಾದ- ನೆಟ್ಟಗಾದ, ಶಿವನ,ವಿಗ್ರಹಮಂ- ಶರೀರವನ್ನು, ಕಂಡು, ಎನ್ನಆಳ್ದಂಗೆ- ನನ್ನಸ್ವಾಮಿಗೆ, ರೋಗಂ, ಮಾಣ್ದುದು- ಬಿಟ್ಟುಹೋಯ್ತು,ಆಂ, ಬರ್ದುಂಕಿದೆಂ,ಎಂದು, ಅಳವಿಗೆಳೆದ- ಗುಣಾತೀತವಾದ, ಆನಂದಮಂ, ಒಳಕೊಂಡು-ಹೊಂದಿ, ಮಗುಳ್ದು- ಪುನಃ, ಮಣಿದು- ನಮಸ್ಕರಿಸಿ.

ಅಕ್ಕಟ! ಮುನ್ನ, ನಿನ್ನ, ಅಂಗಂ,ಏಂಕಾರಣಂ, ಕೊಂಕುವೆತ್ತು- ಡೊಂಕಾಗಿ, ಸೆಡೆದು- ಸೆಳೆತು, ಉರುಗಿದದು? ಇದು, ಎನ್ನೊಡನೆ, ನನ್ನಿವೇಳ್-ನಿಶ್ಚಯವಂಹೇಳು, ಎನೆ, ಪನ್ನಗಧರಂ, ಇಂತು, ನಾಟ್ಯಮಾಡಿದೆಂ. ... ... ... ... ... ... ॥೩೨॥

ಎನೆ, ನಾಟ್ಯನಮಿತ್ತಂಡಿ, ಕೇಳ್ದು, ಕೌತುಕಂಬಟ್ಟು- ಕುತೂಹಲಪಟ್ಟು, ಈಗಳ್, ಆಂ, ನಾಟ್ಯಮಂ, ನೋಡಿದಪೆಂ, ತೋರಿಂ- ತೋರಿಸಿರಿ,ಎನೆ, ಶಿವಂ, ತನ್ನ, ತಾಂಡವಮಂ, ನಾಟ್ಯವನ್ನು,ಅವಂಗೆ,ತೋರಲ್-ತೋರಿಸುವದಕ್ಕೆ,ಉಜ್ಜುಗಿಸಿ- ಪ್ರಯತ್ನಿಸಿ. * * * * * * * * * * *

ಪುಲಿದೊವಲ್- ಹುಲಿಯ ಚರ್ಮ, ಅಂದವಾಳ್ದ- ಅಂದವಾದ, ಪೊಸಕಾಸೆ, ವಿರಾಜಿಸೆ, ಮತ್ತದೈತ್ಯಸಂಕುಲದ, ಶಿರಂಗಳ್, ಎಂಬ, ಸರಗೆಜ್ಜೆಗಳ್, ಅಂಘ್ರಿಸರೋಜದೊಳ್- ಪಾದಕಮಲದಲ್ಲಿ, ಪಳಂಚೆ- ಬಂದ

ರುಗಳೆಂಬ ಸರಗೆಜ್ಜೆಗಳಂಘ್ರಿಸರೋಜದೊಳ್ಪಳ| ॥ಚಲಿದುಲಿವುತ್ತೆ ತೋರೆ ಡಮರುಸ್ಫುಟಧಾತ್ಕೃತಿ ಮೀರೆ ಬೆನ್ನಮೇ । ಲೊಲೆಯೆ ಜಟಾಳಿ ತುಳ್ಕೆದಿವಿಜಾಪಗೆ ತಾಂಡವಮಂ ನಿಮಿರ್ಚಿದಂ॥ ... ... ... ... ॥೩೪॥

ವ॥ ಆಗಳ್॥ ಕಂ॥ ಡಮರುಕರವಮಂ ಕೇಳ್ದಂ। ದಮರರ್ಸಡಗರಿಸುತ್ತೈದೆ ಹರಿಧಾತೃಮುಖರ್ ॥ಕ್ರಮದಿಂನರ್ತನವಾದ್ಯಮ । ನಮರ್ದಿರೆ ಬಾಜಿಸಿದ ರಾಮಹೇಶನ ಪೊರೆಯೊಳ್ ॥

ವ ॥ ಆವಾದ್ಯದ ಜತಿವಿಡಿದಂಗೋಪಾಂಗಭಂಗಿ ಸಂಗಳಿಸೆ ನಿಜಾಪಾಂಗವಲ್ಗನಕರತಳಚಲನಭ್ರೂಲತಾವಿಕ್ಷೇಪವಿಭ್ರಮಂಬಡೆದು॥ * * * * * * * * *

ಮ ॥ ಕಡೆಗಣ್ಮಿಂ ಚಮರಾಂಗನಾಜನದ ತದ್ವೀರೀರವಂ ತಳ್ತಬ । ಲ್ಗುಡುಗಾಕಾಶಮೆ ನೀರದಂ ಸುರಿವಮಂದಾರಪ್ರಸೂನಂಗಳೇ ॥ ಜಡಿಪಂ ಬಿತ್ತರವಾಗೆ ಮಾಣದಿದಿರೊಳ್ಭಕ್ತೇಂದ್ರನುತ್ಸಾಹಮಂ।ಪಡೆದೊಪ್ಪುತ್ತಿರೆ ನೀಲಕಂಠನಟನಂ ಚೆಲ್ವಾದುದಾವೇಳೆಯೊಳ್॥

ಕಂ॥ ಕಣಿತದ ಕೋಲಾಹಲದಿಂ । ದಣಿಗೆಟ್ಟುರುಳ್ದಪುದು ಗಗನ ಮೆಂಡಾಂಕೆಯನಿ। ಟ್ಟಣಕಮನಮರ್ಚಿ ಮೆರೆವ। ತ್ತಣಿಯರ ಮಭವಾಂಘ್ರಿದಂಡವೊಂದಂಬರದೊಳ್ ॥ ॥೩೭॥

---

ಕೊಂಡು ಸಂಘಟ್ಟಿಸಿ, ಅಲೆದು-ಪೀಡಿಸಿ, ಉಲಿವುತ್ತೆ- ಶಬ್ದವಂಮಾಡುತ್ತ,ತೋರೆ, ಡಮರುಸ್ಫುಟಧಾತ್ಕೃತಿ- ಡಮರುಗದ ವ್ಯಕ್ತವಾದ ಧಾ ಎಂಬಶಬ್ದವು, ಮೀರೆ- ಜಬ್ಬಾಗಲು, ಜಟಾಳಿ, ಬೆನ್ನಮೇಲೆ, ಒಲೆಯೆ- ಹೊರಳಾಡಲು, ದಿವಿಜಾಪಗೆ- ದೇವಗಂಗೆಯು, ತುಳ್ಕೆ- ತುಳುಕುತ್ತಿರಲು, ತಾಂಡವಮಂ, ನಿಮಿರ್ಚಿದಂ- ಮಾಡಿದನು. ... ... ... ... ... ॥೩೪॥

ಅಂದು, ಅಮರರ್- ದೇವತೆಗಳು, ಡಮರುಕರವಮಂ- ಡಮರುಗದ ಶಬ್ದವನ್ನು, ಕೇಳ್ದು, ಸಡಗರಿಸುತೆ, ಐದೆ, ಹರಿಧಾತೃಮುಖರ್- ವಿಷ್ಣು ಬ್ರಹ್ಮ ಮೊದಲಾದವರು, ಕ್ರಮದಿಂ, ನರ್ತನವಾದ್ಯಮಂ- ನಾಟ್ಯಕ್ಕೆ ಅನುಕೂಲವಾದ ತಾಳಾದಿ ವಾದ್ಯಗಳನ್ನು, ಅಮರ್ದಿರೆ- ಸೇರಿರುವಂತೆ, ಆಮಹೇಶನ, ಪೊರೆಯೊಳ್- ಸಮೀಪದಲ್ಲಿ, ಬಾಜಿಸಿದರ್. ... ... ... ... ॥೩೫॥

ಆವಾದ್ಯದ, ಜತಿವಿಡಿದು- ಯತಿಯಂ ಹಿಡಿದು, ಅಂಗೋಪಾಂಗಭಂಗಿ- ಅವಯವೋಪಾವಯವಗಳ ರೀತಿಯು, ಸಂಗಳಿಸೆ, ನಿಜಾ......ಪಡೆದು— ನಿಜ-ತನ್ನ, ಅಪಾಂಗವಲ್ಗನ- ಕಡೆಗಣ್ಣೋಟದ ಚಾಲನೆ, ಕರತಳಚಲನ- ಕೈಯಾಡಿಸುವಿಕೆ, ಭ್ರೂಲತಾವಿಕ್ಷೇಪ- ಬಳ್ಳಿಯಂತಿರುವ ಹುಬ್ಬನ್ನು ಹಾರಿಸುವಿಕೆ, ಇವುಗಳ, ವಿಭ್ರಮಂಬಡೆದು- ವಿಲಾಸವಂ ಪೊಂದಿ. * * * * * * * * * * * * *

ಅಮರಾಂಗನಾಜನದ- ದೇವತಾಸ್ತ್ರೀಯರ, ಕಡೆಗಣ್, ಮಿಂಚು; ತದ್ವೀರೀರವಂ- ಆ ದೇವದುಂದುಭಿಯ ಶಬ್ದವು, ತಳ್ತ, ಬಲ್ಗುಡುಗು; ಆಕಾಶವೆ, ನೀರದಂ- ಮೇಘವು; ಸುರಿವ, ಮಂದಾರಪ್ರಸೂನಂಗಳೆ- ಕಲ್ಪವೃಕ್ಷದ ಹೂವ್ಗಳೇ, ಜಡಿಪಂ- ಮಳೆಯು, ಬಿತ್ತರಂ, ಆಗೆ, ಮಾಣದೆ, ಇದಿರೊಳ್, ಭಕ್ತೇಂದ್ರಂ- ಭಕ್ತನೆಂಬ ಇಂದ್ರನು, (ಭಕ್ತಶ್ರೇಷ್ಠನು) ಉತ್ಸಾಹಮಂ, ಪಡೆದು, ಒಪ್ಪುತ್ತೆ, ಇರೆ, ಆವೇಳೆಯೊಳ್, ನೀಲಕಂಠನಟನಂ- ನವಿಲಿನ ನರ್ತನವು, (ಈಶ್ವರನ ನಾಟ್ಯವು) ಚೆಲ್ವಾದುದು. ... ... ॥೩೬॥

ಕಣಿತದ, ಕೋಲಾಹಲದಿಂ- ಕಲಕಲಶಬ್ದದಿಂದೆ, ಗಗನಂ, ಅಣಿಗೆಟ್ಟು- ಸಡಿಲವಾಗಿ, ಉರುಳ್ದಪುದು, ಎಂದು, ಆಂಕೆಯಿಂ- ಒತ್ತುಮರವನ್ನು, ಇಟ್ಟ, ಅಣಕಮಂ- ಅನುಕರಣವನ್ನು, ಅಮರ್ಚಿ, ಒಂದು ಅಭವಾಂಘ್ರಿದಂಡಂ- ದಂಡದಂತಿರುವ ಈಶ್ವರನೊಂದುಪಾದವು, ಅಂಬರದೊಳ್, ಅಣಿಯರಂ- ಮನೋಹರವಾಗಿ, ಮೆರೆದತ್ತು. ... ... ... ... ... ॥೩೭॥

ಕಂ॥ ಗಿರಿಜೆಯ ಕಣ್ಗಳಿಜೊರ್ನ್ನದೆ । ಹರತನು ಶಶಿಕಾಂತ ಮೊಸೆದುರ್ ಪನಿವಿಡುವವೊ
ಲಾ ॥ ಶಿರದ ಸುರನಿಮ್ನಗೆಯ ಶೀ । ಕರತತಿ ನೆಗೆದಳುರ್ದು ತನುವ ನೇಂಮುಸುಕಿದುದೊ ॥

ಮ॥ ಸ್ರ॥ ಕಡಲೇಳುಂ ತುಳ್ಕೆ ಭೂಭೃಚ್ಛಿಖರನಿಕರ ಮಲ್ಲಾಡೆದಿಕ್ಕುಂಭಿಗಳ್ ಕುಂ।
ಬಿಡೆ ಭೋಗೀಂದ್ರಸ್ಫಟಾಮಂಡಳಿ ಮಣಿಯೆ ಮಹಾಕೂರ್ಮನುಂ ಕುರುಗ್ಗತಂ ಬಾ ॥ ಯ್ವಿಡೆ ದಿ
ಗ್ಭಿತ್ತಿಪ್ರತಾನಂ ಬಿರಿಯೆ ನಡುಗೆ ಧಾತ್ರೀತಳಂ ಕಳ್ಕನೋರಂ । ತುಡುಜಾಲಂ ಸೂಸೆ ಲೇ
ಖಾವಳಿ ಬೆದರೆ ಹರಂ ತಾಂಡವಂಗೆಯ್ಯುತಿರ್ದಂ ॥ ... ... ... ೩೯॥

ಮ॥ ಸ್ರ॥ ತತದೀಪ್ಯದ್ವಿದ್ಯುದುದ್ಯದ್ರುಚಿನಿಚಿತಜಟಾಕೋಟಿಸಂಘಟ್ಟನಪ್ರ । ಚ್ಯುತ
ನಕ್ಷತ್ರಪ್ರತಾನಂ ಗಗನಘನಪತತ್ಕಲ್ಪವೃಕ್ಷಪ್ರಸೂನೋ ॥ ನ್ನತವೃಷ್ಟಿಪ್ರೋನ್ಮಿಳದ್ವಾ
ರ್ಶಿಲೆಗಳೆನಿಸೆ ಚಂಚದ್ಭುಜೋದ್ಭೂತವಾತಾ । ಹತಕಂಪದ್ಭೂಧರಂ ತದ್ಭಯದೆ ನಡುಗುವಂ
ತಾಗೆ ಚೆಲ್ವಾಯ್ತು ನಾಟ್ಯಂ ॥ ... ... ... ॥೪೦॥

ಮಲ್ಲಿಕಾಮಾಲಾ ॥ ನೋಡಿ ರುದ್ರನ ನಾಟ್ಯಮಂ ಮಿಗೆ ಭಕ್ತ ನದ್ಭುತಮಾನಸಂ ॥

---

ಗಿರಿಜೆಯ, ಕಣ್ಗಳಿಜೊರ್ನ್ನದೆ- ಕಣ್ಣಿನ ಕಾಂತಿಯೆಂಬ ಬೆಳ್ದಿಂಗಳಿಂದ, ಹರತನುಶಶಿಕಾಂತಂ- ಈಶ್ವ
ರನ ದೇಹವೆಂಬ ಚಂದ್ರಕಾಂತಶಿಲೆಯು, ಒಸೆದುರ್- ಸ್ರವಿಸಿ, ಪನಿವಿಡುವವೊಲ್- ನೀರಿನ ಹನಿಯನ್ನಿಡುವಂತೆ,
ಆಶಿರದ, ಸುರನಿಮ್ನಗೆಯ- ದೇವಗಂಗೆಯ, ಶೀಕರತತಿ- ಹನಿಗಳ ಸಮೂಹವು, ನೆಗೆದು, ಅಳುರ್ದು- ಆವ
ರಿಸಿ, ತನುವಂ, ಏಂಮುಸುಕಿದುದೊ? ... ... ... ॥೩೮॥

ಏಳ್‌ಕಡಲುಂ- ಏಳು ಸಮುದ್ರಗಳೂ, ತುಳ್ಕೆ, ಭೂಭೃಚ್ಛಿಖರನಿಕರಂ- ಪರ್ವತದ ಕೋಡುಗಲ್ಲುಗ
ಳ ಸಮೂಹವು, ಅಲ್ಲಾಡೆ, ದಿಕ್ಕುಂಭಿಗಳ್- ದಿಗ್ಗಜಗಳು, ಕುಂಬಿಡೆ- ತಲೆಯನು ಬಗ್ಗಿಸಲು, ಭೋಗೀಂ
ದ್ರಸ್ಫಟಾಮಂಡಳಿ- ಆದಿಶೇಷನ ಹೆಡೆಗಳ ಸಮೂಹವು, ಮಣಿಯೆ-ಬಗ್ಗಲು, ಮಹಾಕೂರ್ಮನುಂ, ಕುರುಗ್ಗತಂ-
ತಗ್ಗುತ್ತ, ಬಾಯ್ವಿಡೆ, ದಿಗ್ಭಿತ್ತಿಪ್ರತಾನಂ- ಅಷ್ಟದಿಕ್ಕುಗಳ ಗೋಡೆಗಳ ಸಮೂಹವು, ಬಿರಿಯೆ, ಧಾತ್ರೀತ
ಳಂ- ಭೂತಳವು, ನಡುಗೆ, ಉಡುಜಾಲಂ- ನಕ್ಷತ್ರಗಳ ಸಮೂಹವು, ಓರಂತೆ- ಕ್ರಮವಾಗಿ, ಕಳ್ಕನೆ- ಜಾ
ಗ್ರತೆಯಾಗಿ, ಸೂಸೆ- ಸುರಿಯಲು, ಲೇಖಾವಳಿ- ದೇವತೆಗಳ ಪಙ್ಕ್ತಿಯು, ಬೆದರೆ, ಹರಂ, ತಾಂಡವಂಗೆಯ್ಯು
ತೆ, ಇರ್ದಂ. ... ... ... ... ... ॥೩೯॥

ತತ......ಪ್ರತಾನಂ— ತತ- ವಿಸ್ತೃತವಾದ, ದೀಪ್ಯತ್- ಪ್ರಕಾಶಿಸುವ, ವಿದ್ಯುತ್- ಮಿಂಚಿನ, ಉ
ದ್ಯತ್- ಅಧಿಕವಾದ, ರುಚಿ- ಕಾಂತಿಯುಳ್ಳಿರುವ ಕಾಂತಿಯಿಂದ, ನಿಚಿತ- ವ್ಯಾಪ್ತವಾದ, ಜಟಾಕೋಟಿ-ಅನೇ
ಕ ಜಡೆಗಳ, ಸಂಘಟ್ಟನ- ತಾಡನದಿಂದ, ಪ್ರಚ್ಯುತ- ಜಾರಿದ, ನಕ್ಷತ್ರಪ್ರತಾನಂ- ನಕ್ಷತ್ರಗಳ ಸಮೂಹವು,
ಗಗನ......ಶಿಲೆಗಳ್— ಗಗನ- ಅಂತರಿಕ್ಷವೆಂಬ, ಘನ- ಮೇಘದ ದೆಸೆಯಿಂದ, ಪತತ್- ಬೀಳುತ್ತಿರುವ,ಕ
ಲ್ಪವೃಕ್ಷಪ್ರಸೂನ- ಕಲ್ಪವೃಕ್ಷದ ಹೂವುಗಳೆಂಬ, ಉನ್ನತವೃಷ್ಟಿ- ದೊಡ್ಡಮಳೆಯಲ್ಲಿ, ಪ್ರೋನ್ಮಿಳತ್ ಕೂಡಿ
ದ, ವಾರ್ಶಿಲೆಗಳ್- ಆಲಿಕಲ್ಲುಗಳು, ಎನಿಸೆ; ಚಂಚತ್......ಭೂಧರಂ—ಚಂಚತ್- ಚಪಲಗಳಾದ, ಭುಜ-ಬಾ
ಹುಗಳ ದೆಸೆಯಿಂದ, ಉದ್ಭೂತ- ಹುಟ್ಟಿದ, ವಾತ- ಗಾಳಿಯಿಂದ, ಆಹತ-ಹೊಡೆಯಲ್ಪಟ್ಟುದ್ದರಿಂದಕಾರಣವೇ,
ಕಂಪತ್- ನಡುಗುತ್ತಿರುವ, ಭೂಧರಂ- ಪರ್ವತವು,ತದ್ಭಯದೆ- ಆ ಬಾಹುವಿನ ದೆಸೆಯಿಂದಾದ ಭೀತಿಯಿಂದ,
ನಡುಗುವಂತೆ, ಆಗೆ, ನಾಟ್ಯಂ, ಚೆಲ್ವಾಯ್ತು. ... ... ... ॥೪೦॥

ಭಕ್ತಂ, ರುದ್ರನ, ನಾಟ್ಯಮಂ, ಮಿಗೆ, ನೋಡಿ, ಅದ್ಭುತಮಾನಸಂ- ಆಶ್ಚರ್ಯದಿಂದ ಕೂಡಿದ ಮನ
ಸ್ಸುಳ್ಳವನಾಗಿ, ಮಹೀಶ! ಬೇಡಬೇಡ; ಇನಿತ್ತೆ- ಇಷ್ಟೇ, ಸಾಲ್ಗುಂ- ಸಾಕು,ಲೋಕಚಯಂಗಳ್- ಲೋಕಗ

ಬೇಡಬೇಡ ಮಡೀಶಸೊಲ್ಲುಗಿನಿನಿತ್ತೆ ಲೋಕಚಯಂಗಳ ॥ ಳ್ಕಾಡುಗುಂ ವಲ ವಂದು ವಂದಿಸೆ ವಿಮ್ಮ ಜಿಮ್ಮಸಮನ್ವಿತಂ । ಬೇಡಿಕೊಳ್ವನ ಮೀಶನಂತುಟೆ ಮಾಣ್ದು ನಾಟ್ಯಮನೊಪ್ಪಿದಂ ॥ .. ... ... ... ॥೪೧॥

ವ ॥ ಆಗಳ್ ॥ ಉ ॥ ಅಂಬರಚಕ್ರಮಂ ಬೆಳಗುತಂ ನಿಜರತ್ನಕದಂಬಕಕಾಂತಿಯಿಂ। ತಾಂ ಬರೆ ಪುಷ್ಪಕಂ ಸುರಿವಪೂಮಳೆಯೊಳ್ಸುರದುಂದುಭಿಸ್ವನಾ ॥ ಡಂಬರಮೊಪ್ಪೆ ಶಂಭುಸಹಿತಂ ನಲಿದೇರಿ ತದೀಯಲೋಕಮಂ । ಬೆಂಬಿಡದೈದಿ ಭಕ್ತನೊಸೆದೊಳ್ಪಿದನಾಳ್ದ ಶಿವಪ್ರಸಾದಮಂ ॥ ... ... ... ... ॥೪೨॥

ವ ॥ ಎಂದಿಂತುಬಿತ್ತರಂ ಬಗೆ ॥ * * * * * * * * * *

ಕಂ ॥ ಮಂಡಿತಮತಿನಾಟ್ಯನನಿ । ತ್ತಂಡಿಯ ಕಥೆವೇಳ್ದು ಮುಗುಳ್ದು ಬಸವನು ಬಗೆಮುಂ ॥ ಕೊಂಡಾಲಿಪುದೆಂದೊರೆದಂ । ಖಂಡೇಂದುಧರೈಕಭಕ್ತನೊರ್ವನ ಕಥೆಯಂ ॥೪೩॥

ವ॥ ತತ್ಕಥಾಕಥನ ಮೆಂತೆನೆ॥ * * * * * * * * * * *

ಮತ್ತೇ॥ಮದವಾರ್ಧಾರೆಗಳೊಜ್ಜರಂ ರದನಮುದ್ಯದ್ವಜ್ರಶೃಂಗಂನಿಲುಂಬಿದಮೇಘಂ ಕಿವಿ ಗುಂಡುಗಲ್ತಲೆ ತದಗ್ರಂನೇಲ್ವಪೆರ್ಬ್ಬಾವು ಕೊ । ರ್ಬಿದಶುಂಡಂ ತನಗಾಗೆ ರಂಜಿಪನಗೇಂದ್ರಂ ಕಾಳಹಸ್ತಿಸ್ವಭಾ । ವದೆ ತಾಂತಾಳ್ದುದು ಕಾಳಹಸ್ತಿವೆಸರಂ ನೀಲಾಶ್ಮಕಾಯಪ್ರಭಂ॥

---

ಳ ಸಮುದಾಯವು, ವಲಂ- ನಿಶ್ಚಯವಾಗಿ, ಅಳ್ಕಾಡುಗುಂ- ಭಯಪಡುವದು; ಎಂದು, ವಂದಿಸೆ, ಜಿಮ್ಮಸಮನ್ವಿತಂ- ಇಂದ್ರಯುಕ್ತನಾದ, ವಿಮ್ಮ, ಬೇಡಿಕೊಳ್ವನಂ- ಬೇಡಿಕೊಳ್ಳುತ್ತಿರುವಲ್ಲಿ, ಈಶಂ, ಅಂತುಟಿ- ಹಾಗೆಯೇ, ನಾಟ್ಯಮಂ, ಮಾಣ್ದು- ಬಿಟ್ಟು, ಒಪ್ಪಿದಂ. ... ... ॥೪೧॥

ತಾಂಪುಷ್ಪಕಂ- ಆ ದೇವಯಾನವು, ನಿಜರತ್ನಕದಂಬಕಕಾಂತಿಯಿಂ- ತನ್ನ ರತ್ನಗಳ ಸಮೂಹದ ಪ್ರಕಾಶದಿಂದ, ಅಂಬರಚಕ್ರಮಂ- ಆಕಾಶಮಂಡಲವನ್ನು, ಬೆಳಗುತಂ- ಪ್ರಕಾಶಪಡಿಸುತ್ತ, ಬರೆ, ಸುರಿವಪೂಮಳೆಯೊಳ್- ಸುರಿಯುವ ಹೂವಿನ ಮಳೆಯೊಡನೆ, ಸುರದುಂದುಭಿಸ್ವನಾಡಂಬರಂ- ದೇವತೆಗಳ ನಗಾರಿಯ ಅಧಿಕವಾದ ಶಬ್ದವು, ಒಪ್ಪೆ, ಭಕ್ತಂ, ಶಂಭುಸಹಿತಂ,ನಲಿದು- ಸಂತೋಷಪಟ್ಟು, ಏರಿ- ಹತ್ತಿ,ತದೀಯಲೋಕಮಂ- ಶಿವನ ಲೋಕವನ್ನು, ಬೆಂಬಿಡದೆ, ಐದಿ, ಒಸೆದು, ಶಿವಪ್ರಸಾದಮಂ, ಆಳ್ದು, ಒಪ್ಪಿದಂ. ॥೪೨॥

## ಕಣ್ಣಪ್ಪನ ಕಥೆ.

ಮಂಡಿತಮತಿ- ಅಲಂಕೃತವಾದ ಬುದ್ಧಿಯುಳ್ಳ, ಬಸವಂ,ನಾಟ್ಯನನಿಂತ್ತಂಡಿಯ, ಕಥೆವೇಳ್ದು, ಮುಗುಳ್ದು, ಬಗೆ- ಮನಸ್ಸು, ಮುಂಕೊಂಡು- ಮುಂಬರಿದು, ಆಲಿಪುದು- ಕೇಳುವದು, ಎಂದು, ಖಂಡೇಂದುಧರೈಕಭಕ್ತನ- ಚಂದ್ರನ ಖಂಡವನ್ನು ಧರಿಸಿದ ಶಿವನೊಬ್ಬನಿಗೆಭಕ್ತನಾದ, ಓರ್ವನ,ಕಥೆಯಂ, ಒರೆದಂ-ಹೇಳಿದನು. ॥೪೩॥

ಒಜ್ಜರಂ- ಗಿರಿನದಿಯೇ, ಮದವಾರ್ಧಾರೆಗಳ್- ಮದೋದಕ ಪ್ರವಾಹಗಳು, ಉದ್ಯದ್ವಜ್ರಶೃಂಗಂ- ಅಧಿಕವಾದ ವಜ್ರದ ಕೋಡುಗಲ್ಲೇ, ರದನಂ- ಕೊಂಬು, ನಿಲುಂಬಿದಮೇಘಂ- ಆಶ್ರಯಿಸಿದ ಮೋಡವು, ಕಿವಿ, ಗುಂಡುಗಲ್, ತಲೆ, ತದಗ್ರಂ- ಆ ಪರ್ವತದ ಮೇಲ್ಗಡೆಯಲ್ಲಿ,ನೇಲ್ವ- ಜೋಲಾಡುವ, ಪೆರ್ಬಾವು- ದೊಡ್ಡಹಾವು, ಕೊರ್ಬಿದ- ಕೊಬ್ಬಿದ, ಶುಂಡಂ- ಸೊಂಡಿಲು, ತನಗೆ- ಪರ್ವತಕ್ಕೆ ಆಗೆ, ನೀಲಾಶ್ಮಕಾಯಪ್ರಭಂ- ಇಂದ್ರನೀಲರತ್ನದಂತಿರುವ ದೇಹಕಾಂತಿಯುಳ್ಳ, ರಂಜಿಪನಗೇಂದ್ರಂ- ಪ್ರಕಾಶಿಸುವ ಶ್ರೇಷ್ಠವಾದ ಪರ್ವತವು, ಕಾಳಹಸ್ತಿಸ್ವಭಾವದೆ- ಕಪ್ಪಾದ ಆನೆಯ ಸ್ವರೂಪದಿಂದ, ಕಾಳಹಸ್ತಿವೆಸರಂ- ಕಾಳಹಸ್ತಿಯೆಂಬ ಹೆಸರನ್ನು, ತಾಳ್ದುದು.

ಕಂ॥ ಮರಕತತರುಚಿಯಂ ದೂರ್ವಾಂ। ಕುರಮೆಂದಿನರಥದ ಕುದುರೆಗಳ್ಮುಂಬರಿದಾ॥
ಗಿರಿಯಗ್ರದೊಳಾಡುವ ಕೇ। ಸರಿಗಳ್ಜೃಂಭಾರವಕ್ಕೆ ಪೆಳರ್ಗುಮಜಸ್ರಂ॥ ॥೪೫॥

ಕಂ॥ ಗಿರಿಯಗ್ರದ ಪೆರ್ವ್ವುಲಿ ಮೃಗ। ಧರಮೃಗಮಂ ಪಿಡಿಯಲೆಳಸಿ ಕೆರಮವ್ವಳಿಸು॥
ತ್ತಿರೆ ತನ್ಮೃಗ ಮಗಿದಾವಟ। ತರುವಿನ ಮರೆವುಗುವುದೆಂದೊಡೇನುನ್ನತಮೋ॥ ॥೪೬॥

ಕಂ॥ ಪಳಕಿನ ಪಾಸರೆಯೊಳ್ನೆಲ। ದಳೆದುರಗೇಂದ್ರನ ಫಣಾಮಣಿಯ ಕೆಂಬೆಳಗು॥
ಚ್ಚಳಿಸಿರೆ ಪೊಸರಕ್ತಮಿದೆಂ। ದೆಳೆವುಲಿಗಳ್ನಕ್ಕುತಿರ್ಕ್ಕುಮಾನಗತಟದೊಳ್॥ ॥೪೭॥

ಕಂ॥ ಮರೆಯ ನೆರೆಗೊಂಡ ಜರಜಗ। ರಮುಮುರ್ದ್ದಿರೆ ರಸನೆಯಂತೆ ಪರಿವೊಜ್ಝರಮೊ॥
ಪ್ಪಿರೆ ಲಾಲಾಜಲಮೆನೆ ತ। ಜ್ಗಿರಿ ವೃದ್ಧನ ಬೋಡುಬಾಯಿದೆನೆ ಗವಿ ಮೆರೆಗುಂ॥ ॥೪೮॥

ಮತ್ತೇ॥ ಕರಿಕುಂಭಸ್ಥಳಮಂ ವಿದಾರಿಸೆ ಪುಳಿಂದ ರ್ಸೂಸಿದತ್ಯಂತಭಾ। ಸುರಮು
ಕ್ತಾತತಿ ಚೆಲ್ವನಾಳ್ದುದು ನಗೇಂದ್ರಾಧಿತ್ಯಕಾಕೀರ್ಣಧಾ॥ತ್ರೀರುಹವ್ರಾತಪಟುಪ್ರಭಂಜನ
ಚಳಚ್ಛಾಖಾಗ್ರಪಾತಾಪತ।ತ್ಪರಿಣದ್ಧಪ್ರಭನಿರ್ಜ್ಜರಾಧ್ವಗತತಾರಾನೀಕ ಮುಂಬೆಂತೆವೋಲ್॥

---

ಇನರಥದ- ಸೂರ್ಯನತೇರಿನ, ಕುದುರೆಗಳ್, ಮರಕತತರುಚಿಯುಂ- ಪಚ್ಚೆಯಕಾಂತಿಯನ್ನು, ದೂರ್ವಾಂ ಕುರುಂ- ಗರುಕೆಯಮೊಳಕೆಯು, ಎಂದು, ಮುಂಬರಿದು-ಮುಂದಕ್ಕೆಹೋಗಿ,ಆಗಿರಿಯ, ಅಗ್ರದೊಳ್-ಮೇಲ್ಗಡೆಯಲ್ಲಿ, ಆಡುವ, ಕೇಸರಿಗಳ- ಸಿಹ್ಮಗಳ, ಜೃಂಭಾರವಕ್ಕೆ- ಸಿಂಹನಾದಕ್ಕೆ, ಅಜಸ್ರಂ- ಯಾವಾಗಲೂ, ಪೆಳರ್ಗುಂ- ಭಯಪಡುವವು. ... ... ... ... ॥೪೫॥

ಗಿರಿಯ, ಅಗ್ರದ, ಪೆರ್ವ್ವುಲಿ- ದೊಡ್ಡಹುಲಿಯು, ಮೃಗಧರಮೃಗಮಂ- ಚಂದ್ರನ ಜಿಂಕೆಯನ್ನು, ಪಿಡಿಯಲ್, ಎಳಸಿ, ಕೆರಂ, ಅವ್ವಳಿಸುತ್ತೆ-ಆತುರಪಡುತ್ತ, ಇರೆ, ತನ್ಮೃಗಂ, ಅಗಿದು- ಭಯಪಟ್ಟು, ಆವಟತರುವಿನ- ಆ ಚಂದ್ರನಲ್ಲಿರುವವಟವೃಕ್ಷದ, ಮರೆವುಗುವುದು, ಎಂದೊಡೆ, ಏಂಉನ್ನತಮೋ. ... ॥೪೬॥

ಆನಗತಟದೊಳ್- ಆಪರ್ವತದ ತಪ್ಪಲಿನಲ್ಲಿ, ಪಳಕಿನ- ಸ್ಫಟಿಕದ, ಪಾಸರೆಯೊಳ್— ಹಾಸುಗಲ್ಲಿನಲ್ಲಿ, ನೆಲದಳೆದ- ಭೂಮಿಯಂಹೊತ್ತುಕೊಂಡಿರುವ, ಉರಗೇಂದ್ರನ- ಆದಿಶೇಷನ, ಫಣಾಮಣಿಯ- ಹೆಡೆಯಲ್ಲಿರುವ ರತ್ನದ, ಕೆಂಬೆಳಗು- ಕೆಂಪುಕಾಂತಿಯು, ಉಚ್ಚಳಿಸಿ- ಹೊರಕ್ಕೆ ಹೊರಟು, ಇರೆ, ಇದು, ಪೊಸರಕ್ತಂ, ಎಂದು, ಎಳೆವುಲಿಗಳ್- ಹುಲಿಯಮರಿಗಳು, ನಕ್ಕುತೆ, ಇರ್ಕ್ಕುಂ. ... ... ... ॥೪೭॥

ಮರೆಯುಂ, ನೆರೆಗೊಂಡ— ಆಶ್ರಯಿಸಿದ, ಜರದಜಗರಂ- ಮುದಿಯಾದ ಹೆಬ್ಬಾವು, ರಸನೆಯಂತೆ- ನಾಲಗೆಯಹಾಗೆ, ಅಮುರ್ದು- ಸೇರಿ, ಇರೆ, ಪರಿವೊಜ್ಝರಂ- ಹರಿಯುವ ಗಿರಿನದಿಯೇ, ಲಾಲಾಜಲಂ- ಜೊಲ್ಲು, ಎನೆ, ಒಪ್ಪಿರೆ, ತದ್ಗಿರಿವೃದ್ಧನ- ಆಬೆಟ್ಟವೆಂಬುವ ಮುದುಕನ, ಬೋಡುಬಾಯ್, ಇದು, ಎನೆ, ಗವಿ, ಮೆರೆಗುಂ ... ... ... ... ... ॥೪೮॥

ಪುಳಿಂದರ್- ಬೇಡರು, ಕರಿಕುಂಭಸ್ಥಳಮಂ- ಆನೆಯಕುಂಭಸ್ಥಳವನ್ನು, ವಿದಾರಿಸೆ- ಸೀಳಲು, ಸೂಸಿದ- ಚೆಲ್ಲಿದ, ಅತ್ಯಂತಭಾಸುರಮುಕ್ತಾತತಿ- ಅತ್ಯಂತಮನೋಹರವಾದ ಮುತ್ತುಗಳಸಮೂಹವು, ನಗೇಂದ್ರಾ......ಅನೀಕಂ— ನಗೇಂದ್ರ- ಪರ್ವತಶ್ರೇಷ್ಠದ, ಅಧಿತ್ಯಕೆ- ಊರ್ಧ್ವಭೂಮಿಯಲ್ಲಿ, ಆಕೀರ್ಣ- ಚೆಲ್ಲಿರುವ, ಧಾತ್ರೀರುಹ- ಮರಗಳ, ವ್ರಾತ- ಸಮೂಹದ, ಪಟುಪ್ರಭಂಜನ- ಸಮರ್ಥವಾದ ಬಿರುಗಾಳಿಯಿಂದ, ಚಳತ್- ಚಲಿಸುತ್ತಲಿರುವ, ಶಾಖಾ- ಕೊಂಬೆಗಳ, ಅಗ್ರ- ತುದಿಯ, ಪಾತ- ಏಟಿನಿಂದ, ಆಪತತ್- ಬೀಳುತ್ತಿರುವ, ಪರಿಣದ್ಧ- ವಿಶಾಲವಾದ, ಪ್ರಭ- ಕಾಂತಿಯುಳ್ಳ, ನಿರ್ಜ್ಜರಾಧ್ವ- ಆಕಾಶವನ್ನು, ಗತ- ಹೊಂದಿದ, ತಾರಾ- ನಕ್ಷತ್ರಗಳ, ಅನೀಕಂ- ಸಮೂಹವು, ಎಂಬಂತೆವೋಲ್, ಚೆಲ್ವಂ, ಆಳ್ದುದು. ... ॥೪೯॥

ಮತ್ತೇ॥ ವಿತತಾನೇಕಪದಾವಭಾಸಿ ಹರಿನಾಗಪ್ರಾಂಚಿತಂಖಡ್ಗಮಂಡಿತ ಮುತ್ಕೀರ್ಣ ವರಾಹವಾಸ ಮಬಲಾಂಚದ್ಧೀವರೌಘಾಶ್ರಿತಂ ॥ ಭೃತಭಾಸ್ವಚ್ಛದಭಾಜಿಭೂರುಹಕರೇಣುಭ್ರಾಜಿತಂ ಸಚ್ಛಮೂರು। ರುತಮುಂ ವಾಹಿಷಮಂಜುಳಂ ಕಟಕ ಮಿಂಬಾಗಿರ್ಪುದಾಶೈಲದ॥

ಕಂ॥ ಪರಿಸದರೆ ಸುರಮಣಿಯ ಬ। ಲ್ಮೊರಡಿ ಸುಧಾರಸವ ನಿರ್ಝರಂ ಸುರಭೂಜೋ॥ತ್ಕರ ಮುರ್ವಿ ಪರಿವ ಪೊಸಸಿ। ದ್ಧರಸಂ ಮರೆಗುಂ ತದದ್ರಿವರಕಂದರದೊಳ್ ॥ ॥೫೧॥

ಕಂ॥ ತಮುದಕತವರ್ಮನೆ ಭೂರಿ। ದ್ರುಮದಿಕ್ಕೆ ಮೃಗವ್ರತಾನದಾಡುಂಬೊಲ ನು॥ದ್ಯಮಯುತಪುಳಿಂದಗಣದಾ। ಶ್ರಮ ಮೆನಿಸಿತಗಣ್ಯಖಗವರೇಣ್ಯಮರಣ್ಯಂ ॥ ॥೫೨॥

ವ॥ ಅಂತಪ್ಪ ಬಲ್ಪಪ್ಪಲ್ಲಿ ॥ * * * * * * * * * * *

ಉ॥ ಆಲ ಮಶೋಕೆ ತಾರೆ ಕಡ ವಿಂಗಳ ಮತ್ತಿ ಬಿಡಿ ಪ್ಪತಂಗ ಮಂ। ಕೋಲೆ ಹರೀತಕೀ ಖದಿರ ಮಿಪ್ಪೆ ಪುಲಿಂಗಿ ಲೆರಂ ತಮಾಲಕಂ॥ ಪಾಲೆ ಪಲಾಶ ಮೆರ್ಕೆ ಬಳೆವಂಬಟೆ ಪಾದರಿ ಕಕ್ಕೆ ಲೊಕ್ಕೆ ಡಿಂ। ಡಾಲ ಮಗಸ್ತ್ಯ ಮುಖ್ಯತರುಗಳ್ತರದಿಂದೆಸಗುಂನಿರಂತರಂ॥೫೩॥

---

ಆಶ್ಶೈಲದ, ವಿತತಾನೇಕಪಭಾಸಿ— ವಿತತ- ವಿಸ್ತಾರಗಳಾದ, ಅನೇಕಪ-ಆನೆಗಳು,ಪಾವ- ಕಾಳ್ಕಿಚ್ಚು ಇವುಗಳಿಂದ, ಭಾಸಿ- ಪ್ರಕಾಶಿಸುವ, ಹರಿನಾಗಪ್ರಾಂಚಿತಂ- ಹರಿ- ಸಿಹ್ಮ, ನಾಗ- ಸರ್ಪ, ಇವುಗಳಿಂದ, ಪ್ರಾಂಚಿತಂ- ಕೂಡಿದ, ಖಡ್ಗಮಂಡಿತಂ- ಘೇಂಡಾಮೃಗಗಳಿಂದಲಂಕರಿಸಲ್ಪಟ್ಟ, ಉತ್ಕೀರ್ಣವರಾಹವಾಸಂ- ಅಧಿಕವಾದ ಹಂದಿಗಳಿಗೆ ವಾಸಸ್ಥಲವಾದ, ಅಬಲಾಂಚದ್ಧೀವರೌಘಾಶ್ರಿತಂ— ಅಬಲಾ- ಸ್ತ್ರೀಯರಿಂದ, ಅಂಚತ್- ಪ್ರಕಾಶಮಾನವಾದ, ಧೀವರ— ಬೇಡರುಗಳ, ಓಘ- ಸಮೂಹದಿಂದ, ಆಶ್ರಿತಂ, ಭೃತ......ಭ್ರಾಜಿತಂ—ಭೃತ- ಧರಿಸಲ್ಪಟ್ಟ, ಭಾಸ್ವತ್-ಪ್ರಕಾಶಮಾನವಾದ, ಛದ-ಎಲೆಗಳನ್ನು, ಭಾಜಿ- ಹೊಂದಿರುವ,ಭೂರುಹ- ಮರಗಳೇನು, ಕರೇಣು ಹೆಣ್ಣಾನೆಗಳೇನು, ಇವುಗಳಿಂದ, ಭ್ರಾಜಿತಂ, ಸಚ್ಛಮೂರುತಮಂ- ಅತ್ಯಂತ ಶ್ರೇಷ್ಠಗಳಾದಜಿಂಕೆಗಳುಳ್ಳ, ವಾಹಿಷಮಂಜುಳಂ- ಕೋಣಗಳಿಂದ ಮನೋಹರವಾದ, ಕಟಕಂ-ತಪ್ಪಲು, ಇಂಬಾಗಿ- ಮನೋಹರವಾಗಿ, ಇರ್ಪುದು. ... ... ... ... ॥೫೦॥

ತದದ್ರಿವರಕಂದರದೊಳ್- ಆ ಪರ್ವತದ ಗೋಡೆಯುಳ್ಳಿರ್ಪ ಒಂದುಸ್ಥಲದಲ್ಲಿ, ಪರುಸದ- ಪರುಷದ, ಅರೆ- ಬಂಡೆಯು, ಸುರಮಣಿಯ- ಇಂದ್ರನೀಲರತ್ನದ, ಬಲ್ಮೊರಡಿ- ದೊಡ್ಡಗುಡ್ಡವು, ಸುಧಾರಸದ- ಅಮೃತದ, ನಿರ್ಝರಂ- ಗಿರಿನದಿಯು, ಸುರಭೂಜೋತ್ಕರಂ- ಕಲ್ಪವೃಕ್ಷಗಳ ಸಮೂಹವು, ಉರ್ಬಿ- ಉಕ್ಕಿ, ಪರಿವ- ಪೊಸಸಿದ್ಧರಸಂ, ಮೆರೆಗುಂ. ... ... ... ... ॥೫೧॥

ಅಗಣ್ಯಖಗವರೇಣ್ಯಂ- ಅಸಂಖ್ಯಾತಗಳಾದ ಶ್ರೇಷ್ಠವಾದ ಪಕ್ಕಿಗಳುಳ್ಳ, ಅರಣ್ಯಂ, ತಮುದ- ಕತ್ತಲೆಯ, ತವರ್ಮನೆ- ಜನ್ಮಸ್ಥಲವು, ಭೂರಿದ್ರುಮದ- ಬಹಳವಾದ ಮರಗಳ, ಇಕ್ಕೆ- ಸ್ಥಾನವು, ಮೃಗವ್ರಾತನದ- ಮೃಗಗಳ ಸಮೂಹದ, ಆಡುಂಬೊಲಂ- ಆಶ್ರಯವು, ಉದ್ಯಮಯುತಪುಳಿಂದಗಣದ- ಪ್ರಯತ್ನಶಾಲಿಗಳಾದ ಬೇಡರ ಸಮೂಹದ, ಆಶ್ರಮಂ, ಎನಿಸಿತು. ... ... ... ॥೫೨॥

ಅಂತಪ್ಪ, ಬಲ್ದಪ್ಪಲಲ್ಲಿ-ದೊಡ್ಡತಪ್ಪಲಿನಲ್ಲಿ. * * * * * * * * * * *

ನಿರಂತರಂ, ಆಲಂ, ಅಶೋಕೆ, ತಾರೆ, ಕಡವ, ಇಂಗಳು, ಅತ್ತಿ,ಬಿದಿರ್, ಪತಂಗಂ- ಯಕ್ಕ,ಅಂಕೋಲೆ, ಹರೀತಕೀ- ಅಳಲೇಕಾಯಿಗಿಡ, ಖದಿರಂ- ಕಗ್ಗಲಿ, ಇಪ್ಪೆ, ಪುಲಿಂಗಿಲ್- ಹುಲಿಗಿಲಿ, ಎರಂ, ತಮಾಲಕಂ- ಹೊಂಗೆ, ಪಾಲೆ, ಪಲಾಶಂ- ಮುತ್ತುಗ, ಎರ್ಕೆ, ಬಳೆವಂಬಟೆ, ಪಾದರಿ, ಕಕ್ಕೆ, ಲೊಕ್ಕೆ, ಡಿಂಡಾಲಂ, ಅಗಸ್ತ್ಯಮುಖ್ಯತರುಗಳ್, ತರದಿಂ-ಲ್ವನಾಗಿ, ಎಸೆಗುಂ. ... ... ॥೫೩॥

ಚಂ ॥ ಮರಗುಟಿಗಂ ನವಿಲ್ಗಿಳಿ ಪಸುಂಬ ನವಿಳ್ದಲೆವಕ್ಕಿ ತೊಂಡೆ ತಿ। ತ್ತಿರಿ ಪಿಕ ಳಂಬಕಂ ಶಕುನಿ ಚಾದಗೆ ಟಿಟ್ಟಿಭ ಮಂಚೆ ಕೊಂಚೆ ಕ ॥ ತ್ತರಿ ಗಿರಿಹಂಗ ನಿಂಗೊರಲಿಂಗದಿರ್ವಕ್ಕಿ ಶರಾರಿ ಗೂಗೆ । ಹೆಂಗುರು ಚಿಲುಕೂಲಿಕಂ ಗರುಡನಾ ಗಿಡುಗಂ ಮೊರೆಗುಂ ವನಾಂತದೊಳ್ ॥ ... ... .. ... ॥೫೪॥

ವ॥ ಮತ್ತಂ ॥ ಚಂ ॥ ಹರಿ ಕರಿ ಜಂಬುಕಂ ಮರೆ ಮೊಲಂ ಪುಲಿ ಪುಲ್ಲೆ ಬಿಡಾಲ ಮೆಕ್ಕಲಂ। ಕರಡಿ ವನೇಚರಂ ಫಣಿ ವೃಕಂ ನಕುಲಂ ಶರಭಂ ಕರೇಣು ಕ ॥ ತ್ತುರಿಯ ಮಿಗಂ ಲುಲಾಯ ಮೆನಿಪಗ್ಗದ ಸತ್ವ ಮಳುಂಬ ಮೊಪ್ಪಿ ಭೀ। ಕರತರಮಾಗಿ ಸರ್ವಮೃಗಪಕ್ಷಿಶರಣ್ಯ ಮರಣ್ಯ ಮೊಪ್ಪುಗುಂ॥ ... ... ... ॥೫೫॥

ವ ॥ ಆಗಹನಾಂತರಾಳದಲ್ಲಿ ॥ * * * * * * * * * * *

ಮತ್ತೇ ॥ ಮೃಗಭೂಲಿಪ್ತಮಹೀತಳಂ ಗಜಶಿರೋಮುಕ್ತಾವಳೀಚಾಮರ । ಸ್ಥಗಿತಪ್ರಾಂಜುಳತೋರಣಂ ಫಣಿಫಣಾರತ್ನಪ್ರದೀಪಂ ಮನಂ ॥ ಬುಗೆ ಚೆಲ್ವಾದ ಕರೀಂದ್ರದಂತಕೃತಮಂಚಂ ತಳ್ತ ಕೇಳೀಗೃಹಾ । ಳಿಗಳಿಂ ಶೋಭೆಯನ್ನದೆ ಬೀರಿದುದಿಳಾಲೋಕಕ್ಕಣಂ ಪಕ್ಕಣಂ ॥ ... ... ... ... ॥೫೬॥

ಮಹಾಸ್ರ॥ಪೆದೆವಿಲ್ಲಂ ಮಾಳ್ಪ ಬಾಣಾವಳಿಯಮಸೆವ ಶಸ್ತ್ರಂಗಳಂಕೊರ್ಪುಗೆಯ್ಯು।

---

ವನಾಂತದೊಳ್- ವನಮಧ್ಯದಲ್ಲಿ, ಮರಗುಟಿಗಂ, ನವಿಲ್, ಗಿಳಿ, ಪಸುಂಬಂ, ಅವಿಳ್ದಲೆವಕ್ಕಿ- ಗುಡುಬ್ಬೈರುಂಡ, ತೊಂಡೆ, ತಿತ್ತಿರಿ, ಪಿಕ- ಕೋಗಿಲೆ, ಳಂಬಕಂ- ತೋಲೇಹಕ್ಕಿ, ಶಕುನಿ- ಆಲೇಹಕ್ಕಿ, ಚಾದಗೆ- ಚಾತಕಪಕ್ಷಿ, ಟಿಟ್ಟಿಭಂ- ಲಕುಮುಕಿಹಕ್ಕಿ, ಅಂಚೆ- ಹಂಸ, ಕೊಂಚೆ- ಬಕ, ಕತ್ತರಿ, ಗಿರಿಹಂಗಂ, ಇಂಗೊರಲಂ, ಇಂಗದಿರ್ವಕ್ಕಿ,ಚಕೋರ,ಶರಾರಿ,ಗೂಗೆ, ಹೆಂಗುರು,ಬಿಲುಕೂಲಿ, ಕಾಗೆ, ಗರುಡಂ, ಗಿಡುಗುಂ,ಮೊರೆಗುಂ

ಹರಿ- ಸಿಹ್ಮ, ಕರಿ- ಆನೆ, ಜಂಬುಕಂ- ನರಿ, ಮರೆ- ಕಿರುಬ, ಮೊಲಂ, ಪುಲಿ, ಪುಲ್ಲೆ, ಬಿಡಾಲಂ- ಕೊತ್ತಿ, ಎಕ್ಕಲಂ- ಹಂದಿ, ಕರಡಿ, ವನೇಚರಂ- ಕಪಿ, ಫಣಿ- ಸರ್ಪ, ವೃಕಂ- ತೋಳ, ನಕುಲಂ- ಕೀರ, ಶರಭಂ, ಕರೇಣು- ಹೆಣ್ಣಾನೆ, ಕತ್ತುರಿಯಮಿಗಂ, ಲುಲಾಯಂ- ಕೋಣ, ಎನಿಪ, ಅಗ್ಗದ, ಸತ್ವಂ- ಪ್ರಾಣಿಗಳು, ಅಳುಂಬಂ- ಅಧಿಕವಾಗಿ, ಒಪ್ಪಿ, ಭೀಕರತರಂ, ಆಗಿ, ಸರ್ವಮೃಗಪಕ್ಷಿಶರಣ್ಯಂ- ಸಕಲ ಮೃಗಹಕ್ಕಿಗಳಿಗೆ ಸಂರಕ್ಷಕವಾದ, ಅರಣ್ಯಂ, ಒಪ್ಪುಗುಂ. ... ... ... ... ॥೫೫

ಆಗಹನಾಂತರಾಳದಲ್ಲಿ- ಆ ಅರಣ್ಯ ಮಧ್ಯದಲ್ಲಿ. * * * * * * * * * *

ಮೃಗಭೂಲಿಪ್ತಮಹೀತಳಂ- ಕಸ್ತೂರಿಯಿಂದ ಲೇಪಿಸಲ್ಪಟ್ಟಭೂಮಿಯು, ಗಜ......ತೋರಣಂ— ಗಜ- ಆನೆಗಳ, ಶಿರಃ- ತಲೆಯಲ್ಲಿದ್ದ, ಮುಕ್ತಾವಳೀ- ಮುತ್ತುಗಳ ಸಮೂಹಗಳೇನು, ಚಾಮರ_ ಚಾಮರಗಳೇನು, ಇವುಗಳಿಂದ, ಸ್ಥಗಿತ- ವ್ಯಾಪ್ತವಾದ, ಪ್ರಾಂಜುಳತೋರಣಂ- ಮನೋಹರವಾದ ತೋರಣವು, ಫಣಿಫಣಾರತ್ನಪ್ರದೀಪಂ- ಸರ್ಪಗಳ ಹೆಡೆಯ ರನ್ನಗಳೆಂಬ ದೀಪಗಳು, ಮನಂಬುಗೆ- ಮನಸ್ಸಂ ಪ್ರವೇಶಿಸುತ್ತಿರಲಾಗಿ, ಚೆಲ್ವಾದಕರೀಂದ್ರದಂತಕೃತಮಂಚಂ- ಮನೋಹರವಾದ ಆನೆಯ ದಂತದಿಂದ ಮಾಡಿದ ಮಂಚವು, ತಳ್ತ- ಸೇರಿದ, ಕೇಳೀಗೃಹಾಳಿಗಳಿಂ- ಕ್ರೀಡಾಗೃಹಗಳಿಂದ, ಪಕ್ಕಣಂ- ಬೇಡರ ಮನೆಯು, ಇಳಾಲೋಕಕ್ಕೆ, ಅಣಂ_ ಸ್ವಲ್ಪವಾಗಿ, ಶೋಭೆಯಂ— ಕಾಂತಿಯನ್ನು, ಬೀರಿದುದು- ಹರಡಿತು. ... ॥೫೬॥

ಪೆದೆವಿಲ್ಲಂ- ಸಿಂಜಿನಿಧನುಸ್ಸು ಇವುಗಳನ್ನು, ಮಾಳ್ಪ, ಬಾಣಾವಳಿಯ, ಮಸೆವ, ಶಸ್ತ್ರಂಗಳಂ. ಕೊರ್ಪುಗೆಯ್ಯ- ತೀಕ್ಷ್ಣವನ್ನಾಗಿ ಮಾಡುವ, ಅಗ್ಗದಬೆಳ್ಳಾರಂಗಳಂ- ಶ್ರೇಷ್ಠಗಳಾದ ಬಲೆಗಳನ್ನು, ನಿರ್ಮಿಸು

ಗ್ಗದಬೆಳ್ಳಾರಂಗಳಂ ನಿರ್ಮಿಸುವ ಕರಟಿಮುಕ್ತಾಳಿಯುಂ ಕೋವ ಗುಂಜಾಘ ॥ ಘದ ಚಂಚ ದ್ದಾಮಮುಂ ಕಟ್ಟುವ ನವಿಲಕಲಾಪಂಗಳಿಂ ತಳ್ತ ಪೊಂಬ । ಗ್ಗದ ಭಾಸ್ವಚ್ಚರ್ಮದಿಂ ಟೊ ಪ್ಪರಮ ನೆಸೆವ ಭಿಲ್ಲರ್ಕರಂ ರಂಜಿಸಿರ್ಪರ್ ॥ ... ... .. ॥೫೭॥

ಉ ॥ ಚೆಂದುಟಿ ಮಿಂಚುವ ಲ್ನಗೆವೊಗಂ ನಿಡುಗಣ್ಕುಡಿವುರ್ಬು ತೆಳ್ಗದಂ । ಪಂದದ ವೇಣಿ ಕಂಬುಗಳ ಮಂಬುಜಕೋಶಕುಚಂ ಪ್ರವಾಳಮಂ ॥ ನಿಂದಿಪಕೆಂದಳಂ ಮಿಸುಪತೆಳ್ನ ಡು ಪೀನನಿತಂಬಬಿಂಬ ಮಿಂ।ಪೊಂದಿದಬಾಳೆನುಣ್ದೊಡೆ ವಿರಾಜಿಸೆ ಭಿಲ್ಲಿಯ ರಲ್ಲಿರಂಜಿಪರ್ ॥

ವ ॥ ಇಂತಳುಂಬಮೊಪ್ಪುವ ಬೇಡವಡೆಗೊಡೆಯನೆನಿಸಿ ॥ * * * * *

ಕಂ ॥ ಪ್ರಕಟಪ್ರತಾಪಭೂಷಣ । ನಕುಟಿಲಮತಿ ಮುಗ್ಧ ನಿಂದುಧರವರಭಕ್ತಂ ॥ ವಿಕಟಚರಿತ್ರಂ ರಂಜಿಪ । ನಕಳಂಕಂ ಕಣ್ಣಪಯ್ಯ ನೆಂಬಪುಳಿಂದಂ ॥ ... ॥೫೮॥

ವ ॥ ಆಪುಳಿಂದಪತಿ ಯೊಂದುದಿನಂ ಬೇಂಟೆಗುಜ್ಜುಗಿಸಿ ಸಜ್ಜುಗೆಯ್ದು ॥ * *

ಜಂ ॥ ತೊಳಗುವ ಪೀಲಿದುಡೆ ಮಿಳಿರ್ದಾಡುವ ನೆತ್ತಿಯಚಾಮರಂ ಮನಂ । ಗೊಳಿ ಪೆಳೆಮುತ್ತಿನೆಕ್ಕಸರ ಮುಟ್ಟತಳಿ ರ್ಪಸುರಂಗಿ ಗುಂಜಿಕಾ ॥ ವಳಿಯವಿಭೂಷಣಂ ಪಿಡಿದಬಿ ಲ್ಸರಲಂದದಬೆನ್ನ ಚೆನ್ನಬ । ತ್ತಳಿಕೆ ಮರಂದದಣ್ಪೆಸೆಯೆ ಬಂದ ನುದಗ್ರಪುಳಿಂದನಾಯಕಂ ॥

---

ವ, ಕರಟಿಮುಕ್ತಾಳಿಯುಂ- ಆನೆಯ ಕುಂಭಸ್ಥಲದ ಮುತ್ತುಗಳ ಸಮೂಹವನ್ನು,ಕೋವ-ಪೋಣಿಸುವ,ಗುಂಜಾಘದ-ಗುಲುಗಂಜಿಗಳ ಸಮೂಹದ, ಚಂಚದ್ದಾಮಮಂ-ಹೊಳೆಯುವಮಾಲಿಕೆಗಳನ್ನು,ಕಟ್ಟುವ, ನವಿಲ, ಕಲಾಪಂಗಳಿಂ-ಗರಿಗಳಿಂದ, ತಳ್ತ, ಪೊಂಬಗ್ಗದ-ಹೊಂಬಣ್ಣವಾದ ಹುಲಿಯ,ಭಾಸ್ವಚ್ಚರ್ಮದಿಂದೆ-ಪ್ರಕಾಶಿಸುವಚರ್ಮದಿಂದ,ಟೊಪ್ಪರಮಂ-ಟೊಪ್ಪಿಗೆಯನ್ನು, ಎಸೆವ, ಭಿಲ್ಲರ್-ಬೇಡರು,ಕರಂ,ರಂಜಿಸಿ, ಇರ್ಪರ್. ॥೫೭॥

ಚೆಂದುಟಿ- ಕೆಂಪಾದ ತುಟಿ, ಮಿಂಚುವಲ್- ಹೊಳೆಯುವ ಹಲ್ಲು,ನಗೆಮೊಗಂ,ನಿಡುಗಣ್- ದೀರ್ಘವಾದ ಕಣ್ಣು, ಕುಡಿವುರ್ಬು- ಡೊಂಕಾದ ಹುಬ್ಬು, ತೆಳ್ಗದಂಪು- ತೆಳುವಾದ ಕೆನ್ನೆ, ಅಂದದ, ವೇಣಿ- ಜಡೆ, ಕಂಬುಗಳಂ- ಶಂಖದಂತಿರುವ ಕತ್ತು, ಅಂಬುಜಕೋಶಕುಚಂ- ಕಮಲದ ಮೊಗ್ಗಿನಂತಿರುವ ಮೊಲೆ, ಪ್ರವಾಳಮಂ- ಚಿಗುರನ್ನು, (ಅಥವಾ ಹವಳವನ್ನು) ನಿಂದಿಪ, ಕೆಂದಳಂ- ಹಸ್ತಪ್ರದೇಶವು,ಮಿಸುಪ, ತೆಳ್ನಡು-ಸಣ್ಣನಡು, ಪೀನನಿತಂಬಂ- ದಪ್ಪವಾದ ಕಟಿಪಶ್ಚಾದ್ಭಾಗವು, ಇಂಪೊಂದಿದ, ಬಾಳೆನುಣ್ದೊಡೆ- ಬಾಳೆಗಂಬದಂತಿರುವ ನುಣುಪಾದ ತೊಡೆ, ವಿರಾಜಿಸೆ, ಅಲ್ಲಿ,ಭಿಲ್ಲಿಯರ್- ಬೇಡರ ಹೆಂಗುಸರು, ರಂಜಿಪರ್. ... ॥೫೮॥

ಇಂತು, ಅಳುಂಬಂ, ಒಪ್ಪುವ, ಬೇಡವಡೆಗೆ- ಬೇಡರ ಸೈನ್ಯಕ್ಕೆ, ಒಡೆಯಂ, ಎನಿಸಿ. * * *

ಪ್ರಕಟಪ್ರತಾಪಭೂಷಣಂ- ಪ್ರಸಿದ್ಧವಾದ ಪರಾಕ್ರಮವೇ ಆಭರಣವಾಗುಳ್ಳ,ಅಕುಟಿಲಮತಿ-ಋಜುವಾದ ಬುದ್ಧಿಯುಳ್ಳ, ಮುಗ್ಧಂ, ಇಂದುಧರವರಭಕ್ತಂ- ಶಿವಭಕ್ತನಾದ, ವಿಕಟಚರಿತ್ರಂ- ವಿಸ್ತಾರವಾದ ಚರಿತ್ರೆಯುಳ್ಳ, ಅಕಳಂಕಂ- ನಿರ್ದುಷ್ಟನಾದ, ಕಣ್ಣಪಯ್ಯಂ, ಎಂಬ, ಪುಳಿಂದಂ- ಬೇಡನು, ರಂಜಿಪಂ. ॥೫೯॥

ಆಪುಳಿಂದಪತಿ, ಒಂದುದಿನಂ, ಬೇಂಟೆಗೆ, ಉಜ್ಜುಗಿಸಿ, ಸಜ್ಜುಗೆಯ್ದು- ಸನ್ನಾಹವಂಮಾಡಿ. * *

ತೊಳಗುವಪೀಲಿದುಡೆ- ಪ್ರಕಾಶಿಸುವ ನವಿಲಗರಿಯುಡುಗೆ, ಮಿಳಿರ್ದಾಡುವ-ಹೊರಳಾಡುವ, ನೆತ್ತಿಯ ತಲೆಯ ಮೇಲ್ಗಡೆಯಲ್ಲಿರುವ, ಚಾಮರಂ, ಮನಂಗೊಳಿಪ, ಎಳೆಮುತ್ತಿನ, ಎಕ್ಕಸರಂ- ಒಂದು ಸರ, ಉಟ್ಟತಳಿರ-ಚಿಗುರಿನ, ಉಡಿ, ಪಸುರಂಗಿ-ಹಸುರಬಣ್ಣದ ಅಂಗಿ, ಗುಂಜಿಕಾವಳಿಯ-ಗುಲುಗಂಜಿಗಳ, ಭೂಷಣಂ- ಆಭರಣ, ಪಿಡಿದ, ಬಿಲ್ಸರಲ್- ಬಿಲ್ಲು ಬಾಣ, ಅಂದವ- ಮನೋಹರವಾದ, ಬೆನ್ನ-ಬೆನ್ನಿನಲ್ಲಿರುವ,ಚೆನ್ನಬತ್ತಳಿಕೆ-ಸೊಗಸಾದ ಬತ್ತಳಿಕೆ,ಮರಂದದ, ಅಣ್ಪು-ಲೇಪನೆಯು,ಎಸೆಯೆ,ಉದಗ್ರಪುಳಿಂದನಾಯಕಂ, ಬಂದಂ. ॥೬೦॥

ಕಂ॥ ಬಿಡುವಲೆ ಬೆಳ್ಳಾರಂ ಪೆ। ರ್ದ್ದಡಿ ಬಡಿಕೋಲ್ಕೊಳಗಾಳ ಮಂಟಿಡುವಲೆ ಕೈ।
ಪ್ಪೊಡೆ ಬಿಲ್ಸರಲಡ್ಡಣ ಮೆರೆ। ಯುಡಿಗಲ್ಲಿಗಳೊಪ್ಪೆ ಬಂದರೊಡನೆ ಪುಳಿಂದರ್ ॥೬೧

ಚಂ॥ ತಳಿರುಡಿಯುಟ್ಟು ಪೀಲಿಯ ತರಂಗದ ಬಲ್ಸರಿಗಟ್ಟಿ ತೊಟ್ಟು ಮಂ। ಜುಳನವ
ಗುಂಜಿಕಾಭರಣಮಂ ಪೊಳೆವಚ್ಚೆಯ ಬೊಟ್ಟನಿಟ್ಟು ಪ॥ ಜ್ಜಳಿಪೆಳೆಮುತ್ತಿನೇಕಸರ
ಮೊಪ್ಪಿರೆ ಕತ್ತುರಿಯಣ್ಪುಗೆಯ್ದು ಕಂ। ಗೊಳಿಪ ಕಿರಾತೆಯರ್ಪಿಡಿದು ಬಿಲ್ಸರಲಂ ನಡೆ
ಗೊಂಡರೋಪರೊಳ್ ॥ ... ... ... ... ॥೬೨॥

ವ॥ ಅಂತೇಳ್ತಂದ ಬೇಡವಡೆಗೂಡಿ ಮೃಗಯಾಸಂಭ್ರಮಂ ಮಿಗೆ ಪಣೆಗೆಯ್ವುತ್ತ
ಮಲ್ಲಿ ನಿಜಬಲಕ್ಕೆ ಕೈವೀಸಲೊಡನೆ॥ * * * * * * * * * *

ಚಂ॥ ಸರಳಿಸುವೇಣ ನೋಡುವಮೊಲಂ ಬಿಡದಾಲಿಪದಂತಿ ನಿಲ್ವಸೂ। ಕರ ನಿರದೇ
ಳ್ದು ಮೈಮುರಿವ ಕೇಸರಿ ಪಾರುವ ಪಕ್ಕಿ ಪೊಕ್ಕು ಮೈ॥ ಗರೆವ ಮೃಗಾರಿ ಲಂಘಿಪ ವೃ
ಕಂ ಬಗೆಗುಂದುವ ಖಡ್ಗಿಯೆತ್ತಲುಂ। ನೆರೆದಿರೆ ಕಾಡೊಳುಣ್ಮಿದುದು ಬೇಡರ ಬೇಂಟೆಯ ವಾ
ದ್ಯದಬ್ಬರಂ ॥ ... ... ... ... ॥೬೩॥

ವ॥ ಆಗಳ್ ॥ ಮತ್ತೇ ॥ ತರುಶಾಖಾಗ್ರಮುಸೇರಿ ನೋಳ್ಪ ಮೆಳೆಪೊಕ್ಕಾರ

---

ಬಿಡುವಲೆ- ಸುತ್ತಲೂ ಬಿಡತಕ್ಕ ಬಲೆ, ಬೆಳ್ಳಾರಂ- ನಿಂತು ಬೀಸುವ ಬಲೆ, ಪೆರ್ದ್ದಡಿ- ದೊಡ್ಡದೊಣ್ಣೆ, ಬಡಿಕೋಲ್- ಮುಂದೆ ಗಂಟಿದ್ದು ಹಿಂದೆ ಸಣ್ಣಗಿರುವ ದೊಣ್ಣೆ, ಕೊಳಗಾಳಂ- ಆಹಾರವಂ ಸಿಕ್ಕಿಸಿ ಬಿಡುವ ಗಾಣ, ಅಂಟಿಡುವಲೆ- ಆಲ ಮುಂತಾದವುಗಳ ಅಂಟನ್ನು ಹತ್ತಿಸಿಇಡುವ ಬಲೆ, ಕೈಪೊಡೆ- ಬಾಣಕ್ಕೆ ಸೇರಿಸಿದ ಗರಿ,ಬಿಲ್, ಸರಲ್- ಬಾಣ, ಅಡ್ಡಣಂ-ಗುರಾಣಿ, ಎರೆ-ಎರೆಮಣ್ಣು,ಉಡಿಗಲ್ಲಿಗಳ್-ಕೊಂದ ಮೃಗಮತ್ಸ್ಯಾದಿಗಳಂ ತುಂಬುವ ಚೀಲ, ಇವುಗಳು, ಒಪ್ಪೆ ಪುಳಿಂದರ್, ಒಡನೆ, ಬಂದರ್. ... ... ॥೬೧॥

ತಳಿರ- ಚಿಗುರಿನ, ಉಡಿಯುಟ್ಟು- ಸೀರೆಯನುಟ್ಟು, ಪೀಲಿಯ- ನವಿಲಗರಿಯ, ತರಂಗದ-ತೆರೆಯಂತಿರುವ, ಬಲ್ಸರಿಗಟ್ಟಿ- ದೊಡ್ಡಸರಿಗೆಯಂ ಕಟ್ಟಿ, ಮಂಜುಳನವಗುಂಜಿಕಾಭರಣಮಂ, ತೊಟ್ಟು, ಪೊಳೆವಚ್ಚೆಯಬೊಟ್ಟಂ- ಹೊಳೆಯುವ ಪಚ್ಚೆಯ ಹಣೆಬಟ್ಟನ್ನು, ಇಟ್ಟು, ಪಜ್ಜಳಿಪ- ಪ್ರಜ್ವಲಿಸುವ, ಎಳೆಮುತ್ತಿನ, ಏಕಸರಂ, ಒಪ್ಪಿರೆ, ಕತ್ತುರಿಯ, ಅಣ್ಪುಗೆಯ್ದು- ಲೇಪನವಂ ಮಾಡಿ, ಬಿಲ್ಸರಲಂ, ಪಿಡಿದು, ಕಂಗೊಳಿಪ, ಕಿರಾತೆಯರ್- ಬೇಡರ ಹೆಂಗುಸರು, ಓಪರೊಳ್- ಪ್ರಿಯರೊಡನೆ, ನಡೆಗೊಂಡರ್, ... ॥೬೨॥

ಅಂತು, ಏಳ್ತಂದ, ಬೇಡವಡೆಗೂಡಿ- ಬೇಡರ ಸೈನ್ಯದಿಂ ಕೂಡಿ, ಮೃಗಯಾಸಂಭ್ರಮಂ- ಬೇಟೆಯ ಸಡಗರವು, ಮಿಗೆ, ಪಣೆಗಾಣುತ್ತಂ- ಮೃಗಗಳಿರುವ ಸ್ಥಾನವಂ ಕಾಣುತ್ತ, ಅಲ್ಲಿ, ನಿಜಬಲಕ್ಕೆ- ತನ್ನ ಸೈನ್ಯಕ್ಕೆ, ಕೈವೀಸಲ್, ಒಡನೆ. * * * * * * * * * * * * * * *

ಸರಳಿಸುವ- ಹಾರುವ, ಏಣಂ- ಗಂಡುಜಿಂಕೆ, ಓಡುವ, ಮೊಲಂ, ಬಿಡದೆ, ಆಲಿಪ- ಶಬ್ದವಂ ಕೇಳುವ, ದಂತಿ- ಆನೆ, ನಿಲ್ವ, ಸೂಕರಂ- ಹಂದಿ, ಉರಿದು- ಕೋಪದಿಂ ಬೆಂದು, ಏಳ್ದು, ಮೈಮುರಿವ, ಕೇಸರಿ- ಸಿಂಹ, ಪಾರುವ, ಪಕ್ಕಿ, ಪೊಕ್ಕು, ಮೈಗರೆವ- ಅಡಗಿಕೊಳ್ಳುವ, ಮೃಗಾರಿ- ಹುಲಿ, ಲಂಘಿಪ- ನೆಗೆಯುವ, ವೃಕಂ- ತೋಳ, ಬಗೆಗುಂದುವ- ಮನಸ್ಸುಕೊರಗುವ, ಖಡ್ಗಿ-ಘೇಂಡಾಮೃಗ, (ಇವುಗಳು) ಎತ್ತಲುಂ- ಎಲ್ಲಾಕಡೆಯಲ್ಲೂ, ನೆರೆದು- ಕೂಡಿ, ಇರೆ, ಕಾಡೊಳ್, ಬೇಡರ, ಬೇಂಟೆಯ, ವಾದ್ಯದ, ಅಬ್ಬರಂ- ಶಬ್ದವು, ಉಣ್ಮಿದುದು. ... ... ... ... ... ॥೬೩॥

ತರುಶಾಖಾಗ್ರಮಂ- ಮರದಕೊಂಬೆಯ ತುದಿಯನ್ನು, ಪರಿ- ಹತ್ತಿ, ನೋಳ್ಪ,ಮೆಳೆಪೊಕ್ಕು- ಸೊಪ್ಪು

ಯ್ವ ಸಾರ್ದೂಲ್ಗೞ್ ಬೇ । ಹರಿಸುತ್ತುಂ ಪೊದರಿಂ ತೆರಳ್ಚುವ ಜಲೋದ್ದೇಶಂಗಳೊಳ್ ತೀವಿ
ದೋ ॥ ವರಿಯೊಳ್ ಕಾವಡಿವಜ್ಜೆಯಂ ಪರಿಕಿಪಾರ್ಪಿಂ ಕಂಡೞುಂಬಂ ಮೃಗೋ । ತ್ಕರ
ಮಂ ಬೆಂಬೞಿಯಟ್ಟುವಗ್ಗದಕಿರಾತವ್ರಾತ ಮೇಂತೀವಿತೋ ॥ ... ... ॥೭೪॥

ಮ ॥ ಸ್ರ ॥ ಬಿಡು ಬೇಗಂ ನಾಯ್ಗಳಂ ಬಲ್ಬಲೆಯ ನಿಡು ಮೊಲಂ ಪುಲ್ಲೆ ಪೋದ
ಪ್ಪುದಾರ್ಪಿಂ । ಕೆಡಪೆತ್ತುಂ ಪತ್ತು ಸುತ್ತಾರ್ದ್ದಿಸೆ ಮಸೆ ಸರಲಂ ದ್ವೀಪಿಯಂ ಪೊಯ್ ಕರು
ತ್ತಿ ॥ ರ್ಕಡಿಗೆಯ್ ಬಲ್ಪಂದಿಯಂ ಖಡ್ಗಿಯ ಸಿರಿ ತಿವಿ ಮತ್ತೇಭಮಂ ಸಿಂಗಮಂ ಮೇ ।
ಣ್ಪೊಡೆ ಯೆಂದೆಂಬಬ್ಬರಂ ಪರ್ಬಿದುದು ವನಚರವ್ರಾತವಕ್ತ್ರಪ್ರಭೂತಂ ॥ ॥೭೫॥

ಮತ್ತೇ ॥ ಕರಿಯಂ ಕೊಂದು ಮೃಗಾರಿಯಂ ಸದೆದು ಸಾರಂಗಂಗಳಂ ಸೀಳ್ದು ಕೇ ।
ಸರಿಯಂ ಪೋೞ್ದು ವೃಕಂಗಳಂ ಬಡಿದು ಭಲ್ಲೂಕಂಗಳಂ ತೂೞ್ದು ಕಾ ॥ ಳ್ಮರೆಯಂ ಪೊ
ಯ್ದು ವರಾಹಮಂ ತಿವಿದು ಕಾೞ್ಕೋಣಂಗಳಂ ಬೀೞಲೆ । ಚ್ಚಿರದಾರ್ದ್ದಾಡಿದುದಲ್ಲಿ ವಿಕ್ರ
ಮಿಕಿರಾತಪ್ರೋತ್ಕರಂ ಬೇಂಟೆಯಂ ॥ ... ... ... ॥೭೬॥

ವ ॥ ಇಂತು ಪಲವೇಂಟೆಯುಂ ಬಿಯದರಾಗಹನಂಬಡೆದಾಡುತ್ತ ಮಿರ್ಪ್ಪಾಗಳ್ ॥ *

ಉ ॥ ಆಗಸದಲ್ಲಿ ಮೀಱಿ ಮಿಗೆ ಪಾರುವ ದಿವ್ಯಖಗಕ್ಕೆ ಭಿಲ್ಲರಿಂ । ಬಾಗಿರೆ ಬೀಸಿದೊ

---

ಸೆದೆಯುಂ ತುಂಬಿದ ಪೊದೆಯಂ ಹೊಕ್ಕು, ಆರಯ್ವ- ಪರೀಕ್ಷಿಸುವ, ಸಾರ್ದೂಲ್ಗಳ್- ಹೋದಕಡೆಯಲ್ಲಿ ಬೇಹರಿಸುತ್ತುಂ- ವಿಹರಿಸುತ್ತ, ಪೊದರಿಂ, ತೆರಳ್ಚುವ- ಈಚೆಗೆ ಹೊರಡಿಸುವ, ಜಲೋದ್ದೇಶಂಗಳೊಳ್- ನೀರಿರುವಸ್ಥಲಗಳಲ್ಲಿ, ತೀವಿದ, ಓವರಿಯೊಳ್- ಸಮೀಪದಲ್ಲಿ, ಕಾವ- ಕಾಣುವ, ಅಡಿವಜ್ಜೆಯಂ- ಕಾಲಿನ ಹೆಜ್ಜೆಯನ್ನು, ಪರಿಕಿಪ- ಪರೀಕ್ಷಿಸುವ, ಆರ್ಪಿಂ- ಶೌರ್ಯದಿಂದ, ಕಂಡು, ಅೞುಂಬಂ, ಮೃಗೋತ್ಕರಮಂ, ಬೆಂಬೞಿಯಟ್ಟುವ- ಬೆನ್ನಟ್ಟಿ ಓಡಿಸಿಕೊಂಡು ಹೋಗುವ, ಅಗ್ಗದಕಿರಾತವ್ರಾತಂ, ಏಂತೀವಿತೋ! ... ॥೭೪॥

ಬೇಗಂ, ನಾಯ್ಗಳಂ, ಬಿಡು; ಬಲ್ಬಲೆಯಿಂದು; ಮೊಲಂ, ಪುಲ್ಲೆ, ಪೋದಪ್ಪುದು, ; ಆರ್ಪಿಂ- ಶೌರ್ಯದಿಂದ, ಕೆಡಪು; ಪತ್ತು, ಸುತ್ತು, ಆರ್ದ್ದು- ಕೂಗಿ, ಇಸೆ- ಬಾಣಪ್ರಯೋಗವಂ ಮಾಡು, ಸರಲಂ, ಮಸೆ; ದ್ವೀಪಿಯಂ- ಹುಲಿಯನ್ನು, ಬಲ್ಪಂದಿಯಂ, ಕರುತ್ತು- ಕೋಪವಿಶಿಷ್ಟನಾಗಿ, ಇರ್ಕಡಿಗೆಯ್- ಎರಡುತುಂಡನ್ನು ಮಾಡು; ಖಡ್ಗಿಯಂ, ಇರಿ- ಕುಯ್; ಮತ್ತೇಭಮಂ- ಮದ್ದಾನೆಯನ್ನು, ತಿವಿ; ಸಿಂಗಮಂ- ಸಿಹ್ಮವನ್ನು, ಮೇಣ್, ಪೊಡೆ; ಎಂದೆಂಬ, ವನಚರವ್ರಾತವಕ್ತ್ರಪ್ರಭೂತಂ- ಬೇಡರ ಸಮೂಹದ ಬಾಯಿಂದಹೊರಟ, ಅಬ್ಬರಂ- ಕೂಗು, ಪರ್ಬಿದುದು- ಹಬ್ಬಿಕೊಂಡಿತು. ... ... ॥೭೫॥

ಅಲ್ಲಿ, ವಿಕ್ರಮಿಕಿರಾತಪ್ರೋತ್ಕರಂ- ಪರಾಕ್ರಮವಿಶಿಷ್ಟವಾದ ಬೇಡರ ಗುಂಪು, ಕರಿಯಂ- ಆನೆಯನ್ನು, ಕೊಂದು, ಮೃಗಾರಿಯಂ- ಹುಲಿಯನ್ನು, ಸದೆದು- ನಾಶಮಾಡಿ, ವೃಕಂಗಳಂ- ತೋಳಗಳನ್ನು, ಬಡಿದು, ಭಲ್ಲೂಕಂಗಳಂ- ಕರಡಿಗಳನ್ನು, ತೂೞ್ದು- ತುಳಿದು, ಕಾಳ್ಮರೆಯಂ- ಕಾಡುಕಿರುಬವನ್ನು, ಪೊಯ್ದು, ವರಾಹಮಂ- ಹಂದಿಯನ್ನು, ತಿವಿದು, ಕಾೞ್ಕೋಣಂಗಳಂ- ಕಾಡುಕೋಣಗಳನ್ನು, ಬೀೞಲ್- ಕೆಳಕ್ಕೆ ಬೀಳುವಹಾಗೆ, ಎಚ್ಚು- ಬಾಣದಿಂ ಹೊಡೆದು, ಇರದೆ, ಆರ್ದ್ದು- ಗಟ್ಟಿಯಾಗಿ ಕೂಗಿ, ಬೇಂಟೆಯಂ, ಆಡಿದುದು.

ಇಂತು, ಆಬಿಯದರ್- ಆ ಬೇಡರು, ಆಗಹನಂಬಡೆದು- ಆ ಕಾಡನ್ನಾಕ್ರಮಿಸಿ, ಪಲವೇಂಟೆಯಂ- ಅನೇಕ ಬೇಟೆಗಳನ್ನು, ಆಡುತ್ತಂ, ಇರ್ಪಾಗಳ್. * * * * * * * * * * *

ಆಗಸದಲ್ಲಿ- ಆಕಾಶದಲ್ಲಿ, ಮೀಱಿ, ಮಿಗೆ, ಪಾರುವ, ದಿವ್ಯಖಗಕ್ಕೆ-ಶ್ರೇಷ್ಠವಾದ ಹಕ್ಕಿಗೆ, (ಸೂರ್ಯನಿಗೆ) ಭಿಲ್ಲರ್- ಬೇಡರು, ಇಂಬಾಗಿರೆ- ಮನೋಹರವಾಗಿರುವಂತೆ, ಬೀಸಿದ, ಒಳ್ಪಲೆವೊಲ್- ಒಳ್ಳೆಬಲೆಯಹಾ

ಳ್ವಲೆವೊಲೊಪ್ಪಿರೆ ಸಂಜೆಯ ಕೆಂಪು ಸಿಲ್ಕಿತ | ದ್ವಾಗುರೆಯಲ್ಲಿ ಕಾಲುಡುಗಿ ಪಶ್ಚಿಮ
ವಾರ್ಧಿಗೆ ಬೀಳ್ವುದೆಂಬಿನಂ | ಬೇಗದೊ ಳಲ್ಲಿ ತಕ್ಷಗ ಮಡಂಗಿದು ದಾವೃತಲೋಹಿ
ತಾಂಶುಕಂ॥ ... ... ... ... ... ||೩೭||

ಕಂ॥ ಗಿರಿಕಟಕದಬಿಯುದರ ಕ | ರ್ಬ್ಬುರತನುರುಚಿ ಪರ್ಬ್ಬಿದತ್ತೊ ಪೇಳೆನೆ ಮರ್ಬ್ಬಾ॥
ವರಿಸಿದು ದಖಿಳದಿಶಾವ | ಲ್ಲರಿಗೆ ಮುಗುಳ್ಮೂಡಿದಂತಿ ರೊಗೆದುದು ಭಗಣಂ ॥ ||೩೮||

ಕಂ॥ ಪಿರಿದಂಧಕಾರಯಮುನಾ | ತರಂಗಿಣೀಜಲನಿಷಿಕ್ತ ಸುರಪದಿಶಾವ | ಲ್ಲರಿ ಲಕ್ಷ್ಮ
ಭೃಂಗನವಮಂ | ಜರಿಯಂ ಪಡೆದಂತಿರೊಗೆದುದೈಂದವಬಿಂಬಂ ॥ ... ||೩೯||

ಕಂ ॥ ಮೃಗಯಾಶ್ರಮಮಂ ತೊಲಗಿಸಿ | ಮಿಗೆ ನಿಜರುಚಿಯಿಂದಲರ್ಚಿ ಮುಡಯಿಸಿ
ನೈದಿ | ಲ್ಮುಗುಳಂ ಶಶಿಬಿಯದರ ನೋ | ಲಗಿಪಂತೆಸೆದಂ ನಿಜಾಂಕಮೃಗಹತಿಭಯದಿಂ ||

ವ ॥ ಆಗಳಾಪುಳಿಂದಪತಿಯುಪ್ಪ ಕಣ್ಣಪ್ಪಂ ಸಂಧ್ಯೋಚಿತಕ್ರಿಯಾನಿವರ್ತನಾನಂತ
ರಂ ನಿಜಬಲಸಮೇತ್ತಮೆಳ್ತಂದೊಂದು ಬಾಲಚೂತದೊವರಿಯ ಪಳಿಕುವಾಸರೆಯ ಕು
ಸುಮತಳ್ಪದೊಳ್ಮೈಯಿಕ್ಕಿ ನಿದ್ರೆಗೆಯ್ದಿರೆ ॥ * * * * * * * * *

---

ಗೆ, ಸಂಜೆಯು, ಕೆಂಪು, ಒಪ್ಪಿರೆ, ತದ್ವಾಗುರೆಯಲ್ಲಿ- ಆಬಲೆಯಲ್ಲಿ, ಸಿಲ್ಕಿ, ಕಾಲುಡುಗಿ- ಕಾಲ್ಮುರಿದು, ಪಶ್ಚಿಮವಾರ್ಧಿಗೆ- ಪಶ್ಚಿಮಸಮುದ್ರಕ್ಕೆ, ಬೀಳ್ವುದು, ಎಂಬಿನಂ- ಎಂಬುವಂತೆ, ಬೇಗದೊಳ್, ಅಲ್ಲಿ, ಆವೃತಲೋಹಿತಾಂಶುಕಂ- ಆವರಿಸಲ್ಪಟ್ಟ ಕೆಂಪುಬಟ್ಟೆಯುಳ್ಳ, (ಆವರಿಸಲ್ಪಟ್ಟ ಕೆಂಪುಕಿರಣವುಳ್ಳ) ತಕ್ಷಗಂ- ಆಪಕ್ಷಿಯು, (ಆ ಸೂರ್ಯನು) ಅಡಂಗಿದುದು. ... ... ... ... ||೩೭||

ಗಿರಿಕಟಕದ- ಪರ್ವತದ ತಪ್ಪಲಿನಲ್ಲಿರುವ, ಬಿಯದರ- ಬೇಡರ, ಕರ್ಬ್ಬುರತನುರುಚಿ- ಆಕಾಶದಂತಿರುವದೇಹದ ಕಾಂತಿಯು, ಪರ್ಬ್ಬಿದತ್ತೊ! ಪೇಳ್, ಎನೆ, ಮರ್ಬ್ಬು- ಕತ್ತಲೆಯು, ಆವರಿಸಿದುದು, ಅಖಿಳದಿಶಾವಲ್ಲರಿಗೆ- ಸಮಸ್ತದಿಕ್ಕೆಂಬ ಬಳ್ಳಿಗೆ, ಮುಗುಳ್- ಮೊಗ್ಗುಗಳು, ಮೂಡಿದಂತಿರೆ- ಹುಟ್ಟಿದಹಾಗೆ, ಭಗಣಂ- ನಕ್ಷತ್ರಸಮೂಹವು, ಒಗೆದುದು- ಹುಟ್ಟಿತು. ... ... ... ... ||೩೮||

ಪಿರಿದು- ಹೆಚ್ಚಾಗಿ, ಅಂಧಕಾರ......ವಲ್ಲರಿ—ಅಂಧಕಾರ- ಕತ್ತಲೆಯೆಂಬ, ಯಮುನಾತರಂಗಿಣೀಜಲ- ಯಮುನಾನದಿಯ ನೀರಿನಿಂದ, ನಿಷಿಕ್ತ- ಸೇಚಿಸಲ್ಪಟ್ಟ, ಸುರಪದಿಶಾವಲ್ಲರಿ- ಇಂದ್ರದಿಕ್ಕೆಂಬಬಳ್ಳಿಯು, ಲಕ್ಷ್ಮಭೃಂಗನವಮಂಜರಿಯಂ- ಕಳಂಕೆಂಬ ಭ್ರಮರವುಳ್ಳ ಹೊಸಪುಷ್ಪಗುಚ್ಛವನ್ನು, ಪಡೆದಂತಿರೆ, ಐಂದವಬಿಂಬಂ- ಚಂದ್ರಮಂಡಲವು, ಒಗೆದುದು. ... ... ... ... ||೩೯||

ಶಶಿ- ಚಂದ್ರನು, ನಿಜಾಂಕಮೃಗಹತಿಭಯದಿಂ- ತನ್ನ ಲಾಂಛನವಾದ ಜಿಂಕೆಯಂ ಹೊಡೆಯುವರೆಂಬಭಯದಿಂದ, ಮೃಗಯಾಶ್ರಮಮಂ- ಬೇಟೆಯಿಂದುಂಟಾದ ಆಯಾಸವನ್ನು, ನಿಜರುಚಿಯಿಂದೆ- ತನ್ನ ಕಾಂತಿಯಿಂದ, ಮಿಗೆ, ತೊಲಗಿಸಿ- ಹೋಗಲಾಡಿಸಿ, ನೈದಿಲ್ಮುಗುಳಂ-ನೈದಿಲೆಯ ಮೊಗ್ಗನ್ನು, ಅಲರ್ಚಿ, ಮುಡಿಯಿಸಿ- ತಲೆಯಲ್ಲಿ ಧರಿಸಿಸಿ, ಬಿಯದರಂ- ಬೇಡರನ್ನು, ಓಲಗಿಪಂತೆ-ಸೇವಿಸುವಹಾಗೆ, ಎಸೆದಂ. ... ||೪೦||

ಆಗಳ್, ಆಪುಳಿಂದಪತಿಯುಪ್ಪ, ಕಣ್ಣಪ್ಪಂ, ಸಂಧ್ಯೋಚಿತಕ್ರಿಯಾನಿವರ್ತನಾನಂತರಂ- ಸಂಜೆಯಲ್ಲಿ ಮಾಡುವದಕ್ಕೆ ಯೋಗ್ಯವಾದ ಕಾರ್ಯಗಳನ್ನು ನೆರವೇರಿಸಿದಮೇಲೆ, ನಿಜಬಲಸಮೇತಂ- ತನ್ನ ಸೈನ್ಯದೊಡನೆಕೂಡಿ, ಎಳ್ತಂದು, ಬಾಲಚೂತದ- ಎಳೆಮಾವಿನ, ಓವರಿಯ- ಬಳಿಯಲ್ಲಿರುವ, ಪಳಿಕುವಾಸರೆಯ- ಸ್ಫಟಿಕದ ಹಾಸುಗಲ್ಲಿನಲ್ಲಿರುವ, ಕುಸುಮತಳ್ಪದೊಳ್- ಹೂವಿನ ಹಾಸಿಗೆಯಲ್ಲಿ, ಮೈಯಿಕ್ಕಿ, ನಿದ್ರೆಗೆಯ್ದಿರೆ. * * * * * * * * * * * * * * * * *

ಚಂ ॥ ಕನಸಿನೊಳೈದಿ ಕಾಲಹರನೊಪ್ಪುವ ತಾಪಸವೇಷದಿಂ ನೊಸ | ಲ್ಗನುಪಮ ಭೂತಿಯಂ ಧರಿಸಿ ತಚ್ಛಿರದೊಳ್ಕರವಿಟ್ಟು ಪೇಳ್ದ ಮೆ | ಲ್ಲನೆ ಶಿವಮಂತ್ರಮಂ ಕಿವಿಯೊ ಳೀವನದೊಳ್ಶಿವಲಿಂಗ ಮಿರ್ಕುಮೊ | ಲ್ದನುನಯದಿಂ ಸಮರ್ಚಿಪುದೆನುತ್ತೊರೆದೈದಿದ ನಾಮಹೇಶ್ವರಂ ॥ ... ... ... .. ॥೭೧॥

ವ ॥ ಅಲ್ಲಿಂ ಬಳಿಯಂ ನೆಳ್ಚತ್ತು ಕನಸನೆನಿಸುಂ ನಿಜಮೆಂದು ಬಗೆದಾಪುಳಿಂದಂ ಮುಂದಳೆದಿರ್ಪ್ಪಾಗಳ್ ॥ * * * * * * * * * * * * *

ಶಾ॥ ತಾರಾಕೋರಕ ಮಂಕಮಪ್ಪದಮಿಳಚ್ಚಂದ್ರಪ್ರಸೂನಂ ಪಯೋ | ಜಾರಿಗ್ರಾವ ಕದಂಬಕಂದ ಮಮಳಜ್ಯೋತ್ಸ್ನಾಲತಾಕುಂಜಮಾ | ಭ್ರಾರಣ್ಯಕ್ಕುಡರ್ದೊಪ್ಪೆ ಪತ್ತಿದುದ ದೆತ್ತಂ ಕುಂದಿಮೈಗುಂದೆ ಜಂ|ಭಾರಾತಿಕ್ಷಿತಿಭೃತ್ಪ್ರಭೂತಮರುಣಪ್ರದ್ಯೋತದಾವಾನಲಂ॥

ವ ॥ ಆಗಳ್ಯಥೋಚಿತಪ್ರಾತರಾಚಾರನಿವರ್ತನಾನಂತರಂ ಕಣ್ಣಪ್ಪದೇವ ನಲ್ಲಿಂದೇಳ್ದು ಬರ್ಪನ್ನೆಗಂ ಮುಂದೆ ಮುನ್ನೆಂದು ಮಿಲ್ಲದೊಂದು ಕಿರಿವಟ್ಟೆಯಿರೆ ಕಂಡು ವಿಸ್ಮಯಂ ಮುತ್ತು ಕನಸಿನ ಫಲಂ ನಿಜಮಾದುದೆಂದುತ್ಸವಿಸಿ ತನ್ಮಾರ್ಗಂಬಿಡದೇಳ್ತಂದನತಿದೂರ ದೊಳ್ಕಂಗೊಳಿಪ ಶಿವಲಿಂಗಮಂ ಕಂಡು॥ * * * * * * * * * *

---

ಕಾಲಹರಂ- ಯಮನಾಶಕನಾದ ಶಿವನು, ಒಪ್ಪುವ, ತಾಪಸವೇಷದಿಂ- ಪ್ರಕಾಶಿಸುವಋಷಿವೇಷದಿಂದ, ಕನಸಿನೊಳ್, ಐದಿ, ನೊಸಲ್ಗೆ- ಹಣೆಗೆ, ಅನುಪಮಭೂತಿಯಂ- ಅಸದೃಶವಾದ ಭಸ್ಮವನ್ನು, ಧರಿಸಿ, ತಚ್ಛಿರದೊಳ್- ಆ ಕಣ್ಣಪ್ಪನ ತಲೆಯಲ್ಲಿ, ಕರವಿಟ್ಟು, ಕಯ್ಯನಿಟ್ಟು, ಮೆಲ್ಲನೆ, ಕಿವಿಯೊಳ್, ಶಿವಮಂತ್ರಮಂ- ಪಂಚಾಕ್ಷರಿಮಂತ್ರವನ್ನು, ಪೇಳ್ದು, ಈವನದೊಳ್, ಶಿವಲಿಂಗಂ, ಇರ್ಕುಂ, ಒಲ್ದು- ಪ್ರೀತಿಸಿ, ಅನುನಯದಿಂ- ವಿಶ್ವಾಸದಿಂದ, ಸಮರ್ಚಿಪುದು- ಪೂಜಿಸುವದು, ಎನುತ್ತೆ, ಒರೆದು- ಹೇಳಿ, ಆಮಹೇಶ್ವರಂ, ಐದಿದಂ. ॥೭೧॥

ಅಲ್ಲಿಂಬಳಿಯಿಂ- ಅಲ್ಲಿಂದನಂತರ, ಆಪುಳಿಂದಂ, ಎಳ್ಚತ್ತು- ಎಚ್ಚರಂಗೊಂಡು, ಎನಿಸುಂ- ಎಷ್ಟುಮಾತ್ರಕ್ಕೂ, ನಿಜಂ- ನಿಶ್ಚಯ, ಎಂದು, ಬಗೆದು- ಆಲೋಚಿಸಿ, ಮುಂದಂದಳೆದು, ಇರ್ಪಾಗಳ್. * * *

ತಾರಾಕೋರಕಂ- ನಕ್ಷತ್ರಗಳೆಂಬ ಮೊಗ್ಗುಳ್ಳ, ಅಂಕಮಪ್ಪದಮಿಳಚ್ಚಂದ್ರಪ್ರಸೂನಂ-ಕಳಂಕವೆಂಬ ಭ್ರಮರದಿಂ ಕೂಡಿದ ಚಂದ್ರನೆಂಬ ಹೂವುಳ್ಳ, ಪಯೋಜಾರಿಗ್ರಾವಕದಂಬಕಂದಂ— ಪಯೋಜಾರಿಗ್ರಾವ- ಚಂದ್ರಕಾಂತಶಿಲೆಗಳ, ಕದಂಬ- ಸಮೂಹವೆಂಬ, ಕಂದಂ- ಗೆಡ್ಡೆಯುಳ್ಳ, ಅಮಳಜ್ಯೋತ್ಸ್ನಾಲತಾಕುಂಜಂ-ನಿರ್ಮಲವಾದ ಬೆಳ್ದಿಂಗಳೆಂಬ ಬಳ್ಳಿಯಹೊದರೆಯು, ಅಭ್ರಾರಣ್ಯಕ್ಕೆ- ಆಕಾಶವೆಂಬ ಕಾಡಿಗೆ, ಉಡರ್ದು- ಹತ್ತಿ, ಒಪ್ಪೆ, ಅದು- ಆ ಪೊದರೆಯು, ಎತ್ತಂ- ಎಲ್ಲಾಕಡೆಯಲ್ಲೂ, ಕುಂದಿ, ಮೈಗುಂದೆ- ಕ್ಷೀಣವಾಗುವ ಹಾಗೆ, ಜಂಭಾ......ಪ್ರಭೂತಂ— ಜಂಭಾರಾತಿಕ್ಷಿತಿಭೃತ್- ಇಂದ್ರದಿಕ್ಕಿನಲ್ಲಿರುವ ಪರ್ವತದಲ್ಲಿ, ಪ್ರಭೂತ- ಉತ್ಪನ್ನವಾದ, ಅರುಣಪ್ರದ್ಯೋತದಾವಾನಲಂ- ಕೆಂಪಾದ ಕಾಂತಿಯುಳ್ಳ ಸೂರ್ಯನೆಂಬ ಕಾಳ್ಗಿಚ್ಚು, ಪತ್ತಿದುದು- ಹತ್ತಿಕೊಂಡಿತು. ... ... ... ... ॥೭೨॥

ಆಗಳ್, ಕಣ್ಣಪ್ಪದೇವಂ, ಯಥೋಚಿತಪ್ರಾತರಾಚಾರನಿವರ್ತನಾನಂತರಂ-ಯಥಾಯೋಗ್ಯವಾದಪ್ರಾತಃಕಾಲದ ಆಚಾರಗಳನ್ನು ನೆರವೇರಿಸಿದಮೇಲೆ, ಅಲ್ಲಿಂದೆ, ಏಳ್ದು, ಬರ್ಪನ್ನೆಗಂ- ಬರುವಷ್ಟರಲ್ಲಿ, ಮುಂದೆ- ಮುಂಗಡೆಯಲ್ಲಿ, ಮುನ್ನ- ಮೊದಲು, ಎಂದುಂ- ಯಾವಾಗಲೂ, ಇಲ್ಲದ, ಒಂದುಕಿರಿವಟ್ಟೆ- ಒಂದುಚಿಕ್ಕಮಾರ್ಗವು, ಇರೆ, ಕಂಡು, ವಿಸ್ಮಯಂಮುತ್ತು- ಆಶ್ಚರ್ಯವನ್ನು ಹೊಂದಿ, ಕನಸಿನ, ಫಲಂ, ನಿಜಂ, ಆದುದು, ಎಂದು ಉತ್ಸವಿಸಿ- ಸಂತೋಷಪಟ್ಟು, ತನ್ಮಾರ್ಗಂಬಿಡದೆ, ಏಳ್ತಂದು, ಅನತಿದೂರದೊಳ್- ಸ್ವಲ್ಪ ದೂರದಲ್ಲಿ, ಕಂಗೊಳಿಪ, ಶಿವಲಿಂಗಮಂ, ಕಂಡು. * * * * * * * * * * * * *

ಕಂ ॥ ಕಳೆಯೇರೆ ಕರಣಸಂಕುಳ । ಮಳಿಪಿಂ ನಡೆನೋಡಿ ನಲಿದು ನಮಿಸುತ್ತೆ ಕೂ
ರ್ಪ್ಪ ॥ ಗ್ಗಳಿಸಿ ಬಿಗಿದಪ್ಪಿ ರಾಗಾ । ವಿಳಮತಿ ಮತ್ಪ್ರಾಣಲಿಂಗ ಮಿದು ನಿಜಮೆಂದಂ ॥೭೩॥

ವ ॥ ಎಂದು ನಂಬಿ ನಚ್ಚಿ ನಲವೇರಿ ತಲ್ಲಿಂಗಮ ನಭೀಕ್ಷಿಸಿ ॥ * * * *

ಕಂ ॥ ಗಿರಿತನಯಾಗಂಗಾಂಬಿಕೆ । ಯರ ಕಲಹಕ್ಕಗಿದು ಬಂದು ಪೊಕ್ಕೆಯೊವಿಪಿನಾಂ ।
ತರಮಂ ಪುಲ್ಮೇಯಿಸಲೆಂ । ದುರುವೃಷಭನ ನಿಲ್ಲಿಗೈದಿದೆಯೊ ಪೇಳ್ಭವ ॥ ... ॥೭೪॥

ಕಂ ॥ ಅಯ್ಯ ಮರೆ ಬೇಡ ಪೇಳ್ಬಲ । ಗಯ್ಯೆಡೆಗಿನ್ನೊಂದು ಪುಲ್ಲಿಯಂ ಪಿಡಿಯ
ಲ್ಕಂ ॥ ದೊಯ್ಯನೆ ಬಂದೆಯೊ ನಿಗಮದ । ಪುಯ್ಯಲ್ಗೊಳಗಾಗದಿಲ್ಲಿ ಮಯ್ಗರೆದೆಯೊಪೇಳ್ ॥

ಉ ॥ ಉಟ್ಟ ಚಮೂರುಕೃತ್ತಿ ಪಳದಾಯ್ತು ನವೀನಮೃಗಾರಿಚರ್ಮಮಂ । ನೆಟ್ಟ
ನೆ ಕೊಳ್ವೆನೆಂದೆಳಸಿ ಪೊಕ್ಕೆಯೊ ಮೌಳಿಶಶಿಕ್ಷಯಕ್ಕೆ ಕಾ ॥ ಳ್ಪುಟ್ಟನ ಮರ್ದ್ದ ನೊಲ್ದರ
ಸಲೆಯ್ದಿದೆಯೋ ತಿರಿದುಂಡು ತೃಪ್ತಿಮೇ । ಣ್ಪುಟ್ಟದೆ ಕಾಡ ಪಣ್ಗೆಳಸಿ ಮೆಲ್ಲೊಡೆ ಬಂದೆ
ಯೊ ಪೇಳ್ಮಹೇಶ್ವರ ॥ ... ... ... ... ॥೭೬॥

ಕಂ ॥ ಕಲಿಪಾರ್ಥನಿಷ್ಟಮಂ ಕುಡ । ಲೊಲವಿಂ ವಿಪಿನಕ್ಕೆ ಬಂದತೆರದಿಂದು ಕೇ ॥ ಳೆ
ಲೆದೇವ ಮಾಣದೆನ್ನಂ । ಸಲಹಲ್ಬಗೆದಿಲ್ಲಿಗೆಯ್ದಿದೆಯೊ ಪೇಳ್ಭವ ॥ .. ॥೭೭॥

---

ಕರಣಸಂಕುಳಂ- ಇಂದ್ರಿಯಸಮೂಹವು, ಕಳೆಯೇರೆ, ಅಳಿಪಿಂ- ಪ್ರೀತಿಯಿಂದ, ನಡೆ- ಚೆನ್ನಾಗಿ,ನೋಡಿ, ನಲಿದು- ಸಂತೋಷಪಟ್ಟು, ನಮಿಸುತೆ- ನಮಸ್ಕರಿಸುತ್ತ, ಕೂರ್ಪ್ಪು- ಪ್ರೀತಿಯು, ಅಗ್ಗಳಿಸಿ- ಅಧಿಕವಾಗಿ, ಬಿಗಿದು, ಅಪ್ಪಿ- ಆಲಂಗಿಸಿ, ರಾಗಾವಿಳಮತಿ- ಅನುರಾಗದಿಂ ವ್ಯಾಪ್ತವಾದ ಬುದ್ಧಿಯುಳ್ಳವನಾಗಿ, ಇದು, ಮತ್ಪ್ರಾಣಲಿಂಗಂ- ನನ್ನ ಪ್ರಾಣಲಿಂಗವು, ನಿಜಂ, ಎಂದಂ. ... ... ॥೭೩॥

ಎಂದು, ನಂಬಿ, ನಚ್ಚಿ- ವಿಶ್ವಾಸಪಟ್ಟು, ನಲವೇರಿ- ಸಂತೋಷವಿಶಿಷ್ಟನಾಗಿ, ತಲ್ಲಿಂಗಮಂ, ಅಭೀಕ್ಷಿಸಿ-ನೋಡಿ. * * * * * * * * * * * * * * * *

ಅಭವ! ಗಿರಿತನಯಾಗಂಗಾಂಬಿಕೆಯರ- ಗೌರಿ ಗಂಗಮ್ಮನವರ, ಕಲಹಕ್ಕೆ- ಜಗಳಕ್ಕೆ, ಅಗಿದು- ಭಯಪಟ್ಟು, ಬಂದು, ವಿಪಿನಾಂತರಮಂ- ಕಾಡಿನ ಮಧ್ಯಭಾಗವನ್ನು, ಪೊಕ್ಕೆಯೊ? ಉರುವೃಷಭನಂ- ದೊಡ್ಡ ಬಸವನನ್ನು, ಪುಲ್ಮೇಯಿಸಲೆಂದು, ಇಲ್ಲಿಗೆ, ಎಯ್ದಿದೆಯೊ? ಪೇಳ್. ... ... ॥೭೪॥

ಅಯ್ಯ! ಮರೆ- ಮುಚ್ಚುವಿಕೆಯು, ಬೇಡ; ಬಲಗಯ್ಯ, ಎಡೆಗೆ- ಸ್ಥಳಕ್ಕೆ, ಇನ್ನೊಂದುಪುಲ್ಲಿಯಂ, ಪಿಡಿಯಲ್ಕೆಂದು. ಒಯ್ಯನೆ- ಮೆಲ್ಲಗೆ, ಬಂದೆಯೊ? ಪೇಳ್, ನಿಗಮದ- ವೇದಗಳ, ಪುಯ್ಯಲ್ಗೆ- ಕೂಗಿಗೆ, ಒಳಗಾಗದೆ, ಇಲ್ಲಿ, ಮೆಯ್ಗರೆದೆಯೊ- ಅಡಗಿಕೊಂಡೆಯೋ? ಪೇಳ್, ... ... ॥೭೫॥

ಮಹೇಶ್ವರ! ಉಟ್ಟ,ಚಮೂರುಕೃತ್ತಿ-ಜಿಂಕೆಯಚರ್ಮವು,ಪಳದಾಯ್ತು; ನವೀನಮೃಗಾರಿಚರ್ಮಮಂ- ಹೊಸಹುಲಿಯ ಚರ್ಮವನ್ನು, ನೆಟ್ಟಗೆ, ಕೊಳ್ವೆಂ-ಸ್ವೀಕರಿಸುವೆನು; ಎಂದು, ಎಳಸಿ- ಅಪೇಕ್ಷಿಸಿ, ಪೊಕ್ಕೆಯೊ? ಮೌಳಿಶಶಿಕ್ಷಯಕ್ಕೆ-ಕಿರೀಟದಲ್ಲಿರುವಚಂದ್ರನಕ್ಷಯರೋಗಕ್ಕೆ, (ಕ್ಷೀಣತೆಗೆ) ಕಾಳ್ಪುಟ್ಟನ-ಕಾಡಿನಲ್ಲಿಹುಟ್ಟಿದ ಮೂಲಿಕೆಗಳ, ಮರ್ದ್ದಂ- ಔಷಧವನ್ನು, ಒಲ್ದು, ಅರಸಲ್-ಹುಡುಕುವದಕ್ಕೆ, ಎಯ್ದಿದೆಯೊ-ಬಂದೆಯೋ? ತಿರಿದು,ಉಂಡು,ತೃಪ್ತಿ, ಮೇಣ್, ಪುಟ್ಟದೆ,ಕಾಡ,ಪಣ್ಗೆ, ಎಳಸಿ, ಮೆಲ್ವೊಡೆ- ತಿನ್ನುವದಕ್ಕೆ, ಬಂದೆಯೊ? ಪೇಳ್.

ಅಭವ! ಕೇಳ್; ಕಲಿಪಾರ್ಥನ- ಸಮರ್ಥನಾದ ಅರ್ಜುನನ, ಇಷ್ಟಮಂ, ಕುಡಲ್ ಕೊಡುವದಕ್ಕೆ, ಒಲವಿಂ- ಪ್ರೀತಿಯಿಂದ, ವಿಪಿನಕ್ಕೆ- ಕಾಡಿಗೆ. ಬಂದತೆರದಿಂದಂ, ಎಲೆದೇವ! ಮಾಣದೆ- ಬಿಡದೆ, ಎನ್ನಂ, ಸಲಹಲ್- ಸಂರಕ್ಷಿಸುವದಕ್ಕೋಸ್ಕರ, ಬಗೆದು- ಯೋಚಿಸಿ, ಇಲ್ಲಿಗೆ, ಎಯ್ದಿದೆಯೊ? ಪೇಳ್. ... ॥೭೭॥

ಕಂ ॥ ಪರ್ವಿದ ಘೋರಾರಣ್ಯದೊ । ಳೋರ್ವನೆ ನೀನಿಂತುಟಿರ್ಪುದುಚಿತಮೆ ನಿನ್ನಂ ॥ ಕೊರ್ವಿದ ಚೇಚರ್ಕಂಡೊಡೆ ಗುರ್ವಿಸಿ ಕುಣಿಯಿಸದೆ ಕಾಡದೇನಿರ್ದಪರೇ ॥ ॥೭೮॥

ಚಂ ॥ ಅಡವಿಯ ಸ್ವಸಂತತಿ ಭವನ್ಮಕುಟಾಗ್ರದ ಚಂದ್ರಲೇಖೆಗಂ । ಡೊಡೆ ಕಡುಪಿಂ ತುಡುಂಕದೆ ಕರಾಗ್ರದ ಪುಲ್ಲಿಯು ನಿಲ್ಲಿಸೆಯ್ದಿ ಕಂ ॥ ಡೊಡೆ ಪುಲಿ ಪೋಯ್ಯದಿರ್ದಪುದೆ ತೊಟ್ಟ ಹಿವೃಂದಮನೋಕ್ಷ ಬರ್ಹಿ ಕಂ । ಡೊಡೆ ಕಡಿದಿಕ್ಕದಿರ್ಕುಮೆ ವಿಚಾರಿಸದಳ್ಕದೆ ಕೆಮ್ಮನಿರ್ಪವೆ ॥ ... ... ... ॥೭೯॥

ಕಂ ॥ ಬಿಡು ನಿನ್ನ ಮರುಳ್ತನಮಂ । ನಡೆ ಯೆಮ್ಮಯ ಪಕ್ಕಣಕ್ಕೆ ನಿನ್ನ ನಜಸ್ರಂ ॥ ನಡೆ ನೋಡಿ ಪೊರೆವೆ ನೆನ್ನಯ ॥ ನುಡಿ ತೊದಳಲ್ತಲ್ತು ಮುಂದೆ ನೀಂ ಕಾಣ್ಬೆಯದಂ ॥೮೦॥

ಕಂ ॥ ಎಳಸಿದ ... ಸಪಲಲಾ । ವಳಿ ಮಧುಮಧುರಂ ಫಲಾಳಿ ಪೆರ್ಮರೆವಾಲ್ಸಂ ॥ ಗಳಿಸಿದ ಬಿಬಿರಕ್ಕಿಯ ... ॥ ಜುಳಪಾಯಸ ವೆಳವು ಮದ್ಗೃಹದೊಳನವರತಂ ॥೮೧॥

ಚಂ ॥ ಮುಡಿಪ್ಪೊಡೆ ... ಕಾಡಮಲ್ಲಿಗೆಗಳುಂಟುಡಲಗ್ಗದಪೀಲಿಯುಂಟು ಮೇ । ಣ್ತೊಡುವೊಡೆ ಗುಂಜಿಕಾಭರಣ ... ಭಮೌಕ್ತಿಕಮುಂಟು ಮಾಣದ ॥ ಣ್ಪಿಡುವೊಡೆ ಚಂದನಪ್ರಸರಮುಂಟು ಮೃಗೋದ್ಭವಮುಂಟು ಕೇಳಿಯೊಳ್ । ತೊಡರ್ವೊಡೆ ಕೀರಶಾರಿಕೆಗಳೊಳ್ನುಡಿ ಯುಂಟು ಮದೀ... ಯಗೇಹದೊಳ್ ॥ ... ... ... ॥೮೨॥

---

ನೀಂ, ಓರ್ವನೆ, ಪ... ಹಬ್ಬಿದ, ಘೋರಾರಣ್ಯದೊಳ್- ಭಯಂಕರವಾದ ಕಾಡಿನಲ್ಲಿ, ಇಂತುಟು- ಹೀಗೆ, ಇರ್ಪುದು, ಉಚಿತಮೆ ... ನಿನ್ನಂ, ಕೊರ್ವಿದ- ಕೊಬ್ಬಿದ, ಚಂಚರ್- ಕಾಡುಚಂಚರು, ಕಂಡೊಡೆ- ಕಂಡರೆ, ಅಗುರ್ವಿಸಿ- ಭಯಪಡಿಸಿ ... ಕುಣಿಯಿಸದೆ, ಕಾಡದೆ- ಪೀಡಿಸದೆ, ಇರ್ದಪರೇಂ? ... ... ॥೭೮॥

ಅಡವಿಯ, ಸಪ...ಸಂತತಿ, ಭವನ್ಮಕುಟಾಗ್ರದ- ನಿನ್ನ ಕಿರೀಟದ ಮೇಲಿರುವ, ಚಂದ್ರಲೇಖೆಗಂಡೊಡೆ, ಕಡುಪಿಂ- ಪರಾಕ್ರಮ...ದ, ತುಡುಂಕದೆ- ಹಿಡಿದುಕೊಳ್ಳುವದಿಲ್ಲವೇ? ಪುಲಿ, ಇಲ್ಲಿಗೆ, ಎಯ್ದಿ, ಬಂದು, ಕರಾಗ್ರದ- ನಿನ್ನ ಕಯ್ಯಿನ ತುದಿಯಲ್ಲಿರುವ, ಪುಲ್ಲೆಯಂ, ಕಂಡೊಡೆ, ಪೊಯ್ಯದೆ- ಹೊಡೆಯದೆ, ಇರ್ದಪುದೆ? ಬರ್ಹಿ- ನವಿಲು, ತೊಟ್ಟ- ನೀನ್ಧರಿಸಿದ, ಅಹಿವೃಂದಮಂ- ಸರ್ಪಸಮೂಹವನ್ನು, ಕಂಡೊಡೆ, ಓವೊ! ಕಡಿದು, ಇಕ್ಕದೆ, ಇರ್ಕುಮೆ? ವಿಚಾರಿಸದೆ, ಅಳ್ಕದೆ- ಭಯಪಡದೆ, ಕೆಮ್ಮನೆ- ಸುಮ್ಮನೆ, ಇರ್ಪವೆ? ... ॥೭೯॥

ನಿನ್ನ, ಮರುಳ್ತನಮಂ- ಹುಚ್ಚುತನವನ್ನು, ಬಿಡು; ಎಮ್ಮಯ, ಪಕ್ಕಣಕ್ಕೆ- ಮನೆಗೆ, ನಡೆ; ನಿನ್ನಂ, ಅಜಸ್ರಂ- ಯಾವಾಗಲೂ, ನಡೆ- ಚೆನ್ನಾಗಿ, ನೋಡಿ, ಪೊರೆವೆಂ- ರಕ್ಷಿಸುವೆನು; ಎನ್ನಯ, ನುಡಿ, ತೊದಳ್- ಸುಳ್ಳು, ಅಲ್ತು, ಅಲ್ತು, ಮುಂದೆ, ಇದು- ಆಮಾತನ್ನು, ನೀಂ, ಕಾಣ್ಬೆ- ಕಾಣುವೆ. ... ॥೮೦॥

ಎಳಸಿದ- ಅಪೇಕ್ಷಿಸಿದ, ನಾನಾಪಲಲಾವಳಿ- ಅನೇಕವಿಧವಾದ ಮಾಂಸದ ಸಮೂಹ, ಮಧುಮಧುರಂ- ಜೇನುತುಪ್ಪದಂತೆ ಸಿಹಿಯಾದ, ಫಲಾಳಿ- ಹಣ್ಣುಗಳ ಸಮೂಹ, ಪೆರ್ಮರೆವಾಲ್- ದೊಡ್ಡಕಿರುಬದ ಹಾಲು, ಸೆಂಗಳಿಸಿದ, ಬಿಬಿರಕ್ಕಿಯು, ಮಂಜುಳಪಾಯಸಂ, ಮದ್ಗೃಹದೊಳ್, ಅನವರತಂ, ಒಳವು- ಉಂಟು. ॥೮೧॥

ಮದೀಯಗೇಹದೊಳ್- ನಮ್ಮ ಮನೆಯಲ್ಲಿ, ಮುಡಿಪೊಡೆ- ಮುಡಿದುಕೊಳ್ಳಬೇಕಾದರೆ, ಕಾಡಮಲ್ಲಿಗೆಗಳ್, ಉಂಟು; ಉಡಲ್, ಅಗ್ಗದ- ಶ್ರೇಷ್ಠವಾದ, ಪೀಲಿ- ನವಿಲಗರಿಯು, ಉಂಟು, ಮೇಣ್, ತೊಡುವೊಡೆ, ಗುಂಜಿಕಾಭರಣಂ, ಉಂಟು, ಇಭಮೌಕ್ತಿಕಂ- ಆನೆಯತಲೆಯ ಮುತ್ತು, ಉಂಟು; ಮಾಣದೆ, ಅಣ್ಪಿಡುವೊಡೆ- ಲೇಪಿಸಿಕೊಳ್ಳಬೇಕಾದರೆ, ಚಂದನಪ್ರಸರಂ- ಶ್ರೀಗಂಧಸಮೂಹವು, ಉಂಟು; ಮೃಗೋದ್ಭವಂ- ಕಸ್ತೂರಿಯು, ಉಂಟು; ಕೇಳಿಯೊಳ್- ಕ್ರೀಡೆಯಿಂದ, ತೊಡರ್ವೊಡೆ- ಸಂಬಂಧಿಸಬೇಕಾದರೆ, ಕೀರಶಾರಿಕೆಗಳ- ಗಂಡು ಹೆಣ್ಣು ಗಿಳಿಗಳ, ಒಳ್ನುಡಿ, ಉಂಟು. ... ... ... ॥೮೨॥



ಚಂ॥ ಸುಮತಿಗಳಾಂತು ಘೋರತಪಮಂ ಭಜಿಸುತ್ತಿರೆ ತನ್ನನದ್ರಿಜಾ। ರಮಣನೊಲಲ್ದು ಮೆಚ್ಚಿ ನಿಜರೂಪದೆ ನಿಂದು ಮುಕುಂದಪದ್ಮಜೇಂ॥ ದ್ರಮಹಿತಸಂಪದಂಗಳೊಳಗಿಷ್ಟಮದಾವುದು ಬೇಡಿ ಮಿತ್ತಪೆಂ। ನಿಮಗೆನೆ ದಾನವರ್ಮುದಿತಮಾನಸರಾನತರಾಗಿ ಭಕ್ತಿಯಿಂ॥ ... ... ... .. ॥೮೭॥

ಪೃಥ್ವೀವೃತ್ತಂ॥ ಜಲಂಧರಮತಂಗಜಪ್ರಬಳತಾರಕೇಂದ್ರಾರಿಗ। ಳ್ಬಲಂಗೆಡಿಸೆ ಭಂಗಮಂ ಪಡೆವ ವಿಷ್ಣುಪಂಕೇಜಭೂ॥ ಬಲಾರಿಗಳ ಭಾಗ್ಯಮಂ ಬಯಸೆವೆಂದುಮೆಮ್ಮಂಗಮಂ। ಕಲಾನಿಧಿಕಲಾಪ ನೀಂ ಸವಿಯೆ ಸಾಲ್ಗುಮೆಂದಾಡಿದರ್॥ ... ॥೮೮॥

ವ॥ ಎಂದು ಮತ್ತಮಿಂತೆಂದರ್॥

ಮತ್ತೇ॥ ಹರ ಕೇಳೆಮ್ಮ ಜಲಂಧರಾಂಧಕಗಜವ್ಯಾಘ್ರಾಸುರರ್ಮುಂ ಭವ। ಚ್ಚರಣಾಂಗುಷ್ಠಪದಾಬ್ಜಪಾಣಿಹತಿಯಿಂ ದಳ್ಕಾಡಿ ಮೋಕ್ಷಕ್ಕೆ ಸ॥ ಲ್ಲರೆ ನಿಮ್ಮಂದವರಂತಿರಾವು ಮೊಡಲಂ ಕೂರ್ತಿತ್ತು ನಿನ್ನಂಘ್ರಿಗೀ। ಶ್ವರ ಸನ್ಮುಕ್ತಿಗೆ ಸಲ್ವೆವೆಂದೆನೆ ಮಹೇಶಂ ಮೆಚ್ಚಿ ಸಂಪ್ರೀತಿಯಿಂ॥ ... ॥೮೯॥

ಮತ್ತೇ॥ ನುಡಿದಂ ಕೇಳಿರೆ ಕಾವ್ಯಶಿಷ್ಯರಿರ ನೀವೆಂದಂತೆ ಮಾಳ್ಪೆಂ ಮುದಂ। ಬಡೆ ಕಣ್ಗೊಪ್ಪುವ ಕಾಳಹಸ್ತಿನಗಕಾಂತಾರಾಂತರಾಳಂಗಳೊಳ್॥ ಬಿಡದಿರ್ಪರ್ಮೃಗಮಾ

---

ಸುಮತಿಗಳ್- ಒಳ್ಳೆಯಬುದ್ಧಿಯುಳ್ಳ ಆರಾಕ್ಷಸರು, ಘೋರತಪಮಂ, ಆಂತು, ತನ್ನಂ, ಭಜಿಸುತ್ತಿರೆ, ಅದ್ರಿಜಾರಮಣಂ ಪಾರ್ವತೀಶನು, ಒಲಲ್ದು- ಪ್ರೀತಿಸಿ, ಮೆಚ್ಚಿ, ನಿಜರೂಪದೆ- ಸ್ವಸ್ವರೂಪದಿಂದ, ನಿಂದು, ಮುಕುಂದಪದ್ಮಜೇಂದ್ರಮಹಿತಸಂಪದಂಗಳೊಳಗೆ— ಮುಕುಂದ- ವಿಷ್ಣು, ಪದ್ಮಜ- ಬ್ರಹ್ಮ, ಇಂದ್ರ, ಇವರುಗಳ, ಮಹಿತ-ಪೂಜಿತಗಳಾದ, ಸಂಪದಂಗಳೊಳಗೆ-ಐಶ್ವರ್ಯಗಳಲ್ಲಿ, ಅದಾವುದಿಷ್ಟಂ? ಬೇಡಿಂ- ಯಾಚಿಸಿರಿ, ನಿಮಗೆ, ಇತ್ತಪೆಂ; ಎನೆ, ದಾನವರ್, ರಾಕ್ಷಸರು, ಮುದಿತಮಾನಸರ್- ಸಂತುಷ್ಟವಾದ ಮನಸ್ಸುಳ್ಳವರಾಗಿ, ಆನತರ್, ಆಗಿ, ಭಕ್ತಿಯಿಂ. ... ... ... ॥೮೭॥

ಜಲಂಧರ......ಇಂದ್ರಾರಿಗಳ — ಜಲಂಧರ, ಮತಂಗಜ- ಗಜಾಸುರ, ಪ್ರಬಳ- ಬಲಶಾಲಿಯಾದ, ತಾರಕ, ಇಂದ್ರಾರಿಗಳ್— ಬಲಾಸುರ (ಅಥವಾ ವೃತ್ರಾಸುರ, ಜಂಭಾಸುರ) ಇವರುಗಳು, ಬಲಂಗೆಡಿಸೆ— ಶಕ್ತಿಯಂಕುಂದಿಸಲು, ಭಂಗಮಂ, ಪಡೆದ, ವಿಷ್ಣುಪಂಕೇಜಬಲಾರಿಗಳ- (ಕ್ರಮವಾಗಿ ಜಲಂಧರನಿಂದ ವಿಷ್ಣು, ಗಜಾಸುರನಿಂದ ಬ್ರಹ್ಮ, ಬಲಾಸುರನಿಂದ ಇಂದ್ರ) ಇವರುಗಳ, ಭಾಗ್ಯಮಂ, ಎಂದುಂ- ಯಾವಾಗಲೂ, ಬಯಸೆವ್, ಕಲಾನಿಧಿಕಲಾಪ- ಚಂದ್ರಭೂಷಣನೇ! ಎಮ್ಮ, ಅಂಗಮಂ, ನೀಂ, ಸವಿಯೆ, ಸಾಲ್ಗುಂ- ಸಾಕು, ಎಂದು, ಆಡಿದರ್. ... ... ... ... ॥೮೮॥

ಹರ! ಕೇಳ್, ಎಮ್ಮ, ಜಲಂಧರಾಂಧಕಗಜವ್ಯಾಘ್ರಾಸುರರ್, ಮುಂ- ಪೂರ್ವದಲ್ಲಿ, ಭವಚ್ಚರಣಾಂಗುಷ್ಠಪದಾಬ್ಜಪಾಣಿಹತಿಯಿಂದೆ (ಕ್ರಮವಾಗಿ) ಪಾದ,ಹೆಬ್ಬೆರಳು, ಪಾದಕಮಲ, ಹಸ್ತ, ಇವುಗಳ ಪೆಟ್ಟಿನಿಂದ, ಅಳ್ಕಾಡಿ- ನಿಶ್ಶೇಷರಾಗಿ, ಅವರ್, ನಿಮ್ಮಿಂದೆ, ಮೋಕ್ಷಕ್ಕೆ, ಸಲ್ಲರೆ- ಯೋಗ್ಯರಾಗಲಿಲ್ಲವೇ ? ಅಂತಿರೆ- ಹಾಗೆಯೇ, ಆವುಂ- ನಾವೂ, ನಿನ್ನ, ಅಂಘ್ರಿಗೆ, ಒಡಲಂ- ಶರೀರವನ್ನು, ಕೂರ್ತು- ಪ್ರೀತಿಸಿ, ಇತ್ತು, ಈಶ್ವರ! ಸನ್ಮುಕ್ತಿಗೆ, ಸಲ್ವೆವ್, ಎಂದೆನೆ, ಮಹೇಶಂ, ಮೆಚ್ಚಿ, ಸಂಪ್ರೀತಿಯಿಂ. ... ... ॥೮೯॥

ನುಡಿದಂ, ಕಾವ್ಯಶಿಷ್ಯರಿರೆ- ಶುಕ್ರಾಚಾರ್ಯನಶಿಷ್ಯರಾದರಾಕ್ಷಸರಿರಾ! ಕೇಳಿರ್, ನೀವ್, ಎಂದಂತೆ, ಮಾಳ್ಪೆಂ; ಮುದಂಬಡೆ- ಸಂತೋಷವಿಶಿಷ್ಟವಾಗುವಹಾಗೆ, ಕಣ್ಗೆ, ಒಪ್ಪುವ, ಕಾಳಹಸ್ತಿನಗಕಾಂತಾರಾಂತರಾಳಂಗಳೊಳ್- ಕಾಳಹಸ್ತಿ ಬೆಟ್ಟದಕಾಡಿನಮಧ್ಯದಲ್ಲಿ, ಬಿಡದೆ, ಇರ್ಪರ್, ಮೃಗಂ- ಜಿಂಕೆಗಳು ಆಗಿ ಅ

ಗಿರಲ್ಲಿ ಭವದೀಯಾಂಗಂಗಳಂ ಸೀಳ್ದು ತಂ | ದಡಗಂ ಕೊರ್ತ್ತುಮಗರ್ಪ್ಪಿಪಂ ಬಿಯದನೋ ರ್ವಂ ಮಲ್ಲಸತ್ಕಿಂಕರಂ || ... ... ... ... ||೯೦||

ಕಂ|| ಎನೆ ಕೇಳ್ದು ನಲಿದು ನಿಜಬಂ | ಧುನಿಕಾಯಸಮೇತ ಮೆಯ್ದಿ ತದ್ಗಿರಿವರಕಾ|| ನನಮಂ ಮೃಗರೂಪಿಂದಂ | ಬಿನದಿಸುತೊಪ್ಪಿರ್ದ್ದರಮರವೈರಿಗಳದರೊಳ್ || ||೯೧||

ವ|| ಆಗಳಾಕಣ್ಣಪ್ಪದೇವಂ || ಉ|| ಕಂಡು ಕಡಂಗಿ ಸಾರ್ದ್ದು ಹರಿಣದ್ವಯ ಮಂ ಗುಣಯುಕ್ತಚಂಡಕೋ | ದಂಡಮನಾರ್ಪ್ಪಿನಿಂ ಸೆಳೆದು ಬೊಬ್ಬಿರಿದೆಚ್ಚು ಸರಲ್ಗ ಳಿಂ ಮಹೀ || ಮಂಡಲದಲ್ಲಿ ಮುಂಗೆಡೆದ ತನ್ಮೃಗಯುಗ್ಮದ ಕಾಯಮಂ ಕರಂ | ಖಂಡಿಸಿ ಕಂಡಮಂ ತೆಗೆದು ಸೋದಿಸಿ ಕಿಚ್ಚೊಳಮರ್ಚ್ಚಿ ಕಾಯ್ಸುತಂ || ... ||೯೨||

ಕಂ || ಸುಂಟಿಗೆಗೋಲಿಂ ದಡಗಂ | ವಿಾಂಟಿ ಪೊರಳ್ಚುತ್ತೆ ಪಚಿಸಿ ನಾಲಿಗೆಗೊನೆ ಯಿಂ|| ದಂಟಿ ರಸ ಮಿಂಪು ಕಂಪುಗ | ಳುಂಟೆನಿಪುವನಾಯ್ದು ಪರ್ಣಪಾತ್ರೆಯೊಳಿಡುತಂ||

ತರಳವೃತ್ತಂ || ಎಸೆವ ಕಕ್ಕೆಯರಲ್ಗಳಂ ನವಬಿಲ್ವಕೋಮಲಪಲ್ಲವ | ಪ್ರಸರವಮಂ ಮುಡಿಯಲ್ಲಿ ತಾಳ್ದು ಪಲಾಶಪತ್ರದ ಪಾತ್ರೆಯೊಳ್ || ಮಿಸುಪ ಮಾಂಸಮನಾಂತು ಕೈತಕೆ

---

ಲ್ಲಿ, ಇರಿ; ಮಲ್ಲಸತ್ಕಿಂಕರಂ- ನನ್ನ ಪ್ರಕಾಶಿಸುವ ಭೃತ್ಯನಾದ, ಓರ್ವಂಬಿಯದಂ- ಒಬ್ಬ ಬೇಡನು, ಭವದೀಯಾಂಗಂಗಳಂ- ನಿಮ್ಮ ಶರೀರಗಳನ್ನು, ಸೀಳ್ದು, ಅಡಗಂ- ಮಾಂಸವನ್ನು, ತಂದು, ಕೊರ್ತ್ತು- ಪ್ರೀತಿಸಿ, ಎಮಗೆ, ಅರ್ಪಿಪಂ. ... ... ... ... ... ||೯೦||

ಎನೆ, ಅಮರವೈರಿಗಳ್- ದೇವಶತ್ರುಗಳಾದ ರಾಕ್ಷಸರು, ಕೇಳ್ದು, ನಲಿದು- ಸಂತೋಷಪಟ್ಟು, ನಿಜಬಂಧುನಿಕಾಯಸಮೇತಂ- ತಮ್ಮ ನಂಟರ ಸಮೂಹದೊಡನೆ ಕೂಡಿ, ಮೃಗರೂಪಿಂ- ಜಿಂಕೆಗಳಾಕಾರದಿಂದ, ತದ್ಗಿರಿವರಕಾನನಮಂ- ಶ್ರೇಷ್ಠವಾದ ಆ ಕಾಳಹಸ್ತಿಬೆಟ್ಟದ ಕಾಡನ್ನು, ಎಯ್ದಿ- ಹೊಂದಿ, ಅದರೊಳ್,ಬಿನದಿಸುತ್ತೆ- ವಿನೋದಪಡುತ್ತ, ಒಪ್ಪಿ, ಇರ್ದ್ದರ್. ... ... ... ||೯೧||

ಆಗಳ್, ಆಕಣ್ಣಪ್ಪದೇವಂ. * * * * * * * *

ಹರಿಣದ್ವಯಮಂ- ಜಿಂಕೆಗಳೆರಡನ್ನು, ಕಂಡು, ಕಡಂಗಿ- ಕುತೂಹಲಪಟ್ಟು, ಸಾರ್ದ್ದು- ಸಮೀಪಕ್ಕೆ ಬಂದು, ಗುಣಯುತಚಂಡಕೋದಂಡಮಂ- ಸಿಂಜನಿಯಿಂ ಕೂಡಿದ ಸಮರ್ಥವಾದ ಬಿಲ್ಲನ್ನು, ಆರ್ಪ್ಪಿನಿಂ- ಶೌರ್ಯದಿಂದ, ಸೆಳೆದು, ಬೊಬ್ಬಿರಿದು- ಕೋಲಾಹಲವಂ ಮಾಡಿ, ಸರಲ್ಗಳಿಂ- ಬಾಣಗಳಿಂದ, ಎಚ್ಚು- ಹೊಡೆದು, ಮಹೀಮಂಡಲದಲ್ಲಿ, ಮುಂಗೆಡೆದ- ಮುಂದಾಗಿಬಿದ್ದ, ತನ್ಮೃಗಯುಗ್ಮದ- ಆ ಎರಡುಜಿಂಕೆಗಳ,ಕಾಯಮಂ, ಕರಂ- ಚೆನ್ನಾಗಿ, ಖಂಡಿಸಿ- ಕತ್ತರಿಸಿ, ಕಂಡಮಂ- ಮಾಂಸವನ್ನು, ತೆಗೆದು, ಸೋದಿಸಿ, ಕಿಚ್ಚೊಳ್- ಬೆಂಕಿಯಲ್ಲಿ, ಅಮರ್ಚ್ಚಿ- ಇಟ್ಟು, ಕಾಯಿಸುತಂ. ... ... ... ||೯೨||

ಸುಂಟಿಗೆಗೋಲಿಂದೆ- ಮಾಂಸವಂ ಸುಡುವ ಕೋಲಿನಿಂದ, ಅಡಗಂ- ಮಾಂಸವನ್ನು, ವಿಾಂಟಿ, ಪೊರಳ್ಚುತ್ತೆ- ಹೊರಳಿಸುತ್ತ, ಪಚಿಸಿ- ಬೇಯಿಸಿ, ನಾಲಿಗೆಗೊನೆಯಿಂದೆ- ನಾಲಿಗೆಯ ತುದಿಯಿಂದ,ಅಂಟಿ-ಸೋಂಕಿಸಿ, ರಸಂ- ರುಚಿ, ಇಂಪು- ಮಾಧುರ್ಯ, ಕಂಪುಗಳ್- ಪರಿಮಳಗಳು, ಉಂಟು, ಎನಿಪುವಂ, ಆಯ್ದು, ಪರ್ಣಪಾತ್ರೆಯೊಳ್- ದೊನ್ನೆಯಲ್ಲಿ, ಇಡುತಂ. ... ... ... ||೯೩||

ಕಿರಾತಂ- ಬೇಡನು, ಎಸೆವಕಕ್ಕೆಯ, ಅರಲ್ಗಳಂ- ಹೂವ್ಗಳನ್ನು, ನವಬಿಲ್ವಕೋಮಲಪಲ್ಲವಪ್ರಸರಮಂ- ಹೊಸಬಿಲ್ವದ ಮೃದುವಾದ ಚಿಗುರಿನ ಸಮೂಹವನ್ನು, ಮುಡಿಯಲ್ಲಿ- ಕೇಶದಲ್ಲಿ, ತಾಳ್ದು- ಇಟ್ಟುಕೊಂಡು, ಪಲಾಶಪತ್ರದ- ಮುತ್ತುಗದೆಲೆಯ, ಪಾತ್ರೆಯೊಳ್- ದೊನ್ನೆಯಲ್ಲಿ, ಮಿಸುಪಮಾಂಸಮಂ, ಆಂ

ವಾಹಿನೀವಿಮಳಾಂಬುವಂ । ಲಸಿತವಕ್ತ್ರದೆ ತೀವಿಕೊಂಡು ಕಿರಾತ ನೇಳ್ತರುತೊಪ್ಪಿದಂ ॥

ವ ॥ ಅಂತೇಳ್ತಂದು ಶಿವಾಲಯಮ ನೊಲ್ದು ಪೊಕ್ಕು ಶಿವಲಿಂಗಮಂ ಸಾರ್ದುನಿಂದು ॥

ಮ ॥ ಸ್ರ ॥ ಅದ ನೇನಂ ಪೇಳ್ವೆ ನಾಪೂಜೆಯು ಪೊಸಪರಿಯಂ ಕೆರ್ಪುತಳ್ತಂಘ್ರಿ ಯಿಂ ನೂಂ । ಕಿದ ನಾಲಿಂಗೋತ್ತಮಾಂಗೋದ್ಗಮಮ ನವಮ ಗಂಡೂಷವಾರ್ಮಜ್ಜನಂ ಮಾ ॥ ಡಿದ ನೀಶಂಗೊಲ್ದು ತಾಂ ಮುಮ್ಮುಡಿದ ಕುಸುಮಮಂ ಸೂಸಿದಂ ಮಾಂಸಮಂ ತ । ಳ್ವದೆ ಮುಂದಿಟ್ಟಳ್ಕರಿಂ ದರ್ಪಿಸಿದ ನತಿಶಯಾನಂದದಿಂದಂ ಪುಳಿಂದಂ ॥ ॥೯೫॥

ವ ॥ ಅಪ್ಪೂರ್ವತರಪೂಜೆಯು ನಾ ಪುಳಿಂದನಿಂಳೆಸಗ ಲೊಡನೆ ॥

ಚಂ ॥ ಗಿರಿಜೆಯ ಯಾವಕದ್ರವಪದಾಬ್ಜದಸೋಂಕಿನೊ ಳಾದ ಸೌಖ್ಯದಿಂ । ಪಿರಿದೆ ನಿಸಿತ್ತು ಪಾದುಕೆಯ ನಾಳ್ದ ತದಂಘ್ರಿಯ ಸೋಂಕಿನಿಂದ ಮು ॥ ಬ್ಬರಿಸುವ ಸೌಖ್ಯ ಮಂಬರನದೀವಹನೋತ್ಸವದಿಂ ಸಮುತ್ಸವ । ಕೆರಮನಿಸಿತ್ತು ಶೂಲಿಗೆ ಮುಖೋದಕ ಮಜ್ಜನದಿಂ ಕಪರ್ದದೊಳ್ ॥ ... ... ... ॥೯೬॥

ವ ॥ ಆಗಳಾ ಪೂಜಕಪುಳಿಂದಂ ಪೊರೆಯೇರಿ ಪೊಂಪುಳಿವೋಗಿ ॥ * * *

ಕಂ ॥ ನಲಿನಲಿದು ಮಣಿದು ಮಣಿದು , ಜ್ಜ್ವಲರವದಿಂ ಪಾಡಿ ನೋಡಿ ಶಿವನಂ ಪ್ರೇ

---

ತಂ- ಧರಿಸಿ, ಕೈತಕವಾಹಿನೀವಿಮಳಾಂಬುವಂ- ಕಾಲುವೆಯ ನಿರ್ಮಲವಾದ ನೀರನ್ನು, ಲಸಿತವಕ್ತ್ರದೆ-ಪ್ರಕಾಶಮಾನವಾದ ಬಾಯಲ್ಲಿ, ತೀವಿಕೊಂಡು, ಏಳ್ತರುತೆ, ಒಪ್ಪಿದಂ. ... ... ॥೯೪॥

ಅಂತು, ಏಳ್ತಂದು, ಶಿವಾಲಯಮಂ, ಒಲ್ದು ಪೊಕ್ಕು, ಶಿವಲಿಂಗಮಂ, ಸಾರ್ದು, ನಿಂದು. * *

ಆಪೂಜೆಯ, ಪೊಸಪರಿಯಂ- ಹೊಸರೀತಿಯನ್ನು, ಅದಂ, ಏನಂಪೇಳ್ವೆಂ- ಏನುಹೇಳಲಿ! ಪುಳಿಂದಂ, ಆಲಿಂಗೋತ್ತಮಾಂಗೋದ್ಗಮಮಂ- ಆ ಲಿಂಗದ ಶಿರಸ್ಸಿನ ಮೇಲಿರುವ ಹೂವನ್ನು, ಕೆರ್ಪುತಳ್ತ- ಕೆರದಿಂದ ಕೂಡಿದ, ಅಂಘ್ರಿಯಿಂ- ಪಾದದಿಂದ, ನೂಂಕಿದಂ, ಅವಮ! ಗಂಡೂಷವಾರ್ಮಜ್ಜನಂಮಾಡಿದಂ- ಮುಕ್ಕಳಿಸಿರುವ ನೀರಿನಿಂದಭಿಷೇಕವ ಮಾಡಿದನು, ಒಲ್ದು, ತಾಂ, ಮುಮ್ಮುಡಿದ-ಮೊದಲು ಮುಡಿದಿದ್ದ, ಕುಸುಮಮಂ, ಈಶಂಗೆ, ಸೂಸಿದಂ- ಮುಡಿಸಿದನು; ತಳ್ವದೆ- ತಪ್ಪದೆ, ಮಾಂಸಮಂ, ಮುಂದೆ, ಇಟ್ಟು, ಅಳ್ಕರಿಂದೆ- ಪ್ರೀತಿಯಿಂದ, ಅತಿಶಯಾನಂದದಿಂದಂ, ಅರ್ಪಿಸಿದಂ. ... ... ... ॥೯೫॥

ಆಪುಳಿಂದಂ,ಇಾತು,ಅಪೂರ್ವತರಪೂಜೆಯಂ-ಪೂರ್ವದಲ್ಲಿ ಯಾರೂಮಾಡದಪೂಜೆಯನ್ನು,ಎಸಗಲ್,ಒಡನೆ, ಶೂಲಿಗೆ, ಪಾದುಕೆಯಂ- ಕೆರವನ್ನು, ಆಳ್ದ- ಹೊಂದಿದ, ತದಂಘ್ರಿಯ- ಆ ಕಣ್ಣಪ್ಪನಪಾದದ, ಸೋಂಕಿನಿಂದಂ, ಉಬ್ಬರಿಸುವ- ಉಂಟಾಗುವ, ಸೌಖ್ಯಂ, ಗಿರಿಜೆಯ, ಯಾವಕದ್ರವಪದಾಬ್ಜದ- ಅರಗಿನ ರಸದಿಂದ ಲಿಪ್ತವಾದ ಪಾದಕಮಲದ, ಸೋಂಕಿನೊಳ್- ಸ್ಪರ್ಶದಿಂದ, ಆದ, ಸೌಖ್ಯದಿಂ- ಸುಖಕ್ಕಿಂತಲೂ, ಪಿರಿದು- ದೊಡ್ಡದು, ಎನಿಸಿತ್ತು; ಕಪರ್ದದೊಳ್- ಜಟಾಜೂಟದಲ್ಲಿ, ಮುಖೋದಕಮಜ್ಜನದಿಂ- ಬಾಯಲ್ಲಿ ತುಂಬಿದ್ದ ನೀರಿನಿಂದ ಮಾಡಿದ ಅಭಿಷೇಕದಿಂದುಂಟಾದ, ಸಮುತ್ಸವಂ- ಸಂತೋಷವು, ಅಂಬರನದೀವಹನೋತ್ಸವದಿಂ- ಆಕಾಶಗಂಗೆಯಂ ಧರಿಸಿದುದರಿಂದುಂಟಾದ ಸಂತೋಷಕ್ಕಿಂತಲೂ, ಕರಂ- ಹೆಚ್ಚಾದದ್ದು, ಎನಿಸಿತ್ತು. ॥೯೬॥

ಆಗಳ್, ಆಪೂಜಕಪುಳಿಂದಂ- ಪೂಜಿಸುವ ಆ ಬೇಡನು, ಪೊರೆಯೇರಿ- ಸಮೀಪವಂ ಹೊಂದಿ,ಪೊಂಪುಳಿವೋಗಿ-ರೋಮಾಂಚವಂಹೊಂದಿ. * * * * * * * * * * * * *

ನಲಿನಲಿದು, ಮಣಿದು, ಮಣಿದು , ಉಜ್ಜ್ವಲರವದಿಂ- ಮನೋಹರವಾದ ಶಬ್ದದಿಂದ, ಪಾಡಿ, ಶಿವನಂ, ನೋಡಿ, ಪ್ರೇಮಂಬಲಿದು- ಅನುರಾಗವು ಹೆಚ್ಚಾಗಿ, ಕೆಲಕೆ- ಪಾರ್ಶ್ವಕ್ಕೆ, ಒಲೆದು- ತೂಗಾಡಿ, ಬೆನ್ನ

ಮಂ ॥ ಬಲಿದೊಲೆದು ಕೆಲಕೆ ಬೆಮರ್ದಮ | ರ್ದಲರ್ದಳವಿಗಳುಂಬ ಮುತ್ಸವಂ ಬಡೆದಿರ್ದಂ ॥

ಮತ್ತೇ ॥ ಪದಪಿಂ ಪೂಜಿಸುತಿಂತು ಶಂಕರನ ನಾಕಣ್ಣಪ್ಪ ನಿರ್ಪನ್ನ ಮೊಂ | ದು ದಿನಂ ಪೂಜಕತಾಪಸಂ ಯಜಿಸಲೆಂದೇಳ್ತಂದು ಲಿಂಗಾಲಯ ॥ ಕ್ಕದರೊಳ್ಮೂಳೆಯು ನಾ ರ್ದ್ರಚರ್ಮಮು ನಸೃಙ್ಮಾಂಸಂಗಳಂ ಕಂಡು ಪೇ | ಸಿದ ನಾಗಳ್ಬಗೆಗುಂದಿ ಚಿಂತಿಸಿದ ನಿಂ ತೇಕಾದುದೆಂದಾದ್ವಿಜಂ ॥ ... ... ... .. ॥೯೮॥

ವ ॥ ಇಂತು ಚಿಂತಿಸುತ್ತ ಮಿಡು ಸದುಷ್ಕೃತದುಷ್ಕಿರಾತಕೃತ ಮಕ್ಕು ಮೆಂದು ನಿರ್ಧರಂಗೆಯ್ದವಂಗೆ ತಕ್ಕುದಂ ಬಳಿಯೊಳ್ಕಾಣ್ಬೆನೆಂದು ಸಮ್ಮಾರ್ಜನಿಯಿನದನೆಲ್ಲಮಂ ನಿವಾರಿಸಿ ಗೋಮಯವಾರಿಯಿಂ ಸಾರಣೆಗೆಯ್ದು ಮಂತ್ರೋದಕಮಂ ತಳಿದು ಶಿವಲಿಂಗಕ್ಕೆ ಪಂಚಬ್ರಹ್ಮಪಂಚಾಕ್ಷರಂಗಳಿಂ ಪಂಚಗವ್ಯಮಂ ಪಂಚಾಮೃತಮ ನೆರೆದು ರುದ್ರಸೂಕ್ತ ಪುರುಷಸೂಕ್ತಂಗಳಿಂ ಮಹಾಸ್ನಾನಂಗೆಯ್ದು ವಿಧಾನುಬಿಡದೋಜೆಯಿಂ ಪೂಜಿಸಿ ಲಿಂಗದ ಪಿಂಗಡೆಯೊಳಡಗಿರ್ದು ಕಿರಾತಕೃತ್ಯಮ ನೆಲ್ಲಮಂ ಕಂಡು ಖಾತಿ ಮಿಕ್ಕು ॥ * *

ಕಂ ॥ ಮುಕ್ಕುಳ ನೀರ್ಮಜ್ಜನಕೇಂ | ತಕ್ಕುದೆ ಮುಡಿದಲರ ಪೂಜೆ ಯೋಗ್ಯಮೆ ನೈ

---

ದರ್, ಅಮರ್ದರ್- ಸೇರಿ, ಅಲರ್ದರ್- ವಿಕಸಿತಹೃದಯನಾಗಿ, ಅಳವಿಗೆ- ಗಣನೆಗೆ, ಅಳುಂಬಂ- ಅಧಿಕವಾಗಿ, ಉತ್ಸವಂಬಡೆದು, ಇರ್ದಂ. ... ... ... ... ॥೯೭॥

ಆಕಣ್ಣಪ್ಪಂ, ಇಂತು, ಶಂಕರನಂ, ಪದಪಿಂ- ಪ್ರೀತಿಯಿಂದ, ಪೂಜಿಸುತೆ, ಇರ್ಪನ್ನಂ- ಇರುವಷ್ಟರಲ್ಲಿ, ಒಂದುದಿನಂ, ಪೂಜಕತಾಪಸಂ- ಪೂಜಿಸುವ ಋಷಿಯು, ಯಜಿಸಲೆಂದು- ಪೂಜಿಸಬೇಕೆಂದು, ಲಿಂಗಾಲಯಕ್ಕೆ- ಲಿಂಗದ ದೇವಸ್ಥಾನಕ್ಕೆ, ಏಳ್ತಂದು- ಬಂದು, ಅದರೊಳ್, ಮೂಳೆಯುಂ, ಆರ್ದ್ರಚರ್ಮಮುಂ- ಹಸಿಯಚಕ್ಕಳವನ್ನು, ಅಸೃಙ್ಮಾಂಸಂಗಳಂ- ರಕ್ತಮಾಂಸಗಳನ್ನು, ಕಂಡು, ಪೇಸಿದಂ- ಅಸಹ್ಯಪಟ್ಟನು, ಆಗಳ್, ದ್ವಿಜಂ, ಬಗೆಗುಂದಿ- ಮನಸ್ಸುಕೊರಗಿ, ಇಂತು, ಏಕಾದುದು? ಎಂದು, ಚಿಂತಿಸಿದಂ- ಆಲೋಚಿಸಿದನು. ... ... ... ... ... ॥೯೮॥

ಇಂತು, ಚಿಂತಿಸುತ್ತಂ, ಇದು, ಸದುಷ್ಕೃತದುಷ್ಕಿರಾತಕೃತಂ ಪಾಪವಿಶಿಷ್ಟನಾದ ಬೇಡನಿಂದಮಾಡಲ್ಪಟ್ಟದ್ದು, ಅಕ್ಕುಂ- ಆಗಿರುವದು, ಎಂದು, ನಿರ್ಧರಂಗೆಯ್ದು- ನಿಶ್ಚಯಿಸಿ, ಅವಂಗೆ, ತಕ್ಕುದಂ- ಯೋಗ್ಯವಾದ ಪ್ರತಿಕ್ರಿಯೆಯನ್ನು, ಬಳಿಯೊಳ್- ಸಮೀಪದಲ್ಲಿ. ಕಾಣ್ಬೆಂ, ಎಂದು, ಅದಂನೆಲ್ಲಮಂ- ಆ ಮಾಂಸಾದಿಗಳೆಲ್ಲವನ್ನೂ, ಸಮ್ಮಾರ್ಜನಿಯಿಂ- ಕಸಪೊರಕೆಯಿಂದ ನಿವಾರಿಸಿ ಹೋಗಲಾಡಿಸಿ, ಗೋಮಯವಾರಿಯಿಂ- ಸಗಣದಿಂ ಕೂಡಿದ ನೀರಿನಿಂದ, ಸಾರಣೆಗೆಯ್ದು- ಸಾರಿಸಿ, ಮಂತ್ರೋದಕಮಂ- ಮಂತ್ರದಿಂ ಪರಿಶುದ್ಧವಾದ ನೀರನ್ನು, ತಳಿದು- ಸೇಚಿಸಿ, ಶಿವಲಿಂಗಕ್ಕೆ, ಪಂಚಬ್ರಹ್ಮಪಂಚಾಕ್ಷರಂಗಳಿಂ- ಸದ್ಯೋಜಾತಾದಿಪಂಚಬ್ರಹ್ಮ ಮಂತ್ರದಿಂದಲೂ ಪಂಚಾಕ್ಷರೀಮಂತ್ರದಿಂದಲೂ, ಪಂಚಗವ್ಯಮಂ- ಹಸುವಿನ ಹಾಲು, ತುಪ್ಪ, ಮೊಸರು, ಸಗಣ, ಮೂತ್ರ, ಇವನ್ನೂ. ಪಂಚಾಮೃತಮಂ- ಹಾಲು, ಮೊಸರು, ತುಪ್ಪ, ಜೇನುತುಪ್ಪ, ಸಕ್ಕರೆ, ಇವುಗಳನ್ನೂ. ಎರೆದು. ರುದ್ರಸೂಕ್ತ ಪುರುಷಸೂಕ್ತಂಗಳಿಂ, ಮಹಾಸ್ನಾನಂಗೆಯ್ದು, ವಿಧಾನಂಬಿಡದೆ ವಿಧಿಗನುಸಾರವಾಗಿ, ಓಜೆಯಿಂ- ಕ್ರಮವಾಗಿ, ಪೂಜಿಸಿ, ಲಿಂಗದ, ಪಿಂಗಡೆಯೊಳ್, ಅಡಂಗಿ, ಇರ್ದು, ಕಿರಾತಕೃತ್ಯಮೆಲ್ಲಮಂ- ಬೇಡನ ಕಾರ್ಯವೆಲ್ಲವನ್ನೂ, ಕಂಡು, ಖಾತಿ-ಕೋಪವು, ಮಿಕ್ಕು- ಹೆಚ್ಚಾಗಿ. * * * *

ಮುಕ್ಕಣ್ಣಂಗೆ, ಮುಕ್ಕುಳನೀರ್, ಮಜ್ಜನಕೆ- ಅಭಿಷೇಕಕ್ಕೆ, ತಕ್ಕುದೇಂ- ಯೋಗ್ಯವೇ? ಮುಡಿದ, ಅಲರ, ಪೂಜೆ, ಯೋಗ್ಯಮೆ? ನೈವೇದ್ಯಕ್ಕೆ, ಅಧಗು- ಮಾಂಸವು, ಉಚಿತಮೆ? ಶಿವಶಿವ! ಅಕಟ- ಅ

ವೇ ॥ ದ್ಯಕ್ಕಿಡಗುಚಿತಮೆ ಶಿವಶಿವ । ವ ಎಕ್ಕಣ್ಣಂ ಗಕಟ ಬೇಡ ನಿತ್ತೆಸಗಿದಪಂ ॥೯೯॥
ವ ॥ ಅಂತು ಮಲ್ಲದೆಯುಂ ॥ ಪೃಥ್ವೀವೃತ್ತಂ ॥ ಸುರೇಂದ್ರಜಶರಾಸನ ಪ್ರಹ
ತಿ ಸೌಂಖ್ಯಹಸ್ತಚ್ಯುತ ॥ ಸ್ಫುರದ್ಘನಶಿಲಾಹತಿ ಪ್ರತತಿ ಗಳ್ಕಿದಾಹೇವಮುಂ ॥ ಕರ-ಬಗೆಗೆ
ತಾರದುಂದವರ್ಗೆ ಕೂರ್ತ್ತು ನಿರ್ಲಜ್ಜನೇ । ಕಿರಾತಪದಘಾತಮಂ ಬಗೆವನೇ ಕಿರಾತೇಶ್ವರಂ ॥
ವ॥ ಮುನ್ನ ಮಾ ಕಾಳಹಸ್ತಿಯಲ್ಲಿ ॥ ಉ॥ ಒಂದು ಸಿಲಂಬಿ ಲಿಂಗಶಿರದೊಳ್ ಪೊ
ಸನೂಲ್ಗಳಿ ನ್ನಿಡೆ ಬಲ್ಬಿಸಿ । ಲ್ಪೊಂಪದ ಮಾಳ್ಕೆಯಿಂ ರಚಿಸಿ ಗೂಡ ನೊರಲ್ದಿರೆ ಹಸ್ತಿಯ
ಲ್ಲಿಗೇ ॥ ಳ್ತಂದದ ನೊತ್ತಿ ಕೀಳ್ತು ಸವನಂಗುಡುತುಂ ಬುಜದಿಂದೆ ಪೂಜಿಸು । ತ್ತುಂ ಇರದೆ
ಯುದ್ದಗುಂ ಪ್ರತಿದಿನಂ ನೆಗಳ್ದಾಗುಣಗರ್ಭನಂತಪಂ ॥ ... ... ॥೧೦೧॥
ಉ ॥ ಕಂಡತಿಕೋಪದಿಂ ಪರಿದು ಸುಂಡಿಲಿಂ ಸೀಳ್ದು ಪೊಕ್ಕು ಕಾಲ್ಗಳಿಂ । ಕಂಡಮ
ನೊತ್ತಿ ಪೊಯ್ದು ನೆರ ನಾಕರಿಯಂ ಮಡಿಪುತ್ತೆ ತಾನುಮಾ ॥ ಸುಂಡಿಲೊಳುಬ್ಬಸಂಬ
ಡೆದು ಸಾಯೆ ವಿಮುಕ್ತಿಯ ನಿತ್ತ ನಾವುದೋ । ದ್ದಂಡಗಜೇಂದ್ರರುಂದ್ರಗುಣಗರ್ಭಯು
ಗಕ್ಕೆ ಶಶಾಂಕಶೇಖರಂ ॥ .. ... ... ... ॥೧೦೨॥

---

ಯ್ಯೋ!! ಬೇಡು, ಇತ್ತು, ಎಸಗಿದಂ- ಮಾಡಿದನು. ... ... ... ॥೯೯॥

ಸುರೇಂದ್ರ .....ಪ್ರತತಿಗೆ— * ಸುರೇಂದ್ರಜ- ಅರ್ಜುನನ, ಶರಾಸನ- ಧನುಸ್ಸಿನ, ಪ್ರಹತಿ- ಪೆಟ್ಟು, ಸೌಂಖ್ಯ ಸೌಖ್ಯದ, ಹಸ್ತ-ಕೈಯ್ಯಿಂದ, ಚ್ಯುತ- ಬಿದ್ದ, ಸ್ಫುರತ್-ಪ್ರಕಾಶಿಸುವ, ಘನ-ದಪ್ಪವಾದ, ಶಿಲಾ-ಕಲ್ಲುಗಳ, ಹತಿ- ಏಟು, ಇವುಗಳ, ಪ್ರತತಿಗೆ, ಸಮೂಹಕ್ಕೆ, ಅಳ್ಕದೆ- ಹೆದರದೆ, ಆಹೇವಮಂ- ಆ ಅಪಮಾನವನ್ನು, ಕರಂ, ಬಗೆಗೆ- ಮನಸ್ಸಿಗೆ, ತಾರದೆ, ಅಂದು, ಅವರ್ಗೆ, ಕೂರ್ತು- ಪ್ರೀತಿಸಿದ, ನಿರ್ಲಜ್ಜಂ- ನಾಚಿಕೆಗೆಡಿಯಾದ, ಕಿರಾತೇಶ್ವರಂ, ಕಿರಾತಪದಘಾತಮಂ- ಬೇಡನ ಕಾಲಿನ ಏಟನ್ನು, ಬಗೆವನೇಂ- ಯೋಚಿಸುವನೇ? ... .. ... ... ... ... ॥೧೦೦॥

ಮುನ್ನಂ- ಪೂರ್ವದಲ್ಲಿ, ಈ ಕಾಳಹಸ್ತಿಯಲ್ಲಿ. * * * * * * * * * *

ಒಂದುಸಿಲಂಬಿ- ಒಂದು ಜೇಡರ ಹುಳವು, ಬಲ್ಬಿಸಿಲ್- ಬಲವಾದ ಬಿಸಿಲು, ಪೊಂಪದಮಾಳ್ಕೆಯಿಂ-ಶೋಭೆಯ ರೀತಿಯಿಂದ, ಪೊಸನೂಲ್ಗಳಿಂ, ಲಿಂಗಶಿರದೊಳ್- ಲಿಂಗದ ಮೇಲ್ಗಡೆಯಲ್ಲಿ, ಇಡೆ-ಚೆನ್ನಾಗಿ, ಒರಲ್ದು, ಗೂಡು, ರಚಿಸಿ, ಇಗೆ, ಅಲ್ಲಿಗೆ, ಹಸ್ತಿ- ಆನೆಯು, ಎಳ್ತಂದು, ಅದಂ- ಆ ಗೂಡನ್ನು, ಒತ್ತಿ, ಕೀಳ್ತು, ಸವನಂಗುಡುತೆ- ಸ್ನಾನವಂ ಮಾಡಿಸುತ್ತ, ಅಂಬುಜದಿಂದೆ, ಪೂಜಿಸುತ್ತೆ, ಅಂದು, ಇರದೆ, ಎಸಗುದ್ದಗುಂ, ಪ್ರತಿದಿನಂ, ನೆಗಳ್ದ- ಗೂಡುಮಾಡಿದ, * ಆಗುಣಗರ್ಭಂ-ಆಜೇಡರ ಹುಳವು, ಅಂತು, ಅದು. ... ॥೧೦೧॥

ಕಂಡು, ಅತಿಕೋಪದಿಂ, ಪರಿದು, ಸುಂಡಿಲಿಂ. ಸೀಳ್ದು- ಸೀಳಿದು. ಒಳಪೊಕ್ಕು, ಕಾಲ್ಗಳಿಂ, ಕಂಡಮಂ- ಮಾಂಸವನ್ನು, ಒತ್ತಿ, ಕೀಳ್ದು, ಪೊಯ್ದು, ನೆರೆ- ಬೇಗನೆ, ಆಕರಿಯಂ- ಆ ಆನೆಯನ್ನು, ಮಡಿವುತ್ತೆ- ಸಾಯುತ್ತ, ತಾನುಂ, ಆಸುಂಡಿಲೊಳ್, ಉಬ್ಬಸಂಬಡೆದು, ಸಾಯೆ, ಶಶಾಂಕಶೇಖರಂ- ಚಂದ್ರಶೇಖರನು, ಆವುದೋ ....ಯುಗಕ್ಕೆ— ಆವುದೋದ್ದಂಡಗಜೇಂದ್ರ- ಅಧಿಕವಾದ ಗರ್ವವುಳ್ಳ ಆನೆ, ರುಂದ್ರಗುಣಗರ್ಭ- ವಿಶಾಲವಾದ ತಂತುವ ಹೊಟ್ಟೆಯಲ್ಲುಳ್ಳ ಜೇಡರಹುಳ, ಯುಗಕ್ಕೆ- ಇವೆರಡಕ್ಕೆ, ವಿಮುಕ್ತಿಯಂ- ಮೋಕ್ಷವನ್ನು, ಇತ್ತಂ. ... ... ... ... ... ॥೧೦೨॥

---

* (ಅವ) ಸುರೇಂದ್ರ- ಇಂದ್ರನವೆಸಯಿಂದ, ಜನಿಸಿಹುಟ್ಟಿದವನು. ... ... ॥೧೦೦॥

* (ಅವ) ಗುಣ- ನೂಲೇ, ಗರ್ಭಂ- ಹೊಟ್ಟೆಯಲ್ಲುಳ್ಳದ್ದು. ... ... ॥೧೦೧॥

ಕಂ॥ ಮದಯುತಕಿರಾತ ನುರೆ ಬ। ಲ್ಲಿದ ನಾದೊಡಮೇನೊ ಮತ್ತಕರಿಯಂ ಕೊಂದಿ।
ಕ್ಕಿದ ಗುಣಗರ್ಭನವೊಲ್ತ । ಪ್ಪದೆ ಕೊಲ್ವಂ ಖಲನ ನಲ್ಲದಂದುಣಲೊಲ್ಲಂ ॥ ॥೧೦೩॥

ವ ॥ ಎಂದು ಪ್ರೂಣ್ದು ನಿಜಾಲಯಕ್ಕೇಳ್ತಂ ದೊಂದುಖಡ್ಗಮುಂ ಕೊಂಡು ಮಗುಳ್ದೆ ಯ್ತಂದಾಲಿಂಗದ ಪಿಂಗಡೆಯೊಳಡಂಗಿ ಪಾರ್ವಂ ನಿರೀಕ್ಷಿಪಾಗಳ್ ॥ * * * * *

ಉತ್ಸಾಹವೃತ್ತಂ ॥ ಎಂದಿನಂತೆ ಮಾಂಸಪಾಣಿ ವಾರಿಪೂರಿತಾಸ್ಯ ನಾ। ನಂದದಿಂದೆ ಪುಷ್ಪಪೂರ್ಣಮಸ್ತ ನಲ್ಲಿಗೇಳ್ತರು ॥ ತ್ತಂದು ಮುನ್ನಿನಂತೆ ಲಿಂಗಪೂಜೆಯಂ ಯಥೇಷ್ಟ ಮೋ। ರಂದದಿಂ ನಿಮಿರ್ಚಿ ನೋಡುತಿರ್ದ ನಾವನೇಚರಂ ॥ ... ॥೧೦೪॥

ವ ॥ ಆಗಳಾಭಕ್ತನ ದೃಢಭಕ್ತಿಯಂದಮಂ ಪಾರ್ವತೀಪತಿ ಪಾರ್ವಂಗೆ ತೋರಲೆಳ ಸಿ ನಯನದ್ವಯಮುಂ ಮಿಸುಪ ಮೊಗಮೊಂದಂ ತಳೆದು॥ * * * * * * *

ಕಂ ॥ ಬೆಳಗ ಣ್ಕೆಂಪಡರ್ದಶ್ರುಗ। ಳಳತರ್ಪವೊಲೆಸಗೆ ಕಂಡು ಕಣ್ಣಪ್ಪಂ ಪೇ ॥ ರ ಳಲೊಳಗುವರಿಯೆ ಚಿಂತಾ। ಕುಳ ನಾಗಳ್ಸುಯ್ದು ಸುಗಿದು ಸಿಡಿಮಿಡಿಗೊಂಡಂ ॥೧೦೫॥

ವ॥ ಆಗಳವಂ ನಿರ್ವೇದಂಬಟ್ಟು ನಿರೀಕ್ಷಿಸುತ್ತಿರೆ ॥ * * * * * *

ಕಂ ॥ ತ್ರ್ಯಂಬಕನಾ ಭಕ್ತನ ಪಿಪ। ಳಾಂಬಕಮಂ ಪಡೆಯ ಲೆಳಸಿ ಕಣ್ಣೀರ್ಗರೆ

---

ಮದಯುತಕಿರಾತಂ- ಗರ್ವವಿಶಿಷ್ಟನಾದ ಬೇಡನು, ಬಲ್ಲಿದಂ- ಬಲಶಾಲಿಯು, ಆದೊಡಂ, ಏನೊ? ಮತ್ತಕರಿಯಂ, ಕೊಂದು, ಇಕ್ಕಿದ, ಗುಣಗರ್ಭನವೊಲ್- ಜೇಡರಹುಳದಹಾಗೆ, ಖಲನಂ- ನೀಚನನ್ನು, ತಪ್ಪದೆ, ಕೊಲ್ವಂ, ಅಲ್ಲದಂದು- ಹಾಗಲ್ಲದಪಕ್ಷದಲ್ಲಿ, ಉಣಲೊಲ್ಲಂ. ... ... ॥೧೦೩॥

ಎಂದು, ಪಾರ್ವಂ, ಪೂಣ್ದು- ಪ್ರತಿಜ್ಞೆಯಂ ಮಾಡಿ, ನಿಜಾಲಯಕ್ಕೆ- ತನ್ನ ಮನೆಗೆ, ಏಳ್ತಂದು, ಒಂದುಖಡ್ಗಮಂ- ಒಂದುಕತ್ತಿಯನ್ನು, ಕೊಂಡು, ಮಗುಳ್ದು- ಪುನಃ, ಎಯ್ತಂದು, ಆಲಿಂಗದ, ಪಿಂಗಡೆಯೊಳ್, ಅಡಂಗಿ, ನಿರೀಕ್ಷಿಪಾಗಳ್- ನೋಡುತ್ತಿರುವ ಕಾಲದಲ್ಲಿ. * * * * * * * *

ಎಂದಿನಂತೆ, ಮಾಂಸಪಾಣಿ- ಮಾಂಸವೇ ಕಯ್ಯಲ್ಲುಳ್ಳ, ವಾರಿಪೂರಿತಾಸ್ಯಂ- ನೀರಿನಿಂದ ತುಂಬಿದ ಬಾಯುಳ್ಳ, ಪುಷ್ಪಪೂರ್ಣಮಸ್ತಂ- ಹೂವಿನಿಂದ ತುಂಬಿದ ತಲೆಯುಳ್ಳ, ಆವನೇಚರಂ- ಆ ಬೇಡನು, ಆನಂದದಿಂದೆ, ಅಲ್ಲಿಗೆ- ಆ ದೇವಸ್ಥಾನಕ್ಕೆ, ಏಳ್ತರುತ್ತೆ, ಅಂದು, ಮುನ್ನಿನಂತೆ, ಯಥೇಷ್ಟಂ, ಓರಂದದಿಂ- ಕ್ರಮವಾಗಿ, ಲಿಂಗಪೂಜೆಯಂ, ಮಾಡಿ, ನೋಡುತೆ, ಇರ್ದಂ. ... ... ... ॥೧೦೪॥

ಆಗಳ್, ಆಭಕ್ತನ, ದೃಢಭಕ್ತಿಯ- ನಿಶ್ಚಂಚಲವಾದ ಭಕ್ತಿಯ, ಅಂದಮಂ- ರೀತಿಯನ್ನು, ಪಾರ್ವತೀಪತಿ, ಪಾರ್ವಂಗೆ, ತೋರಲ್- ತೋರುವದಕ್ಕೆ, ಎಳಸಿ- ಅಪೇಕ್ಷಿಸಿ, ನಯನದ್ವಯಮುಂ-ಎರಡುಕಣ್ಣನ್ನು, ಮಿಸುಪಮೊಗಮೊಂದಂ- ಪ್ರಕಾಶಿಸುವಮುಖವೊಂದನ್ನು, ತಳೆದು. * * * * * * * *

ಬೆಳಗಣ್- ಬೆಳಗಿದ್ದ ಕಣ್ಣು, ಕೆಂಪಡರ್ದು- ಕೆಂಪೇರಿ, ಅಶ್ರುಗಳ್- ಕಣ್ಣೀರುಗಳು, ಇಳಿತರ್ಪವೊಲ್, ಎಸಗೆ- ಮಾಡಲು, ಕಣ್ಣಪ್ಪಂ, ಕಂಡು, ಪೇರಳಲ್- ದೊಡ್ಡದುಃಖವು, ಒಳಗುವರಿಯೆ- ಮನಸ್ಸಿನಲ್ಲಿ ವ್ಯಾಪಿಸಲು, ಆಗಳ್, ಚಿಂತಾಕುಳಂ- ಮನೋವ್ಯಥೆಯಿಂದ ವ್ಯಾಕುಲನಾಗಿ, ಸುಯ್ದು- ನಿಟ್ಟುಸುರಂ ಬಿಟ್ಟು, ಸುಗಿದು- ಭಯಪಟ್ಟು, ಸಿಡಿಮಿಡಿಗೊಂಡು- ಕಳವಳಗೊಂಡು. ... ... ॥೧೦೫॥

ಆಗಳ್, ಅವಂ, ನಿರ್ವೇದಬಟ್ಟು- ದುಃಖಿಸಿ, ನಿರೀಕ್ಷಿಸುತ್ತೆ, ಇರೆ. * * *

ತ್ರ್ಯಂಬಕಂ, ಆಭಕ್ತನ, ವಿಪುಳಾಂಬಕವಂ- ನಿರ್ಮಲವಾದ ಕಣ್ಣನ್ನು, ಪಡೆಯಲ್-ಹೊಂದುವದಕ್ಕೆ,

ವಾ ॥ ಡಂಬರಮನಾಳ್ದು ಸುರಿವ ದೃ । ಗಂಬುಗಳಿಂಬಾದುವಾಗಳಾ ಶಶಿಧರನ ॥೧೦೬॥

ವ ॥ ಅಂತಿಳಿತರ್ಪಶ್ರುಧಾರಾಪೂರಮಂ ಪುಳಿಂದ ನಭೀಕ್ಷಿಸಿ ಶಿವಂಗಿಂತೆಂದಂ ॥ *

ಉ ॥ ಆಲಿಸಿ ನಿನ್ನ ನಿಂದೆಯ ನಪರ್ಣೆ ಯೊಡಲ್ವಿಡುವಂದು ದೇವತಾ । ಪಾಲಕಸೂನು ಬಿಲ್ವಿಡಿದು ಬಂಡಣದೊಳ್ಪೊಡೆವಂದು ಜೂಜಿನೊ ॥ ಳೋಸಿಸುತಚ್ಯುತಾಖ್ಯ ನುರೆಕಯ್ಗಳ ನೋವದೆ ಕಟ್ಟುವಂದು ಲೀ । ಲಾಲಸಸೌಖ್ಯ ನುಣ್ಮೆ ಬರುಗಲ್ಗಳ ನಾಂತಿಡುವಂದು ಕಾಂಚಿಯೊಳ್ ॥ ... .. ... ... ॥೧೦೭॥

ಮತ್ತೆ ॥ ಸಿರಿಯಾಳಂ ನಿನಗೆಂದು ತನ್ನಮಗನಂ ಸೀಳ್ದಂದು ಕೂರ್ಪಿಂ ಕೃಪಾ । ಕರ ಪಿಟ್ಟವ್ವೆಗೆ ಬಿಟ್ಟಗೆಯ್ವ ಪದದೊ ಳ್ಭೂಭೃಚ್ಚರ ರ್ದೋತ್ರದಿಂ ॥ ಕರ ಮುರ್ಕ್ಕಿಂ ಬಡಿವಂದು ಚಂದ್ರವಿಭು ನಿನ್ನಂ ಬಿಟ್ಟು ಪೋಪಂದು ಕೇ । ಳ್ಪರಕಾಂತಾರತಿಗೊಲ್ದು ಗಾಡಿವಡೆದಂದಿಲ್ಲಂಬು ನಿನ್ನಕ್ಷಿಯೊಳ್ ॥ ... ... ... ॥೧೦೮॥

ರಥೋದ್ಧತವೃತ್ತಂ ॥ ಈಗ ಳೇಕೆ ಭವದಕ್ಷಿಯಿಂ ಪಯಃ । ಪೂಗ ಮಿಂತು ಸುರಿತರ್ಪುದಕ್ಕಟಾ ॥ ಭೋಗಿಭೂಷ ಮರೆಬೇಡ ಪೇಳ್ವುದಿಂ । ಬಾಗಿ ನಿನ್ನಬಗೆಗಾದ ದುಃಖಮಂ॥

ಮತ್ತೆ ॥ ತೊರೆದೊಳ್ವೆಂಡಿರ ನಾತ್ಮಜಾತರ ನರಣ್ಯಂಬೊಕ್ಕೆ ನೆಂದಳ್ವೆಯೋ । ಸರೆ

ಎಳಸಿ, ಕಣ್ಣೀರ್ಗರೆವ, ಆಡಂಬರವಂ- ಆಧಿಕ್ಯವನ್ನು, ಆಳ್ದು- ಹೊಂದಿ, ಆಗಳ್, ಆಶಶಿಧರನ, ಸುರಿವ, ದೃಗಂಬುಗಳ್- ಕಣ್ಣೀರ್ಗಳು, ಇಂಬಾದುವು- ಮನೋಹರವಾದವು. ... ... ॥೧೦೬॥

ಅಂತು, ಇಳಿತರ್ಪ, ಅಶ್ರುಧಾರಾಪೂರಮಂ- ಕಣ್ಣೀರಿನ ಪ್ರವಾಹವನ್ನು, ಪುಳಿಂದಂ, ಅಭೀಕ್ಷಿಸಿ, ಶಿವಂಗೆ, ಇಂತು ಎಂದಂ. * * * * * * * * *

ಅಪರ್ಣೆ- ಪಾರ್ವತಿಯು, ನಿನ್ನ, ನಿಂದೆಯಂ- ದಕ್ಷನಿಂದ ಮಾಡಲ್ಪಟ್ಟ ದೂಷಣೆಯನ್ನು, ಆಲಿಸಿ- ಕೇಳಿ, ಒಡಲ್ವಿಡುವಂದು- ಶರೀರವಂ ಬಿಡುವಕಾಲದಲ್ಲಿ, ದೇವತಾಪಾಲಕಸೂನು- ಇಂದ್ರಪುತ್ರನಾದ ಅರ್ಜುನನು, ಬಿಲ್ವಿಡಿದು, ಬಂಡಣದೊಳ್- ಯುದ್ಧದಲ್ಲಿ, ಪೊಡೆವಂದು- ಹೊಡೆಯುವಾಗ, ಅಚ್ಯುತಾಖ್ಯಂ- ಅಚ್ಯುತನೆಂಬುವನು, ಜೂಜಿನೊಳ್, ಸೋಲಿಸುತೆ, ಉರೆ, ಕಯ್ಗಳಂ, ಓವದೆ- ಪಾಲಿಸದೆ, ಕಟ್ಟುವಂದು- ಕಟ್ಟುವಕಾಲದಲ್ಲಿ, ಲೀಲಾಲಸಸೌಖ್ಯಂ- ವಿಲಾಸದಿಂದ ಪ್ರವೃತ್ತನಾದ ಸೌಖ್ಯನು, ಉಣ್ಮೆ- ಉಬ್ಬಿ, ಬರುಗಲ್ಗಳು, ಆಂತು- ಧರಿಸಿ, ಇಡುವಂದು- ಹೊಡೆಯುವ ಕಾಲದಲ್ಲಿ, ಕಾಂಚಿಯೊಳ್. ... ॥೧೦೭॥

ಸಿರಿಯಾಳಂ, ನಿನಗೆ, ಎಂದು, ತನ್ನ, ಮಗನಂ, ಸೀಳ್ದಂದು, ಕೃಪಾಕರ- ದಯಾಸ್ಪದನೇ! ಕೂರ್ಪಿಂ- ಪ್ರೀತಿಯಿಂದ, ಪಿಟ್ಟವ್ವೆಗೆ, ಬಿಟ್ಟಗೆಯ್ವಪದದೊಳ್- ಬಿಟ್ಟಿಚಾಕರಿಯಂ ಮಾಡುವಾಗ, ಭೂಭೃಚ್ಚರರ್- ರಾಜಭೃತ್ಯರು, ಉರ್ಕಿಂ- ಗರ್ವದಿಂದ, ಕರಂ- ಚೆನ್ನಾಗಿ, ದೌತ್ರದಿಂ- ಚಿತ್ತದಿಂದ, ಬಡಿವಂದು, ಚಂದ್ರವಿಭು-ಚಂದ್ರಪ್ರಭುವು, ನಿನ್ನಂ, ಬಿಟ್ಟು,ಪೋಪಂದು, ಪರಕಾಂತಾರತಿಗೆ-ಅನ್ಯಸ್ತ್ರೀಯೊಡನೆ ಸುರತಕ್ಕೆ,ಒಲ್ದು-ಪ್ರೀತಿಸಿ, ಗಾಡಿವಡೆದಂದು-ವಿಲಾಸವಂ ಹೊಂದಿದಾಗ,ಕೇಳ್, ನಿನ್ನ.ಅಕ್ಷಿಯೊಳ್, ಅಂಬು-ನೀರು, ಇಲ್ಲ

ಇಗಳ್, ಭವದಕ್ಷಿಯಿಂ- ನಿನ್ನ ಕಣ್ಣಿನಿಂದ, ಪಯಃಪೂಗಂ- ನೀರಿನ ಸಮೂಹವು, ಇಂತು, ಏಕೆಸುರಿತರ್ಪುದು? ಅಕ್ಕಟಾ! ಭೋಗಿಭೂಷ!! ಮರೆ- ವಂಚನೆಯು, ಬೇಡ, ನಿನ್ನ, ಬಗೆಗೆ- ಮನಸ್ಸಿಗೆ, ಆದ, ದುಃಖಮಂ, ಇಂಬಾಗಿ- ಮನೋಹರವಾಗಿ, ಪೇಳ್ವುದು. ... ... ... ॥೧೦೮॥

ಒಳ್ವೆಂಡಿರಂ-ಒಳ್ಳೆಯ ಹೆಂಡತಿಯರನ್ನು, ಆತ್ಮಜಾತರಂ- ಮಕ್ಕಳನ್ನು,ತೊರೆದು- ಬಿಟ್ಟು, ಅರಣ್ಯಂಬೊಕ್ಕೆಂ, ಎಂದು, ಅಳ್ವೆಯೊ? ಪುಲಿ,ಸಿಂಗಂ, ಇರ್ಪ್ಪ, ಅಡವಿಗೆ, ಸೆರೆ, ಆದೆಂ, ಇನ್ನು, ಎಂತು? ಎಂದು, ಕ

ಯಾದೆಂ ಪುಲಿಸಿಂಗಮಿರ್ಪಡವಿಗಿನ್ನೆಂತೆಂದು ಕಣ್ಣೀರ್ಗಳಂ ॥ ಕರೆವುತ್ತಿರ್ಪೆಯೊ ತಳ್ವಿದಂ ಬಿಯದ ನೆಂದೆನ್ನತ್ತಣಿಂ ದಾವಬ । ಲ್ಮರುಕಂ ಕಣ್ಬನಿಯಂ ನಿಮಿರ್ಚಿತೊ ಬಸಿರ್ಕಾಯ್ಪೇರೆ ಶೋಕಿಪ್ಪೆಯೋ ॥ ... ... ... ... ॥೧೧೦॥

ಉ ॥ ಎಂದು ಪಲುಂಬಿ ನಾಡೆ ಪಲವಾಡುವ ನಪ್ಪುವ ನೊರ್ಮೆ ಮುದ್ದಿಪಂ । ತೆಂದೆ ಯಿದೇಕೆ ಕಣ್ಬನಿ ಕಳಲ್ದಪು ದೆಂದಳವಾರಿ ನೋವ ನುಃ ॥ ಪೆಂದು ಸುರಿಕ್ಕಿ ಸುಯ್ಯು ನಕಟೆನ್ನವನಿಂತಿರೆ ತಾಳ್ವೆ ನೆಂತೆನು । ತ್ತಂದಳಲುಣ್ಮೆ ತಲ್ಲಣಿಪ ನೊಯ್ಯನೆ ದೃಗ್ಜಲಮಂ ಸೆರುಗಿಸಿಂ ॥ ... ... ... ... ॥೧೧೧॥

ಕಂ ॥ ಬಿಡದೊರಸಿ ನೋಳ್ಪ ನಂಬಕ । ದೆಡೆಯೊಳ್ರಜಪೊಕ್ಕುದೆಂದು ಮೊಗಮಿಟ್ಟೂದು ॥ ತೊತ್ತಡವೊಡ ನಾಲಿಗೆ ನಾಲಿಗೆ । ಗುಡಿಯಿಟ್ಟೆರೆಯೊರೆದು ತಿರುಪಿ ಸೋದಿಸಿ ನೋಳ್ಪಂ ॥ ... ... ... ... ॥೧೧೨॥

ಕಂ ॥ ದಟ್ಟಯ ಸೆರಂಗಿನಿಂ ಪೊಸ । ಪೊಟ್ಟಣಮಂ ಕಟ್ಟಿ ಬಾಯು ಸೆಕೆಗೊಳಿಸಿ ಮನಂ ॥ ನಟ್ಟೊತ್ತಿದೊಡದು ದೃಗ್ಜಲ । ದಿಟ್ಟಣದಿಂ ನೆನೆಯೆ ಕಂಡು ಬಾಯ್ವಿಡುತಿರ್ಪಂ ॥

ಕಂ ॥ ಕಡೆಗಣ್ಣನೊತ್ತೆ ಕಣ್ಣೀ । ರ್ಗಡಣಿಸಿ ಕಣ್ಣುಣಿಕೆವಿಡಿದು ಸುರಿಗುಂ ಕರದಿಂ ॥ ನಿಡುಗಣ್ಣುಣಿಕೆಯ ನೊತ್ತಿದೊ । ಡೊಡ ನಿಳಿಗು ಮಪಾಂಗದತ್ತಣಿಂ ದಶ್ರುಜಲಂ ॥

ವ ॥ ಅಗಳದಂಕಂಡು ಪುಳಿಂದಪತಿತಳವೆಳಗಾಗಿ ॥ * * * * * * *

---

ಣ್ಣೀರ್ಗಳಂ, ಕರೆವುತ್ತೆ, ಇರ್ಪೆಯೊ? ಬಿಯದಂ- ಬೇಡನು. ತಳ್ವಿದಂ- ತಬ್ಬಿದನು, ಎಂದು, ಎನ್ನತ್ತಣಿಂದೆ- ನನ್ನದೆಸೆಯಿಂದ, ಆದ, ಬಲ್ಮರುಕಂ, ಬಲವಾದ ದುಃಖವು, ಕಣ್ಬನಿಯಂ, ನಿಮಿರ್ಚಿತೊ- ಉಂಟುಮಾಡಿತೊ? ಬಸಿರ್- ಹೊಟ್ಟೆಯು, ಕಾಯ್ಪೇರೆ- ಉಷ್ಣವಂ ಹತ್ತಲಾಗಿ,ಶೋಕಿಪ್ಪೆಯೋ? ... ॥೧೧೦॥

ಎಂದು, ಪಲುಂಬಿ- ಹುಬಳಿಸಿ, ನಾಡೆ- ಚೆನ್ನಾಗಿ, ಪಲವಾಡುವಂ- ಅನೇಕವಿಧವಾಗಿ ಮಾತನಾಡುವವನು, ಅಪ್ಪುವಂ- ತಬ್ಬುವನು; ಒರ್ಮೆ- ಒಂದಾವರ್ತಿ, ಮುದ್ದಿಪಂ- ಮುದ್ದಾಡುವನು; ತಂದೆ! ಇದುಕಣ್ಬನಿ, ಏಕೆಕಳಲ್ದಪುದು- ಯಾಕೆ ಜಾರುತ್ತಿರುವದ? ಎಂದು, ಅಳವಾರಿ- ಶಕ್ತಿಗುಂದಿ, ನೋವಂ- ಬಾಧೆಯನ್ನು ಹೊಂದುವನು; ಉಃಪೆಂದು,ಉಸುರಿಕ್ಕಿ- ಊದಿ, ಸುಯ್ಯಂ ನಿಟ್ಟುಸುರಂ ಬಿಡುವನು, ಅಕಟ! ಎನ್ನವಂ, ಇಂತು, ಇರೆ, ಎಂತು, ತಾಳ್ವೆ? ಎನುತ್ತೆ, ಅಂದು, ಅಳಲ್-ದುಃಖವು, ಉಣ್ಮೆ ಉಂಟಾಗಲು,ತಲ್ಲಣಿಪಂ- ನಡಗುವನು, ಒಯ್ಯನೆ- ಮೆಲ್ಲನೆ, ದೃಗ್ಜಲವಂ- ಕಣ್ಣೀರನ್ನು ಸೆರಗಿನಿಂ. ... ... ॥೧೧೧॥

ಬಿಡದೆ, ಒರಸಿ, ನೋಳ್ಪಂ, ಅಂಬಕದ- ಕಣ್ಣಿನ, ಎಡೆಯೊಳ್, ರಜ, ಅಣುವು, ಪೊಕ್ಕುದು, ಎಂದು ಮೊಗವಿಟ್ಟು, ಊದುತ್ತೆ, ಒಡನೆಒಡನೆ, ಆಲಿಗೆ- ಕಣ್ಣುಗುಡ್ಡೆಗೆ, ನಾಲಿಗೆಗುಡಿಯಿಟ್ಟು- ನಾಲಿಗೆಯು ತಂದಿಯನ್ನಿರಿಸಿ, ಒರೆದು ಒರೆದು- ಸವರಿ ಸವರಿ, ತಿರುಪಿ- ತಿರುಗಿಸಿ,ಸೋದಿಸಿ ನೋಳ್ಪಂ. ... ॥೧೧೨॥

ದಟ್ಟಯ, ಸೆರಗಿನಿಂ, ಪೊಸಪೊಟ್ಟಣಮಂ, ಕಟ್ಟಿ, ಬಾಯುಸಿರ ನೊಸಿ ಶಾಖವು ಮಾಡಿ, ಮನಂನಟ್ಟು- ಮನಸ್ಸನಾಟಿ, ಒತ್ತಿದೊಡೆ, ಅದು- ಆ ಪೊಟ್ಟಣವು. ದೃಗ್ಜಲದ- ಕಣ್ಣೀರಿನ, ಇಟ್ಟಣದಿಂ- ಆಧಿಕ್ಯದಿಂದ, ನೆನೆಯೆ- ಆರ್ದ್ರವಾಗಲು, ಕಂಡು, ಬಾಯ್ವಿಡುತ್ತೆ, ಇರ್ಪಂ ... ... ॥೧೧೩॥

ಕಣ್ಣೀರ್, ಗಡಣಿಸಿ- ಗುಂಪಾಗಿ, ಕಡೆಗಣ್ಣಂ, ಒತ್ತೆ, ಕಣ್ಣುಣಿಕೆವಿಡಿದು- ಕಣ್ಣಿನ ಕೊಣಿಕೆಯನ್ನುಹಿಡಿದು, ಸುರಿಗುಂ, ಕರದಿಂ, ನಿಡುಗಣ್ಣುಣಿಕೆಯಂ- ಉದ್ದವಾದ ಕಣ್ಣಿನ ಕೊಣಿಕೆಯನ್ನು, ಒತ್ತಿದೊಡೆ ಅವುಕಿದರೆ, ಒಡನೆ- ಕೂಡಲೇ, ಅಪಾಂಗದತ್ತಣಿಂದೆ- ಕಡೆಗಣ್ಣಿನ ದೆಸೆಯಿಂದ, ಅಶ್ರುಜಲಂ- ಕಣ್ಣೀರು, ಇಳಿಗುಂ, ಆಗಳ್, ಪುಳಿಂದಪತಿ, ಅದಂ, ಕಂಡು, ತಳವೆಳಗಾಗಿ- ಬೆರಗಾಗಿ. * * * * * * *

ಕಂ ॥ ಇದು ಸುಖಬಾಷ್ಪಂ ಕಾರು । ಣ್ಯದೆ ತೊರೆದದೃಗಂಬು ಶೋಕಜನಿತಾಶ್ರುಗ
ಳೆಂ ॥ ಬುದಕೆ ತೆರಪಿಲ್ಲ ಸುರಿತ । ರ್ಪುದುಗಡ ಕಣ್ಣೊಂದರಿಂದೆ ಜಳಮದರಿಂದಂ ॥೧೧೫॥

ವ॥ಎಂದು ಮುಗ್ಧಂವಿದಗ್ಧನಂತೆವಿಚಾರಂಗೆಯ್ದಕ್ಷಿರೋಗಮಕ್ಕುಮೆಂದು ನಿರ್ಧರಿಸಿ॥

ಮತ್ತೇ॥ ಅಳಿಗಣ್ಣೋ ಪೊಸನೀಲಿಗಣ್ಣೊ ಪರೆಗಣ್ಣೋ ಬೇನೆಗಣ್ಣೋ ರುಜಾ ।
ವಿಳಮಾಂಸದಕಣ್ಣೊ ಮೈಲಿಗೆಯ ಕಣ್ಣೋ ತಿಂತೆಗಣ್ಣೋ ನಿರ ॥ ರ್ಗಳವಾತಾಮಯ
ಮಾಳ್ದಕಣ್ಣೊ ಕುಟಿಗಣ್ಣೋ ಚುರ್ಬುಗಣ್ಣೋ ಜಳಾ । ಕುಳವೊಂದಿರ್ದರಿಗಣ್ಣೊ ಕ
ಣ್ಣಿದಕೆ ಮರ್ದಂ ಮಾಡಲಾಂಬಲ್ಲೆನೆ ॥ ... ... ... ॥೧೧೬॥

ಕಂ॥ ಏಗೆಯ್ದಪೆನಾರ್ಗರುಪುವೆ । ನೀಗಹನದೊಳೋರ್ವ ನಿಲ್ಲ ಮಾಣ್ದಪುದೆಂತೀ ॥
ರೋಗ ಮಕಟಕಟ ಕಾಳ್ಪುರ । ಮಾಗಿಳಿದಪುದಶ್ರು ಕಣ್ಣದೇಂ ಬಾಳ್ದಪುದೋ ॥೧೧೭॥

ಶಾ॥ಕಣ್ಣುಮ್ಮರುಳ್ಗೆ ನೆನಿಪ್ಪ ನಿನ್ನೆಸಕಮಂ ಕಂಡಚ್ಯುತಾಜ ರುದ್ರಾ । ಷಾಣ್ಮುಖ್ಯಾಮ
ರ ರಳ್ಕುವ ರ್ವಿಗತನೇತ್ರಂ ತತ್ಸುರಶ್ರೇಣಿಗೆಂ ॥ತಾಣ್ಮಂ ನೀನೆನಿಸಿರ್ಪೆ ಯೇಂ ನಗರೆ ಕಣ್ಣಿಂ
ಬೆಂದವ ರ್ನಿನ್ನ ನೀಂ । ಮಾ ಣ್ಮಾ ಣಂಬಕದಂಬುವಂ ಕರೆವುದಂ ಶ್ರೀಕಾಳಹಸ್ತೀಶ್ವರ ॥

ಜಳಂ, ಕಣ್ಣೊಂದರಿಂದೆ,ಸುರಿತರ್ಪುದುಗಡ-ಸುರಿಯುತ್ತಿರುವದಲ್ಲವೇ? ಅದರಿಂದಂ, ಇದು, ಸುಖಬಾಷ್ಪಂ- ಸಂತೋಷದಿಂದುಂಟಾದ ಕಣ್ಣೀರು, (ಇದು) ಕಾರುಣ್ಯದೆ,ತೊರೆದ-ಸುರಿದ, ದೃಗಂಬು-ಕಣ್ಣೀರು, (ಇದು) ಶೋಕಜನಿತಾಶ್ರುಗಳ್- ದುಃಖದಿಂದುಂಟಾದಕಣ್ಣೀರ್ಗಳು, ಎಂಬುದಕೆ, ತೆರಪು-ಅವಕಾಶವು, ಇಲ್ಲ

ಎಂದು, ಮುಗ್ಧಂ- ಮೂಢನು, ವಿದಗ್ಧನಂತೆ- ಪ್ರೌಢನ ಹಾಗೆ, ವಿಚಾರಂಗೆಯ್ದು- ಆಲೋಚಿಸಿ, ಅಕ್ಷಿರೋಗಂ- ಕಣ್ಣೋವು, ಅಕ್ಕುಂ, ಎಂದು, ನಿರ್ಧರಿಸಿ. * * * * * * * * * *

ಅಳಿಗಣ್ಣೋ- ಕೆಟ್ಟಕಣ್ಣೋ? ಪೊಸನೀಲಿಕಣ್ಣೋ- ನೂತನವಾದ ನೀಲಿಬಣ್ಣವಾಗುವ ಕಣ್ಣೋ? ಪರೆಗಣ್ಣೋ? ಬೇನೆಗಣ್ಣೋ- ರೋಗದ ಕಣ್ಣೋ? ರುಜಾವಿಳಮಾಂಸದಕಣ್ಣೊ- ರೋಗದಿಂ ವ್ಯಾಪ್ತವಾದ ಕೆಟ್ಟಮಾಂಸದಿಂ ಕೂಡಿದ ಕಣ್ಣೋ? ಮೈಲಿಗೆಯಕಣ್ಣೋ- ಕೊಳಕಿನಿಂ ಕೂಡಿದ ಕಣ್ಣೋ? ತಿಂತೆಗಣ್ಣೋ- ತೀಟೆಯಾಗುವ ಕಣ್ಣೋ? ನಿರರ್ಗಳವಾತಾಮಯಮಾಳ್ದಕಣ್ಣೊ- ಅಧಿಕವಾದ ವಾಯುರೋಗವಂ ಹೊಂದಿದಕಣ್ಣೋ? ಕುಟಿಗಣ್ಣೋ- ಕುಟಿಗೆಯ ಕಣ್ಣೋ? ಚುರ್ಬುಗಣ್ಣೋ- ಇರಿಯುವಕಣ್ಣೋ? ಜಳಾಕುಳಂ- ನೀರಿನಿಂದ ವ್ಯಾಪ್ತವಾಗಿ, ಒಂದಿ, ಇರ್ದ, ಅರಿಕಣ್ಣೋ- ಅರಿಗುಕಟ್ಟುವ ಕಣ್ಣೋ? ಕಣ್ಣಿದಕೆ- ಈ ಕಣ್ಣಿಗೆ, ಆಂ, ಮರ್ದಂ-ಔಷಧವನ್ನು, ಮಾಡಲ್, ಬಲ್ಲೆನೇ? ... ... ... ॥೧೧೬॥

ಏಗೆಯ್ದಪೆಂ- ಏನುಮಾಡಲಿ? ಆರ್ಗೆ, ಅರಿಪುವೆಂ- ತಿಳಿಸಲಿ? ಈಗಹನದೊಳ್- ಈ ಕಾಡಿನಲ್ಲಿ, ಓರ್ವಂ,ಇಲ್ಲ, ಈರೋಗಂ, ಎಂತು, ಮಾಣ್ದಪುದು- ಹೋಗುವದು? ಅಕಟಅಕಟ !! ಅಶ್ರುಕಣಂ- ಕಣ್ಣೀರಿನ ಹನಿಯು, ಕಾಳ್ಪುರಂ- ಪ್ರವಾಹವು, ಆಗಿ, ಇಳಿದಪುದು, ಅದುಕಣ್ಣು,ಬಾಳ್ದಪುದೇಂ. ... ॥೧೧೭॥

ಶ್ರೀಕಾಳಹಸ್ತೀಶ್ವರ ! ಕಣ್ಣುಮ್ಮರುಳ್ಗಂ, ಎನಿಪ್ಪ, ನಿನ್ನ, ಎಸಕಮಂ-ಉದ್ಯೋಗವನ್ನು, ಅಚ್ಯುತಾಜರ್- ವಿಷ್ಣು ಬ್ರಹ್ಮರು, ರುದ್ರಾಷಾಣ್ಮುಖ್ಯಾಮರರ್-ಇಂದ್ರಾದಿದೇವತೆಗಳು,ಕಂಡು,ಅಳ್ಕುವರ್-ಭಯಪಡುವರು, ವಿಗತನೇತ್ರಂ-ಹೋದಕಣ್ಣುಳ್ಳ, ನೀಂ, ತತ್ಸುರಶ್ರೇಣಿಗೆ-ಆ ದೇವತೆಗಳ ಪಙ್ತಿಗೆ,ಎಂತುಆಣ್ಮಂಎನಿಸಿ ಇರ್ಪೆ- ಹ್ಯಾಗೆ ಪತಿಯೆಂದು ಹೇಳಿಸಿಕೊಳ್ಳುವೆ? ಕಣ್, ಇಂಬು- ಮನೋಹರವಾದದ್ದು; ಎಂದವರ್- ಎಂಬುದಾಗಿಹೇಳಿಸಿಕೊಂಡವರು, ಅಥವಾ,ಕಣ್ಣಿಂ-ನಿನ್ನಕಣ್ಣಿನಿಂದ, ಬೆಂದವರ್- ಸುಟ್ಟುಹೋದವರು,ನಗರೇಂ-ಹಾಸ್ಯಮಾಡುವರಲ್ಲವೇ? ನೀಂ,ಅಂಬಕದ-ಕಣ್ಣಿನ, ಅಂಬುವಂ, ಕರೆವುದಂ, ಮಾಣ್,ಬಿಡು,ಮಾಣ್,ಬಿಡು.॥೧೧೮॥

ಮತ್ತೇ ॥ ಕರಿಮುಕ್ತಾಸ್ರಜದಿಂ ಥಲಂಕರಿಸಿ ವಕ್ಷೋಭಾಗಮಂ ಗುಂಜಿಕಾ । ಭರಣಶ್ರೇಣಿಯ ನಿಟ್ಟು ಸಾರಮೃಗಭೂವಿಂದಣ್ಪಿಗೆ ಯ್ದೂರ್ಧ್ವಭಾ ॥ ಸುರಸೂತ್ರಾಂಬರಮಂ ಮರಲ್ದುಡಿಸಿ ನಿನ್ನಂಗಂಗಳಂ ನಾಡೆ ಸಿಂ । ಗರಿಸಲ್ಕಾನೊಸೆದಿರ್ಪಿನಂ ನಯನ ಮಿಂತೇಕಾದುದಯ್ ಶಂಕರ ॥ ... ... ... ... ॥೧೯೯॥

ವ ॥ ಎಂದು ಪಲುಂಬಿ ಪಳಯಿಸಿ ॥ ಕಂ ॥ ಜನಿಯಿಸಿದುದಿಂದಂ ವೇ । ದನೆ ಯರಿಯದಿ ದೆನ್ನ ಕಣ್ಣಿದು ಪತ್ತಿಸಿ ನೋ ॥ ಳ್ಪೆ ನೆನುತ್ತ ಮಸೆದ ಕೂರಂ । ಬಿನ ಮೊನೆಯಿಂ ದೊತ್ತಿ ಮಿಾಂಟ ನಿಜಲೋಚನಮಂ ॥ ... ... ... ॥೨೦೦॥

ಕಂ ॥ ತೆಗೆ ದತುಳಧೀರ ನಾಚ । ಕ್ಷುಗೆ ಪತ್ತಿಸೆ ಬೆಚ್ಚತೆರ್ದಿ ನಮರ್ದಿರೆ ಕಂಡು ॥ ದೊಗುವಿಗೆಯ ಮುದಮ ನೊಳಕೊಂ । ಡಗಲದೆ ನಡೆನೋಡುತಿರ್ದನಾ ಕಣ್ಣಪ್ಪಂ ॥೨೦೧॥

ಕಂ ॥ ಒಳ ಗಿಡಿದುಣ್ಮುವ ಕರುಣಾ । ಜಳ ಮದು ಪೊರಸೂಸುವಂತೆ ವಾಮೇಕ್ಷಣದಿಂ ॥ ದಿಳಿವ ಜಳಧಾರೆ ತಳೆದುದು । ನಳಿನೋಜ್ಜ್ವಳನವಮರಂದಧಾರೆಯ ಚೆಲ್ವಂ ॥೨೦೨॥

ಮತ್ತೇ ॥ ಬಲಗಣ್ಣೀರ್ ನಿಲೆ ವಾಮಲೋಚನ ಮುದಂಬುವ್ರಾತಮಂ ಸೂಸೆ ಕಂ । ಡೊಲವಂ ಪೇರಳಲಂ ಕರಂ ತಳೆದು ಕಣ್ಗೊಪ್ಪಿರ್ದನರ್ಕಾಂಶುಮೇ ॥ ಘುಲಸಚ್ಛಾಯೆಯ

---

ವಕ್ಷೋಭಾಗಮಂ- ಎದೆಯನ್ನು, ಕರಿಮುಕ್ತಾಸ್ರಜದಿಂದೆ- ಆನೆಯ ತಲೆಯ ಮುತ್ತಿನ ಸರದಿಂದ, ಅಲಂಕರಿಸಿ, ಗುಂಜಿಕಾಭರಣಶ್ರೇಣಿಯಂ- ಗುಲಗಂಜಿಯ ಒಡವೆಗಳ ಪಜ್ತಿಯನ್ನು, ಇಟ್ಟು, ಸಾರಮೃಗಭೂವಿಂದೆ- ಶ್ರೇಷ್ಠವಾದ ಕಸ್ತೂರಿಯಿಂದ, ಅಣ್ಪಿಗೆಯ್ದು- ಅನುಲೇಪನೆಯಂ ಮಾಡಿ, ಮರಲ್ದು, ಊರ್ಧ್ವಭಾ ಸುರಸೂತ್ರಾಂಬರಮಂ- ಜೇಡರ ಹುಳದ ಮನೋಹರವಾದ ನೂಲಿನ ವಸ್ತ್ರವನ್ನು, ಉಡಿಸಿ, ನಿನ್ನ, ಅಂಗಂಗಳಂ, ನಾಡೆ- ಚೆನ್ನಾಗಿ, ಸಿಂಗರಿಸಲ್ಕೆ- ಶೃಂಗಾರಮಾಡುವದಕ್ಕೆ, ಆಂ, ಒಸೆದು- ಪ್ರೀತಿಸಿ, ಇರ್ಪಿನಂ- ಇರುವಲ್ಲಿ, ಶಂಕರ! ನಯನಂ, ಇಂತು, ಏಕೆ, ಆದುದಯ್? ... ... ... ॥೧೯೯॥

ಇದು, ಎನ್ನ, ಕಣ್, ಜನಿಯಿಸಿದ, ಅಂದಿಂದಂ- ಆಗಿನಿಂದ, ವೇದನೆಯರಿಯದು- ನೋವನ್ನು ತಿಳಿಯದು; ಇದಂ, ಪತ್ತಿಸಿ, ನೋಳ್ಪೆಂ, ಎನುತ್ತ, ಮಸೆದ-ಶಾಣೋಲ್ಲೇಖನೆಯಂ ಮಾಡಿದ, ಕೂರಂಬಿನ- ತೀಕ್ಷ್ಣವಾದ ಬಾಣದ, ಮೊನೆಯಿಂದೆ ನಿಜಲೋಚನಮಂ,ಒತ್ತಿ, ಮಿಾಂಟಿ. ... ... ॥೨೦೦॥

ಅತುಳಧೀರಂ- ಅಸದೃಶನಾದ ಧೈರ್ಯಶಾಲಿಯಾದ, ಆ ಕಣ್ಣಪ್ಪಂ, ತೆಗೆದು, ಆ ಚಕ್ಷುಗೆ- ನೀರುಸುರಿಯುತ್ತಿದ್ದ ಕಣ್ಣಿಗೆ, ಪತ್ತಿಸೆ, ಬೆಚ್ಚತೆರದಿಂ- ಬೆಸೆವ ರೀತಿಯಿಂದ, ಅಮರ್ದಿರೆ- ಸೇರಿ, ಇರೆ, ಕಂಡು, ಒಗುವಿಗೆಯ- ಅಧಿಕವಾದ, ಮುದಮಂ, ಒಳಕೊಂಡು- ಹೊಂದಿ, ಅಗಲದೆ- ಬಿಡದೆ, ನಡೆ, ನೋಡುತೆ, ಇರ್ದನ್.

ಒಳಗೆ, ಇಡಿದು- ತುಂಬಿ, ಉಣ್ಮುವ- ಹೊರಕ್ಕೆ ಹೊರಡುವ, ಅದುಕರುಣಾಜಲಂ- ಆ ದಯಾರಸವು, ವಾಮೇಕ್ಷಣದಿಂ- ಎಡಗಣ್ಣಿನಿಂದ, ಪೊರಸೂಸುವಂತೆ- ಹೊರಕ್ಕೆ ಹೊರಡುವ ಹಾಗೆ, ಇಳಿವ, ಜಳಧಾರೆ, ನಳಿನೋಜ್ಜ್ವಳನವಮರಂದಧಾರೆಯ- ಕಮಲದಿಂದ ಸ್ರವಿಸುವ ನೂತನವಾದ ಮಕರಂದದ ಧಾರೆಯ, ಚೆಲ್ವಂ- ಸೌಂದರ್ಯವನ್ನು, ತಳೆದುದು. ... ... ... ... ॥೨೦೨॥

ಬಲಗಣ್ಣೀರ್, ನಿಲೆ, ಅದು,ವಾಮಲೋಚನಂ- ಆ ಎಡಗಣ್ಣು, ಅಂಬುವ್ರಾತಮಂ- ನೀರಿನ ಸಮೂಹವನ್ನು, ಸೂಸೆ- ಸುರಿಸಲು, ಶಿವಭಕ್ತಿಶ್ರೀವರಂ- ಶಿವಭಕ್ತಿಯೆಂಬ ಲಕ್ಷ್ಮಿಗೆ ಪತಿಯಾದ, ಧೀವರಂ- ಬೇಡನು, ಕಂಡು, ಒಲವಂ- ಸಂತೋಷವನ್ನು, ಪೇರಳಲಂ- ಹೆಚ್ಚಾದ ದುಃಖವನ್ನು, ಕರಂ- ಚೆನ್ನಾಗಿ, ತಳೆದು, ಅರ್ಕಾಂಶುಮೇಘುಲಸಚ್ಛಾಯೆಯುಂ- ಬಿಸಿಲು ಮೋಡದ ನೆಳಲು ಇವುಗಳನ್ನು, ಆಳ್ದು, ವಾಸರದವೋಲ್-ದಿವ

ತಾಳ್ದ ವಾಸರದವೊಲ್ ಗಂಗಾಕಳಿಂದಾತ್ಮಜಾ। ಸಲಿಲಂದಾಳ್ದ ಸಮುದ್ರದಂತೆ ಶಿವಭಕ್ತಿಶ್ರೀ ವರಂ ಧೀವರಂ॥ ... ... ... ... ॥೧೬೩॥

ವ॥ ಅಂತೊಂದು ನಿಮಿಷಾರ್ಧ ಮಿರ್ದನಿತರೊಳ್ತಿಳಿದೆನೆಗಿನ್ನು ಮೊಂದುವಿಲೋಚನ ಮಿರ್ಕ್ಕು ಮಾನಂಜೆ ನಂಜೆ ನೆಂದು ದರಸ್ಮಿತಾಸ್ಯಂ ಪಾದುಕಾಂಚಿತಪಾದಾಂಗುಷ್ಠದಿಂ ಕಣ್ಣು ಗುರುವ ನೊತ್ತಿ ದೃಢಭಾವಂಬಲಿದು॥ * * * * * * * * * * *

ಮತ್ತಂ॥ ನಿಜವಾಮೇಕ್ಷಣಮಂ ನಿಶಾತಶರದಿಂದಂ ಮೀಂಟುವಾಗಳ್ಕರಾಂ। ಬುಜನುಂ ನೀಡಿ ತದೀಯಪಾಣಿವಿಡಿ ದೊಲ್ದಭ್ರಾವಗಾಚಂದ್ರಚಾ॥ ರುಜಟಾಜೂಟನುಮಾ ಸಮೇತನಸಿತಗ್ರೀವಂ ತ್ರಿನೇತ್ರಂ ಮಹಾ।ಭುಜಗಾಕಲ್ಪನಿಭಾಜಿನಾಂಬರಧರಂ ಪ್ರತ್ಯಕ್ಷನಾದಂ ಶಿವಂ॥ ... ... ... .. ॥೧೬೪॥

ಕಂ॥ ಮೊಳಗಿದುದು ದೇವದುಂದುಭಿ। ವಿಳಸಿತಸುರಭೂಜಕುಸುಮವರ್ಷಂ ಭೋರೆಂ॥ ದಿಳಿದುದು ಪಡೆದೆಳ್ತಂದುದು। ಜಳಜಾಕ್ಷಮುಖಾಮರಾಳಿಯುಂ ಗಣತತಿಯುಂ॥

ವ॥ ಆಗಳ್॥ ಉತ್ಸಾಹವೃತ್ತಂ॥ ತನ್ನ ಮುನ್ನಿನಶ್ರುಮಿಶ್ರಿತಾಂಬಕಂಗಳಂ ಶಿವಂ। ನನ್ನಿಕಣ್ಣಪಂಗೆ ಕೊಟ್ಟು ನಂಬಮಾತಿದೆಂಬಿನಂ॥ ಪ್ರೋನ್ನತಪ್ರಭು ಸುಭಾಶ್ರುಮಿಶ್ರಲೋಚನದ್ವಯಂ। ತನ್ನ ಸಪ್ಪಿ ರಂಜಿಸಿರ್ದ್ದ ದಾಸ್ಯದೊಳ್ಪುಳಿಂದನ॥ ॥೧೬೬॥

---

ಸದ ಹಾಗೆ, ಗಂಗಾಕಳಿಂದಾತ್ಮಜಾಸಲಿಲಂದಾಳ್ದ- ಗಂಗೆ ಯಮುನೆಗಳ ನೀರನ್ನು ಹೊಂದಿದ, ಸಮುದ್ರದಂತೆ, ಕಣ್ಣ, ಒಪ್ಪಿದಂ. ... ... ... ... ... ॥೧೬೩॥

ಅಂತು, ಒಂದುನಿಮಿಷಾರ್ಧಂ, ಇರ್ದು, ಅನಿತರೊಳ್, ತಿಳಿದು- ಚೇತರಿಸಿ, ಎನಗೆ, ಇನ್ನುಂ, ಒಂದು,ವಿಲೋಚನಂ, ಇರ್ಕ್ಕುಂ, ಆಂ, ಅಂಜೆಂ, ಅಂಜೆಂ, ಎಂದು, ದರಸ್ಮಿತಾಸ್ಯಂ-ಮುಗುಳ್ನಗೆಯಿಂ ಕೂಡಿದ ಮುಖವುಳ್ಳವನಾಗಿ, ಪಾದುಕಾಂಚಿತಪಾದಾಂಗುಷ್ಠದಿಂ-ಕೆರದಿಂ ಕೂಡಿದ ಕಾಲಿನ ಹೆಬ್ಬೆಟ್ಟಿನಿಂದ, ಕಣ್ಣುಗುರುಪಂ- ಕಣ್ಣಿನ ಗುರ್ತನ್ನು, ಒತ್ತಿ, ದೃಢಭಾವಂ- ನಿಶ್ಚಂಚಲವಾದ ಮನಸ್ಸು, ಬಲಿದು—ವೃದ್ಧಿಯಂ ಹೊಂದಿ. * *

ನಿಜವಾಮೇಕ್ಷಣಮಂ-ತನ್ನ ಎಡಗಣ್ಣನ್ನು, ನಿಶಾತಶರದಿಂದಂ-ತೀಕ್ಷ್ಣವಾದಬಾಣದಿಂದ. ಮೀಂಟುವಾಗಳ್, ಅಭ್ರಾಪಗಾಚಂದ್ರಚಾರುಜಟಾಧರಂ- ದೇವಗಂಗೆ ಚಂದ್ರ ಇವರಿಂದ ಮನೋಹರವಾದ ಜಡೆಯಂ ಧರಿಸಿರುವ, ಉಮಾಸಮೇತಂ- ಪಾರ್ವತಿಯಿಂ ಯುಕ್ತನಾದ, ಅಸಿತಗ್ರೀವಂ- ಕಪ್ಪಾದ ಕತ್ತುಳ್ಳ, ತ್ರಿನೇತ್ರಂ, ಮಹಾಭುಜಗಾಕಲ್ಪಂ-ದೊಡ್ಡಹಾವುಗಳೇ ಆಭರಣವಾಗುಳ್ಳ, ಇಭಾಜಿನಾಂಬರಧರಂ- ಆನೆಯಚರ್ಮದವಸ್ತ್ರವಂಧರಿಸಿರುವ, ಶಿವಂ, ಕರಾಂಬುಜಮಂ, ನೀಡಿ, ತದೀಯಪಾಣಿವಿಡಿದು- ಆ ಕಣ್ಣಪ್ಪನ ಕೈಯ್ಯಂ ಹಿಡಿದು, ಒಲ್ದು- ಪ್ರೀತಿಸಿ, ಪ್ರತ್ಯಕ್ಷಂ, ಆದಂ. ... ... ... ॥೧೬೪॥

ದೇವದುಂದುಭಿ, ಮೊಳಗಿದುದು- ಶಬ್ದವಂ ಮಾಡಿತು; ವಿಳಸಿತಸುರಭೂಜಕುಸುಮವರ್ಷಂ- ಪ್ರಕಾಶಿಸುವ ಕಲ್ಪವೃಕ್ಷದ ಹೂವಿನ ಮಳೆಯು, ಭೋರ್, ಎಂದು, ಇಳಿದುದು; ಜಳಜಾಕ್ಷಮುಖಾಮರಾಳಿಯುಂ- ವಿಷ್ಣು ಮೊದಲಾದ ದೇವತಾಸಮೂಹವೂ, ಗಣತತಿಯುಂ, ಪಡೆದು, ಎಳ್ತಂದುದು. ... ॥೧೬೫॥

ಶಿವಂ, ತನ್ನ, ಮುನ್ನಿನ, ಅಶ್ರುಮಿಶ್ರಿತಾಂಬಕಂಗಳಂ- ಕಣ್ಣೀರಿನಿಂದ ಕೂಡಿದಕಣ್ಣುಗಳನ್ನು, ಕಣ್ಣಪಂಗೆ, ಕೊಟ್ಟಂ, ಎಂಬ, ಇದುಮಾತು, ನನ್ನಿ- ನಿಶ್ಚಯು, ಎಂಬಿನಂ, ಪುಳಿಂದನ- ಬೇಡನ, ಆಸ್ಯದೊಳ್-ಮುಖದಲ್ಲಿ, ಪ್ರೋನ್ನತಪ್ರಭಂ- ಅಧಿಕವಾದ ಕಾಂತಿಯುಳ್ಳ, ಸುಭಾಶ್ರುಮಿಶ್ರಲೋಚನದ್ವಯಂ- ಸಂತೋಷಬಾಷ್ಪದಿಂದ ಕೂಡಿದ ಕಣ್ಗಳೆರಡು, ತನ್ನಂ, ಅಪ್ಪಿ, ರಂಜಿಸಿ, ಇರ್ದ್ದುದು. ... ... ॥೧೬೬॥

ಕಂ ॥ ಶಿವ ನವನ ನಯನಯುಗಳಮು । ನವ ನಭವನ ನಯನಯುಗಮು ನೀಕ್ಷಿಪ ವ
ದದೊಳ್ ॥ ನವನಯನದೆ ನಿಜನಯನಮು । ನವಧಾನದೆ ನೋಡುವಂತಿ ರೇನೊಪ್ಪಿದುದೊ ॥

ಕಂ ॥ ಹರ ನಿತ್ತ ಲೋಚನದಿ ನಾ । ಹರಮೂರ್ತಿಯ ನೊಲ್ದು ನೋಡುತಡಿದಾವ
ರೆಯೊಳ್ ॥ ಪರಮಾನಂದಮು ನೊಳಕೊಂ । ಡಿರದೆರಗಿದ ನತುಳಭಕ್ತಿನಿಧಿ ಕಣ್ಣಪ್ಪಂ ॥

ಕಂ॥ ಕರುಣಾರಸ ಮಕ್ಷಿಯೊ ಳೊಸ । ರ್ದಿರೆ ಶಂಕಾತಂಕ ಶಂಕರಂ ನೋಡಿದ ನಾ ॥
ವರಭಕ್ತನ ನಾಭಕ್ತಂ । ಸುರಿವ ಸುಖಾಶ್ರುಗಳ ಭರದಿ ನಿ ಕ್ಷಿಸುತಿರ್ದಂ ॥ ॥೧೨೯॥

ಕಂ॥ನಿಮಿರ್ದಮರ್ದು ಪೊಳೆವ ನವನಯ ।ನಮಯೂಖಾಮೃತಮರೀಚಿ ರುಚಿ ಪಸ
ರಿಸಿ ಸಂ॥ಕ್ರಮಿಸೆ ಮುಗಿದರುಣಸರಸಿರು । ಹಮಿದೆನೆಮುಗಿದಳಿಕನಯನಮೆಸೆದುದುಶಿವನ ॥

ಕಂ ॥ ಶಿವ ನವನಿತ್ತಕ್ಷಿಗಳಂ । ಜವದಿಂ ದವನಾಸ್ಯಮೆಂಬ ನವಮುಕುರದೊ ಳು ॥
ತ್ಸವದಿಂ ದೀಕ್ಷಿಸೆ ಮಾರ್ಪೊಳೆ॥ವವೊ ಲೊಪ್ಪಿದುದಾ ವುಳಂದ ನೀಕ್ಷಣಯುಗಳಂ ॥೧೩೧॥

ಮತ್ತೇ ॥ ಸ್ಮರ ಕಾಲಾಭ್ರಪುರಾಧ್ವರಾಂಬುಜಭವಾಂಡವ್ರಾತಮಂ ಸುಟ್ಟ ನಿ । ಷ್ಠು
ರತೇಜಸ್ವಿ ಲಲಾಟನೇತ್ರ ಮದು ಕಾರುಣ್ಯಾರ್ದ್ರಕಣ್ಣಪ್ಪಭಾ ॥ ಸುರನೇತ್ರದ್ವಯದೊ

---

ಶಿವಂ, ಅವನ-ಆ ಕಣ್ಣಪ್ಪನ, ನಯನಯುಗಳಮಂ-ಕಣ್ಗಳೆರಡನ್ನು, ಅವಂ-ಆ ಕಣ್ಣಪ್ಪನು, ಅಭವನ, ನಯನಯುಗಮಂ. ಈಕ್ಷಿಪ- ನೋಡುವ, ಪದದೊಳ್- ಸಮಯದಲ್ಲಿ, ನವನಯನದೆ- ಹೊಸಕಣ್ಣಿನಿಂದ, ನಿಜನಯನಮಂ- ತನ್ನ ಮೊದಲಕಣ್ಣನ್ನು, ಅವಧಾನದೆ- ಜಾಗರೂಕತೆಯಿಂದ, ನೋಡುವಂತಿರೆ, ಎಂಬ ಪ್ಪಿದುದೊ! ... ... ... ... ... ॥೧೨೭॥

ಅತುಳಭಕ್ತಿನಿಧಿ- ಅಸದೃಶವಾದ ಭಕ್ತಿಗೆ ನಿಕ್ಷೇಪನಾದ, ಕಣ್ಣಪ್ಪಂ, ಹರು, ಇತ್ತ, ಲೋಚನದಿಂ, ಆ ಹರಮೂರ್ತಿಯಂ-ಆ ಶಿವನ ದೇಹವನ್ನು, ಒಲ್ದು, ನೋಡುತೆ, ಪರಮಾನಂದಮಂ, ಒಳಕೊಂಡು, ಅಡಿದಾವರೆಯೊಳ್- ಪಾದಕಮಲದಲ್ಲಿ, ಇರದೆ, ಎರಗಿದಂ. ... ... ... ... ॥೧೨೮॥

ಅಕ್ಷಿಯೊಳ್ ಕರುಣಾರಸಂ, ಒಸರ್ದು- ಸ್ರವಿಸಿ, ಇರೆ, ಶಂಕಾತಂಕಶಂಕರಂ- ಸಂಶಯಭೀತಿ ಇವುಗಳಿಂ ಕೂಡಿದ ಈಶ್ವರನು, ಆವರಭಕ್ತನಂ, ನೋಡಿದಂ, ಆಭಕ್ತಂ, ಸುರಿವ, ಸುಖಾಶ್ರುಗಳ- ಸಂತೋಷಬಾಷ್ಪಗಳ, ಭರದಿಂ- ಆಧಿಕ್ಯದಿಂದ, ಈಕ್ಷಿಸುತೆ, ಇರ್ದಂ. ... ... ... ॥೧೨೯॥

ನಿಮಿರ್ದು- ಉದ್ದವಾಗಿ, ಅಮರ್ದು- ಸೇರಿ, ಪೊಳೆವ, ನವನಯನಮಯೂಖಾಮೃತಮರೀಚಿರುಚಿ- ನೂತನವಾದ ಕಣ್ಣಿನ ಕಾಂತಿಯೆಂಬ ಬೆಳ್ದಿಂಗಳು, ಪಸರಿಸಿ- ಹರಡಿ, ಸಂಕ್ರಮಿಸೆ- ಸಂಬಂಧಿಸಲು, ಇದು, ಮುಗಿದ- ಮೊಗ್ಗಾದ, ಅರುಣಸರಸಿರುಹಂ- ಕೆಂದಾವರೆಯು, ಎನೆ, ಶಿವನ, ಮುಗಿದ, ಅಳಿಕನಯನಂ- ಹಣೆಗಣ್ಣು, ಎಸೆದುದು. ... ... ... ... ... ॥೧೩೦॥

ಶಿವಂ, ಅವನ- ಬೇಡನು, ಇತ್ತ, ಅಕ್ಷಿಗಳಂ, ಜವದಿಂದೆ, ಅವನ- ಬೇಡನ, ಆಸ್ಯಂ- ಮುಖವು, ಎಂಬ, ನವಮುಕುರದೊಳ್- ಹೊಸಕನ್ನಡಿಯಲ್ಲಿ, ಉತ್ಸವದಿಂದೆ- ಸಂತೋಷದಿಂದ, ಈಕ್ಷಿಸೆ. ಮಾರ್ಪೊಳೆದವೊಲ್- ಪ್ರತಿಬಿಂಬಿಸಿದಹಾಗೆ, ಅವುಳಿಂದನ, ಈಕ್ಷಣಯುಗಳಂ, ಒಪ್ಪಿದುದು. ... ... ॥೧೩೧॥

ಸ್ಮರ......ವ್ರಾತಮಂ— ಸ್ಮರ- ಮನ್ಮಥ, ಕಾಲ- ಯಮ, ಅಭ್ರಪುರ- ಅಂತರಿಕ್ಷದಲ್ಲಿದ್ದ ತ್ರಿಪುರ, ಅಂಬುಜಭವಾಂಡ- ಬ್ರಹ್ಮಾಂಡ ಇವುಗಳ, ವ್ರಾತಮಂ- ಸಮೂಹವನ್ನು, ಸುಟ್ಟ, ಅದುನಿಷ್ಠುರತೇಜಸ್ವಿ ಲಲಾಟನೇತ್ರಂ- ಆ ಕಠಿಣವಾದ ತೇಜೋಯುಕ್ತವಾದ ಹಣೆಗಣ್ಣು,ಕಾರುಣ್ಯಾರ್ದ್ರಕಣ್ಣಪ್ಪಭಾಸುರನೇತ್ರದ್ವಯದ- ದಯಾರಸದಿಂದ ನನೆದ ಕಣ್ಣಪ್ಪನ ಮನೋಹರವಾದ ಎರಡು ಕಣ್ಗಳ, ಒತ್ತಿನೊಳ್- ಬಳಿಯಲ್ಲಿ,

ತ್ತಿನೊಳ್ನೆಲಸಿ ತಾನುಂ ಶಾಂತಿವೆತ್ತೋಜೆಯಿಂ । ಇರದೇಂ ಪೋಕುಮೆ ಭರ್ಗ ನುಗ್ರನೆನಿಪಾಖ್ಯಾನಕ್ಕೆ ಪಕ್ಕಪ್ಪನೇ ॥ ... .. ... ॥೧೩೨॥

ಕಂ ॥ ಕಣ್ಣಪ್ಪಂಗೆ ಮಹೇಶಂ । ಕಣ್ಣಪ್ಪಂ ತನ್ನಿರೀಕ್ಷಣಾಸ್ಪದ ನೆಂದುಂ ॥ ಕಣ್ಣಪ್ಪಂ ಶಶಿಮೌಳಿಗೆ । ಕಣ್ಣಪ್ಪಂ ತನ್ನಿರೀಕ್ಷಣಾಸ್ಪದ ನನಿಶಂ ॥ ... ॥೧೩೩॥

ವ ॥ ಇಂತು ಶಂಕರಪ್ರಸನ್ನತೆಯಂ ಪಡೆದೊಪ್ಪುವ ತದ್ಭಕ್ತನ ಮಹತ್ತ್ವಮನಾ ಭೂಸುರಂ ಕಂಡು ॥ * * * * * * * *

ಕಂ ॥ ನಡನಡನೆ ನಡುಗಿ ಭಯದಿಂ । ಪಿಡಿದಸಿಯಂ ಬಿಸುಟು ಕಣ್ಣಪಯ್ಯನ ಕೆರ್ಪಂ ॥ ತಡಿದಾವರೆಗೆರಗುತೆ ಚಿ । ತ್ತದೆ ಕೀರ್ತಿಸಿದಂ ಸವಿಸ್ಮಯಸ್ಮಿತವದನಂ ॥೧೩೪॥

ಕಂ ॥ ಕರುಣಾನಿಧಿ ಕಲಿಮಲಹರ ಪರಮಗುಣಾಭರಣ ಪಾವನಾಂಗ ಮಹಾಶಂ । ಕರ ಭಕ್ತಿಲೋಲ ಮಹಿಮಾ । ಕರ ಕರುಣಿಪುದೆಂದು ಪೊಗಳ್ದು ಮಗುಳ್ಪಿಂತೆಂದಂ ॥೧೩೫॥

ಮತ್ತೇ ॥ ಹರಕೋಟೀರದ ಚಂದ್ರಮಂಗಮರ್ದಗಂಗಾದೇವಿಗಾದತ್ತು ಬಂ । ಧುರಸಂಧ್ಯಾರುಣರೋಚಿ ಬೈತಲೆಯ ಸಿಂದೂರಂ ಭವತ್ಪಾದುಕಾ ॥ ಭರಣಶ್ರೀಪದಪದ್ಮಪಾಂಸು ನಖಜಾಲಂ ತಾರಕಾಪಾಳಿ ಭಾ।ಸುರಸೀಮಂತದಮೌಕ್ತಿಕಾವಳಿಯಲಂಕಾರಂ ಕಿರಾತೇಶ್ವರ ॥

---

ತಾನುಂ,ನೆಲಸಿ, ಶಾಂತಿವೆತ್ತು, ಓಜೆಯಿಂದೆ-ಕ್ರಮದಿಂದ, ಇರದೆ, ಪೋಕುಮೇಂ? ಭರ್ಗಂ_ಮನ್ಮಥಯಮಾದಿಗಳಂ ನಾಶಮಾಡಿದವನು,ಉಗ್ರಂ-ಕ್ರೂರನು, ಎನಿಪ, ಆಖ್ಯಾನಕ್ಕೆ-ಹೆಸರಿಗೆ ,ಪಕ್ಕ-ಆಸ್ಪದನು, ಅಪ್ಪನೇ?

ಮಹೇಶಂ, ಕಣ್ಣಪ್ಪಂಗೆ,ತನ್ನಿರೀಕ್ಷಣಾಸ್ಪದಂ-ಅವನನೋಟಕ್ಕೆಆಶ್ರಯನಾಗಿ,ಎಂದುಂ,ಕಣ್-ನೇತ್ರಸ್ವರೂಪನು, ಅಪ್ಪಂ,ಕಣ್ಣಪ್ಪಂ,ಶಶಿಮೌಳಿಗೆ,ತನ್ನಿರೀಕ್ಷಣಾಸ್ಪದಂ,ಅನಿಶಂ-ಯಾವಾಗಲೂ,ಕಣ್, ಅಪ್ಪಂ.

ಇಂತು, ಶಂಕರಪ್ರಸನ್ನತೆಯಂ, ಪಡೆದು, ಒಪ್ಪುವ, ತದ್ಭಕ್ತನ– ಆ ಕಣ್ಣಪ್ಪನ, ಮಹತ್ತ್ವಮಂ, ಆಭೂಸುರಂ- ಲಿಂಗದ ಹಿಂದೆ ಅಡಗಿದ್ದ ಹಾರ್ವನು, ಕಂಡು. * * * * * * * * *

ಕಿತ್ತಡಿ- ತಪಸ್ವಿಯಾದ ಪಾರ್ವನು, ಭಯದಿಂ, ನಡನಡನೆ, ನಡುಗಿ, ಪಿಡಿದ, ಅಸಿಯಂ- ಕತ್ತಿಯನ್ನು, ಬಿಸುಟು, ಕಣ್ಣಪಯ್ಯನ, ಕೆರ್ಪಂತ- ಕೆರವಂ ಧರಿಸಿದ, ಅಡಿದಾವರೆಗೆ- ಪಾದಕಮಲಕ್ಕೆ, ಎರಗುತೆ- ನಮಸ್ಕರಿಸುತ್ತ, ಸವಿಸ್ಮಯಸ್ಮಿತವದನಂ- ಆಶ್ಚರ್ಯಯುಕ್ತವಾದ ಮುಗುಳ್ನಗೆಯಿಂ ಕೂಡಿದ ಮುಖವುಳ್ಳವನಾಗಿ, ಕೀರ್ತಿಸಿದಂ-ಹೊಗಳಿದನು. ... ... ... ... ॥೧೩೪॥

ಕರುಣಾನಿಧಿ! ಕಲಿಮಲಹರ- ಸಮರ್ಥವಾದ ಪಾಪವಂ ನಾಶಮಾಡುವ, ಪರಮಗುಣಾಭರಣ, ಪಾವನಾಂಗ- ಪರಿಶುದ್ಧವಾದ ದೇಹವುಳ್ಳ, ಮಹಾಶಂಕರ ಭಕ್ತಿಲೋಲ, ಮಹಿಮಾಕರ! ಕರುಣಿಪುದು, ಎಂದು, ಮಗುಳ್ದು- ಪುನಃ, ಇಂತು, ಎಂದಂ. ... ... ... ... ॥೧೩೫॥

ಕಿರಾತೇಶ್ವರ- ಬೇಡರಿಗೆ ಅಧಿಪತಿಯಾದವನೇ! ಭವತ್ಪಾದುಕಾಭರಣಶ್ರೀಪದಪದ್ಮಪಾಂಸು- ನಿನ್ನಪಾದರಕ್ಷಾಭರಣದ ಕಾಂತಿಯುಕ್ತವಾದ ಚರಣಕಮಲದ ಧೂಳಿಯು, ಹರಕೋಟೀರದ-ಈಶ್ವರನ ಕಿರೀಟದಲ್ಲಿರುವ, ಚಂದ್ರಮಂಗೆ, ಬಂಧುರಸಂಧ್ಯಾರುಣರೋಚಿ- ಮನೋಹರವಾದ ಸಂಧ್ಯಾಕಾಲದಲ್ಲುಂಟಾಗುವ ಕೆಂಪುಬಣ್ಣದ ರೂಪವಾದದ್ದು; ಅಮರ್ದ- ಶಿರಸ್ಸಿನಲ್ಲಿ ಸೇರಿದ, ಗಂಗಾದೇವಿಗೆ, ಬೈತಲೆಯ, ಸಿಂದೂರಂ- ಚಂದ್ರದ ಹುಡಿಯ ರೂಪವಾದದ್ದು, ಆದತ್ತು; ನಖಜಾಲಂ- ನಿನ್ನ ಉಗುರುಗಳ ಸಮೂಹವು, (ಹರಕೋಟೀರದ ಚಂದ್ರಮಂಗೆ) ತಾರಕಾವಳಿ- ನಕ್ಷತ್ರಪಙ್ಕ್ತಿಯು, (ಗಂಗಾದೇವಿಗೆ) ಸೀಮಂತದ- ಬೈತಲೆಯ, ಮೌಕ್ತಿಕಾವಳಿಯ- ಮುತ್ತುಗಳ ಪಙ್ಕ್ತಿಯು, ಅಲಂಕಾರಂ- ಆಭರಣವು, ಆದತ್ತು. ... ... ॥೧೩೬॥

ಕಂ॥ ಮೃಡನ ಜಡೆಮುಡಿಯ ಶಶಿ ನಿ । ನ್ನಡಿಗೆರ್ಪಿನ ಸೋಂಕಿನಿಂ ಜಗದ್ವಂದಿತ ಮಾ॥
ಯ್ತೊಡನೆ ಪೆಂಗಂಗೆಯುಂ ಮೇ । ಣ್ಪಡೆದತ್ತು ಪವಿತ್ರಭಾವಮಂ ಶುಭಚರಿತ ! ॥೧೩೩॥

ಮತ್ತೇ॥ ಸಕಳಾಮ್ನಾಯ ಶಿರಃಸ್ಥಳಸ್ಥಗಿತಪಾದಂ ಶಂಕರಂ ತನ್ನ ಮ । ಸ್ತಕದೊ
ಳ್ನಿನ್ನಡಿಗೆರ್ಪ ನಾಂತು ಭುವನಾನೀಕಂಗಳೊಳ್ ಖ್ಯಾತಿವೆ ॥ ತ್ತಕಳಂಕ ಸ್ಫುಟಭಕ್ತವತ್ಸ
ಲತೆಯಂ ಕೈಕೊಂಡ ನೀಂ ನಿನ್ನ ಪಾ । ದುಕೆ ತಾನಾಗಿರೆ ಬೊಮ್ಮ ನೀಶಶಿರಮಂ ಪೇ ಳ್ಕಾಣ
ದೇಂ ಪೋಕುಮೇ॥ ... ... .. ... ॥೧೩೪॥

ಕಂ॥ ಇದು ಮುಕ್ತಿಭಾಮಿನಿಯ ಸ । ಮ್ಮದಕರಪರಿಣಯಮ ನಾಂಪ ಸುಕೃತಿಗಲೀ
ಲಾ ॥ ಸ್ಪದಮಸ್ತಕಶೇಖರ ಮೆ ನ್ನದೆ ಪೆರತೇನೆಂದಪೆಂ ಭವತ್ಪಾದುಕೆಯಂ ॥ ॥೧೩೫॥

ಮತ್ತೇ॥ ಭವದೀಯಾಸ್ಯಪವಿತ್ರಸಾರಸಲಿಲಸ್ನಾತಂ ಭವತ್ಪಾದುಕಾ । ಪ್ರವಿರಾಜತ್ಪ
ದಪದ್ಮ ಪೂಜಿತಶಿರಂ ತ್ವನ್ಮೌಲಿನಿರ್ಮಾಲ್ಯಪು ॥ ಷ್ಪವಿತಾನಾರ್ಚಿತ ನತ್ಯಪೂರ್ವಭವದುಚ್ಛಿ
ಷ್ಟಾದನಾದಂ ಸದಾ । ಶಿವತಾಸಂಗತ ನಬ್ಜಮೌಲಿ ಘನಪುಷ್ಪಾಂಕಂ ಪ್ರಸಾದಾನ್ವಿತಂ ॥

---

ಶುಭಚರಿತ- ಮಂಗಳಕರವಾದ ಚರಿತ್ರೆಯುಳ್ಳವನೇ ! ನಿನ್ನ, ಅಡಿಗೆರ್ಪಿನ-ಪಾದದಕೆರದ, ಸೋಂಕಿನಿಂ-ಸ್ಪರ್ಶನದಿಂದ, ಮೃಡನ, ಜಡೆಮುಡಿಯ, ಶಶಿ- ಚಂದ್ರರೇಖೆಯು, ಜಗದ್ವಂದಿತಂ- ಲೋಕದಿಂದ ನಮಸ್ಕರಿಸಲ್ಪಡುವದು, ಆಯ್ತು; ಒಡನೆ- ಆ ಚಂದ್ರನಕೂಡ, ಎಸೆವ, ಗಂಗೆಯುಂ, ಮೇಣ್, ಪವಿತ್ರಭಾವಮಂ-ಪರಿಶುದ್ಧತ್ವವನ್ನು, ಪಡೆದತ್ತು. ... ... ... ... ॥೧೩೩॥

ಸಕಳಾಮ್ನಾಯಶಿರಃಸ್ಥಳಸ್ಥಗಿತಪಾದಂ-ಸಕಲ ಉಪನಿಷತ್ತುಗಳಲ್ಲೂ ವ್ಯಾಪ್ತವಾದ, (ಅಂದರೆಸ್ತೋತ್ರರೂಪದಿಂದ ಪ್ರಖ್ಯಾತವಾದ) ಚರಣವುಳ್ಳ, ಶಂಕರಂ, ತನ್ನ, ಮಸ್ತಕದೊಳ್, ನಿನ್ನ, ಅಡಿಗೆರ್ಪಂ- ಪಾದದ ಕೆರವನ್ನು, ಆಂತು, ಭುವನಾನೀಕಂಗಳೊಳ್- ಲೋಕಸಮುದಾಯದಲ್ಲಿ, ಖ್ಯಾತಿವೆತ್ತು- ಪ್ರಸಿದ್ಧಿಯಂ ಹೊಂದಿ, ಅಕಳಂಕಸ್ಫುಟಭಕ್ತವತ್ಸಲತೆಯಂ- ನಿರ್ದುಷ್ಟರಾದ ಭಕ್ತರಲ್ಲಿ ವಾತ್ಸಲ್ಯವನ್ನು, ಕೈಕೊಂಡಂ-ಸ್ವೀಕರಿಸಿದನು, ಬೊಮ್ಮಂ- ಚತುರ್ಮುಖಬ್ರಹ್ಮನು, ತಾಂ, ಈನಿನ್ನ, ಪಾದುಕೆ, ಕೆರವು, ಆಗಿ, ಇರೆ, ಈಶಶಿರಮಂ, ಕಾಣದೆ, ಪೋಕುಮೇಂ- ಹೋಗುತ್ತಿದ್ದನೇ? ಪೇಳ್. ... ... ೧೩೪॥

ಭವತ್ಪಾದುಕೆಯಂ- ನಿನ್ನ ಪಾದರಕ್ಷೆಯನ್ನು, ಇದು, ಮುಕ್ತಿಭಾಮಿನಿಯ- ಮುಕ್ತ್ಯಂಗನೆಯ, ಸಮ್ಮದಕರಪರಿಣಯಮಂ- ಸಂತೋಷವನ್ನುಂಟುಮಾಡುವ ಮದುವೆಯನ್ನು, ಆಂಪ- ಹೊಂದುವ, ಸುಕೃತಿಗೆ- ಪುಣ್ಯಶಾಲಿಗೆ, ಲೀಲಾಸ್ಪದಮಸ್ತಕಶೇಖರಂ- ವಿಲಾಸಾಶ್ರಯವಾದತಲೆಯಕಿರೀಟವು, ಎನ್ನದೆ, ಪೆರತುಂ-ಬೇರೆ, ಏನೆಂದಪೆಂ-ಏನೆಂದುಹೇಳಲಿ? ... ... ... ... ॥೧೩೫॥

ಭವದೀಯಾಸ್ಯಪವಿತ್ರಸಾರಸಲಿಲಸ್ನಾತಂ- ನಿನ್ನ ಬಾಯಿಯ ಪರಿಶುದ್ಧವಾದ ಶ್ರೇಷ್ಠವಾದ ನೀರಿನಿಂದಭಿಷೇಕಮಾಡಲ್ಪಟ್ಟ ಶಿವನು, ಸದಾ- ಯಾವಾಗಲು, ಅಶಿವತಾಸಂಗತಂ- ಅಮಂಗಳಸ್ವರೂಪಿತ್ವದಿಂಕೂಡಿದವನು, (ಸದಾ- ಯಾವಾಗಲೂ, ಶಿವತಾಸಂಗತಂ- ಶಿವಭಾವದಿಂದ ಕೂಡಿದವನು;) ಭವತ್ಪಾದುಕಾಪ್ರವಿರಾಜತ್ಪದಪದ್ಮಪೂಜಿತಶಿರಂ- ನಿನ್ನ ಪಾದರಕ್ಷೆಯಿಂ ಪ್ರಕಾಶಿಸುವ ಪಾದಕಮಲದಿಂದ ಪೂಜಿಸಲ್ಪಟ್ಟ ಶಿರಸ್ಸುಳ್ಳ ಶಿವನು, ಅಬ್ಜಮೌಳಿ- ಕಮಲವೇ ಕಿರೀಟದಲ್ಲುಳ್ಳವನು, (ಚಂದ್ರನೇ ಕಿರೀಟದಲ್ಲುಳ್ಳವನು) ತ್ವನ್ಮೌಳಿನಿರ್ಮಾಲ್ಯಪುಷ್ಪವಿತಾನಾರ್ಚಿತಂ- ನಿನ್ನ ಜಡೆಯಲ್ಲಿ ಮುಡಿದಿದ್ದ ಹೂವ್ಗಳ ಸಮೂಹದಿಂದ ಪೂಜಿಸಲ್ಪಟ್ಟ ಶಿವನು, ಘನಪುಷ್ಪಾಂಕಂ-ಶ್ರೇಷ್ಠಗಳಾದ ಹೂವ್ಗಳೇ ಚಿಹ್ನೆಯಾಗುಳ್ಳವನು, (ನೀರೇ ಚಿಹ್ನೆಯಾಗುಳ್ಳವನು ಅಂದರೆ ಗಂಗಾಧರನೆಂಬ ಭಾವ) ಅತ್ಯಪೂರ್ವಭವದುಚ್ಛಿಷ್ಟಾದನಾದಂ-ಅತಿ ನೂತನವಾದ ನಿನ್ನ ಎಂಜಲನ್ನವನ್ನು ತಿಂದ ಶಿವನು, ಪ್ರಸಾದಾನ್ವಿತಂ- ಪ್ರಸಾದದಿಂದ ಕೂಡಿದವನು, (ನೈರ್ಮಲ್ಯದಿಂದ ಕೂಡಿದವನು.) ॥೧೩೬॥

ಕಂ॥ ಕುವಲಯಹಿತಕರ ನಧಿಗತ । ಭುವನೋನ್ನತಪತ್ರಶಿವಸುಖಪ್ರದಪಾದಂ ॥ ಪ್ರ
ವರಶುಚಿ ಯೆನಿಪ ನಿನ್ನಂ । ಶಿವಂಗೆ ಕಣ್ಣಪ್ಪ ನನ್ನದಿರ್ಪರೆ ವಿಬುಧರ್॥ ... ॥೧೪೧॥

ಕಂ ॥ ಚಕ್ರಮ ನರ್ಥಿಸಿ ಹರಿ ಗಿರಿ । ಶಕ್ರಮಕರ್ಪಿಸಿದ ನಲ್ತೆ ಕಣ್ಣಂ ಭಾಸ್ವ ॥ ದ್ವಿ
ಕ್ರಮ ಶಿವನಕ್ಷಿಯುಗಕೆ । ಸಕ್ರಮ ಮರ್ಥಿಸದೆ ನಿನ್ನ ಕಣ್ಗಳ ನಿತ್ತಯ್ ॥ ॥೧೪೨॥

ಕಂ ॥ ಖಲರ ಕೆಳೆತನದೆ ಸುಜನರ । ಕಲಹಂ ಲೇಸೆಂಬ ವಾಣಿ ಸತ್ಯಂ ನಿನ್ನಂ ॥ ಕೊ
ಲಲೆಳಸಿ ಬಂದು ಶಿವನು । ಜ್ಜ್ವಲಪದಮಂ ಕಂಡೆನಯ್ಯ ನಿನ್ನಯ ಕೃಪೆಯಿಂ ॥ ॥೧೪೩॥

ಕಂ ॥ ಆಗಮ ನಿಗಮದೆ ಸಂ । ಭಾವಿತ ವಿದು ಭರ್ಗ ನೊಲ್ಮೆ ನಿನ್ನಯ ಚರಿತಂ ॥
ದೇವನ ಮಹಿಮೆಯ ಭಕ್ತರ । ಭಾವಮ ನವರೀರ್ವ ರಲ್ಲ ದುಳಿದವರರಿಯರ್॥ ॥೧೪೪॥

ಮತ್ತೇ ॥ ಪಿತನಂ ಕೊಲ್ವುದು ಮಾತ್ಮಜಾತನ ಸುಹಿಂಸಾಕೃತ್ಯಮುಂ ಶೇಷಮಂ ।
ಶಿತಿಕಂಠಂ ಗುಣಲೀವುದುಂ ಪಣವಧೂಗೇಹಕ್ಕೆ ದೂದಟ್ಟುವಾ ॥ ಯತಿಯುಂ ಶಂಭುವ ನಂ

---

(ಚಂದ್ರ) ಕುವಲಯಹಿತಕರಂ-ನೈದಿಲೆಗಳಿಗೆಹಿತವನ್ನುಂಟುಮಾಡುವನು,(ಕಣ್ಣಪ್ಪ) ಭೂಮಂಡಲಕ್ಕೆ ಹಿತವನ್ನುಂಟುಮಾಡುವನು (ಸೂರ್ಯ) ಅಧಿಗತಭುವನೋನ್ನತಪತ್ರಶಿವಸುಖಪ್ರದಪಾದ— ಅಧಿಗತ- ಪ್ರಾಪ್ತವಾದ, ಭುವನ- ಜಲದಲ್ಲಿ, ಉನ್ನತ- ಉದ್ಧವಾದ, ಪತ್ರ- ದಳಗಳುಳ್ಳ ಕಮಲಗಳಿಗೆ, ಶಿವಸುಖಪ್ರದಪಾದಂ- ಮಂಗಳಕರವಾದ ಸೌಖ್ಯವನ್ನುಂಟುಮಾಡುವ ಕಿರಣವುಳ್ಳವನು, (ಕಣ್ಣಪ್ಪ) ಅಧಿಗತ-ಪ್ರಾಪ್ತವಾದ, ಭುವನ- ಲೋಕಕ್ಕೆ, ಉನ್ನತ- ದೊಡ್ಡವನಾದ ವೃಷಭೇಶ್ವರನೇ, ಪತ್ರ- ವಾಹನವಾಗುಳ್ಳ, ಶಿವ- ಈಶ್ವರನಿಗೆ, ಸುಖಪ್ರದ- ಸೌಖ್ಯವನ್ನುಂಟುಮಾಡುವ, ಪಾದಂ- ಚರಣವುಳ್ಳವನು; (ಅಗ್ನಿ) ಪ್ರವರಶುಚಿ- ಅತ್ಯಂತ ಶ್ರೇಷ್ಠವಾದದ್ದು; (ಕಣ್ಣಪ್ಪ) ಅತ್ಯಂತಶ್ರೇಷ್ಠವಾದವನು ಪರಿಶುದ್ಧನು ಎನಿಪ, ನಿನ್ನಂ, ವಿಬುಧರ್- ವಿದ್ವಾಂಸರು,ಶಿವಂಗೆ,ಕಣ್,ಅಪ್ಪಂ, ಎನ್ನದೆ,ಇರ್ಪರೆ? ... ... ... ॥೧೪೧॥

ಹರಿ- ವಿಷ್ಣುವು, ಚಕ್ರಮಂ- ಚಕ್ರಾಯುಧವನ್ನು, ಅರ್ಥಿಸಿ- ಬೇಡಿ, ಕಣ್ಣಂ, ಗಿರಿಶಕ್ರಮಕೆ—ಗಿರಿಶ- ಪರಮೇಶ್ವರನ, ಕ್ರಮಕೆ- ಪಾದಕ್ಕೆ, ಅರ್ಪಿಸಿದನಲ್ತೆ? ಭಾಸ್ವದ್ವಿಕ್ರಮ- ಪ್ರಕಾಶಿಸುವ ಪರಾಕ್ರಮವುಳ್ಳ ಕಣ್ಣಪ್ಪನೇ! ಅರ್ಥಿಸದೆ- ಏನನ್ನೂ ಬೇಡದೆ, ಶಿವನ, ಅಕ್ಷಿಯುಗಕೆ- ಎರಡುಕಣ್ಣುಗಳಿಗೆ, ಸಕ್ರಮಂ-ಕ್ರಮಯುಕ್ತವಾಗಿ, (ಪಾದದೊಡನೆ ಕೂಡಿ) ನಿನ್ನ, ಕಣ್ಗಳಂ, ಇತ್ತಯ್. ... ... ॥೧೪೨॥

ಖಲರ- ನೀಚರ, ಕೆಳೆತನದೆ- ಮಿತ್ರತ್ವಕ್ಕಿಂತಲೂ, ಸುಜನರ, ಕಲಹಂ, ಲೇಸು-ಒಳ್ಳೇದು, ಎಂಬ,ವಾಣಿ- ಮಾತು, ಸತ್ಯಂ, ನಿನ್ನಂ, ಕೊಲಲ್- ಕೊಲ್ಲುವದಕ್ಕೋಸ್ಕರ, ಎಳಸಿ- ಅಪೇಕ್ಷಿಸಿ, ಬಂದು, ಅಯ್ಯ! ನಿನ್ನಯ, ಕೃಪೆಯಿಂ, ಶಿವನ, ಉಜ್ಜ್ವಲಪದಮಂ- ಪ್ರಕಾಶಿಸುವ ಪಾದವನ್ನು,ಕಂಡೆಂ. ... ॥೧೪೩॥

ಭರ್ಗನ- ಶಿವನ, ಇದುನಲ್ಮೆ- ಈ ಪ್ರೀತಿಯು, ನಿನ್ನಯ, ಚರಿತಂ, ಆಗಮನಿಗಮದೆ- ಯಾವ ಆಗಮವೇದಗಳಲ್ಲಿ, ಸಂಭಾವಿತಂ- ಸಂಭಾವಿಸಲ್ಪಟ್ಟದ್ದು? (ಅಂದರೆ ಪ್ರತಿಪಾದಿಸಲ್ಪಟ್ಟಿತು?) ದೇವನ, ಮಹಿಮೆಯ- ಮಹತ್ತ್ವವನ್ನು, ಭಕ್ತರ, ಭಾವಮಂ-ಮನಸ್ಸನ್ನು, ಅವರ್ಈರ್ವರ್- ಆ ಶಿವ, ಅವನ ಭಕ್ತರು, ಅಲ್ಲದೆ, ಉಳಿದವರ್, ಅರಿಯರ್— ತಿಳಿಯರು. ... ... ... ... ॥೧೪೪॥

ಪಿತನಂ, ಕೊಲ್ವುದುಂ, ಆತ್ಮಜಾತನ- ಮಗನ, ಸುಹಿಂಸಾಕೃತ್ಯಮುಂ- ಹಿಂಸೆ ಮಾಡುವ ಕಾರ್ಯವೂ, ಶೇಷಮಂ- ಉಂಡುಮಿಕ್ಕಿದುದನ್ನು, ಶಿತಿಕಂಠಂಗೆ, ಉಣಲ್- ಉಣ್ಣುವದಕ್ಕೆ, ಈವುದುಂ- ಕೊಡುವದೂ, ಶಂಭುವಂ- ಪಣವಧೂಗೇಹಕ್ಕೆ- ಸೂಳೆಯಮನೆಗೆ, ದೂದಟ್ಟುವ- ದೂತಕೃತ್ಯಕ್ಕೆ ಕಳುಹಿಸುವ, ಆಯತಿಯುಂ- ರೀತಿಯೂ, ನೀಂ, ಅಂಬಿಕಾಪತಿಗೆ, ಮಾಂಸಾರ್ಪಣಂಗೆಯ್ವುದುಂ, ಕ್ಷಿತಿಯೊಳ್,

ಬಿಕಾಪತಿಗೆ ನೀಂ ಮಾಂಸಾರ್ಪಣಂಗೆಯ್ವುದುಂ । ಕ್ಷಿತಿಯೊಳ್ ಳೆನ್ನೀಳ್ದೊಪ್ಪಿದಾವ ವೇದವಿ
ಹಿತಂ ಮೇಣಾವಶಾಸ್ತ್ರಕ್ರಮಂ ॥ ... ... ... ॥೧೪೫॥

ಕಂ॥ ನಿನ್ನನ್ನರಪ್ಪಶರಣರ । ಸನ್ನುತನವಚರಿತ ಮಪ್ರಮೇಯ ಮತರ್ಕ್ಯಂ॥ ನನ್ನಿ
ಕೃತಾಗಸ್ಕನ ನೆಂ । ಲ್ದೆನ್ನಂ ಪೊರೆ ಯೆಂದು ಪೊಗಳ್ದು ಮಗುಳ್ದೆರಗಿರ್ದಂ ॥ ॥೧೪೬॥

ವ ॥ ಅಂತೆರಗಿರ್ಪ ಧರಾಮರೇಂದ್ರನಂ ಕರುಣಾರ್ದ್ರಕಟಾಕ್ಷದಿ ನಡರೆ ನೋಡಿ
ಶಿವಪ್ರಸಾದಭಾಜನನಂ ಮಾಡಿ ತಾನುಂ ಮಾಶಿವನೊಳ್ ಅವಿನಾಭಾವಂಬಡೆದು ನಿರಂತರಪರ
ಮಾನಂದನಿರ್ಭರನಾಗಿ ರಂಜಿಸಿರ್ದ ನಾಪರಮಶಿವಂ ನಿಜಲಿಂಗದೊಳ್ ಅಂತರ್ಗತನಾಗಿರ್ದ
ನನಂತರಂ ॥ * * * * * * * * * * * * * * *

ಕಂ॥ ಹರದೃಷ್ಟಿಯೊಡನೆ ತನ್ನಯ । ವರದೃಷ್ಟಿತ ಗುಳ್ವ ನಾನೆ ಕಣ್ಣಪ್ಪಂಭಾ॥
ಸುರಲಿಂಗದ ಕಟ್ಟಿದಿರೊಳ್ । ನಿರುತರಂ ಭುವನ ಮರಿಯೆ ಮೆರೆದಪ ನಲ್ತೆ ॥ ॥೧೪೭॥

ಮತ್ತೇ ॥ ಬಗೆಗೊಂಡೀಗಳು ಮಲ್ಲಿ ಪೂಜಕಜನೌಘಂ ಕಾಳಹಸ್ತೀಶ್ವರಂ । ಗೆ
ಗುಣಾಲಂಕೃತಕಣ್ಣಪಯ್ಯನ ಮುಖಾಂಭೋಜಾತ ಗಂಡೂಷವಾ ॥ ರಿಗಳಿಂ ಮಜ್ಜನಮಂ
ತದೀಯಕಚನಿರ್ಮಾಲ್ಯಂಗಳಿಂ ಪೂಜೆಯುಂ । ಮಿಗೆ ಮಾಳ್ಕುಂ ಶಿವನೊಲ್ದು ನೂಟಮ ನವಂ
ಕೊಂಡಲ್ಲದಾಹಾರಮಂ ॥ ... ... ... ॥೧೪೮॥

---

ನೋಳ್ಪೊಡೆ-ವಿಚಾರಿಸಿದರೆ, ಇದು, ಆವವೇದವಿಹಿತಂ- ಯಾವ ವೇದದಲ್ಲಿ ಹೇಳಲ್ಪಟ್ಟದ್ದು? ಮೇಣ್, ಆವ
ಶಾಸ್ತ್ರಕ್ರಮಂ ? ... ... ... ... ... ॥೧೪೫॥

ನಿನ್ನನ್ನರ್‌ಅಪ್ಪ- ನಿನಗೆ ಸದೃಶರಾದಂಥ, ಶರಣರ, ಸನ್ನುತನವಚರಿತಂ- ಶ್ಲಾಘ್ಯವಾದ ಹೊಸಚ
ರಿತ್ರವು, ಅಪ್ರಮೇಯಂ- ಅಗಣ್ಯವಾದದ್ದು, ಅತರ್ಕ್ಯಂ-ಊಹಿಸಲಸಾಧ್ಯವಾದದ್ದು; ನನ್ನಿ-ನಿಶ್ಚಯ, ಕೃತಾ
ಗಸ್ಕರಂ- ಮಾಡಲ್ಪಟ್ಟ ಅಪರಾಧವುಳ್ಳ, ಎನ್ನಂ, ಒಲ್ದು- ಪ್ರೀತಿಸಿ, ಪೊರೆ, ಎಂದು, ಪೊಗಳ್ದು, ಮಗು
ಳ್ಪು, ಎರಗಿ, ಇರ್ದಂ. ... ... ... ... ... ॥೧೪೬॥

ಅಂತು, ಎರಗಿ, ಇರ್ದ, ಧರಾಮರೇಂದ್ರನಂ, ಶ್ರೇಷ್ಠನಾದ ಬ್ರಾಹ್ಮಣನನ್ನು, ಕರುಣಾರ್ದ್ರಕಟಾಕ್ಷ
ದಿಂ, ಅಡರೆ,ನೋಡಿ, ಶಿವಪ್ರಸಾದಭಾಜನನಂ- ಶಿವಾನುಗ್ರಹಕ್ಕೆ ಪಾತ್ರನನ್ನು, ಮಾಡಿ, ತಾನುಂ, ಆಶಿವನೊ
ಳ್, ಅವಿನಾಭಾವಂಬಡೆದು- (ಅಂದರೆ ಒಬ್ಬರನ್ನುಬಿಟ್ಟು ಒಬ್ಬರಿರದಂತೆ) ನಿರಂತರಪರಮಾನಂದನಿರ್ಭರಂ-
ಶಾಶ್ವತವಾದ ಉತ್ಕೃಷ್ಟವಾದ ಸಂತೋಷಾಧಿಕ್ಯವುಳ್ಳವನು, ಆಗಿ, ರಂಜಿಸಿ, ಇರ್ದಂ, ಆಪರಮಶಿವಂ,ನಿಜ
ಲಿಂಗದೊಳ್, ಅತರ್ಗತಂ, ಆಗಿ,ಇರ್ದಂ,ಅನಂತರಂ. * * * * * * * * * * * *

ಹರದೃಷ್ಟಿಯೊಡನೆ, ತನ್ನಯ, ವರದೃಷ್ಟಿ, ತಗುಳ್ವಂ- ತಗುಲುವಿಕೆಯನ್ನು, ಆನೆ, ಹೊಂದಲು, ಕ
ಣ್ಣಪ್ಪಂ, ಭಾಸುರಲಿಂಗದ, ಕಟ್ಟಿದಿರೊಳ್, ಮುಂಗಡೆಯಲ್ಲಿ, ನಿರಂತರಂ, ಭುವನಂ, ಅರಿಯೆ-ತಿಳಿಯುತ್ತಿರ
ಲಾಗಿ,ಮೆರೆದಪನಲ್ತೆ? ... ... ... ... ... ॥೧೪೭॥

ಈಗಳುಂ, ಅಲ್ಲಿ- ಆಕಾಳಹಸ್ತಿಯಲ್ಲಿ, ಬಗೆಗೊಂಡು- ಮನೋಹರವಾಗಿ,ಪೂಜಕಜನೌಘಂ- ಪೂಜಿಸು
ವ ಜನರ ಸಮೂಹವು, ಕಾಳಹಸ್ತೀಶ್ವರಂಗೆ, ಗುಣಾಲಂಕೃತಕಣ್ಣಪಯ್ಯನ,ಮುಖಾಂಬೋಜಗಂಡೂಷವಾ
ರಿಗಳಿಂ-ಕಮಲದಂತಿರುವಮೊಗದಲ್ಲಿ ಮುಕ್ಕಳಿಸಿದ ನೀರಿನಿಂದ,ಮಜ್ಜನಮಂ-ಅಭಿಷೇಕವನ್ನು, ತದೀಯಕಚನಿ
ರ್ಮಾಲ್ಯಂಗಳಿಂ- ಆ ಕಣ್ಣಪ್ಪನ ಕೇಶದಲ್ಲಿ ಮುಡಿಸಿದ್ದ ಹೂವ್ಗಳಿಂದ, ಮಿಗೆ, ಪೂಜೆಯುಂ, ಮಾಳ್ಕುಂ, ಆವಂ-
ಆ ಕಣ್ಣಪ್ಪನು, ಆಹಾರಮಂ, ಕೊಂಡಲ್ಲದೆ- ಸ್ವೀಕರಿಸಿದ ಹೊರ್ತು, ಶಿವಂ, ಊಟವಂ, ಒಲ್ಲಂ. ॥೧೪೮॥

ಕಂ ॥ ಎಂದಿಂತು ಭಕ್ತಸಮುದಯ । ಮಂದಾರಂ ಬಸವ ನೊರೆಯೆ ಕಣ್ಣಪ್ಪನಚೆ॥
ಲ್ವೊಂದಿದ ಕಥೆಯಂ ಕೇಳ್ದು । ನಂದಂಬೆತ್ತೆಸೆದುದಲ್ಲಿ ಶರಣಸಮಾಜಂ ॥ ... ॥೧೪೯॥
ಕಂ ॥ ದೀಪದಕಲಿಯಾರಕಥಾ । ಲಾಪಮ ನೋದಿದೊಡೆ ಭಕ್ತಿಯಿಂ ಕೇಳ್ದೊಡೆ ಸ॥
ರ್ವಾಪತ್ತುಕ ಳ ಮಳಿಗುಂ ಚಿ । ದ್ರೂಪಶಿವಜ್ಞಾನಸಿದ್ಧಿ ಯಪ್ಪುದಮೋಘಂ ॥ ॥೧೫೦॥
ಕಂ ॥ ಚಿತ್ತೋತ್ಸವದಿಂ ನಾಟ್ಯನ । ಮಿತ್ತಂಡಿಯ ಕಥೆಯ ನೋದಿದರ್ಗಾಲಿಸಿದ ॥
ರ್ಗೆತ್ತಣದು ಜನನರುಜೆ ಬಳಿ । ಕೆತ್ತಣದಳಿವೆನೆ ಶಿವಾಧವಂ ದಯೆಗೆಯ್ವಂ ॥ ॥೧೫೧॥
ಕಂ ॥ಕಣ್ಣಪ್ಪನ ಕಥೆಯನಿದಂ । ಬಣ್ಣಿಸಿ ಬರೆದೋದೆ ಕೇಳೆ ಸುಜನರ್ಗೆ ಮು ॥
ಕ್ಕಣ್ಣ ನೊಸೆದ ವರ್ಗಕುಡುವಂ । ತಣ್ಣನೆ ತಣಿವಂತೆ ಸೌಖ್ಯಸಾರಾಮೃತಮಂ ॥೧೫೨॥
ಸ್ರ ॥ ಎಂದಿಂತೋರಂತೆ ಮುಗ್ಧಾಂಬುಜರಿಪುಧರಸುಸ್ನಿಗ್ಧಮುಗ್ಧಪ್ರತಾನಾ । ಮಂ
ದೋಪಾಖ್ಯಾನಮಂ ಚೆನ್ನಬಸವಮುಖಮಾಹೇಶ್ವರವ್ರಾತ ಕತ್ಯಾ॥ ನಂದಂ ಮೆಯ್ವೆರ್ಚಿಪೇ
ಳುತ್ತೆಸೆದು ಚರಲಸತ್ಪೂಜನಂಗೆಯ್ವುತಿರ್ದಂ । ನಂದೀಶಂ ಭಕ್ತಿಕೋಶಂ ಜಗದವನಕಳಾ
ವೀತತಂದ್ರಂ ವೃಷೇಂದ್ರಂ ॥ ... ... ... ॥೧೫೩॥
ಲಲಿತಪದವೃತ್ತಂ ॥ ರಾಜಶಕಲಾಂಕಮತರಾಜದುರುಸಿಂಧುಪತಿರಾಜ ಭುವನಾವನಿಜ

---

ಎಂದು, ಇಂತು, ಭಕ್ತಸಮುದಯಮಂದಾರಂ- ಭಕ್ತರಸಮೂಹಕ್ಕೆ ಕಲ್ಪವೃಕ್ಷನಾದ, ಬಸವಂ, ಇಂತು, ಒರೆಯೆ- ಹೇಳಲು, ಅಲ್ಲಿ-ಆಸಭೆಯಲ್ಲಿ, ಶರಣಸಮಾಜಂ, ಕಣ್ಣಪ್ಪನ, ಚೆಲ್ವೊಂದಿದ ಕಥೆಯಂ, ಕೇಳ್ದು, ಆನಂದಂಬೆತ್ತು, ಎಸೆದುದು. ... ... ... ... ॥೧೪೯॥

ದೀಪದಕಲಿಯಾರಕಥಾಲಾಪಮಂ, ಭಕ್ತಿಯಿಂ, ಓದಿದೊಡೆ, ಕೇಳ್ದೊಡೆ, ಸರ್ವಾಪತ್ತುಕಳ್- ಸಮಸ್ತ ವಿಪತ್ಸಮೂಹವು, ಅಳಿಗುಂ-ನಾಶವಾಗುವದು; ಅಮೋಘಂ-ವ್ಯರ್ಥವಾಗದ, ಚಿದ್ರೂಪಶಿವಜ್ಞಾನಸಿದ್ಧಿ-ಜ್ಞಾನಸ್ವರೂಪನಾದ ಪರಶಿವನಜ್ಞಾನಸಂಪ್ರಾಪ್ತಿಯು, ಅಪ್ಪುದು. ... ... ... ॥೧೫೦॥

ನಾಟ್ಯನಮಿತ್ತಂಡಿಯ, ಕಥೆಯಂ, ಚಿತ್ತೋತ್ಸವದಿಂ, ಓದಿದರ್ಗೆ, ಆಲಿಸಿದರ್ಗೆ, ಜನನರುಜೆ- ಉತ್ಪತ್ತಿಯೆಂಬ ರೋಗವು, ಎತ್ತಣದು? ಬಳಿಕೆ, ಅಳಿವು- ನಾಶವು, ಎತ್ತಣದು? ಎನೆ, ಶಿವಾಧವಂ- ಪಾರ್ವತೀ ಪತಿಯು,ದಯೆಗೆಯ್ವಂ. ... ... ... ... ... ॥೧೫೧॥

ಕಣ್ಣಪ್ಪನ, ಇದಂಕಥೆಯಂ, ಸುಜನರ್, ಬಣ್ಣಿಸಿ-ವರ್ಣನೆಮಾಡಿ,ಬರೆದು, ಓದೆ, ಕೇಳೆ, ಮುಕ್ಕಣ್ಣಂ, ಒಸೆದು, ಅವರ್ಗೆ, ಮಿಗೆ, ತಣ್ಣನೆ, ತಣಿವಂತೆ-ತೃಪ್ತಿಪಡುವಹಾಗೆ, ಸೌಖ್ಯಸಾರಾಮೃತಮಂ- ಸುಖದಿಂದ ಶ್ರೇಷ್ಠವಾದ ಮೋಕ್ಷವನ್ನು, ಕುಡುವಂ. ... ... ... ॥೧೫೨॥

ಎಂದು, ಇಂತು, ಭಕ್ತಿಕೋಶಂ- ಶಿವಭಕ್ತಿಗೆ ಬೊಕ್ಕಸವಾದ, ನಂದೀಶಂ- ನಂದೀಶನಾಮಕನಾದ, ಜಗದವನಕಳಾವೀತತಂದ್ರಂ— ಜಗತ್- ಲೋಕವನ್ನು, ಅವನ- ಪರಿಪಾಲಿಸುವ, ಕಲಾ- ವಿದ್ಯಾವಿಷಯದಲ್ಲಿ, ವೀತ- ಹೋದ, ತಂದ್ರಂ- ಆಲಸ್ಯವುಳ್ಳ, ವೃಷೇಂದ್ರಂ, ಮುಗ್ಧರಿ......ಉಪಾಖ್ಯಾನಮಂ— ಮುಗ್ಧ- ಸುಂದರನಾದ, ಅಂಬುಜರಿಪು- ಚಂದ್ರನನ್ನು, ಧರ- ಧರಿಸಿರುವ ಈಶ್ವರನ, ಸುಸ್ನಿಗ್ಧ- ಮನೋಹರವಾದ, ಮುಗ್ಧಪ್ರತಾನ- ಮುಗ್ಧರ ಸಮೂಹದ, ಅಮಂದೋಪಾಖ್ಯಾನಮಂ- ಅಧಿಕವಾದ ಕಥೆಯನ್ನು, ಚೆನ್ನಬಸವಮುಖಮಾಹೇಶ್ವರವ್ರಾತಕೆ- ಚೆನ್ನಬಸವೇಶ್ವರ ಮುಂತಾದ ಮಾಹೇಶ್ವರರ ಸಮೂಹಕ್ಕೆ, ಅತ್ಯಾನಂದಂ, ಮಯ್ವೆರ್ಚೆ-ಹೆಚ್ಚುವಂತೆ, ಒರಂತೆ-ಚೆನ್ನಾಗಿ, ಪೇಳುತ್ತೆ, ಎಸೆದು, ಚರಲಸತ್ಪೂಜನಂಗೆಯ್ವುತೆ-ಜಂಗಮರ ಪ್ರಕಾಶಿಸುವ ಪೂಜೆಯನ್ನು ಮಾಡುತ್ತ, ಇರ್ದಂ. ... ... ... ॥೧೫೩॥

ರಾಜ......ರಾಜ— ರಾಜ- ಚಂದ್ರನ, ಶಕಲಾ- ಖಂಡವೇ, ಅಂಕ- ಚಿಹ್ನವಾಗುಳ್ಳ ಶಿವನ, ಮತ-

ಬಿಕಾಪತಿಗೆ ನೀಂ ಮಾಂಸಾರ್ಪಣಂಗೆಯ್ವುದುಂ । ಕ್ಷಿತಿಯೊಳ್ ನೋಳ್ಪೊಡಿದಾವ ವೇದವಿಹಿತಂ ಮೇಣಾವಶಾಸ್ತ್ರಕ್ರಮಂ ॥ ... ... ... ॥೧೮೫॥

ಕಂ॥ ನಿನ್ನನ್ನರಪ್ಪಶರಣರ । ಸನ್ನುತನವಚರಿತ ಮಪ್ರಮೇಯ ಮತರ್ಕ್ಯಂ॥ ನನ್ನಿ ಕೃತಾಗಸ್ಕನ ನೊ । ಲ್ದೆನ್ನಂ ಪೊರೆ ಯೆಂದು ಪೊಗಳ್ದು ಮಗುಳ್ದೆರಗಿರ್ದಂ ॥ ॥೧೮೬॥

ವ॥ ಅಂತೆರಗಿರ್ಪ ಧರಾಮರೇಂದ್ರನಂ ಕರುಣಾರ್ದ್ರಕಟಾಕ್ಷದಿ ನಡರೆ ನೋಡಿ ಶಿವಪ್ರಸಾದಭಾಜನನಂ ಮಾಡಿ ತಾನುಮಾಶಿವನೊಳವಿನಾಭಾವಂಬಡೆದು ನಿರಂತರಪರಮಾನಂದನಿರ್ಭರನಾಗಿ ರಂಜಿಸಿರ್ದ ನಾಪರಮಶಿವಂ ನಿಜಲಿಂಗದೊಳಂತರ್ಗತನಾಗಿರ್ದನನಂತರಂ ॥ * * * * * * * * * * * * * * * * *

ಕಂ॥ ಹರದೃಷ್ಟಿ ಯೊಡನೆ ತನ್ನಯ । ವರದೃಷ್ಟಿತ ಗುಳ್ಪ ನಾನೆ ಕಣ್ಣಪ್ಪಂಭಾ॥ ಸುರಲಿಂಗದ ಕಟ್ಟದಿರೊ । ಳ್ನಿರುತರಂ ಭುವನ ಮರಿಯೆ ಮೆರೆದಪ ನಲ್ತೆ ॥ ॥೧೮೭॥

ಮತ್ತಂ॥ ಬಗೆಗೊಂಡೀಗಳು ಮಲ್ಲಿ ಪೂಜಕಜನೌಘಂ ಕಾಳಹಸ್ತೀಶ್ವರಂಗೆ ಗುಣಾಲಂಕೃತಕಣ್ಣಪಯ್ಯನ ಮುಖಾಂಭೋಜಾತ ಗಂಡೂಷವಾರಿಗಳಂ ಮಜ್ಜನಮಂ ತದೀಯಕಚಸನ್ನಿರ್ಮಾಲ್ಯಂಗಳಿಂ ಪೂಜೆಯಂ । ಮಿಗೆ ಮಾಳ್ಕುಂ ಶಿವನೊಲ್ಲ ನೂಟಮ ನವಂ ಕೊಂಡಲ್ಲದಾಹಾರಮಂ ॥ ... ... ... ॥೧೮೮॥

ನೋಳ್ಪೊಡೆ-ವಿಚಾರಿಸಿದರೆ, ಇದು, ಆವವೇದವಿಹಿತಂ- ಯಾವ ವೇದದಲ್ಲಿ ಹೇಳಲ್ಪಟ್ಟದ್ದು? ಮೇಣ್, ಆವ ಶಾಸ್ತ್ರಕ್ರಮಂ ? ... ... ... ... ... ॥೧೮೫॥

ನಿನ್ನನ್ನರ್‌ಅಪ್ಪ- ನಿನಗೆ ಸದೃಶರಾದಂಥ, ಶರಣರ, ಸನ್ನುತನವಚರಿತಂ- ಶ್ಲಾಘ್ಯವಾದ ಹೊಸಚರಿತ್ರವು, ಅಪ್ರಮೇಯಂ- ಅಗಣ್ಯವಾದದ್ದು, ಅತರ್ಕ್ಯಂ-ಊಹಿಸಲಸಾಧ್ಯವಾದದ್ದು; ನನ್ನಿ-ನಿಶ್ಚಯ, ಕೃತಾಗಸ್ಕರಂ- ಮಾಡಲ್ಪಟ್ಟ ಅಪರಾಧವುಳ್ಳ, ಎನ್ನಂ, ಒಲ್ದು- ಪ್ರೀತಿಸಿ, ಪೊರೆ, ಎಂದು, ಪೊಗಳ್ದು, ಮಗುಳ್ದು, ಎರಗಿ, ಇರ್ದಂ. ... ... ... ... ... ॥೧೮೬॥

ಅಂತು, ಎರಗಿ, ಇರ್ದ, ಧರಾಮರೇಂದ್ರನಂ, ಶ್ರೇಷ್ಠನಾದ ಪಾರ್ವನನ್ನು, ಕರುಣಾರ್ದ್ರಕಟಾಕ್ಷದಿಂ, ಅಡರೆನೋಡಿ, ಶಿವಪ್ರಸಾದಭಾಜನನಂ- ಶಿವಾನುಗ್ರಹಕ್ಕೆ ಪಾತ್ರನನ್ನು, ಮಾಡಿ, ತಾನುಂ, ಆಶಿವನೊಳ್, ಅವಿನಾಭಾವಂಬಡೆದು- (ಅಂದರೆ ಒಬ್ಬರನ್ನುಬಿಟ್ಟು ಒಬ್ಬರಿರದಂತೆ) ನಿರಂತರಪರಮಾನಂದನಿರ್ಭರಂ- ಶಾಶ್ವತವಾದ ಉತ್ಕೃಷ್ಟವಾದ ಸಂತೋಷಾಧಿಕ್ಯವುಳ್ಳವನು, ಆಗಿ, ರಂಜಿಸಿ, ಇರ್ದಂ, ಆಪರಮಶಿವಂ,ನಿಜಲಿಂಗದೊಳ್, ಅತರ್ಗತಂ, ಆಗಿ,ಇರ್ದಂ,ಅನಂತರಂ. * * * * * * * * * * *

ಹರದೃಷ್ಟಿಯೊಡನೆ, ತನ್ನಯ, ವರದೃಷ್ಟಿ, ತಗುಳ್ವ- ತಗುಲುವಿಕೆಯನ್ನು, ಆನೆ, ಹೊಂದಲು, ಕಣ್ಣಪ್ಪಂ, ಭಾಸುರಲಿಂಗದ, ಕಟ್ಟದಿರೊಳ್, ಮುಂಗಡೆಯಲ್ಲಿ, ನಿರುತರಂ, ಭುವನಂ, ಅರಿಯೆ-ತಿಳಿಯುತ್ತಿರಲಾಗಿ,ಮೆರೆದಪನಲ್ತೆ? ... ... ... ... ... ॥೧೮೭॥

ಈಗಳುಂ, ಅಲ್ಲಿ- ಆಕಾಳಹಸ್ತಿಯಲ್ಲಿ, ಬಗೆಗೊಂಡು- ಮನೋಹರವಾಗಿ,ಪೂಜಕಜನೌಘಂ- ಪೂಜಿಸುವ ಜನರ ಸಮೂಹವು, ಕಾಳಹಸ್ತೀಶ್ವರಂಗೆ, ಗುಣಾಲಂಕೃತಕಣ್ಣಪಯ್ಯನ,ಮುಖಾಂಬೋಜಗಂಡೂಷವಾರಿಗಳಿಂ-ಕಮಲದಂತಿರುವಮೊಗದಲ್ಲಿ ಮುಕ್ಕುಳಿಸಿದ ನೀರಿನಿಂದ,ಮಜ್ಜನಮಂ-ಅಭಿಷೇಕವನ್ನು, ತದೀಯಕಚನಿರ್ಮಾಲ್ಯಂಗಳಿಂ- ಆ ಕಣ್ಣಪ್ಪನ ಕೇಶದಲ್ಲಿ ಮುಡಿಸಿದ್ದ ಹೂವುಗಳಿಂದ, ಮಿಗೆ, ಪೂಜೆಯಂ, ಮಾಳ್ಕುಂ, ಅವಂ- ಆ ಕಣ್ಣಪ್ಪನು, ಆಹಾರಮಂ, ಕೊಂಡಲ್ಲದೆ- ಸ್ವೀಕರಿಸಿದ ಹೊರತು, ಶಿವಂ, ಊಟಮಂ, ಒಲ್ಲಂ. ॥೧೮೮॥

ಕಂ ॥ ಎಂದಿಂತು ಭಕ್ತಸಮುದಯ । ಮಂದಾರಂ ಬಸವ ನೊರೆಯೆ ಕಣ್ಣಪ್ಪನಚೆ॥
ಲ್ವೊಂದಿದ ಕಥೆಯಂ ಕೇಳ್ದು । ನುಡಂಬೆತ್ತಿಸೆದುದಲ್ಲಿ ಶರಣಸಮಾಜಂ ॥ ... ॥೧೪೯॥
ಕಂ ॥ ದೀಪದಕಲಿಯಾರಕಥಾ । ಲಾಪಮ ನೋದಿದೊಡೆ ಭಕ್ತಿಯಿಂ ಕೇಳ್ದೊಡೆ ಸ॥
ರ್ವಾಪತ್ಕುಳ ಮಳಗುಂ ಚಿ । ದ್ರೂಪಶಿವಜ್ಞಾನಸಿದ್ಧಿ ಯಪ್ಪುದಮೋಘಂ ॥ ॥೧೫೦॥
ಕಂ ॥ ಚಿತ್ರೋತ್ಸವದಿಂ ನಾಟ್ಯನ । ಮಿತ್ತಂಡಿಯ ಕಥೆಯ ನೋದಿದರ್ಗಾಲಿಸಿದ ॥
ರ್ಗೆತ್ತಣದು ಜನನರುಜೆ ಬಳಿ । ಕೆತ್ತಣದಳಿವೆನೆ ಶಿವಾಧವಂ ದಯೆಗೆಯ್ವಂ ॥ ॥೧೫೧॥
ಕಂ ॥ಕಣ್ಣಪ್ಪನ ಕಥೆಯನಿದಂ । ಬಣ್ಣಿಸಿ ಬರೆದೋದೆ ಕೇಳೆ ಸುಜನ ರ್ಗಿಗೆ ಮು ॥
ಕ್ಕಣ್ಣ ನೊಸೆದ ವರ್ಗೆಕುಡುವಂ । ತಣ್ಣನೆ ತಣಿವಂತೆ ಸೌಖ್ಯಸಾರಾಮೃತಮಂ ॥೧೫೨॥
ಸ್ರ ॥ ಎಂದಿಂತೋರಂತೆ ಮುಗ್ಧಾಂಬುಜರಿಪುಧರಸುಸ್ನಿಗ್ಧಮುಗ್ಧಪ್ರತಾನಾ । ಮಂ
ದೋಪಾಖ್ಯಾನಮಂ ಚೆನ್ನಬಸವಮುಖಮಾಹೇಶ್ವರವ್ರಾತ ಕತ್ಯಾ॥ ನಂದಂ ಮೆಯ್ವೆರ್ಚಿಪೇ
ಳುತ್ತೆಸೆದು ಚರಲಸತ್ಪೂಜನಂಗೆಯ್ವುತಿರ್ದಂ । ನಂದೀಶಂ ಭಕ್ತಿಕೋಶಂ ಜಗದವನಕಳಾ
ವೀತತಂದ್ರಂ ವೃಷೇಂದ್ರಂ ॥ ... ... ... ॥೧೫೩॥
ಲಲಿತಪದವೃತ್ತಂ ॥ ರಾಜಶಕಲಾಂಕಮತರಾಜದುರುಸಿಂಧುಪತಿರಾಜ ಭುವನಾವನಿಜ

---

ಎಂದು, ಇಂತು, ಭಕ್ತಸಮುದಯಮಂದಾರಂ- ಭಕ್ತರಸಮೂಹಕ್ಕೆ ಕಲ್ಪವೃಕ್ಷನಾದ, ಬಸವಂ, ಇಂತು, ಒರೆಯೆ- ಹೇಳಲು, ಅಲ್ಲಿ-ಆಸಭೆಯಲ್ಲಿ, ಶರಣಸಮಾಜಂ, ಕಣ್ಣಪ್ಪನ, ಚೆಲ್ವೊಂದಿದ ಕಥೆಯಂ, ಕೇಳ್ದು, ಪುನುಡಂಬೆತ್ತು, ಎಸೆದುದು. ... ... ... ... ॥೧೪೯॥

ದೀಪದಕಲಿಯಾರಕಥಾಲಾಪಮಂ, ಭಕ್ತಿಯಿಂ, ಓದಿದೊಡೆ, ಕೇಳ್ದೊಡೆ, ಸರ್ವಾಪತ್ಕುಳಂ ಸಮಸ್ತ ವಿಪತ್ಸಮೂಹವು, ಅಳಗುಂ-ನಾಶವಾಗುವದು; ಅಮೋಘಂ-ವ್ಯರ್ಥವಾಗದ, ಚಿದ್ರೂಪಶಿವಜ್ಞಾನಸಿದ್ಧಿ—ಜ್ಞಾನಸ್ವರೂಪನಾದ ಪರಶಿವನಜ್ಞಾನಪ್ರಾಪ್ತಿಯು, ಅಪ್ಪುದು. ... ... ... ॥೧೫೦॥

ನಾಟ್ಯನಮಿತ್ತಂಡಿಯ, ಕಥೆಯಂ, ಚಿತ್ರೋತ್ಸವದಿಂ, ಓದಿದರ್ಗೆ, ಆಲಿಸಿದರ್ಗೆ, ಜನನರುಜೆ- ಉತ್ಪತ್ತಿಯೆಂಬ ರೋಗವು, ಎತ್ತಣದು? ಬಳಿಕೆ, ಅಳಿವು- ನಾಶವು, ಎತ್ತಣದು? ಎನೆ, ಶಿವಾಧವಂ- ಪಾರ್ವತೀ ಪತಿಯು,ದಯೆಗೆಯ್ವಂ. ... ... ... ... ... ॥೧೫೧॥

ಕಣ್ಣಪ್ಪನ, ಇದಾಕಥೆಯಂ, ಸುಜನರ್, ಬಣ್ಣಿಸಿ-ವರ್ಣನೆಮಾಡಿ,ಬರೆದು, ಓದೆ, ಕೇಳೆ, ಮುಕ್ಕಣ್ಣಂ, ಒಸೆದು, ಅವರ್ಗೆ. ಮಿಗೆ, ತಣ್ಣನೆ, ತಣಿವಂತೆ-ತೃಪ್ತಿಪಡುವಹಾಗೆ, ಸೌಖ್ಯಸಾರಾಮೃತಮಂ- ಸುಖದಿಂದ ಶ್ರೇಷ್ಠವಾದ ಮೋಕ್ಷವನ್ನು, ಕುಡುವಂ. ... ... ... ॥೧೫೨॥

ಎಂದು, ಇಂತು, ಭಕ್ತಿಕೋಶಂ- ಶಿವಭಕ್ತಿಗೆ ಬೊಕ್ಕಸವಾದ, ನಂದೀಶಂ- ನಂದೀಶನಾಮಕನಾದ, ಜಗದವನಕಳಾವೀತತಂದ್ರಂ— ಜಗತ್- ಲೋಕವನ್ನು, ಅವನ- ಪರಿಪಾಲಿಸುವ, ಕಲಾ- ವಿದ್ಯಾವಿಷಯದಲ್ಲಿ, ವೀತ- ಹೋದ, ತಂದ್ರಂ- ಆಲಸ್ಯವುಳ್ಳ, ವೃಷೇಂದ್ರಂ, ಮುಗ್ಧಾರಿ......ಉಪಾಖ್ಯಾನಮಂ— ಮುಗ್ಧ- ಸುಂದರನಾದ, ಅಂಬುಜರಿಪು- ಚಂದ್ರನನ್ನು, ಧರ- ಧರಿಸಿರುವ ಈಶ್ವರನ, ಸುಸ್ನಿಗ್ಧ- ಮನೋಹರವಾದ, ಮುಗ್ಧಪ್ರತಾನ- ಮುಗ್ಧರ ಸಮೂಹದ, ಅಮಂದೋಪಾಖ್ಯಾನಮಂ- ಅಧಿಕವಾದ ಕಥೆಯನ್ನು, ಚೆನ್ನಬಸವಮುಖಮಾಹೇಶ್ವರವ್ರಾತಕೆ- ಚೆನ್ನಬಸವೇಶ್ವರ ಮುಂತಾದ ಮಾಹೇಶ್ವರರ ಸಮೂಹಕ್ಕೆ, ಅತ್ಯಾನಂದಂ, ಮಯ್ವೆರ್ಚೆ-ಹೆಚ್ಚುವಂತೆ, ಓರಂತೆ-ಚೆನ್ನಾಗಿ, ಪೇಳುತ್ತೆ, ಎಸೆದು, ಚರಲಸತ್ಪೂಜನಂಗೆಯ್ವುತೆ-ಜಂಗಮರ ಪ್ರಕಾಶಿಸುವ ಪೂಜೆಯನ್ನು ಮಾಡುತ್ತ, ಇರ್ದಂ. ... ... ... ॥೧೫೩॥

ರಾಜ......ರಾಜ— ರಾಜ- ಚಂದ್ರನ, ಶಕಲಾ- ಖಂಡವೇ, ಅಂಕ- ಚಿಹ್ನವಾಗುಳ್ಳ ಶಿವನ, ಮತ-

ಬೀಜಮೃಡಪಾದಾಂ।ಭೋಜಮದಷಟ್ಪದ ಕಳಾಜನನಭೂಮಿ ಜಗತೀಜನವಿನುತ್ಯ ಕವಿತಾಜ ಲರುಹಾರ್ಕ॥ಮಾಜಮದಮರ್ದ್ದನ ಪರಾಜಯವಿದೂರ ವಿನತಾಜರಥಕೀರ್ತ್ತಿತಮಹೌಜಸಸದಾ ನಿ।ರ್ವ್ಯಾಜಮೃಡಭಕ್ತ್ತಿರಸಭಾಜನ ಬುಧಾಳಿಸುರಭೂಜ ಪೊರೆ ಧೀಗುಣಜಿತಾಜ ಬಸವೇಶ ॥

ಪೃಥ್ವೀವೃತ್ತಂ ॥ ಮೃಗೇಂದ್ರ ನಿಜವಾಹನೇ ಮೃಡಕೃತೋರುಸಮ್ಮೋಹನೇ । ಖಗೇಂದ್ರರಥಪೂಜಿತೇ ಖಮಣಿಕಾಂತಿವಿಭ್ರಾಜಿತೇ ॥ ನಗೇಂದ್ರವರನಂದಿನೀ ನತಸುರವ್ರಜಾನಂದಿನೀ । ಜಗತ್ತ್ರಯವಿಧಾಯಿನೀ ಜಯ ಮದಂಬೆ ಕಾತ್ಯಾಯನೀ । ... ॥೧೫೫॥

ಗದ್ಯಂ ॥ ಇದುವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದವರಾಗಭಸಿತಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತ್ತಿವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಬೀಜದಕಲಿನಾಟ್ಯನವಿತ್ತಂಡಕಣ್ಣಪ್ಪದೇವಕಥಾವಿವರಣಂ ದಶಮಾಶ್ವಾಸಂ ಪರಿಸಮಾಪ್ತಂ ॥ ... ... ... ❀

ದಶಮಾಶ್ವಾಸಂ ಸಂಪೂರ್ಣಂ.

---

ಮತವೆಂಬ, (ಅಂದರೆ ವೀರಶೈವಮತವೆಂಬ) ಸಿಂಧುಪತಿ-ಸಮುದ್ರಕ್ಕೆ, ರಾಜ-ಚಂದ್ರನಾದ,ಭುವನಾವನಿಜಬೀಜ-ಲೋಕವೆಂಬ ವೃಕ್ಷಕ್ಕೆ ಬೀಜರೂಪನಾದ, (ಅಥವಾ ಲೋಕವನ್ನು ಪರಿಪಾಲಿಸುವಸ್ಥಿರವಾದ ಅಂಕುರಕಾರಣನಾದ, ಮೃಡಪಾದಾಂಭೋಜಮದಷಟ್ಪದ-ಈಶ್ವರನ ಪಾದಕಮಲಕ್ಕೆ ಮತ್ತಭ್ರಮರನಾದ, ಕಳಾಜನನಭೂಮಿ- ವಿದ್ಯೆಗಳಿಗೆ ಜನ್ಮಸ್ಥಲನಾದ, ಜಗತೀಜನವಿನುತ್ಯ- ಭೂಜನಗಳಿಂದ ಸ್ತೋತ್ರಮಾಡಿಸಿಕೊಳ್ಳಲ್ಪಡುವದಕ್ಕೆ ಯೋಗ್ಯನಾದ, ಕವಿತಾಜಲರುಹಾರ್ಕ- ಕವಿತ್ವವೆಂಬ ಕಮಲಕ್ಕೆ ಸೂರ್ಯನಾದ, ಮಾಜಮದಮರ್ದ್ದನ— ಮಾಜ- ಮನ್ಮಥನ, ಮದ- ಗರ್ವವನ್ನು, ಮರ್ದನ- ನಾಶಪಡಿಸಿದ, ಪರಾಜಯವಿದೂರ- ಅಪಜಯಕ್ಕೆ ದೂರನಾದ, ವಿನತಾಜರಥಕೀರ್ತ್ತಿತಮಹೌಜಸ— † ವಿನತಾಜ-ಗರುಡನೇ, ರಥ-ವಾಹನವಾಗುಳ್ಳ ವಿಷ್ಣುವಿನಿಂದ, ಕೀರ್ತ್ತಿತಮಹೌಜಸ-ಹೊಗಳಲ್ಪಟ್ಟ ಅಧಿಕವಾದ ಪರಾಕ್ರಮವುಳ್ಳ, ಸದಾ. ನಿರ್ವ್ಯಾಜಮೃಡಭಕ್ತ್ತಿರಸಭಾಜನ- ನಿಷ್ಕಪಟವಾದ ಶಿವಭಕ್ತಿ ಯೆಂಬ ಫಲಕ್ಕೆ ಪಾತ್ರನಾದ, ಬುಧಾಳಿಸುರಭೂಜ- ವಿದ್ವಾಂಸರ ಸಮೂಹಕ್ಕೆ ಕಲ್ಪವೃಕ್ಷನಾದ, ಧೀಗುಣಜಿತಾಜ-ಬುದ್ಧಿಯ ಗುಣವಿಂದ ಜೈಸಲ್ಪಟ್ಟ ಬ್ರಹ್ಮನುಳ್ಳ,ಬಸವೇಶ! ಪೊರೆ ॥೧೫೪॥

ಮೃಗೇಂದ್ರನಿಜವಾಹನೇ- ಸಿಂಹವೇ ತನ್ನ ವಾಹನವಾಗುಳ್ಳ, ಮೃಡಕೃತೋರುಸಮ್ಮೋಹನೇ-ಪರಮೇಶ್ವರನಿಂದ ಮಾಡಲ್ಪಟ್ಟ ಅಧಿಕವಾದ ಪ್ರೀತಿಯುಳ್ಳ, * ಖಗೇಂದ್ರರಥಪೂಜಿತೇ- ವಿಷ್ಣುವಿನಿಂದ ಪೂಜಿಸಲ್ಪಟ್ಟ, ಖಮಣಿಕಾಂತಿವಿಭ್ರಾಜಿತೇ- ಸೂರ್ಯನ ಕಾಂತಿಯಂತಿರುವ ಕಾಂತಿಯಿಂದ ಪ್ರಕಾಶಿಸುವ, ನಗೇಂದ್ರವರನಂದಿನೀ- ಪರ್ವತರಾಜನ ಶ್ರೇಷ್ಠಳಾದ ಪುತ್ರಿಯಾದ, ನತಸುರವ್ರಜಾನಂದಿನೀ- ನಮಸ್ಕರಿಸಿದ ದೇವರ ಸಮೂಹವನ್ನು ಸಂತೋಷಪಡಿಸುವ, ಜಗತ್ತ್ರಯವಿಧಾಯಿನೀ- ಮೂರುಲೋಕವನ್ನು ನಿರ್ಮಿಸುವ, ಮದಂಬೆ-ನನ್ನ ತಾಯಾದ, ಕಾತ್ಯಾಯನೀ ! ಜಯ. ... ... ... ॥೧೫೫॥

---

* (ಅವ) ಮಾ- ಲಕ್ಷ್ಮಿಯುದೆಸೆಯಿಂದ, ಜ- ಹುಟ್ಟಿದವನು. † (ಅವ) ವಿನತಾ- ವಿನತೆಯೆಂಬ ಕಶ್ಯಪಪತ್ನಿಯುದೆಸೆಯಿಂದ, ಜ- ಹುಟ್ಟಿದವನು, ಗರುಡ. ... ... ... ॥೧೫೪॥

* (ಅವ) ಖಗ- ಪಕ್ಷಿಗಳಿಗೆ,ಇಂದ್ರ-ಒಡೆಯನಾದಗರುಡನೇ, ರಥ.ವಾಹನವಾಗುಳ್ಳವನುವಿಷ್ಣು.॥೧೫೫॥

ಹತ್ತನೆಯಆಶ್ವಾಸವು ಸಂಪೂರ್ಣವು.

ಶ್ರೀಃ

ಜಲಂಧರಾಸುರಾಂತಕಾಯ ಪರಬ್ರಹ್ಮಣೇನಮಃ.

# ಏಕಾದಶಾಶ್ವಾಸಂ.

## ಸಕಳೇಶಮಾದರಸಕಥನಂ.

ಕಂ ॥ ಶ್ರೀಧರಣೀಧರವರತನ | ಯಾಧರನವಬಿಂಬಚುಂಬನಪ್ರಮದಶುಕಂ ॥ ಭೂಧರ
ಚಾಪಂ ಚಂದ್ರಕ | ಳಾಧರ ನೆಮಗೀಗೆ ಸೌಖ್ಯಮಂ ಶಿವಲಿಂಗಂ ॥ ... ... ॥೧॥

ಚ ॥ ಪ್ರಮದವನೋಪಕಂಠಪರಿಖಾಪರಿರಂಜಿತತುಂಗವಪ್ರಮು | ತ್ತಮಕನಕಧ್ವಜಾಂ
ಕಮಣಿಹರ್ಮ್ಯ ಮುದಂಚಿತಸೋಮಸೂರ್ಯವೀಥಿಮಹಿತ ಮಭ್ರಚುಂಬಿಘನಗೋಪುರಲಿಂ
ಗನಿಕೇತನಂವಿಳಾ | ಸಮ ನಮರ್ಗಿರ್ದು ದಂಬೆ ಯೆನಿಪ್ಪೊಳ್ವೆಸರಾಂತ ಪುರಂ ಮನೋಹರಂ ॥

ಕಂ ॥ ಆಪಟ್ಟಣದಧಿಪತಿ ಯಂ | ಬಾಪತಿಪದಭಕ್ತ ನತುಳರುಚಿನಿಚಿತಯಶೋ ॥
ದೀಪಿತಭುವನಂ ವಿನಯಕ | ಲಾಪಂ ವಿತತಪ್ರತಾಪ ನಭಿನವರೂಪಂ ॥ ... ॥೩॥

---

ಶ್ರೀಧರ.....ಶುಕಂ— ಶ್ರೀ- ಸಂಪದ್ಯುಕ್ತಳಾದ, ಧರಣೀಧರವರತನಯಾ-ಪಾರ್ವತಿಯ, ಅಧರ-ತುಟಿಯೆಂಬ, ನವ- ನೂತನವಾದ, ಬಿಂಬ- ತೊಂಡೆಯಹಣ್ಣನ್ನು, ಚುಂಬನ- ಚುಂಬಿಸುವ ವಿಷಯದಲ್ಲಿ, ಪ್ರಮದಶುಕಂ- ಸಂತೋಷವಿಶಿಷ್ಟವಾದ ಗಿಳಿಯಾದ, ಭೂಧರಚಾಪಂ—ಭೂಧರ- ಪರ್ವತವೇ, (ಮೇರು) ಚಾಪಂ- ಧನುಸ್ಸಾಗುಳ್ಳ, ಚಂದ್ರಕಳಾಧರಂ, ಶಿವಲಿಂಗಂ, ಎಮಗೆ, ಸೌಖ್ಯಮಂ, ಈಗೆ. ... ॥೧॥

ಪ್ರಮದ.....ವಪ್ರಂ— ಪ್ರಮದವನ- ಸಂತೋಷವನ್ನುಂಟುಮಾಡುವ ವನಗಳ, (ಅಂದರೆ ಉಪವನಗಳ) ಉಪಕಂಠ- ಸಮೀಪದಲ್ಲಿರುವ, ಪರಿಖಾ- ಕಂದಕಗಳಿಂದ, ಪರಿರಂಜಿತ- ಪ್ರಕಾಶಿಸುತ್ತಿರುವ, ತುಂಗವಪ್ರಂ- ಉನ್ನತವಾದ ಮಣ್ಣುದಿಣ್ಣೆಗಳುಳ್ಳ, ಉತ್ತಮಕನಕಧ್ವಜಾಂಕಮಣಿಹರ್ಮ್ಯಂ-ಉತ್ತಮ ಶ್ರೇಷ್ಠಗಳಾದ, ಕನಕ-ಚಿನ್ನದ, ಧ್ವಜ- ಧ್ವಜಗಳೇ, ಅಂಕ- ಚಿಹ್ನವಾಗುಳ್ಳ, ಮಣಿ- ರನ್ನದ, ಹರ್ಮ್ಯಂ-ಉಪ್ಪರಿಗೆಗಳುಳ್ಳ, ಉದಂಚಿತಸೋಮಸೂರ್ಯವೀಥಿಮಹಿತಂ— ಉದಂಚಿತ- ಶ್ಲಾಘ್ಯವಾದ, ಸೋಮಸೂರ್ಯವೀಥಿ- ಅಡ್ಡಲಾದ ಬೀದಿ ನಡುಬೀದಿಗಳಿಂದ, ಮಹಿತಂ-ಪೂಜ್ಯವಾದ, ಅಭ್ರಚುಂಬಿಘನಗೋಪುರಲಿಂಗನಿಕೇತನಂ—ಅಭ್ರ- ಅಂತರಿಕ್ಷವನ್ನು, ಚುಂಬಿ- ಸೋಂಕುತ್ತಿರುವ, ಘನ- ಶ್ರೇಷ್ಠಗಳಾದ, ಗೋಪುರ- ಗೋಪುರಗಳುಳ್ಳ, ಲಿಂಗನಿಕೇತನಂ- ಶಿವದೇವಸ್ಥಾನಗಳುಳ್ಳ, ಮನೋಹರಂ, ಅಂಬೆ, ಎನಿಪ, ಒಳ್ವೆಸರಾಂತ, ಪುರಂ, ವಿಳಾಸಮಂ, ಅಮರ್ದುಗ್ಗಿರ್ದುದು. ... ... ... ... ... ॥೨॥

ಆಪಟ್ಟಣದ, ಅಧಿಪತಿ- ಸ್ವಾಮಿಯಾದ, ಅಂಬಾಪತಿಪದಭಕ್ತಂ, ಅತುಳರುಚಿನಿಚಿತಯಶೋದೀಪಿತಭುವನಂ- ಅಸದೃಶವಾದ ಕಾಂತಿಯಿಂದ ವ್ಯಾಪ್ತವಾದ ಕೀರ್ತಿಯಿಂದ ಪ್ರಕಾಶಪಡಿಸಲ್ಪಟ್ಟ ಲೋಕವುಳ್ಳ, ವಿನಯಕಲಾಪಂ- ನೀತಿಯೇ ಆಭರಣವಾಗುಳ್ಳ, ವಿತತಪ್ರತಾಪಂ- ವಿಸ್ತಾರವಾದ ಪರಾಕ್ರಮವುಳ್ಳ, ಅಭಿನವರೂಪಂ- ನೂತನವಾದ ಆಕಾರವುಳ್ಳ. ... ... ... ... ॥೩॥

ಮ॥ ಸ್ರ ॥ ನಮಿತಪ್ರತ್ಯರ್ಥಿಪೃಥ್ವೀಧವನಿವಹಮಹಾಮೌಳಿಮಾಣಿಕ್ಯಮಾಲಾ । ಸಮುದಂಚತ್ಕಾಂತಿನೀರಾಜಿತನಿಜಚರಣಾಂಭೋಜ ನುದ್ಯತ್ಪ್ರತಾಪಾ ॥ ರ್ಯಮಧಾಮೋದ್ಧೂತವೇಳಾಚಲಚರಮಧರಾರೂಢಗಾಢಾಂಧಕಾರಂ । ದಮಿತಾರಿವ್ರಾತ ನಭ್ಯರ್ಚಿತಹರಪದ ನುತ್ಪಾದಿತಾರ್ಯಪ್ರಮೋದಂ ॥ ... ... ... ... ॥೪॥

ಭುಜಂಗಪ್ರಯಾತವೃತ್ತಂ ॥ ಶಿವಧ್ಯಾನರಕ್ತಂ ಶಿವಜ್ಞಾನಯುಕ್ತಂ । ಶಿವಾದ್ವೈತಭಾಜಂ ಶಿವೈಕ್ಯಾಬ್ಧಿರಾಜಂ ॥ ಶಿವಪ್ರೇಮ ಧಾಮಂ ಶಿವಾನಂದಭೂಮಂ । ಶಿವಪ್ರಾಣಿ ಯೊಲ್ದೊಪ್ಪಿದಂ ಮಾದಿರಾಜಂ ॥ ... ... ... ... ॥೫॥

ಕಂ ॥ ಶಿವಯೋಗಸುಖಮ ನಾಳ್ದ । ಪ್ಪುವ ಮಾದಾರ್ಯನ ಮರುಳ್ಚಲಾರ್ತ್ತದೇಸಾಮ್ರಾ ॥ ಜ್ಯವಿಶೇಷಸುಖಂ ಸೂದೆಗೊಂ । ಡವನು ಮೇಣಂಬಿಲಂ ವಲಂ ಮಚ್ಚುಕುಮೆ ॥ ... ... .. ... ... ॥೬॥

ಕಂ॥ ಆಮಾದಿರಾಜ ನಿಂದುಕ । ಲಾಮೌಳಿಯ ನೊಲ್ದು ಭಜಿಸುತಂ ಭಕ್ತಿಯಿ ನು ॥ ದ್ದಾಮತರತಂತ್ರಿವಾದ್ಯಕ । ಳಾಮಹಿತಂ ವೀಣೆಗೇಳಿಸ ಲ್ಬಗೆದಂದು ॥ .. ॥೭॥

---

ನಮಿತ......ಚರಣಾಂಭೋಜಂ— ನಮಿತ- ನಮಸ್ಕರಿಸಿದ, ಪ್ರತ್ಯರ್ಥಿಪೃಥ್ವೀಧವ- ಶತ್ರುರಾಜರ, ನಿವಹ- ಸಮೂಹದ, ಮಹಾಮೌಳಿ- ದೊಡ್ಡಕಿರೀಟಗಳಲ್ಲಿರುವ, ಮಾಣಿಕ್ಯ- ರತ್ನಗಳ, ಮಾಲಾ-ಪಜ್ತಿಯಿಂದ, ಸಮುದಂಚತ್- ವೃದ್ಧಿಹೊಂದುತ್ತಿರುವ, ಕಾಂತಿ- ಪ್ರಕಾಶದಿಂದ, ನೀರಾಜಿತ- ಆರತಿಯನ್ನೆತ್ತಲ್ಪಟ್ಟ, ನಿಜ- ತನ್ನ, ಚರಣಾಂಭೋಜಂ- ಪಾದಕಮಲವುಳ್ಳ; ಉದ್ಯತ್......ಅಂಧಕಾರಂ— ಉದ್ಯತ್-ಅಧಿಕವಾದ, ಪ್ರತಾಪ- ಪರಾಕ್ರಮವೆಂಬ, ಅರ್ಯಮಧಾಮ- ಸೂರ್ಯನ ತೇಜಸ್ಸಿನಿಂದ, ಉದ್ಧೂತ-ಹೋಗಲಾಡಿಸಲ್ಪಟ್ಟ, ವೇಳಾಚಲ- ಕುಲಾಚಲಗಳ, ಚರಮಧರಾ-ಅಂತ್ಯಭೂಮಿಯನ್ನು,ಆರೂಢ- ಹತ್ತಿರುವ, ಗಾಢ- ಸಾಂದ್ರವಾದ, ಅಂಧಕಾರಂ- ಕತ್ತಲೆಯುಳ್ಳ, ದಮಿತಾರಿವ್ರಾತಂ— ದಮಿತ-ನಾಶಮಾಡಲ್ಪಟ್ಟ, ಅರಿವ್ರಾತಂ-ಶತ್ರುಸಮೂಹವುಳ್ಳ, ಅಭ್ಯರ್ಚಿತಹರಪದಂ— ಅಭ್ಯರ್ಚಿತ-ಪೂಜಿಸಲ್ಪಟ್ಟ, ಹರ-ಶಿವನ, ಪದಂ- ಚರಣವುಳ್ಳ, ಉತ್ಪಾದಿತಾರ್ಯಪ್ರಮೋದಂ— ಉತ್ಪಾದಿತ-ಉಂಟುಮಾಡಲ್ಪಟ್ಟ, ಆರ್ಯ-ಪೂಜ್ಯರ, ಪ್ರಮೋದಂ-ಸಂತೋಷವುಳ್ಳ.

ಶಿವಧ್ಯಾನರಕ್ತಂ-ಈಶ್ವರನಂ ಧ್ಯಾನಿಸುವದರಲ್ಲಿ ಆಸಕ್ತನಾದ, ಶಿವಜ್ಞಾನಯುಕ್ತಂ, ಶಿವಾದ್ವೈತಭಾಜಂ- ಶಿವನೊಡನೆ ಅಭೇದವಂ ಹೊಂದಿರುವ, ಶಿವೈಕ್ಯಾಬ್ಧಿರಾಜಂ-ಶಿವನೊಡನ ಏಕತ್ವವಂ ಹೊಂದಿರುವವರೆಂಬ ಸಮುದ್ರಕ್ಕೆ ಚಂದ್ರನಾದ, ಶಿವಾನಂದಭೂಮಂ- ಬ್ರಹ್ಮಾನಂದಕ್ಕೆ ಸ್ಥಾನನಾದ, ಶಿವಪ್ರಾಣಿ- ಲಿಂಗವೇ ಪ್ರಾಣವಾಗುಳ್ಳ, ಮಾದಿರಾಜಂ, ಒಲ್ದು, ಒಪ್ಪಿದಂ. ... ... ... ॥೫॥

ಶಿವಯೋಗಸುಖಮಂ, ಆಳ್ದು, ಒಪ್ಪುವ, ಮಾದಾರ್ಯನುಂ, ಸಾಮ್ರಾಜ್ಯವಿಶೇಷಸುಖಂ- ದೊರೆತನದಿಂದುಂಟಾದ ವಿಶೇಷಸುಖವು,"ಅರುಳ್ಚಲ್-ಚಿತ್ತಾಕರ್ಷಣೆಯಂಮಾಡುವದಕ್ಕೋಸ್ಕರ,"ಅರ್ತ್ತದೇ- ಸಮರ್ಥವಾಯ್ತೇ? ಸೂದೆಗೊಂಡವನಂ-ಅಮೃತವಂ ಕುಡಿದವನನ್ನು, ಮೇಣ್, ಅಂಬಿಲಂ- ಅಕ್ಕಿಯಂ ತೊಳೆದ ನೀರು, ವಲಂ-ನಿಶ್ಚಯವಾಗಿ, ಮಚ್ಚಿಕುಮೆ? ... ... ... ॥೬॥

ಉದ್ದಾಮತರತಂತ್ರಿವಾದ್ಯಕಳಾಮಹಿತಂ-ಅತ್ಯುತ್ಕೃಷ್ಟವಾದ ತಂತಿಯ ವಾದ್ಯವಿದ್ಯೆಯಲ್ಲಿ, (ಅಂದರೆ ವೀಣೆ ಮುಂತಾದವುಗಳಂ ಬಾಜಿಸುವದರಲ್ಲಿ) ಪೂಜ್ಯನಾದ, ಆಮಾದಿರಾಜಂ, ಇಂದುಕಲಾಮೌಳಿಯಂ, ಒಲ್ದು, ಭಕ್ತಿಯಿಂ, ಭಜಿಸುತಂ- ಸೇವಿಸುತ್ತ, ವೀಣೆಗೇಳಿಸಲ್- ಪರಮೇಶ್ವರನಿಗೆ ವೀಣೆಯ ವಾದ್ಯಮಂ ಕೇಳಿಸುವದಕ್ಕೋಸ್ಕರ, ಬಗೆದಂದು- ಆಲೋಚಿಸಿದನು. ... ... ... ॥೭॥

ವ ॥ ಅಂತು ಬಗೆದುದು ರಾವಣರುದ್ರಕೂರ್ಮಕೈಲಾಸಾಕಾಶಗೌರೀಸ್ವಾಯಂಭುವಕಿನ್ನರವೀಣೆಗಳುಮಂ ವೇಣುಸ್ವರಮಂಡಲಂಗಳುಮಂ ಶ್ರುತಿಗೊಳಿಸಿ ಕಳೆವೆರ್ಚಿಸಿ ಹರನಿದಿರೊಳ್ ತರಂಗೊಳಿಸಿದಾಗಳ್ ಆವರಾಗಮಾವವೀಣೆಯೊಳ್ ತಾನೆ ಪುಟ್ಟುಗುಮಾವೀಣೆಯುಂ ಕಯ್ಕೊಂಡಾರಾಗಮನೆ ಹರಂಗೆ ಕೇಳಿಸಲೆಳಸಿ ॥ * * * * * * *

ಉ ॥ ಕತ್ತರಿ ಬಿತ್ತರಂ ನಿಮಿರೆ ಕಾಕಳಿ ಪೊಣ್ಮೆ ಪೊದಳ್ದ ದೇಶಿ ಮ । ಯ್ವೆತ್ತಿರೆ ತೇನತೇನ ಮೊದವೃತ್ತಿರೆ ತಾನರವಂ ಲಯಂ ಜವಂ ॥ ಬೆತ್ತಿರೆ ಮೂರ್ಛನಾಪ್ರಸರ ಮೊಂದಿರೆ ಜೇನ್ವಳೆ ಸೂಸಿದಂತಿರಿಂ । ಪೊತ್ತರಿಸುತ್ತೆ ರಾಗರಸ ಮುರ್ವಿರೆ ತೋರುತೆ ಬಿನ್ನಣಂಗಳಂ ॥

ತರಳವೃತ್ತಂ ॥ ಲಳಿತಗಾಢಮಿತಾಯಿ ಲಂಘಿತಕಾಕೆ ಜಾಯನುಜಾಯಿ ಪಂ । ಜಳಬಜಾವಣೆ ತಾಳ ಸಾರಿ ಸುರೀತಿ ರಕ್ತಿ ಪದಕ್ರಮಂ ॥ ವಳಿ ಸುರಂಗಿತ ಮಾಯತಂ ಪಣಿ ಕಂಪಿತಂ ಹಳುವಾಯಿ ಚೊಕ್ಕಳ ಮನೂದ್ಗತವೃತ್ತಿ ಪಾಳಿ ವಿಮೋಕ್ಷ ಮಿಂಪು ಲಯಾಸ್ಪದಂ ॥

ವಿಭ್ರಮವೃತ್ತಂ ॥ ಭ್ರಮರಲೀಲೆ ಲುಳಿ ದೇಶಿ ಯೊಬ್ಬೆಯುಂ । ಗಮಕ ಮೊಳ್ಪು ಲಳಿ ನೇರ್ಪು ಚಾಪಳಂ ॥ ಕ್ರಮನಿಬಂಧ ಮುಚಿತಸ್ವರಂ ಬೆಡಂ । ಗಮರೆ ಬಾಜಿಸುತೆ ಚಾರುವೀಣೆಯಂ ॥

ಕಂ ॥ ಮಾಳವ ಮಾಶ್ರೀರಾಗಂ । ಸಾಳಗ ಮುರುನಾಟ ಶಂಕರಾಭರಣಂ ಬಂ ॥ ಗಾಳಂ ಘೂರ್ಜರಿ ತೋಡಿ ವ । ರಾಳಿಕೆ ಕಲ್ಯಾಣಿ ದೇಶಿ ಕನ್ನಡರಾಗಂ ॥ ... ॥೧೧॥

---

ಅಂತು, ಬಗೆದುದು, ರಾವಣರುದ್ರಕೂರ್ಮಕೈಲಾಸಾಕಾಶಗೌರೀಸ್ವಾಯಂಭುವಕಿನ್ನರವೀಣೆಗಳುಮಂ, ವೇಣುಸ್ವರಮಂಡಲಂಗಳುಮಂ- ಬಿದುರಿನಿಂದ ಮಾಡಿದ ಕೊಳಲು ಮುಂತಾದವಾದ್ಯಗಳನ್ನೂ, ಶ್ರುತಿಗೊಳಿಸಿ, ಕಳೆವೆರ್ಚಿಸಿ- ತಾಳಪ್ರಮಾಣಭೇದವು ಹೆಚ್ಚಿ, ಹರನ, ಇದಿರೊಳ್- ಮುಂಗಡೆಯಲ್ಲಿ, ತರಂಗೊಳಿಸಿದಾಗಳ್- ಲೈನಾಗಿಮಡಗಿದ ಕಾಲದಲ್ಲಿ, ಆವರಾಗಂ, ಆವವೀಣೆಯೊಳ್, ತಾನೆ, ಪುಟ್ಟುಗುಂ- ಹುಟ್ಟುವದೋ? ಆವೀಣೆಯುಂ, ಕಯ್ಕೊಂಡು- ತೆಗೆದುಕೊಂಡು, ಆರಾಗಮನೆ, ಹರಂಗೆ, ಕೇಳಿಸಲ್, ಎಳಸಿ. * * *

ಕತ್ತರಿ, ಬಿತ್ತರಂ- ವಿಸ್ತಾರವಾಗಿ, ನಿಮಿರೆ- ಹೆಚ್ಚಾಗಿರಲು, ಕಾಕಳಿ, ಪೊಣ್ಮೆ- ಉಂಟಾಗಲು, ಪೊದಳ್ದ, ದೇಶಿ, ಮಯ್ವೆತ್ತಿ- ಎರಕವಾಗಿ; ಇರೆ, ತೇನತೇನಂ, ಒದವುತ್ತೆ, ಇರೆ; ತಾನರವಂ, ಲಯಂಜವಂಬೆತ್ತು- ಶೀಘ್ರವಾದತಾಳಗತಿಯುಂ ಹೊಂದಿ, ಇರೆ; ಮೂರ್ಛನಾಪ್ರಸರಂ-ಆರೋಹಣಾವರೋಹಣಗಳ ಸಮೂಹವು, ಒಂದಿ, ಇರೆ; ಜೇನ್ವಳೆ- ಜೇನಿನ ಮಳೆಯು, ಸೂಸಿದಂತಿರೆ- ಸುರಿದ ಹಾಗೆ, ಇಂಪು- ಮಾಧುರ್ಯವು, ಒತ್ತರಿಸುತ್ತೆ- ಸಾಂದ್ರವಾಗುತ್ತ, ರಾಗರಸಂ, ಉರ್ವಿ, ಇರೆ; ಬಿನ್ನಣಂಗಳಂ- ಚೆಂದಗಳನ್ನು, ತೋರುತೆ. ॥೮॥

- ಇಲ್ಲಿ ಕತ್ತರಿ, ಕಾಕಳಿ, ತೇನತೇನ, ಮುಂತಾದವುಗಳು ನಾನಾವಿಧವಾಗಿಹಾಡುವ ಜಾತಿಗಳೆಂದುತಿಳಿವುದು.

ಲಳಿತಗಾಢಮಿತಾಯಿ, ಲಂಘಿತಕಾಕು, ಜಾಯ್, ಅನುಜಾಯಿ, ಪಂಜಳಬಜಾವಣೆ, ತಾಳ, ಸಾರಿ, ಸುರೀತಿ, ರಕ್ತಿ, ಪದಕ್ರಮಂ, ವಳಿ, ಸುರಂಗಿತಂ, ಆಯತಂ, ಪಣಿ, ಕಂಪಿತಂ, ಹಳುವಾಯಿ, ಚೊಕ್ಕಳಂ, ಅನೂದ್ಗತವೃತ್ತಿ, ಪಾಳಿ, ವಿಮೋಕ್ಷಂ, ಇಂಪು, ಲಯಾಸ್ಪದು. ... ... ... ॥೯॥

ಭ್ರಮರಲೀಲೆ, ಲುಳಿ, ದೇಶಿ, ಒಬ್ಬೆಯುಂ, ಗಮಕಂ, ಒಳ್ಪು, ಲಳಿ, ನೇರ್ಪು, ಚಾಪಳಂ, ಕ್ರಮನಿಬಂಧಂ, ಉಚಿತಸ್ವರಂ, ಬೆಡಂಗು, (ಈ ಗೇಯಭೇದಗಳು) ಅಮರೆ, ಚಾರುವೀಣೆಯಂ, ಬಾಜಿಸುತೆ. ... ॥೧೦॥

ಮಾಳವಂ, ಆಶ್ರೀರಾಗಂ, ಸಾಳಗಂ, ಉರುನಾಟ, ಶಂಕರಾಭರಣಂ, ಬಂಗಾಳಂ, ಘೂರ್ಜರಿ, ತೋಡಿ, ವರಾಳಿಕೆ, ಕಲ್ಯಾಣಿ, ದೇಶಿ, ಕನ್ನಡರಾಗಂ. ... ... ... ॥೧೧॥

ಪೃಥ್ವೀವೃತ್ತಂ ॥ ವರಾಳಿ ಮಧು ಮಾಧವೀ ಲಲಿತೆ ಗೌಳ ವೇಳಾವಳೀ । ಕುರುಂಜಿ ಪಳಮಂಜರೀ ಬಹುಳಿ ನಾದರಾಮಕ್ರಿಯಾ ॥ ಹಿರಿಪ್ರಬಳಭೈರವೀ ಮಲಹರೀ ವಸಂತಂಗಳಿಂ । ಬುರುಸ್ಫುರಿತರಾಗಸಂಚಯಮನೋಜೆಯಿಂ ಬಾಜಿಸಂ ॥ ... ॥೧೨॥

ಕಂ॥ ಶಾರದೆಯ ತುಂಬುರನ ನವ । ನಾರದನ ಗಿರೀಂದ್ರಸುತೆಯ ವೀಣೆಯ ಬರ್ದಿಂ ॥ ಸಾರತರಮಿಂತಿದೆಂದು ಪು । ರಾರಿ ಕರಂ ಕೇಳ್ದು ಕೇಳ್ದು ಮೆಚ್ಚುತ್ತಿರ್ಪಂ ॥ ॥೧೩॥

ಚಂ॥ ಅನುದಿನಮೀಶನಾಲಿಸಿ ಮುದಂಬಡೆ ಕೇಳಿಸುತಿಂತು ವೀಣೆಯಂ । ವಿನುತಶಿವಾಂಗಜಂಗಮಕದಂಬಮನರ್ಚಿಸುತಂ ಸಮಾಧಿವೆ ॥ ತ್ತನುಪಮಲಿಂಗಮಂ ಬಿಡದೆ ಜಾನಿಸುತಂ ನಿಜರಾಜಭೋಗಮಂ । ನೆನೆಯದೆ ಮಾದಿರಾಜವಿಭು ವಿರ್ದನನೂನವಿರಕ್ತಿವೃತ್ತಿಯಿಂ ॥

ವ॥ ಅಂತಿರುತ್ತಮಿರ್ಪೊಂದುದಿವಸಂ ಶ್ರೀಗಿರಿಯಿನೆಳ್ತಂದ ಮಾಹೇಶ್ವರರಿಂ ತತ್ಪರ್ವತಪ್ರಭಾವಮುಮನಾಗಿರಿಯೊಳ್ವೈರಾಗ್ಯದೇಳ್ಗೆಯಿಂ ಸಾಮ್ರಾಜ್ಯಭೋಗಮನುಳಿದೆಯ್ದಿ ಶಿವಯೋಗದೊಳ್ನೆಲಸಿರ್ಪ ಶಿವಯೋಗಿಮಲ್ಲರಸನೆಂಬ ಶಿವೈಕ್ಯನ ಪೆರ್ಮೆಯುಮನಾಕರ್ಣಿಸಿ ತದ್ದರ್ಶನೋತ್ಕಂಠೆಯಿನಖಿಳರಾಜ್ಯಸಂಪದ್ಬಂಧುಸಂದೋಹಮಂ ವಿವರ್ಜಿಸಿ ಸಕಳೇಶಮಾದರಸಂ ತತ್ಪರ್ವತಮನೆಯ್ದಿ ನಿಂದು ನಿರೀಕ್ಷಿಪಾಗಳ್ ॥ * * * * *

---

ವರಾಳಿ......ವಸಂತಂಗಳ್— ವರಾಳಿ, ಮಧು, ಮಾಧವೀ, ಲಲಿತೆ, ಗೌಳ, ವೇಳಾವಳೀ, ಕುರಂಜಿ, ಪಳಮಂಜರೀ, ಬಹುಳಿ, ನಾದರಾಮಕ್ರಿಯಾ, ಹಿರಿ, ಪ್ರಬಳಭೈರವೀ, ಮಲಹರೀ, ವಸಂತಂಗಳ್, ಎಂಬ, ಉರುಸ್ಫುರಿತರಾಗಸಂಚಯಮುಮಂ- ಅಧಿಕವಾಗಿ ಪ್ರಕಾಶಿಸುವ ರಾಗಗಳ ಸಮೂಹವನ್ನು, ಒಜೆಯಿಂ- ಕ್ರಮವಾಗಿ, ಬಾಜಿಸಂ. ... ... ... ... ... ॥೧೨॥

ಶಾರದೆಯ- ಸರಸ್ವತಿಯ, ತುಂಬುರನ, ನವನಾರದನ, ಗಿರೀಂದ್ರಸುತೆಯ, ವೀಣೆಯ, ಬರ್ದಿಂ- ಮಾಧುರ್ಯಕ್ಕಿಂತಲೂ, ಇದು- ಈ ಮಾದರಸನ ವೀಣೆಯನಾದವು, ಇಂತು, ಸಾರತರಂ- ಅತಿ ಶ್ರೇಷ್ಠವಾದದ್ದು, ಎಂದು, ಪುರಾರಿ, ಕರಂ- ಅತ್ಯಂತವಾಗಿ, ಕೇಳ್ದುಕೇಳ್ದು, ಮೆಚ್ಚುತ್ತ, ಇರ್ಪಂ. ... ॥೧೩॥

ಈಶಂ, ಅನುದಿನಂ- ಪ್ರತಿ ದಿವಸದಲ್ಲೂ, ಆಲಿಸಿ- ಕೇಳಿ, ಮುದಂಬಡೆ- ಸಂತೋಷವಂ ಹೊಂದುವಂತೆ, ಮಾದಿರಾಜವಿಭು, ಇಂತು, ವೀಣೆಯಂ, ಕೇಳಿಸುತೆ, ವಿನುತಶಿವಾಂಗಜಂಗಮಕದಂಬಮಂ— ವಿನುತ- ಶ್ಲಾಘ್ಯವಾದ, ಶಿವಾಂಗ- ಮಂಗಳಕರವಾದ ಅವಯುವವುಳ್ಳ, (ಅಥವಾ ಶಿವಾವಯವರೂಪರಾದ) ಜಂಗಮ- ಚರಮೂರ್ತಿಗಳ, ಕದಂಬಮಂ- ಸಮೂಹವನ್ನು, ಅರ್ಚಿಸುತಂ, ಸಮಾಧಿವೆತ್ತು- ಶಿವಯೋಗವಂ ಹೊಂದಿ, ಅನುಪಮಲಿಂಗಮಂ, ಬಿಡದೆ, ಜಾನಿಸುತ್ತ, ನಿಜರಾಜಭೋಗಮಂ, ನೆನೆಯದೆ, ಅನೂನವಿರಕ್ತಿವೃತ್ತಿಯಿಂ- ಅಧಿಕವಾದ ಲೌಕಿಕವಿಷಯಾನಿಚ್ಛಾವ್ಯಾಪಾರದಿಂದ, ಇರ್ದಂ. ... ... ... ॥೧೪॥

ಸಕಳೇಶಮಾದರಸಂ, ಅಂತು, ಇರುತ್ತಿಂ, ಇರ್ಪ, ಒಂದುದಿವಸಂ, ಶ್ರೀಗಿರಿಯಿಂ, ಎಳ್ತಂದ, ಮಾಹೇಶ್ವರರಿಂ, ತತ್ಪರ್ವತಪ್ರಭಾವಮುಮಂ- ಆ ಶ್ರೀಶೈಲದ ಮಹಿಮೆಯನ್ನೂ, ಆಗಿರಿಯೊಳ್, ವೈರಾಗ್ಯದ, ವಿರಕ್ತತ್ವದ, ಏಳ್ಗೆಯಿಂ— ಆಧಿಕ್ಯದಿಂದ, ಸಾಮ್ರಾಜ್ಯಭೋಗಮಂ, ಉಳಿದು-ಬಿಟ್ಟು, ಎಯ್ದಿ- ಬಂದು, ಶಿವಯೋಗದೊಳ್, ನೆಲಸಿ, ಇರ್ಪ, ಶಿವಯೋಗಿಮಲ್ಲರಸಂ, ಎಂಬ, ಶಿವೈಕ್ಯನ, ಪೆರ್ಮೆಯುಮಂ- ಆಧಿಕ್ಯವನ್ನೂ, ಆಕರ್ಣಿಸಿ, ತದ್ದರ್ಶನೋತ್ಕಂಠೆಯಿಂ-ಆ ಶ್ರೀಗಿರಿ ಮಲ್ಲರಸ ಇವರುಗಳನ್ನು ನೋಡಬೇಕೆಂಬ ಕುತೂಹಲದಿಂದ, ಅಖಿಳರಾಜ್ಯಸಂಪದ್ಬಂಧುಸಮೂಹಂ- ಸಮಸ್ತ ರಾಜ್ಯ ಐಶ್ವರ್ಯ ನಂಟರುಗಳ ಸಮೂಹವನ್ನು, ವಿವರ್ಜಿಸಿ-ಬಿಟ್ಟು, ತತ್ಪರ್ವತಮಂ, ಎಯ್ದಿ-ಹೊಂದಿ, ನಿಂದು, ನಿರೀಕ್ಷಿಪಾಗಳ್. * * * * * * * *

ಮತ್ತೇ || ವಿತತಾಭ್ರಂಕಷಶೃಂಗಪಾಳಿ ವಿಳಸತ್ಪಾತಾಳವಾತಾಶನಾ | ಶ್ರಿತಶುಭ್ರಬಿಲರಾಜಿ ಖೇಚರಚಯಾಂಚತ್ಪುಷ್ಪಕಸ್ಪರ್ಶಿ ವಿ || ಸ್ತೃತಶಾಖಕ್ಷಿತಿಜಾತಜಾತಿ ರವಿಬಿಂಬಾಲಿಂಗನೋತ್ಕೀರ್ಣಮಂ | ಡಿತರೋಚಿಷ್ಕಣದೀವ್ಯದರ್ಕಮಣಿಬೃಂದಶ್ರೀಧರಂಭೂಧರಂ ||೧೫||

ಚಂ || ಮುನಿಗಳಬೀಡು ಮುಕ್ತಿಯತವರ್ಮನೆ ಪುಣ್ಯದಪುಂಜದಿಕ್ಕೆ ಪಂ | ಪಿನನೆಲೆ ಘೋರಗಹ್ವರದ ಬಾಳ್ಕೆಮೊದಲುರ್ವಿಯ ಸೈಪಿನಾಗರಂ | ಬಿನದಿಪ ದೇವತಾವಳಿಯಬಾವಡಿ ಸಿದ್ಧರ ಕೋಶಗೇಹಮೆಂ | ದೆನಿಸಿ ವಿರಾಜಿಸಿರ್ದುದಧರಾತ್ತಪಯೋಧರಮಾಧರಾಧರಂ ||

ಚಂ || ಪಿರಿಯತನಕ್ಕಿದಿರ್ಚಿ ಕಡೆಗಾದುದು ಮಂದರಮಾಗಿರೀಂದ್ರದೊಳ್ಸುರಗಿರಿ ಬಾಗಿದತ್ತು ಪಿಡಿತಕ್ಕೊಳಗಾಗಿ ಹಿಮಾದ್ರಿ ಸೇಡುವ || ಟ್ಟಿರದೆ ಬೆಳರ್ತುನಿಂದುದು ಕುಲಾಚಲಸಂತತಿ ಮೂಲೆವೊಕ್ಕು ಮು | ಯ್ಗರೆದುದು ಮಿಕ್ಕಪರ್ವತಚಯಂ ಮುಳುಗಿರ್ದುದು ವಾರ್ಧಿವಾರಿಯೊಳ್ || ... ... ... ... ... ||೧೭||

ಕಂ || ಅಲ್ಲಿಯ ಭಿಲ್ಲರ್ಮುನಿವರ | ರಲ್ಲಿಯ ಘನನಿರ್ಝರಾಂಬು ತೀರ್ಥೋದಕಮಂ ||

---

ವಿತತಾಭ್ರಂಕಷಶೃಂಗಪಾಳಿ — ವಿತತ- ವಿಸ್ತಾರಗಳಾದ, ಅಭ್ರಂಕಷ- ಅಂತರಿಕ್ಷವನ್ನು ತಿಕ್ಕುತ್ತಿರುವ, ಶೃಂಗ- ಶಿಖರಗಳ, ಪಾಳಿ- ಪಙ್ತಿ, ವಿಳಸತ್ಪಾತಾಳವಾತಾಶನಾಶ್ರಿತಶುಭ್ರಬಿಲರಾಜಿ— ವಿಳಸತ್- ಪ್ರಕಾಶಿಸುವ, ಪಾತಾಳವಾತಾಶನ- ಪಾತಾಳಲೋಕದಲ್ಲಿರುವ ಸರ್ಪಗಳಿಂದ, ಆಶ್ರಿತ- ಆಶ್ರಯಿಸಲ್ಪಟ್ಟ, ಬಿಲರಂಧ್ರಗಳ, ರಾಜಿ- ಪಙ್ತಿ, ಖೇಚರ......ಜಾತಿ— ಖೇಚರ- ದೇವತೆಗಳ, ಚಯ- ಸಮೂಹದಿಂದ, ಅಂಚತ್- ಪೂಜ್ಯವಾದ, ಪುಷ್ಪಕ- ವಿಮಾನಗಳನ್ನು, ಸ್ಪರ್ಶಿ- ಸೋಂಕುತ್ತಿರುವ, ವಿಸ್ತೃತ— ವಿಸ್ತಾರಗಳಾದ, ಶಾಖ- ಕೊಂಬೆಗಳುಳ್ಳ, ಕ್ಷಿತಿಜಾತ- ಮರಗಳ, ಜಾತಿ, ರವಿ......ಶ್ರೀಧರಂ— ರವಿ- ಸೂರ್ಯನ, ಬಿಂಬ- ಛಾಯೆಯನ್ನು, ಆಲಿಂಗನ- ಆಲಿಂಗಿಸುವದರಿಂದ, ಉತ್ಕೀರ್ಣ- ಮೇಲಕ್ಕೆ ಪ್ರಸರಿಸಿದ, ಮಂಡಿತ- ಅಲಂಕರಿಸಲ್ಪಟ್ಟ, ರೋಚಿಃ- ಕಾಂತಿಗಳ, ಕಣ- ಲೇಶಗಳಿಂದ, ದೀವ್ಯತ್- ಪ್ರಕಾಶಿಸುತ್ತಿರುವ, ಅರ್ಕಮಣಿ- ಸೂರ್ಯಕಾಂತಶಿಲೆಗಳ, ಬೃಂದ- ಸಮೂಹದ, ಶ್ರೀ- ಸಂಪತ್ತನ್ನು, ಧರಂ- ಧರಿಸಿರುವ, ಭೂಧರಂ-ಪರ್ವತವು. ||೧೫||

ಅಧರಾತ್ತಪಯೋಧರಂ— ಅಧಃ- ಕೆಳಗಡೆಯಲ್ಲಿ, ಆತ್ತ- ಪಡೆಯಲ್ಪಟ್ಟ, ಪಯೋಧರಂ- ಮೇಘವುಳ್ಳ, ಆಧರಾಧರಂ, ಮುನಿಗಳ, ಬೀಡು-ಆಶ್ರಯ; ಮುಕ್ತಿಯ, ತವರ್ಮನೆ; ಪುಣ್ಯದ, ಪುಂಜದ, ಇಕ್ಕೆ- ಸ್ಥಾನ; ಪಂಪಿನ, ನೆಲೆ; ಘೋರಗಹ್ವರದ- ದೇವತೆಗಳಿಂ ತೋಡಿ ಮಾಡಲ್ಪಟ್ಟ ಭಯಂಕರಗಳಾದ ತೊರ್ರೆಗಳ, ಬಾಳ್ಕೆಮೊದಲ್-ಬಾಳುವಿಕೆಯ ಆದಿ; ಉರ್ವಿಯ, ಸೈಪಿನ- ಪುಣ್ಯದ, ಆಗರಂ; ಬಿನದಿಪ, ದೇವತಾವಳಿಯ, ಬಾವಡಿ-ಸ್ಥಾನ; ಸಿದ್ಧರ, ಕೋಶಗೇಹಂ-ಬೊಕ್ಕಸದ ಮನೆ; ಎಂದು, ಎನಿಸಿ, ವಿರಾಜಿಸಿ, ಇರ್ದುದು. ||೧೬||

ಆಗಿರೀಂದ್ರದೊಳ್- ಆ ಶ್ರೀಗಿರಿಯೊಡನೆ, ಪಿರಿಯತನಕ್ಕೆ- ಔನ್ನತ್ಯಕ್ಕೋಸ್ಕರ, ಇದಿರ್ಚಿ- ಪ್ರತಿಭಟಿಸಿ; ಮಂದರಂ, ಕಡೆಗೆ-ಕೊನೆಗೆ, (ಕಡೆಯುವದಕ್ಕೆ) ಆದುದು; ಸುರಗಿರಿ, ಪಿಡಿತಕ್ಕೆ-ಬಂದುಹಿಡಿಯಲ್ಲಿ ಹಿಡಿದುಕೊಳ್ಳುವದಕ್ಕೆ, ಒಳಗಾಗಿ- ಆಸ್ಪದವಾಗಿ, ಬಾಗಿದತ್ತು- ಬಗ್ಗಿತು; ಹಿಮಾದ್ರಿ- ಹಿಮವತ್ಪರ್ವತವು, ಸೇಡುವಟ್ಟು- ಶೈತ್ಯವಂ ಹೊಂದಿ, ಇರದೆ; ಬೆಳರ್ತು- ಬೆಳ್ಳಗಾಗಿ, ನಿಂದುದು; ಕುಲಾಚಲಸಂತತಿ- ಸಪ್ತಕುಲಪರ್ವತಗಳ ಸಮೂಹವು, ಮೂಲೆವೊಕ್ಕು, ಮುಯ್ಗರೆದುದು- ಅಡಗಿಕೊಂಡಿತು; ಮಿಕ್ಕಪರ್ವತಚಯಂ, ವಾರ್ಧಿವಾರಿಯೊಳ್- ಸಮುದ್ರದ ನೀರಿನಲ್ಲಿ, ಮುಳುಗಿ, ಇರ್ದುದು. ... ... ... ||೧೭||

ಅಲ್ಲಿಯ- ಆ ಪರ್ವತದಲ್ಲಿರುವ, ಭಿಲ್ಲರ್- ಬೇಡರು, ಮುನಿವರರ್- ಋಷಿಶ್ರೇಷ್ಠರು; ಅಲ್ಲಿಯ, ಘನನಿರ್ಝರಾಂಬು- ಅಧಿಕವಾದ ಗಿರಿನದಿಯ ನೀರು, ತೀರ್ಥೋದಕಂ- ಮಹರ್ಷಿಗಳು ಸ್ನಾನಮಾಡುವ ಪರಿಶು

ತಲ್ಲಿಯ ಶಿಲೆ ಲಿಂಗಂ ನೆಗಳ್ದಲ್ಲಿಯ ತತಪಾಂಸು ಭಸಿತ ಮೆನೆ ಬಣ್ಣಿಪರಾರ್ ॥ ॥೧೪॥

ಕಂ॥ ಅತಿದೂರಂ ಕೇತಾರಂ ಮೃತಿವಡೆಯೆ ವಿಮುಕ್ತಿಗುಡುವು ದಾಕಾಶಿ ಮಹೋ॥ನ್ನತ ವಿಾಶ್ರೀಗಿರಿ ಮೋಕ್ಷ । ಸ್ಥಿತಿಯಂ ಶಿಖರಾವಲೋಕಮಾತ್ರದಿ ನೀಗುಂ ॥ ॥೧೫॥

ವ ॥ ಮತ್ತಂ ಶ್ರೀಶೈಲ ಗಿರಿ ಯುದಯಗಿರಿಯಂತೆ ಲೋಕನೇತ್ರರುಚಿರಮುಂ । ಮಸ್ತಾಚಲದಂತೆ ವೃದ್ಧಹಂಸಾಶ್ರಿತಮುಂ । ಸುರಧರಾಧರದಂತೆ ನಾಕಾಲಯಾಶ್ರಯಮುಂ । ಮಿಂದ್ರಕೀಲಕುತ್ಕೀಲದಂತೆ ನರವರಾಭೀಷ್ಟದಮುಂ । ಹಿಮಶೈಲದಂತೆ ಗಂಗಾಧರಸ್ಥಿತಿವಿರಾಜಿತಮುಂ । ಮಂಜನಾದ್ರಿಯಂತಂಧಕಾರಾತಿರುಚಿವಿಳಿತಮುಂ । ಮೈನಾಕಮಹೀಧ್ರದಂತೆ ಸಮುದ್ರಸತ್ವಗುಣಪರಿವೃತಮುಂ । ಮಲಯಭೂಧರದಂತೆ ಮನೋಜ್ಞಮರುದಾಡಂಬರ

---

ದ್ದೋದಕ; ಅಂತು, ಅಲ್ಲಿಯ, ಶಿಲೆ- ಕಲ್ಲು, ಲಿಂಗಂ; ನೆಗಳ್ದ- ಪ್ರಸಿದ್ಧವಾದ, ಅಲ್ಲಿಯ, ತತಪಾಂಸು ವಿಸ್ತಾರವಾದ ಧೂಳಿಯು, ಭಸಿತಂ, ಎನೆ, ಬಣ್ಣಿಪರ್, ಆರ್? ... ... ... ॥೧೪॥

ಅತಿದೂರಂ- ಬಹುದೂರದಲ್ಲಿರುವ, ಕೇತಾರಂ- ಹಿಮವತ್ಕೇತಾರವು, ಆಕಾಶಿ- ಆವಾರಾಣಸೀಪಟ್ಟಣವೂ, ಮೃತಿವಡೆಯೆ- ಮರಣವಂ ಹೊಂದಿದರೆ, ವಿಮುಕ್ತಿಗುಡುವುದು-ಮೋಕ್ಷವಂ ಕೊಡುವದು, ಮಹೋನ್ನತಂ- ಅತಿ ದೊಡ್ಡದಾದ, ಈಶ್ರೀಗಿರಿ, ಶಿಖರಾವಲೋಕಮಾತ್ರದಿಂ- ತನ್ನ ಕೋಡುಗಲ್ಲನ್ನು ನೋಡಿದ ಮಾತ್ರದಿಂದ, ಮೋಕ್ಷಸ್ಥಿತಿಯಂ, ಈಗುಂ. ... ... ... ... ॥೧೫॥

ಮತ್ತಂ, ಆಶ್ರೀಗಿರಿ, ಉದಯಗಿರಿ ಯಂತೆ-ಉದಯಪರ್ವತದಹಾಗೆ, ಲೋಕನೇತ್ರರುಚಿರಮುಂ- (ಉದಯಗಿರಿ) ಲೋಕನೇತ್ರ- ಸೂರ್ಯನಿಂದ, ರುಚಿರಮುಂ; (ಶ್ರೀಗಿರಿ) ಲೋಕನೇತ್ರ- ಜನಗಳಕಣ್ಣಿಗೆ, ರುಚಿರಮುಂ; ಅಸ್ತಾಚಲದಂತೆ- ಅಸ್ತಪರ್ವತದಹಾಗೆ, ವೃದ್ಧಹಂಸಾಶ್ರಿತಮುಂ- (ಅಸ್ತಗಿರಿ) ವೃದ್ಧಹಂಸ- ಅಸ್ತಂಗತನಾಗುತ್ತಿರುವ ವೃದ್ಧಸೂರ್ಯನಿಂದ, ಆಶ್ರಿತಮುಂ- ಆಶ್ರಯಿಸಲ್ಪಟ್ಟದ್ದು; (ಶ್ರೀಗಿರಿ) ವೃದ್ಧ- ಮುದುಕರಾದ, ಹಂಸ- ಯತಿಶ್ರೇಷ್ಠರಿಂದ, ಆಶ್ರಿತಮುಂ; ಸುರಧರಾಧರದಂತೆ- ಮೇರುಪರ್ವತದಹಾಗೆ, ನಾಕಾಲಯಾಶ್ರಯಮುಂ-.(ಮೇರುಗಿರಿ) ನಾಕ- ಸ್ವರ್ಗದ, ಆಲಯ- ಮನೆಗಳಿಗೆ, ಆಶ್ರಯಮುಂ; (ಶ್ರೀಗಿರಿ) ನಾಕಾಲಯ- ದೇವತೆಗಳಿಗೆ, ಆಶ್ರಯಮುಂ-.ವಾಸಸ್ಥಲವಾದದ್ದು; ಅಥವಾ, ನಾಕ- ಪಾಪರಹಿತರುಗಳೇನ್ನುವಲಯ-ನಾಶರಹಿತರೇನು ಇವರುಗಳಿಗೆ, ಆಶ್ರಯಮುಂ; ಇಂದ್ರಕೀಲಕುತ್ಕೀಲದಂತೆ-ಇಂದ್ರಕೀಲಪರ್ವತದಹಾಗೆ, ನರವರಾಭೀಷ್ಟದಮುಂ; (ಇಂದ್ರಕೀಲ) ನರ- ಅರ್ಜುನನಿಗೆ, ವರಾಭೀಷ್ಟದಮುಂ-ಇಷ್ಟವಾದ ವರವನ್ನು ಕೊಟ್ಟದ್ದು; (ಶ್ರೀಗಿರಿ) ನರವರ- ಪುರುಷಶ್ರೇಷ್ಠರಿಗೆ, ಅಭೀಷ್ಟದಮುಂ; ಹಿಮಶೈಲದಂತೆ-ಹಿಮವತ್ಪರ್ವತದಹಾಗೆ, ಗಂಗಾಧರಸ್ಥಿತಿವಿರಾಜಿತಮುಂ; (ಹಿಮಗಿರಿ) ಗಂಗಾ- ಗಂಗಾನದಿಯನ್ನು, ಧರ- ಧರಿಸುವ, ಸ್ಥಿತಿ- ರೀತಿಯಿಂದ, ವಿರಾಜಿತಮುಂ; (ಶ್ರೀಗಿರಿ) ಗಂಗಾಧರ- ಈಶ್ವರನ, ಸ್ಥಿತಿ- ಇರುವಿಕೆಯಿಂದ, ವಿರಾಜಿತಮುಂ; ಅಂಜನಾದ್ರಿಯಂತೆ- ನೀಲಗಿರಿಯಹಾಗೆ, ಅಂಧಕಾರಾತಿರುಚಿವಿಳಿತಮುಂ (ನೀಲಗಿರಿ) ಅಂಧಕಾರ- ಕತ್ತಲೆಯೋಪಾದಿಯಲ್ಲಿರುವ, ಅತಿರುಚಿ- ಬಹಳವಾದಕಾಂತಿಯಿಂದ, ವಿಳಿತಮುಂ- ಕೂಡಿರುವದು; (ಶ್ರೀಗಿರಿ) ಅಂಧಕ- ಅಂಧಕಾಸುರನಿಗೆ, ಅರಾತಿ-ಶತ್ರುವಾದ ಈಶ್ವರನ, ಅತಿರುಚಿ-ಅತ್ಯಂತಪ್ರೀತಿಯಿಂದ ವಿಳಿತಮುಂ, ಮೈನಾಕಮಹೀಧ್ರದಂತೆ; ಮೈನಾಕಪರ್ವತದಹಾಗೆ, ಸಮುದ್ರಸತ್ವಗುಣಪರಿವೃತಮುಂ (ಮೈನಾಕ) ಸಮುದ್ರ- ಸಮುದ್ರದಲ್ಲಿರುವ, ಸತ್ವ- ಪ್ರಾಣಿಗಳೇನು, ಗುಣ- ಕ್ಷಾರಾದಿಗುಣಗಳೇನು ಇವುಗಳಿಂದ, ಪರಿವೃತಮುಂ- ಆವರಿಸಲ್ಪಟ್ಟದ್ದು; (ಶ್ರೀಗಿರಿ) ಸಮುದ್ರ- ಆಕಾರಸಹಿತವಾದ, ಸತ್ವಗುಣದಿಂದ ಪರಿವೃತಮುಂ- ಆವರಿಸಲ್ಪಟ್ಟದ್ದು; ಮಲಯಭೂಧರದಂತೆ, ಮನೋಜ್ಞಮರುದಾಡಂಬರಮುಂ; (ಮಲಯಪರ್ವತ) ಮನೋಜ್ಞ- ಮನೋಹರವಾದ, ಮರುತ್- ವಾಯುವಿನ, ಆಡಂಬರಮುಂ- ಅತಿಶಯ

ಮು ಮೆನಿಸಿರ್ದುದಂತುಮಲ್ಲದೆಯುಂ ॥ * * * * * * * * * *

ಚಂ ॥ ಮಿಸುಗುವ ಮಂದರಾಗದೆ ಮಹೋನ್ನತಿಯುಂ ಸೆಳೆದೀಳ್ದುಕೊಂಡು ರಂ । ಜಿಸುವ ಸುರಾಗದಿಂ ಗರಿಮೆಯುಂ ತೆಗೆತಂದಪರಾಗದಿಂ ಗುಣ ॥ ಪ್ರಸರಮ ನೀಶ ನೀಗಿರಿ ಯ ನಾಗಿಸ ರ್ದೊಡಿದಕ್ಕಿನಿತ್ತು ಪೇ। ಪೆಸವ್ರುದೆ ಕೀಳ ಲಾನಮಿಸ ಲೊತ್ತರಿಸ ಲ್ಕವ್ರು ಸಾ ಧ್ಯಮುಪ್ಪುವೆ ॥ ... ... ... ... ॥೨೦॥

ಮತ್ತೇ॥ಹರನೇತ್ರತ್ರಯಮಂಜುಳತ್ರಿದಳಸಂದೋಹಾಮಿಳದ್ದೀರ್ಘಭಾ । ಸುರಶಾಖಾನ್ವಿತ ಮಾಶ್ರಿತಪ್ರಕರಮೋಕ್ಷಶ್ರೀಕರ ತಾಪಸೋ ॥ತ್ಕರಸಂಸೇವಿತ ಮಾತ್ಮವೈಭವಜಿತಸ್ವರ್ನ್ನಂದನಂ ಕಣ್ಗೆಬಂಧುರವಾಗಿರ್ದುದು ತತ್ಕುಭೃತ್ಕಟಕದೊ ಳ್ಬಿಲ್ವೀವನಂಪಾವನಂ॥

ವ ॥ ತದ್ಬಿಲ್ವವನವಲಯಾಂತರಾಳಭಾಸುರ ಮೆನಿಸಿ ॥ * * * * * * *

ಮತ್ತೇ ॥ ನುತರುದ್ರಾಕ್ಷಧರಾಧರಪ್ರತತಿ ರುದ್ರಾಕ್ಷಕ್ಷಮಾಜಾತಸಂ । ತತಿ ರುದ್ರಾ

---

ಉಳ್ಳದ್ದು; (ಶ್ರೀಗಿರಿ) ಮನೋಜ್ಞ- ಮನೋಹರವಾದ, ಮರುತ್- ದೇವತೆಗಳ, ಆಡಂಬರಮುಂ– ಅತಿಶಯವುಳ್ಳದ್ದು; ಎನಿಸಿ, ಇರ್ದುದು; ಅಂತುಂ, ಅಲ್ಲದೆಯುಂ. * * * * * * * * * *

ಈಶಂ, ಮಿಸುಪ- ಪ್ರಕಾಶಿಸುವ, ಮಂದರಾಗದೆ-ಮಂದರಪರ್ವತದ ದೆಸೆಯಿಂದ, ಮಹೋನ್ನತಿಯಂ- ಬಹಳವಾದ ಉದ್ದವನ್ನು, ಸೆಳೆದು- ಆಕರ್ಷಿಸಿ, ರಂಜಿಸುವ, ಸುರಾಗದಿಂ- ಮೇರುಪರ್ವತದ ದೆಸೆಯಿಂದ, ಗರಿಮೆಯುಂ- ದೊಡ್ಡತನವನ್ನು, ಈಳ್ದುಕೊಂಡು- ಎಳೆದುಕೊಂಡು, ಅಪರಾಗದಿಂ- ಪಶ್ಚಿಮಗಿರಿಯದೆಸೆಯಿಂದ, ಗುಣಪ್ರಸರಮಂ- ಗುಣಗಳ ಸಮೂಹವನ್ನು, ತೆಗೆತಂದು- ತೆಗೆದುಕೊಂಡುಬಂದು, ಈಗಿರಿಯಂ- ಈ ಶ್ರೀಶೈಲವನ್ನು, ಆಗಿಸದೆ- ಮಾಡದೆ, ಇರ್ದೊಡೆ, ಇದಕ್ಕೆ- ಈ ಬೆಟ್ಟಕ್ಕೆ, ಇನಿತ್ತುಪೇಪು- ಇಷ್ಟುಅತಿಶಯವು, ಎಸೆವುದೆ? ಅವು– ಆಮಂದರಮೇರುಪಶ್ಚಿಮಗಿರಿಗಳು, ಕೀಳಲ್, ಆನಮಿಸಲ್, ಒತ್ತರಿಸಲ್ಕೆ, (ಅಂದರೆ ಮಂದರಪರ್ವತವಂ ಸಮುದ್ರಮಥನಕಾಲದಲ್ಲ ಕೀಳುವದಕ್ಕೆ, ಮೇರುಪರ್ವತವಂ ತ್ರಿಪುರಸಂಹಾರಕಾಲದಲ್ಲಿ ಧನುಸ್ಸಂ ಮಾಡಿ ಬಗ್ಗಿಸುವದಕ್ಕೆ, ಪಶ್ಚಿಮಗಿರಿಯಂ ಸಮುದ್ರತೀರವರ್ತಿಯಾದುದರಿಂ ಕೊನೆಗೊತ್ತರಿಸುವದಕ್ಕೆ) ಸಾಧ್ಯಂ, ಅಪ್ಪುವೆ? ... ... ... ... ... ॥೨೦॥

ತತ್ಕುಭೃತ್ಕಟಕದೊಳ್-ಆಪರ್ವತದ ತಪ್ಪಲಿನಲ್ಲಿ, ಹರ......ಶಾಖಾನ್ವಿತಂ— ಹರ-ಈಶ್ವರನ, ನೇತ್ರತ್ರಯ- ಮೂರುಕಣ್ಣುಗಳೋಪಾದಿಯಲ್ಲಿ, ಮಂಜುಳ-ಮನೋಹರವಾದ, ತ್ರಿದಳ-ಮೂರುಎಸಳುಗಳ, ಸಂದೋಹ- ಸಮೂಹದಿಂದ, ಆಮಿಳತ್- ಎಲ್ಲಾಕಡೆಯುಲ್ಲೂ ಕೂಡಿರುವ, ದೀರ್ಘ- ಉದ್ದವಾದ, ಭಾಸುರ- ಪ್ರಕಾಶಮಾನವಾದ, ಶಾಖಾ- ಕೊಂಬೆಗಳಿಂದ, ಅನ್ವಿತಂ- ಕೂಡಿದ, ಆಶ್ರಿತಪ್ರಕರಮೋಕ್ಷಶ್ರೀಕರಂ- ಆಶ್ರೈಸಿದವರ ಸಮೂಹಕ್ಕೆ ಮುಕ್ತಿಸಂಪತ್ತನ್ನುಂಟುಮಾಡುವ, ತಾಪಸೋತ್ಕರಸಂಸೇವಿತಂ- ಋಷಿಗಳ ಸಮೂಹದಿಂದ ಸೇವಿಸಲ್ಪಟ್ಟ, ಆತ್ಮವೈಭವಜಿತಸ್ವರ್ನ್ನಂದನಂ- ತನ್ನ ವಿಭವದಿಂದ ಜೈಸಲ್ಪಟ್ಟ ಸ್ವರ್ಗಲೋಕದ ಉಪವನವುಳ್ಳ, ಪಾವನಂ-ಪರಿಶುದ್ಧವಾದ, ಬಿಲ್ವೀವನಂ-ಬಿಲ್ವವೃಕ್ಷಗಳಕಾಡು,ಕಣ್ಗೆ,ಬಂಧುರಂ, ಆಗಿ,ಇರ್ದುದು.

ತದ್ಬಿಲ್ವವನವಲಯಾಂತರಾಳಭಾಸುರಂ- ಆ ಬಿಲ್ವವನದ ಮಂಡಲದ ಮಧ್ಯದಲ್ಲಿ ಮನೋಹರವಾದದ್ದು, ಎನಿಸಿ. * * * * * * * * * * * * * * * * *

ನುತರುದ್ರಾಕ್ಷಧರಾಧರಪ್ರತತಿ- ಶ್ಲಾಘ್ಯಗಳಾದ ರುದ್ರಾಕ್ಷಗಳ ಬೆಟ್ಟದ ಸಮೂಹ, ರುದ್ರಾಕ್ಷಕ್ಷಮಾಜಾತಸಂತತಿ- ರುದ್ರಾಕ್ಷಗಳ ಮರಗಳ ಸಮೂಹ, ರುದ್ರಾಕ್ಷಖನಿಪ್ರತಾನಂ- ರುದ್ರಾಕ್ಷಗಳ ಗಣಿಗಳ ಸಮೂಹ, ಉರುರುದ್ರಾಕ್ಷಾಪಗಾಪಾಳಿ- ಉತ್ಕೃಷ್ಟಗಳಾದ ರುದ್ರಾಕ್ಷಗಳ ಹೊಳೆಗಳ ಸಾಲು, ಸಂಗತಭಸ್ಮಾಚಲ

ಕ್ಷಖನಿಪ್ರತಾನ ಮುರುರುದ್ರಾಕ್ಷಾವಗಾವಳಿ ಸಂ ॥ ಗತಭಸ್ಮಾಚಲಪಜ್ತಿಭಸ್ಮತರುಷಂಡಂ
ಭಸ್ಮನದ್ಯಾಳಿ ವಿ । ಶ್ರುತಸದ್ಭಸ್ಮಖನಿವ್ರಜಂ ಮೆರೆಗು ಮತ್ಯಾಶ್ಚರ್ಯಮಂ ಬೀರುತಂ ॥
ಉ ॥ ಲಿಂಗಧರಾಧರಪ್ರತತಿ ಲಿಂಗಮಹೀರುಹಪಜ್ತಿ ಲಿಂಗತೀ । ರ್ಥಂಗಳರಾಜಿ ಲಿಂ
ಗತಟನೀತತಿ ಜಂಗಮಶೈಲಸಂಕುಲಂ ॥ ಜಂಗಮಪಾದಪಾಳಿ ಘನಜಂಗಮಗುಲ್ಮವಿತಾನ
ಮುಲ್ಲಸ । ಜ್ಜಂಗಮವಲ್ಲರೀಸಮಿತಿ ಕಣ್ಗೆಸೆದಿರ್ದುದು ಮಾದಿರಾಜನ ॥ .. ॥೨೩॥
ಕಂ॥ ನುಡಿವಲತೆ ನುಡಿವಗಿರಿತತಿ । ನುಡಿವ ಮಹಾಗುಲ್ಮಸಮಿತಿ ನುಡಿವಗನಿವಹಂ ॥
ನಡೆವಲತೆ ನಡೆವಗಿರಿತತಿ । ನಡೆವಮಹಾಗುಲ್ಮವಿತತಿ ನಡೆವಗನಿವಹಂ ॥ ... ॥೨೪॥
ಉ ॥ ಪಾಡುವ ಪಕ್ಷಿ ಪಾಡುವ ಮಹಾಫಣಿ ಪಾಡುವಭೃಂಗಸಂಕುಳಂ । ಪಾಡುವ ದಂ
ತಿ ಪಾಡುವಮೃಗಾವಳಿ ಪಾಡುವಸಿಂಹಸಂಚಯಂ ॥ ಪಾಡುವವಾನರಪ್ರತತಿ ಪಾಡುವಶೈಲಲ
ತಾತರುವ್ರಜಂ । ಪಾಡುವಗುಲ್ಮನಿಮ್ನಗೆಗಳೊಪ್ಪುಗು ಮದ್ಭುತಮಂ ನೆಗಳ್ಚುತಂ ॥
ಕಂ॥ಕುಣಿವಗಿರಿ ಕುಣಿವತರುಗ । ಳ್ಕುಣಿವಹಿ ಕುಣಿವಂಡಜಾಳಿ ಕುಣಿವಮೃಗಂಗಳ್ ॥
ಕುಣಿವಲತೆ ಕುಣಿವಗುಲ್ಮಂ । ಕುಣಿವಕಪಿವ್ರಾತ ಮೇಂ ಮನಂಗೊಳಿಸಿದುವೊ ॥ ॥೨೫॥
ಕಂ ॥ ಜ್ಯೋತಿರ್ನ್ನದಿ ನವಕಾಷ್ಠ । ಜ್ಯೋತಿ ತೃಣಜ್ಯೋತಿ ವಾಲುಕಾಜ್ಯೋತಿ ಶಿಲಾ ॥
ಜ್ಯೋತಿ ಜಲಗಿರಿ ಜಲಾವನಿ । ಜಾತಂ ಜಲಹರಿಣಸಮಿತಿ ಜಲವಿಹಗಕುಲಂ ॥ ॥೨೬॥

---

ಪಜ್ತಿ- ಕೂಡಿದ ವಿಭೂತಿಯಬೆಟ್ಟದಸಾಲು,ಭಸ್ಮತರುಷಂಡಂ-ವಿಭೂತಿಯ ಮರಗಳ ಗುಂಪು, ಭಸ್ಮನದ್ಯಾಳಿ-ವಿಭೂತಿಯ ಹೊಳೆಗಳ ಸಾಲು,ವಿಶ್ರುತಸದ್ಭಸ್ಮಖನಿವ್ರಜಂ- ಪ್ರಸಿದ್ಧವಾದ ಒಳ್ಳೆಯ ವಿಭೂತಿಯಗಣಿಗಳ ಸಮೂಹ, (ಇವುಗಳು) ಅತ್ಯಾಶ್ಚರ್ಯವಂ, ಬೀರುತಂ, ಮೆರೆಗುಂ. ... ... ॥೨೨॥

ಲಿಂಗಧರಾಧರಪ್ರತತಿ- ಲಿಂಗದ ಬೆಟ್ಟಗಳ ಸಮೂಹ, ಲಿಂಗಮಹೀರುಹಪಜ್ತಿ- ಲಿಂಗದ ಮರಗಳ ಸಾಲು, ಲಿಂಗತೀರ್ಥಂಗಳ- ಲಿಂಗದ ಪರಿಶುದ್ಧೋದಕಗಳ, ರಾಜಿ- ಸಾಲು, ಲಿಂಗತಟನೀತತಿ- ಲಿಂಗದ ಹೊಳೆಗಳ ಗುಂಪು, ಜಂಗಮಶೈಲಸಂಕುಲಂ, ಜಂಗಮಪಾದಪಾಳಿ, ಘನಜಂಗಮಗುಲ್ಮವಿತಾನಂ- ಶ್ರೇಷ್ಠರಾದಜಂಗಮರೂಪಿಗಳಾದ ಪೊದರುಗಳ ಗುಂಪು, ಉಲ್ಲಸಜ್ಜಂಗಮವಲ್ಲರೀಸಮಿತಿ-ಪ್ರಕಾಶಿಸುವ ಜಂಗಮರೂಪಗಳಾದ ಬಳ್ಳಿಗಳ ಗುಂಪು, ಮಾದಿರಾಜನ, ಕಣ್ಗೆ, ಎಸೆದು, ಇರ್ದ್ದುದು. ... ... ॥೨೩॥

ನುಡಿವಲತೆ- ಮಾತನಾಡುವ ಬಳ್ಳಿ. ನುಡಿವಗಿರಿತತಿ, ನುಡಿವಮಹಾಗುಲ್ಮಸಮಿತಿ, ನುಡಿವಅಗನಿವಹಂ-ಮಾತನಾಡುವಮರಗಳ ಗುಂಪು, ನಡೆವಲತೆ, ನಡೆವಗಿರಿತತಿ,ನಡೆವಮಹಾಗುಲ್ಮವಿತತಿ,ನಡೆವಅಗನಿವಹಂ. ॥೨೪॥

ಪಾಡುವಪಕ್ಷಿ, ಪಾಡುವಮಹಾಫಣಿ, ಪಾಡುವಭೃಂಗಸಂಕುಳಂ, ಪಾಡುವದಂತಿ, ಪಾಡುವಮೃಗಾವಳಿ, ಪಾಡುವಸಿಂಹಸಂಚಯಂ, ಪಾಡುವವಾನರಪ್ರತತಿ, (ವಾನರ- ಕಪಿ) ಪಾಡುವಶೈಲಲತಾತರುವ್ರಜಂ, ಪಾಡುವಗುಲ್ಮನಿಮ್ನಗೆಗಳ್, (ನಿಮ್ನಗೆ-ಹೊಳೆ) ಅದ್ಭುತಮಂ,ನೆಗಳ್ಚುತಂ-ಉಂಟುಮಾಡುತ್ತ,ಒಪ್ಪುಗುಂ.

ಕುಣಿವಗಿರಿ, ಕುಣಿವತರುಗಳ್, ಕುಣಿವಅಹಿ, ಕುಣಿವಅಂಡಜಾಳಿ- (ಅಂಡಜ-ಪಕ್ಷಿ) ಕುಣಿವಮೃಗಂಗಳ್, ಕುಣಿವಲತೆ, ಕುಣಿವಗುಲ್ಮಂ, ಕುಣಿವಕಪಿವ್ರಾತಂ,ಏಂಮನಂಗೊಳಿಸಿದುವೊ! ... ॥೨೫॥

ಜ್ಯೋತಿರ್ನ್ನದಿ- ತೇಜೋರೂಪವಾದ ಹೊಳೆ, ನವಕಾಷ್ಠಜ್ಯೋತಿ- ತೇಜೋರೂಪವಾದ ಹೊಸಕಟ್ಟಿಗೆ, ತೃಣಜ್ಯೋತಿ- ತೇಜೋರೂಪವಾದ ಹುಲ್ಲು, ವಾಲುಕಾಜ್ಯೋತಿ- ತೇಜೋರೂಪವಾದ ಮಳಲು, ಶಿಲಾಜ್ಯೋತಿ- ತೇಜೋರೂಪವಾದಕಲ್ಲು, ಜಲಗಿರಿ- ನೀರಿನ ಬೆಟ್ಟ, ಜಲಾವನಿಜಾತಂ- ನೀರಿನ ಮರ, ಜಲಹರಿಣಸಮಿತಿ- ನೀರಿನ ಜಿಂಕೆಗಳ ಗುಂಪು, ಜಲವಿಹಗಕುಲಂ- ನೀರಿನ ಹಕ್ಕಿಗಳಗುಂಪು. ... ॥೨೬॥

ಶಾ ‖ ನಾನಾವರ್ಣಮ ನಾಳ್ದ ಶೈಲತತಿ ನಾನಾವರ್ಣಭೂಜೋತ್ಕರಂ । ನಾನಾವರ್ಣದವಲ್ಲರೀವಿತತಿ ನಾನಾವರ್ಣಗುಲ್ಮವ್ರಜಂ ‖ ನಾನಾರೂಪಮಹೀಧರಪ್ರತತಿ ನಾನಾರೂಪಭೂರುಟ್ಚಯಂ । ನಾನಾರೂಪಲತಾಳಿ ಗುಲ್ಮನಿವಹಂ ತೀವಿರ್ಪುದಾತಾಣದೊಳ್ ‖ ‖೨೮‖

ಮಲ್ಲಿಕಾಮಾಲಾ ‖ ಖೇಚರಾಚಲರಾಜಿ ಖೇಚರಭೂಜಗುಲ್ಮಸಮುತ್ಕರಂ । ಖೇಚರಾತುಳವಲ್ಲಿಕಾತತಿ ಹರ್ಮ್ಯರೂಪಗಿರಿವ್ರಜಂ ‖ ಪ್ರಾಚುರಂ ಮಣಿಹರ್ಮ್ಯರೂಪನಗಾಳಿ ಹರ್ಮ್ಯಲತಾಚಯಂ । ರೋಚಿರುಜ್ಜ್ವಳಹರ್ಮ್ಯಗುಲ್ಮವಿತಾನವೊಪ್ಪುದೆಳ್ಗೆಯಿಂ ‖ ‖೨೯‖

ಕಂ ‖ ಮೃಗರೂಪಭೂಧರಾವಳಿ । ಮೃಗರೂಪಮಹೀರುಹಾಳಿ ಕಣ್ಗೆಸೆದುದು ಮೇಣ್ ‖ ಖಗರೂಪಶೈಲಸಂತತಿ । ಖಗರೂಪತರುಪ್ರತಾನ ಮಾಶ್ರೀಗಿರಿಯೊಳ್ ‖ ... ‖೩೦‖

ಕಂ ‖ ನರರೂಪಧರಾಧರತತಿ । ನರರೂಪಮಹೀಜರಾಜಿ ರಾಜಿಸಿದುದು ಮೇಣ್ ‖ ಸುರರೂಪಗಿರಿಕದಂಬಂ । ಸುರರೂಪಮ ನಾಳ್ದವಿಟಪಿಸಂಕುಳಮದರೊಳ್ ‖ ‖೩೧‖

ಮಂಶಸ್ಥವೃತ್ತಂ ‖ ಪ್ರಸೂತಭೂತಾಳಿ ನಗಾಗಸಂಕುಳಂ । ವಸಂತಲಕ್ಷ್ಮೀಚಿರಭೃತ್ತರುವ್ರಜಂ ‖ ಲಸತ್ಸುರಾಧೀಶಭಯಂಕರಪ್ರಭಾ । ಪ್ರಸನ್ನಶೈಲಾವಳಿ ಯಲ್ಲಿ ರಂಜಿಕುಂ ‖

ಮ ‖ ಸ್ರ ‖ ವರಗಂಧರ್ವಸ್ವರೂಪಂ ಬಡೆದ ತರುಲತಾಗುಲ್ಮಶೈಲಪ್ರತಾನಂ । ಕರಮೆಂ

---

ನಾನಾವರ್ಣಮಂ- ಅನೇಕ ಬಣ್ಣಗಳನ್ನು, ಆಳ್ದ, ಶೈಲತತಿ, ನಾನಾವರ್ಣಭೂಜೋತ್ಕರಂ- ಅನೇಕ ಬಣ್ಣದ ಮರಗಳ ಗುಂಪು, ನಾನಾವರ್ಣದ, ವಲ್ಲರೀವಿತತಿ, ನಾನಾವರ್ಣಗುಲ್ಮವ್ರಜಂ, ನಾನಾರೂಪಮಹೀಧರಪ್ರತತಿ, ನಾನಾರೂಪಭೂರುಟ್ಚಯಂ,ನಾನಾರೂಪಲತಾಳಿ,ಗುಲ್ಮನಿವಹಂ, ಆತಾಣದೊಳ್, ತೀವಿ, ಇರ್ಪುದು.

ಖೇಚರಾಚಲರಾಜಿ- ಅಂತರಿಕ್ಷದಲ್ಲಿ ಓಡಾಡುವ ಬೆಟ್ಟಗಳ ಸಾಲು, ಖೇಚರಭೂಜಗುಲ್ಮಸಮುತ್ಕರಂ- ಅಂತರಿಕ್ಷದಲ್ಲಿ ನಡೆಯುವ ಮರ ಪೊದರೆ ಇವುಗಳ ಗುಂಪು, ಖೇಚರಾತುಳವಲ್ಲಿಕಾತತಿ- ಅಂತರಿಕ್ಷದಲ್ಲಿ ಚರಿಸುವ ಅಸದೃಶಗಳಾದ ಬಳ್ಳಿಗಳ ಸಮೂಹವು, ಹರ್ಮ್ಯರೂಪಗಿರಿವ್ರಜಂ- ಉಪ್ಪರಿಗೆಗಳ ಆಕಾರವುಳ್ಳ ಬೆಟ್ಟಗಳ ಗುಂಪು, ಪ್ರಾಚುರಂ- ಪ್ರಸಿದ್ಧವಾದ, ಮಣಿಹರ್ಮ್ಯರೂಪನಗಾಳಿ- ರತ್ನದ ಉಪ್ಪರಿಗೆಗಳಂತಿರುವ ಮರಗಳ ಸಾಲು, ಹರ್ಮ್ಯಲತಾಚಯಂ, ರೋಚಿರುಜ್ಜ್ವಳಹರ್ಮ್ಯಗುಲ್ಮವಿತಾನಂ- ಕಾಂತಿಯಿಂದ ಪ್ರಕಾಶಮಾನವಾದ ಉಪ್ಪರಿಗೆಯಂತಿರುವ ಪೊದರೆಗಳ ಗುಂಪು, ಎಳ್ಗೆಯಿಂ, ಒಪ್ಪಿದುದು. ... ... ‖೨೯‖

ಮೃಗರೂಪಭೂಧರಾವಳಿ, ಮೃಗರೂಪಮಹೀರುಹಾಳಿ, ಮೇಣ್, ಖಗರೂಪಶೈಲಸಂತತಿ- ಪಕ್ಷಿಗಳ ಆಕಾರವುಳ್ಳ ಪರ್ವತಗಳ ಗುಂಪು, ಖಗರೂಪತರುಪ್ರತಾನಂ, ಆಶ್ರೀಗಿರಿಯೊಳ್, ಕಣ್ಗೆ, ಎಸೆದುದು. ‖೩೦‖

ನರರೂಪಧರಾಧರತತಿ, ನರರೂಪಮಹೀಜರಾಜಿ, ಮೇಣ್, ಸುರರೂಪಗಿರಿಕದಂಬಂ,ಸುರರೂಪಮಂ, ಆಳ್ದ, ವಿಟಪಿಕುಳಂ- ಮರಗಳ ಗುಂಪು, ಅದರೊಳ್, ರಂಜಿಸಿದುದು. ... ... ‖೩೧‖

ಅಲ್ಲಿ, ಪ್ರಸೂತಭೂತಾಳಿನಗಾಗಸಂಕುಳಂ— ಪ್ರಸೂತ- ಹೆತ್ತಂತಹ, ಭೂತ- ಪ್ರಾಣಿಗಳ, ಆಳಿ-ಸಾಲುಳ್ಳ, ನಗ- ಬೆಟ್ಟಗಳೇನು, ಅಗ- ಮರಗಳೇನು ಇವುಗಳ, ಸಂಕುಳಂ, ವಸಂತಲಕ್ಷ್ಮೀಚಿರಭೃತ್ತರುವ್ರಜಂ- ವಸಂತಕಾಲಲಕ್ಷ್ಮಿಯನ್ನು ಬಹುಕಾಲವಾಗಿ ಧರಿಸಿರುವ ಮರಗಳಗುಂಪು, ಲಸತ್ಸುರಾಧೀಶಭಯಂಕರಪ್ರಭಾಪ್ರಸನ್ನಶೈಲಾವಳಿ— ಲಸತ್- ಪ್ರಕಾಶಿಸುವ, ಸುರಾಧೀಶ- ಇಂದ್ರನಿಗೆ, ಭಯಂಕರ- ಭೀತಿಯನ್ನುಂಟುಮಾಡುವ, ಪ್ರಭಾ- ಕಾಂತಿಯಿಂದ, ಪ್ರಸನ್ನ- ನಿರ್ಮಲವಾದ, ಶೈಲ- ಬೆಟ್ಟಗಳ, ಆವಳಿ, ರಂಜಿಕುಂ. ‖೩೨‖

ವರಗಂಧರ್ವಸ್ವರೂಪಂಬಡೆದ, ತರುಲತಾಗುಲ್ಮಶೈಲಪ್ರತಾನಂ, ಕರಂ-ಅತ್ಯಂತವಾಗಿ, ಎಂದುಂ- ಯಾವಾಗಲೂ, ಛಾಯೆ- ನೆಳಲು, ಅಲ್ಲಾಡದ-ಚಲಿಸದ, ಗಿರಿತರುವೃಂದಂ, ನೆಳಲ್ಗೆಟ್ಟ-ನೆಳಲೇಇಲ್ಲದಿರುವ, ಭೂಜೋ

ದುಂಛಾಯೆ ಯಲ್ಲಾಡದ ಗಿರಿ ತರುವೃಂದಂ ನೆಳಲ್ಗೆಟ್ಟ ಭೂಜೋ ॥ ತ್ಕರ ಮದ್ರಿವ್ರಾತ
ಮುಂದೂರದನೆಳಲೆಸೆವತ್ಯುನ್ನತಕ್ಷ್ಮಾಜಧಾತ್ರೀ । ಧರಜಾತಂ ಬೆಟ್ಟು ಬೆಟ್ಟೊಳ್ನೆರೆಯೆ ಜವ
ದೆಪ್ಪುಟ್ಟರ್ದ್ದ ಬಾಲಾಚಲೌಘಂ॥ ... ... ... ॥೩೩॥

ಚಂ ॥ ತರುತರುಯೋಗದಿಂ ಜನಿಯಿಪರ್ಭಕಪಾದಪರಾಜಿ ಭೂಧರೋ । ತ್ಕರ ಮಿರ
ದೋಲಗಂಗುಡೆವಿರಾಜಿಪ ರಾಜಮಹೀಧರಾಳಿ ವಿ ॥ ಸ್ತರಧರಣೀರುಹಪ್ರತತಿ ಯೋಲಗಿಸು
ತ್ತಿರೆ ಬಾಳ್ವ ಧಾರುಣೀ । ವರತರುಜಾತಮದ್ರಿ ಯಡರ್ಪ್ಪದ್ರಿಗಳಂತೆಸೆವಂಘ್ರಿಪವ್ರಜಂ ॥

ಕಂ॥ ಅಡರ್ದೊಡೆ ಸಮಸ್ತಲೋಕಮ । ನೆಡೆವರಿಯದೆ ತೋರ್ಪ್ಪ ಗಿರಿತರುವ್ರಜ ಮ
ಣ್ಪಿಂ ॥ ದಡರ್ದ್ದೌಂಕಿಸೆ ನೆನೆದಲ್ಲಿಗೆ।ಕಡುವೇಗದೆ ಪೊತ್ತು ಪರಿವ ನಗಮಹಿಜಕುಳಂ॥೩೪॥

ಕಂ॥ ಮಳೆ ಗಾಳಿ ಬಿಸಿ ಲ್ಜೊನ್ನಂ । ಗಳ ನೊಲವಿಂ ಕಾಲಮರಿದು ಕರೆವಮಹೀಜಾ॥
ವಳಿ ಯಡರ್ದೊಡನ್ಯರೂಪಂ । ಕೆಳೆಗೊಳಿಪ ಮಹೀಧ್ರಾಳಿ ಭೂಜಸಮಾಜಂ ॥ ॥೩೬॥

ಕಂ ॥ ಮೃಗ ಮರ್ದ್ಧಂ ನಗಮರ್ದ್ಧಂ । ಖಗಮರ್ದ್ಧಂ ಭೂಜ ಮರ್ದ್ಧ ಮೆನಿಪಚ್ಚರಿಯಂ॥
ನೆಗಳ್ವಗವಿಟಪಿಕದಂಬಂ । ಬಗೆಗೊಂಡುದುಮಾದಿರಾಜಮಾಹೇಶ್ವರನ ॥ ... ॥೩೭॥

ಕಂ॥ ಅಂದಂಬಡೆದಿನಿವಣ್ಣಂ । ಕುಂದದೆ ಸಲೆಗಳಿಗೆಗಳಿಗೆಗಳ್ಗೊಲವಿಂದೊಂ ॥ ದೊಂ
ದನುದಿರ್ಚುವ ಭೂರುಹ । ವೃಂದಮು ಮೋರೋರ್ಮೆ ಕೂಗುವಚಲವಿತಾನಂ॥ ॥೩೮॥

---

ತ್ಕರಂ–ಮರಗಳ ಗುಂಪು, ಅದ್ರಿವ್ರಾತಮುಂ; ದೂರದ- ದೂರದಲ್ಲಿರುವ, ನೆಳಲ್, ಎಸೆವ, ಅತ್ಯುನ್ನತಕ್ಷ್ಮಾಜ ಧಾತ್ರೀಧರಜಾತಂ- ಬಹು ದೊಡ್ಡದಾಗಿರುವ ಮರ ಬೆಟ್ಟ ಇವುಗಳ ಗುಂಪು, ಬೆಟ್ಟು- ಒಂದುಬೆಟ್ಟವು, ಬೆಟ್ಟೊಳ್-ಇನ್ನೊಂದುಬೆಟ್ಟದೊಡನೆ, ನೆರೆಯೆ- ಸಂಗಮಂ ಮಾಡಲು, ಜವದೆ- ಬೇಗನೆ.ಪುಟ್ಟಿರ್ದ್ದ, ಬಾಲಾಚಲೌಘಂ-ಮರಿಬೆಟ್ಟಗಳಗುಂಪು. ... ... ... ... ॥೩೩॥

ತರುತರುಯೋಗದಿಂ-ಮರಮರಗಳ ಕೂಡುವಿಕೆಯಿಂದ, ಜನಿಯಿಪ ಅರ್ಭಕಪಾದಪರಾಜಿ- ಎಳೆಮರಗಳ ಸಾಲು, ಭೂಧರೋತ್ಕರಂ- ಬೆಟ್ಟಗಳ ಗುಂಪು, ಇರದೆ, ಓಲಗಂಗುಡೆ- ಸೇವೆಯನ್ನು ಕೊಡಲು, ವಿರಾಜಿಪ-ರಾಜಮಹೀಧರಾಳಿ- ಅರಸುಬೆಟ್ಟಗಳ ಸಾಲು, ವಿಸ್ತರಧರಣೀರುಹಪ್ರತತಿ- ವಿಶಾಲಗಳಾದ ಮರಗಳಸಮೂಹವು, ಓಲಗಿಸುತ್ತೆ, ಸೇವಿಸುತ್ತ, ಇರೆ, ಬಾಳ್ವ, ಧಾರುಣೀವರತರುಜಾತಂ- ಅರಸು ಬೆಟ್ಟಗಳ ಗುಂಪು, ಅದ್ರಿಯಡರ್ಪ್ಪ- ಬೆಟ್ಟವಂಹತ್ತುವ, ಅದ್ರಿಗಳಂತೆ, ಎಸೆವ, ಅಂಘ್ರಿಪವ್ರಜಂ- ಮರಗಳ ಗುಂಪು. ... ॥೩೪॥

ಅಡರ್ದೊಡೆ- ಹತ್ತಿದರೆ, ಸಮಸ್ತಲೋಕಮಂ, ಎಡೆವರಿಯದೆ- ಒಂದುಸ್ಥಲಕ್ಕೆ ಹೋಗದೆ, ತೋರ್ಪ, ಗಿರಿತರುವ್ರಜಂ, ಅಣ್ಪಿಂದೆ- ಶೌರ್ಯದಿಂದ, ಅಡರ್ದು- ಹತ್ತಿ, ಔಂಕಿಸೆ- ಅದಿಮಿದರೆ, ನೆನೆದಲ್ಲಿಗೆ- ಸ್ಮರಿಸಿದ ಸ್ಥಲಕ್ಕೆ, ಕಡುವೇಗದೆ, ಪೊತ್ತು, ಪರಿವ- ಓಡುವ, ನಗಮಹೀಜಕುಳಂ. ... ... ॥೩೫॥

ಮಳೆಗಾಳಿಬಿಸಿಲ್ಜೊನ್ನಂಗಳಂ, ಒಲವಿಂ, ಕಾಲಮರಿದು- ಸಮಯವಂ ತಿಳಿದು, ಕರೆವ- ಸುರಿಸುವ, ಮಹೀಜಾವಳಿ, ಅಡರ್ದೊಡೆ, ಅನ್ಯರೂಪಂ- ಮತ್ತೊಂದು ಆಕಾರವದನ್ನು, ಕೆಳೆಗೊಳಿಪ- ಹೊಂದಿಸುವ, ಮಹೀಧರಾಳಿ,ಭೂಜಸಮಾಜಂ. ... ... ... ... ... ॥೩೬॥

ಅರ್ಧಂ- ಅರ್ಧಭಾಗವು, ಮೃಗಂ, ಅರ್ಧಂ, ನಗಂ, ಅರ್ಧಂ, ಖಗಂ, ಅರ್ಧಂ, ಭೂಜಂ, ಎನಿಪ, ಅಚ್ಚರಿಯಂ, ನೆಗಳ್ವ,ಅಗವಿಟಪಿಕದಂಬಂ, ಮಾದಿರಾಜಮಾಹೇಶ್ವರನ, ಬಗೆಗೊಂಡುದು-ಮನಸ್ಸನ್ನಾಕರ್ಷಿಸಿತು.

ಕುಂದದೆ- ಕಮ್ಮಿಯಾಗದೆ, ಸಲೆ- ಚೆನ್ನಾಗಿ, ಗಳಿಗೆಗಳಿಗೆಗಳ್ಗೆ- ಪ್ರತಿ ಗಳಿಗೆಯಲ್ಲೂ, ಒಲವಿಂದೆ, ಅಂದುಬಡೆದ, ಇನಿವಣ್ಣಂ- ಮಧುರವಾದಫಲವನ್ನು, ಒಂದೊಂದಂ, ಉದಿರ್ಚುವ-ಉದುರಿಸುವ, ಭೂರುಹವೃಂದಮುಂ- ಮರಗಳಗುಂಪೂ, ಓರೋರ್ಮೆ, ಕೂಗುವ, ಅಚಲವಿತಾನಂ-ಬೆಟ್ಟಗಳಗುಂಪು. ... ॥೩೮॥

ಕಂ ॥ ಮೊದಲಂ ತರಿದೊಡೆ ಮೊದಲಂ । ದದೆ ಪತ್ತುವ ಭೂಧರಾಳಿಯುಂ ತರುಕುಳ
ಮುಂ ॥ ಮೊದಲೆಡೆಯಿಂ ತೆಗೆದಿಡೆ ತ । ಳ್ವದೆ ಮೊದಲೆಡೆಗೆಯ್ದೆ ನಿಲ್ವ ಕಲ್ಗಳತತಿಯುಂ ॥
ಕಂ ॥ ಬಿಳಿಯಾನೆ ಬಿಳಿಯ ಪೆರ್ಬುಲಿ । ಬಿಳಿಯಪಿಕಂ ಬಿಳಿಯ ತುಂಬಿ ಬಿಳಿಯಕುರು
ರಂಗಂ ॥ ಬಿಳಿಯಕಪಿ ಬಿಳಿಯಭಲ್ಲಂ । ಬಿಳಿಯ ವರಾಹಂಗಳಲ್ಲಿ ಮೆರೆಗುಮಳುಂಬಂ ॥೪೦॥
ಕಂ ॥ ಕರಿಯ ಮೊಲಂ ಕರಿಯ ಶುಕಂ । ಕರಿಯ ಮರಾಳಾಳಿ ಕರಿಯ ಕಂಠೀರವಮುಂ ॥
ಕರಿಯಲರ ಮಲ್ಲಿಕಾಲತೆ । ಕರಿಯ ಚಕೋರಾಳಿ ಚಿತ್ರಮೆನೆ ಕಂಗೊಳಿಕುಂ ॥ ॥೪೧॥
ಚಂ ॥ ಹರಿ ಕರಿಯಂತೆ ತೋರ್ಪ ಕರಿ ದುರ್ಗೆಯ ಕೇಸರಿಯಂತಿರಿರ್ಪ ಕೇ । ಸರಿ ಯ
ಮರಾಜನೆಳ್ತರದ ಕೋಣನವೋಲ್ ಬಗೆಗೊಳ್ವ ಕೋಣ ಮೀ ॥ ಶ್ವರಕರದೇಣದಂತಿರೆಸೆವೇ
ಣನುದಗ್ರಮುರಾರಿತಾರ್ಕ್ಷ್ಯಮಂ । ಪರಿಕಿಸೆ ಪೋಲ್ವ ತಾರ್ಕ್ಷ್ಯ ಮೆಸೆಗುಂ ಘನಘೋರವ
ನಾಂತರಾಳದೊಳ್ ॥ ... ... ... ... ॥೪೨॥
ವ ॥ ಮತ್ತಂ ಆಗಹನಾಂತರಾಳದೊಳ್ ಅತಿವಿಚಿತ್ರಮೆನಿಸಿ ರವಿಯೊಡನುದಯಂಬಡೆ
ದು ಮಧ್ಯಂದಿನದೊಳ್ ಇನನಂ ಮುಟ್ಟಿ ದಿನಮಣಿಯೊಡನಿಳಿದಹಸ್ಪತಿಯೊಡನಸ್ತಮಿಪ
ಭಾಸ್ಕರತಾಳತರುಗಳುಂ ತತ್ಪ್ರಕಾರಮನಾಳ್ದಹಸ್ಕರಗಿರಿಗಳುಂ ಚತುರ್ದಿಶಾವಲಂಬಿ

---

ಮೊದಲಂ- ಬುಡವನ್ನು, ತರಿದೊಡೆ- ಕತ್ತರಿಸಿದರೆ, ಮೊದಲ- ಪೂರ್ವದ, ಅಂದದೆ-ರೀತಿಯಿಂದ, ಪತ್ತುವ- ಹತ್ತಿಕೊಳ್ಳುವ, ಭೂಧರಾಳಿಯುಂ-ಬೆಟ್ಟಗಳ ಸಾಲೂ, ತರುಕುಳಮುಂ ಮರಗಳ ಗುಂಪೂ, ಮೊದಲ,ಎಡೆಯಿಂ- ಸ್ಥಲದಿಂದ, ತೆಗೆದು, ಇಡೆ,ತಳ್ವದೆ-ತಪ್ಪದೆ, ಮೊದಲ,ಎಡೆಗೆ, ಎಯ್ದಿ-ಬಂದು,ನಿಲ್ವ, ಕಲ್ಗಳ,ತತಿಯುಂ.

ಅಲ್ಲಿ, ಬಿಳಿಯ- ಬೆಳ್ಳಗಿರುವ, ಆನೆ, ಬಿಳಿಯ, ಪೆರ್ಬುಲಿ- ದೊಡ್ಡಹುಲಿ, ಬಿಳಿಯ, ಪಿಕಂ, ಕೋಗಿಲೆ, ಬಿಳಿಯ; ತುಂಬಿ- ಭ್ರಮರ, ಬಿಳಿಯ, ಕುರುಂಗಂ- ಜಿಂಕೆ, ಬಿಳಿಯ, ಕಪಿ, ಬಿಳಿಯ, ಭಲ್ಲಂ- ಕರಡಿ, ಬಿಳಿಯ, ವರಾಹಂಗಳ್- ಹಂದಿಗಳು, ಅಳುಂಬಂ- ಹೆಚ್ಚಾಗಿ, ಮೆರೆಗುಂ, ... ... ... ॥೪೦॥

ಕರಿಯ- ಕಪ್ಪಾದ, ಮೊಲಂ, ಕರಿಯ, ಶುಕಂ- ಗಿಣಿ, ಕರಿಯ, ಮರಾಳಾಳಿ- ಹಂಸಪಕ್ಷಿಗಳ ಸಾಲು, ಕರಿಯ, ಕಂಠೀರವಮುಂ- ಸಿಂಹವೂ, ಕರಿಯ, ಅಲರ- ಹೂವಿನ, ಮಲ್ಲಿಕಾಲತೆ- ಮಲ್ಲಿಗೆಯ ಬಳ್ಳಿ, ಕರಿಯ,ಚಕೋರಾಳಿ- ಚಕೋರಪಕ್ಷಿಗಳ ಸಾಲು, ಚಿತ್ರಂ- ಆಶ್ಚರ್ಯವು, ಎನೆ, ಕಂಗೊಳಿಕುಂ. ... ॥೪೧॥

ಹರಿಕರಿಯಂತೆ- ಇಂದ್ರನ ಆನೆಯಹಾಗೆ, ತೋರ್ಪ. ಕರಿ- ಆನೆ, ದುರ್ಗೆಯ- ಪಾರ್ವತಿಯ, ಕೇಸರಿಯಂತಿರೆ- ಸಿಂಹದಹಾಗೆ, ಇರ್ಪ, ಕೇಸರಿ; ಯಮರಾಜನ, ಎಳ್ತರದ- ಎತ್ತರವಾದ, ಕೋಣನಂತೆವೋಲ್, ಬಗೆಗೊಳ್ವ- ಮನೋಹರವಾಗಿರುವ, ಕೋಣಂ, ಈಶ್ವರಕರದ-ಶಿವನ ಕಯ್ಯಲ್ಲಿರುವ, ಏಣದಂತಿರೆ- ಜಿಂಕೆಯಹಾಗೆ, ಎಸೆವ. ಏಣಂ, ಪರಿಕಿಸೆ- ಪರೀಕ್ಷೆಯಂ ಮಾಡಿದರೆ, ಉದಗ್ರಮುರಾರಿತಾರ್ಕ್ಷ್ಯಮಂ-ಉತ್ಕೃಷ್ಟವಾದ ವಿಷ್ಣುವಿನ ಗರುಡನನ್ನು, ಪೋಲ್ವ- ಸರಿಹೋಲುವ, ತಾರ್ಕ್ಷ್ಯಂ- ಗರುಡನು, ಘನಘೋರವನಾಂತರದೊಳ್- ದಟ್ಟವಾಗಿ ಭಯಂಕರವಾಗಿರುವ ಕಾಡಿನ ಮಧ್ಯದಲ್ಲಿ, ಎಸಗುಂ. ... ... ॥೪೨॥

ಮತ್ತಂ, ಆಗಹನಾಂತರಾಳದೊಳ್- ಆ ಕಾಡಿನ ಮಧ್ಯದಲ್ಲಿ, ಅತಿವಿಚಿತ್ರಂ, ಎನಿಸಿ, ರವಿಯೊಡನೆ,ಉದಯಂಬಡೆದು- ಹುಟ್ಟಿ, ಮಧ್ಯಂದಿನದೊಳ್- ಮಧ್ಯಾಹ್ನದಲ್ಲಿ, ಇನನಂ-ಸೂರ್ಯನನ್ನು, ಮುಟ್ಟಿ, ದಿನಮಣಿಯೊಡನೆ- ಸೂರ್ಯನಕೂಡ, ಇಳಿದು, ಅಹಸ್ಪತಿಯೊಡನೆ- ಸೂರ್ಯನಸಂಗಡ, ಅಸ್ತಮಿಪ- ಮುಳುಗುವ, ಭಾಸ್ಕರತಾಳತರುಗಳುಂ- ಸೂರ್ಯನಂತಿರುವ ತಾಳೆಯ ಮರಗಳೂ, ತತ್ಪ್ರಕಾರಮಂ- ಆ ಮರಗಳ ರೀತಿಯನ್ನು, ಆಳ್ದ- ಹೊಂದಿದ, ಅಹಸ್ಕರಗಿರಿಗಳುಂ- ಸೂರ್ಯನಂತಿರುವ ಬೆಟ್ಟಗಳೂ, ಚತುರ್ದಿಶಾವಲಂಬಿಚತುಶ್ಶಿ

ಚತಶ್ಶಿಖರಾಗ್ರಮಂ ಏರೆ ಹರಪುರಚತುರ್ದ್ವಾರಮಂ ಕಾಣಿಪ ವನಸ್ಪತಿಗಳುಂ ತದ್ವಿಧ
ಮಾದ ನಗತತಿಗಳುಂ ತುದಿಗೊಡನಾರೋಹಿಸಿದ ಮನುಜರಂ ಪಾತಾಳಗಂಗಾಜಲದೊ
ಳೋಲಾಡಿಸುವಗಂಗಾಜನಿತಕುಜವ್ಯೂಹಮುಮಾಪರಿಗೆಯ್ವ ಗಂಗಾಜನಿತಶೈಲಸಮೂಹ
ಮುಂ ಮೇಲನಾರೋಹಿಸಿದರ್ಥಿಜನಮನಷ್ಟಾಷಷ್ಟಿತೀರ್ಥಮಂ ಕಾಣಿಸಿ ತುಷ್ಟಿವ
ಡಿಪಷ್ಟಾಷಷ್ಟಿಭೂರುಹಪ್ರಕರಮುಮಂತಪ್ಪ ಭೂಧರನಿಕರಮುಂ ಪರಸ್ಪರನಿಘರ್ಷಣ
ದಿನೊಗೆದಡವಿಯಂ ಸುಡಲೊಡರ್ಚುವನಲನುರಿಯಂ ಮಂಜುಗರೆದು ನಂದೆಪೊಯ್ವ ಪಾದ
ಪಪ್ರತಾನಮುಮಂತೆಗೆಯ್ವ ಪರ್ವತವಿತಾನಮುಂ ಹಿಮಪಾತದಿಂ ಸುಗಿದಡರ್ದರ್ಗಿರುಳೊ
ಳರ್ಕಾತಪಮಂ ಬಿಸಿಲ ಬಿಸುಪಿಂ ಬಳಲ್ದಾರೋಹಿಸಿದರ್ಗೆ ಪಗಲ್ಚಂದ್ರಾತಪಮಂ ಕರೆವ ವೃ
ಕ್ಷಪ್ರಚಯಮುಮಂತೆರದ ಕುತ್ಕೀಲನಿಚಯಮುಮಂ ನಿರಂತರಸುಧಾರಸಪೂರ್ಣೋದೀರ್ಣ
ಮಹೀರುಹತಟಾಕತಟನೀದೀರ್ಘಿಕಾಳಿಗಳುಂ ನಿರವಧಿಕದಧಿಪೂರಿತಾನೋಕಹತರಂಗಿಣೀ
ವಾಪೀಕೂಪಾಳಿಗಳುಂ ಮಧುರತರಘೃತರಸಸಮೃದ್ಧಸಾಲಸರೋವರಸರಿತ್ಕದಂಬಮುಮಂ ನಿ

---

ಖರಾಗ್ರಮಂ- ನಾಲ್ಕುದಿಕ್ಕುಗಳನ್ನಾಶ್ರಯಿಸಿರುವ ನಾಲ್ಕು ಕೋಡುಗಲ್ಲುಗಳ ತುದಿಯನ್ನು, ಏರೆ-ಹತ್ತಲು,
ಹರಪುರಚತುರ್ದ್ವಾರಮಂ- ಕೈಲಾಸಪಟ್ಟಣದ ನಾಲ್ಕು ಬಾಗಿಲನ್ನು, ಕಾಣಿಪ, ವನಸ್ಪತಿಗಳುಂ- ಮರಗ
ಳೂ, ತದ್ವಿಧಮಾದ- ಅದೇಪ್ರಕಾರಗಳಾದ, ನಗತತಿಗಳುಂ- ಮರಗಳ ಸಮೂಹಗಳೂ, ತುದಿಗೊಡಂ- ಕೊ
ನೆಯ ಕೊಂಬೆಯನ್ನು, ಆರೋಹಿಸಿದ, ಮನುಜರಂ, ಪಾತಾಳಗಂಗಾಜಲದೊಳ್, ಓಲಾಡಿಸುವ- ತೂಗಾ
ಡಿಸುವ, ಗಂಗಾಜನಿತಕುಜವ್ಯೂಹಮುಂ- ಗಂಗೆಯಲ್ಲಿ ಹುಟ್ಟಿದಮರಗಳ ಗುಂಪೂ, ಆಪರಿಗೆಯ್ವ- ಅದೇ
ರೀತಿಯು ಮಾಡುವ, ಗಂಗಾಜನಿತಶೈಲಸಮೂಹಮುಂ- ಗಂಗೆಯಲ್ಲಿ ಹುಟ್ಟಿದ ಬೆಟ್ಟಗಳ ಗುಂಪೂ, ಮೇ
ಲಂ- ಅಗ್ರಪ್ರದೇಶವನ್ನು, ಆರೋಹಿಸಿದ ಹತ್ತಿದ, ಅರ್ಥಿಜನಮಂ- ಯಾಚಕಜನವನ್ನು, ಅಷ್ಟಾಷಷ್ಟಿ
ತೀರ್ಥಮಂ- ಅರವತ್ತೆಂಟುತೀರ್ಥಗಳನ್ನು, ಕಾಣಿಸಿ, ತುಷ್ಟಿವಡಿಪ- ಸಂತೋಷಪಡಿಸುವ, ಅಷ್ಟಾಷ
ಷ್ಟಿಭೂರುಹಪ್ರಕರಮುಂ- ಅರವತ್ತೆಂಟುತರದ ಮರಗಳ ಸಮೂಹವೂ, ಅಂತಪ್ಪ- ಆವಿಧವಾದ, ಭೂಧರನಿ
ಕರಮುಂ- ಬೆಟ್ಟಗಳ ಗುಂಪೂ, ಪರಸ್ಪರನಿಘರ್ಷಣದಿಂ- ಒಂದಕ್ಕೊಂದು ತಿಕ್ಕುವದರಿಂದ, ಒಗೆದು-ಹುಟ್ಟಿ,
ಅಡವಿಯಂ, ಸುಡಲ್, ಒಡರ್ಚುವ- ಪ್ರಯತ್ನಪಡುವ, ಅನಲನ- ಅಗ್ನಿಯ, ಉರಿಯಂ- ಜ್ವಾಲೆಯನ್ನು,
ಮಂಜುಗರೆದು- ಹಿಮವಂಸುರಿಸಿ, ನಂದೆಪೊಯ್ವ- ಆರಿಹೋಗುವಂತೆ ಹೊಯ್ಯುವ, ಪಾದಪಪ್ರತಾನಮುಂ-
ಮರಗಳ ಗುಂಪೂ, ಅಂತೆಗೆಯ್ವ- ಹಾಗೆಯೇ ಮಾಡುವ, ಪರ್ವತವಿತಾನಮುಂ, ಹಿಮಪಾತದಿಂ- ಮಂಜಿನಬಿ
ಟಿನ ದೆಸೆಯಿಂದ, ಸುಗಿದು- ಭಯಪಟ್ಟು, ಅಡರ್ದರ್ಗೆ- ಹತ್ತಿದವರಿಗೆ, ಇರುಳೊಳ್- ರಾತ್ರಿಯಲ್ಲಿ, ಅರ್ಕಾ
ತಪಮಂ- ಸೂರ್ಯನ ಕಿರಣವನ್ನು; ಬಿಸಿಲ, ಬಿಸುಪಿಂ- ಔಷ್ಣ್ಯದಿಂದ, ಬಳಲ್ದು- ಆಯಾಸಪಟ್ಟು, ಆರೋ
ಹಿಸಿದರ್ಗೆ, ಪಗಲ್, ಚಂದ್ರಾತಪಮಂ- ಬೆಳ್ದಿಂಗಳನ್ನು, ಕರೆವ- ಸುರಿಸುವ, ವೃಕ್ಷಪ್ರಚಯಮುಂ, ಆತೆರದ,
ಕುತ್ಕೀಲನಿಚಯಮುಂ- ಬೆಟ್ಟಗಳ ಗುಂಪೂ, ನಿರಂ......ಕಾಳಿಗಳುಂ— ನಿರಂತರ- ಯಾವಾಗಲೂ, ಸುಧಾ
ರಸ- ಹಾಲಿನಿಂದ, ಪೂರ್ಣ- ತುಂಬಿದ, ಉದೀರ್ಣ- ಅಧಿಕವಾದ, ಮಹೀರುಹ-ಮರ, ತಟಾಕ- ಕೆರೆ, ತಟನೀ-
ಹೊಳೆ, ದೀರ್ಘಿಕಾ- ಕೊಳ, ಇವುಗಳ, ಆಳಿಗಳುಂ- ಪಙ್ತಿಗಳೂ, ನಿರ......ಪಾಳಿಗಳುಂ— ನಿರವಧಿಕ- ಅ
ಪಾರವಾದ, ದಧಿ- ಮೊಸರಿನಿಂದ, ಪೂರಿತ- ತುಂಬಲ್ಪಟ್ಟ, ಅನೋಕಹ- ಮರ, ತರಂಗಿಣೀ- ಹೊಳೆ, ವಾ
ಪೀ- ತೋಟದ ಬಾವಿ, ಕೂಪ- ಮನೆಯ ಬಾವಿ ಇವುಗಳ, ಆಳಿಗಳುಂ, ಮಧುರ..... ಕದಂಬಮುಂ— ಮ
ಧುರತರ- ಅತಿರುಚಿಯಾದ, ಘೃತರಸ- ತುಪ್ಪದಿಂದ, ಸಮೃದ್ಧ- ತುಂಬಲ್ಪಟ್ಟ, ಸಾಲ- ಮರ, ಸರೋವರ-

ಜಾಭ್ಯಂತರಮಿಸುಪಕನಕಮಯಶಿಖರಧರಣೀರುಹಲತಾಗುಲ್ಮತಟಾಕಸರಃಕಮಲವಾಲುಕಾ
ಶೈವಲಮಧುಪಮೃಗಬಿಲೇಶಯವಪ್ರಹರ್ಮ್ಯಸುರಾಲಯನಿಕುರುಂಬಮುಂ ನವರತ್ನಮಯಧ
ರಾಧರಧರಾರುಹಶಕುಂತಹರಿಣಫಣಿಸಾಲಸೌಧಪುರವ್ರಾತಮುಮಶ್ವತ್ಥನಾಳಿಕೇರಕ್ರಮುಕ
ಜಂಬುಜಂಬೀರನಾಗಕೇಸರಾಶೋಕಚೂತಪನಸಘನಸಾರಚಂದನಸರಳಾನೇಕಶಾಖಾವಲಂ
ಬಿತಭೂಮಿಜಾತಸಂಜಾತಮುಂ ಮೊಂದೊಂದುಶಾಖಾಗ್ರದನೇಕಗುಚ್ಛಂಗಳೊಳ್ ಪ್ರತ್ಯೇ
ಕಮರಲ್ದ ಬಕವಕುಳತಿಲಕಚಂಪಕಬಂಧೂಕಕರ್ಣಿಕಾರಕರವೀರಕೇಸರಮಾಧವೀಮಾಲತೀ
ಮಲ್ಲಿಕಾಜಾತಿಯೂಥಿಕಾಪುನ್ನಾಗಕುಂದಾರವಿಂದಮಂದಾರಕಲ್ಹಾರಕುಸುಮಸಮುದಯಮು
ನಾಳ್ದಕಾಶ್ಯಪೀರುಹಸಂಘಾತಮುಂ ಕೊಂಬುಕೊಂಬುಗಳೊಳೊಂದೊಂದರೊಳ್ಸಂದಣಿ
ಸಿ ನಿಲುಂಬಿದ ರಸಾಲಪನಸಕದಳೀಕಪಿತ್ಥನಾರಂಗಮಾತುಳಂಗಗೋಸ್ತನೀಜಂಬುಜಂಬೀರ
ಬದರದಾಡಿಮತಿಂತ್ರಿಣೀಪರಿಪಕ್ವಫಲಂಗಳಂತಳೆದು ನಿಂದಕುಜಪ್ರಜಾತಮುಂ ಮೊಂದೊಂದ

---

ಕೊಳ, ಸರಿತ್- ಹೊಳೆ, ಇವುಗಳ, ಕದಂಬಮುಂ- ಗುಂಪೂ, ನಿಜಾಭ್ಯಂತರಂ- ತನ್ನ ಮಧ್ಯದಲ್ಲಿ, ಮಿಸುಪ, ಕನಕ......ನಿಕುರುಂಬಮುಂ— ಕನಕಮಯ- ಸುವರ್ಣವಿಕಾರವಾದ, ಶಿಖರ- ಕೋಡುಗಲ್ಲುಗಳು, ಧರಣೀರುಹ- ಮರಗಳು, ಲತಾ- ಬಳ್ಳಿಗಳು, ಗುಲ್ಮ- ಪೊದರುಗಳು, ತಟಾಕ- ಕೆರೆಗಳು, ಸರಃ- ಕೊಳಗಳು, ಕಮಲ- ತಾವರೆ, ವಾಲುಕಾ-ಮಳಲು, ಶೈವಲ-ಪಾವಸೆ, ಮಧುಪ- ಭ್ರಮರ, ಮೃಗ, ಬಿಲೇಶಯ- ಸರ್ಪಗಳು, ವಪ್ರ- ದಿಣ್ಣೆಗಳು, ಹರ್ಮ್ಯ-ಉಪ್ಪರಿಗೆಗಳು, ಸುರಾಲಯ-ದೇವತೆಗಳ ಮನೆಗಳು, ಇವುಗಳ, ನಿಕುರುಂಬಮುಂ, ನವ......ವ್ರಾತಮುಂ— ನವರತ್ನಮಯ- ಒಂಭತ್ತು ವಿಧವಾದ ರತ್ನಗಳ ವಿಕಾರವಾದ, ಧರಾಧರ- ಬೆಟ್ಟಗಳು, ಧರಾರುಹ- ಮರಗಳು, ಶಕುಂತ- ಹಕ್ಕಿಗಳು, ಹರಿಣ- ಜಿಂಕೆಗಳು, ಫಣಿ- ಹಾವುಗಳು, ಸಾಲ- ಕೋಟೆಗಳು, ಸೌಧ- ಉಪ್ಪರಿಗೆಗಳು, ಪುರ- ಪಟ್ಟಣಗಳು, ಇವುಗಳ, ವ್ರಾತಮುಂ, ಅಶ್ವತ್ಥ......ಸಂಜಾತಮುಂ— ಅಶ್ವತ್ಥ- ಅರಳಿ, ನಾಳಿಕೇರ- ತೆಂಗು, ಕ್ರಮುಕ- ಅಡಕೆ, ಜಂಬು- ನೇರಿಲು, ಜಂಬೀರ- ನಿಂಬೆ, ನಾಗಕೇಸರ- ನಾಗಸಂಪಗೆ, ಅಶೋಕ- ಅಸುಗೆ, ಚೂತ- ಮಾವು, ಪನಸ- ಹಲಸು, ಘನಸಾರ- ಪಚ್ಚಕರ್ಪೂರದ ಗಿಡ, ಚಂದನ- ಶ್ರೀಗಂಧ, ಸರಳ- ದೇವದಾರು, ಇವುಗಳೆಂಬ, ಅನೇಕಶಾಖಾವಲಂಬಿತ- ಅನೇಕ ಕೊಂಬೆಗಳಿಂದಾಶ್ರಯಿಸಲ್ಪಟ್ಟ, ಭೂಮಿಜಾತ- ಮರಗಳ, ಸಂಜಾತಮುಂ, ಒಂದೊಂದು ಶಾಖಾಗ್ರದ- ಒಂದೊಂದು ಕೊಂಬೆಯ ತುದಿಯಲ್ಲಿರುವ, ಅನೇಕಗುಚ್ಛಂಗಳೊಳ್- ಅನೇಕ ಗೊಂಚಲುಗಳಲ್ಲಿ, ಪ್ರತ್ಯೇಕಂ- ಬೇರೆಬೇರೆಯಾಗಿ, ಅಡರ್ದ, ಬಕ......ಸಂಘಾತಮುಂ —ಬಕ- ಕೊಕ್ಕರೆಹೂವು, ವಕುಳ- ಪಗಡೆಹೂವು, ತಿಲಕ- ತಿಲಕದ ಹೂವು, ಚಂಪಕ, ಬಂಧೂಕ- ಬಂದಿಗೇ ಹೂವು, ಕರ್ಣಿಕಾರ- ಬೆಟ್ಟತಾವರೆ, ಕರವೀರ- ಕಣಿಗಲೆ, ಕೇಸರ- ಸುರಗಿ, ಮಾಧವೀ- ವಸಂತದೂತಿ, ಮಾಲತೀ- ಕೆಂಪುಜಾಜಿ, ಮಲ್ಲಿಕಾ, ಜಾತಿ- ಬಿಳಿಯ ಜಾಜಿ, ಯೂಥಿಕಾ- ಕಾಡುಮಲ್ಲಿಗೆ, ಪುನ್ನಾಗ-ಸುರಹೊನ್ನೆ, ಕುಂದ- ಮೊಲ್ಲೆ, ಅರವಿಂದ- ತಾವರೆ, ಮಂದಾರ- ಬಿಳಿಯಯಕ್ಕ, (ಅಥವಾ ಕಲ್ಪವೃಕ್ಷದಹೂವು) ಕಲ್ಹಾರ- ಸುಗಂಧಿಕಮಲ, ಇವುಗಳೆಂಬ, ಕುಸುಮಸಮುದಯಮಂ, ಆಳ್ದ, ಕಾಶ್ಯಪೀರುಹಸಂಘಾತಮುಂ- ಮರಗಳಗುಂಪೂ, ಕೊಂಬುಕೊಂಬುಗಳೊಳ್, ಒಂದೊಂದರೊಳ್, ಸಂದಣಿಸಿ- ಗುಂಪಾಗಿ, ನಿಲುಂಬಿದ- ಆಶ್ರಯಿಸಿಕೊಂಡಿರುವ, ರಸಾಲ.. ...ಫಲಗಳಂ— ರಸಾಲ- ಮಾವು, ಪನಸ- ಹಲಸು, ಕದಳೀ- ಬಾಳೆ, ಕಪಿತ್ಥ- ಬೇಲ, ನಾರಂಗ- ಕಿತ್ತಳೆ, ಮಾತುಳಂಗ- ಮಾದಳ, ಗೋಸ್ತನೀ- ದ್ರಾಕ್ಷಿ, ಜಂಬು- ನೇರಿಲು, ಜಂಬೀರ- ನಿಂಬೆ, ಬದರ- ಯಲಚೆ, ದಾಡಿಮ- ದಾಳಿಂಬೆ, ತಿಂತ್ರಿಣೀ- ಹುಣಿಸೆ, ಇವುಗಳ, ಪರಿಪಕ್ವಫಲಂಗಳಂ, ತಳೆದು, ನಿಂದ, ಕುಜಪ್ರಜಾತಮುಂ- ಮರ

ರೊಳ್ತಳ್ತ ಕೊಂಬುಗಳೊಳ್ಪಂಚವರ್ಣಮನಾಳ್ದ ಮಹೀಜರಾಜಿಯುಮಂತೆಸೆವ ಗಿರಿಸಂದೋಹಮುಂ ದ್ರಾಕ್ಷಾಪ್ರವಾಳಫಣಿಲತಾಕೃತಿಯನೇಕಮೂಲಂ ಬಿಡಿದು ತಳೆದ ವಲ್ಲೀನಿಕಾಯಮುಂ ಸುಳಿಸುಳಿದು ಶಿವಾಲಯದರಜಮನುಡುಗುವ ಮಂದಪವನಮುಂ ಲಿಂಗಾಂಗಣಕ್ಕೆ ಚೆಳೆಯಂಗುಡುವ ನಿರಿಮುಗಿಲ್ಗಳುಂ ಭವಭವನದೊಳ್ಸಾಂಗಮೆನೆ ರಂಗವಲ್ಲಿಯಂ ನಿಮಿರ್ಚುವ ಸಸ್ಯಂಗಳುಂ ಗಂಗಾಧರಂಗೆ ಮಜ್ಜನಂಮಾಳ್ಪ ತೀರ್ಥಂಗಳುಂ ಚಂದ್ರಮೌಳಿಗೆ ಗಂಧಾನುಲೇಪಂಗೆಯ್ವ ಚಂದನಕ್ಷಮಾರುಹಂಗಳುಂ ಪರಮಂಗೆ ಪರಿಮಳದಲರಂ ಸಮರ್ಪಿಪ ಸಲ್ಲಲಿತವಲ್ಲಿಗಳುಂ ಧೂರ್ಜಟಿಗೆ ಧೂಪಾರ್ಪಣಂಗೆಯ್ವ ಗುಗ್ಗುಲತರುಗಳುಂ ದಿವ್ಯಲಿಂಗಮೂರ್ತಿಗೆ ದೀಪಮಂ ನೀರಾಜಿಪ ಸಾರತರಜ್ಯೋತಿರ್ಲತೆಗಳುಂ ನಗಜಾಧಿಪಂಗೆ ನಾನಾಮಧುರತರಫಲಮಂ ನೀವ ನಾಕದ್ರುಮಂಗಳುಂ ತತ್ವಮಯಂಗೆ ತಾಂಬೂಲಂಗುಡುವ ಪೂಗಾದಿವಿಟಪಿಗಳುಂ ನಿಜನಾಮಂಗಳಿಂ ಲಿಂಗಪ್ರತಿಷ್ಠೆಗೆಯ್ದು ಭಕ್ತಿ ಮಿಗೆ ಗಿರೀಶಾಯ ನಮೋ ಎಂದು ಗಿರಿಲಿಂಗಮಂ ಪೂಜಿಪ ಗಿರಿಗಳತೆರಳ್ಕೆಯುಂ ವೃಕ್ಷೇಶಾಯನಮೋ ಎಂದು ವೃಕ್ಷಲಿಂಗಮನೊಲಗಿಪ ವೃಕ್ಷಪಙ್ಕ್ತಿಯುಂ ಪಕ್ಷಿಪತಯೇ ನಮೋ ಎಂದು ಪಕ್ಷಿಲಿಂಗಮನಾರಾಧಿಪ ಪಕ್ಷಿಗಳ ನೆರವಿಯುಂ ಮೃಗಕುಲೇಶಾಯ ನಮೋ ಎಂದು ಮೃಗಲಿಂಗಮಂ ಸೇವಿಪ ಮೃಗಂಗಳ ಜಂಗುಳಿಯುಂ ನಾಗನಾಥಾಯನಮೋ ಎಂದು ನಾಗಲಿಂಗಮಂ ಭಜಿಪ

---

ಗಳ ಗುಂಪೂ, ಬಂದೊಂದರೊಳ್, ತಳ್ತ, ಕೊಂಬುಗಳೊಳ್, ಪಂಚವರ್ಣಮಂ- ಐದುಬಣ್ಣವನ್ನು, ಆಳ್ದ, ಮಹೀಜರಾಜಿಯುಂ- ಮರಗಳ ಸಾಲೂ, ಅಂತು, ಎಸೆವ, ಗಿರಿಸಂದೋಹಮುಂ, ದ್ರಾಕ್ಷಾಪ್ರವಾಳಫಣಿಲತಾಕೃತಿಯು- ದ್ರಾಕ್ಷಿಹಂಬು ಹವಳದ ಹಂಬು ಎಲೆ ಹಂಬು ಇವುಗಳ, ಆಕಾರದ, ಅನೇಕಮೂಲಂಬಿಡಿದು- ಅನೇಕ ಬುಡಗಳನ್ನನುಸರಿಸಿ, ತಳೆದ, ವಲ್ಲೀನಿಕಾಯಮುಂ-ಬಳ್ಳಿಗಳ ಗುಂಪೂ, ಸುಳಿಸುಳಿದು- ಸಂಚರಿಸಿ, ಶಿವಾಲಯದ, ರಜಮಂ- ಧೂಳಿಯನ್ನು, ಉಡುಗುವ- ಗುಡಿಸುವ, ಮಂದಪವನಮುಂ- ಮೆಲ್ಗಾಳಿಯೂ, ಲಿಂಗಾಂಗಣಕ್ಕೆ- ಶಿವದೇವಸ್ಥಾನದಲ್ಲಿ, ಚೆಳೆಯಂಗುಡುವ- ನೀರನ್ನು ಚಿಮುಕಿಸುವ, ನಿರಿಮುಗಿಲ್ಗಳುಂ- ಗುಂಪಾದ ಮೋಡಗಳೂ, ಭವಭವನದೊಳ್- ಶಿವದೇವಸ್ಥಾನದಲ್ಲಿ, ಸಾಂಗಂ, ಎನೆ, ರಂಗವಲ್ಲಿಯಂ, ನಿಮಿರ್ಚುವ- ವಿರಚಿಸುವ, ಸಸ್ಯಂಗಳುಂ- ಪೈರುಗಳೂ, ಗಂಗಾಧರಂಗೆ, ಮಜ್ಜನಂಮಾಳ್ಪ- ಅಭಿಷೇಕವಂ ಮಾಡುವ, ತೀರ್ಥಂಗಳುಂ, ಚಂದ್ರಮೌಳಿಗೆ, ಗಂಧಾನುಲೇಪಂಗೆಯ್ವ, ಚಂದನಕ್ಷಮಾರುಹಂಗಳುಂ- ಶ್ರೀಗಂಧದ ಮರಗಳೂ, ಪರಮಂಗೆ- ಉತ್ಕೃಷ್ಟನಾದ ಶಿವನಿಗೆ, ಪರಿಮಳದ, ಅಲರಂ, ಸಮರ್ಪಿಪ, ಸಲ್ಲಲಿತವಲ್ಲಿಗಳುಂ- ಮನೋಹರಗಳಾದ ಬಳ್ಳಿಗಳೂ, ಧೂರ್ಜಟಿಗೆ, ಧೂಪಾರ್ಪಣಂಗೆಯ್ವ, ಗುಗ್ಗುಲತರುಗಳುಂ- ಧೂಪದ ಮರಗಳೂ ದಿವ್ಯಲಿಂಗಮೂರ್ತಿಗೆ, ದೀಪಮಂ, ನೀರಾಜಿಪ- ಬೆಳಗುವ, ಸಾರತರಜ್ಯೋತಿರ್ಲತೆಗಳುಂ, ನಗಜಾಧಿಪಂಗೆ, ನಾನಾಮಧುರತರಫಲಮಂ, ಈವ, ನಾಕದ್ರುಮಂಗಳುಂ- ಕಲ್ಪವೃಕ್ಷಗಳೂ, ತತ್ವಮಯಂಗೆ, ತಾಂಬೂಲಂಗುಡುವ, ಪೂಗಾದಿವಿಟಪಿಗಳುಂ- ಅಡಕೆ ಮುಂತಾದ ಮರಗಳೂ, ನಿಜನಾಮಂಗಳಿಂ- ತಮ್ಮ ಹೆಸರಿನಿಂದ, ಲಿಂಗಪ್ರತಿಷ್ಠೆಗೆಯ್ದು- ಲಿಂಗಗಳಂ ಪ್ರತಿಷ್ಠೆಮಾಡಿ, ಭಕ್ತಿ, ಮಿಗೆ, ಗಿರೀಶಾಯ- ಗಿರೀಶ್ವರನಿಗೋಸ್ಕರ, ನಮಃ- ನಮಸ್ಕಾರವು, ಎಂದು, ಗಿರಿಲಿಂಗಮಂ-ಪರ್ವತಲಿಂಗವನ್ನು, ಪೂಜಿಪ, ಗಿರಿಗಳ, ತೆರಳ್ಕೆಯುಂ- ಗುಂಪೂ, ವೃಕ್ಷೇಶಾಯ, ನಮಃ, ಎಂದು, ವೃಕ್ಷಲಿಂಗಮಂ, ಓಲಗಿಪ- ಸೇವಿಸುವ, ವೃಕ್ಷಪಙ್ಕ್ತಿಯುಂ, ಪಕ್ಷಿಪತಯೇ, ನಮಃ, ಎಂದು, ಪಕ್ಷಿಲಿಂಗಮಂ, ಆರಾಧಿಪ-ಪೂಜಿಸುವ, ಪಕ್ಷಿಗಳ, ನೆರವಿಯುಂ-ಗುಂಪೂ, ಮೃಗಕುಲೇಶಾಯ, ನಮಃ, ಎಂದು,ಮೃಗಲಿಂಗಮಂ, ಸೇವಿಪ, ಮೃಗಂಗಳ, ಜಂಗುಳಿಯುಂ- ಗುಂಪೂ, ನಾ

ನಾಗಂಗಳ ತಂಡಮುಂ ಅಳಿನಾಯಕಾಯ ನಮೋ ಎಂದಳಿಲಿಂಗಮನರ್ಚಿಪಳಿಗಳ ಬಳಗಮುಂ ಜಲವರೇಣ್ಯಾಯ ನಮೋ ಎಂದು ಜಲಲಿಂಗಮಂ ಯಜಿಪ ಕೊಳಂಗಳೊಬ್ಬುಳಿಯುಂ ತೀರ್ಥಾಧಿಪತಯೇ ನಮೋ ಎಂದು ತೀರ್ಥಲಿಂಗಮನಭಿವಂದಿಪ ತೀರ್ಥಸಂತತಿಯುಂ ಮುನಿಪಾಲಕಾಯ ನಮೋ ಎಂದು ಮುನಿಲಿಂಗಮಂ ಜಾನಿಪ ಮುನಿಗಳ ಮೊತ್ತಮುಂ ಶಬರರಾಜಾಯ ನಮೋ ಎಂದು ಶಬರಲಿಂಗಮಂ ಸಪರ್ಯೆಗೆಯ್ವ ಶಬರರ ವಂಗಡಮುಂ ಮತ್ತಂ ವನಸಲಿಲಕೇಳಿಗೆಯ್ದು ಪರಿದು ನೆರೆದು ಬಿನದಿಪ ಗರುಡಗಂಧರ್ವಕಿನ್ನರಕಿಂಪುರುಷದಂಪತಿಗಳ ಮೊಗ್ಗರಮುಂ ಇಂದ್ರಾದಿಗಳಳ್ಕೆ ಘೋರತಪಂಗೆಯ್ವ ಸಂಯಮಿಗಳ ಸೊಲ್ಗಳುಂ ತರುಗಿರಿಗಳ್ನೀಡುವ ಫಲನಿರ್ಝರಾಮೃತಭಿಕ್ಷೆಯಂ ಕೈಕೊಂಡು ಸಂತಮಿರ್ಪ ತಪಸಿಗಳ ಬಂಬಲುಂ ಅನ್ಯೋನ್ಯವೈರಮನುಳಿದೊಂದೆಡೆಯೊಳೊಡನಾಡುವ ನಾನಾಮೃಗಂಗಳ ತಿಂತಿಣಿಯುಂ ಗಿರೀಶಪೂಜೋತ್ಸವಕ್ಕೆಳಸಿ ಸಡಗರದಿಂ ಬರ್ಪ ದಿಗ್ವನಿತಾದಿಕ್ಪತಿಗಳೋಳಿಯುಂ ಹರನಿದಿರೊಳ್ನರ್ತನಂಗೆಯ್ವ ನಿರ್ಜರೀನಿರ್ಜರರ ಪೌಳಿಯುಂ ಜಲರುಹಾದಿಜಲೋದ್ಗಮದಿಂ ನೀಶನಂ ಪೂಜೆಗೆಯ್ದು ಮಣಿವ ಜಲಕನ್ಯಕಾಜಲಪುರುಷರ ಗೊಂದಣಿಯುಂ ಅಪೂರ್ವವಸ್ತುವ ನಭವಂಗೆ ಕಾಣ್ಕೆಗೊಟ್ಟು ನಮಿಪ ಬಿಲಕನ್ಯಕಾಬಿಲಪುರುಷರ ಸಂದಣಿಯುಂ

---

ಗನಾಥಾಯ, ನಮಃ, ಎಂದು, ನಾಗಲಿಂಗಮಂ– ಸರ್ಪಲಿಂಗವನ್ನು, ಭಜಿಪ- ಸೇವಿಸುವ, ನಾಗಂಗಳ- ಹಾವುಗಳ, ತಂಡಮುಂ, ಅಳಿನಾಯಕಾಯ, ನಮಃ, ಎಂದು, ಅಳಿಲಿಂಗಮಂ- ಭ್ರಮರಲಿಂಗವನ್ನು, ಅರ್ಚಿಪ, ಅಳಿಗಳ, ಬಳಗಮುಂ, ಜಲವರೇಣ್ಯಾಯ, ನಮಃ, ಎಂದು, ಜಲಲಿಂಗಮಂ, ಯಜಿಪ- ಪೂಜಿಸುವ, ಕೊಳಂಗಳ, ಒಬ್ಬುಳಿಯುಂ, ತೀರ್ಥಾಧಿಪತಯೇ,ನಮಃ, ಎಂದು, ತೀರ್ಥಲಿಂಗಮಂ, ಅಭಿವಂದಿಪ-ನಮಸ್ಕರಿಸುವ, ತೀರ್ಥಸಂತತಿಯುಂ, ಮುನಿಪಾಲಕಾಯ, ನಮಃ, ಎಂದು, ಮುನಿಲಿಂಗಮಂ, ಜಾನಿಪ- ಧ್ಯಾನಮಾಡುವ, ಮುನಿಗಳ, ಮೊತ್ತಮುಂ, ಶಬರರಾಜಾಯ, ನಮಃ, ಎಂದು, ಶಬರಲಿಂಗಮಂ- ಕಿರಾತಲಿಂಗವನ್ನು, ಸಪರ್ಯೆಗೆಯ್ವ- ಪೂಜಿಸುವ, ಶಬರರ, ವಂಗಡಮುಂ- ಗುಂಪೂ, ಮತ್ತಂ, ವನಸಲಿಲಕೇಳಿಗೆಯ್ದು- ಕಾಡಾಟನೀರಾಟಗಳನ್ನಾಡಿ, ಪರಿದು- ಸುತ್ತಿ, ನೆರೆದು- ಗುಂಪುಕೂಡಿ, ಬಿನದಿಪ-ವಿನೋದಪಡುವ, ಗರುಡಗಂಧರ್ವಕಿನ್ನರಕಿಂಪುರುಷದಂಪತಿಗಳ, ಮೊಗ್ಗರಮುಂ- ಗುಂಪೂ, ಇಂದ್ರಾದಿಗಳ್, ಅಳ್ಕೆ- ಭಯಪಡಲು, ಘೋರತಪಂಗೆಯ್ವ, ಸಂಯಮಿಗಳ- ಋಷಿಗಳ, ಸೊಲ್ಗಳುಂ, ತರುಗಿರಿಗಳ್-ಮರಗಳು ಬೆಟ್ಟಗಳು, ನೀಡುವ, ಫಲನಿರ್ಝರಾಮೃತಭಿಕ್ಷೆಯಂ- ಹಣ್ಣು ಗಿರಿನದಿಯ ನೀರು ಇವುಗಳೆಂಬ ಭಿಕ್ಷವನ್ನು, ಕೈಕೊಂಡು- ಸ್ವೀಕರಿಸಿ, ಸಂತಮಿರ್ಪ- ಸುಖವಾಗಿ ಸುಮ್ಮನಿರುವ, ತಪಸಿಗಳ, ಬಂಬಲುಂ- ಗುಂಪೂ, ಅನ್ಯೋನ್ಯವೈರಮಂ-ಪರಸ್ಪರದ್ವೇಷವನ್ನು, ಉಳಿದು- ಬಿಟ್ಟು, ಒಂದೆಡೆಯೊಳ್- ಒಂದುಸ್ಥಲದಲ್ಲಿ, ಒಡನಾಡುವ- ಜೊತೆಯಲ್ಲಾಡುವ, ನಾನಾಮೃಗಂಗಳ, ತಿಂತಿಣಿಯುಂ, ಗಿರೀಶಪೂಜೋತ್ಸವಕ್ಕೆ, ಎಳಸಿ, ಸಡಗರದಿಂ, ಬರ್ಪ, ದಿಗ್ವನಿತಾದಿಕ್ಪತಿಗಳ- ದಿಕ್ಕಾಂತೆಯರುದಿಕ್ಪಾಲಕರುಗಳ, ಓಳಿಯುಂ- ಗುಂಪೂ, ಹರನ, ಇದಿರೊಳ್- ಮುಂಗಡೆಯಲ್ಲಿ, ನರ್ತನಂಗೆಯ್ವ- ಕುಣಿಯುವ, ನಿರ್ಜರೀನಿರ್ಜರರ-ದೇವತೆಗಳು ಅವರ ಪತ್ನಿಯರು ಇವರುಗಳ,ಪೌಳಿಯುಂ-ಪಙ್ತಿಯೂ, ಜಲರುಹಾದಿಜಲೋದ್ಗಮದಿಂ–ತಾವರೆ ಮುಂತಾದ ನೀರಿನಲ್ಲಿ ಹುಟ್ಟುವ ಹೂವುಗಳಿಂದ, ಈಶನಂ, ಪೂಜೆಗೆಯ್ದು, ಮಣಿವ- ನಮಸ್ಕರಿಸುವ, ಜಲಕನ್ಯಕಾಜಲಪುರುಷರ– ನೀರಹೆಂಗುಸರುನೀರಮನುಷ್ಯರುಗಳ, ಗೊಂದಣಿಯುಂ, ಅಪೂರ್ವವಸ್ತುವಂ- ಹೊಸದಾದ ಪದಾರ್ಥವನ್ನು, ಅಭವಂಗೆ, ಕಾಣ್ಕೆಗೊಟ್ಟು, ನಮಿಪ– ಅಡ್ಡಬೀಳುವ, ಬಿಲಕನ್ಯಕಾಬಿಲಪುರುಷರ- ಬಿಲಗಳಲ್ಲಿ ವಾಸಮಾಡುವ ಹೆಂಗುಸು ಗಂಡುಸರುಗಳ, ಸಂದಣಿಯುಂ, ಅನವರ

ಮತ್ತೇ॥ ಚರಣಾಂಗುಷ್ಠಮನೂರಿ ಧಾತ್ರಿಯೊಳೆ ಬಾಹುದ್ವಂದ್ವಮೂರ್ಧ್ವಕ್ಕೆ ಸಂ। ದಿರೆ ನಿಂದುಗ್ರತಪಂಗಳಂ ನೆಗಳ್ವ ಮೇಗಣ್ಬೊತ್ತಿ ಪಾದಂಗಳಂ॥ ಶಿರಮಂ ಸೂಚಿಯ ಮೇಲೆ ಸಾರ್ಚಿ ತಪಮಂ ಮಾಳ್ಪನ್ಯಭಾವಂ ವಪುಃ। ಕರಣವ್ಯಾಪೃತಿಶೂನ್ಯಮಾದ ಮುನಿವೃಂದಂ ಬೀರಿತಾಶ್ಚರ್ಯಮಂ॥ ... ... ... ॥೪೬॥

ಕಂ॥ ತನುವಂ ಪುತ್ತಡರ್ದಿರೆ ಮೇ। ಲೆ ನಿತಾಂತಂ ಜಡೆ ಮಡಲ್ತು ಲತೆಯವೊಲಿರೆ ಚಿ॥ ದ್ಘನಶಿವನಂ ನೆನೆವಗ್ಗದ। ಮುನಿಗಳ್ಕಿರುವೆಟ್ಟನಂತಿರೇನೊಪ್ಪಿದರೋ॥ ... ॥೪೭॥

ಮ॥ಸ್ರ॥ ತನುವೃತ್ತಂ ನೇತ್ರದೊಳ್ನೇತ್ರದ ಗತಿ ವಿಳಸತ್ಪ್ರಾಣದೊಳ್ಪ್ರಾಣಜಾತಂ। ಮನದೊಳ್ತನ್ಮಾನಸಂ ಬುದ್ಧಿಯೊಳಮರ್ದಮಹಾಬುದ್ಧಿ ಚಿತ್ತಾಗ್ರದೊಳ್ಪೆಂ॥ ಪಿನಚಿತ್ತಂ ತಾನಹಂಕಾರದೊಳೊದವಿದಹಂಕಾರ ಮಾಜೀವನೊಳ್ಜೀ। ವನಮುಂ ಚಿಜ್ಜ್ಯೋತಿಯೊಳ್ಸಂದಳಿಯೆ ಮಿಸುಪ ಯೋಗೀಶ್ವರರ್ಕಣ್ಗೆಸೆದರ್॥ ... ॥೪೮॥

ಮತ್ತೇ॥ ಹರಿಯೊಳ್ಬಲ್ಲಮನಾಡುವಾನ ಪುಲಿಯೊಳ್ಮೇಳಾಪಮಂ ತಾಳ್ದು ಸಂ। ಚರಿಪುದ್ಯನ್ಮೃಗರಾಜಿ ಬರ್ಹಿಯ ಬಿಸಲ್ಗಾಸ್ಯಂಗಳಂ ಸಾರ್ಚಿ ಸೋ॥ ಳ್ಪುರಗಶ್ರೇಣಿ ಸಮಾಗ್ರದಿಂ ಶರಭಕಂಡೂವಾರಣಂಗೆಯ್ವ ಕೇ। ಸರಿವೃಂದಂ ಭಯಮಿಲ್ಲದಿರ್ಪ್ಪುವನಿತಂ ತತ್ತಾಪಸಾವಾಸದೊಳ್॥ ... ... ... ... ॥೪೯॥

---

ಧಾತ್ರಿಯೊಳೆ, ಚರಣಾಂಗುಷ್ಠಮಂ- ಪಾದದ ಹೆಬ್ಬೆಟ್ಟನ್ನು, ಊರಿ, ಬಾಹುದ್ವಂದ್ವಂ-ಎರಡುತೋಳುಗಳು, ಊರ್ಧ್ವಕ್ಕೆ- ಮೇಲ್ಗಡೆಗೆ, ಸಂದು- ಸೇರಿ, ಇರೆ, ನಿಂದು, ಉಗ್ರತಪಂಗಳಂ, ನೆಗಳ್ವ, ಪಾದಂಗಳಂ, ಮೇಗಕ್ಕೆ- ಮೇಲಕ್ಕೆ, ಒತ್ತಿ- ಅದಿಮಿ, ಶಿರಮಂ, ಸೂಚಿಯಮೇಲೆ, ಸಾರ್ಚಿ- ಸೇರಿಸಿ, ತಪಮಂ, ಮಾಳ್ಪ, ಅನ್ಯಭಾವಂ-ತಾನೂಆತ್ಮನೂ ಬೇರೆ ಯೆಂಬಭಿಪ್ರಾಯವು, ವಪುಃಕರಣವ್ಯಾಪೃತಿ- ದೇಹೇಂದ್ರಿಯಗಳ ವ್ಯಾಪಾರವು, ಶೂನ್ಯವಾದ- ಇಲ್ಲವಾದ, ಮುನಿವೃಂದಂ, ಆಶ್ಚರ್ಯಮಂ, ಬೀರಿತು. ... ॥೪೬॥

ತನುವಂ, ಪುತ್ತು, ಅಡರ್ದು- ಹತ್ತಿ, ಇರೆ, ಮೇಲೆ, ನಿತಾಂತಂ- ಅತ್ಯಂತವಾಗಿ, ಜಡೆ, ಮಡಲ್ತು- ಹಬ್ಬಿದ, ಲತೆಯವೋಲ್- ಬಳ್ಳಿಯಹಾಗೆ, ಇರೆ, ಚಿದ್ಘನಶಿವನಂ- ಜ್ಞಾನಸಾಂದ್ರನಾದ ಪರಶಿವನನ್ನು, ನೆನೆವ, ಅಗ್ಗದ- ಶ್ರೇಷ್ಠರಾದ, ಮುನಿಗಳ್, ಕಿರುವೆಟ್ಟನಂತಿರೆ- ಸಣ್ಣಬೆಟ್ಟದಹಾಗೆ, ಏಂ ಒಪ್ಪಿದರೋ! ॥೪೭॥

ತನುವೃತ್ತಂ- ದೇಹವ್ಯಾಪಾರವು, ನೇತ್ರದೊಳ್; ನೇತ್ರದ, ಗತಿ- ಗಮನವು, ವಿಳಸತ್ಪ್ರಾಣದೊಳ್, ಪ್ರಾಣಜಾತಂ- ಪ್ರಾಣಗಳ ಸಮೂಹವು, ಮನದೊಳ್ ತನ್ಮಾನಸಂ, ಬುದ್ಧಿಯೊಳ್, ಅಮರ್ದ, ಮಹಾಬುದ್ಧಿ, ಚಿತ್ತಾಗ್ರದೊಳ್; ಪೆಂಪಿನ- ಅತಿಶಯವಾದ, ಚಿತ್ತಂ, ತಾಂ, ಅಹಂಕಾರದೊಳ್; ಒದವಿದ, ಅಹಂಕಾರಂ, ಆ ಜೀವನೊಳ್; ಜೀವಮುಂ, ಚಿಜ್ಜ್ಯೋತಿಯೊಳ್- ಜಗದುಚಿತವಾದ ಪರಂಜ್ಯೋತಿಯಲ್ಲಿ, ಸಂದು- ಸೇರಿ, ಅಳಿಯೆ- ಐಕ್ಯವಾಗಲು, ಮಿಸುಪ, ಯೋಗೀಶ್ವರರ್, ಕಣ್ಗೆಸೆದರ್. ... ॥೪೮॥

ಹರಿಯೊಳ್- ಸಿಂಹದೊಡನೆ, ಬಲ್ಲಮಂ- ವಿಲಾಸವನ್ನು, ಆಡುವ, ಆನೆ; ಪುಲಿಯೊಳ್, ಮೇಳಾಪಮಂ, ಒಡನಾಟವನ್ನು, ತಾಳ್ದು, ಸಂಚರಿಪ, ಉದ್ಯನ್ಮೃಗರಾಜಿ, ಸಾರ್ಚಿ- ಸಮೀಪಕ್ಕೆ ಹೋಗಿ, ಬರ್ಹಿಯ- ನವಿಲ, ಬಿಸಲ್ಗಾಸ್ಯಂಗಳಂ- ಮಹೋಷ್ಣವಾದ ಕಾಲಿನಾಡಗಳನ್ನು, ನೋಳ್ಪ, ಉರಗಶ್ರೇಣಿ-ಸರ್ಪಗಳಸಾಲು, ಸಮಾಗ್ರದಿಂ- ಉತ್ಸಾಹದಿಂದ, ಶರಭಕಂಡೂವಾರಣಂಗೆಯ್ವ- ಶರಭಮೃಗದ ತೀಂಟೆಯನ್ನು ಹೋಗಲಾಡಿಸುವ, ಕೇಸರಿವೃಂದಂ- ಸಿಂಹಗಳ ಗುಂಪು. ಅನಿತಂ- ಇವಾವಾಗಲೂ, ತತ್ತಾಪಸಾವಾಸದೊಳ್- ಆ ಮುನಿಗಳ ಆಶ್ರಮದಲ್ಲಿ, ಭಯಂ, ಇಲ್ಲದೆ, ಇರ್ಪ್ಪುವು. ... ... ॥೪೯॥

ವ ॥ ಮತ್ತ ಮೊಂದು ರುಚಿರಪ್ರದೇಶದಲ್ಲಿ ॥ * * * * * * * *

ಚಂ ॥ ಸುರಕುಜಮೂಲದೊಳ್ವಿಸುಪ ಚಂದ್ರಶಿಲಾತಳಪುಷ್ಪತಲ್ಪದೊಳ್ । ಪರಿದೆ ಸೆದಿರ್ದಭಸ್ಮರಜಮುಂ ಘುಸೃಣಾರುಣರೇಣುವುಂ ಸಡಿ ॥ ಲ್ದರೆಯೆಡೆಯೊಕ್ಕ ಕೆಕ್ಕೆಯರಲುಂ ನರುವಲ್ಲಿಗೆಮಾಲೆಯುಂ ಕ್ಷವಮಾ । ಧರ ತನಯಾಮಹೇಶ ರೊರಗಿರ್ದುದ ನೇಂ ಪಿಸುಣಾ ಡಲಾರ್ತುವೊ ॥ ... ... ... ... ॥೩೦॥

ಕಂ ॥ ಕರ ಮಿಂತು ಸಂತತಂ ಭಾ । ಸುರಮಹಿಮೆಯ ನಾಳ್ದ ಗಿರಿಯ ನೀಕ್ಷಿಸಿ ಪಿ ರಿದ ॥ ಚ್ಚರಿವಡುತೆ ಮಾಪಿರಾಜಂ । ಗುರುವಂ ಮಿಗೆ ಕಾಣ್ಬ ತವಕದಿಂ ಬರ್ಪಾಗಳ್ ॥೩೧॥

ಮ॥ ಸ್ರ॥ ಹರತೇಜಃಪುಂಜಪೂರ್ಣಾಕೃತಿಯೊ ಶಿವವಿರಾಣ್ಮೂರ್ತಿಯೋ ಭಸ್ಮಧಾ ತ್ರೀ । ಧರವೋ ಶ್ರೀಪರ್ವತಾಗ್ರಸ್ಥಿತಮುನಿಜನಪುಣ್ಯಸ್ಫುರದ್ರಾಶಿಯೋ ಎಂ ॥ ಬರವಂ ಕೈಕೊಂಡು ಮಾರ್ಗಂಬಿಡಿದು ಮಹಿನಭೋಭಾಗಮಂ ಮುಟ್ಟ ಯೋಗೀ । ಶ್ವರ ನುತ್ತುಂ ಗಾಂಗ ನಡ್ಡಂಗೆಡೆದಿರೆ ಪದಪಿಂ ಕಂಡ ನಾಮಾಪಿರಾಜಂ ॥ ... ... ॥೩೨॥

ವ ॥ ಅಂತು ಕಂಡು ಮುಂದಣ್ಗೆ ಪೋಗಲಳವಲ್ಲದೆ ವಿಸ್ಮಯಾಂತಃಕರಣ ನೀಮಹಾ ಮಹಿಮನಿರವಂ ಪರೀಕ್ಷಿಪೆ ನೆಂದು ತನ್ಮಸ್ತಕಾಗ್ರದತ್ತ ಲ್ವರ್ಷತ್ರಯಂ ನಡೆದಂತಂಗಾಣ

ಮತ್ತಂ, ಒಂದು, ರುಚಿರಪ್ರದೇಶದಲ್ಲಿ. * * * * * * * * * * * *

ಸುರಕುಜಮೂಲದೊಳ್- ಕಲ್ಪವೃಕ್ಷದ ಬುಡದಲ್ಲಿ, ವಿಸುಪ, ಚಂದ್ರಶಿಲಾತಳಪುಷ್ಪತಲ್ಪದೊಳ್- ಚಂದ್ರಕಾಂತಶಿಲೆಯ ಮೇಲಿರುವ ಹೂವಿನ ಹಾಸಿಗೆಯಲ್ಲಿ, ಪರಿದು-ಹರಡಿ, ಎಸೆದು, ಇರ್ದ, ಭಸ್ಮರಜಮುಂ- ವಿಭೂತಿಯ ಧೂಳಿಯೂ, ಘುಸೃಣಾರುಣರೇಣುವುಂ- ಕುಂಕುಮಕೇಸರಿಯ ಧೂಳಿಯೂ, ಸಡಿಲ್ದು- ಕೇಶ ದಿಂ ಕೆಳಕ್ಕೆ ಜಾರಿ, ಎಡೆಯೊಕ್ಕ- ಅಲ್ಲಲ್ಲಿ ಸುರಿದಿರುವ, ಕೆಕ್ಕೆಯಲರಲುಂ-ಕೆಕ್ಕೆಯ ಹೂವು, ನರುವಲ್ಲಿಗೆ ಮಾಲೆಯುಂ- ಸುಗಂಧವಿಶಿಷ್ಟವಾದ ಮಲ್ಲಿಗೆ ಹೂವಿನ ಸರವೂ, ಕ್ಷಮಾಧರತನಯಾಮಹೇಶರ್- ಪಾರ್ವತೀ ಪರಮೇಶ್ವರರು, ಒರಗಿ-ಮಲಗಿ, ಇರ್ದುದು, ಪಿಸುಣಾಡಲ್- ಚಾಡಿಯು ಹೇಳುವದಕ್ಕೋಸ್ಕರ, ಏಂ ಆರ್ತು ವೋ- ಏನುಸಮರ್ಥವಾದವೋ! ... ... ... ... ॥೩೦॥

ಇಂತು, ಕರಂ- ಅಧಿಕವಾಗಿ, ಸಂತತಂ, ಭಾಸುರಮಹಿಮೆಯುಂ, ಆಳ್ದ, ಗಿರಿಯಂ, ಮಾಪಿರಾಜಂ, ಈಕ್ಷಿಸಿ, ಪಿರಿದು- ಅಧಿಕವಾಗಿ, ಅಚ್ಚರಿವಡುತೆ- ಗುರುವಂ, ಮಿಗೆ, ಕಾಣ್ಬ- ನೋಡುವ, ತವಕದಿಂ- ಆತುರದಿಂದ, ಬರ್ಪಾಗಳ್. ... ... ... ... ... ॥೩೧॥

ಉತ್ತುಂಗಾಂಗಂ- ಉನ್ನತವಾದ ದೇಹವುಳ್ಳ. ಯೋಗೀಶ್ವರಂ, ಹರತೇಜಃಪುಂಜಪೂರ್ಣಾಕೃತಿಯೊ- ಶಿವತೇಜಸ್ಸಮೂಹದ ಸಂಪೂರ್ಣವಾದಾಕಾರವೋ! ಶಿವವಿರಾಣ್ಮೂರ್ತಿಯೋ- ಈಶ್ವರನ ವಿರಾಟ್ಸ್ವರೂಪ ವೋ! ಭಸ್ಮಧಾತ್ರೀಧರವೋ- ವಿಭೂತಿಯಬೆಟ್ಟವೋ! ಶ್ರೀಪರ್ವತಾಗ್ರಸ್ಥಿತಮುನಿಜನಪುಣ್ಯಸ್ಫುರದ್ರಾಶಿ ಯೋ- ಶ್ರೀಶೈಲದ ಮೇಲಿರುವ ಋಷಿಜನಗಳ ಪುಣ್ಯದ ಪ್ರಕಾಶಿಸುವ ಗುಡ್ಡೆಯೋ! ಎಂಬ, ಇರವಂ- ರೀತಿ ಯನ್ನು, ಕೈಕೊಂಡು- ಹೊಂದಿ, ಮಾರ್ಗಂಬಿಡಿದು- ದಾರಿಗಟ್ಟಿ, ಮಹಿನಭೋಭಾಗಮಂ- ಭೂವ್ಯೋಂ ತರಿಕ್ಷಪ್ರದೇಶವನ್ನು,ಮುಟ್ಟ, ಅಡ್ಡಂಗೆಡೆದು-ಅಡ್ಡಡ್ಡಲಾಗಿ ಬಿದ್ದು, ಇರೆ,ಆಮಾಪಿರಾಜಂ, ಪದಪಿಂ,ಕಂಡಂ.

ಅಂತು, ಕಂಡು, ಮುಂದಣ್ಗೆಪೋಗಲ್, ಅಳವಲ್ಲದೆ- ಸಾಧ್ಯವಾಗದೆ, ವಿಸ್ಮಯಾಂತಃಕರಣಂ- ಆಶ್ಚ ರ್ಯಯುಕ್ತವಾದ ಮನಸ್ಸುಳ್ಳವನಾಗಿ, ಈಮಹಾಮಹಿಮನ, ಇರವಂ- ರೀತಿಯನ್ನು, ನಿರೀಕ್ಷಿಪೆಂ- ಎಂದು, ತ ನ್ಮಸ್ತಕಾಗ್ರದತ್ತಲ್- ಅವನ ಶಿರಸ್ಸಿನ ಕಡೆಗೆ, ವರ್ಷತ್ರಯಂ- ಮೂರು ವರ್ಷಗಳ ಕಾಲ, ನಡೆದು, ಅಂತಂ

ಡತ್ತಲ್ಪಾದಾಬ್ಜಮಂ ಕಂಡು ಪೊಡಮಡುವುದ ನುಳಿದಿತ್ತಲೆಳ್ತಂದುದಪರಾಧಮೆಂದು ಬ ಗೆದು ಮಗುಳ್ದಮಸ್ತಕದಿಶಾಭಾಗದಿಂ ಪದನಳಿನದಿಶಾಭಾಗಕ್ಕೆ ವರ್ಷಾಷ್ಟಕಂಬರಂ ನಡೆ ಗೊಳುತ್ತಂ ತದುಭೀತಿಯುಂ ಕಾಣದತಿಚಕಿತನಾಗಿ ಕಾರ್ಪಣ್ಯಮನಾಳ್ದು ನಿಂದು ॥ * *

ಕಂ ॥ ಮನುಮುನಿಗಳರಸಿ ಕಾಣದ । ಘನಮಹಿಮಭವನ್ಮಹತ್ತ್ವಮಂ ಪರಿಕಿಪೊಡೆ ॥ ನೆನಿತರವಂ ಕಾಡದೆ ಪದ । ವನಜಮ ನೆನಗಿಲ್ಲಿ ತೋರಿ ಪೊರೆ ಕರುಣಾಬ್ಧೀ ॥೫೩॥

ವ ॥ ಎಂದು ಭಯಭಕ್ತಿಯಿಂ ಪೊಗಳ್ದು ಪಕ್ಷದ್ವಯಂಬರಂ ದಂಡಪ್ರಣಾಮಂಗೆಯ್ದಿರುತ್ತಮಿರೆ ಶಿವಯೋಗಿಮಲ್ಲಿಕಾರ್ಜುನಂ ಪ್ರಸನ್ನನಾಗಿ ತನ್ನ ಮುನ್ನಿನ ದೇಶಿಕಾಕೃತಿಯಂತಾಳ್ದು ಕರಾಂಬುಜದಿಂದೆತ್ತಿ ಗಾಢಾಲಿಂಗನಂಗೆಯ್ದು ಕೃಪಾರ್ದ್ರಾಲೋಕನದಿನಭೀಕ್ಷಿಸಿ ॥ * * * * * * * * * * * * * * *

ಕಂ॥ ಕರುಣಾಮೃತರಸ ಮೊಗೆದು । ಬ್ಬರಿಸಿ ಮುಖಾಂಬುಜದೆ ತುಳ್ಕಿದಂತಿರೆ ದಶನ॥ ಸ್ಫುರಿತರುಚಿನುಡಿದ ನಾಮ । ಲ್ಲರಸಂ ಮಾದರಸನೊಡನೆ ನಸುನಗುತಾಗಳ್ ॥ ॥೫೪॥

ಕಂ॥ ಪ್ರಾಜ್ಯತರಮಾದನಿಜಸಾ । ಮ್ರಾಜ್ಯಮ ನುಳಿದರರೆ ಘೋರವಿಪಿನಾಂತರದೊಳ್॥ ಪೂಜ್ಯಮತಿ ಬಂದೆ ನಿನ್ನವೊ । ಲೀಜ್ಯಾಮಂಡಲದೊ ಳಧಿಕಸಾಹಸಿ ಯಾವಂ ॥ ॥೫೫॥

---

ಗಾಣದೆ- ಕೊನೆಗಾಣದೆ, ಅತ್ತಲ್- ಆಕಡೆ, ಪಾದಾಬ್ಜಮಂ, ಕಂಡು, ಪೊಡಮಡುವುದಂ- ನಮಸ್ಕರಿಸುವದನ್ನು, ಉಳಿದು- ಬಿಟ್ಟು, ಇತ್ತಲ್, ಎಳ್ತಂದುದು, ಅಪರಾಧಂ- ತಪ್ಪು, ಎಂದು, ಬಗೆದು- ಆಲೋಚಿಸಿ, ಮಗುಳ್ದು- ಪುನಃ, ಅಮಸ್ತಕದಿಶಾಭಾಗದಿಂ- ಆ ತಲೆಯಿದ್ದ ದಿಕ್ಕಿನ ದೆಸೆಯಿಂದ, ಪದನಳಿನದಿಶಾಭಾಗಕ್ಕೆ-ಪಾದ ಕಮಲವಿರುವ ದಿಕ್ಕಿನಕಡೆಗೆ, ವರ್ಷಾಷ್ಟಕಂಬರಂ- ಎಂಟು ವರ್ಷಗಳ ತನಕ, ನಡೆಗೊಳುತ್ತಂ, ತದುಭೀತಿಯುಂ, ಕಾಣದೆ, ಅತಿಚಕಿತಂ- ಬಹಳವಾಗಿ ಭಯಪಟ್ಟವನು, ಆಗಿ, ಕಾರುಣ್ಯಮಂ- ದೀನತೆಯನ್ನು, ಆಳ್ದು, ನಿಂದು. * * * * * * * * * *

ಕರುಣಾಬ್ಧೀ! ಮನುಮುನಿಗಳ್, ಅರಸಿ, ಕಾಣದ, ಘನಮಹಿಮಭವನ್ಮಹತ್ತ್ವಮಂ- ಅತ್ಯಂತಮಹಿಮೆಯುಳ್ಳ ನಿನ್ನ ಮಹತ್ತ್ವವನ್ನು, ಪರಿಕಿಪೊಡೆ- ಪರೀಕ್ಷಿಸಬೇಕಾದರೆ, ಆಂ, ಎನಿತರವಂ- ಎಷ್ಟರವನು? ಕಾಡದೆ- ಪೀಡಿಸದೆ, ಎನಗೆ, ಇಲ್ಲಿ, ಪದವನಜಮಂ- ಚರಣಕಮಲವನ್ನು, ತೋರಿ, ಪೊರೆ- ರಕ್ಷಿಸು. ॥೫೩॥

ಎಂದು, ಭಯಭಕ್ತಿಯಿಂ, ಪೊಗಳ್ದು, ಪಕ್ಷದ್ವಯಂಬರಂ- ಎರಡುಪಕ್ಷಗಳ ತನಕ, ದಂಡಪ್ರಣಾಮಂಗೆಯ್ದು, ಇರುತ್ತಂ, ಇರೆ, ಶಿವಯೋಗಿಮಲ್ಲಿಕಾರ್ಜುನಂ, ಪ್ರಸನ್ನಂ, ಆಗಿ, ತನ್ನ, ಮುನ್ನಿನ- ಮೊದಲಿನ,ದೇಶಿಕಾಕೃತಿಯಂ- ಗುರುರೂಪವಾದಾಕಾರವನ್ನು, ತಾಳ್ದು, ಕರಾಂಬುಜದಿಂದೆ, ಎತ್ತಿ, ಗಾಢಾಲಿಂಗನಂಗೆಯ್ದು, ಕೃಪಾರ್ದ್ರಾಲೋಕನದಿಂ- ದಯಾಸಿಕ್ತವಾದ ನೋಟದಿಂದ, ಅಭೀಕ್ಷಿಸಿ- ನೋಡಿ. * * * * *

ಕರುಣಾಮೃತರಸಂ, ಮುಖಾಂಬುಜದೆ, ಒಗೆದು, ಉಬ್ಬರಿಸಿ, ತುಳ್ಕಿದಂತೆ, ದಶನಸ್ಫುರಿತರುಚಿ- ಹಲ್ಲುಗಳ ಪ್ರಕಾಶಿಸುವ ಕಾಂತಿಯು, ಇರೆ, ನಸುನಗುತೆ, ಆಗಳ್, ಆಮಲ್ಲರಸಂ, ಮಾದರಸನೊಡನೆ, ನುಡಿದಂ. ... ... ... ... ... ॥೫೪॥

ಪೂಜ್ಯಮತಿ- ಪೂಜಿಸಲ್ಪಡುವದಕ್ಕೆ ಯೋಗ್ಯವಾದ ಬುದ್ಧಿಯುಳ್ಳವನೇ! ಪ್ರಾಜ್ಯತರಮಾದ- ಅತಿ ಬಹುಳವಾದ, ನಿಜಸಾಮ್ರಾಜ್ಯಮಂ- ಸ್ವಕೀಯವಾದ ದೊರೆತನವನ್ನು, ಉಳಿದು, ಘೋರವಿಪಿನಾಂತರದೊಳ್- ಭಯಂಕರವಾದ ಕಾಡಿನ ಮಧ್ಯದಲ್ಲಿ, ಬಂದೆ; ಅರರೆ! ಈಜ್ಯಾಮಂಡಲದೊಳ್- ಈ ಭೂಮಂಡಲದಲ್ಲಿ, ನಿನ್ನವೊಲ್, ಅಧಿಕಸಾಹಸೀ, ಆವಂ? ... ... ... ॥೫೫॥

ಮತ್ತೇ ॥ ಮದಮತ್ತಾಧಮ ಖುಲ್ಲ ಗೊಲ್ಲ ಪದೆದಾಂ ಕುಳ್ಳಿರ್ದ ಭೂಜಾತಮ ।
ಲ್ಲದೆ ಭೂಜಾತ ಮರಣ್ಯದೊಳ್ ತರಿವೊಡೇ ನಿಲ್ಲಾದುದೇ ಪಾಪಿ ಪೆ ॥ ರ್ಚಿದಕೊರ್ಬಿಂ ದಿದ
ನೇಕೆ ನೀಂ ತರಿದಪಯ್ ಮಾ ಣ್ಮಾಣದಿರ್ದಂದು ತ । ಳ್ವದೆ ಶಾಪೋಗ್ರತರಜ್ವಲಜ್ಜ್ವಲನದಿಂ
ನಿನ್ನಂಗಮಂ ಸುಟ್ಟಪೆಂ ॥ ... ... ... ॥೬೫॥

ವ ॥ ಎಂದ ಮಾದಿರಾಜನ ಮಾತುಗೇಳ್ದು ಕಪಟಪಟುಮಲ್ಲರಸಮಾಹೇಶ್ವರನಟ್ಟ
ಹಾಸಂಗೆಯ್ದು ! * * * * * * * * * * * * * *

ಕಂ ॥ ಅಮಮ ದಯಾಪರ ವಿಳಸಿತ । ಯಮನಿಯಮಕಳಾಪ ಭಾಪು ಚಾಗುರೆ ಘ
ನವಿ ॥ ಕ್ರಮ ಭಲರೆ ಶಾಂತಿಯುತ ಸಂ । ಯಮಿಗಳ್ನಿನ್ನನ್ನ ರೊಳರೆ ಧರಣೀತಳದೊಳ್ ॥

ಮತ್ತೇ ॥ ನಿನಗೀಭೂರುಹ ಮಲ್ಲದನ್ಯತರುವೇನಿಲ್ಲಾದುದೇ ಕುಳ್ಳಿರ । ಲ್ಘನಕಾಂ
ತಾರದೊ ಳಿತ್ತರಾ ರ್ನಿನಗಿದಂ ನೀಂ ಶಾಖಿಯಂ ಸಾಕಿದಾ ॥ ತನೊ ಕಾಡಿಂತಿದು ನಿನ್ನದೋ
ಬರಿದೆ ಕೋಪಂಗೆಯ್ವೆ ನೀಂ ಪಾಪಿಯ । ಲ್ತೆ ನಿತಾಂತಂ ಮುಳಿದೆನ್ನ ನೆಂತು ಸುಡುವ
ಯ್ ಕೋಪಾಗ್ನಿಯಿಂ ತಾಪಸಾ ॥ ... ... ... ॥೬೭॥

ಕಂ ॥ ಮಳೆ ಮಂಜು ಗಾಳಿ ಬಿಸಿಲುಪ । ಟಳಕಳ್ಕದೆ ಮಾಳ್ಪ ನಿನ್ನ ತಪ ಮೆತ್ತನಿ
ರಾ ॥ ಕುಳ ಮಿತರುವಿನ ಬಳಿನೆಳ । ಲಳಿಪೆತ್ತ ವಿಚಿತ್ರಮಲ್ತೆ ನಿನ್ನಯ ಚರಿತಂ ॥೬೮॥

---

ಮದಮತ್ತ- ಗರ್ವದಿಂಕೊಬ್ಬಿದ, ಅಧಮ-ನೀಚನಾದ, ಖುಲ್ಲ-ಕೆಟ್ಟವನಾದ, ಗೊಲ್ಲ! ಆಂ, ಪದೆದು,ಕುಳ್ಳಿರ್ದ, ಭೂಜಾತಮಲ್ಲದೆ, ಮರಹೂರ್ತಾಗಿ, ತರಿವೊಡೆ- ಕತ್ತರಿಸಬೇಕಾದರೆ, ನಿನಗೆ,ಅರಣ್ಯದೊಳ್, ಭೂಜಾತಂ,ಇಲ್ಲಾದುದೇಂ- ಇಲ್ಲವಾಯ್ತೇ? ಪಾಪಿ! ಪೆರ್ಚಿದಕೊರ್ಬಿಂದೆ, ಇದಂ, ನೀಂ, ಏಕೆತರಿದಪಯ್? ಮಾಣ್-ಬಿಡು; ಮಾಣದೆ- ಬಿಡದೆ, ಇರ್ದಂದು- ಇದ್ದಲ್ಲಿ, ತಳ್ವದೆ, ನಿನ್ನ, ಅಂಗಮಂ, ಶಾಪೋಗ್ರತರಜ್ವಲಜ್ಜ್ವಲನದಿಂ-ಭಯಂಕರವಾಗಿಉರಿಯುತ್ತಿರುವ ಶಾಪವೆಂಬಬೆಂಕಿಯಿಂದ, ಸುಟ್ಟಪೆಂ. ... ॥೬೫॥

ಎಂದ, ಮಾದಿರಾಜನ, ಮಾತುಗೇಳ್ದು, ಕಪಟಪಟುಮಲ್ಲರಸಮಾಹೇಶ್ವರಂ- ಕೃತ್ರಿಮವ್ಯಾಪಾರದಲ್ಲಿ ಸಮರ್ಥನಾದ ಮಲ್ಲರಸನೆಂಬ ಮಾಹೇಶ್ವರನು, ಅಟ್ಟಹಾಸಂಗೆಯ್ದು- ಶಬ್ದಪುರಸ್ಸರವಾಗಿ ನಕ್ಕು. *

ಅಮಮ!! ದಯಾಪರ-ಕರುಣಾಸಕ್ತನೇ! ವಿಳಸಿತಯಮನಿಯಮಕಳಾಪ— ವಿಳಸಿತ-ಪ್ರಕಾಶಿಸುವ, ಯಮ- ಶರೀರಸಾಧನಾಪೇಕ್ಷೆಯಿಂದ ಮಾಡುವ ನಿತ್ಯಕರ್ಮ. ನಿಯಮ--ಸ್ನಾನಾದಿಕರ್ಮ; (ಅಥವಾಯೋಗಸಾಧನ) ಇವುಗಳೇ, ಕಳಾಪ- ಆಭರಣವಾಗುಳ್ಳವನೇ! ಭಾಪು-ಶಹಬಾಸ್! ಚಾಗುರೇ!! ಘನವಿಕ್ರಮ! ಭಲರೆ!! ಶಾಂತಿಯುತ! ಧರಣೀತಲದೊಳ್. ನಿನ್ನನ್ನರ್- ನಿನ್ನಂಥಾ, ಸಂಯಮಿಗಳ್, ಒಳರೆ? ... ॥೬೬॥

ತಾಪಸ! ಘನಕಾಂತಾರದೊಳ್- ದೊಡ್ಡಕಾಡಿನಲ್ಲಿ, ನಿನಗೆ, ಕುಳ್ಳಿರಲ್- ಕುಳಿತುಕೊಂಡಿರುವದಕ್ಕೆ, ಈಭೂರುಹಂಅಲ್ಲದೆ, ಅನ್ಯತರು, ಇಲ್ಲಾದುದೇಂ? ನಿನಗೆ, ಇದಂ- ಈ ಮರವನ್ನು, ಇತ್ತರ್, ಆರ್? ನೀಂ, ಶಾಖಿಯಂ- ಮರವನ್ನು, ಸಾಕಿದಾತನೊ- ರಕ್ಷಿಸಿದವನೋ? ಇಂತು, ಇದುಕಾಡು, ನಿನ್ನದೋ? ನೀಂ, ಬರಿದೆ- ವ್ಯರ್ಥವಾಗಿ, ಕೋಪಂಗೆಯ್ವೆ! ನೀಂ, ನಿತಾಂತಂ- ಅತ್ಯಂತವಾಗಿ, ಪಾಪಿಯಲ್ತೆ? ಎನ್ನಂ, ಕೋಪಾಗ್ನಿಯಿಂ,ಎಂತುಸುಡುವಯ್? ... ... ... ... ... ॥೬೭॥

ಮಳೆಮಂಜುಗಾಳಿಬಿಸಿಲ, ಉಪಟಳಕೆ- ಬಾಧೆಗೆ, ಅಳ್ಕದೆ-ಭಯಪಡದೆ, ಮಾಳ್ಪ, ನಿನ್ನ, ತಪಂ, ಎತ್ತ? ಈತರುವಿನ, ನಿರಾಕುಳಂ- ನಿಶ್ಚಂಚಲವಾದ, ಬಳಿನೆಳಲ- ಅಳಿಪು- ಇಲ್ಲಿದಹಾಗೆ ಮಾಡುವಿಕೆಯು, ಎತ್ತ? ನಿನ್ನ, ಚರಿತಂ, ವಿಚಿತ್ರಂಅಲ್ತೆ- ಆಶ್ಚರ್ಯಕರವಾದುದಲ್ಲವೇ? ... ... ॥೬೮॥

ಕಂ ॥ ತನುವಂ ಬಡಿದೊಡ ಮೆಂತುಂ । ಮುನಿಯ ರ್ಮುನಿವರ ರುದಗ್ರಶಾಂತ ರ್ಮುನಿ ದಯ್ ॥ ಬನದಗಮುಂ ತರಿದೊಡೆ ದು| ರ್ಘ್ನನತಾಪಸ ನಿನ್ನವೊಲ್ ದುರಾತ್ಮಕ ರೊಳರೇ ॥ ೯ ॥

ಕಂ॥ ಕೋಪಾಗ್ನಿಯಿಂದೆ ಬೆಂದಪೆ । ಶಾಪಾಗ್ನಿಯಿಂ ನೆನ್ನ ನುರುಪಲಳಿಸಿರ್ಪ ಪ್ಪೆ ॥ ಲೋಪವ ದಿದರಿಂದ ಮೆಂಬುದ । ನೇಪ್ರೊಳ್ತುಂ ತಿಳಿಯ ಮೂಢಜನಕುಲತಿಲಕಾ ॥ ೧೦ ॥

ಕಂ ॥ ಕಪಟಿಯ ಜಪಮುಂ ಕೋಪಿಯ । ತಪಮುಂ ಪಿಸುಣನ ಮೃದೂಕ್ತಿಯುಂ ಪರನಿಂದಾ ॥ ಲಪಿತನ ವಿದ್ಯೆಯುಂ ಮಗ್ಗದ । ಕೃಪಣನ ಸನ್ಮಾನಮುಂ ನಿರರ್ಥಕಮಲ್ತೆ ॥

ಮತ್ತೇ ॥ ವಿನಯಾರಣ್ಯದವಾನಲಂ ಶಮಸುಖಜ್ಯೋತ್ಸ್ನಾದಿನೇಶಾತಪಂ ॥ ಘನ ಸಂತೋಷಪರಸಾಂಬುರಾಶಿಬಡಬಜ್ವಾಲಾಕಲಾಪಂ ವಿವೇ ॥ ಕನಗಾಗ್ರಸ್ಫುಟಮೇಘವಹ್ನಿಯೆ ನಿಶ್ಚೀಕೋಪಾಗ್ನಿ ಪೀರ್ಗುಂ ಮನೋ । ವನಜಾತಾಂಚಿತಚಿನ್ಮರಂದರಸಮಂ ಕಾಯ್ಪೇರೆ ತಜ್ಜೀವನಂ ॥ ... ... ... ॥ ೧೨ ॥

ಕಂ ॥ ಹೃದಯಾಲವಾಲದೊಳ್ಪು । ಟ್ಟಿದವಿಮಳಜ್ಞಾನಲತೆಗೆ ಶಮಜಲಮುಂ ಸೂ ॥

---

ಉದಗ್ರಶಾಂತರ್- ಉತ್ಕೃಷ್ಟರಾದ ಶಾಂತಿವಿಶಿಷ್ಟರಾದ, ಮುನಿವರರ್, ತನುವಂ, ಒಡಿದೊಡಂ- ಹೊಡೆದಾಗ್ಯೂ, ಎಂತುಂ- ಯಾವರೀತಿಯಿಂದಲೂ, ಮುನಿಯರ್- ಕೋಪಗೊಳ್ಳುವರಲ್ಲ; ದುರ್ಘನತಾಪಸ- ದುಷ್ಟತಪಸ್ವಿಯೇ! ಬನದ- ಕಾಡಿನ, ಅಗಮುಂ- ಮರವನ್ನು, ತರಿದೊಡೆ, ಮುನಿಪಯ್- ಕೋಪಗೊಂಡೆ! ನಿನ್ನವೊಲ್, ದುರಾತ್ಮಕರ್- ದುಷ್ಟಪ್ರಾಣಿಗಳು, ಒಳರೆ-ಉಂಟೇ? ... ... ॥ ೯ ॥

ಮೂಢಜನಕುಲತಿಲಕಾ- ದಡ್ಡರಗುಂಪಿನಲ್ಲಿ ದೊಡ್ಡವನಾದವನೇ! ಕೋಪಾಗ್ನಿಯಿಂದೆ- ಕೋಪವೆಂಬ ಬೆಂಕಿಯಿಂದ, (ನೀಂ) ಬೆಂದಪೆ- ಬೇಯುತ್ತಿರುವೆ! ಎನ್ನಂ, ಶಾಪಾಗ್ನಿಯಿಂ- ಶಾಪವೆಂಬ ಬೆಂಕಿಯಿಂದ, ಉರುಪಲ್-ದಹಿಸುವದಕ್ಕೆ, ಎಳಸಿ-ಅಪೇಕ್ಷಿಸಿ, ಇರ್ಪೆ, ಇದರಿಂದಂ-ಈ ಕೋಪಶಾಪಪ್ರದಾನದಿಂದ, ಏನೊಳ್ತುಂ- ಯಾವಾಗಲೂ, ತಪ್ರೋಲೋಪಂ- ತಪಸ್ಸಿಗೆ ಹಾನಿಯು, ಎಂಬುದು, ತಿಳಿಯೆ. ... ॥ ೧೦ ॥

ಕಪಟಿಯ- ಮೋಸಗಾರನ, ಜಪಮುಂ, ಕೋಪಿಯ, ತಪಮುಂ, ಪಿಸುಣನ- ಚಾಡಿಕೋರನ, ಮೃದೂಕ್ತಿಯುಂ- ಮೆಲ್ನುಡಿಯೂ, ಪರನಿಂದಾಲಪಿತನ- ಅನ್ಯದೂಷಣವಾಕ್ಯುಕ್ತನ, ವಿದ್ಯೆಯುಂ, ಅಗ್ಗದ- ಅಧಿಕನಾದ, ಕೃಪಣನ- ಜೀನನ, ಸನ್ಮಾನಮುಂ, ನಿರರ್ಥಕಂಅಲ್ತೆ- ನಿಷ್ಪ್ರಯೋಜಕವಲ್ಲವೇ? ॥ ೧೧ ॥

ವಿನಯಾರಣ್ಯದವಾನಲಂ-ನಮ್ರತೆಯೆಂಬ ಕಾಡಿಗೆಕಾಳ್ಗಿಚ್ಚು, ಶಮಸುಖಜ್ಯೋತ್ಸ್ನಾದಿನೇಶಾತಪಂ- ಶಾಂತಿಯಿಂದುಂಟಾಗುವ ಸೌಖ್ಯವೆಂಬ ಬೆಳ್ದಿಂಗಳಿಗೆ ಸೂರ್ಯನ ಕಿರಣ, ಘನ......ಕಲಾಪಂ— ಘನ-ಗಾಂಭೀರ್ಯವಾದ, ಸಂತೋಷರಸ- ಹರ್ಷವೆಂಬ ನೀರಿನ. ಅಂಬುರಾಶಿ- ಸಮುದ್ರಕ್ಕೆ, ಒಡಬಜ್ವಾಲಾಕಲಾಪಂ- ಬಡಬಾಗ್ನಿಯ ಉರಿಯ ಸಮೂಹ; ವಿವೇಕನಗಾಗ್ರಸ್ಫುಟಮೇಘವಹ್ನಿ— ತಿಳುವಳಿಕೆಯೆಂಬ ಬೆಟ್ಟದ ತುದಿಗೆ ವ್ಯಕ್ತವಾದ ಸಿಡಿಲು; ಎನಿಪ, ಈಕೋಪಾಗ್ನಿ, ಮನೋವನಜಾತಾಂಚಿತಚಿನ್ಮರಂದರಸಮಂ— ಮನಃ- ಮನಸ್ಸೆಂಬ, ವನಜಾತ- ಕಮಲದಲ್ಲಿ, ಅಂಚಿತ- ಪೂಜ್ಯವಾಗಿರುವ, ಚಿತ್- ಜ್ಞಾನವೆಂಬ, ಮರಂದರಸಮಂ- ಮಕರಂದವನ್ನು, ಪೀರ್ಗುಂ- ಕುಡಿಯುವದು; ಕಾಯ್ಪು- ಕೃಷ್ಣ್ಯವು, ಪೆರೆ- ಹತ್ತಲು, ತಜ್ಜೀವನಂ- ಆ ಪ್ರಾಣವನ್ನು, ಪೀರ್ಗುಂ. ... ... ... ... ... ॥ ೧೨ ॥

ಹೃದಯಾಲವಾಲದೊಳ್- ಮನಸ್ಸೆಂಬ ಪಾತೆಯಲ್ಲಿ, ಪುಟ್ಟಿದ, ವಿಮಳಜ್ಞಾನಲತೆಗೆ- ನಿರ್ಮಲವಾದ ಮೋಕ್ಷವಿಷಯಕಬುದ್ಧಿಯೆಂಬ ಬಳ್ಳಿಗೆ, ಶಮಜಲಮುಂ- ಶಾಂತಿಯೆಂಬ ನೀರನ್ನು, ಸೂಸದೆ- ಚೆಲ್ಲದೆ, ಕೋ

ಸದೆ ಕೋಪಶಿಖಿಯಿ ನುರುಪಿದೊ | ಡದು ಸುಖರಸಮೋಕ್ಷಫಲಮ ನೇ ನಿತ್ತಪುದೆ ||೭೩||
ಚಂ || ಧನವನಿತಾನಿಕೇತನಮ ನೊಲ್ಲದೆ ಬಿಟ್ಟು ವಿರಕ್ತಿವೃತ್ತಿಯಿಂ | ಮನದೊಳೆ
ಶಂಕೆಗೆಯ್ದು ಶಿವಯೋಗ ಸುಖಂಬಡೆಯಲ್ಕೆ ಬಂದು ಕಾ || ನನದೆಡೆಗೀಶ್ವರಾಂಘ್ರಿ ಯುಗ
ಮಂ ನೆಲೆ ಜಾನಿಸುತಿರ್ದ್ದ ಮಿಲ್ಲಿ ಕೆ | ಮ್ಮನೆ ನೆಳಲಾಸೆವೆತ್ತು ಮುಳಿಸಾಂತಪೆ ನಿನ್ನವೊ
ಲಾರೊಗಾವಿಲರ್ || ... ... ... ... ||೭೪||
ಕಂ || ಸೋಲ ಮಿದೆಂಬ ರ್ಕರ್ಬ್ಬಿನ | ಕೋಲೊಂದಿನಿಸುಳಿಯೆ ತರಿಯೆ ಕರ್ಬ್ಬಿನಪೊರೆ
ಯಂ || ಲೀಲೆಮಿಗೆ ತಾಳ್ದ ಶೀಲದ | ಜಾಲದೊಳನಿಸುಳಿಯೆ ಸೋಲಮಲ್ಲದೆಪೆರತೇಂ ||೭೫||
ಕಂ || ಕಡುಬಾಸೆಗೆಯ್ದು ರಣದೊ | ಳ್ತೊಡಂಕಿ ಸೋಲ್ತಸಿಯ ನಿಟ್ಟು ಬರ್ಪ್ಪ
ನ ತೆರದಿಂ || ನುಡಿಯಂತೆ ನಡೆಯ ಲರಿಯದ | ಜಡರಂ ಮೃಡಭಕ್ತ ರೊಲ್ವರೇವಸುಮ
ತಿಯೊಳ್ || ... ... ... ... .. ||೭೬||
ಕಂ || ಶಿವಭಕ್ತಿಗೆ ಶಿವಯೋಗಕೆ | ಶಿವವ್ರತಕ್ಕಮಳತರಶಿವಜ್ಞಾನಕೆ ಶಾಂ || ತಿವಿಹಿ
ತಮದಿಲ್ಲದಿರೆ ಕೇ | ಳ್ಲವಣೋನವ್ಯಂಜನೋಪಮಾನ ಮದಕ್ಕುಂ || ... ||೭೭||
ಕಂ || ಎನೆ ಕೇಳ್ದು ಮಾದಿರಾಜಂ | ಮುನಿಸಳಿದು ಬಿಗುರ್ತು ವಿಸ್ಮಯಂಬಡೆವೃತ

---

ಪಶಿಖಿಯಿಂ- ಕೋಪವೆಂಬ ಬೆಂಕಿಯಿಂದ, ಉರುಪಿದೊಡೆ- ಸುಟ್ಟರೆ, ಅದು-ಆ ಬಳ್ಳಿಯು, ಸುಖರಸಮೋಕ್ಷ
ಫಲಮಂ- ಸೌಖ್ಯವೆಂಬಮೃತವುಳ್ಳ ಮುಕ್ತಿಯೆಂಬ ಹಣ್ಣನ್ನು, ಇತ್ತಪುದೇಂ? ... ||೭೩||

ಧನವನಿತಾನಿಕೇತನಮಂ— ಧನ- ಹಣ, ವನಿತಾ- ಸ್ತ್ರೀ, ನಿಕೇತನಮಂ- ಮನೆಯನ್ನು, ಒಲ್ಲದೆ-ಬ
ಯಸದೆ, ಬಿಟ್ಟು, ವಿರಕ್ತಿವೃತ್ತಿಯಿಂ- ವೈರಾಗ್ಯವ್ಯಾಪಾರದಿಂದ, ಮನದೊಳೆ, ಶಂಕೆಗೆಯ್ದು- ಊಹಿಸಿ, ಶಿ
ವಯೋಗಸುಖಂಬಡೆಯಲ್ಕೆ, ಕಾನನದ, ಎಡೆಗೆ, ಬಂದು, ಈಶ್ವರಾಂಘ್ರಿಯುಗಮಂ, ಜಾನಿಸುತೆ-ಧ್ಯಾನಮಾ
ಡುತ್ತ, ಇರ್ದ್ದಂ, ಇಲ್ಲಿ, ಕೆಮ್ಮನೆ- ವ್ಯರ್ಥವಾಗಿ, ನೆಳಲ, ಆಸೆವೆತ್ತು-- ಅಪೇಕ್ಷೆಯಂ ಹೊಂದಿ, ಮುಳಿಸಾಂ
ತಪೆ- ಕೋಪವಂ ಹೊಂದುವೆ! ನಿನ್ನವೋಲ್, ಗಾವಿಲರ್- ಮೂಢರು, ಆರೊ? ... ||೭೪||

ಕರ್ಬ್ಬಿನ— ಕಬ್ಬಿನ, ಪೊರೆಯಂ- ಹೊರೆಯನ್ನು, ತರಿಯೆ- ಕತ್ತರಿಸಿದರೆ, ಕರ್ಬ್ಬಿನ, ಕೋಲ್, ಒಂದುಇ
ನಿಸು- ಒಂದಿಷ್ಟು, ಉಳಿಯೆ- ಅವಶಿಷ್ಟವಾದರೆ, ಇದು, ಸೋಲಂ- ಸೋಲುವಿಕೆ, ಎಂಬರ್; ಲೀಲೆ- ವಿಲಾ
ಸವು, ಮಿಗೆ- ಹೆಚ್ಚಾಗಲು, ತಾಳ್ದ, ಶೀಲದ- ಸದಾಚಾರದ, ಜಾಲದೊಳ್-ಸಮೂಹದಲ್ಲಿ, ಇನಿಸು, ಉಳಿಯೆ,
ಸೋಲಂ, ಅಲ್ಲದೆ, ಪೆರತುಮಂ- ಬೇರೆಯೇನು ? ... ... ... ||೭೫||

ಕಡುಬಾಸೆಗೆಯ್ದು-ಅತ್ಯಂತ ಪ್ರತಿಜ್ಞೆಯಂ ಮಾಡಿ, ರಣದೊಳ್- ಯುದ್ಧದಲ್ಲಿ, ತೊಡಂಕಿ- ಸೆಂಧಿ
ಸಿ, ಸೋಲ್ತು- ಅಸಿಯಂ- ಕತ್ತಿಯನ್ನು, ಇಟ್ಟು, ಬರ್ಪ್ಪನ-ಬರುವವನ, ತೆರದಿಂ— ರೀತಿಯಿಂದ, ವಸುಮ
ತಿಯೊಳ್ ಭೂಮಿಯಲ್ಲಿ, ನುಡಿಯಂತೆ, ನಡೆಯಲ್-ಆಚರಿಸುವದಕ್ಕೆ, ಅರಿಯದ-ತಿಳಿಯದ, ಜಡರಂ-ಮೂ
ಢರನ್ನು, ಮೃಡಭಕ್ತರ್, ಒಲ್ವರೇ- ಪ್ರೀತಿಸುವರೇ? ... ... ... ||೭೬||

ಶಿವಭಕ್ತಿಗೆ, ಶಿವಯೋಗಕೆ, ಶಿವವ್ರತಕ್ಕೆ, ಅಮಳತರಶಿವಜ್ಞಾನಕೆ, ಶಾಂತಿ, ವಿಹಿತಂ- ಉಚಿತವಾದ
ದ್ದು, ಅದು- ಆ ಶಾಂತಿಯು, ಇಲ್ಲದೆ, ಇರೆ, ಕೇಳ್, ಅದು- ಆ ಶಿವಭಕ್ತಿ ಮುಂತಾದದ್ದು, ಲವಣೋನವ್ಯಂ
ಜನೋಪಮಾನಂ— ಲವಣ- ಉಪ್ಪಿನಿಂದ, ಊನ- ಕಡಮೆಯಾದ, (ಅಂದರೆ ಉಪ್ಪಿಲ್ಲದ) ವ್ಯಂಜನ-ಉಪ್ಪಿ
ನಕಾಯಿನ, ಉಪಮಾನಂ- ಸಾದೃಶ್ಯವುಳ್ಳದ್ದು, ಅಕ್ಕುಂ. ... ... ... ||೭೭||

ಎನೆ, ಮಾದಿರಾಜಂ, ಕೇಳ್ದು, ಮುನಿಸು- ಕೋಪವು, ಅಳಿದು- ನಾಶವಾಗಿ, ಬಿಗುರ್ತು-ಭಯಪಟ್ಟು,

ನೋಳ್ಪ ನಿತರರೊಳೆ ಮಲ್ಲಿಕಾರ್ಜುನ । ಮುನಿಪಂ ತಾಂ ಮುನ್ನಿನಂದಮಂ ಕೈಕೊಂಡಂ ॥

ವ॥ ಅಂತವಂ ಗೊಲ್ಲವರಿಜ ನುಳಿದು ಗುರುರೂಪಮಂ ಕೈಕೊಂಡಿರೆ ಮಾದಿರಾಜಂ ಕಂಡು ನಾಣ್ಚಿ ತನು ಜರಿಯೆ ಮನಂ ಕದಡಿ ಶೋಕಾಶ್ರುಕಣಕಲಿತಮುಖನಾಗಿ ತಲೆವಾಗಿ ತಲ್ಲಣಂಬೆತ್ತು॥ * * * * * * * * * * * * * * * *

ಮತ್ತೇ ॥ಎನಗೇಕಪ್ಪುದು ಶಾಂತಿ ಸೈರಣೆ ಮಹಾಸದ್ಭಕ್ತಿ ಸಂಪತ್ತಿ ಪಾ । ವನವೈರಾಗ್ಯ ಮಪಕ್ವದುರ್ಮತಿಗೆ ದುರ್ದಾಂತಂಗೆ ತಾಳ್ದಪ್ಪುದೇ ॥ ತನಿವಣ್ಣೊಪ್ಪವು ನಚ್ಚಪೂಮಿಡಿ ವಲಂ ಕೊಯ್ದಿಕ್ಕೆ ತಾನಂತೆ ಚೆ । ದ್ಘನಸಾರಾಮೃತ ಮೀಶನೊಲ್ಮೆವಡೆದರ್ಗಕ್ಕುಂ ಪೆರರ್ಗಕ್ಕುಮೇ ॥ ... ... ... ... ॥೭೯॥

ಕಂ ॥ ಸಕಳೇಶ ನಿಮ್ಮ ಕಾರುಣ್ಯಕಟಾಕ್ಷಮದೊಂದದೆನಗೆ ಬರ್ಕುಮೆ ಶಾಂತಿ ॥ ಪ್ರಕಟಸುಖಂ ಶರಣಾಗೆನು । ತಕಳಂಕಂ ಮಲ್ಲಿಕಾರ್ಜುನಂ ಗೆರಗಿರ್ದಂ ॥ ... ॥೮೦॥

ವ ॥ ಆಗಳಾಶಿವಯೋಗಿ ಯಾತನಂ ತೆಗೆದೆತ್ತಿ ಬಿಗಿಯಪ್ಪಿ ಮೈದಡವಿ ಮನ್ನಿಸಿ ॥

ಉ ॥ ನಂದನ ಕೇಳಪಕ್ವಮತಿ ನೀನಣಮಲ್ತು ಮದೀಯದರ್ಶನಂ । ಕುಂದದ ಪಕ್ವದುರ್ಮತಿಗದೇಂ ದೊರೆಕೊಳ್ಗುಮೆ ನೀಂ ಧರಿತ್ರಿಗೆ ॥ ಯೆಯ್ದಂದೊಡೆ ಪೋಗೆ ನೆಂದ ನುಡಿಗಾಂ

---

ವಿಸ್ಮಯಂಬಡೆವುತೆ- ಆಶ್ಚರ್ಯಪಡುತ್ತ, ನೋಳ್ಪ, ಅನಿತರೊಳೆ, ಮಲ್ಲಿಕಾರ್ಜುನಮುನಿಪಂ, ತಾಂ, ಮುನ್ನಿನ, ಅಂದಮಂ- ರೀತಿಯನ್ನು, ಕೈಕೊಂಡಂ. ... ... ... ॥೭೮॥

ಅಂತು, ಅವಂ, ಗೊಲ್ಲವರಿಜಂ- ದನವಂಕಾಯುವವನಾಕರವನ್ನು, ಉಳಿದು, ಗುರುರೂಪಂ, ಕೈಕೊಂಡು- ಸ್ವೀಕರಿಸಿ, ಇರೆ, ಮಾದಿರಾಜಂ, ಕಂಡು, ನಾಣ್ಚಿ, ತನು, ಜರಿಯೆ– ಕೃಶವಾಗಲು, ಮನಂ, ಕದಡಿ- ಚಂಚಲವಾಗಿ, ಶೋಕಾಶ್ರುಕಣಕಲಿತಮುಖಂ- ದುಃಖದಿಂದುಂಟಾದ ಕಣ್ಣೀರಿನ ಹನಿಯಿಂ ಕೂಡಿದ ಮುಖವುಳ್ಳವನು, ಆಗಿ, ತಲೆವಾಗಿ, ತಲ್ಲಣಂಬೆತ್ತು- ಭಯದಿಂ ಬೆರಗಾಗಿ. * * * * * * * *

ಶಾಂತಿ, ಸೈರಣೆ- ಕ್ಷಮೆ, ಮಹಾಸದ್ಭಕ್ತಿಸಂಪತ್ತಿ- ಅಧಿಕವಾದ ಒಳ್ಳೆಯ ಭಕ್ತಿಯೆಂಬ ಐಶ್ವರ್ಯವು, ಪಾವನವೈರಾಗ್ಯಂ- ಪರಿಶುದ್ಧವಾದ ವಿರಕ್ತಿಯು, ಅಪಕ್ವದುರ್ಮತಿಗೆ- ಹಣ್ಣಾಗದ ಕೆಟ್ಟಬುದ್ಧಿಯುಳ್ಳ, ದುರ್ದಾಂತಂಗೆ- ದುಷ್ಟವಾದ ಇಂದ್ರಿಯನಿಗ್ರಹವುಳ್ಳ, (ಅಂದರೆ ಇಂದ್ರಿಯನಿಗ್ರಹಶೂನ್ಯನಾದ) ಎನಗೆ, ಏಕೆ ಅಪ್ಪುದು? ಕೊಯ್ದು, ಇಕ್ಕೆ, ವಲಂ, ಅಚ್ಚಪೂಮಿಡಿ- ನಿರ್ಮಲವಾದ ಹೂಗಾಯಿಯು, ತಾಂ, ತನಿವಣ್ಣ-ಪಕ್ವವಾದ ಹಣ್ಣಿನ, ಒಪ್ಪಮಂ- ರೀತಿಯನ್ನು, ತಾಳ್ದಪ್ಪುದೇ- ಹೊಂದುವದೇ? ಅಂತೆ- ಹಾಗೆ, ಈಶನ, ಒಲ್ಮೆವಡೆದರ್ಗೆ- ಪ್ರೀತಿಯಂ ಹೊಂದಿದವರಿಗೆ, ಚೆದ್ಘನಸಾರಾಮೃತಂ- ಜ್ಞಾನವೆಂಬ ಸಾಂದ್ರವಾದ ಶ್ರೇಷ್ಠವಾದ ಅಮೃತವು, ಅಕ್ಕುಂ; ಪೆರರ್ಗೆ- ಅನ್ಯರಿಗೆ, ಅಕ್ಕುಮೇ ? ... ... ... ॥೭೯॥

ಅಕಳಂಕಂ- ನಿರ್ದುಷ್ಟನಾದ ಮಾದರಸನು, ಸಕಳೇಶ! ನಿಮ್ಮ, ಕಾರುಣ್ಯಕಟಾಕ್ಷಂ– ದಯಾವಿಶಿಷ್ಟವಾದ ಕಡೆಗಣ್ಣೋಟವು, ಅದು, ಒಂದದ, ಎನಗೆ, ಶಾಂತಿಪ್ರಕಟಸುಖಂ- ಶಾಂತಿಯಿಂದ ಪ್ರಸಿದ್ಧವಾದ ಸೌಖ್ಯವು, ಬರ್ಕುಮೆ? ಎನಗೆ, ಶರಣ್- ಸಂರಕ್ಷಕನು, ಆಗು, ಎನುತೆ, ಎರಗಿ, ಇರ್ದಂ. ... ॥೮೦॥

ಆಗಳ್, ಆಶಿವಯೋಗಿ, ಆತನಂ-ಮಾದಿರಾಜನನ್ನು, ತೆಗೆದು, ಎತ್ತಿ, ಬಿಗಿಯಪ್ಪಿ-ಮೈದಡವಿ, ಮನ್ನಿಸಿ.

ನಂದನ-ಮಗನೇ! ಕೇಳ್, ನೀಂ, ಅಣಂ-ಸ್ವಲ್ಪವೂ, ಅಪಕ್ವಮತಿ-ಹಣ್ಣಾಗದಬುದ್ಧಿಯುಳ್ಳವನು, ಅಲ್ತು; ಕುಂದದ- ಕಮ್ಮಿಯಾಗದ, ಅಪಕ್ವದುರ್ಮತಿಗೆ, ಅಮದೀಯದರ್ಶನಂ-ಆ ನನ್ನನ್ನು ಕಾಣುವಿಕೆಯು, ದೊರೆಕೊಳ್ಗುಮೇಂ- ಲಭಿಸುವದೇ, ನೀಂ, ಧರಿತ್ರಿಗೆ, ಎಯ್ದು- ಹೋಗು,ಎಂದೊಡೆ, ಪೋಗೆಂ- ಹೋಗುವದಿಲ್ಲ.

ನೆಗಳ್ದೆನ್ನ ವಿನೋದದ ಮಿಂತಿದಾ । ವಂದದಿ ನಾಡೊಡು ದರೆಗೆ ಪೀನಿರದೆಯುದ್ದವ ಕಜ್ಜ
ಮುತ್ತಮಂ ॥ ... ... ... .. ॥೮೧॥

ವ ॥ ಅದೇಂಕಾರಣಮೆಂಬೆಯಪ್ಪೊಡೆ॥ * * * * * * * * *

ಕಂ ॥ ಹರನಿತ್ತ ನಿರೂಪದ ಭಾ । ಸುರವೃಷಭಂ ಬಸವರೂಪದಿಂ ಬಂದೀಗಳ್ ॥ ದ
ರೆಗೆಸೆದಿರ್ಪಂ ಭಕ್ತಿಯ । ಪರಿಯಂ ಪ್ರಕಟಿಸುತೆ ಭಕ್ತಜನಮಂದಾರಂ ॥ ... ॥೮೨॥

ಕಂ ॥ ಆತನಪೊರೆಗೆಯ್ದಿ ಕರಂ । ನೂತನಗೀತಾಮೃತಾಂಬುನಿಧಿಯೊಳ ಗವನಂ ॥
ಪ್ರೀತಿಯೊಳೋಲಾಡಿಸಿ ವಿ । ಖ್ಯಾತಸುಖಂ ಬೆತ್ತು ಭಕ್ತಿಯಂ ಪ್ರಕಟಿಸುತಂ ॥೮೩॥

ಕಂ ॥ ಶ್ರೀವೀರಶೈವದೇಶಿಕ । ಭಾವಮ ನಾಳ್ದೆಸೆದು ಚರಿಸುತಂ ಬರ್ಪುದು ನೀಂ ॥
ನೈವತ್ತುಬರಿಸಕೆಮ್ಮ ಪ । ದಾವಾಸಕ್ಕೆಂದು ನುಡಿದು ಮಂಗುಳ್ದಿಂತೆಂದಂ ॥ / ॥೮೪॥

ಕ ॥ ಸ್ಥಿತಿ ನಿನಗೆ ಸಪ್ತಶತಪರಿ । ಮಿತವತ್ಸರ ಪಿಳೆಯೊ ಳುಳಿದುದೈವತ್ತುಸಮು ॥
ನ್ನತವತ್ಸರವದು ಕಳೆದೊಡೆ । ಸುತ ನಿನ್ನಂ ಬರಿಸಿ ಕೊಳ್ವೆ ನೆನ್ನೆಡೆಗೊಲವಿಂ ॥೮೫॥

ವ ॥ ಎಂದುಸಿರೆ ಮಹಾಪ್ರಸಾದಮೆಂದು ನಿಜಾನುಜ್ಞೆಯಂ ಕೈಕೊಂಡ ಮಾದಿರಾಜ
ನಂ ನಿನ್ನ ಮನೋರಥಮ ನೆರೆಯೆನಲೊಡಂ ॥ * * * * * * * * *

ಶಾ ॥ ಶ್ರೀಯಂ ಬೇಡುವೊಡನ್ಯಕಾಂತೆ ಘುನವೀರ್ಯಾಯುಷ್ಯಮಂ ಬೇಳ್ಪನೇ । ಮಾ

---

ಎಂದ, ನುಡಿಗೆ, ಆಂ, ಇಂತು, ನೆಗಳ್ದ, ಮಾಡಿದ, ಇದು, ಎನ್ನ, ವಿನೋದಂ; ನೀಂ, ಆವಂದದಿಂ-ಆದೊಡಂ-ಯಾವರೀತಿಯಿಂದಲಾದರೂ, ದರೆಗೆ, ಇರದೆ, ಎಯ್ದುವ, ಕಜ್ಜಂ- ಕಾರ್ಯವು, ಉತ್ತಮಂ. ... ॥೮೧॥

ಅದೇಂಕಾರಣಂ ? ಎಂಬೆಯಪ್ಪೊಡೆ-ಎನ್ನುವೆಯೆಂದರೆ:— * * * * * * * *

ಹರಂ, ಇತ್ತ, ನಿರೂಪದೆ- ಅಪ್ಪಣೆಯಿಂದ, ಭಾಸುರವೃಷಭಂ, ಈಗಳ್, ದರೆಗೆ, ಬಸವರೂಪದಿಂ, ಬಂದು, ಭಕ್ತಿಯ, ಪರಿಯಂ- ರೀತಿಯನ್ನು, ಪ್ರಕಟಿಸುತೆ, ಭಕ್ತಜನಮಂದಾರಂ- ಭಕ್ತರಿಗೆ ಕಲ್ಪವೃಕ್ಷನಾಗಿ, ಎಸೆದು, ಇರ್ಪಂ. ... ... ... ... ... ॥೮೨॥

ಆತನ, ಪೊರೆಗೆ- ಬಳಿಗೆ, ಎಯ್ದಿ, ಕರಂ-ಅತ್ಯಂತವಾಗಿ, ನೂತನಗೀತಾಮೃತಾಂಬುನಿಧಿಯೊಳಗೆ-ಹೊಸದಾದ ಸಂಗೀತವೆಂಬ ಕ್ಷೀರಸಮುದ್ರದಲ್ಲಿ, ಅವನಂ- ಬಸವೇಶ್ವರನನ್ನು, ಪ್ರೀತಿಯೊಳ್- ಸಂತೋಷದಿಂದ ಓಲಾಡಿಸಿ, ವಿಖ್ಯಾತಸುಖಂಬೆತ್ತು- ಪ್ರಸಿದ್ಧವಾದ ಸೌಖ್ಯವಂ ಹೊಂದಿ, ಭಕ್ತಿಯಂ, ಪ್ರಕಟಿಸುತಂ. ॥೮೩॥

ಶ್ರೀವೀರಶೈವದೇಶಿಕಭಾವಮಂ- ಷಡ್ಗುಣೈಶ್ವರ್ಯಸಂಪನ್ನವಾದ ವೀರಶೈವಮತದಗುರುತ್ವವನ್ನು, ಆಳ್ದು- ಹೊಂದಿ, ಎಸೆದು, ಚರಿಸುತಂ, ನೀಂ, ಐವತ್ತುಬರಿಸಕೆ- ಐವತ್ತುವರ್ಷಕ್ಕೆ, ಎಮ್ಮ ಪದಾವಾಸಕ್ಕೆ- ಪಾದದೆಡೆಗೆ, ಬರ್ಪುದು; ಎಂದು, ನುಡಿದು, ಮಂಗುಳ್ದು- ಪುನಃ, ಇಂತು, ಎಂದಂ. ॥೮೪॥

ನಿನಗೆ, ಸಪ್ತಶತಪರಿಮಿತವತ್ಸರಂ- ಏಳ್ನೂರುವರ್ಷಗಳು, ಇಳೆಯೊಳ್, ಸ್ಥಿತಿ- ವಾಸವು; ಸಮುನ್ನತವತ್ಸರಂ, ಐವತ್ತು, ಉಳಿದುದು, ಅದು, ಕಳೆದೊಡೆ, ಸುತ ! ನಿನ್ನಂ, ಎನ್ನ, ಎಡೆಗೆ- ಸ್ಥಳಕ್ಕೆ, ಒಲವಿಂ-ಪ್ರೀತಿಯಿಂದ, ಬರಿಸಿಕೊಳ್ವೆಂ ಬರಮಾಡಿಕೊಳ್ಳುವೆನು. ... ... ... ॥೮೫॥

ಎಂದು, ಉಸಿರೆ- ಹೇಳಲು, ಮಹಾಪ್ರಸಾದಂ, ಎಂದು, ನಿಜಾನುಜ್ಞೆಯಂ- ತನ್ನ ಅಪ್ಪಣೆಯನ್ನು, ಕೈಕೊಂಡ- ಸ್ವೀಕರಿಸಿದ, ಮಾದಿರಾಜನಂ- ಮಾದಿರಾಜನನ್ನುಕುರಿತು, ನಿನ್ನ, ಮನೋರಥಮಂ, ಎರೆ- ಬೇಡು, ಎನೆ, ಒಡಂ -ಕೂಡಲೇ. * * * * * * * * * * * * * *

ಶ್ರೀಯಂ- ಲಕ್ಷ್ಮಿಯನ್ನು, ಬೇಡುವೊಡೆ- ಬೇಡಬೇಕಾದರೆ, (ಅವಳ್) ಅನ್ಯಕಾಂತೆ- ಮತ್ತೊಬ್ಬನಹೆಂ

ಯಾಮಂದಿರ ಮಿಂದ್ರಭೋಗ ಮಚಿರಂ ಕೈವಲ್ಯಮುಂ ಪೇಳ್ವೊಡಾ ॥ ಮ್ನಾಯಾತೀತಮನಿ
ಪ್ಪ ಶಂಭುಪದ ಮಿಂತನ್ಯಾರ್ಥಮಂ ಬೇಡುವ । ನ್ಯಾಯಕ್ಕಾಂ ಬಗೆದಾರೆ ನೆಂದೆರಗಿ ಬೀ
ಳ್ಕೊಂಡು ಮಹಾಭಕ್ತಿಯಿಂ ॥ ... ... .. ||೮೬||

ವ ॥ ಅನಂತರಂ ॥ ಮಹಾಸ್ರ ॥ ವಿಮಳಸ್ವಾಂತಾಬ್ಜದೊಳ್ ಧ್ಯಾನಿಸುತೆ ವಿಸು
ಪತದ್ದೇಶಿಕಶ್ರೀಪದಾಂಭೋಜಮಂ । ಜವ ನಾಗಳ್ಬಂದು ಕಲ್ಯಾಣಮ ನತಿಜವದಿಂ ಪೊಕ್ಕು ಲಿಂ
ಗಾರ್ಚನಾಸಂ॥ ಭ್ರಮದೊಳ್ ತಳ್ತಿರ್ದ ಭಾಸ್ವದ್ಬಸವನಿದಿರೊಳಾಲಿಂಗದೊಳ್ ಬಿಂಬಿಸಿರ್ದಂ।
ಪ್ರಮಥೇಂದ್ರಾಚಾರಸಾರಪ್ರಥಿತಗುಣಗಣಭ್ರಾಜಿತಂ ಮಾದಿರಾಜಂ ॥ ... ||೮೭||

ಉ ॥ ಸಂಗಮದೇವನೊಳ್ ಪೊಳೆದಜಂಗಮಮೂರ್ತಿಯ ನೀಕ್ಷಿಸುತ್ತೆ ಸಾ । ಷ್ಟಾಂ
ಗಲಸತ್ಪ್ರಣಾಮಮ ನೊಡರ್ಚುತೆ ಮೆಲ್ಲನೆ ನೋಳ್ಪವೇಳೆಯೊಳ್ ॥ ಮುಂಗಡೆ ನಿಂದು ಮಾ
ದರಸ ನಾಪರಿಜಾಂತಿರೆ ನೋಡಿ ವಿಸ್ಮಯಾ । ಲಿಂಗಿತಮಾನಸಂ ಬಸವನೊಲ್ದೆರಗಿರ್ದ ನವಂ
ಗೆ ಭಕ್ತಿಯಿಂ ॥ ... .. ... .. ||೮೮||

ವ ॥ ಆಗಳ್ ॥ ರಥೋದ್ಧತವೃತ್ತಂ ॥ ಮಾದಿರಾಜವಿಭು ತದ್ವೃಷೇಂದ್ರನಂ ।

---

ಡತಿ; ಘನದೀರ್ಘಾಯುಷ್ಯಮಂ, ಬೆಪ್ಪನೇ- ಯಾಚಿಸಲೇ, (ಅದು) ಮಾಯಾಮಂದಿರಂ-ಮೋಸಕ್ಕೆ ಆಶ್ರಯವಾದದ್ದು; ಇಂದ್ರಭೋಗಂ- ಭೋಗೇಂದ್ರಸೌಖ್ಯವು, ಅಚಿರಂ- ಅಲ್ಪಕಾಲಿಕವಾದದ್ದು; ಕೈವಲ್ಯಮಂ- ಮೋಕ್ಷವನ್ನು, ಪೇಳ್ವೊಡೆ, ಆಮ್ನಾಯಾತೀತಂ-ವೇದಗಳನ್ನು ಅತಿಕ್ರಮಿಸಿದ್ದು; ಎನಿಪ್ಪ, ಶಂಭುಪದಂ-ಈಶ್ವರನ ಪಾದವು, (ಸ್ಥಾನವು;) ಇಂತು, ಅನ್ಯಾರ್ಥಮಂ- ಮತ್ತೊಬ್ಬರ ಪದಾರ್ಥವನ್ನು, ಬೇಡುವ, ಅನ್ಯಾಯಕ್ಕೆ, ಆಂ, ಬಗೆದಾರೆಂ- ಮನಸ್ಸಂ ಕೊಡುವದಿಲ್ಲ; ಎಂದು, ಮಹಾಭಕ್ತಿಯಿಂ, ಎರಗಿ- ನಮಸ್ಕರಿಸಿ, ಬೀಳ್ಕೊಂಡು- ಕಳುಹಿಸಿಕೊಂಡನು, ... ... ... .. ||೮೬||

ಪ್ರಮಥೇಂದ್ರಾಚಾರಸಾರಪ್ರಥಿತಗುಣಗಣಭ್ರಾಜಿತಂ— ಪ್ರಮಥೇಂದ್ರ- ಪ್ರಮಥಶ್ರೇಷ್ಠರ, ಆಚಾರ- ನಡತೆಯಿಂದ, ಸಾರ- ಶ್ರೇಷ್ಠನಾದ, ಪ್ರಥಿತ- ಪ್ರಸಿದ್ಧವಾದ, ಗುಣ- ಸದ್ಗುಣಗಳ, ಗಣ- ಸಮೂಹದಿಂದ, ಭ್ರಾಜಿತಂ- ಪ್ರಕಾಶಿಸುವ, ಮಾದಿರಾಜಂ,ವಿಮಳಸ್ವಾಂತಾಬ್ಜದೊಳ್- ನಿರ್ಮಲವಾದ ಹೃದಯಕಮಲದಲ್ಲಿ, ವಿಸುಪತದ್ದೇಶಿಕಶ್ರೀಪದಾಂಭೋಜಮಂ- ಪ್ರಕಾಶಿಸುವ ಆ ಗುರೂತ್ತಮನ ಪಾದಕಮಲವನ್ನು,ಧ್ಯಾನಿಸುತೆ- ಧ್ಯಾನಮಾಡುತ್ತ, ಆಗಳ್, ಬಂದು, ಅತಿಜವದಿಂ- ಬಹುವೇಗದಿಂದ, ಕಲ್ಯಾಣಮಂ, ಪೊಕ್ಕು, ಲಿಂಗಾರ್ಚನಾಸಂಭ್ರಮದೊಳ್- ಲಿಂಗಪೂಜೆಯ ಸಡಗರದಲ್ಲಿ, ತಳ್ತು- ಸೇರಿ, ಇರ್ದ, ಭಾಸ್ವದ್ಬಸವನ, ಇದಿರೊಳ್, ಆಲಿಂಗದೊಳ್- ಆ ಬಸವೇಶ್ವರನ ಶಿವಲಿಂಗದಲ್ಲಿ, ಬಿಂಬಿಸಿ- ಪ್ರತಿಫಲಿಸಿ, ಇರ್ದಂ. ... ||೮೭||

ಸಂಗಮದೇವನೊಳ್, ಪೊಳೆದ, ಜಂಗಮಮೂರ್ತಿಯಂ, ಬಸವಂ, ಈಕ್ಷಿಸುತ್ತೆ, ಸಾಷ್ಟಾಂಗಲಸತ್ಪ್ರಣಾಮಮಂ, ಒಡರ್ಚುತೆ- ಮಾಡುತ್ತ, ನೋಳ್ಪವೇಳೆಯೊಳ್, ಮಾದರಸಂ, ಮುಂಗಡೆಯಂದು-ಮುಂಭಾಗಕ್ಕೆ ಬಂದು, ಆಪರಿಜಾಂತು- ಆ ಲಿಂಗದಲ್ಲಿ ತೋರಿದ ಆಕಾರವನ್ನು ಧರಿಸಿ, ಇರೆ, ನೋಡಿ, ವಿಸ್ಮಯಾಲಿಂಗಿತಮಾನಸಂ- ಆಶ್ಚರ್ಯದಿಂದಾಲಿಂಗಿಸಲ್ಪಟ್ಟ ಮನಸ್ಸುಳ್ಳವನಾಗಿ, ಒಲ್ದು, ಭಕ್ತಿಯಿಂ, ಅವಂಗೆ- ಮಾದಿರಾಜನಿಗೆ, ಎರಗಿ, ಇರ್ದಂ. ... ... ... ... ... ||೮೮||

ಮಾದಿರಾಜವಿಭು, ತದ್ವೃಷೇಂದ್ರನಂ, ಮೋದದಿಂದೆ, ಬಿಗಿಯಪ್ಪಿ, ಸಾರಸಂವಾದಂ- ಶ್ರೇಷ್ಠವಾದ ಸಂಗೀತಸ್ವರಮಂತ್ರವು, ಒಂದೆ- ಹೊಂದಿರಲು, ಕೃಪೆಗೆಯ್ದು- ದಯಪಾಲಿಸಿ, ಸರ್ವತತ್ವಾದಿಜೆತ್ಸ್ವಿಷಮಂ-

ನೋಡದಬಿಂದೆ ಪಗಿಯುಪ್ಪಿ ಸೌರಸಂ ॥ ವಾದವನೊಂದೆ ಕೃಪೆಗೆಯ್ದು ಸರ್ವತ । ತ್ವಾದಿಚಿತ್ಸು
ಖಮನೀವೃತೊಪ್ಪಿದಂ ॥ ... ... ... ... ॥೮೯॥

ಮ ॥ ಸ್ರ ॥ ಪಡೆದಾಗಳ್ಮಾದಿರಾಜಾರ್ಯನ ಪದತಳಮಂ ಪೂಜಿಸುತ್ತಂ ವಿಳಾಸಾ ।
ಸ್ಪದಕಾರುಣ್ಯಾರ್ದ್ರತದ್ವೀಕ್ಷಣರುಚಿ ವಿಳಸಚ್ಚಂದ್ರಿಕಾಸಾರದಿಂ ಸ ॥ ಮ್ಮದದುಗ್ಧಾಂ
ಭೋಧಿ ಮೈವರ್ಚಿರೆ ನಲಿಯೆ ಹೃದಿಂದೀವರಂ ಚಿತ್ಕಳಾಸಂ । ಪದಮಂ ಕೈಕೊಂಡು ಕಣ್ಗೊ
ಪ್ಪಿದನತುಳಶಿವಾದ್ವೈತವಿದ್ಯಾಸಮುದ್ರಂ ॥ ... ... ॥೯೦॥

ಕಂ ॥ ಹರರೂಪನಮಾದಿರಾಜನ । ಚರಿತ್ರಮಂ ಕೇಳ್ದ ಪೇಳ್ದ ಪಠಿಸಿದ ಸುಜನರ್ ॥
ಪುರುಷಾರ್ಥಚತುಷ್ಟಯಮಂ । ವರಭಕ್ತಿಜ್ಞಾನವಿರತಿಯಂ ಸಲೆ ಪಡೆವರ್ ॥ ॥೯೧॥

ಲಲಿತಪದವೃತ್ತಂ ॥ ಭಾರ್ಗವಶುಕಾದಿಮುನಿವರ್ಗನುತ ಶಾಂಭವಸುಮಾರ್ಗಗಚರಿತ್ರ
ಹೃತದುರ್ಗತಿ ಸಮಸ್ತ । ಸ್ವರ್ಗಭವನಾರ್ಚಿತ ನಿಸರ್ಗಗುಣರಂಜಿತ ಯಜುರ್ಗತಮಹಾಮ
ನು ವಪುರ್ಗುಣವಿದೂರಾ ॥ ನರ್ಗಳಚಿದಾತ್ಮ ವಿಧುಮಾರ್ಗಣಹೃತೇಂದ್ರಪರ ದುರ್ಗಯಮದ

---

ಸಕಲತತ್ವಗಳಿಗೂ ಮೊದಲನೆಯದಾದ ಪರವಸ್ತುವಿಷಯಕವಾದ ಜ್ಞಾನದಿಂದುಂಟಾದ ಸೌಖ್ಯವನ್ನು, ಈ
ವುತೆ, ಒಪ್ಪಿದಂ. ... ... ... ... ... ॥೮೯॥

ಅತುಳಶಿವಾದ್ವೈತವಿದ್ಯಾಸಮುದ್ರಂ- ಅಸದೃಶವಾದ ಶಿವಾದ್ವೈತವಿದ್ಯೆಗೆ ಸಮುದ್ರನಾದ ಬಸವೇ
ಶ್ವರನು, ಪಡೆದು, ಆಗಳ್, ಮಾದಿರಾಜಾರ್ಯನ, ಪದತಳಮಂ, ಪೂಜಿಸುತ್ತಂ,ವಿಳಾಸಾ......ಆಸಾರದಿಂ—
ವಿಳಾಸ- ಲೀಲೆಗೆ, ಆಸ್ಪದ- ಆಶ್ರಯವಾದ, ಕಾರುಣ್ಯ- ದಯೆಯಿಂದ, ಆರ್ದ್ರ- ಸಿಕ್ತವಾದ, ತದ್ವೀಕ್ಷಣ-ಆ
ಮಾದಿರಾಜನ ನೋಟದ, ರುಚಿ- ಕಾಂತಿಯೆಂಬ, ವಿಳಸತ್- ಪ್ರಕಾಶಿಸುವ, ಚಂದ್ರಿಕಾ- ಬೆಳ್ದಿಂಗಳ, ಆಸಾ
ರದಿಂ- ಧಾರೆಯಿಂದ, ಸಮ್ಮದದುಗ್ಧಾಂಭೋಧಿ- ಸಂತೋಷವೆಂಬ ಕ್ಷೀರಸಮುದ್ರವು, ಮೈವರ್ಚಿ- ಅಭಿವೃದ್ಧ
ವಾಗಿ, ಇಗೆ, ಹೃದಿಂದೀವರಂ- ಹೃದಯವೆಂಬ ಕನ್ನೈದಿಲೆಯು, ಚಿತ್ಕಳಾಸಂಪದಮಂ- ಜ್ಞಾನವಿದ್ಯೆಯೆಂಬ
ಸಂಪತ್ತನ್ನು, ಕೈಕೊಂಡು, ಕಣ್ಗೆ, ಒಪ್ಪಿದಂ. ... ... ... ॥೯೦॥

ಹರರೂಪನಮಾದಿರಾಜನ, ಚರಿತ್ರಮಂ, ಕೇಳ್ದ, ಪೇಳ್ದ,ಪಠಿಸಿದ, ಸುಜನರ್, ಪುರುಷಾರ್ಥಚತುಷ್ಟ
ಯಮಂ- ಧರ್ಮ ಅರ್ಥ ಕಾಮ ಮೋಕ್ಷವೆಂಬ ಚತುರ್ವಿಧಪುರುಷಾರ್ಥಗಳನ್ನು, ವರಭಕ್ತಿಜ್ಞಾನವಿರತಿಯಂ-
ಶ್ರೇಷ್ಠವಾದ ಭಕ್ತಿಜ್ಞಾನವೈರಾಗ್ಯವನ್ನು, ಸಲೆ, ಪಡೆವರ್. ... ... ... ॥೯೧॥

ಭಾರ್ಗವ......ಚರಿತ್ರ— ಭಾರ್ಗವ, ಶುಕ, ಇವರುಗಳೇ, ಆದಿ- ಮೊದಲಾದ, ಮುನಿ- ಋಷಿಗಳ,
ವರ್ಗ- ಗುಂಪಿನಿಂದ, ನುತ-ಕೊಂಡಾಡಲ್ಪಟ್ಟ,ಶಾಂಭವಸುಮಾರ್ಗಗ—ಶಾಂಭವ-ಶಿವಸಂಬಂಧವಾದ,ಸುಮಾ
ರ್ಗಗ- ಒಳ್ಳೆಯಸರಣಿಯಲ್ಲಿ ಹೋಗಿರುವ,ಚರಿತ್ರ-ಚರಿತ್ರೆಯುಳ್ಳ, ಹೃತದುರ್ಗತಿ-ನಾಶಮಾಡಲ್ಪಟ್ಟ ದುರ್ಮಾ
ರ್ಗವುಳ್ಳ,ಸಮಸ್ತಸ್ವರ್ಗಭವನಾರ್ಚಿತ-ಎಲ್ಲಾ ದೇವತೆಗಳಿಂದಲೂ ಪೂಜಿಸಲ್ಪಟ್ಟ, ನಿಸರ್ಗಗುಣರಂಜಿತ- ಸ್ವ
ಭಾವಸಿದ್ಧವಾದ ಸದ್ಗುಣಗಳಿಂದ ಪ್ರಕಾಶಿಸುವ,ಯಜುರ್ಗತಮಹಾಮನು-ಯಜುರ್ವೇದವನ್ನುಹೊಂದಿದ ಅಧಿ
ಕವಾದ ಪ್ರಣವಮಂತ್ರಸ್ವರೂಪನಾದ, ವಪುರ್ಗುಣವಿದೂರ-ದೇಹಗುಣಗಳಿಗೆ ದೂರನಾದ, ಅನರ್ಗಳಚಿದಾತ್ಮ
ತಡೆಯಿಲ್ಲದ ಜ್ಞಾನಸ್ವರೂಪನಾದ, ವಿಧುಮಾರ್ಗಣ— ವಿಷ್ಣುವೇ. ಬಾಣವಾಗುಳ್ಳ, ಹೃತೇಂದ್ರಪರ-ಹೃತ-
ನಾಶಮಾಡಲ್ಪಟ್ಟ, * ಇಂದ್ರಪರ- ರಾಕ್ಷಸರುಳ್ಳ, ದುರ್ಗಯಮದರ್ಪಹರ- ದುಃಖದಿಂದಲೂ ಹೊಂದಲಸಾಧ್ಯ
ನಾದಯಮನ ಗರ್ವವನ್ನು ನಾಶಮಾಡಿದ; ಭರ್ಗಹೃದಯಾಬ್ಜಾಂತರ್ಗತ- ಈಶ್ವರನ ಮನಸ್ಸೆಂಬ ಕಮಲದ

---

* (ಅವ) ಇಂದ್ರ- ದೇವೇಂದ್ರನಿಗೆ, ಪರ-ಶತ್ರುಗಳು. ... ... ॥೯೨॥

ರ್ಪಹರ ಭರ್ಗಹೃದಯಾಬ್ಜಾಂ। ತರ್ಗತ ಲಸನ್ನಿಗಮಸರ್ಗಕರ ಮಾಳ್ಪುದಪವರ್ಗಸುಖಮಂ ನುತಬುಧರ್ಗೆ ಬಸವೇಶ ॥ ... ... .. ... ॥೯೨॥

ಶಿಖರಿಣೀವೃತ್ತಂ ॥ ಶಿವೇ ಸರ್ವಾಧಾರೇ ಶಶಧರಕಲಾಭೂಷಣಧರೇ। ಸುವರ್ಣಾಂಭೋಜಾಭಸ್ಫುರಿತವದನೇ ಕುಂದರದನೇ ॥ ಹವಿರ್ಭೋಕ್ತ್ರಾರಾಧ್ಯೇ ಹರಹೃದಯಹರ್ಷೋದಯಕರೇ ಭವಾನಿ ಕಲ್ಯಾಣೀ ಭುವನಜನನೀ ಪಾಲಿಸಿಳೆಯಂ ॥ ... ॥೯೩॥

ಗದ್ಯಂ ॥ ಇದು ವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತಭಾಸುರಲಲಾಟಪಟ್ಟಸರಸವದನನಮಾನಿತೋಭಯಕವಿತಾವಿಶಾರದಶ್ರೀವಿಷ್ಣುರಿದೇವಭಕ್ತಿವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಸಕಳೇಶಮಾದಿರಾಜಕಥಾವರ್ಣ್ಣನಮೇಕಾದಶಾಶ್ವಾಸಂ ಪರಿಸಮಾಪ್ತಂ ॥ ... ... ... ... ... *

ಏಕಾದಶಾಶ್ವಾಸಂ ಸಂಪೂರ್ಣಂ.

---

ಮಧ್ಯಮಂ ಹೊಂದಿದ, ಲಸನ್ನಿಗಮಸರ್ಗಕರ- ಪ್ರಕಾಶಿಸುವ ವೇದಗಳ ಸೃಷ್ಟಿಯಂ ಮಾಡಿದ, ಬಸವೇಶ! ನುತಬುಧರ್ಗೆ-ಶ್ಲಾಘ್ಯರಾದ ವಿದ್ವಾಂಸರಿಗೆ, ಅಪವರ್ಗಸುಖಮಂ- ಮೋಕ್ಷಸೌಖ್ಯವನ್ನು, ಮಾಳ್ಪುದು. ॥೯೨॥

ಶಿವೇ- ಮಂಗಳವುಳ್ಳ, ಸರ್ವಾಧಾರೇ- ಸಕಲಕ್ಕೂ ಆಶ್ರಯಳಾದ, ಶಶಧರಕಲಾಭೂಷಣಧರೇ-ಚಂದ್ರನ ಕಿರಣವೆಂಬ ಆಭರಣವಂ ಧರಿಸಿರುವ, ಸುವರ್ಣಾಂಭೋಜಾಭಸ್ಫುರಿತವದನೇ- ಚಿನ್ನದ ಕಮಲದಕಾಂತಿಯಂತಿರುವ ಕಾಂತಿಯಿಂದ ಪ್ರಕಾಶಿಸುವ ಮುಖವುಳ್ಳ, ಕುಂದರದನೇ- ಮೊಲ್ಲೆಯ ಹೂವಿನಂತಿರುವ ಹಲ್ಲುಳ್ಳ, ಹವಿರ್ಭೋಕ್ತ್ರಾರಾಧ್ಯೇ- ದೇವತೆಗಳಿಂದ ಪೂಜಿಸಲ್ಪಡುವದಕ್ಕೆ ಯೋಗ್ಯಳಾದ, ಹರಹೃದಯಹರ್ಷೋದಯಕರೇ- ಈಶ್ವರನ ಮನಸ್ಸಿಗೆ ಸಂತೋಷೋತ್ಪತ್ತಿಯಂ ಮಾಡುವ, ಭವಾನೀ- ಈಶ್ವರನಪತ್ನಿಯಾದ, ಕಲ್ಯಾಣೀ-ಮಂಗಳಸ್ವರೂಪಿಣಿಯಾದ, ಭುವನಜನನೀ- ಜಗನ್ಮಾತೆಯೇ! ಇಳೆಯಂ, ಪಾಲಿಸು. ॥೯೩॥

ಹನ್ನೊಂದನೆಯ ಆಶ್ವಾಸವು ಸಂಪೂರ್ಣವು.

# ಶ್ರೀಃ

ಬ್ರಹ್ಮಕಪಾಲಧರಾಯ ಪರಬ್ರಹ್ಮಣೇ ನಮಃ.

## ದ್ವಾದಶಾಶ್ವಾಸಂ.

### ಪಿಪ್ಪಳಿಮಾಚರಸ ಕಥನಂ.

ಕಂ || ಶ್ರೀಕಲ್ಯಾಣೀರಮಣ ನಿ | ಳಾಕುಶಶಿಖಿಪವನಗಗನರವಿಶಶಿಪುರುಷಾ || ನೇಕ ತನುಚಾರುಚಂದ್ರಕ | ಲಾಂಕಂ ಪೊರೆಗೆಮ್ಮ ನಾವಗಂ ಶಿವಲಿಂಗಂ || ... ||೧||

ಉತ್ಸಾಹವೃತ್ತಂ || ಸಾರಸಾರಸಾರಿಮಿತ್ರವಾಯುಮಿತ್ರನೇತ್ರಜಂ | ಭಾರಿಭಾರತೀರಮೇಶಸೇವಿತಾಂಘ್ರಿ ನಿತ್ಯ ಸಾ || ಕಾರಕಾರಣಾತ್ಮದೇವ ರಕ್ಷಿಸೆನ್ನ ನಕ್ಷಯೋ | ದಾರ ದಾರುಣಾಸುರೇಂದ್ರಶೈಲಶಂಬಶಂಕರ || ... ... ... ||೨||

ಚಂ || ಸುರುಚಿರನಂದನಾಳಿನವಶಾಲಿವನಾವಳಿಪಂಕಜಾಕರೋ | ತ್ಕರತಟನೀಪಶುಪ್ರಕರ ಮಾಹಿಷಮಂಡಿತಸಂಪದಾಸ್ಪದ || ಸ್ಫುರಿತಪುರೀಕದಂಬವಿಳಸಜ್ಜನರಂಜಿತದೇಶಮ ಧ್ಯಬಂ | ಧುರತರಮಾಗಿ ಪಿಪ್ಪಲಿಗೆಯೆಂಬ ಪುರಂ ಮೆರೆಗುಂ ವಿಲಾಸದಿಂ || ... ||೩||

---

ಶ್ರೀಕಲ್ಯಾಣೀರಮಣಂ, ಇಳಾ......ತನು— ಇಳಾ- ಭೂಮಿ, ಕುಶ- ನೀರು, ಶಿಖಿ- ಅಗ್ನಿ, ಪವನ- ವಾಯು, ಗಗನ-ಆಕಾಶ, ರವಿ, ಶಶಿ,ಪುರುಷ-ಯಜಮಾನಗಳೆಂಬ, ಅನೇಕ, ತನು- ಶರೀರವುಳ್ಳ, ಚಾರುಚಂದ್ರಕಲಾಂಕಂ-ಮನೋಹರವಾದಚಂದ್ರನ ರೇಖೆಯೇಆಭರಣವಾಗುಳ್ಳ, ಶಿವಲಿಂಗಂ,ಎಮ್ಮಂ, ಆವಗಂ.ಪೊರೆಗೆ.

ಸಾರ......ನೇತ್ರ— ಸಾರ- ಶ್ರೇಷ್ಠನಾದ, ಸಾರಸಾರಿ- ಚಂದ್ರ, ಮಿತ್ರ- ಸೂರ್ಯ, ವಾಯುಮಿತ್ರ- ಅಗ್ನಿ, ಇವುಗಳೇ, ನೇತ್ರ- ಕಣ್ಣಾಗುಳ್ಳ, ಜಂಭಾರಿ......ಅಂಘ್ರಿ— ಜಂಭಾರಿ - ಇಂದ್ರ, ಭಾರತಿ- ಸರಸ್ವತಿ, ರಮಾ- ಲಕ್ಷ್ಮಿ, ಇವರಿಬ್ಬರಿಗೆ, ಈಶ- ಪತಿಗಳಾದ ಬ್ರಹ್ಮವಿಷ್ಣುಗಳಿಂದ, ಸೇವಿತ- ಸೇವಿಸಲ್ಪಟ್ಟ,ಅಂಘ್ರಿ- ಪಾದವುಳ್ಳ, ನಿತ್ಯ- ಶಾಶ್ವತನಾದ, ಸಾಕಾರ-ಆಕಾರಸಹಿತನಾದ,ಕಾರಣಾತ್ಮ- ಸಕಲಕ್ಕೂ ಹೇತುವಾದ ದೇಹವುಳ್ಳ, (ಅಥವಾಸಕಲಕ್ಕೂ ಹೇತುವಾದ ಪರಮಾತ್ಮನಾದ,) ದೇವ-ಸಕಲಕ್ಕೂ ಸ್ವಾಮಿಯಾದ.ಅಕ್ಷಯೋದಾರ- ನಾಶವಾಗದ ಔದಾರ್ಯಗುಣವುಳ್ಳ, ದಾರುಣಾಸುರೇಂದ್ರಶೈಲಶಂಬ—ದಾರುಣ-ಭಯಂಕರರಾದ, ಅಸುರೇಂದ್ರ- ರಾಕ್ಷಸಶ್ರೇಷ್ಠರೆಂಬ, ಶೈಲ- ಪರ್ವತಗಳಿಗೆ, ಶಂಬ- ವಜ್ರಾಯುಧನಾದ, ಶಂಕರ !ಎನ್ನಂ, ರಕ್ಷಿಸು.

ಪಿಪ್ಪಲಿಗೆ, ಎಂಬ, ಪುರಂ, ಸುರುಚಿರ......ಬಂಧುರತರಂ— ಸುರುಚಿರ-ಮನೋಹರವಾದ,ನಂದನಾಳಿ- ಉಪವನಪಜ್ತಿ, ನವಶಾಲಿ- ನೂತನವಾದ ಬತ್ತದ ಗಪ್ಪೆಗಳು, ವನಾವಳಿ- ಕಾಡುಗಳಪಜ್ತಿ, ಪಂಕಜಾಕರೋತ್ಕರ- ಸರೋವರ ಸಮೂಹ, ತಟಿನೀ- ಹೊಳೆಗಳು, ಪಶುಪ್ರಕರ- ದನಗಳ ಸಮೂಹ, ಮಾಹಿಷ- ಕೋಣಗಳು ಇವುಗಳ, ಮಂಡಿತ-ಅಲಂಕರಿಸಲ್ಪಟ್ಟ, ಸಂಪತ್- ಐಶ್ವರ್ಯಕ್ಕೆ, ಆಸ್ಪದ- ಆಶ್ರಯವಾದ; ಸ್ಫುರಿತ- ಪ್ರಕಾಶಿಸುವ, ಜನ- ಜನಗಳಿಂದ, ರಂಜಿತ- ಮನೋಹರವಾದ, ದೇಶ- ದೇಶದ, ಮಧ್ಯ- ಮಧ್ಯಭಾಗದಲ್ಲಿ, ಬಂಧುರತರಂ, ಆಗಿ, ವಿಲಾಸದಿಂ, ಮೆರೆಗುಂ. ... ... ... ||೩||

ಉ॥ ಆಪುರದಲ್ಲಿ ಪೇರ್ಮೆ ಮಿಗೆ ರಂಜಿಸ ನೋರ್ವ ನಪೂರ್ವವೃತ್ತನು ೯ರ್ವೀಪರಿ ಪಾಲನಾರ್ಥ ಮೊಗೆತಂದ ಮಹೇಶ್ವರದಿವ್ಯಮೂರ್ತಿ ದಿ ॥ ಗ್ವ್ಯಾಪಿಯಶಸ್ಕ ನಸ್ಖಲಿತಸದ್ಗು ಣಭೂಷಣ ನರ್ದಿತೇಷಣಂ। ಚಾಪಲವಾದಿಭಂಜನ ನನಂಜನನೀಶ್ವರಭಕ್ತಿರಂಜಿತಂ॥ ॥೪॥

ಮ ॥ ವಿಲಸದ್ವೀರಶಿವೈಕ್ಯಮಾರ್ಗನಿರತಂ ವಿಜ್ಞಾನಸಂಪನ್ನನು।ಜ್ಜ್ವಲವೀರವ್ರತ ನಿಷ್ಠ ನಪ್ರತಿಮವೈರಾಗ್ಯಸ್ವಭಾಗ್ಯಂ ನಿರಾ॥ಕುಲಚಿತ್ತಂನಿರವದ್ಯಹೃದ್ಯಚರಿತಂ ನಿರ್ಧೂ ತತಾಪವ್ರಜಂ । ಕಲಿಕಾಲುಷ್ಯನಿವಾರಕಂ ಶುಭಕರಂ ಕಾರುಣ್ಯರತ್ನಾಕರಂ ॥ ॥೫॥

ಮ॥ಜಿತಕಾಲತ್ರಯಕರ್ಮ ನೂರ್ಮಿರಹಿತಂ ನಿರ್ಮಾಯನುಂಗೇಂದ್ರಿಯೋ।ನ್ನತಲಿಂಗಾನ್ವಿ ತ ನಾತ್ಮದರ್ಶನಸಭಾಪಾಲಂ ಸದಾಜ್ಯೋತಿವಿ ॥ ಶ್ರುತತೇಜೋಮಯ ನಪ್ರಮೇಯರಜಕ ತ್ವಚ್ಛನ್ನರುದ್ರಂ ಪ್ರತ । ರ್ಜಿತಮಾದ್ಯದ್ಭವಿಸಂಗ ನೂರ್ಜಿತ ನಯೋನಿಪ್ರೋದ್ಭವಂ ಮಾಚಯಂ ॥ ॥೬॥

ಆ ಪುರದಲ್ಲಿ, ಅಪೂರ್ವವೃತ್ತಂ- ಹೊಸಚರಿತ್ರೆಯುಳ್ಳ, ಉರ್ವೀಪರಿಪಾಲನಾರ್ಥಂ- ಭೂಮಿಯಂ ರಕ್ಷಿಸುವದಕ್ಕೋಸ್ಕರ, ಒಗೆತಂದ-ಅವತರಿಸಿದ, ಮಹೇಶ್ವರ ದಿವ್ಯಮೂರ್ತಿ- ಈಶ್ವರನ ಶ್ರೇಷ್ಠವಾದ ಆಕಾ ರನಾದ, ದಿಗ್ವ್ಯಾಪಿಯಶಸ್ಕಂ, ಅಸ್ಖಲಿತಸದ್ಗುಣಭೂಷಣಂ—ಅಸ್ಖಲಿತ-ಜಾರದ, ಸದ್ಗುಣ-ಒಳ್ಳೆಯಗುಣ ಗಳೇ, ಭೂಷಣಂ- ಆಭರಣವಾಗುಳ್ಳ, ಅರ್ದಿತೇಷಣಂ—ಅರ್ದಿತ-ನಾಶಗೊಳಿಸಲ್ಪಟ್ಟ, ಈಷಣಂ-ಅರ್ಥೇಷ ಣ ಪುತ್ರೇಷಣ ದಾರೇಷಣಗಳೆಂಬ ಈಷಣತ್ರಯಗಳುಳ್ಳ, ಚಾಪಲವಾದಿಭಂಜನಂ- ಚಾಂಚಲ್ಯವಿಶಿಷ್ಟರಾದ ಪರವಾದಿಗಳನ್ನು ನಾಶಪಡಿಸುವ, ಅನಂಜನಂ- ಮಾಯಾರಹಿತನಾದ, ಈಶ್ವರಭಕ್ತಿರಂಜಿತಂ ... ॥೪॥

ವಿಲಸದ್ವೀರಶಿವೈಕ್ಯಮಾರ್ಗನಿರತಂ— ವಿಲಸತ್- ಪ್ರಕಾಶಿಸುವ, ವೀರಶಿವೈಕ್ಯಮಾರ್ಗ- ವೀರಶೈವ ಮಾರ್ಗದಲ್ಲಿ, ನಿರತಂ-ಆಸಕ್ತನಾದ, ವಿಜ್ಞಾನಸಂಪನ್ನಂ,ಉಜ್ಜ್ವಲವೀರವ್ರತನಿಷ್ಠಂ—ಪ್ರಕಾಶಿಸುವವೀರ ಶೀಲದಲ್ಲಿ ಶ್ರದ್ಧೆಯುಳ್ಳ, ಅಪ್ರತಿಮವೈರಾಗ್ಯಸ್ವಭಾಗ್ಯಂ- ಅಸದೃಶವಾದ ವಿರಕ್ತಿಯೇ ತನ್ನ ಐಶ್ವರ್ಯವಾ ಗುಳ್ಳ, ನಿರಾಕುಲಚಿತ್ತಂ- ನಿಶ್ಚಂಚಲವಾದ ಮನಸ್ಸುಳ್ಳ, ನಿರವದ್ಯಹೃದ್ಯಚರಿತಂ- ನಿರ್ದುಷ್ಟವಾದ ಮನೋ ಹರವಾದ ಚರಿತ್ರೆಯುಳ್ಳ, ನಿರ್ಧೂತತಾಪವ್ರಜಂ— ನಿರ್ಧೂತ- ಕೊಡಹಲ್ಪಟ್ಟ, ತಾಪವ್ರಜಂ- ಆಧ್ಯಾತ್ಮಿಕ ಆಧಿಭೌತಿಕ ಆಧಿದೈವಿಕವೆಂಬ ತಾಪಗಳ ಸಮೂಹವುಳ್ಳ, ಕಲಿಕಾಲುಷ್ಯನಿವಾರಕಂ- ಸಮರ್ಥವಾದ ಪಾಪವ ನ್ನು ಹೋಗಲಾಡಿಸುವ, ಶುಭಕರಂ, ಕಾರುಣ್ಯರತ್ನಾಕರಂ- ದಯೆಗೆ ಸಮುದ್ರನಾದ. ... ॥೫॥

ಜಿತಕಾಲತ್ರಯಕರ್ಮಂ-ಜೈಸಲ್ಪಟ್ಟ ಭೂತಭವಿಷ್ಯದ್ವರ್ತಮಾನ ಕಾಲಗಳ ಕರ್ಮವುಳ್ಳ, ಊರ್ಮಿರಹಿತಂ, ಕ್ಷುತ್, ಪಿಪಾಸೆ, ಶೋಕ, ಮೋಹ, ಜನನ, ಮರಣಗಳೆಂಬ ಊರ್ಮಿಗಳಿಂದ ಬಿಡಲ್ಪಟ್ಟ, ನಿರ್ಮಾಯಂ- ಮಾ ಯಾರಹಿತನಾದ, ಅಂಗೇಂದ್ರಿಯೋನ್ನತಲಿಂಗಾನ್ವಿತಂ- ಅವಯವಗಳೇನು ಇಂದ್ರಿಯಗಳೇನು ಇವುಗಳಲ್ಲಿ ಉನ್ನತವಾದ ಲಿಂಗಗಳಿಂದ ಕೂಡಿದ, ಆತ್ಮದರ್ಶನಸಭಾಪಾಲಂ—ಆತ್ಮದರ್ಶನ- ಪರಮಾತ್ಮ ವಿಷಯಕವಾದ ನೋಟವುಳ್ಳ, (ಶಿವಾ ಬುದ್ಧಿಯುಳ್ಳವರ) ಸಭಾ- ಸಮೂಹವನ್ನು ಪಾಲಂ- ರಕ್ಷಿಸುವ, ಸದಾಜ್ಯೋತಿವಿ ಶ್ರುತತೇಜೋಮಯಂ—ಸದಾ-ನಿರಂತರವಲ್ಲೂ, ಜ್ಯೋತಿ-ಪರಂಜ್ಯೋತಿಯ, ವಿಶ್ರುತ-ಪ್ರಸಿದ್ಧವಾದ, ತೇ ಜೋಮಯಂ-ಕಾಂತಿವಿಕಾರನಾದ, ಅಪ್ರಮೇಯರಜಕತ್ವಛನ್ನರುದ್ರಂ- ಅಪ್ರಮೇಯ- ಅಗಣ್ಯವಾದ, ರಜ ಕತ್ವ- ಮಡಿವಳತನದಿಂದ,ಛನ್ನ- ಗುಪ್ತವಾದ, ರುದ್ರಂ- ರುದ್ರನುಳ್ಳ, ಪ್ರತರ್ಜಿತಮಾದ್ಯದ್ಭವಿಸಂಘಂ— ಪ್ರತರ್ಜಿತ- ಭಯಪಡಿಸಲ್ಪಟ್ಟ, ಮಾದ್ಯತ್- ಕೊಬ್ಬಿದ, ಭವಿಸಂಘಂ-ಲಿಂಗಹೀನರ ಸಮೂಹವುಳ್ಳ, ಊರ್ಜಿ ತಂ-ಬಲಶಾಲಿಯಾದ, ಅಯೋನಿಪ್ರೋದ್ಭವಂ- ಯೋನಿಯ ಮುಖದಿಂಜನಿಸದ, ಮಾಚಯಂ- ಮಾಚ ಯ್ಯನಾಮಕನಾದ, ಓರ್ವಂ, ಪೇರ್ಮೆ, ಮಿಗೆ,ರಂಜಿಪಂ ... ... ... ॥೬॥

ಮ॥ ಬಸವಾಧೀಶ್ವರಭಕ್ತಿವಾರಿಧಿಗೆ ಚಂದ್ರಂ ಬರ್ಪವೋಲ್ತದ್ಗುಣ । ಪ್ರಸರಾಕರ್ಣ ನಕರ್ಣನಾತ್ಮಪುರದಿಂ ಕಲ್ಯಾಣಕೇಳ್ತಂದು ವಂ ॥ ದಿಸುತಾ ಠಾಣದೊಳಿರ್ದ ಜಂಗಮಜ ಯಕ್ಕಾನಂದದಿಂ ನಾಡೆ ಪೂ । ಜಿಸಿಕೊಂಡಲ್ಲಿ ವೃಷೇಂದ್ರನಿಂದೆ ಮೆರೆದಿರ್ದಂ ಮಾಚಿದೇವಾ ಹ್ವಯಂ ॥ ... ... ... ... ... ... ॥೭॥

ವ ॥ ಅಂತಿರ್ದು ಮಾಚಿದೇವ ನೆನ್ನ ದಾಸೋಹಭಾವಕ್ಕೆ ತಕ್ಕ ಕಜ್ಜಂಗೆಯ್ವೆನೆಂದು ಭಕ್ತಿ ಮಿಗೆ ಶಿವಗಣದ ಮಾಸಿದಂಬರಕದಂಬಮ ನರುಣೋದಯದಿಂ ಮುನ್ನಮೆ ಕೊಂಡು ಪೋಗಿ ತಾಂ ಬೇರೆ ನೆಗಳ್ದ ದೀರ್ಘಿಕೆಯ ತಿಳಿನೀರಿಂ ತೊಳೆದು ವಿಮಳಂಗೆಯ್ದು ಣಗಿಸಿ ಮ ಡಿಕೆಗೊಳಿಸಿ ಘಟ್ಟನೆಗೆಯ್ದು ಪೊರೆಗಟ್ಟಿ ಪೊತ್ತು ಜಂಗಮಹಿಮಾಚಲದಂತೆ ರಾಜವೀಧಿ ವಿಡಿದು ॥ * * * * * * * * * * * * * * *

ಚಂ ॥ ಭವಿಜನ ಮೆಳ್ತರುತ್ತಮಿರೆ ತನ್ನಿದಿರೊಳ್ಜಯಘಂಟಿಕಾಲಸ । ದ್ರವಮನೊ ಡರ್ಚುತಂ ಜಡಿದು ಚಿಮ್ಮುತೆ ಕಯ್ಯ ನಿಶಾತಖಡ್ಗಮಂ ॥ ಶಿವಗಣದಂಬರವ್ರಜಮ ನಂಟದೆ ಸಾರ್ತೊಲಗೆಂಟದಾಗಳಾಂ । ತವಿಪೆನೆನುತ್ತೆ ಸಾರುತಧಟಿಂ ನಡೆತಂದು ವಿಳಾಸದೇಳ್ಗೆಯಿಂ॥

ಕಂ ॥ ಅಂಬರಮನೆರೆದ ಭಕ್ತಕ । ದಂಬಕ್ಕಂಬರಮ ನೇನನಾದೊಡಮೀವ್ರ॥ ತ್ತಂಬ ಸವನೀಕ್ಷಿಸುತ್ತೆಮು । ದಂಬಡೆ ಮೆರೆದಿರ್ದ ನಮಿತಮಹಿಮಾವರಣಂ ॥ ... ॥೯॥

ಮಾಚಿದೇವಾಹ್ವಯಂ- ಮಾಚಿದೇವನೆಂಬ ಹೆಸರುಳ್ಳ ಪೂರ್ವೋಕ್ತನು, ತದ್ಗುಣಪ್ರಸರಾಕರ್ಣನಕ ರ್ಣಂ—ತದ್ಗುಣ- ಆ ಬಸವೇಶ್ವರನ ಗುಣಗಳ, ಆಕರ್ಣನ- ಕೇಳುವಿಕೆಯಿಂದ ಕೂಡಿದ, ಕರ್ಣಂ- ಕಿವಿಯುಳ್ಳ ವನಾಗಿ, ಬಸವಾಧೀಶ್ವರಭಕ್ತಿವಾರಿಧಿಗೆ- ಬಸವೇಶ್ವರನು ಮಾಡುವ ಭಕ್ತಿಯೆಂಬ ಸಮುದ್ರಕ್ಕೆ, ಚಂದ್ರಂ, ಬರ್ಪವೋಲ್, ಆತ್ಮಪುರದಿಂ- ತಮ್ಮ ಊರಿನಿಂದ, ಕಲ್ಯಾಣಕೆ, ಏಳ್ತಂದು, ಆಠಾಣದೊಳ್- ಆಸ್ಥಳದಲ್ಲಿ, ಇರ್ದ, ಜಂಗಮಜಯಕ್ಕೆ, ವಂದಿಸುತೆ, ಆನಂದದಿಂ, ಅಲ್ಲಿ, ವೃಷೇಂದ್ರನಿಂದೆ, ನಾಡೆ ಚೆನ್ನಾಗಿ, ಪೂಜಿಸಿಕೊಂ ಡು,ಮೆರೆದು, ಇರ್ದಂ. ... ... ... ... ... ॥೭॥

ಮಾಚಿದೇವಂ, ಅಂತು, ಇರ್ದು, ಎನ್ನ, ದಾಸೋಹಭಾವಕ್ಕೆ- ನಾನು ಸೇವಕನೆಂಬ ತನಕ್ಕೆ, ತಕ್ಕ- ಯೋಗ್ಯವಾದ, ಕಜ್ಜಂಗೆಯ್ವೆಂ- ಕಾರ್ಯವಂಮಾಡುವೆನು, ಎಂದು, ಭಕ್ತಿ, ಮಿಗೆ, ಶಿವಗಣದ, ಮಾಸಿದ, ಅಂ ಬರಕದಂಬಮಂ- ಬಟ್ಟೆಗಳ ಸಮೂಹವನ್ನು, ಅರುಣೋದಯದಿಂ, ಮುನ್ನಮೆ, ಕೊಂಡು, ಪೋಗಿ, ತಾಂ, ಬೇರೆ, ನೆಗಳ್ದ- ಮಾಡಿದ, ದೀರ್ಘಿಕೆಯ- ಬಾವಿಯ, ತಿಳಿನೀರಿಂ, ತೊಳೆದು, ವಿಮಳಂಗೆಯ್ದು- ಕೊಳೆಯಿಲ್ಲ ದಂತೆ ಮಾಡಿ, ಒಣಗಿಸಿ, ಮಡಿಕೆಗೊಳಿಸಿ, ಘಟ್ಟನೆಗೆಯ್ದು, ಪೊರೆಗಟ್ಟಿ-ಹೊರೆಯಂಕಟ್ಟಿ, ಪೊತ್ತು, ಜಂಗ ಮಹಿಮಾಚಲದಂತೆ- ಚಲಿಸುವ ಹಿಮವತ್ಪರ್ವತದಹಾಗೆ, ರಾಜವೀಧಿವಿಡಿದು- ರಾಜಮಾರ್ಗವನ್ನನುಸರಿಸಿ,

ಭವಿಜನಂ, ತನ್ನ, ಇದಿರೊಳ್, ಎಳ್ತರುತ್ತಂ,ಇರೆ,ಜಯಘಂಟಿಕಾಲಸದ್ರವಮಂ-ವಿಜಯಸೂಚಕವಾದ ಗಂಟೆಯ ಶಬ್ದವನ್ನು, ಒಡರ್ಚುತಂ-ಮಾಡುತ್ತ, ಕಯ್ಯ, ನಿಶಾತಖಡ್ಗಮಂ-ತೀಕ್ಷ್ಣವಾದಕತ್ತಿಯನ್ನು,ಜಡಿ ದು, ಚಿಮ್ಮುತೆ, ಶಿವಗಣದ, ಅಂಬರವ್ರಜಮಂ, ಅಂಟದೆ, ಸೋಂಕದೆ, ಸಾರ್-ಹೋಗು, ತೊಲಗು- ಹೋ ಗು, ಅಂಟಿದಾಗಳ್- ಸೋಂಕಿದಾಗ, ಆಂ, ತವಿಪೆಂ,-ನಾಶಮಾಡುವೆನು, ಎನುತ್ತೆ, ಸಾರುತೆ-ಕೂಗುತ, ಅಧ ಟಿಂ- ಶೌರ್ಯದಿಂದ, ನಡೆತಂದು, ವಿಳಾಸದ, ಏಳ್ಗೆಯಿಂ- ಆಧಿಕ್ಯದಿಂದ. ... ... ॥೮॥

ಅಂಬರಮಂ- ಬಟ್ಟೆಯನ್ನು, ಎರೆದ, ಬೇಡಿದ, ಭಕ್ತಕದಂಬಕ್ಕೆ, ಅಂಬರಮಂ- ಏನಂ, ಆದೊಡಂ, ಈ ವುತ್ತಂ, ಬಸವಂ, ಈಕ್ಷಿಸುತ್ತೆ, ಮುದಂಬಡೆ- ಸಂತೋಷವಂ ಹೊಂದಲು, ಅಮಿತಮಹಿಮಾವರಣಂ- ಎಣಿಸಲಾಗದ ಮಹತ್ವವೆಂಬ ಆವರಣವಸ್ತ್ರವುಳ್ಳ ಮಾಚಿದೇವನು, ಮೆರೆದು, ಇರ್ದಂ. ... ॥೯॥

ವ ‖ ಆಗಳಾಮಾಚಿದೇವನ ಮಹಿಮೆಗಂಡು ಭಕ್ತಗಣಂ ತಲೆದೂಗಿ ಬೀಗಿ‖ * *

ಕಂ ‖ ಪುಲಿಯುಡುಪ ನೆಂಬ ರಜಕನ । ಸುಲಲಿತತರಭಕ್ತಿ ಯೊಳ್ಳಿತಾದುದು ಮುನ್ನಂ ‖ ನಲಿದೇಕಾಳಿ ಯೊಡರ್ಚ್ಚಿದ । ಮಲಹರಸದ್ಭಕ್ತಿ ಮೆರೆದುದೀಗಳ್ದರೆಯೊಳ್ ‖೧೦‖

ಕಂ ‖ ಮಡಿವಾಳಮಾಚಿದೇವನ । ಬೆಡಂಗುವಡೆದೆಸೆವ ಭಕ್ತಿ ಯಾಭಕ್ತಿಯಿ ನುಗ್ಗಡನಾದುದಿವನ ಸಾಸದ । ಪೊಡರ್ಪ್ಪು ಪೊಸತೆಂದು ಪೊಗಳೆ ಭಕ್ತಸಮಾಜಂ ‖ ‖೧೧‖

ಕಂ ‖ ಕೋಕಾಳಿಗೆ ನಯಮುಂ ಸಲೆ । ಘೂಕಾಳಿಗೆ ಭಯಮನು ನೆಸವ ರವಿಯವೊಲಿಗಣಾ ‖ ನೀಕಕ್ಕೆ ನಯಮನಾ ಭವಿ । ಲೋಕಕ್ಕತಿಭಯಮನು ನೆಸಗಿ ಕರಮೆಸೆದಿರ್ದಂ ‖೧೨‖

ವ ‖ ಆಪ್ರಬಳತಮೋಹರಪ್ರತಾಪಶಾಲಿಯಪ್ಪ ಮಾಚಿದೇವ ನಂತಿರುತ್ತಮಿರ್ದ್ದೊಂದುದಿನ ಮೆಂದಿನಂತೆ ವಸನವಿಸರಮಂ ಪೊರೆಗಟ್ಟಿ ಪೊತ್ತು ನಡೆವಾಗಳ್ಬೀದಿಯೊಳ್ಮದಾವಿಳಮಾನಸಂ ಭವಿಯೋರ್ವ್ವ ನಂಬರಕದಂಬಮಂ ಸೋಂಕೆ ಕುಪಿತನಾಗಿ ‖ * * *

ಕಂ ‖ ಜಡಿದಲಗ ನೆತ್ತಿ ಭೋಂಕನೆ । ಪೊಡೆದಾತನ ತಲೆಯ ನಾಗಸಕ್ಕಿರದಿಟ್ಟು ‖ ಮಡಿವಾಳಮಾಚಿದೇವಂ । ನಡೆತಂದು ಗಣಾಂಘ್ರಿಸೇವೆಗೆಯ್ಯುತ್ತಿರ್ದಂ ‖ ... ‖೧೩‖

ವ ‖ ಆಗಳಾಪುರದ ಖಳಜನನಿವಹಂ ಕಂಡು ಕಡುಕನಲ್ದು ಮಂತಣಂಗೊಂಡು ಗುಜುಗುಜಿಸುತಂ ಪರಿತಂದುಮಣಿದೇಳ್ವರಾಜಪುತ್ರರಮೌಳಿಮಣಿಘೃಣಿಗಣದಿಂ ವಜ್ಜಳಿಪ

---

ಆಗಳ್, ಭಕ್ತಗಣಂ,ಆಮಾಚಿದೇವನ,ಮಹಿಮೆಗಂಡು, ತಲೆದೂಗಿ, ಬೀಗಿ-ಉತ್ಸಾಹಪಟ್ಟು. * *

ಮುನ್ನಂ, ಪುಲಿಯುಡುಪಂ, ಎಂಬ, ರಜಕನ,ಸುಲಲಿತತರಭಕ್ತಿ, ಒಳ್ಳಿತು, ಆದುದು,ನಲಿದು, ಏಕಾಳಿ-ಏಕಾಳಿಯೆಂಬ ರಜಕಭಕ್ತನು, ಒಡರ್ಚ್ಚಿದ;ಮಲಹರಸದ್ಭಕ್ತಿ, ಶಿವಭಕ್ತಿಯು,ಮೆರೆದುದು,ಈಗಳ್, ದರೆಯೊಳ್.

ಇವನ- ಈಮಾಚಿದೇವನ, ಪೊಡರ್ಪು-ಸ್ಫುರಣವು, ಪೊಸತು ಎಂದು, ಭಕ್ತಸಮಾಜಂ, ಪೊಗಳೆ, ಮಡಿವಾಳಮಾಚಿದೇವನ, ಬೆಡಂಗುವಡೆದು- ವಿಲಾಸವಂಹೊಂದಿ, ಎಸೆವ, ಭಕ್ತಿ, ಆಭಕ್ತಿಯಿಂ- ಆಪುಲಿಯುಡುಪಏಕಾಳಿಗಳ ಭಕ್ತಿಗಿಂತಲೂ, ಉಗ್ಗಡಂ- ಉತ್ಕೃಷ್ಟವು, ಆದ.ದು. ... ... ‖೧೧‖

ಕೋಕಾಳಿಗೆ-ಚಕ್ರವಾಕಪಕ್ಷಿಗಳ ಪಜ್ತಿಗೆ,ನಯಮಂ-ಗಂಡುಹೆಣ್ಣನ್ನು ಸೇರಿಸುವಿಕೆಯನ್ನು, ಸಲೆ-ಚೆನ್ನಾಗಿ, ಘೂಕಾಳಿಗೆ ಗೂಬೆಗಳ ಪಜ್ತಿಗೆ, ಭಯಮಂ, ಎಸಪ- ಮಾಡ.ವ, ರವಿಯವೊಲೆ- ಸೂರ್ಯನ ಹಾಗೆ, ಗಣಾನೀಕಕ್ಕೆ, ನಯಮಂ- ನೀತಿಯನ್ನು, ಆ ಭವಿಲೋಕಕ್ಕೆ- ಅಲಿಂಗಿಜನಕ್ಕೆ, ಭಯಮಂ, ಎಸಗಿ, ಕರಂ, ಎಸೆದು ಇರ್ದಂ. ... ... ... ... ... ‖೧೨‖

ಆಪ್ರಬಳತಮೋಹರ ಪ್ರತಾಪಶಾಲಿಯಪ್ಪ- ಬಲವತ್ತರವಾದ ಅಜ್ಞಾನವನ್ನು ನಾಶಪಡಿಸುವ ಪರಾಕ್ರಮ ವಿಶಿಷ್ಟನಾದ, ಮಾಚಿದೇವಂ, ಅಂತು, ಇರುತ್ತಂ, ಇರ್ದ್ದು, ಒಂದು ದಿನಂ, ಎಂದಿನಂತೆ- ಪ್ರತಿನಿತ್ಯದ ಹಾಗೆ, ವಸನವಿಸರಮಂ, ಪೊರೆಗಟ್ಟಿ, ಪೊತ್ತು, ನಡೆವಾಗಳ್, ಬೀದಿಯೊಳ್, ಮದಾವಿಳಮಾನಸಂ- ಗರ್ವದಿಂದ ವ್ಯಾಪ್ತವಾದ ಮನಸ್ಸುಳ್ಳ, ಓರ್ವಂ, ಭವಿ, ಅಂಬರಕದಂಬಮಂ-ಬಟ್ಟೆಗಳ ಸಮೂಹವನ್ನು, ಸೋಂಕೆ ಕುಪಿತ- ಕೋಪವಿಶಿಷ್ಟನು, ಆಗಿ. * * * * * * * * * * * * *

ಆಮಡಿವಾಳಮಾಚಿದೇವಂ, ಅಲಗಂ- ಕತ್ತಿಯನ್ನು, ಜಡಿದು, ಎತ್ತಿ, ಭೋಂಕನೆ- ಶೀಘ್ರವಾಗಿ, ಆತನ, ತಲೆಯಂ, ಪೊಡೆದು, ಇರದೆ, ಆಗಸಕ್ಕೆ, ಇಟ್ಟು, ನಡೆತಂದು, ಗಣಾಂಘ್ರಿಸೇವೆಗೆಯ್ಯುತ್ತ, ಇರ್ದ್ದಂ.

ಆಗಳ್, ಆ ಪುರದ, ಖಳಜನನಿವಹಂ, ಕಂಡು, ಕಡುಕನಲ್ದು- ಬಹಳವಾಗಿ ಕೋಪಿಸಿ, ಗುಜುಗುಜಿಸುತಂ- ಅಲ್ಲಲ್ಲಿ ಗುಂಪು ಗೂಡಿ ಮಾತನಾಡುತ್ತ, ಪರಿತಂದು- ಬಂದು, ಮಣಿದು- ನಮಸ್ಕರಿಸಿ, ಏಳ್ವ, ರಾ

ಬಿಜ್ಜಳನೋಲಗಮಂ ಪೊಕ್ಕು ತುಳಿಲ್ಗೆಯ್ದು ಕರಂಗಳಂ ಮುಗಿದು ನಿಂದು ॥ * *

ಚಂ ॥ ಧರಣಿಪ ನಿನ್ನ ಪಟ್ಟಣದೊಳುದ್ಧತ ನೋರ್ವ್ವ ನಖರ್ವ್ವಗರ್ವ್ವನಿ । ಮ್ಮರ ನೆಸದಿ ರ್ದ್ದಪಂ ರಜಕ ನದ್ಭುತ ಮಾತನ ವೃತ್ತ ಮಾರುಮಂ ॥ ಪುರದೊಳೆ ಬೀದಿಯೊಳ್ಸಳಯ ಲೀಯ ನುದಗ್ರಕೃಪಾಣಪಾಣಿ ಯಂ । ಬರಪಯ ಮಂಟಿದಾತನ ಕರುತ್ತಿರಿದಪ್ಪೆ ನೆನುತ್ತ ಸಾರುತಂ ॥ ... ... ... ... ... ... ॥೧೪॥

ಕಂ ॥ ಮೃಡಭಕ್ತ ನೆಂಬ ಗರ್ವ್ವದ । ಪೊಡರ್ಪು ತಲೆಗೇರಿ ಬಡಿವ ನೆಂತಪ್ಪರುಮಂ ॥ ಕಡುಸಾಸಿಗಳಂ ಪೆರರು । ಮಡಿಪುವ ಮೃಡಭಕ್ತಿ ಯೊಳವೆ ವಸುಧಾತಳದೊಳ್ ॥ ॥೧೫॥

ಉ ॥ ಅಂಗಡಿ ಯೆತ್ತಿ ಕಟ್ಟದುದು ಕೆಟ್ಟುದು ಮಾರುವ ಸಂತೆ ಮತ್ತಮಾ । ತುಗ ತುರಂಗಗೋಶಕಟಸಂತತಿ ಯದ್ಭುತ ಮೆಂತೊ ಗೆಂಟನೊ ॥ ಳ್ಬೆಂಗೊಡುತೋಡುಗುಂ ಜ ವದಿನಾರಜಕಂ ಬರೆ ಬರ್ಪ್ಪ ನೋರ್ವ್ವನು । ಮುಂಗಡೆಯಲ್ಲಿ ಖಡ್ಗದೆ ಕರುತ್ತಿರಿದಾಗಸಕೆತ್ತಿ ಚಿಮ್ಮಿದಂ ॥ ... ... ... ... ... ... ॥೧೬॥

ಕಂ ॥ ಪೆಣನದು ಬಯಲಾದುದೊ ತಾಂ । ನೋಣೆದನೊ ನುಂಗಿದುದೊ ಗಗನಮುದು ಕಾಣಿಸದೇ ॥ ನಣಕವೊ ರಜಕನ ಬಗೆ ತ । ಲ್ಲಣಮ ನಿದಂ ತವಿಸಿ ನೃಪತಿ ಪೊರೆವ್ವುರಜನಮಂ ॥

---

ಜಪುತ್ರರ, ಮೌಳಿಮಣಿಘೃಣಿಗಣದಿಂ- ಕಿರೀಟರತ್ನಕಾಂತಿಯ ಸಮೂಹದಿಂದ, ಪಜ್ಜಳಿಪ, ಪ್ರಜ್ವಲಿಸುವ, ಬಿಜ್ಜಳನ, ಓಲಗಮಂ- ಸಭೆಯನ್ನು, ಪೊಕ್ಕು, ತುಳಿಲ್ಗೆಯ್ದು- ನಮಸ್ಕಾರವಂ ಮಾಡಿ, ಕರಂಗಳಂ, ಮುಗಿದು, ನಿಂದು * * * * * * * * * * * * * * * * *

ಧರಣಿಪ ! ನಿನ್ನ, ಪಟ್ಟಣದೊಳ್, ಉದ್ಧತಂ- ಕೊಬ್ಬಿದ, ಅಖರ್ವ್ವಗರ್ವ್ವನಿಷ್ಠುರಂ- ಅಧಿಕವಾದ ಅಹಂಕಾರದಿಂದ ಕಠಿಣನಾದ, ಓರ್ವ್ವಂರಜಕಂ- ಒಬ್ಬ ಮಡಿವಳನು, ಎಸೆದು, ಇರ್ದ್ದಪಂ ; ಆತನ, ವೃತ್ತಂ- ನಡತೆಯು, ಅದ್ಭುತಂ, ಆಶ್ಚರ್ಯಕರವಾದದ್ದು ; ಉದಗ್ರಕೃಪಾಣಪಾಣಿ- ಉತ್ಕೃಷ್ಟವಾದ ಕತ್ತಿಯಿಂ ಕೂಡಿದ ಕೆಯ್ಯುಳ್ಳವನಾಗಿ, ಅಂಬರಚಯಮಂಟಿದಾತನ- ಬಟ್ಟೆಗಳ ಸಮೂಹವನ್ನು ಸೋಂಕಿದವನನ್ನು, ಕರುತ್ತು-ಕೋಪಗೊಂಡು- ಇರಿದಪ್ಪೆಂ- ಕತ್ತರಿಸುವೆನು, ಎನುತ್ತೆ, ಸಾರುತಂ- ಕೂಗುತ್ತ, ಪುರದೊಳ್, ಬೀದಿಯೊಳ್-ಆರುಮಂ- ಯಾರನ್ನೂ, ಸುಳಿಯಲ್ ಈಯಂ-ತಿರುಗಾಡುವದಕ್ಕವಕಾಶವಂ ಕೊಡುವದಿಲ್ಲವು.

ಮೃಡಭಕ್ತಂ, ಎಂಬ, ಗರ್ವ್ವದ, ಪೊಡರ್ಪು- ಸ್ಫೂರ್ತಿಯು, ತಲೆಗೆ, ಏರಿ, ಕಡುಸಾಸಿಗಳಂ- ಅತಿಸಾಹಸ ವಂತರಾದ, ಪೆರರಂ- ಅನ್ಯರಾದ ಅಲಿಂಗಿಗಳನ್ನು, ಎಂತಪ್ಪರುಮಂ- ಎಂತವರನ್ನಾದರೂ, ಬಡಿವಂ, ವಸು ಧಾತಳದೊಳ್, ಮಡಿಪುವ- ಕೊಲ್ಲುವ, ಮೃಡಭಕ್ತಿ, ಒಳವೆ? ... ... ॥೧೫॥

ಅಂಗಡಿ. ಎತ್ತಿ, ಕಟ್ಟದುದು-ಮುಚ್ಚಲ್ಪಟ್ಟಿತು ; ಮಾರುವ, ಸಂತೆ, ಕೆಟ್ಟುದು ; ಮತ್ತೆ......ಸಂ ತತಿ-ಮತ್ತಮಾತಂಗ-ಮದಿಸಿದ ಆನೆಗಳು, ತುರಂಗ-ಕುದುರೆಗಳು, ಗೋ-ಹಸುಗಳು, ಶಕಟ- ಗಾಡಿಗಳು ಇವುಗಳ, ಸಂತತಿ- ಸಮೂಹವು, ಆರಜಕಂ, ಬರೆ, ಬೆಂಗೊಟ್ಟು- ಹಿಂದಿರುಗಿ, ಜವದಿಂ, ಗೆಂಟಿನೊಳ್- ದೂರ ದಲ್ಲಿ, ಓಡುಗುಂ, ಅದ್ಭುತಂ-ಎಂತೊ ? ಮುಂಗಡೆಯಲ್ಲಿ, ಬರ್ಪನಂಓರ್ವನಂ, ಕರುತ್ತೆ-ಕೋಪಿಸಿ, ಖಡ್ಗದೆ, ಇರಿದು, ಎತ್ತಿ, ಆಗಸಕೆ, ಚಿಮ್ಮಿದಂ ... ... ... ... ॥೧೬॥

ನೃಪತಿ! ಅದುಪೆಣಂ, ಬಯಲ್, ಆದುದೊ ? ತಾಂ-ಆ ರಜಕನು, ನೊಣೆದನೊ-ತಿಂದನೊ ? ಗಗ ನಂ, ನುಂಗಿದುದೊ ? ಅದು-ಆ ಹೆಣವು, ಕಾಣಿಸದು, ರಜಕನ, ಬಗೆ-ರೀತಿಯು, ಏನಣಕಮೊ-ಏನದ್ಭುತ ವೋ ? ಇದುತಲ್ಲಣಮಂ-ಈ ಭಯವನ್ನು, ತವಿಸಿ-ನಾಶಮಾಡಿ, ಪುರಜನಮಂ, ಪೊರೆ. ... ॥೧೭॥

ವ ॥ ಎಂಬ ಪಿಸುಣರ ದುರಾಲಾಪಮಂ ನರಸ ನಾಲಿಸಿ ಕೋಪಾವೇಶಪಾಟಲಕಟಾಕ್ಷ ನಾಗಿ ಬಸವಾಮಾತ್ಯನಾನನಮ ನಭೀಕ್ಷಿಸಿ ॥ * * * * * * * * *

ಕಂ ॥ ರಾಕ್ಷಸನೊ ಮನುಜರೂಪತ । ರಕ್ಷುವೊ ಖಲರಜಕ ನೀಶಭಜಕನೆನುತ್ತಂ ॥ ಭಕ್ಷಿಸಿದಪ ನಿದಿರ್ಗೆಯ್ದಂ । ದಾಕ್ಷಣಮಪರಾಧರಹಿತರಂ ಮಾನವರಂ ॥ ... ॥೧೮॥

ಕಂ ॥ ಜನಪತಿಯಾದೆನ್ನತ್ತಣಿ । ನಿನಿತು, ಭಯ ಮಿಲ್ಲದಪನುವ, ರಜಕಂ ಪೆಮ್ಮೆಗೊ। ಬ್ಬಿನ ಪೆರ್ಚುಗೆಯಿಂಕೊಂದಪ। ನನಿಮಿತ್ತಂ ಸಾರ್ವ ನರರ ನೀಪ್ಪುರವರದೊಳ್ ॥ ॥೧೯॥

ಕಂ ॥ ಪಳಿಗರ್ಪ್ಪಡಮಂ ಕರ್ಚ್ಚುವ। ಚಳಕದ ಕರಮೆತ್ತ ಶಸ್ತ್ರಚಾಲನವಿದ್ಯಾ॥ ಬಳ ಮೆತ್ತಲವಂ ಮನುಜಾ। ವಳಿಲಯಕರರಜಕರೂಪರಾಕ್ಷಸನೆತ್ತ ॥ ... ॥೨೦॥

ಉ ॥ ಚೋಳವರಾಳಕೇರಳಕಳಿಂಗತುರುಷ್ಕವಿದರ್ಭಪಾಂಡ್ಯಪಾಂ । ಚಾಳಮುಖಾವನೀಪತಿಗಳಳ್ಕಿ ಮದಾಜ್ಞೆಗೆ ಬಾಳ್ವರಾವಗಂ ॥ ಕಾಳಗಕಾಂಪ ಶೂರರಣಮಿಲ್ಲ ಮಿವಂ ಕಡುಗೊರ್ಬ್ಬಿ ತನ್ನ ತೋ । ಳ್ಬಳ ಪಿಡಾಯಮಂ ಮೆರೆಯಲಾಟಿಪ ನೆನ್ನೊಳದೆಂತೊ ಸಾಹಸಂ॥

ಕಂ ॥ ಅರಿಯದವನುಂಟೆ ವಸನಂ । ಕರೆಗೊಳ್ವುದೆ ನುಂಗಲಕ್ಕುಮೇ ಪೇಳವನಂ ॥ ನೆರೆಪೊಕ್ಕಿದಸಗನಧಟಂ । ಮುರಿಯದೆ ಬಿಡೆನೆಂದು ಬಿಜ್ಜಳಂ ಘೂರ್ಮಿಸುತಂ ॥ ॥೨೨॥

---

ಎಂಬ, ಪಿಸುಣರ-ಚಾಡಿಕೋರರ, ದುರಾಲಾಪಮಂ-ಕೆಟ್ಟಮಾತನ್ನು, ಅರಸಂ--ಬಿಜ್ಜಳನು,ಆಲಿಸಿ-ಕೇಳಿ, ಕೋಪಾವೇಶಪಾಟಲಕಟಾಕ್ಷಂ-ಕೋಪದಪ್ರವೇಶದಿಂದ ಕೆಂಪಾದ ಕಡೆಗಣ್ಣುಗಳುಳ್ಳವನು, ಆಗಿ ಬಸವಾಮಾತ್ಯನ-ಮಂತ್ರಿಯಾದ ಬಸವೇಶ್ವರನ, ಆನನಮಂ-ಮುಖವನ್ನು, ಅಭೀಕ್ಷಿಸಿ-ನೋಡಿ. *

ಖಲರಜಕಂ-ನೀಚನಾದ ಅಗಸನು, ಈಶಭಜಕಂ, ಎನುತ್ತಂ, ಅಪರಾಧರಹಿತರಂ-ತಪ್ಪಿತವಿಲ್ಲದ, ಮಾನವರಂ, ಇದಿರ್ಗೆ, ಎಯ್ದ-ದಾಕ್ಷಣಂ-ಬಂದೊಡನೆ, ಭಕ್ಷಿಸಿದಪಂ, ರಾಕ್ಷಸನೊ ? ಮನುಜರೂಪತೆ ರಕ್ಷುವೊ-ಮನುಷ್ಯನ ಆಕಾರವುಳ್ಳಹುಲಿಯೋ ? ... ... ... ॥೧೮॥

ರಜಕಂ, ಜನಪತಿಯಾದ, ಎನ್ನತ್ತಣಿಂ-ನನ್ನ ದೆಸೆಯಿಂದ, ಇನಿತುಭಯಮುಂ-ಇಷ್ಟು ಭೀತಿಯೂ, ಇಲ್ಲದೆ, ಪೆಮ್ಮೆಗೊರ್ಬ್ಬಿನ, ಪೆರ್ಚುಗೆಯಿಂ, ಅನಿಮಿತ್ತಂ-ನಿಷ್ಕಾರಣವಾಗಿ, ಈ ಪುರವರದೊಳ್, ಸಾರ್ವನರರಂ-ಹೋಗುವ ಮನುಷ್ಯರನ್ನು, ಕೊಂದಪಂ, ಅಮಮ ! ... ... ... ॥೧೯॥

ಪಳಿಗರ್ಪ್ಪಡಮಂ-ಕಳೆಯಬಟ್ಟೆಯನ್ನು,ಕರ್ಚ್ಚುವ-ತೊಳೆಯುವ, ಚಳಕದ-ಜಾಣತನವುಳ್ಳ, ಕರಂ,ಎತ್ತ ? ಶಸ್ತ್ರಚಾಲನವಿದ್ಯಾಬಳಂ-ಬಾಣಗಳನ್ನುತಿರುಗಿಸುವವಿದ್ಯಾಶಕ್ತಿಯು, ಎತ್ತಲ್? ಅವಂ,ಮನು...ರಾಕ್ಷಸಂ ಮನುಜಾವಳಿ-ಮನುಷ್ಯಪಜ್ತಿಯ,ಲಯಕರ-ನಾಶಪಡಿಸುವ,ರಜಕರೂಪ_ಅಗಸನಆಕಾರವುಳ್ಳ,ರಾಕ್ಷಸನಲ್ತೆ?

ಚೋಳ ವರಾಳ ಕೇರಳ ಕಳಿಂಗ ತುರುಷ್ಕ ವಿದರ್ಭ ಪಾಂಡ್ಯ ಪಾಂಚಾಳ ಮುಖಾವನೀಪತಿಗಳ್, ಮದಾಜ್ಞೆಗೆ-ನನ್ನ ಅಪ್ಪಣೆಗೆ, ಅಳ್ಕಿ-ಭಯಪಟ್ಟು,ಆವಗಂ, ಬಾಳ್ವರ್; ಕಾಳಗಕೆ, ಆಂಪ-ಇದಿರಾಗುವ,ಶೂರರ್, ಅಣಂ-ಸ್ವಲ್ಪವೂ, ಇಲ್ಲಾ, ಇವಂ, ಕಡುಗೊರ್ಬ್ಬಿ, ತನ್ನ, ತೋಳ್ಬಳ-ತೋಳಿನ ಕತ್ತಿಯ,ಪಿಡಾಯಮಂ-ದಂಬವನ್ನು, ಎನ್ನೊಳ್, ಮೆರೆಯಲ್-ತೋರಿಸುವದಕ್ಕೋಸ್ಕರ, ಆಟಿಪಂ-ಆಟವಾಡುವನು, ಸಾಹಸಂ, ಅದು, ಎಂತೊ-ಎಥಾದ್ದೋ ? ... ... ... ॥೨೧॥

ಅರಿಯದವರ್,ಅಂಟೆ-ಸೋಂಕಲು,ವಸನಂ-ಬಟ್ಟೆಯು, ಕರೆಗೊಳ್ವುದೆ-ಕಪ್ಪಾಗುವದೇ? ಅವನಂ-ಸೋಂಕಿದವನನ್ನು, ನುಂಗಲ್,ಅಕ್ಕುಮೆ-ಆದೀತೆ? ಪೇಳ್, ನೆರೆ-ಹೆಚ್ಚಾಗಿ,ಸೊರ್ಕಿದ-ಕೊಬ್ಬಿದ, ಅಸಗನ,ಅಧಟಂ-ಶೌರ್ಯವನ್ನು, ಮುರಿಯದೆ-ಭಂಗಪಡಿಸದೆ, ಬಿಡೆಂ, ಎಂದು, ಬಿಜ್ಜಳಂ, ಘೂರ್ಮಿಸುತಂ-ಸಿಟ್ಟಿನಿಂ ಕೂಗುತ್ತ.

ಮ ॥ ನಿಜಸಿಂಹಾಸನದಿರ್ಕೆಲಂಬಿಡಿದು ನಿಂದುದ್ಯತ್ಕೃಪಾಣೋಲ್ಲಸ । ದ್ಭುಜರಂ ಧೀ
ರಭಟರ್ಕಳಂ ಬೆಸಸಿದಂ ನೀಮೆಯ್ದಿ ಕೂರ್ಪಿಂದೆ ತ ॥ ದ್ರಜಕಂ ಬರ್ಪೆಡೆಗಾಂತು ಗರ್ಜಿಸುತೆ
ಮುನ್ನುಂಗಿರ್ದನಂ ತಳ್ವದೊ । ಟ್ಟಜೆಯಿಂ ಕಾರೆನುತಾರ್ದು ಕೊಲ್ವುದೆನುತಂ ಕೋಪ್ರೋ
ಜ್ಜ್ವಳಂ ಬಿಜ್ಜಳಂ॥ ... ... ... ... ... ...॥೨೩॥

ವ ॥ ಇಂತೆಂದು ಗಳಪುವ ಬಿಜ್ಜಳನಂ ವೃಷೇಂದ್ರ ನಭೀಕ್ಷಿಸಿ ॥ * * * *

ಕಂ ॥ ಎಲೆನೃಪತಿ ಖಲರ ಕಾಕರ । ಮಲಿನಾತ್ಮರ ಮಾತುಗೇಳ್ದು ಮರುಳಾದೆ ಮ
ದಾ ॥ ವಿಲಮಾನಸ ಮೇಲರಿಯದೆ । ಪಲವಂ ಗಳಪಿದಪೆ ಬಲ್ಲರೊಲ್ವರೆ ನಿನ್ನಂ ॥೨೪॥

ಕಂ ॥ ಅಸಗ ನಿವ ನೆಂದು ಬಗೆದೀ । ಳಿಸುವಯ್ ತಿಳಿವಿಲ್ಲದರಸ ಕೇಳಸಗನೆ ತಾಂ ॥
ರಸೆಯು ನಡಿ ಸೋಂಕಿನಿಂ ಪಾ । ಲಿಸ ಲೆಯ್ದಿದ ರುದ್ರ ಮೂರ್ತಿ ಯಾಮಾಚಯ್ಯಂ ॥೨೫॥

ಕಂ ॥ ಅವನೆ ಕುಲಹೀನನುಂ ಮೇ । ಣವನೆ ಕುಲಾನ್ವಿತನು ಮವನೆ ತದುಭಯ
ಭಾವ ॥ ಸವನಿಸದ ಸರ್ವಗತನುಂ । ಪ್ರವಿದಿತಸಾಕ್ಷಾನ್ಮಹೇಶ್ವರಂ ಮಾಚಯ್ಯಂ॥ ॥೨೬॥

ವ ॥ ಮತ್ತಮಾ ಮಾಚಿದೇವ ನವಿರಳಮದಮಿಳಿತ ನಳಿನಭವ ಜಟಾಘಟಿತಯಜ್ಞ

---

ನಿಜಸಿಂಹಾಸನದ, ಇರ್ಕೆಲಂಬಿಡಿದು-ಎರಡು ಪಾರ್ಶ್ವಗಳನ್ನು ಹಿಡಿದುಕೊಂಡು, ನಿಂದು, ಉದ್ಯತ್ಕೃಪಾಣೋಲ್ಲಸದ್ಭುಜರಂ-ಉದ್ಯತ್-ಉತ್ಕೃಷ್ಟವಾದ, ಕೃಪಾಣ-ಕತ್ತಿಗಳಿಂದ, ಉಲ್ಲಸತ್-ಪ್ರಕಾಶಿಸುವ, ಭುಜರಂ-ತೋಳ್ಗಳುಳ್ಳ, ವೀರಭಟರ್ಕಳಂ-ಧೈರ್ಯಶಾಲಿಗಳಾದ ಭೃತ್ಯರನ್ನು ಕುರಿತು, ನೀಂ-ನೀವು, ಕೂರ್ಪಿಂದೆ-ಪ್ರೀತಿಯಿಂದ, ಎಯ್ದಿ-ಹೋಗಿ, ತದ್ರಜಕಂ, ಬರ್ಪ, ಎಡೆಗೆ-ಸ್ಥಳಕ್ಕೆ, ಆಂತು-ಇದಿರಾಗಿ, ಗರ್ಜಿಸುತೆ-ಭಯಂಕರವಾದ ಧ್ವನಿಯಂ ಮಾಡುತ್ತ. ಮುಂ, ನುಂಗಿ, ಇರ್ದನಂ, ತಳ್ವದೆ- ತಪ್ಪದೆ, ಒಟ್ಟಜೆಯಿಂ- ಕಪ್ಪದರೂಪವಾಗಿ, ಕಾರು-ಕಕ್ಕು, ಎನುತೆ, ಆರ್ದು-ಕೂಗಿ, ಕೊಲ್ವುದು, ಎನುತಂ, ಕೋಪೋಜ್ವಳಂ-ಕೋಪದಿಂ ಪ್ರಕಾಶಿಸುವ, ಬಿಜ್ಜಳಂ, ಬೆಸಸಿದಂ- ಆಜ್ಞಾಪಿಸಿದನು. ... ... ॥೨೩॥

ಎಲೆನೃಪತಿ ! ಖಲರ-ನೀಚರ, ಕಾಕರ-ಕುತ್ಸಿತರ, ಮಲಿನಾತ್ಮರ-ಪಾಪಿಗಳ, ಮಾತುಗೇಳ್ದು, ಮರುಳಾದೆ- ಹುಚ್ಚನಾದೆ, ಮದಾವಿಲಮಾನಸ- ಗರ್ವದಿಂವ್ಯಾಪ್ತವಾದ ಮನಸ್ಸುಳ್ಳವನೇ ! ಮೇಲ್- ವಿಶೇಷವಾಗಿ, ಅರಿಯದೆ, ಪಲವಂ- ಅನೇಕಮಾತನ್ನು, ಗಳಪಿದಪೆ- ಕೂಗುವೆ, ಬಲ್ಲರ್-ತಿಳಿದವರು, ನಿನ್ನಂ, ಒಲ್ವರೆ- ಪ್ರೀತಿಸುವರೇ ? ... ... ... ... ॥೨೪॥

ತಿಳಿವು- ಜ್ಞಾನವು, ಇಲ್ಲದ, ಅರಸ ! ಕೇಳ್, ಇವಂ, ಅಸಗಂ, ಎಂದು, ಬಗೆದು- ಯೋಚಿಸಿ, ಪಳಿಸುವಯ್- ತಿರಸ್ಕರಿಸುತ್ತೀಯೆ; ತಾಂ, ಆಮಾಚಯ್ಯನು, ಅಸಗನೇ? ರಸೆಯಂ- ಭೂಮಿಯನ್ನು, ಅಡಿಸೋಂಕಿನಿಂ- ಪಾದಸ್ಪರ್ಶದಿಂದ, ಪಾಲಿಸಲ್, ಎಯ್ದಿದ- ಬಂದ, ರುದ್ರಮೂರ್ತಿ. ... ... ॥೨೫॥

ಮಾಚಯ್ಯಂ, ಅವನೆ, ಕುಲಹೀನನುಂ, ಮೇಣ್, ಅವನೆ, ಕುಲಾನ್ವಿತನುಂ, ಅವನೆ, ತದುಭಯಭಾವಂ- ಆಕುಲೀನಾಕುಲೀನತ್ವಗಳು, ಸವನಿಸದ- ಉಂಟಾಗದ, ಸರ್ವಗತಂ- ಸರ್ವವ್ಯಾಪಿಯಾದ, ಪ್ರವಿದಿತಸಾಕ್ಷಾನ್ಮಹೇಶ್ವರಂ- ಪ್ರಸಿದ್ಧನಾದ ಪ್ರತ್ಯಕ್ಷಪರಮೇಶ್ವರನು. (ರುದ್ರನೇ ಮಾಚಯ್ಯನಾಗವತರಿಸಿರುವದರಿಂದ ಕುಲಾನ್ವಿತಂ ಕುಲಹೀನನೆಂಬಲ್ಲಿ ದೇಹಸಹಿತ ದೇಹರಹಿತ ಅಂದರೆ ಸಾಕಾರಿಯೂ ನಿರಾಕಾರಿಯೂ ಆದವನೆಂಬ ಭಾವವು) ... ... ... ... ... ॥೨೬॥

ಮತ್ತಂ, ಆಮಾಚಿದೇವಂ, ಅವಿರಳ......ಸೂತ್ರಮಂ—ಅವಿರಳ- ದಟ್ಟವಾದ, ಮದ- ಗರ್ವದಿಂದ, ಮಿಳಿತ- ಕೂಡಿದ, ನಳಿನಭವ- ಬ್ರಹ್ಮನ, ಜಟಾ- ಜಡೆಗಳಿಂದ, ಘಟಿತ- ಸೇರಿಸಲ್ಪಟ್ಟ, ಯಜ್ಞಸೂತ್ರಮಂ-

ಸೂತ್ರಮನುರದೊಳಳವಡಿಸಿ ಕರತಳದೊಳ್ತತ್ಕರೋಟಭಿಕ್ಷಾಪಾತ್ರೆಯುಮಂ ತಳೆದು ಭುವನಭವನದೊಳ್ಭಿಕ್ಷಾಟನಂಗೆಯ್ದ ಮಹಾಬ್ರಾಹ್ಮಣನುಂ, ಸಂಪೂಜ್ಯಮೋಕ್ಷಸಾಮ್ರಾಜ್ಯರಕ್ಷಣವಿಚಕ್ಷಣನೆನಿಸಿ ಕ್ಷತ್ರಿಯನುಂ, ಚಪಲತರಕರ್ಮೋರ್ಮಿಮಾಲಾಕುಲಭವಸಮುದ್ರದೊಳ್ಜೀವವಸ್ತುನಿಬಿಡಿತತನುವಹಿತ್ರಸಮುದಯಮಂ ತಿರಿಗಿಪುದರಿಂ ವೈಶ್ಯನುಂ, ಮಾಯಾಧರಿತ್ರಿಯೊಳ್ಜೀವಸಸ್ಯಂಗಳಂ ಬೆಳೆಯಿಸಿ ಕಾಲಮರಿದು ಕೊಯ್ದಿಕ್ಕಿ ರಾಶಿಗೆಯ್ವುದರಿಂದನುಪಮಾನಶೂದ್ರನುಂ, ನಾದಬಿಂದುಫಲಕದೊಳಾದಿಶಕ್ತಿಚಕ್ರಮನಮರ್ಚಿ ಕಳಾದಂಡದಿನಜಾಂಡಭಾಂಡಂಗಳಂ ತಿರುಪಿ ನಿರ್ಮಿಪ ಘಟಕಾರನುಂ, ಪ್ರಳಯಜಲಧಿಯೊಳಳವಿಗಳಿದಳವಿನಿಂ ವಿಹರಿಪ ಸಮದಮತ್ಸ್ಯಕೂರ್ಮಂಗಳನಾದಿಭೂದಾರಕಪಿಶಿತಮಿಳಿತನೃಹರಿನಖಸಂಘಟಿತಫಣಿಪಗುಣನಿಯುತತ್ರಿವಿಕ್ರಮಕಂಕಾಳದಂಡಮೆಂಬಗಾಳಮಂ ನಿಟ್ಟಿಸಳೆವ ವಾಗುರಿಕನುಂ, ಮೃಗರೂಪನಾಳ್ದ ನಳಿನಜನ ಶಿರಮಂ ನೆಚ್ಚುರುಳ್ಚಿದತುಳಬಳಕಿರಾತನುಂ, ಸಕಲಜಗನ್ನಿವಹನಿಲಯನಿರ್ಮಾಣಕರ್ಮಕರ್ಮಠನೆನಿಪ ಕಮ್ಮರನುಂ, ವಿಮಲದೀಕ್ಷಾನಲನಿನಾತ್ಮಕನಕಮ

---

ಉಪವೀತನನ್ನು, ಉರದೊಳ್- ಎದೆಯಲ್ಲಿ, ಅಳವಡಿಸಿ- ಸೇರಿಸಿ, ಕರತಳದೊಳ್, ತತ್ಕರೋಟಭಿಕ್ಷಾಪಾತ್ರೆಯುಂ- ಆ ಬ್ರಹ್ಮನ ತಲೆಯೋಡೆಂಬ ಭಿಕ್ಷಾಪಾತ್ರೆಯನ್ನು, ತಳೆದು, ಭುವನಭವನದೊಳ್- ಜಗತ್ತೆಂಬ ಮನೆಯಲ್ಲಿ, ಭಿಕ್ಷಾಟನಂಗೆಯ್ದ- ಭಿಕ್ಷೆಯನ್ನೆತ್ತಿದ, ಮಹಾಬ್ರಾಹ್ಮಣನುಂ; ಸಂಪೂಜ್ಯ........ವಿಚಕ್ಷಣಂ— ಸಂಪೂಜ್ಯ- ಚೆನ್ನಾಗಿ ಪೂಜಿಸಲ್ಪಡುವದಕ್ಕೆ ಯೋಗ್ಯವಾದ, ಮೋಕ್ಷ- ಮುಕ್ತಿಯೆಂಬ, ಸಾಮ್ರಾಜ್ಯ- ದೊರೆತನವನ್ನು, ರಕ್ಷಣ- ಪರಿಪಾಲಿಸುವದರಲ್ಲಿ, ವಿಚಕ್ಷಣಂ- ಕುಶಲನು. ಎನಿಸಿ, ಕ್ಷತ್ರಿಯನುಂ; ಚಪಲ.......ಸಮುದ್ರದೊಳ್— ಚಪಲತರ- ಅತಿಚಂಚಲಗಳಾದ, ಕರ್ಮ- ಕರ್ಮಗಳೆಂಬ, ಊರ್ಮಿ- ತೆರೆಗಳ, ಮಾಲಾ- ಪಙ್ತಿಯಿಂದ, ಆಕುಲ- ವ್ಯಾಪ್ತವಾದ, ಭವ- ಸಂಸಾರವೆಂಬ, ಸಮುದ್ರದೊಳ್, ಜೀವ........ಸಮುದಯಮಂ— ಜೀವ- ಪ್ರಾಣಿಗಳೆಂಬ, ವಸ್ತು- ಪದಾರ್ಥಗಳಿಂದ, ನಿಬಿಡಿತ- ತುಂಬಲ್ಪಟ್ಟ, ತನು- ದೇಹವೆಂಬ, ವಹಿತ್ರ- ಹಡಗುಗಳ, ಸಮುದಯಮಂ, ತಿರಿಗಿಪುದರಿಂ, ವೈಶ್ಯನುಂ; ಮಾಯಾಧರಿತ್ರಿಯೊಳ್- ಮಾಯೆಯೆಂಬ (ಭ್ರಮೆ) ಭೂಮಿಯಲ್ಲಿ, ಜೀವಸಸ್ಯಂಗಳಂ- ಪ್ರಾಣಗಳೆಂಬ ಪೈರುಗಳನ್ನು, ಬಳೆಯಿಸಿ, ಕಾಲಮರಿದು, ಕೊಯ್ದು, ಇಕ್ಕಿ, ರಾಶಿಗೆಯ್ವುದರಿಂದೆ, ಅನುಪಮಾನಶೂದ್ರನುಂ; ನಾದಬಿಂದುಫಲಕದೊಳ್- ನಾದಬಿಂದುಗಳೆಂಬ ಹಲಗೆಯಲ್ಲಿ, ಆದಿಶಕ್ತಿಚಕ್ರಮಂ- ಮೂಲಶಕ್ತಿಯೆಂಬ ಚಕ್ರವನ್ನು, ಅಮರ್ಚಿ-ಇಟ್ಟು, ಕಳಾದಂಡದಿಂ- ಕಳೆಯೆಂಬ ದೊಣ್ಣೆಯಿಂದ, ತಿರುಪಿ- ತಿರುಗಿಸಿ, ಅಜಾಂಡಭಾಂಡಂಗಳಂ- ಬ್ರಹ್ಮಾಂಡಗಳೆಂಬ ಮಡಕೆಗಳನ್ನು, ನಿರ್ಮಿಪ, ಘಟಕಾರನುಂ ಕುಂಬಾರನೂ; ಪ್ರಳಯಜಲಧಿಯೊಳ್— ಪ್ರಳಯಕಾಲದ ಸಮುದ್ರದಲ್ಲಿ, ಅಳವಿಗಳಿದ- ಗಣನಾತೀತವಾದ, ಅಳವಿನಿಂ- ಶಕ್ತಿಯಿಂದ, ವಿಹರಿಪ- ಕ್ರೀಡಿಸುವ, ಸಮದಮತ್ಸ್ಯಕೂರ್ಮಂಗಳಂ- ಗರ್ವದಿಂ ಕೂಡಿದ ಮೀನು ಆಮೆ ಇವುಗಳನ್ನು, ಆದಿ......ದಂಡಂ— ಆದಿಭೂದಾರಕ- ಆದಿವರಾಹದ, ಪಿಶಿತ- ಮಾಂಸದಿಂದ, ಮಿಳಿತ- ಕೂಡಿದ, ನೃಹರಿ- ನೃಸಿಂಹನ, ನಖ- ಉಗುರಿನಿಂದ, ಸಂಘಟಿತ- ಸೇರಿಸಲ್ಪಟ್ಟ, ಫಣಿಪ- ಆದಿಶೇಷನೆಂಬ, ಗುಣ- ದಾರದಿಂದ, ನಿಯುತ- ಕೂಡಿದ, ತ್ರಿವಿಕ್ರಮ- ವಾಮನಮೂರ್ತಿಯ, ಕಂಕಾಳದಂಡಂ-ದೊಣ್ಣೆಯಂತಿರುವ ಮೂಳೆಯು, ಎಂಬ, ಗಾಳಮಂ-ಗಾಣವನ್ನು, ಇಟ್ಟು, ಸೆಳೆವ, ವಾಗುರಿಕನುಂ- ಬೆಸ್ತನೂ; ಮೃಗರೂಪಂ- ಜಿಂಕೆಯಾಕಾರವನ್ನು, ಆಳ್ದ- ಹೊಂದಿದ, ನಳಿನಜನ- ಬ್ರಹ್ಮನ, ಶಿರಮಂ, ಎಚ್ಚು- ಬಾಣಪ್ರಯೋಗವಂ ಮಾಡಿ, ಉರುಳ್ಚಿದ- ಕೆಡವಿದ, ಅತುಳ- ಅಸದೃಶವಾದ, ಬಳ- ಶಕ್ತಿಯುಳ್ಳ, ಕಿರಾತನುಂ- ಬೇಡನೂ; ಸಕಲ......ಕರ್ಮಠಂ— ಸಕಲಜಗತ್- ಸಮಸ್ತ ಲೋಕಗಳ,

ಲಿನಮಂ ನಪ್ರೋಹಿಪ ಹೇಮಕಾರನುಂ ಲೋಕೇಶಕೇಶವವಾಸವಾದಿಪಶುಪ್ರಕರಪಾಲನಂಗೆಯ್ವ ಗೋವಳನುಂ, ಪ್ರಕೃತಿಸೂತ್ರಮಂ ಪಿಡಿದು ನರೋರಗದಿವಿಜರೆಂಬ ಬೊಂಬೆಗಳನಾಡಿಪ ಸೂತ್ರಿಕನುಂ, ಏಕಾರ್ಣ್ಣವದೊಳಳ್ದ ನಾಕಿಜನಮೆಂಬ ವಸನಮಂ ವಿಲಯಸಮಯದೊಳೊಗೆವ ರಜಕನುಂ ತಾನೆ ನಿಜಮೆನಿಸಿ ರಂಜಿಪ ನಮಗೊಂದು ಜಾತಿಕಲ್ಪನೆಗೆಯ್ವುದವಿವೇಕವಿಲಸನಮಕ್ಕುಂ ಮಹಾಮಹಾತ್ಮನ ಪೆಂಪನಭಿವರ್ಣ್ಣಿಪೊಡನಂತಾನಂತರ್ಗ್ಗಮಾದೊಡ ಮಶಕ್ಯಮುಂ ಕುಮಲ್ಲದೆಯುಂ ॥ * * * * * * * * * * * * * *

ಕಂ ॥ ಹರ ನಾತ್ಮಲೀಲೆಯಿಂದಂ । ಕಿರಾತನೆನಿಸಿರ್ದ್ದನಂದು ಪಾರ್ತ್ಥಹಿತಾರ್ತ್ಥಂ ॥ ಶರಣಹಿತಾರ್ತ್ಥಂ ಮಾಚಯ । ವರರೂಪಂ ತಾಳ್ದು ರಜಕನೆನಿಸಿದನಲ್ತೆ ॥ ... ॥೧೩॥

ಮತ್ತಂ ॥ ಕರಿಚರ್ಮ್ಮಾಂಬರಭಕ್ತರಂಬರಮನೆಲ್ಲಾಗಳ್ಸಮುತ್ಸಾಹದೆ । ಳ್ತರದಿಂದಂ ತೊಳೆದೀವ ನನ್ಯವಸನವ್ರಾತಂಗಳಂಮುಟ್ಟ ನಾ ॥ ದರದಿಂದಂ ಕುಡುವಂ ಚರವ್ರಜಕೆ ಭಾಸ್ವದ್ವಸ್ತ್ರಮಂ ಬಾಪ್ಪುದು । ರ್ಣ್ಣರಂಟುತ್ತಿರೆ ಸ್ಯೆರಿಸಂ ಶರಣವಾಸಶ್ರೇಣಿಯಂ ಮಾಚಯಂ ॥ ... ... .. ... ॥೧೪॥

---

ನಿವಹ- ಸಮೂಹದ, ಲಯ- ನಾಶವೇನು, ನಿರ್ಮ್ಮಾಣ- ಸೃಷ್ಟಿಯೇನು, ಇವುಗಳೆಂಬ, ಕರ್ಮ- ಕೃತ್ಯದಿಂದ, ಕರ್ಮ್ಮಠಂ- ಕರ್ಮಶೂರನು; ಎನಿಪ- ಕಮ್ಮರನುಂ- ಕಮ್ಮಾರನೂ; ವಿಮಲದೀಕ್ಷಾನಲನಿಂ- ನಿರ್ಮಲವಾದಶಿವದೀಕ್ಷೆಯೆಂಬ ಬೆಂಕಿಯಿಂದ, ಆತ್ಮಕನಕಮಲಿನಮಂ- ದೇಹ, ಅಥವಾ ಮನಸ್ಸು ಎಂಬ ಚಿನ್ನದಕೊಳೆಯನ್ನು, ಅಪ್ರೋಹಿಪ- ಹೋಗಲಾಡಿಸುವ, ಹೇಮಕಾರನುಂ- ಅಕ್ಕಸಾಲಿಗನೂ; ಲೋಕೇಶ......ಗೆಯ್ವ— ಲೋಕೇಶ- ಬ್ರಹ್ಮ, ಕೇಶವ- ವಿಷ್ಣು, ವಾಸವ- ಇಂದ್ರ, ಇವರುಗಳೇ, ಆದಿ- ಮೊದಲಾದ, ಪಶು- ಪಶುಗಳ,ಪ್ರಕರ- ಸಮೂಹವನ್ನು, ಪಾಲನಂಗೆಯ್ವ, ಗೋವಳನುಂ- ಗೋಪಾಲಕನೂ; ಪ್ರಕೃತಿಸೂತ್ರಮಂ- ಮಾಯೆಯೆಂಬ ಸೂತ್ರವನ್ನು, ಪಿಡಿದು, ನರೋರಗದಿವಿಜರ್— ನರ- ಮನುಷ್ಯರು, ಉರಗ- ಸರ್ಪಗಳು, ದಿವಿಜರ್- ದೇವತೆಗಳು, ಎಂಬ, ಬೊಂಬೆಗಳು, ಆಡಿಪ- ಸೂತ್ರಿಕನುಂ- ಸೂತ್ರಧಾರನೂ, ಏಕಾರ್ಣ್ಣವದೊಳ್- ಮಹಾಪ್ರಳಯಕಾಲದ ಸಮುದ್ರದಲ್ಲಿ, ನಾಕಿಜನಂ- ದೇವತೆಗಳು, ಎಂಬ, ವಸನಮಂ- ಬಟ್ಟೆಯನ್ನು, ಅಳ್ದ-ಅದ್ದಿ, ವಿಲಯಸಮಯದೊಳ್, ಒಗೆವ, ರಜಕನುಂ; ತಾನೆ, ನಿಜಂ, ಎನಿಸಿ, ರಂಜಿಪಂ, ಅವಂಗೆ, ಒಂದುಜಾತಿಕಲ್ಪನೆಗೆಯ್ವುದು, ಅವಿವೇಕವಿಲಸನಂ- ಅಜ್ಞಾನವಿಲಾಸವು, ಅಕ್ಕುಂ, ಆಮಹಾತ್ಮನ,ಪೆಂಪಂ- ಆಧಿಕ್ಯವನ್ನು, ಅಭಿವರ್ಣ್ಣಿಪೊಡೆ, ಅನಂತಾನಂತರ್ಗಂ— ಅನಂತ- ಆದಿಶೇಷ, ಅನಂತರ್ಗಂ- ಅವರೊಡನೆ ವಿಷ್ಣುವಿಗಾದರೂ, (ಅಥವಾ ಅಪರಿಮಿತವಾದ ಆದಿಶೇಷರಿಗಾದರೂ) ಅಶಕ್ಯಂ ಅಂತುಂ, ಅಲ್ಲದೆಯುಂ. * *

ಹರಂ, ಆತ್ಮಲೀಲೆಯಿಂದಂ- ತನ್ನ ವಿಲಾಸದಿಂದ, ಪಾರ್ಥಹಿತಾರ್ಥಂ- ಅರ್ಜುನನಿಗೆ ಸುಖವನ್ನುಂಟುಮಾಡುವದಕ್ಕೋಸ್ಕರ, ಅಂದು, ಕಿರಾತಂ- ಬೇಡನು, ಎನಿಸಿ, ಇರ್ದ್ದಂ, (ಇಂದು) ಶರಣಹಿತಾರ್ಥಂ, ಮಾಚಯವರರೂಪಂದಾಳ್ದು, ರಜಕಂ, ಎನಿಸಿದನಲ್ತೆ? ... ... ... ॥೧೩॥

ಮಾಚಯಂ, ಕರಿಚರ್ಮ್ಮಾಂಬರಭಕ್ತರ— ಕರಿ- ಆನೆಯ, ಚರ್ಮ- ವಸ್ತ್ರವೇ, ಅಂಬರ- ವಸ್ತ್ರವಾಗುಳ್ಳ ಶಿವನ, ಭಕ್ತರ, ಅಂಬರಮಂ, ಎಲ್ಲಾಗಳ್- ನಿರಂತರದಲ್ಲೂ, ಸಮುತ್ಸಾಹದ, ಎಳ್ತರದಿಂದಂ- ಆಧಿಕ್ಯದಿಂದ, ತೊಳೆದು, ಈವಂ; ಅನ್ಯವಸನವ್ರಾತಂಗಳಂ— ಇತರರಾದ ಅಲಿಂಗಿಗಳ ಬಟ್ಟೆಗಳ ಸಮೂಹವನ್ನು, ಮುಟ್ಟಂ; ಚರವ್ರಜಕೆ- ಜಂಗಮಸಮೂಹಕ್ಕೆ, ಆದರದಿಂದಂ-ವಿಶ್ವಾಸದಿಂದ, ಭಾಸ್ವದ್ವಸ್ತ್ರಮಂ, ಕುಡುವಂ; ಶರಣವಾಸಶ್ರೇಣಿಯಂ- ಶಿವಶರಣರ ಬಟ್ಟೆಯ ಸಮೂಹವನ್ನು, ದುರ್ಣ್ಣಯರ್-ದುಷ್ಟನೀತಿಯುಳ್ಳವರು, ಅಂಟುತ್ತಿರೆ- ನೋಡುತ್ತಿದ್ದರೆ, ಸ್ಯೆರಿಸಂ. ... ... ... ॥೧೪॥

ಕಂ॥ ನಿಟಿಲನಯನಸ್ವರೂಪಂ। ಪಟುಭುಜಬಳಮಹಿತಮಾಚಿರಾಜನ ಮಹಿಮೋ ॥ ತ್ಕಟತೆಯ ನರಿವೊಡೆ ಸಾಧ್ಯಮೆ। ಕುಟಿಲಾತ್ಮರ್ಗೇಕೆ ನೃಪತಿ ನಿನ್ನಯ ಭಟರುಂ॥ ॥೨೯॥

ಕಂ॥ ಕಳುಪಿದಪೆ ಮುಳಿದು ತರಗೆಲೆ। ಗಳ ನುರಿಯೆಡೆಗಬ್ಬುವಂತಿರಾತನ ಬಳಿಗಾ ॥ ಬಳವದ್ವಿಕ್ರಮ ನೀಖಿಳ। ಬಳಮಂ ಬರಿಕೆಯ್ವನೊಂದೆನಿಮಿಸದೊಳಧಟಂ॥ ॥೩೦॥

ಮಹಾಸ್ರ॥ ಮುಳಿಸಿಂದಂ ಚಾತುರಂಗಂಬೆರಸು ನೃಪತಿ ನೀನಾಂತೊಡಂ ದೋರ್ಬಳ ಪ್ರೋ। ಜ್ಜ್ವಳನಾಮಾಚಯ್ಯನೇಂ ಲೆಕ್ಕಿಪನೆ ಬರಿದೆ ಸಂರಂಭದಿಂ ಸೈನ್ಯಮಂ ನೀಂ ॥ ಕಳುಪುತ್ತಂ ಮಾನಭಂಗಂಬಡೆಯದಿರವನೊಳ್ಗೆಲ್ಲಮಂ ಕೊಳ್ವರಾರ್ತ್ವ। ದ್ಬಳಮಂ ಪಾಳ್ಗೆಯ್ವಣಂ ತಾಳದಿರಪಯಶಮಂ ಬಿಜ್ಜಳಕ್ಷೋಣಿಪಾಲ ॥ ... ... ॥೩೧॥

ವ॥ ಎಂಬುದುಮಾ ಬಿಜ್ಜಳಂ ಕೇಳ್ದು ರೋಷೋನ್ಮಿಷಿತಹಸಿತಶೌರ್ಯೋಕ್ತಿಮುಖರಮುಖನಾಗಿ॥ * * * * * * * * * * * * *

ಕಂ॥ ಸಮಯಾಭಿಮಾನಜನಿತ। ಭ್ರಮೆಯಿಂ ಕಾರಣಕಥಾಳಿಯಂ ಕಲ್ಪಿಸುತ ॥ ಕ್ರಮಮ ನೊರೆಯದಿರೆನುತೆಮು। ರ್ದಮನರಪತಿ ಬಸವನುಕ್ತಿಯಂ ವಾರಿಸುತಂ॥ ॥೩೨॥

ಕಂ॥ ಪ್ರೊತಕರಿಸಿನೊಳೆತುದೆರ್ದೆನೆಲ। ಡೆನೊಳ್ಕಡೆಗಣ್ಣೊಳುರೆ ತಳರ್ಬುದು ಕೊಂ

---

ನಿಟಿಲನಯನಸ್ವರೂಪಂ- ಶಿವಾಕಾರನಾದ, ಪಟುಭುಜಬಳಮಹಿತಮಾಚಿರಾಜನ- ಪಟು- ಸಮರ್ಥನಾದ, ಭುಜಬಳ- ಬಾಹುಶಕ್ತಿಯಿಂದ, ಮಹಿತ- ಪೂಜ್ಯನಾದ, ಮಾಚಿರಾಜನ, ಮಹಿಮೋತ್ಕಟತೆಯಂ-ಮಹತ್ತ್ವಾಧಿಕ್ಯವನ್ನು, ಅರಿವೊಡೆ- ಕುಟಿಲಾತ್ಮರ್ಗೆ, ಸಾಧ್ಯಮೆ? ನೃಪತಿ, ನಿನ್ನಯ, ಭಟರುಂ. ॥೨೯॥

ತರಗೆಲೆಗಳಂ, ಉರಿಯ- ಜ್ವಾಲೆಯು, ಎಡೆಗೆ- ಬಳಿಗೆ, ಅಬ್ಬುವಂತಿರೆ- ಕಳುಹಿಸುವಹಾಗೆ, ಆತನ- ಆ ಮಾಚಯ್ಯನ, ಬಳಿಗೆ, ಏಕೆಕಳುಪಿದಪೆ? ಆಬಳವದ್ವಿಕ್ರಮಂ- ಪ್ರಬಲವಾದ ಪರಾಕ್ರಮವುಳ್ಳ ಆ ಮಾಚಯ್ಯನು, ಅಧಟಿಂ- ಶೌರ್ಯದಿಂದ, ಈಖಿಳಬಳಮಂ- ಈ ನೀಚಸೈನ್ಯವನ್ನು, ಒಂದೆನಿಮಿಸದೊಳ್- ಒಂದೇ ನಿಮಿಷದಲ್ಲಿ, ಬರಿಕೆಯ್ವಂ- ನಾಶಪಡಿಸುವನು. ... ... ... ... ॥೩೦॥

ನೃಪತಿ! ನೀಂ, ಮುಳಿಸಿಂದಂ-ಕೋಪದಿಂದ, ಚಾತುರಂಗಂಬೆರಸು- ಹಸ್ತಿ ಅಶ್ವ ರಥ ಕಾಲಾಳುಗಳೆಂಬ ಚತುರಂಗಸೈನ್ಯದಿಂ ಕೂಡಿ, ಆಂತೊಡಂ- ಇದಿರಾದಾಗ್ಯೂ, ದೋರ್ಬಳಪ್ರೋಜ್ವಳಂ- ಭುಜಶಕ್ತಿಯಿಂ ಪ್ರಕಾಶಿಸುವ, ಆಮಾಚಯ್ಯಂ, ಲೆಕ್ಕಿಪನೇಂ- ಗಣನೆಮಾಡುವನೇ? ನೀಂ, ಬರಿದೆ- ವ್ಯರ್ಥವಾಗಿ, ಸಂರಂಭದಿಂ- ಸಡಗರದಿಂದ, ಕಳುಪುತ್ತಂ, ಮಾನಭಂಗಂಬಡೆಯದೆ, ಇರ್; ಅವನೊಳ್, ಗೆಲ್ಲಮಂ- ಜಯವನ್ನು, ಕೊಳ್ವರ್, ಆರ್? ಬಿಜ್ಜಳಕ್ಷೋಣಿಪಾಲ! ತ್ವದ್ಬಳಮಂ- ನಿನ್ನ ಸೈನ್ಯವನ್ನು, ಪಾಳ್ಗೆಯ್ದು, ಅಣಂ- ಸ್ವಲ್ಪ, ಅಪಯಶಮಂ, ತಾಳದೆ, ಇರ್. ... ... ... ... ॥೩೧॥

ಎಂಬುದುಂ- ಹೀಗೆ ಹೇಳುತಲೂ, ಆಬಿಜ್ಜಳಂ, ಕೇಳ್ದು, ರೋಷೋ.......ಮುಖಂ— ರೋಷ- ಕೋಪದಿಂದ, ಉನ್ಮಿಷಿತ- ಹೆಚ್ಚಾಗಿವಿಸ್ತರಿಸಿದ,ಹಸಿತ- ನಗುವಿಕೆಯಿಂ ಕೂಡಿದ, ಶೌರ್ಯೋಕ್ತಿ-ಪರಾಕ್ರಮ ಸೂಚಕವಾದ ಮಾತಿನಿಂದ, ಮುಖರ- ಶಬ್ದಾಯಮಾನವಾದ, ಮುಖಂ, ಅಗಿ- * * * * *

ಸಮಯಾಭಿಮಾನಜನಿತಭ್ರಮೆಯಿಂ- ಮತಾಭಿಮಾನದಿಂದುಂಟಾದ ಅಯಥಾರ್ಥಜ್ಞಾನದಿಂದ, ಕಾರಣಕಥಾಳಿಯಂ- ಕಾರಣರೂಪಗಳಾದ ಕಥೆಗಳನ್ನು, ಕಲ್ಪಿಸುತೆ, ಅಕ್ರಮಮಂ, ಒರೆಯದೆ- ಹೇಳದೆ, ಇರ್; ಎನುತೆ, ದುರ್ದ್ದಮನರಪತಿ- ದುಷ್ಟನಾದ ರಾಜನು, ಬಸವನ, ಉಕ್ತಿಯಂ, ವಾರಿಸುತಂ- ತಡೆಯುತ್ತ. ॥೩೨॥

ಭೂಭುಜನ, ಕೋಪಲತೆ- ಕ್ರೋಧವೆಂಬ ಬಳ್ಳಿಯು, ಎರ್ದೆನೆಲದ- ಹೃದಯವೆಂಬ ಭೂಮಿಯು, ಎಡೆಯೊಳ್, ಪೊಡಕರಿಸಿ- ವಿಜೃಂಭಿಸಿ, ಮೊಳೆತುದು; ಕಡೆಗಣ್ಣೊಳ್, ಉರೆ, ತಳರ್ದುದು- ಬೆಸುರಿನಿಂದತುಂಬಿ

ಶ್ಲೋ॥ ಕುಡಿಗೊಂಡುದು ಪೃಸ್ಟಿನೊಳ್। ವಾಡೆದುದು ವದನದೊಳೆ ಕೋಪಲತೆ ಬೂಭುಜನ॥

ಶಾ॥ ದೀನಂ ದಾನವಿಧಾನವಾಣಿಗೆ ಮನಂದಂದಪ್ಪನೇ ಸತ್ಕೃಪಾ। ಹೀನಂ ಶಾಂತಿಸು ಬೋಕ್ತಿಗೇಳ್ವನೆ ಮನೋಜಜನ್ಮಾದಿವೈರಾಗ್ಯವಾ ॥ ಕ್ಯಾನೀಕಕ್ಕೆ ಸಡಿಲ್ವನೇ ಸಿರಿಗರಂ ಸೋಂಕಿರ್ದ ತದ್ವಿಜ್ಜಳೋ। ರ್ವೀನಾಥು ಬಸವೋಕ್ತ ಭಕ್ತಮಹಿಮಾಲಾಪಕ್ಕೆ ಮು ಯ್ಯಾಂಪನೇ ॥ ... ... ... ... ... .. ।೩೪।

ವ॥ ಎನಿಸಿ ತದ್ವಚನಮ ನೇಳದುಗೆಯ್ದು ದುರ್ಣಯಧುರೀಣಂ ತನ್ನ ಮನ್ನಣೆಯ ಮಾವುತನ ನಭೀಕ್ಷಿಸಿ ॥ * * * * * * * * * * * * *

ಚಂ॥ ತೊಡರ್ದೊಡೆ ಜಂಭಭಿದ್ಗಜಮ ನಾದೊಡ ಮರ್ದಿಸಲಾರ್ಪ ಶಕ್ತಿಸಂ। ಗಡಿಸಿದ ನೀಲಭೂಧರಸಮಾನ ಮದಾಂಧಮದೀಯಹಸ್ತಿಯಂ ॥ ಕಡುಪಿನೊಳಾತ ನೆಯ್ದುವೆಡೆವಟ್ಟೆ ಯೊಳಾರ್ದ್ದಿದಿರಾಂತು ನೂಂಕಿ ಮುಂ। ಗಡೆಗವನಂ ಪಡಲ್ವಿಡಿಸಿ ಮರ್ದಿಪುದೆಂದ ನವದ್ಯಮಾ ನಸಂ ॥ ... .. ... ... ... .. ... ॥೩೫॥

ವ॥ ಎಂದ ನರೇಂದ್ರನನುಜ್ಞೆಯ ನಾಧೋರಣಂ ತಾಳ್ದಿಭೇಂದ್ರಮಂ ಪಣ್ಣಿಗೆಯ್ದೇರಿ ಮೀರಿ ಪರಿಯಿಪಾಗಳ್ ॥ * * * * * * * * * * * * *

---

ತು; ಪುಬ್ಬಿನೊಳ್, ಗೂಸಿಂ- ವಕ್ರತ್ವದಿಂದ, ಕುಡಿಗೊಂಡುದು- ಕೊನೆಯಾಯ್ತು, ವದನದೊಳೆ- ಮೊಗದಲ್ಲಿ, ಅಲರ್ವಕಿವುದು- ಹೂವನ್ನು ಬಿಟ್ಟಿತು. ... ... ... ॥೩೩॥

ದೀನಂ- ದರಿದ್ರನು, ದಾನವಿಧಾನವಾಣಿಗೆ- ದಾನದ ರೀತಿಯ ಮಾತಿಗೆ, ಮನಂದಂದಪ್ಪನೇ- ಮನಸ್ಸನ್ನೀಯುವನೇ? ಸತ್ಕೃಪಾಹೀನಂ, ಶಾಂತಿಸುಬೋಕ್ತಿಗೇಳ್ವನೆ? ಮನೋಜೋನ್ಮಾದಿ- ಮನ್ಮಥನಿಂದ ಮತ್ತನಾದವನು, ವೈರಾಗ್ಯವಾಕ್ಯಾನೀಕಕ್ಕೆ, ವಿರಕ್ತಿಯನ್ನುಂಟುಮಾಡುವ ಮಾತುಗಳ ಸಮೂಹಕ್ಕೆ, ಸಡಿಲ್ವನೇ- ಜೋಲುವನೇ? ಸಿರಿಗೆ- ಲಕ್ಷ್ಮಿಯನ್ನು, ಅರಂ-ಅತ್ಯಂತವಾಗಿ, (ಅಥವಾ ಸಿರಿಗರಂ-ಐಶ್ವರ್ಯವಂತರನ್ನು) ಸೋಂಕಿ, ಇರ್ದ, ತದ್ವಿಜ್ಜಳೋರ್ವೀನಾಥಂ, ಬಸವೋಕ್ತಭಕ್ತಮಹಿಮಾಲಾಪಕ್ಕೆ-ಬಸವನಿಂದ ಹೇಳಲ್ಪಟ್ಟ ಭಕ್ತರ ಮಹತ್ತಿನ ಮಾತಿಗೆ, ಮುಯ್ಯಾಂಪನೆ- ಮನ್ನಣಿಸುವನೇ? ... ॥೩೪॥

ಎನಿಸಿ, ದುರ್ಣಯಧುರೀಣಂ- ದುರ್ನೀತಿಯಲ್ಲಿ ಸಮರ್ಥನಾದ ಬಿಜ್ಜಳನು, ತದ್ವಚನಮಂ, ಕೇಳದಂಗೆಯ್ದು- ತಿರಸ್ಕರಿಸಿ, ತನ್ನ, ಮನ್ನಣೆಯ- ಶ್ಲಾಘ್ಯನಾದ, ಮಾವುತನಂ-ಆನೆಯ ಮಾವಟಿಗನನ್ನು, ಅಭೀಕ್ಷಿಸಿ.

ಅವದ್ಯಮಾನಸಂ- ದುಷ್ಟವಾದ ಮನಸ್ಸುಳ್ಳ ಬಿಜ್ಜಳನು, ತೊಡರ್ದೊಡೆ-ಸಂಬಂಧಿಸಿದರೆ, ಜಂಭಭಿದ್ಗಜಮಂ ಆದೊಡಂ- ಇಂದ್ರನ ಆನೆಯನ್ನಾದರೂ, ಅರ್ದಿಸಲ್- ಕೊಲ್ಲುವದಕ್ಕೆ, ಆರ್ಪ- ಸಮರ್ಥವಾಗುವ, ಶಕ್ತಿ- ಬಲವು, ಸಂಗಡಿಸಿದ- ಕೂಡಿದ, ನೀಲ......ಹಸ್ತಿಯಂ— ನೀಲಭೂಧರ- ನೀಲಗಿರಿಗೆ, ಸಮಾನ- ಸದೃಶವಾದ. ಮದ- ಗರ್ವದಿಂದ, ಅಂಧ- ಕುರುಡಾದ, (ಅಂದರೆ ಬಹು ಕೊಬ್ಬಿದ) ಮದೀಯ- ನನ್ನ ಸಂಬಂಧವಾದ. ಹಸ್ತಿಯಂ- ಆನೆಯನ್ನು, ಕಡುಪಿನೊಳ್- ಶೌರ್ಯದಿಂದ, ಆತಂ- ಆ ಮಾಚಯ್ಯನು, ಎಯ್ದುವೆ- ಹೋಗುವ, ಎಡೆವಟ್ಟೆಯೊಳ್- ಮಧ್ಯಮಾರ್ಗದಲ್ಲಿ, ಆರ್ದು- ಕೂಗಿ, ಇದಿರಾಂತು- ಮುಂಗಡೆಗೆ, ನೂಂಕಿ, ಅವನಂ, ಪಡಲ್ವಿಡಿಸಿ- ಗೋಳಾಡಿಸಿ, ಮರ್ದಿಪುದು ಹಿಸುಕಿಸಿ ಕೊಲ್ಲುವದು, ಎಂದಂ. ... ॥೩೫॥

ಎಂದ, ನರೇಂದ್ರನ, ಅನುಜ್ಞೆಯಂ- ಅಜ್ಞೆಯನ್ನು, ಆಧೋರಣಂ- ಮಾವುತನು, ತಾಳ್ದು, ಇಭೇಂದ್ರಮಂ- ಶ್ರೇಷ್ಠವಾದ ಆನೆಯನ್ನು, ಪಣ್ಣಿಗೆಯ್ದು- ಸಿದ್ಧಪಡಿಸಿ, ಏರಿ- ಹತ್ತಿ, ಮೀರಿ- ಹೆಚ್ಚಾಗಿ, ಪರಿಯಿಪಾಗಳ್- ನಡೆಯಿಸುವ ಕಾಲದಲ್ಲಿ. * * * * * * * * * * * * *

ಮಹಾಸ್ರ॥ ಮದವದ್ದಿಗ್ದಂತಿಗಳ್ಕುಂಬಿಡೆ ರವಿರಥದಶ್ವವ್ರಜಂ ಬೆರ್ಚೆ ಕಲ್ಪಾಂ । ತದ ಮೇಘಧ್ವಾನಮಂಬಂತಿರೆ ಪಟುನಿನದಂ ಬೃಂಹಿತಂಗೆಯ್ದು ಚಂಚ। ದ್ರದನಾಗ್ರಪ್ರಾಂಶು ಮಿಂಚಂ ಜಡಿಯೆ ಪೊಳೆದು ಸುರ್ಕೊಗ್ಗುತ್ತುಂ ಕೇರ್ಗಳಂ ಪಾ। ಯ್ದುದು ಕೋಪಾಟೋಪ ದಿಂದಂತಕಮಹಿಷನಿಭಂ ಭೂವಿಭೃತ್ಕುಂಜರೇಂದ್ರಂ ॥ ... .. ॥೩೭॥

ವ॥ ಅಂತೇಳ್ತರ್ಪ ಸಿಂಧುರೇಂದ್ರಮನಣೆದು ತನ್ನ ಮೇಲ್ವರಿಯಿಪಮಾಟೋಪಮಂ ತೊಟ್ಟನೆ ಕಟ್ಟಿದಿರೊಳ್ಮಾಬಿದೇವಂ ಕಂಡು ರೋಷಭೀಷಣಕಲ್ಪಾಂತಭೈರವಾಕೃತಿವಡೆದು ನೆರೆದಬಲಂ ಝುಲ್ಲನೆ ಕೆದರೆ ವಿಲಯಜಲಧರನಿರ್ಘೋಷಮಂ ನೇಳಿಸ ಜಯಘಂಟಾರವಮಂ ನೆಗಳ್ಚಿ ತಾಂ ಪೊತ್ತಂಬರಭರಮನಂಬರಕೇಶನುತ್ತಮಾಂಗದೊಳ್ಪೂರಿಸುವಂತೆ ಜಯಘಂಟೆಯನಲ್ಲಿ ತೊಡರ್ಚುತ್ತುಂಬರಕೆ ನೆಗಪಿ ನಿಲಿಸಿ ಬಾಹಾಸ್ಫಾಲನಂಗೆಯ್ದು ನಿಲ್ನಿಲ್ಲೆನುತ್ತುಂ ಗಜರಿ ಗರ್ಜಿಸಿ ವಿಜೃಂಭಿಸಿ॥ * * * * * * * * * * *

ಮಹಾಸ್ರ॥ ಕಡುಪಿಂದಗ್ರಪ್ರದೇಶಕ್ಕೊಗೆದು ನೆಗೆದು ಮೇಲ್ವಾಯ್ದು ಪಾದಾಗ್ರದಿಂ ದಂ । ಕೆಡಪುತ್ತಂ ಜೋದನಂ ಮುಂಬರಿವ ಕರಿಯ ಶುಂಡಾಗ್ರಮಂ ಕೈಗಳಿಂದಂ॥ ಪಿಡಿದೊ

---

ಮದವದ್ದಿಗ್ದಂತಿಗಳ್- ಗರ್ವವಿಶಿಷ್ಟಗಳಾದ ದಿಗ್ಗಜಗಳು, ಕುಂಬಿಡೆ- ಕೆಳಕ್ಕೆ ಬಗ್ಗಲು, ರವಿರಥದ,ಅಶ್ವವ್ರಜಂ, ಬೆರ್ಚೆ, ಅಂತಕಮಹಿಷನಿಭಂ- ಯಮನ ಕೋಣಕ್ಕೆ ಸದೃಶವಾದ ಭೂವಿಭೃತ್ಕುಂಜರೇಂದ್ರಂ-ಬಿಜ್ಜಳರಾಜನ ಶ್ರೇಷ್ಠವಾದ ಆನೆಯು, ಪಟುನಿನದಂ ಸಮರ್ಥವಾದ, ಶಬ್ದವು, ಕಲ್ಪಾಂತದ- ಪ್ರಳಯಕಾಲದ, ಮೇಘಧ್ವಾನಂ- ಗುಡುಗು, ಎಂಬಂತೆ, ಇರೆ, ಬೃಂಹಿತಂಗೆಯ್ದು- ಗರ್ಜನೆಯಂ ಮಾಡಿ, ಚಂಚದ್ರದನಾಗ್ರಪ್ರಾಂಶು— ಚಂಚತ್- ಹೊಳೆಯುವ, ರದನ- ಕೊಂಬುಗಳ, ಅಗ್ರ- ತುದಿಯ ಪ್ರಾಂಶು- ಶ್ರೇಷ್ಠವಾದ ಕಾಂತಿಯು, ಮಿಂಚಂ, ಜಡಿಯೆ- ತಿರಸ್ಕರಿಸಲು, ಕೇರ್ಗಳಂ- ಗೋಣಿಗಳನ್ನು, ಪೊಳೆದು, ಸುರ್ಕೊಗ್ಗುತ್ತುಂ- ಸುರುಳ್ಚುಮಾಡುತ್ತ, ಕೋಪಾಟೋಪದಿಂದಂ- ಕೋಪದ ಆಡಂಬರದಿಂದ, ಪಾಯ್ದುದು- ಮುಂದಕ್ಕೆ ಹೊರಟಿತು. ... ... ... ... ... ॥೩೭॥

ಅಂತು, ಏಳ್ತರ್ಪ, ಸಿಂಧುರೇಂದ್ರಮಂ, ಅಣೆದು-ಹಿಡಿಸಿ, ತನ್ನ, ಮೇಲ್ವರಿಯಿಪ-ಮೇಲೆ ನಡೆಸುವ, ಆಟೋಪಮಂ-ಅತಿಶಯವನ್ನು, ಮಾಬಿದೇವಂ, ತೊಟ್ಟನೆ-ಜಾಗ್ರತೆಯಿಂದ, ಕಟ್ಟಿದಿರೊಳ್, ಕಂಡು, ರೋಷಭೀಷಣಕಲ್ಪಾಂತಭೈರವಾಕೃತಿವಡೆದು- ಕೋಪದಿಂದ ಭಯಂಕರವಾದ ಪ್ರಳಯಕಾಲದ ಭೈರವನ ಆಕಾರವಂ ಹೊಂದಿ, ನೆರೆದ- ಕೂಡಿದ, ಬಲಂ, ಝುಲ್ಲನೆ, ಕೆದರೆ- ಓಡಿಹೋಗುವಂತೆ, ವಿಲಯಜಲಧರನಿರ್ಘೋಷಮಂ-ಪ್ರಳಯಕಾಲದ ಮೇಘದ ಶಬ್ದವನ್ನು, ಏಳಿಸ- ತಿರಸ್ಕರಿಸುವ, ಜಯಘಂಟಾರವಮಂ, ನೆಗಳ್ಚಿ- ಮಾಡಿ, ತಾಂ, ಪೊತ್ತ, ಅಂಬರಭರಮಂ- ಬಟ್ಟೆಗಳ ಭಾರವನ್ನು, ಅಂಬರಕೇಶನ- ವ್ಯೋಮಕೇಶನಾದ ಈಶ್ವರನ, ಉತ್ತಮಾಂಗದೊಳ್- ಶಿರಸ್ಸಿನಲ್ಲಿ, ಪೂರಿಸುವಂತೆ, ಜಯಘಂಟೆಯಂ, ಅಲ್ಲಿ-ಆ ಗಂಟೆಸಲ್ಲಿ, ತೊಡರ್ಚುತ್ತೆ-ಸೇರಿಸುತ್ತ, ಅಂಬರಕೆ, ನೆಗಪಿ- ಎತ್ತಿ, ನಿಲಿಸಿ, ಬಾಹಾಸ್ಫಾಲನಂಗೆಯ್ದು-ತೋಳನ್ನು ತಟ್ಟಿ, ನಿಲ್, ಎನುತಂ,ಗಜರಿ- ಬೆದರಿಸಿ, ಗರ್ಜಿಸಿ-ಭೀಕರಧ್ವನಿಯಂ ಮಾಡಿ, ವಿಜೃಂಭಿಸಿ-ಸಂಭ್ರಮಿಸಿ. * * * * * *

ಮಾಬಿದೇವಂ, ಕಡುಪಿಂದ— ಶೌರ್ಯದಿಂದ, ಅಗ್ರಪ್ರದೇಶಕ್ಕೆ, ಒಗೆದು- ಉಬ್ಬಿ, ನೆಗೆದು ಹಾರಿ, ಮೇಲ್ವಾಯ್ದು, ಜೋದನಂ- ಮಾವುತನನ್ನು, ಪಾದಾಗ್ರದಿಂದಂ, ಕೆಡಪುತ್ತಂ, ಮುಂಬರಿವ- ಮುಂದೆ ಬರುವ, ಕರಿಯ— ಆನೆಯ, ಶುಂಡಾಗ್ರಮಂ ಸೊಂಡಿಲ ತುದಿಯನ್ನು, ಕೈಗಳಿಂದಂ, ಪಿಡಿದು, ಒತ್ತುತ್ತೆ- ಅದುಮಿ, ಎತ್ತುತ್ತೆ, ಅರ್ದು- ಗಟ್ಟಿಯಾಗಿ ಕೂಗಿ, ಅಪ್ಪಳಿಸಿ- ಭೂಮಿಗೆ ಬಡಿದು, ಪೊಡಡು. ದಂತಂಗಳ್ಕಂ, ಕೀಳುತಂ,

ತ್ತುತ್ತೆತ್ತುತ್ತಾರ್ದಪ್ಪಳಿಸಿ ಪೊಡೆದು ದಂತಂಗಳಂ ಕೀಳುತಂ ಭೋ। ಳಡೆ ಸೀಳ್ದಂ ಸೀಳ್ದ ವೋಲ್ ಧೂರ್ಜಟಿ ಕರಟಿಮುಹಾದೈತ್ಯನಂ ಮಾಚಿದೇವಂ॥ ... ... ॥೩೭॥

ವ॥ ಮತ್ತಂ ॥ ಚಂ॥ ಕಿರಿಹರಿದಂಷ್ಟ್ರಮಂ ಮುರಿದ ಷಣ್ಮುಖನಂದಮನಾಳ್ದ ಮಾದ್ಯದು। ದ್ದ್ವಿರದರದಂಗಳಂ ಮುರಿದ ನುಗ್ರನೃಸಿಹ್ಮನ ನಂದು ಸೀಳ್ದ ಭೂ ॥ ಸುರಶರಭೇಂದ್ರನೇಳ್ಗೆಯ ವಿಳಾಸಮ ನಾಂತು ಗಜೇಂದ್ರಕಾಯಮಂ। ಭರದಿ ನಡರ್ದು ಸೀಳ್ದ ನಹಿತರ್ಬೆದರುತ್ತಿರೆ ಚಂಡವಿಕ್ರಮಂ॥ ... .. .. ... ॥೩೮॥

ವ॥ ಆಗಳಾ ಮಾನವೇಂದ್ರನ ಮದಗಜಮಂ ಸದೆವಂತೆ ಮದಗಜಮಂ ಮಾಚಿದೇವನಾರ್ಪಿಂ ಸದೆಯೆ ಭಕ್ತವ್ರಜಂ ಕಂಡು ನಣ್ಪನೊಳಕೊಂಡು ಕೊಂಡಾಡುತ್ತಿರೆ॥ * *

ಮ॥ ಜನಪಂ ಕೇಳ್ದನಿತೆಲ್ಲಮಂ ಬಗೆ ಭಯಕ್ಕಿಂಬಾಗೆ ಲಜ್ಜಾನತಾ । ನನನಾಗಿರ್ಪುದು ಮೆಂದನಲ್ಲಿ ಬಸವಂ ನೀಂ ಕೇಳದಾಂ ಪೇಳ್ದ ಮಾ ॥ ತನಿಳಾಧೀಶ ಮದಾಂಧಗಂಧಗಜಮಂ ನೀಗಾಡಿದಯ್ಯಾ ಕಟಾ। ನಿ ನಿತಾಂತಂ ನಿನಗಾದುದಕ್ಕಟ ದುರಾತ್ಮಾಲಾಪಮೇಗೆಯ್ವುದೋ॥

ಕಂ॥ ಅನುಜಗುರುವಿನಯವಚನಮು। ನನಾದರಂಗೆಯ್ದು ಕೆಡರೆ ಮುನ್ನೀದರೆಯೊಳ್॥

---

ಪೋಣಿತೆ- ಕೊಗಿಸೊಳ್ಳಲು, * ಧೂರ್ಜಟಿ- ಈಶ್ವರನು, ಕರಟಿಮುಹಾದೈತ್ಯನಂ- ಗಜಾಸುರನನ್ನು, ಸೀಳ್ದವೋಲ್, ಸೀಳ್ದಂ. ... ... ... ... ... ॥೩೭॥

ಚಂಡವಿಕ್ರಮಂ- ಸಮರ್ಥವಾದ ಪರಾಕ್ರಮವುಳ್ಳ ಮಾಚಿದೇವನು, ಕಿರಿಹರಿದಂಷ್ಟ್ರಮಂ— ಕಿರಿ- ವರಾಹರೂಪನಾದ,ಹರಿ-ವಿಷ್ಣುವಿನ,ದಂಷ್ಟ್ರಮಂ-ಕೋರೆದಾಡೆಯನ್ನು, ಮುರಿದ,ಷಣ್ಮುಖನ,ಅಂದಮಂ- ರೀತಿಯನ್ನು, ಆಳ್ದು-ಹೊಂದಿ, ಮಾದ್ಯದುದ್ದ್ವಿರದರದಂಗಳಂ— ಮಾದ್ಯತ್ ಮದಿಸುತ್ತಿರುವ, ಉದ್ದ್ವಿರದ- ದೊಡ್ಡಾನೆಯ, ರದಂಗಳಂ- ಕೊಂಬುಗಳನ್ನು, ಮುರಿದು, ಅಹಿತರ್- ಶತ್ರುಗಳು, ಬೆದರುತ್ತಿರೆ, ಅಂದು, ನೃಸಿಹ್ಮನಂ, ಸೀಳ್ದ, ಭೂಸುರಶರಭೇಂದ್ರನ, ಏಳ್ಗೆಯ, ವಿಳಾಸಮಂ, ಆಂತು, ಭರದಿಂ- ಶೀಘ್ರವಾಗಿ, ಗಜೇಂದ್ರಕಾಯಮಂ, ಅಡರ್ದು- ಹತ್ತಿ, ಸೀಳ್ದಂ. ... ... ... ॥೩೮॥

ಆಗಳ್, ಮಾಚಿದೇವಂ, ಆಮಾನವೇಂದ್ರನ- ಆ ರಾಜನ, ಮದಗಜಮಂ- ಗರ್ವವೆಂಬ ಆನೆಯನ್ನು, ಸದೆವಂತೆ- ಕೊಲ್ಲುವಹಾಗೆ; ಆರ್ಪಿಂ- ಶೌರ್ಯದಿಂದ, ಮದಗಜಮಂ- ಮದ್ದಾನೆಯನ್ನು, ಸದೆಯೆ- ಕೊಲ್ಲಲು, ಭಕ್ತವ್ರಜಂ, ಕಂಡು, ನಣ್ಪಂ-ವಿಸಯವನ್ನು, ಒಳಕೊಂಡು-ಹೊಂದಿ, ಕೊಂಡಾಡುತ್ತಿರೆ. * * *

ಅನಿತೆಲ್ಲಮಂ- ಅಷ್ಟೆಲ್ಲವನ್ನೂ, ಜನಪಂ- ರಾಜನು, ಕೇಳ್ದು, ಬಗೆ-ಮನಸ್ಸು, ಭಯಕ್ಕೆ, ಇಂಬು- ಆಸ್ಪದವಾದದ್ದು, ಆಗೆ, ಲಜ್ಜಾನತಾನನಂ— ಲಜ್ಜಾ- ನಾಚಿಕೆಯಿಂದ, ಆನತ- ಬಗ್ಗಿದ, ಆನನಂ- ಮುಖವುಳ್ಳವನು, ಆಗಿ, ಇರ್ಪುದುಂ- ಅಲ್ಲಿ, ಬಸವಂ, ಮದಾಂಧ- ಗರ್ವದಿಂ ಕುರುಡನಾದ, ಇಳಾಧೀಶ- ರಾಜನೇ! ಆಂ, ಪೇಳ್ದ, ಮಾತಂ, ನೀಂ, ಕೇಳದೆ, ಗಂಧಗಜಮಂ- ಮದವಿಶಿಷ್ಟವಾದ ಆನೆಯನ್ನು, ನೀಗಾಡಿದಯ್- ಹೋಗಲಾಡಿಸಿಕೊಂಡೆ; ನಿನಗೆ, ನಿತಾಂತಂ- ಅತ್ಯಂತವಾಗಿ, ಮಾನಹಾನಿ, ಆದುದು, ಅಕ್ಕಟ— ಅಯ್ಯೋ! ದುರಾತ್ಮಾಲಾಪಂ- ದುಷ್ಟರಮಾತು, ಏಗೆಯ್ವುದೊ- ಏನನ್ನುತಾನೇಮಾಡದೋ, ಎಂದು. ... ॥೩೯॥

ಮುನ್ನ, ಈದರೆಯೊಳ್, ದನುಜಾಧಿಪಮನುಜಾಧಿಪರ್- ರಾಕ್ಷಸರಾಜಮನುಷ್ಯರಾಜರು, ಎನಿಸುವ, ದಶಕಂಠಕೌರವರ್ - ರಾವಣಕೌರವರು, ಮೂರ್ಖತೆಯಿಂ, ಅನುಜಗುರುವಿನಯವಚನಮಂ, ಅನಾದರಂಗೆಯ್ದು, ಕೆಡರೆ;

---

* (ಶಿವ) ಧೂರ್- ಪ್ರವಾಹವೇ, (ಗಂಗೆ) ಜಟಿ- ಜಡೆಯುಳ್ಳುಳ್ಳವನು. ... ... ॥೩೭॥

ದನುಜಾಧಿಪಮನುಜಾಧಿಪ। ರೆನಿಸುವ ದಶಕಂಠಕೌರವರ್ಗೊಂತೇಂ॥ ... ॥೪೦॥

ಕಂ॥ ಶ್ರೀಮದತಿಮಿರಾಂಧರ್ಗೆ ಮ। ಹೀಮಹಿತಬುಧೋಕ್ತಿ ದೀಪ ಮಪ್ಪುದಜಸ್ರಂ॥
ತಾಮದನೊಲ್ಲದೊಡವರ್ಗೆಧ। ರಾಮಾನಿನಿಯರಸ ಸುಪಥ ಮೇಂ ಕಾಣಿಪುದೇ ॥ ॥೪೧॥

ಕಂ॥ ರಾಜದ್ವೇಷಂ ಮಧುಪಸ। ಮಾಜಾತಿಪ್ರೀತಿ ತನ್ನ ಸಂಗ ಗುಣದೆಸೀ॥ ರೇಜಕ್ಕೆ
ಳವೆನಿಸಿದ ಲ। ಕ್ಷ್ಮೀಜಾಯೆಗೆ ಕೂರ್ತಂಗೆ ಮತಿ ಸಮನಿಪುದೇ ॥ ... ॥೪೨॥

ಕಂ॥ ನರರೂಪರುದ್ರ ರೆನಿಸುವ । ಹರಭಕ್ತರ ಮಹಿಮೆ ಮತ್ತಜನಬುದ್ಧಿಗೆ ಗೋ॥
ಚರಿಪುದೆ ದಿನಕರಕರಣೋ । ತ್ಕರ ಮಧಮದಿವಾಂಧದೃಷ್ಟಿಗೇಂ ಕಾಣಿಪುದೇ ॥ ॥೪೩॥

ಮೃಡಭಕ್ತರಳವ ನರಿಯದ। ಜಡಮತಿಗಳ ಮಾತುಗೇಳ್ದು ಮಾನಕ್ಷತಿಯಂ । ಪಡೆ
ದೆಗತಮಾಚಿದೇವನ। ತೊಡಂಕೆನಿಂ ಭಕ್ತರಳವದೇಂ ಕೇವಳಮೆ ॥ ... ॥೪೪॥

ಮ ॥ ಧರಣೀಪಾಲಕ ಕೇಳ್ಧರಾತಳದೊಳಂದಂಬೆತ್ತ ತದ್ದ್ರಾವಿಡೋ । ರ್ವರೆಯೊ
ಳ್ಪೇರ್ಮೆಯ ನಾಳ್ದು ತಾಳ್ದು ಸೊಬಗಂ ಸೌಂದರ್ಯದಿಂ ಗೋತ್ರಭಿ ॥ ತ್ಪುರಮಂ ತಾಂಪಳಿ

(ಅಂದರೆ ತಮ್ಮನಾದ ವಿಭೀಷಣನಮಾತನ್ನು ಕೇಳದೆ ರಾವಣನೂ, ಭೀಷ್ಮದ್ರೋಣರಮಾತನ್ನುಕೇ
ಳದೆ ಕೌರವರೂಕೆಡಲಿಲ್ಲವೇ; ಎಂದು ತಾತ್ಪರ್ಯ) ... ... ... ... ॥೪೦

ಧರಾಮಾನಿನಿಯರಸ– ಭೂಕಾಂತಾಪತಿಯಾದ ಬಿಜ್ಜಳನೇ !ಶ್ರೀಮದತಿಮಿರಾಂಧರ್ಗೆ- ಐಶ್ವರ್ಯವೆಂಬಕ
ತ್ತಲೆಯಿಂದಕುರುಡರಾದವರಿಗೆ, ಮಹೀಮಹಿತಬುಧೋಕ್ತಿ-ಮಹೀ-ಭೂಮಿಯಲ್ಲಿ, ಮಹಿತ ಪೂಜ್ಯರಾದ,ಬು
ಧೋಕ್ತಿ- ವಿದ್ವಾಂಸರಮಾತು, ಅಜಸ್ರಂ- ಯಾವಾಗಲೂ, ದೀಪಂ, ಅಪ್ಪುದು, ತಾಂ, ಅದಂ ... ॥೪೧॥
ಒಲ್ಲದೊಡೆ,ಅವರ್ಗೆ, ಸುಪಥಂ-ಸನ್ಮಾರ್ಗವು, ಕಾಣಿಪುದೇಂ.ಗುಣಿನೀರೇಜಕ್ಕೆ-ಸದ್ಗುಣವುಳ್ಳಕಮಲಕ್ಕೆ,
(ತಂತುವುಳ್ಳಕಮಲಕ್ಕೆ) ತನ್ನ,ಸಂಗಗುಣದೆ, ರಾಜದ್ವೇಷಂ-ದೊರೆಯುವೈರ (ಚಂದ್ರನವೈರ) ಮಧುಪಸಮಾ
ಜಾತಿಪ್ರೀತಿ- ಮಧುಪ-ಹೆಂಡಗುಡುಕರ, ಸಮಾಜ-ಗುಂಪಿನಲ್ಲಿ, ಅತಿಪ್ರೀತಿ, (ಭ್ರಮರಗಳಗುಂಪಿನಬಹುಪ್ರೇ
ಮವು)-ಒಳವು-ಉಂಟು,ಎನಿಸಿದ, ಲಕ್ಷ್ಮೀಜಾಯೆಗೆ ಲಕ್ಷ್ಮಿಯಂಬಪತ್ನಿಗೆ,ಕೂರ್ತಂಗೆ-ಪ್ರೀತಿಸಿದವನಿಗೆ, ಮ
ತಿ- ಬುದ್ಧಿಯು, ಸಮನಿಪುದೆ? ... ... ... ... ... ॥೪೨॥

ನರರೂಪರುದ್ರರ್, ಎನಿಸುವ, ಹರಭಕ್ತರ, ಮಹಿಮೆ, ಮತ್ತಜನಬುದ್ಧಿಗೆ- ಗರ್ವಿಗಳ ಬುದ್ಧಿಗೆ, ಗೋ
ಚರಿಪುದೆ- ಕಾಣಿಸುವದೇ? ದಿನಕರಕಿರಣೋತ್ಕರಂ- ಸೂರ್ಯನ ಕಾಂತಿಸಮೂಹವು, ಅಧಮದಿವಾಂಧದೃಷ್ಟಿ
ಗೆ-ನೀಚವಾದ ಗೂಬೆಯ ಕಣ್ಣಿಗೆ, ಕಾಣಿಪುದೇಂ? ... ... ... ॥೪೩॥

ಮೃಡಭಕ್ತರ, ಅಳವಂ-ಶಕ್ತಿಯನ್ನು, ಅರಿಯದ; ಜಡಮತಿಗಳ- ಮೂಢಬುದ್ಧಿಗಳ,ಮಾತುಗೇಳ್ದು,
ಮಾಚಿದೇವನ, ತೊಡಂಕಿನಿಂ, ಮಾನಕ್ಷತಿಯುಂ- ಗೌರವಹಾನಿಯನ್ನು, ಪಡೆದೆಗಡ! ಭಕ್ತರ, ಅದು ಅಳವು,
ಕೇವಳಮೇ- ಸಾಮಾನ್ಯವೇ? ... ... ... ... ॥೪೪॥

## ಚೋಳರಾಜ ಇರಿವತ್ತರ ಕಥೆ.

ಧರಣೀಪಾಲಕ? ಕೇಳ್; ಧರಾತಳದೊಳ್, ಅಂದಂಬೆತ್ತ- ಮನೋಹರವಾದ, ತದ್ದ್ರಾವಿಡೋರ್ವರೆ
ಯೊಳ್- ಆ ದ್ರಾವಿಡದೇಶದ ಎಲ್ಲಾ ಪೈರುಗಳಿಂದ ಪರಿಪೂರ್ಣವಾದ ಭೂಮಿಯಲ್ಲಿ, ಉದ್ಯ..... ಶೋಭಿ—
ಉದ್ಯತ್- ಅಧಿಕವಾದ, ವಪ್ರ-ಪ್ರಕಾರ, ವಿಸ್ತಾರ- ವಿಶಾಲಗಳಾದ, ಗೋಪುರ- ಊರಬಾಗಿಲು, ನಾನಾ
ಮಣಿಹರ್ಮ್ಯ, ಇವುಗಳಿಂದ, ಶೋಭಿ- ಪ್ರಕಾಶಿಸುವ, ಕರವೂರ್, ಎಂದೆಂಬ, ಸತ್ಪಟ್ಟಣಂ, ಪೇರ್ಮೆಯಂ, ಆ

ಕೆಯ್ದು ಕುಂಗೊಳಿಪುದುಪ್ಪದ್ವವಪ್ರವಿಸ್ತಾರಗೋ । ಪುರನಾನಾಮಣಿಹರ್ಮ್ಯಶೋಭಿ ಶರ
ಪೂರೆಂದೆಂಬ ಸತ್ಪುಷ್ಟಣಂ ॥ ... ... ... ... ... ॥೪೫॥

ಕಂ ॥ ಅವನಾಳ್ವ ನಭವಭಕ್ತಂ । ಮದವದ್ರಿಪುದರ್ಪದಂತಿದಳನಮೃಗೇಂದ್ರಂ । ಸದ
ಮಳಗುಣನಿಧಿ ವಿಶದಾಭ್ಯುದಿತಯಶಂ ಚೋಳರಾಯನೆಂಬ ನರೇಂದ್ರಂ ॥ ॥೪೬॥

ವ ॥ ಆಪುರವರದೊಳ್ಮತ್ತಂ ಓರ್ವ ನಸಮನಯನನಪರಾವತಾರವೆನಿಸಿ ॥ *

ಚಂ॥ ಪರಮಗುಣಾಕರಂ ಪ್ರಬಲಶೈವಮತಾಂಬುಜಭಾನು ಸತ್ಯಸಂ । ಗರ ನಭವಾಂ
ಘ್ರಿಭಕ್ತ ನಹಿತಾಚಲಶಂಬ ನಮಂದಶಕ್ತಿವಿ । ಸ್ಫುರಿತ ನವಾಸ್ತಕರ್ಮ ನುರರೀಕೃತಸುವ್ರ
ತನನ್ಯವಾದಿವಾ । ರ್ದರಪವಮಾನ ನಾನತಜನಾಮರಭೂಜ ನತರ್ಕ್ಯವಿಕ್ರಮಂ ॥ ॥೪೭॥

ಚಂ॥ ಗುರುಚರಭಕ್ತಿತತ್ಪರ ನುದಾತ್ತವಿಭೂತಿಶಿವಾಕ್ಷಮಾಲಿಕಾ । ಭರಣ ನಜೇಯ
ನಂಗಗುಣವರ್ಜಿತ ನೂರ್ಜಿತಲಿಂಗನಿಷ್ಠನೀ ॥ ಶ್ವರಭಜಕಾಪಕಾರಿಹರಣೈಕದೃಢವ್ರತಸಂ
ಗತಂಕೃಪಾ । ಕರನಿರಿವತ್ತನೆಂಬ ಶರಣಂ ಶರಣಾಗತವಜ್ರಪಂಜರಂ ॥ ... ॥೪೮॥

---

ಳ್ವ, ಸೊಬಗು- ಸೊಗಸನ್ನು, ತಾಳ್ದು. ತಾಂ, ಸೌಂದರ್ಯದಿಂ, ಗೋತ್ರಭಿತ್ಪುರಮಂ- ಇಂದ್ರನ ಅಮರಾ
ವತೀಪಟ್ಟಣವನ್ನು, ಪಳಿಕೆಯ್ದು-ತಿರಸ್ಕರಿಸಿ, ಕುಂಗೊಳಿಪುದು. ... ... ॥೪೫॥

ಅದಂ, ಅಭವಭಕ್ತಂ, ಮದವದ್ರಿಪುದರ್ಪದಂತಿದಳನಮೃಗೇಂದ್ರಂ-ಗರ್ವಯುಕ್ತರಾದ ಶತ್ರುಗಳ ಅಹಂ
ಕಾರವೆಂಬ ಆನೆಯನ್ನು ಸೀಳುವದರಲ್ಲಿ ಸಿಂಹನಾದ, ಸದಮಳಗುಣನಿಧಿ- ನಿರ್ಮಲವಾದ ಸದ್ಗುಣಗಳಿಗೆ ನಿಕ್ಷೇಪ
ನಾದ, ವಿಶದಾಭ್ಯುದಿತಯಶಂ- ನಿರ್ಮಲವಾಗಿಯೂ ಅಭಿವೃದ್ಧಿಪಾಗಿಯೂ ಇರುವ ಕೀರ್ತಿಯುಳ್ಳ, ಚೋಳರಾ
ಯಂ, ಎಂಬ ನರೇಂದ್ರಂ, ಆಳ್ವಂ. ... ... ... ... ॥೪೬॥

ಆಪುರದೊಳ್, ಮತ್ತಂ, ಓರ್ವಂ, ಅಸಮನಯನನ- ಈಶ್ವರನ, ಅಪರಾವತಾರಂ- ಮತ್ತೊಂದವತಾ
ರವು, ಎನಿಸಿ. * * * * * * * * * * * * * * * * *

ಪರಮಗುಣಾಕರಂ, ಪ್ರಬಳಶೈವಮತಾಂಬುಜಭಾನು- ಬಲವತ್ತರವಾದ ಶಿವಮತವೆಂಬ ಕಮಲಕ್ಕೆ
ಸೂರ್ಯನಾದ, ಸತ್ಯಸಂಗರಂ- ಸತ್ಯಪ್ರತಿಜ್ಞೆಯುಳ್ಳ, ಅಭವಾಂಘ್ರಿಭಕ್ತಂ, ಅಹಿತಾಚಲಶಂಬಂ- ಶತ್ರುಗಳೆಂ
ಬ ಪರ್ವತಗಳಿಗೆ ವಜ್ರಾಯುಧನಾದ, ಅಮಂದಶಕ್ತಿವಿಸ್ಫುರಿತಂ-ಹೆಚ್ಚಾದ ಬಲದಿಂ ಪ್ರಕಾಶಿಸುವ, ಅವಾಸ್ತ
ಕರ್ಮಂ- ಹೋಗಲಾಡಿಸಲ್ಪಟ್ಟ ಕರ್ಮಗಳುಳ್ಳ, ಉರರೀಕೃತಸುವ್ರತಂ- ಅಂಗೀಕರಿಸಲ್ಪಟ್ಟ ಒಳ್ಳೆಯವ್ರತವು
ಳ್ಳ, (ಅಂದರೆ ಶಿವಪೂಜಾವ್ರತ) ಅನ್ಯವಾದಿವಾರ್ದರಪವಮಾನಂ- ಪರಮತವಾದಿಗಳೆಂಬ ಮೋಡಕ್ಕೆ ವಾ
ಯುವಾದ, ಆನತಜನಾಮರಭೂಜಂ- ನಮಸ್ಕರಿಸಿದ ಜನಕ್ಕೆ ಕಲ್ಪವೃಕ್ಷನಾದ, ಅತರ್ಕ್ಯವಿಕ್ರಮಂ- ಪ್ರತಿ
ಪಾದಿಸುವದಕ್ಕಸಾಧ್ಯವಾದ ಪರಾಕ್ರಮವುಳ್ಳ. ... ... ... ॥೪೭॥

ಗುರುಚರಭಕ್ತಿತತ್ಪರಂ, ಉದಾತ್ತವಿಭೂತಿಶಿವಾಕ್ಷಮಾಲಿಕಾಭರಣಂ— ಉದಾತ್ತ- ಪಡೆಯಲ್ಪಟ್ಟ,
ವಿಭೂತಿ, ಶಿವಾಕ್ಷಮಾಲಿಕಾ, ಇವುಗಳೇ, ಆಭರಣಂ, ಅಜೇಯಂ- ಮತ್ತೊಬ್ಬರಿಂದ ಜೈಸುವದಕ್ಕಸಾಧ್ಯ
ನಾದ, ಅಂಗಗುಣವರ್ಜಿತಂ- ಶರೀರದ ಶೀತೋಷ್ಣಾದಿಗುಣಗಳಿಂದ ಬಿಡಲ್ಪಟ್ಟ, ಊರ್ಜಿತಲಿಂಗನಿಷ್ಠಂ-ತೇ
ಜೋವಿಶಿಷ್ಟವಾದ ಲಿಂಗದಲ್ಲಿ ವಿಶ್ವಾಸವುಳ್ಳ, ಈಶ್ವರಭಜಕಾಪಕಾರಿಹರಣೈಕದೃಢವ್ರತಸಂಗತಂ—ಈಶ್ವರಭ
ಜಕ- ಶಿವಭಕ್ತರಿಗೆ, ಅಪಕಾರಿ- ಅಪಕಾರವಂ ಮಾಡುವರನ್ನು, ಹರಣ- ನಾಶಪಡಿಸುವ, ಏಕ- ಮುಖ್ಯವಾ
ದ, ದೃಢ ಸ್ಥಿರವಾದ, ವ್ರತ-ನಿಯಮದಿಂದ, ಸಂಗತಂ, ಕೃಪಾಕರಂ, ಇರಿವತ್ತಂ, ಎಂಬ, ಶರಣಂ, ಶರಣಾಗ
ತವಜ್ರಪಂಜರಂ— ತನ್ನನ್ನು ಸಂರಕ್ಷಕನನ್ನಾಗಿ ಹೊಂದಿದವರಿಗೆ ವಜ್ರದ ಪಂಜರನಾಗಿ. ... ॥೪೮॥

ವ ॥ ಒಪ್ಪುತ್ತಮಿರ್ಪಿನಮಳ್ಳಿ ॥ ಉ ॥ ಚೋಳನೃಪಾಲಪಟ್ಟಗಜಮಂ ದ್ರನಿಭಂ ಮದವಾಂತು ಶೃಂಖಲಾ । ಜಾಲಮನುತ್ತು ಕೀಳ್ತು ತಡೆದಗ್ಗದ ಜೋದರನಿಕ್ಕಿ ಮಟ್ಟಿ ಮ ॥ ತ್ತಾಳಿಗಳಂ ಪಳಂಚಿತೆಮ ಕರ್ಣದನುತ್ಕಟಕೋಪದಿಂ ಮಹಾ । ಭೀಳತೆವೆತ್ತು ಸ್ವೈರಿಮದಾ ಪೊಳಲುಜ್ಜ್ವಳರಾಜವೀಥಿಯೊಳ್ ॥ ... ... ... ॥೪೯॥

ವ ॥ ಆವೇಳೆಯೊಳದ್ಭುತಂ ಮಸಗೆ ॥ ಚಂ ॥ ನಡೆ ತಡೆ ಪಿಂಗು ಪಿಂಗು ಕಡೆಗೋಡಿರದೋಡು ಗಜಂ ಗಜಂ ಕರಂ । ಪಿಡಿವುದು ಪೊಯ್ದುದೆತ್ತಿದುದು ಪತ್ತಿದುದೊತ್ತಿದು ದತ್ತಮಿತ್ತಲುಂ ॥ ಕೆಡಪಿದುದಿಟ್ಟುದಿಟ್ಟು ಪಿಸಿ ಕೊಂದುದು ಸೀಳ್ದುದು ತೂಳ್ದುದಯ್ಯೊ ಬೆಂ । ಗುಡುವ ಜನಂಗಳಂ ಜವದಿನೆಂಬ ರವಂ ಪಿರಿದಾಯ್ತು ವೀಥಿಯೊಳ್ ॥ ॥೫೦॥

ವ ॥ ಆಸಮಯದೊಳ್ ಓರ್ವಂ ಶಿವಭಕ್ತಂ ನೋರ್ವಂ ಶಿವಪೂಜೆಗೆ ಪೂದಿರಿಯಲೆಳಸಿ ಪುಷ್ಪವಾಟಿಯಂ ಪೊಕ್ಕು ॥ * * * * * * * * * * * * * *

ಮ॥ಎಲರಲ್ಲಾಡದ ಮಂಜು ಪೊಯ್ಯದಳಿ ಕೆಂಪಂ ಪೀರದಿರ್ಪ್ಪಾರದುತ್ಕಲದೊರ್ಪ್ಪಂಗೆಡದಚ್ಚಮೊಗ್ಗೆಯೆನಿಪ ಮಂದಾಳವಚ್ಛಿದ್ರಕೋ ॥ಮಲಭಾಸ್ವದ್ದಳಚಾರುಕೇಸರಸುಗಂಧಾ

---

ಒಪ್ಪುತ್ತಂ, ಇರ್ಪಿನಂ, ಅಳ್ಳಿ. * * * * * * * * * * * * * *

ಅದ್ರಿನಿಭಂ-ಬೆಟ್ಟಕ್ಕೆ ಸದೃಶವಾದ, ಚೋಳನೃಪಾಲಪಟ್ಟಗಜಂ, ಮದವಾಂತು, ಶೃಂಖಲಾಜಾಲಮಂ- ಸರಪಣಿಯ ಸಮೂಹವನ್ನು, ಒತ್ತಿ, ಕೀಳ್ತು, ತಡೆದ, ಅಗ್ಗದ-ಶ್ರೇಷ್ಠರಾದ, ಜೋದರಂ- ಮಾವುತರನ್ನು, ಇಕ್ಕಿ- ಹೊಡೆದು, ಮೆಟ್ಟಿ, ಮತ್ತಾಳಿಗಳಂ- ಮದವಿಶಿಷ್ಟಗಳಾದ ಭ್ರಮರಗಳನ್ನು, ಕರ್ಣದಿಂ-ಕಿವಿಯಿಂದ ಪಳಂಚಿ- ಹೊಡೆದು, ಅಳಿದು- ಪೀಡಿಸಿ, ಉತ್ಕಟಕೋಪದಿಂ- ಹೆಚ್ಚಾದ ಸಿಟ್ಟಿನಿಂದ, ಮಹಾಭೀಳತೆವೆತ್ತು- ಅತ್ಯಂತಭಯಂಕರತ್ವವಂ ಹೊಂದಿ, ಆಪೊಳಲ- ಆ ಪಟ್ಟಣದ, ಉಜ್ಜ್ವಳರಾಜವೀಥಿಯೊಳ್-ಸ್ವೈರಿದುದು- ಸಂಚರಿಸಿತು. ... ... ... ... ॥೪೯॥

ಆವೇಳೆಯೊಳ್, ಅದ್ಭುತಂ-ಆಶ್ಚರ್ಯವು, ಮಸಗೆ- ಉಂಟಾಗಲು. * * * * * * *

ನಡೆ, ನಡೆ, ಪಿಂಗು— ಹಿಂದಕ್ಕೆ ಹೋಗು, ಪಿಂಗು, ಕಡೆಗೆ- ಒಂದುಪಾರ್ಶ್ವಕ್ಕೆ, ಓಡು, ಇರದೆ- ತಪ್ಪದೆ, ಓಡು, ಗಜಂ, ಗಜಂ, ಕರಂ- ಚೆನ್ನಾಗಿ, ಪಿಡಿವುದು, ಪೊಯ್ದುದು, ಎತ್ತಿದುದು, ಪತ್ತಿದುದು, ಒತ್ತಿದುದು, ಅತ್ತಂ, ಇತ್ತಲುಂ, ಕೆಡಪಿದುದು, ಇಟ್ಟುದು, ಇಟ್ಟು, ಪಿಸಿ- ಕಾಲಿನಲ್ಲಿ ತಿಕ್ಕಿ, ಕೊಂದುದು, ಬೆಂಗುಡುವ- ಬೆನ್ನಂತಿರುಗಿಸಿಹೋಗುವ, ಜನಗಳಂ, ಜವದಿಂ, ತೂಳ್ದುದು-ತುಳಿದಿತು; ಎಂಬ, ರವಂ-ಶಬ್ದವು, ವೀಥಿಯೊಳ್, ಪಿರಿದು-ಹೆಚ್ಚಾದದ್ದು, ಆಯ್ತು. ... ... ... ... ... ॥೫೦॥

ಆಸಮಯದೊಳ್, ಓರ್ವ್ವಂ, ಶಿವಭಕ್ತಂ, ಶಿವಪೂಜೆಗೆ, ಪೂದಿರಿಯಲ್- ಹೂವನ್ನೆತ್ತುವದಕ್ಕೋಸ್ಕರ, ಎಳಸಿ, ಪುಷ್ಪವಾಟಿಯಂ- ಹೂದೋಟವನ್ನು, ಪೊಕ್ಕು. * * * * * * * * *

ಎಲರ್- ಗಾಳಿಯು, ಅಲ್ಲಾಡದ- ಬೀಸಿಲಡದ, ಮಂಜು, ಪೊಯ್ಯದ-ಬೀಳದ, ಅಳಿ, ಕೆಂಪಂ-ಪರಿಮಳವನ್ನು, ಪೀರದೆ- ಕುಡಿಯದೆ, ಇರ್ಪ, ಆರದ- ಒಣಗದ, ಉತ್ಕಲರ್ದ- ಆಗತಾನೇ ಅರಲುತ್ತಿರುವ, ಒಪ್ಪಂಗೆಡದ- ಒಪ್ಪವಾದ, (ಅಂದರೆ ಹುಳುಕು ಮುತಾದುದು ಹೊಂದದ) ಅಚ್ಚಮೊಗ್ಗೆ, ಎನಿಪ, ಅಂದಂದಾಳದ, ಅಚ್ಛಿದ್ರ......ಆವಳಿಯುಂ— ಅಚ್ಛಿದ್ರ- ಒಡೆದುಹೋಗದ, ಕೋಮಲ- ಮೃದುವಾದ, ಭಾಸ್ವತ್-ಪ್ರಕಾಶಿಸುವ, ದಳ- ಎಸಳು, ಚಾರು- ಮನೋಹರವಾದ, ಕೇಸರ- ಕಿಂಜಲ್ಕ, ಸುಗಂಧ, ಇವುಗಳಾದ, ಆಕೀರ್ಣ-

ಕೀರ್ಣ ನವ್ಯೋದ್ಗಮಾ | ವಳಿಯಂ ಕೊಯ್ದು ಕರಂಡಕಂ ಜಡಿಯೆ ತೀವೃತ್ತಂ ಸಮು ತ್ಸಾಹದಿಂ ॥ ... ... ... ... ... ॥೫೧॥

ಕಂ ॥ ಹರಪೂಜೆಗೆಯ್ವ ಪೊಳ್ತೀ | ಸರಿಪುದೆನುತ್ತವ ನತೀವ ಜವದಿಂ ತಾಳ್ದಾ | ಕರಡಿಗೆಯ ಲರು ಭಕ್ತಂ | ಪುರವೀಥಿಯೊಳೈದೆ ಬರ್ಪ ಸಮನಂತರದೊಳ್ ॥ ॥೫೨॥

ಉ ॥ ಕಟ್ಟದಿರಲ್ಲಿ ಕಂಡು ಕರಿ ಕಾಯ್ಪು ವಿಜೃಂಭಿಸೆ ಬರ್ಪ ಭಕ್ತನು | ಮುಟ್ಟ ಕ ರಾಗ್ರದಿಂ ಸೆಳೆದು ಸುತ್ತಿ ನಭಃಸ್ಥಳಕಿಟ್ಟು ತೀವ್ರದಿಂ॥ ನೆಟ್ಟನೆ ಕೊಂಬ ನೊಡ್ಡಿ ನಿಲೆ ತ ದ್ರದನಾಗ್ರದೆ ಬೀಳ್ದು ರಕ್ತಮಂ। ದಿಟ್ಟಣಿಸುತ್ತೆ ಸೂಸೆ ಹರಣಂಗಳೆವಾಗಲವಂ ವಿಷಾದದಿಂ॥

ಚಂ॥ ಪುರಹರ ಪಾರ್ವತೀಶ ಪರಮೇಶ ಮದೀಶ ಮಹೇಶ ಪಾಹಿಯೆಂ। ಬರವಮನಾಲಿ ಸುತ್ತಗಿದು ಕೆಟ್ಟೆ ನಿದೆಲ್ಲಿಯ ಭಕ್ತರೋದನ॥ ಸ್ವರ ಮೆನುತಲ್ಲಿಗೆಯ್ದಿ ಜವದಿಂದರಿವತ್ತ ನಿ ಳಾತಳಕ್ಕೆಬೀ । ಳ್ದುರುಳ್ದ ಮಹೇಶಭಕ್ತನ ಸಭೇಂದ್ರಮ ನೀಕ್ಷಿಸಿ ತತ್ಕ್ಷಣಾರ್ಧದೊಳ್॥

ಮ॥ ಸ್ರ॥ ಪಟುಕೋಪಾಟೋಪದಿಂ ಗರ್ಜಿಸಿ ಘುಡಿಘುಡಿಸುತ್ತಾರ್ದು ಹೋ ನಿಲ್ಲೆ ನುತ್ತಾ । ರ್ಭಟಿಸುತ್ತಂ ಪೊಕ್ಕು ಮೇಗಣ್ಗೊಗೆದು ನೆಗೆದು ತತ್ಕಂಠಮಂ ಮೆಟ್ಟಿ ನಿಂ ದು ॥ ತ್ಕಟಸುತ್ತಂ ಜೋದನಂ ಪೊಯ್ದೊದೆದು ಬಿದುವದಿರೆಬ್ಬೇ ಸಮಂತಾಗೆ ಶೈಲ । ಸ್ಫುಟಕಾಯೋಗ್ರೇಭಮಂ ಕೈಗೊಡಲಿಯಿ ನಧಟಂ ಸೀಳ್ದ ನುಗ್ರಾವತಾರಂ ॥ ॥೫೫॥

---

ವ್ಯಾಪ್ತವಾದ, ನವ್ಯ- ನೂತನವಾದ, ಉದ್ಗಮ- ಹೂವ್ಗಳ, ಆವಳಿಯಂ-ಪಜ್ತಿಯನ್ನು, ಕೊಯ್ದು, ಕರಂ ಡಕಂ- ಪುಟ್ಟಿಯು, ಜಡಿಯೆ- ಜಗ್ಗುವಂತೆ, ಸಮುತ್ಸಾಹದಿಂ, ತೀವೃತ್ತಂ, ತುಂಬುತ್ತ. ... ॥೫೧॥

ಅವ ಭಕ್ತಂ- ಆ ಶಿವಭಕ್ತನು, ಹರಪೂಜೆಗೆಯ್ವ, ಪೊಳ್ತು ಕಾಲವು, ಓಸರಿಪುದು- ಮೀರುವದು, ಎ ನುತ್ತೆ, ಅತೀವಜವದಿಂ- ಬಹುಬೇಗನೆ, ಆಕರಡಿಗೆಯು, ಅಲರು, ತಾಳ್ದು, ಪುರವೀಥಿಯೊಳ್, ಐದೆ- ಚೆನ್ನಾಗಿ, ಬರ್ಪ, ಸಮನಂತರದೊಳ್. ... ... ... ... ॥೫೨॥

ಕಟ್ಟದಿರಲ್ಲಿ, ಕರಿ, ಕಂಡು, ಕಾಯ್ಪು- ಕೋಪವು, ವಿಜೃಂಭಿಸೆ- ಹೆಚ್ಚಾಗಲು, ಬರ್ಪ, ಭಕ್ತನಂ, ಮುಟ್ಟ, ಕರಾಗ್ರದಿಂ- ಸೊಂಡಿಲತುದಿಯಿಂದ, ಸೆಳೆದು, ಸುತ್ತಿ, ನಭಃಸ್ಥಳಕೆ, ಇಟ್ಟು, ತೀವ್ರದಿಂ- ಬೇಗನೆ, ನೆಟ್ಟನೆ, ಕೊಂಬಗ, ಒಡ್ಡಿ, ನಿಲೆ, ತದ್ರದನಾಗ್ರದೆ-ಆ ಆನೆಯ ಕೊಂಬಿನ ತುದಿಯಲ್ಲಿ, ಬೀಳ್ದು,ರಕ್ತಮಂ,ದಿ ಟ್ಟಣಿಸುತ್ತೆ-ಸಾಂದ್ರವಾಗಿ, ಸೂಸೆ, ಹರಣಂಗಳೆವಾಗಳ್, ಅವಂ-ಆ ಭಕ್ತನು,ವಿಷಾದದಿಂ-ಮನಃಕ್ಲೇಶದಿಂದ

ಪುರಹರ! ಪಾರ್ವತೀಶ! ಪರಮೇಶ! ಮದೀಶ! ಮಹೇಶ! ಪಾಹಿ- ರಕ್ಷಿಸು, ಎಂಬ, ರವವಂ, ಇರಿವ ತ್ತಂ, ಆಲಿಸುತ್ತೆ, ಅಗಿದು- ಭಯಪಟ್ಟು, ಕೆಟ್ಟೆಗ, ಇದು, ಎಲ್ಲಿಯಭಕ್ತರೋದನಸ್ವರಂ- ಯಾವಕಡೆಯಿಂದ ಬಂದ ಭಕ್ತನ ಅಳುವಿಕೆಯ ಧ್ವನಿಯು? ಎನುತೆ, ಜವದಿಂದೆ, ಅಲ್ಲಿಗೆ, ಎಯ್ದಿ, ಇಳಾತಳಕ್ಕೆ, ಬೀಳ್ದು, ಉರು ಳ್ದ, ಮಹೇಶಭಕ್ತನು, ಇಭೇಂದ್ರಮಂ, ಈಕ್ಷಿಸಿ, ತತ್ಕ್ಷಣಾರ್ಧದೊಳ್. ... ... ॥೫೪॥

ಉಗ್ರಾವತಾರಂ- ಭಯಂಕರವಾದ ಆಕಾರವುಳ್ಳ ಇರಿವತ್ತನು, ಪಟುಕೋಪಾಟೋಪದಿಂ- ಸಮರ್ಥ ವಾದ ಕೋಪಾಧಿಕ್ಯದಿಂದ, ಗರ್ಜಿಸಿ-ಭಯಂಕರಧ್ವನಿಯನ್ನು ಮಾಡಿ,ಘುಡಿಘುಡಿಸುತ್ತೆ, ಆರ್ದು, ಹೋ, ನಿ ಲ್, ಎನುತ್ತೆ, ಆರ್ಭಟಿಸುತ್ತಂ, ಪೊಕ್ಕು, ಮೇಗಣ್ಗೆ- ಆನೆಯ ಮೇಲ್ಗಡೆಗೆ, ಒಗೆದು- ಎದ್ದು, ನೆಗೆದು, ತ ತ್ಕಂಠಮಂ- ಆ ಆನೆಯ ಕತ್ತನ್ನು, ಮೆಟ್ಟಿ, ನಿಂದು, ಉತ್ಕಟಿಸುತ್ತಂ- ಮದಿಸಿ, ಜೋದನಂ- ಮಾವುತನ ನ್ನು, ಪೊಯ್ದು- ಹೊಡೆದು, ಒದೆದು, ಶೈಲಸ್ಫುಟಕಾಯೋಗ್ರೇಭಮಂ-ಪರ್ವತದಂತೆ ವ್ಯಕ್ತವಾದ ದೇಹವುಳ್ಳ ದೊಡ್ಡ ಆನೆಯನ್ನು, ಅಧಟಿಂ- ಶೌರ್ಯದಿಂದ, ಕೈಗೊಡಲಿಯಿಂ, ಅದುಬಿದು- ಆ ಕುಂಭಸ್ಥಲವು, ಸಮಂತು- ಚೆನ್ನಾಗಿ, ಇರ್ಬ್ಬೇಳ್- ಎರಡುಹೋಳು, ಆಗೆ-ಆಗುವಂತೆ, ಸೀಳ್ದಂ. ... ... ॥೫೫

ಚಂ ॥ ಕೆಡೆದುದು ಸಿಂಧುರಂ ಧರಣಿಯೊಳ್ ಹರಿ ಪೊಯ್ದೊಡೆ ನೀಲಪರ್ವತಂ । ಪಡಲಿಡುವಂದದಿಂ ಶರಣ ನಿಂತೆಸಗಿರ್ದುದ ನೆಲ್ಲಮುಂ ಮಹಾ ॥ ಮೃಡಪದಭಕ್ತ ಚೋಳವಿಭು ಕೇಳ್ದಗಿದೇಳ್ತರುತಲ್ಲಿ ಕಂಡು ಸಂ । ಗಡದ ನರೇಂದ್ರ ರಚ್ಚರಿಯ ನಾಳೆ ತದಂಘ್ರಿಗೆ ಮೈಯ ನಿಕ್ಕಿದಂ ॥ ... ... ... ... ... ॥೫೬॥

ವ ॥ ಅಂತು ಮೈಯಿಕ್ಕಿ ಪೊಗಳ್ದು ಕೈಯಂ ಮುಗಿದು ನಿಂದು ಕಿಂಕರತೆಯ ನಪ್ಪಕೆಯ್ದು ॥ * * * * * * * * * * * * * * * *

ಉ ॥ ಶ್ರೀವರವಾಗ್ವರಪ್ರಮುಖನಿರ್ಜರರಾದೊಡ ಮೋರ್ಮೆ ತೀವ್ರಗ । ರ್ವಾವಿಳರಾಗಿ ಮಾರ್ಮಲೆಯೆ ಶಿಕ್ಷಿಸಲಾರ್ಪಧಟುಳ್ಳವಂಗೆ ದಂ ॥ ತಾವಳಮರ್ದನಂ ಪಿರಿದೆ ಕೇಳ್ನಗಂತರಿನಂತದಿರ್ಕೆ ಮಾ । ದೇವನ ಭಕ್ತನಂ ಮಡಿಪಿತಕ್ಕಟ ದುಷ್ಟಮದಾಂಧ ಮದ್ಗಜಂ ॥ ... ... ... ... ... ॥೫೭॥

ಕಂ॥ ಏಗೆಯ್ವೆ ನಿದಕೆ ಪೇಳ್ಗುಣ । ಸಾಗರ ಸದ್ಭಕ್ತಮೃತಿಗೆ ಮೇಣೆನ್ನಸುವಂ ॥ ನೀಗೆ ಸರಿವರ್ಕುಮೆಂದುಸಿ । ರ್ದಾಗಳೆ ಬಾಯ್ಪುಳಿಯದಿರ್ಕುಮೇನಿಜದಿಂದಂ ॥ ॥೫೮॥

ಹರಿ- ಇಂದ್ರನು, ಪೊಯ್ದೊಡೆ- ಹೊಡೆದರೆ, ನೀಲಪರ್ವತಂ, ಪಡಲಿಡುವಂದದಿಂ- ಬೀಳುವಹಾಗೆ, ಸಿಂಧುರಂ- ಆನೆಯು, ಧರಣಿಯೊಳ್, ಕೆಡೆದುದು- ಬಿದ್ದಿತು, ಶರಣಂ, ಇಂತು, ಎಸಗಿ- ಮಾಡಿ, ಇರ್ದುದಂ, ಎಲ್ಲಮುಂ, ಮಹಾಮೃಡಪದಭಕ್ತಚೋಳವಿಭು, ಕೇಳ್ದು, ಅಗಿದು- ಭಯಪಟ್ಟು, ಏಳ್ತರುತೆ, ಅಲ್ಲಿ, ಕಂಡು, (ಇರಿವತ್ತನನ್ನೂ, ಅವನು ಮಾಡಿರುವ ಕಾರ್ಯವನ್ನೂ ನೋಡಿ) ಸಂಗಡದ, ನರೇಂದ್ರರ್- ರಾಜರು, ಅಚ್ಚರಿಯಂ, ಆಳೆ- ಹೊಂದಲು, ತದಂಘ್ರಿಗೆ- ಆ ಇರಿವತ್ತನೆಂಬ ಶರಣರ ಪಾದಕ್ಕೆ, ಮೆಯ್ಯಂ ಇಕ್ಕಿದಂ- ನಮಸ್ಕರಿಸಿದನು. ... ... ... ... ... ... ॥೫೬॥

ಅಂತು, ಮೈಯಿಕ್ಕಿ, ಪೊಗಳ್ದು, ಕೈಯಂ, ಮುಗಿದು, ನಿಂದು, ಕಿಂಕರತೆಯಂ- ಸೇವಕತ್ವವನ್ನು, ಅಪ್ಪುಕೆಯ್ದು-ಹೊಂದಿ. * * * * * * * * * * * * * * *

ಶ್ರೀವರವಾಗ್ವರಪ್ರಮುಖನಿರ್ಜರರ್— ಶ್ರೀವರ- ಲಕ್ಷ್ಮೀಪತಿಯಾದ ವಿಷ್ಣು, ವಾಗ್ವರ- ಸರಸ್ವತೀಪತಿಯಾದ ಬ್ರಹ್ಮ, ಇವರುಗಳೇ, ಪ್ರಮುಖ- ಮೊದಲಾದ, ನಿರ್ಜರರ್— ದೇವತೆಗಳು, ಆದೊಡಂ, ಓರ್ಮೆ- ಒಂದಾವರ್ತಿ, ಗರ್ವಾವಿಳರ್- ಅಹಂಕಾರಯುಕ್ತರು, ಆಗಿ, ಮಾರ್ಮಲೆಯೆ- ಕೊಬ್ಬಿ ತೂಗಾಡಿದರೆ, ಶಿಕ್ಷಿಸಲ್, ಆರ್ಪ- ಸಮರ್ಥವಾಗುವ, ಅಧಟುಳ್ಳವಂಗೆ- ಶೌರ್ಯವುಳ್ಳ, ನಿನಗೆ, ದಂತಾವಳಮರ್ದನಂ-ಆನೆಯಂ ಕೊಲ್ಲುವಿಕೆಯು, ಪಿರಿದೆ- ದೊಡ್ಡದೇ? ಪೇಳ್; ಅಂತರಿಂ- ಆದುದರಿಂದ, ಅದು- ಆ ಗಜಸಂಹರಣವು, ಅಂತು, ಇರ್ಕೆ; ದುಷ್ಟಮದಾಂಧಮದ್ಗಜಂ- ನನ್ನ ಕೆಟ್ಟಮದ್ದಾನೆಯು, ಮಾದೇವನ- ಮಹಾದೇವನ, ಭಕ್ತನಂ, ಮಡಿಪಿತು- ಕೊಂದಿತು, ಅಕ್ಕಟ- ಅಯ್ಯೋ! ... ... ... ॥೫೭॥

ಗುಣಸಾಗರ! ಇದಕೆ- ಈ ಭಕ್ತಮರಣಕ್ಕೆ, ಏಗೆಯ್ವೆಂ- ಏನುಮಾಡಲಿ? ಪೇಳ್, ಸದ್ಭಕ್ತಮೃತಿಗೆ, ಮೇಣ್, ಎನ್ನ, ಅಸುವಂ- ಪ್ರಾಣವನ್ನು, ನೀಗೆ- ಬಿಟ್ಟರೆ, ಸರಿವರ್ಕುಂ, ಎಂದು, ಉಸಿರ್ದಾಗಳೆ- ಹೇಳಿದ ಕೂಡಲೇ, ನಿಜದಿಂದಂ, ಬಾಯ್, ಪುಳಿಯದೆ- ಹುಳಿತುಕೊಳ್ಳದೆ, ಇರ್ಕುಮೇ? (ಶ್ರೇಷ್ಠವಾದ ಶಿವಭಕ್ತನಿಗೆ ನಾನು ಸದೃಶನಲ್ಲವಾದುದರಿಂದ ಆ ಭಕ್ತನ ಪ್ರಾಣಕ್ಕೆ ನನ್ನ ಪ್ರಾಣವಂ ಬಿಟ್ಟರೆ ಭಕ್ತಮೃತಿದೋಷವು ಪರಿಹಾರವಾಗುವದೆಂದು ಹೇಳಿದರೆ ನನ್ನಬಾಯಿ ಹುಳಿತುಕೊಳ್ಳುವದಲ್ಲವೇ ? ಎಂದನು. ಅಂದರೆ ಶಿವಭಕ್ತನಮೃತಿಯಿಂದಾದ ವಿಪದದೋಷಕ್ಕೆ ನನ್ನ ಪ್ರಾಣವಂ ಕೊಟ್ಟರೂ ಪರಿಹರವಾಗಲಾರದೆಂಬಭಾವವು) ॥೫೮॥

ಕಂ ॥ ಎನ್ನಗಜ ಮೆಸಗಿದೀತ । ಪ್ಪೆನ್ನದು ವಲಮಳಿದು ಶುದ್ಧ ನಪ್ಪೆ ನೆನುತ್ತಂ ॥
ಸನ್ನುತಗುಣನಿಧಿ ಚೋಳಂ । ತನ್ನಯ ಶಿರಮರಿದುಕೊಳ್ವ ಸಮಯದೊಳಾಗಳ್ ॥ ॥೫೯॥

ಮ ॥ ಸುರಗಂಗಾಶಶಭೃತ್ಕಪರ್ದ್ದನನಲಾದಿತ್ಯೇಂದುನೇತ್ರಂ ಮಹಾ । ಗರಳಗ್ರೀವ ನ
ಹೀಂದ್ರಭೂಷ ನಗಜಾಸಂಯುಕ್ತ ನುಗ್ರದ್ವಿಪಾ ॥ ಸುರಚರ್ಮ್ಮಾಂಬರ ನನ್ವಿತಾಭಯವರಶ್ರೀ
ಪಾಣಿಪದ್ಮಂ ಪ್ರಭಾ । ಕರಕೋಟಿಪ್ರಭ ನಕ್ಷಪಾದ ನನಘಂ ಪ್ರತ್ಯಕ್ಷ ನಾದಂ ಮೃಡಂ ॥

ವ ॥ ಅಂತು ಶಿವಂ ಪ್ರಸನ್ನನಾಗುತ್ತಿರಿವತ್ತನವೀರವ್ರತಕ್ಕಂ ಚೋಳರಾಯನ ಭ
ಕ್ತಿವ್ರತಕ್ಕಂ ಮಚ್ಚಿ ಗಣನಿವಹದೊಳ್ಪರಶಿವಂ ಪೊಗಳ್ದೀರ್ವ್ವರಂ ಬಿಗಿಯಪ್ಪಿ ಮುಂತಾಡಿ
ಮಡಿದ ಭಕ್ತಂಗಂ ಗಜಾಧೋರಣರ್ಗ್ಗಂ ಹರಣಮಂ ಕರುಣಿಸಿ ಸುರಕುಜಕುಸುಮವರ್ಷಂ
ಭೋರೆಂದು ಸುರಿಯೆ ಸುರದುಂದುಭಿನಿರ್ಘೋಷಂ ದಿಗಂತಕ್ಕೆ ಧೀಂಕಿಡೆ ಬಂದ ಮಣಿಪು
ಷ್ಪಕದೊಳ್ ಕುಳ್ಳಿರಿಸಿ ಕೂರ್ಮ್ಮೆವೆರಸಿ ಕೈಲಾಸಕ್ಕೆ ಕರೆದೊಯ್ದು ಗಣಸಭೆಯೊಳ್ಸುಖ ಮಿ
ರಿಸೆ ಮರೆದಿರ್ದ್ದನಾ ಚೋಳೋರ್ವ್ವಿಪಂ ಭಕ್ತನಂ ನಿಜಗಜಂ ಮಡಿಪಲೊಡಂಭೃತ್ಯಾಪರಾಧಾ
ತ್ಸ್ವಾಮಿನೋದಂಡ ಎಂಬ ನಯಂಬಿಡಿದು ನಿಜಪ್ರಾಣಮಂ ನಿತ್ಯಾಗೆಳಾಂ ಬೇಡೆಂದು ಸಾರಿ

ಎನ್ನ, ಗಜಂ, ಎಸಗಿದ, ಈತಪ್ಪು, ಎನ್ನದು, ವಲಂ- ನಿಶ್ಚಯ; ಅಳಿದು- ಸತ್ತು, ಶುದ್ಧಂ- ದೋಷರಹಿ
ತನು, ಅಪ್ಪೆಂ, ಎನುತ್ತಂ, ಸನ್ನುತಗುಣನಿಧಿ, ಚೋಳಂ, ತನ್ನಯ, ಶಿರಮಂ, ಅರಿದುಕೊಳ್ವ- ಕತ್ತರಿಸಿಕೊ
ಳ್ಳುವ, ಸಮಯದೊಳ್, ಆಗಳ್. ... ... ... ... ॥೫೯॥

ಸುರಗಂಗಾಶಶಭೃತ್ಕಪರ್ದಂ— ಸುರಗಂಗಾ- ದೇವಗಂಗೆ, * ಶಶಭೃತ್- ಚದ್ರ, ಇವರುಗಳೇ, ಕ
ಪರ್ದಂ- ಜಡೆಯಲ್ಲುಳ್ಳ, ಅನಲಾದಿತ್ಯೇಂದುನೇತ್ರಂ— ಅನಲ- ಬೆಂಕಿ, ಆದಿತ್ಯ- ಸೂರ್ಯ, ಇಂದು- ಚಂದ್ರ,
ಇವರುಗಳೇ, ನೇತ್ರಂ- ಕಣ್ಣಾಗುಳ್ಳ, ಮಹಾಗರಳಗ್ರೀವಂ- ಅಧಿಕವಾದ ವಿಷವೇ ಕತ್ತಿನಲ್ಲುಳ್ಳ, ಅಹೀಂದ್ರ
ಭೂಷಣಂ, ಅಗಜಾಸಂಯುಕ್ತಂ-ಪಾರ್ವತೀಸಮೇತನಾದ, ಉಗ್ರದ್ವಿಪಾಸುರಚರ್ಮ್ಮಾಂಬರಂ- ಭಯಂಕರವಾ
ದ ಆನೆಯ ಚರ್ಮವೇ ವಸ್ತ್ರವಾಗುಳ್ಳ, ಅನ್ವಿತಾಭಯವರಶ್ರೀಪಾಣಿಪದ್ಮಂ— ಅನ್ವಿತ- ಕೂಡಿದ, ಅಭಯವ
ರ- ಅಭಯಪ್ರದಾನದ, ಶ್ರೀ-ಸಂಪತ್ತಿನಿಂ ಕೂಡಿದ, ಪಾಣಿಪದ್ಮಂ- ಕಮಲದಂತಿರುವ ಕೈಯ್ಯುಳ್ಳ, ಪ್ರಭಾಕರ
ಕೋಟಿಪ್ರಭಂ- ಅನೇಕ ಸೂರ್ಯರ ಕಾಂತಿಯಂತಿರುವ ಕಾಂತಿಯುಳ್ಳ, ಅಕ್ಷಪಾದಂ- ಕಣ್ಣೇ ಚರಣದಲ್ಲುಳ್ಳ,
ಅನಘಂ- ಪಾಪರಹಿತನಾದ, ಮೃಡಂ, ಪ್ರತ್ಯಕ್ಷಂ, ಆದಂ. .. ... ... ॥೬೦॥

ಅಂತು, ಶಿವಂ, ಪ್ರಸನ್ನಂ, ಆಗುತ್ತೆ, ಇರಿವತ್ತನ, ವೀರವ್ರತಕ್ಕಂ, ಚೋಳರಾಯನ,ಭಕ್ತಿವ್ರತಕ್ಕಂ,
ಮೆಚ್ಚಿ- ಶ್ಲಾಘಿಸಿ, ಗಣನಿವಹದೊಳ್, ಈಶ್ವರಂ, ಪೊಗಳ್ದು, ಬಿಗಿಯಪ್ಪಿ, ಮುಂತಾಡಿ- ಮುದ್ದಾಡಿ, ಮಡಿ
ದ, ಭಕ್ತಂಗಂ, ಗಜಾಧೋರಣರ್ಗ್ಗಂ- ಆನೆಗೂಮಾವುತನಿಗೂ, ಹರಣಮಂ, ಕರುಣಿಸಿ, ಸುರಕುಜಕುಸುಮವ
ರ್ಷಂ- ಕಲ್ಪವೃಕ್ಷದ ಹೂಮಳೆಯು, ಭೋರ್, ಎಂದು, ಸುರಿಯೆ, ಸುರದುಂದುಭಿನಿರ್ಘೋಷಂ-ದೇವತೆಗ
ಳ ನಗಾರಿಯ ಶಬ್ದವು, ದಿಗಂತಕ್ಕೆ- ದಿಕ್ಕುಗಳ ಕೊನೆಗೆ, ಧೀಂಕಿಡೆ- ದುಮುಕಲು, ಬಂದ, ಮಣಿಪುಷ್ಪ
ಕದೊಳ್- ರತ್ನಖಚಿತವಾದ ವಿಮಾನದಲ್ಲಿ, ಕುಳ್ಳಿರಿಸಿ, ಕೂರ್ಮ್ಮೆವೆರಸಿ- ಕೈಲಾಸಕ್ಕೆ, ಕರೆದು, ಒಯ್ದು,
ಗಣಸಭೆಯೊಳ್, ಸುಖಂ- ಸೌಖ್ಯವಾಗಿ, ಇರಿಸೆ, ಮೆರೆದು, ಇರ್ದ್ದಂ; ಆಚೋಳೋರ್ವ್ವಿಪಂ, ನಿಜಗಜಂ-
ತನ್ನ ಆನೆಯು, ಭಕ್ತನಂ- ಶಿವಭಕ್ತನನ್ನು, ಮಡಿಪಲ್- ಸಾಯಿಸಲು, ಒಡಂ- ಕೂಡಲೇ, ಭೃತ್ಯಾಪರಾ
ಧಾತ್- ಸೇವಕನ ತಪ್ಪಿನ ದೆಸೆಯಿಂದ, ಸ್ವಾಮಿನಃ- ಒಡೆಯನಿಗೆ, ದಂಡಃ- ಶಿಕ್ಷೆಯು, ಎಂಬ, ನಯಂಬಿ

* (ಅವ) ಶಶ- ಮೊಲವನ್ನು, ಭೃತ್- ಧರಿಸಿರುವವನು. ... ... ... ॥೬೦॥

ದೊಡಂ ಮೀರಿ ಮದೋದ್ರೇಕದಿಂ ಮುಂಗಾಣದೆ ಭಕ್ತವಧೆಗೆಳಸಿ ಮತ್ತಗಜಮ ನಟ್ಟಿದ ನಿನಗಾದ ಶಿವದ್ರೋಹಕ್ಕೆ ನಿಷ್ಕೃತಿ ಯಾವುದೆಂದು ಮೂದಲಿಸಿ ಮತ್ತ ಮಿಂತೆಂದಂ ॥

ಕಂ ॥ ಧರಣಿಯೊ ಳತುಳಿತಶೋಭಾ । ಕರ ಮಿದೆ ಪೆರತಿಲ್ಲ ಮೆಂಬ ಪೇರ್ಮೆಗಡಪ್ಪಾ ॥ ಗಿರೆ ಬಾಹೂರೆಂಬ ಮಹಾ । ಪುರವರದೊ ಳ್ಮೆರೆವ ನೋರ್ವ ನಚಳಶಿವೈಕ್ಯಂ ॥ ॥೬೧॥

ಮಾಲಿನೀವೃತ್ತಂ ॥ ಕಲುಷಕುಜಕುಠಾರಂ ಕಾಲಕರ್ಮಾತಿದೂರಂ । ವಿಲಸಿತಗುಣಧಾಮಂ ವೀರಶೈವಾಬ್ಧಿಸೋಮಂ ॥ ಸುಲಲಿತಶುಭರೂಪಂ ಶುದ್ಧವಿದ್ಯಾಕಲಾಪಂ । ವಿಲಯರಹಿತಭಾವಂ ವಿಶ್ವದೊ ಳ್ಬೊಮ್ಮಿದೇವಂ ॥ ... ... ... ॥೬೨॥

ಶಾ ॥ ವೀರಾಚಾರವಿಹಾರ ನಾರ್ಯ ನನಘಂ ಪ್ರಧ್ವಸ್ತಪಾಶಂ ಮಹಾ । ಕಾರುಣ್ಯಾಕರ ನಪ್ರಮೇಯಮಹಿಮಂ ನಿರ್ಧೂತದೋಷಂ ಗುಣಾ ॥ ಧಾರಂ ದಿಕ್ತಟಪೂರ್ಣ್ಣಕೀರ್ತಿಮಹಿತಂ ಸದ್ಭಕ್ತಸಂದೋಹಮಂ । ದಾರಂ ಶ್ರೀಗುರುಲಿಂಗಜಂಗಮಪದಾಂಭೋಜಾತಪೂಜೋತ್ಸವಂ ॥ ... ... ... ... ॥೬೩॥

ವ ॥ ಎನಿಸಿ ಪೆಂಪುವೆತ್ತ ಬಾಹೂರಬೊಮ್ಮಿದೇವಂ ಸ್ವಲೀಲೆಯಿಂ ನೊಂದುಕುಸುಮಾ

---

ಡಿದು- ನೀತಿಯನ್ನನುಸರಿಸಿ, ನಿಜಪ್ರಾಣಮಂ, ಇತ್ತಲ, ಎಂಬಾಗಳ್- ಹೀಗೆನ್ನುವಲ್ಲಿ, ಆಂ, ಬೇಡ, ಎಂದು ಸಾರಿದೊಡಂ- ಹೇಳಿದಾಗ್ಯೂ, ಮೀರಿ, ಮದೋದ್ರೇಕದಿಂ- ಗರ್ವಾಧಿಕ್ಯದಿಂದ, ಮುಂಗಾಣದೆ, ಭಕ್ತವಧೆಗೆ, ಎಳಸಿ, ಮತ್ತಗಜಮಂ, ಅಟ್ಟಿದ, ನಿನಗೆ, ಆದ, ಶಿವದ್ರೋಹಕ್ಕೆ, ನಿಷ್ಕೃತಿ- ಪರಿಹಾರವು, ಆವುದು? ಎಂದು,ಮೂದಲಿಸಿ- ಹೀಯಾಳಿಸಿ, ಮತ್ತಂ, ಇಂತು, ಎಂದಂ. * * * * * * * * *

## ಬೊಮ್ಮಿದೇವನಕಥೆ.

ಧರಣಿಯೊಳ್, ಇದೆ, ಅತುಳಿತಶೋಭಾಕರಂ- ಅಸದೃಶವಾದ ಕಾಂತಿಗಾಸ್ಪದವಾದದ್ದು, ಪೆರತು- ಮತ್ತೊಂದು, ಇಲ್ಲಂ, ಎಂಬ ಪೇರ್ಮೆಗೆ- ಆಧಿಕ್ಯಕ್ಕೆ, ಅಡಪ್ಪ್- ಆಶ್ರಯವು, ಆಗಿ, ಇರೆ, ಬಾಹೂರೆಂಬ, ಮಹಾಪುರದೊಳ್, ಅಚಳಶಿವೈಕ್ಯಂ, ಒರ್ವಂ, ಮೆರೆವಂ. ... ... ... ॥೬೧॥

ವಿಶ್ವದೊಳ್, ಪ್ರಪಂಚದಲ್ಲಿ, ಕಲುಷಕುಜಕುಠಾರಂ- ಪಾಪವೆಂಬ ಮರಕ್ಕೆ ಕೊಡಲಿಯಾದ, ಕಾಲಕರ್ಮಾತಿದೂರಂ- ಭೂತಭವಿಷ್ಯದ್ವರ್ತಮಾನಕರ್ಮಗಳಿಗೆ ದೂರನಾದ, ವಿಲಸಿತಗುಣಧಾಮಂ- ಪ್ರಕಾಶಿಸುವ ಗುಣಗಳಿಗೆ ಸ್ಥಾನನಾದ, ವೀರಶೈವಾಬ್ಧಿಸೋಮಂ- ವೀರಶೈವಮತವೆಂಬ ಸಮುದ್ರಕ್ಕೆ ಚಂದ್ರನಾದ, ಸುಲಲಿತಶುಭರೂಪಂ- ಪ್ರಕಾಶಿಸುವ ಮಂಗಳಕರವಾದ ಆಕಾರವುಳ್ಳ, ಶುದ್ಧವಿದ್ಯಾಕಲಾಪಂ- ಪರಿಶುದ್ಧವಾದ ವಿದ್ಯೆಗಳೇ ಆಭರಣವಾಗುಳ್ಳ, ವಿಲಯರಹಿತಭಾವಂ-ನಾಶರಹಿತತ್ವವುಳ್ಳ, ಬೊಮ್ಮಿದೇವಂ. ... ॥೬೨॥

ವೀರಾಚಾರವಿಹಾರಂ- ವೀರಶೈವಾಚಾರದಿಂ ಕ್ರೀಡಿಸುವವನು, ಆರ್ಯಂ- ಶ್ರೇಷ್ಠನು, ಅನಘಂ- ಪಾಪರಹಿತನು, ಪ್ರಧ್ವಸ್ತಪಾಶಂ- ನಾಶಮಾಡಲ್ಪಟ್ಟ ಮಾಯಾಪಾಶವುಳ್ಳವನು, ಮಹಾಕಾರುಣ್ಯಾಕರಂ, ಅಪ್ರಮೇಯಮಹಿತಂ- ಅಗಣ್ಯವಾದ ಮಹತ್ತ್ವವುಳ್ಳವನು, ನಿರ್ಧೂತದೋಷಂ- ಹೋಗಲಾಡಿಸಲ್ಪಟ್ಟ ಪಾಪವುಳ್ಳವನು, ಗುಣಾಧಾರಂ, ದಿಕ್ತಟಪೂರ್ಣ್ಣಕೀರ್ತಿಮಹಿತಂ- ಸಮಸ್ತ ದಿಕ್ಪ್ರದೇಶದಲ್ಲೂ ತುಂಬಿದ ಯಶಸ್ಸಿನಿಂದ ಪೂಜ್ಯನಾದವನು, ಸದ್ಭಕ್ತಸಂದೋಹಮಂದಾರಂ- ಒಳ್ಳೆಯಶಿವಭಕ್ತರ ಸಮೂಹಕ್ಕೆ ಕಲ್ಪವೃಕ್ಷನು, ಶ್ರೀಗುರುಲಿಂಗಜಂಗಮಪದಾಂಭೋಜಾತಪೂಜೋತ್ಸವಂ. ... ... ... ॥೬೩॥

ಎನಿಸಿ, ಪೆಂಪುವೆತ್ತ- ಆಧಿಕ್ಯವಂ ಹೊಂದಿದ, ಬಾಹೂರ, ಬೊಮ್ಮಿದೇವಂ, ಸ್ವಲೀಲೆಯಿಂ, ಒಂದುಕುಸುಮಾರಾಮಮಂ- ಹೂದೋಟವನ್ನು, ನೆಗಳ್ಚಿ- ಮಾಡಿ, ಪೂಗಿಡುಗಳಂ, ಆದರಂಬೆತ್ತು-ಪ್ರೀತಿಯಿಂದೊ

ರಾಮಮಂ ನೆಗಳ್ದ ಪೂಗಿಡುಗಳನಾದರಂಬೆತ್ತೋವಿ ಬಕವಕುಳತಿಲಕಚಂಪಕಕೇಸರಕರ ವೀರಕರ್ಣಿಕಾರಕಲ್ಹಾರಕಮಳಕುಮುದ ಪುನ್ನಾಗಜಾತಿಯೂಥಿಕಾಮಾಲತೀ ಮಲ್ಲಿಕಾದಿಕು ಸುಮಸಮುದಯಮ ನಲ್ಲಿ ತಿರಿದತಿಚಿತ್ರಮಪ್ಪಂತೆ ಮೆರೆನಿಂಡೆದಂಡೆಚೆಂಡುಗಳಂ ಸಮೆದು ಶಿವಭಕ್ತರ್ಗೆ ಕಾಣ್ಕೆಗೆಯ್ದವರಿನೊಡವಿಸಿದ ವಿತ್ತದಿಂ ಪಿಂಗದೆ ಜಂಗಮಾರ್ಚನೆಯಂ ಮಾ ಡುತ್ತಮೀನಿಯಮದಿ ನನವರತ ಮೆಸೆದಿರ್ದನಂತುಮಲ್ಲದೆ ॥ * * * * *

ಮತ್ತೀ ॥ ಪರವಾದಿವ್ರಜ ವೈದೆ ವಾದಿಸೆ ಬಲಂಬೆತ್ತೀಶಭಕ್ತಂ ಜಗ । ದ್ಗುರುವೆಂ
ದಂದು ಕರಂ ಪ್ರತಿಷ್ಠಿಸಿದ ನಿಕ್ಷುವ್ರಾತಮಂ ಪೇರ್ಮೆ ತ ॥ ಳ್ತಿರೆ ತಾಂ ಮೇಯಿಸಿ ಕಲ್ಲನಂದಿ
ಗೆ ಜಸಂಬೆತ್ತೊಪ್ಪಿದಂ ಜೋಳಮಂ । ಪರಲಿಂಗಾಕೃತಿಗೆಯ್ದು ಡಲ್ನುಡಿಸಿದಂ ಸದ್ಭಕ್ತಿ
ಸಾರಾನ್ವಿತಂ ॥ ... ... ... ... ॥೭೪॥

ವ॥ಇಂತು ನಿರುಪಮನಿಜಪ್ರಭಾವಮಂ ಮೆರೆವುತ್ತಂ ಬೊಮ್ಮಿದೇವ ನೆಸೆದಿರ್ಪಿನಮ ಲ್ಲಿ ಮತ್ತಮೊಂದುದಿನದೊಳದ್ಭುತಂ ಮಸಗೆ ನರೇಂದ್ರ ನೋರ್ವಂ ಪರನೃಪಾಲನಮೇಲೆ ದಂಡೆತ್ತಿ ಬರುತ್ತ ಮಾಪುರಬಹಿರ್ಸ್ಥಳಯಪುಷ್ಪಾರಾಮನಿಕಟತರಂಗಿಣೀತಟದೊಳ್ಪಾಳೆ ಯಂಗೆಯ್ದಿರ್ಪಿನ ಮಾನೃಪಪಟ್ಟಗಜಂ ಸಪ್ತಮದಾವಸ್ಥೆಯಿಂ ಮುಂಗಾಣದೆ ಕಂಗನೆ ಕನ

ದಿ, ಓವಿ- ರಕ್ಷಿಸಿ, ಬಕ.....ಸಮುದಯಮಂ— ಬಕ- ಕೊಕ್ಕರೆಹೂವು, ವಕುಳ- ಪಗಡೆ, ತಿಲಕ, ಚಂಪಕ, ಕೇಸರ– ಸುರಗಿ, ಕರವೀರ- ಕಣಿಗಲೆ, ಕರ್ಣಿಕಾರ- ಬೆಟ್ಟತಾವರೆ, ಕಲ್ಹಾರ- ಸುಗಂಧಿಕಮಲ, ಕಮಳ- ತಾ ವರೆ, ಕುಮುದ- ನೈದಿಲೆ, ಪುನ್ನಾಗ- ಸುರಹೊನ್ನೆ, ಜಾತಿ- ಬಿಳೀಜಾಜಿ, ಯೂಥಿಕಾ- ಕಾಡುಮಲ್ಲಿಗೆ, ಮಾಲ ತೀ- ಕೆಂಪುಜಾಜಿ, ಮಲ್ಲಿಕಾ, ಇವುಗಳೇ, ಆದಿ- ಮೊದಲಾದ, ಕುಸುಮಸಮುದಯಮಂ, ಅಲ್ಲಿ, ತಿರಿದು-ಕಿತ್ತಿ, ಅತಿಚಿತ್ರಂ, ಅಪ್ಪಂತೆ, ಮೆರೆಪಿಂಡೆದಂಡೆಚೆಂಡುಗಳಂ- ಪ್ರಕಾಶಿಸುವ ದುಂಡುದಂಡೆಗಳು ಚೆಂಡುಗಳನ್ನು, ಸಮೆ ದು- ಮಾಡಿ, ಶಿವಭಕ್ತರ್ಗೆ, ಕಾಣ್ಕೆಗೆಯ್ದದರಿಂ-ಕಾಣ್ಕೆಯಂ ಮಾಡಿದುದರಿಂದ, ಒಡವಿಸಿದ-ಕೂಡಿಸಿದ, ವಿತ್ತ ದಿಂ- ಹಣದಿಂದ, ಪಿಂಗದೆ, ಜಂಗಮಾರ್ಚನೆಯಂ, ಮಾಡುತ್ತಂ, ಈನಿಯಮದಿಂ- ಈವ್ರತದಿಂದ, ಅನವರತಂ, ಎಸೆದು, ಇರ್ದಂ, ಅಂತುಂ- ಹಾಗೂ, ಅಲ್ಲದೆ. * * * * * * * * * * * *

ಸದ್ಭಕ್ತಿಸಾರಾನ್ವಿತಂ- ಒಳ್ಳೆಯ ಭಕ್ತಿಯ ಸ್ಥಿರಾಂಶದಿಂ ಕೂಡಿದ ಬೊಮ್ಮಿದೇವನು, ಪರವಾದಿವ್ರ ಜಂ, ಐದೆ, ವಾದಿಸೆ, ಛಲಂಬೆತ್ತು- ಶಪಥವಂ ಹೊಂದಿ, ಈಶಭಕ್ತಂ, ಜಗದ್ಗುರು, ಎಂದು, ಅಂದು- ಆಗ, ಕರಂ-ಚೆನ್ನಾಗಿ, ಪ್ರತಿಷ್ಠಿಸಿದಂ- ಸ್ಥಾಪಿಸಿದನು; ಕಲ್ಲ- ಶಿಲೆಯ, ನಂದಿಗೆ-ಬಸವೇಶ್ವರನಿಗೆ, ಪೇರ್ಮೆ- ಆಧಿಕ್ಯ ವು, ತಳ್ತು, ಇರೆ, ತಾಂ, ಇಕ್ಷುವ್ರಾತಮಂ- ಕಬ್ಬಿನ ಸಮೂಹವನ್ನು, ಮೇಯಿಸಿ, ಜಸಂಬೆತ್ತು- ಕೀರ್ತಿಯಂ ಹೊಂದಿ,ಒಪ್ಪಿದಂ, ಜೋಳಮಂ,ಪರಲಿಂಗಾಕೃತಿಗೆಯ್ದು, ನುಡಿಸಿದಂ-ಮಾತನಾಡಿಸಿದನು,ಡಲ್-ನಿಶ್ಚಯ.

ಇಂತು, ಬೊಮ್ಮಿದೇವಂ, ನಿರುಪಮನಿಜಪ್ರಭಾವಮಂ- ಅಸದೃಶವಾದ ತನ್ನ ಮಹಿಮೆಯನ್ನು, ಮೆ ರೆವುತ್ತಂ- ಪ್ರಕಾಶಿಸುತ್ತ, ಎಸೆದು, ಇರ್ಪಿನಂ, ಅಲ್ಲಿ, ಮತ್ತಂ, ಒಂದುದಿವಸದೊಳ್, ಅದ್ಭುತಂ- ಆಶ್ಚ ರ್ಯವು, ಮಸಗೆ-ಹೆಚ್ಚಾಗಲು, ಓರ್ವಂನರೇಂದ್ರಂ- ಒಬ್ಬರಾಜನು, ಪರನೃಪಾಲನ- ಮತ್ತೊಬ್ಬರಾಜನ, ಮೇ ಲೆ, ದಂಡೆತ್ತಿ- ಸೈನ್ಯದೊಡನೆ, ಬರುತ್ತಂ, ಆಪುರ.....ತಟದೊಳ್— ಆಪುರ- ಆ ಬಾಹೂರಿನ, ಬಹಿಸ್ಥಳ ದ- ಹೊರಗಡೆಯಲ್ಲಿರುವ, ಪುಷ್ಪಾರಾಮ- ಹೂದೋಟದ, ನಿಕಟ- ಸಮೀಪದಲ್ಲಿರುವ, ತರಂಗಿಣೀ- ಹೊಳೆ ಯ, ತಟದೊಳ್- ದಡದಲ್ಲಿ, ಪಾಳೆಯಂಗೆಯ್ದು- ಬೀಡನ್ನುಬಿಟ್ಟು, ಇರ್ಪಿನಂ, ಆನೃಪನ, ಪಟ್ಟಗಜಂ, ಸಪ್ತ ಮದಾವಸ್ಥೆಯಿಂ- ಏಳಾದಮದದಶೆಗಳಿಂದ, ಮುಂಗಾಣದೆ- ಬುದ್ಧಿತೋರದೆ, ಕಂಗನೆ- ಅಧಿಕವಾಗಿ, ಕನ

ಲ್ದು ದಿಕ್ಕುಂಭಿಗಳ್ಗೆ ಬೃಂಹಿತಂಗೆಯ್ದು ನಿಗಳಮಂ ಪರಿದು ನಿಟ್ಟೋಟದಿಂ ಬೀದಿವರಿ ದಾರೆಕಾರರ ನಟ್ಟ ಮಾವುತನಂ ಕೆಡಪಿ ಕಟ್ಟುಬ್ಬಟೆಯ ನೊಳಕೊಂಡು ಮಾಮುಸಕಂ ಮು ಸಗಿ ಕೋಲಾಹಲಮ ನೆಸಗಿ ತಡೆಯುಲೊಡರ್ಚಿದರನಡಂಗ ಪೊಯ್ದು ಕಾಲೊಗೆದ ನೀಲಾಚಲ ದಂತೆ ಪೊಡವಿಯೊಳಡಿಗೊಳ್ವ ಕಲ್ಪಾಂತಮೇಘದಂತೆ ಬರಿಕೈವಡೆದಾದಿವರಾಹನಂತೆ ವಿ ಜೃಂಭಿಸಿ ತನ್ನಿದಿರೊಳ್ ಪರಿದು ತುಡುಂಕಲವ್ವಳಿಪನಮಾ ಜೊಮ್ಮಿದೇವಂ ತೊಟ್ಟನೆ ಕಂಡ ದಿರದಿದಿರ್ವರಿದು ಸಿಂಹನಾದಂಗೆಯ್ದು ಗರ್ಜಿಸಿ ದಕ್ಷಿಣಕರಾಗ್ರಮಂ ನೆಗಪಿ ಹೋ ಹೋ ಎಂದು ನಿವಾರಿಸಿ ॥ * * * * * * * * * * * * * * *

ಚಂ ॥ ಕೆಡೆ ಕೆಡೆ ಯೆಂದು ನಿಂದೊದರೆ ಕೇಳ್ದಳರ್ದಚ್ಚಿಗಮಾಂತು ಕುಂಭಮಂ। ಕೊ ಡಪುತೆ ಕಾಲ್ಗಳಂ ಬಿದಿರ್ದು ಸುಂಡಿಲ ನೆತ್ತಿಯೊಳಿಟ್ಟು ಮುಂಬರ ॥ ಪ್ಪಡೆಯಡೆ ಕರ್ಣ ಮೀಳ್ದಳರೆ ಕಣ್ಮುಗಿವುತ್ತಿರೆ ಘೀಳಿಡುತ್ತೆ ಸೊ । ರ್ಕುಡುಗಿ ಕುನುಂಗಿ ಪಿಂದೆಗೆದು ಬೀ ಳ್ದುದು ಸತ್ತುದು ಮತ್ತಕುಂಜರಂ ॥ ... ... ... ॥೬೫॥

ವ॥ ಆಮದಗಜ ಮಿಂತು ತರಂಗಿಣೀತಟದೊಳ್ಕೆಡೆದು ಮಡಿಯೆ ದೂತ ಭೂತಳಾ ಧಿಪನಿರ್ದಲ್ಲಿಗತಿವೇಗದಿಂ ಪರಿತಂದಾವೃತ್ತಾಂತಮನೆಲ್ಲಮಂ ಸವಿಸ್ತರಂ ಪೇಳೆ ಕೇಳ್ದು ॥

---

ಲ್ದು- ಕೋಪಿಸಿ, ದಿಕ್ಕುಂಭಿಗಳ್- ದಿಗ್ಗಜಗಳು, ಅಳ್ಕೆ- ಭಯಪಡುವಂತೆ, ಬೃಂಹಿತಂಗೆಯ್ದು ಗರ್ಜನೆಯಂ ಮಾಡಿ, ನಿಗಳಮಂ- ಸರಪಣಿಯನ್ನು, ಪರಿದು- ಕಿತ್ತು, ನಿಟ್ಟೋಟದಿಂ- ನೆಟ್ಟಗೆ ಓಡುವದರಿಂದ, ಬೀದಿವರಿ ದು- ಬೀದಿಯಲ್ಲಿ ಸಂಚರಿಸಿ, ಆರೆಕಾರರಂ-ಕಾವಲುಗಾರರನ್ನು, ಅಟ್ಟಿ, ಮಾವುತನಂ, ಕೆಡಪಿ, ಕಟ್ಟುಬ್ಬಟೆ ಯಂ- ಅತಿ ಶೌರ್ಯವನ್ನು, ಒಳಕೊಂಡು- ಹೊಂದಿ, ಮಾಮುಸಕಂಮುಸಗಿ- ಬಲುಸಿಟ್ಟಾಗಿ, ಕೋಲಾಹಲ ಮಂ, ಎಸಗಿ, ತಡೆಯುಲ್, ಒಡರ್ಚಿದರಂ- ಪ್ರಯತ್ನಿಸಿದವರನ್ನು, ಅಡಂಗೆ- ಮರೆಯಾಗುವಂತೆ, ಪೊಯ್ದು, ಕಾಲ್, ಒಗೆದ- ಹುಟ್ಟಿದ, ನೀಲಾಚಲದಂತೆ- ಕರಿಯ ಬೆಟ್ಟದಹಾಗೆ, ಪೊಡವಿಯೊಳ್, ಅಡಿಗೊಳ್ವ- ನಡೆ ಯುವ, ಕಲ್ಪಾಂತಮೇಘದಂತೆ- ಪ್ರಳಯಕಾಲದ ಮೋಡದಹಾಗೆ, ಬರಿಕೈವಡೆದ- ಸುಂಡಿಲಂಹೊಂದಿದ, ಆ ದಿವರಾಹದಂತೆ- ಆದಿವರಾಹಮೂರ್ತಿಯಹಾಗೆ, ವಿಜೃಂಭಿಸಿ- ಉಬ್ಬಿ, ತನ್ನ, ಇದಿರೊಳ್, ಪರಿದು-ಸಂಚರಿಸಿ, ತುಡುಂಕಲ್-ಗ್ರಹಿಸುವದಕ್ಕೆ, ಅವ್ವಳಿಪನಂ- ಆತುರಪಡುವಲ್ಲಿ. ಆಬೊಮ್ಮಿದೇವಂ, ತೊಟ್ಟನೆ-ಶೀಘ್ರವಾಗಿ, ಕಂಡು, ಅರಿದೆ- ಚಲಿಸದೆ, ಇದಿರ್ವರಿದು-ಎದುರಿಗೆ ಬಂದು, ಸಿಹ್ಮನಾದಂಗೆಯ್ದು- ಸಿಹ್ಮದಕೊಗಿನಹಾಗೆಗರ್ಜ ನೆಯಂಮಾಡಿ, ಗರ್ಜಿಸಿ- ಭಯಪಡಿಸಿ, ದಕ್ಷಿಣಕರಾಗ್ರಮಂ- ಬಲಗಯ್ಯಿನ ತುದಿಯನ್ನು, ನೆಗಪಿ- ಎತ್ತಿ,ಹೋ ಹೋ,ಎಂದು, ನಿವಾರಿಸಿ-ತಡೆದು. * * * * * * * * * * * * * *

ನಿಂದು, ಕೆಡೆ-ಬೀಳು, ಕೆಡೆ; ಎಂದು, ಒದರೆ- ಕೂಗಲು, ಮತ್ತಕುಂಜರಂ- ಮದ್ದಾನೆಯು, ಕೇಳ್ದು; ಅಳರ್ದು- ಭಯಪಟ್ಟು, ಅಚ್ಚಿಗಮಾಂತು- ಆಶ್ಚರ್ಯವಂ ಹೊಂದಿ, ಕುಂಭಮಂ; ಕೊಡವುತೆ, ಕಾಲ್ಗಳಂ, ಬಿದಿರ್ದು-ಚಾಚೆ, ಸುಂಡಿಲ, ನೆತ್ತಿಯೊಳ್, ಇಟ್ಟು, ಮುಂಬರಲ್, ಪಡೆಯದೆ- ಶಕ್ತನಾಗದೆ, ಕರ್ಣಂ- ಕಿವಿ ಯು, ಈಳ್ದು– ಉದ್ದವಾಗಿ, ಅಳರೆ– ಜೋಲಾಡಲು, ಕಣ್, ಮುಗಿವುತ್ತೆ, ಇರೆ; ಘೀಳಿಡೆ- ಕೂಗಿಕೊಳ್ಳು ತ್ತ, ಸೊರ್ಕು- ಗರ್ವವು, ಉಡುಗಿ- ಭಗ್ನವಾಗಿ, ಕುನುಂಗಿ- ಕುಗ್ಗಿ, ಪಿಂದೆಗೆದು– ಬೀಳ್ವುದು- ಸತ್ತುದು.

ಆಮದಗಜಂ, ಇಂತು, ತರಂಗಿಣೀತಟದೊಳ್, ಕೆಡೆದು- ಬಿದ್ದು, ಮಡಿಯೆ- ಸಾಯಲು, ದೂತರ್- ಆಳ್ಗಳು, ಭೂತಳಾಧಿಪಂ- ದೊರೆಯು, ಇರ್ದಲ್ಲಿಗೆ, ಅತಿವೇಗದಿಂ, ಪರಿತಂದು, ಆವೃತ್ತಾಂತಮಂ, ಎಲ್ಲಮಂ, ಸವಿಸ್ತರಂ, ಪೇಳೆ, ಕೇಳ್ದು. * * * * * * * * * * * * * *

ವೃತ್ತಂ ॥ ಜನಪಾಲಂ ಮಿಗೆ ಭೀತಿವಟ್ಟು ನಡೆತಂದಾಭಕ್ತನಿರ್ದಲ್ಲಿಗಾ । ಳ್ತನಮಂ
ತಾಂ ತಳೆದಂಘ್ರಿಪಂಕಜಕೆ ಮೆಯ್ಯಂ ಸಾರ್ಚಿ ಕುಂಬಿಟ್ಟು ದೇ ॥ ವ ನಿತಾಂತಂ ಮದಮ
ತ್ತಮತ್ಕರಿಕೃತಂ ತಪ್ಪೆನ್ನದೋರಂತೆ ತ । ಪ್ಪ ನೀಂ ನೀಂ ಕ್ಷಮಿಸೆಂದು ಮತ್ತಮೆರ
ಗಿರ್ದಂ ದೀನನವಾಸ್ಯನನು ॥ ... ... ... ॥೬೬॥

ಕಂ॥ ಎರಗಿದರವಮಗನ ಮೌಳಿಯ ।ನುರೆ ಪಿಡಿದೆತ್ತುತ್ತೆ ಪರಸಿ ಮಡಿದಾನೆಯ ನೆ॥
ಳ್ಚರಿಸುತಸುವಿತ್ತು ಬಲ್ಲಿದ । ರೆರೆಯಂ ಕೃಪೆಗೆಯ್ದು ಬೊಮ್ಮಿದೇವಂ ಮೆರೆದಂ ॥೬೭॥

ಕಂ ॥ ಕವಿಗಳ್ವಿಬುಧರ್ ಭೂಭುಜ । ರವಿಕಲಮತಿಸುಜನರ್ಇದೆ ಚಿತ್ರಮಿದೆಂದು ॥
ತ್ಸವಮಾಂತು ಪೊಗಳೆ ಮಹಿಮಾ । ರ್ಣವ ನಿಂತೆಸೆದಿರ್ದನರಸ ಕೇಳದರಿಂದಂ ॥ ॥೬೮॥

ಕಂ ॥ ಮರೆವುಗೆ ಕಾವರಿದಿರ್ಚಿದೊ । ಡಿರಿವರ್ಪದಕೆರಗೆ ಭವಮ ನಳಿಪರ್ಬಿಡದೆ ॥
ಚ್ಚರೊಳೊಂದಿ ಭಜಿಸೆ ವಾಳ್ಪ । ರ್ತರಿಸಂದಪವರ್ಗಸುಖಮ ನೀಶ್ವರಭಕ್ತರ್ ॥ ॥೬೯॥

ಚಂ ॥ ಧರಣಿಪ ಕೇಳನಾದಿಪುರುಷಂ ಕಲಿಕಾಲಕಪರ್ದಿ ಸಾಹಸಾ । ಭರಣ ನಯೋ
ನಿಜಂ ಮನುಜನಲ್ತು ವಿಚಾರಿಸೆ ನಾಚಿದೇವನಾ ॥ ವರಗುಣಶೀಲನಂಘ್ರಿಯ ನೊರಲ್ದು ಶರ
ಣ್ಬುಗು ಭೂಪ ನಿನ್ನ ನುದ್ಧರಿಸುವ ನೀವ ನೀಹಿತಮ ನಲ್ಲದೊಡಪ್ಪುದು ಕಾರ್ಯವಿಘ್ನವಂ॥

---

ಜನಪಾಲಂ, ಮಿಗೆ, ಭೀತಿವಟ್ಟು, ಆಭಕ್ತಂ, ಇರ್ದಲ್ಲಿಗೆ, ನಡೆತಂದು, ತಾಂ, ಆಳ್ತನಮಂ- ಸೇವಕತ್ವವನ್ನು, ತಳೆದು, ಅಂಘ್ರಿಪಂಕಜಕೆ, ಮೆಯ್ಯಂ- ದೇಹವನ್ನು, ಸಾರ್ಚಿ- ಸೇರಿಸಿ, ಕುಂಬಿಟ್ಟು- ನಮಸ್ಕರಿಸಿ, ದೇವ! ಮದಮತ್ತಮತ್ಕರಿಕೃತಂ- ಕೊಬ್ಬಿದ ನನ್ನ ಆನೆಯಿಂದ ಮಾಡಲ್ಪಟ್ಟ ತಪ್ಪು, ಎನ್ನದು; ಇದಂ, ಓರಂತೆ- ಚೆನ್ನಾಗಿ, ನೀಂ, ಕ್ಷಮಿಸು, ಎಂದು, ದೀನನವಾಸ್ಯನನಂ-ದೈನ್ಯದಿಂ ಕೂಡಿ ಬಗ್ಗಿದ ಮುಖವುಳ್ಳವನಾಗಿ, ಮತ್ತಂ, ಎರಗಿ, ಇರ್ದಂ. ... ... ... ... ॥೬೬॥

ಬಲ್ಲಿದರ-ಬ್ರಾಹ್ಮಣರಲ್ಲಿ, (ಅಥವಾಬಲಶಾಲಿಗಳಲ್ಲಿ)ಎರೆಯಂ-ಶ್ರೇಷ್ಠನಾದ, ಬೊಮ್ಮಿದೇವಂ,ಎರಗಿದ-ನಮಸ್ಕರಿಸಿದ, ಅರಮಗನ-ರಾಜಪುತ್ರನ,ಮೌಳಿಯಂ-ಕಿರೀಟವನ್ನು, ಉರೆ,ಪಿಡಿದು, ಎತ್ತುತ್ತೆ, ಪರಸಿ, ಮಡಿದ, ಆನೆಯಂ, ಎಳ್ಚರಿಸುತೆ-ಎಚ್ಚರಪಡಿಸುತ್ತ,ಅಸುವಿತ್ತು-ಪ್ರಾಣವಂ ಕೊಟ್ಟು, ಕೃಪೆಗೆಯ್ದು,ಮೆರೆದಂ

ಕವಿಗಳ್, ವಿಬುಧರ್- ವಿದ್ವಾಂಸರು, ಭೂಭುಜರ್- ರಾಜರು, ಅವಿಕಲಮತಿಸುಜನರ್- ನಿಶ್ಚಂಚಲವಾದ ಬುದ್ಧಿಯುಳ್ಳ ಸತ್ಪುರುಷರು, ಇದೆ- ಚೆನ್ನಾಗಿ; ಇದು, ಚಿತ್ರಂ- ಆಶ್ಚರ್ಯವು, ಎಂದು, ಉತ್ಸವಮಾಂತು- ಸಂತೋಷವಂ ಹೊಂದಿ, ಪೊಗಳೆ, ಮಹಿಮಾರ್ಣವಂ- ಮಹತ್ತ್ವಕ್ಕೆ ಸಮುದ್ರನಾದ ಬೊಮ್ಮಿದೇವನು, ಇಂತು, ಎಸೆದು, ಇರ್ದಂ; ಅರಸ! ಕೇಳ್, ಅದರಿಂದಂ. ... ... ॥೬೮॥

ಈಶ್ವರಭಕ್ತರ್, ಮರೆವುಗೆ-ಮರೆಯಂ ಹೊಕ್ಕರೆ, ಕಾವರ್- ರಕ್ಷಿಸುವರು; ಇದಿರ್ಚಿದೊಡೆ ಇದಿರಾದರೆ, ಇರಿವರ್- ಕೊಲ್ಲುವರು; ಪದಕೆ, ಎರಗೆ, ಭವಮಂ, ಅಳಿಪರ್-ಹೋಗಲಾಡಿಸುವರು, ಬಿಡದೆ, ಎಚ್ಚರೊಳ್, ಒಂದಿ,ಭಜಿಸೆ-ಸೇವಿಸಿದರೆ,ತರಿಸಂದು-ನಿರ್ಣಯವಾಗಿ,ಅಪವರ್ಗಸುಖಮಂ- ಮೋಕ್ಷಸೌಖ್ಯವನ್ನು, ವಾಳ್ಪರ್.

ಧರಣಿಪ- ಬಿಜ್ಜಳರಾಜನೇ! ಕೇಳ್, ನಾಚಿದೇವಂ, ಅನಾದಿಪುರುಷಂ- ಸಕಲಕ್ಕೂ ಆದಿಪುರುಷನು, ಕಲಿಕಾಲಕಪರ್ದಿ- ಕಲಿಯುಗದಲ್ಲಿ ಈಶ್ವರನು; ಸಾಹಸಾಭರಣಂ- ಸಾಹಸವೇ ಒಡವೆಯಾಗುಳ್ಳವನು; ಅಯೋನಿಜಂ- ಯೋನಿಮಾರ್ಗದಿಂ ಹುಟ್ಟದವನು, ವಿಚಾರಿಸೆ, ಮನುಜಂ, ಅಲ್ತು; ಭೂಪ! ಆ ವರಗುಣಶೀಲನ- ಆ ಶ್ರೇಷ್ಠವಾದ ಗುಣಗಳೇ ಸ್ವಭಾವವಾಗುಳ್ಳವನ, ಅಂಘ್ರಿಯಂ, ಒರಲ್ದು- ಪ್ರೀತಿಸಿ, ಶರಣ್ಬುಗು- ಸಂರಕ್ಷಕವನ್ನಾಗಿ ಹೊಂದು, ನಿನ್ನಂ, ಉದ್ಧರಿಸುವಂ, ಈಹಿತಮಂ- ಇಷ್ಟವಾದುದನ್ನು, ಈವಂ, ಅಲ್ಲದೊಡೆ-ಹಾಗೆ ಶರಣಾಗತನಾಗದಿದ್ದರೆ, ಕಾರ್ಯವಿಘ್ನವಂ- ಕಾರ್ಯಹಾನಿಯು, ಅಪ್ಪುದು. ... ॥೭೦॥

ವ ॥ ಎಂದ ವೃಷೇಂದ್ರನ ಸತ್ಯಾಲಾಪಮಂ ಬಿಜ್ಜಳನಾಕರ್ಣಿಸಿ ॥ * * *

ಕಂ ॥ ನರನಾದೊಡೆ ಮಾಚಯ್ಯಂ । ಗಿರಿನಿಭಕರಿಯಂ ಕರಾಗ್ರದಿಂ ಕೊಲ್ವನೆ ತಾಂ ॥ ಹರರೂಪ ನಕ್ಕುಮೀಬಸ । ವರಸನ ನುಡಿ ನನ್ನಿಯೆಂದು ನಂಬಿದ ನರಸಂ ॥ ।೩೧॥

ವ ॥ ಆಗ ಳಿಂತು ವಿಚಾರಿಸಿ ನಂಬುಗೆವೆತ್ತು ನಾಣಿಲಿತನಂ ಮಿಕ್ಕು ಮಂತ್ರಿಮಂಡಲಿಕದಂಡನಾಥರೊಡನೇಳ್ತರೆ ನಡೆತಂದ ಮಾಚಿದೇವ ನಿದಿರೊಳವನಿವಿನಿಹಿತೋತ್ತಮಾಂಗನಾಗಿ ಪೊಡಮಟ್ಟರೆ ಬಸವರಸ ನಾವೀರಾವತಾರನಡಿಗರಗಿ ಕರಾಂಜಲಿಗೆಯ್ದು ಭಯಭಕ್ತಿವೆರಸಿ ಕೀರ್ತಿಸಿ ದೇವ ಬಿನ್ನಪ ಮಿಂತೆಂದಂ ॥ * * * * * * * * *

ಚಂ ॥ ಜಡಮತಿ ಮುನ್ನ ಮಾಂ ಜಡಿದು ಬೇಡನೆ ಕೇಳದೆ ತನ್ನ ದಂತಿಯಂ । ಬಿಡದವಿಚಾರದಿಂ ಕಳುಪಿ ನೀಗಿದಬನ್ನದೆ ಲಜ್ಜೆಗೆಟ್ಟು ಸಿ ॥ ಮ್ಮಡಿಯೆಡೆಗೆಯ್ದಲಳ್ಕುತಭಯಂಬಡೆಯಲ್ಕಪರಾಧಿಯತ್ತ ಸೈ । ಗೆಡದೆರಗಿರ್ದಪಂ ನಿಮಗೆ ಬಿಜ್ಜಳನುಜ್ಜ್ವಳಶೌರ್ಯಭೂಷಣಾ ॥ ... ... ... ... ।೩೨॥

ಚಂ ॥ ಎಣಿಪೊಡಜಾಂಡಮಂಡಲದೊಳೀಶ್ವರಸನ್ನಿಭ ನಿಮ್ಮೊಳಾರ್ಪಿನಿಂ । ಸೆಣಸಿ ಬರ್ದುಂಕಲಾರ್ಪ ಕಲಿಯಾವನಜೇಯಪರಾಕ್ರಮೈಕಭೂ ॥ ಷಣ ನಿಮಗೀನೃಪಂ ತೃಣಕ

---

ಎಂದ, ವೃಷೇಂದ್ರನ, ಸತ್ಯಾಲಾಪಮಂ, ಬಿಜ್ಜಳಂ, ಆಕರ್ಣಿಸಿ- ಕೇಳಿ. * * * * * * *

ಮಾಚಯ್ಯಂ, ನರಂ- ಮನುಷ್ಯನು,ಆದೊಡೆ, ಗಿರಿನಿಭಕರಿಯಂ-ಬೆಟ್ಟಕ್ಕೆ ಸದೃಶವಾದಆನೆಯನ್ನು, ಕರಾಗ್ರದಿಂ, ಕೊಲ್ವನೆ? ತಾಂ, ಹರರೂಪಂ, ಅಕ್ಕುಂ, ಈಬಸವರಸನ, ನುಡಿ, ನನ್ನಿ- ನಿಶ್ಚಯವು, ಎಂದು, ಅರಸಂ, ನಂಬಿದಂ. ... ... ... ... ... ।೩೧॥

ಆಗಳ್, ಇಂತು, ವಿಚಾರಿಸಿ- ಆಲೋಚಿಸಿ, ನಂಬುಗೆವೆತ್ತು, ನಾಣಿಲಿತನಂ- ನಾಚಿಕೆಯಿಲ್ಲದಿರುವಿಕೆಯಂ, ಮಿಕ್ಕು- ಹೆಚ್ಚಾಗಿ, ಮಂತ್ರಿಮಂಡಲಿಕದಂಡನಾಥರ್‌- ಮಂತ್ರಿಸಾಮಾಜಿಕಶಿಕ್ಷಾಧಿಕಾರಿಗಳು, ಒಡನೆ, ಏಳ್ತರೆ- ಬರಲು, ಮಾಚಿದೇವನ, ಇದಿರೊಳ್, ಅವನಿವಿನಿಹಿತೋತ್ತಮಾಂಗಂ- ಭೂಮಿಯಲ್ಲಿಡಲ್ಪಟ್ಟ ಶಿರಸ್ಸುಳ್ಳವನು, ಆಗಿ, ಪೊಡಮಟ್ಟು, ಇರೆ, ಬಸವರಸಂ, ಆವೀರಾವತಾರನ- ಆ ವೀರಭದ್ರೇಶ್ವರನ ಅವತಾರಿಯಾದ ಮಾಚಯ್ಯನ, ಅಡಿಗೆ, ಎರಗಿ, ಕರಾಂಜಲಿಗೆಯ್ದು- ಕೈಮುಗಿದು, ಭಯಭಕ್ತಿವೆರಸಿ, ಕೀರ್ತಿಸಿ,ದೇವ! ಬಿನ್ನಪಂ, ವಿಜ್ಞಾಪನೆ, ಇಂತು, ಎಂದಂ. * * * * * * * * * * * * * * *

ಉಜ್ಜ್ವಳಶೌರ್ಯಭೂಷಣಾ! ಜಡಮತಿ- ಮೂಢಬುದ್ಧಿಯುಳ್ಳ, ಬಿಜ್ಜಳಂ, ಮುನ್ನಂ, ಆಂ, ಜಡಿದು- ಭಯಪಡಿಸಿ, ಬೇಡ, ಎನೆ, ಕೇಳದೆ, ಅವಿಚಾರದಿಂ- ಆಲೋಚಿಸದೆ, ಬಿಡದೆ- ತಪ್ಪದೆ, ತನ್ನ, ದಂತಿಯಂ- ಆನೆಯನ್ನು, ಕಳುಪಿ, ನೀಗಿದ- ಹಾಳುಮಾಡಿಕೊಂಡ, ಬನ್ನದೆ- ಸಂಕಟದಿಂದ, ಲಜ್ಜೆಗೆಟ್ಟು, ನಿಮ್ಮ, ಅಡಿಯ, ಎಡೆಗೆ, ಎಯ್ದಲ್- ಬರುವದಕ್ಕೆ, ಅಳ್ಕುತೆ- ಭಯಪಡುತ್ತೆ, ಅಭಯಂಬಡೆಯಲ್ಕೆ- ಭೀತಿರಾಹಿತ್ಯವಂ ಹೊಂದುವದಕ್ಕೋಸ್ಕರ, ಅತ್ತ, ಅಪರಾಧಿ- ಅಪರಾಧವಂ ಮಾಡಿದ ರಾಜನು, ಸೈಗೆಡೆದು- ಬಿದ್ದು, ನಿಮಗೆ, ಎರಗಿ- ನಮಸ್ಕರಿಸಿ, ಇರ್ದಂ. ... ... ... ... ।೩೨॥

ಈಶ್ವರಸನ್ನಿಭ- ಪರಶಿವನಿಗೆ ಸದೃಶನಾದ, ಅಜೇಯಪರಾಕ್ರಮಭೂಷಣ- ಅನ್ಯರಿಂ ಜೈಸುವದಕ್ಕಸಾಧ್ಯವಾದ ಶೌರ್ಯವೇ ಆಭರಣವಾಗುಳ್ಳ ಮಾಚಿದೇವನೇ! ಎಣಿಪೊಡೆ- ಆಲೋಚಿಸಿದರೆ, ಅಜಾಂಡಮಂಡಲದೊಳ್-ಬ್ರಹ್ಮಾಂಡವಲಯದಲ್ಲಿ, ನಿಮ್ಮೊಳ್, ಆರ್ಪಿನಿಂ- ಶೌರ್ಯದಿಂದ, ಸೆಣಸಿ- ಯುದ್ಧವಂಮಾಡಿ, ಬರ್ದುಂ

ಣೋಪಮ ನೀತನೊ ಳೀಕೆಸಾಹಸೋ । ಲ್ಬಣದ ಬೆಡಂಗು ವಿಷ್ಕರಕೆ ಪಾಶುಪತಾಸ್ತ್ರ
ಮವೇಕೆ ಲೋಕದೊಳ್ ॥ ... ... ... ... ॥೨೩॥

ಕಂ ॥ ಪ್ರಣುತಗುಣಭರಣ ಭಯದಿಂ। ಪ್ರಣಾಮ ಮೆಸಗಿರ್ದ ಭೂಪನಪರಾಧಮ ನಿಂ ॥
ದಣಿಯರ ಮಭಿನವ ಭಾಳೇ । ಕ್ಷಣ ಸೈರಿಸಿ ಕರುಣಿಸೆಂದು ಮುಗುಳ್ದೆರಗಿರ್ದಂ ॥ ॥೨೪॥

ಮ॥ ಸ್ರ॥ ಬಸವಾಧೀಶಪ್ರಗಲ್ಭಾಮಳವಿನಯನಯಾಲಾಪಚಂದ್ರಾತಪಂ ಮಾಂ । ಜಿ
ಸೆ ತಚ್ಚೇತಃಸ್ಫುರತ್ಸೂರ್ಯಮಣಿಜನಿತಕೋಪಾಗ್ನಿಯಂ ಶಾಂತಿವೆತ್ತಾ ॥ ರಸೆಯಾಣ್ಮಂಗಿ
ತ್ತು ತಾ ನೊಲ್ದಭಯಮ ನಳಿದಿರ್ದಾನೆಯಂಗಂಗಳಂ ಬಂ । ಧಿಸಿ ರಕ್ಷಾರೇಣುವಂ ಮೇ
ಣ್ತಳೆದಸುಗೊಳಿಸುತ್ತೆತ್ತಿದಂ ಮಾಚಿದೇವಂ ॥ ... ... ॥೨೫॥

ಚಂ ॥ ಅನಿತರೊ ಳಲ್ಲಿ ಪೂರ್ವ್ವದಿನದಲ್ಲಿರಿದಾಗಸವಟ್ಟೆಗಿಟ್ಟ ಪೆಂ । ಪಿನ ಪೆಣ ಮ
ದ್ಭುತಂ ಮಸಗೆ ನೋಳ್ಪ ಜನಾವಳಿ ಭೀತಿವಟ್ಟು ಝು॥ ಲ್ಲನೆ ಕೆದರ್ದೋಡೆ ಭೋಂಕ ನಿಳೆ
ಯೊ ಳ್ಪಡಲಿಟ್ಟುದು ತಾ ನದಕ್ಕೆ ಜೀ । ವನಮ ನಮರ್ಚ್ಚಿ ಮಾಚವಿಭು ಭಕ್ತಮಹೋತ್ಸ
ವಮಂ ನೆಗಳ್ಚಿದಂ ॥ ... ... ... ... ॥೨೬॥

ಮತ್ತೇ ॥ ಇದು ಚಂದ್ರಾತಪದೊಟ್ಟಿಲೋ ಗಗನಗಂಗಾಜಾತಶುಭ್ರಾಂಬುಜಾ । ತದ

---

ಕಲ್- ಬದುಕುವದಕ್ಕೆ, ಅರ್ಪ- ಶಕ್ತನಾಗುವ, ಕಲಿ- ಸಮರ್ಥನು, ಆವಂ? ನಿಮಗೆ, ಈನೃಪಂ, ತೃಣಕ
ಣೋಪಮಂ- ಹುಲ್ಲಿನ ಸಣ್ಣತುಣಿಕಿಗೆ ಸದೃಶನು; ಈತನೊಳ್, ಸಾಹಸೋಲ್ಬಣದ- ಸಾಹಸಾಧಿಕ್ಯದ, ಬೆ
ಡಂಗು- ವಿಲಾಸವು, ಏಕೆ? ಲೋಕದೊಳ್, ವಿಷ್ಕಿರಕೆ- ಕೋಳಿಗೆ, ಅದುಪಾಶುಪತಾಸ್ತ್ರಂ, ಏಕೆ? ॥೨೩॥

ಪ್ರಣುತಗುಣಭರಣ, ಅಭಿನವಭಾಳೇಕ್ಷಣ- ನೂತನನಾದ ಈಶ್ವರನೇ! ಭಯದಿಂ, ಪ್ರಣಾಮಮೆಸಗಿ–
ನಮಸ್ಕರಿಸಿ, ಇರ್ದ, ಭೂಪನ, ಅಪರಾಧಮಂ- ತಪ್ಪನ್ನು, ಇಂದು, ಅಣಿಯರಂ- ಚೆನ್ನಾಗಿ, ಸೈರಿಸಿ, ಕರು
ಣಿಸು, ಎಂದು, ಮುಗುಳ್ದು, ಎರಗಿ, ಇರ್ದಂ. ... ... ... ॥೨೪॥

ಬಸವಾ......ಆತಮ, ಬಸವಾಧೀಶ- ಬಸವೇಶ್ವರನ, ಪ್ರಗಲ್ಭ- ಪ್ರೌಢವಾದ, ಅಮಳ- ನಿರ್ಮಲ
ವಾದ, ವಿನಯ- ನಮ್ರತೆಯಿಂ ಕೂಡಿದ, ನಯಾಲಾಪ- ನೀತಿವಚನವೆಂಬ, ಚಂದ್ರಾತಪಂ- ಚಂದ್ರಿಕೆಯು, ತ
ಚ್ಚೇತಃಸ್ಫುರತ್ಸೂರ್ಯಮಣಿಜನಿತಕೋಪಾಗ್ನಿಯಂ— ತತ್- ಆಮಾಚಿದೇವನ, ಚೇತಃ-ಮನಸ್ಸೆಂಬ, ಸ್ಫು
ರತ್- ಪ್ರಕಾಶಿಸುವ, ಸೂರ್ಯಮಣಿ- ಸೂರ್ಯಕಾಂತಶಿಲೆಯಿಂದ, ಜನಿತ- ಹುಟ್ಟಿದ, ಕೋಪ- ಕೋಪವೆಂಬ,
ಅಗ್ನಿಯಂ, ಮಾಂಜಿಸೆ- ಶಮನಪಡಿಸಲು, ಮಾಚಿದೇವಂ, ತಾಂ, ಶಾಂತಿವೆತ್ತು, ಒಲ್ದು, ಅರಸೆಯಾಣ್ಮಂಗೆ-
ದೊರೆಗೆ, ಅಭಯಮಂ, ಇತ್ತು, ಅಳಿದು-ಸತ್ತು, ಇರ್ದ, ಆನೆಯ, ಅಂಗಂಗಳ- ಅವಯವಗಳನ್ನು, ಬಂಧಿಸಿ,
ಮೇಣ್. ರಕ್ಷಾರೇಣುವಂ- ಭಸ್ಮದ ಧೂಳಿಯನ್ನು, ತಳದು-ಸೇಚಿಸಿ, ಅಸುಗೊಳಿಸುತ್ತೆ- ಪ್ರಾಣವಿಶಿಷ್ಟವಂ
ಮಾಡುತ್ತ, ಎತ್ತಿದಂ. ... ... ... ... ॥೨೫॥

ಅನಿತರೊಳ್, ಅಲ್ಲಿ ಪೂರ್ವ್ವದಿನದೊಳ್- ಹಿಂದಣ ದಿನದಲ್ಲಿ, ಇರಿದು- ಕೊಂದು, ಆಗಸವಟ್ಟೆಗೆ- ಆಕಾಶ
ಮಾರ್ಗಕ್ಕೆ, ಇಟ್ಟ, ಪೆಂಪಿನ, ಪೆಣಂ, ಅದ್ಭುತಂ, ಮಸಗೆ-ಹೆಚ್ಚಾಗಲು, ನೋಳ್ಪ, ಜನಾವಳಿ, ಭೀತಿವಟ್ಟು,
ಝಲ್ಲನೆ, ಕೆದರ್ದು– ವಿರಳರಾಗಿ, ಓಡೆ, ಭೋಂಕನೆ- ಬೇಗನೆ, ಇಳೆಯೊಳ್, ಪಡಲಿಟ್ಟುದು- ಬಿದ್ದಿತು,
ತಾಂ, ಮಾಚವಿಭು, ಅದಕ್ಕೆ- ಹೆಣಕ್ಕೆ, ಜೀವನಮಂ- ಪ್ರಾಣವನ್ನು, ಅಮರ್ಚ್ಚಿ, ಕೂಡಿಸಿ, ಭಕ್ತಮಹೋ
ತ್ಸವಮಂ- ಭಕ್ತರಿಗೆ ಅತ್ಯಂತ ಸಂತೋಷವನ್ನು, ನೆಗಳ್ಚಿದಂ- ಮಾಡಿದನು. ... ... ॥೨೬॥

ಗಣಾಗ್ರೇಸರಂ-ಶಿವಗಣಗಳಲ್ಲಿ ಶ್ರೇಷ್ಠನಾದ ಮಾಚಿದೇವನು, ಇದು, ನೋಳ್ಪೊಡೆ, ಚಂದ್ರಾತಪದ,

ಸಂಜಾತವೊ ಶಾರದಾಂಬುದದ ಪಿಂಡೋ ನೋಳ್ಪೆಡೆಂದೆಂಬ ಸಂ॥ ಪದಕಿಂಬಾಗಿ ನಭೋಂ
ತದೊಳ್ಮಿಸುವ ವಾಸೋಭಾರಮಂ ಬೆನ್ನೊಳಾಂ। ತುದಿತೋತ್ಸಾಹದಿ ನೆಂದಿನಂತೆ ಪದೆದೇ
ಳ್ತಂದಂ ಗಣಾಗ್ರೇಸರಂ॥ ... ... ... ... ॥೩೩॥

ವ॥ ಅಂತೇಳ್ತಂದು ತನ್ನಡಿದಾವರೆಯ ನೋಲಗಿಸೆ ಬಂದ ವೃಷೇಂದ್ರನಂ ಬೀಳ್ಕೊಟ್ಟಾ ಮಾಚಿದೇವಂ ನಿಜಮಂದಿರಂಬೊಕ್ಕು ಶರಣಸಪರ್ಯೆಯಿಂ ಸುಖಮಿರ್ದ್ದನಾ ಬಿಜ್ಜಳಂ ಮಾಚಿದೇವನ ಮಹಿಮೋನ್ನತಿಗೆ ವಿಸ್ಮಯಂಬಟ್ಟು ನಿಜಮಂತ್ರಿಮಂಡಲಿಕರೊಳ್ಪೊಗಳುತ್ತಂ ಬಂದು ನಿಜಾಲಯಮಂ ಪೊಕ್ಕಿರ್ದ್ದನಾ ಪ್ರಸ್ತಾವದೊಳ್॥ * * * * *

ಮ॥ಸ್ರ॥ ಬಗೆದಂದಾ ಮಾಚಿದೇವಂ ನೆಗಳ್ದ ಘನತರಾಶ್ಚರ್ಯಮಂ ಭಾವಿಸುತ್ತಂ।
ಪೊಗಳುತ್ತಂ ಭಕ್ತಸಂದೋಹದೊಳವನಳವಂ ಬಂದು ಶುದ್ಧಾಂತಮಂ ತಾಂ॥ ಪುಗು
ತಂದೋರಂತೆ ನಾನಾರ್ಥಮ ನಮಿತಚರಶ್ರೇಣಿಗೊಲ್ದೀವುತಂ ಕೈ। ಮಿಗೆ ಕೂರ್ತಾರಾಧಿ
ಸುತ್ತಂ ಮೆರೆದನತುಳಕಲ್ಯಾಣಕಲ್ಪಕ್ಷಮಾಜಂ॥ ... ... ॥೩೪॥

ಕಂ॥ ಪರಮಗುರುಮಾಚಿದೇವನ। ಚರಿತ್ರಮಂ ಕೇಳೆ ಪೇಳೆ ಬಿತ್ತರಿಸೆ ಸುಖೋ॥
ತ್ತರಪರಿಣತಿ ದೊರೆಕೊಳ್ಗುಂ। ಧರಿತ್ರಿಯೊ ಳ್ಸುಜನವಿತತಿ ಗಭವನ ಕೃಪೆಯಿಂ॥೩೫॥

ಲಲಿತಪದವೃತ್ತಂ॥ ಕುಂಜರ ಮಹಾದನುಜ ಭಂಜನ ಪದಾಂಬುಜ ಕೃತಾಂಜಲಿಸು

---

ಬಟ್ಟಲೋ- ಸಮೂಹವೋ! ಗಗನಗಂಗಾಜಾತಶುಭ್ರಾಂಬುಜಾತದ— ಗಗನಗಂಗಾ- ಆಕಾಶಗಂಗೆಯಲ್ಲಿ, ಜಾತ- ಹುಟ್ಟಿದ, ಶುಭ್ರಾಂಬುಜಾತ- ಬೆಳ್ದಾವರೆಗಳ, ಸಂಜಾತವೊ- ಸಮೂಹವೋ! ಶಾರದಾಂಬುದದ- ಶರತ್ಕಾಲದ ಮೋಡಗಳ, ಪಿಂಡೋ- ಸಮೂಹವೋ! ಎಂದು, ಎಂಬ, ಸಂಪದಕೆ, ಇಂಬು- ಆಸ್ಪದವು, ಆಗಿ, ನಭೋಂತದೊಳ್- ಅಂತರಿಕ್ಷಮಧ್ಯದಲ್ಲಿ, ಮಿಸುಪ, ವಾಸೋಭಾರಮಂ-ಬಟ್ಟೆಯ ಹೊರೆಯನ್ನು, ಬೆನ್ನೊಳ್, ಆಂತು, ಎಂದಿನಂತೆ, ಉದಿತೋತ್ಸಾಹದಿಂ- ಉತ್ಪನ್ನವಾದ ಉಲ್ಲಾಸದಿಂದ, ಪದೆದು, ಏಳ್ತಂದಂ.॥೩೩॥

ಅಂತು, ಏಳ್ತಂದು, ತನ್ನ, ಅಡಿದಾವರೆಯಂ, ಓಲಗಿಸೆ- ಸೇವಿಸುವದಕ್ಕೆ, ಬಂದ, ವೃಷೇಂದ್ರನಂ, ಬೀಳ್ಕೊಟ್ಟು, ಆ ಮಾಚಿದೇವಂ, ನಿಜಮಂದಿರಂಬೊಕ್ಕು- ತನ್ನ ಮನೆಯಂ ಹೊಕ್ಕು, ಶರಣಸಪರ್ಯೆಯಿಂ- ಶಿವಶರಣರ ಪೂಜೆಯಿಂದ, ಸುಖಂ, ಇರ್ದಂ, ಆ ಬಿಜ್ಜಳಂ, ಮಾಚಿದೇವನ, ಮಹಿಮೋನ್ನತಿಗೆ, ವಿಸ್ಮಯಂಬಟ್ಟು-ಆಶ್ಚರ್ಯಪಟ್ಟು, ನಿಜಮಂತ್ರಿಮಂಡಲಿಕರೊಳ್-ಪ್ರಧಾನಿ ಸಾಮಾಜಿಕರೊಡನೆ, ಪೊಗಳುತ್ತಂ, ಬಂದು, ನಿಜಾಲಯಮಂ, ಪೊಕ್ಕು, ಇರ್ದಂ, ಆ ಪ್ರಸ್ತಾವದೊಳ್- ಆ ಕಾಲದಲ್ಲಿ. * * * * * * *

ಅತುಳಕಲ್ಯಾಣಕಲ್ಪಕ್ಷಮಾಜಂ- ಕಲ್ಯಾಣಪಟ್ಟಣಕ್ಕೆ ಅಸದೃಶವಾದ ಕಲ್ಪವೃಕ್ಷನಾದ ಬಸವೇಶ್ವರನು, ಆ ಮಾಚಿದೇವಂ, ನೆಗಳ್ದ- ಮಾಡಿದ, ಘನತರಾಶ್ಚರ್ಯಮಂ, ಬಗೆತಂದು- ಮನಸ್ಸಿಗೆ ತಂದು, ಭಾವಿಸುತ್ತಂ- ಯೋಚಿಸುತ್ತ, ಭಕ್ತಸಂದೋಹದೊಳ್, ಅವನ, ಅಳವಂ- ಶಕ್ತಿಯನ್ನು, ಪೊಗಳುತ್ತಂ, ಬಂದು, ತಾಂ, ಶುದ್ಧಾಂತಮಂ- ಅಂತಃಪುರವನ್ನು, ಪುಗುತ್ತೆ, ಅಂದು, ಓರಂತೆ- ಚೆನ್ನಾಗಿ, ಅಮಿತಚರಶ್ರೇಣಿಗೆ- ಎಣಿಸುವದಕ್ಕಾಗದ ಜಂಗಮರ ಸಮೂಹಕ್ಕೆ, ಒಲ್ದು, ನಾನಾರ್ಥಮಂ- ಅನೇಕ ವಿಧವಾದ ದ್ರವ್ಯವನ್ನು, ಈವುತಂ, ಕೈಮಿಗೆ- ಹೆಚ್ಚಾಗಿ, ಕೂರ್ತು- ಪ್ರೀತಿಸಿ, ಆರಾಧಿಸುತ್ತಂ- ಪೂಜಿಸುತ್ತ, ಮೆರೆದಂ. ॥೩೪॥

ಧರಿತ್ರಿಯೊಳ್- ಭೂಮಿಯಲ್ಲಿ, ಪರಮಗುರುಮಾಚಿದೇವನ, ಚರಿತ್ರಮಂ, ಕೇಳೆ, ಪೇಳೆ, ಬಿತ್ತರಿಸೆ- ವಿಸ್ತಾರಪಡಿಸಿದರೆ, ಸುಜನವಿತತಿಗೆ, ಅಭವನ, ಕೃಪೆಯಿಂ, ಸುಖೋತ್ತರಪರಿಣತಿ- ಅಧಿಕವಾದ ಸೌಖ್ಯಪ್ರಾಪ್ತಿಯು, ದೊರೆಕೊಳ್ಗುಂ. ... ... ... ... ॥೩೫॥

ಕುಂಜರಮಹಾದನುಜಭಂಜನಪದಾಂಬುಜಕೃತಾಂಜಲಿ— ಕುಂಜರಮಹಾದನುಜ- ಗಜಾಸುರನನ್ನು, ಭಂಜನ- ನಾಶಮಾಡಿದ ಪರಶಿವನ, ಪದಾಂಬುಜ- ಪಾದಕಮಲಕ್ಕೋಸ್ಕರ, ಕೃತ- ಮಾಡಲ್ಪಟ್ಟ, ಅಂಜಲಿ-

ಭಕ್ತ ಗಣರಂಜನ ನಿತಾಂತ । ಮಾಂಜುಳಯಶೋಧನ ಧನಂಜಯ ದೃಗರ್ಚಕ ಪತಂಜಲಿ ಮುನಿಸ್ತುತಸಮಂಜಸಗುಣಾಂಕ ॥ ಮಂಜುಳಕಟಾಕ್ಷರುಚಿ ಸಂಜನಿತಲೋಕಗುಣ ಪುಂಜ ಯುತ ಭಕ್ತಪವಿಪಂಜರಸದರ್ಥ । ವ್ಯಂಜಕವಚಸ್ಕಪೊರೆಕಂಜಭವವಂದ್ಯಭವಕಂಜದವ ಪಾವಕನಿರಂಜನವೃಷೇಂದ್ರ ॥ ... ... ... ॥೮೦॥

ಶಿಖರಿಣೀವೃತ್ತಂ ॥ ಮುರಾರಾತಿಬ್ರಹ್ಮಾದ್ಯಮರವರಸಂಸೇವಿತ ಪದೇ । ಸುರಾರಾತಿಧ್ವಂಸೇಸ್ಫುಟಪಟುಕಠೋರಾಯುಧಧರೇ ॥ ವರಾರಾತಿಸ್ವಚ್ಛಸ್ಮಿತಮತಿಹೃದಂಭೋಜನಿಲಯೇ । ಪುರಾರಾತಿಪ್ರೇಮಾಸ್ಪದೆ ನಗತನೂಜೇಜಯಜಯ ॥ ... ॥೮೧॥

ಗದ್ಯಂ ॥ ಇದುವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಮಡಿವಾಳಮಾಚಿದೇವಮಹಿಮಕಥನಂ ದ್ವಾದಶಾಶ್ವಾಸಂ ಪರಿಸಮಾಪ್ತಂ ॥ ... ... ... ... ... *

---

ದ್ವಾದಶಾಶ್ವಾಸಂ ಸಂಪೂರ್ಣಂ.

---

ಕೈಮುಗಿಯುವಿಕೆಯುಳ್ಳ, ಸುಭಕ್ತಗುಣರಂಜನ ಒಳ್ಳೆಯ ಭಕ್ತರನ್ನು ಸಂತೋಷಪಡಿಸುವ, ನಿತಾಂತಮಾಂಜುಳಯಶೋಧನ- ಅತ್ಯಂತವಾಗಿ ಮನೋಹರವಾದ ಕೀರ್ತಿಯೇ ದ್ರವ್ಯವಾಗುಳ್ಳ, ಧನಂಜಯದೃಗರ್ಚಕ— ಧನಂಜಯದೃಕ್- ಅಗ್ನಿಯೇ ನೇತ್ರವಾಗುಳ್ಳ ಈಶ್ವರನನ್ನು, ಅರ್ಚಕ- ಪೂಜಿಸುವ, ಪತಂಜಲಿಮುನಿಸ್ತುತ ಸಮಂಜಸಗುಣಾಂಕ- ಸರ್ವಾಭಿಮತವಾದ ಸದ್ಗುಣಗಳೇ ಲಕ್ಷಣವಾಗುಳ್ಳ, ಮಂಜುಳಕಟಾಕ್ಷರುಚಿಸಂಜನಿತಲೋಕ- ಮನೋಹರವಾದ ಕಡೆಗಣ್ಣೋಟದ ಕಾಂತಿಯಿಂದ ಹುಟ್ಟಿಸಲ್ಪಟ್ಟ ಭುವನವುಳ್ಳ, ಗುಣಪುಂಜಯುತಭಕ್ತಪವಿಪಂಜರ- ಸದ್ಗುಣಸಮೂಹದಿಂಕೂಡಿದ ಭಕ್ತರಿಗೆ ವಜ್ರದ ಪಂಜರನಾದ, ಸದರ್ಥವ್ಯಂಜಕವಚಸ್ಕ- ಒಳ್ಳೆಯ ಅರ್ಥವನ್ನು ಸೂಚಿಸುವ ಮಾತುಳ್ಳ, ಕಂಜಭವವಂದ್ಯ- ಬ್ರಹ್ಮನಿಂದ ನಮಸ್ಕರಿಸಲ್ಪಡುವದಕ್ಕೆ ಯೋಗ್ಯನಾದ, ಭವಕಂಜದವಪಾವಕ- ಪಾಪವೆಂಬ ಕಾಡಿಗೆ ಕಾಳ್ಗಿಚ್ಚಾದ, ನಿರಂಜನ- ಮಾಯಾರಹಿತನಾದ, ವೃಷೇಂದ್ರ! ಪೊರೆ. ... ... ... ... ॥೮೦॥

ಮುರಾ......ಪದೇ— ಮುರಾರಾತಿ- ವಿಷ್ಣು, ಬ್ರಹ್ಮ, ಇವರುಗಳೇ, ಆದಿ- ಮೊದಲಾದ, ಅಮರವರ- ದೇವಶ್ರೇಷ್ಠರಿಂದ, ಸಂಸೇವಿತ- ಚೆನ್ನಾಗಿ ಸೇವಿಸಲ್ಪಟ್ಟ, ಪದೇ- ಚರಣವುಳ್ಳ, ಸುರಾ......ಧರೇ— ಸುರಾರಾತಿ- ರಾಕ್ಷಸರನ್ನು, ಧ್ವಂಸ- ನಾಶಪಡಿಸುವದರಲ್ಲಿ, ಸ್ಫುಟ- ಪ್ರಸಿದ್ಧವಾದ, ಪಟು- ಸಮರ್ಥವಾದ, ಕಠೋರ- ಕಠಿಣವಾದ, ಆಯುಧವನ್ನು, ಧರೇ- ಧರಿಸಿರುವ, ವರಾ......ನಿಲಯೇ— ವರ- ಶ್ರೇಷ್ಠವಾದ, ಅರ- ಆಯುಧಗಳಚಿನೋಪಾದಿಯಲ್ಲಿ, (ಅಥವಾ ಕಮಲದ ದಳದೋಪಾದಿಯಲ್ಲಿ) ಸ್ವಚ್ಛ- ಒಳ್ಳೆಯ ನಿರ್ಮಲವಾದ, ಸ್ಮಿತಮತಿ-ವಿಕಸನಶೀಲವಾದ ಬುದ್ಧಿಯುಳ್ಳವರ, ಹೃದಂಭೋಜ-ಹೃದಯವೆಂಬ ಕಮಲವೇ, ನಿಲಯ- ಮನೆಯಾಗುಳ್ಳ, ಪುರಾರಾತಿಪ್ರೇಮಾಸ್ಪದೆ— ಪುರಾರಾತಿ- ಈಶ್ವರನ, ಪ್ರೇಮ- ಅನುರಾಗಕ್ಕೆ, ಆಸ್ಪದೆ- ಆಶ್ರಯಳಾದ, ನಗತನೂಜೇ-ಪರ್ವತಪುತ್ರಿಯೇ! ಜಯಜಯ. ... ... ॥೮೧॥

---

ಹನ್ನೆರಡನೆಯ ಆಶ್ವಾಸವು ಸಂಪೂರ್ಣವು.

---

## ಶ್ರೀಃ.

### ದಕ್ಷಮುಖವಿಧ್ವಂಸಿನೇ ಪರಬ್ರಹ್ಮಣೇ ನಮಃ.

# ತ್ರಯೋದಶಾಶ್ವಾಸಂ.

### ಮಾಚಿದೇವ ಬಸವೇಶ್ವರ ಸಂವಾದಕಥನಂ.

ಕಂ ॥ ಶ್ರೀಮದಗರಾಜತನುಜಾ । ವಾಮಾಂಗಂ ವಾಮದೇವನುತನ ತನುಹರಂ ॥
ಭೀಮನಭಿರಾಮಸೋಮಕ । ಲಾಮಮಕುಟಂ ಮಾಳ್ಕೆ ಸೌಖ್ಯಮಂ ಶಿವಲಿಂಗಂ ॥ ॥೧॥

ಮತ್ತೇ ॥ ಗುರುರೂಪಂ ಕರುಣಾಬ್ಧಿಮಾಚವಿಭು ವಿಂತೊಪ್ಪುತ್ತಮಿರ್ದೊಂದು
ವಾ । ಸರದೊಳ್ ಭಕ್ತನದೋರ್ವನೋದೆ ಬಸವಾಗಾರಾಗತಂ ಬೇಡುವೀ ॥ ಶ್ವರಭಕ್ತವ್ರ
ಜ ವಿಲ್ಲದಿಂತು ಬಡವಾದಂ ಮಾಣದಾನೆಂಬ ನಿ । ಷ್ಠುರತದ್ಗೀತವನಾಲಿಸುತ್ತ ಮುಳಿ
ಸಂ ತಾಳ್ದಾತ್ಮಕರ್ಣಂಗಳಂ ॥ ... ... ... ॥೨॥

ಕಂ ॥ ಕರತಳದಿ ನೊತ್ತಿಕೊಳುತಂ । ಹರಹರ ದುರ್ವ್ವಚನ ಮಿದ ನದೇಂ ಕೇಳ್ವ
ರೆ ಶಂ ॥ ಕರಶರಣ ರೆಮ್ಮ ಮುಂದಿವ । ನೊರೆಯದಿರೆಂದೈದೆ ಜಡಿದು ಮುಗುಳ್ದಿಂತೆಂದಂ ॥

ಕಂ ॥ ಏನೆಂಬೆ ನಿದಂ ಶರಣ ರ್ದೀನರ್ಗಡ ಬೇಳ್ಪ ವಸ್ತುವಂ ಕುಡುವ ಮಹಾ ।
ದಾನಿಗಡ ಬಸವನೆಮಮ ಮ । ಹೀನುತಸದ್ಭಕ್ತಿಭಾವ ಮಿಂತಿರವೇಡ ॥ ... ॥೪॥

---

ಶ್ರೀಮದಗರಾಜತನುಜಾವಾಮಾಂಗಂ--- ಶ್ರೀಮತ್- ಸಂಪದ್ಯುಕ್ತಳಾದ, ಅಗರಾಜತನುಜಾ- ಪರ್ವತರಾಜಪುತ್ರಿಯೇ, ವಾಮಾಂಗಂ- ಎಡಮೈಯ್ಯಲ್ಲುಳ್ಳ, ವಾಮದೇವನುತಂ—ವಾಮ- ಮನೋಹರವಾದ, ದೇವ- ದೇವತೆಗಳಿಂದ, ನುತಂ- ಕೊಂಡಾಡಲ್ಪಟ್ಟ, ಅತನುಹರಂ- ಮನ್ಮಥನನ್ನು ನಾಶಮಾಡಿದ, ಭೀಮಂ- ಭಯಂಕರನಾದ, ಅಭಿರಾಮಸೋಮಕಲಾಮಕುಟಂ--- ಅಭಿರಾಮ- ಮನೋಹರವಾದ, ಸೋಮಕಲಾ- ಚಂದ್ರಕಿರಣವೇ, ಮಕುಟಂ- ಕಿರೀಟದಲ್ಲುಳ್ಳ, ಶಿವಲಿಂಗಂ, ಸೌಖ್ಯಮಂ, ಮಾಳ್ಕೆ. ... ॥೧॥

ಗುರುರೂಪಂ, ಕರುಣಾಬ್ಧಿ- ದಯಾರಸಕ್ಕೆ ಸಮುದ್ರನಾದ, ಮಾಚವಿಭು, ಇಂತು, ಒಪ್ಪುತ್ತಂ, ಇರ್ದು, ಒಂದುವಾಸರದೊಳ್- ಒಂದು ದಿನದಲ್ಲಿ, ಬಸವಾಗಾರಾಗತಂ- ಬಸವೇಶ್ವರನ ಮನೆಯಿಂದ ಬಂದ, ಅದೋರ್ವಂ ಭಕ್ತಂ, ಓದೆ, ಬೇಡುವ, ಈಶ್ವರಭಕ್ತವ್ರಜಂ, ಇಲ್ಲದೆ, ಮಾಣದೆ- ಬಿಡದೆ, ಆಂ, ಇಂತು, ಬಡವಾದೆಂ, ಎಂಬ ನಿಷ್ಠುರತದ್ಗೀತವಂ- ಕಠಿಣವಾದ ಆಗಾನವನ್ನು, ಆಲಿಸುತ್ತ, ಮುಳಿಸಂ- ಕೋಪವನ್ನು, ತಾಳ್ದು, ಆತ್ಮಕರ್ಣಂಗಳಂ- ತನ್ನ ಕಿವಿಗಳನ್ನು. ... ... ... ॥೨॥

ಕರತಳದಿಂ, ಒತ್ತಿಕೊಳುತಂ- ಅದುಮಿಕೊಳ್ಳುತ್ತ, ಹರಹರ! ಇದಂ ದುರ್ವ್ವಚನಮಂ, ಶಂಕರಶರಣರ್, ಕೇಳ್ವರೆ? ಎಮ್ಮ, ಮುಂದೆ, ಇದಂ, ಒರೆಯದೆ- ಹೇಳದೆ, ಇರ್, ಎಂದು, ಐದೆ-ಚೆನ್ನಾಗಿ, ಜಡಿದು- ಗದರಿಸಿ, ಮುಗುಳ್ದು- ಮತ್ತೆ, ಇಂತು, ಎಂದಂ. ... ... ... ... ॥೩॥

ಇದಂ, ಏನೆಂಬೆಂ; ಶರಣರ್, ದೀನರ್ಗಡ- ಬಡವರಂತೆ! ಬಸವಂ, ಬೇಳ್ಪವಸ್ತುವಂ- ಬೇಡುವ ಪದಾರ್ಥವನ್ನು, ಕುಡುವ, ಮಹಾದಾನಿಗಡ- ಅತ್ಯಂತ ದಾನಗುಣವುಳ್ಳವನಂತೆ! ಅಮಮ! ಮಹೀನುತಸದ್ಭಕ್ತಿಭಾವಂ- ಭೂಲೋಕಶ್ಲಾಘ್ಯವಾದ ಒಳ್ಳೆಯ ಭಕ್ತಿಸ್ಥಿತಿಯು, ಇಂತು, ಇರವೇಡ. ... ॥೪॥

ಕಂ॥ ಮರೆವನೆ ತನ್ನಯ ಭಾಷೆಯ । ತೆರನಂ ಕಡುಚಾಗಿ ಯೆಂಬ ಬಿಂಕಂ ಮನದೊಳ್॥
ಗರಿಗಟ್ಟುತೆ ಭಕ್ತಿರಸಂ । ಬರೆತುದೆ ಬಸವಂ ವಿವೇಕಮಂ ನೀಗಿದನೆ ॥ ... ॥೫॥

ಕಂ ॥ ಆತನ ಗೀತಮನಾತನ ॥ ಮಾತಂ ಸಲೆಮಾಣ್ಬುದೆಮ್ಮೊಳೆಂದು ಸಿರ್ದು ಕರಂ ॥
ಖಾತಿ ಮಿಗೆ ತಳರ್ದನಾವಿ ॥ ಖ್ಯಾತಂ ನಿಜಕಾಯಕಕ್ಕೆ ಮಾಚಯದೇವಂ ॥ ... ॥೬॥

ಮ॥ ಸ್ರ॥ ಬಸವೇಶಂ ಮಾಚಿದೇವಂ ಮುಳಿದ ಬಗೆಯ ನಾಕರ್ಣಿಸುತ್ತಂ ಮಹಾಸಾ।
ಧ್ವಸದಿಂ ಮುಂಗೆಟ್ಟು ಚಿತ್ತಂ ಕದಡೆ ನಡುಗಿ ತನ್ಮಾರ್ಗಮಂ ಪತ್ತಿಸದ್ಭ ॥ ಕ್ತಸಹಾಯಂ
ನಿಂದು ನಿಂದೊಲ್ದಡಿಗಡಿಗಿಳೆಯೊಳ್ಕುಂಬಿಡುತ್ತೆಯ್ದಿ ತತ್ಪಾ । ದಸರೋಜಂ ಗಂಡು
ತಾಂ ಸೈಗೆಡೆದು ಪೊಗಳ್ದು ಕಾರ್ಪಣ್ಯಮಂ ಬೀರುತಾಗಳ್ ॥ .. ... ॥೭॥

ಮ॥ ಸ್ರ॥ ಕೃತಪಾಪಂ ದುಷ್ಪ್ರಲಾಪಂ ಕುಟಿಲಮತಿಯುತಂ ಕ್ರೂರನತ್ಯಂತಘೋ
ರಂ । ವ್ರತಶೂನ್ಯಂ ವ್ರಾತ್ಯಮಾನ್ಯಂ ವಿಕೃತಿಶತಸಮಾಶ್ಲಿಷ್ಟ ನೀಹಾಹಿದಷ್ಟಂ ॥ ಧೃತಿ
ದೂರಂ ಧೂರ್ತಸಾರಂ ಸಮದಕುಮತಿಮೃಗ್ಯಂ ಸದಾಮಂದಭಾಗ್ಯಂ ತತಮೋಹಂ ತಾ
ಮಸಾಹಂಕೃತಿಯುತ ನೆನಿಪೆನ್ನಿಂ ಪೆರಂ ದುಷ್ಟನಾವಂ ॥ ... ... ॥೮॥

---

ಬಸವಂ, ತನ್ನಯ, ಭಾಷೆಯ, ತೆರನಂ- ರೀತಿಯನ್ನು, ಮರೆದನೆ ? . ಕಡುಚಾಗಿ- ಅತ್ಯಂತ ದಾನವಂ ಮಾಡುವವನು, ಎಂಬ, ಬಿಂಕಂ- ಗರ್ವವು, ಮನದೊಳ್, ಗರಿಕಟ್ಟಿತೆ- ವೃದ್ಧಿಯನ್ನೈದಿತೇ ? ಭಕ್ತಿರಸಂ, ಬರೆತುದೆ- ಬಣಗಿತೇ ? ವಿವೇಕಮಂ- ತಿಳುವಳಿಕೆಯನ್ನು, ನೀಗಿದನೆ- ಬಿಟ್ಟನೇ ? ... ॥೫॥

ಆತನ, ಗೀತಮಂ, ಆತನ, ಮಾತಂ, ಸಲೆ- ಚೆನ್ನಾಗಿ, ಎಮ್ಮೊಳ್, ಮಾಣ್ಬುದು- ಬಿಡತಕ್ಕದ್ದು; ಎಂದು, ಉಸಿರ್ದು- ಹೇಳಿ, ಕರಂ- ಅತ್ಯಂತವಾಗಿ, ಕೋಪವು, ಮಿಗೆ, ಆವಿಖ್ಯಾತಂ, ಮಾಚಯದೇವಂ, ನಿಜಕಾಯಕಕ್ಕೆ, ತನ್ನ ಕೆಲಸಕ್ಕೆ, ತಳರ್ದಂ- ಹೊರಟನು. ... ... ... ॥೬॥

ಮಾಚದೇವನು, ಮುಳಿದ, ಬಗೆಯಂ-ರೀತಿಯನ್ನು, ಸದ್ಭಕ್ತಸಹಾಯಂ, ಬಸವೇಶಂ,ಆಕರ್ಣಿಸುತ್ತಂ, ಮಹಾಸಾಧ್ವಸದಿಂ-ಅತ್ಯಂತ ಭಯದಿಂದ, ಮುಂಗೆಟ್ಟು-ಮುಂದಕ್ಕೆ ಬುದ್ಧಿಯು,ಪ್ರಸರಿಸದೆ, ಚಿತ್ತಂ,ಕದಡೆ-ಕಲ್ಮಷವಿಶಿಷ್ಟನಾಗಲು, ನಡುಗಿ, ತನ್ಮಾರ್ಗಮಂ-ಆಮಾಚಿದೇವನು ಹೋಗುವ ಮಾರ್ಗವನ್ನು,ಪತ್ತಿ-ಅನುಸರಿಸಿ, ನಿಂದು, ನಿಂದು, ಒಲ್ದು- ಪ್ರೀತಿಸಿ, ಅಡಿಗಡಿಗೆ-ಹೆಜ್ಜೆಹೆಜ್ಜೆಗೆ, ಇಳೆಯೊಳ್, ಕುಂಬಿಡುತ್ತೆ-ನಮಸ್ಕರಿಸುತ್ತ, ಎಯ್ದಿ- ಹೋಗಿ, ತತ್ಪಾದಸರೋಜಂಗಂಡು– ಆ ಮಾಚಿದೇವನ ಪಾದಕಮಲವಂನೋಡಿ, ತಾಂ, ಸೈಗೆಡೆದು- ಅಡ್ಡಬಿದ್ದು, ಪೊಗಳ್ದು, ಆಗಳ್, ಕಾರ್ಪಣ್ಯಮಂ- ದೈನ್ಯವನ್ನು, ಬೀರುತೆ- ಪ್ರಸರಿಸುತ್ತ.

ಕೃತಪಾಪಂ- ಮಾಡಲ್ಪಟ್ಟ ಪಾಪವುಳ್ಳವನು, ದುಷ್ಪ್ರಲಾಪಂ- ವ್ಯರ್ಥವಾದ ಕೆಟ್ಟಮಾತುಳ್ಳವನು, ಕುಟಿಲಮತಿಯುತಂ- ವಕ್ರವಾದ ಬುದ್ಧಿಯಿಂ ಕೂಡಿದವನು, ಕ್ರೂರನು, ಅತ್ಯಂತಘೋರಂ- ಬಲುಗಳ್ಳನಾದವನು, ವ್ರತಶೂನ್ಯಂ- ನಿಯಮವಿಲ್ಲದವನು, ವ್ರಾತ್ಯಮಾನ್ಯಂ- ಸಂಸ್ಕಾರವಿಲ್ಲದವರಿಂದ, ಸನ್ಮಾನಿಸಲ್ಪಡುವದಕ್ಕೆ ಯೋಗ್ಯನಾದವನು, ವಿಕೃತಿಶತಸಮಾಶ್ಲಿಷ್ಟಂ- ಅನೇಕ ವಿಕಾರಗಳಿಂದಾಶ್ರಯಸಲ್ಪಟ್ಟವನು, ಈಹಾಹಿದಷ್ಟಂ- ಆಸೆಯೆಂಬ ಸರ್ಪದಿಂದ ಕಚ್ಚಲ್ಪಟ್ಟವನು, ಧೃತಿದೂರಂ- ಧೈರ್ಯಕ್ಕೆ ದೂರನಾದವನು, ಧೂರ್ತಸಾರಂ- ವಂಚಕರಲ್ಲಿ ಶ್ರೇಷ್ಠನಾದವನು, ಸಮದಕುಮತಿಮೃಗ್ಯಂ-ಗರ್ವದಿಂ ಕೂಡಿದ ಕೆಟ್ಟಬುದ್ಧಿಯುಳ್ಳವರಿಂದ ಹುಡುಕಲ್ಪಡುವದಕ್ಕೆ ಯೋಗ್ಯನಾದವನು, ಸದಾಮಂದಭಾಗ್ಯಂ- ಯಾವಾಗಲೂ ಅಲ್ಪೈಶ್ವರ್ಯವುಳ್ಳವನು, ತತಮೋಹಂ- ವಿಸ್ತಾರವಾದ ಅಜ್ಞಾನವುಳ್ಳವನು, ತಾಮಸಾಹಂಕೃತಿಯುತಂ- ತಮಸ್ಸಂಬಂಧವಾದ ಅಹಂಕಾರದಿಂದ ಕೂಡಿದವನು, ಎನಿಪ, ಎನ್ನಿಂ- ನನಗಿಂತಲೂ, ಪೆರಂ-ಮತ್ತೊಬ್ಬ, ದುಷ್ಟಂ, ಆವಂ ?

ಮತ್ತೇ ॥ ಅರಿಷಡ್ವರ್ಗದದೂಸರಿಂ ಕೊರಗಿದೆಂ ತಾಪಾಗ್ನಿಯಿಂ ಕಂದಿದೆಂ । ಕರಂ ಮಾಶಾಗ್ರಹದಿಂದೆ ಕಟ್ಟುವಡೆದೆಂ ಕ್ಲೇಶೌಘದಿಂ ಕುಂದಿದೆಂ ॥ ಪರಿಣದ್ಧೋರ್ಮಿಪಯೋಧಿಯೊಳ್ಮುಳುಗಿದೆಂ ಕೂರ್ತೆನ್ನ ನಿನ್ನಾದೊಡಂ । ಕರುಣಾಸಾಗರ ನೋಡಿರಕ್ಷಿಪುದಘಧ್ವಾಂತಪ್ರಭಾವಲ್ಲಭ ॥ ... ... ... ... ... ... ॥೯॥

ಕಂ॥ಕೊಳ್ಳಿಯೊಳೆ ತಂಪ ನಗ್ಗದ । ಮುಳ್ಳೊಳ್ಮಾರ್ದವಮ ನೆಳವದೊಳ್ನವಫಲಮಂ ॥ ಪೊಳ್ಳೊಳ್ಪುರುಳಂ ನೋಳ್ಪವೊ । ಲೊಳ್ಳಿತ್ತಂ ಮಾಣದೆನ್ನೊಳರಸಿದೊಡುಂಟೆ ॥೧೦॥

ಕಂ ॥ ಅರಿಯದೆ ನೆಗಳ್ದೀತಪ್ಪಂ । ಮರೆವುದು ರಕ್ಷಿಪ್ಪುದೆನ್ನನೆಂದಂಘ್ರಿಯುಗ ॥ ಕ್ಕೆರಗಿದ ಬಸವನ ನೀಕ್ಷಿಸಿ । ಬಿರುವಾತಿಂ ಜರೆದು ಮಾಚಿದೇವಂನುಡಿದಂ ॥ ... ॥೧೧॥

ಮತ್ತೇ॥ ಎಲೆ ದುರ್ದಾಂತ ಮದಾಂಧ ಕೊರ್ಬಿದೆಗಡಾ ಸದ ಕ್ತರೇಂ ದೀನರೇ । ನೆಲದೊಳ್ನೀನೆ ಧನಾಢ್ಯನೇ ಬಡತನಕ್ಕೆಂಬಾಡೆಯೆಂತೆಂತು ಬೇ ॥ ಳ್ಪಲಸದ ಕ್ತನಿತಾನ ಮಿಲ್ಲದೆ ವಲಂ ನೀನರ್ಥಮಂ ಜಂಗಮಾ । ವಳಿಗೊಲ್ದೀಯದೊ ಡೀವರಾರಮಮ ನಣ್ಪಿಂದಂ ವದಾನ್ಯೋತ್ತಮರ್ ॥ ... ... ... ... ... ॥೧೨॥

ಕಂ ॥ ಕೊಡುವಾತಂ ಕಲಿದೇವ ನರ್ಥತತಿಯಂ ಕೊಂಬಾತನುಂ ತಾನೆ ಬೇ ।

---

ಅರಿಷಡ್ವರ್ಗದ- ಕಾಮ, ಕ್ರೋಧ, ಲೋಭ, ಮೋಹ, ಮದ, ಮತ್ಸರವೆಂಬ ಷಡ್ವರ್ಗಗಳ, ದೂಸರಿಂ- ವ್ಯಥೆಯಿಂದ, ಕೊರಗಿದೆಂ; ತಾಪಾಗ್ನಿಯಿಂ- ಆಧ್ಯಾತ್ಮಿಕ ಆಧಿಭೌತಿಕ ಆಧಿದೈವಿಕ ತಾಪತ್ರಯಗಳೆಂಬ ಬೆಂಕಿಯಿಂದ, ಕಂದಿದೆಂ- ಕಾಂತಿಹೀನನಾದೆನು; ಕರಂ, ಆಶಾಗ್ರಹದಿಂ- ಆಸೆಯೆಂಬ ದೆವ್ವದಿಂದ, ಕಟ್ಟುವಡೆದೆಂ- ಹಿಡಿಯಲ್ಪಟ್ಟೆನು,ಕ್ಲೇಶೌಘದಿಂ-ಅವಿದ್ಯಾ ಅಸ್ಮಿತ ರಾಗ ದ್ವೇಷ ಅಭಿನಿವೇಶವೆಂಬ ಕ್ಲೇಶಗಳ ಸಮೂಹದಿಂದ, ಕುಂದಿದೆಂ- ಕೃಶಹೀನನಾದೆನು; ಪರಿಣದ್ಧೋರ್ಮಿಪಯೋಧಿಯೊಳ್- ವಿಶಾಲವಾದ ಕ್ಷುತ್ ಪಿಪಾಸೆ ಶೋಕ ಮೋಹ ಜನನ ಮರಣವೆಂಬ ಷಡೂರ್ಮಿಗಳೆಂಬ ಸಮುದ್ರದಲ್ಲಿ,ಮುಳುಗಿದೆಂ, ಕರುಣಾಸಾಗರ! ಅಘಧ್ವಾಂತಪ್ರಭಾವಲ್ಲಭ- ಪಾಪವೆಂಬ ಕತ್ತಲೆಗೆ ಸೂರ್ಯನಾದ ಮಾಚಿದೇವನೇ! ಇನ್ನಾದೊಡಂ, ಕೂರ್ತು- ಪ್ರೀತಿಸಿ, ಎನ್ನಂ, ರಕ್ಷಿಪುದು. ... ... ... ... ... ॥೯॥

ಕೊಳ್ಳಿಯೊಳೆ- ಉರಿಯುವ ಕೊಳ್ಳಿಯಲ್ಲಿ, ತಂಪಂ, ಅಗ್ಗದ- ದೊಡ್ಡದಾದ ಮುಳ್ಳೊಳ್, ಮಾರ್ದವಮಂ- ಮೃದುತ್ವವನ್ನು, ಎಳವದೊಳ್- ಎಳವದ ಕಾಯಿಯಲ್ಲಿ, (ದೂದಿಕಾಯಿ) ನವಫಲಮಂ- ನೂತನವಾದ ಹಣ್ಣನ್ನು, ಪೊಳ್ಳೊಳ್, ಪುರುಳಂ-ಸ್ಥಿರಾಂಶವನ್ನು, ನೋಳ್ಪವೊಲ್,ಮಾಣದೆ, ಎನ್ನೊಳ್, ಒಳ್ಳಿತ್ತಂ-ಸಮೀಚೀನತ್ವವನ್ನು, ಅರಸಿದೊಡೆ- ಅಪೇಕ್ಷಿಸಿದರೆ, ಉಂಟೆ ? ... ... ॥೧೦॥

ಅರಿಯದೆ, ನೆಗಳ್ದ, ಈತಪ್ಪಂ, ಮರೆವುದು; ಎನ್ನಂ, ರಕ್ಷಿಪ್ಪುದು, ಎಂದು, ಅಂಘ್ರಿಯುಗಕ್ಕೆ, ಎರಗಿದ, ಬಸವನಂ, ಮಾಚಿದೇವಂ, ಈಕ್ಷಿಸಿ, ಬಿರುವಾತಿಂ-ಕಠಿಣವಾದ ಮಾತಿನಿಂದ, ಜರೆದು-ಹೀಯಾಳಿಸಿ,ನುಡಿದಂ.

ಎಲೆದುರ್ದಾಂತ- ದುಷ್ಟವಾದ ಇಂದ್ರಿಯನಿಗ್ರಹವುಳ್ಳನೇ! ಮದಾಂಧ- ಗರ್ವದಿಂ ಕುರುಡನಾದವನೇ! ಕೊರ್ಬಿದೆಗಡಾ- ಕೊಬ್ಬಿದೆಯಲ್ಲವೇ ? ಸದ್ಭಕ್ತರ್, ದೀನರೇಂ- ಬಡವರೇ ? ನೆಲದೊಳ್, ನೀನೆ, ಧನಾಢ್ಯನೇ ? ಬೇಳ್ಪ, ಲಸದ್ಭಕ್ತನಿತಾನಂ- ಪ್ರಕಾಶಿಸುವ ಭಕ್ತಸಮೂಹವು, ಇಲ್ಲದೆ, ಎಂತೆಂತು- ಹ್ಯಾಗೆ ಹ್ಯಾಗೆ, ಬಡವಾದೆ ? ವಲಂ- ನಿಶ್ಚಯ; ವದಾನ್ಯೋತ್ತಮರ್- ದಾನಿಗಳಲ್ಲಿ ಶ್ರೇಷ್ಠನೇ! ನೀಂ, ಜಂಗಮಾಳಿಗೆ, ಒಲ್ದು, ಅರ್ಥಮಂ-ದ್ರವ್ಯವನ್ನು, ಈಯದೊಡೆ, ನಣ್ಪಿಂದಂ-ನಯದಿಂದ, ಈವರ್, ಆರ್ ? ಅಮಮ! ॥೧೨॥

ಅರ್ಥತತಿಯಂ, ಕೊಡುವಾತಂ, ಕಲಿದೇವಂ- ಸಮರ್ಥನಾದ ಪರಮೇಶ್ವರನು; ಕೊಂಬಾತನುಂ- ತೆಗೆದುಕೊಳ್ಳುವನು, ತಾನೆ; ಬೇಳ್ಪ- ಬೇಡುವ, ಒಡೆಯರ್ಗೆ- ಸ್ವಾಮಿಗಳಿಗೆ, ಆಂ, ನಿಜದಿಂ, ಇರದೆ- ಬಿಡದೆ, ಈ

ಳೊಪ್ಪಿಡೆಯು ರ್ಕ್ಕಿನಿರವೇವ ನಲ್ತು ನಿಜಡಿಂಡೆಂಬೊಂದುಸದ್ಭಾವವಾ ॥ ನೃಡಭಕ್ತಂಗಿರವೇ
ಳ್ಕುಮಲ್ಲದೊಡಹಂಕಾರಾನ್ವಿತಂ ಭಕ್ತಿ ನೋೞ | ಳೊಪ್ಪಿಡೆ ತಾಂ ರಾಜಸ ಮೀಶನೊಲ್ಮೆಗಿದು
ದೂರಂ ಶುದ್ಧಮಂತಪ್ಪುದಯ್ ॥ ... ... ... ... ॥೧೩॥

ಮ॥ ಸ್ರ। ಸುರರತ್ನಂ ತಾನೆ ಕಾಲ್ಗರ್ಚ್ಚುವ ಶಿಲೆ ಸುರಧೇನುವ್ರಜಂ ಗೋಕುಲಂ ತ |
ತ್ಸುರಭೂಜಶ್ರೇಣಿ ಪಿತ್ತಿಲ್ಬನ ಮುರುಕನಕಕ್ಷ್ಮಾಧರಂ ಕೇಳಿಶೈಲಂ ॥ ಸುರಪಂಭೃತ್ಯಂಧ
ನೇಶಂ ನವನಿಧಿವಿಲಸತ್ಕೋಶಮಂ ಕಾವ ನಪ್ಪಂ | ತಿರೆ ಮಾಳ್ಪರ್ತಮ್ಮ ನೆಂದುಂ ಭಜಿಪ
ಸುಜನಸಂತಾನಕೊಲ್ದೀಶಭಕ್ತರ್ ॥ ... ... ... .. ॥೧೪॥

ಕಂ ॥ ಶಿವಗಣಕೆ ನೀಂಕುಡುವ ದಂ | ತಿವಾಜಿವಸುವಸನವಿಸರವನಿತಾಮಣಿಗಳ್ ॥
ವಿವರಿಪೊಡೇವಾಳ್ತೆ ಸರಿ | ದ್ಧವಂಗೆ ಮುಗಿಲೀವ ಪನಿಗಳಂತಿರೆ ಧರೆಯೊಳ್ ॥ ॥೧೫॥

ಕಂ ॥ನಡೆನೋಡು ಬಸವ ಶರಣರ | ಬಡತನಮಂ ತೋರ್ಪೆ ನೀಂಗಳೆಂದಾಕ್ಷಣದೊಳ್॥
ಮಡಿವಳ್ಳನಾಚಯಂ ತ | ನ್ನಡಿದಾವರೆಯಿಂದೆ ನೀರ್ಗಳಂಕೆದರಲೊಡಂ ॥ ... ॥೧೬॥

ಕಂ ॥ನವಜಲಕಣಗಣಮದುಮಣಿ | ಪವಳಂ ಪೊಸಮುತ್ತು ಪುಷ್ಯರಾಗಂ ವಜ್ರಂ॥

---

ವಂ, ಅಲ್ತು; ಎಂಬ, ಒಂದುಸದ್ಭಾವಂ, ಅನೃಡಭಕ್ತಂಗೆ, ಇರವೇಳ್ಕುಂ- ಇರಬೇಕು, ಅಲ್ಲದೊಡೆ, ಭಕ್ತಿ, ಅಹಂಕಾರಾನ್ವಿತಂ; ನೋೞ್ಪೊಡೆ- ವಿಚಾರಿಸಿದರೆ, ತಾಂ-ಆ ಭಕ್ತಿಯು, ರಾಜಸಂ- ರಜೋಗುಣಸಂಬಂಧವಾದದ್ದು; ಇದು, ಈಶನ- ಒಲ್ಮೆಗೆ- ಪ್ರೀತಿಗೆ, ದೂರಂ; ಎಂತು, ಶುದ್ಧಂ, ಅಪ್ಪುದಯ್. ... ॥೧೩॥

ಈಶಭಕ್ತರ್. ತಮ್ಮಂ, ಎಂದುಂ, ಭಜಿಪಸುಜನಸಂತಾನಕೆ- ಸೇವಿಸುವ ಸತ್ಪುರುಷರ ಸಮೂಹಕ್ಕೆ, ಒಲ್ದು, ಸುರರತ್ನಂ- ಚಿಂತಾರತ್ನವು, ತಾನೆ, ಕಾಲ್ಗರ್ಚ್ಚುವ- ಕಾಲನ್ನು ತೊಳೆದುಕೊಳ್ಳುವದಕ್ಕೆ ಹಾಕಿರುವ ಶಿಲೆ- ಕಲ್ಲು; ಸುರಧೇನುವ್ರಜಂ- ಕಾಮಧೇನುಗಳ ಸಮೂಹವು, ಗೋಕುಲಂ-ಹಸುಗಳ ಸಮೂಹವು, ತತ್ಸುರಭೂಜಶ್ರೇಣಿ- ಆ ಕಲ್ಪವೃಕ್ಷಗಳ ಪಙ್ಕ್ತಿಯು, ಪಿತ್ತಿಲ್ಬನಂ-ಹಿತ್ತಲಿನ ವನವು, ಉರುಕನಕಕ್ಷ್ಮಾಧರಂ-ದೊಡ್ಡ ಮೇರುಪರ್ವತವು, ಕೇಳಿಶೈಲಂ- ಕ್ರೀಡಾಪರ್ವತವು, ಸುರಪಂ- ದೇವೇಂದ್ರನು, ಭೃತ್ಯಂ- ಆಳು; ಧನೇಶಂ- ಕುಬೇರನು, ನವನಿಧಿವಿಲಸತ್ಕೋಶಮಂ- ಮಹಾಪದ್ಮ, ಪದ್ಮ, ಶಂಖ, ಮಕರ, ಕಚ್ಛಪ, ಮುಕುಂದ, ಕುಂದ, ನೀಲ, ವರ ಎಂಬ ನವನಿಧಿಗಳಿಂದ ಪ್ರಕಾಶಿಸುವ ಬೊಕ್ಕಸವನ್ನು, ಕಾವಂ- ಪಾಲಿಸುವವನು, ಅಪ್ಪಂತಿರೆ- ಆಗುವಹಾಗೆ, ಮಾಳ್ಪರ್. ... ... ... ... ॥೧೪॥

ಧರೆಯೊಳ್, ಮುಗಿಲ್- ಮೋಡವು, * ಸರಿದ್ಧವಂಗೆ- ಸಮುದ್ರನಿಗೆ, ಈವ- ಕೊಡುವ, ಪನಿಗಳಂತಿರೆ- ನೀರಿನ ಹನಿಗಳ ಹಾಗೆ, ಶಿವಗಣಕೆ, ನೀಂ, ಕುಡುವ, ದಂತಿ.....ಮಣಿಗಳ್— ದಂತಿ- ಆನೆ, ವಾಜಿ- ಕುದುರೆ, ವಸು- ದ್ರವ್ಯ, ವಸನವಿಸರ- ವಸ್ತ್ರಸಮೂಹ, ವನಿತಾ- ಸ್ತ್ರೀಯರು, ಮಣಿಗಳ್- ರತ್ನಗಳು, (ಅಥವಾ ವನಿತಾಮಣಿಗಳ್- ಶ್ರೇಷ್ಠರಾದ ಸ್ತ್ರೀಯರು) ವಿವರಿಪೊಡೆ, ಏವಾಳ್ತೆ-ಏನುಸುದ್ದಿ ? ॥೧೫॥

ಬಸವ! ಶರಣರ, ಬಡತನಮಂ, ಈಗಳ್, ತೋರ್ಪೆಂ, ನಡೆ- ಚೆನ್ನಾಗಿ, ನೋಡು; ಎಂದು, ಆಕ್ಷಣದೊಳ್, ಮಡಿವಳ್ಳನಾಚಯಂ, ತನ್ನ, ಅಡಿದಾವರೆಯಿಂದೆ- ಕಮಲದಂತಿಪ್ಪ ಪಾದದಿಂದ, ನೀರ್ಗಳಂ, ಕೆದರಲ್- ಚಿಮ್ಮಲು, ಒಡಂ-ಕೊಡಲೇ. ... ... ... ... ॥೧೬

ಅದುನವಜಲಕಣಗಣಂ- ಆ ನೂತನವಾದ ನೀರಿನ ಹನಿಗಳ ಸಮೂಹವು, ಮಣಿ- ಕೆಂಪು, ಪವಳಂ, ಪೊಸಮುತ್ತು, ಪುಷ್ಯರಾಗಂ, ವಜ್ರಂ, ಪವಿಧರಮಣಿ- ಇಂದ್ರನೀಲರತ್ನ, ವೈಡೂರ್ಯಂ, ತವೆ, ಗೋಮೇಧಿ

---

* (ಅವ) ಸರಿತ್- ಹೊಳೆಗಳಿಗೆ, ಧವ- ಪತಿ. ... ... ... ॥೧೭॥

ಪವಿಧರಮಣಿ ವೈಡೂರ್ಯಂ ತವೆಗೋಮೇಧಿಕ ಮುದಾರಮರಕತರತ್ನಂ ॥ ... ॥೧೩॥

ವ॥ ಎನಿಪ್ಪ ಮಣಿಗಣದ ರಾಶಿಯಾಗಿ ನಿಜರುಚಿಯಿಂ ತರಣಿಕಿರಣಮನಧಿಕರಿಸಿ ಥಳಥಳಿಸಿ ಪೊಳೆಯೆ ಮತ್ತಮಾಗಳ್॥ * * * * * * * * * * *

ಕಂ॥ ಪ್ರಮಥಪ್ರಸಾದಲಬ್ಧಂ । ಸುಮನೋಮಹಿಜಾತ ಜಾತಸುಮನೋವರ್ಷಂ॥ ಸುಮನೋಜ್ಞಮಾಗಿ ಮೇಲಿಳೆ। ಯೆ ಮಹೋತ್ಸವಮಾಂತು ಪೊಗಳೆಭಕ್ತಕದಂಬಂ ॥

ವ॥ ಆಗಳ್ಮಹೀಪತಿ ಮಾಚಿದೇವಮಹಿಮಾಲೋಕನೋತ್ಸುಕಂ ಮಂತ್ರಿಮಂಡಲಿಕರ್ವೆರಸಿ ಬಂದು ನಿರೀಕ್ಷಿಸಿ ವಿಸ್ಮಯಮಾಂತು ಪೊಗಳುತ್ತಿರೆ ತನ್ಮಹಿಮೆಯಂ ನುತಿಸಲೀಶ್ವರಂ ಪಲವರಿಜುವಡೆದೆಳ್ತಂದ ನೆನಿಸಿ ಗಣನಿವಹಂ ನೋಡಿಕೊಂಡಾಡೆ ರಂಜಿಪ ಕಲಿಕಾರಣರುದ್ರನಪ್ಪ ಮಾಚಿರಾಜನ ಪದಸರೋಜಕವನತನಾಗಿ ಸಾತ್ವಿಕಂ ನಿಮಿರೆ ಬಸವಂ ಭಯಭಕ್ತಿವೆರಸಿ ಕೀರ್ತಿಸಿ ॥ * * * * * * * * * * * *

ಚಂ॥ ಪರಸಮಯಾತಿಭೀಮ ಪಟುಸಾಹಸಧಾಮ ಪರಾಸ್ತಕಾಮ ಭಾ । ಸುರಗುಣರತ್ನಹಾರ ಭವಿಮೋಘಸವಿಾರ ಭವಾಪಹಾರ ಶಾಂ ॥ ಕರಮತಸಿಂಧುಚಂದ್ರ ಶಮನಾದ್ರಿಮಹೇಂದ್ರ ಶಿವಾಂಗರುಂದ್ರಸ। ದ್ವರದ ಕೃಪಾಸಮುದ್ರ ವಸುಧಾತಳರುದ್ರ ವಿನಿದ್ರವೈಭವ॥೧೫॥

---

ಕಂ, ಉದಾರಮರಕತರತ್ನಂ— ಉದಾರ- ಉತ್ಕೃಷ್ಟವಾದ, ಮರಕತರತ್ನಂ. ... ॥೧೩॥

ಎನಿಪ್ಪ, ಮಣಿಗಣದ, ರಾಶಿ, ಆಗಿ, ನಿಜರುಚಿಯಿಂ- ತನ್ನ ಕಾಂತಿಯಿಂದ, ತರಣಿಕಿರಣಮಂ, ಅಧಿಕರಿಸಿ- ತಿರಸ್ಕರಿಸಿ, ಥಳಥಳಿಸಿ, ಪೊಳೆಯೆ, ಮತ್ತಂ, ಆಗಳ್. * * * * * * * * *

ಪ್ರಮಥಪ್ರಸಾದಲಬ್ಧಂ-ಪ್ರಮಥರ ಅನುಗ್ರಹದಿಂ ಪಡೆಯಲ್ಪಟ್ಟ,ಸುಮನೋಮಹಿಜಾತಜಾತಸುಮನೋವರ್ಷಂ-ಸುಮನೋಮಹಿಜಾತ-ಕಲ್ಪವೃಕ್ಷಗಳದೆಸೆಯಿಂದ, ಜಾತ-ಉತ್ಪನ್ನವಾದ,ಸುಮನಃ-ಹೂವ್ಗಳ, ವರ್ಷಂ-ಮಳೆಯು,ಸುಮನೋಜ್ಞಂ, ಆಗಿ,ಮೇಲೆ,ಇಳಿಯೆ, ಭಕ್ತಕದಂಬಂ,ಮಹೋತ್ಸವಮಾಂತು,ಪೊಗಳೆ.

ಆಗಳ್, ಮಹೀಪತಿ- ಬಿಜ್ಜಳನು, ಮಾಚಿದೇವಮಹಿಮಾಲೋಕನೋತ್ಸುಕಂ- ಮಾಚಿದೇವನ ಮಹತ್ತ್ವವನ್ನು ನೋಡಬೇಕೆಂಬ ಕುತೂಹಲವುಳ್ಳವನಾಗಿ, ಮಂತ್ರಿಮಂಡಲಿಕರ್ವೆರಸಿ-ಮಂತ್ರಿ, ಸಾಮಾಜಿಕರೊಡನೆ ಕೂಡಿ, ಬಂದು, ನಿರೀಕ್ಷಿಸಿ, ವಿಸ್ಮಯಮಾಂತು- ಆಶ್ಚರ್ಯವಂ ಹೊಂದಿ- ಪೊಗಳುತ್ತ, ಇರೆ, ತನ್ಮಹಿಮೆಯಂ, ನುತಿಸಲ್- ಸ್ತೋತ್ರಮಾಡಲು, ಈಶ್ವರಂ, ಪಲವರಿಜುವಡೆದು- ಅನೇಕಾಕಾರವಂ ಹೊಂದಿ, ಎಳ್ತಂದು, ಎನಿಸಿ, ಗಣನಿವಹಂ, ನೋಡಿ, ಕೊಂಡಾಡೆ; ರಂಜಿಪ, ಕಲಿಕಾರಣರುದ್ರಂ- ಕಲಿಯುಗದಲ್ಲಿ ಕಾರಣರುದ್ರರೂಪನು, ಆದ, ಮಾಚಿರಾಜನ, ಪದಸರೋಜಕೆ, ಅವನತಂ- ಬಗ್ಗಿದವನು, ಆಗಿ, ಸಾತ್ವಿಕಂ, ರೋಮಾಂಚಾದಿಸಾತ್ವಿಕಗುಣವು, ನಿಮಿರೆ- ಉಂಟಾಗಲು, ಬಸವಂ, ಭಯಭಕ್ತಿವೆರಸಿ- ಭಯದಿಂದಲೂ ಭಕ್ತಿಯಿಂದಲೂ ಕೂಡಿ, ಕೀರ್ತಿಸಿ. * * * * * * * * * * * * * * * * *

ಪರಸಮಯಾತಿಭೀಮ- ಅನ್ಯಮತಗಳಿಗೆ ಬಹು ಭಯಂಕರನಾದ, ಪಟುಸಾಹಸಧಾಮ- ಸಮರ್ಥವಾದ ಸಾಹಸಕ್ಕೆ ಸ್ಥಾನನಾದ, ಪರಾಸ್ತಕಾಮ- ನಾಶಪಡಿಸಲ್ಪಟ್ಟ ಮನ್ಮಥನುಳ್ಳ, ಭಾಸುರಗುಣರತ್ನಹಾರ- ಮನೋಹರವಾದ ಗುಣಗಳೇ ರತ್ನಾಭರಣವಾಗುಳ್ಳ, ಭವಿಮೋಘಸಮೀರ- ಲಿಂಗಹೀನರೆಂಬ ಮೋಡಕ್ಕೆ ವಾಯುವಾದ, ಭವಾಪಹಾರ- ಭವವನ್ನು ನಾಶಪಡಿಸುವ ಶಾಂಕರಮತಸಿಂಧುಚಂದ್ರ- ಶಿವಮತವೆಂಬ ಸಮುದ್ರಕ್ಕೆ ಚಂದ್ರನಾದ, ಶಮನಾದ್ರಿಮಹೇಂದ್ರ- ಯಮನೆಂಬ ಪರ್ವತಕ್ಕೆ ದೇವೇಂದ್ರನಾದ, ಶಿವಾಂಗರುಂದ್ರ- ಶಿವನಿಂ ಕೂಡಿದ ಅವಯವದಿಂದ ಪೂರ್ಣನಾದ, ಸದ್ವರದ- ಒಳ್ಳೆಯವರವನ್ನು ಕೊಡುವ, ಕೃಪಾಸಮುದ್ರ, ವಸುಧಾತಳರುದ್ರ-ಭೂಪ್ರದೇಶಕ್ಕೆ ರುದ್ರನಾದ, ವಿನಿದ್ರವೈಭವ- ಪ್ರೋಜ್ವಲವಾದ ವೈಭವವುಳ್ಳ. ॥೧೫॥

ಕಂ॥ ಶರಣಾಗತರಕ್ಷಣತ ।ತ್ಪರ ಪರಮಾರಾಧ್ಯ ಮಾಚಿದೇವ ಮಹಾತ್ಮ್ಯಾ ॥ ಕಶ ಕರುಣಾನಿಧಿ ಕರುಣಿಸಿ । ಪರಿಭವಸಾಗರದಿ ನೆನ್ನ ನುದ್ಧರಿಸಭವ ॥ ... ॥೨೧॥

ಮ ॥ ಸ್ರ ॥ ಪಶುವಾಂ ದೇವೇಶ ಕೇಳ್ನೀಂ ಪತಿ ಪಟುಖಲ ನಾಂ ಸಾಧು ನೀಂ ಕ್ರೋಧಿ ಯಾಂ ಪ್ರೊ। ಣ್ಣಶಮಾಂಕಂ ನೀಂ ಸದಾದುಷ್ಕೃತಶತಕರ ನಾಂ ಧರ್ಮಿ ನೀಂ ಘೋ ರಮಾಯಾ ॥ ವಶ ನಾಂ ಮಾಯಾವಿ ನೀಂ ಚಿದ್ರಸವಿರಹಿತ ನಾಂಜ್ಞಾನಿ ನೀಂ ಸಾಪರಾಧಂ ಶಿಶುವಾಂ ಮೇಣ್ತಂದೆ ನೀಂ ಲೋಭದ ನೆಲೆವನೆ ಯಾಂ ದಾನಿ ನೀಂ ಮಾಚಿದೇವ ॥ ॥೨೧॥

ಶಾ॥ ಖ್ಯಾತಂ ಲಕ್ಷಚತುಷ್ಟಯಂ ಮಿಸುಪ ತೊಂಬತ್ತಾರುಸಾಹಸ್ರಮುಂ। ಗೀತವ್ರಾತಮನೈದೆ ಪಾಡಿದೆ ನರಣ್ಯಾಕ್ರಂದನಂಗೆಯ್ವವೋಲ್ ॥ ಜಾತಾಹಂಕೃತಿ ಯಾಪೆನಾ ನದರಿ ನೆಲ್ಲಂ ಮೋಘಮಾದತ್ತು ತ। ದ್ಗೀತಂ ನಿಮ್ಮಡಿಯೊಲ್ಮೆಯಿಲ್ಲದೊಡೆ ಪೇಳೇಗೆಯ್ವೆ ನೆಂತಿರ್ಪೆನೋ ॥ ... ... ... ... ... .. ॥೨೨॥

ವ ॥ಎಂದಾಂ ನೆಗಳ್ದ ಶತಾಪರಾಧಮಂ ಕ್ಷಮಿಪುದೆಂದು ಪೊಡಮಟ್ಟಿರ್ದ ಬಸವರಾಜನಂ ಮಾಚಿದೇವಂ ಕೃಪಾವಲೋಕನದಿ ನಭೀಕ್ಷಿಸಿ ತೆಗೆದು ಬಿಗಿದಪ್ಪಿ ಮನ್ನಿಸುತ ಮಿರ್ದ್ಪಾಗಳ್ ॥ * * * * * * * * * * * * * * * *

---

ಶರಣಾಗತರಕ್ಷಣತತ್ಪರ- ಸುರಕ್ಷಕನನ್ನಾಗಿ ಹೊಂದಿದವರನ್ನು ಸಂರಕ್ಷಿಸುವವರಲ್ಲಾಸಕ್ತನಾದ, ಪರಮಾರಾಧ್ಯ- ಉತ್ಕೃಷ್ಟರಾದವರಿಂ ಪೂಜಿಸಲ್ಪಡುವದಕ್ಕೆ ಯೋಗ್ಯನಾದ, ಮಹಾತ್ಮ್ಯಾಕರ- ಮಹಿಮೆಗಾಸ್ಪದನಾದ, ಕರುಣಾನಿಧಿ, ಅಭವ- ಉತ್ಪತ್ತಿರಹಿತನಾದ, ಮಾಚಿದೇವ! ಕರುಣಿಸಿ, ಎನ್ನಂ,ಭವಸಾಗರದಿಂ- ಜನನಮರಣಾತ್ಮಕವಾದ ಭವವೆಂಬ ಸಮುದ್ರದ ದೆಸೆಯಿಂದ, ಉದ್ಧರಿಸು- ಮೇಲಕ್ಕೆ ತೆಗೆ. ... ॥೨೧॥

ದೇವೇಶ! ಮಾಚಿದೇವ! ಕೇಳ್, ಆಂ, ಪಶು; ನೀಂ, ಪತಿ; ಆಂ, ಪಟುಖಲಂ- ಅತಿನೀಚನು; ನೀಂ, ಸಾಧು- ಸತ್ಪುರುಷನು; ಆಂ, ಕ್ರೋಧಿ- ಕೋಪವುಳ್ಳವನು, ನೀಂ, ಶಮಾಂಕಂ- ಶಾಂತಿಯೇ ಚಿಹ್ನವಾಗುಳ್ಳವನು; ಆಂ, ಸದಾ- ಯಾವಾಗಲೂ, ದುಷ್ಕೃತಶತಕರಂ- ಅನೇಕ ಪಾಪಕಾರ್ಯಗಳಂ ಮಾಡುವನು; ನೀಂ, ಧರ್ಮಿ- ಪುಣ್ಯಕಾರ್ಯವುಳ್ಳವನು; ಆಂ, ಘೋರಮಾಯಾವಶಂ- ಭಯಂಕರವಾದ ಮಾಯೆಗಧೀನನು; ನೀಂ, ಮಾಯಾವಿ- ಮಾಯಾರಹಿತನು; ಆಂ, ಚಿದ್ರಸವಿರಹಿತಂ-ಜ್ಞಾನದಿಂ ಶೂನ್ಯನಾದವನು; ನೀಂ, ಜ್ಞಾನಿ; ಆಂ, ಸಾಪರಾಧಂ- ತಪ್ಪಿನಿಂ ಕೂಡಿದ, ಶಿಶು; ನೀಂ, ಮೇಣ್, ತಂದೆ, ಆಂ, ಲೋಭದ- ಕೃಪಣತ್ವದ, ನೆಲೆವನೆ- ಆಶ್ರಯನು; ನೀಂ, ದಾನಿ- ದಾನಗುಣವುಳ್ಳವನು. .. ... ॥೨೧॥

ಖ್ಯಾತಂ- ಪ್ರಸಿದ್ಧವಾದ, ಲಕ್ಷಚತುಷ್ಟಯಂ- ನಾಲ್ಕು ಲಕ್ಷವು, ಮಿಸುಪ, ತೊಂಬತ್ತಾರುಸಹಸ್ರಮುಂ, ಗೀತವ್ರಾತಮುಂ- ಗಾನ ಸಮೂಹವನ್ನು, ಅರಣ್ಯಾಕ್ರಂದನಂಗೆಯ್ವವೋಲ್- ಕಾಡಿನಲ್ಲಿ ಗೋಳಾಡಿದಂತೆ, ಪಾಡಿದೆಂ: ಆಂ, ಜಾತಾಹಂಕೃತಿ- ಉತ್ಪನ್ನವಾದ ಗರ್ವವುಳ್ಳವನು, ಆದೆಂ; ಅದರಿಂ, ತದ್ಗೀತಂಎಲ್ಲಂ, ಮೋಘಂ- ವ್ಯರ್ಥವು, ಆದತ್ತು; ನಿಮ್ಮ, ಅಡಿಯ, ಒಲ್ಮೆ-ಪ್ರೀತಿಯು, ಇಲ್ಲದೊಡೆ, ಏಗೆಯ್ವೆಂ? ಎಂತು, ಇರ್ಪೆನೋ ? ಪೇಳ್. ... ... ... ... ... ॥೨೨॥

ಎಂದು, ಆಂ, ನೆಗಳ್ದ- ಮಾಡಿದ, ಶತಾಪರಾಧಮಂ- ಅನೇಕ ತಪ್ಪನ್ನು, ಕ್ಷಮಿಪುದು- ಸಹಿಸಬೇಕು, ಎಂದು, ಪೊಡಮಟ್ಟು- ನಮಸ್ಕರಿಸಿ, ಇರ್ದ, ಬಸವರಾಜನಂ, ಮಾಚಿದೇವಂ, ಕೃಪಾವಲೋಕನದಿಂ- ದಯಾವಿಶಿಷ್ಟವಾದ ನೋಟದಿಂದ, ಅಭೀಕ್ಷಿಸಿ- ನೋಡಿ, ತೆಗೆದು, ಬಿಗಿದು, ಅಪ್ಪಿ- ಆಲಂಗಿಸಿ, ಮನ್ನಿಸುತಂ, ಇರ್ಪ್ಪಾಗಳ್. * * * * * * * * * * * * * * * * * *

ಕಂ ॥ ತೊಳೆವಾತ ನಂಬರಕ್ಕೆಂ । ಮುಳಿವನೆಮಲಿನಕ್ಕೆ ಮುಳಿವನಲ್ಲದೆ ಸುಗುಣೋ ॥ ಜ್ಜ್ವಳಬಸವನ ಭಕ್ತಿಗೆ ನಿ । ರ್ಮಳತೆಯ ನಾಗಿಪ್ಪೊಡೆ ಮುಳಿದ ನಾ ಮಾಚಯ್ಯಂ ॥ ... ... ... .... ॥೧೩॥

ಚಂ ॥ ಕಡಿದೊಡೆ ಕರ್ಬು ಸೀಯೆನಿನಿದೀಯದೆ ಮಾಣ್ಬುದೆ ದಿವ್ಯಚಂದನಂ। ಪಿಡಿದ ಮರ್ದೊತ್ತಿ ತೇಯ್ದೊಡೆ ಸುಗಂಧಮನಾನದೆ ಕಾಯ್ಸಿ ವಹ್ನಿಯಿಂ ॥ ಬಡಿದೊಡೆಕಾಂತಿಯಂ ಪಡೆಯದೇ ಕನಕಂ ಕಡುಕಾಯ್ದು ಮಾಚಯಂ । ಜಡಿದೊಡೆ ಭಕ್ತಿಯುಜ್ಜ್ವಳತೆಯಂಬಸವಂ ತವೆ ಬೀರದಿರ್ಪನೇ ॥ ... ... ... ... ॥೧೪॥

ವ ॥ ಎಂದು ಶಿವಗಣಸಂದೋಹಂ ಬಣ್ಣಿಸುತ್ತಿ ಮಿರೆ ವೃಷೇಂದ್ರನಂ ನೋಡಿಮಾಚಿದೇವ ನಿಂತೆಂದಂ ॥ * * * * * * * * * * * * * *

ಕಂ॥ ವಿನಯಂ ಶಮೆ ದಮೆ ನಿರ್ವಂ। ಚನೆ ದಾರ್ಢ್ಯಂ ಸತ್ಯ ಮಾರ್ಜ್ಜವಂ ನಿರ್ಮ್ಮದಭಾ ॥ ವನೆ ದಾಸ್ಯಂ ಭಯ ಮನುನಯ । ಮನವದ್ಯಂ ಭಕ್ತಿಲಕ್ಷಣಂ ಬಸವೇಶಾ ॥ ॥೧೫॥

ಕಂ ॥ ಮದ ಮದು ಭಕ್ತಿಗೆ ಕಂಟಕ । ಮದ ನಳಿಯಲ್ವೇಳ್ಕುಮದರಿನೆಮ್ಮಯ ಶರಣರ್ ॥ ಮದನಾರಿಯ ಪದಭಕ್ತರ । ಮದಮಂ ಮುನ್ನಳಿದು ಭಕ್ತಿಯಂಪ್ರಕಟಿಸಿದರ್ ॥೧೬॥

---

ತೊಳೆವಾತಂ- ಬಟ್ಟೆಯಂ ತೊಳೆಯುವವನು, ಮಲಿನಕ್ಕೆ- ಕೊಳೆಗೆ, ಮುಳಿವಂ- ಕೋಪಿಸಿಕೊಳ್ಳುವನು, ಅಲ್ಲದೆ, ಅಂಬರಕ್ಕೆ- ಬಟ್ಟೆಯ ವಿಷಯದಲ್ಲಿ, ಮುಳಿವನೇಂ ? ಆಮಾಚಯ್ಯಂ, ಸುಗುಣೋಜ್ಜ್ವಳಬಸವನ- ಸದ್ಗುಣಗಳಿಂ ಮನೋಹರನಾದ ಬಸವೇಶ್ವರನ, ಭಕ್ತಿಗೆ, ನಿರ್ಮ್ಮಳತೆಯಂ- ಪಾರಿಶುದ್ಧ್ಯವನ್ನು, ಆಗಿಪ್ಪೊಡೆ- ಉಂಟುಮಾಡುವವಕ್ಕೋಸ್ಕರ, ಮುಳಿದಂ. ... ... ॥೧೩॥

ಕಡಿದೊಡೆ, ಕರ್ಬು, ಸೀಯೆನೆ, ಇನಿದೀಯದೆ- ಮಾಧುರ್ಯವನ್ನು ಕೊಡದೆ, ಮಾಣ್ಬುದೆ- ತಪ್ಪುವದೇ? ಪಿಡಿದು, ಅಪುದರ್ದು- ಸೇರಿಸಿ, ಒತ್ತಿ, ತೆಯ್ದೊಡೆ, ದಿವ್ಯಚಂದನಂ-ಶ್ರೇಷ್ಠವಾದ ಶ್ರೀಗಂಧವು,ಸುಗಂಧಮಂ- ಒಳ್ಳೆಯ ಪರಿಮಳವನ್ನು, ಆನದೆ- ಹೊಂದುವದಿಲ್ಲವೇ ? ವಹ್ನಿಯಿಂ- ಬಂಕಿಯಿಂದಕ್ಷಿಕಾಯ್ಸಿ, ಬಡಿದೊಡೆ ಕನಕಂ- ಚಿನ್ನವು, ಕಾಂತಿಯಂ, ಪಡೆಯದೇ ? ಮಾಚಯಂ, ಕಡುಕಾಯ್ದು- ಬಹು ಕೋಪಿಸಿ, ಜಡಿದೊಡೆ- ಭಯಪಡಿಸಿದರೆ, ಬಸವಂ, ತವೆ- ಹೆಚ್ಚಾಗಿ, ಭಕ್ತಿಯ, ಉಜ್ಜ್ವಳತೆಯಂ- ಪ್ರಕಾಶವನ್ನು, ಬೀರದೆ- ಪ್ರಸರಿಸದೆ, ಇರ್ಪನೇ ? ... ... ... ... ... ॥೧೪॥

ಎಂದು, ಶಿವಗಣಸಂದೋಹಂ, ಬಣ್ಣಿಸುತ್ತಿ, ಇರೆ, ಮಾಚಿದೇವಂ, ವೃಷೇಂದ್ರನಂ, ನೋಡಿ, ಇಂತು, ಎಂದಂ, * * * * * * * * * * * * * * * * *

ಬಸವೇಶ! ಅನವದ್ಯಂ- ನಿರ್ದುಷ್ಟವಾದ, ವಿನಯಂ- ನಮ್ರತೆ, ಶಮೆ- ಶಾಂತಿ, ದಮೆ- ಇಂದ್ರಿಯನಿಗ್ರಹ, ನಿರ್ವಂಚನೆ- ಮೋಸಗೊಳಿಸದಿರುವದು, ದಾರ್ಢ್ಯಂ- ದೃಢತ್ವ, ಸತ್ಯಂ, ಆರ್ಜವಂ- ಋಜುತ್ವ, ನಿರ್ಮ್ಮದಭಾವನೆ- ಅಹಂಕಾರವಿಲ್ಲದಭಿಪ್ರಾಯ, ದಾಸ್ಯಂ- ಸೇವಕತ್ವ, ಭಯಂ, ಅನುನಯಂ- ನೀತಿ, (ಇವುಗಳು) ಭಕ್ತಿಲಕ್ಷಣಂ- ಭಕ್ತಿಗೆ ಚಿಹ್ನೆಗಳು. .... ... ... ... ॥೧೫॥

ಅದುಮದಂ, ಭಕ್ತಿಗೆ, ಕಂಟಕಂ- ಪ್ರತಿಬಂಧಕವಾದದ್ದು: ಅದಂ, ಅಳಿಯಲ್ವೇಳ್ಕುಂ- ಬಿಡಬೇಕು; ಅದರಿಂ, ಎಮ್ಮಯ, ಶರಣರ್, ಮದನಾರಿಯ- ಶಿವನ, ಪದಭಕ್ತರ- ಪಾದದಲ್ಲಿ ಭಕ್ತಿಯುಳ್ಳವರ, ಮದವಂ- ಗರ್ವವನ್ನು, ಮುನ್ನ- ಪೂರ್ವದಲ್ಲಿ, ಅಳಿದು- ನಾಶಪಡಿಸಿ, ಭಕ್ತಿಯಂ, ಪ್ರಕಟಿಸಿದರ್. ... ॥೧೬॥

ಕಂ॥ ಎಂತೆನೆ ಪೇಳ್ದಪೆ ನವನೀ । ಕಾಂತೆಯ ಸೀಮಂತರತ್ನ ಮೆನೆ ಕಂಗೊಳಿಕುಂ॥
ಕಾಂತಿ ಮಿಗೆ ನವಿಲೆಯೆಂಬ ಪು । ರಂ ತಾನಳಕಾಭಿರಾಮಗುಣಪರಿಮಿಳಿತಂ ॥ ॥೨೭॥

ಕಂ ॥ ಆಪುರದೊಳೆಸೆವ ನೋರ್ವನು । ಮಾಪತಿಪದಭಕ್ತನಮಿತಶಿವಸುಖಭರಿತಂ ॥
ತಾಪಸನುತಸುಜ್ಞಾನಕ । ಲಾಪಂ ಮೃಡರೂಪ ನಪಗತಾಖಿಲತಾಪಂ ॥ ... ॥೨೮॥

ಚಂ ॥ ಭವಮೃತಿಕಾಲಕರ್ಮರಹಿತಂ ಹರಿಧಾತೃಮುಖಾನ್ಯದೈವಗ । ರ್ವವನದವಾಗ್ನಿ
ಚಂಡಭುಜದಂಡ ನಖಂಡಗುಣಾಂಕ ನದ್ರಿಜಾ ॥ ಧವಮತಪಾರಿಜಾತ ನಭವಾಗಮಧೀರ ನತ
ರ್ಕ್ಯವಿಕ್ರಮಂ । ಭವಿಮತಪದ್ಮಷಂಡಕಳಭಂ ಪರಭೀಮಸಮಗ್ರವಿಗ್ರಹಂ ॥ ॥೨೯॥

ಕಂ॥ ಶಂಕರಕಿಂಕರಜನತಾ । ಶಂಕರ ನಘುಚಯಭಯಂಕರಂ ಪರಿಹೃತಮಾ ॥ ಯಾಂ
ಕುರ ನಿರ್ಪಂ ಪೆಸರಿಂ । ಶಂಕರದಾಸಯ್ಯ ನೆಂಬ ನಚಳಶಿವೈಕ್ಯಂ ॥ ... ॥೩೦॥

ತರಳವೃತ್ತಂ ॥ ಜೇಡೆಯಶಂಕರದೇವದಿವ್ಯಸಭಾಸ್ಥಿತಂ ಮೆರೆದಿರ್ಪ ನೊ ; ಳ್ಪಡರೆ

---

## ಶಂಕರದಾಸಯ್ಯನಕಥೆ.

ಎಂತು ? ಎನೆ, ಪೇಳ್ದಪೆವ್— ಹೇಳುವೆವು; ನವಿಲೆ, ಎಂಬ, ಪುರಂ, ಕಾಂತಿ, ಮಿಗೆ, ತಾಂ, ಅಳಕಾಭಿರಾಮಗುಣಪರಿಮಿಳಿತಂ— ಅಳಕಾ- ಕುಬೇರನ ಪಟ್ಟಣದ, ಅಭಿರಾಮ- ಮನೋಹರವಾದ, ಗುಣ- ಗುಣಗಳೋಪಾದಿಯುಳ್ಳಿರುವ ಗುಣಗಳಿಂದ, ಪರಿಮಿಳಿತಂ- ಕೂಡಿದ, (ಅಳಕಾ-ಮುಂಗುರುಳುಗಳಲ್ಲಿ, ಅಭಿರಾಮ-ಮನೋಹರವಾದ, ಗುಣ- ತಂತುವಿನಿಂದ, ಪರಿಮಿಳಿತಂ- ಕೂಡಿದ) ಅವನೀಕಾಂತೆಯ- ಭೂಮಿಯೆಂಬ ಸ್ತ್ರೀಯು, ಸೀಮಂತರತ್ನಂ- ಬೈತಲೆಯಲ್ಲಿಡುವ ಮಣಿಯು, ಎನೆ, ಕಂಗೊಳಿಕುಂ. ... ॥೨೭॥

ಆಪುರದೊಳ್, ಉಮಾಪತಿಪದಭಕ್ತಂ, ಅಮಿತಶಿವಸುಖಭರಿತಂ- ಎಣಿಸಲಾಗದ ಶಿವನಿಂದುಂಟಾದ ಸೌಖ್ಯದಿಂದ ತುಂಬಿದ, ತಾಪಸನುತಸುಜ್ಞಾನಕಲಾಪಂ- ಋಷಿಗಳಿಂದ ಸ್ತೋತ್ರಮಾಡಲ್ಪಟ್ಟ ಒಳ್ಳೆಯ ಜ್ಞಾನವೇ ಆಭರಣವಾಗುಳ್ಳ, ಮೃಡರೂಪಂ- ಶಿವಾಕಾರನಾದ, ಅಪಗತಾಖಿಲತಾಪಂ- ಕಳೆದುಹೋದ ಆಧ್ಯಾತ್ಮಿಕ ಆಧಿಭೌತಿಕ ಆಧಿದೈವಿಕವೆಂಬ ಎಲ್ಲಾ ತಾಪಗಳುಳ್ಳ, ಓರ್ವಂ, ಎಸೆವಂ. ... ॥೨೮॥

ಹರಿಧಾತೃಮುಖಾನ್ಯದೈವಗರ್ವವನದವಾಗ್ನಿ— ಹರಿ- ವಿಷ್ಣು, ಧಾತೃ- ಬ್ರಹ್ಮ, ಇವರುಗಳೇ, ಮುಖ- ಮೊದಲಾದ, ಅನ್ಯದೈವ- ಇತರದೇವತೆಗಳ, ಗರ್ವ- ಅಹಂಕಾರವೆಂಬ, ವನ- ಕಾಡಿಗೆ, ದವಾಗ್ನಿ- ಕಾಳ್ಕಿಚ್ಚಾದ, ಚಂಡಭುಜದಂಡಂ- ಸಮರ್ಥವಾದ ದಂಡದಂತಿರುವ ಬಾಹುವುಳ್ಳ, ಅಖಂಡಗುಣಾಂಕಂ- ಭಂಗರಹಿತವಾದ ಸದ್ಗುಣಗಳೇ ಲಕ್ಷಣವಾಗುಳ್ಳ, ಅದ್ರಿಜಾಧವಮತಪಾರಿಜಾತಂ- ಶಿವಮತಕ್ಕೆ ಕಲ್ಪವೃಕ್ಷನಾದ, ಅಭವಾಗಮಧೀರಂ- ಶೈವಾಗಮಗಳಲ್ಲಿ ಪಂಡಿತನಾದ, ಅತರ್ಕ್ಯವಿಕ್ರಮಂ- ಊಹಿಸುವುದಕ್ಕಾಗದ ಪರಾಕ್ರಮವುಳ್ಳ, ಭವಿಮತಪದ್ಮಷಂಡಕಳಭಂ- ಲಿಂಗಹೀನರ ಮತವೆಂಬ ಕಮಲಸಮೂಹಕ್ಕೆ ಮದಗಜನಾದ, ಪರಭೀಮಸಮಗ್ರವಿಗ್ರಹಂ— ಪರ- ಉತ್ಕೃಷ್ಟನಾದ, ಭೀಮ- ಪರಶಿವನಿಂದ, ಸಮಗ್ರ- ಸಂಪೂರ್ಣವಾದ, ವಿಗ್ರಹಂ- ಶರೀರವುಳ್ಳ, (ಅಂದರೆ ಲಿಂಗಾಂಗಿಯಾದ) ... ... ... ॥೨೯॥

ಶಂಕರಕಿಂಕರಜನತಾಶಂಕರಂ- ಶಿವಸೇವಕರಾದ ಜನರ ಸಮೂಹಕ್ಕೆ ಸುಖವನ್ನುಂಟುಮಾಡುವ, ಅಘಚಯಭಯಂಕರಂ- ಪಾಪಸಮೂಹಕ್ಕೆ ಭಯವನ್ನುಂಟುಮಾಡುವ, ಪರಿಹೃತಮಾಯಾಂಕುರಂ- ನಾಶಗೊಳಿಸಲ್ಪಟ್ಟ ಮಾಯೆಯ ಮೊಳಕೆಯುಳ್ಳ, ಅಚಳಶಿವೈಕ್ಯಂ- ನಿಶ್ಚಂಚಲವಾದ ಶಿವನ ಸಾಮರಸ್ಯವುಳ್ಳ, ಶಂಕರದಾಸಯ್ಯಂ, ಎಂಬಂ- ಎಂಬುವನು. ... ... ... ॥೩೦॥

ಜೇಡೆಯಶಂಕರದೇವದಿವ್ಯಸಭಾಸ್ಥಿತಂ- ಜೇಡೆಯಶಂಕರದೇವನ ಶ್ರೇಷ್ಠವಾದ ಸಭೆಯಲ್ಲಿರುವವನಾಗಿ, ಮೆರೆದು, ಇರ್ಪಂ, ಒಳ್ಪು- ಸಮೀಚೀನತ್ವವು, ಅಡರೆ- ಹೊಂದಿರಲು, ಸೂಚೆಯ- ಸೂಚಿಯು, ಕಾಯಕಂ-

ಸೂಚಿಯಕಾಯಕ ಕ್ರಿಯೆ ಯೊಪ್ಪೆ ಮೇಣದರಿಂದೆ ತಾಂ । ಪಡೆದು ತಂದೊಡನೈದು ಮಾನಸುಧಾನ್ಯದಿಂದರಿದೆಂಬಿನಂ । ಮೃಡನ ಭಕ್ತಸಹಸ್ರಕಾದೊಡ ಮಲ್ಲಿತೃಪ್ತಿಯು ನಾಗಿಪಂ ॥ ... ... ... ... ॥೩೧॥

ವ ॥ ಅನವರತ ಮಾಮಹಿಮಾನ್ವಿತ ನಿಯಮದಿನಿರೆ ಯಿರೆ ತದ್ದರ್ಶನೋತ್ಕಂಠೆಯಿಂ ಜಾಡರದಾಸಯ್ಯನೆಂಬ ಹರಭಕ್ತನೆಳ್ತಂದವನಡಿಗವನತನಾಗಿಶಿವಾನುಭವಗೋಷ್ಠಿಯಿ ನಿರ್ದನಂತರಂ ನಿಜಭವನಕೇಳ್ತಂದು ನಿಜರಮಣಿಯೊಡನುಮ್ಮಳಿಸುತಿಂತೆಂದಂ ॥ *

ಕಂ ॥ ಹರಭಕ್ತ ನಾಗಿಯುಂ ಶಂ । ಕರದಾಸಂ ಬಡತನಕ್ಕೆ ಪಕ್ಕಾಗಿರ್ಪಂ ॥ ತರಳಾಕ್ಷಿ ಕಳುಪುಧಾನ್ಯೋ । ತ್ಕರಮಂ ಪಸಿದಿರ್ಕು ಮಾತ ನಲ್ಲದೊಡೀಗಳ್ ॥ ... ॥೩೨॥

ವ ॥ ಎಂದು ಬೆಸಸೆ ತದಾಂಗ್ನೆಯೆನಿಪ ದುಗ್ಗಳದೇವಿ ತಳ್ವದೆ ಧಾನ್ಯಮಂ ಕಳುಪೆ ಶಂಕರದಾಸಯ್ಯನದಂ ಕಂಡು ಮುಗುಳ್ನಗೆಸಕ್ಕು ॥ * * * * * * *

ಮಹಾಸ್ರ ॥ ಒದವಿರ್ದತ್ಯಂತಭಾಗ್ಯಂ ಮಿಸುಗೆ ಮೆರೆವ ದಾಸಯ್ಯ ನೆಮ್ಮೀ ದರಿದ್ರತ್ವದ ಪಾಂಗಂ ಕಂಡು ತಾ ನೇಂ ಕರುಣೆಯೊ ಮರುಕಂಬೆತ್ತು ಧಾನ್ಯಂಗಳಂ ತಳ್ವದ ತಂದಿತ್ತಂ ಮೊದಲ್ಧಾನ್ಯದ ಘನನಿಧಿಯಂ ವಸ್ತ್ರಮಂ ಕೊಟ್ಟುಕೊಂಡಂ। ಪಡೆದಾನಿನ್ನೇನನೀವೆಂ ಕೃಪಣ ನಮಮ ಸದ್ಭಕ್ತನಿಂತಾಗವೇಡ ॥ ... ... ॥೩೩॥

---

ಶೀಲವೆಂಬ, ಕ್ರಿಯೆ-ಕೃತ್ಯವು, ಒಪ್ಪೆ, ಮೇಣ್, ಅದರಿಂದೆ-ಆ ಕಾಯಕದಿಂದ, ತಾಂ, ಒಡನೆ,ಪಡೆದು, ತಂದ, ಐದುಮಾನಸುಧಾನ್ಯದಿಂ- ಐದು ಸೇರು ಧಾನ್ಯದಿಂದ, ಅರಿದು- ಅಸಾಧ್ಯವು, ಎಂಬಿನಂ- ಎಂಬುವಹಾಗೆ, ಮೃಡನ, ಭಕ್ತಸಹಸ್ರಕೆ, ಆದೊಡಂ, ಅಲ್ಲಿ, ತೃಪ್ತಿಯಂ, ಆಗಿಪಂ. .. ... ॥೩೧॥

ಆಮಹಿಮಾನ್ವಿತಂ, ಅನವರತಂ- ಯಾವಾಗಲೂ, ಈನಿಯಮದಿಂ- ಈ ವ್ರತದಿಂದ, ಇರೆಇರೆ, ಜಾಡರದಾಸಯ್ಯಂ, ಎಂಬ, ಹರಭಕ್ತಂ, ತದ್ದರ್ಶನೋತ್ಕಂಠೆಯಿಂ-ಆಶಂಕರ ದಾಸಯ್ಯನನ್ನು ನೋಡಬೇಕೆಂಬ ಕುತೂಹಲದಿಂದ,ಎಳ್ತಂದು, ಅವನ, ಅಡಿಗೆ, ಅವನತನು, ಆಗಿ, ಶಿವಾನುಭವಗೋಷ್ಠಿಯಿಂ- ಶಿವಾನುಭವಶಾಸ್ತ್ರಪ್ರಸಂಗದಿಂದ, ಇರ್ದು, ಅನಂತರಂ, ನಿಜಭವನಕೆ- ತನ್ನ ಮನೆಗೆ, ಎಳ್ತಂದು, ಉಮ್ಮಳಿಸುತೆ- ಖೇದಪಡುತ್ತ, ನಿಜರಮಣಿಯೊಡನೆ- ತನ್ನ ಹೆಂಡತಿಯೊಡನೆ, ಇಂತು, ಎಂದಂ. * * * * * * *

ಶಂಕರದಾಸಂ, ಹರಭಕ್ತಂ, ಆಗಿಯುಂ, ಬಡತನಕ್ಕೆ, ಪಕ್ಕಾಗಿ- ಆಸ್ಪದನಾಗಿ, ಇರ್ಪಂ, ತರಳಾಕ್ಷಿ- ಚಂಚಲನೇತ್ರೆಯೇ! ಧಾನ್ಯೋತ್ಕರಮಂ, ಕಳುಪು; ಅಲ್ಲದೊಡೆ, ಈಗಳ್, ಆತಂ- ಆ ಶಂಕರದಾಸಯ್ಯನು, ಪಸಿದು, ಇರ್ಕುಂ. ... ... ... ... ... ॥೩೨॥

ಎಂದು, ಬೆಸಸೆ- ಆಜ್ಞಾಪಿಸಲು, ತದಾಂಗ್ನೆ- ಆತನ ಹೆಂಡತಿಯು, ಎನಿಪ, ದುಗ್ಗಳೆದೇವಿ, ತಳ್ವದೆ- ತಪ್ಪದೆ, ಧಾನ್ಯಮಂ, ಕಳುಪೆ, ಶಂಕರದಾಸಯ್ಯಂ, ಅದಂ, ಕಂಡು, ಮುಗುಳ್ನಗೆನಕ್ಕು. * * * *

ಒದವಿ- ಪ್ರಾಪ್ತವಾಗಿ, ಇರ್ದ, ಅತ್ಯಂತಭಾಗ್ಯಂ, ಮಿಸುಗೆ, ಮೆರೆವ, ದಾಸಯ್ಯಂ, ಎಮ್ಮ, ಈದರಿದ್ರತ್ವದ- ಈ ಬಡತನದ, ಪಾಂಗಂ- ರೀತಿಯನ್ನು, ಕಂಡು, ಮರುಕಂಬೆತ್ತು- ಮರುಗಿ, ತಳ್ವದೆ, ಧಾನ್ಯಂಗಳಂ, ತಂದು, ಇತ್ತಂ, ತಾಂ- ಆ ಜೇಡರ ದಾಸಯ್ಯನು, ಏಂಕರುಣೆಯೊ! ಮೊದಲ್, ವಸ್ತ್ರಮಂ- ಬಟ್ಟೆಯನ್ನು, ಕೊಟ್ಟು, ಧಾನ್ಯದ, ಘನನಿಧಿಯಂ, ಕೊಂಡಂ; ಕೃಪಣಂ- ಬಡವನಾದ, ಆಂ, ಪಡೆದು- ಪ್ರೀತಿಸಿ, ಇನ್ನು, ಏನಂ, ಈವೆಂ? ಅಮಮ! ಸದ್ಭಕ್ತಂ, ಇಂತು- ಈ ಜೇಡರದಾಸಯ್ಯನಹಾಗೆ, ಆಗವೇಡ. ॥೩೩॥

ಎಂದು ರೋಷಾಡುತ್ತೊಂದುಮುಷ್ಟಿಯೊಳಾನೆಲ್ಲನೆಲ್ಲಮು ನಡಸಿ ಪಿಡಿದು ಪೊಡವಿಯೊಳಿಡೆ ಗೃಹದೊಳಿರ್ದಕ್ಷಯನಿಧಿ ತತ್ಕ್ಷಣದೊಳಡಂಗೆ ಕಂಡು ಬೆಬ್ಬಳಿವೋಗಿ ತಳಮಳಗುಗೊಂಡು ಕಳವಳಿಪ ನಿಜಪತಿಯಂ ನೋಡಿ ದುರ್ಗಾಂಬೆ ಯಿಂತೆಂದಳ್ ॥ * * *

ಕಂ ॥ ಸರಿಬೆಸದಾಟಮ ನೇಂ ಕೇ । ಸರಿಯೊಡ ನಾಡಿದರು ವೊಳರೆ ಶರಣರ ಪರಿಯಂ ॥ ಪರಿಕಿಸದೆ ಕಳುಪಿ ಧಾನ್ಯಮ । ನುರುಮದದಿಂ ನಿಧಿಯ ನಿಂತು ನೀಗಿದೆ ಯಕಟ ॥

ಕಂ ॥ ತಂದೈದುಮಾನಧಾನ್ಯದೊ । ಳಿಂದುಧರಾರ್ಚ್ಚಕಸಹಸ್ರಮಂ ತಣಿಪಿದಪಂ ॥ ಕುಂದದೆ ಶಂಕರದಾಸ ನ । ವಂ ದಿಟದಿಂ ಪ್ರಿಯ ದರಿದ್ರನೇನಾದವನೆ ॥ ... ॥೩೫॥

ಉ ॥ ಆತನ ಪೇರ್ಮೆಯಂ ಪೊಗಳಲಾ ರ್ನೆರೆವ ರ್ನಿಜರೂಪದಿಂದೆ ಸಂ । ಪ್ರೀತಿಯೊಳೀಶನೆಯ್ದಿ ವರಮಂ ಮಿಗೆ ಬೇಡೆನೆ ನಕ್ಕು ದೇವ ಮ ॥ ತ್ತಾತ ಭವತ್ಪದಾಬ್ಜನಿಧಿ ಸನ್ನಿಧಿವೆತ್ತಿರೆ ಬೇರೆ ಬೇಳ್ಪ ವಿ । ಖ್ಯಾತವರಂಗಳುಂಟೆ ವರಮಿತ್ತಪೆ ನೆಂದೆನೆ ಬೇಡ ನಿಂತಿವಂ ॥

ಉತ್ಸಾಹವೃತ್ತಂ ॥ ಎಂಬ ಲಜ್ಜೆ ನಿನ್ನ ಚಿತ್ತಕಾಗದಂತೆ ಬೇಳ್ಪೆ ನೊ । ಲ್ದಂಬಿಕೇಶ ರಾತ್ರಿಯಲ್ಲಿ ಸೂಜಿಗಣ್ಗೆ ಸೂತ್ರಮಂ ॥ ಇಂಬುವೆತ್ತು ಕೋಯಲೀಕ್ಷಿಸುತ್ತೆ ಕಾಣ್ಬ ಮಾಳ್ಕೆಯಿಂ । ದಂಬಕಪ್ರಕಾಶಮೊಂದ ನೀಯೆ ಸಾಲ್ಗು ಮೀಶ್ವರ ॥ ... ॥೩೭॥

---

ಎಂದು, ರೋಷಾಡುತ್ತೆ- ತಿರಸ್ಕರಿಸುತ್ತೆ, ಒಂದುಮುಷ್ಟಿಯೊಳ್- ಒಂದು ಹಿಡಿಯಲ್ಲಿ, ಆನೆಲ್ಲಂಎಲ್ಲಮಂ- ಆ ಬತ್ತನೆಲ್ಲವನ್ನೂ, ಅಡಸಿ- ಸೇರಿಸಿ, ಪಿಡಿದು, ಪೊಡವಿಯೊಳ್, ಇಡೆ, ಗೃಹದೊಳ್- ಜೇಡರದಾಸಯ್ಯನ ಮನೆಯಲ್ಲಿ, ಇರ್ದ, ಅಕ್ಷಯನಿಧಿ- ನಾಶವಾಗದ ನಿಕ್ಷೇಪವು, ತತ್ಕ್ಷಣಾರ್ಧದೊಳ್, ಅಡಂಗೆ- ಮರೆಯಾಗಲು, ಕಂಡು, ಬೆಬ್ಬಳ್ ವೋಗಿ- ಭಯದಿಂದ ಸ್ತಂಭೀಭೂತನಾಗಿ, ತಳಮಳಗುಗೊಂಡು- ವ್ಯಾಕುಲಪಟ್ಟು, ಕಳವಳಿಪ- ಲವಲವಿಕೆಯಂ ಹೊಂದುವ, ನಿಜಪತಿಯಂ, ನೋಡಿ, ದುರ್ಗಾಂಬೆ- ದುಗ್ಗಳೆದೇವಿಯು, ಇಂತು, ಎಂದಳ್. * * * * * * * * * * * * * * * *

ಕೇಸರಿಯೊಡನೆ- ಸಿಹ್ಮದೊಡನೆ, ಸರಿಬೆಸದ, ಆಟಮಂ, ಆಡಿದರುಂ, ಒಳರೆ ? ಶರಣರ, ಪರಿಯಂ- ರೀತಿಯೆನ್ನು, ಪರಿಕಿಸದೆ- ಪರೀಕ್ಷೆಯಂ ಮಾಡದೆ, ಉರುಮದದಿಂ-ಅಧಿಕವಾದ ಗರ್ವದಿಂದ, ಧಾನ್ಯಮಂ, ಕಳುಪಿ, ಇಂತು, ನಿಧಿಯಂ, ನೀಗಿದೆ- ಹೋಗಲಾಡಿಸಿಕೊಂಡೆ, ಅಕಟ- ಅಯ್ಯೋ ! ... ॥೩೪॥

ಶಂಕರದಾಸಂ, ತಂದು, ಐದುಮಾನಧಾನ್ಯದೊಳ್, ಇಂದುಧರಾರ್ಚಕಸಹಸ್ರಮಂ-ಸಹಸ್ರಜನ ಶಿವಪೂಜಕರನ್ನು, ಕುಂದದೆ- ಕಮ್ಮಿಯಾಗದೆ, ತಣಿಪಿದಪಂ- ತೃಪ್ತಿಗೊಳಿಸುವನು; ಪ್ರಿಯ ! ಅವಂ, ದಿಟದಿಂ, ದರಿದ್ರಂ, ಆದಪನೇಂ ? ... ... ... ... ... ॥೩೫॥

ಆತನ, ಪೇರ್ಮೆಯಂ- ಮಹತ್ತ್ವವನ್ನು, ಪೊಗಳಲ್, ನೆರೆವರ್-ಸಮರ್ಥರಾಗುವರು, ಆರ್ ? ಈಶಂ, ಸಂಪ್ರೀತಿಯೊಳ್, ನಿಜರೂಪದಿಂದೆ, ಎಯ್ದಿ- ಬಂದು, ಮಿಗೆ, ವರಮಂ, ಬೇಡು, ಎನೆ, ನಕ್ಕು, ದೇವ, ಮತ್ತಾತ- ನನ್ನ ತಂದೆಯೇ ! ಭವತ್ಪದಾಬ್ಜನಿಧಿ- ನಿನ್ನ ಪಾದಕಮಲವೆಂಬ ನಿಕ್ಷೇಪವು, ಸನ್ನಿಧಿವೆತ್ತು- ಸಮೀಪವಂ ಹೊಂದಿ, ಇರೆ, ಬೇರೆ, ಬೇಳ್ಪ, ವಿಖ್ಯಾತವರಂಗಳ್, ಉಂಟೆ ? ವರಮಿತ್ತಪೆಂ, ಎನೆ, ಇಂತು, ಇವಂ, ಬೇಡಂ- ಕೇಳಲೊಲ್ಲನು. ... ... ... ... ॥೩೬॥

ಎಂಬ, ಲಜ್ಜೆ- ನಾಚಿಕೆಯು, ನಿನ್ನ, ಚಿತ್ತಕೆ, ಆಗದಂತೆ, ಒಲ್ದು, ಬೇಳ್ಪೆಂ; ಅಂಬಿಕೇಶ ! ರಾತ್ರಿಯಲ್ಲಿ, ಸೂಜಿಗಣ್ಗೆ, ಸೂತ್ರಮಂ- ದಾರವನ್ನು, ಇಂಬುವೆತ್ತು-ಮನೋಹರವಾಗಿ, ಈಕ್ಷಿಸುತ್ತೆ, ಕೋಯಲ್- ಪೋಣಿಸುವದಕ್ಕೆ, ಕಾಣ್ಬ, ಮಾಳ್ಕೆಯಿಂದೆ-ರೀತಿಯಿಂದ, ಅಂಬಕಪ್ರಕಾಶಮೊಂದಂ- ಕಣ್ಣಿನ ಕಾಂತಿಯೊಂದನ್ನು, ಈಯೆ- ಕೊಟ್ಟರೆ, ಈಶ್ವರ ! ಸಾಲ್ಗುಂ- ಸಾಕು. ... ... ... ॥೩೭॥

ವ ॥ ಎಂಬ ಭಕ್ತನುಕ್ತಿಗೆ ಶಂಭು ಸಂಭ್ರಮಿಸುತಿರುಳೊಳ್ ಪರ್ಬಿದ ಮರ್ಬಿನುರ್ಬನೞಿವಳವನಲಂಗಲ್ಲದಿಲ್ಲೆಂದು ನಿಟಿಲತಟದೊಳ್ ಪಾವಕಾಕ್ಷಿಯಂ ದೇವದೇವಂ ಕರುಣಿಸೆ ಕೈಕೊಂಡು ವಿಲಯಕಾಲದೊಳ್ ಘುಳುಘುಳಿಪ ಕಾಲಾಗ್ನಿರುದ್ರನಂತೆ ಪರದೈವಕೋಲಾಹಲಂ ಪರವಾದಿಜನಮದಮದಗಜವಿಮದವಿದಳನಕಂಠೀರವಂ ಹರಸಮಯಂ ನಲಿಯೆ ಪರಸಮಯಂ ಬೆದರೆ ಸಂಭ್ರಮದಿಂ ನಡೆಗೊಂಡು ಪರದೈವನಿಕೇತನಂಗಳ ನಳವಿಯೊಳ್ ನಿಂದು ನಿಜನಿಟಿಲತಟಘಟಿತಪಟುತರವಿಕಸ್ವರವೀತಿಹೋತ್ರವಿಲೋಚನದಿಂ ಮುಳಿದು ಘುಳಿಘುಳಿಸಿ ಘುಳಿಲನುರುಪುವಾಗಳಸವಸದಿನರ್ಧಾಲಯಮುರಿಯೆ ಸರಭಸಂ ಪರಿವಬಳಾರಿಮಾರಿಮಾತೃಕಾನಿಕಾಯಮುಮಳ್ಕಿರಿದು ಬಳ್ಳಿವರಿವ ದಳ್ಳುರಿ ಯಳುರ್ಕೆಯಿಂ ಗೋಪುರಂ ಸೀಳ್ದು ಸಕ್ಕೆವಿಡೆ ಮುಕ್ಕೊಡೆ ಛಿಟಿಲೆನೆ ಸಿಡಿಯೆ ಪೆಳರ್ದು ನಡುಗಿ ಬಾಯ್ವಿಡುವ ಮಾಳವಿವೆರಸು ನಿಟ್ಟೋಟದಿ ನೋಡುವ ಮೈಲಾರನುಂ ಪ್ರಚುರಕಚನಿಚಯಂ ಗರಿಗರಿಲನುರಿಯೆ ತಳಮೊಳಗುಗೊಂಡು ತಲೆಗೊಡಹಿ ಕಡೆವರಿವೇಕನಾಥೆಯುಮಂ ಪಿಗಿದುಬ್ಬಟ ಪಟ್ಟಣಿಗೆ ನಿಂದುರಿಯೆ ಕೇಸುರಿವೆಳ

---

ಎಂಬ, ಭಕ್ತನ, ಉಕ್ತಿಗೆ- ಮಾತಿಗೆ, ಶಂಭು, ಸಂಭ್ರಮಿಸುತೆ- ಸಡಗರಪಡುತ್ತ, ಇರುಳೊಳ್- ರಾತ್ರಿಯಲ್ಲಿ, ಪರ್ಬಿದ- ಅಭಿವೃದ್ಧವಾದ, ಮರ್ಬಿನ- ಕತ್ತಲೆಯ, ಉರ್ಬಂ- ಔದ್ಧತ್ಯವನ್ನು, ಅೞಿವ- ನಾಶಗೊಳಿಸುವ, ಅೞವು- ಶಕ್ತಿಯು, ಅನಲಂಗೆ- ಅಗ್ನಿಗೆ, ಅಲ್ಲದೆ, ಇಲ್ಲ-ಮತ್ತೊಬ್ಬರಿಗಿಲ್ಲ; ಎಂದು, ನಿಟಿಲತಟದೊಳ್- ಹಣೆಯಲ್ಲಿ, ಪಾವಕಾಕ್ಷಿಯಂ- ಅಗ್ನಿನೇತ್ರವನ್ನು, ಕರುಣಿಸೆ- ದಯಪಾಲಿಸಲು, ಕೈಕೊಂಡು- ಸ್ವೀಕರಿಸಿ ವಿಲಯಕಾಲದೊಳ್- ಪ್ರಳಯಸಮಯದಲ್ಲಿ, ಘುಳುಘುಳಿಪ, ಕಾಲಾಗ್ನಿರುದ್ರನಂತೆ, ಪರದೈವಕೋಲಾಹಲಂ- ಶಿವೇತರದೇವತೆಗಳಿಗೆ ಲೂಟಿಮಾಡುವ, ಪರ......ಕಂಠೀರವಂ— ಪರವಾದಿಜನ- ಅನ್ಯಮತವಾದಿಜನಗಳ, ಮದ- ಗರ್ವವೆಂಬ, ಮದಗಜ- ಮದ್ದಾನೆಗಳ, ವಿದು- ಕುಂಭಸ್ಥಲವನ್ನು, ವಿದಳನ- ಸೀಳುವದರಲ್ಲಿ, ಕಂಠೀರವಂ- ಸಿಂಹನಾದ ಶಂಕರದಾಸಯ್ಯನು, ಹರಸಮಯಂ- ಶಿವಮತವು, ನಲಿಯೆ- ಸಂತೋಷಪಡಲು, ಪರಸಮಯಂ- ಶಿವೇತರಮತವು, ಬೆದರೆ- ಭಯಪಡಲು, ಸಂಭ್ರಮದಿಂ, ನಡೆಗೊಂಡು- ಹೊರಟು, ಪರದೈವನಿಕೇತನಂಗಳಂ-ಶಿವೇತರದೇವಸ್ಥಾನಗಳನ್ನು; ಅಳವಿಯೊಳ್-ಸಮೀಪದಲ್ಲಿ, ನಿಂದು, ನಿಜ......ವಿಲೋಚನದಿಂ— ನಿಜ- ತನ್ನ, ನಿಟಿಲತಟ- ಹಣೆಯ ಪ್ರದೇಶದಲ್ಲಿ, ಘಟಿತ- ಸೇರಿಸಲ್ಪಟ್ಟ, ಪಟುತರ- ಅತಿ ಸಮರ್ಥವಾದ, ವಿಕಸ್ವರ- ಪ್ರಜ್ವಲಿಸುವ, ವೀತಿಹೋತ್ರ- ಅಗ್ನಿಯ, ವಿಲೋಚನದಿಂ- ಕಣ್ಣಿನಿಂದ, ಮುಳಿದು- ಕೋಪಿಸಿ, ಘುಳುಘುಳಿಸಿ, ಘುಳಿಲನೆ-ಬೇಗನೆ, ಉರುಪುವ- ಸುಡುವ, ಆಗಳ್, ಅಸವಸದಿಂ- ಅವಸರದಿಂದ, ಅರ್ಧಾಲಯಂ- ಅರ್ಧದೇವಸ್ಥಾನವು, ಉರಿಯೆ, ಸರಭಸಂ- ವೇಗದಿಂ ಕೂಡಿ, ಪರಿವ- ಓಡುವ, ಬಳಾರಿಮಾರಿಮಾತೃಕಾನಿಕಾಯಮುಂ— ಬಳಾರಿ- ಇಂದ್ರ, ಮಾರಿ, ಮಾತೃಕಾ - ಬ್ರಾಹ್ಮಿ, ಮಾಹೇಶ್ವರಿ, ಕೌಮಾರಿ,ವೈಷ್ಣವಿ, ವಾರಾಹಿ, ಇಂದ್ರಾಣಿ, ಚಾಮುಂಡಿ. ಎಂಬ ಸಪ್ತಮಾತೃಕೆಯರ, ನಿಕಾಯಮುಂ- ಸಮೂಹವೂ; ಅಳ್ಕಿರಿದು- ಆವರಿಸಿ, ಬಳ್ಳಿವರಿವ-ಅಭಿವೃದ್ಧಿಯನ್ನೈದುವ, ದಳ್ಳುರಿ- ಹೆಚ್ಚಾದಜ್ವಾಲೆಯ, ಅಳುರ್ಕೆಯಿಂ- ಆವರಿಸುವಿಕೆಯಿಂದ, ಗೋಪುರಂ, ಸೀಳ್ದು, ಸಕ್ಕೆವಿಡೆ- ಚಕ್ಕೆಯು ಬಿಡಲು; ಮುಕ್ಕೊಡೆ- ಮೇಲಿಟ್ಟಿರುವ ಮೂರುಛತ್ರಿಯು, ಛಿಟಿಲ್, ಎನೆ, ಸಿಡಿಯೆ, ಪೆಳರ್ದು- ಭಯಪಟ್ಟು, ನಡುಗಿ, ಬಾಯ್ವಿಡುವ, ಮಾಳವಿವೆರಸು- ಮಾಳವಿಯೆಂಬ ಶಕ್ತಿಯಿಂ ಕೂಡಿ, ನಿಟ್ಟೋಟದಿಂ- ನೆಟ್ಟಗಿರುವ ಓಟದಿಂದ, ಓಡುವ, ಮೈಲಾರನುಂ; ಪ್ರಚುರಕಚನಿಚಯಂ- ಪ್ರಸಿದ್ಧವಾದ ಕೂದಲಿನ ಸಮೂಹವು, ಗರಿಗರಿಲನೆ, ಉರಿಯೆ, ತಳಮಳಗುಗೊಂಡು- ಲವಲವಿಕೆಯು ಹೊಂದಿ, ತಲೆಗೊಡಹಿ- ತಲೆಯನ್ನೊದರಿಕೊಂಡು, ಕಡೆವರಿವ- ಬಂದುಪಾರ್ಶ್ವ

ಗು ನಿತಂಬಮಂಡಳಮು ನಳುರ್ದು ಮಾಸುರಿಕೆ ಮಿಗೆ ತಳಿರುಟ್ಟ ಪುಳಿಂದಿಯರ ವಿಭ್ರಮಂದ ಳೆವು ಮೊರೆಯಿಡುತೆ ಪರಿವ ಯಕ್ಷಿಣಿಯರುಂ ಕರತಳದ ಪಿಂಛಗುಚ್ಛಮುರಿವರಿದು ಬೇಂ ಭೋಂಕನೆ ಬಿಸುಟು ವಿಸಟಂಬರಿವ ನಗ್ನಾಂಗಜಿನಪ್ರಕರಮುಂ ದಾವಾನಲಂ ಕೊಂಡ ಕಾಳ್ಕೊರಡುತೆ ಶಿಖಿಶಿಖಾಕಬಳಿತಾಂಗನಾಗಿ ಬಿಗುರ್ತು ಹಾಹಾರವಂ ಪೊಣ್ಮೆ ಮುನ್ನುಂಡ ಜಾರಕ್ತರಸಮಂ ಕಾರುತಂ ಪಾರುವ ಪ್ರೇತರಾಜನುಂ ಮಿಂತು ಪಲಾಯನಂಬೆತ್ತು ತಲ್ಲಣಿಸಿ ಮಲ್ಲಳಿಗೊಳ್ವ ಸಕಲದೇವತಾನಿಕುರುಂಬಮೆಲ್ಲಂ ಪುಲ್ಗರ್ಚಿ ಪಳ್ಗಿರಿದು ಕೃತಾಂಜಲಿಪುಟಂಬೆರಸು ನಿಜಚರಣನಳಿನಮಂ ಶರಣ್ಬುಗೆ ತಜ್ಜಗದ್ಗುರು ನಿಶ್ಶಂಕಶಂಕರದಾಸದೇವನಭಯಮನಿತ್ತು ಕರುಣಿಸೆ ತದ್ದೇವತಾನಿವಹಮಘನಮಹಿಮನಂಘ್ರಿಯನೋಲಗಿಸಲೆಳಸಿ॥

ಸ್ರ॥ ಮೈಲಾರಂ ಛತ್ರಮಂ ಮಾಳವಿ ಮಣಿಮಯತತ್ಪಾದುಕಾದ್ವಂದ್ವಮಂ ತಾಂ।
ಬೂಲೋದ್ಯತ್ಪೇಟಿಯಂ ಬಾಹ್ಲಿಕೆ ಭಸಿತವಿಳತ್ಪಾತ್ರೆಯಂ ಬ್ರಹ್ಮರಕ್ಷಃ॥ ಪಾಲಂ ಸೂ
ಚೀಗುಣಂ ತೀವಿದ ಕರಡಿಗೆಯಂ ಡಾಕಿನೀಶಕ್ತಿ ಶೌರ್ಯ। ಶ್ರೀಲೋಲಂ ಭೈರವಂ ಶೂಲಮನೆ

---

ಕ್ಕೆ ಓಡುವ, ಏಕನಾಥೆಯುಂ- ಏಕನಾಥೆಯೆಂಬ ಶಕ್ತಿಯೂ, ಬಗಿದು, ಉಟ್ಟ, ಪಟ್ಟಣಿಗೆ-ಪಟ್ಟಸೀರೆಯು, ನಿಂದು, ಉರಿಯೆ, ಕೇಸುರಿವೆಳಗು- ಕೆಂಪಾದ ಜ್ವಾಲೆಯ ಬೆಳಕು, ನಿತಂಬಮಂಡಲಮಂ- ಕಟಿಪಶ್ಚಾದ್ಭಾಗವನ್ನು, ಅಳುರ್ದು- ಆವರಿಸಿ, ಮಾಸುರಿಕೆ- ಪ್ರಜ್ವಲನವು, ಮಿಗೆ- ಹೆಚ್ಚಾಗಲು, ತಳಿರುಟ್ಟ-ಚಿಗುರನ್ನುಟ್ಟ, ಪುಳಿಂದಿಯರ- ಬೇಡಿತಿಯರ, ವಿಭ್ರಮಂದಳೆದು- ವಿಲಾಸವಂ ಹೊಂದಿ, ಮೊರೆಯಿಡುತೆ- ಗೋಳಾಡುತ್ತ, ಪರಿವ ಓಡುವ, ಯಕ್ಷಿಣಿಯರುಂ; ಕರತಳದ, ಪಿಂಛಗುಚ್ಛಮಂ- ನವಿಲಗರಿಯ ಹೊರೆಯಂ, ಉರಿವರಿದು- ಉರಿಹತ್ತಿ, ಬೇಯೆ, ಭೋಂಕನೆ- ಬೇಗನೆ, ಬಿಸುಟು, ವಿಸಟಂಬರಿವ- ಇಷ್ಟಬಂದಂತೆ ಓಡುವ, ನಗ್ನಾಂಗಜಿನಪ್ರಕರಮುಂ- ಬೆತ್ತಲೆಯಾದ ಜಿನದೇವತೆಗಳ ಸಮೂಹವೂ; ದಾವಾನಲಂ-ಕಾಳ್ಕಿಚ್ಚು, ಕೊಂಡ- ಗ್ರಹಿಸಿದ, ಕಾಳ್ಕೊರಡುತೆ-ಕಾಡು ಕೊರಡಿನಂತೆ, ಶಿಖಿಶಿಖಾಕಬಳಿತಾಂಗಂ— ಶಿಖಿ- ಅಗ್ನಿಯ, ಶಿಖಾ- ಜ್ವಾಲೆಯಿಂದ, ಕಬಳಿತ- ತುತ್ತಾಗಿಸಾಡಲ್ಪಟ್ಟ, ಅಂಗಂ- ಅವಯವವುಳ್ಳವನು, ಆಗಿ, ಬಿಗುರ್ತು- ಭಯಪಟ್ಟು, ಹಾಹಾರವಂ- ಹಾ ಹಾ ಎಂಬ ಶಬ್ದವು, ಪೊಣ್ಮೆ- ಉಂಟಾಗಲು, ಮುನ್ನ, ಉಂಡ, ಅಜಾರಕ್ತರಸಮಂ-ಆಡಿನ ರಕ್ತವನ್ನು, ಕಾರುತಂ- ಕಕ್ಕುತ, ಪಾರುವ, ಪ್ರೇತರಾಜನುಂ, ಇಂತುಪಲಾಯನಂಬೆತ್ತು-ಓಡಿ, ತಲ್ಲಣಿಸಿ-ಭಯದಿಂ ಬೆರಗಾಗಿ, ಮಲ್ಲಳಿಗೊಳ್ವ- ಗುಂಪಾಗುವ, ದೇವತಾನಿಕುರುಂಬಮೆಲ್ಲಂ- ಎಲ್ಲಾ ದೇವತೆಗಳ ಸಮೂಹವೂ, ಪುಲ್ಗರ್ಚಿ- ಹುಲ್ಲನ್ನು ಕಚ್ಚಿಕೊಂಡು, ಪಳ್ಗಿರಿದು,ಕೃತಾಂಜಲಿಪುಟಂಬೆರಸು-ಕಯ್ಯಂ ಮುಗಿದು, ನಿಜಚರಣನಳಿನಮಂ- ತನ್ನ ಪಾದಕಮಲವನ್ನು, ಶರಣ್ಬುಗೆ- ಸಂರಕ್ಷಕವನ್ನಾಗಿ ಹೊಂದಲು, ತಜ್ಜಗದ್ಗುರು- ಆ ಜಗತ್ತಿಗೆ ಆಚಾರ್ಯನಾದ, ನಿಶ್ಶಂಕಶಂಕರದಾಸದೇವಂ- ಭಯರಹಿತನಾದ ಶಂಕರದಾಸಾರ್ಯನು, ಅಭಯಮಂ, ಇತ್ತು- ಕೊಟ್ಟು, ಕರುಣಿಸೆ, ತದ್ದೇವತಾನಿವಹಂ, ಅಘನಮಹಿಮನ, ಅಂಘ್ರಿಯಂ, ಓಲಗಿಸಲ್- ಸೇವಿಸುವದಕ್ಕೋಸ್ಕರ, ಎಳಸಿ- ಅಪೇಕ್ಷಿಸಿ. * * * * * * * * * * * *

ಮೈಲಾರಂ, (ಎಂಬುವನು) ಛತ್ರಮಂ, ಮಾಳವಿ, (ಎಂಬುವಳ್) ಮಣಿಮಯತತ್ಪಾದುಕಾದ್ವಂದ್ವಮಂ- ರತ್ನಖಚಿತವಾದ ಶಂಕರದಾಸನ ಪಾದುಕೆಗಳೆರಡನ್ನು,ಬಾಹ್ಲಿಕೆ,(ಎಂಬವಳ್) ತಾಂಬೂಲೋದ್ಯತ್ಪೇಟಿಯಂ-ತಾಂಬೂಲದ ಅಧಿಕವಾದ ಪೆಟ್ಟಿಗೆಯನ್ನು,ಬ್ರಹ್ಮರಕ್ಷಃಪಾಲಂ, (ಎಂಬವಂ)ಭಸಿತವಿಳತ್ಪಾತ್ರೆಯಂ-ಭಸ್ಮದಿಂ ಕೂಡಿದ ಬಟ್ಟಲನ್ನು, ಡಾಕಿನೀಶಕ್ತಿ- ಡಾಕಿನಿ ಎಂಬ ಶಕ್ತಿಯು, ಸೂಚೀಗುಣಂ- ಸೂಜಿದಾರವು, ತೀವಿದ- ತುಂಬಿದ, ಕರಡಿಗೆಯಂ- ಭರಣಿಯನ್ನು, ಶೌರ್ಯಶ್ರೀಲೋಲಂ- ಪರಾಕ್ರಮಸಂಪತ್ತಿನಲ್ಲಾಸಕ್ತ

ತಳೆದು ತತ್ಸೇವೆಗೆಯ್ವುತ್ತಮಿರ್ದರ್ ॥ ... ... ... ॥೩೮॥

ಉ॥ ಚಾರುತರಾಲಯಾಂಕಣರಜಂಡೆಗೆವಳ್ಮಸಣಬ್ಬೆ ಸುತ್ತುವ । ಳ್ಕಾರಿರುಳ್ಕಪ್ಪ ದುಂ ಬಳಸಿ ತದ್ಗೃಹಮಂ ಘನಕಾಳರಾತ್ರಿ ಯಾ ॥ ಭೈರವಿ ತಪ್ಪಳಿಂಧನವಂ ನೊಳ್ಳುದು ಗಾವ ಳೊರಲ್ದು ಚಂಡಿಕಾ। ನಾರಿ ಕುಮಾರಿ ಮಾರಿ ಪುಣರ್ಪ ರ್ಷ್ಕರುನಲ್ಗಳ ನಲ್ಲಿಪಾಡುತಂ॥

ಮತ್ತೇ॥ ಚೆಳೆಯಾಂಗೆಯ್ವನ ಳೇಕನಾಥೆ ಸಲಿಲಬ್ರಹ್ಮಾಣಿ ನೀರ್ದರ್ಪ ಳು । ಜಜ್ವ ಳಚಾಮುಂಡಿಕೆ ಕಾವಳಾಲಯದಬಾಗಿಲ್ವಾಡಮಂ. ಚಾರುಕಾ ॥ ಹಳಿಯಂ ಕಾಟಕರ್ಮೋಟಕ ರ್ನುಡಿಯಿಪ ರ್ಕಪ್ಪಂಗಳಂ ತೆತ್ತು ಮಂ । ಜುಳಭಾವಂ ಮಿಗೆ ಯೋಗಪೀಠನಿವಹಂ ಬಾ ಳ್ಗಂತದೀಯಾಜ್ಞೆಯಿಂ ॥ .. ... .. .. ॥೪೦॥

ವ ॥ ಸಂತತ ಮಿಂತೆಸೆವ ಶಂಕರದಾಸದೇವನ ನಿರಂಕುಶಮಹಿಮೆಯಂ ಜಗದೇಕಮ ಲ್ಲನೆಂಬ ಭೂವಲ್ಲಭಂ ಕೇಳ್ದಳ್ಕಜಂಗೊಂಡು ॥ * * * * * * * * *

ಕಂ ॥ ಫಣಿಧರನಿಂ ಪಡೆದಂಗಡ । ಪಣೆಗಣ್ಣಂ ಸುರರನುರುಪುವಂಗಡ ಪರರಂ ॥ ಗಣಿ ಸಂಗಡ ನೋಳ್ಪಂ ತ । ನ್ನಣಕಮ ನೆಮ್ಮೂರೊಳಿರ್ಪ ದಾಮೋದರನಂ ॥ ... ॥೪೧॥

---

ನಾದ, ಭೈರವಂ, ಶೂಲಮನೆ, ತಳೆದು, ತತ್ಸೇವೆಗೆಯ್ವುತ್ತಂ, ಇರ್ದರ್. ... ॥೩೮॥

ಅಲ್ಲಿ, ಶಂಕರದಾಸಾರ್ಯನ ಮನೆಯಲ್ಲಿ, ಮಸಣಬ್ಬೆ-ಮಸಣಮ್ಮನು, ಚಾರುತರಾಲಯಾಂಕಣರಜಂಡೆಗೆವಳ್- ಮನೋಹರವಾದ ಮನೆಯ ಪ್ರದೇಶದ ಧೂಳನ್ನು ಹೋಗಲಾಡಿಸುವಳು, (ಅಂದರೆ ಕಸವಂ ಗುಡಿಸುವಳು) ಘನಕಾಳರಾತ್ರಿ, ಕಾರಿರುಳ್- ಕರ್ರಗಾದ ರಾತ್ರಿಯು, ಅಪ್ಪುದುಂ-ಆಗುತಲೂ, ತದ್ಗೃಹಮಂ- ಆ ಶಂಕರದಾಸಯ್ಯನ ಮನೆಯನ್ನು, ಬಳಸಿ, ಸುತ್ತುವಳ್, ಆಭೈರವಿ,ಇಂಧನಮಂ- ಸೌದೆಯನ್ನು, ತಪ್ಪಳ್; ಚಂಡಿಕಾನಾರಿ, ಒರಲ್ದು- ಪ್ರೀತಿಸಿ, ಒಲ್ದುರುಗಾವಳ್- ಒಳ್ಳೆಯ ಹಸುಗಳಂ ಕಾಯುವಳು; ಕುಮಾರಿ, ಮಾರಿ, (ಇವರುಗಳು) ನರುನೆಲ್ಗಳಂ- ಪುಣುಗುರಾಜನ ಬತ್ತವನ್ನು, ಪಾಡುತಂ,ಮಿದಿವರ್- ಕುಟ್ಟುವರು. ... ... ... ... ... ॥೩೯॥

ಏಕನಾಥೆ, ಚೆಳೆಯಂಗೆಯ್ವಳ್- ನೀರನ್ನು ಚಿಮುಕಿಸುವಳು, ಸಲಿಲಬ್ರಹ್ಮಾಣಿ, ನೀರ್ದರ್ಪಳ್- ನೀರನ್ನು ತರುವಳು; ಉಜ್ಜ್ವಳಚಾಮುಂಡಿಕೆ, ಆಲಯದ- ಮನೆಯ, ಬಾಗಿಲ್ವಾಡಮಂ, ಕಾವಳ್; ಕಾಟಕರ್ಮೋಟಕರ್, ಚಾರುಕಾಹಳಿಯಂ- ಮನೋಹರವಾದ ಕಹಳೆಯನ್ನು, ನುಡಿಯಿಪರ್; ಯೋಗಪೀಠನಿವಹಂ- ಯೋಗಾಸನರ ಸಮೂಹವು, ಕಪ್ಪಂಗಳಂ, ತೆತ್ತು-ಕೊಟ್ಟು, ಮಂಜುಳಭಾವಂ- ಮನೋಹರವಾದಭಿಪ್ರಾಯವು, ಮಿಗೆ, ತದೀಯಾಜ್ಞೆಯಿಂ- ಆ ಶಂಕರದಾಸಾರ್ಯನ ಅಪ್ಪಣೆಯಿಂದ, ಬಾಳ್ಗುಂ. ... ೪೦॥

ಸಂತತಂ, ಇಂತು, ಎಸೆವ, ಶಂಕರದಾಸದೇವನ, ನಿರಂಕುಶಮಹಿಮೆಯಂ- ಪ್ರತಿಬಂಧಕವಿಲ್ಲದ ಮಾಹಾತ್ಮ್ಯವನ್ನು, ಜಗದೇಕಮಲ್ಲಂ, ಎಂಬ, ಭೂವಲ್ಲಭಂ-ರಾಜನು, ಕೇಳ್ದು, ಅಳ್ಕಜಂಗೊಂಡು- ಹೊಟ್ಟೆಯ ಕಿಚ್ಚಂ ಹೊಂದಿ.

ಫಣಿಧರನಿಂ- ಸರ್ಪಧರನಾದ ಶಿವನಿಂದ, ಪಣೆಗಣ್ಣಂ, ಪಡೆದಂಗಡ- ಪಡೆದುಕೊಂಡನಂತೆ! ಸುರರಂ- ದೇವತೆಗಳನ್ನು, ಉರುಪುವಂಗಡ- ಸುಡುವನಂತೆ, ಪರರಂ- ಶಿವಭಕ್ತೇತರರನ್ನು, ಗಣಿಸಂಗಡ- ಎಣಿಸುವದಿಲ್ಲವಂತೆ! ತನ್ನ, ಅಣಕಮಂ- ಶೌರ್ಯವನ್ನು, ನೋಳ್ಪಂ, ಎಮ್ಮ ಊರೊಳ್, ಇರ್ಪ, * ದಾಮೋದರನಂ- ವಿಷ್ಣುವನ್ನು. ... ... ... ... ... ॥೪೧॥

---

* (ಅವ) ದಾಮ- ವೈಜಯಂತಿಯೆಂಬ ಮಾಲಿಕೆಯೇ, ಉದರಂ- ಹೊಟ್ಟೆಯಮೇಲುಳ್ಳವನು. ॥೪೧॥

ಕಂ ॥ ಸುಟ್ಟೊಡೆ ತನ್ನಯ ಮಹಿಮೆಯ । ಕಟ್ಟುರ್ಬ್ಬಿ ಯರಿಯಲಕ್ಕು ಮೆಂದಾಗ್ರ
ಹವಂ ॥ ತೊಟ್ಟುರ್ಕ್ಕಿ ಪಂಚಲೋಹದೆ । ದಿಟ್ಟಂ ಮಾಡಿಸಿದ ನುಗ್ರದಾಮೋದರನಂ ॥೪೩॥

ಕಂ ॥ ಸ್ಥೂಲಹರಿವಿಗ್ರಹಕೆ ತ । ಕ್ಕಾಲಯಮಂ ನೆಗಳ್ದು ರತ್ನದೊಡವಿಟ್ಟು ಮಹೀ ॥
ಪಾಲಂ ಪೂಜಿಸಿ ಸಂಭ್ರಮ । ಲೋಲಂ ಮದಮತ್ತಚಿತ್ತ ನಿರ್ಪಿನ ಮಿತ್ತಲ್ ॥ ॥೪೪॥

ಕಂ ॥ ಶಂಕರದಾಸಂ ವೈರಿಭ । ಯಂಕರ ನಾವಾರ್ತೆಯಂ ಸಮಾಕರ್ಣಿಸಿ ನಿಃ ॥ ಶಂ
ಕಮತಿ ಯಾರ್ಪ್ಪವೆರಸಿ ಕ । ರಂ ಕಾಯ್ಪಿಂ ದಲ್ಲಿಗೆಯ್ದಲುಜ್ಜುಗಿಸಿರ್ದ್ದಂ ॥ .. ॥೪೫॥

ವ ॥ ಅನ್ನೆವರ ಮಾದಾಮೋದರಮಂದಿರಾಂತರಾಳದೊಳ್ ॥ * * * * *

ಚಂ ॥ ಸೊಡರ್ಗುಡಿ ನಂದಿದತ್ತು ಪಗಲೂಳ್ದುದು ಜಂಬುಕರಾಜಿ ಗೋಪುರಂ ।
ನಡುಗಿದುದೇಳ್ಗೆವೆತ್ತ ಕಳಶಂ ಮುರಿವೀಳ್ದುದು ಗಾರುಡಧ್ವಜಂ ॥ ಕೆಡೆದುದು ಸಾಲಭಂಜಿಕೆ
ಗಳಶ್ರುವನು ವಶ್ರುವ ನಲ್ಲಿ ಕೋವುಳೇ । ಳ್ದಡಿಗಡಿಗಾಡುತಿರ್ದ್ದುದು ಮುಗಿಲ್ಮಿಗೆಸೂಸಿತು
ರಕ್ತವೃಷ್ಟಿಯುಂ ॥ ... ... ... ... ... ॥೪೬॥

ವ ॥ ಇಂತುತ್ಪಾತಶತಂ ನೆಗಳ್ವಿನ ಮಾಶಂಕರದಾಸ ನಧ್ವರಮರ್ದ್ದನಕೆ ತಳರ್ವ್ವ ವೀರ
ಭದ್ರನಂತೆ. ವೀರಗಣಪರಿವೃತ ನಾನಗರಿಗೇಳ್ತಂದು ತದಾಲಯಪ್ರತೋಳಿಕೆಯಂ ಪೊಕ್ಕು

---

ಸುಟ್ಟೊಡೆ, ತನ್ನಯ, ಮಹಿಮೆಯ, ಕಟ್ಟುರ್ಬ್ಬಿ- ಅಧಿಕವಾದ ಶೌರ್ಯವು, ಅರಿಯಲ್- ತಿಳಿಯುವದ
ಕ್ಕೆ, ಅಕ್ಕುಂ, ಎಂದು, ಆಗ್ರಹವಮಂ, ತೊಟ್ಟು- ಹೊಂದಿ, ಉರ್ಕ್ಕಿ- ಗರ್ವಿಸಿ, ಪಂಚಲೋಹದೆ- ಐದುವಿಧ
ವಾದ ಲೋಹಗಳಿಂದ, ಉಗ್ರದಾಮೋದರನಂ- ಭಯಂಕರನಾದ ವಿಷ್ಣುವನ್ನು, ದಿಟ್ಟಂಮಾಡಿಸಿದಂ- ಸಿದ್ಧ
ಮಾಡಿಸಿದನು. ... ... ... ... ... ॥೪೩॥

ಮಹೀಪಾಲಂ, ಸ್ಥೂಲಹರಿವಿಗ್ರಹಕೆ- ದಪ್ಪವಾದ ವಿಷ್ಣುಮೂರ್ತಿಗೆ, ತಕ್ಕ, ಆಲಯಮಂ- ಮನೆ
ಯನ್ನು, ನೆಗಳ್ದು-ಮಾಡಿ, ರತ್ನದೊಡವಿಟ್ಟು- ರತ್ನದ ಆಭರಣಗಳನ್ನಿಟ್ಟು, ಪೂಜಿಸಿ, ಸಂಭ್ರಮಲೋಲಂ-
ಸಡಗರದಿಂದ ಆಸಕ್ತನಾಗಿ, ಮದಮತ್ತಚಿತ್ತಂ-ಗರ್ವದಿಂದುಂಡಿಸಿದಮನಸ್ಸುಳ್ಳವನಾಗಿ, ಇರ್ಪಿನಂ, ಇತ್ತಲ್.

ವೈರಿಭಯಂಕರಂ- ಶತ್ರುಗಳಿಗೆ ಭೀತಿಯನ್ನುಂಟುಮಾಡುವ, ಶಂಕರದಾಸಂ, ಆವಾರ್ತೆಯಂ- ಆ ಜ
ಗದೇವನ ಸುದ್ದಿಯನ್ನು, ಸಮಾಕರ್ಣಿಸಿ- ಕೇಳಿ, ನಿಶ್ಶಂಕಮತಿ- ಭಯವಿಲ್ಲದ ಬುದ್ಧಿಯುಳ್ಳವನಾಗಿ, ಆರ್ಪ್ಪವೆ
ರಸಿ - ಶೌರ್ಯ ವಿಂಕೂಡಿ,ಕರಂ- ಅತ್ಯಂತವಾಗಿ, ಕಾಯ್ಪಿಂದೆ - ಕೋಪದಿಂದ, ಅಲ್ಲಿಗೆ - ವಿಷ್ಣುದೇವಸ್ಥಾನ
ದ ಬಳಿಗೆ, ಎಯ್ದಲ್- ಹೋಗುವದಕ್ಕೆ, ಉಜ್ಜುಗಿಸಿ- ಪ್ರಯತ್ನಪಟ್ಟು, ಇರ್ದಂ. ... ॥೪೪॥

ಅನ್ನೆವರಂ- ಅಷ್ಟರಲ್ಲಿ, ಆದಾಮೋದರಮಂದಿರಾಂತರಾಳದೊಳ್- ಆ ವಿಷ್ಣುದೇವಸ್ಥಾನದೊಳಗೆ.

ಸೊಡರ್ಗುಡಿ- ದೀಪದ ಕುಡಿಯು, ನಂದಿದತ್ತು-ಆರಿಹೋಯ್ತು. ಪಗಲ್, ಜಂಬುಕರಾಜಿ- ನರಿಗಳಪಜ್ತಿ
ಯು, ಊಳ್ದುದು- ಕೂಗಿತು, ಗೋಪುರಂ, ನಡುಗಿದುದು, ಏಳ್ಗೆವೆತ್ತ-ಉನ್ನತವಾದ, ಕಳಶಂ, ಮುರಿವೀಳ್ದು
ದು- ಮುರಿದು ಬಿದ್ದಿತು, ಗಾರುಡಧ್ವಜಂ- ಗರುಡಗಂಬವು, ಕೆಡೆದುದು- ಬಿದ್ದಿತು, ಸಾಲಭಂಜಿಕೆಗಳ್- ಗೊಂ
ಬೆಗಳು, ಅಶ್ರುವಂ- ಕಣ್ಣೀರನ್ನು, ಇಕ್ಕಿದವು, ಅಲ್ಲಿ, ಕೋವುಳ್-ಚೆಂಡೂಳು ಏಳ್ದು, ಅಡಿಗಡಿಗೆ, ಆಡುತೆ, ಇ
ರ್ದ್ದುದು, ಮುಗಿಲ್- ಮೋಡವು, ಮಿಗೆ-ಹೆಚ್ಚಾಗಿ,ರಕ್ತವೃಷ್ಟಿಯುಂ- ರಕ್ತದಮಳೆಯನ್ನು, ಸೂಸಿತು. ॥೪೫॥

ಇಂತು, ಉತ್ಪಾತಶತಂ- ಅನೇಕ ಅಶುಭಸೂಚನೆಗಳು, ನೆಗಳ್ವಿನಂ- ಉಂಟಾಗುತ್ತಿರುವಲ್ಲಿ, ಆಶಂಕರ
ದಾಸಂ, ಅಧ್ವರಮರ್ದನಕೆ- ಯಜ್ಞನಾಶಕ್ಕೆ, ತಳರ್ವ- ಹೋಗುವ, ವೀರಭದ್ರನಂತೆ, ವೀರಗಣಪರಿವೃತಂ-
ವೀರಶೈವ ಸಮೂಹದಿಂದ ಸುತ್ತುವರಿ ಪಲ್ಪಟ್ಟವನಾಗಿ, ಆನಗರಿಗೆ-ಆ ಜಗದೇವನ ಪಟ್ಟಣಕ್ಕೆ, ಏಳ್ತಂದು,

ಮಿಕ್ಕು ಮಹಾಮಹೋಗ್ರಮುಸಗಿ ಪ್ರೊಂದೆರೆಯ ನಗಲೆ ನೂಂಕಿ ಪರಿಸದೊಳ್ನಿಂದು ಮುಳಿಸಿಂ ನಿಟಿಲತಟಶಿಖಿನಯನಮಂ ನಸುದೆರೆಯಲೊಡನೆ ॥ * * * * * * * *

ಚಂ ॥ ಚಟಚಟನಿಸ್ವನಂ ನಿಮಿರೆ ಕೆಂಗಿಡಿ ಸೂಸೆ ಪ್ರೊದವಳ್ದು ಪೊಣ್ಮುತು । ತ್ಕಟಿಸೆ ಕಡುಗಿ ಪೊಂಬೆಳಗನಾಳ್ದರಿ ಮಾಲೆಯನಪ್ಪಿ ಲೋಹಸಂ ॥ ಘಟಿತಮುಕುಂದವಿಗ್ರಹಮನೊತ್ತಿ ತುಡುಂಕೆ ಮುಸುಂಕಿ ಪಾಯ್ದು ತ । ತ್ಪಟುನಿಟಲಾಕ್ಷವಹ್ನಿ ಪರಿಯಿಟ್ಟುದು ಸುಟ್ಟುದು ತತ್‌ಕ್ಷಣಾರ್ಧದೊಳ್ ॥ ... ... ... ... ॥೪೭॥

ಕಂ ॥ ಜಲದಧಿಪತಿ ಹರಿಯಂಗಂ । ಜಲಮಯಮಾಗುತ್ತೆ ವಹ್ನಿ ದೇವತೆಯೊಳ್ನಿ ॥ ಶ್ಚಲವೊಂದಿ ತೋರ್ಪವೋಲು । ಜ್ಜ್ವಲಿಸಿತು ಕರಗಿದ ತದುಷ್ಣಲೋಹಾಂಗರಸಂ ॥೪೮॥

ವ ॥ ಅಂತು ಹರಿಯಂಗಮೆಲ್ಲ ಮುರಿಗಣ್ಣುರಿಯಿಮುರಿಗೊಂಡರಗಿನಂತೆ ಕರಗಿಪೋಗೆ ಶರಣಜನಂ ನಲಿಯೆ ಪರಸಮಯಂ ಕೊರಗೆ ಜಗದ್ಗುರು ಶಂಕರದಾಸನಿಂತೆಸಗಿದ ವೃತ್ತಾಂತಮನಾಜಗದೇಕಮಲ್ಲಂ ಕೇಳ್ದು ಬಗೆಬೆದರಿ ವಿಸ್ಮಯಂಬಟ್ಟು ಜವದಿನೆಳ್ತಂದ ವನತನಾಗುತಭಯಂಬಡೆದಿರ್ದನಂತಪ್ಪ ಪೇರ್ಮೆಗಡರ್ಪಾಗಿ ಹರಿಮುಖ್ಯಪರದೈವಕೋಲಾಹ

---

ತಮಾಲಯಪ್ರತೋಳಿಕೆಯಂ- ಆ ದೇವಸ್ಥಾನದ ಹೊರಗಣ ಜಗಲಿಯನ್ನು, ಪೊಕ್ಕು, ಮಿಕ್ಕು- ಹೆಚ್ಚಾಗಿ, ಮಹಾಮಹೋಗ್ರಮುಸಗಿ- ಅತಿಕೋಪವೇರಿ, ಪೊಂದೆರೆಯಂ- ಚಿನ್ನದ ಅಡ್ಡತೆರೆಯನ್ನು, ನೂಂಕಿ, ಪರಿಸದೊಳ್- ಸಮೀಪದಲ್ಲಿ, ನಿಂದು, ಮುಳಿಸಿಂ, ನಿಟಿಲತಟಶಿಖಿನಯನಮಂ- ಹಣೆಯಲ್ಲಿರುವ ಅಗ್ನಿನೇತ್ರವನ್ನು, ನಸುದೆರೆಯಲ್- ಸ್ವಲ್ಪವಾಗಿ ತೆರೆಯಲು, ಒಡನೆ. * * * * * * * * * * * * *

ನಿಟಿಲಾಕ್ಷವಹ್ನಿ- ಹಣೆಗಣ್ಣಿನ ಬೆಂಕಿಯು, ಚಟಚಟನಿಸ್ವನಂ- ಚಟಚಟಎಂಬಶಬ್ದವು, ನಿಮಿರೆ- ಹೆಚ್ಚಾಗಲು, ಕೆಂಗಿಡಿ, ಸೂಸೆ- ಚೆಲ್ಲಲು, ಪೊದವಳ್ದು- ಹೆಚ್ಚಾಗಿ, ಪೊಣ್ಮುತೆ- ಹೊರಕ್ಕೆ ಹೊರಡುತ್ತ, ಉತ್ಕಟಿಸಿ- ಉಬ್ಬಿ, ಕಡುಗಿ- ಮುಂಬರಿದು, ಪೊಂಬೆಳಗಂ- ಹೊಂಬಣ್ಣವಾದಕಾಂತಿಯನ್ನು, ಆಳ್ದ-ಹೊಂದಿದ್ದ, ಉರಿ- ಜ್ವಾಲೆಯು, ಮಾಲೆಯಂ- ಪಜ್ತಿಯನ್ನು, ಅಪ್ಪಿ ಹೊಂದಿ, ಲೋಹಸಂಘಟಿತಮುಕುಂದವಿಗ್ರಹಮಂ, ಲೋಹದಿಂದಮಾಡಿಸಲ್ಪಟ್ಟ ವಿಷ್ಣುವಿನ ದೇಹವನ್ನು, ಒತ್ತಿ- ಅಮುಕಿ, ತುಡುಂಕಿ- ಬೇಗಹಿಡಿದು, ಮುಸುಂಕಿ- ಆಚ್ಛಾದಿಸಿ, ಪಾಯ್ದು- ಮೇಲೆಬಿದ್ದು, ಪರಿಯಿಟ್ಟುದು- ಸಂಚರಿಸಿತು, ತತ್ಕ್ಷಣಾರ್ಧದೊಳ್, ಸುಟ್ಟುದು. ... ... ... ... ... ... ॥೪೭॥

ಜಲದ- ನೀರಿಗೆ, ಅಧಿಪತಿಹರಿಯ- ಒಡೆಯನಾದ ವಿಷ್ಣುವಿನ, ಅಂಗಂ, ಜಲಮಯಂ, ಆಗುತ್ತೆ, ವಹ್ನಿದೇವತೆಯೊಳ್, ನಿಶ್ಚಲಂ- ಚಲಿಸದಹಾಗೆ, ಒಂದಿ, ತೋರ್ಪವೋಲ್, ಕರಗಿದ, ತದುಷ್ಣಲೋಹಾಂಗರಸಂ- ಆಕಾದಲೋಹದನೀರು, ಉಜ್ಜ್ವಲಿಸಿತು- ಪ್ರಕಾಶಿಸಿತು. ... ... ॥ ೪೮ ॥

ಅಂತು, ಹರಿಯ, ಅಂಗಮೆಲ್ಲಂ, ಉರಿಗಣ್ಣ, ಉರಿಯಿಂ, ಉರಿಗೊಂಡು, ಅರಗಿನಂತೆ, ಕರಗಿಪೋಗೆ, ಶರಣಜನಂ, ನಲಿಯೆ- ಸಂತೋಷಪಡಲು, ಪರಸಮಯಂ- ಶಿವೇತರಮತವು, ಕೊರಗೆ, ಜಗದ್ಗುರು- ಜಗತ್ತಿಗೆ ಆಚಾರ್ಯನಾದ, ಶಂಕರದಾಸಂ, ಇಂತು, ಎಸಗಿದ, ವೃತ್ತಾಂತಮಂ, ಆ ಜಗದೇಕಮಲ್ಲಂ, ಕೇಳ್ದು, ಬಗೆಬೆದರಿ- ಮನಸ್ಸಿನಲ್ಲಿಹೆದರಿ, ವಿಸ್ಮಯಂಬಟ್ಟು- ಆಶ್ಚರ್ಯವನ್ನುಹೊಂದಿ, ಜವದಿಂ- ವೇಗವಾಗಿ, ಎಳ್ತಂದು, ಅವನತಂ- ನಮಸ್ಕರಿಸಿದವನು, ಆಗುತ್ತೆ, ಅಭಯಂಬಡೆದು- ಭೀತಿರಾಹಿತ್ಯವಂಪಡೆದುಕೊಂಡು, ಇರ್ದಂ, ಅಂತಪ್ಪಪೇರ್ಮೆಗೆ- ಅಂತಾಮಹಿಮೆಗೆ, ಅಡರ್ಪು- ಆಶ್ರಯನು, ಆಗಿ, ಹರಿಮುಖ್ಯಪರದೈವಕೋಲಾಹಲಂ- ವಿಷ್ಣುಮೊದಲಾದ ಶಿವೇತರ ದೇವತೆಗಳನ್ನು ಸೋಲಿಸುವನು, ಎಂಬ, ಬಿರುದಾಂತು,ಮೆರೆವ, ಶಂಕರದಾಸ

ಲನೆಂಬ ಬಿರುದಾಂತು ಮೆರೆವ ಶಂಕರನವತಾರಶಂಕರದಾಸಯ್ಯಂಗೆ ದಾರಿದ್ರ್ಯತಂಕ ಮೆಂದು ಶಂಕೆವೆತ್ತು ಭೋಂಕನಹಂಕಾರದಿಂದೆ ಧಾನ್ಯಂಗಳುಪಿ ನಿತ್ಯನಿಧಿಯಂ ನಿರರ್ಥಂ ನೀಗಾಡಿದ ಮರುಳರ್ಗೆಮಗೆ ತಚ್ಚರಣಮೆ ಶರಣ ಮೆಂದೀರ್ವರೇಕಚಿತ್ತರಾಗುತ್ತಡಿಗಡಿಗೆ ಪೊಡಮಡುತ್ತ ಮಾವಸಿಯಿಸಿರ್ದ ಮಠಕೇಳ್ತಂದೊಳಗಣ್ಗೆ ಪೊಕ್ಕು ನೋಳ್ಪಿನ ಮಾಗಳ್ ॥ *

ಮತ್ತೇ॥ ಜಲಮಂ ತಾರೆಲೆ ಕಾಳಿ ಪಾದ್ಯಕೆ ಸರಾಗಂ ಗಂಗೆ ಯುದ್ದ ಸತ್ಪುಷ್ಪಸಂ। ಕುಳಮಂ ಗಂಧಮ ನಲ್ಲಿ ನೀ ನಿರಿಸು ಲಂಕಾದೇವಿ ನೀಂ ಪೂಜಿಸು ॥ ಉಜ್ಜ್ವಲಜಾಲೇಂದ್ರದ ದೇವಿ ಗದ್ದುಗೆಯ ನಿಕ್ಕೋರಂತೆ ನೀಂ ಭೂತಿಯಂ। ನಲವಿಂ ಶಾರದೆ ನೀಡು ಹಿಂಗುಲೆ ಕುಡೀ ಕರ್ಪೂರತಾಂಬೂಲಮಂ ॥ ... ... ... ... ॥೪೮॥

ಕಂ॥ ಮೆಲ್ಲನೆ ವೀಜನಮಂ ಪಿಡಿ। ದಿಲ್ಲಿ ಕರಂ ಬೀಸು ಮಾಣಿಕಾದೇವಿ ಯೆನುತ್ತಲ್ಲಿ ನೆರೆನೆರೆದು ಸೇವಿಪ। ಸಲ್ಲಲಿತಂ ಶಕ್ತಿವೃಂದ ಮೇನೊಪ್ಪಿದುದೋ ॥ ... ॥೪೯॥

ಮ॥ ಸ್ರ॥ ಪ್ರಣುತಶ್ರೀವಾಣಿಯರ್ಕಂಕಣಝಣಝಣಿತಂ ಪೊಣ್ಮೆ ಕೈಗಣ್ಮೆ ಲೋಲೇ। ಕ್ಷಣಧಾಮಂ ನಿಂದು ಬೀಸುತ್ತಿರೆ ಚಮರರುಹದ್ವಂದ್ವಮಂ ಪಾಡೆ ತದ್ಯಕ್ಷಿಣಿಯರ್ಕೂರ್ತಾಡೆ ಕಾಳೀವಧು ಪೊಗಳೆ ಮಹಾಭೈರವಂ ಜಟ್ಟಿಗಂ ಜೋಗಿಣಿಯರ್ಶಂಖಾದಿವಾದ್ಯಧ್ವನಿಯ ನೆಸಗೆ ಪೇರೋಲಗಂ ತೋರಿತಾಗಳ್ ॥ ... ... ॥೫೦॥

ರ ಶಂಕರದಾಸಯ್ಯಂಗೆ, ದಾರಿದ್ರ್ಯತಂಕಂ-ಬಡತನದ ತೊಂದರೆಯು, ಎಂದು, ಶಂಕೆವೆತ್ತು-ಊಹಿಸಿ, ಭೋಂಕನೆ- ಬೇಗವಾಗಿ, ಅಹಂಕಾರದಿಂದೆ, ಧಾನ್ಯಂಗಳುಪಿ, ನಿತ್ಯನಿಧಿಯಂ-ಶಾಶ್ವತವಾದನಿಕ್ಷೇಪವನ್ನು, ನಿರರ್ಥಂ-ವ್ಯರ್ಥವಾಗಿ, ನೀಗಾಡಿದ-ಹಾಳ್ಮಾಡಿಕೊಂಡ, ಮರುಳರ್ಗೆ-ಹುಚ್ಚರಾದ, ಎಮಗೆ, ತಚ್ಚರಣಮೆ-ಆ ಶಂಕರದಾಸನ ಪಾದವೇ, ಶರಣಂ- ಸಂರಕ್ಷಕವಾದದ್ದು, ಎಂದು, ಈರ್ವರ್- ಗಂಡಹೆಂಡತಿಯರು, ಏಕಚಿತ್ತರ್-ಒಂದೇವಿಧವಾದ ಮನಸ್ಸುಳ್ಳವರು, ಆಗುತ್ತೆ, ಅಡಿಗಡಿಗೆ, ಪೊಡಮಡುತ್ತಂ- ಅಡ್ಡಬೀಳುತ್ತ, ಅವರ್-ಶಂಕರದಾಸಯ್ಯರು, ವಸಿಯಿಸಿ- ವಾಸಮಾಡಿ, ಇರ್ದ, ಮಠಕೆ, ಏಳ್ತಂದು, ಒಳಗಣ್ಗೆ, ಪೊಕ್ಕು, ನೋಳ್ಪಿನಂ, ಆಗಳ್

ಎಲೆಕಾಳಿ, ಪಾದ್ಯಕೆ, ಜಲಮಂ, ತಾರ್- ತೆಗೆದುಕೊಂಡುಬಾ; ಗಂಗೆ, ನೀಂ, ಸರಾಗಂ- ಪ್ರೀತಿಯಿಂದಕೊಡಿ, ಸತ್ಪುಷ್ಪಸಂಕುಳಮಂ, ಗಂಧಮಂ, ಅಲ್ಲಿ, ಇರಿಸು; ಲಂಕಾದೇವಿ! ನೀಂ, ಪೂಜಿಸು; ಉಜ್ಜ್ವಲಜಾಲೇಂದ್ರದದೇವಿ! ಗದ್ದುಗೆಯಂ- ಪೀಠವನ್ನು, ಓರಂತೆ- ಚೆನ್ನಾಗಿ, ಇಕ್ಕು; ಶಾರದೆ! ನೀಂ, ನಲವಿಂ, ಭೂತಿಯಂ- ವಿಭೂತಿಯನ್ನು, ನೀಡು- ಕೊಡು; ಹಿಂಗುಲೆ, ಈ ಕರ್ಪೂರತಾಂಬೂಲಮಂ- ಪಚ್ಚಕರ್ಪೂರದಿಂದಕೂಡಿದ ತಾಂಬೂಲವನ್ನು, ಕುಡು. ... ... ... ... ॥೪೮॥

ಮಾಣಿಕಾದೇವಿ? ವೀಜನಮಂ- ಬೀಸಣಿಗೆಯನ್ನು, ಪಿಡಿದು, ಇಲ್ಲಿ, ಮೆಲ್ಲನೆ, ಕರಂ- ಚೆನ್ನಾಗಿ, ಬೀಸು; ಎನುತ್ತೆ, ಅಲ್ಲಿ, ನೆರೆನೆರೆದು- ಕೂಡಿಕೂಡಿ, ಸೇವಿಪ, ಸಲ್ಲಲಿತಂ- ಶ್ಲಾಘ್ಯವಾದ, ಶಕ್ತಿವೃಂದಂ- ಶಕ್ತಿಯರಗುಂಪು, ಏಂಒಪ್ಪಿದುದೊ? ... ... ... ... ॥೪೯॥

ಆಗಳ್, ಪ್ರಣುತಶ್ರೀವಾಣಿಯರ್- ಶ್ಲಾಘ್ಯರಾದ ಲಕ್ಷ್ಮಿಸರಸ್ವತಿಯರು, ಕಂಕಣಝಣಝಣಿತಂ- ಕೈಬಳೆಗಳ ಝಣಝಣವೆಂಬಶಬ್ದವು, ಪೊಣ್ಮೆ- ಹೆಚ್ಚಾಗಲು, ಲೋಲೇಕ್ಷಣಧಾಮಂ- ಚಂಚಲವಾದ ಕಣ್ಣುಗಳಕಾಂತಿಯು, ಕೈಗಣ್ಮೆ- ಹೆಚ್ಚಾಗಲು, ನಿಂದು. ಚಮರರುಹದ್ವಂದ್ವಮಂ- ಎರಡುಚಾಮರಗಳನ್ನು, ಬೀಸುತ್ತೆ, ಇರೆ, ತದ್ಯಕ್ಷಿಣಿಯರ್- ಆ ಯಕ್ಷಸ್ತ್ರೀಯರು, ಪಾಡೆ, ಕಾಳೀವಧು, ಕೂರ್ತು- ಪ್ರೀತಿಸಿ, ಆಡೆ- ಕುಣಿಯಲು, ಜಟ್ಟಿಗಂ- ಬಲಶಾಲಿಯಾದ, ಮಹಾಭೈರವಂ, ಪೊಗಳೆ, ಜೋಗಿಣಿಯರ್- ಯೋಗಿನಿಯರು, ಶಂಖಾದಿವಾದ್ಯಧ್ವನಿಯಂ, ಎಸಗೆ- ಮಾಡಲು, ಪೇರೋಲಗಂ- ದೊಡ್ಡಸಭೆಯು, ತೋರಿತು. ॥೫೦॥

ಕಂ ॥ ಅಣಿಮಾದ್ಯಷ್ಟವಿಭೂತಿಗ । ಳಣಿಯರಮೋಲಗಿಪ ದಿವ್ಯಸಿಹ್ಮಾಸನದೊಳ್ ॥ ಮಣಿದೇಳ್ವ ನಿರ್ಜ್ಜರರ ಸಂ । ದಣಿಯೊ ಳ್ಕಣ್ಗೆಸೆದ ನರರೆ ಶಂಕರದಾಸಂ ॥ ... ॥೫೧॥

ವ ॥ ಅಂತೆಸೆವ ಶಂಕರದಾಸಯ್ಯಂಗೆ ದಂಡಪ್ರಣಾಮಂಗೆಯ್ದು ಕಾರ್ಪಣ್ಯಂದೋರಿ ಕೈಮುಗಿದು ನಿಂದು ॥

ನಿರೋಷ್ಠ್ಯಚಂಪಕಮಾಲಾವೃತ್ತಂ ॥ ಶರಣಶರಣ್ಯ ಶಾಂತ ಶಶಿಶೇಖರಸಂಗತಚಿತ್ತಚೇತನಾ । ದರಚರಸಂಚಯಾಂಘ್ರಿಸರಸೀಜಸದಾರ್ಚ್ಚಕ ಸಾರಸತ್ವಸಂ ॥ ಗರ ತತಸಾಹಸಾಂಕ ಗಣರಂಜನ ನಿರ್ಜ್ಜಿತಕಾಲ ನೀತನಿ । ರ್ಜ್ಜರತತಿಲಜ್ಜ ಧೀರ ಜಯ ಶಂಕರದಾಸ ಜಗತ್ತ್ರಯಾಧಿಕ ॥ ... ... ... ... ... ॥೫೨॥

ವ ॥ ಎಂದು ಸನ್ನುತಿಗೆಯ್ದು ॥

ವೃ॥ ಕರುಣಾಸಾಗರ ಜೀಯ ದಿವ್ಯಮಹಿಮಾಲಂಕಾರ ಭಾಳಾಕ್ಷ ಶಂ । ಕರದಾಸಾರ್ಯ ಭವನ್ಮಹತ್ತ್ವಮ ನದೆಂತುಂ ಕಾಣ ದಜ್ಞ್ಞರ್ಗ್ಗೆ ನೀಂ ॥ ಶರಣಾಗೊಲ್ದೆಮಗನ್ಯಥಾ ಗತಿವಿಹೀನರ್ಗ್ಗೆಂದು ಬಾಯ್ವಿಟ್ಟು ತ । ಚ್ಚರಣಾಂಭೋರುಹಯುಗ್ಮದೊ ಳ್ಕೆಡೆದರಾ ದುರ್ಗ್ಗಾಂಬಿಯುಂ ದಾಸನುಂ ॥ .. ... ... ... ... ॥೫೩॥

---

ಮಣಿದ- ನಮಸ್ಕರಿಸಿ, ಏಳ್ವ, ನಿರ್ಜರರ- ದೇವತೆಗಳ, ಸಂದಣಿಯೊಳ್- ಗುಂಪಿನಲ್ಲಿ, ಅಣಿಮಾದ್ಯಷ್ಟವಿಭೂತಿಗಳ್- ಅಣಿಮಾಮುಂತಾದ ಅಷ್ಟೈಶ್ವರ್ಯಗಳು, ಅಣಿಯರಂ- ಮನೋಹರವಾಗಿ, ಓಲಗಿಪ- ಸೇವಿಸುವ, ದಿವ್ಯಸಿಹ್ಮಾಸನದೊಳ್, ಶಂಕರದಾಸಂ, ಕಣ್ಗೆ, ಎಸೆದಂ, ಅರರೆ- ಆಶ್ಚರ್ಯ !! ॥೫೧॥

ಅಂತು, ಎಸೆವ, ಶಂಕರದಾಸಯ್ಯಂಗೆ, ದಂಡಪ್ರಣಾಮಂಗೆಯ್ದು- ದೊಣ್ಣೆಯಂತೆ ನಮಸ್ಕರಿಸಿ, ಕಾರ್ಪಣ್ಯಂದೋರಿ- ದೈನ್ಯವಂತೋರಿಸಿ, ನಿಂದು. * * * * * * * * * * *

ಶರಣಶರಣ್ಯ- ಶರಣಾಗಿಸಂರಕ್ಷಕನಾದ, ಶಾಂತ, ಶಶಿಶೇಖರಸಂಗತಚಿತ್ತಚೇತನಾದರ- ಶಶಿಶೇಖರ-ಈಶ್ವರನಿಂದ, ಸಂಗತ- ಕೂಡಿದ, ಚಿತ್ತ- ಮನಸ್ಸು, ಚೇತನ- ಬುದ್ಧಿಯುಳ್ಳವರಲ್ಲಿ, ಆದರ- ಪ್ರೀತಿಯುಳ್ಳ, ಚರ......ಅರ್ಚ್ಚಕ— ಚರ- ಜಂಗಮರ, ಸಂಚಯ- ಸಮೂಹದ, ಅಂಘ್ರಿಸರಸಿಜ- ಪಾದಕಮಲವನ್ನು, ಸದಾ- ಯಾವಾಗಲೂ, ಅರ್ಚಕ- ಪೂಜಿಸುವ, ಸಾರಸತ್ಯಸಂಗರ- ಶ್ರೇಷ್ಠವಾದ ಸತ್ಯಪ್ರತಿಜ್ಞೆಯುಳ್ಳ, ತತಸಾಹಸಾಂಕ- ವಿಸ್ತಾರವಾದ ಸಾಹಸವೇ ಲಕ್ಷಣವಾಗುಳ್ಳ, ಗಣರಂಜನ- ಶಿವಗಣಂಗಳನ್ನು ಸಂತೋಷಪಡಿಸುವ, ನಿರ್ಜಿತಕಾಲ- ಜೈಸಲ್ಪಟ್ಟಯಮನುಳ್ಳ, ನೀತನಿರ್ಜ್ಜರತತಿಲಜ್ಜ- ನೀತ-ಹೊಂದಿಸಲ್ಪಟ್ಟ, ನಿರ್ಜರ-ದೇವತೆಗಳ, ತತಿ- ಸಮೂಹಕ್ಕೆ, ಲಜ್ಜ- ನಾಚಿಕೆಯುಳ್ಳ, ಧೀರ- ಧೈರ್ಯಶಾಲಿಯಾದ, ಜಗತ್ತ್ರಯಾಧಿಕ-ಮೂರುಲೋಕಕ್ಕೂ ದೊಡ್ಡವನಾದ, ಶಂಕರದಾಸ! ಜಯ— ಸರ್ವೋತ್ಕೃಷ್ಟನಾಗು. ॥೫೨॥

ಎಂದು, ಸನ್ನುತಿಗೆಯ್ದು-ಸ್ತೋತ್ರಮಾಡಿ. * * * * * * * * * * * *

ಕರುಣಾಸಾಗರ, ಜೀಯ- ಸ್ವಾಮಿಯಾದ, ದಿವ್ಯಮಹಿಮಾಲಂಕಾರ- ಶ್ರೇಷ್ಠವಾದ ಮಹತ್ತ್ವವೇ ಆಭರಣವಾಗುಳ್ಳ, ಭಾಳಾಕ್ಷ- ಹಣೆಗಣ್ಣುಳ್ಳ, ಶಂಕರದಾಸಾರ್ಯ! ಭವನ್ಮಹತ್ತ್ವಮಂ- ನಿನ್ನಮಹಿಮೆಯನ್ನು, ಅದೆಂತುಂ- ಅದುಹ್ಯಾಗೂ, ಕಾಣದ, ಅಜ್ಞರ್ಗೆ- ಮೂಢರಾದ, ಅನ್ಯಥಾ- ನೀನಲ್ಲದೆ ಪ್ರತ್ಯೇಕವಾಗಿ, ಗತಿವಿಹೀನರ್ಗೆ- ಪ್ರಾಪ್ಯಸ್ಥಾನವಿಲ್ಲದ, ಎಮಗೆ, ನೀಂ, ಶರಣ್- ಸಂರಕ್ಷಕನು, ಆಗು, ಎಂದು, ಆದುರ್ಗ್ಗಾಂಬಿಯುಂ- ಆದುಗ್ಗಳಮ್ಮನೂ, ದಾಸನುಂ- ಜೇಡರದಾಸನೂ, ಬಾಯ್ವಿಟ್ಟು, ತಚ್ಚರಣಾಂಭೋರುಹಯುಗ್ಮದೊಳ್- ಆ ಶಂಕರದಾಸಾರ್ಯನ ಪಾದಕಮಲವೆರಡರಲ್ಲಿ, ಕೆಡೆದರ್- ಬಿದ್ದರು. ... ॥೫೩॥

ವ ॥ ಎರಗಿ ನಿಧಿ ಬಯಲಾದಂದಮಂ ನುಡಿವ ಶಂಕರದಾಸಂ ದರಸ್ಮಿತಾಸ್ಯನಾಗಿ ॥ *

ಕಂ ॥ ಶರಣಾರ್ಥಿರವಂಗುಡುತಂ । ಶರಣಂ ನಚಿ ನೋಡಿ ನುಡಿದ ನೆಮಗಾದೆಡರಂ ॥ ಪ
ರಿಹರಿಸಿ ಧಾನ್ಯಮಿತ್ತು । ದ್ಧರಿಸಿದೆ ನಿನ್ನಂತಿರಾಪ್ತತಮ ರೆಮಗೊಳರೆ ॥ ... ॥೫೪॥

ಕಂ॥ ಇನ್ನೆವರ ಮೆನ್ನೆಡರ ನೆಲೆ । ನಿನ್ನವೊಲಾರ್ಪರಿದರಯ್ಯ ಕಡುಬಡತನದಿಂ ॥ ದಂ
ನವೆದಭಕ್ತತತಿಗೆ ಜ । ಗನ್ನುತ ನೀಂ ಬಗೆವೊಡಮರಭೂರುಹನಲ್ತೆ ॥ ... ॥೫೫॥

ಕಂ ॥ ಜಲನಿಧಿ ಯೆನಿಪಕ್ಷಯನವ । ಜಲನಿಧಿಯಂ ಪಡೆದು ಜಲಮ ನೀವಬ್ದದವೋ
ಲ್ ॥ ಸಲೆ ನೀಂ ಧಾನ್ಯದನಿಧಿವಡೆ । ದಲಸದೆ ದರೆಗೀವೆ ಧಾನ್ಯಮಂ ಘನಮಹಿಮ ॥ ॥೫೬॥

ಮ॥ ಸ್ರ॥ ಎನಗಿನ್ನುಂ ಧಾನ್ಯಮಂ ಕೊಟ್ಟಪನತುಳವದಾನ್ಯೋತ್ತಮಂ ನನ್ನಿಯಿಂ
ದಾಂ । ನೆನೆವುತ್ತಿರ್ಪನ್ನೆಗಂ ನಿನ್ನಯ ನಿಧಿ ಬಯಲಾಯ್ತಕ್ಕಟಾ ದೇವ ನೇಂ ಕೊಂ॥ಡನೋ
ಚೋರರ್ಬಂದುಕಳ್ದೊಯ್ದರೊ ಧರಣಿತಳಂ ನುಂಗಿತೋ ಖೇಚರ ರ್ಕೆ । ಮ್ಮನೆ ಕೊಂಡೇಂ
ಪೋದರೋ ತನ್ನಿಧಿಯ ನುಸಿರದೇಕಿರ್ದಪಯ್ ಭಕ್ತವರ್ಯ ॥ ... ... ॥೫೭॥

ಕಂ ॥ ಮೃಡನಿತ್ತಕ್ಷಯನಿಧಿ ಯಂ । ತಡಗೆ ನೀಂ ಸುಮ್ಮನಿರ್ಪುದೇಂ ತನ್ಮೃಡನಂ॥
ತಡೆದೀ ಗಳ್ಕೊಟ್ಟಲ್ಲದೆ । ಬಿಡೆ ನೆನೆ ಮಗುಳ್ದೀವ ನಲ್ತೆ ನಿನಗಾನಿಧಿಯಂ ॥ ॥೫೮॥

---

ಎರಗಿ- ನಮಸ್ಕರಿಸಿ, ನಿಧಿ- ನಿಕ್ಷೇಪವು, ಬಯಲಾದ- ಕಾಣದಂತಾದ, ಅಂದಮಂ- ರೀತಿಯನ್ನು, ಅ
ರುಪೆ- ಹೇಳಲು, ಶಂಕರದಾಸಂ, ದರಸ್ಮಿತಾಸ್ಯಂ- ಮುಗುಳ್ನಗೆಯಿಂ ಕೂಡಿದ ಮುಖಪದ್ಮವನು, ಆಗಿ. *

ಶರಣಂ- ಶಂಕರದಾಸನು, ಶರಣಾರ್ಥಿರವಂಗುಡುತಂ- ಶರಣಾರ್ಥಿ ಎಂಬ ಶಬ್ದವು ಮಾಡುತ್ತ, ನಚಿ-
ಚೆನ್ನಾಗಿ, ನೋಡಿ, ನುಡಿದಂ, ಎಮಗೆ, ಆದ, ಎಡರಂ- ತೊಂದರೆಯನ್ನು, ಧಾನ್ಯಮಿತ್ತು, ಪರಿಹರಿಸಿ, ಉ
ದ್ಧರಿಸಿದೆ- ನಿನ್ನಂತಿರೆ- ನಿನ್ನಹಾಗೆ, ಎಮಗೆ, ಆಪ್ತತಮರ್- ಅತ್ಯಂತ ಮಿತ್ರರು, ಒಳರೆ- ಉಂಟೇ ? ॥೫೪॥

ಅಯ್ಯ! ಇನ್ನೆವರಂ- ಇಲ್ಲಿಯುವರಿಗೂ, ನಿನ್ನವೊಲ್, ಎನ್ನ, ಎಡರಂ-ತೊಂದರೆಯನ್ನು, ಪರಿದರ್-ನಾ
ಶಪಡಿಸಿದವರು, ಆರ್ ? ಬಗೆವೊಡೆ- ವಿಚಾರಿಸಿದರೆ, ಜಗನ್ನುತ- ಲೋಕಶ್ಲಾಘ್ಯನಾದ, ನೀಂ, ಬಡತನದಿಂ
ದಂ, ನವೆವ- ಕ್ಷೀಣವಾಗುವ, ಭಕ್ತತತಿಗೆ, ಅಮರಭೂರುಹನಲ್ತೆ- ಕಲ್ಪವೃಕ್ಷನಲ್ಲವೇ ? ... ॥೫೫॥

ಘನಮಹಿಮ! ಜಲನಿಧಿ- ನೀರಿಗೆ ನಿಕ್ಷೇಪವು, ಎನಿಪ, ಅಕ್ಷಯನವಜಲನಿಧಿಯಂ- ಕ್ಷೀಣವಾಗದ ಸಮು
ದ್ರವನ್ನು, ಪಡೆದು, ಜಲಮಂ, ಈವ, ಅಬ್ದದವೋಲ್-ಮೇಘದ ಹಾಗೆ, ನೀಂ, ಸಲೆ, ಧಾನ್ಯದ, ನಿಧಿವಡೆದು,
ಅಲಸದೆ- ಆಲಸ್ಯವಂ ಹೊಂದದೆ, ದರೆಗೆ- ಭೂಮಿಗೆ, ಧಾನ್ಯಮಂ, ಈವೆ- ಕೊಡುವೆ. ... ॥೫೬॥

ಇನ್ನುಂ, ಎನಗೆ, ಧಾನ್ಯಮಂ, ಕೊಟ್ಟಪಂ- ಕೊಡುವನು, ಅತುಳವದಾನ್ಯೋತ್ತಮಂ- ಅಸದೃಶರಾ
ದ ದಾನಿಗಳಲ್ಲಿ ಶ್ರೇಷ್ಠನಾದವನು, ನನ್ನಿ- ನಿಶ್ಚಯ, ಎಂದು, ಆಂ, ನೆನೆವುತ್ತೆ- ಯೋಚಿಸುತ್ತ, ಇರ್ಪನ್ನೆಗಂ-
ಇರುವಷ್ಟರಲ್ಲಿ, ನಿನ್ನಯ, ನಿಧಿ, ಬಯಲ್, ಆಯ್ತು, ಅಕ್ಕಟಾ! ತನ್ನಿಧಿಯಂ- ಆ ನಿಕ್ಷೇಪವನ್ನು, ದೇವಂ-
ಈಶ್ವರನು, ಕೊಂಡನೋ ? ಚೋರರ್- ಕಳ್ಳರು, ಬಂದು, ಕಳ್ದು- ಕದ್ದು, ಒಯ್ದರೊ ತೆಗೆದುಕೊಂಡು
ಹೋದರೋ ? ಧರಣಿತಳಂ, ನುಂಗಿತೋ ? ಖೇಚರರ್- ದೇವತೆಗಳು, ಕೆಮ್ಮನೆ- ಸುಮ್ಮನೆ, ಕೊಂಡು,
ಪೋದರೋವೆಂ ? ಭಕ್ತವರ್ಯ! ಉಸಿರದೆ- ಹೇಳದೆ, ಏಕೆ, ಇರ್ದಪಯ್ ? ... ... ॥೫೭॥

ಮೃಡಂ, ಇತ್ತ, ಅಕ್ಷಯನಿಧಿ, ಅಂತು, ಅಡಗೆ- ಮರೆಯಾಗಲು, ನೀಂ, ಸುಮ್ಮನೆ, ಇರ್ಪ
ದೇಂ ? ತನ್ಮೃಡನಂ, ತಡೆದು, ಈಗಳ್, ಕೊಟ್ಟಲ್ಲದೆ, ಬಿಡೆಂ, ಎನೆ, ಮಗುಳ್ದು-ಪುನಃ, ನಿನಗೆ, ಆನಿಧಿಯಂ
ಈವನಲ್ತೆ ? ... ... ... ... ... ॥೫೮॥

ಕಂ ॥ ಬಡತನದಿಂ ನವೆದಪೆ ನೆ । ನ್ನಡಿವಿಡಿದೊಡೆ ನಿನಗದೇನ ನಿತ್ತಪೆನಿನ್ನುಂ ॥
ಬಿಡದೊಂದಂಬರಮುಂ ನೀಂ । ಮೃಡಂಗೆ ನೆಯ್ದಿತ್ತು ಪಡೆವುದಕ್ಷಯನಿಧಿಯಂ ॥ ೪೯ ॥

ಕಂ ॥ ಒಂದು ಕೊಟ್ಟೆರಡು ಕೊ । ಳ್ವಂದದ ವಿಕ್ರಯದ ಜಾಣ್ಮೆ ನಿಮಗೊಪ್ಪುಗುಂ
ಮೇ ॥ ನೆಂದರಿಯೆನಿದಂ ನಿನಗಾ । ವಂದದಿ ನೊಳ್ಪೀವ ನೀವ ನೆನಗಿತ್ತಪನೇ ॥ ೫೦ ॥

ಕಂ ॥ ಭಯಭಕ್ತಿಭರಿತಚರಿತಂ । ನಯವಿನಯಸಮೇತ ನಖಿಳಮಾನ್ಯವದಾನ್ಯಂ ॥
ಕ್ರಯವಿಕ್ರಯಕ್ರಿಯಾನಿ । ರ್ಣಯನಿಪುಣಂ ನೀನೆ ದಾಸ ನಿನಗಣೆಯಾವಂ ॥ ೫೧ ॥

ವ ॥ ಎಂದು ವಿಡಂಬಿಸಿ ನುಡಿದು ಖನಿತ್ರಮುಂ ಕೈಯೊಳಿತ್ತು ಭೂತಳಮ ನಿವ ನೀ
ಗಳಗುಳೆಂದು ಚರಚರಣರಜಮುನಲ್ಲಿ ತಳಿದು ಶಂಕರದಾಸಂ ದಾಸಂಗೆ ಬೆಸನೆ ತದಾಜ್ಞೆ
ಯಂ ಕೈಕೊಂಡು ಧರಿತ್ರಿಯು ನವ ನಗುಳಲೊಡನಪರಿಮಿತಂಪೊನ್ನರಾಶಿಪೊರಸೂಸೆಕಂಡು॥

ಕಂ॥ ಪಿರಿದದ್ಭುತ ಮೊಗೆಯೆ ಭಯ । ಸ್ಫುರಿತಾಂತಃಕರಣರಾಗಿ ದುರ್ಗಾಂಬಿಕೆಯುಂ॥
ವರದಾಸಯ್ಯನು ಮಾಶಂ । ಕರದಾಸಯ್ಯಂಘ್ರಿವಿಡಿದುಪೊಡಮಟ್ಟಿರ್ದರ್ ॥ ೫೨ ॥

ಕಂ ॥ ದೇವ ಭವದೀಯಮಹಿಮೆಯ । ನೀವಸುಮತಿಯಲ್ಲಿ ನೋಳ್ಪೊಡಾನೆನಿಸರ
ವಂ ॥ ಪಾವನಮೂರ್ತಿ ಕೃಪಾಕರ । ಭಾವಜಮದಹರವಿಲಾಸ ಶಂಕರದಾಸ ॥ ೫೩ ॥

---

ಬಡತನದಿಂ, ನವೆದಪೆಂ- ಕೃಶನಾಗುತ್ತಿರುವೆನು; ಎನ್ನ, ಅಡಿವಿಡಿದೊಡೆ- ಪಾದವಂ ಹಿಡಿದರೆ, ನಿನಗೆ, ಅದೇನಂ, ಇತ್ತಪೆಂ ? ಇನ್ನುಂ, ನೀಂ, ಬಿಡದೆ, ಒಂದು, ಅಂಬರಮುಂ-ವಸ್ತ್ರವನ್ನು, ನೆಯ್ದು, ಮೃಡಂಗೆ, ಇತ್ತು, ಅಕ್ಷಯನಿಧಿಯಂ, ಪಡೆವುದು. ... ... ... ... ॥೪೯॥

ಒಂದಂ, ಕೊಟ್ಟು, ಎರಡಂ, ಕೊಳ್ವ, ಅಂದದ- ಚೆನ್ನಾದ, ವಿಕ್ರಯದ, ಜಾಣ್ಮೆ-ಕೌಶಲ್ಯವು, ನಿಮಗೆ, ಒಪ್ಪುಗುಂ; (ಆಂ) ಇದಂ, ಏಂ, ಎಂದು, ಅರಿಯೆಂ; ನಿನಗೆ, ಈಶಂ, ಆವಂದದಿಂ-ಯಾವರೀತಿಯಿಂದಾದರೂ, ಈವಂ-ಕೊಡುವವನು, ಎನಗೆ, ಇತ್ತಪನೇ ? ... ... ... ... ॥೫೦॥

ದಾಸ! ನೀನೆ, ಭಯಭಕ್ತಿಭರಿತಚರಿತಂ; ನಯವಿನಯಸಮೇತಂ— ನಯ- ನೀತಿ, ವಿನಯ-ನಮ್ರತೆ, ಇವುಗಳಿಂದ, ಸಮೇತಂ; ಅಖಿಳಮಾನ್ಯವದಾನ್ಯಂ- ಸಕಲರಿಂದ ಸನ್ಮಾನಿಸಲ್ಪಡುವದಕ್ಕೆ ಯೋಗ್ಯನಾದ ದಾನಶಾಲಿಯು; ಕ್ರಯವಿಕ್ರಯಕ್ರಿಯಾನಿರ್ಣಯನಿಪುಣಂ- ಕೊಂಡುಕೊಳ್ಳುವದು ಮಾರುವದು ಈ ಕಾರ್ಯಗಳ ನಿಶ್ಚಯದಲ್ಲಿ ಕುಶಲನಾದನು; ನಿನಗೆ, ಎಣೆ- ಸದೃಶನು, ಆವಂ ? ... ... ॥೫೧॥

ಎಂದು, ಶಂಕರದಾಸಂ, ವಿಡಂಬಿಸಿ- ಹೀಯಾಳಿಸಿ, ನುಡಿದು, ಖನಿತ್ರಮುಂ- ಗುದ್ದಲಿಯನ್ನು, ಕೈಯೊಳ್, ಇತ್ತು, ಇದಂಭೂತಳಮುಂ, ಈಗಳ್; ಅಗುಳ್- ಅಗಿ; ಎಂದು, ಅಲ್ಲಿ, ಚರಚರಣರಜಮುಂ- ಜಂಗಮರ ಪಾದಧೂಳಿಯನ್ನು, ತಳಿದು- ಉದುರಿಸಿ, ದಾಸಂಗೆ- ಜೇಡರ ದಾಸಯ್ಯನಿಗೆ, ಬೆಸಸೆ- ಆಜ್ಞಾಪಿಸಲು,ಅವಂ, ತದಾಜ್ಞೆಯಂ- ಶಂಕರದಾಸಯ್ಯನ ಅಪ್ಪಣೆಯನ್ನು, ಕೈಕೊಂಡು- ಸ್ವೀಕರಿಸಿ, ಧರಿತ್ರಿಯಂ- ಭೂಮಿಯನ್ನು, ಅಗುಳಲ್, ಒಡನೆ, ಅಪರಿಮಿತಂ, ಪೊನ್ನ, ರಾಶಿ, ಪೊರಸೂಸೆ- ಹೊರಕ್ಕೆಹೊರಡಲು, ಕಂಡು. *

ಪಿರಿದು- ಹೆಚ್ಚಾಗಿ, ಅದ್ಭುತಂ- ಆಶ್ಚರ್ಯವು, ಒಗೆಯೆ- ಹುಟ್ಟಲು, ದುರ್ಗಾಂಬಿಕೆಯುಂ, ವರದಾಸಯ್ಯನುಂ, ಭಯಸ್ಫುರಿತಾಂತಃಕರಣರ್- ಭೀತಿಯಿಂದ ಪ್ರಕಾಶಿಸುವ ಮನಸ್ಸುಳ್ಳವರು, ಆಗಿ, ಶಂಕರದಾಸಯ್ಯಂಘ್ರಿವಿಡಿದು, ಪೊಡಮಟ್ಟು- ನಮಸ್ಕರಿಸಿ, ಇರ್ದರ್. ... ... ॥೫೨॥

ಪಾವನಮೂರ್ತಿ- ಪರಿಶುದ್ಧವಾದ ಶರೀರವುಳ್ಳ,ಕೃಪಾಕರ, ಭಾವಜಮದಹರವಿಲಾಸ- ಮನ್ಮಥನಗರ್ವವನ್ನು ನಾಶಪಡಿಸುವ ಲೀಲೆಯುಳ್ಳ, ದೇವ- ಸ್ವಾಮಿಯೇ, ಶಂಕರದಾಸ! ಈ ವಸುಮತಿಯಲ್ಲಿ- ಭೂಮಿಯಲ್ಲಿ,ಭವದೀಯಮಹಿಮೆಯಂ- ನಿನ್ನಮಹತ್ವವನ್ನು, ನೋಳ್ಪೊಡೆ-ನೋಡುವದಕ್ಕೆ, ಆಂ, ಎನಿಸರವಂ-ಎಷ್ಟರವನು?

ಚಂ ॥ ಪರಶಿವಮೂರ್ತಿ ನಿನ್ನ ನಖಿಳೋನ್ನತಭಾಗ್ಯಸಮಗ್ರ ನೆಂದು ನಿ । ರ್ಧರಿಸ ದೆ ಮೇಣಕಿಂಚನನೆನುತ್ತವಿವೇಕದೆ ವಿತ್ತಪಂಗೆ ಪೊ ॥ ನ್ನೊರೆಯು ಮಹೀಶ್ವರಂಗೆ ಪೊಸಟ ಕ್ಕೆಯು ನೀವವೊ ಲಲ್ಪಧಾನ್ಯಮುಂ । ಸರಭಸ ಮಿತ್ತು ಮಾಡಿದಪರಾಧಮದಂ ಕ್ಷಮಿಸಾ ದ್ರ್ಯಶೇಖರ ॥ ... ... ... .. ... ॥೭೪

ಕಂ ॥ ಪಶು ನಾಂ ಪತಿ ನೀಂ ನಿಮ್ಮಯ । ಶಿಶು ನಾಂ ಸಲೆ ತಂದೆ ನೀಂ ಮಲೀಮಸಮ ತಿ ಯಾಂ ॥ ಕುಶಲಮತಿ ನೀ ನವಿದ್ಯಾ । ವಶನಾಂ ವಶಿ ನೀ ನದಾನಿ ಯಾಂ ವಿತರಣಿ ನೀಂ ॥

ವ ॥ ಎಂದತಿದೈನ್ಯದಿಂ ವನಿತೆವೆರಸಿ ಸರ್ವಾಪರಾಧಮಂ ಸೈರಿಪುದೆಂದಡಿದಾವರೆಗೆರ ಗಿರ್ದ ದಾಸಯ್ಯನಂ ಶಂಕರದಾಸಯ್ಯಂ ಕರುಣಾರ್ದ್ರಕಟಾಕ್ಷದಿಂ ನಿರೀಕ್ಷಿಸಿ ಮನ್ನಿಸಿತೆಗೆ ದೆತ್ತುತಭಯಮಿತ್ತು ಮುನ್ನಿನಂತಿರಕ್ಷಯನಿಧಿಯಂ ಕರುಣಿಸಿ ದಂಪತಿಯಂ ಭಕ್ತಿಸುಖ ದೊಳಿರಿಸಿದ ನದುಕಾರಣದಿಂ ॥ * * * * * * * * * * * *

ಕಂ ॥ ಶರಣರೊಳೆ ಮದ ಮದಾಗದು । ದರೆಯೊಳ್ಭಕ್ತಂಗೆ ಭಕ್ತಿಚಂದ್ರಿಕೆಗಮ ನಾ ॥ ರ್ಧರವಬಲ ಮದ ಳಿದೊಡೆ ಸುಖ । ಶರನಿಧಿ ವರ್ಧಿಪುದು ಕೇಳ್ಗಣಾರ್ಣವಚಂದ್ರ ॥

ಸ್ರ ॥ ಇಂತೆಂದಾ ಮಾಚಿದೇವಂ ಪದೆದೊರೆದ ಮಹಾಭಕ್ತವೃತ್ತಾಂತಮಂ ಕೇ। ಳ್ದಂ

---

ಪರಶಿವಮೂರ್ತಿ- ಈಶ್ವರಸ್ವರೂಪನಾದ, ಅರ್ಯಶೇಖರ- ಶ್ರೇಷ್ಠರಲ್ಲಿ ಶ್ರೇಷ್ಠನಾದವನೇ! ನಿನ್ನಂ, ಅಖಿಳೋನ್ನತಭಾಗ್ಯಸಮಗ್ರಂ- ಸಕಲಗಳಾದ ಉತ್ಕೃಷ್ಟೈಶ್ವರ್ಯಗಳಿಂದ ಸಂಪೂರ್ಣನಾದವನು, ಎಂದು, ನಿರ್ಧರಿಸದೆ, ಮೇಣ್, ಅಕಿಂಚನಂ- ದರಿದ್ರನು, ಎನುತ್ತೆ, ಅವಿವೇಕದೆ- ಪರಿಜ್ಞಾನಹೀನತೆಯಿಂದ, ವಿತ್ತಪಂ ಗೆ- ಕುಬೇರನಿಗೆ, ಪೊನ್ನೊರೆಯಂ- ಚಿನ್ನದ ಒರೆಯನ್ನು, ಮಹೇಶ್ವರಂಗೆ- ಆದಿಶೇಷನಿಗೆ, ಪೊಸಟಕ್ಕೆಯಂ- ನೂತನವಾದ ಹಾಸಿಗೆಯನ್ನು, ಈವವೊಲ್, ಸರಭಸಂ- ಬೇಗನೆ, ಅಲ್ಪಧಾನ್ಯಮಂ,ಇತ್ತು, ಮಾಡಿದ, ಅದಂ, ಅಪರಾಧಮಂ, ಕ್ಷಮಿಸು. ... ... ... ... ... ॥೭೪॥

ಆಂ, ಪಶು, ನೀಂ, ಪತಿ, ಆಂ, ನಿಮ್ಮಯ, ಶಿಶು- ಮಗುವು, ನೀಂ, ಸಲೆ, ತಂದೆ; ಆಂ, ಮಲೀಮಸ ಮತಿ- ಮಲಿನವಾದ ಬುದ್ಧಿಯುಳ್ಳವನು, ನೀಂ, ಕುಶಲಮತಿ-ಪ್ರೌಢವಾದಬುದ್ಧಿಯುಳ್ಳವನು; ಆಂ, ಅವಿದ್ಯಾ ವಶಂ- ಅವಿದ್ಯೆಯೆಂಬ ಕ್ಲೇಶಕ್ಕಧೀನನಾದವನು, ಅಥವಾ ವಿದ್ಯಾಸ್ವಾಧೀನವಿಲ್ಲದವನು, ನೀಂ, ವಶಿ- ವಿದ್ಯಾ ಸ್ವಾಧೀನವುಳ್ಳವನು; ಆಂ, ಅದಾನಿ- ದಾನವಂ ಮಾಡದವನು, ನೀಂ, ವಿತರಣಿ- ದಾನಗುಣವುಳ್ಳವನು. ॥೭೫॥

ಎಂದು, ಅತಿದೈನ್ಯದಿಂ, ವನಿತೆವೆರಸಿ-ಹೆಂಡತಿಯೊಡನೆಕೂಡಿ, ಸರ್ವಾಪರಾಧಮಂ, ಸೈರಿಪುದು, ಎಂದು, ಅಡಿದಾವರೆಗೆ, ಎರಗಿ, ಇರ್ದ, ದಾಸಯ್ಯನಂ, ಶಂಕರದಾಸಯ್ಯಂ, ಕರುಣಾರ್ದ್ರಕಟಾಕ್ಷದಿಂ, ನಿರೀಕ್ಷಿಸಿ, ಮ ನ್ನಿಸಿ, ತೆಗೆದು, ಎತ್ತುತೆ, ಅಭಯಮಿತ್ತು, ಮುನ್ನಿನಂತಿರೆ- ಮೊದಲಿನಹಾಗೆ, ಅಕ್ಷಯನಿಧಿಯಂ, ಕರುಣಿಸಿ, ದಂಪತಿಯಂ, ಗಂಡಹೆಂಡತಿಯರನ್ನು ಸುಖದೊಳ್, ಇರಿಸಿದಂ, ಅದುಕಾರಣದಿಂ. * * * * *

ಗಣಾರ್ಣವಚಂದ್ರ- ಪ್ರಮಥಗಣಗಳೆಂಬ ಸಮುದ್ರಕ್ಕೆ ಚಂದ್ರನಾದ ಬಸವೇಶ್ವರನೇ! ಕೇಳ್; ಧರೆ ಯೊಳ್, ಭಕ್ತಂಗೆ, ಶರಣರೊಳೆ, ಅದುಮದಂ, ಆಗದು, ಅದು- ಆ ಗರ್ವವು, ಅಳಿದೊಡೆ, ಸುಖಶರನಿಧಿ- ಸೌಖ್ಯವೆಂಬ ಸಮುದ್ರವು, ವರ್ಧಿಪುದು. ... ... ... ... ॥೭೬॥

ಇಂತು, ಎಂದು, ಆಮಾಚಿದೇವಂ, ಪದೆದು- ಪ್ರೀತಿಸಿ, ಒರೆದ- ಹೇಳಿದ, ಮಹಾಭಕ್ತವೃತ್ತಾಂತಮಂ, ದಿಗಂತಾಕ್ರಾಂತಸ್ವಚ್ಛಪ್ರಭಾಭಾಸುರಯಶಂ- ದಿಕ್ಕುಗಳ ಕೊನೆಯಲ್ಲಿ ಆಕ್ರಮಿಸಿರುವ ಕಾಂತಿಯಿಂದ ಪ್ರ

ತಿಂತೆಂದೂಹಿಸಲ್ಬಾರದ ಘನಸುಖಮಂ ತಾಳ್ದು ಸದ್ಭಕ್ತಿಯುಕ್ತ ॥ ಸ್ವಾಂತಂ ತತ್ಪಾದ
ಪದ್ಮಕ್ಕೆರಗಿ ನುತಿಸುತಂ ರಂಜಿಸಿರ್ದಂ ದಿಗಂತಾ । ಕ್ರಾಂತಸ್ವಚ್ಛಪ್ರಭಾಭಾಸುರಯಶ ನ
ವನೀಮಾನಿನೀಮಾನನೀಯಂ ॥ ... ... ... ... ॥೬೭॥

ಲಲಿತಪದವೃತ್ತಂ ॥ ಸಜ್ಜನಸಮರ್ಚ್ಯ ಚರಪಜ್ಜಳಸಮಾರಚಿತಮಜ್ಜನ ನಿಜಾಂ
ಘ್ರಿವಿನಮಜ್ಜನಸಮೂಹಾ । ಪಜ್ಜಳದಮಾರುತ ಮರುಜ್ಜನಕ ಶಿಷ್ಟಪರಿಷಜ್ಜಲಜಭಾ
ನು ಭವರಜ್ಜುಕರವಾಲ ॥ ರುಜ್ಜಲಧಿಬಾಡಬ ಜಗಜ್ಜಠರ ತಾರಕಲಸಜ್ಜಪನಿಯುಕ್ತಮದ
ಮಜ್ಜನ ವಿದೂರ । ಪ್ರೋಜ್ಜನಿತತತ್ವಕುಲ ಬಿಜ್ಜಳಪರಿಸ್ತುತ ವಿಲಜ್ಜಖಲಭಂಜನ ಸ
ಸಜ್ಜ ಬಸವೇಶಾ ! ... ... .. ... ... ॥೬೮॥

ಚಂ ॥ ವಿಲಸಿತಕುಂದಸುಸ್ಮಿತೆ ಮುಕುಂದಸಮರ್ಚಿತೆ ನೀಲವೇಣಿ ಮಂ ! ಜುಲತರ
ಪದ್ಮಪಾಣಿ ಮಕರಧ್ವಜಪಾಲಿನಿ ಕಚ್ಛಪಾಂಘ್ರಿನಿ ॥ ಶ್ಚಲವರದಾತ್ರಿ ಶಂಭುನಿಧಿ ಯೆಂದೆನಿ

---

ಕಾಶಿಸುವ ಕೀರ್ತಿಯುಳ್ಳ, ಅವನೀಮಾನಿನೀಮಾನನೀಯಂ-ಭೂಕಾಂತೆಯಿಂದ ಸನ್ಮಾನಿಸಲ್ಪಡುವದಕ್ಕೆ ಯೋ
ಗ್ಯನಾದ ಬಸವೇಶ್ವರನು, ಕೇಳ್ದು, ಅಂತು, ಇಂತು, ಎಂದು, ಊಹಿಸಲ್ಬಾರದ- ಊಹಿಸುವದಕ್ಕಾಗದ,
ಸುಖಮಂ, ತಾಳ್ದು, ಸದ್ಭಕ್ತಿಯುಕ್ತಸ್ವಾಂತಂ- ಒಳ್ಳೆಯ ಭಕ್ತಿಯಿಂದ ಕೂಡಿದ ಮನಸ್ಸುಳ್ಳವನಾಗಿ,
ತತ್ಪಾದಪದ್ಮಕ್ಕೆ-ಆ ಮಾಚಿದೇವನ ಚರಣಕಮಲಕ್ಕೆ, ಎರಗಿ, ನುತಿಸುತಂ, ರಂಜಿಸಿ, ಇರ್ದಂ. ॥೬೭॥

ಸಜ್ಜನಸಮರ್ಚ್ಯ- ಸತ್ಪುರುಷರಿಂ ಪೂಜಿಸಿಗೊಳ್ಳುವದಕ್ಕೆ ಯೋಗ್ಯನಾದ; ಚರಪಜ್ಜಳಸಮಾರಚಿತ
ಮಜ್ಜನ-ಚರ- ಜಂಗಮರ, ಪಜ್ಜಳ-ಪಾದೋದಕದಿಂದ, ಸಮಾರಚಿತ- ಮಾಡಲ್ಪಟ್ಟ, ಮಜ್ಜನ-ಸ್ನಾನವು
ಳ್ಳ,ನಿಜಾಂಘ್ರಿ......ಮಾರುತ— ನಿಜ- ತನ್ನ, ಅಂಘ್ರಿ-ಪಾದದಲ್ಲಿ, ವಿನಮತ್-ನಮಸ್ಕರಿಸುವ, ಜನ- ಜನಗ
ಳ, ಸಮೂಹ- ಗುಂಪಿನ, ಆಪತ್- ವಿಪತ್ತೆಂಬ, ಜಳದ- ಮೋಡಕ್ಕೆ, ಮಾರುತ- ಗಾಳಿಯಾದ; ಮರುಜ್ಜನ
ಕ- ಮರುತ್- ದೇವತೆಗಳಿಗೆ, ಜನಕ- ತಂದೆಯಾದ, ಶಿಷ್ಟಪರಿಷಜ್ಜಲಜಭಾನು- ಶಿಷ್ಟ- ಸತ್ಪುರುಷರ, ಪ
ರಿಷತ್-ಸಮೂಹವೆಂಬ, ಜಲಜ- ಕಮಲಗಳಿಗೆ, ಭಾನು- ಸೂರ್ಯನಾದ; ಭವರಜ್ಜುಕರವಾಲ- ಭವ- ಜನನ
ಮರಣಾತ್ಮಕವಾದಸಂಸಾರವೆಂಬ, ರಜ್ಜು- ಹಗ್ಗಕ್ಕೆ, ಕರವಾಲ- ಕತ್ತಿಯಾದ; ರುಜ್ಜಲಧಿಬಾಡಬ- ರುತ್-
ದುಃಖವೆಂಬ, ಜಲಧಿ- ಸಮುದ್ರಕ್ಕೆ, ಬಾಡಬ- ಬಡಬಾಗ್ನಿಯಾದ; ಜಗಜ್ಜಠರ- ಜಗತ್- ಲೋಕವೇ, ಜಠರ-
ಹೊಟ್ಟೆಯಲ್ಲುಳ್ಳ; ತಾರಕಲಸಜ್ಜಪನಿಯುಕ್ತ- ತಾರಕ- ತಾರಕಮಂತ್ರದ, ಲಸತ್- ಪ್ರಕಾಶಿಸುವ, ಜಪ-
ಅನುಷ್ಠಾನದಿಂದ, ನಿಯುಕ್ತ- ಕೂಡಿದ, ಮದಮಜ್ಜನವಿದೂರ- ಮದಮಜ್ಜನ- ಗರ್ವಿಗಳಾದ ಜನಗಳಿಗೆ, ವಿ
ದೂರ- ದೂರಸ್ಥನಾದ; ಪ್ರೋಜ್ಜನಿತತತ್ವಕುಲ- ಪ್ರೋಜ್ಜನಿತ- ಉಂಟುಮಾಡಲ್ಪಟ್ಟ, ತತ್ವ- ಮೂವ
ತ್ತೆರಡುತತ್ವಗಳ, ಕುಲ- ಸಮೂಹವುಳ್ಳ, ಬಿಜ್ಜಳಪರಿಸ್ತುತ- ಬಿಜ್ಜಳರಾಜನಿಂದಕೊಂಡಾಡಲ್ಪಟ್ಟ; ವಿಲ
ಜ್ಜಖಲಭಂಜನ-ವಿಲಜ್ಜ- ನಾಚಿಕೆಯಿಲ್ಲದ, ಖಲ- ನೀಚರನ್ನು, ಭಂಜನ- ನಾಶಮಾಡುವ; ಸಸಜ್ಜ- ಸತ್ಪು
ರುಷೋದ್ಭವರಿಂಕೂಡಿದ, ಬಸವೇಶಾ. ... ... ... ॥೬೮॥

ವಿಲಸಿತಕುಂದಸ್ಮಿತೆ- ಪ್ರಕಾಶಿಸುವ ಮೊಲ್ಲೆಯ ಹೂವಿನಂತಿರುವ ಮುಗುಳ್ನಗೆಯುಳ್ಳ, ಮುಕುಂದಸ
ಮರ್ಚಿತೆ- ವಿಷ್ಣುವಿನಿಂ ಪೂಜಿಸಿಕೊಳ್ಳಲ್ಪಟ್ಟ, ನೀಲವೇಣಿ- ಕಪ್ಪಾದ ಜಡೆಯುಳ್ಳ, ಮಂಜುಲತರಪದ್ಮಪಾ
ಣಿ- ಅತಿ ಮನೋಹರವಾದ ತಾವರೆಯಂತಿರುವ ಹಸ್ತವುಳ್ಳ, ಮಕರಧ್ವಜಪಾಲಿನಿ- ಮನ್ಮಥನನ್ನು ಸಂರಕ್ಷಿಸಿದ
ಕಚ್ಛಪಾಂಘ್ರಿ- ಆಮೆಯಂತಿರುವಪಾದವುಳ್ಳ, ನಿಶ್ಚಲವರದಾತ್ರಿ- ಸ್ಥಿರವಾದ ವರವನ್ನುಕೊಡುವ, ಶಂಭುನಿಧಿ-
ಈಶ್ವರನ ನಿಕ್ಷೇಪವು, ಎನಿಪ, ಅಗ್ಗದ- ಶ್ರೇಷ್ಠವಾದ, ಅನೂನಕಾಂತಿಸಲ್ಲಲಿತತನೂವಿರಾಜಿತೆ- ಹೆಚ್ಚಾದ

ವೆಗ್ಗವನೂನಕಾಂತಿ ಸ | ಲ್ಲಲಿತತನುವಿನಾಜಿಕೆ ಮಹೇಶ್ವರಿ ರಕ್ಷಿಪುದೆನ್ನ ನಳ್ಕರಿಂ ||೬೯||

ಗದ್ಯಂ || ಇದು ವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯಾತರುಣಾರುಣಾತಪಪರಿಲಸಿತಪರಮ ಶಿವಲಿಂಗಪಾದಾರವಿಂದರಾಗಭಸಿತಭಾಸುರಲಲಾಟಪಟ್ಟಪರಸಜನಮಾನಿತೋಭಯ ಕವಿತಾವಿಶಾರದಶ್ರೀ ಷಡಕ್ಷರಿದೇವಭಕ್ತಿ ವಿರಚಿತ ಶ್ರೀಮದ್ವೃಷಭೇಂದ್ರವಿಜಯ ಮಹಾಪುರಾಣದೊಳ್ ಶಂಕರದಾಸದೇವರಕಥಾಕಥನಂ ತ್ರಯೋದಶಾಶ್ವಾಸಂ ಪರಿಸಮಾಪ್ತಂ || .. .. ... ... ... *

ತ್ರಯೋದಶಾಶ್ವಾಸಂ ಸಂಪೂರ್ಣಂ.

---

ಶ್ರೀಃ

---

ನೃ ಸಿ ಹ್ಮ ಸಂ ಹಾ ರಿ ಣೇ ಪ ರ ಬ್ರ ಹ್ಮ ಣೇ ನ ಮ ಃ.

## ಚತುರ್ದಶಾಶ್ವಾಸಂ.

ದ ಭ್ರ ಭ ಕ್ತ ಕ ಥ ನ ಂ.

ಕಂ || ಶ್ರೀದೇವೀಮಾನಸಹ | ರ್ಷೋದಯಕರರೂಪ ನನಘ ನನವಧಿಮಹಿಮಂ ||
ವೇದಾಶ್ವ ನಖಿಳಜಗದು | ತ್ಪಾದಕ ನೆಮಗೀಗೆ ಸೌಖ್ಯಮಂ ಶಿವಲಿಂಗಂ || ... ||೧||

---

ಕಾಂತಿಯಿಂದ ಶ್ಲಾಘ್ಯವಾದ ಶರೀರದಿಂ ಪ್ರಕಾಶಿಸುವ, ಮಹೇಶ್ವರಿ! ಎನ್ನಂ, ಅಳ್ಕರಿಂ- ಪ್ರೀತಿಯಿಂದ, ರಕ್ಷಿಪುದು. ... ... ... ... ... ... ||೬೯||

ಹದಿಮೂರನೆಯ ಆಶ್ವಾಸವು ಸಂಪೂರ್ಣವು.

---

ಹದಿನಾಲ್ಕನೆಯ ಆಶ್ವಾಸ ಪ್ರಾರಂಭಃ.

ಶ್ರೀದೇವೀ......ರೂಪಂ — ಶ್ರೀದೇವೀ- ಷಡ್ಗುಣೈಶ್ವರ್ಯಸಂಪನ್ನಳಾದ ಪಾರ್ವತಿಯ, ಮಾನಸ-ಮನಸ್ಸಿನಿಗೆ, ಹರ್ಷ- ಸಂತೋಷದ, ಉದಯ- ಅಭಿವೃದ್ಧಿಯನ್ನು, ಕರ- ಮಾಡುವ, ರೂಪಂ- ಆಕಾರವುಳ್ಳ, ಅನಘಂ- ಪಾಪರಹಿತನಾದ, ಅನವಧಿಮಹಿಮಂ- ಕೊನೆಯಿಲ್ಲದ ಮಹತ್ತ್ವವುಳ್ಳ, ವೇದಾಶ್ವಂ- ವೇದಗಳೇ ಕುದುರೆಗಳಾಗುಳ್ಳ, ಅಖಿಳಜಗದುತ್ಪಾದಕಂ- ಸಮಸ್ತ ಲೋಕಗಳನ್ನೂ ಹುಟ್ಟಿಸಿದ, ಶಿವಲಿಂಗಂ, ಎಮಗೆ, ಸೌಖ್ಯಮಂ, ಈಗೆ. ... ... ... ... ... ||೧||

ಕಂ || ಅಲಘುತರವಿಕ್ರಮಂ ಮಂ | ಜುಳಗುಣನಿಧಿ ಮಾಚಿದೇವ ನಿನ್ನಂ ಕೇಳೆಂ ||
ದೊಲವಿಂದುಸಿರ್ದಂ ಶುಭನಿ | ಶ್ಚಲಮತಿ ಬಸವಂಗೆ ಭಕ್ತನೋರ್ವನ ಕಥೆಯಂ || ||೨||

ಅದೆಂತೆನೆ || ವ || ಅವನೀಭಾಗದೊಳ್ ಪೆಳ್ಗೆವೆತ್ತ ಜಸಮಂ ತಾಳ್ದೊಪ್ಪುಗುಂ ಸಂಪದ | ಮುನಿರಾಜದ್ಗೃಹರಾಜಿ ದಿವ್ಯಮಣಿಹರ್ಮ್ಯವ್ರಾತವಿಭ್ರಾಜಿ ಶಾಂ || ಭವಗೇಹವ್ರಜ ಶೋಭಿ ನವ್ಯಕನಕಪ್ರಾಕಾರಕೇದ್ಯಂಶು ನೀ | ಡೆ ವಿಯಲ್ಲಕ್ಷ್ಮಿಗೆ ಕಾಂಚಿಯಂ ಮಿಸುಪ ಕಾಂಚೀನಾಮಚತ್ಪುರಂ || ... ... ... ... ... ||೩||

ಕಂ || ಘನಮೋಕ್ಷಶ್ರೀಗೆ ತವ | ರ್ಮನೆ ಭರಣೀಯುಕ್ತಚೈತ್ರಮಾಸರಮಧ್ಯಂ || ದಿನದೊಳ್ ಶ್ರೀವೃಷಘಂಟಾ | ನಿನದಮಂ ಕೇಳಪೆಳ್ಗೆವೆತ್ತುದದರ್ಕ್ಕಂ || ... ||೪||

ವ || ಮತ್ತಮಾ ಪಟ್ಟಣಂ ಮಯೋಧ್ಯೆಯಂತಾಗಿಯುಮಲಂಕಾರಾತಿವಿಭವಾನ್ವಿತಮುಂ | ರಾಜಹಂಸಸಮನ್ವಿತಮಾಗಿಯುಮಂಧಕಾರಾತಿರುಚಿರಮುಂ | ಕಮಳಾಭಿರಾಮ

---

ಅಲಘುತರವಿಕ್ರಮಂ- ಅತ್ಯಧಿಕವಾದ ಪರಾಕ್ರಮವುಳ್ಳ, ಮಂಜುಳಗುಣನಿಧಿ, ಮಾಚಿದೇವಂ, ನಿನ್ನಂ, ಕೇಳ್, ಎಂದು, ಒಲವಿಂದೆ-ಪ್ರೀತಿಯಿಂದ, ಶುಭನಿಶ್ಚಲಮತಿ ಬಸವಂಗೆ- ಮಂಗಳ ಕರವಾದ ಚಾಂಚಲ್ಯರಹಿತವಾದ ಬುದ್ಧಿಯುಳ್ಳ ಬಸವೇಶ್ವರನಿಗೆ, ಭಕ್ತನೋರ್ವನ, ಕಥೆಯಂ, ಉಸಿರ್ದಂ. ... ... ||೨||

ಅವನೀಭಾಗದೊಳ್- ಭೂತಳದಲ್ಲಿ, ಸಂಪದ್ಮುನಿರಾಜದ್ಗೃಹರಾಜಿ— ಸಂಪತ್- ಐಶ್ವರ್ಯದಿಂದ, ಮುನಿರಾಜತ್- ಪ್ರಕಾಶಿಸುತ್ತಿರುವ, ಗೃಹ- ಮನೆಗಳ, ರಾಜಿ- ಪಙ್ಕ್ತಿಯುಳ್ಳ, ದಿವ್ಯ......ಶೋಭಿ— ದಿವ್ಯ- ಶ್ರೇಷ್ಠವಾದ, ಮಣಿ- ರತ್ನಖಚಿತವಾದ, ಹರ್ಮ್ಯ- ಉಪ್ಪರಿಗೆಗಳ, ವ್ರಾತ- ಸಮೂಹದಿಂದ, ವಿಭ್ರಾಜಿ- ಪ್ರಕಾಶಿಸುತ್ತಿರುವ, ಶಾಂಭವಗೇಹವ್ರಜಶೋಭಿ- ಶಿವದೇವಸ್ಥಾನಗಳ ಸಮೂಹದಿಂದ ಪ್ರಕಾಶಿಸುವ, ನವ್ಯಕನಕಪ್ರಾಕಾರಕೇದ್ಯಂಶು— ನವ್ಯ- ನೂತನವಾದ, ಕನಕ- ಚಿನ್ನದ, ಪ್ರಾಕಾರ- ಸುತ್ತುಗೋಡೆಯ, ಕೇದ್ಯ- ವ್ಯಾಪ್ತವಾದ, ಅಂಶು- ಕಿರಣವು, ನೀಡೆ- ಅಧಿಕವಾಗಿ, ವಿಯಲ್ಲಕ್ಷ್ಮಿಗೆ- ಆಕಾಶಲಕ್ಷ್ಮಿಗೆ, ಕಾಂಚಿಯಂ- ಒಡ್ಯಾಣವನ್ನು, ಮಿಸುಪ, ಕಾಂಚೀನಾಮಚತ್ಪುರಂ- ಕಾಂಚಿಯೆಂಬ ಶೋಭಿಸುವ ಪಟ್ಟಣವು, ಪೆಳ್ಗೆವೆತ್ತ- ಪ್ರಸಿದ್ಧವಾದ, ಜಸಮಂ- ಕೀರ್ತಿಯನ್ನು, ತಾಳ್ದು- ಧರಿಸಿ, ಒಪ್ಪುಗುಂ. ... ... ||೩||

ಘನಮೋಕ್ಷಶ್ರೀಗೆ- ಉತ್ಕೃಷ್ಟವಾದ ಮುಕ್ತಿಲಕ್ಷ್ಮಿಗೆ, ತವರ್ಮನೆ; ಭರಣೀಯುಕ್ತಚೈತ್ರಮಾಸರಮಧ್ಯಂದಿನದೊಳ್- ಭರಣೀನಕ್ಷತ್ರದಿಂದಕೂಡಿದ ಚೈತ್ರಮಾಸದ ದಿವಸದ ಮಧ್ಯಾಹ್ನದಲ್ಲಿ, ಶ್ರೀವೃಷಘಂಟಾನಿನದಮಂ- ಶ್ರೀ ಬಸವೇಶ್ವರನ ಗಂಟೆಯ ಧ್ವನಿಯನ್ನು, ಕೇಳಪ, ಪೆಳ್ಗೆವೆತ್ತು- ಪ್ರಸಿದ್ಧಿಯಂ ಹೊಂದಿ, ಎನದು, ಇದಕ್ಕೆ. ... ... ... ... ... ||೪||

ಮತ್ತಂ, ಆ ಪಟ್ಟಣಂ, ಅಯೋಧ್ಯೆ. ರಾಮನ ಪಟ್ಟಣವು, ಆಗಿಯುಂ, ಅಲಂಕಾರಾತಿವಿಭವಾನ್ವಿತಮುಂ- ಲಂಕಾಪಟ್ಟಣಕ್ಕೆ ಶತ್ರುವಾದ ರಾಮನ ವೈಭವದಿಂದ ಕೂಡಿರುವದು. ( ಅಯೋಧ್ಯೆ-ಅನ್ಯರಿಂದಯುದ್ಧಮಾಡಿ ಜೈಸುವದಕ್ಕಾಗದದು, ಆಗಿಯುಂ, ಅಲಂಕಾರಾತಿ ವಿಭವಾನ್ವಿತಮುಂ- ಅಲಂಕಾರ, ಅತಿವಿಭವ- ಅತ್ಯಂತವೈಭವ, ಇವುಗಳಿಂದ, ಅನ್ವಿತಮುಂ- ಕೂಡಿರುವದು. ) ರಾಜಹಂಸಸಮನ್ವಿತಂ- ರಾಜ- ಚಂದ್ರ, ಹಂಸ- ಸೂರ್ಯ ಇವರಿಂದ, ಸಮನ್ವಿತಂ, ಆಗಿಯುಂ, ಅಂಧಕಾರಾತಿರುಚಿರಮುಂ- ಅಂಧಕಾರ- ಕತ್ತಲೆಯಿಂದ, ಅತಿರುಚಿರಮುಂ- ಅತಿಮನೋಹರವಾದದ್ದು, ( ರಾಜಹಂಸ ಸಮನ್ವಿತಂ- ರಾಜಶ್ರೇಷ್ಠರಿಂದ ಕೂಡಿರುವದು, ಆಗಿಯುಂ, ಅಂಧಕಾರಾತಿರುಚಿರಮುಂ- ಅಂಧಕ- ಅಂಧಕಾಸುರನಿಗೆ, ಅರಾತಿ- ಶತ್ರುವಾದ ಈಶ್ವರನಿಂದ, ರುಚಿರಮುಂ, ) ಕಮಳಾಭಿರಾಮಮುಂ- ಕಮಳ- ತಾವರೆಯ ಹೂವುಗಳಿಂದ, ಅಭಿರಾಮಂ- ಮನೋಹರವಾದದ್ದು, ಆಗಿಯುಂ; ಅಜಡಾಶ್ರಯಮುಂ- ಜಲಾಧಾರಪ್ರದೇಶವಲ್ಲದುದು; ( ಕಮಳಾ- ಲಕ್ಷ್ಮಿಯಿಂ

ವಾಗಿಯುಂ ಮಜಡಾಶ್ರಯಮುಂ । ಗುರುಬುಧಕವಿಲಸಿತಮಾಗಿಯುಂ ಮನವಗ್ರಹವಿಳಾಸ ಯುತಮುಂ । ಮನಂತಭೋಗಿಲೋಕಾಶ್ರಿತಮಾಗಿಯುಂ ನಾಕಲೋಕವಿರಾಜಿತಮುಂ । ಮಖಿಲವರ್ಣಸಂಪೂರ್ಣಮಾಗಿಯುಂ ಮಪವರ್ಗಾವಹಮುಂ । ಪರಸಹಕಾರಾಳಿಮಂಡಿತಮಾಗಿ ಯುಂ ಮೇಕಾಮ್ರವಲ್ಲಭಸಲ್ಲಲಿತ ಮೆನಿಸಿರ್ದುದಂತುಮಲ್ಲದೆಯುಂ ॥ * * * * *

ಚಂ ॥ ಸುರಪುರದಂತೆದಿವ್ಯಸುಮನೋಗಣನಂದನಭಾಸಿ ದೈತ್ಯಸಂ । ಹರಪುರ ದಂತನಂತಬಲತಾರ್ಕ್ಷ್ಯ ವಿರಾಜಿತ ಮಂಬುಜಾರಿಶೇ ॥ ಖಗಪುರದಂತೆ ವೀರಗಣನಾಯ

ದ,ಅಭಿರಾಮಂ, ಆಗಿಯುಂ, ಅಜಡ- ಮೂಢರಲ್ಲದ ಪಂಡಿತರಿಗೆ, ಆಶ್ರಯಮುಂ- ಆಧಾರವಾದದ್ದು;) ಗುರುಬುಧಕವಿಲಸಿತಂ- ಗುರು- ಬೃಹಸ್ಪತಿ, ಬುಧ, ಕವಿ- ಶುಕ್ರ, ಇವರುಗಳಿಂದ, ವಿಲಸಿತಂ- ಪ್ರಕಾಶವಾ ಸವಾದದ್ದು, ಆಗಿಯುಂ, ಅನವಗ್ರಹವಿಳಾಸಯುತಮುಂ- ನವಗ್ರಹಗಳಲೀಲೆಯಿಂದ ಕೂಡಿರುವದು; (ಗುರುಬುಧಕವಿಲಸಿತಂ- ಗುರು- ಆಚಾರ್ಯರು, ಬುಧ ವಿದ್ವಾಂಸರು, ಕವಿ- ಕವಿಗಳು, ಇವರಿಂದ, ವಿಲಸಿತಂ, ಆಗಿಯುಂ, ಅನವಗ್ರಹವಿಲಾಸಯುತಮುಂ- ಅನವಗ್ರಹ- ಅನಾವೃಷ್ಟಿಯಿಲ್ಲದಿರುವಿಕೆಯಿಂದುಂಟಾದ, ವಿಲಾಸ- ಲೀಲೆಯಿಂದ, ಯುತಮುಂ; ) ಅನಂತಭೋಗಿಲೋಕಾಶ್ರಿತಂ- ಅನಂತ- ಆದಿಶೇಷನೇನು, ಭೋಗಿ- ಇತರಸರ್ಪಗಳೇನು, ಇವುಗಳ, ಲೋಕ- ಪಾತಾಳಲೋಕದಿಂದ, ಆಶ್ರಿತಂ, ಆಗಿಯುಂ, ನಾಕಲೋಕವಿರಾಜಿತಮುಂ- * ನಾಕಲೋಕ- ದೇವತೆಗಳಿಂದ, ವಿರಾಜಿತಮುಂ- ಪ್ರಕಾಶಿಸುವದು; ( ಅನಂತಭೋಗಿಲೋಕಾಶ್ರಿತಮುಂ- ಅನಂತ- ಅಪರಿಮಿತರಾದ, ಭೋಗಿಲೋಕ- ಸುಖಿಪುರುಷರಿಂದ, ಆಶ್ರಿತಮುಂ, ನಾಕಲೋಕ ವಿರಾಜಿತಮುಂ- ನಾಕಲೋಕ- ಸ್ವರ್ಗಲೋಕದೋಪಾದಿಯಲ್ಲಿ, ವಿರಾಜಿತಮುಂ; ) ಅಖಿಲವರ್ಣಸಂಪೂರ್ಣಂ- ಅಖಿಲವರ್ಣ- ಎಲ್ಲಾ ಅಕ್ಷರಗಳಿಂದಲೂ, ಸಂಪೂರ್ಣಂ, ಆಗಿಯುಂ, ಅಪವರ್ಗಾವಹಮುಂ- ಪವರ್ಗವಿಲ್ಲದಿರುವಿಕೆಯಂ ಹೊಂದಿರುವದು, ಅಥವಾ, ಅಪಗತವಾದವರ್ಗಗಳಂ ಹೊಂದಿರುವದು; ( ಅಖಿಲವರ್ಣಸಂಪೂರ್ಣಂ- ಅಖಿಲವರ್ಣ- ಬ್ರಾಹ್ಮಣಾದಿವರ್ಣಗಳೆಲ್ಲದರಿಂದಲೂ, ಸಂಪೂರ್ಣಂ, ಆಗಿಯುಂ, ಅಪವರ್ಗಾವಹಮುಂ- ಅಪವರ್ಗ- ಮೋಕ್ಷವನ್ನು, ಆವಹಮುಂ- ಉಂಟುಮಾಡುವದು; ) ಪರಸಹಕಾರಾಳಿಮಂಡಿತಂ- ಪರ- ಉತ್ಕೃಷ್ಟಗಳಾದ, ಸಹಕಾರ- ಸೀ ಮಾವಿನ ಮರಗಳ, ಆಳಿ- ಶ್ರೇಣಿಯಿಂದ, ಮಂಡಿತಂ- ಅಲಂಕರಿಸಲ್ಪಟ್ಟದ್ದು, ಆಗಿಯುಂ, ಏಕಾಮ್ರವಲ್ಲಭಸಲ್ಲಲಿತಂ- ಏಕ- ಒಂದಾದ, ಆಮ್ರವಲ್ಲಭ- ಶ್ರೇಷ್ಠವಾದ ಮಾವಿನ ಮರದಿಂದ, ಸಲ್ಲಲಿತಂ- ಮನೋಹರವಾದದ್ದು; ( ಪರಸಹಕಾರಾಳಿಮಂಡಿತಂ- ಪರ- ಅನ್ಯರಿಗೆ, ಸಹಕಾರ- ಸಹಾಯವಂ ಮಾಡುವವರ, ಆಳಿ- ಪಜ್ತೆಯಿಂದ, ಮಂಡಿತಂ, ಆಗಿಯುಂ, ಏಕಾಮ್ರವಲ್ಲಭಸಲ್ಲಲಿತಂ- ಏಕಾಮ್ರನಾಥನೆಂಬ ದೇವರಿಂದಮನೋಹರವಾದದ್ದು; ) ಎನಿಸಿ, ಇರ್ದುದು; ಅಂತುಂ, ಅಲ್ಲದೆಯುಂ. * *

ತತ್ಪುರಂ- ಆ ಕಾಂಚೀಪಟ್ಟಣವು, ಸುರಪುರದಂತೆ- ಅಮರಾವತಿಯಹಾಗೆ, ದಿವ್ಯಸುಮನೋಗಣನಂದನಭಾಸಿ- ದಿವ್ಯ- ಸ್ವರ್ಗದಲ್ಲಿ ಉತ್ಪನ್ನವಾದ, ಸುಮನಃ- ಹೂವ್ಗಳ, ಗಣ- ಸಮೂಹವುಳ್ಳ, ನಂದನ- ನಂದನ ನಾಮಕವಾದ ಉಪವನದಿಂದ, ಭಾಸಿ- ಪ್ರಕಾಶಿಸುವದು; (ಪಟ್ಟಣ) ದಿವ್ಯ- ಶ್ರೇಷ್ಠರಾದ, ಸುಮನಃ- ವಿದ್ವಾಂಸರ- ಗಣ-ಸಮೂಹವೇನು, ನಂದನ- ಪುತ್ರರೇನು, ಅಥವಾ, ಉಪವನವೇನು, ಇವುಗಳಿಂದ, ಭಾಸಿ; ದೈತ್ಯಸಂಹರಪುರದಂತೆ- ದೈತ್ಯಸಂಹರ- ವಿಷ್ಣುವಿನ, ಪುರದಂತೆ- ವೈಕುಂಠನಾಮಕವಾದ ಪಟ್ಟಣದಹಾಗೆ, ಅನಂತಬಲತಾರ್ಕ್ಷ್ಯವಿರಾಜಿತಂ- ಅನಂತ- ಶೇಷನೇನು, ಬಲ- ಬಲರಾಮನೇನು, ತಾರ್ಕ್ಷ್ಯ- ಗರುಡನೇನು, ಇವರುಗಳಿಂದ, ವಿರಾಜಿತಂ, ( ಪಟ್ಟಣ ) ಅನಂತ-ಅಪರಿಮಿತವಾದ, ಬಲ-ಸೈನ್ಯವೇನು, ತಾರ್ಕ್ಷ್ಯ- ಕುದುರೆ ( ಅಥವಾ ರಥ, ) ಇವುಗಳಿಂದ, ವಿರಾಜಿತಂ; ಅಂಬುಜಾರಿಶೇಖರಪುರದಂತೆ- ಅಂಬುಜಾರಿ- ಚಂದ್ರನೇ,

* ( ಅವ ) ನಾಕ- ಸ್ವರ್ಗದಲ್ಲಿರುವ, ಲೋಕ- ಜನಗಳು. * * * * * * * *

ಕಶಕ್ತಿಧರಾಂಚಿತಂ ಧನೇ । ಶ್ವರಪುರದಂತೆ ಪುಣ್ಯಜನಸನ್ನಿಧಿರಂಜಿತ ಮಾಯ್ತು ತ
ತ್ಪುರಂ ॥ .. ... ... ... .. ... ॥೫॥

ಕಂ ॥ ಆ ಪಟ್ಟಣದೊಳ್ವಿನಯಕ । ಲಾಪಂ ಕುಲದೀಪನಭವಲಾಂಛನಧರಸೇ ॥
ವಾಪರನಿರ್ಪಂ ದುರಿತವು । ರಾಪಂ ಸಿರಿಯಾಳನೆಂಬ ನತಿಸಂಪದದಿಂ ॥ .. ॥೬॥

ಕಂ॥ ಮಂಗಳಮಯಿ ಮಾನಿನಿ ಚರ । ಲಿಂಗಾರ್ಚನನಿರತೆ ಚತುರಪತಿಭಕ್ತಿಸಮಾ॥
ಲಿಂಗಿತೆ ಕಂಗೊಳಿಸಿರ್ದ । ಳ್ಚಂಗಳೆ ಯೆನಿಸಿರ್ದ ತನ್ನಿತಂಬಿನಿಜಸದೊಳ್ ॥ ... ॥೭॥

ಕಂ ॥ ಆವಂಪತಿ ಗಳ್ಕರಸುತ । ನಾವಂ ಚೇಲಾಳನೆಂಬ ನಿಳೆಯೊಳ್ಕಣ್ಗಂ ॥ ಬಾದಂ
ನಿಜವಿಮಲಗುಣಾ । ಮೋದಿತಪಿತೃಹೃದಯ ನಮಿತರುಚಿಮಯಕಾಯಂ ॥ ... ॥೮॥

ಕಂ ॥ ಅನುದಿನ ಮೆಳಸಿದ ರುಚಿಭೋ । ಜನದಿಂ ಜಂಗಮಸಹಸ್ರಮಂ ತಣಿಪುತೆ
ಪಾ ॥ ವನಚರಿತ ರ್ಸಲೆಭಜಿಸುತೆ । ಮನಸಿಜಹರನಂ ವಧೂವರ ರ್ಮೆರೆದಿರ್ದರ್ ॥ ॥೯॥

---

ಶೇಖರ- ಶಿರೋಭೂಷಣವಾಗುಳ್ಳ ಪರಮೇಶ್ವರನ, ಪುರದಂತೆ- ಕೈಲಾಸಪಟ್ಟಣದಹಾಗೆ, ವೀರಗಣನಾಯಕ ಶಕ್ತಿಧರಾಂಚಿತಮುಂ- ವೀರ- ವೀರಭದ್ರೇಶ್ವರ, ಗಣನಾಯಕ- ವಿಘ್ನೇಶ್ವರ, ಶಕ್ತಿಧರ- ಷಣ್ಮುಖ, ಇವರುಗಳಿಂದ, ಅಂಚಿತಮುಂ- ಪೂಜ್ಯವಾದದ್ದು; ( ಪಟ್ಟಣ ) ವೀರ- ವೀರಶೈವಮತೋದ್ಭೂತರಾದ, ಗಣನಾಯಕ- ಗಣಶ್ರೇಷ್ಠರುಗಳೇನು, ಶಕ್ತಿ- ಇಚ್ಛಾಜ್ಞಾನಕ್ರಿಯಾಶಕ್ತಿಗಳನ್ನು, ಧರ- ಧರಿಸಿರುವದರಿಂದ ಅಥವಾ, ಪ್ರಭುಮಂತ್ರೋತ್ಸಾಹಶಕ್ತಿಗಳನ್ನು ಧರಿಸಿರುವದರಿಂದ, ಅಂಚಿತಂ; ಧನೇಶ್ವರಪುರದಂತೆ- ಕುಬೇರನ ಪಟ್ಟಣದಲ್ಲಿರುವ ಜನಗಳೇನು, ಸನ್ನಿಧಿ- ಸಮೀಚೀನಗಳಾದ ನಿಧಿಗಳೇನು ಇವುಗಳಿಂದ, ರಂಜಿತಂ, ( ಪಟ್ಟಣ ) ಪುಣ್ಯಜನ- ಪರಿಶುದ್ಧರಾದ ಜನರ, ಸನ್ನಿಧಿ- ಸಾಮೀಪ್ಯದಿಂದ, ರಂಜಿತಂ, ಆಯ್ತು. ॥೫॥

ಆ ಪಟ್ಟಣದೊಳ್, ವಿನಯಕಲಾಪಂ- ನಮ್ರತೆಯೇ ಭೂಷಣವಾಗುಳ್ಳ, ಕುಲದೀಪಂ- ವಂಶವನ್ನು ಪ್ರಕಾಶಪಡಿಸುವ, ಅಭವಲಾಂಛನಧರಸೇವಾಪರಂ- ಅಭವ- ಶಿವನ, ಲಾಂಛನ- ಚಿಹ್ನಗಳನ್ನು, ( ವಿಭೂತಿ ರುದ್ರಾಕ್ಷಾದಿಗಳನ್ನು ) ಧರ- ಧರಿಸಿರುವ ಶಿವಭಕ್ತರ, ಸೇವಾ- ಪರಿಚರ್ಯೆಯಲ್ಲಿ, ಪರ- ಆಸಕ್ತನಾದ, ದುರಿತದೂರಾಪಂ- ಪಾಪರಹಿತನಾದ, ಸಿರಿಯಾಳಂ, ಎಂಬಂ, ಅತಿಸಂಪದದಿಂ- ಅತ್ಯೈಶ್ವರ್ಯದಿಂದ, ಇರ್ಪಂ. ॥೬॥

ಮಂಗಳಮಯಿಮಾನಿನಿ- ಮಂಗಳಕರಳಾದ ಮಾನವತಿಯಾದ, ಚರಲಿಂಗಾರ್ಚನನಿರತೆ- ಜಂಗಮಲಿಂಗವನ್ನು ಪೂಜಿಸುವದರಲ್ಲಾಸಕ್ತೆಯಾದ, ಚತುರಪತಿಭಕ್ತಿಸಮಾಲಿಂಗಿತೆ- ಚತುರ- ಕುಶಲನಾದ, ಪತಿ- ಗಂಡನಲ್ಲಿಡಲ್ಪಟ್ಟ, ಭಕ್ತಿ- ಭಕ್ತಿಯಿಂದ, ಸಮಾಲಿಂಗಿತೆ- ಆಶ್ರಯಿಸಲ್ಪಟ್ಟ, ಚಂಗಳೆ, ಎನಿಸಿ, ಇರ್ಪ, ತನ್ನಿತಂಬಿನಿ- ಆ ಸಿರಿಯಾಳನ ಪತ್ನಿಯು, ಜಸದೊಳ್- ಕೀರ್ತಿಯಿಂದ, ಕಂಗೊಳಿಸಿ, ಇರ್ದಳ್. ... ... ॥೭॥

ಆವಂಪತಿಗೆ- ಆ ಗಂಡಹೆಂಡರಿಗೆ, ಅಳ್ಕರ- ಪ್ರೀತಿಪಾತ್ರನಾದ, ಸುತಂ- ಮಗನಾದ, ನಿಜವಿಮಲಗುಣಾಮೋದಿತಪಿತೃಹೃದಯಂ- ನಿಜ- ತನ್ನ, ವಿಮಲಗುಣ- ನಿರ್ಮಲವಾದ ಸದ್ಗುಣಗಳಿಂದ, ಆಮೋದಿತ- ಸಂತೋಷಪಡಿಸಲ್ಪಟ್ಟ, ಪಿತೃ- ತಂದೆಯ, ಹೃದಯಂ- ಮನಸ್ಸುಳ್ಳ, ಅಮಿತರುಚಿಮಯಕಾಯಂ- ಎಣಿಸಲಸದಳವಾದ ಕಾಂತಿಯ ವಿಕಾರವಾದ ಶರೀರವುಳ್ಳ, ಚೇಲಾಳಂ, ಎಂಬಂ, ಆದಂ- ಅತ್ಯಂತವಾಗಿ, ಇಳೆಯೊಳ್, ಕಣ್ಗೆ, ಇಂಬಾದಂ- ಸೊಗಸಾದನು. ... ... ... ... ॥೮॥

ಪಾವನಚರಿತರ್- ಪರಿಶುದ್ಧವಾದಚರಿತ್ರವುಳ್ಳ, ವಧೂವರರ್- ಸತಿಪತಿಗಳು, ಅನುದಿನಂ- ಯಾವಾಗಲೂ, ಎಳಸಿದ- ಅಪೇಕ್ಷೆಮಾಡಿದ, ರುಚಿಭೋಜನದಿಂ- ರುಚಿಯುಕ್ತವಾದ ಭೋಜನದಿಂದ, ಜಂಗಮಸಹಸ್ರಮಂ- ಸಾವಿರಜಂಗಮರನ್ನು, ತಣಿಪುತೆ- ತೃಪ್ತಿಪಡಿಸುತ್ತ, ಮನಸಿಜಹರನಂ- ಶಿವನನ್ನು, ಸಲೆ- ಚೆನ್ನಾಗಿ ಭಜಿಸುತೆ- ಸೇವಿಸುತ್ತ, ಮೆರೆದು, ಇರ್ಪರ್. ... ... ... ॥೯॥

ವ || ಅಂತವರನವರತಮಿಂತು ಜರಲಿಂಗಸಮರ್ಚನೋತ್ಸವಪರಾಯಣರೆನಿಸಿರ್ಪನ್ನೆಗಂ || * * * * * * * * * * * * * * *

ಮಹಾಸ್ರ || ವರುಣಾಶಾಕುಂಭಿ ಶುಂಭತ್ಕರಟಕಟಗಳದ್ದಾನಧಾರಾತಿಸಾರ | ಭ್ಯರಸಾಶ್ಲಿಷ್ಟಂ ಪ್ರತೀಚ್ಯಾಂಬುಧಿಚಳದಚಳಸ್ಪರ್ಧಿಕಲ್ಲೋಲಮಾಲಾ | ಸ್ಫುರದುದ್ಯನ್ನರ್ತಕೀನರ್ತಕ ಮನುಪಮನೀಪಪಕ್ಷಮಾರುತ್ಪ್ರಸೂನೋ | ತ್ಕರಧೂಳೀಭೂತಿಭಾರಂ ಸುಳಿದುದಸದಳಂ ಪಶ್ಚಿಮಾಶಾಸಮೀರಂ || ... ... ... ... ||೧೦||

ಚಂ|| ಕಡವಲರೇರಿ ಕೊರ್ವಿದುದು ಕೇತಕಿ ಪೂತುದು ನೋಗೆ ರಾಗಮಂ | ಪಡೆದುದು ನಣ್ಪನಪ್ಪಿದುದು ಚಾದಗೆ ಬೇಸಗೆ ಬೀತುದಂಚೆ ಬ | ಲ್ಪುಡುಗಿ ಬಿಗುರ್ತು ಪಾರಿದುದು ಮೊಲ್ಲೆ ಮುಗುಳ್ತುದು ಬಳ್ಳಿಮಿಂಚು ಸಂ | ಗಡಿಸಿ ಪಳಂಚಿ ಮಿಂಚಿದುದು ಬಲ್ಮುಗಿಲೇಳ್ದುದು ದಿಕ್ಪ್ರತಾನದೊಳ್ || ... ... .. ... ||೧೧||

ಚಂ || ವಸುಧೆಯ ರಾಜಹಂಸತತಿಯಂ ನಿಜಗರ್ಜಿತಮಾತ್ರದಿಂದೆ ಪೋ | ರಿಸಿದನಿ

---

ಅಂತವರ್- ಆ ಪ್ರಕಾರದಲ್ಲಿದ್ದ ದಂಪತಿಗಳು, ಅನವರತಂ- ಯಾವಾಗಲೂ, ಇಂತು, ಜರಲಿಂಗಸಮರ್ಚನೋತ್ಸವ ಪರಾಯಣರ್- ಜಂಗಮಲಿಂಗವನ್ನು ಪೂಜಿಸುವ ಉತ್ಸವದಲ್ಲಿ ಆಸಕ್ತರಾಗಿ, ಎನಿಸು, ಇರ್ಪನ್ನೆಗಂ. * * * * * * * * * * * * * * * * * *

ವರುಣಾಶಾ......ಶ್ಲಿಷ್ಟಂ— ವರುಣಾಶಾ- ಪಶ್ಚಿಮದಿಕ್ಕಿನಲ್ಲಿರುವ, ಕುಂಭಿ- ಅಂಜನನಾಮಕವಾದ ಆನೆಯು, ಶುಂಭತ್- ಪ್ರಕಾಶಿಸುವ, ಕರಟತಟ- ಗಂಡಸ್ಥಲದ ದೆಸೆಯಿಂದ, ಗಳತ್- ಸುರಿಯುತ್ತಿರುವ, ದಾನ-ಮದೋದಕದ, ಧಾರಾ-ದಾರೆಯು, ಅತಿಸಾರಭ್ಯರಸ-ಹೆಚ್ಚಾದ ಪರಿಮಳ ಗುಣದಿಂದ, ಆಶ್ಲಿಷ್ಟಂ- ಆಶ್ರಯಿಸಲ್ಪಟ್ಟ, ಪ್ರತೀಚ್ಯಾ...... ನರ್ತಕಂ— ಪ್ರತೀಚ್ಯಾಂಬುಧಿ- ಪಶ್ಚಿಮ ಸಮುದ್ರದಲ್ಲಿ, ಚಳತ್- ಚಲಿಸುತ್ತಿರುವ, ಅಚಳ- ಪರ್ವತದೊಡನೆ, ಸ್ಪರ್ಧಿ- ಸ್ಪರ್ಧಿಸುವ ( ನಾನು ಹೆಚ್ಚು ತಾನು ಹೆಚ್ಚು ಎಂಬ ಭಾವಮಂ ಹೊಂದಿರುವ ) ಕಲ್ಲೋಲ- ದೊಡ್ಡತೆರೆಗಳ, ಮಾಲಾ- ಪಙ್ತಿಯೆಂಬ, ಸ್ಫುರತ್- ಪ್ರಕಾಶಿಸುವ, ಉದ್ಯತ್- ಉತ್ಕೃಷ್ಟವಾದ, ನರ್ತಕೀ- ನಾಟ್ಯಗಾತಿಯನ್ನು, ನರ್ತಕಂ- ಕುಣಿಸುವ; ಅನುಪಮ...ಭಾರಂ— ಅನುಪಮ- ಅಸದೃಶವಾದ, ನೀಪಪಕ್ಷಮಾರುತ್- ಕಡಪದ ಮರದ, ಪ್ರಸೂನ- ಹೂವ್ಗಳ, ಉತ್ಕರ- ಸಮೂಹದ, ಧೂಳೀ- ಪರಾಗವೆಂಬ, ಭೂತಿಭಾರಂ- ಅಧಿಕವಾದ ಭಸ್ಮವುಳ್ಳ, ಅಸದಳಂ- ಅತ್ಯಧಿಕವಾದ, ಪಶ್ಚಿಮಾಶಾಸಮೀರಂ- ಪಡುವಣದಿಕ್ಕಿನಗಾಳಿಯು, ಸುಳಿದುದು- ಬೀಸಿತು. ... ... ||೧೦||

ಕಡವು- ನೀಪವೃಕ್ಷವು, ಅಲರೇರಿ- ಹೂವಂಹೊಂದಿ, ಕೊರ್ವಿದುದು- ಕೊಬ್ಬಿತು; ಕೇತಕಿ- ತಾಳೇಮರವು, ಪೂತುದು- ಹೂವ ಬಿಟ್ಟಿತು; ನೋಗೆ- ನವಿಲು, ರಾಗಮಂ- ಪ್ರೀತಿಯನ್ನು, ಪಡೆದುದು, ಚಾದಗೆ- ಚಾತಕ ಪಕ್ಷಿಯು, ನಣ್ಪಂ- ನೊಗಸನ್ನು, ಅಪ್ಪಿದುದು; ಬೇಸಗೆ, ಬೀತುದು- ಕಳೆದುದು, ಅಂಚೆ- ಹಂಸಪಕ್ಷಿಯು, ಬಲ್ಪುಡುಗಿ-- ಶಕ್ತಿಗುಂದಿ, ಬಿಗುರ್ತು- ಭಯಪಟ್ಟು, ಪಾರಿದುದು- ಹಾರಿಹೋಯಿತು; ಮೊಲ್ಲೆ- ಮೊಲ್ಲೆಯಬಳ್ಳಿಯು, ಮುಗುಳ್ತುದು- ಮೊಗ್ಗನ್ನು ಬಿಟ್ಟಿತು; ಬಳ್ಳಿಮಿಂಚು- ಬಳ್ಳಿಯಾಕಾರವಾಗಿರುವ ಮಿಂಚು, ಪಳಂಚಿ- ಸಂಘಟಿಸಿ, ಮಿಂಚಿದುದು- ಪ್ರಕಾಶಿಸಿತು; ದಿಕ್ಪ್ರತಾನದೊಳ್- ದಿಕ್ಕುಗಳ ಸಮೂಹದಲ್ಲಿ, ಬಲ್ಮುಗಿಲ್- ಬಲವಾದ ಮೋಡವು, ಏಳ್ದುದು. ... ... ... ||೧೧||

ಅಂಬುಧರಾಗಮಭೂಮಿಪಾಲಕಂ— ಅಂಬುಧರ- ಮೋಡದ, ಆಗಮ- ಬರುವಿಕೆಯೆಂಬ, ಭೂಮಿಪಾಲಕಂ- ರಾಜನು, ನಿಜಗರ್ಜಿತಮಾತ್ರದಿಂದೆ- ತನ್ನಗುಡುಗಿನ ಶಬ್ದಮಾತ್ರದಿಂದ, ವಸುಧೆಯ-ಭೂಮಿಯಲ್ಲಿರು

ತ್ರೈದದಭ್ರದೊಳೆ ಕೈದೆಗೆವಂತಿರೆ ರಾಜಹಂಸರಂ ॥ ದೆಸಗುತೆ ತನ್ನಿದಾಘವಿಭುವಂ ಸದೆದೆ ಣ್ದೆಸೆಯೊಳ್ಸ್ವತೇಜಮಂ । ಪಸರಿಸಿದಂ ತಟಿಚ್ಛಲದಿ ನಾಬುಧರಾಗಮಭೂಮಿಪಾಲಕಂ ॥

ಕಂ ॥ ಪೊರೆವತ್ತಿಸಿದನೊ ಪಳೆಯಂ । ಬರವಿಂದು ನೆರೆಪರಿಗುಮೆಂದು ಬಿದಿ ನವನೀ ಲಾಂ ॥ ಬರದಿ ನೆನೆ ತೀವಿ ಕವಿದಂ । ಬರಮು ನವ ನೀಲಜಲದ ಮೇಲ ರಂಜಿಸಿತೋ ॥೧೩॥

ಕಂ ॥ ನಿಯತದಿ ನಪಾರ್ದಿನೊ ಳಪರ್ದ । ನ್ನಯ ಜೀವನಮಂ ಮರಾಳ ನಿದು ಜೀ ರ್ಪಡಿಕುಂ ॥ ನಯರಹಿತ ಮೆಂಬ ಮುಳಿಸಿಂ । ಪಯೋಧರಂ ಗರ್ಜಿಸುತ್ತುಮಂ ಪಾರಿಸುಗುಂ ॥

ಕಂ ॥ ಎಳೆಮಿಂಚು ಬಳ್ಳಿಮಿಂಚುಚ್ಚಳಿಸುವ ಸಳೆಮಿಂಚು ತೋರಮಿಂಚಸಿಮಿಂ ಚ ॥ ವ್ವಳಿಸುವ ಗೊಂಚಲ್ಮಿಂಚ । ಗ್ಗಳಿಸಿದ ಕುಡಿಮಿಂಚು ಮಿಂಚಿದುವುಕಾರ್ಮೊಗದೊಳ್ ॥

ಚಂ ॥ ಛಿಳಛಿಟಲೆಂಬ ಗರ್ಜನ ಮಡಂಬಡೆ ಮಿಂಚುವ ದಂಷ್ಟ್ರದಂತೆ ಮಿಂ । ಚಳ ವಡೆ ಶಕ್ರಗೋಪತತಿ ಸೂಸುವ ರಕ್ತ ಕಣಂಗಳಾಗೆ ಕಂ ॥ ಗೊಳಿಸಖರಾಂಶು ಚಕ್ರಮೆನೆಮೇ

ವ, ರಾಜಹಂಸತತಿಯಂ- ರಾಜಶ್ರೇಷ್ಠರ ಸಮೂಹವನ್ನು, ( ರಾಜಹಂಸಪಕ್ಷಿಗಳ ಸಮೂಹವನ್ನು ) ಪಾ ರಿಸಿದ, ಅನಿತುಂ- ಅಷ್ಟರಲ್ಲಿ, ಅಭ್ರದೊಳ್- ಅಂತರಿಕ್ಷದಲ್ಲಿ, ರಾಜಹಂಸರ್- ರಾಜಶ್ರೇಷ್ಠರು, ( ಚಂದ್ರಸೂ ರ್ಯರು ) ಐದದೆ- ಹೋಗದೆ, ಕೈದೆಗೆವಂತಿರೆ- ಹಿಂದೆಗೆಯುವಹಾಗೆ, ಎಸಗುತೆ- ಮಾಡುತ್ತ, ತನ್ನಿದಾಘವಿ ಭುವಂ- ಆ ಗ್ರೀಷ್ಮಕಾಲವೆಂಬ ರಾಜನನ್ನು, ಸದೆದು- ಕೊಂದು, ಎಣ್ದೆಸೆಯೊಳ್- ಎಂಟು ದಿಕ್ಕಿನಲ್ಲಿ, ಸ್ವ ತೇಜಮಂ- ತನ್ನ ಪರಾಕ್ರಮವನ್ನು, ತಟಿಚ್ಛಲದಿಂ- ಮಿಂಚೆಂಬ ವ್ಯಾಜದಿಂದ, ಪಸರಿಸಿದಂ. ... ॥೧೨॥

ಬಿದಿ ಬ್ರಹ್ಮನು, ಇದು, ಪಳೆಯ- ಹಳೇದಾದ, ಅಂಬರಂ- ಬಟ್ಟೆಯು, ( ಆಕಾಶವು ) ನೆರೆ- ಅಧಿಕ ವಾಗಿ, ಪರಿಗುಂ- ಹರಿದುಹೋಗುವದು; ಎಂದು, ನವನೀಲಾಂಬರದಿಂ- ಹೊಸದಾದ ಕಪ್ಪುಬಟ್ಟೆಯಿಂದ, ಪೊ ರೆವತ್ತಿಸಿದನೊ- ಜೊತೆಯಲ್ಲಿ ಸೇರಿಸಿ ಹತ್ತಿಸಿದನೋ; ಎನೆ, ನೀಲಜಲದಂ- ಕಪ್ಪುಮೋಡವು, ಅದಂಅಂಬರ ಮಂ- ಆ ಆಕಾಶವನ್ನು, ತೀವಿ- ತುಂಬಿ, ಕವಿದು- ಆಚ್ಛಾದಿಸಿ, ರಂಜಿಸಿತೊ ? ... ॥೧೩॥

ಪಯೋಧರಂ- ಮೋಡವು, ಅಪಾರ್ದಿನೊಳ್- ಕಾಲದಲ್ಲಿ, ಅಪಾರ್ದ- ಸೇರಿದ, ಎನ್ನಯ- ನನ್ನ, ಜೀವ ನಮಂ- ಪ್ರಾಣವನ್ನು, ( ನೀರನ್ನು ) ನಯರಹಿತಂ- ನೀತಿಹೀನವಾದ, ಇದುಮರಾಳಂ- ಈ ಹಂಸಪಕ್ಷಿ ಯು, ನಿಯತದಿಂ- ನಿಶ್ಚಯವಾಗಿ, ಬೇರ್ಪಡಿಕುಂ- ಬೇರೆ ಮಾಡುವದು, ಎಂಬ, ಮುಳಿಸಿಂ- ಕೋಪದಿಂದ, ಗರ್ಜಿಸುತ್ತೆ, ಅದಂ- ಆ ಹಂಸಪಕ್ಷಿಯನ್ನು, ಪಾರಿಸುಗುಂ. ... ... ॥೧೪॥

ಕಾರ್ಮೊಗದೊಳ್- ವರ್ಷಾಕಾಲದ ಆರಂಭದಲ್ಲಿ,ಎಳೆಮಿಂಚು, ಬಳ್ಳಿಮಿಂಚು- ಬಳ್ಳಿಯಹಾಗಿರುವ ಮಿಂ ಚು, ಉಚ್ಚಳಿಸುವ- ಮೇಲಕ್ಕೆ ನೆಗೆಯುವ, ಸಳೆಮಿಂಚು- ಸೂಕ್ಷ್ಮವಾದ ಮಿಂಚು, ತೋರಮಿಂಚು- ದಪ್ಪ ವಾದ ಮಿಂಚು, ಅಸಿಮಿಂಚು- ಕತ್ತಿಯಂತಿರುವ ಮಿಂಚು, ಅವ್ವಳಿಸುವ- ಆತುರಪಡುವ, ಗೊಂಚಲ್ಮಿಂ ಚು- ಗುಂಪಾದ ಮಿಂಚು, ಅಗ್ಗಳಿಸಿದ- ಅಧಿಕವಾದ, ಕುಡಿಮಿಂಚು- ಕೊನೆಕೊನೆಯಾಗಿರುವ ಮಿಂಚು, ಮಿಂಚಿದುವು- ಹೊಳೆದುವು. ... ... ... ... ... ॥೧೫॥

ಛಿಳಛಿಟಲ್, ಎಂಬ, ಗರ್ಜನಂ- ಭಯಂಕರಧ್ವನಿಯಂ ಮಾಡುವಿಕೆಯು, ಒಡಂಬಡೆ- ಜೊಂದಿರಲು, ಮಿಂಚುವ, ದಂಷ್ಟ್ರದಂತೆ- ಕೋರೆದಾಡೆಯಹಾಗೆ, ಮಿಂಚು, ಅಳವಡೆ- ಸೇರಿರಲು, ಶಕ್ರಗೋಪತತಿ- ಇಂದ್ರಗೋಪದ ಹುಳುಗಳು, ಸೂಸುವ- ಸ್ರವಿಸುವ- ರಕ್ತಕಣಂಗಳ್, ಆಗೆ, ಖರಾಂಶು- ಸೂರ್ಯನು, ಚ ಕ್ರಮೆನೆ- ಈಶ್ವರನ ಪಾದದಿಂದ ಬರೆಯಲ್ಪಟ್ಟಿದ್ದ ಚಕ್ರದಹಾಗೆ, ಕಂಗೊಳಿಸೆ, ಮೇಲೆ, ನೀಲನೀರದಂ- ಕ ಪ್ಪಾದ ಮೋಡವು, ಘನಾ......ಶಿರಂ— ಘನಾಗಮ- ವರ್ಷಾಕಾಲವೆಂಬ, ಫಾಲನೇತ್ರ- ಈಶ್ವರನಿಂದ,

ಲಿಘುನಾಗಮುಘೋಲನೇತ್ರನಿ । ರ್ದಳಿತಜಲಂಧರೋಗ್ರಶಿರಮೆಂಬವೊಲಾದುದು ನೀಲನೀರದಂ ॥

ಮತ್ತೇ ॥ ಜಲದಶ್ಯಾಮಲಕಾಯಕಾಂತಿಬಿಡದೆತ್ತಂಪೊಣ್ಮೆ ನಿಂದಿಂದ್ರಚಾ । ಪಲಸಚ್ಚಾಪಮನಾಂತು ಚಾಪಲತಟಜ್ಜ್ಯಾಕರ್ಷಣಂಗೆಯ್ದು ನಿ ॥ ಸ್ತುಲಮೇಘಧ್ವನಿಗರ್ಜಿತಂ ಗುಡುತೆ ಪೂಡುತ್ತುಚ್ಚ ನುದ್ಯಚ್ಚರಾ । ವಳಿಯಂ ಗ್ರೀಷ್ಮಸುರಾರಿ ಬೆಂಗುಡುವಿನಂ ಕಾರೆಂಬ ನಾರಾಯಣಂ ... ... ... ... ... ॥೧೭॥

ಕಂ ॥ ಜಳದಗಜಂ ಜಳಮದಜಳ । ಮಿಳಿತರೆ ಮೇಲ್ವಾಯ್ದು ಮಿಗೆ ಬಿಸಿಲ್ಗುದುರೆಗಳಂ ॥ ತುಳಿಯೆ ರವಿ ನಿಜರಥಾಶ್ವಾ । ವಳಿಯಂ ಕೊಂಡೋಡುತಗಿದಡಂಗಿದನಲ್ತೆ ॥೧೮॥

ಚಂ ॥ ವನಧಿಯ ನೀರನುಂಡು ಜಳದಕ್ಕಮೆಯಾಗೆ ಖರಾಂಶುವೆಂಬಮ । ರ್ದಿನಕಬಳಂಗೊಳುತ್ತೆ ಜಳದಂ ಸೆಳೆಮಿಂಚೆನಿಸಿರ್ಪ ಕಾದಕಾಂ ॥ ಚನದ ಶಲಾಕೆಯಿಂ ಸುಡಿಸಿಕೊಂಡೆಲರೊಳ್ಮರಿತಕ್ಕೆ ಮೈಗುಡು । ತ್ತನುಗತಿಯಿಂ ಮಗುಳ್ಚದವೊಲಂಬುವನೀಂಮುಳಿಚೆಲ್ವನಾಳ್ದುದೊ ॥ ... ... ... ... ॥೧೯॥

ಮತ್ತೇ ॥ ಗಗನಶ್ರೀವಧು ಚಂಚಲೇಕ್ಷಣದೆ ಪೂರ್ಣಪ್ರೇಮದಿಂ ನೋಡಿ ಚಾ

---

ನಿರ್ದಳಿತ- ಸೀಳಲ್ಪಟ್ಟ, ಜಲಂಧರ- ಜಲಂಧರಾಸುರನ, ಉಗ್ರ- ಭಯಂಕರವಾದ, ಶಿರಂ, ಎಂಬವೊಲ್- ಆದುದು. ... ... ... ... ... ... ॥೧೬॥

ಕಾರ್- ವರ್ಷಾಕಾಲವು, ಎಂಬ, ನಾರಾಯಣಂ, ಜಲದ ಶ್ಯಾಮಲಕಾಯಕಾಂತಿ-ಮೇಘದ ಕಪ್ಪಾದ ದೇಹದ ಕಾಂತಿಯು, ( ಮೋಡದಂತೆ ಕಪ್ಪಾದ ಶರೀರದ ಕಾಂತಿಯು, ) ಬಿಡದೆ, ಎತ್ತಂ- ಎಲ್ಲಾ ಕಡೆಯಲ್ಲೂ, ಪೊಣ್ಮೆ- ಉಂಟಾಗಲು, ನಿಂದು, ಇಂದ್ರಚಾಪಲಸಚ್ಚಾಪಮಂ- ಇಂದ್ರಧನುಸ್ಸೆಂಬ ಪ್ರಕಾಶಿಸುವ ಧನುಸ್ಸನ್ನು, ಆಂತು, ಚಾಪಲತಟಜ್ಜ್ಯಾಕರ್ಷಣಂಗೆಯ್ದು- ಚಂಚಲವಾದ ಮಿಂಚೆಂಬ ಸಿಂಜಿನಿಯನ್ನೆಳೆದು, ನಿಸ್ತುಲಮೇಘಧ್ವನಿಗರ್ಜಿತಂಗುಡುತೆ- ಅಸದೃಶವಾದ ಗುಡುಗೆಂಬ ಗರ್ಜನೆಯಂ ಮಾಡುತ್ತ, ಪೂಡುತೆ- ಧನುಸ್ಸಿಗೆ ಬಾಣವಂ ಸೇರಿಸುತ್ತ, ಗ್ರೀಷ್ಮಸುರಾರಿ- ಬೇಸಗೆಯೆಂಬ ರಾಕ್ಷಸನು, ಬೆಂಗುಡುವಿನಂ- ಹಿಮ್ಮೆಟ್ಟಿ ಓಡಿಹೋಗುವಹಾಗೆ, ಉದ್ಯಚ್ಚರಾವಳಿಯಂ- ಅಧಿಕವಾದ ಬಾಣಪಙ್ತಿಯನ್ನು, ( ಜಲಪಙ್ತಿಯನ್ನು ) ಎಚ್ಚಂ- ಪ್ರಯೋಗಿಸಿದನು. ... ... ... ... ॥೧೭॥

ಜಳದಗಜಂ- ಮೋಡವೆಂಬ ಆನೆಯು, ಜಳಮದಜಳಂ- ನೀರೆಂಬ ಮದೋದಕವು, ಇಳಿತರೆ- ಸುರಿಯಲು, ಮಿಗೆ, ಮೇಲ್ವಾಯ್ದು- ಮೇಲಕ್ಕೆ ಬಿದ್ದು, ಬಿಸಿಲ್ಗುದುರೆಗಳಂ- ಮರೀಚೀಜಳವನ್ನು, ತುಳಿಯೆ, ರವಿ- ಸೂರ್ಯನು, ಅಗಿದು- ಭಯಪಟ್ಟು, ನಿಜರಥಾಶ್ವಾಳಿಯಂ- ತನ್ನ ಕುದುರೆಗಳ ಪಙ್ತಿಯನ್ನು, ಕೊಂಡು- ತೆಗೆದುಕೊಂಡು, ಓಡುತೆ, ಅಡಂಗಿದನಲ್ತೆ- ಔತುಕೊಂಡನಲ್ಲವೇ ? ... ... ॥೧೮॥

ಜಳದಂ- ಮೋಡವು, ವನಧಿಯ- ಸಮುದ್ರದ, ನೀರಂ, ಉಂಡು, ಜಳದ, ಅಕ್ಕಮೆ-ಅಜೀರ್ಣವು, ಆಗೆ, ಖರಾಂಶು- ಸೂರ್ಯನು, ಎಂಬ, ಮರ್ದಿನ- ಔಷಧದ, ಕಬಳಂಗೊಳುತ್ತೆ- ತುತ್ತನ್ನು ತೆಗದುಕೊಳ್ಳುತ್ತ, ಸೆಳೆಮಿಂಚು, ಎನಿಸಿ, ಇರ್ದ, ಕಾದ, ಕಾಂಚನದ- ಚಿನ್ನದ, ಶಲಾಕೆಯಿಂ- ಸಲಾಕಿಯಿಂದ, ಸುಡಿಸಿಕೊಂಡು, ಎಲರ- ಗಾಳಿಯ, ಬಳ್ಮರಿತಕ್ಕೆ- ಒಳ್ಳೇ ಸುತ್ತಿಬೀಸುವಿಕೆಗೆ, ಮೈಗುಡುತ್ತೆ- ದೇಹವನೀಯುತ್ತ, ಅನುಗತಿಯಿಂ- ಕ್ರಮವಾಗಿ, ಅಂಬುವಂ- ನೀರನ್ನು, ಮಗುಳ್ಚದವೋಲ್- ಪುನಃ ಈಚೆಗೆ ಕಕ್ಕಿದಹಾಗೆ, ಮಳೆ, ಎಂಚೆಲ್ವಂ, ಆಳ್ದುದೊ ? ... ... ... ... ... ॥೧೯॥

ಗಗನಶ್ರೀವಧು- ಅಂತರಿಕ್ಷಲಕ್ಷ್ಮಿಯೆಂಬ ಸ್ತ್ರೀಯು, ಚಾದಗೆಯೆಂಬ- ಚಾತಕಪಕ್ಷಿಯೆಂಬ, ಅರ್ಭಕೇಶುವನ್ನು, ಪೂರ್ಣಪ್ರೇಮದಿಂ, ಚಂಚಲೇಕ್ಷಣದೆ- ಮಿಂಚೆಂಬ ಕಣ್ಣಿನಿಂದ, ನೋಡಿ, ಕರುಣಿಸುತ್ತಾಗಿ,

ದಗೆಯೆಂಬಭರ್ಮಕನುಕರಂ ತೊರೆದು ಬಿಣ್ಪಿಂ ಬೇಗಿ ಮೇಲ್ವಾಯ್ದು ಕೈ ॥ ಮಿಗೆ ಸೊಂಪಾಂತಬೃಹತ್ಪಯೋಧರದಿನೋರಂತೆಚ್ಚು ಪಾಯ್ತರ್ಪಧಾ। ರೆಗಳಿಂ ತಳ್ತ ಪಯೋರಸಪ್ರಸರದಿಂ ಸರ್ವೋರ್ವಿಯಂ ನಾಂದಿದಳ್ ॥ ... ... ... .. ॥೨೦॥

ಕಂ॥ ವನಧರಕರಿಗಳ್ನಿರ್ಜ್ಜರ। ಧುನಿಯೊಳ್ನೀರ್ದುಗ್ಗಿದು ತಣಿದು ಫೂತ್ಕರಿಪ ತದೀ॥ ಯನವಾಂಬುಕಣಗಣಂ ಮೇ। ದಿನಿಗುರುಳ್ವವೊಲಿಳಿವ ಮಳೆಯದೇಂ ಪಡೆದತ್ತೋ ॥

ಕಂ ॥ ಕಡಲಂಬುಗೊಂಬಸಮಯದೊಳ್ । ಎಡೆಸಿಲ್ಕಿದ ಮೌಕ್ತಿಕಾಳಿಯಂ ಸುರಿದಪುದೀ ॥ ಜಡಧರ ಮನೆ ಜಲಶಿಲೆಗಳ್ । ಗಡಣದ ಮಳೆ ಸುರಿದು ಹರಿದು ಪಸರಿಸಿತಾಗಳ್ ॥೨೨॥

ಕಂ ॥ ಜಲಧರಕಟಾಹಪೂರಿತ । ಜಲಮಂ ಮಿಂಚೆಂಬ ಪೊನ್ನಜೀರ್ಕೊಳವೆಗಳಿಂ ॥ ಜಲದೇವತೆಯರ್ವಿನದದಿ । ನಲರ್ದೋಸಗೆಗೆ ಸೂಸಿದಂತೆ ಸುರಿದುವು ಮಳೆಗಳ್ । ॥೨೩॥

ಚಂ ॥ ನಿರವಿಸೆ ಜಿಷ್ಣುವಾಣತಿಯೊಳಬ್ದಕುಲಂ ತದರಾತಿಭೂಧರೋ । ತ್ಕರಮನಪಾರವಾರಿಯೊಳಡಂಗಿಸಿಕೊಂಡಸರೋಧಿಯಂಬುವಂ ॥ ಬರೆತೆಗೆದೀಂಟತಂದು ಸುರಿವುತ್ತಿರೆ

---

ತೊರೆದು- ಬಿಟ್ಟು, ಬಿಣ್ಪಿಂ- ಸ್ಥೌಲ್ಯದಿಂದ, ಬೇಗಿ- ಉಬ್ಬಿ, ಮೇಲ್ವಾಯ್ದು- ಮೇಲಕ್ಕೆ ಹಾರಿ, ಕೈಮಿಗೆ- ಅಧಿಕವಾಗಿ, ಸೊಂಪಾಂತ- ಸೊಗಸಂ ಹೊಂದಿದ, ಬೃಹತ್ಪಯೋಧರದಿಂ- ವಿಶಾಲವಾದ ಕುಚದಿಂದ, (ಮೇಘದಿಂದ) ಓರಂತೆ- ಕ್ರಮವಾಗಿ, ಎಚ್ಚು - ಈಚೆಗೆ ಹೊರಟು, ಪಾಯ್ತರ್ಪ- ಇಳಿದು ಬರುತ್ತಿರುವ, ಧಾರೆಗಳಿಂ, ತಳ್ತ, ಪಯೋರಸಪ್ರಸರದಿಂ- ಹಾಲಿನ ಸಮೂಹದಿಂದ, (ನೀರಿನ ಸಮೂಹದಿಂದ) -ಸರ್ವೋರ್ವಿಯಂ- ಎಲ್ಲಾ ಭೂಮಿಯನ್ನೂ, ನಾಂದಿದಳ್- ನೆನಸಿದಳು. ... ... ... ॥೨೦॥

ವನಧರಕರಿಗಳ್- ಮೋಡಗಳೆಂಬ ಆನೆಗಳು, ನಿರ್ಜರಧುನಿಯೊಳ್- ದೇವಗಂಗೆಯಲ್ಲಿ, ನೀರ್ದುಗ್ಗಿದು, ತಣಿದು- ತೃಪ್ತಿಯಂ ಹೊಂದಿ, ಫೂತ್ಕರಿಪ- ಫೂ ಎಂದು ಊದಲು, ತದೀಯನವಾಂಬುಕಣಂ- ಆ ಉಬ್ಬುದರಿಂದುಂಟಾದ ಹೊಸನೀರಿನ ಹನಿಗಳ ಸಮೂಹವು, ಮೇದಿನಿಗೆ- ಭೂಮಿಗೆ, ಉರುಳ್ವವೋಲ್, ಇಳಿವಮಳೆ, ಅದು, ಸಂರಂಜಿಸಿತೊ! ... ... ... ... ... ॥೨೧॥

ಈಜಡಧರಂ- ಈ ಮೋಡವು, ಕಡಲಂಬುಗೊಂಬಸಮಯದೊಳ್- ಸಮುದ್ರದ ನೀರನ್ನು ಗ್ರಹಿಸುವ ಕಾಲದಲ್ಲಿ, ಎಡೆಸಿಲ್ಕಿದ- ಮಧ್ಯದಲ್ಲಿ ಸಿಕ್ಕಿದ, ಮೌಕ್ತಿಕಾಳಿಯಂ- ಮುತ್ತಿನ ಸಮೂಹವನ್ನು, ಸುರಿದಪುದು, ಎನೆ, ಜಲಶಿಲೆಗಳ್- ಆಲಿಕಲ್ಲುಗಳ, ಗಡಣದ- ಸಮೂಹದಿಂದ ಕೂಡಿದ, ಮಳೆ, ಆಗಳ್, ಸುರಿದು, ಹರಿದು, ಪಸರಿಸಿತು. ... ... ... ... ... ॥೨೨॥

ಜಲದೇವತೆಯರ್- ಜಲಾಭಿಮಾನದೇವತೆಗಳು, ಜಲಧರಕಟಾಹಪೂರಿತ ಜಲಮಂ- ಮೋಡವೆಂಬ ಕಡಾಯಿಯಲ್ಲಿ ತುಂಬಿದ ನೀರನ್ನು, ಮಿಂಚು, ಎಂಬ, ಪೊನ್ನ- ಚಿನ್ನದ, ಜೀರ್ಗೊಳವೆಗಳಿಂ- ಪಿಚಕಾರಿಗಳಿಂದ, ವಿನದದಿಂ- ವಿನೋದದಿಂದ, ಅಲರ್ದ- ಹಚ್ಚಾದ, ಓಸಗೆಗೆ- ಉತ್ಸವಕ್ಕೋಸ್ಕರ, ಸೂಸಿದಂತೆ- ಚೆಲ್ಲಿದಹಾಗೆ, ಮಳೆಗಳ್, ಸುರಿದವು. ... ... ... ... ... ॥೨೩॥

ನಿರವಿಸೆ- ಆಜ್ಞಾಪಿಸಲಾಗಿ, ಜಿಷ್ಣುವ- ಇಂದ್ರನ, ಆಣತಿಯೊಳ್- ಆಜ್ಞೆಯಿಂದ, ಅಬ್ದಕುಲಂ- ಮೇಘಸಮೂಹವು, ತದರಾತಿಭೂಧರೋತ್ಕರಮಂ- ಆ ಇಂದ್ರನಿಗೆ ಶತ್ರುಗಳಾದ ಬೆಟ್ಟಗಳ ಸಮೂಹವನ್ನು, ಅಪಾರವಾರಿಯೊಳ್- ಕೊನೆಯಿಲ್ಲದ ನೀರಿನಲ್ಲಿ, ಅಡಂಗಿಸಿಕೊಂಡ, ಸರೋಧಿಯ- ಸಮುದ್ರದ, ಅಂಬುವಂ, ಬರೆತೆಗೆದು- ಈಚೆಗೆ ತೆಗೆದು, ಈಂಟಿ- ಕುಡಿದು, ತಂದು, ಧಾತ್ರಿಗೆ- ಭೂಮಿಗೆ, ಸುರಿವುತ್ತಿರೆ, ಇರೆ, ಮತ್ತೆ- ಪುನಃ, ಭೂಧರತತಿ- ಪರ್ವತಗಳ ಸಮೂಹವು, ಮಿಕ್ಕು- ಅಧಿಕವಾಗಿ, ಸಿಂಧುವಿಂದೆ, ನದಿಯುಮುಖದಿಂದ,

ಜಿಯಿಂ ತೃಪ್ತಿವಡಿಸಿ ಕೈಗಟ್ಟಯಿತ್ತು ಕರ್ಪೂರತಾಂಬೂಲಮಂ ಸಮರ್ಪಿಸಿ ಪರಿಮಳಸು ಮನೋಮಾಲಿಕಾಸುವಸನಮಣಿಭೂಷಣಾದಿಯಿ ನಲಂಕರಿಸಿ ಪೂಜಿಸಲೊಡಂ ಮುದಂದಳೆ ದು ದಂಪತಿಯಂ ಪರಸಿ ಬಳಿಯಿಂ ಕೈಲಾಸಕ್ಕೆಳ್ತರೆ ಹರಂ ಕೇಳ್ದು ಪರಮಹರ್ಷಂದಾ ಳ್ದು ತದ್ಭಕ್ತನಂ ನಿಜಪುರಕ್ಕೆ ತರಳೆಳಸಿ ನೆನೆದು ಕಪಟನಾಟಕಲೀಲಾಲಸಚಿತ್ತಂ ಬಿನದ ದಿಂ ಭೈರವಾಕೃತಿದಾಳ್ದ ನದೆಂತೆನೆ ‖ * * * * * * * * * * *

ಚಂ ‖ ಜಡೆಯೆಡೆಯಾಂತಕೇತಕಿಯ ನುಣ್ಣೆಸಳಾಗೆ ಶಶಾಂಕಲೇಖೆ ಚೆ । ಲ್ವಡರ್ದಳ ಕೇಕ್ಷಣಂ ನೊಸಲಸುಂದರಬೊಟ್ಟಿನ ಪಾಂಗ ನಾಳೆ ಪಂ ‖ ಪಿಡಿದಜಚಕ್ರಿಮಸ್ತಕಯುಗಂ ಶ್ರುತಿಕುಂಡಲಯುಗ್ಮ ಮಾಗೆ ತಾ । ಳೊಡನೆ ನಿಕೃತ್ತಹಸ್ತ್ಯಸುರ ಮಸ್ತಕಮೌಕ್ತಿಕ ಕಂಠಮಾಲೆಯಂ ‖ ... ... ... ... ... ||೨೯||

ಮ ‖ ಸ್ರ ‖ ತಳೆದುಗ್ರದ್ವೀಪಿದಂತಾವಳನೃಹರಿಲಸತ್ಕೃತ್ತಿಕಂಥಾವೃತಾಂಗಂ । ಬ ಳವತ್ಕೂರ್ಮಾರಿಭೃತ್ಖರ್ಪರತರಳಸುರಾಸ್ಥಿವ್ರಜ ಸ್ರಗ್ವಿಭೂಷೋ ‖ ಜ್ಜ್ವಳವಕ್ಷಂ ತತ್ತ್ವ

---

ಪ್ತಿವಡಿಸಿ, ಕೈಗಟ್ಟಯಿತ್ತು, ಮುಖವಾಸನಾರ್ಥವಾಗಿ ಮಾಡಿರುವ ಗುಳಿಗೆಗಳಂಕೊಟ್ಟು, ಕರ್ಪೂರ ತಾಂಬೂಲಮಂ- ಪಚ್ಚಕರ್ಪೂರದಿಂ ಕೂಡಿದ ವೀಳಯವನ್ನು, ಸಮರ್ಪಿಸಿ, ಪರಿಮಳ......ಣಾದಿಯಿಂ—ಪರಿಮಳಸುಮನೋಮಾಲಿಕಾ- ಸುವಾಸನೆಯಿಂಕೂಡಿದ ಹೂವಿನ ಸರವೇನು, ಸುವಸನ- ಒಳ್ಳೆಯ ಬಟ್ಟೆಯೇನು, ಮಣಿಭೂಷಣ- ರತ್ನದ ಒಡವೆಗಳೇನು, ಇವುಗಳೇ, ಆದಿಯಿಂ- ಮೊದಲಾದವುಗಳಿಂದ, ಅಲಂಕರಿಸಿ, ಪೂಜಿಸಲ್, ಒಡಂ- ಕೂಡಲೇ, ಮುದಂದಳೆದು- ಸಂತೋಷವಂ ಹೊಂದಿ, ದಂಪತಿಯಂ- ಗಂಡಹೆಂಡತಿಯರನ್ನು, ಪರಸಿ- ಆಶೀರ್ವದಿಸಿ, ಬಳಿಯಿಂ- ಅನಂತರ, ಕೈಲಾಸಕ್ಕೆ, ಎಳ್ತರೆ- ಬರಲು, ಹರಂ, ಕೇಳ್ದು, ಪರಮಹರ್ಷಂದಾಳ್ದು, ತದ್ಭಕ್ತನಂ- ಆ ಸಿರಿಯಾಳ ಸೆಟ್ಟಿಯನ್ನು, ನಿಜಪುರಕ್ಕೆ- ತನ್ನ ಕೈಲಾಸಪಟ್ಟಣಕ್ಕೆ, ತರಲ್, ಎಳಸಿ, ನೆನೆದು- ಯೋಚಿಸಿ, ಕಪಟನಾಟಕಲೀಲಾಲಸಚಿತ್ತಂ- ಕೃತ್ರಿಮವಾದ ನಾಟಕದ ವಿಲಾಸದಿಂದ ಮತ್ತನಾದ ಮನಸ್ಸುಳ್ಳ ಶಿವನು, ಬಿನದದಿಂ- ವಿನೋದದಿಂದ, ಭೈರವಾಕೃತಿದಾಳ್ದಂ, ಅದು, ಎಂತು, ಎನೆ. * *

ಶಶಾಂಕಲೇಖೆ- ಚಂದ್ರನ ರೇಖೆಯು, ಜಡೆಯೆಡೆಯಾಂತ- ಜಡೆಯ ಸ್ಥಲದಲ್ಲಿ ಧರಿಸಿದ, ಕೇತಕಿಯ- ತಾಳೆಯ, ನುಣ್ಣೆಸಳ್- ನುಣುಪಾದ ಗರಿಯು, ಆಗೆ, ಚೆಲ್ವಡರ್ದ- ಸುಂದರವಾದ, ಅಳಕೇಕ್ಷಣಂ- ಹಣೆಗಣ್ಣು, ನೊಸಲ- ಹಣೆಯಲ್ಲಿಡುವ, ಸಿಂದುರಬೊಟ್ಟಿನ, ಪಾಂಗಂ- ರೀತಿಯನ್ನು, ಆಳೆ- ಹೊಂದಲು, ಪೆಂಪಿಡಿದ- ಆಧಿಕ್ಯವಂಹೊಂದಿದ, ಅಜಚಕ್ರಿಮಸ್ತಕಯುಗಂ- ಬ್ರಹ್ಮ ವಿಷ್ಣುಗಳ ತಲೆಯೆರಡೂ, ಶ್ರುತಿಕುಂಡಲಯುಗ್ಮಂ- ಕಿವಿಯಲ್ಲಿಡುವ ಎರಡುಹತ್ತಕಡುಕುಗಳು, ಆಗೆ, ಒಡನೆ, ನಿಕೃತ್ತಹಸ್ತ್ಯಸುರಮಸ್ತಕಮೌಕ್ತಿಕ ಕಂಠಮಾಲೆಯಂ- ನಿಕೃತ್ತ- ಕತ್ತರಿಸಲ್ಪಟ್ಟ, ಹಸ್ತ್ಯಸುರ- ಗಜಾಸುರನ, ಮಸ್ತಕ- ಶಿರಸ್ಸಿನ, ಮೌಕ್ತಿಕ- ಮುತ್ತುಗಳ, ಕಂಠಮಾಲೆಯಂ- ಕತ್ತಿನ ಹಾರವನ್ನು, ತಳೆದು. ... ... ||೨೯||

ಉಗ್ರ......ವೃತಾಂಗಂ— ಉಗ್ರ- ಭಯಂಕರವಾದ, ದ್ವೀಪಿ- ವ್ಯಾಘ್ರ, ದಂತಾವಳ- ಗಜ, ನೃಹರಿ- ನರಸಿಂಹ, ಇವರುಗಳ, ಲಸತ್- ಪ್ರಕಾಶಿಸುವ, ಕೃತ್ತಿ- ಚರ್ಮದ, ಕಂಥಾ- ಕಂತೆಯಿಂದ, ಆವೃತ- ಸುತ್ತಹಾಕಲ್ಪಟ್ಟ, ಅಂಗಂ- ಅವಯವವುಳ್ಳ, ಬಳ......ವಕ್ಷಂ— ಬಳವತ್- ಶಕ್ತಿವಿಶಿಷ್ಟನಾದ, ಕೂರ್ಮ- ಆನೆಯು ಅವತಾರಿಯಾದ ವಿಷ್ಣುವಿಗೆ, ಅರಿ- ಶತ್ರುವಾದವನಾದ ಕಾರಣವೇ, ಭೃತ್- ಧರಿಸಲ್ಪಟ್ಟ, ಖರ್ಪರ- ಬೆನ್ನಿನ ಓಟೆಯೆಂಬ, ತರಳ- ಹಾರಮಧ್ಯದ ಪದಕವಾಗುಳ್ಳ, ಸುರ- ದೇವತೆಗಳ, ಅಸ್ಥಿ- ಮೂಳೆಗಳ, ವ್ರಜ- ಸಮೂಹದ, ಸ್ರಕ್- ಮಾಲಿಕೆಯೆಂಬ, ವಿಭೂಷ- ಅಲಂಕಾರದಿಂದ, ಉಜ್ಜ್ವಳ- ಮನೋಹರವಾದ,

ರೂಪಂ ತ್ರಿಶಿಖಿಖರಶಿಖಾದೀಪ್ತಶೂಲಾಯುಧಂ ಪಾ೦ಂ । ಜುಳನಾದೋದ್ಬಿಂದುಚಂಚನ್ಮಣಿ
ಯುಗಮಿಳದೋಂಕಾರಢಕ್ಕಾಂಕಹಸ್ತಂ ॥ ... ... ... ॥೩೦॥

ಮತ್ತೆ೦ ॥ ಶ್ರುತಿಚಂಚಚ್ಚರಣಾಂಗದಂ ತೊಳಗೆ ಧುತ್ತೂರಪ್ರಸೂನಂ ಜಟಾ । ತ
ತಿಯೊಳ್ಶೋಭಿಸೆ ಜೋಗವಟ್ಟಗೆ ಫಣಾಭೃನ್ನಾಥ ನಂದಾಗೆ ಸ ॥ ನ್ನುತವಿದ್ಯಾಮಯಕಕ್ಷ
ಪಾಲಿಕೆ ಬೆಡಂಗಂ ಬೀರೆ ತಾಳ್ದಿಂತು ಪಾ। ರ್ವತಿಯಾಣ್ಮಂ ನವಭೈರವಾಕೃತಿಯಂ ನಾಳ್ದಾ
ಯ್ತಂದ ನಾನಂದದಿಂ ॥ ... .. ... ... ... ॥೩೧॥

ವ ॥ ಅಂತೆಳ್ತಂದು ಕಾಂಚೀನಗರಮಂ ಪೊಕ್ಕುಭಕ್ತಗೃಹಬಹಿರ್ದೇಶದಾಚಮರ
ವೊದಲೊಳ್ ಬಗ್ಗದೊವಲ ಪಾಸುಗೆಯಲ್ಲಿ ಸಲ್ಲೀಲೆಯಿಂ ಮೂರ್ತಿಗೊಂಡಿರೆ ಯಿರೆ ॥ *

ಮ॥ ಸ್ರ ॥ ಚರವೃಂದಂ ಧೂರ್ಜಟಿಪ್ರೇರಣೆಯಿ ನುರುನಿಜಾವಾಸಕಂದೆಯ್ದದಿರ್ಪ್ಪಂ
ದಿರವಿಂಗಾತಂ ವಿಷಾದಂಬಡೆದು ತವೆ ತದನ್ವೇಷಣಂಗೆಯ್ಯಲೆಂದಾ ॥ ದ್ಭರದಿಂ ತದ್ವೀಥಿಯೊ
ಳ್ಪಾಯ್ದರಸುತಿದಿರೊಳ್ಕೂಪ್ಪದ ತದ್ಭೈರವಾಧೀ । ಶ್ವರನಂ ಕಂಡಂ ಚಕೋರಂ ಶಶಿಯ
ನೊಸೆದು ಕಂಡಂತಿರಾದಭ್ರಭಕ್ತಂ ॥ ... ... ... ॥೩೨॥

---

ವಕ್ಷಂ- ಎದೆಯುಳ್ಳ, ತತ್ವರೂಪಂ- ತತ್ವಗಳ ಸ್ವರೂಪನಾದ, ತ್ರಿಶಿಖಿಖರಶಿಖಾದೀಪ್ತಶೂಲಾಯುಧಂ- ತ್ರಿಶಿ
ಖಿ- ಮೂರು ಅಗ್ನಿಗಳ, ಖರ- ತೀಕ್ಷ್ಣವಾದ, ಶಿಖಾ- ಜ್ವಾಲೆಯೋಪಾದಿಯುಳ್ಳ, ದೀಪ್ತ- ಪ್ರಜ್ವಲಿಸುವ,
ಶೂಲಾಯುಧಂ- ತ್ರಿಶೂಲವುಳ್ಳ, ಪಾ೦ಜುಳ......ಹಸ್ತಂ—ಪಾ೦ಜುಳ- ಮನೋಹರವಾದ, ನಾದ- ನಾ
ದವೇನು, ಉತ್- ಉತ್ಕೃಷ್ಟವಾದ, ಬಿಂದು ಇವುಗಳೆಂಬ, ಚಂಚತ್- ಚಪಲವಾದ, ಮಣಿಯುಗ- ಎರಡು
ಮಣಿಗಳಿಂದ, ಮಿಳಿತ- ಕೂಡಿದ, ಓಂಕಾರ- ಪ್ರಣವವೆಂಬ, ಢಕ್ಕಾ- ಡವಣೆಯ, ಅಂಕ- ಚಿಹ್ನವುಳ್ಳ, ( ಅಂದ
ರೆ ಡವಣೆಯಂ ಹಿಡಿದಿರುವ ) ಹಸ್ತಂ- ಕೆಯ್ಯುಳ್ಳ. ... ... ... ॥೩೦॥

ಶ್ರುತಿಚಂಚಚ್ಚರಣಾಂಗದಂ- ಶ್ರುತಿ- ವೇದಗಳೆಂಬ, ಚಂಚತ್- ಪ್ರಕಾಶಿಸುವ, ಚರಣಾಂಗದಂ- ಪಾ
ದದ ಗಗ್ಗರಗಳು, ತೊಳಗೆ- ಪ್ರಕಾಶಿಸಲು, ಧುತ್ತೂರಪ್ರಸೂನಂ— ದತ್ತೂರಿಯ ಹೂವು, ಜಟಾತತಿಯೊಳ್,
ಶೋಭಿಸೆ, ಫಣಾಭೃನ್ನಾಥಂ- ಆದಿಶೇಷನು, ಅಂದು, ಜೋಗವಟ್ಟಗೆ- ಯೋಗಪಟ್ಟೆಯು, ಆಗೆ, ಸನ್ನುತ
ವಿದ್ಯಾಮಯಕಕ್ಷಪಾಲಿಕೆ- ಸನ್ನುತ- ಶ್ಲಾಘ್ಯಗಳಾದ, ವಿದ್ಯಾಮಯ- ವಿದ್ಯೆಗಳರೂಪವಾದ, ಕಕ್ಷಪಾಲಿಕೆ-
ಜೋಳಿಗೆಯು, ಬೆಡಂಗಂ- ಸೊಗಸನ್ನು, ಬೀರೆ, ತಾಳ್ದು, ಇಂತು, ಪಾರ್ವತಿಯ, ಆಣ್ಮಂ- ಪತಿಯು, ನವ
ಭೈರವಾಕೃತಿಯಂ, ಆಳ್ದು- ಹೊಂದಿ, ಆನಂದದಿಂ, ಎಯ್ತಂದಂ. ... ... ॥೩೧॥

ಅಂತು, ಎಳ್ತಂದು, ಕಾಂಚೀನಗರಮಂ, ಪೊಕ್ಕು, ಭಕ್ತಗೃಹಬಹಿರ್ದೇಶದ- ಭಕ್ತನಮನೆಯ ಹೊರ
ಗಣ ಸ್ಥಳದ, ಆಚಮರ, ಪೊದಲೊಳ್, ಬಗ್ಗದೊವಲ- ಹುಲಿಯ ಚರ್ಮದ, ಪಾಸುಗೆಯಲ್ಲಿ- ಹಾಸಗೆಯಲ್ಲಿ,
ಸಲ್ಲೀಲೆಯಿಂ- ಒಳ್ಳೆಯವಿಲಾಸದಿಂದ, ಮೂರ್ತಿಗೊಂಡು- ಕುಳಿತು, ಇರೆಯಿರೆ. * * * * *

ಚರವೃಂದಂ- ಜಂಗಮಸಮೂಹವು, ದೂರ್ಜಟಿಪ್ರೇರಣೆಯಿಂ- ಈಶ್ವರನ ಉದ್ಬೋಧನೆಯಿಂದ, ಉ
ರುನಿಜಾವಾಸಕೆ- ಶ್ರೇಷ್ಠವಾದ ತನ್ನಮನೆಗೆ, ಅಂದು, ಎಯ್ದದೆ- ಬರದೆ, ಇರ್ಪ, ಒಂದಿರವಿಂಗೆ- ಒಂದುರೀತಿ
ಗೆ, ಆತಂ- ಆಸಿರಿಯಾಳಸೆಟ್ಟಿಯು, ವಿಷಾದಂ ಬಡೆದು- ಮನಃಕ್ಲೇಶವಂ ಹೊಂದಿ, ತವೆ- ಚೆನ್ನಾಗಿ, ತದನ್ವೇ
ಷಣಂಗೆಯ್ಯಲೆಂದು- ಆ ಜಂಗಮರಂ ಹುಡುಕಬೇಕೆಂದು, ಆದರದಿಂ- ವಿಶ್ವಾಸದಿಂದ, ತದ್ವೀಥಿಯೊಳ್- ಆ
ಭೈರವೇಶ್ವರನು ಕುಳಿತಿದ್ದ ಬೀದಿಯಲ್ಲಿ, ಪಾಯ್ದು- ಹೊರಟು, ಅರಸುತೆ- ಹುಡುಕುತ್ತ, ಚಕೋರಂ, ಒಸೆ
ದು, ಶಶಿಯಂ- ಚಂದ್ರನನ್ನು, ಕಂಡಂತಿರೆ- ನೋಡಿದಹಾಗೆ, ಆದಭ್ರಭಕ್ತಂ- ಸಿರಿಯಾಳಸೆಟ್ಟಿಯು, ಇದಿರೊ
ಳ್, ತದ್ಭೈರವಾಧೀಶ್ವರನಂ, ಕಂಡಂ. ... ... ... ... ॥೩೨॥

ವ ॥ ಅಂತು ಕಂಡು ಕಳೆಯೇರಿ ಸಾರೆವಂದು ಸಾಷ್ಟಾಂಗಮೆರಗಿ ಕೃತಾರ್ಥಭಾವಮಂ ಕೈಕೊಂಡು ದೇವ ನಿಮ್ಮಡಿಗ ಳೆನ್ನಮೇಲಣ ಕಾರುಣ್ಯದಿಂ ಮದೀಯಗೃಹದೊ ಳಿಂದಾರೋಗಣೆಗೆಯ್ವುದೆಂದು ಬಿನ್ನಪಂಗೆಯ್ಯೆ ಕಪಟವೇಷದೀಶ್ವರಂ ಕೇಳ್ದು ॥ * * *

ಕಂ ॥ ಎಲೆಮಗನೆ ಕೇಳೆಮಗೆ ನಿ । ಶ್ಚಲಸುವ್ರತಮುಂಟು ಸಲಿಪ ಕಲಿಯಾವನದಂ ॥
ನೆಲದೊ ಳ್ನೆನೆವೊಡಸಾಧ್ಯ ಮ । ದೋಲವಿಂ ನೀಂ ಸಲಿಸೆ ನಿನ್ನಜನ್ಮಮೆ ಸಫಲಂ ॥ ॥೩೩॥

ಮ ॥ ಸ್ರ ॥ ಅರುದಿಂಗಳ್ಗೊರ್ಮೆ ಕೇಳ್ ಭೋಜನ ಮೆಮಗದು ಸದ್ವಂಶಜಂ ಕೋಮಲಾಂಗಂ । ನೆರೆ ಚೆಲ್ವಂ ಪಂಚವರ್ಷೀಯನೆನಿಪ ಗುಣವದ್ಬಾಲನಂ ತಂದೆ ತಾಯ್ಗಳ್ ॥ ತರಿದು ದ್ಯದ್ಭಕ್ತಿಯಿಂ ಮಾಡಿದ ಪಿಶಿತದಿ ನಾದಪ್ಪುದೀಮಾಳ್ಕೆಯಿಂ ನೀ । ನುರೆಮಾಡಲ್ವೇಳ್ಕುಮಿಂತಲ್ಲದೊಡೆ ಬರಿಯ ಮಾತಿಂದಮೇಂ ದಭ್ರಭಕ್ತ ॥ ... ... ॥೩೪॥

ಕಂ ॥ ಎನೆ ಕೇಳ್ದು ಭೈರವೋಕ್ತಿಯ । ನನವದ್ಯಂ ದೇವ ಮಾಳ್ಪೆ ನೀಮಾಳ್ಕೆಯೊ ಳೆಂ ॥ ದೆನುತೆರಗಿ ಮುದದೆ ವಿಜ್ಞಾ । ಪನಮಂ ತಾಂ ಮಾಡಿ ಸೆಟ್ಟಿ ಮನೆಗೆಳ್ತಂದಂ ॥

ವ ॥ ಅಂತೆಳ್ತಂದು ನಿಜರಮಣಿಯಾನನಮ ನಭೀಕ್ಷಿಸಿ ತನ್ಮನಮ ನೊರೆದು ನೋಡಲಿಂತೆಂದಂ ॥ * * * * * * * * * * * * * *

---

ಅಂತು, ಕಂಡು, ಕಳೆಯೇರಿ- ಕಾಂತಿವಿಶಿಷ್ಟನಾಗಿ, ಸಾರೆವಂದು- ಸಮೀಪಕ್ಕೆ ಬಂದು, ಸಾಷ್ಟಾಂಗಂ, ಎರಗಿ, ಕೃತಾರ್ಥಭಾವಮಂ- ಧನ್ಯತ್ವವನ್ನು, ಕೈಕೊಂಡು- ಸ್ವೀಕರಿಸಿ, ದೇವ! ನಿಮ್ಮ, ಅಡಿಗಳ್, ಎನ್ನಮೇಲಣ, ಕಾರುಣ್ಯದಿಂ, ಇಂದು, ಮದೀಯಗೃಹದೊಳ್- ನನ್ನ ಮನೆಯಲ್ಲಿ, ಆರೋಗಣೆಗೆಯ್ವುದು-ಭೋಜನವಂ ಮಾಡಬೇಕು, ಎಂದು, ಬಿನ್ನಪಂಗೆಯ್ಯೆ- ಬಿನ್ನಹವಂ ಮಾಡಲು, ಕಪಟವೇಷದ, ಈಶ್ವರಂ, ಕೇಳ್ದು. * * * * * * * * * * * * * * * * * *

ಎಲೆಮಗನೆ! ಕೇಳ್; ಎಮಗೆ- ನಿಶ್ಚಲಸುವ್ರತಂ- ದೃಢವಾದ ಒಳ್ಳೆಯ ನಿಯಮವು, ಉಂಟು, ಅದಂ, ನೆಲದೊಳ್- ಭೂಮಿಯಲ್ಲಿ, ಸಲಿಪ- ನೆರವೇರಿಸುವ, ಕಲಿ- ಸಮರ್ಥನು, ಆವಂ? ಅದು, ನೆನೆವೊಡೆ- ಸ್ಮರಿಸಿದರೆ, ಅಸಾಧ್ಯಂ; ನೀಂ, ಸಲಿಸೆ, ನಿನ್ನ, ಜನ್ಮಮೆ, ಸಫಲಂ- ಸಾರ್ಥಕವಾದದ್ದು. ... ॥೩೩॥

ದಭ್ರಭಕ್ತ! ಕೇಳ್, ಎಮಗೆ, ಅರುದಿಂಗಳ್ಗೆ- ಆರು ತಿಂಗಳಿಗೆ, ಒರ್ಮೆ- ಒಂದಾವರ್ತಿ. ಸದ್ವಂಶಜಂ- ಒಳ್ಳೆಯ ಕುಲದಲ್ಲಿ ಹುಟ್ಟಿದವನು, ಕೋಮಲಾಂಗಂ- ಮೃದುವಾದ ಅವಯವವುಳ್ಳವನು, ನೆರೆ- ಚೆನ್ನಾಗಿ, ಚೆಲ್ವಂ- ಸುಂದರನು, ಪಂಚವರ್ಷೀಯಂ- ಐದುವರ್ಷಗಳ ವಯಸ್ಸುಳ್ಳವನು. ಎನಿಪ, ಗುಣವದ್ಬಾಲನಂ-ಸುಗುಣವುಳ್ಳ ಹುಡುಗನನ್ನು, ತಂದೆತಾಯ್ಗಳ್, ತರಿದು-ಕತ್ತರಿಸಿ, ಉದ್ಯದ್ಭಕ್ತಿಯಿಂ- ಹೆಚ್ಚಾದ ಭಕ್ತಿಯಿಂದ, ಮಾಡಿದ, ಪಿಶಿತದಿಂ- ಮಾಂಸದಿಂದ, ಅದುಭೋಜನಂ, ಆದಪ್ಪುದು- ಆಗುವದು; ಈಮಾಳ್ಕೆಯಿಂ- ಈರೀತಿಯಿಂದ, ನೀಂ, ಉರೆ- ಅಧಿಕವಾಗಿ, ಮಾಡಲ್ವೇಳ್ಕುಂ; ಇಂತು, ಅಲ್ಲದೊಡೆ, ಬರಿಯ- ನಿಷ್ಪ್ರಯೋಜನವಾದ, ಮಾತಿಂದಂ, ಏಂ, ... ... ... ... ... ॥೩೪॥

ಎನೆ, ಅನವದ್ಯಂ- ನಿರ್ದುಷ್ಟನಾದ, ಸೆಟ್ಟಿ, ಭೈರವೋಕ್ತಿಯಂ, ಕೇಳ್ದು, ದೇವ! ಈಮಾಳ್ಕೆಯೊಳ್- ಈರೀತಿಯಿಂದ, ಮಾಳ್ಪೆಂ, ಎಂದು, ಎನುತೆ, ಎರಗಿ, ಮುದದೆ, ತಾಂ, ವಿಜ್ಞಾಪನಮಂ- ಬಿನ್ನಹವನ್ನು, ಮಾಡಿ, ಮನೆಗೆ, ಎಳ್ತಂದಂ. ... ... ... ... ॥೩೫॥

ಅಂತು, ಎಳ್ತಂದು, ನಿಜರಮಣಿಯ- ತನ್ನ ಹೆಂಡತಿಯ, ಆನನಮಂ- ಮುಖವನ್ನು, ಅಭೀಕ್ಷಿಸಿ-ನೋಡಿ, ಒರೆದು- ಶೋಧಿಸಿ, ತನ್ಮನಮಂ- ಅವಳ ಮನಸ್ಸನ್ನು, ನೋಡಲ್, ಇಂತು, ಎಂದಂ. * * * * *

ಉ ॥ ತಾಪಸ ನೋರ್ವ್ವ ನೊಲ್ದು ನವಭೈರವವೇಷಮ ನಾಂತು ಬಂದ ನಿಂ । ದೋ
ವಳೆ ಕೇಳವಂಗೆ ಶಿಶುಮಾಂಸನಿಷೇವಣಸುವ್ರತಂ ಗಡಿಂ ॥ ದೀಪುರದೊ ಳ್ವಲಂ ಬಲಿತುತಂ
ದು ಸಲಕ್ಷಣಬಾಲನಂ ಬಳಿಕ್ಕಾಪರಮಂಗೆಕೊಯ್ದಡಗನಟ್ಟುಣಲಿಕ್ಕುವಕಜ್ಜಮುಪ್ಪುದೇ॥

ವ ॥ ಎಂದಾವಲ್ಲಭನ ವಚನಮಂ ಸೇಳಿಡುಂಗೆಯ್ದು ಚಂಗಳೆ ದೇವಿ ಯಿಂತೆಂದಳ್ ॥ *

ಚಂ ॥ ಶಿವಶಿವ ಬೆಳ್ತನಂ ನಿಮಗೆ ಸಲ್ವುದೆ ತಾಪಸವೇಷಧೀಶ ನು । ತ್ಸವಮತಿ ಚೇ
ಡೆ ಲೋಗರ ತನೂಜರ ನೀಯಲದೇಕೆ ಮತ್ತನೂ ॥ ಭವ ನಿರೆ ಮಂಜುಳಾಂಗ ನವನಂ ವಧಿ
ಸುತ್ತ ಮವಂಗೆ ತೃಪ್ತಿ ಸಂ । ಭವಿಸಪ್ಪೊಲಿತ್ತು ಮಾಂಸಚಯಮಂ ತವೆ ತಾಳ್ವುದು
ಧನ್ಯಭಾವಮಂ ॥ ... ... ... ... .. ॥೩೮॥

ವ ॥ ಎಂದ ಮನದನ್ನಳ ವಿನಯವಚನಂ ಮನಃಕಂಡೂಕಂಡೂಯನ ಮಾಗೆ ಬಗೆಯೊ
ಳ್ಮೆಚ್ಚಿ ಮುದಂಬಟ್ಟು ಸೆಟ್ಟಿ ಪಠನಾಗರದೊಳೋದುವಣುಗನಂ ತರಲೆಂದು ನಡೆಗೊಳ್ವು
ದರಿಂ ಮುನ್ನಮ ತತ್ತಾಪಸಂ ಸೌಮ್ಯವೇಷಂದಳೆದಾ ಚೇಲಾಳನಿರ್ದಲ್ಲಿ ಗೆಯ್ತಂದವನಂ
ಕೆಲಕ್ಕೆ ಕರೆದು ಮಣಿದಾತನಂ ನೋಡಿ ನಿಡುಸುಯ್ದು ಕಂಬನಿದುಂಬುತಿಂತೆಂದಂ॥ * *

---

ಓವಳೆ-ಪತ್ನಿಯೇ ! ಕೇಳ್; ಓರ್ವ್ವಂತಾಪಸಂ, ನವಭೈರವವೇಷಮಂ, ಆಂತು, ಇಂದು, ಬಂದಂ, ಅವಂ
ಗೆ, ಶಿಶುಮಾಂಸನಿಷೇವಣಸುವ್ರತಂಗಡ- ಮಗುವಿನ ಮಾಂಸವನ್ನು ತಿನ್ನುವ ಒಳ್ಳೆಯ ನಿಯಮವಂತೆ!
ಇಂದು, ಈಪುರದೊಳ್, ವಲಂ- ನಿಶ್ಚಯವಾಗಿ, ಸಲಕ್ಷಣಬಾಲನಂ, ಬಲಿತುತಂದು- ಕ್ರಯಕ್ಕೆ ತೆಗೆದುಕೊಂ
ಡುಬಂದು, ಬಳಿಕ್ಕ-ಅನಂತರ, ಕೊಯ್ದು, ಆಪರಮಂಗೆ- ಉತ್ಕೃಷ್ಟನಾದ ಆ ಭೈರವನಿಗೆ, ಅಡಗಂ-
ಮಾಂಸವನ್ನು, ಅಟ್ಟು- ಪಾಕಮಾಡಿ, ಉಣಲ್- ಊಟವಂ ಮಾಡುವದಕ್ಕೆ, ಇಕ್ಕುವ, ಕಜ್ಜಂ- ಕಾರ್ಯ
ವು, ಅಪ್ಪುದೇ ? ... ... ... ... ... ।೩೭॥

ಎಂದ, ಆವಲ್ಲಭನ ಪತಿಯ, ವಚನಮಂ, ಚಂಗಳೆದೇವಿ, ಎಡಂಗೆಯ್ದು- ತಿರಸ್ಕರಿಸಿ, ಇಂತು, ಎಂದಳ್.

ಶಿವಶಿವ ! ನಿಮಗೆ, ಬೆಳ್ತನಂ- ಹುಚ್ಚುತನವು, ಸಲ್ವುದೆ- ಯೋಗ್ಯವಾದದ್ದೇ ? ತಾಪಸವೇಷದ, ಈ
ಶಂ, ಉತ್ಸವಮತಿ- ಸಂತೋಷವಿಶಿಷ್ಟವಾದ ಮನಸ್ಸುಳ್ಳವನಾಗಿ, ಬೇಡೆ, ಮಂಜುಳಾಂಗಂ- ಮನೋಹರ
ವಾದ ಅವಯವವುಳ್ಳ, ಮತ್ತನೂಜಂ- ನಮ್ಮ ಮಗನು, ಇರೆ- ಇರುತ್ತಿರಲು, ಲೋಗರ- ಇತರರ, ತನೂಜ
ರಂ- ಮಕ್ಕಳನ್ನು, ಈಯಲ್‌ಅದುವಿಗೆ- ಕೊಡುವದೇಕೆ ? ಅವನಂ- ಆ ನಮ್ಮ ಮಗನನ್ನು, ವಧಿಸುತ್ತಂ-
ಕೊಲ್ಲುತ್ತ, ಅವಂಗೆ- ಆ ಈಶ್ವರನಿಗೆ, ತೃಪ್ತಿ, ಸಂಭವಿಪವೊಲ್- ಉಂಟಾಗುವಹಾಗೆ, ಮಾಂಸಚಯಮಂ,
ಇತ್ತು, ತವೆ- ಚೆನ್ನಾಗಿ, ಧನ್ಯಭಾವಮಂ- ಕೃತಾರ್ಥತೆಯನ್ನು, ತಾಳ್ವುದು. ... ।೩೮॥

ಎಂದ, ಮನದನ್ನಳ- ಮನಃಕಾಂತೆಯ, ವಿನಯವಚನಂ- ನಮ್ರತೆಯಿಂ ಕೂಡಿದ ಮಾತು, ಮನಃಕಂ
ಡೂಕಂಡೂಯನಂ- ಮನಸ್ಸೆಂಬ ಕಜ್ಜಿಗೆ ತೀಟೆಯು, ಆಗೆ, ಬಗೆಯೊಳ್- ಮನಸ್ಸಿನಲ್ಲಿ, ಮೆಚ್ಚಿ- ಶ್ಲಾ
ಘಿಸಿ, ಸೆಟ್ಟಿ, ಮುದಂಬಟ್ಟು, ಪಠನಾಗಾರದೊಳ್- ಓದುವ ಮನೆಯಲ್ಲಿ, ಓದುವ, ಅಣುಗನಂ- ಮಗನನ್ನು,
ತರಲ್‌ಎಂದು- ಕರತರಬೇಕೆಂದು, ನಡೆಗೊಳ್ವುದರಿಂ- ಹೋಗುವದಕ್ಕಿಂತಲೂ, ಮುನ್ನಮೆ- ಮೊದಲೇ, ತ
ತ್ತಾಪಸಂ- ಆ ಋಷಿಯು, ಸೌಮ್ಯವೇಷಂದಳೆದು- ಶಾಂತವಾದ ಆಕಾರವಂ ಹೊಂದಿ, ಆಚೇಲಾಳಂ-ಆ ಸಿ
ರಿಯಾಳಸೆಟ್ಟಿಯ ಮಗನು, ಇರ್ದಲ್ಲಿಗೆ- ಇದ್ದ ಸ್ಥಲಕ್ಕೆ, ಎಯ್ತಂದು, ಅವನಂ, ಕೆಲಕ್ಕೆ– ಒಂದುಕಡೆಗೆ, ಕರೆ
ದು, ಮಣಿದ- ನಮಸ್ಕರಿಸಿದ, ಆತನಂ- ಆ ಹುಡುಗನನ್ನು, ನೋಡಿ, ನಿಡುಸುಯ್ದು- ನಿಟ್ಟುಸುರಂ ಬಿಟ್ಟು,
ಕಂಬನಿದುಂಬುತೆ- ಕಣ್ಣೀರನ್ನು ತುಂಬಿಕೊಳ್ಳುತ್ತ, ಇಂತು, ಎಂದಂ. * * * * * * *

ಚಂ ॥ ಎಲೆ ಸುಕುಮಾರ ನಿನ್ನ ಸುಕುಮಾರಶರೀರವ ನಯ್ಯೊ ಪಿತ್ರರಿಂ । ದಲಸದೆ
ಬಂದ ರಾಕ್ಷಸತಪಸ್ವಿಗೆ ಕೇಳ್ಬಲಿಗಟ್ಟ ಮಾಂಸಮಂ ॥ ಸುಲಿದುಣಲಿಕ್ಕಲಿರ್ದಪರದಂ ತಿ
ಳಿದಂ ನಿನಗೆಲ್ಲಮಂ ಸಮು । ಜ್ಜ್ವಲಮತಿ ಪೇಳಲೆಯ್ದಿದೆ ನಳಲ್ಪಿರಿದಾಗೆ ಮದೀಯ
ಚಿತ್ತದೊಳ್ ॥ ... ... ... ... .. ॥೩೮॥

ಉ ॥ ಪೋಗು ರಹಸ್ಯವಾಸದೊಳಡಂಗಿರು ನಿನ್ನಯ ತಂದೆ ಬಂದು ನೀ । ಡಾಗದೆ
ಕಂಡೊಡೇಂ ಬಿಡುವನೇ ಪಿಡಿದೊಯ್ಯನೆ ಕಂದ ಸಾವಿಗೀ ॥ ಡಾಗದಿರಯ್ಯೊ ಸತ್ತು ಪಡೆವಗ್ಗ
ದಮೋಕ್ಷಮದೇಕೆ ಧಾರುಣೀ । ಭೋಗಮನುಣ್ಬುದಂ ಬಿಸುಟು ಸಾವುದರಿಂದತಿಕಷ್ಟ
ಮಾವುದೊ ॥ ... ... ... ... ... ॥೩೯॥

ಕಂ ॥ ಪಿಡಿದಡಸಿ ಕೆಡಪಿ ಜುಂಡಿಕೆ । ವಿಡಿದೌಂಕಿ ಕರಾಳಖಡ್ಗದಿಂ ಗರಿಲನೆ ಸೊಂ ॥
ಪಡರ್ದೆಸೆವ ನಿನ್ನ ಕೊರಲಂ । ತಡೆಯದೆ ಕೊರೆದಪ್ಪ ರಕಟ ನಿನ್ನಯ ಪಿತರರ್ ॥ ॥೪೦॥

ವ ॥ ಎಂಬ ತಾಪಸಾಲಾಪಮಂ ಏಳಿದಂಗೆಯ್ದು ನಕ್ಕು ಚೇಲಾಳ ನಿಂತೆಂದಂ ॥ *

ಮ ॥ ಸ್ರ ॥ ಒಡಲಭ್ರಚ್ಛಾಯೆಯಂತುಂ ಕಿಡುಗು ಮಿದನದಾವಂ ದೃಢಂಗೆಯ್ವನೆ
ನ್ನಂ । ಪಡೆದರ್ತತ್ತಾಪಸಂಗಿಂತಳಿವ ತನುವನೊಲ್ದೀಯೆ ಸಾಫಲ್ಯಮಂ ತಾಂ ॥ ಪಡೆಗುಂ

---

ಎಲೆಸುಕುಮಾರ- ಎಲೈ ಒಳ್ಳೆಯ ಮಗನೇ! ಕೇಳ್, ಪಿತ್ರರ್- ತಾಯಿತಂದೆಗಳು, ಅಯ್ಯೊ! ನಿನ್ನ, ಸುಕುಮಾರಶರೀರಮಂ- ಕೋಮಲವಾದ ದೇಹವನ್ನು, ಇಂದು, ಅಲಸದೆ- ಆಲಸ್ಯಪಡದೆ, ಬಂದ, ರಾಕ್ಷಸತಪಸ್ವಿಗೆ- ಋಷಿವೇಷಧಾರಿರಾಕ್ಷಸನಿಗೆ, ಬಲಿಗಟ್ಟ- ಉಪಚಾರವಂಮಾಡಿ, ಮಾಂಸಮಂ, ಸುಲಿದು, ಉಣಲ್- ಊಟವಂ ಮಾಡುವದಕ್ಕೆ, ಇಕ್ಕಲ್- ಇಡುವದಕ್ಕೋಸ್ಕರ, ಇರ್ದಪರ್- ಯತ್ನವಂ ಮಾಡಿರುವರು; ಅಂ, ಅದಂ, ತಿಳಿದು, ಮದೀಯಚಿತ್ತದೊಳ್- ನನ್ನ ಮನಸ್ಸಿನಲ್ಲಿ, ಅಳಲ್- ದುಃಖವು, ಪಿರಿದಾಗೆ- ಹೆಚ್ಚಾಗಲು, ಸಮುಜ್ಜ್ವಲಮತಿ- ಪ್ರಕಾಶಮಾನವಾದ ಬುದ್ಧಿಯುಳ್ಳವನೇ! ನಿನಗೆ, ಎಲ್ಲಮಂ, ಪೇಳಲ್- ಹೇಳುವದಕ್ಕೆ, ಎಯ್ದಿದೆಂ- ಬಂದೆನು. ... ... ... ... ... ॥೩೮॥

ಕಂದ- ಮಗುವೇ! ಪೋಗು; ರಹಸ್ಯವಾಸದೊಳ್- ಗುಟ್ಟಾದ ಸ್ಥಲದಲ್ಲಿ, ಅಡಂಗಿ- ಅವಿತು, ಇರು; ನಿನ್ನಯ, ತಂದೆ, ಬಂದು, ನೀಡಾಗದೆ- ತಪ್ಪದೆ, ಕಂಡೊಡೆ, ಪಿಡಿದು, ಒಯ್ಯದೆ- ತೆಗೆದುಕೊಂಡುಹೋಗದೆ ಬಿಡುವನೇಂ ? ಅಯ್ಯೊ! ಸಾವಿಗೆ, ಈಡಾಗದೆ- ಗುರಿಯಾಗದೆ, ಇರ್; ಸತ್ತು, ಪಡೆವ, ಅಗ್ಗದ- ಶ್ರೇಷ್ಠವಾದ, ಅದುಮೋಕ್ಷಂ, ಏಕೆ? ಧಾರುಣೀಭೋಗಮಂ- ಭೂ ಸೌಖ್ಯವನ್ನು, ಉಣ್ಬುದಂ, ಬಿಸುಟು, ಸಾವುದರಿಂದೆ- ಸಾಯುವದಕ್ಕಿಂತಲೂ, ಅತಿಕಷ್ಟಂ, ಆವುದೊ ? ... ... ॥೩೯॥

ನಿನ್ನಯ, ಪಿತರರ್- ತಾಯ್ತಂದೆಗಳು, ಪಿಡಿದು, ಅಡಸಿ- ಸೇರಿಸಿ, ಕೆಡಪಿ- ಜುಂಡಿಕೆವಿಡಿದು- ಜುಟ್ಟಂ ಹಿಡಿದು, ಔಂಕಿ- ಅದಿಮಿ, ಕರಾಳಖಡ್ಗದಿಂ- ಭಯಂಕರವಾದ ಕತ್ತಿಯಿಂದ, ಗರಿಲನೆ- ಶೀಘ್ರವಾಗಿ, ಸೊಂಪಡರ್ದು- ಸೊಗಸೇರಿ, ಎಸೆವ, ನಿನ್ನ, ಕೊರಲಂ- ಕತ್ತನ್ನು, ತಡೆಯದೆ- ಜಾಗ್ರತೆಯಾಗಿ, ಕೊರೆದಪ್ಪರ್- ಕತ್ತರಿಸುವರು; ಅಕಟ-ಅಯ್ಯೋ!! ... ... ... ... ॥೪೦॥

ಎಂಬ, ತಾಪಸಾಲಾಪಮಂ, ಚೇಲಾಳಂ, ಏಳಿದಂಗೆಯ್ದು- ತಿರಸ್ಕರಿಸಿ, ಇಂತು, ಎಂದಂ. * *

ಒಡಲ್- ಶರೀರವು, ಅಭ್ರಛಾಯೆ- ಮೇಘದ ನೆಳಲು, (ಅಥವಾ ಅಂತರಿಕ್ಷದ ನೆಳಲು) ಎಂತುಂ- ಹಾಗೂ, ಕೆಡುಗುಂ- ನಾಶವಾಗುವದು, ಇದಂ, ಅದಾವಂ, ದೃಢಂಗೆಯ್ವಂ- ಸ್ಥಿರವಾದುದುದನ್ನಾಗಿ ಮಾಡುವನು ? ಎನ್ನಂ, ಪಡೆದರ್, ತತ್ತಾಪಸಂಗೆ, ಇಂತು, ಅಳಿವ- ನಾಶವಾಗುವ, ತನುವಂ, ಒಲ್ದು, ಈಯೆ, ಎನ್ನ

ಕೇಳೆನ್ನ ಭಾಗ್ಯಕ್ಷಿತಿರುಹ ಮದರಿಂದಂ ಭಯಂದೋರ್ಪ ನಿನ್ನೀ । ನುಡಿಗಳ್ಗಂ ಅಳ್ಕೆ ನಸ್ನಿಂಗಿತಮ ನರಿಯದಿಂತೆಂಬುದೇ ತಾಪಸೇಂದ್ರ ॥ ... ... ... ॥೪೧॥

ಕಂ ॥ ಜನನಿಗೆ ಜನಕಂಗೆ ಮುದಂ । ಜನಿಪುದುಗಡ ಯೋಗಿಗಾವಪುದು ತೃಪ್ತಿಗಡೀ ॥ ತೆನುವಿಂದೋರ್ಕ್ಮೆಯೆ ನಿಜಮೆಂ । ದೆನೆ ಪೇಳೆನ್ನಿಂದೆ ಧನ್ಯ ನನ್ಯ ನದಾವಂ ॥ ॥೪೨॥

ವ ॥ ಎಂದ ಚೇಲಾಳದೇವನ ನಿಶ್ಚಳಭಾವಕ್ಕೆ ಭವಾನಿಯರಸಂ ಮನದೊಳ್ಮೆಚ್ಚಿ ॥

ಕಂ ॥ ಜನನಿಯ ಬಗೆಯುಂ ಜನಕನ । ಮನಮುಂ ತೆನುಜನಹೃದಯಮುಮೊಂದಾದುದು ಪೇ ॥ ಳೆನಗಿಲ್ಲಿಯದಿವರಂಗೆ । ಲ್ವನುವೆಂದು ಪುರಾರಿ ನಾಣ್ಚಿ ಮೆಲ್ಲನೆ ಸರಿದಂ ॥೪೩॥

ವ ॥ ಅಂತು ಸರಿದಿಮಿದಿರ ನಿನ್ನುಂ ನೋಳ್ಪ ನದಕ್ಕೇನೆಂದು ತದ್ಭೈರವಾಕೃತಿಯಂತಳೆದಿರ್ಪಾಗಳ್ ॥ * * * * * * * - * * * * * * *

ಮಂ ॥ ಸ್ರ ॥ ಸಿರಿಯಾಳಂ ವೋದದಿಂ ದೋದುವಮಠದೆಡೆಗೇಳ್ತಂದು ಚೇಲಾಳನಂ ಸ । ತ್ಕರಿಸುತ್ತಂ ತಾಳ್ದು ಬೆನ್ನೊಳ್ಮನೆಗೆ ಮಗುಳ್ದು ಬಂದಲ್ಲಿ ವಧ್ಯೋಚಿತಾಲಂ ॥ ಕರಣಂಗೆಯ್ದೈಹಿಕೈಕಸ್ಪೃಹೆಯ ನುಳಿದು ಮೋಕ್ಷಾರ್ಥಿಯಾಗಿರ್ದ ಶೋಭಾ । ಕರನಂ ಮುಂದಾಡಿನೋಡುತ್ತೊಸಗೆಯ ದಿನ ಮಿಂದೆಂದು ಸಂತೋಷದಿಂದಂ ॥ ... ॥೪೪॥

---

ಭಾಗ್ಯಕ್ಷಿತಿರುಹಂ- ಐಶ್ವರ್ಯವೆಂಬ ಮರವು, ತಾಂ,ಸಾಫಲ್ಯಮಂ- ಫಲಸಹಿತತ್ವವನ್ನು, ಪಡೆಗುಂ, ಅದರಿಂದಂ, ಭಯಂದೋರ್ಪ, ನಿನ್ನ, ಈನುಡಿಗಳ್ಗೆ, ಆಂ, ಅಳ್ಕೆಂ- ಭಯಪಡುವದಿಲ್ಲ, ತಾಪಸೇಂದ್ರ ! ಕೇಳ್, ಎನ್ನ,ಇಂಗಿತಮಂ- ಮನೋಭಿಪ್ರಾಯವನ್ನು, ಅರಿಯದೆ, ಇಂತು, ಎಂಬುದೇ ? ... ॥೪೧॥

ಈತನುವಿಂದೆ, ಓರ್ಕ್ಮೆಯೆ- ಒಂದಾವರ್ತಿಯೇ, ನಿಜಂ- ನಿಶ್ಚಯವಾಗಿ, ಜನನಿಗೆ- ತಾಯ್ಗೆ, ಜನಕಂಗೆ- ತಂದೆಗೆ, ಮುದಂ, ಜನಿಪುದುಗಡ- ಉಂಟಾಗುವದಲ್ಲವೇ? ಯೋಗಿಗೆ, ತೃಪ್ತಿ, ಆದಪುದುಗಡ? ಎಂದೆನೆ ,ಎನ್ನಿಂದೆ- ನನಗಿಂತಲೂ, ಅನ್ಯಂ- ಮತ್ತೊಬ್ಬ, ಧನ್ಯಂ- ಕೃತಾರ್ಥನು, ಅದಾವಂ ? ಪೇಳ್. ... ॥೪೨॥

ಎಂದ, ಚೇಲಾಳದೇವನ, ನಿಶ್ಚಳಭಾವಕ್ಕೆ- ಚಾಂಚಲ್ಯರಹಿತವಾದಮನಸ್ಸಿಗೆ, ಭವಾನಿಯ, ಅರಸಂ, ಮನದೊಳ್, ಮೆಚ್ಚಿ. * * * * * * * * * * * * * * * * *

ಜನನಿಯ, ಬಗೆಯುಂ- ಮನಸ್ಸೂ, ಜನಕನ, ಮನಮುಂ, ತನುಜನ- ಮಗನ, ಹೃದಯಮುಂ, ಒಂದು, ಆದುದು, ಎನಗೆ, ಇವರಂ, ಗೆಲ್ವ, ಅನುವು- ರೀತಿಯು, ಎಲ್ಲಿಯದು ? ಪೇಳ್; ಎಂದು, ಪುರಾರಿ, ನಾಣ್ಚಿ ಮೆಲ್ಲನೆ, ಸರಿದಂ- ಹಿಂದಿರುಗಿದಂ. ... .... ... ... ॥೪೩॥

ಅಂತು, ಸರಿದು, ಇವರಿದಿರೊಳ, ಇನ್ನುಂ, ನೋಳ್ಪೆಂ, ಅದಕ್ಕೆ, ಏಂ ? ಎಂದು, ತದ್ಭೈರವಾಕೃತಿಯಂ, ತಳೆದು, ಇರ್ಪ, ಆಗಳ್. * * * * * * * * * * * * * * * *

ಸಿರಿಯಾಳಂ, ವೋದದಿಂದೆ, ಓದುವ, ಮಠದ, ಎಡೆಗೆ, ಏಳ್ತಂದು, ಚೇಲಾಳನಂ, ಸತ್ಕರಿಸುತ್ತಂ- ಉಪಚರಿಸುತ್ತ, ಬೆನ್ನೊಳ್, ತಾಳ್ದು, ಮಗುಳ್ದು- ಹಿಂದಿರುಗಿ, ಮನೆಗೆ, ಬಂದು, ಅಲ್ಲಿ, ವಧ್ಯೋಚಿತಾಲಂಕರಣಂಗೆಯ್ದು- ಕೊಲ್ಲುವದಕ್ಕೆ ಯೋಗ್ಯವಾದ ಅಲಂಕಾರವಂ ಮಾಡಿ, ಐಹಿಕೈಕಸ್ಪೃಹೆಯಂ- ಈ ಲೋಕ ಸಂಬಂಧವಾಗಿ ಮುಖ್ಯವಾದ ಆಸೆಯನ್ನು, ಉಳಿದು- ಬಿಟ್ಟು, ಮೋಕ್ಷಾರ್ಥಿಯಾಗಿ- ಮುಕ್ತಿಯನ್ನಪೇಕ್ಷಿಸುವನಾಗಿ, ಇರ್ದ, ಶೋಭಾಕರನಂ- ಕಾಂತಿಗಾಸ್ಪದವಾದ ಮಗನನ್ನು, ಮುಂದಾಡಿ, ನೋಡುತ್ತೆ, ಇಂದು, ಒಸಗೆಯ- ಉತ್ಸವದ, ದಿನಂ, ಎಂದು, ಸಂತೋಷದಿಂದಂ. ... ... ... ॥೪೪॥

ಚಂ ॥ ಮಗನೆ ಮಹೇಶ್ವರಂ ಕೃಪೆಯಿನೆಮ್ಮ ಭವಾಮಯಮಂ ಸಡಿಲ್ಚಲುಜ್ಜುಗಿಸಿ ಚರಾಂಗನೆಯ್ದಿ ನವಭೋಜ್ಯಮನರ್ತಿಸಿ ಬೇಡಿದಂ ದಯಾ ॥ ಳುಗಳಧಿನಾಥ ನಿಂದು ಮಣಿದಾಂ ಕ್ಷಣ ಮಿತ್ತೆ ನವಂಗೆ ಲೀಲೆಕೈ । ನಿಗೆ ಭವದೀಯಕಾಯ ಮಿದು ಕಾಯಜವೈರಿ ಗಭೀಷ್ಟಭೋಜನಂ ॥ ... ... ... ... ... ॥೪೫॥

ವ ॥ ಎಂಬ ಪಿತೃವಚನ ಮನೊಲ್ದು ಚೇಲಾಳಂ ಕೇಳ್ದು ॥ * * * *

ಕಂ ॥ ಬಹುಸುಕೃತರಾಶಿ ಫಲಿಸಿದು । ದಹಿಧರಕರುಣೈಕಲತಿಕೆ ಪೂತುದು ಪರೆದ ॥ ತ್ತಹಿತಕುಲಂ ಘನಸಂಸೃತಿ । ಗಹನಂ ಕಡಿವಡೆದು ದಾಟೆ ನಾನತಿಧನ್ಯಂ ॥ ॥೪೬॥

ವ॥ ಎಂದ ಮಗನ ಧೀರತೆಯ ಬಗೆಗೆ ಬಗೆಮೆಚ್ಚಿ ಪೆರ್ಚಿ ಕಟ್ಟಕ್ಕರಿಂ ನಿರೀಕ್ಷಿಸಿ॥

ಚಂ ॥ ಮರೆಯದಿರಯ್ಯ ಶಂಕರಪದಾಂಬುಜಮಂ ಶಿವಮಂತ್ರದೆಚ್ಚರಂ । ತೊರೆಯದಿರಂಬಿಕಾಧವನೊಳಚ್ಚರಿದಂತಿರು ನಿನ್ನೊಳೀಗಳ ॥ ಕ್ಕರಿನಪವರ್ಗಕಾಂತೆ ಪಸೆಸಿಂದಪಳೈಹಿಕಜಾಡ್ಯಭೋಗದೊಂ । ದೆರಕದಿ ನೇನೊ ನಿತ್ಯಸುಖಮಂ ಪಡೆ ಮತ್ಕುಲಕಲ್ಪಭೂರುಹ॥

ವ॥ ಎಂದು ಮತ್ತಮಿರದೆ ॥ ಮ ॥ ಜವದಿಂ ವರ್ಧ್ಯೋಚಿತಾಲಂಕೃತಿವಳೆದು ಶಿವ

---

ಮಗನೆ ! ದಯಾಳುಗಳ, ಅಧಿನಾಥಂ, ಮಹೇಶ್ವರಂ, ಕೃಪೆಯಿಂ, ಎಮ್ಮ ಭವಾಮಯಮಂ- ಜನ್ಮರೋಗವನ್ನು, ಸಡಿಲ್ಚಲ್- ಜಾರಿಸುವದಕ್ಕೋಸ್ಕರ, ಉಜ್ಜುಗಿಸಿ- ಪ್ರಯತ್ನಪಟ್ಟು, ಚರಾಂಗಂ- ಜಂಗಮಾಕಾರನಾಗಿ, ಎಯ್ದಿ- ಬಂದು, ನವಭೋಜ್ಯಮಂ- ಹೊಸದಾದ ಆಹಾರವನ್ನು, ಅರ್ತಿಸಿ- ಪ್ರೀತಿಸಿ, ಬೇಡಿದಂ; ಇಂದು, ಮಣಿದು- ನಮಸ್ಕರಿಸಿ, ಆಂ, ಕ್ಷಣಂ- ಕ್ಷಣಕಾಲದಲ್ಲಿ, ಲೀಲೆ, ಕೈವಿಂಗೆ- ಚೆಚ್ಚಾಗಲು, ಅವಂಗೆ, ಇತ್ತೆಂ; ಇದು, ಭವದೀಯಕಾಯಂ- ನಿನ್ನಶರೀರವು, ಕಾಯಜವೈರಿಗೆ- ಮನ್ಮಥನಿಗೆ ಶತ್ರುವಾದ ಈಶ್ವರನಿಗೆ, ಅಭೀಷ್ಟಭೋಜನಂ- ಇಷ್ಟವಾದ ಊಟವು. ... ... ... ॥೪೫॥

ಎಂಬ, ಪಿತೃವಚನಮಂ, ಚೇಲಾಳಂ, ಒಲ್ದು, ಕೇಳ್ದು. * * * * * * * *

ಬಹುಸುಕೃತರಾಶಿ- ಬಹಳವಾದ ಪುಣ್ಯಸಮೂಹವು, ಫಲಿಸಿದುದು, ಅಹಿಧರಕರುಣೈಕಲತಿಕೆ- ಈಶ್ವರನ ದಯೆಯೆಂಬ ಮುಖ್ಯವಾದ ಬಳ್ಳಿಯು, ಪೂತುದು- ಹೂವನ್ನು ಬಿಟ್ಟಿತು; ಅಹಿತಕುಲಂ- ಶತ್ರುಸಮೂಹವು, ಪರೆದತ್ತು- ವಿರಳವಾಯ್ತು; ಘನಸಂಸೃತಿಗಹನಂ- ಸಾಂದ್ರವಾದ ಸಂಸಾರವೆಂಬ ಕಾಡು, ಕಡಿವಡೆದುದು- ಕತ್ತರಿಸಿ ಬಿದ್ದಿತು. ಆಂ, ಅತಿಧನ್ಯಂ, ಆದೆಂ. ... ... ॥೪೬॥

ಎಂದ, ಮಗನ, ಧೀರತೆಯ- ಧೈರ್ಯಶಾಲಿತ್ವದ, ಬಗೆಗೆ- ಮನಸ್ಸಿಗೆ, ಬಿಟ್ಟು, ಮೆಚ್ಚಿ, ಪೆರ್ಚಿ- ಉಬ್ಬಿ, ಕಟ್ಟಕ್ಕರಿಂ- ಅತಿಪ್ರೀತಿಯಿಂದ, ನಿರೀಕ್ಷಿಸಿ. * * * * * * * * * * *

ಅಯ್ಯ ! ಮತ್ಕುಲಕಲ್ಪಭೂರುಹ- ನನ್ನವಂಶಕ್ಕೆ ಕಲ್ಪವೃಕ್ಷನಾದವನೇ ! ಶಂಕರ ಪದಾಂಬುಜಮಂ, ಮರೆಯದೆ, ಇರ್; ಶಿವಮಂತ್ರದ, ಎಚ್ಚರಂ- ಜಾಗರೂಕತೆಯನ್ನು, ತೊರೆಯದೆ- ಬಿಡದೆ, ಇರ್; ಅಂಬಿಕಾಧವನೊಳ್- ಈಶ್ವರನೊಡನೆ, ಅಚ್ಚರಿದಂತೆ- ಎರಕವಾದ ಹಾಗೆ, ಇರು; ಈಗಳ್, ನಿನ್ನೊಳ್- ನಿನ್ನೊಡನೆ, ಅಪವರ್ಗಕಾಂತೆ- ಮುಕ್ತ್ಯಂಗನೆಯು, ಅಕ್ಕರಿಂ- ಪ್ರೀತಿಯಿಂದ, ಪಸನಿಂದಪಳ್- ಮದುವೆಗೆ ನಿಂತುಕೊಳ್ಳುವಳು, ಐಹಿಕಜಾಡ್ಯಭೋಗದ- ಈ ಭೂಲೋಕಸಂಬಂಧವಾದ ಜಡತ್ವದ ಸುಖದ, ಒಂದು ಎರಕದಿಂ- ಒಂದು ಪ್ರೀತಿಯಿಂದ, ಏನೊ ? ನಿತ್ಯಸುಖಮಂ- ಶಾಶ್ವತವಾದ ಸೌಖ್ಯವನ್ನು, ಪಡೆ. ... ॥೪೭॥

ಜವದಿಂ, ವಧ್ಯೋಚಿತಾಲಂಕೃತಿದಳೆದು, ಶಿವಧ್ಯಾನಮಾಂತು, ಒಪ್ಪುವ, ಆತ್ಮೋದ್ಭವನಂ-ಮಗನನ್ನು, ತನ್ಮಾತೆ-ಅವನ ತಾಯಿಯು, ಸಾರ್ಚಿತೆ- ಸೇರಿಸಿ, ಹೊಂದಿಸಿ, ಅಡಸಿ- ಸೇರಿಸಿ, ಪಿಡಿಯೆ, ಭಕ್ತಂ, ನಿರ್ಮೋ

ಧ್ಯಾನವಮಾಂ ತೊಪ್ಪೆವಾತ್ಮೋಂ । ಬ್ಬವನಂ ತನ್ಮಾತೆ ಸಾರ್ಚುತ್ತಡಸಿ ಪಿಡಿಯೆ ನಿರ್ಮ್ಮೋಹದಿಂ ಭಕ್ತ ನತ್ಯು । ತ್ಸವಚಿತ್ತಂ ಖಡ್ಗದಿಂ ಮಸ್ತಕಮ ನರಿದು ಜೇರ್ಕೈಯ್ದುದಂ ಮುಂಡಮಂ ಸೀ । ಳ್ದವಿಳಂಬಂ ಮಾಂಸಖಂಡಂದೆಗೆದು ಸಲಿಲದಿಂ ಕ್ಷಾಳನಂಗೆಯ್ವುತಾಗಳ್ ॥೪೮॥

ಕಂ ॥ ನೀಡೆ ಪರಿಮಳಿಪ ಸಂಬರ । ದಾಡಂಬರ ಮೆಸೆಯೆ ಪೊರೆದು ಘೃತಮೆರೆದು ಮುದಂ ॥ ಗೂಡಿ ನವಶಾಕಮಂ ರುಚಿ । ಮೂಡಿರೆ ಖಾದ್ಯಪ್ರತಾನಮಂ ಸತಿ ಸವೆದಳ್ ॥೪೯॥

ವ ॥ ಅಂತು ಶಿಶುಮಾಂಸದಿಂ ಷಡ್ವಿಧಾಹಾರಮಂ ಚಂಗಳೆದೇವಿ ವಿರಚಿಸುತ್ತಿರೆ ತದ್ಗೃಹದಾಸಿ ಚಂಡಿನಿಯೆಂಬವಳ್ಕೇಶ ದೂಷಿತಮೆಂದು ಕೆಲಂದೆಗೆದಿರ್ದ್ದ ಶಿಶುಶಿರಮ ನೊರಲೊಳ್ಮಿದಿದು ಪುಳಿವೆರಸಿ ಮೇಲೋಗರಂಗೆಯ್ದು ಜತನಂ ಮಿಗೆ ಬೈತಿಟ್ಟಿರ್ದ್ದಾಗಳ್ ॥ * *

ಕಂ ॥ ಅಟ್ಟಿಳುಪಿ ಭಸ್ಮರಕ್ಷೆಯ । ನಿಟ್ಟು ಭಾಜನಸಮಾಜಮಂ ಬಾಸಣಿಸು ॥ ತ್ತಿಟ್ಟಣಿಪ ಸಂಭ್ರಮದೆ ಗುಡಿ । ಗಟ್ಟಿ ಗೃಹಾಂಕಣಮ ನಂದವೆಳ್ಕೈಗೆಯ್ದಳ್ ॥ ॥೫೦॥

ಕಂ ॥ ಕತ್ತುರಿಯ ಸಾರಣೆಯ ಬಡು । ಮುತ್ತಿನ ಪೊಸರಂಗವಲಿಯ ನಾಳ್ದಳೆ ಕಣ್ಗಿಂ ॥ ಬಿತ್ತರಮಾದುದೊ ತಾರೆಗ । ಳೊತ್ತರಿಸಿದ ಗಗನದಂತೆ ತನ್ಮಂದಿರದೊಳ್ ॥೫೧॥

---

ಹದಿಂ- ಪ್ರೀತಿರಾಹಿತ್ಯದಿಂದ, ಅತ್ಯುತ್ಸವಚಿತ್ತಂ- ಬಹು ಸಂತೋಷವಿಶಿಷ್ಟನಾದ ಮನಸ್ಸುಳ್ಳವನಾಗಿ, ಖಡ್ಗದಿಂ, ಮಸ್ತಕಮಂ- ಶಿರಸ್ಸನ್ನು, ಅರಿದು- ಕತ್ತರಿಸಿ, ಬೇರ್ಕೆಯ್ದು- ಬೇರೆಮಾಡಿ, ಅದಂ ಮುಂಡಮಂ- ಆ ಪೂರ್ವಶರೀರವನ್ನು, ಸೀಳ್ದು, ಅವಿಳಂಬಂ- ಶೀಘ್ರವಾಗಿ, ಮಾಂಸಖಂಡಂದೆಗೆದು- ಮಾಂಸದ ತುಣುಕುಗಳನ್ನು ತೆಗೆದು, ಸಲಿಲದಿಂ- ನೀರಿನಿಂದ, ಕ್ಷಾಳನಂಗೆಯ್ವುತೆ- ತೊಳೆಯುತ್ತ, ಆಗಳ್. ... ॥೪೮॥

ಸತಿ- ಪತ್ನಿಯು, ನೀಡೆ- ಹೆಚ್ಚಾಗಿ, ಪರಿಮಳಿಪ- ಸುಗಂಧವಂ ಬೀರುವ, ಸಂಬರದ- ಸಂಬಾರದ, ಆಡಂಬರಂ- ಅತಿಶಯವು, ಎಸೆಯೆ, ಪೊರೆದು- ಪಾಲಿಸಿ, ( ಅಂದರೆ ಬೆರಸಿ ) ಘೃತಮೆರೆದು- ತುಪ್ಪವಂ ಹುಯ್ದು, ಮುದಂಗೂಡಿ, ರುಚಿ, ಮೂಡಿ- ಹುಟ್ಟಿ, ಇರೆ, ನವಶಾಕಮಂ- ಹೊಸತರಕಾರಿಯನ್ನು, ಖಾದ್ಯಪ್ರತಾನಮಂ- ಅಗಿಯುವ ಪದಾರ್ಥಗಳ ಸಮೂಹವನ್ನು, ಸವೆದಳ್ – ಮಾಡಿದಳು. ... ... ॥೪೯॥

ಅಂತು, ಚಂಗಳೆದೇವಿ, ಶಿಶುಮಾಂಸದಿಂ, ಷಡ್ವಿಧಾಹಾರಮಂ- ಲೇಹ್ಯ, ಚೋಷ್ಯ, ಖಾದ್ಯ, ಭೋಜ್ಯ, ಪಾನೀಯ, ಭಕ್ಷ್ಯಗಳೆಂಬ ಆರುವಿಧಗಳಾದ ಆಹಾರಗಳನ್ನು, ವಿರಚಿಸುತ್ತೆ, ಇರೆ, ತದ್ಗೃಹದಾಸಿ–ಅವಳ ಮನೆಯ ಗಾಂತಿಯರಾದ, ಚಂಡಿನಿ, ಎಂಬವಳ್, ಕೇಶದೂಷಿತಂ- ಕೂದಲಿರುವದರಿಂದ ದುಷ್ಟವಾದದ್ದು, ಎಂದು, ಕೆಲಂದೆಗೆದು- ಒಂದುಕಡೆ ತೆಗೆದು, ಇರ್ದ್ದ, ಶಿಶುಶಿರಮಂ, ಒರಲೊಳ್- ಒಳಕಲ್ಲಿನಲ್ಲಿ, ಮಿದಿದು- ಕುಟ್ಟಿ, ಪುಳಿವೆರಸಿ- ಮೇಲೋಗರಂಗೆಯ್ದು, ಜತನಂ- ಜಾಗರೂಕತೆಯು, ಮಿಗೆ- ಹೆಚ್ಚಾಗಿರಲು, ಬೈತಿಟ್ಟು- ಮುಚ್ಚಿರಿಸಿ, ಇರ್ದ್ದ, ಆಗಳ್.

ಅಂದು, ಅವಳ್- ಚಂಗಳೆಯು, ಅಟ್ಟು- ಅಡಿಗೆಯಂ ಮಾಡಿ, ಆಭಾಜನಸಮಾಜಮಂ- ಆ ಪಾತ್ರೆಗಳ ಸಮೂಹವನ್ನು, ಇಳುಪಿ, ಭಸ್ಮರಕ್ಷೆಯಂ- ವಿಭೂತಿಯ ಪಾಲನೆಯನ್ನು, ಇಟ್ಟು, ಬಾಸಣಿಸುತ್ತೆ- ಮುಚ್ಚುತ್ತೆ, ಇಟ್ಟಣಿಪ- ಸಾಂದ್ರವಾದ. ಸಂಭ್ರಮದೆ- ಸಡಗರದಿಂದ, ಗುಡಿಗಟ್ಟಿ- ತೋರಣವಂ ಕಟ್ಟಿ, ಕೈಗೆಯ್ದಳ್- ಅಲಂಕರಿಸಿದಳು. ... ... ... ... ... ॥೫೦॥

ತನ್ಮಂದಿರದೊಳ್- ಅವರ ಮನೆಯಲ್ಲಿ, ಕತ್ತುರಿಯ, ಸಾರಣೆಯ– ಸಾರಿಸುವಿಕೆಯುಳ್ಳ, ಬಡುಮುತ್ತಿನ- ಬಿಟ್ಟಿರುವ ಮುತ್ತಿನ, ಪೊಸರಂಗವಲಿಯುಂ, ಆಳ್ದು, ಇಳೆ, ತಾರೆಗಳ್ - ನಕ್ಷತ್ರಗಳು, ಒತ್ತರಿಸಿದ- ತುಂಬಿದ, ಗಗನದಂತೆ, ಕಣ್ಗೆ, ಎಂಬಿತ್ತರಂ- ಎನು ವಿಸ್ತಾರವಾದದ್ದು, ಆದುದೊ? .. ... ॥೫೧॥

ವ ॥ ಆಗಳಾ ಚಂಗಳಾಂಬೆ ನಿಜರಮಣನನು ನೋಡಿ ... ... ...

ಮತ್ತೇ ॥ ಪಸಿದಂ ದಿವ್ಯತಪಸ್ವಿ ತಳ್ವದೊಡ ಗೊಂಡೆಯ್ತಂರ್ಪುದೆಂದಾಡೆಸಂ । ತಸ ದಿಂ ಸೆಟ್ಟಿ ಮಹೇಶ ನಿರ್ದ ಮರನಂ ಸಾರ್ತಂದು ಕಂಡಾತನಂ ॥ ಘ್ರಿಸರೋಜದ್ವಯಕಳ್ಕ ರಿಂ ದೆರಗಿ ವಿಜ್ಞಪ್ತಿಪ್ರಕಾರೋಕ್ತಿ ರು । ಜಿಸೆ ಕೈಗೊಟ್ಟತಿ ಭಕ್ತಿಯಿಂ ಕರೆದುತಂದಂ ಮಂದಿರಕ್ಕೊಳ್ಪನಿಂ ॥ ... ... ... ... ... ॥೩೨॥

ಕಂ ॥ ಸತಿಯುಂ ಪತಿಯುಂ ಯತಿಪದ । ಶತದಳಮಂ ತೊಳೆದು ತೀರ್ಥಜಳಮಂ ತಳಿದು ॥ ನ್ನತಪೀಠ ಮಿತ್ತು ಗಂಧಾ । ಕ್ಷತಸುಮನೋಮಾಲಿಕಾದಿಯಿಂದರ್ಚಿಸಿದರ್ ॥೩೩॥

ಕಂ ॥ ಮಿಸುಗುವ ಪೊನ್ನಡ್ಡಣಿಗೆಯೊ । ಳೊಸೆದೊಪ್ಪುವ ಪೊನ್ನಪರಿಯಣಮ ನ ಳವಡಿಸು ॥ ತ್ತೆಸೆಯೆ ಚಷಕಾಳಿ ಚಂಗಳೆ । ಪೊಸಮಾಂಸದ ಶಾಕಪಾಕಮಂ ಗಡಣಿಸಿದಳ್॥

ವ ॥ ಅಂತು ಗಡಣಿಸಿ ಕೆಲಸಾರ್ದು ದೇವ ಕೃಪೆಯಿ ನಾರೋಗಿಪುದೆಂದೆರಗೆ ಕಪಾಲಿ ಪಿಶಿತಾನ್ನಮಂ ಬೇರೆಬೇರೆ ಪರೀಕ್ಷಿಸುತ್ತ ಮದರೊಳ್ ಶಿರೋಮಾಂಸ ಮಿಲ್ಲದಿರೆ ನೋಡಿ ಮುಳಿದಿಂತೆಂದಂ॥ ... ... ... ... ... ... ..

ಮತ್ತೇ ॥ ನಿಮಗಾತ್ಮೋದ್ಭವನಳ್ಕರೇಂ ಪಿರಿದೊಮಿಕ್ಕಂಗಂಗಳಂ ಸೀಳ್ದು ಮಾಂ। ಸಮನೀಗ ಳ್ಸಮೆದಿಕ್ಕಿ ವಂಚಿಸಿದಿ ರೀಗಳ್ ನೋಡಲೆಂದುತ್ತಮಾಂ ॥ ಗಮ ನೀಭಕ್ತಿಗೆ

---

ಆಗಳ್- ಆ ಚಂಗಳಾಂಬೆ- ಚಂಗಳೆಯಮ್ಮನು, ನಿಜರಮಣನಂ- ತನ್ನ ಗಂಡನನ್ನು, ನೋಡಿ. * *

ದಿವ್ಯತಪಸ್ವಿ, ಪಸಿದಂ; ತಳ್ವದೆ- ತಪ್ಪದೆ, ಒಡಗೊಂಡು- ಕರೆದುಕೊಂಡು, ಎಯ್ತರ್ಪುದು- ಬರುವದು; ಎಂದು, ಆಡೆ- ಹೇಳಲು, ಸೆಟ್ಟಿ, ಸಂತಸದಿಂ, ಮಹೇಶಂ, ಇರ್ದ, ಮರನಂ, ಸಾರ್ತಂದು- ಸಮೀಪಕ್ಕೆ ಬಂದು, ಆತನಂ, ಕಂಡು, ಅಳ್ಕರಿಂದೆ- ಪ್ರೀತಿಯಿಂದ, ಅಂಘ್ರಿಸರೋಜದ್ವಯಕೆ, ಎರಗಿ, ವಿಜ್ಞಪ್ತಿಪ್ರಕಾರೋಕ್ತಿ- ವಿಜ್ಞಾಪನಾ ಪೂರ್ವಕವಾದ ವಚನವು, ರಂಜಿಸೆ, ಕೈಗೊಟ್ಟು, ಅತಿಭಕ್ತಿಯಿಂ, ಮಂದಿರಕ್ಕೆ- ಮನೆಗೆ- ಒಳ್ಪನಿಂ- ಚೆನ್ನಾಗಿ, ಕರೆದುತಂದಂ. ... ... ... ... ... ॥೩೨॥

ಸತಿಯುಂ, ಪತಿಯುಂ, ಯತಿಪದಶತದಳಮಂ- ಸನ್ಯಾಸಿಯ ಪಾದಕಮಲವನ್ನು, ತೊಳೆದು, ತೀರ್ಥಜಳಮಂ, ತಳಿದು- ಸೇಚನೆಮಾಡಿಕೊಂಡು, ಉನ್ನತ ಪೀಠಮಿತ್ತು, ಗಂಧಾಕ್ಷತಸುಮನೋ ಮಾಲಿಕಾದಿಯಿಂದೆ, ಅರ್ಚಿಸಿದರ್. ... ... ... ... ... ॥೩೩॥

ಮಿಸುಗುವ, ಪೊನ್ನ, ಅಡ್ಡಣಿಗೆಯೊಳ್- ತೇವಟಿಗೆಯಲ್ಲಿ, ಒಸೆದು, ಒಪ್ಪುವ, ಪೊನ್ನ, ಪರಿಯಣನಂ- ಬಟ್ಟಲನ್ನು, ಅಳವಡಿಸುತ್ತೆ- ಮಡಗುತ್ತ, ಚಷಕಾಳಿ- ಪಾನಪಾತ್ರೆಗಳ ಪಙ್ತಿಯು, ಎಸೆಯೆ, ಚಂಗಳೆ, ಪೊಸಮಾಂಸದ, ಶಾಕಪಾಕಮಂ- ಅಟ್ಟ ತರಕಾರಿಯನ್ನು, ಗಡಣಿಸಿದಳ್- ಗುಡ್ಡೆಹಾಕಿದಳು. ॥೩೪॥

ಅಂತು, ಗಡಣಿಸಿ, ಕೆಲಸಾರ್ದು- ಒಂದುಕಡೆಗೆ ಹೋಗಿ, ದೇವ ! ಕೃಪೆಯಿಂ, ಆರೋಗಿಪುದು- ಊಟವಂ ಮಾಡುವದು, ಎಂದು, ಎರಗೆ- ನಮಸ್ಕರಿಸಲು, ಕಪಾಲಿ, ಪಿಶಿತಾನ್ನಮಂ- ಮಾಂಸಾಹಾರವನ್ನು, ಬೇರೆಬೇರೆ, ಪರೀಕ್ಷಿಸುತ್ತಂ, ಅದರೊಳ್, ಶಿರೋಮಾಂಸಂ- ತಲೆಯಮಾಂಸವು, ಇಲ್ಲದೆ, ಇರೆ, ನೋಡಿ, ಮುಳಿದು- ಕೋಪಿಸಿ, ಇಂತು, ಎಂದು. * * * * * * * * * * * * *

ನಿಮಗೆ, ಆತ್ಮೋದ್ಭವನ- ಮಗನ, ಅಳ್ಕರ್- ಪ್ರೀತಿಯು, ಏಂಪಿರಿದೋ- ಏನುದೊಡ್ಡದೋ ! ಮಿಕ್ಕ, ಅಂಗಂಗಳಂ, ಸೀಳ್ದು, ಮಾಂಸಮಂ, ಸಮೆದು- ಅಡಿಗೆ ಮಾಡಿ, ಈಗಳ್, ಇಕ್ಕಿ, ಉತ್ತಮಾಂಗಮಂ- ಶಿರಸ್ಸನ್ನು, ನೋಡಲ್- ನೋಡುವದಕ್ಕೆ, ಎಂದು, ಈಗಳ್, ವಂಚಿಸಿದಿರ್- ವಂಚನೆಮಾಡಿದಿರಿ; ಈಭಕ್ತಿಗೆ,

ಮಚ್ಚಿದೆಂ ಭಲರೆ ನಿಮ್ಮಂತಪ್ಪರಾ ದಾತರೂ। ಟಮನೊಲ್ಲೆಂ ವ್ರತಭಂಗ ಮಕ್ಕು ಮೆ
ಮಗೀಶೇಷಾಂಗಮಾಂಸಂಗಳಿಂ ॥ ... ... ... ... ॥೫೫॥

ವ ॥ ಎಂದು "ಸರ್ವೇಷು ಗಾತ್ರೇಷು ಶಿರಃಪ್ರಧಾನ"ಮೆಂದುಂಟಪ್ಪುದರಿಂ ದುತ್ತಮಾಂಗಪಲಲ ಮಿಲ್ಲದೀಯಧಮಾಂಗಮಾಂಸಮ ನಾಂ ಕೊಳ್ವನಲ್ಲೆಂದು ಕಪಾಲಿಕರಂ ಕೋಪಿಸಲೊಡನವರಳ್ಕಿ ಬಳ್ಕಿ ಬೆಬ್ಬಳಿವೋಗುತೋರೋರ್ವರ ಮೊಗಮ ನವಲೋಕಿಪಾಗಳ್ ಚಂಡಿನಿ ಮುನ್ನಂ ತಾಂ ಸಮೆದಿರಿಸಿದ ಶಿರೋಮಾಂಸಮನಿದೆ ಯೆಂದು ತೋರಿಸೆ॥ ...

ಕಂ ॥ ಪೊಂಪುಳಿವೋಗುತ್ತಾಗಳ್ । ದಂಪತಿ ಮಿಗೆ ಮೆಚ್ಚುಗೊಟ್ಟು ಚೆಟ್ಟಿಗೆ ಪಿ
ರಿದುಂ ॥ ಸೊಂಪೆಸೆವ ತಲೆಯಡಗ ನೊಲ । ವಿಂ ಪರಮ ನಗಲ್ಗೆ ನೀಡಿ ಮುಗುಳ್ದರಗಲೊಡಂ॥

ಕಂ ॥ ಆವಾವತೆರದಿನಾದೊಡ । ಮೀವಧುವುಂ ವರನು ಮರರೆ ಸೋಲರೆನುತ್ತಂ॥
ಬಾವರ ನಾಳೋಚಿಸಿ ಮೇ । ಣೀವಿಧದಿಂ ಗೆಲ್ವೆ ನೆಂದು ನೆನೆದಿಂತೆಂದಂ॥ ... ॥೫೭॥

ಮ॥ ಎಲೆ ಸದ್ಭಕ್ತ ಮಡೀಯಪಜ್ಜೆಯೊಳೆ ನೀನುಂಡಲ್ಲದಾನೊಲ್ಲೆನೀ। ಪಲಲಾಹಾರಮ ನೆನ್ನ ಸುವ್ರತಕೆ ಭಂಗಂ ಬರ್ಕು ಮುಂಡಂಧು ಶಂ॥ಭು ಲಸದ್ಭಕ್ತನಸಾಕ್ಷಿಕಂಬರಿಯೆ ತಾನೇನುಣ್ಬನೇ ಕುಳ್ಳಿರೆಂ । ದಲರ್ದಾಕ್ಷೇಪದ ನೆಂದನೆಂದು ಸಿರಿಯಾಳಂಗಾಮಹಾಭೈರವಂ ॥

---

ಮಚ್ಚಿದೆಂ, ಭಲರೆ!! ನಿಮ್ಮಂತಪ್ಪರ್- ನಿಮ್ಮಂಥಾ, ದಾತರ್- ದಾನಿಗಳು, ಆರ್ ? ಊಟಮಂ, ಒಲ್ಲೆಂ; ಎಮಗೆ, ಈಶೇಷಾಂಗಮಾಂಸಂಗಳಿಂ- ಉಳಿದಿರುವ ಅಂಗವುಳ್ಳ ಮಾಂಸಗಳಿಂದ, ವ್ರತಭಂಗಂ, ಅಕ್ಕುಂ.॥೫೫॥

ಎಂದು, ಸರ್ವೇಷು- ಸಮಸ್ತವಾದ, ಗಾತ್ರೇಷು- ಅವಯವಗಳಲ್ಲಿ, ಶಿರಃ- ತಲೆಯು, ಪ್ರಧಾನಂ- ಮುಖ್ಯವಾದದ್ದು; ಎಂದು, ಉಂಟಪ್ಪುದರಿಂದೆ- ನೀತಿಯುಂಟಾಗಿರುವದರಿಂದ, ಉತ್ತಮಾಂಗಪಲಲಂ-ಶಿರಸ್ಸಿನಮಾಂಸವು, ಇಲ್ಲದ, ಈಯಧಮಾಂಗಮಾಂಸಮಂ- ಈ ನೀಚಾವಯವಗಳ ಬಾಡನ್ನು, ಆಂ, ಕೊಳ್ವಂ-ಸ್ವೀಕರಿಸುವನು, ಅಲ್ಲ, ಎಂದು, ಕಪಾಲಿ, ಕರಂ- ಅತ್ಯಂತವಾಗಿ, ಕೋಪಿಸಲ್, ಒಡಂ- ಕೂಡಲೇ, ಅವರ್-ಗಂಡಹೆಂಡತಿಯರು, ಅಳ್ಕಿ- ಹೆದರಿ; ಬಳ್ಕಿ- ಆಯಾಸಪಟ್ಟು, ಬೆಬ್ಬಳಿವೋಗುತೆ- ಬೆರಗಾಗುತ್ತ, ಓರೋರ್ವರ- ಒಬ್ಬರೊಬ್ಬರ, ಮೊಗಮಂ, ಅವಲೋಕಿಪಾಗಳ್- ನೋಡುವಾಗ, ಚಂಡಿನಿ- ಚಂಡಿನಿಯೆಂಬ ಗೌಡಿಯು, ಮುನ್ನಂ- ಮೊದಲು, ತಾಂ, ಸಮೆದು- ಮಾಡಿ, ಇರಿಸಿದ, ಶಿರೋಮಾಂಸಮಂ, ಇದೆ, ಎಂದು, ತೋರಿಸೆ.

ಆಗಳ್, ದಂಪತಿ- ಸತಿಪತಿಯರು, ಪೊಂಪುಳಿವೋಗುತ್ತೆ- ರೋಮಾಂಚವಿಶಿಷ್ಟರಾಗುತ್ತ, ಚೇಟಿಗೆ- ಗೌಡಿಯನ್ನು, ಮಿಗೆ, ಮೆಚ್ಚುಗೊಟ್ಟು- ಶ್ಲಾಘಿಸಿ, ಪಿರಿದುಂ- ಹೆಚ್ಚಾಗಿ; ಸೊಂಪು- ಸೊಗಸು, ಎಸೆವ, ತಲೆಯ, ಅಡಗಂ- ಮಾಂಸವನ್ನು, ಒಲವಿಂ- ಪ್ರೀತಿಯಿಂದ, ಪರಮನ- ಉತ್ಕೃಷ್ಟನಾದ ಯತಿಯ, ಅಗಲ್ಗೆ- ಬಟ್ಟಲಿಗೆ, ನೀಡಿ, ಮುಗುಳ್ದು- ಪುನಃ, ಎರಗಲ್, ಒಡಂ. ... ... ॥೫೬॥

ಆವಾವತೆರದಿಂ, ಆದೊಡಂ, ಈವಧುವುಂ, ವರನುಂ, ಸೋಲರ್, ಅರರೆ- ಆಶ್ಚರ್ಯ! ಎನುತ್ತೆ, ಅಂಬಾವರಂ- ಪಾರ್ವತೀ ಪತಿಯು, ಆಳೋಚಿಸಿ, ಮೇಣ್- ಮತ್ತು, ಈವಿಧದಿಂ, ಗೆಲ್ವೆಲ, ಎಂದು, ನೆನೆದು- ಯೋಚಿಸಿ, ಇಂತು, ಎಂದಂ. ... ... ... ... ... ॥೫೭॥

ಎಲೆಸದ್ಭಕ್ತ! ಮದೀಯಪಜ್ಜೆಯೊಳೆ- ನನ್ನ ಪಜ್ಜೆಯಲ್ಲಿ, ನೀಂ, ಉಂಡಲ್ಲದೆ- ಉಣದಿದ್ದರೆ, ಆಂ, ಈ ಪಲಲಾಹಾರಮಂ- ಈ ಮಾಂಸದ ಆಹಾರವನ್ನು, ಒಲ್ಲೆಂ; ಉಂಡ, ಅಂದು, ಎನ್ನ, ಸುವ್ರತಕೆ, ಭಂಗಂ, ಬರ್ಕುಂ; ಶಂಭು, ಸದ್ಭಕ್ತನ, ಸಾಕ್ಷಿಕಂ- ಸಾಕ್ಷಿಯು, ಬರಿದೆ- ಇಲ್ಲದೆ, ತಾಂ, ಉಣ್ಬನೇಂ ? ಕುಳ್ಳಿರ್, ಎಂದು, ಅಲರ್ದ-ಹೆಚ್ಚಾದ,ಆಕ್ಷೇಪದಿಂ, ಅಂದು, ಆಮಹಾಭೈರವಂ, (ಸಿರಿಯಾಳಂಗೆ) ಎಂದ. ॥೫೮॥

ವ॥ ಆನುಡಿಯಂ ಕೇಳ್ದು ನಿಜರಮಣಿಯಾನನಮಂ ನೋಡಲೊಡನೆ ॥ * * *

ಕಂ॥ ಒಡೆಯರ್ಬೆಸಸಿದ ಮಾಳ್ಕೆಯೊ । ಳಡಿಗಡದೆ ಮದೀಶ ಕುಳ್ಳಿರೆಂದಧಿಪತಿಯಂ ।
ನುಡಿದಲ್ಲಿ ಕುಳ್ಳಿರಿಸುತೊಂ । ದೆಡೆಗೆಯ್ದಾತಂಗೆ ಮಡದಿ ಮಡುಗಿದಳಾಗಳ್ ॥ ॥೪೯॥

ವ॥ ಅಂತು ಲಿಂಗಾರ್ಚನಾನಂತರಂ ತತ್ಪಾಕಮನವಳ್ಗಡಣಿಸೆ ಕಂಡು ತತ್ತಪೋಧನನಚ್ಚರಿವಡುತ್ತಿಂತೆಂದಂ ॥ * * * * * * * * * * *

ಕಂ॥ ತನುಭವನಿಲ್ಲದ ಮನೆ ಪೊ । ಳ್ಮನೆ ಯಿದರೊಳದೆಂತುಕೊಂಬೆನಶನಮನೀಗ ।
ಳ್ನಿನಗೆಂತು ಗಂಟಲೊಳ್ಭೋ । ಜನಮಿಳಿದಪುದೆತ್ತ ಪೋದನೋ ನಿನ್ನಣುಗಂ ॥೫೦॥

ಕಂ॥ ಅತಿಥಿಗುರುಪೂಜೆಗೃಹದೊ । ಳ್ಸುತರಿಲ್ಲದೆ ಸುಭಗಮಲ್ತು ಸುತರಹಿತತೆಯಿಂ ।
ಗತಿಗೆಟ್ಟ ನಿನ್ನಗೃಹದೊ । ಳ್ಮತಿಗೆಟ್ಟಾಸುಂಡು ಶೀಲಮಂ ನೀಗುವೆನೆ ॥ ... ॥೫೧॥

ಕಂ॥ ಬೇಡೆಮಗೆ ಭೋಜನಂ ತೆಗೆ । ನೀಡಿರ್ದಗಲಂ ನಿತಾಂತಮೆಂದಾ ಯತಿಯಂ ॥ ನೋ
ಡಿ ಪೆಳರ್ದರಕ್ಕಟೇನಂ । ಮಾಡುವೆವಿದಕೆಂದವರ್ಕರಂ ಚಿಂತಿಸಿದರ್ ॥ ... ... ॥೫೨॥

ವ॥ ಅಂತು ಚಿಂತಿಸುವ ದಂಪತಿಯನೀಶ್ವರಂ ನೋಡಿ ಮನದನುರಾಗದಿನಿಂತೆಂದಂ ॥

---

ಆನುಡಿಯಂ, ಕೇಳ್ದು, ನಿಜರಮಣಿಯ- ಆನನಮಂ- ಮುಖವನ್ನು, ನೋಡಲ್, ಒಡನೆ. * *

ಮಡದಿ- ಪತ್ನಿಯು, ಮದೀಶ- ನನ್ನ ಪತಿಯೇ! ಒಡೆಯರ್- ಸ್ವಾಮಿಗಳು, ಬೆಸಸಿದ- ಆಜ್ಞಾಪಿಸಿದ, ಮಾಳ್ಕೆಯೊಳ್- ರೀತಿಯಿಂದ, ಅಡಿಗಡದೆ- ಹೆಜ್ಜೆದಪ್ಪದೆ, ಕುಳ್ಳಿರ್, ಎಂದು, ಅಧಿಪತಿಯಂ- ಗಂಡನನ್ನು ಕುರಿತು, ನುಡಿದು, ಅಲ್ಲಿ, ಕುಳ್ಳಿರಿಸುತೆ, ಆಗಳ್, ಆತಂಗೆ, ಒಂದೆಡೆಗೆಯ್ದು- ಒಂದು ಎಡೆಯನ್ನು ಮಾಡಿ, ಮಡುಗಿದಳ್. ... ... ... ... ... ॥೪೯॥

ಅಂತು, ಲಿಂಗಾರ್ಚನಾನಂತರಂ, ಅವರ್- ಗಂಡಹೆಂಡತಿಯರು, ತತ್ಪಾಕಮಂ- ಆ ಆಹಾರವನ್ನು, ಗಡಣಿಸೆ- ಗುದ್ದೆಮಾಡಲು, * ತತ್ತಪೋಧನಂ- ಆ ತಪಸ್ವಿಯು, ಕಂಡು, ಅಚ್ಚರಿವಡುತ್ತೆ, ಇಂತು, ಎಂದಂ. * * * * * * * * * *

ತನುಭವಂ- ಮಗನು, ಇಲ್ಲದ, ಮನೆ, ಪೊಳ್ಮನೆ, ಇದರೊಳ್, ಅಶನಮಂ- ಅನ್ನವನ್ನು, ಅದೆಂತುಕೊಂಬೆಂ- ಅದುಹ್ಯಾಗೆ ಗ್ರಹಿಸುವೆನು ? ಈಗಳ್, ನಿನಗೆ, ಗಂಟಲೊಳ್, ಭೋಜನಂ- ಅನ್ನವು, ಎಂತು ಇಳಿದಪುದು ? ನಿನ್ನ, ಅಣುಗಂ- ಮಗನು, ಎತ್ತ- ಯಾವಕಡೆಗೆ, ಪೋದನೋ ? ... ... ॥೫೦॥

ಗೃಹದೊಳ್- ಮನೆಯಲ್ಲಿ, ಸುತರ್, ಇಲ್ಲದೆ, ಅತಿಥಿಗುರುಪೂಜೆ- ಅಭ್ಯಾಗತರಾದ ಆಚಾರ್ಯರ ಪೂಜೆಯು, ಸುಭಗಂ- ಮನೋಹರವಾದದ್ದು, ಅಲ್ತು: ಸುತರಹಿತತೆಯಿಂ- ಮಕ್ಕಳಿಲ್ಲದಿರುವಿಕೆಯಿಂದ, ಗತಿಗೆಟ್ಟ- ಪ್ರಾಪ್ಯಸಾಧನವಿಲ್ಲದ, ನಿನ್ನ, ಗೃಹದೊಳ್, ಮತಿಗೆಟ್ಟು, ಆಂ, ಉಂಡು, ಶೀಲಮಂ- ಸದ್ವ್ರತವನ್ನು, ನೀಗುವೆನೆ- ಬಿಡುವೆನೆ ? ... ... ... ... ... ॥೫೧॥

ಎಮಗೆ, ಭೋಜನಂ, ಬೇಡ; ನೀಡಿ- ಬಡಿಸಿ, ಇರ್ದ, ಅಗಲಂ- ಬಟ್ಟಲನ್ನು, ನಿತಾಂತಂ- ಶೀಘ್ರವಾಗಿ. ತೆಗೆ; ಎಂದ, ಆ ಯತಿಯಂ, ಅವರ್- ಗಂಡಹೆಂಡತಿಯರು, ನೋಡಿ, ಪೆಳರ್ದು- ಭಯಪಟ್ಟು, ಅಕ್ಕಟ- ಅಯ್ಯೋ ! ಇದಕ್ಕೆ, ಏನಂ, ಮಾಡುವೆವ್ ? ಎಂದು, ಕರಂ-ಬಹಳವಾಗಿ, ಚಿಂತಿಸಿದರ್- ಆಲೋಚಿಸಿದರು.

ಅಂತು, ಚಿಂತಿಸುವ, ದಂಪತಿಯಂ, ಈಶ್ವರಂ, ನೋಡಿ, ಮನದ, ಅನುರಾಗದಿಂ- ಪ್ರೀತಿಯಿಂದ, ಇಂತು, ಎಂದಂ. * * * * * * * * * * * * * * * *

---

* (ಅವ) ತಪಃ- ತಪಸ್ಸೇ, ಧನಂ- ದ್ರವ್ಯವಾಗುಳ್ಳವನು. * * * * * * * *

ಉ ॥ ಚೆಂಗಳೆ ಪೋಗು ನಿನ್ನಣುಗನಂ ಕರೆ ಬಂದಪನೀಗಳೆಂದ ಮಾರಾಂಗಹರೋ ಕ್ತಿಯಂ ಮನದೆಗೊಂಡುರೆ ನಂಬಿ ಪೊದಳ್ದು ದಭ್ರ ಭಕ್ತಾಂಗನೆ ಬಂದು ಬೀದಿಯೊಳೆ ನಿಂದು ನಿರೀಕ್ಷಿಸಿ ಕಯ್ಯನೀಡಿ ತನ್ಮಂಗಳರೂಪೆ ಕೋಕಿಲಕಲಧ್ವನಿಯಿಂ ಕರೆದಳ್ಕುಮಾರನಂ॥

ಕಂ ॥ ಚೆನ್ನಿಗರಾಣ್ಮ ಬಾರ ಸುಕುಮಾರಶಿರೋಮಣಿ ಬಾರ ಶೈವಸಂ । ಪನ್ನಗುಣಾಂಕ ಬಾರ ಶಿವಭೋಜ್ಯ ಕಳೇವರ ಬಾರ ದುಗ್ಧಭಾ । ಸ್ವನ್ನವಮುಗ್ಧಮುಖಾಂಬುಜ ಬಾರ ಮದೀಯಮಾನಸೋ । ದ್ಯನ್ನಳಿನಾರ್ಕ ಬಾರ ಸುತ ಬಾರೆನುತಿರ್ದ ಳುದಾತ್ತಲೀಲೆಯಿಂ ॥೬೪॥

ಚಂ ॥ ಶರಣರ ಕೈಯ ಕನ್ನಡಿಯೆ ಬಾರ ಪುರಾತನರಂಘ್ರಿರೇಣು ಮೈ । ವೊರೆದೆಸೆವಾನೆ ಬಾರ ಶಿವತತ್ವಸುಧಾರಸಹಂಸ ಬಾರ ಶಂ । ಕರಮತಸಾರಚೂತಶುಕ ಬಾರ ಪುರಾತನಗೀತಜಾತವಂ । ಕರುಹಮಧುಪಾಳಿ ಬಾರ ಸುತ ಬಾರೆನುತಂ ಕರೆದಳ್ಕುಮಾರನಂ ॥೬೫॥

ಛಂದೋವೃತ್ತಂ ॥ ಕಂದ ಬಾರ ಕಲಿಸೂದನ ಬಾರಂಗೇಂದ್ರಿಯಮೋಹವಿದೂರ ಬಾ । ರಿಂದುಮೌಳಿಪದಪಂಕಜಸೇವಾಲಾಲಸ ಬಾರ ಪರಾತ್ಪರಾ ॥ ನಂದಕಾರಣಕುಮಾರ

---

ಚಂಗಳೆ ! ಪೋಗು; ನಿನ್ನ, ಅಣುಗನಂ- ಮಗನನ್ನು, ಕರೆ; ಈಗಳ್, ಬಂದಪಂ, ಎಂದ, ಮಾರಾಂಗಹರೋಕ್ತಿಯಂ- ಮನ್ಮಥನ ಶರೀರವಂ ನಾಶಮಾಡಿದ ಶಿವನ ಮಾತನ್ನು, ಮನದೆಗೊಂಡು- ಮನಸ್ಸಿಗೆ ತಂದು, ಉರೆ- ಹೆಚ್ಚಾಗಿ, ನಂಬಿ, ಪೊದಳ್ದು– ಉಬ್ಬಿ, ತನ್ಮಂಗಳರೂಪೆ, ದಭ್ರಭಕ್ತಾಂಗನೆ ಸಿರಿಯಾಳನ ಪತ್ನಿಯು, ಬಂದು, ಬೀದಿಯೊಳೆ, ನಿಂದು ನಿರೀಕ್ಷಿಸಿ, ಕೈಯ, ನೀಡಿ, ಕೋಕಿಲಕಲಧ್ವನಿಯಿಂ- ಕೋಗಿಲೆಯ ಕೂಗಿನಂತೆ ಅವ್ಯಕ್ತಮಧುರವಾದ ಶಬ್ದದಿಂದ, ಕುಮಾರನಂ,ಕರೆದಳ್. ... ... ॥೬೩॥

ಚೆನ್ನಿಗರ- ಸುಂದರರ, ಆಣ್ಮ- ಪತಿಯಾದವನೇ ! ಬಾರ- ಬಾ; ಸುಕುಮಾರಶಿರೋಮಣಿ- ಕೋಮಲಾಂಗರಲ್ಲಿ ಶಿರೋರತ್ನಸ್ವರೂಪನಾದವನೇ! ( ಅಂದರೆ ಶ್ರೇಷ್ಠನಾದವನೇ ) ಬಾರ; ಶೈವಸಂಪನ್ನಗುಣಾಂಕ- ಶಿವಭಕ್ತರಲ್ಲಿರುವ ಗುಣವೇ ಚಿಹ್ನವಾಗುಳ್ಳವನೇ ! ಬಾರ; ಶಿವಭೋಜ್ಯಕಳೇವರ– ಈಶ್ವರನಿಂದ ಭುಂಜಿಸುವದಕ್ಕೆ ಯೋಗ್ಯವಾದ ಶರೀರವುಳ್ಳವನೇ ! ಬಾರ; ದುಗ್ಧಭಾಸ್ವನ್ನವಮುಗ್ಧಜಲ್ಪನಮುಖಾಂಬುಜ— ದುಗ್ಧ- ಹಾಲಿನಂತೆ, ಭಾಸ್ವತ್- ಪ್ರಕಾಶಿಸುವ, ನವ- ಹೊಸದಾದ, ಮುಗ್ಧ- ಸುಂದರವಾದ, ಜಲ್ಪನ- ಮಾತಿನಿಂ ಕೂಡಿದ, ಮುಖಾಂಬುಜ- ಮೊಗದಾವರೆಯುಳ್ಳವನೇ! ಬಾರ; ಮದೀಯಮಾನಸೋದ್ಯನ್ನಳಿನಾರ್ಕ- ನನ್ನ ಮನಸ್ಸೆಂಬ ಕಮಲಕ್ಕೆ ಸೂರ್ಯನಾದವನೇ ! ಬಾರ; ಸುತ-ಮಗನೇ ! ಬಾರ; ಎನುತೆ, ಉದಾರಲೀಲೆಯಿಂ- ಉತ್ಕೃಷ್ಟವಾದ ವಿಲಾಸದಿಂದ, ಇರ್ದಳ್. ... ... ... ॥೬೪॥

ಶರಣರ, ಕಯ್ಯ, ಕನ್ನಡಿಯೆ ! ಬಾರ; ಪುರಾತನರ, ಅಂಘ್ರಿರೇಣು- ಪಾದದ ದೂಳಿಯು, ಮೈವೊರ್ಎದು- ದೇಹದಲ್ಲಿ ವ್ಯಾಪಿಸಿ, ಎಸೆವ, ಆನೆ! ಬಾರ; ಶಿವತತ್ವಸುಧಾರಸಹಂಸ- ಪರಶಿವತತ್ವಗಳೆಂಬ ಹಾಲಿಗೆ ಹಂಸಪಕ್ಷಿಯಾದವನೇ ! ಬಾರ; ಶಂಕರಮತಸಾರಚೂತಶುಕ- ಶಿವಮತವೆಂಬ ಶ್ರೇಷ್ಠವಾದ ಮಾವಿನ ಹಣ್ಣಿಗೆ ಗಿಳಿಯಾದವನೇ! ಬಾರ; ಪುರಾತನಗೀತಜಾತಪಂಕೆರುಹಮಧುಪಾಳಿ- ಅರುವತ್ತ್ಮೂವ ರುರು ಪುರಾತನರ ಗೀತಿಕೆಗಳ ಸಮೂಹವೆಂಬ ಕಮಲಕ್ಕೆಮತ್ತಭ್ರಮರನಾದವನೇ ಬಾರ; ಸುತ ! ಬಾರ್, ಎನುತಂ, ಕುಮಾರನಂ, ಕರೆದಳ್. ... ... ... ... ... ॥೬೫॥

ಕಂದ ! ಬಾರ; ಕಲಿಸೂದನ- ಕಲಿಪುರುಷನಂ ನಾಶಪಡಿಸುವವನೇ ! ಬಾರ್; ಅಗೇಂದ್ರಿಯಮೋಹವಿದೂರ- ದೇಹೇಂದ್ರಿಯಸಂಬಂಧವಾದ ಅಜ್ಞಾನಕ್ಕೆ ದೂರನಾದವನೇ! ಬಾರ್; ಇಂದುಮೌಳಿಪದಪಂಕಜಸೇವಾಲಾಲಸ- ಈಶ್ವರನ ಪಾದಕಮಲವಂ ಸೇವಿಸುವದರಲ್ಲಾಸಕ್ತನಾದವನೇ ! ಬಾರ; ಪರಾತ್ಪರಾನಂದಕಾರ

ಬಾರಯ್ ಮೋಕ್ಷಶುಭಾಮೃತಹಂಸ ಬಾ । ರಂದವಾಳ್ದ ಕುಲಭೂಷಣ ಬಾರಯ್ ಬಾರೆಲೆ
ಭದ್ರಕಳಾನಿಧಿ ॥ ... ... ... ... .. ॥೬೬॥

ವ ॥ ಅಂತು ಕರೆಯಲೊಡನೆ ॥ ಚಂ ॥ ಝುಣಝುಣನಿಸ್ವನಂ ನಿಮಿರೆ ಚೆಲ್ವೆಸೆವಂ
ದುಗೆ ಗಂಡಯುಗ್ಮದೊ । ಳ್ಕೆಣಿಯೆ ಸುವರ್ಣಚಾರುಮಣಿಕುಂಡಲ ಮಂದದಮಂದಹಾಸ
ಮಿ ॥ ಟ್ಟಣಿಸೆ ಪೊದಳ್ದ ಮುದ್ದುಮೊಗದೊಳ್ ನಸಲೊಳ್ ತೊನೆದಾಡೆ ಭಾಳಭೂ । ಷ
ಣ ಮಿದಿರೊಳ್ಕುಮಾರ ನೊಸೆದೆಳ್ತರುತಿರ್ದ ನದೊಂದುಲೀಲೆಯಿಂ ॥ ... ॥೬೭॥

ಕಂ । ಜನನಿಯ ದೀರ್ಘಾಪಾಂಗದ । ತನಿವೆಳಗಂ ತಳ್ತು ಜೊನ್ನ ಮಮರ್ದೆಳೆವೆರೆ
ಯುಂ ॥ ನೆನೆಯಿಸಿದ ನಪ್ಪುಡುಗಣ । ಮೆನಿಸಿರೆನಕ್ಷತ್ರಮಾಲೆಯಾಚೇಲಾಳಂ ॥ ॥೬೮॥

ಕಂ ॥ ತನುಜನ ಬರವಿಂಗಾಕಾ । ಮಿನಿ ನಲಿದಳ್ಪುತ್ರಮೋಹದಿಂದಮೆ ಯಲ್ತು ॥ ಲ್ತ
ನವದ್ಯಮುನಿಗಿವಂ ಭೋ । ಜನ ಮಕ್ಕುಂ ನಾಳೆಯುಂ ದಲೆಂಬೀಬಗೆಯಿಂ ॥ ॥೬೯॥

ಮತ್ತೆ ॥ ಪಿತ ನಾನಂದಮ ನಾನೆ ಸರ್ವಜನಮುಂ ಕೊಂಡಾಡೆ ಚೇಲಾಳ ನಾ । ವ್ರತಿ
ಪಾದಾಂಬುಜಕೆಳ್ತರುತ್ತಿರಗೆ ನೀ ನಾರೋಗಿಸಿನ್ನೆಂದು ಪಾ ॥ ರ್ವತಿಯಾಣ್ಮಂಗೆನೆ ಸೆಟ್ಟ

---

ಕುಮಾರಕ- ಬ್ರಹ್ಮಾನಂದಕ್ಕೆ ಹೇತುಭೂತನಾದ ಮಗನೇ! ಬಾರಯ್; ಮೋಕ್ಷಶುಭಾಮೃತಹಂಸ- ಮು
ಕ್ತಿಯೆಂಬ ಮಂಗಳಕರವಾದ ಅಮೃತಕ್ಕೆ ಹಂಸಪಕ್ಷಿಯಾದವನೇ, ಬಾರ್; ಅಂದವಾದ, ಕುಲಭೂಷಣ-
ವಂಶಕ್ಕೆ ಅಲಂಕಾರನಾದವನೇ, ಬಾರಯ್; ಎಲೆಭದ್ರಕಲಾನಿಧಿ- ಮಂಗಳಕರವಾದ ಕಾಂತಿಗೆ ನಿಕ್ಷೇಪನಾದ
ವನೇ, ಬಾರ್. ... ... ... ... ... ॥೬೬॥

ಚೆಲ್ವು- ಸೌಂದರ್ಯವು, ಎಸೆವ, ಅಂದುಗೆ- ಕಾಲಂದಿಗೆಯು, ಝುಣಝುಣನಿಸ್ವನಂ, ನಿಮಿರೆ- ಉಂಟು
ಮಾಡಿರಲು; ಸುವರ್ಣಚಾರುಮಣಿಕುಂಡಲಂ- ಚಿನ್ನದ ಮನೋಹರವಾದ ರತ್ನದ ಹತ್ತಕಡಕು, ಗಂಡಯು
ಗ್ಮದೊಳ್- ಎರಡುಕೆನ್ನೆಗಳಲ್ಲಿ, ಕುಣಿಯೆ; ಅಂದದ, ಮಂದಹಾಸಂ, ಮುದ್ದುಮೊಗದೊಳ್, ಪೊದಳ್ದು-
ಆವರಿಸಿ, ಇಟ್ಟಣಿಸೆ- ಇಕ್ಕಟ್ಟಾಗಿ ತುಂಬಿರಲು; ಭಾಳಭೂಷಣಂ- ಹಣೆಯಲ್ಲಿ ಕಟ್ಟಿರುವ ಆಭರಣವು, ನೊ
ಸಲೊಳ್, ತೊನೆದಾಡೆ- ಅಳ್ಳಾಡುತ್ತಿರಲು, ಇದಿರೊಳ್, ಕುಮಾರಂ, ಒಸೆದು, ಅದೊಂದುಲೀಲೆಯಿಂ- ಹೇಳಲ
ಸದಳವಾದ ಅದೊಂದುತರದ ವಿಲಾಸದಿಂದ, ಎಳ್ತರುತೆ, ಇರ್ದಂ. ... ... ॥೬೭॥

ಆ ಚೇಲಾಳಂ, ನಕ್ಷತ್ರಮಾಲೆ- ಕತ್ತಿನಲ್ಲಿ ಹಾಕಿರುವ ೨೭ ಮುತ್ತುಗಳುಳ್ಳ ಮಾಲಿಕೆಯು, ಅಪ್ಪಿದ,
ಉಡುಗಣಂ- ನಕ್ಷತ್ರಸಮೂಹವು, ಎನಿಸಿ, ಇರೆ; ಜನನಿಯ, ದೀರ್ಘಾಪಾಂಗದ- ಉದ್ದವಾದ ಕಡೆಗಣ್ಣಿನ,
ತನಿವೆಳಗಿಂ- ತಂಪಾದ ಕಾಂತಿಯಿಂದ, ತಳ್ತು- ವ್ಯಾಪ್ತನಾಗಿ, ಜೊನ್ನಂ- ಬೆಳ್ದಿಂಗಳು, ಅಮರ್ದ- ಸೇರಿದ,
ಎಳೆವೆರೆಯುಂ- ಬಾಲಚಂದ್ರನನ್ನು, ನೆನೆಯಿಸಿದಂ- ಸ್ಮರಣೆ ಮಾಡಿಸಿದನು. ... ॥೬೮॥

ಆಕಾಮಿನಿ, ತನುಜನ, ಬರವಿಂಗೆ- ಬರುವಿಕೆಗೋಸ್ಕರ, ಪುತ್ರಮೋಹದಿಂದಮೆ- ಮಗನ ಮೇಲಣ ಅ
ನುರಾಗದಿಂದಲೇ, ನಲಿದಳ್- ಸಂತೋಷಪಟ್ಟವಳು, ಅಲ್ತು, ಅಲ್ತು, (ಮತ್ತೇನೆಂದರೆ) ಇವಂ- ಈ ಮಗ
ನು, ನಾಳೆಯುಂ, ಅನವದ್ಯಮುನಿಗೆ- ನಿರ್ದುಷ್ಟನಾದ ಋಷಿಗೆ, ಭೋಜನಂ- ಆಹಾರವು, ಅಕ್ಕುಂ, ಎಂಬ,
ಈ ಬಗೆಯಿಂ- ಈ ವಿಧವಾದ ಮನಸ್ಸಿನಿಂದ, (ನಲಿದಳ್- ಸಂತೋಷಪಟ್ಟಳು) ದಲ್- ನಿಶ್ಚಯ. ॥೬೯॥

ಪಿತು, ಆನಂದಮಂ, ಆನೆ- ಹೊಂದಲು; ಸರ್ವಜನಮುಂ, ಕೊಂಡಾಡೆ; ಚೇಲಾಳಂ, ಎಳ್ತರುತೆ, ಆ
ವ್ರತಿಪಾದಾಂಬುಜಕೆ- ಆ ಶೀಲ ಸಂಪನ್ನನ ಪಾದಕಮಲಕ್ಕೆ, ಎರಗೆ; ಸೆಟ್ಟಿ, ಪಾರ್ವತಿಯ, ಆಣ್ಮಂಗೆ, ನೀಂ,
ಇನ್ನು, ಆರೋಗಿಸು, ಎಂದು, ಎನ್ನೆ, ವಿಶ್ವವಿಶ್ರುತತೇಜೋನಿಧಿ- ಪ್ರಪಂಚದಲ್ಲೆಲ್ಲಾ ಪ್ರಸಿದ್ಧವಾದ ತೇಜ

ಕಂಡವರ ಸಮ್ಯಗ್ಭಕ್ತಿಯುಮಂ ವಿಶ್ವವಿ । ಶ್ರುತತೇಜೋನಿಧಿ ಮೆಚ್ಚಿ ತನ್ನನಿಜರೂಪಂ ತೋರಿ
ದಂ ನಲ್ಮೆಯಿಂ ॥ ... ... ... ... ... ॥೩೦॥

ಛಂದೋವೃತ್ತಂ ॥ ಕುಂಡಲೀಶಮಣಿಕುಂಡಲಕರ್ಣಂ ಭೀಮಗರಾಂಕಿತಕಂಧರ ।
ಖಂಡಚಂದ್ರಸುರಸಿಂಧುಕಪರ್ದಂ ಶೂಲಪರಶ್ವಧಪಾಣಿ ಮಾ ॥ ರ್ತ್ತಂಡಕೋಟಿರುಚಿ ಮಾಧವ
ಚಕ್ಷುಃಪಾದ ನಿಭಾಜಿನವಾಸಸಂ । ಮಂಡಿತಾಂಗ ನಮಳಸ್ಮಿತವಕ್ತ್ರಂ ಕಣ್ಗೆಸೆದಂ ವೃಷ
ಭಧ್ವಜಂ ॥ ... ... ... ... ... ... ॥೩೧॥

ಕಂ ॥ ಸುರದುಂದುಭಿರವಮೊಡನೆ ನೊ । ತ್ತರಿಸುತೆ ಭೋರೆಂದು ಸುರಮಹೀರುಹ
ಸುಮನೋ ॥ ವರವರ್ಷಂ ಕರೆದುದು ವಿಧಿ । ಹರಿಸುರಪನಿಲಿಂಪ ರಲ್ಲಿ ನೆರೆದೆಳ್ತಂದರ್ ॥೩೨॥

ಕಂ ॥ ಪರಮಚಿರುತೊಂಡನಾಹೇ । ಶ್ವರಂಗೆ ಚೆಂಗಳೆಗೆ ಮಿಸುಪಚೇಲಾಳಂಗಾ ॥
ಪುರದೇಳುಕೇರಿಯ ಜನೋ । ತ್ಕರಕ್ಕೆ ಪುರವೈರಿ ಬರಿಸಿದಂ ಪುಷ್ಪಕಮಂ ॥ ॥೩೩॥

ವ ॥ ಆ ಪುಷ್ಪಕದೊಳ್ ಇಂದುಧರ ನವಂದಿರಂ ಕೂರ್ಮೆಯಿಂ ಕುಳ್ಳಿರಿಸಿ ಕೈಲಾಸವಾ
ಸಮ ನೆಯ್ದಿಸಿ ಭದ್ರಾಸನದೊಳವರ್ಗ್ಗಾನ್ವಿತಂ ಸುರನಿಕರ ಮೋಲಗಿಸೆ ಪರಮೋತ್ಸಾಹದಿಂ
ಮೂರ್ತಿಗೊಂಡೊಪ್ಪುತ್ತಮಿರ್ಪ್ಪಗಳ್ ॥ * * * * * *

---

ಸ್ವಿಗೆ ನಿಕ್ಷೇಪನಾದ ಸ್ವಾಮಿಯು, ಅವರ- ಪತಿಪತ್ನೀಪುತ್ರರ, ಸಮ್ಯಗ್ಭಕ್ತಿಯುಮಂ- ಒಳ್ಳೆಯ ಭಕ್ತಿಯನ್ನು
ಕಂಡು, ಮೆಚ್ಚಿ- ಶ್ಲಾಘಿಸಿ, ನಲ್ಮೆಯಿಂ- ಪ್ರೀತಿಯಿಂದ, ತನ್ನ, ನಿಜರೂಪಂ, ತೋರಿದು. ॥೩೦॥

ಕುಂಡಲೀಶಮಣಿಕುಂಡಲಕರ್ಣಂ- ಆದಿಶೇಷನೆಂಬ ರತ್ನದ ಹತ್ತಕಡಕುಗಳೇ ಕಿವಿಯಲ್ಲುಳ್ಳ, ಭೀಮಗ
ರಾಂಕಿತಕಂಧರಂ- ಭಯಂಕರವಾದ ವಿಷವೇ ಕತ್ತಿನಲ್ಲುಳ್ಳ, ಖಂಡಚಂದ್ರಸುರಸಿಂಧುಕಪರ್ದಂ- ಚಂದ್ರನಕೆ
ಲ ದೇವಗಂಗೆ ಇವುಗಳೇ ಜಡೆಯಲ್ಲುಳ್ಳ, ಶೂಲಪರಶ್ವಧಪಾಣಿ- ತ್ರಿಶೂಲ ಗಂಡುಗೊಡಲಿ ಇವುಗಳಿಂ ಕೂಡಿದ
ಕೈಯ್ಯುಳ್ಳ, ಮಾರ್ತ್ತಂಡಕೋಟಿರುಚಿ- ಕೋಟಿಸೂರ್ಯರ ಕಾಂತಿಯಂತಿರ್ಪ್ಪ ಕಾಂತಿಯುಳ್ಳ, ಮಾಧವಚಕ್ಷುಃ
ಪಾದಂ ವಿಷ್ಣುವಿನ ಕಣ್ಣೇ ಚರಣದಲ್ಲುಳ್ಳ, ಇಭಾಜಿನವಾಸಸಂಮಂಡಿತಾಂಗಂ- ಗಜಚರ್ಮವೆಂಬ ವಸ್ತ್ರದಿಂದ
ಅಲಂಕರಿಸಲ್ಪಟ್ಟ ದೇಹವುಳ್ಳ, ಅಮಳಸ್ಮಿತವಕ್ತ್ರಂ- ನಿರ್ಮಲವಾದ ಮುಗುಳ್ನಗೆಯಿಂ ಕೂಡಿದ ಮುಖವುಳ್ಳ,
ವೃಷಭಧ್ವಜಂ, ಕಣ್ಗೆ, ಎಸೆದು. ... ... ... ... ॥೩೧॥

ಸುರದುಂದುಭಿರವದೊಡನೆ, ದೇವತೆಗಳ ನಗಾರಿಯ ಶಬ್ದದೊಡನೆ, ಸುರಮಹೀರುಹಸುಮನೋವರ
ವರ್ಷಂ- ಕಲ್ಪವೃಕ್ಷದ ಹೂವ್ಗಳ ಶ್ರೇಷ್ಠವಾದ ಮಳೆಯು, ಒತ್ತರಿಸುತೆ- ಸೇರುತ್ತ, ಭೋರ್, ಎಂದು,
ಕರೆದುದು; ಅಲ್ಲಿ, ವಿಧಿಹರಿಸುರಪನಿಲಿಂಪರ್- ಬ್ರಹ್ಮ ವಿಷ್ಣು ಇಂದ್ರ ದೇವತೆಗಳು, ನೆರೆದು- ಗುಂಪುಕೂಡಿ,
ಎಳ್ತಂದರ್. ... ... ... ... ... ॥೩೨॥

ಪುರವೈರಿ, ಪರಮಚಿರುತೊಂಡಮಾಹೇಶ್ವರಂಗೆ- ಮಾಹೇಶ್ವರನಾದ ಪಥ್ರಭಕ್ತನಿಗೆ, ( ಚಿರುತೊಂಡ,
ಧರ್ಮಭಕ್ತ ಎಂಬೆರಡು ಶಬ್ದಗಳೂ ಸಮಾನಾರ್ಥಕಗಳು ) ಚೆಂಗಳೆಗೆ, ಮಿಸುಪ, ಚೇಲಾಳಂಗೆ, ಆಪುರದ, ಏ
ಳುಕೇರಿಯ, ಜನೋತ್ಕರಕ್ಕೆ-ಜನಸಮೂಹಾಯಕ್ಕೋಸ್ಕರ,ಪುಷ್ಪಕಮಂ-ಹೂವಿನವಿಮಾನವನ್ನು,ಬರಿಸಿದಂ.

ಇಂದುಧರಂ, ಆಪುಷ್ಪಕದೊಳ್, ಅವಂದಿರಂ- ಅವರೆಲ್ಲರನ್ನೂ, ಕೂರ್ಮೆಯಿಂ- ಪ್ರೀತಿಯಿಂದ, ಕು
ಳ್ಳಿರಿಸಿ, ಕೈಲಾಸವಾಸಮಂ, ಎಯ್ದಿಸಿ, ಸುರನಿಕರಂ, ಓಲಗಿಸೆ- ಸೇವಿಸುತ್ತಿರಲು, ಅವರ್ಗ್ಗಾನ್ವಿತಂ- ಪಾರ್ವ
ತೀಸಮೇತನಾಗಿ, ಭದ್ರಾಸನದೊಳ್- ಮಂಗಳಕರವಾದ ಪೀಠದಲ್ಲಿ, ಪರಮೋತ್ಸಾಹದಿಂ, ಮೂರ್ತಿಗೊಂಡು-
ಕುಳಿತು, ಒಪ್ಪುತ್ತಂ, ಇರ್ಪ್ಪಗಳ್ * * * * * * * * * * * * *

ಮಹಾಸ್ರ॥ ಸಭೆಯೊಳ್ಕುಳ್ಳಿರ್ದು ತನ್ನಂ ತನುಭವನನುಮಾಧೀಶನಂ ನೋಡಿವಿಶ್ವ। ಪ್ರಭುವಿಂಗಾರೋಗಿಸಲ್ಕಿತ್ತಣುಗನನೊಲಿಸುತ್ತಣ್ಮಿ ಕೈಲಾಸಭಾಸ್ವ॥ ದ್ವಿಭವಶ್ರೀಯಾಂತರಾರೆನ್ನನ್ರೊಳಿಳೆಯೊಳ್ ಮತ್ಕೃತ್ಯಮನ್ಯರ್ಗಣಂ ದು। ರ್ಲಭ ಮಕ್ಕುಂ ಮಾಣದೆಂದುತ್ಸವಿಸುತೆ ಮದಮಂ ತಾಳ್ದ ನಾಪಭೃಭಕ್ತಂ॥ ... ... ॥೨೪॥

ಕಂ॥ ಅತನ ಗರ್ವದ ಬಗೆಯಂ। ಭೂತೇಶಂ ತಿಳಿದು ಭಕ್ತ ಬಾರೆನುತಾಗಳ್॥ ಪ್ರೀತಿ ಮಿಗೆ ಕೈವಿಡಿದು ಧರ। ಣೀತಳಕವನೊಡನೆ ಶಂಭು ಬರ್ಪಿಸ ಮಾಗಳ್॥ ॥೨೫॥

ಮ॥ ಧರಣೀಭಾಗದೊಳೆಳ್ಗೆವೆತ್ತು ಗುಣದಿಂ ವೀರವ್ರತಸ್ನಿಗ್ಧೆ ಶಂ। ಕರಪಾದಾಂಬುಜಲಗ್ನಮಾನಸೆ ಗಣವ್ರಾತಾಂಘ್ರಿ ಪದ್ಮಾರ್ಚನಾ॥ ಪರೆ ಸಂಸಾರಕಲಂಕದೂರೆ ಚರದಾಸೀಭಾವಸಂಪನ್ನೆ ಭಾ। ಸುರಭಕ್ತಪ್ರಮದಾನುಕೂಲೆ ಮೆರೆದಿರ್ದಳ್ನಿಂಬಿಯೆಂಬಳ್ಕರಂ॥

ಕಂ॥ ಶರಣರ ಮನೆದುರುಗಾಮ। ತರುಣಂ ತಾಂನೀರನಡಕುವ ಳ್ಶೀಲ ಮಿದಾ॥ ಗಿರೆತನಗದರಿಂ ದೊದವಿದ। ವರಧನದಿಂ ಚರಪದಾಬ್ಜಮಂ ಪೂಜಿಸುವಳ್॥ ॥೨೭॥

ಕಂ॥ ಆ ಕಾಂತೆಯ ಮಂದಿರಕ್ಕೆ ಪಿ। ನಾಕಿ ಚರಾಕೃತಿಯ ನಾಳ್ದು ಭಕ್ತಾನ್ವಿತ

ಆದಪ್ರಭಕ್ತಂ, ಸಭೆಯೊಳ್, ಕುಳ್ಳಿರ್ದು, ತನ್ನಂ, ತನುಭವನಂ, ಉಮಾಧೀಶನಂ, ನೋಡಿ, ಎನ್ನವೊಲ್- ನನ್ನಹಾಗೆ, ಇಳೆಯೊಳ್, ವಿಶ್ವಪ್ರಭುವಿಂಗೆ- ಪ್ರಪಂಚಕ್ಕಧಿಪತಿಯಾದ ಈಶ್ವರನಿಗೆ, ಅಣುಗನಂ- ಮಗನನ್ನು, ಆರೋಗಿಸಲ್ಕೆ- ಊಟವಂ ಮಾಡುವದಕ್ಕೆ, ಇತ್ತು, ಒಲಿಸುತ್ತೆ- ಮೆಚ್ಚಿಸಿಕೊಳ್ಳುತ್ತ, ಅಣ್ಮಿ- ಶೌರ್ಯವಿಶಿಷ್ಟನಾಗಿ, ಕೈಲಾಸಭಾಸ್ವದ್ವಿಭವಶ್ರೀಯ- ಕೈಲಾಸದ ಪ್ರಕಾಶಿಸುವ ವೈಭವದ ಸಂಪತ್ತನ್ನು, ಆಂತರ್- ಹೊಂದಿದವರು, ಆರ್? ಮತ್ಕೃತ್ಯಂ- ನನ್ನ ಕಾರ್ಯವು, ಅನ್ಯರ್ಗೆ, ಅಣಂ- ಅತ್ಯಂತವಾಗಿ, ದುರ್ಲಭಂ, ಅಕ್ಕುಂ, ಮಾಣದು-ತಪ್ಪದು, ಎಂದು, ಉತ್ಸವಿಸುತೆ-ಸಂತೋಷಪಡುತ್ತ, ಮದಮಂ-ಗರ್ವವನ್ನು, ತಾಳ್ದಂ.

ಆತನ, ಗರ್ವದ, ಬಗೆಯಂ- ರೀತಿಯನ್ನು, ಭೂತೇಶಂ, ತಿಳಿದು, ಭಕ್ತ -ಬಾರ್, ಎನುತೆ, ಆಗಳ್, ಪ್ರೀತಿ, ಮಿಗೆ, ಕೈವಿಡಿದು, ಅವನೊಡನೆ, ಶಂಭು, ಧರಣೀತಳಕೆ, ಬರ್ಪಿಸಂ, ಆಗಳ್. ... ॥೨೫॥

ನಿಂಬ್ಯಕ್ಕನ ಕಥೆ.

ಧರಣೀಭಾಗದೊಳ್, ಗುಣದಿಂ, ಎಳ್ಗೆವೆತ್ತು- ಪ್ರಸಿದ್ಧಿಯಂ ಹೊಂದಿ, ವೀರವ್ರತಸ್ನಿಗ್ಧೆ- ವೀರಶೈವವ್ರತದಿಂದ ಸಾಂದ್ರಳಾದ, ಶಂಕರಪಾದಾಂಬುಜಲಗ್ನಮಾನಸೆ, ಗಣವ್ರಾತಾಂಘ್ರಿಪದ್ಮಾರ್ಚನಾಪರೆ- ಶಿವಗಣಂಗಳ ಸಮೂಹದ ಪಾದಕಮಲವ- ಪೂಜಿಸುವದರಲ್ಲಾಸಕ್ತಳಾದ, ಸಂಸಾರಕಲಂಕದೂರೆ- ಸಂಸೃತಿಯೆಂಬ ದೋಷದಿಂದ ದೂರಳಾದ, ಚರದಾಸೀಭಾವಸಂಪನ್ನೆ- ಜಂಗಮರಲ್ಲಿ ಗೌಡಿಯತನವಂ ವಹಿಸಿರುವ, ಭಾಸುರಭಕ್ತಪ್ರಮದಾನುಕೂಲೆ- ಪ್ರಕಾಶಮಾನರಾದ ಶಿವಭಕ್ತರ ಪತ್ನಿಯರಿಗೆ ಸಹಾಯಕಳಾದ, ನಿಂಬಿ, ಎಂಬಳ್, ಕರಂ- ಅತ್ಯಂತವಾಗಿ, ಮೆರೆದು, ಇರ್ದಳ್. ... ... ... ॥೨೬॥

ತರುಣಂ- ತನ್ನ ಮಗನು, ಶರಣರ, ಮನೆದುರುಗಾಮಂ- ಮನೆಗಳ ಹಸುವನ್ನು ಕಾಯುವನು; ತಾಂ, ನೀರಂ, ಅಡಕುವಳ್- ತುಂಬುವಳು; ಇದು, ತನಗೆ, ಶೀಲಂ- ಸದಾಚಾರವು, ಆಗಿ, ಇರೆ; ತನಗೆ, ಅದರಿಂ- ಆ ಕಾರ್ಯದಿಂದ, ಒದವಿದ- ಪ್ರಾಪ್ತವಾದ, ವರಧನದಿಂ- ಶ್ರೇಷ್ಠವಾದ ಹಣದಿಂದ, ಚರಪದಾಬ್ಜಮಂ, ಪೂಜಿಸುವಳ್. ... ... ... ... ... ... ॥೨೭॥

ಅಸ್ತೋಕಮತಿ- ಅಧಿಕವಾದ ಬುದ್ಧಿಯುಳ್ಳ, ಪಿನಾಕಿ, ಚರಾಕೃತಿಯಂ- ಜಂಗಮಾಕಾರವನ್ನು, ಆಳ್ದು, ಭಕ್ತಾನ್ವಿತಂ- ಸಿರಿಯಾಳನೊಡನೆ ಕೂಡಿದವನಾಗಿ, ಆ ಕಾಂತೆಯ, ಮಂದಿರಕೆ, ಬಂದು, ನಿಂದು, ಅನ

ನ ॥ ನೋನ್ತಿಕ್ಕಪುತ್ತಿ ಬುಡು ನಿಂದವ । ಲೋಕಿಪ ವೇಳೆಯೊಳ್ ನಿಂಬಿ ಯವರಂ ಕಂಡಳ್ ॥೭೮॥

ಕಂ ॥ ಸಡಗರಿಸಿ ನಿಂಬಿ ಮನದೊ । ಳ್ಗುಡಿಗಟ್ಟುತ್ತೆರಗಿ ಚರಣಮಂ ಕರ್ಚಿ ಪೊ । ದಳ್ದಡಿಯೊರಸಿ ಕುಳ್ಳಿರಿಸಿದ । ಳ್ಮೃಡಭಕ್ತೆ ನವೀನಮೃದುಳತಳ್ಪಸ್ಥಳದೊಳ್ ॥೭೯॥

ವ ॥ ಅಂತು ಕುಳ್ಳಿರಿಸಿ ಕೂರ್ಮೆಯಿಂ ಯಥೋಚಿತವಿನಯಮಂ ಮೆರೆದವರ್ಗೆ ಭೋಜನಮಂ ಸವೆಯಲೆಳಸಿ ॥ * * * * * * * * * * * *

ಕಂ ॥ ಗಾರಿಗೆ ಮಂಡಿಗೆ ಚಕ್ಕುಲಿ । ಪೂರಿಗೆ ವಡೆ ಫೇಣಿ ॥ ಪಾಯಸಂಗಳ ನೊಲವಿಂ ॥ ಸಾರತರಶಾಕಪಾಕಮ । ನಾರುಚಿರರಸಾಯನಂಗಳಂ ಸಲೆ ಸವೆದಳ್ ॥ ॥೮೦॥

ವ ॥ ಅಂತು ಸವೆದವಂ ಧವಳವಸ್ತ್ರದಿಂ ಬಾಸಣಿಸಿ ಭಕ್ತೆ ಘಟಮಂ ಕೊಂಡರ್ಘ್ಯಕ್ಕೆರೆವನೀರ್ಗೆ ಪೋಗಲೊಡನಾಗಳ್ ॥ * * * * * * * * * * *

ಮಹಾಸ್ರ ॥ ತುರುಗಾಯಲ್ಪೋದಪುತ್ರಂ ಪಸುವಡಸಿ ನಿಜಾಗಾರಕೆಯ್ತಂದು ನಿಂದೊ । ಲ್ದರಸುತ್ತಂ ಮಾತೆಯಂ ಕಾಣದೆ ಮಡಕೆಯ ನನ್ವೇಷಣಂಗೆಯ್ದು ಮುಚ್ಚು । ಳ್ದಿರೆವುತ್ತಂ ಕಂಡು ಕಜ್ಜಾಯಮನತಿಜವದಿಂದೆತ್ತಿ ಮೆಲ್ವಾಗಳೆಯ್ತಂ । ದುರೆ ಕಂಡಳ್ಕಾಯ್ಪಿಂ ದೊನಕೆವಿಡಿದವಂ ಬೀಳ್ವಿನಂ ಪಾಯ್ದು ಪೊಯ್ದಳ್ ॥ ... ॥೮೧॥

ವ ॥ ಅಂತವಳಣುಗನಂ ಮನೆವೊಕ್ಕ ತುಡುಗುಣಿವೇರಡಿಯುಂ ಬಡಿಮುತೆ ಬಡಿಪ್ಪ

---

ಲೋಕಿಪ- ನೋಡುವ, ವೇಳೆಯೊಳ್- ಕಾಲದಲ್ಲಿ, ನಿಂಬಿ, ಅವರಂ, ಕಂಡಳ್. ... ॥೭೮॥

ಮೃಡಭಕ್ತೆ, ನಿಂಬಿ, ಮನದೊಳ್, ಸಡಗರಿಸಿ, ಗುಡಿಗಟ್ಟುತ್ತೆ- ರೋಮಾಂಚವಿಶಿಷ್ಟಳಾಗುತ್ತ, ಎರಗಿ, ಚರಣಮಂ, ಕರ್ಚಿ- ತೊಳೆದು, ಪೊದಳ್ದ- ವಿಸ್ತಾರವಾದ, ಅಡಿಯ, ಒರಸಿ, ನವೀನಮೃದುಳತಳ್ಪಸ್ಥಳದೊಳ್- ಹೊಸದಾಗಿ ಕೋಮಲವಾದ ಹಾಸಿಗೆಯಲ್ಲಿ, ಕುಳ್ಳಿರಿಸಿದಳ್. ... .. ॥೭೯॥

ಅಂತು, ಕುಳ್ಳಿರಿಸಿ, ಕೂರ್ಮೆಯಿಂ- ಪ್ರೀತಿಯಿಂದ, ಯಥೋಚಿತವಿನಯಮಂ- ಯಥಾಯೋಗ್ಯವಾದ ನಮ್ರತೆಯನ್ನು, ಮೆರೆದು- ತೋರ್ಪಡಿಸಿ, ಅವರ್ಗೆ, ಭೋಜನಮಂ, ಸವೆಯಲ್- ಮಾಡುವದಕ್ಕೋಸ್ಕರ, ಎಳಸಿ- ಅಪೇಕ್ಷಿಸಿ. * * * * * * * * * * * * * * * *

ಗಾರಿಗೆ, ಮಂಡಿಗೆ, ಚಕ್ಕುಲಿ, ಪೂರಿಗೆ, ಒಡೆ, ಫೇಣಿ, ಪಾಯಸಂಗಳಂ, ಸಾರತರಶಾಕಪಾಕಮಂ, ಆರುಚಿರರಸಾಯನಂಗಳಂ, ಸಲೆ, ಒಲವಿಂ, ಸವೆದಳ್- ಮಾಡಿದಳು. ... ... ॥೮೦॥

ಭಕ್ತೆ, ಅಂತು, ಸವೆದು, ಅವಂ- ಆ ಆಹಾರದ್ರವ್ಯಗಳನ್ನು, ಧವಳವಸ್ತ್ರದಿಂ- ಬಿಳಿಯ ಬಟ್ಟೆಯಿಂದ, ಬಾಸಣಿಸಿ- ಮುಚ್ಚಿ, ಘಟಮಂ, ಕೊಂಡು, ಅರ್ಘ್ಯಕ್ಕೆ, ಎರೆವ, ನೀರ್ಗೆ, ಪೋಗಲ್, ಒಡಂ, ಆಗಳ್. *

ತುರುಗಾಯಲ್ಪೋದ- ಹಸುವನ್ನು ಕಾಯುವದಕ್ಕೆ ಹೋದ, ಪುತ್ರಂ, ಪಸಿವಡಿಸಿ- ಹಸಿವನ್ನುಹೊಂದಿ, ನಿಜಾಗಾರಕೆ- ತಮ್ಮಮನೆಗೆ, ಎಯ್ತಂದು, ನಿಂದು, ಒಲ್ದು, ಮಾತೆಯಂ, ಅರಸುತ್ತಂ-ಹುಡುಕುತ್ತ, ಕಾಣದೆ, ಮಡಕೆಯಂ, ಅನ್ವೇಷಣಂಗೆಯ್ದು- ಹುಡುಕಿ, ಮುಚ್ಚುಳ್ದಿರೆವುತ್ತಂ- ಮೇಲೆ ಮುಚ್ಚಿದ್ದ ಮುಚ್ಚಳವನ್ನು ತೆಗೆಯುತ್ತ, ಕಜ್ಜಾಯಮಂ, ಕಂಡು, ಅತಿಜವದಿಂದೆ- ಅತಿವೇಗನೆ, ಎತ್ತಿ, ಮೆಲ್ವಾಗಳ್- ತಿನ್ನುವ ಕಾಲದಲ್ಲಿ, ನಿಂಬಿ, ಎಯ್ತಂದು, ಉರೆ, ಕಂಡಳ್. ಕಾಯ್ಪಿಂದೆ- ಕೋಪದಿಂದ, ಒನಕೆವಿಡಿದು, ಅವಂ, ಬೀಳ್ವಿನಂ- ನೆಲಕ್ಕೆ ಬೀಳುವ ಹಾಗೆ, ಪಾಯ್ದು- ಮೇಲೆಬಿದ್ದು, ಪೊಯ್ದಳ್- ಹೊಡೆದಳು. ... ॥೮೧॥

ಅಂತು, ಅವಳ್, ಅಣುಗನಂ, ಮನೆಪೊಕ್ಕ, ತುಡುಗುಣಿಪೇರಡಿಯಂ- ಕದ್ದು ಕಬಳವಂತಿನ್ನುವ ಸ್ವ

ಮಡಿಪಿ ಕಾಲ್ವಿಡಿದು ಸರಸರನೆಳೆದಾರುಮರಿಯದಂತೊಂದುಗೊಂಟಿನೊಳಿಕ್ಕಿ ಪುಲ್ಲಂ ಕವಿ
ಸುತಾಗ್ನೇಯಸ್ನಾನಮೆಸಗಿ ಗೃಹಮಂ ಶುಚಿಗೆಯ್ದು ಮೊದಲಂತೆಲ್ಲಮಂ ಮಗುಳೆಸವೆವು
ತ್ತಿರ್ದಾಗಳ್ಶಿವಂ ಸಿರಿಯಾಳಂಗೆ ಸನ್ನೆದೋರಿ ಪುರ್ಬಿಂ ಜರ್ಬಿ ಮೆಲ್ಲನಿಂತೆಂದಂ ॥ * *

ಮತ್ತೇಭ ॥ ಪಸಿದೇಳ್ತಂದು ನಿಜಾಲಯಕ್ಕರಿಯದೋರಂತೊಂದು ಕಜ್ಜಾಯಮಂ।
ರಸನಾಲಂಪಟನೆತ್ತಿ ಭಾಂಡದಿ ನದಂ ಮೆಲ್ವಂದಮಂ ಕಂಡು ಕೋ॥ಪಿಸಿ ತನ್ನಳ್ಕರ ತ
ತ್ಕುಮಾರಕನ ನಿಂದೇಕಾಂತದೊಳ್ಕೊಂದಳೀ । ಬಿಸಜಾತಾಂಬಕಿ ನಿಂಬಿ ನೋಡೆನುತೆ
ಪಾದಾಂಗುಷ್ಠದಿಂ ಪುಲ್ಗಳಂ ॥ ... ... ... ... ॥೮೨॥

ಶಿಖರಿಣೀವೃತ್ತಂ ॥ ಕೆಲಂ ನೋಂಕುತ್ತಾಗಳ್ಪುರರಿಪು ಶವಂದೋರಿಸೆ ನಿರ। ರ್ಗಲಾ
ಶ್ಚರ್ಯಂಬೆತ್ತಾಕೆಯ ಪರಿಗೆ ಮೆಚ್ಚುತ್ತೆ ಪೊಗಳ್ತು ॥ ತ್ತಲಾಪಿಂ ತದ್ಭಕ್ತೋತ್ತಮ ನಿರೆ
ಸುಭೋಜ್ಯಾಳಿಯ ನವ। ವಿಲಾಸಂ ಕೈಗಣ್ಮುತ್ತಿರೆ ಸವೆದಳಾನಿಂಬಿ ಜವದಿಂ ॥ ॥೮೩॥

ವ ॥ ಅಂತು ಸವೆದಿಳುಪುತನಂತರ ಮಿಾರ್ವರ್ಗೆ ಸೊಂಗ ಮನೆ ಲಿಂಗಾರ್ಚನಂಗೆಯ್ಸು
ತಾರೋಗಣೆಗೆಡೆಗೆಯ್ದು ಗಡಣಿಸಿ "ದಾತಾ ಭೋಕ್ತಾ ಸ್ವಯಂ ಶಿವಃ" ಎಂದು ಪೂವಲಿ
ಗೆದರಿ ಪೊಡಮಟ್ಟಾರೋಗಿಪುದೆಂದು ಬಿನ್ನಪಂಗೆಯ್ಯೆ॥ * * * * * * *

---

ಭಾವಪುತ್ರೆ ನಾಯನ್ನು, ಬಡಿವಂತೆ, ಬಡಿದು, ಮಡಿಪಿ- ಕೊಂದು, ಕಾಲ್ವಿಡಿದು, ಸರಸರನೆ, ಎಳೆದು, ಆರುಂ, ಅರಿಯದಂತೆ, ತಿಳಿಯದ ಹಾಗೆ, ಒಂದುಗೊಂಟಿನೊಳ್- ಒಂದುಮೂಲೆಯಲ್ಲಿ, ಇಕ್ಕಿ, ಪುಲ್ಲಂ, ಕವಿಸುತೆ- ಹೊದ್ದಿಸುತ್ತೆ, ಆಗ್ನೇಯಸ್ನಾನಮೆಸಗಿ- ಮೃತಾಶೌಚಾನಂತರದಲ್ಲಿ ಮಾಡುವ ಸ್ನಾನವಂಮಾಡಿ, ಗೃಹಮಂ, ಶುಚಿಗೆಯ್ದು- ಪರಿಶುದ್ಧವಂಮಾಡಿ, ಮೊದಲಂತೆ, ಎಲ್ಲಮಂ, ಮಗುಳೆ- ಪುನಃ, ಸವೆವುತ್ತೆ- ಮಾಡುತ್ತ, ಇರ್ಪಾಗಳ್, ಶಿವಂ, ಸಿರಿಯಾಳಂಗೆ, ಸನ್ನೆದೋರಿ- ಸಂಜ್ಞೆಯುಮಾಡಿ, ಪುರ್ಬಿಂ, ಜರ್ಬಿ- ಹಾರಿಸಿ, ಮೆಲ್ಲನೆ, ಇಂತು, ಎಂದಂ. * * * * * * * * * * * * * * * *

ಪಸಿದು, ನಿಜಾಲಯಕ್ಕೆ, ಏಳ್ತಂದು, ಅರಿಯದೆ- ಇಲ್ಲಿಯ ವಿಷಯವಂ ತಿಳಿಯದೆ, ಓರಂತೆ, ರಸನಾಲಂಪಟಂ- ನಾಲಿಗೆಯ ಆಸೆಯುಳ್ಳವನಾಗಿ, ಒಂದು ಕಜ್ಜಾಯಮಂ, ಭಾಂಡದಿಂ- ಮಡಕೆಯಿಂದ, ಎತ್ತಿ, ಮೆಲ್ವ- ತಿನ್ನುವ, ಅಂದಮಂ-ರೀತಿಯನ್ನು, ಈ ಬಿಸಜಾತಾಂಬಕಿ-ಕಮಲನೇತ್ರೆಯಾದ, ನಿಂಬಿ, ಕಂಡು, ಕೋಪಿಸಿ, ತನ್ನ, ಅಳ್ಕರ- ಪ್ರೀತಿಗಾಸ್ಪದನಾದ, ತತ್ಕುಮಾರಕನಂ- ಆ ಮಗನನ್ನು, ಏಕಾಂತದೊಳ್-ರಹಸ್ಯದಲ್ಲಿ, ಕೊಂದಳ್; ನೋಡು, ಎನುತೆ, ಪಾದಾಂಗುಷ್ಠದಿಂ- ಚರಣದ ಹೆಬ್ಬೆಟ್ಟಿನಿಂದ, ಪುಲ್ಗಳಂ. ॥೮೨॥

ಕೆಲಂನೋಂಕುತ್ತೆ- ಒಂದುಕಡೆಗೆ ನೋಡುತ್ತ, ಆಗಳ್,ಪುರರಿಪು, ಶವಂದೋರಿಸೆ- ಹೆಣವನ್ನು ತೋರಿಸಲು, ತದ್ಭಕ್ತೋತ್ತಮಂ- ಭಕ್ತಶ್ರೇಷ್ಠನಾದ ಆ ಸಿರಿಯಾಳನು, ನಿರರ್ಗಲಾಶ್ಚರ್ಯಂಬೆತ್ತು- ಅಧಿಕವಾದ ಆಶ್ಚರ್ಯವಂಹೊಂದಿ, ಆಕೆಯ, ಪರಿಗೆ- ರೀತಿಗೆ, ಮೆಚ್ಚುತ್ತೆ, ಅಲಾಪಿಂ, ಪೊಗಳುತ್ತೆ, ಇರೆ, ಅವಳ್, ಆನಿಂಬಿ, ವಿಲಾಸಂ, ಕೈಗಣ್ಮುತ್ತೆ– ಹೆಚ್ಚುತ್ತ, ಇರೆ, ಜವದಿಂ, ಸುಭೋಜ್ಯಾಳಿಯಂ- ಸವಿಯಾದಸವಾದ ಆಹಾರವನ್ನು, ಸವೆದಳ್. ... ... ... ... ... ॥೮೩॥

ಅಂತು, ಸವೆದು, ಇಳುಪುತ್ತೆ, ಅನಂತರಂ, ಈರ್ವರ್ಗೆ, ಸೊಂಗಂ, ಎನೆ, ಲಿಂಗಾರ್ಚನಂಗೆಯ್ಸುತ್ತೆ, ಆರೋಗಣೆಗೆ- ಭೋಜನಕ್ಕೆ, ಎಡೆಗೆಯ್ದು, ಗಡಣಿಸಿ- ಎಲ್ಲವನ್ನೂ ಒದಗಿಸಿ, ಶಿವಃ- ಪರಶಿವನು, ಸ್ವಯಂ- ತಾನು, ದಾತಾ- ಕೊಡುವನು; ಭೋಕ್ತಾ- ಊಟವಂಮಾಡುವನು: ಎಂದು, ಪೂವಲಿಗೆದರಿ- ಪುಷ್ಪಾಂಜಲಿಯಂ ಮಾಡಿ, ಪೊಡಮಟ್ಟು- ನಮಸ್ಕರಿಸಿ, ಆರೋಗಿಪುದು, ಎಂದು, ಬಿನ್ನಪಂಗೆಯ್ಯೆ. * * * *

ಚಂ ‖ ತನುಭವ ನೆಲ್ಲಿದಂ ತರುಣಿ ತಾಂ ಪಸಿದಾಗಳೆ ಬಂದು ನಿನ್ನ ನೀ । ಮನೆಯೊಳೆ ಗಳ್ಕರಿಂ ಕರೆದು ಕೋಟಲೆಗೊಂಡ ನವಂಗೆ ನೀಡೆ ಭೋ ‖ ಜನಮ ನಿದೇಕೆ ಕಲ್ಲೆದೆತನು ನಿನಗೆನ್ನದೊ ಮಕ್ಕಳೆಯ್ದೆ ಬಿ । ಬ್ಬಿನ ಬೆಸಗೆಯ್ವುದೊಳ್ಳುಣಿಸೆನುತ್ತಭಿಲಾಷಿಪ್ಪುವಲ್ತೆ ಲೋಕದೊಳ್ ‖ ... ... ... ... ... ‖೭೪‖

ಕಂ ‖ ಆರೋಗಿಸಲುತ್ಸವಿಪ ಕು । ಮಾರನ ನುಳಿದೆಮಗೆ ನೀಡಿದತಿಮಧುರತರಾ ‖ ಹಾರ ಮಿದೆಮ್ಮಯ ಗಂಟಲೊ । ಳೋರಂತಿಳಿವಪ್ಪುದೆ ತಂಗಿ ಕರೆ ತನುಭವನಂ ‖೭೫‖

ಕಂ‖ ಪೊಡವಿಯೊಳಾವೆಂ ಮಕ್ಕಳ । ಪಡೆವರಿಯವೆ ಪೆತ್ತ ಬಸಿರದೇಂತಿರ್ಪುದುಣ‖ ಲ್ಸಡಗರಿಪಣುಗಂಗೀಯದೆ । ಬೊಡಿಸಿದೆಯಕಟೆಮಗೆ ದಿವ್ಯಭೋಜನಮ ನಿದಂ ‖ ‖೭೬‖

ಕಂ ‖ ತನುಭವ ರಿಲ್ಲದ ಮನೆ ಕೆ । ಮ್ಮನೆ ಕೆಲದೊಳ್ಮಕ್ಕಳಿಲ್ಲದೂಟಂ ಕಾಟಂ ‖ ತನಯರ್ಕಳಿಲ್ಲದೈಸಿರಿ । ಕನಸಿನ ಸಿರಿ ಯೆಂದು ಬಲ್ಲರುಲಿಗು ಮಜಸ್ರಂ ‖ ... ‖೭೭‖

ವ ‖ ಎಂದಿಂದುಧರಂ ಕುವರನಳಿದುದ ನರಿಯದವನಂತೆ ನುಡಿಯೆ ನಿಂಬಯಕ್ಕಂ ನಕ್ಕು ‖ * * * * * * * * * * * * * * *

ಚಂ ‖ ಬಿಡು ಬಿಡು ದೇವ ನಿನ್ನ ಚಪಲತ್ವದ ತಕ್ಕಿನ ಮಾತ ನೆನ್ನೊಳೀ । ನುಡಿವ ಸರಕ್ಕೆ ಸಿಲ್ಕುವೆನೆ ನಿನ್ನಯ ಪಂಗಿನೊಳಿರ್ಪ ಬಾಳ್ವವಂ ‖ ಬಡಸಿರಿಯಾಳ್ವ ನಂತವನ

---

ತರುಣಿ- ಎಲೈ ಸ್ತ್ರೀಯೇ! ತನುಭವನ್- ಮಗನು, ಎಲ್ಲಿದಂ- ಎಲ್ಲಿರುವನೆ? ತಾಂ- ಆತನು, ಆಗಳೆ, ಪಸಿದು, ಬಂದು, ಈಮನೆಯೊಳಗೆ, ನಿನ್ನಂ, ಆಳ್ಕರಿಂ, ಕರೆದು, ಕೋಟಲೆಗೊಂಡಂ-ಮನೋವ್ಯಥೆಯಂಪೊಂದಿದನು; ಅವನಿಗೆ, ಭೋಜನಮಂ, ಇದುಏಕೆನೀಡೆ-ಇದೇತಕ್ಕೆ ನೀಡುವದಿಲ್ಲ? (ಜನಂ) ನಿನಗೆ, ಕಲ್ಲೆದೆತನಂ- ಕಲ್ಲಿನಂತೆ ಕಠಿಣವಾದ ಮನಸ್ಸು, ಎನ್ನದೊ- ಎನ್ನುವದಿಲ್ಲವೋ? ಲೋಕದೊಳ್, ಬಿದ್ದಿನರ್- ಔತಣದವರು, ಎಯ್ದೆ- ಬರಲು, ಮಕ್ಕಳ್, ಎಮಗೆ, ಒಳ್ಳುಣಿಸು- ಒಳ್ಳೆಯಊಟವು, ಅಪ್ಪುದು, ಎನುತ್ತೆ, ಅಭಿಲಾಷಿಪ್ಪುವಲ್ತೆ? ... ... ... ... ... ‖೭೪‖

ತಂಗಿ! ಆರೋಗಿಸಲ್- ಊಟವಮಾಡುವದಕ್ಕೆ, ಉತ್ಸವಿಪ- ಉತ್ಸವಪಡುವ, ಕುಮಾರನಂ,ಉಳಿದು- ಬಿಟ್ಟು, ಎಮಗೆ, ನೀಡಿದ, ಅತಿಮಧುರತರಾಹಾರಂ-ಅತ್ಯಂತ ರುಚಿಯುಳ್ಳ ಆಹಾರವು, ಇದು, ಎಮ್ಮಯ, ಗಂಟಲೊಳ್, ಓರಂತೆ- ಚೆನ್ನಾಗಿ, ಇಳಿದಪುದೆ? ತನುಭವನಂ, ಕರೆ. ... ... ‖೭೫‖

ಪೊಡವಿಯೊಳ್, ಆವ್, ಮಕ್ಕಳ್, ಪಡೆದು, ಅರಿಯೆವೆ- ತಿಳಿಯೆವೆ? ಪೆತ್ತ, ಬಸಿರ್- ಹೊಟ್ಟೆಯು, ಅದು, ಎಂತು, ಇರ್ಪುದು? ಉಣಲ್- ಊಟವ ಮಾಡುವದಕ್ಕೆ, ಸಡಗರಿಪ, ಅಣುಗಂಗೆ, ಈಯದೆ, ಎಮಗೆ, ಇದುಭೋಜನಮಂ, ಬೊಡಿಸಿದೆ, ಅಕಟ!! ... ... ... ‖೭೬‖

ತನುಭವರ್, ಇಲ್ಲದ, ಮನೆ; ಕೆಮ್ಮನೆ- ಬರಿದಾದದ್ದು; ಕೆಲದೊಳ್- ಪಾರ್ಶ್ವದಲ್ಲಿ, ಮಕ್ಕಳ್, ಇಲ್ಲದ, ಊಟಂ, ಕಾಟಂ- ನಿರ್ಬಂಧದಿಂದಾದದ್ದು; ತನಯರ್ಕಳ್, ಇಲ್ಲದ, ಐಸಿರಿ- ಐಶ್ವರ್ಯವು, ಕನಸಿನ, ಸಿರಿ- ಸಂಪತ್ತು, ಎಂದು, ಬಲ್ಲರ್- ತಿಳಿದವರು, ಅಜಸ್ರಂ- ಯಾವಾಗಲೂ, ಉಲಿಗುಂ- ಕೂಗುವರು. ‖೭೭‖

ಎಂದು, ಇಂದುಧರಂ, ಕುವರನು, ಅಳಿದುದಂ, ಅರಿಯದವನಂತೆ, ನುಡಿಯೆ, ನಿಂಬಿಯಕ್ಕಂ, ನಕ್ಕು. *

ದೇವ! ನಿನ್ನ, ಚಪಲತ್ವದ, ತಕ್ಕಿನ- ಮೋಸದ, ಮಾತಂ, ಎನ್ನೊಳ್, ಬಿಡು, ಬಿಡು, ಈನುಡಿವ ಸರಕ್ಕೆ- ಈ ಮಾತುಗಳ ಸಮೂಹಕ್ಕೆ, ಸಿಲ್ಕುವೆನೆ? ನಿನ್ನಯ, ಪಂಗಿನೊಳ್- ಹಂಗಿನಲ್ಲಿ, ಇದೆ, ಬಾಳ್ವವಂ- ಬದುಕುವವನು, ಬಡಸಿರಿಯಾಳ್ವಂ; ಅಂತು, ಅವನ, ವಾಕ್ಯದೊಳ್- ರೀತಿಯಿಂದ, ಎನ್ನಂ, ಅದೇಕನೋ

ಮಾಳ್ಕೆಯೊಳೆನ್ನ ನಡೇಕೆ ನೋಡುವಯ್ । ಜಡಮತಿ ಯಲ್ತೆನುತ್ತೆ ತಿಳಿ ಭಕ್ತರ ಸಿಂಬಿ
ಯ ನೈದೆ ನಿಂಬಿಯುಂ ॥ ... ... ... ... ... ॥೮೮॥

ಕಂ ॥ ಪಸುಳೆಯ ವಧಿಸುವ ಬರಿಸುವ । ಗಸಣಿಗ ಳೇಕೆಮಗೆ ದೇವ ನೀಂ ನೀವ ಸ
ಮು ॥ ಲ್ಲಸಿತರಜತಾಚಲವ ನ । ರ್ಥಿಸೆ ನಾಂ ನೀಂ ನುಂಡಲೊಲ್ಲ ವಡಿಯಿಡಲೀಯೆಂ ॥೮೯॥

ಮತ್ತೇ ॥ ನಿಮಗಾಂ ನೇಮಿಸಿ ಮಾಡಿದನ್ನಮ ನುಮೇಶದ್ರೋಹಿ ಕಳ್ದುಂಡ ಪಾ ।
ಪಮ ತದ್ದ್ರೋಹಿಯ ನಿಕ್ಕಿದತ್ತವನ ಪಂಬಲ್ಬೇಡ ಮಾಯಾವಿಭಾ ॥ ವಮ ನಾದಂ ಬಿ
ಡು ಭುಂಜಿಸೆಂದುಸಿರೆ ತದ್ವಾಕ್ಯಂಗಳಂ ಕೇಳ್ದು ನ । ಟ್ಟ ಮದಂಗೆಟ್ಟತಿಭೀತಿವಟ್ಟು ತಲೆ
ವಾಗಿರ್ದಂ ಮಹಾಲಜ್ಜೆಯಿಂ ॥ ... .. ... ... ॥೯೦॥

ವ ॥ ಆಗಳುಮಾರಮಣ ನವಳ ವಿರಕ್ತಿಭಾವಕ್ಕೆ ಮೆಚ್ಚಿ ಮನಂದಂದು ॥ * *

ಕಂ ॥ ಕೊರಲಕರೆ ಶಿರದಪೆರೆ ಪೇ । ರುರದಹಿಪತಿ ನೊಸಲಕಣ್ಕರಾಗ್ರದಶೂಲಂ ॥
ಪರಶು ಪದೆದುಟ್ಟ ಚರ್ಮಾಂ । ಬರ ಮರೆಯೊಡಲಸಿಯ ಳೆಸೆಯೆ ಮೆರೆದಂ ಗಿರಿಶಂ ॥೯೧॥

ವ ॥ ಅಂತು ಶಿವಂ ಪ್ರಸನ್ನನಾಗೆ ನಿಂಬಿಯಕ್ಕಂ ಕಂಡು ಮುಗುಳ್ನಗೆನಕ್ಕು ॥ *

ಚಂ॥ ಎಲೆಯೆಲೆ ದೇವ ನಿನ್ನ ವಿಕಟಾಕೃತಿ ಸಾಲ್ಗು ಮಿದೇಕೆ ಬಲ್ಲರು । ಜ್ಜ್ವಲಗುಣ
ಮೇ ವಿಚಾರಿಸುವ್ರೊಡಿಂತಿದು ದೇಹಕೆ ಜೀವ ಮಾನಿರಾ॥ ಕುಲತರಜೀವಕಂ ಗಮೆನಿಸಿರ್ದು ಭ

---

ಡುವಯ್ ? ಭಕ್ತರ್ಸಿಂಬಿಯುಂ- ಆಶ್ರಯುಳ್ಳಾದ, ನಿಂಬಿಯುಂ, ಜಡಮತಿ- ಮೂಢಬುದ್ಧಿಯುಳ್ಳವಳು, ಅಲ್ತು; ಎನುತ್ತೆ, ಎದೆ-ಚೆನ್ನಾಗಿ, ತಿಳಿ. ... ... ... ... ॥೮೮॥

ಪಸುಳೆಯ- ಮಗುವನ್ನು, ವಧಿಸುವ- ಕೊಲ್ಲುವ, ಬರಿಸುವ- ಬರಮಾಡುವ, ಗಸಣಿಗಳ್- ತಂಟಗಳು, ಎಮಗೆ, ಏಕೆ ? ದೇವ! ನೀಂ, ಈವ, ಸಮುಲ್ಲಸಿತರಜತಾಚಲಮುಂ- ಪ್ರಕಾಶಿಸುವ ಬೆಳ್ಳಿಯ ಬೆಟ್ಟವನ್ನು, ಅರ್ಥಿಸೆಂ- ಬೇಡುವದಿಲ್ಲ; ನೀಂ, ಉಂಡೊಡೆಅಲ್ಲದೆ- ಉಂಡಹೊರತು, ಆಂ, ಬಿಡಲ್‌ಈಯೆಂ- ಬಿಡಗೊಡುವದಿಲ್ಲ. ... ... ... ... ... ॥೮೯॥

ನಿಮಗೆ, ನೇಮಿಸಿ, ಆಂ, ಮಾಡಿದ ಅನ್ನಮಂ, ಉಮೇಶದ್ರೋಹಿ- ಶಿವದ್ರೋಹಿಯಾದವನು, ಕಳ್ದು- ಕದ್ದು, ಉಂಡ, ಪಾಪಮಂ, ತದ್ದ್ರೋಹಿಯುಂ, ಇಕ್ಕಿದತ್ತು- ಹೊಡೆಯಿತು, ಅವನ, ಪಂಬಲ್- ಹಂಬಲು, ಬೇಡ, ಮಾಯಾವಿಭಾವಮುಂ- ಕಪಟತ್ವವನ್ನು, ಆದಂ- ಅತ್ಯಂತವಾಗಿ, ಬಿಡು; ಭುಂಜಿಸು, ಎಂದು, ಉಸಿರೆ, ನೆಟ್ಟ, ತದ್ವಾಕ್ಯಂಗಳಂ, ಕೇಳ್ದು ,ಮದಂಗೆಟ್ಟು- ಗರ್ವಹೀನನಾಗಿ, ಅತಿಭೀತಿವಟ್ಟು, ಮಹಾಲಜ್ಜೆಯಿಂ- ಬಹಳನಾಚಿಕೆಯಿಂದ, ತಲೆವಾಗಿ- ತಲೆಯಂ ಬಗ್ಗಿಸಿ, ಇರ್ದಂ. ... ... ॥೯೦॥

ಆಗಳ್, ಉಮಾರಮಣಂ, ಅವಳ, ವಿರಕ್ತಭಾವಕ್ಕೆ- ಇಚ್ಛಾರಹಿತತ್ವಕ್ಕೆ, ಮೆಚ್ಚಿ, ಮನಂದಂದು.

ಕೊರಲ, ಕರೆ- ಕಪ್ಪು; ಶಿರದ, ಪೆರೆ- ಚಂದ್ರ;ಪೇರುರದ- ದೊಡ್ಡವಕ್ಷಸ್ಥಲದಲ್ಲಿರುವ, ಅಹಿಪತಿ, ಆದಿಶೇಷ; ನೊಸಲ, ಕಣ್; ಕರಾಗ್ರದ, ಶೂಲಂ, ಪರಶು- ಕೊಡಲಿ; ಪದೆದು, ಉಟ್ಟ, ಚರ್ಮಾಂಬರಂ- ಅರೆಯೊಡಲ- ಅರ್ಧಶರೀರದಲ್ಲಿರುವ, ಅಸಿಯಳ್- ಸ್ತ್ರೀಯು, ಎಸೆಯೆ, ಗಿರಿಶಂ, ಮೆರೆದಂ. ... ॥೯೧॥

ಅಂತು, ಶಿವಂ, ಪ್ರಸನ್ನಂ, ಆಗೆ, ನಿಂಬಿಯಕ್ಕಂ, ಕಂಡು, ಮುಗುಳ್ನಗೆನಕ್ಕು. * * * *

ಎಲೆಯೆಲೆದೇವ ! ನಿನ್ನ, ವಿಕಟಾಕೃತಿ- ಮಾಯಾಕಾರವು, ಸಾಲ್ಗುಂ- ಸಾಕು; ಇದು, ಏಕೆ? ವಿಚಾರಿಸುವೊಡೆ, ಇಂತು- ದೇಹಕ್ಕೆ, ಜೀವಂ; ಅನಿರಾಕುಲತರಜೀವಕೆ- ನಿಶ್ಚಂಚಲವಾದಶರೀರಕ್ಕೆ,ಅಂಗಂ; ಎನಿಸಿ, ಇರ್ದು; ಉಭಯನಾಭಿಲಿಂಗಜಂಗಮಾರ್ಗಲಕ್ಷಣಮಂ- ಎರಡು ಹೆಸರುಗಳುಳ್ಳ ಲಿಂಗಜಂಗಮರ ಶ್ರೇಷ್ಠವಾದ

ಯಾಭಿಧಲಿಂಗಜಂಗಮಾರ್ಗ್ಗಲತನುವಂ ಬಿಸುಟ್ಟು ಪೊಸತೊಂದುಕಲೇವರಮಾಂಪವಿಭ್ರಮಂ॥

ಮತ್ತೇ ॥ ಮೊಲೆವಾಲೊಗ್ಗೊಳ್ವೆನೆನುತ್ತೆ ರೋದಿಪ ತನೂಜಾತಂಗೆ ಪಿಣ್ಯಾಕಮಂ ಜುಲಪಿಂಡಂಗೊಡುತ್ತೈದೆ ತನ್ನ ಮೊಲೆಯಂ ತಾಯ್ವಂಚಿಪಂತೀಗಳೀ ॥ ನಿಲವಂ ಕಾಣಿಸಿ ಭಕ್ತಿಯಂ ಮರಪಿಡುತ್ತಂ ಜಾಣ್ಮೆಯಿಂ ಜಾರಲಿಂ । ದೆಲೆ ನೀನಿರ್ಪ್ಪವೆ ನಿನ್ನ ಮಾಯೆಗೊಳಗಾಗೆಂ ಬಲ್ಲೆ ನಾನೆಲ್ಲಮಂ ॥ ... ... ... ... .. ॥೯೩॥

ಚಂ ॥ ಬೆದರದಿರಯ್ಯ ಬಿನ್ನಣ ಮದೇಂ ಬಿಡು ನಿನ್ನಯ ಮುನ್ನಿನಂದಮಂ । ಮದನವಿರೋಧಿ ಬೇರ್ಪಡಿಸಿ ನೋಡಿದೆನೇ ನಯನತ್ರಯಾಗ್ರದೇ ॥ ಶದೊಳ್ ಒಗೆದಿರೊಡ್ಡಂ ತ್ರಿಣಯನಂ ನಯನತ್ರಯ ಮಿಲ್ಲದಿರೊಡ್ಡಂ । ವಿದಿತಗುರೂಪದೇಶ ಮಳವಟ್ಟರೊಳೀಕ್ಷಿಸೆ ಭೇದ ಮಾವುದೊ ॥ ... ... ... ... ... ॥೯೪॥

ಉ ॥ ದಾಸನವಸ್ತ್ರದಾನದೆಡೆ ಗಾವಹಿಭೂಷಣಮಾಂತು ಪೋದೆ ನೀಂ । ಭಾಸುರಗುಂಡಯಂಗೆ ನವಯೌವನಮಂ ಕುಡಲಾವಚಂದ್ರನಂ ॥ ಲೇಸೆನೆ ಸೂಡುತೆಯ್ದಿದೆ ಕಚೌಘಮನರ್ತ್ಥಿಸೆ ಮಾನಕಂಜಧಾ । ತ್ರೀಸುದತೀಶನಿರ್ದ್ದೆಡೆಗದಾವಗನಂದನೆಗೂಡಿ ಬಂದೆ ಪೇಳ್ ॥ ... ... ... ... ... ... ॥೯೫॥

---

ಶರೀರವನ್ನು, ಬಿಸುಟ್ಟು, ಪೊಸತೊಂದುಕಲೇವರಮಾಂಪ- ಹೊಸದೊಂದು ಶರೀರವನ್ನು ಹೊಂದುವ, ಇದು ವಿಭ್ರಮಂ-ಈ ವಿಲಾಸವು, ಬಲ್ಲರ- ತಿಳಿದವರ, ಉಜ್ಜ್ವಲಗುಣಮೇ ಮನೋಹರವಾದಗುಣವೇ? ॥೯೨॥

ಮೊಲೆವಾಲೊಗ್ಗೊಳ್ವೆಂ- ಮೊಲೆಯಲ್ಲಿರುವ ಹಾಲನ್ನು ಸ್ವೀಕರಿಸುವೆನು, ಎನುತ್ತೆ; ರೋದಿಪ, ತನೂಜಾತಂಗೆ, ತಾಯ್, ಪಿಣ್ಯಾಕಮಂಜುಳಪಿಂಡಂಗುಡುತೆ- ಪಿಣ್ಯಾಕ- ಹಿಂಗಿನಿಂದ, ಮಂಜುಲ- ಮನೋಹರವಾದ, ಪಿಂಡಂಗುಡುತೆ- ಉಂಡೆಯಂ ಕೊಡುತ್ತ, ಐದೆ, ತನ್ನಮೊಲೆಯಂ, ವಂಚಿಪಂತೆ, ಈಗಳ್ ಎಲೆ! ನೀಂ ಈ ನಿಲವಂ- ಈಸ್ಥಿತಿಯನ್ನು, ಕಾಣಿಸಿ, ಭಕ್ತಿಯಂ, ಮರಪಿಡುತ್ತಂ- ಮರೆಮಾಡುತ್ತ, ಜಾಣ್ಮೆಯಿಂ- ಜಾಣತನದಿಂದ, ಜಾರಲ್ಎಂದು- ನುಣುಚಿಕೊಳ್ಳಬೇಕೆಂದು, ಇರ್ದ್ದಪೆ- ಇರುವೆ; ಆಂ, ನಿನ್ನ, ಮಾಯೆಗೆ, ಒಳಗಾಗೆಂ; ಎಲ್ಲಮಂ, ಬಲ್ಲೆಂ. ... ... ... ... ... ॥೯೩॥

ಅಯ್ಯ ! ಬೆದರದೆ, ಇರ್; ಅದು, ಬಿನ್ನಣಂ- ಠಾಳಿಯು, ಏಂ ? ಬಿಡು; ಮದನವಿರೋಧಿ! ನಿನ್ನಯ ಮುನ್ನಿನ, ಅಂದಮಂ, ಬೇರ್ಪಡಿಸಿ- ಬೇರೆಯಾಗಿ, ನೋಡಿದೆನೇ ? ನಯನತ್ರಯಾಗ್ರದೇಶದೊಳ್- ಮೂರು ಕಣ್ಣುಗಳ ಮೇಲ್ಗಡೆಯಲ್ಲಿ, ತ್ರಿಣಯನಂ- ಮೂರುಕಣ್ಣುಗಳು, ಒಗೆದು- ಹುಟ್ಟಿ, ಇರೊಡ್ಡಂ, ನಯನತ್ರಯಂ, ಇಲ್ಲದೆ, ಇರೊಡ್ಡಂ, ವಿದಿತಗುರೂಪದೇಶಂ- ಪ್ರಸಿದ್ಧವಾದ ಗುರುಬೋಧೆಯು, ಅಳವಟ್ಟರೊಳ್- ನೆಲೆಗೊಂಡಿರುವರಲ್ಲಿ, ಈಕ್ಷಿಸೆ, ಆವುದೊಭೇದಂ- ಭೇದವೇನು ? ... ... ॥೯೪॥

ನೀಂ, ದಾಸನ- ಜೇಡರ ದಾಸಯ್ಯನ, ವಸ್ತ್ರದಾನದ- ಬಟ್ಟೆಯನ್ನುಕೊಡುವ, ಎಡೆಗೆ- ಸ್ಥಲಕ್ಕೆ, ಆವಹಿಭೂಷಣಮಾಂತು- ಯಾವ ಸರ್ಪದ ಆಭರಣವನ್ನು ಹೊಂದಿ, ಪೋದೆ? ಭಾಸುರಗುಂಡಯಂಗೆ, ನವಯೌವನಮಂ, ಕುಡಲ್- ಕೊಡುವದಕ್ಕೆ, ಲೇಸುಎನೆ, ಆವಚಂದ್ರನ, ಸೂಡುತೆ- ಧರಿಸುತ್ತ, ಎಯ್ದಿದೆ ? ಕಚಾಘಮಂ- ಕೇಶಸಮೂಹವನ್ನು ಅರ್ತ್ಥಿಸೆ- ಬೇಡಲು, ಮಾನಕಂಜಧಾತ್ರೀಸುದತೀಶಂ- ಮಾನಕಂಜರಾಜನು, ಇರ್ದ್ದ, ಎಡೆಗೆ, ಅದು ಆವಅಗನಂದನೆಗೂಡಿ- ಯಾವ ಪಾರ್ವತಿಯೊಡನೆಕೂಡಿ, ಬಂದೆ ? ಪೇಳ್॥ ॥೯೫॥

---

* ( ಅವ ) ಅಗ- ಸಂಚಲಿಸದಿರುವ ಪರ್ವತದ, ನಂದನೆ- ಪುತ್ರಿಯು. ... ॥೯೫॥

ಮ॥ಸ್ರ॥ ನಲವಿಂದಂ ಸಿಂಧುಬಲ್ಲಾಳನ ನವವಧುವಂ ಬೇಡುವಂದಾವ ಹಾಲಾ।ಹಲಮಂ ತಾಳ್ದಿರ್ದ್ದ ಯೆ ಭೋಗಿಯನಮನೆಗೆ ಪೇಳಾವನೋ ವಾಗ್ನಿ ಸೂರ್ಯೋ॥ ಜ್ಜ್ವಲನೇತ್ರಂಬೆತ್ತು ಬೇಗಂ ತಳರ್ದ್ದ ಯರರೆ ಮೇಣ್ಸಾಮವೇದಂ ದ್ವಿಜಂ ಮಾ। ಳ್ಪ ಲಸದ್ಯಜ್ಞಕ್ಕೆ ನೀನಾವಸವಮೃಷಭನಾರೋಹಣಂಗೆಯ್ದು ಪೋದಯ್ ॥ ... ... ॥೯೬॥

ಕಂ॥ ತಳೆದಾವ ಚತುರ್ಭುಜಮಂ। ಘುಳಲನೆ ಪಿಟ್ಟವ್ವೆಯೆಡೆಗೆ ಗಮಿಸಿದೆ ಪೇಳ್ಬಾಂ॥ಬೊಳೆಯ ನದಾವ್ರವ ನಾಳ್ದು। ಜ್ಜ್ವಳಿಸುತೆ ಸಿರಿಯಾಳ್ವನಂಗಣಕ್ಕಡಿಯಿಟ್ಟಯ್ ॥೯೭॥

ಕಂ॥ ನಿನ್ನ ನವರ್ಮನ್ನಿಸರೆ ಮ। ಹೋನ್ನತಮಹಿಮರ್ಕಳವರ ಗೃಹದಾಸಿ ಯೆನಿ॥ ಪ್ಪೆನ್ನೊಡ ನಿದೇಕೆ ನಿನ್ನಯ। ಗನ್ನಂ ಬಿಡುಬಿಡು ಭವಚ್ಚಮತ್ಕೃತಿಯೊಳ್ಪಂ ॥೯೮॥

ಕಂ॥ ಎನ್ನಾಣೆ ನಿನಗೆ ಕೇಳೆಲೆ। ಪನ್ನಗಧರ ಭುಂಜಿಸೆಂಬ ಭಕ್ತೆಯ ನುಡಿಗೇ॥ ಶಂನಗುತೆ ನಲಿದು ಮಚ್ಚುತೆ। ಮನ್ನಿಸಿ ಚಿರುತೊಂಡಯುಕ್ತ ನಾರೋಗಿಸಿದಂ ॥ ॥೯೯॥

ವ॥ ಅಂತಾರೋಗಿಸಿದ ಭವಂಗ ಮಾಚಿರುತೊಂಡಮಾಹೇಶ್ವರಂಗಂ ಕರ್ಪೂರತಾಂಬೂಲಮಂ ಸಮರ್ಪಿಸಿ ಪರಮಾನಂದಂಬಡೆದಾಡಿ ಪಾಡಿ ಪುತ್ರನಿಸ್ಪೃಹೆ ಸಂಭ್ರಮಂಬಡೆದಿರೆ ಶಂಭು ತನ್ನಿಂಬಿಯ ನಭೀಕ್ಷಿಸಿ ಮುದಂಬೆತ್ತು ಸೆಟ್ಟಿಗಿಂತೆಂದಂ ॥ * * * *

ನಲವಿಂದಂ- ಸಂತೋಷದಿಂದ, ಸಿಂಧುಬಲ್ಲಾಳನ, ನವವಧುವಂ- ಹೊಸ ಹೆಂಡತಿಯನ್ನು, ಬೇಡುವಂದು, ಆವಹಾಲಾಹಲಮಂ- ಯಾವ ವಿಷವನ್ನು, ತಾಳ್ದು, ಎಯ್ದಿದಯ್ ? ಭೋಗಯನ, ಮನೆಗೆ, ಆವನೋವಾಗ್ನಿಸೂರ್ಯೋಜ್ಜ್ವಲನೇತ್ರಂಬೆತ್ತು, ಬೇಗಂ, ತಳರ್ದೆ ? ಪೇಳ್, ಅರರೆ ! ಮೇಣ್, ಸಾಮವೇದಂದ್ವಿಜಂ, ಮಾಳ್ಪ, ಲಸದ್ಯಜ್ಞಕ್ಕೆ, ನೀಂ, ಆವಅಸವಂವೃಷಭನ, ಆರೋಹಣಂಗೆಯ್ದು, ಪೋದಯ್? ... ... ... ... ... ॥೯೬॥

ಆವಚತುರ್ಭುಜಮಂ- ಯಾವನಾಲ್ಕು ತೋಳುಗಳನ್ನು, ತಳೆದು, ಪಿಟ್ಟವ್ವೆಯ ಎಡೆಗೆ, ಘುಳಲನೆ- ಬೇಗನೆ, ಗಮಿಸಿದೆ- ಹೋದೆ ? ಪೇಳ್; ಅದಾವುದಂಬಾಂಬೊಳೆಯಂ- ಅದುಯಾವ ಆಕಾಶಗಂಗೆಯನ್ನು, ಆಳ್ದು, ಉಜ್ಜ್ವಳಿಸುತೆ- ಪ್ರಕಾಶಿಸುತ್ತ, ಸಿರಿಯಾಳ್ವನ, ಅಂಗಣಕ್ಕೆ- ಗೃಹಪ್ರದೇಶಕ್ಕೆ, ಅಡಿಯಿಟ್ಟಯ್- ಪಾದವನ್ನಿರಿಸಿದೆ ? ... ... ... ... ... ॥೯೭॥

ಅವರ್ಮಹೋನ್ನತಮಹಿಮರ್ಕಳ್- ಆ ಅತ್ಯಂತೋತ್ಕೃಷ್ಟವಾದ ಮಹತ್ವವುಳ್ಳವರುಗಳು, ನಿನ್ನಂ, ಮನ್ನಿಸರೆ- ಮರ್ಯಾದಿಸಲಿಲ್ಲವೇ ? ಅವರ. ಗೃಹದಾಸಿ- ಮನೆಯ ಗೌಡಿಯು, ಎನಿಪ್ಪ, ಎನ್ನೊಡನೆ, ನಿನ್ನಯ, ಇಪುಗನ್ನಂ- ಈ ಮರೆಮಾಚುವಿಕೆಯು, ಏಕೆ ? ಭವಚ್ಚಮತ್ಕೃತಿಯ-ನಿನ್ನ ಚಮತ್ಕಾರದ, ಒಳ್ಪಂ- ಸಾಮರ್ಥ್ಯವನ್ನು, ಬಿಡು, ಬಿಡು. ... ... ... ... ॥೯೮॥

ಎಲೆಪನ್ನಗಧರ! ಕೇಳ್, ನಿನಗೆ, ಎನ್ನ, ಆಣೆ; ಭುಂಜಿಸು- ಊಟವಂ ಮಾಡು; ಎಂಬ, ಭಕ್ತೆಯ, ನುಡಿಗೆ, ಶಂಕರಂ, ನಗುತೆ, ನಲಿದು- ಸಂತೋಷಪಟ್ಟು, ಮಚ್ಚುತೆ- ಶ್ಲಾಘಿಸುತ್ತ; ಮನ್ನಿಸಿ-ಗೌರವಿಸಿ, ಚಿರುತೊಂಡಯುಕ್ತಂ- ಸಿರಿಯಾಳಸಮೇತನಾಗಿ, ಆರೋಗಿಸಿದಂ- ಭುಂಜಿಸಿದನು. ... ॥೯೯॥

ಅಂತು, ಆರೋಗಿಸಿದ, ಅಭವಂಗಂ, ಆಚಿರುತೊಂಡಮಾಹೇಶ್ವರಂಗಂ,ಪುತ್ರನಿಸ್ಪೃಹೆ- ಮಗನಲ್ಲಿ ಆಸೆಯಿಲ್ಲದಿರುವ ನಿಂಬಿಯಕ್ಕನು, ಕರ್ಪೂರತಾಂಬೂಲಮಂ- ಪಚ್ಚಕರ್ಪೂರದಿಂ ಕೂಡಿದ ವೀಳಯವನ್ನು, ಸಮರ್ಪಿಸಿ, ಪರಮಾನಂದಂಬಡೆದು, ಆಡಿ, ಪಾಡಿ, ಸಂಭ್ರಮಂಬಡೆದು, ಇರೆ, ಶಂಭು, ತನ್ನಿಂಬಿಯಂ, ಅಭೀಕ್ಷಿಸಿ, ಮುದಂಬೆತ್ತು- ಸಂತೋಷವಂಹೊಂದಿ, ಸೆಟ್ಟಿಗೆ, ಇಂತು, ಎಂದಂ. * * * * * * *

ಉತ್ಸಾಹವೃತ್ತಂ ॥ ಅಂದು ಚಂಡಕಾಟಕೋಟರೆಂಬ ಭಕ್ತಪುಂಗವ । ರ್ಕೊಂದರ ಲ್ತೆ ಸಾಪರಾಧರಾದತಂದೆಯಂ ಕನ ॥ ಲ್ದಿಂದು ನಿಂಬಿ ಮತ್ಕೃತಾಪರಾಧನಾದ ಪುತ್ರನಂ । ನಿಂದೆಗೆಯ್ವು ತಿಕ್ಕಿ ಮಿಕ್ಕಳೀಮಹೀತಳಾಗ್ರದೊಳ್ ॥ ... ... ॥೧೧॥

ವ ॥ ಅಂತುಮಲ್ಲದೆಯುಂ ॥ ಉ ॥ ದ್ರಾವಿಡದೇಶದಲ್ಲಿ ನರಸಿಹ್ಮನರಾಧಿಪ ನೆಂಬ ಭಕ್ತ । ನುರ್ವೀವಧುಗಾಣ್ಮನಾಗಿ ಸಲೆ ಸದ್ಗುಣದೇಳ್ಗೆಯಿಂ ನೊಪ್ಪುತಿರ್ದ್ದನೊ ॥ ಲ್ದಾವಿಭುವಿಂಗೆ ಸಾರಸುಖದಾಯಿನಿ ವಿಶ್ರುತದಿವ್ಯರೂಪೆ ಶೋ । ಭಾವತಿ ಭಾಮೆ ರಂಜಿಸವಳಾ ಳ್ನಗಳ್ದುಂದುದಿನಂ ವಿಳಾಸದಿಂ॥ .. ... ... ... ॥೧೮॥

ಮಹಾಸ್ರ ॥ ನಡೆತಂದೋರಂತೆ ಬಾಹೂರೆನಿಪ ಪುರದ ಭಾಳೇಕ್ಷಣಂಗರ್ಚ್ಚನಂಗೆ । ಯ್ದೊಡ ನಲ್ಲಿಂದೇಳ್ತರುತ್ತಂದಿದಿರೊಳಸವಸಂ ಶಂಭುಗೆಂದಿರ್ದ್ದ ನೈದಿ ॥ ಲ್ವಿಡಿವೂವಂ ಪಾಣಿಯಿಂದಂ ತೆಗೆದು ನೆಗಪುತಂ ಘ್ರಾಣಿಸುತ್ತಿರ್ಪ್ಪದುಂ ತ । ಮ್ಮಡಿ ಕಂಡಾಕ್ಷೇಪದಿಂ ಮೂಗರಿದ ನವಳ ನಾವೇಳೆಯೊಳ್ಚೇಟಿಯರ್ಕಳ್ ॥ ... ... ... ॥೧೩॥

ಮ ॥ ಪರಿತಂದಾನರಪಂಗೆ ಕೇಳರಸ ನಿನ್ನರ್ದ್ಧಾಂಗಿ ಗೌರೀಶಮಂ । ದಿರದಿಂದೇಳ್ತರುತೊಂದಲರ್ದ್ವೆಗೆದು ಗಂಧಾಸ್ವಾದನಂಗೆಯ್ಯೆ ಶಂ ॥ ಕರಪೂಜಾರ್ಹದ ಪುಷ್ಪಮಂ ತೆಗಪುದೀ

---

ಅಂದು- ಪೂರ್ವದಲ್ಲಿ, ಚಂಡಕಾಟಕೋಟರ್- ಚಂಡನು ಕಾಟಕೋಟನು, ಎಂಬ, ಭಕ್ತಪುಂಗವರ್- ಭಕ್ತಶ್ರೇಷ್ಠರು, ಕನಲ್ದು- ಕೋಪಿಸಿ, ಸಾಪರಾಧರಾದ- ತಪ್ಪಿನಿಂ ಕೂಡಿದ, ತಂದೆಯಂ, ಕೊಂದರ್‌ಅಲ್ತೆ- ಸಾಯಿಸಲಿಲ್ಲವೇ ? ಇಂದು, ನಿಂಬಿ, ಮತ್ಕೃತಾಪರಾಧಂ- ನನಗೆ ತಪ್ಪಂ ಮಾಡಿದವನು, ಆದ, ಪುತ್ರನಂ, ನಿಂದೆಗೆಯ್ವುತೆ, ಇಕ್ಕಿ- ಹೊಡೆದು, ಮಹೀತಳಾಗ್ರದೊಳ್, ಮಿಕ್ಕಳ್- ಅಧಿಕಳಾದಳು. ... ॥೧೧॥

## ನರಸಿಹ್ಮರಾಜನ ಕಥೆ.

ದ್ರಾವಿಡದೇಶದಲ್ಲಿ, ನರಸಿಹ್ಮನರಾಧಿಪಂ- ನರಸಿಹ್ಮರಾಜನು, ಎಂಬ, ಭಕ್ತಂ, ಉರ್ವೀವಧುಗೆ-ಭೂಕಾಂತೆಗೆ, ಆಣ್ಮಂ- ಪತಿಯು, ಆಗಿ, ಸಲೆ, ಸದ್ಗುಣದ, ಏಳ್ಗೆಯಿಂ, ಒಪ್ಪುತ್ತೆ, ಇರ್ದ್ದಂ, ಆವಿಭುವಿಂಗೆ, ಒಲ್ದು,ಸಾರಸುಖದಾಯಿನಿ- ಶ್ರೇಷ್ಠವಾದ ಸೌಖ್ಯವನ್ನು ಕೊಡುವ, ವಿಶ್ರುತದಿವ್ಯರೂಪೆ- ಪ್ರಸಿದ್ಧವಾಗಿ ಶ್ರೇಷ್ಠವಾದ ಸೌಂದರ್ಯವುಳ್ಳ, ಶೋಭಾವತಿಭಾಮೆ- ಶೋಭಾವತಿಯೆಂಬ ಪತ್ನಿಯು, ರಂಜಿಪಳ್, ಅವಳ್, ನಗಳ್ದ- ಪ್ರಸಿದ್ಧಳಾಗಿ, ಒಂದುದಿನಂ, ವಿಳಾಸದಿಂ- ಲೀಲೆಯಿಂದ. * * * * * * * * * *

ನಡೆತಂದು, ಓರಂತೆ- ಮನೋಹರವಾಗಿ, ಬಾಹೂರ್, ಎನಿಪ, ಪುರದ- ಪಟ್ಟಣದಲ್ಲಿರುವ, ಭಾಳೇಕ್ಷಣಂಗೆ- ಈಶ್ವರನಿಗೆ, ಅರ್ಚ್ಚನಂಗೆಯ್ದು- ಪೂಜೆಯನ್ನುಮಾಡಿ, ಒಡನೆ- ಕೂಡಲೇ, ಅಲ್ಲಿಂದೆ, ಏಳ್ತರುತ್ತಂ, ಅಂದು, ಇದಿರೊಳ್, ಶಂಭುಗೆಂದು- ಶಿವನಿಗೋಸ್ಕರವೆಂದು, ಇರ್ದ- ಇಟ್ಟಿದ್ದ, ನೈದಿಲ್‌ಪಿಡಿವೂವಂ- ಹಿಡಿದು ಕೊಳ್ಳುವದಕ್ಕೆ ಅನುಕೂಲವಾಗಿ ತೊಟ್ಟುಳ್ಳ ನೈದಿಲೆಯ ಹೂವನ್ನು, ಅಸವಸಂ- ಶೀಘ್ರವಾಗಿ, ಪಾಣಿಯಿಂದಂ, ತೆಗೆದು, ನೆಗಪುತಂ- ಮೇಲಕ್ಕೆತ್ತುತ್ತ, ಘ್ರಾಣಿಸುತ್ತೆ, ಇರ್ಪ್ಪದುಂ- ಇರಲು, ತಮ್ಮಡಿ- ಪೂಜಕನು, ಕಂಡು, ಆಕ್ಷೇಪದಿಂ- ನಿಂದಿಸುವಿಕೆಯಿಂದ, ಅಥವಾ ಬೆದರಿಸುವಿಕೆಯಿಂದ, ಅವಳ, ಮೂಗರಿದಂ- ಮೂಗನ್ನು ಕತ್ತರಿಸಿದನು; ಆವೇಳೆಯೊಳ್, ಚೇಟಿಯರ್ಕಳ್- ಸಖಿಯರುಗಳು. ... ॥೧೩॥

ಪರಿತಂದು, ಆನರಪಂಗೆ- ಆ ನರಸಿಹ್ಮರಾಜನಂ ಕುರಿತು, ಅರಸ! ಕೇಳ್; ನಿನ್ನ, ಅರ್ದ್ಧಾಂಗಿ- ಹೆಂಡತಿಯು, ಗೌರೀಶಮಂದಿರದಿಂದೆ- ಶಿವದೇವಸ್ಥಾನದಿಂದ, ಏಳ್ತರುತೆ- ಬರುತ್ತ, ಒಂದರಲ್ದೆಗೆದು- ಒಂದು ಹೂವನ್ನು ತೆಗೆದುಕೊಂಡು, ಗಂಧಾಸ್ವಾದನಂಗೆಯ್ಯೆ- ಪರಿಮಳವಂ ಸ್ವೀಕರಿಸಲು, ತಮ್ಮಡಿ, ಶಂಕರಪೂಜಾರ್ಹ

ನೀಂ ನೊಂದು ಕಾಯ್ಪಿಂದೆ ಮೂ | ಗರಿದಂ ತಮ್ಮಡಿ ನಿನ್ನ ನಲ್ಲಳ ನೆನುತ್ತಂ ಪೇಳೆ ಕೇಳ್ದುರ್ವಿಪಂ || ... ... ... ... ... ... ||೧೦೩||

ಚಂ|| ಹರಹರ ನೀತಿದಪ್ಪಿ ಕೊರೆದಂಗಡ ಮೂಗ ನೆನುತ್ತೆ ಬೇಗದಿಂ| ಬರಿಸಿ ಮಹೇಶಪೂಜಕನ ನೆಂದ ನಿದೇಂ ಪ್ರಥಮಾಪರಾಧಿ ಕೈ || ಯಿರೆ ಕಡಿದಿಕ್ಕದಿಂತು ಕಡೆದಪ್ಪನೊಡರ್ಚಿದಮೂಗನೇನೆ ಕತ್ತರಿಸಿದೆ ನೀನೆನುತ್ತೆ ತೆಗಳ್ದಂಗನೆಯಂ ನಡೆ ನೋಡಿಕೋಪದಿಂ ||

ಮ|| ಶಿವಪೂಜಾರ್ಥಲತಾಂತಮಂ ತೆಗೆದ ಕೈ ತಾನೆಲ್ಲಿ ಮುನ್ನೀಡಿದಂ| ತೆ ವೊಲೀಗಳ್ನುಳೆ ನೀಡು ನೀಡೆನುತೆ ಕಾಯ್ಪಿಂ ಖಡ್ಗದಿಂ ದಾಕೆಯೊ || ಪ್ಪುವ ಕೈಯುಂ ಕಡಿದಿಕ್ಕಿದಂ ಗತವಿಮೋಹಂ ಕಂಡು ಭಕ್ತಾಳಿ ಯು | ತ್ಸವಮಂ ತಾಳೆ ಸಭಾಸದ ರ್ತಳೆಯೆ ತಳ್ತಾಶ್ಚರ್ಯಮುಂ ಭೂಭುಜಂ || .. ... ... ... ... ||೧೦೫||

ವ|| ಆಗಳವನ ಭಕ್ತಿಭಾವಕ್ಕೆ ಮಚ್ಚಿ ನಿಜರೂಪಂದೋರಲೆಳಸಿ || * * *

ಕಂ|| ಪಣೆಗಣ್ಕಿರುವೆರೆ ಸುರನದಿ | ಫಣಿಭೂಷಣ ಮಾಂತ ತಿಸುಳ ಮಿಗ ಮನ್ವಿತಭೀ | ಷಣವಿಷ ಮಿಭಚರ್ಮಾಂಬರ | ಮಣಿಯರ ಮಮರ್ದೆಸೆಯೆ ರೂಪುದೋರಿದನಾಗಳ್ ||

ವ|| ಅಂತು ರೂಪದೋರಿ ತನ್ನಿತಂಬಿನಿ ಗರಿದಮೂಗಂ ಕರಾಬ್ಜಮು ನಿತ್ತು ತದ್ಭಕ್ತಂಗೆ ಸಾಮೀಪ್ಯಪದಮಂ ಸಾರ್ಚಿದೆ ನಂತು ಮಲ್ಲದೆಯುಂ || * * * * *

---

ದ, ಪುಷ್ಪಮಂ, ನೀಂ, ತೆಗೆವುದೇ ? ಎಂದು, ಕಾಯ್ಪಿಂದೆ- ಕೋಪದಿಂದ, ನಿನ್ನ, ನಲ್ಲಳಂ- ಪತ್ನಿಯನ್ನು, ಮೂಗರಿದಂ, ಎನುತ್ತಂ, ಪೇಳೆ, ಉರ್ವಿಪಂ, ಕೇಳ್ದು. ... ... ... ||೧೦೩||

ಹರಹರ!! ನೀತಿದಪ್ಪಿ, ಮೂಗಂ, ಕೊರೆದಂಗಡ- ಕತ್ತರಿಸಿದನಲ್ಲವೇ ? ಎನುತ್ತೆ, ಮಹೇಶಪೂಜಕನಂ, ಬೇಗದಿಂ, ಬರಿಸಿ- ಬರಮಾಡಿಸಿ, ಎಂದಂ, ಪ್ರಥಮಾಪರಾಧಿ- ಮೊದಲನೇತಪ್ಪನ್ನು ಮಾಡಿದ, ಕೈ, ಇರೆ ನೀಂ, ಕಡಿದು- ಕತ್ತರಿಸಿ, ಇಕ್ಕದೆ- ಹಾಕದೆ, ಇಂತು, ಕಡೆದಪ್ಪಂ- ಕೊನೆಯತಪ್ಪನ್ನು, ಒಡರ್ಚಿದ- ಮಾಡಿದ, ಮೂಗಂ, ಏಕೆ, ಕತ್ತರಿಸಿದೆ ? ಇದು, ಏಂ ? ಎನುತ್ತೆ, ತೆಗಳ್ದು- ನಿಂದಿಸಿ, ಅಂಗನೆಯಂ- ಹೆಂಡತಿಯನ್ನು, ನಡೆ- ಚೆನ್ನಾಗಿ, ಕೋಪದಿಂ, ನೋಡಿ. ... ... ... ... ||೧೦೪||

ಖಳೆ- ನೀಚೆಯೇ ! ಶಿವಪೂಜಾರ್ಥಲತಾಂತಮಂ- ಶಿವಪೂಜೆಗೋಸ್ಕರವಾದ ಹೂವನ್ನು, ತೆಗೆದ, ಕೈ, ತಾಂ, ಎಲ್ಲಿ? ಮುಂ- ಮೊದಲು, ನೀಡಿದಂತೆವೊಲ್- ಚಾಚಿದಹಾಗೆ, ಈಗಳ್, ನೀಡು; ಎನುತ, ಗತವಿಮೋಹಂ- ಅನುರಾಗರಹಿತನಾಗಿ, ಭಕ್ತಾಳಿ, ಕಂಡು, ಉತ್ಸವಮಂ- ಸಂತೋಷವನ್ನು, ತಾಳೆ- ಧರಿಸಲು, ಸಭಾಸದರ್- ಸಭೆಯಲ್ಲಿರುವವರು, ತಳ್ತ- ಸೇರಿದ, ಆಶ್ಚರ್ಯಮಂ, ತಳೆಯೆ, ಭೂಭುಜಂ- ರಾಜನು, ಕಾಯ್ಪಿಂ- ಕೋಪದಿಂದ, ಆಕೆಯ, ಒಪ್ಪುವ, ಕೈಯ್ಯಂಖಡ್ಗದಿಂದೆ, ಕಡಿದು, ಇಕ್ಕಿದಂ. ... ||೧೦೫||

ಆಗಳ್, ಆಂ, ಅವನ- ರಾಜನ, ಭಕ್ತಿಭಾವಕ್ಕೆ-ಭಕ್ತಿಸ್ಥಿತಿಗೆ, ಮಚ್ಚಿ, ನಿಜರೂಪಂದೋರಲ್, ಎಳಸಿ- ಅಪೇಕ್ಷಿಸಿ. * * * * * * * * * * * * * * * * * * *

ಪಣೆಗಣ್, ಕಿರುವೆರೆ- ಬಾಲಚಂದ್ರ, ಸುರನದಿ, ಫಣಿಭೂಷಣಂ, ಆಂತ- ಧರಿಸಿದ, ತಿಸುಳಂ- ತ್ರಿಶೂಲ, ಮಿಗಂ- ಜಿಂಕೆ, ಅನ್ವಿತಭೀಷಣವಿಷಂ- ಕೂಡಿದ ಭಯಂಕರವಾದ ವಿಷ, ಇಭಚರ್ಮಾಂಬರಂ- ಆನೆಯ ಚರ್ಮದ ಬಟ್ಟೆ, ( ಇವುಗಳು ) ಅಮರ್ದು- ಸೇರಿ, ಎಸೆಯೆ- ಪ್ರಕಾಶಿಸುತ್ತಿರಲು, ಆಗಳ್, ರೂಪುದೋರಿದಂ

ಅಂತು, ರೂಪುದೋರಿ, ತನ್ನಿತಂಬಿನಿಗೆ, ಅರಿದ, ಮೂಗಂ, ಕರಾಬ್ಜಮುಂ, ಇತ್ತು, ತದ್ಭಕ್ತಂಗೆ, ಸಾಮೀಪ್ಯಪದಮಂ- ಸಾಮೀಪ್ಯಸ್ಥಾನವನ್ನು, ಸಾರ್ಚಿದೆಂ- ಹೊಂದಿಸಿದೆನು, ಅಂತುಂ, ಅಲ್ಲದೆಯುಂ. * *

ಉ ॥ ಭೂವರಚೋಳ ನಂದು ಬಡಮೊಳ್ಚರವೃಂದಕೆ ನೇಮಿಸಿರ್ದ್ದ ಧಾ । ನ್ಯಾವಳಿಯಂ ಭಯಂಬಡೆದು ಭುಂಜಿಸೆ ತನ್ನ ಪರಾಂಗಿ ಕೋಪ್ದಿನಿಂ ॥ ತೀವಿದ ಗರ್ಭಮಾಂತಿರೆಯುಮೋವದೆ ಸೂನುಸಮೇತ ಮುಣ್ಕೆ ತ । ದ್ದೇವಿಯ ಪೆಂಪುವೆತ್ತ ಪೊಡೆಯಂ ಮಿಗೆ ಸೀಳ್ವಿನಮಾಕ್ಷಣಾರ್ದ್ಧದೊಳ್ ॥ ... ... ... ... ॥೧೧೭॥

ಮತ್ತಂ ॥ ಬಗೆಮಚ್ಚುತ್ತ ತದೀಯಭಕ್ತಿಗೆ ಕಪರ್ದ್ದಂ ಬಾಲಚಂದ್ರಂ ಸುರಾ । ಪಗೆ ಕಂಠೋಗ್ರಗರಂ ಲಲಾಟನಯನಂ ಶೂಲಂ ಮೃಗಂ ಭೀಮಪ ॥ ನ್ನಗಹಾರಂ ತೆಗೆದುಟ್ಟ ಕೃತ್ತಿವಸನಂ ಚೆಲ್ವಾಗೆ ಮೈದೋರಿ ಕೈ । ಮಿಗೆ ಬೇಡೆಂದೆನೆ ಮುಕ್ತಿಗೇಳ್ದನವನೆನ್ನಂ ಭಕ್ತಚೂಡಾಮಣಿ ॥ .. ... ... ... ... ॥೧೧೮॥

ಕಂ ॥ ತನಯಂಗಂ ವನಿತೆಗಮಾ । ನನುನಯದಿಂದಸುವನಿತ್ತು ಮಗುಳ್ದವರ್ಗೆ ಮಹಾ ॥ ಘನಮೋಕ್ಷಪದಮೊಡರ್ಚ್ಚಿದೆ । ನೆನುತಂ ಶಶಿಮೌಳಿ ಪೇಳ್ದ ಮತ್ತಂತೆಂದಂ ॥

ಕಂ ॥ ಅವರೆಲ್ಲ ಬೇಡಿ ತವೆಕ । ರ್ತ್ತವಶದಿನೆನ್ನಿಂದಭೀಪ್ಸಿತಘನಪದವಿಯ ನೀ ॥ ಯುವತಿ ವರವೀವೆ ನೆನೆಯುಂ । ಕಿವಿಗೇಳದತೆರದೆ ಮುಟ್ಟಮಿರ್ದ್ದಪಳಲ್ತೆ ॥ ॥೧೧೦॥

ಮಹಾಸ್ರ। ಅಪರಾಧಂಗೆಯ್ದ ತನ್ನಾತ್ಮಜನ ನಿರದೆ ಕೊಂದಳ್ಬಳಕ್ಕಾತನಂ ಕಾಂ।

---

ಅಂದುಬರದೊಳ್- ಕ್ಷಾಮದಲ್ಲಿ, ಭೂವರಚೋಳಂ- ಚೋಳರಾಜನು,ಚರವೃಂದಕೆ- ಜಂಗಮ ಸಮೂಹಕ್ಕೆ, ನೇಮಿಸಿ, ಇರ್ದ್ದ, ಧಾನ್ಯಾವಳಿಯಂ, ತನ್ನ, ಪರಾಂಗಿ- ಪತ್ನಿಯು, ಭಯಂಬಡದೆ- ಭೀತಿಯಂ ಹೊಂದದೆ, ಭುಂಜಿಸೆ- ಊಟವಂ ಮಾಡಲು, ತೀವಿದ- ತುಂಬಿದ, ಗರ್ಭಮಾಂತಿರೆಯುಂ–ಬಸುರನ್ನು ಹೊಂದಿದ್ದರೂ, ಓವದೆ- ರಕ್ಷಿಸದೆ, ಕೋಪ್ದಿಂ- ಕೋಪದಿಂದ, ಮುಣ್ಕೆ- ಪರಾಕ್ರಮ ವಿಶಿಷ್ಟನಾಗಿ, ಸೂನುಸಮೇತಂ- ಮಗನಿಂಕೂಡಿಯೇ, ತದ್ದೇವಿಯ, ಪೆಂಪುವೆತ್ತ- ಆಧಿಕ್ಯವಂ ಹೊಂದಿದ, ಪೊಡೆಯುಂ- ಹೊಟ್ಟೆಯನ್ನು, ಮಿಗೆ, ಸೀಳ್ವಿನಂ- ಸೀಳುವಾಗ, ಆಕ್ಷಣಾರ್ದ್ಧದೊಳ್. ... ... ... ॥೧೧೭॥

ತದೀಯ ಭಕ್ತಿಗೆ- ಆ ಚೋಳರಾಜನ ಭಕ್ತಿಗೆ, ಬಗೆಮಚ್ಚುತ್ತ- ಮನಸ್ಸಿನಲ್ಲಿ ಶ್ಲಾಘಿಸುತ್ತ, ಕಪರ್ದಂ- ಜಟಾಜೂಟವು, ಬಾಲಚಂದ್ರಂ, ಸುರಾಪಗೆ- ದೇವಗಂಗೆ,ಕಂಠೋಗ್ರಗರಂ- ಕತ್ತಿನಲ್ಲಿಭಯಂಕರವಾಗಿರುವ ವಿಷ, ಲಲಾಟನಯನಂ- ಹಣೆಗಣ್ಣು,ಶೂಲವು, ಮೃಗಂ- ಜಿಂಕೆ,ಭೀಮಪನ್ನಗಹಾರಂ- ಭಯಂಕರವಾದ ಸರ್ಪದ ಮಾಲಿಕೆ, ತೆಗೆದು, ಉಟ್ಟ, ಕೃತ್ತಿವಸನಂ- ಚರ್ಮದ ವಸ್ತ್ರ, ( ಇವುಗಳು ) ಚೆಲ್ವು, ಆಗೆ, ಮೈದೋರಿ- ನಿಜದೇಹವಂತೋರಿಸಿ, ಕೈಮಿಗೆ- ಹೆಚ್ಚಾಗಿ, ಬೇಡು, ಎಂದನೆ, ಅವಂಭಕ್ತಚೂಡಾಮಣಿ- ಆ ಭಕ್ತಶ್ರೇಷ್ಠನಾದ ಚೋಳನು, ಎನ್ನಂ, ಮುಕ್ತಿಗೇಳ್ದಂ- ಮೋಕ್ಷವಂ ಕೇಳಿದನು. ... ... ॥೧೧೮॥

ಆ, ತನಯಂಗಂ- ಮಗನಿಗೂ, ವನಿತೆಗಂ- ಹೆಂಡತಿಗೂ, ಅನುನಯದಿಂದೆ- ವಿಶ್ವಾಸದಿಂದ, ಅಸುವಂ- ಪ್ರಾಣವನ್ನು, ಇತ್ತು, ಮಗುಳ್ದು- ಪುನಃ, ಅವರ್ಗೆ, ಮಹಾಘನಮೋಕ್ಷಪದಮೊಡರ್ಚ್ಚಿದೆಂ- ಎನುತಂ, ಶಶಿಮೌಳಿ, ಪೇಳ್ದ, ಮತ್ತಂ, ಇಂತು, ಎಂದಂ. ... ... ... ॥೧೧೯॥

ಅವರೆಲ್ಲ- ಆ ಭಕ್ತರೆಲ್ಲರೂ, ಬೇಡಿ, ತವಕದಿಂ- ಬೇಗನೆ, ಎನ್ನಿಂದೆ, ಅಭೀಪ್ಸಿತಘನಪದವಿಯಂ- ಇಷ್ಟವಾಗಿ ಶ್ರೇಷ್ಠವಾದಸ್ಥಾನವನ್ನು ಪಡೆದರ್; ವರವೀವೆಂ- ವರವನ್ನು ಕೊಡುವೆನು, ಎನೆಯುಂ- ಎಂದರೂ,ಈ ಯುವತಿ- ಈ ಸ್ತ್ರೀಯು,ಕಿವಿಗೇಳದ ತೆರದೆ- ಕಿವಿಯು ಕೇಳಿಸದಹಾಗೆ,ಮುಟ್ಟಂ- ಸುಮ್ಮನೆ, ಇರ್ದ್ದಪಳಲ್ತೆ,

ಅಪರಾಧಂಗೆಯ್ದು- ತಪ್ಪುಮಾಡಿದ, ತನ್ನ, ಆತ್ಮಜನಂ- ಮಗನನ್ನು, ಇರದೆ, ಕೊಂದಳ್; ಬಳಕ್ಕೆ, ಆತನಂ, ಕಾಂಕ್ಷಿಸಳ್ ಅಲ್ತು- ಇಚ್ಛೈಸುವವಳಲ್ಲ; ಈ ನಿಂಬಿಯ, ಘನತರಸದ್ಭಕ್ತಿಯುಂ- ಅತಿಶ್ರೇಷ್ಠವಾದ

ಕ್ಷಿಪಳಲ್ತೇನೆಂಬೆ ನೀನಿಂಬಿಯ ಘನತರಸದ್ಭಕ್ತಿಯಂ ಭಕ್ತ ನೀನಂ ॥ ದುಪಹಾರಂಗೆ ಯ್ದಿ ಯಾಂಬೇಡಿದೊಡೆ ಬಳಯೊಳಾ ಪುತ್ರನ, ಮತ್ತೆ ಭಕ್ತ । ವ್ಯಪದೇಶಂಬೆತ್ತು ನ ಣ್ಪಿಂ ಕರೆಯೆನೆ ಕರೆದ ಯಃಸೂನುವಂ ದಭ್ರಭಕ್ತ ॥ ... ... ॥೧೧೧॥

ಕಂ ॥ ಅದರಿಂದೆ ನಿಂಬಿಯಕ್ಕನ । ಸದಮಳಸದ್ಭಕ್ತಿಯಿರವ ನೀಕ್ಷಿಸಿ ನಿನ್ನೀ ॥ ಮದಮನು ಳಿಯೆಂದು ಸೆಟ್ಟಿಯೊ । ಳೊದವಿದ ಮದಮಂ ತೆರಳ್ಚಿದಂ ಗಿರಿಜೇಶಂ ॥೧೧೨॥

ಉ ॥ ನಿಂಬಿಯ ನಂದನಂ ಗಸುವನಿತ್ತು ನಿರೀಕ್ಷಿಸಿ ಪುಷ್ಪಕಾಗ್ರದೊ । ಳ್ಸಾಂಬ ನೊಲಲ್ದು ಕುಳ್ಳಿರಿಸಿ ತನ್ನಯ ಲೋಕಮನೆಯ್ದುಸುತ್ತ ಮು ॥ ತ್ತಂ ಬಗೆದಂದು ತದ್ವನಿ ತೆಯುತ್ತಮಭಕ್ತಿಯ ನೊಲ್ದು ಕೀರ್ತಿಸು । ತ್ತಂ ಬಗಿಯಪ್ಪಿ ಮೈದಡಪಿ ಮನ್ನಿಸಿದಂ ಕೃಪೆಯಿಂದೆ ಶಂಕರಂ ॥ ... ... ... ... ... ॥೧೧೩॥

ಕಂ ॥ ವಿತತಚತುರ್ಮುಕ್ತಿಗಳಿಂ । ದತಿಶಯ ಮೀಶಶರಣಚರಣಸೇವನ ಮೆಂದೀ ॥ ಕ್ಷಿತಿತಳದೊಳಿರ್ದ ಳಾಗುಣ । ಯುತೆ ನಿಂಬ ವಿಡಂಬಿಸುತ್ತೆ ಫಲಪದದೊಳ್ಪಂ ॥೧೧೪॥

ಮಹಾಸ್ರ ॥ ಅದರಿಂ ಪೀಯೂಷಸಾರಂ ಪುಳಿಯೊಡವೆರೆದಂತಪ್ಪುದಾಭಕ್ತಿ ಚಂಚ । ನ್ಮದದೊಳ್ಮೇಳೈಸೆ ಕೇಳೆಂದೊರೆಯೆ ಗುರುತರಂ ಮಾಚಿದೇವಂ ವಿಳಾಸಾ ॥ ಸ್ಪದಭಾವಂ ನಿಕ್ಕು ಕೇಳೊಲ್ದಿರಗುತವನ ದವ್ಯಾಂಘ್ರಿಯೊಳ್ಕೀರ್ತಿಸುತ್ತಂ । ವದಪಿಂದೊಪ್ಪಿರ್ದ

---

ಒಳ್ಳೆಯ ಭಕ್ತಿಯನ್ನು, ಏನೆಂಬೆಂ- ಏನೆಂದುಹೇಳಲಿ ? ಭಕ್ತ ! ಅಂದು, ಆಂ, ಬೇಡಿದೊಡೆ, ನೀಂ, ಬಳಿಯೊಳ್- ಅನಂತರ, ಭಕ್ತಿವ್ಯಪದೇಶಂಬೆತ್ತು- ಭಕ್ತಿಯ ನೆವವಂ ಹೊಂದಿ, ಆ ಪುತ್ರನಂ, ಉಪಹಾರಂಗೆಯ್ದಿ- ಆ ಹಾರವಂ ನೂಡಿದೆ; ಮತ್ತೆ, ನಣ್ಪಿಂ, ಕರೆ, ಎನೆ, ದಭ್ರಭಕ್ತ ! ಸೂನುವಂ- ಮಗನನ್ನು, ಕರೆದಯ್ ॥೧೧೧॥

ಅದರಿಂದೆ, ನಿಂಬಿಯಕ್ಕನ, ಸದಮಳಸದ್ಭಕ್ತಿಯ- ಸಮೀಚೀನವಾಗಿ ನಿರ್ಮಲವಾದಭಕ್ತಿಯ, ಇರವಂ- ರೀತಿಯನ್ನು, ಈಕ್ಷಿಸಿ, ನಿನ್ನ ಈ ಮದವಮಂ, ಉಳಿ- ಬಿಡು, ಎಂದು, ಸೆಟ್ಟಿಯೊಳ್, ಒದವಿದ- ಪ್ರಾಪ್ತವಾಗಿದ್ದ, ಮದವಮಂ, ಗಿರಿಜೇಶಂ, ತೆರಳ್ಚಿದಂ- ಹೋಗಲಾಡಿಸಿದನು. ... ... ॥೧೧೨॥

ಸಾಂಬಂ, ನಿಂಬಿಯ, ನಂದನಂಗೆ- ಮಗನಿಗೆ, ಅಸುವಂ- ಪ್ರಾಣವನ್ನು, ಇತ್ತು, ನಿರೀಕ್ಷಿಸಿ, ಪುಷ್ಪಕಾಗ್ರದೊಳ್- ಹೂವಿನ ವಿಮಾನದಲ್ಲಿ, ಒಲಲ್ದು - ಪ್ರೀತಿಸಿ, ಕುಳ್ಳಿರಿಸಿ, ತನ್ನಯ, ಲೋಕಮಂ, ಎಯ್ದಿಸುತ್ತೆ, ಮತ್ತಂ, ಶಂಕರಂ, ತದ್ವನಿತೆಯ, ಉತ್ತಮಭಕ್ತಿಯಂ, ಬಗೆದಂದು, ಒಲ್ದು, ಕೀರ್ತಿಸುತ್ತಂ, ಬಿಗಿಯಪ್ಪಿ, ಮೈದಡಪಿ- ಮಯ್ಯನ್ನುಸವರಿ, ಕೃಪೆಯಿಂದೆ, ಮನ್ನಿಸಿದಂ- ಗೌರವಿಸಿದನು. ... ॥೧೧೩॥

ವಿತತಚತುರ್ಮುಕ್ತಿಗಳಿಂದೆ- ಪ್ರಸಿದ್ಧವಾದ ಸಾಲೋಕ್ಯ ಸಾಯುಜ್ಯ ಸಾಮೀಪ್ಯ ಸಾರೂಪ್ಯಗಳೆಂಬ ನಾಲ್ಕುವಿಧಗಳಾದ ಮೋಕ್ಷಗಳಿಗಿಂತಲೂ, ಈ ಶರಣಚರಣಸೇವನಂ, ಅತಿಶಯಂ, ಎಂದು, ಆಗುಣಯುತೆ, ನಿಂಬಿ, ಫಲಪದದ- ಚತುರ್ವಿಧ ಫಲಸ್ಥಾನದ,ಒಳ್ಪಂ- ಸಮೀಚೀನತ್ವವನ್ನು, ವಿಡಂಬಿಸುತ್ತೆ- ತಿರಸ್ಕರಿಸುತ್ತ, ಈ ಕ್ಷಿತಿತಳದೊಳ್, ಇರ್ದಳ್. ... ... ... ... ॥೧೧೪॥

ಅದರಿಂ, ಆಭಕ್ತಿ, ಚಂಚನ್ಮದದೊಳ್- ಚಪಲವಾದ ಗರ್ವದೊಡನೆ, ಮೇಳೈಸೆ- ಕೂಡಿದರೆ, ಪೀಯೂಷಸಾರಂ- ಶ್ರೇಷ್ಠವಾದ ಅಮೃತವು, ಪುಳಿಯ, ಒಡವೆರೆದಂತೆ- ಒಡನೆ ಸೇರಿದಹಾಗೆ, ಅಪ್ಪುದು, 'ಕೇಳ್', ಎಂದು, ಗುರುತರಂ- ಮಹಾಗುರುವಾದ, ಮಾಚಿದೇವಂ, ಒರೆಯೆ- ಹೇಳಲು,' ಈಶಾರ್ಪಿತಮತಿ- ಶಿವನಿಗೋಸ್ಕರ ಸಮರ್ಪಿಸಲ್ಪಟ್ಟ ಬುದ್ಧಿಯುಳ್ಳ, ಶಿವಸಿದ್ಧಾಂತದುಗ್ಧಾಬ್ಧಿಚಂದ್ರಂ- ಶೈವ ಸಿದ್ಧಾಂತವೆಂಬ ಕ್ಷೀರ ಸಮುದ್ರಕ್ಕೆ ಚಂದ್ರನಾದಬಸವೇಶ್ವರನು, ವಿಳಾಸಾಸ್ಪದಭಾವಂ- ಲೀಲೆಗಾಶ್ರಯವಾದ ಮನಸ್ಸುಳ್ಳವನಾ

ನೀಶಾರ್ಪಿತಮತಿ ಶಿವಸಿದ್ಧಾಂತ ದುಗ್ಧಾಬ್ಧಿಚಂದ್ರಂ ॥ ... .. ॥೧೧೫॥

ಲಲಿತಪದವೃತ್ತಂ ॥ ಲಾಟಮಗಧಾಂಧ್ರಕವರಾಟವಿಷಯಾಧಿಪಕಿರೀಟತಟರತ್ನರುಚಿ ಪಾಟಲಿತಪಾದ । ಸ್ಫಾಟಿಕಸುಪೀಠ ಭೃತಕಾಟನಪದಾರಿ ಹೃತತಾಟಕವಿನುತ್ಯ ಮೃಡನಾಟಕಸಹಾಯ ॥ ಚಾಟುಪರವಾದಿಕುಜಪಾಟನಪಟಿಷ್ಠ ಮುನಿಕೋಟಿಹೃದಯಾಂಬುರುಹಕೋಟರಗ ಶೃಂಗಾ । ಶಾಟಿತನಗ ಶ್ರುತಿಸುಘೋಟಕಮತಾದ್ರಿಮಣಿಕೂಟ ಪೊರೆ ನವ್ಯಶಶಿಜೂಟ ಬಸವೇಶ ॥ ... ... ... ... ... ॥೧೧೬॥

ಸ್ವಾಗತವೃತ್ತಂ ॥ ಭೃಂಗವೇಣಿ ಭುವನತ್ರಯಪೂರ್ಣೇ । ಮಂಗಳಾಂಗಿ ಮೃದುವಾಣಿ ಸುಕರ್ಣೇ॥ಕಂಗೊಳಿಪ್ಪ ಕನಕಾಂಚಿತವರ್ಣೇ।ಪಿಂಗದೊಲ್ದು ಪೊರೆ ಯೆನ್ನ ನಪರ್ಣೇ॥

---

ಗಿ, ಮಿಕ್ಕು- ಹೆಚ್ಚಾಗಿ, ಕೇಳ್ದು, ಅವನ- ಮಾಚಿದೇವನ, ದಿವ್ಯಾಂಘ್ರಿಯೊಳ್, ಒಲ್ದು, ಎರಗುತೆ, ಪದಪಿಡೆದೆ, ಕೀರ್ತಿಸುತ್ತಂ, ಒಪ್ಪಿ, ಇರ್ದಂ. ... ... ... ॥೧೧೫॥

ಲಾಟ...... ಪಾದ— ಲಾಟ, ಮಗಧ, ಆಂಧ್ರಕ, ವರಾಟಗಳೆಂಬ, ವಿಷಯ- ದೇಶಗಳ- ಅಧಿಪ- ದೊರೆಗಳ, ಕಿರೀಟತಟ- ಮೌಳಿಯ ಪ್ರದೇಶದಲ್ಲಿರುವ, ರತ್ನ- ಮಣಿಗಳ, ರುಚಿ- ಕಾಂತಿಯಿಂದ, ಪಾಟಲಿತ- ಕೆಂಪಾಗಿ ಮಾಡಲ್ಪಟ್ಟ, ಪಾದ- ಚರಣವುಳ್ಳ, ಸ್ಫಾಟಿಕಸುಪೀಠ- ಸ್ಫಟಿಕಮಣಿ ವಿಕಾರವಾದ ಆಸನವುಳ್ಳ, ಭೃತಕಾಟನಪದಾರಿ * ಭೃತಕಾಟನಪದ- ಮನ್ಮಥನಿಗೆ, ಅರಿ-ಶತ್ರುವಾದ, ಹೃತತಾಟಕವಿನುತ್ಯ- ಹೃತತಾಟಕ- ಶ್ರೀರಾಮನಿಂದ, ವಿನುತ್ಯ- ಸ್ತೋತ್ರಮಾಡಿಸಿಕೊಳ್ಳಲ್ಪಡುವದಕ್ಕೆ ಯೋಗ್ಯನಾದ, ಮೃಡನಾಟಕಸಹಾಯ- ಈಶ್ವರನ ಪ್ರಾಪಂಚಿಕವ್ಯಾಪಾರ ನಾಟಕಕ್ಕೆ ಸಹಾಯನಾದ, ಚಾಟುಪರವಾದಿ ಕುಜಪಾಟನಪಟಿಷ್ಠ-ಚಾಟುಪರನಾದಿ-ಪ್ರೇಮದಿಂದಮಾಡಲ್ಪಟ್ಟ ಮಿಥ್ಯಾಸ್ತೋತ್ರವುಳ್ಳ ಅನ್ಯಮತವಾದಿಗಳೆಂಬ,ಕುಜ- ಮರಗಳನ್ನು ಪಾಟನ- ಸೀಳುವದರಲ್ಲಿ, ಪಟಿಷ್ಠ- ಸಮರ್ಥನಾದ, ಮುನಿಕೋಟಿಹೃದಯಾಂಬುರುಹಕೋಟರಗ- ಮುನಿಕೋಟಿ- ಅನೇಕ ಋಷಿಗಳ, ಹೃದಯಾಂಬುರುಹ- ಹೃದಯಕಮಲವೆಂಬ, ಕೋಟರ- ಪೊದರೆಯನ್ನು, ಗ- ಹೊಂದಿರುವ, ಶೃಂಗಾಶಾಟಿತನಗ- ಶೃಂಗ- ಕೊಂಬುಗಳಿಂದ- ಆಶಾಟಿತ- ತಿವಿಯಲ್ಪಟ್ಟ, ನಗ- ಪರ್ವತವುಳ್ಳ, ಶ್ರುತಿಸುಘೋಟಕಮತಾದ್ರಿಮಣಿಕೂಟ— ಶ್ರುತಿ- ವೇದಗಳೇ, ಸು- ಸವಿಾಚೀನವಾದ, ಘೋಟಕ- ಕುದುರೆಗಳಾಗುಳ್ಳ ಶಿವನ, ಮತ- ಮತವೆಂಬ, ಅದ್ರಿ- ಪರ್ವತಕ್ಕೆ, ಮಣಿ- ರತ್ನದ, ಕೂಟ- ಶಿಖರನಾದ, ನವ್ಯಶಶಿಜೂಟ- ಬಾಲಚಂದ್ರನೇ ಜಡೆಯುಳ್ಳುಳ್ಳ, ಬಸವೇಶ ! ಪೊರೆ. ... ... ॥೧೧೬॥

ಭೃಂಗವೇಣಿ- ಭ್ರಮರದಂತಿರುವ ಜಡೆಯುಳ್ಳ, ಭುವನತ್ರಯಪೂರ್ಣೇ- ಮೂರುಲೋಕಗಳಲ್ಲೂಸಂಪೂರ್ಣಳಾದ, ಮಂಗಳಾಂಗಿ- ಮಂಗಳಕರವಾದ ಶರೀರವುಳ್ಳ, ಮೃದುವಾಣಿ- ಕೋಮಲವಾದ ಮಾತುಳ್ಳ, ಸುಕರ್ಣೇ- ಸವಿಾಚೀನವಾದ ಕಿವಿಯುಳ್ಳ, ಕಂಗೊಳಿಪ್ಪ ಕನಕಾಂಚಿತವರ್ಣೇ-ಪ್ರಕಾಶಿಸುವ ಚಿನ್ನದಂತೆ ಪೂಜ್ಯವಾದ ಬಣ್ಣವುಳ್ಳ, ಅಪರ್ಣೇ ! ಪಿಂಗದೆ- ಬಿಡದೆ, ಒಲ್ದು, ಎನ್ನಂ, ಪೊರೆ. ... ... ॥೧೧೭॥

---

* ( ಅವ ) ಭೃತ- ಧರಿಸಲ್ಪಟ್ಟ. ಕಾಟನ— ಕ- ಜಲದಲ್ಲಿ, ಅಟನ- ಸಂಚಾರವುಳ್ಳ.ಮೀನಿನ, ಪದ- ಚಿಹ್ನೆಯುಳ್ಳವನು. ಅಂದರೆ ಮೀನಲಾಂಛನನು. ... ... ... ॥೧೧೬॥

ಹದಿನಾಲ್ಕನೆಯ ಆಶ್ವಾಸವು ಸಂಪೂರ್ಣವು.

ಗದ್ಯಂ ॥ ಇದು ವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತಭಾಸುರಲಲಾಟಪಟ್ಟ ಸರಸಸಜನಮಾನಿತೋಭಯ ಕವಿತಾವಿಶಾರದಶ್ರೀ ಷಡಕ್ಷರಿದೇವಪ್ರಣೀತ ವಿರಚಿತ ಶ್ರೀಮನ್ವೃಷಭೇಂದ್ರವಿಜಯ ಮಹಾಪುರಾಣದೊಳ್ ದಭ್ರಭಕ್ತಕಥಾವರ್ಣ್ಣನಂ ಚತುರ್ದಶಾಶ್ವಾಸಂ ಪರಿಸಮಾಪ್ತಂ ॥ .. .. ... ... ... ❀

ಚತುರ್ದಶಾಶ್ವಾಸಂ ಸಂಪೂರ್ಣಂ.

ಶ್ರೀಃ

ಅರ್ಧನಾರೀಶ್ವರಾಯ ಪರಬ್ರಹ್ಮಣೇ ನಮಃ:

## ಪಂಚದಶಾಶ್ವಾಸಂ.

ಹಲಾಯುಧಾರ್ಯಕಥನಂ.

ಕಂ ॥ ಶ್ರೀಹಿಮಗಿರೀಂದ್ರತನಯಾ । ಸ್ನೇಹರಸಾಮತ್ರ ನತ್ರಿಪುತ್ರಕಿರೀಟಂ ॥
ಮೋಹತಿಮಿರಾರ್ಕ್ಕ ನಮರಸ । ಮೂಹಾರ್ಚ್ಚಿತ ಸೀಗೆ ಸೌಖ್ಯಮಂ ಶಿವಲಿಂಗಂ ॥ ॥೧॥

ವ ॥ ಮತ್ತಂ ಬಸವಂಗೆ ಮಾಚಿದೇವ ನಿಂತೆಂದಂ ॥ * * * * * *

ಕಂ ॥ ಪುರಹರ ನಾಪರದನ ಕರ । ಸರಸಿಜಮಂ ಪಿಡಿದು ಮೆಲ್ಲ ನಲ್ಲಿಂದೆಳ್ತಂ ॥
ದುರುತರಹಲಾಯುಧಯ್ಯನ । ಪುರಮಂ ಪುಗುತಂದು ಪೊಕ್ಕನವನಂಗಣಮಂ ॥ ॥೨॥

---

ಶ್ರೀ......ಅಮತ್ರಂ—ಶ್ರೀ- ಷಡ್ಗುಣೈಶ್ವರ್ಯಸಂಪನ್ನಳಾದ, ಹಿಮಗಿರೀಂದ್ರತನಯಾ- ಪಾರ್ವತಿಯ, ಸ್ನೇಹ- ಪ್ರೀತಿಯೆಂಬ, ರಸ- ಜಲಕ್ಕೆ, ಅಮತ್ರಂ- ಪಾತ್ರನಾದ, ಅತ್ರಿಪುತ್ರಕಿರೀಟಂ- ಅತ್ರಿಪುತ್ರ- ಚಂದ್ರನೇ, ಕಿರೀಟಂ-ಮೌಳಿಯುಳ್ಳುಳ್ಳ, ಮೋಹತಿಮಿರಾರ್ಕ್ಕಂ- ಮೋಹ- ಅಜ್ಞಾನವೆಂಬ, ತಿಮಿರ- ಕತ್ತಲೆಗೆ, ಅರ್ಕಂ- ಸೂರ್ಯನಾದ, ಅಮರಸಮೂಹಾರ್ಚ್ಚಿತಂ- ದೇವತೆಗಳ ಗುಂಪಿನಿಂದ ಪೂಜಿಸಲ್ಪಟ್ಟ, ಶಿವಲಿಂಗಂ, ಸೌಖ್ಯಮಂ, ಈಗೆ. ... ... ... ... ... ॥೧॥

ಮತ್ತಂ, ಮಾಚಿದೇವಂ, ಬಸವಂಗೆ, ಇಂತು, ಎಂದಂ. * * * * * * * * *

ಪುರಹರಂ, ಆಪರದನ- ಆ ಸೆಟ್ಟಿಯ ( ವ್ಯಾಪಾರಿ ) ಕರಸರಸಿಜಮಂ, ಪಿಡಿದು, ಮೆಲ್ಲನೆ, ಅಲ್ಲಿಂದೆ, ಎಳ್ತಂದು, ಉರುತರಹಲಾಯುಧಯ್ಯನ, ಪುರಮಂ, ಪುಗುತೆ, ಅಂದು, ಅವನ- ಹಲಾಯುಧಯ್ಯನ, ಅಂಗಣಮಂ- ಗೃಹಪ್ರದೇಶವನ್ನು, ಪೊಕ್ಕಂ. ... ... ... ... ॥೨॥

ವ ॥ ಆಗಳಾ ಹಲಾಯುಧ ನಪೂರ್ವತರಚರರೂಪಮಂ ತಳೆದೆಳ್ತಂದರ ನೀರ್ವರಂ ಕಂಡು ದಂಡಪ್ರಣಾಮಂಗೆಯ್ದುಚಿತಸತ್ಕಾರಮಂ ಸಾಂಗ ಮನೆ ನೆಗಳ್ದನಂತರಂ ದೇವರಾವಾಸಮಾವುದೆನ್ನಮೇಲಣ ಕಾರುಣ್ಯದಿ ನಾವೆಡೆಯಿಂ ಬಿಜಯಂಗೆಯ್ದಿರೆಂದು ಕೇಳ ಲೊಡನಾ ಚರಮೂರ್ತಿ ಶಂಕರ ನವಂಗಿಂತೆಂದಂ ॥ * * * * * * * * * *

ಕಂ ॥ ಪರಮಚಿದಂಬರಪುರದೊ । ಳ್ಳಿರುತಿರ್ಪೆಂ ಪಿತರರಿಲ್ಲದಾಂ ಮುನ್ನಂ ಭಾ ॥ ಸುರ
ಶಿಶುರೂಪಂದಾಳ್ದಿರೆ । ಪೊರೆದಳ್ಮಾದೇವಿ ಯೆಂಬ ಳೆಲೆಗುಣನಿಳಯ ॥ ... ॥೩॥

ಮತ್ತೇ ॥ ಎನಗೊಳ್ಪಿಂ ಕೊಡಗೂಸು ಪಾಲೆರೆದ ಳನ್ನಪ್ರಾಶನಂ ಚೌಡಿದೇ । ವನಿ
ನಾದತ್ತು ಧರಿತ್ರಿಯೊ ಳ್ಶಿವಜಾ ಣ್ಭೋಗಯ್ಯನಿಂದಾಯ್ತು ಕೇಳ್ ॥ ಅನವದ್ಯಂ ಸಹಭೋ
ಜನಸ್ಥಿತಿಯ ನಾಚೆನ್ನಯ್ಯ ನೊಲ್ದಿತ್ತ ನೊ । ಯ್ಯನೆ ದಾಸಯ್ಯನುಡ ಲ್ಕರಂ ಕಲಿಸಿದಂ
ತಾ ನಿತ್ತು ಸದ್ವಸ್ತ್ರಮಂ ॥ ... ... ... ... ॥೪॥

ಮತ್ತೇ ॥ ನೆಲೆಗೊಂಡತ್ತು ವಿಭೂತಿಧಾರಣವಿಧಾನಂ ಜ್ಞಾನಸಂಬಂಧರಿಂ । ಬಲ
ವಿಂದಂ ಜಡೆಗಟ್ಟುವಂದ ಮಮರ್ದತ್ತಾ ಮಾನಕಂಜಾರ್ಯರಿಂ ॥ ವಿಲಸತ್ಸೌಂದರನಿಂದೆ ಜಾ
ಣ್ನುಡಿ ಯೊಡಂಬಟ್ಟಿರ್ದು ದೆನ್ನೊಳ್ಸಮು । ಜ್ಜ್ವಲಕರ್ಮಪ್ರಜಯ್ಯೈಕಶಕ್ತಿ ಯೆನಗಾಪಿ
ಟ್ಟವ್ವೆಯಿಂ ದಾಯ್ತು ಕೇಳ್ ॥ ... ... ... ... ॥೫॥

---

ಆಗಳ್, ಆ ಹಲಾಯುಧಂ, ಅಪೂರ್ವತರಚರರೂಪಮಂ, ತಳೆದು, ಎಳ್ತಂದರಂ- ಬಂದಂಥಾ, ಈರ್ವರಂ, ಕಂಡು, ದಂಡಪ್ರಣಾಮಂಗೆಯ್ದು, ಉಚಿತಸತ್ಕಾರಮಂ- ಯೋಗ್ಯವಾದ ಪೂಜೆಯನ್ನು, ಸಾಂಗಂ, ಎನೆ, ನೆಗಳ್ದು, ಅನಂತರಂ, ದೇವರ- ಸ್ವಾಮಿಗಳ, ಆವಾಸಂ- ಸ್ಥಲವು, ಆವುದು? ಎನ್ನಮೇಲಣ, ಕಾರುಣ್ಯದಿಂ, ಆವೆಡೆಯಿಂ- ಯಾವಸ್ಥಲದಿಂದ, ಬಿಜಯಂಗೆಯ್ದಿರಿ- ದಯಮಾಡಿಸಿದಿರಿ ? ಎಂದು, ಕೇಳಲ್, ಒಡನೆ ಆ ಚರಮೂರ್ತಿಶಂಕರಂ- ಜಂಗಮಾಕಾರನಾದ ಆ ಈಶ್ವರನು, ಅವಂಗೆ, ಇಂತು, ಎಂದಂ. * * *

ಎಲೆಗುಣನಿಳಯ- ಎಲೈ ಸದ್ಗುಣಗಳಿಗಾಶ್ರಯನಾದ ಹಲಾಯುಧಯ್ಯನೇ ! ಆಂ, ಪರಮಚಿದಂಬರಪುರದಲ್ಲಿ- ಚಿದಂಬರವೆಂಬ ಪಟ್ಟಣದಲ್ಲಿ, ( ಜ್ಞಾನಾಕಾಶವೆಂಬ ಪಟ್ಟಣದಲ್ಲಿ ) ಇರುತೆ, ಇರ್ಪೆಂ; ಪಿತರರ್- ತಾಯ್ತಂದೆಗಳು, ಇಲ್ಲದೆ, ಮುನ್ನಂ, ಭಾಸುರ ಶಿಶುರೂಪಂದಾಳ್ದು, ಇರೆ, ಮಾದೇವಿ; ಎಂಬಳ್, ಪೊರೆದಳ್ ॥೩॥

ಎನಗೆ, ಕೊಡಗೂಸು, ಒಳ್ಪಿಂ, ಪಾಲೆರೆದಳ್- ಹಾಲನ್ನು ಕುಡಿಸಿದಳು; ಚೌಡಿದೇವನಿಂ, ಅನ್ನಪ್ರಾಶನಂ- ಅನ್ನವಂ ತಿನ್ನುವಿಕೆಯು, ಆದತ್ತು; ಭೋಗಯ್ಯನಿಂದೆ, ಧರಿತ್ರಿಯೊಳ್, ಶಿವ, ಜಾಣ್- ಕೌಶಲ್ಯವು ಆಯ್ತು; ಕೇಳ್; ಅನವದ್ಯಂ- ನಿರ್ದುಷ್ಟನಾದ, ಚೆನ್ನಯ್ಯಂ, ಬಲ್ದು, ಸಹಭೋಜನಸ್ಥಿತಿಯಂ- ಒಡನೆ ಊಟವಂ ಮಾಡುವಿಕೆಯನ್ನು, ಇತ್ತಂ; ದಾಸಯ್ಯಂ- ಬೇಡರದಾಸಯ್ಯನು, ತಾಂ, ಒಯ್ಯನೆ, ಉಡಲ್- ಉಟ್ಟುಕೊಳ್ಳುವದಕ್ಕೆ, ಸದ್ವಸ್ತ್ರಮಂ, ಇತ್ತು, ಕಲಿಸಿದಂ. ... ... ... ॥೪॥

ವಿಭೂತಿಧಾರಣವಿಧಾನಂ- ಭಸ್ಮವಂ ಧರಿಸುವ ರೀತಿಯು, ಜ್ಞಾನಸಂಬಂಧರಿಂದೆ, ನೆಲೆಗೊಂಡತ್ತು- ಅಳವಟ್ಟಿತು; ಬಲವಿಂದಂ, ಜಡೆಗಟ್ಟುವ, ಅಂದಂ, ಆ ಮಾನಕಂಜಾರ್ಯರಿಂ, ಅಮರ್ದತ್ತು- ಸೇರಿತು; ವಿಲಸತ್ಸೌಂದರನಿಂದೆ- ಪ್ರಕಾಶಿಸುವ ಸುಂದರನಂಬ್ಯಣ್ಣನಿಂದ, ಜಾಣ್ನುಡಿ- ಚಾತುರ್ಯಯುಕ್ತವಾದ ಮಾತು, ಎನ್ನೊಳ್, ಒಡಂಬಟ್ಟು- ಸಮ್ಮತವಾಗಿ, ಇರ್ದುದು; ಎನಗೆ, ಸಮುಜ್ಜ್ವಲಕರ್ಮಪ್ರಜಯ್ಯೈಕಶಕ್ತಿ- ಮನೋಹರವಾದ ಕಾರ್ಯಗಳ ಸಮೂಹದಲ್ಲಿ ಮುಖ್ಯವಾದ ಬಲವು, ಆಪಿಟ್ಟವ್ವೆಯಿಂದೆ, ಆಯ್ತು. ... ॥೫॥

ಮತ್ತೀ ॥ ಬಳಿಯೊ ಳುಜ್ಜ್ವನವಮಾಂಪುದುಂ ವಧುವ ನಿತ್ತಂ ಸಿಂಧು ಬಲ್ಲಾಳ ನು। ಜ್ಜ್ವಳತೇಜಂ ಮೊನೆಯಕ್ಷಿತೀಶ ನೆನಗುದ್ಯತ್ಪ್ರೀಮದಿಂ ದೀವನಾ ॥ ಗಳು ಮೊಳ್ಪಿಂ ತ್ರಿಗುಣೋಲ್ಲಸದ್ಭೃತಿಯ ನಿಂತಾದ್ಯರ್ಕಳಿಂ ಬಾಳ್ದೆ ನೀ। ಗಳು ಮಾಭಕ್ತರ ಮೇಳದಿಂ ಕಳೆದಪೆಂ ಪೊಳ್ತಂ ಮಹೋತ್ಸಾಹದಿಂ ॥ ... ... ... ... ॥೬॥

ವ ॥ ಮತ್ತಂ ॥ ಮತ್ತೀ ॥ ಹರನಂ ಪೂಜಿಪ ಮಾಳ್ಕೆಯಿಂ ಭಜಿಪ ರೆನ್ನಂ ಚೆನ್ನಯಂ ಚಾರಮಂ। ಕರಿಕಾಲಂ ತಿರುನೀಲಕಂಠ ನತಿಭಕ್ತಂ ಮಾನಕಂಜಾರ್ಯಸೌಂ ॥ ದರವಾಗೀಶ್ವರ ಸೇಡಿರಾಜ ವರಗುಂಡಾಧೀಶ ಮುಖ್ಯ ರ್ಮಹೇ। ಶ್ವರಭಕ್ತ ರ್ಗುಣಯುಕ್ತ ರನ್ವಿತಮಹಾವೀರವ್ರತಾಲಂಕೃತರ್ ॥ .. ... ... ... ॥೭॥

ಕಂ ॥ ಪಲವುಂ ದೇಶದಭಕ್ತರ। ನಿಲಯಂಗಳ ನೈದೆ ಪೊಕ್ಕು ತತ್ಪೂಜೆಗಳಂ ॥ ನಲವಿಂ ಕೈಕೊಳುತೆಯ್ದಿದೆ। ನಲಂಪಿನಿಂ ಮಿಸುಪ ಕಾಂಚಿಯೆಂಬಾಪೊಳಲಂ ॥ ॥೮॥

ಕಂ ॥ ಆಪುರದೊ ಳೆಸೆವ ಸುಗುಣಕ। ಲಾಪನ ಚಿರುತೊಂಡ ನಾಲಯಂಬುಗುತೆ ಸಮು ॥ ದ್ದೀಪಿತತದ್ಭಕ್ತಿರಸನು। ನೇಪೊಳ್ತುಂ ಕೈಕೊಳುತ್ತೆ ಸುಖಮಿರುತಿರ್ದೆಂ ॥೯॥

ಕಂ ॥ ಆಭಕ್ತ ನೋರ್ಮೆ ನೆಗಳ್ದಮ। ಹಾಭಕ್ತಿ ಯತೀವಚಿತ್ರ ಮೇವೇಳ್ದಪೆ ನೀ ॥

---

ಉಜ್ಜ್ವಳತೇಜಂ- ಪ್ರಜ್ಜ್ವಲಿಸುವ ತೇಜಸ್ಸುಳ್ಳ, ಸಿಂಧುಬಲ್ಲಾಳಂ, ಬಳಿಯೊಳ್- ಕೂಡಲೇ, ಜಾವನಮೊಂಪುದುಂ- ಯೌವನವನ್ನುಹೊಂದುತಲೂ, ವಧುವಂ- ಹೆಂಡತಿಯನ್ನು, ಇತ್ತಂ; ಮೊನೆಯಕ್ಷಿತೀಶಂ, ಉದ್ಯತ್ಪ್ರೀಮದಿಂದೆ- ಹೆಚ್ಚಾದ ಪ್ರೀತಿಯಿಂದ, ಎನಗೆ, ಆಗಳುಂ- ಯಾವಾಗಲೂ, ಒಳ್ಪಿಂ, ತ್ರಿಗುಣೋಲ್ಲಸದ್ಭೃತಿಯುಂ- ಸತ್ವರಜಸ್ತಮೋಗುಣಗಳ ಪ್ರಕಾಶಮಾನವಾದ ಪೋಷಣೆಯನ್ನು, ಆಗಳುಂ, ಈವಂ; ಇಂತು, ಆದ್ಯರ್ಕಳಿಂ- ಪುರಾತನರಿಂದ, ಬಾಳ್ದೆಂ; ಈಗಳುಂ, ಆಭಕ್ತರ, ಮೇಳದಿಂ- ಜೊತೆಯಿಂದ, ಪೊಳ್ತಂ- ಕಾಲವನ್ನು, ಮಹೋತ್ಸಾಹದಿಂ, ಕಳೆದಪೆಂ. ... ... ... ॥೬॥

ಮಹೇಶ್ವರಭಕ್ತರ್- ಶಿವಭಕ್ತರಾದ, ಗುಣಯುಕ್ತರ್, ಅನ್ವಿತಮಹಾವೀರವ್ರತಾಲಂಕೃತರ್— ಅನ್ವಿತ- ಕೂಡಿದ, ಮಹತ್- ಅಧಿಕವಾದ, ವೀರವ್ರತ- ವೀರಶೈವನಿಯಮದಿಂದ, ಅಲಂಕೃತರ್- ಅಲಂಕರಿಸಲ್ಪಟ್ಟ, ಚೆನ್ನಯಂ, ಚಾರಮಂ, ಕರಿಕಾಲಂ, ಅತಿಭಕ್ತಂ- ಅತ್ಯಂತ ಭಕ್ತನಾದ, ತಿರುನೀಲಕಂಠರು, ಮಾನಕಂಜಾರ್ಯಸೌಂದರವಾಗೀಶ್ವರಸೇಡಿರಾಜವರಗುಂಡಾಧೀಶಮುಖ್ಯರ್, ಹರನಂ, ಪೂಜಿಪ, ಮಾಳ್ಕೆಯಿಂ- ರೀತಿಯಿಂದ, ಎನ್ನಂ, ಭಜಿಪರ್. ... ... ... ... ॥೭॥

ಪಲವುಂದೇಶದ- ಅನೇಕ ದೇಶಗಳಲ್ಲಿರುವ, ಭಕ್ತರ, ನಿಲಯಂಗಳಂ- ಮನೆಗಳನ್ನು, ಐದೆ- ಚೆನ್ನಾಗಿ, ಪೊಕ್ಕು, ತತ್ಪೂಜೆಗಳಂ- ಆ ಭಕ್ತರಿಂ ಮಾಡಲ್ಪಟ್ಟ ಪೂಜೆಗಳನ್ನು, ನಲವಿಂ- ಸಂತೋಷದಿಂದ, ಕೈಕೊಳುತೆ- ಸ್ವೀಕರಿಸುತ್ತ, ಅಲಂಪಿನಿಂ- ಆಧಿಕ್ಯದಿಂದ, ಮಿಸುಪ, ಕಾಂಚಿ, ಎಂಬ, ಆಪೊಳಲಂ- ಪಟ್ಟಣವನ್ನು, ಎಯ್ದಿದೆಂ- ಹೊಂದಿದೆನು. ... ... ... ... ... ॥೮॥

ಆಪುರದೊಳ್, ಎಸೆವ, ಸುಗುಣಕಲಾಪನ- ಸದ್ಗುಣಾಭರಣನಾದ, ಚಿರುತೊಂಡನ- ದಭ್ರಭಕ್ತನ, ಆಲಯಂಬುಗುತೆ- ಮನೆಯನ್ನು ಪ್ರವೇಶಿಸುತ್ತ, ಏಪೊಳ್ತುಂ- ಯಾವಾಗಲೂ, ಸಮುದ್ದೀಪಿತತದ್ಭಕ್ತಿರಸಮಂ- ಪ್ರಜ್ಜ್ವಲಿತವಾದ ಆ ಚಿರುತೊಂಡನ ಭಕ್ತಿಯನ್ನು, ಕೈಕೊಳುತ್ತೆ, ಸುಖಂ- ಸುಖವಾಗಿ, ಇರುತೆ, ಇರ್ದೆಂ. ... ... ... ... ... ॥೯॥

ಆಭಕ್ತಂ, ಓರ್ಮೆ- ಒಂದಾವರ್ತಿ, ನೆಗಳ್ದ- ಮಾಡಿದ, ಮಹಾಭಕ್ತಿ, ಅತೀವ- ಅತ್ಯಂತವಾಗಿ, ಚಿತ್ರಂ-

ಭೂಭಾಗದೊಳಾವಂಗ ಮ। ದಾಭೀಳಂ ನೆನೆಯಲೆಸಪ ಕಲಿಯಾವನದಂ ॥ ॥೧೦॥

ಚಂ ॥ ಶಿವಶಿವ ಭೈರವಾಕೃತಿಯೊಳೀಶ್ವರ ನೆಯ್ದು ಭವತ್ಕುಮಾರನಂ । ತವೆ ಕಡಿದಿಕ್ಕವೇಳ್ಕು ಮೆಮಗೆಂದೆನೆ ದೇವ ಮಹಾಪ್ರಸಾದ ಮೆಂ ॥ ದವಿಚಲಿತಾತ್ಮ ನಾತ್ಮಜನ ಗೋಣರಿದಳ್ಕದೆ ಸೀಳ್ದು ಮಾಂಸಮಂ । ಯುವತಿಯ ಕೈಯೊಳೀಯೆ ಪಚಿಸುತ್ತ ಮವಂಗುಣಲಿತ್ತಳಿತ್ತಿಯಿಂ ॥ ... ... ... ... ... ॥೧೧॥

ಕಂ ॥ ನಿಜಕುಲವರ್ಧನ ನೆನಿಪಾ । ತ್ಮಜ ನೊರ್ವನೆ ಚೆಲ್ವ ನೆಳೆಯ ನವನಂ ವಧಿಸು ॥ ತ್ತೆ ಜಡಮತಿ ಭೈರವಂಗಾ । ಸುಜನಸ್ತುತ ನಿತ್ತ ನೆಂದೊಡೆಂ ಬಣ್ಣಿಪುದೊ ॥ ॥೧೨॥

ಕಂ ॥ ವ್ರತಮಿರ್ದು ಜನಂ ಪಡೆಗುಂ । ಸುತನಂ ಸುತಮೋಹ ಮರಿದು ಪಶುಪಕ್ಷಿಮೃ ॥ ಗ ॥ ಪ್ರತತಿಗನೆ ತನ್ಮನಿಗೆ ನಿಜ । ಸುತನಂ ಕಡಿದಿತ್ತ ಸೆಟ್ಟಿಗಾರ್ದೊರೆ ದರೆಯೊಳ್ ॥೧೩॥

ಮತ್ತೇ ॥ ಹರನಂ ನಿಂದಿಸೆ ಕಾಟಕೋಟಘನಚಂಡ ರ್ತಂದೆಯುಂ ಕೊಂದರೆಂ । ಬರದೇಂ ವಿಸ್ಮಯಮೇ ಸಮುಜ್ಜ್ವಲಿತಕೋಪಾಟೋಪಯುಕ್ತ ರ್ಮಹೇ ॥ ಶ್ವರಭಕ್ತಂ ಚಿರುತೊಂಡ ನೊಲ್ವಸುತನಂ ತಪ್ಪೊಂದದಿರ್ಪಾತನಂ । ಭರದಿಂ ಭೈರವ ನೊಲ್ದು ಬೇಡೆ ತರಿದಿತ್ತಂ ಚಿತ್ರ ಮೀಧಾತ್ರಿಯೊಳ್ ॥ ... .. ... ... ॥೧೪॥

---

ಆಶ್ಚರ್ಯಕರವಾದದ್ದು; ಏವೇಳ್ದಪೆಂ- ಏನುಹೇಳಲಿ! ಈಭೂಭಾಗದೊಳ್, ಆವಂಗಂ, ನೆನೆಯಲ್- ಸ್ಮರಿಸುವದಕ್ಕೆ, ಅದು, ಆಭೀಳಂ- ಭಯಂಕರವು; ಅದಂ, ಎಸಪ- ಮಾಡುವ, ಕಲಿ- ಸಮರ್ಥನು, ಆವಂ ? ॥೧೦॥

ಶಿವಶಿವ!! ಈಶ್ವರಂ, ಭೈರವಾಕೃತಿಯೊಳ್, ಎಯ್ದಿ- ಬಂದು, ಎಮಗೆ, ತವೆ, ಭವತ್ಕುಮಾರನಂ- ನಿನ್ನ ಮಗನನ್ನು, ಕಡಿದು, ಇಕ್ಕವೇಳ್ಕುಂ- ಇಕ್ಕಬೇಕು; ಎಂದೆನೆ, ಅವಿಚಲಿತಾತ್ಮಂ- ನಿಶ್ಚಂಚಲವಾದ ಪ್ರಾಣವುಳ್ಳ ಆ ಚಿರುತೊಂಡನು, ದೇವ! ಮಹಾಪ್ರಸಾದಂ- ದೊಡ್ಡ ಅನುಗ್ರಹ, ಎಂದು, ಆತ್ಮಜನ- ಮಗನ, ಗೋಣರಿದು- ಕತ್ತನ್ನು ಕುಯ್ದು, ಅಳ್ಕದೆ- ಹೆದರದೆ, ಸೀಳ್ದು; ಯುವತಿಯ- ಹೆಂಡತಿಯ, ಕೈಯ್ಯೊಳ್, ಮಾಂಸಮಂ, ಈಯೆ- ಕೊಡಲು, ಪಚಿಸುತ್ತಂ- ಬೆಯ್ಸುತ್ತ, ಅಳ್ತಿಯಿಂ, ಅವಂಗೆ- ಈಶ್ವರನಿಗೆ, ಉಣಲ್- ಊಟವಂ ಮಾಡುವದಕ್ಕೆ, ಇತ್ತಳ್. ... ... ... ... ॥೧೧॥

ಚೆಲ್ವಂ- ಸುಂದರನು, ಎಳೆಯಂ- ಬಾಲಕನು, ನಿಜಕುಲವರ್ಧಕಂ- ತಮ್ಮ ವಂಶವನ್ನು ಅಭಿವೃದ್ಧಿಗೊಳಿಸುವನು, ಎನಿಪ, ಆತ್ಮಜಂ, ಒರ್ವನೆ; ಅವನಂ, ಆ ಸುಜನಸ್ತುತಂ- ಸತ್ಪುರುಷರಿಂದ ಸ್ತೋತ್ರ ಮಾಡಿಸಿಕೊಳ್ಳಲ್ಪಟ್ಟ ಆ ಚಿರುತೊಂಡನು, ವಧಿಸುತ್ತೆ- ಕೊಲ್ಲುತ್ತ, ಜಡಮತಿಭೈರವಂಗೆ- ಮೂಢಬುದ್ಧಿಯುಳ್ಳ ಭೈರವನಿಗೆ, ಇತ್ತಂ, ಎಂದೊಡೆ, ಎಂ ಬಣ್ಣಿಪುದೊ ? ... ... ॥೧೨॥

ಜನಂ, ವ್ರತಮಿರ್ದು- ಶೀಲದಿಂದ ಇದ್ದು, ಸುತನಂ, ಪಡೆಗುಂ; ಪಶುಪಕ್ಷಿಮೃಗಪ್ರತತಿಗೆ- ದನ ಹಕ್ಕಿ ಮೃಗ ಇವುಗಳ ಸಮೂಹಕ್ಕೆ, (ಇರುವ) ಸುತಮೋಹಂ- ಮಗನ ಮೇಲಣ ಪ್ರೀತಿಯು, ಅರಿದು- ಅಸಾಧ್ಯವು, ಎನೆ, ತನ್ಮನಿಗೆ- ಆ ಯತಿಗೆ, ನಿಜಸುತನಂ, ಕಡಿದು, ಇತ್ತ, ಸೆಟ್ಟಿಗೆ, ದರೆಯೊಳ್- ಭೂಮಿಯಲ್ಲಿ, ದೊರೆಯರ್- ಸಮಾನರಾರು ? ... ... ... ... ... ॥೧೩॥

ಹರನಂ, ನಿಂದಿಸೆ, ಕಾಟಕೋಟಘನಚಂಡರ್- ಕಾಟಕೋಟ ಶ್ರೇಷ್ಠನಾದ ಚಂಡ ಇವರುಗಳು, ಸಮುಜ್ಜ್ವಲಿತಕೋಪಾಟೋಪರ್- ಸ್ಫುಟವಾದ ಕೋಪಾತಿಶಯವುಳ್ಳವರಾಗಿ, ತಂದೆಯುಂ, ಕೊಂದರ್; ಎಂಬರ್; ಅದು, ವಿಸ್ಮಯಮೇಂ- ಆಶ್ಚರ್ಯವೇ ? ಭೈರವಂ, ಬೇಡೆ, ಮಹೇಶ್ವರಭಕ್ತಂ, ಚಿರುತೊಂಡಂ, ಒಲ್ವ- ಪ್ರೀತಿಪಾತ್ರನಾದ, ತಪ್ಪು, ಒಂದದೆ, ಇರ್ಪಾತನಂ, ಸುತನಂ, ಭರದಿಂ- ಬೇಗನೆ, ತರಿದು, ಇತ್ತಂ, ಈ ಧಾತ್ರಿಯೊಳ್, ಚಿತ್ರಂ. ... ... ... ... ॥೧೪॥

ಚಂ ॥ ಕಿರಿಕಿರಿದಾಗಿ ಕತ್ತರಿಸಿ ಪುತ್ರನ ಪಾಕಮನಟ್ಟು ಭಕ್ತಿಯಿಂ । ಎರಗಿ ಮಹೇಶ ಭುಂಜಿಸೆನೆ ಭುಂಜಿಪೆ ನೀಗಳೆ ನಿನ್ನ ಸೂನುವಂ ॥ ಕರೆ ಕರೆಯೆಂದವಂ ಬೆಸಸೆ ತಾಂ ಕರೆದೀಶ್ವರ ನೊಲ್ಮೆಯಾನುತ । ಳ್ಕರೊಳ್ ಸತೀಸುತಾಪ್ತಜನಸಂಯುತ ನೆಯ್ದಿದ ನೀಶ ಲೋಕಮಂ ॥ ... ... ... ... ... ... ॥೧೫॥

ವ ॥ ಅಂತವಂ ನಿಜಪುರಸಪ್ತವೀಥಿಸಮೇತಂ ಕೈಲಾಸಮಂ ಪ್ರವೇಶಿಸಿ ಗಣಾಗ್ರಗಣ್ಯನೆನಿಸಿರ್ದ ನಿಂತಪ್ಪಮಹಿಮೆಯಂ ಚಿರಕಾಲಂ ಬರ್ದುಂಕಿಯುಮಿನ್ನವರ ಮೊನೆಲ್ಲಿಯುಂ ಕಂಡುದಿಲ್ಲೆಂದು ತಾಪಸಂ ಸಿರಿಯಾಳ್ವನ ಮನದನುವಂ ಹಲಾಯುಧನಭಿಪ್ರಾಯಮಂ ನರಿಯಲೆಂದೊಡೆಯು ಲೊಡನಾಹಲಾಯುಧ ನೇಳಿದಂಗೆಯ್ದಿಂತೆಂದಂ ॥ * * * * *

ಚಂ ॥ ಶಿವಶಿವ ಶಂಭು ವೇಂ ಪಸಿಯರಕ್ಕಸನೇ ನರದೇಹಮಾಂಸಮಂ । ಸವಿವೊಡೆ ಕೆಟ್ಟನೇಂ ಶಿವಪರಾಯಣಸದ್ಗುಣಶೀಲಬಾಲನಂ ॥ ತವಿಪೊಡೆ ಭಕ್ತಿಹೀನನೆ ಯಿದೇತರಮಾತು ಮಹಾತ್ಮ ನಾವನೀಂ । ವಿವರಿಸದಿಂತುಟೇಂ ನುಡಿಯಲಕ್ಕುಮೆ ನಿನ್ನನದೇನನೆಂದಪೆಂ ॥ ... ... ... ... ... ... ॥೧೬॥

ಕಂ ॥ ನಿನ್ನಯ ನುಡಿಯಂ ತೊದಳೆಂ । ದಾಂ ನುಡಿಯಲ್ಕಾಣ್ಮೆ ನಯ್ಯ ಪೇಳ್ದೀ ಮಾತು ॥ ಪನ್ನಗಧರಭಕ್ತರದೇಂ । ಮನ್ನಿಪರೆ ವಿದಗ್ಧರರಸ ನೀನರಿಯದುದೇ ॥ ॥೧೭॥

---

ಪುತ್ರನಂ, ಕಿರಿಕಿರಿದಾಗಿ- ತುಂಡುತುಂಡಾಗಿ, ಕತ್ತರಿಸಿ, ಅಟ್ಟು- ಪಾಕವಂಮಾಡಿ, ಉಣಲ್, ಇಟ್ಟು, ಭಕ್ತಿಯಿಂದ, ಎರಗಿ, ಮಹೇಶ ! ಭುಂಜಿಸು, ಎನೆ, ಈಗಳೆ, ಭುಂಜಿಪೆಂ, ನಿನ್ನ, ಸೂನುವಂ- ಮಗನನ್ನು, ಕರೆ, ಎಂದು, ಅವಂ- ಈಶ್ವರನು, ಬೆಸಸೆ- ಆಜ್ಞಾಪಿಸಲು, ತಾಂ- ಆ ಭಕ್ತನು, ಕರೆದು, ಈಶ್ವರನ, ಒಲ್ಮೆಯಾನುತೆ- ಪ್ರೀತಿಯಂ ಹೊಂದುತ್ತ, ಸತೀಸುತಾಪ್ತಜನಸಂಯುತಂ- ಹೆಂಡತಿ ಮಗ ಇಷ್ಟಜನ ಇವರುಗಳೊಡನೆ ಕೂಡಿ, ಅಳ್ಕರೊಳ್- ಪ್ರೀತಿಯಿಂದ, ಈಶಲೋಕಮಂ, ಎಯ್ದಿದಂ. ... ॥೧೫॥

ಅಂತು, ಅವಂ- ಆ ಚಿರುತೊಂಡನು, ನಿಜಪುರಸಪ್ತವೀಥಿಸಮೇತಂ- ತನ್ನ ಪಟ್ಟಣದ ಏಳು ಬೀದಿಗಳಿಂದಲೂ ಕೂಡಿ, ಕೈಲಾಸಮಂ, ಪ್ರವೇಶಿಸಿ, ಗಣಾಗ್ರಗಣ್ಯಂ- ಗಣಂಗಳಲ್ಲಿ ಶ್ರೇಷ್ಠನು, ಎನಿಸಿ, ಇರ್ದಂ; ಅಂ, ಇನ್ನೆವರಂ- ಇದುವರಿವಿಗೂ, ಬರ್ದುಂಕಿಯುಂ- ಬದುಕಿದ್ದರೂ, ಇಂತಪ್ಪಮಹಿಮೆಯುಂ, ಎಲ್ಲಿಯುಂ, ಕಂಡುದು, ಇಲ್ಲ, ಎಂದು, ತಾಪಸಂ- ಯತಿಯು, ಸಿರಿಯಾಳ್ವನ, ಮನದ, ಅನುವಂ- ರೀತಿಯನ್ನು, ಹಲಾಯುಧನ, ಅಭಿಪ್ರಾಯಮಂ, ಅರಿಯಲ್ ಎಂದು- ತಿಳಿಯಬೇಕೆಂದು, ಒರೆಯಲ್- ಹೇಳಲು, ಒಡನೆ- ಕೂಡಲೇ, ಆ ಹಲಾಯುಧಂ, ಏಳಿದಂಗೆಯ್ದು- ತಿರಸ್ಕರಿಸಿ, ಇಂತು, ಎಂದಂ. * * * * * * * *

ಶಿವಶಿವ! ಶಂಭು, ನರದೇಹಮಾಂಸಮಂ, ಸವಿವೊಡೆ- ತಿನ್ನಬೇಕಾದರೆ, ಪಸಿಯರಕ್ಕಸನೇಂ ? ಹಸಿಯರಾಕ್ಷಸನೇ ? ಕೆಟ್ಟ, ಶಿವಪರಾಯಣಸದ್ಗುಣಶೀಲಬಾಲನಂ- ಶಿವನಲ್ಲಿ ಆಸಕ್ತಿಯುಳ್ಳ ಒಳ್ಳೆಯ ಗುಣವೇ ಸ್ವಭಾವವಾಗುಳ್ಳ ಮಗನನ್ನು, ತವಿಪೊಡೆ- ಕೊಲ್ಲಬೇಕಾದರೆ, ಭಕ್ತಿಹೀನನೇಂ ? ಇದು, ಏತರಮಾತು? ಮಹಾತ್ಮರ, ಆದ, ನೀಂ, ವಿವರಿಸದೆ- ವಿಚಾರಮಾಡದೆ, ಇಂತುಟು- ಹೀಗೆ, ನುಡಿಯಲ್, ಅಕ್ಕುಮೇಂ ? ನಿನ್ನಂ, ಅದೇನಂ ಎಂದಪೆಂ- ಏನೆಂದು ಹೇಳಲಿ ? ... ... ... ... ॥೧೬॥

ಅಯ್ಯಾ! ನಿನ್ನಯ, ನುಡಿಯಂ, ತೊದಳ್, ಎಂದು, ನುಡಿಯಲ್ಕೆ, ಆಂ, ಅಣ್ಮೆಂ- ಸಮರ್ಥನಾಗಲಾರೆನು; ಪೇಳ್ದ, ಈ ಮಾತಂ, ಪನ್ನಗಧರಭಕ್ತರ್, ಅದೇಂ ಮನ್ನಿಪರೇ- ಸನ್ಮಾನಿಸುವರೇನು? ವಿಧಗ್ಧರ- ಪಂಡಿತರ, ಅರಸ- ಒಡೆಯನೇ ! ನೀಂ, ಅರಿಯದುದೆ- ತಿಳಿಯದೇ ಇರತಕ್ಕದ್ದೇ ? ... ... ॥೧೭॥

ವ ॥ ಎಂದು ಹಲಾಯುಧಂಗೆ ಚರರೂಪಚಂದ್ರಧರ ನಿಂತೆಂದಂ ॥ * * * *

ಮತ್ತೇಭ ॥ ಪುಸಿಯಲ್ತಲ್ತು ಮದೀಯವಾಕ್ಯಮಿದು ಕೇಳ್ನಿನ್ನಾಣೆ ಭಕ್ತರ್ಗ್ಗಿದೇಂ । ಪೊಸತೇಂ ಕೇಳ್ಚರುತೊಂಡಮಸ್ತಕದೊಳೇ ಪುಟ್ಟಿತ್ತೆ ಸದ್ಭಕ್ತಿಸಾ ॥ ಹಸಯುಕ್ತರ್ ಶ್ಯರಣರ್ಕ್ಕಳೀಯರೆ ವಧೂಪುತ್ರಾತ್ಮರಂ ಶಂಭುಗೀ । ರಸೆಯೊಳ್ಕೇಳ್ದರಿದಿರ್ದು ಮೇಕೆ ತೊಡಳೆಂಬ ಯ್ಭಕ್ತಚೂಡಾಮಣಿ ॥ ... ... ... ... ॥೧೮॥

ಕಂ ॥ ಅತಿಶಯದುರ್ಲ್ಲಭವಸ್ತುವ । ನತನುಹರಂ ಬೇಳ್ಪನಲ್ತೆ ಭಕ್ತರ ನವರು ॥ ನ್ನತಿ ಮಿಗೆ ಕೊಟ್ಟಪ ರವರಂ । ಶಿತಿಕಂಠಂ ಮೆರೆವ ನವನಿಯೊಳ್ಗುಣಭರಣಾ ॥ ॥೧೯॥

ಧರೆಗೆ ಮೆರೆವಪೆ ನಿವರ್ಗ್ಗಂ । ಪರಮುಕ್ತಿಯ ನೀವೆ ನೆಂದು ಕೊಲಿಸಿದನೀಶಂ ॥ ತರಳನ ನಾಗಳೆ ಕರೆಯಿಸಿ । ಬರಿಸಿದ ನಾ ಗೃಹಕೆ ಶಂಭು ಗಾವುದೊ ದೋಷಂ ॥ ॥೨೦॥

ಕಂ ॥ ಒಪ್ಪದಮಗನಂ ವಧಿಸಿದೊ । ಡಪ್ಪುದು ಬೊಪ್ಪಂಗೆ ದೋಷ ಮಳಿವಿಂಗೆಳಸು । ತೊಪ್ಪುವ ಕುವರನ ವಧಿಸಿದೊ । ಡಪ್ಪುದೆ ಪೇಳ್ದೋಷ ಮದು ಮಹೀನುತಚರಿತ ॥

ಉ ॥ ಎಂದು ಕಪರ್ದ್ದಿ ಮಾರ್ನ್ನುಡಿಯೆ ಕೇಳ್ದು ಹಲಾಯುಧ ನುಗ್ರಕೋಪರೂ । ಪಂ ದಳವೇರೆ ಭಾಪು ಮಗುಳ್ದೆಂತುಟದೆಂತುಟು ಭಕ್ತವತ್ಸಲಂ ॥ ಕಂದನ ಮಾಂಸಮಂ ಬಯ

---

ಎಂದ, ಹಲಾಯುಧಂಗೆ, ಚರರೂಪಚಂದ್ರಧರಂ, ಇಂತು, ಎಂದು. * * * * * * *

ಇದು, ಮದೀಯವಾಕ್ಯಂ- ನನ್ನಮಾತು, ನಿನ್ನ, ಆಣೆ, ಪುಸಿ, ಅಲ್ತು, ಅಲ್ತು, ಕೇಳ್, ಇದು, ಭಕ್ತರ್ಗ್ಗೆ ಪೊಸತೇಂ? ಕೇಳ್; ಚೆರುತೊಂಡಮಸ್ತಕದೊಳೇ- ದಭ್ರಭಕ್ತನತಲೆಯಲ್ಲಿಯೋ (ಅಂದರೆ ಚಿರುತೊಂಡನೊಬ್ಬನಲ್ಲಿಯೋ) ಪುಟ್ಟಿತ್ತೆ ? ಈ ರಸೆಯೊಳ್- ಈ ಭೂಮಿಯಲ್ಲಿ, ಸದ್ಭಕ್ತಿಸಾಹಸಯುಕ್ತರ್, ಶರಣರ್ಕಳ್, ಶಂಭುಗೆ, ವಧೂಪುತ್ರಾತ್ಮರಂ- ಹೆಂಡತಿ ಮಕ್ಕಳು ಪ್ರಾಣ ಇವುಗಳನ್ನು, ಈಯರೆ, ಭಕ್ತಚೂಡಾಮಣಿ- ಭಕ್ತಶ್ರೇಷ್ಠನೇ ! ಕೇಳ್ದು, ಅರಿದು- ತಿಳಿದು, ಇರ್ದ್ದಂ, ಏಕೆತೊಡಳ್ಎಂಬಯ್- ಸುಳ್ಳೆಂದು ಏಕೆಹೇಳುವೆ? ... ... ... ... ... ॥೧೮॥

ಗುಣಾಭರಣ ! ಅತನುಹರಂ- ಮದನಧ್ವಂಸಿಯಾದ ಶಿವನು, ಭಕ್ತರಂ, ಅತಿಶಯದುರ್ಲ್ಲಭವಸ್ತುವಂ- ಅತ್ಯಂತವಾಗಿ ಹೊಂದುವದಕ್ಕಸಾಧ್ಯವಾದ ಪದಾರ್ಥವನ್ನು, ಬೇಳ್ಪಂಅಲ್ತೆ- ಕೇಳುವನಲ್ಲವೇ ? ಅವರ್- ಆ ಭಕ್ತರು, ಉನ್ನತಿ, ಮಿಗೆ, ಕೊಟ್ಟಪರ್- ಕೊಡುವರು; ಅವರಂ, ಶಿತಿಕಂಠಂ, ಅವನಿಯೊಳ್, ಮೆರೆವಂ- ಪ್ರಕಟಪಡಿಸುವನು. ... ... ... ... ... ॥೧೯॥

ಈಶಂ, ಧರೆಗೆ- ಭೂಮಿಯಲ್ಲಿ, ಮೆರೆವಪೆಂ- ಪ್ರಸಿದ್ಧಿಗೊಳಿಸುವೆನು; ಇವರ್ಗೆ- ಈ ಭಕ್ತರಿಗೆ, ಅಂ, ಪರಮುಕ್ತಿಯಂ- ಉತ್ಕೃಷ್ಟವಾದ ಮೋಕ್ಷವನ್ನು, ಈವೆ; ಎಂದು, ತರಳನಂ- ಮಗನನ್ನು, ಕೊಲಿಸಿದಂ, ಆಗಳೆ, ಆಗೃಹಕೆ, ಕರೆಯಿಸಿದಂ; ಶಂಭುಗೆ, ದೋಷಂ, ಆವುದೊ ? ... ... ॥೨೦॥

ಮಹೀನುತಚರಿತ– ಭೂಜನರಿಂ ಶ್ಲಾಘ್ಯವಾದ ಚರಿತ್ರೆಯುಳ್ಳವನೇ ! ಒಪ್ಪದ- ಸಮ್ಮತಿಸದೇಇರುವ, ಮಗನಂ, ವಧಿಸಿದೊಡೆ, ಬೊಪ್ಪಂಗೆ, ದೋಷಂ- ಪಾಪವು, ಅಪ್ಪುದು; ಅಳಿವಿಂಗೆ- ಸಾಯುವದಕ್ಕೆ, ಎಳಸುತ್ತೆ, ಒಪ್ಪುವ, ಕುವರನ, ವಧಿಸಿದೊಡೆ, ಅದು, ದೋಷಂ, ಅಪ್ಪುದೆ? ಕೇಳ್. ... ॥೨೧॥

ಎಂದು, ಕಪರ್ದಿ, ಮಾರ್ನ್ನುಡಿಯೆ- ಪ್ರತಿಯಾಗಿ ಹೇಳಲು, ಹಲಾಯುಧಂ, ಕೇಳ್ದು, ಉಗ್ರಕೋಪರೂಪಂ- ಭಯಂಕರವಾದ ಕೋಪದಿಂದುಂಟಾದ ಆಕಾರವು, ದಳವೇರೆ- ಹೆಚ್ಚಲು, ಭಾಪು- ಶಾಬಾಶ್; ಮಗುಳ್ದು, ಎಂತುಟು- ಹ್ಯಾಗೆ? ಅದು, ಎಂತುಟು? ಭಕ್ತವತ್ಸಲಂ, ಕಂದನ, ಮಾಂಸಮಂ, ಬಯಸಿ, ಬೇಡಿದನೇ

ಸಿ ಬೇಡಿದನೇ ಶಿವಭಕ್ತದಭ್ರಭ । ಕ್ತಂ ದಯೆಗೆಟ್ಟು ಕೊಂದನೆ ಮಹೇಶ್ವರಭಕ್ತ ನೆನಿಪ್ಪ ಬಾಲನಂ ॥ ... ... ... ... ... ॥೬೨॥

ಕಂ ॥ ಶಿರದೆಡೆಯೊಳ್ಕನಕದಕ । ಮ್ಮರಲಂ ತಳೆದಿರ್ದು ಮರುಳ ಕೆಳೆಗೊಂಡುದರಿಂ ॥ ಮರುಳಾದ ನಭವ ನಲ್ಲದೊ । ಡರಿವೆರಸದೆ ಭಕ್ತಸೂನುವಧೆಗೊಲ್ದಪನೆ ॥ ॥೬೩॥

ಕಂ ॥ ದರೆಗೆವನಂ ಮೆರೆವೊಡೆ ತ । ತ್ತರುಣನ ನಿಕ್ಕೆಂದು ಬೆಸಸೆ ಭಕ್ತಂ ಸುತಕಂ ॥ ಧರವಂ ನರಿವಾಗಳಾದೊಡ । ಮಿರವೆ ಶಿವಂ ತಾಂ ಪ್ರಸನ್ನನಾಗಲ್ವೇಡಾ ॥ ... ॥೬೪॥

ಕಂ ॥ ಮನುಜನನುತನಾಗಿರ್ದುಂ । ಮನುಜನ ಮಾಂಸಮನದೆಂತು ಬಯಸಿದ ನೀಶಂ ॥ ದನುಜನವೊಲಕಟ ಭಕ್ತನ । ತನುಜನ ವಧೆಗೆಂತು ಚಿತ್ತ ಮಿತ್ತನೊ ತಿಳಿಯೆಂ ॥

ಮತ್ತೇ ॥ ನಿಗಮಂ ತನ್ನಯ ವಾಕ್ಯ ಮಾಗಿರೆ ನಹಿಂಸ್ಯಾತ್ಸರ್ವಭೂತಾನಿ ಯೆಂ । ದು ಗಭೀರೋಕ್ತಿಯ ನೊಲ್ದು ತಾನೊರೆದು ಮುದ್ಯದ್ಧರ್ಮಿಯಾಗಿರ್ದು ಮಾ ॥ ಮಗುವಂ ಸದ್ಗುಣಿಯಂ ಸ್ವಭಕ್ತಿರುಚಿಯಂ ವಿಧ್ವಂಸನಂಗೆಯ್ಸುವ । ಜ್ಜುಗ ಕೊಲ್ದಂಗಡ ತನ್ನನೇಂ ನಗರೆ ಸದ್ಭಕ್ತ ರ್ಮಹೀಭಾಗದೊಳ್ ॥ ... .. ... ॥೬೬॥

---

ಶಿವಭಕ್ತದಭ್ರಭಕ್ತಂ- ಶಿವಭಕ್ತನಾದ ಚೆರುತೊಂಡನು, ದಯೆಗೆಟ್ಟು- ಕೃಪಾಶೂನ್ಯನಾಗಿ, ಮಹೇಶ್ವರಭಕ್ತಂ, ಎನಿಪ್ಪ, ಬಾಲನಂ, ಕೊಂದನೆ ? ... ... ... ... ॥೬೨॥

ಅಭವಂ, ಶಿರದ,ಎಡೆಯೊಳ್ ಕನಕದ- ಉನ್ಮತ್ತಿಯ, ಕಮ್ಮರಲಂ- ಸುಗಂಧವಿಶಿಷ್ಟವಾದ ಹೂವನ್ನು, ತಳೆದು, ಇರ್ದು, ಮರುಳ- ಭೂತಗಳನ್ನು, ಕೆಳೆಗೊಂಡುದರಿಂ- ಜೊತೆಮಾಡಿಕೊಂಡುದರಿಂದ, ಮರುಳ್- ಹುಚ್ಚನು, ಆದಂ; ಅಲ್ಲದೊಡೆ, ಅರಿವೆರಸದೆ- ತಿಳುವಳಿಕೆಯಿಲ್ಲದೆ, ಭಕ್ತಸೂನುವಧೆಗೆ- ಶಿವಭಕ್ತನ ಮಗನಂ ಕೊಲ್ಲಿಸುವದಕ್ಕೆ, ಒಲ್ದಪನೆ ? ... ... ... ... ॥೬೩॥

ಅವನಂ- ಆ ಭಕ್ತನನ್ನು, ದರೆಗೆ- ಭೂಮಿಯಲ್ಲಿ, ಮೆರೆವೊಡೆ- ಪ್ರಕಾಶಗೊಳಿಸಬೇಕಾದರೆ, ತತ್ತರುಣನಂ- ಅವನ ಮಗನನ್ನು, ಇಕ್ಕು- ಕೊಲ್ಲು, ಎಂದು, ಬೆಸಸೆ, ಭಕ್ತಂ, ಸುತಕಂಧರವಮಂ- ಮಗನ ಕತ್ತನ್ನು, ಅರಿವಾಗಳ್ ಆದೊಡಂ- ಕತ್ತರಿಸುವಾಗಾದರೂ, ಇರಧೆ- ಬಿಡವೆ, ಶಿವಂ, ಪ್ರಸನ್ನಂ, ಆಗಲ್ವೇಡಾ- ಆಗಬೇಡವೇ ? ... ... ... ... ... ... ॥೬೪॥

ಈಶಂ, ಮನುಜನನುತಂ- ಮನುಚಕ್ರವರ್ತಿಯ ಜನಗಳಿಂದ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟವನು ( ಮಂತ್ರಗಳೇನು ಸಕಲ ಲೋಕವೇನು ಇವುಗಳಿಂದ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟವನು ) ಆಗಿ, ಇರ್ದುಂ, ದನುಜನವೊಲ್- ರಾಕ್ಷಸನಹಾಗೆ, ಮನುಜನಮಾಂಸಮಂ- ಮನುಚಕ್ರವರ್ತಿಯ ಜನಗಳ ಮಾಂಸವನ್ನು, ( ಮನುಷ್ಯನ ಮಾಂಸವನ್ನು ) ಅದೆಂತುಬಯಸಿದಂ ? ಅಕಟ ! ಭಕ್ತನ, ತನುಜನ ಮಗನ, ವಧೆಗೆ, ಎಂತು ಚಿತ್ತವಿತ್ತನೋ- ಹ್ಯಾಗೆ ಮನಸ್ಸನ್ನು ಕೊಟ್ಟನೋ ? ತಿಳಿಯೆಂ ! ... ॥೬೫॥

ನಿಗಮಂ- ವೇದವು, ತನ್ನಯ, ವಾಕ್ಯಂ, ಆಗಿ, ಇರೆ, ನಹಿಂಸ್ಯಾತ್ ಸರ್ವಭೂತಾನಿ- ಸಕಲಪ್ರಾಣಿಗಳನ್ನು ಕೊಲ್ಲಕೂಡದು, ಎಂದು, ಗಭೀರೋಕ್ತಿಯುಂ- ಗಂಭೀರವಾದ ಮಾತನ್ನು, ತಾಂ, ಒಲ್ದು, ಒರೆದುಂ- ಹೇಳಿಯೂ, ಉದ್ಯದ್ಧರ್ಮಿ- ಉತ್ಕೃಷ್ಟವಾದ ಧರ್ಮವುಳ್ಳವನು, ಆಗಿ, ಇರ್ದುಂ, ಸದ್ಗುಣಿಯುಂ, ಸ್ವಭಕ್ತಿರುಚಿಯುಂ- ತನ್ನ ಭಕ್ತಿಯಲ್ಲಿ ಪ್ರೀತಿಯುಳ್ಳ, ಆ ಮಗುವಂ, ವಿಧ್ವಂಸನಂಗೆಯ್ಸುವ- ಕೊಲ್ಲಿಸುವ, ಉಜ್ಜುಗಕೆ- ಪ್ರಯತ್ನಕ್ಕೆ, ಒಲ್ದಂಗಡ- ಪ್ರೀತಿಸಿದನಲ್ಲವೇ? ಮಹೀಭಾಗದೊಳ್, ಸದ್ಭಕ್ತರ್, ತನ್ನಂ, ನಗರೇಂ- ಹಾಸ್ಯಮಾಡುವದಿಲ್ಲವೇ ! ... ... ... ... ... ॥೬೬॥

ಮತ್ತೇ॥ ಚರಲಿಂಗಾಕೃತಿಯಿಂ ಸಹಸ್ರಮುಖದಿಂ ಕ್ಷೀರಾನ್ನಮಂ ಕೊಂಡು ತದ್ವ। ರಭಕ್ತಾಲಯದೊಳ್ಬಳಿಕ್ಕ ಮವನುದ್ಯದ್ವಂಶಮಂ ಪೆರ್ಚಿಪ್ಪೊ॥ ದಿರವಂ ಮಾಣ್ದವನಾ ತ್ಮಜಾತನಡಗಂ ತಾಂ ಭಕ್ಷಿಸ ಲ್ಬೇಡಿ ಸಂ। ಹರಣಂಗೆಯ್ಸಿದ ನುಗ್ರ ನಳ್ಕದಪವಾದಕ್ಕೆಂ ದೊಡೇ ನೆಂದಪೆಂ ॥ ... ... ... ... ... ॥೭೮॥

ತರಳವೃತ್ತಂ ॥ ಮಸಣವಟ್ಟೆಯೊಳಾಡಿ ಪೆರ್ಮರುಳೊಂದುಗೂಡಿ ವಿರಾಜಿಸು। ತ್ತಸಮನೇತ್ರವೆ ಲೋಕಮೆಲ್ಲಮ ನಿಕ್ಕಿದಗ್ಗದದೋಸವಂ ॥ ನಿಸದವಿಾ ಶಿವಭಕ್ತಮಂದಿರಮಾಯ್ದು ನೀಗಲೊಡರ್ಚಿದಿ। ಗ್ವಸನ ನಕ್ಕಟ ಭಕ್ತಪುತ್ರನ ಹಿಂಸೆಗೊಲ್ದನಿದದ್ಭುತಂ ॥೭೯॥

ಕಂ ॥ ತಿರಿದುಂಡ ಕುಂದು ಚೆನ್ನನೊ। ಳರಸೊಡನುಂಡಂದು ಪೋದುದುಮೆಯರಸಂಗಾ ॥ ಮರುಳೊಡನಾಡಿದ ಕರೆಸೌಂ। ದರನೊಡನಾಡಿದುದರಿಂದೆ ಪರಿದುದು ಪೆರತೇಂ॥೮೦॥

ಮತ್ತೇ ॥ ಕರಿಚರ್ಮಾಂಬರಮಂ ಸಡಿಲ್ಚಿ ನವವಾಸೋಧಾರಣಂಗೆಯ್ಸಿದಂ। ವರದಾಸಂ ತಲೆಮಾಲೆಯಂ ಬಿಡಿಸುತುಂ ಬಾಹೂರಬೊಮ್ಮಯ್ಯನಾ ॥ ದರದಿಂ ಕೌಸುಮಮಾಲೆಯಿತ್ತ ನೆಲಗೊಂಡಾಖ್ಯಂ ಚಿತಾಭಸ್ಮಮಂ। ಪರಮೇಶಂಗೆ ತೆರಳ್ಚಿ ಚಂದನವಿಲೇಪಂಗೆಯ್ದನೀಧಾತ್ರಿಯೊಳ್ ॥ .. ... ... ... ... ॥೮೦॥

---

ಉಗ್ರಂ– ಈಶ್ವರನು, ತದ್ವರಭಕ್ತಾಲಯದೊಳ್- ಆ ಶ್ರೇಷ್ಠನಾದ ಭಕ್ತನ ಮನೆಯಲ್ಲಿ, ಚರಲಿಂಗಾಕೃತಿಯಿಂ- ಜಂಗಮಲಿಂಗರೂಪದಿಂದ, ಸಹಸ್ರಮುಖದಿಂ– ಅನೇಕ ವಿಧದಿಂದ, ಕ್ಷೀರಾನ್ನಮಂ- ಹಾಲು ಅನ್ನವನ್ನು, ಕೊಂಡು- ಸ್ವೀಕರಿಸಿ, ಬಳಿಕ್ಕಂ ಅನಂತರ, ಅವನ- ಆ ಭಕ್ತನ, ಉದ್ಯದ್ವಂಶಮಂ- ಉತ್ಕೃಷ್ಟವಾದ ಸಂತತಿಯನ್ನು, ಪೆರ್ಚಿಪ- ಅಭಿವೃದ್ಧಿಗೊಳಿಸುವ, ಒಂದಿರವಂ- ಒಂದು ರೀತಿಯನ್ನು, ಮಾಣ್ದು- ಬಿಟ್ಟು, ಅವನ- ಆತ್ಮಜಾತನ- ಮಗನ, ಅಡಗಂ- ಮಾಂಸವನ್ನು, ತಾಂ, ಭಕ್ಷಿಸಲ್, ಬೇಡಿ, ಅಪವಾದಕ್ಕೆ- ನಿಂದೆಗೆ, ಅಳ್ಕದೆ- ಹೆದರದೆ, ಸಂಹರಣಂಗೆಯ್ಸಿದಂ, ಎಂದೊಡೆ, ಏನೆಂದಪೆಂ. ... ॥೭೮॥

ದಿಗ್ವಸನಂ- ದಿಕ್ಕುಗಳೇ ವಸ್ತ್ರವಾಗುಳ್ಳ ಈಶ್ವರನು, ಮಸಣವಟ್ಟೆಯೊಳ್– ಸ್ಮಶಾನದ ಮಾರ್ಗದಲ್ಲಿ, ಪೆರ್ಮರುಳೊಂದುಗೂಡಿ- ದೊಡ್ಡ ಪಿಶಾಚಗಳೊಡನೆಕೂಡಿ, ಆಡಿ- ಆಟವಾಡಿ, ವಿರಾಜಿಸುತ್ತೆ, ಅಸಮನೇತ್ರದೆ- ಅಗ್ನಿನೇತ್ರದಿಂದ, ಲೋಕಮೆಲ್ಲಮಂ, ಇಕ್ಕಿದ- ನಾಶಗೊಳಿಸಿದ, ಅಗ್ಗದದೋಷಮಂ– ದೊಡ್ಡಪಾಪವನ್ನು, ನೀಗಲ್- ಹೋಗಲಾಡಿಸಿಕೊಳ್ಳುವದಕ್ಕೋಸ್ಕರ, ಒಡರ್ಚಿ- ಪ್ರಯತ್ನಪಟ್ಟು, ನಿಸದಂ- ನಿಶ್ಚಯವಾಗಿ, ಶಿವಭಕ್ತಮಂದಿರಮಾಯ್ದು– ಶಿವಭಕ್ತರ ಮನೆಯನ್ನುಹೊಕ್ಕು, ಭಕ್ತಪುತ್ರನ, ಹಿಂಸೆಗೆ, ಒಲ್ದು- ಪ್ರೀತಿಸಿದನು, ಅಕ್ಕಟ! ಇದು, ಅದ್ಭುತಂ !! ... ... ... ॥೭೯॥

ಉಮೆಯ, ಅರಸಂಗೆ, ತಿರಿದು, ಉಂಡ, ಕುಂದು-ದೋಷವು,ಚೆನ್ನನೊಳ್-ಚೆನ್ನಯ್ಯನೊಡನೆ, ಇರದೆ, ಉಂಡ, ಅಂದು, ಪೋದುದು; ಆಮರುಳೊಡನೆ-ಆಪಿಶಾಚಗಳೊಡನೆ, ಆಡಿದ,ಕರೆ-ದೋಷವು, ಸೌಂದರನೊಡನೆ-ಸುಂದರ ನಂಬ್ಯಣ್ಣನೊಡನೆ, ಆಡಿದುದರಿಂದೆ,ಪರಿದುದು-ನಾಶವಾಯ್ತು,ಪೆರತೇಂ-ಬೇರೆಹೇಳುವದೇನು?

ಈ ಧಾತ್ರಿಯೊಳ್, ವರದಾಸಂ- ಶ್ರೇಷ್ಠನಾದ ಜೇಡರದಾಸಯ್ಯನು, ಪರಮೇಶಂಗೆ, ಕರಿಚರ್ಮಾಂಬರಮಂ, ಸಡಿಲ್ಚಿ- ಬಿಚ್ಚಿಸಿ, ನವವಾಸೋಧಾರಣಂಗೆಯ್ಸಿದಂ- ಹೊಸಬಟ್ಟೆಯನ್ನು ಹೊದ್ದಿಸಿದನು; ಬಾಹೂರಬೊಮ್ಮಯ್ಯಂ, ಆದರದಿಂ, ತಲೆಮಾಲೆಯಂ, ಬಿಡಿಸುತ್ತಂ, ಕೌಸುಮಮಾಲೆಯಿತ್ತಂ- ಹೂವಿನಮಾಲೆಯನ್ನು ಕೊಟ್ಟನು; ನೆಲಗೊಂಡಾಖ್ಯಂ- ನೆಲಗೊಂಡನೆಂಬ ಹೆಸರುಳ್ಳಭಕ್ತನು, ಚಿತಾಭಸ್ಮಮಂ- ಹೆಣದ ಬೂದಿಯನ್ನು, ತೆರಳ್ಚಿ- ಕೆಡಿಸಿ, ಚಂದನವಿಲೇಪಂಗೆಯ್ದಂ- ಶ್ರೀಗಂಧದ ಲೇಪನೆಯಂ ಮಾಡಿದನು. ॥೮೦॥

ಕಂ || ಇಂತೆಮ್ಮ ಪುರಾತನರಿಂ | ಕಂತುಹರಂ ಶುದ್ಧನೆನಿಸಿ ಭಕ್ತಾರ್ಭಕನಂ | ತಾಂ ತವಿವಂತೆಸಗಿದ ನಿವ | ನಿಂ ತಿಳಿವೊಡೆ ಲೋಕದೊಳ್ಕೃತಘ್ನರು ಮೊಳರೆ || ||೩೧||

ಮತ್ತೇ || ನರಮಾಂಸಾರ್ಥಿ ಪುರಾರಿ ಯೊಲ್ದೆರೆಯೆ ಸಮ್ಯಗ್ವೀರಶೈವವ್ರತಾ | ಚರಣರ್ಮೆಚ್ಚೆ ನಿರೀಕ್ಷಿಸುತ್ತೆ ಶರಣರ್ಕೊಂಡಾಡೆ ನೃಪಾಂಗಭಾ || ಸುರಮಾಂಸವ್ರಜಮಂ ಸಮರ್ಪಿಸದೆ ತನ್ನಂ ವಂಚಿಸುತ್ತಕ್ಕಟಾ | ಸಿರಿಯಾಳ್ವಂ ಕಡಿದಿಕ್ಕಲಕ್ಕುಮೆ ಶಿವಾಜ್ಞಾಪಾಲನಂ ಬಾಲನಂ || ... .. ... ... ... ||೩೨||

ಕಂ || ತನಗೆ ಸುತನಾದೊಡೇಂ ಪಾ | ವನಜಂಗಮಮಲ್ತೆ ಶೈವಲಾಂಛನಧರನಾ || ತನ ನಕಟ ವಧಿಸಿ ಭೈರವ | ಮುನಿಗಿಕ್ಕಿದ ನಮಮ ಭಕ್ತ ನಿಂತಿರವೇಡ || ... ||೩೩||

ಮತ್ತೇ || ಶಿಶುಹಿಂಸಾಜನಿತಾಪವಾದ ಮಕಟೇತಂಗಕ್ಕು ಮೀಶಂಭು ಕೊ | ರ್ತ್ತಶುಭಾರಂಭಮ ನಿಂತು ಮಾಡಿಸಿದ ನೆಂದೀಲೋಕದೊಳ್ನಾಡೆ ದು || ರ್ಯ್ಯಶಮೆನ್ನಂ ಬಿಡದೆಂದು ಭೀತಿ ಮಿಗೆ ಬರ್ದ್ದಿಂ ಬೇಗದೊಳ್ಮಾಣದಾ | ಪಶುಪಂ ತಾಂ ಕರೆ ಯೆಂದು ಮೋಣ್ಬರಿಸಿದಂ ಚೇಲಾಳನಂ ಲೀಲೆಯಿಂ || ... ... ... ... ... ||೩೪||

ಕಂ || ಭಕ್ತಂಗೆ ಹಿತಮ ನೆಸಗ | ಲ್ಕಭಕ್ತನ ನಿರದೆಂತು ಕೊಲಿಸಿದಂ ಪುರಹರನಾ || ಭಕ್ತಂಜಂಗಮತೃಪ್ತಿನಿ | ಯುಕ್ತಂ ಜಂಗಮಮ ನೆಂತು ಕೊಂದನೊ ಬಳಿಯಿಂ ||೩೫||

---

ಇಂತು, ಎಮ್ಮ, ಪುರಾತನರಿಂ, ಕಂತುಹರಂ, ಶುದ್ಧಂ, ಎನಿಸಿ, ತಾಂ, ಭಕ್ತಾರ್ಭಕನಂ- ಭಕ್ತನ ಮಗನನ್ನು, ತವಿವಂತೆ- ಕೊಲ್ಲುವಹಾಗೆ, ಎಸಗಿದಂ- ಮಾಡಿದನು; ತಿಳಿವೊಡೆ- ವಿಚಾರಮಾಡಿದರೆ, ಲೋಕದೊಳ್, ಇವನಿಂ-ಈ ಈಶ್ವರನಿಗಿಂತಲೂ, ಕೃತಘ್ನರುಂ-ಮಾಡಿದುಪಕೃತಿಯನ್ನು ಮರೆಯುವವರೂ, ಒಳರೇ-ಉಂಟೇ ?

ಪುರಾರಿ, ನರಮಾಂಸಾರ್ಥಿ- ಮನುಷ್ಯರ ಮಾಂಸವನ್ನಪೇಕ್ಷಿಸುವವನಾಗಿ, ಒಲ್ದು, ಎರೆಯೆ- ಬೇಡಲು; ಸಮ್ಯಗ್ವೀರಶೈವವ್ರತಾಚರಣರ್- ಒಳ್ಳೆಯ ವೀರಶೈವಾಚಾರವಂ ನಡೆಯಿಸುವ, ಶರಣರ್, ನಿರೀಕ್ಷಿಸುತ್ತೆ, ಮೆಚ್ಚೆ, ಕೊಂಡಾಡೆ- ಕೊಂಡಾಡುವಹಾಗೆ, ಸಿರಿಯಾಳ್ವಂ, ನೃಪಾಂಗಭಾಸುರಮಾಂಸವ್ರಜಮಂ- ತನ್ನ ಶರೀರದ ಮನೋಹರವಾದ ಮಾಂಸವನ್ನು, ಸಮರ್ಪಿಸದೆ, ತನ್ನಂ, ವಂಚಿಸುತ್ತೆ, ಶಿವಾಜ್ಞಾಪಾಲನಂ- ಪರಮೇಶ್ವರನ ಅಪ್ಪಣೆಯಂ ಪೋಷಿಸುವ, ಬಾಲನಂ, ಕಡಿದು, ಇಕ್ಕಲ್, ಅಕ್ಕುಮೆ ? ಅಕ್ಕಟಾ !! ||೩೨||

ತನಗೆ, ಸುತಂ, ಆದೊಡೇಂ? ಶೈವಲಾಂಛನಧರಂ-ಶಿವಸಂಬಂಧವಾದ ಚಿಹ್ನೆಗಳಂ ಧರಿಸಿರುವವನು, ಪಾವನಜಂಗಮಂ ಅಲ್ತೆ? ಆತನು, ಅಕಟ ! ವಧಿಸಿ, ಭೈರವಮುನಿಗೆ, ಇಕ್ಕಿದನೆ? ಅಮಮ ! ಭಕ್ತ, ಇಂತು, ಇರವೇಡ.

ಈತಂಗೆ- ಈ ಸಿರಿಯಾಳನಿಗೆ, ಶಿಶುಹಿಂಸಾಜನಿತಾಪವಾದಂ- ಮಗುವನ್ನು ಕೊಂದುದರಿಂದುಂಟಾದ ಲೋಕನಿಂದೆಯು, ಅಕ್ಕು; ಅಕಟ ! ಈ ಶಂಭು, ಕೊರ್ತ್ತು- ಪ್ರೀತಿಸಿ, ಇಂತು, ಅಶುಭಾರಂಭಮಂ- ಅಮಂಗಲೋದ್ಯೋಗವನ್ನು, ಮಾಡಿಸಿದಂ; ಎಂದು, ಈ ಲೋಕದೊಳ್, ನಾಡೆ- ಅಧಿಕವಾಗಿ, ದುರ್ಯಶಂ- ಅಪಕೀರ್ತ್ತಿಯು, ಎನ್ನಂ, ಬಿಡದು, ಎಂದು, ಆ ಪಶುಪಂ, ತಾಂ, ಭೀತಿ, ಮಿಗೆ- ಹೆಚ್ಚಾಗಲು, ಬರ್ದ್ದಿಂ- ಸಾಯುವದಕ್ಕಿಂತಲೂ, ಬೇಗದೊಳ್- ಮುಂಚೆಯೇ, ಮಾಣದೆ- ಬಿಡದೆ, ಚೇಲಾಳನಂ, ಕರೆ, ಎಂದು, ಲೀಲೆಯಿಂ, ಮೋಣ್, ಬರಿಸಿದಂ- ಬರಮಾಡಿಕೊಂಡನು. ... ... ... ||೩೪||

ಪುರಹರಂ, ಭಕ್ತಂಗೆ, ಹಿತಮಂ, ಎಸಗಲ್- ಉಂಟುಮಾಡುವದಕ್ಕೆ, ಭಕ್ತನಂ, ಇರದೆ, ಎಂತು ಕೊಲಿಸಿದಂ ? ಜಂಗಮತೃಪ್ತಿನಿಯುಕ್ತಂ- ಜಂಗಮನಿಗೆ ತೃಪ್ತಿಪಡಿಸುವದರಲ್ಲಿ ಆಜ್ಞಾಪ್ತನಾದ, ಆ ಭಕ್ತಂ, ಬಳಿಯಿಂ- ಅನಂತರ, ಜಂಗಮಮಂ, ಎಂತು ಕೊಂದನೊ ? ... ... ... ||೩೫||

ಕಂ॥ ಮಡಿಯಲೆಳಸಿರೊದ್ದಡು ತ । ನ್ಮೃಡಚಿಹ್ನಾಂಕಿತನ ಸಿಕ್ಕಲಕ್ಕುಮೆ ಸುತನಂ॥
ಪೊಡವಿಯೊಳೇತರಭಕ್ತಿಯ । ಪೊಡರ್ಪು ಜಾತಂಗೆ ಬಲ್ಲರೊಲ್ವರೆ ತನ್ನಂ ॥ ... ॥೩೬॥

ಮಹಾಸ್ರ॥ ಎಳೆಗೂಸಂ ಕೊಲ್ವುದುಂ ಮೆಲ್ವುದು ಮಿಳೆಯೊಳನಾಚಾರಮಿಂತಪ್ಪ ಕೃತ್ಯ । ಕ್ಕೆಳಸುತ್ತಂ ಮಾಳ್ಪವ ರ್ದಾನವ ರವರ ಸದೇಂಬಲ್ವರೇ ಭಕ್ತರೀದು ॥ ಪ್ಪುಳ ರೀರ್ವ ರ್ತತ್ಕಥಾವಿಸ್ತರಮ ನೊರೆವವ ರ್ಕೇಳ್ವವ ರ್ಶಂಭುಭಕ್ತ । ರೊಗ್ಗಿಗಲ್ತಲ್ತೆಂದವಂ ತಾಂಪೊರಗೆನುತಧಟಂ ಡಂಗುರಂಬೊಯ್ದ ನಾಗಳ್ ॥ ... .. ॥೩೭॥

ವ॥ ಇಂತು ಹಲಾಯುಧಭಕ್ತ ನಾಕ್ಷೇಪದಿಂ ಬಹಿಷ್ಕರಿಸೆ ಶಂಕರಂ ಬಿಗುರ್ತು ಭೀತಿಯಿಂ ಮುಂಗೆಟ್ಟು ಕಡುನಡುಗುವ ಚಿರುತೊಂಡಂಗಂಜದಿರೆಂದು ಮೆಲ್ಲನೆ ಸಂತವಿಸಿ ನಿಜಾಂಗನೆಯೆನಿಪ ಸರ್ವಮಂಗಳೆಯಂ ನೆನೆದು ಚೆಂಗಳೆವೆರಸಿ ಬರಿಸೆ ತಪಸ್ವಿನೀವೇಷವು ನಾದೇವಿ ತಳೆದೇಳ್ತಂದು ಹಲಾಯುಧನ ಮುಂದೆ ನಿಲ್ವುದು ಮಾಗಳಾಭಕ್ತನಿದಿರೇಳ್ದಭಿವಂದಿಸಿ ಸಮುಚಿತಸತ್ಕಾರಮ ನೆಗಳಲೊಡನೆ ಕೈಕೊಳುತ್ತಪರ್ಣೆ ಯಿಂತೆಂದಳ್ ॥ *

ಮಡಿಯಲ್- ಸಾಯಲುವದಕ್ಕೆ, ಎಳಸಿ, ಇರ್ದೊಡು, ತನ್ಮೃಡಚಿಹ್ನಾಂಕಿತನಂ- ಆ ಶಿವನ ಲಾಂಛನದಿಂ ಗುರುತು ಮಾಡಲ್ಪಟ್ಟಿರುವ, ಸುತನಂ, ಇಕ್ಕಲ್- ಕೊಲ್ಲುವದಕ್ಕೆ, ಅಕ್ಕುಮೆ? ಪೊಡವಿಯೊಳ್, ಆತಂಗೆ- ಆಸಿರಿಯಾಳನಿಗೆ, ಇಮ- ಮಗನಂ ಕೊಲ್ಲುವದು, ಏತರಭಕ್ತಿಯಪೊಡರ್ಪು- ಯಾತರಭಕ್ತಿಯ ಅತಿಶಯ? ತನ್ನಂ, ಬಲ್ಲರ್, ಬಲ್ವರೆ? ... ... ... ... ॥೩೬॥

ಎಳೆಗೂಸಂ, ಕೊಲ್ವುದುಂ, ಮೆಲ್ವುದಂ- ತಿನ್ನುವದೂ, ಇಳೆಯೊಳ್, ಅನಾಚಾರಂ- ಆಚಾರವಲ್ಲವು; ಇಂತಪ್ಪಕೃತ್ಯಕ್ಕೆ, ಎಳಸುತ್ತಂ, ಮಾಳ್ಪವರ್- ಮಾಡುವವರು, ದಾನವರ್- ರಾಕ್ಷಸರು; ಅವರಂ, ಭಕ್ತರ್, ಅದೇಂಬಲ್ವರೇ- ಪ್ರೀತಿಸುವರೇನು ? ಈ ದುಷ್ಪಳರ್- ಈ ಕೆಟ್ಟನೀಚರಾದ, ಈರ್ವರ್- ಈಶ್ವರ ಸಿರಿಯಾಳ ಸೆಟ್ಟಿಯರು, ತತ್ಕಥಾವಿಸ್ತರಮಂ- ಅವರಿಬ್ಬರ ವಿಸ್ತಾರವಾದ ಕಥೆಯನ್ನು, ಒರೆವವರ್- ಹೇಳುವವರು, ಕೇಳ್ವವರ್, ಶಂಭುಭಕ್ತರ್ಗೆ, ಒಳಗು- ಗುಂಪಿನಲ್ಲಿ ಸೇರಿದವರು, ಅಲ್ತು, ಅಲ್ತು; ಎಂದು, ಅವಂ, ತಾಂ, ಪೊರಗೆ- ಹೊರಗೆ; ಎನುತೆ, ಆಗಳ್, ಅಧಟಿಂ- ಶೌರ್ಯದಿಂದ, ಡಂಗುರಂಬೊಯ್ದಂ- ಡಂಗುರವಂ ಹೊಡೆದನು. ... ... ... ... ... ... ॥೩೭॥

ಇಂತುಂ, ಆ ಹಲಾಯುಧಭಕ್ತಂ, ಆಕ್ಷೇಪದಿಂ- ನಿಂದಿಸುವಿಕೆಯಿಂದ, ಬಹಿಷ್ಕರಿಸೆ- ಬಹಿಷ್ಕಾರವಂ ಕೊಡಲು, ಶಂಕರಂ, ಬಿಗುರ್ತು- ಭಯಪಟ್ಟು, ಭೀತಿಯಿಂ, ಮುಂಗೆಟ್ಟು- ಬುದ್ಧಿತೋಚದೆ, ಕಡುನಡುಗುವ- ಬಹಳವಾಗಿ ಕಂಪಿಸುವ, ಚಿರುತೊಂಡಂಗೆ, ಅಂಜದಿರ್, ಎಂದು, ಮೆಲ್ಲನೆ, ಸಂತವಿಸಿ- ಸಮಾಧಾನಪಡಿಸಿ, ನಿಜಾಂಗನೆ, ಎನಿಪ, ಸರ್ವಮಂಗಳೆಯುಂ- ಪಾರ್ವತಿಯನ್ನು, ನೆನೆದು- ಸ್ಮರಿಸಿ, ಚೆಂಗಳೆವೆರಸಿ- ಸಿರಿಯಾಳಪತ್ನಿಯಾದ ಚೆಂಗಳೆಯೊಡನೆಕೂಡಿ, ಬರಿಸೆ- ಬರಮಾಡಲು, ಆ ದೇವಿ, ತಪಸ್ವಿನೀವೇಷಮಂ- ಯತಿಸ್ತ್ರೀಯ ಆಕಾರವನ್ನು, ತಳೆದು, ಏಳ್ತಂದು, ಹಲಾಯುಧನ, ಮುಂದೆ, ನಿಲ್ವುದುಂ- ನಿಲ್ಲುತ್ತಲೂ, ಆಗಳ್, ಆಭಕ್ತಂ, ಇದಿರೇಳ್ದು- ಎದುರ್ಗೊಳ್ಳುವದಕ್ಕೋಸ್ಕರ ಎದ್ದು, ಅಭಿವಂದಿಸಿ, ಸಮುಚಿತಸತ್ಕಾರಮಂ- ಯೋಗ್ಯವಾದ ಪೂಜೆಯನ್ನು, ನೆಗಳಲ್- ಮಾಡಲು, ಒಡನೆ, * ಅಪರ್ಣೆ- ಪಾರ್ವತಿಯು, ಕೈಕೊಳುತ್ತೆ- ಸ್ವೀಕರಿಸುತ್ತ, ಇಂತು, ಎಂದಳ್. * * * * * * * * * * * * *

* (ಅವ) ಈಶ್ವರನಂ ಒಲಿಸಿಕೊಳ್ಳುವದಕ್ಕೋಸ್ಕರ ತಪಸ್ಸಂ ಮಾಡುವ ಕಾಲದಲ್ಲಿ ಮರದ ಎಲೆಗಳನ್ನೂಕೂಡ ಆಹಾರವನ್ನಾಗಿಮಾಡಿ ತಿನ್ನದೇ ಇದ್ದವಳು ಅಪರ್ಣೆ. * * * * * * * *

ತರಳವೃತ್ತಂ ॥ ಎಲೆಹಲಾಯುಧಭಕ್ತ ಭಕ್ತರೊಳಗ್ರಗಣ್ಯನೆನಿಪ್ಪ ನೀಂ । ನಲಸ ದೀವೆ ಸಮಸ್ತಭಕ್ತರಭೀಷ್ಟವಸ್ತುವ ನೀಧರಾ ॥ ವಲಯದಲ್ಲಿ ನಿತಾಂತ ಮಂತರಿ ನೆನ್ನಭೀಷ್ಟವು ನೀವುದೆಂ । ದೊಲವಿನಿಂ ಜಗದಂಬೆ ಬೇಡಿದೊಡೆಂದ ನೆಂದು ಹಲಾಯುಧಂ ॥ ... ... ... ... ... ... ॥೩೮॥

ಕಂ ॥ ಶರಣಗಣಪದರಜಃಕಣ । ಪರಮಾಣುನಿಭಂ ಭವನ್ಮನೋರಥದೊಳ್ಪಂ ॥ ದೊರೆಕೊಳಿಪೊಡೆನಿತರವ ನಾಂ । ಧರಣಿಯೊಳೆಲೆಜನನಿ ಶರಣಗಣಮೀಗು ಮದಂ ॥ ॥೩೯॥

ವ ॥ ಎಂದ ಹಲಾಯುಧನ ನಿರ್ಮದೋಕ್ತಿಯ ನವರ್ಣೆ ಯಾಕರ್ಣಿಸಿ ॥ * * *

ಕ. ॥ ಪತಿಯೆ ಗತಿ ಸತಿಗವಂ ನಿ । ರ್ಗತಿ ಯಾದೊಡೆ ಬಾಳ್ವಳೆಂತು ನಲೆ ಲಕ್ಷ್ಮೀಭಾ ॥ ರತಿಯರವೊಲನ್ಯಪುರುಷಾ । ಶ್ರಿತತ್ವದಿಂ ಬಾಳಲಾರ್ಪಳೇ ವಸುಮತಿಯೊಳ್ ॥ ॥೪೦॥

ಮತ್ತೇ ॥ ಪತಿ ಸದ್ಬಾಹಿರನಾಗೆ ಹಾನಿ ಸತಿಗಕ್ಕುಂ ಭಕ್ತ ನಿನ್ನಂಘ್ರಿಗಾ । ನತೆಯಾಗಿರ್ಪಳೆ ದಭ್ರಭಕ್ತವಧು ಪಾಂ ಶರ್ವಾಣಿ ಯೆತಾಪಸೋ ॥ ನ್ನತನಸ್ಮತ್ಪತಿ ಯಾತನೆತ್ತ ಬೆರುತೊಂಡು ಕೇಳ್ವುದಾವೀರ್ವರುಂ । ಪತಿಭಿಕ್ಷಾರ್ಥ ಮೊರಲ್ದು ನಿನ್ನಸಭೆಗಿಂದೇಳ್ತಂದೆ ವೌತ್ಸುಕ್ಯದಿಂ ॥ ... ... ... ... ... ॥೪೧॥

---

ಎಲೆಹಲಾಯುಧಭಕ್ತ ! ಭಕ್ತರೊಳ್, ಅಗ್ರಗಣ್ಯಂ- ಶ್ರೇಷ್ಠನು, ಎನಿಪ್ಪ; ನೀಂ, ಈಧರಾವಲಯದಲ್ಲಿ- ಈ ಭೂಮಂಡಲದಲ್ಲಿ, ಸಮಸ್ತಭಕ್ತರ, ಅಭೀಷ್ಟವಸ್ತುವಂ- ಇಷ್ಟಪಡಿಸಿದ ಪದಾರ್ಥವನ್ನು, ಅಲಸದೆ- ಆಲಸ್ಯವಂ ಹೊಂದದೆ, ನಿತಾಂತಂ- ಶೀಘ್ರವಾಗಿ, ಈವೆ- ಕೊಡುವೆ; ಅಂತರಿಂ- ಆದುದರಿಂದ, ಎನ್ನ, ಅಭೀಷ್ಟಮಂ, ಈವುದು; ಎಂದು, ಒಲವಿನಿಂ- ಪ್ರೀತಿಯಿಂದ, ಜಗದಂಬೆ- ಜಗತ್ತಿಗೆ ತಾಯಿಯಾದ ಪಾರ್ವತಿಯು, ಬೇಡಿದೊಡೆ, ಅಂದು, ಹಲಾಯುಧಂ, ಎಂದಂ. ... ... ... ॥೩೮॥

ಎಲೆಜನನಿ- ಎಲೌ ತಾಯಿಯೇ ! ಶರಣಗಣಪದರಜಃಕಣಪರಮಾಣುನಿಭಂ- ಶಿವಶರಣರ ಸಮೂಹದ ಪಾದದ ಧೂಳಿಯ ಪರಮಾಣುಗೆ ಸದೃಶನಾದ, ಆಂ, ಭವನ್ಮನೋರಥದ- ನಿನ್ನ ಇಷ್ಟದ, ಒಳ್ಪಂ, ದೊರೆಕೊಳಿಪೊಡೆ- ನೆರವೇರಿಸಿಕೊಡಬೇಕಾದರೆ, ಧರಣಿಯೊಳ್, ಎನಿತರವಂ- ಎಷ್ಟರವನು? ಇದಂ- ಆ ಮನೋರಥವನ್ನು, ಶರಣಗಣಂ, ಈಗುಂ. ... ... ... ... ॥೩೯॥

ಎಂದ, ಹಲಾಯುಧನ, ನಿರ್ಮದೋಕ್ತಿಯಂ-ಗರ್ವಹೀನವಾದವಚನವನ್ನು, ಅಪರ್ಣೆ, ಆಕರ್ಣಿಸಿ-ಕೇಳಿ.

ಸತಿಗೆ- ಪತಿವ್ರತೆಯಾದವಳಿಗೆ, ಪತಿಯೆ, ಗತಿ- ಪ್ರಾಪ್ಯಸ್ಥಾನನು; ಅವಂ,ನಿರ್ಗತಿ- ಪ್ರಾಪ್ಯಸ್ಥಾನರಹಿತನು, ಆದೊಡೆ, ಎಂತುಬಾಳ್ವಳ್- ಹ್ಯಾಗೆ ಬದುಕುವಳು ? ವಸುಮತಿಯೊಳ್, ಲಕ್ಷ್ಮೀಭಾರತಿಯರವೊಲ್, ಲಕ್ಷ್ಮಿ ಸರಸ್ವತಿ ಇವರುಗಳ ಹಾಗೆ, ಅನ್ಯಪುರುಷಾಶ್ರಿತತ್ವದಿಂ- ಮತ್ತೊಬ್ಬ ಮನುಷ್ಯನನ್ನು ಆಶ್ರಯಿಸುವಿಕೆಯಿಂದ, ಬಾಳಲ್, ಅರ್ಪಳೆ- ಸಮರ್ಥಳಾಗುವಳೇ ? ... ... ... ॥೪೦॥

ಪತಿ, ಸದ್ಬಾಹಿರಂ- ಸತ್ಪುರುಷರಿಗೆ ಹೊರಗಾದವನು, ಆಗೆ, ಸತಿಗೆ, ಹಾನಿ- ಭಂಗವು, ಅಕ್ಕುಂ; ಭಕ್ತ ! ನಿನ್ನ, ಅಂಘ್ರಿಗೆ- ಪಾದಕ್ಕೆ, ಆನತೆಯಾಗಿ- ನಮಸ್ಕರಿಸಿ, ಇರ್ಪಳೆ, ದಭ್ರಭಕ್ತವಧು- ಸಿರಿಯಾಳನ ಹೆಂಡತಿಯು; ಆಂ, ಶರ್ವಾಣಿ- ಈಶ್ವರನ ಹೆಂಡತಿಯು; ಆ ತಾಪಸೋನ್ನತಂ- ಆ ಋಷಿಶ್ರೇಷ್ಠನು, ಅಸ್ಮತ್ಪತಿ- ನನ್ನಗಂಡನು; ಆವಂ, ಬೆರುತೊಂಡುಬಿಲ್ತೆ ? ಕೇಳ್ವುದು, ಆವ್, ಈರ್ವರುಂ, ಪತಿಭಿಕ್ಷಾರ್ಥಂ- ಗಂಡಂದಿರು ಬೇಡುವದಕ್ಕೋಸ್ಕರ, ಒರಲ್ದು- ಪ್ರೀತಿಸಿ, ನಿನ್ನ, ಸಭೆಗೆ, ಇಂದು, ಔತ್ಸುಕ್ಯದಿಂ- ಕುತೂಹಲದಿಂದ, ಎಳ್ತಂದೆವ್- ಬಂದೆವು. ... ... ... ... ॥೪೧॥

ವ ॥ ಎಂಬುದುಂ ಕೇಳ್ದು ಹಲಾಯುಧಸಭಾಜನಂ ಕುತೂಹಲಭಾಜನ ಮಾಗಿ ನೋಡುತ್ತ ಮಿರೆ ಪತಿಭಿಕ್ಷಾಂದೇಹಿಯೆಂಬ ಚಂಗಳೆ ಸರ್ವಮಂಗಳೆಯ ದೈನ್ಯೋಕ್ತಿಯುಂ ಮನದೆಗೊಂಡು ಶಿವಗಣಸಮನ್ವಿತ ನಾಹಲಾಯುಧಂ ದೇವಂಗ ಮಾಭಕ್ತಂಗ ಮಭಯ ದಾನಂಗೆಯ್ದೀರ್ವ್ವರಂಬರಿಸಲೊಡನೆ ॥ * * * * * * * * * * *

ಮಂದಾನಿಲರಗಳೆ ॥ ಆಸಮಯದೊಳತಿಸಂಸಂಭ್ರಮ ಮೆಸೆದಿರೆ । ಭಾಸುರಸುರದುಂದುಭಿ ಮೊಳಗುತ್ತಿರೆ । ಸುರಿಯೆ ಸುರಾಗಮಸುಮನೋವರ್ಷಂ । ದರೆಯೊಳುಮಾಪತಿಗಣಮತಿಹರ್ಷಂ । ಮಿಗೆ ನೋಡುತ್ತಿರೆ ನಗಸುತೆಗೋಪಂ । ಸೊಗಯಿಸಿ ತೋರಿಸಿದಂ ನಿಜ ರೂಪಂ । ಜಡೆಮುಡಿ ಬಾಂದೊಳ್ ಶಶಿಕಳೆ ಮೆರೆದಿರೆ । ತೊಡರ್ದಹಿಕುಂಡಲಮಂಡಲಮಮರ್ದಿರೆ । ನಗೆಮೊಗ ಮಿನಶಶಿಹುತವಹನೇತ್ರಂ । ಬಗೆಗೊಳೆ ಕರೆಗೊರ ಲಹಿಪತಿಸೂತ್ರಂ । ವರ ಮಭಯಂ ಮೃಗ ಮತುಳಕುಠಾರಂ । ಕರಮೊಪ್ಪುತ್ತಿರೆ ಕರದೊಳುದಾರಂ । ಮದ ಗಜದಜಿನದಪೊದಿಕೆಯಳುಂಬಂ । ಸದಮಳನಿಜತನುಕಿರಣಕದಂಬಂ । ಮಿಸುಗೆ ವಿರಾಜಿಸಿ ದಂ ವೃಷವಾಹಂ । ಪೊಸತೆನೆ ಬಂದುದು ದಿವಿಜಸಮೂಹಂ । ಹರಿ ವಿಧಿ ಸುರಪತಿ ಶಿಖಿ ಯ ಮದನುಜರ್ । ವರುಣ ಪವನ ಧನಪತಿ ಶೂಲಭುಜರ್ । ಸುರ ಕಿನ್ನರ ಕಿಂಪುರುಷನಿಕಾಯಂ।

---

ಎಂಬುದಂ, ಕೇಳ್ದು, ಆ ಹಲಾಯುಧಸಭಾಜನಂ- ಆ ಹಲಾಯುಧಾರ್ಯನ ಸಭೆಯಲ್ಲಿಪ್ಪ ಜನವು, ಕುತೂಹಲ ಭಾಜನಂ- ಕೌತುಕಕ್ಕೆ ಪಾತ್ರವಾದದ್ದು, ಆಗಿ, ನೋಡುತ್ತಂ, ಇರೆ, ಪತಿಭಿಕ್ಷಾಂ- ಗಂಡನ ಭಿಕ್ಷವನ್ನು, ದೇಹಿ- ಕೊಡು, ಎಂಬ, ಚಂಗಳೆ ಸರ್ವಮಂಗಳೆಯ, ದೈನ್ಯೋಕ್ತಿಯಂ- ದೀನತ್ವದಿಂದುಂಟಾದ ಮಾತನ್ನು, ಮನದೆಗೊಂಡು- ಮನಸ್ಸಿನಲ್ಲಿ ಆಲೋಚಿಸಿ, ಶಿವಗಣಸಮನ್ವಿತಂ, ಹಲಾಯುಧಂ, ದೇವಂಗಂ- ಈಶ್ವರನಿಗೂ, ಆಭಕ್ತಂಗಂ, ಅಭಯದಾನಂಗೆಯ್ದು, ಈರ್ವ್ವರುಂ, ಬರಿಸಲ್- ಬರಮಾಡಲು, ಒಡನೆ. * *

ಆಸಮಯದೊಳ್, ಅತಿಸಂಭ್ರಮಂ- ಬಹು ಸಡಗರವು, ಎಸೆದು, ಇರೆ; ಭಾಸುರಸುರದುಂದುಭಿ-ಮನೋಹರವಾದ ದೇವತೆಗಳ ನಗಾರಿಯು, ಮೊಳಗುತ್ತೆ-ಶಬ್ದಮಂ ಮಾಡುತ್ತ, ಇರೆ; ಸುರಾಗಮಸುಮನೋವರ್ಷಂ- ಕಲ್ಪವೃಕ್ಷದ ಹೂವಿನ ಮಳೆಯು, ಸುರಿಯೆ; ದರೆಯೊಳ್, ಉಮಾಪತಿಗಣಂ- ಶಿವಗಣಂಗಳು, ಅತಿಹರ್ಷಂ, ಮಿಗೆ, ನೋಡುತ್ತೆ, ಇರೆ; ನಗಸುತೆಯ, ಓಪಂ- ಪತಿಯು, ಸೊಗಯಿಸಿ, ನಿಜರೂಪಂ, ತೋರಿಸಿದಂ; ಜಡೆಮುಡಿ, ಬಾಂದೊಳೆ- ಆಕಾಶಗಂಗೆ, ಶಶಿಕಳೆ- ಚಂದ್ರರೇಖೆ, ಮೆರೆದು, ಇರೆ; ತೊಡರ್ದ- ಸಿಕ್ಕಿರುವ, ಅಹಿಕುಂಡಲಮಂಡಲಂ- ಸರ್ಪದ ಕರ್ಣಕುಂಡಲದ ವಲಯವು, ಅಮರ್ದು- ಸೇರಿ, ಇರೆ; ನಗೆಮೊಗಂ- ಮಂದಹಾಸದಿಂ ಕೂಡಿದ ಮುಖ, ಇನಶಶಿಹುತವಹನೇತ್ರಂ- ಸೂರ್ಯ ಚಂದ್ರ ಅಗ್ನಿ ಇವುಗಳ ಕಣ್ಣುಗಳು, ಬಗೆಗೊಳೆ- ಮನೋಹರವಾಗಿರಲು; ಕರೆಗೊರಲ್- ಕಪ್ಪುಕತ್ತು, ಅಹಿಪತಿಸೂತ್ರಂ-ಆದಿಶೇಷನ ಯಜ್ಞೋಪವೀತ; ವರಂ- ವರಪ್ರದಾನ, ಅಭಯಂ- ಅಭಯಪ್ರದಾನ, ಮೃಗಂ- ಜಿಂಕೆ, ಅತುಳಕುಠಾರಂ- ಅಸದೃಶವಾದ ಕೊಡಲಿ, ( ಇವುಗಳು ) ಕರದೊಳ್, ಕರಂ- ಅತ್ಯಂತವಾಗಿ, ಒಪ್ಪುತ್ತೆ, ಇರೆ; ಉದಾರಂ- ಉತ್ಕೃಷ್ಟನಾದ ಶಿವನು, ಮದಗಜದ, ಅಜಿನದ- ಚರ್ಮದ, ಪೊದಿಕೆಯ, ಅಳುಂಬಂ- ಆಧಿಕ್ಯವು, ಸದಮಳನಿಜತನುಕಿರಣಕದಂಬಂ- ಸವಿಶೇಷವಾಗಿ ನಿರ್ಮಲವಾದ ತನ್ನ ದೇಹದ ಕಾಂತಿಯ ಸಮೂಹವು, ಮಿಸುಗೆ, ವೃಷವಾಹಂ, ವಿರಾಜಿಸಿದಂ; ದಿವಿಜಸಮೂಹಂ- ದೇವತೆಗಳ ಗುಂಪು, ಪೊಸತು, ಎನೆ, ಬಂದುದು; ಹರಿವಿಧಿಸುರಪತಿಶಿಖಿಯಮದನುಜರ್- ವಿಷ್ಣು ಬ್ರಹ್ಮ ಇಂದ್ರ ಅಗ್ನಿ ಯಮ ನಿರೃತಿಗಳು, ವರುಣಪವನಧನಪತಿಶೂಲಭುಜರ್- ವಾಯು ಕುಬೇರ ಈಶಾನರುಗಳು, ಸುರಕಿನ್ನರಕಿಂಪುರುಷನಿಕಾಯಂ, ಗರುಡೋರಗಸಿದ್ಧರ, ಸಮೂ

ಗರುತ್ಮೋರಗ ಸಿದ್ಧರ ಸಮುದಾಯಂ । ಮನು ಮುನಿ ಶಿಖಿ ಶಶಿ ರವಿ ವಸು ವಿಸರಂ । ಘನ
ನಿಗಮಾಗಮಪುರುಷಪ್ರಸರಂ । ನೆಗಳ್ದಾಡುವ ಸುರಲಲನೆಯರಂದಂ । ಮಿಗೆ ಪಾಡುವ ಗಂಧ
ರ್ವರ ವೃಂದಂ । ಬಳಸಿರೆ ನಾನಾವಾದ್ಯನಿನಾದಂ । ವಿಲಸಿತಸಂಗೀತದ ಮೃದುನಾದಂ । ಜ
ಯರವಮುಖರಮುಖಾಮರನಿಕರಂ । ನಿಯತಪ್ರಥಿತಪ್ರಮಥಪ್ರಕರಂ । ತೆರಪರಿದೆತ್ತಂ
ತುರುಗಿರೆ ಸುತ್ತಂ । ಗುಣಮಣಿಹಾರಂ ಪ್ರಣವಾಕಾರಂ । ವಿತರಣಶೀಲಂ ನುತಗುಣಪಾಲಂ ।
ಗಿರಿವರಚಾಪಂ ಮುರರಿಪುರೋಪಂ । ವೃಜಿನವಿಭಂಗಂ ವಿಜಿತಾನಂಗಂ । ಜನನಮೃತಿ
ದೂರಂ ಭುವನಾಧಾರಂ । ಕರುಣಾಖಾಂಗಂ ಗಿರಿಜಾರ್ಧಾಂಗಂ । ಸುರುಚಿಕಪರ್ದಂ ಕರ
ಮೆಸೆದಿರ್ದಂ ॥ ... * ... * ... * ... * ... * ... * ...

ಕಂ ॥ ಸಿರಿಯಾಳ್ನ ಚೋಳನ ಭೂ । ವರಚಾರಮನಮಳಚರಿತಮಂ ಗಾಯಕರ ॥
ಚ್ಚರಿಮಿಗೆ ಪಾಡುತ್ತಿರ್ದ । ರ್ಪುರಹರನಗ್ರಪ್ರದೇಶದೊಳ್ಬಿಡದಾಗಳ್ ॥ ... ॥೪೭॥

ಉ ॥ ಕಟ್ಟಿದಿರಲ್ಲಿ ಕಂಗೊಳಿಪ ಕಾಯಜವೈರಿಯ ದಿವ್ಯಮೂರ್ತಿಯಂ । ನೆಟ್ಟನೆ ಕಂ
ಡು ಪೊಂಪುಳಿಯನಾಳ್ದು ವಿಲೋಚನದಿಂ ಸುಖಾಶ್ರುಗ ॥ ಳೊತ್ತಟ್ಟಿಡೆ ಗದ್ಗದಂ ನೆಗೆಯೆ

---

ದಾಯಂ, ಮನುಮುನಿಶಿಖಿಶಶಿರವಿವಸುವಿಸರಂ- ಮನುಗಳು ಮುನಿಗಳು ಅಗ್ನಿ ಚಂದ್ರ ಸೂರ್ಯ ಅಷ್ಟವ
ಸುಗಳ ಸಮೂಹ, ಘನನಿಗಮಾಗಮಪುರುಷಪ್ರಸರಂ- ಶ್ರೇಷ್ಠವಾದ ವೇದಪುರುಷ ಆಗಮಪುರುಷರ ಸ
ಮೂಹವು, ನೆಗಳ್ದು- ಪ್ರಸಿದ್ಧರಾಗಿ, ಆಡುವ, ಸುರಲಲನೆಯರ- ದೇವತಾಸ್ತ್ರೀಯರ, ಅಂದಂ- ರೀತಿ
ಯು, ಮಿಗೆ, ಪಾಡುವ, ಗಂಧರ್ವರ, ವೃಂದಂ- ಗುಂಪು, ಬಳಸಿ- ಸುತ್ತಿ, ಇರೆ; ನಾನಾವಾದ್ಯನಿನಾದಂ, ವಿಳ
ಸಿತಸಂಗೀತದ, ಮೃದುನಾದ- ಕೋಮಲವಾದ ಶಬ್ದವು, ಜಯರವಮುಖರಮುಖಾಮರನಿಕರಂ-ಜಯ ಎಂ
ಬ ಶಬ್ದದಿಂದ ಶಬ್ದಾಯಮಾನವಾಗಿ ಮಾಡಲ್ಪಟ್ಟ ಬಾಯುಳ್ಳ ದೇವತೆಗಳ ಸಮೂಹವು, ನಿಯತಪ್ರಥಿತಪ್ರ
ಮಥಪ್ರಕರಂ- ನಿಶ್ಚಿತರಾಗಿ ಪ್ರಸಿದ್ಧರಾದ ಪ್ರಮಥರ ಸಮೂಹವು, ತೆರಪರಿದು- ವಿರಳವಾಗಿ ಪ್ರಸರಿಸಿ, ಎ
ತ್ತಂ- ಎಲ್ಲಾ ಕಡೆಯಲ್ಲೂ, ಸುತ್ತಂ, ತುರುಗಿ- ತುಂಬಿ, ಇರೆ; ಗುಣಮಣಿಹಾರಂ- ಸದ್ಗುಣಗಳೆಂಬ ರತ್ನ
ಗಳೇ ಹಾರವಾಗುಳ್ಳ, ಪ್ರಣವಾಕಾರಂ- ಓಂಕಾರಸ್ವರೂಪನಾದ, ವಿತರಣಶೀಲಂ- ದಾನಗುಣವೇ ಸ್ವಭಾವ
ವಾಗುಳ್ಳ, ನುತಗಣಪಾಲಂ- ಶ್ಲಾಘ್ಯರಾದ ಗಣಂಗಳನ್ನು ಸಂರಕ್ಷಿಸುವ, ಗಿರಿವರಚಾಪಂ- ಮೇರುಪರ್ವತವೇ
ಧನುಸ್ಸಾಗುಳ್ಳ, ಮುರರಿಪುರೋಪಂ- ವಿಷ್ಣುವೇ ಬಾಣವಾಗುಳ್ಳ, ವೃಜಿನವಿಭಂಗಂ- ಪಾಪವಂ ನಾಶಮಾಡಿ
ದ, ವಿಜಿತಾನಂಗಂ- ಜೈಸಲ್ಪಟ್ಟ ಮನ್ಮಥನುಳ್ಳ, ಜನಮೃತಿದೂರಂ- ಜನನ ಮರಣಗಳಿಗೆ ದೂರಸ್ಥನಾದ,
ಭುವನಾಧಾರಂ- ಪ್ರಪಂಚಕ್ಕೆ ಆಶ್ರಯನಾದ, ಕರುಣಾಖಾಂಗಂ-ದಯಾವಿಶಿಷ್ಟವಾದ ಕಡೆಗಣ್ಣೋಟವುಳ್ಳ,
ಗಿರಿಜಾರ್ಧಾಂಗಂ- ಪಾರ್ವತಿಯೇ ಅರ್ಧದೇಹವಾಗುಳ್ಳ, ಸುರುಚಿಕಪರ್ದಂ- ಸಮೀಚೀನವಾದ ಕಾಂತಿಯಿಂ
ಕೂಡಿದ ಜಡೆಯುಳ್ಳಶಿವನು, ಕರಂ, ಎಸೆದು, ಇರ್ದಂ. ... * ... * ... * ... * ...

ಆಗಳ್, ಪುರಹರನ, ಅಗ್ರಪ್ರದೇಶದೊಳ್- ಮುಂಗಡೆಯಲ್ಲಿ, ಗಾಯಕರ್- ಹಾಡುವವರು, ಸಿರಿಯಾ
ಳನ, ಚೋಳನ, ಭೂವರಚಾರಮನ, ಅಮಳಚರಿತಮಂ, ಅಚ್ಚರಿ, ಮಿಗೆ, ಬಿಡದೆ, ಪಾಡುತ್ತ, ಇರ್ದರ್ ॥೪೭॥

ಕಟ್ಟಿದಿರಲ್ಲಿ- ಮುಂಗಡೆಯಲ್ಲಿ, ಕಂಗೊಳಿಪ, ಕಾಯಜವೈರಿಯ- ಈಶ್ವರನ, ದಿವ್ಯಮೂರ್ತಿಯಂ- ಶ್ರೇ
ಷ್ಠವಾದ ಆಕಾರವನ್ನು, ಆ ಹಲಾಯುಧಂ, ನೆಟ್ಟನೆ, ಕಂಡು, ಪೊಂಪುಳಿಯಂ- ರೋಮಾಂಚನವನ್ನು, ಆ
ಳ್ದು, ವಿಲೋಚನದಿಂ- ಕಣ್ಣುಗಳಿಂದ, ಸುಖಾಶ್ರುಗಳ್- ಸಂತೋಷಬಾಷ್ಪಗಳು, ತೊಟ್ಟಿಡೆ- ತೊಟ್ಟುತೊ
ಟ್ಟಾಗಿ ಸುರಿಯಲು; ಗದ್ಗದಂ- ನಡುಗುವಿಕೆಯಿಂ ಕೂಡಿದ ಕಂಠಧ್ವನಿಯು, ನೆಗೆಯೆ- ಉಂಟಾಗಲು, ವ್ಯ

ವೈಬೆಮರೇರೆ ಕರಾಗ್ರಕಂಪನಂ । ಪುಟ್ಟ ಸುಭಕ್ತಿಯಿಂ ದೆರಗಿದಂ ಹರನಂಘ್ರಿಯೊಳಾ ಹಲಾಯುಧಂ॥ .. .. ... ... ... ... ॥೪೩॥

ಚಂ॥ ಪರಮಸ್ಪೃಹಾಸಮುದ್ರ ಫಣಿರಾಜವಿಭೂಷಣ ಬಾಲಚಂದ್ರಶೇ । ಖರ ಭವಹಾರಿ ಮಂತ್ರಮಯ ರಮ್ಯಕಳೇವರ ಶರ್ವ ಷಣ್ಮುಖಾ ॥ ದರ ಸಹಜಪ್ರಕಾಶ ಲಲಿತಾಕ್ಷರಮೂರ್ತಿ ನಗೇಂದ್ರಕನ್ಯಕಾ । ವರ ಶರಣಾಗೆನುತ್ತೆ ನುತಿಗೆಯ್ದೆರಗಿರ್ದನ ನಪ್ಪಿದಂ ಶಿವಂ ॥೪೪॥

ವ॥ ಅಂತು ನಿಜಭುಜದಿಂ ತೆಗೆದು ಬಿಗಿದಪ್ಪಿ ಗಣನಿವಹದೊಳಣಿಯರಂ ಕೊಂಡಾಡಿ ದಿನಮಣಿಯನಣಕಿಪ ಘೃಣಿಗಣಮಹಿತಮಣಿಮಯಪುಷ್ಪಕದೊಳವನಾಳ್ದನವಪುರಗಳಿಂ ಸಮೇತಮಾಹಲಾಯುಧನಂ ಕುಳ್ಳಿರಿಸಿ ಗಿರಿಜಾಪತಿ ಪರಮೋತ್ಸವದಿಂ ದಿವಿಜರುಘೇ ಯೆನೆ ರಜತಾಚಲಕ್ಕೆ ಕೊಂಡೊಯ್ದು ತನ್ನನಿತ್ತು ಮನ್ನಿಸಿದನಾಗಳ್ ॥ * *

ಮಹಾಸ್ರ॥ ಸಿರಿಯಾಳ್ವಂಗಾದಹಂಕಾರಮ ನುಡುಗಿಸಲೆಂದಿಂತು ಗೆಯ್ದಂಗಡಾ ಶಂ । ಕರ ನೀಭೂಲೋಕದೊ ಳ್ಮೇಣದರಿ ನವಳಭಕ್ತರ್ಗಣಂ ಸಲ್ಲದೀದು ॥ ಸ್ತರಗರ್ವಂ ಕೇಳ್ವುದೆಂದಿಂತೊರೆದವರದಮಾಚಾರ್ಯ ನಂಘ್ರಿದ್ವಯಕ್ಕಾ । ದರದಿಂದಂ ವಂದಿಸುತ್ತಂ ನುತಿಸುತೆಸೆದನಾನಂದಸಾಂದ್ರಂ ವೃಷೇಂದ್ರಂ ॥ ... ... ... ॥೪೫॥

---

ಬೆಮರೇರೆ- ಸ್ವೇದೋದಕವು ಹೊರಡಲು, ಕರಾಗ್ರಕಂಪನಂ- ಹಸ್ತದ ಮುಂಗಡೆಯು ನಡುಗುವಿಕೆಯೂ, ಪುಟ್ಟ, ಸುಭಕ್ತಿಯಿಂದೆ, ಹರನ, ಅಂಘ್ರಿಯೊಳ್, ಎರಗಿದಂ. ... ... ॥೪೩॥

ಪರಮಸ್ಪೃಹಾಸಮುದ್ರ, ಫಣಿರಾಜವಿಭೂಷಣ, ಬಾಲಚಂದ್ರಶೇಖರ, ಭವಹಾರಿ- ಪಾಪವಂ ನಾಶಮಾಡುವನೇ, ಮಂತ್ರಮಯ- ಮಂತ್ರಸ್ವರೂಪನಾದವನೇ, ರಮ್ಯಕಳೇವರ- ಮನೋಹರವಾದ ಶರೀರವುಳ್ಳವನೇ, ಶರ್ವ, ಷಣ್ಮುಖಾದರ- ಷಣ್ಮುಖನಲ್ಲಿ ಪ್ರೀತಿಯುಳ್ಳವನೇ, ಸಹಜಪ್ರಕಾಶ- ಸ್ವಭಾವ ಸಿದ್ಧವಾದ, ತೇಜಸ್ಸುಳ್ಳವನೇ, ಲಲಿತಾಕ್ಷರಮೂರ್ತಿ- ಮನೋಹರವಾದ ನಾಶರಹಿತವಾದ ಶರೀರವುಳ್ಳವನೇ, ನಗೇಂದ್ರಕನ್ಯಕಾವರ- ಗಿರಿಜಾಪತಿಯಾದವನೇ! ಶರಣ್- ಸಂರಕ್ಷಕನು, ಆಗು, ಎನುತ್ತೆ, ನುತಿಗೆಯ್ದು- ಸ್ತೋತ್ರಮಾಡಿ, ಎರಗಿ; ಇರ್ದನಂ- ಇದ್ದ ಹಲಾಯುಧನನ್ನು, ಶಿವಂ, ಅಪ್ಪಿದಂ- ಆಲಿಂಗಿಸಿದನು. ॥೪೪॥

ಅಂತು, ನಿಜಭುಜದಿಂ- ತನ್ನ ತೋಳಿನಿಂದ, ತೆಗೆದು, ಬಿಗಿದು, ಅಪ್ಪಿ, ಗಣನಿವಹದೊಳ್, ಅಣಿಯರಂ- ಮನೋಹರವಾಗಿ, ಕೊಂಡಾಡಿ, ದಿನಮಣಿಯಂ- ಸೂರ್ಯನನ್ನು, ಅಣಕಿಪ- ಹಾಸ್ಯಮಾಡುವ, ಘೃಣಿಗಣಮಹಿತಮಣಿಮಯಪುಷ್ಪಕದೊಳ್- ಕಾಂತಿಯ ಪುಂಜದಿಂದ ಪೂಜ್ಯವಾದ ರತ್ನಖಚಿತವಾದ ವಿಮಾನದಲ್ಲಿ, ಅವಂ, ಆಳ್ದ, ನವಪುರಗಳಿಂ- ಒಂಭತ್ತು ಪಟ್ಟಣಗಳಿಂದ, ಸಮೇತಂ- ಕೂಡಿ, ಆ ಹಲಾಯುಧನಂ, ಕುಳ್ಳಿರಿಸಿ, ಗಿರಿಜಾಪತಿ, ಪರಮೋತ್ಸವದಿಂ, ದಿವಿಜರ್, ಉಘೇ, ಎನೆ, ರಜತಾಚಲಕ್ಕೆ- ಕೈಲಾಸಪರ್ವತಕ್ಕೆ, ಕೊಂಡು, ಒಯ್ದು, ತನ್ನಂ- ತನ್ನ ರೂಪನ್ನು ( ಸಾರೂಪ್ಯವನ್ನು ) ಇತ್ತು, ಆಗಳ್, ಮನ್ನಿಸಿದಂ. * * *

ಶಂಕರಂ, ಸಿರಿಯಾಳ್ವಂಗೆ, ಆದ- ಉಂಟಾದ, ಅಹಂಕಾರಮಂ, ಉಡುಗಿಸಲ್ ಎಂದು- ನಾಶಪಡಿಸಬೇಕೆಂದು, ಈ ಭೂಲೋಕದೊಳ್, ಇಂತು, ಗೆಯ್ದಂಗಡಾ- ಮಾಡಿದನಲ್ಲವೇ ? ಮೇಣ್, ಅದರಿಂ, ಅವಳ ಭಕ್ತರ್ಗೆ- ಈ ದುಸ್ತರಗರ್ವಂ- ದಾಟುವದಕ್ಕೆ ಅಸಾಧ್ಯವಾದ ಈ ಅಹಂಕಾರವು, ಅಣಂ- ಸ್ವಲ್ಪವೂ, ಸಲ್ಲದು- ಯೋಗ್ಯವಾದುದಲ್ಲವು; ಕೇಳ್ವುದು, ಎಂದು, ಇಂತು, ಒರೆದು- ಹೇಳಿದ, ವರದಮಾಚಾರ್ಯನ- ಇಷ್ಟವರವಂ ಕೊಡುವ ಮಹಾದೇವನ, ಅಂಘ್ರಿದ್ವಯಕ್ಕೆ, ಆನಂದಸಾಂದ್ರಂ- ಸಂತೋಷದಿಂ ದಟ್ಟನಾದ, ವೃಷೇಂದ್ರಂ, ಆದರದಿಂದಂ, ವಂದಿಸುತ್ತಂ- ನಮಸ್ಕರಿಸುತ್ತ, ನುತಿಸುತೆ, ಎಸೆದಂ. ... ... ॥೪೫॥

ಲಲಿತಪದವೃತ್ತಂ ॥ ದುಷ್ಟಜನದರ್ಪಹರ ಶಿಷ್ಟಜನರಕ್ಷಕ ಸದಿಷ್ಟಜನಸನ್ನುತ ನತೇಷ್ಟದಪದಾಬ್ಜೋ । ತ್ಕೃಷ್ಟಗುಣಸೇವ್ಯ ಹೃತದುಷ್ಟಮಕರಧ್ವಜನಿವಿಷ್ಟಮುನಿಮಾನಸ ಸುಹೃಷ್ಟಮೃದುಭಾಷ ॥ ನಷ್ಟಪರವಾದಿ ಪರಿತುಷ್ಟಪರಮೇಶ ಲಸದಷ್ಟದಿಗಧೀಶ ನುತಸೃಷ್ಟಜಗದಂಡಾ । ಕ್ಲಿಷ್ಟಮತಿಸಾಧು ಪರಿಪುಷ್ಟಸಕಲಾರ್ಥ ಪೊರೆ ವಿಷ್ಟಪಕದಂಬಕವಿಶಿಷ್ಟಬಸವೇಶ ॥ ... ... ... ... ॥೪೬॥

ಮಂಜುಭಾಷಿಣೀವೃತ್ತಂ ॥ ಶರಣಾಗತಾರ್ತಿಹರಣೇಕ್ಷಣಾಂಚಲೇ । ಪರಿಣದ್ಧಕಾಂತಿಭರಿತಾಸ್ಯಮಂಡಲೇ ॥ ಗಿರಿಜಾತೆ ದಿವ್ಯತರಸದ್ಗುಣೋಜ್ಜ್ವಲೇ । ಹರಪತ್ನಿ ಯೆನ್ನ ಪೊರೆ ಸರ್ವಮಂಗಲೇ ॥ ... ... ... ... ... ॥೪೭॥

---

ದುಷ್ಟಜನದರ್ಪಹರ- ಕೆಟ್ಟಜನರ ಗರ್ವವನ್ನು ನಾಶಮಾಡುವ, ಶಿಷ್ಟಜನರಕ್ಷಕ- ಸತ್ಪುರುಷರನ್ನು ಪರಿಪಾಲಿಸುವ, ಸದಿಷ್ಟಜನಸನ್ನುತ- ಸತ್- ಸಮೀಚೀನರಾದ, ಇಷ್ಟಜನ- ಆಪ್ತಜನರಿಂದ, ಸನ್ನುತ; ನತೇಷ್ಟದಪದಾಬ್ಜ- ನಮಸ್ಕರಿಸಿದವರಿಗೆ ಇಷ್ಟಾರ್ಥವನ್ನು ಕೊಡುವ ಪಾದಕಮಲವುಳ್ಳ, ಉತ್ಕೃಷ್ಟಗುಣಸೇವ್ಯ- ಉತ್ತಮವಾದ ಗುಣವುಳ್ಳವರಿಂದ ಸೇವಿಸಲ್ಪಡುವದಕ್ಕೆ ಯೋಗ್ಯನಾದ, ಹೃತದುಷ್ಟಮಕರಧ್ವಜ- ಹೃತ- ಸಂಹರಿಸಲ್ಪಟ್ಟ, ದುಷ್ಟಮಕರಧ್ವಜ- ಕೆಟ್ಟ ಮನ್ಮಥನುಳ್ಳ, ನಿವಿಷ್ಟಮುನಿಮಾನಸ- ನಿವಿಷ್ಟ- ಕುಳಿತುಕೊಳ್ಳಲ್ಪಟ್ಟ, ಮುನಿ- ಋಷಿಗಳ, ಮಾನಸ- ಚಿತ್ತವುಳ್ಳ, ಸುಹೃಷ್ಟ- ಸಮೀಚೀನಸಂತೋಷ ವಿಶಿಷ್ಟನಾದ, ಮೃದುಭಾಷ- ಕೋಮಲವಾದ ನುಡಿಯುಳ್ಳ, ನಷ್ಟಪರವಾದಿ- ನಾಶಗೊಳಿಸಲ್ಪಟ್ಟ ಶಿವೇತರಮತವಾದಿಗಳುಳ್ಳ, ಪರಿತುಷ್ಟಪರಮೇಶ- ಸಂತೋಷಪಡಿಸಲ್ಪಟ್ಟ ಈಶ್ವರನುಳ್ಳ, ಲಸದಷ್ಟದಿಗಧೀಶನುತ- ಪ್ರಕಾಶಿಸುವ ಅಷ್ಟದಿಕ್ಪಾಲಕರಿಂದ ಹೊಗಳಿಸಿಕೊಳ್ಳಲ್ಪಟ್ಟ, ಸೃಷ್ಟಜಗದಂಡ- ಹುಟ್ಟಿಸಲ್ಪಟ್ಟ ಲೋಕವೆಂಬ ಮೊಟ್ಟೆಯುಳ್ಳ, ಆಕ್ಲಿಷ್ಟಮತಿಸಾಧುಪರಿಪುಷ್ಟಸಕಲಾರ್ಥ- ಆಕ್ಲಿಷ್ಟ- ಕ್ಲೇಶಪಡಿಸಲ್ಪಟ್ಟ, ಮತಿ- ಬುದ್ಧಿಯುಳ್ಳ, ಸಾಧು- ಸತ್ಪುರುಷರಿಗೋಸ್ಕರ, ಪರಿಪುಷ್ಟ- ಪೋಷಿಸಲ್ಪಟ್ಟ, ಸಕಲಾರ್ಥ- ಸಮಸ್ತೈಶ್ವರ್ಯವುಳ್ಳ, ವಿಷ್ಟಪಕದಂಬಕವಿಶಿಷ್ಟ- ಜಗತ್ಸಮೂಹದಿಂಕೂಡಿದ, ಬಸವೇಶ, ಪೊರೆ ॥೪೬॥

ಶರಣಾಗತಾರ್ತಿಹರಣೇಕ್ಷಣಾಂಚಲೇ- ಶರಣಾಗತ- ಸಂರಕ್ಷಕಳನ್ನಾಗಿ ಹೊಂದಿದವರ, ಆರ್ತಿ- ಮನೋವ್ಯಥೆಯನ್ನು, ಹರಣ- ನಾಶಮಾಡುವ, ಈಕ್ಷಣಾಂಚಲೇ- ಕಡೆಗಣ್ಣುಳ್ಳ, ಪರಿಣದ್ಧಕಾಂತಿಭರಿತಾಸ್ಯಮಂಡಲೇ- ಪರಿಣದ್ಧ- ವಿಸ್ತಾರವಾದ, ಕಾಂತಿ- ಪ್ರಕಾಶದಿಂದ, ಭರಿತ- ತುಂಬಿದ, ಆಸ್ಯಮಂಡಲೇ- ಮುಖಮಂಡಲವುಳ್ಳ, ಗಿರಿಜಾತೆ, ದಿವ್ಯತರಸದ್ಗುಣೋಜ್ವಲೇ- ಅತ್ಯಂತ ಶ್ರೇಷ್ಠಗಳಾದ ಸದ್ಗುಣಗಳಿಂದ ಮನೋಹರಳಾದ, ಹರಪತ್ನಿ, ಸರ್ವಮಂಗಲೇ? ಎನ್ನ, ಪೊರೆ. ... ... ... ॥೪೭॥

ಹದಿನೈದನೆಯ ಆಶ್ವಾಸವು ಸಂಪೂರ್ಣವು.

ಗದ್ಯಂ ॥ ಇದು ನಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪವಿರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀ ಷಡಕ್ಷರಿದೇವಭಕ್ತಿ ವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಪಲಾಯುಧವೃತ್ತಾಂತವರ್ಣ್ಣನಂ ಪಂಚದಶಾಶ್ವಾಸಂ ಪರಿಸಮಾಪ್ತಂ ॥ .. ... ... ... ...

ಪಂಚದಶಾಶ್ವಾಸಂ ಸಂಪೂರ್ಣಂ.

ಶ್ರೀಃ

ಶಿರಾತೇಶ್ವರಾಯ ಪರಬ್ರಹ್ಮಣೇ ನಮಃ.

ಷೋಡಶಾಶ್ವಾಸಂ

ಮರೆಮಿಂಡದೇವಕಥನಂ.

ಕಂ ॥ ಶ್ರೀಕಾಳಿಕಾಭಿರುಚಿರಕ । ಳಾಕೇಳೀಶೀಲ ನಖಿಳಭುವನಾಳಿಜನಾ । ನೀಕಪರಿಪೂಜಿತಂ ಮಹಿ । ಮಾಕರ ನೆಮಗೀಗೆ ಸೌಖ್ಯಮಂ ಶಿವಲಿಂಗಂ ॥ ... ॥೧॥

ಕಂ॥ ಸನ್ನುತಮಹಿಮಂ ಗುಣಸಂ । ಪನ್ನಂ ಬಸವಣ್ಣ ಕೇಳ್ವು ದಿನ್ನು ಮೆನುತ್ತಂ ॥ ಪ್ರೋನ್ನತಮಾಚಪ್ರಭುಪೇ । ಳ್ದಂ ನಲವಿಂ ಮತ್ತಮೊಂದು ಕಥನಮನಾಗಳ್ । ॥೨॥

ಹದಿನಾರನೆಯ ಆಶ್ವಾಸಪ್ರಾರಂಭಃ.

ಶ್ರೀ......ಶೀಲಂ— ಶ್ರೀ- ಷಡ್ಗುಣೈಶ್ವರ್ಯ್ಯಸಂಪನ್ನಳಾದ, ಕಾಳಿಕಾ- ಪಾರ್ವತಿಯ, ಅಭಿರುಚಿರ- ಮನೋಹರವಾದ, ಕಳಾ- ವಿದ್ಯೆಗಳ, ಕೇಳೀ- ಕ್ರೀಡೆಯೋ, ಶೀಲಂ- ಸ್ವಭಾವವಾಗುಳ್ಳ, ಅಖಿಳಭುವನಾಳಿಜನಾನೀಕಪರಿಪೂಜಿತಂ- ಸಮಸ್ತಲೋಕಗಳ ಸಮೂಹದಲ್ಲಿರುವ ಜನಗಳ ಗುಂಪಿನಿಂದ ಪೂಜಿಸಲ್ಪಟ್ಟ, ಮಹಿಮಾಕರಂ- ಶಿವಲಿಂಗಂ, ಎಮಗೆ, ಸೌಖ್ಯಮಂ, ಈಗೆ. ... ... ... ॥೧॥

ಆಗಳ್, ಸನ್ನುತಮಹಿಮಂ, ಗುಣಸಂಪನ್ನಂ, ಪ್ರೋನ್ನತಮಾಚಪ್ರಭು- ಅತ್ಯುತ್ಕೃಷ್ಟನಾದ ಮಾಚಿದೇವನು, ಬಸವಣ್ಣ ! ಇನ್ನುಂ, ಕೇಳ್ವುದು, ಎನುತ್ತಂ, ಮತ್ತಂ, ಒಂದುಕಥನಮಂ, ನಲವಿಂ- ಸಂತೋಷದಿಂದ, ಪೇಳ್ದಂ. ... ... ... ... ॥೨॥

ಕಂ ॥ ನೆಲಸಿರಿ ನೆಲಸಿದ ಜಲರುಹ। ದಲರೆನೆ ರಂಜಿಪ್ಪುದು ಸಜಳಪರಿಖಾಸರಸೀ ॥
ವಿಲಸಿತ ಮುರುಸಾಲದಳಂ। ಸಲೆ ತಿರುಚೆಂಗೊಂಡೆಯೆಂಬ ಪೊಳಲಾಪುರದೊಳ್ ॥ ॥೩॥

ಮಹಾಸ್ರ ॥ ಚರಪಾದಾಂಭೋಜಪೂಜಾರತನಪಗತಷಡ್ವರ್ಗ ನೀಶೈಕಭಾವ। ಸ್ಥಿರ
ಚಿತ್ತಂ ದೃಪ್ತವಾದಿವ್ರಜಮದಹರ ನತ್ಯಂತ ಸಾಮರ್ಥ್ಯಯುಕ್ತಂ ॥ ಹರಭಕ್ತಪ್ರೇಮಧಾ
ಮಂ ಸುಗುಣಮಣಿಗಣಾಲಂಕೃತಂ ಶೈವಧರ್ಮೋ। ದ್ಧರಣಂ ಶೌರ್ಯಾಂಕ ನಿರ್ಪಂ ನಿರುಪ
ಮಮೆರೆಮಿಂಡಾರ್ಯ ನೆಂಬಂಬಭಕ್ತಂ ॥ ... .. ... ... ॥೪॥

ಮತ್ತಂ॥ ನಿರಘಂ ನಿರ್ಮಮತಾಯುತಂ ದಲೆನಿಪಾಭಕ್ತಂ ಮಹೋತ್ಸಾಹದಿಂ। ತಿರು
ವಾರೂರೆನಿಸೀಳ್ಗೆವೆತ್ತ ನಗರಕ್ಕೆಯ್ತಂದು ವಲ್ಮೀಕನಾಥರುಚಿಸ್ಫೀತಗೃಹಾಂತರಾಳದೊಳ್
ತಲ್ಲಿಂಗಕ್ಕೆ ಸತ್ಪೂಜೆಯಂ।ನೆರವುತ್ತಂ ಶಿವರಾತ್ರಿಸದ್ವ್ರತಮ ನತ್ಯಾನಂದದಿಂಮಾಡಿದಂ ॥

ವ ॥ ಅಂತು ವಲ್ಮೀಕನಾಥಾಲಯದೊಳಾಡಿ ಪಾಡಿ ಜಾಗರಣಮಿರ್ದು ಬೆಳಗಪ್ಪು
ದುಂ ಯಥೋಚಿತಪ್ರಾತರಾಚಾರಮಂ ನೆಗಳ್ದನಂತರಂ ರಂಗಮಂಟಪದೊಳ್ ಭಕ್ತಗಣಸ
ಮಾವೃತಂ ಶಿವಕಥಾಗೋಷ್ಠಿಯೊಳ್ ಸುಖ ಮಿರ್ಪ್ಪಾಗಳ್ ॥ * * * * * *

---

ನೆಲಸಿರಿ- ಭೂಲಕ್ಷ್ಮಿಯು, ನೆಲಸಿದ- ವಾಸವಮಾಡಿಕೊಂಡಿರುವ, ಜಲರುಹದ- ಕಮಲದ, ಅಲರ್- ಹೂವು, ಎನೆ, ಸಜಳಪರಿಖಾಸರಸೀವಿಲಸಿತಂ- ನೀರಿನಿಂದ ಕೂಡಿದ ಕಂದಕವೆಂಬ ಕೊಳದಲ್ಲಿ ಪ್ರಕಾಶಿಸುವ, ಉರುಸಾಲದಳಂ- ಅಧಿಕವಾದ ಕೋಟೆದೆನೆಯೆಂಬ ಎಸಳುಗಳುಳ್ಳ, ತಿರುಚೆಂಗೊಂಡೆ, ಎಂಬ, ಪೊಳಲ್- ಪಟ್ಟಣವು, ರಂಜಿಪುದು; ಆ ಪುರದೊಳ್. ... ... ... ... ॥೩॥

ಚರಪಾದಾಂಭೋಜಪೂಜಾರತಂ- ಜಂಗಮರ ಪಾದಕಮಲದಪೂಜೆಯಲ್ಲಿ ಆಸಕ್ತನಾದ, ಅಪಗತಷಡ್ವರ್ಗಂ- ಕಳೆದುಹೋದ ಕಾಮಾದ್ಯರಿಷಡ್ವರ್ಗವುಳ್ಳ, ಈಶೈಕಭಾವಸ್ಥಿರಚಿತ್ತಂ- ಪರಮೇಶ್ವರನಲ್ಲಿ ಏಕತ್ವವಂ ಹೊಂದಿರುವದರಿಂದ ನಿಶ್ಚಂಚಲವಾದ ಮನಸ್ಸುಳ್ಳ, ದೃಪ್ತವಾದಿವ್ರಜಮದಹರಂ- ಕೊಬ್ಬಿದ ಅನ್ಯಮತವಾದಿಗಳ ಸಮೂಹದ ಗರ್ವವನ್ನು ನಾಶಮಾಡಿದ, ಅತ್ಯಂತಸಾಮರ್ಥ್ಯಯುಕ್ತಂ, ಹರಭಕ್ತಪ್ರೇಮಧಾಮಂ- ಶಿವಭಕ್ತರಪ್ರೀತಿಗೆಸ್ಥಾನಭೂತನಾದ, ಸುಗುಣಮಣಿಗಣಾಲಂಕೃತಂ, ಶೈವಧರ್ಮೋದ್ಧರಣಂ- ಶಿವಭಕ್ತರನಡತೆಯನ್ನು ಉದ್ಧರಿಸಿದ, ಶೌರ್ಯಾಂಕಂ- ಪರಾಕ್ರಮವೇ ಲಕ್ಷಣವಾಗುಳ್ಳ, ನಿರುಪಮಮೆರೆಮಿಂಡಾರ್ಯಂ- ಅಸದೃಶನಾದ ಮೆರೆಮಿಂಡಯ್ಯನು, ಎಂದೆಂಬ, ಭಕ್ತಂ, ಇರ್ಪ್ಪಂ. ... ... ॥೪॥

ವಲ್- ನಿಶ್ಚಯವಾಗಿ, ನಿರಘಂ- ಪಾಪರಹಿತನು, ನಿರ್ಮಮತಾಯುತಂ- ಅಹಂಭಾವವಿಲ್ಲದಿರುವಿಕೆಯಿಂ ಕೂಡಿದವನು, ಎನಿಪ, ಆ ಭಕ್ತಂ, ಮಹೋತ್ಸಾಹದಿಂ, ತಿರುವಾರೂರ್, ಎನಿಪ, ಏಳ್ಗೆವೆತ್ತ- ಪ್ರಸಿದ್ಧಿಯಂ ಹೊಂದಿದ, ನಗರಕ್ಕೆ, ಏಯ್ತಂದು, ವಲ್ಮೀಕನಾಥರುಚಿಸ್ಫೀತಗೃಹಾಂತರಾಳದೊಳ್- ವಲ್ಮೀಕನಾಥ- ವಲ್ಮೀಕನಾಥೇಶ್ವರನ, ರುಚಿ- ಕಾಂತಿಯಿಂದ, ಸ್ಫೀತ- ಬಹಳವಾಗಿ ತುಂಬಲ್ಪಟ್ಟ, ಗೃಹಾಂತರಾಳದೊಳ್- ಮನೆಯ ಒಳಭಾಗದಲ್ಲಿ, ತಲ್ಲಿಂಗಕ್ಕೆ, ಸತ್ಪೂಜೆಯಂ, ನೆರವುತ್ತಂ- ಮಾಡುತ್ತ, ಅತ್ಯಾನಂದದಿಂ, ಶಿವರಾತ್ರಿಸದ್ವ್ರತಮಂ, ಮಾಡಿದಂ. ... ... ... ... ... ॥೫॥

ಅಂತು, ವಲ್ಮೀಕನಾಥಾಲಯದೊಳ್, ಆಡಿ, ಪಾಡಿ, ಜಾಗರಣಮಿರ್ದು- ನಿದ್ರೆಯಂಮಾಡದೇಇದ್ದು, ಬೆಳಗು, ಅಪ್ಪುದುಂ- ಆಗುತಲೂ, ಯಥೋಚಿತಪ್ರಾತರಾಚಾರಮಂ- ಯಥಾಯೋಗ್ಯವಾಗಿ ಪ್ರಾತಃಕಾಲದಲ್ಲಿ ಮಾಡತಕ್ಕ ಶೀಲವನ್ನು; ನೆಗಳ್ದು, ಅನಂತರಂ, ರಂಗಮಂಟಪದೊಳ್- ರಂಗಸ್ಥಲದಲ್ಲಿ, ಭಕ್ತಗಣಸಮಾವೃತಂ- ಭಕ್ತಸಮೂಹದಿಂದಾವರಿಸಲ್ಪಟ್ಟವನಾಗಿ, ಶಿವಕಥಾಗೋಷ್ಠಿಯೊಳ್, ಸುಖಂ, ಇರ್ಪ್ಪಾಗಳ್. *

ಚಂ ॥ ಪೊಗರುಗುವಚ್ಚಜೌವನದ ನೀಳ್ದಲರ್ಗಂಗಳ ಚಂದ್ರಬಿಂಬಮಂ । ನಗುವದ ರಸ್ಮಿತಾನನದ ಪೇರುರದಾಯತಮಾದ ತೋಳ ಜ ॥ ಘುಗುರ್ಗಳ ಕಾಂತಿತಳ್ತ ಕೆರಕಂಜದ ಸುಣ್ಪೊಡೆ ಯಾಮ್ರಪಲ್ಲವಾಂ । ಘ್ರಿಗಳ ಬೆಡಂಗು ರಂಜಿಸೆ ಕರು ಬರುತೊಪ್ಪಿದ ನಲ್ಲಿ ಸೌಂದರಂ ॥ ... ... ... ... ... ... ॥೬॥

ಚಂ ॥ ನಳನ ನಿಳಂಕೆಗೆಯ್ದು ನಳಕೂಬರನಗ್ಗದ ಗಂಡುಗಾಡಿಯಂ । ಪಳಿದು ಜಯಂತನಂ ಜಡಿದು ಬರ್ಕ್ಕಡಿಗೆಯ್ದು ಬಸಂತನಂ ಸಮು ॥ ಜ್ವಳಕುಸುಮಾಸ್ತ್ರನಂ ಜರಿದು ಕೆಂಗೊಳಿಸಿರ್ದ ನವಂ ವಿಳಾಸದಿಂ । ವಿಳಸಿತಶೋಭೆಯಿಂ ಸೊಬಗಿನಿಂ ಚದುರಿಂ ಮಧುರ ಸ್ವಭಾವದಿಂ ॥ ... ... ... ... ... ... ॥೭॥

ಚಂ ॥ ಪರವೆಯ ತೋಳ ತಳ್ಪಿನೊಳ್ ಪತ್ತಿದ ಕುಂಕುಮರೇಖೆ ತತ್ತನೂ । ದರಿಯ ನಖಾಂಕ ಮೊಂದಿದ ಮನೋಹರಕಂಧರ ಮಾಕೆ ಯಿಟ್ಟ ಕ ॥ ಸ್ತುರಿಯಲಾಮ ಮಂಟಿದ ನೊಸಲ್ಮಿಸುಪೊಂದಿದ ತದ್ರದಕ್ಷತಾಂ । ಕುರಮುಳವಟ್ಟ ಚೆಂದುಟ ವಿರಾಜಿತಮಾದುದು ಸೌಂದರೇಂದ್ರನ ॥ ... ... ... ... ... ॥೮॥

ವ ॥ ಮತ್ತಂ ಮರೆವಿರಿದ ವಿಚಕಿಲದಲರ ಮಾಲೆಯಂ ತಳೆದು ತೆರಂಬೊಳೆವ ಮುಡಿ

---

ಪೊಗರ್- ಕಾಂತಿಯು, ಉಗುವ-ಸುರಿಯುವ,ಅಚ್ಚಜೌವನದ- ಹೊಸಯೌವನದ, ನೀಳ್ದ ಅಲರ್ಗಂಗಳ- ಉದ್ದವಾದ ಹೂವಿನಂತಿರುವ ಕಣ್ಣುಗಳ, ಚಂದ್ರಬಿಂಬವುಂ, ನಗುವ- ಹಾಸ್ಯಮಾಡುವ, ದರಸ್ಮಿತಾನನದ- ಮುಗುಳ್ನಗೆಯುಂಕೂಡಿದ ಮುಖದ, ಪೇರುರದ- ದೊಡ್ಡವಕ್ಷಸ್ಥಲದ, ಆಯತಂ- ಉದ್ದವಾದದ್ದು, ಆದ, ತೋಳ- ಬಾಹುವಿನ, ಬೆಳ್ಪುಗುರ್ಗಳ- ಬೆಳ್ಳಗಿರುವಉಗುರುಗಳ, ಕಾಂತಿತಳ್ತ- ಪ್ರಕಾಶದಿಂವ್ಯಾಪ್ತವಾದ, ಕರಕಂಜದ- ತಾವರೆಯಂತಿರುವ ಕೆಯ್ಯ, ನುಣ್ಪೊಡೆಯ, ಆಮ್ರಪಲ್ಲವಾಂಘ್ರಿಗಳ- ಮಾವಿನ ಚಿಗುರಿನಂತಿರುವಕಾಲುಗಳ, ಬೆಡಂಗು- ಸೊಗಸು, ರಂಜಿಸೆ, ಅಲ್ಲಿ, ಸೌಂದರಂ, ಬರುತೆ, ಒಪ್ಪಿದಂ. ... ॥೬॥

ಇಲ್ಲಿ ಸೌಂದರಂ ಎಂಬಶಬ್ದವು ಸಂಕೇತನಾಮವಾದುದರಿಂದ ಸುಂದರಂ ಎಂದಿರಬೇಕಾಗಿದ್ದಲಾಗದು ...

ಅವಂ, ನಳನಂ, ವಿಳಾಸದಿಂ, ಇಳಿಂಕೆಗೆಯ್ದು- ತಿರಸ್ಕರಿಸಿ, ನಳಕೂಬರನ- ಕುಬೇರನಮಗನ, ಅಗ್ಗದ- ಅಧಿಕವಾದ, ಗಂಡುಗಾಡಿಯಂ- ಪೌರುಷವನ್ನು, ವಿಳಸಿತಶೋಭೆಯಿಂ- ಪ್ರಕಾಶಿಸುವ ತೇಜಸ್ಸಿನಿಂದ, ಪಳಿದು- ನಿಂದಿಸಿ, ಜಯಂತನಂ- ಇಂದ್ರಪುತ್ರನನ್ನು, ಸೊಬಗಿನಿಂ- ಸೊಗಸಿನಿಂದ, ಜಡಿದು- ತಿರಸ್ಕರಿಸಿ, ಬಸಂತನಂ, ಚದುರಿಂ- ಚಾತುರ್ಯದಿಂದ, ಬರ್ಕ್ಕಡಿಗೆಯ್ದು- ಭಯಪಡಿಸಿ, ಸಮುಜ್ವಳಕುಸುಮಾಸ್ತ್ರನಂ- ಮನೋಹರನಾದ ಮನ್ಮಥನನ್ನು, ಮಧುರಸ್ವಭಾವದಿಂ- ಮನೋಹರವಾದ ಆಕಾರದಿಂದ, ಜರಿದು- ಹೀಯಾಳಿಸಿ, ಕೆಂಗೊಳಿಸಿ- ಇರ್ದಂ. ... ... ... ... ... ॥೭॥

ಸೌಂದರೇಂದ್ರನ, ಪರವೆಯ- ಪರವೆಯೆಂಬುವಳ, ತೋಳ, ತಳ್ಪಿನೊಳ್- ಆಲಿಂಗನೆಯಿಂದ, ಪತ್ತಿದ, ಕುಂಕುಮರೇಖೆ, ತತ್ತನೂದರಿಯ- ಆ ಸ್ತ್ರೀಯ, ನಖಾಂಕಂ- ನಖಕ್ಷತದಗುರ್ತು, ಒಂದಿದ, ಮನೋಹರಕಂಧರಂ- ಮನೋಹರವಾದಕತ್ತು- ಆಕೆಯ, ಇಟ್ಟಕಸ್ತೂರಿಯ, ಲಲಾಮಂ- ತಿಲಕವು, ಅಂಟಿದ, ನೊಸಲ್- ಹಣೆಯು, ಮಿಸುಪೊಂದಿದ- ಪ್ರಕಾಶವಂ ಪೊಂದಿದ, ತದ್ರದಕ್ಷತಾಂಕುರಂ- ಆಕೆಯ ಹಲ್ಲಿನಿಂದುಂಟಾದ ಗಾಯದ ಮೊಳಕೆಯು, ಅಳವಟ್ಟ- ಸೇರಿದ, ಚೆಂದುಟಿ- ಕೆಂಪಾದ ತುಟಿಯು, ವಿರಾಜಿತಂ, ಆಯ್ತು. ॥೮॥

ಮತ್ತಂ, ಅರೆವಿರಿದ- ಅರ್ಧವಿಕಸಿತವಾದ, ವಿಚಕಿಲದ- ಮಲ್ಲಿಗೆಯ, ಅಲರ- ಹೂವಿನ, ಮಾಲೆಯಂ, ತಳೆದು, ತೆರಂಬೊಳೆವ- ಪ್ರಕಾಶಿಸುವ, ಮುಡಿಯುಂ- ಕೇಶವೂ, ವದನವಿಧುಬಿಂಬಪರಿವೃತತಾರಾವಾರದಂತೆ-

ಯುಂ ವದನವಿಧುಬಿಂಬಪರಿವೃತತಾರಾವಾರದಂತೆಸೆವ ತಾರಾಹಾರಮುಂ ಮುಖಸರಸಿಜಂ ಕಟ್ಟ ಸೆರೆಯಿಟ್ಟ ನಕ್ಷತ್ರಂಗಳ ನನುಕರಿಸಿ ತೊಳತೊಳಗುವೆಳೆಮುತ್ತಿನ ಕರ್ಣಾಭರಣ ಮುಂ ಭುಜಲತೆ ಕುಸುಮಮಂಜರಿಯಂ ತಳೆದಂತೆ ಪಜ್ಜಳಿಪ ಬಜ್ಜರದ ಬಾಹುಪೂರ ಮುಂ ಕರಸರಸಿರುಹಮೂಲಮಂ ಮಾಲೆಗೊಂಡು ಬಳಸಿ ನಿಂದು ಮರಿದುಂಬಿಗಳ ಬಂಬಲಂ ತೆಸೆವಿಂದ್ರನೀಲಮಣಿಮಯಕಂಕಣಮುಂ ಕರತಳಾರುಣನಖಮಣಿರುಚಿಯ ನೆರೆಯ ಲ್ಬಯ ಸಿ ನಿಂದ ಮಣಿಗಣ ಮೆನೆ ಮೆರೆವ ರನ್ನದುಂಗುರಮುಂ ನಡೆನೋಡುವೆಳೆಜೌವನೆಯುರವಿರ ಹಶಿಖಿಶಿಖಾತಪ್ತನಯನಾಂಚಳಾಂಚಿತರುಚಿನಿಚಯಂ ತಾಗೆ ಕೋಮಲಾಂಗಂ ಕಂದುಗು ಮೆಂದು ಬೆಳ್ಪಂಗಳಂ ಬಾಸಣಿಸಿದಂತೆ ಮನೋಜ್ಞಮಾದ ಧವಳತರರುಚಿರದುಕೂಲಮುಂ ಪದನಳಿನಮಂ ಬಳಸಿ ತಳ್ತ ಮಂಜುಳಮರಾಳಕಾಂಡಮಂಡದಂತೆ ಮಂಡಳಿಸಿ ನಿಂದಮೌ ಕ್ತಿಕಾನ್ವಿತಪಾದಕಟಕಮುಂ ಕಡುಬೆಡಂಗುವಡೆಯೆ ತೊಡೆದ ಯಕ್ಷಕರ್ದಮದ ನರುಗಂಪಿಗೆ ಪರಿಮರಿಗೊಂಡೆರಗುವ ಮರಿದುಂಬಿಗಳ ಬಂಬಲಂ ಸೊಂಪಗೆಯ ಕಮ್ಮರಲ ಬಿಜ್ಜಣಿಗೆಯಂ

---

ಮುಖವೆಂಬ ಚಂದ್ರಮಂಡಲವನ್ನು ಸುತ್ತುವರಿದಿರುವ ನಕ್ಷತ್ರಸಮೂಹದಹಾಗೆ, ಎಸೆವ, ತಾರಾಹಾರ ಮುಂ- ನಕ್ಷತ್ರಮಾಲಿಕೆಯೆಂಬ ಮುತ್ತಿನ ಹಾರವೂ, ಮುಖಸರಸಿಜಂ- ಮೊಗವೆಂಬತಾವರೆಯು, ಕಟ್ಟ, ಸೆರೆಯಿಟ್ಟ, ನಕ್ಷತ್ರಂಗಳಂ, ಅನುಕರಿಸಿ, ತೊಳತೊಳಗುವ- ಅತ್ಯಂತವಾಗಿ ಪ್ರಕಾಶಿಸುವ, ಎಳೆಮುತ್ತಿನ, ಕರ್ಣಾಭರಣಮುಂ, ಭುಜಲತೆ- ತೋಳೆಂಬ ಬಳ್ಳಿಯು, ಕುಸುಮ ಮಂಜರಿಯಂ- ಹೂವಿನ ಗೊಂಚಲನ್ನು, ತಳೆದಂತೆ- ಧರಿಸಿದಹಾಗೆ, ಪಜ್ಜಳಿಪ- ಪ್ರಜ್ವಲಿಸುವ, ಬಜ್ಜರದ- ವಜ್ರದ, ಬಾಹುಪೂರಮುಂ- ಭುಜಕೀರ್ತಿ ಯೂ, ಕರಸರಸಿರುಹಮೂಲಮಂ- ಹಸ್ತವೆಂಬ ಕಮಲದಬುಡವನ್ನು, ಮಾಲೆಗೊಂಡು- ಪಙ್ತಿಯಾಗಿ, ಬಳ ಸಿ, ನಿಂದ, ಮರಿದುಂಬಿಗಳ, ಬಂಬಲಂತೆ- ಗುಂಪಿನಹಾಗೆ, ಎಸೆವ, ಇಂದ್ರನೀಲಮಣಿಮಯಕಂಕಣಮುಂ ಇಂದ್ರನೀಲರತ್ನವಿಕಾರವಾದ ಕರಭೂಷಣವೂ, ಕರತಳಾರುಣನಖಮಣಿರುಚಿಯ- ಕರತಳ- ಹಸ್ತಪ್ರದೇಶದ ಲ್ಲಿರುವ, ಅರುಣ- ಕೆಂಪಾದ, ನಖಮಣಿ- ರತ್ನಗಳೋಪಾದಿಯಲ್ಲಿರುವ ಉಗುರುಗಳ, ರುಚಿಯಂ- ಕಾಂತಿಯ ನ್ನು, ಎರೆಯಲ್- ಬೇಡುವದಕ್ಕೋಸ್ಕರ, ಬಯಸಿ- ಅಪೇಕ್ಷಿಸಿ, ನಿಂದ, ಮಣಿಗಣಂ, ಎನೆ, ಮೆರೆವ, ರನ್ನದ, ಉಂಗುರಮುಂ; ನಡೆ- ಚೆನ್ನಾಗಿ, ನೋಡುವ, ಎಳೆಜೌವನೆಯುರ-ಪ್ರಾಯದಹುಡುಗಿಯುರ, ವಿರಹಶಿಖಿಶಿಖಾತ ಪ್ತನಯನಾಂಚಳಾಂಚಿತರುಚಿನಿಚಯಂ- ವಿರಹಶಿಖಿ- ವಿರಹಾಗ್ನಿಯ,ಶಿಖಾ- ಜ್ವಾಲೆಯಿಂದ, ತಪ್ತ- ಸಂತಾಪ ಪಡಿಸಲ್ಪಟ್ಟ, ನಯನಾಂಚಳ- ಕಡೆಗಣ್ಣಿನ, ಅಂಚಿತ- ಚಂಚಲವಾದ, ರುಚಿ- ಕಾಂತಿಯ,ನಿಚಯಂ- ಸಮೂ ಹವು, ತಾಗೆ, ಕೋಮಲಾಂಗಂ, ಕಂದುಗುಂ, ಎಂದು, ಬೆಳ್ಪಂಗಳಂ, ಬಾಸಣಿಸಿದಂತೆ- ಆಚ್ಛಾದಿಸಿದಹಾ ಗೆ, ಮನೋಜ್ಞವಾದ, ಧವಳತರರುಚಿರದುಕೂಲಮುಂ- ಅತಿ ಶುಭ್ರವಾಗಿ ಮನೋಹರವಾದ ಪಟ್ಟೆ ಯುವಸ್ತ್ರವೂ, ಪದನಳಿನಮಂ- ಪಾದಕಮಲವನ್ನು, ಬಳಸಿ, ತಳ್ತ, ಮಂಜುಳಮರಾಳಕಾಂಡಮಂಡದಂತೆ- ಮನೋಹರಗಳಾದ ಹೆಣ್ಣು ಹಂಸಪಕ್ಷಿಗಳ ಮೊಟ್ಟೆಯ ಗುಂಪಿನಂತೆ, ಮಂಡಳಿಸಿ- ಗುಂಪಾಗಿ, ನಿಂದ, ಮೌಕ್ತಿಕಾನ್ವಿತಪಾದಕಟಕಮುಂ- ಮುತ್ತುಗಳಿಂ ಕೂಡಿದ ಕಾಲಿನ ಗಗ್ಗರವೂ, ಕಡುಬೆಡಂಗುವಡೆಯೆ- ಅತಿ ವಿಲಾಸವಂ ಹೊಂದಿರಲು, ತೊಡೆದ- ಲೇಪಿಸಲ್ಪಟ್ಟಿರುವ, ಯಕ್ಷಕರ್ದಮದ- ಕಸ್ತೂರಿಗಂಧದ, ನ ರುಗಂಪಿಗೆ- ಸುವಾಸನೆಗೆ, ಪರಿಮರಿಗೊಂಡು- ಲಂಘಿಸಿ ಎರಗುವ, ಮರಿದುಂಬಿಗಳ, ಬಂಬಲಂ- ಸ ಮೂಹವನ್ನು, ಸೊಂಪಗೆಯ, ಕಮ್ಮರಲ- ಪರಿಮಳಯುಕ್ತವಾದ ಹೂವಿನ, ಬಿಜ್ಜಣಿಗೆಯಂ- ಬೀಸಣಿಗೆ ಯನ್ನು, ಬೀಸಿ, ತೆಪಱ್ಚ-ಓಡಿಸುವ, ಪರಿಚಾರಿಕಾನಿಕಾಯದಿಂ- ಗಾಡಿಯರ ಗುಂಪಿನಿಂದ; ನಿಜ......ಶಾ

ಬೀಸಿತೆಮರ್ಸ್ವ ಪರಿಚಾರಿಕಾನಿಕಾಯದಿಂ ನಿಜಕಟಾಕ್ಷರುಚಿದ್ವಿಗುಣಿತಧವಳಮುಧವಳಚಾಮ
ರಮುಂ ಕಂಕಣಝಣತ್ಕಾರಂ ಪೊಣ್ಮೆ ಬೀಸುವ ಚಾಮರಗ್ರಾಹಿಣಿಯರಿಂ ನಿಜಬಿರುದಗ
ದ್ಯಪದ್ಯಪ್ರಬಂಧಸಂದೋಹಮನುಗ್ಗಡಿಸಿ ರಯ್ಯಮನೆ ಕಯ್ಯೆತ್ತಿ ಕೈವಾರಿಸುವ ವಂದಿಮಾ
ಗಧಪ್ರತಾನದಿಂ ಸರಸತರಮಂಗಳಸಂಗೀತಮಂಪಾಡುವ ಸಂಗೀತವಿಶಾರದರಿಂ ಕೆಲವಲದೊ
ಳೋಲಗಿಸಿ ಬರ್ಪ ರಾಜಪುತ್ರರಿಂ ಸಡಗರದಿ ಸೇಳ್ತಂದು ನಿಂದು ನಲ್ಲವರಕೆಗುಡುವ ಮಾ
ಹೇಶ್ವರರಿಂ ಪರಮವಿಭವಂ ಮಿಗೆ ಭುವನತ್ರಯಸೌಂದರ್ಯ ಮೇಕತ್ವಂಬಡೆದಂತೆ ಮೋಹ
ನಂಬೆತ್ತು ವಿಬುಧವಿದೂಷಕಾದಿಭೋಗಸಖಸಮೇತಂ ಪೊಗಳ್ವ ಬುಧರ್ಗೆ ಪಿಡಿವೊಂಗಳ ನಳ್ತಿ
ಯಿ ನಿತ್ತು ಮನ್ನಿಸುತ್ತಂ ಕರತಳದ ಕನತ್ಕನಕಕಿಂಕಿಣಿಮಾಲೆ ತಳ್ತ ಪೊಂಗಠಾರಿಯುಂ
ಮೊನೆಗಾಣಿಸಿ ವಾಮಪ್ರಕೋಷ್ಠಮುಂ ದಂಡೆಗೊಟ್ಟೊಲಪ್ಪುದೋರಿ ಜಡಿಜಡಿದು ಚಿಮ್ಮು
ತಂ ಬೆಡಂಗು ಮಿಗೆ ಪೆಡಂಮೆಟ್ಟಿ ಜಂಗಳಂಬಾಯ್ದು ನಡೆದೋರುತ್ತಂ ನಿಜಭುಜಾದಂಡಮ
ನೊರ್ಮೆ ನಡೆ ನೋಡಿ ನಲವೇರುತ್ತಂ ಸಖನಿಕರದೊಳ್ಸೊಳ್ನುಡಿಗುಡುತ್ತೆ ನಸುನಗು
ತ್ತಂ ಶಂಕರಕುಮಾರಂ ಸೌಂದರಂ ಸಲೀಲೆಯಿಂ ಮುಂದಿರ್ದ ಗಣಸಭೆಗೆ ಪೊಡಮಡದೆ ಮ

---

ಮರವಂ— ನಿಜ- ತಮ್ಮ, ಕಟಾಕ್ಷರುಚಿ- ಕಡೆಗಣ್ಣಿನ ಕಾಂತಿಯಿಂದ, ದ್ವಿಗುಣಿತ- ಎರಡು ಭಾಗ
ಹೆಚ್ಚಿಸಲ್ಪಟ್ಟ, ಧವಳಿಮ- ಬಿಳೀ ಬಣ್ಣವುಳ್ಳ, ಧವಳಚಾಮರವಂ- ಬಿಳಿಯ ಚೌರಿಯನ್ನು, ಕಂಕಣಝ
ಣತ್ಕಾರಂ- ಕಡಗಗಳ ಝಣಝಣವೆಂಬ ಶಬ್ದವು, ಪೊಣ್ಮೆ- ಉಂಟಾಗಲು, ಬೀಸುವ, ಚಾಮರಗ್ರಾಹಿ
ಣಿಯರಿಂ, ನಿಜ.........ಸಂದೋಹಮಂ— ನಿಜ- ತನ್ನ, ಬಿರುದ- ಬಿರುದನ್ನು ಸೂಚಿಸುವ, ಗದ್ಯ- ವಾ
ಕ್ಯರೂಪವಾದ, ಪದ್ಯ- ಛಂದೋಬದ್ಧವಾದ, ಪ್ರಬಂಧ- ಗ್ರಂಥಗಳ; ಸಂದೋಹಮಂ- ಗುಂಪನ್ನು,
ಉಗ್ಗಡಿಸಿ- ಗಟ್ಟಿಯಾಗಿ ಕೂಗಿ, ರಯ್ಯಮೆನೆ, ಮನೋಹರವಾಗಿ, ಕೈಯೆತ್ತಿ, ಕೈವಾರಿಸುವ- ಹೊ
ಗಳುವ, ವಂದಿಮಾಗಧಪ್ರತಾನದಿಂ- ಭಟ್ಟರಾಜರು ಸ್ತುತಿಪಾಠಕರುಗಳ ಗುಂಪಿನಿಂದ, ಸರಸತರಮಂ
ಗಳಸಂಗೀತಮಂ- ಅತಿರಸವಿಶಿಷ್ಟವಾಗಿ ಶುಭಕರವಾದ ಗಾನವನ್ನು, ಪಾಡುವ, ಸಂಗೀತವಿಶಾರದರಿಂ,
ಕೆಲವಲದೊಳ್- ಎಡಬಲಗಳಲ್ಲಿ, ಓಲಗಿಸಿ- ಸೇವಿಸಿ, ಬರ್ಪ, ರಾಜಪುತ್ರರಿಂ, ಸಡಗರದಿಂ- ಸಂಭ್ರಮದಿಂ
ದ, ಏಳ್ತಂದು, ನಿಂದು, ನಲ್ಲವರಕೆಗುಡುವ- ಒಳ್ಳೆಯ ಆಶೀರ್ವಾದಮಂ ಮಾಡುವ, ಮಾಹೇಶ್ವರರಿಂ, ಪರಮ
ವಿಭವಂ, ಮಿಗೆ, ಭುವನತ್ರಯಸೌಂದರ್ಯಂ- ಮೂರು ಲೋಕಗಳಲ್ಲಿರುವ ಸುಂದರತ್ವವು, ಏಕತ್ವಂಬಡೆದಂತೆ-
ಒಂದೇ ಭಾವವನ್ನು ಹೊಂದಿದಹಾಗೆ, ಮೋಹನಂಬೆತ್ತು- ಪ್ರೀತಿಕರವಾಗಿ, ವಿಬುಧವಿದೂಷಕಾದಿಭೋಗಸಖಸ
ಮೇತಂ, ಪೊಗಳ್ವ, ಬುಧರ್ಗೆ- ವಿದ್ವಾಂಸರಿಗೆ, ಅಳ್ತಿಯಿಂ, ಪಿಡಿವೊಂಗಳಂ-ಹಿಡಿಹಿಡಿಯು ಹಣವನ್ನು, ಇತ್ತು,
ಮನ್ನಿಸುತ್ತಂ- ಮರ್ಯಾದಿಸುತ್ತ, ಕರತಳದ, ಕನತ್ಕನಕಕಿಂಕಿಣಿಮಾಲೆತಳ್ತ- ಹೊಳೆಯುತ್ತಿರುವ ಚಿನ್ನದ ಸ
ಣ್ಣ ಗಂಟೆಗಳಿಂದ ಕೂಡಿದ, ಪೊಂಗಠಾರಿಯುಂ- ಚಿನ್ನದ ಕಠಾರಿಯನ್ನು, ಮೊನೆಗಾಣಿಸಿ- ಅಗ್ರಭಾಗವಂ ಚಾ
ಚಿ, ವಾಮಪ್ರಕೋಷ್ಠಮಂ- ಎಡದೋಳಿನ ತತ್ತಿಯನ್ನು, ದಂಡೆಗೊಟ್ಟು- ಮುಂದಾನಿಸಿ, ಒಲಪ್ಪುದೋರಿ-
ಒಯ್ಯಾರವಂ ತೋರಿಸಿ, ಜಡಿಜಡಿದು, ಚಿಮ್ಮುತಂ, ಬೆಡಂಗು- ವಿಲಾಸವು, ಮಿಗೆ, ಪೆಡಂಮೆಟ್ಟಿ- ಹಿಂದಕ್ಕೆ
ಬಂದು, ಜಂಗಳಂಬಾಯ್ದು- ಲಂಘಿಸಿ, ನಡೆದೋರುತ್ತಂ- ನಡಿಗೆಯಂ ತೋರ್ಪಡಿಸುತ್ತ, ಒರ್ಮೆ, ನಿಜಭುಜಾ
ದಂಡಮಂ- ದೊಣ್ಣೆಯಂತಿರುವ ತನ್ನ ತೋಳನ್ನು, ನಡೆ- ಚೆನ್ನಾಗಿ, ನೋಡಿ, ನಲವೇರುತ್ತಂ- ಸಂತೋಷ
ವಂ ಹೊಂದುತ್ತ, ಸಖನಿಕರದೊಳ್, ಸೊಳ್ನುಡಿಗುಡುತ್ತೆ- ಆಗಾಗ್ಯೆ ಒಂದೊಂದು ಮಾತನಾಡುತ್ತ, ನಸುನ
ಗುತ್ತೆ, ಶಂಕರಕುಮಾರಂ, ಸೌಂದರಂ, ಸಲೀಲೆಯಿಂ- ವಿಲಾಸದಿಂ ಕೂಡಿ, ಮುಂದೆ, ಇರ್ದ, ಗಣಸಭೆಗೆ, ಪೊ

ಶಿವಾಂಪ್ರಿಗೆಯಂ ಮೆಟ್ಟಿ ನಷೆತರುತ್ತಂ ಪಡಿಪ್ರೊಂಗಳಂ ಬೇಳ್ಪ ತವಕದಿ ನಾಲಿಂಗಾಲಯು ವುಂ ಪ್ರುಗೆ ಮೆರೆವಿಂಡದೇವಂ ಕಂಡು ಘುಡಿಘುಡಿಸಿ ಕೋಪಾಟೋಪವನುಂ ತಾಳ್ದು ॥ *

ಮಹಾಸ್ರು ॥ ವೃಷಭಭಕ್ತವ್ರಾತಕೇಳ್ ತಂದೆರಗದೆ ಪಿರಿದುಂ ಕೊರ್ಬಿನಿಂ ಪೋಪ ನಾರೀ । ಕಡುಧೂರ್ತಂ ಕೇಳ್ದು ಮೆಂತಾನರಿಯದೆ ಶರಣಾಧಿಕ್ಯಮಂ ಪೋಗಿ ಪೊಕ್ಕಂ ॥ ಗುಡಿಯುಂ ಮಹೇಶ್ವರ ರ್ಕ್ಕಾಯೆಡ್ದೆಡೆ ಪೊರೆಯ ಲದೇಂ ಶಕ್ತನೇ ಶಂಭು ತನ್ನಂ । ಕೆಡುವಾತಂಗೇಕೆ ಬರ್ಕ್ಕುಂ ಸುಮತಿ ಶಿವಗಣದ್ರೋಹಿಯುಂ ಬೇಗ ವಿಾಗಳ್ ॥ ... ॥೯॥

ಕಂ ॥ ಗುಡಿಯೊಳಗಿರಲೀಯದೆ ಪೊರ । ಮಡಿಪ್ಪುದು ನೀವೆಂದು ವೀರಗಣಕೆವನೆನೆ ಸಂ ॥ ಗಡಿಸಿದ ಜನತತಿ ಯಚ್ಚರಿ । ವಡೆ ತಮ್ಮಡಿ ಯೋರ್ವ ನಲ್ಲಿ ಕೈಮುಗಿದೆಂದಂ ॥೧೦॥

ಚಂ ॥ ಬಗೆಯದಿ ರಯ್ಯ ಸೌಂದರನ ಜಾವಳ ನೆಂದು ಮಹೇಶ್ವರಂಗಿವಂ । ಮಗನೆನಿಸಿರ್ಪ ನೀತನ ಸುಗೀತಕೆ ಸೋಲ್ತನೊ ಭಕ್ತಿಗೊಲ್ದನೋ ॥ ಮೃಗಧರಮೌಲಿ ಯಾನರಿಯೆ ನರ್ಥಿಸಿದರ್ಥಮ ನೀವ ನದ್ಭುತಂ । ಮಿಗೆ ಪಡಿಪೊನ್ನಸಾಸಿರಮ ನಿತ್ತೊಡನಾಟುವ ನೊಲ್ದಹರ್ನಿಶಂ ॥ ... ... ... ... ... ... ॥೧೧॥

ಮತ್ತಂ ॥ ನಲವಾಲಾಪದೊಳೇನೊ ನಂಬಿ ಗಣಿಕಾಗೇಹಕ್ಕೆ ದೂದಟ್ಟಬಂ । ದೊ

ಡವಡವೆ- ನಮುಸ್ಕರಿಸದೆ, ಮಣಿಪಾದುಗೆಯಂ- ರತ್ನದ ಪಾದುಕೆಯನ್ನು, ಮೆಟ್ಟಿ, ನಷೆತರುತ್ತಂ, ಪಡಿಪೊಂಗಳಂ- ಬಗಸೆಯ ಹಣವನ್ನು ಬೇಳ್ಪ- ಯಾಚಿಸುವ, ತವಕದಿಂ- ಕುತೂಹಲದಿಂದ, ಆಲಿಂಗಾಲಯುವುಂ, ಪುಗೆ, ಮೆರೆವಿಂಡದೇವಂ, ಕಂಡು, ಘುಡಿಘುಡಿಸಿ- ಗರ್ಜನೆ ಮಾಡಿ, ಕೋಪಾಟೋಪವಂ- ಹೆಚ್ಚಾದ ಸಿಟ್ಟನ್ನು, ತಾಳ್ದು. * * * * * * * * * * * * * * *

ಎಳ್ತಂದು, ವೃಷಭಭಕ್ತವ್ರಾತಕೆ, ಎರಗದೆ, ಪಿರಿದುಂಕೊರ್ಬಿನಿಂ- ಹೆಚ್ಚಾದ ಗರ್ವದಿಂದ, ಪೋಪಂ- ಹೋಗುವ, ಈ ಕಡುಧೂರ್ತಂ- ಈ ಬಹುನೀಚನು, ಆರ್ ? ಶರಣಾಧಿಕ್ಯಮಂ- ಶರಣರ ಮಹತ್ವವನ್ನು, ಎಂತಾನುಂ- ಹ್ಯಾಗಾದರೂ, ಕೇಳ್ದು, ಅರಿಯನೆ ? ಪೋಗಿ, ಗುಡಿಯಂ, ಪೊಕ್ಕಂ, ಮಾಹೇಶ್ವರರ್, ಕಾಯೆಡ್ದೆಡೆ- ಕೋಪಿಸಿಕೊಂಡರೆ, ಶಂಭು, ತನ್ನಂ- ಆತನನ್ನು, ಪೊರೆಯಲ್- ಕಾಪಾಡುವದಕ್ಕೆ, ಶಕ್ತನೇಂ ? ಕೆಡುವಾತಂಗೆ- ಕೆಟ್ಟುಹೋಗುವವನಿಗೆ, ಸುಮತಿ- ಒಳ್ಳೆಯ ಬುದ್ಧಿಯು, ಏಕೆಬರ್ಕ್ಕುಂ ? ಈಗಳ್, ಬೇಗಂ ಶಿವಗಣದ್ರೋಹಿಯಂ. ... ... ... ... ... ॥೯॥

ಗುಡಿಯೊಳಗೆ, ಇರಲೀಯದೆ- ಇರಗೊಡಿಸದೆ, ನೀವ್, ಪೊರಮಡಿಪುದು- ಹೊರಕ್ಕೆ ಹೊರಡಿಸುವದು, ಎಂದು, ಅವಂ- ಆ ಮೆರೆವಿಂಡದೇವನು, ವೀರಗಣಕೆ, ಎನೆ- ಹೇಳಲು, ಸಂಗಡಿಸಿದ- ಸೇರಿದ್ದ, ಜನತತಿ, ಅಚ್ಚರಿವಡೆ, ಅಲ್ಲಿ, ಓರ್ವಂತಮ್ಮಡಿ- ಒಬ್ಬ ಪೂಜಾರಿಯು, ಕೈಮುಗಿದು, ಎಂದಂ. ... ॥೧೦॥

ಅಯ್ಯ ! ಸೌಂದರನ, ಸೌಂದರನನ್ನು, ಜಾವಳಂ- ಸಾಮಾನ್ಯನು, ಎಂದು, ಬಗೆಯದೆ- ಆಲೋಚಿಸದೆ, ಇರ್; ಇವಂ, ಮಹೇಶ್ವರಂಗೆ, ಮಗಂ, ಎನಿಸಿ, ಇರ್ಪನ್; ಮೃಗಧರಮೌಲಿ- ಚಂದ್ರಶೇಖರನು, ಈತನ, ಸುಗೀತಕೆ- ಒಳ್ಳೆಯಗಾನಕ್ಕೆ, ಸೋಲ್ತನೊ ? ಭಕ್ತಿಗೆ, ಒಲ್ದನೋ ? ಆಂ, ಅರಿಯೆಂ, ಅರ್ಥಿಸಿದ- ಬೇಡಿದ, ಅರ್ಥಮಂ- ಇಷ್ಟಾರ್ಥವನ್ನು, ಈವ, ಅದ್ಭುತಂ- ಆಶ್ಚರ್ಯ ! ಮಿಗೆ, ಒಲ್ದು, ಪಡಿಪೊನ್ನ- ಬೊಗಸೆಯ ಹೊನ್ನಿನ, ಸಾಸಿರವಂ, ಇತ್ತು, ಅಹರ್ನಿಶಂ- ಹಗಲುರಾತ್ರಿಯಲ್ಲೂ, ಒಡನೆ, ಆಡುವಂ. ॥೧೧॥

ನಲವಾಲಾಪದೊಳ್- ಅನೇಕವಮಾತಿನಿಂದ, ಏನೊ ? ನಂಬಿ- ಸೌಂದರನಂಬ್ಯಣ್ಣನು, ಗಣಿಕಾಗೇಹಕ್ಕೆ- ಸೂಳೆಯಮನೆಗೆ, ದೂದಟ್ಟಿ- ದೂತಕೃತ್ಯಕ್ಕೋಸ್ಕರ ಕಳುಹಿಸಲು, ಅಂಗಜಹರಂ, ಬಂದು, ಒಲವಿಂ, ಹಾ

ಲವಿಂ ದೌರ್ತ್ಯಮುನಾಗಿನಂ ಬಳಿಯೊಳೊಲ್ದಿಯ್ತ್ತರ್ಪ ನೇನೆಂದೊಡಂ ‖ ಸಲೆ ಕೇಳ್ದಾಗಳೆವಾಳ್ಪ ನುಗಜಹರು ಕೇಳೆಂದವಂ ಪೇಳೆ ತ | ದ್ವಿಲಸದ್ವಾಕ್ಯಮನಾಲಿಸುತ್ತೆ ಮೆರೆವಿಂಡಂ ಮತ್ತೆ ಕಾಯ್ಪೇರಿದಂ ‖ ... ... ... ... ‖೧೦‖

ವ‖ ಅಂತು ಕಾಯ್ಪೇರಿ ವಲ್ಮೀಕವಲ್ಲಭಂಗೆ ಭುಜಂಗನೊಡನಾಟಂ ತಕ್ಕುದೆಂದು ಗರ್ಜಿಸಿ ವಿಜೃಂಭಿಸಿ ‖ * * * * * * * * * * * * * *

ಮಹಾಸ್ರ‖ ಅತಿವೃದ್ಧಂ ಬುದ್ಧಿಗೆಟ್ಟೀಖಲನ ಕೆಳೆತನಂ ಬೊಕ್ಕ ನೇಶಂಭು ವತ್ಯುದ್ಧತ ನೀತಂ ತತ್ಸಹಾಯಂಬಡೆದ ಮುದದಿ ನೀಭಕ್ತವೃಂದಕ್ಕೆ ಬಂದಾ ‖ ನತಿಯುಂ ತಾಂ ಮಾಡದಿಂತೆ ಯ್ದಿದನೆ ಮರುಳಿರೆ ಲೇಸಾಮದಿ ಧೂರ್ತರೀರ್ವ್ವ ಕ್ಷಿತಿಯೊಳ್ಸದ್ಭಕ್ತಸಂದೋಹಕೆ ಪೊರಗೆನುತಂ ಡುಂಗುರಂ ಬೊಯ್ದನಾಗಳ್ ‖ ... ... ‖೧೩‖

ವ ‖ ಅಂತು ಡುಂಗುರಂಬೊಯ್ದುಂ ತುಗಣಸಮೂಹಮುಂ ಬೆರಸು ಹರಹರಧ್ಯಾನಸಹಿತಂ ಕೋಲಾಹಲಮಂ ನೆಗಳ್ಚೆ ಗುಡಿಯೊಳಿರ್ದ ಶಂಕರಂ ಕೇಳ್ದು ನಂಬಿಯಿದಿರೊಳ್ಭಕ್ತವತ್ಸಲತೆಯಂ ಪ್ರಕಟಿಸಲ್ಸಾಕಾರತ್ವಂ ಬಡೆದು ಬಿಗುರ್ತಂತಂತೆ ಕಂಪಿಸುತ್ತೆ ಬೆಮರುತ್ತ ಬೆಬ್ಬಳಿವೋಗಿ ಕಟ್ಟಳಿದು ಕೆದರ್ದ ಕೆಂಜೆಡೆಗಳ ನಸವಸದಿಂ ಸುತ್ತಿ ಬಂಧಿಸುತ್ತಂ ಮಿಳಿ

---

ತ್ಯನುಂ- ಸೇವಕತನವನ್ನು, ಆಗಿಪಂ- ಬಳಿಯೊಳ್- ಅನಂತರದಲ್ಲಿ, ಎಯ್ತರ್ಪಂ- ಬರುವನು; ಏನೆಂದೊಡಂ- ಏನನ್ನು ಹೇಳಿದಾಗ್ಯೂ, ಸಲೆ, ಕೇಳ್ದು, ಆಗನ, ವಾಳ್ಪಂ; ಕೇಳ್, ಎಂದು, ಅವಂ- ತಮ್ಮಡಿಯು, ಪೇಳೆ, ಮೆರೆವಿಂಡಂ, ತದ್ವಿಲಸದ್ವಾಕ್ಯಮಂ, ಆಲಿಸುತ್ತೆ- ಕೇಳುತ್ತ, ಮತ್ತೆ, ಕಾಯ್ಪೇರಿದಂ- ಕೋಪವಿಶಿಷ್ಟನಾದನು. ... ... ... ... ... ‖೧೦‖

ಅಂತು, ಕಾಯ್ಪೇರಿ, ವಲ್ಮೀಕವಲ್ಲಭಂಗೆ- ವಲ್ಮೀಕನಾಥೇಶ್ವರನಿಗೆ, (ಹುತ್ತಕ್ಕೆ ಒಡೆಯನಾದವನಿಗೆ) ಭುಜಂಗನ- ವಿಟಪುರುಷನ, (ಸರ್ಪನ) ಒಡನಾಡಂ- ಕೂಡಿಆಡುವಿಕೆಯು, ತಕ್ಕುದು- ಯೋಗ್ಯವಾದುದು; ಎಂದು, ಗರ್ಜಿಸಿ, ವಿಜೃಂಭಿಸಿ– ಉಬ್ಬಿ. * * * * * * * * * * * * *

ಅತಿವೃದ್ಧಂ- ಬಹುಮುದುಕನಾದ, ಶಂಭು, ಬುದ್ಧಿಗೆಟ್ಟು, ಈಖಲನ- ನೀಚನ, ಕೆಳೆತನಂಬೊಕ್ಕನೆ- ಸ್ನೇಹಿತತನವಂ ಮಾಡಿದನೇ? ಈತಂ, ಅತ್ಯುದ್ಧತಂ- ಬಹುಕೊಬ್ಬಿದವನು; ತತ್ಸಹಾಯಂಬಡೆದ- ಆ ಈಶ್ವರನ ಸಹಾಯವನ್ನು ಹೊಂದಿದ, ಮುದದಿಂ, ತಾಂ, ಬಂದು, ಈಭಕ್ತವೃಂದಕ್ಕೆ, ಆನತಿಯಂ- ನಮಸ್ಕಾರವನ್ನು, ಮಾಡದೆ, ಇಾತು, ಎಯ್ದಿದನೆ? ಮರುಳಿರೆ- ಶಾಬಾಸ್! ಲೇಸು– ಒಳ್ಳೆಯದು, ಆದುದು!! ಈ ಧೂರ್ತರ್ ಈರ್ವರ್- ಈ ನೀಚರಿಬ್ಬರೂ (ಈಶ್ವರ ಸುಂದರನಂಬ್ಯಣ್ಣ) ಕ್ಷಿತಿಯೊಳ್, ಸದ್ಭಕ್ತಸಂದೋಹಕೆ- ಒಳ್ಳೆಯಭಕ್ತರ ಗುಂಪಿನ ದೆಸೆಯಿಂದ, ಪೊರಗು- ಹೊರಗಾದವರು, ಎನುತಂ, ಆಗಳ್, ಡುಂಗುರಂಬೊಯ್ದಂ

ಅಂತು, ಡುಂಗುರಂಬೊಯ್ದು, ಇಾತು, ಗಣಸಮೂಹಂಬೆರಸು, ಹರಹರಧ್ಯಾನಸಹಿತಂ- ಹರಹರ ಎಂಬ ಶಬ್ದದಿಂದ ಕೂಡಿ, ಕೋಲಾಹಲಮಂ- ಕಲಕಲವನ್ನು ನೆಗಳ್ಚೆ- ಮಾಡಲು, ಗುಡಿಯೊಳ್, ಇರ್ದ ಶಂಕರಂ, ಕೇಳ್ದು. ನಂಬಿಯ, ಇದಿರೊಳ್- ಮುಂಗಡೆಯಲ್ಲಿ, ಭಕ್ತವತ್ಸಲತೆಯಂ- ಭಕ್ತರಲ್ಲಿ ಪ್ರೀತಿಯನ್ನು, ಪ್ರಕಟಿಸಲ್- ವ್ಯಕ್ತಪಡಿಸುವದಕ್ಕೋಸ್ಕರ, ಸಾಕಾರತ್ವಂಬಡೆದು- ಆಕಾರಸಹಿತನಾಗಿ, ಬಿಗುರ್ತು- ಭಯಪಟ್ಟು, ಅಂತಂತೆ- ಹಾಗೆಹಾಗೆ, ಕಂಪಿಸುತ್ತೆ- ನಡುಗುತ್ತ, ಬೆಮರುತ್ತ- ಬೆಬ್ಬಳಿವೋಗಿ, ಬೆರಗಾಗಿ, ಕಟ್ಟಳಿದು- ಗುಟುಬಿಚ್ಚಿ, ಕೆದರ್ದ- ಹರಡಿಕೊಂಡಿರುವ, ಕೆಂಜೆಡೆಗಳಂ, ಅಸವಸದಿಂ- ಬೇಗನೆ, ಸುತ್ತಿ, ಬಂಧಿಸುತ್ತಂ- ಕಟ್ಟುತ್ತ, ಇಳಿದು, ಎಳಲ್ವ- ಜೋಲಾಡುವ, ತನ್ನ, ಅಡಿಗಚ್ಚೆಯಂ- ಕೆಳಗಚ್ಚೆಯನ್ನು, ಅವುರ್ಚಿ, ಸೇರಿಸಿ,

ದೆಳಲ್ವ ತನ್ನಡಿಗಚ್ಚೆಯ ನಮರ್ಚಿ ಬಿಗಿದೇರಿಸುತ್ತಂ ಕೂಗಿನುಡಿವುದ ನುಳಿದು ಸೌಂದರ
ನಂ ಕೈಸನ್ನೆಯಿಂ ಸಾರೆಗರೆದೆಮಗಿನ್ನೆಂತೆಂದು ತನ್ಮನೋಭೂಮಿಯೊಳ್ಭೀತಿಬೀಜಮಂ ಬಿ
ತ್ತಿ ಬೇರ್ವರಿಸುತ್ತಂ ಶರಣಗಣಂ ಕಾಣ್ಗುಮೆಂದೆಳೆಲೆವಿಟ್ಟ ಪೂಮಾಲೆಗಳ ಬಂಬಲಂ ಮ
ರೆಗೊಳುತ್ತುಂ ಗವಾಕ್ಷವಿವರದೊಳ್ಮೆಲ್ಲಮೆಲ್ಲನೆ ಜೋಲ್ದು ನೋಡುತ್ತೆ ಕೆಲಬಲದ ಸೊ
ಪ್ಪುಳನಾರೈವುತ್ತತಿಪ್ರಯಾಸದಿಂ ಪೊಡಮುಟ್ಟಿ ನಿಡುಮುಸುಂಕೆಸೆಯೆ ನೆರೆದ ಮಂದಿ
ಯೊಳ್ಪೊಕ್ಕು ದೇಗುಲದ ಪಿಂದಣ್ಗೆಳ್ತಂದು ಸುತ್ತುಂಗೋಡೆಯ ಕಲ್ಲನೊಂದಂ ಪಾದಾ
ಗ್ರದಿಂಕೆಡಪಿ ರಂಧ್ರದೊಳ್ನುಸುಳ್ದು ಸೌಂದರಂ ಬೆರಸು ನಿಟ್ಟೋಟದಿ ನೋಡುತ್ತಂಕೋ
ಶಪರಿಮಿತಸ್ಥಾನದೊಳೊಂದುನಂದನ ಮಿರೆ ಕಂಡಾವನಮಂ ಪುಗುತರ್ಪಾಗಳ್ ॥ * *

ಮಹಾಸ್ರ ॥ ವಿಳಸತ್ಪುಷ್ಪಿಣಿಯಂ ಲತಾಲಲನೆಯಂ ಮೈಸೋಂಕಿ ಚಂಡಾಳಿಯೊ ।
ಳ್ಕೆಳೆಗೊಂಡಪ್ಪುತೆ ಮಿತ್ರಜಾಯೆಯ ನುದಂಚದ್ರಾಜಹಂಸಾಂಗನಾ ॥ ಕುಳಮಂ ಚುಂಬಿ
ಸಿ ಪಂಕಜಾಕರದ ನೀರೊಳ್ಮಿಂದು ತದ್ದೋಷಮಂ ಕಳೆಯಲ್ದೇವನ ಸೇವೆಗೆಯ್ದುವವೊ
ಲೆಂಬಂದಪ್ಪೊತ್ತು ಮಂದಾನಿಲಂ ॥ ... ... ... ... ॥೧೪॥

---

ಬಿದು, ಏರಿಸುತ್ತಂ- ಎತ್ತಿಸಿಕ್ಕಿಸುತ್ತ, ಕೂಗಿ ನುಡಿವುದಂ- ಉಳಿದು, ಸೌಂದರನಂ, ಕೈಸನ್ನೆಯಿಂ, ಸಾರೆಗರೆ
ದು-ಸಮೀಪಕ್ಕೆಕರೆದು, ಇನ್ನು, ಎಮಗೆ, ಎಂತು? ಎಂದು, ತನ್ಮನೋ ಭೂಮಿಯೊಳ್- ಆ ನಂಬ್ಯಣ್ಣನವ
ನಸ್ಸೆಂಬ ಭೂಮಿಯಲ್ಲಿ, ಭೀತಿಬೀಜಮಂ- ಭಯವೆಂಬ ಬಿತ್ತನ್ನು, ಬಿತ್ತಿ, ಬೇರ್ವರಿಸುತ್ತಂ, ಶರಣಗಣಂ,
ಕಾಣ್ಗುಂ- ಕಾಣುವದು, ಎಂದು, ಎಳಲೆವಿಟ್ಟ- ಜೋಲುಬಿಟ್ಟ, ಪೂಮಾಲೆಗಳ, ಬಂಬಲಂ- ಗುಂಪನ್ನು,
ಮರೆಗೊಳುತ್ತಂ- ಮುಚ್ಚಿಕೊಳ್ಳುತ್ತ, ಗವಾಕ್ಷವಿವರದೊಳ್- ಕಿಟಕಿಯ ಸಂದಿನಲ್ಲಿ, ಮೆಲ್ಲಮೆಲ್ಲನೆ, ಜೋ
ಲ್ದು- ಬಗ್ಗಿ, ನೋಡುತ್ತೆ, ಕೆಲಬಲದ, ಸೊಪ್ಪುಳಂ- ಶಬ್ದವನ್ನು, ಆರೈವುತ್ತೆ- ಕೇಳುತ್ತ, ಅತಿಪ್ರಯಾಸದಿಂ,
ಪೊಡಮುಟ್ಟಿ, ನಿಡುಮುಸುಂಕು- ಉದ್ದವಾದ ಮೇಲ್ಮುಸುಕು, ಎಸೆಯೆ, ನೆರೆದ- ಕೂಡಿದ, ಮಂದಿಯೊ
ಳ್- ಜನದಲ್ಲಿ, ಪೊಕ್ಕು, ದೇಗುಲದ- ದೇವಸ್ಥಾನದ, ಪಿಂದಣ್ಗೆ- ಹಿಂದುಗಡೆಗೆ, ಎಳ್ತಂದು, ಸುತ್ತುಂಗೋಡೆ
ಯ- ಸುತ್ತಲಿರುವಗೋಡೆಯ, ಒಂದುಕಲ್ಲಂ, ಪಾದಾಗ್ರದಿಂ, ಕೆಡಪಿ, ರಂಧ್ರದೊಳ್-ಸಂದಿನಲ್ಲಿ, ನುಸುಳ್ದು-
ನುಗ್ಗಿ, ಸೌಂದರಂಬೆರಸು- ಸೌಂದರನಂಬ್ಯಣ್ಣನೊಡನೆಕೂಡಿ, ನಿಟ್ಟೋಟದಿಂ, ಬರದಾರಿನಿಂದ, ಓಡುತ್ತಂ
ಕ್ರೋಶಪರಿಮಿತಸ್ಥಾನದೊಳ್- ಒಂದು ಹರದಾರಿಯಲ್ಲಿ, ಒಂದುನಂದನಂ- ಒಂದುತೋಟವು, ಇರೆ, ಕಂಡು,
ಆವನಮಂ, ಪುಗುತರ್ಪಾಗಳ್- ಪ್ರವೇಶಿಸುವ ಕಾಲದಲ್ಲಿ. * * * * * * * * *

ಮಂದಾನಿಲಂ- ಮೆಲ್ಗಾಳಿಯು, ವಿಲಸತ್ಪುಷ್ಪಿಣಿಯಂ- ಪ್ರಕಾಶಿಸುವ ರಜಸ್ವಲೆಯಾದ, (ಹೂವ
ನ್ನು ಬಿಟ್ಟಿರುವ,) ಲತಾಲಲನೆಯಂ- ಬಳ್ಳಿಯೆಂಬ ಸ್ತ್ರೀಯನ್ನು, ಮೈಸೋಂಕಿ- ಮುಟ್ಟಿ, ಚಂಡಾಳಿ
ಯೊಳ್- ಚಂಡಾಲ ಸ್ತ್ರೀಯೊಡನೆ, (ಚಂಡ-ಸಮರ್ಥಗಳಾದ, ಅಳಿಯೊಡನೆ- ಭ್ರಮರದೊಡನೆ) ಕೆಳೆಗೊಂ
ಡು- ಸ್ನೇಹವಂ ಮಾಡಿಕೊಂಡು, ಮಿತ್ರಜಾಯೆಯಂ- ಸ್ನೇಹಿತನ ಪತ್ನಿಯನ್ನು (ಸೂರ್ಯನ ಪತ್ನಿಯಾದ ಕ
ಮಲಿನಿಯನ್ನು,) ಅಪ್ಪುತೆ- ಆಲಿಂಗಿಸುತ್ತ, ಉದಂಚದ್ರಾಜಹಂಸಾಂಗನಾಕುಲಮಂ- ಉತ್ಕೃಷ್ಟರಾದ
ರಾಜಶ್ರೇಷ್ಠರ ಪತ್ನಿಯರ ಗುಂಪನ್ನು (ಉತ್ಕೃಷ್ಟಗಳಾದ ಹೆಣ್ಣುಹಂಸಪಕ್ಷಿಗಳ ಗುಂಪನ್ನು,) ಚುಂಬಿ
ಸಿ- ಮುತ್ತಿಕ್ಕಿ, ಪಂಕಜಾಕರದ- ಪಂಕ- ಪಾಪದಿಂದ, ಜಾ- ಹುಟ್ಟಿದವಳ, ಕರದ- ಕೆಯ್ಮುಟ್ಟಿದ, ನೀರೊಳ್,
ಮಿಂದು- ಸ್ನಾನವಂಮಾಡಿ, (ಪಂಕಜಾಕರದ- ಸರೋವರದ, ನೀರೊಳ್, ಮಿಂದು) ತದ್ದೋಷಮಂ- ಪೂ
ರ್ವೋಕ್ತಗಳಾದ ದುಷ್ಕಾರ್ಯಗಳಿಂದುಂಟಾದ ಪಾಪವನ್ನು, ಕಳೆಯಲ್- ಹೋಗಲಾಡಿಸಿಕೊಳ್ಳುವದಕ್ಕೋಸ್ಕ
ರ, ದೇವನ- ಈಶ್ವರನ, ಸೇವೆಗೆ, ಎಯ್ದುವವೊಲ್- ಹೋಗುವಹಾಗೆ, ಎಂಬಂದದೊತ್ತು. ॥೧೪

ವ ॥ ಅಂತು ಬಂದ ಮಂದಾನಿಲನು ಮನದೆಗೊಂಡು ಖಂಡೇಂದುಧರು ಬರೆವರೆ ॥ *

ಚಂಪಕಂ ॥ ತಳಿ ರೆಲೆ ಮೊಗ್ಗೆ ಯುಜ್ಜಳ ರಲ ರ್ಮಿಡಿ ಬಲ್ಮಿಡಿ ದೋರೆ ಯಚ್ಚ್ವಪ । ಣ್ಬುಳಸಿದ ಕೊಂಬುಗೊಂಬೊಳಡಿದೊಪ್ಪಿರೆ ಕೀರ ಮಯೂರ ಭೃಂಗ ಕೋ ॥ ಕಿಳ ಕುಳಮ ಲ್ಲಿ ತೀವಿರೆ ಮರಂಗಳೊ ಳರ್ಕಸುಧಾಂಶುರೋಚಿ ಯು । ಜ್ಜ್ವಳಿಸದ ತದ್ವನಂ ಬಗೆಗಡಂಗು ವೊಡುತ್ಸವಮಿತ್ತು ಡೀಶನ ॥ ... .. ... ... ॥೧೫॥

ಚಂಪಕ ॥ ಎಳೆದಳಿರಾಂತಶೋಕೆ ನನೆದೀವಿದಮಲ್ಲಿಗೆ ಪೂತಚಂಪಕಂ । ಮಿಳಿರ್ವಲ ರ್ಜೊಂಪಮಂ ತಳೆದ ಮಾಧವಿ ಬಲ್ಮುಗುಳಾಂತಜಾತಿ ಕಾ॥ಯ್ಗಳ ನುರೆ ಪೊತ್ತು ನಿಂದ ಪೊ ಸ ತೆಂಗು ನಿಲುಂಬಿದ ಪಣ್ಣ ಬಿಣ್ಪ ನಾ । ಳ್ದಿಳೆಗೆರಗಿರ್ದ ಬಾಳೆ ಬಗೆಗೊಂಡುದು ತದ್ವನ ದೊಳ್ಪುರಾರಿಯ ॥ ... ... ... ... ... ॥೧೬॥

ವ ॥ ಮತ್ತ ಮಲ್ಲಿ ಮಕರಧ್ವಜವಿಜಯಯಾತ್ರೆಗೆ ಬಸಂತಂ ಪೊಯ್ದಿಂದ್ರಗೋಪದ ಗೂಡಾರ ಮೆನಿಸಿ ರಂಜಿಸಿ ತಳಿರ್ತ ಮಾಮರದೆಳೆಗೊಂಬಿನೊ ಳ್ಕುಳ್ಳಿರ್ದೆಲರಲೆಪದಿ ನೊಲೆ ದು ತೂಗುತಿನಿದೊಸರ್ವ ತನಿವಣ್ಣಂ ಮನವಾರೆ ನೋಡಿ ಪಕ್ಕದಿಂದಪ್ಪಿ ಚಂಚುಪುಟದಿಂ

---

ಅಂತು, ಬಂದ, ಮಂದಾನಿಲನಂ, ಖಂಡೇಂದುಧರಂ- ಚಂದ್ರನ ತುಣುಕನ್ನುಧರಿಸಿರುವಶೀಶ್ವರನು, ಮ ನದೆಗೊಂಡು- ಮನಸ್ಸಿನಲ್ಲಿ ಅನುಗ್ರಹಿಸಿ, ಬರೆವರೆ. * * * * * * * * * * *

ತಳಿರ್- ಚಿಗುರು, ಎಲೆ,ಮೊಗ್ಗೆ, ಉಜ್ಜಳಲ್- ಅರ್ಧಅರಳಿದಹೂವು, ಅರಲ್- ಪೂರ್ಣವಾಗಿಅರಳಿದಹೂ ವು, ಮಿಡಿ- ಹೀಚು, ಬಲ್ಮಿಡಿ- ಸ್ವಲ್ಪಬಲಿತಹೀಚು, ದೋರೆ- ಅರ್ಧಪಕ್ವವಾದಹಣ್ಣು, ಅಚ್ಚಪಣ್- ಚೆನ್ನಾ ಗಿಕಳಿತಹಣ್ಣು, ಬಳಸಿದ- ಸುತ್ತಿಕೊಂಡಿರುವ, ಕೊಂಬುಕೊಂಬುಗಳೊಳ್-ಪ್ರತಿಶಾಖೆಗಳಲ್ಲಿ, ಇಡಿದು, ತುಂ ಬಿ, ಒಪ್ಪಿ, ಇರೆ, ಕೀರ......ಕುಲಂ—ಕೀರ- ಗಿಳಿ, ಮಯೂರ- ನವಿಲು, ಭೃಂಗ-ತುಂಬಿ, ಕೋಕಿಳ- ಕೋ ಗಿಲೆ, ಇವುಗಳ, ಕುಳಂ- ಗುಂಪು, ಅಲ್ಲಿ, ತೀವಿ, ಇರೆ, ಮರಂಗಳೊಳ್, ಅರ್ಕಸುಧಾಂಶುರೋಚಿ- ಸೂರ್ಯಚಂ ದ್ರರ ಕಿರಣವು, ಉಜ್ಜ್ವಳಿಸಿದ- ಒಳಕ್ಕೆಪ್ರವೇಶಗೊಳ್ಳದ, ತದ್ವನಂ, ಈಶನ, ಬಗೆಗೆ, ಅಡಂಗುವೊಡೆ- ಮಗ್ನ ವಾಗಬೇಕಾದರೆ, ಉತ್ಸವಮಿತ್ತುದು. ... ... ... ... ॥೧೫॥

ತದ್ವನದೊಳ್, ಎಳೆದಳಿರಾಂತ, ಅಶೋಕೆ, ನನೆದೀವಿದ- ಮೊಗ್ಗೆಗಳಿಂದತುಂಬಿದ, ಮಲ್ಲಿಗೆ, ಪೂತ- ಹೂವನ್ನುಬಿಟ್ಟ, ಚಂಪಕಂ, ಮಿಳಿರ್ವ- ಜೋಲಾಡುವ ,ಅಲರ್ಜೊಂಪಮಂ- ಹೂವಿನ ಗೊಂಚಲನ್ನು, ತಳೆದ, ಮಾಧವಿ- ವಸಂತದೂತಿ, ಬಲ್ಮುಗುಳಾಂತ- ಹಣ್ಣುಮೊಗ್ಗೆಗಳನ್ನು ಧರಿಸಿದ, ಜಾತಿ- ಜಾಜಿ, ಕಾಯ್ಗಳಂ, ಉರೆ, ಪೊತ್ತು, ನಿಂದ, ಪೊಸತೆಂಗು, ನಿಲುಂಬಿದ- ಆಶ್ರಯಿಸಿದ, ಪಣ್ಣ,ಬಿಣ್ಪಂ- ಭಾರವನ್ನು, ಆಳ್ದು -ಹೊಂ ದಿ, ಇಳೆಗೆ- ಭೂಮಿಗೆ, ಎರಗಿ- ಬಗ್ಗಿ, ಇರ್ದ, ಬಾಳೆ, ಪುರಾರಿಯ, ಬಗೆಗೊಂಡುದು- ಮನಸ್ಸನ್ನಾಕ ರ್ಷಿಸಿತು. ... ... ... ... ... ... ॥೧೬॥

ಮತ್ತಂ, ಅಲ್ಲಿ, ಮಕರಧ್ವಜವಿಜಯಯಾತ್ರೆಗೆ, ಮನ್ಮಥನಜಯಪ್ರಯಾಣಕ್ಕೋಸ್ಕರ, ಬಸಂತಂ, ಪೊಯ್ದ, ಇಂದ್ರಗೋಪದ- ಹೊನ್ನುಹುಳದ ಬಣ್ಣದ, ಗೂಡಾರಂ-ಪಟಗೃಹವು, ಎನಿಸಿ, ರಂಜಿಸಿ, ತಳಿರ್ತ- ಚಿಗುರಿದ, ಮಾಮರದ- ಮಾವಿನಮರದ, ಎಳೆಗೊಂಬಿನೊಳ್, ಕುಳ್ಳಿರ್ದು, ಎಲರ- ಗಾಳಿಯ, ಅಲೆಪದಿಂ- ತೂಗಾಡಿಸುವಿಕೆಯಿಂದ, ಒಲೆದು- ಜೋತು, ತೂಗುತೆ, ಇನಿದೊಸರ್ವ- ಮಾಧುರ್ಯವಂ ಸ್ರವಿಸುವ, ತನಿವ ಣ್ಣಂ, ಮನವಾರೆ- ಮನಸ್ತೃಪ್ತಿಯುಂಟಾಗುವ ಹಾಗೆ, ನೋಡಿ, ಪಕ್ಕದಿಂದೆ- ರೆಕ್ಕೆಯಿಂದ, ಅಪ್ಪಿ- ತಬ್ಬಿ, ಚಂಚುಪುಟದಿಂ- ಕೊಕ್ಕಿನಿಂದ, ಕದ್ರುಂಕಿ- ಕುಕ್ಕಿ, ಸೋರ್ವ, ಇನಿರಸಮಂ- ಸೀಯಾದರಸವನ್ನು, ಪಕ್ಕಿಂ-

ಕದ್ಯಂಕಿ ಸೋರ್ವಿನಿರಸಮುಂ ಪಕ್ಕ ಮೊಳಸೆ ಚೀತ್ಕಾರರವಂ ನಿಮಿರೆ ನಾಲಿಗೆಗೊನೆಯಿಂ ಸವಿಸವಿದು ಕಣ್ಮುಚ್ಚಿ ಪರಮಾನಂದಪರವಶತೆಯಿಂ ತಣಿದು ತೇಗಿ ಗಳಗಳನೆ ಗಳಪುವರಗಿಳಗಳ ಬಳಗಮುಂ ಸಲ್ಲಲಿತಪಲ್ಲವೋಲ್ಲಸಿತರಸಾಲಶಾಖಾಗ್ರಮ ನೇರಿ ವಿಾರಿ ಕೊರಲಂ ನೀಡಿ ಮಿಂಚುವ ಚಂಚುವಿಂ ಸೆಳೆದೆಳೆದು ಕದ್ಯಂಕಿ ಚೆಂದಳಿರ ರಸವು ನಂದಂಬೆತ್ತು ಸವಿದು ನಲಿನಲಿದು ಚಂಚತ್ಪಂಚಶರನ ಬಂಚೆರದಂತೆ ಪಂಚ ಮೆನೆ ಪಂಚಮಧ್ವಂಚರಂದೋರಿ ಕಳಕಳಂಗೈವ ಕಳಕಂಠಂಗಳುಂ ಅರೆವಿರಿದ ಸರಸಪರಿಮಳದರಲ ಕುಸುಂಕರೊಳ್ಮುಸುಕಿ ಮುಸುಂಬ ನಿಟ್ಟು ಪಸಿಪಡಂಗೆ ಬಂಡುಂಡು ಪಿಂಡುಗೊಂಡು ಮಂಡಳಿಸಿ ನಗೆ ದಕಾಂಡಜಳಧರಶಂಕೆಯುಂ ಕಳಾಪಿಗಳ್ಗೆಸಗಿ ನರ್ತನಂಗೈಸಿ ಪರಿದು ಪರಿಮರಿಗೊಂಬ ಭೃಂಗಂಗಳುಂ ತಿಳಿಗೊಳದೊಳ್ಸುಳಿದು ಸುತ್ತಿ ನಳಿನವಿಳಸಿತಸುರಭಿರಜಮುಂ ಕೊರಲ್ಕುಸಿವಿನಂ ಪೊತ್ತೆತ್ತಿ ಪೊರಲಾರದಡಿಗಡಿಗೆ ನಿಂದುನಿಂದಶೋಕಾನೋಕಹದ ಶಾಖೆಯುಂ ಪಲುಂಗಿ ಮಧುಪರವ ವ್ಯಾಜದಿಂ ನರಲ್ದು ಮಂದಂ ಮಂದಂ ಬರ್ಪ ಗಂಧವಹನುಂ ಸಲೆ ಮೆರೆವ ಮನೋಜ್ಞದಳ ಫಳ ಕುಸುಮ ವಿಳಸಿತ ಕುಂದ ಕುಟಜ ಮಾಕಂದ ಮಂದಾರ ಜಂಬು ಜಂಬೀರ ನಾರಂಗ

---

ರೆಕ್ಕೆಯು, ಎಳಲೆ- ಜೋಲಿರಲು, ಚೀತ್ಕಾರರವಂ- ಚೀರ್ ಎಂಬಶಬ್ದವು, ನಿಮಿರೆ- ಉಂಟಾಗಲು, ನಾಲಿಗೆಗೊನೆಯಿಂ, ಸವಿಸವಿದು, ಕಣ್ಮುಚ್ಚಿ, ಪರಮಾನಂದ ಪರವಶತೆಯಿಂ- ಅತಿಶಯವಾದ ಸಂತೋಷದಿಂದುಂಟಾದ ಮೂರ್ಛೆಯಿಂದ, ತಣಿದು- ತೃಪ್ತಿಪಟ್ಟು, ತೇಗಿ, ಗಳಗಳನೆ, ಗಳಪುವ- ಮಾತನಾಡುವ, ಅರಗಿಳಿಗಳ- ರಾಜಶುಕಗಳ, ಬಳಗಮುಂ; ಸಲ್ಲಲಿತ......ಅಗ್ರಮಂ—ಸಲ್ಲಲಿತ- ಶ್ಲಾಘ್ಯವಾದ, ಪಲ್ಲವ- ಚಿಗುರಿನಿಂದ, ಉಲ್ಲಸಿತ- ಪ್ರಕಾಶಮಾನವಾದ, ರಸಾಲಶಾಖಾಗ್ರಮಂ- ಮಾವಿನಕೊಂಬೆಯನ್ನು, ಏರಿ,ವಿಾರಿ-ಹೆಚ್ಚಾಗಿ, ಕೊರಲಂ, ನೀಡಿ, ಮಿಂಚುವ- ಹೊಳೆಯುವ, ಚಂಚುವಿಂ- ಕೊಕ್ಕಿನಿಂದ, ಸೆಳೆದು- ಆಕರ್ಷಿಸಿ, ಎಳೆದು, ಕದ್ಯಂಕಿ, ಚೆಂದಳಿರ- ಕೆಂಪುಚಿಗುರಿನ, ರಸವು, ಅಂದಂಬೆತ್ತು- ಮನೋಹರವಾಗಿ, ಸವಿದು, ನಲನಲಿದು- ಬಹುಸಂತೋಷಪಟ್ಟು, ಚಂಚತ್ಪಂಚಶರನ- ಪ್ರಕಾಶಿಸುವ ಮನ್ಮಥನ, ಬಂಚರದಂತೆ- ವೀಣೆಯಹಾಗೆ, ಪಂಚಮೆನೆ- ವಿಸ್ತಾರವಾಗುವಹಾಗೆ, ಪಂಚಮದ- ಪಂಚಮನಾದದ, ಈಂಚರಂದೋರಿ- ಮಧುರಸ್ವರವನ್ನು ತೋರ್ಪಡಿಸಿ, ಕಳಕಳಂಗೈವ- ಕೋಲಾಹಲಧ್ವನಿಯಂಮಾಡುವ, ಕಳಕಂಠಂಗಳುಂ- ಕೋಗಿಲೆಗಳೂ; ಅರೆವಿರಿದ- ಅರ್ಧವಿಕಸಿತವಾದ, ಸರಸಪರಿಮಳದ· ಮನೋಹರವಾದ ಸುವಾಸನೆಯುಳ್ಳ, ಅರಲ- ಹೂವಿನ, ಕುಸುಂಕರೊಳ್- ಕಿಂಜಲ್ಕದಲ್ಲಿ, ಮುಸುಕಿ- ಮುತ್ತಿ, ಮುಸುಂಬಂ- ಮುಸುಡಿಯನ್ನು, ಇಟ್ಟು, ಪಸಿವು, ಅಡಂಗೆ- ಶಮನವಾಗುವಹಾಗೆ, ಬಂಡುಂಡು- ಮಕರಂದವಂ ಕುಡಿದು, ಪಿಂಡುಗೊಂಡು- ಗುಂಪುಗೂಡಿ, ಮಂಡಳಿಸಿ- ಗುಂಡಾಗಿ, ನೆಗೆದು, ಕಳಾಪಿಗಳ್ಗೆ- ನವಿಲುಗಳಿಗೆ, ಅಕಾಂಡಜಲಧರಶಂಕೆಯುಂ- ಅವಿಚ್ಛಿನ್ನವಾದ ಮೋಡನೆಂಬ ಊಹೆಯನ್ನು, ಎಸಗಿ, ನರ್ತನಂಗೈಸಿ, ಪರಿದು- ಸಂಚರಿಸಿ, ಪರಿಮರಿಗೊಂಬ- ಹಾರಿಹಾರಿಹೋಗುವ, ಭೃಂಗಂಗಳುಂ, ತಿಳಿಗೊಳದೊಳ್, ಸುಳಿದು, ಸುತ್ತಿ, ನಳಿನವಿಳಸಿತಸುರಭಿರಜಮುಂ- ಕಮಲದ ಪ್ರಕಾಶಿಸುವ ಪರಿಮಳವಿಶಿಷ್ಟವಾದ ಧೂಳಿಯನ್ನು, ಕೊರಲ್- ಕುಸಿವಿನಂ- ಕುಗ್ಗುವಹಾಗೆ, ಪೊತ್ತು, ಎತ್ತಿ, ಪೊರಲಾರದೆ, ಅಡಿಗಡಿಗೆ, ನಿಂದುನಿಂದು, ಅಶೋಕಾನೋಕಹದ- ಅಸುಗೆಮರದ, ಶಾಖೆಯುಂ- ಕೊಂಬೆಯಲ್ಲಿ, ಮಲುಂಗಿ, ಮಧುಪರವವ್ಯಾಜದಿಂ- ಭ್ರಮರದ ಕೂಗೆಂಬ ನೆವದಿಂದ, ನರಲ್ದು, ಮಂದಮಂದಂ- ಮೆಲ್ಲಮೆಲ್ಲನೆ, ಬರ್ಪ, ಗಂಧವಹನುಂ- ವಾಯುವೂ- ಸಲೆ, ಮೆರೆವ, ಮನೋಜ್ಞ...... ಸಮುದಂಬೆಂ —ಮನೋಜ್ಞ- ಮನೋಹರವಾದ, ದಳ- ಪತ್ರಗಳು, ಫಳ- ಹಣ್ಣುಗಳು, ಕುಸುಮ- ಹೂವ್ಗಳು ಇ

ತುಂಗ ಮಾತುಳಂಗ ನಾರಿಕೇಳ ಪಾಟಲ ತಮಾಲ ತಾಲ ಹಿಂತಾಲ ಪೂಗ ಪುನ್ನಾಗ ನಾಗ ಕೇಸರ ಕುರವಕ ಬಕ ವಕುಳ ತಿಳಕ ಚಂಪಕ ದಾಡಿಮತರುನಿಕರನಿಬಿಡಿತ ಜಾತಿ ಯೂಧಿಕಾ ಮಾಲತೀ ಮಲ್ಲಿಕಾ ಮಾಧವೀ ಮುಖ ಲಲಿತವಿತಾನಸಮುದಂಚಿತ ಮೆನಿಸಿ ಕಂಪಿನ ಕಣಿಯುಂ ತಂಪಿನ ತವರ್ಮನೆಯುಂ ಮಲರಂಬನ ಬಲದಗರುಡಿಯುಂ ಬಸಂತರಾಜನ ಶಿಬಿರ ಮುಂ ಚೈತ್ರಲಕ್ಷ್ಮಿಯ ಚಿತ್ರಶಾಲೆಯುಂ ವಿಯೋಗಿನಿವಹಕಾರಾಗಾರಮುಂ ಕಳಕಂಠಕುಳ ಸಂಗೀತಸದನಮುಂ ಶುಕನಿಕರಪಠನಾಗಾರಮುಂ ಅಳಿಪ್ರತಾನಾನೂನಪಾನೀಯಮಂಟಪ ಮುಂ ರತಿದೇವಿಯಸೌಭಾಗ್ಯಭವನಮುಂ ಮಂದಾನಿಲನಕೇಳೀನಿಳಯಮುಂ ಅನಂಗರಾಜ ನ ರಾಜಧಾನಿಯುಂ ತಾ ನೆಂದೆನಿಸಿ ಕಂಗೊಳಿಪುದ್ಯಾನಮಂ ಸೌಂದರನೊಡನೆ ಪ್ರೊಕ್ಕು ನಂ ದನದಂದಮ ನವಲೋಕಿಸುತ್ತಂ ಶುಕಪಿಕಮಧುಕರಪ್ರಕರಮಧುರರವಮ ನಾಕರ್ಣಿಸು ತ್ತಂಮುಂದಣ್ಗೆ ನಡೆತರ್ಪಾಗಳ್॥ * * * * * * * * * * * *

ಮ ॥ ಸ್ರ ॥ ವಿದಳತ್ಪುಷ್ಪಸ್ಫುರತ್ಸೌರಭಭರಸಭರಲುಬ್ಧಭ್ರಮದ್ಭೃಂಗಸಂಘಾ । ಸ್ಪದಚಂಚತ್ಪರ್ಣಕರ್ಣಂ ಗಳಿತಮಧುಮದಂ ಕೋರಕೋದಾರಭೂಸ್ವ ॥ ದ್ರದನಂ ಪ್ರೋ

---

ವುಗಳಿಂದ, ವಿಳಸಿತ- ಪ್ರಕಾಶಮಾನವಾದ, ಕುಂದ- ಮೊಲ್ಲೆ, ಕುಟಜ- ಗಿರಿಮಲ್ಲಿಗೆ, ಮಾಕಂದ- ಮಾವು, ಮಂದಾರ- ಹಾಲಿವಾಣ, ಜಂಬು- ನೇರಿಲು, ಜಂಬೀರ- ನಿಂಬೆ, ನಾರಂಗ- ಕಿತ್ತಲೆ, ತುಂಗ- ಉನ್ನತವಾದ, ಮಾತುಳಂಗ- ಮಾದಲು, ನಾರಿಕೇಳ- ತೆಂಗು, ಪಾಟಲ- ಪಾದರಿ, ತಮಾಲ- ಹೊಂಗೆ, ತಾಲ- ಶ್ರೀತಾಳೆ, ಹಿಂತಾಲ- ಕಿರುತಾಳೆ, ಪೂಗ- ಅಡಕೆ, ಪುನ್ನಾಗ- ಸುರಹೊನ್ನೆ, ನಾಗಕೇಸರ- ನಾಗಸಂಪಿಗೆ, ಕುರವಕ- ಗೋರಂಟೆ, ಬಕ- ಕೊಕ್ಕರೆ, ವಕುಳ- ಪಗಡೆ, ತಿಳಕ- ಸುರಾಯಿ, ಚಂಪಕ, ದಾಡಿಮ, ತರು, ಇವುಗಳಿಂದ ನಿಬಿಡಿತ- ಸಾಂದ್ರವಾದದ್ದು, ಜಾತಿ- ಜಾಜಿ, ಯೂಧಿಕಾ- ಕಾಡುಮಲ್ಲಿಗೆ, ಮಾಲತೀ- ಕೆಂಪುಜಾಜಿ, ಮಲ್ಲಿ ಕಾ, ಮಾಧವಿ- ವಸಂತದೂತಿ, ಮುಖ- ಮೊದಲಾದ, ಲಲಿತಲತಾ- ಶ್ಲಾಘ್ಯವಾದ ಬಳ್ಳಿಗಳ; ವಿತಾನ- ಗುಂ ಪಿನಿಂದ, ಸಮುದಂಚಿತಂ- ಅಭಿವೃದ್ಧವಾದದ್ದು, ಎನಿಸಿ, ತಾಂ, ಕಂಪಿನ- ಪರಿಮಳದ, ಕಣಿಯುಂ- ಖನಿ ಯೂ, ತಂಪಿನ, ತವರ್ಮನೆಯುಂ- ಜನ್ಮಭೂಮಿಯೂ, ಅಲರಂಬನ- ಮನ್ಮಥನ, ಬಲದ- ಸೈನ್ಯದ, ಗರುಡಿ ಯುಂ, ಬಸಂತರಾಜನ, ಶಿಬಿರಮುಂ- ಸೈನ್ಯನಿಲ್ಲುವ ಸ್ಥಲವೂ, ಚೈತ್ರಲಕ್ಷ್ಮಿಯ- ವಸಂತಲಕ್ಷ್ಮಿಯ, ಚಿತ್ರ ಶಾಲೆಯುಂ- ಉಪ್ಪರಿಗೆ ಮನೆಯೂ, ವಿಯೋಗಿನಿವಹಕಾರಾಗಾರಮುಂ- ವಿರಹಿಗಳಗುಂಪಿಗೆ ಸೆರೆಮನೆಯೂ, ಕಳಕಂಠಕುಳಸಂಗೀತ ಸದನಮುಂ- ಕೋಗಿಲೆಗಳ ಗುಂಪಿನ ಹಾಡುವ ಮನೆಯೂ, ಶುಕನಿಕರಪಠನಾಗಾರ ಮುಂ- ಗಿಳಿಗಳಗುಂಪಿನ ಪಾಠಶಾಲೆಯೂ, ಅಳಿಪ್ರತಾನಾನೂನಪಾನೀಯಮಂಟಪಮುಂ- ಭ್ರಮರಗಳ ಗುಂಪಿನ ಅಧಿಕವಾದ ಅರವಟ್ಟಿಗೆಯೂ, ರತಿದೇವಿಯ, ಸೌಭಾಗ್ಯಸದನಮುಂ- ಬೊಕ್ಕಸವೂ, ಮಂದಾನಿಲ ನ, ಕೇಳೀನಿಳಯಮುಂ- ಆಟದ ಮನೆಯೂ, ಅನಂಗರಾಜನ, ರಾಜಧಾನಿಯುಂ, ಎಂದು, ಎನಿಸಿ, ಕಂಗೊಳಿ ಪ, ಉದ್ಯಾನಮಂ, ಸೌಂದರನೊಡನೆ, ಪೊಕ್ಕು, ನಂದನದ, ಅಂದಮಂ, ಅವಲೋಕಿಸುತ್ತಂ- ನೋಡುತ್ತ, ಶುಕ......ರವಮಂ—ಶುಕ- ಗಿಳಿ, ಪಿಕ- ಕೋಗಿಲೆ, ಮಧುಕರ- ತುಂಬಿ ಇವುಗಳ, ರವಮಂ- ಧ್ವನಿಯನ್ನು ಆಕರ್ಣಿಸುತ್ತಂ- ಕೇಳುತ್ತ, ಮುಂದಣ್ಗೆ- ಮುಂಗಡೆಗೆ, ನಡೆತರ್ಪಾಗಳ್. * * * * * *

ಆನಂದನದೊಳ್, ವಿದಳತ್......ಕರ್ಣಂ—ವಿದಳತ್- ಅರಲುತ್ತಲಿರುವ, ಪುಷ್ಪ- ಹೂವುಗಳ, ಸ್ಫುರ ತ್- ಪ್ರಕಾಶಿಸುವ, ಸೌರಭ- ಪರಿಮಳಯುಕ್ತವಾದ, ರಸಭರ- ಹೆಚ್ಚಾದಮಕರಂದದಲ್ಲಿ, ಲುಬ್ಧ- ಆಸಕ್ತಿಗ ಳಾದಕಾರಣವೇ, ಭ್ರಮತ್- ಸುತ್ತುತ್ತಲಿರುವ, ಭೃಂಗ- ತುಂಬಿಗಳ, ಸಂಘ- ಗುಂಪಿಗೆ, ಆಸ್ಪದ- ಆಶ್ರ

ತ್ತುಂಗಶಾಖಾಕರಮು ಗುಸುವ ನೋರೇಣುಶುಭ್ರಾಂಗ ಮಿಂಬಾ। ದುದು ಶಕ್ರೇಭಂಬೊಲಾ ನಂದನದೊಳಸದಳಂ ಪಾರಿಜಾತಕ್ಷಮಾಜಂ ॥ ... ... ... ॥೧೭॥

ಜುಂಬಳಿಸಿ ನಿಲುಂಬಿ ತೀವಿದಳವಿಂಡು ಪಯೋಧರ ಮಲ್ಲಿತಳ್ತನ। ಲ್ಗಿಳಿಗಳ ಸಾಲ್ಸುರೇಂದ್ರಧನು ಕೆಂದಳಿರುಣ್ಮುವ ಮಿಂಚು ಕೋಕಿಲಾ॥ವಳಿಪುಗಿಲೆಂಬ ಬಲ್ದನಿ ಘನಧ್ವನಿಯಾಗೆ ಗಳನ್ಮರಂದವೇ। ಮಳೆಯೆನೆ ನೀಲಕಂಠನಯನೋತ್ಸವಮಿತ್ತುದು ತತ್ಕ್ಷಮಾರುಹಂ ॥

ವ॥ ಅಂತೆಸೆವ ಪಾರಿಜಾತಮಹೀಜಾತತಳದ ತಣ್ಣೆಳಲ ಚಂದ್ರಕಾಂತಶಿಲಾತಳದಲರ್ವಸೆಯೊಳ್ಕುಳ್ಳಿರ್ದು ಸೌಂದರನಿಂ ಪದತಳಮನೊತ್ತಿಸಿಕೊಳುತ್ತಂ ಮಂದಾನಿಲಂಗೆ ಮೈಗೊಟ್ಟು ಪರಿದೋಡಿ ಬಂದ ಬಳಲ್ಕೆಯಂ ಪರಿಹರಿಸಿಕೊಳುತ್ತಂ ವಾಲ್ಮೀಕವಲ್ಲಭನಿರೆಸೌಂದರಂ ಮೆಲ್ಲ ನಿಂತೆಂದು ॥ * * * * * * * * * * * * *

ಕಂ ॥ ಇನಿತೊಂದುಬ್ಬಸಮಾದುದು। ಘನಮಹಿಮ ಮಹೇಶ ನಿನಗಿದೇಂಕಾರಣಮಿಂ॥ದೆನಗಿ ದರಿವಂತೆ ಪೇಳೆಂ। ದೆನೆ ನಂಬಿಗೆ ಪೇಳ್ದ ನಂಬಿಕಾಧವ ನಾಗಳ್ ॥ ... ॥೧೮॥

ಕಂ॥ ಎನಗಿನ್ನೆಲ್ಲಿಯ ಮಹಿಮೆ ಯ। ದೆನಗಿನ್ನೆತ್ತಣದೊ ಬಾಳ್ಕೆ ಮದ್ಭಕ್ತಗಣಂ॥ ಮುನಿದು ಪೊರಗೆಂಡಬಳಿಕಿ। ನ್ನೆನಗಾವುದು ಗತಿ ಬಳಲ್ದೆ ತನಿಬೇವಸದಿಂ ॥ .. ॥೨೦॥

---

ಯವಾದ, ಚಂಚತ್- ಚಪಲವಾದ, ಪರ್ಣ- ಎಲೆಗಳೆಂಬ, ಕರ್ಣ- ಕಿವಿಯುಳ್ಳ, ಗಳಿತಮಧುಮದಂ- ಗಳಿತ- ಜಾರಿಬಿದ್ದ, ಮಧು- ಮಕರಂದವೆಂಬ, ಮದಂ- ಮದೋದಕವುಳ್ಳ, ಕೋರಕೋದಾರಭಾಸ್ವದ್ರದನಂ- ಮೊಗ್ಗೆಯೆಂಬ ಉತ್ಕೃಷ್ಟವಾದ ಪ್ರಕಾಶಿಸುವ ಕೊಂಬುಳ್ಳ, ಪ್ರೋತ್ತುಂಗಶಾಖಾಕರಂ- ಅತ್ಯುನ್ನತವಾದಕೊಂಬೆಯೆಂಬ ಸೊಂಡಿಲುಳ್ಳ, ಉರುಸುಮನೋರೇಣುಶುಭ್ರಾಂಗಂ- ಹೆಚ್ಚಾದ ಪುಷ್ಪಧೂಳಿಯಿಂದ ಬೆಳ್ಳಗಾದ ದೇಹವುಳ್ಳ, ಅಸದಳಂ- ಅಸಾಧ್ಯವಾದ, ಪಾರಿಜಾತಕ್ಷಮಾಜಂ- ಪಾರಿಜಾತದ ಮರವು, ಶಕ್ರೇಭಂಬೊಲ್- ಇಂದ್ರನ ಐರಾವತದ ಹಾಗೆ, ಇಂಬಾದುದು. ... ... ... ... ॥೧೭॥

ತತ್ಕ್ಷಮಾರುಹಂ- ಆ ಪಾರಿಜಾತದ ಮರವು, ಬಳಸಿ- ಸುತ್ತಿ, ನಿಲುಂಬಿ- ಆಶ್ರಯಿಸಿ, ತುಂಬಿದ, ಅಳಿವಿಂಡು, ಪಯೋಧರಂ- ಮೋಡವು, ಅಲ್ಲಿ, ತಳ್ತ, ನಲ್ಗಿಳಿಗಳ- ಒಳ್ಳೆಯಗಿಳಿಗಳ, ಸಾಲ್, ಸುರೇಂದ್ರಧನು-ಇಂದ್ರನ ಧನುಸ್ಸು, ಕೆಂದಳಿರ್, ಉಣ್ಮುವ, ಮಿಂಚು, ಕೋಕಿಲಾವಳಿ- ಕೋಗಿಲೆಗಳ ಲೈನು, ಪುಗಿಲ್, ಎಂಬ, ಬಲ್ದನಿ- ಘನಧ್ವನಿ, ಗುಡುಗು, ಆಗೆ, ಗಳನ್ಮರಂದವೆ- ಸುರಿಯುತ್ತಿರುವ ಮಕರಂದವೇ, ಮಳೆ, ಎನೆ, ನೀಲಕಂಠನಯನೋತ್ಸವಮಿತ್ತುದು- ಈಶ್ವರನ ನೇತ್ರಕ್ಕೆ ಸಂತೋಷವಂ ಕೊಟ್ಟಿತು, ( ನವಿಲುಗಳ ನೇತ್ರಕ್ಕೆ ಆನಂದವಂ ಕೊಟ್ಟಿತು. ) ... ... ... ... ॥೧೮॥

ಅಂತು, ಎಸೆವ, ಪಾರಿಜಾತಮಹೀಜಾತತಳದ, ತಣ್ಣೆಳಲ, ಚಂದ್ರಕಾಂತಶಿಲಾತಳದ, ಅಲರ್ವಸೆಯೊಳ್-ಹೂವಿನ ಗದ್ದುಗೆಯಲ್ಲಿ, ವಾಲ್ಮೀಕವಲ್ಲಭಂ- ವಲ್ಮೀಕೇಶ್ವರನು, ಕುಳ್ಳಿರ್ದು, ಸೌಂದರನಿಂ, ಪದತಳಮಂ, ಒತ್ತಿಸಿಕೊಳುತ್ತಂ, ಮಂದಾನಿಲಂಗೆ, ಮೈಗೊಟ್ಟು, ಪರಿದು, ಓಡಿಬಂದ, ಬಳಲ್ಕೆಯಂ- ಆಯಾಸವನ್ನು, ಪರಿಹರಿಸಿಕೊಳುತ್ತಂ, ಇರೆ, ಸೌಂದರಂ, ಮೆಲ್ಲನೆ, ಇಂತೆಂದಂ. * * * * * * * *

ಘನಮಹಿಮ, ಮಹೇಶ! ನಿನಗೆ, ಇನಿತೊಂದುಉಬ್ಬಸಂ-ಇಷ್ಟೊಂದುಸಂಕಟವು, ಇದೇಂಕಾರಣಂ, ಆದುದು? ಇಂದು, ಎನಗೆ, ಇದು, ಅರಿವಂತೆ, ಪೇಳ್, ಎಂದು, ಎನೆ, ಆಗಳ್, ಅಂಬಿಕಾಧವಂ, ನಂಬಿಗೆ, ಪೇಳ್ದಂ.

ಇನ್ನು, ಎನಗೆ, ಅದುಎಲ್ಲಿಯಮಹಿಮೆ ? ಎನಗೆ, ಇನ್ನು, ಬಾಳ್ಕೆ- ಬದುಕುವಿಕೆಯು, ಎತ್ತಣದೊ ? ಮದ್ಭಕ್ತಗಣಂ, ಮುನಿದು, ಪೊರಗು, ಎಂದಬಳಿಕ, ಇನ್ನು, ಎನಗೆ, ಗತಿ, ಆವುದು ? ತನಿಬೇವಸದಿಂ- ಹೆಚ್ಚಾದ ಸಂಕಟದಿಂದ, ಬಳಲ್ದೆಂ. ... ... ... ... ॥೨೦॥

ಕಂ ॥ ಎಂದೊಡೆ ಸೌಂದರ ನಾಗ । ಳ್ತಂದೆ ಯಿದೇವೇಳ್ವೆ ನೀಂಸ್ವತಂತ್ರಂಗಡ ನಿ ॥
ನ್ನಿಂದಧಿಕರೆ ಭಕ್ತರ್ಪೇ । ಳೆಂದೆನೆ ಶಶಿಮೌಳಿ ಮುಗ್ಧ ಕೇಳೆನುತೊರೆದಂ ॥ ೨೧॥

ವೃ ॥ ವಿತತಸ್ವಾತಂತ್ರ್ಯಮೆಲ್ಲಾಗಳುಮೊಳವೆನಗಂತಾದೊಡಂ ಭಕ್ತರೊಂದಾಣತಿ
ಯೊಳ್ಸಂದಿರ್ಪೆ ನಾಂ ಭಕ್ತರತನುವೆ ಮದೀಯಾಂಗಮಾ ಪ್ರಾಣಮಾ ಸ ॥ ನ್ನುತಭಕ್ತ
ರ್ಗಂತವರ್ಪ್ರಾಣ ಮೆನಿಪ ರೆನಗಾ ಭಕ್ತರೊಳ್ವಸ್ತುಭೇದ। ಸ್ಥಿತಿಯೆಂದುಂ ತೋರದೆನ್ನೊ
ಳ್ಬಗೆವೊಡೆನಗೆ ಭಕ್ತರ್ಗಳಿಂದಾರೊ ಕೂರ್ಪರ್॥ . . ... ... ॥೨೨॥

ಚಂ ॥ ಭಕ್ತರ ಪಾದಪೂಜೆಯೆ ಮದೀಯಪದಾಂಬುಜಪೂಜೆ ಯಕ್ಕುಮಾ। ಭ
ಕ್ತರತೃಪ್ತಿಯೇ ತಿಳಿವೊಡೆನ್ನಯ ತೃಪ್ತಿ ಯೆನಿಪ್ಪುದಾವಗಂ ॥ ಭಕ್ತರ ನಿಂದೆಯೇಜಗ
ದೊಳೆನ್ನಯ ನಿಂದೆ ಯದಪ್ಪುದೆಯ್ದೆ ಕೇಳ್ । ಭಕ್ತರ ಕೀರ್ತನಂ ನಿಜದಿ ನೆನ್ನಯ ಕೀ
ರ್ತನ ಮಲ್ತೆ ಸೌಂದರಾ ॥ ... ... ... ... ... ॥೨೩॥

ಚಂ ॥ ಇದು ವೇದಾಗಮಸಿದ್ಧ ಮೆನ್ನ ಚರಪಾದಾಂಭೋಜಮಂ ಪೂಜೆಗೆ । ಯ್ಯದೆ
ಮತ್ಪೂಜೆಯ ನೆಯ್ದೆ ಮಾಡೆ ವಿಫಲಂ ತಾನಕ್ಕು ಮೆಂದಾರಹ ॥ ಸ್ಯದೊಳೊಲ್ದಾನೊರೆ
ದೆಂ ಮದಂಘ್ರಿಭಜನಾಸಕ್ತರ್ಗೆ ಲಿಂಗಾಂಗಯೋ । ಗದ ಸಂಸಿದ್ಧಿ ಚರಾಂಘ್ರಿಪೂಜನದಿ ನ
ಕ್ಕುಂ ಕೇಳ್ಪೆರರ್ಗಕ್ಕುಮೇ ॥ ... ... ... ... ॥೨೪॥

ಮಲ್ಲಿಕಾಮಾಲಾವೃತ್ತಂ ॥ ಭಕ್ತವತ್ಸಲ ನಪ್ಪೆ ನಾತ್ಮಜಭಕ್ತಲೋಕಸಮಾಶ್ರಿ

---

ಎಂದೊಡೆ, ಆಗಳ್, ಸೌಂದರಂ, ತಂದೆ! ಇದೇವೇಳ್ವೆ- ಇದೇನು ಹೇಳುವೆ ? ನೀಂಸ್ವತಂತ್ರಂಗಡ-
ಪರಾಧೀನನಲ್ಲವಷ್ಟೆ! ಭಕ್ತರ್, ನಿನ್ನಿಂದೆ, ಅಧಿಕರೇ ? ಪೇಳ್, ಎಂದೆನೆ, ಶಶಿಮೌಳಿ, ಮುಗ್ಧ, ಕೇಳ್, ಎ
ನುತೆ, ಒರೆದಂ. ... ... ... ... ... ॥೨೧॥

ಎನಗೆ, ಎಲ್ಲಾಗಳುಂ- ಎಲ್ಲಾಕಾಲದಲ್ಲೂ, ವಿತತಸ್ವಾತಂತ್ರ್ಯಂ, ಒಳವು; ಅಂತಾದೊಡಂ- ಹಾಗಾ
ದಾಗ್ಯೂ, ಆಂ, ಭಕ್ತರ, ಒಂದಾಣತಿಯೊಳ್- ಒಂದು ಆಜ್ಞೆಯಲ್ಲಿ, ಸಂದು- ಸಿಕ್ಕಿ, ಇರ್ಪೆಂ, ಆಭಕ್ತರ, ತೆ
ನುವೆ, ಮದೀಯಾಂಗಂ- ನನ್ನ ದೇಹವು; ಆಂ, ಆಸನ್ನುತಭಕ್ತರ್ಗೆ, ಪ್ರಾಣಂ; ಅಂತು, ಅವರ್, ಎನಗೆ, ಪ್ರಾ
ಣಂ, ಎನಿಪರ್, ಆಭಕ್ತರೊಳ್, ಎನ್ನೊಳ್, ವಸ್ತುಭೇದಸ್ಥಿತಿ- ದೇಹಗಳಿಗೆ ಸಾಮಾನ್ಯವಾಗಿ ಅನ್ಯತ್ರ ತೋ
ರುವ ಭೇದವು, ಎಂದುಂ- ಯಾವಾಗಲೂ, ತೋರದು, ಬಗೆವೊಡೆ, ಎನಗೆ, ಭಕ್ತರ್ಗಳಿಂದೆ- ಭಕ್ತರಿಗಿಂತಲೂ,
ಕೂರ್ಪರ್- ಪ್ರೀತಿಯುಕ್ತರು, ಆರೊ ? ... ... ... ... ॥೨೨॥

ಸೌಂದರಾ! ಭಕ್ತರ, ಪಾದಪೂಜೆಯೆ, ಮದೀಯಪದಾಂಬುಜಪೂಜೆ, ಅಕ್ಕುಂ, ತಿಳಿವೊಡೆ, ಆಭಕ್ತ
ರ, ತೃಪ್ತಿಯೇ, ಎನ್ನಯ, ತೃಪ್ತಿ, ಎನಿಪ್ಪುದು, ಆವಗಂ, ಜಗದೊಳ್, ಭಕ್ತರ, ಅದುನಿಂದೆಯೆ, ಎನ್ನಯ,
ನಿಂದೆ, ಅಪ್ಪುದು, ಎಯ್ದೆ, ಕೇಳ್, ಭಕ್ತರ, ಕೀರ್ತನಂ, ನಿಜದಿಂ, ಎನ್ನಯ, ಕೀರ್ತನಮಲ್ತೆ- ಹೊಗಳುವಿಕೆ
ಯಲ್ಲವೇ ? ... ... ... ... ... ... ॥೨೩॥

ಇದು, ವೇದಾಗಮಸಿದ್ಧಂ; ಎನ್ನ, ಚರಪಾದಾಂಭೋಜಮಂ- ಜಂಗಮರ ಪಾದಕಮಲವನ್ನು, ಪೂಜೆ
ಗೆಯ್ಯದೆ, ಎಯ್ದೆ, ಮತ್ಪೂಜೆಯುಂ, ಮಾಡೆ, ತಾಂ, ವಿಫಲಂ, ಅಕ್ಕುಂ, ಎಂದು, ಆಂ, ಆರಹಸ್ಯದೊಳ್, ಒ
ಲ್ದು, ಒರೆದೆಂ, ಮದಂಘ್ರಿಭಜನಾಸಕ್ತರ್ಗೆ, ಚರಾಂಘ್ರಿಪೂಜನದಿಂ, ಲಿಂಗಾಂಗಯೋಗದ, ಸಂಸಿದ್ಧಿ, ಅಕ್ಕುಂ,
ಪೆರರ್ಗೆ- ಮಿಕ್ಕವರಿಗೆ, ಅಕ್ಕುಮೇ ? ಕೇಳ್. ... ... ... ॥೨೪॥

ಭಕ್ತವತ್ಸಲಂ- ಭಕ್ತರಲ್ಲಿ ಪ್ರೀತಿಯುಳ್ಳವನು, ಆತ್ಮಜಭಕ್ತಲೋಕಸಮಾಶ್ರಿತಂ- ತನ್ನ ದೆಸೆಯಿಂದ ಹು

ತು । ಭಕ್ತಸಂಕುಳವಶ್ಯನನ್ವಿತಭಕ್ತಚಿತ್ತಕಧೀಶ್ವರಂ ॥ ವ್ಯಕ್ತಮಿಂತಿದು ಕೇಳ್ವುದೆಂತೆ
ನೆ ಧಾತ್ರಿಯೊಳ್ಗುಣಧರ್ಮಸಂ । ಯುಕ್ತನೂರ್ಜಿತಶೈವಸಂಯಮಿಬಾಣನೆಂಬುವನೊಪ್ಪಿದಂ॥

ವ ॥ ಅಂತೊಪ್ಪುವಬಾಣಂ ಮಾಣದನುದಿನಂ ಸಾಸಿರಸೂಳ್ಮತ್ತಪೂಜೆಗೆಯ್ವನೇಮ
ಮಂ ಕೈಕೊಂಡು ಪೂಜಿಪಾಗಳ್ತನುಧರ್ಮಾಚರಣಕ್ಕೆತೆರಪಿಲ್ಲದಿರೆ ಕಲಡವಂಗಾಂಸಹಸ್ರಕ
ಮಂ ಕೂಡಲೊಡನವಂ ತತ್ಕರಗಂಳ ನೋರ್ಮೆಯೆ ಸಸಂಭ್ರಮಂ ಪೂಜಿಸುತ್ತಿರ್ಪಿನ ಮೆ
ನ್ನಿಂ ಕರವರಂಬಡೆದ ವಾರ್ತೆಯಂ ಕೇಳ್ದವನು ನೋಡಲೆಳಸಿಭಕ್ತರ್ಬರೆತದೋಗೆಪ್ಪಿಯೊ
ಳವಂ ಸುಖಮಿರ್ಪಿನಂ ಪೊಳ್ತು ಪೋಗೆ ಮುಗುಳೆ ಲಿಂಗಾರ್ಚನಂಗೆಯ್ದು ತತ್ಪ್ರಸಾದಸೇವನೆ
ಗೆಯ್ವನ್ನೆವರಂ ॥ * * * * * * * * * * * * * * *

ಕಂ ॥ ಪರರಾರು ಮಲ್ಲಿ ತನ್ಮಂದಿರದೊಳಗಣ್ಗೆಯ್ದಂತೆ ವಾರಿಸುತಂಸಾ ॥ ದರ ಮವ
ನ ಗೃಹದ ಬಾಗಿಲ । ನಿರದಾಂಕಾದಿರ್ದನ ನಲ್ತ್ತಧರೆಯರಿವಿನೆಗಂ ॥ ... ॥೨೬॥

ವ ॥ ಅಂತುಮಲ್ಲದೆಯುಂ ॥ ವೃ ॥ ಘನಭಕ್ತಂ ಕರಿಕಾಲಚೋಳವಿಭು ಕಾವೇ
ರೀಸರಿದ್ಬಂಧನ । ಕ್ಕೆ ನಸುಂಬಿಟ್ಟಿಗೆಯಲ್ಕೆ ಸರ್ವಜನಮಂ ತಾಂ ಪ್ರೇರಿಪಂದಾರುಮಿ ।ಲ್ಲ
ನಗೆಂತೆಂದು ಬಳಲ್ವ ಭಕ್ತಮಿಸುಪಾಪಿಟ್ಟವ್ವೆಗಾಳಾಗಿ ಕೇ । ಳ್ನಿನ್ನಗಾ ನಿರ್ದಪೆ ನೆಂದು ಸಂ
ತವಿಡುತ್ತೊಲ್ದಾಂ ಬಿಟ್ಟಿಯಂ ಮಾಡಿದಂ ॥ ... ... ... ॥೨೭॥

---

ಟ್ಟದ ಭಕ್ತಜನರಿಂದ ಆಶ್ರಯಿಸಲ್ಪಟ್ಟವನು,ಭಕ್ತಸಂಕುಳವಶ್ಯಂ- ಭಕ್ತರ ಸಮೂಹದಿಂದಧೀನಗೊಳಿಸಲ್ಪಡ್ವ ವದಕ್ಕೆ ಯೋಗ್ಯನಾದವನು, ಅನ್ವಿತಭಕ್ತಚಿತ್ತಕೆ-ತನ್ನಲ್ಲಿ ಕೂಡಿದ ಭಕ್ತರ ಮನಸ್ಸಿಗೆ,ಅಧೀಶ್ವರಂ, ಅಪ್ಪಂ; ಇಂತು, ಇದು, ವ್ಯಕ್ತಂ, ಕೇಳ್ವುದು, ಎಂತು? ಎನೆ, ಧಾತ್ರಿಯೊಳ್, ಗುಣಧರ್ಮಸಂಯುಕ್ತಂ-ಸದ್ಗುಣ ಧ ರ್ಮದಿಂ ಕೂಡಿದ, ಉರ್ಜಿತಶೈವಸಂಯಮಿ-ತೇಜಸ್ವಿಯಾದ ಶೈವತಪಸ್ವಿಯಾದ,ಬಾಣಂ,ಎಂಬವಂ, ಒಪ್ಪಿದಂ.

ಅಂತು, ಒಪ್ಪುವ, ಬಾಣಂ, ಮಾಣದೆ- ಬಿಡದೆ, ಅನುದಿನಂ, ಸಾಸಿರಸೂಳ್- ಸಹಸ್ರಾವರ್ತಿ, ಮತ್ತಪೂ ಜೆಗೆಯ್ವ, ನೇಮಮಂ, ಕೈಕೊಂಡು, ಪೂಜಿಪ, ಆಗಳ್, ತನುಧರ್ಮಾಚರಣಕ್ಕೆ- ದೇಹಸಂಬಂಧವಾದ ಪುರೀ ಷೋತ್ಸರ್ಜನಾವಿಧರ್ಮಗಳಂ ನಡೆಯಿಸುವದಕ್ಕೆ, ತೆರಪು- ಅವಕಾಶವು, ಇಲ್ಲದೆ, ಇರೆ, ಅಂ, ಕಂಡು, ಅವಂಗೆ, ಸಹಸ್ರಕರಮಂ, ಕೂಡಲ್, ಒಡನೆ, ಅವಂ, ತತ್ಕರಂಗಳಿಂ, ಓರ್ಮೆಯೆ, ಸಸಂಭ್ರಮಂ- ಸಡಗರದಿಂ ಕೂಡಿ, ಪೂ ಜಿಸುತ್ತೆ, ಇರ್ಪಿನಂ, ಎನ್ನಿಂ, ಕರವರಂಬಡೆದ- ಹಸ್ತಗಳ ವರವನ್ನು ಹೊಂದಿದ, ವಾರ್ತೆಯಂ, ಭಕ್ತರ್, ಕೇ ಳ್ದು, ಅವನಂ, ನೋಡಲ್, ಎಳಸಿ, ಬರೆ, ಅವಂ- ಬಾಣನು, ತದ್ಗೋಷ್ಠಿಯೊಳ್- ಆ ಭಕ್ತರೊಡನೆ ಸಲ್ಲಾ ಪದಿಂದ, ಸುಖಂ, ಇರ್ಪಿನಂ, ಪೊಳ್ತು- ಹೊತ್ತು, ಪೋಗೆ, ಮುಗುಳೆ, ಲಿಂಗಾರ್ಚನಂಗೆಯ್ದು, ತತ್ಪ್ರಸಾದಸೇ ವೆಗೆಯ್ವನ್ನೆವರಂ- ಆ ಲಿಂಗಪ್ರಸಾದ ಸ್ವೀಕಾರವನ್ನು ಮಾಡುವವರಿಗೂ. * * * * * *

ಅಲ್ಲಿ, ಪರರ್- ಅನ್ಯರು ( ಭವಿಗಳು ) ಆರುಂ, ತನ್ಮಂದಿರದ, ಒಳಗಣ್ಗೆ, ಎಯ್ದದಂತೆ, ಅಂ, ವಾರಿ ಸುತಂ- ತಡೆಯುತ್ತ, ಸಾದರಂ- ಪ್ರೀತಿಯುಕ್ತನಾಗಿ, ಅವನ- ಬಾಣನ, ಗೃಹದ, ಬಾಗಿಲಂ, ಇರದೆ, ದರೆ, ಅರಿವಿನೆಗಂ- ತಿಳಿಯುವಪರಿಗೆ, ಕಾವಿರ್ದನಲ್ತೆ. ... ... ... ॥೨೬॥

ಘನಭಕ್ತಂ, ಕರಿಕಾಲಚೋಳವಿಭು, ಕಾವೇರೀಸರಿದ್ಬಂಧನಕ್ಕೆ- ಕಾವೇರೀನದಿಯತಡಂಗಿಗೆ, ಎನಸುಂ- ಅತ್ಯಂತವಾಗಿ, ಬಿಟ್ಟಿಗೆಯಲ್ಕೆ-ಕೂಲಿಯಿಲ್ಲದ ಕೆಲಸವಂಮಾಡುವದಕ್ಕೆ, ಸರ್ವಜನಮಂ, ತಾಂ, ಪ್ರೇರಿಪ,ಅಲ ದು, ಎನಗೆ, ಆರುಂ, ಇಲ್ಲ, ಎಂತು? ಎಂದು, ಬಳಲ್ವ, ಭಕ್ತಿ, ಮಿಸುಪ, ಆ ಪಿಟ್ಟವ್ವೆಗೆ,ಆಳ್, ಆಗಿ,ಕೇಳ್, ನಿನಗೆ, ಆಂ, ಇರ್ದಪೆಂ, ಎಂದು, ಸಂತವಿಡುತೆ- ಸಮಾಧಾನಪಡಿಸುತ್ತ,ಒಲ್ದು, ಆಂ, ಬಿಟ್ಟಿಯಂಮಾಡಿದಂ

ಚಂ ॥ ದೊರೆವಡೆದೊಪ್ಪವಾಳ್ದ ಸೊಬಗಿಂ ದೆಲೆನಂಬಿ ಧರಾತಳಾಗ್ರದೊ । ಳ್ತಿರು
ಕುಡಿಯೆಂಬ ನವ್ಯಪುರ ಮಿರ್ಪ್ಪುದು ತತ್ಪುರದೊ ಳ್ನಿರಂತರಂ ॥ ಗುರುಚರಲಿಂಗಭೃತ್ಯತೆ
ಯೊಡಂಬಡೆ ನೇಮ ಮದಾಗಿ ಸತ್ಕ್ಯಸಂ । ಗರ ನೆಸೆದಿರ್ಪ್ಪ ನಲ್ತೆ ಕಲಿಕಾಮನಕಾಮ ನಮೇ
ಯ ವೈಭವಂ ॥ ... ... ... ... ... ... ॥೨೮॥

ಕಂ ॥ ಕೇಳ್ದಿನ್ನೀರ್ವರ ಮೇಳವ । ನಾಳ್ದತಿಕೌತುಕವ ನಮಳಮತಿ ಬಲ್ಮೆಳಿ
ಸಂ ॥ ತಾಳ್ದಕಟ ಸೌಂದರಂ ತ । ನ್ನಾಳ್ದಂಗಾಳ್ವೆಸವ ನಿತ್ತ ನೇನೆಂಬೆ ನಿದಂ ॥೨೯॥

ಮಹಾಸ್ರ ॥ ಮೃದುಪಾದಾಂಭೋರುಹಂ ಕಂದುಗು ಮಕಟೆನುತಂ ನೋಡದುದ್ದಾ
ಮಕಾಮಾ । ಸ್ಪದಚಿತ್ತಂ ಮಂದೆವಾಳಂ ಮಸಗಿ ಪಣವಧೂಗೇಹ ಕೊಲ್ದಟ್ಟುಗುಂ ಮಾ॥
ಣದೆ ಧೂರ್ತ್ತಂ ನಂಬಿ ಯಾತ್ಮೇಶ್ವರನ ನಿಳೆಯೊ ಳಿಂತಪ್ಪ ದುಷ್ಕೃತ್ಯಮಂ ನೋ । ಳ್ಪ
ದಯುಕ್ತಂ ಭಕ್ತವೃಂದಕ್ಕಿದ ನುಡುಗಿಸದೇಕಿರ್ಪ್ಪರೋ ಭಕ್ತವರ್ಯರ್ ॥ ... ॥೩೦॥

ಕಂ ॥ ಜಗದಧಿಪತಿ ಸರ್ವಜ್ಞಂ । ಮುಗುದನವೊಲ್ ಸೂಳೆವನೆಗೆ ಧೂರ್ತನ ನಣ್ಪಂ॥
ಬಗೆಗೊಂಡು ನಡೆಯೆ ತನ್ನಂ । ನಗುವ ರ್ಬುಧ ರಿದನದೆಂತು ಸೈರಿಪೆ ನಿಳೆಯೊಳ್ ॥೩೧॥

ವ ॥ ಎಂದು ಕೋಪಾಟೋಪಮಂ ತಾಳ್ದು ವಿಜೃಂಭಿಸಿ ॥ * * * * *

ಕಂ ॥ ನಿನ್ನ ಪೆಸರ್ಗೊಂಡರಂ ಸಲೆ । ನಿನ್ನೂರಿಂ ಬಂದಜನಮ ನಿರಿದಪೆ ನೆನುತಾ ॥

---

ಎಲೆನಂಬಿ! ದೊರೆವಡೆದ- ಪ್ರಾಪ್ತವಾದ, ಒಪ್ಪವಾಳ್ದ, ಸೊಬಗಿಂದೆ, ಧರಾತಳಾಗ್ರದೊಳ್, ತಿರುಕೊ
ಡಿ, ಎಂಬ, ನವ್ಯಪುರಂ, ಇರ್ಪ್ಪುದು; ತತ್ಪುರದೊಳ್, ನಿರಂತರಂ, ಗುರುಚರಲಿಂಗಭೃತ್ಯತೆ, ಗುರುಲಿಂಗ
ಜಂಗಮಸೇವಕತ್ವವು, ಒಡಂಬಡೆ, ಅದು, ನೇಮಂ- ವ್ರತವು, ಆಗಿ, ಅಕಾಮಂ- ಇಚ್ಛಾರಹಿತನಾದ, ಅಮೇ
ಯವೈಭವಂ- ಅಪರಿಮಿತವಾದವಿಭವವುಳ್ಳ, ಕಲಿಕಾಮಂ, ಎಸೆದು, ಇರ್ಪ್ಪನಲ್ತೆ. ... ॥೨೮॥

ಅಮಳಮತಿ– ನಿರ್ಮಲವಾದ ಬುದ್ಧಿಯುಳ್ಳ ಆಕಲಿಕಾಮನು, ಎಮ್ಮ, ಈರ್ವರ, ಮೇಳಮಂ- ಜೊತೆ
ಯನ್ನು, ಕೇಳ್ದು, ಅತಿಕೌತುಕಮಂ, ಆಳ್ದು, ಬಲ್ಮೆಳಸಂ, ತಾಳ್ದು, ಅಕಟ! ಸೌಂದರಂ, ತನ್ನ,ಆಳ್ದಂಗೆ-
ಪರಿಪಾಲಿಸಿದವನಿಗೆ, ಆಳ್ವೆಸಮಂ- ದೂತಕೃತ್ಯವನ್ನು, ಇತ್ತಂ, ಇದಂ, ಏನೆಂಬೆಂ? ... ॥೨೯॥

ಉದ್ದಾಮಕಾಮಾಸ್ಪದಚಿತ್ತಂ- ಅಧಿಕವಾದ ಕಾಮಕ್ಕೆ ಆಶ್ರಯವಾದಮನಸ್ಸುಳ್ಳ, ಧೂರ್ತಂ- ನೀಚ
ನಾದ, ನಂಬಿ, ಮಂದೆವಾಳಂಮಸಗಿ- ಬರಬುತನವು ಹೆಚ್ಚಾಗಿ, ಅಕಟ! ಮೃದುಪಾದಾಂಭೋರುಹಂ, ಕಂದು
ಗುಂ, ಎನುತಂ, ನೋಡದೆ, ಆತ್ಮೇಶ್ವರನಂ, ಮಾಣದೆ, ಪಣವಧೂಗೇಹಕ್ಕೆ- ಸೂಳೆಯಮನೆಗೆ, ಒಲ್ದು,
ಅಟ್ಟುಗುಂ- ಕಳುಹಿಸುವನು; ಇಳೆಯೊಳ್, ಭಕ್ತವೃಂದಕ್ಕೆ, ಇಂತಪ್ಪದುಷ್ಕೃತ್ಯಮಂ, ನೋಳ್ಪುದು, ಅ
ಯುಕ್ತಂ, ಭಕ್ತವರ್ಯರ್, ಇದಂ, ಉಡುಗಿಸದೆ- ಬಿಡಿಸದೆ, ಏಕೆಇರ್ಪ್ಪರೊ ? ... ॥೩೦॥

ಜಗದ, ಅಧಿಪತಿ, ಸರ್ವಜ್ಞಂ, ಧೂರ್ತನ- ನೀಚನಾದ ಸೌಂದರನ, ನಣ್ಪಂ- ನಯವನ್ನು, ಬಗೆಗೊಂ
ಡು– ಮನಸ್ಸಿನಲ್ಲಿ ನೆನಸಿ, ಮುಗುದನವೊಲ್, ಸೂಳೆಮನೆಗೆ, ನಡೆಯೆ, ತನ್ನಂ, ಆ ಈಶ್ವರನನ್ನು, ಬುಧರ್,
ನಗುವರ್- ಹಾಸ್ಯಮಾಡುವರು; ಇದಂ, ಇಳೆಯೊಳ್, ಎಂತುಸೈರಿಪೆಂ ? ... ॥೩೧॥

ಎಂದು, ಕೋಪಾಟೋಪಮಂ, ತಾಳ್ದು, ವಿಜೃಂಭಿಸಿ- ಉಬ್ಬಿ. * * * * * * *

ನಿನ್ನ, ಪೆಸರ್ಗೊಂಡರಂ– ಹೆಸರನ್ನು ಎತ್ತಿದವರನ್ನು ( ಅಥವಾ ಹೆಸರನ್ನು ಹೊಂದಿದವರನ್ನು ) ಸ
ಲೆ, ನಿನ್ನ, ಊರಿಂ, ಬಂದಜನಮಂ, ಇರಿದಪೆಂ, ಎನುತೆ; ಆತಂ, ನಿಯಮದಿಂ, ಇರೆ, ಒರ್ವಿಂದಂ- ಪ್ರೀತಿ
ಯಿಂದ, ನಿಮ್ಮೀರ್ವರುಮಂ, ಒಂದುಮಾಡಿದೆನಲ್ತೆ ? ಅಂದರೆ ಆಕಲಿಕಾಮನು ನನ್ನವಿಷಯದಲ್ಲ ಅಷ್ಟು ಶ್ರ

ಶಂನಿಯಮದಿ ನಿರೆ ಬರ್ದಿಂ । ದಂನಿವಿನ್ನೊರ್ವಪನು ನೊಂದುವಡಿದೆನಲ್ತೆ ॥ ॥೩೦॥

ವ ॥ ಮತ್ತಂ ॥ ಚಂ ॥ ಎನ್ನಯ ತಂದೆನಿನ್ನ ಪಿತನಿಂ ತೆಗೆದಿರ್ದನೆ ಮುನ್ನಸಾಲ ಮಂ । ನಿನ್ನಯ ಕಯ್ಯೊಳಾಂಕಡನ ನಾಂತೆನೆ ಪೇಳ್ದುದಮಂ ಕಡಂಗಿ ನಿಚ್ಚಂ ನಿನಗೀವ ನಿಚ್ಚಪಡಿವೊಂಗಳ ನೆಂದುದ ನೊಲ್ದುಮಾಡುವಂ । ಮನ್ನಿಪೆನಲ್ತೆ ಭಕ್ತಿಹಿತಕಾರಣ ಮಲ್ಲದೊಡಿಂತು ಕೂರ್ಪೆನೆ ॥ ... ... ... ... ॥೩೧॥

ವ ॥ ಎಂದು ನಿಜಭಕ್ತವತ್ಸಲತೆಯುಮ ನಾಭಕ್ತರ ಪೇರ್ಮೆಯುಮಂ ತಚ್ಚರಿತ್ರಕಥನಪೂರ್ವಕಂ ಪಾರ್ವತೀಪತಿ ಯೊರೆದಿಂತಪ್ಪಮದ್ಭಕ್ತರೊಳಹಂಕರಿಪೊಡೆ ನೀನೆನಿತರವಂ ನಿನ್ನೊಡನಾಡಿದದೂಸರಿಂದೆನಗ ೀಸಂಕಟಂ ಬಂದುದೆಂದು ಪೇಳೆ ಕೇಳ್ದು ನಾಬಿ ನಡಂನಡುಗಿ ಬೆಗಡುಗೊಂಡು ಹರನಡಿಗೆರಗಿ ತನ್ನಿರೂಪದಿಂ ತನ್ನ ಪೊಂದಾಳಮಂ ಕೈಕೊಂಡು ತದ್ಗಣಕೃಪೆಯ ನಣೆಯರು ಪಡೆಯ ಲೆಳಸಿ ಶಿವಗಣಮಂ ತಾಳಲಯಂಬಿಡಿದು ಸರಸರವ ಮಂಕುರಿಸೆ ಭಕ್ತಿಯಿಂ ಪಾಡಿದ ಸದೆಂತೆನೆ ॥ * * * * * * * *

ಮತ್ತೇ ॥ ಶಿವಲಿಂಗಕ್ಕೆ ಸುಗಂಧಚಂದನಮ ನೊಳ್ಪಂ ದೊಲ್ದು ಕಾಲತ್ರಯಂ । ತವೆ ತಾನರ್ಪಿಪ ನೇಮದಿಂದೆಸೆದು ಮೂಲದ್ರವ್ಯಮಳ್ಕಾಡೆ ಶಾಂಭವಪೂಜೋಚಿತಚಂದನಕ್ರಿಯ ಕೆಡಕ್ಕೈಗಣ್ಮೆ ಮೇಣುಳ್ಳ ವಸ್ತುವದೆಲ್ಲಂ ಬರಿದಾಗೆ ತಕ್ಕುಗೆಡದೆನ್ನಂಗಂಗಳಂ ಕೂರ್ಪಿನಿಂ ॥

---

ದ್ಧಾಸಮನ್ವಿತನಾಗಿ, ನಿನ್ನನ್ನು ಶಿವದ್ರೋಹಿಯೆಂದು ತಿಳಿದು ಆಗ್ರಹವಂ ಮಾಡಿ ತನ್ನ ದೃಢಭಕ್ತಿಯನ್ನು ತೋರ್ಪಡಿಸಿದಾಗ್ಯೂ, ನೀನು ನನ್ನನ್ನೇ ಸೇವಕನನ್ನಾಗಿ ಮಾಡಿಕೊಂಡಿದ್ದಾಗ್ಯೂ ಈವಿಧರಾದ ನಿಮ್ಮಿಬ್ಬರನ್ನೂ ಒಂದೇಸಮನಾಗಿ ತಿಳಿದಿರುವೆನಲ್ಲವೇ, ಎಂದು ತಾತ್ಪರ್ಯ. ... ... ॥೩೦॥

ಕಡಂಗಿ- ಕುತೂಹಲಪಟ್ಟು, ನಿಚ್ಚಂ- ನಿತ್ಯದಲ್ಲೂ, ನಿನಗೆ, ಈವ, ನಿಚ್ಚಪಡಿವೊಂಗಳಂ- ಪ್ರತಿದಿನದ ಪಡಿಯ ಹೊನ್ನುಗಳನ್ನು, ಮುನ್ನಂ, ಎನ್ನಯ, ತಂದೆ, ನಿನ್ನ, ಪಿತನಿಂ, ಸಾಲವಂ, ತೆಗೆದು ಇದ್ದನೋ? ಆಂ, ನಿನ್ನ, ಕಯ್ಯೊಳ್; ಕಡನಂ- ಕಂತಿಗೆಕೊಡುವ ಹಣವನ್ನು, ಆಂತೆನೊ? ದಿಜವಂ, ಪೇಳ್, ಎಂದುದಂ- ನೀನು ಹೇಳಿದುದನ್ನು, ಒಲ್ದು, ಮಾಡುವೆಂ, ಮನ್ನಿಪೆನಲ್ತೆ ? ಭಕ್ತಿ, ಹಿತಕಾರಣಂ- ನನಗೆ ಹಿತವಾಗಿರುವ ಹೇತುವು, ಅಲ್ಲದೊಡೆ, ಇಂತು, ಕೂರ್ಪೆನೆ ? ... ... ... ॥೩೧॥

ಎಂದು, ನಿಜಭಕ್ತವತ್ಸಲತೆಯುಮಂ, ಆ ಭಕ್ತರ, ಪೇರ್ಮೆಯುಮಂ, ತಚ್ಚರಿತ್ರಕಥನಪೂರ್ವಕಂ- ಪಾರ್ವತೀಪತಿ, ಒರೆದು, ಇಂತಪ್ಪ, ಮದ್ಭಕ್ತರೊಳ್, ಅಹಂಕರಿಪೊಡೆ, ನೀಂ, ಎನಿತರವಂ? ನಿನ್ನೊಡನೆ, ಆಡಿದ, ದೂಸರಿಂದೆ- ದೋಷದಿಂದ, ಎನಗಂ, ಈ ಸಂಕಟಂ, ಬಂದುದು, ಎಂದು, ಪೇಳೆ, ನಂಬಿ, ಕೇಳ್ದು, ನಡಂನಡುಗಿ- ಬಹುಕಂಪಿಸಿ, ಬೆಗಡುಗೊಂಡು- ಭಯವನ್ನುಹೊಂದಿ, ಹರನ, ಅಡಿಗೆ, ಎರಗೆ, ತನ್ನಿರೂಪದಿಂ- ಆ ಶಿವನ ಆಜ್ಞೆಯಿಂದ, ತನ್ನ, ಪೊಂದಾಳಮಂ- ಚಿನ್ನದ ತಾಳವನ್ನು, ಕೈಗೊಂಡು, ತದ್ಗಣಕೃಪೆಯಂ- ಆಶಿವಗಣಗಳ ದಯೆಯನ್ನು, ಪಡೆಯಲ್-ಹೊಂದುವದಕ್ಕೋಸ್ಕರ, ಎಳಸಿ,ತಾಳಲಯಂಬಿಡಿದು-ತಾಳಗತಿಯನ್ನನುಸರಿಸಿ, ಸರಸರವಂ-ಮಧುರಶಬ್ದವು, ಅಂಕುರಿಸೆ- ಉಂಟಾಗಲು, ಭಕ್ತಿಯಿಂ,ಪಾಡಿದಂ,ಅದು, ಎಂತು? ಎನೆ.

ಶಿವಲಿಂಗಕ್ಕೆ, ಸುಗಂಧಚಂದನವಂ, ಒಳ್ಪಿಂದೆ, ಒಲ್ದು, ಕಾಲತ್ರಯಂ- ಪ್ರಾತರ್ಮಧ್ಯಾಹ್ನ ಸಾಯಾಹ್ನ ಕಾಲಗಳಲ್ಲೂ, ತವೆ, ತಾಂ, ಅರ್ಪಿಪ, ನೇಮದಿಂದೆ, ಎಸೆದು, ಮೂಲದ್ರವ್ಯಂ, ಅಳ್ಕಾಡೆ- ಕಳೆದುಹೋಗಲು, ಶಾಂಭವಪೂಜನೋಚಿತಚಂದನಕ್ರಿಯಕೆ- ಶಿವಪೂಜೆಗೆ ಯೋಗ್ಯವಾದ ಶ್ರೀಗಂಧವಂ ಕೊಂಡುಕೊಳ್ಳುವದಕ್ಕೆ, ಎಡರ್- ವಿಘ್ನವು, ಕೈಗಣ್ಮೆ- ಉಂಟಾಗಲು, ಮೇಣ್, ಉಳ್ಳ- ತನ್ನಲ್ಲಿದ್ದ, ಅದು, ವಸ್ತು, ಎಲ್ಲಂ, ಬರಿದಾಗೆ, ತಕ್ಕುಗೆಡದೆ, ಧೈರ್ಯಗೆಡದೆ, ಎನ್ನ, ಅಂಗಂಗಳಂ,ಕೂರ್ಪಿನಿಂ, ... ॥೩೨॥

ಚಂ ॥ ಕಡಿಕಡಿದೊತ್ತಿ ತೇದು ಪೊಸಗಂಧಮನರ್ಪಿಪೆನೆಂದು ನಿಂದು ತ । ನ್ನೊಡಲನಿದಿರೊಳ್ಮಹೀಶ ರುಧಿರಂ ನೆಗೆತಂದೊಡೆ ಕಂಪು ಸೊಂಪುನು ॥ ಣ್ಪಡರದೊಡಿಂಪು ತಣ್ಪೆಸೆಯದಿರ್ದೊಡೆ ಚಂದನಗಂಧವಾಗದಿ । ರ್ದೊಡೆ ಶಿವ ನಿನ್ನೊಳಂಕ ಮೆನುತಂ ಮೊಳಕಯ್ಯ ನತೀವನಿಷ್ಠೆಯಿಂ ॥ ... ... .. ... ... ॥೩೫॥

ಕಂ ॥ ಬಿಡದೊತ್ತಿ ತೇದು ಸಂದಣಿ । ಯೆಡೆಯೊಳ್ಸಿರಿಗಂಪು ವಡೆವುತಿತ್ತೊಲಿಯಿಸಿ ತ ॥ ನ್ನೊಡನಂ ಕೈಲಾಸಾದ್ರಿಗೆ । ನಡೆವಣುಮೂರ್ತಿಗಳ ಚರಣಕಿಂಕರನಪ್ಪಂ ॥ ॥೩೬॥

ಚಂ ॥ ಬೆಳಗುವೆನೀಶ್ವರಂಗೆ ಸಲೆ ಸಾಸಿರದೀಪಮನೆಂದು ನೇಮಮಂ । ತಳೆದೆಸಗುತ್ತುಮಿಂತಿರೆ ತದರ್ಜಿತ ಮುಪಾರ್ಜಿತವಿತ್ತಮೆಲ್ಲಮುಂ ॥ ತಳರ್ದೊಡೆ ದೀಪದಂಡ ಮೊಡಲಾತ್ಮಶಿರಂ ನವಪಾತ್ರ ಕೇಶಕುಂ । ತಳಜಟೆ ಬತ್ತಿ ಭಕ್ತಿರಸಮಲ್ಲಿ ತಿಲೋದ್ಭವವಾಗೆ ಕೂರ್ಪಿನಿಂ ॥ ... ... ... ... ... ॥೩೭॥

ಕಂ ॥ ಉರಿವೊತ್ತಿಸಿ ದೀಪಮನಾ । ದರದಿಂ ಬೆಳಗುತ್ತೆ ಶಂಭುವಂ ಮೆಚ್ಚಿಸಿ ತ ॥ ತ್ಪುರಮಂ ಪಡೆದೆಯ್ದಿದ ಬಂಧುರಕಡವಲನಂಬಿಯೆಂಬ ಭಕ್ತನ ಬಂಟಂ ॥ ... ॥೩೮॥

ಚಂ ॥ ಇಳೆಯೊಳು ಪಾಂಡ್ಯಮಂಡಳದೊಳೊಪ್ಪುವ ತೆನಿಮ್ನಗೆಗೆಯ್ದಿ ನಿಂದು ತ । ಜ್ಜಳದೊಳೆ ಜಾಲಮಂ ಪರಪಿ ಮುನ್ನಮೆ ಸಿಲ್ಕಿದ ಮೀನನೊಲ್ಲದಂ ॥ ತುಳುಪಿ ಶಿವಂಗೆನುತ್ತೆ ಕಡೆಸಿಲ್ಕಿದ ಮೀನ್ಗಳನೊಯ್ದು ಮಾರುತಂ । ಗಳಿಸಿದ ವಿತ್ತದಿಂದೆ ಚರಲಿಂಗಮನರ್ಚಿಸುತಂ ನಿರಂತರಂ ॥ ... ... ... ... ... ॥೩೯॥

---

ಕಡಿಕಡಿದು, ಒತ್ತಿ, ತೇದು, ಪೊಸಸುಗಂಧಮಂ, ಅರ್ಪಿಪೆ, ಎಂದು, ನಿಂದು, ತನ್ನೊಡಲನ, ಇದಿರೊಳ್, ಮಹೀಶ ! ರುಧಿರಂ- ರಕ್ತವು, ನೆಗೆತಂದೊಡೆ- ಹಾರಿದರೆ, ಕಂಪು- ಪರಿಮಳ, ಸೊಂಪು- ಸೊಗಸು, ನುಣ್ಪು- ಅಡರದೊಡೆ, ತಣ್ಪು, ಎಸೆಯದೆ, ಇರ್ದೊಡೆ, ಚಂದನಗಂಧಂ, ಆಗದೆ, ಇರ್ದೊಡೆ, ಶಿವ, ನಿನ್ನೊಳ್, ಅಂಕಂ- ದೋಷವು, ಎನುತಂ, ಅತೀವನಿಷ್ಠೆಯಿಂ- ಬಹುಶ್ರದ್ಧೆಯಿಂದ, ಮೊಳಕಯ್ಯಂ. ॥೩೫॥

ಬಿಡದೆ, ಸಣ್ಣಿಗೆಯ- ಮಳಲಿನ, ಎಡೆಯೊಳ್- ಸ್ಥಳದಲ್ಲಿ, ಒತ್ತಿ, ತೇದಿ, ಸಿರಿಗಂಪುವಡೆವುತೆ- ಶ್ರೀಗಂಧವಂ ಹೊಂದುತ್ತ, ಇತ್ತು, ತನ್ನೊಡನಂ, ಒಲಿಯಿಸಿ, ಕೈಲಾಸಾದ್ರಿಗೆ, ನಡೆದ, ಅಣುಮೂರ್ತಿಗಳ, ಚರಣಕಿಂಕರಂ- ಪಾದಸೇವಕನು, ಅಪ್ಪಂ. ... ... ... ... ॥೩೬॥

ಈಶ್ವರಂಗೆ, ಸಲೆ, ಸಾಸಿರದೀಪಮಂ, ಬೆಳಗುವೆಂ, ಎಂದು, ನೇಮಮಂ, ತಳೆದು, ಎಸಗುತ್ತುಂ, ಅಂತೆ, ಇರೆ, ತದರ್ಜಿತ- ಆ ಸೇವೆಗೋಸ್ಕರ, ಉಪಾರ್ಜಿತವಿತ್ತಮೆಲ್ಲಮುಂ- ಸಂಪಾದಿಸಿದ್ದ ಹಣವೆಲ್ಲವೂ, ತಳರ್ದೊಡೆ- ಹೋಗಲಾಗಿ, ಒಡಲ್- ಶರೀರವು, ದೀಪದ- ದೀಪಸ್ತಂಭದ, ಅಂದಂ, ಆತ್ಮಶಿರಂ, ನವಪಾತ್ರೆ, ಕೇಶಸಂಕುಳ ಜಟೆ, ಬತ್ತಿ, ಅಲ್ಲಿ, ಭಕ್ತಿರಸಂ, ತಿಲೋದ್ಭವಂ- ಎಣ್ಣೆಯು, ಆಗೆ, ಕೂರ್ಪಿನಿಂ. ॥೩೭॥

ಉರಿವೊತ್ತಿಸಿ, ಆದರದಿಂ, ದೀಪಮಂ, ಬೆಳಗುತ್ತೆ, ಶಂಭುವಂ, ಮೆಚ್ಚಿಸಿ, ಪಡೆದು, ತತ್ಪುರಮಂ, ಎಯ್ದಿದ, ಬಂಧುರಕಡವಲನಂಬಿ, ಎಂಬ, ಭಕ್ತನ, ಬಂಟಂ. ... ... ॥೩೮॥

ಇಳೆಯೊಳು, ಪಾಂಡ್ಯಮಂಡಲದೊಳ್- ಪಾಂಡ್ಯ ದೇಶದಲ್ಲಿ, ಒಪ್ಪುವ, ತೆನಿಮ್ನಗೆಗೆ-ಹೊಳೆಗೆ, ಎಯ್ದಿ, ತಜ್ಜಳದೊಳೆ-ಆನೀರಿನಲ್ಲಿ, ಜಾಲಮಂ-ಬಲೆಯನ್ನು, ಪರಪಿ-ಹರಡಲು, ಮುನ್ನಮೆ-ಮೊದಲೇ, ಸಿಲ್ಕಿದ, ಮೀನಲ, ಒಲ್ಲದೆ, ಅಂತೆ, ಶಿವಂಗೆ, ಎನುತೆ, ಉಳುಪಿ- ಬಿಟ್ಟು, ಕಡೆಸಿಲ್ಕಿದ-ಅನಂತರದಲ್ಲಿಸಿಕ್ಕಿದ, ಮೀನ್ಗಳಲ, ಒಯ್ದು- ತೆಗೆದುಕೊಂಡು ಹೋಗಿ, ಗಳಿಸಿದ- ಸಂಪಾದಿಸಿದ, ವಿತ್ತದಿಂದೆ, ನಿರಂತರಂ, ಚರಲಿಂಗಮಂ, ಅರ್ಚಿಸುತಂ.

ಉ॥ ನೇಮ ಮದಾಗೆ ವರ್ತಿಸುತ ಮೊಂದುದಿನಂ ಬಲೆವೀಸಿ ನೀರೊಳು । ದ್ದಾಮತೆ
ಯಿಂದದಂ ನೆಳೆದು ನೋಳ್ಪನ ಮುಜ್ಜ್ವಳರತ್ನಲೋಚನಂ । ಹೇಮಮಯಾಂಗ ಮೊಪ್ಪ
ವಝುಸಂ ಬರೆ ಮುನ್ನಭವಂಗಿದೆಂದು ಪ। ಟ್ಟಮಡುನೀರೊಳಂತೆ ಬಲೆವೀಸಿದೊಡಂತದು
ಸಿಲ್ಕೆ ಮೇಣದಂ ॥ ... ... ... ... ... ॥೪೦॥

ಮತ್ತೇ॥ ಬಿಡುತಂ ಮೇಣ್ಬಲೆವೀಸೆ ಮತ್ತುಳದ ಮತ್ಸ್ಯಂ ಸಿಲ್ಕದಾವಿಾನೆ ಬ ।
ದೊಡೆ ಕೆಂಡಚ್ಚರಿವಟ್ಟು ಬಿಟ್ಟು ಬಳಕಲ್ಲಿಂದೆಯ್ದಿ ಬೇರೊಂದು ಪೆ॥ ರ್ಮಡುವೊಳ್ಜಾಲಮ
ನಲ್ಲಿ ಬೀಸೆ ಮಗುಳ್ದಾಪಾಠೀನಮೇ ಸಿಲ್ಕ ತ। ಜ್ಜಡದೊಳ್ವರ್ಜಿಸುತಿಂತು ಸಂಜೆವರೆಗಂ
ನೀರುಳ್ಳ ಠಾಣಂಗಳೊಳ್॥ ... ... ... ... ... ॥೪೧॥

ಮತ್ತೇ॥ ಬಲೆವೀಸುತ್ತೆ ನವೀನಮಿಾನಮ ನದೆಂತುಂ ಕಾಣದೀಮಿಾನಮೇ । ಸಲೆ
ಠಾಂಬಂದಪುದೀ ಶಿವಾರ್ಪಣದ ಮಿಾನಂ ಕೊಲ್ವುದೆಂತಕ್ಕು ಮಿಾ॥ ಜಾಡೊಳ್ಜಾಲಮ ನಿ
ಟ್ಟು ನೋಳ್ಪೆ ನಣಮಿಾ ಮಿಾನೆಯ್ದೆ ಮಾಣ್ದಪ್ಪೆ ನೀ । ಬಲೆಯಂ ಮೇಣೆನುತಣ್ಮಿ ಪೂ
ಣ್ದುಪುರಪೂರ್ವಾಶಾನದೀವಾರಿಯೊಳ್॥ ... ... ... ॥೪೨॥

ಉ॥ಜಾಲಮ ನಿಕ್ಕುತಂ ಸೆಳೆಯೆ ತಳ್ತದರೊಳ್ನಯನತ್ರಯಂ ಜಟಾ।ಮಾಲೆ ನವೇಂ
ದುನಾಗಭರಣಂ ನಗಜಾತೆ ಗಜಾಜಿನಾಂಬರಂ॥ ಕಾಲಗಳಂ ವೃಷೇಂದ್ರ ನೊಡ ನೊಪ್ಪಿರೆ ಮ
ಚ್ಚಿಮಹೇಶ ಸೆಯ್ದೆ ಸ । ಲ್ಲೀಲೆಯೊಳಾತನೂರ್ಗೆ ನಡೆಗೊಂಡತಿಭಕ್ತನ ಭಕ್ತನಪ್ಪೆ ನಾ॥

ಅದು- ಪೂರ್ವೋಕ್ತವಾದಕೃತ್ಯವು, ನೇಮಂ- ಕಾಯಕವು, ಆಗೆ, ವರ್ತಿಸುತಂ,ಒಂದು ದಿನಂ, ನೀರೊ
ಳ್, ಬಲೆವೀಸಿ, ಉದ್ದಾಮತೆಯಿಂದೆ, ಅದಂ- ಆಬಲೆಯನ್ನು, ಸೆಳೆದು, ನೋಳ್ಪನಂ, ಉಜ್ಜ್ವಳರತ್ನಲೋಚ
ನಂ- ಪ್ರಕಾಶಿಸುವ ರತ್ನದ ಕಣ್ಣುಳ್ಳ, ಹೇಮಮಯಾಂಗಂ ಸುವರ್ಣ ವಿಕಾರವಾದ ದೇಹವು, ಒಪ್ಪುವ, ಝ
ಷಂ, ಬರೆ, ಮುನ್ನ, ಅಭವಂಗೆ, ಇದು, ಎಂದು, ಬಿಟ್ಟು, ಆಮಡುನೀರೊಳ್, ಅಂತೆ, ಬಲೆವೀಸಿದೊಡೆ, ಅಂ
ತು, ಅದು, ಸಿಲ್ಕೆ, ಮೇಣ್, ಅದಂ. ... ... ... ... ॥೪೦॥

ಬಿಡುತಂ, ಮೇಣ್, ಬಲೆವೀಸೆ, ಮತ್ತೆ, ಉಳಿದಮತ್ಸ್ಯಂ, ಸಿಲ್ಕದೆ, ಆಮಿಾನು, ಬಂದೊಡೆ, ಕೇಡು,
ಅಚ್ಚರಿವಟ್ಟು, ಬಿಟ್ಟು, ಬಳಿಕೆ, ಅಲ್ಲಿಂದೆ, ಎಯ್ದಿ, ಬೇರೊಂದು ಪೆರ್ಮಡುವೊಳ್, ಜಾಲಮಂ- ಬಲೆಯನ್ನು,
ಅಲ್ಲಿ, ಬೀಸೆ, ಮಗುಳ್ದು, ಆಪಾಠೀನಮೆ- ಮಿಾನ್ನೆ, ಸಿಲ್ಕ, ತಜ್ಜಡದೊಳ್, ವರ್ಜಿಸುತ್ತೆ, ಇಂತು, ಸಂಜೆವರೆ
ಗಂ, ನೀರ್, ಉಳ್ಳ, ಠಾಣಂಗಳೊಳ್- ಸ್ಥಳಗಳಲ್ಲಿ. ... ... ... ॥೪೧॥

ಬಲೆವೀಸುತ್ತೆ, ನವೀನಮಿಾನಮಂ- ಹೊಸಮಿಾನನ್ನು, ಅದೆಂತುಂ, ಕಾಣದೆ, ಈಮಿಾನಮೇ, ಠಾಂ,
ಸಲೆ, ಬಂದಪುದು, ಈಶಿವಾರ್ಪಣದ, ಮಿಾನಂ, ಕೊಲ್ವುದು, ಎಂತು, ಅಕ್ಕುಂ ? ಈಜಲದೊಳ್, ಜಾಲ
ಮಂ, ಇಟ್ಟು, ಅಣಂ- ಸ್ವಲ್ಪ, ನೋಳ್ಪೆಂ, ಈಮಿಾನೆ, ಮೇಣ್, ಎಯ್ದೆ, ಈಬಲೆಯಂ, ಮಾಣ್ದಪ್ಪೆಂ- ಬಿ
ಟ್ಟುಬಿಡುವೆನು, ಎನುತೆ, ಅಣ್ಮಿ- ಪರಾಕ್ರಮವಿಶಿಷ್ಟನಾಗಿ, ಪೂಣ್ದು- ಪ್ರತಿಜ್ಞೆಯಂ ಮಾಡಿ, ಪುರಪೂ
ರ್ವಾಶಾನದೀವಾರಿಯೊಳ್- ಆ ಪಟ್ಟಣದ ಪೂರ್ವದಿಕ್ಕಿನಲ್ಲಿರುವ ಹೊಳೆಯ ನೀರಿನಲ್ಲಿ. ... ॥೪೨॥

ಜಾಲಮಂ, ಇಕ್ಕುತಂ, ಸೆಳೆಯೆ, ಅದರೊಳ್, ತಳ್ತು, ನಯನತ್ರಯಂ, ಜಟಾಮಾಲೆ, ನವೇಂದುನಾ
ಗಭರಣಂ- ಹೊಸಚಂದ್ರ ಸರ್ಪಾಭರಣ, ನಗಜಾತೆ- ಪಾರ್ವತಿ, ಗಜಾಜಿನಾಂಬರಂ, ಕಾಲಗಳಂ- ಕಪ್ಪುಕ
ತ್ತು, ಒಡನೆ, ವೃಷೇಂದ್ರಂ, ಒಪ್ಪಿ, ಇರೆ, ಮಹೇಶಂ, ಮಚ್ಚಿ, ಸಲ್ಲೀಲೆಯೊಳ್, ಆತನ, ಊರ್ಗೆ, ನಡೆಗೊಂ
ಡ, ಅತಿಭಕ್ತನ, ಭಕ್ತಂ, ಆಂ, ಅಪ್ಪೆಂ. ... ... ... ॥೪೩॥

ಚಂ॥ ಪ್ರತಿದಿನ ಮಿಾಶ್ವರಂಗೆ ಮೃದುಶಾಲಿಯ ತಂಡುಲದನ್ನಮರ್ಪಿಪಾ । ವ್ರತಮನೆ ತಾಳ್ದು ತಾ ನೆಸಗುವಾವ್ರತಕರ್ಥ ಮದೆಲ್ಲ ತೀರೆ ನಿಶ್ಚಿತಮತಿಗದ್ದೆಗುಯ್ದು ಪೊಸಕೂಲಿಯೊಳಾರ್ಜಿಸಿ ಶಾಲಿಯಕ್ಕಿಯಂ । ರತಿಪತಿವೈರಿಗನ್ನಮನೊಡರ್ಚಿ ಸಮರ್ಪಿಸ ತಿಂತು ನೇಮಮಂ॥

ಮ ॥ ಸ್ರ ॥ ಸಲಿಸುತ್ತಿರ್ಪನ್ನ ಮಾಕೂಲಿಗೆ ಕರೆವರು ಮಿಲ್ಲಾಗೆ ಸಪ್ತೋಪವಾಸಂ । ನೆಲೆಗೊಂಡಿರ್ಪಂದು ಮಾನದ್ವಯಮಿತವಿಲಸತ್ತಂಡುಲಂ ಶಂಕರಾಜ್ಞಾ ॥ ಬಲದಿಂ ಕೈಗೂಡೆ ಕೊಂಡೆಯ್ದುವ ಸಮಯದೆ ತಾಂ ಬೀಳ್ವಿನಂ ಬೀದಿಯೊಳ್ತಂ । ಡುಲ ಮೆಲ್ಲಂ ಸೂಸೆ ಸುಯ್ಯುತ್ತದನುಡುಗೆ ಮಲಂಬಾರದಿರ್ದತ್ತದಾಗಳ್ ॥ ... ... .. ॥೪೫॥

ಮತ್ತೇ॥ ಅದ ನಂದೀಕ್ಷಿಸಿ ನೊಂದು ಚಂದ್ರಧರ ನಾಹಾರಕ್ಕೆ ತಂದಕ್ಕಿಸೂ । ಸಿದು ದೀತಪ್ಪ ನೊಡರ್ಚಿದೆಂ ಬಿಡುವೆ ನೆನ್ನೀಪ್ರಾಣಮಂ ಮಾಣದೆಂ ॥ ದೊದರುತ್ತಂ ಕೂಡುಗೋಲ ನೆತ್ತಿ ಕೊರೆದಾತ್ಮಗ್ರೀವಮಂ ಶಂಭುಮ । ಪದಪಿಂ ಮೆಚ್ಚಿಸಿ ಮೋಕ್ಷಮೊಂದಿದರಿವಾಲಂಗಾಂ ಕರಂ ಕಿಂಕರಂ ॥ ... ... ... ... ... ॥೪೬॥

ಮತ್ತೇ॥ ವಿಳಸದ್ದುಗ್ಗುಳಧೂಪಮಂ ಸಲೆ ಮಹಾದೇವಂಗೆ ಕಾಲತ್ರಯಂ । ಗಳೊಳೊಲ್ದರ್ಪಿಪನೇಮಮಂ ತಳೆದು ತಾನಿರ್ಪಾಗಳಾ ಧೂಪಕ ॥ ರ್ಗ್ಗಳವಿತ್ತಂ ವ್ಯಯಮಾಗೆ ವಸ್ತುಚಯಮಂ ನೈಜಾಂಗನಾಕಂಠಮಂ । ಗಳಸೂತ್ರಂ ಮೊದಲಾಗಿ ಮಾರಿ ಸಲಿಸುತ್ತಾ ನೇಮಮಂ ಭಕ್ತಿಯಿಂ ॥ ... ... ... ... ... ॥೪೭॥

---

ಪ್ರತಿದಿನಂ, ಈಶ್ವರಂಗೆ, ಮೃದುಶಾಲಿಯ- ಕೋಮಲವಾದ ಬತ್ತದ, ತಂಡುಲದ- ಅಕ್ಕಿಯ, ಅನ್ನಮರ್ಪಿಪ, ಆವ್ರತಮನೆ, ತಾಳ್ದು, ತಾಂ, ಎಸಗುವ, ಆವ್ರತಕೆ, ಅದು, ಅರ್ಥಂ, ಎಲ್ಲ, ತೀರೆ, ನಿಶ್ಚಲಮತಿ- ಚಂಚಲವಾಗದ ಬುದ್ಧಿಯುಳ್ಳವನಾಗಿ, ಗದ್ದೆಗುಯ್ದು- ಗದ್ದೆಯನ್ನು ಕುಯ್ದು, ಪೊಸಕೂಲಿಯೊಳ್-ಆಯಾ ದಿನದ ಕೂಲಿಯಿಂದ, ಶಾಲಿಯ, ಅಕ್ಕಿಯಂ, ಆರ್ಜಿಸಿ, ರತಿಪತಿವೈರಿಗೆ, ಅನ್ನಮಂ, ಒಡರ್ಚಿ, ಸಮರ್ಪಿಸುತ್ತೆ, ಇಂತು, ನೇಮಮಂ. ... ... ... ... ... ॥೪೪॥

ಸಲಿಸುತ್ತೆ, ಇರ್ಪನ್ನಂ- ಇರುವಲ್ಲಿ, ಆ ಕೂಲಿಗೆ, ಕರೆವರುಂ, ಇಲ್ಲಾಗೆ, ಸಪ್ತೋಪವಾಸಂ- ಏಳು ಹೊತ್ತು ಉಪವಾಸವು, ನೆಲೆಗೊಂಡು, ಇರ್ಪ, ಅಂದು, ಮಾನದ್ವಯಮಿತವಿಲಸತ್ತಂಡುಲಂ- ಎರಡುಸೇರು ಅಕ್ಕಿಯು, ಶಂಕರಾಜ್ಞಾಬಲದಿಂ, ಕೈಗೂಡೆ, ಕೊಂಡು, ಎಯ್ದುವ, ಸಮಯದೆ, ತಾಂ, ಬೀಳ್ವಿನಂ- ಬೀಳುವಷ್ಟರಲ್ಲಿ, ಬೀದಿಯೊಳ್, ತಂಡುಲಂ, ಎಲ್ಲಂ, ಸೂಸೆ- ಚೆಲ್ಲಲು, ಸುಯ್ಯುತ್ತೆ- ನಿಟ್ಟುಸಿರನ್ನು ಬಿಡುತ್ತ, ಅದಂ, ಉಡುಗೆ- ಗುಡಿಸಲು, ಅದು, ಆಗಳ್, ಕರಂ- ಚೆನ್ನಾಗಿ, ಬಾರದೆ, ಇರ್ದತ್ತು. ॥೪೫॥

ಅದಂ, ಅಂದು, ಈಕ್ಷಿಸಿ, ನೊಂದು, ಚಂದ್ರಧರನ, ಆಹಾರಕ್ಕೆ, ತಂದ, ಅಕ್ಕಿ, ಸೂಸಿದುದು, ಈತಪ್ಪಂ, ಒಡರ್ಚಿದೆಂ, ಮಾಣದೆ, ಎನ್ನ, ಈ ಪ್ರಾಣಮಂ, ಬಿಡುವೆಂ, ಎಂದು, ಒದರುತ್ತಂ- ಕೂಗುತ್ತ, -ಕೂಡುಗೋಲಂ, ಎತ್ತಿ, ಆತ್ಮಗ್ರೀವಮಂ- ತನ್ನ ಕತ್ತನ್ನು, ಕೊರೆದು, ಶಂಭುವಂ, ಪದಪಿಂ, ಮೆಚ್ಚಿಸಿ, ಮೋಕ್ಷಮೊಂದಿದ, ಅರಿವಾಲಂಗೆ, ಆಂ, ಕರಂ, ಕಿಂಕರಂ. ... ... ... ॥೪೬॥

ಕಾಲತ್ರಯಂಗಳೊಳ್, ಸಲೆ, ಮಹಾದೇವಂಗೆ, ವಿಲಸದ್ದುಗ್ಗುಳಧೂಪಮಂ, ಒಲ್ದು, ಅರ್ಪಿಪ, ನೇಮಮಂ, ತಳೆದು, ತಾಂ, ಇರ್ಪಾಗಳ್, ಆ ಧೂಪಕೆ, ಅರ್ಗ್ಗಳವಿತ್ತಂ, ವ್ಯಯಂ, ಆಗೆ, ವಸ್ತುಚಯಮಂ- ಮನೆಯ ಪದಾರ್ಥಗಳ ಸಮೂಹವನ್ನು, ನೈಜಾಂಗನಾಕಂಠಮಂಗಳಸೂತ್ರಂಮೊದಲಾಗಿ- ತನ್ನ ಹೆಂಡತಿಯ ಕತ್ತಿನ ತಾಳಿ ಮೊದಲ್ಗೊಂಡು, ಮಾರಿ, ಭಕ್ತಿಯಿಂ, ಆ ನೇಮಮಂ, ಸಲಿಸುತ್ತಂ. ... ॥೪೭॥

ವ ॥ ಇರ್ಪಿನ ಮಾಗಳ್ತಿರಿಪಿನಂದ ಮೆಂಬ ಪುರವರದೊಳ್ತಿರುಪರಂಧಾಮ ನೆಂಬ ನರೇಶ್ವರಂ ನಿರಂತರ ಭಜಿಪ ನಾಗನಾಥನೆಂಬ ಲಿಂಗಂ ಪುರೋಭಾಗದೊಳ್ನಾಗಕನ್ನಿಕೆಯರ್ಪಾಡುವ ರಾಗರಸಕ್ಕೆ ರಾಗಿಸಿ ಮುಂಗಡೆಗೆಪಿಂಗದೊಲೆದು ಬಾಗಿರೆ ತನ್ನರೇಶ್ವರ ನೀಲಿಂಗಮಂ ಸಸಿನೆಗೆಯ್ದವಂಗೆ ಬೇಡಿದುದ ನೀವೆನೆಂಬ ವಾರ್ತೆಯಂ ಕೇಳ್ದಾಪುರಿಗೆಳ್ತಂದೆಮಗೆ ಪಿರಿದುಂ ಗುಗ್ಗುಲಮ ನೀಯೆಲಿಂಗದೊಲೆಪಮಂ ನೇರಿತ್ತುಗೆಯ್ವೆ ನೆಂದು ಪ್ರೊಣ್ದು ನುಡಿಯ ಲೊತ ನವಂ ಬೇಡಿದನಿತಂ ಗುರ್ಗುಳಮಂ ರಾಸಿಗೆಯ್ದು ಮುಂದಿಟ್ಟು ವಂದಿಸೆ ಕೈಕೊಂಡು ತಲ್ಲಿಂಗ ದೆಡೆಗೆಯ್ದಿ ಪನ್ನತಿಕೆಯಿಂ ನಿಂದು ॥ * * * * * * * *

ಚಂ ॥ ಧರಣಿಪ ನಲ್ಲಿ ನೋಡ ತಿರೆ ಪಟ್ಟೆಯ ಚೆಂದಿಯೊ ಳೊಂದಿ ಬಂಧಿಸು । ತ್ತರಿದೆನೆ ಲಿಂಗಮೂರ್ತಿಯ ತದಗ್ರದೆ ಕಟ್ಟದಬೊಮ್ಮಹಾಸಮಂ ॥ ಕೊರಲೊ ಳಮರ್ಚಿ ತಾಂ ನಿಗುರೆ ನೆಟ್ಟನೆ ನಿಂದುಶಿವಂ ಪ್ರಸನ್ನನಾ । ಗಿರೆ ಶಿವಲೋಕಮಂ ಪಡೆದ ಸತ್ಕಲಿನಾಥನ ಭೃತ್ಯ ನಪ್ಪೆ ನಾಂ ॥ ... ... .. ... ... ... ॥೪೮॥

ಚಂ ॥ ಸೊಗಯಿಪ ಶೈವಲಾಂಛನಧರರ್ಕಳ ನೀಶ್ವರ ನೆಂದು ಭಾವಿಸು । ತ್ತಗಲದೆ ಪೂಜಿಸುತ್ತ ರಿಪುಭೂಪರ ನರ್ದಿಸಿ ಕೀರ್ತಿವೆತ್ತು ಪೇರ್ಮೆಗೆನೆಲೆಯಾಗಿರುತ್ತ ಮಹಿತೋರ್ವಿಪ ನೋರ್ವನ ಯುದ್ಧರಂಗದೊ । ಳ್ನೆಗಳ್ದತಿಶೌರ್ಯದಿಂ ತೆಮರೆ ಸೋಲ್ತವನೀಶ್ವರ ಭಕ್ತವೇಷಮಂ ॥ ... ... ... .. ... ... ॥೪೯॥

ಮತ್ತೇ ॥ ತಳೆದೆಳ್ತಂದಿದಿರಾಂತು ನಿಂದಿರೆ ರಣೋರ್ವೀಭಾಗದೊ ಳ್ಕಂಡು ನಿ ।

---

ಇರ್ಪಿನಂ, ಆಗಳ್, ತಿರಿಪಿನಂದಂ, ಎಂಬ, ಪುರವರದೊಳ್, ತಿರುಪರಂಧಾಮಂ, ಎಂಬ, ನರೇಶ್ವರಂ, ನಿರಂತರಂ, ಭಜಿಪ, ನಾಗನಾಥಂ, ಎಂಬ, ಲಿಂಗಂ, ಪುರೋಭಾಗದೊಳ್, ನಾಗಕನ್ನಿಕೆಯರ್, ಪಾಡುವ, ರಾಗರಸಕ್ಕೆ, ರಾಗಿಸಿ- ಪ್ರೀತಿಸಿ, ಪಿಂಗದೆ, ಮುಂಗಡೆಗೆ, ಒಲೆದು- ಅಲ್ಲಾಡಿ, ಬಾಗಿ, ಇರೆ, ತನ್ನರೇಶ್ವರಂ, ಈ ಲಿಂಗವಂ, ಸಸಿನೆಗೆಯ್ದವಂಗೆ- ಮೊದಲಿದ್ದಂತೆ ಸರಿಮಾಡಿದವನಿಗೆ, ಬೇಡಿದುದಂ, ಈವೆಂ, ಎಂಬ, ವಾರ್ತೆಯಂ, ಕೇಳ್ದು. ಆ ಪುರಿಗೆ, ಎಳ್ತಂದು, ಎಮಗೆ, ಪಿರಿದುಂ, ಗುಗ್ಗುಲಮಂ, ಈಯೆ, ಲಿಂಗದ, ಒಲೆಪಮಂ- ಓರೆಯಾಗಿರುವಿಕೆಯನ್ನು, ನೇರಿತ್ತುಗೆಯ್ವೆಂ- ನೆಟ್ಟನೆಮಾಡುವೆನು, ಎಂದು, ಪೂಣ್ದು, ನುಡಿಯಲ್, ಒಡಂ, ಅವಂ, ಬೇಡಿದನಿತಂ, ಗುಗ್ಗುಳಮಂ, ರಾಸಿಗೆಯ್ದು, ಮುಂದೆ, ಇಟ್ಟು, ವಂದಿಸೆ, ಕೈಕೊಂಡು, ತಲ್ಲಿಂಗದ, ಎಡೆಗೆ, ಎಯ್ದಿ, ಪನ್ನತಿಕೆಯಿಂ- ಶೌರ್ಯವಿಂದ, ನಿಂದು. * * * * * * * *

ಧರಣಿಪಂ, ಅಲ್ಲಿ, ನೋಡುತೆ, ಇರೆ, ಪಟ್ಟೆಯ- ರೇಷಿಮೆಯ, ಚೆಂದಿಯೊಳ್, ಲಿಂಗಮೂರ್ತಿಯಂ, ಒಂದಿ, ಬಂಧಿಸುತ್ತೆ, ಅರಿದು, ಎನೆ, ತದಗ್ರದೆ, ಆ ಪಟ್ಟೆಯ ಚೆಂದಿಯ ತುದಿಯಲ್ಲಿ ಕಟ್ಟದ, ಬೊಮ್ಮಹಾಸಮಂ, ಕೊರಲೊಳ್, ಅಮರ್ಚಿ, ತಾಂ, ನಿಗುರೆ, ಶಿವಂ, ನೆಟ್ಟನೆ, ನಿಂದು, ಪ್ರಸನ್ನಂ, ಆಗಿ, ಇರೆ, ಶಿವಲೋಕಮಂ, ಪಡೆದ, ಸತ್ಕಲಿನಾಥನ, ಭೃತ್ಯಂ, ಆಂ, ಅಪ್ಪೆಂ. ... ... ॥೪೮॥

ಸೊಗಯಿಪ, ಶೈವಲಾಂಛನಧರರ್ಕಳಂ, ಈಶ್ವರಂ, ಎಂದು, ಭಾವಿಸುತ್ತೆ, ಅಗಲದೆ, ಪೂಜಿಸುತ್ತೆ, ರಿಪುಭೂಪರಂ, ಅರ್ದಿಸಿ- ನಾಶಮಾಡಿ, ಕೀರ್ತಿವೆತ್ತು, ಪೇರ್ಮೆಗೆ- ಅತಿಶಯಕ್ಕೆ, ನೆಲೆ, ಆಗಿ, ಇರುತ್ತಂ, ಅಹಿತೋರ್ವಿಪನೊರ್ವನ, ಯುದ್ಧರಂಗದೊಳ್, ನೆಗಳ್ದ, ಅತಿಶೌರ್ಯದಿಂ, ತೆಮರೆ- ಓಡಿಸಲು, ಅವಂ- ಆ ಶತ್ರುರಾಜನು, ಸೋಲ್ತು, ಭಕ್ತವೇಷಮಂ. ... ... ... ... ॥೪೯॥

ತಳೆದು, ಎಳ್ತಂದು, ರಣೋರ್ವೀಭಾಗದೊಳ್- ಯುದ್ಧಭೂಮಿಯಲ್ಲಿ, ಇದಿರಾಂತು, ನಿಂದು, ಇರೆ,

ಶ್ಚಳ ಸದ್ಭಕ್ತಿಯ ನಾಳ್ದು ಕೈಯಸಿಯ ನುಡೀತಾಡಿ ಮುಯ್ಯೆಕ್ಕ ಭೂ ॥ ತಳದೊ ಳ್ತದ್ರಿಪುಖಡ್ಗದಿಂ ಪೊಡೆಯೆ ತಾಂ ನಿಷ್ಪಂದನಾಗಿರ್ದನಿ । ರ್ಮಳಭಾವಕ್ಕೆ ಪುರಾರಿ ಮೆಚ್ಚುತಸಿಯುಂ ಪೂಮಾಲೆಗೆಯ್ದೊಲ್ಮೆಯಿಂ ॥ ... .. ... ... ॥೫೦॥

ಕಂ ॥ ಕ್ಷೋಣಿಜನ ವೀಕ್ಷಿಸುತ್ತಿರೆ, ವಾಣವೆ ಪುಷ್ಪಕದೊಳೆಯ್ದಿ ನಿಜನಗರಿಗೆ ಸಂ ॥ ದೇಣಾದಿನಾಥನ ಸಮಕೃಪಾಣಂ ಬಿಡಿದೋಲಗಿಪ್ಪ ಕಿಂಕರ ನಪ್ಪಂ॥ ... ॥೫೧॥

ಮ ॥ ಸ್ರ ॥ ದರೆಯೊಳ್ ಶ್ರೀಪಂಚಮುದ್ರಾಂಕಿತರ ನಘಹರಶ್ರದ್ಧೆಯಿಂ ಕಂಡು ಪೂಜಾ । ಪರನಾಗುತ್ತೆಳ್ಗೆಯಿಂವರ್ತಿಸುತೆ ರಿಪುಧರಾಧೀಶರಂ ಪೊಯ್ಯುದ್ಧ ಯ ಎದ್ದೋ ॥ ರ್ವರೆಯೊ ಳ್ಬೆಂಬತ್ತೆ ಕೆಟ್ಟೋಡುತೆ ಕಪಟೋಪಾಯದಿಂ ತಾಳ್ದು ಭಾಸ್ವ । ಚ್ಚರರೂಪಂ ಬಂದವ ರ್ತಳ್ತರಿಯೆ ಧುರದೊ ಳಾತ್ಮಾಂಗಮಂ ಭಕ್ತಿಯಿಂದಂ ॥ ... ... ॥೫೨॥

ಕಂ ॥ ಶರಣೆಂದೊಪ್ಪಿಸಿ ಸೈಗೆಡೆ । ದಿರೆ ದರೆಯೊಳ್ಮೆಚ್ಚಿ ಶಂಭು ಸಾರೂಪ್ಯಮನಂ ॥ ದಿರವೀಯೆ ಮೆರೆವ ಧೈರ್ಯಾ । ಕರ ನೆನಿಸುವ ಸೇದಿರಾಜ ನನುಚರನಪ್ಪಂ॥ ... ॥೫೩॥

ಚಂ ॥ ಅನುದಿನ ವೀಶಲಾಂಛನಧರರ್ಕಳ ನೀಶ್ವರ ನೆಂಬ ಭಕ್ತಿಭಾ । ವನೆ ಯೊಡಗೂಡಿ ತಾಂ ಭಜಿಸುತಂ ಪಿರಿದೇಳ್ಗೆಯ ನಾಳ್ದು ರಾಜ್ಯಮಾ ॥ ಲನೆಯ ನೊಡರ್ಚುತಿರ್ದು ರಿಪುರಾಜರ ನಾಜಿಯೊ ಳಟ್ಟಿ ಪೊಯ್ದು ನೆ । ಟ್ಟನೆ ತಲೆಯೊಟ್ಟಲಂ ತರಿಸಿ ಬಂಡಿಯೊ ಳೀಕ್ಷಿಸುತಿರ್ಪ ಪೊಳ್ತನೊಳ್ ॥ ... ... ... ... ... ॥೫೪॥

---

ಕಂಡು, ನಿಶ್ಚಳಸದ್ಭಕ್ತಿಯುಂ, ಆಳ್ದು, ಅಂದು, ಕೆಯ್ಯ, ಅಸಿಯಂ- ಕತ್ತಿಯನ್ನು, ಈಡಾಡಿ- ಬಿಸಾಡಿ, ಭೂತಳದೊಳ್, ಮುಯ್ಯೆಕ್ಕಿ- ನಮಸ್ಕರಿಸಿ, ತದ್ರಿಪು, ಖಡ್ಗದಿಂ, ಪೊಡೆಯೆ, ತಾಂ, ನಿಷ್ಪಂದಂ- ಚಲಿಸದೇ ಇರುವವನು, ಆಗಿ, ಇರ್ದ, ನಿರ್ಮಳಭಾವಕ್ಕೆ, ಪುರಾರಿ, ಮೆಚ್ಚುತೆ, ಅಸಿಯುಂ- ಕತ್ತಿಯನ್ನು, ಪೂಮಾಲೆಗೆಯ್ದು, ಒಲ್ಮೆಯಿಂ. ... ... ... ... ... ॥೫೦॥

ಕ್ಷೋಣಿಜನಂ, ವೀಕ್ಷಿಸುತ್ತೆ, ಇರೆ, ವಾಣವೆ, ಪುಷ್ಪಕದೊಳ್- ವಿಮಾನದಲ್ಲಿ, ಎಯ್ದಿ, ನಿಜನಗರಿಗೆ, ಸಂದ, ಏಣಾದಿನಾಥನ, ಅಸಮಕೃಪಾಣಂಬಿಡಿದು- ಕತ್ತಿಯಂ ಹಿಡಿದುಕೊಂಡು, ಓಲಗಿಪ್ಪ- ಸೇವಿಸುವ, ಕಿಂಕರಂ, ಅಪ್ಪಂ. ... ... ... ... ... ॥೫೧॥

ದರೆಯೊಳ್, ಶ್ರೀಪಂಚಮುದ್ರಾಂಕಿತರಂ- ವೀಭೂತಿ ರುದ್ರಾಕ್ಷ ಮಂತ್ರ ಲಿಂಗ ಕಾವಿಯ ಬಟ್ಟೆ, ಈ ಚಿಹ್ನಗಳುಳ್ಳವರನ್ನು, ಅಘಹರಶ್ರದ್ಧೆಯಿಂ- ಈಶ್ವರನಿಷ್ಠೆಯಿಂದ, ಕಂಡು, ಪೂಜಾಪರಂ, ಆಗುತ್ತೆ, ಏಳ್ಗೆಯಿಂ, ವರ್ತಿಸುತೆ, ಯುದ್ಧೋರ್ವಿಯೊಳ್, ರಿಪುಧರಾಧೀಶರಂ, ಪೊಯ್ದು, ಬೆಂಬತ್ತೆ- ಬೆನ್ನಟ್ಟಲು, ಕೆಟ್ಟು, ಓಡುತ್ತೆ, ಕಪಟೋಪಾಯದಿಂ, ಅವರ್-ಆ ಶತ್ರುರಾಜರು, ಚರರೂಪಂ, ತಾಳ್ದು, ಬಂದು, ತಳ್ತು, ಧುರದೊಳ್, ಆತ್ಮಾಂಗಮಂ, ಇರಿಯೆ- ಸೀಳಲು, ಭಕ್ತಿಯಿಂದಂ. ... ... ... ॥೫೨॥

ಶರಣ್, ಎಂದು, ಒಪ್ಪಿಸಿ, ದರೆಯೊಳ್, ಸೈಗೆಡೆದು-ಅಡ್ಡಬಿದ್ದು, ಇರೆ,ಶಂಭು, ಮೆಚ್ಚಿ, ಅಂದು,ಇರದೆ, ಸಾರೂಪ್ಯಮಂ, ಈಯೆ, ಮೆರೆದ, ಧೈರ್ಯಾಕರಂ, ಎನಿಸುವ,ಸೇದಿರಾಜನ, ಅನುಚರಂ-ಸೇವಕನು,ಅಪ್ಪಂ.

ಅನುದಿನಂ, ಈಶಲಾಂಛನಧರರ್ಕಳಂ, ಈಶ್ವರಂ, ಎಂಬ, ಭಕ್ತಿಭಾವನೆಯೊಡಗೂಡಿ, ತಾಂ, ಭಜಿಸುತಂ, ಪಿರಿದು ಏಳ್ಗೆಯಂ, ಆಳ್ದು, ರಾಜ್ಯಪಾಲನೆಯಂ, ಒಡರ್ಚುತೆ, ಇರ್ದು, ರಿಪುರಾಜರಂ, ಆಜಿಯೊಳ್- ಯುದ್ಧದಲ್ಲಿ, ಅಟ್ಟಿ, ಪೊಯ್ದು, ನೆಟ್ಟನೆ, ತಲೆಯ, ಒಟ್ಟಲಂ- ಸಮೂಹವನ್ನು, ಬಂಡಿಯೊಳ್, ತರಿಸಿ, ಈಕ್ಷಿಸುತೆ, ಇರ್ಪ, ಪೊಳ್ತನೊಳ್. ... ... ... ... ॥೫೪॥

ಮ ॥ ಸ್ರ ॥ ಕುನಿರೆಲ್ಮೂವತ್ತು ತೀವಿರ್ದಹಿತಶಿರದೊಳೊಂದುತ್ತಮಾಂಗಂ ಕಚೌ
ಘಂ । ನೆನವೆತ್ತಂ ರಕ್ತದಿಂ ಪತ್ತಿರೆ ಜಡಿದಲೆಯೋಲ್ತೋರೆ ಕಂಡಳ್ಕುತಂ ಕ ॥ ಳ್ಕನೆಜಾಂ
ಚತ್ಖಡ್ಗದಿಂದಾತ್ಮಶಿರಮನರಿದತ್ತೀಶ್ವರಂ ಮುಚ್ಚಿ ತಜ್ಜೀ । ವನಮಂ ಕೂರ್ತೆತ್ತಿ ಮೋ
ಕ್ಷಂಬಡೆದೆಸೆದ ಪಗಲ್ಬೋಳನಾಳ್ಪೆನೆಂದುಂ ॥ ... ... ... ॥೫೫॥

ಮ ॥ ಸ್ರ ॥ ನಿಜದಾಸೀಪುತ್ರನೊರ್ವಂ ಕೆಲಸಕಲಸುತೇಳ್ದೋಡಿ ಭಸ್ಮಾಕ್ಷಮಾ
ಲಾ । ಭಜನಂಬೆತ್ತಂಗದೊಳ್ಜಂಗಮತತಿಯೊಡನೇಳ್ತಂದು ಕಾಲ್ನೀಡಿ ಹಸ್ತಾಂ ॥ ಬು
ಜದಿಂ ಕರ್ಚಿ ವಾಗಳ್ಜಲಮನರೆಯದಾಕಾಂತೆ ಮಲ್ಲಂಗಡೀತಂ । ನಿಜದಿಂ ಮುಚ್ಚೀ
ಟಯಪ್ಪಾಸಿರಿಗಿಯಣುಗನಂದೇಳಿವಂ ಗೆಯ್ದೊಡಾಗಳ್ ॥ ... ... ॥೫೬॥

ಉ॥ ಜಂಗಮದಲ್ಲಿ ಪೂರ್ವಕುಲನಾಮಮನೆತ್ತಿದಳೀಕೆಯೆಂದು ತ । ನ್ನಂಗನೆಯೊಪ್ಪ
ಮಾಳ್ದ ನಳಿತೋಳ್ಗಳನಾಗಳೆ ಕಾಯ್ದು ಖಂಡಿಸು ॥ ತ್ತಂಗಜವೈರಿಯಂಪಡೆದು ಮುಚ್ಚಿ
ಸಿ ತತ್ಕೃಪೆಯಿಂ ಗಣತ್ವದೊ । ಳ್ಸಂಗತನಾದ ಭಕ್ತಕಲಿಕಂಬನ ಸಿಂಬಕನಪ್ಪನಾವಗಂ ॥

ಚಂ ॥ ಧರಣಿಯೊಳೊಪ್ಪುತಂ ಹರಚರಾಂಘ್ರಿಸಮರ್ಚನಸೌಖ್ಯದಿಂದೆ ತಾ । ನಿರೆ
ಪುರವೈರಿ ಬಂದೊಸೆದು ಜಂಗಮರೂಪದೊಳೊರ್ಮೆ ತನ್ನಭಾ ॥ ಸುರತರಮಾದ ಕಚ್ಚುಟ
ಮನೊಪ್ಪದೆ ಬೈತಿಡು ನಾಳೆ ಕೊಳ್ವೆನೆಂ । ದಿರಿಸುತದೃಶ್ಯಮಾಗಿಸುತಮಂ ಮುಗುಳ್ದೆಯ್ದು
ತೆ ಬೇಡೆ ನೋಡುತಂ ॥ ... ... ... ... ... ॥೫೮॥

---

ಕುನಿರೆಲ್ಮೂವತ್ತುತೀವಿರ್ದ- ಮೂವತ್ತು ಬೇಲಿಗಳಲ್ಲಿ ತುಂಬಿದ್ದ, ಅಹಿತಶಿರದೊಳ್, ಒಂದು ಉತ್ತಮಾಂಗಂ- ಒಂದು ತಲೆಯು, ಎತ್ತಂ, ರಕ್ತದಿಂ, ಕಚೌಘಂ- ಕೂದಲಗುಂಪು, ನೆನದು, ಪತ್ತಿ, ಇರೆ, ಜಡಿವಲೆಯೋಲ್- ಜಟಾಯುಕ್ತವಾದ ಶಿರಸ್ಸಿನಹಾಗೆ, ತೋರೆ, ಕಂಡು, ಅಳ್ಕುತಂ-ಭಯಪಡುತ್ತ, ಕಳ್ಕನೆ-ಜಾಗ್ರತೆಯಾಗಿ, ಚಂಚತ್ಖಡ್ಗದಿಂದ-ಹೊಳೆಯುವ ಕತ್ತಿಯಿಂದ, ಆತ್ಮಶಿರಮಂ, ಅರಿದು-ಕತ್ತರಿಸಿ, ಇತ್ತು, ಈಶ್ವರಂ, ಮುಚ್ಚಿ, ತಜ್ಜೀವನಮಂ, ಕೂರ್ತು, ಎತ್ತಿ ಮೋಕ್ಷಂಬಡೆದ, ಪಗಲ್ಬೋಳನ, ಆಳ್, ಎಂದುಂ, ಅಪ್ಪೆಂ.

ನಿಜದಾಸೀಪುತ್ರಂ, ಒರ್ವಂ, ಕೆಲಸಕೆ- ಕೆಲಸವಂ ಮಾಡುವದಕ್ಕೆ, ಅಲಸುತೆ- ಆಲಸ್ಯಪಡುತ್ತ, ಎಳ್ದು, ಓಡಿ, ಅಂಗದೊಳ್, ಭಸ್ಮಾಕ್ಷಮಾಲಾಭಜನಂಬೆತ್ತು- ವಿಭೂತಿ ರುದ್ರಾಕ್ಷಮಾಲೆಗಳ ಸೇವೆಯಂ ಹೊಂದಿ, ಅಂದರೆ ಧರಿಸಿ, ಜಂಗಮತತಿಯೊಡನೆ,ಎಳ್ತಂದು, ಕಾಲ್ನೀಡೆ, ಆಕಾಂತೆ, ಹಸ್ತಾಂಬುಜದಿಂ,ಕರ್ಚುವಾಗಳ್- ತೊಳೆಯುವ ಕಾಲದಲ್ಲಿ, ಜಲಮಂ, ಎರೆಯದೆ, ಈತಂ, ಮಲ್ಲಂಗಡ-ಮಲ್ಲನಲ್ಲವೇ? ನಿಜದಿಂ, ಮುಚ್ಚೀಟಯಾದ- ನಮ್ಮ ದಾಸಿಯಾದ, ಆಸಿರಿಗಿಯ, ಅಣುಗಂ- ಮಗನು, ಎಂದು, ಆಗಳ್,ಎಳದಂಗೆಯ್ದೊಡೆ-ತಿರಸ್ಕರಿಸಲು.

ಈಕೆ, ಜಂಗಮದಲ್ಲಿ, ಪೂರ್ವಕುಲನಾಮಮಂ, ಎತ್ತಿದಳ್, ಎಂದು, ತನ್ನ, ಅಂಗನೆಯ, ಒಪ್ಪಮಾಳ್ದ, ನಳಿತೋಳ್ಗಳಂ- ಕೋಮಲವಾದ ಬಾಹುಗಳನ್ನು, ಆಗಳೆ, ಕಾಯ್ದು- ಕೋಪಿಸಿ, ಖಂಡಿಸುತ್ತ, ಅಂಗಜವೈರಿಯಂ, ಪಡೆದು, ಮುಚ್ಚಿಸಿ, ತತ್ಕೃಪೆಯಿಂ, ಗಣತ್ವದೊಳ್, ಸಂಗತನಾದ, ಭಕ್ತಕಲಿಕಂಬನ, ಸಿಂಬಕಂ- ಆಶ್ರಿತನು, ಆವಗಂ, ಅಪ್ಪೆಂ. ... ... ... ... ॥೫೭॥

ತಾಂ, ಧರಣಿಯೊಳ್, ಒಪ್ಪುತಂ, ಹರಚರಾಂಘ್ರಿಸಮರ್ಚನಸೌಖ್ಯದಿಂದೆ, ಇರೆ, ಪುರವೈರಿ, ಒರ್ಮೆ, ಒಸೆದು, ಜಂಗಮರೂಪದೊಳ್, ಬಂದು, ತನ್ನ, ಭಾಸುರತರಮಾದ,ಕಚ್ಚುಟಮಂ- ಕೌಪೀನವನ್ನು, ಒಪ್ಪದೆ-ನೇರವಾಗಿ, ಬೈತಿಡು- ಮುಚ್ಚಿಡು, ನಾಳೆ, ಕೊಳ್ವೆಂ- ತೆಗೆದುಕೊಳ್ಳುವೆನು, ಎಂದು, ಇರಿಸುತೆ, ಅದೃಶ್ಯಮಾಗಿಸುತೆ-ಕಣ್ಣಿಗೆ ಕಾಣಿಸದುದನ್ನಾಗಿಮಾಡುತ್ತ, ಮುಗುಳ್ದು, ಎಯ್ದುತೆ,ಬೇಡೆ, ಅವಂ, ನೋಡುತಂ. ॥೫೮॥

ಉ॥ ಪೇಳಿಗೆಯಲ್ಲಿಕಾಣದೆ ಮಹಾಭಯಮಾಳ್ದಿರೆ ಕಂಡು ಕಾಡುತಂ । ಕೇಳೆನಗಿಂದಿದಕ್ಕೆ ಪಡಿಕಚ್ಚುಟ ಮಿರ್ದಪುದುಂಬರಂಗಳಂ ॥ ಪಾಳಿಯೊಳಿಂತಿದಕ್ಕೆ ಸರಿದೂಗಿ ಸಮರ್ಪಿಪುದೆಂದು ತಾಪಸಂ । ಪೇಳೆ ಕಡಂಗಿ ಕಚ್ಚುಟವನೊಂದೆಡೆ ದಟ್ಟಿಯೊಳಂಬರಂಗಳಂ॥

ಉ॥ ಒಂದೆಡೆ ದಟ್ಟಿಯಲ್ಲಿರಿಸಿ ತೂಗಿ ಸಮಾನಮದಾಗದಿರ್ದೊಡೋ । ರಂದದೆ ವಿತ್ತವಸ್ತುಚಯಮುಂ ಸತಿಯುಂ ಸುತನುಂ ನಿಜಾಂಗಮುಂ ॥ ಕುಂದದೆ ತೂಗಿ ತೋಡೆನಿಸಿ ಮೆಚ್ಚಿಸಿ ಶಂಭುವನೆಯ್ದಿ ಮೋಕ್ಷದೊ । ಳ್ನಿಂದು ವಿರಾಜಿಸಿರ್ಪಮರನೀತಿಯ ಬಂಟರ ಬಂಟನಪ್ಪೆನಾಂ । ... ... ... ... ... ... ॥೬೦॥

ಮತ್ತೇ॥ ಚರಲಿಂಗಾಘ್ರಿಸಮರ್ಚನಕ್ಕೆ ಧನಮೆಲ್ಲಂ ತೀರೆ ದಾರಿದ್ರ್ಯದಿಂ । ದಿರುತಂ ಪೆರ್ಮಳೆಯಲ್ಲಿ ವೃದ್ಧಚರವೇಷಂಬೆತ್ತು ಕಾಲಾರಿ ನ ॥ ಟ್ಟಿರುಳೊಳ್ಬಂದು ನಿಜಾಲಯಕ್ಕೆ ಚಳಿಯಿಂದಂ ಕಂಪಿಸುತ್ತಾರ್ತಿವೆ । ತ್ತಿರೆ ಕಿಚ್ಚಂ ಪಟುಗೆಯ್ದು ತನ್ನ ಗುಡಿಲಂ ಕೀಳ್ತಿಕ್ಕಿ ಪೊತ್ತಿಕ್ಕುತಂ ॥ ... ... ... ... .. ॥೬೧॥

ಚಂ॥ ಉರುಪಿದೊಡಲ್ಲಿಕಾದುರಿಯ ನಾಚಳಿಯಂಡಲೆಯಂ ತೆರಳ್ಚಿ ತ । ದ್ವರಮುನಿ ಭಕ್ತ ಕೇಳ್ಪಸಿದೆ ನಂಬಕಳಂ ತುರುಗಾವಸೊನುಗೆಂ ॥ ದಿರಿಸಿದುದುಳ್ಕೊಡಿಕ್ಕೆನೆ ನಿಜಾಂಗನೆ ಯಿಲ್ಲನೆ ಕೇಳ್ದು ನಟ್ಟಿರು । ಳ್ಸುರಿವತಿವೃಷ್ಟಿಯೊಳ್ತೆಳರ್ದು ತನ್ನಯಗರ್ದೆಗೆ ತೆಲ್ಪುನೆಲ್ಲಗಳಂ ॥ ... ... ... ... ... ॥೬೨॥

---

ಪೇಳಿಗೆಯಲ್ಲಿ- ಪೆಟ್ಟಿಗೆಯಲ್ಲಿ, ಕಾಣದೆ, ಮಹಾಭಯಮಾಳ್ದು, ಇರೆ, ಕಂಡು, ಕಾಡುತಂ- ಪೀಡಿಸುತ್ತ, ಕೇಳ್, ಎನಗೆ, ಇಂದು, ಇದಕ್ಕೆ, ಪಡಿಕಚ್ಚುಟಂ- ಪ್ರತಿಯಾದಕೌಪೀನವು, ಇರ್ದಪುದು, ಇದಕ್ಕೆ, ಅಂಬರಂಗಳಂ, ಪಾಳಿಯೊಳ್- ಲೈನಾಗಿ, ಸರಿದೂಗಿ- ತೂಕಮಾಡಿ, ಎಂತುಸಮರ್ಪಿಪುದು? ಎಂದು, ತಾಪಸಂ, ಪೇಳೆ, ಕಡಂಗಿ- ಕುತೂಹಲಪಟ್ಟು, ಕಚ್ಚುಟಮಂ, ಒಂದೆಡೆದಟ್ಟಿಯೊಳ್- ಒಂದುಕಡೆಯತಕ್ಕಡಿತಟ್ಟೆಯಲ್ಲಿ, ಅಂಬರಂಗಳಂ. ... ... ... ... ... ॥೫೯॥

ಒಂದೆಡೆದಟ್ಟಿಯಲ್ಲಿ,ಇರಿಸಿ, ತೂಗಿ, ಅದು, ಸಮಾನಂ, ಆಗದೆ, ಇರ್ದೊಡೆ,ಓರಂದದೆ- ಒಂದೇರೀತಿಯಾಗಿ, ವಿತ್ತವಸ್ತುಚಯಮುಂ- ಹಣ ಪದಾರ್ಥಗಳಗುಂಪನ್ನು, ಸತಿಯುಂ, ಸುತನಂ, ನಿಜಾಂಗಮುಂ, ಕುಂದದೆ, ತೂಗಿ, ತೋಡು- ಸಮವು, ಎನಿಸಿ, ಶಂಭುವಂ, ಮೆಚ್ಚಿಸಿ, ಎಯ್ದಿ, ಮೋಕ್ಷದೊಳ್, ನಿಂದು, ವಿರಾಜಿಸಿ, ಇರ್ಪ, ಅಮರನೀತಿಯ, ಬಂಟರ, ಬಂಟಂ, ಆಂ, ಅಪ್ಪೆಂ. ... ... ... ॥೬೦॥

ಚರಲಿಂಗಾಂಘ್ರಿಸಮರ್ಚನಕ್ಕೆ, ಧನಂ, ಎಲ್ಲಂ, ತೀರೆ, ದಾರಿದ್ರ್ಯದಿಂದೆ, ಇರುತಂ, ಕಾಲಾರಿ- ಯಮನ ವೈರಿಯಾದ ಈಶ್ವರನು, ಪೆರ್ಮಳೆಯಲ್ಲಿ, ವೃದ್ಧಚರವೇಷಂಬೆತ್ತು- ಮುದಿಜಂಗಮನ ವೇಷವಂಪೊಂದಿ, ನಟ್ಟಿರುಳೊಳ್- ಅರ್ಧರಾತ್ರಿಯಲ್ಲಿ, ನಿಜಾಲಯಕ್ಕೆ, ಬಂದು, ಚಳಿಯಿಂದು, ಕಂಪಿಸುತ್ತೆ, ಆರ್ತಿವೆತ್ತು- ಬಾಧಾವಿಶಿಷ್ಟನಾಗಿ,ಇರೆ, ಕಿಚ್ಚಂ- ಬೆಂಕಿಯನ್ನು, ಪಟುಗೆಯ್ದು- ಹೆಚ್ಚಿಸಿ, ತನ್ನ, ಗುಡಿಲಂ- ಗುಡಿಸಲನ್ನು, ಕೀಳ್ತು, ಇಕ್ಕಿ, ಪೊತ್ತಿಕ್ಕುತಂ. ... ... ... ... ॥೬೧॥

ಉರುಪಿದೊಡೆ- ಹತ್ತಿಸಲಾಗಿ, ತದ್ವರಮುನಿ, ಅಲ್ಲಿ, ಉರಿಯಂ, ಕಾದು, ಆ ಚಳಿಯ, ಅಂಡಲೆಯಂ- ಬಾಧೆಯನ್ನು, ತೆರಳ್ಚಿ- ಹೋಗಲಾಡಿಸಿಕೊಂಡು, ಭಕ್ತ ! ಕೇಳ್, ಪಸಿದೆಂ, ತುರುಗಾವಸೊನುಗೆ-ದನವಂ ಕಾಯುವವಮಗನಿಗೆ, ಎಂದು, ಇರಿಸಿದುದು, ಅಂಬಕಳಂ- ನಿತ್ತಂಗಳು, ಉಳ್ಕೊಡೆ, ಇಕ್ಕು, ಎನೆ, ನಿಜಾಂಗನೆ, ಇಲ್ಲ, ಎನೆ, ಕೇಳ್ದು, ನಟ್ಟಿರುಳ್, ಸುರಿವ, ಅತಿವೃಷ್ಟಿಯೊಳ್, ತನ್ನಯ, ಗರ್ದೆಗೆ, ತಳರ್ದು, ತೆಲ್ಪ- ತೇಲಾಡುವ, ನೆಲ್ಗಳಂ- ಬತ್ತಗಳನ್ನು. ... ... ... ... ॥೬೨॥

ಕಂ ॥ ತಂದು ಪುರಿದೊಲ್ದು ಮಿಡಿದವ । ರಂ ದೋದನವೆಸಗಿ ತಪ್ಪದುಣಲಿತ್ತೊಲ್ದಿ
ಸು ॥ ತ್ತಂ ದಭವನ ನುರುಮುಕ್ತಿಗೆ । ಸಂದೆಸೆವೆಳೆಯಾಂಡ ಗುಡಿಯ ಮಾರನಮಗನಾಂ ॥

ಉ ॥ ದಾನವಿಧಾನದಿಂ ನಿಗಮಸಮ್ಮತಿಯಿಂ ಸಲೆ ತೋರ್ಪದೃಷ್ಟಸಂ । ತಾನದಿ
ನಾಗಳುಂ ಭವಿಗಳಂ ಶಿವಭಕ್ತರನೊಲ್ದು ಮಾಡುತಂ ॥ ತಾ ನೊಸೆದಾಳ್ದ ಧಾರುಣಿಯೊ
ಳೊಲ್ಲದರಂ ತರಿದಿಕ್ಕುತಂ ಪ್ರೊದ । ಳ್ದೀನಿಯಮಂಕರಂತನಗೆ ಶಾಶ್ವತಮಾಗಿರೆ ಬಾಳ್ವ ಕಾ
ಲದೊಳ್ ॥ ... ... ... ... ... ... ॥೬೪॥

ಕಂ॥ ನಿಕ್ಕುವ ಮೀತನ ಪರಿಯಂ । ಮೊಕ್ಕಳ ಮಾನರಿವೆ ನೆಂದು ಚಂದ್ರಧರಂತಾ॥
ಳ್ದೊಕ್ಕಲಿಗವರಿಜ ನಾತ್ಮಪ್ರ । ರಕ್ಕೆಯ್ದುತೆ ಪ್ರೊರೆಗೆ ಬಂದು ನಿಂದಸವಸದಿಂ ॥ ॥೬೫॥

ಕಂ ॥ ಬಿಟ್ಟ ಪ್ರೊರೆ ತೆರಿಗೆ ಸುಂಕಂ । ಕೊಟ್ಟಣ ಮಾಕಾಣ್ಕೆ ಖಾಣ ಕಡ್ಡಾಯ ಮೊ
ಳಂ ॥ ಕೊಟ್ಟ ತಳರೆಂದು ನಿನ್ನವ । ರಟ್ಟ ಕರು ಕಟ್ಟ ಕುಟ್ಟ ಬಾಧಿಪರೆನ್ನಂ ॥೬೬॥

ಚಂ ॥ ನಿನಗಿದು ಧರ್ಮಮೇ ನೃಪತಿ ಯೆಂದಳಲಿಂ ಮೊರೆಯಿಕ್ಕೆ ನೋಡಿ ಕಾ । ಪಿನವ
ರ ನೆಂತಿವಂ ಕಳೆಯುತೆಮ್ಮಡಿಗೆಯ್ದಿದ ನೆಂದು ವಿಸ್ಮಯಂ ॥ ಜನಿಯಿಸೆ ಗೌಡ ಕೇಳ್ನಿನಗೆ
ಕೊಟ್ಟಪೆ ನೀಗಳೆ ಸರ್ವಮಾನ್ಯಮಂ । ಘನಶಿವಭಕ್ತನಾಗಿರೆನೆ ಕೇಳೆಲೆ ಭೂಪತಿ ಯೆಮ್ಮ
ಜಾತಿಯೊಳ್ ॥ ... ... ... ... ... ... ॥೬೭॥

ಮತ್ತೇ ॥ ಶಿವಭಕ್ತಿಸ್ಥಿತಿಯಾಂತು ಬಾಳ್ಪರಣ ಮಿಲ್ಲಾಂ ಭಕ್ತನೆಂತಪ್ಪೆ ನಂ । ಜು

---

ತಂದು, ಪುರಿದು, ಒಲ್ದು, ಮಿಡಿದು- ಕುಟ್ಟಿ, ಅವರ್, ಅಂದು, ಓದನವೆಸಗಿ- ಅನ್ನವಂಮಾಡಿ, ತಪ್ಪದೆ- ತಪ್ಪದೆ, ಉಣಲಿತ್ತು- ಉಣ್ಣುವದಕ್ಕೆ ಕೊಟ್ಟು, ಅಂದು ಅಭವನಂ, ಒಲಿಸುತ್ತ, ಉರುಮುಕ್ತಿಗೆ, ಸಂದು, ಎಸೆವ, ಎಳೆಯಾಂಡಗುಡಿಯುಮಾರನ, ಮಗಂ; ಆಂ. ... ... ॥೬೩॥

ತಾಂ, ಒಸೆದು, ಆಳ್ದ, ಧಾರುಣಿಯೊಳ್, ದಾನವಿಧಾನದಿಂ- ಕೊಡುವದರಿಂದ, ನಿಗಮಸಮ್ಮತಿಯಿಂ- ವೇದದ ಒಡಂಬಡಿಕೆಯಿಂದ, ಸಲೆ, ತೋರ್ಪ, ಅದೃಷ್ಟಸಂತಾನದಿಂ, ಆಗಳುಂ, ಭವಿಗಳಂ, ಒಲ್ದು, ಶಿವಭಕ್ತರಂ, ಮಾಡುತೆ, ಒಲ್ಲದರಂ- ಶಿವಭಕ್ತರಾಗುವದಕ್ಕೆ ಸಮ್ಮತಿಸದಿದ್ದವರನ್ನು, ತರಿದು, ಇಕ್ಕುತಂ, ಪ್ರೊದಳ್ದ, ಈ ನಿಯಮಂ, ಕರಂ, ತನಗೆ, ಶಾಶ್ವತಂ, ಆಗಿ, ಇರೆ, ಬಾಳ್ವ, ಕಾಲದೊಳ್. ... ॥೬೪॥

ನಿಕ್ಕುವಂ, ನಿಶ್ಚಲವಾದ, ಈತನ, ಪರಿಯಂ, ಮೊಕ್ಕಳಂ- ಅಧಿಕವಾಗಿ, ಆಂ, ಅರಿವೆಂ, ಎಂದು, ಚಂದ್ರಧರಂ, ಒಕ್ಕಲಿಗವರಿಜಂ- ಒಕ್ಕಲಿಗನಾಕಾರವನ್ನು, ತಾಳ್ದು, ಆತ್ಮಪ್ರರಕ್ಕೆ, ಎಯ್ದುತೆ, ಪ್ರೊರೆಗೆ- ಸಮೀಪಕ್ಕೆ, ಬಂದು, ನಿಂದು, ಅಸವಸದಿಂ- ಬೇಗನೆ. ... ... ... ॥೬೫॥

ಬಿಟ್ಟ, ಪೊರೆ, ತೆರಿಗೆ, ಸುಂಕಂ, ಕೊಟ್ಟು, ಅಣಂ, ಆಕಾಣ್ಕೆ, ಖಾಣ, ಕಡ್ಡಾಯಗಳಂ, ಕೊಟ್ಟು, ತಳರ್- ಹೋಗು, ಎಂದು, ನಿನ್ನವರ್, ಅಟ್ಟಿ, ಕರಂ- ಅತ್ಯಂತವಾಗಿ, ಕಟ್ಟಿ, ಕುಟ್ಟಿ, ಎನ್ನಂ, ಬಾಧಿಪರ್.

ನೃಪತಿ! ನಿನಗೆ, ಇದು, ಧರ್ಮಮೇ- ಮಾಡತಕ್ಕಕಾರ್ಯವೇ? ಎಂದು; ಅಳಲಿಂ- ದುಃಖದಿಂದ, ಮೊರೆಯಿಕ್ಕೆ- ದೂರನ್ನು ಹೇಳಿಕೊಳ್ಳಲು, ಕಾಪಿನವರಂ- ಕಾವಲುಗಾರರನ್ನು, ನೋಡಿ, ಇವಂ, ಕಳೆಯುತೆ- ಅಮ್ಮ ಕಾವಲುಗಳನ್ನು ಕಳೆದು, ಎಮ್ಮ; ಎಡೆಗೆ, ಎಂತು, ಎಯ್ದಿದಂ? ಎಂದು, ವಿಸ್ಮಯಂ, ಜನಿಯಿಸೆ, ಗೌಡ! ಕೇಳ್, ನಿನಗೆ, ಈಗಳೆ, ಸರ್ವಮಾನ್ಯವಂ, ಕೊಟ್ಟಪೆಂ, ಘನಶಿವಭಕ್ತಂ, ಆಗಿ, ಇರ್, ಎನೆ, ಎಲೆಭೂಪತಿ! ಕೇಳ್, ಎಮ್ಮ, ಜಾತಿಯೊಳ್. ... ... ... ... ॥೬೭॥

ಶಿವಭಕ್ತಿಸ್ಥಿತಿಯಾಂತು, ಬಾಳ್ವರ್, ಅಣಂ- ಸ್ವಲ್ಪವೂ, ಇಲ್ಲ, ಆಂ, ಎಂತು, ಭಕ್ತಂ, ಅಪ್ಪೆಂ? ಈ

ವೆ ನೀಭಕ್ತಿಗೆನುತ್ತವಂ ನುಡಿಯೆ ನಿನ್ನಂ ಬಾಳಿಪೆಂ ನಂಬು ಶಾಂ ||ಭವದೀಕ್ಷಾವಿಧಿಯಾಂತು ಬಾಳ್ನಿನಗೆ ಧಾನ್ಯದ್ರವ್ಯರಾಜ್ಯಂಗಳಂ | ಜವದಿಂ ದೀವೆ ನೆನುತ್ತೊಡಂಬಡಿಸುತಾತಂ ಕೇಳದಿರ್ಪಂದಮಂ || ... ... ... ... ... ||೬೮||

ಉ|| ಕಂಡತಿಕೋಪದಿಂ ಜಡಿದು ಕೂರಸಿಯಂ ಪೊಡೆದಿಕ್ಕೆ ಭೋಂಕನಾ|ಖಂಡಶಶಾಂಕಮೌಳಿ ನಿಜರೂಪಮನಾಳ್ದು ಪೊದಳ್ದು ಮಚ್ಚಿ ಭೂ || ಮಂಡಲಪಾಲ ಬೇಡು ವರಮಿತ್ತಪೆ ನೆಂದೆನೆ ಬೇಡ ತದ್ವರಂ|ಮಂಡಿತಲಿಂಗಮಂ ತಳೆ ನಿಜಾಂಗದೊಳಂಗಜಮಾನಮರ್ದನ||

ಕಂ || ಎಂದು ಶಿವಲಿಂಗಮಂ ಬಿಡ | ದಿಂದುಧರಂ ಗೊಲ್ದು ಧರಿಸಿ ಗಣಸಂಕುಳದೊ || ಳ್ಸಂದ ಗಣನಾಥಭಕ್ತನ | ಚೆಂದಳಿರಡಿಗೆರ್ಪ ನಾಂಪ ಕಿಂಕರ ನಪ್ಪೆಂ || ... ||೭೦||

ಚಂ || ಮಿಸುಪ ಚಿದಂಬರಾಖ್ಯಪುರದೊಳ್ಶಿವಲಿಂಗನಿಕೇತನಕ್ಕೆ ಬಂ | ದೊಸೆದಭಿವಂದಿಸುತ್ತೆ ಸಲೆ ಪೋಗುವ ನೇಮದೊಳೊಪ್ಪುತೊಂದಿರು || ಳ್ಮಸಗಿದ ಮರ್ಬಿನೊಳ್ಪುರಹರಾಲಯದಿಂ ಮನೆಗೆಯ್ದುವಾಗಳಾ | ಗಸಕಡರ್ದೊಪ್ಪುವುಪ್ಪರಿಗೆಯಿಂ ಗಣಿಕಾಂಗನೆ ಯೆಂಜಲಂಬುವಂ || ... ... .. ... ... ||೭೧||

ಉತ್ಸಾಹವೃತ್ತಂ|| ಮೇಲೆ ಚೆಲ್ಲೆ ಶೀಕರಾಳಿಪಾರೆ ನೀಲಕಂಠ ಕಂ | ಕಾಲಪಾಣಿಯೆಂಬ ಸೊಲ್ಲ ನಾಲಿಸುತ್ತೆ ಭೀತಿಯಿಂ || ಬಾಲೆ ಬೇಗ ಬಂದು ಬೀದಿ ಗೊಲ್ದು ವಂದಿಸುತ್ತೆ ತ| ನ್ನಾಲಯಕ್ಕೆ ಕೊಂಡು ಪೋಗಿ ದಿವ್ಯಗಂಧತೈಲಮಂ || ... ... ||೭೨||

---

ಭಕ್ತಿಗೆ, ಅಂಜಾವೆಂ, ಎನುತ್ತೆ, ಅವಂ, ನುಡಿಯೆ, ನಿನ್ನಂ, ಬಾಳಿಪೆಂ- ಬದುಕಿಸುವೆನು; ನಂಬು; ಶಾಂಭವದೀಕ್ಷಾವಿಧಿಯಾಂತು- ಶಿವದೀಕ್ಷಾಸಂಸ್ಕಾರವಂಪೊಂದಿ, ಬಾಳ್, ನಿನಗೆ, ಧಾನ್ಯದ್ರವ್ಯರಾಜ್ಯಂಗಳಂ, ಜವದಿಂದೆ, ಈವೆಂ, ಎನುತ್ತೆ, ಒಡಂಬಡಿಸುತೆ, ಆತಂ, ಕೇಳದೆ, ಇರ್ಪ, ಅಂದಮಂ. ... ... ||೬೮||

ಕಂಡು, ಅತಿಕೋಪದಿಂ, ಕೂರಸಿಯಂ- ತೀಕ್ಷ್ಣವಾದಕತ್ತಿಯನ್ನು, ಜಡಿದು- ಅಳ್ಳಾಡಿಸಿ, ಪೊಡೆದು, ಇಕ್ಕೆ, ಭೋಂಕನೆ- ಬೇಗನೆ, ಅಖಂಡಶಶಾಂಕಮೌಳಿ, ನಿಜರೂಪಮಂ, ಆಳ್ದು, ಪೊದಳ್ದು, ಮಚ್ಚಿ, ಭೂಮಂಡಲಪಾಲ, ವರಮಿತ್ತಪೆಂ; ಬೇಡು; ಎಂದೆನೆ, ಅಂಗಜಮಾನಮರ್ದನ- ಮನ್ಮಥನ ಗರ್ವವನ್ನು ನಾಶಮಾಡಿದ ಶಿವನೇ! ತದ್ವರಂ, ಬೇಡ; ನಿಜಾಂಗದೊಳ್-ತನ್ನ ಶರೀರದಲ್ಲಿ, ಮಂಡಿತಲಿಂಗಮಂ- ಅಲಂಕರಿಸಲ್ಪಟ್ಟ ಶಿವಲಿಂಗವನ್ನು, ತಳೆ- ಧರಿಸು. ... ... ... ... ||೬೯||

ಎಂದು, ಬಿಡದೆ, ಇಂದುಧರಂಗೆ, ಒಲ್ದು, ಶಿವಲಿಂಗಮಂ, ಧರಿಸಿ, ಗಣಸಂಕುಳದೊಳ್, ಸಂದ, ಗಣನಾಥಭಕ್ತನ, ಚೆಂದಳಿರಡಿಗೆರ್ಪಂ- ಕೆಂಪು ಚಿಗುರಿನಂತಿರುವ ಪಾದದ ಕೆರವನ್ನು, ಆಂಪ-ಧರಿಸುವ, ಕಿಂಕರಂ- ಆಳು, ಅಪ್ಪೆಂ. ... ... ... ... ... ||೭೦||

ಮಿಸುಪ, ಚಿದಂಬರಾಖ್ಯಪುರದೊಳ್, ಶಿವಲಿಂಗನಿಕೇತನಕ್ಕೆ, ಬಂದು, ಒಸೆದು- ಪ್ರೀತಿಸಿ, ಅಭಿವಂದಿಸುತ್ತೆ, ಸಲೆ, ಪೋಗುವ, ನೇಮದೊಳ್- ವ್ರತದಿಂದ, ಒಪ್ಪುತೆ, ಒಂದಿರುಳ್- ಒಂದು ರಾತ್ರಿಯಲ್ಲಿ, ಮಸಗಿದ- ಅಭಿವೃದ್ಧವಾದ, ಮರ್ಬಿನೊಳ್, ಪುರಹರಾಲಯದಿಂ, ಮನೆಗೆ, ಎಯ್ದುವಾಗಳ್, ಆಗಸಕ್ಕೆ, ಅಡರ್ದು, ಒಪ್ಪುವ, ಉಪ್ಪರಿಗೆಯಿಂ, ಗಣಿಕಾಂಗನೆ- ಸೂಳೆಯು, ಎಂಜಲ, ಅಂಬುವಂ. ... ... ||೭೧||

ಮೇಲೆ, ಚೆಲ್ಲೆ, ಶೀಕರಾಳಿ- ತುಂತುರುಹನಿಯ ಪಙ್ಕ್ತಿಯು, ಪಾರೆ- ಮೇಲೆ ಹಾರಲು, ನೀಲಕಂಠ! ಕಂಕಾಲಪಾಣಿ- ವಿಷ್ಣುವಿನ ದೇಹದ ಮೂಳೆಯೇ ಹಸ್ತದಲ್ಲುಳ್ಳವನೇ! ಎಂಬ, ಸೊಲ್ಲಂ- ಮಾತನ್ನು, ಆಲಿಸುತೆ, ಬಾಲೆ, ಭೀತಿಯಿಂ, ಬೇಗ, ಬೀದಿಗೆ, ಬಂದು, ಒಲ್ದು, ವಂದಿಸುತ್ತೆ, ತನ್ನ, ಆಲಯಕ್ಕೆ, ಕೊಂಡು, ಪೋಗಿ, ದಿವ್ಯಗಂಧತೈಲಮಂ ... ... ... ... ... ||೭೨||

ಉ ॥ ಪೂಸಿ ವಿಳಾಸದಿಂದೆ ಜಳಕಂಬುಗಿಸುತ್ತೆ ಸುಗಂಧಚಂದನಂ । ಪೂಸರಮಂ
ಬರಾಭರಣಮೆಂಬಿವ ನರ್ಪಿಸಿ ದಿವ್ಯವೀಟಕಾ ॥ ವಾಸಿತವಕ್ತ್ರನಂ ನೆಗಳ್ದ ಸೈರಿಪುದೆನ್ನಪ
ರಾಧಮಂ ಭವ । ದ್ದಾಸಿಗಡಾನೆನುತ್ತೆರಗಿ ಬೀಳ್ಕೊಡೆ ಬರ್ಪಿನ ಮಾತ್ಮಗೇಹದೊಳ್ ॥೩೩॥
ಚಂ ॥ ಪ್ರಿಯೆ ಮಿಗೆ ನೋಡಿ ತನ್ನ ಪೊಸವೇಷಮ ನಕ್ಕಟ ಪೊಳ್ತು ಪೋದುದ ।
ನ್ನೆಯುಮ ನದೆಂತುಸೈರಿಪೆ ನಿದೆತ್ತಣದುಜ್ವಳವೇಷದೇಳ್ಗೆ ಯೆ ॥ ಲ್ಲಿಯ ದಡರ್ದಂಗರಾಗದ
ನಿಗಂಪೊಸೆದಾವಳೊ ಳಿರ್ದು ಬಂದೆ ನಿ । ನ್ನಯ ಬತಮಿಂದು ಕಾಂತ ಫಲಮಾದುದು ನನ್ನಿ
ಯೆನುತ್ತೆ ಕಾಯ್ಪಿನಿಂ ॥ ... ... .. .. ... ॥೩೪॥
ಮತ್ತೇ ॥ ಮಣಿಮಂಚಾಗ್ರಕೆ ಬಾರದಿರ್ಪ ಬಗೆಗಂಡೋರಂತೆ ಬಾ ರೆಂದು ಸಂ । ದ
ಣಿಪಳ್ಕರ್ಮಿಗೆ ತತ್ಕರಂಬಿಡಿದು ತಾಂ ಮೇಲ್ವಾಯೆ ನೀಂ ಮುಟ್ಟದಿ ॥ ರ್ಫಣಿರಾಡ್ಭೂಷಣ
ನಾಣೆ ಯೆಂದೆನೆ ಕರಂಕೈವಿಟ್ಟು ತತ್ಕಾಂತೆಯೊ । ಳ್ಪ್ರಣಯಂ ಮಾಣ್ದುಳಿದಿರ್ದು ವತ್ಸರ
ಮದೆಂಭತ್ತಾಗುತಿರ್ಪನ್ನೆಗಂ ॥ ... ... ... ... ॥೩೫॥
ಮ ॥ ಸ್ರ ॥ ಹರ ನಾಗಳ್ಜಂಗಮಾಕಾರಮನೆ ತಳೆದು ತನ್ನಿಷ್ಟೆಗೊಲ್ದಿಯ್ದುತಂಕ ।
ರ್ಪರ ಮೊಂದಂ ಜೋಕೆಯಿಂ ಬೈತಿಡುವುದೆನುತೆ ಕೊಟ್ಟೈದುತಂ ಮಾಯಮಪ್ಪಂ ॥ ತಿರೆ ಗೆ

ಪೂಸಿ- ದೇಹಕ್ಕೆ ಲೇಪಿಸಿ, ವಿಳಾಸದಿಂದೆ, ಜಳಕಂಬುಗಿಸುತ್ತೆ- ಸ್ನಾನಮಂ ಮಾಡಿಸುತ್ತ, ಸುಗಂಧ ಚಂದನಂ, ಪೂಸರಂ- ಹೂವಿನ ಮಾಲೆ, ಅಂಬರಾಭರಣಂ- ವಸ್ತ್ರ ಒಡವೆ, ಎಂಬ, ಇವಂ, ಅರ್ಪಿಸಿ, ದಿವ್ಯ ವೀಟಿಕಾವಾಸಿತವಕ್ತ್ರನಂ- ಶ್ರೇಷ್ಠವಾದ ವೀಳಯದಿಂದ ಪರಿಮಳಗೊಳಿಸಲ್ಪಟ್ಟ ಮುಖವುಳ್ಳವನನ್ನಾಗಿ, ನೆಗಳ್ದ, ಎನ್ನ, ಅಪರಾಧಮಂ, ಸೈರಿಪುದು, ಆಂ, ಭವದ್ದಾಸಿಗಡಾ- ನಿನ್ನ ಸೇವಕಿಯಲ್ಲವೇ ? ಎನುತ್ತ, ಎರಗಿ- ನಮಸ್ಕರಿಸಿ, ಬೀಳ್ಕೊಡೆ- ಕಳುಹಿಸಿಕೊಡಲು, ಬರ್ಪಿನಂ- ಬರುವಲ್ಲಿ, ಆತ್ಮಗೇಹದೊಳ್- ತನ್ನ ಮನೆಯಲ್ಲಿ. ... ... ... ... ... ॥೩೩॥

ತನ್ನ, ಪೊಸವೇಷಮಂ, ಪ್ರಿಯೆ, ಮಿಗೆ, ನೋಡಿ, ಪೊಳ್ತು- ಹೊತ್ತು, ಪೋದುದು, ಅನ್ನೆಯುಮಂ, ಅದೆಂತುಸೈರಿಪೆಂ ? ಇದು, ಉಜ್ವಳವೇಷದ, ಏಳ್ಗೆ, ಎತ್ತಣದು ? ಅಡರ್ದ, ಅಂಗರಾಗದ- ಅನುಲೇಪನ ದ್ರವ್ಯದ, ಇನಿಗಂಪು- ಸೊಗಸಾದ ವಾಸನೆಯು, ಎಲ್ಲಿಯದು ? ಆವಳೊಳ್, ಇರ್ದು, ಬಂದೆ ? ಕಾಂತ! ನಿನ್ನಯ, ಬತಂ- ವ್ರತವು, ಇಂದು, ಫಲಂ- ಫಲವಿಶಿಷ್ಟವಾದದ್ದು, ಆದುದು, ನನ್ನಿ- ನಿಶ್ಚಯ, ಎನುತ್ತೆ, ಕಾಯ್ಪಿನಿಂ- ಕೋಪದಿಂದ. ... ... ... ... ... ॥೩೪॥

ಮಣಿಮಂಚಾಗ್ರಕೆ- ರತ್ನಖಚಿತವಾದ ಮಂಚದ ಮೇಲಕ್ಕೆ, ಬಾರದಿರ್ಪ, ಬಗೆಗಂಡು- ಮನಸ್ಸಂನೋಡಿ, ಓರಂತೆ- ಸುಮ್ಮನೆ, ಬಾರ್, ಎಂದು, ಸಂದಣಿಪ- ಗುಂಪಾಗುವ, ಅಳ್ಕರ್- ಪ್ರೀತಿಯು, ಮಿಗೆ, ತತ್ಕರಂಬಿಡಿದು, ತಾಂ, ಮೇಲ್ವಾಯೆ- ಮೇಲೆ ಬೀಳಲು, ನೀಂ, ಫಣಿರಾಡ್ಭೂಷಣನ- ಆದಿಶೇಷನೇ ಆಭರಣವಾಗುಳ್ಳ ಈಶ್ವರನ, ಆಣೆ, ಆಜ್ಞೆಯಾದಂತೆ, ಮುಟ್ಟದಿರ್- ಮುಟ್ಟಬೇಡ, ಎಂದು, ಎನೆ, ಕರಂ, ಕೈವಿಟ್ಟು- ಕೈಯ್ಯನ್ನು ಬಿಟ್ಟು, ತತ್ಕಾಂತೆಯೊಳ್, ಪ್ರಣಯಂಮಾಣ್ದು- ಪ್ರೀತಿಯಂ ಬಿಟ್ಟು, ಉಳಿದು, ಅವಳಂ ತ್ಯಜಿಸಿ, ಅದುವತ್ಸರಂ-ಆವರ್ಷವು, ಎಂಭತ್ತು, ಆಗುತೆ, ಇರ್ಪನ್ನೆಗಂ- ಇರುವಲ್ಲಿ. ... ॥೩೫॥

ಆಗಳ್, ಹರಂ, ಜಂಗಮಾಕಾರಮನೆ, ತಳೆದು, ತನ್ನಿಷ್ಟೆಗೆ- ಅವನ ಶಪಥನಿರ್ವಹಣಕ್ಕೆ, ಒಲ್ದು, ಎಯ್ದುತಂ- ಬರುತ್ತ, ಒಂದಂಕರ್ಪರಮಂ- ಭಿಕ್ಷನನ್ನೆತ್ತುವಪಾತ್ರೆಯೊಂದನ್ನು, ಜೋಕೆಯಿಂ, ಬೈತಿಡುವುದು- ಬಚ್ಚಿಡುವದು, ಎನುತೆ, ಕೊಟ್ಟು, ಐದುತಂ- ಹೋಗುತ್ತ, ಅದಂ- ಆ ಪಾತ್ರೆಯನ್ನು, ಮಾಯಮಪ್ಪಂತಿರೆ

ಯೊಳ್ದೀರಂತೆವಂ ತಾಂ ಮರುದಿನ ಮೊಸೆದೇಳ್ತಂದು ತಾರೆಂದು ಬೇಡು । ತ್ತಿರೆ ಬೇಗಂ ಮು
ನ್ನ ಬೈತಿಟ್ಟೆಡೆಯೊಳರಸುತಂ ಕಾಣದುದ್ಭೀತಿಯಿಂದಂ ॥ ... ... ॥೭೬॥

ಮ ॥ ಸ್ರ ॥ ನಡುಗುತ್ತಿರ್ಪನ್ನ ಮೇಂ ಪೋದುದೆ ಕಿತವ ಲಸತ್ಕರ್ಪರಂ ಜೋಳಿಯಿಂ
ಬೈ । ತಿಡು ನೀನೆಂದಿತೊತ್ತಡಂ ವಂಚಿಪುದೆ ಜಗದೊಳಾರ್ಮೆಚ್ಚುವರ್ನಿನ್ನ ನಿಲ್ಲಂ ॥ ದೊ
ಡೆ ಸೊಲ್ಲಂ ನಂಬಲೆಂತಕ್ಕುಮೊ ಕುಡು ಕುಡು ಮತ್ಪಾತ್ರೆಯಂ ನಿನ್ನ ನೆಂತುಂ । ಬಿಡೆ ನೆಂ
ದಾಸ್ಫೋಟಿಸುತ್ತಂ ಸಿಡಿದಿಡು ತಿದಿರೊಳ್ತರ್ಜನಂಗೆಯ್ವುತಾಗಳ್ ॥ ... ॥೭೭॥

ಮ ॥ ಸ್ರ ॥ ಶಪಥಂಗೆಯ್ದಲ್ಲದೆಂತುಂ ಬಿಡೆ ನೆನುತಘಟಂ ಈರ್ವರಂ ತೀರ್ಥವಾರಿ ।
ಸ್ನಪನಂಗೆಯ್ಸುತ್ತೆ ವಾರ್ಧಿಕ್ಯಮ ನುಳಿದೊಲವಿಂ ಯೌವನಂಗೊಟ್ಟು ಕಾರು ॥ ಣ್ಯಪರಂ
ಪ್ರತ್ಯಕ್ಷ ನಾಗುತ್ತಿಳೆಯೊಳಿರಿಸುತೆಂಭತ್ತು ಸಂವತ್ಸರಂ ಸೌ । ಖ್ಯಪದಂ ಕೈಗಣ್ಮೆ ಮೇ
ಣ್ಪುಷ್ಪಕದೊಳಿರಿಸಿ ಕೊಂಡೊಯ್ವುತಂ ಕೂರ್ಮೆಯಿಂದಂ ॥ ... ... ॥೭೮॥

ಕಂ ॥ ಪರಮಗಣಪದಮ ನಾಪುರ । ಹರ ನೀಯೆ ತದೀಯಭುವನದೊಳ್ಮೆರೆದ ಲ
ಸ ॥ ತ್ತಿರುನೀಲಕಂಠಮಾಹೇ । ಶ್ವರಂಗೆ ಡಿಂಗರಿಗ ನಪ್ಪೆ ನಾನನವರತಂ ॥ ... ॥೭೯॥

ಮತ್ತೇ ॥ ಮುದದಿಂ ವಿಕ್ರಮಚೋಳ ನೊರ್ಮೆ ಗುಡಿಯಂ ಸೌವರ್ಣದಿಂ ಮಾಡುತಂ ।
ತದರೊಳ್ಶಂಕರನಂ ಪ್ರತಿಷ್ಠಿಸೆ ಕರಂ ಕಂಡಂತುಟಾತ್ಮೀಯಹೃ ॥ ತ್ಪದದೊಳ್ದೇಗುಲ

---

ಗೆಯ್ದು- ಕಾಣದಹಾಗೆ, ಮಾಡಿ, ಒರಂತೆ, ಮರುದಿನಂ- ಬೆಳಿಗ್ಗೆ, ಒಸೆದು, ಪೆಳ್ತಂದು, ತಾರ್- ಕೊಡು, ಎಂದು, ಬೇಡುತ್ತೆ, ಇರೆ, ಬೇಗಂ, ಮುನ್ನ, ಬೈತಿಟ್ಟ, ಎಡೆಯೊಳ್, ಅರಸುತಂ- ಹುಡುಕುತ್ತ, ಕಾಣದೆ, ಉದ್ಭೀತಿಯಿಂದಂ- ಉಬ್ಬಾದ ಭಯದಿಂದ. ... ... ... ... ॥೭೬॥

ನಡುಗುತ್ತೆ, ಇರ್ಪನ್ನಂ, ಕಿತವ- ವಂಚಕನೇ! ಲಸತ್ಕರ್ಪರಂ- ಹೊಳೆಯುವ ಭಿಕ್ಷಾಪಾತ್ರೆಯು, ಪೋದುದೇಂ? ನೀಂ, ಜೋಳಿಯಿಂ, ಬೈತಿಡು, ಎಂದು, ಇತೊತ್ತಡಂ- ಕೊಟ್ಟಾಗ್ಯೂ, ವಂಚಿಪುದೆ- ಮೋಸಮಾಡುವದೇ? ನಿನ್ನಂ. ಜಗದೊಳ್, ಆರ್ಮೆಚ್ಚುವರ್? ಇಲ್ಲ, ಎಂದೊಡೆ, ಸೊಲ್ಲಂ- ಮಾತನ್ನು, ಎಂತು ನಂಬಲ್ ಅಕ್ಕುಮೊ- ಹ್ಯಾಗೆ ನಂಬುವದಕ್ಕಾದೀತೋ? ಮತ್ಪಾತ್ರೆಯಂ, ಕುಡು, ಕುಡು, ನಿನ್ನಂ, ಎಂತುಂ, ಬಿಡೆಂ, ಎಂದು, ಆಸ್ಫೋಟಿಸುತ್ತಂ- ತಗಾದೆಯುಂ ಮಾಡುತ್ತ, ಇದಿರೊಳ್, ಸಿಡಿದಿಡುತೆ-ಕೋಪದಿಂ ಸಿಡಿದು ಬೀಳುತ್ತ, ಆಗಳ್, ತರ್ಜನಂಗೆಯ್ವುತೆ-ಭಯಪಡಿಸುತ್ತ. ... ... ... ॥೭೭॥

ಶಪಥಂಗೆಯ್ದಲ್ಲದೆ- ಪ್ರತಿಜ್ಞೆಯಂ ಮಾಡಿದಹೊರತು, ಎಂತುಂ, ಬಿಡೆಂ, ಎನುತೆ, ಅಘಟಂ ದೆ- ಶಾರ್ಯದಿಂದ, ಈರ್ವರಂ, ತೀರ್ಥವಾರಿಸ್ನಪನಂಗೆಯ್ಸುತ್ತೆ- ಪರಿಶುದ್ಧೋದಕಸ್ನಾನವಂ ಮಾಡಿಸುತ್ತ, ವಾರ್ಧಿಕ್ಯಮಂ- ಮುಪ್ಪನ್ನು, ಅಳಿದು- ಬಿಡಿಸಿ; ಒಲವಿಂ, ಯೌವನಂಗೊಟ್ಟು, ಕಾರುಣ್ಯಪರಂ- ದಯಾಸಕ್ತನಾದ ಶಿವನು, ಪ್ರತ್ಯಕ್ಷಂ, ಆಗುತ್ತೆ, ಇಳೆಯೊಳ್, ಎಂಭತ್ತು ಸಂವತ್ಸರಂ, ಇರಿಸುತ್ತೆ, ಸೌಖ್ಯಪದಂ- ಸುಖಸ್ಥಾನವು, ಕೈಗಣ್ಮೆ- ವಶವಾಗುವಂತೆ, ಮೇಣ್, ಪುಷ್ಪಕದೊಳ್- ದೇವವಿಮಾನದಲ್ಲಿ, ಇರಿಸಿ, ಕೂರ್ಮೆಯಿಂದಂ ಕೊಂಡು, ಒಯ್ವುತಂ. ... ... ... ... ... ॥೭೮॥

ಆ ಪುರಹರಂ, ಪರಮಗಣಪದಮಂ, ಈಯೆ, ತದೀಯಭುವನದೊಳ್- ಆ ಈಶ್ವರಲೋಕದಲ್ಲಿ, ಮೆರೆದ, ಲಸತ್ತಿರುನೀಲಕಂಠಮಾಹೇಶ್ವರಂಗೆ, ಆಂ, ಅನವರತಂ, ಡಿಂಗರಿಗಂ- ಸೇವಕನು, ಅಪ್ಪೆಂ. ॥೭೯॥

ವಿಕ್ರಮಚೋಳಂ, ಒರ್ಮೆ, ಮುದದಿಂ, ಸೌವರ್ಣದಿಂ, ಗುಡಿಯಂ, ಮಾಡುತೆ, ಅಂತು, ಅದರೊಳ್, ಶಂಕರನಂ, ಪ್ರತಿಷ್ಠಿಸೆ, ಕರಂ, ಕಂಡು, ಅಂತುಟು- ಹಾಗೆ, ಆತ್ಮೀಯಹೃತ್ಪದದೊಳ್- ತನ್ನ ಹೃದಯಸ್ಥ

ಮಂ ನಿರ್ಮಿಸಿ ಶಿವಲಿಂಗಸ್ಥಾಪನಮುಗೆಯ್ದು ತ । ಳ್ವದೆ ಕೈಲಾಸಕೆ ಪೋದ ಪೊಸಲವರಾ
ಧೀಶಂಗೆ ತೊಳ್ತುದಪಂ ॥ ... ... ... ... ... ॥೮೦॥

ಕಂ ॥ ಬಡವಿದ ಸಾಮ್ರಾಜ್ಯದ ಸಂ । ಪದಮಂ ತೊರೆದತಿವಿರಕ್ತಿಯಿಂ ಶಂಕರನಂ ॥
ಪಡೆದೊಲಿಸಿ ಮೆರೆದ ಮಹಿಮಾ । ಸ್ಪದ ಕರಿಕಾಲಾಖ್ಯ ಭಕ್ತನನುಚರನಪ್ಪೆಂ ॥ ॥೮೧॥

ಕಂ ॥ ಮಿಸುಪಂತರಂಗದೊಳ್ಧ್ಯಾ । ನಿಸುತಂ ಭವಹರನ ನೆಸಗಿ ಮಾನಸಪೂಜಾ
ವಿಸರಮನೊಲಿಸಿದ ಸಂವಿ । ದ್ರಸಿಕನ ತಿರುಕುರುಪೆಯಂಘ್ರಿಸೇವಕನಪ್ಪೆಂ ॥ ॥೮೨॥

---

ಲದಲ್ಲಿ, ದೇಗುಲಮಂ- ದೇವಸ್ಥಾನವನ್ನು, ನಿರ್ಮಿಸಿ- ಮಾಡಿ, ಶಿವಲಿಂಗಸ್ಥಾಪನಂಗೆಯ್ದು, ಕೈಲಾಸಕೆ, ಪೋದ, ಪೊಸಲವರಾಧೀಶಂಗೆ, ತೊಳ್ತು- ದಾಸನು, ಆದಪೆಂ. ... ... ॥೮೦॥

ಬಡವಿದ– ಪ್ರಾಪ್ತವಾದ, ಸಾಮ್ರಾಜ್ಯದ- ದೊರೆತನದ, ಸಂಪದಮಂ- ಐಶ್ವರ್ಯವನ್ನು, ತೊರೆದು- ಬಿಟ್ಟು, ಅತಿವಿರಕ್ತಿಯಿಂ- ಅತ್ಯಂತ ವೈರಾಗ್ಯದಿಂದ, ಶಂಕರನಂ, ಪಡೆದು, ಒಲಿಸಿ– ಮೆಚ್ಚಿಸಿಕೊಳ್ಳಲು, ಮೆರೆದ, ಮಹಿಮಾಸ್ಪದಕರಿಕಾಲಾಖ್ಯಭಕ್ತನ, ಅನುಚರಂ- ಸೇವಕನು, ಅಪ್ಪೆಂ. ... ॥೮೧॥

ಮಿಸುಪ,ಅಂತರಂಗದೊಳ್-ಮನಸ್ಸಿನಲ್ಲಿ,ಭವಹರನಂ, ಧ್ಯಾನಿಸುತಂ- ಧ್ಯಾನಮಾಡುತ್ತ,ಮಾನಸಪೂಜಾವಿಸರಮಂ- ಮನಸ್ಸಿನಲ್ಲುಂಟಾಗುವ ಪೂಜಾ ಸಮೂಹವನ್ನು. ಶ್ಲೋ॥ ಅಂತಃಪವನಸಂಸ್ಪೃಷ್ಟಸುಸೂಕ್ಷ್ಮಾಂಬರಶೋಭಿತೆ । ಮೂರ್ಧನ್ಯಚಂದ್ರವಿಗಳತ್ಸುಧಾಸೇಕಾತಿಶೀತಳೆ । ಬದ್ಧೇಂದ್ರಿಯನವದ್ವಾರೆ ಬೋಧದೀಪೆಹೃದಾಲಯೆ । ಪದ್ಮಪೀಠೆಸಮಾಸೀನಂಚೆಲ್ಲಿಂಗಂಶಿವವಿಗ್ರಹಂ । ಭಾವಯಿತ್ವಾಸದಾಕಾಲಂಪೂಜಯೇನ್ಭಾವವಸ್ತುಭಿಃ । ಕ್ಷಮಾಭಿಷೇಕಸಲಿಲಂ ವಿವೇಕೋವಸ್ತ್ರಮುಚ್ಯತೆ । ಸತ್ಯಮಾಭರಣಂಪ್ರೋಕ್ತಂ ವೈರಾಗ್ಯಂಪುಷ್ಪಮಾಲಿಕಾ । ಗಂಧಸ್ಸಮಾಧಿಸಂಪತ್ತಿ ರಕ್ಷತಾನಿರಹಂಕೃತಿಃ । ಭ್ರಾಂತಿಮೂಲಪ್ರಪಂಚಸ್ಯನಿವೇದ್ಯಂತನ್ನಿವೇದನಂ ।ಮೌನಂಘಂಟಾಪರಿಸ್ಪಂದಸ್ತಾಂಬೂಲಂವಿಷಯಾರ್ಪಣಂ । ವಿಷಯಭ್ರಾಂತಿ ರಾಹಿತ್ಯಂ ತತ್ಪ್ರದಕ್ಷಿಣಕಲ್ಪನಾ । ಬುದ್ಧೇಸ್ತದಾತ್ಮಿಕಾಶಕ್ತಿರ್ನಮಸ್ಕಾರಕ್ರಿಯಾಮತಾ। ಏವಂವಿಧೈರ್ಭಾವಪುಷ್ಪೈರುಪಚಾರೈರದೂಷಿತೈಃ । ಪ್ರತ್ಯಙ್ಮುಖಮನಾಭೂತ್ವಾಪೂಜಯೇಲ್ಲಿಂಗಮಾಂತರಂ॥ ಅಂದರೆ:—

ಪ್ರಾಣವಾಯುವಿನಿಂದ ವ್ಯಾಪ್ತವಾಗಿಯೂ, ಅತಿಸೂಕ್ಷ್ಮಾಕಾಶದಲ್ಲಿ ಪ್ರಕಾಶಮಾನವಾಗಿಯೂ, ಬ್ರಹ್ಮರಂಧ್ರವನ್ನೈದಿದ ಪೂರ್ಣಚಂದ್ರಮಂಡಲದಿಂದ ಸುರಿಯುತ್ತಿರುವ ಅಮೃತದ ಸೇಚನೆಯಿಂದ ಅತ್ಯಂತ ತಂಪಾಗಿರುವದಾಗಿಯೂ, ಕರ್ಣ ಮುಂತಾದ ಪಂಚೇಂದ್ರಿಯದ್ವಾರಗಳೂ ಮುಚ್ಚಲ್ಪಟ್ಟವುಗಳಾಗಿಯೂ, ಪರಮಾತ್ಮಜ್ಞಾನವೆಂಬ ದೀಪವುಳ್ಳದ್ದಾಗಿಯೂ ಇರುವ ಊರ್ಧ್ವಹೃದಯಗೃಹದಲ್ಲಿರುವ ಹನ್ನೆರಡು ಎಸಳುಗಳುಳ್ಳ ಕಮಲದ ಪೀಠದಲ್ಲಿರುವ ಮಂಗಳಮೂರ್ತಿಯಾದ ಪ್ರಾಣಲಿಂಗವನ್ನು ಗುರೂಪದಿಷ್ಟಮಾರ್ಗದಿಂದ ಧ್ಯಾನಮಾಡಿ ಸದಾ ಕಾಲದಲ್ಲಿಯೂ ಮಾನಸಿಕಪದಾರ್ಥಗಳಿಂದ ಪೂಜಿಸಬೇಕು; ಹ್ಯಾಗೆಂದರೆ:— ಸಹನೆಯೇ ಅಭಿಷೇಕದ ನೀರು; ನಿತ್ಯಾನಿತ್ಯ ವಸ್ತುವಿವೇಕವೇ ವಸ್ತ್ರ; ಸತ್ಯವೇ ಆಭರಣ; ಇಹಾಮುತ್ರಫಲಭೋಗದಲ್ಲಿ ಆಸೆಇಲ್ಲದಿರುವದೇ ಹೂವಿನ ಮಾಲಿಕೆ; ಏಕಾಗ್ರಚಿತ್ತತೆಯೇ ಗಂಧ; ಅಹಂಕಾರವಿಲ್ಲದಿರುವದೇ ಅಕ್ಷತೆ; ಜಗತ್ಪ್ರಕಾಶಕವಾದ ಮಹಾ ಜ್ಞಾನವೇ ದೀಪ; ನಾನು ಈಶ್ವರನಲ್ಲವೆಂಬ ಜ್ಞಾನಕ್ಕೆ ಮೂಲಭೂತ ಪ್ರಪಂಚವಾದಶರೀರಾದ್ಯಹಂಕಾರವರ್ಗವಂತಿಳಿಸುವಿಕೆಯೇನೈವೇದ್ಯ; ಅನಾಹತನಾದಾನುಸಂಧಾನಹೇತುವಾದಮೌನವೇಘಂಟಾನಾದ, ಮಾತೃಮಾನಮೇಯಾತ್ಮಕಗಳಾದ ವಿಷಯಗಳ ಸಮರ್ಪಣೆಯೇ ಅಡಕೆ ಸುಣ್ಣ ಎಲೆಗರೂಪವಾದ ತಾಂಬೂಲ, ಶಿವಾಪೇಕ್ಷಯಾ ಅಭೇದಭ್ರಾಂತಿ ಯಿಲ್ಲದಿರುವದೇ ಪ್ರದಕ್ಷಿಣೆ, ಬುದ್ಧಿಯುಲಿಂಗಳರೂಪವನ್ನೈದುವ ಶಕ್ತಿಯೇ ನಮಸ್ಕಾರ, ಈಪ್ರಕಾರವಾದ ಭಾವವಸ್ತುಗಳಿಂದ ಪೂಜಿಸಬೇಕೆಂಬದಾಗಿ ಶ್ರೀರೇಣುಕಾಚಾರ್ಯವಚನವಿರುವದರಿಂದೀವಿಧವಾದ ಪೂಜೆಯೇ ಭಾವಪೂಜೆ ಯೆನಿಸಿಕೊಳ್ಳುವದು ) ಎಸಗಿ, ಒಲಿಸಿದ, ಸಂವಿದ್ರಸಿಕನ- ಕ್ರಿಯಾಭಾವರಸಜ್ಞನಾದ, ತಿರುಕುರುಪೆಯ, ಅಂಘ್ರಿಸೇವಕಂ, ಅಪ್ಪೆಂ. ॥೮೨॥

ಕಂ ॥ ಚರಭಕ್ತಿವಿಡಿದು ರೋಹಿಣಿ । ವೆರಸಿ ಮಹೇಶ್ವರನ ನಳ್ಕರಿಂದೊಲಿಸಿ ಶುಭಾ॥
ಕರ ಮುಕ್ತಿವಡೆದು ರಂಜಿಪ । ತಿರುಮೂಲನ ಚರಣನಳಿನಷಟ್ಪದನಪ್ಪಂ ॥ ॥೮೩॥

ಕಂ ॥ ವಂಚಿಸದೆ ಚರಸಹಸ್ರಕೆ । ಸಂಚಿತಧನಮಿತ್ತು ತೃಪ್ತಿವಡಿಸುತೆ ನಿಚ್ಚಂ ॥
ಪಂಚಮುಖ ನೂರ್ಗೆ ನಡೆದ ಸ । ಮಂಚಿತಚೆರುಪುಲಿಯ ನಾಥ ನನುಚರನಪ್ಪಂ ॥ ॥೮೪॥

ಕಂ ॥ ಪೊಸತೊಂದುಪೊನ್ನನನುದಿನ । ಮಸಮಾಕ್ಷನಿನೊಲ್ದು ಪಡೆದುಗಣತತಿಯಂ
ಪೂ ॥ ಜಿಸಿ ಸಂದ ಚಿರುತ್ತೊಣ್ಡೆಯರ । ಮಿಸುಪಡಿದಾವರೆಯ ಲೆಂಕನಪ್ಪ ನಜಸ್ರಂ ॥೮೫॥

ಉ ॥ ಭೂತಭವದ್ಭವಿಷ್ಯದಭವಾಂಘ್ರಿಸರೋರುಹಭಕ್ತಿತತ್ಪರ । ವ್ರಾತದ ಭೃತ್ಯನಪ್ಪೆನೆನುತಂ ತಿರುಪಾಡುಗಳಿಂದೆ ಪಾಡುತಂ ॥ ಭೂತಳದಲ್ಲಿ ಸ್ಟೈಗೆಡೆಯುತಂ ಮುಗಿಯುತ್ತೆ ಕರಾರವಿಂದಮಂ । ಭೀತಿಸಮೇತಭಕ್ತಿರಸದಿಂ ಮಿಗೆ ನಾಂದತಿದೈನ್ಯವೃತ್ತಿಯಿಂ ॥ ... ... ... ... ... ... ॥೮೬॥

ಪ್ರಭಾತವೃತ್ತಂ ॥ ಭವದನುಚರಭೃತ್ಯಭಕ್ತದಾಸಂ । ಶಿವಗಣವೃಂದಮೆ ಮಾಣದಪ್ಪೆ ನಪ್ಪಂ ॥ ಪ್ರವಿದಿತಕೃಪೆಗೆಯ್ವು ದೆನ್ನೊಳೆಂದಾ । ಸವಿನಯಸೌಂದರ ನೊಲ್ದು ಕೀರ್ತಿಸುತ್ತಂ ॥ ... ... ... ... ... ... ॥೮೭॥

ಕಂ ॥ ಪುರಹರನ ಪಿಂತೆ ಮೆಲ್ಲನೆ । ಬರುತಿರೆ ಮೆರೆವಿಂಡ ನೊಲ್ದು ಶಿವಗಣಸಹಿತಂ ॥
ಕರುಣಿಸುತಭಯಮ ನಿತ್ತಾ । ದರಿಸುತೆ ಸೌಂದರನ ನಭವನಂಘ್ರಿಗೆ ಮಣಿದಂ॥ ॥೮೮॥

---

ಚರಭಕ್ತಿವಿಡಿದು, ರೋಹಿಣಿವೆರಸಿ, ಮಹೇಶ್ವರನಂ, ಅಳ್ಕರಿಂದೆ, ಒಲಿಸಿ, ಶುಭಾಕರಮುಕ್ತಿವಡೆದು, ರಂಜಿಪ, ತಿರುಮೂಲನ, ಚರಣನಳಿನಷಟ್ಪದಂ-ಪಾದಕಮಲಕ್ಕೆ ಭ್ರಮರನು, ಅಪ್ಪಂ. ... ॥೮೩॥

ವಂಚಿಸದೆ- ವಂಚನೆಯಂಮಾಡದೆ, ಚರಸಹಸ್ರಕೆ -ಸಾವಿರಜಂಗಮರಿಗೆ, ಸಂಚಿತಧನಮಿತ್ತು-ಸಂಪಾದಿಸಿದಧನವನ್ನುಕೊಟ್ಟು, ತೃಪ್ತಿವಡಿಸುತೆ, ಪಂಚಮುಖನ, ಊರ್ಗೆ, ನಡೆದ, ಸಮಂಚಿತಚೆರುಪುಲಿಯನಾಥನ, ಅನುಚರಂ, ಅಪ್ಪಂ. ... ... ... ... ... ॥೮೪॥

ಅನುದಿನಂ- ಪ್ರತಿದಿವಸದಲ್ಲೂ, ಒಲ್ದು, ಅಸಮಾಕ್ಷನಿಂ- ಈಶ್ವರನಿಂದ, ಪೊಸತೊಂದುಪೊನ್ನಂ, ಪಡೆದು, ಗಣತತಿಯಂ, ಪೂಜಿಸಿ, ಸಂದ- ಶಿವಲೋಕವಂಪೊಂದಿದ, ಚಿರುತ್ತೊಣ್ಡೆಯರ, ಮಿಸುಪ, ಅಡಿದಾವರೆಯ, ಲೆಂಕಂ- ಆಳು, ಅಜಸ್ರಂ- ಯಾವಾಗಲೂ, ಅಪ್ಪಂ. ... ... ॥೮೫॥

ಭೂತ......ವ್ರಾತದ— ಭೂತ- ಹಿಂದಣ, ಭವತ್- ಈಗಿನ, ಭವಿಷ್ಯತ್- ಮುಂದಣ, ಅಭವಾಂಘ್ರಿಸರೋರುಹಭಕ್ತಿತತ್ಪರ- ಶಿವನ ಪಾದಕಮಲದ ಭಕ್ತಿಯಲ್ಲಿ ಆಸಕ್ತರಾದವರ, ವ್ರಾತದ- ಗುಂಪಿನ, ಭೃತ್ಯಂ- ಸೇವಕನು, ಅಪ್ಪಂ, ಎನುತಂ, ತಿರುಪಾಡುಗಳಿಂದೆ, ಪಾಡುತಂ, ಭೂತಳದಲ್ಲಿ, ಸ್ಟೈಗೆಡೆಯುತಂ- ಅಡ್ಡಬೀಳುತ್ತ, ಕರಾರವಿಂದಮಂ, ಮುಗಿಯುತ್ತೆ, ಭೀತಿಸಮೇತಭಕ್ತಿರಸದಿಂ- ಭಯವಿಶಿಷ್ಟವಾದ ಭಕ್ತಿಜಲದಿಂದ, ಮಿಗೆ, ನಾಂದು, ಅತಿದೈನ್ಯವೃತ್ತಿಯಿಂ. ... ... ... ॥೮೬॥

ಶಿವಗಣವೃಂದಮೆ— ಶಿವಗಣಸಮೂಹವೇ! ಮಾಣದೆ- ತಪ್ಪದೆ, ಭವದನುಚರಭೃತ್ಯಭಕ್ತದಾಸಂ- ನಿಮ್ಮಸೇವಕರ ಸೇವಕರ ಭಕ್ತನೂ ಆಳೂ, ಅಪ್ಪೆಂ, ಅಪ್ಪಂ; ಎನ್ನೊಳ್, ಪ್ರವಿದಿತಕೃಪೆಗೆಯ್ವುದು, ಎಂದು, ಆ ಸವಿನಯಸೌಂದರಂ- ನಮ್ರನಾದ ಆಸೌಂದರನಂಬ್ಯಣ್ಣನು, ಕೀರ್ತಿಸುತ್ತಂ. ... ॥೮೭॥

ಪುರಹರನ, ಪಿಂತೆ- ಹಿಂದೆ, ಮೆಲ್ಲನೆ, ಬರುತಿರೆ, ಮೆರೆವಿಂಡಂ, ಒಲ್ದು, ಶಿವಗಣಸಹಿತಂ, ಕರುಣಿಸುತೆ, ಅಭಯಮಂ- ಭೀತಿರಾಹಿತ್ಯವನ್ನು, ಇತ್ತು, ಸೌಂದರನಂ, ಆದರಿಸುತೆ, ಅಭವನ, ಅಂಘ್ರಿಗೆ, ಮಣಿದಂ. ॥೮೮॥

ವ || ಅಂತು ಮಣಿದು ಪರಮೋತ್ಸವಂ ಮಿಗೆ ಭಕ್ತಿವೆತ್ತು ಕೊಂಡಾಡಿ ಪಾಡುತ್ತುಮಿರೆ ಶಿವಂ ನೋಡಿ ಕಾರುಣ್ಯಮಂ ನೀಡಿ ಮಣಿಮಯಪುಷ್ಪಕಮಂ ಬರಿಸಿ ತತ್ಸಹಚರಗಣಸಮೇತಂ ಕುಳ್ಳಿರಿಸಿ ಮೆರೆಮಿಂಡದೇವನಂ ಕೈಲಾಸಕ್ಕೆ ಕರೆದೊಯ್ದು ನಿತ್ಯತ್ವಮನಿತ್ತು ಮನ್ನಿಸೆ ಮತ್ತಮಾಗಳ್ || * * * * * * * * * * *

ಕಂ || ಮನಸಿಜಹರ ನಾಮೆರೆಮಿಂ | ಡನ ಮಹಿಮೆಯನಲ್ಲಿ ಪೊಗಳುತಂ ಗಣತತಿಯೊ || ಳ್ಬಿನದಂ ಮಿಗೆ ನಿಜಭದ್ರಾ | ಸನದೊಳ್ಗಿರಿಜಾತೆವೆರಸು ಸುಖದಿಂದಿರ್ದಂ|| ||೪೯||

ಮಹಾಸ್ರ || ಅದರಿಂದಂ ಭಕ್ತರೊಳ್ಸಲ್ಲದು ಮದ ಮೆನುತಂ ಮಾಚಯಂ ಪೇಳೆ ಕೇಳ್ದ | ತ್ಯುದಿತೋತ್ಸಾಹಾನ್ವಿತಂ ತತ್ಪದನಳಿನಸಮಸ್ಕಾರಮಂ ಮಾಡಿ ತೋರ್ಪ || ಗ್ಗದತತ್ಪಾದಾಂಬುಜಾಂಬುಪ್ರಭವನವಮಣಿಶ್ರೇಣಿಯಂ ಮಾಣದೀಯು | ತ್ತೊದವಿರ್ಪಾನಂದದಿಂ ಜಂಗಮತತಿಗೆಸೆದಂ ಭಕ್ತಿಸಾಂದ್ರಂ ವೃಷೇಂದ್ರಂ || ... ... ||೫೦||

ಲಲಿತಪದವೃತ್ತಂ || ಶುಂಠಶಿಶುಮಾರಮದಲುಂಠನಸಮರ್ಥ ದಶಕಂಠನತಭೂಭೃದುಪಕಂಠ ತತಲೀಲೋ | ತ್ಕಂಠ ಭೃಗುಗಾರ್ಗ್ಯಹರಕಂಠಸನಕಸ್ತುತವಿಕುಂಠಿಸುಮನಃಪ್ರಿಯ

---

ಅಂತು, ಮಣಿದು, ಪರಮೋತ್ಸವಂ, ಮಿಗೆ, ಭಕ್ತಿವೆತ್ತು, ಕೊಂಡಾಡಿ, ಪಾಡುತ್ತುಂ, ಇರೆ, ಶಿವಂ, ನೋಡಿ, ಕಾರುಣ್ಯಮಂ, ನೀಡಿ, ಮಣಿಮಯಪುಷ್ಪಕಮಂ- ರತ್ನವಿಕಾರವಾದ ದೇವಯಾನವನ್ನು, ಬರಿಸಿ, ತತ್ಸಹಚರಗಣಸಮೇತಂ, ಕುಳ್ಳಿರಿಸಿ, ಮೆರೆಮಿಂಡದೇವನಂ, ಕೈಲಾಸಕ್ಕೆ, ಕರೆದು, ಒಯ್ದು, ನಿತ್ಯತ್ವಮಂ, ಇತ್ತು, ಮನ್ನಿಸಿ- ಮರ್ಯಾದೆಮಾಡಿ, ಮತ್ತಂ, ಆಗಳ್. * * * * * * * * * *

ಅಲ್ಲಿ, ಮನಸಿಜಹರಂ, ಆ ಮೆರೆಮಿಂಡನ, ಮಹಿಮೆಯಂ, ಗಣತತಿಯೊಳ್, ಪೊಗಳುತೆ, ಬಿನದಂ- ವಿನೋದವು, ಮಿಗೆ, ನಿಜಭದ್ರಾಸನದೊಳ್- ತನ್ನಸಿಹ್ಮಾಸನದಲ್ಲಿ, ಗಿರಿಜಾತೆವೆರಸು, ಸುಖದಿಂದೆ, ಇರ್ದಂ ||೪೯||

ಅದರಿಂದೆ, ಭಕ್ತರೊಳ್, ಮದಂ, ಸಲ್ಲದು; ಎನುತಂ, ಮಾಚಯಂ, ಪೇಳೆ, ಭಕ್ತಿಸಾಂದ್ರಂ, ವೃಷೇಂದ್ರಂ, ಕೇಳ್ದು, ಅತ್ಯುದಿತೋತ್ಸಾಹಾನ್ವಿತಂ- ಅತ್ಯಂತವಾಗಿ ಉತ್ಪನ್ನವಾದ ಸಂತೋಷದಿಂದ ಕೂಡಿದವನಾಗಿ, ತತ್ಪದನಳಿನನಮಸ್ಕಾರಮಂ- ಆ ಮಾಚಿದೇವನ ಪಾದಕಮಲಕ್ಕೆ ನಮಸ್ಕಾರವನ್ನುಮಾಡಿ, ಜಂಗಮತತಿಗೆ, ತೋರ್ಪ, ಅಗ್ಗದ- ಶ್ರೇಷ್ಠವಾದ, ತತ್ಪಾದಾಂಬುಜಾಂಬುಪ್ರಭವನವಮಣಿಶ್ರೇಣಿಯಂ- ಅವನ ಪಾದಕಮಲದ ನೀರಿನಿಂದ ಹುಟ್ಟಿದ ರತ್ನಗಳನ್ನು, ( ಅಂದರೆ ಮಹಿಮಾಪ್ರದರ್ಶನಾರ್ಥವಾಗಿ ಪಾದದಿಂ ನೀರಂ ಕೆದರಲು ಉದ್ಭವಿಸಿದ ರತ್ನಗಳನ್ನು ) ಮಾಣದೆ, ಈಯುತ್ತೆ, ಒದವಿ, ಇರ್ಪ, ಆನಂದದಿಂ, ಎಸೆದಂ. ||೫೦||

ಶುಂಠ......ಸಮರ್ಥ— ಶುಂಠ– ಸಮರ್ಥನಾದ, ಶಿಶುಮಾರ- ಶಿಶುಮಾರನೆಂಬ ದೈತ್ಯನ, ಮದ- ಗರ್ವವನ್ನು, ಲುಂಠನ- ಹೊರಳಾಡಿಸುವದರಲ್ಲಿ, ಸಮರ್ಥ, ದಶಕಂಠ......ಉತ್ಕಂಠ— ದಶಕಂಠ– ರಾವಣನಿಂದ, ನತ- ನಮಸ್ಕರಿಸಲ್ಪಟ್ಟ, ಭೂಭೃತ್– ಪರ್ವತದ, (ಅಂದರೆ ಕೈಲಾಸಪರ್ವತದ) ಉಪಕಂಠ- ಸಮೀಪದಲ್ಲಿ, ತತ- ವಿಸ್ತಾರವಾದ, ಲೀಲಾ- ವಿಲಾಸದಲ್ಲಿ, ಉತ್ಕಂಠ- ಕುತೂಹಲವುಳ್ಳ, ಭೃಗುಗಾರ್ಗ್ಯಹರಕಂಠಸನಕಸ್ತುತ- ಭೃಗು, ಗಾರ್ಗ್ಯ, ಹರಕಂಠ, ಸನಕ, ಇವರುಗಳಿಂದ, ಸ್ತುತ, ವಿಕುಂಠಿಸುಮನಃಪ್ರಿಯ- ಪ್ರಮಾದರಹಿತರಾದ ದೇವತೆಗಳಿಗೆ ಆಪ್ತನಾದ, ಸುಕಂಠಸುರಗೇಯ- ಸಮೀಚೀನವಾದ ಶಾರೀರವುಳ್ಳ ದೇವತೆಗಳಿಂದ, ( ಅಂದರೆ ಕಿನ್ನರಗಂಧರ್ವರಿಂದ ) ಗಾನಮಾಡಲ್ಪಡುವದಕ್ಕೆ ಯೋಗ್ಯನಾದ, ಕುಂಠಿತದುರೀಹ- ಭಂಗಗೊಳಿಸಲ್ಪಟ್ಟ ಕೆಟ್ಟ ಆಸೆಯುಳ್ಳ, ವಿಷಕಂಠಕೃತಚಾರುತರಕಂಠಿಕ—ವಿಷಕಂಠ- ಈಶ್ವರನಿಂದ, ಕೃತ- ಮಾಡಲ್ಪಟ್ಟ, ಚಾರುತರ- ಅತಿ ಮನೋಹರವಾದ, ಕಂಠಿಕ- ಸಮೀಪವರ್ತಿಯಾದ, ಗಜಾಸ್ಯಶಿತಿಕಂಠರಥವಂದ್ಯ—

ಸುಕಂಠಸುರಗೇಯ ॥ ಕುಂಠಿತದುರೀಹವಿಷಕಂಠಕೃತಚಾರುತರಕಂಠಿಕಗಜಾಸ್ಯಶಿತಿಕಂಠರ ಥವಂದ್ಯಾ । ಕುಂಠನಿಜಶೌರ್ಯಪ್ರೋರೆಟುಂಠಣಿತನಾದ ಕಲಕಂಠರುಚಿ ನೀಲಗರಕಂಠಬಸವೇಶ ॥

ಪ್ರಭಾತವೃತ್ತಂ ॥ ನಮದಮರವಧೂಟಕಾಲಕಾಳಿ। ಭ್ರಮರವಿರಾಜಿತಪಾದಪದ್ಮಯು ಗ್ಮೇ ॥ ಹಿಮಗಿರಿತನುಜಾತೆ ರಕ್ಷಿಸೆನ್ನಂ । ಹಿಮಕರಶೇಖರಧರ್ಮಪತ್ನಿ ಗೌರೀ ॥ ॥೯೨॥

ಗದ್ಯಂ ॥ ಇದು ನಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರು ಚಿನಿಚಯತರುಣಾರುಣಾತಪಪರಿಲಸಿತವರಮುಶಿವಲಿಂಗಪಾದಾರವಿಂದಪರಾಗಭಸಿತ್ಥಭೂಸುರ ಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀ ಷಡಕ್ಷರಿದೇವಭಕ್ತಿ ವಿರಚಿತ ಶ್ರೀಮದ್ವೃಷಭೇಂದ್ರವಿಜಯ ಮಹಾಪುರಾಣದೊಳ್ ಮೆರೆವಿಂಡದೇವಕಥಾವರ್ಣನಂಷೋಡ ಶಾಶ್ವಾಸಂ ಪರಿಸಮಾಪ್ತಂ ॥ .. .. ... ... ... ...

ಷೋಡಶಾಶ್ವಾಸಂ ಸಂಪೂರ್ಣಂ.

---

ಗಜಾಸ್ಯ- ಗಣಪತಿ, * ಶಿತಿಕಂಠರಥ- ಷಣ್ಮುಖ, (ಇವರುಗಳಿಂದ) ವಂದ್ಯಾ-ನಮಸ್ಕರಿಸಲ್ಪಡುವದಕ್ಕೆ ಯೋಗ್ಯನಾದ, ಅಕುಂಠನಿಜಶೌರ್ಯ— ಅಕುಂಠ- ಅಧಿಕವಾದ, ನಿಜ- ತನ್ನ, ಶೌರ್ಯ- ಪರಾಕ್ರಮವು ಳ್ಳ, ಟಂಠ........ಕಂಠ— ಟುಂಠಣಿತನಾದ- ಠಣ್ ಣ ಎಂಬದಾಗಿ ಮಾಡಲ್ಪಟ್ಟ ಧ್ವನಿಯುಳ್ಳ, ಕಲಕಂ ಠ- ಕೋಗಿಲೆಯು, ರುಚಿ- ಕಾಂತಿಯೋಪಾದಿಯಲ್ಲಿ, ನೀಲ- ಕಪ್ಪಾದ, ಗರ- ವಿಷವೇ! ಕಂಠ- ಕತ್ತಿನಲ್ಲುಳ್ಳ, ಬಸವೇಶ! ಪೊರೆ. ... ... ... ... ... ॥೯೧॥

ನಮತ್......ಯುಗ್ಮೇ— ನಮತ್- ನಮಸ್ಕರಿಸುವ, ಅಮರವಧೂಟಿಕಾ- ದೇವತಾ ಸ್ತ್ರೀಯರ, ಅಲಕಾ- ಮುಂಗುರುಳುಗಳ, ಆಳಿ- ಪಜ್ತಿಯೆಂಬ, ಭ್ರಮರ- ತುಂಬಿಗಳಿಂದ, ವಿರಾಜಿತ- ಪ್ರಕಾಶಿಸುವ, ಪಾ ದಪದ್ಮಯುಗ್ಮೇ- ಚರಣಕಮಲಯುಗಳವುಳ್ಳ, ಹಿಮಗಿರಿತನುಜಾತೆ, ಹಿಮಕರಶೇಖರಧರ್ಮಪತ್ನಿ- ಚಂದ್ರಶೇಖರ ನ ಧರ್ಮಪತ್ನಿಯಾದ, ಗೌರೀ! ಎನ್ನಂ, ರಕ್ಷಿಸು. ... ... ... ॥೯೨॥

---

* (ಅವ) ಶಿತಿ- ಕಪ್ಪಾದ, ಕಂಠ- ಕತ್ತುಳ್ಳ ನವಿಲೇ, ರಥ- ವಾಹನವಾಗುಳ್ಳವನು. ... ॥೯೧॥

ಹದಿನಾರನೆಯ ಆಶ್ವಾಸವು ಸಂಪೂರ್ಣವು.

ಶ್ರೀಃ

ತ್ರಿವಿಕ್ರಮಹರಾಯಪರಬ್ರಹ್ಮಣೇನಮಃ.

# ಸಪ್ತದಶಾಶ್ವಾಸಂ.

## ಕಿನ್ನರಿಬ್ರಹ್ಮಯ್ಯಕಥನಂ.

ಕಂ ॥ ಶ್ರೀಮದಗಜಾಭುಜಾಸುಮ । ನೋಮಾಲಾಲಂಕೃತಾತ್ಮಕಂಧರ ನಭವಂ ॥ ಭೀಮಾಂಧಕಾಂಧಕಾರಮ । ಹಾಮಿಹಿರು ಪೊರೆಗೆ ಭಕ್ತರಂ ಶಿವಲಿಂಗಂ ॥ ... ॥೧॥

ಮತ್ತೇ ॥ ಧರಣೀಭಾಗದೊಳೆಳ್ಗೆವೆತ್ತೆಸೆವ ಪೂಡೂರೆಂಬ ಸದ್ಗ್ರಾಮದೊ । ಳ್ಪರಭೀಮಂ ದುರಿತಾಮಯಾರಿಸುಜನಸ್ತೋಮಸ್ತುತಂ ಸತ್ಯಸಂ ॥ ಗರ ನಂಗೇಂದ್ರಿಯಲಿಂಗಸಂಗತ ನುದಾರಸ್ಫಾರವೀರವ್ರತಾ । ಚರಣಂ ಕಿನ್ನರಬೊಮ್ಮಿದೇವ ನೆಸೆದಂ ದುರ್ದಾಂತ ವಾಗ್ಭಂಜನಂ ॥ ... ... ... ... ... ... ॥೨॥

ಶಾ ॥ ಸರ್ವಪ್ರಾಣಿದಯಾಕರಂ ನಿಜಮತಾಂಭೋಜಾತಪದ್ಮಾಕರಂ । ದುರ್ವಾರಾಹಿತಭಂಜನಂ ಶರಣಚೇತೋರಂಜನಂ ಭಕ್ತಕ ॥ ಲ್ಪೋರ್ವೀಜಂ ಭುವನೈಕಪೂಜ್ಯ ನನಘಂ

---

ಶ್ರೀಮ......ಕಂಧರಂ— ಶ್ರೀಮತ್- ಷಡ್ಗುಣೈಶ್ವರ್ಯಯುಕ್ತಳಾದ, ಅಗಜಾ- ಪಾರ್ವತಿಯ, ಭುಜಾ—ತೋಳ್ಗಳೆಂಬ, ಸುಮನೋಮಾಲಾ- ಹೂವಿನಮಾಲಿಕೆಯಿಂದ, ಅಲಂಕೃತ- ಅಲಂಕರಿಸಲ್ಪಟ್ಟ, ಆತ್ಮ- ತನ್ನ, ಕಂಧರಂ- ಕಂಠವುಳ್ಳ, ಅಭವಂ, ಭೀಮಾಂಧಕಾಂಧಕಾರಮಹಾಮಿಹಿರಂ- ಭೀಮ- ಭಯಂಕರನಾದ,ಅಂಧಕ- ಅಂಧಕಾಸುರನೆಂಬ, ಅಂಧಕಾರ- ಕತ್ತಲೆಗೆ, ಮಹಾಮಿಹಿರಂ- ದೊಡ್ಡಸೂರ್ಯನಾದ, ಶಿವಲಿಂಗಂ, ಭಕ್ತರಂ, ಪೊರೆಗೆ. ... ... ... ... ... ॥೧॥

ಧರಣೀಭಾಗದೊಳ್, ಎಳ್ಗೆವೆತ್ತು, ಎಸೆವ, ಪೂಡೂರ್, ಎಂಬ, ಸದ್ಗ್ರಾಮದೊಳ್, ಪರಭೀಮಂ- ಶಿವಭಕ್ತೇತರರಿಗೆ ಭಯಂಕರನಾದ, ದುರಿತಾಮಯಾರಿ- ಪಾಪವೆಂಬ ರೋಗಕ್ಕೆ ಶತ್ರುವಾದ, ಸುಜನಸ್ತೋಮಸ್ತುತಂ, ಸತ್ಯಸಂಗರಂ- ಸತ್ಯಪ್ರತಿಜ್ಞೆಯುಳ್ಳ, ಅಂಗೇಂದ್ರಿಯಲಿಂಗಸಂಗತಂ- ಆಯಾಯ ಅವಯವ ಇಂದ್ರಿಯಗಳಲ್ಲಿ ಲಿಂಗಗಳಿಂಕೂಡಿದ, ಉದಾರಸ್ಫಾರವೀರವ್ರತಾಚರಣಂ- ಉತ್ಕೃಷ್ಟವಾಗಿ ವಿಸ್ತಾರವಾದ ವೀರಶೈವವ್ರತದ ನಡತೆಯುಳ್ಳ, ದುರ್ದಾಂತವಾಗ್ಭಂಜನಂ- ದುಷ್ಟರ ವಚನವಂ ನಾಶಮಾಡುವ, ಬೊಮ್ಮಿದೇವಂ, ಎಸೆದಂ. ... ... ... ... ... ॥೨॥

ಸರ್ವಪ್ರಾಣಿದಯಾಕರಂ- ಸಕಲ ಭೂತಗಳಲ್ಲೂ ಇರುವ ಕೃಪೆಗೆ ಆಶ್ರಯನಾದ, ನಿಜಮತಾಂಭೋಜಾತಪದ್ಮಾಕರಂ- ತಮ್ಮ ಶಿವಮತವೆಂಬ ಕಮಲಕ್ಕೆ ಸೂರ್ಯನಾದ, ದುರ್ವಾರಾಹಿತಭಂಜನಂ- ಇತರರಿಂದ ತಡೆಯುವದಕ್ಕಶಕ್ಯರಾದ ಶತ್ರುಗಳನ್ನು ನಾಶಮಾಡುವ, ಶರಣಚೇತೋರಂಜನಂ-ಶಿವಶರಣರ ಮನಸ್ಸಂತೋಷಪಡಿಸುವ, ಭಕ್ತಕಲ್ಪೋರ್ವೀಜಂ- ಶಿವಭಕ್ತರಿಗೆಕಲ್ಪವೃಕ್ಷನಾದ, ಭುವನೈಕಪೂಜ್ಯಂ- ಲೋಕದಿಂದೆಲ್ಲಾ ಮು

ಸದ್ಭಕ್ತಿಯುಕ್ತಂ ಸದಾ । ಖರ್ವಶ್ರೀಗುಣಮಂಡನಂ ಶುಭಕರಂ ಸಂಗೀತವಿದ್ಯಾಧರಂ ॥೩॥

ಚಂ ॥ ಸಕಳಕಳಾಪ್ರವೀಣ ನಕಳಂಕಗುಣಾಂಕ ನುದಾತ್ತಜಂಗಮ | ಪ್ರಕರಸಮ
ರ್ಚನಕ್ಕೆ ತನುವಂ ಮನವಂ ಧನಮುಂ ನಿವೇದಿಸು ॥ ತ್ತಕುಟಿಲವೃತ್ತ ನಿರ್ಪಿನ ಮುಪಾ
ತ್ತಧನವ್ಯಯ ಮಾಗೆ ಕೊಂಕದು । ತ್ಸುಕಮತಿ ಚೆನ್ನಕಿನ್ನರಿಯ ನಪ್ರಿಜೆಯಾಣ್ಮನ
ಮುಂದೆ ಲೀಲೆಯಿಂ ॥ ... ... ... ... ... ॥೪॥

ಮತ್ತೇ ॥ ಪಿಡಿದೋರಂತಿರೆ ಜೇನಸೋನೆ ಕರೆದತ್ತೆಂಬಂತೆ ರಾಗಂಗಳಂ | ಕಡುಪಿಂ
ಕೇಳಿಸೆ ಗಾನಲೋಲ ನಗಜೇಶಂ ಮೆಚ್ಚೆ ಸಂಪ್ರೀತಿಯಿಂ ॥ ಕುಡೆ ಪೊನ್ನಂ ಪಣಪಾಗಮಂ
ಪಡೆದು ನಿಚ್ಚಂ ಜಂಗಮಶ್ರೇಣಿಯಂ । ಬಿಡದಾರಾಧಿಸುತಿರ್ದ ನನ್ಯಸಮಯಾಹಂಕಾರಶಂ
ಕಾಹರಂ ॥ ... .. ... ... ... ... ॥೫॥

ವ॥ ಅಂತಿರ್ಪಿನಮಾಗಳ್ ॥ ಕಂ॥ ಬಸವನ ಭಕ್ತಿಶಶಾಂಕ | ಪ್ರಸರತ್ಪ್ರಭೆ ತೀವೆ ಕಂ
ಡು ತದ್ದರ್ಶನಕೆಂ ॥ ದೊಸೆದೆಳ್ತಂದಂ ಕಿನ್ನರ । ನಸದೃಶಕಲ್ಯಾಣಪಟ್ಟಣಕ್ಕನುನಯದಿಂ ॥

ವ ॥ ಅಂತೆಳ್ತಂದು ಬಸವನ ಶಿವಲಿಂಗದೊಳ್ಬಿಂಬಿಸೆ ಬಸವಂ ಕಂಡು ಸಮುತ್ಸುಕಚಿ
ತ್ತನಪ್ಪನಿತರೊಳ್ಕಟ್ಟದಿರೊಳ್ಪ್ರಸನ್ನನಾಗಿ ಸಾಷ್ಟಾಂಗಮೆರಗಿ ತನ್ನ ನುನ್ನತಾಸನ

---

ಖ್ಯವಾಗಿ ಪೂಜಿಸಲ್ಪಡುವದಕ್ಕೆ ಯೋಗ್ಯನಾದ, ಅನಘಂ- ಪಾಪರಹಿತನಾದ, ಸದ್ಭಕ್ತಿಯುಕ್ತಂ, ಸದಾ- ಯಾವಾಗಲೂ, ಅಖರ್ವಶ್ರೀಗುಣಮಂಡನಂ- ಅಧಿಕವಾದ ಸಂಪತ್ತನ್ನುಂಟುಮಾಡುವ ಸದ್ಗುಣಗಳೇ ಆಭರಣವಾಗುಳ್ಳ, ಶುಭಕರಂ, ಸಂಗೀತವಿದ್ಯಾಧರಂ. ... ... ... ॥೩॥

ಸಕಳಕಳಾಪ್ರವೀಣಂ- ಎಲ್ಲಾವಿದ್ಯೆಗಳಲ್ಲೂ ಕುಶಲನಾದ, ಅಕಳಂಕಗುಣಾಂಕಂ- ನಿರ್ದುಷ್ಟಗಳಾದ ಗುಣಗಳೇ ಚಿಹ್ನವಾಗುಳ್ಳ ಬೊಮ್ಮಯ್ಯನು, ಉದಾತ್ತಜಂಗಮಪ್ರಕರಸಮರ್ಚನಕ್ಕೆ, ತನುವಂ, ಮನವಂ, ಧನಮಂ, ನಿವೇದಿಸುತ್ತೆ- ಅರ್ಪಿಸುತ್ತ, ಅಕುಟಿಲವೃತ್ತಂ- ವಕ್ರವಾಗದ ನಡತೆಯುಳ್ಳವನಾಗಿ, ಇರ್ಪಿನಂ- ಇರುವಲ್ಲಿ, ಉಪಾತ್ತಧನಂ- ತಾನುಪಡೆದಿದ್ದ ಧನವು, ವ್ಯಯಂ, ಆಗೆ, ಕೊಂಕದೆ- ಮನಸ್ಸಂತಿರುಗಿಸದೆ, ಉತ್ಸುಕಮತಿ- ಕುತೂಹಲವಿಶಿಷ್ಟವಾದ ಬುದ್ಧಿಯುಳ್ಳವನಾಗಿ, ಅಪ್ರಿಜೆಯಾಣ್ಮನ, ಮುಂದೆ, ಲೀಲೆಯಿಂ, ಕಿನ್ನರಿಯಂ- ತಂತ್ರೀವಾದ್ಯವನ್ನು. ... ... ... ... ॥೪॥

ಪಿಡಿದು, ಓರಂತಿರೆ- ಚೆನ್ನಾಗಿ, ಜೇನ- ಜೇನುತುಪ್ಪದ, ಸೋನೆ- ಮಳೆಯು, ಕರೆದತ್ತು, ಎಂಬಂತೆ, ರಾಗಂಗಳಂ, ಕಡುಪಿಂ- ಶೌರ್ಯದಿಂದ, ಕೇಳಿಸೆ, ಗಾನಲೋಲಂ- ಸಂಗೀತದಲ್ಲಿ ಆಸಕ್ತಿಯುಳ್ಳ, ಅಗಜೇಶಂ, ಮೆಚ್ಚೆ, ಸಂಪ್ರೀತಿಯಿಂ; ಪೊನ್ನಂ, ಕುಡೆ, ಅನ್ಯಸಮಯಾಹಂಕಾರಶಂಕಾಹರಂ- ಇತರ ಮತಸ್ಥರ ಗರ್ವವೇನು ಸಂದೇಹವೇನು ಇವುಗಳನ್ನುನಾಶಮಾಡುವ ಕಿನ್ನರಯ್ಯನು, ಪಣಪಾಗಮಂ- ಹಣಹಾಗವನ್ನು, ಪಡೆದು, ನಿಚ್ಚಂ, ಬಿಡದೆ- ತಪ್ಪದೆ, ಜಂಗಮಶ್ರೇಣಿಯುಂ, ಆರಾಧಿಸುತ್ತೆ, ಇರ್ದಂ. ... ... ॥೫॥

ಬಸವನ, ಭಕ್ತಿಶಶಾಂಕಪ್ರಸರತ್ಪ್ರಭೆ- ಶಿವಭಕ್ತಿಯೆಂಬ ಹರಡಿಕೊಳ್ಳುತ್ತಿರುವ ಚಂದ್ರಿಕೆಯು, ತೀವೆ- ತುಂಬಿಕೊಳ್ಳಲು, ಕಿನ್ನರಂ- ಕಿನ್ನರಿಬೊಮ್ಮಯ್ಯನು, ಕಂಡು, ತದ್ದರ್ಶನಕೆ, ಎಂದು, ಒಸೆದು, ಅಸದೃಶಕಲ್ಯಾಣಪಟ್ಟಣಕ್ಕೆ, ಅನುನಯದಿಂ, ಎಳ್ತಂದಂ. ... ... ... ॥೬॥

ಅಂತು, ಎಳ್ತಂದು, ಬಸವನ, ಶಿವಲಿಂಗದೊಳ್, ಬಿಂಬಿಸೆ, ಬಸವಂ, ಕಂಡು, ಸಮುತ್ಸುಕಚಿತ್ತಂ, ಅಪ್ಪ, ಅನಿತರೊಳ್, ಕಟ್ಟದಿರೊಳ್- ಮುಂಗಡೆಯಲ್ಲಿ, ಪ್ರಸನ್ನಂ, ಆಗಿ, ಸಾಷ್ಟಾಂಗಂ- ಅಷ್ಟಾಂಗಸಹಿತನಾಗಿ, ಎರಗಿ, ತನ್ನಂ, ಉನ್ನತಾಸನದೊಳ್- ಎತ್ತರವಾದ ಪೀಠದಲ್ಲಿ, ಮೂರ್ತಿಗೊಳಿಸಿ- ಕುಳ್ಳಿರಿಸಿ, ಯಥೋಚಿ

ದೊಳ್ಮೂರ್ತಿಗೊಳಿಸಿ ಯಥೋಚಿತಸತ್ಕಾರಂಗೆಯ್ದು ಪೂಜಿಸಿ ಪಾದೋದಕಪ್ರಸಾದಂ
ಗೊಂಡು ಕೃತಾರ್ಥಭಾವವಮನಪ್ಪುಗೆಯ್ದಿರೆ॥ * * * * * * * * *

ಕಂ ॥ ಕಿನ್ನರಬೊಮ್ಮಂ ಬಸವನ । ಸನ್ನುತಶಿವತತ್ವರಸದೊಳೋಲಾಡಿಸುತಂ ॥
ಮನ್ನಣೆವೆತ್ತು ಶಿವೈಕ್ಯಸ । ಮುನ್ನತರೊಳ್ಕೂಡಿ ಮೆರೆಯುತಿರ್ಪ್ಪೊಂದುದಿನಂ ॥ ॥೭॥

ಕಂ॥ ಪರಮತ್ರಿಪುರಾಂತಕಮಂ । ದಿರಗೋಪುರದಲ್ಲಿ ಬಿನದದಿಂದೇಳ್ತಂದಾ॥ದರದಿಂ
ಕುಳ್ಳಿರ್ದಂ ಸುರ । ವರಹರಿದದ್ರಿಯೊಳೆ ತೊಳಪ ರವಿಬಿಂಬದವೋಲ್॥ ... ॥೮॥

ವ ॥ ಆಸಮಯದೊಳೋರ್ವವಿಟಂ ವೇಶ್ಯಾಲಯದ ಪರ್ಬ್ಬಕ್ಕೆ ವಧಿಸಲ್ತಕ್ಕ ಬಲ್ಗುರಿ
ಯಂ ಬಿಲ್ತುಗೊಂಡು ಪುರವೀಥಿಯೊಳ್ಬರ್ಪ್ಪಾಗಳಾ ಕುರಿ ನೇಣಂ ಪರಿದು ನಿಟ್ಟೋಟದಿ
ನರುಚುತ್ತಂ ಪರಿತಂದು ಶಿವಾಗಾರಮಂ ಪುಗೆವುಗೆ ಬೆಂಬತ್ತಿ ಪಿಡಿಯಲಡವರಿಪಾಬೊಜ
ಗನ ತವಕಮಂ ಕಾರುಣ್ಯನಿಧಿ ಕಿನ್ನರಯ್ಯಂ ಕಂಡು ॥ * * * * * * *

ಕಂ ॥ ಬಿಡು ಬಿಡು ಪಿಡಿಯದಿರೆಲೆಯೆಲೆ । ಜಡಮತಿ ಸಾವಿಂಗೆ ಪೆಳರ್ದುಪೊಕ್ಕು
ದು ಬಂದೀ ॥ ಗುಡಿಯಂ ಕುರಿಯಿದು ಬೆಲೆಯಂ । ನುಡಿ ಕೊಟ್ಟಪೆ ನೆರಡುಮಡಿಯ ನಾದೊ
ಡ ವೀಗಳ್ ॥ ... ... ... ... ... ... ॥೯॥

ಕಂ॥ ಸರಿ ಸಕಲಜೀವರಾಶಿಗೆ । ಮರಣಭಯಂ ಮಗನೆ ಸುಗಿಪು ಪೊಕ್ಕುದು ಕುರಿ

---

ತಸತ್ಕಾರಂಗೆಯ್ದು, ಪೂಜಿಸಿ, ಪಾದೋದಕ ಪ್ರಸಾದಂಗೊಂಡು, ಕೃತಾರ್ಥಭಾವವಮಂ- ಧನ್ಯತ್ವವನ್ನು,
ಅಪ್ಪುಗೆಯ್ದು- ಹೊಂದಿ, ಇರೆ. * * * * * * * * * * * *

ಕಿನ್ನರಬೊಮ್ಮಂ, ಬಸವನ, ಬಸವೇಶ್ವರನನ್ನು, ಸನ್ನುತಶಿವತತ್ವರಸದೊಳ್- ಶ್ಲಾಘ್ಯವಾದ ಪರತ
ತ್ವ ವಿಚಾರವೆಂಬ ಜಲದಲ್ಲಿ, ಓಲಾಡಿಸುತಂ- ತೇಲಾಡಿಸುತ್ತ, ಮನ್ನಣೆವೆತ್ತು- ಮರ್ಯಾದೆಯಂಹೊಂದಿ, ಶಿ
ವೈಕ್ಯಸಮುನ್ನತರೊಳ್- ಶಿವನೊಡನೆ ಏಕತ್ವವಂ ಹೊಂದಿರುವದರಿಂ ದೊಡ್ಡವರಾದವರೊಡನೆ, ಕೂಡಿ, ಮೆ
ರೆಯುತೆ, ಇರ್ಪ, ಒಂದುದಿನಂ. ... ... ... ... ॥೭॥

ಬಿನದದಿಂದೆ- ವಿನೋದದಿಂದ, ಏಳ್ತಂದು, ಪರಮತ್ರಿಪುರಾಂತಕನ- ಉತ್ಕೃಷ್ಟನಾದ ತ್ರಿಪುರಾಂತಕೇ
ಶ್ವರನ, ಮಂದಿರಗೋಪುರದಲ್ಲಿ- ದೇವಸ್ಥಾನದ ತಲಬಾಗಿಲಲ್ಲಿ, ಆದರದಿಂ, ಸುರವರಹರಿದದ್ರಿಯೊಳೆ- ಇಂದ್ರ
ದಿಕ್ಕಿನ ಪರ್ವತದಲ್ಲಿ, ತೊಳಪ, ರವಿಬಿಂಬದವೋಲ್- ಸೂರ್ಯಮಂಡಲದಹಾಗೆ, ಕುಳ್ಳಿರ್ದಂ. ॥೮॥

ಆಸಮಯದೊಳ್, ಓರ್ವವಿಟಂ, ವೇಶ್ಯಾಲಯದ, ಪರ್ಬ್ಬಕ್ಕೆ- ಹಬ್ಬಕ್ಕೋಸ್ಕರ, ವಧಿಸಲ್- ಕೊಲ್ಲು
ವದಕ್ಕೆ, ತಕ್ಕ- ಯೋಗ್ಯವಾದ, ಬಲ್ಗುರಿಯಂ- ಬಲವಾದ ಕುರಿಯನ್ನು, ಬಿಲ್ತುಗೊಂಡು- ಕ್ರಯಕ್ಕೆ ತೆಗೆ
ದುಕೊಂಡು, ಪುರವೀಥಿಯೊಳ್, ಬರ್ಪ್ಪಾಗಳ್, ಆ ಕುರಿ, ನೇಣಂ-ಹಗ್ಗವನ್ನು, ಪರಿದು- ಕಿತ್ತು, ನಿಟ್ಟೋಟ
ದಿಂ- ಭರದೋಡಿನಿಂದ, ಅರುಚುತ್ತಂ- ಕೂಗುತ್ತ, ಪರಿತಂದು- ಓಡಿಬಂದು, ಶಿವಾಗಾರಮಂ- ದೇವಸ್ಥಾನವ
ನ್ನು, ಪುಗೆವುಗೆ- ಪ್ರವೇಶಿಸಲು, ಬೆಂಬತ್ತಿ- ಹಿಂದಟ್ಟಿ, ಪಿಡಿಯಲ್, ಅಡವರಿಪ- ಆತುರಪಡುವ, ಆ ಬೊ
ಜಗನ- ಅವಿಟನ, ತವಕಮಂ- ವೇಗವನ್ನು, ಕಾರುಣ್ಯನಿಧಿ- ದಯೆಗೆ ನಿಕ್ಷೇಪನಾದ, ಕಿನ್ನರಯ್ಯಂ,ಕಂಡು.

ಎಲೆಎಲೆಜಡಮತಿ- ಎಲೋಮೂಢಬುದ್ಧಿಯುಳ್ಳವನೇ ! ಬಿಡು, ಬಿಡು, ಪಿಡಿಯದಿರ್- ಹಿಡಿಯಬೇಡ;
ಇದುಕುರಿ, ಸಾವಿಂಗೆ, ಪೆಳರ್ದು- ಭಯಪಟ್ಟು, ಬಂದು, ಈ ಗುಡಿಯಂ, ಪೊಕ್ಕುದು, ಬೆಲೆಯಂ- ಕ್ರಯವ
ನ್ನು, ನುಡಿ; ಎರಡುಮಡಿಯಂಆದೊಡಂ- ಒಂದಕ್ಕೆರಡರಷ್ಟನ್ನಾದರೂ, ಈಗಳ್, ಕೊಟ್ಟಪೆಂ. ॥೯॥

ಮಗನೆ ! ಸಕಲಜೀವರಾಶಿಗೆ, ಮರಣಭಯಂ; ಸರಿ- ಸಮಾನವಾದದ್ದು; ಕುರಿ, ಸುಗಿದು- ಭಯಪ

ಶಂ ॥ ಕರಶರಣರ್ಮರೆವೊಕ್ಕುದ । ನಿರಪೇವರೆ ಗಾಂಪಪಿಡಿಯದಿ ರ್ಬಿಡುಕುರಿಯಂ ॥ ॥೧೦॥

ಕಂ ॥ ಬಳೆದಳಿಪಿನಿಂದೆ ಸೆಳೆದಪೆ । ತಳರದೆ ಪೆರತೊಂದು ಬಿಲ್ತ ಕುರಿ ಯಿಳಯದೆ ನಿ॥ ನ್ನಳ ಗಂಟಲೊಳ ಳಲೆ ಖಲ ಕುಳ । ತಿಳಕನೆ ಬಿಡು ಕುರಿಯ ಕುರಿತ ವಿತ್ತಮ ನೀವಂ॥೧೧॥

ವ ॥ ಎನೆ ಕೇಳ್ದು ದುಷ್ಟಭುಜಂಗ ನಟ್ಟಹಾಸಂಗೆಯ್ದು ॥ * * * *

ಕಂ॥ ಅರರೆ ಬಲವಂತ ಚಾಗಿಗ । ಳರಸ ದಯಾಪರ ರದಾರೊ ನಿನ್ನವೊಲೆ ವಸುಂ॥ ಧರೆಯೊಳರಿದರಿದು ನಿನ್ನಯ । ಪರಿ ಕುರಿಯಂ ಬಿಡಿಸಲೆಂದು ಬಗೆದಂದಿರ್ದೈ ॥ ॥೧೨॥

ಕಂ ॥ ಪುಗುಗುಂ ಪರರಂಗಣಮಂ । ಪುಗುಗುಂ ಪರಗೃಹಮ ನೋರ್ಮೆ ದೇವಾಲಯ ಮಂ ॥ ಪುಗುಗುಂ ಕುರಿ ಪಿಡಿಯದಿರೆನೆ । ಜಗದೊಳ್ಬೆಲೆಗೊಟ್ಟು ಕೊಂಡರೇಂ ಬಿಟ್ಟಪರೆ ॥

ಕಂ ॥ ನರರ ಹರಣಕ್ಕೆ ಬೆಲೆ ಸಾ । ಸಿರಪೊನ್ನಗಡ ಜೀವ ಮಲ್ಲ ಸರಿಗಡ ನೀಂ ಸಾ ॥ ಸಿರಪೊನ್ನ ನಾಪೊಡಂ ಸಾ । ದರ ಮಿತ್ತು ಪಶುವ ಬಿಡಿಸ ಲಾಪುರ್ವ ನಲ್ತೆ ॥ ॥೧೪॥

ವ॥ ಎಂದವಂ ಕಟಕಿಯಂ ಗಳಪುತ್ತೆನ್ನ ನುವಳಾಂ ತಪ್ಪಿದ ನೆಂದು ಮುಳಿಯದಿರ ಳೆಂದಜಪಶುವನವಂ ಜವದಿಂ ಸೆಳೆಯ ಲೊಡನೆ ॥ * * * * * * * *

ಕಂ ॥ ಗಳಪದಿರು ಪಲವ ನೆಲೆ ಪೊಂ । ಗಳ ನೀವೆಂ ಪಿಡಿ ಸಹಸ್ರಮಂ ಕರಿಯಂಕೊ॥

---

ಟ್ಟು, ಪೊಕ್ಕುದು; ಗಾಂಪ- ಮೂಢನೇ! ಶಂಕರಶರಣರ್, ಮರೆವೊಕ್ಕುದಂ- ಶರಣಾಗತವಾದುದನ್ನು, ಇರದೆ, ಈವರೇ? ಕುರಿಯಂ, ಪಿಡಿಯದಿರ್, ಬಿಡು. ... ... ... ||೧೦||

ಬಳೆದ- ಅಭಿವೃದ್ಧವಾದ, ಅಳಿಪಿನಿಂದೆ- ದುರಾಸೆಯಿಂದ, ತಳರದೆ- ಕದಲದೆ, ಸೆಳೆದಪೆ- ಎಳೆಯುತ್ತೀಯೆ, ಪೆರತೊಂದುಬಿಲ್ತಕುರಿ- ಮತ್ತೊಂದುಕೊಂಡುಕೊಂಡ ಕುರಿಯು, ನಿನ್ನವಳ- ನಿನ್ನಾಕೆಯು, ಗಂಟಲೊಳ್, ಇಳಿಯದೆ? ಎಲೆಖಲಕುಳತಿಳಕನೆ- ಎಲೈ ಮೂಢರಗುಂಪಿನಲ್ಲಿ ದೊಡ್ಡವನೇ! ಕುರಿಯು, ಬಿಡು; ಕುರಿತ- ಮನಸ್ಸಿನಲ್ಲಿ ನೆನೆದ, ವಿತ್ತಮಂ, ಹಣವನ್ನು, ಈವೆಂ. ... ... ... ... ||೧೧||

ಎನೆ,ಕೇಳ್ದು, ದುಷ್ಟಭುಜಂಗಂ- ಕೆಟ್ಟವಿಟನು, ಅಟ್ಟಹಾಸಂಗೆಯ್ದು- ಗಟ್ಟಿಯಾಗಿನಕ್ಕು. * *

ಅರರೆ! ಬಲವಂತ! ಚಾಗಿಗಳಅರಸ- ತ್ಯಾಗಮಾಡುವವರಲ್ಲಿ ಸ್ವಾಮಿಯಾದವನೇ! ವಸುಂಧರೆಯೊಳ್- ಭೂಮಿಯಲ್ಲಿ, ನಿನ್ನವೊಲೆ, ದಯಾಪರರ್, ಅದಾರೊ? ನಿನ್ನಯ, ಪರಿ- ರೀತಿಯು, ಅರಿದು ಅರಿದು- ಅಸಾಧ್ಯ ಅಸಾಧ್ಯ; ಕುರಿಯಂ, ಬಿಡಿಸಲ್ಎಂದು- ವಧೆಯದೆಸೆಯಿಂದ ತಪ್ಪಿಸಬೇಕೆಂದು, ಬಗೆದಂದು- ಯೋಚನೆಯಂಮಾಡಿ, ಇರ್ದೈ. ... ... ... ... ... ... ||೧೨||

ಜಗದೊಳ್, ಕುರಿ, ಓರ್ಮೆ, ಪರರ-ಮತ್ತೊಬ್ಬರ, ಅಂಗಣಮಂ- ಹೈಲನ್ನು, ಪುಗುಗುಂ- ಪ್ರವೇಶಮಾಡುವದು; ಪರಗೃಹಮಂ, ಪುಗುಗುಂ; ದೇವಾಲಯಮಂ, ಪುಗುಗುಂ; ಪಿಡಿಯದಿರ್- ಹಿಡಿಯಬೇಡ, ಎನೆ, ಬೆಲೆಗೊಟ್ಟು- ಕ್ರಯವನ್ನುಕೊಟ್ಟು, ಕೊಂಡರ್, ಬಿಟ್ಟಪರೇಂ? ... ... ||೧೩||

ನರರ, ಹರಣಕ್ಕೆ- ಪ್ರಾಣಕ್ಕೆ, ಬೆಲೆ- ಕ್ರಯವು, ಸಾಸಿರಪೊನ್ನಗಡ- ಸಹಸ್ರವರವಲ್ಲವೇ ? ಜೀವಂಎಲ್ಲ- ಪ್ರಾಣವೆಲ್ಲವೂ, ಸರಿಗಡ- ಸಮಾನವಲ್ಲವೇ ? ನೀಂ, ಸಾಸಿರಪೊನ್ನಂ, ಆಪೊಡಂ, ಸಾದರಂ- ಪ್ರೀತಿಸಹಿತನಾಗಿ, ಇತ್ತು, ಅಜಪಶುವಂ- ಕುರಿಯನ್ನು, ಬಿಡಿಸಲ್, ಆಪುರ್ವನಲ್ತೆ- ಸಮರ್ಥನಾಗುವನಲ್ಲವೇ? ||೧೪||

ಎಂದು, ಅವಂ, ಕಟಕಿಯಂ- ವಿಘ್ನಕಾರಿಯಾದ ಕಿನ್ನರಯ್ಯನನ್ನು, ಗಳಪುತ್ತೆ- ಕೂಗಾಡುತ್ತ, ಎನ್ನಂ, ಅವಳ್- ಆ ಸೂಳೆಯು, ಆಂ, ತಪ್ಪಿದಂ- ತರದೆ ತಪ್ಪಿದನು, ಎಂದು, ಮುಳಿಯದೆ, ಇರಳ್, ಎಂದು, ಅವಂ, ಅಜಪಶುವಂ, ಜವದಿಂ- ಬೇಗನೆ, ಸೆಳೆಯಲ್, ಒಡನೆ. * * * * * * * * *

ಎಲೆ, ಪಲವಂ- ಅನೇಕನಾತನ್ನು, ಗಳಪದಿರು- ಕೂಗಬೇಡ, ಸಹಸ್ರಮಂ ಪೊಂಗಳಂ,ಈವೆಂ, ಪಿಡಿ;

ಟ್ಟಳುಪಿದೊಡೆ ಬಿಡೆ ಮಗುಳ್ದೀ। ಗಳೆ ಶಿವನುಂಡಿಗೆಯ ನೊತ್ತಿ ಬಿಡುವೆ ನನೂನಂ ॥೧೫॥
ವ ॥ ಎಂದು ಸಹಸ್ರವಿತ್ತಮಂ ತರಿಸಿ ಬೊಮ್ಮಿದೇವಂ ಕುಡ ಲೊಡ ನವಂ ಕೊಂಡು ಕುರಿಯ ನುಳಿದು ಪಿರಿಯಬೆಲೆವಡೆದೆ ನೆಂದುತ್ಸವಿಸಿ ಮಗುಳ್ದೊಂದುಕುರಿಯಂ ಬಿಲ್ತುಗೊಂಡು ಗಾಣಿಕ್ಯನಿಕೇತನಕ್ಕೆ ಬಂದು ತಂದ ಕುರಿಯಂ ತೋರಿ ಸಾಸಿರಪೊಂಜಾಳಿಗೆಯಂ ಮುಂದಿಟ್ಟಾದವೃತ್ತಾಂತದಾದ್ಯಂತಮ ನವಂ ಪೇಳೆ ಕೇಳ್ದು ಪಣಾಂಗನೆ ಕನಲ್ದು ಪೊಂಜಾಳಿಗೆಯಂ ನೂಂಕಿ ಕಳೆದು ॥ * * * * * * * * * * * * *

ಕಂ ॥ ಪೊಲ್ಲದು ಗೆಯ್ದೆ ಯಿದೇತರ । ಬಲ್ಲತನಂ ವಿಟರೊ ಳೆಂತು ನಗೆಗೆಡೆಯಾದ್ಯೆ ॥
ಖುಲ್ಲ ಪಡೆದೆನ್ನ ಬಳಿಯೊ । ಳ್ನಿಲ್ಲದೆ ತೊಲಗೆಂದು ಗಬರಿ ಗರ್ಜಿಸುತಾಗಳ್ ॥ ॥೧೬॥
ಕಂ ॥ ಗಳಸೂಳೆವೆಣ್ಗಳೆನ್ನಂ । ಪಳಿವಂತಿರೆ ಮಾಣ ದೆಮ್ಮಗೃಹದೇವತೆಯ ॥ ರ್ಮು
ಳಿವಂತೆ ಮಾಡಿದ್ಯೆ ಛೀ । ಖಳ ಪಣದಳಿಯಾಸೆಗಾಗಿ ನೀಗಿದೆ ಕುರಿಯಂ ॥ ... ॥೧೭॥
ಕಂ॥ ಪಣಮೆಂಬಾಳ್ತಿಯೆ ಪೇ ಳೆನ । ಗಣಿಯರ ಮಿಾಬೀದಿಬೀದಿಯೊ ಳ್ಬಿತ್ತಿಪೆನಿ ॥
ಟ್ಟಣಿಸಿರೆ ಪೊನ್ನಂ ಮತ್ಪುರ । ಗಣಿಕಾತತಿಯೆಲ್ಲ ಬಲ್ಲುದೆನ್ನಯ ಪೆಂಪಂ॥ ... ॥೧೮॥
ಚಂ ॥ ಅದು ಗೃಹದೇವತಾಬಲಿಗೆ ನೇಮಿಸಿ ತಂದುದುಬೇಗ ಪೋಗಿ ನೀ । ನದ

---

ಕುರಿಯು, ಕೊಟ್ಟ ಅಳುಪಿದೊಡೆ- ದುರಾಸೆಯಂಮಾಡಿದರೆ, ಬಿಡೆ, ಮಗುಳ್ದು, ಈಗಳೆ, ಶಿವನ, ಉಂಡಿಗೆಯಂ- ಮುದ್ರೆಯನ್ನು, ಅನೂನಂ- ಕಡಮೆಯಾಗದಂತೆ, ಒತ್ತಿಬಿಡುವೆಂ. ... ... ॥೧೫॥

ಎಂದು, ಬೊಮ್ಮಿದೇವಂ, ಸಹಸ್ರವಿತ್ತಮಂ, ತರಿಸಿ, ಕುಡಲ್, ಒಡನೆ, ಅವಂ, ಕೊಂಡು- ತೆಗೆದುಕೊಂಡು, ಕುರಿಯಂ, ಉಳಿದು- ಬಿಟ್ಟು, ಪಿರಿಯಬೆಲೆವಡೆದೆಂ- ಹೆಚ್ಚಾದಕ್ರಯವಂ ಹೊಂದಿದೆನು, ಎಂದು, ಉತ್ಸವಿಸಿ- ಸಂತೋಷಪಟ್ಟು, ಮಗುಳ್ದು-ಪುನಃ,ಒಂದುಕುರಿಯಂ,ಬಿಲ್ತುಗೊಂಡು-ಕೊಂಡುಕೊಂಡು,ಗಾಣಿಕ್ಯನಿಕೇತನಕ್ಕೆ- ಸೂಳೆಯರಗುಂಪಿನಮನೆಗೆ, ಬಂದು, ತಂದಕುರಿಯಂ,ತೋರಿ, ಸಾಸಿರಪೊಂಜಾಳಿಗೆಯಂ- ಸಹಸ್ರವರದ ಚೀಲವನ್ನು, ಮುಂದೆ, ಇಟ್ಟು, ಆದ, ವೃತ್ತಾಂತದ, ಆದ್ಯಂತಮಂ, ಅವಂ, ಪೇಳೆ, ಪಣಾಂಗನೆ- ಸೂಳೆಯು, ಕೇಳ್ದು, ಕನಲ್ದು- ಕೋಪಿಸಿ, ಪೊಂಜಾಳಿಗೆಯಂ- ವರಹದ ಚೀಲವನ್ನು, ನೂಂಕಿ, ಕಳೆದು- ಬಿಸಾಡಿ. * * * * * * * * * * * * * * * * * *

ಪೊಲ್ಲದುಗೆಯ್ದೆ- ಕೆಟ್ಟದ್ದನ್ನು ಮಾಡಿದೆ, ಇದು, ಏತರಬಲ್ಲತನಂ- ಯಾತರ ಪ್ರೌಢಿಮೆ? ವಿಟರೊಳ್, ಎಂತುನಗೆಗೆ ಎಡೆಯಾದ್ಯೆ- ಹ್ಯಾಗೆಹಾಸ್ಯಕ್ಕೆ ಆಸ್ಪದನಾದೆ? ಖುಲ್ಲ- ನೀಚನೇ ! ಪಡೆದು- ಪ್ರೀತಿಸಿ, ಎನ್ನ, ಬಳಿಯೊಳ್- ಸಮಿಾಪದಲ್ಲಿ, ನಿಲ್ಲದೆ, ತೊಲಗು- ಹೋಗು, ಎಂದು, ಗಬರಿ, ಗರ್ಜಿಸುತೆ, ಆಗಳ್. ॥೧೬॥

* ಗಳಸೂಳೆವೆಣ್ಗಳ್- ಸೂಳೆಯರು, ಎನ್ನಂ, ಪಳಿವಂತಿರೆ- ನಿಂದಿಸುವಹಾಗೆ, ಎಮ್ಮ, ಗೃಹದೇವತೆಯರ್, ಮಾಣದೆ- ತಪ್ಪದೆ, ಮುಳಿವಂತೆ- ಕೋಪಿಸಿಕೊಳ್ಳುವಹಾಗೆ, ಮಾಡಿದ್ಯೆ; ಛೀ; ಖಳ- ನೀಚನೇ! ಪಣದ, ಆಸೆಗಾಗಿ, ಕುರಿಯಂ, ನೀಗಿದೆ. ... ... ... ... ... ... ॥೧೭॥

ಎನಗೆ, ಪಣಂ, ಎಂಬ, ಆಳ್ತಿಯೆ- ಆಸೆಯೆ? ಪೇಳ್, ಅಣಿಯರಂ- ಮನೋಹರವಾಗಿ, ಈ ಬೀದಿಬೀದಿಯೊಳ್, ಪೊನ್ನಂ, ಇಟ್ಟಣಿಸಿರೆ- ಸಾಂದ್ರವಾಗಿರುವಂತೆ, ಬಿತ್ತಿಪೆಂ. ಮತ್ಪುರಗಣಿಕಾತತಿ- ನಮ್ಮ ಊರಿನಲ್ಲಿರುವ ಸೂಳೆಯರ ಗುಂಪು, ಎನ್ನಯ, ಪೆಂಪಂ- ಅತಿಶಯವನ್ನು, ಬಲ್ಲುದು. ... ... ॥೧೮॥

ಅದು- ಆಕುರಿಯು, ಗೃಹದೇವತಾಬಲಿಗೆ, ನೇಮಿಸಿ, ತಂದುದು, ಬೇಗ, ನೀಂ, ಪೋಗಿ, ಒಸೆದು,

---

* (ಅವ) ಸಂಪಾದನೆಯಂ ಮಾಡುವ ಹೆಣ್ಣು. ... ... ... ... ॥೧೭॥

ನೊಸೆದಿತ್ತ ವಿತ್ತತತಿಯುಂ ಮಗುಳ್ದಿತ್ತುದರಿಂದೆ ತಂದೊಡ । ಲ್ಲದೆ ಪೊಸವರ್ಬ್ಬಮುಂ ನೆಗ ಳ್ವುದಾಗದು ಮದ್ಗೃಹದೇವತಾಳಿ ಕಾ ।ಯ್ವುದು ಪೆರತೊಂದು ಬಲ್ಗುರಿಯು ನಿಕ್ಕುತೆ ಪಲ್ಲ ವ ಮಾಡೆ ಪರ್ವ್ವಮುಂ ॥ ... ... ... ... ... ॥೧೯॥

ವ ॥ ಎಂದವ ಳಾಕ್ಷೇಪದಿಂ ಗಳಪೆ ಕಾಮಾಂಧಂ ಮುಂದಪ್ಪನರ್ಥಮುಂ ಲಕ್ಕಿಸಿದೆ ದೇ ಗುಲಕ್ಕೆ ಪರಿತಂದು ಲಿಂಗಮುದ್ರಾಂಕಿತಛಾಗಮ ನಡ ನಡಸಿ ಪಿಡಿಯ ಲೊಡನೆ ಕಿನ್ನರಯ್ಯಂ ಕೆರಳ್ದು ನೋಡಿ ॥ * * * * * * * * * * * * * *

ಕಂ ॥ ಪಿಡಿಯದಿ ರೆಲೆ ಖಳ ಕುರಿಯಂ । ಬಿಡು ಬಸವಾಧೀಶನಾಣೆಕಡುಪಾತಕಿ ನೀಂ ॥
ಬಿಡದೊಡೆ ನಿನ್ನಯ ತಲೆಯುಂ । ಪೊಡೆಯದೆ ಬಿಡೆ ನೆಂದು ಶರಣ ನುದ್ಘೋಷಿಸಿದಂ ॥೨೦॥

ಚಂ ॥ ಎಲವೊ ಮದಾಂಧ ಸಿಂಹಶಿಶು ಕೈಗೊಳಗಪ್ಪುದೆ ವನ್ಯದಂತಿಗು । ಜ್ವಲತರ ಲಿಂಗಮುದ್ರೆವಡೆದೀಕುರಿ ನೀಂ ಪಿಡಿಯಲ್ಕೆ ಸಾಧ್ಯಮೇ ॥ ತೊಲಗು ಶಿವೈಕ್ಯರಲ್ಲಿ ಶರಣಾಗತ ಪಂಜರ ರೆಂಬ ಪೇರ್ಮೆಯಾ ॥ ಸಲೆ ಬಿರುದುಂಟು ಕೇಳ್ಮರೆಗೆ ಬಂದುದನೀವನೆಧೀರಕಿನ್ನರಂ॥

ಕಂ ॥ ಪಡಪಡ ನೀನಲ್ತಿರೆ ನೀಂ । ಬಿಡದಾರಾಧಿಸುವ ನಿನ್ನ ಗೃಹದೇವತೆಯು ॥ ರ್ಪಿ ಡಿದೀಕುರಿಯುಂ ನೆಳೆದೊಡ ಮಡಿಯಿಡದೆ ಕರುತ್ತ ತರಿದು ಕೆಡಪ್ಪುವೆ ನೀಂಗಳ್ ॥ ॥೨೨॥

ವ ॥ ಎಂದು ಮುಟ್ಟ ಮೂದಲಿಸಿ ನುಡಿಯೆ ಖಲಂ ಕೇಳ್ದುಕೆರಳ್ದು ಕೂರಸಿಯ ನೆ

---

ಇತ್ತ- ಅವನುಕೊಟ್ಟ, ಅದಂವಿತ್ತತತಿಯುಂ- ಆ ಹಣದ ಗುಂಪನ್ನು, ಮಗುಳ್ದು, ಇತ್ತುದರಿಂದೆ, ತಂದೊ ಡಲ್ಲದೆ- ತಂದಹೊರ್ತು, ಪೊಸಪರ್ಬ್ಬಮುಂ, ನೆಗಳ್ವುದು, ಆಗದು; ಮದ್ಗೃಹದೇವತಾಳಿ, ಕಾಯ್ವುದು- ಕೋ ಪಮಾಡಿಕೊಳ್ಳುವದು; ಪಲ್ಲವ- ವಿಟನೇ !ಪೆರತೊಂದುಬಲ್ಗುರಿಯುಂ, ಇಕ್ಕುತೆ-ಕೊಲ್ಲುತ್ತ, ಪರ್ವ್ವಮುಂ, ಮಾ ಡೆ- ಮಾಡುವದಿಲ್ಲ. ... ... ... ... ... ॥೧೯॥

ಎಂದು, ಅವಳ್, ಆಕ್ಷೇಪದಿಂ, ಗಳಪೆ, ಕಾಮಾಂಧಂ, ಅವಂ- ವಿಟನು, ಮುಂದೆ, ಅಪ್ಪ, ಅನರ್ಥ ಮುಂ, ಲೆಕ್ಕಿಸದೆ, ದೇಗುಲಕ್ಕೆ- ದೇವಸ್ಥಾನಕ್ಕೆ, ಪರಿತಂದು- ಓಡಿಬಂದು, ಲಿಂಗಮುದ್ರಾಂಕಿತಛಾಗಮುಂ, ಅಡಸಿ, ಪಿಡಿಯಲ್, ಒಡನೆ, ಕಿನ್ನರಯ್ಯಂ, ಕೆರಳ್ದು- ಕೋಪಿಸಿ, ನೋಡಿ. * * * * * *

ಎಲೆಖಳ! ಕುರಿಯಂ, ಪಿಡಿಯದಿರ್; ಬಸವಾಧೀಶನ, ಆಣೆ, ಬಿಡು; ನೀಂ, ಕಡುಘಾತಕಿ- ಬಹುಪಾ ಪಿಯು, ಬಿಡದೊಡೆ, ನಿನ್ನಯ, ತಲೆಯುಂ, ಪೊಡೆಯದೆ, ಬಿಡೆಂ. ಎಂದು, ಶರಣಂ, ಉದ್ಘೋಷಿಸಿದಂ- ಗಟ್ಟ ಯಾಗಿ ಕೂಗಿದನು. ... ... ... ... ... ॥೨೦॥

ಎಲವೊಮದಾಂಧ! ಸಿಂಹಶಿಶು- ಸಿಂಹದ ಮರಿಯು, ವನ್ಯದಂತಿಗೆ- ಕಾಡಿನಲ್ಲಿಹುಟ್ಟಿದ ಆನೆಗೆ, ಕೈಗೆ, ಒಳಗಪ್ಪುದೆ- ಅಧೀನವಾಗುವದೇ? ಉಜ್ವಲತರಲಿಂಗಮುದ್ರೆಪಡೆದ, ಈ ಕುರಿ, ನೀಂ, ಪಿಡಿಯಲ್ಕೆ, ಸಾಧ್ಯ ಮೆ? ತೊಲಗು; ಶಿವೈಕ್ಯರಲ್ಲಿ, ಶರಣಾಗತಪಂಜರರ್- ಮರೆಹೊಕ್ಕವರಿಗೆ ಕಬ್ಬಿಣದ ಗೂಡಾದವರು, ಎಂಬ, ಪೇರ್ಮೆಯಾ, ಬಿರುದು, ಸಲೆ- ಚೆನ್ನಾಗಿ, ಉಂಟು; ಕೇಳ್,ಮರೆಗೆ,ಬಂದುದಂ,ಧೀರಕಿನ್ನರಂ, ಈವನೆ? ॥೨೧॥

ಪಡಪಡ- ಎಲಎಲಾ! ನೀನಲ್ತಿರೆ- ನೀನಲ್ಲದೆ, ನೀಂ, ಬಿಡದೆ, ಆರಾಧಿಸುವ- ಪೂಜಿಸುವ, ಗೃಹದೇವ ತೆಯರ್, ಈಕುರಿಯಂ, ಪಿಡಿದು, ಸೆಳೆದೊಡಂ, ಕರುತ್ತೆ- ಕೋಪಗೊಂಡು, ಅಡಿಯಿಡದೆ- ಕಾಲನ್ನಾಚೆಗಿ ಕ್ಕದೆ, ಈಗಳ್, ತರಿದು, ಕೆಡಪುವೆಂ. ... ... ... ... ॥೨೨॥

ಎಂದು, ಮುಟ್ಟ- ತನ್ನ ಮೇಲೆ ಕಯ್ಯನ್ನಿಟ್ಟು, ಮೂದಲಿಸಿ- ಶಪಥವಂ ಮಾಡಿ, ನುಡಿಯೆ, ಖಲಂ, ಕೇಳ್ದು, ಕೆರಳ್ದು, ಕೂರಸಿಯುಂ- ತೀಕ್ಷ್ಣವಾದ ಕತ್ತಿಯನ್ನು, ಎತ್ತುತ್ತೆ, ಇದಿರ್ಚಿ- ಎದುರಾಗಿ, ನಿಲೆ, ಕಿ

ತ್ತುತ್ತಿರ್ದ್ದಿರ್ಚ್ಚಿ ನಿಲೆ ಕಿನ್ನರಯ್ಯಂ ಕಂಡು ಕೋಪಾಟೋಪಮಂ ತಾಳ್ದು ಕರತಲಕರಾಳಖ ಡ್ಗಮಂ ಜಡಿದಡಸಿ ನೋಡಿ ॥ * * * * * * * * * * *

ಕಂ॥ ಕೆಡೆ ಕೆಡೆ ಯೆನುತ್ತೆ ಗರ್ಜ್ಜಿಸಿ । ಪೊಡೆದ ನಹಾಯುಧದೆ ಕಿನ್ನರಂ ತಚ್ಚಿರಮಂ॥ ಕೆಡೆಯೆ ಕಬಂಧಂ ತಲೆಯುದು । ಸಿಡಿಯೆ ಪುರಾಂತಕನ ಗುಡಿಯ ಪೊರಗಣ್ಗಾಗಳ್ ॥೬೩॥

ವ॥ ಅಂತು ಪೊಸೆದುಕೆಡೆದ ಮುಂಡಮಂ ದೇಗುಲದ ಪೊರಗಣ್ಗೆ ಬಿಸುಡಿಸಿ ಕಿನ್ನರೇಂದ್ರ ಮಿರ್ಪ್ಪಿನ ಮಾದುರಾತ್ಮಕನ ಬಂಧುಗಳ್ನೆರೆದು ಸಂದಣಿಸಿ ಬಿಜ್ಜಳನ ಸಭೆಗೆಯ್ದಿ ಮೊರೆಯಿಟ್ಟು ಮರುಗಿ ॥ * * * * * * * * * * * * *

ಚಂ ॥ ಧರಣಿಪ ಬಿನ್ನಪಂ ಕುರಿಯ ನೊಂದ ನಿವಂ ಬೆಲೆಗೊಟ್ಟು ಕೊಂಡುಭಾ । ಸುರಪುರವೀಥಿಯೊಳ್ತಳರ್ವವೇಳೆಯೊಳಾಕುರಿ ಪೊಕ್ಕುದೀಶಮಂ ॥ ಧಿರಮ ನದಂಕರಂ ಪಿಡಿಯೆ ಮುಟ್ಟದಿ ರೆಂದಪರಾಧಮೇನುಮೊಂ । ಧಿರ ದೆಸೆವೀತನಂ ತರಿ ದುರುಳ್ಚಿದನುಗ್ರ ತೆ ವೆತ್ತು ಕಿನ್ನರಂ ॥ ... ... ... ... ... ॥೬೪॥

ವ॥ ಎಂದಾರುಂಡಮುಂಡಮಂ ಮುಂದಿಟ್ಟು ಮೊರೆಯಿಡೆ ಧರಾಧಿಪಂ ಕೇಳ್ದುಕೋ ಪಮಂ ತಾಳ್ದು ಬಸವರಸನ ಮುಖಾರವಿಂದಮಂ ನೋಡಿ ॥ * * * * * *

ಚಂ ॥ ಪರಮುದಯಾಪರ ರ್ನ್ಸತತನೀತಿಯುತ ರ್ಧರಭಕ್ತರೆಂದು ಸಾ । ದರಮೆನ ಗೆಂದ ನಿನ್ನ ನುಡಿ ತಪ್ಪುಗುಮೇವೃಷಭೇಂದ್ರ ನಿನ್ನ ಕಿ ॥ ನ್ನರವಿಭುದೇಗುಲಕ್ಕೆ ಕುರಿ

---

ನ್ನರಯ್ಯಂ, ಕಂಡು, ಕೋಪಾಟೋಪಮಂ– ಬಹು ಕೋಪವನ್ನು, ತಾಳ್ದು, ಕರತಳಕರಾಳಖಡ್ಗಮಂ– ಕೈಯ್ಯಲ್ಲಿರುವ ತೀಕ್ಷ್ಣವಾದ ಕತ್ತಿಯನ್ನು, ಜಡಿದು- ಅಳ್ಳಾಡಿಸಿ, ಅಡಸಿ- ಸೇರಿಸಿ, ನೋಡಿ. * *

ಕಿನ್ನರಂ, ಕೆಡೆಕೆಡೆ- ಬೀಳು ಬೀಳು, ಎನುತ್ತೆ, ಗರ್ಜಿಸಿ, ತಚ್ಚಿರಮಂ-ಆ ವಿಟನ ತಲೆಯನ್ನು, ಅಹಾ ಯುಧದೆ- ಕತ್ತಿಯಿಂದ, ಕಬಂಧಂ- ಮುಂಡವು, ಕೆಡೆಯೆ- ಬೀಳುವಹಾಗೆ, ಅದುತಲೆ, ಪುರಾಂತಕನ, ಗುಡಿ ಯ, ಪೊರಗಣ್ಗೆ- ಹೊರಕ್ಕೆ, ಸಿಡಿಯೆ- ಹಾರುವಹಾಗೆ, ಆಗಳ್, ಪೊಸೆದಂ. ... ॥೬೩॥

ಅಂತು, ಪೊಸೆದು, ಕೆಡೆದ- ಬಿದ್ದ, ಮುಂಡಮಂ, ಕಿನ್ನರೇಂದ್ರಂ, ದೇಗುಲದ, ಪೊರಗಣ್ಗೆ, ಬಿಸು ಡಿಸಿ, ಇರ್ಪ್ಪಿನಂ, ಆದುರಾತ್ಮಕನ- ಆ ದುಷ್ಟನಾದ ವಿಟನ, ಬಂಧುಗಳ್, ನೆರೆದು- ಕೂಡಿ, ಸಂದಣಿಸಿ-ಗುಂಪಾ ಗಿ, ಬಿಜ್ಜಳನ, ಸಭೆಗೆ, ಎಯ್ದಿ- ಹೋಗಿ, ಮೊರೆಯಿಟ್ಟು ದೂರನ್ನು ಹೇಳಿಕೊಂಡು, ಮರುಗಿ-ದುಃಖಪಟ್ಟು.

ಧರಣಿಪ! ಬಿನ್ನಪಂ- ವಿಜ್ಞಾಪನೆ; ಇವಂ- ಈ ಸತ್ತಿರುವಾತನು, ಒಂದಂ ಕುರಿಯಂ, ಬೆಲೆಗೊಟ್ಟು- ಕ್ರಯವಂ ಕೊಟ್ಟು, ಕೊಂಡು, ಭಾಸುರಪುರವೀಥಿಯೊಳ್, ತಳರ್ವ- ಹೋಗುವ, ವೇಳೆಯೊಳ್, ಆಕುರಿ, ಈಶಮಂದಿರಮಂ, ಪೊಕ್ಕುದು, ಅದಂ, ಕರಂ, ಪಿಡಿಯೆ, ಮುಟ್ಟದಿರ್, ಎಂದು, ಏನುಂಅಪರಾಧಂ– ಯಾ ವ ತಪ್ಪುಕೊಡ, ಒಂದಿ, ಇರದೆ, ಎಸೆವ, ಈತನಂ, ಕಿನ್ನರಂ, ಉಗ್ರತೆವೆತ್ತು- ಕ್ರೂರತ್ವವಂ ಹೊಂದಿ, ತರಿ ದು- ಕತ್ತರಿಸಿ, ಉರುಳ್ಚಿದಂ. ... ... ... ... ॥೬೪॥

ಎಂದು, ಆರುಂಡಮುಂಡಮಂ, ಮುಂದೆ, ಇಟ್ಟು, ಮೊರೆಯಿಡೆ, ಧರಾಧಿಪಂ, ಕೇಳ್ದು, ಕೋಪಮಂ, ತಾಳ್ದು, ಬಸವರಸನ, ಮುಖಾರವಿಂದಮಂ, ನೋಡಿ. * * * * * * * * * *

ವೃಷಭೇಂದ್ರ! ವರಭಕ್ತರ್, ಪರಮುದಯಾಪರರ್- ಉತ್ಕೃಷ್ಟವಾದ ಕೃಪೆಯುಳ್ಳಾಸಕ್ತರು, ಸತ ತನೀತಿಯುತರ್- ಯಾವಾಗಲೂ ನೀತಿಯುಂದ ಕೂಡಿದವರು, ಎಂದು, ಸಾದರಂ, ಎನಗೆ, ಎಂದ- ಹೇಳಿದ, ನಿ ನ್ನ, ನುಡಿ, ತಪ್ಪುಗುಮೆ ? ನಿನ್ನ, ಕಿನ್ನರವಿಭು, ದೇಗುಲಕ್ಕೆ, ಕುರಿ, ಪೊಕ್ಕೊಡೆ, ಅದು- ಆ ಕುರಿಯು, ತ

ಪ್ರೊಕ್ಕೊಡೆ ತನ್ನ ನಮೆಂತೊ ಕೊಂಡವಂ । ಕರ ಮಿಡ ನೀಳ್ದು ಸುದೆಳೆಯೆ ಕಿಮ್ಮನೆ ಕೊಂ
ದ ನುದಗ್ರವೃತ್ತಿಯಿಂ ॥ ... ... ... ... ... ॥೬೫॥

ಕಂ ॥ ದುರಿತಕ್ಕಳ್ಕದೆ ಪಳಿಗುಂ । ದರೆ ಯೆಂಬುದ ನಿಂಬುಗೆಯ್ಯದೆಂತಪ್ಪರುಮಂ ॥
ಪರಿಕಿಸೆ ತಪ್ಪಿಲ್ಲದೆಯುಂ । ಹರಭಕ್ತರೊಳ್ಕಿವರ ಸಾರ್ಬ್ಬಾಧಿಪರೋ ॥ ... ॥೬೬॥

ಕಂ ॥ ಅರಸುತನಂ ತಮಗಾದಂ । ತಿರೆ ಪರರಂ ಕೊಲ್ವ ರಣಕಿಪ ರ್ಪರಮತಮಂ ॥
ಪರದೈವಂಗಳ ನಳಿವ । ರ್ಪರಪ್ರಮಾಣೋಕ್ತಿಶಾಸ್ತ್ರಮಂ ಪಳಿಕ್ಕೈವರ್ ॥ ... ॥೬೭॥

ಮಹಾಸ್ರ ॥ ಮಗನಂ ಸೀಳ್ವುದು ಮಂಘ್ರಿಯಿಂದೊದೆಯುದುಂ ಮಾಂಸಾರ್ಪ್ಪಣಂಗೆ
ಯ್ವುದುಂ । ಬಗೆವರ್ಚ್ಚಿಂ ಬಿರುಗಲ್ಗಳಿಂ ದಿಸುವುದುಂ ಮೇಣ್ತಂದೆಯಂ ಕೊಲ್ವುದುಂ ॥ ಸೊ
ಗಯಿಪ್ಪಾತ್ಮವಧೂಟಿಯಂ ಕುಡುವುದುಂ ದುರ್ಜ್ಜಾತಿಯೊಳ್ಬಾಳ್ವುದುಂ । ಜಗದೊಳ್ಭಕ್ತ
ರ ರೀತಿಯೆಂಬ ರಿದನಾವಂ ನಚ್ಚುವಂ ಮೆಚ್ಚುವಂ ॥ ... ... ॥೬೮॥

ಕಂ ॥ ಅರಸರ್ಗ್ಗಾಜ್ಞಾಭಂಗಮೆ । ಮರಣೋಪಮ ಮಲ್ತೆ ಶರಣ ರೆನ್ನಾಜ್ಞೆಯ
ನೊತ್ತರಿಸಿ ನಡೆದಪ ರಿದೇಕೆಮ। ಗರಸುತನಂ ಬಸವ ನೀನೆ ಕೈಕೊಳ್ವುದಿದಂ ॥ ॥೬೯॥

ವ ॥ ಎಂದರಸಂ ವಿರಸಂ ನುಡಿಯೆ ಬಸವಂ ಕೇಳ್ದು ಮುಗುಳ್ನಗೆನಕ್ಕು ॥ * *

ಕಂ ॥ ಶಿವಧರ್ಮಮಾರ್ಗಮಂ ನಿ ತ । ರುವರಲ್ತಲ್ತೆಂದು ಶರಣರವನಿಪ ಮೇಲಂ ॥

---

ನ್ನದು, ಎಂತೊ ? ಅವಂ, ಕೊಂಡವಂ, ಕರಂ, ನೀಳ್ದು, ಸದ್ದು,ಎಳೆಯೆ, ಕಿಮ್ಮನೆ- ಸುಮ್ಮನೆ, ಉದಗ್ರವೃ
ತ್ತಿಯಿಂ- ವಿಶಾರಿದ ವರ್ತನದಿಂದ, ಕೊಂದಂ ... ... ... ... ॥೬೫॥

ಹರಭಕ್ತರ್, ದುರಿತಕ್ಕೆ, ಅಳ್ಕದೆ- ಭಯಪಡದೆ, ದರೆ- ಭೂಜನವು, ಪಳಿಗುಂ- ನಿಂದಿಸುವದು, ಎಂಬುದ
ದಂ, ಇಂಬುಗೆಯ್ಯದೆ- ಮನೋಹರವಾದುದನ್ನಾಗೆಣಿಸದೆ,ಪರಿಕಿಸೆ- ವಿಚಾರಿಸಿದರೆ,ತಪ್ಪು, ಇಲ್ಲದೆಯುಂ, ಎಂ
ತಪ್ಪರುಮಂ- ಎಂತವರನ್ನಾದರೂ, ಕೊಲ್ವರ್, ಇವರುಂ, ಆರ್‌ಬಾಧಿಪರೊ- ಯಾರುಪೀಡಿಸುವರೋ? ॥೬೬॥

ತಮಗೆ, ಅರಸುತನಂ, ಆದಂತಿರೆ- ಆದಹಾಗೆ, ಪರರ- ಕೊಲ್ವರ್, ಪರಮತಮಂ, ಅಣಕಿಪರ್- ಹಾ
ಸ್ಯಮಾಡುವರು; ಪರದೈವಂಗಳಂ- ಶಿವೇತರದೇವತೆಗಳನ್ನು, ಅಳಿವರ್- ನಾಶಮಾಡುವರು, ಪರಪ್ರಮಾ
ಣೋಕ್ತಿಶಾಸ್ತ್ರಮಂ- ಅನ್ಯಮತದವರಿಗೆ ಪ್ರಮಾಣವಾದ ವಚನವುಳ್ಳಶಾಸ್ತ್ರವನ್ನು, ಪಳಿಕ್ಕೈವರ್- ದೂಷಿ
ಸುವರು. ... ... ... ... ... ... ॥೬೭॥

ಮಗನಂ, ಸೀಳ್ವುದುಂ, ಅಂಘ್ರಿಯಿಂದೆ- ಒದೆಯುದು, ಮಾಂಸಾರ್ಪ್ಪಣಂಗೆಯ್ವುದುಂ, ಬಗೆವರ್ಚ್ಚಿಂ-
ಮನಸ್ಸಿನಸೆಚ್ಚೆಗೆಯಿಂದ, ಬಿರುಗಲ್ಗಳಿಂದೆ- ಬಿರುಸಾದಕಲ್ಲುಗಳಿಂದ, ಇಸುವುದುಂ- ಹೊಡೆಯುವದೂ, ಮೇ
ಣ್, ತಂದೆಯಂ, ಕೊಲ್ವುದುಂ, ಸೊಗಯಿಪ್ಪ, ಆತ್ಮವಧೂಟಿಯಂ- ತನ್ನಪತ್ನಿಯನ್ನು, ಕುಡುವುದುಂ,
ದುರ್ಜಾತಿಯೊಳ್- ಕೆಟ್ಟಜಾತಿಯಲ್ಲಿ, ಬಾಳ್ವುದುಂ, ಜಗದೊಳ್, ಭಕ್ತರ, ರೀತಿ, ಎಂಬರ್, ಇದಂ, ಆವಂ,
ನಚ್ಚುವಂ- ನಂಬುವನು? ಮೆಚ್ಚುವಂ- ಶ್ಲಾಘಿಸುವನು? ... ... ... ॥೬೮॥

ಬಸವ! ಅರಸರ್ಗ್ಗೆ, ಆಜ್ಞಾಭಂಗಮೆ- ಅಪ್ಪಣೆಯು ನಡೆಯದಿರುವದೇ, ಮರಣೋಪಮಮಲ್ತೆ- ಸಾ
ಯುವದಕ್ಕೆ ಸದೃಶವಾದುದಲ್ಲವೇ ? ಶರಣರ್, ಎನ್ನ, ಆಜ್ಞೆಯಂ, ಒತ್ತರಿಸಿ- ಒರೆಮಾಡಿ, ನಡೆದಪರ್, ಎ
ಮಗೆ, ಇದುಅರಸುತನಂ, ಏಕೆ ? ನೀನೆ, ಇದಂ- ಈ ಅರಸುತನವನ್ನು, ಕೈಕೊಳ್ವುದು-ಸ್ವೀಕರಿಸುವದು.

ಎಂದು, ಅರಸಂ, ವಿರಸಂ- ಪ್ರೀತಿಹೀನನಾಗಿ, ನುಡಿಯೆ, ಬಸವಂ, ಕೇಳ್ದು, ಮುಗುಳ್ನಗೆನಕ್ಕು. *

ಅವನಿಪ! ಎಮ್ಮ,ಶರಣರ್, ಶಿವಧರ್ಮಮಾರ್ಗಮಂ, ವಿಶಾರುವರ್ ,ಅಲ್ತಅಲ್ತು; ಮೇಲಂ-ದೆಬ್ಬಾದಂ

ನಿವರಿಸದೆ ಕಾರ್ಯಹಾನಿಯ । ನವಧರಿಸದೆ ಬಾಯ್ಗೆ ಬಂದವೋಲ್ ನುಡಿದಪುದೆ ॥ ॥೩೦॥

ಚಂ ॥ ಕಿರುಕುಳನಲ್ತು ಕಿನ್ನರ ಮಹಾವಿಭು ಶಂಕರರೂಪನಲ್ತೆ ತ । ಪ್ಪೊರಗದೆ ಕೊಲ್ವನೇ ಪೆರನನೆಳ್ತರದೀದುದೆನುತ್ತೆ ಪೇಳ್ ಕೇ ॥ ಳ್ದೆರಕದೆ ಕಟ್ಟುಕೊಟ್ಟಗೆಯೊಳೆಂ ಬವೊಲೀಖಳರುಕ್ತಿಗೇಳ್ದುವೇ । ಲರಿಯದ ಕಾರ್ಯಮಂ ನುಡಿವೆ ಬಲ್ಲವರೊಲ್ವರೆ ನಿನ್ನನುರ್ವಿಪ ॥ ... ... ... ... ... ... ॥೩೧॥

ಕಂ ॥ ಕಳುಪಾತನಲ್ಲಿಗೆಲೆ ಮಂ । ಜುಳಮತಿಮಂತ್ರಿಗಳ ನರಸ ಬಳಿಕವನಿರವಂ ॥ ತಿಳಿ ತಪ್ಪೆಳ್ಳನಿತಾದೊಡ । ಮಿಳೇಶ ಕೇಳ್ಕಿನ್ನರಯ್ಯನೊಳ್ಪೊರ್ದುಗುಮೆ ॥ ॥೩೨॥

ವ॥ಎನಲೊಡನಾನುಡಿಯನಿಂಬುಕೆಯ್ದು ಬಿಜ್ಜಳಂ ತನ್ನ ಮನ್ನಣೆಯ ಮಂತ್ರಿವರರಂ ಕಳುಪಲೊಡನವರ್ಬಂದು ಕಿನ್ನರನಂ ಕಂಡು ಪೊಡಮಟ್ಟು ನಿಟಿಲತಟಘಟಿತಕರಪುಟರಾಗಿ ॥ * * * * * * * * * * * * * * *

ಮಹಾಸ್ರ ॥ ಅಮರ್ದೆತ್ತಂಬಿಲವೆತ್ತ ಭಾನುಕಿರಣಂ ತಾನೆತ್ತ ಮರ್ಬೆತ್ತ ಚಂದ್ರಮಯೂಖಾವಳಿಯೆತ್ತ ಚಕ್ರಚಯಮೆತ್ತಂಭೋಧಿಯೆತ್ತಲ್ಪಕ ॥ ರ್ದಮವಾಪೀಗತಭೇಕಮೆತ್ತ ಶರಣರ್ನೀವೆತ್ತ ದುರ್ನೀತದು । ರ್ದಮದೋಷಾರ್ಥಿಜನೌಘಮೆತ್ತರಿಯೆವಾವಿಂತಪ್ಪ ಸಂಬಂಧಮಂ ॥ ... ... ... ... ॥೩೩॥

---

ಕವನ್ನು, ವಿವರಿಸದೆ, ಕಾರ್ಯಹಾನಿಯಂ, ಅವಧರಿಸದೆ-ಆಲೋಚಿಸದೆ, ಬಾಯ್ಗೆ, ಬಂದವೋಲ್, ನುಡಿದಪುದೆ ?

ಕಿನ್ನರಮಹಾವಿಭು, ಕಿರುಕುಳಂ- ನೀಚಕುಲದಲ್ಲಿ ಹುಟ್ಟಿದವನು, ಅಲ್ತು; ಶಂಕರರೂಪನಲ್ತೆ ? ತಪ್ಪು, ಒರಗದೆ- ಮೇಲೆ ಬೀಳದೆ, ಪೆರನಂ- ಕೊಲ್ವನೆ ? ಇರದೆ, ಎಳ್ತು- ಎತ್ತು, ಈದುದು, ಎನುತ್ತೆ, ಪೇಳ್, ಕೇಳ್ದು, ಎರಕದೆ- ಪ್ರೀತಿಯಿಂದ, ಕೊಟ್ಟಗೆಯೊಳ್, ಕಟ್ಟು, ಎಂಬವೊಲ್, ಈಖಳರ, ಉಕ್ತಿಗೇಳ್ದು, ಮೇಲರಿಯದ- ಮುಂದೆ ಬರುವುದಂ ತಿಳಿಯದ, ಕಾರ್ಯಮಂ, ನುಡಿವೆ; ಉರ್ವಿಪ ! ನಿನ್ನಂ, ಬಲ್ಲವರ್- ತಿಳುವಳಿಕೆಯುಳ್ಳವರು, ಒಲ್ವರೆ- ಪ್ರೀತಿಸುವರೇ ? ... ... ... ... ।೩೧॥

ಅರಸ ! ಆತನಲ್ಲಿಗೆ- ಆ ಕಿನ್ನರಯ್ಯನ ಬಳಿಗೆ, ಮಂಜುಳಮತಿಮಂತ್ರಿಗಳಂ- ಮನೋಹರವಾದ ಬುದ್ಧಿಯುಳ್ಳ ಮಂತ್ರಿಗಳನ್ನು, ಕಳುಪು, ಬಳಿಕೆ, ಅವನ- ಕಿನ್ನರಯ್ಯನ, ಇರವಂ- ರೀತಿಯನ್ನು, ತಿಳಿ; ಇಳೇಶ ! ಕೇಳ್; ಕಿನ್ನರಯ್ಯನೊಳ್, ತಪ್ಪು, ಎಳ್ಳನಿತಾದೊಡಂ- ಎಳ್ಳಷ್ಟಾದರೂ, ಪೊರ್ದುಗುಮೆ- ಹೊಂದೀತೇ ? ... ... ... ... ... ।೩೨॥

ಎನಲ್, ಒಡನೆ, ಬಿಜ್ಜಳಂ, ಆನುಡಿಯಂ ಇಂಬುಗೆಯ್ದು, ತನ್ನ, ಮನ್ನಣೆಯ- ಮರ್ಯಾದಿಸಿಗೊಳ್ಳುವದಕ್ಕೆ ಯೋಗ್ಯರಾದ, ಮಂತ್ರಿವರರಂ, ಕಳುಪಲ್, ಒಡನೆ, ಅವರ್, ಬಂದು, ಕಿನ್ನರನಂ, ಕಂಡು, ಪೊಡಮಟ್ಟು- ನಮಸ್ಕರಿಸಿ, ನಿಟಿಲತಟಘಟಿತಕರಪುಟರ್- ಹಣೆಯಲ್ಲಿಸೇರಿಸಲ್ಪಟ್ಟಬದ್ಧಾಂಜಲಿಯುಳ್ಳವರು, ಆಗಿ. *

ಅಮರ್ದು- ಅಮೃತವು, ಎತ್ತ? ಅಂಬಿಲಂ- ಅಂಬಲಿಯು, ಎತ್ತ ? ಭಾನುಕಿರಣಂ, ತಾಂ, ಎತ್ತ ? ಮರ್ಬು- ಕತ್ತಲೆಯು, ಎತ್ತ ? ಚಂದ್ರಮಯೂಖಾವಳಿ- ಬೆಳ್ದಿಂಗಳ ಪಜ್ತಿಯು, ಎತ್ತ ? ಚಕ್ರಚಯಂ- ಚಕ್ರವಾಕಪಕ್ಷಿಗಳಗುಂಪು, ಎತ್ತ? ಅಂಭೋಧಿ, ಎತ್ತ ? ಅಲ್ಪಕರ್ದಮವಾಪೀಗತಭೇಕಂ- ಚಿಕ್ಕದಾದ ಕೆಸರಿನ ಬಾವಿಯನ್ನು ಹೊಂದಿದ ಕಪ್ಪೆಯು, ಎತ್ತ ? ನೀವ್, ಶರಣರ್, ಎತ್ತ ? ದುರ್ನೀತದುರ್ದಮದೋಷಾರ್ಥಿಜನೌಘಂ- ದುರ್ನೀತ- ಕೆಟ್ಟನೀತಿಯುಳ್ಳ; ದುರ್ದಮ- ಇಂದ್ರಿಯನಿಗ್ರಹಶೂನ್ಯರಾದ, ದೋಷಾರ್ಥಿಜನೌಘ- ಪಾಪವನ್ನು ಬಯಸುವ ಜನಗಳಗುಂಪು, ಎತ್ತ? ಆವ್, ಇಂತಪ್ಪ, ಸಂಬಂಧಮಂ, ಅರಿಯೆವ್. ।೩೩॥

ವ ‖ ದೇವ ನೀಂ ನೋಳ್ಪೊಡೆ ಮಹಾನುಭಾವಂ ಸ್ವತಂತ್ರಶೀಲಂ ಶಿವಾನಂದರಸಸಮಾಸ್ವಾದನತೃಣೀಕೃತಜಗದ್ವ್ಯಾಪಾರಂ ಭವಭಾರಿಯಪ್ಪ ಲೌಕಿಕವರಾಕಜನದೊಡನೆ ವಿವಾದಮದೇಂಕಾರಣಂ ತಗುಳ್ಚಿದಿರಿ ಯಿದಂ ತಿಳಿಯ ಲರಸ ನೆಮ್ಮಂ ನಿಮ್ಮೆಡೆಗಟ್ಟಿದ ನೆಂದವ ರ್ಪೇಳೆ ಕಿನ್ನರೇಂದ್ರ ನವಧಿರೊರೆಯ ನಾಕರ್ಣಿಸಿ‖ * * * * * * *

ಮಹಾಸ್ರ ‖ ಪಲವಾಲಾವಮೊ ಳೇನು ಪಾಪಿ ಕುರಿಯಂ ತರ್ಪಾಗ ಳುದ್ವಿದ್ಗ್ನಯಾ । ಕುಲಮೇಷಂ ಪರಿದೀಪ್ಪುರಾಂತಕನ ಗೇಹಂ ಬೊಕ್ಕು ದಾತಂಮಹಾ ‖ ವಿಲಚಿತ್ತಂ ಬಳಿಪಂ ಪಿದಂ ಪಿಡಿಯೆ ಲಿಂಗಾಗಾರಮಂ ಪೊಕ್ಕುದಂ । ಕೊಲಲೇನಕ್ಕುಮೆ ಬೇಡ ಕೊಂಡಪೆಲೆಯಂ ನೀಂ ಪೇಳ್ವುದಾನಿತ್ತಪೆಂ ‖ ... ... ... ... ... ‖೩೪‖

ಕ ‖ ಇರ್ಮ್ಮಡಿ ಮೂರ್ಮ್ಮಡಿ ಪೊಂಗಳ । ನೋರ್ಮ್ಮೆಯೆ ಪಿಡಿಕುಡುವೆ ನಿಲ್ಲಿ ಬಿಡು ಮೇಷಮನೆಂ‖ ದೂರ್ಮ್ಮೊದಲಿ ನುಡಿದೆ ನಾವು । ಪ್ಕರ್ಮ್ಮವಿಲ ನೆನ್ನ ನಣಕಿಸು ತ್ತಿಂತೆಂದಂ‖ ‖೩೫‖

ಕಂ ‖ ಉತ್ತಮಗುಣಗಣಪುರುಷಕು । ಲೋತ್ತಂಸಂ ಪ್ರಾಣಿಗಳ ದಯಾಪರ ನೀತಂ ‖ ಮತ್ತೆನ್ನದೆ ಸಾಸಿರಪೊ । ನ್ನಿತ್ತಾದೊಡಮರರೆ ಕುರಿಯ ಬಿಡಿಸದೆ ಮಾಣಂ ‖೩೬‖

ವ ‖ ಎಂದವ ನಾಳವಾಡಿ ನುಡಿಯ ಲಾಕ್ಷಣವೆ ಸಾಸಿರಪೊಂಗಳಂ ತರಿಸುತೆಣಿಸಿಕೊ

---

ದೇವ! ನೀಂ, ನೋಳ್ಪೊಡೆ, ಮಹಾನುಭಾವಂ- ದೊಡ್ಡದಾದ ಶಿವಾನುಭಾವವುಳ್ಳವನು; ಸ್ವತಂತ್ರಶೀಲಂ- ತನ್ನಧೀನವಾದ ಸದಾಚಾರವುಳ್ಳವನು, ಶಿವಾ......ವ್ಯಾಪಾರಂ— ಶಿವಾನಂದರಸ- ಪರಬ್ರಹ್ಮಾನಂದವೆಂಬ ಜಲವನ್ನು, ಸಮಾಸ್ವಾದನ- ಪಾನಮಾಡುವದರಿಂದ, ತೃಣೀಕೃತ- ಹುಲ್ಲಿನಂತೆ ಮಾಡಲ್ಪಟ್ಟ, ಜಗದ್ವ್ಯಾಪಾರಂ-ಲೌಕಿಕವ್ಯವಹಾರವುಳ್ಳವನು;ಭವಭಾರಿಯಪ್ಪ-ಪಾಪದಭಾರವುಳ್ಳ,ಲೌಕಿಕವರಾಕಜನದೊಡನೆ-ಲೌಕಿಕವಾದ ನೀಚಜನದೊಡನೆ, ವಿವಾದಮಂ- ಕಲಹವನ್ನು, ಅದೇಂಕಾರಣಂತಗುಳ್ಚಿದಿರಿ- ಅದೇನುಕಾರಣ ಮಾಡಿದಿರಿ? ಇದಂ, ತಿಳಿಯಲ್, ಅರಸಂ, ಎಮ್ಮಂ, ನಿಮ್ಮಲ್ಲಿಗೆ, ಅಟ್ಟಿದಂ, ಎಂದು, ಅವರ್, ಪೇಳೆ, ಕಿನ್ನರೇಂದ್ರಂ, ಅವಧಿರ- ಅವರುಗಳ, ಒರೆಯಂ- ಮಾತನ್ನು, ಆಕರ್ಣಿಸಿ- ಕೇಳಿ. * * * * * *

ಪಲವಾಲಾಪದೊಳ್- ಬಲುಮಾತಿನಿಂದ, ಏನು? ಪಾಪಿ- ಪಾತಕಿಯು, ಕುರಿಯಂ, ತರ್ಪಾಗಳ್, ಉದ್ವಿದ್ಗ್ನಯಾಕುಲಮೇಷಂ- ಹೆಚ್ಚಾದಭೀತಿಯಿಂದವ್ಯಾಪ್ತವಾದ ಕುರಿಯು, ಪರಿದು- ಬಂದು, ಈ ಪುರಾಂತಕನ, ಗೇಹಬೊಕ್ಕುದು; ಮದಾವಿಲಚಿತ್ತಂ—ಗರ್ವದಿಂದ ಕಲ್ಮಷಯುಕ್ತವಾದ ಮನಸ್ಸುಳ್ಳ, ಆತಂ, ಬಳಿಪಂದು- ಸಮೀಪಕ್ಕೆಬಂದು, ಇದಂ- ಈ ಕುರಿಯನ್ನು, ಪಿಡಿಯೆ, ಲಿಂಗಾಗಾರಮಂ, ಪೊಕ್ಕುದು, ಕೊಲಲ್, ಅಕ್ಕುಮೇ? ಬೇಡ; ಕೊಂಡ, ಬೆಲೆಯು, ಪೇಳ್ವುದು; ಅಂ, ಇತ್ತಪೆಂ. ... ... ‖೩೪‖

ಇರ್ಮ್ಮಡಿಮೂರ್ಮ್ಮಡಿಪೊಂಗಳಂ-ಒಂದಕ್ಕೆರಡರಷ್ಟು ಮೂರರಷ್ಟು ವರಗಳನ್ನು, ಓರ್ಮ್ಮೆಯೆ, ಕುಡುವೆಂ, ಪಿಡಿ; ಮೇಷಮಂ, ಇಲ್ಲಿ, ಬಿಡು; ಎಂದು, ಊರ್ಮ್ಮೊದಲೆ- ಊರಿಗಿಂತಮುಂಚೆಯೇ, ನುಡಿದೆಂ, ಆದುಷ್ಕರ್ಮ್ಮವಿಲಂ- ಆ ಕೆಟ್ಟಕಾರ್‍ಯಮಾಡುವದರಿಂದ ಕಲ್ಮಷಯುಕ್ತನಾದ ವಿಟನು, ಎನ್ನಂ, ಅಣಕಿಸುತ್ತೆ- ಹಾಸ್ಯಮಾಡುತ್ತ, ಇಂತು, ಎಂದಂ. ... ... ... ... ‖೩೫‖

ಈತಂ- ಈ ಕಿನ್ನರಯ್ಯನು, ಉತ್ತಮಗುಣಗಣಪುರುಷಕುಲೋತ್ತಂಸಂ- ಶ್ರೇಷ್ಠವಾದ ಗುಣಸಮೂಹವುಳ್ಳವರ ಗುಂಪಿನಲ್ಲಿ ಉತ್ಕೃಷ್ಟನಾದವನು, ಮತ್ತೆ, ಪ್ರಾಣಿಗಳ, ದಯಾಪರಂ; ಎನ್ನದೆ; ಅರರೆ! ಸಾಸಿರಪೊನ್ನಿತ್ತಾದೊಡಂ, ಕುರಿಯ, ಬಿಡಿಸದೆ, ಮಾಣ. ... ... ‖೩೬‖

ಎಂದು, ಅವಂ, ಆಳವಾಡಿ- ಪರಿಹಾಸವಮಾಡಿ, ನುಡಿಯಲ್, ಆಕ್ಷಣವೆ, ಸಾಸಿರಪೊಂಗಳಂ, ತರಿಸು

ಟ್ಟು ನೀಂ ಮುಗುಳ್ದಳಪಿದೊಡಾನೆಂತುಂ ಬಿಡುವನಲ್ತೀಕುರಿಗೆ ಲಿಂಗಾಂಕಿತಂ ಗೆಯ್ದುಬಿಡುವೆ ನೆನೆ ಖಳ ನೊಡಂಬಟ್ಟು ಪೋಗಿ ಕಿರಿದುಪೊಳ್ತಂಕಳೆದು ಮುಗುಳ್ದಲ್ಲಿಗೆಯ್ತಂದಳಿಪಿ ಕುರಿಯ ಕೊರಲ್ಗೆ ನೇಣಂ ಬಂಧಿಸಿ ಪಿಡಿದೆಳೆಯೆ ಕಂಡು ॥ * * * * * *

ಚಂ॥ ಎಲೆ ಎಲೆ ದುಷ್ಟನೀಂ ಬಿಡುಬಿಡೀಕುರಿಯಂ ಪಿಡಿವಂದ ಮೆಂತೊ ಮುಂ । ಬೆಲೆಗೊಳುತಿತ್ತು ಮತ್ತಳಿಪಿ ನೀಂ ತೊಲಗೆಂದೆನೆ ಕೀಳ್ತನೆನ್ನಮೇಲ್ ॥ ಅಲಗನವಂ ಬಳಿಕ್ಕವನಂ ಕಡಿದಿಕ್ಕಿದೆ ನಾರೊಳಾಯ್ತು ತ । ಪ್ಪಲಸದೆ ನೋಡಿ ಮಾತಿದಕೆ ಸಾಕ್ಷಿ ವರತ್ರಿಪುರಾಂತಕೇಶ್ವರಂ ॥ ... ... ... ... ... ॥೩೭॥

ವ ॥ ಎಂಬುದನವರ್ಕೇಳ್ದು ವಿಸ್ಮಯಂಬಟ್ಟು ಸಭೆಯೊಳಿರ್ದ ಬಿಜ್ಜಳಂಗೆಯ್ತಂದೆರಗಿ ಮೇಷವೃತ್ತಾಂತಮುಮಾತ್ರಿಪುರಾಂತಕನ ಸಾಕ್ಷಿಯುಮನಾಸಚಿವರ್ಸವಿಸ್ತರಂ ಪೇಳೆ ಕೇಳ್ದು ಪರಿಹಾಸಂಗೆಯ್ದು ॥ * * * * * * * * * * * *

ಚಂ ॥ ಪ್ರಕಟಿತಲಿಂಗಸಾಕ್ಷಿಯನವಂ ನುಡಿಯಿಪ್ಪುದು ಮನ್ಮನಕ್ಕೆ ಕೌ । ತುಕಮಿದ ನೆಯ್ದೆ ನೋಳ್ಪೆನೆನುತೆಳ್ದು ಸಭಾಸದರೆಯ್ದೆ ಪಿಂತೆ ಪಾ ॥ ಠಕರೊಲವಿಂದಮುಗ್ಗಡಿಸೆ ಮುಂದೆ ತತಾನಕರಾವಮುಣ್ಮೆ ಬಂ । ದಕುಟಿಲಭಕ್ತನಿರ್ದ ಶಿವಮಂದಿರಮಂ ಪುಗುತಂದನುರ್ವಿಪಂ ॥ .. ... ... ... ... ॥೩೮॥

---

ತೆ, ಎಣಿಸಿ, ಕೊಟ್ಟು, ನೀಂ, ಮುಗುಳ್ದು, ಅಳಪಿದೊಡೆ- ದುರಾಸೆಯುಂಮಾಡಿದರೆ, ಆಂ, ಎಂತುಂ, ಬಿಡುವನಲ್ತು; ಈ ಕುರಿಗೆ, ಲಿಂಗಾಂಕಿತಂಗೆಯ್ದು ಬಿಡುವೆಂ, ಎನೆ, ಖಳಂ, ಒಡಂಬಟ್ಟು, ಪೋಗಿ, ಕಿರಿದುಪೊಳ್ತಂ- ಸ್ವಲ್ಪಕಾಲವನ್ನು, ಕಳೆದು, ಮುಗುಳ್ದು- ಪುನಃ, ಇಲ್ಲಿಗೆ, ಎಯ್ತಂದು, ಅಳಪಿ- ಆಸೆಯುಂಮಾಡಿ, ಕುರಿಯ, ಕೊರಲ್ಗೆ- ಕತ್ತಿಗೆ, ನೇಣಂ- ಹಗ್ಗವನ್ನು, ಬಂಧಿಸಿ, ಪಿಡಿದು, ಎಳೆಯೆ, ಕಂಡು. * * * * *

ಎಲೆಎಲೆದುಷ್ಟ! ನೀಂ, ಈ ಕುರಿಯಂ, ಬಿಡು, ಬಿಡು; ಮುಂಬೆಲೆಗೊಳ್ಳುತೆ- ಮೊದಲು ಕ್ರಯುವಂತೆಗೆದುಕೊಂಡು, ಇತ್ತು- ಕೊಟ್ಟು, ಮತ್ತೆ- ಪುನಃ, ಅಳಪಿ, ನೀಂ, ಪಿಡಿವ, ಅಂದಂ- ರೀತಿಯು, ಎಂತೊ? ತೊಲಗು- ಹೋಗು; ಎಂದೆನೆ, ಅವಂ, ಎನ್ನಮೇಲೆ, ಅಲಗಂ- ಕತ್ತಿಯನ್ನು, ಕೀಳ್ತಂ; ಬಳಿಕ್ಕಂ, ಅವನಂ, ಕಡಿದು, ಇಕ್ಕಿದೆಂ; ತಪ್ಪು, ಆರೊಳ್, ಆಯ್ತು? ಅಲಸದೆ- ಆಲಸ್ಯಮಾಡದೆ, ನೋಡಿಂ- ನೋಡಿರಿ; ಇಂತು, ಇದಕೆ- ಈ ಮಾತಿಗೆ, ವರತ್ರಿಪುರಾಂತಕೇಶ್ವರಂ, ಸಾಕ್ಷಿ. ... ... ॥೩೭॥

ಎಂಬುದಂ, ಅವರ್- ಆ ಮಂತ್ರಿಗಳು, ಕೇಳ್ದು, ವಿಸ್ಮಯಂಬಟ್ಟು- ಆಶ್ಚರ್ಯಪಟ್ಟು, ಎಯ್ತಂದು, ಸಭೆಯೊಳ್, ಇರ್ದ, ಬಿಜ್ಜಳಂಗೆ, ಎರಗಿ, ಮೇಷವೃತ್ತಾಂತಮುಂ, ಆ ತ್ರಿಪುರಾಂತಕನ, ಸಾಕ್ಷಿಯುಂ, ಆ ಸಚಿವರ್- ಮಂತ್ರಿಗಳು, ಸವಿಸ್ತರಂ- ವಿಸ್ತಾರವಾಗಿ, ಪೇಳೆ, ಕೇಳ್ದು, ಪರಿಹಾಸಂಗೆಯ್ದು: * * * *

ಅವಂ- ಆ ಕಿನ್ನರಯ್ಯನು, ಪ್ರಕಟಿತಲಿಂಗಸಾಕ್ಷಿಯುಂ, ನುಡಿಯಿಪ್ಪುದು- ಹೇಳಿಸುವದು, ಮನ್ಮನಕ್ಕೆ- ನನ್ನಮನಸ್ಸಿಗೆ, ಕೌತುಕಂ- ಆಶ್ಚರ್ಯಾವಹಮಾದುದು; ಇದು, ಎಯ್ದೆ- ಚೆನ್ನಾಗಿ, ನೋಳ್ಪೆಂ, ಎನುತೆ ಎಳ್ದು, ಪಿಂತೆ, ಸಭಾಸದರ್- ಸಭೆಯಲ್ಲಿದ್ದ ಜನರು, ಎಯ್ದೆ- ಬರಲು, ಪಾಠಕರ್- ಬಟ್ಟರಾಜರುಗಳು, ಮುಂದೆ, ಒಲವಿಂದಂ, ಉಗ್ಗಡಿಸೆ- ಹೊಗಳಲು, ತತಾನಕರಾವಂ- ತತ- ವಿಸ್ತಾರನಾದ, ಆನಕರಾವಂ- ತಮ್ಮಟೆಯಶಬ್ದವು, ಉಣ್ಮೆ- ಉಂಟಾಗಲು, ಉರ್ವಿಪಂ, ಬಂದು, ಅಕುಟಿಲಭಕ್ತಂ- ಕೃತ್ರಿಮವಿಲ್ಲದ ಭಕ್ತಿಯುಳ್ಳಕಿನ್ನರಯ್ಯನು, ಇರ್ದ, ಶಿವಮಂದಿರಮಂ, ಪುಗುತಂದಂ- ಪ್ರವೇಶಿಸಿದನು. ... ... ॥೩೮॥

ವ ॥ ಆಗಳಾಬಸವರಾಜಂ ಕಿನ್ನರೇಂದ್ರನಿರ್ದೆಡೆಗೆಳ್ತಂದೆರಗಿ ಕರಾರವಿಂದಮಂ ಮುಗಿದು ನಿಂದು ॥

ಉ ॥ ಸಾರವಿಚಾರ ಧೀರ ಶಿವತತ್ವಸುಧಾರಸರಾಜಹಂಸ ವಿ । ಸ್ತಾರಯಶಸ್ಕ ಯೋಗಿಜನವಲ್ಲಭ ಭಕ್ತಿಲತಾಂತಗಂಧ ಗಂ ॥ ಭೀರಗುಣಾಭಿರಾಮ ಮಹನೀಯ ಕೃಪಾಕರ ಸುಪ್ರತಾಪತೇ । ಜೋರಮಣೀಯ ದೇವ ಜಯ ಕಿನ್ನರಬೊಮ್ಮ ನಿಸರ್ಗವೈಭವ॥ ॥೩೯॥

ನಿರೋಷ್ಠ್ಯವೃತ್ತಂ ॥ ಚರಚರಣಾರ್ಚನಾಂಚಿತಚರಾಚರರಕ್ಷಣಶೀಲ ಸತ್ಯಸಂ । ಗರ ಘನಸತ್ಕಳಾನಿಧಿ ದಯಾರಸಸಾಗರ ದಾನಶೀಲ ಶಂ ॥ ಕರ ಶರಣಾಳಿಸಂಗತ ಕಥಾ ಕಲಸಾದರ ಸಾರಚಿದ್ಘನ । ಸ್ಥಿರತರಚಿತ್ತ ಧೀರ ಜಯಕಿನ್ನರನಾಯಕ ಶಾಂತಿದಾಯಕ ॥೪೦॥

ವ ॥ ಎಂದು ಕೂರ್ಮೆಯಿಂ ಕೊಂಡಾಡಿ ಪಾಡಿ ತತ್ಪ್ರಸನ್ನತೆವಡೆದು ಬಸವರಸನಿರ್ಪುದು ಮಾಗಳಾ ಕಿನ್ನರವಿಭು ಮಂದಸ್ಮಿತಮುಖಾಂಬುಜಂ ಸಮಸ್ತಭಕ್ತಜನಂ ಸಂಭ್ರಮಿಸೆ ನೆರೆದಜನಂ ನೋಡುತ್ತಮಿರೆ ತಮ್ಮಡಿ ಬೀಯಗಮನಿಕ್ಕಿ ಕಿತ್ತು ಪುರಾಂತಕನಿಶಾಂತಕವಾಟಪುಟಮಂ ನೋರೆನೋಟದಿಂ ನಸುನೋಡಲೊಡನೆ ॥ * * * , * *

---

ಆಗಳ್, ಆ ಬಸವರಾಜಂ, ಕಿನ್ನರೇಂದ್ರಂ, ಇರ್ದ, ಎಡೆಗೆ, ಎಳ್ತಂದು, ಎರಗಿ, ಕರಾರವಿಂದಮಂ, ಮುಗಿದು- ಜೋಡಿಸಿ, ನಿಂದು. * * * * * * * * * * * * * *

ಸಾರವಿಚಾರ- ಶ್ರೇಷ್ಠವಾದ ವೇದಾಂತವಿಚಾರವುಳ್ಳ, ಧೀರ- ಧೈರ್ಯಶಾಲಿಯಾದ, ಶಿವತತ್ವಸುಧಾರಸರಾಜಹಂಸ- ಪರತತ್ವವೆಂಬ ಹಾಲಿಗೆ ಹಂಸಪಕ್ಷಿಯಾದ, ವಿಸ್ತಾರಯಶಸ್ಕ, ಯೋಗಿಜನವಲ್ಲಭ- ಋಷಿಜನರಲ್ಲಿ ಸ್ವಾಮಿಯಾದ, ಭಕ್ತಿಲತಾಂತಗಂಧ- ಭಕ್ತಿಯೆಂಬ ಹೂವಿಗೆ ಪರಿಮಳನಾದ, ಗಂಭೀರಗುಣಾಭಿರಾಮ, ಮಹನೀಯ- ಮಹಾತ್ಮನಾದ, ಕೃಪಾಕರ- ದಯೆಗಾಶ್ರಯನಾದ, ಸುಪ್ರತಾಪತೇಜೋರಮಣೀಯ- ಒಳ್ಳೆಯ ಪರಾಕ್ರಮವೆಂಬ ತೇಜಸ್ಸಿನಿಂದ ಮನೋಹರನಾದ, ನಿಸರ್ಗವೈಭವ- ಸ್ವಭಾವಸಿದ್ಧವಾದ ವಿಭವಗಳುಳ್ಳ, ಕಿನ್ನರಬೊಮ್ಮ ! ದೇವ ! ಜಯ- ಸರ್ವೋತ್ಕೃಷ್ಟನಾಗು. ... ... ... ॥೩೯॥

ಚರಚರಣಾರ್ಚನಾಂಚಿತ- ಜಂಗಮರ ಪಾದಪೂಜೆಯಂ ಮಾಡುವದರಿಂ ಪೂಜ್ಯನಾದ, ಚರಾಚರರಕ್ಷಣಶೀಲ- ಸ್ಥಾವರಜಂಗಮಗಳಂ ಸಂರಕ್ಷಿಸುವ ಸ್ವಭಾವವುಳ್ಳ, ಸತ್ಯಸಂಗರ- ದೃಢಪ್ರತಿಜ್ಞೆಯುಳ್ಳ, ಘನಸತ್ಕಳಾನಿಧಿ- ಶ್ರೇಷ್ಠವಾದ ಒಳ್ಳೆಯ ವಿದ್ಯೆಗಳಿಗೆ ನಿಕ್ಷೇಪನಾದ, ದಯಾರಸಸಾಗರ- ಕೃಪೆಯೆಂಬ ಜಲಕ್ಕೆ ಸಮುದ್ರನಾದ, ದಾನಶೀಲ- ವಿತರಣಗುಣವೇ ಸ್ವಭಾವವಾಗುಳ್ಳ, ಶಂಕರಶರಣಾಳಿಸಂಗತಕಥಾಕಲನಾದರ- ಶಿವಶರಣರಪಙ್ಕ್ತಿಯ ಕಥೆಯನ್ನು ಕೇಳುವದರಲ್ಲಿ ಆಸಕ್ತನಾದ, ಸಾರಚಿದ್ಘನಸ್ಥಿರತರಚಿತ್ತ- ಶ್ರೇಷ್ಠವಾದ ಜ್ಞಾನದಿಂದ ಸಾಂದ್ರವಾದ ನಿಶ್ಚಂಚಲವಾದ ಮನಸ್ಸುಳ್ಳ, ಧೀರ, ಶಾಂತಿದಾಯಕ, ಕಿನ್ನರನಾಯಕ ! ಜಯ. ... ... ... ... ... ॥೪೦॥

ಎಂದು, ಬಸವರಸಂ, ಕೂರ್ಮೆಯಿಂ, ಕೊಂಡಾಡಿ, ಪಾಡಿ, ತತ್ಪ್ರಸನ್ನತೆವಡೆದು- ಅವನನುಗ್ರಹವಂ ಹೊಂದಿ, ಇರ್ಪುದುಂ, ಆಗಳ್, ಆಕಿನ್ನರವಿಭು, ಮಂದಸ್ಮಿತಮುಖಾಂಬುಜಂ- ಮುಗುಳ್ನಗೆಯಿಂಕೂಡಿದ ಮುಖಕಮಲವುಳ್ಳವನಾಗಿ, ಸಮಸ್ತ ಭಕ್ತಜನಂ, ಸಂಭ್ರಮಿಸೆ- ಸಡಗರ ಪಡುತ್ತಿರಲು, ನೆರೆದ, ಜನಂ, ನೋಡುತ್ತಂ, ಇರೆ, ತಮ್ಮಡಿ, ಬೀಯಗಮಂ- ಬೀಗವನ್ನು, ಇಕ್ಕಿ- ಹಾಕಿ, ಕಿತ್ತು- ಅಲ್ಲಾಡಿಸಿದ, ಪುರಾಂತಕನಿಶಾಂತಕವಾಟಪುಟಮಂ, ಪುರಾಂತಕೇಶ್ವರದೇವಸ್ಥಾನದ ಕದಗಳೆರಡನ್ನು, ಓರೆನೋಟದಿಂ, ನಸುನೋಡಲ್- ಸ್ವಲ್ಪನೋಡಲು, ಒಡನೆ. * * * * * * * * * * * * * * *

ಕಂ॥ ಪುರವೈರಿ ಪೆಳರ್ದು ನಿಜಮಂ । ದಿರದ ಕವಾಟದೊಳೆ ತಳ್ತು ಬೀಯುಗವು ನದಂ॥
ಪರಿಹರಿಸಿ ತೆಗದು ಗಳಿಲನೆ । ಸರಭಸ ಮಾಜವಳಿವಡಿಯ ನೆಂಬಿರ್ಬಿದನೊ ॥ ॥೪೧॥

ಸ್ರ॥ ದಾಸಯ್ಯಂಗಂದುಮೇಶಂ ಪಡಿದೆರೆದ ನೆನಿಪ್ಪುಕ್ತಿಯಂ ಕೇಳ್ವೆ ವೀಗ । ಳ್ಸಾ
ಸಂಚಿತ್ತೊತ್ತಪ್ಪುವೀಕಿನ್ನರವಿಭುಗೆ ಪುರಾರಾತಿ ಸಂಪ್ರೀತಿಯಿಂ ಪ್ರೋ ॥ ಲ್ಲಾಸಂ ಕೈಗಣ್ಮೆ
ತಾನೇ ಪಡಿದೆರೆವ ನಿದಾಶ್ಚರ್ಯ ಮೀಲಿಂಗಮಂ ಸ । ತ್ಯಾಸನ್ನಂ ಸಾಕ್ಷಿಯುಂ ದಲ್ನುಡಿಯಿಸ
ದಿರ ನೆಂದುರ್ಬ್ಬಿ ಕೊಂಡಾಡೆ ಭಕ್ತರ್ ॥ ... ... ... ... ॥೪೨॥

ಚಂ॥ ಮೃಡನ ಸಮೀಪದೊಳ್ನೆಲಸಿ ತನ್ನ ಕರಾಗ್ರಕರಾಳಖಡ್ಗಮಂ । ಜಡಿದು ಕ
ಡಂಗಿ ನಿಂದು ಹರಭಕ್ತರ ಪಾದಸರೋಜರಾಜಿಯಂ ॥ ಬಿಡದೊಲವಿಂದೆ ಜಾನಿಸುತಭೀಕ್ಷಿಸಿ
ಲಿಂಗಮ ನಲ್ಲಿ ಭಕ್ತರು । ಗ್ಗಡಿಸುತ ಘೋರವಂ ಗುಡೆ ಸಮಕ್ಷದೊಳೀಕ್ಷಿಸೆ ಭೂಭುಜಾದಿಗಳ್॥

ಮತ್ತೇ॥ ಪರಮೇಶಾನ ಪುರಾರಿ ಸೌಂದರಗಣೇಶಂಗಂದು ಕಾಂತಾಪಯೋ । ಧರ
ದೊಳ್ನೀನುಲಿದಂತಿರುಂಪೆಯೊಳೆವಾದಂಗೆಯ್ದ ದಾಸಂಗೆ ಶಂ ॥ ಕರ ಮಾತಾಡಿದ ಮಾಳ್ಕೆ
ಯಿಂ ನೆಗಳ್ದ ಬೊಮ್ಮಯ್ಯಂಗೆ ಜೋಳಂಗಳು । ತ್ಕರದೊಳ್ನಿಂದುಸಿರ್ದಂತೆ ದೇವ ನುಡಿ
ನೀಂ ಸತ್ಯಾರ್ಥಮಂ ಸಾದರಂ ॥ ... ... ... ... ॥೪೪॥

---

ಪುರವೈರಿ, ಪೆಳರ್ದು- ಭಯಪಟ್ಟು, ನಿಜಮಂದಿರದ- ತನ್ನ ಮನೆಯ, ಕವಾಟದೊಳೆ, ತಳ್ತು, ಅದು ಬೀಯುಗವುಂ, ಪರಿಹರಿಸಿ- ನಾಶಮಾಡಿ, ತೆಗೆದು, ಗಳಿಲನೆ- ಬೇಗನೆ, ಆಜವಳಿವಡಿಯಂ- ಆ ತಾರುಗದಗಳೆರಡನ್ನು, ಎಂಬಿರ್ಬಿದನೊ! ... ... ... ... ... ॥೪೧॥

ಅಂದು, ಉಮೇಶಗ, ದಾಸಯ್ಯಂಗೆ, ಪಡಿದೆರೆದಂ- ಕದವಂ ತೆಗೆದನು, ಎನಿಪ್ಪ, ಉಕ್ತಿಯುಂ, ಕೇಳ್ವೆವ್, ಈಗಳ್, ಸಾಸಂಬೆತ್ತು- ಸಾಹಸವಂ ಹೊಂದಿ, ಒಪ್ಪುವ, ಈಕಿನ್ನರವಿಭುಗೆ, ಪುರಾರಾತಿ, ಸಂಪ್ರೀತಿಯಿಂ- ಸಂತೋಷಪಡಿದ್ದ, ಪ್ರೋಲ್ಲಾಸಂ- ಉತ್ಸಾಹವು, ಕೈಗಣ್ಮೆ- ಉಂಟಾಗಿರಲು, ತಾನೇ, ಪಡಿದೆರೆಪಂ- ಕದವಂ ತೆಗೆದನು, ಇದು, ಆಶ್ಚರ್ಯಂ; ಸತ್ಯಾಸನ್ನಂ- ಸತ್ಯಕ್ಕೆ ಸಮೀಪವರ್ತಿಯಾದ ಕಿನ್ನರಯ್ಯನು, ಈಲಿಂಗಮಂ, ಸಾಕ್ಷಿಯುಂ, ದಲ್- ನಿಶ್ಚಯವಾಗಿ, ನುಡಿಯಿಸದೆ, ಇರಂ, ಎಂದು, ಭಕ್ತರ್, ಉರ್ಬಿ- ಉತ್ಸಾಹಪಟ್ಟು, ಕೊಂಡಾಡೆ. ... ... ... ... ... ॥೪೨॥

ಮೃಡನ, ಸಮೀಪದೊಳ್, ನೆಲಸಿ- ನಿಂದು, ತನ್ನ, ಕರಾಗ್ರಕರಾಳಖಡ್ಗಮಂ- ಕಯ್ಯಿನ ತುದಿಯಲ್ಲಿರುವ ಭಯಂಕರವಾದ ಕತ್ತಿಯನ್ನು, ಜಡಿದು- ಅಳ್ಳಾಡಿಸಿ, ಕಡಂಗಿ- ಕುತೂಹಲಪಟ್ಟು, ನಿಂದು, ಹರಭಕ್ತರ, ಪಾದಸರೋಜರಾಜಿಯಂ, ಬಿಡದೆ, ಒಲವಿಂದೆ, ಜಾನಿಸುತೆ- ಧ್ಯಾನಮಾಡುತ್ತ, ಲಿಂಗಮಂ, ಅಭೀಕ್ಷಿಸಿ- ನೋಡಿ, ಅಲ್ಲಿ, ಭಕ್ತರ್, ಉಗ್ಗಡಿಸುತೆ- ಕೂಗುತ್ತ, ಘೋರವಂಗುಡೆ- ಉಘೇ ಎಂದು ಶಬ್ದವಂ ಮಾಡಲು, ಭೂಭುಜಾದಿಗಳ್- ರಾಜ ಮುಂತಾದವರುಗಳು, ಸಮಕ್ಷದೊಳ್- ಪ್ರತ್ಯಕ್ಷವಾಗಿ, ಈಕ್ಷಿಸೆ- ನೋಡುತ್ತಿರಲು. ... ... ... ... ... ... ॥೪೩॥

ಪರಮೇಶಾನ! ಪುರಾರಿ! ಅಂದು, ಸೌಂದರಗಣೇಶಂಗೆ, ಕಾಂತಾಪಯೋಧರದೊಳ್- ಅವನ ಪತ್ನಿಯ ಮೊಲೆಯಲ್ಲಿ, ನೀಂ, ಉಲಿದಂತೆ- ಕೂಗಿದಹಾಗೆ, ಶಂಕರ! ಇರುಂಪೆಯೊಳ್- ಇರುವೆಯೊಡನೆ, ವಾದಂಗೆಯ್ದ- ವಿವಾದವಂ ಮಾಡಿದ, ದಾಸಂಗೆ, ಮಾತಾಡಿದ, ಮಾಳ್ಕೆಯಿಂ- ರೀತಿಯಿಂದ, ನೆಗಳ್ದ- ಪ್ರಸಿದ್ಧವಾದ, ಬೊಮ್ಮಯ್ಯಂಗೆ, ಜೋಳಂಗಳ, ಉತ್ಕರದೊಳ್- ರಾಶಿಯಲ್ಲಿ, ನಿಂದು, ಉಸಿರ್ದಂತೆ- ಮಾತನಾಡಿದಹಾಗೆ, ದೇವ! ನೀಂ, ಸಾದರಂ- ಪ್ರೀತಿಯುಕ್ತನಾಗಿ, ಸತ್ಯಾರ್ಥಮಂ- ಯಥಾರ್ಥವಾದ ಅಭಿಪ್ರಾಯವನ್ನು, ನುಡಿ.

ವ ॥ ಎಂದು ವಿಜೃಂಭಿಸಿ ॥ ಕಂ ॥ ಅತಿನಿಷ್ಠೆ ನಿಮಿರೆ ಶೌರ್ಯೋ । ನ್ನತಿಯಿಂ ಹರ ಹರ ಪುರಾಂತಕಾ ಯೆನೆ ಭಕ್ತಂ ॥ ವಿತತ ಮಹಾಧ್ವನಿಯೆಾಂದ । ದ್ಭುತ ಮೊಗೆಯೆ ಪುರಾರಿತಳ್ವದೋ ಯೆನುತಿರ್ದಂ ॥ ... ... ... ... ... ॥೪೭॥

ವ ॥ ಆನಿರಂತರಮಹಾಧ್ವನಿ ದಶದಿಗಂತರಮ ನಳುರ್ದು ಮುಕ್ಕುಳಿಸಿ ಮುಸುಂಕ ಲೊಡನೆ ॥ * * * * * * * * * * * * * * *

ಮತ್ತೇ ॥ ಕಡಲೇಳುಂ ಕದಡೇಳ್ದು ತುಳ್ಕಿದುದಹೀಂದ್ರಂ ಬಳ್ಕಿದಂ ಕೂರ್ಮನು । ರ್ಚ್ಕುಡಿದಿರ್ದಂ ಕುಲಭೂಧರಂ ಕೆಡೆದು ದಾಶಾದಂತಿ ಬಾಯ್ವಿಟ್ಟುದಂ ॥ ಡುಡ ಜಾಲಂ ಬಿಡದು ಳ್ಕಿದತ್ತು ದರೆಯಲ್ಲಾಡಿತ್ತು ನಂದಿರ್ದುದಾ । ಬಡಬಂ ನಿಂದುದು ವಾಯು ವಸ್ತಮಿಸಿತರ್ಕಂ ದಿಗ್ವರರ್ಬೆರ್ಚಿದರ್ ॥ ... ... ... ... ... ॥೪೮॥

ಮತ್ತೇ ॥ ಭ್ರಮೆಯಿಂದಂ ಬೆಗಡೊಂದಿ ಬಲ್ಪುಡಗಿ ಬೇಗಂ ಹಮ್ಮುದಂ ಬೋದುದೆ । ಯ್ದೆ ಮದೇಭಾಶ್ವನರಾದಿಜೀವಿನಿವಹಂ ಲೋಕವ್ರಜಂ ಬೆರ್ಚಿದ ॥ ತ್ತಮರಶ್ರೇಣಿ ಬಿಗುರ್ತುದುದುಳಿದ ರುಗ್ರ್ಯಲ್ಲಿಂಗಸಂಯುಕ್ತರಾ । ಪ್ರಮಥರ್ಸನ್ಮುದಮಾಂತರೆಮ್ಮ ದಿನ ಮಾದತ್ತೆಂದು ಲೀಲೋತ್ಸುಕರ್ ॥ ... ... ... ... ... ॥೪೯॥

---

ಭಕ್ತಂ- ಭಕ್ತನಾದ ಕಿನ್ನರಯ್ಯನು, ಅತಿನಿಷ್ಠೆ- ಅತ್ಯಂತ ಶ್ರದ್ಧೆಯು, ನಿಮಿರೆ- ಹೆಚ್ಚಾಗಿರಲು, ಶೌರ್ಯೋನ್ನತಿಯಿಂ- ಅತಿಪರಾಕ್ರಮದಿಂದ, ಹರಹರ! ಪುರಾಂತಕಾ! ಎನೆ; ಪುರಾರಿ, ತಳ್ವದೆ– ತಪ್ಪದೆ, ಒಂದು ವಿತತಮಹಾಧ್ವನಿ- ಒಂದು ವಿಸ್ತಾರವಾದ ದೊಡ್ಡಕೂಗು, ಅದ್ಭುತಂ- ಆಶ್ಚರ್ಯಕರವಾಗಿ, ಒಗೆಯೆ– ಹುಟ್ಟಲು, ಓ ಎನುತೆ, ಇರ್ದಂ. ... ... ... ... ॥೪೭॥

ಆನಿರಂತರಮಹಾಧ್ವನಿ- ಆವಿಚ್ಛಿತ್ತಿಯಿಲ್ಲದಕೂಗು, ದಶದಿಗಂತರಮಂ- ಹತ್ತುದಿಕ್ಕುಗಳ ಕೊನೆಯನ್ನು, ಅಳುರ್ದು- ಆವರಿಸಿ, ಮುಕ್ಕುಳಿಸಿ– ತುಂಬಿ, ಮುಸುಂಕಲ್- ಆಛಾದಿಸಲು, ಒಡನೆ. * * *

ಏಳ್ಕಡಲುಂ- ಸಪ್ತಸಮುದ್ರಗಳೂ, ಕದಡೇಳ್ದು- ಬಗ್ಗಡವಾಗಿ, ತುಳ್ಕಿದುದು; ಅಹೀಂದ್ರಂ- ಆದಿಶೇಷನು, ಬಳ್ಕಿದಂ- ಬಯಪಟ್ಟನು; ಕೂರ್ಮಂ- ಭೂಮಿಯುಂಹೊತ್ತಿರುವ ಮೊದಲನೇ ಆಮೆಯು, ಉರ್ಕುಡಿದು- ಗರ್ವಹೀನನಾಗಿ, ಇರ್ದ; ಕುಲಭೂಧರಂ- ಸಪ್ತಕುಲಾಚಲವು, ಕೆಡೆದುದು- ಮುರಿದುಬಿದ್ದವು; ಆಶಾದಂತಿ- ದಿಗ್ಗಜಗಳು, ಬಾಯ್ವಿಟ್ಟುದು, ಉಡುಜಾಲಂ- ನಕ್ಷತ್ರಗಳಗುಂಪು, ಬಿಡದೆ, ಉಳ್ಕಿದತ್ತು- ಕಳೆದುಬಿದ್ದಿತು; ಧರೆ ಭೂಮಿಯು; ಅಲ್ಲಾಡಿತ್ತು; ಆಬಡಬಂ- ಸಮುದ್ರದಲ್ಲಿರುವ ಬಡಬಾಗ್ನಿಯು, ನಂದಿ- ಶಾಂತವಾಗಿ, ಇರ್ದುದು; ವಾಯು- ಗಾಳಿಯು, ನಿಂದುದು- ಚಲಿಸದೆ ನಿಂತಿತು; ಅರ್ಕಂ- ಸೂರ್ಯನು, ಅಸ್ತಮಿಸಿತು- ಮುಳುಗಿತು; ದಿಗ್ವರರ್- ದಿಕ್ಪಾಲಕರು, ಬೆರ್ಚಿದರ್- ಬೆಚ್ಚುಬಿದ್ದರು. ... ॥೪೮॥

ಮದೇಭಾಶ್ವನರಾದಿಜೀವಿನಿವಹಂ- ಮದವೇರಿದಾನೆ ಕುದುರೆ ಮನುಷ್ಯ ಮುಂತಾದ ಪ್ರಾಣಿಗಳಗುಂಪು, ಭ್ರಮೆಯಿಂದಂ- ಭ್ರಾಂತಿಯಿಂದ, ಬೆಗಡೊಂದಿ- ಭಯಪಟ್ಟು; ಬಲ್ಪು- ಶಕ್ತಿಯು, ಉಡುಗಿ- ನಾಶವಾಗಿ, ಬೇಗಂ, ಹಮ್ಮುದಂಬೋದುದು- ಗರ್ವಹೀನವಾಯ್ತು; ಲೋಕವ್ರಜಂ- ಎಲ್ಲಾಲೋಕಗಳೂ, ಬೆರ್ಚಿದತ್ತು; ಅಮರಶ್ರೇಣಿ- ದೇವತೆಗಳಗುಂಪು, ಬಿಗುರ್ತುದು- ಭಯಪಟ್ಟಿತು, ಅಂದು, ಉಗ್ರ್ಯಲ್ಲಿಂಗಸಂಯುಕ್ತರ್- ಉತ್ಕೃಷ್ಟವಾದ ಶಿವಲಿಂಗದಿಂಕೂಡಿದ, ಆ ಪ್ರಮಥರ್, ಎಮ್ಮ, ದಿನಂ, ಆದತ್ತು ( ಅಂದರೆ ನಮ್ಮ ಹೆಚ್ಚಿಗೆಯ ದಿವಸವಾಯ್ತು ) ಎಂದು, ಲೀಲೋತ್ಸುಕರ್- ವಿಲಾಸದಿಂದೌತ್ಸುಕ್ಯವುಳ್ಳವರಾಗಿ, ಸನ್ಮುದಮಾಂತರ್- ಸಂತೋಷವಂ ಹೊಂದಿದರು, ... ... ... ... ॥೪೯॥

ಚಂ ॥ ಕುಣಿವ ಕುಕಿಲ್ವ ಕೂಗಿಡವ ರಾಗಿಸ ರಂಜಿಪ ಜೋಲ್ವ ತೇಲ್ವ ಸಂ।
ದಣಿಪ ಕಡಂಗು ವಚ್ಚರಿಯೊಳಾಡುವ ಪಾಡುವ ಸುತ್ತಿಬರ್ಪ ಮೇಣ್ ॥ ಣ್ಮಣಿವ ಮರಲ್ವ
ಕೀರ್ತಿಸುವ ಪೊಂಪುಳಿಪೋಪ ವಿನೋದಕೇಳಿಯೊ। ಳ್ತಣಿಯದ ಭಕ್ತವೃಂದ ಮೆಸೆದಿ
ರ್ಪುದು ಕಿನ್ನರನಗ್ರದೇಶದೊಳ್ ॥ ... ... .. ... ॥೪೮॥

ಕಂ ॥ ಇರುಳುಂ ಪಗಲುಂ ಪುರರಿಪು। ಮೊರೆಯುತ್ತಿರೆ ಸಪ್ತದಿವಸಪರ್ಯಂತಂ ತ ॥
ದ್ಧರಣಿಪಮುಖ್ಯರ್ಮೂರ್ಛೆಯೊ। ಳಿರೆ ಜಗದುದ್ಧರಣಶೀಲನೀಕ್ಷಿಸಿ ಬಸವಂ ॥ ॥೪೯॥

ಕಂ ॥ ಕರುಣಾನಿಧಿ ಕಿನ್ನರಪದ। ಸರಸಿರುಹಕ್ಕೆರಗಿ ಮುಗುಳ್ದು ಕೈಮುಗಿವುತೆ ಸಾ॥
ದರ ಮುಚಿತವಚನರಚನೋ। ತ್ಕರ ಮವದಿರ್ರೆ ಭಕ್ತಿವೆತ್ತು ಕೀರ್ತಿಸುತಿರ್ಪಂ ॥೫೦॥

ಉ ॥ ಮಂಗಳಲಿಂಗಸಂಗತನಿಜಾಂಗ ಜಿತಾಂಗಜ ತುಂಗದುಷ್ಟಮಾ। ತಂಗಮತಂಗ
ಜಾಹಿತ ಪತಂಗಜಭಂಗ ಚಿದಂಗ ಜಂಗಮೋ ॥ ತ್ತುಂಗ ಭುಜಂಗರಾಜಧರಭಕ್ತಹೃದಂಬು
ಜಭೃಂಗ ಸದ್ದಯಾ। ಪಾಂಗ ಶಿವಾಂತರಂಗ ಗಣಪುಂಗವಸಾಂಗಸಮರ್ಚನಪ್ರಿಯ ॥೫೧॥

ಕಂ ॥ ಶ್ರೀಕರ ಮಹಿಮಾಕರ ಪರ। ಭೀಕರ ನತವನಜವನದಿವಾಕರ ಗುಣರ। ತ್ನಾ

---

ಕುಣಿವ, ಕುಕಿಲ್ವ- ಕೇಕೆಹಾಕುವ, ಕೂಗಿಡುವ- ಕೂಗಿಕೊಳ್ಳುವ, ರಾಗಿಸ- ಪ್ರೀತಿಪಡುವ, ರಂಜಿ
ಪ- ಆಹ್ಲಾದಪಡುವ, ಜೋಲ್ವ- ತಲೆದೂಗುವ, ತೇಲ್ವ- ಓಲಾಡುವ, ಸಂದಣಿಪ- ಗುಂಪುಗೂಡುವ, ಕಡಂ
ಗುವ- ಕುತೂಹಲಪಡುವ, ಅಚ್ಚರಿಯೊಳ್, ಆಡುವ, ಪಾಡುವ, ಸುತ್ತಿಬರ್ಪ- ಪ್ರದಕ್ಷಿಣೆಯಂ ಮಾಡುವ,
ಮೇಣ್, ಮಣಿವ- ನಮಸ್ಕರಿಸುವ, ಮರಲ್ವ- ಹಿಂತಿರುಗುವ, ಕೀರ್ತಿಸುವ- ಹೊಗಳುವ, ಪೊಂಪುಳಿಪೋ
ಪ- ರೋಮಾಂಚಿತವಾಗುವ, ವಿನೋದಕೇಳಿಯೊಳ್- ಸಂತೋಷದಾಟದಲ್ಲಿ, ತಣಿಯದ- ತೃಪ್ತಿಯಂಹೊಂ
ದದಿರುವ, ಭಕ್ತವೃಂದಂ, ಕಿನ್ನರನ, ಅಗ್ರದೊಳ್- ಮುಂಗಡೆಯಲ್ಲಿ. ಎಸೆದು, ಇರ್ಪುದು. ... ॥೪೮॥

ಪುರರಿಪು, ಸಪ್ತದಿವಸಪರ್ಯಂತಂ, ಇರುಳುಂ- ರಾತ್ರಿಯೂ, ಪಗಲುಂ, ಮೊರೆಯುತ್ತ- ಕೂಗುತ್ತ,
ಇರೆ, ತದ್ಧರಣಿಪಮುಖ್ಯರ್- ಆ ರಾಜ ಮುಂತಾದವರುಗಳು, ಮೂರ್ಛೆಯೊಳ್, ಇರೆ, ಜಗದುದ್ಧರಣಶೀಲಂ-
ಜಗತ್ತನ್ನು ಕಾಪಾಡುವದೇ ಸ್ವಭಾವವಾಗುಳ್ಳ, ಬಸವಂ. ಈಕ್ಷಿಸಿ. ... ... ॥೪೯॥

ಕರುಣಾನಿಧಿ,ಕಿನ್ನರಪದಸರಸಿರುಹಕ್ಕೆ- ದಯೆಗೆ ನಿಕ್ಷೇಪನಾದ ಕಿನ್ನರಯ್ಯನ ಪಾದಕಮಲಕ್ಕೆ, ಎರಗಿ,
ಮುಗುಳ್ದು, ಕೈಮುಗಿವುತೆ, ಸಾದರಂ, ಉಚಿತವಚನರಚನೋತ್ಕರಂ-ತತ್ಕಾಲಕ್ಕರ್ಹವಾದ ಮಾತುಗಳಜೋ
ಡಣೆಯ ಸಮೂಹವು, ಅವದಿರ್ರೆ- ಸೇರಿರಲು, ಭಕ್ತಿವೆತ್ತು, ಕೀರ್ತಿಸುತೆ, ಇರ್ಪಂ. ... ॥೫೦॥

ಮಂಗಳಲಿಂಗಸಂಗತನಿಜಾಂಗ- ಶುಭಕರವಾದ ಲಿಂಗದಿಂ ಕೂಡಿದ ಸ್ವಕೀಯವಾದ ದೇಹವುಳ್ಳವನೇ,ಜಿತಾಂ
ಗಜ- ಜೈಸಲ್ಪಟ್ಟ ಮನ್ಮಥನುಳ್ಳವನೇ.ತುಂಗ- ಉನ್ನತನಾದದುಷ್ಟಮಾತಂಗಮತಂಗಜಾಹಿತ ದುಷ್ಟ- ದು
ರ್ಜನರೆಂಬ, ಮಾತಂಗ- ಆನೆಗಳಿಗೆ ಮತಂಗಜಾಹಿತ- ಸಿಂಹನಾದವನೇ,ಚಿದಂಗ- ಜ್ಞಾನಸ್ವರೂಪನಾದವನೇ,
ಜಂಗಮೋತ್ತುಂಗ- ಜಂಗಮರಲ್ಲಿ ಶ್ರೇಷ್ಠನಾದವನೇ, ಭುಜಂಗ...ಭೃಂಗ— ಭುಜಂಗರಾಜ- ಆದಿಶೇಷನ
ನ್ನು, ಧರ- ಧರಿಸಿರುವ, ಶಿವನ, ಭಕ್ತ- ಭಕ್ತರ, ಹೃತ್- ಹೃದಯವೆಂಬ, ಅಂಬುಜ- ಕಮಲಕ್ಕೆ, ಭೃಂಗ-ಭ್ರ
ಮರನಾದವನೇ, ಸದ್ದಯಾಪಾಂಗ- ಒಳ್ಳೆಯ ಕೃಪೆಯಿಂ ಕೂಡಿದ ಕಡೆಗಣ್ಣುಳ್ಳವನೇ, ಶಿವಾಂತರಂಗ- ಈಶ್ವ
ರನೇ ಮನಸ್ಸಿನಲ್ಲುಳ್ಳವನೇ, ಗಣಪುಂಗವಸಾಂಗಸಮರ್ಚನಪ್ರಿಯ- ಶಿವಗಣಶ್ರೇಷ್ಠರನ್ನು ಯಥಾಶಾಸ್ತ್ರೀ
ಯವಾಗಿ ಪೂಜಿಸುವದರಲ್ಲಿ ಪ್ರೀತಿಯುಳ್ಳವನೇ. ... ... ... ॥೫೧॥

ಶ್ರೀಕರ- ಸಂಪತ್ತನ್ನುಂಟುಮಾಡುವವನೇ, ಮಹಿಮಾಕರ- ಮಹತ್ವಕ್ಕೆ ಆಶ್ರಯನಾದವನೇ, ಪರಭೀ

ಕರ ಬುಧಾಂಬುರಾಶಿಸುಧಾಕರ ದರ್ವೀಕರೇಂದ್ರಧರಹಿತಚರಿತ ॥ ... ॥೫೦॥

ವ॥ ಎಂದು ಸನ್ನುತಿಗೆಯ್ದು ॥ ಕಂ॥ ಕಿನ್ನರಪತಿಸಖಸನ್ನಿಭ । ಕಿನ್ನರಪತಿ ನಿಮ್ಮ ಮಹಿಮೆಯಂ ತಿಳಿಯದೆ ಸೊ ॥ ರ್ಕಿಂ ನರಪತಿಮುಖ ರಳಿದ । ರ್ಕಿನ್ನರ ಪತಿಕರಿಸು ತಿವರ ಪೊರೆ ಗುಣನಿಳಯ ॥ ... ... ... ... ... ॥೫೩॥

ವ॥ ಎಂದು ವೃಷೇಂದ್ರಂ ಬಿನ್ನವಿಸೆ ಕೇಳ್ದು ತತ್ಕರಾಗ್ರದೊಳ್ ಕರಾರ್ಪಣಂಗೆಯ್ದು॥

ಕಂ॥ ನಗುತೆ ಪುರಾಂತಕ ನಿದಿರೊ । ಳ್ಮಿಗೆ ನಿಂದು ಪುರಾರಿ ಸಾಲ್ಗು ಮೋ ಹೋ ಯೆನುತಂ ॥ ನೆಗಪಿ ಕರವುಂ ನಿವಾರಿಸೆ । ಸುಗುಣಾಂಕಶಂಭು ಭೀಮರವಮುಳಿದೆಸೆದಂ॥೫೪॥

ವ॥ ಆಗಳ್ ॥ ಕಂ॥ ಮೊದಲಂತೆ ಲೋಕಮೆಲ್ಲಂ । ಪದುಳಂ ಮಿಗೆಬಾಳ್ದುದವನಿಪಾ ಲಾದಿಗ ಳೊಂದಿದ ಮೂರ್ಛೆ ತಿಳಿಯೆಬಿಡದೇ । ಳ್ದುದಿತೋತ್ಸವಕಿನ್ನರೇಂದ್ರನಡಿಗೆರಗಿರ್ದರ್॥

ಉ ॥ ಮಂಗಳಸತ್ಯರೂಪ ವ ಹಿಮಾರ್ಣವ ಮಾನನಿದಾನ ಚೆಲ್ವತಾ । ಲಿಂಗಿತ ಕಲ್ಪಭೂಜ ಕರುಣಾಕರ ಕಾಮವಿದೂರ ಲಿಂಗಸಂ ॥ ಗಾಂಗ ದಿಗಂತಪೂರ್ಣ್ಣಸಿತಕೀರ್ತಿ

ಕರ- ಶಿವಭಕ್ತರಿಗೆ ಭಯಂಕರನಾದವನೇ, ನತವನಜವನದಿವಾಕರ- ತನ್ನನ್ನು ನಮಸ್ಕರಿಸಿದವರೆಂಬ ಕಮಲ ಗಳ ವನಕ್ಕೆ ಸೂರ್ಯನಾದವನೇ, ಗುಣರತ್ನಾಕರ- ಸದ್ಗುಣಗಳಿಗೆ ಸಮುದ್ರನಾದವನೇ, ಬುಧಾಂಬುರಾಶಿಸು ಧಾಕರ- ವಿದ್ವಾಂಸರೆಂಬ ಸಮುದ್ರಕ್ಕೆ ಚಂದ್ರನಾದವನೇ. ದರ್ವೀಕರೇಂದ್ರಧರಹಿತಚರಿತ— * ದರ್ವೀಕ ರೇಂದ್ರಧರ- ಈಶ್ವರನಿಗೆ, ಹಿತ- ಇಷ್ಟವಾದ, ಚರಿತ- ನಡತೆಯುಳ್ಳವನೇ! ... ... ॥೫೦॥

* ಕಿನ್ನರಪತಿಸಖಸನ್ನಿಭ- ಶಿವನಿಗೆ ಸದೃಶನಾದ, ಕಿನ್ನರಪತಿ- ಕಿನ್ನರಸ್ವಾಮಿಯೇ! ನರಪತಿಮುಖರ್- ದೊರೆ ಮೊದಲಾದವರು, ಸೊರ್ಕಿಂ- ಗರ್ವದಿಂದ, ನಿಮ್ಮ, ಮಹಿಮೆಯಂ, ತಿಳಿಯದೆ, ಅಳಿದರ್- ನಾಶವಾದ ರು; ಗುಣನಿಳಯ! ಕಿನ್ನರ! ಇವರ, ಪತಿಕರಿಸುತೆ- ಮನ್ನಿಸಿ, ಪೊರೆ. ... ... ॥೫೩॥

ಎಂದು, ವೃಷೇಂದ್ರಂ, ಬಿನ್ನವಿಸೆ- ವಿಜ್ಞಾಪಿಸಲು, ಕೇಳ್ದು, ತತ್ಕರಾಗ್ರದೊಳ್- ಆ ಬಸವೇಶ್ವರನ ಕೈಯ್ಯಮೇಲೆ, ಕರಾರ್ಪಣಂಗೆಯ್ದು- ಹಸ್ತವನ್ನಿಟ್ಟು. * * * * * * * * *

ನಗುತೆ, ಪುರಾಂತಕನ, ಇದಿರೊಳ್, ಮಿಗೆ,ನಿಂದು, ಪುರಾರಿ, ಓಹೋ! ಸಾಲ್ಗುಂ- ಸಾಕು; ಎನುತಂ, ಕರವುಂ, ನೆಗಪಿ- ಮೇಲಕ್ಕೆತ್ತಿ, ನಿವಾರಿಸೆ-ತಡೆಯಲು, ಸುಗುಣಾಂಕಶಂಭು, ಭೀಮರವಮುಳಿದು- ಭಯಂ ಕರವಾದ ಕೂಗನ್ನುಬಿಟ್ಟು, ಎಸೆದಂ. ... ... ... ... ॥೫೪॥

ಮೊದಲಂತೆ, ಲೋಕಂ, ಎಲ್ಲಂ, ಪದುಳಂಮಿಗೆ- ಕ್ಷೇಮವುಹೆಚ್ಚಾಗಿ, ಬಾಳ್ದುದು; ಅವನಿಪಾಲಾದಿಗಳ್, ಒಂದಿದ, ಮೂರ್ಛೆ, ತಿಳಿಯೆ- ಕಳೆಯಲು, ಬಿಡದೆ, ಏಳ್ದು, ಉದಿತೋತ್ಸವಕಿನ್ನರೇಂದ್ರನ- ಉತ್ಪನ್ನವಾದಸಂ ತೋಷವುಳ್ಳ ಕಿನ್ನರಸ್ವಾಮಿಯ, ಅಡಿಗೆ, ಎರಗಿ, ಇರ್ದರ್. ... ... ॥೫೫॥

ಮಂಗಳಸತ್ಯರೂಪ— ಮಂಗಳಕರವಾದ ಯಥಾರ್ಥಸ್ವರೂಪವುಳ್ಳ, ಮಹಿಮಾರ್ಣವ, ಮಾನನಿದಾನ- ಮರ್ಯಾದೆಗೆ ಆದಿಕಾರಣನಾದ, ಚೆಲ್ವತಾಲಿಂಗಿತಕಲ್ಪಭೂಜ- ಜ್ಞಾನವೆಂಬ ಬಳ್ಳಿಯಿಂದಾಲಿಂಗಿಸಲ್ಪಟ್ಟ ಕಲ್ಪ ವೃಕ್ಷರಾದ, ಕರುಣಾಕರ, ಕಾಮವಿದೂರ, ಲಿಂಗಸಂಗಾಂಗ, ದಿಗಂತಪೂರ್ಣ್ಣಸಿತಕೀರ್ತಿವಿರಾಜಿತ- ದಿಕ್ಕುಗಳ

* (ಅವ) ದರ್ವೀ- ಸಾಟಿನೋಪಾದಿ ಸುಳ್ಳಿ, ಕರ- ಹೆಡೆಯುಳ್ಳದ್ದು ಸರ್ಪ, ಅವುಗಳಿಗೆ, ಇಂದ್ರ- ಸ್ವಾ ಮಿಯಾದದ್ದು, ಶೇಷ, ಅದನ್ನು, ಧರ- ಧರಿಸಿರುವವನು. ... ... ... ॥೫೦॥

* (ಅವ) ಕಿನ್ನರ- ಕಿನ್ನರರೆಂಬದೇವತಾವಿಶೇಷರಿಗೆ, ಪತಿ- ಸ್ವಾಮಿಯಾದವನು ಕುಬೇರ, ಅವನಿಗೆ, ಸಖ- ಸ್ನೇಹಿತನಾದವನು ಈಶ್ವರ. ... ... ... ... ॥೫೩॥

ನಿರಾಜಿತಕಿನ್ನರೇಂದ್ರ ದೀ । ನುಗೆನಗಿತ್ತು ನೀ ನಭಯಮಂ ಕೃಪೆಯಿಂ ಪೊರೆ ಸದ್ಗುಣಾಕರ ॥ ... ... ... ... ... ... ॥೫೬॥

ಮತ್ತೆ ॥ ಕಪಟಾಲಾಪನ ನಜ್ಞಭಾವಯುತನಂ ದುರ್ದಾಂತನಂ ಧೂರ್ತನಂ । ಚಪಲಸ್ವಾಂತನ ನಲ್ಪಚೇತನನ ನನ್ಯಾಯಾಧ್ವಸಂಚಾರನು ॥ ಸುಪಥತ್ಯಾಗಿಯ ನನ್ವಿತಾಪಜಯನಂ ನಿರ್ಲಜ್ಜನು ನೀಚನು । ಕೃಪೆಯಿಂದೆನ್ನನೊರಲ್ದು ರಕ್ಷಿಸು ನಿತಾಂತಂ ಕಿನ್ನರಾಧೀಶ್ವರ ॥ ... ... ... ... ... .. ॥೫೭॥

ಎಂದಾಂ ನೆಗಳ್ದ ಶತಾಪರಾಧಮಂ ಸೈರಿಪುದೆಂದು ಬಿಜ್ಜಳಂ ಸಾಷ್ಟಾಂಗ ಮೆರಗಿ ಮಗುಳ್ದಿಂತೆಂದಂ ॥ * * * * * * * * * * * * * *

ತರಳವೃತ್ತಂ ॥ ಮದನಮರ್ದನ ನಾಂತು ಮಸ್ತಕದಲ್ಲಿ ನಿನ್ನ ನಿಜಾಜ್ಞೆಯಂ । ಪದೆದು ನೀಂ ಕರೆದಾಗ ಓ ಯೆನುತಿರ್ದ ನಣ್ಕ್ಮತೆ ಹೋಯೆನು ॥ ತೊದರೆ ನಿಂದ ನಡಂತೊ ನಿನ್ನಯ ಪೇರ್ಮೆ ಧಾತ್ರಿಯೊ ಳದ್ಭುತಂ । ವಿದಿತ ಮಿಂತಿದು ನಿನ್ನ ನಾಫಣಿರಾಜ ನಾರ್ಪನೆ ಬಣ್ಣಿಸಲ್ ॥ ... ... ... ... .. ... ॥೫೮॥

ಕಂ॥ ಉಗ್ರಪ್ರತಾಪ ನಿನ್ನ ಸ । ಮಗ್ರ ಪ್ರೇರಣೆಯಿ ನಳಿದು ದುಳಿದುದು ಜಗವಾಗ್ರ್ಯಾಗ್ರಣಿ ನೀನೆ ಜಗತ್ತ್ರಯ । ನಿಗ್ರಹಸಮನುಗ್ರಹಕ್ರಿಯಾಧೌರೇಯಂ ॥ ... ॥೫೯॥

---

ಕೊನೆಯಿಲ್ಲಿತುಂಬಿದ ಶುಭ್ರವಾದ ಯಶಸ್ಸಿನಿಂದ ಪ್ರಕಾಶಿಸುವ,ಸದ್ಗುಣಾಕರ, ಕಿನ್ನರೇಂದ್ರ! ದೀನಂಗೆ- ಬಡವನಾದ, ಎನಗೆ, ಕೃಪೆಯಿಂ, ಅಭಯಮಂ- ಭೀತಿರಾಹಿತ್ಯವನ್ನು, ಇತ್ತು, ಪೊರೆ. ... ॥೫೬॥

ಕಿನ್ನರಾಧೀಶ್ವರ! ಕಪಟಾಲಾಪನಂ- ಕೃತ್ರಿಮವಾದ ಮಾತುಳ್ಳ, ಅಜ್ಞಭಾವಯುತನಂ- ಮೂಢತ್ವದಿಂಕೂಡಿದ, ದುರ್ದಾಂತನಂ- ಆಚಾರ್ಯರಿಂಕ್ರಮವಾಗಿ ಶಿಕ್ಷಿಸಲ್ಪಡದೇ ಇಗುವ, ಧೂರ್ತನಂ- ವಂಚಕನಾದ, ಚಪಲಸ್ವಾಂತನಂ- ಚಂಚಲವಾದ ಮನಸ್ಸುಳ್ಳ, ಅಲ್ಪಚೇತನನಂ- ಸ್ವಲ್ಪಕಾಲಬದುಕುವ, ಅನ್ಯಾಯಾಧ್ವಸಂಚಾರನಂ- ಅಧರ್ಮಮಾರ್ಗದಲ್ಲೇ ಸಂಚರಿಸುವ, ಸುಪಥತ್ಯಾಗಿಯಂ- ಸನ್ಮಾರ್ಗವಂಬಿಟ್ಟ, ಅನ್ವಿತಾಪಜಯನಂ- ಸೋಲಿಂವಿಕೆಯಿಂ ಕೂಡಿದ, ನಿರ್ಲಜ್ಜನಂ- ನಾಚಿಕೆಯಿಲ್ಲದ, ನೀಚನಂ, ಎನ್ನಂ, ಕೃಪೆಯಿಂದೆ, ಒರಲ್ದು- ಪ್ರೀತಿಸಿ, ನಿತಾಂತಂ- ಅತ್ಯಂತವಾಗಿ, ರಕ್ಷಿಸು. ... ... ... ॥೫೭॥

ಎಂದು, ಬಿಜ್ಜಳಂ, ಆಂ, ನೆಗಳ್ದ- ಮಾಡಿದ, ಶತಾಪರಾಧಮಂ- ಅನೇಕವಾದ ತಪ್ಪನ್ನು, ಸೈರಿಪುದು; ಎಂದು, ಸಾಷ್ಟಾಂಗಂ, ಎರಗಿ, ಮಗುಳ್ದು, ಇಂತು, ಎಂದಂ. * * * * * * * * *

ನಿನ್ನ, ನಿಜಾಜ್ಞೆಯಂ- ಸ್ಥಿರವಾದ ಅಪ್ಪಣೆಯನ್ನು. ಮದನಮರ್ದನಂ, ಪದೆದು, ಮಸ್ತಕದಲ್ಲಿ ಆಂತು- ಶಿರಸಾವಹಿಸಿ, ನೀಂ, ಕರೆದಾಗಳ್, ಓ ಎನುತೆ, ಇರ್ದಂ; ಅಣ್ಕ್ಮತೆ- ಪರಾಕ್ರಮವಿಶಿಷ್ಟನಾಗಿ, ಹೋಎನುತ್ತ, ಒದರೆ- ಕೂಗಲು, ನಿಂದು; ನಿನ್ನಯ, ಪೇರ್ಮೆ- ಅತಿಶಯವು, ಅದು, ಎಂತೊ- ಎಂಥಾದ್ದೋ! ಧಾತ್ರಿಯೊಳ್, ಅದ್ಭುತಂ, ಇದು, ಇಂತು, ವಿದಿತಂ- ತಿಳಿಯಲ್ಪಟ್ಟಿತು; ನಿನ್ನಂ, ಬಣ್ಣಿಸಲ್- ಗುಣವಂ ವಿಸ್ತರಿಸುವದಕ್ಕೆ, ಆ ಫಣಿರಾಜಂ- ಆ ಆದಿಶೇಷನು, ಆರ್ಪನೆ- ಸಮರ್ಥನಾಗುವನೇ? ... ॥೫೮॥

ಉಗ್ರಪ್ರತಾಪ- ಭಯಂಕರವಾದ ಪರಾಕ್ರಮವುಳ್ಳವನೇ! ಅಗ್ರ್ಯಾಗ್ರಣಿ- ಶ್ರೇಷ್ಠರಲ್ಲೆಲ್ಲಾ ಅಗ್ರೇಸರನಾದವನೇ! ನಿನ್ನ, ಸಮಗ್ರಪ್ರೇರಣೆಯಿಂ- ಸಂಪೂರ್ಣವಾದ ಉದ್ಬೋಧನೆಯಿಂದ, ಜಗಂ, ಅಳಿದುದು, ಉಳಿದುದು, ಜಗತ್ತ್ರಯನಿಗ್ರಹಸಮನುಗ್ರಹಕ್ರಿಯಾಧೌರೇಯಂ- ಮೂಲೋಕದ ಶಿಕ್ಷೆ ರಕ್ಷಣೆಗಳಂ ಮಾಡುವ ಕಾರ್ಯದ ಭಾರವನ್ನು ವಹಿಸಿರುವವಂ, ನೀನೆ. ... ... ... ... ॥೫೯॥

ಕಂ ‖ ಪಶು ಮಱೆವುಗೆ ಕಾಯ್ದ್ದ ನರ | ಪಶು ವಾಂ ಮರೆವೊಕ್ಕೆ ನೊಲ್ದು ಪೊರೆವೆ
ನ್ನಂ ನೀಂ ‖ ಪಶುಪಾವತಾರ ನೆಂಬುದ | ನಶೇಷಭುವನದೊಳ್ ದೇವ ಮೆರೆಯಲ್ವೇಳ್ಕುಂ ‖
ಕಂ ‖ ವಿರಹಿತಮನುಷ್ಯಧರ್ಮ್ಮಂ | ಪರಿಗಳಿತಾಶಂ ಸದೇಕನಿಧಿ ಯೆನಿಸಿದ ಕಿ ‖ ನ್ನರ
ನಾಥ ಕೇಳ್ನಿನಗೆ ಶಂ | ಕರಮಿತ್ರತೆ ಪುಣ್ಯಜನನಿಷೇವ್ಯತೆ ಚಿತ್ರಂ ‖ ... ‖೬೧‖
ವ ‖ ಎಂದು ಮುಗುಳ್ದು ಮುಗುಳ್ದರಗಿ ಪೊಗಳ್ವ ನರೇಂದ್ರನಂ ಕೃಪಾಪಾಂಗದಿ ನ
ಭೀಕ್ಷಿಸುತಭಯಮುಮಂ ಕರುಣಿಸಿ ‖ * * * * * * * * * * *
ಕಂ ‖ ಪೆರೆದಲೆಯನ ಶರಣರೊಳೆಲೆ | ಕರೆಮರೆಯಿಲ್ಲದೆ ಸಮೋತ್ತರಂಗುಡದೆ ಸು
ಖಂ ‖ ನೆರೆ ಬರ್ದುಕು ಪೋಗೆನುತೆ ನೆಲ|ದೆರೆಯನ ಬೀಳ್ಕೊಟ್ಟು ಮಡಿದ ಕುರಿಮಾನಿಸನಂ‖
ಕಂ‖ ಅಸುವೀಯುತೆತ್ತುತಿಂತಿದು | ಪೊಸತೆಂದಾಪೌರ ರೆಯ್ದೆ ಕೊಂಡಾಡೆ ಗಣ‖
ಪ್ರಸರಂ ಮುದಮಾಳ್ದಿರೆ ನೆಗ | ಳ್ದಸಮಂ ನಿಜಗೃಹಮ ನೆಯ್ದಿದಂ ಗುಣನಿಳಯಂ‖೬೩‖
ವ ‖ ಅಂತೆಯ್ದಿ ಕಿನ್ನರಯ್ಯಂ ಮುನ್ನಿನಂತೆ ನಿಜಮಹಿಮೆವೆತ್ತೊಪ್ಪುತಿರ್ಪ ನಾ
ಪ್ರಸ್ತಾವದೊಳ್‖ * * * * * * * * * * * * * *

---

ದೇವ! ಪಶು- ಪಶುವಾದಕುರಿಯು, ಮರೆವುಗೆ- ಶರಣಾಗತವಾಗಲು, ಕಾಯ್ದ್ದೆ- ಕಾಪಾಡಿದೆ; ಆಂ; ನರಪಶು- ಮನುಷ್ಯರೂಪನಾದ ಪಶುವು, ಮರೆಪೊಕ್ಕೆಂ; ಒಲ್ದು, ಎನ್ನಂ, ಪೊರೆದು, ನೀಂ, ಪಶುಪಾವತಾರಂ- ಪಶುಪತಿಯ ಅವತಾರವು, ಎಂಬುದಂ, ಅಶೇಷಭುವನದೊಳ್- ಎಲ್ಲಾಲೋಕದಲ್ಲೂ,ಮೆರೆಯಲ್ವೇಳ್ಕುಂ- ಪ್ರಕಾಶಪಡಿಸಬೇಕು. ... ... ... ... ... ‖೬೦‖

ವಿರಹಿತಮನುಷ್ಯಧರ್ಮ್ಮಂ- ವಿರಹಿತ- ಶೂನ್ಯವಾದ, ಮನುಷ್ಯಧರ್ಮ್ಮಂ- ನರವಾಹನವುಳ್ಳವನು, (ಮಾನುಷಸ್ವಭಾವವಿಲ್ಲದವನು) ಪರಿಗಳಿತಾಶಂ- ಪರಿಗಳಿತ- ಜಾರಿಹೋದ, ಆಶಂ- ದಿಕ್ಕುಳ್ಳವನು, ( ಬಿಟ್ಟುಹೋದ ಆಸೆಯುಳ್ಳವನು ) ಸದೇಕನಿಧಿ- ಸತ್- ಸವಿನಾಶವಿಲ್ಲದ, ಏಕ- ಮುಖ್ಯವಾದ, ನಿಧಿ- ನಿಕ್ಷೇಪವುಳ್ಳವನು, ( ಸತ್- ಸತ್ಪುರುಷರಿಗೆ, ಏಕ- ಮುಖ್ಯವಾದ, ನಿಧಿ- ನಿಕ್ಷೇಪನಾದವನು. ) ಎನಿಸಿದ, ಕಿನ್ನರನಾಥ ! ಕೇಳ್, ನಿನಗೆ, ಶಂಕರಮಿತ್ರತೆ- ಶಿವನ ಸ್ನೇಹಿತತನವು, ( ಸುಖವನ್ನುಂಟುಮಾಡುವದರಿಂದ ಮಿತ್ರತ್ವವು ) ಪುಣ್ಯಜನನಿಷೇವ್ಯತೆ- ಕುಬೇರನ ಪಟ್ಟಣದ ಜನಗಳಿಂದಸೇವಿಸಲ್ಪಡುವಿಕೆಯು, (ಪರಿಶುದ್ಧರಾದ ಜನರಿಂದಸೇವಿಸಲ್ಪಡುವಿಕೆಯು. ) ಚಿತ್ರಂ- ಆಶ್ಚರ್ಯಕರವಾದದ್ದು. ... ... ... ‖೬೧‖

ಎಂದು, ಮುಗುಳ್ದು, ಮುಗುಳ್ದು, ಎರಗಿ, ಪೊಗಳ್ವ, ನರೇಂದ್ರನಂ, ಕೃಪಾಪಾಂಗದಿಂ- ದಯಾವಿಶಿಷ್ಟವಾದ ಕಡೆಗಣ್ಣೋಟದಿಂದ. ಅಭೀಕ್ಷಿಸುತೆ, ಅಭಯಮುಮಂ, ಕರುಣಿಸುತಂ. * * * * * * *

ಎಲೆ! ಪೆರೆದಲೆಯನ- ಚಂದ್ರನೇಶಿರಸ್ಸಿನಲ್ಲುಳ್ಳ ಶಿವನ, ಶರಣರೊಳ್, ಕರೆಮರೆ- ಕಳಂಕು ಮೋಸವು, ಇಲ್ಲದೆ, ಸಮೋತ್ತರಂಗುಡದೆ- ಸಮಾನವಾಗಿ ಉತ್ತರವನ್ನೀಯದೆ, ಸುಖಂ, ನೆರೆ- ಚೆನ್ನಾಗಿ, ಬರ್ದುಕೆಂ, ಪೋಗು, ಎನುತೆ, ನೆಲದ- ಭೂಮಿಯ, ಎರೆಯನ- ಪತಿಯನ್ನು, ಬೀಳ್ಕೊಟ್ಟು- ಕಳುಹಿಸಿಕೊಟ್ಟು, ಮಡಿದ, ಕುರಿಮಾನಿಸನಂ- ಪಶುವಿನಂಥಾಮನುಷ್ಯನನ್ನು. ... ... ... ‖೬೨‖

ಅಸುವೀಯುತೆ- ಪ್ರಾಣವಂಕೊಡುತ್ತ, ಎತ್ತುತೆ, ಇಂತು, ಇದು, ಪೊಸತು, ಎಂದು, ಆಪೌರರ್- ಆ ಪಟ್ಟಣದವರು, ಎಯ್ದೆ, ಕೊಂಡಾಡೆ,ಗಣಪ್ರಸರಂ, ಮುದಮಾಳ್ದು, ಇರೆ, ನೆಗಳ್ದು, ಅಸಮಂ- ಅಸದೃಶನಾದ,ಗುಣನಿಳಯಂ- ಸದ್ಗುಣಗಳಿಗೆ ವಾಸಭೂಮಿಯಾದ ಕಿನ್ನರಯ್ಯನು, ನಿಜಗೃಹಮಂ, ಎಯ್ದಿದಂ. ‖೬೩‖

ಅಂತು, ಕಿನ್ನರಯ್ಯಂ, ಎಯ್ದಿ, ಮುನ್ನಿನಂತೆ, ನಿಜಮಹಿಮೆವೆತ್ತು- ಸ್ಥಿರವಾದಮಹತ್ವವಂಹೊಂದಿ, ಒಪ್ಪುತೆ, ಇರ್ಪಂ, ಆ ಪ್ರಸ್ತಾವದೊಳ್. * * * * * * * * * * * * *

ಮ ॥ ಸ್ರ ॥ ಪೊಗಳುತ್ತಂ ಕಿನ್ನರೇಂದ್ರಂ ನೆಗಳ್ದ ಘನತರಾಶ್ಚರ್ಯಮಂ ಭಕ್ತರೊಳ್ವಂ । ದಿಗಳಿಂ ಕೊಂಡಾಡಿಸುತ್ತಂ ಶರಣನತುಳಸಾಮರ್ಥ್ಯಮಂ ಸಂಭ್ರಮಂ ಪೆಂ ॥ ಪೊಗೆವನ್ನಂ ಬಂದು ಪೊಕ್ಕಂ ನಿಜಭವನಮನಾಮ್ನಾಯಗೇಯಂ ವಿಮಾಯಂ । ಸುಗುಣಾಲಂಕಾರವೀರವ್ರತಹಿತಚರಿತಂ ವೀರಶೈವಾಬ್ಧಿಚಂದ್ರಂ ॥ ... ... ॥೬೪॥

ಕ ॥ ಘನಮಹಿಮಕಿನ್ನರೇಂದ್ರನ । ವಿನುತಚರಿತ್ರಮನದಾವನೋದುವನಾವಂ । ವಿನಯದೆ ಕೇಳ್ವನವಂ ನೆ । ಟ್ಟನೆ ಪಡೆವಂ ಸುಖಮನೈಹಿಕಾಮುಷ್ಮಿಕಮಂ ॥೬೫॥

ಲಲಿತಪದವೃತ್ತಂ ॥ ಕುಷ್ಠಮುಖದುಸ್ಸಹಬಲಿಷ್ಠಗದಮರ್ದನಗರಿಷ್ಠನಿಜಪಜ್ಜಲ ಯುಧಿಷ್ಠಿರನರಾರ್ಚ್ಯ । ಧಿಷ್ಠಿತಜಗತ್ತ್ರಯ ವರಿಷ್ಠಗರುಡಾಂಕಪರಮೇಷ್ಠಿನುತ ಭರ್ಗಪದನಿಷ್ಠಜನಲೋಲಾ ॥ ಶ್ರೇಷ್ಠಸುಕವಿಪ್ರಕರಪುಷ್ಠಸುರಭೂಜ ಖಲಕಾಷ್ಠದವಪಾವಕ ಪಟಿಷ್ಠಗಣವೃಂದ । ಜ್ಯೇಷ್ಠ ಪರಿತರ್ಜಿತಲಘಿಷ್ಠಮತವಾದಿಕುಲ ಸುಷ್ಠುವಚನೋತ್ಕರ ಮಹಿಷ್ಠ ಬಸವೇಶಾ ॥ ... ... ... ... ॥೬೬॥

ಆಮ್ನಾಯಗೇಯಂ- ವೇದಗಳಿಂದ ಗಾನಮಾಡಲ್ಪಡುವದಕ್ಕೆ ಯೋಗ್ಯನಾದ, ವಿಮಾಯಂ- ಮಾಯಾರಹಿತನಾದ, ಸುಗುಣಾಲಂಕಾರವೀರವ್ರತಹಿತಚರಿತಂ- ಸದ್ಗುಣಗಳೇ ಆಭರಣವಾಗುಳ್ಳ ವೀರಶೈವನಿಯಮವುಳ್ಳ, ಸಕಲರಿಗೂ ಇಷ್ಟವಾದನಡತೆಯುಳ್ಳ, ವೀರಶೈವಾಬ್ಧಿಚಂದ್ರಂ- ವೀರಶೈವರೆಂಬಸಮುದ್ರಕ್ಕೆ ಚಂದ್ರನಾದ ಬಸವೇಶ್ವರನು, ಕಿನ್ನರೇಂದ್ರಂ, ನೆಗಳ್ದ- ಮಾಡಿದ, ಘನತರಾಶ್ಚರ್ಯಮಂ, ಭಕ್ತರೊಳ್, ಪೊಗಳುತ್ತಂ ಶರಣನ, ಅತುಳಸಾಮರ್ಥ್ಯಮಂ, ವಂದಿಗಳಿಂ- ಸ್ತುತಿಪಾಠಕರಿಂದ, ಕೊಂಡಾಡಿಸುತ್ತಂ, ಸಂಭ್ರಮಂ- ಸಡಗರವು, ಪೆಂಪು ಅತಿಶಯವು, ಪೊಗೆವನ್ನಂ-ಹುಟ್ಟುವಹಾಗೆ, ಬಂದು, ನಿಜಭವನಮಂ-ತನ್ನಮನೆಯನ್ನು, ಪೊಕ್ಕಂ.

ಘನಮಹಿಮಕಿನ್ನರೇಂದ್ರನ, ವಿನುತಚರಿತ್ರಮಂ- ಶ್ಲಾಘ್ಯವಾದ ನಡತೆಯನ್ನು, ಅದಾವಂ ಓದುವಂ- ಯಾವನು ಓದುವನೋ? ಆವಂ; ವಿನಯದೆ, ಕೇಳ್ವಂ, ಅವಂ, ಐಹಿಕಾಮುಷ್ಮಿಕಮಂ ಸುಖಮಂ- ಈಲೋಕ ಪರಲೋಕವೆರಡರಲ್ಲೂ ಉಂಟಾಗುವ ಸೌಖ್ಯವನ್ನು, ನೆಟ್ಟನೆ, ಪಡೆವಂ. ... ||೬೫||

ಕುಷ್ಠ......ಪಜ್ಜಲ— ಕುಷ್ಠ- ಬಿಳಿಯ ಕೋಷ್ಠವೇ, ಮುಖ- ಮೊದಲಾದ, ದುಸ್ಸಹ- ಸಹಿಸುವದಕ್ಕಶಕ್ಯವಾದ, ಬಲಿಷ್ಠ- ಬಲವತ್ತರಗಳಾದ, ಗದ- ರೋಗಗಳನ್ನು, ಮರ್ದನ- ನಾಶಮಾಡುವದರಲ್ಲಿ, ಗರಿಷ್ಠ- ಬಹು ಗುರುವಾದ, ನಿಜ- ತನ್ನ, ಪಜ್ಜಲ- ಪಾದೋದಕವುಳ್ಳ; ಯುಧಿಷ್ಠಿರನರಾರ್ಚ್ಯ— ಯುಧಿಷ್ಠಿರ- ಧರ್ಮರಾಯ, ನರ- ಅರ್ಜುನ, ಇವರುಗಳಿಂದ, ಅರ್ಚ್ಯ- ಪೂಜಿಸಲ್ಪಡುವದಕ್ಕೆ ಯೋಗ್ಯನಾದ, ಅಧಿಷ್ಠಿತಜಗತ್ತ್ರಯ- ತನ್ನಲ್ಲಿ ವಾಸಮಾಡಲ್ಪಟ್ಟ ಮೂರು ಲೋಕವುಳ್ಳ, ವರಿಷ್ಠಗರುಡಾಂಕಪರಮೇಷ್ಠಿನುತ— ವರಿಷ್ಠ- ಶ್ರೇಷ್ಠನಾದ, ಗರುಡಾಂಕ- ವಿಷ್ಣು, ಪರಮೇಷ್ಠಿ- ಬ್ರಹ್ಮ, ಇವರುಗಳಿಂದ, ನುತ- ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ, ಭರ್ಗಪದನಿಷ್ಠಜನಲೋಲಾ— ಭರ್ಗ- ಈಶ್ವರನ, ಪದ- ಪಾದದಲ್ಲಿ, ನಿಷ್ಠ- ಶ್ರದ್ಧೆಯುಳ್ಳ, ಜನ- ಜನಗಳಲ್ಲಿ, ಲೋಲಾ- ಆಸಕ್ತನಾದ; ಶ್ರೇಷ್ಠಸುಕವಿಪ್ರಕರಪುಷ್ಠಸುರಭೂಜ— ಶ್ರೇಷ್ಠಸುಕವಿ- ಉತ್ತಮರಾದ ಸತ್ಕವಿಗಳ, ಪ್ರಕರ- ಗುಂಪಿಗೆ, ಪುಷ್ಠಸುರಭೂಜ— ಆರನೇ ಕಲ್ಪವೃಕ್ಷನಾದ, ಖಲಕಾಷ್ಠದವಪಾವಕ— ಖಲ- ನೀಚರೆಂಬ, ಕಾಷ್ಠ- ಸೌದೆಗೆ, ದವಪಾವಕ- ಕಾಳ್ಕಿಚ್ಚಾದ; ಪಟಿಷ್ಠಗಣವೃಂದಜ್ಯೇಷ್ಠ— ಪಟಿಷ್ಠ- ಸಮರ್ಥರಾದ, ಗಣ- ಶಿವಗಣಂಗಳ, ವೃಂದ- ಗುಂಪಿನಲ್ಲಿ ಜ್ಯೇಷ್ಠ- ದೊಡ್ಡವನಾದ; ಪರಿತರ್ಜಿತಲಘಿಷ್ಠಮತವಾದಿಕುಲ— ಪರಿತರ್ಜಿತ- ಭಯಪಡಿಸಲ್ಪಟ್ಟ, ಲಘಿಷ್ಠಮತವಾದಿಕುಲ- ಅತಿ ನೀಚ ಮತಸ್ಥರಾದ ವಾದಿಗಳ ಗುಂಪುಳ್ಳ; ಸುಷ್ಠುವಚನೋತ್ಕರ- ಒಳ್ಳೆಯ ಮಾತುಗಳ ಗುಂಪುಳ್ಳ, ಮಹಿಷ್ಠ- ಅತಿ ಪೂಜ್ಯನಾದ, ಬಸವೇಶಾ! ... ... ||೬೬||

ಪ್ರಭಾತವೃತ್ತಂ ॥ ಶರಣಾಗತಾರ್ತಿಹರಣಾತಿರಂಜನೇ । ತರವಾರಿದೃಪ್ತಸುರವೈರಿಭಂಜನೇ॥ಕರಿಮಂದಯಾನೆ ಹರಿಚಂದನಾರ್ಜುನೇ । ಪರಿಪಾಲಿಸೆನ್ನ ಗಿರಿರಾಜನಂದನೇ॥೬೭॥

ಗದ್ಯಂ ॥ ಇದುನಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತವರಮಶಿವಲಿಂಗಪಾದಾರವಿಂದಪರಾಗಭಸಿತಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತ ಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಕಿನ್ನರೇಂದ್ರವೈಭವಕಥನಂಸಪ್ತದಶಾಶ್ವಾಸಂಪರಿಸಮಾಪ್ತಂ॥ ... ... ... ... ... ...

ಸಪ್ತದಶಾಶ್ವಾಸಂ ಸಂಪೂರ್ಣಂ.

ಶ್ರೀಃ

ಚಂಡವರದಾಯ ಪರಬ್ರಹ್ಮಣೇನಮಃ.

## ಅಷ್ಟಾದಶಾಶ್ವಾಸಂ.

### ಕಲಿಕೇತಬ್ರಹ್ಮಕಥನಂ.

ಕಂ ॥ ಶ್ರೀಮದಮಳಾಂಬಿಕಾಮುಖ । ತಾಮರಸದ್ಯುಮಣಿ ಗುಣಗಣಾಭರಣ ಗಣ॥ ಸ್ತೋಮಪರಿವೃತನಶೇಷಭ । ವಾಮಯಹರ ನೀಗೆ ಸೌಖ್ಯಮಂ ಶಿವಲಿಂಗಂ ॥ ... ॥೧॥

ಶರಣಾಗತಾರ್ತಿಹರಣಾತಿರಂಜನೇ- ಮರೆಹೊಕ್ಕವರ ಮನೋವ್ಯಥೆಯನ್ನು ನಾಶಮಾಡುವದರಿಂದ ಬಹಳವಾಗಿ ಸಂತೋಷಪಡಿಸುವ, ತರವಾರಿದೃಪ್ತಸುರವೈರಿಭಂಜನೆ— ತರವಾರಿ- ಖಡ್ಗಾಯುಧದಿಂದ, ದೃಪ್ತ- ಕೊಬ್ಬಿದ, ಸುರವೈರಿ- ರಾಕ್ಷಸರನ್ನು, ಭಂಜನೆ- ನಾಶಮಾಡುವ, ಕರಿಮಂದಯಾನೆ-ಆನೆಯ ಮೆಲ್ನಡೆಯೋಪಾದಿಯಲ್ಲಿರುವ ಗಮನವುಳ್ಳ, ಹರಿಚಂದನಾರ್ಜನೇ- ಶ್ರೀಗಂಧಲೇಪನೆಯಿಂದ ಬೆಳ್ಳಗಿರುವ, ಗಿರಿರಾಜನಂದನೆ, ಎನ್ನಂ, ಪಾಲಿಸು. ... ... ... ... ... ||೬೭||

ಹದಿನೇಳನೆಯ ಆಶ್ವಾಸವು ಸಂಪೂರ್ಣವು.

ಹದಿನೆಂಟನೆಯ ಆಶ್ವಾಸಪ್ರಾರಂಭಃ.

ಶ್ರೀ......ದ್ಯುಮಣಿ— ಶ್ರೀಮತ್- ಷಡ್ಗುಣೈಶ್ವರ್ಯಯುಕ್ತಳಾದ, ಅಮಳ- ನಿರ್ಮಲಳಾದ, ಅಂಬಿಕಾ- ಪಾರ್ವತಿಯ, ಮುಖ- ವದನವೆಂಬ, ತಾಮರಸ- ಕಮಲಕ್ಕೆ, ದ್ಯುಮಣಿ- ಸೂರ್ಯನಾದ, ಗುಣ......ವೃತಂ— ಗುಣ- ಸದ್ಗುಣಗಳ, ಗಣ- ಸಮೂಹವೇ, ಆಭರಣ- ಅಲಂಕಾರವಾಗುಳ್ಳ, ಗಣ- ಶಿವಗಣಂಗಳ, ಸ್ತೋಮ- ಗುಂಪಿನಿಂದ, ಪರಿವೃತ—ಸುತ್ತುವರಿಯಲ್ಪಟ್ಟ, ಅಶೇಷಭವಾಮಯಹರಂ- ಸಕಲರ ಪಾಪವೆಂಬ ರೋಗವನ್ನು ನಾಶಮಾಡುವ, ಶಿವಲಿಂಗಂ, ಸೌಖ್ಯಮಂ, ಈಗೆ. ... ... ||೧||

ವ ॥ ಮತ್ತ ಮಭಿನವವಿಭವಮಂ ಬಡೆದೆಸೆವ ಕಲ್ಯಾಣನಗರದಲ್ಲಿ ॥ * * * *

ಮ ॥ ಸ್ರ ॥ ಸ್ಥಿರಚಿತ್ತಂ ಜಂಗಮಶ್ರೀಪದಭಜಕ ನುದಾತ್ತಸ್ವತಂತ್ರಂ ಯಶೋ
ಭಾ । ಸುರ ನಾದ್ಯಂ ಭಕ್ತ ನಂಗೇಂದ್ರಿಯಗುಣರಹಿತಂ ಲಿಂಗನಿಷ್ಠಾಪರಂ ಶಾಂ ॥ ಕರಮಾ
ರ್ಗೈಕಪ್ರದೀಪಂ ಕ್ಷಪಿತದುರಿತ ನುದ್ವೀತಮೋಹಂ ಕೃಪಾನಿ । ರ್ಭರಚಿತ್ತಂ ಸ್ವರ್ಣಲೋ
ಷ್ಟವ್ರಜಸಮಮತಿ ಲಿಂಗಾಧಿರೂಢಾಭಿಮಾನಂ॥ ... ... ... ॥೧॥

ಮತ್ತೇ ॥ ಜೀವನ್ಮುಕ್ತನಶೇಷಭಕ್ತನಿವಹೋಲ್ಲಾಸಪ್ರದಂ ಶುದ್ಧಧ । ರ್ಮಾವಾ
ಸಂ ವಿಮದಂ ತೃಣೀಕೃತಜಗ ಜ್ಜಾಲಂ ಸುಲೀಲಾಸ್ಪದಂ ॥ ಶ್ರೀವೀರವ್ರತಸಂಪದಂ ತ್ರಿ
ವಿಧಶೇಷಾಸ್ವಾದ ನಾನಂದಸ । ದ್ಭಾವಂ ತಾಂ ಕಲಿಕೇತಬೊಮ್ಮಿಮವಸರಿಂ ದೊಪ್ಪಿರ್ಪ ನ
ತ್ಯೂರ್ಜಿತಂ ॥ ... ... ... ... ... ... ॥೨॥

ವ ॥ ಅಂತಭಿನವ ವೀರಭದ್ರ ನೆಂಬಂತೆಸೆದು ॥ * * * * * * * *

ಕಂ ॥ ಮುಂದಲೆಯೊ ಳೊಲೆವ ಮುಡಿ ನೊಸ । ಲಂದದಸಿತಭಸಿತ ರೇಖೆ ಬಿಗಿದುಟ್ಟ
ಪ ಸು ॥ ರ್ಪೊಂದಿದವಸನಂ ಕರ್ಣದ । ಕೆಂದಳಿರವತಂಸ ಮೆಸೆಯೆ ಕಿರುಗೆಜ್ಜೆಗಳಂ ॥೪॥

---

ಮತ್ತಂ, ಅಭಿನವವಿಭವಂಬಡೆದು- ಹೊಸದಾದ ವೈಭವವನ್ನುಹೊಂದಿ, ಎಸೆವ, ಕಲ್ಯಾಣನಗರದಲ್ಲಿ. *

ಸ್ಥಿರಚಿತ್ತಂ- ನಿಶ್ಚಂಚಲವಾದಮನಸ್ಸುಳ್ಳ, ಜಂಗಮಶ್ರೀಪದಭಜಕಂ, ಉದಾತ್ತಸ್ವತಂತ್ರಂ, ಯಶೋಭಾಸುರಂ- ಕೀರ್ತಿಯಿಂಪ್ರಕಾಶಮಾನನಾದ, ಆದ್ಯಂ- ಮೊದಲಿಗನಾದ, ಅಂಗೇಂದ್ರಿಯಗುಣರಹಿತಂ, ಲಿಂಗನಿಷ್ಠಾಪರಂ- ಶಿವಲಿಂಗದ ಶ್ರದ್ಧೆಯಲ್ಲಾಸಕ್ತನಾದ, ಶಾಂಕರಮಾರ್ಗೈಕಪ್ರದೀಪಂ- ಶೈವಸರಣಿಯೊಂದನ್ನೇ ಪ್ರಕಾಶಪಡಿಸುವ, ಕ್ಷಪಿತದುರಿತಂ- ನಾಶಮಾಡಲ್ಪಟ್ಟ ಪಾಪವುಳ್ಳ, ಉದ್ವೀತಮೋಹಂ- ಕಳೆದುಹೋದ ಅಜ್ಞಾನವುಳ್ಳ, ಕೃಪಾನಿರ್ಭರಚಿತ್ತಂ- ದಯಾತಿಶಯದಿಂಕೂಡಿದಮನಸ್ಸುಳ್ಳ, ಸ್ವರ್ಣಲೋಷ್ಟವ್ರಜಸಮಮತಿ- ಚಿನ್ನ ಮಣ್ಣಿನಗಡ್ಡೆ ಎರಡರಲ್ಲೂ ಸಮವಾದ ಬುದ್ಧಿಯುಳ್ಳ, ಲಿಂಗಾಧಿರೂಢಾಭಿಮಾನಂ- ಲಿಂಗಧಾರಿಗಳಲ್ಲಿ ಅಭಿಮಾನವುಳ್ಳ. ... ... ... ... ... ||೧||

ಜೀವನ್ಮುಕ್ತಂ- ಬದುಕಿರುವಾಗಲೇ ಸಕಲಸಂಸಾರಪಾಪಪುಣ್ಯಾದಿಗಳಿಂ ಬಿಡಲ್ಪಟ್ಟ, ಅಶೇಷಭಕ್ತನಿವಹೋಲ್ಲಾಸಪ್ರದಂ- ಸಕಲ ಶಿವಭಕ್ತರಿಗೂ ಪ್ರೋತ್ಸಾಹವಂಕೊಡುವ, ಶುದ್ಧಧರ್ಮಾವಾಸಂ- ಪರಿಶುದ್ಧವಾದ ಸ್ವಭಾವಕ್ಕೆ ಆಶ್ರಯನಾದ, ವಿಮದಂ- ಗರ್ವರಹಿತನಾದ, ತೃಣೀಕೃತಜಗಜ್ಜಾಲಂ- ಹುಲ್ಲಾಗಿಮಾಡಲ್ಪಟ್ಟ ಲೋಕಸಮುದಾಯವುಳ್ಳ, ಸುಲೀಲಾಸ್ಪದಂ- ಒಳ್ಳೆಯವಿಲಾಸಕ್ಕಾಶ್ರಯನಾದ, ಶ್ರೀವೀರವ್ರತಸಂಪದಂ- ವೀರಶೈವನಿಯಮವೆಂಬ ಐಶ್ವರ್ಯವುಳ್ಳ, ತ್ರಿವಿಧಶೇಷಾಸ್ವಾದನಾನಂದಸದ್ಭಾವಂ- ತ್ರಿವಿಧಶೇಷ- ಶುದ್ಧಸಿದ್ಧ ಪ್ರಸಿದ್ಧವೆಂದು ಮೂರುವಿಧಗಳಾದ ಪ್ರಸಾದಗಳನ್ನು, ಆಸ್ವಾದನ- ಸ್ವೀಕರಿಸುವದರಿಂದುಂಟಾದ, ಆನಂದ- ಸಂತೋಷದಿಂಕೂಡಿದ, ಸದ್ಭಾವಂ- ಒಳ್ಳೆಯಮನಸ್ಸುಳ್ಳ, ತಾಂ, ಕಲಿಕೇತಬೊಮ್ಮಿಮವೆಸರಿಂದೆ, ಅತ್ಯೂರ್ಜಿತಂ- ಬಹುತೇಜಸ್ವಿಯಾಗಿ, ಒಪ್ಪಿ, ಇರ್ಪಂ. ... ... ||೨||

ಅಂತು, ಅಭಿನವವೀರಭದ್ರಂ- ಹೊಸಬನಾದ ವೀರಭದ್ರೇಶ್ವರನು, ಎಂಬಂತೆ, ಎಸೆದು. * * *

ಮುಂದಲೆಯೊಳ್, ಒಲೆವ- ಹೊರಳಾಡುವ, ಮುಡಿ- ಕೇಶಬಂಧವು, ನೊಸಲ- ಹಣೆಯಲ್ಲಿರುವ, ಅಂದದ- ಒಪ್ಪವಾದ, ಸಿತಭಸಿತರೇಖೆ- ಶುಭ್ರವಾದ ಬಸ್ಮದ ಗೆರೆ, ಬಿಗಿದು, ಉಟ್ಟ, ಪಸುರ್ಪು- ಹಸುರು ಬಣ್ಣವು, ಒಂದಿದ, ವಸನಂ- ಬಟ್ಟೆ; ಕರ್ಣದ- ಕಿವಿಯಲ್ಲಿರುವ, ಕೆಂದಳಿರ- ಕೆಂಪು ಚಿಗುರಿನ, ಅವತಂಸಂ- ಆಭರಣವು, ಎಸೆಯೆ, ಕಿರುಗೆಜ್ಜೆಗಳಂ. ... ... ... ... ... ||೪||

ಉ॥ಒಂದಡಿಯೊಳ್ತೊಡರ್ಚಿ ಪೆರತೊಂದಡಿಯೊಳ್ಝಣರೆಂಬ ಚೆಲ್ವಪೊನ್ನಂದುಗೆ
ಯಿಕ್ಕಿ ವಾಮಕರದೊಳ್ಬಲದಕ್ಷ ನಜಾಸ್ಯಶೃಂಗ ಮಂ॥ಬಂದಮನಾಳ್ದ ಬಲ್ದಗರಕೋಡ ನ
ಮರ್ಚಿ ಮುಕುಂದನಸ್ಥಿದಂ । ಡದಳೆದಂತೆ ದಕ್ಷಿಣಕರಾಗ್ರದೆಡಂಗೆಯ ನಾಂತು ಲೀಲೆಯಿಂ॥

ಮಹಾಸ್ರ ॥ ತಿರುಪುತ್ತಂ ಚೆಚ್ಚರಂ ಘುಲ್ಘುಲಕೆನೆ ಫಲಕಂ ದೇಶಿವೆತ್ತೋಜೆಚೆ
ಲ್ವಾ । ಗಿರೆ ಮಂದಸ್ಮೇರಮಂ ಬೀರುತೆ ಝುಣಝುಣನಿಕ್ವಾಣಮಂ ಸೂಸೆ ಪಾದ ॥ ಸ್ಫುರಿತಂ
ಮಂಜೀರಮೊಯ್ಯಾರದೆ ನಡೆತರುತಂ ಭಕ್ತರಾವಾಸಕತ್ಯಾ । ದರದಿಂ ನಿಂದೀಕ್ಷಿಸುತ್ತಂ
ಸರಸಮೃದುರವಂದೋರುತಂ ಪಾಡುತಾಗಳ್ ॥ ... ... ... ॥೬॥

ಜಂ ॥ ಪರಮತಗರ್ವಗಂಧಗಜಭಂಜನಕೇಸರಿ ಬಂದ ನಂಬಿಕಾ । ವರಶರಣಪ್ರತಾನ
ಪದಪದ್ಮಮರಂದಮದಾಳಿ ಬಂದ ನೀ ॥ ಶ್ವರಮತಪಂಕಜಾಕರಮರಾಳಕಿಶೋರ ನೊಲಿದು
ಬಂದ ನ । ಧ್ವರಹರಭದ್ರದಂತಿಪತಿ ಬಂದ ನಿವಂ ಕಲಿಕೇತಬೊಮ್ಮಯಂ॥ ॥೭॥

ನ ॥ ಎಂದು ವಿಳಾಸದಿ ನುಲಿನೃತ್ತಂ ಮತ್ತಮಿರದೆ ॥ * * * * * *

ಕಂ ॥ ಬಂದಂ ಭಕ್ತರ ಮುದ್ದಿನ । ಕಂದಂ ತ್ರಿವಿಧಪ್ರಸಾದಸೇವಾನಿರತಂ ॥ ಬಂದಂ
ಪ್ರಮಥರ ಲೆಂಕಂ । ಬಂದಂ ಭೃಂಗೀಶನಣುಗ ನೀಕಲಿಕೇತಂ । ... ... ॥೮॥

---

ಒಂದಡಿಯೊಳ್- ಒಂದು ಪಾದದಲ್ಲಿ, ತೊಡರ್ಚಿ- ಕಟ್ಟಿ, ಪೆರತೊಂದಡಿಯೊಳ್- ಮತ್ತೊಂದು ಪಾದದಲ್ಲಿ, ಝಣರ್, ಎಂಬ, ಪೊನ್ನಂದುಗೆಯಿಕ್ಕಿ- ಚಿನ್ನದ ಬಳೆಯಂ ಹಾಕಿ, ವಾಮಕರದೊಳ್- ಎಡಗಯ್ಯಲ್ಲಿ, ಬಲದಕ್ಷನ, ಅಜಾಸ್ಯಶೃಂಗಂ- ಆಡಿನ ಮುಖದ ಕೊಂಬು, ಎಂಬ, ಅಂಪನುಂ, ಆಳ್ದ, ಬಲ್ದಗರ- ಬಲವಾದ ಟಗರಿನ, ಕೋಡಂ-ಕೊಂಬನ್ನು, ಅಮರ್ಚಿ- ಸೇರಿಸಿ, ಮುಕುಂದನ- ವಿಷ್ಣುವಿನ, ಅಸ್ಥಿದಂಡಂದಳೆದಂತೆ- ದೊಣ್ಣೆಯಂತಿದ್ದ ಮೂಳೆಯಂಧರಿಸಿದಹಾಗೆ, ದಕ್ಷಿಣಕರಾಗ್ರದೆ-ಬಲಗಯ್ಯತುದಿಯಲ್ಲಿ, ಲೀಲೆಯಿಂ, ಡಂಗೆಯಂ, ಗೆಜ್ಜೆಯಂಕಟ್ಟಿದಕೋಲನ್ನು, ಆಂತು. ... ... ... ... ॥೫॥

ಫಲಕಂ- ಹಲಗೆಯು, ಘುಲ್ಘುಲಕ್ಎನೆ, ಚೆಚ್ಚರಂ- ಬೇಗಬೇಗನೆ, ತಿರುಪುತ್ತಂ, ದೇಶಿವೆತ್ತು, ಓಜೆ, ಚೆಲ್ವಾಗಿ, ಇರೆ, ಮಂದಸ್ಮೇರಮಂ- ಮುಗುಳ್ನಗೆಯನ್ನು, ಬೀರುತೆ, ಪಾದಸ್ಫುರಿತಂ- ಚರಣದಲ್ಲಿ ಪ್ರಕಾಶಿಸುವ, ಮಂಜೀರಂ- ಪಾದಕಟವು, ಝುಣಝುಣನಿಕ್ವಾಣಮಂ- ಝುಣಝುಣವೆಂಬ ಶಬ್ದವನ್ನು, ಸೂಸೆ, ಒಯ್ಯಾರದೆ- ಬಲಪಿನಿಂದ, ಭಕ್ತರ, ಆವಾಸಕೆ, ನಡೆತರುತಂ, ಅತ್ಯಾದರದಿಂ, ನಿಂದು, ಈಕ್ಷಿಸುತ್ತಂ, ಸರಸಮೃದುರವಂದೋರುತಂ- ಮಧುರವಾಗಿ ಕೋಮಲವಾದ ಧ್ವನಿಯಂ ಮಾಡುತ್ತ, ಪಾಡುತೆ, ಆಗಳ್. ... ॥೬॥

ಪರ......ಕೇಸರಿ— ಪರಮತ- ಇತರಮತಗಳ, ಗರ್ವ- ಅಹಂಕಾರವೆಂಬ, ಗಂಧಗಜ- ಕೊಬ್ಬಿದ ಆನೆಗಳನ್ನು, ಭಂಜನ- ನಾಶಪಡಿಸುವದರಲ್ಲಿ, ಕೇಸರಿ- ಸಿಹ್ಮನಾದವನು, ಬಂದಂ; ಅಂಬಿಕಾ......ಮದಾಳಿ— ಅಂಬಿಕಾವರಶರಣ- ಶಿವಶರಣರ, ಪ್ರತಾನ- ಗುಂಪಿನ, ಪದಪದ್ಮ- ಪಾದವೆಂಬ ಕಮಲದ, ಮರಂದ- ಮಕರಂದಕ್ಕೆ, ಮದಾಳಿ- ಮದಿಸಿದ ಭ್ರಮರನಾದವನು, ಬಂದಂ, ಈಶ್ವರ......ಕಿಶೋರಂ— ಈಶ್ವರಮತ-ಶಿವಮತವೆಂಬ, ಪಂಕಜಾಕರ- ಕೊಳಕ್ಕೆ, ಮರಾಳಕಿಶೋರಂ- ಹಂಸಪಕ್ಷಿಯ ಮರಿಯಾದವನು. ಒಲಿದು-ಪ್ರೀತಿಸಿ, ಬಂದು; ಅಧ್ವರ......ಪತಿ— ಅಧ್ವರಹರ- ದಕ್ಷಯಜ್ಞನಾಶಕನಾದ ವೀರಭದ್ರನ, ಭದ್ರದಂತಿಪತಿ- ಮಂಗಳಕರವಾದ ಗಜಶ್ರೇಷ್ಠನಾದ, ಇವಂಕಲಿಕೇತಬೊಮ್ಮಯ್ಯ, ಬಂದಂ. ... ॥೭॥

ಭಕ್ತರ, ಮುದ್ದಿನ- ಪ್ರೀತಿಪಾತ್ರನಾದ, ಕಂದಂ- ಮಗನು, ಬಂದಂ; ತ್ರಿವಿಧಪ್ರಸಾದಸೇವಾನಿರತಂ, ಬಂದಂ; ಪ್ರಮಥರ, ಲೆಂಕಂ- ಆಳು, ಬಂದಂ; ಭೃಂಗೀಶನ, ಅಣುಗಂ ಮಗನಾದ, ಈಕಲಿಕೇತಂ, ಬಂದು

ಕಂ ॥ ಚೆಂಗಳೆಯು ಮಗಂ ದುಗ್ಗಳೆ । ಯಂಗಳಮಂ ಬೇಹರಿಪ್ಪ ಕಿಂಕರನಾದ ॥ ಯ್ಯಂಗಳ ಭೃತ್ಯಂ ಭೋಗನ । ಡಿಂಗರಿಗಂ ಬಂದ ನಿಂದು ನೋಡಿರೆ ಶರಣರ್ ॥ ... ॥೯॥

ಕಂ ॥ ಎಂದುಲಿದು ಪಾಡಿ ನಗಿಸುತೆ । ಕುಂದದೆ ತಾಂ ಪ್ರಸ್ಥಯುಗಳದಳತೆಯ ಧಾನ್ಯಂ ॥ ದಂದೆನಿತು ಬಂದೊಡಂ ಚರ । ವೃಂದಮ ನದರಿಂದೆ ತಣಿಪುತೆಸೆದಂ ಭಕ್ತಂ ॥೧೦॥

ವ ॥ ಅಂತಿರ್ಪಿನ ಮೊಂದುವಾಸರಂ ನಿಜಗೃಹಬಹಿರ್ದೇಶಭಾಸುರವೇದಿಕಾಗ್ರದೊಳ್ಳವಭಕ್ತನೋರ್ವಂ ಪಥಶ್ರಾಂತಿಯಿಂ ಕಂಗೆಟ್ಟು ಪಟ್ಟಿರ್ಪಿನಮಾತನಂ ಕಲಿಕೇತಯ್ಯಂ ಕಂಡು ನೀಂ ನಾರೆಂ ಕಾರಣಂ ಬಂದೆ ಯೆಂಬುದು ಮಾಭಕ್ತಂ ತದ್ದಯಾರ್ದ್ರಕಟಾಕ್ಷವೀಕ್ಷಣಸಾಂದ್ರಚಂದ್ರಿಕಾನಿರಸ್ತಪಥಶ್ರಮಭರ ನಾಗುತ್ತಿಂತೆಂದಂ ॥ * * * * * * *

ಕಂ ॥ ಹರಭಕ್ತಭೃತ್ಯ ನಾಂ ಕಿನ್ನರಬೊಮ್ಮನ ಪೊರೆಗೆ ಪೋಗುತೆನಗಾದೆಡರಂ ॥ ಪರಿಹರಿಸಲೆಂದು ಬಂದೆಂ । ನಿರವದ್ಯಚರಿತ್ರ ನಾತ ನೇಂ ಜಾವಳನೆ ॥ ... ॥೧೧॥

ಕಂ ॥ ಪಡೆದಂ ಸೌಂದರ ನೆಂಬ । ರ್ಪಡಿಹೊನ್ನಂ ಮುನ್ನ ಮಭವನಿಂ ಕಿನ್ನರ ನಾ ॥ ವ್ಮೃಡನಿಂ ದನುದಿನಮೀಗಳ್ । ಪಡೆವಂ ಪಡಿಪೊನ್ನ ನೆಂದೊಡೇವಣ್ಣಿಪುದೊ ॥ ॥೧೨॥

ವ ॥ ಎಂದು ಕಿನ್ನರೇಂದ್ರನು ಕೊಂಡಾಡುತ್ತ ಮಾತನಿ ನಲ್ಲದೆನ್ನ ಬಡತನಂ ಪರಿಪಡ

---

ಚೆಂಗಳೆಯು, ಮಗಂ, ದುಗ್ಗಳೆಯು, ಅಂಗಳಮಂ- ಗೃಹಾಂಗಣದಲ್ಲಿ, ಬೇಹರಿಪ್ಪ- ಕಾವಲಿರುವ, ಕಿಂಕರಂ; ಆದಯ್ಯಂಗಳ, ಭೃತ್ಯಂ; ಭೋಗನ, ಡಿಂಗರಿಗಂ- ಆಳು, ಇಂದು, ಬಂದಂ, ಶರಣರ್, ನೋಡಿರೆ- ನೋಡುವದಿಲ್ಲವೇ ? ... ... ... ... ... ॥೯॥

ಎಂದು, ಉಲಿದು- ಕೂಗಿ, ಪಾಡಿ, ನಗಿಸುತೆ, ಕುಂದದೆ- ಕಮ್ಮಿಯಾಗದೆ, ತಾಂ, ಪ್ರಸ್ಥಯುಗಳದ- ಎರಡು ಕೊಳಗದ ಅಳತೆಯ, ಧಾನ್ಯಂದಂದು, ಎನಿತುಬಂದೊಡಂ- ಎಷ್ಟು ಬಂಪಾಗ್ಯೂ, ಚರವೃಂದಮಂ; ಅದರಿಂದೆ- ಆ ಎರಡು ಕೊಳಗದ ಧಾನ್ಯದಿಂದ, ತಣಿಪುತೆ- ತೃಪ್ತಿಪಡಿಸುತ್ತ, ಭಕ್ತಂ, ಎಸೆದಂ. ॥೧೦॥

ಅಂತು, ಇರ್ಪಿನಂ, ಒಂದುವಾಸರಂ, ನಿಜಗೃಹಬಹಿರ್ದೇಶಭಾಸುರವೇದಿಕಾಗ್ರದೊಳ್- ತನ್ನ ಮನೆಯ ಹೊರಗೆ ಪ್ರಕಾಶಿಸುವ ಜಗತಿಯ ಮೇಲೆ, ಓರ್ವಂಶಿವಭಕ್ತಂ, ಪಥಶ್ರಾಂತಿಯಿಂ- ಮಾರ್ಗಾಯಾಸದಿಂದ, ಕಂಗೆಟ್ಟು, ಪಟ್ಟು- ಮಲಗಿ; ಇರ್ಪಿನಂ, ಆತನಂ, ಕಲಿಕೇತಯ್ಯಂ, ಕಂಡು, ನೀಂ, ಆರ್ ? ಏಂಕಾರಣಂ, ಬಂದೆ ? ಎಂಬುದುಂ, ಆಭಕ್ತಂ, ತದ್ದಯಾ.........ಭರಂ— ತತ್- ಆ ಕಲಿಕೇತಯ್ಯನ, ದಯಾರ್ದ್ರಕಟಾಕ್ಷ-ಕೃಪಾರಸದಿಂ ನೆನದ ಕಡೆಗಣ್ಣಿನ, ವೀಕ್ಷಣ- ನೋಟವೆಂಬ ಸಾಂದ್ರ- ದಟ್ಟವಾದ, ಚಂದ್ರಿಕಾ- ಬೆಳ್ದಿಂಗಳಿಂದ, ನಿರಸ್ತ- ನಾಶಮಾಡಲ್ಪಟ್ಟ, ಪಥಶ್ರಮಭರಂ- ಅತಿ ಮಾರ್ಗಾಯಾಸವುಳ್ಳವನು, ಆಗುತ್ತೆ, ಇಂತು, ಎಂದಂ. ... ... ... ... ... ॥೧೦॥

ಆಂ, ಹರಭಕ್ತಭೃತ್ಯಂ; ಕಿನ್ನರಬೊಮ್ಮನ, ಪೊರೆಗೆ-ಸಮೀಪಕ್ಕೆ, ಪೋಗುತೆ, ಎನಗೆ, ಆದ, ಎಡರಂ- ವಿಘ್ನವನ್ನು, ಪರಿಹರಿಸಲ್, ಎಂದು, ಬಂದೆಂ; ನಿರವದ್ಯಂ- ನಿರ್ದುಷ್ಟನಾದ, ಆತಂ- ಆ ಕಿನ್ನರಯ್ಯನು, ಜಾವಳನೇಂ-ಸಾಮಾನ್ಯನೇ ? ... ... ... ... ... ॥೧೧॥

ಮುನ್ನಂ, ಸೌಂದರಂ, ಅಭವನಿಂ, ಪಡಿಹೊನ್ನಂ- ಬಗಸೆಯಷ್ಟು ಹೊನ್ನನ್ನು, ಪಡೆದಂ, ಎಂಬರ್ ; ಕಿನ್ನರಂ, ಈಗಳ್, ಆಮೃಡನಿಂದೆ, ಅನುದಿನಂ- ನಿರಂತರದಲ್ಲೂ, ಪೊಸಪೊನ್ನಂ, ಪಡೆವಂ, ಎಂದೊಡೆ, ಏಂ ವಣ್ಣಿಪುದೊ ? ... ... ... ... ... ॥೧೨॥

ಎಂದು, ಕಿನ್ನರೇಂದ್ರನಂ, ಕೊಂಡಾಡುತ್ತಂ, ಆತನಿಂಅಲ್ಲದೆ- ಆ ಕಿನ್ನರೇಂದ್ರನಿಂದಲ್ಲದೆ, ಎನ್ನ, ಬಡ

ದಾನುಹಾನುಹಿಮನ ಗೃಹವೆನಿತುದೂರವಮಾಂ ಪೋಗಲ್ವೇಳ್ಕು ಮೆನೆ ಕಲಿಕೇತಯ್ಯಂ ಕೇಳ್ದು ಕಲುಷಿತಕಟಾಕ್ಷನಾಗಿ ॥ * * * * * * * * * * * *

॥ಚಂ॥ ನುಡಿಯದಿ ರೆನ್ನ ಮುಂದೆ ಬಿಡು ಕಿನ್ನರಬೊಮ್ಮನ ಪೇರ್ಮೆಯಂ ಧನಂ । ಬಡೆ
ವಳಿಪಿಂದೆ ಪೂಜಿಪ ನುಪಾಧವನಂ ಸಲೆಕೂಲಿಗೆಯ್ವವಂ ॥ ಪಡೆಯನೆ ಧಾನ್ಯರಾಶಿಯ ನಿದೇ
ತರಭಕ್ತಿ ಯವಂ ಪಣಂಗಳಂ । ತಡೆಯದೆ ಕೊಳ್ವನಲ್ಲದೆ ವಿಶುದ್ಧಸುಭಕ್ತಿಸುಖಕ್ಕೆ ಸಲ್ವನೇ

ಕಂ ॥ ಗಣಿಪ್ಪೊಡಜಹರಿಗ ಳೈಸಿರಿ । ತೃಣಕಣ ಕೆಣೆಯಲ್ತೆ ಭಕ್ತಿಸಾಮ್ರಾಜ್ಯಪರಾ॥
ಯಣಶರಣಗಣಕೆ ತಾನೆನೆ । ಪಣದಾಸೆಗೊರಲ್ದು ಭಜಿಪುದೇಂ ಪುರಹರನಂ ... ॥೧೪॥

ಕಂ ॥ ಕಿನ್ನರಿಮ ನೊಲ್ದು ನುಡಿಸುತೆ । ಮನ್ನಣೆಗೆಯ್ದಾಡಿ ಪಾಡಿ ಪೂಜಿಸಿ ಪ
ಡೆವಂ । ಪೊನ್ನಂ ಪಣವಂ ಪಾಗವ । ನುನ್ನತಮತಿ ಯೀತನಂತೆ ಪಡೆದರುಮೊಳರೆ ॥೧೫॥

ಕಂ ॥ ಮೃಡನಂ ಕರೆ ದೋಯೆನಿಪುದು । ಪಡೆವುದು ಪೊಸಪೊನ್ನ ನೆರಡು ಕಜ್ಜಮ
ನೀತಂ ॥ ಬಿಡದಭ್ಯಾಸಿಸಿದ ನಿವಂ । ಪೊಡವಿಯೊಳ್ ಮುನ್ನ ನಂಬಿಯೊಡನಾಡಿದನೊ ॥೧೬॥

ವ ॥ ಎಂದು ಕಿನ್ನರಯ್ಯನಂ ವಿಡಂಬಿಸಿ ನುಡಿದು ॥ * * * * * *

ಕಂ ॥ ಎಲೆ ಭಕ್ತ ಕಿನ್ನರಯ್ಯನ । ನಿಲಯಂ ಕಡುದೂರ ಮಲ್ಲಿಗೆಂತೆಯ್ದುವೆನೀ॥

---

ತನು, ಪರಿಪಡದು-ನಾಶವಾಗುವದಿಲ್ಲ; ಆಮಹಾಪಾಹಿಮನ, ಗೃಹಂ, ಎನಿತುದೂರಂ-ಎಷ್ಟುದೂರ? ಪೋಗಲ್ವೇಳ್ಕುಂ- ಹೋಗಬೇಕು; ಎನೆ, ಕಲಿಕೇತಯ್ಯಂ, ಕೇಳ್ದು, ಕಲುಷಿತಕಟಾಕ್ಷಂ- ಕೆಂಪಾದ ಕಡೆಗಣ್ಣುಳ್ಳವನು, ಆಗಿ. * * * * * * * * * * * * * * * * * *

ಎನ್ನ, ಮುಂದೆ, ಕಿನ್ನರಬೊಮ್ಮನ, ಪೇರ್ಮೆಯುಂ, ನುಡಿಯದಿರ್- ಹೇಳಬೇಡ; ಬಿಡು? ಧನಂಬಡೆವ,ಅಳಿಪಿಂದೆ- ಆಸೆಯಿಂದ, ಉಪಾಧವನಂ, ಸಲೆ, ಪೂಜಿಪಂ ; ಕೂಲಿಗೆಯ್ವವಂ, ಧಾನ್ಯರಾಶಿಯಂ, ಪಡೆಯನೆ ? ಇದು, ಏತರಭಕ್ತಿ ? ಅವಂ, ತಡೆಯದೆ, ಪಣಂಗಳಂ, ಕೊಳ್ವಂ- ಗ್ರಹಿಸುವನು, ಅಲ್ಲದೆ, ವಿಶುದ್ಧಸುಭಕ್ತಿಸುಖಕ್ಕೆ- ನಿರ್ಮಲವಾದ ಒಳ್ಳೆಯಭಕ್ತಿಯಿಂದುಂಟಾಗುವ ಸೌಖ್ಯಕ್ಕೆ, ಸಲ್ವನೇ- ಯೋಗ್ಯನಾಗುವನೇ ? ... ... ... ... ... ॥೧೩॥

ಭಕ್ತಿಸಾಮ್ರಾಜ್ಯಪರಾಯಣಶರಣಗಣಕೆ- ಶಿವಭಕ್ತಿಯೆಂಬ ದೊರೆತನದಲ್ಲಿ ಆಸಕ್ತರಾದ ಶಿವಗಣಂಗಳ ಗುಂಪಿಗೆ, ಗಣಿಪ್ಪೊಡೆ- ಆಲೋಚಿಸಿದರೆ, ಅಜಹರಿಗಳ, ಐಸಿರಿ- ಐಶ್ವರ್ಯವು, ತಾಂ, ತೃಣಕಣಕೆ- ಹುಲ್ಲಿನಚೂರಿಗೆ, ಎಣೆಯಲ್ತೆ? ಎನೆ, ಪಣದ, ಆಸೆಗೆ, ಒರಲ್ದು, ಪುರಹರನಂ, ಭಜಿಪುದೇಂ- ಪೂಜಿಸುವದೇ ? ॥೧೪॥

ಒಲ್ದು, ಕಿನ್ನರಿಯಂ, ನುಡಿಸುತೆ. ಮನ್ನಣೆಗೆಯ್ದು, ಆಡಿ, ಪಾಡಿ, ಪೂಜಿಸಿ, ಪಣವಂಪಾಗವಂಪೊನ್ನಂ- ಹಣಹಾಗಚಿನ್ನವನ್ನು, ಪಡೆವಂ, ಉನ್ನತಮತಿ- ಉತ್ಕೃಷ್ಟವಾದ ಬುದ್ಧಿಯುಳ್ಳವನು !! ಈತನಂತೆ, ಪಡೆದರುಂ- ಹಣವನ್ನು ಹೊಂದಿದವರೂ, ಒಳರೆ- ಉಂಟೇ? ... ... ॥೧೫॥

ಈತಂ, ಮೃಡನಂ, ಕರೆದು. ಓ ಎನಿಪುದು; ಪೊಸಪೊನ್ನಂ, ಪಡೆವುದು; ಎರಡುಕಜ್ಜಮುಂ- ಈಎರಡು ಕಾರ್ಯವನ್ನು, ಬಿಡದೆ, ಅಭ್ಯಾಸಿಸಿದಂ; ಇವಂ, ಪೊಡವಿಯೊಳ್, ಮುನ್ನಂ, ನಂಬಿಯು- ಸೌಂದರನಂಬ್ಯಣ್ಣನ, ಒಡನಾಡಿದನೋಏಂ- ಸ್ನೇಹಿತತನವಂ ಮಾಡಿದ್ದನೋಏನೋ! ... ... ॥೧೬॥

ಎಂದು, ಕಿನ್ನರಯ್ಯನಂ, ವಿಡಂಬಿಸಿ- ತಿರಸ್ಕರಿಸಿ, ನುಡಿದು. * * * * * * * *

ಎಲೆಭಕ್ತ ! ಕಿನ್ನರಯ್ಯನ, ನಿಲಯಂ- ಮನೆಯು ,ಕಡುದೂರಂ- ಬಹಳದೂರ; ನೀಂ, ಅಲಸಿಕೆವೆತ್ತು- ಆಲಸ್ಯವಂಹೊಂದಿ, ಇರ್ದಪೆ; ಅಲ್ಲಿಗೆ, ಎಂತು ಎಯ್ದುವೆ- ಹ್ಯಾಗೆ ಹೋಗುತ್ತೀಯೆ? ಸಂಚಲಿಸದೆ- ಆಚೆಗೆ

ನುಸಿಕೆವೆತ್ತ್ರರ್ದ್ಧಪೆ ಸಂ। ಚಲಿಸವೆ ನಿನಗೀವೆ ನರ್ಥಮಂ ಕೊಳ್ಳೆನುತಂ ॥ ... ॥೧೭॥

ಮ ॥ ಸ್ರ ॥ ಕಲಿಕೇತಬ್ರಹ್ಮ ದೇವಂ ಪಿಡಿದತಗರ ಬಲ್ಗೋಡ ನಲ್ಲಾಡಿಸುತ್ತಂ ।ನ ಲವಿಂದಂ ಜಾಡಿಸುತ್ತಂಬಿದಿರೆ ಪಳಚ ನತ್ಯದ್ಭುತಂ ಪೊನ್ಮೆ ಪೂರ್ಣೋ। ಜ್ವಲತೇಜಂ ಪೊನ್ನದೆತ್ತಂ ಸುರಿಸು ದಸದಳಂ ಸಿಂಹಿಕಾಪುತ್ರವಕ್ತ್ರೋ। ಚ್ಚಲಿತಂ ಮುನ್ನುಗಿದ ರ್ಕಾಂಗದ ಪೊಸಕಿಡಿಗಳ್ಸೂಸುವೊಂದಂದದಿಂದಂ ॥ ... ... ...॥೧೮॥

ವ ॥ ಅಂತಳುಂಬಂ ಸೂಸೆ ರಾಸಿಯಾದ ಪೊಂಗಳ ನಾಭಕ್ತಂ ಕಂಡು ಕುತೂಹಲ ಮಾನಸಂ ತನ್ನ ಮನಂ ತಣಿವನಿತು ಪೊನ್ನಂತನ್ನ ವಸನದಿಂಮೊಟ್ಟೆಗಟ್ಟಿ ಸಡಗರಂ ಮಿಗೆ ಪೊತ್ತು ಪೊರಲಾರದೆಡವೆಗಲು ಬಲವೆಗಲುಂ ಪಚ್ಚಿ ಪಲ್ಲಟಿಸಿ ತಳೆದು ದಡದಡಿಸುತ್ತೆ ಳ್ತಂ ದು ಬಸವನರಮನೆಯ ಮೊಗಸಾಲೆಯೊಳಿಳುಪಿ ಬಸವಳಿದು ಬಳಲ್ದು ಬಸವರಾಜ ನೆಡೆಗೆ ಳ್ತಂದು ಕಲಿಕೇತದೇವ ನೆಂದುದುಮಂ ತಾನೆಂದುದುಮ ನಿನಿಸುಳಿಯದೆಲ್ಲಮನು ಸಿರ್ದ್ದವನಿ ತ್ತ ಪೊನ್ನ ಪೊರೆಯುಂ ಪೊರಲಾರೆ ನದಂ ಪೊರತೋರ್ಪ್ಪನತಿಬಳ ನಪ್ಪ ಚರನಂ ಕುಡುವು ದೆಂದು ಬೇಡೆ ಬಸವಂ ಕೇಳ್ದು ಶಿರಮಂ ತೂಗಿ ॥ * * * * * * * *

ಮತ್ತೇ ॥ ಪಿರಿದುಂ ವಿಸ್ಮಿತನಾಗಿ ಕೇಡಿವನಕಯ್ಯೊಳ್ನಿಂದು ದಕ್ಕುಂ ಚರಾ।ಚ ರದೊಳ್ತಾನೆ ಪದಾನ್ಯವರ್ಗ್ಯ ನಿವ ನೀಸಾಮರ್ಥ್ಯಮಂ ಬಣ್ಣಿಸ ॥ ಲ್ಕುರಗಾಧೀಶ ಸಹಸ್ರ

---

ಹೋಗದೆ, ನಿನಗೆ, ಅರ್ಥಮಂ- ದ್ರವ್ಯವನ್ನು, ಈವೆಂ. ಕೊಳ್- ಸ್ವೀಕರಿಸು, ಎನುತಂ. ॥೧೭॥

ಕಲಿಕೇತಬ್ರಹ್ಮದೇವಂ, ಪಿಡಿದ, ತಗರ, ಬಲ್ಗೋಡಂ- ಬಲವಾದಕೊಂಬನ್ನು, ಅಲ್ಲಾಡಿಸುತ್ತಂ, ನಲ ವಿಂದಂ- ಸಂತೋಷದಿಂದ, ಜಾಡಿಸುತ್ತಂ- ಒದರುತ್ತ, ಬಿದಿರೆ- ಕೊಲುಕಲು, ಅತ್ಯದ್ಭುತಂ, ಪೊನ್ಮೆ, ಪಳಚ ನೆ- ನಿರ್ಮಲವಾಗಿ, ಪೂರ್ಣೋಜ್ವಲತೇಜಂ- ಸಂಪೂರ್ಣವಾಗಿ ಪ್ರಕಾಶಿಸುವ ಕಾಂತಿಯುಳ್ಳ, ಅದುಪೊನ್ನು, ಎ ತ್ತಂ- ಎಲ್ಲಾಕಡೆಯಲ್ಲೂ, ಮುನ್ನುಗಿದ- ಮೊದಲುನುಂಗಿದ್ದ, ಅರ್ಕಾಂಗದ- ಸೂರ್ಯನ ದೇಹದ, ಪೊಸಕಿಡಿ ಗಳ್, ಸಿಂಹಿಕಾಪುತ್ರವಕ್ತ್ರೋಚ್ಚಲಿತಂ- ಕೇತುವಿನಬಾಯಿಂದ ಉಬೆಗೆಹೊರಟು, ಸೂಸುವ- ಸುರಿಯು ವ, ಒಂದಂದದಿಂದಂ, ಅಸದಳಂ- ಇತರರಿಗಸಾಧ್ಯವಾಗಿ, ಸುರಿದುದು. ... ... ॥೧೮॥

ಅಂತು, ಅಳುಂಬಂ- ಅಧಿಕವಾಗಿ, ಸೂಸೆ- ಚೆಲ್ಲಿ, ರಾಸಿ, ಆದ, ಪೊಂಗಳಂ, ಆಭಕ್ತಂ, ಕಂಡು, ಕು ತೂಹಲಮಾನಸಂ, ತನ್ನ, ಮನಂ, ತಣಿವನಿತುಪೊನ್ನ- ತೃಪ್ತಿಪಡುವಷ್ಟುಸುವರ್ಣವನ್ನು, ತನ್ನ, ವಸನದಿಂ, ಮೊಟ್ಟೆಗಟ್ಟಿ, ಸಡಗರಂ, ಮಿಗೆ, ಪೊತ್ತು, ಪೊರಲಾರದೆ, ಎಡವೆಗಲಂ- ಎಡಗಡೆಯಹೆಗಲನ್ನು, ಬಲವೆಗಲಂ, ಪಚ್ಚಿ- ಹೊಂದಿಸಿ, ಪಲ್ಲಟಿಸಿ- ಸ್ಥಾನವಂತಪ್ಪಿಸಿ ತಪ್ಪಿಸಿ, ತಳೆದು, ದಡದಡಿಸುತ್ತೆ- ಬೇಗಹೋಗಬೇಕೆಂದು ದ ಡಗುಟ್ಟುತ್ತ, ಎಳ್ತಂದು, ಬಸವನ, ಅರಮನೆಯ, ಮೊಗಸಾಲೆಯೊಳ್- ಮುಂಭಾಗದಲ್ಲಿರುವ ಪಡಸಾಲೆಯ ಲ್ಲಿ, ಇಳುಪಿ, ಬಸವಳಿದು- ವಶದಪ್ಪಿ, ಬಳಲ್ದು, ಬಸವರಾಜನ, ಎಡೆಗೆ, ಎಳ್ತಂದು, ನಿಂದು, ಕಲಿಕೇತದೇವಂ. ಎಂದುದುಮಂ- ಎಂದದ್ದನ್ನೂ, ತಾಂ, ಎಂದುದುಮಂ, ಇನಿಸು- ಇಷ್ಟು, ಉಳಿಯದೆ, ಎಲ್ಲಮಂ, ಉಸಿರ್ದು- ಹೇಳಿ, ಅವಂ, ಇತ್ತ, ಪೊನ್ನ, ಪೊರೆಯುಂ, ಪೊರಲಾರೆ; ಅದಂ, ಪೊರಲ್- ಹೊರುವದಕ್ಕೆ, ಒಗ್ವಂ, ಅತಿಬ ಳಂ, ಅಪ್ಪ, ಚರನಂ- ಆಳನ್ನು, ಕುಡುವುದು- ಕೊಡಬೇಕು, ಎಂದು, ಬೇಡೆ, ಬಸವಂ, ಕೇಳ್ದು, ಶಿರಮಂ, ತೂಗಿ,

ಪಿರಿದಂ- ಹೆಚ್ಚಾಗಿ, ವಿಸ್ಮಿತಂ- ಆಶ್ಚರ್ಯಯುಕ್ತನು, ಆಗಿ, ಕೋಡು- ಕೊಂಬು, ಇವನ- ಈ ಕಲಿ ಕೇತಯ್ಯನ, ಕಯ್ಯೊಳ್, ನಿಂದುದು, ಅಕ್ಕುಂ; ಚರಾಚರದೊಳ್, ತಾನೆ, ಪದಾನ್ಯವರ್ಗ್ಯಂ- ದಾನಿಗಳಲ್ಲಿ ಶ್ರೇ ಷ್ಠನು; ಇವನ, ಈ ಸಾಮರ್ಥ್ಯಮಂ, ಬಣ್ಣಿಸಲ್ಕೆ, ಉರಗಾಧೀಶಸಹಸ್ರಮುಂ- ಸಾವಿರಆದಿಶೇಷರೂ, ನೆ

ಮುಂನೆರೆಗುಮೇ ಭೂಭಾಗಸಾಕ್ಷಾನ್ಮಹೇ । ಶ್ವರನೀತು ಕಲಿಕೇತಬೊಮ್ಮ ನೆನುತಂ ಕೊಂ ಡಾಡಿದಂ ಕೂರ್ಮೆಯಿಂ ॥ ... ... ... ... ... ॥೧೯॥

ವ ॥ ಅಂತು ಕೊಂಡಾಡಿ ಮುದಂಬಡೆದಾಭಕ್ತಂಗೆ ಪೊನ್ನಪ್ಪೊರೆಯಂ ಪೊರ ಲನು ಚರನ ನಿತ್ತು ಕಳುಪಿ ಗಳಿಲನೆದ್ದು ತದ್ದರ್ಶನೋತ್ಕಂಠೆಯಿಂ ವೃಷೇಂದ್ರಂ ಬಂದು ಕಲಿಕೇ ತದೇವನಂ ಕಂಡು ಸಾತ್ವಿಕಭಕ್ತಿಯಿಂ ಸಾಷ್ಟಾಂಗವೆರಗಿ ॥ * * * * * *

ಕಂ ॥ ಅಣಿಮಾದಿಸಿದ್ಧಿಪದಕಾ । ರಣ ಮಲ್ತೆ ಭವತ್ಪದಾಬ್ಜ ಮೆಲೆ ದೇವ ಗಣಾ ॥ ಗ್ರಣಿ ಭುವನತ್ರಿತಯದೊಳಾ । ರೆಣೆವರ್ಪ್ಪ ರ್ನಿನಗೆ ಮಹಿಮೆಯೊಳ್ವಿತರಣದೊಳ್ ॥೨೦॥

ವ ॥ ಎಂದು ಪಲವಂದದಿಂ ಸನ್ನುತಿಗೆಯ್ದು ಕೃತಾಂಜಲಿಪುಟನಾಗಿರ್ಪ್ಪ ಬಸವನಾನ ನಬಿಸರುಹಮ ನಭೀಕ್ಷಿಸಿ ಮುಂದಸ್ಮಿತಾಸ್ಯನಾಗಿ ॥ * * * * * * * *

ಉ ॥ ಎನ್ನನಿದೇಕೆ ಬಣ್ಣಿಪೆ ವೃಷಾಧಿಪ ನಿನ್ನಯ ಕಿನ್ನರೇಂದ್ರನಂ । ತುನ್ನತಿ ವೆತ್ತು ಕಿನ್ನರಿಯ ಬಾರಿಸಿ ಪೂಜಿಸಿ ನಿಚ್ಚನಿಚ್ಚಮುಂ ॥ ಪೊನ್ನ ನುಮೇಶನಿಂ ಪಡೆಯ ಲಾರ್ಪ್ಪೆನೆ ಮೇಣವನಂತೆ ವಿತ್ತಸಂ । ಪನ್ನತೆಯುಂಟೆ ಪೇಳೆನಗೆ ಸುಮ್ಮನೆ ಪೇರ್ಮೆಯ ನುಂ ಟುಮಾಡುವಯ್ ॥ ... ... ... ... ... ... ॥೨೧॥

ಕಂ ॥ ಸಿರಿಯುಂ ಪಡೆದರ್ಗ್ಗಡ ಸುಂ । ದರಕಿನ್ನರ ರೀರ್ವ್ವ ರಭವನಂ ಭಜಿಸಿ ವಸುಂ ॥ ಧರೆಯೊಳವರಂತೆ ಭಕ್ತೋ । ತ್ಕರದೊಳ್ಪೆಸರ್ವೆತ್ತು ಪೇರ್ಮೆವಡೆದರು ಮೊಳರೆ ॥೨೨॥

---

ರೆಗುಮೇ- ಸಮರ್ಥರಾಹಾರೆ? ಈ ಕಲಿಕೇತಬೊಮ್ಮಂ, ಭೂಭಾಗಸಾಕ್ಷಾನ್ಮಹೇಶ್ವರಂ- ಭೂತಲಕ್ಕೆ ಪರ ಮೇಶ್ವರನು; ಎನುತಂ, ಕೂರ್ಮೆಯಿಂ, ಕೊಂಡಾಡಿದಂ. ... ... ... ॥೧೯॥

ಅಂತು, ವೃಷೇಂದ್ರಂ, ಕೊಂಡಾಡಿ, ಮುದಂಬಡೆದು, ಆ ಪೊನ್ನ, ಪೊರೆಯುಂ, ಪೊರಲ್, ಆ ಭಕ್ತಂ ಗೆ, ಅನುಚರನಂ- ಆಳನ್ನು, ಇತ್ತು, ಕಳುಪಿ, ಗಳಿಲನೆ- ಬೇಗನೆ, ಎದ್ದು, ತದ್ದರ್ಶನೋತ್ಕಂಠೆಯಿಂ- ಆ ಕಲಿ ಕೇತಯ್ಯನನ್ನು ನೋಡಬೇಕೆಂಬ ಕುತೂಹಲದಿಂದ, ಬಂದು, ಕಲಿಕೇತದೇವನಂ, ಕಂಡು, ಸಾತ್ವಿಕಭಕ್ತಿ ಯಿಂ, ಸಾಷ್ಟಾಂಗಂ, ಎರಗಿ. * * * * * * * * * * * * * * *

ಗಣಾಗ್ರಣಿ, ಎಲೆದೇವ! ಭವತ್ಪದಾಬ್ಜಂ- ನಿನ್ನ ಚರಣಕಮಲವು, ಅಣಿಮಾದಿಸಿದ್ಧಿಪದಕಾರಣಮಲ್ತೆ- ಅಣಿಮೆಮೊದಲಾದ ಅಷ್ಟಮಹಾಸಿದ್ಧಿಗಳಸ್ಥಾನಕ್ಕೆ ಕಾರಣವಾದುದಲ್ಲವೇ? ಭುವನತ್ರಿತಯದೊಳ್- ಮೂ ರುಲೋಕದಲ್ಲಿ, ನಿನಗೆ, ಮಹಿಮೆಯೊಳ್, ವಿತರಣದೊಳ್- ದಾನದಲ್ಲಿ, ಆರ್, ಎಣೆವರ್ಪ್ಪರ್? ॥೨೦॥

ಎಂದು, ಪಲವಂದದಿಂ, ಸನ್ನುತಿಗೆಯ್ದು, ಕೃತಾಂಜಲಿಪುಟಂ, ಆಗಿ, ಇರ್ಪ್ಪ, ಬಸವನ, ಆನನಬಿಸರುಹ ಮಂ- ಮುಖಕಮಲವನ್ನು, ಅಭೀಕ್ಷಿಸಿ, ಮಂದಸ್ಮಿತಾಸ್ಯಂ- ಮಸುನಗೆಯಿಂದಕೂಡಿದ ಮುಖವುಳ್ಳವನು, ಆಗಿ.

ವೃಷಾಧಿಪ! ಎನ್ನಂ, ಇದೇಕೆಬಣ್ಣಿಪೆ? ನಿನ್ನಯ, ಕಿನ್ನರೇಂದ್ರನಂತೆ, ಉನ್ನತಿವೆತ್ತು, ಕಿನ್ನರಿಯ, ಬಾರಿಸಿ, ಪೂಜಿಸಿ, ನಿಚ್ಚನಿಚ್ಚಮುಂ- ಪ್ರತಿದಿನದಲ್ಲೂ, ಉಮೇಶನಿಂ, ಪೊನ್ನಂ, ಪಡೆಯಲ್, ಆರ್ಪ್ಪೆನೆ- ಸಮ ರ್ಥನಾಗುವೆನೇ? ಮೇಣ್, ಅವನಂತೆ, ಎನಗೆ, ವಿತ್ತಸಂಪನ್ನತೆ- ಐಶ್ವರ್ಯಸಮೇತತ್ವವು, ಉಂಟೆ? ಪೇಳ್; ಸುಮ್ಮನೆ- ನಿಷ್ಕಾರಣವಾಗಿ, ಪೇರ್ಮೆಯುಂ- ಅತಿಶಯವನ್ನು, ಉಂಟುಮಾಡುವಯ್. ॥೨೧॥

ವಸುಂಧರೆಯೊಳ್, ಸುಂದರಕಿನ್ನರರ್- ನಂಬ್ಯಣ್ಣಕಿನ್ನರಯ್ಯ, ಈರ್ವ್ವರ್- ಈ ಇಬ್ಬರು, ಅಭವನಂ, ಭಜಿಸಿ, ಸಿರಿಯುಂ- ಸಂಪತ್ತನ್ನು, ಪಡೆದರ್ಗ್ಗಡ? ಅವರಂತೆ, ಭಕ್ತೋತ್ಕರದೊಳ್- ಭಕ್ತರಗುಂಪಿನಲ್ಲಿ, ಪೆಸರ್ವೆ ತ್ತು- ಹೆಸರಂಪಡೆದು, ಪೇರ್ಮೆವಡೆದರುಂ- ಅತಿಶಯವಂಹೊಂದಿದವರೂ, ಒಳರೆ? ... ॥೨೨॥

ಕಂ ॥ ಮೃಡನಂಘ್ರಿಪೂಜೆ ಯದು ಕೈ । ಯೊಡನೆ ಕರಂ ಫಲಿತಮಾಯ್ತು ಕಿನ್ನರ ಪತಿಗೀ ॥ ಪೊಡವಿಯೊಳದರಿಂ ದೈಸಿರಿ । ಪಡೆದಂ ಶಿವನಂಘ್ರಿಭಜಕ ನಿಂತಿರವೇಡ ॥೨೩॥

ಚಂ ॥ ಉದಯದೊ ಳೆಳ್ದು ಬೈಗೆವರೆಗಂ ನೆಗಳ್ದುಂ ಮಿಗೆ ತೊಳ್ತುಗಜ್ಜಮಂ । ಮದನವಿರೋಧಿಯಿಂ ಪಡೆದುದಿಲ್ಲರೆವಾಗಮ ನಾದೊಡಂ ಸಮಂ ॥ ತೊದವಿದ ಮದ್ದರಿದ್ರತೆ ಯಡಂಗಿದುದಿಲ್ಲಕಟಲ್ಪಧಾನ್ಯಮ । ಲ್ಲದೆ ಪೆರತಾವುದೊಂದರಿಯ ದೆನ್ನಯ ಪೂಜೆ ನಿರರ್ಥ ಮುರ್ವಿಯೊಳ್ ॥ ... .. ... ... ... ... ॥೨೪॥

ಕಂ ॥ ತ್ರೈಲೋಕ್ಯಪತಿಯ ನಭವನ । ನೋಲಗಿಸಿಯುಮಾಂ ದರಿದ್ರನಾಗಿರ್ಪೆಂ ವೀ॥ ಣಾಲಲಿತರವದೆ ಮಚ್ಚಿಸಿ । ಶೂಲಿಯ ನಾಕಿನ್ನರಂ ಕರಂ ಸಿರಿವಡೆದಂ ॥ ... ॥೨೫॥

ವ ॥ ಎಂದು ಕಲಿಕೇತದೇವಂ ಕಟಕಿವಾತಂ ನುಡಿದು ಮತ್ತಮಿಂತೆಂದಂ ॥ *

ಕಂ ॥ ಹರನಂ ಕರೆ ದೋ ಯೆನಿಸಿದ । ಪರಿಯಂ ಕೇಳ್ದೆಳಸಿ ನೋಡ ಲೆಯ್ದಿದ ಮಾ ಹೇ ॥ ಶ್ವರತತಿಯ ಪೂಜೆಗಾ ಕಿ । ನ್ನರಂಗೆ ಶಿವನಿತ್ತ ವಿತ್ತಮೇಂ ಸಾಲ್ದಪುದೆ ॥೨೬॥

ಮತ್ತೇ ॥ ಹರನಂ ಪೂಜಿಸಿ ಲಜ್ಜೆಗೆಟ್ಟೆರೆದು ಭಾಗ್ಯಂಗೊಳ್ವನ ಲ್ಲಯ್ಯ ಶಂ । ಕರ ದಾಸಯ್ಯನ ಭೃತ್ಯ ನಾಂ ಬಸವ ತತ್ಪಾದಾಂಬುಜಧ್ಯಾನನಿ ॥ ರ್ಭರಭಾವಂ ಮಿಗೆ ಪಾಳ್ಪ

---

ಈ ಪೊಡವಿಯೊಳ್, ಮೃಡನ, ಅಂಘ್ರಿಪೂಜೆ, ಅದು, ಕಿನ್ನರಪತಿಗೆ, ಕಯ್ಯೊಡನೆ- ಕೂಡಲೇ, ಕರಂ- ಚೆನ್ನಾಗಿ, ಫಲಿತಂ- ಪ್ರಯೋಜನವಿಶಿಷ್ಟವಾದದ್ದು, ಆಯ್ತು, ಅದರಿಂದೆ, ಐಸಿರಿವಡೆದಂ- ಐಶ್ವರ್ಯವಂ ಹೊಂದಿದನು; ಶಿವನ, ಅಂಘ್ರಿಭಜಕಂ, ಇಂತು, ಇರವೇಡ. ... ... ... ॥೨೩॥

ಉದಯದೊಳ್- ಸೂರ್ಯೋದಯಕಾಲದಲ್ಲಿ, ಎಳ್ದು, ಬೈಗೆವರೆಗಂ- ಸಾಯಂಕಾಲದವರಿಗೂ, ಮಿಗೆ, ತೊಳ್ತುಗಜ್ಜಮಂ- ಆಳುಗೆಲಸವನ್ನು, ನೆಗಳ್ದುಂ- ಮಾಡಿಯೂ, ಮದನವಿರೋಧಿಯಿಂ, ಅರೆವಾಗಮಂ ಆದೊಡಂ- ಅರ್ಧಹಾಗವನ್ನಾದರೂ, ಪಡೆದುದು, ಇಲ್ಲ; ಸಮಂತು- ಚೆನ್ನಾಗಿ, ಒದವಿದ- ಪ್ರಾಪ್ತವಾದ, ಮದ್ದರಿದ್ರತೆ- ನನ್ನಬಡತನವು, ಅಡಂಗಿದುದು, ಇಲ್ಲ; ಅಕಟ! ಎನ್ನ- ನಾನುಮಾಡುವ,ಪೂಜೆ, ಅಲ್ಪಧಾನ್ಯಂ, ಅಲ್ಲದೆ, ಪೆರತುಆವುದೊಂದಂ- ಮತ್ತೆಯಾವದೊಂದನ್ನೂ, ಅರಿಯದು, ಉರ್ವಿಯೊಳ್, ನಿರರ್ಥಂ- ವ್ಯರ್ಥವಾದದ್ದು. ... ... ... ... ... ... ॥೨೪॥

ಆಂ, ತ್ರೈಲೋಕ್ಯಪತಿಯಂ, ಅಭವನಂ, ಓಲಗಿಸಿಯುಂ- ಸೇವಿಸಿಯೂ, ದರಿದ್ರಂ, ಆಗಿ, ಇರ್ಪೆಂ; ಆ ಕಿನ್ನರಂ, ಶೂಲಿಯಂ- ಶಿವನನ್ನು, ವೀಣಾಲಲಿತರವದೆ- ವೀಣೆಯಶ್ಲಾಘ್ಯವಾದಧ್ವನಿಯಿಂದ, ಮಚ್ಚಿಸಿ, ಕರಂ, ಸಿರಿವಡೆದಂ. ... ... ... ... ॥೨೫॥

ಎಂದು, ಕಲಿಕೇತದೇವಂ, ಕಟಕಿವಾತಂ- ಕಪಟವಾಕ್ಯವನ್ನು, ನುಡಿದು, ಮತ್ತಂ, ಇಂತೆಂದಂ. *

ಹರನಂ, ಕರೆದು, ಓ ಎನಿಸಿದ, ಪರಿಯಂ- ರೀತಿಯನ್ನು, ಕೇಳ್ದು, ಎಳಸಿ- ಅಪೇಕ್ಷಿಸಿ, ನೋಡಲ್, ಎಯ್ದಿದ, ಮಾಹೇಶ್ವರತತಿಯ, ಪೂಜೆಗೆ, ಶಿವಂ, ಆ ಕಿನ್ನರಂಗೆ, ಇತ್ತ, ವಿತ್ತಂ- ಹಣವು, ಸಾಲ್ದಪುದೇಂ- ಸಾಕಾಗುವದೇ? ... ... ... ... ... ॥೨೬॥

ಆಂ, ಹರನಂ, ಪೂಜಿಸಿ, ಲಜ್ಜೆಗೆಟ್ಟು- ನಾಚಿಕೆಯಿಲ್ಲದೆ, ಎರೆದು- ಬೇಡಿ, ಭಾಗ್ಯಂಗೊಳ್ವಂ- ಐಶ್ವರ್ಯವನ್ನು ತೆಗೆದುಕೊಳ್ಳುವನು, ಅಲ್ಲಯ್ಯ; ಶಂಕರದಾಸಯ್ಯನ, ಭೃತ್ಯಂ; ಬಸವ! ತತ್ಪಾದಾಂಬುಜಧ್ಯಾನನಿರ್ಭರಭಾವಂ- ಆ ಶಂಕರದಾಸಾರ್ಯನ ಪಾದಕಮಲ ಸ್ಮರಣಾತಿಶಯವುಳ್ಳಮನಸ್ಸು, ಮಿಗೆ- ಹೆಚ್ಚಾಗಿರಲು, ಪಾಳ್ಪ, ಕಾಯಕರ್ದಿ- ಶೀಲದಿಂದ, ಅಲ್ಪದ್ರವ್ಯಂ, ಉಂಟು, ಕಿನ್ನರನಂ, ಸಹಸ್ರಶಕಟವ್ರಾತಂಗಳಂ- ಸಾವಿ

ಕಾಯಳಪಿ ನಲ್ಪದ್ರವ್ಯ ಮುಂಟಂತೆದಂ । ತರವೇಳ್ಕಿನ್ನರನು ಸಹಸ್ರಶಕಟಪಾತ್ರಂಗಳಂ ಕೊಟ್ಟಪೆಂ ॥ .. ... ... ... ... ... ॥೩೭॥

ವ ॥ ಎಂದಾಶರಣವರೇಣ್ಯಂ ನಸುನಗೆನಗುತ್ತಂ ಕರತಳದಿಂ ಮೃತ್ತಿಕೆಯಂ ಪಿಡಿಪಿಡಿದಾಡಲೊಡನನಿತುಂ ಸುವರ್ಣ್ಣಮಯ ಮಾಗೆ ಕಂಡು ಬಸವಂ ಬಿಸುವಂದಂಬಡೆದು ಕೀರ್ತಿಸುತ್ತಿರ್ಪಿನಮಿತ್ತ ಕಿನ್ನರಯ್ಯನದನೆಲ್ಲಮಂ ಕೇಳ್ದು ಪಿರಿದುಂಭೀತಿದಾಳ್ದು ಪರಿತಂದು ಕಲಿಕೇತಬೊಮ್ಮಿದೇವ ನಡಿದಾವರೆಯೊಳ್ಕೆಡೆದು ॥ * * * * * *

ಚಂ ॥ ಶರಧಿಯ ಮುಂದೆ ಪಲ್ವಲದ ಪೇರ್ಮೆಯೆ ಸಿಂಹದ ಮುಂದೆ ಪುಲ್ಲೆಯೆ । ಳ್ತರಮೆ ಸುರಾವನೀರುಹದ ಮುಂದೆ ಕರಂಜದ ಕೊರ್ವೆ ಚಾರುಚಂ ॥ ಡರುಚಿಯ ಮುಂದೆ ಮಿಂಬುಳುವಿನೇಳ್ಗೆಯೆ ಸತ್ಯಸಾರಭಾ । ಸುರತರ ನಿನ್ನ ಮುಂದೆ ನೆಗಳ್ದೆನ್ನಯ ತೇಜಮೆ ಪೇಳ್ದಯಾಕರ ॥ ... ... ... ... ... ... ॥೩೮॥

ವ ॥ ಎಂದು ಕಿಂಕರತೆಯ ನಪ್ಪುಕೆಯ್ದೆರಗಿರ್ದ ಕಿನ್ನರಯ್ಯನಂ ಕಾರುಣ್ಯದಿಂ ತೆಗೆದು ನೋಡಿ ಬಿಗಿಯುಪ್ಪಿ ಮನ್ನಿಸಿ ॥ * * * * * * * * * * *

ಕಂ ॥ ನಿರುಪಾಧಿನಿಷ್ಪ್ರಪಂಚ । ಸ್ಥಿರಭಕ್ತಿಯ ಕೀಲ ನುಸಿರ್ದು ಲಿಂಗಾಂಗಪರಿ॥ ಸ್ಫುರಿತಸುಯೋಗದ ಪೇರ್ಮೆಯ । ನೊರೆ ದಳವಡಿಸುತ್ತೆ ಕಿನ್ನರಯ್ಯಂಗಾಗಳ್ ॥ ॥೩೯॥

---

ರಬಂಡಿಗಳ ಗುಂಪನ್ನು, ತರವೇಳ್- ತರುವಂತೆಹೇಳು; ಅಂತು, ಅದಂ- ಆ ಹಣವನ್ನು, ಕೊಟ್ಟಪೆಂ- ಕೊಡುವೆನು. ... ... ... ... ... ... ॥೩೭॥

ಎಂದು, ಆಶರಣವರೇಣ್ಯಂ, ನಸುನಗೆನಗುತ್ತಂ, ಕರತಳದಿಂ, ಮೃತ್ತಿಕೆಯಂ- ಮಣ್ಣನ್ನು, ಪಿಡಿಪಿಡಿದು, ಆಡಲ್- ಆಟವಾಡಲು, ಒಡನೆ, ಅನಿತುಂ- ಅಷ್ಟೂ, ಸುವರ್ಣ್ಣಮಯಂ, ಆಗೆ, ಬಸವಂ, ಕಂಡು, ಬಿಸುವಂದಂಬಡೆದು- ಕೌತುಕವಂಹೊಂದಿ, ಕೀರ್ತಿಸುತ್ತೆ, ಇರ್ಪಿನಂ, ಇತ್ತ- ಈ ಕಡೆ, ಕಿನ್ನರಯ್ಯಂ, ಅದ ಎಲ್ಲಮಂ, ಕೇಳ್ದು, ಪಿರಿದುಂ, ಭೀತಿದಾಳ್ದು, ಪರಿತಂದು, ಕಲಿಕೇತಬೊಮ್ಮಿದೇವನ, ಅಡಿದಾವರೆಯೊಳ್, ಕೆಡೆದು- ಬಿದ್ದು. * * * * * * * * * * * * * * * * *

ದಯಾಕರ ! ಶರಧಿಯ- ಸಮುದ್ರದ, ಮುಂದೆ- ಪಲ್ವಲದ- ಕುಂಟೆಯ, ಪೇರ್ಮೆಯೆ ? ಸಿಂಹದ, ಮುಂದೆ, ಪುಲ್ಲೆಯ- ಹುಲ್ಲೆಕರುವಿನ, ಎಳ್ತರವೆ- ಆಧಿಕ್ಯವೇ ? ಸುರಾವನೀರುಹದ- ಕಲ್ಪವೃಕ್ಷದ, ಮುಂದೆ, ಕರಂಜದ- ಹುಲಿಯುಗುರುಗಿಡದ, ಕೊರ್ವೆ- ಗರ್ವವೇ ? ಚಾರುಚಂಡರುಚಿಯ- ಮನೋಹರನಾದ ಸೂರ್ಯನ, ಮುಂದೆ, ಮಿಂಬುಳುವಿನ- ಮಿಂಚಿನಹುಳದ, ಏಳ್ಗೆಯೆ ? ಸತ್ಯಸಾರಭಾಸುರತರ- ಯಾಥಾರ್ಥ್ಯದ ಸ್ಥಿರಾಂಶದಿಂದ ಅತಿ ಮನೋಹರನಾದವನೇ ! ನಿನ್ನ, ಮುಂದೆ, ನೆಗಳ್ದ, ಎನ್ನಯ, ತೇಜಮೆ- ಪ್ರಭಾವವೇ? ಪೇಳ್. ... ... ... ... ... ॥೩೮॥

ಎಂದು, ಕಿಂಕರತೆಯಂ- ಸೇವಕತನವನ್ನು, ಅಪ್ಪುಕೆಯ್ದು- ಧರಿಸಿ, ಎರಗಿರ್ದ, ಕಿನ್ನರಯ್ಯನಂ, ಕಾರುಣ್ಯದಿಂ, ನೋಡಿ, ತೆಗೆದು, ಬಿಗಿಯಪ್ಪಿ ಮನ್ನಿಸಿ. * * * * * * * * * * *

ಆಗಳ್, ಕಿನ್ನರಯ್ಯಂಗೆ, ನಿರುಪಾಧಿನಿಷ್ಪ್ರಪಂಚಸ್ಥಿರಭಕ್ತಿಯ- ನಿರುಪಾಧಿ- ನಿಷ್ಕಪಟವಾದ, ನಿಷ್ಪ್ರಪಂಚ- ವೈಪರೀತ್ಯಶೂನ್ಯವಾದ, ಸ್ಥಿರಭಕ್ತಿಯ- ನಿಶ್ಚಲವಾದ ಭಕ್ತಿಯ, ಕೀಲಂ, ಉಸಿರ್ದು, ಲಿಂಗಾಂಗಪರಿಸ್ಫುರಿತಸುಯೋಗದ- ಲಿಂಗಾಂಗಸಾಮರಸ್ಯದ, ಮರ್ಮಮಂ- ಗುಟ್ಟನ್ನು, ಒರೆದು, ಅಳವಡಿಸುತ್ತೆ- ಅವನಮನಸ್ಸಿಗೆ ನಾಟುವಂತೆಮಾಡಿ. ... ... ... ॥೩೯॥

ಚ॥ ಕರೆದೊಡಗೊಂಡು ಪೋಗಿ ನಿಜಮಂದಿರದೊಳ್ ಶಿವಪೂಜೆಗೆಯ್ಸಿ ಭಾ । ಸುರ ಪರಮಪ್ರಸಾದಪರಿತುಷ್ಟಿಯ ನಾಗಿಸಿ ದಿವ್ಯಭೂಷಣಾಂ ॥ ಬರತತಿಯಿಂದಲಂಕರಿಸಿ ಸತ್ಕ್ರಿಯೆಯಿಂ ನೆಗಳ್ದಮಹಾತ್ಮನಾ । ದರಿಸುತೆ ಕಿನ್ನರೇಂದ್ರವೃಷಭಾಧಿಪರಂ ಕಳುಪುತ್ತೆ ಲೀಲೆಯಿಂ ॥ ... ... .. ... ... . .. ॥೩೦॥

ಕಂ॥ ಎಂದಿನತೆರದಿಂ ಮಹಿಮೆಯ । ನುದುಂದಿಂಗಿಳೆಯೊಳೊಲ್ದು ಬೀರುತೆ ಪರಮಾ ॥ ನಂದಂ ಮಿಗೆ ಭಜಿಸುತೆ ಚರ । ವೃಂದಮನೊಪ್ಪಿರ್ದನಲ್ಲಿಕಲಿಕೇತಾರ್ಯಂ॥ ॥೩೧॥

ಕಂ॥ ಕಲಿಕೇತಬೊಮ್ಮಿದೇವನ । ವಿಲಸತ್ಕಥೆಯಂ ವಿಳಾಸ ಮಮದೋರ್ದೆ ಮನಂ ॥ ನಲಿದೊಡನೆ ಕೇಳೆ ಮನುಜಾ । ವಲಿ ಶಂಕರ ನೀವ ನಭಿಮತೇಷ್ಟಮ ನನಿಶಂ ॥೩೨॥

ಮ॥ ಸ್ರ॥ ಪದಪಿಂದಂ ಕಿನ್ನರಾರ್ಯಂಗೆರಗಿ ಕಳುಪುತಂ ತನ್ನಿಶಾಂತಕ್ಕೆ ಕೈಗ । ಣ್ಮಿದ ನಣ್ಪಿಂ ತನ್ಮಹತ್ವಸ್ಥಿತಿಯ ನುರೆ ನಿಜಸ್ವಾಂತದೊಳ್ಭಾವಿಸುತ್ತಂ ॥ ಮುದದಿಂ ಕೊಂಡಾಡುತಂ ಭಕ್ತರೊಳೆ ತಳರ್ದು ಶುದ್ಧಾಂತಮಂ ಪೊಕ್ಕು ಭಕ್ತೌಘದ ಭಾಗ್ಯಂರೂಪುಗೊಂಡಂತೆಸೆದ ನಭವವೂಜಾವಿತಂದ್ರಂ ವೃಷೇಂದ್ರಂ ॥ ... ... ॥೩೩॥

ಲಲಿತಪದವೃತ್ತಂ॥ ದಂಡಧರಬಾಧಿತಮೃಕಂಡುಭವರಕ್ಷ ಪರಿಪಾಂಡುರಕಳೇವರಪಿಚಂಡ ಭೃತವಿಶ್ವಾ । ಜಾಂಡ ಘನಕುಂಡಲಿಪಕುಂಡಲ ಮನೋಜ್ಞತತತಾಂಡವಮೃಡಪ್ರ

---

ಕರೆದು, ಒಡಗೊಂಡು- ಸಂಗಡಕರೆದುಕೊಂಡು, ಪೋಗಿ, ನಿಜಮಂದಿರದೊಳ್, ಶಿವಪೂಜೆಗೆಯ್ಸಿ, ಭಾಸುರಪರಮಪ್ರಸಾದಪರಿತುಷ್ಟಿಯಂ- ಪ್ರಕಾಶಿಸುವ ಉತ್ಕೃಷ್ಟವಾದ ಪ್ರಸಾದಸೇವನೆಯಿಂದುಂಟಾಗುವ ಸಂತೋಷವನ್ನು, ಆಗಿಸಿ, ದಿವ್ಯಭೂಷಣಾಂಬರತತಿಯಿಂದೆ, ಅಲಂಕರಿಸಿ, ಆಮಹಾತ್ಮಂ, ಸತ್ಕ್ರಿಯೆಯಿಂ, ನೆಗಳ್ದ, ಆದರಿಸುತೆ, ಕಿನ್ನರೇಂದ್ರವೃಷಭಾಧಿಪರಂ, ಕಳುಪುತ್ತೆ, ಲೀಲೆಯಿಂ. ... ... ॥೩೦॥

ಅಲ್ಲಿ- ಆ ಕಲ್ಯಾಣಪಟ್ಟಣದಲ್ಲಿ, ಕಲಿಕೇತಾರ್ಯಂ ಎಂದಿನತೆರದಿಂ- ಯಾವಾಗಳಂತೆಯೇ, ಅಂದುಂದಿಂಗೆ- ಆಗಾಗ್ಯೆ, ಇಳೆಯೊಳ್, ಮಹಿಮೆಯಂ, ಒಲ್ದು, ಬೀರುತೆ- ಹರಡುತ್ತ, ಪರಮಾನಂದಂ, ಮಿಗೆ, ಚರವೃಂದಮಂ, ಭಜಿಸುತೆ, ಒಪ್ಪಿ, ಇರ್ದಂ. ... ... ... ... ॥೩೧॥

ಮನುಜಾವಳಿ, ಕಲಿಕೇತಬೊಮ್ಮಿದೇವನ, ವಿಲಸತ್ಕಥೆಯಂ, ವಿಲಾಸಂ, ಅಮರ್ದು , ಓದೆ, ಮನಂ- ಮನಸ್ಸಿನಲ್ಲಿ, ನಲಿದು- ಸಂತೋಷಪಟ್ಟು, ಒಡನೆ, ಕೇಳೆ, ಶಂಕರಂ, ಅನಿಶಂ- ಯಾವಾಗಲೂ, ಅಭಿಮತೇಷ್ಟಮಂ- ಅವರವರಿಗೆಸಮ್ಮತವಾದ ಇಷ್ಟಾರ್ಥವನ್ನು, ಈವಂ. ... ... ... ॥೩೨॥

ಅಭವವೂಜಾವಿತಂದ್ರಂ- ಶಿವಪೂಜೆಯಲ್ಲಿ ಆಲಸ್ಯವಿಲ್ಲದ, ವೃಷೇಂದ್ರಂ, ಪದಪಿಂದಂ, ಕಿನ್ನರಾರ್ಯಂಗೆ, ಎರಗಿ, ತನ್ನಿಶಾಂತಕ್ಕೆ, ಅವನಮನೆಗೆ, ಕಳುಪುತಂ, ಕೈಗಣ್ಮಿದ- ಹೆಚ್ಚಾದ, ನಣ್ಪಿಂ- ನಯದಿಂದ, ತನ್ಮಹತ್ವಸ್ಥಿತಿಯಂ- ಆ ಕಲಿಕೇತಯ್ಯನ ಮಹಿಮೆಯ ರೀತಿಯನ್ನು, ಉರೆ, ನಿಜಸ್ವಾಂತದೊಳ್- ತನ್ನ ಮನಸ್ಸಿನಲ್ಲಿ, ಭಾವಿಸುತ್ತಂ- ಯೋಚಿಸುತ್ತ, ಮುದದಿಂ,ಭಕ್ತರೊಳೆ, ಕೊಂಡಾಡುತಂ,ತಳರ್ದು- ಹೊರಟು, ಶುದ್ಧಾಂತಮಂ- ಅಂತಃಪುರವನ್ನು, ಪೊಕ್ಕು, ಭಕ್ತೌಘದ- ಭಕ್ತರಗುಂಪಿನ, ಭಾಗ್ಯಂ, ರೂಪುಗೊಂಡಂತೆ- ಆಕಾರ ವೆಧರಿಸಿದಹಾಗೆ, ಎಸೆದಂ. - ... ... ... ... ... ... ॥೩೩॥

ದಂಡ......ರಕ್ಷ— ದಂಡಧರ- ಯಮನಿಂದ, ಬಾಧಿತ- ಪೀಡಿಸಲ್ಪಟ್ಟ, ಮೃಕಂಡುಭವ- ಮಾರ್ಕಂಡೇಯನನ್ನು, ರಕ್ಷ- ಸಂರಕ್ಷಿಸಿದ; ಪರಿಪಾಂಡುರಕಳೇವರ- ಶುಭ್ರವಾದ ದೇಹವುಳ್ಳ; ಪಿಚಂಡಭೃತವಿಶ್ವಾಜಾಂಡ- ಪಿಚಂಡ-ಹೊಟ್ಟೆಯಲ್ಲಿ, ಭೃತ- ಪರಿಪಾಲಿಸಲ್ಪಟ್ಟ, ವಿಶ್ವಾಜಾಂಡ- ಸಕಲಬ್ರಹ್ಮಾಂಡವುಳ್ಳ; ಘನ...ಪ್ರ

ಯುತಚಂಡಗಣನೃತ್ಯ ॥ ಪಂಡಿತೆ ಜನಾಂಬುರುಹಷಂಡ ಮದದೃಪ್ತರಿಪುಖಂಡನಜಗದ್ಭರಣಶೌಂಡ ನಿಖಿಲಾಶಾ । ಖಂಡಿತಸುಕೀರ್ತಿಮಹಿಮಂಡಲ ಮಹೇಶ ಪೊರೆ ಮಂಡಿತಮಹಾಗುಣಕರಂಡ ಬಸವೇಶ ॥ ... ... ... ... ... ॥೩೪॥

ತೋಟಕವೃತ್ತಂ ॥ ಮುರಶಾಸನವಾಗ್ವರವಾಸವಭಾ । ಸುರಮೌಳಿವಿರಾಜಿತಪಾದಯುಗೇ ॥ ಪರಮೇಶ್ವರಿ ಪಾವನರೂಪಿಣಿ ನೀಂ । ಪೊರೆ ಯೆನ್ನ ನಿಳಾಧರರಾಜಸುತೇ ॥೩೫॥

ಗದ್ಯಂ॥ ಇದು ವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣೇಯರುಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತಭಾಸುರಲಲಾಟಪಟ್ಟಸರಸಜನಮಾನಿತೊಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಕಲಿಕೇತಬ್ರಹ್ಮದೇವಪ್ರಭವವರ್ಣ್ಣನಮಷ್ಟಾದಶಾಶ್ವಾಸಂ ಪರಿಸಮಾಪ್ತಂ. ... ... ... ... ...

ಅಷ್ಟಾದಶಾಶ್ವಾಸಂ ಸಂಪೂರ್ಣಂ.

---

ಯುತ- ಘನ- ದೊಡ್ಡವನಾದ, ಕುಂಡಲಿಪ- ಆದಿಶೇಷನೆಂಬ, ಕುಂಡಲ- ಕರ್ಣಕುಂಡಲದಿಂದ, ಮನೋಜ್ಞ- ಮನೋಹರನಾದ, ತತ- ವಿಸ್ತಾರವಾದ, ತಾಂಡವ- ನರ್ತನವುಳ್ಳ, ಮೃಡ- ಈಶ್ವರನಿಂದ, ಪ್ರಯುತ- ಕೂಡಿದ; ಚಂಡಗಣನೃತ್ಯ- ಸಮರ್ಥರಾದ ಗಣಂಗಳಿಂದ ಕೊಂಡಾಡಲ್ಪಡುವ ನೃತ್ಯಕ್ಕೆ ಯೋಗ್ಯನಾದ; ಪಂಡಿತ...... ರವಿ- ಪಂಡಿತಜನ- ವಿದ್ವಜ್ಜನರೆಂಬ, ಅಂಬುರುಹ- ಕಮಲಗಳ, ಷಂಡ- ಗುಂಪಿಗೆ, ರವಿ- ಸೂರ್ಯನಾದ; ದೃಪ್ತ......ಶೌಂಡ—ದೃಪ್ತ- ಕೊಬ್ಬಿದ, ರಿಪು- ಶತ್ರುಗಳನ್ನು, ಖಂಡನ- ಕತ್ತರಿಸುವಿಕೆಯೇನು, ಜಗತ್- ಲೋಕವನ್ನು, ಭರಣ- ಸಂರಕ್ಷಿಸುವಿಕೆಯೇನು ಇವುಗಳಲ್ಲಿ, ಶೌಂಡ- ಸಮರ್ಥನಾದ; ನಿಖಿಲಾಶಾಖಂಡಿತಸುಕೀರ್ತಿ- ನಿಖಿಲ- ಸಮಸ್ತವಾದ, ಆಶಾ- ದಿಕ್ಕುಗಳಲ್ಲೂ, ಅಖಂಡಿತ- ವಿಚ್ಛಿತ್ತಿಯಿಲ್ಲದಿರುವ, ಸುಕೀರ್ತಿ- ಒಳ್ಳೇಯಶಸ್ಸುಳ್ಳ; ಮಹಿಮಂಡಲಮಹೇಶ- ಭೂಮಂಡಲಕ್ಕೆ ದೊಡ್ಡಸ್ವಾಮಿಯಾದ; ಮಂಡಿತಮಹಾಗುಣಕರಂಡ- ಮಂಡಿತ- ಅಲಂಕರಿಸಲ್ಪಟ್ಟ, ಮಹತ್- ಅಧಿಕವಾದ, ಗುಣ- ಸದ್ಗುಣಗಳಿಗೆ, ಕರಂಡ- ಭರಣಿಯಾದ ಬಸವೇಶ ! ಪೊರೆ. ... ... ... ... ... ... ... ।೩೪।

ಮುರ......ಯುಗೇ—ಮುರಶಾಸನ- ವಿಷ್ಣು, ವಾಗ್ವರ- ಬ್ರಹ್ಮ, ವಾಸವ- ದೇವೇಂದ್ರ, ಇವರುಗಳ, ಭಾಸುರ- ಪ್ರಕಾಶಿಸುವ, ಮೌಳಿ- ಕಿರೀಟವನ್ನು, ವಿರಾಜಿತ- ಪ್ರಕಾಶಿಸುವ, ಪಾದಯುಗೇ- ಚರಣಯುಗ್ಮವುಳ್ಳ, ಪರಮೇಶ್ವರಿ- ಪರಮೇಶ್ವರನ ಪತ್ನಿಯಾದ, ಪಾವನರೂಪಿಣಿ- ಪರಿಶುದ್ಧವಾದ ಆಕಾರವುಳ್ಳ, ಇಳಾಧರರಾಜಸುತೇ- ಪರ್ವತರಾಜನಪುತ್ರಿಯೇ ! ಎನ್ನಂ, ಪೊರೆ. ... ... ... ॥೩೫॥

---

* (ಅವ) ಮುರನೆಂಬರಾಕ್ಷಸನನ್ನು ಶಿಕ್ಷಿಸಿದವನು. ... ... ... ॥೩೫॥

ಹದಿನೆಂಟನೆಯ ಆಶ್ವಾಸವು ಸಂಪೂರ್ಣವು.

# ಶ್ರೀಃ

ಶ್ರೀಕರಶಾಯ ಪರಬ್ರಹ್ಮಣೇ ನಮಃ.

## ಏಕೋನವಿಂಶತ್ಯಾಶ್ವಾಸಂ.

### ಮೋಳಿಗೆಮಾರಕಥನಂ.

ಕಂ ॥ ಶ್ರೀಕರಹಿಮಾದ್ರಿತನಯಾ । ಲೋಕನರುಚಿಚಂದನಘಟಾಲಿಪ್ತಾಂಗಂ ॥
ಸ್ವೀಕೃತನಿಗಮಂ ಪಾಲಿತ । ಲೋಕಂ ಪೊರೆಗೆಮ್ಮ ನಾವಗಂ ಶಿವಲಿಂಗಂ ॥ ... ॥೧॥

ವ ॥ ಮತ್ತಮಾಕಲ್ಯಾಣಸಂಪದಂಬೆತ್ತ ಕಲ್ಯಾಣಪುರದಲ್ಲಿ ॥ * * * *

ವೃತ್ತ ॥ ಶರಣೇಚ್ಛಾಪರಿಪಾಲಕಂ ವಿಧಿನಿಷೇಧಾತೀತವೃತ್ತಂ ಶುಭಾ । ಕರಸೌ
ಶೀಲ್ಯಸಮನ್ವಿತಂ ವಿಮಳಚಿತ್ತಂ ಷಟ್ಸ್ಥಲಜ್ಞಾನತ ॥ ತ್ಪರನುದ್ಧೂತದುರೀಷಣಂ ದುರಿ
ತದೂರಂ ಪ್ರಾಣಲಿಂಗೈಕ್ಯಭಾ । ಸುರನತ್ಯಂತವಿಶುದ್ಧಕೀರ್ತಿ ಚರಪಾದಾಂಭೋಜಪೂ
ಜೋತ್ಸವಂ ॥ ... ... ... ... ... ... ॥೨॥

ಕಂ ॥ ಜಿತರಿಪುಷಡ್ವರ್ಗ್ಗನಪಾ । ಕೃತಭವಿಸಂಸರ್ಗ್ಗನಮಳಗುಣಭೂಷಣನ ॥ ರ್ದ್ದಿ
ತಮಾಯಾಮಯನುರರೀ । ಕೃತಸುವ್ರತನಪ್ರತರ್ಕ್ಯಮಹಿಮಾಧಾರಂ ॥ ... ॥೩॥

---

ಶ್ರೀ.....ಲಿಪ್ತಾಂಗಂ—ಶ್ರೀಕರ- ಸಂಪತ್ತನ್ನುಂಟುಮಾಡುವ, ಹಿಮಾದ್ರಿತನಯಾ- ಪಾರ್ವತಿಯ, ಆಲೋಕನ- ನೋಟದ, ರುಚಿ- ಕಾಂತಿಯೆಂಬ, ಚಂದನ- ಶ್ರೀಗಂಧದ, ಘಟಾ- ಪಙ್ತಿಯಿಂದ, ಲಿಪ್ತ- ಲೇಪಿಸಲ್ಪಟ್ಟ, ಅಂಗಂ- ಅವಯವವುಳ್ಳ, ಸ್ವೀಕೃತನಿಗಮಂ- ಅನುಗ್ರಹಿಸಲ್ಪಟ್ಟ ವೇದವುಳ್ಳ, ಪಾಲಿತಲೋಕಂ- ಸಂರಕ್ಷಿಸಲ್ಪಟ್ಟ ಪ್ರಪಂಚವುಳ್ಳ, ಶಿವಲಿಂಗಂ, ಎಮ್ಮಂ, ಆವಗಂ- ನಿರಂತರದಲ್ಲೂ, ಪೊರೆಗೆ. ॥೧॥

ಮತ್ತಂ, ಆ ಕಲ್ಯಾಣಸಂಪದಂಬೆತ್ತ- ಮಂಗಳಸೌಭಾಗ್ಯವಂಪಡೆದ, ಕಲ್ಯಾಣಪುರದಲ್ಲಿ. * *

ಶರಣೇಚ್ಛಾಪರಿಪಾಲಕಂ-ಶಿವಶರಣರಇಷ್ಟಾರ್ಥವನ್ನು ಪೋಷಿಸುವ, ಅಂದರೆ ಕೊಡುವ,ವಿಧಿನಿಷೇಧಾತೀತವೃತ್ತಂ- ಈಕಾರ್ಯವಂ ಮಾಡಬೇಕು ಈಕಾರ್ಯವಂ ಮಾಡಬಾರದು ಎಂಬ ಪ್ರಾಪಂಚಿಕನಿಯಮವನ್ನು ವಿ...ದನಡತೆಯುಳ್ಳ, ಶುಭಾಕರಸೌಶೀಲ್ಯಸಮನ್ವಿತಂ- ಮಂಗಳವನ್ನುಂಟುಮಾಡುವಒಳ್ಳೆಯಸ್ವಭಾವದಿಂ ಕೂಡಿದ, ವಿಮಳಚಿತ್ತಂ,ಷಟ್ಸ್ಥಲಜ್ಞಾನತತ್ಪರಂ,ಉದ್ಧೂತದುರೀಷಣಂ—ಕೊಡಹಲ್ಪಟ್ಟಅರ್ಧೇಷಣ ಪಾರೇಷಣ ಪುತ್ರೇಷಣಗಳುಳ್ಳ, ದುರಿತದೂರಂ,ಪ್ರಾಣಲಿಂಗೈಕ್ಯಭಾಸುರಂ-ಪ್ರಾಣಲಿಂಗಗಳಏಕತ್ವದಿಂಪ್ರಕಾಶಮಾನವಾದ, ಅತ್ಯಂತವಿಶುದ್ಧಕೀರ್ತಿ-ಬಹುನಿರ್ಮಲವಾದ ಯಶಸ್ಸುಳ್ಳ,ಚರಪಾದಾಂಭೋಜಪೂಜೋತ್ಸವಂ.

ಜಿತರಿಪುಷಡ್ವರ್ಗ್ಗಂ- ಜೈಸಲ್ಪಟ್ಟ ಕಾಮ ಕ್ರೋಧ ಲೋಭ ಮೋಹ ಮದ ಮಾತ್ಸರ್ಯಗಳೆಂಬಅರಿಷಡ್ವರ್ಗವುಳ್ಳ, ಅಪಾಕೃತಭವಿಸಂಸರ್ಗ್ಗಂ- ತಿರಸ್ಕರಿಸಲ್ಪಟ್ಟಲಿಂಗಹೀನರ ಸಂಭಂಧವುಳ್ಳ,ಅಮಳಗುಣಭೂಷಣಂ, ಅರ್ದಿತಮಾಯಾಮಯಂ- ನಾಶಮಾಡಲ್ಪಟ್ಟ ಅಜ್ಞಾನವೆಂಬ ರೋಗವುಳ್ಳ, ಉರರೀಕೃತಸುವ್ರತಂ- ಅಂಗೀಕರಿಸಲ್ಪಟ್ಟ ಒಳ್ಳೆಯನಿಯಮವುಳ್ಳ, ಅಪ್ರತರ್ಕ್ಯಮಹಿಮಾಧಾರಂ- ಊಹಿಸುವದಕ್ಕೆಶಕ್ಯವಾದ ಮಹತ್ವಕ್ಕೆ ಆಶ್ರಯನಾದ. ... ... ... ... ... ॥೩॥

ಉ ॥ ಪಳಿಸಿ ಭೋಗಪೂಗದನುಭಾವಮನುದ್ಘಶಿವಾನುಭಾವದೊ । ಳ್ಮೇಳಿಸಿ ಚಿತ್ತಮಂ ನಿಜಪದಾನತರಂ ಶಿವಭಕ್ತಿಭಾಗ್ಯದೊಳ್ ॥ ಜಾಳಿಸಿ ಕರ್ಮವಾಸನೆ ತೊಡಂಕದ ಪಾಂಗನ ಮರ್ಚ್ಚುತಾಗಳುಂ । ಮೋಳಿಗೆಮಾರ ನೀಶ್ವರಕುಮಾರ ನಪಾಕೃತಮಾರ ನೊಪ್ಪಿದಂ ॥೪॥

ಚಂ॥ ಅನುದಿನ ಮುಗ್ರಕಾನನಕೆ ಪೋಗಿ ಕುಠಾರದಿ ನಿಂಧನಂಗಳಂ । ಮನದೊಲವಿಂದೆ ತಾಂ ತರಿದು ಬಳ್ಳಿವರೆ ಗಟ್ಟಿ ಪೊದಳ್ದು ಪೊತ್ತು ನೆ ॥ ಟ್ಟನೆ ತರುತಲ್ಲಿ ಮಾರಿ ದೊರೆದರ್ಥದೆ ಜಂಗಮಕೋಟಿ ಬಂದೊಡಂ । ಘನಮಹಿಮಂ ಸುತೃಪ್ತಿಯನೊಡರ್ಚ್ಚುತೆ ಮೋಳಿಗೆಮಾರ ನಿರ್ಪಿನಂ ॥ ... ... ... ... ... ... ॥೫॥

ಕಂ ॥ ಬಸವಗೃಹದಿವ್ಯಭೋಜನ । ವಿಸರದಿ ನುರೆ ತಣಿಯದೆಯ್ದಿ ಜಂಗಮ ನಿವಹಂ॥ ಮಿಸುಪಂಬಕಳಮ ನಾರೋ । ಗಿಸಿ ತಣೆಗುಂ ಮಾರಿದೇವನಿಲಯದೊ ಳನಿಶಂ ॥ ... ॥೬॥

ವ ॥ ಅಂತಾರೋಗಿಸಿದ ಚರಲಿಂಗನಿಕರ ಮೊಂದುದಿನಂ ಬಸವನ ಗೃಹಕೇಳ್ತಂದು ತನ್ಮಾಹಾರವಿಂದಮ ನಭೀಕ್ಷಿಸಿ ॥ * * * * * * * * * * *

ಚಂ॥ ಎಲೆ ಬಸವೇಶ ನಿನ್ನ ಗೃಹದೊ ಳ್ಸಮೆದಿರ್ದ್ದ ನವೀನಸಾರಮಂ । ಜುಲತರಷಡ್ರಸಾನ್ನತತಿ ನೋಳ್ಪೊಡೆ ಮೋಳಿಗೆಮಾರಿದೇವನಾ ॥ ನಿಲಯದೊ ಳಿಂಬುವೆತ್ತು ಮಿಸುಪಂಬ

---

ಅಪಾಕೃತಮಾರಂ- ಕೀಳುಮಾಡಲ್ಪಟ್ಟಮನ್ಮಥನುಳ್ಳ, ಈಶ್ವರಕುಮಾರಂ- ಶಿವಪುತ್ರನಾದ, ಮೋಳಿಗೆಮಾರಂ, ಭೋಗಪೂಗದ- ಇಹಲೋಕಸೌಖ್ಯಸಮೂಹದ, ಅನುಭಾವಮಂ, ಪಳಿಸಿ- ತಿರಸ್ಕರಿಸಿ, ಉದ್ಘಶಿವಾನುಭಾವದೊಳ್- ಶ್ರೇಷ್ಠವಾದ ಪರಮಾನುಭವದಲ್ಲಿ, ಚಿತ್ತಮಂ, ಮೇಳಿಸಿ-ಸೇರಿಸಿ, ನಿಜಪದಾನತರಂ, ಶಿವಭಕ್ತಿಭಾಗ್ಯದೊಳ್- ಶಿವಭಕ್ತಿಯೆಂಬೈಶ್ವರ್ಯದಲ್ಲಿ, ಜಾಳಿಸಿ- ತೇಲಾಡಿಸಿ, ಕರ್ಮವಾಸನೆ, ತೊಡಂಕದ- ಅಡ್ಡಿಯಾಗದ, ಪಾಂಗಂ- ರೀತಿಯನ್ನು, ಅಮರ್ಚ್ಚುತೆ, ಆಗಳುಂ- ನಿರಂತರದಲ್ಲೂ, ಒಪ್ಪಿದಂ. ॥೪॥

ಘನಮಹಿಮಂ, ಮೋಳಿಗೆಮಾರಂ, ಅನುದಿನಂ, ಉಗ್ರಕಾನನಕೆ- ಭಯಂಕರವಾದಕಾಡಿಗೆ, ಪೋಗಿ, ಕುಠಾರದಿಂ- ಕೊಡಲಿಯಿಂದ, ಮನದ, ಒಲವಿಂದೆ- ಸಂತೋಷದಿಂದ, ತಾಂ, ಇಂಧನಂಗಳಂ- ಸೌದೆಗಳನ್ನು, ತರಿದು- ಕತ್ತರಿಸಿ, ಬಳ್ಳಿವರೆಗಟ್ಟಿ- ದಪ್ಪಹೊರೆಯನ್ನು ಕಟ್ಟಿ, ಪೊದಳ್ದು- ಉಬ್ಬಿ, ಪೊತ್ತು, ನೆಟ್ಟನೆ, ತರುತೆ, ಅಲ್ಲಿ- ಆಪಟ್ಟಣದಲ್ಲಿ, ಮಾರಿ, ದೊರೆದ, ಅರ್ಥದೆ- ದುಡ್ಡಿನಲ್ಲಿ, ಜಂಗಮಕೋಟಿ, ಬಂದೊಡಂ, ಸುತೃಪ್ತಿಯಂ, ಒಡರ್ಚ್ಚುತೆ, ಇರ್ಪಿನಂ. ... ... ... ... .. ॥೫॥

ಅನಿಶಂ- ನಿರಂತರದಲ್ಲೂ, ಜಂಗಮನಿವಹಂ, ಬಸವಗೃಹದಿವ್ಯಭೋಜನವಿಸರದಿಂ, ಉರೆ, ತಣಿಯದೆ- ತೃಪ್ತಿಯಂಹೊಂದದೆ, ಎಯ್ದಿ- ಬಂದು, ಮಾರಿದೇವನಿಳಯದೊಳ್- ಮೋಳಿಗೆಮಾರಯ್ಯನಮನೆಯಲ್ಲಿ, ಅಂಬಕಳಮಂ- ಅಂಬಲಿಯನ್ನು, ಆರೋಗಿಸಿ- ಸ್ವೀಕರಿಸಿ, ತಣೆಗುಂ- ತೃಪ್ತಿಪಡುವದು. ... ॥೬॥

ಅಂತು, ಆರೋಗಿಸಿದ, ಚರಲಿಂಗನಿಕರಂ, ಒಂದುದಿನಂ, ಬಸವನ, ಗೃಹಕೆ, ಪೆಳ್ತಂದು, ತನ್ಮಾಹಾರವಿಂದಮಂ, ಅಭೀಕ್ಷಿಸಿ. * * * * * * * * * * * * * * * *

ಎಲೆಬಸವೇಶ ! ನಿನ್ನ, ಗೃಹದೊಳ್, ಸಮೆದು- ಮಾಡಿ, ಇರ್ದ್ದ, ನವೀನಸಾರಮಂಜುಲತರಷಡ್ರಸಾನ್ನತತಿ- ಹೊಸದಾದ ಸ್ಥಿರಾಂಶದಿಂದಮನೋಹರವಾದಸೀ, ಸಪ್ಪೆ, ಕಾರ, ಹುಳಿ, ಉಪ್ಪು, ಕಹಿ, ಒಗರು ಎಂಬ ಆರುವಿಧಗಳಾವ ರುಚಿಗಳಿಂಕೂಡಿದ ಅನ್ನದ ಸಮೂಹವು, ನೋಳ್ಪೊಡೆ- ವಿಚಾರಮಾಡಿನೋಡಿದರೆ, ಮೋಳಿಗೆ ಮಾರಿದೇವನ, ಆ ನಿಲಯದೊಳ್, ಇಂಬುವೆತ್ತು- ಮನೋಹರವಾಗಿ, ಮಿಸುಪ, ಅಂಬಕಳಕ್ಕೆ- ಅಂಬಲಿಗೆ, ಆವಗಂ- ಯಾವಾಗಲೂ, ಎಣೆಯಾರದು- ಸದೃಶವಾಗಲಾರದು; ಸಲಿದು- ಸಂತೋಷಪಟ್ಟು ಅದಂ,

ಕಳಕ್ಕೆಣೆವಾರ ದಾವಗಂ । ನಲಿದಪ ನುಂಡಮದ್ರುಸನೆ ಗನ್ಯರಸಂ ವಿರಸಂ ಧರಿತ್ರಿಯೊಳ್ ॥೭॥

ವ ॥ ಎಂದು ಮತ್ತಮಿರದೆ ॥ ಚಂ ॥ ಅನುದಿನ ಮಾತ್ಮಕಾಯಕದಿ ನೊರ್ಕ್ಕೊಳ ಗಂಬರೆ ಬತ್ತ ಮುಂತದಂ । ಮನೆಗಿರದೊಲ್ದು ತಂದದರಿ ನಚ್ಚರಿವೆತ್ತನಿತಲ್ಲಿಬಂದೊಡಂ ॥ ಘನಚರವೃಂದಮಂ ತಣಿಪುಗುಂ ನೆಗಳ್ದಾತನ ಭಕ್ತಿಯಂದಮಂ । ಮನಸಿಜವೈರಿ ಯೋರ್ವ ನರಿವಂ ಪೊಗಳ ಲ್ಪೆರರೇಂ ಸಮರ್ಥರೆ ॥ ... ... ... ॥೮॥

ವ ॥ ಎಂದು ಮುಗುಳ್ದು ಮುಗುಳ್ದು ಬಗೆವೆರ್ಚಿ ಪೊಗಳ್ವನಂ ಬಸವು ಕೇಳ್ದು ವಿಸ್ಮಯಾಂತಃಕರಣನಾಗಿ ತದ್ಭಕ್ತನು ನೋಡಲೆಳಸಿ ಗುಪ್ತಾಕಾರದಿಂ ಸಲ್ಲೀಲೆಯಿಂ ಮೆಲ್ಲನೆಳ್ತಂದವನಂಗಳನುಂ ಪುಗುತಂದು ಮಾರಿದೇವನ ರಾಣಿಯಂ ಕಂಡು ಭಕ್ತಿಯಿಂ ಶರಣೆಂದು ಕರಾರವಿಂದಮಂ ಮುಗಿಯಲೊಡನೆ ॥ * * * * * * * * *

ಕಂ ॥ ಶರಣೆಂದು ಮುಗುಳ್ಪ ಭಾಮಿನಿ । ಭರದಿಂದು ತಂದ ಪಾದ್ಯಜಲಕಲಶಮನಾ ॥ ದರದಿಂ ದೀಳ್ಪ ಕೊಳುತ್ತಂ । ಕರದಿಂ ದಡಿದೊಳೆವುತೆಯ್ದಿದು ತದ್ಗೃಹಮಂ ॥ ... ॥೯॥

ವ॥ಅಂತೆಯ್ದಿ ಸಲ್ಲೀಲೆ ಮಿಗೆ ಮೆಲ್ವಸೆಯೊಳ್ಕುಳ್ಳಿರ್ದು ಲಿಂಗಾರ್ಚನೆಗೆಯ್ದನಂತರಂ॥

ಮ॥ ಸ್ರ ॥ ಪಸಿವಾದ ತ್ತೆಮ್ಮ ದೇವರ್ಗೆಲೆ ಜನನಿ ಭವದ್ಗೇಹದಲ್ಲಿರ್ದಪೋಲ್ಸಂ । ತಸದಿಂ ನೈವೇದ್ಯಮಂ ನೀಂ ಗಡಣಿಸೆನೆ ಮುದಂಬೆತ್ತು ತತ್ಕಾಂತೆ ಯಾರೋ ॥ ಗಿಸಲಿ

---

ಉಂಡ, ಮದ್ರುಸನೆಗೆ- ನನ್ನ ನಾಲಿಗೆಗೆ, ಧಾತ್ರಿಯೊಳ್, ಅನ್ಯರಸಂ- ಮತ್ತೊಂದು ಪದಾರ್ಥದ ರುಚಿಯು, ವಿರಸಂ- ರುಚಿಯಿಲ್ಲದ್ದೇಣಿರುವದು. ... ... ... ... ॥೭॥

ಅನುದಿನ, ಆತ್ಮಕಾಯಕದಿಂ- ತನ್ನನಿಯಮದಿಂದ, ಬತ್ತಂ, ಒರ್ಕ್ಕೊಳಗಂ- ಒಂದುಕೊಳಗವು, ಬರೆ, ಅಂತು, ಅದಂ, ಇರದೆ, ಬಲ್ದು, ಮನೆಗೆ, ತಂದು, ಅಲ್ಲಿ, ಎನಿತುಬಂದೊಡಂ- ಎಷ್ಟುಬಂದಾಗ್ಯೂ, ಘನಚರವೃಂದಮಂ- ಅಚ್ಚರಿವೆತ್ತು- ಆಶ್ಚರ್ಯವನ್ನುಂಟುಮಾಡಿ, ತಣಿವುಗುಂ- ತೃಪ್ತಿಪಡಿಸುವನು; ನೆಗಳ್ದ- ಪ್ರಸಿದ್ಧವಾದ, ಆತನ, ಭಕ್ತಿಯ, ಅಂದಮಂ, ಮನಸಿಜವೈರಿ, ಓರ್ವಂ, ಅರಿವಂ, ಪೆರರ್- ಇತರರು, ಪೊಗಳಲ್, ಸಮರ್ಥರೇಂ ? ... ... ... ... ... ... ॥೮॥

ಎಂದು, ಮುಗುಳ್ದು, ಮುಗುಳ್ದು, ಬಗೆವೆರ್ಚಿ- ಮನಸ್ಸುಬ್ಬಿ, ಪೊಗಳ್ವನಂ- ಹೊಗಳುತ್ತಿರುವಲ್ಲಿ, ಬಸವಂ, ಕೇಳ್ದು, ವಿಸ್ಮಯಾಂತಃಕರಣಂ- ಆಶ್ಚರ್ಯದಿಂಕೂಡಿದ ಮನಸ್ಸುಳ್ಳವನು, ಆಗಿ, ಸದ್ಭಕ್ತನಂ, ನೋಡಲ್, ಎಳಸಿ, ಗುಪ್ತಾಕಾರದಿಂ- ಗುಟ್ಟಾದರೂಪದಿಂದ, ಸಲ್ಲೀಲೆಯಿಂ, ಮೆಲ್ಲನೆ, ಎಳ್ತಂದು, ಅವನ, ಅಂಗಳಮಂ- ಮನೆಯಮುಂಭಾಗವನ್ನು, ಪುಗುತಂದು- ಪ್ರವೇಶಿಸಿ, ಮಾರಿದೇವನ, ರಾಣಿಯಂ- ಪತ್ನಿಯನ್ನು, ಕಂಡು, ಭಕ್ತಿಯಿಂ, ಶರಣ್, ಎಂದು, ಕರಾರವಿಂದಮಂ, ಮುಗಿಯಲ್, ಒಡನೆ. * * * * *

ಮುಗುಳ್ದು- ಭಾಮಿನಿ- ಆ ಸ್ತ್ರೀಯು, ಶರಣ್, ಎಂದು, ಭರದಿಂದು, ತಂದ, ಪಾದ್ಯಜಲಕಲಶಮಂ- ಪಾದಾಭಿಷೇಕಕ್ಕೆ ಕೊಡುವ ನೀರನ್ನುತುಂಬಿದ ಕಲಶವನ್ನು, ಆದರದಿಂದೆ, ಕರದಿಂದೆ, ಈಳ್ದುಕೊಳುತ್ತಂ- ತೆಗೆದುಕೊಂಡು, ಅಡಿದೊಳೆವುತೆ, ತದ್ಗೃಹಮಂ, ಎಯ್ದಿದಂ. ... ... ॥೯॥

ಅಂತು, ಎಯ್ದಿ, ಸಲ್ಲೀಲೆ, ಮಿಗೆ, ಮೆಲ್ವಸೆಯೊಳ್- ಮೆತ್ತಗಿರುವ ಪೀಠದಲ್ಲಿ, ಕುಳ್ಳಿರ್ದು, ಲಿಂಗಾರ್ಚನೆಗೆಯ್ದು, ಅನಂತರಂ. * * * * * * * * * * * * *

ಎಲೆಜನನಿ- ಎಲೆಯಮ್ಮ ! ಎಮ್ಮ, ದೇವರ್ಗೆ, ಪಸಿವ್, ಆದತ್ತು; ಭವದ್ಗೇಹದಲ್ಲಿ- ನಿಮ್ಮಮನೆಯಲ್ಲಿ, ಇರ್ದಪೋಲ್, ಸಂತಸದಿಂ, ನೈವೇದ್ಯಮಂ- ಸಮರ್ಪಣೆಮಾಡುವದಕ್ಕೆ ಯೋಗ್ಯವಾದುದನ್ನು, ನೀಂ, ಗ

ತ್ತಾಹಾರಮಂ ತಾಂ ಸಲಿಸುತೆ ನಿಜಲಿಂಗಕ್ಕೆ ಮೇಣಚ್ಚಪೊಂಗ | ಳ್ದ್ವಿಸಹಸ್ರಂ ತೀವಿ ದೊಳ್ಬಾಳಗೆಗಳ ನೆರಡು ತಳ್ವದೊಳ್ಪಿಂದ ಮಾಗಳ್ ‖ ... ... ‖೧೦‖

ಕಂ ‖ ತೆಗೆದಾರುಂ ಕಾಣದವೊಲ್ | ಸೊಗಯಿಪ ಮಜ್ಜನದ ಪಾತ್ರೆಯೆಡೆಯೊಳಲಂ ಪಿಂ ! ಸುಗುಣಾಭರಣಂ ಬಸವಂ | ಮಿಗೆ ಬೈಚಿಡುತೇಳ್ದು ಜನನಿ ಶರಣೆನುತಾಗಳ್ ‖೧೧‖

ಮತ್ತೇ ‖ ಪೊರಮಟ್ಟಂಗಣಕೆಯ್ದಿ ನಿಂದು ಗೃಹಮಂ ನೋಡುತ್ತೆ ಮೆಯ್ಯುಬ್ಬುವು ತೆ | ಳ್ಕರೊಳಾನಂದಿಸಿ ನೋಳ್ಪೊಡಿಂತಿದು ಮಹಾಮೋಹಾಂಧಕಾರಕ್ಕೆ ನೇ ‖ ಸರಬಿಂಬಂ ಪರಮುಕ್ತಿಭಾಮಿನಿಗೆ ಜನ್ಮಸ್ಥಾನ ಮನ್ಯೂನಮಾ | ದರನೆಂದುಂ ನೆಲೆಗೊಂಡ ಠಾಣ ಮಿದು ಜನ್ಮಾಂಭೋದಜಂಝಾನಿಲಂ ‖ ... ... ... ... ‖೧೨‖

ವ ‖ ಎಂದು ಭರ್ತ್ತುಮಂದಿರಮಂ ಪೊಗಳ್ದು ಮತ್ತಮಿಂತೆಂದೆ ‖

ಮಹಾಸ್ರ | ಇದನಾವಂ ನೋಳ್ಪ ನಾವಾನವನ ದುರಿತ ಮಳ್ಕಾಡದೇ ನಿರ್ಪ್ಪನೇ ಮೇ | ಣಿದ ನಾವಂ ಸಾರ್ವ್ವ ನೊಲ್ದಾನರನ ಘನಸುಖಂ ಸಾರದೇಂ ಪೋಕುಮೇ ಮ ‖ ತ್ತಿದ ನಾವಂ ಬಣ್ಣಿಪಂ ತಳ್ತವನ ನುರುಕಲಾಸಂಪದಂ ಪೊರ್ದ್ದದೇಂ ಮಾ | ಣ್ಬುದೆ ಬಂದೀಗೇಹದನ್ನಂಬಡೆದ ಮನುಜ ನೇನಾಗನೇ ಬಂಧಮುಕ್ತಂ ‖ ... ... ‖೧೩‖

ಉ ‖ ನೇಸರಬಿಂಬ ಮಂಬರದ ಮಧ್ಯಮ ನೆಯ್ದಿದ ಪೊಳ್ತನೊಳ್ಪನಮ | ಲ್ಲಾಸ

---

ಡಣಿಸು-ಸೇರಿಸು; ಎನೆ, ತತ್ಕಾಂತೆ, ಮುದುಬೆತ್ತು, ಆರೋಗಿಸಲ್, ಆಹಾರಮಂ, ಇತ್ತು, ತಾಂ, ನಿಜ ಲಿಂಗಕ್ಕೆ, ಸಲಿಸುತ್ತೆ- ಆರೋಗಣೆಮಾಡುತ್ತ, ಮೇಣ್, ಆಗಳ್, ಅಚ್ಚಪೊಂಗಳ್, ದ್ವಿಸಹಸ್ರಂತೀವಿದ, ಎರಡಂಬಳ್ಬಾಳಗೆಗಳಂ- ಒಳ್ಳೆಯ ಎರಡುಬೇಲಗಳನ್ನು, ತಳ್ವದೆ, ಒಳ್ಪಿಂದೆ- ಸವಿಶಾಚೇನತ್ವದಿಂದ. ‖೧೦‖

ಸುಗುಣಾಭರಣಂ, ಬಸವಂ, ತೆಗೆದು- ಆರುಂ, ಕಾಣದವೊಲ್, ಸೊಗಯಿಪ, ಮಜ್ಜನದ- ಸ್ನಾನ ಮಾಡುವ ಜಲವಂತುಂಬುವ, ಪಾತ್ರೆಯ, ಎಡೆಯೊಳ್, ಅಲಂಪಿಂ, ಬೈತಿಡುತೆ- ಬಚ್ಚಿಡುತ್ತ, ಎಳ್ದು, ಜನನಿ! ಶರಣ್, ಎನುತೆ, ಆಗಳ್. ... ... ... ... ‖೧೧‖

ಪೊರಮಟ್ಟು, ಅಂಗಣಕೆ- ಮನೆಯ ಹೊರಗಣಬೈಲಿಗೆ, ಎಯ್ದಿ, ನಿಂದು, ಗೃಹಮಂ, ನೋಡುತ್ತೆ, ಮೆಯ್, ಉಗ್ಬುತೆ, ಅಳ್ಕರೊಳ್- ಪ್ರೀತಿಯಿಂದ, ಆನಂದಿಸಿ, ನೋಳ್ಪೊಡೆ, ಇಂತು, ಇದು- ಈ ಮನೆಯು ಮೋಹಾಂಧಕಾರಕ್ಕೆ- ಅಜ್ಞಾನವೆಂಬ ಕತ್ತಲೆಗೆ, ನೇಸರ- ಸೂರ್ಯನ, ಬಿಂಬಂ- ಮಂಡಲವು; ಪರಮುಕ್ತಿಭಾಮಿನಿಗೆ, ಜನ್ಮಸ್ಥಾನಂ; ಅನ್ಯೂನಮಾದರಂ— ಅನ್ಯೂನ- ಅಧಿಕನಾದ, ಮಾ- ಲಕ್ಷ್ಮಿಯಲ್ಲಿ, ಆದರಂ- ಪ್ರೀತಿಯುಳ್ಳ ವಿಷ್ಣುವು, ನೆಲೆಗೊಂಡ- ವಾಸವಾಗಿರುವ, ಠಾಣಂ- ಸ್ಥಾನವು, ಇದು, ಜನ್ಮಾಂಭೋದಜಂಝಾನಿಲಂ- ಉತ್ಪತ್ತಿಯೆಂಬಮೋಡಕ್ಕೆಬಿರುಗಾಳಿಯು. ... ... ... ‖೧೨‖

ಇದಂ, ಆವಂ, ನೋಳ್ಪಂ, ಆಮಾನವನ,ದುರಿತಂ, ಅಳ್ಕಾಡದೆ- ಹೆದರದೆ, ಇರ್ಪ್ಪನೇ? ಮೇಣ್, ಇದಂ, ಆವಂ, ಒಲ್ದು, ಸಾರ್ವಂ- ಸಮೀಪವಂಪೊಂದುವನೋ, ಆ ನರನ, ಆ ಮನುಷ್ಯನನ್ನು, ಘನಸುಖಂ, ಸಾರದೆ- ಹೊಂದದೆ, ಪೋಕುಮೇಂ? ಮತ್ತೆ, ಇದಂ, ಆವಂ, ಬಣ್ಣಿಪಂ, ಅವನಂ, ಉರುಕಲಾಸಂಪದಂ- ಉತ್ಕೃಷ್ಟವಾದ ವಿದ್ಯೆಯೆಂಬ ಐಶ್ವರ್ಯವು, ತಳ್ತು- ಸೇರಿ, ಪೊರ್ದ್ದದೆ, ಮಾಣ್ಬುದೇಂ- ಬಿಡುವದೇ? ಬಂದು, ಈಗೇಹದ, ಅನ್ನಂಬಡೆದ, ಮನುಜಂ, ಬಂಧಮುಕ್ತಂ- ಸಂಸಾರಬಂಧದ ದೆಸೆಯಿಂದ ವಿಮೋಚನವಂ ಪಡೆದವನು, ಆಗನೇಂ? ... ... ... ... ‖೧೩‖

ನೇಸರ, ಬಿಂಬಂ, ಅಂಬರದ, ಮಧ್ಯಮಂ, ಎಯ್ದಿದ, ಪೊಳ್ತನೊಳ್- ಹೊತ್ತಿನಲ್ಲಿ, ಬಿಣ್ಪಿನ- ದಪ್ಪವಾ

ದೆ ಪೊತ್ತು ಬೆಣ್ಪು ನಡುಗರ್ಬ್ಬಿನ ಬಲ್ಪೊರೆಯಂ ಗಿರೀಂದ್ರಕ ॥ ನ್ಯಾಸಹಚಾರಿಯಂ ನೆನೆವು ತಂ ನೆನವುತ್ತೆ ಸುಖಾಶ್ರುವಿಂ ನಿಜಾ । ವಾಸಮ ನೆಯ್ದಿ ನಿಂದಿಳುವುತಿಂಧನಭಾರಮ ನಲ್ಲ ಮಾರಯಂ ॥ ... ... ... ... ... ... ॥೧೮॥

ಚಂ ॥ ನಿಜವಧು ಮಂಘ್ರಿಯಂ ತೊಳೆಯೆಬಂದೊಳಪೊಕ್ಕು ಪೊದಳ್ದ ಭಕ್ತಿಯಿಂ । ಸುಜನವರೇಣ್ಯ ನರ್ಚ್ಚಿಸಿ ಚರವ್ರಜಮಂ ಶಿವಲಿಂಗಮೂರ್ತ್ತಿಯಂ ॥ ಭಜಿಯಿಪ ವೇಳೆಯೊಳ್ ಮಿಸುಪ ಪೊಂಗಳ ಜಾಳಿಗೆಗಂಡು ಬಂದ ರಾ । ರ್ಭುಜಗಧರೈಕಭಕ್ತ ರಣ ಮೆಲ್ಲಿಯವೀ ಪೊಸಪೊನ್ನ ನೀವಿಗಳ್॥ ... ... ... ... ... ॥೧೯॥

ವ ॥ ಎಂದು ವಲ್ಲಭೆಯಂ ಬೆಸಗೊಳ ಲೊಡನೆ ॥ * * * * * * *

ಕಂ ॥ ಆ ನರಿಯೆ ನವನ ಕುರುಪಂ । ಭೂನುತ ಕೇಳೋರ್ವ ನೆಯ್ದಿ ಭಕ್ತಂ ನೆಗ ಳ್ದೀ । ಸ್ಥಾನದೊಳೆ ಲಿಂಗಪೂಜೆಯ । ನಾನಂದದಿ ನೆಸಗಿ ತಳರ್ದ ನೆಂದವ ಳೆಂದಳ್ ॥೨೦॥

ವ ॥ ಎಂದ ವಲ್ಲಭೆಯ ಸೊಲ್ಲಂ ಮೋಳಿಗೆಮಾರಿದೇವಂ ಕೇಳ್ದು ಬಂದವಂ ಬಸವ ನೆಂದು ನಿಜಾಂತರಂಗದೊಳ್ ನಿರ್ಧರಿಸಿ॥ * * * * * * * * * *

ಉ ॥ ಮಂದಿರಕೆಂದು ಬಂದು ಪದೆದಿಂತು ಶಿವಾರ್ಚ್ಚನೆಗೆಯ್ದು ಪೋದ ನಾ । ರೆಂದೆನ ವೇಡ ತಾನೆ ಬಸವಂ ಸತಿ ಸಂದೆಗಮೇ ದರಿದ್ರಭಾ ॥ ವಂದಳೆದಿರ್ದ ಭಕ್ತತತಿಗರ್ಥ್ಥಮ ನೀಯಲು ಮೋವಲುಂ ಸಮರ್ತ್ಥಂ ದಿಟ ಮಾತನಲ್ಲದಿಳೆಯೊಳ್ಪೆರನಾವನೊನೋಡೆನಾಡೆಯುಂ॥

---

ದ, ಅಡುಗರ್ಬ್ಬಿನ– ಸೌದೆಯ, ಬಲ್ಪೊರೆಯಂ, ಸಮುಲ್ಲಾಸದೆ, ಪೊತ್ತು, ಗಿರೀಂದ್ರಕನ್ಯಾಸಹಚಾರಿಯಂ- ಪಾರ್ವತಿಯೊಡನೆ ಸಂಚರಿಸುವ ಈಶ್ವರನನ್ನು, ನೆನೆವುತಂ- ಧ್ಯಾನಮಾಡುತ್ತ, ಸುಖಾಶ್ರುವಿಂ- ಸಂತೋಷ ಬಾಷ್ಪದಿಂದ, ನೆನೆವುತಂ- ಆರ್ದ್ರನಾಗುತ್ತ, ನಿಜಾವಾಸಮಂ, ಎಯ್ದಿ; ಅಲ್ಲಿ, ಮಾರಯಂ, ನಿಂದು, ಇಂಧನಭಾರಮಂ- ಸೌದೆಯ ಹೊರೆಯನ್ನು, ಇಳುವುತೆ. ... ... ... ॥೧೮॥

ನಿಜವಧು, ಅಂಘ್ರಿಯಂ, ತೊಳೆಯೆ- ತೊಳೆಯಲು, ಸುಜನವರೇಣ್ಯ- ಸತ್ಪುರುಷಶ್ರೇಷ್ಠನಾದ ಮಾರಯ್ಯನು. ಬಂದು, ಒಳಪೊಕ್ಕು, ಪೊದಳ್ದ-ಹೆಚ್ಚಾದ, ಭಕ್ತಿಯಿಂ, ಚರವ್ರಜಮಂ ಅರ್ಚಿಸಿ, ಶಿವಲಿಂಗ ಮೂರ್ತಿಯಂ, ಭಜಿಯಿಪ-ಪೂಜಿಸುವ,ವೇಳೆಯೊಳ್, ಮಿಸುಪ,ಪೊಂಗಳ. ಜಾಳಿಗೆಗಂಡು-ಚೀಲಮಂನೋಡಿ, ಭುಜಗಧರೈಕಭಕ್ತರ್, ಅಣು-ಸ್ವಲ್ಪ,ಬಂದರ್, ಆರ್? ಈಪೊಸಪೊನ್ನ,ನೀವಿಗಳ್-ಚೀಲಗಳು,ಎಲ್ಲಿಯವ್?

ಎಂದು, ವಲ್ಲಭೆಯಂ- ಪತ್ನಿಯನ್ನು, ಬೆಸಗೊಳಲ್- ಕೇಳಲು, ಒಡನೆ. * * * * * *

ಭೂನುತ! ಅವನ, ಕುರುಪಂ- ಗುರ್ತನ್ನು, ಆಂ, ಅರಿಯೆಂ- ಕಾಣೆನು; ಓರ್ವಂಭಕ್ತಂ, ಎಯ್ದಿ, ನೆಗಳ್ದ, ಈ ಸ್ಥಾನದೊಳೆ, ಲಿಂಗಪೂಜೆಯಂ, ಆನಂದದಿಂ, ಎಸಗಿ, ತಳರ್ದಂ- ಹೊರಟುಹೋದನು, ಎಂದು, ಅವಳ್, ಎಂದಳ್. ... ... ... ... ... ॥೨೦॥

ಎಂದ, ವಲ್ಲಭೆಯ- ಪತ್ನಿಯ, ಸೊಲ್ಲಂ-ಮಾತನ್ನು, ಮೋಳಿಗೆಮಾರಿದೇವಂ, ಕೇಳ್ದು, ಬಂದವಂ, ಬಸವಂ,ಎಂದು, ನಿಜಾಂತರಂಗದೊಳ್- ತನ್ನ ಮನಸ್ಸಿನಲ್ಲಿ, ನಿರ್ಧರಿಸಿ-ನಿಶ್ಚೈಸಿ. * * * * * *

ಸತಿ- ಎಲೈ ಪತ್ನಿಯೇ! ಇಂದು, ಮಂದಿರಕೆ, ಬಂದು, ಪದೆದು, ಇಂತು, ಶಿವಾರ್ಚನೆಗೆಯ್ದು, ಪೋದಂ- ಹೋದವನು, ಆರ್ ? ಎಂದು, ಎನವೇಡ- ಎನ್ನಬೇಡ; ತಾನೆ- ಆತನೇ, ಬಸವಂ; ಸಂದೆಗಮೆ- ಸಂದೇಹವೇ ? ದರಿದ್ರಭಾವಂದಳೆದು- ಬಡತನವಂ ಹೊಂದಿ, ಇರ್ದ, ಭಕ್ತತತಿಗೆ, ಅರ್ಥ ಮಂ- ಹಣವನ್ನು, ಈಯಲುಂ- ಕೊಡುವದಕ್ಕೂ, ಓವಲುಂ- ರಕ್ಷಿಸುವದಕ್ಕೂ, ಆತಂ- ಆ ಬಸವನು, ಸಮರ್ಥಂ; ದಿಟಂ- ನಿಶ್ಚಯ; ಆತಂ,ಅಲ್ಲದೆ, ಇಳೆಯೊಳ್, ನಾಡೆಯುಂ-ಚೆನ್ನಾಗಿಯೂ, ನೋಡೆ, ಪೆರಂ-ಮತ್ತೊಬ್ಬನು,ಆವನೋ?

ಮತ್ತೀ ॥ ಬಹುಪುಣ್ಯಾಧಿಕರಾದ ಭಾಗ್ಯನಿಧಿಗಳ್ದಾರಿದ್ರ್ಯದಿಂ ನೋವರಂ । ಮಹಿಯೊಳ್ಪಾಲಿಪುದೇಂ ವಿಚಿತ್ರಮೆ ಮಹಾಭಾಗ್ಯಾಧಿಕಂ ತಾಂ ಗಡೀ ॥ ಸಹಜಾತ್ಯಂತದರಿದ್ರಭಾವಹತರಾದೆಮ್ಮಂ ಕರಂ ಸತ್ಕೃಪಾ । ಮಹಿತಂ ನೋಡಿ ವೃಷೇಂದ್ರ ನಿತ್ತು ತಳರ್ದಂ ದಾನೋನ್ನತಂ ಪ್ಪೊಂಗಳಂ ॥ ... ... ... ... ॥೧೮॥

ಕಂ ॥ ಕೇಳದೆ ಪೇಳದೆ ಪೊಸಪೊಂ । ಜಾಳಿಗೆಗಳನೀಂತುಟರಿಸಿ ಪೋದಂ ಬಸವಂ ॥ ಪೇಳವನಲ್ಲದೆ ಘನಕರು । ಣಾಳು ಕರಂ ದಾನಿ ಯಾವನೀವಸುಮತಿಯೊಳ್ ॥ ... ॥೧೯॥

ಕಂ ॥ ನುಡಿಯಲರಿದಾದ ಬಡತನ । ಮೆಡೆಗೊಂಡಿರ್ದೆಮ್ಮೊಳಲ್ಲ ದಾರೊಳ್ಮರೆವಂ ॥ ಕಡುಜಾನಿತನದ ತನ್ನಯ । ಬೆಡಂಗ ನೀಬಸವ ನಮುಮದಾನನಿದಾನಂ ॥ ... ॥೨೦॥

ಕಂ ॥ ದೊರೆಗುಮೆಮಗೆಮ್ಮ ಲಿಂಗಂ । ಕರುಣಿಸುತೊಲ್ದಿತ್ತ ಕಾಯಕದಿ ನರ್ಥಸಮು ॥ ತ್ಕರಮಂತುಟಪ್ಪ ಪೇರ್ಮೆಯ । ವರಿಯಂ ತಾಂಬಲ್ಲ ನಲ್ಲದಾ ನತ್ತರಿವೆಂ ॥ ॥೨೧॥

ವ ॥ ಎಂದು ವಿಡಂಬನಂಗೆಯ್ದೆರಳ್ಪೊಂಜಾಳಿಗೆಗಳ ನೀರ್ವ ರ್ಮಾಹೇಶ್ವರರ್ಗಿತ್ತು ಮಣಿದು ಮತ್ತಮಿರದೆ॥ * * * * * * * * * * * * *

ಮತ್ತೀ ॥ ಅದ ನೇವೇಳ್ವುದೊ ಮೋಳಿಗಯ್ಯನ ಮಹಾಮಾಹಾತ್ಮ್ಯಮಂ ಜಂಗಮಾ॥ ಘದಪಾದಂ ದೊಳೆದಂಬುವಂ ತಳೆದು ಕಾಮ್ಯವ್ರಾತಮಂ ನೋಳ್ಪುದುಂ ॥ ಪಡೆದೆ

---

ಮಹಿಯೊಳ್, ಬಹುಪುಣ್ಯಾಧಿಕರಾದ,ಭಾಗ್ಯನಿಧಿಗಳ್- ಐಶ್ವರ್ಯಕ್ಕೆನಿಕ್ಷೇಪರಾದವರು, ದಾರಿದ್ರ್ಯದಿಂ, ನೋವರಂ- ಬಾಧಿಸಲ್ಪಡುತ್ತಿರುವರನ್ನು, ಪಾಲಿಪುದು, ವಿಚಿತ್ರಮೇಂ- ಆಶ್ಚರ್ಯವೇ ? ತಾಂ-ಆ ಬಸವನು, ಮಹಾಭಾಗ್ಯಾಧಿಕಂಗಡ- ಅಧಿಕವಾದ ಐಶ್ವರ್ಯದಿಂದ ಉತ್ಕೃಷ್ಟನಾದವನಲ್ಲವೇ ? ದಾನೋನ್ನತಂ- ದಾನ ಗುಣದಿಂ ದೊಡ್ಡವನಾದ, ಸತ್ಕೃಪಾಮಹಿತಂ- ಒಳ್ಳೆಯ ದಯೆಯಿಂದ ಪೂಜ್ಯನಾದ, ವೃಷೇಂದ್ರಂ, ಸಹಜಾತ್ಯಂತದರಿದ್ರಭಾವಹತರಾದ- ಸ್ವಭಾವಸಿದ್ಧವಾಗಿ ಬಹು ಬಡತದಿಂ ಹೊಡೆಯಲ್ಪಟ್ಟವರಾದ, ಎಮ್ಮಂ,ಕರಂ, ನೋಡಿ, ಪೊಂಗಳಂ, ಇತ್ತು,ತಳರ್ದಂ. ... ... ... ... ॥೧೮॥

ಕೇಳದೆ, ಪೇಳದೆ, ಬಸವಂ, ಇಂತುಟು- ಹೀಗೆ, ಪೊಸಪೊಂಜಾಳಿಗೆಗಂ, ಇರಿಸಿ, ಪೋದಂ; ಈವಸುಮತಿಯೊಳ್, ಅವಂ, ಅಲ್ಲದೆ, ಘನಕರುಣಾಳು– ದೊಡ್ಡ ದಯಾಶಾಲಿಯಾದವನು, ದಾನಿ- ದಾನವಂ ಮಾಡುವನು, ಆವಂ ? ಪೇಳ್. ... ... ... ... ॥೧೯॥

ದಾನನಿದಾನಂ, ಈ ಬಸವಂ, ತನ್ನ, ಕಡುಜಾನಿತನದ- ಬಹುಜಾನಿತ್ವದ, ಬೆಡಂಗಂ, ನುಡಿಯಲ್- ಹೇಳುವದಕ್ಕೆ, ಅರಿದಾದ- ಅಸಾಧ್ಯವಾದ, ಬಡತನಂ, ಎಡೆಗೊಂಡು- ಆಶ್ರಯಿಸಿ, ಇರ್ದ, ಎಮ್ಮೊಳ್, ಅಲ್ಲದೆ, ಆರೊಳ್, ಮರೆವಂ- ತೋರ್ಪಡಿಸುವನು? ಅಮಮ!! ... ... ... ॥೨೦॥

ಎಮಗೆ, ಎಮ್ಮ, ಲಿಂಗಂ, ಕರುಣಿಸುತೆ, ಒಲ್ದು, ಇತ್ತ, ಕಾಯಕದಿಂ- ಕೆಲಸದಿಂದ, ಅರ್ಥಸಮುತ್ಕರಂ- ಹಣದರಾಸಿಯು, ದೊರೆಗುಂ; ಅಂತುಟಪ್ಪ- ಅಂಥಾ, ಪರಿಯಂ- ರೀತಿಯನ್ನು, ತಾಂ- ಬಸವನು, ಬಲ್ಲಂ, ಅಲ್ಲದೆ, ಆಂ, ಎತ್ತ- ಯಾವಕಡೆಯಿಂದ, ಅರಿವೆಂ- ತಿಳಿಯುವೆನು? ... ... ॥೨೧॥

ಎಂದು, ವಿಡಂಬನಂಗೆಯ್ದು- ತಿರಸ್ಕರಿಸಿ, ಎರಳ್ಪೊಂಜಾಳಿಗೆಗಳಂ- ಎರಡುಹೊನ್ನಿನ ಚೀಲಗಳನ್ನು, ಈರ್ವರ್ಮಾಹೇಶ್ವರರ್ಗೆ, ಇತ್ತು, ಮಣಿದು, ಮತ್ತಂ, ಇರದೆ. * * * * * * * * *

ಮೋಳಿಗಯ್ಯನ, ಅದಂಮಹಾಮಾಹಾತ್ಮ್ಯಮಂ, ಏವೇಳ್ವುದೊ! ಭಕ್ತೋತ್ತಮಂ, ಜಂಗಮಾಘದ, ಪಾದಂದೊಳೆತ; ಅಂಬುವಂ, ಕಾಮ್ಯವ್ರಾತಮಂ- ಸೌದೆಗಳ ಗುಂಪನ್ನು, ತಳೆದು- ಸೇಬಿಸಿ, ಪಡೆದು,

ತ್ತಂ ಜವದಿಂ ಸುವರ್ಣಮಯಂ ದಾದತ್ತಂ ತದಂ ಖಂಡಿಸು । ತ್ತೊದವಿರ್ದಳ್ಕರಿಂ ನಿತ್ತನಂ
ದುಚರಸಂದೋಹಕ್ಕೆ ಭಕ್ತೋತ್ತಮಂ ॥ ... ... ... ॥೧೨॥

ವ ॥ ಅಂತು ಥಳಥಳಿಸಿ ಪೊಳೆವ ಕನಕಕಾಪ್ಯಂಗಳಂ ಕಡಿಕಡಿದು ಸಾಸಿರಪೊನ್ನ
ತೂಕದ ಕಡಿಗಳಂ ಸಮರ್ಪಿಸೆ ಕೈಕೊಂಡು ತೂನೆದು ಕೊಂಡಾಡಿ ಜಂಗಮಸಮೂಹಂ ಬಸ
ವ ನರಮನೆಗೆೞ್ತಂದು ಸಡಗರಿಸುತ್ತಾ ಮಾಭಕ್ತನ ಮಹಿಮೆಯಂ ಪಸರಿಸುತಾತ ನೆಸಗಿ
ದಂದಮ ನೊರೆದೊರೆದು ಮಗುೞ್ದು ಕೀರ್ತಿಸುತಿರೆ ಬಸವಂ ಕೇಳ್ದು ಭೀತಿಗೊಂಡು ಬೆರ
ಗುವಟ್ಟು ವೇಗದಿಂ ಮಾರಿದೇವ ನಡೆಗೆೞ್ತಂದು ಶರಣೆಂದು ಸಾಷ್ಟಾಂಗ ಮೆರಗಿ ಕಿಂಕರತೆ
ಯ ನಪ್ಪುಕೆಯ್ದು ಕಾರ್ಪಣ್ಯಂದೋರಿ ಕಂಠರವಿಂದಮಂ ಮುಗಿದು ನಿಂದು ॥ * *

ಕಂ ॥ ಶರಣಾಗತಾರ್ತಿಹರ ಶಂ । ಕರರೂಪ ಶರಣ್ಯ ಶಾಂತಿಭೂಷಣ ಮಹಿಮಾ ॥ ಕ
ರ ಸರ್ವಾರ್ಥಪ್ರದ ಶುಭ । ಕರ ರಕ್ಷಿಪುದೆನ್ನ ನೆಂದು ಬಸವಂ ಪೊಗೞ್ದಂ ॥ ... ॥೧೩॥

ವ ॥ ಅಂತುತನ್ನಂ ನುತಿಗೆಯ್ವ ಬಸವರಸನಂ ಮಾರಿದೇವ ನಭೀಕ್ಷಿಸಿ ॥ * *

ಕಂ ॥ ಕಡುಸಿರಿವಡೆದ ವದಾನ್ಯಂ । ಬಡವನ ನಿಂತೇಕೆ ಪೊಗೞ್ದಪ ಯ್ನೀ ನೆನ್ನಂ ॥
ಪೊಡವಿಯೊ ಳಿದು ಯುಕ್ತಮೆ ಪೇಳ್ । ಬಿಡದರ್ಥಿಗಳಂ ವದಾನ್ಯರೇಂ ಪೊಗೞ್ದಪರೆ ॥೧೪॥

ಕಂ ॥ ಮುನ್ನೆಂದು ಮರಿಯದೀಪೊಸ । ಪೊನ್ನೊಪ್ಪುವ ಜಾಳಿಗೆಗಳ ನಿಂದಾನರಿ

---

ಎತ್ತಂ- ಎಲ್ಲಾಕಡೆಯಲ್ಲೂ, ನೋೞ್ಪುದುಂ- ನೋಡುತಲೂ, ಜವದಿಂ, ಸುವರ್ಣಮಯಂ, ಆದತ್ತು; ಅಂತು, ಅದಂ, ಖಂಡಿಸುತ್ತೆ, ಒದವಿರ್ದ, ಅಳ್ಕರಿಂ- ಪ್ರೀತಿಯಿಂದ, ಅಂದು, ಚರಸಂದೋಹಕ್ಕೆ, ಇತ್ತಂ ॥೧೨॥

ಅಂತು, ಥಳಥಳಿಸಿ, ಪೊಳೆವ, ಕನಕಕಾಪ್ಯಂಗಳಂ, ಕಡಿಕಡಿದು, ಸಾಸಿರಪೊನ್ನ, ತೂಕದ, ಕಡಿಗಳಂ- ತುಣುಕುಗಳನ್ನು, ಸಮರ್ಪಿಸೆ, ಜಂಗಮಸಮೂಹಂ, ಕೈಕೊಂಡು- ಸ್ವೀಕರಿಸಿ, ತೂನೆದು- ತೂಗಾಡಿ, ಕೊಂಡಾಡಿ, ಬಸವನ, ಅರಮನೆಗೆ, ಎೞ್ತಂದು, ಸಡಗರಿಸುತ್ತಂ, ಆ ಭಕ್ತನ, ಮಹಿಮೆಯಂ, ಪಸರಿಸುತೆ- ವಿಸ್ತರಿಸುತ್ತ, ಆತಂ, ಎಸಗಿದ- ಮಾಡಿದ, ಅಂದಮಂ, ಒರೆದು, ಒರೆದು, ಮಗುೞ್ದು, ಕೀರ್ತಿಸುತೆ, ಇರೆ, ಬಸವಂ, ಕೇಳ್ದು, ಭೀತಿಗೊಂಡು, ಬೆರಗುವಟ್ಟು- ಬೆರಗಾಗಿ, ವೇಗದಿಂ, ಮಾರಿದೇವನ, ಎಡೆಗೆ, ಎೞ್ತಂದು, ಶರಣ್, ಎಂದು, ಸಾಷ್ಟಾಂಗಂ, ಎರಗಿ, ಕಿಂಕರತೆಯಂ, ಅಪ್ಪುಕೆಯ್ದು- ಅಶ್ರಯಿಸಿ, ಕಾರ್ಪಣ್ಯಂದೋರಿ- ದೈನ್ಯವಂ ತೋರಿಸಿ, ಕಂಠರವಿಂದಮಂ, ಮುಗಿದು, ನಿಂದು. * * * * * * * * * * *

ಶರಣಾಗತಾರ್ತಿಹರ-ಮರೆಹೊಕ್ಕವರ ಮನೋವ್ಯಥೆಯನ್ನು ನಾಶಮಾಡುವ, ಶಂಕರರೂಪ, ಶರಣ್ಯ- ಸಂರಕ್ಷಕನಾದ, ಶಾಂತಿಭೂಷಣ, ಮಹಿಮಾಕರ, ಸರ್ವಾರ್ಥಪ್ರದ- ಸಕಲೇಷ್ಟಾರ್ಥಗಳಂ ಕೊಡುವ, ಶುಭಕರ, ಎನ್ನಂ, ರಕ್ಷಿಪುದು, ಎಂದು, ಬಸವಂ, ಪೊಗೞ್ದಂ. ... ... ... ॥೧೩॥

ಅಂತು, ತನ್ನಂ, ನುತಿಗೆಯ್ವ, ಬಸವರಸನಂ, ಮಾರಿದೇವಂ, ಅಭೀಕ್ಷಿಸಿ. * * * * *

ಕಡುಸಿರಿವಡೆದ- ಬಹು ಸಂಪತ್ತನ್ನು ಹೊಂದಿದ, ನೀಂ, ಬಡವನಂ, ಎನ್ನಂ, ಇಂತು, ಏಕೆಪೊಗೞ್ದಪಯ್ ? ಪೊಡವಿಯೊಳ್, ಇದು, ಯುಕ್ತಮೆ ? ಪೇಳ್, ವದಾನ್ಯರ್- ದಾನವಂ ಮಾಡುವರು, ಬಿಡದೆ, ಅರ್ಥಿಗಳಂ- ಯಾಚಕರನ್ನು, ಪೊಗೞ್ದಪರೇಂ- ಹೊಗಳುವರೇ ? ... ... ॥೧೪॥

ಮುನ್ನ, ಎಂದುಂ, ಅರಿಯದ, ಈಪೊಸಪೊನ್ನ, ಒಪ್ಪುವ, ಜಾಳಿಗೆಗಳಂ, ಇಂದು, ಆಂ, ನಿನ್ನಯ, ಕೃಪೆಯಿಂ, ಅರಿದೆಂ; ಬಡತನಮಂ, ನೀಗಿದೆಂ- ಬಿಟ್ಟೆನು; ಎನಗೆ, ನೀನೆ, ಮಾನ್ಯವದಾನ್ಯಂ- ಸನ್ಮಾನಮಾಡಿ

ಡೆಂ ॥ ನಿನ್ನಯ ಕೃಪೆಯಿಂ ಬಡತನ । ಮಂ ನೀಗಿದೆ ನೆನಗೆ ನೀನೆ ಮಾನ್ಯವದಾನ್ಯಂ ॥೧೫॥

ಮತ್ತೇ ॥ ಅತಿದಾರಿದ್ರ್ಯದೊಳಿರ್ಪನೀ ಬಣಗುಭಕ್ತಂ ಮಾಣದುದ್ಯಿದ್ದ ಸ । ನ್ನುತಕಾರುಣ್ಯದೆ ಪೊನ್ನ ಜಾಳಗೆಗಳಂ ತಂದಿತ್ತ ನಿನ್ನಂತಿರಾ ॥ ಪ್ತತಮಂ ಪೇಳೆನಗಾರೊ ಧಾತ್ರಿಯೊಳೆ ನಿನ್ನಂ ಪೋಲ್ವನಾವಂ ವದಾ । ನ್ಯತೆಯೊಳ್ನೀನೊಸೆದೀಯುದಂದು ಬಡವರ್ಗಾರೀವರರ್ಥಂಗಳಂ ॥ ... ... .. ... ... ॥೧೬॥

ಕಂ ॥ ಕೋಡಮುದು ನಿನ್ನ ಶಿರದೊಳ್ । ಮೂಡಿದುದೆಲೆ ಬಸವ ಬಡವರಿರ್ಪೆಡೆಗೆ ಮುದಂ ॥ ಗೂಡಿ ಗಮಿಸುತ್ತೆ ಧನಮಂ । ನೀಡುವೆ ನಿನಗೆಣೆಯೆ ಸುರರ ಮರನುಂ ಮಣಿಯುಂ ॥

ಮತ್ತೇ ॥ ಎನಗಿತ್ತಂತೆವೊಲಾರ್ಗೆ ಕೊಟ್ಟೆ ಧನಮಂ ಭಕ್ತರ್ಗೆ ಪೇಳ್ಮಾಬಿದೇ । ವನ ಕಪ್ಪಳ್ಳಿಕರ ಪೌತ್ರನಾಂ ಬಿಡದಿರೆನ್ನೊಳ್ಮಾಣದಿಂತಪ್ಪ ಸ ॥ ದ್ಘನಕಾರುಣ್ಯಮನಯ್ಯ ನೀಂ ಪಿರಿದುಭಾಗ್ಯಂಪೆತ್ತವಂ ನಿನ್ನ ಕೂ । ರ್ಪಿನಪಾಂಗಪ್ರಭೆ ಯೆನ್ನಮೇಲಿರೆ ನಿತಾಂತಂ ಭಾಗ್ಯದಿಂ ಬಾಳ್ದಪೆಂ ॥ ... ... ... .. ... ॥೧೮॥

ವ ॥ ಎಂದು ಮೋಳಿಗಯ್ಯ ನಾಳವಾಡಿ ನುಡಿಯೆ ಬಸವಂ ಭಯಂಬಡೆದಂತಂತೆ ಕಂಪಿಸಿ ಬೆಮರುತ್ತ ಬೆಬ್ಬಳಿವೋಗಿ ॥ * * * * * * * * * * * *

ಕಂ ॥ ಗಾವಿಲನೊಳಧಮನೊಳ್ಗ । ರ್ವಾವಿಲನೊಳ್ಖಲನೊಳಳಿಪನೊಳ್ ದುರ್ದಮದೋ ॥ ಷಾವೃತನೊಳೆನ್ನೊಳಮಳಗು । ಣಾವಳಿಯಂ ದೇವ ನೋಳ್ಪುದೇ ಘನಮಹಿಮಾ ॥

---

ಸಿಕೊಳ್ಳುವದಕ್ಕೆ ಯೋಗ್ಯನಾದ ದಾನಿಯು. ... ... ... ॥೧೫॥

ಈಬಣಗುಭಕ್ತಂ- ಹುರುಳಿಲ್ಲದ ಭಕ್ತನು, ಅತಿದಾರಿದ್ರ್ಯದೊಳ್, ಇರ್ಪಂ; ಎಂದು, ಮಾಣದೆ- ತಪ್ಪದೆ, ಎದ್ದು, ಸನ್ನುತಕಾರುಣ್ಯದೆ, ಪೊನ್ನ, ಜಾಳಗೆಗಳಂ, ತಂದು, ಇತ್ತ, ನಿನ್ನಂತಿರೆ- ನಿನ್ನಹಾಗೆ, ಧಾತ್ರಿಯೊಳೆ, ಎನಗೆ, ಆಪ್ತತಮಂ- ಅತಿ ಮಿತ್ರನು, ಆರೊ ? ಪೇಳ್, ವದಾನ್ಯತೆಯೊಳ್- ದಾನಗುಣದಲ್ಲಿ, ನಿನ್ನಂ, ಪೋಲ್ವಂ, ಆವಂ ? ನೀಂ, ಒಸೆದು, ಬಡವರ್ಗೆ, ಅರ್ಥಂಗಳಂ, ಈಯುದಂದು- ಕೊಡದೇಇದ್ದಲ್ಲಿ, ಆರ್, ಈವರ್?

ಎಲೆಬಸವ ! ನಿನ್ನ, ಶಿರದೊಳ್, ಅದು ಕೋಡಂ, ಮೂಡಿದುದು-ಹುಟ್ಟಿತು; ಬಡವರ್, ಇರ್ದ,ಎಡೆಗೆ, ಮುದಂಗೂಡಿ, ಗಮಿಸುತ್ತೆ, ಧನಮಂ, ನೀಡುವೆ, ನಿನಗೆ, ಸುರರ, ಮರನುಂ, ಮಣಿಯುಂ, ಎಣೆಯೆ?

ಅಯ್ಯಾ! ಎನಗೆ, ಧನಮಂ, ಇತ್ತಂತೆವೋಲ್- ಕೊಟ್ಟಹಾಗೆ, ಭಕ್ತರ್ಗೆ, ಆರ್ಗೆ, ಕೊಟ್ಟೆ ? ಪೇಳ್; ಆಂ, ಮಾಚಿದೇವನ, ಕಪ್ಪಳ್ಳಿಕರ- ಅತಿ ಪ್ರೀತಿಪಾತ್ರನಾದ, ಪೌತ್ರಂ- ಮೊಮ್ಮಗನು; ಎನ್ನೊಳ್, ಮಾಣದೆ- ತಪ್ಪದೆ, ಇಂತಪ್ಪ, ಸದ್ಘನಕಾರುಣ್ಯಮಂ, ಬಿಡದೆ, ಇರ್; ನೀಂ, ಪಿರಿದುಭಾಗ್ಯಂಪೆತ್ತವಂ- ಬಹಳ ಐಶ್ವರ್ಯವಂ ಹೊಂದಿದವನು; ನಿನ್ನ, ಕೂರ್ಪಿನ- ಪ್ರೀತಿಯಿಂ ಕೂಡಿದ, ಅಪಾಂಗಪ್ರಭೆ- ಕಡೆಗಣ್ಣಿನ ಕಾಂತಿಯು, ಎನ್ನ, ಮೇಲೆ, ಇರೆ, ನಿತಾಂತಂ- ಅತ್ಯಂತವಾಗಿ, ಭಾಗ್ಯದಿಂ, ಬಾಳ್ದಪೆಂ. ... ॥೧೮॥

ಎಂದು, ಮೋಳಿಗಯ್ಯಂ, ಆಳವಾಡಿ- ಪರಿಹಾಸಮಾಡಿ, ನುಡಿಯೆ, ಬಸವಂ, ಭಯಂಬಡೆದು, ಅಂತಂತೆ- ಹಾಗೆಹಾಗೆ, ಕಂಪಿಸಿ, ಬೆಮರುತ್ತ, ಬೆಬ್ಬಳಿವೋಗಿ- ಬೆರಗಾಗಿ. * * * * * * * *

ಘನಮಹಿಮ, ದೇವ! ಗಾವಿಲನೊಳ್- ಮೂಢನಾದ, ಅಧಮನೊಳ್- ನೀಚನಾದ, ಗರ್ವಾವಿಲನೊಳ್- ಅಹಂಕಾರದಿಂ ವ್ಯಾಪ್ತನಾದ, ಖಲನೊಳ್- ನೀಚನಾದ, ಅಳಿಪನೊಳ್-ದುರಾಸೆಯುಳ್ಳ, ದುರ್ದಮದೋಷಾವೃತನೊಳ್ ಇಂದ್ರಿಯನಿಗ್ರಹಶೂನ್ಯನಾದ ಪಾಪವಿಶಿಷ್ಟನಾದ, ಎನ್ನೊಳ್, ಅಮಳಗುಣಾವಳಿಯಂ, ನೋಳ್ಪುದೆ ? ... ... ... ... ... ॥೧೯॥

ಉ ॥ ಸಿದ್ಧರಸಂ ಪರೀಕ್ಷಿಪುದೆ ಲೋಹದ ದುರ್ಗುಣಮಂ ಸುವರ್ಣಭಾ । ಸ್ವದ್ಧರಣೀಧರಂ ಬಗೆವುದೇ ಮಿಗೆ ಕಾಗೆಯ ದುಷ್ಟವೃತ್ತಿಯಂ ॥ ಶುದ್ಧತರಪ್ರಕಾಶಮತಿ ನೀಂಬಿಡವೆನ್ನೊಳನೇಕದೋಷಸು । ಬದ್ಧನೊಳೊಳ್ಪನೀಕ್ಷಿಪುದೆ ಮೋಳಿಗೆಮಾರ ಮಹಾಕೃಪಾಕರ ॥ ... ... ... ... ... ... ॥೩೦॥

ಚಂ ॥ ಕಲರವ ಮುಂಟೆ ದರ್ದುರದೊಳಂಬುಜದೊಳ್ನವನೀತಮುಂಟೆ ಸ । ತ್ಫಲತತಿಯುಂಟೆ ಶಾಲ್ಮಲಿಯೊಳಿಂಗಳರಾಶಿಯೊಳುಂಟೆ ತಂಪು ಕ ॥ ಜ್ಜಲದೊಳ ಮುಂಟೆ ಶುಭ್ರತೆ ಪಲಾಂಡುವೊಳುಂಟೆ ಪಟೀರಸೌರಭಂ । ಜಲರುಹ ಮುಂಟೆ ಕೊಂಪಟೆಯೊಳೆನ್ನೊಳೆ ಸದ್ಗುಣಮುಂಟೆ ಧಾತ್ರಿಯೊಳ್ ॥ ... ... .. ... ॥೩೧॥

ಕಂ ॥ ಪಸಿದಂ ಪ್ರಭುವೆಂದಾಳೋ । ಚಿಸಿ ತಣಿಪಲ್ ಬಗೆದೆ ನಯ್ಯ ಮುನ್ನಂನಿನ್ನಂ ॥ ವಸುರಹಿತ ನೆಂದು ನೆನೆದೆಂ । ವಸುಧೆಯೊಳೆಂದೆನ್ನ ಪೋಲ್ವ ಗಾಂಪರು ಮೊಳರೆ ॥೩೨॥

ಕಂ ॥ ಗತಿಯುಂ ಮತಿಯುಂ ಹಿತನುಂ । ಪಿತನುಂ ಗುರುಸಂಗಮೇಶನುಂ ನೀ ನೆನಗೆ ॥ ನ್ನತಿಶಯಶತಾಪರಾಧಮ । ನತರ್ಕ್ಯಮಹಿಮಾಬ್ಧಿ ಮರೆದು ಪಾಲಿಪುದೆನ್ನಂ ॥ ॥೩೩॥

ವ ॥ ಎಂದಭಯಮುಮಂ ಬೇಡಿ ಭಯಭಕ್ತಿಯಿಂ ದಡಿಗೆರಗಿರ್ದ ಬಸವನಂ ಮಾರಿದೇವಂ

---

ಸಿದ್ಧರಸಂ, ಲೋಹದ- ಕಬ್ಬಿನದ, ದುರ್ಗುಣಮಂ, ಪರೀಕ್ಷಿಪುದೆ, ಸುವರ್ಣಭಾಸ್ವದ್ಧರಣೀಧರಂ-ಮೇರುಪರ್ವತವು, ಕಾಗೆಯ, ದುಷ್ಟವೃತ್ತಿಯಂ, ಮಿಗೆ, ಬಗೆವುದೇ- ಯೋಚಿಸುವದೇ ? ಮಹಾಕೃಪಾಕರ, ಮೋಳಿಗೆಮಾರ! ಶುದ್ಧತರಪ್ರಕಾಶಮತಿ- ಅತಿ ನಿರ್ಮಲವಾದ ಕಾರಣವೇ ಪ್ರಕಾಶಿಸುವಬುದ್ಧಿಯುಳ್ಳ,ನೀಂ, ಅನೇಕದೋಷಸಂಬದ್ಧನೊಳ್, ಎನ್ನೊಳ್, ಒಳ್ಪಂ- ಸಮೀಚೀನತ್ವವನ್ನು, ಈಕ್ಷಿಪುದೆ ? ॥೩೦॥

ಧಾತ್ರಿಯೊಳ್, ದರ್ದುರದೊಳ್- ಕಪ್ಪೆಯಲ್ಲಿ, ಕಲರವಂ- ಅವ್ಯಕ್ತಮಧುರವಾದ ನಾದವು, ಉಂಟೆ? ಅಂಬುಜದೊಳ್- ಅಕ್ಕಿಯಂತೊಳೆದ ನೀರಿನಲ್ಲಿ, ನವನೀತಂ- ಬೆಣ್ಣೆಯು, ಉಂಟೆ? ಶಾಲ್ಮಲಿಯೊಳ್- ಬೂರುಗದ ಮರದಲ್ಲಿ, ಸತ್ಫಲತತಿ- ಒಳ್ಳೆಯ ಹಣ್ಣುಗಳಗುಂಪು, ಉಂಟೆ? ಇಂಗಳರಾಶಿಯೊಳ್- ಕೆಂಡದರಾಸಿಯಲ್ಲಿ, ತಂಪು, ಉಂಟೆ? ಕಜ್ಜಳದೊಳಂ- ಕಾಡಿಗೆಯಲ್ಲಿ, ಶುಭ್ರತೆ- ಬಿಳುಪು, ಉಂಟೆ? ಪಲಾಂಡುವೊಳ್- ಈರುಳ್ಳಿಯಲ್ಲಿ, ಪಟೀರಸೌರಭಂ- ಶ್ರೀಗಂಧದ ಪರಿಮಳವು, ಉಂಟೆ ? ಕೊಂಪಟೆಯೊಳ್- ಪಲ್ವಲದಲ್ಲಿ, ಜಲರುಹಂ- ಕಮಲವು, ಉಂಟೆ? ಎನ್ನೊಳೆ, ಸದ್ಗುಣಂ, ಉಂಟೆ ? ... ... ... ॥೩೧॥

ಅಯ್ಯ! ಮುನ್ನಂ- ಪೂರ್ವದಲ್ಲಿ, ಪ್ರಭು- ಅಲ್ಲಮಪ್ರಭುವು, ಪಸಿದಂ, ಎಂದು, ಆಲೋಚಿಸಿ, ತಣಿಪಲ್- ತೃಪ್ತಿಗೊಳಿಸುವದಕ್ಕೆ, ಬಗೆದೆಂ- ಆಲೋಚಿಸಿದೆನು; ಇಂದು, ನಿನ್ನಂ, ವಸುರಹಿತಂ- ಹಣವಿಲ್ಲದವನು, ಎಂದು, ನೆನೆದೆಂ- ಭಾವಿಸಿದೆನು, ವಸುಧೆಯೊಳ್, ಎನ್ನ, ಪೋಲ್ವ- ಸರಿಹೋಲುವ, ಗಾಂಪರುಂ- ಮೂಢರೂ, ಒಳರೆ- ಇರ್ಧಾರೆಯೇ? ... ... ... ... ॥೩೨॥

ಅತರ್ಕ್ಯಮಹಿಮಾಬ್ಧಿ- ಊಹಿಸುವದಕ್ಕಶಕ್ಯವಾದ ಮಹತ್ವಕ್ಕೆ ಸಮುದ್ರನಾದ ಮಾರಯ್ಯನೇ ! ಎನಗೆ, ಗತಿಯುಂ- ಪ್ರಾಪ್ಯಸ್ಥಾನವೂ, ಮತಿಯುಂ- ಬುದ್ಧಿಯೂ, ಹಿತನುಂ- ಆಪ್ತನೂ, ಪಿತನುಂ- ತಂದೆಯೂ, ಗುರುಸಂಗಮೇಶನುಂ, ನೀನೆ; ಎನ್ನ, ಅತಿಶಯಶತಾಪರಾಧಮಂ, ಮರೆದು, ಎನ್ನಂ, ಪಾಲಿಪುದು. ... ... ... ... ... ... ॥೩೩॥

ಎಂದು, ಅಭಯಮುಮಂ, ಬೇಡಿ, ಭಯಭಕ್ತಿಯಿಂದೆ, ಅಡಿಗೆ, ಎರಗಿ, ಇರ್ದ, ಬಸವನಂ, ಮಾರಿದೇವಂ, ಕಾರುಣ್ಯದಿಂ, ನೋಡಿ, ತೆಗೆದು, ಎತ್ತಿ, ಬಿಗಿಯಪ್ಪಿ, ಸಮುಚಿತವಿನಯಮುಮಂ, ಮೆರೆದು- ಪ್ರಕಾಶಪಡಿಸಿ, ಮ

ಕಾರುಣ್ಯದಿಂ ನೋಡಿ ತೆಗೆದೆತ್ತಿ ಬಿಗಿದಪ್ಪಿ ಸಮುಚಿತವಿನಯಮಂ ಮೆರೆದು ಮನ್ನಿಸಿ ನಿಜಕೃಪಾಸುಧಾತರಂಗಿಣಿಯೊಳವಗಾಹಂಗೆಯ್ಸಿ ॥ * * * * * * * * *

ಕಂ ॥ ಸರಸಮಧುರೋಕ್ತಿಯಿಂ ಬಸ । ವರಸನ ಬಗೆಗಿತ್ತು ಮುದಮನೆಂದಿನ ತೆರದಿ ॥ ಗುರುಮೋಳಿಗೆಮಾರಯ್ಯಂ । ಕರುಣಾನಿಧಿ ಭಕ್ತಜನಯುತಂ ಸುಖಮಿರ್ದಂ ॥೩೪॥

ವ ॥ ಅನಂತರಂ ॥ ಮ॥ ಸ್ರ॥ ನಲವಿಂದಂ ಮಾರಿದೇವಂಗೆರಗಿ ನುತಿಸಿ ಬೀಳ್ಕೊಂಡು ಹೃತ್ಪದ್ಮದೊಳ್ತದ್ವಿಲಸತ್ಸಾಮರ್ಥ್ಯಮಂ ಭಾವಿಸುತೆಪೊಗಳುತಂ ಭಕ್ತಸಂದೋಹದೊಳ್ನಿರ್ಮಲಚಿತ್ತಂ ಭಕ್ತಿಯುಕ್ತಂ ನಿರುಪಮಮಹಿಮಂ ಭವ್ಯಸೇವ್ಯಂ ಭವೌಘಾ । ಜಲಶಂಬಂ ಬಂದು ಪೊಕ್ಕಂ ನಿಜಗೃಹಮನವಂ ಶೈವವಿದ್ಯಾಸಮುದ್ರಂ ॥ ... ॥೩೫॥

ಕಂ॥ ರವೆಗೆಸೆವ ಮೋಳಿಗಯ್ಯನ । ಮಿಸುಪ ಚರಿತ್ರಮನಪಾಪ ನೋದುವ ನಾವಂ ॥ ಪಸರಿಸಿ ಕೇಳ್ವ ನವಂಗೆ । ಲ್ಲಸಮಾಕ್ಷಂ ಮಾಳ್ಪ ನಭಿಮತಾರ್ಥಮನನಿಶಂ ॥ ॥೩೬॥

ಲಲಿತಪದವೃತ್ತಂ ॥ ಗೂಢಶಿವತತ್ವನಿಧಿ ಗೂಢಪದಕಂಕಣ ನಿಗೂಢಶಿವಮಂತ್ರಪರಿಲೀಢಶಿವಶಾಸ್ತ್ರ । ರೂಢಮತಿಸಂಯುತ ಸಮೂಢಘನಸಾರರುಚಿ ಮೂಢಮತಿವರ್ಜಿತನ

---

ನ್ನಿಸಿ, ನಿಜಕೃಪಾಸುಧಾತರಂಗಿಣಿಯೊಳ್- ತನ್ನ ದಯೆಯೆಂಬ ಅಮೃತದ ಹೊಳೆಯಲ್ಲಿ, ಅವಗಾಹಂಗೆಯ್ಸಿ- ಮುಳುಗಿಸಿ. * * * * * * * * * * * * * * * * *

ಕರುಣಾನಿಧಿ, ಮೋಳಿಗೆಮಾರಯ್ಯಂ, ಸರಸಮಧುರೋಕ್ತಿಯಿಂ- ಮನೋಹರವಾಗಿ ಕಿವಿಗಿಂಪಾದ ಮಾತಿನಿಂದ, ಬಸವರಸನ, ಬಗೆಗೆ- ಮನಸ್ಸಿಗೆ, ಮುದಮಂ, ಇತ್ತು, ಎಂದಿನತೆರದಿಂ- ಯಥಾರೀತಿಯಾಗಿ, ಭಕ್ತಜನಯುತಂ- ಭಕ್ತರೊಡನೆ ಕೂಡಿ, ಸುಖಂ- ಸೌಖ್ಯವಿಶಿಷ್ಟನಾಗಿ, ಇರ್ದಂ. ... ॥೩೪॥

ನಿರ್ಮಲಚಿತ್ತಂ, ಭಕ್ತಿಯುಕ್ತಂ? ನಿರುಪಮಮಹಿಮಂ- ಎಣೆಯಿಲ್ಲದ ಮಹತ್ವವುಳ್ಳ, ಭವ್ಯಸೇವ್ಯಂ- ಮಂಗಳಾನ್ವಿತರಿಂದ ಸೇವಿಸಲ್ಪಡುವದಕ್ಕೆ ಯೋಗ್ಯನಾದ, ಭವೌಘಾಜಲಶಂಬಂ- ಪಾಪಸಮೂಹವೆಂಬ ಬೆಟ್ಟಕ್ಕೆ ವಜ್ರಾಯುಧನಾದ, ಶೈವವಿದ್ಯಾಸಮುದ್ರಂ- ಶಿವಸಂಬಂಧವಾದ ವಿದ್ಯೆಗಳಿಗೆ ಸಮುದ್ರರೂಪನಾದ, ಅವಂ- ಆ ಬಸವೇಶ್ವರನು, ನಲವಿಂದಂ- ಸಂತೋಷದಿಂದ, ಮಾರಿದೇವಂಗೆ, ಎರಗಿ, ಬೀಳ್ಕೊಂಡು- ಕಳುಹಿಸಿಕೊಂಡು, ಹೃತ್ಪದ್ಮದೊಳ್, ತದ್ವಿಲಸತ್ಸಾಮರ್ಥ್ಯಮಂ- ಆ ಮಾರಯ್ಯನ ಪ್ರಕಾಶಿಸುವ ಕಾರ್ಯವನ್ನು, ಭಾವಿಸುತೆ- ಯೋಚಿಸುತ್ತ, ಭಕ್ತಸಂದೋಹದೊಳ್, ಪೊಗಳುತಂ, ಬಂದು, ನಿಜಗೃಹಮಂ, ಪೊಕ್ಕಂ. ॥೩೫॥

ರವೆಗೆ- ಭೂಮಿಯಲ್ಲಿ, ಎಸೆವ, ಮೋಳಿಗಯ್ಯನ, ಮಿಸುಪ, ಚರಿತ್ರಮಂ, ಅಪಾಪಂ, ಓದುವಂ, ಆವಂ, ಪಸರಿಸಿ, ಕೇಳ್ವಂ, ಅವಂಗೆ, ಅಸಮಾಕ್ಷಂ- ವಿಷಮವಾದ ನೇತ್ರವುಳ್ಳವನು, ಒಲ್ದು, ಅನಿಶಂ- ಯಾವಾಗಲೂ, ಅಭಿಮತಾರ್ಥಮಂ- ಇಷ್ಟಾರ್ಥವನ್ನು, ಮಾಳ್ಪಂ- ಉಂಟುಮಾಡುವನು. ... ॥೩೬॥

ಗೂಢಶಿವತತ್ವನಿಧಿ— ಗುಪ್ತವಾದ ಶಿವನ ತತ್ವಗಳೆಂಬ ನಿಕ್ಷೇಪಕ್ಕೆ ರಹಸ್ಯಸ್ಥಾನನಾದ, ಪದಕಂಕಣನಿಗೂಢಶಿವಮಂತ್ರ- ಚರಣಕಟಕದಲ್ಲಿ ನೆಲೆಗೊಂಡಿರುವ ಶಿವಮಂತ್ರವುಳ್ಳ, ಪರಿಲೀಢಶಿವಶಾಸ್ತ್ರ— ಪರಿಲೀಢ- ಆಸ್ವಾದಿಸಲ್ಪಟ್ಟ ( ಎಂದರೆ ಅಭ್ಯಸಿಸಲ್ಪಟ್ಟ, ) ಶಿವಶಾಸ್ತ್ರ- ಶಿವಸಂಬಂಧವಾದ ಶಾಸ್ತ್ರಗಳುಳ್ಳ, ಆರೂಢಮತಿಸಂಯುತ- ಅಭಿವೃದ್ಧವಾದ ಬುದ್ಧಿಯಿಂದಕೂಡಿದ, ಸಮೂಢಘನಸಾರರುಚಿ- ಗುತ್ತೆಹಾಕಲ್ಪಟ್ಟ ಪಚ್ಚಕರ್ಪೂರದ ಕಾಂತಿಯಂತಿರುವಕಾಂತಿಯುಳ್ಳ, ಮೂಢಮತಿವರ್ಜಿತ- ಮೂರ್ಖಬುದ್ಧಿಯುಳ್ಳವರಿಂದ ಬಿಡಲ್ಪಟ್ಟ, ನವ್ರೋಢ ಸುರಸೇವ್ಯ- ಹೊಸದಾಗಿ ಮದುವೆಮಾಡಿಕೊಂಡಿರುವ ದೇವತೆಗಳಿಂದ ಸೇವಿಸಲ್ಪಡುವದಕ್ಕೆ ಯೋಗ್ಯನಾದ, ಗಾಢರಿಪುಷಡ್ವರ್ಗಹರ- ಸಾಂದ್ರವಾದ ಅರಿಷಡ್ವರ್ಗಗಳನ್ನು ನಾಶಮಾಡಿದ, ಬಾಢದು

ವ್ರೋಢ ಸುರಸೇವ್ಯ ॥ ಗಾಢರಿಪುವರ್ಗಹರ ಬಾಢದುರಿತಾರ್ದನ ಸದೂಢವೃಢ ಶಶ್ವದವಗಾಢ
ಶಿವಧರ್ಮ್ರ।ಪ್ರೌಢಬುಧನುತ್ಯ ದೃಗಪ್ರೋಢಭವ ರಕ್ಷಿಪುದುರೂಢಶಶಿಭೃನ್ಮತನಿರೂಢಬಸವೇಶ ॥

ಲಲಿತಪದವೃತ್ತಂ ॥ ಸ್ವರ್ಣಗಿರಿಮಂದಿರೆ ಸುವರ್ಣರುಚಿಭಾಸುರೆ ಸುಪರ್ಣರಥವಂದಿ
ತೆ ಯಜುರ್ನುತಪದಾಬ್ಜೇ । ತೂರ್ಣಗಸಖೇಕ್ಷಣೆ ವಿಕೀರ್ಣಮದಿರಾಮದವಿಘೂರ್ಣಿತವಿಲೋ
ಚನೆ ಸದುರ್ಣಯದುರೀಹೋ ॥ ದೀರ್ಣದನುಜಾತಹರೆ ಕರ್ಣರಿಪುರೋಪದೆ ಗುಣಾರ್ಣವ
ಶಿವೈಕ್ಯಮತನಿರ್ಣಯಧುರೀಣೇ । ಪೂರ್ಣಗುಣಭೂಷಣೆ ವಿತೀರ್ಣಭುವನವ್ರಜೆ ಸುಕರ್ಣೆ
ಪರಿಪಾಲಿಪುದಪರ್ಣೆ ಬಿಡದೆನ್ನಂ ॥ ... ... ... ... ॥೩೮॥

ರಿತಾರ್ದನ- ಶೀಘ್ರವಾಗಿ ಪಾಪಸಂನಾಶಪಡಿಸುವ, ಸದೂಢವೃಢ- ಸನಿನಾಡೇನವಾಗಿಹೊರಲ್ಪಟ್ಟ ಈ
ಶ್ವರನುಳ್ಳ, ಶಶ್ವದವಗಾಢಶಿವಧರ್ಮ- ಬಾರಿಬಾರಿಗೂ ಚಿಂತನೆಮಾಡಲ್ಪಟ್ಟ ಈಶ್ವರಧರ್ಮವುಳ್ಳ;ಪ್ರೌಢಬುಧನು
ತ್ಯ- ಕುಶಲರಾದ ವಿದ್ವಾಂಸರಿಂದ ಸ್ತೋತ್ರಮಾಡಿಸಿಕೊಳ್ಳಲ್ಪಡುವವರ್ಕೆ ಯೋಗ್ಯನಾದ, ದೃಗಪ್ರೋಢಭ
ವ- ಕಣ್ಣಿನಿಂದ ಬೋಗಲಾಡಿಸಲ್ಪಟ್ಟ ಪಾಪವುಳ್ಳ, ರೂಢಶಶಿಭೃನ್ಮತನಿರೂಢ- ಅಭಿವೃದ್ಧಿಗೊಳಿಸಲ್ಪಟ್ಟವೀ
ರಶೈವಮತವನ್ನುಹೊಂದಿದ ಬಸವೇಶ ! ... ... ... ... ॥೩೭॥

ಸ್ವರ್ಣಗಿರಿಮಂದಿರೆ- ಮೇರುಪರ್ವತವೇ ಮನೆಯಾಗುಳ್ಳ, ಸುವರ್ಣರುಚಿಭಾಸುರೆ– ಚೆನ್ನದಕಾಂತಿಯುಂ
ತಿರುವ ಕಾಂತಿಯಿಂದಪ್ರಕಾಶಿಸುವ, * ಸುವರ್ಣರಥವಂದಿತೆ- ವಿಷ್ಣುವಿನಿಂದ ನಮಸ್ಕರಿಸಲ್ಪಡುವ, ಯ
ಜುರ್ನುತಪದಾಬ್ಜೆ- ಯಜುರ್ವೇದದಿಂದ ಸ್ತೋತ್ರಮಾಡಲ್ಪಟ್ಟ ಪಾದಕಮಲವುಳ್ಳ ; † ತೂರ್ಣಗಸಖೇಕ್ಷಣೆ-
ಅಗ್ನಿಯೇನೇತ್ರವಾಗುಳ್ಳ, ವಿಕೀರ್ಣಮದಿರಾಮದವಿಘೂರ್ಣಿತವಿಲೋಚನೆ— ವಿಕೀರ್ಣ- ಚಂಚಲವಾದ, ಮ
ದಿರಾ- ಮದ್ಯಪಾನದ, ಮದ- ಗರ್ವದಿಂದ, ವಿಘೂರ್ಣಿತ- ತಿರುಗಿಸಲ್ಪಟ್ಟ, ವಿಲೋಚನೆ- ನೇತ್ರವುಳ್ಳ, ಸದು
ರ್ಣಯದುರೀಹೋದೀರ್ಣದನುಜಾತಹರೆ— ಸದುರ್ಣಯ- ಕೆಟ್ಟನೀತಿಯಿಂದಕೂಡಿದ, ದುರೀಹ- ದುರಾಸೆಯು
ಳ್ಳ, ಉದೀರ್ಣ- ಉತ್ಕೃಷ್ಟರಾದ, ದನುಜಾತ- ರಾಕ್ಷಸರನ್ನು, ಹರೆ- ನಾಶಮಾಡಿದ, ಕರ್ಣರಿಪುರೋಪದೆ—
ಕರ್ಣರಿಪು- ಅರ್ಜುನನಿಗೆ, ರೋಪದೆ- ಬಾಣವನ್ನುಕೊಟ್ಟ, ಗುಣಾರ್ಣವಶಿವೈಕ್ಯಮತನಿರ್ಣಯಧುರೀಣೆ—
ಗುಣಾರ್ಣವ– ಸದ್ಗುಣಗಳಿಗೆ ಸಮುದ್ರರಾದ, ಶಿವೈಕ್ಯ- ಶಿವನೊಡನೆ ಅಭಿನ್ನತೆಯಂ ಹೊಂದಿದವರ, ಮತ-
ಸಮಯವನ್ನು, ನಿರ್ಣಯ- ಸಿದ್ಧಾಂತಮಾಡುವುದರಲ್ಲಿ, ಧುರೀಣೆ- ಸಮರ್ಥಳಾದ, ಪೂರ್ಣಗುಣಭೂಷಣೆ-
ಸಂಪೂರ್ಣವಾದ ಸದ್ಗುಣಗಳೇ ಆಭರಣವಾಗುಳ್ಳ, ವಿತೀರ್ಣಭುವನವ್ರಜೆ- ವಿಸ್ತರಿಸಲ್ಪಟ್ಟ ಲೋಕಸಮುದಾ
ಯವುಳ್ಳ, ಸುಕರ್ಣೆ- ಸವಿಾಚೀನವಾದ ಕಿವಿಯುಳ್ಳ, ಅಪರ್ಣೆ! ಬಿಡದೆ, ಎನ್ನಂ, ಪರಿಪಾಲಿಪುದು. ॥೩೮॥

* (ಅವ) ಸುಪರ್ಣ- ಮನೋಹರಗಳಾದ ರೆಕ್ಕೆಯುಳ್ಳ ಗರುಡನೇ, ರಥ- ವಾಹನವಾಗುಳ್ಳವನು, ವಿ
ಷ್ಣು ಅವನಿಂದ, ವಂದಿತೆ. † (ಅವ) ತೂರ್ಣಗ- ವೇಗವಾಗಿ ಸಂಚರಿಸುವವಾಯುವಿನ, ಸಖ- ಸ್ನೇಹಿ
ತ ಅಗ್ನಿ, ಅವನೇ, ಈಕ್ಷಣೆ ? ... ... ... ... ॥೩೮॥

ಹತ್ತೊಂಭತ್ತನೆಯ ಆಶ್ವಾಸವು ಸಂಪೂರ್ಣವು.

ಗದ್ಯಂ॥ ಇದು ವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿ
ನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತ ಭಾಸುರಲ
ಲಾಟಪಟ್ಟಸರಸಜನಮಾನಿತೋಭಯಕವಿತಾವಿಹಾರವ ಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀ
ಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಪೊಳಗೆಮಾರಿದೇವಮಹತ್ವಕಥನಮೇ
ಕೋನವಿಂಶತ್ಯಾಶ್ವಾಸಂ ಪರಿಸಮಾಪ್ತಂ ... ... ... *

ಏಕೋನವಿಂಶತ್ಯಾಶ್ವಾಸಂ ಸಂಪೂರ್ಣಂ.

ಶ್ರೀಃ

ವಿಷ್ಣುಚಕ್ರಪ್ರದಾಯ ಪರಬ್ರಹ್ಮಣೇ ನಮಃ.

ವಿಂಶತ್ಯಾಶ್ವಾಸಂ.

ಕನ್ನದಬ್ರಹ್ಮಯ್ಯಕಥನಂ.

ಕಂ॥ ಶ್ರೀಕುಧರಪತಿಸುತಾಸುಖ | ಮಾಕಂದವಸಂತ ಸಂತಕಾಂತಕ ನಭವಂ ॥
ಲೋಕೇಶಕೇಶವಾದಿದಿ | ವೌಕಃಸ್ತುತ ನೀಗೆ ಸೌಖ್ಯಮಂ ಶಿವಲಿಂಗಂ ॥ ... ॥೧॥

ಕಂ॥ ಆಕಲ್ಯಾಣದೊಳಿರ್ಪಂ | ಶ್ರೀಕಲ್ಯಾಣೇಶವಿಮಳಪದಭಕ್ತ ನಘಾ | ನೀಕವಿರ
ಹಿತಚರಿತ ನ | ಸ್ತೋಕಯಶೋಧವಳಿತಾಶ ನನುಪಮಮಹಿಮಂ ॥ ... ॥೨॥

---

ಶ್ರೀ......ವಸಂತಂ— ಶ್ರೀ- ಷಡ್ಗುಣೈಶ್ವರ್ಯಯುಕ್ತಳಾದ, ಕುಧರಪತಿಸುತಾ- ಪಾರ್ವತಿಯ, ಸುಖ- ಸೌಖ್ಯವೆಂಬ, ಮಾಕಂದ- ಮಾವಿನಮರಕ್ಕೆ, ವಸಂತಂ- ವಸಂತಋತುವಾದ, ಅಂತಕಾಂತಕಂ- ಯಮನಾಶಕನಾದ, ಅಭವಂ, ಲೋಕೇಶಕೇಶವಾದಿದಿವೌಕಃಸ್ತುತಂ— ಲೋಕೇಶ- ಬ್ರಹ್ಮ, ಕೇಶವ- ವಿಷ್ಣು, ಇವರುಗಳೇ, ಆದಿ- ಮೊದಲಾದ, ದಿವೌಕಃ- ದೇವತೆಗಳಿಂದ, ಸ್ತುತಂ- ಕೊಂಡಾಡಲ್ಪಟ್ಟ, ಶಿವಲಿಂಗಂ, ಸೌಖ್ಯಮಂ, ಈಗೆ. ... ... ... ... ... ॥೧॥

ಆ ಕಲ್ಯಾಣದೊಳ್, ಇರ್ಪಂ- ಇರುವ, ಶ್ರೀಕಲ್ಯಾಣೇಶವಿಮಳಪದಭಕ್ತಂ, ಅಘಾನೀಕವಿರಹಿತಚರಿತಂ- ಪಾಪದಗುಂಪಿನಿಂದಬಿಡಲ್ಪಟ್ಟ ಚರಿತ್ರವುಳ್ಳ, ಅಸ್ತೋಕಯಶೋಧವಳಿತಾಶಂ- ಅಧಿಕವಾದಕೀರ್ತಿಯಿಂದ ಶುಭ್ರವಾಗಿಮಾಡಲ್ಪಟ್ಟ ದಿಕ್ಕುಗಳುಳ್ಳ, ಅನುಪಮಮಹಿಮಂ- ಎಣೆಯಿಲ್ಲದ ಮಹತ್ತ್ವವುಳ್ಳ. ॥೨॥

ಮತ್ತೇ|| ಮದನಾರಾತಿಪದಮುಖ್ಯಭಕ್ತಪದಪೂಜಾಲೋಲ ನೌದಾರ್ಯಶಾ| ಲಿ ದಯಾರಾ
ಶಿ ಮಹಾದ್ಭುತೋನ್ನತಚರಿತ್ರಂ ಸಾರವೀರವ್ರತಾ| ಸ್ಪದ ನುನ್ನಿದ್ರಸುಬೋಧ ನರ್ದ್ವಿಶವಿ
ಮೋಹಂ ಸಂತತಾನಂದಿ ಕನ್ನಡಬೊಮ್ಮಯ್ಯನವಂಚಕಪ್ರಥಿತಸಮ್ಯಗ್ಜಂಗಮಾರಾಧಕಂ|

ಕಂ|| ವಿತತಬಹಿರಂತರರ್ಚನ| ಚತುರಂ ಜಂಗಮಸಮರ್ಪಿತಾಂಗಧನಪ್ರಾಣಾ|| ರ್ಥತ
ತಿ ಜಿತಮಾಯ ನಮಳನ| ಮತಿ ಶಿವಲಿಂಗಾಭಿಮಾನಮಾನಿತವಿಭವಂ|| ... ||೪||

ವ|| ಎನಿಸಿ ರಂಜಿಸಿ| ಮತ್ತೇ|| ಬಳಪಂ ಕತ್ತಿಗೆ ಚೆಂಡು ಕರ್ತರಿ ಮಣಲ್ ಮು
ಳ್ಮಾನಸೂತ್ರಾಂಕುಶಂ ಸೆಳೆ ಗೋಲಕ್ಷತೆ ನಾರಸಂ ಪವನವಸ್ತ್ರಂ ರುದ್ರಭೂಭೂತಿನಾ|
ಯ್ಗಳ ಬಾಯ್ಗಟ್ಟ ನಮುದ್ದದೃಶ್ಯತಿಲಕಂ ಧುತ್ತೂರಬೀಜಾಳಿಕಾ| ಕಳಿ ಮಣ್ಣಿವಳ
ಮಂಜನಂ ಭ್ರಮರಪೂರ್ಣೋದ್ಯತ್ಕರಂಡೌಷಧಂ|| ... ... ||೫||

ಕಂ|| ಒಂದಟ್ಟೆಯ ಕೆರ್ಪಂ ನಲ| ವಿಂದಂ ಮೆಟ್ಟುತ್ತೆ ನೀಲಿಗಪ್ಪಡಮುಡಿ ಚೆ||
ಲ್ವೊಂದಿರೆ ಸಾಧನಮಿಂದ ನೋ| ರಂದದೆ ಕೈಕೊಂಡು ಗಾಢಮಿರದೊಳ್ಪಧಟಂ|| ... ||೬||

---

ಮದನಾ......ಲೋಲಂ—ಮದನಾರಾತಿ- ಈಶ್ವರನ, ಪದ- ಪಾದದಲ್ಲಿ, ಏಕ- ಮುಖ್ಯವಾದ, ಭಕ್ತ- ಭಕ್ತಿಯುಳ್ಳವರ, ಪದಪೂಜಾ- ಪಾದಪೂಜೆಯಲ್ಲಿ, ಲೋಲಂ- ಆಸಕ್ತನಾದ, ಔದಾರ್ಯಶಾಲಿ- ದಾನಸಂಪನ್ನನಾದ, ದಯಾರಾಶಿ- ಕೃಪೆಯ ಸಮುದಾಯವುಳ್ಳ, ಮಹಾದ್ಭುತೋನ್ನತಚರಿತ್ರಂ- ಅತ್ಯಾಶ್ಚರ್ಯಕರವಾದ ಉತ್ಕೃಷ್ಟವಾದ ನಡತೆಯುಳ್ಳ, ಸಾರವೀರವ್ರತಾಸ್ಪದಂ- ಶ್ರೇಷ್ಠವಾದ ವೀರಶೈವನಿಯಮಕ್ಕಾಶ್ರಯನಾದ, ಉನ್ನಿದ್ರಸುಬೋಧಂ- ವಿಕಸಿತವಾದ ಒಳ್ಳೆಯಜ್ಞಾನವುಳ್ಳ, ಸಂತತಾನಂದಿ- ಯಾವಾಗಲೂ ಸಂತೋಷವುಳ್ಳ, ಅವಂಚಕಪ್ರಥಿತಸಮ್ಯಗ್ಜಂಗಮಾರಾಧಕಂ— ಅವಂಚಕ- ನಿಷ್ಕಪಟಿಗಳಾದ, ಪ್ರಥಿತ- ಪ್ರಸಿದ್ಧರಾದ, ಸಮ್ಯಗ್ಜಂಗಮ- ಒಳ್ಳೆಯಜಂಗಮರನ್ನು, ಆರಾಧಕಂ- ಪೂಜಿಸುವ, ಕನ್ನಡಬೊಮ್ಮಯ್ಯಂ. ||೩||

ವಿತತಬಹಿರಂತರರ್ಚನಚತುರಂ- ಪ್ರಸಿದ್ಧವಾದಬಾಹ್ಯಾಭ್ಯಂತರ ಪೂಜೆಗಳೆರಡರಲ್ಲೂ ಕುಶಲನಾದವನು, ಜಂಗಮಸಮರ್ಪಿತಾಂಗಧನಪ್ರಾಣಾರ್ಥತತಿ- ಜಂಗಮರಿಗೋಸ್ಕರ ಕೊಡಲ್ಪಟ್ಟ, ದೇಹ, ಪ್ರಾಣ, ಧನಗಳ ಸಮುದಾಯವುಳ್ಳವನು, ಜಿತಮಾಯಂ- ಜೈಸಲ್ಪಟ್ಟಮಾಯೆಯುಳ್ಳವನು, ಅಮಳನಮತಿ- ನಿರ್ಮಲವಾದ ಬುದ್ಧಿಯುಳ್ಳವನು, ಶಿವಲಿಂಗಾಭಿಮಾನಮಾನಿತವಿಭವಂ- ಶಿವಲಿಂಗದಲ್ಲಿಡಲ್ಪಟ್ಟ ಅಭಿಮಾನವೆಂಬ ಸನ್ಮಾನ ಮಾಡಲ್ಪಟ್ಟ ವೈಭವವುಳ್ಳವನು. ... ... ... ... ... ||೪||

ಬಳಪಂ- ಬಳಾಪು, ಕತ್ತಿಗೆ, ಚೆಂಡು, ಕರ್ತರಿ, ಮಣಲ್, ಮುಳ್, ಮಾನಸೂತ್ರಾಂಕುಶಂ- ಅಳತೆ ದಾರಕ್ಕೆ ಕಟ್ಟಿರುವ ಡೊಂಕಾದ ಆಯುಧ, ಸೆಳೆಗೋಲ್- ಸಿಕ್ಕಿಸಿಕೊಳ್ಳುವ ಕೋಲು, ಅಕ್ಷತೆ, ನಾರಸಂ- ಆಯುಧವಿಶೇಷ, ಪವನವಸ್ತ್ರಂ- ಗಾಳಿಬಟ್ಟೆ, ರುದ್ರಭೂಭೂತಿ— ಸ್ಮಶಾನದವಿಭೂತಿ, ನಾಯ್ಗಳ, ಬಾಯ್ಗಟ್ಟನ- ಸದ್ದುಮಾಡದಂತೆ ಬಾಯನ್ನು ಬಂಧಿಸುವ ಔಷಧ, ಅದೃಶ್ಯತಿಲಕಂ- ನೊತ್ತೊಬ್ಬರಕಣ್ಣಿಗೆ ತನ್ನನ್ನು ಕಾಣದಂತೆಮಾಡುವ ಕಪ್ಪಿನಬೊಟ್ಟು, ಧುತ್ತೂರಬೀಜಾಳಿ- ದತ್ತೂರಿಯ ಬೀಜದರಾಶಿ, ಕಾಶ್ಮೀರ ಕೋಗಿಪಳಂ- ಕವಣೆಯಕಲ್ಲು, ಅಂಜನಂ- ಕಪ್ಪು, ಭ್ರಮರಪೂರ್ಣೋದ್ಯತ್ಕರಂಡೌಷಧಂ- ತುಂಬಿಗಳಿಂದ ಸಂಪೂರ್ಣವಾದ ಭರಣಿಯ ಔಷಧ. ... ... ... ... ||೫||

ಒಂದಟ್ಟೆಯ- ಒಂದು ಅಟ್ಟೆಯುಳ್ಳ, ಕೆರ್ಪಂ- ಕೆರವನ್ನು, ನಲವಿಂದಂ- ಸಂತೋಷದಿಂದ, ಮೆಟ್ಟುತ್ತೆ, ನೀಲಿಗಪ್ಪಡದ- ಕಪ್ಪುಬಟ್ಟೆಯ, ಉಡಿ- ಉಟ್ಟುಕೊಳ್ಳುವಿಕೆಯು, ಚೆಲ್ವೊಂದಿರೆ- ಸೌಂದರ್ಯವುಹೊಂದಿರಲು, ಸಾಧನಮಿಂದಂ- ಪೂರ್ವೋಕ್ತಗಳಾದ ಸಹಾಯದ್ರವ್ಯಗಳನ್ನು, ಓರಂದದೆ- ಚೆನ್ನಾಗಿ, ಕೈಕೊಂಡು, ಗಾಢತಿಮಿರದೊಳ್- ದಪ್ಪವಾದ ಕತ್ತಲೆಯಲ್ಲಿ, ಅಧಟಂ- ಪರಾಕ್ರಮದಿಂದ. ... ... ||೬||

ಉತ್ಸಾಹವೃತ್ತಂ ॥ ಯೋಗಚೂರ್ಣಯೋಗವರ್ತಿಯಂ ಕರಾಗ್ರದಲ್ಲಿ ತಾ । ಳ್ದಾಗ
ಳಂತೆ ಬಂದು ವಿತ್ತಮುಳ್ಳರಾಲಯಂಗಳಂ ॥ ರಾಗಿಸುತ್ತೆ ಸಾರ್ದು ಸೊಪ್ಪುಳಾಲಿಸುತ್ತೆ
ನೋಡಿಸು । ಯೋಗಿಸುತ್ತೆ ತಕ್ಕುದೆಲ್ಲವಂ ಕಡಂಗಿ ಜಾಣ್ಮೆಯಿಂ ॥ ... ॥೭॥

ಮ ॥ಸ್ರ॥ ನೆಲಗನ್ನಂ ಗೋಡೆಗನ್ನಂ ಮಿಸುಗುವಗುಳಿಗನ್ನಂ ದೃಢದ್ವಾರಬಂಧ । ಸ್ಥಲ
ದೊಳ್ಗನ್ನಂ ದಲಿಂತೆಂಬವರೊಳದಱೆ ತಕ್ಕಂದದಿಂ ಕನ್ನಮಂ ಕೋ ॥ ಡಿ ಲಸತ್ಸಾಮರ್ಥ್ಯ
ಯುಕ್ತಂ ಪುಗುತೊಳಗದು ಭಕ್ತಾಲಯಂ ಸ್ವೈಜಮಾದಂ । ದೊಲವಿಂದಂ ದೀಪಮಂ
ತಾಂ ಬೆಳಗುತವರ ನೊಲ್ದೆರ್ಬ್ಬಿಸುತ್ತೊಳ್ಪಿನಿಂದಂ ॥ ... ... ... ॥೮॥

ಮ ॥ಸ್ರ॥ ಪದಪಿಂ ತತ್ಪಾದಾಬ್ಜಕ್ಕೆರಗಿ ಗಿರಿಶಸದ್ಭೃತ್ಯಭೃತ್ಯಂ ಪೆಸರ್ಕ । ನ್ನದಬೊ
ಮ್ಮಂ ಬಂದೆ ನಾನೆಂದರುಪಿ ಪಡೆದು ಪಾದಾಂಬುಶೇಷಂಗಳಂ ಸಂ ॥ ಮುದದಿಂದಂ ಸೇವಿಸು
ತ್ತೆಯ್ದುವನದು ಭವಿಗೇಹಂ ದಲಾದಂದು ಬಾರ್ಚು । ತ್ತೊದವಿರ್ದ್ದರ್ಥಂಗಳಂ ಕೊಂಡೆಸೆ
ದು ತಳರ್ದುರ್ ತದ್ವಿತ್ತದಿಂ ಮತ್ತಮಾಗಳ್ ॥ ... ... ... ॥೯॥

ಕಂ ॥ ಬಂದ ಚರಲಿಂಗಮಂ ನಲ । ವಿಂದಂ ಪೂಜಿಸುತೆ ಸುಖದೊಳಿರೆ ಭಕ್ತಂ ಮ ॥
ತ್ತೊಂದು ದಿನಂ ಬಹುಜಂಗಮ । ವೃಂದಂ ಬಂದತ್ತು ತದ್ಗೃಹಕ್ಕೊಲವಿಂದಂ ॥ ... ॥೧೦॥

---

ಯೋಗಚೂರ್ಣಯೋಗವರ್ತಿಯಂ- ಔಷಧದ ಹುಡಿಯಿಂದಕೂಡಿದ ಬತ್ತಿಯನ್ನು, ಕರಾಗ್ರದಲ್ಲಿ, ತಾಳ್ದು, ಆಗಳ್, ಅಂತೆ, ಬಂದು, ರಾಗಿಸುತ್ತೆ, ವಿತ್ತಂಉಳ್ಳರ- ಹಣವಿರುವವರ, ಆಲಯಂಗಳಂ- ಮನೆಗಳನ್ನು, ಸಾರ್ದು- ಹೊಂದಿ, ಸೊಪ್ಪುಳಾಲಿಸುತ್ತೆ- ಶಬ್ದವನ್ನು ಕೇಳುತ್ತ, ನೋಡಿ, ತಕ್ಕುದೆಲ್ಲವಂ- ಯೋಗ್ಯವಾದ ವಸ್ತುಗಳೆಲ್ಲವನ್ನೂ, ಸಂಯೋಗಿಸುತ್ತಂ- ಜೊತೆಗೊಳಿಸುತ್ತ, ಜಾಣ್ಮೆಯಿಂ- ಜಾಣತನದಿಂದ, ಕಡಂಗಿ- ಕುತೂಹಲಪಟ್ಟು. ... ... ... ... ... ॥೭॥

ನೆಲಗನ್ನಂ- ಭೂಮಿಯಲ್ಲಿ ಹಾಕುವಕನ್ನ (ರಂಧ್ರ) ಗೋಡೆಗನ್ನಂ, ಮಿಸುಗುವ, ಗುಳಿಗನ್ನಂ- ಗುಳಿಯಾಗಿ ಹಾಕುವಕನ್ನ, ದೃಢದ್ವಾರಬಂಧಸ್ಥಲದ- ಗಟ್ಟಿಯಾದ ಬಾಗಿಲನೆಲುವಿನಬಳಿಯಲ್ಲಿ ಹಾಕುವ, ಒಳ್ಗನ್ನಂ, ಇಂತೆಂಬವರೊಳ್- ಈಪ್ರಕಾರವಾದವುಗಳಲ್ಲಿ, ಅದಱೆ- ಆಯಾಯಕನ್ನಕ್ಕೆ; ತಕ್ಕ, ಅಂದದಿಂ, ಲಸತ್ಸಾಮರ್ಥ್ಯಯುಕ್ತಂ- ಒಳ್ಳೆಯಶಕ್ತಿಯಿಂಕೂಡಿದಬೊಮ್ಮಯ್ಯನು, ಕನ್ನಮಂ, ಕೋಡಿ, ಒಳಗೆ, ಪುಗುತೆ, ಅದು, ಸ್ವೈಜಂ- ನಿಜವಾಗಿ, ಭಕ್ತಾಲಯಂ ಶಿವಭಕ್ತರ ಮನೆಯು, ಆದಂದು- ಆದಲ್ಲಿ, ದಲ್- ನಿಶ್ಚಯವಾಗಿ, ತಾಂ, ದೀಪಮಂ, ಬೆಳಗುತೆ- ಪ್ರಕಾಶಪಡಿಸುತ್ತ, ಅವರಂ- ಮನೆಯವರನ್ನು, ಒಲ್ದು, ಎರ್ಬ್ಬಿಸುತ್ತೆ, ಒಳ್ಪಿನಿಂದಂ. ... ... ... ... ... ... ॥೮॥

ಪದಪಿಂ, ತತ್ಪಾದಾಬ್ಜಕ್ಕೆ, ಎರಗಿ, ಆಗ, ಗಿರಿಶಸದ್ಭೃತ್ಯಭೃತ್ಯಂ- ಈಶ್ವರನ ಸೇವಕರ ಸೇವಕನು, ಪೆಸರ್- ಹೆಸರು, ಕನ್ನದಬೊಮ್ಮಂ, ಬಂದೆ; ಎಂದು, ಅರುಪಿ- ತಿಳಿಸಿ, ಪಾದಾಂಬುಶೇಷಂಗಳಂ- ಪಾದೋದಕಪ್ರಸಾದಗಳನ್ನು, ಪಡೆದು, ಸಮ್ಮುದದಿಂದಂ- ಸಂತೋಷದಿಂದ, ಸೇವಿಸುತ್ತೆ, ಎಯ್ದುವಂ- ಹೋಗುವನು: ಅದು- ಆನುಗ್ಗಿದಮನೆಯು, ದಲ್- ನಿಶ್ಚಯವಾಗಿ, ಭವಿಗೇಹಂ- ಲಿಂಗಹೀನರಮನೆಯು, ಆದಂದು, ಒದವಿರ್ದ್ದ; ಸೇರಿದ್ದ, ಅರ್ಥಂಗಳಂ ಬಾರ್ಚುತ್ತೆ- ಬಾಚಿಕೊಂಡು, ಕೊಂಡು- ತೆಗೆದುಕೊಂಡು, ಎಸೆದು, ತಳರ್ದು- ಹೊರಟು, ತದ್ವಿತ್ತದಿಂದೆ, ಮತ್ತಂ, ಆಗಳ್. ... ... ... ॥೯॥

ಭಕ್ತಂ, ಬಂದ, ಚರಲಿಂಗಮಂ, ನಲವಿಂದಂ, ಪೂಜಿಸುತೆ, ಸುಖದೊಳ್, ಇರೆ, ಮತ್ತಂ, ಒಂದುದಿನಂ, ಬಹುಜಂಗಮವೃಂದಂ, ಒಲವಿಂದಂ, ತದ್ಗೃಹಕ್ಕೆ, ಬಂದತ್ತು. ... ... ॥೧೦॥

ವ ॥ ಅಂತು ಬರೆ ಕಂಡು ಸಡಗರಂಗೊಂಡು ಬಹುಧನದಿ ನಲ್ಲಹೀಬಹುಳಜಂಗಮಸವ ರ್ಯೆ ಸಾಂಗ ಮಾಗ ಪರಮನೆಯಂ ಕನ್ನಮಿಕ್ಕಿ ಬಹುವಸ್ತುವಂ ತರ್ಪೆ ನೆಂದುಜ್ಜುಗಿಸಿ ಗೃಹ ಮಂ ಪೊರಮಟ್ಟು ರಾಜವೀಧಿಯೊಳ್ಬರ್ಪಾಗ ಇದಿರೊಳ್ಕಂಡುತನಗೆರಗಿ ನುತಿಪ ಬಸವರ ಸನು ನೋಡಿ ॥ * * * * * * * * * * * * * * *

ಮಹಾಸ್ರ ॥ ಚರವೃಂದಂ ಬಂದು ಬಿಂದೆನ್ನಯ ಗೃಹಕೆ ವೃಷಾಧೀಶ ತತ್ಪೂಜೆಗು ರ್ವೀ । ಶ್ವರಗೇಹಂಬೊಕ್ಕು ಕನ್ನಂಬಗೆದು ಬಹುಧನಂ ತರ್ಪೆ ನೆಂದೆಯ್ದಿದಂತೆ ॥ ದ್ವಾರಕೋ ಶಾಗಾರವುಂ ತೋರೆನಗೆ ದೊರೆಯದ ನ್ಯಾಲಯಂಬೊಕ್ಕು ತರ್ಕೊ । ತ್ಕರ ವಿಾಗ ಳ್ಪೋ ಪ ಮೇಳ್ಕತ್ತಿಗವಿಡಿ ನಡೆಯೆಂದಾಡಿದಂ ಬೊಮ್ಮಿದೇವಂ ॥ ... ... ॥೧೧॥

ವ ॥ ಎನೆ ಕೇಳ್ದನುಚಿತ ಮಿದೆನ್ನದೆ ಭಕ್ತರೇನೆಂದೊಡಂ ಮಾರ್ನುಡಿಗುಡದ ಭಾಷೆ ಯೆ ತನಗುಂಟಪ್ಪುದರಿಂ ಮಹಾಪ್ರಸಾದಮೆಂದೊಡಗೊಂಡು ಪೋಗಿ ನಿರ್ಭೀತಿಯಿಂ ಮಧ್ಯಾ ಹ್ನದೊಳರಮನೆಯಂ ಪೊಕ್ಕು ಬಹುವಸ್ತುವಿರ್ದ ಭಾಂಡಾಗಾರಮಂ ಬಸವಂ ತೋರ ಲೊ ಡನೆ ತತ್ಕರದೊಳಿರ್ದ ತನ್ನ ಕನ್ನಗತ್ತಿಗೆಯಂ ಕೊಂಡಗುಳಿಗನ್ನಮಂ ಸಮೆದೊಕ್ಕ ಮಣ್ಣ ಪುಡಿಯೆಲ್ಲಂ ಪೊನ್ನ ಪುಡಿಯಾಗುಟರುತ್ತಮಿರೆ ತಳ್ವದೊಳಪೊಕ್ಕು ಮಿಕ್ಕ ಕೆಲವಲದ ಪೇ ಟಿಗೆಯಂ ನೋಡಿ ತೆಗೆದಳುಂಬಂ ಪೊನ್ನಪೊರೆಗಟ್ಟಿಕೊಂಡು ಪೋಪಿನಂ ಕಾಪಿನ ಚರರ್ಕಂ

ಅಂತು, ಬರೆ, ಕಂಡು, ಸಡಗರಂಗೊಂಡು, ಬಹುಧನದಿಂ ಒಲ್ಲವೆ, ಈ ಬಹುಳಜಂಗಮಸಪರ್ಯೆ- ಈ ಹೆ ಚ್ಚಾಗಿರುವಜಂಗಮರಪೂಜೆಯು, ಸಾಂಗಂ- ಸಂಪೂರ್ಣವಾದದ್ದು, ಆಗದು, ಅರಮನೆಯಂ, ಕನ್ನಮಿಕ್ಕಿ, ಬಹುವಸ್ತುವಂ, ತರ್ಪೆಂ, ಎಂದು, ಉಜ್ಜುಗಿಸಿ, ಗೃಹಮಂ- ಮನೆಯದಸಯಿಂದ, ಪೊರಮಟ್ಟು- ಹೊರಟು, ರಾಜವೀಧಿಯೊಳ್, ಬರ್ಪಾಗಳ್, ಇದಿರೊಳ್, ಕಂಡು, ತನಗೆ, ಎರಗಿ, ನುತಿಪ, ಬಸವರಸನಂ, ನೋಡಿ. *

ವೃಷಾಧೀಶ ! ಇಂದು, ಎನ್ನಯ, ಗೃಹಕೆ, ಚರವೃಂದಂ, ಬಂದುದು; ತತ್ಪೂಜೆಗೆ- ಆ ಜಂಗಮರ ಪೂಜೆಗೋಸ್ಕರ, ಕನ್ನಂಬಗೆದು, ಉರ್ವೀಶ್ವರಗೇಹಂಬೊಕ್ಕು- ಅರಮನೆಯಂಗುಗ್ಗಿ, ಬಹುಧನಂತರ್ಪೆಂ- ಬ ಹಳದುಡ್ಡನ್ನು ತರುವೆನು, ಎಂದು, ಎಯ್ದಿದೆಂ- ಬಂದೆನು; ತದ್ವಾರಕೋಶಾಗಾರಮಂ- ಆ ರಾಜನಶ್ರೇಷ್ಠ ವಾದ ಬೊಕ್ಕಸದ ಮನೆಯನ್ನು, ಎನಗೆ, ತೋರ್, ಅನ್ಯಾಲಯಂಬೊಕ್ಕೊಡೆ- ದೊರೆಯುಲ್ಲದೆ ಉಳಿದವರ ಮ ನೆಯುಂನುಗ್ಗಿದರೆ, ಅಪ್ರೋತ್ಕರಂ- ಹೆಚ್ಚಾದಹಣವು, ದೊರೆಯದು- ಸಿಕ್ಕುವದಿಲ್ಲ; ಈಗಂ, ಪೋಪಂ- ಹೋಗೋಣ, ಏಳ್; ಕತ್ತಿಗವಿಡಿ- ಕನ್ನಗತ್ತರಿಯಂಹಿಡಿದುಕೋ, ನಡೆ; ಎಂದು, ಬೊಮ್ಮಿದೇವಂ, ಆಡಿ ದಂ- ಹೇಳಿದನು. ... ... ... ... ... ॥೧೧॥

ಎನೆ, ಬಸವಂ, ಕೇಳ್ದು, ಇದು, ಅನುಚಿತಂ-ಅಯೋಗ್ಯವಾದದ್ದು; ಎನ್ನದೆ, ಭಕ್ತರ್; ಏನೆಂದೊಡಂ, ಮಾರ್ನುಡಿಗುಡದ- ಪ್ರತ್ಯುತ್ತರವಂ ಹೇಳದ, ಭಾಷೆಯು- ಪ್ರತಿಜ್ಞೆಯೇ, ತನಗೆ, ಉಂಟಪ್ಪುದರಿಂ- ಉಂ ಟಾಗಿರುವದರಿಂದ, ಮಹಾಪ್ರಸಾದಂ- ದೊಡ್ಡ ಅನುಗ್ರಹವು, ಎಂದು, ಒಡಗೊಂಡು- ಸಂಗಡ ಕರೆದುಕೊಂ ಡು, ಪೋಗಿ, ನಿರ್ಭೀತಿಯಿಂ, ಮಧ್ಯಂದಿನದೊಳ್- ಮಧ್ಯಾಹ್ನದಲ್ಲಿ, ಅರಮನೆಯಂ, ಪೊಕ್ಕು, ಬಹುವಸ್ತು, ಇರ್ದ, ಭಾಂಡಾಗಾರಮಂ- ಬೊಕ್ಕಸದ ಮನೆಯನ್ನು, ತೋರಲ್, ಒಡನೆ, ತತ್ಕರದೊಳ್- ಬಸವನಕಯ್ಯ ಲ್ಲಿ, ಇರ್ದ, ತನ್ನ, ಕನ್ನಗತ್ತಿಗೆಯಂ- ಕನ್ನಗತ್ತರಿಯನ್ನು, ಕೊಂಡು, ಗುಳಿಗನ್ನಮಂ- ಗುಳಿಯಾಗಿ, ಹಾ ಕುವ ಕನ್ನವನ್ನು, ಸಮೆದು- ಮಾಡಿ, ಒಕ್ಕ- ಸುರಿದ, ಮಣ್ಣ, ಪುಡಿ, ಎಲ್ಲಂ, ಪೊನ್ನ, ಪುಡಿ, ಆಗಿ, ಉದಿರು ತ್ತಿಂ, ಇರೆ, ತಳ್ವದೆ, ಒಳಪೊಕ್ಕು, ಮಿಕ್ಕ, ಕೆಲವಲದ- ಆಚೆ ಈಚೆ ಇರುವ, ಪೇಟಿಗೆಯಂ- ಪೆಟ್ಟಿಗೆಯನ್ನು,

ಡು ಭೂಪ ನಿರ್ದ್ದೆಡೆಗೆ ಸರಭಸಂ ಪರಿದು ಪೋಗಿ ತದ್ವೃತ್ತಾಂತಮನೆಲ್ಲಮಂ ಪೇಳೆ ಕೇ
ಳ್ದು ಬಿಜ್ಜಳಂ ಕೋಪಪ್ರೋಜ್ಜ್ವಳಭೀಷಣೇಕ್ಷಣನಾಗಿ॥ * * * * * * *

ಮತ್ತೇ॥ ಸ್ಥಿರಸತ್ಯವ್ರತನೀಶಭಕ್ತ ನೆನಗಾಪ್ತಂ ಧರ್ಮ್ಮಯುಕ್ತಂ ಗುಣಾ । ಕರನೆಂ
ದಾಂ ಸಕಲಾಧಿಪತ್ಯಪದಮಂ ಕೈಸಾರ್ಚ್ಚಿತಂ ನಂಬಿ ನ ॥ ಚ್ಚಿರೆ ಲೇಸು ನೆಗಳ್ದಂಗಡಾ ಬಸ
ವ ನೇನೆಂಬೆಂ ಪಗಲ್ಬಂದು ತ । ಸ್ಕರರಿಂ ತೋಡಿಸಿ ಕನ್ನಮಂ ಕಳಿಸಿದಂ ಮತ್ಕೋಶವಿ
ತ್ತಂಗಳಂ ॥ ... ... ... ... ... ... ॥೧೨॥

ಉ॥ ಬೇಡಿದೊಡೀಯನೇ ತನಗೆ ಭೂರಿಧನಂಗಳನೇಕೆ ಕನ್ನಮಂ । ತೋಡಿಸಿ ಕೋ
ಶವಿತ್ತತತಿಯಂ ಬರಿಕೆಯ್ದನಕಾರ್ಯಮೆಂಬುದಂ ॥ ನೋಡದೆ ದುರ್ವ್ಯಶಃಸ್ಥಿತಿಗೆ ಭಾಜನನಾ
ದನಜಸ್ರಮಾಂ ಕರಂ । ಮಾಡಿದ ಲೇಸನೊತ್ತರಿಸಿದಂಗಡ ತನ್ನನದೆಂತು ನಂಬುವೆಂ॥೧೩॥

ಕಂ ॥ ಹರಣಂಗೊಳಿಪುದಿವಂಗೆ । ಚ್ಚರಿಯಲ್ತರ್ಥಂ ಬಹಿಶ್ಚರಾಃಪ್ರಾಣಾ ಎಂ ॥ ಬೊ
ರೆಯುಂಟಪ್ಪುದರಿಂ ತ । ಸ್ಕರರಿಂ ಮುದ್ಧನಮಂ ನಿಂತು ಕಳಿಸಿದ ಕತದಿಂ ॥ ... ॥೧೪॥

ವ ॥ ಅದುಕಾರಣದಿಂ ಬಸವಸಚಿವನೊಡನಾಟ ಮೆಮಗೆ ಸಾಲ್ಗುಮೆಂದು ರೋಷಾ

---

ನೋಡಿ, ತಗೆದು, ಅಳುಂಬಂ- ಹೆಚ್ಚಾಗಿ, ಪೊನ್ನ, ಪೊರೆಗಟ್ಟ-ಹೊರೆಯಂ ಕಟ್ಟ, ಕೊಂಡು- ತೆಗೆದುಕೊಂ
ಡು, ಪೋಪಿನಂ- ಹೋಗುತ್ತಿರುವಲ್ಲಿ, ಕಾಪಿನ ಕಾವಲಿನ, ಚರರ್- ಆಳುಗಳು, ಕಂಡು, ಭೂಪನಂ, ಇರ್ದ,
ಎಡೆಗೆ, ಸರಭಸಂ- ವೇಗದಿಂ ಕೂಡಿ, ಪರಿದುಪೋಗಿ- ಓಡಿಹೋಗಿ, ತದ್ವೃತ್ತಾಂತಮಂಎಲ್ಲಮಂ- ಆ ಕನ್ನ
ರವೊಮ್ಮೆಯ್ಯನ ವಾರ್ತೆಯೆಲ್ಲವನ್ನು, ಪೇಳೆ, ಬಿಜ್ಜಳಂ, ಕೇಳ್ದು, ಕೋಪಪ್ರೋಜ್ಜ್ವಳಭೀಷಣೇಕ್ಷಣಂ- ಸಿಟ್ಟ
ನಿಂದ ಪ್ರಕಾಶಿಸುವ ಭಯಂಕರವಾದ ಕಣ್ಣುಳ್ಳವನು. ಆಗಿ. * * * * * * * * *

ಬಸವಂ ಸ್ಥಿರಸತ್ಯವ್ರತಂ- ನಿಶ್ಚಂಚಲವಾದ ಯಾಥಾರ್ಥ್ಯವೇ ನಿಯಮವಾಗುಳ್ಳವನು, ಈಶಭಕ್ತಂ,
ಎನಗೆ, ಆಪ್ತಂ, ಧರ್ಮ್ಮಯುಕ್ತಂ, ಗುಣಾಕರಂ, ಎಂದು, ಆಂ, ಸಕಲಾಧಿಪತ್ಯಪದಮಂ- ಎಲ್ಲದರಮೇಲಣ ಅ
ಧಿಕಾರಸ್ಥಾನವನ್ನು, ಕೈಸಾರ್ಚ್ಚಿತಂ- ಕೈಗೆ ಕೊಟ್ಟು, ನಂಬಿ, ನಚ್ಚಿ, ಇರೆ, ಲೇಸಂ- ಒಳ್ಳೆಯದನ್ನು, ನೆಗ
ಳ್ದಂಗಡ- ಮಾಡಿದನಲ್ಲವೇ ? ಏನೆಂಬೆಂ- ಏನುಹೇಳಲಿ, ಪಗಲ್- ಹಗಲಿನಲ್ಲಿ, ಬಂದು, ತಸ್ಕರರಿಂ- ಕಳ್ಳರಿಂದ,
ಕನ್ನಮಂ, ತೋಡಿಸಿ, ಮತ್ಕೋಶವಿತ್ತಂಗಳಂ- ನನ್ನ ಬೊಕ್ಕಸದ ಹಣವನ್ನು, ಕಳಿಸಿದಂ. ... ॥೧೨॥

ಬೇಡಿದೊಡೆ- ನನ್ನನ್ನು ಯಾಚಿಸಿದರೆ, ತನಗೆ- ಅವನಿಗೆ, ಭೂರಿಧನಂಗಳಂ- ಹೆಚ್ಚಾದ ಹಣವನ್ನು, ಈ
ಯನೇ- ಕೊಡುತ್ತಿದ್ದಿಲ್ಲವೇ ? ಕನ್ನಮಂ, ತೋಡಿಸಿ, ಕೋಶವಿತ್ತತತಿಯಂ, ಬರಿಕೆಯ್ದಂ- ಯಾಕೆ ಶೂ
ನ್ಯವಂ ಮಾಡಿದನು ? ಅಕಾರ್ಯಂ- ಮಾಡಬಾರದು, ಎಂಬುದಂ, ನೋಡದೆ, ದುರ್ವ್ಯಶಃಸ್ಥಿತಿಗೆ, ಭಾಜನಂ- ಪಾ
ತ್ರನು, ಆದಂ; ಅಜಸ್ರಂ- ಯಾವಾಗಳೂ, ಆಂ, ಕರಂ- ಹೆಚ್ಚಾಗಿ, ಮಾಡಿದ, ಲೇಸಂ- ಒಳ್ಳೆಯದನ್ನು ಒ
ತ್ತರಿಸಿದಂಗಡ- ಬಂದುಕಡೆಗೆ ನೂಕಿಬಿಟ್ಟನಲ್ಲವೇ ? ತನ್ನಂ, ಅದೆಂತುನಂಬುವೆಂ- ಹ್ಯಾಗೆ ನಂಬಲಿ ? ॥೧೩॥

ತಸ್ಕರರಿಂ- ಕಳ್ಳರಿಂದ, ಮದ್ಧನಮಂ- ನನ್ನ ಹಣವನ್ನು, ಇಂತು, ಕಳಿಸಿದ- ಕದಿಸಿದ, ಕತದಿಂ- ಕಾರ
ಣದಿಂದ, ಅರ್ಥಾಃ- ದ್ರವ್ಯಗಳು, ಬಹಿಶ್ಚರಾಃ- ಹೊರಗೆ ಸಂಚರಿಸುವ, ಪ್ರಾಣಾಃ- ಪ್ರಾಣಗಳು, ಎಂಬ,
ಒರೆ- ಮಾತು, ಉಂಟಪ್ಪುದರಿಂ- ಉಂಟಾಗಿರುವದರಿಂದ, ಇವಂಗೆ- ಈ ಬಸವನಿಗೆ, ಹರಣಂಗೊಳಿಪುದು-ಪ್ರಾ
ಣವಂ ತೆಗೆಯಿಸುವದು, ಅಚ್ಚರಿಯಲ್ತು. .. ... ... ... ॥೧೪॥

ಅದುಕಾರಣದಿಂ, ಬಸವಸಚಿವನ, ಒಡನಾಟಂ- ಸಹವಾಸವು, ಎಮಗೆ, ಸಾಲ್ಗುಂ- ಸಾಕು; ಎಂದು, ಆ
ವಂ ಬಿಜ್ಜಳನು, ರೋಷಾವೇಶನಿರ್ಯದನಲಕಣಕಟಾಕ್ಷಂ- ಕೋಪದ ಪ್ರವೇಶದಿಂದ ಹೊರಕ್ಕೆ ಹೊರಡುತ್ತಿ

ವೇಶನಿರ್ಲ್ಯವನಲಕ್ಷಣಕಟಾಕ್ಷನಾಗಿ ಭಾಂಡಾಗಾರದೆಡೆಗೇಳ್ತಂದು ಕನ್ನಂದೆಗೆದ ತಾಣಮುಮನಾ ಣದನು ನಿಂದುನಿರೀಕ್ಷಿಸಿದಾಗಳ್ ॥ * * * * * * * * * * *

ಕಂ ॥ ಇದು ಶರಣಚರಣಕನಕಾ । ಬ್ಜದ ರಜ ಮೊರ್ಗುಡಿಸಿತೆನಿಸಿ ಕೋಶಶ್ರೀಯಂ ॥
ಗದ ಕುಂಕುಮರಜ ಮುದಿರ್ದಾವ್ರೊ । ಒದವಿದ ನವಕನಕರಜ ಮಿದೇಂ ರಂಜಿಸಿತೋ ॥೧೫॥

ವ ॥ ಅಂತೆಸೆದು ಪರಿದು ಪಸರಿಸಿದ ಕನಕರಜೋರಾಜಿಯಂ ರಾಜೇಂದ್ರ ನಭೀಕ್ಷಿಸಿ ಕೋಪಮನುಳಿದು ವಿಸ್ಮಯಾಂತಃಕರಣನಾಗಿ ತಲೆಯಂ ತೂಗಿ ಬಸವನಂ ಬರಿಸಿ ॥ *

ಕಂ ॥ ಏನಿದು ವಿಚಿತ್ರತರ ಮಿದು । ದೀನೆಲದೊಳಗೊಕ್ಕ ಕನಕರಜ ಮೆತ್ತಣದಿಂ ॥
ತೇನೆಸಗಿದೆ ಪೇಳೆನಗೆ ನಿ । ದಾನಮನೆಲೆಬಸವ ಬಂದ ಚೋರ ನದಾವಂ ॥ ... ॥೧೬॥

ವ ॥ ಎಂದಾನೃಪಂ ಬೆಸಗೊಳೆ ನಸುನಗುತೆ ಬಸವರಸ ನಿಂತೆಂದಂ ॥ * * *

ಕಂ ॥ ವಿದಿತಸುಗುಣಾಂಕ ನೆಲೆ ಭೂ । ಸುದತೀಶ ವಿರಾಜಿಸಿರ್ಪ ನೀಪುರದೊಳ್ಕ ॥
ನ್ನದ ಬೊಮ್ಮನೆಂಬ ನವನ । ಗ್ಗದಮೆಂಪಂ ಪೊಗಳಲೀಶ್ವರಂಗ ಮಶಕ್ಯಂ ॥ ... ॥೧೭॥

ಮತ್ತಂ ॥ ಸುರಭೂಜಂಗಳ ಮೂಲ ಮಾತನಪದಾಂಗುಷ್ಠದ್ವಯಂ ಸಾರಸ । ರ್ಜ್ಜರ
ಧೇನುವ್ರಜಜನ್ಮಭೂಮಿ ಯವನುದ್ಯದ್ವೀಕ್ಷಣಂ ದಿವ್ಯಭಾ ॥ ಸುರಚಿಂತಾಮಣಿಗೇಹ ಮಾ

---

ರುವ ಬೆಂಕಿಯ ಕಿಡಿಯುಳ್ಳ ಕಡೆಗಣ್ಣುಳ್ಳವನು, ಆಗಿ, ಭಾಂಡಾಗಾರದ, ಎಡೆಗೆ, ಏಳ್ತಂದು, ನಿಂದು, ಕನ್ನಂದೆಗೆದ, ತಾಣಮುಂ-ಸ್ಥಾನವನ್ನು, ಮಾಣದೆ- ತಪ್ಪದೆ, ನಿರೀಕ್ಷಿಸಿದಾಗಳ್. * * * * * * * *

ಒದವಿದ, ನವಕನಕರಜಂ- ಹೊಸಚಿನ್ನದಹುಡಿಯು, ಇದು, ಶರಣಚರಣಕನಕಾಬ್ಜದ- ಶಿವಶರಣರಪಾದವೆಂಬ ಸುವರ್ಣಕಮಲದ, ರಜಂ- ಧೂಳಿಯು, ಒರ್ಗುಡಿಸಿತು- ರಾಶಿಯಾಯ್ತು, ಎನಿಸಿ, ಕೋಶಶ್ರೀಯ- ಬೊಕ್ಕಸದ ಲಕ್ಷ್ಮಿಯು, ಅಂಗದ, ಕುಂಕುಮರಜಂ, ಉದಿರ್ದ್ಪೊಲ್, ಅದು- ಆ ಚಿನ್ನದಹುಡಿಯು, ಏಂ ರಂಜಿಸಿತೋ ? ... ... ... ... ... ... ॥೧೫॥

ಅಂತು, ಎಸೆದು, ಪರಿದು, ಪಸರಿಸಿದ, ಕನಕರಜೋರಾಜಿಯಂ, ರಾಜೇಂದ್ರಂ, ಅಭೀಕ್ಷಿಸಿ, ಕೋಪಮಂ, ಉಳಿದು, ಸವಿಸ್ಮಯಾಂತಃಕರಣಂ- ಆಶ್ಚರ್ಯದಿಂಕೂಡಿದಮನಸ್ಸುಳ್ಳವನು, ಆಗಿ, ತಲೆಯಂ, ತೂಗಿ, ಬಸವನಂ, ಬರಿಸಿ-ಬರಮಾಡಿ. * * * * * * * * * * * * * *

ಎಲೆಬಸವ ! ಇದುಏಂವಿಚಿತ್ರತರಂ- ಇದೇನಾಶ್ಚರ್ಯ ? ಈ ನೆಲದೊಳಗೆ, ಇಡಿದು, ಒಕ್ಕ- ಸುರಿದಿರುವ, ಕನಕರಜಂ, ಎತ್ತಣದು- ಎಲ್ಲಿಯದು? ಇಂತು, ಏಂಎಸಗಿದೆ? ನಿದಾನಮಂ- ಮೂಲಕಾರಣವನ್ನು, ಎನಗೆ, ಪೇಳ್, ಅದಾವಂಚೋರಂ- ಯಾವಕಳ್ಳನು, ಬಂದಂ ? ... ... ... ॥೧೬॥

ಎಂದು, ಆನೃಪಂ, ಬೆಸಗೊಳೆ- ಕೇಳಿಕೊಳ್ಳಲು, ಬಸವರಸಂ, ನಸುನಗುತೆ- ಮೆಲ್ಲನೆನಗುತ್ತ, ಇಂತು, ಎಂದಂ. * * * * * * * * * * * * * * * * *

ಎಲೆಭೂಸುದತೀಶ- ಎಲೈಭೂಕಾಂತಾಪತಿಯಾದವನೇ ! ಈ ಪುರದೊಳ್, ವಿದಿತಸುಗುಣಾಂಕಂ- ಪ್ರಸಿದ್ಧವಾದಸದ್ಗುಣಗಳೇಲಕ್ಷಣವಾಗುಳ್ಳ, ಕನ್ನದಬೊಮ್ಮನೆಂಬಂ, ವಿರಾಜಿಸಿ, ಇರ್ಪಂ, ಅವನ, ಅಗ್ಗದ- ಶ್ರೇಷ್ಠವಾದ, ಮೆಂಪಂ- ಅತಿಶಯವನ್ನು, ಪೊಗಳಲ್- ಹೊಗಳುವದಕ್ಕೆ, ಈಶ್ವರಂಗಂ, ಅಶಕ್ಯಂ. ॥೧೭॥

ಆತನ, ಪದಾಂಗುಷ್ಠದ್ವಯಂ- ಪಾದದಹೆಬ್ಬೆಟ್ಟುಗಳೆರಡೂ, ಸುರಭೂಜಂಗಳ- ಕಲ್ಪವೃಕ್ಷಗಳ, ಮೂಲಂ- ಬುಡವು; ಅವನ, ಉದ್ಯದ್ವೀಕ್ಷಣಂ- ಉತ್ಕೃಷ್ಟವಾದ ನೇತ್ರವು, ಸಾರನಿರ್ಜರಧೇನುವ್ರಜಜನ್ಮಭೂಮಿ- ಶ್ರೇಷ್ಠವಾದಕಾಮಧೇನುಗಳಗುಂಪಿನ ಉತ್ಪತ್ತಿಸ್ಥಾನ; ಆತನ, ಕರಂ, ದಿವ್ಯಭಾಸುರಚಿಂತಾಮಣಿಗೇಹಂ- ಶ್ರೇಷ್ಠವಾದ ಪ್ರಕಾಶಿಸುವ ಚಿಂತಾರತ್ನದಮನೆ; ಆ ದೇವನ, ವಾಣಿ- ಮಾತು, ಸಂಪೂರ್ಣ

ಜನಕರು ಸುಪ್ರಸನ್ನಸುಜ್ಞಾನದಾ । ಕರ ಮಾಹೇಶನವಾಣಿ ಜನ್ಮಗದಭೈಷಜ್ಯಾಶ್ರಯಂ ತತ್ಪದಂ ॥ ... ... ... ... ... ||೧೮||

ಕಂ ॥ ಆತನ ಪಾದಸ್ಪರ್ಶಂ । ಖ್ಯಾತಘನಸ್ಪರ್ಶವೇದಿ ಯಾತನ ಮುನಿಸು ॥ ತ್ಪಾತಲ ಯಕಾಲ ಮಾತನ । ಚೇತೋದಯ ಮುಕ್ತಿಮೂಲಕಾರಣಮರಸ ॥ ... ||೧೯||

ಕಂ ॥ ಅಣಿಮಾದಿಸಿದ್ಧಿಗಳತಿಂ । ತಿಣ ಯವನಂ ಸೇವಿಪರ್ಗೆ ಸುಲಭಂ ಶರಣಾ ॥ ಗ್ರ ಣಿ ಯಿಂತು ಪೆಂಪು ಮಿಗೆ ಸಂ । ದಣಿಸಿರೆಯುಂ ದರೆಯೊಳಸಮಲಿಂಗಸಮರ್ಥಂ ॥...||೨೦||

ಉ॥ ಕನ್ನಮನಿಕ್ಕಿ ತಂದ ಧನದಿಂ ಸಲೆ ಜಂಗಮಪಾದಪೂಜೆಯಂ । ಚೆನ್ನನೆ ಮಾಳ್ಪ ನಂತದು ನಿಜವ್ರತ ಮಾತ್ಮಮಹತ್ತ್ವದಿಂದವಂ ॥ ಪೊನ್ನ ನದೆಂತು ಮಾರ್ಜಿಸ ನಿಳಾಧಿಪ ಕೇ ಳ್ಶಿವಭಕ್ತಿಯೆತ್ತ ಚೌರ್ಯಂನೆಗಳ್ವಂದ ಮೆತ್ತ ಪರಮಾರ್ಥವಿರೋಧಮಿದೆಂಬೆಯಪ್ಪೊಡಂ॥

ಕಂ ॥ ಶಿವಭಕ್ತಿಯುಕ್ತ ನಂಲ್ದೊಡ । ಗುವ ದುಷ್ಕರ್ಮಂ ಸುಕರ್ಮಫಲಮನೆ ಮಾ ಳ್ಕುಂ ॥ ಶಿವಭಕ್ತಿವಿರಹಿತರ್ಗ್ಗದು । ವಿಮರ್ಶೆ ನಿಜಫಲಮನಿಪ್ಪದುಃಖಮ ನೀಗುಂ ||೨೧||

ವ ॥ ಅದುಂತನೆ ॥ ಮತ್ತೀ ॥ ದರೆಯೊಳ್ಧರ್ಮಜನಾದಿ ಜೂದ ನವನೀಸೌಭಾಗ್ಯ ಮಂಪೀಗಿ ಸೋ । ದರಯುಕ್ತಂ ವನವಾಸಿ ಯಾದ ನೆಸಗುತ್ತಾ ಜೂದ ನೆಯ್ದಿರ್ದ್ದ ನೀ ॥

---

ಸುಜ್ಞಾನದ, ಆಕರಂ; ತತ್ಪದಂ- ಅವನಪಾದವು; ಜನ್ಮಗದಭೈಷಜ್ಯಾಶ್ರಯಂ- ಉತ್ಪತ್ತಿಯೆಂಬರೋಗಕ್ಕೆ ಔಷಧಗಳವಾಸಸ್ಥಾನವು. ... ... ... ... ... ||೧೮||

ಅರಸ! ಆತನ, ಪಾದಸ್ಪರ್ಶಂ- ಅಡಿಯ, ಸೋಂಕುವಿಕೆಯು, ಖ್ಯಾತಘನಸ್ಪರ್ಶವೇದಿ- ಪ್ರಸಿದ್ಧವಾದ ಮೋಕ್ಷವಂ ಸೋಂಕುವ ಜಗತಿ, ( ಅಂದರೆ ಮೋಕ್ಷಯಾನ ) ಆತನ, ಮುನಿಸು, ಉತ್ಪಾತಲಯಕಾಲಂ- ಪಾ ನಿರೂಪಕವಾದ ಪ್ರಳಯಕಾಲ; ಆತನ, ಚೇತೋದಯ- ಮನಸ್ಸಿನ ಕೃಪೆಯು, ಮುಕ್ತಿಮೂಲಕಾರಣಂ- ಮೋಕ್ಷಕ್ಕೆ ಆದಿಕಾರಣವು. ... ... ... ... ... ||೧೯||

ದರೆಯೊಳ್, ಅವನ, ಸೇವಿಪರ್ಗೆ, ಅಣಿಮಾದಿಸಿದ್ಧಿಗಳ, ತಿಂತಿಣಿ- ಗುಂಪು, ಸುಲಭಂ- ಸುಖದಿಂದ ಹೊಂದುವದಕ್ಕೆ ಯೋಗ್ಯವಾದದ್ದು; ಅಸಮಲಿಂಗಸಮರ್ಥಂ; ಶರಣಾಗ್ರಣಿ, ಇಂತು, ಪೆಂಪು, ಮಿಗೆ, ಸಂದಣಿಸಿ- ಸೇರಿ, ಇರೆಯುಂ- ಇದ್ದಾಗ್ಯೂ. ... ... ... ... ||೨೦||

ಕನ್ನಮಂ, ಇಕ್ಕಿ, ತಂದ, ಧನದಿಂ, ಸಲೆ, ಜಂಗಮಪಾದಪೂಜೆಯಂ, ಚೆನ್ನನೆ- ಚೆನ್ನಾಗಿ, ಮಾಳ್ಪಂ, ಅಂತು, ಅದು, ನಿಜವ್ರತಂ- ತನ್ನ ಶೀಲವು; ಅವಂ, ಆತ್ಮಮಹತ್ತ್ವದಿಂದೆ, ಪೊನ್ನಂ, ಅದೆಂತುಂ ಅರ್ಜಿಸಂ- ಅದು ಹ್ಯಾಗೂ ಸಂಪಾದಿಸಲೊಲ್ಲನು; ಇಳಾಧಿಪ ! ಕೇಳ್, ಶಿವಭಕ್ತಿ, ಎತ್ತ ? ಚೌರ್ಯಂನೆಗಳ್ವ- ಕಳ್ಳತನವಂ ಮಾಡುವ, ಅಂದು- ರೀತಿಯು, ಎತ್ತ ? ಇದು, ಪರಮಾರ್ಥವಿರೋಧಂ- ಉತ್ಕೃಷ್ಟವಾದ ಪ್ರಯೋಜನಕ್ಕೆ ಪ್ರತಿಷೇಧಕವಾದದ್ದು, ಎಂಬೆಯಪ್ಪೊಡಂ-ಎಂಬದಾಗಿ ಹೇಳುವೆ ಯಾದಾಗ್ಯೂ. ... ||೨೧||

ಶಿವಭಕ್ತಿಯುಕ್ತಂ, ಒಲ್ದು, ಎಸಗುವ, ದುಷ್ಕರ್ಮಂ-ಕೆಟ್ಟಕೆಲಸವು, ಸುಕರ್ಮಫಲಮನೆ-ಒಳ್ಳೆಯಕೆಲಸದಿಂದುಂಟಾಗುವ ಪ್ರಯೋಜನವನ್ನೇ, ಮಾಳ್ಕುಂ; ಅದು-ಆ ದುಷ್ಕಾರ್ಯವು, ವಿಮರ್ಶೆ- ವಿಚಾರಮಾಡಿದರೆ, ಶಿವಭಕ್ತಿವಿರಹಿತರ್ಗೆ, ನಿಜಫಲಂ-ತನ್ನಿಂದುಂಟಾಗುವಪ್ರಯೋಜನವು, ಎನಿಪ್ಪ, ದುಃಖಮುಮಂ, ಈಗುಂ-ಕೊಡುವದು.

ದರೆಯೊಳ್, * ಧರ್ಮಜಂ- ಧರ್ಮರಾಯನು, ಜೂದಂ, ಆಡಿ, ಅವನೀಸೌಭಾಗ್ಯಮಂ- ಭೂಸಂಪತ್ತನ್ನು, ನೀಗಿ- ಕಳೆದುಕೊಂಡು, ಸೋದರಯುಕ್ತಂ- ಸಹೋದರರೊಡನೆಕೂಡಿ, ವನವಾಸಿ, ಆದಂ; ಮೂರ್ಖನಾಥನಿಭು, ಆಜೂದು, ಎಸಗುತ್ತೆ, ಈಶ್ವರನ, ಆವಾಸವ, ಎಯ್ದಿ, ಇರ್ದಂ, ರಾವಂ, ಪೇಂಟಯಿಂ, ಜಾ

---

* ( ಅಥ ) ಧರ್ಮ- ಯಮಧರ್ಮನ ದೆಸೆಯಿಂದ, ಜ- ಹುಟ್ಟಿದವನು. ... ||೨೨||

ಶ್ವರ ನಿವಾಸನು ಮೂರ್ಜ್ಯನಾಥವಿಭು ರಾಮಂ ಬೇಂಟೆಯಿಂ ಜಾನಕೀ | ನಿರಹಾವಸ್ಥೆಯ
ನಾಂತ ನಾಳ್ದನದರಿಂದಂ ಕಣ್ಣಪಂ ಮುಕ್ತಿಯಂ ‖ ... ... ‖೧೩‖

ಆಂ ‖ ಧನವನಿತಾವಿಮೋಹಿತ ರಿಳಾಧಿಪರಂ ದಳಿದರ್ ಕೆಲಂಬ ರಾ | ಘನಥಕಾಮಿನೀ
ತತಿಯ ನೊಂದಿದ ಸೌಂದರ ನಾಳ್ದನಾ ಮಹೇ ‖ ಶನ ಪದಮಂ ತೊರೆದಳ್ದುಡಿ ಪೂಜ್ಯತೆ
ಯಾಳ್ದನಜಂ ಧರಾತಿಪಾ | ವನಚರುತೊಂಡ ನಾಡಿಪುಸಿಯಂ ಪುರವೈರಿಯ ಲೋಕಮ
ಯ್ದಿದಂ .. .. ... ... ... ... ‖೧೪‖

ಮತ್ತೇ‖ ಮುನಿಮಾಂಡವ್ಯ ನೊಡರ್ಚಿ ಹಿಂಸೆಯ ನವಂ ಶೂಲಕ್ಕೆ ಪಕ್ಕಾದನಾ | ಘ
ನಚಂಡೇಶ್ವರ ನಿಕ್ಕಿ ತಂದೆಯ ನುಮಾಧೀಶಪ್ರಸಾದಕ್ಕೆ ಭಾ ‖ ಜನನಾದಂ ಕುರಿಗಳ್ದು ಶೂ
ಲಕಿಳಿದಂ ಕೇಳ್ ಮೃಗಂ ಮಾರ್ಗತಾ | ಡನದಿಂದಂ ಕಲವತ್ತಿ ಭಕ್ತ ನಿಳಿಯೊ ಳ್ಸಾರ್ದಂ ಶಿ
ವಾವಾಸಮಂ ‖ ... ... ... ... ... ... ‖೧೫‖

ಮ ‖ ಸ್ರ ‖ ದರೆಯೊ ಳ್ರಾಜ್ಯಾಂತದೊಳ್ಕೇಳ್ನರಕ ಮವನಿಪರ್ಗೆಂಬ ವೇದೋಕ್ತಿ
ಯಂ ಮಾ |ಣಿಸುತ್ತಂ ಪ್ರಾಜ್ಯಸಾಮ್ರಾಜ್ಯಮ ನಿರದೊಲವಿಂ ಪಾಲಿಸುತ್ತಿರ್ದು ಗೌರೀ ‖
ವರಸಮ್ಯಗ್ಭಕ್ತಿಯಿಂ ಮುಕ್ತಿಯೊಳೊಡವರೆದ ರ್ಚಾರಮಾಧೀಶಚೋಳಾ | ದ್ಯರಣಂ ಕೊ
ರ್ತ್ತೀಶ್ವರಾರ್ಥಂ ನೆಗಳ್ದ ನಿಖಿಲದುಷ್ಕರ್ಮಮುಂ ಶಿಷ್ಟಧರ್ಮಂ ‖ ... ‖೧೬‖

---

ನಕೀನಿರಹಾವಸ್ಥೆಯಂ- ಸೀತೆಯವಿಯೋಗಾವಸ್ಥೆಯನ್ನು, ಆಂತಂ; ಅದರಿಂದಂ- ಆ ಬೇಂಟೆಯಿಂದ, ಕಣ್ಣ
ಪಂ, ಮುಕ್ತಿಯಂ, ಆಳ್ದಂ. ... ... ... ... ‖೧೩‖

ಅಂದು- ಪೂರ್ವದಲ್ಲಿ, ಕೆಲಂಬರ್ ಇಳಾಧಿಪರ್- ಕೆಲವು ರಾಜರು, ಧನವನಿತಾವಿಮೋಹಿತರ್- ಹೊನ್ನು
ಹೆಣ್ಣುಗಳಲ್ಲಿ ಆಸಕ್ತಿಯುಳ್ಳವರಾಗಿ, ಅಳಿದರ್-ನಾಶವಾದರು; ಆಘನಥನಕಾಮಿನೀತತಿಯಂ, ಒಂದಿದ, ಸೌಂ
ದರಂ, ಆಮಹೇಶನ, ಪದಮಂ- ಸ್ಥಾನವನ್ನು, ಆಳ್ದಂ; ಅಜಂ- ಬ್ರಹ್ಮನು, ತೊರೆದಳ್ದುಡಿದು- ಸುಳ್ಳನ್ನು
ಹೇಳಿ, ಅಪೂಜ್ಯತೆಯಾಳ್ದಂ- ಪೂಜಿಸಿಕೊಳ್ಳುವದಕ್ಕೆ ಯೋಗ್ಯನಲ್ಲದಿರುವಿಕೆಯನ್ನು ಹೊಂದಿದನು; ಧರಾತಿ
ಪಾವನಚರುತೊಂಡಂ- ಭೂಮಿಗೆ ಅತಿಪರಿಶುದ್ಧನಾದಭಕ್ತನು, ಪುಸಿಯಂ, ಆಡಿ, ಪುರವೈರಿಲೋಕಮ
ಯ್ದಿದಂ- ಶಿವಲೋಕವಂ ಹೊಂದಿದನು. ... ... ... ... ‖೧೪‖

ಇಳೆಯೊಳ್, ಅವಂ ಮುನಿಮಾಂಡವ್ಯಂ- ಆ ಮಾಂಡವ್ಯನೆಂಬುವನು, ಹಿಂಸೆಯುಂ, ಒಡರ್ಚಿ, ಶೂ
ಲಕ್ಕೆ, ಪಕ್ಕಾದಂ- ಆಸ್ಪದನಾದನು; ಆ ಘನಚಂಡೇಶ್ವರಂ, ತಂದೆಯಂ,ಇಕ್ಕಿ- ಕೊಂದು, ಉಮಾಧೀಶಪ್ರ
ಸಾದಕ್ಕೆ- ಶಿವಾನುಗ್ರಹಕ್ಕೆ, ಭಾಜನಂ- ಪಾತ್ರನು, ಆದಂ; ಶೂದ್ರಿಕಂ, ಕುರಿಗಳ್ದು- ಕುರಿಯಂ ಕದ್ದು,
ಶೂಲಕೆ, ಇಳಿದಂ; ಕಲವತ್ತಿಭಕ್ತಂ, ಮಾರ್ಗತಾಡನದಿಂದಂ- ಮೃಗವಧೆಯಸಂಬಂಧದಿಂದ, ಶಿವಾವಾಸಮಂ,
ಸಾರ್ದಂ. ... ... ... ... ... ... ‖೧೫‖

ಕೇಳ್, ದರೆಯೊಳ್, ಚಾರಮಾಧೀಶಚೋಳಾದ್ಯರ್, ಚಾರಮ ಚೋಳನುಂತಾದ ರಾಜರು, ಅವನಿಪ
ರ್ಗೆ- ದೊರೆಗಳಿಗೆ, ರಾಜ್ಯಾಂತದೊಳ್- ರಾಜ್ಯವನ್ನನುಭವಿಸಿಯಾದಕೊನೆಯಲ್ಲಿ, ನರಕಂ, ಎಂಬ, ವೇದೋಕ್ತಿ
ಯಂ, ಮಾಣಿಸುತ್ತಂ- ತಿರಸ್ಕರಿಸಿ, ಇರದೆ, ಪ್ರಾಜ್ಯಸಾಮ್ರಾಜ್ಯಮಂ- ಬಹುಳವಾದದೊರೆತನವನ್ನು, ಒಲ
ವಿಂ,ಪಾಲಿಸುತ್ತಂ- ಕಾಪಾಡುತ್ತ, ಇರ್ದು, ಗೌರೀವರಸಮ್ಯಗ್ಭಕ್ತಿಯಿಂ- ಶಿವನಚೆನ್ನಾದಭಕ್ತಿಯಿಂದ, ಮು
ಕ್ತಿಯೊಳ್,ಒಡವೆರೆದರ್- ಕೂಡಿದರು; ಅಣಂ,ಸ್ವಲ್ಪವಾಗಿ, ಕೊರ್ತು- ಪ್ರೀತಿಸಿ,ಈಶ್ವರಾರ್ಥಂ- ಶಿವನಿಗೋ
ಸ್ಕರ, ನೆಗಳ್ದ, ನಿಖಿಲದುಷ್ಕರ್ಮಮುಂ- ಕೆಟ್ಟಕೆಲಸವೆಲ್ಲವೂ, ಶಿಷ್ಟಧರ್ಮಂ- ಸತ್ಕಾರ್ಯವು. • ‖೧೬‖

ಮತ್ತೇ ॥ ಇದು ಸತ್ಯಂ ಶಿವಭಕ್ತಸಂತತಿ ಗಧರ್ಮ್ಮೋಧರ್ಮ್ಮತಾಂ ಯಾತಿ ಯೆಂ । ದೊದ
ರುತ್ತಿರ್ದ್ದಪುದು ಶೈವತಂತ್ರ ಮದರಿಂ ಧಾತ್ರೀಶ ಕೇಳೆಮ್ಮ ಕ ॥ ನ್ನಡಬೊಮ್ಮಯ್ಯನ ವೃತ್ತಿ
ಸಾಧುಚರಿತಂ ದುಷ್ಕರ್ಮ್ಮಮಲ್ತಲ್ತು ದು । ರ್ಮ್ಮದಮೋಹಸ್ಪೃಹೆಯಿಲ್ಲ ದಪ್ರತಿಮನಂ ಪೇ
ಳ್ಬಣ್ಣಿಸಲ್ಬರ್ಕುಮೇ ॥ ... ... ... ... ... ॥೨೭॥

ಮ ॥ ಸ್ರ ॥ ಹರಭಕ್ತರ್ಮ್ಮಂದಿರಕ್ಕೇಳ್ತರೆ ಪಗಲಿರುಳೆಂದೆನ್ನದಾವೇಳೆಯೊಳ್ಸಂ ।
ವರಿಸುತ್ತಂ ಬಂದು ಕನ್ನಂದೆಗೆದದು ಶರಣಾವಾಸ ಮಂದಾಗೆ ಸಾರ್ದ್ದಾ ॥ ದರದಿಂ ಕುಂಬಿ
ಟ್ಟು ಪೋಪಂ ಪೆಸರನರುಪುತೆನ್ಯಾಲಯಂ ತಾ ನದಾಗು । ತ್ತಿರೆ ಕೊಂಡರ್ತ್ಥೌಘಮಂ
ತೊಳ್ದವರದುರಿತಮಂ ಧನ್ಯರಂ ಮಾಡಿ ಪೋಪಂ ॥ ... ... ॥೨೮॥

ಚಂ ॥ ನರಪತಿ ನೋಡು ಮುಟ್ಟಡೆಡೆ ಮೆಟ್ಟದ ತಾಣ ಮೊರಲ್ದು ಕನ್ನಮಂ । ಶರಣ
ನೊಡರ್ಚ್ಚಿ ತಳ್ತಳದ ಭಿತ್ತಿಯ ಮಣ್ದೊರೆವೆತ್ತ ಕಾಂತಿಭಾ ॥ ಸುರತರನವ್ಯಹೇಮಮಯ
ಮಾಗಿ ವಿರಾಜಿಪ್ಪುದಿಂತಿದಲ್ತೆ ತ । ದ್ಗುರುವಿಳಸನ್ಮಹತ್ವಕೆ ನಿದರ್ಶನ ಮುರ್ವ್ವಿಯೊಳದ್ಭು
ತಾಸ್ಪದಂ ॥ ... ... ... ... ... ... ॥೨೯॥

ಕಂ ॥ ಇಂತತುಳಮಹಿಮೆಯುಳ್ಳಂ । ಗೆಂತುಂ ದುರ್ಲ್ಲಭ ಮದಾವು ದಾತಂ ನಿನ್ನಂ ॥
ಸಂತಸವೆ ಸಲಪ ಲೆಯ್ದಿದ । ನಂತಲ್ಲದೆ ಬಂದ ನಲ್ತು ವಿತ್ತಸ್ಪೃಹೆಯಿಂ ॥ ... ॥೩೦॥

---

ಇದು, ಸತ್ಯಂ; ಶಿವಭಕ್ತಸಂತತಿಗೆ, ಅಧರ್ಮಃ- ಕೆಟ್ಟಧರ್ಮವು, ಧರ್ಮತಾಂ- ಸದ್ಧರ್ಮತ್ವವನ್ನು, ಯಾತಿ- ಹೊಂದುತ್ತೆ; ಎಂದು, ಶೈವತಂತ್ರಂ- ಶೈವಾಗಮವು, ಒದರುತ್ತೆ- ಕೂಗುತ್ತ, ಇರ್ದಪುದು; ಅದರಿಂ, ಧಾತ್ರೀಶ! ಕೇಳ್, ಎಮ್ಮ, ಕನ್ನದಬೊಮ್ಮಯ್ಯನ, ವೃತ್ತಿ- ನಡತೆಯು, ಸಾಧುಚರಿತಂ- ಸತ್ಪುರುಷರನಡತೆಯು, ದುಷ್ಕರ್ಮಂ, ಅಲ್ತು, ಅಲ್ತು; ದುರ್ಮದಮೋಹಸ್ಪೃಹೆ- ಕೆಟ್ಟಅಹಂಕಾರ ಅಜ್ಞಾನ ಆಸೆಗಳು, ಇಲ್ಲದ, ಅಪ್ರತಿಮನಂ- ಅಸದೃಶನಾದವನನ್ನು, ಬಣ್ಣಿಸಲ್, ಬರ್ಕುಮೇ? ಪೇಳ್. ... ॥೨೭॥

ಹರಭಕ್ತರ್, ಮಂದಿರಕ್ಕೆ- ತನ್ನಮನೆಗೆ, ಏಳ್ತರೆ- ಬರಲು, ಪಗಲ್, ಇರುಳ್, ಎಂದು, ಎನ್ನದೆ, ಆವೇಳೆಯೊಳ್, ಸಂವರಿಸುತ್ತಂ- ಸಿದ್ಧನಾಗಿ, ಬಂದು, ಕನ್ನಂದೆಗೆದು, ಅದು- ಆಕನ್ನವಂತೆಗೆದಮನೆಯು, ಶರಣಾವಾಸಂ- ಶಿವಶರಣರಮನೆಯು, ಆಗೆ, ಅಂದು, ಆದರದಿಂ, ಸಾರ್ದು- ಸಮೀಪಕ್ಕೆಹೋಗಿ, ಕುಂಬಿಟ್ಟು- ನಮಸ್ಕರಿಸಿ, ಪೆಸರಂ- ತನ್ನಹೆಸರನ್ನು, ಅರುಪುತ್ತೆ- ಹೇಳುತ್ತ, ಪೋಪಂ; ಅದು- ಆಕನ್ನಹಾಕಿದಮನೆಯು, ತಾಂ, ಅನ್ಯಾಲಯಂ- ಶಿವಭಕ್ತೇತರರಮನೆಯು, ಆಗುತ್ತೆ, ಇರೆ, ಅರ್ಥೌಘಮಂ- ಹಣದರಾಶಿಯನ್ನು, ಕೊಂಡು, ಅವರ, ಅನುಸರಿಸುವರ, ದುರಿತಮಂ- ಪಾಪವನ್ನು, ತೊಳ್ದು- ಕಳೆದುಬಿಟ್ಟು, ಧನ್ಯರಂ- ಕೃತಾರ್ಥರನ್ನು, ಮಾಡಿ, ಪೋಪಂ. ... ... ... ... ॥೨೮॥

ನರಪತಿ ! ನೋಡು; ಶರಣಂ, ಮುಟ್ಟಡ, ಎಡೆ, ಮೆಟ್ಟದ, ತಾಣಂ, ಒರಲ್ದು, ಕನ್ನಮಂ, ಒಡರ್ಚಿ, ತಳ್ತು, ಇಳಿದ, ಭಿತ್ತಿಯು- ಗೋಡೆಯು, ಮಣ್, ದೊರೆವೆತ್ತ, ಕಾಂತಿಭಾಸುರತರನವ್ಯಹೇಮಮಯಂ- ತೇಜಸ್ಸಿನಿಂದ ಮನೋಹರವಾದ ಹೊಸಚಿನ್ನದ ವಿಕಾರವಾದದ್ದು, ಆಗಿ, ವಿರಾಜಿಪುದು, ಇಂತು, ಇದು, ತದ್ಗುರುವಿಳಸನ್ಮಹತ್ವಕೆ- ಆ ಗುರುವಿನ ಪ್ರಕಾಶಿಸುವ ಮಹಿಮೆಗೆ, ಉರ್ವಿಯೊಳ್, ಅದ್ಭುತಾಸ್ಪದಂ- ಆಶ್ಚರ್ಯಕ್ಕಾಶ್ರಯವಾದ, ನಿದರ್ಶನಮಲ್ತೆ- ದೃಷ್ಟಾಂತರವಲ್ಲವೇ ? ... ... ॥೨೯॥

ಇಂತು, ಅತುಳಮಹಿಮೆಯುಳ್ಳಂಗೆ, ಅದಾವುದು- ಆದ್ಯಾವದಾದಾಗ್ಯೂ, ಎಂತುದುರ್ಲ್ಲಭಂ ? ಆತಂ, ಸಂತಸವೆ, ನಿನ್ನಂ, ಸಲಪಲ್- ಸಂರಕ್ಷಿಸುವದಕ್ಕೆ, ಎಯ್ದಿದಂ; ಅಂತು, ಅಲ್ಲದೆ, ವಿತ್ತಸ್ಪೃಹೆಯಿಂ- ಹಣದಾಸೆಯಿಂದ, ಬಂದಂ, ಅಲ್ತು. ... ... ... ... ॥೩೦॥

ಕಂ॥ ಜನಪತಿ ನಿನ್ನಯ ಕೋಶದ । ಧನಮನದುಂ ಕವರ್ದುದಿಲ್ಲ ತೋರ್ಪೆನದಂ ನೆ॥
ಟ್ಟನೆ ನೋಳ್ಪುದೀಗಳೊಲ್ದಿಂ । ದನಪತ್ಯಂ ತಾನೆ ಬರಿಸಿದಂ ಕರಣಿಕರಂ ॥ ॥೩೧॥

ವ॥ ಅಂತು ಬರಿಸಿ ಬಸವಂ ಲೆಕ್ಕವಿನಿತೆಂದೋದಿಸಿ ಪೊನ್ನಪೆಟ್ಟಿಗೆಗಳಂ ತೆಗೆಸಿ ತೋರಿಸೆ ಮುನ್ನಿರ್ದಪೊಂಗಳೀರ್ಮಡಿಸಿ ಪೆರ್ಚಿರೆ ಬಿಜ್ಜಳಂ ಕಂಡು ॥

ಕಂ॥ ತಲೆದೂಗಿ ವಿಸ್ಮಯಂಬಟ್ಟೆ । ದೊಲವಿಂ ಕೊಂಡಾಡುತಿರ್ದನಿತ್ತಲ್ಮಹಿಮೋ॥
ಜ್ವಲಗುಣಿ ಕನ್ನದಬೊಮ್ಮಂ । ನಿಲಯಕ್ಕೆಳ್ತಂದನಧಿಕಸಂಭ್ರಮದಿಂದಂ ॥ ॥೩೨॥

ವ॥ ಅಂತೆಳ್ತಂದು ತನ್ನ ಕನ್ನದುಪಕರಣಮಂ ತಂದ ಧನನಿಚಯಮನಿದಿರ್ವಂದಡಿಗೆರಗಿದ್ದ ನಿಜಾಂಗನೆಯ ಕರದೊಳಿತ್ತವಳ್ವೆರಸು ಚರಲಿಂಗಪೂಜೆಯನೋಜೆಯಿಂ ರಚಿಸಿ ಪೊದಮಟ್ಟು ಧನಕನಕಮಣಿಭೂಷಣಂಗಳನಳುಂಬಂ ಸಮರ್ಪಿಸಿ ಸದ್ರಸಸಮಂಚಿತದಿವ್ಯಾನ್ನದಿಂ ತೃಪ್ತಿವಡಿಸಿ ಭಕ್ತಿ ಮಿಗೆ ತತ್ಪ್ರಸಾದಸಮಾಸ್ವಾದನಂಗೆಯ್ದು ತತ್ಕಾರುಣ್ಯಸುಧಾಶರಧಿಯೊಳೋಲಾಡಿ ಪಾಡಿ॥ * * * * * * * * * * * *

ಕಂ॥ ಪರಮಾನಂದಮನಾಳ್ದೊ । ಪ್ಪಿರುತಿರ್ದಂ ಜಂಗಮಾಂಘ್ರಿಪೂಜೋತ್ಸವತ॥
ತ್ಪರ ನಾ ಕನ್ನದಬೊಮ್ಮಯ । ನುರುತರ ಶಿವಭಕ್ತಿಭಾಮಿನೀಮುಖಮುಕುರಂ॥ ... ॥೩೩॥

ಮತ್ತೇ॥ ಅರಸಂಗಾದವಿವೇಕಮಂ ತೆಮರ್ದು ತನ್ನ ಮಾಹಾತ್ಮ್ಯಮಂ ಮತ್ತೆ ಚಿತ್ತ

---

ಜನಪತಿ ! ನಿನ್ನಯ, ಕೋಶದ, ಧನಮಂ, ಅದಂ, ಕವರ್ದುದಿಲ್ಲ- ಬಾಚಿಕೊಳ್ಳಲಿಲ್ಲ; ಅದಂ, ತೋರ್ಪೆಂ, ನೆಟ್ಟನೆ, ಒಲ್ದು, ಈಗಳ್, ನೋಳ್ಪುದು; ಎಂದು, ಅನಪತ್ಯಂ- ನಿರ್ದುಷ್ಟನಾದ ಬಸವೇಶ್ವರನು, ತಾನೆ, ಕರಣಿಕರಂ- ಲೆಕ್ಕದವರನ್ನು, ಬರಿಸಿದಂ- ಬರಮಾಡಿಸಿದನು. ... ... ॥೩೧॥

ಅಂತು, ಬಸವಂ, ಬರಿಸಿ, ಲೆಕ್ಕಂ, ಇನಿತು- ಇಷ್ಟು, ಎಂದು, ಓದಿಸಿ, ಪೊನ್ನ, ಪೆಟ್ಟಿಗೆಗಳಂ- ಪೆಟ್ಟಿಗೆಗಳನ್ನು, ತೆಗೆದು, ತೋರಿಸೆ, ಮುನ್ನ, ಇರ್ದ, ಪೊಂಗಳ್, ಈರ್ಮಡಿಸಿ- ಒಂದಕ್ಕೆರಡಾಗಿ, ಪೆರ್ಚೆ, ಇರೆ, ಬಿಜ್ಜಳಂ, ಕಂಡು. * * * * * * * * * * * * * * * * * *

ತಲೆದೂಗಿ, ವಿಸ್ಮಯಂಬಟ್ಟೆದು, ಒಲವಿಂ, ಕೊಂಡಾಡುತ್ತೆ, ಇರ್ದಂ, ಇತ್ತಲ್, ಮಹಿಮೋಜ್ಜ್ವಲಗುಣಿ- ಮಹತ್ತ್ವದಿಂದ ಪ್ರಕಾಶಿಸುವ ಗುಣವುಳ್ಳ, ಕನ್ನದಬೊಮ್ಮಂ, ಅಧಿಕಸಂಭ್ರಮದಿಂದಂ, ನಿಲಯಕ್ಕೆ- ಮನೆಗೆ, ಎಳ್ತಂದಂ. ... ... ... ... ... ... ॥೩೨॥

ಅಂತು, ಎಳ್ತಂದು, ತನ್ನ, ಕನ್ನದ, ಉಪಕರಣಮಂ- ಸಾಧನದ್ರವ್ಯವನ್ನು. ತಂದ, ಧನನಿಚಯಮಂ, ಇದಿರ್ವಂದು- ಎದುರಿಗೆ ಬಂದು, ಅಡಿಗೆ- ತನ್ನ ಪಾದಕ್ಕೆ, ಎರಗಿ, ಇರ್ದ, ನಿಜಾಂಗನೆಯ- ತನ್ನ ಹೆಂಡತಿಯ, ಕರದೊಳ್, ಇತ್ತು, ಅವಳ್ವೆರಸು- ಅವಳೊಡನೆ ಕೂಡಿ, ಓಜೆಯಿಂ- ಕ್ರಮವಾಗಿ, ಚರಲಿಂಗಪೂಜೆಯಂ, ರಚಿಸಿ, ಪೊದಮಟ್ಟು. ಧನಕನಕಮಣಿಭೂಷಣಂಗಳಂ, ಅಳುಂಬಂ- ಅಧಿಕವಾಗಿ, ಸಮರ್ಪಿಸಿ, ಸದ್ರಸಸಮಂಚಿತದಿವ್ಯಾನ್ನದಿಂ- ಒಳ್ಳೆಯ ರುಚಿಯಿಂ ಕೂಡಿದ ಶ್ರೇಷ್ಠವಾದ ಅನ್ನದಿಂದ, ತೃಪ್ತಿವಡಿಸಿ, ಭಕ್ತಿ, ಮಿಗೆ- ಹೆಚ್ಚಾಗಲು, ತತ್ಪ್ರಸಾದಸಮಾಸ್ವಾದನಂಗೆಯ್ದು- ಆ ಜಂಗಮರ ಪ್ರಸಾದವಂ ಸ್ವೀಕರಿಸಿ, ತತ್ಕಾರುಣ್ಯಸುಧಾಶರಧಿಯೊಳ್- ಅವರ ಕೃಪೆ ಯೆಂಬ ಕ್ಷೀರಸಮುದ್ರದಲ್ಲಿ, ಓಲಾಡಿ, ಪಾಡಿ. * * * * * *

ಜಂಗಮಾಂಘ್ರಿಪೂಜೋತ್ಸವತತ್ಪರಂ, ಉರುತರಶಿವಭಕ್ತಿಭಾಮಿನೀಮುಖಮುಕುರಂ- ಉತ್ಕೃಷ್ಟವಾದ ಶಿವಭಕ್ತಿ ಯೆಂಬ ಸ್ತ್ರೀಯ ಮುಖಕ್ಕೆ ಕನ್ನಡಿಯಾದ, ಆಕನ್ನದಬೊಮ್ಮಯ್ಯಂ, ಪರಮಾನಂದಮಂ, ಆಳ್ದು, ಒಪ್ಪಿ, ಇರುತೆ, ಇರ್ದಂ. ... ... ... ... ... ॥೩೩॥

ಸಿದ್ಧಾಂತವಿದ್ಯಾಧರಂ- ಶಿವಸಿದ್ಧಾಂತ ವಿದ್ಯೆಯಂ ಧರಿಸಿದ ಬಸವೇಶ್ವರನು, ಅರಸಂಗೆ, ಆದ, ಅವಿವೇ

ರಿಸುತ್ತಂ ಕಡಿಳಾಪತಿಪ್ರಣುತ ನಲ್ಲಿಂದೇಳ್ದು ಕಾರುಣ್ಯಸಾ॥ ಗರ ನಾಕನ್ನಡಬೊಮ್ಮಿದೇವ
ನ ಪದಾಂಭೋಜಂಗಳಂ ಜಾನಿಸು ! ತ್ತಿರದೇಳ್ತಂದೆಸಬಿರ್ದ್ದ ನಾತ್ಮಗೃಹದೊಳ್ಸದ್ಧಾಂತವಿ
ದ್ಯಾಧರಂ ॥ ... ... ... ... ... ... ॥೩೪॥

ಕಂ॥ ಪದೆದಿಳೆಯೊಳಾವ ನೀಕ । ನ್ನಡ ಬೊಮ್ಮಯ್ಯನ ಚರಿತ್ರಮಂ ಕೇಳ್ವ ನವಂ॥
ಮದನಾರಿಯ ಕೃಪೆಯಿಂ ತ । ಪ್ಪದೆ ಪಡೆವಂ ಸರ್ವಸಿದ್ಧಿ ಸೌಖ್ಯೋದಯಮಂ ॥೩೫॥

ಲಲಿತಪದವೃತ್ತಂ ॥ ಕ್ಷೋಣಿಜನರಕ್ಷಣಧುರೀಣ ಖಲದುರ್ಮ್ಮದಕರೇಣುನಿಶಿತಾಂ
ಕುಶ ಸಪೇಣಧರಲಕ್ಷ್ಮ । ಪ್ರಾಣ ಸುರವಂದ್ಯಪದಶೋಣಸರಸೀರುಹ ವಿಷಾಣದಳಿತಾಸುರ
ಸವೀಣಮುನಿನುತ್ಯ ॥ ಪ್ರೀಣಿತಮಹಾಗಣ ಪುರಾಣಪರಿಸನ್ನುತ ಹೃತಾಣವಕಳಂಕ ಸು
ಮಬಾಣಮದಭಂಗಾ । ಕ್ಷೀಣಬಲ ರಕ್ಷಿಪುದು ಪಾಣಿನಿಕಣಾದನುತವಾಣಿ ವರದಾಭಯದಪಾಣಿ
ಬಸವೇಶ ॥ ... ... ... ... ... ... ॥೩೬॥

ಇಂದ್ರವಜ್ರವೃತ್ತಂ ॥ ಪ್ರಣೀತವೇದಾಗಮಶಾಸ್ತ್ರಸಂಕುಳೀ । ಕ್ಷಣದ್ಯುತಿಪ್ರಾಂ

---

ಕಮಂ, ತೆಮರ್ದು- ಹೋಗಲಾಡಿಸಿ, ತನ್ಮಾಹಾತ್ಮ್ಯಮಂ- ಆ ಕನ್ನದ ಬೊಮ್ಮಯ್ಯನ ಮಹಿಮೆಯನ್ನು,
ಮತ್ತೆ, ಬಿತ್ತರಿಸುತ್ತಂ, ತಳಿಳಾಪತಿಪ್ರಣುತಂ- ಆ ಬಿಜ್ಜಳರಾಜನಿಂದ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟವನಾ
ಗಿ, ಅಲ್ಲಿಂದೆ, ಎಳ್ದು, ಕಾರುಣ್ಯಸಾಗರನ- ಆ ಕನ್ನದ ಬೊಮ್ಮಿದೇವನ, ಪದಾಂಭೋಜಂಗಳಂ, ಜಾನಿಸುತ್ತೆ,
ಇರದೆ, ಎಳ್ತಂದು, ಆತ್ಮಗೃಹದೊಳ್, ಎಸೆದು, ಇರ್ದ್ದಂ. ... ... ... ॥೩೪॥

ಇಳೆಯೊಳ್, ಆವಂ, ಪದೆದು, ಈಕನ್ನದಬೊಮ್ಮಯ್ಯನ, ಚರಿತ್ರಮಂ, ಕೇಳ್ವಂ, ಅವಂ, ಮದನಾರಿ
ಯ, ಕೃಪೆಯಿಂ, ಸರ್ವಸಿದ್ಧಿಸೌಖ್ಯೋದಯಮಂ- ಸಕಲೇಷ್ಟಾರ್ಥಸಿದ್ಧಿಯನ್ನೂ ಸೌಖ್ಯಾಭಿವೃದ್ಧಿಯ
ನ್ನೂ, ತಪ್ಪದೆ, ಪಡೆವಂ. ... ... ... ... ... ॥೩೫॥

ಕ್ಷೋಣಿಜನರಕ್ಷಣಧುರೀಣ- ಭೂಜನರು ಪರಿಪಾಲಿಸುವುದರಲ್ಲಿ ಸಮರ್ಥನಾದ, ಖಲದುರ್ಮ್ಮದಕರೇಣುನಿ
ಶಿತಾಂಕುಶ- ನೀಚರಾದ ಕೆಟ್ಟಗರ್ವವೆಂಬ ಹೆಣ್ಣಾನೆಗೆ ತೀಕ್ಷ್ಣವಾದ ಅಂಕುಶನಾದ, ಸಪೇಣಧರಲಕ್ಷ್ಮಪ್ರಾ
ಣ--- ಸತ್- ಸಮೀಚೀನವಾದ, ಪಣಧರ- ಚಂದ್ರನೇ, ಲಕ್ಷ್ಮ- ಚಿಹ್ನವಾಗುಳ್ಳ ಈಶ್ವರನಿಗೆ, ಪ್ರಾಣ- ಪ್ರಾ
ಣರೂಪನಾದ, ಸುರವಂದ್ಯಪದಶೋಣಸರಸೀರುಹ-- ಸುರ- ದೇವತೆಗಳಿಂದ, ವಂದ್ಯ- ನಮಸ್ಕರಿಸಲ್ಪಡುವ
ದಕ್ಕೆ ಯೋಗ್ಯವಾದ, ಪದಶೋಣಸರಸೀರುಹ- ಕೆಂದಾವರೆಯಂತಿರುವ ಚರಣವುಳ್ಳ, ವಿಷಾಣದಳಿತಾಸುರ—
ವಿಷಾಣ- ಕೊಂಬಿನಿಂದ, ದಳಿತ- ಸೀಳಲ್ಪಟ್ಟ, ಅಸುರ ರಾಕ್ಷಸರುಳ್ಳ, ಸವೀಣಮುನಿನುತ್ಯ— ಸವೀಣಮು
ನಿ-- ವೀಣೆಯಿಂ ಕೂಡಿದ ಋಷಿ, ( ಅಂದರೆ ನಾರದಋಷಿಯಿಂದ ) ನುತ್ಯ, ಪ್ರೀಣಿತಮಹಾಗಣ— ಪ್ರೀ
ಣಿತ- ಸಂತೋಷಪಡಿಸಲ್ಪಟ್ಟ, ಮಹಾಗಣ- ಅಧಿಕರಾದ ಗಣಂಗಳುಳ್ಳ, ಪುರಾಣಪರಿಸನ್ನುತ- ಪುರಾಣಗ
ಳಿಂದ ಹೊಗಳಲ್ಪಟ್ಟ, ಹೃತಾಣವಕಲಂಕ- ನಾಶಮಾಡಲ್ಪಟ್ಟ ಆಣವಮಲವುಳ್ಳ, ಸುಮಬಾಣಮದಭಂಗ-ಮ
ನ್ಮಥನ ಗರ್ವವನ್ನು ನಾಶಮಾಡಿದ, ಅಕ್ಷೀಣಬಲ- ನಾಶವಾಗದ ಶಕ್ತಿಯುಳ್ಳ, ಪಾಣಿನಿಕಣಾದನುತವಾಣಿ-
ಪಾಣಿನಿ ಕಣಾದ ಮುನಿಗಳಿಂದ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ ಮಾತುಳ್ಳ, ವರದಾಭಯದಪಾಣಿ- ಇಷ್ಟವರ
ಅಭಯಗಳನ್ನು ಕೊಡುವ ಹಸ್ತವುಳ್ಳ, ಬಸವೇಶ, ರಕ್ಷಿಪುದು. ... ... ॥೩೬॥

ಪ್ರಣೀತವೇದಾಗಮಶಾಸ್ತ್ರಸಂಕುಳೀ-ಗುಣಸತ್ತಾಗಿಮಾಡಲ್ಪಟ್ಟ, ವೇದ ಆಗಮ ಶಾಸ್ತ್ರ ಇವುಗಳ
ಗುಂಪುಳ್ಳ, ಕ್ಷಣದ್ಯುತಿಪ್ರಾಂಜುಳವೀಕ್ಷಣಾಂಚಳೇ-ಮಿಂಚಿನೋಪಾದಿಯಲ್ಲಿ ಪ್ರಕಾಶಿಸುವಕಡೆಗಣ್ಣುಳ್ಳ, ಮಣಿ

ಜ್ವಳವಿಸ್ಫುರಣಾಂಚಳೇ ॥ ಮಣಿಪ್ರಭಾಭೂಷಣಹೇಮಕುಂಡಳೇ । ಗಣಾಭಿರಾಮೇ ಜಯ ಸರ್ವಮಂಗಳೇ ॥ ... ... ... ... ... ... ॥೩೩॥

ಗದ್ಯ ॥ ಇದು ವಿನಮದಖಿಳಸುರಾಸುರೇಂದ್ರಮುಕುಟತಟಘಟಿತಮಣಿಗಣಾಗಣಿತರುಚಿನಿಚಯಮುತರುಣಾರುಣಾತ್ಮಸಪರೀಸಿತವರಮಶಿವಲಿಂಗಪಾದಾರವಿಂದಪರಾಗಭಸಿತ ಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದ ಶ್ರೀಷಡಕ್ಷರಿದೇವಭಕ್ತವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಕನ್ನದಬ್ರಹ್ಮಯ್ಯಮಹತ್ವಕಥನಂ ವಿಂಶತ್ಯಾಶ್ವಾಸಂ ಪರಿಸಮಾಪ್ತಂ ... ... ... ... .. *

ವಿಂಶತ್ಯಾಶ್ವಾಸಂ ಸಂಪೂರ್ಣಂ.

---

ಶ್ರೀಃ

ಹರಿಮುಖಜನಕಾಯ ಪರಬ್ರಹ್ಮಣೇ ನಮಃ.

ಏಕವಿಂಶತ್ಯಾಶ್ವಾಸಂ.

ಮುಸುಟೆಚೌಡಾರ್ಯಕಥನಂ.

ಕಂ ॥ ಶ್ರೀಮದಿಳಾಧರತನಯಾ । ಕೋಮಳತರಬಾಹುಕನಕಚಾಂಪೇಯಲಸ ॥ ದ್ದಾಮಾನ್ವಿತಗಳ ಸಮರಲ । ಲಾಮಂ ಪೊರೆಗೆಮ್ಮನಾವಗಂ ಶಿವಲಿಂಗಂ ॥ ... ॥೧॥

---

ಪ್ರಭಾಭೂಷಣಹೇಮಕುಂಡಳೇ- ರತ್ನದ ಕಾಂತಿಯಿಂ ಕೂಡಿದ ಚಿನ್ನದ ಕರ್ಣಕುಂಡಲಾಭರಣವುಳ್ಳ, ಗಣಾಭಿರಾಮೇ- ಶಿವಗಣಂಗಳಿಂದ ಮನೋಹರಳಾದ, ಸರ್ವಮಂಗಳೇ ! ಜಯ. ... ... ॥೩೩॥

ಇಪ್ಪತ್ತನೆಯ ಆಶ್ವಾಸವು ಸಂಪೂರ್ಣವು.

---

ಇಪ್ಪತ್ತೊಂದನೆಯ ಆಶ್ವಾಸಪ್ರಾರಂಭಃ

ಶ್ರೀಮದಿಳಾ........ ಗಳಂ— ಶ್ರೀಮತ್- ಸಂಪದ್ಯುಕ್ತಳಾದ, ಇಳಾಧರತನಯಾ- ಪಾರ್ವತಿಯ, ಕೋಮಳತರ- ಅತ್ಯಂತ ಮೃದುವಾದ, ಬಾಹು- ತೋಳೆಂಬ, ಕನಕ-ಚಿನ್ನದ, ಚಾಂಪೇಯ- ಸಂಪಗೆಹೂವಿನ, ಸತ್- ಸಮೀಚೀನವಾದ, ದಾಮ-ಮಾಲಿಕೆಯಿಂದ, ಅನ್ವಿತ-ಕೂಡಿಕೊಂಡಿರುವ, ಗಳಂ-ಕಂಠವುಳ್ಳ; ಅಮರಲಲಾಮಂ- ದೇವತಾಸಾರ್ವಭೌಮನಾದ, ಶಿವಲಿಂಗಂ, ಆವಗಂ- ನಿರಂತರದಲ್ಲೂ, ಎಮ್ಮಂ, ಪೊರೆಗೆ. ॥೧॥

ಕಂ ॥ ವಸುಧಾಲಲನೆಯ ಮಲಯಜ । ರಸತಿಲಕದ ತೆರದೆ ಸೌಧರುಚಿಯಿಂ ತೊಳಗುತ್ತೆ ಸದೃಶವೈಭವದಿಂದಂ । ಮುಸುಟೆ ಯೆನಿಪ್ಪೊಂದು ಪುರವರಂ ಸೊಗಯಿಸುಗುಂ ॥
ಕಂ ॥ ಆಪುರದೊಳ್ ಎಸೆವ ನಖಿಳಕ । ಳಾಪಂಡಿತ ನಪ್ರತರ್ಕ್ಯಮಹಿಮಾಕರ ನು ॥ ರ್ವೀಪಾವನಪದ ನುಜ್ವಳ।ರೂಪಂ ಸಲೆ ಮುಸುಟಿಚೌಡ ನೆಂಬ ಶಿವೈಕ್ಯಂ ॥ ... ॥೩॥
ಚಂ ॥ ಶರಣಶರಣ್ಯ ನಾರ್ಯ ನನಘಂ ಸಫಲೀಕೃತಸತ್ಯವಾಕ್ಯ ನೀ । ಶ್ವರಮತಕಲ್ಪಭೂಜ ನನವದ್ಯಗುಣಾಂಬುಧಿ ಗಾಢಶೌರ್ಯಬಂ ॥ ಧುರ ನನಿಮಿತ್ತಸಾಧುಜನಬಂಧು ವಿಶಾಲಯಶೋವಿಭಾಗಿ ಶಂ । ಬರಹರದರ್ಪಸರ್ಪಶಿಖಿ ದುರ್ಮತಗರ್ವಘನಪ್ರಭಂಜನಂ ॥ ... ॥೪॥
ಮ ॥ ನಿರಪಾಯಂ ಗಿರಿಶಪ್ರಸಾದರಸಿಕಂ ವೀರವ್ರತಾಲಂಕೃತಂ । ಪರಮಾನಂದಮ ಯಂ ಚರಾಚರಚಯಾಭೀತಿಪ್ರದಾನಾದರಂ ॥ ಕರುಣಾಶಾಲಿ ನಿರಸ್ತಕರ್ಮತತಿ ಶಾಪಾನು

ವಸುಧಾಲಲನೆಯ- ಭೂಕಾಂತೆಯ, ಮಲಯಜರಸತಿಲಕದ— ಮಲಯಜರಸ- ಶ್ರೀಗಂಧೋದಕದ, ತಿಲಕದ- ಹಣೆಬೊಟ್ಟಿನ, ತೆರದೆ- ರೀತಿಯಿಂದ, ಸೌಧರುಚಿಯಿಂ- ಉಪ್ಪರಿಗೆಯಕಾಂತಿಯಿಂದ, ತೊಳಗುತ್ತೆ- ಪ್ರಕಾಶಿಸುತ್ತ, ಅಸದೃಶವೈಭವದಿಂದಂ- ಅತ್ಯಧಿಕಸಂಪತ್ತಿನಿಂದ, ಮುಸುಟೆ, ಎನಿಪ್ಪ, ಪುರವರಂ, ಸೊಗಯಿಸುಗುಂ. ... ... ... ... ... ... ॥೨॥

ಆಪುರದೊಳ್, ಅಖಿಲಕಲಾಪಂಡಿತಂ-ಸಮಸ್ತ ವಿದ್ಯೆಗಳಲ್ಲಿಯೂ ಚತುರನಾದ, ಅಪ್ರತರ್ಕ್ಯಮಹಿಮಾಕರಂ- ಊಹಿಸುವದಕ್ಕಾಗದ ಮಹತ್ತ್ವಕ್ಕೆ ಆಸ್ಪದನಾದ, ಉರ್ವೀಪಾವನಪದಂ—ಉರ್ವೀ- ಭೂಮಿಗೆ, ಪಾವನ- ಪರಿಶುದ್ಧನಾದ, ಪದಂ- ಪಾದವುಳ್ಳ, ಅಥವಾ ( ಉರ್ವೀಪ- ರಾಜರುಗಳನ್ನು, ಅವನ- ಸಂರಕ್ಷಿಸುವ, ಪದಂ- ಪಾದವುಳ್ಳ ) ಉಜ್ವಳರೂಪಂ- ಪ್ರಕಾಶಮಾನವಾದ ರೂಪುಳ್ಳ, ಮುಸುಟಿಚೌಡನೆಂಬ, ಶಿವೈಕ್ಯಂ, ಸಲೆ, ಎಸೆವಂ. ... ... ... ... ... ... ॥೩॥

ಶರಣಶರಣ್ಯಂ— ಶಿವಶರಣರಕ್ಷಕನು, ಆರ್ಯಂ, ಅನಘಂ- ಪಾಪರಹಿತನು, ಸಫಲೀಕೃತಸತ್ಯವಾಕ್ಯಂ- ಫಲವತ್ತಾಗಿ ಮಾಡಲ್ಪಟ್ಟ ಸತ್ಯವಚನವುಳ್ಳವನು, ಅಂದರೆ ( ಸತ್ಯವಾಕ್ಕು ಇವನಿಂದ ಸಫಲವಾಗಿ ಮಾಡಲ್ಪಟ್ಟಿತು ಎಂದು ತಾತ್ಪರ್ಯ ) ಈಶ್ವರಮತಕಲ್ಪಭೂಜಂ- ಶಿವಮತಕ್ಕೆ ಕಲ್ಪವೃಕ್ಷಪ್ರಾಯನಾದವನು, ಅನವದ್ಯಗುಣಾಂಬುಧಿ —ಅನವದ್ಯ- ನಿರ್ದುಷ್ಟಗಳಾದ, ಗುಣ- ಸದ್ಗುಣಗಳಿಗೆ, ಅಂಬುಧಿ- ಸಮುದ್ರಸ್ವರೂಪನಾದವನು, ಗಾಢಶೌರ್ಯಬಂಧುರಂ- ಅಧಿಕ ಪರಾಕ್ರಮದಿಂದ ಮನೋಹರನಾದವನು, ಅನಿಮಿತ್ತಸಾಧುಜನಬಂಧು-ಅನಿಮಿತ್ತ- ಕಾರಣವಿಲ್ಲದೆ, ಸಾಧುಜನ- ಸತ್ಪುರುಷಜನಕ್ಕೆ, ಬಂಧು- ಮಿತ್ರನಾಗಿರುತ್ತಕ್ಕವನು, ಅಂದರೆ, ( ತಾನಾಗಿ ಸತ್ಪುರುಷರಲ್ಲಿ ಪ್ರೀತಿಯುಳ್ಳವನು ) ವಿಶಾಲಯಶೋವಿಭಾಗಿ- ವಿಸ್ತಾರವಾದ ಕೀರ್ತಿಯನ್ನು ಹೊಂದಿದವನು, ಶಂಬರಹರದರ್ಪಸರ್ಪಶಿಖಿ— ಶಂಬರಹರ- ಮನ್ಮಥನ, ದರ್ಪ- ಗರ್ವವೆಂಬ, ಸರ್ಪ- ಹಾವಿಗೆ, ಶಿಖಿ- ನವಿಲಾದವನು, ದುರ್ಮತಗರ್ವಘನಪ್ರಭಂಜನಂ—ದುರ್ಮತ- ದುಷ್ಟಮತದವರ, ಗರ್ವ- ಅಹಂಕಾರವೆಂಬ, ಘನ- ಮೋಘಕ್ಕೆ, ಪ್ರಭಂಜನಂ- ಜೋರುಗಾಳಿಮಾರುತಸ್ವರೂಪನು. ... ... ॥೪॥

ನಿರಪಾಯಂ-ಹಾನಿಯಿಲ್ಲದೇ ಇರುವವನು, ಗಿರಿಶಪ್ರಸಾದರಸಿಕಂ-ಶಿವಪ್ರಸಾದದಲ್ಲಿ ಅನುರಾಗವುಳ್ಳವನು, ವೀರವ್ರತಾಲಂಕೃತಂ-ವೀರಶೈವನಿಯಮದಿಂದ ಅಲಂಕರಿಸಲ್ಪಟ್ಟವನು, ಪರಮಾನಂದಮಯಂ-ಉತ್ಕೃಷ್ಟವಾದ ಆನಂದಸ್ವರೂಪನು, ಚರಾಚರಚಯಾಭೀತಿಪ್ರದಾನಾದರಂ—ಚರಾಚರ-ಸ್ಥಾವರಜಂಗಮಗಳ, ಚಯ- ಸಮೂಹಕ್ಕೆ, ಅಭೀತಿ- ಅಭಯವನ್ನು, ಪ್ರದಾನ- ಕೊಡುವದರಲ್ಲಿ, ಆದರಂ- ವಿಶ್ವಾಸವುಳ್ಳವನು, ಕರುಣಾಶಾಲಿ, ನಿರಸ್ತಕರ್ಮತತಿ— ನಿರಸ್ತ- ಹೋಗಲಾಡಿಸಲ್ಪಟ್ಟ, ಕರ್ಮ- ದುಷ್ಕೃತದ, ತತಿ- ಸಮುದಾಯವುಳ್ಳವನು, ಶಾಪಾನುಗ್ರಹೋದ್ದಾಮಶಕ್ತಿ- ಶಾಪಾನುಗ್ರಹದಲ್ಲಿ ಉತ್ಕೃಷ್ಟವಾದ ಸಾಮರ್ಥ್ಯವುಳ್ಳವನು,

ಗ್ರಹೋದ್ದಾಮಶ | ಕ್ತಿರಸಾಭಾಗಸಮಾಗತೇಶ ನಮೃತಾಪಾಂಗಂ ಪ್ರಬೋಧಾಸ್ಪದಂ||೫||
ಕಂ|| ದೃಷ್ಟಾದೃಷ್ಟಫಲೋದಯ | ದೃಷ್ಟಿಸದಾಮೋಘಸತ್ಕ್ರಿಯಾದರ್ಪಣಸಂ ||
ತುಷ್ಟಶಿವ ನವನತಪ್ರಕರೇ | ಷ್ಟಪ್ರದ ನತುಳವೀರರಸಪರಿಪೂರ್ಣಂ || ... ||೬||
ನ || ಎಂಬ ನೆಗಳ್ತೆಗಡರ್ಪೆನಿಸಿ || * * * * * * * * * *
ಉ|| ಗೂಳಿ ತಪಸ್ವಿ ಭಕ್ತರಿಳೆಯೊಳ್ ಮೃತಿ ಯೊಂದಿರೆ ಜೀವ ವಿತಾವೃತಂ|ಬಾಳಪಮಾ
ರ್ಗಕೆದ್ದಮಿರೆ ದಳ್ಳುರಿ ಪಿರಿಯ್ವಳೆ ಮುಳ್ಗಿಸುತ್ತಿರಲ್ ಮೆಳೆಯ ಸಲ್ಲಿ ನಾಡೆ ನಡೆಯುಜ್ಜುಗದೊ
ಳ್ಶಪಥಂಗೊಳುತ್ತೆ ಭ | ಕ್ತಾಳಿಯಭೀಷ್ಟಮಂ ಸಲಿಸುತಂ ಮೆರೆದಿರ್ದನವಂ ವಿಳಾಸದಿಂ||
ಕಂ || ಇರೆ ಬಸವಭಕ್ತಿಕುಸುಮದ | ಪರಿಮಳ ಮೆಣ್ದೆಸೆಗೆ ತೀವೆ ಜಸ ಮವನಂ
ಸಾ || ದರ ವೀಕ್ಷಿಸಲ್ಕೆ ಶಿವಗಣ | ವರ ರೊಡನೆಳ್ತಂದ ನತುಳಸಂಭ್ರಮದಿಂದಂ || ||೮||

ಅಂದರೆ ( ಶಾಪವನ್ನು ಕೊಡುವದರಲ್ಲಿಯೂ ಅನುಗ್ರಹಮಾಡುವದರಲ್ಲಿಯೂ ಉತ್ಕೃಷ್ಟಸಾಮರ್ಥ್ಯವುಳ್ಳವನೆಂದು ತಾತ್ಪರ್ಯ ) ರಸಾಭಾಗಸಮಾಗತೇಶಂ— ರಸಾಭಾಗ- ಭೂಭಾಗಕ್ಕೆ, ಸಮಾಗತ- ಬಂದ, ಈಶಂ- ಈಶ್ವರನು, ಅಮೃತಾಪಾಂಗಂ- ಅಮೃತವೇ ಕಡೆಗಣ್ಣಿನಲ್ಲುಳ್ಳವನು, ಪ್ರಬೋಧಾಸ್ಪದಂ ಪ್ರಕೃಷ್ಟವಾದ ಜ್ಞಾನಕ್ಕೆ ಆಸ್ಪದನಾದವನು. ... ... ... ... ||೫||

ದೃಷ್ಟಾ.....ದೃಷ್ಟಿ— ದೃಷ್ಟ- ನೋಡಿದ, ಅದೃಷ್ಟ- ನೋಡದೇ ಇರುವ, ಫಲ- ಫಲದ, ಉದಯ- ಆವಿರ್ಭಾವವೇ, ದೃಷ್ಟಿ-ನೇತ್ರದಲ್ಲುಳ್ಳವನು, (ಅಂದರೆ ನೇತ್ರಾವಲೋಕನಮಾತ್ರದಿಂದಲೇ ಪ್ರತ್ಯಕ್ಷಾಪ್ರತ್ಯಕ್ಷಫಲಗಳನ್ನು ಕೊಡುವನೆಂದು ತಾತ್ಪರ್ಯ ) ಸದಾಮೋಘಸತ್ಕ್ರಿಯತರ್ಪಣಸಂತುಷ್ಟಶಿವಂ— ಸದಾ- ಎಲ್ಲಾಕಾಲದಲ್ಲೂ, ಅಮೋಘ- ವ್ಯರ್ಥವಾಗದೇ ಇರುವ, ಸತ್ಕ್ರಿಯ— ಸತ್- ಸಮೀಚೀನವಾದ, ಕ್ರಿಯಾ- ಆಚಾರದಿಂದಲೂ, ತರ್ಪಣ- ತೃಪ್ತಿಪಡಿಸುವಿಕೆಯಿಂದಲೂ, ಸಂತುಷ್ಟ- ಸಂತೋಷಪಡಿಸಲ್ಪಟ್ಟ, ಶಿವಂ- ಶಿವನುಳ್ಳವನು, ಅವನತಪ್ರಕರೇಷ್ಟಪ್ರದಂ—ಅವನತ-ನಮ್ರರಾದವರ, ಪ್ರಕರ- ಸಮುದಾಯಕ್ಕೆ, ಇಷ್ಟ- ಇಷ್ಟಾರ್ಥವನ್ನು,ಪ್ರದಂ- ಕೊಡತಕ್ಕವನು, ಅತುಳವೀರರಸಪರಿಪೂರ್ಣಂ- ಅಸದೃಶವಾದ ಪರಾಕ್ರಮರಸದಿಂದ ಸಂಪೂರ್ಣನು. ... ... ... ... ||೬||

ಎಂಬ, ನೆಗಳ್ತೆಗೆ- ಖ್ಯಾತಿಗೆ, ಅಡರ್ಪು- ಆಶ್ರಯನು, ಎನಿಸಿ. * * * * * * *

ಅವಂ- ಬಸವಾಚಾರ್ಯನು, ಗೂಳಿತಪಸ್ವಿಭಕ್ತರ್— ಗೂಳಿ- ಗೂಳಿಯೆಂಬ, ತಪಸ್ವಿ- ಋಷಿಯೂ, ಭಕ್ತರ್- ಭಕ್ತರೂ, ಇವರುಗಳು, ಮೃತಿಯೊಂದಿರೆ- ಮರಣವನ್ನೊಂದಿರಲಾಗಿ, ಜೀವವಿತಾವೃತಂ- ಪ್ರಾಣವನ್ನು ಕೊಡುತ್ತ,ದಳ್ಳುರಿಪಿರಿಯ್ವಳೆ- ಅತ್ಯಂತ ಶಬ್ದವುಳ್ಳ ದೊಡ್ಡಹೊಳೆಯು, ಬಾಳಪಮಾರ್ಗಕೆ- ಪ್ರಸಿದ್ಧಿಯಾಗುವ ದಾರಿಗೆ, ಅದ್ದಮಿರೆ- ಅಡ್ಡಲಾಗಿರಲಾಗಿ, ಅದು, ಮೆಳೆಯು- ಕ್ರಮದಿಂದ, ಮುಳ್ಗಿಸುತ್ತಿ- ತಗ್ಗಿಸುತ್ತ ಅಲ್ಲಿ, ನಾಡೆ- ಚೆನ್ನಾಗಿ, ನಡೆಯು- ನಡಗೆಯು, ಉಜ್ಜುಗದೊಳ್- ಉದ್ಯೋಗದಲ್ಲಿ, ಶಪಥಂಗೊಳುತ್ತೆ- ಭಾಷೆಯನ್ನು ಮಾಡುತ್ತ, ಅಥವಾ ( ಆಣೆಯನ್ನು ಮಾಡುತ್ತ ) ಭಕ್ತಾಳಿಯ, ಅಭೀಷ್ಟಮಂ- ಇಷ್ಟಾರ್ಥವನ್ನು, ಸಲಿಸುತ್ತಂ-ಕೊಡಿಸುತ್ತ, ವಿಳಾಸದಿಂ, ಮೆರೆದು, ಇರ್ದನು. ... ||೭||

ಇರೆ- ಹೀಗಿರಲಾಗಿ, ಬಸವಭಕ್ತಿಕುಸುಮದ— ಬಸವ- ಬಸವೇಶ್ವರನ, ಭಕ್ತಿ- ಭಕ್ತಿಯೆಂಬ, ಕುಸುಮದ- ಪುಷ್ಪದ, ಪರಿಮಳಂ- ಸುಗಂಧವು, ಜಸಂ- ಯಶಸ್ಸು, ಎಣ್ದೆಸೆಗೆ- ಎಂಟುದಿಕ್ಕಿಗೆ, ತೀವೆ- ತುಂಬಲಾಗಿ, ಅವನಂ- ಆ ಬಸವೇಶನನ್ನು, ಸಾದರಂ- ವಿಶ್ವಾಸಯುಕ್ತನಾಗಿ, ವೀಕ್ಷಿಸಲ್ಕೆ- ನೋಡುವದಕ್ಕೆ, ಅತುಳಸಂಭ್ರಮದಿಂದಂ, ಶಿವಗಣವರರೊಡನೆ- ಶಿವಶರಣರ ಸಮೂಹದೊಡನೆ, ಎಳ್ತಂದಂ- ಬಂದನು. ||೮||

ವ || ಅಂತೆಳ್ತರ್ಪಾಗಳ್ ಆವಮಾರ್ಗಮಧ್ಯದಲ್ಲಿ || * * * * * * *

ಚಂ || ಖರಕರರೋಚಿ ಯುರ್ಚ್ಚದ ತರುವ್ರಜದಾಲಯ ಮಂಧಕಾರದಾ | ಗರ ಮಹಿ
ವೃಂದದಿಕ್ಕೆ ಮೃಗರಾಜಿಯತಾಯ್ವನೆ ಪಕ್ಕಿವಿಂಡಿನೋ || ವರಿ ಸಲೆ ದಾವಪಾವಕನ ಭೋಜ
ನಶಾಲೆ ಕಿರಾತಕೋಶಮುಂ | ದಿರ ಮೆನಿಸಿರ್ದು ದೇಳ್ಗೆವಡೆದೊಪ್ಪುವ ಕಾನನ ಮೊಂದಗು
ರ್ವಿನಿಂ || ... ... ... ... ... ... ... ||೯||

ವ || ಅಂತೆಸೆವ ಕಾನನದಂತರಾಳದೊಳ್ ಚಾಡದೇವಂ ನಡೆತರುತ್ತುಮಿರೆ ಯಿರೆ || *

ಕಂ || ಮಿಸುನಿಯ ಪೊಸಚೆಂಡುಗಳಂ | ತೆಸೆವಿಟ್ಟೆಯ ಪಣ್ಗಳಿದಿರೊಳಿರೆ ಕಂಡಾ
ತಾ | ಪಸ ರೆಮ್ಮ ಲಿಂಗಕೊಲ್ದ | ರ್ಪಿಸಲ್ಕೆ ಬಯಸಿರ್ಪೆವೆಂಬ ನುಡಿಗೇಳ್ದಾಗಳ್ || ... ||೧೦||

ಚಂ || ನಸುನಗುತೆಯ್ದೆ ಕೂರಸಿಯ ನ ತರುಮೂಲದೊಳೂರಿ ನಿಂದು ನಿ | ಟ್ಟಿ
ಸಿ ಪೊಸಪಣ್ಗಳಂ ಸವಿವುದಿ ನ್ನೆನೆ ಜಂಗಯ ನಲ್ಲಿ ಜಂಗಮ || ಪ್ರಸರ ಮೊರಲ್ದು ಪಣ್ದಿ
ರಿಯುತಿತ್ತು ಶಿವಂಗಮೃತೋಪಮಾನ ವಿಾ | ರಸ ಮೆನುತಂ ಪ್ರಸಾದಫಲಸೇವನೆಗೆಯ್ದು
ದ ಮೇನನೆಂಬೆನೊ || ... ... .. ... ... ||೧೧||

ಕಂ || ಇನಿಮಾವಿನ ತನಿವಣ್ಣಂ | ಮನವೊಲವಿಂ ಸೇವಿಸುತಿ ರಿಟ್ಟೆಯ ಪಣ್ಣಂ ||

---

ಅಂತು, ಎಳ್ತರ್ಪಾಗಳ್, ಆವಮಾರ್ಗಮಧ್ಯದಲ್ಲಿ, * * * * * * * * * *

ಒಪ್ಪುವ, ಒಂದು ಕಾನನಂ, ಪೆರ್ಗೆವಡೆದು- ಆಧಿಕ್ಯವನ್ನು ಹೊಂದಿ, ಅಗುರ್ವಿನಿಂ- ಭಯಂಕರತ್ವದಿಂದ, * ಖರಕರರೋಚಿ-ಸೂರ್ಯನಕಿರಣವು, ಉರ್ಚ್ಚದ-ಬೀಳದ, ತರುವ್ರಜದ-ವೃಕ್ಷಸಮುದಾಯದ, ಆಲಯಂ-ಮನೆಯೂ, ಅಂಧಕಾರದ- ಕತ್ತಲೆಯ, ಆಗರಂ- ಸ್ಥಾನವು, ಅಹಿವೃಂದದ- ಸರ್ಪಸಮುದಾಯದ, ಇಕ್ಕೆ- ಸ್ಥಲವು, ಮೃಗರಾಜಿಯ- ಮೃಗಪಙ್ಕ್ತಿಯ, ತಾಯ್ವನೆ ತವರುಮನೆಯು, ಪಕ್ಕಿವಿಂಡಿನ- ಪಕ್ಷಿಗುಂಪಿನ, ಓವರಿ ನೆಲೆ- ಪ್ರೋಷಣಸ್ಥಾನವು, ದವಪಾವಕನ- ಕಾಳ್ಗಿಚ್ಚಿನ, ಭೋಜನಶಾಲೆ, ಕಿರಾತಕೋಶಮಂದಿರಂ— ಕಿರಾತಬೇಡರುಗಳಿಗೆ, ಕೋಶಮಂದಿರಂ- ಬೊಕ್ಕಸದ ಮನೆಯು, ಎನಿಸಿ, ಇರ್ದುದು. ... ||೯||

ಅಂತು, ಎಸೆವ, ಕಾನನದ- ಅರಣ್ಯದ, ಅಂತರಾಳದೊಳ್- ಮಧ್ಯದಲ್ಲಿ, ಚಾಡದೇವಂ, ನಡೆತರುತ್ತಂ- ಬರುತ್ತ, ಇದಿರಿರೆ- ಇರಲಾಗಿ. * * * * * * * * * * * * * *

ಇದಿರೊಳ್- ಮುಂಭಾಗದಲ್ಲಿ, ಮಿಸುನಿಯ- ಚಿನ್ನದ, ಪೊಸಚೆಂಡುಗಳಂತೆ- ನೂತನಕಂದುಕದಹಾಗೆ, ಎಸೆವ, ಇಟ್ಟೆಯಪಣ್ಗಳ್- ಸಂಪಿನ ಮರದ ಹಣ್ಣುಗಳು, ಇರೆ, ಆತಾಪಸರ್- ಆ ತಪಸ್ವಿಗಳು, ಕಂಡು, ಎಮ್ಮ, ಲಿಂಗಕೆ, ಒಲ್ದು- ಪ್ರೀತಿಸಿ, ಅರ್ಪಿಸಲ್ಕೆ- ಒಪ್ಪಿಸುವದಕ್ಕೆ, ಬಯಸಿ, ಇರ್ಪೆವ್, ಎಂಬ, ನುಡಿಗೇಳ್ದು, ಆಗಳ್, ... ... ... ... ... ||೧೦||

ಚಾಡಯ್ಯಂ, ನಸುನಗುತೆ- ಮಂದಹಾಸವನ್ನು ಮಾಡುತ್ತ, ಎಯ್ದು- ಬಂದು, ಕೂರಸಿಯಂ- ಕ್ರೂರವಾದ ಖಡ್ಗವನ್ನು, ಆತರುಮೂಲದೊಳ್- ಆವೃಕ್ಷದ ಬುಡದಲ್ಲಿ, ಊರಿ, ನಿಂದು, ನಿಟ್ಟಿಸಿ- ನೋಡಿ, ಇನ್ನು ಪೊಸಪಣ್ಗಳಂ, ಸವಿವುದು, ಎನೆ, ಅಲ್ಲಿ, ಜಂಗಮಪ್ರಸರಂ- ಜಂಗಮಸಮುದಾಯವು, ಒರಲ್ದು- ಸಂಭ್ರಮಿಸಿ, ಪಣ್ದಿರಿಯುತ್ತೆ- ಹಣ್ಣನ್ನುಕೊಯ್ಯುತ್ತ, ಶಿವಂಗೆ, ಇತ್ತು- ಕೊಟ್ಟು, ಈರಸಂ- ಈಹಣ್ಣಿನರಸವು, ಅಮೃತೋಪಮಂ- ಅಮೃತಕ್ಕೆ ಸಮಾನವು, ಎನುತಂ, ಪ್ರಸಾದಫಲಸೇವನೆಗೆಯ್ದುದು- ಅನುಗ್ರಹರೂಪವಾದ ಫಲವನ್ನು ಸ್ವೀಕರಿಸಿದ್ದನ್ನು, ಏನನೆಂಬೆಂ- ಏನೆಂದು ಹೇಳಲಿ! ... ... ||೧೧||

ಇನಿಮಾವಿನ- ಸಿಹಿ ಮಾವಿನ, ತನಿವಣ್ಣಂ- ಪಕ್ವವಾದ ಹಣ್ಣನ್ನು ಮನದ, ಒಲವಿಂ- ಪ್ರೀತಿಯಿಂದ,

---

* (ಅವ) ಖರ- ತೀಕ್ಷ್ಣವಾದ, ಕರ- ಕಾಂತಿಯುಳ್ಳವನು. ... ... ||೯||

ಘನಜಂಗಮತತಿ ಸೇವಿಸು । ತನುನಯದಿಂ ತಣಿದು ಪೊಗಳ್ದ ದಾಗುಣನಿಧಿಯಂ ॥೧೨॥

ವ ॥ ಆಗಹನಾಂತರಾಳಮಂ ಕಳೆದು ಚೌಡದೇವಂ ನಿಜಲಿಂಗಮಧ್ಯದೊ ಳ್ಪೊಳೆಯೆ ಬಸವ ನರಿ ದೊಸಗೆ ಮಿಗೆ ಗುಡಿಗಟ್ಟಿ ಸಡಗರ ಮಿದಿರ್ಗೊಂಡು ಸಾಷ್ಟಾಂಗ ಮೆರಗಿ ಬಿಜ ಯಂಗೆಯ್ಸಿ ತಂದು ಸಮುಚಿತಸತ್ಕಾರಪೂರ್ವಕಂ ಪೂಜಿಸಿ ಪೊಗಳ್ದು ತತ್ಕಾರುಣ್ಯಮಂ ಪಡೆದು ನಿಜಗುರುಸಂಗಮೇಶ್ವರ ನೆಂಬಭಾವದಿಂ ನಂಬಿ ನಲಿದುಭಕ್ತಿಯಿಂಭಜಿಸುತ್ತಮಿರೆ॥

ಕಂ॥ ಪರಮಾನಂದದಿ ನಾಚೌಡರಸಂ ಬಸವನ ಸುಭಕ್ತಿಯಂ ಕೈಕೊಳುತಂ ॥ ಸು ರುಚಿರಕಲ್ಯಾಣದೊ ಳೊ । ಪ್ಪಿರುತಿರ್ದಂ ವೀರವೃತ್ತಿ ತನಗೆಸೆವಿನೆಗಂ ॥ ... ॥೧೩॥

ವ ॥ ಅಲ್ಲಿ ಪೆರತೊಂದುದಿವಸ ಮಾರ್ಯಗೃಹವಿವಾಹನಿಮಿತ್ತ ಮವರಿಂ ಪ್ರಾರ್ಥಿಸಲ್ಪ ಟ್ಟು ಪರಮೋತ್ಸವಂ ಮಿಗೆ ಚೌಡದೇವಂ ಪೊರಮಟ್ಟು ರಾಜವೀಧಿಯೊ ಳ್ಬರ್ಪಾಗ ಳೊತ್ತ ಟ್ಟನೆ ಕಟ್ಟಿದಿರೊ ಳಾಡಿ ಪಾಡುವ ಭಕ್ತಜನದ ಮಧ್ಯದೊ ಳೆತ್ತಿ ಬರ್ಪ ನಾನಾವಿಧಕುಸು ಮಮಾಲಿಕಾಮುಕುರಕಿಂಕಿಣೀಚಾಮರಚಿತ್ರಾಂಬರಪ್ರಕರದಿ ನಲಂಕೃತಿವೆತ್ತೆಸೆವ ವಿಮಾನ ದೊ ಳಿರ್ದ ತಾಪಸನ ಶಬಮಂ ಕಂಡು ಬಳಸಿರ್ದ ಭಕ್ತರೊಡನೆ ॥ * * * *

---

ಸೇವಿಪಂತೆ, ಇಟ್ಟಿಯು, ಪಣ್ಣಂ, ಘನಜಂಗಮತತಿ, ಅನುನಯದಿಂ, ಸೇವಿಸುತ್ತೆ, ತಣಿದು- ತೃಪ್ತಿಪಟ್ಟು, ಆ ಗುಣನಿಧಿಯಂ- ವಿಸ್ತಾರವಾದ ಗುಣಕ್ಕೆ ನಿಕ್ಷೇಪಸ್ವರೂಪನಾದ ಚೌಡಾರ್ಯನನ್ನು, ಪೊಗಳ್ದುದು- ಸ್ತೋ ತ್ರಮಾಡಿತು. ... ... ... ... ... ॥೧೨॥

ಆಗಹನಾಂತರಾಳಮಂ- ಆಕಾಡಿನಮಧ್ಯಪ್ರದೇಶವನ್ನು, ಕಳೆದು, ಚೌಡದೇವಂ, ಚೌಡಾರ್ಯನು, ನಿಜ ಲಿಂಗಮಧ್ಯದೊಳ್- ತನ್ನಲಿಂಗದಮಧ್ಯದಲ್ಲಿ, ಪೊಳೆಯೆ- ಪ್ರಕಾಶಿಸಲಾಗಿ, ಬಸವಂ, ಅರಿದು- ತಿಳಿದು, ಒ ಸಗೆ- ಉತ್ಸವವು, ಮಿಗೆ- ಹೆಚ್ಚಾಗಲಾಗಿ, ಗುಡಿಗಟ್ಟಿಸಿ- ತೋರಣವನ್ನುಕಟ್ಟಿಸಿ, ಸಡಗರದಿಂ- ಸಂಭ್ರ ಮದಿಂದ, ಇದಿರ್ಗೊಂಡು, ಸಾಷ್ಟಾಂಗಮೆರಗಿ, ಬಿಜಯಂಗೆಯ್ಸಿತಂದು, ಸಮುಚಿತಸತ್ಕಾರಪೂರ್ವಕಂ—ಸ ಮುಚಿತ- ಯೋಗ್ಯವಾದ, ಸತ್ಕಾರಪೂರ್ವಕಂ- ಉಪಚಾರಪೂರ್ವಕವಾಗಿ, ಪೂಜಿಸಿ, ಪೊಗಳ್ದು, ತತ್ಕಾರು ಣ್ಯಮಂ- ಆ ಚೌಡಾರ್ಯನಕೃಪೆಯನ್ನು, ಪಡೆದು, ನಿಜಗುರುಸಂಗಮೇಶ್ವರಂ, ಎಂಬ, ಭಾವದಿಂ- ಅಭಿಪ್ರಾ ಯದಿಂದ, ನಂಬಿ, ನಲಿದು- ಸಂತೋಷಪಟ್ಟು, ಭಕ್ತಿಯಿಂ, ಭಜಿಸುತ್ತಂ- ಸೇವಿಸುತ್ತ, ಇರೆ. * *

ಆ ಚೌಡರಸಂ, ಪರಮಾನಂದದಿಂ, ಬಸವನ, ಸುಭಕ್ತಿಯಂ, ಕೈಕೊಳುತಂ- ಅಂಗೀಕರಿಸುತ್ತ, ಸುರುಚಿರಕಲ್ಯಾಣದೊಳ್- ಮನೋಹರವಾದ ಕಲ್ಯಾಣಪಟ್ಟಣದಲ್ಲಿ, ವೀರವೃತ್ತಿ- ವೀರಶೈವವ್ಯಾಪಾರ ವು, ತನಗೆ, ಎಸೆವಿನೆಗಂ- ಪ್ರಕಾಶಿಸುತ್ತಿರಲು, ಒಪ್ಪಿ, ಇರುತ್ತೆ, ಇರ್ದಂ. ... ... ॥೧೩॥

ಅಲ್ಲಿ, ಪೆರತೊಂದುದಿವಸಂ- ಮತ್ತೊಂದುದಿವಸದಲ್ಲಿ, ಆರ್ಯಗೃಹವಿವಾಹನಿಮಿತ್ತಂ—ಆರ್ಯ- ಶ್ರೇಷ್ಠ ನ, ಗೃಹ- ಮನೆಯ, ವಿವಾಹನಿಮಿತ್ತಂ- ಮದುವೆಗೋಸ್ಕರ, ಅವರಿಂ- ಆ ಆರ್ಯನಿಂದ, ಪ್ರಾರ್ಥಿಸಲ್ಪಟ್ಟು- ಬೇಡಲ್ಪಟ್ಟು, ಪರಮೋತ್ಸವಂ- ಉತ್ಕೃಷ್ಟವಾದಸಂತೋಷವು, ಮಿಗೆ, ಚೌಡದೇವಂ, ಪೊರಮಟ್ಟು, ರಾಜವೀಧಿಯೊಳ್, ಬರ್ಪಾಗಳ್, ತೊಟ್ಟನೆ- ಜಾಗ್ರತೆಯಾಗಿ, ಕಟ್ಟಿದಿರೊಳ್- ಮುಂಭಾಗದಲ್ಲಿ, ಆಡಿ, ಪಾ ಡುವ, ಭಕ್ತಜನದ, ಮಧ್ಯದೊಳ್, ಎತ್ತಿಬರ್ಪ, ನಾನಾವಿಧ......ಪ್ರಕರದಿಂ— ನಾನಾವಿಧ- ಅನೇಕಪ್ರಕಾ ರವಾದ, ಕುಸುಮಮಾಲಿಕಾ- ಹೂವಿನಸರ, ಮುಕುರ- ಕನ್ನಡಿ, ಕಿಂಕಿಣೀ- ಸಣ್ಣಗಂಟೆ, ಚಾಮರ- ಚವರಿ, ಚಿ ತ್ರಾಂಬರ- ನಾನಾಬಣ್ಣದಬಟ್ಟೆ, ಇವುಗಳ, ಪ್ರಕರದಿಂ- ಸಮುದಾಯದಿಂದ, ಅಲಂಕೃತಿವೆತ್ತು, ಎಸೆವ, ವಿಮಾ ನದೊಳ್- ಇದ್ದ, ತಾಪಸನ- ಈ ಋಷಿಯ, ಶಬಮಂ- ಹೆಣವನ್ನು, ಕಂಡು, ಬಳಸಿ, ಇರ್ದ, ಭಕ್ತರೊಡನೆ. *

ಉ ॥ ತಾಪಸವರ್ಯನಿಂ ಪರಕೆಯಾನದೆ ಪೋಪೆನೆ ಮಂಗಲಾರ್ಥ ಮಾ । ಪೀಪಯಣ ಕ್ಕಿವಂ ಬೆರಸಿದಲ್ಲದೆ ಪೋಡಪೆ ನೆಂತೊ ಕೇಳಿ ಮೆಂ ॥ ದಾಪಟುವಿಕ್ರಮಂ ಜಡಿದು ಚಿಮ್ಮು ತೆ ಕಯ್ಯ ನಿಶಾತಖಡ್ಗಮಂ । ಭಾಪೆನುತಾರ್ದು ಬೊಬ್ಬಿರಿದು ಮುಂಗಡೆಸಾರ್ದು ಕಡಂಗು ತುರ್ಬ್ಬಿತಂ॥ ... ... ... .. ... ... ॥೧೪॥

ಚಂ ॥ ಒಸಗೆ ಯಿದೇಂ ತಪಸ್ವಿ ಶರಣಾರ್ಥಿ ಯೆನುತ್ತಿರೆ ಜೀವರಿಕ್ತತಾ । ಪಸತ ನು ಜೀವನಂಬಡೆದು ಕೇಳ್ದು ಸದಾಶಿವಮಸ್ತು ತೇ ಯೆನು ॥ ತ್ತುಸಿರೆ ಕಡಂಗಿ ಚೌಡವಿ ಭು ನಕ್ಕು ನಿರೀಕ್ಷಿಸಿ ತಾಪಸೇಂದ್ರ ನೀ । ನೊಸೆದಿಳಿ ನಂದಿವಾಹ ಮುಳಿದೀ ನರವಾಹನ ಮೇರಿ ಬರ್ಪ್ಪುದೇಂ ॥ ... ... ... ... ... ॥೧೫॥

ಕಂ ॥ ಅರರೆ ಪೊಸಜೋಹಮಾಳ್ದಂ । ತಿರೆ ನಿನ್ನಂ ನಗರೆ ನಗರದವರೆಲ್ಲ ರೆನು ॥ ತ್ತುರವಣಿಸಿ ಚರಣತಳಮಂ । ಶರಣಂ ಪಿಡಿದಲುಗೆ ತಾಪಸಂ ಸಂಭ್ರಮದಿಂ ॥ ॥೧೬॥

ಮತ್ತೇ ॥ ಇಳೆಯೊ ಳ್ಧುಮ್ಮಿಕ್ಕಿ ಬೇಗಂ ತೆಗೆದು ಬಿಗಿದು ತಳ್ಕೈಸಿ ಕೊಂಡಾಡೆದೇ ವಾ । ವಳಿ ಮರ್ತ್ಯಶ್ರೇಣಿ ಚೌಡಪ್ರಭು ಮುದದಿ ನವಂಗೂಡಿ ವೈವಾಹಸನ್ಮಂ ॥ ಗಳಕಾ

---

ತಾಪಸವರ್ಯನಿಂ, ಪರಕೆಯಂ- ಆಶೀರ್ವಾದವನ್ನು, ಆನದೆ- ಹೊಂದದೆ, ಪೋಪೆನೆ- ಮಂಗಳಾರ್ಥಂ- ಆವ- ಶುಭಕಾರ್ಯಕ್ಕೋಸ್ಕರವಾದ, ಈ ಪಯಣಕ್ಕೆ, ಇನಂ, ಬೆರಸಿದಲ್ಲದೆ, ಕೂಡಿದಹೊರ್ತು, ಎಂತುಪೋದ ಪೆನೊ- ಹ್ಯಾಗೆ ಹೋಗುವೆನೋ, ಕೇಳಿಂ- ಕೇಳಿರಿ, ಎಂದು, ಆ ಪಟುವಿಕ್ರಮಂ- ಆ ಸಮರ್ಥವಾದ ಪರಾ ಕ್ರಮವುಳ್ಳಚೌಡಾರ್ಯನು; ಕೆಯ್ಯ, ನಿಶಾತಖಡ್ಗಮಂ— ನಿಶಾತ- ತೀಕ್ಷ್ಣವಾದ, ಖಡ್ಗಮಂ- ಕತ್ತಿಯನ್ನು, ಜಡಿದು- ಅಲ್ಲಾಡಿಸಿ, ಚಿಮ್ಮುತೆ- ಹಾರಿಸುತ್ತ, ಭಾಪು- ಶಹಬಾಸು ? ಎನುತೆ, ಆರ್ದು- ಕೂಗಿ, ಬೊಬ್ಬ ರಿದು- ಕೋಲಾಹಲವಂಮಾಡಿ, ಮುಂಗಡೆಸಾರ್ದು- ಮುಂದಕ್ಕೆಬಂದು, ಕಡಂಗುತೆ- ಔತ್ಸುಕ್ಯಪಡುತ್ತ, ಉರ್ಬ್ಬಿತಂ- ಉಬ್ಬುತ್ತ. ... ... ... ... ... ... ॥೧೪॥

ತಪಸ್ವಿ- ಋಷಿಯೇ! ಇದು, ಒಸಗೆ- ಈ ಪುತ್ಸವವು, ಏಂ? ಶರಣಾರ್ಥಿ-ಸಂರಕ್ಷಣೆಯನ್ನು ಬೇಡುವೆ ನು, ಎನುತ್ತಿರೆ, ಜೀವರಿಕ್ತತಾಪಸತನು— ಜೀವ- ಪ್ರಾಣದಿಂದ, ರಿಕ್ತ- ಬಿಡಲ್ಪಟ್ಟ, ತಾಪಸ- ಋಷಿಯ, ತನು- ಶರೀರವು, ಜೀವನಂಬಡೆದು- ಪ್ರಾಣವನ್ನುಹೊಂದಿ, ಕೇಳ್ದು, ತೇ- ನಿನಗೆ, ಸದಾ- ಯಾವಾಗಲೂ, ಶಿ ವಂ- ಮಂಗಳವು, ಅಸ್ತು- ಆಗಲಿ. ಎನುತ್ತೆ, ಉಸಿರೆ- ಹೇಳಲಾಗಿ, ಚೌಡವಿಭು, ಕಡಂಗಿ- ಔತ್ಸುಕ್ಯಪಟ್ಟು, ನಕ್ಕು, ನಿರೀಕ್ಷಿಸಿ, ತಾಪಸೇಂದ್ರ! ನೀಂ, ಒಸೆದು- ಪ್ರೀತಿಸಿ, ಇಳಿ, ನಂದಿವಾಹಮುಳಿದು- ನಂದೀಶ್ವರ ವಾಹ ನವನ್ನು ಬಿಟ್ಟು, ಈನರವಾಹನಮೇರಿ- ಮನುಷ್ಯವಾಹನವನ್ನುಹತ್ತಿ, ಬರ್ಪ್ಪುದೇಂ. ... ॥೧೫॥

ನಿನ್ನಂ, ನಗರದವರ್‌ಎಲ್ಲರ್- ಪಟ್ಟಣದವರೆಲ್ಲರೂ, ಪೊಸಜೋಹಮಾಳ್ದಂತೆ- ನೂತನವೇಷವನ್ನು ಧರಿಸಿದಹಾಗೆ, ಇರೆ, ನಗರೆ- ಹಾಸ್ಯಮಾಡರೆ? ಅರರೆ! ಎನುತ್ತೆ, ಶರಣಂ- ಚೌಡದೇವನು, ಉರವಣಿಸಿ- ಸಿದ್ಧ ನಾಗಿ, ಚರಣತಳಮಂ- ಪಾದಪ್ರದೇಶವನ್ನು, ಪಿಡಿದು, ಅಲುಗೆ- ಅಲ್ಲಾಡಿಸಲಾಗಿ, ತಾಪಸಂ- ಋಷಿಯು, ಸಂಭ್ರಮದಿಂ. ... ... ... ... ... ॥೧೬॥

ಬೇಗಂ, ಇಳೆಯೊಳ್- ಭೂಮಿಯಲ್ಲಿ, ಧುಮ್ಮಿಕ್ಕಿ- ಧುಮುಕಿ, ತೆಗೆದು, ಬಿಗಿದು- ಗಟ್ಟಿಯಾಗಿ, ತ ಳ್ಕೈಸಿ- ಆಲಿಂಗಿಸಲಾಗಿ, ದೇವಾವಳಿ- ದೇವತೆಗಳ ಸಮೂಹವು, ಮರ್ತ್ಯಶ್ರೇಣಿ- ಭೂಜನದ ಸಮುದಾ ಯವು, ಕೊಂಡಾಡೆ- ಶ್ಲಾಘಿಸಲಾಗಿ, ಚೌಡಪ್ರಭು, ಮುದದಿಂ- ಸಂತೋಷದಿಂದ, ಅವಂಗೂಡಿ- ಆತಾಪಸ ನೊಡನೆಕೂಡಿ, ವೈವಾಹಸನ್ಮಂಗಳಕಾರ್ಯಕ್ಕೆ- ವಿವಾಹಶುಭಕಾರ್ಯಕ್ಕೆ, ಒಲ್ದು, ಬರ್ಪ, ಆಪಥದೊಳ್- ಆ

ರ್ಯಕ್ಕೊಳ್ಪುದ್ದಿಂ ಬರ್ಪಪಥದೊಳೆಸೆದು ದುದ್ದಂಡಶಾಖಾಕದಂಬೋ । ಜ್ವಲಪೂರ್ಣೋದೀ
ರ್ಣಶುಂಭತ್ಫಲಕುಲವಿಲಸಚ್ಛಾಯಕಂ ಪ್ಲಕ್ಷವೃಕ್ಷಂ ॥ ... ... ॥೧೭॥

ವ ॥ ಅಂತೊಪ್ಪುವ ಪೇರಾಲಮರದ ಬಳಿಗೊಂಡು ಸಾರ್ದು ತುರುಗಾವ ಕಿರುಕುಳ
ರ್ನೆರೆದೆರಳ್ಬಳವಾಗಿ ನಿಂದು ಪರಿವರಿದಾಡುತ್ತಲೆಳಸುತ್ತೀಬಸವನಾಲಮೆಮಗಂ ನಿಮಗಂ ಮ
ಧ್ಯಸ್ಥಮಿದು ಮುಟ್ಟೆ ಗೆಲ್ವ ಮಲ್ಲದೊಡೆ ಸೋಲಮೆಂಬ ಸೊಲ್ಲಂ ಕೇಳ್ದು ಚೌಡವಿಭು
ನಿಂದಾಗೋವಳರು ಕೈವೀಸಿ ಕರೆದೀವಟವೃಕ್ಷಕ್ಕೆ ಬಸವನಾಲಮೆಂಬ ಪೆಸರೇಂ ಕಾರಣಂ
ಬಂದುದೆಂದು ಬೆಸಗೊಳ್ವನ ಮಾತುರುವಳರೊಳ್ ಪಿರಿಯನಾದೋರ್ವನಿಂತೆಂದಂ ॥ * *

ಉ ॥ ಕೇಳೆಲೆ ದೇವ ಸಪ್ತದಿವಸಂಬರಮೀಪೊಲದಲ್ಲಿ ಮುನ್ನೆರ । ಳ್ಗೂಳಿಗಳೆಯ್ದೆ
ಕಾದುತಿರೆ ಮೋಣದರೊಳ್ ನೆಗಳ್ದೊಂದು ನೊಂದು ರ ॥ ಕ್ತಾಳಿ ಪ್ರೊದಳ್ದು ಸೂಸೆ ಮಡಿದ
ತ್ತದನೀಯೆಡೆಯಲ್ಲಿ ತಾಪಸ । ರ್ಪೂಳೆ ವಟಾಂಕುರಂ ನಿಮಿರ್ದುಪೆರ್ಮರ ನಾದು ದಿದೆಂದು
ನಲ್ಮೆಯಿಂ ॥ ... ... ... ... ... .. ॥೧೮॥

ಉ ॥ ತನ್ನ ಪಿತಾಮಹಂ ತನಗೆ ಪೇಳ್ದನೆನುತ್ತಿದನೆಮ್ಮ ತಂದೆ ಪೇ । ಳ್ದಂ ನಿಜ

---

ಮಾರ್ಗದಲ್ಲಿ, ಉದ್ದಂಡ......ಯುಕಂ—ಉದ್ದಂಡ- ಉತ್ಕೃಷ್ಟವಾದ, ಶಾಖಾ- ಕೊಂಬೆಗಳ, ಕದಂಬ- ಸ
ಮುದಾಯದಿಂದ, ಉಜ್ವಲ- ಪ್ರಕಾಶಮಾನವಾದ, ಪೂರ್ಣ- ಸಂಪೂರ್ಣವಾದ, ಉದೀರ್ಣ- ಅಧಿಕವಾದ,
ಶುಂಭತ್- ಪ್ರಕಾಶಿಸುವ, ಫಲ- ಹಣ್ಣುಗಳ, ಕುಲ- ಸಮುದಾಯದಿಂದ, ವಿಲಸತ್- ಪ್ರಕಾಶಿಸುವ, ಛಾಯ
ಕಂ- ನೆರಳುಳ್ಳ, ಪ್ಲಕ್ಷವೃಕ್ಷಂ- ಆಲದಮರವು, ಎಸೆದುದು. ... ... ॥೧೭॥

ಅಂತು, ಒಪ್ಪುವ- ಪ್ರಕಾಶಿಸುವ, ಪೇರಾಲಮರದ- ದೊಡ್ಡಾಲದಮರದ, ಬಳಿಗೊಂಡು- ಸಮೀಪ
ವನ್ನನುಸರಿಸಿ, ಸಾರ್ದು- ಬಂದು, ತುರುಗಾವ- ದನಮೇಯಿಸುವ, ಕಿರುಕುಳರ್- ಸಣ್ಣವರು, ನೆರೆದು-
ಸೇರಿ, ಎರಳ್ಬಳಂ- ಎರಡುಗುಂಪು, ಆಗಿ, ನಿಂದು, ಪರಿವರಿದು- ಓಡಿಓಡಿ, ಆಡಲ್, ಎಳಸುತ್ತೆ- ಅಪೇಕ್ಷಿಸುತ್ತ,
ಈಬಸವನಾಲಂ- ಈಬಸವನಾಮಾಂಕಿತವಾದ ಆಲದಮರವು, ಎಮಗಂ- ನಮಗೂ, ನಿಮಗಂ- ನಿಮಗೂ,
ಮಧ್ಯಸ್ಥಂ- ಮಧ್ಯದಲ್ಲಿರುವದು, ಇದಂ, ಮುಟ್ಟೆ-ಮುಟ್ಟಲು, ಗೆಲ್ವಂ- ಗೆಲ್ಲುವಿಕೆಯು; ಅಲ್ಲದೊಡೆ, ಸೋ
ಲಂ- ಸೋಲುವಿಕೆಯು, ಎಂಬ, ಸೊಲ್ಲಂ- ಮಾತನ್ನು, ಚೌಡವಿಭು, ಕೇಳ್ದು, ನಿಂದು, ಆಗೋವಳರಂ- ಆ
ಗೋಪಾಲಕರನ್ನು, ಕೈವೀಸಿ- ಕೆಯ್ಯನ್ನುಬೀಸಿ, ಕರೆದು, ಈ ವಟವೃಕ್ಷಕ್ಕೆ- ಈ ಆಲದಮರಕ್ಕೆ, ಬಸವನಾ
ಲಂ, ಎಂಬ, ಪೆಸರ್, ಏಂಕಾರಣಂ- ಏನುಕಾರಣ, ಬಂದುದು? ಎಂದು, ಬೆಸಗೊಳ್ವನಂ- ಪ್ರಶ್ನೆಮಾಡುವಕಾ
ಲದಲ್ಲಿ, ಆತುರುವಳರೊಳ್- ಆ ಗೋಪಾಲಕರಲ್ಲಿ, ಪಿರಿಯಂ- ಹಿರಿಯವನು, ಆದ, ಓರ್ವಂ, ಇಂತು,
ಎಂದಂ. * * * * * * * * * * * * * * * * *

ಎಲೆದೇವ- ಎಲೈಸ್ವಾಮಿಯೇ ! ಕೇಳ್, ಮುನ್ನ, ಈ ಪೊಲದೊಳ್, ಎರಡ್ಗೂಳಿಗಳ್, ಎಯ್ದೆ- ಚೆ
ನ್ನಾಗಿ, ಸಪ್ತದಿವಸಂಬರಂ- ಏಳುದಿವಸದವರಿವಿಗೂ, ಕಾದುತೆ- ಯುದ್ಧಮಾಡುತ್ತ, ಇರೆ, ಮೋಣ್, ಅದ
ರೊಳ್, ನೆಗಳ್ದ- ಪ್ರಸಿದ್ಧವಾದ, ಒಂದು, ನೊಂದು- ರಕ್ತಾಳಿ- ರಕ್ತಪ್ರವಾಹವು, ಪ್ರೊದಳ್ದು- ವಿಶೇಷವಾ
ಗಿ, ಸೂಸೆ- ಸುರಿಯಲಾಗಿ, ಮಡಿದತ್ತು- ಮರಣವನ್ನುಹೊಂದಿತು, ಅದಂ, ಈ ಯೆಡೆಯಲ್ಲಿ- ಈ ಸ್ಥಾನದಲ್ಲಿ,
ತಾಪಸರ್, ಪೂಳೆ- ಹೂಳಲಾಗಿ, ವಟಾಂಕುರಂ- ಆಲದಮರದ ಮೊಳಕೆಯು, ನಿಮಿರ್ದು- ಉದ್ದವಾಗಿ, ಇ
ದು, ಪೆರ್ಮರಂ- ದೊಡ್ಡಮರವು, ಆದುದು, ಎಂದು, ನಲ್ಮೆಯಿಂ- ಪ್ರೀತಿಯಿಂದ. ... ॥೧೮॥

ತನ್ನ, ಪಿತಾಮಹಂ- ಹೆತ್ತಪ್ಪನು, ತನಗೆ, ಪೇಳ್ದಂ, ಎಂದು, ಎಮ್ಮ, ತಂದೆ, ಪೇಳ್ದಂ- ನಿಜಂ, ಅಂತ
ರಿಂ- ಆದುದರಿಂದ, ಇದು, ಬಸವನಾಲಂ, ಎಂದು, ಉರ್ವಿಯೊಳ್, ಎನಿಸಿದುದು, ಚೆನ್ನೆಸವ- ಚೆನ್ನಾಗಿ ಪ್ರಕಾ

ಮುಂತೆರಂ ಬಸವನಾಲ ಮಿಡಿದೆಡೆಸಿಸಿರ್ದ್ದ ದುರ್ವಿಯೊ ॥ ಛಿನ್ನಸಪೀಫಳಂ ಸವಿಯೆ ಮಾಂಸ
ದ ಮಾಕ್ಕೆಯೊಳಿರ್ಪ್ಪುದಯ್ಯ ಕೇಳ್ । ನನ್ನಿಯಿದಲ್ತೆ ಸೀಳ್ದೆಡೆಯ ಪಾಲ್ಸುರಿದಪ್ಪುದು
ರಕ್ತದಂತೆವೋಲ್ ॥ ... ... ... ... ... ॥೧೯॥

ವ ॥ ಎಂದವನುಸಿರ್ವಿನಂ ಬಳಸಿರ್ದ್ದ ಜನಂ ಕೇಳ್ದು ಬಹುಕಾಲವ್ಯತೀತವೃತ್ತಾಂತಮಿದರೊಳೆಸವುದ್ಯೋಗಮೇಂ ಮುಂದಣ್ಗೆ ಬಿಜಯಂಗೆಯ್ಸಿ ಯೆನೆ ಬಾಡದೇನಂ ನಕ್ಕು ದೃಢತರವೀರವ್ರತಪರಾಯಣರ್ಗೆ ಚಿರಂತನ ಮೆಂಬ ಶಂಕೆಯೇಂ ಬಸವನ ನಳಿವಂ ಕೇಳ್ದುಪೇಕ್ಷಿಸಿ ಪೋಗೆ ತದ್ವ್ರತಭಂಗವಾಗದೆಂತಿರ್ಕ್ಕುಮದುಕಾರಣದಿಂ ಸೀಗಳ್ ॥ * *

ಕಂ ॥ ಮೃಡಭಕ್ತರ ಘನಕೃಪೆಯಿಂ । ಪಡೆದಪೆ ನೀಂ ಬಸವನಸುವ ನೀಮದುವೆಗಿವಂ ॥
ಬಿಡದೊಡನೆಳ್ತಂದಲ್ಲದೆ । ನಡೆಯೆಂ ನಿಜ ಮೆಂದು ನಿಂದು ಬೊಬ್ಬಿಡುತಧಟಂ ॥ ॥೨೦॥

ಕಂ ॥ ನೆರೆಗಲಿ ಕುರುಳ್ಚಿ ಚಿಮ್ಮುತೆ । ಮಿರುಪಸಿಯಂ ವಟಮಹೀಜಮೂಲದೊಳೂ
ರುತ್ತುರೆ ನಿಂದು ವೃಷಭಪೊರಮಡು । ಪೊರಮಡು ಜವದಿಂದ ಮೆಂಬುದುಂ ತತ್ಕ್ಷಣದೊಳ್ ॥

ಚಂ ॥ ಛಿಟಿಛಿಟಿಲೆಂದು ಬೇರ್ಸಿಡಿಯೆ ಪಣ್ಗಳಿಳಾಗ್ರದೊಳಲ್ಲಿ ಸೂಸೆ ತ । ದ್ವಟತ

---

ಶಿಸುವ, ಈ ಫಳಂ, ಸವಿಯೆ- ತಿನ್ನಲಾಗಿ, ಮಾಂಸದ, ಮಾಕ್ಕೆಯಾಳ್- ರೀತಿಯಿಂದ, ಇರ್ಪ್ಪುದು, ಸೀಳ್ದ ಎಡೆಯಲ್ಲಿ- ಸ್ಥಾನದಲ್ಲಿ, ರಕ್ತದಂತೆವೋಲ್, ಪಾಲ್, ಸುರಿದಪ್ಪುದು, ಅಯ್ಯ, ಇದು, ನನ್ನಿಯಲ್ತೆ- ನಿಶ್ಚಯವಲ್ಲವೇ? ಕೇಳ್. ... ... ... ... ... ॥೧೯॥

ಎಂದು, ಅವನು, ಉಸಿರ್ವಿನಂ- ಹೇಳುವ ಕಾಲದಲ್ಲಿ, ಬಳಸಿ, ಇರ್ದ್ದ, ಜನಂ, ಕೇಳ್ದು, ಬಹುಕಾಲವ್ಯತೀತವೃತ್ತಾಂತಂ- ಬಹಳದಿನವುಕಳೆದ ವರ್ತಮಾನವು, ಇದರೊಳ್- ಇದರ ವಿಷಯದಲ್ಲಿ, ಎಸಪ- ಮಾಡುವ, ಉದ್ಯೋಗಂ- ಉದ್ಯೋಗವು, ಏಂ? ಮುಂದಣ್ಗೆ- ಮುಂದಕ್ಕೆ, ಬಿಜಯಂಗೆಯ್ಸಿ- ದಯಮಾಡಿಸಿರಿ, ಎನೆ, ಬಾಡದೆ ಮಂ, ನಕ್ಕು, ದೃಢತರವೀರವ್ರತಪರಾಯಣರ್ಗೆ— ದೃಢತರ- ಬಹುಸ್ಥಿರವಾದ, ವೀರವ್ರತ- ವೀರಶೈವನಿಯಮದಲ್ಲಿ, ಪರಾಯಣರ್ಗೆ- ಆಸಕ್ತಿಯುಳ್ಳವರಿಗೆ, ಚಿರಂತನಂ- ಪುರಾತನವು, ಎಂಬ, ಶಂಕೆಯೇಂ- ಸಂದೇಹವೇನು? ಬಸವನ, ಅಳಿವಂ- ಮರಣವನ್ನು, ಕೇಳ್ದು, ಉಪೇಕ್ಷಿಸಿ- ಉದಾಸೀನಮಾಡಿ, ಪೋಗೆ, ತದ್ವ್ರತಭಂಗಂ- ನಿಯಮಕ್ಕೆ ಹಾನಿಯು, ಆಗದೆ, ಎಂತಿರ್ಕ್ಕುಂ- ಹ್ಯಾಗಿರುವದು? ಅದುಕಾರಣದಿಂ- ಆಕಾರಣದಿಂದ, ಈಗಳ್. * * * * * * * * * * * * * * * *

ಮೃಡಭಕ್ತರ- ಶಿವಭಕ್ತರ, ಘನಕೃಪೆಯಿಂ- ಉದ್ದಾಮವಾದದಯೆಯಿಂದ, ಈ ಬಸವನ, ಅಸುವಂ- ಪ್ರಾಣವನ್ನು, ಪಡೆದಪೆ, ಈ ಮದುವೆಗೆ, ಇವಂ, ಬಸವ, ಒಡನೆ- ಜೊತೆಯಲ್ಲಿ, ಎಳ್ತಂದಲ್ಲದೆ- ಬಂದಹೊರತು, ನಡೆಯೆಂ- ಹೋಗೆನು, ನಿಜಂ- ನಿಶ್ಚಯವು, ಎಂದು, ನಿಂದು, ಅಧಟಂ- ಪರಾಕ್ರಮದಿಂದ, ಬೊಬ್ಬಿಡುತಂ- ಕೋಲಾಹಲಮಾಡುತ್ತ. ... ... ... ... ॥೨೦॥

ನೆರೆಗಲಿ- ಸಮರ್ಥನಾದ ಚೌಹಾರ್ಯನು, ಕುರುಳ್ಚಿ- ಆಯುಧವನ್ನು ಅಲ್ಲಾಡಿಸುತ್ತ, ಚಿಮ್ಮುತೆ- ಒದರುತ್ತ, ಮಿರುಪ- ಪ್ರಕಾಶಿಸುವ, ಅಸಿಯಂ- ಕತ್ತಿಯನ್ನು, ವಟಮಹೀಜಮೂಲದೊಳ್- ಆಲದ ಮರದಬುಡದಲ್ಲಿ, ಊರುತ್ತೆ, ಉರೆ- ಚೆನ್ನಾಗಿ, ನಿಂದು, ವೃಷಭ- ಎಲೈಬಸವನೇ! ಜವದಿಂ- ಜಾಗ್ರತೆಯಿಂದ, ಪೊರಮಡು- ಹೊರಡು, ಪೊರಮಡು- ಹೊರಡು, ಎಂಬುದುಂ- ಎನ್ನಲಾಗಿ, ತತ್ಕ್ಷಣದೊಳ್- ಲಕ್ಷಣದಲ್ಲಿ. ॥೨೧॥

ಛಿಟಿಛಿಟಿಲ್, ಎಂದು, ಬೇರ್, ಸಿಡಿಯೆ- ಹಾರಲಾಗಿ, ಪಣ್ಗಳ್, ಇಳಾಗ್ರದೊಳ್- ಭೂಮಿಯ ಮೇಲೆ, ಅಲ್ಲಿ, ಸೂಸೆ- ಸುರಿಯುಲಾಗಿ, ತದ್ವಟತರು- ಆ ಆಲದ ಮರವು, ಕಂಪಿಸುತ್ತಿರೆ- ನಡುಗುತ್ತಿರಲಾಗಿ, ಧ

ರು ಕಂಪಿಸುತ್ತಿರೆ ಧರಾತಳ ಮಿರ್ಬಗೆಯಾಗೆ ಪೊಣ್ಮುತು ॥ ತ್ಕಟಸಿ ಕಡುಂಗು ತುರ್ಬಿ ಕೆಲೆ ಯುತ್ತೆ ರಣತ್ಕೃತಿ ಯುಣ್ಮೆ ತೀವ್ರದಿಂ । ಪುಟನೆಗೆದೇಳ್ದು ದಂದು ಬಸವಂ ಬಿಸವಂದದಪು ದಾಗೆ ನೋಳ್ಪರೊಳ್ ॥ ... ... ... ... ... ॥೨೨॥

ಮ ॥ ಸ್ರ ॥ ತನಗಂದೋರಂತೆ ಕ್ರಮದಿ ಕೈಗೆಯ್ದರಿಸಿನ ವಲರೊಳ್ಪಾಸಿಗು ಪ್ರಾಸರಂ ಚಂ । ದನಲೇಪಂ ಭೂರಿ ಭೂರಿಸ್ವನ ಕನಕಲಸದ್ಘಂಟಿಕಾಕಿಂಕಿಣೀವಮಾ ॥ ಲೆ ನವೀನಂ ಚೇ ಲ ಮಾದಂ ಮಿಸುಗೆ ಮೆರೆದು ದುದ್ಯತ್ಕಕುದ್ಬಂಧುರಂ ಮಂ । ಜುನಿಜಾಂಗಂತುಂಗಶೃಂಗಂ ಮಿಳದರುಣಿಮ ಚಂಚತ್ಕಟಾಕ್ಷಂ ಮಹೋಕ್ಷಂ ॥ ... ... ... ॥೨೩॥

ಮ ॥ ಸ್ರ ॥ ಮಲೆಯುತ್ತಂ ಪುತ್ತ ನೊಲ್ದೀಡಿರಿಯು ತಗಿಯುತಂ ಬಾಲಮಂ ಬೀಸುತಂ ಸಂ । ಚರಿಸುತ್ತಂ ಚೆಲ್ಲದಿಂದಂ ನೆಗೆಯುತೆ ಕೆಲನಂ ನೋಡುತುಬ್ಬುತ್ತೆ ಪುಲ್ಲಂ ॥ ಸಲೆ ಕರ್ಚುತ್ತತ್ತ ಮಿತ್ತಂ ಪರಿಯುತೆ ನೆಳಲಂ ಕಂಡು ಮೇಲ್ವಾಯುತಂ ಕೋ । ಡಲುಗು ತ್ತಂ ಘೂರ್ಣಿಸುತ್ತಂ ಕೆಲೆಯುತೆಸೆದುದಾಮೋದಸಾಂದ್ರಂ ವೃಷೇಂದ್ರಂ ॥ ... ॥೨೪॥

---

ರಾತಳಂ- ಭೂಮಿಯು, ಇರ್ಬಗೆಯಾಗೆ- ಎರಡುಭಾಗವಾಗಲಾಗಿ, ಅಂದು, ಬಸವಂ, ಪೊಣ್ಮುತೆ- ಹೊರಕ್ಕೆ ಹೊರಟು, ಉತ್ಕಟಿಸಿ- ಬಲವಿಶಿಷ್ಟವಾಗಿ, ಕಡಂಗುತೆ- ಔತ್ಸುಕ್ಯಪಡುತ್ತ, ಉರ್ಬಿ- ಉಬ್ಬಿ, ಕೆಲೆಯುತ್ತೆ- ಕೂಗುತ್ತ, ರಣತ್ಕೃತಿ- ರಣತ್ಕಾರವು, ಉಣ್ಮೆ- ಉಂಟಾಗಲಾಗಿ, ತೀವ್ರದಿಂ- ಜಾಗ್ರತೆಯಿಂದ, ಪುಟನೆಗೆದು- ಮೇಲಕ್ಕೆ ಹಾರಿ, ನೋಳ್ಪರೊಳ್- ನೋಡುವರಲ್ಲಿ, ಅದುಬಿಸವಂದಂ- ಆ ಆಶ್ಚರ್ಯವು, ಆಗೆ, ಏಳ್ದುದು. ... ... ... ... ... ... ॥೨೨॥

ತನಗೆ, ಅಂದು- ಆಕಾಲದಲ್ಲಿ, ಓರಂತೆ- ಕ್ರಮವಾಗಿ, ಕೈಗೆಯ್ದು, ಅರಸಿನು, ಅಲಂಕರಿಸಿದ, ಅಲರ- ಹೂವಿನ, ಒಳ್ಪಾಸಿಗಂ- ಒಳ್ಳೆಯಬಾಸಿಂಗವು, ಪ್ರಾಸರಂ- ಪುಷ್ಪಮಾಲೆಯು, ಚಂದನಲೇಪಂ- ಶ್ರೀಗಂಧಾ ನುಲೇಪನವು, ಭೂತಿ- ಭಸ್ಮವು, ಭೂರಿಸ್ವನಕನಕಲಸದ್ಘಂಟಿಕಾಕಿಂಕಿಣೀವಮಾಲೆ— ಭೂರಿಸ್ವನ- ಅಧಿಕವಾದ ಧ್ವನಿಯುಳ್ಳ, ಕನಕ- ಸುವರ್ಣದ, ಲಸತ್- ಪ್ರಕಾಶಿಸುವ, ಘಂಟಿಕಾ- ಗಂಟೆಗಳು, ಕಿಂಕಿಣೀ- ಸಣ್ಣಗೆಜ್ಜೆಗಳು, ಇವುಗಳ, ಮಾಲೆ- ಪಂಕ್ತಿಯು, ನವೀನಂ- ನೂತನವಾದ, ಚೇಲಂ- ವಸ್ತ್ರವು, ಆದಂ- ಅತ್ಯಂತವಾಗಿ, ಮಿಸುಗೆ- ಪ್ರಕಾಶಿಸಲು, ಉದ್ಯತ್ಕಕುದ್ಬಂಧುರಂ— ಉದ್ಯತ್- ಉತ್ಕೃಷ್ಟವಾದ, ಕಕುತ್- ಹಿರಳಿನಿಂದ, ಬಂಧುರಂ- ಮನೋಹರವಾದ, ಮಂಜುನಿಜಾಂಗಂ— ಮಂಜು- ಮನೋಹರವಾದ, ನಿಜ- ತನ್ನ, ಅಂಗಂ- ಶರೀರವುಳ್ಳ, ತುಂಗಶೃಂಗಂ— ತುಂಗ- ಉನ್ನತವಾದ, ಶೃಂಗಂ- ಕೊಂಬುಳ್ಳ, ಮಿಳದರುಣಿಮಚಂಚತ್ಕಟಾಕ್ಷಂ- ಮಿಳತ್- ಕೂಡಿಕೊಂಡಿರುವ, ಅರುಣಿಮ- ಕೆಂಪುಬಣ್ಣದಿಂದ, ಚಂಚತ್- ಚಪಲವಾದ, ಕಟಾಕ್ಷಂ- ಕಡೆಗಣ್ಣುಳ್ಳ, ಮಹೋಕ್ಷಂ- ದೊಡ್ಡಬಸವನು, ಮೆರೆದುದು- ಪ್ರಕಾಶಮಾನವಾಯ್ತು. ... ॥೨೩॥

ಮಲೆಯುತ್ತಂ- ಕೊಬ್ಬಿನಿಂದ ತೂಗಾಡುತ್ತ, ಪುತ್ತಂ- ಹುತ್ತವನ್ನು, ಒಲ್ದು- ಪ್ರೀತಿಸಿ, ಈಡಿರಿಯುತ್ತೆ- ತಿವಿಯುತ್ತೆ, ಅಗಿಯುತಂ- ಬಗೆಯುತ್ತ, ಬಾಲಮಂ, ಬೀಸುತಂ, ಸಂಚರಿಸುತ್ತಂ- ಸಂಚಾರಮಾಡುತ್ತಾ, ಚೆಲ್ಲದಿಂದಂ- ವಿಲಾಸದಿಂದ, ನೆಗೆಯುತೆ- ಹಾರುತ್ತ, ಕೆಲನಂ-ಒಂದುಪಾರ್ಶ್ವವನ್ನು, ನೋಡುತೆ, ಉಬ್ಬುತ್ತೆ, ಪುಲ್ಲಂ- ಹುಲ್ಲನ್ನು, ಸಲೆ, ಕರ್ಚುತೆ- ಕಚ್ಚುತ್ತ, ಅತ್ತಂ, ಇತ್ತಂ, ಪರಿಯುತೆ- ಸಂಚರಿಸುತ್ತ, ನೆಳಲಂ- ತನ್ನ ನೆಳಲನ್ನು, ಕಂಡು, ಮೇಲೆ ಬೀಳುತ್ತ, ಕೋಡಲುಗುತ್ತಂ- ಕೊಂಬನ್ನು ಅಲ್ಲಾಡಿಸುತ್ತ, ಘೂರ್ಣಿಸುತ್ತಂ- ಸುತ್ತುತ್ತ, ಕೆಲೆಯುತೆ- ಕೂಗುತ್ತ, ಆಮೋದಸಾಂದ್ರಂ- ಸಂತೋಷದಿಂದಪರಿಪೂರ್ಣನಾದ, ವೃಷೇಂದ್ರಂ- ವೃಷಭಶ್ರೇಷ್ಠವು, ಎಸೆದುದು. ... ... ... ॥೨೪॥

ಚಂ ॥ ಪೆರದನಿಯಾಗೆ ಕೇಳ್ದು ಕಿವಿಯಾಡಿಸುತಂ ಮೊಗವೆತ್ತಿ ಮೇಲೆ ಮೆ । ಲ್ಕಿರಿಯುತೆ ಮೂತ್ರಮಂ ಬಿಡುತೆ ಗೋಮಯಮಿಕ್ಕುತೆ ವೃಕ್ಷಪರ್ಣಮಂ ॥ ಮುರಿಯುತೆ ಶೃಂಗದಿಂ ಬಳಸಿ ಸುತ್ತುತೆ ನೆಕ್ಕುತೆ ಪಾಸಿಸುತ್ತೆ ಪ । ಲ್ದೆರೆಯುತೆ ಪಾಯ್ವುತಂ ಮೆರೆದುದಾಶರಣಂ ನಲವೆರ್ಚೆ ಪುಂಗವಂ ॥ ... ... ... ... ॥೨೪॥

ವ ॥ ಅಂತು ನಿಜಲೀಲೆಯಿಂ ನಿಕಟದೊಳ್ ಬನದಿಪ ವೃಷಭೇಂದ್ರನಂ ಚೌಡದೇವಂ ಮುದಂ ಮಿಗೆ ನೋಡಿ ಮೈದಡವಿ ಕೊರಲಂ ಬಿಗಿಯಪ್ಪಿ ರಾಗಿಸುತ್ತಂ ಮತ್ತಂ ಮಿರೆ ॥

ಮ ॥ ಸ್ರ ॥ ಒಲವಿಂ ತತ್ಪಾದಮಂ ತಾಂ ತೊಳೆದು ಕುಸುಮಗಂಧಾಕ್ಷತಾಮೋದಧೂಪೋ । ಜ್ವಲದೀಪಾನೀಕದಿಂ ದರ್ಚಿಸಿ ಮಧುರಸುಧಾಜ್ಯಾದಿಸಂತರ್ಪಣಂಗೆ ॥ ಯ್ದಲರ್ದಿತ್ತೋರಂತೆ ಪುಷ್ಪಾಂಜಲಿಯ ನೆಲೆವೃಷಾಧೀಶ ನೀಂ ಬರ್ಪುದೆಮ್ಮ । ವಿಲಸತ್ಕಲ್ಯಾಣಕಾರ್ಯಕ್ಕೆನುತೆ ತಳರ್ದ ನುಕ್ಷಾನ್ವಿತಂ ಚೌಡದೇವಂ ॥ ... ... ॥೨೫॥

ವ ॥ ಅಂತು ಶಿವಗಣಾವೃತಂ ಮಾರ್ಗಮಂ ಪತ್ತಿ ಕಿರಿದುದೂರಂ ಪೋಗೆಪೋಗೆ ಮುಂಗಡೆಯೊಳ್ ॥ * * * * * * * * * * * * * *

ಚಂ ॥ ಘುಳುಘುಳಿಸುತ್ತೆ ಬರ್ಪತೆರೆಯಿಂ ನೊರೆಯಿಂ ಕಳಹಂಸಪಙ್ಕ್ತಿಯಿಂ । ಜಳರು

---

ಪುಂಗವಂ- ವೃಷಭವು, ಪೆರದನಿಯಾಗೆ- ಮತ್ತೊಂದು ಧ್ವನಿಯಾಗಲಾಗಿ, ಕೇಳ್ದು, ಕಿವಿಯಾಡಿಸುತಂ- ಕಿವಿಯನ್ನು ಆಡಿಸುತ್ತ, ಮೊಗವೆತ್ತಿ- ಮುಖವನ್ನೆತ್ತಿ, ಮೇಲೆ, ಮೆಲ್ಕಿರಿಯುತೆ, ಚರ್ವಿತಚರ್ವಣಮಂ ಮಾಡುತ್ತ, ಮೂತ್ರಮಂ, ಬಿಡುತೆ, ಗೋಮಯಮಿಕ್ಕುತೆ- ಶೊಪ್ಪೆ ಹಾಕುತ್ತ, ಶೃಂಗದಿಂ- ಕೊಂಬಿನಿಂದ, ವೃಕ್ಷಪರ್ಣಮಂ- ಮರದ ಎಲೆಯನ್ನು, ಮುರಿಯುತೆ, ಬಳಸಿ, ಸುತ್ತುತೆ, ನೆಕ್ಕುತೆ, ಪಾಸಿಸುತ್ತೆ- ಆಘ್ರಾಣಿಸುತ್ತೆ, ಪಲ್ದೆರೆಯುತೆ- ಹಲ್ಲನ್ನು ಕಿರಿಯುತ್ತ, ಪಾಯ್ವುತಂ- ಲಂಘಿಸುತ್ತ, ಆಶರಣಂ, ನಲವೆರ್ಚೆ- ಪ್ರೀತಿಹೆಚ್ಚಲಾಗಿ, ಮೆರೆದುದು. ... ... ... ... ... ॥೨೪॥

ಅಂತು, ನಿಜಲೀಲೆಯಿಂ- ಸ್ವಕೀಯಲೀಲೆಯಿಂದ, ನಿಕಟದೊಳ್- ಸಮೀಪದಲ್ಲಿ, ಬನದಿಪ- ವಿನೋದಿಸುವ, ವೃಷಭೇಂದ್ರನಂ, ಚೌಡದೇವಂ, ಮುದಂ- ಸಂತೋಷವು, ಮಿಗೆ, ನೋಡಿ, ಮೈದಡವಿ- ಮೈಯ್ಯನ್ನು ಸವರಿ, ಕೊರಲಂ- ಕಂಠವನ್ನು, ಬಿಗಿಯಪ್ಪಿ- ಗಾಢಾಲಿಂಗನೆಯನ್ನುಮಾಡಿ, ರಾಗಿಸುತ್ತಂ- ಪ್ರೀತಿಸುತ್ತ, ಮತ್ತಂ, ಇರೆ. * * * * * * * * * * * * * * * *

ಒಲವಿಂ- ಪ್ರೀತಿಯಿಂದ, ತತ್ಪಾದಮಂ- ಆ ವೃಷಭನ ಪಾದವನ್ನು, ತೊಳೆದು, ಕುಸುಮ...ದಿಂದೆ— ಕುಸುಮ- ಪುಷ್ಪವೇನು, ಗಂಧ- ಶ್ರೀಗಂಧವೇನು, ಅಕ್ಷತ- ಅಕ್ಷತೆಯೇನು, ಆಮೋದಧೂಪ- ಪರಿಮಳಧೂಪವೇನು, ಉಜ್ವಲ- ಪ್ರಕಾಶಮಾನವಾದ, ದೀಪ- ದೀಪವೇನು, ಇವುಗಳ, ಅನೀಕದಿಂದೆ- ಸಮುದಾಯದಿಂದ, ಅರ್ಚಿಸಿ -ಪೂಜಿಸಿ, ಮಧುರಾಜ್ಯಾದಿಸಂತರ್ಪಣಂಗೆಯ್ದು- ಮನೋಹರವಾದ ತುಪ್ಪವೇ ಮೊದಲಾದವುಗಳಿಂದ ಸಮಾರಾಧನೆಯನ್ನುಮಾಡಿ, ಅಲರ್ದು- ಸಂತೋಷವಿಶಿಷ್ಟನಾಗಿ, ಪುಷ್ಪಾಂಜಲಿಯಂ, ಇತ್ತು, ಎಲೆವೃಷಾಧೀಶ, ಎಮ್ಮೊಳ್, ವಿಲಸತ್ಕಲ್ಯಾಣಕಾರ್ಯಕ್ಕೆ- ಪ್ರಕಾಶಮಾನವಾದ ವಿವಾಹಕ್ಕೆ, ನೀಂ, ಬರ್ಪುದು, ಎನುತೆ, ಉಕ್ಷಾನ್ವಿತಂ- ವೃಷಭನಿಂದಕೂಡಿದ, ಚೌಡದೇವಂ, ತಳರ್ದಂ- ಹೊರಟನು. ... ॥೨೫॥

ಅಂತು, ಶಿವಗಣಾವೃತಂ- ಪ್ರಮಥಗಣಸಹಿತನಾದಚೌಡದೇವನು, ಮಾರ್ಗಮಂ, ಪತ್ತಿ- ಹೊಂದಿ, ಕಿರಿದುದೂರಂ, ಸ್ವಲ್ಪದೂರವು, ಪುಗೆಪುಗೆ- ಪ್ರವೇಶಿಸಲಾಗಿ, ಮುಂಗಡೆಯೊಳ್. * * * * *

ಘುಳುಘುಳಿಸುತ್ತೆ, ಬರ್ಪ, ತೆರೆಯಿಂ, ನೊರೆಯಿಂ, ಕಳಹಂಸಪಙ್ಕ್ತಿಯಿಂ- ಅವ್ಯಕ್ತಮಧುರವಾದ ಹಂಸಪಕ್ಷಿಗಳಸಾಲಿನಿಂದಲೂ, ಜಳರುಹರಾಜಿಯಿಂ- ಕಮಲಸಮುದಾಯದಿಂದಲೂ, ಸಿಡಿಪ, ಸೀರ್ಪನಿಯಿಂ- ಸಣ್ಣ

ಕ್ಷಣಗಾಮಿಯಿಂ ಸಿಡಿವ ನೀರ್ವನಿಯಿಂ ನೆಗೆತರ್ಪ ಮೀನ್ಗಳಿಂ ॥ ಸುಳಿಗಳ ಬಂಬಲಿಂ ಮಕರಕ
ರ್ಕಟಕಾದಿವಿಚಿತ್ರಸತ್ವಸಂ । ಕುಳದಿ ನಲಂಪುವೆತ್ತು ಪೊಳೆ ಯೊಪ್ಪಿದು ದಿರ್ಪೊಳೆಯೆಂ
ಬ ನಾಮದಿಂ ॥ ... ... ... ... ... ... ॥೭೩॥

ಉ ॥ ಶ್ರೀಯುತಪಂಕಜಂ ವದನ ಮಾರಡಿಮಾಲೆ ಕಚೌಘಮುಲ್ಲಸ । ತ್ತೋಯಜ
ರೇಣು ಪೀತವಸನಂ ಪುಳಿನಂ ಜಘನಂ ಚಳೋರ್ಮಿವೃ ॥ ತ್ತಾಯತಬಾಹು ತಳ್ತಸುಳಿನಾ
ಭಿ ಪಯಶ್ಚರ ಮಕ್ಷಿಯಾಗೆ ನಾ । ರಾಯಣಿಯಂತೆ ಚಕ್ರಜಲಜಾಂಕೆ ನದೀವಧು ಕಣ್ಗೆ
ತೋರಿದಳ್ ॥ ... ... ... .. ... ... ॥೭೪॥

ವ ॥ ಅಂತೆಸೆವಡ್ಡಂಬರಿವ ಬೃಹತ್ತರಂಗಿಣಿಯ ಸಾರ್ಕೆಗೆ ಸರಭಸಂ ಪರಿತಂದು ಚಾ
ಡದೇವಂ ನಿಂದು ವಿಜೃಂಭಿಸಿ ॥ * * * * * * * * * * * *

ಚಂ ॥ ಉಡುಗೆಲೆ ನಿನ್ನ ಬಿಂಕಮು ತರಂಗಿಣಿ ಭಕ್ತರ ಮುಂದೆ ಮುನ್ನ ಪೇಂ । ಕು
ಡಿಯನೆ ಕುಂಭಜಂ ಶರಣ ನೋರ್ಕೆಯೆ ನಿನ್ನಯ ಕಾಂತ ನಾದ ಪೆ ॥ ರ್ಗಡಲ ನಿರ್ಕೆ ನಾವಿ
ಕನ ಮೂದಲೆ ಗಾಶಿವದಾಸ ನಣ್ಮಿ ಪಾ । ಯ್ದೊಡನೆ ಮಹಾನದೀಮದವ ನಳ್ಗಿಸಿ ಕಾಲ್ನಡೆ
ಯಿಂದ ಮೆಯ್ದನೆ ॥ ... ... ... ... ... ॥೭೫॥

---

ಹನಿಯಿಂದಲೂ, ನೆಗೆತರ್ಪಮೀನ್ಗಳಿಂ- ಹಾರಿಬರುವ ಮೀನುಗಳಿಂದಲೂ, ಸುಳಿಗಳ, ಬಂಬಲಿಂ- ಸಮುದಾ
ಯದಿಂದಲೂ,ಮಕರಕರ್ಕಟಕಾದಿವಿಚಿತ್ರಸತ್ವಸಂಕುಳದಿಂ- ಮೊಸಳೆ ನಳ್ಳಿ ಮೊದಲಾದ ಆಶ್ಚರ್ಯಕರಪ್ರಾಣಿಗ
ಳಸಮುದಾಯದಿಂದಲೂ, ಅಲಂಪುವೆತ್ತು- ಆಧಿಕ್ಯವನ್ನುಹೊಂದಿ, ಇರ್ಪೊಳೆಯೆಂಬ, ನಾಮದಿಂ- ಹೆಸರಿನಿಂ
ದ, ಪೊಳೆ, ಒಪ್ಪಿದುದು. ... ... ... ... ... ॥೭೩॥

ಶ್ರೀಯುತಪಂಕಜಂ- ಕಾಂತಿಯಿಂದ ಕೂಡಿದ ಕಮಲವೇ, ಮುಖಂ- ಮುಖವು, ಆರಡಿಮಾಲೆ- ಭ್ರಮ
ರಪಙ್ತಿಯೇ,-ಕಚೌಘಂ- ಕೂದಲುಗಳ ಸಮುದಾಯವು, ಉಲ್ಲಸತ್ತೋಯಜರೇಣು- ಪ್ರಕಾಶಮಾನವಾದ
ಕಮಲದ ಧೂಳಿಯೇ, ಪೀತವಸನಂ- ಕೆಂಪುಬಟ್ಟೆಯು, ಪುಳಿನಂ- ಮಳಲದಿಣ್ಣೆಯೇ, ಜಘನಂ- ಕಟಿಪ್ರದೇ
ಭಾಗವು, ಚಳೋರ್ಮಿ- ಚಂಚಲವಾದ ತೆರೆಯೇ, ವೃತ್ತಾಯತಬಾಹು- ವರ್ತುಲವಾಗಿಯೂ ವಿಸ್ತಾರವಾಗಿ
ಯೂ ಇರುವ ಭುಜವು, ತಳ್ತಸುಳಿ- ಸಂಬಂಧಿಸಿದ ಸುಳಿಯೇ, ನಾಭಿ- ಹೊಕ್ಕಳು, ಪಯಶ್ಚರಂ- ಮೀನುಗ
ಳೇ, ಅಕ್ಷಿಯಾಗೆ- ನೇತ್ರವಾಗಿರಲಾಗಿ, ಚಕ್ರಜಲಜಾಂಕೆ— ಚಕ್ರ- ಚಕ್ರವಾಕಪಕ್ಷಿಯೇನು, ಜಲಜ- ನೀರಿ
ನಲ್ಲಿಹುಟ್ಟುವ ವಸ್ತುಗಳೇನು, ಇವುಗಳೇ ಅಂಕೆ- ಗುರುತಾಗಿಯುಳ್ಳ, ( ಚಕ್ರ- ಚಕ್ರಾಯುಧ,ಜಲಜ- ಕಮ
ಲ ಇವುಗಳೇ, ಅಂಕ- ಚಿಹ್ನವಾಗುಳ್ಳ, ) ನದೀವಧು- ನದಿಯೆಂಬ ಸ್ತ್ರೀಯು, ನಾರಾಯಣಿಯಂತೆ- ಲಕ್ಷ್ಮಿ
ಯ ಹಾಗೆ, ಕಣ್ಗೆ, ತೋರಿದಳ್. ... ... ... ... ॥೭೪॥

ಅಂತು, ಎಸೆವ,- ಅಡ್ಡಂಬರಿವ- ಅಡ್ಡಲಾಗಿ ಹರಿಯುವ, ಬೃಹತ್ತರಂಗಿಣಿಯ- ದೊಡ್ಡನದಿಯ, ಸಾ
ರ್ಕೆಗೆ- ಸಮೀಪಕ್ಕೆ,ಸರಭಸಂ, ಜಾಗ್ರತೆಯಾಗಿ,ಪರಿತಂದು- ಬಂದು, ಚಾಡದೇವಂ, ನಿಂದು, ವಿಜೃಂಭಿಸಿ. *

ಎಲೆತರಂಗಿಣಿ ! ಎಲೈನದಿಯೇ, ಭಕ್ತರ, ಮುಂದೆ, ನಿನ್ನ, ಬಿಂಕಮಂ- ಗರ್ವವನ್ನು, ಉಡುಗು- ಬಿ
ಡು, ಮುನ್ನ- ಪೂರ್ವದಲ್ಲಿ, ನಿನ್ನಯ, ಕಾಂತನಾದ- ವಲ್ಲಭನಾದ, ಪೆರ್ಗಡಲಂ, ದೊಡ್ಡಸಾಗರವನ್ನು, ಓರ್ಕೆ
ಯೆ- ಓಂದೇಆವರ್ತಿ, ಶರಣ- ಶಿವಶರಣನಾದ,ಕುಂಭಜಂ- ಅಗಸ್ತ್ಯನು, ಕುಡಿಯನೆ- ಪಾನಮಾಡನೇ? ಅ
ದು, ಇರ್ಕೆ- ಹಾಗಿರಲಿ, ನಾವಿಕನ- ಅಂಬಿಗನ, ಮೂದಲೆಗೆ- ಹೀಯಾಳಿಸಿದಮಾತಿಗೆ, ಆ ಶಿವದಾಸಂ, ಅಣ್ಮಿ-
ಪರಾಕ್ರಮವಿಶಿಷ್ಟನಾಗಿ, ಪಾಯ್ದು- ಲಂಘಿಸಿ, ಒಡನೆ- ಜೊತೆಯಲ್ಲಿ, ಮಹಾನದೀಮದವಂ- ದೊಡ್ಡಹೊ
ಳೆಯಗರ್ವವನ್ನು, ಅಳ್ಗಿಸಿ- ನಾಶಮಾಡಿ, ಕಾಲ್ನಡೆಯಿಂದಂ, ಎಯ್ದನೆ- ಹೋಗನೆ,. ... ॥೭೫॥

ವ ॥ ಅದಲ್ಲದೆಯುಂ ॥ ಚಂ ॥ ಪುರಹರನಂ ಗಜೇಶಮಸಣಯ್ಯನೆನಿಪ್ಪ ಮಹಾತ್ಮ
ನಳ್ಕರಿಂ । ದುರುನಿಜಭಾವದಿಂ ಕುರುವದೊಳ್ಭಜಿಸುತ್ತಿರೆ ನೀಂ ನವಾಂಬುನಿ ॥ ರ್ಭರತೆಯು
ನೆಯ್ದುತಿರ್ದ್ದೆಸೆಗೆಖಂಡಿಸಿದಂತೆವೊಲಾಂತು ಭೀತಿಯಂ । ಪರಿದೆಗೆದಂದು ನೀಂ ಕುಡುಕುಡ
ಧ್ವಮ ನಿಂದೆಮಗೆಂದು ಶೌರ್ಯದಿಂ ॥ ... ... ... ... ॥೩೦॥

ಮತ್ತಂ ॥ ಮೊನೆದೋರುತ್ತೆ ಕೃಪಾಣಮುಂ ಜಡಿದು ಚಿಮ್ಮುತ್ತೆತ್ತೆ ಕಂಡಳ್ಕಿ
ಭೋಂ । ಕನೆ ಭಾಗದ್ವಯಮಾಗಿ ತಾಯ್ಮಳಲದೆತ್ತಂ ತೋರೆ ಪಾಯ್ವಂಬು ನಿಂ ॥ ದು ನಿ
ತಾಂತಂ ನೆರೆದತ್ತು ತನ್ನದಿ ನಭೋಮಾರ್ಗಕ್ಕೆ ಧೀಂಕಿಟ್ಟು ತ । ದ್ಘನಕೀರ್ತ್ಯಂಗನೆ ಯಂ
ಬರಾಂಬರದ ಭಾಸ್ವನ್ನೀವಿಯೆಂಬಂತೆವೋಲ್ ॥ ... ... ... ॥೩೧॥

ಕಂ॥ ಶರಣಂಗೆ ಧರಾವಧು ಸಾ । ದರ ಮಿಕ್ಕುವ ಧವಳವಸನದೊಪ್ಪುವ ಪೊಸನೇಸ ।
ಗುರಿ ಯೆನಿಸಿ ನಿಮಿರ್ದನದಿಯಂ । ಬರನದಿಯೊಳ್ಕೂಡಲೆಳಸಿ ನೆಗೆದವೊಲೆಸೆಗುಂ ॥೩೨॥

ಕಂ ॥ ಪೊಡವಿಯೊಳೆ ಕಡಿಯೆ ಪೊಳೆ ಯಿ । ರ್ಕಡಿಯಕ್ಕುಮೆ ಯೆಂಬ ಗಾಥೆಯಂ
ಮಾಣಿಸಿದಂ ॥ ಕಡುಗಲಿ ಚೌಡಯ್ಯನೆನು । ತ್ತೊಡನೆ ಗಣಪ್ರತತಿ ಯಲ್ಲಿ ಪೊಗಳ್ದ
ತ್ತಾಗಳ್ ॥ ... ... ... ... .. ... ॥೩೩॥

---

ಗಜೇಶಮಸಣಯ್ಯಂ, ಎನಿಪ್ಪ, ಮಹಾತ್ಮನ, ಅಳ್ಕರಿಂ- ಪ್ರೀತಿಯಿಂದ, ಉರುನಿಜಭಾವದಿಂ- ಉ
ತ್ಕೃಷ್ಟವಾದ ತನ್ನ ಮನಸ್ಸಿಂದ, ಕುರುವದೊಳ್ ಪುರಹರನಂ, ಭಜಿಸುತ್ತಿರಲಾಗಿ, ನೀಂ, ನವಾಂಬುನಿರ್ಭರತೆ
ಯುಂ- ನೂತನವಾದ ಜಲಪೂರ್ಣತೆಯಿಂದ, ಎಯ್ದುತೆ, ಇರ್ದೆಸೆಗೆ- ಎರಡುದಿಕ್ಕಿಗೆ, ಖಂಡಿಸಿದಂತೆ- ಕತ್ತರಿ
ಸಿದಹಾಗೆ, ಭೀತಿಯಂ, ಆಂತು, ಅಂದು- ಆಕಾಲದಲ್ಲಿ, ನೀಂ, ಪರಿದೆಗೆದೆ- ಹಿಂದೆಗೆದೆ, ಇಂದು, ಎಮಗೆ, ಅ
ಧ್ವಮಂ- ಮಾರ್ಗವನ್ನು, ಕುಡು; ಕುಡು, ಎಂದು, ಶೌರ್ಯದಿಂ. ... ... ॥೩೦॥

ಮೊನೆದೋರುತ್ತೆ- ಪರಾಕ್ರಮವನ್ನು ತೋರಿಸುತ್ತ, ಜಡಿದು- ಭಯಪಡಿಸಿ, ಚಿಮ್ಮುತ್ತೆ- ಹಾರು
ತ್ತ, ಕೃಪಾಣಮುಂ- ಖಡ್ಗವನ್ನು, ಎತ್ತೆ- ಮೇಲಕ್ಕೆ ಎತ್ತಲಾಗಿ, ಕಂಡು, ಅಳ್ಕಿ- ಭಯಪಟ್ಟು, ಭೋಂಕನೆ-
ಜಾಗ್ರತೆಯಾಗಿ, ಭಾಗದ್ವಯಂ- ಎರಡುಭಾಗವು, ಆಗಿ, ಅದ ತಾಯ್ಮಳಲ್- ಆ ನೀರಿನಕೆಳಗಡೆಯಿರುವ ಮ
ಳಲು, ಎತ್ತಂ- ಎಲ್ಲಾಕಡೆಯಲ್ಲೂ, ತೋರೆ- ಕಾಣಲಾಗಿ, ಪಾಯ್ವಂಬು- ಮೇಲೆಹಾರುವ ನೀರು, ನಿಂದು,
ನಿತಾಂತಂ- ಅತ್ಯಂತವಾಗಿ, ನಭೋಮಾರ್ಗಕ್ಕೆ- ಆಕಾಶಮಾರ್ಗಕ್ಕೆ, ತನ್ನದಿ- ಆ ನದಿಯು, ಧೀಂಕಿಟ್ಟು-
ಲಂಘಿಸಿ, ತದ್ಘನಕೀರ್ತ್ಯಂಗನೆಯ- ಆ ಚೌಡದೇವನ ಉತ್ಕೃಷ್ಟವಾದಕೀರ್ತಿಯೆಂಬಸ್ತ್ರೀಯ, ಅಂಬ
ರಾಂಬರದ- ಆಕಾಶವೆಂಬ ವಸ್ತ್ರದ, ಭಾಸ್ವನ್ನೀವಿ- ಪ್ರಕಾಶಮಾನವಾದ ನರಿಯು, ಎಂಬಂತೆವೋಲ್, ಮೆ
ರೆದತ್ತು- ಪ್ರಕಾಶಮಾನವಾಯ್ತು. ... ... ... ... ॥೩೧॥

ಶರಣಂಗೆ- ಚೌಡದೇವನಿಗೆ, ಧರಾವಧು- ಭೂಕಾಂತೆಯು, ಸಾದರಂ- ವಿಶ್ವಾಸಪೂರ್ವಕವಾಗಿ, ಇಕ್ಕು
ವ, ಧವಳವಸನದ, ಒಪ್ಪುವ, ಪೊಸನೇಸಗುರಿ- ನೂತನವಾದ ಸೂರ್ಯಪಾನಿ, ಎನಿಸಿ, ನಿಮಿರ್ದ- ಉದ್ದವಾದ, ನ
ದಿ, ಅಂಬರನದಿಯೊಳ್- ಆಕಾಶ ಗಂಗೆಯಲ್ಲಿ, ಕೂಡಲ್- ಸೇರುವದಕ್ಕೋಸ್ಕರ, ಎಳಸಿ, ನೆಗೆದವೊಲ್-
ಹಾರಿದಹಾಗೆ, ಎಸೆಗುಂ. ... ... ... ... ... ॥೩೨॥

ಪೊಡವಿಯೊಳೆ, ಪೊಳೆ- ನದಿಯು, ಕಡಿಯೆ- ಕತ್ತರಿಸಲಾಗಿ, ಇರ್ಕಡಿಯಕ್ಕುಮೇ- ಎರಡು ತುಂಡಾ
ಗುವದೇ? ಎಂಬ, ಗಾಥೆಯಂ, ಕಡುಗಲಿ- ಸಮರ್ಥನಾದ, ಚೌಡಯ್ಯಂ, ಮಾಣಿಸಿದಂ- ತಪ್ಪಿಸಿದನು, ಎನು
ತ್ತೆ, ಗಣಪ್ರತತಿ, ಒಡನೆ, ಅಲ್ಲಿ, ಆಗಳ್, ಪೊಗಳ್ದತ್ತು. ... ... ... ॥೩೩॥

ಚಂ ॥ ಕುಣಿವ ಕುಕಿಲ್ವ ರಾಗಿಸುವ ತೂಗುವ ಬೀಗುವ ಸುತ್ತಿಬರ್ಪ ಸಂ । ದಣಿಪ ನಿರೀಕ್ಷಿಪ ಳ್ತಿವಡೆದಾಡುವ ಪಾಡುವ ನಲ್ಮೆದೋರ್ಪ ಸಂ ॥ ದಣಿಯರ ಮುರ್ಬಿ ಕೀರ್ತಿಸುವ ಪೊಂಪುಳಯಾಂಪ ಮರಲ್ವ ಭಕ್ತಿಯಿಂ । ಮಣಿವ ಕಡುಂಗುವ ದ್ಭುತವಿಳಾಸಮು ಸಾಳ್ದುವು ಭಕ್ತಸಂಕುಲಂ ॥ ... ... ... ... ... ॥೩೨॥

ವ॥ ಅಂತು ಸಮುತ್ಸವಿಪ ಶರಣಗಣಂ ಬೆರಸು ॥ * * * * * * *

ಉ॥ ಮುಂದೆ ವೃಷೇಂದ್ರನುಂ ತವಸಿಯುಂ ನಡೆಯುತ್ತಿರೆ ನಂದಿಕೇತನಂ । ಬಾಂದಳದಲ್ಲಿ ಮಿಳ್ಳಿರಿಯೆ ಮಂಗಲತೂರ್ಯರವಂ ಜಯಸ್ವನಂ ॥ ಕುಂದದೆ ಕೂಡಿ ಘೂರ್ಣಿಸೆ ಮಹೋತ್ಸವ ಮಾಳ್ಪಿರೆ ಭಕ್ತ ರಾಗಳ್ । ನಂದದೆ ತತ್ತರಂಗಿಣಿಯ ನುಣ್ಮಳಲೊಳ್ನಡೆದಂ ಗಣಾಧಿಪಂ ॥ ... ... ... ... ... ... ॥೩೩॥

ವ ॥ ಅಂತುಪಿರಿದುಸಡಗರಂಮಿಗೆನಡೆತಂದಾರ್ಯನಗರಿಯಂಪೊಕ್ಕು ತನ್ಮನೋರಥಮ ನೊದವಿಸಿ ಪರಿಣಯಮಹೋತ್ಸಾಹಮಂ ನೆಗಳ್ಚಿ ಮಗುಳ್ದು ಪೊಳೆಯ ಪುಳಿನತಳದೊಳ್ಶರಣಗಣಸಮೇತ ಮೇಳ್ತಂದು ಮುನ್ನಿನಂತೆ ರಾನಡಿಯಂ ಪರಿಯಲ್ನಿರವಿಸಿ ಪರಿಯಿಸಿ ವಿತತಾದ್ಭುತಚರಿತ್ರಂ ಚೌಡರಾಜಂ ಕಲ್ಯಾಣಪುರಮಂ ಪುಗುತರ್ಪಾಗಳ್ ॥ * * *

---

ಕುಣಿವ, ಕುಕಿಲ್ವ- ಕೋಗಿಲೆಯಹಾಗೆ ಧ್ವನಿಯನ್ನು ಮಾಡುವ, ರಾಗಿಸುವ- ಪ್ರೀತಿಸುವ, ತೂಗುವ, ಬೀಗುವ- ಬಿಗುತುಗೊಳ್ಳುವ, ಸುತ್ತಿ, ಬರ್ಪ, ಸಂದಣಿಪ- ಒಂದುಗೂಡುವ, ನಿರೀಕ್ಷಿಪ- ನೋಡುವ, ಅಳ್ತಿವಡೆದು- ಪ್ರೀತಿಯನ್ನು ಹೊಂದಿ, ಆಡುವ, ಪಾಡುವ, ನಲ್ಮೆದೋರ್ಪ- ಪ್ರೀತಿಯನ್ನು ತೋರಿಸುವ, ಸಂದು- ಸೇರಿ, ಅಣಿಯರಂ- ಮನೋಹರವಾಗಿ, ಉರ್ಬಿ, ಕೀರ್ತಿಪ- ಸ್ತೋತ್ರಮಾಡುವ, ಪೊಂಪುಳಿಯಾಂಪ- ರೋಮಾಂಚವನ್ನು ಹೊಂದುವ, ಮರಲ್ವಭಕ್ತಿಯಿಂ- ವೃದ್ಧಿಹೊಂದುವ ಭಕ್ತಿಯಿಂದ, ಮಣಿವ- ನಮಸ್ಕರಿಸುವ, ಕಡುಂಗುವ- ಔತ್ಸುಕ್ಯಪಡುವ, ಭಕ್ತಸಂಕುಲಂ, ಅದ್ಭುತವಿಳಾಸಮಂ- ಆಶ್ಚರ್ಯಕರವಾದ ಲೀಲೆಯನ್ನು, ಆಳ್ದುದು. ... ... ... ... ॥೩೨॥

ಅಂತು, ಸಮುತ್ಸವಿಪ-ಸಂತೋಷಪಡುವ, ಶರಣಗಣಂಬೆರಸು. * * * * * * * *

ಮುಂದೆ, ವೃಷೇಂದ್ರನುಂ, ತವಸಿಯುಂ, ನಡೆಯುತ್ತಿ, ಇರೆ, ನಂದಿಕೇತನಂ- ವೃಷಭಧ್ವಜವು, ಬಾಂದಳದಲ್ಲಿ- ಆಕಾಶದಲ್ಲಿ, ಮಿಳ್ಳಿರಿಯೆ- ತಿವಿಯುತ್ತಿರಲು, ಮಂಗಳತೂರ್ಯರವಂ- ಶುಭಕರವಾದ ವಾದ್ಯಧ್ವನಿಯು, ಜಯಸ್ವನಂ- ಜಯಧ್ವನಿಯು, ಕುಂದದೆ- ವಿಚ್ಛಿತ್ತಿಯಿಲ್ಲದೆ, ಕೂಡಿ, ಘೂರ್ಣಿಸೆ- ಶಬ್ದಾಯಮಾನವಾಗಿರಲಾಗಿ, ಕ್ತರ್, ಮಹೋತ್ಸವಮಾಳ್ಪಿರೆ- ಬಹುಸಂತೋಷವನ್ನುಹೊಂದಿರಲಾಗಿ, ಆಗಳ್, ಗಣಾಧಿಪಂ- ಚೌಡಪ್ಪನು, ಆನಂದದೆ, ತತ್ತರಂಗಿಣಿಯು- ಆ ನದಿಯು, ನುಣ್ಮಳಲೊಳ್ ನಡೆದು. ... ॥೩೩॥

ಅಂತು, ಪಿರಿದುಸಡಗರಂ- ಬಹುಸಂಭ್ರಮವು, ಮಿಗೆ, ನಡೆತಂದು, ಆರ್ಯನಗರಿಯಂ- ಶ್ರೇಷ್ಠನ ಪಟ್ಟಣವನ್ನು, ಪೊಕ್ಕು- ಪ್ರವೇಶಿಸಿ, ತನ್ಮನೋರಥಮಂ- ಅವನ ಇಷ್ಟಾರ್ಥವನ್ನು, ಒದವಿಸಿ- ಉಂಟುಮಾಡಿ, ಪರಿಣಯಮಹೋತ್ಸಾಹಮಂ- ವಿವಾಹಮಹೋತ್ಸವವನ್ನು, ನೆಗಳ್ಚಿ- ನೆರವೇರಿಸಿ, ಮಗುಳ್ದು- ಪುನಃ, ಆ ಪೊಳೆಯ, ಪುಳಿನತಳದೊಳ್- ಮಳಲಿನ ಸ್ಥಾನದಲ್ಲಿ, ಶರಣಗಣಸಮೇತಂ, ನಿಳ್ತಂದು, ಮುನ್ನಿನಂತಿರೆ- ಮುಂಚಿನಹಾಗೆ, ಆ ನದಿಯಂ, ಪರಿಯಲ್- ಕತ್ತರಿಸಿಹೋಗುವದಕ್ಕೋಸ್ಕರ, ನಿರವಿಸಿ- ಆಜ್ಞಾಪಿಸಿ, ಪರಿಯಿಸಿ,- ವಿತತಾದ್ಭುತಚರಿತ್ರಂ- ಅತ್ಯಾಶ್ಚರ್ಯಕರವಾದ ಚರಿತ್ರೆಯುಳ್ಳ, ಚೌಡರಾಜಂ, ಕಲ್ಯಾಣಪುರಮಂ, ಪುಗುತರ್ಪಾಗಳ್- ಪ್ರವೇಶಮಾಡುವಕಾಲದಲ್ಲಿ. * * * * * * * * * * * * *

ಕಂ ॥ ಗುಡಿಗಟ್ಟ ಪೌರಭಕ್ತ । ರ್ಗಡಣದಿ ನಿದಿರ್ಗೊಳೆ ತವಸ್ವಿವೃಷಭಸಮೇತಂ ॥ ನಡೆತಂದ ನನುಮ ನೋಳ್ಪವ । ರೊಡ ನರಿದರಿದೆಂದು ಪೊಗಳುತಿರೆ ಚೌಡಾರ್ಯಂ ॥೩೬॥

ವ ॥ ಆಗ ಳೊರ್ವ್ವ ಳಪೂರ್ವ್ವಲಾವಣ್ಯತಾರುಣ್ಯರೂಪವತಿ ಸುದತಿ ರಾಜವೀಥಿಯೊ ಳೈತರುತಂ ಕಂಡಿದಿರ್ವ್ವಂದು ಪದನಳಿನಂ ಪಣೆನೋಂಕೆ ಮಣಿಯ ಲೊಡನೆ ॥ * * *

ಕಂ ॥ ಯುವತಿ ನಿನಗಕ್ಕೆ ದೀರ್ಘಾ । ಯು ವೆನುತ್ತಂ ಪರಸಿ ಪರಮಸಂಭ್ರಮದಿಂ ದಂ ॥ ವಿವಿಧೋತ್ಸವಮಂ ಶಿವಗಣ । ನಿವಹದೊ ಳೊದವಿಸುತೆ ನಿಜಗೃಹಕ್ಕೆಳ್ತಂದಂ ॥

ವ ॥ ಅಂತೆಳ್ತಂದು ಚೌಡರಾಜ ನೆಂದಿನಂತೆ ಶಿವಾನುಭಾವಗೋಷ್ಠಿಯೊ ಳ್ಸುಖ ಮಿರ್ಪನ್ನೆಗ ಮಾಪರಕೆಗೊಂಡ ತರುಣಿ ಮರಣಮ ನೆಯ್ದ ಲೊಡನೆ ಪಿರಿದುಂ ಶೋಕಂ ಬ ಡೆದವಳ ತಂದೆತಾಯ್ಗ ಳ್ಮರುದಿನಂ ತತ್ಕಳೇಬರಮಂ ತಂದು ಶರಣ ನಿದಿರೊ ಳಿರಿಸಿ ಪದ ಕಮಲದೊ ಳ್ಕೆಡೆದು ಕಣ್ಬನಿ ಕಾಳ್ಪುರಂಮಸಗೆ ಹಾಹಾರವಂ ಪೊಣ್ಮೆ ಮೊರೆಯಿಟ್ಟು ಮರುಗಿ ॥ * * * * * * * * * * * * * * *

ಕಂ ॥ ಎಲೆದೇವ ನಿನ್ನೆ ನಿಮ್ಮಯ । ನಲಿನಾಂಘ್ರಿಗೆ ಮಣಿದು ಪರಕೆವಡೆದೆಳ್ತಂ ದೀ ॥ ಲಲನೆ ಯಿರುಳಳಿದ ಳಕಟಾ । ನಲವಿಂ ದಸುವಿತ್ತು ಪೊರೆ ದಯಾಳುಗಳರಸ ॥೩೮॥

---

ಪೌರಭಕ್ತರ್- ಪಟ್ಟಣದಲ್ಲಿರುವ ಭಕ್ತರು, ಗುಡಿಗಟ್ಟ- ತೋರಣವನ್ನುಕಟ್ಟ, ಗಡಣದಿಂ- ಸಮೂಹದಿಂದ, ಇದಿರ್ಗೊಳೆ, ತಪಸ್ವಿವೃಷಭಸಮೇತಂ- ಯತಿವೃಷಭರಿಂದಕೂಡಿದ, ಚೌಡಾರ್ಯಂ, ನೋಳ್ಪವರ್- ಅರಿದುಅರಿದು- ಅಸಾಧ್ಯ ಅಸಾಧ್ಯ; ಎಂದು ಪೊಗಳುತ್ತಿರೆ, ನಡೆತಂದಂ, ಅನುಮಂ!! ... ॥೩೬॥

ಆಗಳ್, ಓರ್ವಳ್, ಅಪೂರ್ವಲಾವಣ್ಯತಾರುಣ್ಯರೂಪವತಿ— ಅಪೂರ್ವ- ಹೊಸದಾದ, ಲಾವಣ್ಯ- ಕಾಂತಿವಿಶೇಷ, ತಾರುಣ್ಯ- ಯವ್ವನ, ರೂಪವತಿ- ಸೌಂದರ್ಯ ಇವುಗಳುಳ್ಳ, ಸುದತಿ- ಸ್ತ್ರೀಯು, ರಾಜವೀಥಿಯೊಳ್, ಎಯ್ತರುತಂ- ಬರುತ್ತ, ಕಂಡು, ಇದಿರ್ವ್ವಂದು, ಪದನಳಿನಂ- ಪಾದಕಮಲವು, ಪಣೆನೋಂಕೆ- ಹಣೆಯನ್ನು ನೋಕಲಾಗಿ, ಮಣಿಯಲ್- ನಮಸ್ಕರಿಸಲು, ಒಡನೆ. * * * * * * * *

ಯುವತಿ- ಸ್ತ್ರೀಯೇ ! ನಿನಗೆ, ದೀರ್ಘಾಯು- ಬಹುದಿನದಾಯುಷ್ಯವು, ಅಕ್ಕೆ- ಆಗಲಿ, ಎನುತ್ತಂ, ಪರಸಿ, ಪರಮಸಂಭ್ರಮದಿಂದಂ, ಶಿವಗಣನಿವಹದೊಳ್- ಶಿವಶರಣಸಮೂಹದಲ್ಲಿ, ವಿವಿಧೋತ್ಸವಮಂ- ನಾನಾವಿಧವಾದ ಸಂತೋಷವನ್ನು, ಒದವಿಸುತೆ- ಉಂಟುಮಾಡುತ್ತ, ನಿಜಗೃಹಕ್ಕೆ- ತನ್ನಮನೆಗೆ, ಎಳ್ತಂದಂ- ಬಂದನು. ... ... ... ... ... ॥೩೭॥

ಚೌಡರಾಜಂ, ಅಂತು, ಎಳ್ತಂದು, ಎಂದಿನಂತೆ, ಶಿವಾನುಭಾವಗೋಷ್ಠಿಯೊಳ್, ಸುಖಮಿರ್ಪನ್ನೆಗಂ- ಸುಖವಾಗಿರತಕ್ಕ ಕಾಲದಲ್ಲಿ, ಆಪರಕೆಗೊಂಡ- ಆ ಆಶೀರ್ವಾದವನ್ನು ಹೊಂದಿದ, ತರುಣಿ, ಮರಣಮಂ, ಎಯ್ದಲ್, ಒಡನೆ, ಅವಳ, ತಂದೆತಾಯ್ಗಳ್, ಪಿರಿದು ಶೋಕಂಬಡೆದು- ಬಹುದುಃಖವನ್ನು ಹೊಂದಿ, ಮರುದಿನಂ- ಮಾರನೆಯ ದಿವಸ, ತತ್ಕಳೇಬರಮಂ- ಆ ಸ್ತ್ರೀ ಶರೀರವನ್ನು, ತಂದು, ಶರಣನ, ಇದಿರೊಳ್, ಇರಿಸಿ, ಪದಕಮಲದೊಳ್, ಕೆಡೆದು- ಬಿದ್ದು, ಕಣ್ಬನಿ- ಕಣ್ಣೀರು, ಕಾಳ್ಪುರಂಮಸಗೆ- ಪ್ರವಾಹವಾಗಿ ಹೆಚ್ಚಲು, ಹಾಹಾರವಂ- ಹಾ ! ಹಾ ! ಎಂಬ ಧ್ವನಿಯು, ಪೊಣ್ಮೆ, ಮೊರೆಯಿಟ್ಟು, ಮರುಗಿ. * * *

ಎಲೆದೇವ ! ನಿನ್ನೆ, ನಿಮ್ಮಯ, ನಲಿನಾಂಘ್ರಿಗೆ- ಕಮಲದಂತಿರುವ ಪಾದಕ್ಕೆ, ಮಣಿದು, ಪರಕೆವಡೆದು- ಆಶೀರ್ವಾದವನ್ನು ಹೊಂದಿ, ಎಳ್ತಂದ, ಈಲಲನೆ, ಇರುಳ್- ರಾತ್ರಿಯಲ್ಲಿ, ಅಳಿದಳ್- ಸತ್ತಳು, ಅಕಟಾ, ನಲವಿಂದೆ- ಪ್ರೀತಿಯಿಂದ, ಅಸುವಿತ್ತು- ಪ್ರಾಣವನ್ನು ಕೊಟ್ಟು, ದಯಾಳುಗಳ, ಅರಸ! ಪೊರೆ. ... ॥೩೮॥

ಕಂ॥ ಅನಿಮಿತ್ತಬಂಧು ವಿನಯಾಂ । ಬುನಿಧಾನ ಮಹತ್ವಮಹಿತ ಮತ್ತನುಜೆಗೆ
ಜೀ॥ವನಮಂ ನೀಂ ಇತ್ತೆಮ್ಮಯ । ಮನದಳಲಂ ಪರಿವುದೆಂದು ಮುಗುಳ್ದರಗಲೊಡಂ ॥

ಕಂ॥ ಪರಮಕೃಪಾನಿಧಿ ಯವರಂ । ಕರುಣಾಲೋಕನದೆ ನೋಡಿ ಸಂತವಿಡುತ್ತಂ॥
ಕರತಳದೆ ಜಡಿದು ತನ್ನಯ । ಕರವಾಳಂ ಮುಟ್ಟಿಸುತ್ತೆ ಶಿಬಿಕೆಯ ನಧಟಂ ॥ ... ॥೪೦॥

ಕಂ॥ ಪೆಸರ್ವಿಡಿದು ಕರೆಯುತೇಳೇಂ । ಬಿಸಜಾಕ್ಷಿ ಯೆನುತ್ತೆ ಕರೆಯಲೊಡ ನಾಕ್ಷಣ
ದೊ॥ಳ್ಪೊಸನುಲಿ ಗಳ್ಬಿಟಛಿಟರವ । ಮೆಸೆಯೆ ಕರಂ ಪಿಡಿಯೆ ಶಿಬಿಕೆಯಿಂ ದವಳೇಳ್ದಳ್ ॥

ಕಂ॥ ನಿದ್ರೆತಿಳಿದೇಳ್ವವೋ ಲು । ನ್ನಿದ್ರೇಕ್ಷಣೆ ಯೇಳ್ದು ಚೌಡದೇವನ ಪದಭಾ ॥
ಸ್ವದ್ರಾಜೀವಕೆ ಮಣಿಯೆ ಸ । ಮುದ್ರುಚೆಯಿಂ ನಲಿದ ರಾಗಳಾಕೆಯ ಪಿತರರ್ ॥ ... ॥೪೨॥

ವ॥ ಅಂತು ನಲವೇರಿ ನಮಿಸಿ ಕರಾಂಜಲಿಯಂ ನೊಸಲೊಳಮರ್ಚಿ ನಿಂದು ॥

ಕಂ॥ ಪರಸಿದ ರೇಂ ಪ್ರಾಣಮ ನೀಂ । ಪರೆ ದರೆಯೊಳ ಗೆಂಬ ನುಡಿಯ ನಿಲ್ಲೆನಿಸಿ
ಮೊದ॥ಲ್ಪರಸಿದೆ ಮಡಿದವ ಳಸುವಂ । ಬರಿಸಿದೆಗಡ ದೇವ ನಿಮ್ಮ ಪೋಲ್ವರು ಪೋಳರೆ ॥

ಕಂ॥ ದೇವ ಭವದಕ್ಷಿರುಚಿಸಂ । ಜೀವನದಿಂ ಪಡೆದೆ ಮಡಿದ ಮಗಳಸುವ ನಿಳಾ ॥
ಪಾವನ ಕರುಣಾವರ್ಷದೆ । ತೀವಿದ ಮನ್ಮನದ ಬೇಗೆಯಂ ಮುಳ್ಗಿಸಿದೈ ॥ ... ॥೪೪॥

---

ಅನಿಮಿತ್ತಬಂಧು- ಕಾರಣವಿಲ್ಲದೆ ಬಂಧುವಾಗತಕ್ಕವನೇ ! ವಿನಯಾಂಬುನಿಧಾನ—ವಿನಯ- ಸೌಜನ್ಯತೆಗೆ ಅಂಬುನಿಧಾನ- ಸಮುದ್ರರೂಪನಾದವನೇ ! ಮಹತ್ವಮಹಿತ- ಮಹಿಮೆಯಿಂದ ಪೂಜ್ಯನಾದವನೇ! ಮತ್ತನುಜೆಗೆ- ನಮ್ಮ ಮಗಳಿಗೆ, ಜೀವನಮಂ- ಪ್ರಾಣವನ್ನು, ಇತ್ತು, ಎಮ್ಮಯ, ಮನದ, ಅಳಲಂ- ದುಃಖವನ್ನು, ಪರಿವುದು- ಹೋಗಲಾಡಿಸುವದು, ಎಂದು, ಮುಗುಳ್ದು, ಎರಗಲ್, ಒಡಂ- ಕೂಡಲೇ. ॥೩೯॥

ಪರಮಕೃಪಾನಿಧಿ-ಉತ್ಕೃಷ್ಟವಾದ ದಯೆಗೆ ನಿಕ್ಷೇಪನಾದ ಚೌಡಾರ್ಯನು, ಅವರಂ, ಕರುಣಾಲೋಕನದೆ, ನೋಡಿ, ಸಂತವಿಡುತ್ತಂ- ಸಮಾಧಾನಪಡಿಸುತ್ತ, ಕರತಳದೆ, ತನ್ನಯ, ಕರವಾಳಂ- ಖಡ್ಗವನ್ನು, ಜಡಿದು, ಶಿಬಿಕೆಯಂ- ವಿಮಾನವನ್ನು, ಅಧಟಿಂ- ಪರಾಕ್ರಮದಿಂದ, ಮುಟ್ಟಿಸುತ್ತೆ. ... ॥೪೦॥

ಪೆಸರ್ವಿಡಿದು, ಕರೆಯುತೆ, ಬಿಸಜಾಕ್ಷಿ- ಕಮಲನೇತ್ರೆಯೇ ! ಏಳ್, ಎನುತ್ತೆ, ಕರೆಯಲ್, ಒಡನೆ, ಆ ಕ್ಷಣದೊಳ್, ಪೊಸನುಲಿಗಳ್- ಹೊಸಹಗ್ಗಗಳು, ಛಿಟಛಿಟರವಂ, ಎಸೆಯೆ, ಪಿಡಿಯೆ- ಬಿಗಿಯಲಾಗಿ, ಶಿಬಿಕೆಯಿಂ-ವಿಮಾನದಿಂದ, ಅವಳ್, ಏಳ್ದಳ್. ... ... ... ... ॥೪೧॥

ನಿದ್ರೆತಿಳಿದು- ನಿದ್ರೆಯಿಂದೆಚ್ಚೆತ್ತು, ಏಳ್ವವೋಲ್, ಉನ್ನಿದ್ರೇಕ್ಷಣೆ- ಬಿಡಲ್ಪಟ್ಟ ನೇತ್ರವುಳ್ಳ ಸ್ತ್ರೀಯು, ಏಳ್ದು, ಚೌಡದೇವನ, ಪದಭಾಸ್ವದ್ರಾಜೀವಕೆ-ಪ್ರಕಾಶಮಾನವಾದ ಪಾದಕಮಲಕ್ಕೆ, ಮಣಿಯೆ,ಆಕೆಯ, ಪಿತರರ್- ತಾಯ್ತಂದೆಗಳು,ಸಮುದ್ರುಚೆಯಿಂ- ಹೆಚ್ಚಾದ ಪ್ರೀತಿಯಿಂದ,ನಲಿದರ್.ಸಂತೋಷಪಟ್ಟರು.

ಅಂತು, ನಲವೇರಿ, ನಮಿಸಿ, ಕರಾಂಜಲಿಯಂ, ನೊಸಲೊಳ್- ಹಣೆಯಲ್ಲಿ, ಅಮರ್ಚಿ- ಸೇರಿಸಿ, ನಿಂದು.

ಪರಸಿದರ್- ಆಶೀರ್ವಾದವನ್ನು ಮಾಡಿದವರು, ಪ್ರಾಣಮಂ, ಈವರೇಂ ? ಎಂಬ, ನುಡಿಯಂ, ಇಲ್ಲ, ಎನಿಸಿ, ಮೊದಲ್, ಪರಸಿದೆ- ಆಶೀರ್ವದಿಸಿದೆ, ಮಡಿದವಳ- ಸತ್ತವಳ, ಅಸುವಂ- ಪ್ರಾಣವನ್ನು, ಬರಿಸಿದೆ-ಬರಮಾಡಿದೆಗಡ !. ದೇವ ! ನಿನ್ನ, ಪೋಲ್ವರುಂ- ಹೋಲುವಂಥಾವರೂ, ಒಳರೆ- ಉಂಟೆ? ... ॥೪೩॥

ಇಳಾಪಾವನ- ಭೂಮಿಯಲ್ಲಿ ಪರಿಶುದ್ಧನಾದ, ದೇವ, ಭವದಕ್ಷಿರುಚಿಸಂಜೀವನದಿಂ- ನಿನ್ನನೇತ್ರದಕಾಂತಿಯೆಂಬ ಸಂಜೀವನದಿಂದ, ಮಗಳ,ಅಸುವಂ-ಪ್ರಾಣವನ್ನು, ಪಡೆದೆ;ತೀವಿದ- ತುಂಬಿದ, ಮನ್ಮನದ- ನನ್ನಮನಸ್ಸಿನ, ಬೇಗೆಯಂ- ಸಂತಾಪವನ್ನು, ಕರುಣಾವರ್ಷದೆ- ದಯೆಯೆಂಬಮಳೆಯಿಂದ,ಮುಳ್ಗಿಸಿದೈ- ನಾಶಮಾಡಿದೆ.

ಕಂ ॥ ಪ್ರತ್ಯುಪಕೃತಿಯಿಲ್ಲಿದಕಿದು । ಸತ್ಯಂ ಪ್ರಾಣೋಪಕಾರಕದರಿಂ ಭುವನ ॥ ಸ್ತುತ್ಯ ಸಲೆ ನಿಮ್ಮ ಭೃತ್ಯರ । ಭೃತ್ಯತೆಯಿಂ ಬಾಳ್ವೆವೆಮ್ಮ ನುದ್ಧರಿಸೋವಿ ॥೮೫॥

ವ॥ ಎಂದು ಸಾಷ್ಟಾಂಗ ಮೆರಗಿರ್ದ ದಂಪತಿಯ ನಾಕನ್ನಿಕೆಯುಮಂ ಕಾರುಣ್ಯದಿಂ ನೋಡಿ ಲಿಂಗಾಂಗಸಂಯುಕ್ತರಂ ಮಾಡಿ ಮಗುಳ್ದು ಶತಾಯುರ್ಜೀವಿತ್ವಮುಮಂ ಕರುಣಿಸಿ ಕಳುಪಿ ಮಹಾನುಭಾವ ನೊಪ್ಪಿರ್ದ ನಾಗಳ್ ॥ * * * * * * * * * *

ಚಂ ॥ ಅಳಿದ ತಪೋಧನಂಗೆ ವೃಷಭಂಗೆ ವರಾಂಗಿಗೆ ಜೀವಮಿತ್ತು ತಾ । ನುಳುಪಿದ ನೀಧರಿತ್ರಿಯೊಳೆ ಚೌಡಮಹಾವಿಭು ಚಿತ್ರಮೆಂದು ನಿ ॥ ಶ್ಚಳವತಿ ಸೂರಿಗಳ್ಪೊಗಳ್ದು ಬಣ್ಣಿಪ ಕೀರ್ತಿಯ ವಾರ್ತೆ ಲೋಕದೊ । ಳ್ಬಳೆದಿರೆ ಕೇಳ್ದಸೂಯೆಗೊಳುತನ್ಯಮತಸ್ಥಿತರೊಂದುಗೂಡುತಂ ॥ ... ... ... ... ... ॥೮೬॥

ಚಂ ॥ ಪ್ರಾಣಮನಿತ್ತು ಗೂಳಿಗೆ ತಪಸ್ವಿಗೆ ಕನ್ನೆಗೆ ತನ್ನ ಬಿಂಕಮಂ । ಕ್ಷೋಣಿಯೊಳೆಯ್ದೆ ಬೀರಿದವನನ್ಯಮತಂಗಳ ಲೆಕ್ಕಿಸಂ ಪರ॥ ತ್ರಾಣಪರಾಯಣಂ ದರೆಯೊಳೋರ್ವನೆ ತಾಂ ಗಡ ತನ್ನ ಪೇರ್ಮೆಯಂ । ಮಾಣಿಪ ವೆಂದೆನುತ್ತೆ ಕಪಟಸ್ಥಿತಿಯಂ ಬಗೆಗೊಂಡು ದುರ್ಬುಧರ್ ॥ ... ... ... ... ... ... ॥೮೭॥

---

ಇದಕೆಪ್ರಾಣೋಪಕಾರಕೆ- ಈ ಪ್ರಾಣವನ್ನು ರಕ್ಷಿಸಿದಉಪಕಾರಕ್ಕೆ, ಪ್ರತ್ಯುಪಕೃತಿ- ಬದಲಾಗಿಮಾಡುವ ಉಪಕಾರವು, ಇಲ್ಲ; ಇದು, ಸತ್ಯಂ, ಅದರಿಂ, ಭುವನಸ್ತುತ್ಯ- ಲೋಕದಿಂದ ಸ್ತೋತ್ರಮಾಡಿಸಿಕೊಳ್ಳುವದಕ್ಕೆ ಯೋಗ್ಯನಾದಸ್ವಾಮಿಯೇ ? ನಿಮ್ಮ, ಭೃತ್ಯರ- ಸೇವಕರ, ಭೃತ್ಯತೆಯಿಂ- ಸೇವಕತ್ವೆಯಿಂದ, ಸಲೆ, ಬಾಳ್ವೆವು; ಎಮ್ಮಂ, ಒಲವಿಂ, ಉದ್ಧರಿಸು. ... ... ... ॥೮೫॥

ಎಂದು, ಸಾಷ್ಟಾಂಗಂ, ಎರಗಿ, ಇರ್ದ, ದಂಪತಿಯು- ಗಂಡಹೆಂಡತಿಯರನ್ನು, ಆ ಕನ್ನಿಕೆಯುಮಂ, ಮಹಾನುಭಾವಂ, ಕಾರುಣ್ಯದಿಂ, ನೋಡಿ, ಲಿಂಗಾಂಗಸಂಯುಕ್ತರಂ- ಲಿಂಗಧಾರಿಗಳನ್ನು, ಮಾಡಿ, ಮಗುಳ್ದು, ಶತಾಯುರ್ಜೀವಿತ್ವಮುಂ- ನೂರುವರ್ಷಬಾಳ್ವೆಯನ್ನು, ಕರುಣಿಸಿ- ದಯಪಾಲಿಸಿ, ಕಳುಪಿ, ಒಪ್ಪಿ, ಇರ್ದಂ. * * * * * * * * * * * * * * * * *

ಈ ಧರಿತ್ರಿಯೊಳೆ- ಈ ಭೂಮಿಯಲ್ಲಿ, ನಿಶ್ಚಲಮತಿ- ಚಂಚಲಶೂನ್ಯವಾದ ಬುದ್ಧಿಯುಳ್ಳ, ಚೌಡವಿಭು, ಅಳಿದ, ತಪೋಧನಂಗೆ- ಋಷಿಗೆ, ವೃಷಭಂಗೆ, ವರಾಂಗಿಗೆ- ಶ್ರೇಷ್ಠವಾದ ಅಂಗವುಳ್ಳ ಸ್ತ್ರೀಗೆ, ಜೀವಮಿತ್ತು; ತಾಂ, ಉಳುಪಿದುದು, ಚಿತ್ರಂ- ಆಶ್ಚರ್ಯವು, ಎಂದು, ಸೂರಿಗಳ್- ಬುದ್ಧಿವಂತರು, ಬಣ್ಣಿಪ- ವರ್ಣಿಸುವ, ಕೀರ್ತಿವಾರ್ತೆ- ಯಶೋವೃತ್ತಾಂತವು, ಲೋಕದೊಳ್, ಬಳೆದು, ಇರೆ, ಅನ್ಯಮತಸ್ಥಿತರ್- ಪರಮತಸ್ಥರಾದ, ದುರ್ಬುಧರ್- ಮೂಢರು, ಕೇಳ್ದು, ಅಸೂಯೆಗೊಳುತೆ- ಹೊಟ್ಟೆಯಕಿಚ್ಚನ್ನುಹೊಂದಿ, ಒಂದುಗೂಡುತಂ- ಗುಂಪಾಗುತ್ತ. ... ... ... ... ॥೮೬॥

ಗೂಳಿಗೆ, ತಪಸ್ವಿಗೆ, ಕನ್ನೆಗೆ, ಪ್ರಾಣಮಂ, ಇತ್ತು, ತನ್ನ, ಬಿಂಕಮಂ- ಗರ್ವವನ್ನು, ಕ್ಷೋಣಿಯೊಳ್- ಭೂಮಿಯಲ್ಲಿ, ಎಯ್ದೆ, ಬೀರಿದಮಂ- ವಿಸ್ತರಿಸುವನು, ಅನ್ಯಮತಂಗಳಂ- ಪರಮತಗಳನ್ನು, ಲೆಕ್ಕಿಸಂ- ಲಕ್ಷ್ಯಮಾಡುವದಿಲ್ಲ, ದರೆಯೊಳ್, ತಾಂ, ಓರ್ವನೆ, ಪರತ್ರಾಣಪರಾಯಣಂಗಡ- ಅನ್ಯರಕ್ಷಣೆಯಲ್ಲಿ ಆಸಕ್ತನಾದವನಲ್ಲವೇ ? ತನ್ನ, ಪೇರ್ಮೆಯಂ- ಆಧಿಕ್ಯವನ್ನು, ಮಾಣಿಪೆವು- ನಿಲಿಸುವೆವು, ಎಂದು, ಎನುತ್ತೆ, ಕಪಟಸ್ಥಿತಿಯಂ, ಬಗೆಗೊಂಡು- ಯೋಚಿಸಿಕೊಂಡು. ... ... ... ॥೮೭॥

ಮತ್ತೇ ॥ ತೃಣಮುಂ ತೀವಿ ತಪಸ್ವಿಯಾಕೃತಿಯ ನಾಗಳ್ಗೋಣಿಯಿಂ ಮಾಡುತಂ । ಪಣೆಯೊಳ್ಪೂಸಿ ವಿಭೂತಿಯುಂತೊಡಿಸಿ ರುದ್ರಾಕ್ಷಾಳಿಯುಂ ಶೈವಲ ॥ ಕ್ಷಣಮಂ ಸಾರ್ಚಿ ಜಟಾಳಿಯುಂ ರಚಿಸಿ ಕೌಪೀನಾನ್ವಿತಂಗೆಯ್ದು ನಿರ್ಗುಣ ರಂದಂತೆದ ನೊಂದು ಬಾಳ್ಗಡಿಯೊ । ಳೋರಂತಿಟ್ಟು ಕೌಟಿಲ್ಯದಿಂ ॥ ... ... ... ... ॥೪೮॥

ಮ॥ ಸ್ರ॥ ನಗುತಂ ನಾನಾಜನಂ ತೀವಿದ ವಿಪಣಿಗಳೊಳ್ಚೆಲ್ಲದಿಂ ಶೈವಮಾರ್ಗಾನುಗ ನೋರ್ವಂ ಬೀಳ್ದು ದೇವಾಲಯದೊಳೆ ಮಡಿದಂ ತಾಪಸಂ ಮಾಣದಾದೇ ॥ ಸಿಗನಂಗಂ ಬಾತು ನಾರುತ್ತ ಕಟ ಕೆಡೆದು ತಾ ನಿರ್ಪ್ಪದಾರುಂ ಕರಂಸಾ । ರ್ಕೆಗೆ ಸಾರ ರ್ನೋಡ ರೆತ್ತ ರ್ಪ್ಪುರದೊಳಭವಭಕ್ತರ್ಕಳಾಶ್ಚರ್ಯಮಲ್ತೆ ॥ . ... ... ... ॥೪೯॥

ಮತ್ತೇ ॥ ತಮಗೇಂ ಬಾರದೆ ನಾಳೆ ನಾಳೆ ಮರಣಂ ಸಾವೆಲ್ಲಜೀವರ್ಗೆ ತಾಂ । ಸಮ ಮೆಂಬೊಳ್ಪಿಡಿ ಸತ್ಯಮಲ್ತೆ ಶಿವಭಕ್ತರ್ ಶೈವಮುದ್ರಾಂಕಸಂ ॥ ಯಮಿ ದೀನಂ ಮೃತನಾಗೆ ನೋಡ ರಿವ ನುದ್ಯದ್ವಿತ್ತಸಂಪನ್ನನಾ । ಗೆ ಮಹೋತ್ಸಾಹದಿ ನರ್ಥದಾಸೆ ಗಳಿದಾಗಳ್ಬಾರದೇಂ ಪೋಪರೆ ॥ ... ... ... ... ... ॥೫೦॥

ಕಂ ॥ ಬಡತಪಸಿ ಮಡಿದ ನಕ್ಕಟ । ನಡೆ ನೋಳ್ಪವರಾರು ಮಿಲ್ಲ ಮಾತನ ಪೆಣನಂ ॥ ನ್ಮೃಡಭಕ್ತ ರೆತ್ತ ಲೊಲ್ಲ । ರ್ಪೊಡವಿಯೊ ಳಿದು ಭಕ್ತನೀತಿಯೇಬಗೆವಾಗಳ್ ॥ ॥೫೧॥

---

ಆಗಳ್, ನಿರ್ಗುಣರ್- ಸದ್ಗುಣವಿಲ್ಲದವರು, ಗೋಣಿಯಿಂ, ತಪಸ್ವಿಯ, ಆ ಕೃತಿಯಂ, ಮಾಡುತ್ತಂ, ತೃಣಮಂ- ಹುಲ್ಲನ್ನು, ತೀವಿ- ತುಂಬಿ, ಪಣೆಯೊಳ್, ವಿಭೂತಿಯಂ, ಪೂಸಿ- ಧರಿಸಿ, ರುದ್ರಾಕ್ಷಾಳಿಯಂ, ತೊಡಿಸಿ, ಶೈವಲಕ್ಷಣಮಂ, ಸಾರ್ಚಿ- ಹೊಂದಿಸಿ, ಜಟಾಳಿಯಂ, ರಚಿಸಿ, ಕೌಪೀನಾನ್ವಿತಂಗೆಯ್ದು, ಅಂದು, ಅವಂ, ಒಂದು ಬಾಳ್ಗಡಿಯೊಳ್- ಕೌಟಿಲ್ಯದಿಂ- ಕಪಟದಿಂದ, ಓರಂತೆ- ಕ್ರಮವಾಗಿ, ಇಟ್ಟು. ॥೪೮॥

ನಗುತಂ, ನಾನಾಜನಂ, ತೀವಿದ, ವಿಪಣಿಗಳೊಳ್- ಅಂಗಡಿಬೀದಿಗಳಲ್ಲಿ, ಚೆಲ್ಲದಿಂ- ವಿಲಾಸದಿಂದ, ಶೈವಮಾರ್ಗಾನುಗಂ- ಶಿವಮಾರ್ಗವನ್ನು ಅನುಸರಿಸಿದ, ಓರ್ವಂತಾಪಸಂ- ಒಬ್ಬರುಷಿಯು, ದೇವಾಲಯದೊಳೆ, ಬೀಳ್ದು, ಮಡಿದಂ- ಸತ್ತನು, ದೇಸಿಗನ- ಗುರೂತ್ತಮನ, ಅಂಗಂ- ಶರೀರವು, ತಾಂ, ಮಾಣದೆ- ಬಿಡದೆ, ಬಾತು- ಊದಿ, ಕರಂ- ಅತ್ಯಂತವಾಗಿ ನಾರುತ್ತೆ- ನಾತಹೊಡೆಯುತ್ತ, ಕೆಡೆದು- ಬಿದ್ದು, ಇರ್ಪ್ಪುದು: ಅಕಟ- ಅಯ್ಯೋ ! ಪುರದೊಳ್, ಆರುಂ ಅಭವಭಕ್ತರ್ಕಳ್- ಶಿವಭಕ್ತರ್ಯ್ಯಾರೂ, ಸಾರ್ಕೆಗೆ- ಸಮೀಪಕ್ಕೆ, ಸಾರರ್- ಸೇರರು, ನೋಡರ್, ಎತ್ತರ್- ಎತ್ತುವದಿಲ್ಲ, ಆಶ್ಚರ್ಯಮಲ್ತೆ. ... . ... ॥೪೯॥

ನಾಳೆ, ತಮಗೆ, ನಾಳೆ, ಮರಣಂ, ಬಾರದೇಂ ? ಸಾವು, ತಾಂ, ಎಲ್ಲಜೀವರ್ಗೆ, ಸಮಂ; ಎಂಬ, ಬಲ್ಪಿಡಿ, ಸತ್ಯಮಲ್ತೆ ? ಶಿವಭಕ್ತರ್, ದೀನಂ- ಬಡವನಾದ, ಶೈವಮುದ್ರಾಂಕಸಂಯಮಿ- ಶಿವಚಿಹ್ನಾಂಕಿತನಾದ ಯೋಗಿಯು, ಮೃತಲ, ಆಗೆ, ನೋಡರ್- ನೋಡುವದಿಲ್ಲ, ಅವಂ, ಉದ್ಯದ್ವಿತ್ತಸಂಪನ್ನಂ- ಉತ್ಕೃಷ್ಟವಾದ ಧನವಂತನು, ಆಗೆ, ಅಳಿದಾಗಳ್- ಸತ್ತಕಾಲದಲ್ಲಿ, ಮಹೋತ್ಸಾಹದಿಂ, ಅರ್ಥದ, ಆಸೆಗೆ, ಬಾರದೆ, ಪೋಪರೇಂ. ... ... ... ... ... ॥೫೦॥

ಬಡತಪಸಿ, ಮಡಿದಂ, ನಡೆ, ನೋಳ್ಪವರ್, ಆರುಂ, ಇಲ್ಲಂ, ಅಕ್ಕಟ, ಆತನ, ಪೆಣನಂ, ಮೃಡಭಕ್ತರ್, ಎತ್ತಲ್, ಒಲ್ಲರ್, ಪೊಡವಿಯೊಳ್, ಬಗೆವಾಗಳ್- ಯೋಚಿಸಲಾಗಿ, ಇದು, ಭಕ್ತನೀತಿಯೇ- ಭಕ್ತರಿಗೆ ನ್ಯಾಯವೇ. ... ... ... ... ... ... ॥೫೧॥

ಕಂ ॥ ಮಡಿದತಪಸ್ವಿಗೆ ಮುನ್ನಂ । ಪೊಡವಿಯೊಳಸುವಿತ್ತನೀತ ನಳಿದಿರ್ಪ್ಪದ
ನಾ ॥ ಕಡುಚಾಗಿ ಚೌಡಯ್ಯಂ ಕಂ । ಡೊಡೆ ಹರಣಮ ನೀವ ನರಿಯದಿರ್ದ್ದಪನಲ್ತೆ ॥೫೨॥
ವ ॥ ಆತಂಗೆ ಮಾಡೊಡ ಮೀ ಕುಣಪಮಂ ತೋರಿದಪೆ ವೆಂದೊಂದು ವಿಮಾನಮಂ ರ
ಚಿಸುತದರೊಳಿಟ್ಟು ಬಂಧಿಸಿ ಬಡತಪಸಿಗಳುಮಂ ಗೋವರುಮಂ ಕೆಲಂಬರುಮಂ ನೆರಪುತವ
ರ್ಗಳಿನಾ ಮಾಡಮಂ ಪೊರಿಸಿಕೊಂಡು ಚೌಡದೇವನ ಗೃಹದ ಮುಂದಣಬೀದಿಯೊಳ್ ಧೂ
ರ್ತಧುರಂಧರರ್ಪಲವಂದದಿಂ ಪರಿಹಾಸೋಕ್ತಿಗಳ ನಾಡುತ್ತಂ ಬರುತ್ತಮಿರೆ ಚೌಡದೇವ
ನದಂ ಕಂಡು ಕೃತಕಶಬ ಮೆಂದರಿ ದವರ ದುಶ್ಚೇಷ್ಟೆಯ ನಭೀಕ್ಷಿಸಿ ಮುಗುಳ್ನಗೆನಕ್ಕು ॥
ಕಂ ॥ ಘನಮಹಿಮಾಂಬುಧಿ ದೂಷಕ । ಜನವನಧರಚಂಡಮಾರುತಂ ಚೌಡಾರ್ಯಂ ॥
ತನು ಪೊಂಪುಳಿಯೋಗುತ್ತಿರೆ । ಬಿನದದೆ ನಡೆ ನೋಡಿ ತನ್ನೊಳಂದಿಂತೆಂದಂ ॥ ॥೫೩॥
ಚಂ॥ ವನಜಭವಾಂಡಭಾಂಡಚಯಮಂ ಕಡೆಯ ಲ್ಕೆಡಪಲ್ಸಮರ್ಥ್ಧರೆಂ । ದೆನಿಪ ಮ
ಹೇಶಭಕ್ತರವರ್ಗೀ ಕಪಟಾಕೃತಿಗಂಗಮಿತ್ತು ಜೀ ॥ ವನಮನಮರ್ಚುವಂದ ಮಿದು ಲಕ್ಷ್ಯ
ಮೆ ಮಾಣದೆ ಮಾಳ್ಪೆ ನಿಂತುಟೆಂ । ದನವಧಿಶೌರ್ಯ ನಣ್ಮಿ ನೆನೆದಾದ್ಯಗಣಾಂಘ್ರಿಸರೋಜ
ರಾಜಿಯಂ ॥ ... ... ... ... ... ... ॥೫೪॥

---

ಮುನ್ನಂ, ಮಡಿದ, ತಪಸ್ವಿಗೆ, ಪೊಡವಿಯೊಳ್, ಕಡುಚಾಗಿ- ಅತಿದಾನಶಾಲಿಯಾದ ಚೌಡಯ್ಯಂ, ಅಸುವಿತ್ತಂ- ಪ್ರಾಣವನ್ನು ಕೊಟ್ಟನು, ಈತಂ- ಈ ಋಷಿಯು, ಅಳಿದು, ಇರ್ಪ್ಪದು, ಕಂಡೊಡೆ, ಹರಣಮಂ- ಪ್ರಾಣವನ್ನು, ಈವಂ- ಕೊಡುವಿಕೆಯನ್ನು, ಅರಿಯದೆ, ಇರ್ದ್ದಪನಲ್ತೆ ? ... ॥೫೨॥

ಆತಂಗಮಾದೊಡಂ- ಆ ಚೌಡಯ್ಯನಿಗಾದರೂ, ಈ ಕುಣಪಮಂ- ಈ ಹೆಣವನ್ನು, ತೋರಿದಪೆವ್, ಎಂದು, ಒಂದುವಿಮಾನಮಂ, ರಚಿಸುತೆ, ಅದರೊಳ್, ಇಟ್ಟು, ಬಂಧಿಸಿ, ಬಡತಪಸಿಗಳುಮಂ, ಗೋವರುಮಂ, ಕೆಲಂಬರಂ- ಕೆಲವರನ್ನು, ನೆರಪುತೆ- ಸೇರಿಸುತ್ತ, ಅವರ್ಗಳಿಂ, ಆ ಮಾಡಮಂ- ಆ ವಿಮಾನವನ್ನು, ಪೊರಿಸಿಕೊಂಡು, ಚೌಡದೇವನ, ಗೃಹದ, ಮುಂದಣಬೀದಿಯೊಳ್, ಧೂರ್ತಧುರಂಧರರ್- ನೀಚರಲ್ಲಿ ಸಮರ್ಥರಾದವರು, ಪಲವಂದದಿಂ- ನಾನಾರೀತಿಯಿಂದ, ಪರಿಹಾಸೋಕ್ತಿಗಳಂ- ಹಾಸ್ಯವಚನಗಳನ್ನು, ಆಡುತ್ತಂ, ಬರುತ್ತಂ, ಇರೆ, ಚೌಡದೇವಂ, ಅದಂ, ಕಂಡು, ಕೃತಕಶಬಂ- ಕೃತ್ರಿಮವಾದ ಹೆಣವು, ಇದು, ಅರಿದು, ಅವರ, ದುಶ್ಚೇಷ್ಟೆಯಂ, ಅಭೀಕ್ಷಿಸಿ- ನೋಡಿ, ಮುಗುಳ್ನಗೆನಕ್ಕು- ಮಂದಹಾಸವನ್ನುಮಾಡಿ. ॥

ಘನಮಹಿಮಾಂಬುಧಿ-ಉತ್ಕೃಷ್ಟವಾದ ಮಹತ್ತ್ವಕ್ಕೆ ಸಮುದ್ರಪ್ರಾಯನಾದ,ದೂಷಕಜನವನಧರಚಂಡಮಾರುತಂ—ದೂಷಕ- ದೂಷಣೆಯಂಮಾಡುವ, ಜನ- ಜನಗಳೆಂಬ, ವನಧರ- ಮೇಘಕ್ಕೆ, ಚಂಡಮಾರುತಂ- ಪ್ರಚಂಡವಾಯುಸ್ವರೂಪನಾದ, ಚೌಡಾರ್ಯಂ, ತನು- ಶರೀರವು, ಪೊಂಪುಳಿಯೋಗುತ್ತಿರೆ- ರೋಮಾಂಚವಿಶಿಷ್ಟನಾಗುತ್ತಿರಲಾಗಿ, ಬಿನದದೆ- ವಿನೋದದಿಂದ, ಅಂದು, ನೋಡಿ, ತನ್ನೊಳ್,ಇಂತು, ಎಂದಂ.

ಮಹೇಶಭಕ್ತರ್, ವನಜಭವಾಂಡಭಾಂಡಚಯಮಂ- ಬ್ರಹ್ಮಾಂಡಗಳೆಂಬ ಕುಂಭಗಳಸಮುದಾಯವನ್ನು, ಪಡೆಯಲ್, ಕೆಡಪಲ್- ನಾಶಮಾಡುವದಕ್ಕೆ, ಸಮರ್ಥರ್, ಎಂದು, ಎನಿಪ, ಅವರ್ಗೆ, ಈ ಕಪಟಾಕೃತಿಗೆ- ಈ ಕೃತ್ರಿಮರೂಪಿನ ಹೆಣಕ್ಕೆ, ಅಂಗಮಿತ್ತು- ಶರೀರವನ್ನುಕೊಟ್ಟು, ಜೀವನಮಂ- ಪ್ರಾಣವನ್ನು, ಅಮರ್ಚುವಂದಂ- ಹೊಂದಿಸುವ ರೀತಿಯು, ಇದು, ಲಕ್ಷ್ಯಮೆ-ಗುರಿಯೇ! ಮಾಣದೆ,ಇಂತುಟು- ಹೀಗೆ, ಮಾಳ್ಪೆಂ, ಎಂದು,ಅನವಧಿಶೌರ್ಯಂ- ಅಪಾರವಾದ ಪರಾಕ್ರಮವುಳ್ಳ ಚೌಡಾರ್ಯನು, ಅಣ್ಮಿ- ಪೌರುಷವಿಶಿಷ್ಟನಾಗಿ, ಆದ್ಯಗಣಾಂಘ್ರಿಸರೋಜರಾಜಿಯಂ- ಪುರಾತನರಾದ ಶಿವಗಣಂಗಳಪಾದಕಮಲವನ್ನು, ನೆನೆದು- ಸ್ಮರಿಸಿ.

ಚಂ॥ ಕರತಳಖಡ್ಗಮಂ ಜಡಿದು ಚಿಮ್ಮುತೆ ತಾಪಸದೇವ ನುದ್ಭವ | ಕ್ಕಿರದಿದು
ಕಾರಮಿಂಚೆನಿಸೆ ಲಂಘಿಸಿ ಮಾಡದ ಮುಂದೆ ಪೌರರ ॥ ಚ್ಚರಿವಡೆ ನಿಂದು ಕೃತ್ರಿಮತಪ
ಸ್ವಿಯ ಕೈವಿಡಿದೆತ್ತು ತೇಳ್ಗುಣಾ | ಕರ ಜವದಿಂದ ಮೆಂದುಸಿರೆ ಚೌಡಮಹಾಪ್ರಭು ತತ್
ಕ್ಷಣಾರ್ಧದೊಳ್ ॥ ... ... ... ... ... ॥೨೫॥

ಮ॥ ಸ್ರ॥ ತನುಭಾವು ತಳ್ತು ಜೀವಂಬಡೆದು ಮಹಿಂಗೆ ದುಮ್ಮಿಕ್ಕಿ ಮೆಯ್ಯಿಕ್ಕಿ
ಚೌತಾ | ರ್ಯನ ಪಾದಾಂಬೋರುಹಕ್ಕಾ ಕಪಟತಪಸಿ ದೇವೇಶ ನಿಮ್ಮೀಕೃಪಾಲೋ ॥ ಕನ
ದಿಂ ದಾಂ ಪುಟ್ಟಿದೆಂ ಕೇಳೆನಗೆ ಪಿತನುಮಾಚಾರ್ಯನುಂ ಲಿಂಗಮುಂ ನೀಂ | ನಿತಾಂತಂ ಸ
ತ್ಯಮೆನ್ನಂ ಪೊರೆಯುದೆನುತೆ ಕೊಂಡಾಡಿದು ಭಕ್ತಿಯಿಂದಂ ॥ ... ... ॥೨೬॥

ವ॥ ಇಂತು ಕರಕಂಜಮಂ ಮುಗಿದು ದೈನ್ಯಂ ಮಿಗೆ ಪೊಗಳ್ವ ತಾಪಸನಂ ಚೌಡದೇ
ವಂ ಕೃಪಾವಲೋಕನದಿ ನಭೀಕ್ಷಿಸಿ ಶಿವದೀಕ್ಷೆಯಂ ಕರುಣಿಸಿ ಚಿರ ಜೀವಿತ್ವಮ ನಿತ್ತು ರ
ಕ್ಷಿಸಿ ನಿರರ್ಗಳನಿಜಪ್ರಭಾವಮಂ ಬೀರುತ್ತ ಮಿರ್ಪಿನಮಾಗಳ್ ॥ * * * * *

ಚಂ॥ ಪರಮತಮತ್ತವಾದಿತತಿ ಯಚ್ಚರಿವಟ್ಟುಪೊದಳ್ದಭೀತಿಯೊ | ಳ್ಪೊರೆದೊ
ಡಲುಂ ಧರಿತ್ರಿಯೊಳೆ ಸಾರ್ಚಿ ನಮಸ್ಕೃತಿಗೆಯ್ದು ದೇವ ಚೌ॥ ಡರಸ ಚರಾಚರಪ್ರಕರಪಾಲ
ಕ ಪಾಲಿಪುದೆಮ್ಮ ನಜ್ಞರಂ|ದುರಿತನಿಯುಕ್ತರಂ ಪಶುಗಳಂ ಗುಣಹೀನರನೆಂದು ದೈನ್ಯದಿಂ॥

---

ಚೌಡಮಹಾಪ್ರಭು, ಕರತಳಖಡ್ಗಮಂ- ಹಸ್ತಪ್ರದೇಶದಲ್ಲಿರುವ ಕತ್ತಿಯನ್ನು, ತಾಪಸದೇವನ, ಋಷಿಯು, ಉದ್ಭವಕ್ಕೆ- ಆವಿರ್ಭಾವಕ್ಕೆ, ಇರದೆ- ಬಿಡದೆ, ಇದು- ಈ ಖಡ್ಗವು, ಕಾರಮಿಂಚು- ವರ್ಷಾಕಾಲದ ಮಿಂಚು, ಎನಿಸೆ, ಚಿಮ್ಮುತೆ, ಜಡಿದು- ಅಲ್ಲಾಡಿಸಿ, ಲಂಘಿಸಿ- ಹಾರಿ, ಮಾಡದ- ವಿಮಾನದ, ಮುಂದೆ, ನಿಂದು, ಪೌರರ್- ಪಟ್ಟಣದ ಜನರು, ಅಚ್ಚರಿವಡೆ- ಆಶ್ಚರ್ಯಪಡಲಾಗಿ, ಕೃತ್ರಿಮತಪಸ್ವಿಯ, ಕೈವಿಡಿದು- ಕಯ್ಯನ್ನುಹಿಡಿದು, ಎತ್ತುತೆ, ಗುಣಾಕರ! ಜವದಿಂದಂ-ಬೇಗನೆ, ಏಳ್, ಎಂದು, ಉಸಿರೆ, ತತ್ಕ್ಷಣಾರ್ಧದೊಳ್.

ಆ ಕಪಟತಪಸ್ವಿ, ತನುಭಾವಂ- ಶರೀರವ್ಯಾಪಾರವು, ತಳ್ತು-ಹೊಂದಿ, ಜೀವಂಬಡೆದು, ಮಹಿಗೆ, ದುಮ್ಮಿಕ್ಕಿ, ಚೌತಾರ್ಯನ, ಪಾದಾಂಭೋರುಹಕ್ಕೆ, ಮೆಯ್ಯಿಕ್ಕಿ- ನಮಸ್ಕರಿಸಿ, ದೇವೇಶ! ನಿಮ್ಮ, ಈ ಕೃಪಾಲೋಕನದಿಂದೆ, ಈ ಕರುಣಾವಿಶಿಷ್ಟನಾದ ನೋಟದಿಂದ, ಆಂ, ಪುಟ್ಟಿದೆಂ, ಕೇಳ್, ಎನಗೆ, ಪಿತನುಂ- ತಂದೆಯೂ, ಆಚಾರ್ಯನುಂ- ಗುರುವೂ, ಲಿಂಗಮುಂ, ನಿತಾಂತಂ- ಅತ್ಯಂತವಾಗಿ, ನೀನೆ, ಸತ್ಯಂ, ಎನ್ನಂ, ಪೊರೆಯುದು- ರಕ್ಷಿಸುವದು, ಎನುತೆ, ಭಕ್ತಿಯಿಂ, ಕೊಂಡಾಡಿದಂ. ... ... ... ॥೨೬॥

ಇಂತು, ಕರಕಂಜಮಂ, ಮುಗಿದು, ದೈನ್ಯಂ, ಮಿಗೆ, ಪೊಗಳ್ವ, ತಾಪಸನಂ, ಚೌಡದೇವಂ, ಕೃಪಾವಲೋಕನದಿಂ, ಅಭೀಕ್ಷಿಸಿ, ಶಿವದೀಕ್ಷೆಯಂ, ಕರುಣಿಸಿ, ಚಿರಂಜೀವಿತ್ವಮಂ-ಬಹುಕಾಲ ಬದುಕುವಿಕೆಯನ್ನು, ಇತ್ತು, ರಕ್ಷಿಸಿ, ನಿರರ್ಗಳನಿಜಪ್ರಭಾವಮಂ- ತಡೆಯಿಲ್ಲದೆಯಿರುವ ತನ್ನ ಮಹಿಮೆಯನ್ನು, ಬೀರುತ್ತಂ, ಇರ್ಪಿನಂ, ಆಗಳ್. * * * * * * * * * * * * * * * * *

ಪರಮತಮತ್ತವಾದಿತತಿ- ಅನ್ಯಮತದ ಕೊಬ್ಬಿದ ವಾದಿಗಳ ಸಮೂಹವು, ಅಚ್ಚರಿವಟ್ಟು, ಪೊದಳ್ದ ಬೀತಿಯೊಳ್- ಹೆಚ್ಚಾದಭಯದಿಂದ, ಪೊರೆದು- ತುಂಬಿ, ಒಡಲಂ- ದೇಹವನ್ನು, ಧರಿತ್ರಿಯೊಳೆ, ಸಾರ್ಚಿ- ಸೇರಿಸಿ, ನಮಸ್ಕೃತಿಗೆಯ್ದು, ದೇವ! ಚೌಡರಸ! ಚರಾಚರಪ್ರಕರಪಾಲಕ- ಸ್ಥಾವರಜಂಗಮಂಗಳ ಸಮುದಾಯವನ್ನು ರಕ್ಷಿಸುವಂಥಾವನೇ! ಅಜ್ಞರು- ಮೂರ್ಖರಾದ, ದುರಿತನಿಯುಕ್ತರಂ-ಪಾಪದಿಂದಕೂಡಿದ, ಪಶುಗಳಂ, ಗುಣಹೀನರಂ, ಎಮ್ಮಂ, ಪಾಲಿಪುದು, ಎಂದು, ದೈನ್ಯದಿಂ. ... ... ॥೨೭॥

ಚಂ ॥ ಅಭಯುಮ ನೊಲ್ದು ಜೇಡೆ ಮರೆದಾ ಮದಮುತ್ತರ ತಪ್ಪ ನಾಗಣ । ಪ್ರಭು ಪದೆದೀಕ್ಷಿಸುತ್ತೆ ಕೃಪೆಯಿಂದಭಯಂಗುಡು ತನ್ಯದರ್ಶನ ॥ ಪ್ರಭವಜಡತ್ವಮಂ ಬಿಡಿಸಿ ಶೈವ ಮತಸ್ಥಿತಿಯಂ ನೆಗಳ್ಚಿ ಸ । ದ್ವಿಭವದಿನೊಪ್ಪಿದಂ ಮುಸುಟಿಚೌಡಮಹಾತ್ಮ ನಿಳಾತಳಾ ಗ್ರದೊಳ್ ॥ ... ... ... ... ... ... ॥೫೮॥

ಮಹಾಸ್ರ ॥ ಇಳೆಯೊ ಳ್ಶ್ರೀಚೌಡದೇವಂ ಮುನಿವೃಷಭಕನ್ಯಾಗತಪ್ರಾಣಮಂ ಕೊ । ಟ್ಟಳಿಪ ರ್ನೈಗೆಯ್ದ ಮಾಯಾಮುನಿಗೆ ಹರಣಮಂ ಸಾರ್ಚಿ ಭೂನುತ್ಯನಾಗಿ ॥ ರ್ದಳ ಮಂ ಕೇಳ್ದೆಯ್ದಿ ನಣ್ಪಿಂದೆರಗಿ ನುತಿಸುತಾನಂದಮಂ ತಾಳ್ದು ಭಕ್ತಾ । ವಳಿಯೊ ಳ್ಕೊಂ ಡಾಡುತಂ ತನ್ಮಹಿಮೆಯ ನೆಸೆದು ಭಕ್ತಿಸೌಂದ್ರಂ ವೃಷೇಂದ್ರಂ ॥ ... ॥೫೯॥

ಕಂ ॥ ಮುಸುಟಿಯುಚೌಡಾರ್ಯನ ಸ । ಲ್ಲಸಿತಚರಿತ್ರಮ ನದಾವ ನೋದುವ ನಾವಂ॥ ರಸೆಯೊ ಳ್ಕೇಳ್ವ ನವಂ ಸಂ । ತಸದಿಂ ಪಡೆವಂ ಚಿರಾಯುವಂ ಘನಸುಖಮಂ ॥ ॥೬೦॥

ಲಲಿತಪದವೃತ್ತಂ ॥ ಶಾಂತನಿಜಮಾನಸ ನಿತಾಂತಪರಿವರ್ಜಿತಲತಾಂತಶರ ನಿರ್ಜಿತ ಕೃತಾಂತ ಶಿವಯೋಗಾ । ಶ್ರಾಂತಸುಖಯುಕ್ತ ನಿಗಮಾಂತಚಿದಭಿಜ್ಞ ಭವತಾಂತ ನತರಕ್ಷ ಶಶಿಕಾಂತಧವಳಾಂಗ ॥ ದಾಂತ ಪರಮೇಶಪರಿ ಚಿ ತನಪರಾಯಣ ನಿತಾಂತಶಿವಮಂತ್ರಕಲಿ

---

ಅಭಯುಮಂ, ಒಲ್ದು, ಜೇಡೆ, ಆಮದಮುತ್ತರ- ಆ ಗರ್ವಯುಕ್ತರ, ತಪ್ಪಂ- ಅಪರಾಧವನ್ನು, ಮರೆದು, ಆ ಗಣಪ್ರಭು- ಆ ಗಣಾಗ್ರಣಿಯಾದ, ಮುಸುಟಿಚೌಡಮಹಾತ್ಮಂ, ಪದೆದು, ಈಕ್ಷಿಸಿ, ಕೃಪೆಯಿಂದೆ,ಅ ಭಯುಮಂಗುಡುತೆ, ಅನ್ಯದರ್ಶನ ಪ್ರಭವಜಡತ್ವಮಂ- ಪರಸ್ರೇಕ್ಷಣದಿಂದ ಉಂಟಾದ ಜಡಭಾವವನ್ನು, ಬಿಡಿಸಿ, ಶೈವಮತಸ್ಥಿತಿಯಂ- ಶಿವಮತದಲ್ಲಿರುವಿಕೆಯನ್ನು, ನೆಗಳ್ಚಿ- ಮಾಡಿ, ಇಳಾತಳಾಗ್ರದೊಳ್, ಒಪ್ಪಿದಂ. ॥೫೮॥

ಇಳೆಯೊಳ್, ಶ್ರೀಚೌಡದೇವಂ, ಮುನಿವೃಷಭಕನ್ಯಾಗತಪ್ರಾಣಮಂ- ಋಷಿ, ಬಸವ, ಸ್ತ್ರೀ ಇ ವರುಗಳಿಗೆ ಹೋದಂಥಾ ಪ್ರಾಣವನ್ನು, ಕೊಟ್ಟು, ಅಳಿಪರ್- ನಿಂದಕರು, ಗೈಗೆಯ್ದ- ನಿರ್ಮಿಸಿದ, ಮಾಯಾ ಮುನಿಗೆ, ಹರಣಮಂ, ಸಾರ್ಚಿ, ಭೂನುತ್ಯಂ- ಭೋಜನದಿಂದ ಹೊಗಳಲ್ಪಡುವದಕ್ಕೆಯೋಗ್ಯನು, ಆಗಿ, ಇ ರ್ದ, ಅಳವಂ- ಶಕ್ತಿಯನ್ನು, ಭಕ್ತಿಸೌಂದ್ರಂ, ವೃಷೇಂದ್ರಂ, ಕೇಳ್ದು, ಎಯ್ದಿ, ಬಂದು, ನಣ್ಪಿಂದೆ- ಪ್ರೀತಿ ಯಿಂದ, ಎರಗಿ, ನುತಿಸುತೆ, ಆನಂದಮಂ, ತಾಳ್ದು, ಭಕ್ತಾವಳಿಯೊಳ್, ತನ್ಮಹಿಮೆಯಂ- ಅವನ ಮಹತ್ವವ ನ್ನು, ಕೊಂಡಾಡುತಂ, ಎಸೆದಂ. ... ... ... ... ॥೫೯॥

ಮುಸುಟಿಯುಚೌಡಾರ್ಯನ, ಸಲ್ಲಸಿತಚರಿತ್ರಮಂ- ಒಳ್ಳೆಯುಪ್ರಕಾಶಮಾನವಾದ ಕಥೆಯನ್ನು,ಅದಾವಂ, ಓದುವಂ, ಆವಂ, ರಸೆಯೊಳ್- ಭೂಮಿಯಲ್ಲಿ, ಕೇಳ್ವಂ, ಅವಂ, ಸಂತಸದಿಂದೆ, ಚಿರಾಯುವಂ- ಬಹುಕಾಲಿಕ ವಾದ ಆಯುಸ್ಸನ್ನು, ಘನಸುಖಮಂ- ಉತ್ಕೃಷ್ಟವಾದ ಸೌಖ್ಯವನ್ನು, ಪಡೆವಂ. ... ॥೬೦॥

ಶಾಂತನಿಜಮಾನಸ- ಶಾಂತಿಗುಣದಿಂಕೂಡಿದ ತನ್ನಮನಸ್ಸುಳ್ಳ, ನಿತಾಂತಪರಿವರ್ಜಿತಲತಾಂತಶರ— ನಿತಾಂತ- ಶೀಘ್ರವಾಗಿ, ಪರಿವರ್ಜಿತ- ಬಿಡಲ್ಪಟ್ಟ, * ಲತಾಂತಶರ- ಕಾಮನುಳ್ಳ,ನಿರ್ಜಿತಕೃತಾಂತ- ಜೈಸ ಲ್ಪಟ್ಟಯಮನುಳ್ಳ, ಶಿವಯೋಗಾಶ್ರಾಂತಸುಖಯುಕ್ತ- ಶಿವಸಂಬಂಧದಿಂದುಂಟಾದ ಅಧಿಕವಾದ ಸೌಖ್ಯದಿಂ ದಕೂಡಿದ, ನಿಗಮಾಂತಚಿದಭಿಜ್ಞ- ವೇದಾಂತವಿಷಯಕಜ್ಞಾನದಲ್ಲಿ ಪ್ರಾಜ್ಞನಾದ, ಭವತಾಂತ- ಭಾಪವನ್ನು ನಾಶಮಾಡಿದ, ನತರಕ್ಷ- ನಮಸ್ಕರಿಸಿದವರನ್ನು ಪಾಲಿಸುವ, ಶಶಿಕಾಂತಧವಳಾಂಗ- ಚಂದ್ರಕಾಂತ ಶಿಲೆ ಯೋಪಾದಿಯಲ್ಲಿ ಶುಭ್ರವಾದ ದೇಹವುಳ್ಳ, ದಾಂತ- ಇಂದ್ರಿಯನಿಗ್ರಹವುಳ್ಳ, ಪರಮೇಶಪರಿಚಿಂತನಪರಾಯ

---

* (ಅವ) ಲತಾಂತ- ಹೂವೇ, ಶರ- ಬಾಣವಾಗುಳ್ಳವನು. ... ... ... ॥೬೧॥

ತಾಂತರ ನಿರುದ್ಧ । ಸ್ವಾಂತಶಿವಲಿಂಗಜಯ ಸಂತತಕೃಪಾಕರ ನಿರಂತಗಣನಂದನವಸಂತ ಬಸವೇಶ ॥ ... ... ... ... ... ... ॥೬೧॥

ಉ ॥ ಶುಂಭನಿಶುಂಭಭಂಜನೆ ಕದಂಬಕದಂಬನಿವಾಸೆ ಕುಂಭಿರಾ । ಟ್ಕುಂಭಪಯೋಧ ರೋಜ್ವಲೆ ಚಿದಂಬರರೂಪಿಣಿ ಕಂಬುಕಂಠೆ ವಿ ॥ ಶ್ವಂಭರಜಂಭವೈರಿಸುರವಂದ್ಯಪದಾಂಬುಜೆ ಶಂಭುಸಂಭ್ರಮಾ । ರಂಭಣಶುಂಭದಂಬಿಕೆ ಮದಂಬಿಕೆ ಪಾಲಿಪು ದೆನ್ನ ಶಾಂಭವಿ ॥ ॥೬೨॥

ಗದ್ಯಂ॥ ಇದುವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತ ಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದ ಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಮುಸುಡಿಚೌಡದೇವಮಹತ್ವಕಥನಮೇಕವಿಂಶತ್ಯಾಶ್ವಾಸಂಪರಿಸಮಾಪ್ತಂ ... ... ... ... *

ಏಕವಿಂಶತ್ಯಾಶ್ವಾಸಂ ಸಂಪೂರ್ಣಂ.

---

ಣ- ಈಶ್ವರಧ್ಯಾನದಲ್ಲಾಸಕ್ತನಾದ, ನಿತಾಂತಶಿವಮಂತ್ರಕಲಿತಾಂತರ- ಅಧಿಕವಾದ ಷಡಕ್ಷರಿಮಂತ್ರದಿಂದ ಕೂಡಿದಮನಸ್ಸುಳ್ಳ, ನಿರುದ್ಧಸ್ವಾಂತಶಿವಲಿಂಗ- ಮತ್ತೊಂದುಕಡೆಗೆ ಚಲಿಸದಹಾಗೆ ತಡೆಯಲ್ಪಟ್ಟಮನಸ್ಸಿನಲ್ಲಿ ಶಿವಲಿಂಗವುಳ್ಳ, ಸಂತತಕೃಪಾಕರ- ಯಾವಾಗಲೂ ದಯಾಸ್ಪದನಾದ, ನಿರಂತಗಣನಂದನವಸಂತ- ನಾಶವಿಲ್ಲದವರೇ ಇರುವ ಶಿವಗಣಂಗಳೆಂಬ ಉಪವನಕ್ಕೆ ವಸಂತಋತುವಾದ, ಬಸವೇಶ ! ಜಯ. ॥೬೧॥

ಶುಂಭನಿಶುಂಭಭಂಜನೆ- ಶುಂಭಾಸುರನಿಶುಂಭಾಸುರರೆಂಬರಾಕ್ಷಸರನ್ನು ನಾಶಮಾಡಿದ, ಕದಂಬಕದಂಬನಿವಾಸೆ- ಈಚಲುಗುಂಪಿನಲ್ಲಿ ವಾಸಮಾಡುವ, ಕುಂಭಿರಾಟ್ಕುಂಭಪಯೋಧರೋಜ್ವಲೆ— ಕುಂಭಿರಾಟ್- ಗಜಶ್ರೇಷ್ಠದ, ಕುಂಭ- ಕುಂಭಸ್ಥಲದೋಪಾದಿಯಲ್ಲಿರುವ, ಪಯೋಧರ- ಕುಚಗಳಿಂದ, ಉಜ್ವಲೆ- ಪ್ರಕಾಶಮಾನಳಾದ, ಚಿದಂಬರರೂಪಿಣಿ- ಜ್ಞಾನಾಕಾಶಸ್ವರೂಪಿಣಿಯಾದ, ಕಂಬುಕಂಠೆ, ಶಂಖದಂತಿರುವಕತ್ತುಳ್ಳ, ವಿಶ್ವಂಭ ........ಬುಜೆ— ವಿಶ್ವಂಭರ- ವಿಷ್ಣು, ಜಂಭವೈರಿ- ಇಂದ್ರ, ಇವರೆಂಬ, ಸುರ- ದೇವತೆಗಳಿಂದ, ವಂದ್ಯ- ನಮಸ್ಕರಿಸಲ್ಪಡುವದಕ್ಕೆ ಯೋಗ್ಯವಾದ, ಪದಾಂಬುಜೆ- ಪಾದಕಮಲವುಳ್ಳ, ಮದಂಬಿಕೆ- ನನ್ನ ತಾಯಾದ, ಶಾಂಭವಿ, ಶಂಭುಸಂಭ್ರಮಾರಂಭಣಶುಂಭದಂಬಿಕೆ- ಈಶ್ವರನ ಸಂತೋಷಾವಿರ್ಭಾವದಿಂದ ಪ್ರಕಾಶಮಾನಳಾದ ಪಾರ್ವತಿಯೇ! ಎನ್ನ, ಪಾಲಿಪುದು. ... ... ... ॥೬೨॥

---

ಇಪ್ಪತ್ತೊಂದನೆಯ ಆಶ್ವಾಸವು ಸಂಪೂರ್ಣವು.

---

## ಶ್ರೀಃ.

ಕುಮಾರಜನಕಾಯ ಪರಬ್ರಹ್ಮಣೇನಮಃ.

## ದ್ವಾವಿಂಶತ್ಯಾಶ್ವಾಸಂ.

### ತೆಲುಂಗುಜೊಮ್ಮಯ್ಯಕಥನಂ.

ಶ್ರೀಶಾಂಭವೀಮುಖಾಕ್ಷಿಕು । ಶೇಶಯಕುಮುದಾನುರಂಜನಾಕ್ಷಿದ್ವಯ ನಾ ॥ ಕಾಶಮ
ಣಿಜಾತಹರ ನಖಿ । ಳೇಶಂ ಪೊರೆಗೆಮ್ಮ ನಾವಗಂ ಶಿವಲಿಂಗಂ ॥ ... ... ॥೧॥

ವ ॥ ಮತ್ತಮಾಪುರದಲ್ಲಿ ॥ * * * * * * * * * * *

ಚಂ ॥ ನಿರುಪಮದಿವ್ಯಮೂರ್ತಿ ನಿಜಲಿಂಗಸಮುಚಿತಮರ್ಮವೇದಿ ಸ । ದ್ಗುರುಚರ
ಲಿಂಗಭಕ್ತ ನಘದೂರನಪಾರಪುಣ್ಯಕೀ ॥ ರ್ತಿರುಚಿರ ನುಜ್ವಳಪ್ರಬಳಶೌರ್ಯ ನಪಾಸ್ತಕ
ಳಂಕ ನೊಪ್ಪುಗುಂ । ಸುರಗಿಯಚೌಡದೇವ ನೆನಿಸಿರ್ಪಮಹಾತ್ಮ ನನೂನವೈಭವಂ ॥೨॥

ಮ ॥ ಜಿತಸಂಸಾರವಿಕಾರ ನಂಚಿತಮಹಾವೀರವ್ರತಾಧಾರ ನೂ । ರ್ಜಿತಲಿಂಗಂ ಪ್ರ

---

ಶ್ರೀಶಾಂಭವೀ......ದ್ವಯಂ— ಶ್ರೀ- ಸಂಪದ್ಯುಕ್ತಳಾದ, ಶಾಂಭವೀ- ಪಾರ್ವತಿಯ, ಮುಖಾಕ್ಷಿ- ಮುಖನೇತ್ರ ಇವುಗಳೆಂಬ, ಕುಶೇಶಯಕುಮುದ- ತಾವರೆ ಕನ್ನೈದಿಲೆಗಳನ್ನು, ಅನುರಂಜನ- ಸಂತೋಷಪಡಿಸುವ, ಅಕ್ಷಿದ್ವಯಂ- ಎರಡುನೇತ್ರವುಳ್ಳ, (ಅಂದರೆ ಸೂರ್ಯಚಂದ್ರನೇತ್ರವುಳ್ಳವನು,) ಆಕಾಶಮಣಿಜಾತಹರಂ— ಆಕಾಶಮಣಿ- ಸೂರ್ಯನಿಂದ, ಜಾತ- ಹುಟ್ಟಿದಯಮನನ್ನು, ಹರಂ- ಸಂಹರಿಸಿದ, ಅಖಿಳೇಶಂ- ಎಲ್ಲಕ್ಕೂಸ್ವಾಮಿಯಾದ, ಶಿವಲಿಂಗಂ, ಆವಗಂ, ಎಮ್ಮಂ, ಪೊರೆಗೆ. ... ... ॥೧॥

ಮತ್ತಂ, ಆ ಪುರದಲ್ಲಿ. * * * * * * * * * * * * * * *

ನಿರುಪಮದಿವ್ಯಮೂರ್ತಿ- ಸಾಮ್ಯರಹಿತವಾದ ಮನೋಹರ ಶರೀರವುಳ್ಳ, ನಿಜಲಿಂಗಸಮುಚಿತಮರ್ಮವೇದಿ- ಪೂಜ್ಯವಾದ ತನ್ನಲಿಂಗದ ಮರ್ಮವನ್ನು ತಿಳಿದ, ಸದ್ಗುರುಚರಲಿಂಗಭಕ್ತಂ- ಒಳ್ಳೆಯ ಗುರುಲಿಂಗಜಂಗಮರಲ್ಲಿ ಭಕ್ತಿಯುಳ್ಳ, ಅಘದೂರಂ- ಪಾಪಶೂನ್ಯನಾದ, ಅಪಾರಪುಣ್ಯಕೀರ್ತಿರುಚಿರಂ- ಕೊನೆಯಿಲ್ಲದೇ ಇರುವ ಪುಣ್ಯದಿಂದಲೂ ಯಶಸ್ಸಿನಿಂದಲೂ ಮನೋಹರನಾದ, ಉಜ್ವಳಪ್ರಬಳಶೌರ್ಯಂ- ಪ್ರಕಾಶಮಾನವಾಗಿಯೂ ಅಧಿಕವಾಗಿಯೂ ಇರುವ ಪರಾಕ್ರಮವುಳ್ಳ, ಅಪಾಸ್ತಕಳಂಕಂ- ನಿಷ್ಕಳಂಕನಾದ, ಅನೂನವೈಭವಂ- ಅಧಿಕವಾದವಿಭವವುಳ್ಳ, ಸುರಗಿಯಚೌಡಂ, ಎನಿಸಿ, ಇರ್ಪ, ಮಹಾತ್ಮಂ- ಮಹಿಮನು, ಒಪ್ಪಿದಂ. ॥೨॥

ಜಿತಸಂಸಾರವಿಕಾರಂ- ಜೈಸಲ್ಪಟ್ಟ ಸಂಸಾರವಿಕಾರವುಳ್ಳವನು, ಅಂಚಿತಮಹಾವೀರವ್ರತಾಧಾರಂ- ಪೂಜ್ಯವಾದ ಮಹತ್ತಾದ ವೀರಶೈವ ವ್ರತಕ್ಕೆ ಆಶ್ರಯನಾದವನು, ಊರ್ಜಿತಲಿಂಗಂ- ತೇಜಸ್ವಿಯಾದಶಿವಲಿಂಗವುಳ್ಳವನು, ಪ್ರಣಯಪ್ರಸನ್ನಕರಣಂ- ಪ್ರಕೃಷ್ಟವಾದ ನೀತಿಯಿಂದ ನಿರ್ಮಲವಾದ ಅಂತಃಕರಣವುಳ್ಳವನು, ಲಿಂಗಾಭಿಮಾನಕ್ರಿಯಾಶ್ರಿತಂ- ಲಿಂಗದಲ್ಲಿ ಅಭಿಮಾನವುಳ್ಳ ವ್ಯಾಪಾರದಿಂದ ಆಶ್ರಯಿಸಲ್ಪಟ್ಟವನು, ಊರ್ವೀವಿ

ಣಯುಪ್ರಸನ್ನಕರಣಂ ಲಿಂಗಾಭಿಮಾನಕ್ರಿಯಾ ॥ ಶ್ರಿತ ನುರ್ವೀವಿನುತಂ ಪ್ರಸಾದಯ ಗಸೇ
ವಾನಂದಯುಕ್ತಂ ಕೃಪಾ । ನ್ವಿತಚಿತ್ತಂ ಗುಣಶಾಲಿಯಷ್ಟವಿಧಸದ್ಭಕ್ತಿಕ್ರಮಭ್ರಾಜಿತಂ ॥
ವ ॥ ಎಂಬ ನೆಗಳ್ತೆವೆತ್ತು ॥ * * * * * * * * * *

ಚಂ॥ ಅನುದಿನ ಮೊಲ್ದು ತನ್ನ ಮನೆಗೆಯ್ದಿದ ಜಂಗಮಲಿಂಗಸಂಚಯ । ಕ್ಕನುನಯ
ದಿಂ ನಮಸ್ಕರಿಸಿ ಪೂಜಿಸಿ ದಿವ್ಯರುಚಿಪ್ರಸನ್ನಭೋ ॥ ಜನನವಶಾಕಪಾಕಪರಮಾನ್ನರಸಾ
ಯನಖಾದ್ಯಮುಖ್ಯಮಂ । ಮನದೊಲವಿಂ ನಿವೇದಿಸಿ ಕರಾಂಜಲಿಗೆಯ್ದು ಪೊದಳ್ದ ಭ
ಕ್ತಿಯಿಂ ॥ ... ... ... ... ... ... ... ॥೪॥

ವ ॥ "ರಸಾನ್ ಭಕ್ತಸ್ಯ ಜಿಹ್ವಾಗ್ರಾದಶ್ನಾಮಿ ಕಮಲೋದ್ಭವ" ಎಂದು ಭವದ್ವಾ
ಕ್ಯಮುಂಟಪ್ಪುದರಿಂ ದೇವ ನೀಂ ಭಕ್ತರೂಪದಿಂ ಭುಜಿಪುದೆಂದು ಬಿನ್ನಪಂಗೆಯ್ದು ತಣಿಪಿ
ನೋಡಿ ಪರಮಾನಂದಮನಾಳ್ದನಂತರಂ ವ್ಯಾಘ್ರಾಜಿನಾಸ್ತರಣದೊಳ್ಪೂರ್ವಾಭಿಮುಖ
ನಾಗಿ ಕುಳ್ಳಿರ್ದು ನಿಜೇಷ್ಟಲಿಂಗಮಂ ಪೂಜಿಸಲೆಂದು ಪಜ್ಜಳಿಪ ಸೆಜ್ಜೆಯಿಂ ಕರಾಂಬುಜ
ಕ್ಕೆ ಬಿಜಯಂಗೆಯ್ಸಿ ತಲ್ಲಿಂಗಮಂ ನೋಡಿ ಜಲಾಭಿಷೇಕದಿಂ ಮುನ್ನಮೆ ಸುಖಬಾಷ್ಪಜಲ
ಕಲ್ಲೋಲದಿನಭಿಷೇಕಂಗೆಯ್ದು ಧೂಪಾರ್ಪಣದಿಂ ಮುನ್ನಂ ಚಿದಗ್ನಿವಿನಿಹಿತವಾಸನಾಧೂ

---

ನುತಂ- ಭೂನುತ್ಯನು, ಪ್ರಸಾದಯ-ಗಸೇವಾನಂದಯುಕ್ತಂ- ದ್ವಿವಿಧಪ್ರಸಾದಸ್ವೀಕಾರಾನಂದದಿಂದ ಕೂಡಿದವನು, ಕೃಪಾನ್ವಿತಚಿತ್ತಂ- ದಯಾವಿಶಿಷ್ಟವಾದ ಮನಸ್ಸುಳ್ಳವನು, ಗುಣಶಾಲಿ- ಸದ್ಗುಣದಿಂದ ಒಪ್ಪುವವನು, ಅಷ್ಟವಿಧಸದ್ಭಕ್ತಿಕ್ರಮಭ್ರಾಜಿತಂ- ಅಷ್ಟವಿಧಸದ್ಭಕ್ತಿ- ಶಿವಕಥಾಶ್ರವಣ, ಶಿವಕೀರ್ತನ, ಶಿವಸ್ಮರಣ, ಶಿವಪಾದಸೇವನ, ಶಿವಾರ್ಚನೆ, ಶಿವಸೇವಕತ್ವ, ಶಿವವಂದನೆ, ಶಿವಾತ್ಮಾರ್ಪಣ, ಎಂಬ ಎಂಟುಪ್ರಕಾರವಾದಭಕ್ತಿಯು, ಕ್ರಮ- ರೀತಿಯಿಂದ, ಭ್ರಾಜಿತಂ- ಪ್ರಕಾಶವಾನನಾದವನು. ... ... ॥೩॥

ಎಂಬ, ನೆಗಳ್ತೆವೆತ್ತು- ಪ್ರಸಿದ್ಧಿಯನ್ನು ಹೊಂದಿ. * * * * * * * * *

ಅನುದಿನಂ- ಪ್ರತಿದಿನವೂ, ಒಲ್ದು, ತನ್ನ, ಮನೆಗೆ, ಎಯ್ದಿದ-ಬಂದ, ಜಂಗಮಲಿಂಗಸಂಚಯಕ್ಕೆ- ಜಂಗಮರೂಪಿಗಳಾದ ಲಿಂಗಸಮುದಾಯಕ್ಕೆ, ನಮಸ್ಕರಿಸಿ, ಪೂಜಿಸಿ. ದಿವ್ಯರುಚಿ.....ಮುಖ್ಯಮಂ—ದಿವ್ಯ- ಮನೋಹರವಾದ, ರುಚಿ- ಸ್ವಾದವುಳ್ಳ, ಪ್ರಸನ್ನ- ನಿರ್ಮಲವಾದ, ಭೋಜನ- ಆಹಾರವೇನು, ನವ- ನೂತನವಾದ, ಶಾಕಪಾಕ- ಕಾಯಿಪಲ್ಯಗಳೇನು, ಪರಮಾನ್ನ- ಉತ್ಕೃಷ್ಟವಾದ ಅನ್ನವೇನು, ರಸಾಯನ- ರಸಾಯನವೇನು, ಖಾದ್ಯ- ತಿನ್ನುವ ಪದಾರ್ಥಗಳೇನು, ಇವುಗಳೇ, ಮುಖ್ಯಮಂ- ಮೊದಲಾದವುಗಳನ್ನು, ಮನದ, ಒಲವಿಂ, ನಿವೇದಿಸಿ, ಭಕ್ತಿಯಿಂ, ಪೊದಳ್ದು- ಉಬ್ಬಿ, ಕರಾಂಜಲಿಗೆಯ್ದು. ... ... ॥೪॥

ಕಮಲೋದ್ಭವ- ಬ್ರಹ್ಮನೇ ! ( ಅಹಂ- ನಾನು ) ಭಕ್ತಸ್ಯ- ಭಕ್ತನ, ಜಿಹ್ವಾಗ್ರಾತ್- ನಾಲಿಗೆಯ ತುದಿಯಿಂದ, ರಸಾನ್- ಷಡ್ರಸಗಳನ್ನು, ಅಶ್ನಾಮಿ- ತಿನ್ನುತ್ತೇನೆ, ಎಂದು, ಭವದ್ವಾಕ್ಯಂ— ಭವತ್- ನಿನ್ನ, ವಾಕ್ಯಂ- ಮಾತು, ಉಂಟು, ಅಪ್ಪುದರಿಂ- ಆದುದರಿಂದ, ದೇವ- ಸ್ವಾಮಿಯೇ ! ನೀಂ, ಭಕ್ತರೂಪದಿಂ- ಭಕ್ತಾಕೃತಿಯಿಂದ, ಭುಂಜಿಪುದು, ಎಂದು, ಬಿನ್ನಪಂಗೆಯ್ದು- ವಿಜ್ಞಾಪಿಸಿ, ತಣಿಪಿ- ತೃಪ್ತಿಪಡಿಸಿ, ನೋಡಿ, ಪರಮಾನಂದಮಂ- ಉತ್ಕೃಷ್ಟವಾದ ಸಂತೋಷವನ್ನು, ಆಳ್ದು, ಅನಂತರಂ, ವ್ಯಾಘ್ರಾಜಿನಾಸ್ತರಣದೊಳ್- ಹುಲಿಯಚರ್ಮದ ಪೀಠದಲ್ಲಿ, ಪೂರ್ವಾಭಿಮುಖಂ, ಆಗಿ, ಕುಳ್ಳಿರ್ದು, ನಿಜೇಷ್ಟಲಿಂಗಮಂ- ತನ್ನ ಇಷ್ಟಲಿಂಗವನ್ನು, ಪೂಜಿಸಲೆಂದು, ಪಜ್ಜಳಿಪಸೆಜ್ಜೆಯಿಂ- ಪ್ರಕಾಶಿಸುವ ಕರಡಗೆಯಿಂದ, ಕರಾಂಬುಜಕ್ಕೆ- ಹಸ್ತಕಮಲಕ್ಕೆ, ಬಿಜಯಂಗೆಯ್ಸಿ,ತಲ್ಲಿಂಗಮಂ- ಆ ಲಿಂಗವನ್ನು, ನೋಡಿ, ಜಲಾಭಿಷೇಕದಿಂಮುನ್ನಮೆ- ನೀರಿನ ಅಭಿಷೇಕಕ್ಕಿಂತಮುಂಚೆಯೇ ,ಸುಖಬಾಷ್ಪಜಲಕಲ್ಲೋಲದಿಂ- ಆನಂದದಿಂದುಂಟಾದ ಕಣ್ಣೀರಿನತೆರೆ

ಪಧೂಪಮಮಂ ಬೀಸಿ ಕುಸುಮೋಪಹಾರದಿಂ ಮುನ್ನ ಮಾತ್ಮೇಂದ್ರಿಯಾರ್ಪಣಮಂ ನೆಗಳ್ದು ಗಂಧಾರ್ಪಣದಿಂ ಮುನ್ನಮೆ ಚಿದನುಭವಸುಗಂಧಾನುಲೇಪಮಂ ನಿವಿರ್ಚಿ ನೀರಾಜನಾರ್ಪಣ ದಿಂ ಮುನ್ನಮೆ ಯಾತ್ಮಾಂತರೊಜ್ಯೋತಿಯಂ ಬೆಳಗಿ ನೈವೇದ್ಯಾರ್ಪಣದಿಂ ಮುನ್ನ ಮಾತ್ಮನೈವೇದ್ಯಮಂ ನಿವೇದಿಸಿ ತಾಂಬೂಲಾರ್ಪಣದಿಂ ಮುನ್ನಮೆ ಯನುರಾಗಸತ್ತಾಂಬೂಲ ಮಂ ಸಮರ್ಪಿಸು ತ್ತನಂತರಂ ಸಾಂಗ ಮೆನೆ ನೈವೇದ್ಯಾಂತ ಬಾಹ್ಯಪೂಜೆಯ ನೊಡರ್ಚು ತಾಗಳ್ ॥

ಚ ॥ ಮಿರುಗುವಖಡ್ಗಮಂ ತೆಗೆದು ತನ್ನಯ ದಕ್ಷಿಣಭಾಗದಲ್ಲಿ ಕೀಳ್ತೊರೆಯಿ ನಮರ್ಚಿ ಸಾರ್ಚಿ ನಿಜಲಿಂಗಮ ನೀಕ್ಷಿಸಿ ಭೋಜ್ಯವಸ್ತುವಂ ॥ ನೆರೆಗಲಿ ನಿಷ್ಠೆಯಿಂ ಕರದೆ ಸತ್ಕಬಳೀಕೃತಿಗೆಯ್ದು ನೀಡೆ ನೀಳ್ದೆರಕದೆ ಶಂಭು ಕೈಕೊಳುತೆ ಭುಂಜಿಸುತಿರ್ದ ನುದಾ ತ್ತಲೀಲೆಯಿಂ ॥ .. ... .. ... ... ... ॥೫॥

ವ ॥ ಅಂತು ನಿಜೇಷ್ಟಲಿಂಗಂ ಕರಾಗ್ರದಿಂ ಕಬಳಂಗೊಂಡು ಚರ ಮಾರೋಗಿಪಂ ತಾರೋಗಿಸೆ ಕಂಡು ಕಳೆಯೇರಿ ಮಾರಿ ॥ * * * * * * * * * *

---

ಯಿಂದ, ಅಭಿಷೇಕಂಗೆಯ್ದು, ಧೂಪಾರ್ಪಣದಿಂ, ಮುನ್ನಮೆ, ಚಿದಗ್ನಿವಿನಿಹಿತವಾಸನಾಧೂಪಧೂಪಮಮಂ— ಚಿದಗ್ನಿ- ಜ್ಞಾನಾಗ್ನಿಯಲ್ಲಿ, ವಿನಿಹಿತ- ಇರಿಸಲ್ಪಟ್ಟ, ವಾಸನಾ- ಸಂಸ್ಕಾರವೆಂಬ, ಧೂಪಧೂಪಮಮಂ- ಧೂಪದಹೊಗೆಯನ್ನು, ಬೀಸಿ, ಕುಸುಮೋಪಹಾರದಿಂ- ಪುಷ್ಪಪೂಜಾದ್ರವ್ಯದಿಂದ, ಮುನ್ನಂ, ಆತ್ಮೇಂದ್ರಿಯಾರ್ಪಣಮಂ- ತನ್ನ ಇಂದ್ರಿಯಸಮರ್ಪಣೆಯನ್ನು, ನೆಗಳ್ದು, ಗಂಧಾರ್ಪಣದಿಂ- ಚಂದನಾನುಲೇಪನದಿಂದ, ಮುನ್ನಮೆ, ಚಿದನುಭವಸುಗಂಧಾನುಲೇಪನಂನಿವಿರ್ಚಿ- ಚಿದನುಭವ- ಜ್ಞಾನಾನುಭವವೆಂಬ, ಸುಗಂಧ- ಒಳ್ಳೆಯ ಶ್ರೀಗಂಧದ, ಅನುಲೇಪನಂ ನಿವಿರ್ಚಿ- ಲೇಪನೆಯನ್ನುಮಾಡಿ, ನೀರಾಜನಾರ್ಪಣದಿಂ- ಆರತಿಯನ್ನೆತ್ತುವದಕ್ಕಿಂತ, ಮುನ್ನಮೆ, ಆತ್ಮಾಂತರ್ಜ್ಯೋತಿಯಂ- ತನ್ನೊಳಗಿನತಕ್ಕ ಜ್ಯೋತಿಯನ್ನು, ಬೆಳಗಿ, ನೈವೇದ್ಯಾರ್ಪಣದಿಂ- ನೈವೇದ್ಯಸಮರ್ಪಣದಿಂದ, ಮುನ್ನಮೆ, ಆತ್ಮನೈವೇದ್ಯಮಂ- ಸ್ವಾರ್ಪಣೆಯನ್ನು, ನಿವೇದಿಸಿ, ತಾಂಬೂಲಾರ್ಪಣದಿಂ, ಮುನ್ನಮೆ, ಅನುರಾಗಸತ್ತಾಂಬೂಲಮಂ- ಪ್ರೀತಿಯೆಂಬ ಒಳ್ಳೆಯತಾಂಬೂಲವನ್ನು, ಸಮರ್ಪಿಸುತ್ತೆ, ಅನಂತರಂ, ಸಾಂಗಂ- ಸಂಪೂರ್ಣವು, ಎನೆ, ನೈವೇದ್ಯಾಂತಬಾಹ್ಯಪೂಜೆಯಂ- ನೈವೇದ್ಯವೇ ಕೊನೆಯಾದ ಬಹಿರಂಗಪೂಜೆಯನ್ನು, ಒಡರ್ಚುತೆ- ಮಾಡುತ್ತ, ಆಗಳ್. * * * *

ನೆರೆಗಲಿ- ಬಹುಸಮರ್ಥನಾದ ಸುರಗಿಚೌಡಯ್ಯನು, ತನ್ನಯ, ದಕ್ಷಿಣಭಾಗದಲ್ಲಿ, ಮಿರುಗುವ- ಪ್ರಕಾಶಿಸುವ, ಖಡ್ಗಮಂ- ಕತ್ತಿಯನ್ನು, ಒರೆಯಿಂ- ಚೀಲದಿಂದ, ಕೀಳ್ತು- ಕಿತ್ತು, ತೆಗೆದು, ಭೋಜ್ಯವಸ್ತುವಂ- ಭುಂಜಿಸುವದಕ್ಕೆ ಯೋಗ್ಯವಾದ ವಸ್ತುವನ್ನು, ನಿಷ್ಠೆಯಿಂ- ಶ್ರದ್ಧೆಯಿಂದ, ಅಮರ್ಚೆ- ಇಟ್ಟು, ಸಾರ್ಚಿ- ಹೊಂದಿಸಿ, ನಿಜಲಿಂಗಮಂ- ಸ್ವೇಷ್ಟಲಿಂಗವನ್ನು, ಈಕ್ಷಿಸಿ- ನೋಡಿ, ಕರದೆ- ಹಸ್ತದಿಂದ, ಸತ್ಕಬಳೀಕೃತಿಗೆಯ್ದು— ಒಳ್ಳೆಯ ತುತ್ತನ್ನುಮಾಡಿ, ನೀಡೆ- ಚಾಚಲಾಗಿ, ಶಂಭು- ಈಶ್ವರನು, ನೀಳ್ದು- ಕಯ್ಯನ್ನುನೀಡಿ, ಎರಕದೆ- ಪ್ರೀತಿಯಿಂದ, ಕೈಕೊಳುತೆ- ಸ್ವೀಕರಿಸುತ್ತ, ಉದಾತ್ತಲೀಲೆಯಿಂ- ಉತ್ಕೃಷ್ಟವಾದವಿಲಾಸದಿಂದ, ಭುಂಜಿಸುತೆ, ಇರ್ದನಂ. ... ... ... ... ॥೫॥

ಅಂತು, ನಿಜೇಷ್ಟಲಿಂಗಂ, ಕರಾಗ್ರದಿಂ- ಹಸ್ತಾಗ್ರದಿಂದ, ಕಬಳಂಗೊಂಡು- ತುತ್ತನ್ನು ತೆಗೆದುಕೊಂಡು, ಚರಂ- ಚರಮೂರ್ತಿಯು, ಆರೋಗಿಪಂತೆ- ಭುಂಜಿಸುವಹಾಗೆ, ಆರೋಗಿಸೆ- ಭುಂಜಿಸಲಾಗಿ, ಕಂಡು, ಕಳೆಯೇರಿ- ಉಲ್ಲಾಸವನ್ನುಹೊಂದಿ, * * * * * * * * * * * *

ಕಂ॥ ಅನುದಿನ ಮೀತೆರದಿಂ ನೆ । ಟ್ಟನೆ ಕಾಲತ್ರಯದೊಳಭವನಂ ತಣಿಪುತೆ ಪಾ॥ ವನತತ್ಪ್ರಸಾದಮಂ ತಾಂ । ಮನದೊಲವಿಂ ಸೇವಿಸುತ್ತ ಮಿರ್ಪಿನ ಮಾಗಳ್॥ ॥೬॥

ಕಂ॥ ಹರಭಕ್ತರಲ್ಲಿ ಕಂಡಾ । ಸುರಗಿಯಚೌಡಯ್ಯ ನೆಸಗಿದುಜ್ಜುಗಮ ನದಂ॥ ಪಿರಿದಾನ ದಮ ನಾಳ್ದು । ದರದಿಂ ಬಗೆವೆರ್ಚ್ಚಿ ತವೊಳ್ಮೆಂದಿಂತೆಂದರ್॥ ... ॥೭॥

ಉ॥ ವೀರಿದಭಕ್ತಿಯಿಂದೆ ಕರಿಕಾಲನುಹೀಪತಿ ನಿಚ್ಚನಿಚ್ಚ ಮಿಂ । ಪೇರಿದ ಭಿನ್ನಸೂಕ್ಷ್ಮಧವಳಾಸಮಶಾಲಿಸುತಂಡುಲಾಳಿ ಮು॥ ನ್ನೂರರುವತ್ತುಕಂಡುಗ ಮದಂ ಮಿಸುಪ್ಪೋದನವಂ ನಿಮಿರ್ಚ್ಚಿ ಸೊಂ । ಪಾರದಶಾಕಪಾಕತತಿಯಂ ಸಮೆದಲ್ಲಿ ಮನೋನುರಾಗದಿಂ॥ ... ... ... ... ... ... ... ॥೮॥

ಕಂ॥ ಮೂವತ್ತುಕೊಳಗದೊಣಸಿಂ । ತೀವಿದ ಬಹುವಿಧರಸಾನ್ನತತಿಯ ನೊಡರ್ಚ್ಚಿ॥ ತ್ತಾವಿಭು ಸಹಸ ಮಣಿಪಾ । ತ್ರಾವಳಿಯೊಳುಮೇಶ್ವರಂಗೆ ಗಡಣಿಸು ತೊಲವಿಂ॥

ಮ॥ ಕರವಾಳಂ ಕರದಲ್ಲಿ ತಾಳ್ದೊಳಲೆವಿಟ್ಟೋರಂತೆ ಚೆಲ್ವಾದ ಪ್ಪೊಂ । ದೆರೆಯಂ ನಿಂದೊಡನಾಲಿಸುತ್ತಿರೆ ಮಹೇಶಂ ಭಕ್ಷ್ಯಭೋಜ್ಯಾನ್ನ ಸಾ॥ ಧುರುಚಿಸ್ಫೀತರಸಾಯನಂಗಳ

---

ಅನುದಿನಂ- ಪ್ರತಿದಿನವಲ್ಲೂ, ಈತೆರದಿಂ- ಈ ರೀತಿಯಿಂದ, ನೆಟ್ಟನೆ- ವಿಚ್ಛಿತ್ತಿಯಿಲ್ಲದೆ, ಕಾಲತ್ರಯದೊಳ್- ತ್ರಿಕಾಲದಲ್ಲೂ, ಅಭವನಂ- ಈಶ್ವರನನ್ನು, ತಣಿಪುತೆ- ತೃಪ್ತಿಪಡಿಸುತ್ತ, ಪಾವನತತ್ಪ್ರಸಾದಮಂ- ಪರಿಶುದ್ಧವಾದ ಆ ಶಿವನ ಪ್ರಸಾದವನ್ನು, ತಾಂ, ಮನದ, ಒಲವಿಂ, ಸೇವಿಸುತ್ತೆ, ಇರ್ಪಿನಂ, ಆಗಳ್.

ಹರಭಕ್ತರ್, ಅಲ್ಲಿ, ಆಸುರಗಿಯಚೌಡಯ್ಯಂ, ಎಸಗಿದ, ಅದಂ-ಉಜ್ಜುಗಮಂ- ಆ ಪ್ರಯತ್ನವನ್ನು, ಕಂಡು, ಪಿರಿದು- ಹೆಚ್ಚಾಗಿ, ಆನಂದಮಂ, ಆಳ್ದು, ಆದರದಿಂ, ಬಗೆವೆರ್ಚ್ಚಿ- ಮನಸ್ಸುಬ್ಬಿ, ತವೊಳ್ಮೆಳ್, ಅಂದು, ಇಂತು, ಎಂದರ್. ... ... ... ... ... ॥೭॥

ಕರಿಕಾಲಮಹೀಪತಿ- ಕರಿಕಾಲನೆಂಬದೊರೆಯು, ವೀರಿದ- ವಿಶೇಷವಾದ, ಭಕ್ತಿಯಿಂ, ನಿಚ್ಚನಿಚ್ಚಂ- ಪ್ರತಿದಿನವೂ, ಇಂಪೇರಿದ- ಸೊಗಸಾದ, ಅಭಿನ್ನ......ಲಾಳಿ— ಅಭಿನ್ನ- ಮೊನೆಮುರಿಯದ, ಸೂಕ್ಷ್ಮ- ಸಣ್ಣದಾದ, ಧವಳ- ಶುಭ್ರವಾದ, ಅಸಮ- ಅಸದೃಶವಾದ, ಶಾಲಿ- ಗದ್ದೆಯ, ಸುತಂಡುಲಾಳಿ- ಒಳ್ಳೆಯ ಅಕ್ಕಿಯ ಸಮುದಾಯವು, ಮುನ್ನೂರರುವತ್ತುಕಂಡುಗಂ, ಅದಂ, ಮಿಸುಪ, ಓದನಮಂ- ಅನ್ನವನ್ನು, ನಿಮಿರ್ಚ್ಚಿ- ಮಾಡಿ, ಸೊಂಪಾರದ- ಸೊಗಸುಕಡಮೆಯಾಗದ, ಶಾಕಪಾಕತತಿಯಂ- ಕಾಯಿಪಲ್ಯಗಳಸಮುದಾಯವನ್ನು, ಸಮೆದು- ಮಾಡಿ, ಅಲ್ಲಿ, ಮನೋನುರಾಗದಿಂ- ಮನಃಪ್ರೀತಿಯಿಂದ. ... ॥೮॥

ಮೂವತ್ತುಕೊಳಗದೊಣಸಿಂ, ತೀವಿದ- ವ್ಯಾಪ್ತವಾದ, ಬಹುವಿಧರಸಾನ್ನತತಿಯಂ— ನಾನಾವಿಧವಾದ ರಸಾನ್ನಗಳ ಸಮುದಾಯವನ್ನು, ಒಡರ್ಚ್ಚುತೆ- ಮಾಡುತ್ತ, ಆ ವಿಭು- ಆ ಸುರಗಿಯ ಚೌಡಾರ್ಯನು, ಸಹಸ್ರಮಣಿಪಾತ್ರಾವಳಿಯೊಳ್- ಅನೇಕರತ್ನದ ಬಟ್ಟಲುಗಳಲ್ಲಿ, ಉಮೇಶ್ವರಂಗೆ- ಈಶ್ವರನಿಗೆ, ಒಲವಿಂ, ಗಡಣಿಸುತೆ- ನೀಡುತ್ತ. ... ... ... ... ... ॥೯॥

ಕರವಾಳಂ- ಖಡ್ಗವನ್ನು, ಕರದಲ್ಲಿ, ತಾಳ್ದು, ಓರಂತೆ- ಚೆನ್ನಾಗಿ, ಚೆಲ್ವಾದ- ಮನೋಹರವಾದ, ಪೊಂದೆರೆಯಂ- ಸುವರ್ಣದ ತೆರೆಯನ್ನು, ಎಳಲೆವಿಟ್ಟು- ಜೋಲುಬಿಟ್ಟು, ನಿಂದು, ಒಡನೆ, ಆಲಿಸುತ್ತಿರೆ- ಕೇಳುತ್ತಿರಲಾಗಿ, ಮಹೇಶಂ, ಭಕ್ಷ್ಯ........ ಗಳಂ— ಭಕ್ಷ್ಯ- ತಿನ್ನುವ ಪದಾರ್ಥವೇನು, ಭೋಜ್ಯ- ಭುಂಜಿಸುವ ಪದಾರ್ಥವೇನು, ಅನ್ನ- ಅನ್ನವೇನು, ಸಾಧುರುಚಿ- ಒಳ್ಳೆಯ ರುಚಿಯಿಂದ, ಸ್ಫೀತ- ಬಹುಳವಾದ, ರ

ನೊರಲ್ದಾಸ್ವಾದನಂಗೆಯ್ದು ಭಾ | ಸುರನಾದಂ ಕಿವಿಗಿಂಪನೀಯೆ ಸವಿದಂ ತಾನಿಂದು ಭೂಭಾಗದೊಳ್ ॥ ... ... ... ... ... ... .. ॥೧೦॥

ಕಂ ॥ ಮನ್ನಣೆವೆತ್ತೊಪ್ಪುವ ಭ | ಕ್ತಂ ನಿಜಜಿಹ್ವೆಯೊಳೆ ಸವಿಯಂ ಈಯುತೆ ಮ | ಗುಳ್ದು ॥ ಚೆನ್ನಯ್ಯ ನಂಬಕಳವಂ | ತಾಂ ನಲಿದೊಡನುಣಿಸಿದಂ ಭವಾನೀಪತಿಯಂ ॥೧೧॥

ಶಾ ॥ ದ್ರಾಕ್ಷಾರಾಮಮೆನಿಪ್ಪ ತತ್ಪುರದೊಳಿರ್ಪ ಳ್ಚೋಳಿಕಾದೇವಿ ರು | ದ್ರಾಕ್ಷಕ್ಷಾರಲಸತ್ಕಳೇವರೆ ಯಲಂಪಿಂ ಪುಳ್ಗಿಯುಣ್ಬಂದು ಜಿ ॥ ಹ್ವಾಕ್ಷಿಪ್ತಂ ಸವಿಯಾಗೆ ಪುಳ್ಗಿಯ ನದಂ ಸದ್ವಸ್ತ್ರದಿಂ ಮುಚ್ಚಿ ಭಾ | ಳಾಕ್ಷಂಗೀಯುದೆನುತ್ತೆ ಚೇಟಿಯ ಕರಾಂಭೋಜಾತದಿಂ ದಟ್ಟಿದಳ್ ॥ ... ... ... ... ... ... ॥೧೨॥

ಮ ॥ ಜವದಿಂ ಬಂದವಳಂಗಜಾರಿಯ ನಿವಾಸಕ್ಕೆಳ್ಕರಿಂ ದೇವದೇ | ವವರೇಣ್ಯೋತ್ತಮ ಭೀಮನಾಥ ಪದೆದೆಮ್ಮಕ್ಕಂ ಕರಂ ಪುಳ್ಗಿಯಂ ॥ ಸವಿವೆತ್ತಿರ್ದನಿದಾಗೆ ನಿನ್ನ ನೆನೆದೆನ್ನಿಂ ದಟ್ಟಿದಳ್ ಬಟ್ಟಲೊ | ಳ್ತವೆ ತಂದಿರ್ದಪೆನೆಂಬುದುಂ ತರುಣಿ ತಾರೆಂದೀಶ್ವರಂ ಪಾತ್ರೆಯಂ ॥

ಕಂ ॥ ಪ್ರಣಯದಿ ನೀಳ್ದುಕೊಳುತ್ತಂ | ಫಣಿಕಟಕಂ ಸವಿದು ಪುಳ್ಗಿಯಂ ಬಟ್ಟಲ | ನಂ ॥ ಗಣಕಿಟ್ಟಂ ಕ್ರೇಂಕಾರ | ಕ್ವಣಿತಂ ಕೈಗಣ್ಮೆ ನೋಳ್ಪ ರರಿದೆಂಬಿನೆಗಂ ॥ ॥೧೪॥

---

ಸಾಯಿನಂಗಳಂ, ಒರಲ್ದು- ಇಷ್ಟಪಟ್ಟು, ಆಸ್ವಾದನಂಗೆಯ್ದು- ಸ್ವೀಕರಿಸಿ, ಭಾಸುರನಾದಂ, ಕಿವಿಗೆ, ಇಂಪಂ- ಮಾಧುರ್ಯವನ್ನು, ಈಯೆ, ತಾಂ, ಭೂಭಾಗದೊಳ್, ಇಂದು, ಸವಿದಂ. ... ... ॥೧೦॥

ಮನ್ನಣೆವೆತ್ತು- ಪೂಜ್ಯತ್ವವನ್ನು ಹೊಂದಿ, ಒಪ್ಪುವ, ಚೆನ್ನಯ್ಯಂ, ಭಕ್ತಂ, ನಿಜಜಿಹ್ವೆಯೊಳೆ- ತನ್ನ ನಾಲಿಗೆಯಲ್ಲಿ, ಸವಿಯಂ- ರುಚಿಯನ್ನು, ಈಯುತೆ- ಕೊಡುತ್ತ, ಮಗುಳ್ದು- ಪುನಃ, ತಾಂ, ನಲಿದು, ಅಂಬಕಳವಂ- ಅಂಬಲಿಯನ್ನು, ಭವಾನೀಪತಿಯಂ- ಶಿವನನ್ನು, ಒಡನೆ, ಉಣಿಸಿದಂ. ... ॥೧೧॥

ದ್ರಾಕ್ಷಾರಾಮಂ, ಎನಿಪ್ಪ, ತತ್ಪುರದೊಳ್- ಆಪಟ್ಟಣದಲ್ಲಿ, ಇರ್ಪಳ್-ಇರುವ, ರುದ್ರಾಕ್ಷಕ್ಷಾರಲಸತ್ಕಳೇವರೆ- ಭಸ್ಮರುದ್ರಾಕ್ಷಿಗಳಿಂದ ಮನೋಹರವಾದ ಶರೀರಉಳ್ಳ, ಚೋಳಿಕಾದೇವಿ, ಅಲಂಪಿಂ- ಆಧಿಕ್ಯದಿಂದ, ಪುಳ್ಗೆಯುಣ್ಬಂದು- ಹೋಳಿಗೆಯನ್ನು ತಿನ್ನುವ ಕಾಲದಲ್ಲಿ, ಜಿಹ್ವಾಕ್ಷಿಪ್ತಂ- ನಾಲಿಗೆಯಲ್ಲಿರಿಸಲ್ಪಟ್ಟ ಹೋಳಿಗೆಯು, ಸವಿಯಾಗೆ- ರುಚಿಯಾಗಲಾಗಿ, ಅದಂಪುಳ್ಗಿಯಂ- ಆ ಹೋಳಿಗೆಯನ್ನು, ಸದ್ವಸ್ತ್ರದಿಂ- ಒಳ್ಳೆಯ ಬಟ್ಟೆಯಿಂದ, ಮುಚ್ಚಿ, ಭಾಳಾಕ್ಷಂಗೆ- ಈಶ್ವರನಿಗೆ, ಈವುದು- ಕೊಡುವದು, ಎನುತ್ತೆ, ಚೇಟಿಯ- ಗೌಡಿಯ, ಕರಾಂಭೋಜಾತದಿಂ- ಕಮಲದಹಾಗಿರುವ ಹಸ್ತದಿಂದ, ಅಟ್ಟಿದಳ್- ಕಳುಹಿಸಿದಳು. ॥೧೨॥

ಅವಳ್, ಅಂಗಜಾರಿಯ- ಶಿವನ, ನಿವಾಸಕ್ಕೆ- ಸದನಕ್ಕೆ, ಜವದಿಂ- ಜಾಗ್ರತೆಯಿಂದ, ಎಳ್ಕರಿಂ- ಪ್ರೀತಿಯಿಂದ, ಬಂದು, ದೇವ, ದೇವವರೇಣ್ಯೋತ್ತಮ- ದೇವತಾಸಾರ್ವಭೌಮನಾದ, ಭೀಮನಾಥ! ಎಮ್ಮ, ಅಕ್ಕಂ, ಪದೆದು- ಇಷ್ಟಪಟ್ಟು, ಕರಂ- ಅತ್ಯಂತವಾಗಿ, ಪುಳ್ಗಿಯಂ- ಹೋಳಿಗೆಯನ್ನು, ಸವಿವುತ್ತೆ, ಇರ್ದು, ಇನಿದಾಗೆ- ರುಚಿಯಾಗಲಾಗಿ, ನಿನ್ನ, ನೆನೆದು, ಎನ್ನಿಂದೆ- ನನ್ನಕೈಯಿಂದ, ಬಟ್ಟಲೊಳ್- ಬಟ್ಟಲಲ್ಲಿ, ಅಟ್ಟಿದಳ್- ಕಳುಹಿಸಿದಳು, ತವೆ, ತಂದು, ಇರ್ದಪೆಂ; ಎಂಬುದುಂ, ಈಶ್ವರಂ, ತರುಣಿ- ಸ್ತ್ರೀಯೇ! ಪಾತ್ರೆಯಂ, ತಾರ್- ಕೊಡು, ಎಂದು. ... ... ... ... ॥೧೩॥

ಫಣಿಕಟಕಂ- ಶಿವನು, ಪ್ರಣಯದಿಂ- ವಿಶ್ವಾಸದಿಂದ, ಪುಳ್ಗಿಯಂ- ಹೋಳಿಗೆಯನ್ನು, ಈಳ್ದುಕೊಳುತ್ತಂ- ಈಸಿಕೊಳುತ್ತ, ಸವಿದು, ಕ್ರೇಂಕಾರಕ್ವಣಿತಂ- ಕ್ರೇಜ್ ಎಂಬ ಬಟ್ಟಲಧ್ವನಿಯು, ಕೈಗಣ್ಮೆ- ಹೆಚ್ಚಾಗಲಾಗಿ, ನೋಳ್ಪರ್- ನೋಡತಕ್ಕವರು, ಅರಿದು, ಎಂಬಿನಂ, ಬಟ್ಟಲಂ, ಅಂಗಣಕ್ಕೆ- ಮುಂದಣಬೈಲಿಗೆ, ಇಟ್ಟಂ. ... ... ... ... ... ... ॥೧೪॥

ಕಂ॥ ಎಂದೆಂಬ ಕಥೆಯ ನಾಲಿಪೆ । ವಿಂದಿಳೆಯೊಳ್ ಕಂಡೆ ವಮಮ ಚೌಡಯ್ಯಂ ನ॥
ಲ್ಪಿಂದಭವಂಗೂಡಿದ ನುಣಿ । ಸಂ ದಿಟ ವಿದ ನೆಂದವ ರ್ಕರಂ ಕೀರ್ತಿಸಿದರ್ ॥ ... ॥೧೫॥
ವ॥ ಆಗಳ್ ॥ ಕಂ॥ ಬಸವರಸ ನೆಯ್ದಿ ನಿಜಪದ । ಬಿಸಜಕೆ ಪೊಡಮಟ್ಟು ನಲಿ
ದು ಪೊಗಳುತ್ತಿರೆ ಸಂ ॥ ತಸ ಮಗಲ್ಪು ಜಸದಿ ನೊಪ್ಪಿದ । ನಸದೃಶಕಲ್ಯಾಣನಗರದೊ
ಳ್ಚೌಡಾರ್ಯಂ ॥ ... .. ... ... ... ... ೧೬॥
ರಥೋದ್ಧತವೃತ್ತಂ ॥ ಮತ್ತ ಮೋರ್ವನ ಸಮಾನ ನಲ್ಲಿ ಸ । ದ್ವೃತ್ತ ನೀಶಪದ
ಭಕ್ತಿತತ್ಪರಂ ॥ ಮತ್ತವಾದಿಜಯಹೃದ್ಭಯಂಕರೋ । ದಾತ್ತಶೌರ್ಯನಿಧಿಲೋಕಪಾವನಂ ॥
ಚಂ॥ ಅನಘು ನನಾಮಯಂ ವಿಲಯದೂರ ನಪಾರಕೃಪಾಬ್ಧಿ ಚಂದ್ರಿಕಾ । ರ್ಜುನನಿ
ಜಕೀರ್ತಿಪೂರಿತದಿಶಾಂತ ನನಂತಮಹತ್ವಶಾಲಿ ಸ ॥ ಜ್ಜನನುತಿಪಾತ್ರ ನುಜ್ವಳಚರಿತ್ರ ನು
ದಾತ್ತಕಿರಾತರುದ್ರ ನೆಂ । ದೆನಿಸಿ ತೆಲುಂಗುಜೊಮ್ಮವೆಸರಿಂ ದೆಸೆದಿರ್ಪ್ಪ ನಖರ್ವವೈಭವಂ ॥
ಕಂ॥ ಕಲಿಕಲುಷಹರಂ ಜಂಗಮ । ವಿಲಸತ್ಪದಭಕ್ತ ನಜಿತ ನನುಪಮಸುಗುಣೋ॥
ಜ್ವಲ ನಮಿತಚಿದ್ಘನಾಸ್ಪದ । ನಲಘುತರಂ ವಿಧಿನಿಷೇಧವಿರಹಿತಚರಿತಂ ॥ ... ॥೧೯॥

---

ಎಂದು, ಎಂಬ, ಕಥೆಯಂ, ಆಲಿಪೆವ್- ಕೇಳುವೆವು, ಇಂದು, ಇಳೆಯೊಳ್, ಚೌಡಯ್ಯಂ, ಅಭವಂಗೆ, ಇವು ಉಣಿಸಂ- ಈ ಊಟವನ್ನು, ಊಡಿದಂ- ಮಾಡಿಸಿದನು, ಕಂಡೆವ್, ಅಮಮ- ಆಶ್ಚರ್ಯ, ಎಂದು, ಅವರ್, ಕರಂ, ಕೀರ್ತಿಸಿದರ್- ಸ್ತುತಿಸಿದರು. .. ... ... ... ॥೧೫॥

ಆಗಳ್, ಬಸವರಸಂ, ಎಯ್ದಿ- ಬಂದು, ನಿಜಪದಬಿಸಜಕೆ- ತನ್ನ ಪಾದಕಮಲಕ್ಕೆ, ಪೊಡಮಟ್ಟು- ನಮಸ್ಕರಿಸಿ, ನಲಿದು, ಪೊಗಳುತ್ತಿರೆ, ಚೌಡಾರ್ಯಂ, ಅಸದೃಶಕಲ್ಯಾಣನಗರದೊಳ್, ಸಂತಸಮಗಲ್ಪು- ಸಂತೋಷಹೆಚ್ಚಾಗಿ, ಜಸದಿಂ- ಯಶಸ್ಸಿನಿಂದ, ಒಪ್ಪಿದಂ. ... ... ... ॥೧೬॥

ಮತ್ತಂ, ಅಲ್ಲಿ- ಆ ಕಲ್ಯಾಣಪಟ್ಟಣದಲ್ಲಿ, ಓರ್ವಂ, ಅಸಮಾನಂ- ಸಮಾನರಹಿತನಾದ, ಸದ್ವೃತ್ತಂ- ಒಳ್ಳೆಯನಡತೆಯುಳ್ಳ, ಈಶಪದಭಕ್ತಿತತ್ಪರಂ, ಮತ್ತವಾದಿ......ನಿಧಿ— ಮತ್ತ- ಮದಿಸಿರುವ, ವಾದಿ- ಪರವಾದಿಗಳ, ಜಯ- ಸಮುದಾಯದ, ಹೃತ್- ಮನಸ್ಸಿಗೆ, ಭಯಂಕರ- ಭೀತಿಯನ್ನುಂಟುಮಾಡುವ, ಉದಾತ್ತ- ಉತ್ಕೃಷ್ಟವಾದ, ಶೌರ್ಯ- ಪರಾಕ್ರಮಕ್ಕೆ, ನಿಧಿ- ನಿಕ್ಷೇಪಸ್ವರೂಪನಾದ, ಲೋಕಪಾವನಂ ಭೂಪರಿಶುದ್ಧನಾದ. ... ... ... ... ... ... ... ॥೧೭॥

ಅನಘಂ- ಪಾಪರಹಿತನಾದ, ಅನಾಮಯಂ- ರೋಗವಿಲ್ಲದ, ವಿಲಯದೂರಂ- ನಾಶಕ್ಕೆ ದೂರನಾದ, ಅಪಾರಕೃಪಾಬ್ಧಿ- ಅಧಿಕವಾದ ದಯೆಗೆ ಸಮುದ್ರನಾದ, ಚಂದ್ರಿಕಾ.....ಶಾಂತಂ — ಚಂದ್ರಿಕಾ- ಬೆಳ್ದಿಂಗಳೋಪಾದಿಯಲ್ಲಿ, ಅರ್ಜುನ- ಶುಭ್ರವಾದ, ನಿಜ— ತನ್ನ, ಕೀರ್ತಿ- ಯಶಸ್ಸಿನಿಂದ, ಪೂರಿತ- ತುಂಬಲ್ಪಟ್ಟ, ದಿಶಾಂತಂ- ದಿಕ್ಕುಗಳ ಕೊನೆಯುಳ್ಳ, ಅನಂತಮಹತ್ವಶಾಲಿ- ಹೆಚ್ಚಾದಮಹಿಮೆಯಿಂದ ಒಪ್ಪುತ್ತಲಿರುವ, ಸಜ್ಜನನುತಿಪಾತ್ರಂ- ಸತ್ಪುರುಷರ ಹೊಗಳುವಿಕೆಗೆ ಆಧಾರನಾದ, ಉಜ್ವಳಚರಿತ್ರಂ, ಉದಾತ್ತಕಿರಾತರುದ್ರಂ- ಉತ್ಕೃಷ್ಟವಾದ ಶಬರವೇಷವನ್ನು ಧರಿಸಿದ ಶಿವನು, ಎಂದು, ಎನಿಸಿ, ತೆಲುಂಗುಜೊಮ್ಮವೆಸರಿಂ- ತೆಲುಗುಜೊಮ್ಮ ಎಂಬ ಹೆಸರಿನಿಂದ, ಅಖರ್ವವೈಭವಂ- ಅಧಿಕವಿಭವವುಳ್ಳವನಾಗಿ, ಎಸೆದು, ಇರ್ಪ್ಪಂ. ॥೧೮॥

ಕಲಿಕಲುಷಹರಂ-ಸಮರ್ಥವಾದ ಪಾಪವನ್ನು ಹಾಳುಮಾಡುವ, ಜಂಗಮವಿಲಸತ್ಪದಭಕ್ತಂ, ಅಜಿತಂ- ಮತ್ತೊಬ್ಬರಿಂದ ಜೈಸಲ್ಪಡದೇ ಇರುವ, ಅನುಪಮಸುಗುಣೋಜ್ವಲಂ- ಸಮಾನರಹಿತವಾದ ಸದ್ಗುಣಗಳಿಂದ ಪ್ರಕಾಶಿಸುವ, ಅಮಿತಚಿದ್ಘನಾಸ್ಪದಂ- ಅಪರಿಮಿತವಾಗಿಯೂ ಉತ್ಕೃಷ್ಟವಾಗಿಯೂ ಇರುವ ಜ್ಞಾನಕ್ಕೆ ಆಶ್ರಯನಾದ, ಅಲಘುತರಂ- ಮಹಾಗುರುವಾದ, ವಿಧಿನಿಷೇಧವಿರಹಿತಚರಿತಂ. ... ॥೧೯॥

ಕಂ॥ ಬೆಂಬಿಡದೆ ಸುರಿಯೆ ಸಂತಸ । ಗಂಬನಿ ಪುಳಕಂಗಳುಣ್ಮೆ ಪರವಶಭಾವಂ ॥ ಮುಂಬರಿಯೆ ಪೂಜಿಸುತೆನಿಟ । ಲಾಂಬಕನಂ ಭಕ್ತಿಭಾವದಿಂ ಜೊಮ್ಮಯ್ಯಂ ॥ ... ॥೨೦॥

ಕಂ॥ ಚರಲಿಂಗದಾಸಭಾವ । ಸ್ಫುರಿತಂ ಸುಖಮಿರ್ದ್ದ ನಿತ್ತಲತಿರುಚಿರಶ್ರೀ ॥ ಗಿರಿಯೊಳವಿರಳಸಮಾಧಿಯೊ । ಳಿರುತೆ ಶಿವಾನಂದನೆಂಬ ಮುನಿವರನೊರ್ವ್ವಂ ॥ ... ॥೨೧॥

ಚಂ॥ ಪದನಖರಾಳಿ ಬೇರ್ವ್ವರಿಯೆ ಪಾಣಿನಖಾವಳಿ ನೀಳ್ದು ಬಳ್ವಳಂ । ಪುದಿದಿರೆ ಬೆಳ್ಳಿವಳ್ಳಿಗಳವೋಲದರುಜ್ವಳರೋಚಿ ಸುತ್ತಲುಂ ॥ ಪದೆದು ಮುಸುಂಕೆ ಕೇಶಚಯಮಂಗಮನಾವರಿಸುತ್ತೆ ತೋರೆ ಪಿಂ । ಗದೆ ಶಿವಲಿಂಗದಂಘ್ರಿಯನೆ ಜಾನಿಸುತಿರ್ದ್ದನತೀವ ಭಕ್ತಿಯಿಂ ॥ ... ... ... ... ... ... ॥೨೨॥

ಕಂ॥ ಆಮುನಿಯ ಪಾದಸೇವೆಯನಾಮೋದದಿನೆಸಗುತಿರ್ಪ್ಪ ತದ್ವರಶಿಷ್ಯಂ ॥ ಭೂಮಹಿತಕಂದಮೂಲ । ಸ್ತೋಮಂದರಲೆಂದು ತಳರುತಂ ಕಟ್ಟಡಿರೊಳ್ ॥ ... ॥೨೩॥

ಮ॥ ಸ್ರ॥ ಬಿನದಂಬೆತ್ತೆಳ್ತರುತ್ತಂ ಯುವತಿಸಹಿತಗಂಧರ್ವಸಂದೋಹಮಾ ಪೆಂ । ಪಿನ ಯೋಗಾರೂಢಯೋಗೀಶ್ವರನನುರುಜಟಾಪ್ರಾವೃತಸ್ಥೈರ್ಯಭಾಸ್ವ ॥ ತ್ತನುವಂ

---

ಜೊಮ್ಮಯ್ಯಂ, ಬೆಂಬಿಡದೆ, ಸಂತಸಗಂಬನಿ- ಆನಂದಬಾಷ್ಪವು, ಸುರಿಯೆ, ಪುಳಕಂಗಳ್- ರೋಮಾಂಚನವು, ಉಣ್ಮೆ, ಪರವಶಭಾವಂ- ಅಸ್ವಾಧೀನತೆಯು, ಮುಂಬರಿಯೆ, ನಿಟಿಲಾಂಬಕನಂ- ಶಿವನನ್ನು, ಭಕ್ತಿಭಾವದಿಂ, ಪೂಜಿಸುತೆ. ... ... ... ... ... ॥೨೦॥

ಚರಲಿಂಗದಾಸಭಾವಸ್ಫುರಿತಂ— ಚರಲಿಂಗ- ಜಂಗಮಮೂರ್ತಿಗಳ, ದಾಸಭಾವ- ಸೇವಕತ್ವದಿಂದ, ಸ್ಫುರಿತಂ- ಪ್ರಕಾಶಮಾನನಾದ ಜೊಮ್ಮಯ್ಯನು, ಸುಖಮಿರ್ದ್ದಂ- ಸುಖವಾಗಿದ್ದನು; ಇತ್ತಲ್, ಅತಿರುಚಿರಶ್ರೀಗಿರಿಯೊಳ್- ಮನೋಹರವಾದ ಶ್ರೀಶೈಲದಲ್ಲಿ, ಶಿವಾನಂದು, ಎಂಬ, ಓರ್ವ್ವಂ, ಮುನಿವರಂ, ಅವಿರಳಸಮಾಧಿಯೊಳ್- ಅವಿಚ್ಛಿನ್ನವಾದ ಶಿವಯೋಗದಿಂದ, ಇರುತ್ತೆ. ... ... ॥೨೧॥

ಪದನಖರಾಳಿ— ಪದ- ಪಾದದ, ನಖರಾಳಿ- ಉಗುರುಗಳ ಪಙ್ತಿಯು, ಬೇರ್ವ್ವರಿಯೆ- ಬೇರನ್ನು ಬಿಡಲಾಗಿ, ಪಾಣಿನಖಾಳಿ- ಕೈಯ್ಯುಗುರುಗಳ ಪಙ್ತಿಯು, ನೀಳ್ದು- ಉದ್ದವಾಗಿ, ಬಳ್ವಳಂ- ಬಲವತ್ತರವಾಗಿ, ಪುದಿದು- ಆಚ್ಛಾದಿಸಿ, ಇರೆ, ಅದರ- ಆ ಉಗುರಿನ, ಉಜ್ವಲರೋಚಿ- ಪ್ರಕಾಶಮಾನವಾದ ಕಾಂತಿಯು, ಬೆಳ್ಳಿವಳ್ಳಿಗಳವೋಲ್- ಬೆಳ್ಳಿಯಲತೆಯಹಾಗೆ, ಸುತ್ತಲುಂ, ಪದೆದು, ಮುಸುಂಕೆ- ಆಚ್ಛಾದಿಸಿರಲಾಗಿ, ಕೇಶಚಯಂ- ಕೂದಲುಗಳ ಸಮುದಾಯವು, ಅಂಗಮಂ- ಶರೀರವನ್ನು, ಆವರಿಸುತ್ತೆ, ತೋರೆ, ಪಿಂಗದೆ- ಬಿಡದೆ, ಅತೀವಭಕ್ತಿಯಿಂ, ಶಿವಲಿಂಗದ, ಅಂಘ್ರಿಯನೆ, ಜಾನಿಸುತೆ- ಧ್ಯಾನಿಸುತ್ತ, ಇರ್ದ್ದಂ. ... ॥೨೨॥

ಆ ಮುನಿಯ, ಪಾದಸೇವೆಯಂ, ಆಮೋದದಿಂ- ಸಂತೋಷದಿಂದ, ಎಸಗುತೆ, ಇರ್ಪ್ಪ, ತದ್ವರಶಿಷ್ಯಂ- ಅವರಮುಖ್ಯಶಿಷ್ಯನು, ಭೂಮಹಿತಕಂದಮೂಲಸ್ತೋಮಂದರಲ್- ಭೂಮಿಯಲ್ಲಿರುವಶ್ರೇಷ್ಠವಾದ ಗೆಡ್ಡೆ ಗೆಣಸುಗಳ ರಾಶಿಯನ್ನು ತರುವದಕ್ಕೆ, ಎಂದು, ತಳರುತ್ತಂ- ಹೋಗುತ್ತ, ಕಟ್ಟದಿರೊಳ್- ಮುಂಭಾಗದಲ್ಲಿ. ... ... ... ... ... ॥೨೩॥

ಯುವತಿಸಹಿತಗಂಧರ್ವಸಂದೋಹಂ— ಪತ್ನೀಸಮೇತರಾದ ಗಂಧರ್ವರ ಸಮುದಾಯವು, ಬಿನದಂಬೆತ್ತು- ವಿನೋದವನ್ನು ಹೊಂದಿ, ಎಳ್ತರುತ್ತಂ, ಉರುಜಟಾಪ್ರಾವೃತಸ್ಥೈರ್ಯ ಭಾಸ್ವತ್ತನುವಂ—ಉರು- ಉತ್ಕೃಷ್ಟವಾದ, ಜಟಾ- ಜೆಡೆಗಳಿಂದ, ಪ್ರಾವೃತ- ಸುತ್ತುವರಿಯಲ್ಪಟ್ಟ, ಸ್ಥೈರ್ಯ- ಸ್ಥಿರತ್ವದಿಂದ, ಭಾಸ್ವತ್- ಪ್ರಕಾಶಮಾನವಾದ, ತನುವಂ- ಶರೀರವುಳ್ಳ, ಆಪೆಂಪಿನಯೋಗಾರೂಢಯೋಗೀಶ್ವರನಂ- ಆ

ಕಂಡಿಲ್ಲಿ ಚಿತ್ರಂ ಮುನಿಪ ನೆಸೆದಪಂ ವೃದ್ಧಭಲ್ಲೂಕದಂತೆಂ । ದುನಿತಾಂತಂ ಪೊಯ್ದುದ್ಧಕ ಯ್ಯಂಮಿಗೆ ನಗೆಮುಳಿಸಿಂ ನೋಡುತಿಂತೆಂದ ನಾಗಳ್ ॥ ... ... ॥೭೪॥

ಮತ್ತೀ ॥ ಎಲೆದುಶ್ಚೇಷ್ಟಕನಿಷ್ಠಮಾನಸ ಮಹಾಕಾಮಾಂಧಗಂಧರ್ವಸಂ । ಕುಲ ಮೇಕೊರ್ವಿದಗರ್ವದಿಂ ಘನಶಿವಾನಂದಾಖ್ಯಯೋಗೀಂದ್ರನಂ ॥ ವಿಲಯಾತೀತಶಿವೈಕ್ಯಭಾವ ಯುತನಂ ಭಲ್ಲೂಕದಂತಿರ್ಪನೆಂ । ದುಳಿಯಲ್ತಕ್ಕುದೆ ನೋಡದಾತನಮಹಾಮಾಹಾತ್ಮ್ಯವಿ ಸ್ತಾರಮಂ ॥ ... ... ... ... ... ... ॥೭೫॥

ಕಂ ॥ ಪರಮತಪೋಧನನಂಬ । ಲ್ಗರಡಿಯ ವೊಲೆನುತ್ತೆ ನುಡಿದಕತದಿಂ ದರೆಯೊ ॥ ಳ್ಕರಡಿಗಳಾಗಿರಿ ನೀವೆನು । ತಿರದಿತ್ತಂ ಘೋರಶಾಪಮಂ ಮುನಿತನಯಂ ॥ .. ೭೬॥

ವ ॥ ಎನೆ ಕೇಳ್ದು ಗಂಧರ್ವರ್ನಡನಡುಗಿ ಬೆಬ್ಬಳಿಯೋಗಿ ಪರಿತಂದು ಪದದೊಳ್ಮೆ ಯ್ಯಿಕ್ಕಿ ನಿಂದು ಕಯ್ಯಂಮುಗಿದು ॥ * * * * * * * * * * *

ಮ॥ ಸ್ರ॥ ಬಕವೃಂದಂ ಬಲ್ಲುದೇ ಹಂಸನ ಮಹಿಮೆಯ ನಂಭೋಜಸೌರಭ್ಯಮಂ ಭೇ । ಕಕದಂಬಂ ಬಲ್ಲುದೇ ಭಾನುವಿನ ಘನಲಸತ್ತೇಜಮಂ ಬಲ್ಲುದೇ ಕೌ ॥ ಶಿಕಯೂಥಂ ಸಾರಕಂಠೀರವ ದಳವ ನದೇಂ ಬಲ್ಲುದೇ ದೇವ ಪೇಳ್ಜಂ । ಬುಕಸಂಘಂ ಶಂಭುಭಕ್ತೋ

---

ಅಧಿಕ್ಯವುಳ್ಳ ಶಿವಯೋಗದಲ್ಲಿ ಕುಳಿತಿರುವ ಋಷಿಯನ್ನು, ಕಂಡು, ಇಲ್ಲಿ, ಚಿತ್ರಂ- ಆಶ್ಚರ್ಯವು ! ಮುನಿಪಂ- ಋಷಿಯು, ವೃದ್ಧಭಲ್ಲೂಕದಂತೆ- ಮುದಿಗರಡಿಯ ಹಾಗೆ, ಎಸೆದಪಂ, ಎಂದು, ನಿತಾಂತಂ- ಅತ್ಯಂತವಾಗಿ, ಕಯ್ಯಂ, ಪೊಯ್ದು- ಹೊಡೆದು, ಅಂದರೆ ( ತಪ್ಪಾಳೆಹಾಕಿ ) ಮಿಗೆ, ನಗೆ- ನಗಲಾಗಿ, ಆಗಳ್, ಮುಳಿಸಿಂ- ಕೋಪದಿಂದ, ನೋಡುತೆ, ಇಂತು, ಎಂದು. ... ... ... ॥೭೪॥

ಎಲೆ........ಕೆಲವೇ— ಎಲೆದುಶ್ಚೇಷ್ಟ- ಎಲೈ ಕೆಟ್ಟಾಟವುಳ್ಳ, ಕನಿಷ್ಠಮಾನಸ- ನೀಚವು ನಸ್ಸುಳ್ಳ, ಮಹಾಕಾಮಾಂಧ- ಅತ್ಯಂತವಾದ ಕಾಮದಿಂದ ಕುರುಡರಾದ, ಗಂಧರ್ವಸಂಕುಲಮೇ ! ಕೊ ರ್ವಿದ, ಗರ್ವದಿಂ, ವಿಲಯಾತೀತಶಿವೈಕ್ಯಭಾವಯುತನಂ— ವಿಲಯ- ನಾಶವನ್ನು, ಅತೀತ- ಅತಿಕ್ರಮಿಸಿದ; ಶಿವೈಕ್ಯಭಾವ- ಈಶ್ವರನಲ್ಲಿ ಅಭಿನ್ನತೆಯಿಂದ, ಯುತನಂ, ಘನಶಿವಾನಂದಾಖ್ಯಯೋಗೀಶ್ವರನಂ-ಮಹಿಮನಾ ದಶಿವಾನಂದನೆಂಬ ಮುನಿಶ್ರೇಷ್ಠನನ್ನು, ಭಲ್ಲೂಕದಂತೆ-ಕರಡಿಯಹಾಗೆ, ಇರ್ಪಂ,ಎಂದು, ಆತನ, ಮಹಾಮಾ ಹಾತ್ಮ್ಯವಿಸ್ತಾರಮಂ- ಅಧಿಕವಾದ ಮಹಿಮೆಯ ಹೆಚ್ಚಿಗೆಯನ್ನು, ನೋಡದೆ, ಉಳಿಯಲ್ತಕ್ಕುದೇ- ಕೂ ಗುವದಕ್ಕೆ ಯೋಗ್ಯವೇ ? ... ... ... ... ... ॥೭೫॥

ನೀವ್, ಪರಮತಪೋಧನನಂ- ಉತ್ಕೃಷ್ಟನಾದ ಋಷಿಯನ್ನು, ಬಲ್ಗರಡಿಯಪೊಲ್- ದೊಡ್ಡಕ ರಡಿಯಹಾಗೆ, ಎನುತ್ತೆ, ನುಡಿದಕತದಿಂ- ಆಡಿದ ಕಾರಣದಿಂದ, ದರೆಯೊಳ್-ಭೂಮಿಯಲ್ಲಿ; ಕರಡಿಗಳ್, ಆಗಿ ರಿ, ಎನುತ್ತೆ, ಇರದೆ, ಮುನಿತನಯಂ, ಘೋರಶಾಪಮಂ- ಭಯಂಕರವಾದ ಶಾಪವನ್ನು, ಇತ್ತಂ. ॥೭೬॥

ಎನೆ, ಕೇಳ್ದು, ಗಂಧರ್ವರ್, ನಡನಡುಗಿ, ಕಂಪಿಸಿ, ಬೆಬ್ಬಳಿಯೋಗಿ- ಬೆರಗಾಗಿ, ಪರಿತಂದು, ಪದ ದೊಳ್- ಪಾದದಲ್ಲಿ, ಮೆಯ್ಯಿಕ್ಕಿ- ನಮಸ್ಕರಿಸಿ, ನಿಂದು, ಕಯ್ಯಂ, ಮುಗಿದು. * * * * * *

ದೇವ ! ಬಕವೃಂದಂ-ಕೊಕ್ಕರೆಗಳ ಗುಂಪು, ಹಂಸನ, ಮಹಿಮೆಯುಂ, ಬಲ್ಲುದೇ ? ಭೇಕಕದಂಬಂ- ಕ ಪ್ಪೆಗಳಗುಂಪು, ಅಂಭೋಜಸೌರಭ್ಯಮಂ- ಕಮಲದ ಪರಿಮಳವನ್ನು, ಬಲ್ಲುದೇ ? ಕೌಶಿಕಯೂಥಂ- ಗೂಗೆ ಗಳಗುಂಪು, ಭಾನುವಿನ- ಸೂರ್ಯನ, ಘನಲಸತ್ತೇಜಮಂ- ಅತ್ಯಂತಪ್ರಕಾಶಮಾನವಾದ ತೇಜಸ್ಸನ್ನು, ಬ ಲ್ಲುದೇ? ಇದುಜಂಬುಕಸಂಘಂ- ಆ ನರಿಗಳಗುಂಪು, ಸಾರಕಂಠೀರವದ- ಶ್ರೇಷ್ಠವಾದ ಸಿಂಹದ, ಅಳವಂ- ಶ ಕ್ತಿಯನ್ನು, ಬಲ್ಲುದೇಂ ? ಪೇಳ್, ದುರ್ಮದಾಂಧರ್- ಕೆಟ್ಟಗರ್ವದಿಂದ ಕುರುಡರಾದ ನಾವು, ಶಂಭುಭಕ್ತೋ

ನ್ನತಿಯ ಬಗೆಯನೇಂ ಬಲ್ಲೆವೇ ದುರ್ಮದಾಂಧರ್ ‖ ... ... ... ‖೨೭‖

ಕಂ ‖ ಅದರಿಂ ದಾವರಿಯದೆ ಮಾ । ಡಿದ ತಪ್ಪಂ ಮರೆದು ದೇವ ನೀವಿತ್ತೀಶಾ ‖
ಪದ ಮೋಚನಮಂ ಪರಿಪೂ । ರ್ಣದಯಾನಿಧಿ ಕರುಣಿಸೆಂದು ಮಗುಳ್ದೆರಗಿರ್ದರ್ ।‖೨೮‖

ವ‖ ಆಗಳಾತಾಪಸಕುಮಾರಂ ತಾ ನಿತ್ತವಂದಿರಶಾಪಂ ಪರಿವಡುವಂದಮಂ ನೆನೆದು‖

ಕಂ ‖ ಎಲೆ ಗಂಧರ್ವರೆ ದರೆಯೊ । ಳ್ತೆಲುಂಗುಜೊಮ್ಮಯ್ಯ ನೆಂಬ ಕಾರಣಪುರುಷಂ ‖
ವಿಲಸತ್ಕಲ್ಯಾಣಪುರ । ಸ್ಥಲದೊ ಳ್ಕಂಗೊಳಿಪ ನಮಿತಮಹಿಮಾವರಣಂ ‖ ... ‖೨೯।

ಕಂ‖ ಅವನ ಕರದಿಂದೆ ಮೃತಿ ಸಂಭವಿಸೆ ವಲಂ ನಿಮಗೆ ಶಾಪಮೋಚನ ಮಕ್ಕುಂ ‖
ಶಿವಕರದಿ ನಳಿದ ದಾನವ । ನಿವಹ ಕ್ಕೆಂತಂತೆ ಮೋಕ್ಷಗತಿ ದೊರಕೊಳ್ಗುಂ ‖ ‖೩೦‖

ಕಂ ‖ ನಿಯತಂ ಕಲ್ಯಾಣದ ಸಾ । ರ್ಕೆಯೊ ಳೊಪ್ಪುವ ಕಾಡೊ ಳೆಯ್ದಿ ಕರಡಿಯ
ರೂಪಿಂ ‖ ಭಯವಿಲ್ಲದೊಗೆಯುದೆಂದಾ । ದಯಾಕರಂ ಬೆಸಸೆ ಬಂದು ಪುಟ್ಟಿದರದರೊಳ್ ‖

ವ ‖ ಅಂತವ ರ್ಭಲ್ಲೂಕಾಕೃತಿಯಿಂ ಪುಟ್ಟಿ ತದ್ವಿಪಿನಾಂತರಾಳದೊ ಳ್ತೆಲುಂಗುಜೊ
ಮ್ಮಯ್ಯನ ಬರವಂ ಬಯಸುತ್ತ ಮಿರ್ಪಿನ ಮೊಂದುದಿವಸಂ ‖ * * * * * *

ಉತ್ಸಾಹವೃತ್ತಂ‖ ಆತೆಲುಂಗುಜೊಮ್ಮ ನಾಮಹಾವನಾಂತರಕ್ಕೆ ಸಂ । ಪ್ರೀತಿಯಿಂ

---

ನ್ನತಿಯ- ಶಿವಭಕ್ತ್ಯಾಧಿಕ್ಯದ,ಬಗೆಯನೆ- ರೀತಿಯನ್ನು, ಬಲ್ಲೆವೆಯೇಂ? ... ... ‖೨೭‖

ದೇವ ! ಪರಿಪೂರ್ಣದಯಾನಿಧಿ ! ಅದರಿಂದೆ, ಆವ್- ನಾವು, ಅರಿಯದೆ- ತಿಳಿಯದೆ, ಮಾಡಿದ, ತಪ್ಪಂ, ಮರೆದು, ನೀವ್, ಇತ್ತ, ಶಾಪದ, ಮೋಚನಮಂ- ನಿವಾರಣೆಯನ್ನು, ಕರುಣಿಸು, ಎಂದು, ಮಗುಳ್ದು- ಪುನಃ, ಎರಗಿ, ಇರ್ದರ್. ... ... ... ... ‖೨೮‖

ಆಗಳ್, ಆ ತಾಪಸಕುಮಾರು, ತಾಂ, ಇತ್ತ, ಅವಂದಿರ- ಅವರ, ಶಾಪಂ, ಪರಿವಡುವ- ವಿಮೋಚನವಾಗುವ, ಅಂದಮಂ- ರೀತಿಯನ್ನು, ನೆನೆದು. * * * * * * * * * * * *

ಎಲೆಗಂಧರ್ವರೆ ! ದರೆಯೊಳ್, ಅನಿಮಿತಮಹಿಮಾವರಣಂ- ಎಣಿಸುವದಕ್ಕಾಗದ ಮಹತ್ವವೇ ಹೊದಿಕೆಯಾಗುಳ್ಳ, ಕಾರಣಪುರುಷಂ- ಮೂಲಪುರುಷನಾದ, ತೆಲುಂಗುಜೊಮ್ಮಯ್ಯಂ, ಎಂಬಂ, ವಿಲಸತ್ಕಲ್ಯಾಣಪುರಸ್ಥಲದೊಳ್, ಕಂಗೊಳಿಪಂ. ... ... ... ... ‖೨೯‖

ಅವನ, ಕರದಿಂದೆ, ಮೃತಿ, ಸಂಭವಿಸೆ- ಪ್ರಾಪ್ತವಾಗಲಾಗಿ, ನಿಮಗೆ, ವಲಂ- ನಿಶ್ಚಯವಾಗಿ, ಶಾಪಮೋಚನಂ, ಅಕ್ಕುಂ, ಶಿವಕರದಿಂ, ಅಳಿದ-ಸತ್ತ, ದಾನವನಿವಹಕ್ಕೆ, ರಾಕ್ಷಸರ-ಗುಂಪಿಗೆ, ಎಂತೊ ? ಅಂತೆ- ಹಾಗೆ, ಮೋಕ್ಷಗತಿ, ದೊರಕೊಳ್ಗುಂ. ... ... ... ... ‖೩೦‖

ಆದಯಾಕರಂ- ಕೃಪಾಸ್ಪದನಾದ ಮುನಿಪುತ್ರನು, ಕಲ್ಯಾಣದ, ಸಾರ್ಕೆಯೊಳ್- ಸಮೀಪದಲ್ಲಿ, ಒಪ್ಪುವ ಕಾಡೊಳ್- ಪ್ರಕಾಶಿಸುವ ಅರಣ್ಯದಲ್ಲಿ, ಎಯ್ದಿ- ಹೋಗಿ, ಕರಡಿಯ, ರೂಪಿಂ- ಆ ಕೃತಿಯಿಂದ, ಭಯಂ, ಇಲ್ಲದೆ, ಒಗೆಯುದು- ಹುಟ್ಟುವದು, ನಿಯತಂ- ನಿಶ್ಚಯವು, ಎಂದು, ಬೆಸಸೆ- ಅಜ್ಞಾಪಿಸಲಾಗಿ, ಅದರೊಳ್- ಆಕಾಡಿನಲ್ಲಿ, ಬಂದು, ಪುಟ್ಟಿದರ್. ... ... ... ... ‖೩೧‖

ಅಂತು, ಅವರ್, ಭಲ್ಲೂಕಾಕೃತಿಯಿಂ- ಕರಡಿಯರೂಪಿನಿಂದ, ತದ್ವಿಪಿನಾಂತರದೊಳ್- ಆ ಅರಣ್ಯಮಧ್ಯದಲ್ಲಿ, ಪುಟ್ಟಿ, ತೆಲುಂಗುಜೊಮ್ಮಯ್ಯನ, ಬರವಂ- ಆಗಮನವನ್ನು, ಬಯಸುತ್ತಂ, ಇರ್ಪಿನಂ, ಒಂದುದಿವಸಂ. * * * * * * * * * * * * * * * * * *

ಆ ತೆಲುಂಗುಜೊಮ್ಮಂ, ಆಮಹಾವನಾಂತರಕ್ಕೆ, ಸಂಪ್ರೀತಿಯಿಂದೆ, ಬಂದು, ಪುಷ್ಪಪತ್ರಸ್ತೋಗಮಂ,

ದೆ ಬಂದು ಪುಷ್ಪಪತ್ರಪೂಗಮಂ ಪುರಾ ॥ ರಾತಿಪೂಜೆಗೆಂದು ಕೊಯ್ವವೇಳೆಯಲ್ಲಿ ಶಾಪ
ಸಂ । ಜಾತಭಲ್ಲರೂಪರಲ್ಲಿ ಕಂಡರಾಮಹಾತ್ಮನಂ ॥ ... ... ॥೩೦॥

ಕಂ ॥ ಮುನಿ ಮುನ್ನ ಪೇಳ್ದ ಕುರುಪಂ । ನೆನೆ ದೀತಂ ಜೊಮ್ಮಯಾಖ್ಯನಪ್ಪಂ ಧಿ
ಟ ಮೆಂ ॥ದೆನುತೊಲ್ದು ಸುತ್ತಿ ಮುತ್ತಿ ದ।ಅನಘನ ಮುಂದಣ್ಗೆ ನಡೆಯಲೀಯದೆ ಕಡುಪಿಂ॥

ವ ॥ ಅವರೊಳೊಂದುಬಲ್ಗರಡಿ ಮುಂದಣ್ಗೆ ಬಂದು ಪೊಡಮಟ್ಟು ಪೊಗಳ್ದು ॥ *

ಚಂ ॥ ಕರಡಿಯ ಮಾಳ್ಕೆಯಿಂ ಮುನಿಪ ನಿರ್ದಪ ನೆಂದವಿವೇಕಭಾವದೆ । ಳ್ತರದೆ
ಮಹಾತ್ಮನಂ ನುಡಿದ ವಾಚಕದೋಷದೆ ಶಾಪಮಾಂತು ತ॥ದ್ವರಮುನಿಶಿಷ್ಯನಿಂ ಕರಡಿಯಾ
ಗಿರುತಿರ್ದಪೆವಿಲ್ಲಿ ಮುಂದೆ ಗಂ । ದರರೆನಿಸಿರ್ಪೆವಯ್ಯ ಭವಪೀಯಕರಾಗ್ರಶರಾಗ್ರಪಾತದಿಂ ॥

ಚಂ ॥ ಮಡಿಯೆ ವಿಶಾಪ ಮಕ್ಕು ಮೆಮಗುನ್ನತಮೋಕ್ಷಮೆ ಸಾರ್ಗ್ಗಮಲ್ತೆ ನಿ।
ಮ್ಮಡಿಗಳೊರಲ್ದು ಮೇಣದರಿನಾಡುತೆ ಬೇಂಟೆಯ ನೆಮ್ಮ ರಕ್ಷಿಸ ॥ ಲ್ನಡೆಯುಲಿ ವೇಳ್ಕು
ಮಿಲ್ಲಿಗಿದನಳ್ತಿಪೆ ವೆಂದೆನೆ ಲೇಸೆನುತ್ತೆ ಪೆಂ । ಪಡರ್ದಿರೆ ಸಂತವಿಟ್ಟುರುಚಿದಕ್ಷಿಯೊ ಳೀ
ಕ್ಷಿಸಿ ತತ್ಪ್ರಕಾರಮಂ ॥ ... ... ... ... ... ॥೩೪॥

ಮತ್ತೇ ॥ ನೆನೆಯುತ್ತಂ ನಿಜಮಂದಿರಕ್ಕೆ ನಲವಿಂ ಬಂದಂದು ತಾಂ ತಂದ ವ। ನ್ಯ
ನವೀನಪ್ರಸವಂಗಳಿಂ ಭಜಿಸುತುಂ ಭಾಳಾಕ್ಷನಂ ಮಾಣದಾ ॥ ದಿನಮುಂ ನೂಂಕಿ ಪಳಚ್ಚ ನ

---

ಪುರಾರಾತಿಪೂಜೆಗೆ-ಶಿವಪೂಜೆಗೆ, ಎಂದು, ಕೊಯ್ವವೇಳೆಯುಲ್ಲಿ, ಶಾಪಸಂಜಾತಭಲ್ಲರೂಪರ್- ಶಾಪದಿಂದ ಹು
ಟ್ಟಿದ ಕರಡಿಯ ಆಕೃತಿಯುಳ್ಳ ಗಂಧರ್ವರು, ಅಲ್ಲಿ, ಆ ಮಹಾತ್ಮನಂ, ಕಂಡರ್. ... ॥೩೦॥

ಮುನಿ, ಮುನ್ನ, ಪೇಳ್ದಕುರುಪಂ- ಹೇಳಿದ ಗುರುತನ್ನು, ನೆನೆದು, ಈತಂ, ತೆಲುಂಗುಜೊಮ್ಮಯಾ
ಖ್ಯಂ, ಅಪ್ಪಂ, ದಿಟಂ, ಎಂದು, ಎನುತೆ, ಒಲ್ದು, ಅನಘನ- ಪಾಪಶೂನ್ಯನಾದ ಆ ಸ್ವಾಮಿಯನ್ನು, ಸುತ್ತಿ,
ಮುತ್ತಿ, ಮುಂದಣ್ಗೆ- ಮುಂದಕ್ಕೆ, ಕಡುಪಿಂ- ಶೌರ್ಯದಿಂದ, ನಡೆಯಲ್ ಈಯದೆ- ನಡೆಯಗೊಡಿಸದೆ. ॥೩೧॥

ಅವರೊಳ್, ಒಂದು ಬಲ್ಗರಡಿ- ಒಂದುದೊಡ್ಡಕರಡಿಯು, ಮುಂದಣ್ಗೆ, ಬಂದು, ಪೊಡಮಟ್ಟು- ನಮ
ಸ್ಕರಿಸಿ, ಪೊಗಳ್ದು. * * * * * * * * * * * * * * * * *

ಅಯ್ಯ- ಆರ್ಯನೇ ! ಮುನಿಪಂ, ಕರಡಿಯ, ಮಾಳ್ಕೆಯಿಂ, ಎಂದು, ಅವಿವೇಕಭಾವದ, ಎಳ್ತರದೆ- ಆ
ಧಿಕ್ಯದಿಂದ, ಮಹಾತ್ಮನಂ, ನುಡಿದ, ವಾಚಕದೋಷದೆ- ಮಾತಿನಿಂದುಂಟಾದ ಪಾಪದಿಂದ, ತದ್ವರಮುನಿಶಿ
ಷ್ಯನಿಂ, ಶಾಪಮಾಂತು, ಕರಡಿಯಾಗಿ, ಇರುತೆ, ಇಲ್ಲಿ, ಇರ್ದಪೆವು, ಮುಂದೆ- ಇನ್ನುಮುಂದೆ, ಭವಪೀಯಕ
ರಾಗ್ರಶರಾಗ್ರಪಾತದಿಂ- ನಿನ್ನಕೆಯ್ಯಬಾಣದ ಪೆಟ್ಟಿನಿಂದ, ಗಂದರರ್- ಗಂಧರ್ವರು, ಎನಿಸಿ, ಇರ್ಪೆವು. ॥೩೨॥

ಮಡಿಯೆ- ಸಾಯಲಾಗಿ, ಎಮಗೆ, ವಿಶಾಪಂ- ಶಾಪವಿಮೋಚನವು, ಅಕ್ಕುಂ, ಉನ್ನತಮೋಕ್ಷಮೆ, ಸಾ
ರ್ಗ್ಗಮಲ್ತೆ ? ಅದರಿಂ, ಮೇಣ್, ನಿಮ್ಮ, ಅಡಿಗಳ್, ಒರಲ್ದು, ಬೇಂಟೆಯುಂ, ಆಡುತೆ, ಎಮ್ಮ, ರಕ್ಷಿಸಲ್,
ಇಲ್ಲಿಗೆ, ನಡೆಯುವೇಳ್ಕುಂ- ದಯಮಾಡಿಸಬೇಕು, ಇದಂ, ಅಳ್ತಿಪೆವ್- ಯಾಚಿಸುವೆವು, ಎನೆ, ಲೇಸು- ಒಳ್ಳೆ
ಯದು, ಎನುತ್ತೆ, ಪೆಂಪಡರ್ದಿರೆ- ಆಧಿಕ್ಯವನ್ನು ಹೊಂದಿರಲಾಗಿ, ಸಂತವಿಟ್ಟು- ಸಮಾಧಾನಪಡಿಸಿ; ತತ್ಪ್ರ
ಕಾರಮಂ- ಅವರ ರೀತಿಯನ್ನು, ಉರುಚಿದಕ್ಷಿಯೊಳ್- ಉತ್ಕೃಷ್ಟವಾದ ಜ್ಞಾನದೃಷ್ಟಿಯಿಂದ, ಈಕ್ಷಿಸಿ

ನೆನೆಯುತ್ತಂ, ಅಂದು, ನಿಜಮಂದಿರಕ್ಕೆ, ಬಂದು, ತಾಂ, ತಂದ, ವನ್ಯನವೀನಪ್ರಸವಂಗಳಿಂ- ವನದ
ಲ್ಲಿ ಹುಟ್ಟಿದ ನೂತನವಾದ ಹೂವ್ಗಳಿಂದ, ಭಾಳಾಕ್ಷನಂ- ಶಿವನನ್ನು, ಭಜಿಸುತಂ- ಪೂಜಿಸುತ್ತ, ಮಾಣದೆ- ಬಿ
ಡದೆ, ಆ ದಿನಮುಂ, ನೂಂಕಿ- ಕಳೆದು, ಪಳಚ್ಚನೆ- ಪ್ರಕಾಶಮಾನವಾಗಿ, ಅರ್ಕಂ- ಸೂರ್ಯನು, ಒಗೆವಲ್ಲಿಂ ಪಾ

ರ್ಕ ನೋಗೆವಲ್ಲಿಂ ಮುನ್ನ ಮೇಳ್ದೀಶನು | ಮನ ಮೊಲ್ದರ್ಚಿಸಿ ತತ್ಪ್ರಸಾದಸವಂ ಕೈಕೊಂಡು ಸಂಪ್ರೀತಿಯಿಂ ‖ ... ... ... ... ... ‖೩೬‖

ಕಂ ‖ ಅಳವಡೆವಸುರಂಗಿಯುಮಂ | ತಳೆ ದೊಳ್ಗರ್ಪಿಡಿದ ಚಂದಿಯಂ ಸುತ್ತಿ ಶರಾ ‖ ವಳಿ ಪುದಿದ ಬೆನ್ನ ಪೊಸಬ | ತ್ತಳಿಕೆ ವಿರಾಜಿಸೆ ಮಯೂರಪಿಂಛಾಂಚಿತಮಂ ‖ ‖೩೭‖

ಮ‖ ಸ್ರ‖ ಧನುವಂ ಕೈಕೊಂಡು ಗೇಣಂ ತಳೆದು ಕಟಿಯೊಳ್ ಓರಂತೆ ಮೆಟ್ಟುತ್ತೆ ಕೆರ್ಪಂ | ಸುನಿಗಳ್ ಪಿಂದೆಯ್ದೆ ಕೂರ್ಪಿಂ ದೊಡವರೆ ಕಲಿಬೇಡರ್ಕಳೆಳ್ತಂದು ತತ್ಕಾ ‖ ನನೆಮಂ ತಾಂ ಪೊಕ್ಕು ವೀಕ್ಷೀಕ್ಷಿಸುವ ಸಮಯದೊಳ್ ಪಿಂಡುಪಿಂಡಾಗಿ ಭಲ್ಲೂ | ಕನಿಕಾಯಂ ಬಂದು ಸಾರ್ದವ್ವಳಿಸಿ ಬಳಸೆ ಕಂಡುರ್ಬಿದಂ ಜೋಮ್ಮಿದೇವಂ ‖ ... ... ‖೩೮‖

ವ ‖ ಅಂತುರ್ಬ್ವಿ ಚಂಡಧನುರ್ದ್ದಂಡಮಂ ಜೇವಡೆದು ಕೂರ್ಗಣೆಯುಂ ತೊಡರ್ಚಿ ತೆಗೆನೆರೆದು ನೀಡಡಿಗೊಂಡು ನಿಂದಾಗಳ್ ನೆರೆದ ಕಿರಾತ ರಣ್ಮಿ ಕೊರಲಹಾಸಮಂ ಸಡಿಲ್ಚಿ ಚಿಟುಂಕುದೋರಿ ಬಿಡ ಲೊಡನೆ ಜವಂಮಿಗೆ ಗಜಂಗಳಂ ಪಾಯ್ವ ಸಿಂಗಂಗಳಂತೆ ಮುಂಕೊಂಡುತುಡುಂಕುವ ಜಾಯಿಲಂಗಳ್ಗೆ ಮೈಗೊಡ ದೊಡಮುರಿದು ಪರಿವರಿದಸುವ ಬಿಯದ ರಂಬಿಗೆಸಿಲ್ಕದೆ ಕಟ್ಟಿವಿರೊಳ್ಪಾಯ್ದು ತನ್ನ ಕೂರ್ಗಣೆಗೊಡಲ ನೊಪ್ಪಿಸಿ ಸಡಗರಂ ಮಿಗೆ ಭಲ್ಲೂಕಂಗಳ್ನಿಲೆ ನಿರೀಕ್ಷಿಸಿ ‖ * * * * * * * * * * * * * *

---

ನ್ನಮೆ- ಹುಟ್ಟುವದಕ್ಕಿಂತಮುಂಚೆಯೇ, ಏಳ್ದು, ಈಶನಂ,ಮನವೊಲ್ದು, ತತ್ಪ್ರಸಾದಮಂ- ಆಶಿವಾನುಗ್ರಹವನ್ನು, ಸಂಪ್ರೀತಿಯಿಂ, ಕೈಕೊಂಡು. ... ... ... ... ‖೩೬‖

ವಸುರಂಗಿಯು- ಹಸುರಂಗಿಯನ್ನು,ಅಳವಡೆ- ಒಪ್ಪುವಹಾಗೆ, ಮುಂತಳೆದು- ಮುಂದೆಧರಿಸಿ,ಒಳ್ಗರ್ಪಿಡಿದ- ಒಳ್ಳೆಯಕಪ್ಪಾದ,ಚಂದಿಯುಂ-ಬಟ್ಟೆಯನ್ನು, ಸುತ್ತಿ, ಶರಾವಳಿ- ಬಾಣಪಙ್ತಿಯು,ಪುದಿದ-ಆಚ್ಛಾದಿಸಿದ, ಬೆನ್ನ, ಪೊಸಬತ್ತಳಿಕೆ, ವಿರಾಜಿಸೆ,ಮಯೂರಪಿಂಛಾಂಚಿತಮಂ-ನವಿಲುಗರಿಯಿಂದ ಕೂಡಿಕೊಂಡಿರುವ.

ಧನುವಂ ಬಿಲ್ಲನ್ನು, ಕೈಕೊಂಡು, ಗೇಣಂ- ಸುರಗಿಯನ್ನು, ಕಟಿಯೊಳ್-ನಡುವಿನಲ್ಲಿ, ಓರಂತೆ- ಚೆನ್ನಾಗಿ, ತಳೆದು, ಕೆರ್ಪಂ- ಎಕ್ಕಡವನ್ನು, ಮೆಟ್ಟುತ್ತೆ, ಸುನಿಗಳ್- ನಾಯಿಗಳು, ಪಿಂದೆ, ಎಯ್ದೆ, ಕಲಿಬೇಡರ್ಕಳ್- ಸಮರ್ಥರಾದ ಬೇಡರು, ಕೂರ್ಪಿಂದೆ, ಒಡವರೆ, ಎಳ್ತಂದು, ತತ್ಕಾನನಮಂ- ಆ ಕಾಡನ್ನು, ತಾಂ, ಪೊಕ್ಕು, ವೀಕ್ಕ- ಹೆಚ್ಚಾಗಿ, ಈಕ್ಷಿಸುವ, ಸಮಯದೊಳ್, ಭಲ್ಲೂಕನಿಕಾಯಂ- ಕರಡಿಗಳಗುಂಪು, ಪಿಂಡುಪಿಂಡಾಗಿ, ಬಂದು, ಸಾರ್ದು- ಸಮೀಪಿಸಿ, ಅದ್ವಳಿಸಿ- ಅಪ್ಪಳಿಸಿ, ಬಳಸೆ,ಜೋಮ್ಮಿದೇವಂ, ಕಂಡು, ಉರ್ಬಿದಂ.

ಅಂತು, ಉರ್ಬ್ವಿ, ಚಂಡಧನುರ್ದಂಡಮಂ- ಕ್ರೂರವಾದ ಧನುಸ್ಸಿನದಂಡವನ್ನು,ಜೇವಡೆದು-ಸಿಂಜನಿಯ ನಾದವನ್ನುಮಾಡಿ, ಕೂರ್ಗಣೆಯುಂ- ಕ್ರೂರವಾದಬಾಣವನ್ನು, ತೊಡರ್ಚಿ- ಸೇರಿಸಿ,ತೆಗೆನೆರೆದು- ಉದ್ದವಾಗಿಎಳದು, ನೀಡಡಿಗೊಂಡು- ಕಾಲನ್ನುಚಾಚಿ, ನಿಂದು, ಆಗಳ್, ನೆರೆದಕಿರಾತರ್, ಅಣ್ಮಿ- ಪೌರುಷವನ್ನು ಹೊಂದಿ, ಕೊರಲ, ಹಾಸಮಂ- ಹಗ್ಗವನ್ನು, ಸಡಿಲ್ಚಿ- ಬಿಚ್ಚಿ, ಚಿಟುಂಕುದೋರಿ- ಚಿಟುಕಿಹಾಕಿ, ಬಿಡಲ್, ಒಡನೆ, ಜವಂ- ವೇಗವು, ಮಿಗೆ, ಗಜಂಗಳಂಪಾಯ್ವ- ಆನೆಗಳಮೇಲೆ ಬೀಳುವ, ಸಿಂಗಂಗಳಂತೆ- ಸಿಂಹಗಳ ಹಾಗೆ, ಮುಂಕೊಂಡು, ತುಡುಂಕುವ- ಬೇಗ ಹಿಡಿಯುವ, ಜಾಯಿಲಂಗಳ್ಗೆ- ನಾಯಿಗಳಿಗೆ, ಮೆಯ್ಗೊಡದೆ, ಒಡನುರಿದು- ತಿರುಗಿ, ಪರಿವರಿದು- ಓಡಿಓಡಿ, ಇಸುವಬಿಯದರ- ಬಾಣಪ್ರಯೋಗಮಾಡುವ ವ್ಯಾಧರ, ಅಂಬಿಗೆ- ಬಾಣಕ್ಕೆ, ಸಿಲ್ಕದೆ, ಕಟ್ಟವಿರೊಳ್, ಪಾಯ್ದು, ತನ್ನ, ಕೂರ್ಗಣೆಗೆ- ಕ್ರೂರವಾದ ಬಾಣಕ್ಕೆ, ಒಡಲಂ ಶರೀರವನ್ನು, ಒಪ್ಪಿಸಿ, ಸಡಗರಂ, ಮಿಗೆ, ಭಲ್ಲೂಕಂಗಳ್, ನಿಲೆ, ನಿರೀಕ್ಷಿಸಿ. * * * * * *

ಕ॥ ನೆರ ನೆಚ್ಚು ಕೆಡಪಿದಂ ಕರೆ । ಮರೆಯಿಲ್ಲದೆ ಶರಣ ನೊಲ್ದವಂ ತತ್‌ಕ್ಷಣದೊ॥ಳ್ಪ ರಿವಡೆ ತತ್ತನು ಮಿರುಗತೆ। ಮೆರೆದ ರ್ಮಣಿಭರಣಭೂಷಿತ ರ್ಗಂಧರ್ವರ್ ॥ ... ॥೯॥

ಚಂ ॥ ಮಣಿ ದವನ ಘ್ರಿಪಂಕಜಕೆ ದೇವ ಭವತ್ಕೃಪೆಯಿಂದೆ ಪೋದುದಿಂ ।ದಣಿಯು ರ ಮೆಮ್ಮ ಜಾಡ್ಯತೆನು ಪೂರ್ವಸ್ಥಿತಿಯಾಂತೆ ಮೆಂದು ಸಂ ॥ ದಣಿಸಿದ ಭಕ್ತಿಯಿಂಪೊಗ ಳ್ದು ಬಂದ ವಿಮಾನವನು ನೇರಿ ಗಂಡರ । ರ್ಫಣಿಪತಿಭೂಷ ನಿರ್ಪ ಪುರಿಗೆಯ್ದಿ ವಿರಾಜಿಸಿದ ರ್ವಿನೋದದಿಂ ॥ ... ... ... ... ... ... ॥೮॥

ವ ॥ ಅನ್ನೆವರ ಮಿತ್ತಲ್ ॥ ಕಂ ॥ ಪ್ರತಿದಿನ ಮೀತೆರದಿಂ ಸ । ನ್ನುತಮಹಿಮಂ ಸ ಪ್ತಭಲ್ಲಮಂ ತವಿಸಿ ನಿಜ॥ಸ್ಥಿತಿಗೊಳಿಸಿ ಕಳುಪುತಂ ವಸು । ಮತಿಯೊಳ್ಮೃಗಯಾವಿನೋ ದವುಂ ತಳೆ ದೆಸೆದಂ ॥ ... ... ... ... ... ॥೯೧॥

ಕಂ॥ ಅರಸಂ ಕಿರಾತಮುಖದಿಂ । ಶರಣನ ಪರಿಗೇಳ್ದು ನೋಡ ಲೇಳ್ತಂದು ವನಾಂ॥ ತರ ಕದ ನೆಲ್ಲಮ ನೀಕ್ಷಿಸಿ । ಪುರಜನದೊಡ ನಾಳ್ದು ಚೋದ್ಯಮಂ ಕೀರ್ತಿಸಿದಂ ॥೯೨॥

ವ॥ ಆಗ ಳ್ತನ ಹಿಮೆಯಂ ಬಲ್ಲ ಮಹಾತ್ಮ ರಾತೆಲುಂಗುಜೊಮ್ಮಯ್ಯನ ನಭೀಕ್ಷಿಸಿ ಮುದಂಬಡೆದು ॥ * * * * * * * * * * * * * *

ಚಂ॥ ಪರಮವಿವೇಕಮೆಂಬ ಪೊಳೆವಿಟ್ಟಿಯೊ ಳಿಟ್ಟು ವಿಮೋಹಸಿಂಹಮಂ । ನಿರುಪ

---

ನೆರನೆ- ಬೇಗನೆ, ಎಚ್ಚು- ಬಾಣಪ್ರಯೋಗಮಾಡಿ, ಶರಣಂ- ಜೊಮ್ಮಯ್ಯನು, ಕರೆಮರೆಯಿಲ್ಲದೆ- ಸಂಶಯವಿಲ್ಲದೆ, ಒಲ್ದು, ಅವಂ, ಕೆಡಪಿದಂ, ತತ್‌ಕ್ಷಣದೊಳ್, ತತ್ತನು- ಆ ಕರಡಿಗಳ ಶರೀರವು, ಪಡಿವಡೆ- ಬೀಳಲಾಗಿ, ಮಿರುಗುತೆ- ಪ್ರಕಾಶಿಸುತ್ತ, ಮಣಿಭರಣಭೂಷಿತರ್- ರತ್ನಾಭರಣಗಳಿಂದ ಅಲಂಕರಿಸಲ್ಪಟ್ಟ, ಗಂಧರ್ವರ್, ಮೆರೆದರ್. ... ... ... ... ... ॥೯॥

ಗಂಡರರ್, ಅವನ- ಆ ಜೊಮ್ಮಯ್ಯನ, ಅಂಘ್ರಿಪಂಕಜಕೆ, ಮಣಿದು, ದೇವ ! ಇದು, ಭವತ್ಕೃಪೆಯಿಂದೆ, ಎಮ್ಮ, ಜಾಡ್ಯತನು- ಜಡತ್ವದಿಂ ಕೂಡಿದ ಶರೀರವು, ಅಣಿಪುರ- ಅತ್ಯಂತವಾಗಿ, ಪೋದುದು, ಪೂರ್ವಸ್ಥಿತಿಯಂ- ಮೊದಲಿನ ರೀತಿಯನ್ನು, ಆಂತೆವ್- ಧರಿಸಿದೆವು, ಎಂದು, ಸಂದಣಿಸಿದಭಕ್ತಿಯಿಂ- ಗುಂಪುಕೂಡಿದ ಭಕ್ತಿಯಿಂದ, ಪೊಗಳ್ದು, ಬಂದ, ವಿಮಾನವಮಂ, ಏರಿ, ಫಣಿಪತಿಭೂಷಂ, ಇರ್ಪ್ಪ, ಪುರಿಗೆ, ವಿನೋದದಿಂ, ಎಯ್ದು, ವಿರಾಜಿಸಿದರ್. ... ... ... ... ॥೯೦॥

ಈ ತೆರದಿಂ, ಸನ್ನುತಮಹಿಮಂ- ಶ್ಲಾಘ್ಯವಾದ ಮಹತ್ವವುಳ್ಳ ಜೊಮ್ಮಯ್ಯನು, ಸಪ್ತಭಲ್ಲಮಂ- ಏಳುಕರಡಿಗಳನ್ನು, ತವಿಸಿ- ಕೊಂದು, ನಿಜಸ್ಥಿತಿಗೊಳಿಸಿ- ತನ್ನರೀತಿಯನ್ನುಹೊಂದಿಸಿ, ಕಳುಪುತಂ,ವಸುಮತಿಯೊಳ್- ಭೂಮಿಯಲ್ಲಿ, ಪ್ರತಿದಿನಂ, ಮೃಗಯಾವಿನೋದವಮಂ- ಬೇಟೆಯ ವಿಲಾಸವನ್ನು, ತಳೆದು, ಎಸೆದಂ.

ಅರಸಂ- ಬಿಜ್ಜಳನು, ಕಿರಾತಮುಖದಿಂ- ಬೇಡರಕಡೆಯಿಂದ, ಶರಣನ, ಪರಿಗೇಳ್ದು- ರೀತಿಯನ್ನು ಕೇಳಿ, ನೋಡಲ್, ವನಾಂತರಕ್ಕೆ, ಏಳ್ತಂದು, ಅದುಎಲ್ಲಮಂ, ಪುರಜನದೊಡನೆ, ಈಕ್ಷಿಸಿ, ಚೋದ್ಯಮಂ- ಆಶ್ಚರ್ಯವನ್ನು, ಆಳ್ದು, ಕೀರ್ತಿಸಿದಂ. ... ... ... ... ॥೯೨॥

ಆಗಳ್, ತನ್ಮಹಿಮೆಯಂ, ಬಲ್ಲ, ಮಹಾತ್ಮರ್, ಆತೆಲುಂಗುಜೊಮ್ಮಯ್ಯನಂ, ಅಭೀಕ್ಷಿಸಿ, ಮುದುಬಡೆದು. * * * * * * * * * * * * * * * * * *

ಪರಮವಿವೇಕಂ, ಎಂಬ, ಇಟ್ಟಿಯೊಳ್- ಈಟಿಯಲ್ಲಿ, ವಿಮೋಹಸಿಂಹಮಂ- ಅಜ್ಞಾನವೆಂಬ ಸಿಂಹವನ್ನು, ಇಟ್ಟು- ಹೊಡೆದು, ನಿರುಪಮಸಂವಿದುಜ್ವಲಕೃಪಾಣದೆ- ಉಪಮಾತೀತವಾದ ಜ್ಞಾನವೆಂಬ ಪ್ರ

ಮಸಂವಿದುಜ್ವಳಕೃಪಾಣದೆ ಖಂಡಿಸು ತಜ್ಞಭಾವ ಸಿಂ ॥ ಧುರಮ ನಡರ್ತ್ತು ಸೀಳ್ದು ಹರ ನಿಷ್ಠೆ ಯೆನಿಪ್ಪ ಸಿತಾಸಿಯಿಂದೆ ಸಂ । ಸರಣಚಮೂರುಮಂ ದುರಿತಖಡ್ಗಿಯ ನಿಕ್ಕಿ ವಿಲೋಕನಾಸ್ತ್ರದಿಂ ॥ ... ... ... ... ... ೪೩॥

ಮತ್ತೇ ॥ ನಿರಹಂಕಾರ ಮೆನಿಪ್ಪ ಬಲ್ಸುರಗಿಯಿಂ ಪೋಳ್ದುನ್ಮದೋದ್ರೇಕಸೂ । ಕರಮಂ ಜಾನ ಮೆನಿಪ್ಪಡಾಯುಧದೆ ಪೊಯ್ದಾಶಾಲುಲಾಯೌಘಮಂ ॥ ವರವೀರವ್ರತಶೂಲದಿಂ ದಿರಿದಸದ್ವ್ಯಾಪಾರಭಲ್ಲೂಕಮಂ । ಸ್ಥಿರವೈರಾಗ್ಯಕುಠಾರದಿಂ ತರಿಯುತಕ್ಷೋದ್ರೇಕ ಸಾರಂಗಮಂ ॥ .. ... ... ... ... ... ॥೪೪॥

ಚಂ ॥ ವಿತತಮಹತ್ವ ಮೆಂಬ ಗಡೆಯಿಂ ಸದೆ ದುದ್ಧತವೃತ್ತಚಾಪಲಾ । ನ್ವಿತಪರ ವಾದಿವಾರಮೃಗವೃಂದಮ ನುರ್ವಿಯೊಳಿಂತು ಬೇಂಟೆಯಂ ॥ ಪ್ರತಿದಿನ ಮಾಡುತಿರ್ಪ್ಪ ನೆನುತಂ ಪದಪಿಂ ಪೊಗಳುತ್ತ ಮಿರ್ಪ್ಪನಂ । ನುತಮಹಿಮಾಂಕಜೊಮ್ಮವಿಭು ರಂಜಿಸುತಿರ್ದ್ದನು ದಾತ್ತಲೀಲೆಯಿಂ ॥ ... ... ... ... ... ॥೪೫॥

ಮ॥ ಸ್ರ॥ ಬಸವೇಶಂ ಬಂದು ಜೊಮ್ಮಪ್ರಭುವಿ ನಡಿಗೆ ಮೆಯ್ಯಿಕ್ಕಿ ದೇವೇಶ ನಿನ್ನಂ । ಘ್ರಿಸರೋಜಾಘಾತದಿಂದು ಮಡಿದ ಪುಳುಗಳುಂ ಮೋಕ್ಷಮಂ ಸಾರ್ಗ್ಗ ಮೆಂಬಂ ॥ ದೊಸೆ

---

ಕಾಶಮಾನವಾದ ಕತ್ತಿಯಿಂದ, ಅಜ್ಞಭಾವಸಿಂಧುರಮಂ- ಜಡಬುದ್ಧಿಯೆಂಬ ಆನೆಯನ್ನು, ಖಂಡಿಸುತೆ- ಕತ್ತರಿಸುತ್ತ, ಹರನಿಷ್ಠೆ, ಎನಿಪ್ಪ, ಸಿತಾಸಿಯಿಂ- ತೀಕ್ಷ್ಣವಾದ ಕತ್ತಿಯಿಂದ, ಸಂಸರಣಚಮೂರುಮಂ- ಸಂಸಾರವೆಂಬ ಗುಡುಜಿಂಕೆಯನ್ನು, ಅಡರ್ತ್ತು- ಹತ್ತಿ, ಸೀಳ್ದು, ವಿಲೋಕನಾಸ್ತ್ರದಿಂ- ಜ್ಞಾನದೃಷ್ಟಿಯೆಂಬ ಆಯುಧದಿಂದ, ದುರಿತಖಡ್ಗಿಯಂ- ಪಾಪವೆಂಬ ಗೇಂಡಾಮೃಗವನ್ನು, ಇಕ್ಕಿ- ಸಂಹರಿಸಿ. ॥೪೩॥

ನಿರಹಂಕಾರಂ, ಎನಿಪ್ಪ, ಬಲ್ಸುರಗಿಯಿಂ- ಬಲವಾದಸುರಗಿಯಿಂದ, ಉನ್ಮದೋದ್ರೇಕಸೂಕರಮಂ- ಹೆಚ್ಚಾದ ಅಷ್ಟಮದಗಳೆಂಬ ಕೊಬ್ಬಿದ ಹಂದಿಗಳನ್ನು, ಪೋಳ್ದು- ಹೋಳುಮಾಡಿ, ಜಾಸಂ, ಎನಿಪ್ಪ- ಧ್ಯಾನವೆಂಬ, ಅಡಾಯುಧದಿಂ- ದೊಣ್ಣೆಯಿಂದ, ಆಶಾಲುಲಾಯೌಘಮಂ- ಆಸೆಯೆಂಬ ಕೋಣಗಳ ಸಮುದಾಯವನ್ನು, ಪೊಯ್ದು, ವರವೀರವ್ರತಶೂಲದಿಂದೆ- ಉತ್ಕೃಷ್ಟವಾದ ವೀರಶೈವನಿಯಮವೆಂಬ ತ್ರಿಶೂಲದಿಂದ, ಅಸದ್ವ್ಯಾಪಾರಭಲ್ಲೂಕಮಂ- ಕೆಟ್ಟನಡತೆಯೆಂಬ ಕರಡಿಯನ್ನು, ಇರಿದು- ತಿವಿದು, ಸ್ಥಿರವೈರಾಗ್ಯಕುಠಾರದಿಂ- ಶಾಶ್ವತವಾದ ವಿರಕ್ತಿಯೆಂಬ ಕೊಡಲಿಯಿಂದ, ಅಕ್ಷೋದ್ರೇಕಸಾರಂಗಮಂ- ಇಂದ್ರಿಯಗಳೆಂಬ ಕೊಬ್ಬಿದ ಸಾರಗಗಳನ್ನು, ತರಿಯುತೆ. ... ... ... ॥೪೪॥

ವಿತತಮಹತ್ವಂ, ಎಂಬ, ಗಡೆಯಿಂ, ಉದ್ಧತ......ವೃಂದಮಂ— ಉದ್ಧತ- ಕೊಬ್ಬಿದ, ವೃತ್ತ- ಚರಿತ್ರೆಯುಳ್ಳ, ಚಾಪಲ- ಚಾಂಚಲ್ಯದಿಂದ, ಅನ್ವಿತ- ಕೂಡಿದ, ಪರವಾದಿ- ಇತರ ಮತವಾದಿಗಳ, ವಾರ- ಸಮುದಾಯವೆಂಬ, ಮೃಗವೃಂದಮಂ, ಸದೆದು- ಕೊಂದು, ಉರ್ವಿಯೊಳ್, ಇಂತು, ಬೇಂಟೆಯಂ, ಪ್ರತಿದಿನಂ, ಆಡುತೆ, ಇರ್ಪ್ಪಂ, ಎನುತಂ, ಪದಪಿಂ, ಪೊಗಳುತ್ತಂ, ಇರ್ಪ್ಪನಂ, ನುತಮಹಿಮಾಂಕಜೊಮ್ಮವಿಭು- ಶ್ಲಾಘ್ಯವಾದಮಹಿಮೆಯೇ ಗುರುತಾಗಿಯುಳ್ಳ ಜೊಮ್ಮಯ್ಯನು, ಉದಾತ್ತಲೀಲೆಯಿಂ- ಉತ್ಕೃಷ್ಟವಾದ ವಿಲಾಸದಿಂದ, ರಂಜಿಸುತೆ, ಇರ್ದಂ. ... ... ... ... ॥೪೫॥

ಗಣಾಂಭೋಧಿಚಂದ್ರಂ- ಪ್ರಮಥರೆಂಬ ಸಮುದ್ರಕ್ಕೆ ಚಂದ್ರಪ್ರಾಯನಾದ, ಬಸವೇಶಂ, ಬಂದು, ಜೊಮ್ಮಪ್ರಭುವಿನ, ಅಡಿಗೆ, ಮೆಯ್ಯಿಕ್ಕಿ, ದೇವೇಶ ! ನಿನ್ನ, ಅಂಘ್ರಿಸರೋಜಾಘಾತದಿಂ— ಅಂಘ್ರಿಸರೋಜ- ಪಾದಕಮಲದ, ಆಘಾತದಿಂ- ಹೊಡೆತದಿಂದ, ಮಡಿದ- ಸತ್ತ, ಪುಳುಗಳುಂ, ಮೋಕ್ಷಮಂ, ಸಾರ್ಗ್ಗಂ,

ದಾದಂ ನಿನ್ನ ಕಯ್ಯಿಂದಳಿದ ಮೃಗಗಣಂ ಶಂಕರಾವಾಸಮಂ ಸಾ। ರ್ದ್ದಿಸಕಂ ತಾಂ ಚೋದ್ಯ ಮಂ ಪೇಳೆನುತೆ ಪೊಗಳುತಿರ್ದ್ದಂಗಣಾಂಭೋಧಿಚಂದ್ರಂ ॥ ... ... ॥೪೬॥

ಪ್ರಿಯಂವದಾವೃತ್ತಂ ॥ ಸುರಗಿಚೌಡವಿಭುಸಚ್ಚರಿತ್ರಮಂ । ಬರೆದೋಡೋದಿದೊ ಡೆಕೇಳ್ದೊಡಳ್ಕರಿಂ ॥ ದರೆಯೊಳೊಲ್ದು ಪಡೆವರ್ನಿರಂತರಂ । ನರರುಮೇಶಕೃಪೆಯಿಂದ ಭೀಷ್ಟಮಂ ॥ ... ... ... ... ... ... ॥೪೭॥

ಕಂ॥ ಭೂನುತತೆಲುಂಗುಜೊಮ್ಮನ । ನೂನೋಪಾಖ್ಯಾನಮಂ ಸಮಂತೋದಿದೊಡೊ॥ ಲ್ದಾನಂದಿಸಿ ಕೇಳ್ದೊಡೆ ಗಿರಿ । ಜಾನಾಯಕ ನೀವ ನವರ್ಗೆ ನಿರುಪಮಸುಖಮಂ ॥೪೮॥

ಲಲಿತಪದವೃತ್ತಂ ॥ ತ್ಯಕ್ತಕರಣೇಂದ್ರಿಯನಿಯುಕ್ತವಿಷಯಭ್ರಮ ಸದುಕ್ತಪರ ಮಾರ್ಥ ಪರಿಭಕ್ತಪರವಾದ । ಪ್ರಾಕ್ತನಮಹೇಶಪದಭಕ್ತಕರುಣಾಮೃತನಿಷಿಕ್ತಸು ಯ ಶೋಭರಿತದಿಕ್ತಟ ಕವೀಂದ್ರ ॥ ವ್ಯಕ್ತರುಚಿಸಾರಪದ ಸೂಕ್ತಮಣಿಭೂಷಣಸಿಷಕ್ತನಿಜ ಕರ್ಣ ಪರಿಭುಕ್ತಗರ ಮಾನೋ । ದ್ರಿಕ್ತಮದವಾರಣ ವಿರಕ್ತಹಿತ ರಕ್ಷಿಸು ನಿರುಕ್ತಶಿವತ ತ್ವ ಪರಮುಕ್ತ ಬಸವೇಶ ॥ ... ... ... ... ॥೪೯॥

---

ಎಂಬಂದು- ಎನ್ನುವಲ್ಲಿ, ನಿನ್ನ, ಕಯ್ಯಿಂದೆ, ಅಳಿದ, ಮೃಗಗಣಂ, ಶಂಕರಾವಾಸಮಂ- ಈಶ್ವರನ ಸ್ಥಾನವ ನ್ನು, ಸಾರ್ದ್ದು, ಎಸಕಂ- ಉದ್ಯೋಗವು, ತಾಂ, ಚೋದ್ಯಮೆ- ಆಶ್ಚರ್ಯವೇ ? ಪೇಳ್, ಎನುತೆ, ಪೊಗಳುತೆ, ಇರ್ದ್ದಂ. ... ... ... ... ... ... ॥೪೬॥

ಸುರಗಿಯ, ಚೌಡವಿಭುಸಚ್ಚರಿತ್ರಮಂ- ಚೌಡಯ್ಯನ ಸವಿಾಚೀನವಾದ ಕಥೆಯನ್ನು, ಬರೆಪೊಡೆ ಓದಿದೊಡೆ, ಅಳ್ಕರಿಂ, ಕೇಳ್ದೊಡೆ, ದರೆಯೊಳ್, ಒಲ್ದು, ನಿರಂತರಂ, ನರರ್, ಉಮೇಶಕೃಪೆಯಿಂದೆ, ಅಭೀ ಷ್ಟಮಂ- ಇಷ್ಟಾರ್ಥವನ್ನು, ಪಡೆವರ್. ... ... ... ... ॥೪೭॥

ಭೂನುತತೆಲುಂಗುಜೊಮ್ಮನ, ಅನೂನೋಪಾಖ್ಯಾನಮಂ ಅಧಿಕವಾದ ಚರಿತ್ರೆಯನ್ನು, ಸಮಂತು- ಚೆನ್ನಾಗಿ, ಓದಿದೊಡೆ, ಒಲ್ದು, ಆನಂದಿಸಿ, ಕೇಳ್ದೊಡೆ, ಅವರ್ಗೆ, ಗಿರಿಜಾನಾಯಕಂ, ನಿರುಪಮಸುಖ ಮಂ, ಈವಂ. ... ... ... ... ... ... ॥೪೮॥

ತ್ಯಕ್ತ......ಭ್ರಮ—ತ್ಯಕ್ತ-ಬಿಡಲ್ಪಟ್ಟ, ಕರಣ- ದೇಹ, ಇಂದ್ರಿಯ, ಇವುಗಳಲ್ಲಿ, ನಿಯುಕ್ತ- ಕೂ ಡಿದ,ವಿಷಯ- ಗುಣಗಳ, ಭ್ರಮ-ಭ್ರಾಂತಿಯುಳ್ಳ,ಸದುಕ್ತಪರಮಾರ್ಥ—ಚೆನ್ನಾಗಿಹೇಳಲ್ಪಟ್ಟ ಪರಮಾತ್ಮ ವಿ ಷಯವುಳ್ಳ, ಪರಿಭಕ್ತಪರವಾದ- ಭೇದಿಸಲ್ಪಟ್ಟ ಶಿವೇತರವಸ್ತುಸ್ವರೂಪವುಳ್ಳ, ಪ್ರಾಕ್ತನಮಹೇಶಪದಭಕ್ತ ಕ ರುಣಾಮೃತನಿಷಿಕ್ತ- ಪ್ರಾಕ್ತನಮಹೇಶಪದಭಕ್ತ- ಪುರಾತನರಾದ ಶಿವಭಕ್ತರ, ಕರುಣಾಮೃತ- ದಯೆಯೆಂ ಬ ಅಮೃತರಸದಿಂದ, ನಿಷಿಕ್ತ- ಸೇಚಿಸಲ್ಪಟ್ಟ, ಸುಯಶೋಭರಿತದಿಕ್ತಟ- ಒಳ್ಳೆಯಕೀರ್ತಿಯಿಂದ ತುಂಬಲ್ಪ ಟ್ಟ ದಿಕ್ಪ್ರದೇಶಗಳುಳ್ಳ, ಕವೀಂದ್ರವ್ಯಕ್ತರುಚಿಸಾರಪದ-ಕವಿಶ್ರೇಷ್ಠರಿಂದ ಸ್ಫುಟವಾಗಿಯೂ ಕಾಂತಿಯಿಂ ದ ಶ್ರೇಷ್ಠವಾಗಿಯೂ ಇರುವ ಚರಣವುಳ್ಳ, ಸೂಕ್ತಮಣಿಭೂಷಣನಿಷಕ್ತನಿಜಕರ್ಣ-ಸತ್ಯವಚನವೆಂಬ ರತ್ನಾ ಭರಣದಿಂದ ಸಂಬಂಧಿಸಿಕೊಂಡಿರುವ ತನ್ನ ಕಿವಿಯುಳ್ಳ, ಪರಿಭುಕ್ತಗರ- ತಿನ್ನಲ್ಪಟ್ಟ ವಿಷವುಳ್ಳ, ಮಾನೋ ದ್ರಿಕ್ತಮದವಾರಣ- ಗರ್ವದಿಂದ ಕೊಬ್ಬಿದವರ ಅಹಂಕಾರವನ್ನು ನಿಲ್ಲಿಸುವ, ವಿರಕ್ತಹಿತ- ವೈರಾಗ್ಯಸಂಪನ್ನ ರ ಮಿತ್ರನಾದ, ನಿರುಕ್ತಶಿವತತ್ವ- ಹೇಳಲ್ಪಟ್ಟ ಪರಮಾತ್ಮಭಾವವುಳ್ಳ, ಪರಮುಕ್ತ- ಉತ್ಕೃಷ್ಟವಾದಮು ಕ್ತಿಯುಂಹೊಂದಿದ, ಬಸವೇಶ ! ರಕ್ಷಿಸು. ... ... ... ... ॥೫೦॥

ಪುಷ್ಪಿತಾಗ್ರವೃತ್ತಂ ॥ ಹರಿವಿಧಿಸುರರಾಜರತ್ನಮೌಳಿ । ಸ್ಫುರಿತಪದಾಬ್ಜೆ ಸುರಾರಿಹೃತ್ಕರಾಳೀ ॥ ಪುರಹರಸುಮನೋಮನೋಜ್ಞಕೇಳೀ । ಪರಿಣತೆ ಪಾಲಿಪು ದೆನ್ನ ಭದ್ರಕಾಳೀ ॥ ... ... ... ... ... ... ॥೫೦॥

ಗದ್ಯಂ॥ ಇದುವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತ ಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದ ಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಸುರಗಿಚೌಡತೆಲುಂಗುಜೊಮ್ಮಯ್ಯಗಳಮಹತ್ವಕಥನಂದ್ವಾವಿಂಶತ್ಯಾಶ್ವಾಸಂಪರಿಸಮಾಪ್ತಂ॥ ... ... ... *

ದ್ವಾವಿಂಶತ್ಯಾಶ್ವಾಸಂ ಸಂಪೂರ್ಣಂ.

---

## ಶ್ರೀಃ

ಏಕಪಾದಲೀಲಾವಹಾಯಪರಬ್ರಹ್ಮಣೇನಮಃ.

## ತ್ರಯೋವಿಂಶತ್ಯಾಶ್ವಾಸಂ.

### ಶಿ ವ ಯೋ ಗ ನಿ ದ್ರಾ ಮು ದ್ರಾ ಕ ಥ ನಂ.

ಕಂ॥ ಶ್ರೀಸರ್ವಮಂಗಳಾಮುಖ । ಭಾಸುರಮಣಿಮುಕುರವೀಕ್ಷಣೋತ್ಸವ ನಖಿಳಾ॥
ವಾಸಂ ತನುರುಚಿಜಿತಕೈ । ಲಾಸಂ ಪಾಳ್ಕೆಮಗೆ ಸೌಖ್ಯಮಂ ಶಿವಲಿಂಗಂ ॥ ... ॥೧॥

---

ಹರಿವಿಧಿ......ದಾಬ್ಜೆ—ಹರಿ, ವಿಧಿ- ಬ್ರಹ್ಮ, ಸುರರಾಜ- ಇಂದ್ರ, ಇವರುಗಳ, ರತ್ನಮೌಳಿ- ರತ್ನಖಚಿತವಾದ ಕಿರೀಟಗಳಿಂದ, ಸ್ಫುರಿತ- ಪ್ರಕಾಶಮಾನವಾದ, ಪದಾಬ್ಜೆ, ಸುರಾರಿಹೃತ್ಕರಾಳೀ—ಸುರಾರಿ- ರಾಕ್ಷಸರುಗಳ, ಹೃತ್- ಹೃದಯಕ್ಕೆ, ಕರಾಳಿ- ಕ್ರೂರಳಾದ, ಪುರಹರಸುಮನೋಮನೋಜ್ಞಕೇಳೀಪರಿಣತೆ—ಪುರಹರ- ಶಿವನೊಡನೆ, ಸುಮನಃ- ಹೂವ್ಗಳ, ಮನೋಜ್ಞಕೇಳೀ- ಮನೋಹರವಾದ ಆಟದಲ್ಲಿ, ಪರಿಣತೆ- ಸಮರ್ಥಳಾದ, ಭದ್ರಕಾಳೀ ! ಎನ್ನ, ಪಾಲಿಪುದು. ... ... ... ... ॥೫೦॥

ಇಪ್ಪತ್ತೆರಡನೆಯ ಆಶ್ವಾಸವು ಸಂಪೂರ್ಣವು.

---

ಇಪ್ಪತ್ಮೂರನೆಯಆಶ್ವಾಸಪ್ರಾರಂಭಃ.

ಶ್ರೀಸರ್ವ......ತ್ಸವಂ— ಶ್ರೀ- ಸಂಪದ್ಯುಕ್ತಳಾದ, ಸರ್ವಮಂಗಳಾ- ಪಾರ್ವತಿಯ, ಮುಖ- ಮುಖವೆಂಬ, ಭಾಸುರ- ಪ್ರಕಾಶಮಾನವಾದ, ಮಣಿಮುಕುರ- ರತ್ನದರ್ಪಣವನ್ನು, ವೀಕ್ಷಣ- ನೋಡುವದರಲ್ಲಿ, ಉತ್ಸವಂ- ಸಂತೋಷವುಳ್ಳ, ಅಖಿಳಾವಾಸಂ- ಸಮಸ್ತರಿಗೂ ಆಶ್ರಯಭೂತನಾದ, ತನುರುಚಿಜಿತಕೈಲಾಸಂ— ತನುರುಚಿ- ಶರೀರಕಾಂತಿಯಿಂದ, ಜಿತ- ಜೈಸಲ್ಪಟ್ಟ, ಕೈಲಾಸಂ- ಕೈಲಾಸಾದ್ರಿಯುಳ್ಳ, ಶಿವಲಿಂಗಂ, ಸೌಖ್ಯಮಂ, ಎಮಗೆ, ಪಾಳ್ಕೆ. ... ... ... ... ॥೧॥

ಚಂ ॥ ಹರಮತಸಿಂಧುಚಂದ್ರ ನಕಲಂಕಗುಣಾಂಕ ನನೂನಭಕ್ತಿಭಾ । ಸುರಬಸವೇಶ್ವರಂ ಚರಣದಾಬ್ಜಸಮರ್ಚನೆಗೆಯ್ದ ನಂತರಂ ॥ ಸುರುಚಿರಲಿಂಗಪೂಜೆ ಗಿರದುಜ್ಜುಗಿಸುತ್ತೆ ಸುಖಾಸನಸ್ಥನಾ । ಗಿರುತೆ ವಿಭೂತಿಧಾರಣಮ ನಾಳ್ದು ಶಿವಾಕ್ಷಮಣಿಪ್ರತಾನಮಂ ॥

ಮತ್ತೇ ॥ ಧರಿಸುತ್ತಂಗದೊಳ್ ಬಲ್ಮೆವೆತ್ತು ಶಿವಮಂತ್ರಧ್ಯಾನಯುಕ್ತಂ ಪ್ರಭಾ । ವರಣಂ ಲಿಂಗಮನೊಲ್ದು ರಂಜಿಸೆ ಕರಾಂಭೋಜಾತದೊಳ್ ನೋಡಿ ನೋ ॥ ಡಿ ರುಚಿಸ್ಫೂರ್ತಿಯ ನಾಳ್ದು ಬಾಳ್ದು ಕರದಿಂ ಸೋಂಕಿ ಮೈಸೋಂಕುತುಂ । ಕರಗುತ್ತಂ ಶಿವಲಿಂಗಸೌಖ್ಯಸುಧೆಯಂ ತಾ ನುಂಟ ಮೆಯ್ಮೆಚ್ಚುತಂ ॥ ... ... ... ॥೩॥

ಮತ್ತೇ ॥ ಅಲರ್ಗಣ್ಣಿಂ ನಸೆ ನೋಡಿ ಮಾಡಿ ಪರಮಾನಂದಾಬ್ಧಿಯೊಳ್ ಕೂಡಿ ಮೂಡಿ ಲಸತ್ಸಂಭ್ರಮಮಾಳ್ದು ತಾಳ್ದು ತನು ರೋಮಾಂಚಂಗಳಂ ಮಂಗಳಂ ॥ ನಲವೆಚ್ಚುತ್ತಿರೆ ಪತ್ತಿ ಸುತ್ತಿ ಬೆರಸುತ್ತಾಲಿಂಗದಾಲಿಂಗನಂ । ಬಲಿದೊಪ್ಪುತ್ತಿರೆ ಯೋಗರಾಗರಸದಿಂ ದಿರ್ದಂ ವೃಷಾಧೀಶ್ವರಂ ॥ ... ... ... ... ... ॥೪॥

ಚಂ ॥ ಬದವಿದ ಕೆಂಪನಂಬಡೆದ ಕಯ್ಯದು ಸತ್ಕ್ರಿಯೆಯಂ ನಿಮಿರ್ಚಲೀ । ಯದು ಮುದಬಾಷ್ಪವಾರಿಯ ಪೊನಲ್ ಶಿವಲಿಂಗವ ನೆಯ್ದೆ ನೋಡಲೀ ॥ ಯದು ನವಗದ್ಗದಂ

---

ಹರಮತಸಿಂಧುಚಂದ್ರಂ— ಹರಮತ- ಶಿವಮತವೆಂಬ, ಸಿಂಧು- ಸಮುದ್ರಕ್ಕೆ, ಚಂದ್ರಂ, ಅಕಲಂಕಗುಣಾಂಕಂ- ನಿಷ್ಕಲಂಕವಾದ ಗುಣಗಳೇ ಚಿಹ್ನವಾಗುಳ್ಳ, ಅನೂನಭಕ್ತಿಭಾಸುರಬಸವೇಶ್ವರಂ- ಅಧಿಕವಾದ ಭಕ್ತಿಯಿಂದ ಪ್ರಕಾಶಮಾನನಾದ ಬಸವೇಶ್ವರನು, ಚರಣದಾಬ್ಜಸಮರ್ಚನೆಗೆಯ್ದು, ಅನಂತರಂ, ಸುರುಚಿರಲಿಂಗಪೂಜೆಗೆ, ಇರದೆ- ಬಿಡದೆ, ಉಜ್ಜುಗಿಸುತ್ತೆ- ಪ್ರಯತ್ನಪಡುತ್ತ, ಸುಖಾಸನಸ್ಥಂ, ಆಗಿ, ಇರುತೆ, ವಿಭೂತಿಧಾರಣಮಂ, ಆಳ್ದು, ಶಿವಾಕ್ಷಮಣಿಪ್ರತಾನಮಂ- ರುದ್ರಾಕ್ಷಿಮಣಿಗಳ ಸಮುದಾಯವನ್ನು. ॥೨॥

ಅಂಗದೊಳ್, ಧರಿಸುತ್ತೆ, ಬಲ್ಮೆವೆತ್ತು, ಶಿವಮಂತ್ರಧ್ಯಾನಯುಕ್ತಂ, ಪ್ರಭಾವರಣಂ- ತೇಜಸ್ಸೇ ಹೊದ್ದಿಕೆಯಾಗುಳ್ಳ ಬಸವೇಶನು, ಕರಾಂಭೋಜಾತದೊಳ್, ಆದುಲಿಂಗಂ, ಒಲ್ದು, ರಂಜಿಸೆ, ನೋಡಿ, ನೋಡಿ, ರುಚಿಸ್ಫೂರ್ತಿಯಂ- ಪ್ರೀತಿಯ ಪ್ರಕಾಶವನ್ನು, ಆಳ್ದು, ಬಾಳ್ದು, ಕರದಿಂದ- ಹಸ್ತದಿಂದ, ಸೋಂಕಿ, ಮೈಸೋಂಕುತಂ, ಕರಗುತ್ತಂ, ಶಿವಲಿಂಗಸೌಖ್ಯಸುಧೆಯಂ- ಶಿವಲಿಂಗಸಂಗದಿಂದುಂಟಾದ ಸುಖಾಮೃತವನ್ನು, ತಾಂ, ಉಂಟು, ಮೆಯ್ಮೆಚ್ಚುತಂ- ಮೆಯ್ಯುಬ್ಬುತ್ತೆ. ... ... ... ॥೩॥

ಅಲರ್ಗಣ್ಣಿಂ- ಕಮಲದ-ತೆರವ ಕಣ್ಣಿನಿಂದ, ನಸೆ- ಚೆನ್ನಾಗಿ, ನೋಡಿ, ಮಾಡಿ, ಪರಮಾನಂದಾಬ್ಧಿಯೊಳ್— ಉತ್ಕೃಷ್ಟವಾದ ಸಂತೋಷ ಸಮುದ್ರದಲ್ಲಿ, ಕೂಡಿ, ಮೂಡಿ- ಎದ್ದು, ಲಸತ್ಸಂಭ್ರಮಮಾಳ್ದು- ಪ್ರಕಾಶಮಾನವಾದ ಸಡಗರವನ್ನುಹೊಂದಿ, ತನು- ಶರೀರವು, ರೋಮಾಂಚಂಗಳಂ, ತಾಳ್ದು, ಮಂಗಳಂ, ನಲವೆಚ್ಚುತ್ತಿರೆ- ಬಹುಹೆಚ್ಚುತ್ತಿರಲು, ಪತ್ತಿ, ಸುತ್ತಿ, ಬೆರಸುತ್ತೆ, ಆ ಲಿಂಗದ, ಆಲಿಂಗನಂ- ತಬ್ಬುವಿಕೆಯು, ಬಲಿದು- ಹೆಚ್ಚಾಗಿ, ಒಪ್ಪುತ್ತಿರೆ, ವೃಷಾಧೀಶ್ವರಂ, ಯೋಗರಾಗರಸದಿಂದೆ— ಯೋಗ- ಶಿವಯೋಗದ, ರಾಗರಸದಿಂದೆ- ಪ್ರೀತಿಗುಣದಿಂದ, ಇರ್ದಂ, ... ... ... ॥೪॥

ಬದವಿದ- ಪ್ರಾಪ್ತವಾದ, ಕೆಂಪನಂಬಡೆದ- ನಡುಗುವಿಕೆಯನ್ನು ಹೊಂದಿದ, ಅದುಕಯ್, ಸತ್ಕ್ರಿಯೆಯಂ, ನಿಮಿರ್ಚಲೀಯದು- ಮಾಡಗೊಡಿಸದು, ಮುದಬಾಷ್ಪವಾರಿಯ- ಆನಂದದಿಂದುಂಟಾದ ಕಣ್ಣೀರಿನ, ಪೊನಲ್- ಪ್ರವಾಹವು, ಶಿವಲಿಂಗವಂ, ಎಯ್ದೆ, ನೋಡಲೀಯದು— ನೋಡಗೊಡಿಸದು, ನವಗದ್ಗದಂ- ನೂತನವಾಗಿ ದೈನ್ಯದಿಂ ನಡುಗುತ್ತಿರುವವಾತು, ನೆಗಳ್ದು— ಉಂಟಾಗಿ, ಸನ್ನುತಿಗೆಯ್ಯಲ್- ಸ್ತೋತ್ರಮಾಡು

ನೆಗಳ್ದ ಸನ್ನುತಿಗೆಯ್ಯ ಲೊಡರ್ಚೆ ವಿಘ್ನಮಾ | ದುದು ತನು ವಪ್ಪ ಲೆಳ್ಚರ ದು ತಾ ನೆ
ನೆ ಭಕ್ತಿ ಯದೇಂ ನಳುಂಬಮೋ ॥ ... ... ... ... ॥೫॥

ಕಂ ॥ ಪಳುಕುಗೊಡದೊಳಗೆ ಪೊರಗು | ಜ್ವಳಿಪ ಮಣಿಜ್ಯೋತಿಯಂತಿ ರೊಳಹೊ
ರಗೆ ತಳ ॥ ತ್ತಳಿಪ ಶಿವಲಿಂಗದಂಗದ | ಬೆಳಗಿನೊಳೆ ವೃಷೇಂದ್ರ ನಮರ್ದು ಬೆಳಗಾಗಿರ್ದಂ॥

ಕಂ ॥ ಪರಮಶಿವಲಿಂಗರುಚಿಭಾ | ಸುರಚಂದ್ರಿಕೆ ಯಳುರೆ ಕಾಯಶಶಿಮಣಿ ಯೊಸ
ರ್ವಂ ॥ ತಿರೆ ಬೆಮ ರಿರೆ ಸುಖಬಾಷ್ಪಂ |ಸುರಿದುದು ಕಣ್ಣೈದಿಲಲರ ಮಕರಂದದವೋಲ್॥

ಚಂ ॥ ಶಿವ ನೊಳಪೊಕ್ಕು ಮಿಕ್ಕಲರ್ದು ಸೊಕ್ಕಿ ಸೊಗಂಬಡೆ ದುರ್ವಿ ಪರ್ವಿ ಬಾ
ಹ್ಯವಿಷಯವೃತ್ತಿಯಂ ಮರೆದು ಜುಮ್ಮನೆ ಕೂರ್ತು ಬೆಮರ್ತು ನೇತ್ರಸಂ ॥ ಭವಸುಖಬಾ
ಷ್ಪದಿಂ ನೆನೆದು ಪೊಂಪುಳಿಯೋಗಿ ಪೊಡಳ್ದಭಕ್ತಿ ಯು | ತ್ಸವರಸದೊ ಳ್ಮುಳುಂಗಿ ಸು
ಖಮಿರ್ದ ನೊರಲ್ದು ವೃಷಾಧಿನಾಯಕಂ ॥ ... ... ... ॥೮॥

ಕಂ ॥ ತನ್ನೊಳಗೆ ಶಿವಂ ಶಿವನೊ | ಳ್ತಾಂ ನಲೆಗೊಂಡೆಸೆವ ನಮಮ ಕನ್ನಡಿಯಿದಿ
ರೊ ॥ ಳ್ಗನ್ನಡಿ ಯೊಳ್ಮಾರ್ಪೊಳೆವವೊ | ಲುನ್ನತಗುಣನಿಳಯ ನಭವಗಣಮಣಿಮುಕುರಂ॥

---

ಪದಕ್ಕೋಸ್ಕರ, ಒಡರ್ಚೆ- ಆರಂಭಿಸಲಾಗಿ, ವಿಘ್ನಂ, ಆದುದು, ತನು, ತಾಂ, ಅಪ್ಪಲ್- ಆಲಿಂಗಿಸುವದ
ಕ್ಕೋಸ್ಕರ, ಎಳ್ಚರದು- ಎಚ್ಚರವನ್ನು ಹೊಂದುವದಿಲ್ಲ, ಎನೆ, ಭಕ್ತಿ, ಅದೇಂ ಅಳುಂಬಮೋ- ಅದೇನು ಅಧಿ
ಕವೋ? ... ... ... ... ... ... ॥೫॥

ವೃಷೇಂದ್ರಂ, ಪಳುಕುಗೊಡದ- ಸ್ಫಟಿಕ ಕಲಶದ, ಒಳಗೆ, ಪೊರಗೆ, ಉಜ್ವಳಿಪಮಣಿಜ್ಯೋತಿಯಂತಿ
ರೆ- ಪ್ರಕಾಶಿಸುವ ರತ್ನದೀಪದ ಹಾಗೆ, ಒಳಹೊರಗೆ, ತಳತ್ತಳಿಪ- ಪ್ರಕಾಶಿಸುವ, ಶಿವಲಿಂಗದ, ಅಂಗದ- ಶ
ರೀರದ, ಬೆಳಗಿನೊಳೆ- ಪ್ರಕಾಶದಲ್ಲಿ, ಅಮರ್ದು- ಸೇರಿ, ಬೆಳಗಾಗಿ- ಪ್ರಕಾಶಿಸಿ, ಇರ್ದಂ. ... ॥೬॥

ಪರಮ......ಚಂದ್ರಿಕೆ— ಪರಮ- ಉತ್ಕೃಷ್ಟವಾದ, ಶಿವಲಿಂಗ- ಶಿವಲಿಂಗದ, ರುಚಿ- ಕಾಂತಿ
ಯೆಂಬ, ಭಾಸುರ- ಪ್ರಕಾಶಮಾನವಾದ, ಚಂದ್ರಿಕೆ- ಬೆಳ್ದಿಂಗಳು, ಅಳುರೆ- ಆಚ್ಛಾದಿಸಲಾಗಿ, ಕಾಯಶಶಿ
ಮಣಿ- ಶರೀರವೆಂಬ ಚಂದ್ರಕಾಂತಶಿಲೆಯು, ಒಸರ್ವುತಿರೆ- ಸ್ರವಿಸುವಹಾಗೆ, ಬೆಮರ್, ಇಗೆ, ಸುಖಬಾ
ಷ್ಪಂ- ಆನಂದದಿಂದುಂಟಾದ ಕಣ್ಣೀರು, ಕಣ್ಣೈದಿಲಲರ- ಕಣ್ಣೆಂಬ ನೈದಿಲೆಯ ಹೂವಿನ, ಮಕರಂದದ
ವೋಲ್, ಸುರಿದುದು. ... ... ... ... ... ॥೭॥

ವೃಷಾಧಿನಾಯಕಂ, ಶಿವನ, ಒಳಪೊಕ್ಕು, ಮಿಕ್ಕು, ಅಲರ್ದು, ಸೊಕ್ಕಿ, ಸೊಗಂಬಡೆದು- ಸುಖವ
ನ್ನುಹೊಂದಿ, ಉರ್ವಿ- ಉಬ್ಬಿ, ಪರ್ವಿ- ಹಬ್ಬಿ, ಬಾಹ್ಯವಿಷಯವೃತ್ತಿಯಂ- ಬಹಿರಂಗವಿಷಯಕವಾದ ವ್ಯಾ
ಪಾರವನ್ನು, ಮರೆದು, ಜುಮ್ಮನೆ, ಕೂರ್ತು- ಪ್ರೀತಿಸಿ, ಬೆಮರ್ತು, ನೇತ್ರಸಂಭವಸುಖಬಾಷ್ಪದಿಂ- ಕಣ್ಣಿ
ನಿಂದಹುಟ್ಟಿದ ಆನಂದಬಾಷ್ಪದಿಂದ, ನೆನೆದು, ಪೊಂಪುಳಿಯೋಗಿ- ರೋಮಾಂಚವನ್ನು ಹೊಂದಿ, ಪೊಡಳ್ದ
ಭಕ್ತಿಯ- ಹೆಚ್ಚಾದಭಕ್ತಿಯಿಂದುಂಟಾದ, ಉತ್ಸವರಸದೊಳ್- ಸಂತೋಷವೆಂಬ ನೀರಿನಲ್ಲಿ, ಮುಳುಂಗಿ, ಒ
ರಲ್ದು, ಸುಖಮಿರ್ದಂ. ... ... ... ... ... ॥೮॥

ಉನ್ನತಗುಣನಿಳಯಂ- ಉತ್ಕೃಷ್ಟವಾದ ಗುಣಗಳಿಗೆ ಆಶ್ರಯನಾದ, ಅಭವಗಣಮಣಿಮುಕುರಂ-
ಪ್ರಮಥರಿಗೆ ರತ್ನದ ಕನ್ನಡಿಯಾದ ಬಸವನು, ತನ್ನ, ಒಳಗೆ, ಶಿವಂ, ಶಿವನ, ಒಳಗೆ, ತಾಂ, ನೆಲೆಗೊಂಡು-
ವಾಸವಂಮಾಡಿ, ಇದಿರ- ಮುಂಗಡೆಯಲ್ಲಿರುವ, ಒಳ್ಗನ್ನಡಿಯೊಳ್- ಒಳ್ಳೆಯ ಕನ್ನಡಿಯಲ್ಲಿ, ಕನ್ನಡಿ, ಮಾ
ರ್ಪೊಳೆವವೊಲ್– ಪ್ರತಿಬಿಂಬಿಸುವಹಾಗೆ, ಎಸೆದಂ. ... ... ... ॥೯॥

ಕಂ ‖ ಪರೆದು ಪಸರಿಸಿದ ಕಿರಣಮ । ನರುಣಂ ಬರಸೆಳೆದು ಶರಧಿಯೊಳ್ ಪೊಕ್ಕವೊ
ಲಾ ‖ ಶರಣವರೇಣ್ಯಂ ಪಸರಿಪ । ಕರಣಮನೊಳಕೆಯ್ದು ಲಿಂಗದೊಳಪೊಕ್ಕಿರ್ದಂ ‖೧೦‖
ಕಂ ‖ ವಾಯಂ ಜ್ಞಾತೃಜ್ಞಾನ । ಜ್ಞೇಯ ಮಿದೆಂಬಂತೆ ಮರೆದು ನಿಜಹೃದಯಲ
ಸ ‖ ತ್ತೋಯರುಹಕರ್ಣಿಕಾಗ್ರದೊ । ಳಾಯತಿಯಿಂ ಮಿಸುಪ ಶಿವನೊ ಳೊಡೆವೆರೆದಿರ್ದಂ‖
ವ ‖ ಅಂತು ಬೆಚ್ಚಂತೆ ಬೆರಸಿ ಬಿಚ್ಚದಚ್ಚಳಿಯದ ಪರಮಾನಂದಮಯಶಿವಯೋಗ
ನಿದ್ರಾಮುದ್ರಿತ ನಾಗಿ ಬಸವರಸ ನಿರ್ಪಿನ ಮಲ್ಲಿ ಚನ್ನಬಸವೇಂದ್ರಂ ಬಂದು ನಿಜಗುರುವಿನಿ
ರವಂ ನಿರೀಕ್ಷಿಸಿ ಸಾಶ್ಚರ್ಯಚಿತ್ತನಾಗಿ ‖ * * * * * * * * * *
ಕಂ ‖ ನಿದ್ರೆ ಯಧಿಲ್ಲದ ಚಿದ್ರಸ । ಮುದ್ರಿತಶಿವಯೋಗನಿದ್ರೆ ಯಳವಟ್ಟುದು ನಿ ‖ ರ್ನಿ
ದ್ರಗುರುವಿಂಗೆ ಮಾಯಾ । ನಿದ್ರಾನ್ವಿತಜನ ಕಿದೆಂತುಮೇಂ ಸಂದಪುದೆ ‖ ... ‖೧೨‖
ಚಂ‖ಇದು ತೆರೆನಿಂದಸಾಗರಮೊ ನೋಡಿದು ಮೇಘವಿಹೀನಮಾದ ಶಾ।ರದವಿಮಲಾಮ
ರಾಧ್ವಮೊ ಪರೀಕ್ಷಿಪೊಡಿಂತಿದು ಪರ್ಣಶಬ್ದಮಿ‖ಲ್ಲದ ವಿಲಸನ್ಮಹೀರುಹಮೊ ಪೇಳೆನೆ ನಿಶ್ಚ
ಳಭಾವಮಾಂತಡಂ। ಗಿದ ಕರಣಂಗಳಿಂ ಮಿಸುಪ ಯೋಗಮಿದೊಪ್ಪುಗು ಮಾವೃಷೇಂದ್ರನ‖

---

ಅರುಣಂ- ಸೂರ್ಯನು, ಪರೆದು- ವಿಸ್ತರಿಸಿ, ಪಸರಿಸಿದ, ಕಿರಣಮಂ, ಬರಸೆಳೆದು- ಬೇಗನಾಗಿಸೆಳೆದು, ಶರಧಿಯ- ಸಮುದ್ರದ, ಒಳಪೊಕ್ಕವೊಲ್- ಒಳಗೆ ಪ್ರವೇಶಮಾಡಿದಹಾಗೆ, ಆ ಶರಣವರೇಣ್ಯಂ- ಆಶರಣಶ್ರೇಷ್ಠನಾದ ಬಸವನು, ಪಸರಿಪ, ಕರಣಮಂ- ಇಂದ್ರಿಯಗಳನ್ನು, ಒಳಗೆಯ್ದು- ಒಳಗೆಮಾಡಿ, ಲಿಂಗದ, ಒಳಪೊಕ್ಕು, ಇರ್ದಂ. ... ... ... ... ... ‖೧೦‖

ಇದು, ಜ್ಞಾತೃ- ತಿಳಿಯುವವನು, ಜ್ಞಾನ- ತಿಳುವಳಿಕೆ, ಜ್ಞೇಯ- ತಿಳಿಯಲ್ಪಡುವದಕ್ಕೆ ಯೋಗ್ಯವಾದವಸ್ತು, ಎಂಬ ತ್ರಿಪುಟಿಗಳನ್ನು, ಅಂತೆ, ಅಂತೆ, ಮರೆದು, ವಾಯಂ- ನಿಶ್ಚಯವಾಗಿ, ನಿಜಹೃದಯಲಸತ್ತೋಯರುಹಕರ್ಣಿಕಾಗ್ರದೊಳ್— ನಿಜ- ತನ್ನ, ಹೃದಯ- ಮನಸ್ಸೆಂಬ, ಲಸತ್- ಪ್ರಕಾಶಮಾನವಾದ, ತೋಯರುಹ- ಕಮಲದ, ಕರ್ಣಿಕಾಗ್ರದೊಳ್- ಗೆಡ್ಡೆಯ ಮೇಲುಭಾಗದಲ್ಲಿ, ಆ ಯತಿಯಿಂ- ಪ್ರಭಾವದಿಂದ, ಮಿಸುಪ, ಶಿವನೊಳ್, ಒಡವೆರೆದು- ಜೊತೆಯಲ್ಲಿ ಸೇರಿ, ಇರ್ದಂ. ... ... ... ‖೧೧‖

ಅಂತು, ಬೆಚ್ಚಂತೆ- ಬೆಸೆದಹಾಗೆ, ಬೆರಸಿ- ಕೂಡಿ, ಬಿಚ್ಚದ- ಬೇರೆಯಾಗದ, ಅಚ್ಚಳಿಯದ- ಕುಂದದ ಪರಮಾನಂದಮಯಶಿವಯೋಗನಿದ್ರಾಮುದ್ರಿತಂ, ಉತ್ಕೃಷ್ಟಸಂತೋಷಸ್ವರೂಪನಾದಶಿವನ ಸಂಬಂಧದಿಂದುಂಟಾದನಿದ್ರೆಯಿಂದಬಂಧಿಸಲ್ಪಟ್ಟವನಾಗಿ, ಬಸವರಸಂ, ಇರ್ಪಿನಂ, ಅಲ್ಲಿ, ಚನ್ನಬಸವೇಂದ್ರಂ, ಬಂದು, ನಿಜಗುರುವಿನ, ಇರವಂ, ನಿರೀಕ್ಷಿಸಿ, ಸಾಶ್ಚರ್ಯಚಿತ್ತಂ, ಆಗಿ. * * * * * * * * *

ನಿರ್ನಿದ್ರಗುರುವಿಂಗೆ- ಮಾಯಾನಿದ್ರಾರಹಿತನಾದಗುರುವಿಗೆ, ಅದುನಿದ್ರೆ, ಇಲ್ಲದ, ಚಿದ್ರಸಮುದ್ರಿತಶಿವಯೋಗನಿದ್ರೆ, ಚಿದ್ರಸ- ಜ್ಞಾನರಸವಿಂದ, ಮುದ್ರಿತ- ಬಿನ್ನಗೊಳಿಸಲ್ಪಟ್ಟ, ಶಿವಯೋಗನಿದ್ರೆ, ಶಿವನಸಂಬಂಧದಿಂದುಂಟಾದ ನಿದ್ರೆಯು, ಅಳವಟ್ಟುದು- ಪ್ರಾಪ್ತವಾಯಿತು, ಇದು, ಮಾಯಾನಿದ್ರಾನ್ವಿತಜನಕೆ- ಮಾಯೆಯಿಂದುಂಟಾಗುವ ನಿದ್ರೆಯಿಂದಕೂಡಿದ ಜನಗಳಿಗೆ, ಸಂದಪುದೇಂ- ಸಲ್ಲುವದೇನು ? ‖೧೨‖

ಇದು, ತೆರೆ- ತರಂಗವು, ನಿಂದ- ನಿಂತ, ಸಾಗರವೊ- ಸಮುದ್ರವೋ, ನೋಡು, ಇದು, ಮೇಘವಿಹೀನಮಾದ- ಮೋಡವಿಲ್ಲದಿರುವ, ಶಾರದವಿಮಲಾಮರಾಧ್ವಮೊ- ಶರದೃತುವಿನಲ್ಲಿರುವ ನಿರ್ಮಲವಾದ ಆಕಾಶವೋ, ಪರೀಕ್ಷಿಪೊಡೆ, ಇಂತು, ಇದು, ಪರ್ಣಶಬ್ದಂ- ಎಲೆಯಧ್ವನಿಯು, ಇಲ್ಲದ, ವಿಲಸನ್ಮಹೀರುಹಮೊ- ಪ್ರಕಾಶಮಾನವಾದ ಗಿಡವೋ, ಪೇಳ್, ಎನೆ, ಅಡಂಗಿದ, ಕರಣಂಗಳಿಂ, ನಿಶ್ಚಳಭಾವಮಾಂತು, ಮಿಸುಪ, ಈ ವೃಷೇಂದ್ರನ, ಇದುಯೋಗಂ, ಒಪ್ಪುಗುಂ. ... ... ... ‖೧೩‖

ವ ॥ ಮತ್ತಮಿರದೆ ॥ ಮ॥ ಸ್ರ॥ ಶಿವಲಿಂಗೈಕ್ಯಾತಿ ಸೌಖ್ಯಂಬಡೆದು ಮರೆಪಿ ನಿಂದಿ ರ್ಪನೋ ಕಂಗಳಿಂ ನೋ । ಡುವೊಡಾನಂದಾಶ್ರು ಕಾಣಲ್ವಿಡದೆನುತ ಮನೋನೇತ್ರದಿಂನೋ ಳ್ಪನೋ ಶಂ ॥ಭುವ ನೀತಂ ತೋಳ್ಗಳಿಂ ದಪ್ಪಿದೊಡೆ ಮೃದುಶಿವಾಂಗಕ್ಕೆ ಕಂದಪ್ಪುದೆಂದ। ಪ್ಪುವವೊ ಡಂತರ್ಭಾವಸತ್ಕೋಮಲಭುಜದಿ ನೂರಲ್ದಿರ್ಪನೋ ದೇಶಿಕೇಂದ್ರಂ । ॥೧೪॥

ವ ॥ ಅಂತುಮಲ್ಲದೆಯುಂ ಮಲ್ಲಿ ಸೌಕುಮಾರ್ಯಂಬೆತ್ತೊಪ್ಪುವ ನಿರುಪಮಶಿವಲಿಂಗ ಕ್ಕೆ ಕರತಳಾಸ್ತರಣಂ ಬೆಟ್ಟಿತಕ್ಕುಮೆಂದು ಬಿಟ್ಟು ಕಟ್ಟಳ್ಕರಿಂ ಭಕ್ತಿಸೌರಭಪರಿಮಿಳಿ ತಮೃದುಲಹೃದಯನಳಿನಸುಖಾಸನದೊಳ್ಮೂರ್ತಿಗೊಳಿಸಿಯುಂ, ವಿಮಳಶೀತಳೋಪಣ್ಣಜ ಲಾಭಿಷೇಕಮ ನಡಿಗಡಿಗೊಡರ್ಚೆ ಕೋಮಲಾಂಗಂ ಬಳಲ್ದಪುದೆಂದು ಶಾಂತಿಸಲಿಲದಿನಭಿ ಷೇಕಮ ನೆಸಗಿಯುಂ, ಇಳಾತಳದೊಳೊಗೆದ ಕುಸುಮವಿಸರಂ ಕಠಿನಮೆಂದುಳಿದು ಸು ಲಲಿತಸಹಸ್ರದಳಕಮಲಮಂ ಸಮರ್ಪಿಸಿಯುಂ, ಅಮಳತನುಧೂಪಧೂಮಂ ತಾಗೆ ಕಪ್ಪಡ ರ್ದಪ್ಪುದೆಂದು ವಿಸರ್ಜಿಸಿ ಜಗಜಗಿಪ ಚಿದಗ್ನಿಯೊಳಿಕ್ಕಿದ ದಶೇಂದ್ರಿಯವಿಷಯದಶಾಂಗ ಧೂಪಮಂ ಬೀಸಿಯುಂ, ಪೇರುರಿಯ ನೀರಾಜನಮಂ ಬೆಳಗೆ ಬಿಸಿ ಮಸಗಿದಪ್ಪುದೆಂದು ವ ರ್ಜಿಸಿಜಗದ್ವರ್ತಿವಿಡಿದುಜ್ವಲಿಪ ಶಾಂತಪ್ರಕಾಶಮಾದಖಂಡಾತ್ಮಜ್ಯೋತಿಯಂಬೆಳಗಿಯುಂ,

---

ದೇಶಿಕೇಂದ್ರಂ- ಗುರುಶ್ರೇಷ್ಠನಾದ ಬಸವೇಶನು, ಶಿವಲಿಂಗೈಕ್ಯಾತಿಸೌಖ್ಯಂಬಡೆದು— ಶಿವಲಿಂಗ- ಶಿವಲಿಂಗದ, ಐಕ್ಯ- ಒಡನೆ ಸೇರುವದರಿಂದುಂಟಾದ, ಅತಿಸೌಖ್ಯಂಬಡೆದು, ಮರಪಿನಿಂದೆ- ಪರವಶಭಾವದಿಂದ ಇರ್ಪನೋ ? ಈತಂ, ಶಂಭುವಂ, ನೋಡುವೊಡೆ, ಆನಂದಾಶ್ರು- ಸಂತೋಷದಿಂದುಂಟಾದ ಕಣ್ಣೀರು, ಕಾಣಲ್ವಿಡದು- ಕಾಣಗೊಡಿಸದು, ಎನುತೆ, ಮನೋನೇತ್ರದಿಂ- ಮನಸ್ಸೆಂಬ ಕಣ್ಣಿನಿಂದ, ನೋಳ್ಪನೋ, ತೋಳ್ಗಳಿಂದೆ, ಅಪ್ಪಿದೊಡೆ, ಮೃದುಶಿವಾಂಗಕ್ಕೆ, ಕಂದು, ಅಪ್ಪುದು, ಎಂದು, ಅಂತರ್ಭಾವಸತ್ಕೋಮಲ ಭುಜದಿಂ— ಅಂತರ್ಭಾವ- ಮನಸ್ಥಿತಿಯೆಂಬ- ಸತ್- ಸವಿಾಚೀನವಾದ, ಕೋಮಲಭುಜದಿಂ- ಮೃದುವಾ ದ ತೋಳಿನಿಂದ, ಅಪ್ಪುವೊಡೆ- ಆಲಿಂಗಿಸುವದಕ್ಕೋಸ್ಕರ, ಒರಲ್ದು- ಪ್ರೀತಿಸಿ, ಇರ್ಪನೋ? ॥೧೪॥

ಅಂತುಂ, ಅಲ್ಲದೆಯುಂ, ಸೌಕುಮಾರ್ಯಂಬೆತ್ತು- ಕೋಮಲತ್ವವನ್ನು ಹೊಂದಿ, ಒಪ್ಪುವ, ಶಿವಲಿಂಗ ಕ್ಕೆ, ಕರತಳಾಸ್ತರಣಂ- ಹಸ್ತಪ್ರದೇಶವೆಂಬಗದ್ದುಗೆಯು, ಬೆಟ್ಟಿತು- ಕಠಿಣವು, ಅಕ್ಕುಂ, ಎಂದು, ಬಿಟ್ಟು, ಕಟ್ಟಳ್ಕರಿಂ- ಅತಿಪ್ರೀತಿಯಿಂದ, ಭಕ್ತಿ.........ಸನದೊಳ್— ಭಕ್ತಿ- ಭಕ್ತಿಯೆಂಬ, ಸೌರಭ- ಪರಿಮಳ ದಿಂದ, ಪರಿಮಿಳಿತ- ಕೂಡಿಕೊಂಡಿರುವ, ಮೃದುಲ- ಮೃದುವಾದ, ಹೃದಯನಳಿನ- ಹೃತ್ಕಮಲವೆಂಬ, ಸು ಖಾಸನದೊಳ್, ಮೂರ್ತಿಗೊಳಿಸಿಯುಂ, ವಿಮಲ ಶೀತೋಷ್ಣಜಲಾಭಿಷೇಕಮಂ, ಅಡಿಗಡಿಗೆ- ಭಾರಿಭಾರಿ ಗೂ, ಒಡರ್ಚೆ- ಮಾಡಲಾಗಿ, ಕೋಮಲಾಂಗಂ, ಬಳಲ್ದಪ್ಪುದು, ಎಂದು, ಶಾಂತಿಸಲಿಲದಿಂ- ಶಾಂತಿಯೆಂಬ ನೀರಿನಿಂದ, ಅಭಿಷೇಕಮಂ, ಎಸಗಿಯುಂ, ಇಳಾತಳದೊಳ್, ಒಗೆದ, ಕುಸುಮವಿಸರಂ, ಕಠಿನಂ, ಎಂದು, ಉ ಳಿದು- ಬಿಟ್ಟು, ಸುಲಲಿತಸಹಸ್ರದಳಕಮಲಮಂ- ಮನೋಹರವಾದ ಸಹಸ್ರಾರಕಮಲವನ್ನು, ಸಮರ್ಪಿಸಿ ಯುಂ, ಧೂಪಧೂಮಂ- ಧೂಪದಹೊಗೆಯು, ತಾಗೆ, ಅಮಳತನು, ಕಪ್ಪು, ಅಡರ್ದಪ್ಪುದು- ಹತ್ತುವದು, ಎಂದು, ವಿಸರ್ಜಿಸಿ, ಜಗಜಗಿಪ- ಅತಿಪ್ರಕಾಶಿಸುವ, ಚಿದಗ್ನಿಯೊಳ್- ಜ್ಞಾನವೆಂಬಬೆಂಕಿಯಲ್ಲಿ, ಇಕ್ಕಿದ, ದ ಶೇಂದ್ರಿಯವಿಷಯದಶಾಂಗಧೂಪಮಂ- ಹತ್ತು ಇಂದ್ರಿಯಗಳ ವ್ಯಾಪಾರವೆಂಬ ದಶಾಂಗಧೂಪವನ್ನು, ಬೀ ಸಿಯುಂ, ಪೇರುರಿಯ- ದೊಡ್ಡಜ್ವಾಲೆಯ, ನೀರಾಜನಮಂ- ಆ ರತಿಯನ್ನು, ಬೆಳಗೆ, ಬಿಸಿ- ಔಷ್ಣ್ಯವು, ಮಸಗಿದಪುದು- ಹೆಚ್ಚುವದು, ಎಂದು, ವರ್ಜಿಸಿ- ಬಿಟ್ಟು, ಜಗದ್ವರ್ತಿವಿಡಿದು- ಜಗತ್ತೆಂಬಬತ್ತಿಯನ್ನುಹೊಂ

ಕ್ಷಾರಾಮ್ಲಾದಿರಸಮಿಳಿತಾಹಾರೋಪಹಾರಂ ಕ್ರೂರಮಕ್ಕುಮೆಂದು ತೊಲಗಿಸಿ ಮಿಾಸ
ಲೋಸರಿಸದ ಮಧುರತರನಿಜಪ್ರಾಣನೈವೇದ್ಯಮಂ ನಿವೇದಿಸಿಯುಂ ಮಂತರರ್ಚನೆಯ ನಿಂ
ತು ತೇನತೇನಂ ನಿಮಿರ್ಚಲೆಂದು ಭಾವರತಿಯೊಳ್ಮೂಡಿ ಮುಳುಗಿ ॥ * * * *

ಕಂ ॥ ಪೊರಗಂ ಮರೆದಿರ್ಪನೊ ಕ । ಟ್ಟರಕದಿ ನಮರ್ದಪ್ಪೆ ಪುಳಕತತಿ ನಾಂಟುಗು
ಮೆ ॥ ನ್ನೆರೆಯನನೆನ ತಾತ್ಮನಿ ನ । ಳ್ಕರೊಳಪ್ಪ ಲೊಡರ್ಚಿದಂದವೋ ಬಗೆವನೆಯೊಳ್ ॥

ಕಂ ॥ ಆಲೋಕಿಪ ತಾನುಂ ತ । ನ್ನಾಲೋಕಮುಂ ಮೊಡನೆ ನುಡಿವ ತಾನುಂ ನುಡಿ
ಯುಂ ॥ ಲೀಲೆ ಮಿಗೆ ನೆನೆವ ತಾನುಂ । ಮೇಲೆನಿಸಿದ ಮನಮುಂ ಮಭವನೊಳ್ಬೆರೆದಿರವೋ ॥

ಕಂ ॥ ಕುಂದದ ಪೆರ್ಚ್ಚದ ಕಡೆಮೊದ । ಲೊಂದದಚಿತ್ಸಲಿಲಪೂರ್ಣ್ಣನಿರುಪಮಪರಮಾ ॥
ನಂದಮಯಶಂಭುಶರಧಿಯೊ । ಳಿಂದು ಕರಂ ಮುಳುಗಿದಂದವೋ ವೃಷಭೇಂದ್ರಂ ॥೧೭॥

ಕಂ ॥ ಸಕಲಕರಣಾಳಿ ಪರಿಚಾ । ರಕಜನಮಂ ತೊಲಗಿಸುತ್ತೆ ಸುಮನೋಗೃಹದೊ ॥

---

ದಿ, ಉಜ್ವಲಿಪ- ಪ್ರಕಾಶಿಸುವ, ಶಾಂತಪ್ರಕಾಶಂ- ತಂಪಾದ ಜ್ವಾಲೆಯುಳ್ಳದ್ದು, ಆದ, ಅಖಂಡಾತ್ಮಜ್ಯೋತಿಯಂ— ಅಖಂಡ- ಅವಿಚ್ಛಿನ್ನವಾದ, ಆತ್ಮಜ್ಯೋತಿಯಂ— ಪರಮಾತ್ಮಜ್ಯೋತಿಯನ್ನು, ಬೆಳಗಿಯುಂ, ಕ್ಷಾರಾಮ್ಲಾದಿರಸಮಿಳಿತಾಹಾರೋಪಹಾರಂ— ಕ್ಷಾರ- ಉಪ್ಪು, ಆಮ್ಲ- ಹುಳಿ, ಆದಿ- ಮೊದಲಾದ, ರಸ- ಷಡ್ರಸಗಳಿಂದ, ಮಿಳಿತ- ಕೂಡಿದ, ಆಹಾರ- ಆಹಾರವೆಂಬ, ಉಪಹಾರಂ- ಅರ್ಪಣದ್ರವ್ಯವು, ಕ್ರೂರಂ, ಅಕ್ಕುಂ, ಎಂದು, ತೊಲಗಿಸಿ- ಬಿಟ್ಟು, ಮಿಾಸಲ್- (ಇನ್ನೊಬ್ಬರಿಗರ್ಪಿಸದೇ ಇರುವಿಕೆಯು) ಓಸರಿಸದ- ಜಾರದ, ಮಧುರತರನಿಜಪ್ರಾಣನೈವೇದ್ಯಮಂ— ಮಧುರತರ- ಅತಿಸೀಯಾದ, ನಿಜ- ತನ್ನ, ಪ್ರಾಣ- ಪ್ರಾಣದ, ನೈವೇದ್ಯಮಂ, ನಿವೇದಿಸಿಯುಂ, ಅಂತರರ್ಚನೆಯಂ- ಮಾನಸಿಕಪೂಜೆಯನ್ನು, ಇಂತು, ತೇನತೇನಂ- ಮೇಲೆಮೇಲೆ, ನಿಮಿರ್ಚಲ್ ಎಂದು- ಮಾಡಬೇಕೆಂದು, ಭಾವರತಿಯೊಳ್- ಮನೋನುರಾಗದಲ್ಲಿ, ಮೂಡಿ, ಮುಳುಗಿ. * * * * * * * * * * * * * * * *

ಪೊರಗಂ- ಬಾಹ್ಯವನ್ನು, ಮರೆದು, ಇರ್ಪ್ಪನೊ, ಕಟ್ಟರಕದಿಂ- ಹೆಚ್ಚಾದ ಪ್ರೀತಿಯಿಂದ, ಎನ್ನ, ಎರೆಯನಂ- ವಲ್ಲಭನನ್ನು, ಅಮರ್ದು- ಸೇರಿ, ಅಪ್ಪೆ- ಆಲಂಗಿಸಲಾಗಿ, ಪುಳಕತತಿ- ರೋಮಾಂಚಸಮೂಹವು, ನಾಂಟುಗುಂ- ಚುಚ್ಚುವದು, ಎನುತೆ, ಬಗೆವನೆಯೊಳ್- ಮನೋಗೃಹದಲ್ಲಿ, ಆತ್ಮನಿಂ, ಅಳ್ಕರೊಳ್, ಅಪ್ಪಲ್, ಒಡರ್ಚಿದ, ಅಂದವೋ ! ... ... ... ... ... ॥೧೫॥

ಆಲೋಕಿಪ, ತಾನುಂ, ತನ್ನ, ಆಲೋಕಮುಂ- ದೃಷ್ಟಿಯೂ, ಒಡನೆ, ನುಡಿವ, ತಾನುಂ, ನುಡಿಯುಂ, ಲೀಲೆ- ವಿಲಾಸವು, ಮಿಗೆ, ನೆನೆವ, ತಾನುಂ, ಮೇಲ್- ಉತ್ಕೃಷ್ಟವು, ಎನಿಸಿದ, ಮನಮುಂ, ಅಭವನೊಳ್, ಬೆರೆದ, ಇರವೊ ಸ್ಥಿತಿಯೋ ! ... ... ... ... ॥೧೬॥

ವೃಷಭೇಂದ್ರಂ, ಕುಂದದ- ಕಡಮೆಯಾಗದ, ಪೆರ್ಚ್ಚದ- ಹೆಚ್ಚದೇ ಇರುವ, ಕಡೆಮೊದಲೊಂದದ- ಆದ್ಯಂತಶೂನ್ಯವಾದ, ಚಿತ್ಸಲಿ......ಶರಧಿಯೊಳ್— ಚಿತ್ಸಲಿಲ- ಜ್ಞಾನಾಮೃತದಿಂದ, ಪೂರ್ಣ್ಣ- ತುಂಬಿದ, ನಿರುಪಮ- ಎಣೆಯಿಲ್ಲದ, ಪರಮ- ಉತ್ಕೃಷ್ಟವಾದ, ಆನಂದಮಯ— ಸಂತೋಷಸ್ವರೂಪನಾದ, ಶಂಭು- ಶಿವನೆಂಬ, ಶರಧಿಯೊಳ್- ಸಮುದ್ರದಲ್ಲಿ, ಇಂದು- ಚಂದ್ರನು, ಮುಳುಗಿದ, ಅಂದವೋ ! ॥೧೭॥

ಅಕಳಂಕಂ- ಕಲೆಯಿಲ್ಲದ ಬಸವೇಶನು, ಸುಮನೋಗೃಹದೊಳ್- ಒಳ್ಳೆಯ ಮನಸ್ಸೆಂಬ ಮನೆಯಲ್ಲಿ; ಸಕಲಕರಣಾಳಿಪರಿಚಾರಕಜನಮಂ— ಸಕಲ- ಸಮಸ್ತವಾದ, ಕರಣ- ಇಂದ್ರಿಯಗಳೆಂಬ, ಪರಿಚಾರಕಜನಮಂ, ತೊಲಗಿಸುತ್ತೆ- ಕಳುಹಿಸುತ್ತ, ಸುಕರಶಿವಪತಿಯೊಳ್- ಸಮಾಚೀನನಾದ ಪರಶಿವನೆಂಬ ಗಂಡನೊಡ

ಳ್ಸುಕರಶಿವಪತಿಯೊ ಳೊಡವೆರೆದಕಳಂಕಂ ಸುಖದ ಸುಗ್ಗಿವಡೆದಿರ್ದ್ದಪನೊ। ॥೧೪॥

ವ॥ ಅಂತುಮಲ್ಲದೆಯುಮಖಿಳೇಂದ್ರಿಯದಮನಂಗೆಯ್ವುದೆ ಯಮ ಮಾಗೆಯುಮೆಲ್ಲೆಡೆಯೊಳ್ನಿಜಪ್ರಾಣಲಿಂಗಮಲ್ಲದೆ ಪೆರತರಿಯದ ನಿಯಮಮೆ ನಿಯಮ ಮಾಗಿಯುಂ ಯೋಗನಿದ್ರಾಸೀನತೆಯೆ ಸುಖಾಸನ ಮಾಗಿಯುಂ ನಿರಹಮ್ಮತೆಯಿಂ ನಿಜಮೃದುಶ್ವಾಸಮನೊಯ್ಯನೊಯ್ಯನೆ ಪೂರಿಪುದೆ ಪ್ರಾಣಾಯಾಮಮಾಗಿಯುಂ ನಿರ್ವಿಷಯಕರಣಾಂತರ್ಮುಖೀಕರಣವೃತ್ತಿಯೆ ಪ್ರತ್ಯಾಹಾರಮಾಗಿಯುಂ ಶಿವಜಂಗಮಸ್ವಪ್ನದರ್ಶನಮೆ ಮೂರ್ತಿಧ್ಯಾನ ಮಾಗಿಯುಂ ಮಿದನೆಡೆವಿಡದೆ ಧರಿಸಿರ್ಪುದೆ ಧಾರಣಮಾಗಿಯುಂ ನಿಶ್ಚಲನಿರುಪಾಧಿಕಭಕ್ತಿಲಬ್ಧಶಿವಯೋಗನಿದ್ರಾಸಮಾಧಿಯೆನಿರವಧಿಕಸುಖೋದಯಲಕ್ಷಣಾದ್ಭುತಸಮಾಧಿಯಾಗಿಯುಮಿಂತು ನಿಜಾನುಭಾವಾಷ್ಟಾಂಗಯೋಗಸಂಪತ್ತಿ ಯಳವಡಲೊಡನೆ ॥ * * * *

ಕಂ॥ ಪರವಶಭಾವಂ ಮಿಗೆ ಮ। ದ್ಗುರುನಿಶ್ಚಲನಿರ್ವಿಕಲ್ಪಸುಖದೊಳ್ಸಲೆ ಸಂ॥
ದಿರದೆಸೆವ ಪೊಂಗೊ ಚಕ್ರಾಂ। ತರಲಿಂಗಾಲೋಕಸೌಖ್ಯದಿಂ ದಿರ್ದ್ದಪನೊ॥ ... ॥೧೫॥

ನೆ, ಒಡವೆರೆದು- ಜೊತೆಯಲ್ಲಿ ಸೇರಿ, ಸುಖದ ಸುಗ್ಗಿವಡೆದು- ಆಧಿಕ್ಯವಂ ಹೊಂದಿ, ಇರ್ಪನೇ ! ॥೧೪॥

ಅಂತುಂ, ಅಲ್ಲದೆಯುಂ, ಅಖಿಳೇಂದ್ರಿಯದಮನಂಗೆಯ್ದುದೆ— ಅಖಿಳ- ಸಮಸ್ತವಾದ, ಇಂದ್ರಿಯ- ಕರಣಗಳ, ದಮನಂಗೆಯ್ದುದೆ- ನಿಗ್ರಹವಂ ಮಾಡಿದುದೇ, ಯಮಂ, ಆಗಿಯುಂ, ಎಲ್ಲೆಡೆಯೊಳ್- ಎಲ್ಲಾ ಸ್ಥಾನದಲ್ಲೂ, ನಿಜಪ್ರಾಣಲಿಂಗಂ- ತನ್ನ ಪ್ರಾಣಲಿಂಗವು, ಅಲ್ಲದೆ, ಪೆರತು- ಮತ್ತೊಂದು, ಅರಿಯದ- ತಿಳಿಯದ, ನಿಯಮಮೆ- ವ್ರತವೇ, ನಿಯಮಂ- ಆಗಿಯುಂ, ಯೋಗನಿದ್ರಾಸೀನತೆಯೆ- ಯೋಗನಿದ್ರೆಯಲ್ಲಿ ಕುಳಿತಿರುವಿಕೆಯೇ, ಸುಖಾಸನಂ, ಆಗಿಯುಂ, ನಿರಹಮ್ಮತೆಯಿಂ- ಗರ್ವವಿಲ್ಲದೇ ಇರುವಿಕೆಯಿಂದ, ನಿಜಮೃದುಶ್ವಾಸಮಂ- ಮೆಲ್ಲಗಿರುವ ತನ್ನ ಉಸುರನ್ನು, ಒಯ್ಯನೊಯ್ಯನೆ- ಮೆಲ್ಲಮೆಲ್ಲನೆ, ಪೂರಿಪುದೆ- ತುಂಬುವದೇ, ಪ್ರಾಣಾಯಾಮಂ, ಆಗಿಯುಂ, ನಿರ್ವಿಷಯಕರಣಾಂತರ್ಮುಖೀಕರಣವೃತ್ತಿಯೆ— ನಿರ್ವಿಷಯ- ವ್ಯಾಪಾರಶೂನ್ಯವಾದ, ಕರಣ- ಇಂದ್ರಿಯಗಳನ್ನು, ಅಂತರ್ಮುಖೀಕರಣ- ಒಳಮೊಗವಾಗಿ ಮಾಡತಕ್ಕ ವ್ಯಾಪಾರವೇ, ಪ್ರತ್ಯಾಹಾರಂ, ಆಗಿಯುಂ, ಶಿವಜಂಗಮಸ್ವಪ್ನದರ್ಶನಮೆ- ಶಿವಜಂಗಮರನ್ನು ಸ್ವಪ್ನದಲ್ಲಿ ನೋಡುವಿಕೆಯೇ, ಮೂರ್ತಿಧ್ಯಾನಂ, ಆಗಿಯುಂ, ಇದಂ, ಎಡೆವಿಡದೆ, ಧರಿಸಿ, ಇರ್ಪುದೇ, ಧಾರಣಂ, ಆಗಿಯುಂ, ನಿಶ್ಚಲನಿರುಪಾಧಿಕಭಕ್ತಿಲಬ್ಧಶಿವಯೋಗನಿದ್ರಾಸಮಾಧಿಯೆ— ನಿಶ್ಚಲ- ಚಂಚಲವಿಲ್ಲದ, ನಿರುಪಾಧಿಕ- ಉಪಾಧಿವಿಲ್ಲದ, ಭಕ್ತಿ- ಭಕ್ತಿಯಿಂದ, ಲಬ್ಧ- ಹೊಂದಲ್ಪಟ್ಟ, ಶಿವಯೋಗನಿದ್ರಾಸಮಾಧಿಯೆ- ಶಿವಯೋಗನಿದ್ರೆಯಿಂಬ ನಿಯಮವೇ, ನಿರವಧಿಕಸುಖೋದಯಲಕ್ಷಣಾದ್ಭುತಸಮಾಧಿ— ನಿರವಧಿಕ- ಹೆಚ್ಚಾದ, ಸುಖ- ಸುಖದ, ಉದಯ- ಆವಿರ್ಭಾವವೇ, ಲಕ್ಷಣ- ಚಿಹ್ನೆಯಾಗಿಯುಳ್ಳ, ಅದ್ಭುತ- ಆಶ್ಚರ್ಯಕರವಾದ, ಸಮಾಧಿ, ಆಗಿಯುಂ, ಇಂತು, ನಿಜಾನುಭಾವಾಷ್ಟಾಂಗಯೋಗಸಂಪತ್ತಿ— ನಿಜ- ಸ್ಥಿರವಾದ, ಅನುಭಾವ- ತಿಳುವಳಿಕೆಯಿಂದುಂಟಾದ, ಅಷ್ಟಾಂಗಯೋಗ- ಅಷ್ಟಾಂಗಯೋಗದ, ಸಂಪತ್ತಿ- ಐಶ್ವರ್ಯವು, ಅಳವಡಲ್, ಒಡನೆ * * *

ಮದ್ಗುರು-ನನ್ನ ಗುರುವು, ಪರವಶಭಾವಂ, ಮಿಗೆ, ನಿಶ್ಚಲನಿರ್ವಿಕಲ್ಪಸುಖದೊಳ್- ನಿಶ್ಚಂಚಲವಾಗಿಯೂ ಶಾಶ್ವತವಾಗಿಯೂ ಇರುವ ಸುಖದಲ್ಲಿ, ಸಲೆ, ಸಂದು, ಇರದೆ, ಎಸೆವ, ಪೊಂಗೊ-ಕ್ರಮವೋ! ಚಕ್ರಾಂತರಲಿಂಗಾಲೋಕಸೌಖ್ಯದಿಂದೆ ಚಕ್ರ-ಷಟ್ಚಕ್ರಗಳ, (ಆಧಾರ ಸ್ವಾಧಿಷ್ಠಾನ,ಮಣಿಪೂರಕ, ಅನಾಹತ,ವಿಶುದ್ಧ, ಆಜ್ಞೇಯ, ) ಅಂತರ- ಮಧ್ಯದಲ್ಲಿರುವ, ಲಿಂಗ- ಲಿಂಗಗಳನ್ನು, (ಆಚಾರಲಿಂಗ, ಗುರುಲಿಂಗ, ಶಿವಲಿಂಗ, ಜಂಗಮಲಿಂಗ, ಪ್ರಸಾದಲಿಂಗ, ಮಹಾಲಿಂಗ ) ಆಲೋಕ- ನೋಡುವ, ಸೌಖ್ಯದಿಂದೆ,ಇರ್ದ್ದಪನೋ ?

ಕಂ ॥ ನಲಿದುರ್ವ್ವಿ ಪೊಗಳೆ ವರ್ಣ್ಣಾ । ವಳಿಯೊತ್ತುಗು ವಮಲಕೋಮಲಾಂಗಮನೆಂದು ॥ ಜ್ವಲಮೃದುಲಹೃದಯವಿಕಸಿತ । ನಲಿನದೊಳೆ ತದರ್ದ್ಧರೂಪನಂ ಜಾನಿಪನೊ ॥೨೦॥

ಮ ॥ ನೆನೆಯುತ್ತಂ ನಿಡುನೇಹದಿಂ ಭ್ರಮರಕೀಟನ್ಯಾಯದಿಂ ತಾನೆ ತ । ದ್ಘನಲಿಂಗಾಕೃತಿ ಯಾಗೆ ತಪ್ಪುಗು ಮನಾದಿಸ್ವಾಮಿಭೃತ್ಯತ್ವ ಮೆಂ ॥ ದೆನಿಪೀಸಂಪದಮೆಂದುಮುಂನೆನೆದು ಮೇಣಂಜುತ್ತೆ ಹೃತ್ಪಂಕಜಾ । ಸನಲಿಂಗಕ್ಕೆ ಪೊದಳ್ದ ತನ್ಮನಮನು ನೀತಂತೆತ್ತುಸ್ಸೈ ತಿರ್ಪನೋ ॥ .. ... ... .. ... ... ॥೨೧॥

ಕಂ ॥ ಪತಿಯನೆ ನೆನೆನೆನೆದುದರಿಂ । ಸತಿ ತತ್ಪತಿ ಯಾಗೆಫಲಮದೇಂ ಪಡೆವಳೆ ತ ॥ ದ್ರತಿಸುಖಮ ನ್ನುತುಟೀಶ । ಸ್ಮೃತಿಯಿಂ ತಾ ನೀಶ ನಾಗೆಫಲಮೇಂ ಭಕ್ತಂ ॥ ॥೨೨॥

ಮ॥ ಸ್ರ॥ ಮನವಂ ದೂದಟ್ಟದೆಂ ಮತ್ಪ್ರಿಯನ ಪೊರೆಗೆ ಮುನ್ನಂ ಸಪತ್ನೀತ್ವಮಂ ತಾ ।ಳ್ದು ನಿತಾಂತಂ ಕೂಡಿದ ತ್ತಕ್ಕಟ ಮನ ಮವನೊ ಳ್ನಪ್ಪಿದೆಂದೊಪ್ಪದಿಂ ಪಾ॥ ಣಿನಿ ಪೇಳ್ದಂ ಸೂತ್ರ ಮೆಂತಪ್ಪುಗುಮೆ ಬಳಿಕದಂತಾದೊಡಂ ಗಂಡರುಂ ಪೆ। ಣ್ಣೆನಿಸು ತ್ತಂಕೂಡುವಸ್ಮತ್ಪತಿ ಗಿದು ವಧು ಮಾಗಿರ್ಪ್ಪುದಾಶ್ಚರ್ಯಮೇ ದಲ್ ॥ ... ॥೨೩॥

---

ನಲಿದು, ಉರ್ವ್ವಿ- ಉರ್ವ್ವಿ, ಪೊಗಳೆ, ಅನುಳಕೋಮಲಾಂಗನಂ, ವರ್ಣಾವ- ಅಕ್ಷರಪಙ್ಕ್ತಿಯು, ಒತ್ತುಗುಂ, ಎಂದು, ಉಜ್ವಲಮೃದುಲಹೃದಯವಿಕಸಿತನಲಿನದೊಳೆ— ಉಜ್ವಲ- ಪ್ರಕಾಶಮಾನವಾದ, ಮೃದುಲ- ಕೋಮಲವಾದ, ಹೃದಯ- ಹೃದಯವೆಂಬ, ವಿಕಸಿತ- ಅರಳಿದ, ನಳಿನದೊಳೆ- ಕಮಲದಲ್ಲಿ, ತದರ್ಧರೂಪನಂ- ಆ ಪರಬ್ರಹ್ಮಸ್ವರೂಪನನ್ನು, ಜಾನಿಪನೊ- ಧ್ಯಾನಿಸುವನೋ. ... ... ॥೨೦॥

ನೆನೆದು,ನಿಡುನೇಹದಿಂ-ಹೆಚ್ಚಾದಸ್ನೇಹದಿಂದ, ನೆನೆಯುತ್ತಂ, ಭ್ರಮರಕೀಟನ್ಯಾಯದಿಂ,(ಕೆಡಜದಮೂತಿಯಿಂದ ಆಗಾಗ್ಯೆ ಕುಕ್ಕಲ್ಪಟ್ಟು ಭೀತಿಯಿಂದ ಅದರ ಸ್ಮರಣೆಯಲ್ಲೇ ಇರುವ ಅವರೆಯಹುಳವು ಕಾಲಕ್ರಮೇಣ ತಾನೂ ಕೆಡಜನೇ ಆಗುವಂತೆ ) ತಾನೆ, ತದ್ಘನಲಿಂಗಾಕೃತಿ- ಆ ಉತ್ಕೃಷ್ಟವಾದ ಲಿಂಗದ ಆಕಾರವು, ಆಗೆ, ಅನಾದಿಸ್ವಾಮಿಭೃತ್ಯತ್ವಂ- ಅನಾದಿಸ್ವಾಮಿಯು ಸೇವಕತನವು, ಎನಿಪ, ಈ ಸಂಪದಂ- ಈ ಸಂಪತ್ತು, ಎಂದುಮುಂ- ಯಾವಾಗಲೂ, ತಪ್ಪುಗುಂ- ತಪ್ಪುವದು ಎಂದು, ನೆನೆದು, ಮೇಣ್, ಅಂಜುತ್ತೆ, ಹೃತ್ಪಂಕಜಾಸನಲಿಂಗಕ್ಕೆ- ಹೃದಯಕಮಲವೇ ಪೀಠವಾಗುಳ್ಳಲಿಂಗಕ್ಕೆ, ತನ್ಮನಮಂ, ಅಂತು, ತೆತ್ತು-ಕೊಟ್ಟು, ಸ್ಥೈತಿರ್ಪನೋ-ಸುಮ್ಮನೇ ಇರುವನೋ ? ... ... ... ... ॥೨೧॥

ಪತಿಯನೆ- ಗಂಡನನ್ನು, ನೆನೆನೆನೆದುದರಿಂ, ಸತಿ- ಪತ್ನಿಯು, ತತ್ಪತಿ- ಆ ಗಂಡನೇ, ಆಗೆ, ತದ್ರತಿಸುಖಮಂ- ಆ ಪತಿಯ ಸಂತತಸುಖವನ್ನು, ಪಡೆವಳೆ? ಅದೇಂಫಲಂ? ಅಂತುಟು- ಹಾಗೆ, ಈಶಸ್ಮೃತಿಯಿಂ- ಶಿವಧ್ಯಾನದಿಂದ, ಭಕ್ತಂ- ಭಕ್ತನು, ತಾಂ, ಈಶಂ, ಆಗೆ, ಏಂಫಲಂ ? ... ... ॥೨೨॥

ಮತ್ಪ್ರಿಯನ- ನನ್ನ ವಲ್ಲಭನಾದ ಶಿವನ, ಪೊರೆಗೆ- ಸಮೀಪಕ್ಕೆ, ಮನಮಂ, ದೂದಟ್ಟಿದೆಂ- ಕುಂಟಣಿತನಕ್ಕೆ ಕಳುಹಿಸಿದೆನು, ಮುನ್ನಂ- ಮುಂಚೆ, ಮನಂ, ಸಪತ್ನೀತ್ವಮಂ- ಸವತಿಯತನವನ್ನು, ತಾಳ್ದು, ನಿತಾಂತಂ- ಅತ್ಯಂತವಾಗಿ, ಅವನೊಳ್, ಕೂಡಿದತ್ತು, ಅಕ್ಕಟಾ ! ಇದು- ಈ ಮನಸ್ಸು, ನಪ್ಪು- ನಪುಂಸಕವು, ಎಂದು, ಒಪ್ಪದಿಂ, ಪಾಣಿನಿ- ಪಾಣಿನ್ಯಾಚಾರ್ಯನು, ಪೇಳ್ದಂ, ಸೂತ್ರಂ, ತಪ್ಪುಗುಮೆಯೇ, ಬಳಿಕೆ,ಅದು, ಅಂತಾದೊಡಂ, ಗಂಡರಂ- ಪುರುಷರನ್ನು, ಪೆಣ್- ಹೆಣ್ಣು, ಎನಿಸುತ್ತಂ, ಕೂಡುವ, ಅಸ್ಮತ್ಪತಿಗೆ-ನನ್ನಗಂಡನಿಗೆ, ಇದು- ಈ ಮನಸ್ಸು, ವಧುವಾಗಿ- ಹೆಂಡತಿಯಾಗಿ, ಇರ್ಪ್ಪುದು, ದಲ್, ಆಶ್ಚರ್ಯಮೇ? ... ... ... ... ... ... ॥೨೩॥

ಕಂ ॥ ಎಂದೆಣಿಸು ತೊಡನೆ ತನ್ನೆಡೆ । ವಂದ ಮನಂ ಮಗುಳ್ದು ಪಿರಿದು ಬೆರಸದಮು ನ್ನಂ ॥ ಕುಂದದೆ ನಿಜಪತಿಯೊಳ್ಸಲೆ । ಸಂದಿಲ್ಲದೆ ನೆರೆಯ ಲೆಳಸಿ ಪುರುಡಿಸುತಾಗಳ್ ॥೨೪॥

ಚಂ ॥ ಹೃದಯಸರೋಜ ಮೆಂಬ ಮಣಿಮಂಚದೊಳೊಯ್ಯನೆ ಭಕ್ತಿದೂತಿ ಪಾ । ಸಿದನಿಜನಿಷ್ಠೆಯೆಂಬ ಮೃದುತಲ್ಪದೊಳುಜ್ವಲಿಪಾತ್ಮನಾಥನಂ ॥ ಸದಮಳಚಿತ್ಪ್ರಭಾ ಕ್ಷಿಯೊಳ್ ನೋಡುತೆ ಹುಂಕೃತಿ ಲಜ್ಜೆ ಪಿಂಗೆ ತ । ಳ್ವದೆ ದೃಢಭಾವಬಾಹುವಿನೊಳಪ್ಪ ತಿವಂ ನೆರೆದೊಪ್ಪವಂದವೋ ॥ ... ... ... ... ॥೨೫॥

ಚಂ॥ ನೆನೆವೊಡೆ ನಿಳ್ಕ ದೀಕ್ಷಿಪೊಡೆ ಸಿಲ್ಕದ ಕೀರ್ತಿಪೊಡೊಲ್ದು ಶಕ್ಯವೆಂ। ದೆನಿಸ ದ ಕೂಡಲುಜ್ಜುಗಿಸೆ ತಳ್ಕಗೆ ಸಲ್ಲದ ದಿವ್ಯಲಿಂಗಮಂ ॥ ಘನತರಭಕ್ತಿಯಿಂ ನೆನೆದಭೀಕ್ಷಿಸಿ ಕೀರ್ತಿಸಿಕೂಡಿ ಮಾಣದಾ। ನೆನವು ನಿರೀಕ್ಷಣಾದಿನುತಿಕೂಟಮಿವೆಂಬವಡಂಗೆ ಲಿಂಗದೊಳ್ ॥

ಕಂ ॥ ತಾ ನೆಂಬುದಳಿದು ಪೊರಗೊಳ । ಗಾನುಂದಮೆ ತೀವಿ ಬಾಹ್ಯರತಿ ಯರೆತು ಶಿ ವಂ ॥ ತಾನಾದನೊ ತಾನೇ ಶಿವ । ನೇನಾದನೊ ಬಸವ ನಮಮ ಬಣ್ಣಿಪೊಡಳವೆ ॥೨೭॥

ಕಂ ॥ ನೊಲ್ಲಿಡಬಾರದ ಪವಣಿಸೆ । ನಿಲ್ಲದ ತಣಿವಾದುದೊಲ್ಲೆನಿಸ ದಪೆರತೊಂ ॥ ದೆಲ್ಲಿ ಯು ಮತಿಶಯ ಮಿಲ್ಲದ । ಸಲ್ಲಲಿತಶಿವೈಕ್ಯಸೌಖ್ಯಮಂ ತಾಳ್ದಿಹನೊ॥ ... ॥೨೮॥

---

ಎಂದು, ಎಣಿಸುತೆ, ಒಡನೆ, ತನ್ನ, ಎಡೆವಂದ- ಸಮೀಪಕ್ಕೆಬಂದ, ಮನಂ, ಮಗುಳ್ದು- ಪುನಃ, ಪರಿ ದು, ಬೆರಸದ, ಕೊಡದ, ಮುನ್ನಂ- ಮುಂಚೆ, ಕುಂದದೆ, ನಿಜಪತಿಯೊಳ್- ತನ್ನಗಂಡನಲ್ಲಿ, ಸಲೆ, ಸಂದಿಲ್ಲದೆ- ಭೇದವಿಲ್ಲದೆ, ನೆರೆಯಲ್- ಕೂಡುವದಕ್ಕೋಸ್ಕರ, ಎಳಸಿ- ಅಪೇಕ್ಷಿಸಿ, ಪುರುಡಿಸುತೆ, ನಾನುಮುಂದು ತಾನು ಮುಂದು ಎಂದು ಸ್ಪರ್ಧೆಮಾಡುತ್ತ, ಆಗಳ್. ... ... ... ॥೨೪॥

ಇವಂ, ಭಕ್ತಿದೂತಿ- ಭಕ್ತಿಯೆಂಬ ಕುಂಟಣಿಯು, ಹೃದಯಸರೋಜಂ, ಎಂಬ, ಮಣಿಮಂಚದೊಳ್, ಒಯ್ಯನೆ, ಪಾಸಿದ, ನಿಜನಿಷ್ಠೆ, ಎಂಬ, ಸ್ಥಿರವಾದ ಶ್ರದ್ಧೆಯೆಂಬ, ಮೃದುತಲ್ಪದೊಳ್- ಕೋಮಲವಾದ ಹಾಸಿಗೆಯಲ್ಲಿ, ಉಜ್ವಲಿಪ, ಆತ್ಮನಾಥನಂ- ತನ್ನ ವಲ್ಲಭನನ್ನು, ಸದಮಳಚಿತ್ಪ್ರಭಾಕ್ಷಿಯೊಳ್- ನಿರ್ಮಲವಾದ ಜ್ಞಾನದೃಷ್ಟಿಯಿಂದ, ನೋಡುತೆ, ಹುಂಕೃತಿ- ಹುಂಕಾರವು, ಲಜ್ಜೆ- ನಾಚಿಕೆಯು,ಪಿಂಗೆ- ಹಿಂದೆಗೆಯಲಾಗಿ, ತಳ್ವದೆ- ತಪ್ಪದೆ, ದೃಢಭಾವಬಾಹುವಿನೊಳ್- ನಿಶ್ಚಂಚಲವಾದ ಮನಸ್ಸೆಂಬ ತೋಳಿನಿಂದ, ಅಪ್ಪುತೆ- ಆಲಿಂ ಗಿಸುತ್ತ, ನೆರೆದು- ಸೇರಿ, ಒಪ್ಪುವ, ಅಂದವೋ ? ... ... ... ॥೨೫॥

ನೆನೆವೊಡೆ- ಸ್ಮರಿಸುವದಕ್ಕೆ, ನಿಳ್ಕದ- ಗೋಚರಿಸದ, ಈಕ್ಷಿಪೊಡೆ, ಸಿಲ್ಕದ, ಒಲ್ದು, ಕೀರ್ತಿಪೊಡೆ, ಶ ಕ್ಯಂ, ಎನಿಸದ, ಕೂಡಲ್, ಉಜ್ಜುಗಿಸೆ, ತಳ್ಕಗೆ- ಆಲಿಂಗನೆಗೆ, ಸಲ್ಲದ, ದಿವ್ಯಲಿಂಗಮಂ, ಘನತರಭಕ್ತಿಯಿಂ, ನೆನೆದು, ಅಭೀಕ್ಷಿಸಿ- ನೋಡಿ, ಕೀರ್ತಿಸಿ, ಕೂಡಿ, ಮಾಣದೆ- ಬಿಡದೆ, ಆ ನೆನವು, ನಿರೀಕ್ಷಣಾದಿನುತಿಕೂಟಂ- ನೋಟಮುಂತಾದಕಾರ್ಯವು ಸ್ತುತಿಯು ಕೂಡುವಿಕೆಯು, ಎಂಬ, ಇವು, ಲಿಂಗದೊಳ್, ಅಡಂಗೆ. ॥೨೬॥

ತಾಂ, ಎಂಬುದು, ಅಳಿದು, ಪೊರಗೆ, ಒಳಗೆ, ಆನುಂದಮೆ, ತೀವಿ, ಬಾಹ್ಯರತಿ- ಬಹಿಃಕ್ರೀಡೆಯು, ಅರೆತು- ನಾಶವಾಗಿ, ಶಿವಂ, ತಾಂ, ಆದನೋ ಏನೋ, ತಾನೇ, ಶಿವಂ, ಆದನೋಯೇನೋ, ಅಮಮ! ಬಣ್ಣಿ ಪೊಡೆ, ಅಳವೆ- ಶಕ್ಯವೇ ? ... ... ... ... ॥೨೭॥

ನೊಲ್ಲಿಡಬಾರದ- ವಾಗತೀತನಾದ, ಪವಣಿಸಿ-ಪ್ರಮಾಣಿಸಿ, ನಿಲ್ಲದ, ತಣಿವು-ತೃಪ್ತಿಯು, ಆದುದು, ಬೇ ಡ, ಎನಿಸದ, ಎಲ್ಲಿಯುಂ, ಪೆರತೊಂದು-ಮತ್ತೊಂದು, ಅತಿಶಯಂ-ಅಧಿಕವಾದವಸ್ತುವು, ಇಲ್ಲದ, ಸಲ್ಲಲಿತಶಿವೈ ಕ್ಯ ಸೌಖ್ಯಮಂ-ಮನೋಹರನಾದ ಶಿವನೊಡನೆ ಬೆರೆಯುವದರಿಂದುಂಟಾದಸೌಖ್ಯವನ್ನು, ತಾಳ್ದು, ಇಹನೊ?

ಕಂ ॥ ದ್ವೈತಾದ್ವೈತಭ್ರಮಿತರ । ಮಾತು ಮನಂಬುಗದ ನಿಗಮತತಿ ಯರಿಯದ
ವಿ ॥ ಶ್ವಾತೀತವಿಮಳಲಿಂಗದೊ । ಳೋತೊಡಗೂಡಿರ್ದ ಭಾವವೋವೃಷಭೇಂದ್ರಂ ॥ ॥೨೯॥

ವ ॥ ಅಂತುಮಲ್ಲದೆಯುಂ ॥ ಚಂ ॥ ರಮಣ ನಗಲ್ಕೆ ಯಿಲ್ಲ ದೊಡ ನಾವಗ ಮೊಪ್ಪಿರೆ
ಯುಂ ತದಂಗಸಂ । ಗಮಸುಖಮಂವರಾಂಗಿ ವಿಜನಸ್ಥಳದೊ ಳ್ಪಡೆವಂತೆ ತನ್ನೊಳಿಂ ॥ ಪ
ಮರ್ದ್ದ ವಿಯುಕ್ತ ನಾಗದೆ ಶಿವಂ ಸಲೆವರ್ತ್ತಿಸಿಯುಂ ತದೀಯಯೋ । ಗಮಹಿತಸೌಖ್ಯ
ಮಂಕರಣ ಮಿಲ್ಲದವಸ್ಥೆಯೊ ಳೊಂದಿದಂದವೊ ॥ ... ... ... ॥೩೦॥

ವ ॥ ಮತ್ತಂ ॥ ಮ ॥ ಸ್ರ ॥ ಬಲವದ್ಭಕ್ತಾಂಗ ಮಂಗಂ ತನ ಗೆನಿಪ ಭವಂಗಂಗ
ಮಂ ಭಕ್ತಸತ್ಪ್ರಾ । ಣಲಸತ್ಪ್ರಾಣಂಗೆ ಮೇಣ್ಪ್ರಾಣಮ ನಮಳಿನಭಕ್ತಾಕ್ಷ ಮಾತ್ಮಾ
ಕ್ಷ ಮಾಗಿ ॥ ರ್ಪಲಲಾ ಟಾಕ್ಷಂಗೆನೈಜಾಕ್ಷಮ ನಳವಡಿಸುತ್ತೀಯುತಾನಂದಮಂ ತೊ । ಳ್ದೊ
ಲವಿಂತದ್ಭಾವಮಂ ತಾಂಮರೆದು ಬೆರೆದನೋ ಲಿಂಗದೊ ಳ್ಶ್ರೀವೃಷೇಂದ್ರಂ ॥ ॥೩೧॥

ಕಂ ॥ ಪರಿಕಿಪೊಡೆ ವಾಙ್ಮನಕಗೋ । ಚರ ಮಿದುಶಿವಯೋಗನಿದ್ರೆ ಯೆಂದೀ ತೆರದಿಂ
ವರಚನ್ನಬಸವ ನಾಬಸ । ವರಸನ ಬಗೆಗಂಡು ಪೊಗಳುತಿರ್ಪ್ಪನ ಮಾಗಳ್ ॥ ॥೩೨॥

---

ವೃಷಭೇಂದ್ರಂ, ದ್ವೈತಾದ್ವೈತಭ್ರಮಿತರ- ದ್ವೈತಅದ್ವೈತವೆಂಬದಾಗಿ ಭ್ರಾಂತರಾದವರ, ಮಾತು, ಮನಂಬುಗದ- ಮನಸ್ಸನ್ನು ಪ್ರವೇಶಮಾಡದ, ನಿಗಮತತಿ- ವೇದಸಮುದಾಯವು, ಅರಿಯದ, ವಿಶ್ವಾತೀತವಿಮಳಲಿಂಗದೊಳ್—ವಿಶ್ವ- ಪ್ರಪಂಚವನ್ನು, ಅತೀತ- ಅತಿಕ್ರಮಿಸಿರುವ, ವಿಮಲ- ನಿರ್ಮಲವಾದ, ಲಿಂಗದೊಳ್, ಓತು- ಪ್ರೀತಿಸಿ, ಒಡಗೂಡಿ, ಇರ್ದ್ದ, ಭಾವವೋ! ... ... ... ॥೨೯॥

ಅಂತುಂ, ಅಲ್ಲದೆಯುಂ. * * * * * * * * * * * * * *

ವರಾಂಗಿ- ಶ್ರೇಷ್ಠವಾದ ಅಂಗವುಳ್ಳಸ್ತ್ರೀಯು, ರಮಣನ- ಕಾಂತನ, ಅಗಲ್ಕೆ- ವಿಯೋಗವು, ಇಲ್ಲದೆ, ಒಡಂ- ಕೊಡಲೆ, ಆವಗಂ, ಒಪ್ಪಿರೆಯುಂ, ತದಂಗಸಂಗಮಸುಖಮಂ— ತತ್- ಆ ಕಾಂತನ, ಅಂಗ- ಶರೀರದ, ಸಂಗಮ- ಕೂಡುವಿಕೆಯಿಂದುಂಟಾದ, ಸುಖಮಂ, ವಿಜನಸ್ಥಲದೊಳ್- ನಿರ್ಜನಪ್ರದೇಶದಲ್ಲಿ, ಪಡೆವಂತೆ, ತನ್ನೊಳ್, ಇಂಪು, ಅಮರ್ದ್ದ, ಶಿವಂ, ವಿಯುಕ್ತಂ- ಭಿನ್ನನು, ಆಗದೆ, ಸಲೆ, ವರ್ತ್ತಿಸಿಯುಂ- ಇದ್ದಾಗ್ಯೂ, ಕರಣಂ- ಇಂದ್ರಿಯವು, ಇಲ್ಲದ, ಅವಸ್ಥೆಯೊಳ್, ತದೀಯಯೋಗಮಹಿತಸೌಖ್ಯಮಂ—ತದೀಯ- ಆಶಿವನ, ಯೋಗ- ಸಂಬಂಧದಿಂದುಂಟಾದ, ಮಹಿತ- ಪೂಜ್ಯವಾದ, ಸೌಖ್ಯಮಂ, ಒಂದಿದ, ಅಂದವೊ. ॥೩೦॥

ಶ್ರೀ ವೃಷೇಂದ್ರಂ, ಬಲವದ್ಭಕ್ತಾಂಗಂ- ಬಲವಿಶಿಷ್ಟವಾದ ಭಕ್ತನಶರೀರವು, ತನಗೆ, ಅಂಗಂ, ಎನಿಪ, ಅಭವಂಗೆ, ಅಂಗಮಂ, ಭಕ್ತಸತ್ಪ್ರಾಣಲಸತ್ಪ್ರಾಣಂಗೆ— ಭಕ್ತ- ಭಕ್ತನ, ಸತ್- ಸಮೀಚೀನವಾದ, ಪ್ರಾಣ- ಪ್ರಾಣವೇ, ಲಸತ್ಪ್ರಾಣಂಗೆ- ಪ್ರಕಾಶಮಾನವಾದ ಪ್ರಾಣವಾಗುಳ್ಳಶಿವನಿಗೆ, ಮೇಣ್, ಪ್ರಾಣಮಂ, ಅಮಳಿನಭಕ್ತಾಕ್ಷಂ- ನಿರ್ಮಲವಾದಭಕ್ತನ ಇಂದ್ರಿಯವು, ಆತ್ಮಾಕ್ಷಂ- ತನ್ನ ಇಂದ್ರಿಯವು, ಆಗಿ, ಇರ್ಪ ಲಲಾಟಾಕ್ಷಂಗೆ- ಫಾಲನೇತ್ರವುಳ್ಳ ಶಿವನಿಗೆ, ನೈಜಾಕ್ಷಮಂ- ಸ್ವಕೀಯವಾದ ಇಂದ್ರಿಯವನ್ನು, ಅಳವಡಿಸುತ್ತ- ಅನುರೂಪಗೊಳಿಸಿ, ಈಯುತೆ, ಒಲವಿಂ, ಆನಂದಮಂ, ತೊಳ್ದು- ತುಳಿದು, ತದ್ಭಾವಮಂ- ಆ ಶಿವನ ಭಾವವನ್ನು, ತಾಂ, ಮರೆದು, ಲಿಂಗದೊಳ್, ಬೆರೆದನೋ ! ... ... ... ॥೩೧॥

ಇದು, ಶಿವಯೋಗನಿದ್ರೆ- ಈ ಪರಶಿವನ ಸಂಬಂಧದಿಂದುಂಟಾದ ನಿದ್ರೆಯು, ಪರಿಕಿಪೊಡೆ, ವಾಙ್ಮನಕೆ- ವಾಕ್ಕಿಗೂ ಮನಸ್ಸಿಗೂ, ಅಗೋಚರಂ, ಎಂದು, ಈ ತೆರದಿಂ, ವರಚನ್ನಬಸವಂ, ಆ ಬಸವರಸನ, ಗಂಡು- ಮನಸ್ಸನ್ನು ತಿಳಿದು, ಪೊಗಳುತೆ, ಇರ್ಪಿನಂ, ಆಗಳ್. ... ... ... ॥೩೨॥

ಮ॥ ಸ್ರ॥ ನಲಿದೋರ್ವಂ ಜಂಗಮಾರ್ಯಂ ಬರುತೆ ಬಸವಸಂದರ್ಶನೋತ್ಕಂಠೆಯಿಂ ತ| ನ್ನಿಲಯದ್ವಾರಕ್ಕೆ ಬಂದಲ್ಲಿಯ ಪಡಿಯರರಿಂ ಕೇಳ್ದು ತದ್ಯೋಗನಿದ್ರಾ ॥ ಚಲಭಾವಸ್ಫೂರ್ತಿಯಂ ತಾಂ ಮುಗುಳ ಲೊಡನಣಂ ಜಂಗಮಪ್ರಾಣನಿಷ್ಠೋ । ಜ್ವಲತಾಸಂಪತ್ತಿಭಾಸ್ವದ್ಬಸವ ನಸು ವದೊಂದಾಗಿ ಪೋದತ್ತನೂನಂ ॥ ... ... ॥೩೩॥

ವ॥ಅಗಳಲ್ಲಿರ್ದ ಪರಿಚಾರಕಜನ ಮದಂ ಕಂಡು ಪೆಳರ್ದು ತಳಮಳಗುಗೊಂಡು ಸಂದಣಿಸುವಿನ ಮಾಸಂಖ್ಯಾಸಮಯೋಚಿತಲಿಂಗಾರ್ಚನೆಗೆ ಪರಮಮಾಹೇಶ್ವರ ರ್ಸಾಲ್ವಿಡಿದು ಕುಳ್ಳಿರ್ದು ಬಸವನಿರವಂ ನಿರೀಕ್ಷಿಸಿ ಪಿರಿದದ್ಭುತಮ ನಾಳ್ದದೇಂ ಪ್ರಸ್ತುತ ಮಿಂತಪ್ಪುದಕ್ಕೆ ಕಾರಣ ಮಾವು ದದ ನರಿಯಲ್ವೇಳ್ಕು ಮೆಂದು ಮಂತಣಂಗೊಂಡು ಸಕಲಕರಣಿಕದ್ವಾರಪಾಲಕಾದಿಗಳಂ ಬರಿಸಿ ವಿಚಾರಂಗೆಯ್ದು ಬಸವಬಂಡಾರದ ಕವಳಿಗೆಗಳಂತರಿಸಿ ॥ * * *

ಮ ॥ ಸ್ರ॥ ಬಸವಂ ಕೈಕೊಂಡ ಶೀಲಸ್ಥಿತಿಯ ಶಪಥಗೀತಂಗಳಂ ನೋಡಿ ಮಾಕಾ । ಳಸೆ ಮೇಣ್ತಾಂ ಕಾಣಲಕ್ಕುಂ ಬಳಯಿ ನೆಮಗೆನುತ್ತೆಂದು ಪೇಳ್ವಾಗಳೆಯ್ತಂ॥ದೊಸೆದಾಮಾಹೇಶ್ವರೌಘಕ್ಕೆರಗಿ ಮ ಗಿಯುತಂ ಪಾಣಿಪದ್ಮಂಗಳಂ ಬೋ । ಧಸುಧಾವಾರಾ ಕರಂ ಚನ್ನಬಸವವಿಭು ವಿಜ್ಞಾಪನಂಗೆಯ್ದನಾಗಳ್ ॥ ... ... ॥೩೪॥

---

ಓರ್ವಂಜಂಗಮಾರ್ಯಂ- ಒಬ್ಬ ಜಂಗಮಶ್ರೇಷ್ಠನು, ಬಸವಸಂದರ್ಶನೋತ್ಕಂಠೆಯಿಂ- ಬಸವನನ್ನು ನೋಡಬೇಕೆಂಬ ಕುತೂಹಲದಿಂದ, ನಲಿದು, ಬರುತೆ, ತನ್ನಿಲಯದ್ವಾರಕ್ಕೆ- ಆ ಬಸವರಾಜನಮನೆಯ ಬಾಗಿಲಿಗೆ, ಬಂದು, ಅಲ್ಲಿಯ, ಪಡಿಯರರಿಂ- ಆ ಬಾಗಲಿನಕಾವಲಿನವರಿಂದ, ತದ್ಯೋಗನಿದ್ರಾಚಲಭಾವಸ್ಫೂರ್ತಿಯಂ— ತತ್- ಆ ಬಸವನ, ಯೋಗನಿದ್ರಾ- ಯೋಗನಿದ್ರೆಯಲ್ಲಿ, ಅಚಲ- ನಿಶ್ಚಂಚಲವಾದ, ಭಾವ-ಮನಸ್ಸಿನ, ಸ್ಫೂರ್ತಿಯಂ- ಸ್ಫುರಣವನ್ನು, ಕೇಳ್ದು, ತಾಂ, ಮುಗುಳಲ್, ಹಿಂತಿರುಗಲಾಗಿ, ಒಡನೆ, ಅಣಂ, ಜಂಗಮ......ಬಸವನ— ಜಂಗಮ- ಜಂಗಮರೇ, ಪ್ರಾಣ- ಪ್ರಾಣವು, ಎಂಬ, ನಿಷ್ಠಾ- ಶ್ರದ್ಧೆಯಿಂದುಂಟಾದ, ಉಜ್ವಲತಾ- ಪ್ರಕಾಶಿತ್ವವೆಂಬ, ಸಂಪತ್ತಿ- ಐಶ್ವರ್ಯವಿಂದ, ಭಾಸ್ವತ್- ಪ್ರಕಾಶಿಸುವ, ಬಸವನ, ಅಸು-ಪ್ರಾಣವು, ಅದು, ಅನೂನಂ- ಅಧಿಕವಾಗಿ, ಒಂದಾಗಿ, ಪೋದತ್ತು. ... ... ॥೩೩॥

ಆಗಳ್, ಅಲ್ಲಿ, ಇರ್ದ, ಪರಿಚಾರಕಜನಂ, ಅದಂ, ಕಂಡು, ಪೆಳರ್ದು- ಭಯಪಟ್ಟು, ತಳಮಳಗುಗೊಂಡು- ಕಳವಳವನ್ನು ಹೊಂದಿ, ಸಂದಣಿಸುವಿನಂ- ಗುಂಪಾಗುವದರೊಳಗೆ, ಅಸಂಖ್ಯಾಸಮಯೋಚಿತಲಿಂಗಾರ್ಚನೆಗೆ, ಪರಮಮಾಹೇಶ್ವರರ್, ಸಾಲ್ವಿಡಿದು, ಕುಳ್ಳಿರ್ದು, ಬಸವನ, ಇರವಂ, ನಿರೀಕ್ಷಿಸಿ, ಪಿರಿದು, ಅದ್ಭುತಮಂ, ಆಳ್ದು, ಪ್ರಸ್ತುತಂ- ಪ್ರಕೃತಕಾಲಸ್ಥಿತಿಯು, ಇದೇಂ? ಇಂತು, ಅಪ್ಪುದಕ್ಕೆ, ಕಾರಣಂ, ಆವುದು ? ಅದಂ, ಅರಿಯಲ್ವೇಳ್ಕುಂ, ಎಂದು, ಮಂತಣಂಗೊಂಡು, ಸಕಲಕರಣಿಕದ್ವಾರಪಾಲಾದಿಗಳಂ- ಎಲ್ಲಾ ಮುತ್ಸದ್ದಿಗಳು ದ್ವಾರಪಾಲಕರು ಮೊದಲಾದವರನ್ನು, ಬರಿಸಿ, ವಿಚಾರಂಗೆಯ್ದು, ಬಸವಬಂಡಾರದ, ಕವಳಿಗೆಗಳಂ- ಪುಸ್ತಕಗಳನ್ನು, ತರಿಸಿ. * * * * * * * * * * * * *

ಬಸವಂ, ಕೈಕೊಂಡ- ಅಂಗೀಕರಿಸಿದ, ಶೀಲಸ್ಥಿತಿಯ- ನಿಯಮದರೀತಿಯ, ಶಪಥಗೀತಂಗಳಂ- ಪ್ರತಿಜ್ಞಾಯಪದ್ಯಗಳನ್ನು, ನೋಡಿಂ- ನೋಡಿರಿ, ಮೇಣ್, ಆಕಾಳಸೆ, ಬಳಯಿಂ- ಅನಂತರ, ಎಮಗೆ, ತಾಂ, ಕಾಣಲ್, ಅಕ್ಕುಂ- ಕಾಣುವದಕ್ಕಾಗುವದು,ಎನುತ್ತೆ, ಎಂದು, ಪೇಳ್ವಾಗಳ್, ಬೋಧಸುಧಾವಾರಾಕರಂ-ಸದ್ಬೋಧೆಗೆಸಮುದ್ರನಾದ, ಚನ್ನಬಸವವಿಭು, ಎಯ್ತಂದು, ಒಸೆದು, ಆಮಾಹೇಶ್ವರೌಘಕ್ಕೆ, ಎರಗಿ, ಪಾಣಿಪದ್ಮಂಗಳಂ, ಮುಗಿಯುತಂ, ಆಗಳ್, ವಿಜ್ಞಾಪನಂಗೆಯ್ದಂ. ... ... ॥೩೪॥

ಮ ॥ ಸ್ರ ॥ ಹರಪೂಜಾಕಾಲದೊಳ್ ಮದ್ಗುರು ಪರಮಸುಖಾವಾಪ್ತಿಯಿಂ ಯೋಗನಿದ್ರಾ । ಭರಿತಂ ಸೈತಿರ್ಪಿನಂ ಜಂಗಮ ಮನುನಯದಿಂ ಬಂದು ತದ್ವಾರಪಾಲ ॥ ರ್ಭರದಿಂದಂ ಯೋಗನಿದ್ರಾಸ್ಥಿತಿಯ ನರುಪೆ ಕೇಳ್ದಾಕ್ಷಣಂ ಪೋಗೆ ಕೂಪೋಂ । ದಿರದೆಯ್ದಿತ್ತಲ್ತೆ ಮದ್ದೇಶಿಕ ನಸುವೊಸತೆಂಬನ್ನೆಗಂ ಭಕ್ತವೃಂದಂ ॥ ... ... ॥೩೫॥

ಕಂ ॥ ಗುರುವರನ ಶಪಥ ಮುಂಟೇ । ವರಿಯಿ ನದಂ ನೆನೆಯೆ ಬಿರಿಯುದೆರ್ದೆ ನುಡಿದೊಡೆ ಭಾ ॥ ಸುರರಸನೆ ಸೀಳ್ವುದೆನೆ ಭೀ । ಕರ ಮದು ನಡೆಯಲ್ಕೆ ಸಾಧ್ಯಮೇ ಪೆರರ್ಗಿಳೆಯೊಳ್ ॥ ... ... ... ... ... ... ॥೩೬॥

ಕಂ॥ ಪೊಸತೊಂದು ಗೀತಮಂ ತಾಂ । ಬೆಸಸಿದ ನಾಬಸವ ನಾತ್ಮಶಪಥಕ್ರಮಣೋ ॥ ಲ್ಲಸಿತ ಮದೆಂತೆನೆ ಬಲ್ಲಂ । ತುಸಿರ್ದಪೆ ನಾಲಿಪ್ಪುದು ಶರಣಸಂಕುಲ ಮೀಗಳ್ ॥ ॥೩೭॥

ಮಲ್ಲಿಕಾಮಾಲಾವೃತ್ತಂ ॥ ಪ್ರಾಣಲಿಂಗಮೆ ಧಾತ್ರಿಯೊಳ್ ಶಿವಭಕ್ತಸಂತತಿ ಗೊಚ್ಚತಂ । ಪ್ರಾಣ ಮಾಘನಲಿಂಗಮೂರ್ತಿಗೆ ಸದ್ಗುರೂತ್ತಮ ನಾಗಳುಂ ॥ ಪ್ರಾಣಮಾಗುರು ತಾನೆನಿಪ್ಪ ಸುಜಂಗಮಂ ನಿಜದಿಂದೆ ಮ । ತ್ಪ್ರಾಣ ಮೆಮ್ಮಯ ಸಂಗಮೇಶ ನಿದಕ್ಕೆ ಸಾಕ್ಷಿ ಸನಿಾಹಿತಂ ॥ ... ... ... ... ... ॥೩೮॥

ಕಂ ॥ ವ್ರತ ಮಿದೆನಗೆಂದು ಪೂಣ್ದು । ನ್ನತಮತಿಗೀತಮನೊರಲ್ದು ಪಾಡಿದ ನೀಗ ॥ ಳ್ಕ್ಷತಿ ಪೊಗಳೆ ಪಾಡಿದಂದದೆ । ನುತಚರ ದೊಡನೈದಿಸಿರ್ದ ನಸುವಂಬಸವಂ ॥ ॥೩೯॥

---

ಮದ್ಗುರು, ಹರಪೂಜಾಕಾಲದೊಳ್, ಪರಮಸುಖಾವಾಪ್ತಿಯಿಂ- ಪರಮ- ಉತ್ಕೃಷ್ಟವಾದ, ಸುಖ- ಸೌಖ್ಯದ, ಅವಾಪ್ತಿಯಿಂ- ಹೊಂದುವಿಕೆಯಿಂದ, ಯೋಗನಿದ್ರಾಭರಿತಂ, ಸೈತು- ಸುಮ್ಮನೆ, ಇರ್ಪಿನಂ ಇರುವಾಗ, ಜಂಗಮಂ, ಅನುನಯದಿಂ, ಬಂದು, ತದ್ವಾರಪಾಲರ್, ಭರದಿಂದಂ, ಯೋಗನಿದ್ರಾಸ್ಥಿತಿಯಂ, ಅರುಪೆ, ಕೇಳ್ದು, ಆಕ್ಷಣಂ, ಪೋಗೆ, ಭಕ್ತವೃಂದಂ, ಪೊಸತು, ಎಂಬನ್ನೆಗಂ, ಮದ್ದೇಶಿಕನ- ನನ್ನಗುರುವಿನ, ಅಸು, ಕೂಡಿ, ಒಂದಿ, ಇರದೆ, ಎಯ್ದಿತ್ತಲ್ತೆ ? ... ... ... ... ॥೩೫॥

ಈಪರಿಯಿಂ, ಗುರುವರನ, ಶಪಥಂ, ಉಂಟು, ಅದಂ, ನೆನೆಯೆ, ಎರ್ದೆ, ಎದೆಯುಂ, ಬಿರಿಯುದು, ನುಡಿದೊಡೆ, ಭಾಸುರರಸನೆ- ಪ್ರಕಾಶಮಾನನಾದನಾಲಿಗೆಯುಂ, ಒಡನೆ, ಸೀಳ್ವುದು, ಅದು, ನಡೆಯಲ್ಕೆ, ಭೀಕರಂ ಭಯಂಕರವು, ಇಳೆಯೊಳ್, ಪೆರರ್ಗೆ- ಅನ್ಯರಿಗೆ, ಸಾಧ್ಯಮೇಂ ? ... ... ॥೩೬॥

ಆತ್ಮಶಪಥಕ್ರಮಣೋಲ್ಲಸಿತಂ—ಆತ್ಮ- ತನ್ನ, ಶಪಥ- ಭಾಷೆಯ, ಕ್ರಮಣ- ಕ್ರಮದಿಂದ, ಉಲ್ಲಸಿತಂ- ಪ್ರಕಾಶಿಸುವ, ಬಸವಂ, ಪೊಸತೊಂದುಗೀತಮಂ, ತಾಂ, ಬೆಸಸಿದಂ-ಆಜ್ಞಾಪಿಸಿದನು ,ಅದು, ಎಂತು ಎನೆ, ಬಲ್ಲಂತೆ, ಉಸಿರ್ದಪೆಂ; ಈಗಳ್, ಶರಣಸಂಕುಲಂ, ಆಲಿಪುದು. ... ... ॥೩೭॥

ಧಾತ್ರಿಯೊಳ್, ಶಿವಭಕ್ತಸಂತತಿಗೆ, ಒಚ್ಚತಂ- ನಿಶ್ಚಯವಾಗಿ, ಪ್ರಾಣಲಿಂಗಮೆ, ಪ್ರಾಣಂ, ಆ ಘನಲಿಂಗಮೂರ್ತಿಗೆ, ಸದ್ಗುರೂತ್ತಮಂ, ಆಗಳುಂ, ಪ್ರಾಣಂ; ತಾಂ, ಆಗುರು, ಎನಿಪ್ಪ, ಸುಜಂಗಮಂ, ನಿಜದಿಂದೆ, ಮತ್ಪ್ರಾಣಂ; ಇದಕ್ಕೆ, ಎಮ್ಮಯ, ಸಂಗಮೇಶಂ, ಸಾಕ್ಷಿಸನಿಾಹಿತಂ- ಸಾಕ್ಷೀಭೂತತ್ವದಿಂದ ಇಚ್ಛೈಸಲ್ಪಟ್ಟವನು ... ... ... ... ... ॥೩೮॥

ಉನ್ನತಮತಿ- ಉತ್ಕೃಷ್ಟವಾದ ಬುದ್ಧಿಯುಳ್ಳ, ಬಸವಂ, ಎನಗೆ, ಇದು, ವ್ರತಂ, ಎಂದು, ಪೂಣ್ದು- ಪ್ರತಿಜ್ಞೆಯನ್ನುಮಾಡಿ, ಗೀತಮಂ- ಹಾಡನ್ನು, ಒರಲ್ದು- ಪ್ರೀತಿಸಿ, ಪಾಡಿದಂ, ಈಗಳ್, ಕ್ಷಿತಿ- ಭೂಮಿಯು, ಪೊಗಳೆ- ಸ್ತುತಿಸಲಾಗಿ, ಪಾಡಿದಂದದೆ- ಹಾಡಿದರೀತಿಯಿಂದ, ಅಸುವಂ, ನುತಚರದೊಡನೆ- ಶ್ಲಾಘ್ಯವಾದ ಜಂಗಮದೊಡನೆ, ಐದಿಸಿ- ಹೊಂದಿಸಿ, ಇರ್ದಂ. ... ... ... ... ॥೩೯॥

ಕಂ || ನೆನೆಯಲ್ನುಡಿಯ ಲೊಡರ್ಚ್ಚ | ಲ್ಕೆ ನಿತಾಂತಂ ಮಾದೃಶರ್ಗದೇಂ ಸಾಧ್ಯಮೆ ದಲ್ || ನೆನೆದಂತೆ ನುಡಿದು ನುಡಿದಂ | ತೆ ನಡೆದ ನೀಂಗುರುವಿವಂಗದಾರ್ ದೊರೆ ದರೆಯೊಳ್ ||

ಕಂ || ಬಿರುದಿನಭಾಷೆಯ ಬಲ್ಮೆಯ | ಧುರಂಧರಂ ಭಕ್ತಿನಿಧಿ ಭವತ್ಕಿಂಕರ ನೀ || ಗುರುಬಸವ ನವಮ ಮಗುಳ್ದಾ | ಚರಲಿಂಗದ ಬಳಿಯೊಳಸುವ ಸಲಿಸಿದ ನಲ್ತೆ || ||೪೧||

ವ || ಎಂದು ಕೇಳ್ದು ಶಿವಗಣಂಮುಚ್ಚಿ ವಿಸ್ಮಯಂಬಡೆಯೆ ಕೊಂಡಾಡಿ ಚನ್ನಬಸವಮುನ್ನಣೆಯ ಪಡಿಯರರಂ ಕರೆದು ಶಿವಭಕ್ತಮಂದಿರಂಗಳೊಳ್ತಜ್ಜಂಗಮಮಂ ಪುಡುಂಕಿ ತಳ್ವದೆ ತಗುಳ್ದೆಂದು ನಿಯಾಮಿಸಲೊಡನವರ್ಮಹಾ ಪ್ರಸಾದಮೆಂದು ತನ್ಮಂದಿರಂಗಳೊಳನ್ವೇಷಣಂಗೆಯ್ದು ಕಂಡು ತಜ್ಜಂಗಮಕ್ಕೆ ನಮಿಸಿ ಜವದಿಂ ಕರೆದು ತಪ್ಪರ್ದು ಮಾಗಳ್ || * * * * * * * * * * * * * * *

ಕಂ || ಚರಲಿಂಗದೊಡನೆ ಗಮಿಸಿದ | ಶರಣಂ ಬಳಸಂದು ಬಂದು ನಿಜದೇಹಮನಾ || ವರಿಸಿ ಶರಣಾಳಿ ಪಿರಿದ | ಚ್ಚರಿವಡೆ ಬಸವೇಶ ನಕ್ಷಿದೆರೆದಾಕ್ಷಣದೊಳ್ || ... ||೪೨||

ಮ || ಸ್ರ || ಬಿಡದೇಳ್ದಾನಂದದಿಂದಂ ಚರಮುಖಶರಣಾನೇಕಪಾದಾಬ್ಜದೊಳ್ಸ್ರೈ | ಗೆಡೆಯುತ್ತಂ ಮುನ್ನಿನಂತರ್ಚ್ಚಿಸುತೆ ಪೊಗಳುತಂ ತತ್ಪ್ರಸಾದಾಮೃತಂಗೊಂ || ಡೊಡ

---

ನೆನೆಯಲ್, ನುಡಿಯಲ್, ನಿತಾಂತಂ- ಅತ್ಯಂತವಾಗಿ, ಒಡರ್ಚ್ಚಲ್ಕೆ- ಮಾಡುವದಕ್ಕೆ, ಮಾದೃಶರ್ಗೆ- ನಮ್ಮಂತವರಿಗೆ, ಅದು- ಆ ಭಾಷೆಯು, ದಲ್- ನಿಶ್ಚಯವಾಗಿ, ಸಾಧ್ಯಮೇಂ? ಈಗುರು, ನೆನೆದಂತೆ, ನುಡಿದು, ನುಡಿದಂತೆ, ನಡೆದಂ, ದರೆಯೊಳ್, ಇವಂಗೆ, ಅದಾರ್, ದೊರೆ- ಸಮಾನರು ? ... ||೪೦||

ಬಿರುದಿನ, ಭಾಷೆಯ, ಪೇರ್ಮೆಯ, ಆಧಿಕ್ಯದ, ಧುರಂಧರಂ- ಭಾರವಾಹಕನಾದ,ಭಕ್ತಿನಿಧಿ- ಭಕ್ತಿಗೆ ನಿಕ್ಷೇಪನಾದ, ಭವತ್ಕಿಂಕರಂ, ನಿಮ್ಮ ಸೇವಕನಾದ, ಈ ಗುರುಬಸವಂ, ಮಗುಳ್ದು, ಆ ಚರಲಿಂಗದ, ಬಳಿಯೊಳ್, ಅಸುವಂ, ಸಲಿಸಿದನಲ್ತೆ? ಅಮಮ! ... ... ... ... ||೪೧||

ಎಂದು, ಕೇಳ್ದು, ಶಿವಗಣಂ, ಮೆಚ್ಚಿ, ಕೊಂಡಾಡಿ, ವಿಸ್ಮಯಂಬಡೆಯೆ, ಚನ್ನಬಸವಂ, ಮನ್ನಣೆಯ- ಮರ್ಯಾದಾವಿಶಿಷ್ಟರಾದ, ಪಡಿಯರರಂ- ದ್ವಾರಪಾಲಕರನ್ನು, ಕರೆದು, ಶಿವಭಕ್ತಮಂದಿರಂಗಳೊಳ್, ತಜ್ಜಂಗಮಮಂ- ಪುಡುಂಕಿ, ತಳ್ವದೆ, ತರ್ಪುದು, ಎಂದು, ನಿಯಾಮಿಸಲ್, ಒಡನೆ, ಅವರ್, ಮಹಾಪ್ರಸಾದಂ- ದೊಡ್ಡ ಅನುಗ್ರಹವು, ಎಂದು, ತನ್ಮಂದಿರಂಗಳೊಳ್, ಅನ್ವೇಷಣಂಗೆಯ್ದು- ಹುಡುಕಿ, ಕಂಡು, ತಜ್ಜಂಗಮಕ್ಕೆ, ನಮಿಸಿ, ನಮಸ್ಕರಿಸಿ, ಜವದಿಂ, ಜಾಗ್ರತೆಯಿಂದ, ಕರೆದುತರ್ಪುದುಂ, ಆಗಳ್. * * * * *

ಚರಲಿಂಗದ, ಒಡನೆ, ಗಮಿಸಿದ- ಹೋದ, ಶರಣಂ, ಪ್ರಾಣವು, ಬಂದು, ಬಳಸಂದು- ಸಮೀಪವನ್ನು ಹೊಂದಿ, ನಿಜದೇಹಮಂ, ಆವರಿಸೆ, ಆಚ್ಛಾದಿಸಲಾಗಿ, ಶರಣಾವಳಿ, ಪಿರಿದು, ಅಚ್ಚರಿವಡೆ, ಬಸವಂ, ಅಕ್ಷಿದೆರೆದು, ಕಣ್ಣನ್ನುಬಿಟ್ಟು, ಆಕ್ಷಣದೊಳ್. ... ... ... ... ||೪೨||

ಬಿಡದೆ, ಏಳ್ದು, ಆನಂದದಿಂದಂ, ಚರಮುಖಶರಣಾನೇಕಪಾದಾಬ್ಜದೊಳ್— ಚರ- ಜಂಗಮರೇ, ಮುಖ- ಮೊದಲಾದ, ಶರಣಾನೇಕ- ಅನೇಕ ಶರಣರ, ಪಾದಾಬ್ಜದೊಳ್, ಸ್ರೈಗೆಡೆಯುತ್ತಂ- ನಮಸ್ಕರಿಸುತ್ತ, ಮುನ್ನಿನಂತೆ, ಅರ್ಚ್ಚಿಸುತೆ, ಪೊಗಳುತಂ, ತತ್ಪ್ರಸಾದಾಮೃತಂಗೊಂಡು- ಆ ಶರಣರ ಪ್ರಸಾದ ಪಾದೋದಕಗಳನ್ನು ಸ್ವೀಕರಿಸಿ, ಒಡನೆ, ಪ್ರಸನ್ನಪ್ರಕಟನಿಜಮಹಾಭಕ್ತಿಸಂಪನ್ನಂ— ಪ್ರಸನ್ನ- ನಿರ್ಮಲವಾದ, ಪ್ರಕಟ- ಪ್ರಸಿದ್ಧವಾದ, ನಿಜ- ಸ್ಥಿರವಾದ, ಮಹತ್- ಉತ್ಕೃಷ್ಟವಾದ, ಭಕ್ತಿ- ಭಕ್ತಿಯಿಂದ, ಸಂಪನ್ನಂ- ಕೂಡಿದ, ಉದ್ಯನ್ಮೃಡಭಕ್ತಪ್ರಾಣಂ— ಉದ್ಯತ್- ಉತ್ಕೃಷ್ಟರಾದ, ಮೃಡಭಕ್ತ- ಶಿವಭಕ್ತರೇ,

ನೊಸ್ಪರ್ದಂ ಪ್ರಸನ್ನಪ್ರಕಟನಿಜಮಹಾಭಕ್ತಿಸಂಪನ್ನನುದ್ಯ। ನ್ಮೃಡಭಕ್ತಿಪ್ರಾಣಮೀ
ಣಂ ಸುಗುಣನಿಧಿ ಶಿವಾದ್ವೈತವಿದ್ಯಾಸಮುದ್ರಂ ॥ ... ... ॥೪೩॥

ಲಲಿತಪದವೃತ್ತಂ ॥ ಕೃತ್ತಪರವಾದ ಮದಮತ್ತಜನ ಸಾರಶುಭವೃತ್ತ ಶಿವಸುವ್ರ
ತನಿಮಿತ್ತ ಶಿವಶೇಷೋಪಾತ್ತಸುಖಭೋಗ ಮೃದುಚಿತ್ತ ಗಣನಾಯಕ ನಿವೃತ್ತವಿಷಯ
ಭ್ರಮ ಸಮಾತ್ತಶಿವಯೋಗಾ ॥ ದತ್ತಶಿವಚಿತ್ಸುಖ ಭವೋತ್ತರಣಶೀಲ ಗುಣವಿತ್ತನಿಧಿ
ಕಾನಕಕಭೃತ್ತಟವಿಹಾರಾ । ಯತ್ತಮುದ ಪಾಲಿಸೊಲವೆತ್ತು ಬಿಡದೆನ್ನ ನೆನಗಿತ್ತು ಮೃ
ಡಭಕ್ತಿಯ ನುದಾತ್ತಬಸವೇಶಾ ॥ ... ... ... ... ॥೪೪॥

ಪುಷ್ಪಿತಾಗ್ರವೃತ್ತಂ ॥ ಶತಮುಖಮುಖದೇವತಾವಿತಾನ । ಸ್ತುತಭೃತವೈಭವದಿವ್ಯ
ಪಾದಪದ್ಮೇ ॥ ವಿತತಸಿತಿಗಳಾಂಗಸಂಗತಾಂಗೇ । ಸತತಕೃಪಾಕರೆ ರಕ್ಷಿಸೆನ್ನ ನಾರ್ಯೇ ॥೪೫॥

---

ಪ್ರಾಣಂ- ಪ್ರಾಣವಾಗುಳ್ಳ, ಸುಗುಣನಿಧಿ, ಶಿವಾದ್ವೈತವಿದ್ಯಾಸಮುದ್ರಂ- ಶಕ್ತಿವಿಶಿಷ್ಟಾದ್ವೈತವಿದ್ಯೆಗೆ ಸಮುದ್ರನಾದ ಬಸವೇಶ್ವರನು, ಒಪ್ಪಿ, ಇರ್ದ್ದಂ. ... ... ... ॥೪೩॥

ಕೃತ್ತ......ಜನ— ಕೃತ್ತ- ಕತ್ತರಿಸಲ್ಪಟ್ಟ, ಪರವಾದ- ಅನ್ಯಮತವಾದವುಳ್ಳ, ಮದಮತ್ತಜನ- ಗರ್ವದಿಂ ಕೊಬ್ಬಿದ ಜನಗಳುಳ್ಳ, ಸಾರಶುಭವೃತ್ತ- ಶ್ರೇಷ್ಠವಾಗಿಯೂ ಮನೋಹರವಾಗಿಯೂ ಇರುವ ಚರಿತ್ರವುಳ್ಳ, ಶಿವಸುವ್ರತನಿಮಿತ್ತ- ಶೈವನಿಯಮಗಳಿಗೆ ಕಾರಣನಾದ, ಶಿವಶೇಷೋಪಾತ್ತಸುಖಭೋಗ- ಈಶ್ವರಪ್ರಸಾದದಿಂದ ಪಡೆಯಲ್ಪಟ್ಟ ಸೌಖ್ಯಾತಿಶಯವುಳ್ಳ, ಮೃದುಚಿತ್ತ- ಕೋಮಲವಾದ ಮನಸ್ಸುಳ್ಳ, ಗಣನಾಯಕ- ಶಿವಗಣಂಗಳಿಗಧಿಪತಿಯಾದ, ನಿವೃತ್ತವಿಷಯಭ್ರಮ- ಹಿಂದಿರುಗಿದ ಇಂದ್ರಿಯವ್ಯಾಪಾರದ ಭ್ರಾಂತಿಯುಳ್ಳ, ಸಮಾತ್ತಶಿವಯೋಗಾದತ್ತಶಿವಚಿತ್ಸುಖ— ಸಮಾತ್ತ- ಪಡೆಯಲ್ಪಟ್ಟ, ಶಿವಯೋಗ- ಶಿವಸಂಬಂಧದಿಂದ, ಆದತ್ತ- ಸ್ವೀಕರಿಸಲ್ಪಟ್ಟ, ಶಿವ- ಈಶ್ವರನ ಸಂಬಂಧವಾದ, ಚಿತ್- ಜ್ಞಾನದಿಂದುಂಟಾದ, ಸುಖ- ಸೌಖ್ಯವುಳ್ಳ, ಭವೋತ್ತರಣಶೀಲಗುಣವಿತ್ತನಿಧಿ- ಸಂಸಾರದ ದೆಸೆಯಿಂದ ದಾಟಿಸುವ ಸ್ವಭಾವಗುಣವೆಂಬ ಸಮುದ್ರಕ್ಕೆ ನಿಕ್ಷೇಪನಾದ, ಕಾನಕಕಭೃತ್ತಟವಿಹಾರಾಯತ್ತ- ಕಾನಕಕಂಭೃತ್- ಮೇರುಪರ್ವತದ, ತಟ- ತಪ್ಪಲಿನ, ವಿಹಾರ- ಕ್ರೀಡಿಸುವಿಕೆಯಿಂದ, ಆಯತ್ತ- ಸಿದ್ಧವಾದ, ಮುದ- ಸಂತೋಷವುಳ್ಳ, ಉದಾತ್ತಬಸವೇಶಾ! ಒಲವೆತ್ತು- ಪ್ರೀತಿಯಂ ಹೊಂದಿ, ಎನಗೆ, ಮೃಡಭಕ್ತಿಯಂ, ಇತ್ತು, ಎನ್ನಂ, ಬಿಡದೆ, ಪಾಲಿಸು. ॥೪೪॥

ಶತಮುಖ......ಪಾದಪದ್ಮೇ— ಶತಮುಖ- ಇಂದ್ರನೇ,ಮುಖ- ಮೊದಲಾದ, ದೇವತಾ- ದೇವತೆಗಳ, ವಿತಾನ- ಸಮುದಾಯದಿಂದ, ಸ್ತುತ- ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ, ಭೃತ- ಧರಿಸಲ್ಪಟ್ಟ, ವೈಭವ- ವಿಭವದಿಂದ, ದಿವ್ಯ- ಮನೋಹರವಾದ, ಪಾದಪದ್ಮೇ- ಪಾದಕಮಲವುಳ್ಳ, ವಿತತಸಿತಗಳಾಂಗಸಂಗತಾಂಗೇ—ವಿತತ- ವಿಸ್ತಾರವಾದ, ಸಿತಿಗಳ— ನೀಲಕಂಠನ, ಅಂಗ- ಶರೀರದಿಂದ, ಸಂಗತ- ಕೂಡಿಕೊಂಡಿರುವ,ಅಂಗೇ- ಶರೀರವುಳ್ಳ, ಸತತಕೃಪಾಕರೆ— ಸತತ- ನಿರಂತರವಾದ, ಕೃಪಾ- ದಯಕ್ಕೆ, ಆಕರೆ- ಆಸ್ಪದಳಾದ, ಆರ್ಯೇ! ಎನ್ನಂ, ರಕ್ಷಿಸು. ... ... ... ... ... ॥೪೫॥

ಇಪ್ಪತ್ತೊಂಬರನೆಯ ಆಶ್ವಾಸವು ಸಂಪೂರ್ಣವು.

ಗದ್ಯಂ ॥ ಇದುವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತ ಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದ ಶ್ರೀಷಡಕ್ಷರಿದೇವಭಕ್ತವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಬಸವಜಂಗಮಪ್ರಾಣಿತ್ವಕಥನಂ ತ್ರಯೋವಿಂಶತ್ಯಾಶ್ವಾಸಂ ಪರಿಸಮಾಪ್ತಂ ॥ ... ... ... ... ... *

ತ್ರಯೋವಿಂಶತ್ಯಾಶ್ವಾಸಂ ಸಂಪೂರ್ಣಂ.

---

# ಶ್ರೀಃ.

ಸುಖಾವಹಮೂರ್ತಯೇಪರಬ್ರಹ್ಮಣೇನಮಃ.

## ಚತುರ್ವಿಂಶತ್ಯಾಶ್ವಾಸಂ.

### ಕಿನ್ನರಬಸವಪ್ರಾಣದಾನಕಥನಂ.

ಕಂ ॥ ಶ್ರೀಗೌರೀಕಚಭರಮಾ । ಲಾಗಣಮಕರಂದಯುಕ್ತಭುಜ ನಜರ ನಜಂ ॥
ಸಾಗರಜಾಪತಿಮುಖಸುರ । ಪೂಗನುತಂ ಮಾಳ್ಕೆ ಸೌಖ್ಯಮಂ ಶಿವಲಿಂಗಂ ॥ ॥೧॥

ಕಂ ॥ ಮುನ್ನೊಮ್ಮೆ ಬಸವ ನಸು ವಿದು । ಕಿನ್ನರ ನಸುಗೂಡಿ ಪೋದುದೆಂ ದದರಿರ
ವಂ ॥ ಚೆನ್ನಬಸವಣ್ಣ ನಾಗ । ಳ್ಬಿನ್ನವಿಸಿದ ನಖಿಳಶರಣಸಂತತಿ ಗೊಲವಿಂ ॥ ॥೨॥

ವ ॥ ಅದೆಂತೆನೆ ॥ ರಥೋದ್ಧತವೃತ್ತಂ ॥ ಪ್ರಾಣಲಿಂಗ ಮೆನಗೀತ ನೆಂದು ವಿ । ಶ್ರಾ

---

ಶ್ರೀಗೌ.....ಭುಜಂ—ಶ್ರೀ- ಷಡ್ಗುಣೈಶ್ವರ್ಯಯುಕ್ತಳಾದ, ಗೌರೀ- ಪಾರ್ವತಿಯ, ಕಚಭರ- ಅತಿಶಯವಾದ ಕೇಶದಲ್ಲಿರುವ, ಮಾಲಾ- ಪುಷ್ಪಮಾಲಿಗಳ, ಗಣ- ಸಮುದಾಯದ, ಮಕರಂದ- ಪುಷ್ಪರಸದಿಂದ, ಯುಕ್ತ- ಕೂಡಿಕೊಂಡಿರುವ, ಭುಜಂ— ಬಾಹುವುಳ್ಳ, ಅಜರಂ- ಮುಪ್ಪಿಲ್ಲದ, ಅಜಂ- ಉತ್ಪತ್ತಿಶೂನ್ಯನಾದ, ಸಾಗರಜಾಪತಿಮುಖಸುರಪೂಗನುತಂ— ಸಾಗರಜಾಪತಿ- ವಿಷ್ಣುವೇ, ಮುಖ- ಮೊದಲಾದ, ಸುರ— ದೇವತೆಗಳ, ಪೂಗ- ಸಮುದಾಯದಿಂದ, ನುತಂ- ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ, ಶಿವಲಿಂಗಂ, ಸೌಖ್ಯಮಂ, ಮಾಳ್ಕೆ. ... ... ... ... ... ... ॥೧॥

ಆಗಳ್, ಚೆನ್ನಬಸವಣ್ಣಂ, ಮುನ್ನಂ, ಒಮ್ಮೆ, ಬಸವನ, ಇದು ಅಸು- ಈಪ್ರಾಣವು, ಕಿನ್ನರನ, ಅಸುಗೂಡಿ, ಪೋದುದು, ಎಂದು, ಅದರ, ಇರವಂ, ಅಖಿಳಶರಣಸಂತತಿಗೆ, ಒಲವಿಂ, ಬಿನ್ನವಿಸಿದಂ. ॥೨॥

ವೃಷಭೇಂದ್ರಂ, ಈತಂ, ಎನಗೆ, ಪ್ರಾಣಲಿಂಗಂ, ಎಂದು, ವಿಶ್ರಾಣನೈಕನಿಧಿಕಿನ್ನರಯ್ಯನಂ- ದಾನ

---

* (ಅವ) ಸಾಗರ- ಸಮುದ್ರದ ಡೆಸೆಯಿಂದ, ಜಾ- ಹುಟ್ಟಿದವಳು. ... ... ॥೨

ಣಾನ್ಯೈಕಸಿಧಿ ಕಿನ್ನರಯ್ಯನಂ ॥ ಮಾಣದೊಲ್ದು ಭಜಿಸುತ್ತೆ ಭಕ್ತಿಯಿಂ । ಕ್ಷೋಣಿಯಲ್ಲಿ ವೃ
ಷಭೇಂದ್ರನಿರ್ಪಿನಂ॥ ... ... ... ... ... ॥೩॥

ಕಂ ॥ ಹರ ನಾಬಸವನ ನೇಹದ । ಪರಿಯಂ ದರೆಗರುಪ ಲೆಂದು ನೆನೆಯುತೆ ತತ್ಕಿ॥
ನ್ನರ ನಸುವಂ ತನ್ನೊಳ್ಮಿಗೆ । ಬೆರಸು ತಡಂಗಿಸಿದ ನಾಗಳಾಬಸವೇಶಂ ॥ ... ॥೪॥

ಕಂ ॥ ಕಾಣುತ್ತೆ ಕಿನ್ನರಯ್ಯಂ । ಪ್ರಾಣಂಗಳೆದಂದದವಂ ಭಯಂಬಡೆದು ಜಗ ॥ ತ್ರಾ
ಣಪರಂ ಬಿಸುಸುಯ್ದು । ಕ್ಷೀಣಗುಣಂ ಬಹುಳಶೋಕವಂ ಮಿಗೆ ತಳೆದಂ ॥ ... ॥೫॥

ವ ॥ ಅಂತು ತಳೆದಳವಿಗಳಿದ ವಿಷಾದದಿಂ ತಲ್ಲಣಿಸಿ ಮರುಗಿ ॥ * * * *

## ತ್ರಿವಿಧಿ.

ಹಾಮದೀಶ ಯಿದೆತ್ತಡಂಗಿದೆ ಕಿನ್ನರೇಶಹಾಗುಣೋ ।ದ್ಧಾಮನೀನಕಟಿಂತುಪೋಪುದೆಕಿನ್ನರೇಶ
ಸಾರವೀರ ಗುಣಾನುರಂಜನ ಕಿನ್ನರೇಶಹಾ ಮದ । ದೂರ ದುರ್ಮತಗರ್ವಭಂಜನ ಕಿನ್ನರೇಶ॥
ಪರಮಕರುಣಾಪೂರಸಿಂಧುವೆ ಕಿನ್ನರೇಶಹಾಮೃದು। ಸರಸಭಾಷಣ ಭಕ್ತಬಂಧುವೆಕಿನ್ನರೇಶ॥
ಕಾಲಕಾಲಮತಾಮರದ್ರುಮ ಕಿನ್ನರೇಶ ಹಾ ಶುಭ। ಶೀಲ ಜಲ್ಪಿತಶಾಂಭವಾಗಮಕಿನ್ನರೇಶ ॥
ಪಂಡಿತಪ್ರಕರೈಕಪಾಲಕ ಕಿನ್ನರೇಶ ಹಾ ಗುಣ।ಮಂಡಿತಾಮಲಶಾಂತಿಲೋಲಕ ಕಿನ್ನರೇಶ ॥

---

ಗುಣಕ್ಕೆ ಮುಖ್ಯ ನಿಕ್ಷೇಪಸ್ವರೂಪನಾದ ಕಿನ್ನರನನ್ನು, ಮಾಣದೆ, ಒಲ್ದು, ಭಕ್ತಿಯಿಂ, ಭಜಿಸುತ್ತೆ, ಕ್ಷೋಣಿಯಲ್ಲಿ, ಇರ್ಪಿನಂ. ... ... ... ... ... ॥೩॥

ಹರಂ, ಆಬಸವನ, ನೇಹದ- ಸ್ನೇಹದ, ಪರಿಯಂ, ದರೆಗೆ, ಅರುಪಲ್ ಎಂದು, ತಿಳಿಸಬೇಕೆಂದು, ನೆನೆಯುತೆ, ತತ್ಕಿನ್ನರನ, ಅಸುವಂ, ತನ್ನೊಳ್, ಮಿಗೆ, ಬೆರಸುತೆ, ಅಡಂಗಿಸಿದಂ, ಇಗಳ್, ಆ ಬಸವೇಶಂ. ॥೪॥

ಕಿನ್ನರಯ್ಯಂ, ಪ್ರಾಣಂಗಳೆದ, ಅಂದವಂ, ಕಾಣುತ್ತೆ, ಭಯಂಬಡೆದು, ಜಗತ್ತ್ರಾಣಪರಂ- ಲೋಕರಕ್ಷಣೆಯಲ್ಲಿ ಆಸಕ್ತನಾದ, ಅಕ್ಷೀಣಗುಣಂ- ಸ್ಥಿರವಾದ ಗುಣವುಳ್ಳ ಬಸವೇಶನು, ಬಿಸುಸುಯ್ದು, ಬಹುಳಶೋಕವಂ, ಮಿಗೆ, ತಳೆದು. ... ... ... ... ... ॥೫॥

ಅಂತು, ತಳೆದು, ಅಳವಿಗಳಿದ- ಗಣನಾತೀತವಾದ, ವಿಷಾದದಿಂ- ಮನಃಕ್ಲೇಶದಿಂದ, ತಲ್ಲಣಿಸಿ- ಬೆರಗಾಗಿ, ಮರುಗಿ- ಸಂಕಟಪಟ್ಟು. * * * * * * * * * * * * *

ಹಾ ! ಮದೀಶ, ಇದೆತ್ತ, ಅಡಂಗಿದೆ? ಕಿನ್ನರೇಶ, ಹಾ? ಗುಣೋದ್ಧಾಮ- ಗುಣದಿಂದ ಉತ್ಕೃಷ್ಟನಾದವನೇ! ಕಿನ್ನರೇಶ! ನೀಂ, ಇಂತು,ಪೋಪುದೇ ? ಅಕಟಾ ! . ... ... . ... ॥೬॥

ಸಾರವೀರಗುಣಾನುರಂಜನ- ಶ್ರೇಷ್ಠವಾದಪರಾಕ್ರಮಗುಣದಿಂದ ಸಂತೋಷಪಡಿಸತಕ್ಕ, ಕಿನ್ನರೇಶ! ಹಾ! ಮದದೂರ,ದುರ್ಮತಗರ್ವಭಂಜನ– ಕೆಟ್ಟಮತಗಳ ಅಹಂಕಾರವನ್ನುಹಾಳುಮಾಡತಕ್ಕ, ಕಿನ್ನರೇಶ!

ಪರಮಕರುಣಾಪೂರಸಿಂಧುವೆ- ಉತ್ಕೃಷ್ಟವಾದ ದಯೆಗೆ ಕೊನೆಯಿಲ್ಲದೇ ಇರುವ ಸಮುದ್ರನಾದ, ಕಿನ್ನರೇಶ! ಹಾ! ಮೃದುಸರಸಭಾಷಣ- ಮೃದುವಾಗಿಯೂ ರಸವಿಶಿಷ್ಟವಾಗಿಯೂ ಇರುವ ವಾಕ್ಯವುಳ್ಳ, ಭಕ್ತಬಂಧುವೆ! ಕಿನ್ನರೇಶ ! ... ... ... ... ... ॥೭॥

ಕಾಲಕಾಲಮತಾಮರದ್ರುಮ- ಶಿವಮತಕ್ಕೆ ಕಲ್ಪವೃಕ್ಷನಾದ, ಕಿನ್ನರೇಶ! ಹಾ! ಶುಭಶೀಲ- ಮಂಗಳಕರವಾದ ಸದಾಚಾರವುಳ್ಳ, ಜಲ್ಪಿತಶಾಂಭವಾಗಮ- ಹೇಳಲ್ಪಟ್ಟಶಿವಾಗಮವುಳ್ಳ, ಕಿನ್ನರೇಶ! ॥೮॥

ಪಂಡಿತಪ್ರಕರೈಕಪಾಲಕ-ಪಂಡಿತರಸಮುದಾಯಕ್ಕೆಮುಖ್ಯರಕ್ಷಕನಾದ, ಕಿನ್ನರೇಶ! ಹಾ! ಗುಣಮಂಡಿತಾಮಲಶಾಂತಿಲೋಲ_ಸದ್ಗುಣದಿಂದಅಲಂಕರಿಸಲ್ಪಟ್ಟನಿರ್ಮಲವಾದಶಾಂತಿಗುಣದಲ್ಲಿಆಸಕ್ತನಾದ,ಕಿನ್ನರೇಶ!

ಊರ್ಜಿತಾಖಿಲಯೋಗಿನಾಯಕ ಕಿನ್ನರೇಶ ಹಾ ಬಲ। ನಿರ್ಜಿತಾತುಲಪುಷ್ಪಸಾಯಕ ಕಿನ್ನರೇಶ॥
ಲಿಂಗಜಂಗಮಭಕ್ತಿಭಾಸುರ ಕಿನ್ನರೇಶ ಹಾ ಗಣ। ಸಂಗನೀತಸಮಸ್ತವಾಸರ ಕಿನ್ನರೇಶ॥
ದುರ್ಮತಾಂಬುಜಮತ್ತವಾರಣ ಕಿನ್ನರೇಶ ಹಾ ಶಿವ ಧರ್ಮಸಂಪದಶರ್ಮಕಾರಣ ಕಿನ್ನರೇಶ॥೧೩॥

ವ॥ ಎಂದು ಪಲುಂಬಿ ಪಳಯಿಸಿ ಮತ್ತಮಿರದೆ॥ * * * * * * *

ಮಲ್ಲಿಕಾಮಾಲಾವೃತ್ತಂ॥ ಹಾ ಮದೀಯಮನೋವನೇರುಹವಾಸರಾಜಮರಾಳ ಹಾ। ಹಾ ಮದೀಯಸುಬೋಧಸಾಗರಸರ್ವಸರ್ವೇಶ್ವರಬಿಂಬ ಹಾ॥ ಹಾ ಮದೀಯವಿಲೋಚನೋತ್ಪಲಚಾರುಪೂರ್ಣಮೃಗಾಂಕ ಹಾ। ಹಾ ಮದೀಯ ವಿವೇಕನಂದನಚೈತ್ರ ಕಿನ್ನರನಾಯಕಾ॥ ... ... ... ... ... ... ॥೧೪॥

ಕಂ॥ ಕಿನ್ನರಪತಿ ಯಾನಿರೆ ಪರ। ಕಿನ್ನರಪತಿಯೊಡನೆ ಮೇಳಮೇ ನಿನಗೆಂದಾ॥ ಪನ್ನಗಧರನಂ ಭೂಬುಧ। ಸನ್ನುತ ಮೂದಲಿಪೆನೆಂದು ಪಡೆದೆಯಿದ್ದುದೆಯೋ॥ ॥೧೫॥

ಉ॥ ಕಿನ್ನರವರ್ಯ ನಿನ್ನ ನಡೆ ನಿನ್ನಯ ಮೆಲ್ನುಡಿ ನಿನ್ನ ಭಕ್ತಿಸಂ। ಪನ್ನತೆ ನಿನ್ನ ವಿಗ್ರಹದ ಚೆಲ್ವಿಕೆ ನಿನ್ನ ವಿನೋದದೇಳ್ಗೆ॥ ನಿನ್ನ ಕಳಾವಿಳಾಸತೆ ಯಿವೆಲ್ಲಮ ಮನ್ನದೆಯಲ್ಲಿ ಬೆರ್ಚಿ ನಣ್ಪಿಂ ನೆಲೆಗೊಂಡು ತೋರ್ಪುದುಗಡಂ ದಿನ ನಿನ್ನ ವಿಯೋಗಮದ್ಭುತಂ॥೧೬॥

---

ಊರ್ಜಿತಾಖಿಲಯೋಗಿನಾಯಕ- ತೇಜಸ್ವಿಗಳಾದ ಸಮಸ್ತ ಋಷಿಗಳಿಗೆ ವಲ್ಲಭನಾದ, ಕಿನ್ನರೇಶ! ಹಾ! ನಿರ್ಜಿತಾತುಲಪುಷ್ಪಸಾಯಕ- ಶಕ್ತಿಯಿಂದ ಜಯಿಸಲ್ಪಟ್ಟ ಅಸದೃಶನಾದ ಮನ್ಮಥನುಳ್ಳ, ಕಿನ್ನರೇಶ! ॥೧೧॥

ಲಿಂಗಜಂಗಮಭಕ್ತಿಭಾಸುರ- ಲಿಂಗಭಕ್ತಿ ಜಂಗಮಭಕ್ತಿಯಿಂದ ಪ್ರಕಾಶಮಾನನಾದ, ಕಿನ್ನರೇಶ! ಹಾ! ಗಣಸಂಗನೀತಸಮಸ್ತವಾಸರ- ಪ್ರಮಥರ ಸ್ನೇಹದಿಂದ ಕಳೆಯಲ್ಪಟ್ಟ ಎಲ್ಲಾ ದಿವಸಗಳುಳ್ಳ, ಕಿನ್ನರೇಶ! ॥೧೨॥

ದುರ್ಮತಾಂಬುಜಮತ್ತವಾರಣ- ಕೆಟ್ಟಮತವೆಂಬ ಕಮಲಗಳಿಗೆ ಮದಿಸಿದ ಆನೆಯಾದ, ಕಿನ್ನರೇಶ! ಹಾ! ಶಿವಧರ್ಮಸಂಪದ- ಶೈವಧರ್ಮವೆಂಬ ಸಂಪತ್ತುಳ್ಳ, ಶರ್ಮಕಾರಣ- ಸುಖಕ್ಕೆ ಮೂಲಭೂತನಾದ, ಕಿನ್ನರೇಶ! ॥೧೩॥

ಎಂದು, ಪಲುಂಬಿ, ಪಂಬಲಿಸಿ, ಮತ್ತಂ, ಇರದೆ. * * * * * * * * * *

ಹಾ! ಮದೀಯಮನೋವನೇರುಹವಾಸರಾಜಮರಾಳ- ನನ್ನ ಮನಸ್ಸೆಂಬ ಕಮಲದಲ್ಲಿ ವಾಸವಾಗಿರುವ ರಾಜಹಂಸಪಕ್ಷಿಯೇ, ಹಾ! ಹಾ! ವಿಲೋಚನೋತ್ಪಲಚಾರುಪೂರ್ಣಶಶಾಂಕ- ನೇತ್ರವೆಂಬ ನೈದಿಲೆಗೆ ಮನೋಹರನಾದ ಪೂರ್ಣಚಂದ್ರನೇ! ಹಾ! ಮದೀಯವಿವೇಕನಂದನಚೈತ್ರ- ನನ್ನ ತಿಳಿವಳಿಕೆಯೆಂಬ ವನಕ್ಕೆ ವಸಂತನಾದವನೇ! ಹಾ! ಕಿನ್ನರನಾಯಕ! ... ... ... ... ॥೧೪॥

ಭೂಬುಧಸನ್ನುತ- ಭೂಮಿಯಲ್ಲಿರುವ ವಿದ್ವಾಂಸರಿಂದ ಹೊಗಳಿಸಕೊಳ್ಳಲ್ಪಟ್ಟ ಕಿನ್ನರೇಶನೇ! ಕಿನ್ನರಪತಿ, ಆಂ, ಇರೆ, ಪರಕಿನ್ನರಪತಿಯೊಡನೆ- ಮತ್ತೊಬ್ಬನಾದ ಕಿನ್ನರಪತಿಯೊಡನೆ, (ಅಂದರೆ ಕುಬೇರನೊಡನೆ) ನಿನಗೆ, ಮೇಳಮೇ- ಸಂಬಂಧವೇ? ಎಂದು, ಆ ಪನ್ನಗಧರನಂ- ಆ ಶಿವನನ್ನು, ಮೂದಲಿಸಲೆಂದು- ಹೀಯಾಳಿಸಬೇಕೆಂದು, ಪಡೆದು- ಇಚ್ಛೈಸಿ, ಎದ್ದು ದೆಸೆಯೊ- ಹೋದೆಯೋ? ... ... ... ॥೧೫॥

ಕಿನ್ನರವರ್ಯ! ಕೇಳ್, ನಿನ್ನ, ನಡೆ- ನಡತೆಯು, ನಿನ್ನಯ, ಮೆಲ್ನುಡಿ- ಮೃದುವಾದ ಮಾತು, ನಿನ್ನ, ಭಕ್ತಿಸಂಪನ್ನತೆ, ನಿನ್ನ, ವಿಗ್ರಹದ- ಶರೀರದ, ಚೆಲ್ವಿಕೆ- ಸೌಂದರ್ಯವು, ನಿನ್ನ, ವಿನೋದದ- ಸಂತೋಷದ, ಏಳ್ಗೆ- ಆಧಿಕ್ಯವು, ನಿನ್ನ, ಕಳಾವಿಳಾಸತೆ- ವಿದ್ಯೆಯಿಂದ ಶೋಭಿಸುವಿಕೆಯು, ಅವುಎಲ್ಲಮಂ, ಎನ್ನ, ಎರ್ದೆಯಲ್ಲಿ- ಮನಸ್ಸಿನಲ್ಲಿ, ನಣ್ಪಿಂ- ಮನೋಹರತ್ವದಿಂದ, ಬೆರ್ಚಿ- ಸಂಬಂಧಿಸಿ, ನೆಲೆಗೊಂಡು- ವಾಸವಾಗಿ, ತೋರ್ಪುದುಗಡ- ಕಾಣುವದಲ್ಲವೇ? ಈದಿನಂ, ನಿನ್ನ, ವಿಯೋಗಂ- ಅಗಲುವಿಕೆಯು, ಅದ್ಭುತಂ! ... ॥೧೬॥

ಉ ॥ ಎನ್ನ ಸುರತ್ನಮೇನುಡಿಯು ಯೆನ್ನಯ ಕಂಗಳ ಪುಣ್ಯಮೇ ಪೊದ । ಳ್ದೆನ್ನೊ ಡ ನೇಕೆ ನೀಂ ಮುನಿದೆ ಯೆನ್ನಯ ಬಾಳ್ಕೆಗಡರ್ಪೆ ಸತ್ಕೃಪಾ ॥ ಸನ್ನತೆವೆತ್ತು ಸಾಜೆ ನಡೆ ನೋಡಿ ಭವತ್ಪದಭೃತ್ಯ ನಾಗಿ ಬಾ । ಳ್ದೆನ್ನೊಳಿದೇಕೆ ನಿರ್ದಯತೆ ಕಿನ್ನರನಾಯಕ ಸತ್ಸ ಹಾಯಕ ॥ ... ... ... ... ... ॥೧೭॥

ವ ॥ ಎಂದು ಪಲವುಪದದಿಂ ಪಳಯಿಸಿ ಶೋಕಾಶ್ರುಕಣಕಲಿತವದನಮಂಡಲ ನಾಗಿ ಬಸವ ರಸ ಮಿರ್ಪಿನ ಮಾಗಳ್ಪಡಿಯಾರಬಾಚಯ್ಯ ನೆಂಬಭಕ್ತಕಂಚುಕಿ ಶಿವಗಣನಿರೂಪದಿಂ ಪ್ರಮ ಥಗಣಪಟ್ಟಗಜ ಮೆನಿಪ ಮಡಿವಳಮಾಚಿದೇವ ನಡಿಗಳೆಡೆಗೆಯ್ತಂದು ಭಕ್ತಿಯಿಂ ಪೊಡಮ ಟ್ಟು ಕಿನ್ನರೇಂದ್ರಂ ಪನ್ನಗಧರನೊಡವೆರೆದಿರಪಂ ಬಿನ್ನವಿಸಿ ಬನ್ನಿರೆಂಬುದಂ ಮಾಚಿದೇವಂ ಸಮುನ್ನತಚಿತ್ತಂ ಕೇಳ್ದು ಶಿವಗಣನಿವಹ ಮಲ್ಲಿಬಂದಿರ್ದಪುದೆ ಬಸವನೇಗೆಯ್ದಪಂ ಪೇಳೆಂ ಬುದು ಮಾತ ನಿಂತಿದು ॥ * * * * * * * * * * * * *

ಕಂ ॥ ಬಂದಿರ್ಪುದಖಿಳಶಿವಗಣ । ವೃಂದಂ ಮಾದರಸಮುಖ್ಯಮೀಗಳ್ಪಡೆದೀ ॥ ಳ್ತಂ ದಾಬಸವಂ ಕಿನ್ನರ । ನಂದದಕಂಧರವ ನಪ್ಪಿ ಶೋಕಿಪನಲ್ತೆ ॥ ... ॥೧೮॥

ಕಂ ॥ ಪ್ರಣಯದೆ ಕಿನ್ನರಬೊಮ್ಮನ । ಗುಣಂಗಳಂ ನೆನೆದು ನೊಂದು ಬಿಸುಸು ಯ್ಯುತೆ ಸಂ ॥ ದಣಿಪ ಕಡುಶೋಕದಿಂ ತ । ಲ್ಲಣಿಸಿ ಪಲುಂಬಿಸಿದ ನಲ್ಲಿ ಬಸವಕುಮಾರಂ ॥

ಎನ್ನ, ಸುರತ್ನವೇ! ನುಡಿಯು- ಮಾತನಾಡುವದಿಲ್ಲ, ಎನ್ನಯ, ಕಂಗಳ- ಕಣ್ಣುಗಳ, ಪುಣ್ಯಮೇ, ಮತ್ಸಹಾಯಕ, ಕಿನ್ನರನಾಯಕ! ಪೊದಳ್ದ- ಪ್ರಸಿದ್ಧನಾದ, ಎನ್ನೊಡನೆ, ಏಕೆ, ನೀಂ, ಮುನಿದೆ- ಕೋಪಿಸಿ ಕೊ , ಎನ್ನಯ, ಬಾಳ್ಕೆಗೆ- ಬದುಕುವಿಕೆಗೆ, ಅಡರ್ಪೆ- ಆಶ್ರಯವೇ! ಸತ್ಕೃಪಾಸನ್ನತೆವೆತ್ತು- ಒಳ್ಳೆಯದ ಯೆಗೆಸಮೀಪವರ್ತಿಯಾಗಿ, ಸಾಜೆ- ಚೆನ್ನಾಗಿ, ನಡೆ, ನೋಡಿ, ಭವತ್ಪದಭೃತ್ಯಂ, ಆಗಿ, ಬಾಳ್ದ, ಎನ್ನೊಳ್, ಇ ದು, ಏಕೆ, ನಿರ್ದಯತೆ ? ... ... ... ... ... ॥೧೭॥

ಎಂದು, ಬಸವರಸಂ, ಪಲವಂದಂ, ಪಳಯಿಸಿ- ಪ್ರಲಾಪಿಸಿ, ಶೋಕಾಶ್ರುಕಣಕಲಿತವದನಮಂಡಲಂ- ಕಣ್ಣೀರಿನ ಹನಿಯಿಂದಕೂಡಿದ ಮುಖವುಳ್ಳವನು, ಆಗಿ, ಇರ್ಪಿನಂ, ಆಗಳ್, ಪಡಿಯಾರಿಬಾಚಯ್ಯಂ, ಎಂಬ ಭಕ್ತಕಂಚುಕಿ- ಭಕ್ತಭೃತ್ಯನು, ಶಿವಗಣನಿರೂಪದಿಂ- ಪ್ರಮಥರ ಆಜ್ಞೆಯಿಂದ, ಪ್ರಮಥಪಟ್ಟಗಜಂ ಎನಿಪ- ಪ್ರಮಥರುಗಳಿಗೆ ಪಟ್ಟದಾನೆಯೆನಿಸಿಕೊಳ್ಳುವ, ಮಡಿವಾಳಮಾಚಿದೇವನ, ಅಡಿಗಳ, ಎಡೆಗೆ- ಸಮೀಪಕ್ಕೆ, ಎ ಳ್ತಂದು, ಭಕ್ತಿಯಿಂ, ಪೊಡಮಟ್ಟು, ಕಿನ್ನರೇಂದ್ರಂ, ಪನ್ನಗಧರನ, ಒಡವೆರೆದ- ಜೊತೆಯಲ್ಲಿಸೇರಿದ, ಇರ ವಂ, ಬಿನ್ನವಿಸಿ, ಬನ್ನಿರಿ, ಎಂಬುದಂ, ಸಮುನ್ನತಚಿತ್ತಂ- ಉಬ್ಬಿದ ಮನಸ್ಸುಳ್ಳ, ಮಾಚಿದೇವಂ, ಕೇಳ್ದು, ಶಿವಗಣನಿವಹಂ, ಅಲ್ಲಿ, ಬಂದು, ಇರ್ದಪುದೆ ? ಬಸವಂ, ಏಗೆಯ್ದಪಂ ? ಪೇಳ್, ಎಂಬುದುಂ, ಆತಂ ಇಂತು, ಎಂದಂ. * * * * * * * * * * * * * * * * *

ಮಾದರಸಮುಖ್ಯಂ- ಮಾದರಸನೇ ಮೊದಲಾದ, ಶಿವಶರಣವೃಂದಂ, ಬಂದು, ಇರ್ಪುದು, ಈಗಳ್, ಆ ಬಸವಂ, ಪಡೆದು, ಎಳ್ತಂದು, ಕಿನ್ನರನ, ಅಂದದಕಂಧರಮಂ- ಸುಂದರವಾದ ಕತ್ತನ್ನು, ಅಪ್ಪಿ- ಆಲಿಂಗಿ ಸಿ, ಶೋಕಿಪನಲ್ತೆ? ... ... ... ... ... ॥೧೮॥

ಅಲ್ಲಿ, ಬಸವಕುಮಾರಂ, ಪ್ರಣಯದೆ- ವಿಶ್ವಾಸದಿಂದ, ಕಿನ್ನರಬೊಮ್ಮನ, ಗುಣಂಗಳಂ, ನೆನೆದು, ನೊಂದು, ಬಿಸುಸುಯ್ಯುತೆ- ಬೆಚ್ಚಗೆ ನಿಟ್ಟುಸುರನ್ನು ಬಿಡುತ್ತ, ಸಂದಣಿಪ- ಗುಂಪಾಗುವ, ಕಡುಶೋಕ ದಿಂ, ತಲ್ಲಣಿಸಿ, ಪಲುಂಬಿಸಿದಂ. ... ... ... ... ॥೧೯॥

ವ ॥ ಎಂದ ನುಡಿಯುಂ ಮಾಚಿದೇವ ನೇಳಿದಂಗೆಯ್ದು ಮುಗುಳ್ನಗೆನಕ್ಕು ॥ * *

ಕಂ ॥ ಕರುಣಾಳು ಬಸವ ನಲ್ಲದೆ । ಧರಣಿಯೊಳಾರುಂಟು ಶರಣ ನಳಿದೊಡೆ ಶೋಕಾ॥ ತುರನಾಗಿ ಮರುಗಿದವ ನೀ । ಧರಿತ್ರಿಯೊ ಳ್ಭಕ್ತಿಭಾವ ಮಿಂತಿರವೇಡಾ ॥ ॥೨೦॥

ಕಂ ॥ ಚರಲಿಂಗಪ್ರಾಣತೆ ಯದು । ಚಿರವ್ರತಂ ತಮಗೆ ನಿಪ್ಪ ಭಾಷೆಯ ಪರಿಯಂ ॥ ಪರುಟವಿಸಿದ ನೀಗ ಳ್ಬಸ । ವರಸಂ ಲೇಸೂದು ಪಮಪು ತನ್ನ ಚರಿತ್ರಂ ॥ ॥೨೧॥

ಮ ॥ ಶಿರಮಂ ಪತ್ತುಗುಮೋರ್ಮೆ ಭಕ್ತಿಮುದಮುದ್ರೇಕಂ ಪೊದಳ್ದಾಗ ಳ । ಬ್ಬರದಿಂ ಮಾಳ್ಪ ನನನ್ಯಸಾಧ್ಯಶಪಥೋಪನ್ಯಾಸಮಂ ಮುಂದೆ ಬ॥ ರ್ಪ್ಪ ರಮಂ ಕಜ್ಜದ ಹಾನಿಯುಂ ಪರಿಕಿಸಂ ಮತ್ತೆಲ್ಲ ಭಕ್ತರ್ಕಳಂ । ತಿರಲೊಲ್ಲಂ ಬಸವಂ ವಿಚಾರಿಸ ನದೇಕಾತ್ಮೀಯಸಾಮರ್ಥ್ಯಮಂ ॥ ... ... ... ... ... ... ॥೨೨॥

ಕಂ ॥ ನೆನೆವಂತೆ ಕಿನ್ನರಾಧೀ । ಶನ ಗುಣಮಂ ಪ್ರೊಣ್ದ ತನ್ನ ಭಾಷೆಯ ನೀಗಳ್ ॥ ನೆ ನೆಯದೆ ಕಣ್ಬನಿಗಳ ಪೆ । ರ್ಮ್ಪನಲಿಂ ನಾಂದಪನೆ ಭಲರೆ ಭಕ್ತವರೇಣ್ಯ ॥ ... ॥೨೩॥

ಕಂ ॥ ಹರಭಕ್ತಂ ಗಳಿವೆಂಬುದು । ಪರಮಾರ್ಥವೆ ಲಿಂಗಯೋಗಿ ಗೆತ್ತಣ ದಳಿವೀ ॥ ಪರಿ ಯರಿದರಿಯದ ಜಡರಂ । ತಿರೆ ತಾಂ ಬರಿದೇಕೆ ಬಸವ ನಾಕ್ರಂದಿಪನೊ ॥ ... ॥೨೪॥

ಕಂ ॥ ಜಂಗಮ ನೆನಗಸುವೆಂದು ಕ । ಡಂಗಿ ಕರಂ ಪ್ರೊಣ್ದ ಪ್ರೊತ್ಕೆಯಂ ಮರೆದೀಗ

---

ಎಂದ, ನುಡಿಯುಂ, ಮಾಚಿದೇವಂ, ಏಳಿದಾಗೆಯ್ದು- ತಿರಸ್ಕರಿಸಿ, ಮುಗುಳ್ನಗೆನಕ್ಕು. * * *

ಧರೆಯೊಳ್, ಕರುಣಾಳು- ದಯಾಶಾಲಿಯು, ಬಸವಂ, ಅಲ್ಲದೆ, ಆರ್, ಉಂಟು ? ಶರಣಂ, ಅಳಿದೊಡೆ, ಶೋಕಾತುರಂ, ಆಗಿ, ಮರುಗಿದಪಂ, ಈ ಧರಿತ್ರಿಯೊಳ್, ಭಕ್ತಿಭಾವಂ- ಭಕ್ತಿಸ್ಥಿತಿಯು, ಇಂತು, ಇರವೇಡಾ. ... ... ... . ... ... ... ॥೨೦॥

ಬಸವರಸಂ, ತನಗೆ, ಚರಲಿಂಗಪ್ರಾಣತೆ- ಜಂಗಮಲಿಂಗವೇ ಪ್ರಾಣವಾಗಿರುವಿಕೆಯು, ಅದು, ಚಿರವ್ರತಂ- ಶಾಶ್ವತವಾದ ನಿಯಮವು, ಎನಿಪ್ಪ, ಭಾಷೆಯ, ಪರಿಯಂ, ಈಗಳ್, ಪರುಟವಿಸಿದಂ- ಮರೆಮಾಚಿದನು- ತನ್ನ, ಚರಿತ್ರಂ, ಲೇಸೊದುದು, ಅಮಮ! ... ... ... ॥೨೧॥

ಭಕ್ತಿಮುದದ. ಉದ್ರೇಕಂ- ಕೊಬ್ಬು, ಓರ್ಮೆ, ಶಿರಮಂ, ಪತ್ತುಗುಂ, ಪೊದಳ್ದಾಗಳ್- ವಿಸ್ತಾರವನ್ನು ಹೊಂದಿದ ಕಾಲದಲ್ಲಿ, ಅಬ್ಬರದಿಂ- ಅತಿ ರಭಸದಿಂದ, ಅನನ್ಯಸಾಧ್ಯಶಪಥೋಪನ್ಯಾಸಮಂ- ಇತರರಿಗೆ ಅಸಾಧ್ಯವಾದ ಪ್ರತಿಜ್ಞೆಯ ಉಪನ್ಯಾಸವನ್ನು, ಮಾಳ್ಪಂ, ಮುಂದೆ, ಬರ್ಪ್ಪ, ಇರವಂ, ಕಜ್ಜದ- ಕಾರ್ಯದ, ಹಾನಿಯುಂ- ನಾಶವನ್ನು, ಪರಿಕಿಸಂ- ಯೋಚಿಸುವದಿಲ್ಲ. ಮತ್ತೆ, ಎಲ್ಲಭಕ್ತರ್ಕಳಂತೆ, ಇರಲೊಲ್ಲಂ, ಬಸವಂ- ಆತ್ಮೀಯಸಾಮರ್ಥ್ಯಮಂ- ತನ್ನ ಶಕ್ತಿಯನ್ನು, ಅದೇಕೆವಿಚಾರಿಸಂ ? ... ... ॥೨೨॥

ಕಿನ್ನರಾಧೀಶನ, ಗುಣಮಂ, ನೆನೆವಂತೆ, ಪ್ರೊಣ್ದ- ಪ್ರತಿಜ್ಞೆ ಮಾಡಿದ, ತನ್ನ, ಭಾಷೆಯಂ, ಈಗಳ್, ನೆನೆಯದೆ, ಕಣ್ಬನಿಗಳ- ಕಣ್ಣೀರಿನ, ಪೆರ್ಮ್ಪನಲಿಂ- ದೊಡ್ಡಪ್ರವಾಹದಿಂದ, ನಾಂದಪನೆ- ನನೆಯುವನೇ? ಭಕ್ತವರೇಣ್ಯ- ಭಕ್ತಶ್ರೇಷ್ಠನೇ ! ಭಲರೆ. ... ... ... ... ॥೨೩॥

ಹರಭಕ್ತಂಗೆ, ಅಳಿವು- ಮರಣವು- ಎಂಬುದು, ಪರಮಾರ್ಥವೆ- ನಿಶ್ಚಯವಾದಭಿಪ್ರಾಯವೇ ? ಲಿಂಗಯೋಗಿಗೆ, ಅಳಿವು, ಎತ್ತಣದು ? ಈ ಪರಿಯು, ಅರಿದು, ಅರಿಯದ, ಜಡರಂತಿರೆ- ಮೂಢರಹಾಗೆ, ಬರಿದೆ, ಬಸವಂ, ಏಕೆ ಆಕ್ರಂದಿಪನೋ- ಏಕೆ ಅಳುವನೋ? ... ... ... ॥೨೪॥

ಜಂಗಮಂ, ಎನಗೆ, ಅಸು, ಎಂದು, ಕಡಂಗಿ- ಔತ್ಸುಕ್ಯಪಟ್ಟು, ಪ್ರೊಣ್ದ ಪ್ರೊತ್ಕೆಯಂ- ಪ್ರತಿಜ್ಞೆಯ

ಳ್ ‖ ಪಿಂಗದೆ ಪಳಯಿಪ ಟಕ್ಕಂಗೆ । ಗಂಗಧರ ಕಲ್ಲಿನಾಥ ನೇನೊಲ್ದಪನೇ ‖ ‖೬೫‖

ಕಂ ‖ ಅಳ ಲರಿಯೆ ನವನ ಗುಣಸಂ । ಕುಳವಂ ನೆನೆನೆನೆದು ಪಾಡಿ ಬಸವರಸನಪ್ರೋ ‖ ಲ್ಪಳಯಿಸ ಲರಿಯೆಂ ಬಂದೊಡೆ । ಫಳಮೇ ನೆನ್ನಿಂದ ಮಲ್ಲಿಗಾತನೆ ಸೊಲ್ಗುಂ ‖ ‖೬೬‖

ವ ‖ ಎಂದು ಮಾಭಕ್ತಿರಹಿತನ ಸೂರ್ಕೆಗಾಂ ಬಾರೆ ನೆಂದ ಮಾಚಿದೇವ ನಾಕ್ಷೇಪ ವಚನಮುಂ ಕೇಳ್ದು ಪಡಿಯರಂ ಬಿಗುರ್ತು ಬೆಬ್ಬಳಿವೋಗಿ ಜವದಿಂ ಪರಿತಂದು ಗಣಸಭೆಗೆ ಮಣಿದು ಮಾಚಿದೇವ ನೆಂದುದ ನೆಲ್ಲಮುಂ ನಡುಕಂಮಿಗೆ ಬಿನ್ನವಿಸೆ ಬಸವರಾಜಂ ಕೇಳ್ದು ನಿಜಪ್ರತಿಜ್ಞೆಯಂ ನೆನೆದು ಶೋಕಮಂ ಪಾಣ್ದು ಬೆರಗುವಟ್ಟು ಕಿನ್ನರಪ್ರಾಣದೊಳ್ತನ್ನಸುವಂ ರಯದಿಂ ಬಳಸಲಿಸಿದಂ ತತ್ಪ್ರಸ್ತಾವದೊಳ್ ‖ * * * * * * *

ಕಂ ‖ ಚರಲಿಂಗದೆಸುವಿ ನೊಡನಸು । ವೆರಸಿದ ನೀಬಸವ ನಸಮಗುಣ ನಿದು ಪೊಸ ತು ‖ ರ್ವರೆಯೊಳ್ಕಂಡರೊಳಂ ಕೇ । ಳ್ದರೊಳಂ ಕಂಡೆಂದು ಪಾಲಿಸಿಯು ನುರಿದಪನೆ ‖

ಕಂ ‖ ಮಾಚಯ್ಯಂ ಬೆಸಸಿದುದೆ ಸ । ದಾಚಾರಂ ತನಗೆನುತ್ತೆ ಕಡುಕಜ್ಜಮ ನಾ ‖ ಳೋಚಿಸದೆ ನೆಗಳ್ದಮಹಿಮೆಯ । ಗೋಚರ ಪನ್ಯರ್ಗೆ ಬಸವದಂಡಾಧಿಪನ ‖ ‖೬೮‖

ವ ‖ ಎಂದಲ್ಲಿಯ ಭಕ್ತಸಮುದಯಂ ಬಸವನಂ ಪೊಗಳುತ್ತುಮಿರ್ದು ಪಡಿಯರಬಾಚಯ್ಯನು ಮಾಚಯ್ಯ ನೆಡೆಗೀಕಜ್ಜಮಂ ಬಿನ್ನವಿಸೆಂದು ಕಳುಪ ಲೊಡನವಂ ಘುಳಿಲನೇ

---

ನ್ನು, ಕೆರಂ, ಮರೆದು, ಈಗಳ್, ಪಿಂಗದೆ, ಪಳಯಿಪ- ಪ್ರಲಾಪಿಸುವ, ಟಕ್ಕಂಗೆ- ವಂಚಕನಿಗೆ, ಅಂಗಜಹರ ಕಲ್ಲಿನಾಥಂ- ಮನ್ಮಥಧ್ವಂಸಿಯಾದ ಶಿವನು, ಒಲ್ದಪನೇಂ? ... ... ... ‖೬೫‖

ಅವನ- ಆ ಕಿನ್ನರನ, ಗುಣಸಂಕುಲಮಂ, ನೆನೆನೆನೆದು, ಅಳಲ್- ದುಃಖಪಡುವದಕ್ಕೆ, ಅರಿಯೆಂ- ತಿಳಿಯೆನು, ಬಸವರಸನಪ್ಪೋಲ್, ಪಾಡಿ, ಪಳಯಿಸಲ್- ಪ್ರಲಾಪಿಸುವದಕ್ಕೆ ಅರಿಯೆಂ- ತಿಳಿಯೆನು, ಬಂದೊಡೆ, ಎನ್ನಿಂದೆ, ಏಂಫಳಂ? ಅಲ್ಲಿಗೆ, ಆತನೆ, ಸಾಲ್ಗುಂ- ಸಾಕು. ... ... ... ‖೬೬‖

ಆ ಭಕ್ತಿರಹಿತನ, ಸಾರ್ಕೆಗೆ- ಸಮೀಪಕ್ಕೆ, ಆಂ, ಎಂದುಂ- ಎಂದಿಗೂ, ಬಾರೆಂ-ಬರುವದಿಲ್ಲ: ಎಂದ, ಮಾಚಿದೇವನ, ಆಕ್ಷೇಪವಚನಮಂ, ಕೇಳ್ದು, ಪಡಿಯರಂ- ಕಂಚುಕಿಯು, ಬಿಗುರ್ತು- ಭಯವನ್ನುಹೊಂದಿ, ಬೆಬ್ಬಳಿವೋಗಿ- ಬೆರಗಾಗಿ, ಜವದಿಂ, ಪರಿತಂದು, ಗಣಸಭೆಗೆ, ಮಣಿದು, ಮಾಚಿದೇವಂ, ಎಂದುದಂ, ಎಲ್ಲಮಂ, ನಡುಕಂ- ನಡುಗುವಿಕೆಯು, ಮಿಗೆ, ಬಿನ್ನವಿಸೆ, ಬಸವರಾಜಂ, ಕೇಳ್ದು, ನಿಜಪ್ರತಿಜ್ಞೆಯಂ, ನೆನೆದು, ಶೋಕಮಂ, ಪಾಣ್ದು- ಬಿಟ್ಟು, ಬೆರಗುವಟ್ಟು, ಕಿನ್ನರಪ್ರಾಣದೊಳ್, ತನ್ನ, ಅಸುವಂ, ರಯದಿಂ- ಜಾಗ್ರತೆಯಿಂದ, ಒಳಗೆಲಿಸಿದಂ- ಸಮಿಪಾಪವನ್ನು ಹೊಂದಿಸಿದನು, ತತ್ಪ್ರಸ್ತಾವದೊಳ್. * * * *

ಅಸಮಗುಣಂ, ಈ ಬಸವಂ, ಚರಲಿಂಗದ, ಅಸುವಿನೊಡನೆ, ಅಸುವೆರಸಿದಂ, ಇದು, ಉರ್ವರೆಯೊಳ್- ಭೂಮಿಯಲ್ಲಿ, ಪೊಸತು, ಕಂಡರೊಳಂ, ಕೇಳ್ದರೊಳಂ, ಎಂದು, ಕಂಡುಂ, ಆಲಿಸಿಯುಂ- ಕೇಳಿಯೂ, ಅರಿದಪನೆ? ... ... ... ... ... ... ‖೬೭‖

ಮಾಚಯ್ಯಂ, ಬೆಸಸಿದುದೆ- ಆಜ್ಞಾಪಿಸಿದ್ದೇ, ತನಗೆ, ಸದಾಚಾರಂ, ಎನುತ್ತೆ, ಕಡುಕಜ್ಜಮಂ- ದೊಡ್ಡಕಾರ್ಯವನ್ನು, ಆಲೋಚಿಸದೆ, ಬಸವದಂಡಾಧಿಪನ, ನೆಗಳ್ದಮಹಿಮೆ- ಪ್ರಸಿದ್ಧವಾದ ಮಾಹಾತ್ಮ್ಯವು, ಅನ್ಯರ್ಗೆ, ಅಗೋಚರಂ- ಅದೃಶ್ಯವು. ... ... ... ... ‖೬೮‖

ಎಂದು, ಅಲ್ಲಿ, ಭಕ್ತಸಮುದಯಂ, ಬಸವನಂ, ಪೊಗಳುತ್ತುಂ, ಇರ್ದು, ಪಡಿಯರಬಾಚಯ್ಯನಂ, ಮಾಚಯ್ಯನ, ಎಡೆಗೆ, ಈ ಕಜ್ಜಮಂ, ಬಿನ್ನವಿಸಲ್, ಎಂದು, ಕಳುಪಲ್, ಒಡನೆ, ಅವಂ, ಘುಳಿಲನೆ, ಬೇಗನೆ,

ಳ್ತಂದೆರಗಿ ಒಸವ ನೆಸಗಿದುದದಮುಂ ಬಿನ್ನಪಂಗೆಯ್ಯೆ ಕೇಳ್ದು ಮಾಚಿದೇವಂ ಸಂತಸಂದಾ ಳ್ದು ರೋಮಾಂಚಕಂಚುಕಿತಾಂಗ ನಾಗಿ ॥ * * * * * * * * *

ಕಂ॥ ಗುಡಿಗಟ್ಟ ಭಕ್ತಜನಮು । ಗ್ಗಡಿಸುತೆ ಕೊಂಡಾಡು ತಲ್ಲಿಬ ಸವಂ ನೋಂನಿಂ॥ ದೊಡನೆಳ್ತರೆ ಮಾಚಯ್ಯಂ । ನಡೆತಂದಂ ವಿಪುಳಸಂಭ್ರಮಂ ವೆರಸಾಗಳ್ ॥ ೨೯॥

ಮತ್ತೇ॥ ವಿಲಸಜ್ಜಂಗಮಜೀವ ಭಾಪುರೆ ಚರಪ್ರಾಣಾನ್ವಿತಪ್ರಾಣಮಂಜುಲಶೀ ಲೋನ್ನತ ಚಾಗುರೇ ಶರಣಜೀವಸ್ಥಾಪನಾಚಾರ್ಯನಿ ॥ ಶ್ಚಲಭಕ್ತಿಪ್ರಮದಾಮನೋಜ್ಞ ಭಳಿರೇ ಭಕ್ತಾರ್ಥಸರ್ವಾರ್ಥಸಂ । ಕುಲಭಾಸ್ವದ್ಬಸವೇಶ ಭಾಪೆನುತೆ ಮಾಚಯ್ಯಂ ಮಹೋ ತ್ಸಾಹದಿಂ ॥ ... ... ... ... ... ... ॥೩೦॥

ವ॥ ಮತ್ತಂ॥ ಚಂ॥ ಜಯಬಸವೇಂದ್ರ ಭಕ್ತಿಗುಣಸಾಂದ್ರ ಚಿದಂಬುಧಿಪೂರ್ಣಚಂ ದ್ರನಿ । ರ್ಣಯನಿಜರೂಪನಿರ್ಜಿತಕಳಾಪ ಮಹಾಶಿವ ತತ್ವದೀಪ ದು ॥ ರ್ಣಯಪರಭಂಗ ಭ ಕ್ತಕೃತಸಂಗ ಶಿವೈಕ್ಯಪದಾಬ್ಜಭೃಂಗ ವಿ । ಸ್ಮಯಕರಕಾರ್ಯ ವಿಂಧ್ಯನಗಧೈರ್ಯ ಜಗತ್ತ್ರ ಯಧುರ್ಯ ವಿಗ್ರಹ ॥ ... ... ... ... ... ॥೩೧॥

---

ಏಳ್ತಂದು, ಎರಗಿ, ಬಸವಂ, ಎಸಗಿದ, ಅಂದವಂ, ಬಿನ್ನಪಂಗೆಯ್ಯೆ, ಮಾಚಿದೇವಂ, ಕೇಳ್ದು, ಸಂತಸಂದಾಳ್ದು, ರೋಮಾಂಚಕಂಚುಕಿತಾಂಗಂ- ರೋಮೋದ್ಗಮದಿಂದ ಕವಚವಿಕ್ಕಿದಂತೆ ಮಾಡಲ್ಪಟ್ಟ ಶರೀರವುಳ್ಳವನು, ಆಗಿ. * * * * * * * * * * * * * * * * *

ಭಕ್ತಜನಂ, ಗುಡಿಗಟ್ಟಿ, ಉಗ್ಗಡಿಸುತೆ, ಬಸವನಂ, ಒಲವಿಂದೆ, ಅಲ್ಲಿ, ಕೊಂಡಾಡುತೆ, ಒಡನೆ, ಏಳ್ತರೆ, ಮಾಚಯ್ಯಂ, ಆಗಳ್, ವಿಪುಳಸಂಭ್ರಮಂವೆರಸು, ನಡೆತಂದಂ. ... ... ॥೨೯॥

ಮಾಚಯ್ಯಂ, ವಿಲಸಜ್ಜಂಗಮಜೀವ- ಪ್ರಕಾಶಮಾನವಾದ ಜಂಗಮಪ್ರಾಣಿಯೇ, ಭಾಪುರೆ- ಶಹಬಾಸ್! ಚರಪ್ರಾಣಾನ್ವಿತಪ್ರಾಣಮಂಜುಲಶೀಲೋನ್ನತ— ಚರ- ಜಂಗಮದ, ಪ್ರಾಣ- ಪ್ರಾಣದಲ್ಲಿ, ಅನ್ವಿತ- ಕೂಡಿರುವ, ಪ್ರಾಣ- ಪ್ರಾಣದಿಂದ, ಮಂಜುಲ- ಪ್ರಕಾಶಮಾನವಾದ, ಶೀಲ- ಸ್ವಭಾವದಿಂದ, ಉನ್ನತ- ಉತ್ಕೃಷ್ಟನಾದವನೇ ! ಚಾಗುರೆ, ಶರಣಜೀವಸ್ಥಾಪನಾಚಾರ್ಯ- ಪ್ರಮಥಪ್ರಾಣವನ್ನು ಸ್ಥಾಪನೆ ಮಾಡತಕ್ಕವನೇ ! ನಿಶ್ಚಲಭಕ್ತಿಪ್ರಮದಾಮನೋಜ್ಞ- ನಿಶ್ಚಂಚಲವಾದ ಭಕ್ತಿಯೆಂಬ ಸ್ತ್ರೀಯಿಂದ ಮನೋಹರನಾದವನೇ, ಭಳಿರೆ ! ಭಕ್ತಾರ್ಥಸರ್ವಾರ್ಥಸಂಕುಲಭಾಸ್ವದ್ಬಸವೇಶ— ಭಕ್ತ- ಭಕ್ತರ, ಅರ್ಥ- ಪ್ರಯೋಜನಕ್ಕೋಸ್ಕರ, ಸರ್ವಾರ್ಥ ಸಮಸ್ತದ್ರವ್ಯಗಳ, ಸಂಕುಳ- ಸಮುದಾಯದಿಂದ, ಭಾಸ್ವತ್- ಪ್ರಕಾಶಮಾನನಾದ, ಬಸವೇಶ! ಭಾಪು, ಎನುತೆ, ಮಹೋತ್ಸಾಹದಿಂ. ... ... ॥೩೦॥

ಬಸವೇಂದ್ರ, ಜಯ- ಸರ್ವೋತ್ಕೃಷ್ಟನಾಗು, ಭಕ್ತಿಗುಣಸಾಂದ್ರ! ಚಿದಂಬುಧಿಪೂರ್ಣಚಂದ್ರ- ಜ್ಞಾನವೆಂಬ ಸಮುದ್ರಕ್ಕೆ ಪೂರ್ಣಚಂದ್ರನಾದ, ನಿರ್ಣಯನಿಜರೂಪನಿರ್ಜಿತಕಲಾಪ— ನಿರ್ಣಯ- ನಿಶ್ಚಯವಾದ, ನಿಜ- ತನ್ನ, ರೂಪ- ಸ್ವರೂಪಿನಿಂದ, ನಿರ್ಜಿತ- ಜೈಸಲ್ಪಟ್ಟ, ಕಲಾಪ- ಚಂದ್ರನುಳ್ಳ, ಮಹಾಶಿವತತ್ವದೀಪ- ಅಧಿಕವಾದ ಪರಶಿವತತ್ವಗಳಿಗೆ ಪ್ರಕಾಶಕನೆನಿಸುವ, ದುರ್ಣಯಪರಭಂಗ- ದುರ್ನೀತಿಯುಳ್ಳಾಸಕ್ತರಾದವರನ್ನು ನಾಶಮಾಡುವ, ಭಕ್ತಕೃತಸಂಗ- ಶಿವಭಕ್ತರಲ್ಲಿ ಮಾಡಲ್ಪಟ್ಟ ಸ್ನೇಹವುಳ್ಳ, ಶಿವೈಕ್ಯಪದಾಬ್ಜಭೃಂಗ— ಶಿವೈಕ್ಯ- ಶಿವನಲ್ಲಿ ಅಭಿನ್ನರಾದವರ, ಪದಾಬ್ಜ- ಪಾದಕಮಲಕ್ಕೆ, ಭೃಂಗ- ಭ್ರಮರನಾದ, ವಿಸ್ಮಯಕರಕಾರ್ಯ- ಆಶ್ಚರ್ಯವನ್ನುಂಟುಮಾಡುವ ವ್ಯಾಪಾರವುಳ್ಳ, ವಿಂಧ್ಯನಗಧೈರ್ಯ- ವಿಂಧ್ಯಪರ್ವತಕ್ಕೆ ಸಮಾನವಾದ ಧೈರ್ಯವುಳ್ಳ, ಜಗತ್ತ್ರಯಧುರ್ಯವಿಗ್ರಹ, ಮೂರುಲೋಕದ ಭಾರವನ್ನು ವಹಿಸುವ ಶರೀರವುಳ್ಳ. ॥೩೧॥

ಮ॥ ಸ್ರ॥ ಚರಲಿಂಗಪ್ರಾಣತಾಬಂಧುರ ಜಯಜಯಸಾಮರ್ಥ್ಯಸಂಪನ್ನ ಸತ್ಯಾ । ಕರ ವೀರಾಚಾರಸಾರಾದರ ಜಯ ಜಯ ವಿಖ್ಯಾತಲಿಂಗಾಂಗಸಂಯೋ ॥ ಗ ರಹಸ್ಯಾರ್ಥಾನುಭಾವಪ್ರದ ಜಯಜಯ ಸದ್ಭಕ್ತಿಸಾಮ್ರಾಜ್ಯಧೌರೇ । ಯ ರಸಾಕಾಂತಾಪನಾರ್ಥಾಗತ ಜಯ ಜಯಭಕ್ತಾಬ್ಧಿಸಂಪೂರ್ಣಚಂದ್ರ ॥ ... ... ... .. ॥೩೦॥

ಕಂ ॥ ನುಡಿಯಲರಿದಾದ ವಾಕ್ಯಂ । ನುಡಿದ್ದೈ ನುಡಿದಂತೆ ನಡೆದೆ ನಿನ್ನಯ ಪೆಂಪಂ ॥ ಪಡಿಗಟ್ಟಿ ನುತಿಸಿದಪೆನೆಂ । ದೊಡೆ ಸಾಧ್ಯವೆ ಬಸವ ಭಕ್ತಜನಮಂದಾರ ॥ ॥೩೩॥

ವ॥ ಎಂದು ಕೊಂಡಾಡಿ ಪಾಡಿ ನಲಿವೆರ್ಚುತ್ತಮಾಗಳ್ ॥ * * * * * *

ಮ॥ ಸ್ರ॥ ಹರ ತೇಜಃಪುಂಜವೋ ಶಂಕರಕರವಿಕರಾಳಾಸ್ತ್ರವೋ ಶೈಲಜಾಧೀ । ಶ್ವರನುದ್ಯದ್ಭಾಳನೇತ್ರಪ್ರಭೆಯೊ ಮೃಡನಸಾಮರ್ಥ್ಯವೋ ಮನ್ಮಥಾರಾ ॥ ತಿರುಚಿಸ್ಫೂರ್ತಿಪ್ರತಾಪಾಕೃತಿಯೊ ಶಿವನಸಾಕಾರವೋ ನೋಡಿ ಮೆಂಬಂ । ತಿರೆ ಬಂದಂ ದಿವ್ಯತೇಜೋಮಯತನುಘನಶೌರ್ಯಾಕರಂ ಮಾಚಿದೇವಂ ॥ ... ... ... ॥೩೪॥

ಲಲಿತಪದವೃತ್ತಂ ॥ ನೋಡೆ ಸುಜನಾಳಿ ರತಿ ಮೂಡೆ ಶಿವಭಕ್ತತತಿ ಪಾಡೆ ಪೊಸ

---

ಚರಲಿಂಗಪ್ರಾಣತಾಬಂಧುರ- ಜಂಗಮವೇ ಪ್ರಾಣವಾಗುಳ್ಳತನದಿಂದ ಮನೋಹರನಾದವನೇ! ಜಯಜಯ, ಸಾಮರ್ಥ್ಯಸಂಪನ್ನ, ಸತ್ಯಾಕರ, ವೀರಾಚಾರಸಾರಾದರ- ವೀರಶೈವನಿಯಮದಿಂದ ಶ್ರೇಷ್ಠರಾದವರಲ್ಲಿ ಪ್ರೀತಿಯುಳ್ಳವನೇ ! ಜಯಜಯ, ಲಿಂಗಾ.........ಪ್ರದ— ಲಿಂಗ, ಅಂಗ, ಇವುಗಳ, ಸಂಯೋಗ- ಸಂಬಂಧ ಬೋಧಕವಾದ, ರಹಸ್ಯ- ಗುಟ್ಟಿನ, ಅರ್ಥ- ಅಭಿಪ್ರಾಯದ, ಅನುಭಾವ- ತಿಳುವಳಿಕೆಯನ್ನು, ಪ್ರದ ಕೊಡತಕ್ಕವನೇ! ಜಯಜಯ, ಸದ್ಭಕ್ತಿಸಾಮ್ರಾಜ್ಯಧೌರೇಯ— ಸದ್ಭಕ್ತಿ- ಒಳ್ಳೆಯ ಭಕ್ತಿಯೆಂಬ, ಸಾಮ್ರಾಜ್ಯ- ರಾಜ್ಯಾಧಿಪತ್ಯದ, ಧೌರೇಯ- ಭಾರವಾಹಕನಾದ; ರಸಾ......ಗತ—ರಸಾಕಾಂತಾ- ಭೂಕಾಂತೆಯನ್ನು, ಅವನಾರ್ಥ- ರಕ್ಷಿಸುವುದಕ್ಕೋಸ್ಕರ, ಆಗತ- ಬಂದವನೇ! ಜಯ, ಭಕ್ತಾಬ್ಧಿಸಂಪೂರ್ಣಚಂದ್ರ- ಭಕ್ತರೆಂಬ ಸಮುದ್ರಕ್ಕೆ ಪೂರ್ಣಚಂದ್ರನಾದವನೇ! ಜಯ. ... ... ... ॥೩೦॥

ಭಕ್ತಜನಮಂದಾರ, ಬಸವ! ನುಡಿಯಲ್, ಅರಿದು, ಅಸಾಧ್ಯವು, ಆದ ವಾಕ್ಯಂನುಡಿದ್ದೈ- ಮಾತನ್ನಾಡಿದೆ, ನುಡಿದಂತೆ, ನಡೆದೆ, ನಿನ್ನಯ, ಪೆಂಪಂ- ಅಧಿಕ್ಯವನ್ನು, ಪಡಿಗಟ್ಟಿ- ಸರಿಹೊಲಿಸಿ, ನುತಿಸಿದಪೆಂ, ಎಂದೊಡೆ, ಸಾಧ್ಯವೆ ? ... ... ... ... ॥೩೩॥

ಎಂದು, ಕೊಂಡಾಡಿ, ಪಾಡಿ, ನಲಿವೆರ್ಚುತ್ತಂ, ಆಗಳ್. * * * * * * *

ದಿವ್ಯತೇಜೋಮಯತನುಘನಶೌರ್ಯಾಕರಂ— ದಿವ್ಯ- ಮನೋಹರವಾದ, ತೇಜೋಮಯ- ಕಾಂತಿರೂಪವಾದ, ತನು- ಶರೀರವುಳ್ಳ, ಘನ- ಉತ್ಕೃಷ್ಟವಾದ, ಶೌರ್ಯ- ಪರಾಕ್ರಮಕ್ಕೆ, ಆಕರಂ- ಆಸ್ಪದನಾದ, ಮಾಚಿದೇವನು, ಹರತೇಜಃಪುಂಜವೊ- ಶಿವನ ಕಾಂತಿಯ ಗುಂಪೋ! ಶಂಕರಕರದ- ಶಿವನ ಹಸ್ತದ, ಕರಾಳಾಸ್ತ್ರವೊ- ಭಯಂಕರವಾದ ಬಾಣವೋ ! ಶೈಲಜಾಧೀಶ್ವರನ, ಉದ್ಯದ್ಭಾಳನೇತ್ರಪ್ರಭೆಯೊ- ಉತ್ಕೃಷ್ಟವಾದ ಹಣೆಗಣ್ಣಿನ ಜ್ವಾಲೆಯೋ! ಮೃಡನ, ಸಾಮರ್ಥ್ಯವೊ ? ಮನ್ಮಥಾರಾತಿರುಚಿಸ್ಫೂರ್ತಿಪ್ರತಾಪಾಕೃತಿಯೊ— ಕಾಮಾರಿಯಾದ ಶಿವನ ತೇಜಸ್ಸ್ಫುರಣವುಳ್ಳ ಶೌರ್ಯದಾಕಾರವೋ ? ಶಿವನ, ಸಾಕಾರವೋ ? ನೋಡಿಂ, ಎಂಬಂತಿರೆ, ಬಂದಂ. ... ... ... ... ॥೩೪॥

ಸುಜನಾಳಿ, ನೋಡೆ, ರತಿ, ಪ್ರೀತಿಯು, ಮೂಡೆ, ಶಿವಭಕ್ತತತಿ, ಪಾಡೆ, ಚರವೃಂದಂ, ಪೊಸಕೇಳಿಯಂ, ಆಡೆ, ನಾಡೆ, ಮಣಿದು, ಈಪ್ಸಿತವ ಇಷ್ಟಾರ್ಥವನ್ನು, ನೀಡು- ಕೊಡು, ಎನುತೆ, ವಂದಿತತಿ- ಸ್ತು

ಕೇಳಿಕೆಯು ಸೊಡೆ ಚರನೃಪಂ । ಸೊಡೆ ಮಣಿಡೇಪ್ಸಿತವ ನೀಡೆನುತೆ ಮಂಚಿತಶಿ ಪಾಡೆ ಪರ ಪಾದಿಜನ ಮೋಡೆ ಯಮವಕ್ತ್ರಂ ॥ ಬಾಡೆ ಭಯವಿಹ್ವಲತೆ ಗೂಡೆ ಭವಿರಾಜಿ ಕೋಡಾಡೆ ಬುಧಪಾಳಿ ಬಗೆಕೋಡೆ ಖಳಜಾಲ । ತೋಡಮರ ಪಿವ ಶಶಿಚೂಡ ನಿವನೆಂಬ ಬಗೆ ಗೀಡೆನಿಸಿ ಶರಣರೊಡನಾಡಿ ನಡೆತಂದಂ ॥ ... ... ... ... ॥೩೫॥

ವ ॥ ಅಂತೆಳ್ತಂದು ಮನ್ನಣೆಯಿಂ ತನ್ನ ನಿದಿರ್ಗೊಳ್ವ ಶರಣಸಮುದಯಂ ಮಣಿ ಯೆ ಮಗುಳ್ದು ಮಣಿದಣಿಯರ ಮನೆಗ್ಗದಿ ಗಳಲ ನೇಳ್ತಂದು ಗಣಸಭೆಗೆ ಪೊಡಮಟ್ಟು ತದನುಜ್ಞೆಯಂ ಶಿರದೊಳಾಂತು ಸಕಲಶಿವಗಣಚರಣಾರವಿಂದಂಗಳಂ ಮಾನಸದೊಳ ರ್ಚಿಸಿ ಸಮಗ್ರನಿಷ್ಠೆಯಿಂ ನಿಂದು ॥ * * * * * * * * * * *

ಮಲ್ಲಿಕಾಮಾಲಾವೃತ್ತಂ ॥ ಕಿನ್ನರೇಶ್ವರ ನಿನ್ನ ಸುಪ್ರಿಯಮಿತ್ರನಂ ವೃಷಭೇಂದ್ರ ನಂ । ಮುನ್ನ ನೀಂ ತೊರೆದೆಯ್ದಲಕ್ಕುಮೆ ಮೇಣ್ಮಹೇಶ್ವರನಾಜ್ಞೆಯಂ ॥ ನಿಶ್ಚಯದಿಂ ಪರಿ ಪೂರ್ತಿಗೆಯ್ಯದೆ ಬಂದೊಡೀತನ ದೆಂತು ಪೇಳ್ । ನಿನ್ನೊಳೆಂದೊಡಗೂಡಿದೈ ಹರನಾದೊಡಂ ಗಣವೃಂದಮಂ ॥ ... .. ... ... ... ... ॥೩೬॥

ಕಂ ॥ ವಂಚಿಸುತೆ ನಿಮ್ಮ ನೀಶ್ವರ । ನಂಚಿತಮತಿ ಯುಳಿಯದೆಂತು ಕೊಂಡೊಯ್ದ ನೊ ನಿ ॥ ಮ್ಮಂ ಚದುರ ರೊಲ್ದಪರೆ ಗಣ । ಸಂಚಯದೊಳ್ನಿಮಗೆ ಪೇರ್ಮೆ ಕೈಸಾರ್ದಪುದ॥

ಕಂ ॥ ವಸುಧೆಯೊಳೆ ಬಸವ ನಿಲ್ಲದೊ । ಡಸಮಾಕ್ಷನ ಮಹಿಮೆ ಯೊಳವೆ ಶಿವಭಕ್ತಿ

---

ಶಿಖಾತಕರ ಸಮೂಹವು, ಪಾಡೆ, ಪರವಾದಿಜನಂ, ಓಡೆ, ಯಮವಕ್ತ್ರಂ- ಯಮನಮುಖವು, ಬಾಡೆ, ಭವಿ ರಾಜಿ- ಲಿಂಗಹೀನರ ಪಙ್ಕ್ತಿಯು, ಭಯವಿಹ್ವಲತೆಗೂಡೆ- ಭಯದಿಂದ ವ್ಯಾಕುಲರಾಗಲು, ಬುಧಪಾಳಿ- ವಿ ದ್ವಾಂಸರ ಪಙ್ಕ್ತಿಯು, ಕೊಂಡಾಡೆ, ಖಳಜಾಲಂ- ನೀಚರಗುಂಪು, ಬಗೆಕೋಡೆ- ಮನೋವ್ಯಥೆಯುಳ್ಳುದಾಗು ದಲಾಗಿ, ಇವಂ, ತೋಡು- ಸಾಮ್ಯವು, ಅಮರದೆ- ಅಳವಡದೆ, ಇರ್ಪ, (ಅಂದರೆ ಉಪಮಾತೀತನಾದ) ಶಶಿ ಚೂಡಂ, ಎಂಬ, ಬಗೆಗೆ- ಯೋಚನೆಗೆ, ಈಡು- ಆಸ್ಪದನು, ಎನಿಸಿ, ಶರಣರೊಡನೆ,ನಾಡೆ, ನಡೆತಂದಂ. ॥೩೫॥

ಅಂತು, ಎಳ್ತಂದು, ಮನ್ನಣೆಯಿಂ- ಮರ್ಯಾದೆಯಿಂದ, ತನ್ನಂ, ಇದಿರ್ಗೊಳ್ವ, ಶರಣಸಮುದಯಂ, ಮಣಿಯೆ, ಮಗುಳ್ದು, ಮಣಿದು, ಅಣಿಯರು, ಅಮರ್ಗೊಡಿ, ಘಳಿಲನೆ, ಎಳ್ತಂದು, ಗಣಸಭೆಗೆ, ಪೊಡಮ ಟ್ಟು, ತದನುಜ್ಞೆಯಂ, ಶಿರದೊಳ್, ಪೊತ್ತು, ಸಕಲಶಿವಗಣಚರಣಾರವಿಂದಂಗಳಂ, ಮಾನಸದೊಳ್, ಅ ರ್ಚಿಸಿ, ಸಮಗ್ರನಿಷ್ಠೆಯಿಂ- ಸಂಪೂರ್ಣವಾದ ಶ್ರದ್ಧೆಯಿಂದ, ನಿಂದು. * * * * * * *

ಕಿನ್ನರೇಶ್ವರ! ನಿನ್ನ, ಸುಪ್ರಿಯಮಿತ್ರನು, ವೃಷಭೇಂದ್ರನಂ, ಮುನ್ನ, ನೀಂ, ತೊರೆದು, ಎಯ್ದ ಲ್, ಅಕ್ಕುಮೆ ? ಮೇಣ್, ಮಹೇಶ್ವರನ, ಆಜ್ಞೆಯಂ, ನಿಶ್ಚಯಿಂ- ನಿಶ್ಚಯದಿಂದ, ಪರಿಪೂರ್ತಿಗೆಯ್ಯದೆ- ಇದು, ಬಂದೊಡೆ, ಈತನಂ, ನಿನ್ನೊಳ್, ಎಂತುಬಡಗೂಡಿದೈ-ಹ್ಯಾಗೆ ಜೊತೆಯಲ್ಲಿ ಸೇರಿಸಿಕೊಂಡೆ ? ಪೇ ಳ್, ಹರನಾದೊಡಂ, (ಗಣವೃಂದಮಂ.) ... ... ... ... ॥೩೬॥

ವಂಚಿಸುತೆ, ಅಂಚಿತಮತಿ- ಪೂಜ್ಯವಾದ ಬುದ್ಧಿಯುಳ್ಳವನಾಗಿ, ನಿಮ್ಮಂ, ಈಶ್ವರಂ, ಉಳಿಯದೆ, ಎಂ ತುಕೊಂಡೊಯ್ದನೊ- ಹ್ಯಾಗೆ ಕರೆದುಕೊಂಡು ಹೋದನೋ? ನಿಮ್ಮಂ, ಚದುರರ್- ಕುಶಲರು, ಒಲ್ದಪ ರೆ ? ಗಣಸಂಚಯದೊಳ್, ನಿಮಗೆ, ಪೇರ್ಮೆ- ಆಧಿಕ್ಯವು, ಕೈಸಾರ್ದಪುದೆ- ಕೈಗೂಡುವದೇ ? ॥೩೭॥

ವಸುಧೆಯೊಳೆ, ಬಸವಂ, ಇಲ್ಲದೊಡೆ, ಅಸಮಾಕ್ಷನ, ಮಹಿಮೆ, ಒಳವೆ ? ಶಿವಭಕ್ತಿಯು, ಪೆಂಪು, ಎಸೆದ ಪುದೆ? ಅರ್ಕಂ- ಸೂರ್ಯನು, ಇಲ್ಲದೊಡೆ, ಪಗಲ- ಹಗಲಿನ, ಸಿರಿ- ಲಕ್ಷ್ಮಿಯು, ನವಬಿಸಜದ- ನೂತನವಾದ ಕ

ಯುದೆಂ ॥ ಪೆಸವಪ್ಪುದೆ ಪಗಲು ಸಿರಿ ನವ । ಬಿಸಜದ ಸೊಂಪರ್ಕ್ಕೆ ನಿಲ್ಲದೊಪೆ ಸಮನಿಪ್ಪುದೆ ॥

ಮ ॥ ಸ್ರ ॥ ಚರಲಿಂಗಪ್ರಾಣಭಾವಂ ಬಸವನಸುವನೊಲ್ದಿತ್ತ ನಾತ್ಮಪ್ರತಿಜ್ಞಾ ।
ಪರಿಪಾಲಂ ಯುಕ್ತ ಮಾತಂಗದು ಪುರಹರನುಂ ನೀನು ಮಾತ್ಮೇಚ್ಛೆಯಿಂ ಭ ॥ ಕ್ತರನೊ
ಪ್ಪಂ ಮಂಬಿಸುತ್ತೀಶರಣ ನಸುವ ನೊಯ್ವಂದವೇಂ ತಕ್ಕುದೇ ಕಿ । ನ್ನರ ನೀ ನೇಳ್ವೃಲ
ಷಾಧೀಶ್ವರನೊಡನೆ ಧರಾಚಕ್ರದೊಳ್ಬಾಳಲೀಗಳ್ ॥ ... ... ॥೩೯॥

ವ ॥ ಎಂದು ಸಂಭ್ರಮಂ ವಿಜೃಂಭಿಸಿ ನುಡಿಯ ಲೊಡನೆ ॥ * * * * *

ಕಂ ॥ ತನು ಮಲುಗೆ ಕಿನ್ನರಯ್ಯಂ ।ಕನಸಂ ಕಂಡೇಳ್ವ ತೆರದಿ ನೇಳ್ದೊಪ್ಪಿರೆ ಭೋಂ॥
ಕನೆ ಬಸವ ನೇಳ್ದು ತತ್ಪದ । ವನರುಹದೊಳಮರ್ಚಿ ನೊಸಲ ನವನತ ನಾದಂ ॥ ॥೪೦॥

ವ ॥ ಅಂತೆರಗುತೀರ್ವ್ವರುಂ ಮಾಚಿದೇವಂಗೆ ಮಣಿಯ ತನ್ಮಾಚಿದೇವ ನವರೊಗ್ಗಡಿ ಗ
ಣಸಭೆಗೆ ಮಗುಳ್ದೆರಗಿ ನಿಂದಾಗಳಾ ಮಾಹೇಶ್ವರ ರಾತನು ನೋಡಿ ಸಾಶ್ಚರ್ಯಮಾನಸ ರಾ
ಗಿ ಸಮ್ಮದಂಬಡೆದು ॥ * * * * * * * * * * * * *

ಮ॥ ಸ್ರ॥ ಶರಣಪ್ರಾಣಪ್ರತಿಷ್ಠಾಪರ ಪರಮಶಿವಾದ್ವೈತವಿದ್ಯೋತವಿದ್ಯಾ।ಕರ ವಿದ್ವದ್ವಂ
ದ್ಯವೀರವ್ರತಹಿತಕರಕಾರುಣ್ಯವಾರಾಸಿವಾದ್ಯು।ತ್ಕರಗರ್ವೋರ್ವೀಧ್ರಸಂಭೇದನಪವಿಭುವನಾ
ರಾಧ್ಯಭೂರುದ್ರ ವಿಶ್ವಂ।ಭರಭದ್ರಾಕಾರ ಭೂಭೃದ್ದ್ವಿಪದಳನಮಹಾಶೌರ್ಯಮಾಚಾರ್ಯವರ್ಯ॥

---

ಮಲದ, ಸೊಂಪು- ಸೊಗಸು, ಸಮನಿಪ್ಪುದೆ- ಪ್ರಾಪ್ತವಾದೀತೇ ? ... ... ॥೩೮॥

ಚರಲಿಂಗಪ್ರಾಣಭಾವಂ- ಜಂಗಮಪ್ರಾಣಿತ್ವವುಳ್ಳ, ಬಸವಂ ಅಸುವಂ, ಒಲ್ದು, ಇತ್ತಂ, ಆತಂಗೆ, ಅದು ಪ್ರತಿಜ್ಞಾಪಾಲನಂ- ಆತನ ಭಾಷೆಯನ್ನುರಕ್ಷಿಸುವಿಕೆಯು, ಯುಕ್ತಂ- ಸಹಜವು, ಪುರಹರನುಂ- ನೀನುಂ,ಆತ್ಮೇಚ್ಛೆಯಿಂ- ತನ್ನ ಇಷ್ಟದಿಂದ,ಭಕ್ತರು,ಒಪ್ಪಂ,ಮಂಬಿಸುತ್ತೆ, ಈಶರಣನ,ಅಸುವಂ, ಒಯ್ವ, ಅಂದಂ,ತಕ್ಕುದೇಂ? ಕಿನ್ನರ!ವೃಷಾಧೀಶ್ವರನೊಡನೆ,ಈಗಳ್, ಧರಾಚಕ್ರದೊಳ್,ಬಾಳಲ್- ಬದುಕುವದಕ್ಕೆ,ನೀಂ,ಏಳ್.

ಎಂದು, ಸಂಭ್ರಮಂ- ಸಡಗರವು, ವಿಜೃಂಭಿಸಿ- ಹೆಚ್ಚಾಗಿ, ನುಡಿಯಲ್, ಒಡನೆ. * * * *

ತನು, ಅಲುಗೆ- ಅಲ್ಲಾಡಲಾಗಿ, ಕಿನ್ನರಯ್ಯಂ, ಕನಸಂ, ಕಂಡು, ಏಳ್ವ, ತೆರದಿಂ, ಏಳ್ದು, ಒಪ್ಪಿ, ಇರೆ, ಬಸವಂ, ಭೋಂಕನೆ- ಜಾಗ್ರತೆಯಾಗಿ, ಏಳ್ದು, ತತ್ಪದವನರುಹದೊಳ್, ನೊಸಲಂ- ಹಣೆಯನ್ನು, ಅಮರ್ಚಿ, ಅವನತಂ- ನಮಸ್ಕರಿಸಿದವನು, ಆದಂ. ... ... ... ॥೪೦॥

ಅಂತು, ಎರಗಿ, ಈರ್ವರುಂ, ಮಾಚಿದೇವಂಗೆ, ಮಣಿಯೆ, ತನ್ಮಾಚಿದೇವಂ, ಅವರೊಗ್ಗಡಿ, ಗಣಸಭೆಗೆ, ಮಗುಳ್ದು, ಎರಗಿ, ನಿಂದಾಗಳ್, ಆ ಮಾಹೇಶ್ವರರ್, ಆತನಂ- ಆ ಮಾಚಿದೇವನನ್ನು, ನೋಡಿ, ಸಾಶ್ಚರ್ಯಮಾನಸರ್ಆಗಿ, ಸಮ್ಮದಂಬಡೆದು- ಸಂತೋಷವನ್ನುಹೊಂದಿ. * * * * * * *

ಶರಣಪ್ರಾಣಪ್ರತಿಷ್ಠಾಪರ-ಶರಣರಪ್ರಾಣವನ್ನು ಸ್ಥಾಪಿಸುವರಲ್ಲಿ ಆಸಕ್ತನಾದ, ಪರಮಶಿವಾದ್ವೈತವಿದ್ಯೋತವಿದ್ಯಾಕರ- ಉತ್ಕೃಷ್ಟವಾದ ಜೀವಪರಮರಿಗೆ ಭೇದವಂಹೇಳುವ ಪ್ರಕಾಶಿಸುವ ವಿದ್ಯೆಗಳಿಗೆ ಆಸ್ಪದನಾದ, ವಿದ್ವದ್ವಂದ್ಯ- ವಿದ್ವಾಂಸರಿಂದ ವಂದಿಸಲ್ಪಡುವದಕ್ಕೆ ಯೋಗ್ಯನಾದ, ವೀರವ್ರತಹಿತಕರ, ಕಾರುಣ್ಯವಾರಾಶಿ- ಕರುಣಾಸಮುದ್ರನಾದ, ವಾದ್ಯು.....ಪವಿ— ವಾದಿ- ಪರವಾದಿಗಳ, ಉತ್ಕರ- ಸಮುದಾಯದ, ಗರ್ವ- ಅಹಂಕಾರವೆಂಬ, ಉರ್ವೀಧ್ರ- ಪರ್ವತಗಳನ್ನು, ಸಂಭೇದನ- ಸೀಳುವದರಲ್ಲಿ, ಪವಿ- ವಜ್ರಾಯುಧನಾದ, ಭುವನಾರಾಧ್ಯ- ಜಗತ್ಪೂಜ್ಯನಾದ, ಭೂರುದ್ರ- ಭೂಮಿಗೆ ರುದ್ರಸ್ವರೂಪನಾದ, ವಿಶ್ವಂಭರಭದ್ರಾಕಾರ- ಭೂಮಿಗೆ ಮಂಗಳಕರವಾದ ಆಕಾರವುಳ್ಳ, ಭೂಭೃದ್ದ್ವಿಪದಳನಮಹಾಶೌರ್ಯ- ಬಿಜ್ಜಳರಾಜನ ಆನೆಯನ್ನು ಸೀಳುವದರಿಂದ ಅಧಿಕವಾದ ಪರಾಕ್ರಮವುಳ್ಳ, ಮಾಚಾರ್ಯವರ್ಯ ! ... ॥೪೧॥

ಚಂ ॥ ಶರಣಗಣಪ್ರಭಾವ ಸರಸೀರುಹಭಾಸ್ಕರ ಭವ್ಯ ಸೇವ್ಯ ಶಾಂ । ಕರಮತಪಾರಿ
ಜಾತ ಜಿತಮನ್ಮಥ ಜನ್ಮಜರಾವಿದೂರ ಸ ॥ ಚ್ಚರಿತ ಚರಾಚರಪ್ರಕರಪಾಲಕ ಜಂಗಮಲಿಂಗ
ಮಂಗಲ । ಸ್ಥಿರತರಭಕ್ತಿಯುಕ್ತ ಗಣಸನ್ನುತ ಸದ್ಗುಣರತ್ನಭೂಷಣ ॥ ॥೪೨॥

ಉ ॥ ಹಾರಪಟೀರಹೀರಘನಸಾರಸುಧಾರಸಸಾರಸಾರಿಮಂ । ದಾರತುಷಾರತಾರಧರ
ಣೀಧರನಾರದಗೌರಕೀರ್ತಿ ವಿ ॥ ಸ್ತಾರವಿಚಾರಸಾರ ನಯವಾಕ್ಯವಿಶಾರದ ವೀರಶೈವಗಂ ।
ಭೀರಮತಪ್ರಶಸ್ತಮಕರಾಕರವರ್ಧನಪೂರ್ಣಚಂದ್ರಮಾ ॥ ... ... ॥೪೩॥

ಕಂ ॥ ಬಿಜ್ಜಳಮಾನವಪತಿಮದ । ಕಜ್ಜಳಸಲಿಲಪ್ರವಾಹ ಸಾಹಸಭರ ವಿ ॥ ದ್ವಜ್ಜ
ಳಧಿಚಂದ್ರ ಭಜಕವಿ । ಪಜ್ಜಳದಪಟುಪ್ರಭಂಜನ ಪ್ರಭಸಿಭವ ॥ ... ॥೪೪॥

ಕಂ ॥ ಶೂಲಧರಭಕ್ತನಿವಹಮ । ನೀಲೋಕದ ಸುಜನನಿಕರಮಂ ಪರಮತಮಂ ॥
ಲಾಲಿಸಲುಂ ಪಾಲಿಸಲುಂ । ಸೋಲಿಸಲುಂ ಮಹಿಗೆ ಬಂದ ಮಹಿಮಾಧಾರಾ ॥ ॥೪೫॥

---

ಶರಣ......ಸ್ಕರ— ಶರಣ- ಶಿವಶರಣರ, ಪ್ರಭಾವ- ಮಹಿಮೆಯೆಂಬ, ಸರಸೀರುಹ- ಕಮಲಕ್ಕೆ, ಭಾಸ್ಕರ- ಸೂರ್ಯನಾದ, ಭವ್ಯಸೇವ್ಯ- ಭವ್ಯರಿಂದ ಸೇವಿಸಲ್ಪಡುವದಕ್ಕೆ ಯೋಗ್ಯನಾದ, ಶಾಂಕರಮತಪಾರಿಜಾತ– ಪರಶಿವಮತಕ್ಕೆ ಕಲ್ಪವೃಕ್ಷನಾದ, ಜಿತಮನ್ಮಥ- ಜೈಸಲ್ಪಟ್ಟ ಮನ್ಮಥನುಳ್ಳ, ಜನ್ಮಜರಾವಿದೂರ- ಹುಟ್ಟುವದು ಮುಪ್ಪುಗಳಿಗೆ ದೂರನಾದ, ಸಚ್ಚರಿತ, ಚರಾಚರಪ್ರಕರಪಾಲಕ, ಜಂಗ........ಯುಕ್ತ— ಜಂಗಮಲಿಂಗ- ಚರಲಿಂಗದಲ್ಲಿ, ಮಂಗಲ- ಶುಭವಾಗಿಯೂ, ಸ್ಥಿರತರ- ದೃಢವಾಗಿಯೂ, ಇರುವ, ಭಕ್ತಿ-ಭಕ್ತಿಯಿಂದ, ಯುಕ್ತ- ಕೂಡಿಕೊಂಡಿರುವ, ಗಣಸನ್ನುತ- ಪ್ರಮಥಸ್ತುತ್ಯನಾದ, ಸದ್ಗುಣರತ್ನಭೂಷಣ- ಸವಿಾಚೀನಗಳಾದ ಗುಣಗಳೆಂಬ ರತ್ನಗಳೇ ಆಭರಣವಾಗಿಯುಳ್ಳ; ... ... ॥೪೨॥

ಹಾರ......ಕೀರ್ತಿ— ಹಾರ- ಮುಕ್ತಾಹಾರ, ಪಟೀರ- ಶ್ರೀಗಂಧ, ಹೀರ- ವಜ್ರ, ಘನಸಾರ- ಪಚ್ಚಕರ್ಪೂರ, ಸುಧಾರಸ- ಅಮೃತ, ಸಾರಸಾರಿ ಚಂದ್ರ, ಮಂದಾರ- ಕಲ್ಪವೃಕ್ಷ, ತುಷಾರ- ಹಿಮ, ತಾರಧರಣೀಧರ- ಕೈಲಾಸಪರ್ವತ, ನಾರದ, ಇವುಗಳೋಪಾದಿಯಲ್ಲಿ, ಗೌರ- ಶುಭ್ರವಾದ, ಕೀರ್ತಿ- ಯಶಸ್ಸುಳ್ಳ, ವಿಸ್ತಾರ......ವಿಶಾರದ— ವಿಸ್ತಾರ- ವಿಸ್ತೃತವಾದ, ವಿಚಾರ- ಆಧ್ಯಾತ್ಮವಿಚಾರದಿಂದ, ಸಾರ- ಶ್ರೇಷ್ಠವಾದ, ನಯವಾಕ್ಯ- ನೀತಿವಾಕ್ಯದಲ್ಲಿ, ವಿಶಾರದ- ನಿಪುಣನಾದ, ವೀರ......ದ್ರಮ— ವೀರಶೈವಗಂಭೀರಮತ- ವೀರಶೈವನಾಮಕವಾದ ಗಂಭೀರವಾದ ಮತವೆಂಬ, ಪ್ರಶಸ್ತ- ಪ್ರಕೃಷ್ಟವಾದ, ಮಕರಾಕರ- ಸಮುದ್ರದ, ವರ್ಧನ- ವೃದ್ಧಿಹೊಂದಿಸುವ ವಿಷಯದಲ್ಲಿ, ಪೂರ್ಣಚಂದ್ರಮ ! ... ॥೪೩॥

ಬಿಜ್ಜಳಮಾನವಪತಿ......ಪ್ರವಾಹ—ಬಿಜ್ಜಳಮಾನವಪತಿ- ಬಿಜ್ಜಳರಾಜನ, ಮದ-ಗರ್ವವೆಂಬ, ಕಜ್ಜಳ-ಕಾಡಿಗೆಗೆ, ಸಲಿಲಪ್ರವಾಹ- ನೀರಿನ ಹೊಳೆಯಾದ, ಸಾಹಸಭರ-ಅತಿಪ್ರಯತ್ನ ವಿಶೇಷವುಳ್ಳ, ವಿದ್ವಜ್ಜಳಧಿಚಂದ್ರ- ವಿದ್ವಾಂಸರೆಂಬ ಸಮುದ್ರಕ್ಕೆ ಚಂದ್ರನಾದ, ಭಜಕ......ವಿಭವ— ಭಜಕ- ಸೇವಕರ, ವಿಪತ್- ಆಪತ್ತೆಂಬ, ಜಳದ- ಮೋಡಕ್ಕೆ, ಪಟು- ಸಮರ್ಥವಾದ, ಪ್ರಭಂಜನ- ಜಂಝಾವಾತನಿಗೆ, ಪ್ರಭ- ಸದೃಶವಾದ, ವಿಭವ- ವೈಭವವುಳ್ಳ. ... ... ... ... ... ॥೪೪॥

ಶೂಲಧರಭಕ್ತನಿವಹಮಂ— ಪರಶಿವಭಕ್ತರನ್ನು, ಲಾಲಿಸಲುಂ, ಆದರಿಸುವದಕ್ಕೂ, ಈ ಲೋಕದ, ಸುಜನನಿಕರಮಂ- ಸತ್ಪುರುಷರ ಸಮೂಹವನ್ನು, ಪಾಲಿಸಲುಂ- ರಕ್ಷಿಸುವದಕ್ಕೂ, ಪರಮತಮಂ— ಅನ್ಯಮತವನ್ನು, ಸೋಲಿಸಲುಂ- ಸೋಲಿಸುವದಕ್ಕೆ, ಮಹಿಗೆ- ಭೂಮಿಗೆ, ಬಂದ, ಮಹಿಮಾಧಾರ- ಮಹತ್ವಕ್ಕೆ ಆಶ್ರಯನಾದವನೇ? ... ... ... ... ... ... ॥೪೫॥

ಕಂ ॥ ಬಸವನುಮಂ ಕಿನ್ನರನುಮ । ನಸುಸಹಿತರ ನಿಂತು ನೆಗಳ್ದ ಶಿವಮಹಿಮೆಗೆ
ಬೆ ॥ ಳ್ಜಸಮ ನಮರ್ಚಿದೆ ಭಕ್ತ । ಪ್ರಸರಕ್ಕೆ ಮಹೋತ್ಸವಂಗಳಂ ಪಡೆದಿತ್ತೈ ॥೪೬॥

ಮತ್ತೇ ॥ ಗಣದುಗ್ಧಾಬ್ಧಿಸುಧಾಂಗ ನಿನ್ನ ನಯ ಯುಕ್ತಂ ನಿಷ್ಠುರಂ ವಾಣಿ ಸಂ ।
ದಣಿಮಾದ್ಯಷ್ಟವಿಭೂತಿಸರ್ವಪದಸನ್ಮೋಕ್ಷಂಗಳಂ ಮಾಳ್ಪ ಲ ॥ ಕ್ಷಣಮಂ ತೊಪ್ಪುಗು
ಮುರ್ವಿಯೊಳ್ನುಡಿಯದೇಂ ಬಲ್ಲರ್ಗೆ ಮುಂಗಯ್ಯ ಕಂ । ಕಣಕೇಂ ಕನ್ನಡಿಯುಂಟೆ ನೋ ॥
ಳ್ಪೊಡಿದೆ ದೃಷ್ಟಾಂತಂ ವೃಷಾಧೀಶನ ॥ ... ... .. ॥೪೭॥

ಕಂ ॥ ವಿಮಲಪ್ರತಿಜ್ಞೆಯಿದರಿಂ । ಪ್ರಮಥರ್ಕಳಶಾಸನಕ್ಕೆ ಸಂದುದು ಭಕ್ತಿ ॥ ಪ್ರ
ಮದೆಗೆ ಸೌಭಾಗ್ಯಂ ಗುಣ । ಸುಮನೋಮಾಲಿಕೆಗೆ ಕಂಪು ನೆರೆದುದು ಪೆರತೇಂ ॥ ॥೪೮॥

ಉ ॥ ಎಮ್ಮ ಮನೋರಥಾಮರಮಹೀರುಹ ಮಾರ್ಯವರೇಣ್ಯ ತಾಳ್ದು ಸೊಂ । ಪಂ
ಮಿಗೆ ಸತ್ವರಂ ಫಲಿತಮಾದುದು ಜಂಗಮಮಾನಸಾಂಬುಜಂ ॥ ಸಮ್ಮದಸೌರಭಂದಳೆದು
ದೆಂದೊಲವಿಂ ನುತಿಗೆಯ್ವುತಿರ್ಪಿನಂ । ದಿಮ್ಮದರಲ್ಲಿ ಮಾಚವಿಭು ಸಸ್ಮಿತಲೋಚನದಿಂದೆ
ನೋಡುತಂ ॥ ... ... ... ... ... ... ॥೪೯॥

ಕಂ ॥ ಬಸವವಿಭು ಮುಖ್ಯಶಿವಗಣ । ವಿಸರಮನಾತ್ಮೀಯವಿಮಲಕರುಣಾಮೃತಸಾ ॥

---

ಬಸವನುಮಂ, ಕಿನ್ನರನುಮಂ, ಅಸುಸಹಿತರಂ- ಪ್ರಾಣಯುಕ್ತರನ್ನು ಇಂತು, ನೆಗಳ್ದ, ಶಿವಮಹಿಮೆಗೆ, ಬೆಳ್ಜಸಮಂ- ಶುಭ್ರವಾದ ಕೀರ್ತಿಯನ್ನು, ಅಮರ್ಚಿದೆ- ಸೇರಿಸಿದೆ, ಭಕ್ತಪ್ರಸರಕ್ಕೆ- ಭಕ್ತಸಮೂಹಕ್ಕೆ, ಮಹೋತ್ಸವಂಗಳಂ, ಪಡೆದು, ಇತ್ತೈ. ... ... ... ॥೪೬॥

ಗಣದುಗ್ಧಾಬ್ಧಿಸುಧಾಂಗ- ಪ್ರಮಥರೆಂಬ ಕ್ಷೀರಸಮುದ್ರಕ್ಕೆ ಚಂದ್ರನಾದ ಎಲೈಮಾಚಿದೇವನೇ ! ನಿನ್ನ, ನಯಯುಕ್ತಂ- ನೀತಿಯಿಂದಕೂಡಿರುವ; ನಿಷ್ಠುರಂ- ಕಠಿಣವಾದ. ವಾಣಿ- ಮಾತು, ಸಂದ........ಗಳಂ— ಸಂದ- ಪ್ರಾಪ್ತವಾದ, ಅಣಿಮಾದ್ಯಷ್ಟವಿಭೂತಿ, ( ಅಣಿಮಾ, ಮಹಿಮಾ, ಗರಿಮಾ, ಲಘಿಮಾ, ಪ್ರಾಪ್ತಿ, ಪ್ರಾಕಾಮ್ಯ, ಈಶತ್ವ, ವಶಿತ್ವಗಳೆಂಬಷ್ಟವಿಭೂತಿಗಳ ) ಸರ್ವಪದ- ಸಕಲಕ್ಕೂ ಸ್ಥಾನವಾದ, ಸನ್ಮೋಕ್ಷಂಗಳಂ, ಮಾಳ್ಪ, ಲಕ್ಷಣಮಂ- ಚೆನ್ನೆಯನ್ನು, ಅಂತು- ಧರಿಸಿ, ಉರ್ವಿಯೊಳ್, ಒಪ್ಪುಗುಂ, ಬಲ್ಲರ್ಗೆ, ನುಡಿಯುದೇಂ- ಹೇಳತಕ್ಕದ್ದೇನು? ಮುಂಗಯ್ಯ, ಕಂಕಣಕೆ; ಕನ್ನಡಿ, ಉಂಟೇಂ? ನೋಳ್ಪೊಡೆ, ವೃಷಾಧೀಶನ, ಇದೆ, ದೃಷ್ಟಾಂತಂ. ... ... ... ... ॥೪೭॥

ಇದರಿಂ, ವಿಮಲಪ್ರತಿಜ್ಞೆ- ನಿರ್ಮಲವಾದ ಪ್ರತಿಜ್ಞೆಯು, ಪ್ರಮಥರ್ಕಳ, ಶಾಸನಕ್ಕೆ, ಸಂದುದು; ಭಕ್ತಿಪ್ರಮದೆಗೆ- ಭಕ್ತಿಯೆಂಬಸ್ತ್ರೀಗೆ, ಸೌಭಾಗ್ಯಂ, ಗುಣಸುಮನೋಮಾಲಿಕೆಗೆ- ಸದ್ಗುಣವೆಂಬ ಪುಷ್ಪಮಾಲಿಕೆಗೆ, ಕಂಪು, ನೆರೆದುದು, ಪೆರತೇಂ- ಮತ್ತೇನು ? ... ... ... ॥೪೮॥

ಆರ್ಯವರೇಣ್ಯ! ಎಮ್ಮ, ಮನೋರಥಾಮರಮಹೀರುಹಂ- ಇಷ್ಟಾರ್ಥವೆಂಬ ಕಲ್ಪವೃಕ್ಷವು, ಸೊಂಪಂ, ಮಿಗೆ, ತಾಳ್ದು, ಸತ್ವರಂ- ಜಾಗ್ರತೆಯಾಗಿ, ಫಲಿತಂ, ಆದುದು, ಜಂಗಮಮಾನಸಾಂಬುಜಂ- ಜಂಗಮರ ಮನಸ್ಸೆಂಬ ಕಮಲವು, ಸಮ್ಮದಸೌರಭಂದಳೆದುದು- ಸಂತೋಷವೆಂಬ ಪರಿಮಳವನ್ನು ಧರಿಸಿತು, ಎಂದು, ದಿವ್ಯಮ್ಮದರ್- ಹಾಡುವರು, ಅಲ್ಲಿ, ಒಲವಿಂ, ನುತಿಗೆಯ್ವುತೆ, ಇರ್ಪಿನಂ, ಮಾಚವಿಭು, ಸಸ್ಮಿತಲೋಚನದಿಂದೆ- ಮುಗುಳ್ನಗೆಯಿಂದಕೂಡಿದ ಕಣ್ಣಿನಿಂದ, ನೋಡುತಂ. ... ... ... ॥[illegible]॥

ಭಕ್ತಹೃದಯಕುಮುದಶಶಾಂಕಂ- ಭಕ್ತರ ಮನಸ್ಸೆಂಬ ಕನ್ನೈದಿಲೆಗೆ ಚಂದ್ರನಾದ ಮಾಚಿದೇವನು, ಬಸವವಿಭು .......ವಿಸರಮಂ— ಬಸವವಿಭು- ಬಸವೇಶನೇ, ಮುಖ್ಯ- ಮೊದಲಾದ, ಶಿವಗಣವಿಸರಮಂ-

ರಸರೋಧಿಯೊಳೋಲಾಡಿಸು । ತೆಸೆದಿರ್ದಂ ಭಕ್ತಹೃದಯಕುಮುದಶಶಾಂಕಂ ॥ ॥೫೦॥

ವ॥ ಆಗಳಾಭಕ್ತಗಣಂ ನಿಜಸಭೆಯೊಳೆಸೆವ ಬಸವರಸನಂ ನೋಡಿಕಾರುಣ್ಯಮುಂನೀಡಿ॥

ಮ॥ ಸ್ರ॥ ಪರಮೇಶಂ ತನ್ನೊಳೀಕಿನ್ನರನ ಕರಣಮಂ ಕೂಡಿಕೊಂಡಿರ್ಪ್ಪನಂ ತ । ಳ್ತಿರದಾತ್ಮಪ್ರಾಣಮಂ ಬೆಂಕೊಳಿಸಿ ಬೆರಸಿರ್ಪ್ಪೆ ಮತ್ತೆ ತತ್ಪ್ರಾಣಮಂ ಮಾ ॥ ಚರಸಾರ್ಯಂ ಸತ್ಕೃಪಾವೀಕ್ಷಣದೆ ಬರಿಸೆ ನೀಂ ಬೆನ್ನನೆಯ್ತಂದೆ ಭಾಪು । ರ್ವ್ವರೆಯೊಳ್ ನಿನ್ನನ್ನರಾ ರ್ಜಂಗಮಮಿಳಿತನಿಜಪ್ರಾಣ ರಾಠ್ಯಾಬ್ಧಿಚಂದ್ರ ॥ ... ... ॥೫೧॥

ಮ॥ ಸ್ರ॥ ಕುಡಲಕ್ಕುಂ ಪೊಂಗಳಂ ಜಂಗಮಕೆ ತನುವ ನಂತೀಯಲಕ್ಕುಂ ಪಲಂ ತ । ಮ್ಮೊಡಲಂ ಕೂರ್ತೀಯಲಕ್ಕುಂ ಬಗೆಯೆ ಮನಮ ನಂತೀಯ ಲಕ್ಕುಂ ಪೊಡಳ್ದೊಂ ॥ ದೆಡೆಯೊಳ್ಮನಂನೀಯಲಕ್ಕುಂ ಮಸವ ನಸುವ ನಂತೀಯಲಕ್ಕುಂ ಪ್ರಯತ್ನಂ । ಬಡೆದೀಯಲ್ಬರ್ಕ್ಕು ಮಾರ್ಪ್ಪಿಂ ದಸುವ ನಸವಸಂ ವೀರಭೃತ್ಯತ್ವದಿಂದಂ ॥ ... ... ॥೫೨॥

ಕಂ ॥ ಬೆಸುಗೆ ಮಿಗೆ ಜವದೆ ಜಂಗಮ । ದಸುವಿನೊಳಸುವಂ ನಿವೇದಿಸಲ್ಬರ್ಕ್ಕುಮೆ ಪೇಳ್ ॥ ಬಸವ ಸಚಿವೇಂದ್ರ ನಿನ್ನವೊಲ್ । ಲಸದೃಶ ಮಿದು ಭಕ್ತಿಭಾವ ಮಾರ್ಗ್ಗ ಮಶಕ್ಯಂ ॥

ಮ॥ ಸ್ರ॥ ಘನಲಿಂಗಪ್ರಾಣಯೋಗವ್ರತದ ಶಪಥ ಮಿಂತಾಗೆ ಸಂದಿರ್ದು ದೆಂದೊ । ಳ್ಪ

---

ಪ್ರಮುಖಸಮುದಾಯವನ್ನು, ಆತ್ಮೀಯ......ಯೊಳ್— ಆತ್ಮೀಯ- ತನ್ನ, ವಿಮಳ- ನಿರ್ಮಲವಾದ, ಕರುಣಾಮೃತ- ದಯಾರಸವೆಂಬ, ಸಾರಸರೋಧಿಯೊಳ್- ಶ್ರೇಷ್ಠವಾದ ಸಮುದ್ರದಲ್ಲಿ, ಓಲಾಡಿಸುತೆ, ಎಸೆದು, ಇರ್ದಂ. ... ... ... ... ... ... ॥೫೦॥

ಆಗಳ್, ಆ ಭಕ್ತಗಣಂ, ನಿಜಸಭೆಯೊಳ್, ಎಸೆವ, ಬಸವರಸನಂ, ನೋಡಿ, ಕಾರುಣ್ಯಮಂ, ನೀಡಿ. *

ಆರಾಠ್ಯಾಬ್ಧಿಚಂದ್ರ- ಶ್ರೇಷ್ಠರೆಂಬ ಸಮುದ್ರಕ್ಕೆ ಚಂದ್ರನಾದಬಸವೇಶನೇ! ಪರಮೇಶಂ, ತನ್ನೊಳ್, ಈ ಕಿನ್ನರನ, ಕರಣಮಂ, ಕೂಡಿಕೊಂಡು, ಇರ್ಪ್ಪನಂ, ತಳ್ತು, ಇರದೆ, ಆತ್ಮಪ್ರಾಣಮಂ- ತನ್ನಪ್ರಾಣವನ್ನು, ಬೆಂಕೊಳಿಸಿ- ಹಿಮ್ಮೆಟ್ಟಿಸಿ, ಬೆರಸಿರ್ದ್ದೆ. ಮತ್ತೆ, ತತ್ಪ್ರಾಣಮಂ, ಮಾಚರಸಾರ್ಯಂ, ಸತ್ಕೃಪಾವೀಕ್ಷಣದೆ, ಬರಿಸೆ, ನೀಂ, ಬೆನ್ನನೆ- ಬೇಗನೆ, ಎಯ್ತಂದೆ, ಭಾಪು!! ಉರ್ವ್ವರೆಯೊಳ್- ಭೂಮಿಯಲ್ಲಿ, ನಿನ್ನನ್ನರ್- ನಿನ್ನಂಥಾ, ಜಂಗಮಮಿಳಿತ ನಿಜಪ್ರಾಣರ್- ಜಂಗಮರೊಡನೆಕೂಡಿರುವ ಸ್ವಕೀಯಪ್ರಾಣವುಳ್ಳವರು, ಆರ್?

ಜಂಗಮಕೆ, ಪೊಂಗಳಂ, ಕುಡಲ್, ಅಕ್ಕುಂ; ತನುವಂ, ಈಯಲ್, ಎಂತು, ಅಕ್ಕುಂ? ಪಲಂ, ತಮ್ಮ ಒಡಲಂ- ಶರೀರವನ್ನು, ಕೂರ್ತು- ಪ್ರೀತಿಸಿ, ಈಯಲ್, ಅಕ್ಕುಂ; ಬಗೆಯೆ- ವಿಚಾರಿಸಲು, ಮನಮಂ, ಈಯಲ್, ಎಂತು, ಅಕ್ಕುಂ? ಪೊಡಳ್ದು- ಪ್ರಸಿದ್ಧವಾಗಿ, ಒಂದೆಡೆಯೊಳ್- ಒಂದೇಸ್ಥಾನದಲ್ಲಿ, ಮನಮಂ, ಈಯಲ್, ಅಕ್ಕುಂ; ಅಸುವಂ- ಪ್ರಾಣವನ್ನು, ಈಯಲ್, ಎಂತು, ಅಕ್ಕುಂ? ಪ್ರಯತ್ನಂಬಡೆದು, ಆರ್ಪ್ಪಿಂದೆ- ಸಾಮರ್ಥ್ಯದಿಂದ, ವೀರಭೃತ್ಯತ್ವದಿಂ, ಅಸವಸಂ- ಜಾಗ್ರತೆಯಾಗಿ, ಅಸುವಂ, ಈಯಲ್, ಬರ್ಕ್ಕುಂ. ॥೫೨॥

ಬೆಸುಗೆ- ಸಂಬಂಧವು, ಮಿಗೆ, ಜವದೆ- ಜಾಗ್ರತೆಯಿಂದ, ಜಂಗಮರ, ಅಸುವಿನೊಳ್, ಅಸುವಂ, ನಿವೇದಿಸಲ್- ಸಮರ್ಪಿಸುವದಕ್ಕೆ, ಬರ್ಕ್ಕುಮೆ? ಪೇಳ್, ಬಸವಸಚಿವೇಂದ್ರ! ಅಸದೃಶಂ- ಉಪಮಾತೀತವಾದ, ಇದು, ಭಕ್ತಿಭಾವಂ, ನಿನ್ನವೋಲ್, ಅರ್ಗ್ಗಂ, ಅಶಕ್ಯಂ. ... ... ... ॥೫೩॥

ಘನಲಿಂಗಪ್ರಾಣಯೋಗವ್ರತದ— ಘನ- ಉತ್ಕೃಷ್ಟವಾದ, ಲಿಂಗ, ಪ್ರಾಣ, ಇವುಗಳ, ಯೋಗಸಂಬಂಧವುಳ್ಳ, ವ್ರತದ, ಶಪಥಂ- ಪಂಥವು, ಇಂತು— ಹೀಗೆ, ಜಗದೊಳ್, ಬಳ್ಪಿನ, ಸತ್ತೇಶನಿಗೆ- ಸತ್ತೇಶನೆಂಬ ಶರಣನಿಗೆ, ಮೇಣ್, ಕೊಂಡಗುಳಿಯ, ವಿಲಸತ್ಕೇಶಿರಾಜಂಗೆ, ಇಳಾಪಾವನ ಚನ್ನಯ್ಯಂಗೆ, ಲೋಕೋತ್ತರ

ನಸತ್ತೇಶಂಗೆ ಮೇಣ್ಸೊಂಡಗುಳಿಯ ವಿಲಸತ್ಕ್ಷೇತ್ರರಾಜಂ ಗಳಾವಾ ॥ ವನಚನ್ನಯ್ಯಂಗೆ
ಲೋಕೋತ್ತರಗುಣಕಮಳಾಂಬಾಖ್ಯೆಗಂ ತಂಗುಟೂರೊ । ಳ್ಬಿನದಂಬೆತ್ತಿರ್ಪ ಮಾರಪ್ರ
ಭುಗೆ ಜಗದೊಳೆಂಬುಕ್ತಿಯಂ ಕೇಳ್ದ ವೀಗಳ್ ॥ ... ... ॥೫೪॥

ಮ॥ ಸ್ರ॥ ಚರಲಿಂಗಪ್ರಾಣಭಾಷಾವ್ರತ ಮಿದು ಬಸವಂಗೈದೆ ಸಂದೊಪ್ಪಿದ ತ್ತು ।
ರ್ವರೆಯೊಳ್ಲಿಂಗಾರ್ಪಿತಪ್ರಾಣತೆ ಯದು ಪೊಸತಲ್ತು ಭಾವಿಪ್ಪೊಡೀಭಾ ॥ ಸುರವೃ
ತ್ತಂ ಜಂಗಮಪ್ರಾಣತೆ ಜಗದೊಳಪೂರ್ವಂ ದಲೆಂದೊಲ್ದು ಮಾಹೇ । ಶ್ವರವೃಂದಂತನ್ನ
ನೊಳ್ಪಿಂ ಪೊಗಳೆ ಮೆರೆದ ನಾನಂದಸಾಂದ್ರಂ ವೃಷೇಂದ್ರಂ ॥ ... ... ॥೫೫॥

ಲಲಿತಪದವೃತ್ತಂ ॥ ತಪ್ತಕನಕಪ್ರಭನಿಗುಪ್ತನಿಜಮಾನಸ ಸುಜಪ್ತಶಿವಮಂತ್ರ
ತನುಲಿಪ್ತಸಿತಭಸ್ಮ । ಪ್ರಾಪ್ತಶಿವಭಾವಜಿತದೃಪ್ತಕರಣೇಂದ್ರಿಯ ಸಮಾಪ್ತಬಹುಕೃ
ತ್ಯ ಪರಿತೃಪ್ತಚರಲಿಂಗಾ ॥ ಕ್ಷಿಪ್ತಮದಸತ್ವಗುಣಲುಪ್ತಜಡಭಾವ ಚಿದಸುಪ್ತ ರುಚಿ
ದೀಪ ಪರಿದೀಪ್ತಕರಣಾಶಾ । ವ್ಯಾಪ್ತಸಿತಕೀರ್ತಿ ಪೊರೆ ಸಪ್ತಹಯಚಂದ್ರ ಪವನಾಪ್ತ
ನಯನಾಂಕ ಧರಗೋಪ್ತ ಬಸವೇಶಾ ॥ ... ... ... ॥೫೬॥

---

ಗುಣಕಮಳಾಂಬಾಖ್ಯೆಗಂ- ಪ್ರಪಂಚವೆಲ್ಲಕ್ಕೂ ಶ್ರೇಷ್ಠವಾದ ಗುಣವುಳ್ಳ ಕಮಳಾಂಬೆಯೆಂಬ ಶರಣೆಗೆ, ತಂಗುಟೂರೊಳ್, ಬಿನದಂಬೆತ್ತು, ಇರ್ಪ, ಮಾರಪ್ರಭುಗೆ, ಸಂದು, ಇರ್ಪುದು, ಎಂದು, ಎಂಬ, ಉಕ್ತಿಯಂ, ಈಗಳ್, ಕೇಳ್ದವು. ... ... ... ... ... ॥೫೪॥

ಉರ್ವರೆಯೊಳ್, ಚರಲಿಂಗಪ್ರಾಣಭಾಷಾವ್ರತಂ- ಜಂಗಮವೇ ಪ್ರಾಣವೆಂಬ ಭಾಷೆಯ ವ್ರತವು, ಲಿಂಗಾರ್ಪಿತಪ್ರಾಣತೆ- ಲಿಂಗದಲ್ಲಿ ಅರ್ಪಿಸಲ್ಪಟ್ಟ ಪ್ರಾಣವುಳ್ಳತನವು, ಬಸವಂಗೆ, ಇದು, ಐದೆ- ಚೆನ್ನಾಗಿ, ಸಂದು ಒಪ್ಪಿದತ್ತು, ಅದು, ಪೊಸತು, ಅಲ್ತು, ಭಾವಿಪ್ಪೊಡೆ- ಆಲೋಚಿಸಿದರೆ, ಭಾಸುರವೃತ್ತಂ- ಪ್ರಕಾಶಮಾನವಾದ ಚರಿತ್ರೆಯುಳ್ಳ, ಜಂಗಮಪ್ರಾಣತೆ- ಜಂಗಮವೇ ಪ್ರಾಣವಾಗುಳ್ಳ ಭಾವವು, ಜಗದೊಳ್, ಅಪೂರ್ವಂ; ದಲ್- ನಿಶ್ಚಯ; ಎಂದು, ಒಲ್ದು, ಮಾಹೇಶ್ವರವೃಂದಂ, ತನ್ನಂ, ಒಳ್ಪಿಂ, ಪೊಗಳೆ, ಆನಂದಸಾಂದ್ರಂ, ವೃಷೇಂದ್ರಂ, ಮೆರೆದಂ. ... ... ... ... ... ॥೫೫॥

ತಪ್ತಕನಕಪ್ರಭ- ಕರಗಿಸಲ್ಪಟ್ಟ ಚಿನ್ನದ ಕಾಂತಿಯಂತಿರುವ ಕಾಂತಿಯುಳ್ಳ, ನಿಗುಪ್ತನಿಜಮಾನಸ- ಗೂಢವಾದ ತನ್ನ ಮನಸ್ಸುಳ್ಳ ( ಅಂದರೆ ಗಂಭೀರವಾದ ಮನಸ್ಸುಳ್ಳವನು ) ಸುಜಪ್ತಶಿವಮಂತ್ರ- ಚೆನ್ನಾಗಿ ಜಪಿಸಲ್ಪಟ್ಟ ಷಡಕ್ಷರಮಂತ್ರವುಳ್ಳ, ತನುಲಿಪ್ತಸಿತಭಸ್ಮ- ದೇಹದಲ್ಲಿ ಲೇಪಿಸಲ್ಪಟ್ಟ ಶುಭ್ರವಾದ ವಿಭೂತಿಯುಳ್ಳ; ಪ್ರಾಪ್ತಶಿವಭಾವ- ಪಡೆಯಲ್ಪಟ್ಟ ಈಶ್ವರಾಕಾರವುಳ್ಳ, ಜಿತದೃಪ್ತಕರಣೇಂದ್ರ- ಜೈಸಲ್ಪಟ್ಟ ಕೊಬ್ಬಿದ ವಾಕ್ಕು ಪಾಣಿ ಪಾದ ಗುದ ಉಪಸ್ಥಗಳೆಂಬ ಕರಣಗಳು, ಕಣ್ಣು ಮೂಗು ಕಿವಿ ನಾಲಿಗೆ ತ್ವಕ್ಕು ಎಂಬ ಇಂದ್ರಿಯಗಳು ಇವುಗಳುಳ್ಳ, ಸಮಾಪ್ತಬಹುಕೃತ್ಯ- ಪೂರೈಸಲ್ಪಟ್ಟ ಅನೇಕಕಾರ್ಯಗಳುಳ್ಳ, ಪರಿತೃಪ್ತಚರಲಿಂಗಾ- ತೃಪ್ತಿಪಡಿಸಲ್ಪಟ್ಟ ಜಂಗಮರುಳ್ಳ, ಕ್ಷಿಪ್ತಮದ- ನಾಶಗೊಳಿಸಲ್ಪಟ್ಟ ಗರ್ವವುಳ್ಳ, ಸತ್ವಗಣಲುಪ್ತಜಡಭಾವ- ಶಾಂತಿಗುಣದಿಂದ ನಾಶಹೊಂದಿಸಲ್ಪಟ್ಟ ಮಾಯಾಜಾಡ್ಯವುಳ್ಳ, ಚಿತ್......ಕರಣ— ಚಿತ್- ಜ್ಞಾನವೆಂಬ, ಅಸುಪ್ತ- ಜಾಗರೂಕವಾದ, ರುಚಿ- ಕಾಂತಿಯುಳ್ಳ, ದೀಪ- ದೀಪದಿಂದ, ಪರಿದೀಪ್ತ- ಪ್ರಕಾಶಗೊಳಿಸಲ್ಪಟ್ಟ, ಕರಣ- ಕರಣಗಳುಳ್ಳ, ಆಶಾವ್ಯಾಪ್ತ ಸಿತಕೀರ್ತಿ- ದಿಕ್ಕುಗಳಲ್ಲಿ ವ್ಯಾಪಿಸಿಕೊಂಡಿರುವ ಶುಭ್ರವಾದ ಯಶಸ್ಸುಳ್ಳ, ಸಪ್ತ......ಗೋಪ್ತ— * ಸಪ್ತಹಯ- ಸೂರ್ಯ, ಚಂದ್ರ, ಪವನಾಪ್ತ- ವಾಯು, ಇವರುಗಳೇ, ನಯನ- ಕಣ್ಣುಗಳುಳ್ಳಶಿವನ, ಅಂಕ- ಚಿಹ್ನವನ್ನು, ಧರ- ಧರಿಸಿರುವರನ್ನು, ಗೋಪ್ತ- ಸಂರಕ್ಷಿಸುವ, ಬಸವೇಶಾ! ಪೊರೆ.

---

* ( ಅವ ) ಸಪ್ತನಾಮಕವಾದ ಕುದುರೆಯುಳ್ಳವನು , ಅಥವಾ ಏಳುಕುದುರೆಗಳುಳ್ಳವನು. ॥೫೬॥

ಉತ್ಸಾಹವೃತ್ತಂ ॥ ಚಂಡಭಾನುಮಂಡಲಾಂತರಾಳಮಂದಿರೋಜ್ವಳೇ । ಖಂಡಿತಪ್ರಚಂಡಚಂಡಮುಂಡಶೌರ್ಯಮಂಜುಳೇ ॥ ಖಂಡಚಂದ್ರಮೌಳಿಭಾಸುರಾಂಕಪೀಠನಿಶ್ಚಳೇ । ಚಂಡಿ ಚಾರುಮೂರ್ತ್ತಿ ಪಾಲಿಸೆನ್ನ ಸರ್ವ್ವಮಂಗಳೇ ॥ ... ... ॥೩೭॥

ಗದ್ಯಂ॥ ಇದುವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪವಿರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತ ಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದ ಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಬಸವಕಿನ್ನರಸಹಪ್ರಾಣತ್ವಕಥನಂ ಚತುರ್ವಿಂಶತ್ಯಾಶ್ವಾಸಂಪರಿಸಮಾಪ್ತಂ॥ ... ... ... ... *

ಚತುರ್ವಿಂಶತ್ಯಾಶ್ವಾಸಂ ಸಂಪೂರ್ಣಂ.

---

## ಶ್ರೀಃ

ದಕ್ಷಿಣಾಮೂರ್ತಯೇಪರಬ್ರಹ್ಮಣೇನಮಃ.

## ಪಂಚವಿಂಶತ್ಯಾಶ್ವಾಸಂ.

### ಮೇದರಕೇತಯ್ಯಕಥನಂ.

ಕಂ ॥ ಶ್ರೀಸದಮಳಾಂಬಿಕಾದರ । ಹಾಸದ್ಯುತಿಮಲ್ಲಿಕಾಮಧುವ್ರತ ನಭವಂ ॥ ವಾಸವಮುಖಸುರಹೃದಯೋ । ಲ್ಲಾಸಪ್ರದ ನೀಗೆ ಸೌಖ್ಯಮಂ ಶಿವಲಿಂಗಾ॥ ... ॥೧॥

---

ಚಂಡ......ಜ್ವಳೆ— ಚಂಡ- ಕ್ರೂರವಾದ, ಭಾನುಮಂಡಲ- ಸೂರ್ಯ್ಯಬಿಂಬದ, ಅಂತರಾಳ- ಮಧ್ಯದಲ್ಲಿರುವ, ಮಂದಿರ- ಮನೆಯಲ್ಲಿ, ಉಜ್ವಳೇ- ಪ್ರಕಾಶಮಾನಳಾದ, ಖಂಡಿತ......ಮಂಜುಳೇ— ಖಂಡಿತ- ಕತ್ತರಿಸಲ್ಪಟ್ಟ, ಪ್ರಚಂಡ- ಸಮರ್ಥರಾದ, ಚಂಡ- ಚಂಡಾಸುರ, ಮುಂಡ- ಮುಂಡಾಸುರ, ಇವರುಗಳ, ಶೌರ್ಯ- ಪರಾಕ್ರಮದಿಂದ, ಮಂಜುಳೇ, ಖಂಡ.........ಶ್ಚಳೇ— ಖಂಡಚಂದ್ರ- ಚಂದ್ರನತುಣುಕೇ, ಮೌಳಿ- ಕಿರೀಟದಲ್ಲುಳ್ಳ ಪರಶಿವನ, ಭಾಸುರ- ಪ್ರಕಾಶಮಾನವಾದ, ಅಂಕಪೀಠ- ತೊಡೆಯೆಂಬ ಗದ್ದುಗೆಯಲ್ಲಿ, ನಿಶ್ಚಳೇ- ಸ್ಥಿರವಾಗಿರುವ, ಚಂಡಿ- ಚಂಡಿಕೆಯಾದ, ಚಾರುಮೂರ್ತಿ- ಮನೋಹರವಾದ ಶರೀರವುಳ್ಳ, ಸರ್ವ್ವಮಂಗಳೇ! ಎನ್ನ, ಪಾಲಿಸು ! ... ... ... ... ॥೩೭॥

ಇಪ್ಪತ್ನಾಲ್ಕನೆಯ ಆಶ್ವಾಸವು ಸಂಪೂರ್ಣವು.

---

ಇಪ್ಪತ್ತೈದನೆಯಆಶ್ವಾಸಪ್ರಾರಂಭಃ.

ಶ್ರೀಸ......ವ್ರತಂ— ಶ್ರೀ- ಸಂಪದ್ಯುಕ್ತಳಾದ, ಸತ್- ಸಮೀಚೀನಳಾದ, ಅಮಳ- ನಿರ್ಮ್ಮಲಳಾದ, ಅಂಬಿಕಾ- ಪಾರ್ವತಿಯ, ದರಹಾಸ- ಮೆಲ್ನಗೆಯ, ದ್ಯುತಿ- ಕಾಂತಿಯೆಂಬ, ಮಲ್ಲಿಕಾ- ಮಲ್ಲಿಗೆಯ ಹೂವಿಗೆ, ಮಧುವ್ರತಂ- ಭ್ರಮರನಾದ, ಅಭವಂ, ವಾಸವ......ಪ್ರದಂ— ವಾಸವ- ಇಂದ್ರನೇ, ಮುಖ- ಮೊದಲಾದ, ಸುರ- ದೇವತೆಗಳ, ಹೃದಯ- ಮನಸ್ಸಿಗೆ, ಉಲ್ಲಾಸ- ಸಂತೋಷವನ್ನು, ಪ್ರದಂ- ಕೊಡತಕ್ಕ, ಶಿವಲಿಂಗಂ, ಸೌಖ್ಯಮಂ, ಈಗೆ. ... ... ... ... ॥೧॥

ಕಾಸಂದವ

ವ ॥ ಇಂತು ಚೆನ್ನಬಸವಂ ಬಸವವೃತ್ತಾಂತಮಂ ಬೆಸಸೆ ಗಣನಿವಹ ಕಾನಂದವ * * * * * * * * *

ನೊದವಿಸುತೆ ಸುಖ ಮಿರುತಿರೆ ಮತ್ತ ಮಲ್ಲಿ ॥

ಮ॥ ಸ್ರ॥ ಚರಲಿಂಗಸ್ವಾಮಿ ಸುಜ್ಞಾನಮೆ ಸಮುಚಿತಸನ್ಮಂತ್ರಿ ಯಾಚಾರಮೇ

ಭಾ । ಸುರರಾಷ್ಟ್ರಂ ಶಾಂತಿ ದುರ್ಗಂ ವಿಮಲಗುಣಮೆ ಮಿತ್ರಂ ಮಹಾಮೂಲಮಂತ್ರಂ ॥

ಚಿರಕೋಶಂ ಶುದ್ಧಬುದ್ಧಿಪ್ರಭೃತಿ ಬಲ ಮಿಂತಾಗೆ ಸಪ್ತಾಂಗವಾಳ್ದ । ಚ್ಚರಿಯಿಂ ಸದ್ಭ

ಕ್ತಿಸಾಮ್ರಾಜ್ಯಕೆ ವಿಭು ವೆನಿಸುತೊಪ್ಪುತಿರ್ದಂ ವೃಷೇಂದ್ರಂ ॥ ... ॥೧॥

ಕಂ ॥ ಜಿತರಿಪುವರ್ಗನುಪಾಯಾ । ನ್ವಿತ ನಧಿಗತಮಂತ್ರಶಕ್ತಿ ತಂತ್ರೋದಿತವಿ ॥ ಶ್ರು

ತಗುಣಗಣನಿಧಿ ಯವನೀ । ಶತೆಯಂ ತಳೆ ದಾಳ್ವು ದರಿದೆ ಜಸಮಂ ಬಸವಂ ॥ ॥೩॥

ಚಂ ॥ ಬಸವಪದಾಬ್ಜಪಾಂಸು ದರೆಯಂ ಬಸವೇಶನದಿವ್ಯಕೀರ್ತಿ ಯೆ । ಣ್ದೆಸೆಯಧಿ

ನಾಥರಂ ಬಸವರಾಜನಪಾಂಗದಕಾಂತಿ ಚಂದ್ರಸೂ ॥ ರಸಸಖರೋಚಿಯಂ ಪಡೆದು ನೋಂಕಿದ

ಮಾತ್ರದೆ ಪಾವನತ್ವಮಂ । ಪೊಸಯಿಸಿ ರಂಜಿಸಿರ್ದುದನೆ ತನ್ಮಹಿಮಾಬ್ಧಿಯ ಪೇರ್ಮೆ ಯೆಂ

ತುಟೊ ॥ ... ... ... ... ... ... ॥೪॥

---

ಇಂತು, ಚನ್ನಬಸವಂ, ಬಸವವೃತ್ತಾಂತವಂ, ಗಣನಿವಹಕೆ, ಬೆಸಸೆ, ಆನಂದಮಂ, ಒದವಿಸುತ- * * * * * * * * *

ಉಂಟುಮಾಡುತ್ತ, ಸುಖಂ, ಇರುತೆ, ಇರೆ, ಮತ್ತಂ, ಅಲ್ಲಿ.

ಚರಲಿಂಗಸ್ವಾಮಿ- ಜಂಗಮಲಿಂಗವೇ ಸ್ವಾಮಿಯು, ಸುಜ್ಞಾನಮೆ, ಸಮುಚಿತಸನ್ಮಂತ್ರಿ- ಯೋಗ್ಯ

ನಾದ ಒಳ್ಳೆಯಮಂತ್ರಿ, ಆಚಾರಮೇ, ಭಾಸುರರಾಷ್ಟ್ರಂ- ಪ್ರಕಾಶಮಾನವಾದ ದೇಶವು, ಶಾಂತಿ, ದು

ರ್ಗಂ- ಕೋಟೆಯು, ವಿಮಲಗುಣಮೆ, ಮಿತ್ರಂ,- ಸ್ನೇಹಿತನು, ಮಹಾಮೂಲಮಂತ್ರಂ, ಚಿರಕೋಶಂ-

ಶಾಶ್ವತವಾದ ಬೊಕ್ಕಸವು, ಶುದ್ಧಬುದ್ಧಿಪ್ರಭೃತಿ- ನಿರ್ಮಲವಾದ ಮನಸ್ಸು ಮೊದಲಾದವುಗಳು, ಬಲಂ- ಸೈ

ನ್ಯವು, ಇಂತು, ಇವು, ಆಗೆ, ಸಪ್ತಾಂಗಮಂ- ಏಳುಅಂಗವನ್ನು, ಆಳ್ದು- ಹೊಂದಿ, ಅಚ್ಚರಿಯಿಂ- ಆಶ್ಚ

ರ್ಯದಿಂದ, ಸದ್ಭಕ್ತಿಸಾಮ್ರಾಜ್ಯಕೆ- ಒಳ್ಳೆಯ ಭಕ್ತಿಯೆಂಬ ದೊರೆತನಕ್ಕೆ, ವಿಭು, ಎನಿಸುತ್ತೆ, ವೃಷೇಂದ್ರಂ,

ಒಪ್ಪುತೆ, ಇರ್ದಂ. ... ... ... ... ... ॥೧॥

ಜಿತರಿಪುವರ್ಗಂ— ಜಿತ- ಜೈಸಲ್ಪಟ್ಟ, ರಿಪುವರ್ಗಂ- ಶತ್ರುಗಳಸಮೂಹವುಳ್ಳ, ( ರಿಪುವರ್ಗಂ- ಅರಿ

ಷಡ್ವರ್ಗವುಳ್ಳ ) ಉಪಾಯಾನ್ವಿತಂ- ಉಪಾಯ- ಸಾಮ, ದಾನ, ಭೇದ, ದಂಡವೆಂಬ ಚತುರುಪಾಯಗಳಿಂ

ದ, ಅನ್ವಿತಂ- ಕೂಡಿದ, ( ಉಪಾಯ- ಶುಭಾವಹವಾದ್ಯುಪಾಯಗಳಿಂದ, ಅನ್ವಿತಂ ) ತಂತ್ರೋದಿತವಿಶ್ರುತಗು

ಣಗಣನಿಧಿ- ತಂತ್ರ- ರಾಜತಂತ್ರದಲ್ಲಿ, ಉದಿತ- ಹೇಳಲ್ಪಟ್ಟ, ವಿಶ್ರುತ- ಪ್ರಸಿದ್ಧವಾದ, ಗುಣ- ಸದ್ಗುಣಗ

ಳ, ಗಣ- ಸಮೂಹಕ್ಕೆ, ನಿಧಿ- ನಿಕ್ಷೇಪನಾದ, ( ತಂತ್ರ- ಆಗಮದಲ್ಲಿ, ಉದಿತ- ಹೇಳಲ್ಪಟ್ಟ, ವಿಶ್ರುತ- ಪ್ರ

ಸಿದ್ಧವಾದ, ಗುಣ- ಸದ್ಗುಣಗಳುಳ್ಳ, ಗಣ- ಶಿವಗಣಂಗಳಿಗೆ, ನಿಧಿ ) ಬಸವಂ, ಅವನೀಶತೆಯಂ- ರಾಜತ್ವವ

ನ್ನು, ( ಅವಂ, ಈಶತೆಯಂ- ಶಿವತ್ವವನ್ನು ) ತಳೆದು, ಜಸಮಂ- ಕೀರ್ತಿಯನ್ನು, ಆಳ್ವುದು, ಅರಿದೆ? ॥೩॥

ಬಸವಪದಾಬ್ಜಪಾಂಸು- ಬಸವನ ಪಾದಕಮಲದಧೂಳು, ದರೆಯಂ, ಬಸವೇಶನ, ದಿವ್ಯಕೀರ್ತಿ, ಎ

ಣ್ದೆಸೆಯ, ಅಧಿನಾಥರಂ- ಪಾಲಕರನ್ನು, ಬಸವರಾಜನ, ಅಪಾಂಗದ- ಕಡೆಗಣ್ಣಿನ, ಕಾಂತಿ- ಪ್ರಕಾಶವು,

ಚಂದ್ರಸೂರಸಸಖರೋಚಿಯಂ- ಚಂದ್ರಸೂರ್ಯರ ಕಿರಣವನ್ನು, ಪಡೆದು, ನೋಂಕಿದ, ಮಾತ್ರದೆ, ಪಾವನ

ತ್ವಮಂ- ಪರಿಶುದ್ಧತ್ವವನ್ನು, ಪೊಸಯಿಸಿ- ಉಂಟುಮಾಡಿ, ರಂಜಿಸಿ, ಇರ್ದುದು, ಎನೆ, ತನ್ಮಹಿಮಾಬ್ಧಿ

ಯ- ಆ ಮಹಿಮಾಸಮುದ್ರನಾದಬಸವನ, ಪೇರ್ಮೆ- ಆಧಿಕ್ಯವು, ಎಂತುಟೊ- ಎಷ್ಟೊ. ... ॥೪॥

ವ ॥ ಎನಿಸಿ ನೆಗಳ್ತೆವೆತ್ತು ಬಸವಂ ತ್ರಿವಿಧಲಿಂಗಸಪರ್ಯೆಯಿಂ ಸುಖ ವಿರ್ಪನ್ನ ವಾ ಪುರದಲ್ಲಿ ॥ * * * * * * * * * * * * * * * *

ಕಂ ॥ ಖ್ಯಾತಗುಣರಾಶಿ ಮೇದರ । ಕೇತಯ್ಯ ನೆನಿಪ್ಪ ಶರಣ ನೊಪ್ಪಿರೆ ಪದಪಿಂ ॥ ದಾತನಸುವಂ ಶಿವಂ ಸಂ । ಪ್ರೀತಿಯಿಂ ನೊಡಗೂಡಿಕೊಂಡ ನಂದೊಂದುದಿನಂ ॥ ॥೫॥

ವ ॥ ಆಗ ಳಾಪೊಳಲ ಭಕ್ತಜನಂಜೆರಸು ವೃಷೇಂದ್ರಂ ನೇಳ್ತಂದು ಸರ್ವಮಾಹೇಶ್ವ ರರ್ವೆರೆದೊಡ್ಡೋಲಗಂಗೊಟ್ಟು ತತವಿತತಘನಸುಷಿರವಾದ್ಯಧ್ವನಿ ವಿಜೃಂಭಿಸೆ ಪುಷ್ಪಾಂಜ ಲಿಗಳೊಡ ನುಘೋಷವಂಗುಡುತ್ತಂ ಶಿವಸಂಕೀರ್ತನಂಗಳಂ ಪಾಡುತಾಡುತಂ ಬಿನದಂಬೆತ್ತಿ ರ್ಪುದಂ ಕಂಡು ತತ್ಸಭೆಗೆ ಸಾಷ್ಟಾಂಗ ಮೆರಗಿ ತದನುಜ್ಞೆಯಿಂ ಕುಳ್ಳಿರ್ದು ಶರಣಂ ಹರ ಣಂಗಳೆದ ನೆಂದು ಮನಂ ನೊಂದು ಮರುಗು ತನಿತರೊ ಳ್ತನ್ನ ಭಾಷೆಯಂ ನೆನೆದು ನೇ ಹಂ ಮಿಗೆ ನಿಜಪ್ರಾಣಮ ನಾಕ್ಷಣದೊ ಳ್ವಿಸರ್ಜಿಸೆ ಗಣನಿವಹ ಮದಂ ಕಂಡು ಕೌತುಕಂ ಗೊಂಡು ಪಡಿಯರಬಾಚಿದೇವನಂ ಮಾಚಿದೇವ ನಡಿಗಳರ್ದೆಡೆಗೀಕಜ್ಜಮಂ ಬಿನ್ನವಿಪುದೆಂ ದು ಬೆಸಸಿ ಕಳುಪ ಲೊಡನೆ ॥ * * * * * * * * * * * * *

ಕಂ ॥ ಕಡುವೇಗದಿ ನೇಳ್ತಂದಾ । ಪಡಿಯರ ನಾಮಾಚಿದೇವ ನಡಿದಳಿರೊ ಳ್ಸಾಷ್ಟಾಂ ॥ ಗೆಡವೇಳ್ದು ಮುಗಿದಕೈ ನೊಸ । ಲೆಡೆಯೊ ಳ್ನಿಲೆ ದೇವ ಕೇಳ್ವುದೆಂದಿಂತೆಂದಂ ॥ ॥೬॥

---

ಎನಿಸಿ, ನೆಗಳ್ತೆವೆತ್ತು- ಪ್ರಸಿದ್ಧಿಯನ್ನುಹೊಂದಿ, ಬಸವಂ, ತ್ರಿವಿಧಲಿಂಗಸಪರ್ಯೆಯಿಂ— ತ್ರಿವಿಧಲಿಂಗ- ಇಷ್ಟಲಿಂಗ, ಭಾವಲಿಂಗ, ಪ್ರಾಣಲಿಂಗವೆಂಬ ಲಿಂಗತ್ರಯಗಳ,ಸಪರ್ಯೆಯಿಂ- ಪೂಜೆಯಿಂದ, ಸುಖಂ, ಇರ್ಪ ನ್ನಂ- ಇರುವಾಗ, ಆಪುರದಲ್ಲಿ. * * * * * * * * * * * * * * *

ಖ್ಯಾತಗುಣರಾಶಿ- ಪ್ರಸಿದ್ಧವಾದ ಗುಣಗಳ ಸಮುದಾಯವುಳ್ಳ, ಮೇದರಕೇತಯ್ಯಂ, ಎನಿಪ್ಪ, ಶರಣಂ ಒಪ್ಪಿ, ಇರೆ, ಅಂದು, ಒಂದುದಿನಂ, ಪದಪಿಂದೆ- ಪ್ರೀತಿಯಿಂದ, ಆತನ, ಅಸುವಂ, ಶಿವಂ, ಸಂಪ್ರೀತಿಯಿಂ, ಒಡಗೂಡಿಕೊಂಡಂ- ಜೊತೆಯಲ್ಲಿ ಸೇರಿಸಿಕೊಂಡನು. ... ... ... ॥೫॥

ಆಗಳ್, ಆ ಪೊಳಲ- ಆ ಪಟ್ಟಣದ, ಭಕ್ತಜನಂಜೆರಸು, ವೃಷೇಂದ್ರಂ, ಏಳ್ತಂದು, ಸರ್ವಮಾಹೇ ಶ್ವರರ್, ನೆರೆದು, ಒಡ್ಡೋಲಗಂಗೊಟ್ಟು, ತತವಿತತಘನಸುಷಿರವಾದ್ಯಧ್ವನಿ— ತತ- ವೀಣಾದಿಗಳು, ವಿತ ತಘನ- ವಿಸ್ತಾರವಾದ ತಾಳಾದಿಗಳು, ಸುಷಿರ- ಕೊಳಲು ಮುಂತಾದವುಗಳು ಇವುಗಳೆಂಬ, ವಾದ್ಯ- ವಾದ್ಯಗ ಳ, ಧ್ವನಿ, ವಿಜೃಂಭಿಸೆ, ಪುಷ್ಪಾಂಜಲಿಗಳೊಡನೆ, ಉಘೋಷವಂಗುಡುತ್ತಂ, ಶಿವಸಂಕೀರ್ತನಂಗಳಂ, ಪಾಡುತ, ಆಡುತಂ, ಬಿನದಂಬೆತ್ತು- ವಿನೋದವನ್ನುಹೊಂದಿ, ಇರ್ಪುದಂ, ಕಂಡು, ತತ್ಸಭೆಗೆ, ಸಾಷ್ಟಾಂಗಂ- ಎದೆ, ತಲೆ, ಮನಸ್ಸು, ಶ್ರದ್ಧೆ, ವಾಕ್ಕು, ಕೈ, ಕಾಲು, ಕಿವಿ, ಎಂಬಅಷ್ಟಾಂಗದಿಂಕೂಡಿ, ಎರಗಿ, ತದನುಜ್ಞೆಯಿಂ, ಕುಳ್ಳಿರ್ದು, ಶರಣಂ, ಹರಣಂಗಳೆದಂ- ಪ್ರಾಣವನ್ನು ಬಿಟ್ಟನು, ಎಂದು, ಮನಂನೊಂದು- ಮನಸ್ಸಿನಲ್ಲಿ ನೊಂದು, ಮರುಗುತೆ, ಅನಿತರೊಳ್- ಅಷ್ಟರಲ್ಲಿ, ತನ್ನ, ಭಾಷೆಯಂ, ನೆನೆದು, ನೇಹಂ-ಸ್ನೇಹವು, ಮಿಗೆ, ನಿ ಜಪ್ರಾಣಮಂ, ಆ ಕ್ಷಣದೊಳ್, ವಿಸರ್ಜಿಸೆ- ಬಿಡಲಾಗಿ, ಗಣನಿವಹಂ, ಅದಂ, ಕಂಡು,ಕೌತುಕಂಗೊಂಡು, ಪಡಿಯರಬಾಚಿದೇವನಂ, ಮಾಚಿದೇವನ, ಅಡಿಗಳ್, ಇರ್ದೆಡೆಗೆ, ಈಕಜ್ಜಮಂ- ಈಕಾರ್ಯವನ್ನು, ಬಿನ್ನವಿ ಪುದು, ಎಂದು, ಬೆಸಸಿ, ಕಳುಪಲ್, ಒಡನೆ. * * * * * * * * * * * *

ಕಡುವೇಗದಿಂ- ಬಹುಜಾಗ್ರತೆಯಿಂದ, ಆ ಪಡಿಯರಂ- ಆ ಪಡಿಯರ ಬಾಚಿದೇವನು, ಏಳ್ತಂದು, ಆ ಮಾಚಿದೇವನ, ಅಡಿದಳಿರೊಳ್- ಚಿಗುರಿನೋಪಾದಿಯಲ್ಲಿರುವ ಪಾದದಲ್ಲಿ, ಸೈಗೆಡೆದು- ಅಡ್ಡಬಿದ್ದು, ಏಳ್ದು, ಮುಗಿದಕೈ, ನೊಸಲ- ಹಣೆಯ, ಎಡೆಯೊಳ್, ನಿಲೆ, ದೇವ! ಕೇಳ್ವುದು, ಎಂದು, ಇಂತು, ಎಂದಂ. ॥೬॥

ಉ॥ ಮೇದರಕೇತದೇವನಸು ಲಿಂಗದೊ ಳೊಂದೆ ವೃಷೇಂದ್ರ ನಂದು ತಾಂ । ನೋದಿದ
ಗೀತಮಂ ನೆನೆದು ಪಾವ್ವನೆ ಪಾರಿ ಭವತ್ಪದಾಬ್ಜಮಂ ॥ ಸಾದರಮೆಯ್ದೆ ಜಾನಿಸುತೆ ನೋ
ಳ್ಪರೊಳದ್ಭುತ ಮುಣ್ಮೆ ಸತ್ಯರ । ತ್ನೋದಧಿ ತನ್ನ ಜೀವನಮ ನಾಗಳೆ ಬಿಟ್ಟ ನದೇ
ನ ನೆಂದಪೆಂ ॥ ... ... ... ... ... ॥೭॥

ವ॥ ಆಗಳಲ್ಲಿ ಸಕಲಗುಣನಿಧಿ ಯೆನಿಪ ಸಕಳೇಶ ಮಾದರಸಯ್ಯನುಂ ಜಗನ್ನುತಮಹಿಮ ನೆನಿಪ ಜಗದೇವಯ್ಯನುಂ ಕಲುಷಹರ ನಾದ ಲಕ್ಕೇತದೇವಯ್ಯನುಂ ತ್ರಿಲಿಂಗಾರಾಧಕ ನಾದ ತೆಲುಂಗಜೊಮ್ಮಯ್ಯನುಂ ಶಂಕರನಂಕಕಾರ ನೆನಿಪ ಶಂಕರಯ್ಯನುಂ ಬಲವದಾಚಾರಚತುರನಾದ ಮಾಚಿರಾಜಯ್ಯನುಂ ದಾಸೋಹಂ ಭಾವ ಮಳವಟ್ಟ ದಾಸಿಮಯ್ಯನುಂ ಕರೆಮಾರೆಯಳಿದ ಮೋರನವೇಮಯ್ಯನುಂ ಗಣದಾಸಭಾವೋದ್ಧಾಮ ನೆನಿಪ ಗಣದಾಸಿಭೀಮಯ್ಯನುಂ ಸುರವಿನುತಚರಿತ್ರನಾದ ಸುರಗಿಚೌಡಯ್ಯನುಂ ಸಲ್ಲೀಲಾಶಾಲಿ ಯೆನಿಪ ಕಲ್ಲಿದೇವಯ್ಯನುಂ ಪಾಶಹರಣಪರಿಣತ ನಪ್ಪ ಕಾಶಿನಾಥನುಂ ಮನ್ನಣೆಯ ಮಹಿಮೆವೆತ್ತ ಕಿನ್ನರಬೊಮ್ಮಯ್ಯನುಂ ಧರಾತಳದಯಾಪರನಾದ ದಸರಯ್ಯನುಂ ಭರ್ಗಪ್ರಿಯಚರಿತಗೊಗ್ಗಯ್ಯನುಂ ಕಾರ್ಕಶ್ಯರಹಿತಹೃದಯ ನೆನಿಪ ಕಕ್ಕಯ್ಯನುಂ ಸಲ್ಲಲಿತಪ್ರಭಾವಮಂಬಡೆದಲ್ಲಮದೇವನುಂ, ಮಾಧುರ್ಯಗುಣಮಹಿತನಾದ ಮಧುವಯ್ಯನು ಮಿವರ್ಮೊದಲಾದ ನಿರುಪಮಾಸಮಾಗ್ರೋದಗ್ರ

---

ಮೇದರಕೇತದೇವನ, ಅಸು, ಲಿಂಗದೊಳ್, ಒಂದೆ, ಅಂದು, ವೃಷೇಂದ್ರಂ, ತಾಂ, ಓದಿದಗೀತಮಂ, ನೆನೆದು, ಪಾವ್ವನೆ- ಜಾಗ್ರತೆಯಾಗಿ, ಪಾರಿ, ಭವತ್ಪದಾಬ್ಜಮಂ, ಸಾದರಂ- ಪ್ರೀತಿಯಿಂದಕೂಡಿ, ಎಯ್ದೆ, ಜಾನಿಸುತೆ, ನೋಳ್ಪರೊಳ್, ಅದ್ಭುತಂ- ಆಶ್ಚರ್ಯವು, ಉಣ್ಮೆ- ಉಂಟಾಗಲಾಗಿ, ಸತ್ಯರತ್ನೋದಧಿ- ಸತ್ಯವೆಂಬ ರತ್ನಕ್ಕೆ, ಸಮುದ್ರನಾದ ಬಸವೇಶನು, ತನ್ನ, ಜೀವಮಂ, ಆಗಳೆ, ಬಿಟ್ಟಂ, ಅದೇನಂ, ಎಂದಪೆಂ. ॥೩॥

ಆಗಳ್, ಅಲ್ಲಿ, ಸಕಲಗುಣನಿಧಿ, ಎನಿಪ, ಸಕಳೇಶಮಾದರಸಯ್ಯನುಂ, ಜಗನ್ನುತಮಹಿಮಂ- ಜಗತ್ತಿನಲ್ಲಿ ಶ್ಲಾಘ್ಯವಾದ ಮಹತ್ವವುಳ್ಳವನು, ಎನಿಪ, ಜಗದೇವಯ್ಯನುಂ, ಕಲುಷಹರಂ- ಪಾಪನಾಶಕನು, ಆದ, ಲಕ್ಕೇತದೇವಯ್ಯನುಂ, ತ್ರಿಲಿಂಗಾರಾಧಕಂ- ಇಷ್ಟಲಿಂಗ ಭಾವಲಿಂಗ ಪ್ರಾಣಲಿಂಗವೆಂಬ ತ್ರಿಲಿಂಗಪೂಜಕನು, ಆದ, ತೆಲುಂಗಜೊಮ್ಮಯ್ಯನುಂ, ಶಂಕರನ, ಅಂಕಕಾರಂ- ಬಿರುದನ್ನು ಹೊಗಳುವನು, ಎನಿಪ, ಶಂಕರಯ್ಯನುಂ, ಬಲವದಾಚಾರಚತುರಂ- ಸಮರ್ಥವಾದ ಆಚಾರದಲ್ಲಿ ನಿಪುಣನು, ಆದ, ಮಾಚಿರಾಜಯ್ಯನುಂ, ದಾಸೋಹಭಾವಂ- ನಾನು ದಾಸನೆಂಬಭಾವವು, ಅಳವಟ್ಟ, ದಾಸಿಮಯ್ಯನುಂ, ಕರೆಮಾರೆಯಂ- ಪಾಪವಂಚನೆಗಳನ್ನು, ಅಳಿದ- ಬಿಟ್ಟ, ಮೋರನವೇಮಯ್ಯನುಂ, ಗಣದಾಸಭಾವೋದ್ಧಾಮಂ- ಪ್ರಮಥರ ಸೇವಕತ್ವದಿಂದ ಉತ್ಕೃಷ್ಟನು, ಎನಿಪ, ಗಣದಾಸಿಭೀಮಯ್ಯನುಂ, ಸುರವಿನುತಚರಿತ್ರಂ, ಆದ, ಸುರಗಿಚೌಡಯ್ಯನುಂ, ಸಲ್ಲೀಲಾಶಾಲಿ, ಎನಿಪ, ಕಲ್ಲಿದೇವಯ್ಯನುಂ, ಪಾಶಹರಣಪರಿಣತಂ- ಮಾಯಾಪಾಶನಾಶದಲ್ಲಿಸಮರ್ಥನಾದವನು, ಅಪ್ಪ, ಕಾಶಿನಾಥನುಂ, ಮನ್ನಣೆಯ- ಪೂಜ್ಯವಾದ, ಮಹಿಮೆವೆತ್ತ- ಮಹತ್ವವನ್ನುಹೊಂದಿದ, ಕಿನ್ನರಬೊಮ್ಮಯ್ಯನುಂ, ಧರಾತಳದಯಾಪರಂ- ಭೂಮಿಯಲ್ಲಿ ಕರುಣಾಶಾಲಿಯು, ಆದ, ದಸರಯ್ಯನುಂ, ಭರ್ಗಪ್ರಿಯಚರಿತಗೊಗ್ಗಯ್ಯನುಂ- ಶಿವನಿಗೆ ಪ್ರೀತಿಪಾತ್ರವಾದ ಚರಿತ್ರೆಯುಳ್ಳ ಗೊಗ್ಗಯ್ಯನೂ, ಕಾರ್ಕಶ್ಯರಹಿತಹೃದಯಂ- ಕಠಿಣವಲ್ಲದ ಮನಸ್ಸುಳ್ಳವನು, ಎನಿಪ, ಕಕ್ಕಯ್ಯನುಂ, ಸಲ್ಲಲಿತಪ್ರಭಾವಂಬಡೆದ- ಮನೋಹರವಾದಮಹಿಮೆಯನ್ನು ಹೊಂದಿದ, ಅಲ್ಲಮದೇವನುಂ, ಮಾಧುರ್ಯಗುಣಮಹಿತಂ, ಆದ, ಮಧುವಯ್ಯನುಂ, ಇವರ್, ಮೊದಲಾದ, ನಿರುಪಮಾಸಮಾಗ್ರೋದಗ್ರಭಕ್ತಿಜ್ಞಾನವಿರತಿವಿಲಸಿತರ್- ನಿರುಪಮ- ಅಸದೃಶವಾದ, ಸಮಗ್ರ-

ಭಕ್ತಿಜ್ಞಾನವಿರತಿವಿಲಸಿತರಾದ ಮಹಾನುಭಾವ ರ್ನೆರೆದು ಚರಮೂರ್ತಿಗಳ್ವೆರಸು ಬಸವನ ಸುವಂ ವಿಸರ್ಜಿಸೆ ವಿಷಾದಂಬಡುತ್ತಿರ್ದ್ದೆನ್ನಂ ನಿಮ್ಮಂಘ್ರಿಯೆಡೆಗಿದೆಲ್ಲಮುಂಬಿನ್ನವಿಸಿ ತಳ್ವ ದೊಡಗೊಂಡುಬರ್ಪ್ಪುದೆಂದು ಕಳುಪಿದ ರೆಂದವಂ ನುಡಿಯೆ ಮಾಚಿದೇವಂ ಕೇಳ್ದು ಮೆಯ್ಯುರ್ಚ್ಚಿ ಪೊಂಪುಳಿಯೋಗಿ ಸಸಂಭ್ರಮಂನಿರೀಕ್ಷಿಸಿ ॥ * * * * * * *

ಕಂ॥ ಎಂತೆಂತು ಮಗುಳ್ದಿದೋರ್ಕ್ಮೆ ನಿ । ತಾಂತಂ ಪೇಳ್ಪೇಳ್ಶಿವೈಕ್ಯನಸುವಿನೊಳಸುವು ॥ ತಾಂ ತಳ್ವದೆ ಬೆರಸಿದನೆ ಮ । ಹಾಂತಂ ವೃಷಭೇಂದ್ರ ನಮಮ ಶುಭಗುಣಸಾಂದ್ರಂ॥

ಕಂ॥ ಪೊಡವಿಯೊಳೆ ಮೃಡನ ಮಾಯೆಯ । ತೊಡಂಕ ನಪಹರಿಸಿ ತನ್ನ ಭಾಷೆಯಥಲಮುಂ ॥ ನುಡಿದಂತೆ ನಡೆದು ತೋರಿದ । ನೆಡೆಯುಡುಗದೆ ಭಕ್ತಿಭಾಮಿನೀಮುಖಮುಕುರಂ॥

ಕಂ॥ ಪಡುಗಡೆಯೊ ಳರ್ಕನುದಯಿಸಿ । ದೊಡ ಮಂಬುಧಿ ಮೇರೆದಪ್ಪಿದೊಡ ಮಮರನಗಂ ॥ ನಡೆಗೊಂಡೊಡ ಮಾಕಾಶಂ । ಕೆಡೆದೊಡ ಮೇಂ ಬಸವಭಾಷೆ ತೊದಳಾದಪ್ಪುದೆ ॥

ಕಂ ॥ ಶರಣ ನಸು ಪೋಗೆ ತನ್ನಯ । ನಿರುಪಮಶಪಥಕ್ರಮೋಕ್ತಿಯಂ ನೆನೆ ದಿಳೆಗ ॥ ಚ್ಚರಿ ಯೊದವೆ ನಿಜಪ್ರಾಣಮ । ನಿರದಿತ್ತಂ ಬಸವ ನೆಂದೊಡೇಂವಣ್ಣಿಪುದೋ ॥೧೧॥

ವ ॥ ಎಂದು ಮಾಚಿದೇವಂ ಪಲವಂದದಿಂ ನೆನೆನೆನೆದು ಕೊಂಡಾಡುತ್ತಂ ಗಣಸಭೆಗೇ

---

ಸಂಪೂರ್ಣವಾದ, ಉದಗ್ರ- ಉತ್ಕೃಷ್ಟವಾದ, ಭಕ್ತಿ, ಜ್ಞಾನ, ವಿರತಿ- ವೈರಾಗ್ಯ, ಇವುಗಳಿಂದ, ವಿಲಸಿತರ್, ಆದ, ಮಹಾನುಭಾವರ್, ನೆರೆದು, ಚರಮೂರ್ತಿಗಳ್ವೆರಸು, ಬಸವಂ, ಅಸುವಂ, ವಿಸರ್ಜಿಸೆ, ವಿಷಾದಂಬಡುತ್ತಂ, ಇರ್ದ್ದ, ಎನ್ನಂ, ನಿಮ್ಮ, ಅಂಘ್ರಿಯೆಡೆಗೆ- ಪಾದಸಮೀಪಕ್ಕೆ, ಇದೆಲ್ಲಮುಂ, ಬಿನ್ನವಿಸಿ, ತಳ್ವದೆ-ನಾವಕಾಶಮಾಡದೆ, ಒಡಗೊಂಡು-ಜೊತೆಯಲ್ಲಿ ಕರೆದುಕೊಂಡು, ಬರ್ಪ್ಪುದು, ಎಂದು. ಕಳುಪಿದರ್, ಎಂದು, ಅವಂ, ನುಡಿಯೆ, ಮಾಚಿದೇವಂ, ಕೇಳ್ದು, ಮೆಯ್ಯುರ್ಚ್ಚಿ- ಮಯ್ಯುಬ್ಬಿ ಪೊಂಪುಳಿಯೋಗಿ- ರೋಮಾಂಚವನ್ನು ಹೊಂದಿ, ಸಸಂಭ್ರಮಂ- ಸಂಭ್ರಮದೊಡನೆ ಕೂಡಿ, ನಿರೀಕ್ಷಿಸಿ. * * * * * * *

ಎಂತು? ಎಂತು ? ಮಗುಳ್ದು- ಪುನಃ, ಇದೋರ್ಕ್ಮೆ, ನಿತಾಂತಂ- ಅತ್ಯಂತವಾಗಿ, ಪೇಳ್, ಪೇಳ್, ಮಹಾಂತಂ, ಶುಭಗುಣಸಾಂದ್ರಂ- ಮಂಗಳಕರವಾದ ಗುಣಗಳಿಂದ ಸಂಪೂರ್ಣನಾದ, ವೃಷಭೇಂದ್ರಂ, ತಾಂ, ಶಿವೈಕ್ಯನ, ಅಸುವಿನೊಳ್, ಅಸುವಂ, ತಳ್ವದೆ, ಬೆರಸಿದನೆ? ಆಮಮ!! ... ... ॥೮॥

ಭಕ್ತಿಭಾಮಿನೀಮುಖಮುಕುರಂ- ಭಕ್ತಿಯೆಂಬ ಸ್ತ್ರೀಯಮುಖಕ್ಕೆ ಕನ್ನಡಿಯಾದ ಬಸವನು, ಪೊಡವಿಯೊಳೆ, ಮೃಡನ, ಮಾಯೆಯ, ತೊಡಂಕಂ- ಪ್ರತಿಬಂಧನವನ್ನು, ಅಪಹರಿಸಿ, ತನ್ನ, ಭಾಷೆಯ, ಥಲಮುಂ, ಎಡೆಯುಡುಗದೆ- ಸ್ಥಲದಪ್ಪದೆ, ನುಡಿದಂತೆ, ನಡೆದು, ತೋರಿದಂ. ... ... ॥೯॥

ಪಡುಗಡೆಯೊಳ್- ಪಶ್ಚಿಮದಿಕ್ಕಿನಲ್ಲಿ, ಅರ್ಕಂ, ಉದಯಿಸಿದೊಡಂ- ಹುಟ್ಟಿದಾಗ್ಯೂ, ಅಂಬುಧಿ, ಮೇರೆದಪ್ಪಿದೊಡಂ- ದಡವನ್ನು ಅತಿಕ್ರಮಿಸಿದಾಗ್ಯೂ, ಅಮರನಗಂ— ಮೇರುಪರ್ವತವು, ನಡೆಗೊಂಡೊಡಂ— ಸಂಚಾರವನ್ನು ಹೊಂದಿದಾಗ್ಯೂ, ಆಕಾಶಂ, ಕೆಡೆದೊಡಂ- ಬಿದ್ದಾಗ್ಯೂ, ಬಸವಭಾಷೆ, ತೊದಳ್— ಸುಳ್ಳು, ಆದಪುದೇಂ ? ... ... ... ... ... ... ॥೧೦॥

ಶರಣನ, ಅಸು, ಪೋಗೆ, ತನ್ನಯ, ನಿರುಪಮಶಪಥಕ್ರಮೋಕ್ತಿಯಂ- ಉಪಮಾತೀತವಾದಭಾಷೆಯ ಕ್ರಮವನ್ನು, ನೆನೆದು, ಇಳೆಗೆ, ಅಚ್ಚರಿ, ಒದವೆ, ಬಸವಂ, ನಿಜಪ್ರಾಣಮಂ, ಇರದೆ, ಇತ್ತಂ, ಎಂದೊಡೆ, ಏಂವಣ್ಣಿಪುದೋ ! ... ... ... ... ... ॥೧೧॥

ಎಂದು, ಮಾಚಿದೇವಂ, ಪಲವಂದದಿಂ, ನೆನೆನೆನೆದು, ಕೊಂಡಾಡುತ್ತಂ, ಎಳ್ತಂದು, ಗಣಸಭೆಗೆ, ಸಡಗ

ಳ್ತಂದು ಸಡಗರಂ ಮಿಗೆ ಭಕ್ತಿಯಿಂ ಪೊಡಮಡಲೊಡನಲ್ಲಿ ಶರಣಗಣಂ ಕಂಡು ಸತ್ಕರಿಸಿ ಬನ್ನಿಮೆಂದಾತನಂ ಕೈವಿಡಿದೊಡನೆ ಮೂರ್ತಿಗೊಳಿಸಿ ॥ * * * * * *

ಉ ॥ ನೋಡಿರೆ ಮಾಚಿದೇವ ಬಸವೇಶನ ಭಕ್ತಿಯದೊಂದು ಪೇರ್ಮೆಯಂ । ಪಾಡಿದ ತನ್ನಗೀತದಳವಂ ನೆನೆದಿಂತಸುವಿಟ್ಟ ಭಕ್ತನಂ ॥ ನಾಡೆ ನಿರೀಕ್ಷಿಸುತ್ತೊಡನೆ ತನ್ನಸುವಂ ಸಲಿಸಿರ್ದನದ್ಭುತಂ । ಮೂಡೆ ಧರಿತ್ರಿಗೀಬಸವನೀತನ ಬಣ್ಣಿಸಲಾರ್ಗೆ ಗೋಚರಂ ॥೧೨॥

ಕಂ ॥ ಖಂಡಶಶಿಮೌಳಿ ಭಕ್ತನ । ಕೊಂಡೊಯ್ದೊಡೆ ಬಸವನಂತಿರಸುವಿತ್ತವರಂ ॥ ಕಂಡರೊಳಂ ಕೇಳ್ದರೊಳಂ । ಕಂಡರಿಯೆವು ಕೇಳ್ದುಮರಿಯೆವೀಭೂತಳದೊಳ್ ॥ ॥೧೩॥

ಕಂ ॥ ವಿದಿತಪವನಾಂಗಜಂಗಮು । ಕಿದು ಯುಕ್ತಂ ಪ್ರಾಣಮಾರುತಾರ್ಪಣ ಮೆನುತಂ ॥ ಪದೆದದನರ್ಪಿಪ ಜಾಣ್ಮಂ । ದುದುಗಡ ಬಸವಂಗೆನೋಳ್ಪೊಡೀವಸುಮತಿಯೊಳ್ ॥

ವ ॥ ಎಂದು ಶರಣಸಮುದಯಂ ಬಸವನೇಳ್ಗೆಯಂ ಕೀರ್ತಿಸುತ್ತ ಮಿಗ್ಪಿನಮಲ್ಲಿ ಮತ್ತೆ ಕೆಲಂಬರ್ಭಕ್ತರಳಲ್ದು ಮರುಗಿ ॥ * * * * * * * * *

ಉ ॥ ಜಂಗಮಲಿಂಗಸಂಕಲಿತಭಕ್ತಿಪರಾಯಣ ಜಂಗಮಕ್ರಿಯಾ । ಸಂಗತ ಜಂಗಮಪ್ರಕರಪಾವನಪಾದ ಸರೋರುಹೋಲ್ಲಸ ॥ ದ್ಭೃಂಗ ಸಮಸ್ತಜಂಗಮಸಮರ್ಚನಲೋಲು

---

ರ೦, ಮಿಗೆ, ಭಕ್ತಿಯಿಂ, ಪೊಡಮಡಲ್, ಒಡನೆ, ಅಲ್ಲಿ, ಶರಣಗಣಂ, ಕಂಡು, ಸತ್ಕರಿಸಿ, ಬನ್ನಿಂ, ಎಂದು, ಆತನಂ, ಕೈವಿಡಿದು, ಒಡನೆ, ಮೂರ್ತಿಗೊಳಿಸಿ. * * * * * * * * * * *

ಮಾಚಿದೇವ! ಬಸವೇಶನ, ಭಕ್ತಿಯ., ಅದೊಂದುಪೇರ್ಮೆಯುಂ, ನೋಡಿರೆ- ನೋಡಿರಿ, ಈಬಸವಂ, ಪಾಡಿದ, ತನ್ನ, ಗೀತದ, ಅಳವಂ, ನೆನೆದು, ಇಂತು, ಅಸುವಿಟ್ಟ, ಪ್ರಾಣವನ್ನುಬಿಟ್ಟ, ಭಕ್ತನಂ, ನಾಡೆ, ನಿರೀಕ್ಷಿಸುತ್ತೆ, ಧರಿತ್ರಿಗೆ, ಅದ್ಭುತಂ, ಮೂಡೆ, ಒಡನೆ, ತನ್ನ, ಅಸುವಂ, ಸಲಿಸಿ, ಇರ್ದ್ದಂ; ಈತನ, ಬಣ್ಣಿಸಲ್, ಆರ್ಗೆ, ಗೋಚರಂ ? ... ... ... ... ॥೧೨॥

ಈಭೂತಳದೊಳ್, ಖಂಡಶಶಿಮೌಳಿ, ಭಕ್ತನ, ಕೊಂಡೊಯ್ದೊಡೆ, ಬಸವನಂತಿರೆ, ಅಸುವಿತ್ತವರಂ, ಕಂಡರೊಳಂ, ಕೇಳ್ದರೊಳಂ, ಕಂಡು, ಅರಿಯೆವು, ಕೇಳ್ದುಂ, ಅರಿಯೆವು. ... ... ॥೧೩॥

ವಿದಿತಪವನಾಂಗಜಂಗಮಕೆ— ವಿದಿತ- ಪ್ರಸಿದ್ಧವಾದ, ಪವನ- ವಾಯುವೇ, ಅಂಗ- ಅಂಗವಾದ, ಜಂಗಮಕೆ, ಇದುಪ್ರಾಣಮಾರುತಾರ್ಪಣಂ- ಈ ಪ್ರಾಣವಾಯು ಸಮರ್ಪಣೆಯು, ಯುಕ್ತಂ, ಎನುತಂ, ಪದೆದು, ಅದಂ, ಅರ್ಪಿಪಜಾಣ್- ಸಮರ್ಪಿಸುವ ಪ್ರೌಢಿಮೆಯು, ಈ ವಸುಮತಿಯೊಳ್, ನೋಳ್ಪೊಡೆ, ಬಸವಂಗೆ, ಸಂದುದುಗಡ- ಪ್ರಾಪ್ತವಾಯಿತಲ್ಲವೇ ? ... ... ... ॥೧೪॥

ಎಂದು, ಶರಣಸಮುದಾಯಂ, ಬಸವನ, ಏಳ್ಗೆಯಂ- ಆಧಿಕ್ಯವನ್ನು, ಕೀರ್ತಿಸುತ್ತಂ, ಇರ್ಪ್ಪನಂ, ಅಲ್ಲಿ, ಮತ್ತೆ, ಕೆಲಂಬರ್ಭಕ್ತರ್, ಅಳಲ್ದು, ಮರುಗಿ. * * * * * * * * * * *

ಜಂಗಮ......ಪರಾಯಣ -- ಜಂಗಮಲಿಂಗ- ಜಂಗಮರಲ್ಲಿ, ಸಂಕಲಿತ- ಕೂಡಿಸಲ್ಪಟ್ಟ, ಭಕ್ತಿ-ಭಕ್ತಿಯಲ್ಲೇ, ಪರಾಯಣ- ಆಸಕ್ತನಾದ, ಜಂಗಮಕ್ರಿಯಾಸಂಗತ- ಜಂಗಮಸಂಬಂಧವಾದ ವ್ಯಾಪಾರದಿಂದ ಕೂಡಿಕೊಂಡಿರುವ, ಜಂಗಮ......ಭೃಂಗ— ಜಂಗಮ- ಜಂಗಮರ, ಪ್ರಕರ ಸಮೂಹದ, ಪಾವನ- ಪರಿಶುದ್ಧವಾದ, ಪಾದ- ಚರಣವೆಂಬ, ಸರೋರುಹ- ಕಮಲಕ್ಕೆ, ಉಲ್ಲಸತ್- ಪ್ರಕಾಶಮಾನವಾದ, ಭೃಂಗ- ಭ್ರಮರನಾದ, ಜಂಗಮಸಮರ್ಚನಲೋಲುಪ- ಜಂಗಮಪೂಜೆಯಲ್ಲಿ ಆಸಕ್ತಿಯುಳ್ಳ, ಜಂಗಮಸಂಘಸಂಗತಜೀವ- ಜಂಗಮಸಮುದಾಯದಲ್ಲಿ ಚೆನ್ನಾಗಿಸೇರಿದ ಪ್ರಾಣವುಳ್ಳ, ಜಂಗಮಸುರದ್ರುಮ- ಜಂಗಮರಿಗೆ ಕಲ್ಪ

ವ ಜಂಗಮಾಳಿಸಂ|ಸಂಗತಜೀವ ಜಂಗಮ ಸುರದ್ರುಮ ಪೋಪುದೆ ನೀಂ ವೃಷಾಧಿಪ ||೧೫||

ಕಂ || ಕಲ್ಯಾಣಮೂರ್ತಿ ನೀ ನಿರೆ | ಕಲ್ಯಾಣ ಮಿದೆನಿಪುದಲ್ತೆ ಮಿಸುಪೀನಗರಂ || ಕಲ್ಯಾಣವಿಲ್ಲದಿರ್ದೊಡೆ | ಕಲ್ಯಾಣಂ ತಾನೆನಿಪ್ಪುದೀಭೂತಳದೊಳ್ || ... ||೧೬||

ಕಂ || ಜ್ಞಾನಾಭಿವೃದ್ಧಿ ಭಕ್ತಿವಿ | ಧಾನಂ ಶಿವಧರ್ಮಸಂಪದಂ ಶಿವಚರಣ || ಧ್ಯಾನರತಿ ಯೆಂಬಿವೆಲ್ಲಂ | ನೀ ನಿಲ್ಲದೊಡೊಳವೆ | ಪೇಳ್ಗುಣಾರ್ಣವಚಂದ್ರ || ... ||೧೭||

ಕಂ || ನೀನುಳ್ಳೊಡುಂಟು ಶರಣಜ | ನಾನಂದಂ ತ್ರಿವಿಧಲಿಂಗಚರಣಾಂಭೋಜಾ || ನೂನಪರಿಪೂಜನಾರತಿ | ಮಾನಿತಶುಭವೃತ್ತಿ ಮಾನ್ಯಜನಮಂದಾರ || ... ||೧೮||

ಉ || ಮಾಮರನಿಲ್ಲದಾರವೆ ಮಹೀವರನಿಲ್ಲದಭೂರಿರಾಜ್ಯ ಮು | ದ್ದಾಮ ಶಶಾಂಕನಿಲ್ಲದಿರು ಳುತ್ಪಲಮಿಲ್ಲದವಾರಿಜಾಕರಂ | ತಾಮರಸಾಪ್ತನಿಲ್ಲದಪಗ ಲ್ನಯಮಿಲ್ಲದಬಾಳ್ಕೆ ದಿವ್ಯಸೌ | ದಾಮಿನಿಯಿಲ್ಲದಿರ್ಪಮುಗಿ ಲಂಬಕಮಿಲ್ಲದಮಾನವಾನನಂ || ... ||೧೯||

ಕಂ || ಶ್ರುತಿಯಿಲ್ಲದಪೂರ್ವಂ ಸ | ನ್ಮತಿಯಿಲ್ಲದಮಂತ್ರಿ ಸತ್ಯಮಿಲ್ಲದತಪದು | ನ್ನತಿ ಕವಿತೆಯಿಲ್ಲದವಿದ | ಗ್ಧತೆ ಬಸವಾಧೀಶನಿಲ್ಲದಿಳೆ ಸೊಗಯಿಕುಮೆ || ... ||೨೦||

ಕಂ || ದಿನಮಣಿಯಿಲ್ಲದೊಡಂಬುಜ | ವನ ಮಲರ್ವುದೆ ಚಂದ್ರ ನಿಲ್ಲದೊಡೆ ಕು

---

ವೃಕ್ಷನಾದ, ವೃಷಾಧಿಪ ! ನೀಂ, ಪೋಪುದೆ ? ... ... ... ||೧೫||

ಕಲ್ಯಾಣಮೂರ್ತಿ- ಮಂಗಳಕರವಾದ ಶರೀರವುಳ್ಳ, ನೀಂ, ಇರೆ, ಮಿಸುಪ, ಈನಗರಂ, ಇದು, ಕಲ್ಯಾಣಂ, ಎನಿಪುದಲ್ತೆ? ಕಲ್ಯಾಣಂ- ಮಂಗಳಸ್ವರೂಪನಾದ ನೀನು, ಇಲ್ಲದಿರ್ದೊಡೆ, ಈ ಭೂತಳದೊಳ್, ತಾಂ, ಅಕಲ್ಯಾಣಂ, ಎನಿಪ್ಪುದು. ... ... ... ... ... ||೧೬||

ಗುಣಾರ್ಣವಚಂದ್ರ ! ಜ್ಞಾನಾಭಿವೃದ್ಧಿ, ಭಕ್ತಿವಿಧಾನಂ, ಶಿವಧರ್ಮಸಂಪದಂ, ಶಿವಚರಣಧ್ಯಾನರತಿ, ಎಂಬ, ಇವು, ಎಲ್ಲಂ, ನೀಂ, ಇಲ್ಲದೊಡೆ, ಒಳವೆ ? ಪೇಳ್. ... ... ||೧೭||

ಮಾನ್ಯಜನಮಂದಾರ- ಪೂಜ್ಯರಿಗೆ ಕಲ್ಪವೃಕ್ಷನಾದವನೇ ! ನೀಂ, ಉಳ್ಳೊಡೆ, ಶರಣಜನಾನಂದಂ- ಶಿವಶರಣರಿಗೆ ಸಂತೋಷವು, ತ್ರಿವಿಧ......ಪೂಜನಾರತಿ— ತ್ರಿವಿಧಲಿಂಗ- ಇಷ್ಟಲಿಂಗ, ಭಾವಲಿಂಗ, ಪ್ರಾಣಲಿಂಗವೆಂಬ ಮೂರುಲಿಂಗಗಳ, ಚರಣಾಂಭೋಜ- ಪಾದಕಮಲದ, ಅನೂನ- ಅಪರಿಮಿತವಾದ, ಪರಿಪೂಜನಾ- ಪೂಜೆಯ, ರತಿ- ವಿಶ್ವಾಸವು, ಮಾನಿತಶುಭವೃತ್ತಿ- ಪೂಜಿಸಲ್ಪಟ್ಟ ಮಂಗಳಕರವಾದ ವ್ಯಾಪಾರವು, ಉಂಟು. ... .. ... ... ... ... ||೧೮||

ಮಾಮರಂ- ಮಾವಿನಮರವು, ಇಲ್ಲದ, ಆರವೆ- ಉದ್ಯಾನವನವು, ಮಹೀವರಂ- ರಾಜನು, ಇಲ್ಲದ, ಭೂರಿರಾಜ್ಯಂ- ಅಧಿಕವಾದ ರಾಜ್ಯವು, ಉದ್ದಾಮಶಶಾಂಕಂ- ಉತ್ಕೃಷ್ಟನಾದ ಚಂದ್ರನು, ಇಲ್ಲದ, ಇರುಳ್- ರಾತ್ರಿಯು, ಉತ್ಪಲಂ- ನೈದಿಲೆಯು, ಇಲ್ಲದ, ವಾರಿಜಾಕರಂ- ಸರೋವರವು; ತಾಮರಸಾಪ್ತಂ- ಸೂರ್ಯನು ಇಲ್ಲದ, ಪಗಲ್, ನಯಂ- ನೀತಿಯು, ಇಲ್ಲದ, ಬಾಳ್ಕೆ, ದಿವ್ಯಸೌದಾಮಿನಿ- ಮನೋಹರವಾದಮಿಂಚು, ಇಲ್ಲದೆ, ಇರ್ಪ, ಮುಗಿಲ್- ಮೇಘವು, ಅಂಬಕಂ- ಕಣ್ಣು, ಇಲ್ಲದ, ಮಾನವಾನನಂ- ಮನುಷ್ಯನಮುಖವು.

ಶ್ರುತಿ- ವೇದವು, ಇಲ್ಲದ, ಪೂರ್ವಂ, ಸನ್ಮತಿ- ಒಳ್ಳೆಯಬುದ್ಧಿಯು, ಇಲ್ಲದ, ಮಂತ್ರಿ, ಸತ್ಯಂ, ಇಲ್ಲದ, ತಪದ, ಉನ್ನತಿ, ಕವಿತೆ, ಇಲ್ಲದ, ವಿದಗ್ಧತೆ- ಪ್ರೌಢತ್ವವು, ಬಸವಾಧೀಶ! ನೀಂ, ಇಲ್ಲದ, ಇಳೆ, ಸೊಗಯಿಕುಮೆ ? ... ... ... ... ... ||೨೦||

ದಿನಮಣಿ- ಸೂರ್ಯನು, ಇಲ್ಲದೊಡೆ, ಅಂಬುಜವನಂ- ಕಮಲಸಮೂಹವು, ಅಲರ್ವುದೆ? ಚಂದ್ರಂ, ಇ

ಮುದಕುಲಂ ॥ ನನೆಕೊನೆವೋವುದೆ ಶರಣ । ರ್ಗೆ ನಿತಾಂತಂ ಬಸವ ನಿಲ್ಲದೊಡೆ ಮುದ
ಮೊಳವೆ ॥ ... ... ... ... ... ... ॥೨೧॥

ಚಂ ॥ ಶರಣಲಲಾಮ ಸತ್ಯಗುಣಧಾಮ ಪವಿತ್ರಚರಿತ್ರ ಸಜ್ಜನಾಂ । ಬುರುಹದಿನೇ
ಶ ಭಕ್ತಿನಿಧಿಕೋಶ ಕೃತಾಂತಲತಾಂತಬಾಣಸಂ ॥ ಹರ ನವತಾರನಿರ್ಜಿತವಿಕಾರ ನಿಜಾಂಗ
ಭುಜಂಗಭೂಷಭಾಸುರಮತವಾರ್ಧಿಚಂದ್ರ ವೃಷಭೇಂದ್ರ ಭವಾಂಬುಧಿಕುಂಭಸಂಭವ ॥೨೨॥

ಕಂ॥ ಧಾರುಣಿಯೊಳ್ಜಂಗಮತತಿ । ಯಾರಂ ಬೇಡುಗುಮದಾರ ನಾಶ್ರೈಸುಗುಮಿ॥
ನ್ನಾರಂ ಕಾಡುಗುಮಾರೊಡ । ನೋರಂತೆ ವಿನೋದಕೇಳಿಯಂ ನಟಯಿಸುಗುಂ ॥೨೩॥

ಕಂ ॥ ಇನ್ನೆಲ್ಲಿಯದಕಟೆಮ್ಮಯ । ಹೃನ್ನಳಿನವಿಕಾಸದೇಳ್ಗೆವಡೆದೈಸಿರಿ ಮೇ ॥ ಣ
ನ್ನೆಲ್ಲಿಯುದಭಿಮತಸುಖ । ಮಿನ್ನೆಲ್ಲಿಯದೋವೊ ಬಸವ ನೀಂ ಪೋದುದರಿಂ॥ ॥೨೪॥

ಮತ್ತೇ । ಹರಪಾದಾಂಬುಜದಲ್ಲಿ ಚಿತ್ತಮನುದಂಚತ್ಕೀರ್ತಿಯಂ ದಿಕ್ಸಮು । ತ್ಕ
ರದೊಳ್ಚನ್ನವೃಷಾಂಕನೊಳ್ವಿಮಲಸನ್ಯಜ್ಞಾನಮಂ ಪ್ರಾಣಮಂ ॥ ಚರರೂಪಾನ್ವಿತ
ಕೇತದೇವನೊಳೆ ನೀಂ ನಿಟ್ಟಂತೆ ನಿನ್ನತ್ಯುದಾ । ರರಸಶ್ರೀಯನದಾರೊಳಿಟ್ಟ ತಳರ್ದೈ
ಪೇಳ್ಭಕ್ತಚೂಡಾಮಣಿ ॥ ... ... ... ... ... ॥೨೫॥

---

ಲ್ಲದೊಡೆ, ಕುಮುದಕುಲಂ- ನೈದಿಲೆಗಳ ಸಮುದಾಯವು, ನನೆಕೊನೆವೋವುದೆ-ಸಂತೋಷವಿಶಿಷ್ಟವಾಗುವ
ದೇ ? ಶರಣರ್ಗೆ, ನಿತಾಂತಂ, ಬಸವಂ, ಇಲ್ಲದೊಡೆ, ಮುದಂ, ಒಳವೆ? ... ... ॥೨೧॥

ಶರಣಲಲಾಮ! ಸತ್ಯಗುಣಧಾಮ- ಸತ್ಯಗುಣಕ್ಕೆ ಮನೆಯಾದ, ಪವಿತ್ರಚರಿತ್ರ, ಸಜ್ಜನಾಂಬುರುಹ
ದಿನೇಶ- ಸತ್ಪುರುಷರೆಂಬ ಕಮಲಕ್ಕೆ ಸೂರ್ಯನಾದ, ಭಕ್ತಿನಿಧಿಕೋಶ- ಭಕ್ತಿಯೆಂಬನಿಕ್ಷೇಪಕ್ಕೆ ಬೊಕ್ಕಸನಾ
ದ, ಕೃತಾಂತಲತಾಂತಬಾಣಸಂಹರಣ— ಕೃತಾಂತ- ಯಮ, ಲತಾಂತಬಾಣ- ಮನ್ಮಥ, ಇವರುಗಳನ್ನು,
ಸಂಹರಣ- ಸಂಹರಿಸಿದ ಶಿವನ, ಅವತಾರ, ನಿರ್ಜಿತವಿಕಾರ-ಜೈಸಲ್ಪಟ್ಟಮಾಯಾವಿಕಾರವುಳ್ಳ, ನಿಜಾಂಗಭುಜಂ
ಗಭೂಷಭಾಸುರಮತವಾರ್ಧಿಚಂದ್ರ— ನಿಜಾಂಗ- ತನ್ನ ಅವಯವದಲ್ಲಿ, ಭುಜಂಗಭೂಷ- ಸರ್ಪದ ಆಭರಣ
ವುಳ್ಳ ಶಿವನ, ಭಾಸುರ-ಪ್ರಕಾಶಮಾನವಾದ, ಮತ- ಮತವೆಂಬ, ವಾರ್ಧಿ- ಸಮುದ್ರಕ್ಕೆ, ಚಂದ್ರ! ಭವಾಂ
ಬುಧಿಕುಂಭಸಂಭವ- ಪಾಪವೆಂಬಸಮುದ್ರಕ್ಕೆ ಅಗಸ್ತ್ಯನಾದ, ವೃಷಭೇಂದ್ರ ! ... ॥೨೨॥

ಧಾರುಣಿಯೊಳ್, ಜಂಗಮತತಿ, ಆರಂ- ಯಾರನ್ನು, ಬೇಡುಗುಂ ? ಅದಾರಂ, ಆಶ್ರೈಸುಗುಂ ?
ಇನ್ನು, ಆರಂ, ಕಾಡುಗುಂ? ಆರೊಡನೆ, ವಿನೋದಕೇಳಿಯಂ- ಸಂತೋಷಕ್ರೀಡೆಯನ್ನು, ಓರಂತೆ- ಚೆನ್ನಾ
ಗಿ, ನಟಯಿಸುಗುಂ ? ... ... ... ... ... ॥೨೩॥

ಬಸವ! ನೀಂ, ಪೋದುದರಿಂ, ಎಮ್ಮಯ, ಹೃನ್ನಳಿನವಿಕಾಸದ, ಹೃತ್ಕಮಲವನ್ನು ವಿಕಸನಮಾಡುವ,
ಏಳ್ಗೆವಡೆದ- ಆಧಿಕ್ಯವನ್ನು ಹೊಂದಿದ, ಐಸಿರಿ- ಐಶ್ವರ್ಯವು, ಇನ್ನು, ಎಲ್ಲಿಯುದು? ಅಕಟ! ಮೇಣ್, ಅಭಿಮ
ತಸುಖಂ—ಇಷ್ಟವಾದಸೌಖ್ಯವು, ಇನ್ನು, ಎಲ್ಲಿಯುದು? ಓವೋ! ... ... ॥೨೪॥

ಭಕ್ತಚೂಡಾಮಣಿ ! ಹರಪಾದಾಂಬುಜದಲ್ಲಿ, ಚಿತ್ತಮಂ, ದಿಕ್ಸಮುತ್ಕರದೊಳ್- ದಿಕ್ಕಿನ ಸಮೂಹ
ದಲ್ಲಿ, ಉದಂಚತ್ಕೀರ್ತಿಯಂ- ಉತ್ಕೃಷ್ಟವಾದ ಯಶಸ್ಸನ್ನು, ಚನ್ನವೃಷಾಂಕನೊಳ್, ವಿಮಲಸಜ್ಞಾ
ನಮಂ, ಚರರೂಪಾನ್ವಿತಕೇತದೇವನೊಳೆ- ಜಂಗಮರೂಪಿನಿಂದಕೂಡಿದ ಮೇದರಕೇತಯ್ಯನಲ್ಲಿ, ಪ್ರಾಣಮಂ,
ನೀಂ, ಇಟ್ಟಂತೆ, ನಿನ್ನ, ಅತ್ಯುದಾರರಸಶ್ರೀಯಂ-ಅತ್ಯೌದಾರ್ಯವೆಂಬ ಸಂಪತ್ತನ್ನು, ಅದಾರೊಳ್, ಇಟ್ಟು,
ತಳರ್ದೈ? ಪೇಳ್. ... ... ... ... ... ॥೨೫॥

ವ ॥ ಎಂದಿಂತು ಭಕ್ತತತಿ ಪಲವಂದದಿಂ ಪಲುಂಬಿ ಪಳಯಿಸುತ್ತಮಿರೆ ಮಾಚಿದೇವಂ ಮಾಣಿಸಿ ॥ * * * * * * * * * * * * * * *

ಕಂ ॥ ಪ್ರಮಥತತಿ ರುದ್ರಸಮುದಯ । ಮುಮೆ ಯೆಮ್ಮ ಪುರಾತನರ್ಕಳರಿಯದ ತೆರದಿಂ ॥ ಹಿಮಕರಧರ ನೀಭಕ್ತೋ । ತ್ತಮ ರಸುವಂ ತನ್ನೊಳಿಟ್ಟೊಡಾಂ ಸೈರಿಪನೆ ॥

ವ ॥ ಎಂದುತ್ಕಟಿಸಿ ನಿಂದು ಭೂಭಾಗಭಾಳನೇತ್ರಂ ವಿಜೃಂಭಿಸಿ ॥ * * *

ಕಂ ॥ ಶರಣಪ್ರಾಣವ್ರತಭಾ । ಸುರಬಸವಂ ಶರಣ ನಳಿಯೆ ಹರಣಮ ನಿತ್ತು ॥ ರ್ವರೆ ಯರಿಯೆ ವಿಜಯ ನಾದಂ । ಹರ ನಿವರಂ ನುಂಗಿ ಪೊಲ್ಲದೆಸಗಿದ ನಲ್ತೆ ॥ ॥೬೩॥

ವ ॥ ಎಂದು ಮತ್ತಮಿರದೆ ॥ ಚಂ॥ ಚರಚರಣಾಬ್ಜಪೂಜನಪರಾಯಣಭಕ್ತರ ನಿಂತಕಾಲದೊ । ಳ್ಪುರಹರ ನೀಂ ವಿಚಾರಿಸದೆ ನಿನ್ನೊಳಡಂಗಿಸಿಕೊಳ್ವುದೇಂ ಸದಾ ॥ ಚರಣಮ ಬೆಚ್ಚರಂ ಕುಡುಕುಡೀಗಳೆ ತಳ್ವದೆ ಕೇತದೇವನಾ । ಹರಣಮ ನೈದುಗುಂ ಬಸವಜೀವನ ವೊಲ್ದದ ರೊಂದುಗೂಡುತಂ ॥ ... ... ... ... ॥೬೪॥

ವ ॥ ಎಂದು ಪನ್ನತಿಕೆಯಂ ನುಡಿದು ॥ ಕಂ ॥ ಮೃಡಭಕ್ತರಸುವ ನಭವಂ । ಕುಡದೀಗ ಳ್ತಳ್ವಗೈದನಾಂ ಸೈರಿಪ ನ ॥ ಲ್ಲೆಡೆಯುಡುಗದೆ ಡಂಗುರಮಂ । ಪೊಡೆಯಿಪೆ ನೆಂದಾರ್ದು ಶರಣ ನುದ್ಘೋಷಿಸಿದಂ ॥ ... ... ... ... ॥೬೫॥

---

ಎಂದು, ಇಂತು, ಭಕ್ತತತಿ, ಪಲವಂದದಿಂ, ಪಲುಂಬಿ, ಪಳಯಿಸುತ್ತಂ, ಇರೆ, ಮಾಚಿದೇವಂ, ಮಾಣಿಸಿ- ನಿಲಿಸಿ. * * * * * * * * * * * * * * * * *

ಹಿಮಕರಧರಂ- ಶಿವನು, ಪ್ರಮಥತತಿ, ರುದ್ರಸಮುದಯಮುಮೆ, ಎಮ್ಮ, ಪುರಾತನರ್ಕಳ್, ಅರಿಯದತೆರದಿಂ, ಈಭಕ್ತೋತ್ತಮರ, ಅಸುವಂ, ತನ್ನೊಳ್, ಇಟ್ಟೊಡೆ, ಆಂ, ಸೈರಿಪನೆ? ... ॥೬೩॥

ಎಂದು, ಭೂಭಾಗಭಾಳನೇತ್ರಂ- ಭೂಮಿಗೆ ಶಿವಸ್ವರೂಪನಾದ ಮಾಚಿದೇವನು, ಉತ್ಕಟಿಸಿ- ಉಬ್ಬಿ, ನಿಂದು,ವಿಜೃಂಭಿಸಿ. * * * * * * * * * * * * * * * * *

ಶರಣ......ಬಸವಂ— ಶರಣ- ಶಿವಶರಣರೇ, ಪ್ರಾಣ- ಪ್ರಾಣವೆಂಬ, ವ್ರತ- ನಿಯಮದಿಂದ, ಭಾಸುರ- ಪ್ರಕಾಶಮಾನನಾದ, ಬಸವಂ, ಶರಣಂ, ಅಳಿಯೆ, ಉರ್ವರೆ- ಭೂಮಿಯು, ಅರಿಯೆ, ಹರಣಮಂ, ಇತ್ತು, ವಿಜಯಂ, ಆದಂ, ಹರಂ, ಇವರಂ, ನುಂಗಿ, ಪೊಲ್ಲದ- ಮಾಡಬಾರದೇ ಇದ್ದದ್ದನ್ನು, ಎಸಗಿದನಲ್ತೆ ?

ಪುರಹರ ! ಚರಚರ......ಕ್ತರಂ— ಚರ- ಜಂಗಮರ, ಚರಣಾಬ್ಜ- ಪಾದಕಮಲದ, ಪೂಜನ- ಪೂಜೆಯಲ್ಲಿ, ಪರಾಯಣ- ಆಸಕ್ತರಾದ, ಭಕ್ತರಂ, ಇಂತು, ಅಕಾಲದೊಳ್, ನೀಂ, ವಿಚಾರಿಸದೆ, ನಿನ್ನೊಳ್, ಅಡಂಗಿಸಿಕೊಳ್ಳುವದು, ಸದಾಚರಣಮೇಂ ? ಬೆಚ್ಚರಂ- ಜಾಗ್ರತೆಯಾಗಿ, ಕೇತದೇವನ, ಹರಣಮಂ- ಪ್ರಾಣವನ್ನು, ತಳ್ವದೆ- ಸಾವಕಾಶಮಾಡದೆ, ಈಗಳೆ, ಕುಡು, ಕುಡು, ಬಸವಜೀವನಂ, ಅದರ, ಒಂದುಗೂಡುತಂ, ಒಲ್ದು, ಐದುಗುಂ- ಬರುವದು. ... ... ... ... ... ॥೬೪॥

ಎಂದು, ಪನ್ನತಿಕೆಯಂ- ಶೌರ್ಯೋಕ್ತಿಯನ್ನು, ನುಡಿದು. * * * * * * * * * *

ಅಭವಂ- ಶಿವನು, ಮೃಡಭಕ್ತರ, ಅಸುವಂ, ಈಗಳ್, ಕುಡದೆ, ತಳ್ವಗೈದಂ- ಸಾವಕಾಶಮಾಡಿದನು, ಆಂ, ಸೈರಿಪಂ- ಸೈರಿಸುವವನು, ಅಲ್ಲ, ಎಡೆಯುಡುಗದೆ- ಆಚೆಗೆ ಕಾಲನ್ನಿಕ್ಕದೆ, ಡಂಗುರಮಂ, ಪೊಡೆಯಿಪೆಂ- ಹೊಡೆಯಿಸುವೆನು, ಎಂದು, ಶರಣಂ, ಆರ್ದು- ಗಟ್ಟಿಯಾಗಿ ಕೂಗಿ, ಉದ್ಘೋಷಿಸಿದಂ- ಗರ್ಜಿಸಿದನು. ... ... ... ... ... ... ॥೬೫॥

ವ ॥ ಅಂತುದ್ಘೋಷಿಸಿ ॥ ಚಂ॥ ಅದಿರೆ ನಭಸ್ಥಳಂ ಕೆದರೆ ತಾರಗೆ ತುಳ್ಕೆ ಪಯೋ
ಧಿ ಬಳ್ಕೆ ಪೆ । ರ್ಪೊದವಿದಹೀಂದ್ರ ನಿಂದ್ರಮುಖದಿಗ್ವರ ರಳ್ಕೆ ವಿರಿಂಚಿವಿಷ್ಣುಗ ॥ ಳ್ಬೆದರೆ
ಗಣೇಂದ್ರ ರದ್ಭುತರಸಾಸ್ಪದ ರಾಗೆ ಮೃದುಸ್ಮಿತಾಮೃತಂ । ಪೊದಳೆ ಕಡಂಗು ತಣ್ಮೆ ಪೊ
ಪೆದುದು ಮಿಗೆ ಡಂಗುರಮಂ ಗಣಾಧಿಪಂ ॥ ... ... ... ... ॥೩೦॥

ಕಂ ॥ ತ್ರ್ಯಕ್ಷನ ಸಭೆ ಗಜಬಜಿಸಿದು । ದಾಕ್ಷಣ ಮಾಪ್ರಮಥರುದ್ರಗಣ ಮುತ್ಸವಿ
ಸಿ ॥ ತ್ತಕ್ಷಯಮಹಿಮನ ಶೌರ್ಯಮ । ನೀಕ್ಷಿಸಿ ಪೊಸತೆಂದು ಪೊಗಳ್ದ ರಘುಹರಭಕ್ತರ್ ॥

ಉ ॥ ನಂಬಿಯ ನಂಬಿಕಾರವಣಾನಂ ಮೆರೆಮಿಂಡ ನದೋರ್ಮೆ ದಭ್ರಭ । ಕ್ತಾಂಬರನಿ
ಮ್ನಗಾಧರರ ನಂದು ಹಲಾಯುಧ ನೋರ್ಮೆ ಗಾಢಶೌ ॥ ರ್ಯಂಬಡೆದೆಮ್ಮವರ್ಗೆ ಪೊರಗೆಂದೆನು
ತಂಜಡಿದಾರ್ದು ಪೊಯ್ದನಾ । ಡಂಬರ ಮೊಪ್ಪೆ ಡಂಗುರಮ ನಿಂದಿಳೆ ಸ್ವೈವೆರಗಾಗೆ ಮಾ
ಚಯಂ ॥ ... ... ... ... ... ... ॥೩೨॥

ಕಂ ॥ ಹೊಡೆದಂ ಡಂಗುರಮ ನಿದಂ । ಮೃಡಂಗೆನುತ್ತಲ್ಲಿ ಶರಣತತಿ ಕೊಂಡಾಡು ॥
ತ್ತೊಡ ನೊಪ್ಪಿರೆ ಕೈಲಾಸದೊ । ಳಡೆವಿಡದಾ ಪ್ರಮಥ ರಭವ ನೊಡ ನಿಂತೆಂದರ್ ॥ ॥೩೩॥

ಚಂ ॥ ಕುಡುಕುಡು ಬೇಗ ಮೀಗ ಳೆಲೆದೇವ ವೃಷೇಂದ್ರನ ಕೇತದೇವ ನು । ಗ್ಗಡದ
ಸುಮ ಕಡಂಗಿ ಕುಡದಿರ್ದೊಡೆ ಸ್ವೈರಿಪ ನಲ್ಲು ಮಿಕ್ಕು ತ ॥ ಕ್ಕಡರ್ದ ಮಹಾಬಲಂ ಪ್ರಮ

---

ಗಣಾದಿಪಂ- ಪ್ರಮಥಾಧಿಪನಾದ ಹೂಬದೇವನು, ನಬಸ್ಥಲಂ- ಆಕಾಶವು, ಅದಿರೆ- ಅಲ್ಲಾಡಲಾಗಿ, ತಾರಗೆ- ನಕ್ಷತ್ರವು, ಕೆದರೆ- ಬೀಳಲು, ಪಯೋಧಿ- ಸಮುದ್ರವು, ತಳ್ಕೆ, ಪೆಂಪೊದವಿದ- ಆಧಿಕ್ಯವನ್ನುಹೊಂದಿದ, ಅಹೀಂದ್ರಂ, ಬಳ್ಕೆ- ನಡುಗಲು, ಇಂದ್ರಮುಖದಿಗ್ವರರ್- ಇಂದ್ರನೇಮೊದಲಾದ ದಿಕ್ಪತಿಗಳು, ಅಳ್ಕೆ- ಭಯಪಡಲಾಗಿ, ವಿರಿಂಚಿವಿಷ್ಣುಗಳ್- ಬ್ರಹ್ಮವಿಷ್ಣುಗಳು, ಬೆದರೆ, ಗಣೇಂದ್ರರ್, ಅದ್ಭುತರಸಾಸ್ಪದರ್- ಆಶ್ಚರ್ಯಕ್ಕಾಶ್ರಯರಾದವರು, ಆಗೆ, ಮೃದುಸ್ಮಿತಾಮೃತಂ- ಮಂದಹಾಸವೆಂಬ ನೀರು, ಪೊದಳೆ- ಹೆಚ್ಚಾಗಲಾಗಿ, ಕಡಂಗುತೆ- ಉತ್ಸಾಹಪಡುತ್ತ, ಅಣ್ಮೆ- ಪರಾಕ್ರಮವಿಶಿಷ್ಟನಾಗಿ, ಮಿಗೆ, ಡಂಗುರಮಂ, ಪೊಡೆದಂ. ... ... ... ... ... ॥೩೦॥

ಆಕ್ಷಣಂ, ತ್ರ್ಯಕ್ಷನ- ತ್ರಿಲೋಚನನಾದ ಪರಶಿವನ, ಸಭೆ, ಗಜಬಜಿಸಿದುದು, ಪ್ರಮಥರುದ್ರಗಣಂ, ಉತ್ಸವಿಸಿತ್ತು, ಅಘಹರಭಕ್ತರ್, ಅಕ್ಷಯಮಹಿಮನ- ನಾಶವಿಲ್ಲದ ಮಹತ್ವವುಳ್ಳ ಮಾಚಿದೇವನ, ಶೌರ್ಯಮಂ, ಈಕ್ಷಿಸಿ, ಪೊಸತು, ಎಂದು, ಪೊಗಳ್ದರ್. ... ... ... ॥೩೧॥

ಅದೋರ್ಮೆ, ಮೆರೆಮಿಂಡಂ, ಗಾಢಶೌರ್ಯಂಬಡೆದು- ಅಧಿಕವಾದ ಪರಾಕ್ರಮವನ್ನುಹೊಂದಿ. ನಂಬಿಯುಂ, ಅಂಬಿಕಾರಮಣನಂ, ಎಮ್ಮವರ್ಗೆ, ಪೊರಗು, ಎಂದು, ಎನುತಂ, ಜಡಿದು, ಆರ್ದು, ಆಡಂಬರಂ- ಅತಿಶಯವು, ಒಪ್ಪೆ, ಡಂಗುರಮಂ, ಪೊಯ್ದಂ; ಅಂದು, ಒರ್ಮೆ, ಹಲಾಯುಧಂ, ದಭ್ರ......ಧರರಂ—ದಭ್ರಭಕ್ತ- ಸಿರಿಯಾಳ, ಅಂಬರನಿಮ್ನಗಾಧರ- ಆಕಾಶಗಂಗಾಧರನಾದ ಶಿವ ಇವರನ್ನು, ಗಾಢಶೌರ್ಯಂಬಡೆದು, ಎಮ್ಮವರ್ಗೆ,ಪೊರಗು, ಎಂದು, ಎನುತಂ, ಜಡಿದು, ಆರ್ದು, ಅಡಂಬರಂ, ಒಪ್ಪೆ, ಡಂಗುರಮಂ, ಪೊಯ್ದಂ ಇಂದು, ಇಳೆ- ಭೂಮಿಯು, ಸ್ವೈವೆರಗಾಗೆ- ಬೆರಗಾಗಲಾಗಿ, ಮಾಚಯಂ. ... ... ॥೩೨॥

ಇದಂ ಡಂಗುರಮಂ, ಮೃಡಂಗೆ, ಪೊಡೆದಂ, ಎನುತ್ತೆ, ಅಲ್ಲಿ, ಶರಣತತಿ, ಕೊಂಡಾಡುತ್ತೆ, ಒಡನೆ, ಒಪ್ಪಿ, ಇರೆ, ಆ ಕೈಲಾಸದೊಳ್, ಆ ಪ್ರಮಥರ್, ಎಡೆವಿಡದೆ, ಅಭವನೊಡನೆ, ಇಂತು,ಎಂದರ್. ॥೩೩॥

ಎಲೆದೇವ! ವೃಷೇಂದ್ರನ, ಕೇತದೇವನ, ಉಗ್ಗಡದ- ಉತ್ಕೃಷ್ಟವಾದ, ಅಸುವಂ, ಬೇಗಂ, ಈಗಳೆ, ಕುಡು, ಕುಡು, ಕಡಂಗಿ, ಕುಡದೆ, ಇರ್ದೊಡೆ, ಮಿಕ್ಕು, ಪ್ರಮಥರೊಳ್, ತಕ್ಕಡರ್ದ, ಅಳವಟ್ಟ,

ಥರೊ ಳ್ಕಲಿದೇವನ ಭದ್ರಸಿಂಧುರಂ । ಪೊಡವಿಯ ರುದ್ರಮೂರ್ತಿ ಭವದೀಯ ಮತಾಂಬುಜ ಭಾನುವಾಚಯಂ ॥ ... ... ... ... ... ॥೩೪॥

ಕಂ ॥ ಅಲ್ಲಿಯ ಭಕ್ತಾಳಿಗೆ ಮೇಣ್ । ಇಲ್ಲಿಯ ಶರಣರ್ಗೆ ದೇವ ಪೊರಗಾಗಿರೆ ಮ ॥ ತ್ತೆಲ್ಲಿಯದೊ ನಿನಗೆ ಪುಗಲಿಡೆ । ಯೆಲ್ಲಿಯ ಅತಿಮಹಿಮೆ ಬೇಗ ಕಳುಪಿವರಸುವಂ ॥ ॥೩೫॥

ಕಂ॥ ಫಳಮಿಲ್ಲದ ಕೊಳನಿಲ್ಲದ । ಜಳಮಿಲ್ಲದ ಬನವನಿಲ್ಲದಗಮುಂ ಬನಮುಂ ॥ ವಿಳಸಿತತಟಾಕಮುಂ ಭೂ । ವಳಯಮು ಮೇಂ ದೇವ ಪೇಳ್ಮನಂಗೊಳಿಸುಗುಮೆ ॥ ॥೩೬॥

ಕಂ ॥ ರವಿರುಚಿಯಿಂ ಶಶಿಕರದಿಂ । ಭುವನಜಮುಂ ಕುಮುದಮುಂ ಪೊದಳ್ದಲರ್ವ್ವಪೊಲು ॥ ತ್ಸವಮೆಸೆವ ಭಕ್ತಿಯಲರ್ವ್ವುದು । ಕುವಲಯಸಖಮೌಳಿ ಬಸವನಿಂ ಭೂತಳದೊಳ್॥

ಕಂ ॥ ಶಿತಿಕಂಠ ನಿಮ್ಮ ಜಂಗಮ । ತತಿಗೀಪ್ಸಿತವಸ್ತುವಿತ್ತು ಪೂಜಿಪ ರಾರ್ಸ ॥ ನ್ನುತಬಸವ ನಿಲ್ಲದಿರೆ ವಸು । ಮತಿಯೊ ಳ್ಸರ್ವಜ್ಞ ದೇವ ನೀ ನರಿಯದುದೆ ॥ ॥೩೮॥

ಕಂ ॥ ಪುರಹರ ಕಳುಪೀಗಳೆ ಮೇಂ । ದರಕೇತಯ್ಯಂಗ ಳೊಡನೆ ಬಸವನ ನಖಿಳೋ॥ ರ್ವ್ವರೆಯೊ ಳ್ಭಕ್ತಿಯ ಸೊಬಗಂ । ಪರಿಪೂರ್ಣ್ಣಂಗೆಯ್ವುದೆಂ ದವ ರ್ನುಡಿಯ ಲೊಡಂ ॥೩೯॥

ಉ ॥ ಆಲಿಸಿ ಶಂಕರಂ ನಗುತೆ ತತ್ಪ್ರಮಥರ್ಕ್ಕಳ ಮುಂದೆ ನಣ್ಪಿನಿಂ । ಲಾಲಿಸುತಂ

---

ಹೊಂದಿದ, ಮಹಾಬಲಂ- ಅಧಿಕಬಲವುಳ್ಳ, ಕಲಿದೇವನ, ಭದ್ರಸಿಂಧುರಂ- ಮಂಗಳಗಜಸ್ವರೂಪನಾದ, ಪೊಡವಿಯು, ರುದ್ರಮೂರ್ತಿ, ಭವದೀಯಮತಾಂಬುಜಭಾನು- ನಿನ್ನಮತವೆಂಬ ಕಮಲಕ್ಕೆ ಸೂರ್ಯನಾದ, ಮಾಚಯ್ಯಂ, ಸ್ವೈರಿಸಂ, ಅಲ್ತೆ. ... ... ... ... ... ॥೩೪॥

ದೇವ! ಅಲ್ಲಿಯ, ಭಕ್ತಾಳಿಗೆ, ಮೇಣ್, ಇಲ್ಲಿಯ, ಶರಣರ್ಗೆ, ಪೊರಗೆ, ಆಗಿ, ಇರೆ, ನಿನಗೆ, ಪುಗಲ್- ಪ್ರವೇಶಮಾಡುವದಕ್ಕೆ, ಎಡೆ- ಸ್ಥಾನವು, ಮತ್ತೆ, ಎಲ್ಲಿಯದೊ, ಅತಿಮಹಿಮೆ, ಎಲ್ಲಿಯದು ? ಬೇಗಂ, ಇವರ, ಅಸುವಂ, ಕಳುಪು. ... ... ... ... ... ॥೩೫॥

ದೇವ ! ಫಳಂ, ಇಲ್ಲದ, ಅಗಮುಂ-ವೃಕ್ಷವೂ, ಕೊಳಂ, ಇಲ್ಲದ, ಬನಮುಂ, ಜಳಂ, ಇಲ್ಲದ, ವಿಳಸಿತತಟಾಕಮುಂ- ಪ್ರಕಾಶಮಾನವಾದ ಕೆರೆಯೂ, ಬಸವಂ, ಇಲ್ಲದ, ಭೂವಳಯಮುಂ, ಮನಂಗೊಳಿಸುಗುಮೇಂ? ಪೇಳ್. ... ... ... ... ... ॥೩೬॥

ಭೂತಳದೊಳ್, ಕುವಲಯಸಖಮೌಳಿ- ಚಂದ್ರಚೂಡನಾದ ಪರಶಿವನೇ! ರವಿರುಚಿಯಿಂ, ಭುವನಜಮುಂ- ಕಮಲವೂ, ಶಶಿಕರದಿಂ, ಕುಮುದಮುಂ, ಪೊದಳ್ದು-ವಿಸ್ತಾರವಾಗಿ, ಅಲರ್ವ್ವಪೊಲ್, ಉತ್ಸವಮೆಸೆವ- ಉತ್ಸವದಿಂದ ಶೋಭಿಸುವ, ಭಕ್ತಿ, ಬಸವನಿಂ, ಅಲರ್ವ್ವುದು. ... ... ॥೩೭॥

ಶಿತಿಕಂಠ- ಎಲೈ ನೀಲಕಂಠನೇ ! ವಸುಮತಿಯೊಳ್, ಸನ್ನುತಬಸವಂ, ಇಲ್ಲದೆ, ಇರೆ, ನಿಮ್ಮ, ಜಂಗಮತತಿಗೆ, ಈಪ್ಸಿತವಸ್ತುವಿತ್ತು- ಇಚ್ಛೈಸಿದ ಪದಾರ್ಥವನ್ನು ಕೊಟ್ಟು, ಪೂಜಿಪರ್, ಆರ್? ಸರ್ವಜ್ಞದೇವ- ಸರ್ವವನ್ನು ಬಲ್ಲ ಸ್ವಾಮಿಯೇ ! ನೀಂ, ಅರಿಯದುದೆ ? ... ... ॥೩೮॥

ಪುರಹರ! ಮೇದರಕೇತಯ್ಯಂಗಳ, ಒಡನೆ, ಬಸವನಂ, ಈಗಳೆ, ಕಳುಪಿ, ಅಖಿಳೋರ್ವ್ವರೆಯೊಳ್-ಸಮಸ್ತ ಭೂಮಿಯಲ್ಲಿ, ಭಕ್ತಿಯ, ಸೊಬಗಂ- ಸೊಗಸನ್ನು, ಪರಿಪೂರ್ಣಂಗೆಯ್ವುದು-ಸಂಪೂರ್ಣ ಮಾಡುವದು, ಎಂದು, ಅವರ್- ಆ ಪ್ರಮಥರು, ನುಡಿಯಲ್, ಒಡಂ. ... ... ॥೩೯॥

ಶಂಕರಂ, ಆಲಿಸಿ, ನಗುತೆ, ತತ್ಪ್ರಮಥರ್ಕ್ಕಳ, ಮುಂದೆ, ನಣ್ಪಿನಿಂ- ಮನೋಹರತೆಯಿಂದ, ಲಾಲಿಸುತಂ, ವೃಷಾಧಿಪನ, ಮೇದರಕೇತಯನಂ, ಕಡುಂಗಿ- ಔತ್ಸುಕ್ಯಪಟ್ಟು, ನೀವ್, ಇನ್ನು, ಇಳೆಗೆ, ಸಲ್ಲೀಲೆ

ವೃಷಾಧಿಪನ ಮೇದರಕೇತಯನಂ ಕಱಂಗಿಸ ॥ ಲ್ಲೀಲೆಯೊಳೆಯ್ದಿರಿನ್ನಿಳಿಗೆ! ನೀವೆನೆ ಕೇಳ್ದು ಬಿಗುರ್ತು ಭಕ್ತಿಯಿಂ । ಶೂಲಿಗ ಮಾಗಣಾವಳಿಗೆ ವಂದಿಸಿ ಕೈಮುಗಿಯುತ್ತೆ ಸಾದರಂ ॥ ... ... ... ... ... ... ॥೪೦॥

ಚಂ ॥ ಗಣತತಿ ಬಿನ್ನಪಂ ಮಹಿಯ ಭೋಗಮ ನೆಲ್ಲಮ ನೊಲ್ಲು ಬಲ್ಲೆವಾ । ಆಣಿಯರ ಮಲ್ಲಿಗೆಯ್ದೆವು ಭವತ್ಪದಪದ್ಮದಗಲ್ಕೆಗಾರೆ ವೆಂ ॥ ದೆಣೆವಡೆ ದೀರ್ವರುಂ ನುಡಿಯೆ ಕೇಳ್ದು ಪುರಾಂತಕ ನೆಂದ ನಾಗಣಾ । ಗ್ರಣಿ ಯೆನಿಸಿರ್ದ ತದ್ಬಸವ ನಾನನಮಂ ನಡೆ ನೋಡಿ ನಣ್ಪಿಸಿಂ ॥ ... ... ... ... ... ... ॥೪೧॥

ಕಂ ॥ ದಾಸೋಽಹಂಭಾವಮ ನುಳಿ । ದಾಸೋಽಹ ಭಾವದೆಡೆಗೆ ಮನವಿಕ್ಕದೆ ನೀಂ ॥ ಲೇಸ ನೊಡರ್ಚ್ಚಿದೆ ಭಳರೆ ಮ । ಹಾಸಾಹಸ ಬಸವ ಭಕ್ತಿ ಯಿಂತಿರವೇಡಾ ॥ ॥೪೨॥

ಕಂ ॥ ವಿಪುಲಗುರುಲಿಂಗಜಂಗಮ । ಸಪರ್ಯೆಯಿಂ ತೋರಿ ಬೀರಿ ಭಕ್ತಿಯ ನೆಲ್ಲ ॥ ರ್ಗ್ಗುಪದೇಶಿಸಿ ಬರ್ಪ್ಪದ ಸುಳಿ । ದುಪಾಯದಿಂ ದಿತ್ತಲಿರ್ಪ್ಪ ನೆಂಬುದು ಮತವೆ ॥ ॥೪೩॥

ವ ॥ ಅಂತುಮಲ್ಲದೆ ॥ ಚಂ ॥ ಅಳಿ ಮಕರಂದಮುಂ ಗಿಳಿ ಲಸತ್ಫಳಮಂ ಪೊಸಮಾವು ಚೈತ್ರನಂ । ಜಲರುಹ ಮರ್ಕ್ಕನಂ ಕುವಲಯಂ ಶಶಿಯಂ ನವಿಲಂಬುವಾಹಮಂ ॥ ಬೆಳೆ ಘನವೃಷ್ಟಿಯಂ ಬಯಸುವಂತೆ ಧರಿತ್ರಿಯೊಳೆನ್ನ ಭಕ್ತಸಂ । ಕುಳ ಮೆಲೆ ನಿನ್ನನೇ ಬಯಸುತಿರ್ದ್ದಪುದಲ್ತೆ ವೃಷಾಧಿನಾಯಕಾ ॥ ... ... ... ॥೪೪॥

---

ಯಿಂ, ಎಯ್ದಿರಿ- ಹೋಗಿರಿ, ಎನೆ, ಬಿಗುರ್ತು- ಭಯಪಟ್ಟು, ಭಕ್ತಿಯಿಂ, ಶೂಲಿಗಂ- ಶಿವನಿಗೂ, ಆಗಣಾವಳಿಗೆ- ಆ ಪ್ರಮಥರ ಸಮುದಾಯಕ್ಕೆ, ವಂದಿಸಿ, ಸಾದರಂ- ಪ್ರೀತಿಸಹಿತನಾಗಿ, ಕೈಮುಗಿಯುತ್ತೆ. ॥೪೦॥

ಗಣತತಿ- ಪ್ರಮಥಸಮೂಹವೇ! ಬಿನ್ನಪಂ, ಆವ್, ಮಹಿಯ, ಎಲ್ಲಮಂ ಭೋಗಮಂ, ಒಲ್ಲು, ಬಲ್ಲೆವ್, ಅಣಿಯರಂ, ಅಲ್ಲಿಗೆ, ಎಯ್ದೆವ್- ಹೋಗುವದಿಲ್ಲ, ಭವತ್ಪದಪದ್ಮದ, ಅಗಲ್ಕೆಗೆ- ವಿಯೋಗಕ್ಕೆ, ಆರೆವ್- ಸಮರ್ಥರಾಗುವದಿಲ್ಲ, ಎಂದು, ಈರ್ವರುಂ, ಎಣೆವಡೆದು- ಒಂದೇಸಮನಾಗಿ, ನುಡಿಯೆ, ಪುರಾಂತಕಂ- ಶಿವನು, ಕೇಳ್ದು, ಆಗಣಾಗ್ರಣಿ- ಪ್ರಮಥಶ್ರೇಷ್ಠನು, ಎನಿಸಿ, ಇರ್ದ, ಬಸವನ, ಆನನಮಂ, ನಡೆ, ನೋಡಿ, ನಣ್ಪಿನಿಂ. ... ... ... ... ... ॥೪೧॥

ಮಹಾಸಾಹಸಿ, ಬಸವ! ದಾಸೋಽಹಂಭಾವಮುಂ- ನಾನು ಸೇವಕನು ಎಂಬ ಭಾವವನ್ನು, ಉಳಿದು, ಆಸೋಽಹಂಭಾವದ- ಆ ಪರಬ್ರಹ್ಮನೇ ನಾನು ಎಂಬುವಿಕೆಯ, ಎಡೆಗೆ- ಸ್ಥಾನಕ್ಕೆ, ನೀಂ, ಮನವಿಕ್ಕದೆ-ಮನಸ್ಸನ್ನು ಕೊಟ್ಟೆ, ಲೇಸಂ- ಒಳ್ಳೆಯದನ್ನು, ಒಡರ್ಚ್ಚಿದೆ- ಮಾಡಿದೆ, ಭಳರೆ! ಭಕ್ತಿ, ಇಂತು, ಇರವೇಡಾ. ॥೪೨॥

ವಿಪುಲ..... ಸಪರ್ಯೆಯಿಂ— ವಿಪುಲ- ವಿಸ್ತಾರವಾದ, ಗುರುಲಿಂಗಜಂಗಮಸಪರ್ಯೆಯಿಂ- ಗುರುಲಿಂಗಜಂಗಮಪೂಜೆಯಿಂದ, ಭಕ್ತಿಯಂ, ಬೀರಿ, ತೋರಿ, ಎಲ್ಲರ್ಗೆ, ಉಪದೇಶಿಸಿ, ಉಪಾಯದಿಂದೆ, ಬರ್ಪ್ಪದಂ- ಉಳಿದು- ಬಿಟ್ಟು, ಇತ್ತಲ್, ಇರ್ಪ್ಪೆಂ, ಎಂಬುದು, ಮತವೆ? ... ... ॥೪೩॥

ಎಲೆ ವೃಷಾದಿನಾಯಕ! ಅಳಿ— ಭ್ರಮರವು, ಮಕರಂದವುಂ, ಗಿಳಿ, ಲಸತ್ಫಳಮಂ- ಪ್ರಕಾಶಮಾನವಾದ ಹಣ್ಣನ್ನು, ಪೊಸಮಾವು, ಚೈತ್ರನಂ- ವಸಂತನನ್ನು, ಜಲರುಹಂ, ಅರ್ಕನಂ ಸೂರ್ಯನನ್ನು, ಕುವಲಯಂ- ನೈದಿಲೆಯು, ಶಶಿಯಂ- ಚಂದ್ರನನ್ನು, ನವಿಲ್, ಅಂಬುವಾಹಮಂ- ಮೇಘವನ್ನು, ಬೆಳೆ- ಪೈರು, ಘನವೃಷ್ಟಿಯಂ- ದೊಡ್ಡಮಳೆಯನ್ನು, ಬಯಸುವಂತೆ, ಧರಿತ್ರಿಯೊಳ್; ಎನ್ನ, ಭಕ್ತಸಂಕುಳಂ, ನಿನ್ನನೇ, ಬಯಸುತೆ, ಇರ್ದ್ದಪುದಲ್ತೆ? ... ... ... ... ... ॥೪೪॥

ಕಂ ‖ ಈಲೋಕಮುಮಾಲೋಕಮು । ಮಾಲೋಕಿಪ್ಪೊಡೊಂದೆ ಬಸವ ಮದ್ಭಕ್ತಿ
ಯುತ ‖ ರ್ಗಾಲಾಪಿಪುದೇಂ ಭೇದಕ । ಥಾಲಾಪಂ ತೋರದೆಂದು ಮೆನಗಂ ನಿನಗಂ ‖ ‖೪೪‖

ಉ ‖ ಎನ್ನ ನಿರೂಪಮಂ ತಳೆದು ಪೋದೆಗಡಂದು ವೃಷೇಂದ್ರ ಭೂತಳ । ಕ್ಕಿನ್ನು
ಮೊರಲ್ದು ಪೋಗಿ ಗುರುಲಿಂಗಜರೋತ್ತಮಭಕ್ತಿಯಂದಮಂ ‖ ಚೆನ್ನಲರ್ವಂತೆ ನೀಂ ಪಸ
ರಿಸುತ್ತಿಳೆಯೊಳ್ ಬಗೆದಿಲ್ಲಿಗೆಯ್ದೆ ನು । ತ್ತಂ ನಗಜಾಧಿಪಂ ಬೆಸಸೆ ತತ್ಪದ ಕೊಲ್ದೆರಗು
ತ್ತೆ ಭಕ್ತಿಯಿಂ‖ ... ... ... ... ... ... ‖೪೫‖

ಕಂ ‖ ಪ್ರಮಥಗಣಪದಸರೋಜಕ್ಕ । ಕ್ಕನು ದೆರಗುತ್ತೊಲ್ದು ಕೇತದೇವಸಮೇತ ‖
ವಿಮಲಮತಿ ತನ್ನಿರೂಪ । ಕ್ರಮಮಂ ತಳೆ ದಿಳೆಗೆ ಬಸವರಾಜಂ ಬಂದಂ ‖ ... ‖೪೬‖

ವ ‖ ಅಂತು ಕೇತದೇವಸಮೇತಂ ಕಲ್ಯಾಣಕಟಕ ಕೇಳ್ತಂದು ಚೈತನ್ಯಂಬಡೆ ದೇ
ಳ್ದು ಶರಣಗಣದೊಡ ನೊಡ್ಡೋಲಗಂಗೊಟ್ಟಿರ್ದ ಮಾಚಿದೇವಂಗ ಮಾಶರಣಸಭೆಗಂ ಸಾ
ಷ್ಟಾಂಗಪ್ರಣಾಮಂಗೈದಾಗ ಳ್ಮಾಚಿದೇವ ನುತ್ಸವಿಸು ತೇಳ್ದು ತಾನು ಮಾಗಣಸಭೆ ಗೆರ
ಗಿ ಕರಾರವಿಂದಂಗಳಂ ಮುಗಿದು ನಿಂದು ‖ * * * * * * * * * *

ಕಂ ‖ ಬಂದಂ ನಿಮ್ಮಡಿಯೊಲ್ಮೆಯ । ಕಂದಂ ನಿಜಭಕ್ತಿಮಲ್ಲಿಕಾವೇಷ್ಟಿತಮಾ ‖
ಕಂದಂ ಶಿವಗಣವಿತತಾ । ನಂದಂ ಬಸವಂ ಶಿವಾಂಘ್ರಿನಳಿನಮರಂದಂ‖ ... ‖೪೭‖

ಕಂ ‖ ಶರಣವರೇಣ್ಯರೆ ನಿಮ್ಮಯ । ಚರಣಾಬ್ಜಭೃತ್ಯರೀಶ್ವರುಂ ಬಂದರಿವಂ ‖

---

ಬಸವ! ಮದ್ಭಕ್ತಿಯುತರ್ಗೆ, ಈ ಲೋಕಮುಂ, ಆ ಲೋಕಮುಂ, ಆಲೋಕಿಪೊಡೆ, ಒಂದೆ; ಆ
ಲಾಪಿಪುದೇಂ- ಹೇಳುವದೇನು? ಎನಗಂ, ನಿನಗಂ, ಎಂದುಂ- ಯಾವಾಗಲೂ, ಭೇದಕಥಾಲಾಪಂ- ಭಿನ್ನತೆ
ಯನ್ನು ಹೇಳುವಿಕೆಯು, ತೋರದು. ... ... ... ... ‖೪೪‖

ವೃಷೇಂದ್ರ! ಅಂದು, ಭೂತಳಕ್ಕೆ, ಎನ್ನ, ನಿರೂಪಮಂ- ಆಜ್ಞೆಯನ್ನು, ತಳೆದು, ಪೋದೆಗಡ? ಇ
ನ್ನು, ಒರಲ್ದು, ಪೋಗಿ, ಗುರುಲಿಂಗಜರೋತ್ತಮಭಕ್ತಿಯ- ಗುರುಲಿಂಗಜಂಗಮರ ಉತ್ಕೃಷ್ಟವಾದ ಭ
ಕ್ತಿಯ, ಅಂದಮಂ, ಚೆಲ್- ಮನೋಹರತ್ವವು, ಅಲರ್ವಂತೆ- ವಿಸ್ತಾರವಾಗುವಹಾಗೆ, ಇಳೆಯೊಳ್, ನೀಂ, ಪ
ಸರಿಸುತ್ತೆ, ಬಗೆದು- ಇಚ್ಛೈಸಿ, ಇಲ್ಲಿಗೆ, ಎಯ್ದು- ಬಾ, ಎನುತ್ತಂ, ನಗಜಾಧಿಪಂ, ಬೆಸಸೆ, ತತ್ಪದಕ್ಕೆ, ಭ
ಕ್ತಿಯಿಂ, ಒಲ್ದು, ಎರಗುತ್ತೆ. ... ... ... ... ... ‖೪೫‖

ವಿಮಲಮತಿ, ಬಸವರಾಜಂ ಕೇತದೇವಸಮೇತಂ ಒಲ್ದು, ಪ್ರಮಥಗಣಪದಸರೋಜಕ್ಕೆ, ಎರಗುತ್ತೆ,
ತನ್ನಿರೂಪಕ್ರಮಮಂ- ಅಪರಶಿವನಆಜ್ಞಾಪರೀತಿಯನ್ನು, ತಳೆದು, ಇಳೆಗೆ, ಬಂದಂ. ... ‖೪೬‖

ಅಂತು, ಕೇತದೇವಸಮೇತಂ, ಕಲ್ಯಾಣಕಟಕಕ್ಕೆ- ಕಲ್ಯಾಣಪಟ್ಟಣಕ್ಕೆ, ಪೆಳ್ತಂದು, ಚೈತನ್ಯಂಬ
ಡೆದು- ಪ್ರಾಣವನ್ನುಹೊಂದಿ, ಎಳ್ದು, ಶರಣಗಣದ, ಒಡನೆ, ಒಡ್ಡೋಲಗಂಗೊಟ್ಟು, ಇರ್ದ, ಮಾಚಿದೇ
ವಂಗಂ, ಆಶರಣಸಭೆಗಂ, ಸಾಷ್ಟಾಂಗಪ್ರಣಾಮಂಗೈದ, ಆಗಳ್- ಮಾಚಿದೇವಂ, ಉತ್ಸವಿಸುತೆ, ಎಳ್ದು,
ತಾನುಂ, ಆಗಣಸಭೆಗೆ, ಎರಗಿ, ಕರಾರವಿಂದಂಗಳಂ, ಮುಗಿದು ,ನಿಂದು. * * * * * * *

ನಿಮ್ಮ, ಅಡಿಯ, ಒಲ್ಮೆಯ- ಪ್ರಿತಿಪಾತ್ರನಾದ, ಕಂದಂ- ಶಿಶುವಾದ, ನಿಜಭಕ್ತಿಮಲ್ಲಿಕಾವೇಷ್ಟಿತಮಾ
ಕಂದಂ- ಸ್ಥಿರವಾದ ಭಕ್ತಿಯೆಂಬ ಮಲ್ಲಿಗೆಯಬಳ್ಳಿಯಿಂದ ಸುತ್ತಲ್ಪಟ್ಟಮಾವಿನಮರವಾದ, ಶಿವಗಣವಿತತಾ
ನಂದಂ- ಪ್ರಮಥರಿಗೋಸ್ಕರ ವಿಸ್ತರಿಸಲ್ಪಟ್ಟ ಸಂತೋಷವುಳ್ಳ, ಶಿವಾಂಘ್ರಿನಳಿನಮರಂದಂ- ಪರಶಿವಪಾದಪ
ದ್ಮಕ್ಕೆಮಕರಂದರೂಪನಾದ, ಬಸವಂ, ಬಂದಂ. ... ... ... ... ‖೪೭‖

ಶರಣವರೇಣ್ಯರ್, ನಿಮ್ಮಯ, ಚರಣಾಂಬುಜಭೃತ್ಯರ್, ಈಶ್ವರುಂ, ಬಂದರ್, ಇವಂದಿರ ...ವರ,

ವೃಷಾಧಿಪನ ಮೇದರಕೇತಯನಂ ಕಷಂಗಿ ಸ ॥ ಲ್ಲೀಲೆಯೊಳೆಯ್ದಿರಿನ್ನಿಳೆಗೆ! ನೀವೆನೆ ಕೇಳ್ದು ಬಿಗುರ್ತು ಭಕ್ತಿಯಿಂ । ಶೂಲಿಗ ಮಾಗಣಾವಳಿಗೆ ವಂದಿಸಿ ಕೈಮುಗಿಯುತ್ತೆ ಸಾದರಂ ॥ ... ... ... ... ... ... ॥೪೦॥

ಚಂ ॥ ಗಣತತಿ ಬಿನ್ನಪಂ ಮಹಿಯ ಭೋಗಮನೆಲ್ಲಮನೊಲ್ಲ ಬಲ್ಲೆವಾ । ವಣಿಯರ ಮಲ್ಲಿಗೆಯ್ದೆವು ಭವತ್ಪದಪದ್ಮದಗಲ್ಕೆಗಾರೆವೆಂ ॥ ದೆಣೆವಡೆದೀರ್ವ್ವರುಂ ನುಡಿಯೆ ಕೇಳ್ದು ಪುರಾಂತಕನೆಂದ ನಾಗಣಾ । ಗ್ರಣಿ ಯೆನಿಸಿರ್ದ್ದ ತದ್ಬಸವನಾನನಮಂ ನಡೆ ನೋಡಿ ನಣ್ಪಿನಿಂ ॥ ... ... ... ... ... ... ॥೪೧॥

ಕಂ ॥ ದಾಸೋಹಂಭಾವಮನುಳಿ । ದಾಸೋಹ ಭಾವದೆಡೆಗೆ ಮನವಿಕ್ಕಿದೆ ನೀಂ ॥ ಲೇಸ ನೊಡರ್ಚ್ಚಿದೆ ಭಳರೆ ಮ । ಹಾಸಾಹಸ ಬಸವ ಭಕ್ತಿಯಿಂತಿರವೇಡಾ ॥ ॥೪೨॥

ಕಂ ॥ ವಿಪುಲಗುರುಲಿಂಗಜಂಗಮ । ಸಪರ್ಯೆಯಿಂ ತೋರಿ ಬೀರಿ ಭಕ್ತಿಯನೆಲ್ಲ ॥ ರ್ಗ್ಗುಪದೇಶಿಸಿ ಬರ್ಪ್ಪದನುಳಿ । ದುಪಾಯದಿಂ ದಿತ್ತಲಿರ್ಪ್ಪೆನೆಂಬುದು ಮತವೆ ॥ ॥೪೩॥

ವ ॥ ಅಂತುಮಲ್ಲದೆ ॥ ಚಂ ॥ ಅಳಿ ಮಕರಂದಮುಂ ಗಿಳಿ ಲಸತ್ಫಳಮಂ ಪೊಸಮಾವು ಚೈತ್ರನಂ । ಜಲರುಹ ಮರ್ಕನಂ ಕುವಲಯಂ ಶಶಿಯಂ ನವಿಲಂಬುವಾಹಮಂ ॥ ಬೆಳೆ ಘನವೃಷ್ಟಿಯಂ ಬಯಸುವಂತೆ ಧರಿತ್ರಿಯೊಳೆನ್ನ ಭಕ್ತಸಂ । ಕುಳ ಮೆಲೆ ನಿನ್ನನೇ ಬಯಸುತಿರ್ದ್ದಪುದಲ್ತೆ ವೃಷಾಧನಾಯಕ ॥ ... ... ... ॥೪೪॥

---

ಯಿಂ, ಎಯ್ದಿರಿ- ಹೋಗಿರಿ, ಎನೆ, ಬಿಗುರ್ತು- ಭಯಪಟ್ಟು, ಭಕ್ತಿಯಿಂ, ಶೂಲಿಗಂ- ಶಿವನಿಗೂ, ಆಗಣಾವಳಿಗೆ- ಆ ಪ್ರಮಥರ ಸಮುದಾಯಕ್ಕೆ, ವಂದಿಸಿ, ಸಾದರಂ- ಪ್ರೀತಿಸಹಿತನಾಗಿ, ಕೈಮುಗಿಯುತ್ತೆ. ॥೪೦॥

ಗಣತತಿ- ಪ್ರಮಥ ಸಮೂಹವೇ! ಬಿನ್ನಪಂ, ಆವ್, ಮಹಿಯ, ಎಲ್ಲಮಂ ಭೋಗಮಂ, ಒಲ್ಲ, ಬಲ್ಲೆವ್, ಅಣಿಯರಂ, ಅಲ್ಲಿಗೆ, ಎಯ್ದೆವ್- ಹೋಗುವದಿಲ್ಲ, ಭವತ್ಪದಪದ್ಮದ, ಅಗಲ್ಕೆಗೆ- ವಿಯೋಗಕ್ಕೆ, ಆರೆವ್- ಸಮರ್ಥರಾಗುವದಿಲ್ಲ, ಎಂದು, ಈರ್ವ್ವರುಂ, ಎಣೆವಡೆದು- ಒಂದೇಸಮನಾಗಿ, ನುಡಿಯೆ, ಪುರಾಂತಕಂ- ಶಿವನು, ಕೇಳ್ದು, ಆಗಣಾಗ್ರಣಿ- ಪ್ರಮಥಶ್ರೇಷ್ಠನು, ಎನಿಸಿ, ಇರ್ದ್ದ, ಬಸವನ, ಆನನಮಂ, ನಡೆ, ನೋಡಿ, ನಣ್ಪಿನಿಂ. ... ... ... ... ... ॥೪೧॥

ಮಹಾಸಾಹಸಿ, ಬಸವ! ದಾಸೋಹಂಭಾವಮಂ- ನಾನು ಸೇವಕನು ಎಂಬ ಭಾವವನ್ನು, ಉಳಿದು, ಆಸೋಹಂಭಾವದ- ಆ ಪರಬ್ರಹ್ಮನೇ ನಾನು ಎಂಬುವಿಕೆಯ, ಎಡೆಗೆ- ಸ್ಥಾನಕ್ಕೆ, ನೀಂ, ಮನವಿಕ್ಕಿದೆ- ಮನಸ್ಸನ್ನು ಕೊಟ್ಟೆ, ಲೇಸಂ- ಒಳ್ಳೆಯದನ್ನು, ಒಡರ್ಚ್ಚಿದೆ- ಮಾಡಿದೆ, ಭಳರೆ! ಭಕ್ತಿ, ಇಂತು, ಇರವೇಡಾ. ॥೪೨॥

ವಿಪುಲ..... ಸಪರ್ಯೆಯಿಂ— ವಿಪುಲ- ವಿಸ್ತಾರವಾದ, ಗುರುಲಿಂಗಜಂಗಮಸಪರ್ಯೆಯಿಂ- ಗುರುಲಿಂಗಜಂಗಮಪೂಜೆಯಿಂದ, ಭಕ್ತಿಯಂ, ಬೀರಿ, ತೋರಿ, ಎಲ್ಲರ್ಗೆ, ಉಪದೇಶಿಸಿ, ಉಪಾಯದಿಂದೆ, ಬರ್ಪ್ಪದಂ- ಉಳಿದು- ಬಿಟ್ಟು, ಇತ್ತಲ್, ಇರ್ಪ್ಪೆಂ, ಎಂಬುದು, ಮತವೆ? ... ... ॥೪೩॥

ಎಲೆವೃಷಾಧಿನಾಯಕ! ಅಳಿ- ಭ್ರಮರವು, ಮಕರಂದಮುಂ, ಗಿಳಿ, ಲಸತ್ಫಳಮಂ- ಪ್ರಕಾಶಮಾನವಾದ ಹಣ್ಣನ್ನು, ಪೊಸಮಾವು, ಚೈತ್ರನಂ- ವಸಂತನನ್ನು, ಜಲರುಹಂ, ಅರ್ಕನಂ ಸೂರ್ಯನನ್ನು, ಕುವಲಯಂ- ನೈದಿಲೆಯು, ಶಶಿಯಂ- ಚಂದ್ರನನ್ನು, ನವಿಲ್, ಅಂಬುವಾಹಮಂ- ಮೇಘವನ್ನು, ಬೆಳೆ- ಪೈರು, ಘನವೃಷ್ಟಿಯಂ- ದೊಡ್ಡಮಳೆಯನ್ನು, ಬಯಸುವಂತೆ, ಧರಿತ್ರಿಯೊಳ್, ಎನ್ನ, ಭಕ್ತಸಂಕುಳಂ, ನಿನ್ನನೇ, ಬಯಸುತೆ, ಇರ್ದ್ದಪುದಲ್ತೆ? ... ... ... ... ... ॥೪೪॥

ಕಂ ॥ ಈಲೋಕಮುಮಾಲೋಕಮು । ಮಾಲೋಕಿಪ್ಪೊಡೊಂದೆ ಬಸವ ಮದ್ಭಕ್ತಿ
ಯುತ ॥ ರ್ಗಾಲಾಪಿಪ್ಪುದೇಂ ಭೇದಕ । ಥಾಲಾಪಂ ತೋರದೆಂದುಮೆನಗುಂ ನಿನಗಂ ॥ ॥೪೫॥

ಉ ॥ ಎನ್ನ ನಿರೂಪಮಂ ತಳೆದು ಪೋದೆಗಡಂದು ವೃಷೇಂದ್ರ ಭೂತಳ । ಕ್ಕಿನ್ನು ಮೊರಲ್ದುಪೋಗಿ ಗುರುಲಿಂಗಚರೋತ್ತಮಭಕ್ತಿಯಂದಮುಂ ॥ ಚೆನ್ನಲರ್ವಂತೆ ನೀಂ ಪಸರಿಸುತ್ತಿಳೆಯೊಳ್ ಬಗೆದಿಲ್ಲಿಗೆಯ್ದು ನು । ತ್ತಂ ನಗಜಾಧಿಪಂ ಬೆಸಸೆ ತತ್ಪದಕೊಲ್ದೆರಗುತ್ತೆ ಭಕ್ತಿಯಿಂ॥ ... ... ... ... ... ... ॥೪೬॥

ಕಂ ॥ ಪ್ರಮಥಗಣಪದಸರೋಜ । ಕ್ಕೆನು ದೆರಗುತ್ತೊಲ್ದು ಕೇತದೇವಸಮೇತ ॥ ವಿಮಲಮತಿ ತನ್ನಿರೂಪ । ಕ್ರಮಮಂ ತಳೆ ದಿಳೆಗೆ ಬಸವರಾಜಂ ಬಂದಂ ॥ ... ॥೪೭॥

ವ ॥ ಅಂತು ಕೇತದೇವಸಮೇತಂ ಕಲ್ಯಾಣಕಟಕಕ್ಕೆಳ್ತಂದು ಚೈತನ್ಯಂಬಡೆದೆಳ್ದು ಶರಣಗಣದೊಡನೊಡ್ಡೋಲಗಂಗೊಟ್ಟಿರ್ದ ಮಾಚಿದೇವಂಗಮಾಶರಣಸಭೆಗಂ ಸಾಷ್ಟಾಂಗಪ್ರಣಾಮಂಗೈದಾಗಳ್ ಮಾಚಿದೇವನುತ್ಸವಿಸುತ್ತೆಳ್ದು ತಾನುಮಾಗಣಸಭೆಗೆರಗಿ ಕರಾರವಿಂದಂಗಳಂ ಮುಗಿದು ನಿಂದು ॥ * * * * * * * * * *

ಕಂ ॥ ಬಂದಂ ನಿಮ್ಮಡಿಯೊಲ್ಮೆಯ । ಕಂದಂ ನಿಜಭಕ್ತಿಮಲ್ಲಿಕಾವೇಷ್ಟಿತಮಾ ॥ ಕಂದಂ ಶಿವಗಣವಿತತಾ । ನಂದಂ ಬಸವಂ ಶಿವಾಂಘ್ರಿಸಳಿನಮರಂದಂ॥ ... ॥೪೮॥

ಕಂ ॥ ಶರಣವರೇಣ್ಯರೆ ನಿಮ್ಮಯ । ಚರಣಾಂಬುಜಭೃತ್ಯರೀಶ್ವರರುಂ ಬಂದರಿವಂ ॥

---

ಬಸವ! ಮದ್ಭಕ್ತಿಯುತರ್ಗೆ, ಈ ಲೋಕಮುಂ, ಆ ಲೋಕಮುಂ, ಆಲೋಕಿಪ್ಪೊಡೆ, ಒಂದೆ; ಆಲಾಪಿಪುದೇಂ- ಹೇಳುವದೇನು? ಎನಗುಂ, ನಿನಗುಂ, ಎಂದುಂ- ಆವಾಗಲೂ, ಭೇದಕಥಾಲಾಪಂ- ಭಿನ್ನತೆಯನ್ನು ಹೇಳುವಿಕೆಯು, ತೋರದು. ... ... ... ... ॥೪೫॥

ವೃಷೇಂದ್ರ! ಅಂದು, ಭೂತಳಕ್ಕೆ, ಎನ್ನ, ನಿರೂಪಮಂ- ಆಜ್ಞೆಯನ್ನು, ತಳೆದು, ಪೋದೆಗಡ? ಇನ್ನು, ಒರಲ್ದು, ಪೋಗಿ, ಗುರುಲಿಂಗಚರೋತ್ತಮಭಕ್ತಿಯ- ಗುರುಲಿಂಗಜಂಗಮರ ಉತ್ಕೃಷ್ಟವಾದ ಭಕ್ತಿಯ, ಅಂದಮುಂ, ಚೆಲ್- ಮನೋಹರತ್ವವು, ಅಲರ್ವಂತೆ- ವಿಸ್ತಾರವಾಗುವಹಾಗೆ, ಇಳೆಯೊಳ್, ನೀಂ, ಪಸರಿಸುತ್ತೆ, ಬಗೆದು- ಇಚ್ಛೈಸಿ, ಇಲ್ಲಿಗೆ, ಎಯ್ದು- ಬಾ, ಎನುತ್ತುಂ, ನಗಜಾಧಿಪಂ, ಬೆಸಸೆ, ತತ್ಪದಕ್ಕೆ, ಭಕ್ತಿಯಿಂ, ಒಲ್ದು, ಎರಗುತ್ತೆ. ... ... ... ... ... ॥೪೬॥

ವಿಮಲಮತಿ, ಬಸವರಾಜಂ ಕೇತದೇವಸಮೇತಂ ಒಲ್ದು, ಪ್ರಮಥಗಣಪದಸರೋಜಕ್ಕೆ, ಎರಗುತ್ತೆ, ತನ್ನಿರೂಪಕ್ರಮಮಂ- ಅಪರಶಿವನ ಆಜ್ಞೆಯರೀತಿಯನ್ನು, ತಳೆದು, ಇಳೆಗೆ, ಬಂದಂ. ... ॥೪೭॥

ಅಂತು, ಕೇತದೇವಸಮೇತಂ, ಕಲ್ಯಾಣಕಟಕಕ್ಕೆ- ಕಲ್ಯಾಣಪಟ್ಟಣಕ್ಕೆ, ಎಳ್ತಂದು, ಚೈತನ್ಯಂಬಡೆದು- ಪ್ರಾಣವನ್ನುಹೊಂದಿ, ಎಳ್ದು, ಶರಣಗಣದ, ಒಡನೆ, ಒಡ್ಡೋಲಂಗೊಟ್ಟು, ಇರ್ದ, ಮಾಚಿದೇವಂಗಂ, ಆಶರಣಸಭೆಗಂ, ಸಾಷ್ಟಾಂಗಪ್ರಣಾಮಂಗೈದ, ಆಗಳ್- ಮಾಚಿದೇವಂ, ಉತ್ಸವಿಸುತ್ತೆ, ಎಳ್ದು, ತಾನುಂ, ಆಗಣಸಭೆಗೆ, ಎರಗಿ, ಕರಾರವಿಂದಂಗಳಂ, ಮುಗಿದು, ನಿಂದು. * * * * * * *

ನಿಮ್ಮ, ಅಡಿಯ, ಒಲ್ಮೆಯ- ಪ್ರೀತಿಪಾತ್ರನಾದ, ಕಂದಂ- ಶಿಶುವಾದ, ನಿಜಭಕ್ತಿಮಲ್ಲಿಕಾವೇಷ್ಟಿತಮಾಕಂದಂ- ಸ್ಥಿರವಾದ ಭಕ್ತಿಯೆಂಬ ಮಲ್ಲಿಗೆಯಬಳ್ಳಿಯಿಂದ ಸುತ್ತಲ್ಪಟ್ಟಮಾವಿನಮರವಾದ, ಶಿವಗಣವಿತತಾನಂದಂ- ಪ್ರಮಥರಿಗೋಸ್ಕರ ವಿಸ್ತರಿಸಲ್ಪಟ್ಟ ಸಂತೋಷವುಳ್ಳ, ಶಿವಾಂಘ್ರಿಸಳಿನಮರಂದಂ- ಪರಶಿವನಪಾದಕಮಲಕ್ಕೆಮಕರಂದರೂಪನಾದ, ಬಸವಂ, ಬಂದಂ. ... ... ... ... ॥೪೮॥

ಶರಣವರೇಣ್ಯರ್, ನಿಮ್ಮಯ, ಚರಣಾಂಬುಜಭೃತ್ಯರ್, ಈಶ್ವರರುಂ, ಬಂದರ್, ಇವಂ ...ದ,

ಧಿರ ಕರದಿಂ ಸೇವೆಯ ನಾ | ದರದಿಂ ಕೈಕೊಂಡು ಸುಖದಿ ನಿನ್ನಿರವೇಳ್ಕುಂ ‖ ‖೪೯‖

ಕಂ ‖ ಭವದೀಯಕೃಪಾಶರಧಿಯೊ | ಳವಗಾಹಂಗೈಸು ತೆವರ ನೆನಗೊಪ್ಪಿಂ ದೊ ‖
ಪ್ಪುವ ನಿಮ್ಮ ಸುಪ್ರಸಾದವ | ನವಿರತವೀಯುತ್ತೆ ಕೂರ್ತು ಪೊರೆಯಲ್ವೇಳ್ಕುಂ ‖೫೦‖

ವ ‖ ಎಂದು ಮಗುಳ್ದು ಮಾಚಿದೇವಂ ಸಾಷ್ಟಾಂಗ ವೆರಗೆ ಭಕ್ತತತಿಯುಂ ಜಂಗಮನಿಕರಮು ಮಾನಂದಂ ಮಿಸುಗೆ ತೆಗೆದು ಬಿಗಿದಪ್ಪಿ ಮನ್ನಿಸಿ ‖ * * * * *

ಚಂ ‖ ಅರರೆ ಗಣಾಗ್ರಗಣ್ಯ ಭವದೀಯಮಹತ್ವಮ ನಿಂತುಟೆಂದು ಬಿ | ತ್ತರಿಸ ಲ
ದಾರ್ಗೆ ಗೋಚರಿಪ್ಪು ದೀನರರುಂ ಸುರರುಂ ಭಯಾರ್ತ್ತಿವ | ಟ್ಟಿರೆ ಧರೆಯುಂ ನಭಸ್ಥಲಮು
ಮದ್ಭುತಕಂಪಮನಾಳೆ ಪೊಯ್ದೆ ಡಂ | ಗುರಮ ನನಂಗಮರ್ದನನ ಮೇಲೆ ಮಹೀತಳಭಾ
ಳಲೋಚನ ‖ ... ... ... ... ... ‖೫೧‖

ಕಂ ‖ ಮದಕರಿಯ ಕರದ ಕಬ್ಬಂ | ಮದಮಿಂ ಸೆಳೆದಂತೆ ಸೆಳೆದೆ ಹರ ನೊಳಕೊಂಡ ‖
ಗ್ಗದ ಶರಣನಸುವ ನಸವಸ | ಮುದಿತಪ್ರಬಲಪ್ರತಾಪ ಮಹಿಮಾಭರಣ ‖ ‖೫೨‖

ಕಂ ‖ ಮೂದಲಿಸಿ ಹರನ ನಧಟಿಂ | ನಾದಂಬೊಯ್ದಳಿದ ಭಕ್ತರಸುವಂ ಪಡೆದೈ ‖
ಮೇದಿನಿಯೊ ಳಮಮ ಘನಮಹಿ | ಮೋದಧಿ ನಿನ್ನಳವ ನಾರೊ ಬಣ್ಣಿಸ ಲಾರ್ಪರ್ ‖೫೩‖

ಕಂ‖ ಆಲೋಕದೊ ಳೀಲೋಕದೊ | ಳಾಲೋಕಿ ಪೊಡರರೆ ನೀನೆ ಪೆಸರ್ವೆತ್ತಿಪ್ಪ ಸ‖

---

ಕರದಿಂ, ಸೇವೆಯು, ಆದರದಿಂ, ಕೈಕೊಂಡು, ಸುಖದಿಂ, ಇನ್ನು, ಇರವೇಳ್ಕುಂ. ... ‖೪೯‖

ಇನಿತು, ಭವದೀಯಕೃಪಾಶರಧಿಯೊಳ್, ಅವಗಾಹಂಗೈಸುತೆ-ಮುಳುಗಿಸುತ್ತ, ಎನಗೆ, ಒಪ್ಪಿಂದೆ, ಒಪ್ಪುವ, ಸುಪ್ರಸಾದಮಂ, ಅವಿರತಂ- ನಿರಂತರವಲ್ಲೂ, ಈಯುತ್ತೆ, ಕೂರ್ತು, ಪೊರೆಯಲ್ವೇಳ್ಕುಂ- ರಕ್ಷಿಸಬೇಕು. ... ... ... ... ... ... ‖೫೦‖

ಎಂದು, ಮಗುಳ್ದು, ಮಾಚಿದೇವಂ, ಸಾಷ್ಟಾಂಗಂ, ಎರಗೆ, ಭಕ್ತತತಿಯುಂ, ಜಂಗಮನಿಕರಮುಂ, ಆನಂದಂ, ಮಿಸುಗೆ, ತೆಗೆದು, ಬಿಗಿದು, ಅಪ್ಪಿ, ಮನ್ನಿಸಿ, * * * * * * * * * *

ಅರರೆ! ಗಣಾಗ್ರಗಣ್ಯ! ಭವದೀಯಮಹತ್ವಮಂ, ಇಂತುಟು- ಇಷ್ಟು, ಎಂದು, ಬಿತ್ತರಿಸಲ್, ಅದು, ಆರ್ಗೆ, ಗೋಚರಿಪುದು? ಮಹೀತಳಭಾಳಲೋಚನ- ಭೂರುದ್ರನೇ! ಈ ನರರುಂ, ಸುರರುಂ, ಭಯಾರ್ತ್ತಿವಟ್ಟು- ಭಯದಿಂದ ಪೀಡಿತರಾಗಿ, ಇರೆ, ಧರೆಯುಂ, ನಭಸ್ಥಲಮುಂ- ಆಕಾಶವೂ, ಅದ್ಭುತಕಂಪಮಂ- ಆಶ್ಚರ್ಯದಿಂದುಂಟಾದ ನಡುಗುವಿಕೆಯನ್ನು, ಆಳೆ, ಅನಂಗಮರ್ದನನ- ಮನ್ಮಥಧ್ವಂಸಿಯಾದಶಿವನ, ಮೇಲೆ, ಡಂಗುರಮಂ, ಪೊಯ್ದೆ. ... ... ... ... ... ‖೫೧‖

ಉದಿತಪ್ರಬಲಪ್ರತಾಪಮಹಿಮಾಭರಣ— ಉದಿತ- ಉತ್ಪನ್ನವಾದ, ಪ್ರಬಲ- ಪ್ರಕೃಷ್ಟವಾದ, ಪ್ರತಾಪ- ಪರಾಕ್ರಮ,ಮಹಿಮಾ- ಮಹತ್ವ, ಇವುಗಳೇ, ಆಭರಣ- ಅಲಂಕಾರವಾಗುಳ್ಳ ಮಾಚಿದೇವನೇ! ಮದಕರಿಯ, ಕರದ-ಸೊಂಡಲಿನಲ್ಲಿರುವ, ಕಬ್ಬಂ- ಕಬ್ಬನ್ನು. ಮದಮಿಂ- ಪ್ರೀತಿಯಿಂದ, ಸೆಳೆದಂತೆ, ಹರಂ, ಒಳಕೊಂಡ, ಅಗ್ಗದ, ಶರಣನ, ಅಸುವಂ, ಅಸವಸಂ- ಜಾಗ್ರತೆಯಾಗಿ, ಸೆಳೆದೆ. ... ‖೫೨‖

ಘನಮಹಿಮೋದಧಿ- ಹೆಚ್ಚಿದಮಹಿಮೆಗೆ ಸಮುದ್ರನಾದ ಮಾಚಿದೇವನೇ! ಹರನಂ, ಅಧಟಿಂ- ಪರಾಕ್ರಮದಿಂದ, ಮೂದಲಿಸಿ, ನಾದಂಬೊಯ್ದು- ಡಂಗುರವನ್ನು ಹೊಡೆದು, ಅಳಿದ, ಭಕ್ತರ, ಅಸುವಂ, ಮೇದಿನಿಯೊಳ್, ಪಡೆದೆ, ಅಮಮ! ನಿನ್ನ, ಅಳವಂ- ಸಾಮರ್ಥ್ಯವನ್ನು, ಬಣ್ಣಿಸಲ್, ಆರ್ಪರ್- ಸಮರ್ಥರು, ಆರೊ ? ... ... ... ... ... ... ‖೫೩‖

ಸತ್ಯಾಲಾಪ- ಸತ್ಯವಾಕ್ಯುಳ್ಳವನೇ! ಈ ಲೋಕದೊಳ್, ಆ ಲೋಕದೊಳ್- ಕೈಲಾಸದಲ್ಲಿ, ಆ ಲೋ

ತ್ತ್ಯಾಲಾಪಬಸವನಸುವಂ । ಲೀಲೆಯೊಳೀತೆರದೆ ಸೆಳೆದು ತಂದಿತ್ತುದರಿಂ ॥ ... ॥೫೪॥

ಕಂ ॥ ಚರಲಿಂಗಕೆ ಹರಣಂ ಬಸ । ವರಸಂ ಬಸವಂಗ ಮೆಮಗ ಮಸು ನೀಂಗಡಮಾ॥ ಚರಸೂರ್ಯಭಕ್ತವದನಾಂ । ಬುರುಹೋಜ್ವಲಸೂರ್ಯ ಸೂರಿಜನಸುತಶೌರ್ಯ ॥ ॥೫೫॥

ಉ ॥ ಎಂದಭಿನಂದಿಸುತ್ತೆ ಗಣಸಂತತಿ ಸಂಭ್ರಮವಾಳ್ದು ನೇತ್ರದಾ । ನಂದಜಲಂ ಪೊನಲ್ವರಿಯೆ ಕೀರ್ತಿಸು ತೊಪ್ಪಿರೆ ತದ್ಗಣಾಳಿಗೋ ॥ ರಂದದೆ ಮಾಚಿದೇವನೆರಗು ತ್ತತಿಭಕ್ತಿಯೊಳಲ್ಲಿ ತತ್ಕೃಪಾ । ಮಂದಸುಧಾತರಂಗಿಣಿಯೊಳಾಳ್ದೊಡ ನೊಪ್ಪಿದ ನುತ್ಸವಾನ್ವಿತಂ ॥ ... ... ... ... ... ... ॥೫೬॥

ಮ॥ ಸ್ರ॥ ಗಣಸಂದೋಹಕ್ಕೆ ಮಾಮಾಚಯನ ಚರಣಕಂಜಾತಕಂ ಭಕ್ತಿಯಿಂದಂ । ಮಣಿಯುತ್ತಂ ಕೀರ್ತಿಸುತ್ತಂ ಪಡೆಯುತವರ ಕಾರುಣ್ಯಮಂ ಬೀಳ್ಕೊಳುತ್ತಂ ॥ ಪ್ರಣಯಂ ಕೈಗಣ್ಮೆ ಭಕ್ತಪ್ರತತಿಸಹಿತಕೇತಾರ್ಯನೊಲ್ದೆಯ್ದಿ ಪೊಕ್ಕಂ । ಮಣಿಭಿತ್ತಿದ್ಯೋತಭಾಸ್ವನ್ನಿಜಭವನಮ ನಾನಂದಸಾಂದ್ರಂ ವೃಷೇಂದ್ರಂ ॥ .. .. ॥೫೭॥

ಲಲಿತಪದವೃತ್ತಂ ॥ ವಾಸ್ತವಗುಣಾಕರ ನಿರಸ್ತನಿಖಿಲಾಮಯ ಪರಾಸ್ತಪರವಾದಯಮಿಶಸ್ತಶಿವಯೋಗಾ । ಭ್ಯಸ್ತನಿಜಭಾವನ ವಚಸ್ತತಮಹಾಗಮ ಮಹಸ್ತತಿಜಿತಾರ್ಕನ

---

ಕಿರೀಟ, ಬಸವನ, ಅಸುವಂ, ಲೀಲೆಯೊಳ್, ಈ ತೆರದೆ, ಸೆಳೆದು,ತಂದು, ಇತ್ತುದರಿಂ, ಅರರೆ ! ನೀನೆ, ಪಸರ್ವೆತ್ತ-ಹೆಸರನ್ನು ಹೊಂದಿದೆ. ... ... ... ... ॥೫೪॥

ಭಕ್ತ......ಸೂರ್ಯ—ಭಕ್ತ- ಭಕ್ತರ, ವದನ- ಮುಖವೆಂಬ, ಅಂಬುರುಹ- ಕಮಲಕ್ಕೆ, ಸೂರ್ಯ! ಸೂರಿಜನನತಶೌರ್ಯ- ವಿದ್ವಜ್ಜನರಿಂದ ಸ್ತೋತ್ರಮಾಡಲ್ಪಟ್ಟ ಪರಾಕ್ರಮವುಳ್ಳ, ಮಾಚರಸಾರ್ಯ! ಚರಲಿಂಗಕೆ, ಬಸವರಸಂ, ಹರಣಂ- ಪ್ರಾಣವು; ನೀಂ, ಬಸವಂಗಂ, ಎಮಗಂ, ಅಸುಗಡ- ಪ್ರಾಣನಲ್ಲವೇ? ॥೫೫॥

ಎಂದು, ಗಣತತಿ, ಅಭಿನಂದಿಸುತ್ತೆ, ಸಂಭ್ರಮವನಾಳ್ದು, ನೇತ್ರದ, ಆನಂದಜಲಂ- ಸಂತೋಷದಿಂದುಂಟಾದ ನೀರು, ಪೊನಲ್ವರಿಯೆ- ಪ್ರವಾಹರೂಪವಾಗಿ ಹರಿಯಲು, ಕೀರ್ತಿಸುತ್ತೆ, ಒಪ್ಪಿ, ಇರೆ, ಮಾಚಿದೇವಂ, ತದ್ಗಣಾಳಿಗೆ, ಓರಂದದೆ- ಕ್ರಮವಾಗಿ, ಅತಿಭಕ್ತಿಯೊಳ್, ಎರಗುತ್ತೆ, ಅಲ್ಲಿ, ಉತ್ಸವಾನ್ವಿತಂ- ಸಂತೋಷದಿಂಕೂಡಿ, ತತ್ಕೃಪಾಮಂದಸುಧಾತರಂಗಿಣಿಯೊಳ್- ಆ ಪ್ರಮಥರ ಅಧಿಕವಾದ ದಯೆಯೆಂಬ ಅಮೃತದ ನದಿಯಲ್ಲಿ, ಆಳ್ದು- ಮುಳುಗಿ, ಒಡನೆ, ಒಪ್ಪಿದಂ. ... ... ... ॥೫೬॥

ಆನಂದಸಾಂದ್ರಂ, ವೃಷೇಂದ್ರಂ, ಗಣಸಂದೋಹಕ್ಕಂ ಆ ಮಾಚಯನ, ಚರಣಕಂಜಾತಕಂ- ಪಾದಕಮಲಕ್ಕೆ, ಭಕ್ತಿಯಿಂದಂ, ಮಣಿಯುತ್ತಂ, ಕೀರ್ತಿಸುತ್ತಂ, ಅವರ, ಕಾರುಣ್ಯಮಂ, ಪಡೆಯುತೆ, ಬೀಳ್ಕೊಳುತ್ತಂ- ಕಳುಹಿಸಿಕೊಳ್ಳುತ್ತ, ಪ್ರಣಯಂ- ವಿಶ್ವಾಸವು, ಕೈಗಣ್ಮೆ- ಹೆಚ್ಚಾಗಲಾಗಿ, ಭಕ್ತಪ್ರತತಿಸಹಿತಕೇತಾರ್ಯಂ, ಒಲ್ದು, ಎಯ್ದಿ- ಬರಲಾಗಿ, ಮಣಿಭಿತ್ತಿದ್ಯೋತಭಾಸ್ವನ್ನಿಜಭವನಮಂ— ಮಣಿಭಿತ್ತಿ- ರತ್ನದ ಗೋಡೆಗಳ, ದ್ಯೋತ- ಕಾಂತಿಯಿಂದ, ಭಾಸ್ವತ್- ಹೊಳೆಯುವ, ನಿಜಭವನಮಂ- ತನ್ನ ಮನೆಯನ್ನು, ಪೊಕ್ಕಂ. ... ... ... ... ... ... ॥೫೭॥

ವಾಸ್ತವಗುಣಾಕರ- ಸ್ವಭಾವಸಿದ್ಧಗಳಾದ ಸದ್ಗುಣಗಳಿಗಾಶ್ರಯನಾದ, ನಿರಸ್ತನಿಖಿಲಾಮಯ- ನಾಶಮಾಡಲ್ಪಟ್ಟ ಸಕಲರೋಗಗಳುಳ್ಳ, ಪರಾಸ್ತಪರವಾದ- ನಾಶಗೊಳಿಸಲ್ಪಟ್ಟ ಶಿವೇತರಮತಸ್ಥರ ವಾಗ್ವಾದವುಳ್ಳ, ಯಮಿಶಸ್ತಶಿವಯೋಗ- ಋಷಿಗಳಿಂದ ಹೊಗಳಲ್ಪಟ್ಟ ಶಿವಯೋಗವುಳ್ಳ, ಅಭ್ಯಸ್ತನಿಜಭಾವನ-ಅಭ್ಯಾಸಮಾಡಲ್ಪಟ್ಟ ಸ್ಥಿರವಾದ ಅನುಭಾವವುಳ್ಳ, ವಚಸ್ತತಮಹಾಗಮ- ತನ್ನ ಮಾತಿನಿಂದ ವಿಸ್ತರಿಸಲ್ಪಟ್ಟ ಅಧಿ

ನಿಗಮಸ್ತವವಿಲೋಲಾ ॥ ಧ್ವಸ್ತಕಲಿಕಲ್ಮಷ ಸಮಸ್ತಬುಧಸನ್ನುತ ಯಶಸ್ತತದಿಗಂತ
ಸುರಮಸ್ತಕಸಮೂಹ । ನ್ಯಸ್ತಪದ ಪಾಲಿಸು ನಿರಸ್ತಮಯಸಾರಗುಣವಿಸ್ತರ ಲಸದ್ವರ
ದಹಸ್ತ ಬಸವೇಶಾ ॥ ... ... ... ... ... ॥೫೮॥

ಮಂದಾಕ್ರಾಂತಾವೃತ್ತಂ ॥ ಸಾರಾಕಾರೇ ಸರಸಹೃದಯೇ ಸರ್ವಲೋಕೈಕಮಾತೇ ।
ಭೂರಿಶ್ರೀರಾಜಿತಪದಯುಗೇ ಭ್ರೂಲತಾಜ್ಞಪ್ತಭೂತೇ ॥ ಪಾರಾವಾರಪ್ರಭವಲಲನಾರಾಧಿ
ತೇ ಸತ್ಪುನೀತೇ । ಮಾರಾರಾತಿಪ್ರಿಯೆ ಪೊರೆ ಸಮಂತೆನ್ನ ನದ್ರೀಂದ್ರಜಾತೇ ॥ ॥೫೯॥

ಗದ್ಯ ॥ ಇದು ವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸತ್ಪರಮಶಿವಲಿಂಗಪಾದಾರವಿಂದಪರಾಗಭಸಿತ ಭಾಸುರಲಲಾಟಪಟ್ಟ ಸರಸಜನಮಾನಿತೋಭಯಕವಿತಾವಿಶಾರದ ಶ್ರೀಷಡಕ್ಷರಿದೇವಭಕ್ತಿವಿರಚಿತ ಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಬಸವಭಕ್ತಪ್ರಾಣಸಖತ್ವಕಥನಂ ಪಂಚವಿಂಶತ್ಯಾಶ್ವಾಸಂ ಪರಿಸಮಾಪ್ತಂ ॥ ... ... ... ... ... *

ಪಂಚವಿಂಶತ್ಯಾಶ್ವಾಸಂ ಸಂಪೂರ್ಣಂ.

---

ಕವಾದ ಶಿವಾಗಮವುಳ್ಳ, ಮಹಸ್ತಿರಜಿತಾರ್ಕ- ತೇಜಸ್ಸಮುದಾಯದಿಂದ ಜೈಸಲ್ಪಟ್ಟ ಸೂರ್ಯನುಳ್ಳ, ನಿಗಮಸ್ತವವಿಲೋಲಾ- ವೇದದ ಸ್ತುತಿಯಲ್ಲಿ ಆಸಕ್ತನಾದ, ಧ್ವಸ್ತಕಲಿಕಲ್ಮಷ- ನಾಶಮಾಡಲ್ಪಟ್ಟ ಸಮರ್ಥವಾದ ಪಾಪವುಳ್ಳ, ಸಮಸ್ತಬುಧಸನ್ನುತ- ವಿದ್ವಾಂಸರೆಲ್ಲರಿಂದಲೂ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ, ಯಶಸ್ತತದಿಗಂತ- ಕೀರ್ತಿಯಿಂದ ಹರಡಲ್ಪಟ್ಟ ದಿಕ್ಕುಗಳ ಕೊನೆಯುಳ್ಳ, ಸುರಮಸ್ತಕಸಮೂಹನ್ಯಸ್ತಪದ- ದೇವತೆಗಳ ಶಿರಸ್ಸಿನ ಗುಂಪಿನಲ್ಲಿಡಲ್ಪಟ್ಟ ಪಾದವುಳ್ಳ, ನಿರಸ್ತಮಯಸಾರಗುಣವಿಸ್ತರ- ನಾಶರಹಿತಗಳಾಗಿಯೂ ಶ್ರೇಷ್ಠಗಳಾಗಿಯೂ ಇರುವ ಗುಣಗಳ ವೈಶಾಲ್ಯವುಳ್ಳ, ಲಸದ್ವರದಹಸ್ತ- ಪ್ರಕಾಶಿಸುವ ಇಷ್ಟವರವನ್ನು ಕೊಡುವ ಕಯ್ಯುಳ್ಳ, ಬಸವೇಶಾ ! ಪಾಲಿಸು. ... ... ... ... ॥೫೮॥

ಸಾರಾಕಾರೇ- ಶ್ರೇಷ್ಠವಾದ ಆಕಾರವುಳ್ಳ, ಸರಸಹೃದಯೇ- ಸದ್ಗುಣವಿಶಿಷ್ಟವಾದ ಮನಸ್ಸುಳ್ಳ, ಸರ್ವಲೋಕೈಕಮಾತೇ- ಸಮಸ್ತಲೋಕಕ್ಕೂ ಮುಖ್ಯತಾಯಾದ, ಭೂರಿಶ್ರೀರಾಜಿತಪದಯುಗೇ- ಹೆಚ್ಚಾದ ಸಂಪತ್ತಿನಿಂದ ಪ್ರಕಾಶಿಸಲ್ಪಟ್ಟ ಪಾದಯುಗ್ಮವುಳ್ಳ, ಭ್ರೂಲತಾಜ್ಞಪ್ತಭೂತೇ- ಲತೆಯೋಪಾದಿಯಲ್ಲಿರುವ ಹುಬ್ಬಿನಿಂದ ಆಜ್ಞಾಪಿಸಲ್ಪಟ್ಟ ಪಂಚಭೂತವುಳ್ಳ, * ಪಾರಾವಾರಪ್ರಭವಲಲನಾರಾಧಿತೇ- ಲಕ್ಷ್ಮಿಯಿಂದ ಪೂಜಿಸಲ್ಪಟ್ಟ, ಸತ್ಪುನೀತೇ- ಸತ್ಪುರುಷರಲ್ಲಿ ಪರಿಶುದ್ಧಳಾದ, ಮಾರಾರಾತಿಪ್ರಿಯೇ- ಮನ್ಮಥಧ್ವಂಸಿಯಾದ ಪರಶಿವನಿಗೆ ವಲ್ಲಭೆಯಾದ, ಅದ್ರೀಂದ್ರಜಾತೇ- ಪರ್ವತರಾಜಪುತ್ರಿಯೇ! ಎನ್ನನು, ಸಮಂತು, ಪೊರೆ. ... ... ... ... ... ... ॥೫೯॥

---

* (ಅವ) ಪಾರಾವಾರ- ಸಮುದ್ರದ ದೆಸೆಯಿಂದ, ಪ್ರಭವ- ಹುಟ್ಟಿದ, ಲಲನಾ- ಸ್ತ್ರೀ, (ಲಕ್ಷ್ಮಿ,) ಅವಳಿಂದ, ಆರಾಧಿತೆ. ... ... ... ... ... ॥೫೯॥

ಇಪ್ಪತ್ತೈದನೆಯ ಆಶ್ವಾಸವು ಸಂಪೂರ್ಣವು.

ಶ್ರೀಃ.

ಉರುಲಿಂಗಾಯ ಪರಬ್ರಹ್ಮಣೇ ನಮಃ.

## ಷಡ್ವಿಂಶತ್ಯಾಶ್ವಾಸಂ.

### ದಸರದೇವಯ್ಯಕಥನಂ.

ಕಂ ॥ ಶ್ರೀವಧುವಮಾಕಬರೀಸುಮ । ದಾಮರಜೋರಾಜಿರಂಜಿವಾಮಾಂಸಕನು ॥
ದ್ದಾಮಗುಣಧಾಮನಘಹರ । ನಾಮಂ ಪೊರೆಗೆಮ್ಮನಾವಗಂ ಶಿವಲಿಂಗಂ ॥ ... ॥೧॥

ಮತ್ತೇ ॥ ಹರಭಕ್ತಿಪ್ರಮದಾಮುಖೈಕಮುಕುರಂ ಪಂಚೇಷುದೂರಂ ಶುಭಾ । ಕರ
ವೃತ್ತಂ ಗಳಿತೇಷಣಂ ವಿಗತದೋಷಂ ವಿಶ್ವನುತ್ಯಂ ಕೃಪಾ ॥ ಭರಣಂ ಭಕ್ತಜನಾಂತರಂಗ
ನನಘಂ ಗಾಂಭೀರ್ಯವಾರಾಕರಂ। ಪರಿಶುದ್ಧಂ ದಸರಯ್ಯನೆಂಬ ಶರಣಂ ದಾನಾಮರಕ್ಷ್ಮಾರುಹಂ॥

ಮಲ್ಲಿಕಾಮಾಲಾವೃತ್ತಂ ॥ ಸರ್ವಜೀವದಯಾಪರಂ ಸಕಲಪ್ರಪಂಚವಿವರ್ಜಿತಂ । ನಿ
ರ್ವಿಕಾರ ನನಾಮಯಂ ನಿಗಮಾಗಮಾರ್ಥವಿಶಾರದಂ ॥ ಗರ್ವದೂರ ನವಂಚಕಂ ಜಿತಪಾಶನಾ
ತ್ಮಯಶೋಜಿತಾ । ಖರ್ವಪಾರ್ವಣಚಂದ್ರಿಕಂ ಚರಲಿಂಗಭಕ್ತಿಪರಾಯಣಂ ॥ ... ॥೨॥

---

ಶ್ರೀವಧು......ಮಾಂಸಕಂ— ಶ್ರೀಮತ್— ಸಂಪದ್ಯುಕ್ತಳಾದ, ಉಮಾ- ಪಾರ್ವತಿಯ, ಕಬರೀ- ಕೇಶದಲ್ಲಿರುವ, ಸುಮದಾಮ- ಪುಷ್ಪಮಾಲಿಕೆಗಳ, ರಜಃ- ಪರಾಗದ, ರಾಜಿ- ಪಙ್ಕ್ತಿಯಿಂದ, ರಂಜಿ- ಪ್ರಕಾಶಮಾನವಾದ, ವಾಮಾಂಸಕಂ— ಎಡದೋಳುಳ್ಳ, ಉದ್ದಾಮಗುಣಧಾಮಂ- ಉತ್ಕೃಷ್ಟವಾದ ಗುಣಗಳಿಗೆ ಮಂದಿರನಾದ, ಅಘಹರನಾಮಂ- ಪಾಪನಾಶಕವಾದ ಹೆಸರುಳ್ಳ, ಶಿವಲಿಂಗಂ, ಎಮ್ಮಂ, ಆವಗಂ, ಪೊರೆಗೆ.

ಹರಭಕ್ತಿಪ್ರಮದಾಮುಖೈಕಮುಕುರಂ— ಹರಭಕ್ತಿ- ಶಿವಭಕ್ತಿಯೆಂಬ, ಪ್ರಮದಾ-ಸ್ತ್ರೀಯ, ಮುಖ- ಮುಖಕ್ಕೆ, ಏಕಮುಕುರಂ- ಮುಖ್ಯದರ್ಪಣವಾದ, ಪಂಚೇಷುದೂರಂ— ಪಂಚೇಷು- ಮನ್ಮಥನಿಗೆ, ದೂರಂ, ಶುಭಾಕರವೃತ್ತಂ— ಶುಭ- ಮಂಗಳಕ್ಕೆ, ಆಕರ- ಆಸ್ಪದವಾದ, ವೃತ್ತಂ- ಚರಿತ್ರೆಯುಳ್ಳ, ಗಳಿತೇಷಣಂ- ಜಾರಿದ ಈಷಣತ್ರಯವುಳ್ಳ, ವಿಗತದೋಷಂ- ಹೋದಪಾಪವುಳ್ಳ, ವಿಶ್ವನುತ್ಯಂ- ಪ್ರಪಂಚಸ್ತುತ್ಯನಾದ, ಕೃಪಾಭರಣಂ, ಭಕ್ತಜನಾಂತರಂಗಂ- ಭಕ್ತಜನರ ಮನಸ್ಸಿನಲ್ಲುಳ್ಳ, ಅನಘಂ- ಪಾಪರಹಿತನಾದ, ಗಾಂಭೀರ್ಯವಾರಾಕರಂ- ಗಂಭೀರತನಕ್ಕೆ ಸಮುದ್ರನಾದ, ಪರಿಶುದ್ಧಂ, ದಾನಾಮರಕ್ಷ್ಮಾರುಹಂ- ದಾನದ ವಿಷಯದಲ್ಲಿ ಕಲ್ಪವೃಕ್ಷನಾದ, ದಸರಯ್ಯನೆಂಬ, ಶರಣಂ. ... ... ... ॥೧॥

ಸರ್ವಜೀವದಯಾಪರಂ- ಸಮಸ್ತಪ್ರಾಣಿಗಳಲ್ಲೂ ಕರುಣಾಸಕ್ತನಾದ, ಸಕಲಪ್ರಪಂಚವಿವರ್ಜಿತಂ- ಸಮಸ್ತವಾದ ಮಾಯಾಪ್ರಪಂಚದಿಂದ ಬಿಡಲ್ಪಟ್ಟ, ನಿರ್ವಿಕಾರಂ, ಅನಾಮಯಂ- ರೋಗವಿಲ್ಲದ, ನಿಗಮಾಗಮಾರ್ಥವಿಶಾರದಂ, ಗರ್ವದೂರಂ, ಅವಂಚಕಂ- ಕಪಟಿಯಲ್ಲದ, ಜಿತಪಾಶಂ- ಜೈಸಲ್ಪಟ್ಟ ಭವಬಂಧವುಳ್ಳ, ಆತ್ಮಯಶೋಜಿತಾಖರ್ವಪಾರ್ವಣಚಂದ್ರಿಕಂ— ಆತ್ಮ- ತನ್ನ, ಯಶಃ- ಕೀರ್ತಿಯಿಂದ, ಜಿತ- ಜೈಸಲ್ಪಟ್ಟ, ಅಖರ್ವ- ಅಧಿಕವಾದ, ಪಾರ್ವಣ- ಹುಣ್ಣಿಮೆಯ, ಚಂದ್ರಿಕಂ ಬೆಳ್ದಿಂಗಳುಳ್ಳ, ಚರಲಿಂಗಭಕ್ತಿಪರಾಯಣಂ. ॥೨॥

ಕಂ ॥ ಘನಸಚ್ಚಿದಾತ್ಮಕಂ ಸ । ಜ್ಜನವಿನುತಂ ಸತ್ಯವಾಣಿ ನಿಜನಿರುಪಮಪಾ ॥ ವ
ನವೃತ್ತಂ ನಹಿಂಸಾಧ । ರ್ಮನಿಯುಕ್ತಂ ಪೇರ್ಮೆವೆತ್ತು ಕಂಗೊಳಿಸಿರ್ದಂ ॥ ... ॥೪॥

ಕಂ ॥ ಶಮದಮಯಮ ನಿಯಮದಯೋ । ತ್ತಮಶಿವಧರ್ಮಂಗ ಳೆಸೆಯೆ ಗುರುಚರ
ಲಿಂಗ ॥ ಕ್ರಮುಕಮಳಂಗಳನರ್ಚಿಸು । ತಮದರ್ಪ್ಪದ ನಮಳಸುಗುಣವಿಸರಂ ದಸರಂ ॥೫॥

ಕಂ ॥ ನಡೆವೆಡೆಯೊ ಳ್ಪದಹತಿಯಿಂ । ಮಡಿಗುಂ ಕ್ರಿಮಿಸಮಿತಿ ಯೆಂದು ಬಗೆದಾರ
ಯ್ಯು ॥ ತ್ತಡಿಯಿಡುವ ನೊಯ್ಯನೊಯ್ಯನೆ । ಪೊಡವಿಯೊ ಳಾದಸರ ನತಿದಯಾರಸಭರಿತಂ ॥

ಕಂ ॥ ನೆಗೆದಡ್ಡಂಬರುವ ಕೀ । ಟಗಣ ಕ್ಕಳಿವಪ್ಪುದೆಂದು ಬೀಸದೆ ತೋಳಂ ॥ ಸು
ಗುಣನಿಧಿ ನಡೆಯುತಖಿಳೋ । ರ್ವ್ವಿಗಹಿಂಸಾಧರ್ಮಶಾಲಿ ತಾನೆನೆ ನೆಗಳ್ದಂ ॥ ... ॥೭॥

ಚಂ ॥ ಹರಚರಣಾರ್ಚ್ಚನಕ್ಕೆ ಪೊಸಪೂದಿರಿಯ ಲ್ಬನಕ್ಕೆಯ್ದಿ ಪೂಗಳಂ । ತುರಿಪದೆ
ನೀಳ್ದು ಕುಯ್ವ್ಯ ಸಳೆಗೊಂ ಬುಡಿದಾಯೆಡೆಯಿಂದೆ ನೆತ್ತರೊ ॥ ತ್ತರಿಸುತೆ ಸೂಸೆ ಜೋ
ರೆನುತೆ ಪೂಗಿಡು ನೊಂದೆನೆ ನುತ್ತಳಲ್ದು ಸು । ರ್ಕ್ಕಿರೆ ನಡೆ ನೋಡಿ ನೊಂದು ಬಿಸುಟಾಕು
ಸುಮಾವಳಿಗುಯ್ವ್ವ ಕಜ್ಜಮಂ ॥ ... ... ... ... ॥೮॥

---

ಘನಸಚ್ಚಿದಾತ್ಮಕಂ- ಉತ್ಕೃಷ್ಟವಾದ ಸತ್ತು ಚಿತ್ತುಗಳ ಸ್ವರೂಪನಾದ, ಸಜ್ಜನವಿನುತಂ, ಸತ್ಯವಾಣಿ, ನಿಜನಿರುಪಮಪಾವನವೃತ್ತಂ— ನಿಜ- ಸ್ಥಿರವಾದ, ನಿರುಪಮ- ಅಸದೃಶವಾದ, ಪಾವನ- ಪರಿಶುದ್ಧವಾದ, ವೃತ್ತಂ- ಚರಿತ್ರೆಯುಳ್ಳ, ಅಹಿಂಸಾಧರ್ಮನಿಯುಕ್ತಂ- ಹಿಂಸೆಮಾಡಬಾರದೆಂಬ ಧರ್ಮದಿಂದ ಕೂಡಿಕೊಂಡಿರುವ ದಸರಯ್ಯನು, ಪೇರ್ಮೆವೆತ್ತು- ಆಧಿಕ್ಯವನ್ನುಹೊಂದಿ, ಕಂಗೊಳಿಸಿ, ಇರ್ದಂ. ॥೪॥

ಅಮಳಸುಗುಣವಿಸರಂ- ನಿರ್ಮಲವಾದ ಸದ್ಗುಣಸಮೂಹವುಳ್ಳ, ದಸರಂ, ಶಮದಮ......ಗಳ್— ಶಮ- ಶಾಂತಿ, ದಮ- ಇಂದ್ರಿಯನಿಗ್ರಹ, ನಿಯಮ- ಯೋಗಸಾಧನೆ, ದಯಾ, ಉತ್ತಮಶಿವಧರ್ಮಂಗಳ್, ಎಸೆಯೆ, ಗುರುಚರಲಿಂಗಕ್ರಮುಕಮಳಂಗಳಂ- ಗುರುಲಿಂಗಜಂಗಮರ ಪಾದಕಮಲಗಳನ್ನು, ಅರ್ಚಿಸುತೆ, ಅಮದರ್ಪ, ಒಪ್ಪಿದಂ. ... ... ... ... ... ॥೫॥

ಅತಿದಯಾರಸಭರಿತಂ, ಆ ದಸರಂ, ನಡೆವ ಎಡೆಯೊಳ್, ಪದಹತಿಯಿಂ, ಕ್ರಿಮಿಸಮಿತಿ- ಹುಳುಗಳಸಮೂಹವು, ಮಡಿಗುಂ, ಎಂದು, ಬಗೆದು- ಆಲೋಚಿಸಿ, ಆರಯ್ಯುತ್ತೆ- ಪರೀಕ್ಷಿಸಿ, ಪೊಡವಿಯೊಳ್, ಒಯ್ಯನೊಯ್ಯನೆ- ಮೆಲ್ಲಮೆಲ್ಲನೆ, ಅಡಿಯಿಡುವಂ. ... ... ... ... ॥೬॥

ಸುಗುಣನಿಧಿ, ನೆಗೆದು, ಅಡ್ಡಂಬಾರುವ- ಅಡ್ಡಲಾಗಿಹಾರುವ, ಕೀಟಗಣಕ್ಕೆ- ಹುಳುಗಳ ಸಮುದಾಯಕ್ಕೆ, ಅಳಿವು- ನಾಶವು, ಅಪ್ಪುದು, ಎಂದು, ತೋಳಂ, ಬೀಸದೆ, ನಡೆಯುತೆ, ಅಖಿಳೋರ್ವ್ವಿಗೆ- ಸಮಸ್ತಭೂಮಿಯಲ್ಲಿ, ತಾಂ, ಅಹಿಂಸಾಧರ್ಮಶಾಲಿ- ಹಿಂಸೆಮಾಡಬಾರದು ಎಂಬ ಧರ್ಮದಿಂದೊಪ್ಪುವನು, ಎನೆ, ನೆಗಳ್ದಂ- ಪ್ರಖ್ಯಾತನಾದನು. ... ... ... ... ... ॥೭॥

ಹರಚರಣಾರ್ಚ್ಚನಕ್ಕೆ- ಶಿವಪಾದಪೂಜೆಗೆ, ಪೊಸಪೂದಿರಿಯಲ್- ನೂತನವಾದ ಪುಷ್ಪವನ್ನು ಕೊಯ್ಯುವದಕ್ಕೋಸ್ಕರ, ಬನಕೆ, ಐದಿ, ಪೂಗಳಂ, ತುರಿಪದೆ- ಜಾಗ್ರತೆಯಿಂದ, ನೀಳ್ದು- ಕೈಯನ್ನುಚಾಚಿ, ಕೊಯ್ಯೆ, ಸೆಳೆಗೊಂಬು- ಸಣ್ಣಕೊಂಬೆಯು, ಉಡಿದು- ಮುರಿದು, ಆಯೆಡೆಯಿಂದೆ- ಆಸ್ಥಾನದಿಂದ, ಜೋರ್, ಎನುತೆ, ನೆತ್ತರ್- ರಕ್ತವು, ಒತ್ತರಿಸುತೆ- ಒಟ್ಟಾಗುತ್ತ, ಸೂಸೆ, ಪೂಗಿಡು, ನೊಂದೆಂ, ಎನುತ್ತೆ, ಅಳಲ್ದು, ಸುರ್ಕ್ಕಿ- ಬಳಲಿ, ಇರೆ, ನಡೆ, ನೋಡಿ, ನೊಂದು, ಕುಸುಮಾವಳಿಗುಯ್ವ್ವಕಜ್ಜಮಂ- ಹೂವ್ವನ್ನು ಕೊಯ್ಯುವಕಾರ್ಯವನ್ನು, ಬಿಸುಟು. ... ... ... ... ॥೮॥

ಕಂ ॥ ಮರದಡಿಯೊಳ್ಗೋಮಯದಿಂ । ವಿರಚಿಸಿ ಸಾರಣೆಯನಲ್ಲಿ ಮರೆಗಟ್ಟುತ್ತೆ ಕ॥
ಮ್ಮರಲುದುರೆ ಕೊಂಡವಂ ಸ । ಚ್ಚರಿತಂ ಶಿವಪೂಜೆಗೆಯ್ವ ನೋಜೆಯೊಳನಿಶಂ ॥ ॥೯॥

ವ ॥ ಇಂತುಶಾಂತಿರಸವಿಸರಂ ಪಸರಿಸುತ್ತಿರೆ ದಸರದೇವಂ ರಸೆಯೊಳ್ಜಸದಿ ನೆಸೆಯುತ್ತುಮಿರೆ ಪರಸಮಯಸ್ಥರಾತನನೆಗಳ್ತೆಗಸೂಯಾಪರರಾಗುತೆಲ್ಲರ್ಮಂತ್ರಣಂಗೊಂಡು ಕುಳ್ಳಿರ್ದೊಂದುಕಪಟೋಪಾಯಮನಾಲೋಚಿಸಿ ॥

ಮ ॥ ಸ್ರ ॥ ಪರರುಂ ತನ್ನಂತೆ ನೋಳ್ಪಂಗಡ ಪರರಮನಂ ನೋಗುಮೆಂದಾಗಳುಂ
ನಿ । ಷ್ಠುರವಕ್ತ್ರಾಲಾಪಮಂ ತಾಂ ಮರೆದುಮುಸಿರದಿರ್ಪಂಗಡಾ ಸರ್ವಜಂತೂ ॥ ತ್ಕರಮ
ತ್ತಂ ನೋಯದಂತಾಚರಿಪ ಪರಮಶಾಂತಂಗಡಾ ವೀರಮಾಹೇ । ಶ್ವರರೊಳ್ಮುಖ್ಯಂಗಡೀ
ತಂ ಪಿಡಿದಬತದ ಸಾಮರ್ಥ್ಯಮಂ ನೋಳ್ಪೆವೀಗಳ್ ॥ ... .. ॥೧೦॥

ವ ॥ ಎಂದನಿಬರಾಲೋಚನಂಗೆಯ್ದು ಕೈಗೆಟ್ಟ ಕಾಳ್ಮನಿಸನೋರ್ವನಂ ಕಾಪಟ್ಯದಿಂ ಕರೆದು ತಂದು ॥ * * * * * * * * * * * * *

ಮತ್ತೇ ॥ ಶಿರಮಂ ಭದ್ರಿಸಿ ನುಣ್ಣನಾಗೆ ಕೊರಳೊಳ್ರುದ್ರಾಕ್ಷಿಯಂತೀವಿ ಮೈ ।
ಗಿರದುದ್ಧೂಳಿಸಿ ಭಸ್ಮಮಂ ಪಣೆಮೊಗಕ್ಕಾಲೇಪನಂಗೆಯ್ದು ಮು ॥ ಪ್ಪುರಿಯಂ ಕಟ್ಟಕ
ಟೀತಟಕ್ಕೆಸುಲಿಪೊಳ್ಪಂ ಪಲ್ಗಳಂ ಕಾಲ್ಗಳಂ । ಕರದಿಂದಂ ತೊಳೆದಾತಂಗೊಂದುಕೋವಣಮ
ನಾತಂ ಗೊಲ್ದು ಕೈಗೆಯ್ವುತಂ ॥ ... ... ... ... ॥೧೧॥

---

ಸಚ್ಚರಿತ್ರಂ, ಮರದ, ಅಡಿಯೊಳ್, ಗೋಮಯದಿಂ, ಸಾರಣೆಯಂ- ಸಾರಿಸುವಿಕೆಯನ್ನು, ವಿರಚಿಸಿ, ಅಲ್ಲಿ, ಮರೆಗಟ್ಟುತ್ತೆ- ಮರೆಯನ್ನುಕಟ್ಟುತ್ತ, ಕಮ್ಮಲರ್- ಕಂಪಾದಹೂವು, ಉದುರೆ, ಅವಂ, ಕೊಂಡು, ಓಜೆಯೊಳ್, ಅನಿಶಂ, ಶಿವಪೂಜೆಗೆಯ್ವಂ. ... ... ... ॥೯॥

ಇಂತು, ಶಾಂತಿರಸವಿಸರಂ- ಶಾಂತಿರಸಸಮೂಹವು, ಪಸರಿಸುತ್ತಿರೆ, ವಿಸ್ತಾರವನ್ನು ಹೊಂದಿರಲಾಗಿ, ದಸರದೇವಂ, ರಸೆಯೊಳ್- ಭೂಮಿಯಲ್ಲಿ, ಜಸದಿಂ, ಎಸೆಯುತ್ತಂ, ಇರೆ, ಪರಸಮಯಸ್ಥರ್- ಇತರಮತಸ್ಥರು, ಆತನ, ನೆಗಳ್ತೆಗೆ- ಆಧಿಕ್ಯಕ್ಕೆ, ಅಸೂಯಾಪರರ್, ಆಗುತೆ, ಎಲ್ಲರ್, ಮಂತ್ರಣಂಗೊಂಡು ಗುಂಪಾಗಿ, ಕುಳ್ಳಿರ್ದು, ಒಂದು ಕಪಟೋಪಾಯಮಂ, ಆಲೋಚಿಸಿ. * * * * * * * *

ಪರರಂ, ತನ್ನಂತೆ, ನೋಳ್ಪಂಗಡ, ಪರರ, ಮನಂ, ನೋಗುಂ- ನೊಯ್ಯುವದು, ಎಂದು, ಆಗಳುಂ, ನಿಷ್ಠುರವಕ್ತ್ರಾಲಾಪಮಂ- ಕಠಿಣವಾಗಿಯೂ ಜೋರಾಗಿಯೂ ಇರುವ ಮಾತನ್ನು, ತಾಂ, ಮರೆದುಂ, ಉಸಿರದೆ, ಇರ್ಪಂಗಡಾ, ಸರ್ವಜಂತೂತ್ಕರಂ- ಸಮಸ್ತಪ್ರಾಣಿಗಳ ಸಮೂಹವು, ನೋಯದಂತೆ, ಆಚರಿಪ, ಪರಮಶಾಂತಂಗಡಾ, ವೀರಮಾಹೇಶ್ವರರೊಳ್- ಮುಖ್ಯಂಗಡ, ಈಗಳ್, ಈತಂ, ಪಿಡಿದ, ಬತದ- ವ್ರತದ, ಸಾಮರ್ಥ್ಯಮಂ, ನೋಳ್ಪೆವ್. ... ... ... ... ... ॥೧೦॥

ಎಂದು, ಅನಿಬರ್, ಆಲೋಚನಂಗೆಯ್ದು, ಕೈಗೆಟ್ಟ- ಕೈಯಿಲ್ಲದ, ಓರ್ವನಂ ಕಾಳ್ಮನಿಸನಂ- ಒಬ್ಬ ಕೆಟ್ಟವ ಮನುಷ್ಯನನ್ನು, ಕಾಪಟ್ಯದಿಂ, ಕರೆದು ತಂದು. * * * * * * * * * * *

ಶಿರಮಂ, ನುಣ್ಣನೆ, ಆಗೆ, ಭದ್ರಿಸಿ- ಕ್ಷೌರವನ್ನು ಮಾಡಿಸಿ, ಕೊರಳೊಳ್, ರುದ್ರಾಕ್ಷಿಯಂ, ತೀವಿ, ಮೈಗೆ, ಇರದೆ, ಭಸ್ಮಮಂ, ಉದ್ಧೂಳಿಸಿ, ಪಣೆಮೊಗಕ್ಕೆ, ಆ ಲೇಪನಂಗೆಯ್ದು, ಕಟೀತಟಕ್ಕೆ- ನಡುವಿಗೆ, ಮುಪ್ಪುರಿಯಂ- ಮೂರುಹುರಿಯನ್ನು, ಕಟ್ಟ, ಒಳ್ಪಂ, ಪಲ್ಗಳುಂ, ಸುಲಿದು- ಶುಭ್ರವಾಗಿಮಾಡಿ, ಕಾಲ್ಗಳಂ, ಕರದಿಂದಂ, ತೊಳೆದು, ಆತಂಗೆ, ಒಂದುಕೋವಣಮಂ- ಒಂದುಚಪ್ಪರವನ್ನು, ಒಲ್ದು, ಕೈಗೆಯ್ವುತಂ. ॥೧೧॥

ಕಂ ॥ ಒಳಗೆ ಮೃದುವಸ್ತ್ರಮುಂ ಸಂ। ಗಳಿಸುತೆ ಬರಿಸೆಜ್ಜೆಯೊಂದ ನಳವಡಿಸು ತ್ತಂ ॥ ಗಳದೊಳ್ಶಿವಲಾಂಛನಮಂ । ಕೆಳೆಗೊಳಿಸಿದ ರರರೆ ಚೋದ್ಯ ಮೆನೆ ಪೌರಜನಂ ॥

ವ ॥ ಇಂತು ಬರಿಜೋಹಮನು ನಳವಡಿಸಿ ನಲವಾಂತುನೋಡಿ ॥ * * * *

ಕಂ ॥ ದಸರಯ್ಯನಿನೆರಗಿಸಿಕೊಂ ಡಸವಸದಿಂ ಪೊಡೆಯು ದವನ ಶಿರಮಂ ನಿನ್ನೀ॥ ವಿಸುಗುತಿಹ ಮೋಟುಗೈಯಿಂ । ರಸೆಯಚ್ಚರಿವಡೆಯೆ ಮಲ್ಲಪೋಗೆನುತಾಗಳ್ ॥ ॥೧೩॥

ಕಂ ॥ ಬೋಳೈಸಿ ಕಳುಪೆಖಳರಾ । ವೇಳೆಯೊಳೈತಂದ ನಖಿಳಸಂಭ್ರಮದಿಂಪು ॥ ಷ್ಪಾಳಿದರ ಲೆಂದು ಪೋವದ । ಯಾಳುವನಾದಸರವಿಭುವ ನೊಯ್ಯನೆ ಕಂಡಂ ॥ ॥೧೪॥

ವ ॥ ಅಂತುಕಂಡು ಸಡಗರಂವಿಗೆ ರಾಜವೀಥಿಯೊಳ್ಬಳಸಂದು ನಡೆತರುತ್ತಂ ನೋಳ್ಪರು ನಗೆಗಡಲೊಳ್ಓಲಾಡಿಸಿ ॥ * * * * * * * * * * *

ಮ ॥ ನಗುತಂಡರ್ರನೆ ತೇಗುತಂ ತೂಸೆಯುತಂ ಪುರ್ಬಿಕ್ಕುತಂ ಪಾರುತಂ । ನೆಗೆಯುತ್ತಂ ಕೆಲೆಯುತ್ತೆ ಕೇಕರಿಸು ತಡ್ಡಂಬಾಯ್ವುತಂ ಮುಂದಿಯೊಳ್ಪುಗುತ್ತೆ ಮೋರೆಯ ನೆತ್ತುತಂ ಮುರುಕಿಸುತ್ತಂತುತೆ ತನ್ನಂಗಮಂ । ವಿಗೆ ನೋಡುತ್ತೊಲೆದಾಡಿಸುತ್ತಮುಡುಪಂ ಪೆಂಪೇರುತಂ ಪಾಡುತಂ ॥ ... ... ... ... ॥೧೫॥

ಕಂ ॥ ನಡೆದು ಪೆಡಂಮೆಟ್ಟುತೆಮುಂ । ಗಡೆಗೊರ್ಗುಡಿಪಂತೆ ಜುಗಳಂಬಾಯ್ವುತೆ ಪಿಂ ॥ ಗಡೆಗೊಲೆದು ನಿಲುತೆ ನೋಡು । ತ್ತೆಡವಲನು ನಲರ್ಚಿಕಣ್ಗಳಂ ಪುರ್ಬಿಡುತಂ ॥೧೬॥

---

ಒಳಗೆ, ಮೃದುವಸ್ತ್ರಮಂ, ಸಂಗಳಿಸುತೆ, ಒಂದಂಬರಿಸಜ್ಜೆಯಂ- ಬರಿಯಕೆರಡಿಗೆಯೊಂದನ್ನು, ಗಳದೊಳ್, ಅಳವಡಿಸುತ್ತೆ, ಪೌರಜನಂ, ಅರರೆ! ಚೋದ್ಯಂ, ಎನೆ, ಶಿವಲಾಂಛನಮಂ, ಕೆಳೆಗೊಳಿಸಿದರ್. ॥೧೨॥

ಇಂತು, ಬರಿಜೋಹಮಂ- ಬರಿಯವೇಷವನ್ನು, ಅಳವಡಿಸಿ, ನಲವಾಂತು- ಸಂತೋಷವನ್ನುಹೊಂದಿ, ನೋಡಿ. * * * * * * * * * * * * * * * *

ಮಲ್ಲ! ದಸರಯ್ಯನಿಂ, ಎರಗಿಸಿಕೊಂಡು- ನಮಸ್ಕಾರಮಾಡಿಸಿಕೊಂಡು, ಅಸವಸದಿಂ- ಅಪಸರದಿಂದ, ಅವನ, ಶಿರಮಂ, ನಿನ್ನ, ಈವಿಸುಗುತಿಹ, ಮೋಟಗಯ್ಯಿಂ, ರಸೆ, ಅಚ್ಚರಿವಡೆಯೆ, ಪೊಡೆಯುದು, ಪೋಗು, ಎನುತೆ, ಆಗಳ್. ... ... ... ... ... ॥೧೩॥

ಖಳರ್, ಬೋಳೈಸಿ- ತಲೆಯಂ ಸವರಿ, ಕಳುಪೆ, ಐತಂದು, ಆವೇಳೆಯೊಳ್, ಅತುಳಸಂಭ್ರಮದಿಂ, ಪುಷ್ಪಾಳಿದರಲ್, ಎಂದು, ಪೋಪ, ದಯಾಳುವಂ, ಆದಸರವಿಭುವಂ, ಒಯ್ಯನೆ, ಕಂಡಂ. ... ॥೧೪॥

ಅಂತು, ಕಂಡು, ಸಡಗರಂ, ವಿಗೆ, ರಾಜವೀಥಿಯೊಳ್, ಬಳಸಂದು, ನಡೆತರುತ್ತಂ ನೋಳ್ಪರಂ, ನಗೆಗಡಲೊಳ್- ನಗುವಿಕೆಯೆಂಬ ಸಮುದ್ರದಲ್ಲಿ, ಓಲಾಡಿಸಿ. * * * * * * * * *

ನಗುತಂ, ಡರ್ರನೆ, ತೇಗುತಂ, ತೂನೆಯುತಂ- ತೂಗಾಡುತ್ತ, ಪುರ್ಬಿಕ್ಕುತಂ, ಪಾರುತಂ, ನೆಗೆಯುತ್ತಂ, ಕೆಲೆಯುತ್ತೆ, ಕೇಕರಿಸುತೆ, ಅಡ್ಡಂಬಾಯ್ವುತಂ- ಅಡ್ಡಲಾಗಿ ಬರುತ್ತ, ಮಂದಿಯೊಳ್- ಜನರಲ್ಲಿ, ಪುಗುತಂ- ನುಗ್ಗುತ್ತ, ಮೋರೆಯಂ-ಮುಖವನ್ನು, ಎತ್ತುತಂ, ಮುರುಕಿಸುತ್ತೆ, ಅಂತೆಂತೆ, ತನ್ನ, ಅಂಗಮಂ, ವಿಗೆ, ನೋಡುತ್ತೆ, ಉಡುಪಂ-ಉಟ್ಟಿರುವದನ್ನು,ಒಲೆದಾಡಿಸುತ್ತಂ, ಪೆಂಪೇರುತಂ-ಉಬ್ಬುತ್ತ, ಪಾಡುತಂ.

ನಡೆದು, ಪೆಡಂಮೆಟ್ಟುತೆ- ಹಿಮ್ಮೆಟ್ಟುತ್ತ, ಮುಂಗಡೆಗೆ, ಒರ್ಗುಡಿಪಂತೆ- ಒಂದುಗೂಡುವಹಾಗೆ, ಜಂಗಳಂಬಾಯ್ವುತೆ- ಲಂಘಿಸುತ್ತ, ಪಿಂಗಡೆಗೆ- ಒಲೆದು, ನಿಲುತೆ, ಎಡವಲಮಂ- ಉಭಯಪಾರ್ಶ್ವಗಳನ್ನು, ಕಣ್ಗಳಂ, ಅಲರ್ಚೆ, ನೋಡುತ್ತೆ, ಪುರ್ಬಿಡುತಂ. ... ... ... ॥೧೬॥

ಕಂ ॥ ಮುಂಡೆಯ ನುಂತಿಂತೊಲೆಯುತೆ। ತುಂಡಿಸಿದ ಕರಂಗಳೊಡ್ಡಿ ದಂಡೆಗುಡುತ್ತಂ॥ ದುಂಡಿಸುತಾಡಿಸುತೆ ಕಟೀ। ಮಂಡಲಮಂ ಬೀಗಿ ಬೆರೆಯುತಣೆದಡಿಯಿಡುತಂ ॥ ॥೧೭॥

ಕಂ ॥ತಳರ್ದಿಂತು ದಸರದೇವನ। ಬಳಸಾರ್ದು ಕಡುಗಿ ನೋಡಿ ಶರಣಾರ್ಥಿ ಯೆನ ॥ ಲ್ಕಳವಡದೆ ಪರಸಿದಂ ತೊಡ। ಲೆಳಸಿಸ್ಪಿನ ಮಲ್ಪ ವಾಯು ನಿನಗಕ್ಕೆನುತಂ ॥ ॥೧೮॥

ವ ॥ ಎಂದವಂ ಕಪಟಚರವೇಷವಂ ತಳೆದೇಳ್ತಂದೆ ನೆಂಬ ಲಜ್ಜೆಯಿಂ ತಡಬಡಂ ಬೋಗಿ ಪರಸಿ ॥ * * * * * * * * * * * * * * *

ಕಂ ॥ ಎಲೆದಸರದೇವ ಕುಶಲಮೆ। ನಲವಿಂದಾವೆಡೆಗೆ ಪೋಪೆ ಕಜ್ಜ ಮದೇಂ ನಿ ॥ ಶ್ಚಲಮತಿ ನಿನ್ನಯ ಸುಗುಣಾ। ವಳಿಯಂ ಕೇಳ್ದೆಳಸಿ ನೋಡಲೆಯ್ದಿದೆ ವೀಗಳ್ ॥೧೯॥

ಕಂ ॥ನಿಯತದೊಳೆ ಮಲ್ಲಿನಾಥಾ ಹ್ವಯ ಮೆಸೆದಪುದೆಮಗೆ ಸುಪ್ರಸಿದ್ಧಂ ಸರ್ವೋ ॥ ರ್ವಿಯೊಳೆಮಗೆಣೆವರ್ಪರದಾ। ರ್ನಯನಿಯಮಮಹತ್ವಸತ್ವಸಾರೋನ್ನತಿಯೊಳ್ ॥ ॥೨೦॥

ಕಂ॥ ಪರ್ವ್ವತನಾಥನಸುತನಾ। ನುರ್ವ್ವರೆಯೊಳ್ಕಿರಿಯನಲ್ತು ನಿನಗೆಂತುಟುಪೇ ॥ ಳ್ಗ ರ್ವ್ವಂನುಡಿಯದೆಪೋದಪೆ। ನಿರ್ವ್ವಂಚಕಭಕ್ತವರ್ಯನಿನಗಿದುಗುಣಮೆ॥ ... ॥೨೧॥

ಕಂ ॥ ನುಡಿದೊಡೆನಿನ್ನಮಹತ್ವಂ। ಕಿಡುಗುಮೆನಡೆನೋಡೆನಿನ್ನಪೌರುಷಮುಳವಂ ॥

---

ಮುಂಡೆಯಂ- ತಲೆಯನ್ನು, ಅಂತು, ಇಂತು, ಒಲೆಯುತ್ತೆ, ತುಂಡಿಸಿದ- ಕತ್ತರಿಸಿದ, ಕರಂಗಳ, ಒಡ್ಡಿ, ದಂಡೆಗುಡುತ್ತಂ- ಮುಂದೆ ಚಾಚುತ್ತ, ದುಂಡಿಸುತೆ- ಉರುಗಿಸುತ್ತ, ಕಟೀಮಂಡಲಮಂ- ನಡುವನ್ನು, ಆಡಿಸುತೆ, ಬೀಗಿ- ಹರ್ಷವನ್ನು ಹೊಂದಿ, ಬೆರೆಯುತೆ, ಅಣೆದು- ಚಿಟುಕಿಹಾಕಿ, ಅಡಿಯಿಡುತಂ- ಹೆಜ್ಜೆಯನ್ನಿಡುತ್ತ. ... ... ... ... ... ॥೧೭॥

ಇಂತು, ತಳರ್ದು- ಹೋಗಿ, ದಸರದೇವನ, ಬಳಸಾರ್ದು- ಸಮೀಪವನ್ನು ಹೊಂದಿ, ಕಡುಗಿ- ಔತ್ಸುಕ್ಯಪಟ್ಟು, ನೋಡಿ, ಶರಣಾರ್ಥಿ, ಎನಲ್ಕೆ, ಅಳವಡದೆ, ತೊಡಲ್- ಸುಖ್ಖು, ಎಳಸಿ, ಇರ್ಪಿನಂ, ನಿನಗೆ,ಅಲ್ಪಂ, ಆಯು- ಆಯುಸ್ಸು, ಅಕ್ಕೆ, ಎನುತಂ, ಪರಸಿದಂ. ... ... ... ॥೧೮॥

ಎಂದು, ಅವಂ, ಕಪಟಚರವೇಷಮಂ, ತಳೆದು, ಏಳ್ತಂದೆಂ, ಎಂಬ, ಲಜ್ಜೆಯಿಂ, ತಡಬಡಂಬೋಗಿ- ತಡವರಿಸಿಗೊಂಡು, ಪರಸಿ. * * * * * * * * * * * * * * *

ಎಲೆದಸರದೇವ ! ಕುಶಲಮೆ ? ನಲವಿಂದೆ, ಆವೆಡೆಗೆ, ಪೋಪೆ? ಅದೇಂಕಜ್ಜಂ- ಅದೇನುಕಾರ್ಯ? ನಿಶ್ಚಲಮತಿ- ಚಾಂಚಲ್ಯವಿಲ್ಲದ ಬುದ್ಧಿಯುಳ್ಳವನೇ! ನಿನ್ನಯ, ಸುಗುಣಾವಳಿಯಂ, ಕೇಳ್ದು, ಈಗಳ್, ನೋಡಲ್, ಎಳಸಿ, ಎಯ್ದಿದೆವ್. ... ... ... ... ... ॥೧೯॥

ಸರ್ವೋರ್ವಿಯೊಳ್, ಎಮಗೆ, ನಿಯತದೊಳೆ- ನಿಶ್ಚಯದಿಂದ, ಸುಪ್ರಸಿದ್ಧಂ, ಮಲ್ಲಿನಾಥಾಹ್ವಯಂ- ಮಲ್ಲಿನಾಥನೆಂಬ ಹೆಸರು, ಎಸೆದಪುದು, ಎಮಗೆ, ನಯ ನಿಯಮಮಹತ್ವಸತ್ವಸಾರೋನ್ನತಿಯೊಳ್— ನಯ- ನೀತಿ- ನಿಯಮ- ವ್ರತ, ಮಹತ್ವ- ಮಹಿಮೆ, ಸತ್ವ- ಸಾಮರ್ಥ್ಯ, ಸಾರೋನ್ನತಿಯೊಳ್- ಶ್ರೇಷ್ಠವಾದ ದೊಡ್ಡತನಗಳಲ್ಲಿ, ಎಣೆವರ್ಪರ್- ಸಮಾನರಾಗುವರು, ಅದಾರ್ ? ... ... ॥೨೦॥

ಉರ್ವರೆಯೊಳ್, ಆಂ, ಪರ್ವತನಾಥನ, ಸುತಂ, ಕಿರಿಯಂ- ಅಲ್ಪಮನುಷ್ಯನು, ಅಲ್ತು- ಅಲ್ಲ, ನಿನಗೆ, ಗರ್ವಂ, ಎಂತುಟು- ಎಂತಹುದು ? ಕೇಳ್, ನುಡಿಯದೆ, ಪೋದಪೆ, ನಿರ್ವಂಚಕಭಕ್ತವರ್ಯ-ಕಪಟಿಗಳಲ್ಲದ ಭಕ್ತರಲ್ಲಿ ಶ್ರೇಷ್ಠನಾದವನೇ! ನಿನಗೆ, ಇದು, ಗುಣಮೆ? ... ... ॥೨೧॥

ಬಗೆವಾಗಳ್, ನುಡಿದೊಡೆ, ನಿನ್ನ, ಮಹತ್ವಂ, ಕಿಡುಗುಮೆ ? ನಡೆ, ನೋಡೆ, ನಿನ್ನ, ಪೌರುಷಮಂ- ಪ

ಮೇಬಗೆವಾಗಳ್‌ ॥ ॥೨೨॥
ಪಡೆಗುಮೆಮಣಿದೊಡೆನಿನ್ನಯ । ಮೃಡಭಕ್ತಿಗೆಹಾನಿಯಕ್ಕು
ಕಂ ॥ ಚರಮೂರ್ತಿ ಯಾನೆ ನಿನ್ನಂ । ಕರೆಯುತ್ತಿರೆ ಕೇಳದಂತೆ ತಳರ್ದಪೆ ನಿನ
ಗುಣಮಣಿಭರಣ॥
ಗಾಂ ॥ ಚರಮೂರ್ತಿ ಯಲ್ಲವೇ ಪೇ । ಳ್ಪರಮಾರ್ಥಮ ನೇಕೆ ನುಡಿಯೆ
ನೀಸೆಂದಾ ॥ ದರ
ಕಂ ॥ ಚರಭಕ್ತಿಯುತನಹಿಂಸಾ । ಪರ ನಧಿಕದಯಾಳು ಧಾರ್ಮಿಕಂ
॥೨೪॥
ದಿ ನಭೀಕ್ಷಿಸ ಲೆಂದಾ । ಇರದೇಳ್ತಂದಿರವ ನಿಂತುಸಫಲಂಗೆಯ್ದಿತ್ತೆ ॥ ...
ಳ್ಸ
ಎಮ್ಮೊಡನಾಡಿಗ ಳಿರ್ಪ । ರ್ದಿಮ್ಮದ ರಿದ ನೆಯ್ದೆ ಕೇಳ್ದೊಡೆಮ್ಮಂ ಬಳಿಯೊ ॥
॥೨೫॥
ಮ್ಮನಿಪರೆ ಲಘುವಮಾಡಿದೆ । ಕೆಮ್ಮನೆ ನೀ ನಕಟ ಸರಿಯ ತಾಪಸ ರೆಡೆಯೊಳ್ ॥
ಕಂ ॥ ಒಡೆಯರ್ಕಳಿರ್ದೆಡೆಗೆ ಕೇಳ್ಮೃಡಭಕ್ತಂ ಪೋಗುತೆರಗಿ ತತ್ಕೃಪೆಯ ನಣಂ ॥
॥೨೬॥
ಪಡೆಯಲ್ವೇಳ್ಕುಂ ನೀ ನಿ । ರ್ದ್ದೆಡೆ ಗಾನಿರದೆಯ್ದೆ ಸುಮ್ಮ ನಿರ್ಪುದೆ ಸುಮತಿ ॥
ಕಂ ॥ ಮದವೊ ಮರುಳ್ತನವೋ ನಿನ । ಗಿದುಜಗದೊಳ್ಮೋಟಮಲ್ಲಿನಾಥನ ಡೊರೆ
ವೆ ॥ ತ್ತೊದವಿದ ಪೇರ್ಮೆಯ್ಗಕೇಳ್ದುಂ । ಪದೆದರಿದುಂಮಣಿಯದಿರ್ಪ ನಿನ್ನ ವಿಡಾಯಂ॥೨೭॥
ವ ॥ ಎಂದಿಂತು ಬಲಾತ್ಕರಿಸಿ ಗಳಪುವಶಿವಲಾಂಛನಧಾರಿಯಾದ ಮೋಟಮಲ್ಲನಿರವಂ
ದಸರಯ್ಯಂ ಪಿಂದಿರುಗಿ ನೋಡಿ * * * * * * * * * * * *

---

ಮಣಿದೊಡೆ- ನಮಸ್ಕರಿಸಿದರೆ, ನಿನ್ನಯ, ಮೃಡಭಕ್ತಿಗೆ,
ರಾಗ್ರವಮವು, ಅಳಿವಂ- ನಾಶವನ್ನು, ಪಡೆಗುಮೆ ? ॥೨೨॥
ಹಾನಿ, ಅಕ್ಕುಮೆ ? ... ... ... ... ...

ಗುಣಮಣಿಭರಣಾ ! ಚರಮೂರ್ತಿ- ಜಂಗಮನಾದ, ಆನೆ- ನಾನೇ , ನಿನ್ನಂ, ಕರೆಯುತ್ತಿರೆ, ಕೇಳದಂ
ತೆ, ತಳರ್ದಪೆ- ಹೋಗುವೆ, ನಿನಗೆ, ಆಂ, ಚರಮೂರ್ತಿ, ಅಲ್ಲನೇಂ ? ಪರಮಾರ್ಥಮಂ- ಉತ್ಕೃಷ್ಟವಾ
ದಭಿಪ್ರಾಯವನ್ನು, ಪೇಳ್, ಏಕೆ, ನುಡಿಯೆ ? ... ... ... ॥೨೩॥

ನೀಂ, ಚರಭಕ್ತಿಯುತಂ, ಅಹಿಂಸಾಪರಂ- ಹಿಂಸೆಮಾಡಬಾರದೆಂಬುವದರಲ್ಲಿ ಆಸಕ್ತನಾದವನು, ಅಧಿಕ
ದಯಾಳು, ಧಾರ್ಮಿಕಂ- ಧರ್ಮಿಷ್ಠನು, ಎಂದು, ಆ, ಆದರದಿಂ, ಅಭೀಕ್ಷಿಸಲ್, ಎಂದು, ಇರದೆ, ಏಳ್ತಂದ, ಇ
ರವಂ- ರೀತಿಯನ್ನು, ಇಂದು- ಈವಾಗ, ಸಫಲಂಗೆಯ್ದ್ಯ-ಪ್ರಯೋಜನವಿಶಿಷ್ಟವನ್ನಾಗಿಮಾಡಿದೆ ॥೨೪॥

ಎಮ್ಮ, ಒಡನಾಡಿಗಳ್- ಸ್ನೇಹಿತರಾದ, ದಿಮ್ಮದರ್- ಹಾರುವರು, ಇರ್ಪರ್, ಇರಂ- ಈವೃತ್ತಾಂ
ತವನ್ನು, ಎಯ್ದೆ, ಕೇಳ್ದೊಡೆ; ಎಮ್ಮಂ, ಬಳಿಯೊಳ್- ಸಮೀಪದಲ್ಲಿ, ಸಮ್ಮನಿಪರೆ- ಸನ್ಮಾನಮಾಡುವರೇ ?
ಕೆಮ್ಮನೆ- ಸುಮ್ಮನೆ, ನೀಂ, ಸರಿಯ- ಸಮಾನರಾದ, ತಾಪಸರ, ಎಡೆಯೊಳ್- ಸಮೀಪದಲ್ಲಿ, ಲಘುಮಾಡಿ
ದೆ- ಅಗೌರವವಿಶಿಷ್ಟನಂಮಾಡಿದೆ; ಅಕಟ! ... ... ... ... ॥೨೫॥

ಸುಮತಿ- ಒಳ್ಳೆಯ ಬುದ್ಧಿಯುಳ್ಳವನೇ! ಕೇಳ್, ಒಡೆಯರ್ಕಳ್, ಇರ್ದ್ದ- ಎಡೆಗೆ, ಮೃಡಭಕ್ತಂ, ಪೋ
ಗುತ್ತೆ, ಎರಗಿ, ತತ್ಕೃಪೆಯಂ- ಆ ಒಡೆಯರ ಕರುಣವನ್ನು, ಅಣಂ- ಅತ್ಯಂತವಾಗಿ, ಪಡೆಯಲ್ವೇಳ್ಕುಂ, ಆ
ರ್ಯ! ನೀಂ, ಇರ್ದ್ದೆಡೆಗೆ, ಆಂ, ಇರದೆ, ಎಯ್ದೆ, ಸುಮ್ಮನೆ, ಇರ್ಪುದೆ ? ... ... ॥೨೬॥

ಜಗದೊಳ್, ಮೋಟಮಲ್ಲಿನಾಥನ, ಡೊರೆವೆತ್ತು-ಪ್ರಸಿದ್ಧಿಯನ್ನು ಹೊಂದಿ, ಒದವಿದ- ಪ್ರಾಪ್ತವಾದ, ಪೇ
ರ್ಮೆಯಂ- ಆಧಿಕ್ಯವನ್ನು, ಕೇಳ್ದುಂ, ಪದೆದು- ಇಚ್ಛೈಸಿ, ಅರಿದುಂ- ತಿಳಿದೂ, ಮಣಿಯದೆ- ನಮಸ್ಕಾರಮಾ
ಡದೆ, ಇರ್ಪ, ನಿನ್ನ, ವಿಡಾಯಂ- ಬಿಗುತನವು, ನಿನಗೆ, ಇದು, ಮದವೊ! ಮರುಳ್ತನವೋ-ಹುಚ್ಚುತನವೋ.

ಎಂದು, ಇಂತು, ಬಲಾತ್ಕರಿಸಿ, ಗಳಪುವ, ಶಿವಲಾಂಛನಧಾರಿಯಾದ, ಮೋಟಮಲ್ಲನ, ಇರವಂ, ದಸರ
ಯ್ಯಂ, ಪಿಂದಿರುಗಿ, ನೋಡಿ. * * * * * * * * * * * * * * * *

ಕಂ ‖ ದುರುಳ ನಿವ ನೆಂದು ಬಗೆದನೆ। ದುರಿತಾತ್ಮಕ ನೆಂದು ನೆನೆದನೇ ಖಲ ನೆಂದೋ‖
ಸರಿಸಿದನೆ ಕುಹಕವೇಷನು । ನಿರದಾಂತನುದಾಂಧ ನೆಂದದೇಂ ನೋಡಿದನೆ ‖ ‖೨೮‖

ಕಂ ‖ ಕರ ಮಿಲ್ಲದ ಮೋಟಂತ । ಸ್ಕರಚರಿತಂ ಕಪಟಯೆಂದುಪೇಕ್ಷಿಸಿದನೆ ಶಾಂ ‖
ಕರಲಾಂಛನಧರನಂ ಭಾ । ಸುರಜಂಗಮ ಮೆಂದು ಭಕ್ತಿಯಿಂ ಭಾವಿಸಿದಂ ‖ ‖೨೯‖

ವ ‖ ಅಂತು ಭಾವಿಸಿ ಭಾವಜಾಂತಕ ನೆಂದೇ ನಂಬಿ ನಲವೇರ್ಚಿ ವಿಶ್ವಾಸಮೇ ನಿಜಪ್ರಾ
ಣ ಮಾಗಿ ಭಯಭಕ್ತಿವೆರಸಿ ನಿಂದು ‖ * * * * * * * * * * *

ಮ ‖ ನರದೇಹಾನ್ವಿತಚಂದ್ರಚೂಡ ಕರುಣಾಪಾರಾಶಿ ತಪ್ಪುಂಟು ಸಾ । ಸಿರ ಮೆ
ನ್ನೊಳ್ಮದಮತ್ತನೊಳ್ಮರೆದಿದಂ ಕಾರುಣ್ಯದಿಂದೆನ್ನನು‖ ದ್ಧರಿಸೊಳ್ಪಂ ನಡೆ ನೋಡಿ ನೀಂ
ಪೊರೆಯುದೆಂದಾತ್ಮಾಂಗಮಂ ಧಾತ್ರಿಯೊ । ಳ್ಪರಪುತ್ತಂ ಪೊಗಳುತ್ತೆ ಮತ್ತೆ ಮಣಿದಿ
ರ್ದಂ ತತ್ಪದದ್ವಂದ್ವದೊಳ್ ‖ ... ... ... ... ‖೩೦‖

ವ ‖ ಆಗ ಳಾಮೋಟಮಲ್ಲಿನಾಥ ನಾಕ್ಷೇಪಂ ಮಿಗೆ ತನಗೆರಗಿರ್ದ ದಸರದೇವನುತ್ತ
ಮಾಂಗಮಂ ಕಿಣಕಲಿತಂಗಳಾದ ತನ್ನ ಕೊನುಗೈಗಳಿ ನಡಸುತಟವಟಿಸಿ ತಿವಿದು‖ * *

ಒಡನೊಡನೆ ಬಡಿಬಡಿದು ಪೊಡೆ। ಪೊಡೆ ದಡಿಗಡಿ ಗಟ್ಟಹಾಸಮಂ ನೆಗಳ್ದು ಕರಂ ‖
ಜಡಿದಣ್ಮಿ ಭಕ್ತನಂ ಬ । ಯ್ದುಡಿಗೈದಂ ಮೋಟಮಲ್ಲ ನಪ್ರತಿಮಲ್ಲಂ ‖ ... ‖೩೧‖

---

ನಿಮಂದುರುಳಂ, ಎಂದು, ಬಗೆದನೆ-ಯೋಚಿಸಿದನೇ ? ದುರಿತಾತ್ಮಕಂ, ಎಂದು, ನೆನೆದನೇ ? ಖಲಂ, ಎಂದು, ಓಸರಿಸಿದನೆ- ಓರೆಯಾದನೇ ? ಕುಹಕವೇಷಮಂ, ಇರದೆ, ಅಂತ, ಮದಾಂಧಂ, ಎಂದು, ಅದೇಂ ನೋಡಿದನೇ ? ... ... ... ... ... ‖೨೮‖

ಕರಂ– ಕೈ, ಇಲ್ಲದ, ಮೋಟಂ, ತಸ್ಕರಚರಿತಂ- ಕಳ್ಳನಡತೆಯುಳ್ಳ, ಕಪಟಿ, ಎಂದು, ಉಪೇಕ್ಷಿಸಿದನೆ ? ಶಾಂಕರಲಾಂಛನಧರನಂ-ಶಿವಲಾಂಛನಧಾರಿಯಾದ ಮೋಟಮಲ್ಲನನ್ನು, ಭಾಸುರಜಂಗಮಂ, ಎಂದು, ಭಕ್ತಿಯಿಂ, ಭಾವಿಸಿದಂ. ... ... ... ... ... ‖೨೯‖

ಅಂತು, ಭಾವಿಸಿ- ತಿಳಿದು, ಭಾವಜಾಂತಕಂ- ಶಿವನು, ಎಂದು ನಂಬಿ, ನಲವೇರ್ಚೆ- ಪ್ರೀತಿ ಹೆಚ್ಚಿ, ವಿಶ್ವಾಸಮೇ, ನಿಜಪ್ರಾಣಂ- ತನ್ನ ಪ್ರಾಣವು, ಆಗಿ, ಭಯಭಕ್ತಿವೆರಸಿ, ನಿಂದು. * * * * * *

ಕರುಣಾಪಾರಾಶಿ- ದಯಾರಸಕ್ಕೆ ಸಮುದ್ರನಾದ, ನರದೇಹಾನ್ವಿತಚಂದ್ರಚೂಡ- ಮನುಷ್ಯಶರೀರದಿಂದ ಕೂಡಿರುವ ಶಿವನೇ! ಮದಮತ್ತನೊಳ್, ಎನ್ನೊಳ್, ಸಾಸಿರಂ- ಸಹಸ್ರವು, ತಪ್ಪು, ಉಂಟು, ಇದಂ, ಮರೆದು, ಕಾರುಣ್ಯದಿಂದೆ, ಎನ್ನಂ, ಉದ್ಧರಿಸು, ಒಳ್ಪಂ, ನಡೆ, ನೋಡಿ, ನೀಂ, ಪೊರೆಯುದು, ಎಂದು, ಆತ್ಮಾಂಗಮಂ, ಧಾತ್ರಿಯೊಳ್, ಪರಪುತ್ತಂ- ವಿಸ್ತರಿಸುತ್ತ, ಪೊಗಳುತ್ತೆ, ಮತ್ತೆ, ತತ್ಪದದ್ವಂದದೊಳ್- ಆ ಮೋಟಮಲ್ಲನ ಪಾದಯುಗ್ಮದಲ್ಲಿ, ಮಣಿದು, ಇರ್ದಂ. ... ... ... ‖೩೦‖

ಆಗಳ್, ಆ ಮೋಟಮಲ್ಲಿನಾಥಂ, ಆಕ್ಷೇಪಂ, ಮಿಗೆ, ತನಗೆ, ಎರಗಿ, ಇರ್ದ, ದಸರದೇವನ, ಉತ್ತಮಾಂಗಮಂ- ತಲೆಯನ್ನು, ಕಿಣಕಲಿತಂಗಳ್- ಜಡ್ಡುಗಟ್ಟಿದಗಂಟಿನಿಂ ಕೂಡಿರುವವುಗಳು, ಆದ, ತನ್ನ, ಕೊನುಗೈಗಳಿಂ- ಮೋಟಗಯ್ಯಿಂದ, ಅಡಸುತೆ- ಸೇರಿಸಿ, ಅಟಮಟಿಸಿ- ಮಿತಿಮೀರಿ, ತಿವಿದು. * * *

ಅಪ್ರತಿಮಲ್ಲಂ- ಅಸದೃಶನಾದ ಗಟ್ಟಿಗನಾದ, ಮೋಟಮಲ್ಲಂ, ಒಡನೊಡನೆ, ಭಕ್ತನಂ, ಒಡಿಬಡಿದು, ಪೊಡೆಪೊಡೆದು, ಅಡಿಗಡಿಗೆ- ಭಾರಿಭಾರಿಗೆ, ಅಟ್ಟಹಾಸಮಂ-ಶಬ್ದಪುರಸ್ಸರವಾದನಗುವಿಕೆಯನ್ನು, ನೆಗಳ್ದು-ಮಾಡಿ, ಕರಂ, ಜಡಿದು– ಭಯಪಡಿಸಿ, ಅಣ್ಮಿ- ಪೌರುಷವನ್ನುಹೊಂದಿ, ಬಯ್ದುಡಿಗೈದಂ- ಬೈಗುಳಾಡಿಸಿದನು.

ಕಂ॥ ಬುಗುಟೊಗೆಯೆ ಶಿರದೊಳಲ್ಲ । ಲ್ಲಿಗೆ ರಂಧ್ರಂಗಳ್ಪೊದಳ್ದು ನೆತ್ತರ್ ಝುಲ್ಲೆಂ॥ ದುಗೆವೆಲ್ಲದಿಂದೆ ಮಲ್ಲಂ । ಮಿಗೆ ನಿರ್ದಯಶೀಲ ನಣ್ಮಿ ಪೊಡೆದಂ ಬಡಿದು ॥ ... ॥೩೦॥

ವ ॥ ಅಂತವ ನಳುಕ್ಕೆಯಿಂ ಪೊಡೆಯ ಲೊಡನೆ ॥ * * * * * * *

ಚಂ॥ ಅಗಿದು ಬೆಮರ್ತನೇ ಸುಗಿದು ಕುಗ್ಗಿದನೇ ನೆರೆ ನೊಂದೆನೆಂದು ಪಿಂ। ದೆಗೆದನೆ ತಪ್ಪು ಸಂದಿರದೆ ಪೊಯ್ದಪ ನೀಚಖಲ ನೆಂದು ಚಿತ್ತದೊಳ್ ॥ ಬಗೆದನೆ ಪೊಯ್ಯದಿ ರ್ಬರಿದೆ ನೀನಕಟೆಂದನೆ ಬಂದು ಕೆಮ್ಮನಿಂ । ತಗಣಿತನೂನ ಬಾಧೆಗೊಳಗಾದೆ ನೆನುತ್ತ ಮಳಲ್ಕೆ ಯೂಂತನೆ ॥ ... ... ... ... ... ... ॥೩೨॥

ಕಂ ॥ ಕಿಸುಗಣ್ಚಿ ನೋಡಿದನೆ ಮಾ । ಮುಸಕಂಮುಸಗಿದನೆ ಸೂರೊಳಿಟ್ಟಣ್ಮಿನಿವಾ॥ ರಿಸಿದನೆ ನಿನಗೇಂ ಮುಳಿಯರೆ । ಸಸಿದಲೆಯನ ಭಕ್ತರೆಂದನೇ ದಸರಯ್ಯಂ ॥ ॥೩೪॥

ಕಂ॥ ಧೃತಿಗುಂದದೆ ಮತಿನಂದದೆ । ರತಿಯೊಡವೆ ಬಲ್ಪುಬಾಡದಳ್ಕಾಡದೆ ನಿ ॥ ಶ್ಚಿತ ಚಿತ್ತವೃತ್ತಿ ಭಕ್ತಿ । ಸ್ಥಿತಿ ಜಾರದೆ ಮೀರದಾಪ್ತಶೀಲಕ್ರಮಮಂ ॥ ... ॥೩೫॥

ಕಂ ॥ ಪರಮಶಮೆ ಭಕ್ತರೂಪಂ । ಕರಮಾಂತುದೊ ದಮೆಯೆ ತಾಳ್ದುದೋ ಪ ದಪಿಂದಂ ॥ ಪುರುಷಾಕಾರವನು ನೆನೆ ಶಾಂ । ತಿರಸಾಂಕಂ ದಸರದೇವ ನೊಪ್ಪಿದನಾಗಳ್ ॥

---

ಶಿರದೊಳ್- ತಲೆಯಲ್ಲಿ, ಬುಗುಟು- ಗುಳ್ಳೆಯು, ಒಗೆಯೆ- ಉಂಟಾಗಲಾಗಿ, ಅಲ್ಲಲ್ಲಿಗೆ, ರಂಧ್ರಂಗಳ್, ಪೊದಳ್ದು- ವಿಸ್ತಾರವಾಗಿ, ನೆತ್ತರ್- ರಕ್ತವು, ಝುಲ್, ಎಂದು, ಉಗೆ- ಸುರಿಯಲಾಗಿ, ನಿರ್ದಯಶೀಲಂ- ಕರುಣಾಹೀನವಾದ ಸ್ವಭಾವವುಳ್ಳ, ಮಲ್ಲಂ, ಬೆಲ್ಲದಿಂದೆ- ವಿಲಾಸದಿಂದ, ಮಿಗೆ, ಅಣ್ಮಿ- ಪರಾಕ್ರಮವಿಶಿಷ್ಟನಾಗಿ, ಪೊಡೆದಂ, ಬಡಿದಂ. ... ... ... ... ॥೩೦॥

ಅಂತು, ಅವಂ, ಅಳುಕ್ಕೆಯಿಂ- ಅಧಿಕವಾಗಿ, ಪೊಡೆಯಲ್, ಒಡನೆ. * * * * *

ಅಗಿದು- ಭಯಪಟ್ಟು, ಬೆಮರ್ತನೇ- ಬೆವರೇರಿದನೇ ? ಸುಗಿದು- ಭಯಪಟ್ಟು, ಕುಗ್ಗಿದನೇ ? ನೆರೆ, ನೊಂದೆಂ, ಎಂದು, ಪಿಂದೆಗೆದನೆ ? ಈಖಲಂ- ಈ ನೀಚನು, ತಪ್ಪು, ಸಂದು, ಇರದೆ, ಪೊಯ್ದಪಂ- ಹೊಡೆಯುವನು, ಎಂದು, ಚಿತ್ತದೊಳ್- ಮನಸ್ಸಿನಲ್ಲಿ, ಬಗೆದನೆ- ಯೋಚಿಸಿದನೆ ? ನೀಂ, ಬರಿದೆ- ಸುಮ್ಮನೆ, ಪೊಯ್ಯದಿರ್- ಹೊಡೆಯಬೇಡ, ಅಕಟ! ಎಂದನೆ ? ಕೆಮ್ಮನೆ- ಸುಮ್ಮನೆ, ಬಂದು, ಇಂತು, ಅಗಣಿತಂ- ಅಧಿಕವು, ಆದ, ಬಾಧೆಗೆ, ಒಳಗಾದೆಂ, ಎನುತ್ತಂ, ಅಳಲ್ಕೆಯೂಂತನೆ- ದುಃಖವನ್ನುಹೊಂದಿದನೆ. ॥೩೨॥

ದಸರಯ್ಯಂ, ಕಿಸುಗಣ್ಚಿ- ಕೋಪಿಸಿಕೊಂಡು, ನೋಡಿದನೆ ? ಮಾಮುಸಕಂಮುಸಗಿದನೆ- ಮಾತ್ಸರ್ಯವಂ ಹೊಂದಿದನೇ ? ಸೂರೊಳಿಟ್ಟು- ಶಪಥವಂಮಾಡಿ, ಅಣ್ಮಿ-ಪರಾಕ್ರಮವಿಶಿಷ್ಟನಾಗಿ, ನಿವಾರಿಸಿದನೆ- ತಡೆದನೇ ? ಸಸಿದಲೆಯನ- ಶಿವನ, ಭಕ್ತರ್, ನಿನಗೆ,ಮುನಿಯರೇಂ- ಕೋಪಿಸಿಕೊಳ್ಳುವದಿಲ್ಲವೇ ? ಎಂದನೆ ?

ಧೃತಿಗುಂದದೆ- ಧೈರ್ಯದಿಂ ಕೆಡಮೆಯಾಗದೆ, ಮತಿ- ಬುದ್ಧಿಯು, ನಂದದೆ- ಕೆಡದೆ, ರತಿ- ವಿಶ್ವಾಸವು, ಒಡೆಯದೆ- ಶಿಥಿಲವಾಗದೆ, ಬಲ್ಪು- ಸಾಮರ್ಥ್ಯವು, ಬಾಡದೆ, ನಿಶ್ಚಿತಚಿತ್ತವೃತ್ತಿ- ನಿಶ್ಚಂಚಲವಾದ ಚಿತ್ತದ ವ್ಯಾಪಾರವು, ಅಳ್ಕಾಡದೆ, ಭಕ್ತಿಸ್ಥಿತಿ, ಜಾರದೆ, ಆಪ್ತಶೀಲಕ್ರಮಮಂ- ಇಷ್ಟವಾದ ತನ್ನ ಸ್ವಭಾವದ ರೀತಿಯನ್ನು, ಮೀರದೆ. ... ... ... ... ... ॥೩೫॥

ಪರಮಶಮೆ- ಉತ್ಕೃಷ್ಟವಾದ ಶಾಂತಿಯೇ, ಭಕ್ತರೂಪಂ-ಭಕ್ತಾಕಾರವನ್ನು, ಕರಂ, ಆಂತುದೊ- ಧರಿಸಿತೋ ? ದಮೆಯೆ- ಇಂದ್ರಿಯನಿಗ್ರಹವೇ, ಪದಪಿಂದಂ- ಪ್ರೀತಿಯಿಂದ, ಪುರುಷಾಕಾರವಮಂ, ತಾಳ್ದುದೊ ? ಎನೆ, ಶಾಂತಿರಸಾಂಕಂ- ಶಾಂತಿಯೇ ಚಿಹ್ನವಾಗಿಯುಳ್ಳ, ದಸರದೇವಂ, ಆಗಳ್, ಒಪ್ಪಿದಂ. ॥೩೬॥

ವ ॥ ಅಂತೊಪ್ಪುತ್ತಿರ್ದ್ದ ಮಲ್ಲಿನಾಥಂ ನಿಲ್ಲದೆ ಬಡಿಯೆ ಶಿರ ಮೆಲ್ಲಂ ಸೀಳ್ದೊಡೆಯೆ ಧೃತಿಗೆಡದೆ ಭಕ್ತವರ್ಯಂ ಕ್ಷಮಾನಿಧಿ ತನ್ನೊಳಿಂತೆಂದಂ ॥ * * * * * *

ಕಂ ॥ ಅಪರಾಧ ಮಿಲ್ಲದೇಂ ಬಡಿ । ದಪನೆ ಮಹಾತ್ಮಂ ಮದೀಯಶಿರಮಂ ಶಿಕ್ಷಾ ॥
ವ್ಯಪದೇಶಂ ಭಕ್ತಿಸ್ಥಿತಿ । ಯುಪದೇಶ ಮಿದಪ್ಪುದಾದೆನಾನತಿಧನ್ಯಂ ॥ ... ॥೩೭॥

ಕಂ ॥ ಹರವಿಯ ನಿಳೆಯೊಳ್ಕೊಳ್ವ । ರ್ಕರದಿಂಟೊಣೆದಲ್ತೆ ಕೊಳ್ವ ರೆನ್ನಯ ಶಿರ
ಮಂ ॥ ಭರದಿಂ ಪೊಡೆದು ಪರೀಕ್ಷಿಸಿ । ಪುರುಳಂ ಕೈಕೊಳ್ವ ನೆನ್ನ ನೀಘನಮಹಿಮಂ ॥

ಕಂ ॥ ಶಿವಹಸ್ತಮ ನಿಂದಿಟ್ಟಂ । ಜವದಿಂ ಪೂರ್ವಾಂಗಮಳಿಯ ಲೆನ್ನಯ ಶಿರದೊಳ್ ॥
ಶಿವಮೂರ್ತಿಯೆನ್ನನೀಗಳ್ । ಶಿವಭಕ್ತನ ನೆಸಗ ಲೆಂದು ಮೇಣ್ಕರಮಿಟ್ಟಂ ॥ ॥೩೯॥

ವ॥ ಎಂದು ಮತ್ತಮಿರದೆ ॥ ಚಂ ॥ ಒಳಗೆ ಮದೀಯಮಸ್ತಕಮಣಂ ಕಠಿಣಂ ಪೊಡೆದಪ್ಪ ನಯ್ಯನು । ಜ್ವಳಮೃದುಪಾಣಿಪದ್ಮ ಮೆನಿತಕ್ಕಟ ನೊಂದುದೊ ಲಿಂಗಜಂಗಮಾ॥
ವಳಿಗೆರಗಿರ್ಪ ಪೇರ್ಮೆತ ನಗುಳ್ಳೊಡೆ ಮಲ್ಲಸದುತ್ತಮಾಂಗ ಮೊ । ಳ್ಪುಳವಡೆ ಪುಷ್ಪದಂತೆ
ಮೃದುವಕ್ಕೆಗಡೀತನ ಪಾಣಿಗನ್ವಿತಂ ॥ ... ... ... ... ॥೪೦॥

ಕಂ ॥ ಶಿರಮತಿಕಠಿಣಂ ಪೊಡೆದೊಡೆ ।ಕರದ್ವಯಂ ನೋಗು ಮೆಂದು ನುಡಿದೊಡೆಮನ
ದೊಳ್ ॥ ಮರುಗುವನೊ ನಿಜಶಿರೋವ್ಯಥೆ । ಗಿರದೀತಂ ನೆನಮ ನಿಟ್ಟುನುಡಿದಪ ನೆನುತಂ ॥

---

ಅಂತು, ಒಪ್ಪುತ್ತಿರ್ದ್ದ, ಇರ್ದ್ದ, ಆ ಮಲ್ಲಿನಾಥಂ, ನಿಲ್ಲದೆ, ಬಡಿಯೆ, ಶಿರಂ- ತಲೆಯು, ಎಲ್ಲಂ, ಸೀಳ್ದು, ಒಡೆಯೆ, ಭಕ್ತವರ್ಯಂ, ಕ್ಷಮಾನಿಧಿ- ಸಹನಗುಣಕ್ಕೆ ನಿಕ್ಷೇಪನಾದ ದಸರಯ್ಯನು, ಧೃತಿಗೆಡದೆ- ಧೈರ್ಯಗೆಡದೆ, ತನ್ನೊಳ್, ಇಂತು, ಎಂದಂ. * * * * * * * * * * * * * *

ಮಹಾತ್ಮಂ- ಮಹಿಮನು, ಮದೀಯಶಿರಮಂ-ನನ್ನತಲೆಯನ್ನು, ಅಪರಾಧಂ, ಇಲ್ಲದೆ, ಬಡಿದಪನೆ? ಇದು, ಶಿಕ್ಷಾವ್ಯಪದೇಶಂ- ಬುದ್ಧಿಗಲಿಸುವನೆಪವು, ಭಕ್ತಿಯ, ಉಪದೇಶಂ, ಅಪ್ಪುದು, ಆಂ, ಅತಿಧನ್ಯಂ, ಆದೆಂ.

ಇಳೆಯೊಳ್- ಭೂಮಿಯಲ್ಲಿ, ಹರವಿಯಂ, ಕೊಳ್ವರ್, ಕರದಿಂ-ಕೈಯಿಂದ, ಟೊಣೆದು- ಬಡಿದು, ಕೊಳ್ವರಲ್ತೆ, ಈಘನಮಹಿಮಂ, ಎನ್ನಯ, ಶಿರಮಂ, ಭರದಿಂ, ಪೊಡೆದು, ಪುರುಳಂ- ಸ್ಥಿರಾಂಶವನ್ನು, ಪರೀಕ್ಷಿಸಿ, ಎನ್ನಂ, ಕೈಕೊಳ್ವಂ-ಅಂಗೀಕರಿಸುವನು. ... ... ... ॥೩೮॥

ಅಂದು, ಶಿವಮೂರ್ತಿ, ಎನ್ನಯ, ಪೂರ್ವಾಂಗಂ- ಪೂರ್ವದಲ್ಲಿದ್ದ ಶರೀರವು, ಅಳಿಯಲ್-ನಾಶವಾಗಲಾಗಿ, ಶಿವಹಸ್ತಮಂ- ಮಂಗಳಕರವಾದ ಕೆಯ್ಯನ್ನು, ಜವದಿಂ, ಇಟ್ಟಂ, ಈಗಳ್,ಎನ್ನಂ, ಶಿವಭಕ್ತನಂ, ಎಸಗಲೆಂದು- ಮಾಡಬೇಕೆಂದು, ಶಿರದೊಳ್, ಮೇಣ್, ಕರಮಿಟ್ಟಂ- ಹಸ್ತವನ್ನಿಟ್ಟನು. ... ॥೩೯॥

ಮದೀಯಮಸ್ತಕಂ- ನನ್ನ ತಲೆಯು, ಒಳಗೆ, ಅಣಂ-ಅತ್ಯಂತವಾಗಿ, ಕಠಿಣಂ, ಪೊಡೆದಪ್ಪಂ- ಹೊಡೆಯುವನು,ಅಯ್ಯನ- ಆರ್ಯನ, ಉಜ್ವಳಮೃದುಪಾಣಿಪದ್ಮಂ- ಉಜ್ವಳ- ಪ್ರಕಾಶಮಾನವಾದ, ಮೃದು-ಕೋಮಲವಾದ, ಪಾಣಿಪದ್ಮಂ- ಹಸ್ತಕಮಲವು, ಎನಿತು, ನೊಂದುದೊ, ಅಕ್ಕಟ ! ಲಿಂಗಜಂಗಮಾವಳಿಗೆ- ಲಿಂಗಜಂಗಮ ಸಮೂಹಕ್ಕೆ, ಎರಗಿರ್ದ್ದ- ನಮಸ್ಕಾರಮಾಡಿದ್ದ, ಪೇರ್ಮೆ- ಆಧಿಕ್ಯವು,ತನಗೆ, ಉಳ್ಳೊಡೆ- ಇದ್ದರೆ, ಈತನ, ಪಾಣಿಗೆ- ಕೈಗೆ, ಅನ್ವಿತಂ- ಸಂಬಂಧಿಸಿದ, ಮಲ್ಲಸದುತ್ತಮಾಂಗಂ- ನನ್ನ ಪ್ರಕಾಶಿಸುವ ತಲೆಯು, ಒಳ್ಪು- ಸಮೀಚೀನತ್ವವು, ಅಳವಡೆ, ಪುಷ್ಪದಂತೆ- ಹೂವಿನಹಾಗೆ, ಮೃದು, ಅಕ್ಕೆಗಡ- ಆಗಲಿ ಯಲ್ಲವೇ?

ಶಿರಂ, ಅತಿಕಠಿಣಂ, ಪೊಡೆದೊಡೆ, ಕರದ್ವಯಂ- ಎರಡು ಕೆಯ್ಯು, ನೋಗುಂ- ನೋಯುವದು, ಎಂದು, ನುಡಿದೊಡೆ, ಮನದೊಳ್, ಮರುಗುವನೊ, ಈತಂ, ನಿಜಶಿರೋವ್ಯಥೆಗೆ— ನಿಜ- ತನ್ನ, ಶಿರಃ-ತಲೆಯ, ವ್ಯಥೆಗೆ- ಬಾಧೆಗೆ, ಇರದೆ, ನೆನಮಂ- ನೆಪವನ್ನು, ಇಟ್ಟು, ನುಡಿದಪಂ, ಎನುತಂ. ... ॥೪೧॥

ಕಂ ॥ ನೆನೆನೆಂದುಪಾಯಮಂ ಮಣಿ । ದನುನಯದಿಂ ದೇವ ನಿನ್ನ ಮೃದುಕರ ಮಿ
ದುಮ ॥ ದ್ಘನಕಠಿಣಮಸ್ತಕದ ತಾ । ಡನದಿಂ ನೊಂದಪ್ಪುದೀಗಳೆನ್ನೆಯ ಮೆಯ್ಯೊಳ್ ॥

ಕಂ ॥ ಮೃದುವಪ್ಪೆಡೆಯಂ ಪೊಡೆ ನೀ । ನದರಿಂ ಬಿನದಕ್ಕೆ ಕೊರತೆಯಾವುದೊ ನಿ
ನ್ನೀ ॥ ಸದಮಲಕರಯುಗಲಂ ನೋ । ಯದುಗಡ ಮದನುಗ್ರಹಾರ್ಥಮಿಂತಿದೆ ಕಜ್ಜಂ ॥೪೩॥

ಕಂ ॥ ಎಂದೊಯ್ಯನೆ ನುಡಿಯುತ್ತಂ । ವಂದಿಸುತಂ ದೇವ ನಿನ್ನಕರಸರಸಿರುಹಂ ॥
ನೊಂದುದಕಟಕಟೆನುತೆ ಬಗೆ । ಗುಂದಿ ಕರಂ ದಸರನವನ ಪೋಟಿತಕರಮಂ ॥ ॥೪೪॥

ಚಂ ॥ ನಿಜಕರದಿಂದೆ ತಾಂಪಿಡಿದು ನೋಡಿ ನಿಗುರ್ಚಿ ನಿಗುರ್ಚಿ ನೇಹದಿಂ । ವೃಜಿನವಿ
ದೂರನೊತ್ತಿ ತೆಗೆಯುತ್ತಿರೆ ಚಿತ್ರಮದೆಂತೊ ರಕ್ತನೀ ॥ ರಜನಿಭಪಾಣಿ ತಳ್ತಲರ್ದು
ಮೂಡಿ ವಿರಾಜಿತಮಾದುದಂದು ಕಾ । ಯಜರಿಪುವಿಂದೆ ಬಾಣಕರಪಂಕಜ ಮೊಲ್ದೊಗೆತಂ
ದವಮಾಳ್ಕೆಯಿಂ ॥ ... ... ... ... ... ... ॥೪೫॥

ವ ॥ ಮತ್ತಂ ॥ ಚಂ ॥ ಪೊರಟದ ಬಂಕಿದೇವವಿಭುವಿಂದೆ ಕೊರಂಟು ತಳಿರ್ತಮಾಂ
ಗಿನಿಂ । ಪರಮಗುಣಾಂಕಚನ್ನಯನ ಜಿಹ್ವೆಗೆ ಮಂಜುಲಭಕ್ತಿಭಾವದಿಂ ॥ ಕರಮೊಗೆದಂತೆ
ಶಾಂತದಸರಯ್ಯನಭಾವದ ಬಲ್ಪಿನಿಂದ ಮಂ । ಕುರಿಸಿ ನಿಮಿರ್ಕೆವೆತ್ತು ಕರಪಲ್ಲವ ಮೊಪ್ಪಿ
ದುದಾತಪಸ್ವಿಯ ॥ ... ... ... ... ... ॥೪೬॥

---

ಒಂದು, ಉಪಾಯಮಂ, ನೆನೆದು, ಅನುನಯದಿಂ, ಮಣಿದು, ದೇವ! ನಿನ್ನ, ಇದುಕರಂ,ಮೃದು, ಮ
ದ್ಘನಕಠಿಣಮಸ್ತಕದ— ಮತ್- ನನ್ನ, ಘನ- ದೊಡ್ಡದಾದ, ಕಠಿಣ- ಗಟ್ಟಿಯಾದ, ಮಸ್ತಕದ- ತಲೆಯ
ನ್ನು, ತಾಡನದಿಂ- ಹೊಡೆಯುವದರಿಂದ, ನೊಂದಪ್ಪುದು, ಈಗಳ್, ಎನ್ನಯ, ಮೆಯ್ಯೊಳ್. ॥೪೨॥

ಮೃದು, ಅಪ್ಪ, ಎಡೆಯಂ- ಸಾಧನವನ್ನು, ನೀಂ, ಪೊಡೆ, ಅದರಿಂ, ಬಿನದಕ್ಕೆ- ವಿನೋದಕ್ಕೆ, ಕೊ
ರತೆ, ಆವುದೊ ? ನಿನ್ನ, ಈಸದಮಲಕರಯುಗಲಂ- ಈ ನಿರ್ಮಲವಾದ ಎರಡು ಹಸ್ತವು, ನೋಯದುಗಡ,
ಮದನುಗ್ರಹಾರ್ಥಂ- ನನ್ನನ್ನು ಅನುಗ್ರಹಿಸುವದಕ್ಕೋಸ್ಕರ, ಇಂತು, ಇದೆ, ಕಜ್ಜಂ- ಕಾರ್ಯವು. ॥೪೩॥

ಎಂದು, ಒಯ್ಯನೆ, ನುಡಿಯುತ್ತಂ, ವಂದಿಸುತಂ, ದೇವ ! ನಿನ್ನ, ಕರಸರಸಿರುಹಂ- ಹಸ್ತಕಮಲವು,
ನೊಂದುದು, ಅಕಟ ! ಅಕಟ !! ಎನುತೆ, ಬಗೆಗುಂದಿ-ಮನಸ್ಸು ದುಃದಸರಂ, ಅವನ, ಪೋಟಿತಕರಮಂ-
ಪೋಟಕಯ್ಯನ್ನು, ಕರಂ-ಚೆನ್ನಾಗಿ. ... ... ... ... ॥೪೪॥

ವೃಜಿನವಿದೂರಂ, ತಾಂ, ನಿಜಕರದಿಂದೆ- ತನ್ನ ಕಯ್ಯಿಂದ, ಪಿಡಿದು, ನೋಡಿ, ನಿಗುರ್ಚಿನಿಗುರ್ಚಿ- ನೀ
ಡಿನೀಡಿ, ನೇಹದಿಂ- ಸ್ನೇಹದಿಂದ, ಒತ್ತಿ, ತೆಗೆಯುತ್ತಿರೆ, ಚಿತ್ರಂ- ಆಶ್ಚರ್ಯವು, ಅದು, ಎಂತೊ ! ಅಂದು,
ರಕ್ತನೀರಜನಿಭಪಾಣಿ- ಕೆಂದಾವರೆಗೆ ಸದೃಶವಾದ ಹಸ್ತವು, ತಳ್ತು- ಸೇರಿ,ಅಲರ್ದು- ವಿಕಸಿತವಾಗಿ, ಮೂ
ಡಿ, ಕಾಯಜರಿಪುವಿಂದೆ- ಮನ್ಮಥಧ್ವಂಸಿಯಾದ ಈಶ್ವರನಿಂದ, ಬಾಣಕರಪಂಕಜಂ-ಬಾಣಾಸುರನ ಹಸ್ತಕಮ
ಲವು, ಒಲ್ದು, ಒಗೆತಂದ- ಹುಟ್ಟಿದ, ಮಾಳ್ಕೆಯಿಂ- ರೀತಿಯಿಂದ, ವಿರಾಜಿತಂ, ಆದುದು. ॥೪೫॥

ಪೊರಟದಬಂಕಿದೇವವಿಭುವಿಂದೆ, ಕೊರಂಟು- ಕೊರಡು, ತಳಿರ್ತ- ಚಿಗುರಿದ, ಮಾಂಗಿನಿಂ- ರೀತಿಯಿಂ
ದ, ಪರಮಗುಣಾಂಕಚನ್ನಯನ-ಉತ್ಕೃಷ್ಟವಾದ ಗುಣವೇ ಚಿಹ್ನವಾಗಿಯುಳ್ಳ, ಚನ್ನಯನ, ಜಿಹ್ವೆಗೆ- ನಾ
ಲಿಗೆಗೆ, ಮಂಜುಲಭಕ್ತಿಭಾವದಿಂ-ಮನೋಹರವಾದ ಭಕ್ತಿಭಾವದಿಂದ, ಕರಂ, ಒಗೆದಂತೆ-ಹುಟ್ಟಿದಹಾಗೆ, ಶಾಂ
ತದಸರಯ್ಯನ, ಭಾವದ— ಮನಸ್ಸಿನ, ಬಲ್ಪಿನಿಂದಂ- ಶಕ್ತಿಯಿಂದ, ಅಂಕುರಿಸಿ- ಮೊಳಕೆಯಾಗಿ, ನಿಮಿರ್ಕೆವೆ
ತ್ತು- ಉದ್ದವಾಗಿ, ಆತಪಸ್ವಿಯ, ಕರಪಲ್ಲವಂ- ಚಿಗುರಿನೋಪಾದಿಯಲ್ಲಿರುವ ಕೈಯು, ಎಸೆದುದು. ॥೪೬॥

ಕಂ ॥ ದಸರವಿಭು ಭಕ್ತಿಚೈತ್ರಂ । ಪಸರಿಸೆ ಸೋಂಕಿಂದೆ ಜಂಗಮಸ್ಥಾಣು ಪಲಂ ॥
ಪೊಸರೆ ತಳಿರ್ತವೊಲೆಸೆಂಕಂ । ಗಸೆದುದೊ ಲಸದರುಣಪಾಣಿಪಲ್ಲವಯುಗಳಂ ॥ ॥೬೩॥

ವ॥ ಮತ್ತಮಾದಯಾರಸನಿಧಿಯ ಶಾಂತಿರಸಕಾಸಾರದೊಳುತ್ಪಲರ್ದ ಕೆಂದಾವರೆಗಳಂತೆಯುಮಾಭಕ್ತಿಸರೋನಿಧಿಯಭಕ್ತಿಭಾಮಿನೀಕರಾವತಂಸಂಗೈದು ತಳೆದಚೆಂದಳಿರ್ಗಳಂತೆಯುಮಳವಿಗಳಿದ ಸೌಂದರ್ಯಮನೊಳಕೊಂಡು ತಳತಳಿಸಿ ಪೊಳೆವ ಬಳ್ವೆಳಗಿಂ ಪಗಿಲ್ತ ಚೆಳ್ಳುಗುರ್ಗಳೆಂಬ ತರಳತಾರಗೆಗಳ್ಗೆಸಂಧ್ಯಾರಾಗರುಚಿಯಂ ಪೂರ್ಯಿಪನೊಂಪಡರ್ದ ಕೆಂಪಂ ತಳೆದು ತೆರಂಬೊಳೆವ ಭಸಿತಾನುಲಿಪ್ತದೀರ್ಘಬಾಹುಮೃಣಾಳದಗ್ರದೊಳೆಮರ್ದರುಣಸರಸಿರುಹಮೆನಿಸಿ ತತ್ಕರಂಗಳ್ಕರಮೆಸೆದಿರ್ದುವಂತುಮಲ್ಲದೆಯುಂ ॥ * * * *

ಕಂ ॥ ಇರುಳಂತಿರೆ ನಖಮಣಿವಿ । ಸ್ಫುರಿತಂ ಪಗಲಂತಿರರುಣರುಚಿಶೋಭಿ ಸುಧಾ ॥

---

ದಸರವಿಭುಭಕ್ತಿಚೈತ್ರಂ-ದಸರದೇವನ ಭಕ್ತಿಯೆಂಬ ವಸಂತಕಾಲವು, ಪಸರಿಸೆ, ಸೋಂಕಿಂದೆ-ಸ್ಪರ್ಶನದಿಂದ, ಜಂಗಮಸ್ಥಾಣು- ಜಂಗಮವೆಂಬ ಮೋಟುಮರವು, ಅಲಂಪು- ಆಧಿಕ್ಯವು, ಒಸರೆ-ಉಚ್ಚಾಗಲಾಗಿ, ತಳಿರ್ತವೊಲ್- ಚಿಗುರಿದಹಾಗೆ, ಲಸದರುಣಪಾಣಿಪಲ್ಲವಯುಗಲಂ— ಲಸತ್- ಪ್ರಕಾಶಮಾನವಾದ, ಅರುಣ- ಕೆಂಪಾದ, ಪಾಣಿಪಲ್ಲವ- ಚಿಗುರಿನೋಪಾದಿಯಲ್ಲಿರುವಕೆಯ್ಯ, ಯುಗಲಂ- ಯುಗ್ಮವು, ಕಣ್ಗೆ, ಎಂ ಎಸೆದುದೊ. ... ... ... ... ... ... ॥೬೩॥

ಮತ್ತಂ, ತತ್ಕರಂಗಳ್- ಆ ಹಸ್ತಗಳು, ಆ ದಯಾರಸನಿಧಿಯ- ಕೃಪಾರಸಕ್ಕೆ ನಿಕ್ಷೇಪಸ್ವರೂಪನಾದ ಆ ದಸರಯ್ಯನ, ಶಾಂತಿರಸಕಾಸಾರದೊಳ್- ಶಾಂತಿರಸವೆಂಬ ಸರೋವರದಲ್ಲಿ, ಉತ್ಪಲರ್ದ- ಚೆನ್ನಾಗಿ ಅರಳಿದ, ಕೆಂದಾವರೆಗಳಂತೆಯುಂ- ಕೆಂಪುತಾವರೆಗಳಹಾಗೂ, ಆ ಭಕ್ತಿಸರೋನಿಧಿಯ- ಆಭಕ್ತಿಗೆ ಸಮುದ್ರನಾದ ದಸರನ, ಭಕ್ತಿಭಾಮಿನೀಕರಾವತಂಸಂಗೈದು— ಭಕ್ತಿಭಾಮಿನೀ- ಭಕ್ತಿಯೆಂಬ ಸ್ತ್ರೀಯು, ಕರ- ಹಸ್ತಕ್ಕೆ, ಅವತಂಸಂಗೈದು- ಆಭರಣವನ್ನಾಗಿಮಾಡಿ, ತಳೆದ- ಧರಿಸಿದ, ಚೆಂದಳಿರ್ಗಳಂತೆಯುಂ- ಕೆಂಪಾದ ಚಿಗುರುಗಳಹಾಗೂ,ಅಳವಿಗಳಿದ ಗಣನಾತೀತವಾದ, ಸೌಂದರ್ಯಮಂ, ಒಳಕೊಂಡು, ತಳತಳಿಸಿ, ಪೊಳೆವ, ಬಳ್ವೆಳಗಿಂ- ಬಳ್ಳಿಯಹಾಗಿರುವ ಕಾಂತಿಯಿಂದ, ಪಗಿಲ್ತ- ಹಬ್ಬಿದ, ಚೆಳ್ಳುಗುರ್ಗಳ್- ಸಣ್ಣಉಗುರುಗಳು, ಎಂಬ, ತರಳತಾರಗೆಗಳ್ಗೆ- ಚಂಚಲವಾದ ನಕ್ಷತ್ರಗಳಿಗೆ, ಸಂಧ್ಯಾರಾಗರುಚಿಯಂ- ಸಂಧ್ಯಾಕಾಲದ ಕೆಂಪಿನಕಾಂತಿಯನ್ನು, ಪೂರ್ಯಿಪ- ಪರಿಪೂರ್ತಿಮಾಡುವ, ಒಂಪು- ಸೊಗಸು, ಅಡರ್ದ- ಹೊಂದಿದ,ಕೆಂಪಂ- ಆರುಣ್ಯವನ್ನು, ತಳೆದು- ಧರಿಸಿ, ತೆರಂಬೊಳೆವ- ಪ್ರಕಾಶಿಸುವ, ಭಸಿತಾನುಲಿಪ್ತದೀರ್ಘಬಾಹುಮೃಣಾಳದ— ಭಸಿತ- ವಿಭೂತಿಯಿಂದ, ಅನುಲಿಪ್ತ-ಲೇಪಿಸಲ್ಪಟ್ಟ, ದೀರ್ಘಬಾಹು- ಉದ್ದವಾದ ಭುಜವೆಂಬ, ಮೃಣಾಳದ- ತಾವರೆದಂಟಿನ, ಅಗ್ರದೊಳ್- ಕೊನೆಯಲ್ಲಿ, ಅಮರ್ದ, ಅರುಣಸರಸಿರುಹ- ಕೆಂದಾವರೆಯು, ಎನಿಸಿ, ಕರಂ, ಎಸೆದು, ಇರ್ದುವು, ಅಂತುಂ, ಅಲ್ಲದೆಯುಂ. * * * * * * * * * * * * * *

ಆಕರಂ- ಆಹಸ್ತವು, ಇರುಳಂತಿರೆ- ರಾತ್ರಿಯಹಾಗೆ, ( ರಾತ್ರಿ ) ನಖಮಣಿವಿಸ್ಫುರಿತಂ— ಸೂರ್ಯನಿಂದ, ಪ್ರಕಾಶಿಸದೇ ಇರುವದು; ( ಕರ ) ನಖಮಣಿ-ರತ್ನಸದೃಶಗಳಾದ ಉಗುರುಗಳಿಂದ, ವಿಸ್ಫುರಿತಂ; ಪಗಲಂತಿರೆ, ಹಗಲಿನಹಾಗೆ, ( ಹಗಲ್ ) ಅರುಣರುಚಿಶೋಭಿ— ಅರುಣ- ಸೂರ್ಯನ, ರುಚಿ- ಕಾಂತಿಯಿಂದ, ಶೋಭಿ- ಪ್ರಕಾಶಿಸುವದು; ( ಕರ ) ಅರುಣ- ಕೆಂಪಾದ, ರುಚಿ- ಕಾಂತಿಯಿಂದ, ಶೋಭಿ- ಪ್ರಕಾಶಮಾನವಾದದ್ದು; ( ಕರ ) ಅರುಣ- ಕೆಂಪಾದ, ರುಚಿ- ಕಾಂತಿಯಿಂದ, ಶೋಭಿ; ಸುಧಾಕರನಂತೆ- ಚಂದ್ರನಹಾಗೆ, ( ಸುಧಾಕರ ) ಪರ್ವಶೋಭಾಕರಂ— ಪರ್ವ- ಹುಣ್ಣಿಮೆಯ ಕಾಲಗಳಲ್ಲಿ, ಶೋಭಾ- ಕಾಂತಿಗೆ, ಆಕರಂ- ಆಸ್ಪದನಾದವನು; ( ಕರ ) ಪರ್ವ- ಗಿಣ್ಣುಗಳ, ಶೋಭಾ- ಕಾಂತಿಗೆ, ಆಕರಂ- ಆಸ್ಪದವಾದದ್ದು;

ಕರನುತೆ ಪರ್ವ್ವಶೋಭಾ । ಕರ ಮಾಕರ ಮಭ್ರದಂತೆ ಲೇಖಾಧಾರಂ ॥ ... ॥೪೭॥

ಮ॥ ಅದು ಪಂಚಾಕ್ಷರದಂತೆವೊಲ್ ಪ್ರಣವವರ್ಣ್ನಪ್ರಾಂಚಿತಂ ಭಸ್ಮದಂ । ತುದಿತಶ್ರೀ ಕರಲಕ್ಷಣಪ್ರಕಟಿತಂರುದ್ರಾಕ್ಷಿಯಂತಿಷ್ಟಸಂ ॥ ಪದದಾನೋತ್ತಮಭೂಷಣಂ ಗಿರಿಶನೆಂತಂ ತಬ್ಜರೇಖಾಶ್ರಿತಂ । ಮದನಾರಾತಿಯಭಕ್ತನಂತೆಸತತಾಶೋಕೋರುರಾಗೋರ್ಜ್ಜಿತಂ ॥೪೮॥

ವ ॥ ಮತ್ತಮಾಕರಂ ತಾಪಸತಪೋವೃತ್ತಿಯಂತೆ ಸಕಲಪುರುಷಾರ್ತ್ಥಪ್ರದಮುಂ ಶಿವದೀಕ್ಷೆಯಂತೆ ಪೂರ್ವ್ವವರ್ಣ್ನನಿವಾರಕಮುಂ ಹರವರಾಭಯಕರದಂತೆ ಸುಪರ್ವ್ವಶೋಭಾವಹಮುಂ ವೇದಾಜಿವರ್ಣ್ನದಂತೆ ಕಳಾವಿರ್ಭಾವಕರಮುಂ ಶಿವಯೋಗಿಗಣದಂತಾತ್ಮಲಿಂಗೋಚಿತಕರಣಮುಂ ಪಾಶುಪತಾಸ್ತ್ರದಂತೆ ಗುರುಶಿಷ್ಯಸಮೀಹಿತಪ್ರದಮುಂ ಕರ್ಣ್ನಸ್ವದೇವನ

---

ಅಭ್ರದಂತೆ- ಆಕಾಶದಹಾಗೆ, (ಆಕಾಶ) ಲೇಖಾಧಾರಂ— ಲೇಖ- ದೇವತೆಗಳಿಗೆ, ಆಧಾರಂ- ಆಶ್ರಯವಾದದ್ದು, (ಕರ) ಲೇಖ- ರೇಖೆಗಳಿಗೆ, ಆಧಾರಂ- ಆಶ್ರಯವಾದದ್ದು. ... ... ॥೪೭॥

ಅದು- ಆ ಹಸ್ತವು, ಪಂಚಾಕ್ಷರದಂತೆವೊಲ್- ಪಂಚಾಕ್ಷರದಹಾಗೆ, (ಪಂಚಾಕ್ಷರ) ಪ್ರಣವವರ್ಣಪ್ರಾಂಚಿತಂ— ಪ್ರಣವವರ್ಣ- ಓಂಕಾರದಿಂದ, ಪ್ರಾಂಚಿತಂ ಪೂಜ್ಯವಾದದ್ದು; (ಕರ) ಪ್ರಣವ- ಪ್ರಕೃಷ್ಟವಾಗಿಯೂ ನೂತನವಾಗಿಯೂ ಇರುವ, ವರ್ಣ- ಬಣ್ಣದಿಂದ, ಪ್ರಾಂಚಿತಂ- ಪೂಜ್ಯವಾದದ್ದು; ಭಸ್ಮದಂತೆ, (ಭಸ್ಮ) ಉದಿತಶ್ರೀಕರಲಕ್ಷಣಪ್ರಕಟಿತಂ— ಉದಿತ- ಉತ್ಪನ್ನವಾದ, ಶ್ರೀ- ಮೋಕ್ಷಸಂಪತ್ತನ್ನು, ಕರ- ಉಂಟುಮಾಡುವ, ಲಕ್ಷಣ-ಚಿಹ್ನದಿಂದ, ಪ್ರಕಟಿತಂ- ಪ್ರಸಿದ್ಧವಾದದ್ದು; (ಕರ) ಉದಿತ- ಉತ್ಪನ್ನವಾದ, ಶ್ರೀ- ಅಷ್ಟೈಶ್ವರ್ಯವನ್ನು, ಕರ- ಉಂಟುಮಾಡುವ, ಲಕ್ಷಣ- ಧನರೇಖೆಮೊದಲಾದ ಚಿಹ್ನಗಳಿಂದ, ಪ್ರಕಟಿತಂ- ಪ್ರಸಿದ್ಧವಾದದ್ದು; ರುದ್ರಾಕ್ಷಿಯಂತೆ, (ರುದ್ರಾಕ್ಷಿ) ಇಷ್ಟಸಂಪದದಾನೋತ್ತಮ ಭೂಷಣಂ— ಇಷ್ಟ- ಇಚ್ಛೈಸಿದ, ಸಂಪದ- ಸಂಪತ್ತನ್ನು, ದಾನ- ಕೊಡುವದರಿಂದ, ಉತ್ತಮಭೂಷಣಂ- ಶ್ರೇಷ್ಠವಾದ ಆಭರಣವು; (ಕರ) ಇಷ್ಟ- ಇಷ್ಟವಾದ, ಸಂಪದ-ಸಂಪತ್ತನ್ನು, ದಾನ- ಕೊಡುವಿಕೆಯೇ, ಉತ್ತಮಭೂಷಣಂ-ಉತ್ಕೃಷ್ಟವಾದ ಆಭರಣವಾಗುಳ್ಳದ್ದು; ಗಿರಿಶಂ- ಶಿವನು, ಎಂತು- ಹ್ಯಾಗೋ, ಅಂತೆ, (ಗಿರಿಶ) ಅಬ್ಜರೇಖಾಶ್ರಿತಂ—ಅಬ್ಜ- ಚಂದ್ರನ, ರೇಖಾ- ಕಲೆಯಿಂದ, ಆಶ್ರಿತಂ- ಆಶ್ರೈಸಲ್ಪಟ್ಟವನು; (ಕರ)ಅಬ್ಜ- ಶಂಖದ, ರೇಖಾ- ಗೆರೆಯಿಂದ, ಆಶ್ರಿತಂ- ಆಶ್ರಯಿಸಲ್ಪಟ್ಟದ್ದು; ಮದನಾರಾತಿಯ- ಪರಶಿವನ,ಭಕ್ತನಂತೆ, (ಭಕ್ತ) ಸತತಾಶೋಕೋರುರಾಗೋರ್ಜಿತಂ— ಸತತ- ನಿರಂತರದಲ್ಲೂ, ಅಶೋಕ- ಶೋಕರುವಾಗ- ದುಃಖವೇನು ಹೆಚ್ಚಾದ ವಿಷಯಾಭಿಲಾಷೆಯೇನು ಇವುಗಳಿಲ್ಲದುದರಿಂದ, ಊರ್ಜಿತಂ- ಪ್ರಬಲನಾದವನು, (ಕರ) ಸತತ- ನಿರಂತರದಲ್ಲು, ಅಶೋಕ- ಅಶೋಕವೃಕ್ಷದಹಾಗೆ, ಉರು- ಅಧಿಕವಾದ, ರಾಗ-ಕೆಂಪಿನಿಂದ, ಊರ್ಜಿತಂ-ತೇಜಸ್ವಿಯಾದದ್ದು. ... ... ॥೪೮॥

ಮತ್ತಂ, ಆಕರಂ, ತಾಪಸತಪೋವೃತ್ತಿಯಂತೆ- ಋಷಿಗಳ ತಪೋ ವ್ಯಾಪಾರದ ಹಾಗೆ, (ತಾಪಸತಪೋವೃತ್ತಿ) ಸಕಲಪುರುಷಾರ್ಥಪ್ರದಂ— ಸಕಲ- ಸಮಸ್ತರಿಗೂ, ಪುರುಷಾರ್ಥ- ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ಚತುರ್ವಿಧಫಲಗಳನ್ನು, ಪ್ರದಂ- ಕೊಡತಕ್ಕದ್ದು; (ಕರ) ಸಕಲಪುರುಷ- ಸಮಸ್ತಮನುಷ್ಯರಿಗೂ, ಅರ್ಥ- ದ್ರವ್ಯವನ್ನು, ಪ್ರದಂ- ಕೊಡತಕ್ಕದ್ದು; ಶಿವದೀಕ್ಷೆಯಂತೆ, (ಶಿವದೀಕ್ಷೆ) ಪೂರ್ವವರ್ಣನಿವಾರಕಮುಂ— ಪೂರ್ವ- ಮೊದಲಿನ, ವರ್ಣ- ಜಾತಿಯನ್ನು, ನಿವಾರಕಮುಂ- ಹೋಗಲಾಡಿಸತಕ್ಕದ್ದು; (ಕರ) ಪೂರ್ವ- ಮೊದಲಿನ, ವರ್ಣ- ಬಣ್ಣವನ್ನು, ನಿವಾರಕಮುಂ- ಹೋಗಲಾಡಿಸತಕ್ಕದ್ದು; ಹರವರಾಭಯಕರದಂತೆ— ಹರ- ಶಿವನ, ವರಾಭಯಕರದಂತೆ- ವರವೇನು ಅಭಯವೇನು ಇವುಗಳುಳ್ಳ ಹಸ್ತದ

ಪಾದುಕೆಯಂತೆ ಶಿವೋತ್ತಮಾಂಗಸಮುಸ್ಪರ್ಶಿಯುಂ ಶಿವನಾಗದೇವನ ಕರಾಬ್ಜದಂತೆ ಪರಮಾಮೃತ ಪ್ರದಾನಮುಹಿತಮುಮೆನಿಸಿ॥ * * * * * * * * * *

ಕಂ ॥ ಕರ ಮೆರಡು ಮಿಂತು ರಾಜಿಸು । ತಿರೆ ಕೊರಲ ಲಾಬರಿಯ ಸಜ್ಜೆ ಲಿಂಗಮ ನಾಳ್ದೊ ॥ ಪ್ಪಿರೆ ಚರವೇಷ ಮದಳವ । ಟ್ಟಿರೆ ತನಗಾ ಮಲ್ಲಿದೇವ ನೀಕ್ಷಿಸು ತಾಗಳ್ ॥೫೦॥

ಚಂ ॥ಬಗೆಬೆದರುತ್ತೆ ಸಂತಸಮ ನಾನುತೆ ಪೋಡುತೆ ತನ್ನ ಚಾರುಪಾ । ಣಿಗಳ ನರಲ್ದೊದರಲ್ದು ಪೊಸಸಜ್ಜೆಯ ಲಿಂಗಮ ನುಂಟ ವೇಳೆವೇ ॥ ಳೆಗೆ ಬಗೆ ದೀಕ್ಷಿಸುತ್ತೆ ದಸರಯ್ಯನ ನಿಟ್ಟಿಸು ತಲ್ಲಿ ಲಜ್ಜೆಯಿಂ । ಮಿಗೆ ತಲೆವಾಗಿ ಮಲ್ಲಿವಿಭು ವಂಗುಟದಿಂ ಬರೆಯುತ್ತೆ ಧಾತ್ರಿಯಂ ॥ ... ... ... ... ... ... ॥೫೧॥

ಕಂ ॥ ಮು ನ್ನೆಗಳ್ದ ತನ್ನತಪ್ಪುಗ । ಳಂ ನೆನೆಯುತೆ ದಸರ ನಮಲಶಮದಮಗುಣಸಂ ॥ ಪನ್ನತೆಯಂ ಬಗೆಯುತೆ ಮಹಿ । ಮೋನ್ನತಿಯಂ ಭಾವಿಸುತ್ತೆ ತಾಪಸ ನಿರ್ದಂ ॥

ಕಂ ॥ ದಸರಯ್ಯಂ ತಚ್ಚರಪದ । ಬಿಸಜಕೆ ಪೊಡಮಡುತೆ ಮತ್ತ ಮೊತ್ತುತೆ ಕರಸಾ ॥ ರಸಮಂ ಚಿಟುಂಕಿಸುತೆ ಸ । ಲ್ಲಸಿತಾಂಗುಲಿಯಂ ಕಡಂಗು ತೊಪ್ಪಿರೆ ಕೆಲದೊಳ್ ॥ ... ... ... ... ... ... ॥೫೩॥

ಕಂ ॥ ಕರುಣಾರಸಭರಿತೇಕ್ಷಣ । ಶರಣರ್ ನಡೆ ನೋಡಿ ಪುಳಕಮಂ ತಾಳ್ದು ಕಳೇ॥ ವರದೊಳಿದು ಲೇಸು ಲೇಸು। ಇರದಾನಂದಿಸುತೆ ದಸರನಂ ಕೀರ್ತಿಸಿದರ್॥ ... ॥೫೪॥

---

ಎರಡುಂಕರಂ, ಇಂತು, ರಾಜಿಸುತೆ, ಇರೆ, ಕೊರಲ- ಕತ್ತಿನ, ಆಬರಿಯಸಜ್ಜೆ- ಆ ಬರಿಯಕರಡಿಗೆಯು, ಲಿಂಗಮುಂ, ಆಳ್ದು, ಒಪ್ಪಿ, ಇರೆ, ತನಗೆ, ಅದು, ಚರವೇಷಂ, ಅಳವಟ್ಟು, ಇರೆ, ಆಗಳ್, ಮಲ್ಲಿದೇವಂ, ಈಕ್ಷಿಸುತೆ. ... ... ... ... ... ॥೫೦॥

ಬಗೆ- ಮನಸ್ಸು, ಬೆದರುತ್ತೆ, ಸಂತಸವಂ, ಆನುತೆ- ಹೊಂದುತ್ತ, ತನ್ನ, ಚಾರುಪಾಣಿಗಳಂ, ನೋಡುತೆ, ಅರಲ್ದು- ಉಬ್ಬಿ, ಪೊಸಸಜ್ಜೆಯ, ಲಿಂಗಮಂ, ಉಂಟಿ- ಮುಟ್ಟಿ, ಒರಲ್ದು- ಪ್ರೀತಿಸಿ, ವೇಳೆವೇಳೆಗೆ, ಬಗೆದು- ಇಷ್ಟಪಟ್ಟು, ಈಕ್ಷಿಸುತ್ತೆ, ದಸರಯ್ಯನ, ನಿಟ್ಟಿಸುತೆ- ನೋಡುತ್ತ, ಅಲ್ಲಿ, ಲಜ್ಜೆಯಿಂ- ನಾಚಿಕೆಯಿಂದ, ಮಿಗೆ, ಮಲ್ಲಿವಿಭು- ಮೋಟಮಲ್ಲದೇವನು, ತಲೆವಾಗಿ, ಅಂಗುಟದಿಂ- ಕಾಲಿನ ಹೆಬ್ಬೆರಳಿನಿಂದ, ಧಾತ್ರಿಯಂ, ಬರೆಯುತ್ತೆ. ... ... ... ... ... ॥೫೧॥

ತಾಪಸಂ, ಮುನ್ನೆಗಳ್ದ, ತನ್ನ, ತಪ್ಪುಗಳಂ, ನೆನೆಯುತೆ, ದಸರನ, ಅಮಲಶಮದಮಗುಣಸಂಪನ್ನತೆಯಂ, ಬಗೆಯುತೆ, ಮಹಿಮೋನ್ನತಿಯಂ ಮಹತ್ವದ ಆಧಿಕ್ಯವನ್ನು, ಭಾವಿಸುತ್ತೆ- ಯೋಚಿಸುತ್ತ, ಇರ್ದಂ. ... ... ... ... ... ... ॥೫೨॥

ದಸರಯ್ಯಂ, ತಚ್ಚರಪದಬಿಸಜಕೆ- ಆ ಜಂಗಮನ ಪಾದಕಮಲಕ್ಕೆ, ಪೊಡಮಡುತೆ, ಮತ್ತಂ, ಕರಸಾರಸಮಂ- ಹಸ್ತಕಮಲವನ್ನು, ಒತ್ತುತೆ, ಸಲ್ಲಸಿತಾಂಗುಲಿಯಂ- ಒಳ್ಳೆಯ ಪ್ರಕಾಶಮಾನವಾದ ಬೆರಲನ್ನು, ಚಿಟುಂಕಿಸುತೆ- ಚಿಟುಕಿಹಾಕುತ್ತ, ಕಡಂಗುತೆ- ಔತ್ಸುಕ್ಯಪಡುತ್ತ, ಒಪ್ಪಿ, ಇರೆ, ಕೆಲದೊಳ್- ಪಾರ್ಶ್ವದಲ್ಲಿ. ... ... ... ... ... ... ॥೫೩॥

ಕರುಣಾರಸಭರಿತೇಕ್ಷಣಶರಣರ್- ಕೃಪಾರಸದಿಂದ ಪರಿಪೂರ್ಣವಾದ ದೃಷ್ಟಿಯುಳ್ಳ ಶರಣರು, ನಡೆ, ನೋಡಿ, ಕಳೇವರದೊಳ್- ಶರೀರದಲ್ಲಿ, ಪುಳಕಮಂ- ರೋಮಾಂಚವನ್ನು, ತಾಳ್ದು, ಇದು, ಲೇಸು, ಲೇಸು ಎಂದು, ಇರದೆ, ಆನಂದಿಸುತೆ, ದಸರನಂ, ಕೀರ್ತಿಸಿದರ್. ॥೫೪॥

ಚಂ ॥ ನಿರುಪಮಶಾಂತ ನಿರ್ಜಿತಲತಾಂತಕಲಂಬ ಕಲಾನಿಶಾಂತ ಶಾಂ | ಕರಮತಪಾ
ರಿಜಾತ ಶಮಿತೇಂದ್ರಿಯಜಾತ ಸದಾಭಿಜಾತ ಬಂ ॥ ಧುರಗುಣಭೂಷ ಭಕ್ತಹಿತಭಾಷ ಭ
ವಾಮಯಭೇಷಜಾಂಘ್ರಿಪಂ | ಕರುಹ ಕೃಪಾಕಟಾಕ್ಷ ಸಚರಾಚರರಕ್ಷಣಸದ್ವಿಚಕ್ಷಣ ॥

ಕಂ॥ ಶಮದಮಯಮನಿಯಮಮಹಿತ | ಹಿಮಕರಧರಶರಣಚರಣಸರಸಿರುಹಮದ॥
ಭ್ರಮರ ಮೃದುಮಧುರಗಂಭೀ | ರಮನೋಹರವಚನವಿಸರ ದಸರ ದಯಾಬ್ಧಿ ॥೫೬॥

ಕಂ॥ ಭವದೀಯಮಸ್ತಕದೊಳು | ದ್ಭವಿಸಿದುದು ಮಹೇಶಭಕ್ತಿ ಭಾವಿಸೆ ಭಕ್ತೋ॥
ತ್ಸವಕರನಿನ್ನಚರಿತ್ರಂ | ನವಕ ಮಿದಂ ಬಣ್ಣಿಸಲ್ಕೆ ಬಲ್ಲರು ಮೊಳರೆ ॥ ॥೫೭॥

ಮ ॥ ಸ್ರ॥ ಅವಿನೀತಂ ಲಿಂಗಬಾಹ್ಯಂ ಕರವಿರಹಿತ ನೇಳ್ತಂದು ಮಾಯಾವಿ ಮಿ
ಥ್ಯಾ | ಶಿವಚಿಹ್ನಂಬೆತ್ತು ಕಾಯ್ಪಿಂ ಬಡಿಯೆ ಶಿರಮ ನಲ್ಲಾಡದಾತಂಗೆ ಪೂರ್ಣೋ ॥ ತ್ಸವ
ದಿಂ ಕೈಯೀಯುತಂ ಸಜ್ಜಿಕೆಯ ನಮಲಲಿಂಗಾನ್ವಿತಂಗೆ ಯ್ದಣಂ ಶಾಂ | ಭವರೂಪಂ ಸಾ
ನ್ನಿಧ್ಯೈ ನಿನ್ನಯ ಬಗೆಪೊಸತೀಧಾತ್ರಿಯೊಳ್ಭಕ್ತವರ್ಯ ॥ .. ... ॥೫೮॥

---

ನಿರುಪಮಶಾಂತ- ಉಪಮಾನರಹಿತವಾದ ಶಾಂತಿಯುಳ್ಳ, ನಿರ್ಜಿತಲತಾಂತಕಲಂಬ— ನಿರ್ಜಿತ- ಜೈಸಲ್ಪಟ್ಟ, ಲತಾಂತಕಲಂಬ- ಮನ್ಮಥನುಳ್ಳ, ಕಲಾನಿಶಾಂತ- ವಿದ್ಯೆಗಳಿಗೆ ಮಂದಿರನಾದ, ಶಾಂಕರಮತಪಾರಿಜಾತ- ಶಿವಮತಕ್ಕೆ ಕಲ್ಪವೃಕ್ಷನಾದ, ಶಮಿತೇಂದ್ರಿಯಜಾತ— ಶಮಿತ- ಶಾಂತಿಹೊಂದಿಸಲ್ಪಟ್ಟ, ಇಂದ್ರಿಯ- ಇಂದ್ರಿಯಗಳ, ಜಾತ- ಸಮೂಹವುಳ್ಳ, ಸದಾಭಿಜಾತಬಂಧುರ— ಸದಾ- ಸರ್ವಕಾಲದಲ್ಲೂ, ಅಭಿಜಾತ- ಸತ್ಕುಲಪ್ರಸೂತರಿಂದ, ಬಂಧುರ- ಮನೋಹರನಾದ, ಗುಣಭೂಷ, ಭಕ್ತಹಿತಭಾಷ- ಭಕ್ತರಿಗೆ ಹಿತಕರವಾದ ಮಾತುಳ್ಳ, ಭವಾಮಯಭೇಷಜಾಂಘ್ರಿಪಂಕರುಹ— ಭವ- ಜನನಮರಣಾತ್ಮಕವಾದ ಸಂಸಾರವೆಂಬ, ಆಮಯ- ರೋಗಕ್ಕೆ, ಭೇಷಜ- ಔಷಧಿಯಾದ, ಅಂಘ್ರಿಪಂಕರುಹ- ಪಾದಕಮಲವುಳ್ಳ, ಕೃಪಾಕಟಾಕ್ಷ, ಸಚರಾಚರರಕ್ಷಣಸದ್ವಿಚಕ್ಷಣ- ಸ್ಥಾವರಜಂಗಮಗಳನ್ನು ರಕ್ಷಿಸುವದರಲ್ಲಿ ಕುಶಲನಾದ. ॥೫೫॥

ಶಮದಮಯಮನಿಯಮಮಹಿತ— ಶಮ- ಶಾಂತಿ, ದಮ- ಇಂದ್ರಿಯನಿಗ್ರಹ, ಯಮ, ನಿಯಮ, ಎಂಬ ಯೋಗಗಳಿಂದ ಪೂಜ್ಯನಾದ, ಹಿಮಕರಧರಶರಣಚರಣಸರಸಿರುಹಮದಭ್ರಮರ— ಹಿಮಕರಧರಶರಣ- ಶಿವಶರಣರ, ಚರಣ- ಪಾದವೆಂಬ, ಸರಸಿರುಹ- ಕಮಲಕ್ಕೆ, ಮದಭ್ರಮರ- ಮಹಿಸಿದಭ್ರಮರನಾದ, ಮೃದುಮಧುರಗಂಭೀರಮನೋಹರವಚನವಿಸರ— ಮೃದು- ಕೋಮಲವಾದ, ಮಧುರ- ಇಂಪಾದ, ಗಂಭೀರ- ಗಾಂಭೀರ್ಯವಿಂಕೂಡಿದ, ಮನೋಹರ- ಇತರರ ಮನಸ್ಸನ್ನಾಕರ್ಷಿಸುವ, ವಚನ- ವಾಕ್ಯಗಳ, ವಿಸರ- ಸಮುದಾಯವುಳ್ಳ, ದಯಾಬ್ಧಿ, ದಸರ ! ... ... ... ... ॥೫೬॥

ಭಕ್ತೋತ್ಸವಕರ ! ಭಾವಿಸೆ, ಭವದೀಯಮಸ್ತಕದೊಳ್- ನಿನ್ನ ತಲೆಯಲ್ಲಿ, ಮಹೇಶಭಕ್ತಿ, ಉದ್ಭವಿಸಿದುದು; ನಿನ್ನ, ಚರಿತ್ರಂ, ನವಕಂ- ನೂತನವು, ಇದಂ, ಬಣ್ಣಿಸಲ್ಕೆ, ಬಲ್ಲರುಂ, ಒಳರೆ ? ॥೫೭॥

ಭಕ್ತವರ್ಯ ! ಅವಿನೀತಂ- ನೀತಿರಹಿತನಾದ, ಲಿಂಗಬಾಹ್ಯಂ- ಭವಿಯಾದ, ಕರವಿರಹಿತಂ- ಹಸ್ತವಿಲ್ಲದ, ಮಾಯಾವಿ- ಕಪಟಿಯು, ಮಿಥ್ಯಾಶಿವಚಿಹ್ನಂಬೆತ್ತು- ಸುಳ್ಳಾದ ಶಿವಲಾಂಛನವಂ ಧರಿಸಿ, ಏಳ್ತಂದು, ಕಾಯ್ಪಿಂ- ಕೋಪದಿಂದ, ಶಿರಮಂ, ಬಡಿಯೆ, ಅಲ್ಲಾಡದೆ, ಆತಂಗೆ, ಪೂರ್ಣೋತ್ಸವದಿಂ, ಕೈಯೀಯುತಂ- ಕೈಯನ್ನು ಕೊಡುತ್ತ, ಸಜ್ಜಿಕೆಯಂ- ಕರಡಿಗೆಯನ್ನು, ಅಮಲಲಿಂಗಾನ್ವಿತಂಗೆಯ್ದು- ನಿರ್ಮಲವಾದ ಲಿಂಗದಿಂದ ಕೂಡಿಕೊಂಡಿರುವದನ್ನಾಗಿಮಾಡಿ, ಅಣಂ- ಅಧಿಕವಾಗಿ, ಶಾಂಭವರೂಪಂ- ಶಿವಸಂಬಂಧವಾದ ಸ್ವರೂಪವನ್ನು, ಸಾನ್ನಿಧ್ಯೈ- ಉಂಟುಮಾಡಿದೆ; ಈ ಧಾತ್ರಿಯೊಳ್, ನಿನ್ನಯ, ಬಗೆ- ರೀತಿಯು, ಪೊಸತು

ಚಂ ‖ ಕೃತಕತಪಸ್ವಿಯೆಂದು ತಿಳಿದುಂ ಶಿವಲಾಂಛನಮಂ ನಿರೀಕ್ಷಿಸು । ತ್ತತಿಶಯಭಕ್ತಿಯಿಂದೆರಗೆ ತಪ್ಪನಿತಿಲ್ಲದೆ ಕೂಸುಗೈಗಳಿಂ ‖ ಗತದಯ ನಾರ್ವಿನಿಂ ಬಡಿಯೆ ನೆತ್ತಿಯ ನೆತ್ತರ ಧಾರೆ ಸೋರ್ವಿನಂ । ಸಿತಮತಿ ನೋಯದಾತನ ಕರಂ ಕಡುನೊಂದುದೆನುತ್ತೆ ಸುರ್ಕಿದೈ ‖ ... ... ... ... ... ... ‖೪೯‖

ಕಂ ‖ ಶಾಂತಾಗ್ರಗಣ್ಯ ನಿನ್ನಯ । ಶಾಂತಿಪ್ರಭೆಗೆಯ್ದೆ ಸೋಲ್ತು ಶಶಿಯುಂ ಗಂಗಾ ‖ ಕಾಂತೆಯುಮಾಶಿವನ ಜಟಾ । ಕಾಂತಾರಮನೊಡನೆ ಪೊಕ್ಕು ಮೈಗರೆದಿರ್ಪರ್ ‖ ‖೫೦

ಉ ‖ ಅಂದು ವೃಷೇಂದ್ರನಾತ್ಮಗೃಹಕೆಯ್ದಿದ ಚೋರರ ನೊಲ್ದು ನೋಡಿ ನಣ್ಪಿಂದವ ನಾಂತನುಣ್ಬದನೆಗಾಯ್ಗಳಲಿಂಗಮ ನೊಲ್ದು ಮಾಡುತೊ ‖ ಳ್ಪಿಂದೆ ಚರಾಂಗರಂ ನೆಗಳ್ದ ನಿಂದುಕರಂಗಳ ನಿತ್ತು ಸಜ್ಜೆಯೊ । ಳ್ಸಂದಿರೆ ಲಿಂಗಮಂ ನೆಗಳ್ದೆ ಧೂರ್ತತಪಸ್ವಿಗೆ ಜಂಗಮತ್ವಮಂ ‖ ... ... ... ... ... ‖೫೧‖

ವ ‖ ಎಂದು ಕೂರ್ಮೆಯಿಂ ಕೊಂಡಾಡಿ ಮೋಟಕರತಾಡಿತತದುತ್ತಮಾಂಗಮನವಲೋಕಿಪಾಗಳೋರೊಂದೆಡೆಯೊಳೊಡೆದು ಸಾಂಖ್ಯನಾಥನ ಬಿರುಗಲ್ಲ ಹತಿಯಿಂದೊಡೆದ ಶಿವಶಿರದಂತೆಯುಂ ಪೆರತೊಂದು ತಾಣದೊಳ್ಬುಗುಟಿವೆತ್ತು ಪಿಟ್ಟವ್ವೆಯ ಭಕ್ತಿನಿಮಿತ್ತಂ ಚೋಳಂಗೆ ಮೃತ್ತಿಕಾಭಾರಮಂ ಪೊರಲೊಡನೆ ಬುಗುಟಿವೋಗಿದ ಮೃಗಧರಧರನ ಮಸ್ತಕದಂತೆಯುಂ ಪರಪ್ರದೇಶದೊಳ್ಸುಲಿವೆತ್ತು ಕಣ್ಣಪ್ಪದೇವನ ಪಾದುಕಾಸಂಘರ್ಷಣದಿಂ

ಸಿತಮತಿ- ಶುಭ್ರವಾದ ಬುದ್ಧಿಯುಳ್ಳ ದಸರನೇ ! ಕೃತಕತಪಸ್ವಿ, ಎಂದು, ತಿಳಿದುಂ, ಶಿವಲಾಂಛನಮಂ, ನಿರೀಕ್ಷಿಸುತ್ತೆ, ಅತಿಶಯಭಕ್ತಿಯಿಂದೆ, ಎರಗೆ, ಗತದಯಂ- ನಿರ್ದಯನಾದ ಆ ಮೋಟಮಲ್ಲನು, ತಪ್ಪು, ಇನಿತು- ಇಷ್ಟು, ಇಲ್ಲದೆ, ಕೂಸುಗೈಗಳಿಂ, ನೆತ್ತಿಯ, ನೆತ್ತರ- ರಕ್ತದ, ಧಾರೆ- ಸಂಪಾತವು, ಸೋರ್ವಿನಂ, ಬಡಿಯೆ, ನೋಯದೆ, ಆತನ, ಕರಂ, ಕಡುನೊಂದುದು, ಎನುತ್ತೆ, ಸುರ್ಕಿದೈ- ಸಂಕೋಚಪಟ್ಟೆ. ‖೪೯‖

ಶಾಂತಾಗ್ರಗಣ್ಯ ! ನಿನ್ನಯ, ಶಾಂತಿಪ್ರಭೆಗೆ- ಶಾಂತತ್ವದ ಕಾಂತಿಗೆ, ಶಶಿಯುಂ- ಚಂದ್ರನೂ, ಗಂಗಾಕಾಂತೆಯುಂ- ಗಂಗಾದೇವಿಯೂ, ಎಯ್ದೆ, ಸೋಲ್ತು, ಶಿವನ, ಜಟಾಕಾಂತಾರಮಂ- ಜಡೆಯೆಂಬ ದೊಡ್ಡಕಾಡನ್ನು, ಪೊಕ್ಕು, ಒಡನೆ, ಮೈಗರೆದು- ಅವಿತುಕೊಂಡು, ಇರ್ಪರ್. ... ‖೫೦‖

ಅಂದು, ವೃಷೇಂದ್ರಂ, ಆತ್ಮಗೃಹಕ್ಕೆ- ತನ್ನಮನೆಗೆ, ಎಯ್ದಿದ, ಚೋರರಂ, ನಣ್ಪಿಂದೆ- ಮನೋಹರತೆಯಿಂದ, ಒಲ್ದು, ನೋಡಿ, ಅವರ್- ಆ ಚೋರರು, ಆಂತ, ಸುಣ್ಪದನೆಗಾಯ್ಗಳ, ಲಿಂಗಮಂ, ಮಾಡುತ್ತೆ, ಒಳ್ಪಿಂದೆ, ಚರಾಂಗರಂ- ಜಂಗಮಾಕಾರರನ್ನು, ನೆಗಳ್ದಂ, ಇಂದು, ಧೂರ್ತತಪಸ್ವಿಗೆ, ಕರಂಗಳಂ, ಇತ್ತು, ಸಜ್ಜೆಯೊಳ್, ಲಿಂಗಮಂ, ಸಂದಿಸಿ, ಜಂಗಮತ್ವಮಂ, ನೆಗಳ್ದೆ. ... ... ‖೫೧‖

ಎಂದು, ಕೂರ್ಮೆಯಿಂ, ಕೊಂಡಾಡಿ, ಮೋಟಕರತಾಡಿತತದುತ್ತಮಾಂಗಮಂ- ಮೋಟುಗಯ್ಯಿಂದ ಹೊಡೆಯಲ್ಪಟ್ಟ ಆ ಶಿರಸ್ಸನ್ನು, ಅವಲೋಕಿಪಾಗಳ್- ನೋಡುವಾಗ, ಓರೊಂದೆಡೆಯೊಳ್- ಒಂದೊಂದು ಕಡೆಯಲ್ಲಿ, ಒಡೆದು, ಸಾಂಖ್ಯನಾಥನ, ಬಿರುಗಲ್ಲ- ಬಿರುಸಾದಕಲ್ಲಿನ, ಹತಿಯಿಂದೆ- ಹೊಡೆತದಿಂದ, ಒಡೆದ, ಶಿವಶಿರದಂತೆಯುಂ, ಪೆರತೊಂದು ತಾಣದೊಳ್- ಮತ್ತೊಂದುಸ್ಥಳದಲ್ಲಿ, ಬುಗುಟಿವೆತ್ತು- ಬೊಕ್ಕೆಯನ್ನುಹೊಂದಿ, ಪಿಟ್ಟವ್ವೆಯ- ಪಿಟ್ಟವ್ವನ, ಭಕ್ತಿನಿಮಿತ್ತಂ, ಚೋಳಂಗೆ, ಮೃತ್ತಿಕಾಭಾರಮಂ- ಮಣ್ಣಿನಭಾರವನ್ನು ಪೊರಲ್- ಹೊರಲಾಗಿ, ಒಡನೆ, ಬುಗುಟು- ಬೊಕ್ಕೆಯು, ಒಗೆದ, ಹುಟ್ಟಿದ, ಮೃಗಧರಧರನ- ಶಿವನ, ಮಸ್ತಕದಂತೆಯುಂ, ಪರಪ್ರದೇಶದೊಳ್- ಮತ್ತೊಂದು ಸ್ಥಾನದಲ್ಲಿ, ಸುಲಿವೆತ್ತು- ಸುಲಿದುಹೋಗಿ, ಕಣ್ಣಪ್ಪ

ಸುಲಿವೆತ್ತು ಹರವರಾಂಗದಂತೆಯು ಮಪರಸ್ಥಾನದೊಳ್ಕೆಂಗಲಿವಡೆದು ಭೋಗನಾಥನ ಪಿಂ ದುರುಳಲೊಡಂ ಕೆಂಗಲೆ ತಳ್ತ ಶಿವಾರಮಣಶೀರ್ಷದಂತೆಯುಂ ಮನ್ಯದೇಶದೊಳುರ್ಬ್ಬಿದ ಭ್ರುಭಕ್ತಂಗೆ ಸಹಾಯಮಾಗಿ ಕರ್ಬ್ಬಪ್ಪೊರೆಯಂ ಪೊರಲೊಡನುರ್ಬ್ಬಿದಭವನ ವಿಭವಂಬಡೆದ ಪೆರ್ದಲೆಯಂತೆಯುಂ ಕರ ಮೆಸೆಯೆ ಕಂಡು ಕೌತುಕಂಬಡೆದು ॥ * * * * *

ಚಂ ॥ ಸಲೆ ತಲೆ ಸಾಸಿರಂ ಬಡೆದನಂ ತಳೆದಗ್ಗದ ರಕ್ಕಸರ್ಕಳಾ । ತಲೆಗಳ ಮಾಲೆಯಂ ಧರಿಸಿ ಪಾಣಿಪಯೋಜದೊಳಬ್ಜಜಾತನೊ ॥ ಳ್ದಲೆಯನಮರ್ಚ್ಚಿ ದೇವರೊಳೆಪೆರ್ದ್ದಲಿವೆತ್ತು ವಿರಾಜಿಸಿರ್ಪ್ಪನಾ । ತಲೆಯದು ಸಾಟ ನಿನ್ನ ತಲೆ ಗನ್ಯರ ಬೀಳ್ದಲೆ ಸಾಟಯಕ್ಕುಮೆ ॥ ... ... ... ... ... ... ॥೬೦॥

ಕಂ ॥ ಪರಮಜಗತ್ಕಾರಣ ಶಂ । ಕರ ಶಿರ ವೊಂದಲ್ಲ ದಳಿದ ವಿಧಿಗುಹದಶಕಂ ॥ ಧರ ಫಣಿವರರ ಶಿರಂಗ । ಳ್ಸರಿಬರ್ಕ್ಕುಮೆ ನಿನ್ನ ಶಿರದೊಳೆಲೆಮಹಿಮಾಬ್ಧಿ ॥ ॥೬೩॥

ಕಂ ॥ ಶರಣಜನಪಾದಜಲಬಂ । ಧುರ ತತ್ಪದನಖರಚಂದ್ರಶೇಖರ ಮೆನಿಪೀ ॥ ಶಿರವಿದು ಗಂಗಾಶಶಿಧರ । ಶಿರಕೆಣೆ ತಾನಪ್ಪುದೀಮಹೀಮಂಡಲದೊಳ್ ॥ ... ॥೬೪॥

---

ದೇವನ, ಪಾದುಕಾಸಂಘರ್ಷಣದಿಂ— ಪಾದುಕಾ- ಪಾದರಕ್ಷೆಯ, ಸಂಘರ್ಷಣದಿಂ- ಸ್ಪರ್ಶನದಿಂದ, ಸುಲಿವೆತ್ತು- ಸುಲಿದುಹೋದ, ಹರವರಾಂಗದಂತೆಯುಂ—ಹರ- ಶಿವನ, ವರಾಂಗದಂತೆಯುಂ- ಶಿರಸ್ಸಿನಹಾಗೂ, ಅಪರಸ್ಥಾನದೊಳ್- ಮತ್ತೊಂದುಸ್ಥಳದಲ್ಲಿ, ಕೆಂಗಲೆವಡೆದು- ಕೆಂಪುಕರೆಯಾಗಿ, ಭೋಗನಾಥನ- ಭೋಗದೇವನ, ಪಿಂದೆ- ಹಿಂದೆ, ಉರುಳಲ್, ಉರುಳಲಾಗಿ, ಒಡಂ, ಕೆಂಗಲೆ, ತಳ್ತ- ಸಂಬಂಧಿಸಿದ, ಶಿವಾರಮಣನ- ಪಾರ್ವತೀಪತಿಯ, ಶೀರ್ಷದಂತೆಯುಂ- ಶಿರಸ್ಸಿನಹಾಗೂ, ಅನ್ಯದೇಶದೊಳ್- ಮತ್ತೊಂದುಪ್ರದೇಶದಲ್ಲಿ, ಉರ್ಬ್ಬಿ- ಉಬ್ಬಿ, ಭಕ್ತಂಗೆ- ಸಿರಿಯಾಳಸೆಟ್ಟಿಗೆ, ಸಹಾಯಂ, ಆಗಿ, ಕರ್ಬ್ಬಪ್ಪೊರೆಯಂ- ಕಬ್ಬಿನ ಹೊರೆಯನ್ನು, ಪೊರಲ್- ಹೊರಲಾಗಿ, ಒಡನೆ, ಉಬ್ಬಿದ, ಅಭವನ- ಶಿವನ, ವಿಭವಂಬಡೆದ- ವೈಭವವನ್ನು ಪಡೆದ, ಪೆರ್ದಲೆಯಂತೆಯುಂ- ದೊಡ್ಡತಲೆಯಹಾಗೂ, ಕರಂ, ಎಸೆಯೆ, ಕಂಡು, ಕೌತುಕಂಬಡೆದು. * * *

ಸಲೆ, ತಲೆಸಾಸಿರಂಬಡೆದನಂ- ಸಹಸ್ರ ಶಿರಸ್ಸನ್ನು ಹೊಂದಿದ ಆದಿಶೇಷನನ್ನು, ತಳೆದ, ಅಗ್ಗದ- ದೊಡ್ಡವರಾದ, ರಕ್ಕಸರ್ಕಳ- ರಾಕ್ಷಸರ, ತಲೆಗಳ, ಮಾಲೆಯಂ, ಧರಿಸಿ, ಪಾಣಿಪಯೋಜದೊಳ್, ಅಬ್ಜಜಾತನ- ಬ್ರಹ್ಮನ, ಒಳ್ದಲೆಯಂ, ಅಮರ್ಚ್ಚಿ- ಸೇರಿಸಿ, ದೇವರೊಳೆ- ದೇವತೆಗಳಲ್ಲಿ, ಪೆರ್ದ್ದಲಿವೆತ್ತು- ದೊಡ್ಡತಲೆಯನ್ನು ಹೊಂದಿ, ವಿರಾಜಿಸಿರ್ಪ್ಪ- ಪ್ರಕಾಶಿಸುವ ಪರಶಿವನ, ಅದುತಲೆ- ಆ ತಲೆಯು, ನಿನ್ನ, ತಲೆಗೆ, ಸಾಟ- ಸಮಾನವು; ಅನ್ಯರ, ಬೀಳ್ದಲೆಗೆ- ಬೀಳತಕ್ಕ ತಲೆಗೆ, ಸಾಟಿ, ಅಕ್ಕುಮೆ. ... ... ॥೬೦॥

ಎಲೆಮಹಿಮಾಬ್ಧಿ! ನಿನ್ನ, ಶಿರದೊಳ್- ತಲೆಯೊಡನೆ, ಪರಮಜಗತ್ಕಾರಣಶಂಕರಶಿರಂ, ಒಂದು, ಅಲ್ಲದೆ, ಉಳಿದ, ವಿಧಿಗುಹದಶಕಂಧರಫಣಿವರರ— ವಿಧಿ- ಬ್ರಹ್ಮ, ಗುಹ- ಷಣ್ಮುಖ, ದಶಕಂಧರ- ರಾವಣ, ಫಣಿವರರ- ಆದಿಶೇಷ ಇವರುಗಳ, ಶಿರಂಗಳ್, ಸರಿಬರ್ಕ್ಕುಮೆ ? ... ... ॥೬೩॥

ಈಮಹೀಮಂಡಲದೊಳ್, ಶರಣಜನಪಾದಜಲಬಂಧುರತತ್ಪದನಖರಚಂದ್ರಶೇಖರಂ— ಶರಣಜನ- ಶಿವಶರಣಜನಗಳ, ಪಾದಜಲ- ಪಾದೋದಕದಿಂದ, ಬಂಧುರ- ಮನೋಹರವಾದದ್ದು, ತತ್ಪದ- ಆ ಶರಣಜನರ ಪಾದದ, ನಖರ- ಉಗುರಿನ ಸಾಲೆಂಬ, ಚಂದ್ರ- ಚಂದ್ರನೇ, ಶೇಖರ- ಶಿರೋಭೂಷಣವಾಗಿಯುಳ್ಳದ್ದು; ಎನಿಪ, ಈಶಿರಂ, ಇದು, ತಾಂ, ಗಂಗಾಶಶಿಧರಶಿರಕೆ ಗಂಗೆಯನ್ನೂ ಚಂದ್ರನನ್ನೂ ಧರಿಸಿರುವ ಪರಶಿವನ ತಲೆಗೆ, ಎಣೆ- ಸಮಾನವು, ಅಪ್ಪುದು. ... ... ... ... ॥೬೪॥

ಕಂ ॥ ಓದ ಲ್ಬರ್ಕ್ಕುಂ ಶಾಸ್ತ್ರಮು । ನೋದಿದುದಂ ಮಗುಳ್ದು ಪರರ್ಗೆ ಬೋಧಿಸಲ
ಕ್ಕುಂ ॥ ಮೇದಿನಿಯೊ ಳಮಮ ಶಮಸುಖ। ಮೇದುರ ನಿನ್ನಂತೆ ನಡೆದು ತೋರ್ಪರು ಪೊಳರೆ॥

ಕಂ ॥ ಇದುಚಿತ್ರಂ ಕ್ಷಮೆ ಯೆಂಬ । ಗ್ಗದ ಖಡ್ಗದೆ ಕೋಪರಿಪುವ ನಾರ್ಪಿಂ ಕಡಿದಿ ॥
ಕ್ಕಿದ ನಿನಗಹಿಂಸಕಂ ಸ । ರ್ವದಯಾಪರ ವೆಂಬ ಕೀರ್ತಿ ವಿಶ್ವಂಭರೆಯೊಳ್ ॥ ॥೭೬॥

ಕಂ॥ ಲಿಂಗದ್ವಯಸಮಭಾವಂ। ಮಂಗಲಮಯ ನಿನಗೆ ಸಂದುದೀಕೃತ್ರಿಮವೇ । ಷಾಂ
ಗದಕುಟಿಲನುಮಂನೀಂ । ಜಂಗಮ ಮೆಂದೊಲ್ದು ಬಗೆದು ನಂಬಿದ ಕತದಿಂ ॥ ॥೭೭॥

ಕಂ ॥ ಬರಿಸಿದೆ ಕಡಿವಡೆ ದೆರಡುಂ । ಕರಂಗಳಂ ಬರಿಯ ಸಜ್ಜೆಯೊಳ್ಲಿಂಗಮ ನೊ॥
ಲ್ದಿರಿಸಿದೆ ಬಗೆಗಯ್ಯಿಂ ಭ । ಕ್ತಿರಸಾಂಬುಜಸೂರ ದಸರ ನಿನ ಗೆಣೆ ಯಾವಂ ॥ ॥೭೮॥

ಚಂ ॥ ದಸರ ಚರಾಚರಪ್ರಕರಪಾಲಕ ಸಾಧುಸರೋಧಿಚಂದ್ರ ಸ । ದ್ವಿಸರಮನೋ
ಜ್ಞ ಮಾನ್ಯ ಮಹನೀಯ ಮಹೇಶ್ವರದಿವ್ಯಪಾದಸಾ ॥ ರಸರಸಭೃಂಗ ಮಂಗಲಮಹತ್ವಸ
ಮನ್ವಿತ ಸದ್ಗುಣಾಂಬುಜಾ । ತಸರಸರದ್ವಲಕ್ಷರುಚಿಕೀರ್ತಿಸಮಂಚಿತ ಸರ್ವದಿಕ್ತಟ॥ ೭೯॥

---

ಶಮಸುಖಮೇದುರ— ಶಮಸುಖ- ಶಾಂತಿಸುಖದಿಂದ, ಮೇದುರ- ವ್ಯಾಪ್ತನಾದ ದಸರನೇ ! ಮೇದಿನಿಯೊಳ್- ಭೂಮಿಯಲ್ಲಿ, ಶಾಸ್ತ್ರಮಂ, ಓದಲ್, ಬರ್ಕ್ಕುಂ, ಮಗುಳ್ದು, ಓದಿದುದಂ, ಪೆರರ್ಗೆ- ಅನ್ಯರಿಗೆ, ಬೋಧಿಸಲ್, ಅಕ್ಕುಂ, ನಿನ್ನಂತ, ನಡೆದು, ತೋರ್ಪರುಂ, ಪಳರೆ? ... ... ॥೭೫॥

ವಿಶ್ವಂಭರೆಯೊಳ್- ಭೂಮಿಯಲ್ಲಿ, ಕ್ಷಮೆ, ಎಂಬ, ಖಡ್ಗದೆ, ಕೋಪರಿಪುವಂ- ಕೋಪವೆಂಬ ಶತ್ರುವನ್ನು, ಆರ್ಪಿಂ- ಶೌರ್ಯದಿಂದ, ಕಡಿದು, ಇಕ್ಕಿದ, ನಿನಗೆ, ಅಹಿಂಸಕಂ- ಹಿಂಸೆಮಾಡದೇ ಇರುವವನು, ಸರ್ವದಯಾಪರಂ- ಸರ್ವರಲ್ಲೂ ದಯಾಸಕ್ತನು, ಎಂಬ, ಇದುಕೀರ್ತಿ, ಚಿತ್ರಂ- ಆಶ್ಚರ್ಯವು ! ॥೭೬॥

ಮಂಗಲಮಯ! ನೀಂ, ಈ ಕೃತ್ರಿಮವೇಷಾಂಗದ- ಈ ಕಪಟ ವೇಷವಯವವುಳ್ಳ, ಕುಟಿಲನುಮಂ- ಕಪಟಿಯನ್ನೂ, ಜಂಗಮಂ, ಎಂದು, ಬಗೆದು, ಒಲ್ದು, ನಂಬಿದಕತದಿಂ- ನಂಬಿದಕಾರಣದಿಂದ, ನಿನಗೆ, ಲಿಂಗದ್ವಯಸಮಭಾವಂ- ಲಿಂಗಜಂಗಮವೆರಡರಲ್ಲೂ, ಸಮವಾದ ಭಾವನೆಯು, ಸಂದುದು- ಪ್ರಾಪ್ತವಾಯಿತು. ... ... ... ... ... ॥೭೭॥

ಭಕ್ತಿರಸಾಂಬುಜಸೂರ- ಭಕ್ತಿರಸವೆಂಬಕಮಲಕ್ಕೆ ಸೂರ್ಯನಾದ, ದಸರ! ಕಡಿವಡೆದ- ತೋಟಾಗಿದ್ದ, ಎರಡುಂಕರಂಗಳಂ, ಬಗೆಗಯ್ಯಿಂ- ಮನಸ್ಸೆಂಬಕೈಯ್ಯಿಂದ, ಬರಿಸಿದೆ, ಬರಿಯ- ಸಜ್ಜೆಯೊಳ್, ಲಿಂಗಮಂ, ಒಲ್ದು, ಇರಿಸಿದೆ, ನಿನಗೆ, ಎಣೆ- ಸಮಾನನು, ಆವಂ ? ... ... ... ॥೭೮॥

ಚರಾಚರಪ್ರಕರಪಾಲಕ- ಸ್ಥಾವರಜಂಗಮಗಳ ಸಮುದಾಯವನ್ನು ರಕ್ಷಿಸುವ, ಸಾಧುಸರೋಧಿಚಂದ್ರ— ಸಾಧು- ಸತ್ಕುಲಪ್ರಸೂತರೆಂಬ, ಸರೋಧಿ- ಸಮುದ್ರಕ್ಕೆ, ಚಂದ್ರ, ಸದ್ವಿಸರಮನೋಜ್ಞಮಾನ್ಯ— ಸತ್- ಸತ್ಪುರುಷರ ( ಅಥವಾ ವಿದ್ವಾಂಸರ ) ವಿಸರ- ಸಮೂಹದಿಂದ, ಮನೋಜ್ಞ- ಮನೋಹರನಾಗಿ, ಮಾನ್ಯ- ಸನ್ಮಾನಿಸಿಗೊಳ್ಳಲು ಯೋಗ್ಯನಾದ, ಮಹನೀಯ- ದೊಡ್ಡವನಾದ, ಮಹೇಶ್ವರದಿವ್ಯಪಾದಸಾರಸರಸಭೃಂಗ— ಮಹೇಶ್ವರ- ಶಿವನ, ದಿವ್ಯ- ಮನೋಹರವಾದ, ಪಾದಸಾರಸ- ಪಾದಕಮಲದ, ರಸ- ಉದಕವೆಂಬ ಮಕರಂದಕ್ಕೆ, ಭೃಂಗ— ಭ್ರಮರನಾದ, ಮಂಗಲಮಹತ್ವಸಮನ್ವಿತ— ಮಂಗಲ- ಮಂಗಳಕರವಾದ, ಮಹತ್ವ- ಮಹಿಮೆಯಿಂದ, ಸಮನ್ವಿತ- ಕೂಡಿದ, ಸದ್ಗುಣಾಂಬುಜಾತಸರ— ಸದ್ಗುಣ- ಒಳ್ಳೇ ಗುಣಗಳೆಂಬ, ಅಂಬುಜಾತ- ಕಮಲಗಳಿಗೆ, ಸರ- ಸರೋವರನಾದ, ಸರದ್ವಳಕ್ಷ......ದಿಕ್ತಟ—ಸರತ್- ವಿಸ್ತರಿಸಿಹೋಗುತ್ತಿರುವ, ವಳಕ್ಷ- ಶುಭ್ರವಾದ, ರುಚಿ- ಕಾಂತಿಯುಳ್ಳ, ಕೀರ್ತಿ- ಯಶಸ್ಸಿನಿಂದ, ಸಮಂಚಿತ- ಕೂಡಿರುವ, ಸರ್ವದಿಕ್ತಟ- ಎಲ್ಲಾ ದಿಗಂತಗಳುಳ್ಳ, ದಸರ ! ... ... ॥೭೯॥

ವ ॥ ಎಂದಿಂತು ಭಕ್ತಜನಂ ನಲಿನಲಿದು ಕೀರ್ತಿಸುತ್ತಮಿರೆ ಪರಸಮಯಸ್ಥರೆಲ್ಲ
ರುಂ ಬಿಗುರ್ತು ಬೆರಗುವಟ್ಟು ನಿರೀಕ್ಷಿಸಿ * * * * * * * * *

ಕಂ ॥ ಬಡಿದೊಡ ಮಳಲದೆ ಕೊಟ್ಟಂ । ಕಡಿವಡೆ ದೆರಡುಂ ಕರಂಗಳಂ ಮಲ್ಲಂ ಗೊ ॥
ಲ್ಲಡಿಗೆರಗಿದೊಡೇನ ನವಂ ಕುಡುವನೊ ಘನಮಹಿಮ ನೆಮಗೆ ವರಮಂ ದಸರಂ ॥ ॥೨೦॥

ವ ॥ ಎಂದೆಲ್ಲ ರೊಂದುಗೂಡಿ ತಚ್ಚರಣಾರವಿಂದಕ್ಕೆ ಸಾಷ್ಟಾಂಗ ವೆರಗಿ ಲಲಾಟಘ
ಟಿತಕರಪುಟ ರಾಗಿ ॥ * * * * * * * * * * * * *

ಮ ॥ ಸ್ರ ॥ ಖಲರುಂ ಕಾಪಟ್ಯಕರ್ಮಾಶ್ರಿತರ ನಧಮರುಂ ದುಷ್ಟರುಂ ಧೂರ್ತರುಂ ದು ॥
ರ್ಬಲರುಂ ದುರ್ನೀತರುಂ ದುರ್ಮದರ ನಧಿಕಪಾಪಾತ್ಮರುಂ ವ್ಯರ್ಥರುಂ ಗಾ ॥ ವಿಲರುಂ ಪಾಷಂಡಮಾ
ರ್ಗಸ್ಥಿತರ ನಪಯಶೋಯುಕ್ತರುಂ ಮೋಹಮೂರ್ಛಾ । ಕುಲರುಂ ಸರ್ವಾಪರಾಧಾನ್ವಿತರ
ನೊಸೆದು ನೀಂ ಕಾಯ್ವುದೆಮ್ಮಂ ದಯಾಬ್ಧಿ ॥ ... ... ... ॥೨೧॥

ಕಂ ॥ ಸರ್ವದಯಾಪರ ನಿನ್ನಯ । ಪರ್ವಿದ ಮಹಿಮಾತಿಶಯಮ ನರಿವಂ ಜಗದೊ ॥
ಳ್ಸರ್ವಜ್ಞಂ ನೊರ್ವ ನಲ್ಲದೆ । ದುರ್ವಾರಮದಾಂಧಮತಿಗ ಳಾವರಿಪಪೆವೆ ॥ ... ॥೨೨॥

ಚಂ ॥ ನೆಗಳ್ದಪರಾಧಮಂ ನಿನಗೆ ತಾಂ ಪಡೆದಂಗಡ ಪಾಣಿಯುಗ್ಮಮಂ । ಬಗೆ ಮಿ
ಗೆ ಮಲ್ಲಿನಾಥ ನವನಿಂ ಮೊದಲಾದಪರಾಧಮೆಮ್ಮ ದು ॥ ಜ್ಜುಗಿಸಿದೆ ಪಾಪಮಂ ಬಗೆವೊಡಂ

---

ಎಂದು, ಇಂತು, ಭಕ್ತಜನಂ, ನಲಿನಲಿದು, ಕೀರ್ತಿಸುತ್ತಂ, ಇರೆ, ಪರಸಮಯಸ್ಥರ್- ಅನ್ಯಮತಸ್ಥ
ರು, ಎಲ್ಲರುಂ, ಬಿಗುರ್ತು- ಭಯಪಟ್ಟು, ಬೆರಗುವಟ್ಟು, ನಿರೀಕ್ಷಿಸಿ. * * * * * * *

ಘನಮಹಿಮಂ, ಅವಂ, ದಸರಂ, ಬಡಿದೊಡಂ- ಹೊಡೆದಾಗ್ಯೂ, ಅಳಲದೆ- ಖೇದಪಡದೆ, ಮಲ್ಲಂಗೆ,
ಕಡಿವಡೆದ, ಎರಡುಕರಂಗಳಂ,ಕೊಟ್ಟಂ, ಒಲ್ದು, ಅಡಿಗೆ, ಎರಗಿದೊಡೆ, ಎಮಗೆ, ಏಂವರಮಂ,ಕುಡುವನೊ?

ಎಂದು, ಎಲ್ಲರ್, ಒಂದುಗೂಡಿ, ತಚ್ಚರಣಾರವಿಂದಕ್ಕೆ-ಆ ದಸರನ ಪಾದಕಮಲಕ್ಕೆ, ಸಾಷ್ಟಾಂಗಂ,
ಎರಗಿ, ಲಲಾಟಘಟಿತಕರಪುಟರ್- ಹಣೆಯಲ್ಲಿ ಸೇರಿಸಲ್ಪಟ್ಟ ಹಸ್ತಪ್ರದೇಶವುಳ್ಳವರು, ಆಗಿ. * * *

ದಯಾಬ್ಧಿ ! ಖಲರುಂ- ದುರ್ಜನರಾದ, ಕಾಪಟ್ಯಕರ್ಮಾಶ್ರಿತರಂ- ಕಪಟವ್ಯಾಪಾರದಿಂದ ಕೂಡಿದ, ಅ
ಧಮರುಂ, ದುಷ್ಟರುಂ, ಧೂರ್ತರುಂ- ವಂಚಕರಾದ, ದುರ್ಬಲರುಂ- ಬಲಹೀನರಾದ, ದುರ್ನೀತರುಂ- ನೀತಿಹೀನ
ರಾದ, ದುರ್ಮದರುಂ- ಕೆಟ್ಟ ಮದವುಳ್ಳ, ಅಧಿಕಪಾಪಾತ್ಮರುಂ, ವ್ಯರ್ಥರುಂ- ನಿಷ್ಪ್ರಯೋಜಕರಾದ, ಗಾವಿಲ
ರುಂ- ಮೂಢರಾದ, ಪಾಷಂಡಮಾರ್ಗಸ್ಥಿತರುಂ- ವೇದಬಾಹ್ಯಮಾರ್ಗದಲ್ಲಿರುವ, ಅಪಯಶೋಯುಕ್ತರುಂ,
ಮೋಹಮೂರ್ಛಾಕುಲರುಂ- ಅಜ್ಞಾನದಿಂದುಂಟಾದ ಪರವಶದಿಂದ ವ್ಯಾಪ್ತರಾದ, ಸರ್ವಾಪರಾಧಾನ್ವಿತರುಂ-
ಎಲ್ಲಾ ತಪ್ಪುಗಳಿಂದಲೂ ಕೂಡಿರುವ, ಎಮ್ಮಂ, ನೀಂ, ಕಾಯ್ವುದು. ... ... ॥೨೧॥

ಸರ್ವದಯಾಪರ ! ನಿನ್ನಯ, ಪರ್ವಿದಮಹಿಮಾತಿಶಯಮಂ, ಜಗದೊಳ್, ಸರ್ವಜ್ಞಂ, ಒರ್ವಂ, ಅರಿ
ವಂ, ಅಲ್ಲದೆ, ದುರ್ವಾರಮದಾಂಧಮತಿಗಳ್—ದುರ್ವಾರ- ತಡೆಯುವುದಕ್ಕೆ ಸಾಧ್ಯವಾಗದ, ಮದ- ಗರ್ವದಿಂ
ದ, ಅಂಧ- ಕುರುಡಾದ, ಮತಿಗಳ್- ಬುದ್ಧಿಯುಳ್ಳ, ಆವ್, ಅರಿದಪೆವೆ ? ... ... ॥೨೨॥

ಮಲ್ಲಿನಾಥಂ, ನಿನಗೆ, ಅಪರಾಧಮಂ, ನೆಗಳ್ದು, ತಾಂ, ಬಗೆ- ಮನಸ್ಸು, ಮಿಗೆ, ಪಾಣಿಯುಗ್ಮಮಂ-
ಎರಡುಕೈಯನ್ನು, ಪಡೆದಂಗಡ ! ಅವನಿಂ, ಮೊದಲ್, ಆದ, ಅಪರಾಧಂ, ಎಮ್ಮದು, ಅದಂ, ಅಂತು, ಬಗೆ
ವೊಡೆ- ಯೋಚಿಸಲಾಗಿ, ಆವ್, ಉಜ್ಜುಗಿಸಿದೆವ್; ಅದರಿಂ, ದಸರ! ನೀಂ, ಸುಜನೋತ್ತಮಂ- ಸತ್ಪುರುಷ

ತದರಿಂಪೊರೆ ಮಾಣದೆಮ್ಮ ಪೆಂ । ಪಗಲದ ಕೂರ್ಮೆಯಿಂ ದಸರನೀಂ ಸುಜನೋತ್ತಮನಾವ ಕಾರಣಂ ॥ ... ... ... ... ... ... ॥೨೩॥

ವ ॥ ಎಂದು ಸನ್ನುತಿಗೆಯ್ವುತೆಮ್ಮಪರಾಧಸರ್ವಸ್ವಮಂ ಸೈರಿಸಿ ಕರುಣಿಪುದೆಂದು ಮುಗುಳ್ದು ಮಣಿ ದಭಯಮಂ ಪಡೆದು ಕೃತಾರ್ಥತೆಯನಾಳ್ದೆಸೆದಿರ್ದರಾಪ್ರಸ್ತಾವದೊಳ್॥

ಕಂ॥ ದರೆಜಯಜಯ ಎನೆಶರಣ । ರ್ಪರಮಾನಂದದೊಳೆ ಪರಸೆ ನುತಿಯಿಸುತಿರೆ ಸ ॥ ರ್ವರು ಮಲ್ಲಿ ಮಲ್ಲಿನಾಥಂ । ಗೆರಡುಂ ಕಯ್ಯಿತ್ತು ಮೆರೆದ ನಾದಸರಯ್ಯಂ ॥ ॥೨೪॥

ಮ ॥ ಸ್ರ॥ ಬಸವಂ ಕೇಳ್ದಾ ಮಹತ್ವಸ್ಥಿತಿಯ ನೊಸಗೆಯಿಂ ದೆಯ್ದಿ ಸದ್ಭಕ್ತಸಂದೋ । ಹಸಮೇತಂ ಕಂಡು ದಂಡಪ್ರಣತಿಯೆಸಗಿ ಕೊಂಡಾಡುತಾನಂದಬಾಷ್ಪ ॥ ಪ್ರಸರಂ ಕೈಗೆಣ್ಮೆ ತಾಳ್ದಾದಸರನಮಲಕಾರುಣ್ಯಮಂ ಬಂದು ಪೊಕ್ಕೊ । ಲ್ದೆಸೆದಂ ಶುದ್ಧಾಂತದೊಳ್ಜಂಗಮುಚಯಚರಣಾಂಭೋಜಪೂಜಾವಿತಂದ್ರಂ ॥ ... ... ॥೨೫॥

ಕಂ ॥ ದಸರಯ್ಯನಮಲಚರಿತಮ । ನೊಸೆದಾವಂ ಕೇಳ್ವನಾವ ನೋದುವನಾವಂ॥ ಪಸರಿಪನವ ನಗಜೇಶ । ಪ್ರಸಾದದಿಂ ಪಡೆಗುಮಿಷ್ಟಸುಖಸಂಪದಮಂ ॥ ॥೨೬॥

ಲಲಿತಪದವೃತ್ತಂ ॥ ಪಾರ್ಥಿವಸಮರ್ಚಿತ ಚತುರ್ಥಮಹನೀಯಪುರುಷಾರ್ಥದ ಪವಿತ್ರಿತಸುತೀರ್ಥಪದ ಧೂತಾ । ನರ್ಥಮತ ರಂಜಿತಸದರ್ಥಪರಮಾಗಮ ಪದಾರ್ಥಪರಿಪಾಲಸು

---

ಶ್ರೀಪಃ ಸು; ಆದಕಾರಣಂ, ಪೆಂಪು- ಅತಿಶಯವು, ಅಗಲದ- ಭಿನ್ನವಾಗದ, ಕೂರ್ಮೆಯಿಂ- ಪ್ರೀತಿಯಿಂದ, ಮಾಣದೆ, ಎಮ್ಮ, ಪೊರೆ ? ... ... ... ... ॥೨೩॥

ಎಂದು, ಸನ್ನುತಿಗೆಯ್ವುತೆ, ಎಮ್ಮ, ಅಪರಾಧಸರ್ವಸ್ವಮಂ, ಸೈರಿಸಿ, ಕರುಣಿಪುದು, ಎಂದು, ಮುಗುಳ್ದು, ಅಭಯಮಂ, ಪಡೆದು, ಕೃತಾರ್ಥತೆಯುಂ-ಧನ್ಯತ್ವವನ್ನು, ಆಳ್ದು, ಎಸೆದು, ಇರ್ದರ್, ಆಪ್ರಸ್ತಾವದೊಳ್- ಆ ಕಾಲದಲ್ಲಿ. * * * * * * * * * * * * * * *

ದರೆ, ಜಯಜಯ, ಎನೆ, ಶರಣರ್, ಪರಮಾನಂದದೊಳೆ. ಪರಸೆ- ಆಶೀರ್ವದಿಸಲು, ಸರ್ವರುಂ, ಅಲ್ಲಿ, ನುತಿಯಿಸುತ್ತೆ, ಇರೆ, ಆದಸರಯ್ಯಂ, ಮಲ್ಲಿನಾಥಂಗೆ, ಎರಡುಂಕಯ್ಯಿತ್ತು, ಮೆರೆದಂ. ... ॥೨೪॥

ಬಸವಂ, ಆ ಮಹತ್ವಸ್ಥಿತಿಯಂ, ಕೇಳ್ದು, ಒಸಗೆಯಿಂದೆ- ಉತ್ಸವದಿಂದ, ಸದ್ಭಕ್ತಸಂದೋಹಸಮೇತಂ, ಎಯ್ದಿ- ಬಂದು, ಕಂಡು, ದಂಡಪ್ರಣತಿಯೆಸಗಿ- ದೀರ್ಘದಂಡನಮಸ್ಕಾರವನ್ನು ಮಾಡಿ, ಕೊಂಡಾಡುತೆ, ಆನಂದಬಾಷ್ಪಪ್ರಕರಂ- ಸಂತೋಷದಿಂದುಂಟಾದ ಕಣ್ಣೀರಿನ ಸಮೂಹವು, ಕೈಗೆಣ್ಮೆ- ಹೆಚ್ಚಾಗಲಾಗಿ, ದಸರನ, ಅಮಲಕಾರುಣ್ಯಮಂ, ತಾಳ್ದು, ಬಂದು, ಶುದ್ಧಾಂತದೊಳ್- ಅಂತಃಪುರದಲ್ಲಿ, ಪೊಕ್ಕು, ಒಲ್ದು, ಜಂಗಮುಚಯಚರಣಾಂಭೋಜಪೂಜಾವಿತಂದ್ರಂ- ಜಂಗಮ ಸಮೂಹದ ಪಾದಕಮಲಪೂಜೆಯಲ್ಲಿ ಆಲಸ್ಯರಹಿತನಾದವನಾಗಿ, ಎಸೆದಂ. ... ... .. ... ॥೨೫॥

ದಸರಯ್ಯನ, ಅಮಲಚರಿತಮಂ, ಒಸೆದು, ಆವಂ, ಕೇಳ್ವಂ ? ಆವಂ, ಓದುವಂ ? ಆವಂ, ಪಸರಿಪಂ-ವಿಸ್ತರಿಸುವನೋ ? ಅವಂ, ನಗಜೇಶಪ್ರಸಾದದಿಂ- ಪಾರ್ವತೀ ಪತಿಯ ಅನುಗ್ರಹದಿಂದ, ಇಷ್ಟಸುಖಸಂಪದಮಂ- ಇಚ್ಛೈಸಿದ ಸೌಖ್ಯಸಂಪತ್ತನ್ನು, ಪಡೆಗುಂ. ... ... ॥೨೬॥

ಪಾರ್ಥಿವಸಮರ್ಚಿತ- ಪಾರ್ಥಿವ-ರಾಜನಿಂದ, ( ಬಿಜ್ಜಳ ) ಸಮರ್ಚಿತ- ಪೂಜಿಸಲ್ಪಟ್ಟ, ಚತುರ್ಥಮಹನೀಯಪುರುಷಾರ್ಥದ- ನಾಲ್ಕನೆಯದಾದ ಮೋಕ್ಷವೆಂಬ ದೊಡ್ಡಪುರುಷಾರ್ಥವನ್ನು ಕೊಡುವ, ಪವಿತ್ರಿತಸುತೀರ್ಥಪದ- ಪರಿಶುದ್ಧಗೊಳಿಸಲ್ಪಟ್ಟ ಒಳ್ಳೆಯ ತೀರ್ಥಗಳುಳ್ಳ ಪಾದವುಳ್ಳ, ಧೂತಾನರ್ಥಮತ- ತಿರಸ್ಕರಿಸ

ಕೃತಾರ್ಥ್ದಜನಪಕ್ಷ ॥ ಪಾರ್ಥ್ಥಪುರೋಪದ ಕದರ್ಪ್ಪಖಲಾಹಿತ ಸದಾರ್ಥ್ಥಿತಗಣೋತ್ಸವ ಸದರ್ಥ್ಥಿಜನತಾಸಂ । ಪ್ರಾರ್ಥ್ಥಿತಸುರದ್ರುಮ ಸಾರ್ಥ್ಥನಿಗಮಸ್ತುತ ಸಮರ್ಥ್ಥಿತಮಹಾವ್ರತ ಸಮರ್ಥ್ದಬಸವೇಶ ॥ ... ... ... ... ... ॥೭೭॥

ಚಾಮರವೃತ್ತಂ ॥ ಚಿದಂಬರಸ್ವರೂಪೆ ಚಿತ್ತಜನ್ಮವಂದ್ಯೆ ಚಿನ್ಮಯೀ । ಕದಂಬವಾಟಿಕಾನಿವಾಸೆ ಕಾಳಿ ಕಾಲಭಂಜನೇ ॥ ಸದಂಬುಜಾಯತಾಕ್ಷಿ ಚಕ್ರಪಾಣಿ ಶಕ್ರಸೇವಿತೇ । ಮದಂಬೆ ರಕ್ಷಿಸೆನ್ನ ನಿಂದುಮೌಳಿಪತ್ನಿ ಪಾರ್ವತೀ ॥ ... ... ॥೭೮॥

ಗದ್ಯ॥ ಇದುವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತ ಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ದಸರದೇವಕಥಾಭಿವರ್ಣ್ಣನಂಷಡ್ವಿಂಶತ್ಯಾಶ್ವಾಸಂಪರಿಸಮಾಪ್ತಂ॥ ... ... ... ... ... ... *

ಷಡ್ವಿಂಶತ್ಯಾಶ್ವಾಸಂಸಂಪೂರ್ಣಂ.

---

ಲ್ಪಟ್ಟ ನಿಷ್ಪ್ರಯೋಜಕಗಳಾದ ಮತಗಳುಳ್ಳ, ರಂಜಿತಸದರ್ಥಪರವಾಗವು- ಪ್ರಕಾಶಗೊಳಿಸಲ್ಪಟ್ಟ ಒಳ್ಳೆಯ ಅರ್ಥವುಳ್ಳ ಉತ್ಕೃಷ್ಟಗಳಾದ ಆಗಮಗಳುಳ್ಳ, ಪರಾರ್ಥಪರಿಪಾಲ- ಅನ್ಯರಿಗೋಸ್ಕರವಾಗಿ ದ್ರವ್ಯವನ್ನು ರಕ್ಷಿಸುವ, ಸುಕೃತಾರ್ಥಜನಪಕ್ಷ- ಪುಣ್ಯವೇ ಪ್ರಯೋಜನನಾಗುಳ್ಳ ಸಜ್ಜನರ ಸಹಾಯಕನಾದ, ಪಾರ್ಥಪುರೋಪದ- ಅರ್ಜುನನಿಗೆ ಸಮರ್ಥವಾದ ಬಾಣವನ್ನುಕೊಟ್ಟ, ಕದರ್ಥಖಲಾಹಿತ- ಕೆಟ್ಟಯಾಚ್ಞೆಯುಳ್ಳ ನೀಚರಿಗೆ ಶತ್ರುವಾದ, ಸದಾರ್ಥಿತಗಣೋತ್ಸವ- ನಿರಂತರದಲ್ಲೂಬೇಡಲ್ಪಟ್ಟ ಶಿವಗಣಂಗಳ ಸಂತೋಷವುಳ್ಳ, ಸದರ್ಥಿಜನತಾಸಂಪ್ರಾರ್ಥಿತಸುರದ್ರು- ಒಳ್ಳೆಯಯಾಚಕಜನಸಮೂಹದಿಂದ ಬೇಡಲ್ಪಟ್ಟ ಕಲ್ಪವೃಕ್ಷನಾದ, ಸಾರ್ಥನಿಗಮಸ್ತುತ- ಅಭಿಪ್ರಾಯಸಹಿತವಾಗಿ ವೇದದಿಂದ ಹೊಗಳಲ್ಪಟ್ಟ, ಸಮರ್ಥಿತಮಹಾವ್ರತ- ಸಾಧಿಸಲ್ಪಟ್ಟ ದೊಡ್ಡನಿಯಮವುಳ್ಳ, ಸಮರ್ಥ- ಶಕ್ತನಾದ, ಬಸವೇಶ! ಪೊರೆ. ॥೭೭॥

ಚಿದಂಬರಸ್ವರೂಪೆ- ಜ್ಞಾನಾಕಾಶಸ್ವರೂಪಿಣಿಯಾದ, ಚಿತ್ತಜನ್ಮವಂದ್ಯೆ- ಮನ್ಮಥನಿಂದ ನಮಸ್ಕರಿಸಲ್ಪಡುವದರ್ಕೆ ಯೋಗ್ಯಳಾದ, ಚಿನ್ಮಯೀ- ಜ್ಞಾನಾತ್ಮಕಳಾದ, ಕದಂಬವಾಟಿಕಾನಿವಾಸೆ- ಈಚಲುಮಗದ ಗುಂಪಿನಲ್ಲಿ ವಾಸಮಾಡುವ, ಕಾಳಿ- ಕಪ್ಪುಬಣ್ಣವುಳ್ಳ.ಕಾಲಭಂಜನೇ- ಯಮನನ್ನು ನಾಶಮಾಡಿದ, ಸದಂಬುಜಾಯತಾಕ್ಷಿ- ಒಳ್ಳೆಯತಾವರೆಯಂತೆ ದೀರ್ಘವಾದಕಣ್ಣುಳ್ಳ, ಚಕ್ರಪಾಣಿ- ಚಕ್ರಾಯುಧವೇ ಹಸ್ತದಲ್ಲುಳ್ಳ, ಶಕ್ರಸೇವಿತೇ- ಇಂದ್ರನಿಂದ ಸೇವಿಸಲ್ಪಟ್ಟ, ಮದಂಬೆ- ನನ್ನತಾಯಾದ, ಇಂದುಮೌಳಿಪತ್ನಿ- ಈಶ್ವರನ ಹೆಂಡತಿಯಾದ, ಪಾರ್ವತೀ! ಎನ್ನಂ, ರಕ್ಷಿಸು. ... ... ... ... ॥೭೮॥

ಇಪ್ಪತ್ತಾರನೆಯ ಆಶ್ವಾಸವು ಸಂಪೂರ್ಣವು.

ಶ್ರೀಃ

ನಿರಂಜನಾಯ ಪರಬ್ರಹ್ಮಣೇ ನಮಃ.

# ಸಪ್ತವಿಂಶತ್ಯಾಶ್ವಾಸಂ.

## ಗುರುಭಕ್ತ್ಯಕಥನಂ.

ಕಂ ॥ ಶ್ರೀಭೂಧರೇಂದ್ರತನಯಾ । ಶೋಭಾವಹಕಲ್ಪವಲ್ಲರೀಸುರತರು ಮ ॥ ತ್ತೇಭಾಜಿನಾಂಬರಂ ನಾ । ಗಾಭರಣಂ ಪೊರೆಗೆ ಶಿಷ್ಟರಂ ಶಿವಲಿಂಗಂ ॥ ... ॥೧॥

ವ ॥ ಮತ್ತಮಲ್ಲಿ ॥ ಕಂ ॥ ಗುರುಚರಣಾರುಣಾಂಬುಜಯುಗಸ್ಮರಣಸ್ಥಿರಚಿತ್ತನಾಲಸ । ದ್ಗುರುಕರುಣಾಕಟಾಕ್ಷರುಚಿಚಂದ್ರಮರೀಚಿಚಕೋರ ನಾತ್ಮವಿ ॥ ದ್ಗುರುಪದಪದ್ಮಶೇಖರಶಿರಂ ಗುರುವಾಕ್ಯಸುಧಾಸುಪಾನಚಾ । ರುರುಚಿ ಗುರುಪ್ರಸಾದರಸಿಕಂ ಗುರುಲಿಂಗಸದಾಸಮರ್ಚಕಂ ॥ ... ... ... ... ... ॥೨॥

ಕಂ॥ ಗುರುಭಕ್ತಿನವಮರುನ್ಮಣಿ । ಗುರುಭಕ್ತಿಸುಧಾಸರೋಧಿ ಗುರುಭಕ್ತಿಸುಖಾ ॥

---

ಶ್ರೀಭೂಧ......ಸುರತರು—ಶ್ರೀ–ಷಡ್ಗುಣೈಶ್ವರ್ಯಯುಕ್ತಳಾದ,ಭೂಧರೇಂದ್ರತನಯಾ- ಪಾರ್ವತಿಯೆಂಬ, ಶೋಭಾವಹ- ಕಾಂತಿಯನ್ನು ವಹಿಸಿಕೊಂಡಿರುವ, ಕಲ್ಪವಲ್ಲರೀ- ಕಲ್ಪಲತೆಗೆ, ಸುರತರು- ಕಲ್ಪವೃಕ್ಷವಾದ, ಮತ್ತೇಭಾಜಿನಾಂಬರಂ— ಮತ್ತೇಭ- ಮದಿಸಿದ ಆನೆಯ, ಅಜಿನ- ಚರ್ಮವೇ, ಅಂಬರಂ- ವಸ್ತ್ರವಾಗಿಯುಳ್ಳ, ನಾಗಾಭರಣಂ, ಶಿವಲಿಂಗಂ, ಶಿಷ್ಟರಂ- ಸತ್ಪುರುಷರನ್ನು, ಪೊರೆಗೆ. ... ॥೧॥

ಗುರುಚರಣಾ......ಚಿತ್ತಂ— ಗುರು- ಗುರುವಿನ, ಚರಣ- ಪಾದವೆಂಬ, ಅರುಣಾಂಬುಜ- ಕೆಂದಾವರೆಯ, ಯುಗ- ಯುಗ್ಮದ, ಸ್ಮರಣ- ನೆನೆಯುವಿಕೆಯಲ್ಲಿ, ಸ್ಥಿರ- ನಿಶ್ಚಂಚಲವಾದ, ಚಿತ್ತಂ- ಮನಸ್ಸುಳ್ಳ, ಅಲಸ......ಚಕೋರಂ— ಅಲಸತ್- ಆ ಪ್ರಕಾಶಮಾನವಾದ, ಗುರು- ಗುರುವಿನ, ಕರುಣಾಕಟಾಕ್ಷ- ದಯಾವಿಶಿಷ್ಟವಾದ ಕಡೆಗಣ್ಣೋಟದ, ರುಚಿ- ಕಾಂತಿಯೆಂಬ, ಚಂದ್ರಮರೀಚಿ- ಬೆಳ್ದಿಂಗಳಿಗೆ, ಚಕೋರಂ, ಆತ್ಮವಿದ್ಗುರುಪದಪದ್ಮಶೇಖರಶಿರಂ— ಆತ್ಮವಿತ್- ಪರಮಾತ್ಮನನ್ನು ತಿಳಿದ, ಗುರು-ಗುರುವಿನ, ಪದಪದ್ಮ- ಪಾದಕಮಲವೆಂಬ, ಶೇಖರ- ಶಿರೋಭೂಷಣವೇ, ಶಿರಂ- ತಲೆಯಲ್ಲುಳ್ಳ, ಗುರುವಾಕ್ಯಸುಧಾ......ರುಚಿ— ಗುರು- ಗುರುವಿನ, ವಾಕ್ಯ- ಮಾತೆಂಬ, ಸುಧಾ- ಅಮೃತದ, ಸುಪಾನ- ಒಳ್ಳೆಯಪಾನದಲ್ಲಿ, ಚಾರು- ಮನೋಹರವಾದ, ರುಚಿ- ಪ್ರೀತಿಯುಳ್ಳ, ಗುರುಪ್ರಸಾದರಸಿಕಂ— ಗುರು- ಗುರುವಿನ, ಪ್ರಸಾದ- ಅನುಗ್ರಹದ- ರಸಿಕಂ- ರಸಜ್ಞನಾದ, ಗುರುಲಿಂಗಸದಾಸಮರ್ಚಕಂ- ಗುರುಲಿಂಗಗಳನ್ನು ಸರ್ವಕಾಲದಲ್ಲೂ ಪೂಜಿಸುವ. ... ... ... ... ... ... ॥೨॥

ಗುರುಭಕ್ತಿನವಮರುನ್ಮಣಿ— ಗುರುಭಕ್ತಿ- ಗುರುಭಕ್ತಿಗೆ, ನವ- ನೂತನವಾದ, ಮರುನ್ಮಣಿ- ಚಿಂತಾಮಣಿಯಾದ, ಗುರುಭಕ್ತಿಸುಧಾಸರೋಧಿ— ಗುರುಭಕ್ತಿ- ಗುರುಭಕ್ತಿಗೆ, ಸುಧಾಸರೋಧಿ- ಕ್ಷೀರಸಮುದ್ರನಾದ, ಗುರುಭಕ್ತಿಸುಖಾಕರಮೂರ್ತಿ— ಗುರುಭಕ್ತಿ- ಗುರುಭಕ್ತಿಯೆಂಬ, ಸುಖ- ಸುಖಕ್ಕೆ, ಆಕರ

ಕರಮೂರ್ತಿ ರಂಜಿಸಿರ್ದಂ । ಗುರುಭಕ್ತಿಧುರೀಣನೆನಮ ಗುರುಭಕ್ತಾರ್ತ್ಯಂ ॥ ॥೩॥

ಕಂ ॥ ಗುರುಕರುಣಮೆ ಹರಣಂಗುರು । ಚರಣಮೆ ನಿಜಚಿತ್ತಹಸ್ತಿಗಾಲಾನಂತ ॥ ದ್ಗುರುಭಜನಸುಖಮೆ ಮೋಕ್ಷ । ಸ್ಥಿರಸುಖ ಮಾಗಿರೆ ಪೊದಳ್ದನಲವೇರಿರ್ದಂ ॥ ॥೪॥

ಕಂ॥ ಅಧಿಕರಿಸಿ ನಂಬಿ ನಗುರೋ । ರಧಿಕಮೆನಿಪ್ಪಾಗಮೋಕ್ತಿಯಂ ಗುರುವಿಂಜೇ ॥ ರಧಿಕಗುಣ ಮಿಲ್ಲೆನುತೆ ಭ । ಕ್ತಿಧುರಂಧರ ನೊಲ್ದು ಭಜಿಯಿಸುವಂ ಗುರುವರನಂ ॥ ॥೫॥

ಚಂ ॥ ಗುರುಚರಣಾಬ್ಜರೇಣುಭಸಿತಂ ಗುರುನಾಮಮೆ ದಿವ್ಯಮಂತ್ರಮಾ । ಗುರು ಭಜನಂ ನಿಜೇಷ್ಟಯಜನಂ ಗುರುಪಾದವೆ ಸರ್ವಸಂಪದೋ ॥ ತ್ಕರಜನನಸ್ಥಲಂ ಗುರುನಿ ರೂಪವೆ ಜೀವನ ಮಾಗೆ ಸಂತತಂ । ಗುರುಚರಣಾಂಬುಜದ್ವಯಮ ನರ್ಚಿಸುತಂ ಗುರು ಭಕ್ತ ನೊಪ್ಪುಗುಂ ॥ ... ... ... ... ... ॥೬॥

ಚಂ ॥ ಪರಿಮಳವಾರಿಯಿಂ ಗುರುಪದಾಂಬುಜಮಂ ತೊಳೆದಷ್ಟಗಂಧದಿಂ । ಪೊರೆ ದು ಸುಗಂಧಪುಷ್ಪಚಯಮಂ ಪದೆದೇರಿಸಿ ಧೂಪದೀಪಭಾ ॥ ಸುರಮಧುರಾನ್ನವೀಟಿಕೆಗ ಳಿಂ ನಲಿದರ್ಚಿಸಿ ಸಾತ್ವಿಕಂ ಪೊದ । ಳ್ದಿರೆ ಪೊಗಳುತ್ತೆ ಕೂರ್ತೆರಗಿ ಮತ್ತೆರಗುತ್ತೆ ಮ ನೋನುರಾಗದಿಂ ॥ ... ... ... ... ... ॥೭॥

---

ಆಸ್ಪದವಾದ, ಮೂರ್ತಿ- ಶರೀರವುಳ್ಳ, ಗುರುಭಕ್ತಿಧುರೀಣಂ- ಗುರುಭಕ್ತಿಧುರಂಧರನಾದ, ಗುರುಭಕ್ತಾರ್ತ್ಯಂ, ರಂಜಿಸಿ, ಇರ್ದ್ದಂ, ಅನುಮ! ... ... ... ... ॥೩॥

ಗುರುಕರುಣವೆ, ಹರಣಂ- ಪ್ರಾಣವು, ಗುರುಚರಣಮೆ, ನಿಜಚಿತ್ತಹಸ್ತಿಗೆ- ತನ್ನ ಮನಸ್ಸೆಂಬಆನೆಗೆ, ಆಲಾನಂ- ಕಟ್ಟುವ ಕಂಬವು, ತದ್ಗುರುಭಜನಸುಖಮೆ- ಆ ಗುರುವನ್ನು ಸ್ತೋತ್ರಮಾಡುವ ಸುಖವೇ, ಮೋಕ್ಷಸ್ಥಿರಸುಖ— ಮೋಕ್ಷ- ಕೈವಲ್ಯದ, ಸ್ಥಿರ- ಶಾಶ್ವತವಾದ, ಸುಖಂ, ಆಗಿ, ಇರೆ, ಪೊದಳ್ದು, ನಲವೇರಿ- ಸಂತೋಷವನ್ನುಹೊಂದಿ, ಇರ್ದಂ. ... ... ... ॥೪॥

ಭಕ್ತಿಧುರಂಧರಂ-ಭಕ್ತಿಯಭಾರವಂವಹಿಸಿದಗುರುಭಕ್ತನು, ನಗುರೋರಧಿಕಂ ಗುರೋಃ-ಗುರುವಿಗೆ, ಅಧಿಕಂ- ಹೆಚ್ಚಾದದ್ದು, ನ- ಇಲ್ಲ, ಎನಿಪ್ಪ, ಆಗಮೋಕ್ತಿಯಂ- ಆಗಮವಚನವನ್ನು, ಅಧಿಕರಿಸಿ- ಅಧಿಕವನ್ನಾಗಿ ತಿಳಿದು, ನಂಬಿ, ಗುರುವಿಂ, ಬೇರೆ, ಅಧಿಕಂ, ಅಣಂ- ಸ್ವಲ್ಪವೂ, ಇಲ್ಲ, ಎನುತೆ, ಒಲ್ದು, ಗುರುವರನಂ, ಭಜಿಯಿಸುಂ. ... ... ... ... ... ॥೫॥

ಗುರುಚರಣಾಬ್ಜರೇಣು—ಗುರು- ಗುರುವಿನ, ಚರಣಾಬ್ಜ- ಪಾದಕಮಲದ, ರೇಣು- ಧೂಳಿಯು, ಭಸಿತಂ, ಗುರುನಾಮಮೆ, ದಿವ್ಯಮಂತ್ರಂ, ಆಗುರುಭಜನಂ, ನಿಜೇಷ್ಟಯಜನಂ—ನಿಜ-ತನಗೆ, ಇಷ್ಟ-ಇಷ್ಟವಾದ, ಯಜನಂ- ಪೂಜೆಯು, ಗುರುಪಾದವೆ, ಸರ್ವಸಂಪದುತ್ಕರಜನನಸ್ಥಲಂ—ಸರ್ವ-ಸಮಸ್ತವಾದ, ಸಂಪತ್-ಸಂಪತ್ತುಗಳ, ಉತ್ಕರ ಸಮೂಹದ, ಜನನಸ್ಥಲಂ- ಜನ್ಮಭೂಮಿಯು, ಗುರುನಿರೂಪಮೆ- ಗುರುವಿನ ಆಜ್ಞೆಯೆ, ಜೀವನಂ, ಆಗೆ, ಸಂತತಂ, ಗುರುಭಕ್ತಂ, ಗುರುಚರಣಾಂಬುಜದ್ವಯಮಂ, ಅರ್ಚಿಸುತಂ, ಒಪ್ಪುಗುಂ.

ಗುರುಪದಾಂಬುಜಮಂ, ಪರಿಮಳವಾರಿಯಿಂ- ಸುವಾಸನೆಯಿಂಕೂಡಿದ ನೀರಿನಿಂದ, ತೊಳೆದು, ಅಷ್ಟಗಂಧದಿಂ, ಪೊರೆದು- ಲೇಪಿಸಿ, ಸುಗಂಧಪುಷ್ಪಚಯಮಂ- ಪರಿಮಳವಿಶಿಷ್ಟವಾದ ಹೂವುಗಳ ಸಮೂಹವನ್ನು, ಪದೆದು- ಇಚ್ಛೈಸಿ, ಏರಿಸಿ- ಧರಿಸಿ, ಧೂಪದೀಪಭಾಸುರವೀಟಿಕೆಗಳಿಂ- ಧೂಪದೀಪ ಪ್ರಕಾಶಮಾನವಾದ ತಾಂಬೂಲಗಳಿಂದ, ನಲಿದು, ಅರ್ಚ್ಚಿಸಿ, ಸಾತ್ವಿಕಂ- ರೋಮಾಂಚಾದಿ ಸಾತ್ವಿಕಭಾವವು, ಪೊದಳ್ದು- ವಿಸ್ತಾರವಾಗಿ, ಇರೆ, ಪೊಗಳುತ್ತೆ, ಕೂರ್ತು- ಪ್ರೀತಿಸಿ, ಎರಗಿ, ಮತ್ತೆ, ಮನೋನುರಾಗದಿಂ- ಮನಸ್ಸಿನ ಪ್ರೀತಿಯಿಂದ, ಎರಗುತ್ತೆ. ... ... ... ... ॥೭॥

ಕಂ || ನೆನೆನೆನೆದು ಗುರುಮಹತ್ವಮ | ನನುನಯದಿಂ ನೋಡಿ ನೋಡಿ ತನ್ಮೂರ್ತಿಯ ನೊಯ್ಯನೆ ಮಣಿದು ಮಣಿದು ತತ್ಕೀ|ರ್ತನಮಂ ಬಗೆದಂದು ನೆಗಳ್ದಂ ಗುರುಭಕ್ತಂ ||

ಚಂ || ಶಿವಮಯಭಾವ ಶಿಷ್ಯಜನಪಾಶನಿಕೃಂತನ ಶಿಷ್ಟವಂದ್ಯ ಶಾಂ | ಭವಮತಕಲ್ಪಭೂಜ ಶರಣಾಗತರಕ್ಷಕ ಶಾಂತ ಶರ್ವರೀ || ಧವರುಚಿಕೀರ್ತಿಭಾಸುರ ಶರಣ್ಯವರೇಣ್ಯ ಶಶಾಂಕಮೌಳಿಭ | ಕ್ತವಿಸರಭಾವನೀಯ ಜಯ ದೇಶಿಕಶೇಖರ ಸದ್ಗುಣಾಕರ || ||೯||

ಮ || ಸ್ರ || ನಿರವದ್ಯಂ ನಿಷ್ಪ್ರಪಂಚಂ ನಿರವಧಿಮಹಿಮಂ ನಿರ್ಗುಣಂ ನಿಷ್ಕಲಂಕಂ | ನಿರಪಾಯಂ ಚಿನ್ಮಯಂ ತಾನೆನಿಪ ಪರಶಿವಂ ನೀನೆ ಕಾರುಣ್ಯದಿಂದು || ಗುರುರೂಪಂ ತಾಳ್ದು ತೂಳ್ದೀ ಭವಮ ನಮಲಲಿಂಗಾಂಗಸಂಯೋಗಮಂ ಬಿ | ತ್ತರಿಸುತ್ತಂ ಶಿಷ್ಯಪಾಶಪ್ರತತಿಯ ಪರಿದೈ ಧಾತ್ರಿಯೊಳ್ ದೇಶಿಕೇಂದ್ರ || ... ... ||೧೦||

ಮತ್ತೇ || ಒದವಿರ್ದಾಗಮಮಸ್ತಕಪ್ರತತಿ ಲಕ್ಷ್ಮೀಶಾಜರುಂ ಕಾಣದ | ಗ್ಗದ ಚಿನ್ಮಾತ್ರಮೆನಿಪ್ಪ ದಿವ್ಯಶಿವಲಿಂಗಾಕಾರಮಂ ಕಾಣಿಸು || ತ್ತದನುದ್ಯದ್ವಪುರಿಂದ್ರಿಯಾದ

ಆ ಗುರುಭಕ್ತಂ, ಗುರುಮಹತ್ವಮಂ, ನೆನೆನೆನೆದು, ಅನುನಯದಿಂ, ತನ್ಮೂರ್ತಿಯಂ- ಆ ಗುರುವಿನ ಶರೀರವನ್ನು, ನೋಡಿ, ನೋಡಿ, ಒಯ್ಯನೆ, ಮಣಿದು ಮಣಿದು, ತತ್ಕೀರ್ತನಮಂ- ಆ ಗುರುಸ್ತೋತ್ರವನ್ನು, ಬಗೆದಂದು- ಮನಸ್ಸಿಗೆತಂದುಕೊಂಡು, ನೆಗಳ್ದಂ. ... ... ... ||೮||

ಶಿವಮಯಭಾವ- ಮಂಗಳಕರವಾದ ಮನಸ್ಸುಳ್ಳ, ಶಿಷ್ಯಜನಪಾಶನಿಕೃಂತನ- ಶಿಷ್ಯಜನರ ಭವಪಾಶವನ್ನು ಕತ್ತರಿಸುವ, ಶಿಷ್ಟವಂದ್ಯ- ಸತ್ಪುರುಷರಿಂದ ವಂದಿಸಲ್ಪಡುವದಕ್ಕೆ ಯೋಗ್ಯನಾದ, ಶಾಂಭವಮತಕಲ್ಪಭೂಜ- ವೀರಶೈವಮತಕ್ಕೆ ಕಲ್ಪವೃಕ್ಷನಾದ, ಶರಣಾಗತರಕ್ಷಕ- ತನ್ನನ್ನು ಸಂರಕ್ಷಕನನ್ನಾಗಿ ಹೊಂದಿದವರನ್ನು ರಕ್ಷಿಸುವ, ಶಾಂತ, ಶರ್ವರೀಧವರುಚಿಕೀರ್ತಿಭಾಸುರ— ಶರ್ವರೀಧವ- ಚಂದ್ರನ, ರುಚಿ- ಕಾಂತಿಯಂತಿರುವ, ಕೀರ್ತಿ- ಯಶಸ್ಸಿನಿಂದ, ಭಾಸುರ- ಪ್ರಕಾಶಮಾನನಾದ, ಶರಣ್ಯವರೇಣ್ಯ- ರಕ್ಷಕರಲ್ಲಿ ಶ್ರೇಷ್ಠನಾದ, ಶಶಾಂಕಮೌಳಿಭಕ್ತವಿಸರಭಾವನೀಯ— ಶಶಾಂಕಮೌಳಿ- ಪರಶಿವನ, ಭಕ್ತ- ಭಕ್ತರ, ವಿಸರ- ಸಮೂಹದಿಂದ, ಭಾವನೀಯ- ಧ್ಯಾನಿಸಲ್ಪಡುವದಕ್ಕೆ ಯೋಗ್ಯನಾದ, ಸದ್ಗುಣಾಕರ, ದೇಶಿಕಶೇಖರ- ಗುರುಶ್ರೇಷ್ಠನೇ! ಜಯ- ಸರ್ವೋತ್ಕೃಷ್ಟನಾಗು. ... ... ... ... ||೯||

ದೇಶಿಕೇಂದ್ರ, ತಾಂ, ನಿರವದ್ಯಂ- ನಿರ್ದೋಷಿಯು, ನಿಷ್ಪ್ರಪಂಚಂ- ಪ್ರಾಪಂಚಿಕವ್ಯಾಪಾರಶೂನ್ಯನು, ನಿರವಧಿಮಹಿಮಂ- ಕೊನೆಯಿಲ್ಲದ ಮಹತ್ವವುಳ್ಳವನು, ನಿರ್ಗುಣಂ, ನಿಷ್ಕಲಂಕಂ, ನಿರಪಾಯಂ, ಚಿನ್ಮಯಂ- ಜ್ಞಾನಸ್ವರೂಪನು, ಎನಿಪ, ಪರಶಿವಂ, ನೀನೆ; ಕಾರುಣ್ಯದಿಂದು, ಧಾತ್ರಿಯೊಳ್, ಗುರುರೂಪಂ, ತಾಳ್ದು, ಭವಮಂ- ಜನನ ಮರಣಾತ್ಮಕವಾದ ಸಂಸಾರವನ್ನು, ತೂಳ್ದು- ತುಳಿದು, ಅಮಳಲಿಂಗಾಂಗಸಂಯೋಗಮಂ- ನಿರ್ಮಲವಾದ ಲಿಂಗಾಂಗಸಾಮರಸ್ಯವನ್ನು, ಬಿತ್ತರಿಸುತ್ತಂ- ವಿಸ್ತರಿಸುತ್ತ, ಶಿಷ್ಯಪಾಶಪ್ರತತಿಯ- ಶಿಷ್ಯರ ಮಾಯಾಪಾಶಸಮೂಹವನ್ನು, ಪರಿದೈ- ಕಿತ್ತುಹಾಕಿದೆ. ... ||೧೦||

ಪೂರ್ಣಮಯಾಸಾಗರ! ಒದವಿರ್ದ- ಪ್ರಾಪ್ತವಾಗಿದ್ದ, ಆಗಮಮಸ್ತಕಪ್ರತತಿಲಕ್ಷ್ಮೀಶಾಜರುಂ— ಆಗಮಮಸ್ತಕ- ವೇದಶಿರಸ್ಸುಗಳಾದ ಉಪನಿಷತ್ತುಗಳ, ಪ್ರತತಿ- ಸಮೂಹ, ಲಕ್ಷ್ಮೀಶ- ವಿಷ್ಣು, ಅಜರುಂ- ಬ್ರಹ್ಮ ಇವರುಗಳೂ, ಕಾಣದ, ಅಗ್ಗದ- ಶ್ರೇಷ್ಠವಾದ, ಚಿನ್ಮಾತ್ರಂ- ಜ್ಞಾನವೇತಾನಾಗಿರುವದು, ಎನಿಪ್ಪ, ದಿವ್ಯಶಿವಲಿಂಗಾಕಾರಮಂ, ಕಾಣಿಸುತ್ತೆ, ಅದಂ- ಆ ಶಿವಲಿಂಗವನ್ನು, ಉದ್ಯದ್ವಪುರಿಂದ್ರಿಯಾದಿಪಂಚಕಸಮ್ಯಗ್ವ್ಯಾಪ್ತಿಯಿಂ— ಉದ್ಯತ್ ಉತ್ಕೃಷ್ಟವಾದ, ವಪುಃ- ಶರೀರ, ಇಂದ್ರಿಯ, ಇವುಗಳೇ,

ಮುಖಸಮ್ಯಗ್ವ್ಯಾಪ್ತಿಯಂ ಮಾಡಿ ಪೂ । ರ್ಣದಯಾಸಾಗರ ಸಾರ್ಷ್ಟಿದೈ ವಿಮಲಜೀವನ್ಮು
ಕ್ತಿಯಂ ಭಕ್ತರೊಳ್ ‖ ... ... ... ... ... ‖೧೧‖

ಮ ‖ ಸ್ರ ‖ ವರಪಂಚಬ್ರಹ್ಮ ನೈದುಂ ಕಳೆ ಮಿಸುವ ಮಹಾಪಂಚಸಾದಾಖ್ಯಪಂ
ಚಾ । ಮರವೃಂದಂ ಪಂಚತನ್ಮಾತ್ರೆಗ ಳಮರ್ದ ಲಸತ್ಪಂಚಭೂತಂ ಪ್ರಪಂಚೋ ‖ ದರ
ಪಂಚೀಭೂತತತ್ವಪ್ರತತಿ ಯೆನಿಪವು ತಾಳ್ದು ಪೆಂಪಾಂತ ಪಂಚಾ । ಕ್ಷರಮಂ ದೇಹೇಂದ್ರಿ
ಯಾಸುಸ್ಥಿತಮ ನೆಸಗಿದೈ ದೇಶಿಕೇಂದ್ರಾವತಂಸ ‖ ... ... ‖೧೨‖

ಚಂ ‖ ನಿಯತದಿ ನಂಗ ಮಿಲ್ಲದೆ ಸದಾಶಿವನಂ ಶಿವಲಿಂಗಮೂರ್ತಿಯೊ । ಳ್ನಿಯಮಿಸಿ
ಸಾರ್ಚಿ ಸರ್ವಗತನಂ ನತಹೃದ್ಗತನಂ ನೆಗಳ್ಚು ತಾ ‖ ರಯೆ ಜಗದಾತ್ಮನಂ ಮಿಸುವಭಕ್ತ
ನಿಜಾತ್ಮನ ನೊಲ್ದು ಮಾಡಿ ಚಿ । ನ್ಮಯನ ನೊಡರ್ಚಿ ಭಕ್ತಮಯನಂ ಪೆಸರ್ವೆತ್ತ ಯು
ದಾತ್ತವೈಭವ ‖ ... ... ... ... ... ... ‖೧೩‖

---

ಆದಿ- ಮೊದಲಾದವುಗಳ, ಮುಖ- ಮುಖದಲ್ಲಿ, ಸಮ್ಯಕ್- ಚೆನ್ನಾಗಿ, ವ್ಯಾಪ್ತಿಯಂ- ತುಂಬಿಕೊಂಡಿರುವಿಕೆ ಯನ್ನು, ಮಾಡಿ, ಭಕ್ತರೊಳ್, ವಿಮಲಜೀವನ್ಮುಕ್ತಿಯಂ- ನಿರ್ಮಲವಾದ ಪ್ರಾಣಸಹಿತವಾಗಿ ಹೊಂದುವ ಮುಕ್ತಿಯನ್ನು, ಸಾರ್ಷ್ಟಿದೈ- ಉಂಟುಮಾಡಿದೆ. ... ... ... ‖೧೧‖

ದೇಶಿಕೇಂದ್ರಾವತಂಸ- ಗುರುಶ್ರೇಷ್ಠರಲ್ಲಿ ಶ್ರೇಷ್ಠನಾದವನೇ ! ವರಪಂಚಬ್ರಹ್ಮಂ, ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನಗಳೆಂಬ ಪಂಚಬ್ರಹ್ಮವು, ಐದುಂಕಳೆ- ನಿವೃತ್ತಿ, ಪ್ರತಿಷ್ಠಾ, ವಿದ್ಯಾ, ಶಾಂತಿ, ಶಾಂತ್ಯತೀತಗಳೆಂಬ ಕಳೆಗಳು, ಮಿಸುವ, ಮಹಾಪಂಚಸಾದಾಖ್ಯಂ- ಮಹತ್- ಉತ್ಕೃಷ್ಟವಾದ, ಪಂಚಸಾದಾಖ್ಯಂ- ಕರ್ತೃಸಾದಾಖ್ಯ, ಕರ್ಮಸಾದಾಖ್ಯ, ಮೂರ್ತಿಸಾದಾಖ್ಯ, ಅಮೂರ್ತಿಸಾದಾಖ್ಯ, ಶಿವಸಾದಾಖ್ಯಗಳೆಂಬ ಸಾದಾಖ್ಯಗಳು, ಪಂಚಾಮರವೃಂದಂ- ಬ್ರಹ್ಮ, ವಿಷ್ಣು, ರುದ್ರ, ಈಶ್ವರ, ಸದಾಶಿವರೆಂಬ ದೇವತೆಗಳು, ಪಂಚತನ್ಮಾತ್ರೆಗಳ್, ಅಮರ್ದ- ಸೇರಿದ, ಲಸತ್ಪಂಚಭೂತಂ— ಲಸತ್- ಪ್ರಕಾಶಮಾನವಾದ, ಪಂಚಭೂತಂ, ಪೃಥ್ವಿ, ಅಪ್ಪು, ತೇಜಸ್ಸು, ವಾಯು, ಆಕಾಶಗಳೆಂಬ ಭೂತಪಂಚಕವು, ಪ್ರಪಂಚೋದರಪಂಚೀಭೂತತತ್ವಪ್ರತತಿ— ಪ್ರಪಂಚ- ಪ್ರಪಂಚವೇ, ಉದರ- ಗರ್ಭವಾಗುಳ್ಳ ಪರವಸ್ತುವಿನಿಂದ, ಪಂಚೀಭೂತ- ವಿಸ್ತರಿಸಲ್ಪಟ್ಟ, ತತ್ವ- ಚತುರ್ವಿಂಶತಿತತ್ವಗಳ, ಪ್ರತತಿ- ಸಮೂಹವು, ಎನಿಪ, ಇವಂ,ತಾಳ್ದು, ಪೆಂಪಾಂತ- ಅಧಿಕ್ಯವನ್ನು ಹೊಂದಿದ, ಪಂಚಾಕ್ಷರನುಂ, ದೇಹೇಂದ್ರಿಯಾಸುಸ್ಥಿತಮಂ— ದೇಹೇಂದ್ರಿಯ- ಶರೀರೇಂದ್ರಿಯಗಳ, ಆಸುಸ್ಥಿತಮಂ- ಎಲ್ಲಾಕಡೆಯಲ್ಲೂ ಶಾಶ್ವತವಾದ ಇರುವಿಕೆಯುಳ್ಳವುಗಳನ್ನಾಗಿ, ಎಸಗಿದೈ- ಮಾಡಿದೆ. ... ... ... ‖೧೨‖

ಉದಾತ್ತವೈಭವ- ಉತ್ಕೃಷ್ಟವಾದ ವಿಭವವುಳ್ಳ ಗುರುವೆ ! ನಿಯತದಿಂ- ನಿಶ್ಚಯವಾಗಿ, ಅಂಗಂ- ದೇಹವು, ಇಲ್ಲದ, ಸದಾಶಿವನಂ, ಶಿವಲಿಂಗಮೂರ್ತಿಯೊಳ್, ನಿಯಮಿಸಿ- ನಿಲ್ಲಿಸಿ, ಸಾರ್ಚಿ- ಸೇರಿಸಿ, ಸರ್ವಗತನಂ- ಸರ್ವವ್ಯಾಪಿಯಾದವನನ್ನು, ನತಹೃದ್ಗತನಂ— ನತ- ನಮ್ರರಾದರವ, ಹೃತ್- ಹೃದಯವನ್ನು, ಗತನಂ- ಹೊಂದಿರುವವನನ್ನಾಗಿ, ನೆಗಳ್ಚುತೆ- ಮಾಡುತ್ತ, ಆರಯೆ- ವಿಚಾರಿಸಲಾಗಿ, ಜಗದಾತ್ಮನಂ- ಜಗತ್ತೇ ತನ್ನಲ್ಲುಳ್ಳಪರಬ್ರಹ್ಮನನ್ನು, ಮಿಸುವ, ಭಕ್ತನಿಜಾತ್ಮನಂ— ಭಕ್ತ- ಭಕ್ತನ, ನಿಜ- ಸ್ವಕೀಯವಾದ, ಆತ್ಮನಂ- ಪ್ರಾಣಸ್ವರೂಪನನ್ನಾಗಿ, ಒಲ್ದು, ಮಾಡಿ, ಚಿನ್ಮಯನಂ- ಜ್ಞಾನಸ್ವರೂಪನನ್ನು, ಭಕ್ತಮಯನಂ- ಭಕ್ತವಿಕಾರನನ್ನಾಗಿ, ಒಡರ್ಚಿ- ಮಾಡಿ, ಪೆಸರ್ವೆತ್ತೆ— ಪ್ರಸಿದ್ಧಿಯಂಪೊಂದಿದೆ. ... ‖೧೩‖

ಕಂ॥ ಮಾಣದೆವಿಶ್ವೇಶ್ವರನಂ । ಪ್ರಾಣೇಶ್ವರ ನೆನಿಸಿ ನೆಗಳ್ದೆ ಕರಪಂಕಜದೊಳ್ ॥ ಕ್ಕಾ ಣಿಸಿದೆ ಬೊಮ್ಮಮಂ ನಿ । ಮ್ಮಾಣತಿಯೊಳ್ಸಂದು ಬಾಳ್ವ ನಗಜಾರಮಣಂ ॥ ॥೧೪॥

ಮ॥ ಸ್ರ॥ ಅದರಿಂ ನೀನೇ ಸ್ವತಂತ್ರಂನಿರುಪಮಮಹಿಮಂ ಸಚ್ಚಿದಾನಂದರೂಪಂ । ವಿದಿತಂ ತತ್ವಾದಿಬೀಜಂ ಗುರುವರ ಗುರುದೇವಾತ್ಪರಂ ನಾಸ್ತಿ ಯೆಂಬು ॥ ಕ್ತಿ ದಿಟಂ ನಿ ನ್ನತ್ತಣಿಂದಂ ಪರ ಮಿನಿತು ಮಣಂ ತೋರ ದೀವಿಶ್ವ ಮೆಲ್ಲಂ । ತ್ವದಧೀನಂ ಲಿಂಗಮುಂ ಜಂಗಮಮುಂ ಮತುಳಿತಾಚಾರ್ಯನುಂ ನೀನೆ ದೇವ ॥ ... ... ॥೧೫॥

ಮತ್ತೇ॥ ಮದಮಂ ತೂಳ್ದು ಮನೋಜನಂ ತುಳಿದು ಮಾಯಾಮೋಹಮಂ ನೂಂ ಕಿ ಪೆ । ರ್ಚಿದಹಂಕಾರಮ ನಿಕ್ಕಿ ದುರ್ವ್ಯಸನಮಂ ನುಗ್ಗೊತ್ತಿ ರಾಗಾದಿಯಂ ॥ ಸದೆ ದಂ ಗೇಂದ್ರಿಯವೃತ್ತಿಯಂ ಪರಿದು ಪಂಚಕ್ಲೇಶಮಂ ಕೀಳ್ತು ಚಿ । ತ್ಪದಮಂ ಸಾರ್ಚುಗುಮ ಲ್ತೆ ನಿನ್ನವಚನಂ ಪ್ರತ್ಯಕ್ಷಭಾಳೇಕ್ಷಣ ॥ ... ... ... ॥೧೬॥

ಮತ್ತೇ॥ ಕಡೆಗಣ್ಕಾಮದುಘಂ ಕರಂ ದಿವಿಜಭೂಜಂ ನಿನ್ನಚೆಲ್ವಾಳ್ದಮೆ । ಲ್ಲಡಿ ಚಿಂ ತಾಮಣಿ ವಾಣಿ ಸರ್ವಸುಪದಾರ್ಥಜ್ಯೋತಿ ಯೆಂದಳ್ಕರಿಂ ॥ ನುಡಿವ ರ್ಕೋವಿದ ರಂತದಿರ್ಕೆ

---

ವಿಶ್ವೇಶ್ವರನಂ- ಜಗದೀಶ್ವರನನ್ನು, ಮಾಣದೆ- ಬಿಡದೆ,ಪ್ರಾಣೇಶ್ವರಂ- ಭಕ್ತನಪ್ರಾಣಕ್ಕೆ ಈಶ್ವರನು, ಎನಿಸಿ, ನೆಗಳ್ದೆ- ಮಾಡಿದೆ, ಕರಪಂಕಜದೊಳ್- ಹಸ್ತಕಮಲದಲ್ಲಿ, ಬೊಮ್ಮಮಂ- ಪರಬ್ರಹ್ಮವನ್ನು, ಕಾಣಿಸಿ ದೆ, ಅಗಜಾರಮಣಂ- ಶಿವನು, ನಿಮ್ಮ, ಆಣತಿಯೊಳ್- ಆಜ್ಞೆಯಲ್ಲಿ, ಸಂದು, ಬಾಳ್ವಂ. ॥೧೪॥

ಅದರಿಂ, ನೀನೇ, ಸ್ವತಂತ್ರಂ, ನಿರುಪಮಮಹಿಮಂ, ಸಚ್ಚಿದಾನಂದರೂಪಂ- ಸತ್‌ಚಿತ್‌ಆನಂದಗಳ ಸ್ವರೂಪನು, ವಿದಿತಂ- ಪ್ರಸಿದ್ಧನು, ತತ್ವಾದಿಬೀಜಂ- ತತ್ವಗಳಿಗೆ ಮೊದಲನೆಯ ಕಾರಣನು, ಗುರುವರ, ಗುರುದೇವಾತ್- ಗುರುವಿಗಿಂತಲೂ, ಪರಂ- ಉತ್ಕೃಷ್ಟವಾದವಸ್ತುವು, ನಾಸ್ತಿ- ಇಲ್ಲ, ಎಂಬ, ಉಕ್ತಿ- ಮಾತು, ದಿಟಂ- ನಿಶ್ಚಯವು, ನಿನ್ನತ್ತಣಿಂದಂ- ನಿನಗಿಂತಲು, ಪರಂ- ಉತ್ಕೃಷ್ಟವು, ಇನಿತುಂ- ಇಷ್ಟು ಅಣಂ- ಸ್ವಲ್ಪವೂ, ತೋರದು, ದೇವ! ಈ ವಿಶ್ವಂ- ಈ ಪ್ರಪಂಚವು, ಎಲ್ಲಂ, ತ್ವದಧೀನಂ- ನಿನ್ನ ಅಧೀನ ವು, ಲಿಂಗಮುಂ, ಜಂಗಮಮುಂ, ಅತುಲಿತಾಚಾರ್ಯನುಂ- ಅಸದೃಶನಾದ ಗುರುವೂ, ನೀನೆ. ॥೧೫॥

ಪ್ರತ್ಯಕ್ಷಭಾಳೇಕ್ಷಣ- ಪ್ರತ್ಯಕ್ಷನಾದ ಶಿವನೇ, ನಿನ್ನ, ವಚನಂ- ಮಾತು, ಮದಮಂ- ಗರ್ವವನ್ನು, ತೂಳ್ದು- ಮೆಟ್ಟಿ, ಮನೋಜನಂ- ಮನ್ಮಥನನ್ನು, ತುಳಿದು, ಮಾಯಾಮೋಹಮಂ, ನೂಂಕಿ, ಪೆರ್ಚಿದ, ಅ ಹಂಕಾರಮಂ, ಇಕ್ಕಿ- ಹೊಡೆದು, ದುರ್ವ್ಯಸನಮಂ- ದುಷ್ಟವಾದ ದುಃಖವನ್ನು, ನುಗ್ಗಾಗಿ, ಒತ್ತಿ, ರಾಗಾ ದಿಯಂ- ಅನುರಾಗಾದಿಗಳನ್ನು, ಸದೆದು-ನಾಶಮಾಡಿ, ಅಂಗೇಂದ್ರಿಯವೃತ್ತಿಯಂ- ಶರೀರೇಂದ್ರಿಯವ್ಯಾಪಾ ರವನ್ನು, ಪರಿದು, ಪಂಚಕ್ಲೇಶಮಂ, ಅವಿದ್ಯೆ, ಅಸ್ಮಿತೆ, ರಾಗ, ದ್ವೇಷ, ಅಭಿನಿವೇಶಗಳೆಂಬುವ ಪಂಚಕ್ಲೇ ಶಗಳನ್ನು, ಕೀಳ್ತು, ಚಿತ್ಪದಮಂ- ಜ್ಞಾನಸ್ಥಾನವನ್ನು, ಸಾರ್ಚುಗುಮಲ್ತೆ ? ... ॥೧೬॥

ನಿನ್ನ, ಕಡೆಗಣ್- ಕಾಮದುಘಂ- ಕಾಮಧೇನುವು, ನಿನ್ನ, ಕರಂ- ಹಸ್ತವು, ದಿವಿಜಭೂಜಂ- ಕಲ್ಪವೃ ಕ್ಷವು, ನಿನ್ನ, ಚೆಲ್ವಾಳ್ದ- ಸುಂದರತ್ವವುಳ್ಳ, ಮೆಲ್ಲಡಿ- ಮೃದುವಾದ ಪಾದವು, ಚಿಂತಾಮಣಿ, ನಿನ್ನ, ವಾಣಿ- ಮಾ ತು, ಸರ್ವಸುಪದಾರ್ಥಜ್ಯೋತಿ— ಸರ್ವ- ಸಮಸ್ತವಾದ, ಸು- ಸವಿಾಚೀನವಾದ, ಪದಾರ್ಥ- ವಸ್ತುಗಳ, ಜ್ಯೋತಿ- ಪ್ರಕಾಶವು, ಎಂದು, ಅಳ್ಕರಿಂ- ಪ್ರೀತಿಯಿಂದ, ಕೋವಿದರ್- ಬುದ್ಧಿಶಾಲಿಗಳು, ನುಡಿವರ್, ಅದು, ಅಂತು, ಇರ್ಕೆ, ಭವಮಂ, ಬೇರ್ಕೆಯ್ವ- ಬೇರೆಮಾಡುವ, ಜೀವತ್ವಮಂ- ಪ್ರಾಣಿತ್ವವನ್ನು, ಕೆಡಿ

ಭವಮಂ ಬೇರ್ಕಿತ್ತೈವ ಜೀವತ್ವಮಂ। ಕೆಡಿಪಾನಂದಮ ನೀವ ಮುಕ್ತಿಗುಡುವಂದಂ ಮೋಕ್ಷ ವರ್ಗಕ್ಕುಮೆ॥ ... ... ... ... ... ... ॥೧೭॥

ಕಂ॥ ಅನಿಮಿತ್ತಬಂಧು ಮನುಮುನಿ। ಜನಕ್ಕಗೋಚರ ಮೆನಿಪ್ಪ ಲಿಂಗಮ ನೆನ್ನೀ।ತನುಮನದೊಳ್ ಭಾವದೊಳಾ।ತ್ಮನೊಳಂ ನೆಲೆಗೊಳಿಸಿ ಪೊರೆದೆ ನೀಂಘನಮಹಿಮ॥

ವ॥ ಎಂದು ಕೂರ್ಮೆಯಿಂ ಕೊಂಡಾಡಿ ದಂಡಪ್ರಣಾಮಂಗೆಯ್ದು ಚರಣಮಂ ಶಿರದೊಳ್ಪೊತ್ತು ಭಯಭಕ್ತಿವೆರಸು ಕಿಂಕರತೆಯ ನಪ್ಪುಕೆಯ್ದು ಗುರುಭಕ್ತಂ ಗುರುಕೃಪೆಯಂ ಪಡೆದು ಜಡಭಾವಮಂ ನೀಗಿ ಮೃಡಭಾವ ಮಳವಟ್ಟು ಗುರುದಕ್ಷಿಣೆಗೆ ಶರೀರಮರ್ಥಪ್ರಾಣಾಂಶ್ಚ ಸದ್ಗುರುಭ್ಯೋ ನಿವೇದಯೇ ದೆಂಬ ವಾಕ್ಯಾನುಸಾರದಿಂ ನಿಜಾಂಗವಸುಪ್ರಾಣಂಗಳಂ ನಿವೇದಿಸಿ॥ * * * * * * * * * * * * *

ಮ॥ ಸ್ರ॥ ದುರಿತಧ್ವಾಂತಾರ್ಕಬಿಂಬಂ ಭವಜಲಧರಜಂಝಾನಿಲಂ ಮೋಹಧಾತ್ರೀಧರಶಂಬಂ ಶೋಕಕಾಕೋದರಖಗಪತಿ ತಾಪಾಬ್ಧಿಕುಂಭೋದ್ಭವಂ ದು॥ಸ್ತರ ಮಾಯಾಭೂರುಹಪ್ರಸ್ಫುರಿತಪರಶು ಕಾಮೇಭಕಂಠೀರವಂ ಭೀ।ಕರಕಾಲಾರಣ್ಯದಾವಂ ಗುರುಪದವಿಲಸದ್ಭಕ್ತಿ ಶಕ್ತಿಪ್ರಯುಕ್ತಂ॥ ... ... ... .. ॥೧೯॥

---

ಪ- ನಾಶಮಾಡತಕ್ಕ, ಆನಂದಮಂ, ಈವ- ಕೊಡುವ, ಮೋಕ್ಷ, ಮುಕ್ತಿಗುಡುವ, ಅಂದಂ, ಅಪವರ್ಗಕ್ಕೆ, ಅಕ್ಕುಮೆ? ... ... ... ... ... ... ॥೧೭॥

ಅನಿಮಿತ್ತಬಂಧು- ನಿಷ್ಕಾರಣವಾಗಿ ಮಿತ್ರನಾದ, ಘನಮಹಿಮ! ನೀಂ, ಮನುಮುನಿಜನಕ್ಕೆ, ಅಗೋಚರಂ- ಕಾಣಿಸದೇ ಇರುವದು, ಎನಿಪ್ಪ, ಲಿಂಗಮಂ, ಎನ್ನ, ಈ ತನುಮನದೊಳ್, ಭಾವದೊಳ್, ಆತ್ಮನೊಳಂ, ನೆಲೆಗೊಳಿಸಿ- ಸ್ಥಿರವಾಗಿಸೇರಿಸಿ, ಪೊರೆದೆ. ... ... ... ॥೧೮॥

ಎಂದು, ಗುರುಭಕ್ತಂ, ಕೂರ್ಮೆಯಿಂ, ಕೊಂಡಾಡಿ, ದಂಡಪ್ರಣಾಮಂಗೆಯ್ದು- ದೊಣ್ಣೆಯಂತೆ ನಮಸ್ಕರಿಸಿ, ಚರಣಮಂ, ಶಿರದೊಳ್, ಪೊತ್ತು, ಭಯಭಕ್ತಿವೆರಸು- ಭಯದಿಂದಲೂ ಭಕ್ತಿಯಿಂದಲೂ ಕೂಡಿ, ಕಿಂಕರತೆಯಂ, ಅಪ್ಪುಕೆಯ್ದು- ಹೊಂದಿ, ಗುರುಕೃಪೆಯಂ, ಪಡೆದು, ಜಡಭಾವಮಂ-ಜಡತ್ವವನ್ನು, ನೀಗಿ-ಬಿಟ್ಟು, ಮೃಡಭಾವಂ, ಅಳವಟ್ಟು, ಗುರುದಕ್ಷಿಣೆಗೆ, ಶರೀರಂ, ಅರ್ಥಪ್ರಾಣಾಂಶ್ಚ-ದ್ರವ್ಯಪ್ರಾಣಗಳನ್ನೂ ಕೂಡ, ಸದ್ಗುರುಭ್ಯಃ-ಒಳ್ಳೆಯ ಗುರುಗಳಿಗೋಸ್ಕರ, ನಿವೇದಯೇತ್- ಸಮರ್ಪಿಸಬೇಕು, ಎಂಬ,ವಾಕ್ಯಾನುಸಾರದಿಂ, ನಿಜಾಂಗವಸುಪ್ರಾಣಂಗಳಂ— ನಿಜಾಂಗ- ತನ್ನದೇಹ, ವಸು-ಹಣ, ಪ್ರಾಣಂಗಳಂ,ನಿವೇದಿಸಿ.

ಶಕ್ತಿಪ್ರಯುಕ್ತಂ- ಬಲದಿಂಕೂಡಿದ, ಗುರುಪದವಿಲಸದ್ಭಕ್ತಿ,ದುರಿತಧ್ವಾಂತಾರ್ಕಬಿಂಬಂ- ಪಾಪವೆಂಬ ಕತ್ತಲೆಗೆ ಸೂರ್ಯಮಂಡಲವು; ಭವಜಲಧರಜಂಝಾನಿಲಂ-ಉತ್ಪತ್ತಿಯೆಂಬ ಮೋಡಕ್ಕೆಬಿರುಗಾಳಿಯು, ಮೋಹಧಾತ್ರೀಧರಶಂಬಂ- ಅಜ್ಞಾನವೆಂಬ ಬೆಟ್ಟಕ್ಕೆ ವಜ್ರಾಯುಧವು; ಶೋಕಕಾಕೋದರಖಗಪತಿ—ಶೋಕ-ದುಃಖವೆಂಬ, * ಕಾಕೋದರ– ಸರ್ಪಕ್ಕೆ, ಖಗಪತಿ-ಗರುಡನು; ತಾಪಾಬ್ಧಿಕುಂಭೋದ್ಭವಂ-ಆಧ್ಯಾತ್ಮಿಕ ಆಧಿಭೌತಿಕ ಆಧಿದೈವಿಕ ತಾಪಗಳೆಂಬ ಸಮುದ್ರಕ್ಕೆ ಅಗಸ್ತ್ಯರ್ಷಿಯು,ದುಸ್ತರಮಾಯಾಭೂರುಹಪ್ರಸ್ಫುರಿತಪರಶು- ದಾಟುವದಕ್ಕಾಗದ ಮಾಯೆಯೆಂಬ ಮರಗಳಗುಂಪಿಗೆ ಕೊಡಲಿಯು,ಕಾಮೇಭಕಂಠೀರವಂ-ವಿಷಯೇಚ್ಛೆಯೆಂಬ ಆನೆಗೆ ಸಿಂಹವು; ಭೀಕರಕಾಲಾರಣ್ಯದಾವಂ— ಭಯಂಕರನಾದಯಮನೆಂಬಕಾಡಿಗೆ ಕಾಳ್ಕಿಚ್ಚು;

---

* (ಅವ) ಕಾಕ- ಕಾಗೆಯಂತೆ, ಉದರ- ಹೊಟ್ಟೆಯುಳ್ಳದ್ದು; (ಅಥವಾ ಕಾಕವೆಂಬ ವಿಷವೇ ಹೊಟ್ಟೆಯಲ್ಲುಳ್ಳದ್ದು.). ... ... ... ... ... ॥೧೯॥

ಚಂ ‖ ಗುರುಪದಭಕ್ತಿ ದೇವತರು ವೀಶ್ವರಸತ್ಕೃಪೆ ಮೂಲ ಮುಲ್ಲಸ । ಚ್ಚರಚರ ಣಾರ್ಚನಾಭಿರತಿ ಪಲ್ಲವ ಮಾಗಮನಿಷ್ಠೆ ಶಾಖೆ ಶಾಂ ‖ ತಿರಸಮರುಂದ ಬೋಧ ಮಲ ರನ್ವಿತ ಮಾಗಿರೆ ಲಿಂಗಸಂಗಸೌ । ಖ್ಯರುಚಿ ಸುಮೋಕ್ಷದಿವ್ಯಫಲ ಮಪ್ಪುದು ತಪ್ಪದು ಭೂತಳಾಗ್ರದೊಳ್ ‖ .. ... ... ... ... ... ‖೧೦‖

ಕಂ ‖ ಕಡಿವೊಡೆ ದುರಿತವ್ರಜಮಂ । ಸುಡುವೊಡೆ ಭವವನಮ ನಭವಚರಣಾಂಬುಜಮಂ ‖ ಪಿಡಿವೊಡೆ ಸಂಪದಮುಕ್ತಿಯ । ಪಡೆವೊಡೆ ಗುರುಭಕ್ತಿ ಮೂಲಕಾರಣ ಮಲ್ತೆ ‖

ಕಂ ‖ ಗುರುಭಕ್ತಿ ಸರ್ವರುಜಯಂ । ಪರಿಹರಿಸುಗು ವೀಗು ವೈಹಿಕಾಮುಷ್ಮಿಕಭಾ‖ಸುರಸುಖಮ ನನಿಷ್ಟಮ ನೊ।ತ್ತರಿಸುಗು ಮಭವಾಂಘ್ರಿಭಕ್ತಿಯಂ ವರ್ಧಿಸುಗುಂ ‖

ಕಂ ‖ ಭವರೋಗಕ್ಕಿದು ಭೇಷಜ । ಮವಿಕಲಶಿವಪದಸುಸೌಧ ಕಿದು ಸೋಪಾನಂ ‖ ಪ್ರವಿಮಲಪರಮಜ್ಞಾನಾ । ರ್ಣವ ಕಿದು ಭಾವಿಪ್ಪೊಡೆ ಪೂರ್ಣಹಿಮಕರಕಿರಣಂ ‖ ‖೧೩‖

ಕಂ ‖ ಗುರುಚರಣಭಕ್ತಿ ಯಿಲ್ಲದ । ಹರಪೂಜೆ ನಿರರ್ಥ ವೆಂಬುದಾಗಮವಚನಂ ‖ ಹರಭಕ್ತಿಗೆ ಚರಭಕ್ತಿಗೆ । ಗುರುಭಕ್ತಿಯೆ ಮೂಲಕಾರಣಂ ಧಾರುಣಿಯೊಳ್ ‖ ‖೧೪‖

ಕಂ ‖ ಗುರುವಿಂ ಗೊಡಲಂ ಲಿಂಗಕೆ । ಹರಣಮ ನಾಜಂಗಮಕ್ಕೆ ನಿರ್ವಂಚನೆ ಸಂ ‖

---

ಭೂತಳಾಗ್ರದೊಳ್, ಗುರುಪದಭಕ್ತಿದೇವತರು- ಗುರುಚರಣಭಕ್ತಿಯೆಂಬ ಕಲ್ಪವೃಕ್ಷವು, ಈಶ್ವರಸತ್ಕೃಪೆ, ಮೂಲಂ- ಬುಡವು; ಉಲ್ಲಸಚ್ಚರಚರಣಾರ್ಚನಾಭಿರತಿ- ಪ್ರಕಾಶಿಸುವ ಜಂಗಮರ ಪಾದಪೂಜೆಯುಲ್ಲಾಸಕ್ತಿಯು, ಪಲ್ಲವಂ- ಚಿಗುರು; ಆಗಮನಿಷ್ಠೆ- ಶೈವಾಗಮಗಳಲ್ಲಿ ಶ್ರದ್ಧೆಯು, ಶಾಖೆ- ಕೊಂಬೆಯು; ಶಾಂತಿರಸಮರಂದಬೋಧಂ- ಶಾಂತಿಗುಣವೆಂಬ ಮಕರಂದವುಳ್ಳ ಜ್ಞಾನವು, ಅಲರ್- ಹೂವು, ಅನ್ವಿತಂ ಆಗಿ- ಕೂಡಿ, ಇರೆ, ಲಿಂಗಸಂಗಸೌಖ್ಯರುಚಿ- ಶಿವಲಿಂಗಯೋಗದಿಂದುಂಟಾದ ಸೌಖ್ಯದ ಪ್ರೀತಿಯು, ಸುಮೋಕ್ಷದಿವ್ಯಫಲಂ- ಒಳ್ಳೆಯಮುಕ್ತಿಯೆಂಬ ಶ್ರೇಷ್ಠವಾದ ಹಣ್ಣು, ಅಪ್ಪುದು; ತಪ್ಪದು. ... ‖೧೦‖

ದುರಿತವ್ರಜಮಂ- ಪಾಪಸಮೂಹವನ್ನು, ಕಡಿವೊಡೆ- ಕತ್ತರಿಸಬೇಕಾದರೆ, ಭವವನಮಂ- ಉತ್ಪತ್ತಿಯೆಂಬ ಕಾಡನ್ನು, ಸುಡುವೊಡೆ- ಸುಡಬೇಕಾದರೆ, ಅಭವಚರಣಾಂಬುಜಮಂ- ಶಿವಪಾದಕಮಲವನ್ನು, ಪಿಡಿವೊಡೆ, ಸಂಪದಮುಕ್ತಿಯಂ- ಮೋಕ್ಷ- ಸಂಪತ್ತನ್ನು, ಪಡೆವೊಡೆ, ಗುರುಭಕ್ತಿ, ಮೂಲಕಾರಣಮಲ್ತೆ? ‖೧೧‖

ಗುರುಭಕ್ತಿ, ಸರ್ವರುಜೆಯಂ- ಎಲ್ಲಾ ರೋಗಗಳನ್ನು, ಪರಿಹರಿಸುಗುಂ; ಐಹಿಕಾಮುಷ್ಮಿಕಭಾಸುರಸುಖಮಂ- ಈಲೋಕ ಪರಲೋಕ ವೆರಡರಲ್ಲೂ ಆಗಬೇಕಾದ ಸೌಖ್ಯವನ್ನು, ಈಗುಂ- ಕೊಡುವದು; ಅನಿಷ್ಟಮಂ- ಬೇಡದುದನ್ನು, ಒತ್ತರಿಸುಗುಂ- ಅಟೆಗೆನೂಕುವದು; ಅಭವಾಂಘ್ರಿಭಕ್ತಿಯಂ, ವರ್ಧಿಸುಗುಂ

ಇದು- ಈ ಗುರುಭಕ್ತಿಯು, ಭವರೋಗಕ್ಕೆ- ಉತ್ಪತ್ತಿಯೆಂಬ ರೋಗಕ್ಕೆ, ಭೇಷಜಂ- ಔಷಧಿಯು, ಇದು, ಅವಿಕಲಶಿವಪದಸುಸೌಧಕೆ— ಅವಿಕಲ- ಅವಿಚ್ಛಿನ್ನವಾದ, ಶಿವಪದ- ಈಶ್ವರನಾವಾಸಸ್ಥಾನದ, ಸುಸೌಧಕೆ- ಒಳ್ಳೆಯ ಮಾಡಕ್ಕೆ, ಸೋಪಾನಂ- ಹಂತವು; ಇದು, ಭಾವಿಪೊಡೆ, ಪ್ರವಿಮಲಪರಮಜ್ಞಾನಾರ್ಣವಕೆ- ಅತಿ ನಿರ್ಮಲವಾದ ಜ್ಞಾನವೆಂಬ ಸಮುದ್ರಕ್ಕೆ, ಪೂರ್ಣಹಿಮಕರಕಿರಣಂ- ಸಂಪೂರ್ಣ ಚಂದ್ರನ ಕಾಂತಿಯು. ... ... ... ... ... ... ‖೧೩‖

ಆಗಮವಚನಂ, ಗುರುಚರಣಭಕ್ತಿ, ಇಲ್ಲದ, ಹರಪೂಜೆ, ನಿರರ್ಥಂ- ನಿಷ್ಪ್ರಯೋಜನವಾದದ್ದು; ಎಂಬುದು; ಧಾರುಣಿಯೊಳ್, ಹರಭಕ್ತಿಗೆ, ಚರಭಕ್ತಿಗೆ, ಗುರುಭಕ್ತಿಯೆ, ಮೂಲಕಾರಣಂ. ... ‖೧೪‖

ಗುರುವಿಂಗೆ, ಒಡಲಂ- ಶರೀರವನ್ನು, ಲಿಂಗಕೆ, ಹರಣಮಂ- ಪ್ರಾಣವನ್ನು, ಆಜಂಗಮಕ್ಕೆ, ನಿರ್ವಂ

ಧರೆ ಧನವಂ ನಿಕ್ಕು ಸೇವಿಪ । ವರಭಕ್ತಂ ತತ್ಪ್ರಸಾದಸಿದ್ಧಿಯ ನಾಳ್ಗುಂ ॥ ॥೨೫॥

ಕಂ ॥ ಹರಮೂರ್ತಿತ್ರಯ ಮೆನಿಸುವ । ಗುರುಚರಲಿಂಗತ್ರಯಕ್ಕೆ ತನುವಂ ಮನ ಮಂ ॥ ಹರಣಮ ನೀಯದೆ ವಂಚಿಸೆ । ಸರಿವುದು ಶಿವಲಿಂಗಧಾರಣವ್ರತಭಾಗ್ಯಂ ॥೨೬॥

ಕಂ ॥ ಕಪಟಿಗೆ ಕುಟಿಲಂ ಗಾಶಾ । ಚಪಲಂಗೆ ಖಲಂಗೆ ಮೋಹಶೀಲಂಗೆ ವೃಥಾ ॥ ಕುಪಿತಂಗೆ ದಂಭಕಂ ಗತಿ । ಕೃಪಣಂ ಗೀತ್ರಿವಿಧಭಕ್ತಿ ಕೈಸಾರ್ದಪುದೇ ॥ ... ॥೨೭॥

ವ॥ ಮತ್ತಂ ॥ ಮ॥ ಸ್ರ॥ ದುರುಳಂ ಗಾಚಾರಶೂನ್ಯಂ ಗಧಿಕಮದನಿಯುಕ್ತಂಗೆ ಧೂರ್ತಂಗೆ ದುರ್ಬೋಧರುಚಿಸ್ವಾಂತಂಗೆ ಹಿಂಸಾಕರಣಮತಿಗೆ ವಿಶ್ವಾಸಹೀನಂಗೆ ದುಷ್ಕರ್ಮರತಂಗಜ್ಞಂಗೆ ಸಂದೇಹಿಗೆ ಪರಮತಶೀಲಂಗೆ ಪಾಷಂಡಿ ಗೆಂದುಂ । ಚರಲಿಂಗಾಚಾರ್ಯಭಕ್ತಿತ್ರಯ ಮಳವಡದೆಂದೆಂಬ ರೀಶಾಗಮಜ್ಞರ್ ॥ ... ... ॥೨೮॥

ಮ॥ ಸ್ರ॥ ವಿಮಲಸ್ವಾಂತಂಗೆ ವಿದ್ಯಾವಿನಯನಯಸದಾಚಾರಯುಕ್ತಂಗೆ ಭಕ್ತೋತ್ತಮಸಂಸರ್ಗಾಭಿಯುಕ್ತಂ ಗಭವಪದದಿದೃಕ್ಷಾಪರಂ ಗನ್ಯಮಾರ್ಗ ॥ ಭ್ರಮದೂರಂ ಗಪ್ರ

---

ಚನೆ, ಸಂದು, ಇರೆ, ಧನಮಂ, ಇತ್ತು, ಸೇವಿಪ, ವರಭಕ್ತಂ, ತತ್ಪ್ರಸಾದಸಿದ್ಧಿಯಂ- ಆ ಗುರುಲಿಂಗಜಂಗಮಾನುಗ್ರಹಪ್ರಾಪ್ತಿಯನ್ನು, ಆಳ್ಗುಂ- ಹೊಂದುವನು. ... ... ॥೨೫॥

ಹರಮೂರ್ತಿತ್ರಯಂ- ಈಶ್ವರನ ಮೂರುಶರೀರವು, ಎನಿಸುವ, ಗುರುಚರಲಿಂಗತ್ರಯಕ್ಕೆ- ಗುರುಲಿಂಗಜಂಗಮರಿಗೆ ತನುವಂ- ದೇಹವನ್ನು, ಮನಮಂ, ಹರಣಮಂ- ಪ್ರಾಣವನ್ನು, ಈಯದೆ, ವಂಚಿಸೆ, ಶಿವಲಿಂಗಧಾರಣವ್ರತಭಾಗ್ಯಂ- ಶಿವಲಿಂಗವನ್ನು ಧರಿಸುವಿಕೆಯೆಂಬ ನಿಯಮದಿಂದುಂಟಾಗುವ ಐಶ್ವರ್ಯವು, ಸರಿವುದು- ಜಾರಿಹೋಗುವದು. ... ... ... ... ... ॥೨೬॥

ಕಪಟಿಗೆ- ಮೋಸಗಾರನಿಗೆ, ಕುಟಿಲಂಗೆ- ವಕ್ರಿಯಾದವನಿಗೆ, ಆಶಾಚಪಲಂಗೆ- ಆಸೆಯಿಂದ ಚಂಚಲನಾದವನಿಗೆ, ಖಲಂಗೆ- ನೀಚನಿಗೆ, ಮೋಹಶೀಲಂಗೆ- ಅಜ್ಞಾನಸ್ವಭಾವವುಳ್ಳವನಿಗೆ, ವೃಥಾಕುಪಿತಂಗೆ- ನಿಷ್ಪ್ರಯೋಜನವಾಗಿ ಕೋಪವುಳ್ಳವನಿಗೆ, ದಂಭಕಂಗೆ- ಹೊರಡಬ್ಬುಳ್ಳವನಿಗೆ, ಅತಿಕೃಪಣಂಗೆ- ಬಹುಲುಬ್ಧನಿಗೆ, ಈತ್ರಿವಿಧಭಕ್ತಿ- ಈ ಗುರುಲಿಂಗಜಂಗಮಭಕ್ತಿಯು, ಕೈಸಾರ್ದಪುದೆ- ಪ್ರಾಪ್ತವಾಗುವದೇ ? ॥೨೭॥

ಈಶಾಗಮಜ್ಞರ್, ದುರುಳಂಗೆ- ದುಷ್ಟನಿಗೆ, ಆಚಾರಶೂನ್ಯಂಗೆ, ಅಧಿಕಮದನಿಯುಕ್ತಂಗೆ- ಹೆಚ್ಚಾದ ಗರ್ವದಿಂದ ಕೂಡಿದವನಿಗೆ, ಧೂರ್ತಂಗೆ- ನೀಚನಿಗೆ, ದುರ್ಬೋಧರುಚಿಸ್ವಾಂತಂಗೆ- ಕೆಟ್ಟಜ್ಞಾನದಲ್ಲಿ ಪ್ರೀತಿಯುಳ್ಳಮನಸ್ಸಿನವನಿಗೆ, ಹಿಂಸಾಕರಣಮತಿಗೆ- ಬಾಧೆಗೊಳಿಸುವ ಬುದ್ಧಿಯುಳ್ಳವನಿಗೆ, ವಿಶ್ವಾಸಹೀನಂಗೆ, ದುಷ್ಕರ್ಮರತಂಗೆ- ಕೆಟ್ಟಕೆಲಸದಲ್ಲಾಸಕ್ತಿಯುಳ್ಳವನಿಗೆ, ಅಜ್ಞಂಗೆ- ಮೂಢನಿಗೆ, ಸಂದೇಹಿಗೆ, ಪರಮತಶೀಲಂಗೆ- ಶಿವೇತರಮತಸ್ವಭಾವವುಳ್ಳವನಿಗೆ, ಪಾಷಂಡಿಗೆ- ವೇದಬಾಹ್ಯನಿಗೆ, ಎಂದುಂ- ಯಾವಾಗಲೂ, ಚರಲಿಂಗಾಚಾರ್ಯಭಕ್ತಿತ್ರಯಂ— ಚರ- ಜಂಗಮ, ಲಿಂಗ, ಆಚಾರ್ಯ- ಗುರು, ಇವುಗಳ, ಭಕ್ತಿತ್ರಯಂ, ಅಳವಡದು, ಎಂದೆಂಬರ್. ... ... ... ... ... ॥೨೮॥

ವಿಮಲಸ್ವಾಂತಂಗೆ- ನಿರ್ಮಲವಾದ ಮನಸ್ಸುಳ್ಳವನಿಗೆ, ವಿದ್ಯಾವಿನಯನಯಸದಾಚಾರಯುಕ್ತಂಗೆ, ವಿದ್ಯಾ, ವಿನಯ- ನಮ್ರತೆ, ನಯ- ನೀತಿ, ಸದಾಚಾರ- ಒಳ್ಳೆಯನಡತೆ ಇವುಗಳಿಂದ, ಯುಕ್ತಂಗೆ, ಅಭವಪದದಿದೃಕ್ಷಾಪರಂಗೆ- ಈಶ್ವರನ ಪಾದವನ್ನು ನೋಡಬೇಕೆಂಬುವದರಲ್ಲಿ ಆಸಕ್ತಿಯುಳ್ಳವನಿಗೆ, ಅನ್ಯಮಾರ್ಗಭ್ರಮದೂರಂಗೆ- ಶಿವಮತಮಾರ್ಗಕ್ಕಿಂತಲೂ ಭಿನ್ನವಾದ ಮಾರ್ಗದ ಸಂಚಾರಕ್ಕೆ ದೂರಸ್ಥನಾದವನಿಗೆ, ಅಪ್ರಮತ್ತಂಗೆ- ಧನಾದಿಮದಹೀನನಿಗೆ, ಅಚಲಮತಿಗೆ, ಸ್ಥಿರವಾದ ಬುದ್ಧಿಯುಳ್ಳವನಿಗೆ, ಅಹಂಕಾರ ಮುಕ್ತಂಗೆ,

ಮತ್ತಂ ಗಜಲಮತಿ ಗಹಂಕಾರಮುಕ್ತಂಗೆ ಶೈವಾ । ಗಮಸಿದ್ಧಂಭಕ್ತಿ ಲಿಂಗತ್ರಯದೊಳೊಗೆಯುದೀಶಪ್ರಸಾದಾಭಿಜಾತಂ॥ ... ... ... ... ॥೨೯॥

ಕಂ ॥ ಕನಸಿನ ಸಿರಿಯವೊಲಳಿವೀ । ತನುಧನವಂ ಮನವ ನಿತ್ತು ಗುರುಚರಲಿಂಗ ॥ ಕ್ಕನುನಯದಿ ನೆಂದು ಮಳಿಯದ । ಘನಶಿವಪದಸಿದ್ಧಿವಡೆಯ ಲೊಲ್ವನೆ ಜಾಣಂ॥ ॥೩೦॥

ಕಂ॥ ಶತಕೋಟವರ್ಷಕೃತಘೋ । ರತರತಪೋವೃಂದ ಮೊಂದೆದಿನಮೆಸಪ ಸಮು ॥ ನ್ನತಗುರುಚರಹರಭಕ್ತಿಯ । ಚತುರ್ಥಭಾಗಕ್ಕಮಾದೊಡಂಪಾಸಟಿಯೇ ॥ ॥೩೧॥

ವ ॥ ಎಂಬಶಿವಾಗಮವಾಕ್ಯಮ ನವಧರಿಸಿ ॥ * * * * * * * *

ಕಂ॥ಅದರಿಂ ಗುರುಭಕ್ತಂಗುರು।ಪದಭಕ್ತಿಯನಾಳ್ದು ಮುಖ್ಯ ಮೆನೆ ಲಿಂಗಕಲಾ ॥ ಸ್ಪದಜಂಗಮಪದಭಕ್ತಿಯ । ನೊದವಿಸುತಂತನುಮನೋಧನಾರ್ಪಣದಿಂದಂ॥ ॥೩೨॥

ವ ॥ ಮತ್ತಂ ॥ ಮತ್ತ॥ ಗುರುಸೇವಾರತಿಯೇತಪಂ ಗುರುಪದಾಬ್ಜಧ್ಯಾನಮೇ ಧ್ಯಾನ ಮಾ ।ಗುರುನಾಮಸ್ಮೃತಿಯೇ ಜಪಂ ಗುರುಪದಾಧೀನತ್ವಮೇ ಸದ್ವ್ರತಂ ॥ಗುರುತತ್ವಪ್ರಮೆಯೇನಿಜಪ್ರಮ.ಗುರೂಕ್ತಾಚಾರಮೇ ಶೀಲಮಾ ।ಗುರುನಿಷ್ಠಾವಿಧಿಯೇ ವಿಧಾನಮೆನ ಕಣ್ಗೊಪ್ಪಿರ್ದನತ್ಯೂರ್ಜಿತಂ॥ ... ... ... ... ॥೩೩॥

ವ ॥ಇಂತು ಜಗಜ್ಜನವಿನುತಚರಿತ್ರಂಗುರುಭಕ್ತಿಪ್ರಭಾವದಿ ನೊಪ್ಪುತ್ತಮಿರ್ದೊಂ

---

ಶೈವಾಗಮಸಿದ್ಧಂ, ಈಶಪ್ರಸಾದಾಭಿಜಾತಂ- ಶಿವಾನುಗ್ರಹದಿಂದುತ್ಪನ್ನವಾದ, ಲಿಂಗತ್ರಯದೊಳ್- ಗುರುಲಿಂಗ ಜಂಗಮರಲ್ಲಿ, ಭಕ್ತಿ, ಒಗೆಯುದು- ಹುಟ್ಟುವದು. ... ... ॥೨೯॥

ಕನಸಿನ, ಸಿರಿಯವೊಲ್, ಅಳಿವ- ನಾಶವಾಗುವ, ಈತನುಧನವಂ, ಮನವಂ, ಗುರುಚರಲಿಂಗಕ್ಕೆ, ಅನುನಯದಿಂ, ಇತ್ತು,ಎಂದುಂ, ಅಳಿಯದ, ಘನಶಿವಪದಸಿದ್ಧಿವಡೆಯಲ್, ಒಲ್ವನೆ- ಪ್ರೀತಿಸುವನೇ, ಜಾಣಂ.

ಶತ......ವೃಂದಂ—ಶತಕೋಟಿವರ್ಷ- ನೂರುಕೋಟಿವರ್ಷಗಳಲ್ಲಿ, ಕೃತ- ಮಾಡಲ್ಪಟ್ಟ, ಘೋರತರ- ಅತಿಭಯಂಕರವಾದ, ತಪೋವೃಂದಂ, ಒಂದೆದಿನಂ, ಎಸಪ, ಸಮುನ್ನತ ಗುರುಚರಹರಭಕ್ತಿಯ,ಚತುರ್ಥಭಾಗಕ್ಕಂ ಆದೊಡಂ- ಕಾಲುಭಾಗಕ್ಕಾದರೂ, ಪಾಸಟಿಯೆ-ಸಮಾನವೇ ? ... ॥೩೧॥

ಎಂಬ, ಶಿವಾಗಮವಾಕ್ಯಮಂ, ಅವಧರಿಸಿ- ಕೇಳಿ. * * * * * * * * *

ಅದರಿಂ, ಗುರುಭಕ್ತಂ, ಗುರುಪದಭಕ್ತಿಯಂ, ಮುಖ್ಯಂ, ಎನೆ, ಆಳ್ದು, ಲಿಂಗಕಲಾಸ್ಪದ ಜಂಗಮಪದಭಕ್ತಿಯಂ; ಲಿಂಗ ಕಲಾಸ್ಪದ- ಶಿವಕಲೆಗಾಶ್ರಯನಾದ, ಜಂಗಮ- ಚರಮೂರ್ತಿಯ, ಪದಭಕ್ತಿಯಂ, ತನುಮನೋಧನಾರ್ಪಣದಿಂದಂ, ಒದವಿಸುತಂ. ... ... ... ॥೩೨॥

ಅತ್ಯೂರ್ಜಿತಂ- ಅತಿಬಲಶಾಲಿಯಾದ ಗುರುಭಕ್ತಾರ್ಯನು, ಗುರುಸೇವಾರತಿಯೇ, ತಪಂ; ಗುರುಪದಾಬ್ಜಧ್ಯಾನಮೇ, ಧ್ಯಾನಂ, ಆ ಗುರುನಾಮಸ್ಮೃತಿಯೇ- ಆಗುರುವಿನ ಹೆಸರನ್ನು ಸ್ಮರಿಸುವಿಕೆಯೇ, ಜಪಂ ಗುರುಪದಾಧೀನತ್ವಮೇ- ಗುರುವಿನಪಾದಕ್ಕೆ ವಶನಾಗಿರುವದೇ, ಸದ್ವ್ರತಂ- ಒಳ್ಳೆಯನಿಯಮವು; ಗುರುತತ್ವಪ್ರಮೆಯೇ, ಗುರುವಿನ ಭಾವದಲ್ಲಿ ಯಾಥಾರ್ಥ್ಯಬುದ್ಧಿಯೇ, ನಿಜಪ್ರಮೆ- ತನ್ನ ಸ್ಥಿರತರವಾದ ಬುದ್ಧಿ; ಗುರೂಕ್ತಾಚಾರಮೇ, ಶೀಲಂ- ಸದಾಚಾರವು; ಆ ಗುರುನಿಷ್ಠಾವಿಧಿಯೇ- ಆ ಗುರುವಿನಲ್ಲಿ ಶ್ರದ್ಧೆಯಿಂ ಕೂಡಿದ ವ್ಯಾಪಾರವೇ, ವಿಧಾನಂ- ಕರ್ಮವು;ಎನೆ, ಕಣ್ಗೆ, ಒಪ್ಪಿದಂ. ... ... ॥೩೩॥

ಇಂತು, ಜಗಜ್ಜನನುತಚರಿತ್ರಂ- ಲೋಕದಲ್ಲಿರುವ ಜನಗಳಿಂದ ಹೊಗಳಿಸಿಕೊಳ್ಳಲ್ಪಟ್ಟ ಚರಿತ್ರವುಳ್ಳ ಗುರುಭಕ್ತಾರ್ಯನು, ಗುರುಭಕ್ತಿಪ್ರಭಾವದಿಂ, ಒಪ್ಪುತ್ತಂ, ಇರ್ದು, ಒಂದುದಿನಂ, ಗುರುಚರಾರ್ಚನೆಗೆ, ಅರ

ದುಪಿನಂ ಗುರುಚರಣಾರ್ಚನೆಗರಲ್ದರಲೆಂದು ಕುಸುಮಕರಂಡಕಮಂ ಕೊಂಡು ಬೆಳಗುಜಾವದೊಳೇಳ್ದು ಜವದಿಂ ನಡೆತರ್ಪಾಗಳಾ ಗುರುಚರಣರಕ್ಷೆಗಳಂ ನಿಜಾಂಘ್ರಿಗಳ್ಸೋಂಕೆ ಕಂಡಳ್ಕಿ ಬಳ್ಕಿ ಮನಂಗುಂದಿ ನೊಂದು ॥ * * * * * * * * * * * * *

॥ ಕಂ ॥ ಅಕಟಕಟ ಗುರುವರನ ಪಾ । ದುಕೆಯಂ ಟಿದುದೆನ್ನ ಬೆಂದಕಾಲ್ಘನತರಪಾ ॥ ತ
ಕ ಮಾದುದೆನಗೆ ಮಿಗೆ ದೇ । ಶಿಕಚರಣದ್ರೋಹಿಯೆನ್ನವೋಲ್ಪೆಗನಾವಂ ॥ ॥೩೪॥

॥ ವ ॥ ಪಾದುಕಾಸನಶಯ್ಯಾದಿ ಗುರುಣಾಯದಧಿಷ್ಠಿತಂ ನಸ್ಪೃಶೇದಂಘ್ರಿಣಾ ಯೆಂಬ ವಚನ ಮುಂಟಪ್ಪುದರಿಂ ತನಗಾದದುಷ್ಕೃತಕ್ಕೆ ನಿಷ್ಕೃತಿಯಾವುದೆಂದು ತನ್ನೊಳಾಲೋಚಿಸಿ ॥ * * * * * * * * * * * * * *

॥ ಚಂ ॥ ಕಡಿಕಡಿದೀ ಪದದ್ವಯಮ ನುದ್ಗತರಕ್ತರಸಾಜ್ಯದಿಂದೆ ಸಂ । ಗಡಿಸಿದ ಮಾಂ
ಸ ಮೆಂಬ ಪೊಸಪಿಂಡದೆ ಖಂಡಿಸಿದಸ್ಥಿಯೆಂಬ ಪೆಂ ॥ ಪಡರ್ದಸಮಿತ್ಸಮೂಹದೆ ಗುರೂತ್ತ
ಮನಾಮ ಮೆನಿಪ್ಪಮಂತ್ರದಿಂ । ದೊಡನೆ ಹರಪ್ರಕೋಪಶಿಖಿ ಗಾಹುತಿಗೊಟ್ಟಪೆ ನೆಂದು
ಕೂರ್ಮೆಯಿಂ ॥ ... ... ... ... ... ... ॥೩೫॥

ಕಂ ॥ ಕರವಾಳಂ ಜಡಿಯುತೆ ತ । ನ್ನೆರಡುಂ ಕಾಲ್ಗಳ ನಡರ್ತ್ತು ತುಂಡಿಸಿ ರುಧಿರೋ ॥
ತ್ಕರ ಮೆಚ್ಚು ಪಾಯ್ವುತಿರೆ ಗುರು । ವರಶರಣೆಂದಾರ್ದು ಕೆಲದೊಳಿರಿಸಿದ ನಾಗಳ್ ॥೩೬॥

---

ಲ್ದರಲೆಂದು- ಹೂವನ್ನು ತರಬೇಕೆಂದು, ಕುಸುಮಕರಂಡಕಮಂ- ಹೂವಿನ ಭರಣಿಯನ್ನು, ಕೊಂಡು ಗ್ರಹಿಸಿ, ಬೆಳಗುಜಾವದೊಳ್, ಏಳ್ದು, ಜವದಿಂ- ಬೇಗನೆ, ನಡೆತರ್ಪಾಗಳ್, ಆ ಗುರುಚರಣರಕ್ಷೆಗಳಂ- ಆ ಗುರುವಿನ ಪಾದರಕ್ಷೆಗಳನ್ನು, ನಿಜಾಂಘ್ರಿಗಳ್- ತನ್ನ ಪಾದಗಳು, ಸೋಂಕೆ, ಕಂಡು, ಅಳ್ಕಿ- ಭಯಪಟ್ಟು, ಬಳ್ಕಿ- ಆಯಾಸಪಟ್ಟು, ಮನಂಗುಂದಿ, ನೊಂದು. * * * * * * * * * *

ಅಕಟಕಟ ! ಎನ್ನ, ಬೆಂದಕಾಲ್- ಸುಟ್ಟಕಾಲು, ಗುರುವರನ, ಪಾದುಕೆಯ, ಅಂಟಿದುದು- ಸೋಂಕಿತು; ಎನಗೆ, ಮಿಗೆ, ಘನತರಪಾತಕಂ- ಬಲುಹೆಚ್ಚಾದ ಪಾಪವು, ಆದುದು; ಎನ್ನವೋಲ್; ದೇಶಿಕಚರಣದ್ರೋಹಿ- ಗುರುವರ್ಯಪಾದದ್ರೋಹಿಯು, ಪೆರಂ- ಮತ್ತೊಬ್ಬನು, ಆವಂ ? ... ॥೩೪॥

ಗುರುಣಾ- ಆಚಾರ್ಯನಿಂದ, ಅದಿಷ್ಠಿತಂ- ಆರೋಹಿಸಲ್ಪಟ್ಟ, ಯತ್- ಯಾವ, ಪಾದುಕಾಸನಶಯ್ಯಾದಿ— ಪಾದುಕಾ- ಪಾದರಕ್ಷೆ, ಆಸನ- ಪೀಠ, ಶಯ್ಯಾ- ಹಾಸಿಗೆ, ಇವುಗಳೇ, ಆದಿ- ಮೊದಲಾದ; ತತ್- ಆ ವಸ್ತುವನ್ನು, ಅಂಘ್ರಿಣಾ- ಕಾಲಿನಿಂದ, ನಸ್ಪೃಶೇತ್- ಸೋಂಕಬಾರದು; ಎಂಬ, ವಚನಂ, ಉಂಟಪ್ಪುದರಿಂದೆ, ಇಂತು, ಎನಗೆ, ಆದ, ದುಷ್ಕೃತಕ್ಕೆ- ಪಾಪಕ್ಕೆ, ನಿಷ್ಕೃತಿ- ಆಪೆನೆ ಹೊರಡಿಸುವಿಕೆಯು, ಆವುದು ? ಎಂದು, ತನ್ನೊಳ್, ಆಲೋಚಿಸಿ. * * * * * * * * * * * *

ಈ ಪದದ್ವಯಮಂ, ಕಡಿಕಡಿದು, ಉದ್ಗತರಕ್ತರಸಾಜ್ಯದಿಂದೆ, ಜೊರಟಂಥಾರಕ್ತವೆಂಬ ತುಪ್ಪದಿಂದ, ಸಂಗಡಿಸಿದ- ಕೂಡಿದ, ಮಾಂಸಂ, ಎಂಬ, ಪೊಸಪಿಂಡದೆ- ನೂತನವಾದ ತುತ್ತಿನಿಂದ, ಖಂಡಿಸಿದ, ಅಸ್ಥಿ- ಮೂಳೆಯು, ಎಂಬ, ಪೆಂಪು- ಅತಿಶಯವು, ಅಡರ್ದ- ಏರಿದ, ಸಮಿತ್ಸಮೂಹದೆ- ಕಟ್ಟಿಗೆಗಳಗುಂಪಿನಿಂದ, ಗುರೂತ್ತಮನಾಮಂ, ಎನಿಪ್ಪ, ಮಂತ್ರದಿಂದೆ, ಒಡನೆ, ಹರಪ್ರಕೋಪಶಿಖಿಗೆ- ಈಶ್ವರನ ಕೋಪವೆಂಬ ಬೆಂಕಿಗೆ, ಆಹುತಿಗೊಟ್ಟಪೆಂ; ಎಂದು, ಕೂರ್ಮೆಯಿಂ. ... ... ... ॥೩೫॥

ಕರವಾಳಂ- ಕತ್ತಿಯನ್ನು, ಜಡಿಯುತೆ- ಒದರುತ್ತ, ತನ್ನ, ಎರಡುಂಕಾಲ್ಗಳಂ, ಅಡರ್ತ್ತು- ಸೇರಿಸಿ, ತುಂಡಿಸಿ- ಕತ್ತರಿಸಿ, ರುಧಿರೋತ್ಕರಂ- ರಕ್ತದಗುಂಪು, ಎಚ್ಚು- ಹೊರಟು, ಪಾಯ್ವುತಿರೆ- ಹಾರುತ್ತಿರಲು, ,ಗುರುವರ ! ಶರಣ್, ಎಂದು, ಆರ್ದು- ಕೂಗಿ, ಕೆಲದೊಳ್- ಪಾರ್ಶ್ವದಲ್ಲಿ, ಇರಿಸಿದಂ, ಆಗಳ್. ॥೩೬॥

ಕಂ ॥ ವಿದಿತಗುರುಭಕ್ತಿದೇವತೆ । ಗಿದು ಬಲಿಗೆದರ್ದರುಣನಳಿನ ಮೆಂಬಂತಿರೆ ತ॥ತ್ಪದ
ಯುಗಲ ಮಮಲಗುರುಚರ। ಣದಜಾನಂ ಬಿಡಿದು ಭಕ್ತ ನೊಪ್ಪುತ್ತಿರ್ದಂ ॥ ॥೩೭॥

ವ ॥ ಆಸಮಯದೊಳಮರಗುಂಡಮಲ್ಲಿನಾಥಪಂಡಿತರೆಂಬ ತದ್ಗುರುಗಳ್ಶಿಷ್ಯನಿಂ ತೆಸೆಗಿಧದ್ಭುತವಾರ್ತೆಯ ನಾಕರ್ಣ್ಣಿಸಿ ಕರುಣಾತಿರೇಕದಿಂ ಶರಣಗಣಸಮೇತ ಮಾತಾಣಕ್ಕೆ ಗಳಿಲನೆ ಬಿಜಯಂಗೈವಿನಂ ಗುರುಭಕ್ತಯ್ಯಂ ಕಟ್ಟಿದಿರೊಳ್ಕಂಡು ನಯವಿನಯಸಂಭ್ರಮಂಬೆರಸು ಭಯಭಕ್ತಿಪಾರವಶ್ಯದಿ ನಿರ್ದ್ದಿನಿಸಾನುಂ ಬೇಗದಿ ನೆಳ್ಚತ್ತು ಸಾಷ್ಟಾಂಗಮೆರಗ ಲೇಳಲುಜ್ಜುಗಿಸುತಳವಿಲ್ಲದೆ ತಲ್ಲಣಿವಾಗಳ್ ॥ * * * * * * *

ಕಂ ॥ ಅರಿದೆಂದು ಶರಣಗಣ ಮ । ಚ್ಚರಿವಡೆ ತರುಣಾರುಣಾಂಶು ವಿಕಸಿತವಿಲಸ ॥
ತ್ತರುಣಾರುಣನಳಿನಯುಗ । ಸ್ಫುರಿತಂ ಪದಯುಗಲ ಮೊಗೆದಬೇಂ ರಂಜಿಸಿತೊ ॥೩೮॥

ಕಂ॥ ಜಡಭವಪರಿಭವಕರನಿ । ರ್ಜ್ಜಡಭವನಿಜಮೂರ್ತಿಯೆನಿಪ ಗುರುವಿನಕೃಪೆಯಿಂ ॥
ದೊಡನೊಗೆದಡಿದಾವರೆಯದು । ಜಡಭವಮಂ ನಗುವವೋಲ್ನಖದ್ಯುತಿ ಮೆರೆಗುಂ ॥೩೯॥

ಕಂ ॥ ತಳಿರುಡಿಯೆ ಮೂಡುಗುಂ ಪೊಸ । ದಳಿರಿಳೆಯೊಳ್ಪೂಗ ಳುಡಿಯೆ ಮು

---

ತತ್ಪದಯುಗಲಂ- ಆ ಗುರುಭಕ್ತಾರ್ಯನ ಪಾದವೆರಡು, ಇದು, ವಿದಿತಗುರುಭಕ್ತಿದೇವತೆಗೆ- ಪ್ರಸಿದ್ಧವಾದ ಗುರುಭಕ್ತಿಯೆಂಬ ದೇವತೆಗೆ, ಬಲಿಗೆದರ್ದ- ಪೂಜಾರ್ಥವಾಗಿ ಎರಚಿದ, ಅರುಣನಳಿನಂ- ಕೆಂಪುಕಮಲವು, ಎಂಬಂತೆ, ಇರೆ, ಭಕ್ತಂ, ಅಮಲಗುರುಚರಣದ, ಜಾನಂಬಿಡದು- ಧ್ಯಾನವಂಜೋದಿ, ಒಪ್ಪುತ್ತ, ಇರ್ದಂ.

ಆ ಸಮಯದೊಳ್, ಅಮರಗುಂಡಮಲ್ಲಿನಾಥಪಂಡಿತರ್, ಎಂಬ, ತದ್ಗುರುಗಳ್, ಶಿಷ್ಯಂ, ಇಂತು, ಎಸಗಿದ, ಅಧ್ಭುತವಾರ್ತೆಯಂ, ಆಕರ್ಣಿಸಿ, ಕರುಣಾತಿರೇಕದಿಂ- ದಯಾಧಿಕ್ಯದಿಂದ, ಶರಣಗಣಸಮೇತಂ, ಆಪಾಣಕ್ಕೆ- ಆ ಗುರುಭಕ್ತಾರ್ಯನಿದ್ದಸ್ಥಲಕ್ಕೆ, ಗಳಲನೆ- ಬೇಗನೆ, ಬಿಜಯಂಗೈವಿನಂ- ದಯಮಾಡುವಷ್ಟರಲ್ಲಿ, ಗುರುಭಕ್ತಯ್ಯಂ, ಕಟ್ಟಿದಿರೊಳ್- ಮುಂಗಡೆಯಲ್ಲಿ, ಕಂಡು, ನಯವಿನಯಸಂಭ್ರಮಂಬೆರಸು, ಭಯಭಕ್ತಿಪಾರವಶ್ಯದಿಂ, ಭಯದಿಂದಲೂ ಭಕ್ತಿಯಿಂದಲೂ ಉಂಟಾದ ಮೂರ್ಛೆಯಿಂದ, ಇರ್ದು, ಇನಿಸಾನುಂಬೇಗದಿಂ- ಸ್ವಲ್ಪಹೊತ್ತಿನಲ್ಲಿ, ಎಳ್ಚತ್ತು, ಸಾಷ್ಟಾಂಗಂ, ಎರಗಲ್- ನಮಸ್ಕರಿಸುವದಕ್ಕೆ, ಏಳಲ್, ಉಜ್ಜುಗಿಸುತೆ, ಅಳವು- ಶಕ್ತಿಯು, ಇಲ್ಲದೆ,ತಲ್ಲಣಿಪಾಗಳ್- ನಡುಗುವಾಗ. * * * * * * * *

ಶರಣಗಣಂ, ಅರಿದು- ಅಸಾಧ್ಯವು, ಎಂದು, ಅಚ್ಚರಿವಡೆ, ತರುಣಾ......ಸ್ಫುರಿತಂ— ತರುಣಾರುಣ- ಬಾಲಸೂರ್ಯನ, ಅಂಶು- ಕಿರಣದಿಂದ, ವಿಕಸಿತ- ಅರಳಿದ, ವಿಲಸತ್- ಪ್ರಕಾಶಿಸುವ, ತರುಣ- ಬಲು ಎಳೆಯದಾಗಿಯೂ ಬಲು ಹಳೆಯದಾಗಿಯೂ ಇಲ್ಲದಿರುವ, ಅರುಣನಳಿನ- ಕೆಂದಾವರೆಗಳ, ಯುಗ– ಯುಗ್ಮದಂತೆ, ಸ್ಫುರಿತಂ- ಪ್ರಕಾಶಿಸುವ, ಅದು, ಪದಯುಗಲಂ, ಒಗೆದು- ಹುಟ್ಟಿ, ಏಂರಂಜಿಸಿತೋ ? ॥೩೮

ಜಡ......ಮೂರ್ತಿ—ಜಡಭವ- ಮೂಢನಿಂದಹುಟ್ಟಿದುದನ್ನು (ಕಮಲವನ್ನು )ಪರಿಭವಕರ- ತಿರಸ್ಕರಿಸುವ, ನಿರ್ಜಡಭವ- ನೀರಿನಿಂದ ಹುಟ್ಟದೇ ಇರುವ, ( ಮೂಢನಿಂದ ಹುಟ್ಟದೇ ಇರುವ ) ಮೂರ್ತಿ-ಶರೀರವುಳ್ಳವನು, ಎನಿಪ. ಗುರುವಿನ, ಕೃಪೆಯಿಂದೆ, ಒಡನೆ, ಒಗೆದ, ಅದುಅಡಿದಾವರೆ-ಆ ಪಾದಕಮಲವು, ಜಡಭವಮಂ- ಮೂಢನಿಂದ ಹುಟ್ಟಿದುದನ್ನು ( ಕಮಲವನ್ನು ) ನಗುವವೋಲ್- ಹಾಸ್ಯಮಾಡುವಹಾಗೆ, ನಖದ್ಯುತಿ- ಉಗುರಿನ ಕಾಂತಿಯು, ಮೆರೆಗುಂ. ... ... ... ... ॥೩೯॥

ಇಳೆಯೊಳ್, ತಳಿರ್- ಚಿಗುರು, ಉಡಿಯೆ- ಮುರಿದುಹೋದರೆ, ಪೊಸದಳಿರು- ಹೊಸಚಿಗುರು, ಮೂಡುಗುಂ; ಪೂಗಳ್, ಉಡಿಯೆ, ಅಲರ್- ಹೂವು, ನಿರಾಕುಳಂ- ನಿಸ್ಸಂದೇಹವಾಗಿ, ಮೂಡುಗುಮೆ? ತ

ಡುಗುಮೆ ನಿರಾ ॥ ಕುಳ ಮಲ ರಿವನಡಿದಾವರೆ । ಪೊಳೆತದು ಮುನ್ನುಡಿಯೆ ತನ್ನನಿದುಚಿ ತ್ರತರಂ ॥ ... ... ... ... ... ... ॥೪೦॥

ಕಂ ॥ ಅಗಜಾಧಿಪಂಗೆ ದಾನಂ । ಸೊಗಯಿಕುಮೇ ಕುಣಿವ ಭೃಂಗಿ ಗೊಂದಡಿಯಿ ತ್ತಂ ॥ ಮಿಗೆ ಗುರುಕುಂಜರ ನತಿದಾ । ನಗುಣಂ ಭಕ್ತಂಗೆ ಪಾದಯುಗಳಮ ನಿತ್ತಂ ॥

ವ ॥ ಎಂದಲ್ಲಿ ಬಲ್ಲ ರೆಲ್ಲಂ ಸಲ್ಲೀಲೆಯಿಂ ನುತಿಸುತಿರ್ಪ್ಪಾಗಳ್ ॥ * * * * *

ಕಂ॥ ಗುರುಚರಣರಕ್ಷೆಯಂ ನಿಜ । ಶಿರದೊಳ್ಮಿಗೆ ಪೊತ್ತು ಪೊಣ್ಮಿದಾನಂದದೆ ತ ॥ ಚ್ಚರಣನಳಿನಕ್ಕೆ ಮಣಿದಾ । ದರದಿಂ ಪೊಗಳುತ್ತ ಮಿರ್ದ್ದ ನಾಗುರುಭಕ್ತಂ ॥ ॥೪೧॥

ವ ॥ ಆಸಮಯದೊಳ್ಶರಣಗಣಂ ಕಂಡು ಕಣ್ಬ್ದಂಬಿ ನೋಡಿ ಮುದಂಬಡೆದು ॥ *

ಚಂ ॥ ಎಲೆಗುರುಭಕ್ತ ನಿನ್ನ ಗುರುಭಕ್ತಿಸಮುಜ್ವಲವೃತ್ತಿ ಜಾತನಿ । ಶ್ಚಲಿತಮ ಹತ್ತ್ವ ಕೆಂತಿದು ವಿಚಿತ್ರಮೆ ದೂರ ಮಿದಲ್ತು ಮೊನ್ನೆ ಭೂ ॥ ಲಲಿತಜನೌಘ ಮೆಲ್ಲರಿಯೆ ನೀಂ ನೆಗಳ್ದದ್ಭುತಕಾರ್ಯಮಂ ಧರಾ । ತಳದೊಳೆ ಕಂಡು ಬಲ್ಲೆ ವಣ ಮೆಂತೆನೆ ನಿನ್ನಯ ದೇಶಿಕೋತ್ತಮಂ ॥ ... ... ... ... ... ॥೪೨॥

ಚಂ ॥ ಗುರುಪದತಂತ್ರತಾಸ್ಥಿತಿಗೆ ನಿನ್ನಯ ಲಬ್ಧಗುರುಪ್ರಸಾದಭಾ । ಸುರತೆ ಗ ಸೂಯೆಗೊಳ್ವ ನಿಜಶಿಷ್ಯಕದಂಬಕೆ ನಿನ್ನನನನ್ಯಸಾ ॥ ಧ್ಯರುಚಿರಭಕ್ತಿಭಾವದಳವಂ ಮಿಗೆ

---

ನ್ನಂ, ಮುನ್ನುಡಿಯೆ- ಮೊದಲು ಕೆತ್ತರಿಸಲು, ಇವನ, ಅಡಿದಾವರೆ, ಮೊಳತುದು; ಇದು, ಚಿತ್ರತರಂ- ಅತ್ಯಾಶ್ಚರ್ಯವು. ... ... ... ... ... ... ॥೪೦॥

ಕುಣಿವ, ಭೃಂಗಿಗೆ, ಒಂದಡಿಯಿತ್ತಂ- ಒಂದುಕಾಲನ್ನು ಕೊಟ್ಟನು; ಅಗಜಾಧಿಪಂಗೆ- ಶಿವನಿಗೆ, ದಾನಂ, ಸೊಗಯಿಕುಮೇ ? ಗುರುಕುಂಜರಂ, ಭಕ್ತಂಗೆ, ಮಿಗೆ, ಪಾದಯುಗಳಮಂ- ಎರಡುಕಾಲುಗಳನ್ನು, ಇತ್ತಂ; ಅತಿದಾನಗುಣಂ- ಅತ್ಯಂತವಿತರಣಗುಣವುಳ್ಳವನು. ... ... ॥೪೧॥

ಎಂದು, ಅಲ್ಲಿ, ಬಲ್ಲರ್, ಎಲ್ಲಂ, ಸಲ್ಲೀಲೆಯಿಂ, ನುತಿಸುತೆ, ಇರ್ಪ್ಪಾಗಳ್. * * * * * *

ಆ ಗುರುಭಕ್ತಂ, ಗುರುಚರಣರಕ್ಷೆಯಂ- ಗುರುವಿನ ಪಾದರಕ್ಷೆಯನ್ನು, ನಿಜಶಿರದೊಳ್, ಮಿಗೆ, ಪೊತ್ತು, ಪೊಣ್ಮಿದ- ಹೆಚ್ಚಾದ, ಆನಂದದೆ, ತಚ್ಚರಣನಳಿನಕ್ಕೆ, ಮಣಿದು, ಆದರದಿಂ, ಪೊಗಳುತ್ತಂ, ಇರ್ದ್ದಂ.

ಆ ಸಮಯದೊಳ್, ಶರಣಗಣಂ, ಕಂಡು, ಕಣ್ಬ್ದಂಬಿ- ಪೂರ್ಣನೇತ್ರದಿಂದ, ನೋಡಿ, ಮುದಂಬಡೆದು. * * * * * * * * * * * * * * * * * *

ಎಲೆಗುರುಭಕ್ತ ! ನಿನ್ನ, ಗುರು......ಮಹತ್ತ್ವಕೆ— ಗುರುಭಕ್ತಿ- ಗುರುಭಕ್ತಿಯಿಂದ, ಸಮುಜ್ವಲ- ಪ್ರಕಾಶಮಾನವಾದ, ವೃತ್ತಿ- ವ್ಯಾಪಾರದಿಂದ, ಜಾತ- ಉತ್ಪನ್ನವಾದ, ನಿಶ್ಚಲಿತ- ಸ್ಥಿರವಾದ, ಮಹತ್ತ್ವಕೆ, ಇಂತು, ಇದು, ವಿಚಿತ್ರಮೆ ? ಇದು, ದೂರಂ, ಅಲ್ತು; ಮೊನ್ನೆ, ಭೂಲಲಿತಜನೌಘಂ, ಎಲ್ಲ, ಅರಿಯೆ ನೀಂ, ನೆಗಳ್ದ, ಅದ್ಭುತಕಾರ್ಯಮಂ, ಅಣಂ- ಅತ್ಯಂತವಾಗಿ, ಧರಾತಳದೊಳೆ, ಕಂಡು, ಬಲ್ಲೆವ್, ಎಂತು? ಎನೆ, ನಿನ್ನಯ, ದೇಶಿಕೋತ್ತಮಂ- ಗುರುಶ್ರೇಷ್ಠನು. ... ... ॥೪೨॥

ನಿನ್ನಯ, ಗುರುಪದತಂತ್ರತಾಸ್ಥಿತಿಗೆ- ಗುರುಚರಣಾಧೀನತ್ವಕ್ಕೆ, ಲಬ್ಧಗುರುಪ್ರಸಾದಭಾಸುರತೆಗೆ— ಲಬ್ಧ- ಪಡೆಯಲ್ಪಟ್ಟ, ಗುರುಪ್ರಸಾದ- ಗುರುವಿನ ಅನುಗ್ರಹದಿಂದ, ಭಾಸುರತೆಗೆ- ಪ್ರಕಾಶಿಸುತ್ತಿರುವಿಕೆಗೆ, ಅಸೂಯೆಗೊಳ್ವ- ಹೊಟ್ಟೆಯಕಿಚ್ಚಂ ಹೊಂದುವ, ಶಿಷ್ಯಕದಂಬಕೆ- ಶಿಷ್ಯರ ಗುಂಪಿಗೆ, ನಿನ್ನ, ಅನನ್ಯಸಾಧ್ಯರುಚಿರಭಕ್ತಿಭಾವದ— ಅನನ್ಯಸಾಧ್ಯ- ಇತರರಿಂದ ಸಾಧಿಸಲ್ಪಡುವದಕ್ಕೆ ಅಸಾಧ್ಯವಾದ,

ಕಾಣಿಸಲೊಲ್ದು ಮೂರ್ತಿಗೊಂ । ಡಿರುತೆ ಸುತಲ್ಪದೊ ಳ್ಕೆಳಗೆ ತನ್ನ ಕೆಲಂಬಡಿಸಿದ್ದ
ಶಿಷ್ಯರುಂ ॥ ... ... ... ... ... ... ॥೪೪॥

ಮ ॥ ಸ್ರ ॥ ಕರೆ ದಾಗಳ್ಮಂಚದೊ ಳ್ಕುಳ್ಳಿರಿ ಮೆನೆ ನಗುತಂ ಬೆಕ್ಕಸಂಬಟ್ಟು ತಾವ
ವ್ರೋ । ರ್ವರ ನೋರ್ವ ರ್ನೋಡಿ ಮದ್ದೇಶಿಕ ನಿರೆ ಕೆಳಗಾವೆಂತು ಕುಳ್ಳಿರ್ಪೆ ವೀಭಾ ॥ ಸು
ರಮಂಚಸ್ಥಾನದೊ ಳ್ದುರ್ಘಟ ಮತಿಶಯದೋಷಾವಹಂ ತಾ ನಿದೆಂದೆ । ಲ್ಲರು ಮಾವಾ
ತಂ ಸಮುಲ್ಲಂಘಿಸೆ ನಸುನಗುತಂ ದೇಶಿಕಂ ನೋಡುತಾಗಳ್ ॥ ... ... ॥೪೫॥

ಮ ॥ ಸ್ರ ॥ ವಿನಯಂ ಬೆತ್ತಾತ್ಮಪಾದಾಂಬುಜಮ ನೊಸಗೆಯಿಂ ಪೂಜಿಸುತ್ತಿರ್ದ
ನಿನ್ನಂ । ಮನ ವೊಲ್ದಾರೋಹಿಸೈ ಮಂಚಮ ನೆನೆ ಮಣಿದಾರ್ಯಾಜ್ಞೆಯಂ ಪೊತ್ತು ನೀಂ
ಭೋಂ ॥ ಕನೆ ಪರ್ಯಂಕಾಗ್ರಮಂ ಸದ್ಗುರು ಶರ ಣೆನುತಂ ಪತ್ತಿದೈ ಮತ್ತ ಮಾದು । ರ್ಮ
ನರೆಲ್ಲರ್ಕಂಡು ಬದ್ಧಭ್ರುಕುಟಿಘಟಿತರಕ್ತೇಕ್ಷಣ ರ್ಕೋಪದಿಂದಂ ॥ ... ॥೪೬॥

ಮ ॥ ಸ್ರ ॥ ಕಡುಧೂರ್ತಂ ಸೊರ್ಕಿನಿಂ ದಳ್ಕದೆ ನಿಜಗುರುಸಾನ್ನಿಧ್ಯದೊ ಳ್ತನ್ನಿರೂ
ಪಂ । ಬಡೆದೆಂ ಮೇ ಣಾ ನೆನುತ್ತಂ ಕೆಳಗೆ ಪಿರಿಯ ರಾವಿರ್ಪುದಂ ನೋಡದುರ್ಬು ॥ ತ್ತೊ
ಡನೀ ಮಂಚಾಗ್ರಮಂ ತಾನಡರ್ದ ನಿದು ಮಲಂ ತಕ್ಕುದೇ ಚಿತ್ತಮಂ ನೋ । ಳ್ಪೊಡೆ ದೇ
ವಂ ಪೇಳ್ದೊಡಾವೇನಡರ್ದೆವೆ ಗುರುಪರ್ಯಂಕಮಂ ಭೀತಿಯಿಂದಂ ॥ ... ॥೪೭॥

---

ರುಚಿರ- ಮನೋಹರವಾದ, ಭಕ್ತಿಭಾವದ, ಅಳವಂ, ಮಿಗೆ, ಕಾಣಿಸಲ್, ಒಲ್ದು, ಸುತಲ್ಪದೊಳ್- ಒಳ್ಳೆ
ಯ ಹಾಸಿಗೆಯಲ್ಲಿ, ಮೂರ್ತಿಗೊಂಡು- ಕುಳಿತು, ಇರುತೆ, ಕೆಳಗೆ, ತನ್ನ, ಕೆಲಂಬಡಿದು- ಪಾರ್ಶ್ವವನ್ನನುಸ
ರಿಸಿ, ಇರ್ದ, ಶಿಷ್ಯರಂ. ... ... ... ... ... ॥೪೪॥

ಆಗಳ್, ಕರೆದು- ಮಂಚದೊಳ್, ಕುಳ್ಳಿರಿಂ, ಎನೆ, ತಾವ್, ನಗುತಂ, ಬೆಕ್ಕಸಂಬಟ್ಟು- ಆಶ್ಚರ್ಯಪ
ಟ್ಟು, ಓರ್ವರ್, ಓರ್ವರಂ, ನೋಡಿ, ಮದ್ದೇಶಿಕಂ- ನಮ್ಮ ಗುರೂತ್ತಮನು, ಕೆಳಗೆ, ಇರೆ, ಆವ್, ಈಭಾ
ಸುರಮಂಚಸ್ಥಾನದೊಳ್, ಎಂತುಕುಳ್ಳಿರ್ಪೆವ್? ಇದು, ತಾಂ, ದುರ್ಘಟಂ-ಅಶಕ್ಯವಾದದ್ದು; ಅತಿಶಯದೋ
ಷಾವಹಂ, ಎಂದು, ಎಲ್ಲರುಂ, ಆಮಾತಂ, ಸಮುಲ್ಲಂಘಿಸೆ, ದೇಶಿಕಂ, ಆಗಳ್, ನೋಡುತೆ, ನಸುನಗುತಂ.

ವಿನಯಂಬೆತ್ತು- ನಮ್ರತೆಯಂಹೊಂದಿ, ಆತ್ಮಪಾದಾಂಬುಜಮಂ, ಒಸಗೆಯಿಂ- ಉತ್ಸವದಿಂದ, ಪೂ
ಜಿಸುತ್ತೆ, ಇರ್ದ, ನಿನ್ನಂ, ಮನಂ, ಒಲ್ದು, ಮಂಚಮಂ, ಆರೋಹಿಸೈ; ಎನೆ, ನೀಂ, ಮಣಿದು- ನಮಸ್ಕರಿ
ಸಿ, ಆರ್ಯಾಜ್ಞೆಯಂ, ಪೊತ್ತು, ಸದ್ಗುರು ! ಶರಣ್, ಎನುತಂ, ಬೋಂಗನೆ, ಪರ್ಯಂಕಾಗ್ರಮಂ- ಮಂಚದ
ಮೇಲ್ಗಡೆಯನ್ನು, ಪತ್ತಿದೈ; ಮತ್ತಂ, ಆದುರ್ಮನರ್- ಆ ಕೆಟ್ಟಮನಸ್ಸುಳ್ಳ: ಎಲ್ಲರ್, ಕೋಪದಿಂದು-
ಕೋಪದಿಂದ, ಬದ್ಧಭ್ರುಕುಟಿಘಟಿತರಕ್ತೇಕ್ಷಣರ್— ಬದ್ಧ- ಕಟ್ಟಲ್ಪಟ್ಟ, ಭ್ರುಕುಟಿ- ಹುಬ್ಬುಗಳಲ್ಲಿ,
ಘಟಿತ- ಸೇರಿಸಲ್ಪಟ್ಟ, ರಕ್ತೇಕ್ಷಣರ್- ಕೆಂಗಣ್ಣುಗಳುಳ್ಳವರಾಗಿ. ... ... ॥೪೬॥

ಕಡುಧೂರ್ತಂ- ಅತಿನೀಚನಾದ ಗುರುಭಕ್ತನು, ಮೇಣ್, ಆಂ, ಗುರುನಿರೂಪಂಬಡೆದೆಂ- ಗುರುವಿನ
ಆಜ್ಞೆಯಂಹೊಂದಿದೆನು; ಎನುತ್ತಂ, ಸೊರ್ಕಿನಿಂದ- ಗರ್ವದಿಂದ, ಅಳ್ಕದೆ- ಹೆದರದೆ, ಪಿರಿಯರ್, ದೊಡ್ಡ
ವರಾದ, ಆವ್, ಕೆಳಗೆ, ಇರ್ಪುದಂ, ನೋಡದೆ, ಉರ್ಬುತ್ತ, ನಿಜಗುರುಸಾನ್ನಿಧ್ಯದೊಳ್- ತನ್ನ ಗುರುವಿನ
ಬಳಿಯಲ್ಲಿ, ಒಡನೆ, ಈಮಂಚಾಗ್ರಮಂ, ತಾಂ, ಅಡರ್ದಂ; ಇದು, ಮಲಂ- ನಿಶ್ಚಯವಾಗಿ, ತಕ್ಕುದೇ- ಯೋ
ಗ್ಯವಾಗುವದೇ ? ದೇವಂ, ಚಿತ್ತಮಂ- ಮನಸ್ಸನ್ನು, ನೋಳ್ಪೊಡೆ- ಪರೀಕ್ಷಿಸುವದಕ್ಕೆ, ಪೇಳ್ದೊಡೆ, ಆವ್,
ಭೀತಿಯಿಂದಂ, ಗುರುಪರ್ಯಂಕಮಂ, ಅಡರ್ದೆವೆ ? ... ... ... ॥೪೭॥

ಕಂ ॥ ಸರಸನವಗಂಧಕುಸುಮೋ । ತ್ಕರ ಮಿರೆಯುಂ ಕನಕದರಲ ನೊಲ್ದಂತೆ ಮ
ಹೇ ॥ ಶ್ವರ ನೀಧೂರ್ತನ ನೊಲ್ದಂ । ಗುರುವಿರೆಯುಂ ಶಿಷ್ಯ ರಮಲಗುಣಮಣಿಭರಣರ್ ॥
ಕಂ ॥ ಗುರುಶಿಷ್ಯಮಾರ್ಗವರ್ತ್ತನ । ಮಿರದೆ ಕುಮಾರ್ಗದೊಳೆ ನಡೆಯೆ ದೇವತ್ವ ಮ
ಣಂ॥ ದೊರೆಕೊಳ್ಗುಮೆ ಪರಿಪಡೆಗುಮೆ । ನರಭಾವಂ ವಿಬುಧತತಿಗೆ ವಿಶ್ವಂಭರೆಯೊಳ್॥೪೯॥
ಕಂ ॥ ಪಿರಿಯಶಿವಸೋದರರ್ಕಳ್ । ಪರಿದಡರಲ್ಕಳ್ಕಿದಾರ್ಯ್ಯಪರ್ಯ್ಯಂಕಮ ನೀ ॥ ದುರು
ಳ ನಿವನಡರ್ದನಿವನಿಂ । ಗುರುಚರಣದ್ರೋಹಿ ಯಾವನೋ ಪೆರ ನಿಳೆಯೊಳ್॥ ॥೫೦॥
ಕಂ ॥ ಇವನ ತಲೆಗಡಿದುರುಳ್ಚುವೆ । ವವನಿಯೊ ಳೆಂದಣ್ಮಿ ಗಳಪುವರ ಕಳಕಳಮಂ॥
ಪ್ರವಿಮಲಮತಿದೇಶಿಕಪುಂ । ಗವ ನೋಹೋ ಯೆಂದು ನಿಲಿಸಿ ನಸುನಗುತಾಗಳ್ ॥೫೧॥
ಮ ॥ ಸ್ರ ॥ ಇಳಿಯಲ್ವೇಳ್ದಲ್ಲಿ ನಿನ್ನಂ ಜವದಿ ನಿಳುಪಿ ಮಂಚಾಗ್ರದಿಂ ಮುಂದೆ ಶಂ
ಭೂ । ಜ್ವಾಳರೂಪಂ ಶೂಲ ವೊಂದಂ ನಡಿಸುತೆಲೆ ಗುರುದ್ರೋಹಿ ಯಂತಿರ್ಕೆ ನಿರ್ವ್ಯಾ ॥
ಕುಳ ರಾಚಾರ್ಯ್ಯಾಂಘ್ರಿಭಕ್ತಿಪ್ರವಣಮತಿಗ ಳೊಲ್ದೇರಿರೈ ನೀವಿದಂ ನಿ । ರ್ಮ್ಮಳಚಿತ್ತ ರ್ನೋ
ಳ್ಪೆ ನಾಂ ನಿಮ್ಮಯ ದೃಢತೆಯ ನೆಂದಾಡಿದಂ ದೇಶಿಕೇಂದ್ರಂ ॥ ... ॥೫೨॥
ಮ ॥ ಸ್ರ ॥ ಎನೆ ಕೇಳ್ದಾಚಾರ್ಯನಂಘ್ರಿದ್ವಯಕೆ ಮಣಿದಿದೇಂ ಪೇಳ್ವೆ ರೋಪ್ರೋ

---

ಸರಸನವಗಂಧಕುಸುಮೋತ್ಕರಂ- ಮನೋಹರವಾದ ಹೊಸಕಂಪಿನಿಂದ ಕೂಡಿದ ಹೂವ್ಗಳ ಸಮೂಹವು, ಇರೆಯುಂ, ಮಹೇಶ್ವರಂ,ಕನಕದ- ಉಮ್ಮತ್ತಿಯ, ಅರಲಂ, ಒಲ್ದಂತೆ-ಪ್ರೀತಿಸಿದಹಾಗೆ, ಅಮಲಗುಣಮಣಿಭರಣರ್- ನಿರ್ಮ್ಮಲಗಳಾದ ಸದ್ಗುಣಗಳೇ ಆಭರಣವಾಗುಳ್ಳ,.ಶಿಷ್ಯರ್, ಇರೆಯುಂ, ಗುರು, ಈ ಧೂರ್ತನಂ, ಒಲ್ದಂ. ... ... ... ... ... ॥೪೮॥

ವಿಶ್ವಂಭರೆಯೊಳ್- ಭೂಮಿಯಲ್ಲಿ, ವಿಬುಧತತಿಗೆ- ವಿದ್ವಾಂಸರಗುಂಪಿಗೆ, ಗುರುಶಿಷ್ಯಮಾರ್ಗವರ್ತ್ತನಂ, ಇರದೆ, ಕುಮಾರ್ಗದೊಳೆ, ನಡೆಯೆ, ದೇವತ್ವಂ, ಅಣಂ- ಅತ್ಯಂತವಾಗಿ, ದೊರೆಕೊಳ್ಗುಮೆ? ನರಭಾವಂ- ಮನುಷ್ಯತ್ವವು, ಪರಿಪಡೆಗುಮೆ- ನಾಶವಾಗುವದೇ ? ... ... ॥೪೯॥

ಪಿರಿಯ- ದೊಡ್ಡವರಾದ, ಶಿವಸೋದರರ್ಕಳ್- ಈಶ್ವರ ಸದೃಶರುಗಳು, ಪರಿದು- ಹೋಗಿ, ಅಡರಲ್ಕೆ- ಹತ್ತುವದಕ್ಕೆ, ಅಳ್ಕಿದ- ಭಯಪಟ್ಟ, ಆರ್ಯ್ಯಪರ್ಯ್ಯಂಕಮಂ- ಗುರುವಿನಮಂಚವನ್ನು, ಈದುರುಳಂ, ಇವಂ, ಅಡರ್ದಂ, ಇಳೆಯೊಳ್, ಇವನಿಂ-ಇವನಿಗಿಂತಲೂ, ಪೆರಂ-ಮತ್ತೊಬ್ಬ, ಗುರುಚರಣದ್ರೋಹಿ, ಆವಂ ?

ಇವನ, ತಲೆಗಡಿದು, ಅವನಿಯೊಳ್, ಉರುಳ್ಚುವೆವ್, ಎಂದು, ಅಣ್ಮಿ- ಪೌರುಷವಿಶಿಷ್ಟರಾಗಿ, ಗಳಪುವರ- ಕೂಗುವರ, ಕಳಕಳಮಂ- ಕೋಲಾಹಲವನ್ನು, ಪ್ರವಿಮಲಮತಿದೇಶಿಕಪುಂಗವಂ- ಅತಿ ನಿರ್ಮ್ಮಲವಾದ ಬುದ್ಧಿಯುಳ್ಳ ಗುರೂತ್ತಮಶ್ರೇಷ್ಠನು, ಓಹೋ ! ಎಂದು ನಿಲಿಸಿ, ನಸುನಗುತೆ, ಆಗಳ್. ॥೫೧॥

ಶಂಭೂಜ್ವಾಳರೂಪಂ- ಈಶ್ವರನಂತೆ ಪ್ರಕಾಶಿಸುವ ಸ್ವರೂಪುಳ್ಳ, ದೇಶಿಕೇಂದ್ರಂ, ಮಂಚಾಗ್ರದಿಂ, ಅಲ್ಲಿ, ನಿನ್ನಂ; ಇಳಿಯಲ್ವೇಳ್ದು- ಇಳಿಯುವದಕ್ಕೆ ಹೇಳಿ, ಜವದಿಂ, ಇಳುಪಿ, ಮುಂದೆ, ಶೂಲಂಬಂದಂ- ಒಂದು ಶೂಲವನ್ನು, ನಡಿಸುತ್ತೆ, ನೆಡಿಸಿ, ಎಲೆ! ಗುರುದ್ರೋಹಿ, ಅಂತು, ಇರ್ಕೆ; ನಿರ್ವ್ಯಾಕುಳರ್- ಮನಸ್ಸಿನಲಾವಿಕೆಯಿಲ್ಲದ, ಆಚಾರ್ಯ್ಯಾಂಘ್ರಿಭಕ್ತಿಪ್ರವಣಮತಿಗಳ್- ಗುರುಪಾದಭಕ್ತಿಯಲ್ಲಾಸಕ್ತವಾದ ಬುದ್ಧಿಯುಳ್ಳ, ನಿರ್ಮ್ಮಲಚಿತ್ತರ್, ನೀವ್, ಇದಂ- ಈ ಶೂಲವನ್ನು, ಒಲ್ದು, ಏರಿರೈ; ಆಂ, ನಿಮ್ಮಯ, ದೃಢತೆಯಂ- ಮನಸ್ಸಿನ ಗಟ್ಟಿತನವನ್ನು, ನೋಳ್ಪೆಂ, ಎಂದು, ಆಡಿದಂ. ... ... ... ॥೫೩॥

ಎನೆ, ಕೇಳ್ದು, ಆಚಾರ್ಯನ, ಅಂಘ್ರಿದ್ವಯಕೆ, ಮಣಿದು, ಇದೇಂ ಪೇಳ್ವಿರಿ? ಓಪ್ರೋಪ್ರೋ! ಮುನ್ನೊ

ವ್ರೊ ಮುನ್ನೊ । ರ್ಮೆ ನಿತಾಂತಂ ಮಂಚನೇರಲ್ಬೆಸಸಿದಿ ರಕಟಂದೋರ್ಮೆ ಶೂಲಾಗ್ರಮಂ
ಭೋಂ ॥ ಕನೆ ಪತ್ತಲ್ವೇಳ್ಕು ಮೆಂದಾಗ್ರಹಿಸಿದಪಿ ರಿದಕ್ಕರ್ಪವೇ ಮಂಚಮೇರಿ । ರ್ದನ
ನೀಶೂಲಾಗ್ರಮಂ ಪತ್ತೆನುತೆ ಬೆಸಸೆ ತಾಂಪತ್ತುಗುಂ ಮಾಣದೀಗಳ್ ॥ .. ॥೫೩॥

ಕಂ ॥ ವಿದಿತಗುರುವಾಕ್ಯಮಂ ವಿಾ । ರದ ಭಕ್ತಂ ಮುನ್ನ ಮಳ್ಕದಾಮಂಚಮನೇ ।
ರಿದನಲ್ತೆ ಬಸಿದ ಶೂಲಮ । ನಿದ ನಿಂದೇರಲ್ಕೆ ಬೆಸಸೆ ಪೆರಸಾರ್ದಪನೆ ॥ ... ॥೫೪॥

ಕಂ ॥ ಕಾಣಮನೆ ಕೊಂಡುದಕೆ ಕಡಿ । ಯಾಣಂ ತಾ ನುಚಿತ ಮೆಂಬ ಗಾಥೆಯತೆ
ರದಿಂ ॥ ಮಾಣದೆ ಮಂಚಮ ನೇರಿದ । ಜಾಣಂಗಿದು ಯುಕ್ತಮಲ್ತೆ ಶೂಲಾರೋಹಂ॥೫೫॥

ವ ॥ ಎಂದವ ರ್ನುಡಿದು ಪೆರಸಾರೆ ಗುರುವರಂ ಗುರುಭಕ್ತ ನೆನಿಪ ನಿನ್ನ ನಮಂದಕೃ
ಪಾರಸಭರಿತಕಟಾಕ್ಷದಿ ನಭೀಕ್ಷಿಸಿ ವಾತ್ಸಲ್ಯದಿಂ ಸಾರೆಗರೆದು ನಿಜತಾಂಬೂಲಪ್ರಸಾದಮಂ
ಕರುಣಿಸೆ ಕೈಕೊಂಡು ಭಕ್ತಿಯಿಂ ಸವಿ ದಂಗಲೇಪನಂಗೈದು ಪರಮಾನಂದ ಬಡೆದಿರೆ ಬಸಿ
ದ ನಿಶಿತಶೂಲಮಂ ಕಣ್ಸನ್ನೆಯಿಂ ತೋರ್ಪುದು ಮಾಗಳ್ ॥ * * * * * *

ಚಂ ॥ ಹರಹರ ಬಣ್ಣಿಸಲ್ಕಳವೆ ನಿನ್ನಧಟಂ ಪೊಡಮಟ್ಟು ದಿವ್ಯಸ । ದ್ಗುರುಪದಪ
ದ್ಮ ಕದ್ಭುತಮನಾಳೆ ಜನಂ ಪರಮಾನುರಾಗನಿ ॥ ರ್ಭರತೆಯ ನಪ್ಪುಕೆಯ್ದು ಪರಿತಂದೊ

---

ರ್ಮೆ ಮೊದಲೊಂದಾವರ್ತಿ, ಮಂಚನೇರಲ್- ಮಂಚವಂ ಹತ್ತುವದಕ್ಕೆ, ಬೆಸಸಿದಿರಿ; ಅಕಟ! ಇಂದು, ಓರ್ಮೆ, ಶೂಲಾಗ್ರಮಂ, ಭೋಂಕನೆ, ಪತ್ತಲ್ವೇಳ್ಕುಂ- ಹತ್ತಬೇಕು, ಎಂದು, ಆಗ್ರಹಿಸಿದಪಿರಿ, ಇದಕ್ಕೆ, ಆರ್ಪೆವೇ ಸಮರ್ಥರಾಗುವೆವೆ ? ಮಂಚಮೇರಿರ್ದನಂ- ಮಂಚವನ್ನು ಹತ್ತಿದ್ದವನನ್ನು, ಈಗಳ್, ಶೂಲಾಗ್ರಮಂ ಪತ್ತು, ಎನುತೆ, ಬೆಸಸೆ- ಆಜ್ಞಾಪಿಸಲು, ತಾಂ, ಮಾಣದೆ- ತಪ್ಪದೆ, ಪತ್ತುಗುಂ. ॥೫೩॥

ವಿದಿತಗುರುವಾಕ್ಯಮಂ, ವಿಾರದ, ಭಕ್ತಂ, ಮುನ್ನಂ, ಅಳ್ಕದೆ- ಹೆದರದೆ, ಆ ಮಂಚಮಂ, ಏರಿದನಲ್ತೆ? ಇಂದು, ಬಸಿದ- ಮೊನೆಮಾಡಿದ, ಇದಂಶೂಲಮಂ, ಏರಲ್ಕೆ, ಬೆಸಸೆ, ಪೆರಸಾರ್ದಪನೆ- ಹಿಂದೆಗೆಯುವನೇ ? ... ... ... ... ... ॥೫೪॥

ಕಾಣಮನೆ, ಕೊಂಡುದಕೆ ತೆಗೆದುಕೊಂಡದ್ದಕ್ಕೆ, ಕಡಿಯಾಣಂ, ತಾಂ,ಉಚಿತಂ; ಎಂಬ; ಗಾಥೆಯ, ತೆರದಿಂ, ಮಾಣದೆ, ಮಂಚಮಂ, ಏರಿದ, ಜಾಣಂಗೆ, ಇದುಶೂಲಾರೋಹಂ- ಈಶೂಲವಂ ಹತ್ತುವಿಕೆಯು; ಯುಕ್ತಮಲ್ತೆ ? ... ... ... ... ... ॥೫೫॥

ಎಂದು, ಅವರ್, ನುಡಿದು, ಪೆರಸಾರೆ- ಹಿಂದೆಗೆಯಲು, ಗುರುವರಂ, ಗುರುಭಕ್ತಂ, ಎನಿಪ, ನಿನ್ನಂ, ಅಮಂದಕೃಪಾರಸಭರಿತಕಟಾಕ್ಷದಿಂ, ಅಭೀಕ್ಷಿಸಿ, ವಾತ್ಸಲ್ಯದಿಂ- ಪ್ರೀತಿಯಿಂದ, ಸಾರೆಗರೆದು- ಸಮಿಾಪಕ್ಕೆ ಕರೆದು, ನಿಜತಾಂಬೂಲಪ್ರಸಾದಮಂ- ತನ್ನ ತಾಂಬೂಲರೂಪವಾದ ಪ್ರಸಾದವನ್ನು, ಕರುಣಿಸೆ- ಕೊಡಲು, ಕೈಕೊಂಡು- ಸ್ವೀಕರಿಸಿ, ಭಕ್ತಿಯಿಂ, ಸವಿದು, ಅಂಗಲೇಪನಂಗೈದು- ಮಯ್ಗೆ ಸವರಿಕೊಂಡು, ಪರಮಾನಂದಂಬಡೆದು, ಇರೆ, ಬಸಿದ– ಮೊನೆಮಾಡಿದ, ನಿಶಿತಶೂಲಮಂ- ತೀಕ್ಷ್ಣವಾದ ಶೂಲಾಯುಧವನ್ನು, ಕಣ್ಸನ್ನೆಯಿಂ, ತೋರ್ಪುದುಂ, ಆಗಳ್, * * * * * * * * * * * * * *

ಹರಹರ ! ಗುಣಾಕರ ನಿನ್ನ, ಅಧಟಂ- ಶೌರ್ಯವನ್ನು, ಬಣ್ಣಿಸಲ್ಕೆ, ಅಳವೆ- ಶಕ್ಯವೇ ? ದಿವ್ಯಸದ್ಗುರುಪದಪದ್ಮಕೆ, ಪೊಡಮಟ್ಟು- ನಮಸ್ಕರಿಸಿ, ಜನಂ, ಅದ್ಭುತಮಂ, ಆಳೆ, ಪರಮಾನುರಾಗನಿರ್ಭರತೆಯ- ಉತ್ಕೃಷ್ಟವಾದ ಪ್ರೇಮಾತಿಶಯವನ್ನು, ಅಪ್ಪುಕೆಯ್ದು- ಹೊಂದಿ, ಪರಿತಂದು- ಬಂದು, ಒಡನೆ.

ಡ ನೇರಿದೆ ಶೂಲಮಂ ಗುಣಾ । ಕರ ಮೊನೆಯುರ್ಬ್ಬಿ ಮೂಡೆ ನಡುನೆತ್ತಿಯೊ ಳೆಂತುಟೊ ಭ
ಕ್ತಿವೈಭವಂ ॥ ... ... ... ... ... ... ॥೫೬॥

ಕಂ ॥ ಪರಮಗುರುಭ್ಯೋನಮ ಎಂ । ಬರವಂ ಸೊಗಯಿಸೆ ಮುಖಾಬ್ಜದೊ ಳ್ಕಿರು
ನಗೆ ತ ॥ ಳ್ತಿರೆ ಮುನ್ನಮಂಚಮೇರಿದ । ಪರಿಯಿಂದೇರಿರ್ದ್ದ ಶೂಲಮಂ ಗುರುಭಕ್ತ ॥೫೭॥

ಕಂ ॥ ಮನಮದು ಗುರುವಿನೊ ಳಮರ್ದಿರೆ । ತನುವಂ ನೀಂ ಸ್ಥಾಣುವಿಂಗೆ ಪಡೆದರ್ಪಿ
ಸಿದೈ ॥ ತನುಮನದರ್ಪಣಭಾವಮು । ನೆನಿಸುಂ ಪಲ್ಲಟಸಿ ಮೆರೆದೆ ಪೊಸತೆನೆವಿಬುಧರ್॥೫೮॥

ಕಂ॥ ಪರಮಾನಂದಸುಧಾಬ್ಧಿಯು । ನಿರದುರ್ವ್ವಿಪ ಗುರುಕಟಾಕ್ಷಕೌಮುದಿ ಕವಿದೊ॥
ತ್ತರಿಸಿರೆ ಮುಗಿವಂಭೋಜಪ । ಪರಿಯಂ ಪರಿಭವಿಸಿ ಮುಗಿದ ಕರ ಮಿರೆ ನೊಸಲೊಳ್ ॥

ಕಂ॥ ಗುರುಚರಣಧ್ಯಾನಾಮೃತ।ಸರಸಿಯೊ ಳವಗಾಹ ಮಿರೆ ಮನೋಹಂಸಂ ನೋ॥
ಳ್ಪರ ಬಗೆಯೊ ಳೊಗೆಯೆ ಕೌತುಕ । ಮರರೆ ನಿಶಾತಾಗ್ರಶೂಲದೊ ಳ್ಕುಳ್ಳಿರ್ದ್ದ ॥೬೦॥

ಮ॥ ಸ್ರ॥ ಗುರುಪಾದಾಂಭೋಜದಾಮಂ ಗುರುಚರಣಮಿಳತ್ಪಾಂಸುಭಾಸ್ವಲ್ಲಲಾ
ಮಂ । ಗುರುವಾಕ್ಯಪ್ರಾಣಸೀಮಂ ಗುರುಪದಕಮಲಧ್ಯಾನನಿರ್ಧೂತಕಾಮಂ ॥ ಗುರುವಂಶಾ

---

ಕೂಡಲೇ, ನಡುನೆತ್ತಿಯೊಳ್, ಮೊನೆ, ಉರ್ಬ್ಬಿ- ಉಬ್ಬಿ, ಮೂಡೆ- ಹೊರಕ್ಕೆ ಹೊರಡಲು, ಶೂಲಮಂ, ಏರಿ
ದೆ; ಭಕ್ತಿವೈಭವಂ, ಎಂತುಟೊ ? ... ... ... ... ॥೫೬॥

ಗುರುಭಕ್ತ! ಮುಖಾಬ್ಜದೊಳ್, ಪರಮಗುರುಭ್ಯಃ- ಉತ್ಕೃಷ್ಟರಾದ ಗುರುಗಳಿಗೋಸ್ಕರ, ನ
ಮಃ, ಎಂಬ, ರವಂ- ಶಬ್ದವು, ಸೊಗಯಿಸೆ, ಕಿರುನಗೆ- ಮಂದಹಾಸವು, ತಳ್ತು- ಸೇರಿ, ಇರೆ, ಮುನ್ನ,
ಮಂಚಮೇರಿದ, ಪರಿಯಿಂದೆ, ಶೂಲಮಂ, ಏರಿ, ಇರ್ದೆ. ... ... ॥೫೭॥

ಅದುಮನಂ, ಗುರುವಿನೊಳ್, ಅಮರ್ದು- ಸೇರಿ, ಇರೆ, ನೀಂ, ಪಡೆದು, ತನುವಂ, ಸ್ಥಾಣುವಿಂಗೆ-
ಈಶ್ವರನಿಗೆ, ( ಶೋಟುಮರಕ್ಕೆ ) ಅರ್ಪಿಸಿದೈ; ತನುಮನದ, ಅರ್ಪಣಭಾವಮಂ- ಸಮರ್ಪಿಸುವಿಕೆಯ
ನ್ನು, ಪಲ್ಲಟಿಸಿ- ವ್ಯತ್ಯಸ್ತವಂಮಾಡಿ, ವಿಬುಧರ್-ವಿದ್ವಾಂಸರು, ಪೊಸತು, ಎನೆ, ಮೆರೆದೆ, (ಗುರುವಿಗೆ ದೇ
ಹವನ್ನೂ ಲಿಂಗಕ್ಕೆ ಮನಸ್ಸನ್ನೂ, ಅರ್ಪಿಸಬೇಕಾಗಿರುವಲ್ಲಿ, ಗುರುವಿಗೆ ಮನಸ್ಸನ್ನೂ ಲಿಂಗಕ್ಕೆ ದೇಹವನ್ನೂ
ಅರ್ಪಿಸಿದುದೇ ವ್ಯತ್ಯಸ್ತಕಾರ್ಯ. ) ... ... ... ... ॥೫೮

ಪರಮಾನಂದಸುಧಾಬ್ಧಿಯುಂ- ಉತ್ಕೃಷ್ಟವಾದ ಸಂತೋಷವೆಂಬ ಕ್ಷೀರಸಮುದ್ರವನ್ನು, ಇರದೆ-
ತಪ್ಪದೆ, ಉರ್ವ್ವಿಪ- ಹೆಚ್ಚಿಸುವ, ಗುರುಕಟಾಕ್ಷಕೌಮುದಿ- ಗುರುವಿನ ಕಡೆಗಣ್ಣೋಟವೆಂಬ ಬೆಳ್ದಿಂಗಳು,
ಕವಿದು- ಆಚ್ಛಾದಿಸಿ, ಒತ್ತರಿಸಿ- ದಟ್ಟವಾಗಿ, ಇರೆ, ಮುಗಿದ- ಮೊಗ್ಗಾದ, ಅಂಭೋಜದ- ತಾವರೆಯ, ಪರಿ
ಯಂ, ಪರಿಭಾವಿಸಿ- ತಿರಸ್ಕರಿಸಿ, ಮುಗಿದಕರಂ, ನೊಸಲೊಳ್, ಇರೆ. ... ... ॥೫೯॥

ಮನೋಹಂಸಂ- ಮನಸ್ಸೆಂಬ ಹಂಸಪಕ್ಷಿಯು, ಗುರುಚರಣಧ್ಯಾನಾಮೃತಸರಸಿಯೊಳ್- ಗುರುಪಾದ
ಧ್ಯಾನವೆಂಬ ಹಾಲ್ಗೊಳದಲ್ಲಿ, ಅವಗಾಹಂ- ಮುಳುಗಿ, ಇರೆ, ನೋಳ್ಪರ, ಬಗೆಯೊಳ್, ಕೌತುಕಂ- ಆಶ್ಚರ್ಯ
ವು, ಒಗೆಯೆ, ನಿಶಾತಾಗ್ರಶೂಲದೊಳ್- ತೀಕ್ಷ್ಣವಾದ ಮೇಲ್ಭಾಗವುಳ್ಳ ಶೂಲದಲ್ಲಿ, ಕುಳ್ಳಿರ್ದ್ದ, ಅರರೆ !

ಗುರುಪಾದಾಂಭೋಜದಾಮಂ-ಗುರುಪಾದವೆಂಬಕಮಲದ ಮಾಳಿಕೆಯುಳ್ಳವನು, ಗುರುಚರಣಮಿಳತ್ಪಾಂ
ಸುಭಾಸ್ವಲ್ಲಲಾಮಂ-ಗುರುವಿನ ಪಾದದಲ್ಲಿ ಕೂಡಿಕೊಂಡಿರುವ ಧೂಳಿಯೇಪ್ರಕಾಶಮಾನವಾದ ಭೂಷಣವಾ
ಗುಳ್ಳವನು, ಗುರುವಾಕ್ಯಪ್ರಾಣಸೀಮಂ- ಗುರುವಚನವುಪ್ರಾಣವಾಗುಳ್ಳತನವೇ ಎಲ್ಲೆಯಾಗುಳ್ಳವನು, ಗುರು
ಪದಕಮಲಧ್ಯಾನನಿರ್ಧೂತಕಾಮಂ- ಗುರುಚರಣವನ್ನು ಧ್ಯಾನಮಾಡುವುದರಿಂದ ಹೋಗಲಾಡಿಸಲ್ಪಟ್ಟ ವಿ

ಭೋಧಿಸೋಮಂ ಗುರುಪದಯುಗಳೀನಿತ್ಯದತ್ತಪ್ರಣಾಮಂ । ಗುರುತತ್ವಜ್ಞಾನಭೂಮಂ ಗುರುಹಿತಕರಣೋದ್ಯೋಗರಾಗಾಭಿರಾಮಂ ॥ ... ... ... ॥೬೧॥

ವ ॥ ಎನಿಸಿ ನೆಗಳ್ತೆವೆತ್ತೆಸೆವ ॥ ಮತ್ತೇ ॥ ಗುರುಲಿಂಗಾಂಘ್ರಿಸಮರ್ಚನೈಕಪರನಂ ಲಿಂಗಾಂಗಸಂಯೋಗಬಂಧುರನಂ ಭಾವಜಸರ್ವಗರ್ವಹರನಂ ಸಾಕಲ್ಯಮಾಂಗಲ್ಯಮಂ ॥ ದಿರನಂ ದುಷ್ಕೃತಮಃಪ್ರಚಂಡಕರನಂ ಸನ್ಮಾರ್ಗಸಂಚಾರಭಾ । ಸುರನಂ ಭವ್ಯಜನಪ್ರಮೋದಕರನಂ ನಿನ್ನಂ ಭವದ್ದೇಶಿಕಂ ॥ ... ... ... ... ॥೬೨॥

ಕಂ ॥ ಉದಯಗಿರಿಶೃಂಗದಗ್ರದೊ । ಳುದಯಿಸಿ ದಿನನಂ ಪರಾಭವಿಸಿ ಘನಶೂಲಾ ॥ ಗ್ರದೊಳೆಸೆವನ ನಮಳಿನಮಧು । ರದಯಾರಸಭರಿತದೃಷ್ಟಿಯಿಂ ದೀಕ್ಷಿಸಿದಂ ॥ ॥೬೩॥

ಕಂ॥ ಪ್ರಾಜ್ಯಗುರುಭಕ್ತಿನಿಜಸಾ । ಮ್ರಾಜ್ಯಕ್ಕಭಿಷೇಕಿಪಂತೆ ವಿಮಲೋದಕದಿಂ ॥ ಪೂಜ್ಯನಿಜಗುರುಕಟಾಕ್ಷರು । ಚಿಜ್ಯೋತ್ಸ್ನೆಯ ನೊಲ್ದು ಮೇಲದೇಂ ಬೀರಿದನೋ ॥೬೪॥

ವ ॥ ಅಂತು ಕಾರುಣ್ಯರಸನುಂ ಮೊಗೆದು ಸೂಸುವಂತೆ ನಿರೀಕ್ಷಿಸಿ ಬೆರಗುವಟ್ಟು ಬೆಬ್ಬಳಿಸಿ ನೋಳ್ಪಶೇಷಶಿಷ್ಯರ ಲಜ್ಜಾನತಾನನಮಂ ನೋಡಿ ದೇಶಿಕೇಂದ್ರ ನಿಂತೆಂದಂ ॥ *

---

ಷಯೋಚ್ಛ್ರಯುಳ್ಳವನು, ಗುರುವಂಶಾಂಭೋಧಿಸೋಮಂ-ಗುರುವಿನವಂಶವೆಂಬ ಸಮುದ್ರಕ್ಕೆಚಂದ್ರನು, ಗುರುಪದಯುಗಳೀನಿತ್ಯದತ್ತಪ್ರಣಾಮಂ- ಗುರುವಿನ ಪಾದಯುಗ್ಮಕ್ಕೋಸ್ಕರ ನಿತ್ಯದಲ್ಲೂ ಕೊಡಲ್ಪಟ್ಟ ನಮಸ್ಕಾರವುಳ್ಳವನು, ಗುರುತತ್ವಜ್ಞಾನಭೂಮಂ-ಗುರುವಿನಭಾವವನ್ನು ತಿಳಿಯುವಿಕೆಗೆ ಆಸ್ಪದನಾದವನು, ಗುರುಹಿತಕರಣೋದ್ಯೋಗರಾಗಾಭಿರಾಮಂ- ಗುರುವಿಗೆ ಹಿತವಾದುದನ್ನು ಮಾಡುವ ಪ್ರಯತ್ನದಿಂದ ಮನೋಹರನಾದವನು. ... ... ... ... ... ॥೬೧॥

ಎನಿಸಿ, ನೆಗಳ್ತೆವೆತ್ತು- ಪ್ರಸಿದ್ಧಿಯುಂಹೊಂದಿ, ಎಸೆವ. * * * * * * * * *

ಭವದ್ದೇಶಿಕಂ-ನಿನ್ನ ಗುರೂತ್ತಮನು, ಗುರುಲಿಂಗಾಂಘ್ರಿಸಮರ್ಚನೈಕಪರನಂ- ಗುರು ಲಿಂಗ ಇವರುಗಳ ಪಾದಪೂಜೆಯಂ ಮಾಡುವದರಲ್ಲಾಸಕ್ತನಾದ, ಲಿಂಗಾಂಗಸಂಯೋಗಬಂಧುರನಂ- ಲಿಂಗಾಂಗಸಾಮರಸ್ಯದಿಂ ಮನೋಹರನಾದ, ಭಾವಜಸರ್ವಗರ್ವಹರನಂ- ಮನ್ಮಥನ ಅಹಂಕಾರವೆಲ್ಲವನ್ನೂ ನಾಶಮಾಡಿದ, ಸಾಕಲ್ಯಮಾಂಗಲ್ಯ ಮಂದಿರನಂ- ಸಮಸ್ತ ಮಂಗಳಗಳಿಗೂ ಮನೆಯಾದ, ದುಷ್ಕೃತಮಃಪ್ರಚಂಡಕರನಂ- ದುರ್ಜನರೆಂಬ ಕತ್ತಲೆಯಗುಂಪಿಗೆ ಸೂರ್ಯನಾದ, ಸನ್ಮಾರ್ಗಸಂಚಾರಭಾಸುರನಂ- ನ್ಯಾಯಮಾರ್ಗದಲ್ಲಿ ನಡೆಯುವದರಿಂದ ಪ್ರಕಾಶಿಸುವ, ಭವ್ಯಜನಪ್ರಮೋದಕರನಂ- ಸಜ್ಜನರಿಗೆ ಸಂತೋಷವನ್ನುಂಟುಮಾಡುವ, ನಿನ್ನಂ. ... ... ... ... ... ... ॥೬೨॥

ಉದಯಗಿರಿಶೃಂಗದ- ಪೂರ್ವಾಚಲದ ಕೋಡುಗಲ್ಲಿನ, ಅಗ್ರದೊಳ್, ಉದಯಿಸಿದ, ಇನನಂ- ಸೂರ್ಯನನ್ನು, ಪರಾಭವಿಸಿ- ತಿರಸ್ಕರಿಸಿ, ಘನಶೂಲಾಗ್ರದೊಳ್, ಎಸೆವನಂ- ಪ್ರಕಾಶಿಸುವ ನಿನ್ನನ್ನು, ಅಮಳಿನಮಧುರದಯಾರಸಭರಿತದೃಷ್ಟಿಯಿಂದ- ನಿರ್ಮಲವಾದ ಕಾರುಣ್ಯದಿಂದ ತುಂಬಿದ ಕಣ್ಣಿನಿಂದ, ಈಕ್ಷಿಸಿದಂ.

ಪೂಜ್ಯನಿಜಗುರು, ಪ್ರಾಜ್ಯಗುರುಭಕ್ತಿನಿಜಸಾಮ್ರಾಜ್ಯಕೆ- ಬಹುಳವಾದ ಗುರುಭಕ್ತಿಯೆಂಬ ಸ್ಥಿರವಾದ ದೊರೆತನಕ್ಕೆ, ವಿಮಲೋದಕದಿಂ- ನಿರ್ಮಲವಾದ ನೀರಿನಿಂದ, ಅಭಿಷೇಕಿಪಂತೆ, ಮೇಲೆ- ಶಿಷ್ಯನಮೇಲೆ. ಕಟಾಕ್ಷರುಚಿಜ್ಯೋತ್ಸ್ನೆಯಂ-ಕಡೆಗಣ್ಣೋಟದ ಕಾಂತಿಯೆಂಬ ಬೆಳ್ದಿಂಗಳನ್ನು, ಅದೇಂಬೀರಿದನೋ! ॥೬೪॥

ಅಂತು, ಕಾರುಣ್ಯರಸಮಂ- ದಯೆಯೆಂಬ ಜಲವನ್ನು, ಮೊಗೆದು- ತುಂಬಿ, ಸೂಸುವಂತೆ- ಸುರಿಯುವಹಾಗೆ, ನಿರೀಕ್ಷಿಸಿ. ಬೆರಗುವಟ್ಟು, ಬೆಬ್ಬಳಿಸಿ- ಭಯಪಟ್ಟು. ನೋಳ್ಪ, ಅಶೇಷಶಿಷ್ಯರ, ಲಜ್ಜಾನತಾನನಮಂ- ನಾಚಿಕೆಯಿಂದ ಬಗ್ಗಿಸಲ್ಪಟ್ಟ ಮುಖವನ್ನು, ದೇಶಿಕೇಂದ್ರಂ, ನೋಡಿ, ಇಂತು, ಎಂದಂ. *

ಕಂ ॥ ಈತನ ಚರಿತ್ರ ಮೀತನ । ನೂತನಗುರುಭಕ್ತಿ ಸೊಗಯಿಪೀತನಸುಗುಣ ॥
ವ್ರಾತ ಮಿವಂಗಲ್ಲದೆ ಮ । ತ್ತೇತೆರದಿಂ ಬಯಸೆ ಪೆರರ್ಗದೇನಾದಪುದೊ ॥ ॥೬೫॥

ಕಂ॥ ಪ್ರದ್ಯೋತನಘನರುಚಿಯಂ । ಖದ್ಯೋತಂ ಫಣಿಪಶಕ್ತಿಯುಮ ನೊಳ್ಳೆವಲಂ॥
ಸದ್ಯೋಗಿಯ ಯೋಗಮ ನಬ । ಲೋದ್ಯೋಗರತಂ ನಿತಾಂತ ಮೆಳಸಿದೊಡೊಳವೆ॥೬೬॥

ಉ॥ ಈತನ ಪೆಂಪುವೆತ್ತ ಗುರುಭಕ್ತಿ ಗುರುವ್ರತನಿಷ್ಠೆಗುಜ್ವಲ । ಖ್ಯಾತಿಗೆ ನೀ
ವಸೂಯೆವಿಡಿದಿರ್ಪಿ ರನೇಕಪುರಾಣತಂತ್ರವೇ ॥ ದಾತಿಶಯೇತಿಹಾಸದೆ ಪುರಾತನ ನೂತನ
ಭಕ್ತರೊಳ್ಪೊದ । ಳ್ದೀತೆರಮಪ್ಪ ಶೌರ್ಯಯುತಭಕ್ತಿಯ ನಾಲಿಪಿರೇ ಧರಿತ್ರಿಯೊಳ್ ॥

ಕಂ ॥ ಕಂಡೀಂ ಬಲ್ಲಿರೆ ಮಹಿಮಕ । ರಂಡನ ಮತ್ಸುತನಪ್ರೋಲ್ವ ಚಲವಂತನ ನು ॥
ದ್ದಂಡತೆಯಿಂ ಗರ್ವಮ ನೊಳ । ಕೊಂಡಾವೇ ಭಕ್ತರೆಂದು ಬೆರೆದಪಿ ರಿಳೆಯೊಳ್ ॥ ॥೬೮॥

ಕಂ॥ ನಿಮಗೆ ಗುರುಭಕ್ತಭಕ್ತಿ । ಕ್ರಮ ಮಮರ್ಪುದೆ ಸುರಮಹೀಜಮಹಿಮೆ ಯ
ದೆಂತುಂ ॥ ಸಮನಿಸುಗುಮೆ ಕಾನನಕುಜ । ಸಮಿತಿಗೆ ಬರಿದೇಕೆ ಭಕ್ತಿಭಾವದ ಬಿಂಕಂ ॥

ಕಂ॥ ಮಂಚಮ ನೇರಿದ ತೆರದಿಂ । ದಂಚಿತಮತಿ ಯಹರ್ವ ನರರೆ ಶೂಲಮನಿದುತಾಂ॥

---

ಈತನ- ಈ ಗುರುಭಕ್ತಾಗ್ರ್ಯನ, ಚರಿತ್ರಂ, ಈತನ, ನೂತನಗುರುಭಕ್ತಿ, ಸೊಗಯಿಪ, ಈತನ, ಸುಗುಣವ್ರಾತಂ, ಇವಂಗೆ, ಅಲ್ಲದೆ, ಮತ್ತೆ, ಬಯಸೆ, ಅದು, ಪೆರರ್ಗೆ- ಉಳಿದವರಿಗೆ, ಏತೆರದಿಂ- ಯಾವರೀತಿಯಿಂದ, ಏನಾದಪುದೋ? ... ... ... ... ... ॥೬೫॥

ಖದ್ಯೋತಂ- ಮಿಂಚಿನ ಹುಳುವು, ಪ್ರದ್ಯೋತನ- ಸೂರ್ಯನ, ಘನರುಚಿಯಂ-ದೊಡ್ಡಕಾಂತಿಯನ್ನು, ಒಳ್ಳೆ- ನೀರೊಳ್ಳೆಯಹಾವು, ಫಣಿಪಶಕ್ತಿಯುಮಂ-ಆದಿಶೇಷನ ಸಾಮರ್ಥ್ಯವನ್ನೂ, ಅಬಲೋದ್ಯೋಗರತಂ-ಸ್ತ್ರೀವ್ಯಾಪಾರದಲ್ಲಾಸಕ್ತನಾದವನು, ( ಅಥವಾ ದುರ್ಬಲಪ್ರಯತ್ನದಲ್ಲಾಸಕ್ತನಾದವನು ) ಸದ್ಯೋಗಿಯ, ಯೋಗಮುಂ, ಬಯಸಿದೊಡೆ, ನಿತಾಂತ- ನಿಶ್ಚಯವಾಗಿ, ಒಳವೆ-ಉಂಟೇ ? ... ॥೬೬॥

ಈತನ, ಪೆಂಪುವೆತ್ತ- ಅತಿಶಯವಾದ, ಗುರುಭಕ್ತಿಗುರುವ್ರತನಿಷ್ಠೆಗೆ, ಉಜ್ವಲಖ್ಯಾತಿಗೆ- ಪ್ರಕಾಶಿಸುವ ಪ್ರಸಿದ್ಧಿಗೆ, ನೀವ್, ಅಸೂಯೆವಿಡಿದು- ಹೊಟ್ಟೆಯಕಿಚ್ಚನ್ನು ಹೊಂದಿ, ಇರ್ಪಿರಿ; ಧರಿತ್ರಿಯೊಳ್, ಅನೇಕಪುರಾಣತಂತ್ರವೇದಾತಿಶಯೇತಿಹಾಸದೆ- ಅನೇಕಪುರಾಣ, ತಂತ್ರ- ಆಗಮ, ವೇದ, ಅತಿಶಯೇತಿಹಾಸದೆ, ಪುರಾತನನೂತನಭಕ್ತರೊಳ್- ಪೂರ್ವಿಕರಲ್ಲೂ ಈಗಿನ ಭಕ್ತರಲ್ಲೂ, ಪೊದಳ್ದ- ಪ್ರಖ್ಯಾತಿಯಂಹೊಂದಿ, ಈತೆರಂ, ಅಪ್ಪ, ಶೌರ್ಯಯುತಭಕ್ತಿಯಂ, ಆಲಿಪಿರೇ ? ... ... ॥೬೭॥

ಮಹಿಮಕರಂಡನ- ಮಹತ್ತ್ವಕ್ಕೆ ಭರಣಿಯಾದ, ಮತ್ಸುತನ- ನನ್ನ ಮಗನನ್ನು ( ಸಂತಾರಯತಿ ತಂಪುತ್ರಂಗುರುರ್ವೈ ತಾರಕಃಪಿತಾ ಎಂಬ ವೀರಶೈವಾಚಾರಕಾಪ್ತವಚನದಂತೆ ಶಿಷ್ಯನನ್ನು ಗುರುವು ಸಂಸಾರದ ದೆಸೆಯಿಂದ ದಾಟಿಸುತ್ತಾನಾದುದರಿಂದ ತಾರಕಪಿತನೆನಿಸಿಕೊಳ್ಳುತ್ತಾನೆ. ) ಪ್ರೋಲ್ವ- ಸರಿಹೋಲುವ, ಚಲವಂತನಂ- ಶಪಥವುಳ್ಳವನನ್ನು. ಕಂಡು, ಬಲ್ಲಿರೇಂ ? ಉದ್ದಂಡತೆಯಿಂ- ನಿರಂಕುಶತ್ವದಿಂದ, ಗರ್ವಮಂ, ಒಳಕೊಂಡು- ಹೊಂದಿ, ಇಳೆಯೊಳ್, ಆವೇ, ಭಕ್ತರ್, ಎಂದು, ಬೆರೆದಪಿರಿ. ... ॥೬೮॥

ನಿಮಗೆ, ಗುರುಭಕ್ತಭಕ್ತಿಕ್ರಮಂ, ಅಮರ್ಪುದೆ ? ಅದುಸುರಮಹೀಜಮಹಿಮೆ- ಆ ಕಲ್ಪವೃಕ್ಷದಮಹತ್ತ್ವವು, ಕಾನನಕುಜಸಮಿತಿಗೆ- ಕಾಡುಮರಗಳ ಗುಂಪಿಗೆ, ಎಂತುಂ- ಹ್ಯಾಗಾದರೂ, ಸಮನಿಸುಗುಮೆ? ಬರಿದೆ- ವ್ಯರ್ಥವಾಗಿ, ಭಕ್ತಿಭಾವದ, ಬಿಂಕಂ- ಗರ್ವವು, ಏಕೆ ? ... ... ॥೬೯॥

ಅಂಚಿತಮತಿ- ಪೂಜ್ಯವಾದ ಬುದ್ಧಿಯುಳ್ಳಗುರುಭಕ್ತಾಗ್ರ್ಯನು, ಮಂಚಮಂ, ಏರಿದ, ತೆರದಿಂದೆ, ಶೂಲ

ಮಂಚ ಮದು ಶೂಲ ಮೆಂಬೀ । ಸಂಚುಂಟೆ ಮದುಕ್ತಿಜೀವಮಾದು ಗಿಳಿಯೊಳ್ ॥ ॥೨೮॥

ಕಂ॥ ಧರಣಿಯೊಳಿವಂಗೆ ಸಂದುದು । ಗುರುವಚನ ಮಲಂಘನೀಯ ಮೆಂಬುಕ್ತಿ ವ
ಲಂ । ಪರಿದೇರೆನೆ ಶೂಲಮ ನಾ । ದರದಿಂ ಭರದಿಂದ ಮೇರಿ ಮೆರೆದುದರಿಂದಂ ॥ ॥೨೯॥

ಕಂ ॥ ಇವ ನೆಮ್ಮ ಕೃಪಾಪಾತ್ರಂ । ನಿವರಿಳೆ ಮತ್ಕೃಪೆಗಪಾತ್ರ ರಪ್ಪಿರಿ ನೀವೆಂ ॥
ದವರೊಡನೆ ನುಡಿದು ನೋಳ್ಪುದು । ಜವದಿಂ ದೃಷ್ಟಾಂತಮಂ ಬಳಿಕ್ಕೆನುತಾಗಳ್ ॥೩೦॥

ವ ॥ ಇಂತೆಂದವ ರ್ಗಮರಗುಂಡದ ಮಲ್ಲಿಕಾರ್ಜುನಾರ್ಯಂ ತ್ವನ್ಮಹತ್ವಮಂ ನಿರವಿಸಿ ಭವದಭಿಮುಖನಾಗಿ ಕೃಪಾವಲೋಕನದಿ ನಭೀಕ್ಷಿಸಿ॥ * * * * * * *

ಚಂ ॥ ಎಲೆಗುರುಭಕ್ತ ನಿನ್ನ ಗುರುಭಕ್ತಿ ಮಹಾಪ್ರಮಥೇಂದ್ರರುದ್ರಭ । ಕ್ತಲಲಿ
ತಭಕ್ತಿಪದ್ಧತಿಗೆ ಸಂದುದು ನೀ ನಿಳಿತರ್ಪ್ಪದಿನ್ನನು ॥ ತ್ತಲಘುವ್ಯದೂಕ್ತಿಯಿಂ ಕರೆಯೆ ಸ
ದ್ಗುರು ನೀಂ ನಿಮಿರ್ದೂರಿ ಕೈಗಳಂ । ಪಲಗೆಯೊಳುದ್ವಮೇಳ್ದಲುಗೆ ಶೂಲ ಮುದಗ್ರತ
ರಪ್ರಭಾವದಿಂ ॥ ... ... ... ... ... ... ॥೩೧॥

ಕಂ ॥ ನೆಗೆ ದಿಳೆಗವತರಿಸಿ ಜನಂ । ಪೊಗಳುತ್ತಿರೆ ಗುರುಪದಾಬ್ಜಕೆರಗಿದೆ ನಿನ್ನಂ ॥
ತೆಗೆದು ಬಿಗಿದಪ್ಪಿ ಸಂತಸ । ದೊಗುಮಿಗೆಯಿಂ ನೋಡಿ ದೇಶಿಕಂ ನಲಿದೊಲವಿಂ ॥ ॥೩೨॥

ಚಂ ॥ ವಿಮಲನಿಜಪ್ರಸಾದಸುಧೆಯಿಂ ತಣಿಪುತ್ತೆ ನೆಗಳ್ತೆವೆತ್ತ ಸಂ । ಭ್ರಮಮ

---

ಮಂ, ಅಡರ್ದಂ, ಅರರೆ !! ಇಳೆಯೊಳ್, ಮದುಕ್ತಿಜೀವಂ- ನನ್ನ ವಾಕ್ಯವೇ ಪ್ರಾಣವಾಗುಳ್ಳವನು, ಆದಂಗೆ ಇದು, ತಾಂ, ಮಂಚಂ, ಅದು, ಶೂಲಂ, ಎಂಬ, ಈಸಂಚು, ಈ ಭೇದವು, ಉಂಟು? ... ॥೨೮॥

ಪರಿದು- ಹೋಗಿ, ಶೂಲಮಂ, ಏರ್, ಎನೆ, ಆದರದಿಂ, ಭರದಿಂದಂ, ಏರಿ; ಮೆರೆದುದರಿಂದಂ, ಧರಣಿಯೊಳ್, ಗುರುವಚನಂ- ಅಲಂಘನೀಯಂ- ಅತಿಕ್ರಮಿಸತಕ್ಕದ್ದಲ್ಲವು, ಎಂಬ, ಉಕ್ತಿ, ಇವಂಗೆ, ಸಂದುದು; ವಲಂ. ... ... ... ... ... ... ॥೨೯॥

ಇವಂ, ಎಮ್ಮ, ಕೃಪಾಪಾತ್ರಂ, ವಿವರಿಳೆ, ನೀವ್, ಮತ್ಕೃಪೆಗೆ, ಅಪಾತ್ರರ್- ಅಯೋಗ್ಯರು, ಅಪ್ಪಿರಿ; ಎಂದು, ಅವರೊಡನೆ, ನುಡಿದು, ಬಳಿಕ್ಕೆ- ಅನಂತರ, ಜವದಿಂ- ಬೇಗನೆ, ದೃಷ್ಟಾಂತಮಂ- ಉದಾಹರಣೆಯನ್ನು, ನೋಳ್ಪುದು, ಎನುತೆ, ಆಗಳ್. ... ... ... ॥೩೦॥

ಅಮರಗುಂಡದಮಲ್ಲಿಕಾರ್ಜುನಾರ್ಯಂ, ಇಂತು, ಎಂದು, ಅವರ್ಗೆ, ತ್ವನ್ಮಹತ್ತ್ವಮಂ- ನಿನ್ನ ಮಹಿಮೆಯನ್ನು, ನಿರವಿಸಿ- ಹೇಳಿ, ಭವದಭಿಮುಖಂ-ಆಗಿ- ನಿನ್ನಕಡೆಗೆತಿರುಗಿ, ಕೃಪಾವಲೋಕನದಿಂ, ಅಭೀಕ್ಷಿಸಿ. *

ಎಲೆಗುರುಭಕ್ತ ! ನಿನ್ನ, ಗುರುಭಕ್ತಿ, ಮಹಾ......ಪದ್ಧತಿಗೆ— ಮಹಾಪ್ರಮಥೇಂದ್ರ, ರುದ್ರಭಕ್ತ- ಶಿವಶಕ್ತರುಗಳ, ಲಲಿತ- ಮನೋಹರವಾದ, ಭಕ್ತಿಪದ್ಧತಿಗೆ-ಭಕ್ತಿಯಮಾರ್ಗಕ್ಕೆ, ಸಂದುದು; ನೀಂ, ಇನ್ನು, ಇಳಿತರ್ಪ್ಪದು, ಎನುತ್ತೆ, ಅಲಘುವ್ಯದೂಕ್ತಿಯಿಂ- ಹೆಚ್ಚಾಗಿ ಕೋಮಲವಾದಮಾತಿನಿಂದ, ಕರೆಯೆ, ಸದ್ಗುರು! ನೀಂ, ಕೈಗಳಂ, ನಿಮಿರ್ದು- ಚಾಚಿ, ಪಲಗೆಯೊಳ್, ಊರಿ, ಉದ್ದವೇಳ್ಪು- ಉದ್ದವಾಗಿಎದ್ದು, ಶೂಲಂ, ಅಲುಗೆ- ನಡುಗಲು, ಉದಗ್ರತರಪ್ರಭಾವದಿಂ-ಅತ್ಯುತ್ಕೃಷ್ಟವಾದ ಮಹಿಮೆಯಿಂದ. ... ॥೩೧॥

ನೆಗೆದು, ಇಳೆಗೆ, ಅವತರಿಸಿ-ಇಳಿದು, ಜನಂ, ಪೊಗಳುತ್ತೆ, ಇರೆ, ಗುರುಪದಾಬ್ಜಕೆ, ಎರಗಿದೆ, ದೇಶಿಕಂ- ಗುರೂತ್ತಮನು, ನಿನ್ನಂ, ತೆಗೆದು, ಬಿಗಿದು, ಅಪ್ಪಿ, ಸಂತಸದ,ಒಗುಮಿಗೆಯಿಂ, ಆಧಿಕ್ಯದಿಂದ, ನೋಡಿ, ಒಲವಿಂ-ಅನುರಾಗದಿಂದ, ನಲಿದು- ಸಂತೋಷಪಟ್ಟು. ... ... ... ॥೩೨॥

ವಿಮಲನಿಜಪ್ರಸಾದಸುಧೆಯಿಂ— ನಿರ್ಮಲವಾದ ತನ್ನತೀರ್ಥಪ್ರಸಾದಗಳಿಂದ, ತಣಿಪುತ್ತೆ- ತೃಪ್ತಿಪಡಿಸು

ನಬಿಚ್ಚಿ ರಂಜಿಸಿರೆ ಶೈವಸಹೋದರರೆಲ್ಲ ವಿಸ್ಮಯ ॥ ಸ್ತಿಮಿತಕಟಾಕ್ಷ ರಕ್ಷತಭವತ್ತನುವಂ ನಡೆ ನೋಡಿ ಚೋದ್ಯಮೆಂ । ದಮು ದರ್ತಿಭೀತಿಯಿಂ ಪೊಗಳೆ ನಿನ್ನಯ ಸದ್ಗುರುಭಕ್ತಿ ವೈಭವಂ ॥ ... ... ... ... ... ... ॥೭೬॥

ಉ ॥ ಅಂದಿಳೆಯಲ್ಲಿ ರಂಜಿಸಿದು ದಿಂದು ಮನೂನತರಪ್ರಭಾವದೊ । ಳ್ಸಂದುದು ಸರ್ವಲೋಕ ಮರಿಯುತ್ತಿರೆ ದೇಶಿಕಸತ್ಕೃಪಾಬ್ಧಿಪೂ ॥ ರ್ಣೇಂದು ವಿಡಲ್ತೆ ನಿನ್ನ ಗುರುಭಕ್ತಿಮಹತ್ವಪರಂಪರೋರ್ಮಿಕಾಬೃಂದಸುಧಾತರಂಗಿಣಿ ಗಣೋತ್ಸವಪದ್ಮವನಪ್ರಭಾಕರ ॥ ಕಂ ॥ ಆ ರಿವರಯ್ಯ ನಿನ್ನಯ । ಸಾರಾಚಾರಪ್ರಸನ್ನಗುರುಭಕ್ತಿಯ ವಿ ॥ ಸ್ತಾರ ಪ್ರಭಾವಮಂ ಕಾ । ಮಾರಾತಿಯುಂ ಮಾಡೊಡೋರ್ಮೆ ತಾಂ ತಿಳಿದಪನೆ ॥ ... ॥೭೭॥

ಮತ್ತೇ ॥ ಗುರುಪಾದಾಂಬುಜಭೃಂಗಸದ್ಗುರುಕರಾಂಭೋಜಾತಜಾತಾಂಗ ಸ । ದ್ಗುರುಸೇವಾಪರತಂತ್ರ ಸದ್ಗುರುಕೃಪಾಲಬ್ಧೇಶಸನ್ಮಂತ್ರ ಸ ॥ ದ್ಗುರುನಾಮಾಮೃತತೃಪ್ತ ಸದ್ಗುರುನಿರೂಪಪ್ರಾಪ್ತಸಂಪ್ರಾಪ್ತ ಸ । ದ್ಗುರುಪಾದಾಂಬುಸಿಕ್ತ ಸಾರಗುರುಭಕ್ತಖ್ಯಾತಿವಿಖ್ಯಾಪಿತ ॥ ... ... ... .. ... ... ॥೭೮॥

---

ತ್ತ, ನೆಗಳ್ತೆವೆತ್ತ- ಪ್ರಸಿದ್ಧಿಯಂ ಹೊಂದಿದ, ಸಂಭ್ರಮಮಂ- ಸಡಗರವನ್ನು, ಅಲರ್ಚಿ- ಎಬ್ಬಿಸಿ, ರಂಜಿಸಿ, ಇರೆ, ಶೈವಸಹೋದರರ್- ಶಿವಭಕ್ತರಾದ ಒಡಹುಟ್ಟಿದವರು, ಎಲ್ಲ, ವಿಸ್ಮಯಸ್ತಿಮಿತಕಟಾಕ್ಷರ್- ಆಶ್ಚರ್ಯದಿಂ ನಿಶ್ಚಂಚಲವಾದಕಡೆಗಣ್ಣೋಟವುಳ್ಳವರಾಗಿ, ಅಕ್ಷತಭವತ್ತನುವಂ-ಗಾಯವಿಲ್ಲದಿರುವನಿನ್ನ ಶರೀರವನ್ನು ನಡೆ- ಚನ್ನಾಗಿ, ನೋಡಿ, ಚೋದ್ಯಂ- ಆಶ್ಚರ್ಯವು, ಎಂದು, ಅಮರ್ದ- ಪ್ರಾಪ್ತವಾದ, ಅತಿಭೀತಿಯಿಂ, ಪೊಗಳೆ, ನಿನ್ನಯ, ಸದ್ಗುರುಭಕ್ತಿವೈಭವಂ. ... ... ... ... ॥೭೬॥

ಅಂದು, ಇಳೆಯಲ್ಲಿ, ರಂಜಿಸಿದುದು; ಇಂದುಂ- ಈಗಲೂ, ಅನೂನತರಪ್ರಭಾವದೊಳ್- ಅತ್ಯಧಿಕವಾದ ಮಹತ್ತ್ವದಿಂದ, ಸಂದುದು; ಗಣೋತ್ಸವಪದ್ಮವನಪ್ರಭಾಕರ ಶಿವಗಣಂಗಳ ಸಂತೋಷವೆಂಬ ಕಮಲಗಳ ಗುಂಪಿಗೆ ಸೂರ್‍ಯನಾದ ಗುರುಭಕ್ತಾರ್‍ಯನೇ ! ನಿನ್ನ, ಇದುಗುರುಭಕ್ತಿ, ದೇಶಿಕಸತ್ಕೃಪಾಬ್ಧಿಪೂರ್ಣೇಂದು- ಗುರೂತ್ತಮನ ಒಳ್ಳೆಯ ದಯೆಯೆಂಬ ಸಮುದ್ರಕ್ಕೆ ಚಂದ್ರನು, ಮಹತ್ತ್ವಪರಂಪರೋರ್ಮಿಕಾಬೃಂದಸುಧಾತರಂಗಿಣಿಯಲ್ತೆ- ಮಹಿಮೆಯ ಸಾಲೆಂಬ ತೆರೆಗಳ ಗುಂಪುಳ್ಳ ಅಮೃತದ ಪ್ರವಾಹವಲ್ಲವೇ !

ಅಯ್ಯ ! ನಿನ್ನಯ, ಸಾರಾಚಾರಪ್ರಸನ್ನಗುರುಭಕ್ತಿಯ- ಶ್ರೇಷ್ಠವಾದ ನಡತೆಯಿಂದ ನಿರ್ಮಲವಾದ ಗುರುಭಕ್ತಿಯ, ವಿಸ್ತಾರಪ್ರಭಾವಮಂ, ಆರ್ ಅರಿವರ್ ? ಕಾಮಾರಾತಿಯುಂ ಆದೊಡಂ- ಶಿವನಾದರೂ, ತಾಂ, ಒರ್ಮೆ- ಒಂದಾವರ್ತಿ, ತಿಳಿದಪನೆ ? ... ... ... ... ॥೭೭॥

ಗುರುಪಾದಾಂಬುಜಭೃಂಗ- ಗುರುವಿನ ಪಾದವೆಂಬ ಕಮಲಕ್ಕೆ ಭ್ರಮರನಾದ, ಸದ್ಗುರುಕರಾಂಭೋಜಾತಜಾತಾಂಗ- ಒಳ್ಳೆಯಗುರುವಿನ ಹಸ್ತಕಮಲದಿಂ ಹುಟ್ಟಿದ ದೇಹವುಳ್ಳ, ಸದ್ಗುರುಸೇವಾಪರತಂತ್ರ- ಒಳ್ಳೆಯ ಗುರುವನ್ನು ಸೇವಿಸುವದರಲ್ಲಾಸಕ್ತನಾದ, ಸದ್ಗುರುಕೃಪಾಲಬ್ಧೇಶಸನ್ಮಂತ್ರ- ಒಳ್ಳೆಯ ಗುರುವಿನ ದಯೆಯಿಂದ ಪಡೆಯಲ್ಪಟ್ಟ ಶಿವಮಂತ್ರವುಳ್ಳ, ಸದ್ಗುರುನಾಮಾಮೃತತೃಪ್ತ- ಒಳ್ಳೆಯ ಗುರುವಿನ ಹೆಸರೆಂಬ ಅಮೃತದಿಂದ ತೃಪ್ತಿಯಂಹೊಂದಿದ, ಸದ್ಗುರುನಿರೂಪಪ್ರಾಪ್ತಸಂಪ್ರಾಪ್ತ- ಒಳ್ಳೆಯ ಗುರುವಿನ ಆಜ್ಞಾಸಮೂಹವಂಹೊಂದಿದ, ಸದ್ಗುರುಪಾದಾಂಬುಸಿಕ್ತ- ಒಳ್ಳೆಯಗುರುವಿನ ಪಾದೋದಕದಿಂದ ಅಭಿಷೇಕಿಸಲ್ಪಟ್ಟ, ಖ್ಯಾತಿವಿಖ್ಯಾಪಿತ- ಒಳ್ಳೆಯ ಶೀಲದಿಂದುಂಟಾದ ಪ್ರಸಿದ್ಧಿಯಿಂದ ಪ್ರಚುರಪಡಿಸಲ್ಪಟ್ಟ, ಸಾರಗುರುಭಕ್ತ ! ... ... ... ... ... ॥೭೮॥

ಸ್ರ॥ ಎಂದಿಂತೆಲ್ಲರ್ಕರಂ ಕೀರ್ತಿಸುತಿರೆ ಬಸವಂ ಕೇಳ್ದು ತಾನೆಯ್ದುತಂ ನ। ಣ್ಪಿಂದು ಮೆಯ್ಯಿಕ್ಕಿ ಕಯ್ಯಂ ಮುಗಿದೆಲೆಗುರುಭಕ್ತಾರ್ಯ ನಿನ್ನನ್ನರಾರ್ಪಿಂ। ಪೊಂದಿರ್ದೀಶ್ರೀಗುರು ಶ್ರೀಪದಯುಗಲಲಸದ್ಭಕ್ತಿಯೊಳ್ನೋಳ್ಪೊಡೆಂದಾ। ನಂದಂಬೆತ್ತೊಲ್ದು ಕೊಂಡಾಡುತೆ ನೊಗಯಿಸಿದಂ ವೀರಶೈವಾಬ್ಧಿಚಂದ್ರಂ॥ ... ... ... ॥೭೯॥

ಕಂ॥ ಗುರುಭಕ್ತನಮಲಚರಿತವು। ನುರೆ ಮುದದಿಂದೋದೆ ಕೇಳೆ ಬಿಡದಪ್ಪುದು ಸ॥ ದ್ಗುರುಪದಸುಭಕ್ತಿ ಸರ್ವೋ। ತ್ತರಸುಖಸುಜ್ಞಾನಸಂಪದಂ ಶಿವಕೃಪೆಯಿಂ॥ ॥೮೦॥

ಲಲಿತಪದವೃತ್ತಂ॥ ಶ್ರೀದಸಹಖೇಲನವಿನೋದಗುಣರತ್ನ ವಿಸರೋದಧಿಮಹೇಶಕೃತಮೋದತತಮಾಯಾ। ನೋದನಸುರೇಂದ್ರನತಪಾದಸರಸೀಜ ಕೃತವೇದಜಗತೀನುತಶುಭೋದಯಚರಿತ್ರ॥ ಮೋದುರಗುಣಾಕರ ಶಿಲಾದಸುತಸಂತತ ಮಹೋದಯಪರಾಸ್ತಪರವಾದಗಣವರ್ಯಾ। ಹ್ಲಾದಕರರಕ್ಷಿಸಘಕಾದಳಗಜೇಂದ್ರ ಭುವನೋದರಲಸತ್ಪ್ರಣವನಾದಬಸವೇಶಾ॥ ... ... ... ... ... .. ॥೮೧॥

ಉತ್ಸಾಹವೃತ್ತಂ॥ ಮಂಗಲಾಂಗಿಮಂಜುಲಾಂಬುಜಾಸ್ಯೇ ವಿಶ್ವವಿಶ್ರುತೆ। ಭೃಂಗವೇ

---

ಎಂದು, ಇಂತು, ಎಲ್ಲರ್, ಕರಂ, ಕೀರ್ತಿಸುತೆ, ಇರೆ, ವೀರಶೈವಾಬ್ಧಿಚಂದ್ರಂ, ಬಸವಂ, ಕೇಳ್ದು, ತಾಂ, ಎಯ್ದುತಂ- ಬರುತ್ತಾ, ನಣ್ಪಿಂದಂ- ನಯದಿಂದ, ಮೆಯ್ಯಿಕ್ಕಿ- ನಮಸ್ಕರಿಸಿ, ಕಯ್ಯಂ, ಮುಗಿದು, ಎಲೆಗುರುಭಕ್ತಾರ್ಯ ! ನೋಳ್ಪೊಡೆ, ಪೆಂಪು- ಅತಿಶಯವು, ಒಂದಿ, ಇರ್ದ, ಈ ಶ್ರೀಗುರು ಶ್ರೀಪದಯುಗಲ ಲಸದ್ಭಕ್ತಿಯೊಳ್- ಷಡ್ಗುಣೈಶ್ವರ್ಯಯುಕ್ತನಾದ ಗುರುವಿನ ಮೋಕ್ಷಸಂಪತ್ಕರವಾದ ಈ ಪಾದಯುಗ್ಮದ ಪ್ರಕಾಶಿಸುವ ಭಕ್ತಿಯವಿಷಯದಲ್ಲಿ, ನಿನ್ನನ್ನರ್- ನಿನ್ನಂತವರು, ಆರ್ ? ಎಂದು, ಆನಂದಂಬೆತ್ತು, ಒಲ್ದು, ಕೊಂಡಾಡುತೆ, ನೊಗಯಿಸಿದಂ. ... ... ... ... ॥೭೯॥

ಗುರುಭಕ್ತನ, ಅಮಲಚರಿತವಂ, ಉರೆ, ಮುದದಿಂದೆ, ಓದೆ, ಕೇಳೆ ಶಿವಕೃಪೆಯಿಂ, ಸದ್ಗುರುಪದ ಸುಭಕ್ತಿ, ಸರ್ವೋತ್ತರಸುಖಸುಜ್ಞಾನಸಂಪದಂ— ಸಕಲಕ್ಕೂ ಉತ್ಕೃಷ್ಟವಾದ ಸೌಖ್ಯವನ್ನುಂಟುಮಾಡುವ ಒಳ್ಳೆಯಜ್ಞಾನಸಂಪತ್ತು, ಬಿಡದೆ, ಅಪ್ಪುದು. ... ... ... ॥೮೦॥

ಶ್ರೀದಸಹಖೇಲನವಿನೋದ-ಕುಬೇರನೊಡನಾಟದ ಸಂತೋಷವುಳ್ಳ, ಗುಣರತ್ನವಿಸರೋದಧಿ- ಸದ್ಗುಣಗಳೆಂಬ ರತ್ನಗಳಗುಂಪಿಗೆ ಸಮುದ್ರನಾದ, ಮಹೇಶಕೃತಮೋದ-ಈಶ್ವರನಿಗೆ ಉಂಟುಮಾಡಲ್ಪಟ್ಟ ಸಂತೋಷವುಳ್ಳ, ತತಮಾಯಾನೋದನ- ವಿಸ್ತಾರವಾದ ಮಾಯೆಯನ್ನು ಹೋಗಲಾಡಿಸುವ, ಸುರೇಂದ್ರನತಪಾದಸರಸೀಜ- ದೇವೇಂದ್ರನಿಂದ ನಮಸ್ಕರಿಸಲ್ಪಟ್ಟ ಪಾದಕಮಲವುಳ್ಳ, ಕೃತವೇದ-ಮಾಡಲ್ಪಟ್ಟವೇದಗಳುಳ್ಳ,(ಅಂದರೆವೇದಗಳನ್ನು ಪಾಗ್ರೂಪವಿಂ ಮಾಡಿ ಹೇಳಿದವನು ) ಜಗತೀನುತಶುಭೋದಯಚರಿತ್ರ- ಲೋಕದಜನದಿಂ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ, ಶುಭೋದಯಚರಿತ್ರ-ಮಂಗಳದಾವಿರ್ಭಾವದಿಂಕೂಡಿದಚರಿತ್ರೆಯುಳ್ಳ, ಮೇದುರಗುಣಾಕರ ವ್ಯಾಪ್ತವಾದ ಸದ್ಗುಣಗಳಿಗಾಶ್ರಯನಾದ,ಶಿಲಾದಸುತ-ಶಿಲಾದರ್ಷಿಗೆಮಗನಾದ, ಸಂತತಮಹೋದಯ- ವಿಚ್ಛಿತ್ತಿಯಿಲ್ಲದ ಉತ್ಸವಾಧಿಕ್ಯವುಳ್ಳ, ಪರಾಸ್ತಪರವಾದ- ನಾಶಮಾಡಲ್ಪಟ್ಟ ಶಿವೇತರಮತವಾದವುಳ್ಳ, ಗಣವರ್ಯಾಹ್ಲಾದಕರ-ಶಿವಗಣಂಗಳಿಗೆ ಸಂತೋಷವನ್ನುಂಟುಮಾಡುವ, ಅಘಕಾದಳಗಜೇಂದ್ರ— ಪಾಪವೆಂಬಬಾಳೆಯವನಕ್ಕೆ ದೊಡ್ಡಆನೆಯಾದ,ಭುವನೋದರ-ಬ್ರಹ್ಮಾಂಡವೇಹೊಟ್ಟೆಯಾಗುಳ್ಳ, ಲಸತ್ಪ್ರಣವನಾದ- ಪ್ರಕಾಶಿಸುವ ಓಂಕಾರನಾದಸ್ವರೂಪನಾದ, ಬಸವೇಶಾ ! ರಕ್ಷಿಸು. ... ... ॥೮೧॥

ಮಂಗಲಾಂಗಿ, ಮಂಜುಲಾಂಬುಜಾಸ್ಯೇ- ಮನೋಹರವಾದ ಕಮಲದಂತಿರುವ ಮುಖವುಳ್ಳ, ವಿಶ್ವವಿಶ್ರುತೆ- ಪ್ರಪಂಚದಲ್ಲಿ ಪ್ರಸಿದ್ಧಳಾದ, ಭೃಂಗವೇಣಿ- ಭ್ರಮರದಂತಿರುವ ಜಡೆಯುಳ್ಳ, ಶಂಕರಾಂಕಪೀಠಿಕಾಸ

ಣಿ ಶುಕಲಾಪಪೇಶಲಕಾಸಪರಿಶ್ರಿತೆ ॥ ತುಂಗದಾನವಾರಿವಾರಿಜೋದ್ಭವಾದಿವಂದಿತೆ। ಸಾಂಗ ವೇದವೇದ್ಯೆ ರಕ್ಷಿಸೆನ್ನ ನದ್ರಿರಾಟ್ಸುತೆ ॥ ... ... ... .. ॥೪೨॥

ಗದ್ಯಂ ॥ ಇದು ಸಕಲಸುರಾಸುರೇಂದ್ರಮಕುಟತಟಘಟಿತಮಣಿಗಣಾಗ್ರಣೀತಟು ಚಿನಿಚಯತರುಣಾತಪಾತಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತಭಾಸುರ ಲಲಾಟಪಟ್ಟಸಪರಿಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀ ಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಗುರುಭಕ್ತಗುರುಭಕ್ತಿಕಥಾಸಂಸಪ್ತವಿಂಶ ತ್ಯಾಶ್ವಾಸಂ ಪರಿಸಮಾಪ್ತಂ ॥ ... ... ... ... ... *

ಸಪ್ತವಿಂಶತ್ಯಾಶ್ವಾಸಂ ಸಂಪೂರ್ಣಂ.

---

ಶ್ರೀಃ

ನಿಷ್ಕಳಾಯ ಪರಬ್ರಹ್ಮಣೇನಮಃ.

ಅಷ್ಟವಿಂಶತ್ಯಾಶ್ವಾಸಂ.

ಗುರುಭಕ್ತಾಂಡಾರ್ಯಕಥನಂ.

ಕಂ ॥ ಶ್ರೀಗುಹಜನನೀಮಧುರಿಮ । ರಾಗಾಧರರಸರಸಜ್ಞ ನಮಳಿನಯಮಿಚೇ ॥
ತೋಗತ ನನುಪಮಸಿಗಮುಕ । ರಾಗುರು ವೆಮಗೀಗೆ ಸೌಖ್ಯಮಂ ಶಿವಲಿಂಗಂ ॥ ॥೧॥

---

ಮಾಶ್ರಿತೆ- ಈಶ್ವರನತೊಡೆಯೆಂಬ ಪೀಠವೇ ಆಶ್ರಯವಾಗುಳ್ಳ, ತುಂಗದಾನವಾರಿವಾರಿಜೋದ್ಭವಾದಿವಂದಿತೆ- ತುಂಗ- ಉನ್ನತನಾದ, ದಾನವಾರಿ— ವಿಷ್ಣು, ವಾರಿಜೋದ್ಭವ- ಬ್ರಹ್ಮ ಇವರುಗಳಿಂದ, ವಂದಿತೆ, ಸಾಂಗ ವೇದವೇದ್ಯೆ- ಸಂಪೂರ್ಣವಾದ ವೇದದಿಂದ ತಿಳಿಯಲ್ಪಡುವದಕ್ಕೆ ಯೋಗ್ಯಳಾದ; ಅದ್ರಿರಾಟ್ಸುತೆ- ಪರ್ವತರಾಜಪುತ್ರಿಯೇ! ಎನ್ನಂ, ರಕ್ಷಿಸು. ... ... ... ... ॥೪೨॥

ಇಪ್ಪತ್ತೇಳನೆಯ ಆಶ್ವಾಸವು ಸಂಪೂರ್ಣವು.

---

ಇಪ್ಪತ್ತೆಂಟನೆಯ ಆಶ್ವಾಸಪ್ರಾರಂಭಃ.

ಶ್ರೀ......ರಸಜ್ಞಂ—ಶ್ರೀ- ಷಡ್ಗುಣೈಶ್ವರ್ಯಯುಕ್ತಳಾದ, ಗುಹಜನನೀ- ಪಾರ್ವತಿಯ. ಮಧುರಿಮ- ಮಾಧುರ್ಯವಿಶಿಷ್ಟವಾದ, ರಾಗಾಧರ-ಕೆಂಬಣ್ಣದಿಂ ಕೂಡಿದ ತುಟಿಯ, ರಸ-ಅಮೃತದ, ರಸಜ್ಞಂ- ರುಚಿಯನ್ನು ತಿಳಿದ, ಅಮಳಿನಯಮಿಚೇತೋಗತ- ನಿರ್ಮಲವಾದ ಋಷಿಗಳ ಮನಸ್ಸನ್ನು ಹೊಂದಿದ, ಅನು ಪಮನಿಗಮಸಕಲಾಗುರು- ಅಸದೃಶವೇದವಿದ್ಯೋಪದೇಶಕರ್ತನಾದ, ಶಿವಲಿಂಗಂ, ಎಮಗೆ ಸೌಖ್ಯಮಂ, ಈಗೆ.

ವ ॥ ಆಗಳ್ ಗುರುಭಕ್ತಭಕ್ತಿಮಹತ್ವದರ್ಶನಜನಿತಹರ್ಷೋದಯಂ ಚೆನ್ನಬಸವಂ ಬಸವಂಗೆರಗುತೆಮ್ಮ ಪುರಾತನರೊಳಿಂತಪ್ಪ ಗುರುಭಕ್ತಿಧುರಂಧರರೊಳರೆ ಬೆಸಸಿ ಮನೆ ವೃಷೇಂದ್ರಂ ಗಣಸಿವಹಮಾನಂದದಿಂ ನಾಕರ್ಣಿಸೆ ಪೇಳ್ದನಂತೆನೆ ॥ * * * *

ಚಂ ॥ ಜಲಧರಚುಂಬಿಚಂದ್ರಮಣಿಸಾಲ ಮುದಂಚಿತಭರ್ಮಹರ್ಮ್ಯಸ । ಕುಲ ಮತಿ ಸಂಪದುಜ್ವಲಗೃಹಾವಳಿ ಸಂತತದಿವ್ಯಭೋಗಮಂ ॥ ಜುಲಮನುಜಾಳಿ ಲೋಚನಸಮುತ್ಸವಕಾರಿಪುರೋಪವೀಥಿ ನಿ । ಶ್ಚಲರುಚಿ ಬೆಜ್ಜವಾಡಪುರ ಮೊಪ್ಪುಗು ಮುರ್ವಿಗಪೂರ್ವಶೋಭೆಯಿಂ ॥ .. ... ... ... ... ... ॥೨॥

ಕಂ ॥ ವರಪುಣ್ಯಜನೋತ್ಕರಭಾ ।ಸುರ ಮುರುವಿಬುಧೇಂದ್ರಶೋಭಿ ಘನಭೋಗಿಸಮು ॥ ತ್ಕರರುಚಿರು ಕಿನ್ನರಪುರ । ಸುರವರಪುರನಾಗಪುರಮ ನದು ಪೋಲ್ತೆಸೆಗುಂ ॥

ಕಂ ॥ ಆ ಪುರವು ನಾಳ್ವ ನನುಪಮ । ರೂಪಂ ಗುರುಭಕ್ತಿತತ್ಪರಂ ನಯವಿನಯಾ ॥ ಲಾಪಂ ವಿಶ್ರುತಕೀರ್ತಿಕ । ಲಾಪಂ ಗುರುಭಕ್ತರಾಜ ನೆಂಬವನೀಶಂ ॥ ... ॥೪॥

---

ಆಗಳ್, ಗುರುಭಕ್ತಭಕ್ತಿಮಹತ್ತ್ವದರ್ಶನಜನಿತಹರ್ಷೋದಯಂ— ಗುರುಭಕ್ತ- ಗುರುಭಕ್ತಾರ್ಯನ, ಭಕ್ತಿ, ಮಹತ್ತ್ವ, ಇವುಗಳನ್ನು, ದರ್ಶನ- ನೋಡುವದರಿಂದ, ಜನಿತ- ಹುಟ್ಟಲ್ಪಟ್ಟ, ಹರ್ಷ- ಸಂತೋಷದ, ಉದಯಂ- ವೃದ್ಧಿಯುಳ್ಳ, ಚೆನ್ನಬಸವಂ, ಬಸವಂಗೆ, ಎರಗುತೆ, ಎಮ್ಮ, ಪುರಾತನರೊಳ್, ಇಂತಪ್ಪ, ಗುರುಭಕ್ತಿಧುರಂಧರರ್, ಒಳರೆ- ಇರುವರೇ ? ಬೆಸಸಿಂ- ಅಪ್ಪಣೆಕೊಡಿಸಿರಿ, ಎನೆ, ವೃಷೇಂದ್ರಂ, ಗಣಸಿವಹಂ, ಆನಂದದಿಂ, ಆಕರ್ಣಿಸೆ, ಪೇಳ್ದಂ, ಅದು, ಎಂತು, ಎನೆ. * * * * * * * * *

ಜಲಧರಚುಂಬಿಚಂದ್ರಮಣಿಸಾಲಂ— ಜಲಧರ- ಮೇಘಗಳನ್ನು, ಚುಂಬಿ-ಸೋಂಕುತ್ತಿರುವ, ಚಂದ್ರಮಣಿಸಾಲಂ- ಚಂದ್ರಕಾಂತಶಿಲೆಯ ಕೋಟೆಯುಳ್ಳ, ಉದಂಚಿತಭರ್ಮಹರ್ಮ್ಯಸಂಕುಲಂ— ಉದಂಚಿತ-ಅತ್ಯುತ್ಕೃಷ್ಟಗಳಾದ, ಭರ್ಮ- ಸುವರ್ಣದ, ಹರ್ಮ್ಯ- ಉಪ್ಪರಿಗೆಗಳ, ಸಂಕುಲಂ ಗುಂಪುಳ್ಳ, ಅತಿಸಂಪದುಜ್ವಲಗೃಹಾವಳಿ- ಅತ್ಯಂತೈಶ್ವರ್ಯದಿಂ ಪ್ರಕಾಶಿಸುವ ಮನೆಗಳ ಸಾಲುಳ್ಳ, ಸಂತತದಿವ್ಯಭೋಗಮಂಜುಲಮನುಜಾಳಿ- ಯಾವಾಗಲೂ ಶ್ರೇಷ್ಠವಾದ ಸೌಖ್ಯದಿಂದ ಮನೋಹರರಾದ ಮನುಷ್ಯರ ಪಙ್ಕ್ತಿಯುಳ್ಳ, ಲೋಚನಸಮುತ್ಸವಕಾರಿಪುರೋಪವೀಥಿ-ಕಣ್ಣುಗಳಿಗೆ ಅತ್ಯಂತ ಸಂತೋಷವನ್ನು ಉಂಟುಮಾಡುವ ಪಟ್ಟಣದ ಮಧ್ಯಮಾರ್ಗಗಳುಳ್ಳ, ನಿಶ್ಚಲರುಚಿ- ಸ್ಥಿರವಾದ ಕಾಂತಿಯುಳ್ಳ, ಬೆಜ್ಜವಾಡಪುರಂ, ಉರ್ವಿಗೆ, ಅಪೂರ್ವಶೋಭೆಯಿಂ- ನೂತನವಾದ ತೇಜಸ್ಸಿನಿಂದ, ಒಪ್ಪುಗುಂ. ... ... ... ... ।೨॥

ವರಪುಣ್ಯಜನೋತ್ಕರಭಾಸುರಂ-ಶ್ರೇಷ್ಠರಾಗಿಯೂ, ಪರಿಶುದ್ಧರಾಗಿಯೂ ಇರುವ ಜನರ ಗುಂಪುಳ್ಳ (ಶ್ರೇಷ್ಠರಾದ ಪುಣ್ಯಜನವೆಂಬ ಸಂಕೇತವುಳ್ಳವರ ಗುಂಪುಳ್ಳ) ಅದು–ಆ ಪಟ್ಟಣವು, ಕಿನ್ನರಪುರಮಂ-ಅಲಕಾವತಿಯನ್ನು, ಪೋಲ್ತು, ಉರುವಿಬುಧೇಂದ್ರಶೋಭಿ- ಉತ್ಕೃಷ್ಟರಾದ ವಿದ್ವದ್ವರ್ಯರಿಂದ ಪ್ರಕಾಶಿಸುವ, ( ಉತ್ಕೃಷ್ಟರಾದ ದೇವಶ್ರೇಷ್ಠರಿಂದ ಪ್ರಕಾಶಿಸುವ ) ಅದು, ಸುರವರಪುರಮಂ- ಅಮರಾವತಿಯನ್ನು, ಘನಭೋಗಿಸಮುತ್ಕರರುಚಿರಂ- ಉತ್ಕೃಷ್ಟರಾದ ಸೌಖ್ಯವಂತರ ಗುಂಪಿನಿಂದ ಮನೋಹರವಾದ, (ಉತ್ಕೃಷ್ಟಗಳಾದ ಸರ್ಪಗಳ ಗುಂಪಿನಿಂದ ಮನೋಹರವಾದ) ಅದು, ನಾಗಪುರಮಂ-ಪಾತಾಳವನ್ನು, ಪೋಲ್ತು,ಎಸೆಗುಂ. ... ... ... ... ... ।೩॥

ಆ ಪುರಮಂ, ಅನುಪಮರೂಪಂ- ಅಸದೃಶಾಕಾರವುಳ್ಳ, ಗುರುಭಕ್ತಿತತ್ಪರಂ, ನಯವಿನಯಾಲಾಪಂ- ನೀತಿಸಮ್ರತೆಗಳಿಂದ ಕೂಡಿದ ಮಾತುಳ್ಳ, ವಿಶ್ರುತಕೀರ್ತಿಕಲಾಪಂ- ಪ್ರಸಿದ್ಧವಾದ ಯಶಸ್ಸೇ ಆಭರಣವಾಗುಳ್ಳ,ಗುರುಭಕ್ತರಾಜಂ, ಎಂಬ, ಅವನೀಶಂ, ಆಳ್ವಂ. ... ... ... ॥೪॥

ಕಂ ॥ ಗುರುಚರಣಸಪರ್ಯ್ಯಾಪರ । ನುರುತರಗುರುನಾಮಜಾಪಕಂ ಗುರುಪರಭಾ ॥
ಸುರಕಾರ್ಯ್ಯಧುರ್ಯ್ಯ ನಮಳಿನ । ಗುರುಮೂರ್ತಿಧ್ಯಾನಲೀನಮಾನಸಮಹಿತಂ ॥ ॥೫॥

ಕಂ ॥ ವೀರವ್ರತನಿಧಿ ವಿತತಯ । ಶೋರಂಜಿತನಂಬುರಾಶಿಗಾಂಭೀರ್ಯಗುಣಾ ॥ ಕರಂ
ಸಾರಾಸಾರವಿ । ಚಾರಪರಂ ಶರಣಗಣಸಮರ್ಚ್ಚನಲೋಲಂ ॥ ... ... ॥೬॥

ಕಂ ॥ ಎಂಬನೆಗಳ್ತೆಯ ನಾಳ್ದಳ । ತ್ರ್ಯಂಬಕನಂ ಪೂಜೆಗೆಯ್ವುತಂ ಶಂಭುಕಥಾ ॥ ಡಂ
ಬರಮನಾಲಿಸುತೆ ಸುಗು । ಣಾಂಬುಧಿಗುರುಭಕ್ತರಾಜ ನೊಪ್ಪುತ್ತಿರ್ದಂ ॥ ... ॥೭॥

ಉ ॥ ತೆಂಕಣಗಾಳಿ ತೀಡೆ ಗಿಳಿಗಳ್ನಲಿದಾಡೆ ಮದಾಳಿ ಪಾಡೆ ಮಾ । ವಂಕುರವೇರೆ
ಮಾಧವಿಗೆ ಬೇರೆಮುಗುಳ್ತಲೆದೋರೆ ಪೂಸರಂ ॥ ಬಿಂಕಮ ನಾಳೆ ಪದ್ಮತತಿ ತಾಳೆ ವಿಲಾಸ
ಮ ನೇಳೆ ಕೋಕಿಲಾ । ಸಂಕಲಿತ ಸ್ವರಂ ವಿಸುಗೆ ಬಂದುದು ಸನ್ಮಧುಮಾಸ ಮುರ್ವಿಯೊಳ್ ॥

ಚಂ ॥ ಘನಶಿಶಿರೇಂದು ಮಸ್ತಮಿಸೆ ಕೋಕಿಲ ಕುಕ್ಕುಟರಾಜಿ ಕೂಗೆ ಮಾ । ವಿನಪೊ
ಸಚೆಂದಳಿರ್ಸ್ಸಿಲಸಂಜೆಯದಾಗೆ ಪಳಚ್ಚನಬ್ಜಕಾನನ । ಮಲರ್ದೊಪ್ಪೆ ಕೈರವದಪೆಂಪಳಿ
ಯುತ್ತಿರೆ ಕೂರ್ತ್ತರೆಂಬ ನಚ್ಚಿನಪೊಣರ್ವಕ್ಕಿಗಳ್ನೆರೆಯೆಮೂಡಿದುದಲ್ತೆ ವಸಂತಭಾಸ್ಕರಂ ॥

---

ಗುರುಚರಣಸಪರ್ಯ್ಯಾಪರಂ-ಗುರುವಿನ ಪಾದಪೂಜೆಯಲ್ಲಾಸಕ್ತನು, ಉರುತರಗುರುನಾಮಜಾಪಕಂ-ಉತ್ಕೃಷ್ಟವಾದ ಗುರುವಿನ ಹೆಸರನ್ನು ಜಪಿಸುವನು, ಗುರುವರಭಾಸುರಕಾರ್ಯ್ಯಧುರ್ಯ್ಯಂ- ಗುರುಶ್ರೇಷ್ಠನ ಸಂಬಂಧವಾದ ಕೆಲಸವನ್ನು ಮಾಡುವದರಲ್ಲಿಸಮರ್ಥನು, ಅಮಳಿನಗುರುಮೂರ್ತಿಧ್ಯಾನಲೀನಮಾನಸಮಹಿತಂ-ನಿರ್ಮಲವಾದ ಗುರುಸ್ವರೂಪವನ್ನು ಧ್ಯಾನಿಸುವದರಲ್ಲಡಗಿದಮನಸ್ಸಿನಿಂದ ಪೂಜ್ಯನಾದವನು. ॥೫॥

ವೀರವ್ರತನಿಧಿ- ವೀರಶೈವನಿಯಮಕ್ಕೆ ನಿಕ್ಷೇಪನು, ವಿತತಯಶೋರಂಜಿತಂ- ವಿಸ್ತಾರವಾದ ಕೀರ್ತಿಯಿಂದಪ್ರಕಾಶಿಸುವವನು, ಅಂಬುರಾಶಿಗಾಂಭೀರ್ಯಗುಣಾಕರಂ- ಸಮುದ್ರದ ಹಾಗೆ ಗಾಂಭೀರತ್ವಕ್ಕಾಶ್ರಯನಾದವನು, ಸಾರಾಸಾರವಿಚಾರಪರಂ-ಒಳ್ಳೆಯದು ಕೆಟ್ಟದೆಂಬುವದನ್ನು ವಿಚಾರಮಾಡುವದರಲ್ಲಾಸಕ್ತನು, ಶರಣಗಣಸಮರ್ಚ್ಚನಲೋಲಂ-ಶಿವಶರಣರಪೂಜೆಯಲ್ಲಾಸಕ್ತನು. ... ... ॥೬॥

ಎಂಬ, ನೆಗಳ್ತೆಯಂ- ಪ್ರಸಿದ್ಧಿಯನ್ನು, ಆಳ್ದ, ಸುಗುಣಾಂಬುಧಿ, ಗುರುಭಕ್ತರಾಜಂ, ತ್ರ್ಯಂಬಕನಂ- ಲಲಾಟನೇತ್ರನಾದ ಶಿವನನ್ನು, ಪೂಜೆಗೆಯ್ವುತಂ, ಶಂಭುಕಥಾಡಂಬರಮಂ- ಶಿವನ ಕಥಾತಿಶಯವನ್ನು, ಆಲಿಸುತೆ, ಒಪ್ಪುತ್ತ, ಇರ್ದಂ. .. ... ... ... ॥೭॥

ತೆಂಕಣ-ದಕ್ಷಿಣದಿಕ್ಕಿನ, ಗಾಳಿ, ತೀಡೆ-ಬೀಸಲು, ಗಿಳಿಗಳ್, ನಲಿದು-ಸಂತೋಷಪಟ್ಟು, ಆಡೆ, ಮದಾಳಿ, ಪಾಡೆ, ಮಾವ್, ಅಂಕುರವೇರೆ-ಚಿಗುರಿನ ಮೊಳಕೆಗಳಂ ಬಿಡಲು, ಮಾಧವಿಗೆ, ಬೇರೆಮುಗುಳ್-ಪ್ರತ್ಯೇಕವಾದ ಮೊಗ್ಗುಗಳು, ತಲೆದೋರೆ, ಪೂಸರಂ ಮನ್ಮಥನು, ಬಿಂಕಮಂ-ಗರ್ವವನ್ನು, ಆಳೆ-ಹೊಂದಲು, ಪದ್ಮತತಿ, ವಿಲಾಸಮಂ, ತಾಳೆ, ಕೋಕಿಲಾಸಂಕಲಿತಸ್ವರಂ, ಕೋಕಿಲ-ಕೋಗಿಲೆಗಳ, ಆಸಂಕಲಿತ-ಎಲ್ಲಾಕಡೆಯಲ್ಲೂ ವ್ಯಾಪಿಸಿದ, ಸ್ವರಂ,ಏಳೆ, ಸನ್ಮಧುಮಾಸಂ- ಒಳ್ಳೆಯವೈಶಾಖಮಾಸವು, ಉರ್ವಿಯೊಳ್, ವಿಸುಗೆ,ಬಂದುದು.

ಘನಶಿಶಿರೇಂದು-ಹೆಚ್ಚಾದ ಶಿಶಿರಋತುವೆಂಬ ಚಂದ್ರನು, ಅಸ್ತಮಿಸೆ, ಕೋಕಿಲಕುಕ್ಕುಟರಾಜಿ-ಕೋಗಿಲೆಗಳೆಂಬ ಕೋಳಿಗಳ ಸಾಲು, ಕೂಗೆ, ಮಾವಿನ, ಅದುಪೊಸಚೆಂದಳಿರ್- ಆಹೊಸಕೆಂಪು ಚಿಗುರು, ಸುಸಿಲಸಂಜೆ- ಪ್ರಾತಸ್ಸಂಧ್ಯೆಯು, ಆಗೆ, ಅಬ್ಜಕಾನನಂ- ಕಮಲಗಳ ವನವು, ಪಳಚ್ಚನೆ- ನಿರ್ಮಲವಾಗಿ, ಅಲರ್ದು- ವಿಕಸಿತವಾಗಿ, ಒಪ್ಪೆ, ಕೈರವದ- ಬಿಳಿಯ ನೈದಿಲೆಯ, ಪೆಂಪು- ಅತಿಶಯವು, ಅಳಿಯುತ್ತ, ಇರೆ, ಕೂರ್ತರ್- ನಾಯಿಕಾನಾಯಕರು, ಎಂಬ, ಪೊಣರ್ವಕ್ಕಿಗಳ್- ಚಕ್ರವಾಕಪಕ್ಷಿಗಳು, ನೆರೆಯೆ-ಸೇರಲಾಗಿ, ವಸಂತಭಾಸ್ಕರಂ- ವಸಂತನೆಂಬಸೂರ್ಯನು, ಮೂಡಿದುದಲ್ತೆ. ... ... ... ॥೯॥

ಮ॥ ಸ್ರ॥ ಪೊಸಜೊನ್ನಂ ತನ್ನಕೀರ್ತಿಪ್ರಭೆ ಪಸರಿಸಿತೆಂಬಂತೆ ಸೊಂಪೇರೆ ಬಳ್ಕಿಂ। ಬಿಸಿಲಾತ್ಮೀಯಪ್ರತಾಪಂ ಕವಿವವೊಲೆಸಕಂದೋರ್ಕೆ ಪಾಂಥಾರಿವರ್ಗಂ ॥ ಕುಸಿದೆತ್ತಂ ನೀರ್ಗಳಂ ಪೊರ್ಕ್ಕಿರೆ ಘನವಿಭವಂಬೆತ್ತು ಕಣ್ಗೊಪ್ಪಿದಂ ಮೆ। ಪೆಸೆವನ್ನಂ ಮಿತ್ರರಾಜಾಭ್ಯುದಯಕರನಿಳಾಮೋದದಂಚೈತ್ರರಾಜಂ ॥ ... ... ... ... ॥೧೦॥

ವ॥ ಅಂತೆಳ್ತಂದಚೈತ್ರಮಾಸದೊಳೊಂದುವಾಸರಮಾಗುರುರಾಜುಬಿನದಂಬೆತ್ತು೦॥

ಮ ॥ ಸ್ರ॥ ವನಕೇಳೀಲೋಲಚಿತ್ತಂ ತಳರ್ದುಬನಕೆ ತತ್ಕೇಳಿಯಂತೀರ್ಚಿ ಸೌಂದ। ರ್ಯ ನಿಯುಕ್ತಂ ಚಾರುಸರ್ವಾಭರಣ ವಿಲಸಿತಂ ಭೂರಿಸೈನ್ಯಪ್ರಯುಕ್ತಂ ॥ ಜನತಾಲೋಕೋತ್ಸವಶ್ರೀಕರ ನುರುವಿಭವಂ ಸಿಂಧುರಾರೂಢನಾನಂ। ದನದಿಂದೇಳ್ತರ್ಪಿನಂ ಮುಂದೆಸೆದುದಮಮಗಾಣಿಕ್ಯಮಾಣಿಕ್ಯಹರ್ಮ್ಯಂ ॥ ... ... ... ॥೧೧॥

ಕಂ॥ ಎಳೆಗಿಳಿಯನೋದಿಸುವ ಮಂ। ಜುಳರತಿಶಾಸ್ತ್ರವನೆ ಕಲ್ವ ವಲ್ಲಕಿಯಮನಂ। ಗೊಳೆ ಬಾಜಿಪ ಸಿಂಗರಿಸುವ। ವಿಳಾಸಿನೀಜನ ಮುದಲ್ಲಿ ಸಲೆ ನೆಲಸಿರ್ಕುಂ॥ ... ॥೧೨॥

ಚಂ ॥ ಬಿನದ ಮೆನಿಪ್ಪ ಪೆರ್ವೆಳೆಗೆರಾಗಿಸಿ ಪಾಯ್ವ ಯುವಪ್ರತಾನನೂ। ತನಮೃಗಜಾಲಮಂ ಮರೆಯೊಳಿರ್ದೆಳೆವೆಂಡಿರ ಪುರ್ಬುವಿಲ್ಲ ನೊ॥ ಯ್ಯನೆ ಸೆಳೆದೀಕ್ಷಣಾಸ್ತ್ರದಿ ಸಿ

---

ಮಿತ್ರರಾಜಾಭ್ಯುದಯಕರಂ- ಸೂರ್ಯಚಂದ್ರರಿಗೆ (ಆಪ್ತರಾಜರಿಗೆ ಅಭಿವೃದ್ಧಿಯನ್ನುಂಟುಮಾಡುವ, ಇಳಾಮೋದದಂ- ಭೂಮಿಗೆ ಪರಿಮಳವನ್ನುಂಟುಮಾಡುವ ಭೂಜನಕ್ಕೆ ಸಂತೋಷವನ್ನುಂಟುಮಾಡುವ, ಚೈತ್ರರಾಜಂ-ವಸಂತನೆಂಬ ದೊರೆಯು, ತನ್ನ,ಕೀರ್ತಿಪ್ರಭೆ, ಪಸರಿಸಿತು,ಎಂಬಂತೆ, ಪೊಸಜೊನ್ನಂ-ನೂತನವಾದಚಂದ್ರಿಕೆಯು, ಸೊಂಪೇರೆ-ಸೊಗಸಂ ಹೊಂದಲು,ಆತ್ಮೀಯಪ್ರತಾಪಂ- ತನ್ನಪರಾಕ್ರಮವು, ಕವಿದವೊಲ್-ಆಚ್ಛಾದಿಸಿದಹಾಗೆ,ಬಳ್ಕಿಂಬಿಸಿಲ್-ಬಲವಾದ ಕೆಂಪುಬಿಸಿಲು, ಎಸಕಂದೋರ್ಕೆ-ಬೀಳುವದಕ್ಕಾರಂಭಿಸಲು, ಪಾಂಥಾರಿವರ್ಗಂ-ಮಾರ್ಗಸ್ಥರೆಂಬಶತ್ರುಗಳ ಗುಂಪು ಕುಸಿದು- ಕುಗ್ಗಿ, ಎತ್ತಂ-ಎಲ್ಲಾಕಡೆಯಲ್ಲೂ, ನೀರ್ಗಳಂ,ಪೊರ್ಕ್ಕ,ಇರೆ,ಘನವಿಭವ ಬೆತ್ತು, ಪಂಪು-ಅತಿಶಯವು, ಎಸೆವನ್ನಂ-ಪ್ರಕಾಶಿಸುವಹಾಗೆ, ಕಣ್ಗೆ,ಒಪ್ಪಿದಂ.

ಅಂತು, ಏಳ್ತಂದ, ಚೈತ್ರಮಾಸದೊಳ್, ಒಂದುವಾಸರಂ, ಆಗುರುಭಕ್ತರಾಜಂ, ಬಿನದಂಬೆತ್ತು. *

ವನಕೇಳೀಲೋಲಚಿತ್ತಂ- ಉಪವನದಾಟದಲ್ಲಿ ಆಸಕ್ತವಾದ ಮನಸ್ಸುಳ್ಳವನಾಗಿ, ಬನಕೆ- ವನಕ್ಕೆ, ತಳರ್ದು- ಹೋಗಿ, ತತ್ಕೇಳಿಯಂ- ಆ ಆಟವನ್ನು, ತೀರ್ಚಿ -ಪೂರೈಸಿಕೊಂಡು, ಸೌಂದರ್ಯನಿಯುಕ್ತಂ- ಸುಂದರತ್ವದಿಂ ಕೂಡಿದ ರಾಜನು, ಚಾರುಸರ್ವಾಭರಣವಿಲಸಿತಂ, ಭೂರಿಸೈನ್ಯಪ್ರಯುಕ್ತಂ- ಬಹುಳವಾದ ಸೈನ್ಯದಿಂ ಕೂಡಿದವನಾಗಿ, ಜನತಾಲೋಕೋತ್ಸವಶ್ರೀಕರಂ-ಜನಸಮೂಹದಕಣ್ಣುಗಳಿಗೆ ಸಂತೋಷಸಂಪತ್ತನ್ನುಂಟುಮಾಡುವನಾಗಿ, ಉರುವಿಭವಂ, ಸಿಂಧುರಾರೂಢಂ-ಆನೆಯಂ ಹತ್ತಿದವನಾಗಿ, ಆನಂದನದಿಂದೆ, ಏಳ್ತರ್ಪಿನಂ, ಮುಂದೆ, ಗಾಣಿಕ್ಯಮಾಣಿಕ್ಯಹರ್ಮ್ಯಂ- ಸೂಳೆಯರ ಗುಂಪಿನ ರತ್ನದ ಉಪ್ಪರಿಗೆಯು, ಎಸೆದುದು, ಅಮಮ!

ಅಲ್ಲಿ, ಎಳೆಗಿಳಿಯುಂ, ಓದಿಸುವ, ಮಂಜುಳರತಿಶಾಸ್ತ್ರವನೆ, ಕಲ್ವ, ವಲ್ಲಕಿಯ, ವೀಣೆಯನ್ನು, ಮನಂಗೊಳೆ- ಮನೋಹರವಾಗಿ, ಬಾಜಿಪ- ಸಿಂಗರಿಸುವ, ವಿಳಾಸಿನೀಜನಂ, ಸಲೆ, ನೆಲಸಿ, ಇರ್ಕುಂ. ॥೧೨॥

ಇದು, ಬಿನದಂ- ವಿನೋದವು, ಎನಿಪ್ಪ, ಪೆರ್ವೆಳೆಗೆ- ದೊಡ್ಡಮೆಳೆಗೆ, ರಾಗಿಸಿ- ಪ್ರೀತಿಸಿ, ಪಾಯ್ವ- ಮೇಲೆ ಬೀಳುವ, ಯುವಪ್ರತಾನನೂತನಮೃಗಜಾಲಮಂ- ಯೌವನಸ್ಥರ ಗುಂಪೆಂಬ ಮೃಗಗಳ ಸಮೂಹವನ್ನು, ಮರೆಯೊಳ್, ಇರ್ದು, ಎಳೆವೆಂಡಿರ- ಎಳೆಯ ಹುಡುಗಿಯರ, ಪುರ್ಬುವಿಲ್ಲಂ- ಹುಬ್ಬೆಂಬ ಬಿಲ್ಲನ್ನು, ಒಯ್ಯನೆ, ಸೆಳೆದು, ಈಕ್ಷಣಾಸ್ತ್ರದಿಂ- ನೋಟವೆಂಬ ಬಾಣದಿಂದ, ಇಸಲ್- ಹೊಡೆಯುವದಕ್ಕೆ, ನೆಗಲ್ದ-

ಸ ಲ್ನಿಗಳ್ದಂಗಜನೆಂಬ ಲುಬ್ಧಕೇಂ । ದ್ರನ ಪೊಸತೋಹಿ ನೊಡ್ಡಣೆ ಯಿದೆಂದೆನೆ ಸೌಧ ಮಡೇಂ ಮನೋಜ್ಞಮೊ ॥ ... ... ... ... ॥೧೩॥

ಚಂ ॥ ತೊಳಗುವ ತೊಂಡೆವಾಯ್ದೆರೆಯ ನೀಳ್ದಲರ್ಗಂಗಳ ಪೂರ್ಣಚಂದ್ರನಂ । ಪ ಳಿದೆಸೆವಾಸ್ಯಬಿಂಬದ ಘನಸ್ತನದಲ್ಪಸುಮಧ್ಯದುನ್ನತೋ ॥ ಜ್ವಳವಿಳಸನ್ನಿತಂಬದ ಸುವ ರ್ಣದ ಬಾಳೆಯ ಚೆಲ್ವಿನೇಳ್ಗೆಯುಂ । ತಳೆದೆಸೆವೂರುಮಂಡಲದ ಮೆಲ್ಲಡಿಯಂದ ಮಡೇನ ಳುಂಬಮೊ ॥ ... ... ... ... ... ... ॥೧೪॥

ಚಂ ॥ ತೊಳಪೆಳೆಮುತ್ತಿ ನೆಕ್ಕಸರ ಮೊಪ್ಪುವ ಕುಂಕುಮದಣ್ಪು ಕೇತಕೀ । ದಳ ದವತಂಸ ಮಾಳ್ದೆಸೆವ ಸೋರ್ಮುಡಿ ಮಲ್ಲಿಗೆಚೊಲ್ಲೆಯುಂ ಮನಂ ॥ ಗೊಳಿವ ಸುವರ್ಣಕಾಂ ಚಿ ಕನಕಾಂಬರ ಮಂಚಿತರತ್ನಭೂಷಣಾ । ವಳಿ ಮೃಗಭೂಲಲಾಮ ಮೆಸೆಯುತ್ತಿರೆ ಕಾಮಿ ನಿ ಕಣ್ಗೆ ತೋರಿದಳ್ ॥ ... ... ... ... ... ॥೧೫॥

ಚಂ ॥ ಅಳಿಕಳಭಂಗಳೋ ಕುರುಳಬಂಬಲೊ ಪೂರ್ಣಶಶಾಂಕಬಿಂಬವೋ । ತೊಳ ಗುವ ವಕ್ತ್ರವೋ ಮದನವಾಜಿಯೊ ಪೆರ್ಮೊಲೆಯೋ ಮನೋಜನು ॥ ಜ್ವಳರಥವೋ ಕ ಟೀತಟಮೊ ಮಾರಗಜೇಂದ್ರಮೊ ಮಂಜುಲೋರುಮಂ । ಡಳಮೊ ವಿರಾಜಿಪಾರಮಣಿಯಂಗ ಮೊ ಕಾವನ ಚಾತುರಂಗವೋ ॥ ... ... ... ... ॥೧೬॥

---

ಪ್ರಯತ್ನಗೊಂಡಿರುವ, ಅಂಗಜಂ- ಮನ್ಮಥನು, ಎಂಬ, ಲುಬ್ಧಕೇಂದ್ರನ- ದೊಡ್ಡಬೇಡನ, ಪೊಸತೋಹಿ ನ- ಹೊಸಮುತ್ತಿಗೆಯು, ಒಡ್ಡಣೆ- ಬಲೆಯೊಡ್ಡು, ಎನೆ, ಅದುಸೌಧಂ- ಆ ಉಪ್ಪರಿಗೆಯು, ಏಂಮನೋ ಜ್ಞಮೋ ! ... ... ... ... ... ... ॥೩೧॥

ತೊಳಗುವ, ತೊಂಡೆವಾಯ್ದೆರೆಯ- ತೊಂಡೆಯ ಹಣ್ಣಿನಂತಿರುವ ತುಟಿಯು, ನೀಳ್ದ- ಉದ್ದವಾದ, ಅಲರ್ಗಂಗಳ-ಹೂವಿನಂತಿರುವ ಕಣ್ಣುಗಳ, ಪೂರ್ಣಚಂದ್ರನಂ, ಪಳಿದು, ಎಸೆವ, ಆಸ್ಯಬಿಂಬದ- ಮುಖಮಂ ಡಲದ, ಘನಸ್ತನದ- ದಪ್ಪವಾದ ಮೊಲೆಯು, ಅಲ್ಪಸುಮಧ್ಯದ- ಸಣ್ಣದಾದ ಒಳ್ಳೆಯ ನಡುವಿನ, ಉನ್ನತೋ ಜ್ವಳವಿಳಸನ್ನಿತಂಬದ- ದಪ್ಪವಾಗಿಯೂ ಮನೋಹರವಾಗಿಯೂ ಪ್ರಕಾಶಿಸುವ ಕಟಿಪಶ್ಚಾದ್ಭಾಗಗಳ, ಸು ವರ್ಣದ, ಬಾಳೆಯ, ಚೆಲ್ವಿನ, ಏಳ್ಗೆಯುಂ, ತಳೆದು, ಎಸೆವ, ಊರುಮಂಡಲದ- ತೊಡೆಗಳ, ಮೆಲ್ಲಡಿಯ- ಮೃ ದುವಾದ ಕಾಲಿನ, ಅದುಅಂದು, ಏಂಅಳುಂಬವೋ- ಏನಧಿಕವೋ ! ... ... ॥೧೪॥

ತೊಳಪ, ಎಳೆಮುತ್ತಿನ, ಎಕ್ಕಸರಂ- ಏಕಾವಳಿಯು, ಒಪ್ಪುವ, ಕುಂಕುಮದ, ಅಣ್ಪು- ಲೇಪನೆಯು, ಕೇತಕೀದಳದ- ತಾಳೆಯಗರಿಯು, ಅವತಂಸಮಾಳ್ದು-ಶಿರೋಭೂಷಣವನ್ನು ಹೊಂದಿ, ಎಸೆವ, ಸೋರ್ಮುಡಿ- ಉದ್ದವಾದ ಕೇಶಪಾಶವು, ಮಲ್ಲಿಗೆಚೊಲ್ಲೆಯಂ-ಮಲ್ಲಿಗೆ ಹೂವಿನ ತುರುಬು, ಮನಂಗೊಳಿಪ, ಸುವರ್ಣಕಾಂ ಚಿ- ಚಿನ್ನದೊಡ್ಯಾಣ, ಕನಕಾಂಬರಂ- ಹೊಂಬಣ್ಣವಾದ ಸೀರೆ, ಅಂಚಿತರತ್ನಭೂಷಣಾವಳಿ, ಮೃಗಭೂಲಲಾ ಮಂ- ಕಸ್ತೂರಿಯ ತಿಲಕವು, ಎಸೆಯುತ್ತೆ, ಇರೆ, ಕಾಮಿನಿ, ಕಣ್ಗೆ, ತೋರಿದಳ್. ... ॥೧೫॥

ಅಳಿಕಳಭಂಗಳೋ- ಮದವಿಶಿಷ್ಟಗಳಾದ ಭ್ರಮರಗಳೋ ! ಕುರುಳ- ಕೇಶದ, ಬಂಬಲೊ- ಗುಂ ಪೋ ! ಪೂರ್ಣಶಶಾಂಕಬಿಂಬವೋ ! ತೊಳಗುವ, ವಕ್ತ್ರವೋ ! ಮದನವಾಜಿಯೊ- ಮನ್ಮಥನ ಕುದು ರೆಯೋ ! ಪೆರ್ಮೊಲೆಯೋ ! ಮನೋಜನ, ಉಜ್ವಳರಥವೋ ! ಕಟೀತಟಮೊ- ನಡುವೋ ! ಮಾರಗ ಜೇಂದ್ರಮೊ ! ಮಂಜುಲೋರುಮಂಡಲವೊ- ಮನೋಹರವಾದ ತೊಡೆಗಳೋ ! ಕಾವನ್ನ ಚಾತುರಂಗ ಮೊ ! ವಿರಾಜಿಪ, ಆರಮಣಿಯ, ಅಂಗವೋ ! ... .... ... ॥೧೬॥

ವ॥ ಎನಿಸಿ ರಂಜಿಸಿ ತನ್ನ ನತಿಮಧುರಸರಸತರಳಾಪಾಂಗದಿ ನಭೀಕ್ಷಿಸುತಿರ್ಪ್ಪಾಗಳ್ ॥

ಕಂ ॥ ವಣ್ಯಾಂಗನೆ ಯತಿಶಯಲಾ । ವಣ್ಯಮ ನವಳಂಗದಂದಮುಮ ನಾಕೆಯತಾ ॥
ರುಣ್ಯದ ಸೊಬಗಂ ಕಂಡಂ । ಫಣ್ಯಾಧಿಪಾಭರಣಚರಣಸರಸಿಜಭೃಂಗಂ ॥ ... ॥೧೭॥

ವ ॥ ಅಂತು ಕಂಡವಳ ರೂಪಾತಿಶಯಕ್ಕೆ ತಲೆದೂಗಿ ಬೆರಗುವಟ್ಟು ॥ * * *

ಕಂ ॥ ಇವ ಳತನುರಾಜ್ಯಲಕ್ಷ್ಮಿಯೊ । ಅವಳಂಗಜರಾಜಮಂತ್ರಶಕ್ತಿಯೊ ಭಗವಂ ॥
ದಿವಳಸಮಾಸ್ತ್ರಂ ಸಲೆಭಜಿ । ಸುವ ದೇವಿಯೊ ಯೆಂದು ಮಗುಳ್ದಭೀಕ್ಷಿಸುತಿರ್ದಂ ॥೧೮॥

ವ ॥ ಆಗಳ್ ॥ ಮ॥ ಸ್ರ॥ ಲಲನಾನೇತ್ರತ್ರಿಭಾಗದ್ಯುತಿತತಿ ಮದನಂ ಮಲ್ಲಿಕಾಶೋ
ಕನೀಲೋ । ತ್ಪಲಮೆಂಬೀಮೂರುಬಾಣಂಗಳ ನಸವಸದಿಂ ದೋರ್ಮೆ ತೊಟ್ಟೆಚ್ಚ ನೆಂಬಂ॥
ತಲರ್ದೊಪ್ಪಂಬೆತ್ತು ಬೇಗಂ ಪರಿದವನೆರ್ದೆಯೊ ಳ್ನಾಂಟೆ ತತ್ಕಾಲಮಂ ಪಾ । ರ್ದಲರಂಬಂ
ಮಾಣದೇಂ ನಾಂಟಿಸಿದನೊ ರಮಣೀಲೋಕರಾಜಂ ಮನೋಜಂ ॥ ... ॥೧೯॥

ಕಂ ॥ ಇಸೆ ಬಗೆಯ ನುರ್ಚಿ ಧೈರ್ಯದ । ಪಸುಗೆಯ ಬಿಸುಪಂ ಸಡಿಲ್ಚಿ ಕಾಮಾ
ಗ್ನಿಯುಂ ॥ ಲ್ಬಿಸುಪಂ ತನುವಿನೊ ಳೆತ್ತಂ । ಪಸರಿಸಿತದುಭೂಮಿಪಾಲಚೂಡಾಮಣಿಯ॥

---

ಎನಿಸಿ, ರಂಜಿಸಿ, ತನ್ನಂ, ಅತಿಮಧುರಸರಸತರಳಾಪಾಂಗದಿಂ- ಬಲು ಇಂಪಾಗಿಯೂ ಮನೋಹರ ವಾಗಿಯೂ ಚಂಚಲವಾಗಿಯೂ ಇರುವ ಕಡೆಗಣ್ಣಿನಿಂದ, ಅಭೀಕ್ಷಿಸುತೆ, ಇರ್ಪ್ಪಾಗಳ್. * * * *

ಫಣ್ಯಾಧಿಪಾಭರಣಚರಣಸರಸಿಜಭೃಂಗಂ- ಶೇಷಭೂಷಣನಾದ ಶಿವನ ಪಾದಕಮಲಕ್ಕೆ ಭ್ರಮರನಾದ ಗುರುಭಕ್ತರಾಜನು, ಪಣ್ಯಾಂಗನೆಯ- ಸೂಳೆಯ, ಅತಿಶಯಲಾವಣ್ಯಮಂ- ಬಹುಳವಾದ ಕಾಂತಿವಿಶೇಷವನ್ನು, ಅವಳ, ಅಂಗದ, ಅಂದಮುಮಂ, ಆಕೆಯ, ತಾರುಣ್ಯದ- ಯೌವನದ, ಸೊಬಗಂ- ಸೊಗಸನ್ನು, ಕಂಡು. ... ... ... ... ... ॥೧೭॥

ಅಂತು, ಕಂಡು, ಅವಳ, ರೂಪಾತಿಶಯಕ್ಕೆ, ತಲೆದೂಗಿ, ಬೆರಗುವಟ್ಟು. * * * * *

ಇವಳ್, ಅತನುರಾಜ್ಯಲಕ್ಷ್ಮಿಯೊ- ಮನ್ಮಥನ ರಾಜ್ಯಲಕ್ಷ್ಮಿಯೊ ! ಇವಳ್, ಅಂಗಜರಾಜಮಂತ್ರಶಕ್ತಿಯೊ- ಮನ್ಮಥನ ಮಂತ್ರಾಭಿಮಾನದೇವತೆಯೋ ! ಬಗೆವಂಬು- ಯೋಚಿಸುವಲ್ಲಿ, ಇವಳ್, ಅಸಮಾಸ್ತ್ರಂ- ಮನ್ಮಥನು, ಸಲೆ, ಭಜಿಸುವ- ಸೇವಿಸುವ, ದೇವಿಯೊ ! ಎಂದು, ಮಗುಳ್ದು- ಪುನಃ, ಅಭೀಕ್ಷಿಸುತ, ಇರ್ದ್ದ. ... ... ... ... ... ॥೧೮॥

ಮದನಂ, ಮಲ್ಲಿಕಾಶೋಕನೀಲೋತ್ಪಲಂ, ಎಂಬ, ಈಮೂರುಬಾಣಂಗಳಂ, ಅಸವಸದಿಂದೆ- ಬೇಗನೆ, ಒರ್ಮೆ, ತೊಟ್ಟು- ಸೇರಿಸಿ, ಎಚ್ಚಂ- ಹೊಡೆದನು, ಎಂಬಂತೆ, ಲಲನಾನೇತ್ರತ್ರಿಭಾಗದ್ಯುತಿತತಿ- ಮೊದಲು ಕೊನೆ ಮಧ್ಯಭಾಗಗಳಲ್ಲಿರುವ ಬಿಳುಪು ಕೆಂಪು ಕಪ್ಪುಕಾಂತಿಗಳು, ಅಲರ್ದು, ಒಪ್ಪಂಬೆತ್ತು, ಬೇಗಂ, ಪರಿದು, ಅವನ, ಎರ್ದೆಯೊಳ್- ಮನಸ್ಸಿನಲ್ಲಿ, ನಾಂಟೆ, ರಮಣೀಲೋಕರಾಜಂ- ಸ್ತ್ರೀಜನಗಳಿಗಧಿಪತಿಯಾದ, ಮನೋಜಂ, ತತ್ಕಾಲಮಂ- ಅದೇಸಮಯವನ್ನು, ಪಾರ್ದು- ಅಪೇಕ್ಷಿಸಿ, ಮಾಣದೆ- ಬಿಡದೆ, ಅಲರ- ಹೂವಿನ, ಅಂಬಂ- ಬಾಣವನ್ನು, ಅದೇಂನಾಂಟಿಸಿದನೊ ! ... ... ॥೧೯॥

ಅದು- ಆ ಬಾಣವು, ಇಸೆ- ಪ್ರಯೋಗಿಸಲು, ಭೂಮಿಪಾಲಚೂಡಾಮಣಿಯ- ರಾಜಶ್ರೇಷ್ಠನ, ಬಗೆಯಂ- ಮನಸ್ಸನ್ನು, ಉರ್ಚಿ- ಭೇದಿಸಿ, ಧೈರ್ಯದ, ಬಿಸುಗೆಯ-ಸಂಬಂಧದ,ಬಿಸುಪಂ- ತೀಕ್ಷ್ಣತೆಯನ್ನು, ಸಡಿಲ್ಚಿ- ಶಿಥಿಲವಂಮಾಡಿ, ತನುವಿನೊಳ್, ಎತ್ತಂ- ಎಲ್ಲಾಕಡೆಯಲ್ಲೂ, ಕಾಮಾಗ್ನಿಯ, ಬಳ್ಪಿಸುಪಂ- ಹೆಚ್ಚಾದ ಔಷ್ಣ್ಯವನ್ನು, ಪಸರಿಸಿತು. ... ... ... ... ॥೨೦॥

ಕಂ ॥ ನಡೆಗೆಡೆ ಚಿತ್ತಂ ಧೃತಿಲತೆ । ಕುಡಿಗಡೆ ಮನಸಿಜವಿಕಾರತತಿ ಮಾನಸದೊ ॥
ಳ್ನಡೆಗೆಡೆ ಕಯ್ಯಂಕುಶ ಮದು । ಪಡಲಿಡೆ ಧರಣಿಯೊಳ್ ವಿರಹವಿಹ್ವಲ ನಾದಂ ॥ ॥೧॥

ವ ॥ ಅಂತು ವಿರಹವಿಷಾದವಿಧುರಿತ ನಾಗಿ ತಾಂ ವಿವೇಕನಿಧಿ ಯಪ್ಪುದರಿಂ ಚೆಲ್ಲಿದ ಕರಣಂಗಳಂ ಮೆಲ್ಲನೆ ಸಂತವಿಸಿಕೊಂಡು ತನ್ನೊಳ್ ಇಂತೆಂದಂ ॥ * * * * * *

ಕಂ ॥ ಕಾಮಿನಿಯಪಾಂಗರುಚಿಸೌ । ದಾಮಿನಿ ಪಾರಿಸಿದು ದೆನ್ನ ಧೃತಿಹಂಸನ ನಿ ॥
ನ್ನೇವಾತೊ ಕಾಮನಂಬು ನಿ । ಕಾಮಂ ನಟ್ಟುರ್ಚಿ ಪಾಯ್ದುದೆನ್ನಯ ಮನಮಂ ॥೨॥

ವ ॥ ಎಂದು ನೊಂದು ಕಜ್ಜದುಜ್ಜವಣೆಯಂ ವಿಚಾರಿಸಿ ॥ * * * * *

ಕಂ॥ ಸುದತಿಯಿವ ಳ್ಬೆಲೆವೆ ಣ್ಣಾವ । ಪದಭಕ್ತೆಗಡೀಕೆಯೊಡನೆ ನೆರೆ ದೊದವಿದ ಸೌ॥
ಖ್ಯದ ಸವಿಯ ನೀಶ್ವರಂಗೊ । ರ್ಮೆದ ಲರ್ಪಿಸಿಕೊಳ್ವೆ ನನಗದಾವುದು ದೋಷಂ ॥೩॥

ಉ ॥ ಸಂದಿಸಿ ಯದ್ಯದಾತ್ಮಹಿತ ಮಂದನುತಂ ಸಲೆ ಮೈಥುನೇ ರತೇ । ಯೆಂದೆನು
ತಂ ಪೊದಳ್ದೊರೆವ ಶೈವಪುರಾಣಸುವಾಣಿಯುಂಟು ಜೇ ॥ ರೊಂದೆನಿಸಿರ್ದ ಪಕ್ಷ ಮಿದು
ಸಲ್ವುದು ಭಕ್ತೆಯುತಂಗೆ ದೋಷ ಮಾ । ವಂದದಿ ನಪ್ಪುದೀಕೆಯ ರತಕ್ಕೆ ವಿಚಾರಿಸಿ
ನೋಡೆ ನಾಡೆಯುಂ ॥ ... ... ... ... ... ॥೪॥

ಚಿತ್ತಂ, ನಡೆಗೆಡೆ- ನಿಶ್ಚಂಚಲವಾಗಲು, ಧೃತಿಲತೆ- ಧೈರ್ಯವೆಂಬ ಬಳ್ಳಿಯು, ಕುಡಿಗಡೆ-ಅಗ್ರಹೀನವಾಗಲು, ಮಾನಸದೊಳ್, ಮನಸಿಜವಿಕಾರತತಿ- ಮನ್ಮಥನಿಂದ ಉಂಟಾಗುವ ವಿಕಾರಗಳ ಸಮೂಹವು, ನಡೆಗೆಡೆ- ನಿಂತುಕೊಳ್ಳಲು, ಕಯ್ಯ, ಅದುಅಂಕುಶಂ, ಧರಣಿಯೊಳ್, ಪಡಲಿಡೆ- ಬೀಳಲು, ವಿರಹವಿಹ್ವಲಂ- ವಿಯೋಗದಿಂದ ವಿಚೇತನನು, ಆದಂ. ... ... ... ... ।೧।

ಅಂತು, ವಿರಹವಿಷಾದವಿಧುರಿತಂ- ವಿಯೋಗದಿಂದುಂಟಾದ ಮನಃಕ್ಲೇಶದಿಂದ ವಿಚೇತನನು, ಆಗಿ, ತಾಂ, ವಿವೇಕನಿಧಿ, ಅಪ್ಪುದರಿಂ, ಚೆಲ್ಲಿದ- ಚಂಚಲಗಳಾದ, ಕರಣಂಗಳಂ- ಇಂದ್ರಿಯಗಳನ್ನು, ಮೆಲ್ಲನೆ, ಸಂತವಿಸಿಕೊಂಡು-ಸಮಾಧಾನಪಡಿಸಿಕೊಂಡು, ತನ್ನೊಳ್, ಇಂತು, ಎಂದಂ. * * * * * * *

ಕಾಮಿನಿಯ, ಅಪಾಂಗರುಚಿಸೌದಾಮಿನಿ- ಕಡೆಗಣ್ಣಿನ ಕಾಂತಿಯೆಂಬ ಮಿಂಚು, ಎನ್ನ, ಧೃತಿಹಂಸನಂ- ಧೈರ್ಯವೆಂಬ ಹಂಸಪಕ್ಷಿಯನ್ನು, ಪಾರಿಸಿದುದು- ಓಡಿಸಿತು, ಇನ್ನು, ಏವಾತೊ- ಏನುಮಾತನಾಡುವದೋ ! ಕಾಮನ, ಅಂಬು- ಬಾಣವು, ನಿಕಾಮಂ- ಅತ್ಯಂತನಾಗಿ, ಎನ್ನಯ, ಮನಮಂ, ನಟ್ಟು, ಉರ್ಚಿ- ಭೇದಿಸಿ, ಪಾಯ್ದುದು- ಹೊರಕ್ಕೆ ಹೊರಟಿತು. ... ... ... ॥೨॥

ಎಂದು, ನೊಂದು, ಕಜ್ಜದ-ಕಾರ್ಯದ, ಉಜ್ಜವಣೆಯಂ-ಉದ್ಯೋಗವನ್ನು, ವಿಚಾರಿಸಿ. * * *

ಬೆಲೆವೆಣ್- ಸೂಳೆಯಾದ, ಇವಳ್ಸುದತಿ- ಈ ಸ್ತ್ರೀಯು, ಶಿವಪದಭಕ್ತೆಗಡ- ಶಿವಭಕ್ತೆಯಲ್ಲವೇ ? ಈಕೆಯೊಡನೆ, ನೆರೆದು- ಕೂಡಿ, ಒದವಿದ, ಸೌಖ್ಯದ, ಸವಿಯಂ- ಮಾಧುರ್ಯವನ್ನು, ಈಶ್ವರಂಗೆ, ಒರ್ಮೆ, ದಲ್- ನಿಶ್ಚಯವಾಗಿ, ಅರ್ಪಿಸಿಕೊಳ್ವೆಂ, ಎನಗೆ, ಅದುದೋಷಂ, ಆವುದು ? ... ॥೩॥

ಸಂದಿಸಿ- ಪ್ರಾಪ್ತವಾಗಿ, ಯದ್ಯತ್- ಯಾವಯಾವದು, ಆತ್ಮಹಿತಂ- ತನಗೆ ಇಷ್ಟವಾದದ್ದೋ, ಎಂದು, ಎನುತಂ, ಸಲೆ, ಮೈಥುನೆ- ರತಿಕ್ರೀಡೆಯಲ್ಲಿ, ರತೆ- ಆಸಕ್ತೆಯು, ( ಆದಾಗ್ಯೂ ) ಎಂದು, ಎನುತಂ, ಪೊದಳ್ದು- ಸ್ಫುಟವಾಗಿ, ಒರೆವ, ಶೈವಪುರಾಣಸುವಾಣಿ, ಉಂಟು, ಬೇರೆ, ಒಂದುಪಕ್ಷಂ, ಎನಿಸಿ, ಇರ್ದ, ಇದು, ಭಕ್ತೆಯುತಂಗೆ, ಸಲ್ವುದು- ಯೋಗ್ಯವಾಗಿರುವದು, ನಾಡೆಯುಂ- ಚೆನ್ನಾಗಿಯೂ, ವಿಚಾರಿಸಿ, ನೋಡೆ, ಈಕೆಯ, ರತಕ್ಕೆ- ಸುರತದಿಂದ, ದೋಷಂ- ಪಾಪವು, ಆವಂದದಿಂ- ಯಾವರೀತಿಯಿಂದ, ಅಪ್ಪುದು ? ... ... ... ... ... ... ॥೪॥

ವ ‖ ಅದರಿಂ ನೀಂ ಗಣಿಕಾಂಗನೆಯ ನಣಿಯರ ಮನುಭವಿಪೆ ನೆಂದು ನಿರ್ಧರಿಸಿ ನಿಜಗೃಹಾಗತ ನವಳ್ಗೆ ತಕ್ಕ ಧನಕನಕವಸನಮಣಿಭೂಷಣಾದಿಯ ನಾತ್ಮಸಖನ ಕಯ್ಯೊಳಿತ್ತವಳ್ಗೊತ್ತೆಯ ಕಳುಪ ಲೊಡನವಂ ತಂದು ನೀಡೆ ಮತ್ತಕಾಶಿನಿ ಯೊತ್ತೆಯ ನೊಲ್ಲೆ ನಿತ್ತಲ್ಬಾರದಿರೆಂದು ವಿಡಂಬಿಸಿ ನುಡಿಯೆ ದೂತಂ ನಿಜನಾಥ ನಿರ್ಪೆಡೆಗೇಳ್ತಂದವಳೊತ್ತೆಯ ನೊಲ್ಲದುತ್ತರಿಸಿ ಬಿತ್ತರಿಸಿದುದ ನೆಲ್ಲಮಂ ಸವಿಸ್ತರಂ ಪೇಳೆ ಮೋಹಾತುರಂ ಕೇಳ್ದವಳ ಸಜ್ಜೆಮಾಡದೆಡೆಗೆ ಗುರುಭಕ್ತರಾಜಂ ತಾನೆ ಬಂದು ತನ್ನಿತಂಬಿನಿಯ ನಭಿನವರಾಗರಸಭರಿತ ದೃಷ್ಟಿಯಿ ನಭೀಕ್ಷಿಸಿ ಸದೈನ್ಯಮಧುರಾಲಾಪದಿ ನಿಂತೆಂದಂ‖ * * * * * *

ಮತ್ತೇ ‖ ಎಲೆ ಭಾಮಾಮಣಿ ನಿನ್ನಪೂರ್ವತರಸೌಂದರ್ಯಕ್ಕೆ ಕಣ್ಸೋಲವಾಂ । ತೊಲವಿಂದಂ ನಿನಗೊತ್ತೆಯಂ ಕಳುಪಿದೆಂ ನೀಂ ನೊಲ್ಲೆ ನೆಂದೆಂಬುದೇಂ ‖ ಛಲವೋ ವೈಭವ ಮೋ ಮನಸ್ಥಿತಿಯ ನಾರೈವಂದವೋ ಬಿಂಕವೋ । ನಲವಾರಿರ್ದುದೊ ನಾಣ ಪೆರ್ಚುಗೆಯೊ ವಿತ್ತಂ ಸಾಲದೆಂಬಾಸೆಯೊ ‖ ... ... ... ... ‖೨೫‖

ವ ತ್ತೇ ಛಲಮುಂ ವೈಭವಮುಂ ಮನಸ್ಥಿತಿಯ ನಾರೈವಂದಮುಂ ಬಿಂಕಮುಂ । ನಲವಾರಿರ್ಪುದು ಮಾಗ ದೊಲ್ದವಿಟನೊಳ್ಬಲ್ಲಳ್ಗೆ ನಾಣ್ಸಲ್ಲದು ‖ ಜ್ವಲವೇಶ್ಯಾಮತಕಲ್ಪ

---

ಅದರಿಂ, ಈಗಣಿಕಾಂಗನೆಯ, ಅಣಿಯರಂ- ಅತ್ಯಂತವಾಗಿ, ಅನುಭವಿಪೆಂ, ಎಂದು, ನಿರ್ಧರಿಸಿ ; ನಿಜಗೃಹಾಗತಂ- ತನ್ನ ಮನೆಗೆ ಬಂದವನಾಗಿ, ಅವಳ್ಗೆ, ತಕ್ಕ, ಧನಕನಕವಸನಮಣಿಭೂಷಣಾದಿಯಂ, ಆತ್ಮಸಖನ- ತನ್ನ ಸ್ನೇಹಿತನ, ಕಯ್ಯೊಳ್, ಇತ್ತು, ಅವಳ್ಗೆ, ಒತ್ತೆಯ- ಪಣದ್ರವ್ಯವನ್ನು, ಕಳುಪಲ್, ಒಡನೆ- ಕೂಡಲೇ, ಅವಂ, ತಂದು, ನೀಡೆ- ಕೊಡಲು, ಮತ್ತಕಾಶಿನಿ- ಸ್ತ್ರೀಯು, ಒತ್ತೆಯಂ, ಒಲ್ಲೆಂ, ಇತ್ತಲ್, ಬಾರದಿರ್, ಎಂದು, ವಿಡಂಬಿಸಿ- ಧಿಕ್ಕರಿಸಿ, ನುಡಿಯೆ, ದೂತಂ- ಆಳು, ನಿಜನಾಥಂ, ಇರ್ಪ, ಎಡೆಗೆ, ಏಳ್ತಂದು, ಅವಳ್, ಒತ್ತೆಯಂ, ಒಲ್ಲವೆ, ಉತ್ತರಿಸಿ- ನೂಕಿ, ಬಿತ್ತರಿಸಿದುದಂ ಎಲ್ಲಮಂ-ಹೇಳಿದುದೆಲ್ಲವನ್ನೂ, ವಿಸ್ತರಂ- ವಿಶಾಲವಾಗಿ, ಪೇಳೆ, ಗುರುಭಕ್ತರಾಜಂ, ಕೇಳ್ದು, ಮೋಹಾತುರಂ- ಅನುರಾಗಾತಿಶಯವುಳ್ಳವನಾಗಿ, ಅವಳ, ಸಜ್ಜೆಮಾಡದ- ಮಾಡಿಯ, ಎಡೆಗೆ, ತಾನೆ, ಬಂದು, ತನ್ನಿತಂಬಿನಿಯಂ, ಅಭಿನವರಾಗರಸಭರಿತದೃಷ್ಟಿಯಿಂ- ಹೊಸದಾದ ಪ್ರೀತಿಯಿಂದುಂಟಾದ ನೀರಿನಿ-ತುಂಬಿದ ಕಣ್ಣಿನಿಂದ, ಅಭೀಕ್ಷಿಸಿ, ಸದೈನ್ಯಮಧುರಾಲಾಪದಿಂ- ದೀನತ್ವದಿಂ ಕೂಡಿದ ಇಂಪಾದ ಮಾತಿನಿಂದ, ಇಂತು, ಎಂದಂ. * * * * * * *

ಎಲೆ ಭಾಮಾಮಣಿ- ಎಲೈಸ್ತ್ರೀರತ್ನವೇ ! ಆಂ, ನಿನ್ನ, ಅಪೂರ್ವತರಸೌಂದರ್ಯಕ್ಕೆ, ಕಣ್ಸೋಲವಾಂತು- ಮೋಹಿತನಾಗಿ, ಒಲವಿಂದೆ, ನಿನಗೆ, ಒತ್ತೆಯಂ- ಪಣದ್ರವ್ಯವನ್ನು, ಕಳುಪಿದೆಂ, ನೀಂ, ಒಲ್ಲೆಂ, ಎಂದೆಂಬುದು, ಛಲಮೋ ಏಂ? ವೈಭವವೋ? ಮನಸ್ಥಿತಿಯಂ, ಆರೈವ- ಪರೀಕ್ಷಿಸುವ, ಅಂದವೋ? ಬಿಂಕವೋ- ಗರ್ವವೋ? ನಲವು- ಪ್ರೀತಿಯು, ಆರಿ, ಇರ್ದುದೊ? ನಾಣ- ನಾಚಿಕೆಯ, ಪೆರ್ಚುಗೆಯೊ? ವಿತ್ತಂ, ಸಾಲದು, ಎಂಬ, ಆಸೆಯೊ ? ... ... ... ... ... ‖೨೫‖

ಛಲಮುಂ, ವೈಭವಮುಂ, ಮನಸ್ಥಿತಿಯಂ, ಆರೈವ- ಪರೀಕ್ಷಿಸುವ, ಅಂದಮುಂ, ಬಿಂಕಮುಂ- ಗರ್ವವೂ, ನಲವಾರಿರ್ಪುದುಂ- ಪ್ರೀತಿಹೀನವಾಗಿರುವಿಕೆಯೂ, ಆಗದು- ಆಗಿಗಲಾರದು; ಬಲ್ಲಳ್ಗೆ- ಜಾಣೆಗೆ, ಒಲ್ದ- ಪ್ರೀತಿಸಿದ, ವಿಟನೊಳ್, ನಾಣ್- ನಾಚಿಕೆಯು, ಸಲ್ಲದು- ಯೋಗ್ಯವಾಗಿರುವದಿಲ್ಲ, ಉಜ್ವಲವೇಶ್ಯಾಮತಕೆ- ಪ್ರಕಾಶಿಸುವ ಸೂಳೆಯ ಸಮ್ಮತಿಗೆ, ಅಲ್ಪವಿತ್ತಂ- ಸ್ವಲ್ಪಹಣವು, ( ಅಂದರೆ ತಾನು ಕಳುಹಿಸಿದ್ದ ಹಣವು ಸಾಲದುದು ) ಎನೆ, ಕಾಮಿನಿ ! ನಿನ್ನ, ಅತ್ಯಾಶೆ, ಎಂಬೆಂಬ, ಅಸರ್ಗಲವಾರಾಶಿಗೆ ತಡೆಯಿಲ್ಲದ ಸಮು

ವಿತ್ತ ಮೆನೆ ನಿನ್ನತ್ಯಾಶೆಯೆಂದೆಂ ಬನ | ಗ್ಗಲವಾರಾಶಿಗೆ ಸೇತುಗಟ್ಟಸೆನೆ ಪೇಳ್ವಿತ್ತೌಘದಿಂ ಕಾಮಿನಿ ‖ ... ... ... ... ... ... ‖೨೬‖

ಚಂ ‖ ಜಡಮತಿಯೆಂಜೆಯಪ್ಪೊಡೆ ಮಹಾಚತುರಂ ದೊರೆ ಯೀತನಲ್ಲವೆಂ | ಬೊಡೆ ಧರಣೀಶಸೂನು ಪರತೊಂದುಮತಸ್ಥಿತ ನೆಂಬೆಯಪ್ಪೊಡಾ ‖ ಮೃಡಪದಭಕ್ತ ನಲ್ಪಬಲನೆಂಬೊಡೆ ಸಾಹಸಿ ಬಂಧುಶೂನ್ಯ ನೆಂ | ಬೊಡೆ ಶಿವಭಕ್ತಬಂಧು ಕುಟಲಾತ್ಮಕ ನೆಂಬೊಡೆ ಸದ್ಗುಣಾಸ್ಪದಂ ‖ ... ... ... ... ... ... ‖೨೩‖

ಕಂ ‖ ಸರಿವರೆಯನಲ್ಲ ವೆಂದೊಡೆ | ತರಳೇಕ್ಷಣೆ ನೋಡು ರತಿಕಳಾವಿದ ನಲ್ಲಂ ‖ ದರವರಿವೊಡೆನೀ ನೆನ್ನೊ | ಳ್ನೆರದೀಕ್ಷಿಪುದೋರ್ಮೆ ಮತ್ಕಲಾಕೌಶಲಮಂ ‖ ‖೨೪‖

ಮತ್ತೇ ‖ ಸೊಗಸಂ ಸೂಸೆ ವಿಳಾಸಮಂ ಮೆರೆದು ನಣ್ಪಂ ನೋಡಿ ಕಾದಲ್ಮೆ ಕೈ | ವಿಗೆ ಸಾರ್ದೊಳ್ನುಡಿಯಾಡಿ ಕುಂತಲಮ ನೊಳ್ಪಿಂತಿರ್ದಿ ರೋಮೋದ್ಗಮಂ ‖ ನೆಗೆವನ್ನಂ ಬಿಗಿದಪ್ಪಿ ಚುಂಬಿಸಿ ಕಲಾವಿಸ್ತಾರಮಂ ಬೀರಿ ನಾ | ಣುಗೆ ನೀಡಾಗದೆ ನಿನ್ನೊಳಿಂದು ನರೆಯ ಲ್ಕೂರ್ತಿಂ ಸರೋಜೇಕ್ಷಣೆ ‖ ... ... ... ... ‖೨೫‖

ಮತ್ತೇ ‖ ಸವಿನೋಟಂ ಪೊಸಬೇಟಮಂ ನಗೆ ಯನಂಗಾವೇಶಮಂ ಜಾಣ್ಮೆವೆ | ತ್ತ ವಿನೋದೋಕ್ತಿ ವಿಳಾಸಮಂ ನಗಳ್ದು ಗಾಢಾಲಿಂಗನಂ ಮನ್ಮಥೋ ‖ ತ್ಸವರೋಮಾಂ

---

ದ್ರೈಕ್ಕಿ, ವಿತ್ತೌಘದಿಂ- ಹಣದ ರಾಸಿಯಿಂದ, ಸೇತುಗಟ್ಟಸೆನೆ- ಸೇತುವೆಯನ್ನು ಕಟ್ಟಿಸಲಾರೆನೆ ? ಪೇಳ್ (ಎನ್ನಂ) ಜಡಮತಿ- ಮೂಢಬುದ್ಧಿಯುಳ್ಳವನು, ಎಂಬೆಯಪ್ಪೊಡೆ- ಎನ್ನುವೆಯಾದರೆ, ಮಹಾಚತುರಂ- ಅತಿಕುಶಲನು; ಈತಂ, ದೊರೆ, ಅಲ್ಲಂ, ಎಂಬೊಡೆ, ಧರಣೀಶಸೂನು- ರಾಜಪುತ್ರನು; ಪರತೊಂದುಮತಸ್ಥಿತಂ- ಶಿವೇತರಮತಸ್ಥನು, ಎಂಬೆಯಪ್ಪೊಡೆ, ಆಮೃಡಭಕ್ತಂ, ಅಲ್ಪಬಲಂ- ಸ್ವಲ್ಪ ಶಕ್ತಿಯುಳ್ಳವನು, ಎಂಬೊಡೆ, ಸಾಹಸಿ, ಬಂಧುಶೂನ್ಯಂ- ನೆಂಟರಿಲ್ಲದವನು, ಎಂಬೊಡೆ, ಶಿವಭಕ್ತಬಂಧು, ಕುಟಲಾತ್ಮಕಂ- ಕಪಟಿಯು, ಎಂಬೊಡೆ, ಸದ್ಗುಣಾಸ್ಪದಂ. ... ... ... ... ‖೨೩‖

ಸರಿವರೆಯುಂ- ತನಗೆ ಸಮಾನವಾದ ಪ್ರಾಯವುಳ್ಳವನು, ಅಲ್ಲಂ, ಎಂದೊಡೆ, ತರಳೇಕ್ಷಣೆ- ಚಂಚಲವಾದ ಕಣ್ಣುಳ್ಳವಳೇ ! ನೋಡು; ರತಿಕಳಾವಿದಂ- ಮನ್ಮಥವಿದ್ಯೆಯನ್ನು ತಿಳಿದವನು, ಅಲ್ಲ, ಎಂದು, ಅರವರಿವೊಡೆ- ಸಂದೇಹಪಟ್ಟರೆ, ನೀಂ, ಓರ್ಮೆ, ಎನ್ನೊಳ್, ನೆರೆದು- ಕೂಡಿ, ಮತ್ಕಲಾಕೌಶಲಮಂ- ನನ್ನ ಮದನವಿದ್ಯಾ ಪ್ರೌಢಿಮೆಯನ್ನು, ಈಕ್ಷಿಪುದು. ... ... ... ... ‖೨೪‖

ಸರೋಜೇಕ್ಷಣೆ ! ಸೊಗಸಂ, ಸೂಸೆ- ಸುರಿಸುತ್ತಿರಲು, ವಿಳಾಸಮಂ, ಮೆರೆದು, ನಣ್ಪಿಂ- ಸೊಗಸಿನಿಂದ, ನೋಡಿ, ಕಾದಲ್ಮೆ- ನಾಯಿಕಾ ನಾಯಕರ ಪ್ರೀತಿಯು, ಕೈವಿಗೆ- ಹೆಚ್ಚಾಗಲು, ಸಾರ್ದು- ಸಮೀಪವಂ ಹೊಂದಿ, ಒಳ್ನುಡಿಯಾಡಿ, ಕುಂತಳಮಂ- ಕೇಶವನ್ನು, ಒಳ್ಪಿಂ- ಚೆನ್ನಾಗಿ, ತಿರ್ದಿ- ನೇರಮಾಡಿ, ರೋಮೋದ್ಗಮಂ- ರೋಮಾಂಚನವು, ನೆಗೆವನ್ನಂ- ಹುಟ್ಟುವಹಾಗೆ, ಬಿಗಿದು, ಅಪ್ಪಿ, ಚುಂಬಿಸಿ, ಕಲಾವಿಸ್ತರಮಂ- ರತಿಕಲೆಯ ವೈಶಾಲ್ಯವನ್ನು, ಬೀರಿ, ನಾಣ್- ನಾಚಿಕೆಯು, ಉಗೆ- ಪ್ರವೇಶಿಸಲು, ನೀಡಾಗದೆ- ಆ ನಾಚಿಕೆಗಾಸ್ಪದವಾಗದೆ, ನಿನ್ನೊಳ್, ಇಂದು, ನೆರೆಯಲ್, ಕೂರ್ತಿಂ- ಪ್ರೀತಿಸಿವನು. ... ‖೨೫‖

ಅಂಗನೆ ! ಸವಿನೋಟಂ-ಇಂಪಾದ ನೋಟವು, ಪೊಸಬೇಟಮಂ- ಹೊಸದಾದ ಪ್ರೀತಿಯನ್ನು, ನಗೆ- ನಗುವಿಕೆಯು, ಅನಂಗಾವೇಶಮಂ- ಮನ್ಮಥಪ್ರವೇಶವನ್ನು, ಜಾಣ್ಮೆವೆತ್ತ- ಚಾತುರ್ಯವಂಹೊಂದಿದ, ವಿನೋದೋಕ್ತಿ- ಸರಸದ ಮಾತು, ವಿಳಾಸಮಂ, ನೆಗಳ್ದು, ಗಾಢಾಲಿಂಗನಂ, ಮನ್ಮಥೋತ್ಸವರೋಮಾಂಚ

ಚನಮಂ ಸುಧಾಧರದ ಭಾಸ್ವಚ್ಚುಂಬನು ದರ್ಪಕ । ದ್ರವಮಂ ಪುಟ್ಟಿಸಲಿರ್ದೊಡೇಕೆ ನೆರೆ ವಾಯಾಸಂ ವಿಟಂಗಂಗನೆ ॥ ... ... ... ... .. ॥೩೫॥

ಮತ್ತೇ ॥ ಕಲೆಯಂ ಕಾಲಸುಜಾತಿಯಂ ಪ್ರಕೃತಿಯಂ ದೇಶೀಯಭಾವಂಗಳಂ । ವಿಲಸದ್ರೀತಿಯ ನುಚ್ಚನೀಚಸಮರತ್ಯಾಶ್ಲೇಷಬಂಧಂಗಳಂ ॥ ಲಲನಾನೀಕದ ಮನ್ಮಥಾಲಯದ ನಾಡೀಭೇದಮಂ ಪ್ರಾಯಮಂ।ನಲವಿಂದಂ ತಿಳಿದೊಂದಲಾರದ ಭುಜಂಗಂ ಭಂಗಮಂ ತಾಳನೆ॥

ಉ ॥ ಪೊಂಪುಳಿ ಮುಗ್ಗುಲಿಕ್ಕಿದವೊಲಂಗದ ಬಳ್ಳಿವುರಿಂಗದಂತೆ ನೇ । ತ್ರಂ ಪಡೆ ದೆಚ್ಚರೊಂದದವೊಲುರ್ಬಿದ ಚೆಂದುಟ ಬೀಯದಂತೆ ಸು ॥ ಯ್ಗಂಪೆಲರೋಟಮಂ ಬಿಡದ ವೊಲ್ತನಗುಣ್ಮಿದ ಸೇದೆ ಜಾರದಂ । ತಿಂಪಡರ್ದಂಗಜಾತಸುಖಮಂ ನಿನಗೀಯದೊ ಡಾಂ ಭುಜಂಗನೆ ॥ ... ... ... ... ... ... ॥೩೬॥

ಉ ॥ ಅಂಗುಟ ಮಂಘ್ರಿಯುಂ ಪರಡು ಜಾನು ಕಟೀತಟ ನಾಭಿ ವಕ್ಷ ಮುಂ । ತ್ತುಂಗಕುಚಂ ಭುಜಂ ನಿಸುಪ ಕಕ್ಷೆಗ ಳೋಷ್ಠಕಪೋಲ ಮಕ್ಷಿ ಫಾ ॥ ಲಂ ಗಳಮುತ್ತಮಾಂ

---

ನವುಂ- ಮನ್ಮಥ ಸಂಬಂಧವಾದ ಸಂತೋಷದಿಂದುಂಟಾದ ರೋಮಾಂಚನವನ್ನು, ಸುಧಾಧರದ- ಅಮೃತ ದಿಂ ಕೂಡಿದ ತುಟಿಯ, ಭಾಸ್ವಚ್ಚುಂಬನಂ, ದರ್ಪಕದ್ರವಮಂ- ಕಾಮರಸವನ್ನು, ಪುಟ್ಟಿಸದೆ, ಇರ್ದೊಡೆ, ವಿಟಂಗೆ, ನೆರೆವ, ಆಯಾಸಂ, ಏಕೆ ? ... ... ... ... ।೩೫॥

ಕಲೆಯಂ-ಮದನಕಲಾಸ್ಥಾನವನ್ನು, ಕಾಲಸುಜಾತಿಯಂ-ಆಯಾಯಸಮಯಗಳು ಆಯಾಯಸ್ತ್ರೀ ಜಾತಿಗಳನ್ನು, ಪ್ರಕೃತಿಯಂ- ಸ್ವಭಾವವನ್ನು, ದೇಶೀಯಭಾವಂಗಳಂ- ಆಯಾಯ ದೇಶಾನುಗುಣವಾದವಿ ಭಾವಾದಿಭಾವಗಳನ್ನು, ವಿಲಸದ್ರೀತಿಯಂ- ಪ್ರಕಾಶಿಸುವ ರತಿಕ್ರಮವನ್ನು, ಉಚ್ಚನೀಚಸಮರತ್ಯಾಶ್ಲೇಷ ಬಂಧಂಗಳಂ— ಉಚ್ಚರತಿ- ಸ್ತ್ರೀ ಅಪೇಕ್ಷೆಯೂ ಅಧಿಕಕಾಲೀನವಾದ ಪುರುಷರತವು, ನೀಚರತಿ- ತದಪೇಕ್ಷೆ ಯಾಅಲ್ಪಕಾಲೀನವಾದಪುರುಷರತವು, ಸಮರತಿ-ಉಭಯಸಮಕಾಲೀನ ಸುರತವು, ಆಶ್ಲೇಷ-ಆಲಿಂಗನೆ, ಬಂಧಂಗಳಂ- ನಾನಾವಿಧರತಿಬಂಧನಗಳು ಇವುಗಳನ್ನು, ಲಲನಾನೀಕದ- ಸ್ತ್ರೀ ಸಮೂಹದ, ಮನ್ಮಥಾಲಯದ- ಯೋನಿಯ, ನಾಡೀಭೇದಮಂ- ಆಯಾಯ ಚಿಹ್ನೆಗಳ ವ್ಯತ್ಯಾಸವನ್ನು, ಪ್ರಾಯಮಂ, ನಲವಿನಿಂ- ಪ್ರೀತಿ ಯಿಂದ, ತಿಳಿದು, ಒಂದಲಾರದ, ಭುಜಂಗಂ, ಭಂಗಮಂ- ಹಾನಿಯನ್ನು, ತಾಳನೆ ? ... ।೩೬॥

ಪೊಂಪುಳಿ- ರೋಮಾಂಚನವು, ಮುಗ್ಗುಲಿಕ್ಕಿದವೊಲ್- ಮಲಗಿದಹಾಗೆ, ಅಂಗದ, ಬಳ್ಳಿವರ್, ಇಂಗ ದಂತೆ, ನೇತ್ರಂ, ಪಡೆದು, ಎಚ್ಚರೊಂದದವೊಲ್- ಜಾಗರೂಕತೆಯಂ ಹೊಂದದಹಾಗೆ, ಉರ್ಬಿದ, ಚೆಂದುಟಿ, ಬೀಯದಂತೆ-ಉಬ್ಬಿರದಹಾಗೆ, ಸುಯ್ಗಂಪೆಲರ್-ಉಸುರಿನ ಪರಿಮಳವಿಶಿಷ್ಟವಾದ ವಾಯುವು, ಓಟವಮಂ ಬಿಡದವೊಲ್, ತನಗೆ, ಉಣ್ಮಿದ- ಹೊರಕ್ಕೆ ಹೊರಟ, ಸೇದೆ- ಬೆವರು, ಜಾರದಂತೆ, ಇಂಪು, ಅಡರ್ದ, ಅಂ ಗಜಾತಸುಖಮಂ- ಮನ್ಮಥನ ಸೌಖ್ಯವನ್ನು, ನಿನಗೆ, ಈಯದೊಡೆ, ಆಂ, ಭುಜಂಗನೆ- ವಿಟನೇ ? ॥೩೭॥

ಅಂಗುಟಂ- ಹೆಬ್ಬೆರಲು, ಅಂಘ್ರಿಯುಂ- ಕಾಲು, ಪರಡು- ಕಾಲಿನಪಕ್ಕದಗಂಟು, ಕಟೀತಟನಾಭಿವ ಕ್ಷಂ- ನಡುವುಹೊಕ್ಕಳು ಎದೆಗಳು- ಉತ್ತುಂಗಕುಚಂ- ದಪ್ಪವಾದಮೊಲೆಯು, ( ಭುಜಂ, ನಿಸುಪ, ಕಕ್ಷೆಗಳ್- ಕಂಕುಳು ) ಓಷ್ಠಕಪೋಲಂ- ತುಟಿ ಕೆನ್ನೆ, ಅಕ್ಷಿ-ಕಣ್ಣು, ಫಾಲಂ- ಹಣೆ, ಗಳಂ- ಕತ್ತು, ಉತ್ತಮಾಂ ಗಂ-ತಲೆ, ಎನಿಪ- ಈಯೆಡೆಯೊಳ್, ಕ್ರಮದಿಂ, ದ್ವಿಪಕ್ಷದೊಳ್- ಶುಕ್ಲ ಕೃಷ್ಣಪಕ್ಷಗಳಲ್ಲಿ, ಕಲೆಯಂ-ಕಲಾ ಸ್ಥಾನಗಳನ್ನು, ವಿಲಾಸದಿಂ, ಊರ್ಧ್ವದೇಶಕೆ- ದೇಹದಮೇಲ್ಗಡೆಗೆ, ಪೊಂಗಿಸುತೆ- ಏರಿಸುತ್ತ, ಎಡದೊಳ್- ವಾಮಭಾಗದಲ್ಲಿ, ಇಳುಪುತ್ತೆ, ಅಂದರೆಶುಕ್ಲಪಕ್ಷದ ಪಾಡ್ಯಮಿಮೊದಲಾದಹದಿನೈದು ತಿಥಿಗಳಲ್ಲಿ ಸ್ತ್ರೀದೇಹದ

ಗ ಮೆನಿಪೀಯೆಡೆಯೊಳ್ಕ್ರಮದಿಂ ದ್ವಿಪಕ್ಷದೊಳ್ಪೊಂಗಿಸು ತೂರ್ಧ್ವದೇಶ ಕಿಳುಪ್ರತ್ತ್ಯ
ಷದೊಳ್ಕಲೆಯಂ ವಿಲಾಸದಿಂ ॥ ... ... ... .. ॥೩೩॥

ಕಂ॥ ಎನುಪಷ್ಟವಿಧಾಲಿಂಗನ । ಮನೂನ ಮೆಂಭತ್ತುನಾಲ್ಕುಬಂಧಂಗಳ್ಚುಂ ॥ ಬ
ನಮುಂ ದ್ವಾದಶವಿಧ ಮೆಂ । ಬಿನಿತರೊಳುಚಿತಪ್ರಕಾರಮರಿ ಡೆಸಗುತ್ತಂ ॥ ೩೪॥

ಕಂ ॥ ಪರಿವಿಡಿಯಿಂ ನಿಂತು ಬಾಹ್ಯಾಂ । ತರರತಮಂ ನೆಗಳ್ದಮ ಜಯಂತನೊ ನಲ
ಕೂ ॥ ಬರನೋ ಮನಸಿಜನೊ ಯೆನೆ ಸಮ । ಸುರತಸುಖಾಬ್ಧಿಯೊಳೆ ನಿನ್ನನಾಳಿಪೆ ನಬಲೆ॥

ಕಂ ॥ ಜಗುಳೆ ನಿರಿ ಮುಗಿಯೆ ಕಣ್ಮಲ । ರೊಗವಿಗೆಯಿಂ ಕಾಮಶರಧಿ ತುಳ್ಕಾಡೆ ಮ
ನಂ ॥ ಬುಗುವಾಲಿಂಗನಮಾತ್ರದೆ । ನೆಗಳ್ವೆಂ ಮೈಮರಪ ನಿಂದು ನಿನ ಗಿಂದುಮುಖಿ ॥೩೬॥

ಕಂ॥ ಸ್ಮರ ನಿಂದು ಧನ್ಯನಾದಂ । ತರುಣಿಮಮಿಂದೆನಗೆ ಸಫಲ ಮಾದುದು ವಲಮೆಂ
ದುರುಮುದಮ ನಾಳೆ ನಿನಗಂ । ಸುರತೋತ್ಸವಮಾಯದಿರೊಡ್ಡಾಂ ವರವಿಟನೆ ॥ ॥೩೭॥

ಕಂ ॥ ನೋಡೆನ್ನ ಪರಿಯ ನಿಂದೊಡ । ಗೂಡೆನ್ನೊಳ್ಮೋಹನಾಂಗಿ ಯೆಂದವ ನೆನೆ

---

ಬಲಗಡೆಯ ಪೂರ್ವೋಕ್ತಗಳಾದ ಅಂಗುಷ್ಠಾದಿಹದಿನೈದು ಸ್ಥಾನಗಳಲ್ಲಿ ಕ್ರಮವಾಗಿ ಒಂದೊಂದು ತಿಥಿಯಲ್ಲಿ ಒಂದೊಂದುಸ್ಥಾನಗಳೂ, ಕೃಷ್ಣಪಕ್ಷದಲ್ಲಿ ಎಡಗಡೆಯ ತಲೆಮೊದಲಾದ ಹದಿನೈದುಸ್ಥಾನಗಳೂ ಕಳಾಸ್ಥಲಗಳೆಂದುಭಾವ ) ... ... ... ... ... ॥೩೩॥

ಮಿನುಪ, ಅಷ್ಟವಿಧಾಲಿಂಗನದಿಂ- ಪುಷ್ಕರ, ವಿವಿಧಕ, ಧೃಷ್ಟಕ, ಪೀಡನಕ, ವೃಕ್ಷಾರೋಹಣ, ಲತಾವೇಷ್ಟನ, ತಿಲತಂಡುಲತೆ, ಕ್ಷೀರನೀರಾಯಿತ ಎಂಬ ಎಂಟುಪ್ರಕಾರಗಳಾದ ಆಲಿಂಗನೆಗಳು ( ಈಎಂಟು ವಿಧವಲ್ಲದೆ ಊರೂಪಗೂಹನ, ಜಘನೋಪಗೂಹನ, ಸ್ತನಾಶ್ಲೇಷ, ಲಲಾಟಕ ಎಂಬ ಇವುನಾಲ್ಕುಸೇರಿ ಆಲಿಂಗನವು ೧೨ ವಿಧಗಳೆಂಬುವದೊಂದು ಮತ ) ಅನೂನಂ- ಅಧಿಕವಾಗಿ, ಎಂಭತ್ತುನಾಲ್ಕು ಬಂಧಂಗಳ್ ಚುಂಬನಮುಂ, ದ್ವಾದಶವಿಧಂ- ನಿಮಿತ್ತಕ, ಸಂಘಟಕ, ಸ್ಫುರಿತಕ,ಭ್ರಾಂತಿಕ, ತಿರ್ಯಗಾಯಿತಕ, ಅತಿಧೃಷ್ಟಕ, ಉತ್ತರಸಂಘಟಿತಕ, ಜಿಹ್ವಾವೇಳನಕ, ಜಿಹ್ವಕ, ಅತಿಜಿಹ್ವಾಯೋಗ, ಸೀತ್ಕಾರ,ದಶನಕವೆಂದು ಹನ್ನೆರಡುವಿಧವು, ಎಂಬ, ಇನಿತರೊಳ್, ಉಚಿತಪ್ರಕಾರಂ, ಅರಿದು, ಎಸಗುತ್ತಂ. ... ॥೩೪॥

ಅಬಲೆ ! ಇಂತು, ಪರಿವಿಡಿಯಿಂ- ಕ್ರಮವಾಗಿ, ಬಾಹ್ಯಾಂತರರತಮಂ- ಹೊರಗಣರತಿ ಒಳಗಣರತಿ ಯೆಂಬೆರಡನ್ನು; ನೆಗಳ್ದು, ಇವಂ, ಜಯಂತನೊ- ಇಂದ್ರಪುತ್ರನೊ ! ನಲಕೂಬರನೊ- ಕುಬೇರಪುತ್ರನೊ ! ಮನಸಿಜನೋ ! ಎನೆ, ಸಮಸುರತಸುಖಾಬ್ಧಿಯೊಳೆ, ನಿನ್ನಂ; ಆಳಿಪೆಂ-ಮುಳುಗಿಸುವೆನು. ॥೩೫॥

ಇಂದುಮುಖಿ ! ನಿರಿ- ನಿರಿಗೆಯ ಗಂಟು. ಜಗುಳೆ- ಜಾರಲು, ಕಣ್ಮಲರ್- ಹೂವಿನಂತಿರುವಕಣ್ಣು, ಮುಗಿಯೆ- ಮುಚ್ಚಿಕೊಳ್ಳಲು, ಒಗುವಿಗೆಯಿಂ- ಹೆಚ್ಚಿಗೆಯಿಂದ. ಕಾಮಶರಧಿ- ಮದನರಸಸಮುದ್ರವು, ತುಳ್ಕಾಡೆ, ಮನಂಬುಗುವ- ಮನಸ್ಸಿಗೆ ನಾಟುವ, ಆಲಿಂಗನಮಾತ್ರದೆ, ನಿನಗೆ, ಇಂದು, ಮೈಮರಪಂ- ಮಯ್ಮರೆಯುವಿಕೆಯನ್ನು, ನೆಗಳ್ವೆಂ. ... ... ... ... ॥೩೬॥

ಇಂದು, ಸ್ಮರಂ, ಧನ್ಯಂ- ಕೃತಾರ್ಥನು, ಆದಂ; ಇಂದು, ಎನಗೆ, ತರುಣಿಮಂ- ಯೌವನವು, ಸಫಲಂ, ಆದುದು, ವಲಂ- ನಿಶ್ಚಯ, ಎಂದು, ನೀಂ, ಉರುಮುದಮಂ, ಆಳೆ- ಹೊಂದುವಹಾಗೆ, ನವಸುರತೋತ್ಸವಮಾಯದೆ, ಇರೊಡ್ಡೆ, ಆಂ, ವರವಿಟನೆ ? ... ... ... ॥೩೭॥

ಮೋಹನಾಂಗಿ- ಪ್ರೀತಿಯನ್ನುಂಟುಮಾಡುವ ದೇಹವುಳ್ಳವಳೇ ! ಇಂದು, ಎನ್ನ, ಪರಿಯಂ- ರೀತಿಯನ್ನು, ನೋಡು, ಎನ್ನೊಳ್, ಒಡಗೂಡು; ಎಂದು; ಅವಂ, ಎನೆ, ತಾಂ- ಆ ಸೂಳೆಯು, ನೋಡಿ, ನ

ತಾಂ ॥ ನೋಡಿ ನಸುನಗುತೆ ವಿಟಕುಲ । ಚೂಡಾಮಣಿ ಮಝುರೆ ಲೇಸನಾಡಿದೆಯೆಂಬಳ್ ॥೩೮॥

ಮತ್ತೇ ॥ ಪೊಸತೀಜಾಣ್ನುಡಿಯೆಲ್ಲಿಕಲ್ತೆ ಯಿದ ನಿಂದೆನ್ನೊಳ್ಕರಂ ನಿನ್ನ ಬ । ರ್ದಿ ಸೆವನ್ನಂ ಬಗೆದೋರಿದೈ ಭಲರೆ ಕಂದರ್ಪಾಗಮಾಭಿಜ್ಞನಿ ॥ ನ್ನೆಸಕಂ ಸಾಲ್ಗು ಮಿದೇಕೆ ನೀಂ ಜರುಚುವೈ ಪೋಪೋಗು ಸದ್ಭಕ್ತಿನೀ । ತಿಸುಶೀಲಂ ಸಮ ನಲ್ತು ಕೊಡದೆನಗೊಂದಲ್ನಿನ್ನೊಳುರ್ವೀಪತಿ ॥ ... ... ... ... ... ॥೩೯॥

ಮ ॥ ಸ್ರ ॥ ಚದುರಂ ನೀಂ ನಾದೊಡಿಂತಿಂತುಸಿರ್ದ ನುಡಿಗಳಂ ಕೇಳ್ದು ಸಂಮೋಹಮಂ ತಾ । ಳ್ದಿದ ಳಲ್ಲೀಕಾಂತೆ ಯೆಂದೊಳ್ಪರಿದು ಕಡೆಗೆ ನೀಂ ಬೇಗ ಜಾರಲ್ಕೆವೇಡಾ ॥ ವಿದಿತಂ ಭಾವಜ್ಞ ನಾದಂಬಬಲೆಯ ಕಡೆಗಣ್ನೋಟದಿಂ ಕಂಡು ಮೋಹಾ । ಸ್ಪದಭಾವಾಭಾವಮಂ ಜಾಣ್ಮೆಯೊಳೆ ತೊಲಗುವಂದಂದಮಂ ಕಾಣವೇಡಾ॥ ... ... ॥೪೦॥

ಉ ॥ ಒತ್ತೆಯನೊಲ್ಲೆ ನೆಂದೊಡೆಲೆ ನೀಂ । ವಿಟನಾದೊಡದೆಂತುಬಂದೆ ಪೇ । ಳ್ಮತ್ತೆ ಮದೀಯಮಂದಿರಕೆ ಸದ್ರಸಿಕೋತ್ತಮ ನಾದೊಡಂತು ಮ ॥ ಚ್ಚಿತ್ತದ ನೇಹಮಂ ತಿಳಿಯದಾಡಿದೆ ಕಾಮಕಲಾಪ್ರಸಂಗಮಂ । ವಿತ್ತದ ಬಲ್ಮೆ ಯುಳ್ಳೊಡಿಳೆಯೊಳ್ಗಣಿಕಾವಳಿ ಶೂನ್ಯಮಾದುದೆ ॥ .. ... ... ... ... ... ॥೪೧॥

---

ಸುನಗುತೆ, ವಿಟಕುಲಚೂಡಾಮಣಿ- ವಿಟಪುರುಷರ ಗುಂಪಿಗೆಲ್ಲಾ ಶ್ರೇಷ್ಠನಾದವನೇ ! ಮಝುರೆ- ಶಹಬಾಸ್ ! ಲೇಸಂ- ಒಳ್ಳೆಯದನ್ನು, ಆಡಿದೆ. ... ... ... ॥೩೮॥

ಉರ್ವೀಪತಿ- ರಾಜನೇ ! ಈ ಜಾಣ್ನುಡಿ- ಈ ಜಾಣತನದ ಮಾತು, ಪೊಸತು, ಇದಂ, ಎಲ್ಲಿಕಲ್ತೆ ? ಇಂದು, ನಿನ್ನ, ಬರ್ದು- ಜಾಣ್ಮೆಯು, ಎಸೆವನ್ನಂ- ಪ್ರಕಾಶಿಸುವಹಾಗೆ, ಎನ್ನೊಳ್, ಕರಂ- ಅತ್ಯಂತವಾಗಿ, ಬಗೆದೋರಿದೈ- ಮನಸ್ಸನ್ನು ಪ್ರಕಾಶಪಡಿಸಿದೆ; ಭಲರೆ! ಕಂದರ್ಪಾಗಮಾಭಿಜ್ಞ- ಮದನ ತಂತ್ರವನ್ನು ತಿಳಿದವನೇ ! ನಿನ್ನ, ಎಸಕಂ- ಉದ್ಯೋಗವು, ಸಾಲ್ಗುಂ- ಸಾಕು; ನೀಂ, ಇದೇಕೆಜರುಚುವೈ- ಏಕೆ ಕೂಗುವೆ ? ಪೋಪೋಗು- ಹೋಗುಹೋಗು, ಸದ್ಭಕ್ತಿ, ನೀತಿ, ಸುಶೀಲಂ, ಕೊಡದೆ, ಎನಗೆ, ನಿನ್ನೊಳ್, ಒಂದಲ್, ಸಮಂ, ಅಲ್ತು. ... ... ... ... ... ॥೩೯॥

ನೀಂ, ಚದುರಂ- ಕುಶಲನು, ಆದೊಡೆ, ಇಂತು, ಇಂತು, ಉಸಿರ್ದ, ನುಡಿಗಳಂ, ಕೇಳ್ದು, ಈಕಾಂತೆ, ಸಂಮೋಹಮಂ- ಪ್ರೀತಿಯನ್ನು, ತಾಳ್ದಳ್- ಹೊಂದಿದವಳು, ಅಲ್ಲ, ಎಂದು, ಒಳ್ಪರಿದು- ಸಮಾಚೀನತ್ವವಂ ತಿಳಿದು, ನೀಂ, ಕಡೆಗೆ- ಬೇರು ಪಾರ್ಶ್ವಕ್ಕೆ, ಬೇಗ, ಜಾರಲ್ಕೆವೇಡಾ- ಹೋಗಬೇಡವೇ ? ವಿದಿತಂ- ಪ್ರಸಿದ್ಧನಾದ, ಭಾವಜ್ಞಂ- ಪರೇಂಗಿತವನ್ನು ತಿಳಿಯುವವನು, ಆದಂದು- ಆದಪಕ್ಷದಲ್ಲಿ, ಅಬಲೆಯ, ಕಣ್ನೋಟದಿಂ, ಮೋಹಾಸ್ಪದಭಾವಾಭಾವಮಂ- ಪ್ರೀತಿಯಂ ಹೊಂದದುದು ಇಲ್ಲದಿರುವದನ್ನು, ಕಂಡು, ಜಾಣ್ಮೆಯೊಳ್,ತೊಲಗುವ, ಒಂದಂದಮಂ, ಕಾಣವೇಡಾ- ತಿಳಿಯಬೇಡವೇ ? ... ... ... ॥೪೦॥

ಎಲೆ, ನೀಂ, ವಿಟಂ, ಆದೊಡೆ, (ಆಂ) ಒತ್ತೆಯಂ- ಪಣದ್ರವ್ಯವನ್ನು, ಒಲ್ಲೆಂ, ಎಂದೊಡೆ, ಮತ್ತೆ, ಮದೀಯಮಂದಿರಕೆ- ನನ್ನ ಮನೆಗೆ, ಅದೆಂತುಬಂದೆ ? ಪೇಳ್, ಸದ್ರಸಿಕೋತ್ತಮಂ- ಒಳ್ಳೆಯ ರಸಜ್ಞರಲ್ಲಿ ಶ್ರೇಷ್ಠನಾದವನು, ಆದೊಡೆ, ಮಚ್ಚಿತ್ತದ- ನನ್ನ ಮನಸ್ಸಿನ, ನೇಹಮಂ- ಪ್ರೀತಿಯನ್ನು, ತಿಳಿಯದೆ, ಕಾಮಕಲಾಪ್ರಸಂಗಮಂ- ಮದನವಿದ್ಯೆಯ ಪ್ರಸ್ತಾಪವನ್ನು, ಎಂತುಆಡಿದೆ ? ವಿತ್ತದ- ಹಣದ, ಬಲ್ಮೆ- ಬಲವು, ಉಳ್ಳೊಡೆ, ಇಳೆಯೊಳ್, ಗಣಿಕಾವಳಿ- ಸೂಳೆಯರ ಗುಂಪು, ಶೂನ್ಯಂಆದುದೆ- ಇಲ್ಲವಾಯ್ತೇ ? ... ... ... ... ... ... ॥೩೧॥

ಚಂ ॥ ಹರಪದಭಕ್ತ ನಾದೊಡಿನಿತುಂಗಜಮೋಹವಿಕಾರ ಮಾಂಪುದೇಂ । ಗುರುಭಜನಾರ್ಪಿತಾತ್ಮತನುವಾದೊಡದೆಂತು ತನೂವಿಮೋಹದೆ ॥ ಳ್ತರ ಮಕಟೇಕೆ ಜೀಳ್ತನದಪೇರ್ಮೆಯು ಮಾತು ವಿದಗ್ಧಪುಂಗವ । ರ್ಸರಿಯಭುಜಂಗರೇಂ ನಗರೆ ನಿನ್ನವಿಚಾರಿತೆಗಂಡು ಧಾತ್ರಿಯೊಳ್ ॥ ... ... ... ... ... ... ॥೪೨॥

ಕಂ ॥ ಅರಿತ ಮದುಳ್ಳೊಡೆ ಕಾಮದ । ಬರಿಕಳವಳದಳವ ನುಳಿದು ಮಾಣ್ದೆನ್ನೊಳ್ಸಂ॥ದೆರಕಮನೆಲೆಗುರುಭಕ್ತಿಯೊ । ಳೆರಕಂಬಡೆ ಬಂದ ಬಟ್ಟೆವಿಡಿ ತಳ ರೆಂದಳ್ ॥೪೩॥

ವ ॥ ಎಂದ ವಾರಾಂಗನೆಯ ಬಿರುನುಡಿ ಗಸಹ್ಯಾಭಾವಂಬಡದೆ ಮಾರ್ಕೊಂಡು ॥ *

ಕಂ ॥ ಪುರುಷಾಂತರ ದಿರವರಿಯದೆ । ಮರುಳೆ ಮದಾಂಧತೆಯೊ ಳಿಂತು ಪೋಗೆಂದಪೆ ನೀ ॥ ನರವರಿಸದೆನ್ನ ನೀನಿ । ಷ್ಕಾರವಕ್ರಾಲಾಪತತಿಗೆ ಕಾರಣಮೇನೊ ॥ ॥೪೪॥

ಕಂ ॥ ವಾರಾಂಗನೆ ನೀಂ ಸುಗುಣ । ಶ್ರೀರಾಜಿತರಾಜಪುತ್ರ ನಾ ನೆನ್ನಂ ನಿ । ಷ್ಕಾರಣ ಮೊಲ್ಲದೆ ಪೋಗೆನೆ । ಭೂರಿಪಣಾಂಗನೆಯ ರೆಲ್ಲ ಪಳಿಯರೆ ನಿನ್ನಂ ॥ ... ॥೪೫॥

ಕಂ ॥ ಸಕಲಕಲಾನಿಧಿರಾಜಂ । ಗಕಟ ಮೊಗಂಗೊಡದ ನಿನಗಮಾಪದ್ಮನಿಗಂ ॥ ಪ್ರ

---

ಹರಭಕ್ತಂ, ಆದೊಡೆ, ಇನಿತು, ಅಂಗಜಮೋಹವಿಕಾರಮಾಂಪುದೇಂ- ಇಷ್ಟು ಮನ್ಮಥಾವಸ್ಥೆಯಿಂದುಂಟಾದ ವಿಕೃತಿಯನ್ನು, ಹೊಂದುವದೇ ? ಗುರುಭಜನಾರ್ಪಿತಾತ್ಮತನು- ಗುರುಸೇವೆಗೋಸ್ಕರ ಸಮರ್ಪಿಸಲ್ಪಟ್ಟ ತನ್ನ ದೇಹವುಳ್ಳವನು, ಆದೊಡೆ. ತನೂವಿಮೋಹದ- ದೇಹಸಂಬಂಧವಾದ ಅಜ್ಞಾನದ, ಎಳ್ತರಂ- ಹೆಚ್ಚಿಗೆಯು, ಅದು, ಎಂತು ? ಅಕಟ ! ಜೆಳ್ತನದ- ಮೂಢತ್ವದ, ಪೇರ್ಮೆಯ- ಹೆಚ್ಚಿಗೆಯ, ಮಾತು, ಏಕೆ ? ಧಾತ್ರಿಯೊಳ್, ವಿದಗ್ಧಪುಂಗವರ್- ವಿದ್ವದ್ವರ್ಯರಾದ, ಭುಜಂಗರ್- ವಿಟರು, ನಿನ್ನ, ಅವಿಚಾರತೆಗಂಡು- ಅವಿವೇಕಿತ್ವವನ್ನು, ಕಂಡು, ನಗರೇಂ ? ... ... ... ।೪೨॥

ಎಲೆ ! ಅದುಅರಿತಂ- ಆ ತಿಳುವಳಿಕೆಯು, ಉಳ್ಳೊಡೆ, ಕಾಮದ, ಬರಿಕಳವಳದ- ವ್ಯರ್ಥವಾದ ಪೇಚಾಟದ, ಅಳವಂ- ಶಕ್ತಿಯನ್ನು, ಉಳಿದು, ಎನ್ನೊಳ್, ಸಂದ- ಸೇರಿದ, ಎರಕಮಂ- ಪ್ರೀತಿಯನ್ನು, ಮಾಣ್ದು- ಬಿಟ್ಟು, ಗುರುಭಕ್ತಿಯೊಳ್, ಎರಕಂಬಡೆ- ಜೊತೆಗೊಳಿಸು, ಬಂದಬಟ್ಟೆವಿಡಿ- ಬಂದ ಮಾರ್ಗವನ್ನು ಹಿಡಿ, ತಳರ್- ಹೋಗು, ಎಂದಳ್. ... ... ... ... ।೪೩॥

ಎಂದ, ವಾರಾಂಗನೆಯ- ಸೂಳೆಯ, ಬಿರುನುಡಿಗೆ- ಕಠಿಣವಾದ ಮಾತಿಗೆ, ಅಸಹ್ಯಾಭಾವಂಬಡದೆ- ಸಹಿಸದಿರುವಿಕೆಯಂ ಹೊಂದದೆ, ಮಾರ್ಕೊಂಡು- ಪ್ರತಿಯಾಗಿ. * * * * * * * * *

ಪುರುಷಾಂತರದ- ಇತರ ಮನುಷ್ಯರ, ಇರವರಿಯದ- ರೀತಿಯಂ ತಿಳಿಯದ, ಮರುಳೆ- ಹುಚ್ಚಳೇ ! ಮದಾಂಧತೆಯೊಳ್- ಗರ್ವದಿಂದುಂಟಾದ ಕುರುಡಿನಿಂದ, ಎನ್ನಂ, ಅರವರಿಸದೆ- ಅಪೇಕ್ಷಿಸದೆ, ಇಂತು, ಪೋಗು, ಎಂದಪೆ, ಈನಿಷ್ಕಾರವಕ್ರಾಲಾಪತತಿಗೆ- ಈಕಠಿಣವಾದ ಡೊಂಕುಮಾತಿನ ಗುಂಪಿಗೆ, ಕಾರಣಂ, ಏನೊ?

ನೀಂ, ವಾರಾಂಗನೆ; ಆಂ, ಸುಗುಣಶ್ರೀರಾಜಿತರಾಜಪುತ್ರಂ; ಎನ್ನಂ, ನಿಷ್ಕಾರಣಂ, ಒಲ್ಲದೆ, ಪೋಗು, ಎನೆ, ಭೂರಿಪಣಾಂಗನೆಯರ್- ಅನೇಕರಾದ ಸೂಳೆಯರು, ಎಲ್ಲ, ನಿನ್ನಂ, ಪಳಿಯರೆ- ದೂಷಿಸುವದಿಲ್ಲವೇ ? ... ... ... ... ... ... ।೪೫॥

ಸಕಲಕಲಾನಿಧಿರಾಜಂಗೆ- ಸಮಸ್ತ ವಿದ್ಯೆಗಳಿಗೂ ನಿಕ್ಷೇಪನಾದ ರಾಜನಿಗೆ, ( ಸಂಪೂರ್ಣಕಿರಣಗಳಿಗೆ ನಿಕ್ಷೇಪನಾದ ಚಂದ್ರನಿಗೆ ) ಮೊಗಂಗೊಡದ- ಮುಖವನ್ನು ಕೊಡದಿರುವ, ನಿನಗಂ, ಆಪದ್ಮನಿಗಂ- ಕಮಲಲತೆಗೂ, ಪ್ರಕಟಗುಣಂ- ಪ್ರಸಿದ್ಧವಾದ ಸುಗುಣವು, ( ತಂತುವು ) ಇರ್ದ್ದಡೇಂ ? ಅಕಟ ! ಇದುವೆ ಕಂ

ಕಬಗುಣಮಿರ್ದೊಡೇಂ ಕಂ । ಟಕನಿವಹಂ ಜಾಡ್ಯಭಾವ ಮಿದುವೆ ನಿಸರ್ಗಂ ॥ ॥೪೬॥

ಮ ॥ ಸ್ರ ॥ ಪಡಪಿಂಗಿನ್ನಾರುಮಂ ನೀಂ ಕರಿಯೆ ನೆನು ತಣಂ ಪ್ರೂಣ್ಕೆಗೈಯಲ್ಲದಿ ರ್ದಪೆಂ । ದೊಡಲೊಳ್ ನಿಷ್ಕಾಮಮಂ ನೀನುಡುತಡಿಯಮಹಾದೇವಿಯಂತೆಯ್ದೆ ತಾಳ್ದೆ ಮೇಣ್ ॥ ಮೃಡನಿಂ ಗಂಡಂದಮಂ ನೀಂ ಪಡೆ ವರತಿಲಕಾಂಬಾಖ್ಯೆಯೆಂ ತೆಂತದಲ್ತೆಂ । ಬೊಡೆ ನೀನಾ ವೀರಚೋಳಾಂಬಿಯವೊಲ್ ಲಭವನೇ ಗಂಡನಾಗಿರ್ಪುದೀಗಳ್ ॥ ... ... ॥೪೭॥

ಕಂ ॥ ಅಂತಲ್ಲದೊಡೆಲೆ ನಿನ್ನನ । ದೇತುಂ ಬಿಟ್ಟಪೆನೆ ಕೂರ್ತು ವಾರಾಂಗನೆ ಗೋ॥ ರುತವಳೊಲ್ಲದೆ ಪೋಗೆನೆ । ತಾಂ ತಳರ್ದನೆನಿಪ್ಪ ನಗೆಗೆ ಪಕ್ಕಾದಪೆನೆ ॥ ... ॥೪೮॥

ವ॥ ಎಂದವನೆನೆ ಕಾಂತೆ ಕಂಗನೆ ಕನಲ್ದು ಕೆಂಪಡರ್ದ ಕಟಾಕ್ಷದಿನಡರಿ ನೋಡಿ ॥ *

ಚಂ ॥ ಅರರೆ ಭುಜಂಗರಾಜ ಮದನಾಗಮಸಾರಧುರೀಣ ವಾರಸುಂ । ದರಿಯೊಳೆ ಬಲ್ಮೆಗೆಯ್ದು ಪೊಸನೇಹಮನುರ್ಚಿಸ ಲೊಲ್ವ ಜಾಣಭಾ ॥ ಸುರಕುಸುಮೌಘಮಂ ಪೊಸೆದು ಕೆಂಪನೆಗೊಳ್ವ ವಿದಗ್ಧ ಭಾವಜಾ । ತುರತೆಗೆ ಕೂರ್ತಳಲ್ಲದಳ ಕೂರಿಪ ಬರ್ದನಿದೆಲ್ಲಿ ಕಲ್ತೆಯೊ ॥ ... ... .. ... ... ... ॥೪೯॥

ಮ ॥ ಸ್ರ ॥ ಬೆಲೆವೆಣ್ಣಾಂ ನಿನ್ನ ಪಂಗೆಳಸಿತು ಮೆನಗೆ ಮುನ್ನಿಲ್ಲ ಮಲ್ಲಿಂಗದೇವಂ ।

---

ಟಕನಿವಹಂ- ಕಠಿಣವಾದ ಮಾತುಗಳ ಗುಂಪು, ( ಈ ಮುಳ್ಳುಗಳ ಗುಂಪು ) ಜಾಡ್ಯಭಾವಂ- ಆಲಸ್ಯಸಹಿತತ್ವವು, ( ನೀರಿನಲ್ಲಿರುವಿಕೆಯು ) ನಿಸರ್ಗಂ- ಸ್ವಭಾವಸಿದ್ಧವಾದದ್ದು. ... ॥೪೬॥

ಪಡಪಿಂಗೆ- ಸುರತಕಾರ್ಯಕ್ಕೆ, ಇನ್ನು, ಆರುಮಂ, ಕರೆಯಂ, ಎನುತೆ, ಅಣಂ- ಅತ್ಯಂತವಾಗಿ, ನೀಂ, ಪೂಣ್ಕೆಗೆಯ್- ಪ್ರತಿಜ್ಞೆಯಂ ಮಾಡು, ಅಲ್ಲದೆ, ಇರ್ದಂದು, ಒಡಲೊಳ್- ಶರೀರದಲ್ಲಿ, ಅಡಿಯಮಹಾದೇವಿಯಂತೆ, ನೀಂ, ನಿಷ್ಕಾಮಮಂ- ವಿರಕ್ತಿಯನ್ನು, ಎಯ್ದೆ ತಾಳ್, ಮೇಣ್, ನೀಂ, ವರತಿಲಕಾಂಬಾಖ್ಯೆ, ಎಂತು, ಅಂತೆ, ಮೃಡನಿಂ- ಪರಮೇಶ್ವರನಿಂದ, ಗಂಡ- ಪುರುಷನ, ಅಂದಮಂ, ಪಡೆ, ಅದು, ಅಲ್ತು, ಎಂಬೊಡೆ, ನೀಂ, ಆವೀರಚೋಳಾಂಬಿಯವೊಲ್, ಅಭವನೇ, ಗಂಡಂ, ಆಗಿ, ಈಗಳ್, ಇರ್ಪುದು. ॥೪೭॥

ಅಂತು, ಅಲ್ಲದೊಡೆ, ಎಲೆ, ನಿನ್ನಂ, ಅದೇತುಂ, ಬಿಟ್ಟಪೆನೆ? ಓರುತೆ- ಚೆನ್ನಾಗಿ, ವಾರಾಂಗನೆಗೆ, ಕೂರ್ತು- ಅಪೇಕ್ಷಿಸಿ, ಅವಳ್, ಒಲ್ಲದೆ, ಪೋಗು, ಎನೆ, ತಾಂ, ತಳರ್ದಂ, ಎನಿಪ್ಪ, ನಗೆಗೆ, ಪಕ್ಕು- ಆಸ್ಪದನು, ಆದಪೆನೆ? ... .. ... ... ... ॥೪೮॥

ಎಂದು, ಅವಂ, ಎನೆ, ಕಾಂತೆ, ಕಂಗನೆ- ಬೇಗನೆ, ಕನಲ್ದು- ಕೋಪಿಸಿಕೊಂಡು, ಕೆಂಪು, ಅಡರ್ದ, ಕಟಾಕ್ಷದಿಂ, ಅಡರಿ- ನೋಡಿ. * * * * * * * * * * * * * *

ಅರರೆ! ಮದನಾಗಮಸಾರಧುರೀಣ- ಮನ್ಮಥತಂತ್ರದಲ್ಲಿ ಶ್ರೇಷ್ಠವಾಗಿ ಸಮರ್ಥನಾದ, ವಾರಸುಂದರಿಯೊಳೆ- ಸೂಳೆಯೊಡನೆ, ಬಲ್ಮೆಗೆಯ್ದು- ಬಲಾತ್ಕಾರಮಾಡಿ, ಪೊಸನೇಹಮಂ- ಹೊಸದಾದ ಪ್ರೀತಿಯನ್ನು, ಉರ್ಚಿಸಲ್- ಹೆಚ್ಚಿಸುವದಕ್ಕೋಸ್ಕರ, ಒಲ್ವ- ಅಪೇಕ್ಷಿಸುವ, ಜಾಣ; ಕುಸುಮೌಘಮಂ- ಹೂವಿನ ಗುಂಪನ್ನು, ಪೊಸೆದು- ತಿಕ್ಕಿ, ಕಂಪನೆ- ಪರಿಮಳವನ್ನು, ಕೊಳ್ವ- ಗ್ರಹಿಸುವ, ವಿದಗ್ಧ, ಭುಜಂಗರಾಜ! ಭಾವಜಾತುರತೆಗೆ- ಕಾಮಾತುರಕ್ಕೆ, ಕೂರ್ತಳ್- ಪ್ರೀತಿಸಿದಳು, ಅಲ್ಲದಳ, ಕೂರಿಪ- ಪ್ರೀತಿಗೊಳಿಸುವ, ಬರ್ದಂ- ಜಾಣ್ಮೆಯನ್ನು, ಇದೆಲ್ಲಿಕಲ್ತೆಯೊ? ... ... ... ॥೪೯॥

ಆಂ, ಬೆಲೆವೆಣ್- ಸೂಳೆಯು, ಮುನ್ನ, ನಿನ್ನ, ಪಂಗು- ದಾಕ್ಷಿಣ್ಯವು, ಎಳ್ಳನಿತುಂ, ಎನಗೆ, ಇಲ್ಲ; ಮಲ್ಲಿಂಗದೇವಂ- ನನ್ನ ಇಷ್ಟಲಿಂಗಸ್ವಾಮಿಯು, ಕೊಟ್ಟ, ಈಕಾಯಕಪ್ರಕ್ರಿಯೆಯೊಳ್- ಈ ನಿಯಮದಿಂದ,

ಸಲೆಕೊಟ್ಟೀಕಾಯಕಪ್ರಕ್ರಿಯೆಯೊಳನುದಿನಂ ಬಾಳ್ವ ನನ್ಯಾಯದಿಂ ನಿ॥ಶ್ಚಲದರ್ಪಂಬೆ
ತ್ತು ನಿನ್ನಾಣತಿಗೆ ಸಲಿಸಲೆಂದಿರ್ಪೆ ಯೆನ್ನಂ ನಿರರ್ಥ। ಕ್ಕೆಲೆ ನಿನ್ನಂ ಬಲ್ಲರೇಂ ಮಚ್ಚು
ವರೆ ನಿನಗಿದೇಂ ತಕ್ಕುದೇ ದುರ್ವ್ಯಾಮೋಹಂ ॥ ... ... ... ॥೫೦॥

ಚಂ॥ ವನಜಮ ನಭ್ರದೊಳ್ತಿರಿಯ ಲಕ್ಕುಮೆ ಸೌರಮರೀಚಿಯಲ್ಲಿ ಭೋಂ। ಕನೆ
ಜಲಮಂ ತುಳುಂಕಿ ತರಲಕ್ಕುಮೆ ಸೈಕತದಲ್ಲಿ ತೈಲಮಂ ॥ ಘನತರಯತ್ನದಿಂ ತೆಗೆಯಲಕ್ಕು
ಮೆ ತನ್ನನದೆಂತು ಬಲ್ಲದಂ। ಗನೆಯೊಳೆ ಸೌಖ್ಯಮಂ ಪಡೆಯ ಲಕ್ಕುಮೆ ಪೇಳ್ದಿಟಮಂ
ಧರಾಧಿಪ ॥ ... ... ... ... ... ... ॥೫೧॥

ಮತ್ತೇ॥ ಧನಮಂ ತೆತ್ತೊಡ ನಿಚ್ಛೆಯಂ ಸಲಿಸಿ ನಾನಾವಸ್ತುಸಂದೋಹಮಂ।
ಮನೆಗೊಲ್ದೆಯ್ದಿಸಿ ತನ್ನಚೆನ್ನದೊಡವಂ ಕೈಗೈಸಿ ಸಂಪ್ರೀತಿಯಂ॥ ಮನದೊಳ್ಮೇಳಿಸಿ
ಜಾಣ್ಮೆಯಂ ಕಲಿಸಿ ಮುನ್ನೇಂ ಕೊಡೆ ಮೆಚ್ಚಿರ್ದ್ದ ಕಾಂ। ತನೊ ನೀಂ ನಕ್ಕಟ ಕೆಮ್ಮನೆಂತು
ನುಡಿವೈ ದುರ್ವಾರಗರ್ವೋಕ್ತಿಯಂ ॥ ... ... ... ... ॥೫೨॥

ಕಂ॥ ಬರೆದ ಪೊಸಚಿತ್ರದಲರೊ। ಳ್ಪರಿಮಳಮಂ ಕೊಳ್ವೆನೆಂಬ ತುಂಬಿಯವೋ
ಲ್ಸಾ॥ ರ್ದುರವಣಿಸಿ ನೇಹವಿಲ್ಲದ। ತರುಣಿಯ ರತಿಗೊಲ್ವ ಮಾನವಂ ಮರುಳಲ್ತೆ॥೫೩॥

ಕಂ॥ ಫುಲ್ಲಶರಕೇಳಿಗೊಲ್ದ। ಲ್ಲಿಲ್ಲದೊಡಂ ಮೇರೆದಪ್ಪಿ ಮೇಲ್ವಾಯ್ದು ಮನಂ॥
ನಿಲ್ಲದೆ ಕಾಡುವ ವಿಟರಂ। ಪುಲ್ಲಿಂ ಕಡೆಗಣಿಸಿ ಕಾಣರೇಂ ಕಾಮಿನಿಯರ್ ॥ ... ॥೫೪॥

---

ಅನುದಿನಂ- ಯಾವಾಗಲೂ, ಬಾಳ್ವೆಂ, ನಿಶ್ಚಲದರ್ಪಂಬೆತ್ತು- ಸ್ಥಿರವಾದ ಗರ್ವವನ್ನು ಹೊಂದಿ, ಎನ್ನಂ, ಅನ್ಯಾಯದಿಂ, ನಿರರ್ಥಕ್ಕೆ- ನಿಷ್ಪ್ರಯೋಜನಕ್ಕೆ, ನಿನ್ನ, ಆಣತಿಗೆ- ಅಪ್ಪಣೆಗೆ, ಸಲಿಸಲ್ಎಂದು- ಸೇರಿಸಿಕೊಳ್ಳಬೇಕೆಂದು, ಇರ್ಪೆ, ಎಲೆ ! ನಿನ್ನಂ, ಬಲ್ಲರ್, ಮಚ್ಚುವರೇಂ? ನಿನಗೆ, ಇದುದುರ್ವ್ಯಾಮೋಹಂ- ಈ ಕೆಟ್ಟ ಅಜ್ಞಾನವು, ತಕ್ಕುದೇ- ಯೋಗ್ಯವಾದುದೇ ? ... ... ... ॥೫೦॥

ಧರಾಧಿಪ ! ಅಭ್ರದೊಳ್- ಅಂತರಿಕ್ಷದಲ್ಲಿ, ವನಜಮಂ- ಕಮಲವನ್ನು, ತಿರಿಯಲ್- ಎತ್ತುವುದಕ್ಕೆ, ಅಕ್ಕುಮೆ ? ಸೌರಮರೀಚಿಯಲ್ಲಿ- ಶ್ರೇಷ್ಠವಾದ ಬಿಸಿಲ್ಗುದುರೆಯಲ್ಲಿ, ಭೋಂಕನೆ- ಬೇಗನೆ, ಜಲಮಂ, ತುಳುಂಕಿ- ಹೆಚ್ಚಾಗಿ ತುಂಬಿ, ತರಲ್, ಅಕ್ಕುಮೆ ? ಸೈಕತದಲ್ಲಿ- ಮಳಲಗಡ್ಡೆಯಲ್ಲಿ, ಘನತರಯತ್ನದಿಂ- ದೊಡ್ಡಪ್ರಯತ್ನದಿಂದ, ತೈಲಮಂ- ಎಣ್ಣೆಯನ್ನು, ತೆಗೆಯಲ್, ಅಕ್ಕುಮೆ ? ತನ್ನಂ, ಅದೆಂತುಂ, ಬಲ್ಲದ, ಅಂಗನೆಯೊಳೆ, ಸೌಖ್ಯಮಂ, ಪಡೆಯಲ್, ಅಕ್ಕುಮೆ ? ದಿಟಮಂ, ಪೇಳ್. ... ॥೫೧॥

ನೀಂ, ಮುನ್ನ, ಧನಮಂ, ತೆತ್ತು, ಒಡನೆ, ಇಚ್ಛೆಯಂ, ಸಲಿಸಿ- ನೆರವೇರಿಸಿ, ಒಲ್ದು, ನಾನಾವಸ್ತುಸಂದೋಹಮಂ, ಮನೆಗೆ, ಎಯ್ದಿಸಿ, ತನ್ನಚೆನ್ನದೊಡವಂ, ಕೈಗೈಸಿ- ಅಲಂಕರಿಸಿ, ಸಂಪ್ರೀತಿಯಂ, ಮನದೊಳ್, ಮೇಳಿಸಿ, ಜಾಣ್ಮೆಯಂ, ಕಲಿಸಿ, ಕೊಡೆ, ಮೆಚ್ಚಿ, ಇರ್ದ, ಕಾಂತನೊ ? ಅಕ್ಕಟ ! ಕೆಮ್ಮನೆ- ಸುಮ್ಮನೆ, ಇಂತು, ದುರ್ವಾರಗರ್ವೋಕ್ತಿಯಂ- ಪಡೆಯುವದಕ್ಕಾಗದ ಅಹಂಕಾರದಮಾತನ್ನು, ನುಡಿವೈ. ॥೫೨॥

ಬರೆದ, ಪೊಸಚಿತ್ರದ, ಅಲರೊಳ್ ಹೂವಿನಲ್ಲಿ, ಪರಿಮಳಮಂ, ಕೊಳ್ವೆಂ, ಎಂಬ, ತುಂಬಿಯವೋಲ್, ಸಾರ್ದು- ಸಮೀಪಕ್ಕೆ ಬಂದು, ಉರವಣಿಸಿ- ಸನ್ನದ್ಧನಾಗಿ, ನೇಹಂ- ಪ್ರೀತಿಯು, ಇಲ್ಲದ, ತರುಣಿಯ, ರತಿಗೆ, ಒಲ್ವ, ಮಾನವಂ, ಮರುಳಲ್ತೆ- ಹುಚ್ಚನಲ್ಲವೇ ? ... ... ॥ ೫೩ ॥

ಫುಲ್ಲಶರಕೇಳಿಗೆ- ಮದನಕ್ರೀಡೆಗೆ, ಒಲ್ದು, ಬಲವು- ಪ್ರೀತಿಯು, ಇಲ್ಲದೊಡಂ, ಮೇರೆದಪ್ಪಿ, ಮೇಲ್ವಾಯ್ದು- ಮೇಲೆಬಿದ್ದು, ಮನಂ, ನಿಲ್ಲದೆ, ಕಾಡುವ, ವಿಟರಂ, ಕಾಮಿನಿಯರ್, ಪುಲ್ಲಿಂ- ಹುಲ್ಲಿಗಿಂತಲೂ, ಕಡೆಗಣಿಸಿ, ಕಾಣರೇ ? ... ... ... ... ... ॥ ೪೫ ॥

ಚಂ ॥ ಎನಗನುರಾಗವಿಲ್ಲದುದರಿಂ ರತಿಸೌಖ್ಯಮದಿಲ್ಲ ನೀನದಂ । ನೆನೆಯುದೆ ಬಲ್ಮೆಗೆ
ಯ್ದೊಡಪಕೀರ್ತಿ ಪೊದಳ್ದಪುದೈದೆ ಕೇಳ್ದ ಸ॥ಜ್ಜನರಿಳಿಕೆಯ್ವರಗ್ಗದ ಭುಜಂಗಸಭಾಂತ
ರದಲ್ಲಿ ಹಾಸ್ಯಮುಂ। ಜನಿಯಿಸುಗುಂ ದುರೀಷಣದೆ ದೂಷಣಮುಂ ತಳೆಯಲ್ಕೆ ತಕ್ಕುದೆ ॥೫೫॥

ಕಂ ॥ ಅದರಿಂದೆ ಮಾನನಿಧಿ ಗುರು । ಪದಭಕ್ತಂ ನೀತಿಯುಕ್ತನರಸಂ ನೀನ ॥
ಪ್ಪುದನರಿದು ನಿನ್ನೊಳಪಯಶ । ಮುದಯಿಸದಂತಾಳ್ವುದಮಳನೀತಿಕ್ರಮಮಂ ॥೫೬॥

ಕಂ ॥ ಗಂಡನೊ ನೀಂ ಸಲೆಪಡಪಿನ । ಮಿಂಡನೊ ಪೊನ್ನಿತ್ತು ಮುನ್ನಮೆನ್ನಂ ಕೊಂಡ
ನೇಂ ॥ ಕೊಂಡವನೊ ಬರಿದೆ ನೀನು । ದ್ದಂಡತೆಯಂ ತೋರ್ಪೆ ನಿನ್ನನಾರ್ಮೆಚ್ಚುವರೊ ॥

ಕಂ ॥ ದೊರೆತನದ ಬಲ್ಮೆಯೊಲ್ಲದ । ತರುಣಿಯ ನೊಲಿಸಲ್ಕೆ ಮದ್ದೊ ಮಂತ್ರಮೊ
ಯಂತ್ರೋ ॥ ದ್ಧರಣಮೊ ದೂತಿಯೊ ವಶ್ಯಾಂ । ಕುರತಿಲಕಮೊ ನನ್ನಿವೇಳ್ಭುಜಂಗಲಲಾಮ ॥

ವ ॥ ಎಂದಿಂತವಳನೇಕವಿಧದಿಂ ವಿಡಂಬಿಸಿ ನುಡಿಯೆ ಗುರುಭಕ್ತರಾಜನದಕ್ಕೆ ತೆ
ಕ್ಕದೆ ಮತ್ತಂ ವಿಮೋಹಿತನಾಗಿರ್ಪುದಂ ಕಂಡು ಪಣ್ಯಾಂಗನೆ ಗಣಿಕಾವಿಡಂಬಮಂ ನುಡಿ
ದಿವಂಗೆ ರತಿಜುಗುಪ್ಸೆದೋರ್ಪೆ ನೆಂದು ನೆನೆದು । * * * * * * * *

ಕಂ ॥ ಕಾಮಹರಭಕ್ತ ನಿನಗೀ । ಕಾಮವ್ಯಾಮೋಹ ಮುಚಿತಮೇ ಬಿಡು ಬಿಡು

---

ಎನಗೆ, ಅನುರಾಗಂ, ಇಲ್ಲದುದರಿಂ, ಅದು ರತಿಸೌಖ್ಯಂ, ಇಲ್ಲ, ನೀಂ, ಅದಂ, ನೆನೆಯುದೆ, ಬಲ್ಮೆಗೆ ಯ್ದೊಡೆ- ಬಲಾತ್ಕಾರಪಡಿಸಿದರೆ, ಅಪಕೀರ್ತಿ, ಪೊದಳ್ದಪುದು- ಹೆಚ್ಚಾಗುವದು; ಐದೆ, ಕೇಳ್ದು, ಸಜ್ಜನರ್, ಇಳಿಕೆಯ್ವರ್- ತಿರಸ್ಕರಿಸುವರು; ಭುಜಂಗಸಭಾಂತರದಲ್ಲಿ- ವಿಟರಸಭೆಯಮಧ್ಯದಲ್ಲಿ, ಹಾಸ್ಯಮುಂ, ಜನಿಯಿಸುಗುಂ; ದುರೀಷಣದೆ- ಈ ಕೆಟ್ಟ ಸ್ತ್ರೀಸಂಬಂಧವಾದ ಇಚ್ಛೆಯಿಂದ, ದೂಷಣಮುಂ, ತಳೆಯಲ್ಕೆ, ತಕ್ಕುದೆ ? ... ... ... ... ... ॥ ೫೫ ॥

ಅದರಿಂದೆ, ನೀಂ, ಮಾನನಿಧಿ- ಗೌರವಕ್ಕೆ ನಿಕ್ಷೇಪನು, ಗುರುಪದಭಕ್ತಂ, ನೀತಿಯುಕ್ತಂ, ಅರಸಂ, ಅಪ್ಪುದಂ, ಅರಿದು, ನಿನ್ನೊಳ್, ಅಪಯಶಂ, ಉದಯಿಸದಂತೆ, ಅಮಳನೀತಿಕ್ರಮಮಂ ತಾಳ್ವುದು. ॥೫೬॥

ನೀಂ, ಗಂಡನೊ ? ಸಲೆ, ಪಡಪಿನ- ಸುರತದ, ಮಿಂಡನೊ ? ಮುನ್ನಂ, ಪೊನ್ನಿತ್ತು, ಎನ್ನಂಕೊಂಡವನೊ ನೀಂ ? ಬರಿದೆ- ವ್ಯರ್ಥವಾಗಿ, ನೀಂ, ಉದ್ದಂಡತೆಯಂ- ಬಲಾತ್ಕಾರವನ್ನು, ತೋರ್ಪೆ, ನಿನ್ನಂ, ಆರ್ ಮೆಚ್ಚುವರೋ ? ... ... ... ... ... ॥೫೭॥

ಭುಜಂಗಲಲಾಮ - ವಿಟಶ್ರೇಷ್ಠನೇ ! ದೊರೆತನದ, ಬಲ್ಮೆ - ಶಕ್ತಿಯು, ಒಲ್ಲದ, ತರುಣಿಯಂ, ಒಲಿಸಲ್ಕೆ, ಮದ್ದೋ - ಔಷಧಿಯೋ ? ಮಂತ್ರಮೊ ? ಯಂತ್ರೋದ್ಧರಣಮೊ ? ದೂತಿಯೋ- ಕುಂಟಣಿಯೋ ? ವಶ್ಯಾಂಕುರತಿಲಕಮೊ- ಸ್ತ್ರೀಯರು ಸ್ವಾಧೀನಗೊಳಿಸುವ ಹಣೆಬೊಟ್ಟೋ ? ನನ್ನಿವೇಳ್ - ನಿಶ್ಚಯವಾಗಿ ಹೇಳು. ... ... ... ... ... ॥೫೮॥

ಎಂದು, ಇಂತು, ಅವಳ್, ಅನೇಕವಿಧದಿಂ, ವಿಡಂಬಿಸಿ - ತಿರಸ್ಕರಿಸಿ, ನುಡಿಯೆ, ಗುರುಭಕ್ತರಾಜಂ, ಅದಕ್ಕೆ, ತೆಕ್ಕದೆ - ತೀಟೆಯನ್ನು ಹಿಂದಿರುಗಿಸದೆ, ಮತ್ತಂ, ವಿಮೋಹಿತಂ, ಆಗಿ, ಇರ್ಪುದಂ, ಪಣ್ಯಾಂಗನೆ, ಕಂಡು, ಗಣಿಕಾವಿಡಂಬಮಂ - ಸೂಳೆಯರ ತಿರಸ್ಕಾರವನ್ನು, ನುಡಿದು, ಇವಂಗೆ, ರತಿಜುಗುಪ್ಸೆದೋರ್ಪೆಂ- ಸುರತವಂಮಾಡಬಾರದೆಂಬಿಚ್ಛೆಯನ್ನು ತೋರಿಸುವೆನು, ಎಂದು, ನೆನೆದು. * * *

ಕಾಮಹರಭಕ್ತ ! ನಿನಗೆ, ಈ ಕಾಮವ್ಯಾಮೋಹಂ - ಈ ಮನ್ಮಥಾಸಕ್ತಿಯು, ಉಚಿತಮೇ ? ಬಿಡು ಬಿಡು; ಎಲೆ ! ಮಾಯಾವಿಯುಂ, ಎನಿಸುವ, ಗಣಿಕಾಸ್ತ್ರೀಯಂದೊಳ್, ಪುರುಳ್- ಸಾರಾಂಶವು, ಇನಿತು,

ವಾ॥ಯಾವ-ಯಮನಿಸುವ ಗಣಿಕಾ|ಸ್ತ್ರೀವ-ದೊಳೆಲೆ ತಿಳಿದು ನೋಡು ಪುರುಳಿಸಿತುಂಟ॥

ಚಂ ॥ ಎಲೆ ವಿಟರಾಜ ಕೇಳ್ಗಣಿಕೆಯ ರ್ಗುಣಹೀನೆಯರ ರ್ಥಲೋಭಸಂ । ಚಲೆ ಯ ರತೀವಧೂರ್ತೆಯ ರಸತ್ಯಸಮೇತೆಯ ರಂಗಜಾತವಿ ॥ ಹ್ವಲೆಯ ರಸಾರಮಾನಸೆಯ ರಸ್ತ್ರವಿಚಾರಿಯ ರಾಪ್ತವಂಚನಾ । ಕುಲೆಯ ರಧರ್ಮಶೀಲೆಯ ರನಾರತದುಷ್ಟಜನಾನುಕೂ ಲೆಯರ್ ॥ ... ... ... ... ... ... ॥೬೦॥

ವೃತ್ತ ॥ ಕೃತಕಾಲಾಪೆಯ ರಿಚ್ಛೆಗಾರ್ತಿಯ ರನಲ್ಪಾಶಾರ್ತಿಯ ರ್ಪಾಪಸಂ । ಗತೆಯ ರ್ಖುಲ್ಲೆಯ ರುಗ್ರೆಯ ರ್ಚಪಲೆಯ ರ್ಗೋಣ್ಗೊಯ್ಕೆಯ ರ್ದಂಭಸಂ ॥ ಯುತೆಯ ರ್ಮಾನವಿಹೀನೆಯ ರ್ಖಲೆಯ ರನ್ಯಾಯಾಧ್ವಸಂಚಾರಿಯ । ರ್ವಿತತಸ್ನೇಹವಿದೂರೆಯ ರ್ವಿಗಡೆಯ ರ್ವಿಧ್ವಸ್ತವಿಶ್ವಾಸೆಯರ್ ॥ ... ... ... ... ॥೬೧॥

ಕಂ ॥ ಮೊರೆಗೆಟ್ಟೊಂದುವ ಧೂರ್ತೆಯ । ರರಿಕೆಯೊಳಸುವಸುವ ನೀಳ್ವ ರಕ್ಕಸಿಯ ರ್ಬ ॥ ಳ್ಬರಿಸಿನ ಬಿಂಕದ ಮಾತಿನ । ನರುಗಲಿಗ ಳ್ವಿಟರ ಮರ್ಮಪಟಕರ್ತರಿಗಳ್॥೬೨॥

ಚಂ ॥ ಅಡಿ ಮುಡಿ ಸುಂಚು ವಂಚನೆ ವಿಡಾಯ ಮಡರ್ಪು ತೊಡರ್ಪು ತೋಟರ| ಟ್ಟಡಿತನ ॥ಮೊಲ್ಮೆ ಬಲ್ಮೆ ಪಡಿ ರಣ್ಮು |ಚಮತ್ಕೃತಿ ಗಾಡಿ ಮೋಡಿ ಯಾ ॥ ರಡಿ ಪು

---

ಉಂಟೆ? ತಿಳಿದು, ನೋಡು. ... ... ... ... ... ॥೫೯॥

ಎಲೆ ವಿಟರಾಜ! ಕೇಳ್, ಗಣಿಕೆಯರ್ - ಸೂಳೆಯರು, ಗುಣಹೀನೆಯರ್, ಅರ್ಥಲೋಭಸಂಚಲೆಯರ್ - ಹಣದಾಸೆಯಿಂದ ಚಪಲರಾದವರು, ಅತೀವಧೂರ್ತೆಯರ್- ಬಹು ಮೋಸಗಾತಿಯರು; ಅಸತ್ಯಸಮೇತೆಯರ್ - ಅಂಗಜಾತವಿಹ್ವಲೆಯರ್- ಮನ್ಮಥನಿಂದವ್ಯಾಕುಲರಾದವರು. ಅಸಾರಮಾನಸೆಯರ್, ಕೆಟ್ಟಮನಸ್ಸುಳ್ಳವರು; ಅಸ್ತ್ರವಿಚಾರೆಯರ್ - ನಷ್ಟವಾದವಿವೇಕವುಳ್ಳವರು, ಆಪ್ತವಂಚನಾಕುಲೆಯರ್- ಹಿತರನ್ನು ಮೋಸಗೊಳಿಸುವದರಲ್ಲಿ ವ್ಯಾಪಕರು, ಅಧರ್ಮಶೀಲೆಯರ್- ಪಾಪಸಾಧಕಸ್ವಭಾವವುಳ್ಳವರು, ಅನಾರತ ದುಷ್ಟಜನಾನುಕೂಲೆಯರ್- ಯಾವಾಗಲೂ ಕೆಟ್ಟವರಿಗೆ ಸಹಾಯಕರಾಗಿರುವರು. ॥೬೦॥

ಕೃತಕಾಲಾಪೆಯರ್- ಕಪಟವಾಕ್ಯವುಳ್ಳವರು, ಇಚ್ಛೆಗಾರ್ತಿಯರ್- ಕಾಮವನ್ನುಂಟುಮಾಡುವರು, ಅನಲ್ಪಾಶಾರ್ತಿಯರ್- ಹೆಚ್ಚಾದ ಆಸೆಯ ಬಾಧೆಯುಳ್ಳವರು, ಪಾಪಸಂಗತೆಯರ್, ಖುಲ್ಲೆಯರ್- ನೀಚರು, ಉಗ್ರೆಯರ್ ಕ್ರೂರೆಯರು, ಚಪಲೆಯರ್, ಗೋಣ್ಗೊಯ್ಕೆಯರ್- ಕತ್ತನ್ನು ಕೊಯುವವರು, ದಂಭಸಂಯುತೆಯರ್- ಹೊರಡಾಂಭಿಕದಿಂದ ಕೂಡಿದವರು, ಮಾನವಿಹೀನೆಯರ್, ಖಲೆಯರ್— ಅಧಮೆಯರು, ಅನ್ಯಾಯಾಧ್ವಸಂಚಾರಿಯರ್, ವಿತತಸ್ನೇಹವಿದೂರೆಯರ್- ಹೆಚ್ಚಾದ ಪ್ರೀತಿಗೆ ದೂರದಲ್ಲಿರುವವರು, ವಿಗಡೆಯರ್- ಸಂಕಟಕಾರಿಣಿಯರು, ವಿಧ್ವಸ್ತವಿಶ್ವಾಸೆಯರ್- ನಾಶಮಾಡಲ್ಪಟ್ಟ ಪ್ರೇಮವುಳ್ಳವರು. ... ॥೬೧॥

ಮೊರೆಗೆಟ್ಟು- ದೂರಿಲ್ಲದೆ, ಒಂದುವ- ಆಶ್ರೈಸುವ, ಧೂರ್ತೆಯರ್, ಅರಿಕೆಯೊಳ್_ ತಿಳುವಿನಲ್ಲಿ, ಅಸುವಸುವಂ- ಪ್ರಾಣಹಣವನ್ನು, ಈಳ್ವ- ಎಳೆದುಕೊಳ್ಳುವ, ರಕ್ಕಸಿಯರ್- ರಾಕ್ಷಸಿಯರು, ಬಳ್ಬರಿಸಿನ, ಬಿಂಕದ- ಗರ್ವದ, ಮಾತಿನ, ನರುಗಲಿಗಳ್- ಒಳ್ಳೆಯಸಮರ್ಥರು, ವಿಟರ, ಮರ್ಮಪಟಕರ್ತರಿಗಳ್- ಗುಟ್ಟಿಂಬಬಟ್ಟೆಗೆ ಕತ್ತರಿಗಳು. ... ... ... ... ... ॥೬೨॥

ಗಣಿಕಾಂಗನೆಯರ್ಗೆ, ಅಡಿಮುಡಿಸುಂಚು- ಕಾಲು ತಲೆಗಂಟಿನಿಂದ ತಿಳಿಯುವಭೇದ, ವಂಚನೆ— ಮೋಸ, ವಿಡಾಯಂ- ಗರ್ವ, ಅಡರ್ಪು- ಆಶ್ರಯ, ತೊಡರ್ಪು- ವಿಘ್ನವು, ತೋಟಿ- ಬಜಾರಿತನ, ರಟ್ಟಡಿತನಂ- ಹಟ, ಒಲ್ಮೆ— ಒಲಿಸಿಗೊಳ್ಳುವಿಕೆ, ಬಲ್ಮೆ- ಬಲಾತ್ಕಾರ, ಪಡಿರ್- ಚಾಕಚಕ್ಯ, ಅಣ್ಮು- ಪರಾಕ್ರಮ, ಚಮ

ಸಿ ದಾಸಿವೈಸಿಕ ಮದಿ ರ್ಪಣಕಂ ಮುಳಿ ಸಗ್ಗ ಸೊಕ್ಕು ಬ । ರ್ಕ್ಕಡ ಪುರುಡಾಕೆ ಝು ಕ ಣೆನುಸು ಳ್ಗಣಿಕಾಂಗನೆಯರ್ಗೆ ಶಾಶ್ವತಂ ॥ ... ... ... ॥೬೩॥

ಕಂ ॥ ಧನದಾಸೆಯೊಳೊಂದಿರ್ದುಂ । ಮನುಷ್ಯಧರ್ಮಾಪಹಾರಿ ಗಣಿಕಾನಿವಹಂ ಜ ನಿತಾಭಿಮನ್ಯು ನರಕೋ । ಪನಿಮಿತ್ತಂ ತಾನೆನಿಪ್ಪುದೇನಚ್ಚರಿಯೊ ॥ ... ॥೬೪॥

ಚಂ॥ ಬಲಿದಸ್ಥಿವ್ರಜದಿಂದೆ ಪಂಜರಮನಂತ್ರವ್ರಾತದಿಂ ಕಟ್ಟಿವೇಣ್ । ಒಲವಿಂ ಮಾಂ ಸಮನಲ್ಲಿಮೆತ್ತಿ ತೊವಲಿಂದಾಚ್ಛಾದನಂಗೆಯ್ದುದು ॥ ರ್ಮಲಮಂ ತಾ ನೊಳಗಿಟ್ಟು ತೀವಿ ಬಿ ದಿಮಾಡಿರ್ದೊಂದು ಚೋಹಂಗಡೀ । ಲಲನಾದೇಹ ಮನಾರತಂ ಕಿಸುಕುಳಂ ದುರ್ವಾರದೋ ಷಾಕುಲಂ ॥ ... ... ... ... ... ... ॥೬೫॥

ಕಂ ॥ ತಲೆ ವಿತತಶ್ಲೇಷ್ಮರಸದ । ನೆಲೆ ವದನಂ ದೋಷಸದನ ಮೆಲುವಡಸಿದ ಬಾ ॥ ಯ್ಚಲರಸನಾಭೋಗಿಯ ಬ । ಳ್ಬಿಲಮಧರಂ ರುಧಿರಮಾಂಸಪರಿಪಕ್ವಫಲಂ ॥ ॥೬೬॥

ಕಂ ॥ ಕಣ್ಗಳಘುವಲ್ಲರಿಯ ಪೊಸ । ಪಣ್ಗಳ್ ಜಾರಡಿಸಿ ತೋರ್ಪ ಪುಣ್ಗಳ್ ಮೂಗುಳ್ದ

---

ತ್ಕೃತಿ, ಗಾಡಿ- ವಿಲಾಸ, ಮೋಡಿ- ಪರವಂಚಿತತನ, ಆರಡಿ- ಶತ್ರುತ್ವ, ಪುಸಿ- ಅಟಕಿಪ್ಪವದು, ವಾಸಿ- ಪಂ ಥ, ವೈಸಿಕಂ- ಕಪಟ, ಅದಿರ್ಪು- ಚಾಂಚಲ್ಯವು, ಅಣಕಂ- ಅಣಕಿಸುವಿಕೆ, ಮುಳಿಸು- ಕೋಪ,ಸಗ್ಗು- ಕೆ ಳಂಕು, ಸೊಕ್ಕು- ಕೊಬ್ಬು, ಬರ್ಕ್ಕಡಿ- ಬೆರಗು, ಪುರುಡು- ಸ್ಪರ್ಧೆ, ಅಂಕೆ- ಆಜ್ಞೆ, ಬಂಕಣಿ- ಬೆದರಿಸುವಿ ಕೆ, ನುಸುಳ್- ಸುಳ್ಳು, ಶಾಶ್ವತಂ- ಸ್ಥಿರವಾದದ್ದು. ... ... ... ॥೬೩॥

ಗಣಿಕಾನಿವಹಂ; ಧನದಾಸೆಯೊಳ್- ಕುಬೇರನ ಮೇಲಣ ಆಸೆಯಿಂದ ( ಹಣದ ಆಸೆಯಿಂದ ) ಒಂದಿ, ಇರ್ದುಂ, ಮನುಷ್ಯಧರ್ಮಾಪಹಾರಿ- ಕುಬೇರನನ್ನು ನಾಶಮಾಡುವದು ( ಮನುಷ್ಯರ ಆಚಾರವನ್ನು ಅಥ ವಾ ಪುಣ್ಯವನ್ನು ನಾಶಮಾಡುವದು ) ಜನಿತಾಭಿಮನ್ಯು- ಹುಟ್ಟಿಸಲ್ಪಟ್ಟ ಅಭಿಮನ್ಯುವುಳ್ಳದ್ದಾದಾಗ್ಯೂ ( ಹುಟ್ಟಿಸಲ್ಪಟ್ಟ ಹೆಚ್ಚಾದ ದುಃಖವುಳ್ಳದ್ದು ) ನರಕೋಪನಿಮಿತ್ತಂ- ಅರ್ಜುನನ ಕ್ರೋಧಕ್ಕೆ ಕಾರಣವಾದ ದ್ದು ( ನರಕಕ್ಕೆ ಉಪಕರಣವಾದದ್ದು ) ಎನಿಪ್ಪುದು, ಏಂ ಅಚ್ಚರಿಯೋ! ... ... ॥೬೪॥

ಅನಾರತಂ- ಯಾವಾಗಲೂ, ಕಿಸುಕುಳಂ- ನೀಚಪ್ರಾಣಿಗಳ ಗುಂಪುಳ್ಳ, ದುರ್ವಾರದೋಷಾಕುಳಂ- ಹೋಗಲಾಡಿಸುವದಕ್ಕಾಗದ ಪಾಪಗಳಿಂದ ವ್ಯಾಪ್ತವಾದ, ಲಲನಾದೇಹಂ ಸ್ತ್ರೀ ಶರೀರವು, ಬಿದಿ- ಬ್ರಹ್ಮ ನು, ತಾಂ, ಅಸ್ಥಿವ್ರಜದಿಂದೆ- ಮೂಳೆಗಳ ಗುಂಪಿನಿಂದ, ಪಂಜರಮಂ- ಗೂಡನ್ನು, ಬಲಿದು- ಮಾಡಿ, ಅಂ ತ್ರವ್ರಾತದಿಂ- ನರಗಳಗುಂಪಿನಿಂದ, ಕಟ್ಟಿ, ಮೇಣ್, ಒಲವಿಂ, ಅಲ್ಲಿ, ಮಾಂಸಮಂ, ಮೆತ್ತಿ, ತೊವಲಿಂದೆ- ಚಕ್ಕಳದಿಂದ, ಆಚ್ಛಾದನಂಗೆಯ್ದು- ಮುಚ್ಚಿ, ತಾಂ, ಒಳಗೆ, ದುರ್ಮಲಮಂ- ಕೆಟ್ಟಪುರೀಷವನ್ನು, ಇಟ್ಟು, ತೀವಿ- ತುಂಬಿ, ಮಾಡಿ, ಇರ್ದ, ಒಂದುಚೋಹಂಗಡಾ- ಒಂದು ತಮಾಷೆಯಲ್ಲವೇ ? ... ॥೬೫॥

ತಲೆ, ವಿತತಶ್ಲೇಷ್ಮರಸದ- ವಿಸ್ತಾರವಾದ ಕೋಟನೀರಿನ, ನೆಲೆ- ಸ್ಥಾನ; ವದನಂ, ದೋಷಸದನಂ- ಪಾಪದಮನೆ, ಎಲುವು- ಮೂಳೆಯು, ಅಡಸಿದ- ತುಂಬಿದ, ಬಾಯ್, ಚಲರಸನಾಭೋಗಿಯ- ಚಂಚಲವಾ ದ ನಾಲಿಗೆಯೆಂಬ ಸರ್ಪದ, ಬಳ್ಬಿಲಂ- ದೊಡ್ಡರಂಧ್ರವು, ಅಧರಂ- ತುಟಿಯು, ರುಧಿರಮಾಂಸಪರಿಪಕ್ವಫ ಲಂ- ರಕ್ತಮಾಂಸಗಳ ಕಳಿತಹಣ್ಣು. ... ... ... ... ॥೬೬॥

ಪೆಣ್ಗಳ, ಕಣ್ಗಳ್, ಅಘುವಲ್ಲರಿಯ- ಪಾಪವೆಂಬ ಬಳ್ಳಿಯ, ಪೊಸಪಣ್ಗಳ್, ಜಾರ್- ಕಣ್ಣಿನಜಾರು, ಅಡಸಿ- ಸೇರಿ, ತೋರ್ಪ, ಪುಣ್ಗಳ್- ಹುಣ್ಣುಗಳು, ನಾಸಿಕೆ- ಮೂಗು, ಸಿಂಬುಳ- ಗೊಣ್ಣೆಯ, ನುಣೊ

ಪೆಣ್ಗಳನಾಸಿಕೆ ಸಿಂಬುಳ | ನುಣ್ಗೊಳವಿ ಯಪಾಂಗ ಮಘಸರೋಧಿತರಂಗಂ ‖ ‖೧೭‖

ಕಂ‖ ಗಳಮದು ದುರುಕ್ತಿದನುಜೆಯ | ಪೊಳಲಪ್ಪವತೋಳ್ಕೃತಾಂತರಾಜನ ಬಾ
ಳ್ಕೈ ‖ ದಳ ಮಧಿಕಲೋಭಭೂಜದ | ದಳ ಮಂಗುಲಿಬೋಜಗನಿವಾನ್ಗ ವಿಮಾಂಗುಲಿ ಪೆರತೇಂ

ಕಂ‖ ಮೊಲೆ ಬಸೆಯ ಮಾಂಸರಾಶಿಯ | ನೆಲೆ ಪೊತೆ ದುರ್ಮಲದ ಕರುಳ್ಗಳೆಡೆ ಯುರುನಾ
ಭೀ ‖ ವಲಯಂ ಸಲೆದುರ್ಗಂಧದ | ನಿಲಯಂ ದುರ್ಜ್ಜಲದ ಪುಳಿನ ಮುರ್ಬಿದಜಘನಂ ‖ ‖೧೯‖

ಕಂ ‖ ಪೊಲಸಿನನೆಲೆರುಧಿರದಕುಳಿ ವಿಲಿವಿಲಿಸುವ ಪುಳುಗಳೊಗೆವಪುತ್ತು ಪುರೀಷಂ ‖
ನೆಲಸಿದ ದರಿ ಕಾಮಾಹಿಯ | ಬಿಲಮಂಗಜಗೃಹ ಮನಂಗದುರ್ಜ್ಜಲಕೂಪಂ ‖ ... ‖೨೦‖

ಕಂ ‖ ತೊಡೆ ಪೇರಡಗಿನ ಕಾಳಜ | ದೆಡೆ ಚರಣಂ ದುರಿತಕಾರಣಂತಾನೆನಿಸೀ ‖ ಕಡುಪೆ
ರ್ಬಡಿಕೆಯಗಣಿಕೆಯ | ರೊಡಲೊಳ್ಪುರುಳುಂಟೆ ತಿಳಿಯೆ ಪೇಳ್ ನೃಪತಿಲಕ ‖ ... ‖೨೧‖

ಕಂ ‖ ಜನತಾಪಪ್ರದ ಮಾಲೋ | ಕನ ಮಿಂದ್ರಿಯ ಮೃಗದಬಲೆ ವಿಕಾರದನೆಲೆಸಂ ‖
ಜನಿತವಿಮೋಹಮರೀಚಿಕೆ | ಯನಿಶಂ ಚಪಲಂ ವಿವೇಕಸರಸಿಜತುಹಿನಂ ‖ ... ‖೨೨‖

ಕಂ‖ ಅಣಕದನೆಲೆ ಸೋಲಿಪಬ | ನ್ನಣದಿಂ ನಂಬಿಸುವ ಡೊಂಬನೆಡೆ ಪುಸಿನುಸುಳ್ ‖

---

ಳವೆ- ನುಣುಪಾದನಾಳವು, ಅಪಾಂಗಂ- ಕಡೆಗಣ್ಣೋಟವು, ಅಘಸರೋಧಿತರಂಗಂ- ಪಾಪವೆಂಬ ಸಮುದ್ರದ ತೆರೆಯು. ... ... ... ... ... ‖೧೭‖

ಅದುಗಳಂ- ಆಕತ್ತು, ದುರುಕ್ತಿದನುಜೆಯ- ಕೆಟ್ಟಮಾತೆಂಬ ರಾಕ್ಷಸಿಯ, ಪೊಳಲ್- ಪಟ್ಟಣವು; ಅಪ್ಪವ, ತೋಳ್, ಕೃತಾಂತರಾಜನ- ಜವರಾಯನ, ಬಾಳ್- ಕತ್ತಿಯು; ಕೈದಳಂ- ಹಸ್ತಪ್ರದೇಶವು, ಅಧಿಕಲೋಭಭೂಜದ- ಹೆಚ್ಚಾದ ಆಸೆಯೆಂಬಮರದ, ದಳಂ- ಎಲೆಯು, ಅಂಗುಲಿ- ಬೆರಲು, ಬೋಜಗವಿಮಾನ್ಗ- ವಿಟರೆಂಬವಿಮಾಸಿಗೆ, ವಿಮಾಂಗುಲಿ- ಗಾಣವು, ಪೆರತೇಂ- ಮತ್ತೇನು ? ... ... ‖೧೮‖

ಮೊಲೆ, ಬಸೆಯು- ಕೊಬ್ಬಿನ. ಮಾಂಸರಾಶಿಯು, ನೆಲೆ- ಬೆಟ್ಟವು, ಪೊತೆ- ಹೊಟ್ಟೆಯು, ದುರ್ಮಲದ- ಕೆಟ್ಟಅಮೇಧ್ಯದ, ಕರುಳ್ಗಳ, ಎಡೆ; ಉರುನಾಭೀವಲಯಂ- ಹೊಕ್ಕುಳಪ್ರದೇಶವು, ಸಲೆ, ದುರ್ಗಂಧದ, ನಿಲಯಂ, ಉರ್ಬಿದ, ಜಘನಂ- ಕಟಿಪುರೋಭಾಗವು. ದುರ್ಜಲದ- ಮೂತ್ರದ, ಪುಳಿನಂ- ಮಳಲಗುಡ್ಡೆ. ‖೧೯‖

ಅಂಗಜಗೃಹಂ ಯೋನಿಯು, ಪೊಲಸಿನ- ಹೊಲಸಿನ, ನೆಲೆ, ರುಧಿರದ- ರಕ್ತದ, ಕುಳಿ- ಹಳ್ಳ, ವಿಲಿವಿಲಿಸುವ- ವಿಲಿವಿಲಿಯೆನ್ನುತ್ತಿರುವ, ಪುಳಗಳ್, ಒಗೆವ ಪುತ್ತು- ಹುತ್ತವು, ಪುರೀಷಂ, ನೆಲಸಿದ- ನಿಂತಿರುವ, ದರಿ- ರಂಧ್ರವು, ಕಾಮಾಹಿಯ- ಮನ್ಮಥನೆಂಬ ಸರ್ಪದ, ಬಿಲಂ- ರಂಧ್ರವು, ಅನಂಗದುರ್ಜಲಕೂಪಂ- ಕೆಟ್ಟ ಕಾಮರಸದ ಬಾವಿಯು. ... ... ... ... ... ‖೨೦‖

ತೊಡೆ, ತಾಂ, ಪೇರಡಗಿನ- ದೊಡ್ಡಮಾಂಸದ, ಕಾಳಜದ- ಕರಿಯ ಬಾಡಿನ, ಎಡೆ, ಚರಣಂ, ದುರಿತಕಾರಣಂ, ಎನಿಪ, ಈಕಡುಪೆರ್ಬಡಿಕೆಯ- ಈ ದೊಡ್ಡಸ್ತ್ರೀಗೆಯ, ಗಣಿಕೆಯರ, ಒಡಲೊಳ್- ದೇಹದಲ್ಲಿ, ತಿಳಿಯೆ- ನೋಡಲು, ಪುರುಳ್- ಸಾರವು, ಉಂಟೆ ? ನೃಪತಿಲಕ ! ಪೇಳ್. ... ‖೨೧‖

ಆಲೋಕನಂ- ಸ್ತ್ರೀಯರ ನೋಟವು, ಜನತಾಪಪ್ರದಂ- ಜನಗಳಿಗೆ ಸಂತಾಪವನ್ನುಂಟುಮಾಡುವದು, ಇಂದ್ರಿಯಮೃಗದ, ಬಲೆ, ವಿಕಾರದ, ನೆರ, ಸಂಜನಿತವಿಮೋಹಮರೀಚಿಕೆ- ಉಂಟುಮಾಡಲ್ಪಟ್ಟ ಅಜ್ಞಾನವುಳ್ಳ ಬಿಸಲ್ಗುದುರೆ, ಅನಿಶಂ- ನಿರಂತರದಲ್ಲೂ, ಚಪಲಂ, ವಿವೇಕಸರಸಿಜತುಹಿನಂ- ಪರಿಜ್ಞಾನವೆಂಬ ಕಮಲಕ್ಕೆ ಹಿಮವು. ... ... ... ... ... ‖೨೨‖

ಗಣಿಕೆಯರ, ನುಡಿ, ಅಣಕದ- ಅಣಕಿಸುವಿಕೆಯ, ನೆಲೆ, ಸೋಲಿಪ- ಮೋಹಗೊಳಿಸುವ, ಬನ್ನಣದಿಂ- ಬಿಗುತನದಿಂದ, ನಂಬಿಸುವ, ಡೊಂಬಿನ- ಬಹಿಶ್ಚಾಪಲ್ಯದ, ಎಡೆ, ಪುಸಿನುಸುಳ್- ಹೇಳಿತಪ್ಪುವಿಕೆ ಸುಳ್ಳು ಇವು

ಡ್ಡಣೆ ಪೊರೆಯರಿವಳಿಪಿನ ಸಂ | ದಣಿವಳಿಬಗಳಂಗಳಿಕ್ಕೆನುಡಿಗಣಿಕೆಯರ ‖ ... ‖೭೩‖

ಕಂ ‖ ಅರಿಷಡ್ವರ್ಗ್ಗದತವ ರತಿ | ವಿರಸಂ ಮಲಿನಂಕೃತಘ್ನ ಮಸ್ಥಿರ ಮಶುಭಂ ‖ ದುರಿತನಿಧಾನಂ ಮಾಯಾಂ | ಕುರಬೀಜಂ ವಾರಕಾಮಿನೀಮನಮರಸ ‖ ... ‖೭೪‖

ಕಂ ‖ ಕುಲಹೀನಂ ಸತ್ಕುಲಜಂ | ಖಲನುತ್ತಮ ನೆಂಬುದಿಲ್ಲದೊಡವೆರೆವ ರ್ಥಂ ‖ ಚಲಮತಿಗ ಳ್ಪಣದಾಸೆಗೆ | ಸಲೆ ಪಣ ಮಿಲ್ಲದ ನನಂಗನಾದೊಡ ಮೊಲ್ಲರ್‖ ... ‖೭೫‖

ಕಂ ‖ ಕ್ಷಣಮಾತ್ರಜನಿತರತಿಸುಖ | ಕಣಮಂ ನೆರೆ ನಚ್ಚಿ ಮಚ್ಚಿ ಮೆಯ್ಯಂ ಮನಮಂ ‖ ಪಣಮುಂ ತೆತ್ತನುದಿನ ಮೀ | ಗಣಿಕೆಯ ರೊಡವೆರೆವ ಮನುಜ ನೇಂಗಾವಿಲನೊ ‖

ಉ ‖ ಮಾನದ ಹಾನಿ ಯೊಂದು ನಿಜದೈನ್ಯದಡರ್ಪೆರ ಡಾತ್ಮ ಲಜ್ಜೆಯುಂ | ತಾನುಳಿದಿರ್ಪ ಬನ್ನ ಮದು ಮೂ ರಪಹಾಸ್ಯದಳುರ್ಕೆ ನಾಲ್ಕು ಹೃದ್ ‖ ಗ್ಲಾನಿ ಯಯ್ದುವಿತ್ತದಳಿವಾರು ವಿಮುಕ್ತಿಯ ನೆಯ್ದದಿರ್ಪುದೇ | ಏನೆಗಳ್ದೀಳರಾಟದಿ ನಣಂ ಕಿಡುಗುಂ ಗಣಿಕಾರತಿಪ್ರಿಯಂ ‖ ... ... ... ... ... ... ‖೭೭‖

ಕಂ ‖ ಕ್ಷಣರುಚಿ ಜಲಲಿಪಿ ಮುಗಿಲೊ | ಡ್ಡಣೆಯನೆಳಲ್ ಕರಕ ಮಿಂದ್ರಚಾಪಂ ಸಂಧ್ಯಾರುಣರುಚಿ ಚಿರ ಮಾದೊಡ ಮೀ | ಗಣಿಕಾಸಂಪ್ರೀತಿಯೊರ್ಮೆ ಚಿರಮಾದಪುದೆ ‖೭೮‖

---

ಗಳ, ಒಡ್ಡಣೆ- ತಡಿಕೆ, ಅರಿವ, ತಿಳುವಳಿಕೆಯು, ಅಳಿಪಿನ- ನಾಶದ, ಪೊರೆ, ಸಂದಣಿಪ, ಅಳಿಬಗಳಂಗ, ದುಷ್ಟವಾದಕಲಹಂಗಳ, ಇಕ್ಕೆ- ಆಶ್ರಯವು. ... ... ... ‖೭೩‖

ಅರಸ! ವಾರಕಾಮಿನೀಮನಂ- ಸೂಳೆಯರಮನಸ್ಸು, ಅರಿಷಡ್ವರ್ಗದ- ಕಾಮಕ್ರೋಧಲೋಭಮೋಹಮದಮಾತ್ಸರ್ಯಗಳ, ತವರ್- ಹುಟ್ಟಿದಮನೆ, ಅತಿವಿರಸಂ- ಬಲುಗುಣಹೀನವಾದದ್ದು, ಮಲಿನಂ- ಕಲ್ಮಷಯುಕ್ತವಾದದ್ದು, ಕೃತಘ್ನಂ- ಉಪಕಾರವಂಮರೆಯುವದು, ಅಸ್ಥಿರಂ- ಚಪಲವಾದದ್ದು, ಅಶುಭಂ, ದುರಿತನಿಧಾನಂ- ಪಾಪಕ್ಕೆನಿಕ್ಷೇಪವು, ಮಾಯಾಂಕುರಬೀಜಂ- ಅಜ್ಞಾನವೆಂಬಮೊಳಕೆಗೆಬೀಜವು. ‖೭೪‖

ಚಂಚಲಮತಿಗಳ್- ಚಪಲಬುದ್ಧಿಯುಳ್ಳಸೂಳೆಯರು, ಕುಲಹೀನಂ- ನೀಚಕುಲೋತ್ಪನ್ನನು, ಸತ್ಕುಲಜಂ, ಖಲಂ- ನೀಚನು, ಉತ್ತಮಂ, ಎಂಬುದು, ಇಲ್ಲದೆ, ಪಣದ, ಆಸೆಗೆ, ಒಡವೆರೆವರ್- ಒಡನೆಕೂಡುವರು, ಸಲೆ- ಪಣಂ, ಇಲ್ಲದನಂ, ಅನಂಗಂ, ಆದೊಡಂ, ಒಲ್ಲರ್. ... ... ‖೭೫‖

ಕ್ಷಣಮಾತ್ರಜನಿತರತಿಸುಖಕಣಮಂ - ಸ್ವಲ್ಪಕಾಲವಿರುವವಾಗಿ ಹುಟ್ಟಿದ ಸುರತ ಸೌಖ್ಯಲೇಶವನ್ನು, ನೆರೆ, ನಚ್ಚಿ' ಮಚ್ಚಿ, ಮೆಯ್ಯಂ; ಮನಮಂ, ಪಣಮಂ, ತೆತ್ತು, ಅನುದಿನಂ, ಈಗಣಿಕೆಯರ, ಒಡವೆರೆವ, ಮನುಜಂ, ಏಂಗಾವಿಲನೊ- ಏನುಮೂಢನೋ ! ... ... ‖೭೬‖

ಮಾನದ, ಹಾನಿ, ಒಂದು; ನಿಜದೈನ್ಯದ, ಅಡರ್ಪು- ಆಶ್ರಯವು, ಎರಡು; ಆತ್ಮಲಜ್ಜೆಯುಂ, ತಾಂ, ಉಳಿದು, ಇರ್ಪ, ಅದುಬನ್ನಂ- ಆ ಕಷ್ಟವು, ಮೂರ್, ಅಪಹಾಸ್ಯದ, ಅಳುರ್ಕೆ- ಅತಿಶಯವು, ನಾಲ್ಕು; ಅದುಹೃದ್ಗ್ಲಾನಿ- ಅಮನಸ್ಸಿನ ಬಳಲಂವಿಕೆಯು, ಐದು; ವಿತ್ತದ, ಅಳಿವು- ನಾಶವು, ಆರು; ವಿಮುಕ್ತಿಯಂ, ಎಯ್ದದೆ, ಇರ್ಪುದು, ಏಳ್, ಈ ಏಳರ, ಆಟದಿಂ, ಅಣಂ- ಅತ್ಯಂತವಾಗಿ, ಗಣಿಕಾರತಿಪ್ರಿಯಂ-ಸೂಳೆಯರೊಡನೆ ಮದನಕ್ರೀಡೆಯಲಾಸಕ್ತಿಯುಳ್ಳವನು, ಕಿಡುಗುಂ- ಕೆಟ್ಟುಹೋಗುವನು. ‖೭೭‖

ಕ್ಷಣರುಚಿ- ಮಿಂಚು, ಜಲಲಿಪಿ- ನೀರಿನಲ್ಲಿ ಬರೆದ ಬರವಣಿಗೆ, ಮುಗಿಲ- ಮೋಡದ, ಒಡ್ಡಣೆಯ- ಗುಂಪಿನ, ನೆಳಲ್, ಕರಕಂ- ಆಲಿಕಲ್ಲು, ಇಂದ್ರಚಾಪಂ- ಇಂದ್ರಧನುಸ್ಸು, ಸಂಧ್ಯಾರುಣರುಚಿ- ಸಂಜೆಗಳಲ್ಲಿರುವ ಕೆಂಪುಕಾಂತಿ, ಚಿರಂ- ಬಹುಕಾಲಿಕವಾದದ್ದು, ಆದೊಡಂ, ಗಣಿಕಾಸಂಪ್ರೀತಿ, ಒರ್ಮೆ, ಚಿರಂ, ಆದಪುದೆ?

ಕಂ ॥ ಅವಿಚಾರಿತರಮಣೀಯಂ । ಭುವನದೊಳೀವಾರವಧುಗಳೊಡನಾಟಮಿದಂ ॥
ಸುವಿವೇಕವಮಾಳ್ದ ನಿಶ್ಚಳ । ಶಿವಭಕ್ತಂ ಬಯಸಲಕ್ಕುಮೇ ಬಗೆವಾಗಳ್ ॥ ... ॥೭೯॥

ಚಂ॥ ಶರಣಮನೋಮರಾಳಕೆ ಮನೋಜ್ಞಮೆ ಕಾಂತೆಯರಾಳ್ದ ಕೇಕರ। ಸ್ಫುರಿತತ
ಟಿಲ್ಲಸಲ್ಲತೆ ವಧೂದರಹಾಸಸುಧಾಂಶುರೋಚಿ ಶಂ॥ಕರಪದಭಕ್ತಲೋಚನಸರೋಜಕೆರೋಚ
ಕಮೇ ಮನೋಜಸಂ । ಹರಭರಿತಾಂಗನಂಗಕೆಮನೋಜರತೋತ್ಸವ ಮೊಪ್ಪಲಾರ್ಕುಮೆ॥

ಚಂ॥ಭಸಿತವಿಲೇಪನಪ್ರಿಯನದೆಂತು ಮೃಗೋದ್ಭವಪಂಕಮಂ ಪನು । ಲ್ಲಸಿತಶಿವಾಕ್ಷಿಜಾ
ತಮಣಿಭೂಷಣನೆಂತು ಮಣಿಸ್ರಜಂಗಳಂ ॥ ಪೊಸತೆನೆ ತಾಳ್ವನೊಲ್ದು ಶಿವಮಂತ್ರಪರಾ
ಯಣನೆಂತು ಕಾಮವಾ । ಗ್ವ್ಯಸನಮನೊಲ್ವನೆಂತು ಶಿವಪೂಜಕನನ್ಯರತಕ್ಕೆ ಕೂರ್ಪನ॥೮೧॥

ಮ॥ ಪಲವಾಲಾಪದಿ ನೇಂ ಫಲಂ ನೃಪತಿ ಕೇಳ್ ನೀಂ ನೀತಿಯುಕ್ತಂ ನಿರಾ । ಕುಲಚಿ
ತ್ತಂ ಗುರುಭಕ್ತನೀಶಭಜನಾಸಕ್ತಂ ಗಡಿಂತಾದದು ॥ ರ್ಮಲಭಾಂಡಪ್ರಮದಾಂಗಸಂಗದ
ಣುಮಾತ್ರಾನಂದಕೊಲ್ದೀಶಭ । ಕ್ತಿಲಸತ್ಸಾರಸುಧಾಬ್ಧಿಯಂ ತೊರೆದು ದಲ್ಬೇಳಾಗದಿ
ರ್ಸಾರಿದೆಂ ॥ ... ... ... ... ... ... ॥೮೨॥

---

ಭುವನದೊಳ್, ಈ ವಾರನಾರಿಗಳ, ಒಡನಾಟಂ, ಅವಿಚಾರಿತರಮಣೀಯಂ- ವಿಚಾರಮಾಡದಿರುವದರಿಂದ ಮನೋಹರವಾದದ್ದು; ಬಗೆವಾಗಳ್- ಯೋಚಿಸುವಲ್ಲಿ, ಇದಂ, ಸುವಿವೇಕವಮಾಳ್ದ, ನಿಶ್ಚಳಶಿವಭಕ್ತಂ ಬಯಸಲ್, ಅಕ್ಕುಮೇ ? ... ... ... ... ... ॥೭೯॥

ಶರಣಮನೋಮರಾಳಕೆ- ಶಿವಶರಣರ ಮನಸ್ಸೆಂಬ ಹಂಸಪಕ್ಷಿಗೆ, ಕಾಂತೆಯರ್, ಆಳ್ದ, ಕೇಕರಸ್ಫುರಿತತಟಿಲ್ಲಸಲ್ಲತೆ- ಕೇಕರ- ಒಂದುವಿಧವಾದ ನೋಟವೆಂಬ, ಸ್ಫುರಿತತಟಿಲ್ಲಸಲ್ಲತೆ- ಪ್ರಕಾಶಿಸುವ ಬಳ್ಳಿಯಂತಿರುವ ಮಿಂಚು, ಮನೋಜ್ಞಮೆ ? ಶಂಕರಪದಭಕ್ತಲೋಚನಸರೋಜಕೆ- ಶಿವನಪಾದದಲ್ಲಿ ಭಕ್ತಿಯುಳ್ಳವರ ಕಣ್ಣೆಂಬ ಕಮಲಕ್ಕೆ, ವಧೂದರಹಾಸಸುಧಾಂಶುರೋಚಿ- ಸ್ತ್ರೀಯರ ಮುಗುಳ್ನಗೆಯೆಂಬ ಚಂದ್ರಿಕೆಯು, ರೋಚಕಮೇ- ರುಚಿಸುವದೇ ? ಮನೋಜಸಹ್ಮರಭರಿತಾಂಗನ— ಮನೋಜಸಹ್ಮರ- ಶಿವನಿಂದ, ಭರಿತ- ಪೂರ್ಣವಾದ, ಅಂಗನ- ಶರೀರವುಳ್ಳವನ, ಅಂಗಕೆ, ಮನೋಜರತೋತ್ಸವಂ- ಮನ್ಮಥಕ್ರೀಡೆಯ ಸಂತೋಷವು, ಒಪ್ಪಲ್, ಆರ್ಕುಮೇ ? ... ... ... ... ॥೮೦॥

ಭಸಿತವಿಲೇಪನಪ್ರಿಯಂ- ವಿಭೂತಿಯಂ ಬಳಿದುಕೊಳ್ಳುವದರಲ್ಲಾಸಕ್ತಿಯುಳ್ಳವನು, ಅದೆಂತು ಮೃಗೋದ್ಭವಪಂಕಮಂ- ಅದುಹ್ಯಾಗೆ ಕಸ್ತೂರಿಯಕೆಸರನ್ನು ಧರಿಸುವನು? ಶಿವಾಕ್ಷಿಜಾತಮಣಿಭೂಷಣಂ- ಶಿವಾಕ್ಷಿಜಾತಮಣಿ- ಈಶ್ವರನ ಕಣ್ಣಿನಿಂದಹುಟ್ಟಿದರುದ್ರಾಕ್ಷಿಗಳ, ಭೂಷಣಂ- ಆಭರಣವುಳ್ಳವನು, ಪೊಸತು, ಎನೆ, ಮಣಿಸ್ರಜಂಗಳಂ- ರತ್ನಮಾಲಿಕೆಗಳನ್ನು, ಒಲ್ದು, ಎಂತುತಾಳ್ವಂ ? ಶಿವಮಂತ್ರಪರಾಯಣಂ, ಕಾಮವಾಗ್ವ್ಯಸನಮಂ- ಮದನ ವಿಷಯಕವಾದ ಮಾತುಗಳ ದುಃಖವನ್ನು, ಎಂತು, ಒಲ್ವಂ? ಶಿವಪೂಜಕಂ, ಅನ್ಯರತಕ್ಕೆ- ಇತರರೊಡನೆ ಕ್ರೀಡಿಸುವದಕ್ಕೆ, ಎಂತುಕೂರ್ಪನೊ ! ... ... ॥೮೧॥

ನೃಪತಿ ! ಕೇಳ್, ಪಲವಾಲಾಪದಿಂ- ಅನೇಕಮಾತಿನಿಂದ, ಏಂಫಲಂ ? ನೀಂ, ನೀತಿಯುಕ್ತಂ, ನಿರಾಕುಲಚಿತ್ತಂ- ಗುರುಭಕ್ತಂ, ಈಶಭಜನಾಸಕ್ತಂಗಡ ! ಇಂತು, ಪೂರ್ವೋಕ್ತಪ್ರಕಾರವಾಗಿ, ಆದ, ದುರ್ಮಲಭಾಂಡಪ್ರಮದಾಂಗಸಂಗದ- ಕೆಟ್ಟಪುರೀಷವನ್ನು ತುಂಬಿದ ಮಡಕೆಯಾದ ಸ್ತ್ರೀಯರದೇಹದ ಸಂಬಂಧದಿಂದುಂಟಾಗುವ, ಅಣುಮಾತ್ರಾನಂದಕೆ- ಅತ್ಯಲ್ಪವಾದ ಸೌಖ್ಯಕ್ಕೆ, ಒಲ್ದು, ಈಶಭಕ್ತಿಲಸತ್ಸಾರಸುಧಾಬ್ಧಿಯಂ- ಶಿವಭಕ್ತಿಯೆಂಬ ಪ್ರಕಾಶಿಸುವ ಶ್ರೇಷ್ಠವಾದ ಹಾಲ್ಗಡಲನ್ನು, ತೊರೆದು, ಬೇಳ್- ದಡ್ಡನು, ಆಗದೆ, ಇರ್, ದಲ್- ನಿಶ್ಚಯವಾಗಿ, ಸಾರಿದೆಂ. ... ... ... ... ॥೮೨॥

ವ ॥ ಎಂದಾಪೌಢಮತಿನಾರಿ ವೇಶ್ಯೋಪಾಲಂಭನಂಗೆಯ್ದಿಂತುಸಿರ್ದ ಹಿತೋಕ್ತಿಯನವಧರಿಸ ದವಮ ಮದನಮೋಹಾವೇಶಪಾರವಶ್ಯದಿ ನಡಸಿ ನೋಡುತ್ತ ಮಿರೆ ಕಂಡು ವಿಸ್ಮಯಂಬಟ್ಟು ॥ * * * * * * * * * * * * *

ಕಂ ॥ ತೊರೆದ ನಿವಂ ಶಿವಭಕ್ತಿಯೊ । ಳೆರಕವ ನಾತ್ಮೀಯನಯಮ ನೇವೇಳ್ದೊಡ ಮೇ ॥ ತೆರದಿಂ ಪರಿವಡದೀತನ । ತರಿಸಂದಂಗಜವಿಕಾರ ಮೇಗೆಯ್ದಪೆನಾಂ ॥ ॥೮೩॥

ವ ॥ ಎಂದು ಚಿಂತಿಸಿ ಮಗುಳೊಂದುಪಾಯಮಂ ನೆನೆದು ॥ * * * * *

ಕಂ॥ ಅತಿಮೂರ್ಖನ ಮನಮಂ ಸಂ । ನುತಕಥೆವೇಳ್ದಾತ್ಮವಶಮ ನೆಸಗೆಂಬಸಮುನ್ನತನೀತಿ ಯೊಳ ವಿವಂಗಾಂ । ಕತೆವೇಳ್ದೀಕ್ಷಿಪೆ ನೆನುತ್ತ ನನೆದಿಂತೆಂದಳ್ ॥ ॥೮೪॥

ಕಂ ॥ ಎನಿತೆನಿತು ಹಿತಮ ನಾ ನೂ । ಲ್ದನುನಯದಿಂ ಪೇಳೆ ಕೇಳ್ದ ನಲ್ತೆಲೆ ನೀಂ ಮು ॥ ನ್ನಿನವ ರ್ಕೇಳ್ದಾಪ್ತಜನದ । ವಿನಯೋಕ್ತಿಯ ನಧಿಕಸುಖಮ ನಾಳರೆ ನೃಪತಿ ॥

ವ ॥ ಅದೆಂತೆನೆ ॥ ಉ ॥ ಅಂಬುಜವಕ್ತ್ರ ಕಂಬುಗಳೆ ಕುಂಭಪಯೋಧರೆ ಪದ್ಮಗಂಧಿ ರೋ । ಲಂಬಕಚಾಭಿರಾಮೆ ರಮಣೀಯಮೃದುಸ್ಮಿತೆ ಶಂಬರಾರಿಮೋ ॥ ಹಾಂಬುಧಿಚಾರುಚಂದ್ರಿಕೆ ನಿಜೋರುವಿನಿರ್ಜಿತರಂಭೆ ರಂಭೆ ಕಂ । ಜಾಂಬಕಿ ಜಂಭವೈರಿಹೃದಯೋತ್ಸವಕಾರಿಣಿ ನಾಕಲೋಕದೊಳ್ ॥ ... ... ... ... ... ॥೮೬॥

---

ಎಂದು, ಆಪ್ರೌಢಮತಿನಾರಿ, ವೇಶ್ಯೋಪಾಲಂಭನಂಗೆಯ್ದು- ಸೂಳೆಯರನ್ನು ತಿರಸ್ಕರಿಸಿ, ಇಂತು, ಉಸಿರ್ದ, ಹಿತೋಕ್ತಿಯಂ, ಅವಂ, ಅವಧರಿಸದೆ- ಮನಸ್ಸಿಗೆ ತಂದುಕೊಳ್ಳದೆ, ಮದನಮೋಹಪಾರವಶ್ಯದಿಂ- ಮನ್ಮಥವಿಷಯಕವಾದ ಅಜ್ಞಾನದಿಂದುಂಟಾದ ಮೂರ್ಛೆಯಿಂದ, ಅಡಸಿ, ನೋಡುತ್ತಂ, ಇರೆ, ಕಂಡು, ವಿಸ್ಮಯಂಬಟ್ಟು. * * * * * * * * * * * * * *

ಇವಂ, ಶಿವಭಕ್ತಿಯೊಳ್, ಎರಕವಂ- ಪ್ರೀತಿಯನ್ನು, ಆತ್ಮೀಯನಯಮಂ- ತನ್ನನೀತಿಯನ್ನು, ತೊರೆದಂ; ಏವೇಳ್ದೊಡಂ- ಏನುಹೇಳಿದಾಗ್ಯೂ, ಏತೆರದಿಂ- ಯಾವರೀತಿಯಿಂದಲೂ, ಈತನ, ತರಿಸಂದ-ಪ್ರಾಪ್ತವಾದ, ಅಂಗಜವಿಕಾರಂ; ಪರಿವಡದು- ನಾಶವಾಗುವದಿಲ್ಲ; ಆಂ, ಏಗೆಯ್ದಪೆಂ- ಏನುಮಾಡಲಿ. ॥೮೩॥

ಎಂದು, ಚಿಂತಿಸಿ, ಮಗುಳ್ದು- ಪುನಃ, ಒಂದು ಉಪಾಯಮಂ, ನೆನೆದು. * * * * *

ಅತಿಮೂರ್ಖನ, ಮನಮಂ, ಸನ್ನುತಕಥೆವೇಳ್ದು, ಆತ್ಮವಶಮಂ-ಸ್ವಾಧೀನವನ್ನು, ಎಸಗು,ಎಂಬ,ಸಮುನ್ನತನೀತಿ, ಒಳವ್-ಉಂಟು, ಇವಂಗೆ,ಆಂ, ಕತೆವೇಳ್ದು, ಈಕ್ಷಿಪೆಂ,ಎನುತ್ತೆ, ನೆನೆದು, ಇಂತು,ಎಂದಳ್.

ಎಲೆನೃಪತಿ ! ಆಂ, ಒಲ್ದು, ಅನುನಯದಿಂ, ಎನಿತುಎನಿತುಹಿತಮಂ, ಪೇಳೆ, ನೀಂ, ಕೇಳ್ದಂ, ಅಲ್ತು, ಮುನ್ನಿನರ್- ಪೂರ್ವಿಕರು, ಆಪ್ತಜನದ, ವಿನಯೋಕ್ತಿಯಂ, ಕೇಳ್ದು ಅಧಿಕಸುಖಮಂ, ಆಳರೆ ?

ಶ್ವೇತನಕಥೆ.

ನಾಕಲೋಕದೊಳ್- ಸ್ವರ್ಗಲೋಕದಲ್ಲಿ, ಅಂಬುಜವಕ್ತ್ರ, ಕಂಬುಗಳೆ- ಶಂಖದಂತಿರುವ ಕಂಠವುಳ್ಳ, ಕುಂಭಪಯೋಧರೆ- ಕಲಶದಂತಿರುವ ಸ್ತನವುಳ್ಳ, ಪದ್ಮಗಂಧಿ- ಕಮಲದ ಪರಿಮಳದಂತಿರುವ ವಾಸನೆಯುಳ್ಳ, ರೋಲಂಬಕಚಾಭಿರಾಮೆ- ತುಂಬಿಯಹಾಗಿರುವ ಕೂದಲಿನಿಂದ ಮನೋಹರಳಾದ, ರಮಣೀಯಮೃದುಸ್ಮಿತೆ- ಮನೋಹರವಾದ ಮೆಲ್ನಗೆಯುಳ್ಳ, ಶಂಬರಾರಿಮೋಹಾಂಬುಧಿಚಾರುಚಂದ್ರಿಕೆ, ಕಾಮಾನುರಾಗವೆಂಬ ಸಮುದ್ರಕ್ಕೆ ಮನೋಹರವಾದ ಬೆಳ್ದಿಂಗಳಾದ, ನಿಜೋರುವಿನಿರ್ಜಿತರಂಭೆ— ನಿಜ- ತನ್ನ, ಊರು- ತೊಡೆಗಳಿಂದ, ವಿನಿರ್ಜಿತ- ಜೈಸಲ್ಪಟ್ಟ, ರಂಭೆ- ಬಾಳೆಯಕಂಬವುಳ್ಳ, ಕಂಜಾಂಬಕಿ- ಕಮಲದಂತಿರುವ ಕಣ್ಣುಳ್ಳ, ಜಂಭವೈರಿಹೃದಯೋತ್ಸವಕಾರಿಣಿ- ಇಂದ್ರನ ಮನಸ್ಸಿಗೆ ಸಂತೋಷವನ್ನುಂಟುಮಾಡುವ. ॥೮೬॥

ಕಂ॥ ಚಳದಳಿಕುಳಪರಿಮಳಮಂ । ಜುಳಸುರಭೂಜಪ್ರಸೂನಕಚಭರೆರತ್ನೋ॥ ಜ್ವಳಭೂಷಣದಿವ್ಯಾಂಬರ । ವಿಳಸಿತೆ ಹರಿಚಂದನಾಂಕಕುಚಯುಗೆ ಮೆರೆದಳ್ ॥ ॥೮೭॥

ಕಂ॥ ಅವಳಧರಾಮೃತರಸಮಂ । ಸವಿದಮರ್ದುಣಿಯಾದ ನಮಮ ಸುರರಾಜಂ ಮೇ॥ ಣವಳ ಕುಚಗಿರಿಯ ನಿಜನಖ । ಪವಿಯಿಂ ದಿರಿದಲ್ತೆ ಗಿರಿವಿಭೇದನ ನಾದಂ ॥೮೮॥

ವ॥ ಎನಿಸಿ ರಂಜಿಪ ರಂಭೆ ಯೊಂದುದಿನಂ ತನ್ನ ನೆಳಸಿರ್ದ ದುರಿತಭರಿತಚರಿತ ನಾದ ವಿಟಶ್ವೇತನಂ ನೋಡಿ ನಗ ಲೊಡ ನವಂ ಕಂಡು ವಿಭ್ರಾಂತಚಿತ್ತನಾಗಿ ॥ * *

ಕಂ॥ ಜನವಿನುತಗುಣವಿಭೂಷಣೆ । ವನಜಾನನೆ ರಂಭೆ ಪೇಳದೇಂಕಾರಣ ಮೆ॥ ನ್ನನಭೀಕ್ಷಿಸಿ ನಕ್ಕಪೆ ಯೆಂ । ದೆನೆ ಬೋಧಿಸ ಲೆಂದು ದಯೆಯಿ ನವ ಳಿಂತೆಂದಳ್ ॥ ॥೮೯॥

ಚಂ॥ ಎಲೆವಿಟ ಪೇಳ ಲೆನ್ನಳವೆ ನಿನ್ನಯ ದುಷ್ಟಚರಿತ್ರಮಂ ಧರಾ । ತಳದೊಳೆಸಂದ ಸರ್ವದುರಿತೌಘನಿದಾನಮ ನಾಫಣೀಂದ್ರನುಂ ॥ ನಲಿದುಸಿರಲ್ಕೆ ಸಾಲ್ದಪನೆ ನೈಮ ರೆ ದುನ್ಮದಮತ್ತ ನಾಗಿ ದು । ಷ್ಟಲರೊಡಗೂಡಿ ವರ್ತಿಸಿದೆ ನೀಂಗಡ ನಿಚ್ಚ ಮಧರ್ಮಮಾರ್ಗದೊಳ್ ॥ ... ... ... ... ... ... ॥೯೦॥

ಕಂ॥ ಇರುಳುಂ ಪಗಲುಂ ಕಾಮಿನಿ । ಯರ ಸಂಗ ಮದಲ್ಲದರಿಯೆ ಶಿವದರ್ಶನಮಂ ॥

---

ಚಳ......ಭರೆ— ಚಳತ್- ಚಲಿಸುತ್ತಿರುವ, ಅಳಿ- ಭ್ರಮರಗಳ, ಕುಳ- ಗುಂಪುಳ್ಳ, ಪರಿಮಳ- ಸುಗಂಧದಿಂದ, ಮಂಜುಳ- ಮನೋಹರವಾದ, ಸುರಭೂಜ- ಕಲ್ಪವೃಕ್ಷದ, ಪ್ರಸೂನ- ಹೂವ್ಗಳೇ, ಕಚಭರೆ- ಕೇಶಸಮುದಾಯದಲ್ಲುಳ್ಳ, ರತ್ನೋಜ್ಜ್ವಳಭೂಷಣದಿವ್ಯಾಂಬರವಿಳಸಿತೆ- ರತ್ನಗಳಿಂದ ಪ್ರಕಾಶಿಸುವ ಆಭರಣ ಶ್ರೇಷ್ಠವಾದ ವಸ್ತ್ರ ಇವುಗಳಿಂದ ಪ್ರಕಾಶಿಸುವ, ಹರಿಚಂದನಾಂಕಕುಚಯುಗೆ- ಶ್ರೀಗಂಧವೇ ಗುರುತಾಗುಳ್ಳ ಸ್ತನಯುಗ್ಮವುಳ್ಳ, ರಂಭೆ, ಮೆರೆದಳ್. ... ... ... ... ॥೮೭॥

ಸುರರಾಜಂ- ದೇವೇಂದ್ರನು, ಅವಳ, ಅಧರಾಮೃತರಸಮಂ, ಸವಿದು, ಅಮರ್ದುಣಿ- ಅಮೃತವನ್ನುಣ್ಣುವ ಸ್ವಭಾವವುಳ್ಳವನು, ಆದಂ; ಅವಳ, ಕುಚಗಿರಿಯ- ಸ್ತನವೆಂಬ ಬೆಟ್ಟವನ್ನು, ನಿಜನಖಪವಿಯಿಂದೆ- ತನ್ನಉಗುರೆಂಬ ವಜ್ರಾಯುಧದಿಂದ, ಇರಿದು- ಸೀಳಿ, ಗಿರಿವಿಭೇದನಂ- ಪರ್ವತವನ್ನು ಸೀಳಿದವನು, ಆದನಲ್ತೆ ? ಅಮಮ ! ... ... ... ... ... ॥೮೮॥

ಎನಿಸಿ, ರಂಜಿಪ, ರಂಭೆ, ಒಂದುದಿನಂ, ತನ್ನಂ, ಎಳಸಿ– ಅಪೇಕ್ಷಿಸಿ, ಇರ್ದ, ದುರಿತಭರಿತಚರಿತಂ- ಪಾಪದಿಂದ ತುಂಬಿದ ನಡತೆಯುಳ್ಳವನು, ಆದ, ವಿಟಶ್ವೇತನಂ- ಶ್ವೇತನೆಂಬ ವಿಟನನ್ನು, ನೋಡಿ, ನಗಲ್, ಒಡನೆ, ಅವಂ, ಕಂಡು, ವಿಭ್ರಾಂತಚಿತ್ತಂ, ಆಗಿ. * * * * * * * * * * * *

ಜನವಿನುತಗುಣವಿಭೂಷಣೆ, ವನಜಾನನೆ, ರಂಭೆ ! ಎನ್ನಂ, ಈಕ್ಷಿಸಿ, ಇದೇಂಕಾರಣಂ, ನಕ್ಕಪೆ ? ಪೇಳ್, ಎಂದು, ಎನೆ, ಅವಳ್, ಬೋಧಿಸಲ್ಎಂದು- ಜ್ಞಾನೋದಯವಂ ಮಾಡಬೇಕೆಂದು, ದಯೆಯಿಂ, ಇಂತು; ಎಂದಳ್. ... ... ... ... ... ॥೮೯॥

ಎಲೆವಿಟ ! ಧರಾತಳದೊಳೆ, ಸಂದ- ಸೇರಿರುವ, ಸರ್ವದುರಿತೌಘನಿದಾನಮಂ- ಸಮಸ್ತಪಾಪಗಳಿಗೂ ಆದಿಕಾರಣವಾದ, ನಿನ್ನಯ, ದುಷ್ಟಚರಿತ್ರಮಂ, ಪೇಳಲ್, ಎನ್ನ, ಅಳವೆ ? ಆ ಫಣೀಂದ್ರನುಂ- ಆ ಆದಿಶೇಷನೂ, ನಲಿದು, ಉಸಿರಲ್ಕೆ, ಸಾಲ್ದಪನೆ- ಸಮರ್ಥನಾಗುವನೇ ? ನೀಂ, ಉನ್ಮದಮತ್ತಂ- ಹೆಚ್ಚಾದ ಗರ್ವದಿಂಕೊಬ್ಬಿದವನು, ಆಗಿ, ನೈಮರೆದು, ಪ್ರಜ್ಞೆತಪ್ಪಿ, ದುಷ್ಟಲರ- ಕೆಟ್ಟನೀಚರ, ಒಡಗೂಡಿ, ನಿಚ್ಚಂ- ನಿರಂತರದಲ್ಲೂ, ಅಧರ್ಮಮಾರ್ಗದೊಳ್, ವರ್ತಿಸಿದೆಗಡ. ... ... ॥೯೦॥

ಖಲತಿಲಕ- ದೊಡ್ಡನೀಚನೇ! ಇರುಳುಂ- ರಾತ್ರಿಯಲ್ಲೂ, ಪಗಲುಂ, ಕಾಮಿನಿಯರ, ಅದುಸಂಗಂ, ಅ

ಗುರುಭಜನಮು ನಭವಾರ್ಚ್ಚಕ । ಚರಣನಮಸ್ಕೃತಿಯ ನೋರ್ಮೆಯುಂ ಖೀತಿಲಕ ॥೯೧॥

ಕಂ ॥ ಇಟ್ಟರಿಯೆ ಭಸಿತಮನಳಿಕದೆ । ತೊಟ್ಟರಿಯೆ ಕೊರಲ್ಗೆ ಮಿಸುಪರುದ್ರಾಕ್ಷಿಗಳಂ ॥ ಕೊಟ್ಟರಿಯೆ ಸುಪಾತ್ರಕೆ ನೀಂ । ಪುಟ್ಟಿದ ದಿನದಿಂದ ಮೊಂದುಕಾಣಿಯುಮನಣಂ॥

ಮತ್ತೇ ॥ ಗುಣಧರ್ಮ್ಮಾನ್ವಿತವೃತ್ತಿ ಧನ್ವಿಗಳೊಳುದ್ಯದ್ದಾನ ಮುತ್ತುಂಗವಾ । ರಣದೊಳ್ಸತ್ಪಥವರ್ತ್ತನಂ ದಿವಿಜರೊಳ್ನ್ಯಾಯೋಕ್ತಿ ಸಿದ್ಧಾಂತಲ ॥ ಕ್ಷಣದೊಳ್ನಿರ್ಮ್ಮಲಮಾನಸಸ್ಥಿತಿ ಮರಾಳವ್ರಾತದೊಳ್ಸದ್ಬುಧ । ಪ್ರಣಯಂ ಸೋಮನೊಳಲ್ಲದುಂಟೆ ವಿಟ ನಿನ್ನೊಳ್ಶ್ವೇತ ಪೇಳ್ನನ್ನಿಯಂ ॥ ... ... ... ... ॥೯೩॥

ಉ॥ ಬಂದುದಿನಂ ಪಶಾಂಗನೆಗೆ ಪೂವಿರಿದೊಯ್ಯನೆ ಪೊತ್ತು ತರ್ಪ ಪೊಳ್ತೊಂದಲರುರ್ಚ್ಚಿ ಬೀಳೆ ಶುಚಿಯಲ್ಲದ ಭೂತಳದಲ್ಲಿ ನೋಡಿ ಕಂ ॥ ಡಿಂದುಧರಂಗಿದರ್ಪ್ಪಿತ ಮೆನುತ್ತಣುಮಾತ್ರಮನೇಕಜನ್ಮದೊಳ್ಸಂದೆಸಗಿರ್ದ್ದ ಪುಣ್ಯದೊದವಿಂ ನೆನೆದೇಳಿದ ಮಿರ್ಪ್ಪಕಾಲದೊಳ್॥

ಕಂ॥ ಸಂಭವಿಸದು ದಾನೆನಪಿಂ । ಜಂಭಾರಿಯ ಪದವಿ ಯೊಂದುದಿನ ಮಿಾಯಿರುಳೊಳ್॥ ಸಂಭೋಗವ ನೆನ್ನೊಳ್ಪಡೆ । ದಂಭೋಜಸಖೋದಯಂಬರಂ ಸುಖಮಿರ್ಪ್ಪೆಂ ॥ ॥೯೫॥

---

ಲ್ಲದೆ, ಶಿವದರ್ಶನಮುಂ, ಗುರುಭಜನಮುಂ, ಅಭವಾರ್ಚಕಚರಣನಮಸ್ಕೃತಿಯುಂ, ಓರ್ಮೆಯುಂ, ಅರಿಪೆ. ॥೯೧॥

ನೀಂ, ಪುಟ್ಟಿದ, ದಿನದಿಂದಂ, ಭಸಿತಮಂ, ಅಳಿಕದೆ- ಹಣೆಯಲ್ಲಿ, ಇಟ್ಟು, ಅರಿಯೆ; ಕೊರಲ್ಗೆ, ಮಿಸುಪ, ರುದ್ರಾಕ್ಷಿಗಳಂ, ತೊಟ್ಟು, ಅರಿಯೆ; ಸುಪಾತ್ರಕೆ, ಒಂದುಕಾಣಿಯುಮಂ, ಅಣಂ- ಅತ್ಯಂತವಾಗಿ, ಕೊಟ್ಟು, ಅರಿಯೆ. ... ... ... ... ... ॥೯೨॥

ವಿಟ, ಶ್ವೇತ ! ಗುಣಧರ್ಮಾನ್ವಿತವೃತ್ತಿ— ಗುಣ- ಸಿಂಜಿನಿ, ಧರ್ಮ- ಬಿಲ್ಲು, ಇವುಗಳಿಂದ, ಅನ್ವಿತ- ಕೂಡಿದ, ವೃತ್ತಿ- ವರ್ತನವು, ಧನ್ವಿಗಳೊಳ್- ಧನುರ್ಧಾರಿಗಳಲ್ಲಿ; ಉದ್ಯದ್ದಾನಂ- ಅಧಿಕವಾದ ಮದೋದಕವು, ಉತ್ತುಂಗವಾರಣದೊಳ್- ಉನ್ನತವಾದ ಆನೆಯಲ್ಲಿ, ಸತ್ಪಥವರ್ತನಂ- ನಕ್ಷತ್ರಮಾರ್ಗದಲ್ಲಿರುವಿಕೆಯು, ದಿವಿಜರೊಳ್- ದೇವತೆಗಳಲ್ಲಿ, ನ್ಯಾಯೋಕ್ತಿ- ತರ್ಕವಚನವು, ಸಿದ್ಧಾಂತಲಕ್ಷಣದೊಳ್- ಸಿದ್ಧಾಂತಗಳ ಸ್ವರೂಪದಲ್ಲಿ; ನಿರ್ಮಳಮಾನಸಸ್ಥಿತಿ- ಕೊಳೆಕಿಲ್ಲದ ಮಾನಸ ಸರೋವರದಲ್ಲಿರುವಿಕೆಯು, ಮರಾಳವ್ರಾತದೊಳ್-ಹಂಸಪಕ್ಷಿಗಳ ಗುಂಪಿನಲ್ಲಿ, ಸದ್ಬುಧಪ್ರಣಯಂ ಒಳ್ಳೆಯ ಬುಧಗ್ರಹದಲ್ಲಿ ಪ್ರೀತಿಯು, ಸೋಮನೊಳ್- ಚಂದ್ರನಲ್ಲಿ, ಅಲ್ಲದೆ, ನಿನ್ನೊಳ್, ಗುಣಧರ್ಮಾನ್ವಿತವೃತ್ತಿ- ಸದ್ಗುಣ ಪುಣ್ಯಕಾರ್ಯ ಇವುಗಳಿಂದಕೂಡಿದ ನಡತೆಯು, ಉದ್ಯದ್ದಾನಂ- ಉತ್ಕೃಷ್ಟವಾದ ದಾನಗುಣವು, ಸತ್ಪಥವರ್ತನಂ- ಒಳ್ಳೆಯಮಾರ್ಗದಲ್ಲಿರುವಿಕೆಯು, ನ್ಯಾಯೋಕ್ತಿ- ನೀತಿವಚನವು, ನಿರ್ಮಲಮಾನಸಸ್ಥಿತಿ- ನಿಷ್ಕಳಂಕವಾದ ಮನಸ್ಸಿನ ಇರುವಿಕೆಯು, ಸದ್ಬುಧಪ್ರಣಯಂ- ಒಳ್ಳೆಯವಿದ್ವಾಂಸರಲ್ಲಿ ವಿಶ್ವಾಸವು, ಉಂಟೆ ? ನನ್ನಿಯಂ- ನಿಜವನ್ನು, ಪೇಳ್. ॥೯೩॥

ಬಂದುದಿನಂ, ಪಶಾಂಗನೆಗೆ- ಸೂಳೆಗೆ, ಪೂವಿರಿದು- ಹೂವನ್ನೆತ್ತಿಕೊಂಡು, ಒಯ್ಯನೆ, ಪೊತ್ತು, ತರ್ಪಪೊಳ್ತು- ತರುವಕಾಲದಲ್ಲಿ, ಒಂದಲರ್- ಒಂದುಹೂವು, ಉರ್ಚಿ- ಜಾರಿ, ಶುಚಿ- ಪರಿಶುದ್ಧವಾದದ್ದು, ಅಲ್ಲದ, ಭೂತಳದಲ್ಲಿ, ಬೀಳೆ, ನೋಡಿ, ಕಂಡು, ಇದು, ಈ ಬಿದ್ದಹೂವು, ಇಂದುಧರಂಗೆ, ಅರ್ಪಿತಂ- ಸಮರ್ಪಿಸಲ್ಪಟ್ಟಿತು, ಎನುತ್ತೆ, ಅನೇಕಜನ್ಮದೊಳ್, ಸಂದು, ಎಸಗಿ, ಇರ್ದ್ದ, ಪುಣ್ಯದ, ಒದವಿಂ, ಅಣುಮಾತ್ರಂ- ಸ್ವಲ್ಪವಾಗಿ, ನೆನೆದು, ಏಳಿದಂ- ತಿರಸ್ಕೃತನಾಗಿ, ಇರ್ಪ, ಕಾಲದೊಳ್. ... ... ॥೯೪॥

ಆನೆನಪಿಂ, ಬಂದುದಿನಂ; ಜಂಭಾರಿಯ- ಇಂದ್ರನ, ಪದವಿ, ಸಂಭವಿಸಿದುದು; ಈ ಇರುಳೊಳ್, ಎನ್ನೊಳ್, ಸಂಭೋಗವಂ, ಪಡೆದು, ಅಂಭೋಜಸಖೋದಯಂಬರಂ- ಸೂರ್ಯನುದಯಿಸುವವರೆಗೂ, ಸುಖಂ- ಸೌಖ್ಯವಾಗಿ, ಇರ್ಪೆಂ. ... ... ... ... ॥೯೫॥

ಕಂ ॥ ಅಲ್ಲಿಂ ಮೇಲೆ ಕೃತಾಂತನ । ಬಲ್ಲಿದ ರೆನಿಸಿರ್ದ ದೂತ ರೆಳೆದೊಯ್ದಧಟಿಂ ॥ ಪ
ಲ್ಲವ ಕೇಳ್ನರಕಾರ್ಣ್ಣವ । ದಲ್ಲಿ ಕರಂ ಕೆಡಪಿ ನಿನ್ನ ಬಾಧಿಪರಲ್ತೆ ॥ ... ॥೯೬॥

ಕಂ ॥ ಇದ ನರಿಯದಕಟ ನೀಂ ಪೆ । ರ್ಚ್ಚಿದ ಮದದಿಂ ಮದನಸುಖಮ ನೆಳಸುತೆಮೇ
ಲ್ವಾ ॥ ಯ್ದುದ ನೀಕ್ಷಿಸಿ ನಕ್ಕಪೆ ನೆನೆ । ಚದುರೆಯ ನುಡಿಗೇಳ್ದು ನಗುತೆ ವಿಟ ನಿಂತೆಂದುಂ

ಉ ॥ ಕೇಳೆಲೆ ರಂಭೆ ಭೂತಳದೊ ಳೀತನೆ ಕಂತು ವೆನುತ್ತೆ ಸದ್ವಿಟ । ರ್ಸೂಳೆಯ ರೆ
ಲ್ಲರುಂ ಪದೆದು ಬಣ್ಣಿಸೆ ಬಾಳ್ದ ನನಂಗಸತ್ಕಲಾ ॥ ಕೇಳಿಯೊ ಳೀಗ ಳೀದಿವಿಜಲೋಕದೊ
ಳೇಳ್ಗೆಯ ನಾಳ್ದ ನಿನ್ನೊ ಳಾಂ । ಮೇಳಿಸಿ ಕೂಡಿ ಮಚ್ಚಿಸಿ ಜಸಂಬಡೆದಾಂ ವಿಜಯಂ
ದ್ವಿಲೋಕದೊಳ್ ॥ ... ... ... ... .. ... ॥೯೮॥

ಕಂ ॥ ಗಣಿಕಾಮಣಿ ನಾಳೆ ನಭೋ । ಮಣಿಸುತನಿಂ ಬರ್ಪ ನಿರಯಗಿರಯಮ ನೆಂ
ತುಂ॥ಗಣಿಪೆನೆ ಬಿಡು ಬಿಡು ನಗೆಯೊಂ।ದಣಕಮ ನಿಂದೆನ್ನೊ ಳೊಲ್ದು ನೆರೆ ಮೃಗನಯನೆ॥

ಕಂ ॥ ಸ್ಮರಶಿಖಿ ಸುಟ್ಟಪುದೀಗಳ್ । ನರಕಾಗ್ನಿಯೆ ನಾಳೆ ಬರ್ಕ್ಕೆ ಮೆರಡರೊ ಳಿದು
ಧ ॥ ಲ್ಪಿರಿದಲ್ತೆ ನಿನ್ನ ಕೊಂಕನೆ । ಪರಿಹರಿಪೆ ನಿದಂ ಬಳಿಕ್ಕೆ ಬಂದುದ ನರಿವೆಂ ॥ ॥೧೦೦॥

ಕಂ ॥ ನರಕಾಗ್ನಿ ಗಳ್ಕಿ ನಿನ್ನೊ । ಳ್ನೆರೆಯದೊ ಡೀಕಾಮವಹ್ನಿ ಸುಟ್ಟಪು ದದರಿಂ॥
ದುರಿಯಲ್ಕಾರೆಂ ತಳ್ವದೆ । ತರಳೇಕ್ಷಣೆ ನೆರೆದು ರಕ್ಷಿಸೆನೆ ವಿಟ ನಾಗಳ್ ॥ ... ॥೧೦೧॥

---

ಪಲ್ಲವ- ವಿಟನೇ ! ಕೇಳ್, ಅಲ್ಲಿಂಮೇಲೆ- ಅನಂತರ, ಬಲ್ಲಿದರ್- ಬಲಶಾಲಿಗಳು, ಎನಿಸಿ, ಇರ್ದ, ಕೃತಾಂತನ- ಯಮನ, ದೂತರ್- ಆಳುಗಳು, ಅಧಟಿಂ- ಶೌರ್ಯದಿಂದ, ನಿನ್ನ, ಎಳೆದು, ಒಯ್ದು, ನರಕಾರ್ಣವದಲ್ಲಿ— ನರಕವೆಂಬ ಸಮುದ್ರದಲ್ಲಿ, ಕೆಡಪಿ, ಕರಂ- ಅತ್ಯಂತವಾಗಿ, ಬಾಧಿಪರಲ್ತೆ ! ॥೯೬॥

ಅಕಟ ! ನೀಂ, ಇದಂ, ಅರಿಯದೆ, ಪೆರ್ಚ್ಚಿದ, ಮದದಿಂ, ಮದನಸುಖಮಂ, ಎಳಸುತೆ, ಮೇಲ್ವಾಯ್ದುದಂ- ಮೇಲೆ ಬಿದ್ದುದನ್ನು, ಈಕ್ಷಿಸಿ, ನಕ್ಕಪೆಂ, ಎನೆ, ವಿಟಂ, ಚದುರೆಯ, ನುಡಿಗೇಳ್ದು, ನಗುತೆ, ಇಂತು, ಎಂದಂ. ... ... ... ... ... ... ॥೯೭॥

ಎಲೆರಂಭೆ ! ಕೇಳ್, ಈ, ಭೂತಳದೊಳ್, ಈತನೆ, ಕಂತು, ಎನುತ್ತೆ, ಸದ್ವಿಟರ್, ಸೂಳೆಯರ್, ಎಲ್ಲರುಂ, ಪದೆದು, ಬಣ್ಣಿಸೆ, ಅನಂಗಸತ್ಕಲಾಕೇಳಿಯೊಳ್- ಮದನವಿದ್ಯಾಕ್ರೀಡೆಯಿಂದ, ಬಾಳ್ದೆಂ; ಈಗಳ್, ಈ ದಿವಿಜಲೋಕದೊಳ್, ಏಳ್ಗೆಯಂ- ಪ್ರಸಿದ್ಧಿಯನ್ನು, ಆಳ್ದ, ನಿನ್ನೊಳ್, ಮೇಳಿಸಿ, ಕೂಡಿ, ಮಚ್ಚಿಸಿ, ಜಸಂಬಡೆದ, ಆಂ, ದ್ವಿಲೋಕದೊಳ್- ಭೂಸ್ವರ್ಗಗಳೆರಡರಲ್ಲೂ, ವಿಜಯಂ- ಜಯಶೀಲನು. ॥೯೮॥

ಗಣಿಕಾಮಣಿ- ಸೂಳೆಯರಲ್ಲಿ ಶ್ರೇಷ್ಠಳಾದವಳೇ ! ನಾಳೆ, ನಭೋಮಣಿಸುತನಿಂ- ಯಮನಿಂದ, ಬರ್ಪ, ನಿರಯಗಿರಯಮಂ-ನರಕಗಿರಕವನ್ನು, ಎಂತುಂ, ಗಣಿಪೆನೆ ? ನಗೆಯ, ಒಂದು ಅಣಕಮಂ, ಬಿಡುಬಿಡು; ಮೃಗನಯನೆ- ಜಿಂಕೆಯ ಕಣ್ಣಿನಂತಿರುವ ಕಣ್ಣುಳ್ಳವಳೇ ! ಇಂದು, ಒಲ್ದು, ಎನ್ನೊಳ್, ನೆರೆ- ಕೂಡು.

ಈಗಳ್, ಸ್ಮರಶಿಖಿ- ಮನ್ಮಥಾಗ್ನಿಯು, ಸುಟ್ಟಪುದು- ಸುಡುವದು, ನಾಳೆ, ನರಕಾಗ್ನಿಯೆ, ಬರ್ಕ್ಕಂ, ಎರಡರೊಳ್— ಈ ಕಾಮಾಗ್ನಿನರಕಾಗ್ನಿಗಳಲ್ಲಿ, ಇದು- ಈ ಕಾಮಾಗ್ನಿಯು, ದಲ್- ನಿಶ್ಚಯವಾಗಿ, ಪಿರಿದಲ್ತೆ- ಹೆಚ್ಚಾದುದಲ್ಲವೇ ? ಇದಂ, ನಿನ್ನ, ಕೊಂಕದೆ,ಪರಿಹರಿಪೆಂ; ಬಳಿಕ್ಕೆ- ಆಮೇಲೆ, ಬಂದುದಂ, ಅರಿವೆಂ.

ವಿಟಂ, ತರಳೇಕ್ಷಣೆ- ಚಂಚಲನೇತ್ರೆಯೆ ! ನರಕಾಗ್ನಿಗೆ, ಅಳ್ಕಿ- ಹೆದರಿ, ನಿನ್ನೊಳ್, ನೆರೆಯದೊಡೆ, ಈ ಕಾಮವಹ್ನಿ, ಸುಟ್ಟಪುದು; ಅದರಿಂದೆ, ಉರಿಯಲ್ಕೆ, ಆರೆಂ- ಸಮರ್ಥನಾಗಲಾರೆನು, ತಳ್ವದೆ- ತಪ್ಪದೆ, ನೆರೆದು- ಕೂಡಿ, ರಕ್ಷಿಸು, ಎನೆ, ಆಗಳ್. ... ... ... ... ॥೧೦೧॥

ಕಂ॥ ಇರುಳೆರಡುಜಾವ ವಿೂಗ । ಳ್ಸರಿದುದು ಬಳಿಕೆರಡುಜಾವ ಮಿದರೊಳ ಗೆನ್ನೊ ॥ ಳ್ನೆರೆದಿರ್ದು ನಾಳೆ ನೀಂ ಘನ । ನಿರಯದೊ ಳೆಲೆ ಬೀಳ್ವುದು ನಿರೀಕ್ಷಿಸಲಾರೆಂ॥ ॥೧೧೧॥

ಕಂ ॥ ಅಣುಮಾತ್ರ ಮಪಥ್ಯಮ ನುಂ । ಡಣಿಯರ ಮೆಲೆ ದೀರ್ಘರುಜೆಯ ನನುಭ ವಿಪವೊ ಲೀ॥ಕ್ಷಣಿಕಸುಖದನುಭವದ ಮೇ। ಲಣಚಿರನರಕಾನುಭವಮ ನಾಂಪುದೆ ಮರುಳೆ ॥

ಕಂ ॥ ಒಂದಲ ರರ್ಪಿತಮನೆ ನಿನ । ಗಿಂದುಧರು ಕೊಟ್ಟ ನೆನ್ನಸುರತಮ ನೀಗಳ್ ॥ ಕುಂದದೆ ನೀಂ ಭಜಿಸಿದೊಡೆ । ನ್ನಂದದ ಗಣಿಕಾಳಿ ನಿನ್ನ ತೊಳ್ತಾಗಿರರೆ॥ ॥೧೧೪॥

ವ ॥ ಅಂತುಮಲ್ಲದೆಯುಂ ॥ ಕಂ ॥ ಕಾಮಾಂತಕರಿಪು ವಲ್ಲದೆ । ಕಾಮಾಂತಕಭಯ ಮ ನಳಿಯಾ ಲಾಪ್ಪವರಾ ರು ॥ ದ್ದಾಮತಮಸ್ತೋಮಗಳಂ । ತಾಮರಸಾರಾತಿ ಯಲ್ಲದಾ ರ್ತೊಲಗಿಪರೊ ॥ ... .. ... ... ... ... ॥೧೧೫॥

ಕಂ ॥ ನಂಬೆನ್ನ ನುಡಿಯ ನೀಗ । ಳ್ಸಾಂಬನ ಮೆಲ್ಲಡಿಯ ನೊಲ್ದು ಪೂಜಿಸು ಪೆರ ತೇಂ ॥ ಬೆಂಬಿಡದೆ ನಿತ್ಯಘನಸೌ । ಖ್ಯಂಬಡೆವಂತೆಸೆಗಿ ನಿನ್ನ ಬಾಳ್ವ ನಭವಂ ॥ ॥೧೧೬॥

ವ ॥ ಎಂದು ಪಲವುಮದದಿ ನವನಂ ತಿಳುಪಿ ತಾ ನೆಂದುದ ನಪ್ಪುಗೆಯ್ಸಿ ರಂಭೆ ಸಂಭ್ರ ಮದಿ ನವನಂ ಭಸ್ಮರುದ್ರಾಕ್ಷಿಗಳಿ ನಲಂಕರಿಸಿ ಶಿವಮಂದಿರಮಂ ತೋರುತೊಳಪುಗಿಸ ಲೊಡನೆ ॥ * * * * * * * * * * * * * * * *

---

ಎಲೆ ! ಈಗಳ್, ಇರುಳ- ರಾತ್ರಿಯ, ಎರಡುಜಾವಂ, ಸರಿದುದು- ಕಳೆದುಹೋಯಿತು; ಬಳಿಕೆ, ಎರ ಡುಜಾವಂ; ಇದರೊಳಗೆ, ಎನ್ನೊಳ್, ನೀಂ, ನೆರೆದು, ಇರ್ದು, ನಾಳೆ, ಘನನಿರಯದೊಳ್- ದೊಡ್ಡನರಕದಲ್ಲಿ, ಬೀಳ್ವುದಂ, ನಿರೀಕ್ಷಿಸಲಾರೆಂ. ... ... ... ... ॥೧೧೧॥

ಎಲೆಮರುಳೆ- ಹುಚ್ಚನೇ ! ಅಪಥ್ಯಮಂ, ಅಣುಮಾತ್ರಂ, ಉಂಡು, ಅಣಿಯರಂ- ಅತ್ಯಂತವಾಗಿ, ದೀರ್ಘರುಜೆಯಂ- ಬಹುಕಾಲಿಕವಾದ ರೋಗವನ್ನು, ಅನುಭವಿಪವೊಲ್, ಈಕ್ಷಣಿಕಸುಖದ, ಅನುಭವದ, ಮೇಲಣ- ಮುಂದಾಗುವ, ಚಿರನರಕಾನುಭವಮಂ, ಆಂಪುದೆ ? ... ... ॥೧೧೩॥

ಒಂದುಅಲರ್- ಒಂದು ಹೂವು, ಅರ್ಪಿತಂ, ಎನೆ, ನಿನಗೆ, ಇಂದುಧರಂ, ಎನ್ನ, ಸುರತಮಂ, ಕೊ ಟ್ಟಂ; ಈಗಳ್, ಕುಂದದೆ, ನೀಂ, ಭಜಿಸಿದೊಡೆ, ಎನ್ನಂದದ, ಗಣಿಕಾಳಿ, ನಿನ್ನ, ತೊಳ್ತಾಗಿ- ದಾಸಿಯರಾಗಿ, ಇರರೆ ? ... ... ... ... ... ... ॥೧೧೪॥

ಕಾಮಾಂತಕಭಯಮಂ- ಮನ್ಮಥಯಮರುಗಳಿಂದುಂಟಾದಭೀತಿಯನ್ನು, ಅಳಿಯಲ್- ನಾಶಮಾಡು ವದಕ್ಕೆ, ಕಾಮಾಂತಕರಿಪು ಅಲ್ಲದೆ, ಮದನಯಮರುಗಳಿಗೆ ಶತ್ರುವಾದ ಶಿವನುಹೊರತು, ಆರ್ಪವರ್- ಸಮ ರ್ಥರು, ಆರ್ ? ತಾಮರಸಾರಾತಿ ಅಲ್ಲದೆ- ಚಂದ್ರನುಹೊರತು, ಉದ್ದಾಮತಮಸ್ತೋಮಗಳಂ- ಹೆಚ್ಚಾ ದ ಕತ್ತಲೆಯ ಗುಂಪುಗಳನ್ನು, ಆರ್ತೊಲಗಿಪರೊ ? ... ... ॥೧೧೫॥

ಎನ್ನ, ನುಡಿಯಂ, ಈಗಳ್, ನಂಬು, ಸಾಂಬನ, ಮೆಲ್ಲಡಿಯಂ- ಮೃದುವಾದ ಪಾದವನ್ನು, ಒಲ್ದು, ಪೂಜಿಸು, ಪೆರತೇಂ- ಮತ್ತೇನು ? ಬೆಂಬಿಡದೆ- ತಪ್ಪದೆ, ನಿತ್ಯಘನಸೌಖ್ಯಂಬಡೆವಂತೆ- ಶಾಶ್ವತವಾದ ಉ ತ್ಕೃಷ್ಟಸುಖವನ್ನು ಹೊಂದುವಹಾಗೆ, ಎಸಗು, ಅಭವಂ, ನಿನ್ನ, ಬಾಳ್ವಂ. ... ॥೧೧೬॥

ಎಂದು, ರಂಭೆ, ಪಲವಂದದಿಂ- ಅನೇಕರೀತಿಯಿಂದ, ಅವನಂ, ತಿಳುಪಿ- ಜ್ಞಾನೋದಯವನ್ನುಂಟು ಮಾಡಿ, ತಾಂ, ಎಂದುದಂ, ಅಪ್ಪುಗೆಯ್ಸಿ- ಸಮ್ಮತಿಸುವಂತೆಮಾಡಿ, ಸಂಭ್ರಮದಿಂ, ಅವನಂ, ಭಸ್ಮರುದ್ರಾ ಕ್ಷಿಗಳಿಂ, ಅಲಂಕರಿಸಿ, ಶಿವಮಂದಿರಮಂ, ತೋರುತೆ, ಒಳಪುಗಿಸಲ್, ಒಡನೆ. * * * * *

ಕಂ ರಂಭೆಯುಪದೇಶವಿರವನ । ವಂ ಭಾವಿಸಿ ನಿಜವಿಕಾರಮಂ ಬಿಸುಟಾಗಳ್ ॥ ಶಂ ಭುವನೆ ಭಜಿಸಿದಂ ಕೇಳ್ । ಕ್ಷ್ಮಾಭಿಸಿಯೊಳ್ ವಿಟವಿವೇಕ ಮಿಂತಿರವೇಡಾ ॥ ... ॥೧೦೩॥

ಕಂ॥ ತನ ಗಹಿತಕಾರ್ಯದೊಳ್ ರತಿ । ಜನಿಯಿಸೆ ಬಿಡಲ ರದುದು ಹಿತ ರೊರೆಗಳ ನೊಯ್ಯನೆ ಕೇಳ್ದು ಬಿಡಲ್ವೇಳ್ಕುಂ । ಮನ ವೊಲ್ದಲ್ಲದೊಡೆ ಹಾನಿ ಯಪ್ಪುದವೋಘಂ॥೧೦೪॥

ಮ॥ ಸ್ರ॥ ಸುರಗಂಗಾವಾರಿಯಿಂ ಭಾಸುರಸುರಕುಜಪುಷ್ಪೌಘದಿಂ ದಿವ್ಯಸೌರಭ್ಯಸೋದ್ಯದ್ಗಂಧದಿಂದಕ್ಷತೆಯಿ ನಧಿಕಧೂಪಂಗಳಿಂ ಸಾರದೀಪೋ ॥ ತ್ಕರದಿಂ ಸ್ವರ್ಧೇನುಭಾಸ್ವತ್ಸುಧೆವೆರಸುದ ನೈವೇದ್ಯದಿಂ ವೀಟಯಿಂ ಚಾ । ಮುಗಚಂಚಚ್ಛತ್ರಘಂಟಾದಿಗಳಿ ನಭವನಂ ಪೂಜಿಸುತ್ತಿರ್ದ ನಾಗಳ್ ॥ ... ... ... ... ೧೦೯

ವ ॥ ಅಂತು ಪೂಜಿಸುತಾಡಿಪಾಡಿ ಪರವೋತ್ಸವಂ ಮಿಗೆ ಪಂಚಾಕ್ಷರಿಜಪಸ್ತೋತ್ರ ಪಠನಪ್ರದಕ್ಷಿಣನಮಸ್ಕಾರಂಗಳೆಸಗುತ್ತ ಮಿರ್ಪಿನ ಮಾಗಳ್॥ * * * * *

ಕಂ ॥ ಪರೆಯೆ ವಿಟದುರಿತದೊಡ ನಾ । ನೆರೆದ ತಮಂ ಶ್ವೇತವದನದೊಡ ನಂಬುರುಹಂ ॥ ಕರ ಮಲರೆ ತನ್ಮನೋರಾ । ಗರಸಂ ನೆಗೆದಂತೆ ಸಂಜೆ ಯುದಯಿಸಿ ತಾಗಳ್ ॥೧೧೦॥

ಉ॥ಎನ್ನಮಗಂ ಮೃಕಂಡುಭವನಂ ಪಿಡಿ ದೊಯ್ಯಲಿಬಂದು ಭರ್ಗನಿಂ।ಬನ್ನಮ ನಾಂತ ನೆಂದು ಪಿಡಿಯ ಲ್ವಿಟಭಕ್ತನ ನಿಂದು ಬಂದವಂ ॥ ಪನ್ನಗಧಾರಿ ಕೊಲ್ಲದಿರ ನೀತನ ನೆಂದು ಜ

---

ಅವಂ, ರಂಭೆಯ, ಉಪದೇಶದ, ಇರವಂ, ಭಾವಿಸಿ, ಆಗಳ್, ನಿಜವಿಕಾರಮಂ- ತನ್ನ ಮನೋವಿಕೃತಿಯನ್ನು, ಬಿಸುಟು- ಬಿಟ್ಟು, ಶಂಭುವನೆ, ಭಜಿಸಿದಂ, ಕೇಳ್, ಕ್ಷ್ಮಾಭಿಸಿಯೊಳ್- ಭೂಮಿಯಲ್ಲಿ, ವಿಟವಿವೇಕಂ- ವಿಟನ ವಿಚಾರವು, ಇಂತು ಇರವೇಡಾ- ಹೀಗಿರಬೇಡವೇ ? ... ... ॥೧೦೩॥

ತನಗೆ, ಅಹಿತಕಾರ್ಯದೊಳ್- ಅನಿಷ್ಟಕಾರಿಕಾರ್ಯದಲ್ಲಿ, ರತಿ- ಆಸಕ್ತಿಯು, ಜನಿಯಿಸೆ, ಬಿಡಲಾರದುದು- ಬಿಡುವದಕ್ಕಾಗದೇ ಇದ್ದಕಾಲದಲ್ಲಿ, ಹಿತರ- ಆಪ್ತರ, ಒರೆಗಳಂ- ಮಾತುಗಳನ್ನು, ಒಯ್ಯನೆ, ಕೇಳ್ದು, ಮನಂ, ಒಲ್ದು, ಬಿಡಲ್ವೇಳ್ಕುಂ; ಅಲ್ಲದೊಡೆ, ಅವೋಘಂ- ವ್ಯರ್ಥವಾಗದ, ಹಾನಿ, ಅಪ್ಪುದು. ॥೧೦೪॥

ಆಗಳ್, ಸುರಗಂಗಾವಾರಿಯಿಂ, ಭಾಸುರಸುರಕುಜಪುಷ್ಪೌಘದಿಂ- ಪ್ರಕಾಶಿಸುವ ಕಲ್ಪವೃಕ್ಷದ ಹೂವುಗಳ ಗುಂಪಿನಿಂದ, ದಿವ್ಯಸೌರಭ್ಯಸೋದ್ಯದ್ಗಂಧದಿಂದೆ- ಶ್ರೇಷ್ಠವಾದ ಪರಿಮಳದಿಂದ ಕೂಡಿದ ಉತ್ಕೃಷ್ಟವಾದ ಗಂಧದಿಂದ, ಅಕ್ಷತೆಯಿಂ, ಅಧಿಕಧೂಪಂಗಳಿಂ, ಸಾರದೀಪೋತ್ಕರದಿಂ, ಸ್ವರ್ಧೇನುಭಾಸ್ವತ್ಸುಧೆವೆರಸಿದ- ಕಾಮಧೇನುವಿನ ಪ್ರಕಾಶಿಸುವ ಹಾಲಿನಿಂಕೂಡಿದ, ನೈವೇದ್ಯದಿಂ, ವೀಟಯಿಂ- ತಾಂಬೂಲದಿಂದ, ಚಾಮರಚಂಚಚ್ಛತ್ರಘಂಟಾದಿಗಳಿಂ, ಅಭವನಂ, ಪೂಜಿಸುತ್ತೆ, ಇರ್ದಂ. ... ... ॥೧೦೯॥

ಅಂತು, ಅವಂ, ಪೂಜಿಸುತೆ, ಆಡಿ, ಪಾಡಿ, ಪರವೋತ್ಸವಂ, ಮಿಗೆ, ಪಂಚಾಕ್ಷರಿ ಜಪಸ್ತೋತ್ರಪಠನ ಪ್ರದಕ್ಷಿಣನಮಸ್ಕಾರಂಗಳಿಂ ಗುತ್ತಂ, ಇರ್ಪಿನಂ, ಆಗಳ್. * * * * * * * * *

ಆಗಳ್, ವಿಟದುರಿತದೊಡನೆ ಆ ವಿಟನಾದ ಶ್ವೇತನಪಾಪದ ಸಂಗಡ, ಆನೆರೆದತಮಂ- ಆ ಕೂಡಿದ್ದ ಕತ್ತಲೆಯು, ಪರೆಯೆ- ನಾಶವಾಗಲು, ಶ್ವೇತವದನದೊಡನೆ, ಅಂಬುರುಹಂ, ಕರಂ, ಅತ್ಯಂತವಾಗಿ, ಅಲರೆ, ತನ್ಮನೋರಾಗರಸಂ- ಅವನ ಮನಸ್ಸಿನ ಪ್ರೀತಿಯು, ( ಆರುಣ್ಯವು ) ನೆಗೆದಂತೆ, ಸಂಜೆ, ಪ್ರಾತಸ್ಸಂಧ್ಯೆಯು, ಉದಯಿಸಿತು. ... ... ... ... ... ॥೧೧೦॥

ಅಂದು, ಎನ್ನ, ಮಗಂ, ಮೃಕಂಡುಭವನಂ- ಮಾರ್ಕಂಡೇಯನನ್ನು, ಪಿಡಿದು, ಒಯ್ಯಲಿಬಂದು- ತೆಗೆದುಕೊಂಡು ಹೋಗುವದಕ್ಕೋಸ್ಕರ ಬಂದು, ಭರ್ಗನಿಂ, ಬನ್ನಮಂ- ಕಷ್ಟವನ್ನು, ಆಂತಂ; ಇಂದು,

ಮಗೆ ಬುದ್ಧಿಯಂ। ಚೆನ್ನನೆ ಪೇಳ ಲೆಯ್ದಿದವ್ರೊ ಲಿಂದ್ರದಿಶಾದ್ರಿಯ ನರ್ಕ್ಕ ನೆಯ್ದಿದಂ॥೧೧೧॥

ವ ॥ ಆಸಮಯದೊ ಳ್ಜವಂ ಜವದಿ ನಾಶ್ವೇತನಂ ಪಿಡಿತರ್ಪುದೆಂದು ನಿಜದೂತರ್ಗ್ಗೆ ಬೆಸಸಲೊಡ ನವ ರ್ಬಂದು ರಂಭಾಲಲನೆಯಂ ಕಂಡಿಂದ್ರಭೋಗದೊ ಳಿರು ಳ್ನಿನ್ನೊಡ ನಿರ್ದ್ದಭು ಜಂಗ ನಾವೆಡೆಯೊ ಳಿರ್ದ್ದಪ ನರುಪೆಂಬುದು ಮವಳ ಗೃಹದಾಸಿ ಪೇಳ್ತಂದು ಲಿಂಗಾಲಯ ದೊ ಳಿರ್ದ್ದಪ ನೆಂದು ಪೇಳ್ವನ ಮಾಭಟರಾದೇಗುಲಕ್ಕೆ ಬಂದು ದೂರಾಂತರಾಳದೊಳ್ನಿಂದು॥

ಉ ॥ ಕಂಡ ರಖಂಡಖಂಡಪರಶುಸ್ಥಿರಭಕ್ತಿಸಮಗ್ರಭಾಗ್ಯನಂ। ಮಂಡಿತಭೂತಿಭಾಸುರಕಳೇವರನಂ ಗಿರಿಶಾಕ್ಷಮಾಲಿಕಾ॥ ಮಂಡನಮಂಜುಮಸ್ತಕಭುಜಾಂತರನಂ ಶಿವಮಂತ್ರಸತ್ಕಲಾ। ಪಂಡಿತನಂ ತಪೋಧನಪದಂಬಡೆದಾವಿಟನಂ ಮಹಾಭಟರ್ ॥ ... ॥೧೧೨॥

ವ ॥ ಅಂತು ಕಂಡು ಮೃಗೇಂದ್ರನಂ ಕಂಡ ಕಲಭಂಗಳಂತೆ ಮುಂದಣ್ಗಡಿಯಿಡ ಲಳ್ಕಿ ನಡನಡಂ ನಡುಗಿ ಪೆಡಂಮೆಟ್ಟಿ ಮಗುಳ್ದಿಯ್ತಂದಾಶ್ವೇತಮುನಿಯ ಪರಿಯ ನೆಲ್ಲಮಂ ನಿಜೇಶ್ವರ ನಾದ ದಂಡಪಾಣಿಗೆ ಬಿನ್ನವಿಸ ಲೊಡ ನವಂ ಕೇಳ್ದು ಕೋಪಾಟೋಪಮಂ ತಾಳ್ದು ಕಲ್ಪಾಂತಮೇಘದಂತೆ ಘುಡುಘುಡಿಸಿ ಘೂರ್ಮ್ಮಿಸಿ ತೊಡೆವ್ರೊಯ್ದು ಕರಾಳಕಾಲದಂಡಮ ನೆತ್ತಿ ಪಡಿದು ॥ * * * * * * * * * * * * * *

---

ವಿಪುಳಸ್ತನಂ, ಪಿಡಿಯಲ್, ಬಂದಪಂ, ಈತನಂ, ಪನ್ನಗಧಾರಿ- ಸರ್ಪವನ್ನು ಧರಿಸಿಕೊಂಡಿರುವ ಶಿವನು, ಕೊಲ್ಲವೆ, ಇರಂ; ಎಂದು, ಜವಂಗೆ- ಯಮನಿಗೆ, ಚೆನ್ನನೆ, ಬುದ್ಧಿಯಂ, ಪೇಳಲ್, ಎಯ್ದಿದವ್ರೊಲ್, ಅರ್ಕಂ- ಸೂರ್ಯನು, ಇಂದ್ರದಿಶಾದ್ರಿಯಂ, ಪೂರ್ವಾಚಲವನ್ನು, ಎಯ್ದಿದಂ. ... ... ॥೧೧೧॥

ಆ ಸಮಯದೊಳ್, ಜವಂ, ಜವದಿಂ- ಬೇಗನೆ, ಆಶ್ವೇತನಂ, ಪಿಡಿತರ್ಪುದು, ಎಂದು, ನಿಜದೂತರ್ಗ್ಗೆ, ಬೆಸಸಲ್, ಒಡನೆ, ಅವರ್, ಬಂದು, ರಂಭಾಲಲನೆಯಂ, ಕಂಡು, ಇಂದ್ರಬೋಗದೊಳ್, ಇರುಳ್- ರಾತ್ರಿಯಲ್ಲಿ, ನಿನ್ನೊಡನೆ, ಇರ್ಪ, ಭುಜಂಗಂ- ವಿಟನು, ಆವೆಡೆಯೊಳ್, ಇರ್ದ್ದಪಂ ? ಅರುಪು, ಎಂಬುದುಂ, ಅವಳ, ಗೃಹದಾಸಿ, ಏಳ್ತಂದು, ಲಿಂಗಾಲಯದೊಳ್, ಇರ್ದಪಂ, ಎಂದು, ಪೇಳ್ವನಂ- ಹೇಳುವಲ್ಲಿ, ಆ ಭಟರ್, ಆ ದೇಗುಲಕ್ಕೆ, ಬಂದು, ದೂರಾಂತರಾಳದೊಳ್, ನಿಂದು. * * * * * * * * * *

ಮಹಾಭಟರ್, ಅಖಂಡ......ಭಾಗ್ಯನಂ— ಅಖಂಡ- ಅವಿಚ್ಛಿನ್ನವಾದ, ಖಂಡಪರಶುಸ್ಥಿರಭಕ್ತಿ- ಈಶ್ವರವಿಷಯಕವಾದ ನಿಶ್ಚಂಚಲಭಕ್ತಿಯೆಂಬ, ಸಮಗ್ರ- ಸಂಪೂರ್ಣವಾದ, ಭಾಗ್ಯನಂ- ಐಶ್ವರ್ಯವುಳ್ಳ, ಮಂಡಿತಭೂತಿಭಾಸುರಕಳೇವರನಂ- ಅಲಂಕರಿಸಲ್ಪಟ್ಟ ವಿಭೂತಿಯಿಂದ ಪ್ರಕಾಶಿಸುವ ದೇಹವುಳ್ಳ, ಗಿರಿಶಾ... ತರನಂ—ಗಿರಿಶಾಕ್ಷಮಾಲಿಕಾ-ರುದ್ರಾಕ್ಷಿಯಸರದ, ಮಂಡನ- ಅಲಂಕಾರದಿಂದ, ಮಂಜು-ಮನೋಹರವಾದ, ಮಸ್ತಕ- ಶಿರಸ್ಸು, ಭುಜಾಂತರನಂ- ಎದೆ ಇವುಗಳುಳ್ಳ, ಶಿವಮಂತ್ರಸತ್ಕಲಾಪಂಡಿತನಂ- ಪಂಚಾಕ್ಷರೀಮಂತ್ರವಿದ್ಯೆಯಲ್ಲಿ ಕುಶಲನಾದ, ತಪೋಧನಪದಂಬಡೆದ-ಮಹಿಲಕ್ಷಣವಂಹೊಂದಿದ, ವಿಟನಂ, ಕಂಡರ್. ।೧೧೨॥

ಅಂತು, ಕಂಡು, ಮೃಗೇಂದ್ರನಂ- ಸಿಂಹವನ್ನು, ಕಂಡ, ಕಲಭಂಗಳಂತೆ-ಮದಗಜಗಳಹಾಗೆ, ಮುಂದಣ್ಗೆ- ಮುಂದಕ್ಕೆ, ಅಡಿಯಿಡಲ್-ಕಾಲನ್ನು ಹಾಕುವದಕ್ಕೆ, ಅಳ್ಕಿ- ಹೆದರಿ, ನಡನಡಂನಡುಗಿ, ಪೆಡಂಮೆಟ್ಟಿ- ಹಿಮ್ಮೆಟ್ಟಿ, ಮಗುಳ್ದು-ತಿರುಗಿ, ಎಯ್ತಂದು, ನಿಜೇಶ್ವರಂ, ಆದ, ದಂಡಪಾಣಿಗೆ-ಯಮನಿಗೆ, ಆಶ್ವೇತಮುನಿಯ, ಪರಿಯಂ, ಎಲ್ಲಮಂ, ಬಿನ್ನವಿಸಲ್, ಅವಂ, ಕೇಳ್ದು, ಒಡನೆ,ಕೋಪಾಟೋಪಮಂ,ತಾಳ್ದು,ಕಲ್ಪಾಂತಮೇಘದಂತೆ- ಪ್ರಳಯಕಾಲದಮೋಡದಹಾಗೆ, ಘುಡುಘುಡಿಸಿ-ಗರ್ಜಿಸಿ, ಘೂರ್ಮ್ಮಿಸಿ- ಹೂಂಕರಿಸಿ, ತೊಡೆವ್ರೊಯ್ದು-ತೊಡೆಯನ್ನುತಟ್ಟಿ, ಕರಾಳಕಾಲದಂಡಮಂ- ಕ್ರೂರವಾದ ಯಮದಂಡವನ್ನು, ಎತ್ತಿ, ಜಡಿದು.

ಮ ॥ ಸ್ರ ॥ ಕಡುಪಿಂದಂ ರುಛೆ ತಾಂ ಬೋಧಿಸೆ ಹರಭಜನೋಪಾಯದಿಂ ದೆನ್ನ ಗೆ
ಲ್ವಾ । ಗಡ ಪಾಪೌಘಪ್ರಬದ್ಧಂ ಮಝರೆ ಗೆಲದದೇಕಿರ್ಪ್ಪನಾಗೆಲ್ವಪಾಂಗಂ ॥ ನಡೆ ನೋ
ಳ್ಪಂ ತೋರ್ಪೆ ನೆನ್ನಾಯುಧದ ಸವಿಯ ನಾಧೂರ್ತ್ತನಂ ಕೊಲ್ವೆ ನೀಗ । ಳ್ಮೃಡನಡ್ಡಂ ಬಾ
ಯ್ದೊಡಂ ಮೇಣ್ಬಿಡೆ ನೆನುತಧಟಿಂ ಪೂಣ್ದನುತ್ತಾಕೃತಾಂತಂ ॥ ... ॥೧೧೩॥

ವ ॥ ಅಂತು ಪೂಣ್ದು ನೀಲಾಚಲಪ್ರತಿಮಕಾಲಮಹಿಷಾರೂಢನಾಗಿ ಕಾಲಂ ಭೀಕ
ರಾಕಾರಮಂ ತಾಳ್ದು ಸಿಡಿಲ ಪಡೆಗೆ ಪಡಿ ಯೆನಿಪ ನಿಜಭಟರ್ವ್ವೆರಸಿ ॥ * * * *

ಮತ್ತೇ ॥ ಕಡೆಗಣ್ಕೆಂಗಿಡಿಸೂಸೆ ಧೂಮಮಿಳಿತೋಚ್ಛ್ವಾಸಂ ಕರಂ ಪೊಣ್ಮೆ ಗಂ ।
ಟಿಡೆ ಪುರ್ಬ್ಬಂಬುದದಲ್ಲಿ ನೀಳ್ದ ಕುಡಿಮಿಂಚೆಂಬಂತೆ ಕೂರ್ದಾಡೆ ತೋ ॥ ರ್ಪಡೆ ಭೀಷಾಕೃತಿ
ವೆತ್ತು ಬರ್ಪಿನ ಮನಂಗಾರಾತಿ ತದ್ರೌದ್ರಮಂ । ಕಡುಪಿಂ ದೀಕ್ಷಿಸಿ ಶೂಲಮಂ ಜಡಿದು ಕಾ
ಯ್ಪಿಂ ದಿಟ್ಟ ನಾಟೋಪದಿಂ ॥ ... ... ... ... ॥೧೧೪॥

ಕಂ ॥ ಇಡೆಯಮನ ವಕ್ಷಮಂ ನ । ಟ್ಟೊಡ ನುಚ್ಚಳಿಸಿದುದು ಕೆಡೆದ ನಿಳೆ ಯದಿರೆ
ಜವಂ ॥ ಬಿಡುಗಣ್ಣ ರ್ನ್ನುತಿಗೆಯ್ದು । ರ್ನ್ನಡಗರದಿಂ ಶ್ವೇತ ನೀಶನಡಿ ಗೆರಗಿರ್ದ್ದಂ ॥೧೧೫॥

ವ ॥ ಅಂತೆರಗಿ ಸಾತ್ವಿಕಭಕ್ತಿಯಿಂ ಪೊಗಳ್ವ ವಿಜಶ್ವೇತನಂ ನೋಡಿ ಕಾರುಣ್ಯಮಂ

---

ಪಾಪೌಘಪ್ರಬದ್ಧಂ- ಪಾಪಗಳಗುಂಪಿನಿಂದ ಕಟ್ಟಲ್ಪಟ್ಟ ಶ್ವೇತನು, ರುಛೆ, ತಾಂ, ಬೋಧಿಸೆ, ಹರ
ಭಜನೋಪಾಯದಿಂದೆ- ಶಿವಧ್ಯಾನದಯುಕ್ತಿಯಿಂದ, ಕಡುಪಿಂದಂ- ಶೌರ್ಯದಿಂದ, ಎನ್ನ, ಗೆಲ್ವಂಗಡ- ಗೆಲುವವ
ನಲ್ಲವೇ ? ಮಝರೆ- ಶಹಬಾಸ್ ! ಗೆಲದೆ, ಅದೇಕಿರ್ಪ್ಪಂ- ಅದೇಕಿದ್ದಾನು ! ಆಗೆಲ್ವ, ಪಾಂಗಂ- ರೀತಿಯ
ನ್ನು, ನಡೆ, ನೋಳ್ಪಂ; ಎನ್ನ ಆಯುಧದ, ಸವಿಯಂ- ರುಚಿಯನ್ನು, ತೋರ್ಪೆಂ; ಈಗಳ್, ಆ ಧೂರ್ತನಂ,
ಕೊಲ್ವೆಂ; ಮೇಣ್- ಮತ್ತು, ಮೃಡಂ- ಶಿವನು, ಅಡ್ಡಂಬಾಯ್ದೊಡಂ- ಅಡ್ಡಲಾಗಿ ಬಂದರೂ, ಬಿಡೆಂ, ಎ
ನುತೆ, ಆ ಕೃತಾಂತಂ- ಆ ಯಮನು, ಅಂತು, ಪೂಣ್ದಂ- ಶಪಥವಂಮಾಡಿದನು. ... ॥೧೧೩॥

ಕಾಲಂ- ಯಮನು, ಅಂತು, ಪೂಣ್ದು, ನೀಲಾಚಲಪ್ರತಿಮಕಾಲಮಹಿಷಾರೂಢಂ- ನೀಲಗಿರಿಗೆ ಸ
ದೃಶವಾದ ಕರಿಯಕೋಣವನ್ನು ಹತ್ತಿದವನು, ಆಗ, ಭೀಕರಾಕಾರಮಂ, ತಾಳ್ದು, ಸಿಡಿಲ, ಪಡೆಗೆ- ಸೈನ್ಯ
ಕ್ಕೆ, ಪಡಿ- ಸಮಾನವು, ಎನಿಪ, ನಿಜಭಟರ್ವ್ವೆರಸಿ- ತನ್ನ ಆಳುಗಳೊಡನೆಕೂಡಿ. * * * * * *

ಕಡೆಗಣ್, ಕೆಂಗಿಡಿಸೂಸೆ- ಕೆಂಪಾದ ಕಿಡಿಗಳನ್ನು ಸುರಿಸುತ್ತಿರಲು, ಧೂಮಮಿಳಿತೋಚ್ಛ್ವಾಸಂ
ಹೊಗೆಯಿಂದಕೂಡಿದ ಉಸುರು, ಕರಂ, ಪೊಣ್ಮೆ- ಹೊರಕ್ಕೆ ಹೊರಡುತ್ತಿರಲು, ಪುರ್ಬ್ಬು, ಗಂಟಿಡೆ, ಅಂಬುದ
ದಲ್ಲಿ, ಮೋಡದಲ್ಲಿ, ನೀಳ್ದ - ಉದ್ದವಾದ, ಕುಡಿಮಿಂಚು- ಡೊಂಕಾದಮಿಂಚು, ಎಂಬಂತೆ, ಕೂರ್ದಾಡೆ- ತೀ
ಕ್ಷ್ಣವಾದಕೋರೆದಾಡೆಯು, ತೋರ್ಪಡೆ, ಭೀಷಾಕೃತಿವೆತ್ತು, ಬರ್ಪಿನಂ- ಬರುವಷ್ಟರಲ್ಲಿ, ಅನಂಗಾರಾತಿ-
ಶಿವನು, ತದ್ರೌದ್ರಮಂ- ಆ ಯಮನ ಭೀಕರತ್ವವನ್ನು, ಈಕ್ಷಿಸಿ, ಕಡುಪಿಂ- ಶೌರ್ಯದಿಂದ, ಶೂಲಮಂ, ಜ
ಡಿದು, ಕಾಯ್ಪಿಂದೆ- ಕೋಪದಿಂದ, ಆ ಟೋಪದಿಂ, ಇಟ್ಟಂ. ... ... ॥೧೧೪॥

ಇಡೆ, ಯಮನ, ವಕ್ಷಮಂ- ಎದೆಯನ್ನು, ನಟ್ಟು- ನಾಟಿ, ಒಡನೆ, ಉಚ್ಚಳಿಸಿದುದು- ಹೊರಕ್ಕೆ ಹೊ
ರಟಿತು; ಇಳೆ- ಭೂಮಿಯು, ಅದಿರೆ- ನಡುಗಲಾಗಿ, ಜವಂ- ಯಮನು, ಕೆಡೆದಂ- ಬಿದ್ದನು; ಬಿಡುಗಣ್ಣರ್-
ದೇವತೆಗಳು, ನುತಿಗೆಯ್ದರ್, ಶ್ವೇತಂ, ನಡಗರದಿಂ, ಈಶನ, ಅಡಿಗೆ, ಎರಗಿ, ಇರ್ದ್ದಂ. ॥೧೧೫॥

ಅಂತು, ಎರಗಿ, ಸಾತ್ವಿಕಭಕ್ತಿಯಿಂ- ರೋಮಾಂಚ ಕರಕಂಪನಾದಿಸಾತ್ವಿಕ ಗುಣಗಳಿಂಕೂಡಿದಭಕ್ತಿ
ಯಿಂದ, ಪೊಗಳ್ವ, ವಿಜಶ್ವೇತನಂ, ಶಿವಂ, ನೋಡಿ, ಕಾರುಣ್ಯಮಂ, ನೀಡಿ, ಗಣಪದಮಂ, ಇತ್ತು, ಮನ್ನಿ

ನೀಡಿ ಗಣಪದಮಂ ನಿತ್ತು ಮನ್ನಿಸಿ ವಿಬುಧ ರ್ಬಿನ್ನವಿಸೆ ಶಿವಂ ಜವಂಗೆ ಹರಣಮುಂ ಕರುಣಿಸಿ ಸಾರೆಗರೆದು ॥ * * * * * * * * * * * * * *

ಕಂ॥ ಇನಸುತ ಮಚ್ಚಿಹ್ನಧರರ । ಮನೆಯಂ ಮರೆ ದೋರ್ಕ್ಮೆಯುಂ ನಿರೀಕ್ಷಿಸದಿರ್ನಿ॥
ನ್ನನುಚರರೊಳಿಟಂ ಪೇಳ್ಪೋ । ಗೆನುತ, ಪ್ರಾಣಾಪಹರಣಪೂರ್ವಕ ಮಭವಂ ॥೧೧೬॥

ಕಂ ॥ ಕಟ್ಟಳೆ ಗೆಯ್ದವನಂ ನಿಜ । ಪಟ್ಟಣಕೊಲವಿಂದೆ ಕಳುಪಿ ಗಣಪತಿ ಸಹಿತಂ ॥
ನೆಟ್ಟನೆ ಕೈಲಾಸಾಚಲ । ಕಿಟ್ಟಣಿಸಿದ ಮುದದಿ ನೈದಿದಂ ಗಿರಿಜೇಶಂ ॥ ... ॥೧೧೭॥

ಕಂ ॥ ಸುರಗಣಿಕೆಯ ನುಡಿಗೇಳ್ದೀ । ಶ್ವರ ನೊಲವಂ ಪಡೆದು ಬಾಳ್ದ ನಾಶ್ವೇತಂ
ನುಂ ॥ ಪರಿಯದ ಹಿತೋಪದೇಶಮು । ನಿರದಾಲಿಸೆ ಕೊರತೆ ಬರ್ಪುದೇ ಗುರುಭಕ್ತ ॥೧೧೮॥

ಸ್ರ॥ ಇಂತೆಂದಾಥಾತ್ರಿಪಂಗಾಗಣಿಕೆ ಯೊರೆಯುತಂ ಶ್ವೇತವೃತ್ತಾಂತಮಂ ಮೇ।
ಣಿಂತಂ ಕೊಂಡಾಖ್ಯಾನಮುಂ ಪೇಳ್ದಪೆ ನೆನುತೆ ಸೆದೊಪ್ಪಿರ್ದ ಳೆಂದಿಂತು ಭಕ್ತ ॥ ಸ್ವಾಂತ
ಕ್ಕಿಂಬಾಗೆ ಪೇಳುತ್ತಸೆದ ನಮಲಕಲ್ಯಾಣಕಲ್ಪದ್ರುಮಂ ದು । ರ್ಧ್ವಾಂತಧ್ವಾಂತಪ್ರಚಂಡಪ್ರ
ಭ ನಭಿನವಸದ್ಭಕ್ತಿಸಾಂದ್ರಂ ವೃಷೇಂದ್ರಂ ॥ ... ... ... ॥೧೧೯॥

ಲಲಿತಪದವೃತ್ತಂ ॥ ಮಂದರಧರಾಧರ ಸುಮಂದಿರ ಮನೋಹರ ಮುಕುಂದ ಚತು

---

ಸಿ, ವಿಬುಧರ್- ದೇವತೆಗಳು, ಬಿನ್ನವಿಸೆ- ವಿಜ್ಞಾಪಿಸಿಕೊಳ್ಳಲು, ಜವಂಗೆ, ಹರಣಮುಂ- ಪ್ರಾಣವನ್ನು, ಕರುಣಿಸಿ, ಸಾರೆಗರೆದು- ಸಮೀಪಕ್ಕೆ ಕರೆದು. * * * * * * * * * * * * *

ಇನಸುತ- ಸೂರ್ಯಪುತ್ರನಾದ ಯಮನೇ ! ಮರೆದು, ಓರ್ಮೆಯುಂ, ಮಚ್ಚಿಹ್ನಧರರ- ಲಿಂಗವಿಭೂತಿ ಮೊದಲಾದ ನನ್ನ ಗುರುತುಗಳಂ ಧರಿಸಿರುವವರ, ಮನೆಯುಂ, ನಿರೀಕ್ಷಿಸದೆ, ಇರ್, ನಿನ್ನ, ಅನುಚರರೊಳ್- ಆಳುಗಳೊಡನೆ, ಇದು, ಪೇಳ್, ಪೋಗು, ಎನುತಂ, ಅಭವಂ, ಪ್ರಾಣಾಪಹರಣಪೂರ್ವಕಂ- ಪ್ರಾಣವನ್ನು ತೆಗೆದುಕೊಳ್ಳುವದಾಗಿ. ... ... ... ... ... ॥೧೧೬॥

ಕಟ್ಟಳೆಗೆಯ್ದು- ಕಟ್ಟನ್ನುಮಾಡಿ, ಅವನಂ, ನಿಜಪಟ್ಟಣಕೆ, ಒಲವಿಂದೆ, ಕಳುಪಿ, ಗಿರಿಜೇಶಂ, ಗಣತತಿಸಹಿತಂ- ಶಿವಗಣಂಗಳಗುಂಪಿನಿಂಕೂಡಿ, ಇಟ್ಟಣಿಸಿದ- ಸಾಂದ್ರವಾದ, ಮುದದಿಂ, ನೆಟ್ಟನೆ, ಕೈಲಾಸಾಚಲಕೆ, ಐದಿದಂ. ... ... ... ... ... ॥೧೧೭॥

ಗುರುಭಕ್ತ ! ಆಶ್ವೇತಂ, ಸುರಗಣಿಕೆಯ- ದೇವತೆಯರ ಸೂಳೆಯಾದ ರಂಭೆಯ, ನುಡಿಗೇಳ್ದು, ಈಶ್ವರನ, ಒಲವಂ, ಪಡೆದು, ಬಾಳ್ದಂ; ಇದರ್ದ- ಬಿಡದೆ, ಸುಂದರಿಯರ, ಹಿತೋಪದೇಶಮಂ, ಆಲಿಸೆ, ಕೊರತೆ, ಬರ್ಪುದೇ ? ... ... ... ... ... ॥೧೧೮॥

ಇಂತು, ಎಂದು, ಆಗಣಿಕೆ, ಆಧಾತ್ರಿಪಂಗೆ- ಆ ಗುರುಭಕ್ತರಾಜನಿಗೆ, ಶ್ವೇತವೃತ್ತಾಂತಮಂ, ಒರೆಯುತಂ, ಮೇಣ್, ಮುಂತೆ, ಒಂದು ಉಪಾಖ್ಯಾನಮುಂ- ಒಂದುಕತೆಯನ್ನು, ಪೇಳ್ವೆಂ, ಎನುತೆ, ಒಸೆದು, ಒಪ್ಪಿ, ಇರ್ದಳ್, ಎಂದು, ಅಮಲಕಲ್ಯಾಣಕಲ್ಪದ್ರುಮಂ- ದೋಷಶೂನ್ಯವಾದ ಕಲ್ಯಾಣಪಟ್ಟಣಕ್ಕೆ ಕಲ್ಪವೃಕ್ಷವಾದ, ದುರ್ಧ್ವಾಂತಧ್ವಾಂತಪ್ರಚಂಡಪ್ರಭಂ- ದುಷ್ಟರೆಂಬ ಕತ್ತಲೆಗೆ ಸೂರ್ಯನಾದ, ಅಭಿನವಸದ್ಭಕ್ತಿಸಾಂದ್ರಂ- ಹೊಸದಾದ ಒಳ್ಳೆಯ ಶಿವಭಕ್ತಿಯಿಂದ ಸಂಪೂರ್ಣನಾದ, ವೃಷೇಂದ್ರಂ, ಭಕ್ತಸ್ವಾಂತಕ್ಕೆ- ಭಕ್ತರುಗಳ ಮನಸ್ಸಿಗೆ, ಇಂಬು- ಮನೋಹರವು, ಆಗೆ, ಇಂತು, ಪೇಳುತೆ, ಎಸೆದಂ. ॥೧೧೯॥

ಮಂದರಧರಾಧರಸುಮಂದಿರ- ಮಂದರಪರ್ವತವೇ ಮನೆಯಾಗುಳ್ಳ, ಮನೋಹರ......ಪೂಜಿತ—
ಮನೋಹರ- ಮನೋಜ್ಞರಾದ, ಮುಕುಂದ- ವಿಷ್ಣು, ಚತುರಾನನ- ಬ್ರಹ್ಮ, ಪುರಂದರ- ದೇವೇಂದ್ರ, ಹುತಾಶ- ಅಗ್ನಿ, ಅಮಂದಯಮ- ಅಧಿಕನಾದ ಯಮ ಇವರುಗಳೇ ಮುಖ್ಯ- ಮೊದಲಾದ, ಸುರ- ದೇವತೆ

ರಾನನಪುರಂದರಹುತಾಶಾ । ಮಂದಮುಮುಮುಕ್ಷ್ಯಸುರವೃಂದಪರಿಪೂಜಿತ ಸನಂದಸನಕಾ ರ್ಚ್ಚಿತ ಸದಿಂದುಧರಭಕ್ತಾ ॥ ನಂದಕರ ಚಿದ್ರಸಮರಂದಮದಷಟ್ಪದ ಸುಕುಂದಹಿಮಹೀರ ಶಶಿಚಂದನಸಿತಾಂಗ । ಸ್ಕಂದನತ ಭಾಸ್ವದರ ವಿಂದಪದ ಪಾಲಿಪು ದನಿಂದಿತಕೃಪಾಸಲಿಲಕಂ ದ ಬಸವೇಶಾ ॥ ... ... ... ... ... ... ॥೧೨೦॥

ಛಂದೋವೃತ್ತಂ॥ ಪಾವನಾಂಗಿ ಪರಮೇಶ್ವರಪತ್ನಿ ಪಂಕಜಲೋಚನವಂದಿತೆ।ಭೂವಿ ಯುಚ್ಚರಸಮಂಚಿತಪಾದೆ ಭೂರಿಸುರಾಹಿತಭಂಜನೆ॥ ಜೀವಿತೇಶಮದವರ್ಧಿನಿ ಮಾನ್ಯೆಮಂ ಗಲಮಂಜುಲಭಾಷಿಣಿ । ದೇವಿ ದಿವ್ಯಗುಣಮಂಡನೆ ಯೆನ್ನಂ ಪಾಲಿಸು ಪರ್ವತನಂದನೆ ॥೧೨೧॥

ಗದ್ಯಂ ॥ ಇದುವಿನಮದಖಿಳಸುರಾಸುರೇಂದ್ರಮುಕುಟತಟಘಟಿತಮಣಿಗಣಾಗಣಿತರು ಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತಭಾಸುರ ಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀ ಮದ್ವೃಷಭೇಂದ್ರವಿಜಯಮಹಾಪುರಾಣದೊಳ್ಪ್ರೌಢಮತಿಕಥಿತಶ್ವೇತಕಥಾವೃತ್ತಾಂತಮ ಷ್ಟವಿಂಶತ್ಯಾಶ್ವಾಸಂಪರಿಸಮಾಪ್ತಂ ॥ ... ... ... ... *

ಅಷ್ಟವಿಂಶತ್ಯಾಶ್ವಾಸಂ ಸಂಪೂರ್ಣಂ.

---

ಗಳ, ವೃಂದ- ಗುಂಪಿನಿಂದ, ಪರಿಪೂಜಿತ, ಸನಂದಸನಕಾರ್ಚ್ಚಿತ- ಸನಂದಸನಕರ್ಷಿಗಳಿಂದ ಪೂಜಿಸಲ್ಪಟ್ಟ, ಸದಿಂದುಧರಭಕ್ತಾನಂದಕರ- ಶ್ರೇಷ್ಠರಾದ ಶಿವಭಕ್ತರಿಗೆ ಸಂತೋಷವನ್ನುಂಟುಮಾಡುವ, ಚಿದ್ರಸಮರಂ ದಮದಷಟ್ಪದ- ಜ್ಞಾನವೆಂಬ ಮಕರಂದಕ್ಕೆ ಮದಿಸಿದ ತುಂಬಿಯಾದ, ಸುಕುಂದ..... ಸಿತಾಂಗ— ಸುಕುಂ ದ-ಬಿಳ್ಳಿಯ ಮೊಲ್ಲೆಯಹೂವು, ಹಿಮ-ಪಚ್ಚಕರ್ಪೂರ, ಹೀರ- ವಜ್ರ, ಶಶಿ- ಚಂದ್ರ, ಚಂದನ-ಶ್ರೀಗಂಧ ಇವು ಗಳಂತೆ, ಸಿತ- ಶುಭ್ರವಾದ, ಅಂಗ- ದೇಹವುಳ್ಳ, ಸ್ಕಂದನತ- ಷಣ್ಮುಖನಿಂದ ನಮಸ್ಕರಿಸಲ್ಪಟ್ಟ, ಭಾಸ್ವದರ ವಿಂದಪದ- ಪ್ರಕಾಶಿಸುವಕಮಲ ದಂತಿರುವಚರಣವುಳ್ಳ, ಅನಿಂದಿತಕೃಪಾಸಲಿಲಕಂದ- ಅನಿಂದಿತ-ನಿರ್ದುಷ್ಟವಾ ದ, ಕೃಪಾ-ದಯೆಯೆಂಬ, ಸಲಿಲ-ನೀರುಳ್ಳ, ಕಂದ-ಮೇಘನಾದ, ಬಸವೇಶ ! ಪಾಲಿಪುದು. ... ॥೧೨೦॥

ಪಾವನಾಂಗಿ- ಪರಿಶುದ್ಧವಾದ ದೇಹವುಳ್ಳ, ಪರಮೇಶ್ವರಪತ್ನಿ, ಪಂಕಜಲೋಚನವಂದಿತೆ- ವಿಷ್ಣುವಿ ನಿಂದ ನಮಸ್ಕರಿಸಲ್ಪಟ್ಟ, ಭೂವಿಯಚ್ಚರಸಮಂಚಿತಪಾದೆ-ಮನುಷ್ಯರು ದೇವತೆಗಳಿಂದಪೂಜಿಸಲ್ಪಟ್ಟ ಪಾ ದವುಳ್ಳ, ಭೂರಿಸುರಾಹಿತಭಂಜನೆ- ಬಹಳರಾದ ರಾಕ್ಷಸರನ್ನು ನಾಶಮಾಡಿದ, ಜೀವಿತೇಶಮದವರ್ಧಿನಿ- ಪ್ರಾ ಣಕಾಂತನಿಗೆ ಸಂತೋಷವಂ ಹೆಚ್ಚಿಸುವ, ಮಾನ್ಯೆ- ಸನ್ಮಾನಗೊಳಿಸಲ್ಪಡುವದಕ್ಕೆ ಯೋಗ್ಯಳಾದ, ಮಂಗ ಲಮಂಜುಲಭಾಷಿಣಿ-ಶುಭಕರವಾಗಿ ಮನೋಹರವಾದ ಮಾತುಳ್ಳ, ದಿವ್ಯಗುಣಮಂಡನೆ- ಶ್ರೇಷ್ಠಗಳಾದ ಗು ಣಗಳೇ ಆಭರಣವಾಗುಳ್ಳ, ಪರ್ವತನಂದನೆ, ದೇವಿ ! ಎನ್ನಂ, ಪಾಲಿಸು. ... ... ॥೧೨೧॥

ಇಪ್ಪತ್ತೆಂಟನೆಯ ಆಶ್ವಾಸವು ಸಂಪೂರ್ಣವು.

# ಶ್ರೀಃ

ಭಸಿತಗೌರಾಯ ಪರಬ್ರಹ್ಮಣೇನಮಃ.

## ನವವಿಂಶತ್ಯಾಶ್ವಾಸಂ.

### ಗುರುಭಕ್ತಾಂಡಾರ್ಯಕಥನಂ.

ಕಂ॥ ಶ್ರೀಮಹಿತಹಿಮಗಿರೀಂದ್ರಸು। ತಾಮಧುರಿಮಸೂಕ್ತಿಪೂರ್ಣ್ಣಕರ್ಣ್ಣಂ ದಿವಿಜ॥
ಸ್ತೋತ್ರಮಲಲಾಮಮಂ ಸಕಲಕ। ಲಾಮಂದಿರ ನೀಗೆ ಸೌಖ್ಯಮಂ ಶಿವಲಿಂಗಂ॥ ... ॥೧॥

ಮತ್ತೇ॥ ವಿಪುಲೇಂದೂಪಲವಪ್ರ ಮಪ್ರತಿಮಹರ್ಮ್ಯಶ್ರೇಣಿ ಮಾಣಿಕ್ಯತುಂ। ಗಪತಾಕಾಳಿ ಸುವರ್ಣ್ಣಗೋಪುರಲಸಲ್ಲಿಂಗಾಲಯಾಲಂಕೃತಂ॥ ಸುಪಣಿಸ್ತ್ರೀಮಣಿಗೇಹಮಂಟಪಮನೋಜ್ಞಂ ಭಾರತೀಪೀಠನಾ। ಮಪುರಂ ಕಂಗೊಳಿಕುಂ ಸಮಸ್ತಜನತಾಸೌಭಾಗ್ಯಶೋಭಾಕರಂ॥ ... ... ... ... ... ... ॥೨॥

ಕಂ॥ ಆನಗರದೊಳೆಸೆದಿರ್ಪ್ಪಂ। ಭೂನುತಗುಣಶಾಲಿ ಶೂಲಿಪದಸೇವಕನ॥ ನ್ಯೂನ ರಸಸತ್ಕವಿತ್ವನಿ। ದಾನಂ ಮಲ್ಲಣನೆನಿಪ್ಪ ನೋರ್ವ್ವಂ ಜಸದೊಳ್॥ ... ॥೩॥

ಕಂ॥ ಸಕಲಕಲಾನಿಪುಣಂ ಬುಧ। ನಿಕರಸ್ತುತವಾಣಿ ಸಾರಸಂಪದನಿಲಯಂ॥ ಸು

---

ಶ್ರೀ......ಕರ್ಣ್ಣಂ— ಶ್ರೀ- ಷಡ್ಗುಣೈಶ್ವರ್ಯಗಳಿಂದ, ಮಹಿತ- ಪೂಜ್ಯಳಾದ, ಗಿರೀಂದ್ರಸುತಾ- ಪಾರ್ವತಿಯ, ಮಧುರಿಮಸೂಕ್ತಿ- ಇಂಪಿನಿಂಕೂಡಿದ ಮಾತಿನಿಂದ, ಪೂರ್ಣ್ಣ-ತುಂಬಲ್ಪಟ್ಟ, ಕರ್ಣ್ಣ - ಕಿವಿಯುಳ್ಳ, ದಿವಿಜಸ್ತೋತ್ರಮಲಲಾಮಂ- ದೇವತೆಗಳ ಗುಂಪಿನಲ್ಲಿ ಶ್ರೇಷ್ಠನಾದ, ಸಕಲಕಲಾಮಂದಿರಂ, ಶಿವಲಿಂಗಂ, ಸೌಖ್ಯಮಂ, ಈಗೆ. ... ... ... ... ... ॥೧॥

ವಿಪುಲೇಂದೂಪಲವಪ್ರಂ- ವಿಶಾಲವಾದ ಚಂದ್ರಕಾಂತಶಿಲೆಯ ಪ್ರಾಕಾರವುಳ್ಳ, ಮಾಣಿಕ್ಯತುಂಗಪತಾಕಾಳಿ- ರತ್ನದ ಉನ್ನತವಾದ ಧ್ವಜಗಳ ಸಾಲುಳ್ಳ, ಸುವರ್ಣಗೋಪುರಲಸಲ್ಲಿಂಗಾಲಯಾಲಂಕೃತಂ- ಚಿನ್ನದ ಗೋಪುರಗಳಿಂದ ಪ್ರಕಾಶಿಸುವ ಶಿವದೇವಸ್ಥಾನಗಳಿಂದಲಂಕರಿಸಲ್ಪಟ್ಟ, ಸುಪಣಿಸ್ತ್ರೀಮಣಿಗೇಹಮಂಟಪಮನೋಜ್ಞಂ- ಒಳ್ಳೆಯ ಸೂಳೆಯರ ಮನೆಗಳಿಂದ ಮನೋಹರವಾದ, ಸಮಸ್ತಜನತಾಸೌಭಾಗ್ಯಶೋಭಾಕರಂ- ಸಕಲ ಜನಸಮುದಾಯದ ಐಶ್ವರ್ಯ ಕಾಂತಿಗಳಿಗಾಶ್ರಯವಾದ, ಭಾರತೀಪೀಠನಾಮಪುರಂ, ಕಂಗೊಳಿಕುಂ. ... ... ... ... ... ... ॥೨॥

ಆನಗರದೊಳ್, ಭೂನುತಗುಣಶಾಲಿ, ಶೂಲಿಪದಸೇವಕಂ, ಅನ್ಯೂನರಸಸತ್ಕವಿತ್ವನಿದಾನಂ- ಕಡಮೆಯಾಗದ ಶೃಂಗಾರಾದಿರಸವಿಶಿಷ್ಟವಾದ ಒಳ್ಳೆಯ ಕವಿತ್ವಕ್ಕೆ ಆದಿಕಾರಣನಾದ, ಮಲ್ಲಣಂ, ಎನಿಪ್ಪಂ, ಓರ್ವ್ವಂ, ಜಸದೊಳ್- ಕೀರ್ತಿಯಿಂದ, ಎಸೆದು, ಇರ್ಪ್ಪಂ. ... ... ... ॥೩॥

ಸಕಲಕಲಾನಿಪುಣಂ- ಸಮಸ್ತ ವಿದ್ಯೆಗಳಲ್ಲೂ ಕುಶಲನಾದ, ಬುಧನಿಕರಸ್ತುತವಾಣಿ- ವಿದ್ವಾಂಸರ ಗುಂಪಿನಿಂದ ಸ್ತೋತ್ರಮಾಡಲ್ಪಟ್ಟ ಮಾತುಳ್ಳ, ಸಾರಸಂಪದನಿಲಯಂ- ಶ್ರೇಷ್ಠವಾದ ಸಂಪತ್ತುಗಳಿಗಾಶ್ರ

ಕವಿಶಿರೋಮಣಿ ವಿಲಸಿತ । ಮಕರಧ್ವಜರೂಪ ನೀಶ್ವರಪ್ರಿಯಭಕ್ತಂ ॥ ... ॥೪॥

ಕಂ॥ ಗುಣನಿಧಿ ಯಾತಂಗೊರ್ವ್ವ । ಳ್ಗಣಿಕಾಂಗನೆ ಕೂರ್ತು ರಂಜಿಪಳ್ಯುವತಿಶಿರೋ॥
ಮಣಿಸೊಬಗಿನಕಣಿ ಸಲೆ ಮ । ಲ್ಲಣಿ ಯೆಂಬ ಳ್ಮರ್ತ್ಯರಂಭೆ ಯಿವಳೆಂಬಿನೆಗಂ ॥ ॥೫॥

ಮ॥ ಸ್ರ॥ ಸ್ತನಯುಗ್ಮಂ ಪದ್ಮಕೋಶಂ ನಗೆಮೊಗ ಮಲರ್ದಂಭೋಜ ಮಂಭಶ್ಚರಂ
ಲೋ । ಚನ ಮುದ್ಯದ್ವೀಚಿಚಂಚತ್ತ್ರಿವಳಿ ಸುಳಿ ಲಸನ್ನಾಭಿ ಲಾವಣ್ಯಮೇ ವಾ ॥ ರಿ ನಿ
ತಂಬಂ ಸೈಕತಂ ಕುಂತಳ ವ ಳಿಕುಳ ಮಿಂಬಾಗೆ ಕಣ್ಗೊಪ್ಪಿಪ ಳ್ಕಾ । ಮಿನಿ ಕಾಸಾರಂಬೊ
ಲಾಡುತ್ತಿರೆ ಸುಕವಿವರಂ ಮಲ್ಲಣಂ ತನ್ನೊಳಾಗಳ್ ॥ ... ... ॥೬॥

ಕಂ ॥ ಮರಕತಕಂಕಣರುಚಿಭಾ । ಸುರತರನೇತ್ರತ್ರಿಭಾಗರುಚಿ ತನುರುಚಿ ಯಾ ॥
ವರಿಸಿರೆ ಕಾಂತೆಯ ಮುಂಗೈ । ಯರಗಿಳಿ ಯದು ಪಂಚವರ್ಣ್ಣಶುಕ ನೆನೆ ತೋರ್ಕ್ಕುಂ ॥೭॥

ವ ॥ ಅಂತೆಸೆವಗಣ್ಯಲಾವಣ್ಯತಾರುಣ್ಯನೈಪುಣ್ಯವತಿ ಯೆನಿಪ ಮಲ್ಲಣಿಯು ಮಾವಿ
ಟತಿಲಕ ನೆನಿಪ ಮಲ್ಲಣನುಂ ಸಮಾನುರಾಗದಿ ನಸಮಶರಸಂಭೋಗಸಮಸುಖಸಮಾಶ್ರಿತ
ರಾಗಿರ್ಪನ್ನ ಮಾಮಲ್ಲಣಿಯ ಜನನಿ ॥

ಕಂ ॥ ಅತಿಚಂಚಲೆ ಯತಿನಿಸ್ಠುರೆ । ಯತಿಕಪಟೋಪಾಯನಿಪುಣೆ ಯತಿಲೋಭಸ

---

ಯನಾದ, ಸುಕವಿಶಿರೋಮಣಿ- ಸತ್ಕವಿಶ್ರೇಷ್ಠನಾದ, ವಿಲಸಿತಮಕರಧ್ವಜರೂಪಂ- ಪ್ರಕಾಶಿಸುವ ಮನ್ಮ
ಥಾಕಾರನಾದ, ಈಶ್ವರಪ್ರಿಯಭಕ್ತಂ. ... ... ... ... ॥೪॥

ಗುಣನಿಧಿ- ಸದ್ಗುಣಗಳಿಗೆ ನಿಕ್ಷೇಪನಾದ, ಆತಂಗೆ, ಯುವತಿಶಿರೋಮಣಿ- ಸ್ತ್ರೀಶ್ರೇಷ್ಠಳಾದ, ಸೊಬಗಿನ- ಸೊಗಸಿನ, ಕಣಿ- ಖನಿಯಾದ, ಮಲ್ಲಣಿ, ಎಂಬಳ್, ಒರ್ವಳ್, ಗಣಿಕಾಂಗನೆ- ಸೂಳೆಯು, ಇವಳ್, ಮರ್ತ್ಯರಂಭೆ- ಭೂಲೋಕದಲ್ಲಿರುವ ರಂಭೆಯು, ಎಂಬಿನೆಗಂ- ಎಂಬುವಹಾಗೆ, ಕೂರ್ತು, ರಂಜಿಪಳ್.

ಸ್ತನಯುಗ್ಮಂ, ಪದ್ಮಕೋಶಂ- ಕಮಲದಮೊಗ್ಗು, ನಗೆಮೊಗಂ, ಅಲರ್ದ, ಅಂಭೋಜಂ, ಲೋಚನಂ- ಕಣ್ಣು, ಅಂಭಶ್ಚರಂ- ಮೀನು, ಚಂಚತ್ತ್ರಿವಳಿ- ಪ್ರಕಾಶಿಸುವ ಹೊಟ್ಟೆಯಕಡಿಯು, ಉದ್ಯದ್ವೀಚಿ- ಅಧಿಕವಾದ ತೆರೆ, ಲಸನ್ನಾಭಿ ಪ್ರಕಾಶಿಸುವ ಹೊಕ್ಕುಳು, ಸುಳಿ, ಲಾವಣ್ಯಮೇ-ಕಾಂತಿವಿಶೇಷವೇ, ವಾರಿ, ನಿತಂಬಂ- ಕಟಿಪಶ್ಚಾದ್ಭಾಗವು, ಸೈಕತಂ- ಮಳಲ ಗುಡ್ಡೆ, ಕುಂತಳಂ- ಕೇಶವು, ಅಳಿಕುಳಂ- ತುಂಬಿಗಳಗುಂಪು, ಸುಕವಿವರಂ- ಕವಿಶ್ರೇಷ್ಠನಾದ, ಮಲ್ಲಣಂ (ಒಳ್ಳೆಯ ನೀರುಹಕ್ಕಿಗಳಲ್ಲಿ ಶ್ರೇಷ್ಠವಾದ ಹಂಸಪಕ್ಷಿಯು) ತನ್ನೊಳ್, ಆಡುತ್ತ- ಕ್ರೀಡಿಸುತ್ತ, ಇರೆ, ಆ ಕಾಮಿನಿ, ಆಗಳ್, ಕಾಸಾರಂಬೊಲ್- ಕೊಳದಹಾಗೆ, ಕಣ್ಗೆ, ಒಪ್ಪಿದಳ್. ... ... ... ... .. ॥೬॥

ಮರಕತಕಂಕಣರುಚಿ- ಪಚ್ಚೆಯ ಕಡಗದ ಕಾಂತಿಯು, ಭಾಸುರತರನೇತ್ರತ್ರಿಭಾಗರುಚಿ- ಪ್ರಕಾಶಿಸುವ ಕಣ್ಣಿನ ಆದ್ಯಂತಮಧ್ಯಗಳ ಬಿಳುಪು ಕೆಂಪು ಕಪ್ಪು ಬಣ್ಣವು, ತನುರುಚಿ- ದೇಹದ ಹೊಂಬಣ್ಣವು, ಆವರಿಸಿ, ಇರೆ, ಕಾಂತೆಯ, ಮುಂಗಯ್ಯ, ಅದು, ಅರಗಿಳಿ, ಪಂಚವರ್ಣಶುಕಂ, ಎನೆ, ತೋರ್ಕ್ಕುಂ. ॥೭॥

ಅಂತು, ಎಸೆವ, ಅಗಣ್ಯಲಾವಣ್ಯ ತಾರುಣ್ಯನೈಪುಣ್ಯವತಿ- ಎಣಿಸುವದಕ್ಕಾಗದ ಕಾಂತಿವಿಶೇಷಯೌವನ ಕುಶಲತ್ವಗಳುಳ್ಳವಳು, ಎನಿಪ, ಮಲ್ಲಣಿಯುಂ, ಆವಿಟತಿಲಕಂ, ಎನಿಪ, ಮಲ್ಲಣನುಂ, ಸಮಾನುರಾಗದಿಂ, ಅಸಮಶರಸಂಭೋಗಸಮಸುಖಸಮಾಶ್ರಿತರ್- ಮದನ ಸಂಭೋಗದಲ್ಲಿ ಸಮರತಿಯಿಂದುಂಟಾದ ಸುಖಮಂ ಹೊಂದಿದವರು, ಆಗಿ, ಇರ್ಪನ್ನಂ- ಇರುವಲ್ಲಿ, ಆ ಮಲ್ಲಣಿಯ, ಜನನಿ. * * * * * *

ಅತಿಚಂಚಲೆ, ಅತಿನಿಷ್ಠುರೆ- ಬಹುಕಠಿಣಹೃದಯಳು, ಅತಿಕಪಟೋಪಾಯನಿಪುಣೆ- ಬಹುಕೃತ್ರಿಮ

ಮ ॥ ನ್ವಿತೆ ಯತಿಕುಟಿಲವಚೋರಂ । ಜಿತೆ ಯತಿಶಯಧೂರ್ತೆಯೆ ನಿಸಿ ಕರಂ ನೂಸೆದಿರ್ದಳ್ ॥

ಮ ॥ ಸ್ರ ॥ ಪೊಸನಾರಂ ಕಲ್ಲೊಳ್ ಎತ್ತಲ್ ತಿರಿಯ ಲರಲ ನಾಕಾಶದೊಳ್ ಗಾಳಿಯಂ ಬಂ । ಡಿಸಲಂಗಚ್ಛಾಯೆಯಂ ಲಂಘಿಸ ಲಹಿಪದಮಂ ಲೆಕ್ಕಿಸಲ್ ವ್ಯೋಮಮುಮಂ ಬಾ । ರ್ಚಿಸ ಲೀಂಟಲ್ ಜ್ಯೋನ್ನಮುಮಂ ನುಣ್ಮಳಲ ಹರವಿಯೊಳ್ ಮಂಜುನೀರ್ದುಂಬಲಾ । ಡಿಸ ಲುದ್ಯನ್ಮೇರುಮಂ ವಾರ್ಧಿಲೆಗಳ ಸರಮುಂ ಮಾಡ ಲಾಬರ್ದೆ ಬಲ್ಲಳ್ ॥ ... ... ॥೯॥

ವ॥ ಅವೃದ್ಧವೇಶ್ಯೆ ನಿಜತನುಜೆ ಮಚ್ಚಿರ್ದತ್ತಿಮಲ್ಲಣ ನೀವ ಧನದ ಪೆರ್ಚುಗೆ ಕೆಲವಾನುಂ ದಿವಸದೊಳ್ ತವಿಲ್ ಗೆ ನೋಡಿ ಸ್ವೈರಿಸಲಾರ ದರ್ಥಾತುರತೆಯಿಂ ಅಳಲ್ದು ಮಲ್ಲಣ ನಿದಿರ್ಗೆ ವಂದು ನುಡು ॥ * * * * * * * * * * * * * *

ಕಂ॥ ಸ್ಫುರಿತಾಧರಂ ಪ್ರಕಂಪಿತ । ಕರಯುಗಲಂ ಭ್ರುಕುಟಿಕೋಪವಿಕೃತಿವಿಶೇಷಾಂ ॥ ಕುರವದನ ಘರ್ಘರರವ । ಮಿರದಮರ್ದುರೆ ಬರ್ದೆ ಮುಳಿಸಿನಿಂ ಪೇಳ್ದಳ್ ॥ ... ॥೧೦॥

ಕಂ ॥ ಭಲರೆ ವಿಟರಾಜ ಕವಿಕುಲ । ತಿಲಕ ವದಾನ್ಯರ್ಕ ಳಾರ್ ನಿನ್ನವೊಲೆ ಧರಾ ॥ ವಲಯದೊಳೆ ನಿನ್ನ ಮಚ್ಚಿದ । ಲಲನೆಗೆ ನೀ ನಮರಭೂರುಹಂ ಕುಡುವೆಡೆಯೊಳ್ ॥ ॥೧೧॥

---

ಯುಕ್ತಿಗಳಲ್ಲಿಕುಶಲಳು, ಅತಿಲೋಭಸಮನ್ವಿತೆ- ಬಹಳಆಸೆಯಿಂದ ಕೂಡಿದವಳು, ಅತಿಕುಟಿಲವಚೋರಂಜಿತೆ- ಬಹಳವಕ್ರೋಕ್ತಿಗಳಿಂದ ಪ್ರಕಾಶಿಸುವಳು, ಅತಿಶಯಧೂರ್ತೆ- ಬಹಳಮೋಸವಯು, ಎನಿಸಿ, ಕರಂ, ಎಸೆದು. ಇರ್ದಳ್. ... ... ... ... ॥೮॥

ಆಬರ್ದೆ- ಆಮುದುಕಿಯು, ಕಲ್ಲೊಳ್, ಪೊಸನಾರಂ- ಹೊಸತಂತುವನ್ನು, ಎತ್ತಲ್- ತೆಗೆಯುವದಕ್ಕೆ, ಆಕಾಶದೊಳ್, ಅರಲಂ ಹೂವನ್ನು ತಿರಿಯಲ್-ಎತ್ತುವದಕ್ಕೆ, ಗಾಳಿಯಂ, ಬಂಡಿಸಲ್-ಕತ್ತರಿಸುವದಕ್ಕೆ, ಅಂಗಚ್ಛಾಯೆಯುಮಂ- ತನ್ನದೇಹದ ನೆಳಲನ್ನು, ಲಂಘಿಸಲ್-ದಾಟುವದಕ್ಕೆ, ಅಹಿಪದಮಂ-ಹಾವಿನ ಕಾಲನ್ನು, ಲೆಕ್ಕಿಸಲ್- ಎಣಿಸುವದಕ್ಕೆ, ವ್ಯೋಮಮುಮಂ, ಬಾರ್ಚಿಸಲ್- ಬಾಚುವದಕ್ಕೆ, ಜ್ಯೋನ್ನಮುಮಂ ಬೆಳ್ದಿಂಗಳನ್ನು, ಈಂಟಲ್- ಕುಡಿಯುವದಕ್ಕೆ, ನುಣ್ಮಳಲ, ಹರವಿಯೊಳ್- ಮಡಕೆಯಲ್ಲಿ, ಮಂಜುನೀರ್ದುಂಬಲ್- ಮಂಜಿನ ನೀರನ್ನು ತುಂಬುವದಕ್ಕೆ, ಉದ್ಯನ್ಮೇರುಮಂ- ದೊಡ್ಡ ಮೇರುಪರ್ವತವನ್ನು, ಅಲ್ಲಾಡಿಸಲ್, ವಾರ್ಧಿಲೆಗಳ- ಅಳಿಕಲ್ಲಿನ, ಸರಮುಂ, ಮಾಡಲ್, ಬಲ್ಲಳ್. ... ... ... ॥೯॥

ಆವೃದ್ಧವೇಶ್ಯೆ, ನಿಜತನೂಜೆ- ತನ್ನ ಮಗಳು, ಮಚ್ಚಿ, ಇರ್ದ, ಮಲ್ಲಣಂ, ಈವ- ಕೊಡುವ, ಧನದ, ಪೆರ್ಚುಗೆ- ಅತಿಶಯವು, ಕೆಲವಾನುಂದಿವಸದೊಳ್, ತವಿಲ್- ಕಡಮೆಯು, ಆಗೆ, ನೋಡಿ, ಸ್ವೈರಿಸಲಾರದೆ, ಅರ್ಥಾತುರತೆಯಿಂದೆ- ಹಣದ ಆಸೆಯಿಂದ, ಅಳಲ್ದು- ದುಃಖಪಟ್ಟು, ಮಲ್ಲಣನ, ಇದಿರ್ಗೆವಂದು-ಮುಂಗಡೆಗೆ ಬಂದು, ನುಡಿದು. * * * * * * * * * * * * * * *

ಸ್ಫುರಿತಾಧರಂ- ಹಾರುತ್ತಿರುವ ತುಟಿಯು, ಪ್ರಕಂಪಿತಕರಯುಗಲಂ- ನಡುಗುತ್ತಿರುವ ಕೈಗಳು, ಭ್ರುಕುಟಿ- ಹುಬ್ಬಗಂಟು, ಕೋಪವಿಕೃತಿವಿಶೇಷಾಂಕುರವದನಂ- ಕೋಪದಿಂದುಂಟಾದ ಒಂದು ವಿಧವಾದ ವಿಕಾರದ ಮೊಳಕೆಯಿಂ ಕೂಡಿದ ಮುಖವು, ಘರ್ಘರರವಂ- ಗರಗರವೆಂಬ ಶಬ್ದವು, ಅಮರ್ದುರೆ, ಇಗೆ, ಬರ್ದೆ- ಮುದುಕಿಯು, ಮುಳಿಸಿನಿಂದೆ, ಇಂತು, ಎಂದಳ್. ... ... ... ॥೧೦॥

ಕವಿಕುಲತಿಲಕ, ವಿಟರಾಜ ! ಭಲರೆ !! ಧರಾವಲಯದೊಳೆ- ಭೂಮಂಡಲದಲ್ಲಿ, ನಿನ್ನವೊಲೆ, ವದಾನ್ಯರ್ಕಳ್- ದಾನಶಾಲಿಗಳು, ಆರೊ ! ನಿನ್ನ, ಮಚ್ಚಿದ, ಲಲನೆಗೆ, ಕುಡುವ, ಎಡೆಯೊಳ್, ನೀಂ, ಅಮರಭೂರುಹಂ- ಕಲ್ಪವೃಕ್ಷನು. ... ... ... ... ॥೧೧॥

ಚ ॥ ಎಣಿಕೆ ಗಳುಂಬವಾದ ವಿಟರೀ ನೆಲೊಳಲೊಳ್ನೆಲಸಿರ್ಕು ಮಾವಗಂ । ಪ್ರಣುತ ವದಾನ್ಯರಂತವರ ನೊಲ್ಲದೆ ಮತ್ತನುಜಾತೆ ನಿನ್ನನೇ ॥ ಗುಣಕರಿಗೊಂಡುಮಚ್ಚಿದ ಳವ ಳ್ಗೆಲೆ ನೀಂ ಪಣವೀಯದೋವೊ ಮ । ಲ್ಲಣ ಬರಿದಿಂತು ಚಾಳಿಪುದು ಸದ್ವಿಟರೀತಿಯೊ ಲುಬ್ಧನೀತಿಯೊ ॥ ... ... ... ... ... ॥೧೦॥

ಕಂ ॥ ಚಲಿವೆಣ್ಗೆ ನಿಚ್ಚಮುಂ ಮ । ಯ್ವೆಲೆಯೀಯದೆ ಟಕ್ಕುದೋರಿ ನೆರೆವ ಭುಜಂಗ ॥ ಸಲೆ ಯವಳ ಜೀವಸವನನ । ನೆಲೆ ಪೀರ್ವ ಭುಜಂಗನಲ್ತೆ ಧರಣೀತಳದೊಳ್ ॥೧೩॥

ಚ. ॥ ಸವಿನಗೆಯಿಂದೆ ಮೆಲ್ನುಡಿಯಬಿನ್ನಣದಿಂ ತನುಸೋಂಕಿನಿಂದೆ ಸ । ತ್ಕವಿತೆಯ ಜಾಣ್ಮೆಯಿಂ ಬಗೆಗೆ ಸೋಲಮನುರ್ವಿಸಿ ಗಾಡಿಯಿಂ ಮನೋ ॥ ಭವಮದಮಂ ನಿಮಿರ್ಚಿ ಪೊಸಲಜ್ಜೆಯ ನಿಕ್ಕಿ ಪೊದಳ್ದು ಕೂಡಿ ನೀಂ । ಕುವರಿಯ ನಿಂತು ಮಚ್ಚಿಸಿ ಮರುಳ್ಚಿ ಧನಂ ಗುಡದಿರ್ಪುದೊಪ್ಪಮೆ ॥ ... ... ... ... ॥೧೪॥

ಕಂ॥ ಪಡೆದುಣ್ಬಪೆಣ್ಣ ನಕ್ಕಟ । ಬಿಡದಿಂತು ಮರುಳ್ಚಿ ಮನೆಯ ಬೀಯಕೆ ಧನ ಮಂ ॥ ಕುಡಲೊಲ್ಲದಿಂತು ಚಾಳಿಪ । ಬೆಡಂಗ ನಿದ ನೆಲ್ಲಿಕಲ್ತೆ ಪೇಳ್ವಿಟತಿಲಕ ॥೧೫॥

ಉ॥ ನಿನ್ನ ವಿಭುತ್ವಮೆನ್ನ ಮನೆಗಪ್ಪುದೆ ಪೆರ್ಚಿದ ಧಾನ್ಯರಾಶಿ ಪೇಳ್ । ನಿನ್ನ ಕವಿತ್ವ ಮೆನ್ನ ಸುತೆಗಪ್ಪುದೆ ಕಾಂಚನರತ್ನಭೂಷಣಂ ॥ ನಿನ್ನ ನಯೋಕ್ತಿ ಯೆನ್ನನಿಳಯವ್ಯಯಕಪ್ಪುದೆ ವಿತ್ತಪುಂಜ ಮೀ । ನಿನ್ನಸುಭಕ್ತಿಯೆಳ್ತರ ಮಿದೇನೆನಗಪ್ಪುದೆ ಸದ್ಗತಿಪ್ರದಂ ॥

---

ಈಪೊಳಲೊಳ್- ಈ ಪಟ್ಟಣದಲ್ಲಿ, ಪ್ರಣುತವದಾನ್ಯರ್- ಶ್ಲಾಘ್ಯವಾದ ದಾನಗುಣವುಳ್ಳ, ಎಣಿಕೆಗೆ, ಅಳುಂಬಂ- ಅತಿಶಯವು, ಆದ, ವಿಟರ್, ಆವಗಂ- ಯಾವಾಗಲೂ, ನೆಲಸಿ, ಇರ್ಕುಂ, ಮತ್ತನುಜಾತೆ- ನನ್ನ ಮಗಳು, ಅಂತವರಂ, ಒಲ್ಲದೆ, ನಿನ್ನನೇ, ಗುಣಕರಿಗೊಂಡು- ಮೋಹಿಸಿ, ಮಚ್ಚಿದಳ್, ಎಲೆಮಲ್ಲಣ! ಓವೊ !! ನೀಂ, ಅವಳ್ಗೆ, ಪಣವೀಯದೆ, ಬರಿದೆ- ಸುಮ್ಮನೆ, ಇಂತು, ಚಾಳಿಪುದು- ಸೋಲಿಸುವದು, ಸದ್ವಿಟರೀತಿಯೊ ? ಲುಬ್ಧನೀತಿಯೊ-ಜಿಪುಣನ ನೀತಿಯೋ ? ... ... ... ॥೧೦॥

ಎಲೆ! ಧರಣೀತಲದೊಳ್, ಚಲಿವೆಣ್ಗೆ, ನಿಚ್ಚಮುಂ, ಮೆಯ್ವೆಲೆಯೀಯದೆ- ದೇಹದ ಕ್ರಯವಂ ಕೊಡದೆ, ಟಕ್ಕುದೋರಿ, ನೆರೆವ, ಭುಜಂಗಂ, ಸಲೆ, ಅವಳ, ಜೀವಸವನಂ- ಪ್ರಾಣವಾಯುವನ್ನು, ಪೀರ್ವ- ಕುಡಿಯುವ, ಭುಜಂಗಂಅಲ್ತೆ- ಸರ್ಪವಲ್ಲವೇ ? ... ... ... ॥೧೩॥

ನೀಂ, ಸವಿನಗೆಯಿಂದೆ, ಮೆಲ್ನುಡಿಯ, ಬಿನ್ನಣದಿಂ- ವಯ್ಯಾರದಿಂದ, ತನುಸೋಂಕಿನಿಂದೆ- ದೇಹಸ್ಪರ್ಶದಿಂದ, ಸತ್ಕವಿತೆಯ, ಜಾಣ್ಮೆಯಿಂ, ಬಗೆಗೆ, ಸೋಲಮಂ- ಸೋಲುವಿಕೆಯನ್ನು, ಉರ್ವಿಸಿ, ಗಾಡಿಯಿಂ- ವಿಲಾಸದಿಂದ, ಮನೋಭವಮದಮಂ, ನಿಮಿರ್ಚಿ, ಪೊಸಲಜ್ಜೆಯಂ, ಇಕ್ಕಿ, ಪೊದಳ್ದು, ಕೂಡಿ, ಇಂತು, ಕುವರಿಯಂ, ಮಚ್ಚಿಸಿ, ಮರುಳ್ಚಿ - ಮರುಳುಮಾಡಿ, ಧನಂಗುಡದೆ, ಇರ್ಪುದು, ಒಪ್ಪಮೆ ? ॥೧೪॥

ವಿಟತಿಲಕ ! ಪಡೆದು- ಸಂಪಾದಿಸಿ, ಉಣ್ಬ, ಪೆಣ್ಣಂ, ಬಿಡದೆ, ಇಂತು, ಮರುಳ್ಚಿ, ಅಕ್ಕಟ ! ಮನೆಯ, ಬೀಯಕೆ- ಕರ್ಚಿಗೆ, ಧನಮಂ, ಕುಡಲ್, ಒಲ್ಲದೆ, ಇಂತು, ಚಾಳಿಪ- ಸೋಲಿಸುವ, ಇದಂಬೆಡಂಗು, ಎಲ್ಲಿಕಲ್ತೆ ? ಪೇಳ್. ... ... ... ... ... ॥೧೫॥

ನಿನ್ನ, ವಿಭುತ್ವಂ, ಎನ್ನ, ಮನೆಗೆ, ಪೆರ್ಚಿದ, ಧಾನ್ಯರಾಶಿ, ಅಪ್ಪುದೆ ? ಪೇಳ್, ನಿನ್ನ, ಕವಿತ್ವಂ, ಎನ್ನ, ಸುತೆಗೆ, ಕಾಂಚನರತ್ನಭೂಷಣಂ, ಅಪ್ಪುದೆ ? ನಿನ್ನ, ನಯೋಕ್ತಿ, ಎನ್ನ, ನಿಳಯವ್ಯಯಕೆ-ಮನೆಯ ಕರ್ಚಿಗೆ, ವಿತ್ತಪುಂಜಂ- ಹಣದರಾಸಿಯು, ಅಪ್ಪುದೆ ? ಈ ನಿನ್ನ, ಸುಭಕ್ತಿಯು, ಎಳ್ತರಂ- ಆಧಿಕ್ಯವು, ಇದು, ಎನಗೆ, ಸದ್ಗತಿಪ್ರದಂ, ಅಪ್ಪುದೇಂ ? ... ... ... ... ॥೧೬॥

ಮ॥ ಪಲವುಂ ಪರ್ವಂಗಳೆಯುದ್ದಿತ್ತಿರೆ ತನುಭವೆತಾಂ ತೊಟ್ಟ ಮಾಣಿಕ್ಯಭೂಷಾ। ವ ಲಿಯಂನುಣ್ಮುತ್ತಿನೇಕಾವಳಿಯ ನಸಮವಂಜೀರಮಂ ಪ್ರೋಲ್ಲಸನ್ಮೇ॥ ಖಲೆಯಂಬೀಯ ಕ್ಕೆಪೊನ್ನಿಲ್ಲದಿರೆ ವಿಪಣಿಯೊಳ್ ಮಾರುತೇಂ ಮಾಡಳೇಂ ಕೇಳ್। ಮಲೆಸನ್ಮಾಹೇಶ್ವರಾರಾಧನವು ನಭವಸುಪೂಜೆಯಂ ಪೇಳ್ವೆನೇನಂ॥ ... ... ... ... ॥೧೭॥

ಕಂ॥ ಕೆಲವಲದ ಗಣಿಕೆಯರ್ ಶಿವ। ನಿಲಯಕೆ ಮಣಿದೊಡವನಿಟ್ಟು ತಳರ್ವೆಡೆಯೊಳಿ ವಳ್॥ ನಲಿದೆಂತು ತಳರ್ವ ಳವರೊತ। ನೆಲೆ ತೊಡವಿಡದಕಟ ಬರಿಯ ವೈಭವದಿಂದಂ॥೧೮॥

ಕಂ॥ ಇತ್ತಿತ್ತು ದಣಿದೆ ನೀಂಬಸು। ವಿತ್ತಮನಿದೆ ಸಾಲ್ಗು ಮೆಮಗೆ ನಿನ್ನೊಡನಾ ಟಂ॥ ಪತ್ತಿದ ನಾಗರ ಕಾಟಂ। ಸುತ್ತೇಂ ನಿಳ್ತುವಿನ ಮಾಟಮಲ್ಲದೆ ಪೆಗತೇಂ॥೧೯॥

ಚಂ॥ ನಸುಮುನಿಸಾಂತು ಸೈರಣೆಯ ಗೆಲ್ಲಮ ನೊಂದಿನಿಸಿತ್ತು ಸೋಲಮಂ। ಪೊಸ ಯಿಸಿ ಸೋಲುತ್ತ ಮೇಣ್ಮುಳಿಯೆ ತಿರ್ದ್ದಿ ಕರಾಬ್ಜದೆ ಪೊಯ್ಯೆ ಪೊಂಗಿ ರಾ॥ ಗಿಸಿ ನಲವೇರಿ ಮೇಲ್ವರಿಯೆ ಮುಂಬರಿದಪ್ಪೆ ಡೊಡಪ್ಪೆ ಮೆಯ್ಯ ನೊಂ। ದಿಸಿ ನೆರೆವಿಚ್ಛೆಗಾರ್ತನದ ಜಾಣ್ಮೆ ಯ ನಿಂತು ನೆಗಳ್ಚಿ ಗಾಡಿಯಿಂ॥ ... ... ... ... ॥೨೦॥

---

ಪಲವುಂಪರ್ವಂಗಳ್- ಅನೇಕ ಹಬ್ಬಗಳು, ಎಯ್ದುದ್ದಿತ್ತು, ಇರೆ, ಬೀಯಕ್ಕೆ- ಕರ್ಚಿಗೆ, ಪೊನ್- ಹಣ ವು, ಇಲ್ಲದೆ, ಇರೆ, ಕೋಮಲೆ- ಸುಕುಮಾರಿಯಾದ, ತನುಭವೆ- ಮಗಳು, ತಾಂ, ತೊಟ್ಟ, ಮಾಣಿಕ್ಯಭೂ ಷಾವಳಿಯುಂ- ರತ್ನದ ಆಭರಣಗಳ ಗುಂಪನ್ನು, ನುಣ್ಮುತ್ತಿನ, ಏಕಾವಳಿಯುಂ- ಒಂದುಸರವನ್ನು, ಅಸಮ ಮಂಜೀರಮಂ- ಎಣೆಯಿಲ್ಲದ ಪಾದಕಟಕವನ್ನು, ಪ್ರೋಲ್ಲಸನ್ಮೇಖಲೆಯುಂ- ಪ್ರಕಾಶಿಸುತ್ತಿರುವ ಒಡ್ಯಾಣವ ನ್ನು, ವಿಪಣಿಯೊಳ್- ಅಂಗಡಿಯ ಬೀದಿಯಲ್ಲಿ, ಮಾರುತೆ, ಸನ್ಮಾಹೇಶ್ವರಾರಾಧನಮಂ- ಶ್ರೇಷ್ಠರಾದ ಮಾಹೇಶ್ವರರಪೂಜೆಯನ್ನು, ಅಭವಸುಪೂಜೆಯಂ, ಮಾಡಳೇಂ ? ಏನಂ, ಪೇಳ್ವೆಂ ? ॥೧೭॥

ಎಲೆ ! ಕೆಲವಲದ- ಸೆಗೆಯುವರಾದ, ಗಣಿಕೆಯರ್- ಸೂಳೆಯರು, ಮಣಿದೊಡವಂ- ರತ್ನಾಭರಣವ ನ್ನು, ಇಟ್ಟು, ಶಿವನಿಲಯಕೆ- ಶಿವದೇವಸ್ಥಾನಕ್ಕೆ, ತಳರ್ವ- ಹೋಗುವ, ಎಡೆಯೊಳ್, ಇವಳ್, ನಲಿದು, ಅವರೊತನೆ, ತೊಡವಿಡದೆ- ಆಭರಣವ ಧರಿಸಿಕೊಳ್ಳದೆ, ಬರಿಯವೈಭವದಿಂ ಎಂತುತಳರ್ವಳ್ ? ಅಕಟ !

ನೀಂ, ಬಸುವಿತ್ತಮಂ- ಬಹಳಹಣವನ್ನು, ಇತ್ತು, ಇತ್ತು, ದಣಿದೆ- ಆಯಾಸಪಟ್ಟೆ- ಎಮಗೆ, ಇ ದೆ, ಸಾಲ್ಗುಂ- ಸಾಕು; ನಿನ್ನ, ಒಡನಾಟಂ ಪತ್ತಿದ, ನಾಗರ- ನಾಗರಹಾವಿನ, ಕಾಟಂ- ಪೀಡೆಯು, ಸು ತ್ತೇಂ- ಬಳಸಾಡುವದೇನು ? ವಿಳ್ತುವಿನ- ಮೃತ್ಯುವಿನ, ಮಾಟಂ- ಕೃತ್ಯವು, ಅಲ್ಲದೆ, ಪೆರತೇಂ- ಮ ತ್ತೇನು ? ... ... ... ... ... ॥೧೯॥

ನಸುಮುನಿಸಾಂತು- ಸ್ವಲ್ಪಕೋಪವನ್ನುಹೊಂದಿ, ಸೈರಣೆಯ- ಸಹಿಸುವಿಕೆಯಿಂದುಂಟಾದ, ಗೆಲ್ಲ ಮಂ- ಗೆಲುವಿಕೆಯನ್ನು, ಒಂದಿನಿಸಿತ್ತು- ಒಂದು ಸ್ವಲ್ಪವನ್ನು ಕೊಟ್ಟು, ಸೋಲಮಂ- ಸೋಲುವಿಕೆಯ ನ್ನು, ಪೊಸಯಿಸಿ- ಉಂಟುಮಾಡಿ, ಸೋಲುತ್ತ- ತಾನುಸೋತುಹೋಗಿ, ಮೇಣ್, ಮುಳಿಯೆ- ಅವಳು ಕೋಪಿಸಿಕೊಳ್ಳಲು, ತಿರ್ದ್ದಿ- ಕೋಪವಮಂಬಿಡಿಸಿ, ಕರಾಬ್ಜದೆ- ಹಸ್ತಕಮಲದಿಂದ, ಪೊಯ್ಯೆ- ಹೊಡೆಯಲು, ಪೊಂಗಿ- ಹೆಚ್ಚಾಗಿ, ರಾಗಿಸಿ- ಪ್ರೀತಿಪಟ್ಟು, ಮೇಲ್ವರಿಯೆ- ಮೇಲೆಬೀಳಲು, ನಲವೇರಿ- ಸಂತೋಷವಂ ಹೊಂದಿ; ಮುಂಬರಿದು- ಮುಂದಕ್ಕೆಬಂದು, ಅಪ್ಪಿದೊಡೆ- ಆಲಿಂಗಿಸಲು, ಮೆಯ್ಯಂ, ಒಂದಿಸಿ, ಅಪ್ಪಿ, ನೆರೆವ, ಇಚ್ಛೆಗಾರ್ತನದ- ಮನ್ಮಥಭಾವದ, ಜಾಣ್ಮೆಯಂ- ಪ್ರೌಢಿಮೆಯನ್ನು, ಇಂತು, ಗಾಡಿಯಿಂ- ವಿಲಾ ಸದಿಂದ, ನೆಗಳ್ಚಿ- ಮಾಡಿ. ... ... ... ... ... ॥೨೦॥

ಚಂ ॥ ಕಲೆಯೊಲವಂ ಪರೀಕ್ಷಿಸಿ ನಿರೀಕ್ಷಿಸಿ ಚೆಂದುಟಿಯಂ ಕರ್ದುಂಕಿ ಚೆ । ಲ್ವಲರೆ ಮನೋಜರಾಗರಸವಾರ್ಧಿಯೊಳಾಳಿಸು ತಿಂತು ಕೂಟದಿಂ ॥ ನಲಿದೊಲವೆತ್ತು ಮಚ್ಚಿಸಿ ಮರುಳ್ಚ್ ಮದೀಯತನೂಜೆಯಂ ಮಹಾ । ಖಲ ಪಣವಿಲ್ಲಯದನ್ಯಮನವಾಗದ ಪೊಲ್ ನೆಗಳಲ್ಕೆ ತಕ್ಕುದೆ ॥ ... ... ... ... ॥೬೧॥

ಚಂ ॥ ಮಗಳತಿಮುಗ್ಧೆ ಮಾನಿನಿ ಯಿವಳ್ಪಣಮಂ ಪಡೆದುಂಬಕಾಲದೊ । ಳೆಗಳ್ದ ಲೆಮರ್ದು ಮಾಯೆಯ ಮರುಳ್ಚದೆ ನಿನ್ನಯ ಮರ್ದು ಮಾಯೆನಿ ॥ ನ್ನೊಗುಮಿಗವೆತ್ತ ಸತ್ಕಳೆಮಿವೆಂಬಿವನೆಲ್ಲಮ ನೆಯ್ದೆ ತುಳ್ದು ನೀಂ । ನಗೆಗೆಡೆಯಾಗೆ ಕಟ್ಟಿಸಿದಪೆ ಮಣಿಮಂಚದ ಕಾಲೊಳೀಕೆಯ ॥ ... ... ... ... ... ॥೬೨॥

ಕಂ॥ ಅನರಿಯದ ಕೌಟಿಲ್ಯಮೆ । ಯಾನರಿಯದ ಮರ್ದುಮಾಯೆಕಳೆಗಳೆ ಬಿಡುಕೀ ॥ ಳ್ದೀನರಿವೆ ಯಿಲ್ಲವೋ ಪೇ । ಳೀನಗರದೊಳೆನ್ನ ಸೂಳೆತನದ ಬೆಡಂಗಂ ॥ ... ॥೬೩॥

ಮ॥ ಸ್ರ॥ ಸುಳಿಸುತ್ತುಂಗಾರನಂ ಜಕ್ಕುಲಿಸಿ ಕಳೆವ ಬೆಳ್ಪಾಳ ನೊಳ್ಪಿಂದೆ ಬಂದಾ । ಗಳೆ ಕಾಯ್ಪಂ ದೋರುತಂ ಪಾರಿಪ ಪುರುಡಿಗನಂ ಪೂಣ್ದು ಬೀರ್ಕೈವ ಲೋಭೋ ॥ ಜ್ವಳನಂ ರೋಡಾಡಿ ಪೋಗಾಡುವ ವಿಗಡದ ಮಾಯಾವಿಯಂ ಮಾಯೆಯಿಂ ಸೊ । ರ್ಕಳಿವನ್ನಂ

ಮಹಾಖಲ- ಬಹುನೀಚನೇ ! ಪಣವಿಲ್ಲಯದೆ, ಕಲೆಯ- ಕಲಾಸ್ಥಾನದ ಸ್ಪರ್ಶದಿಂದುಂಟಾಗುವ, ಒಲವಂ- ಪ್ರೀತಿಯನ್ನು, ಪರೀಕ್ಷಿಸಿ, ನಿರೀಕ್ಷಿಸಿ, ಚೆಂದುಟಿಯಂ- ಕೆಂಪಾದ ತುಟಿಯನ್ನು, ಕರ್ದುಂಕಿ- ಹಲ್ಲಿನಿಂ ಕಚ್ಚಿ, ಚೆಲ್ವು- ಸೌಂದರ್ಯವು, ಅಲರೆ- ಹಚ್ಚಾಗಲಾಗಿ, ಮನೋಜರಾಗರಸವಾರ್ಧಿಯೊಳ್-ಕಾಮಾನುರಾಗವೆಂಬ ಸಮುದ್ರದಲ್ಲಿ, ಆಳಿಸುತ- ಮುಳುಗಿಸುತ್ತ, ಇಂತು, ಕೂಟದಿಂ- ಸಂಗದಿಂದ, ನಲಿದು, ಒಲವೆತ್ತು, ಮದೀಯತನೂಜೆಯಂ- ನನ್ನ ಮಗಳನ್ನು, ಮಚ್ಚಿಸಿ, ಮರುಳ್ಚಿ- ಹುಚ್ಚು ಹಿಡಿಯಿಸಿ, ಅನ್ಯಮನಂ- ಮತ್ತೊಬ್ಬನಲ್ಲಿ ಮನಸ್ಸು, ಆಗದವೊಲ್, ನೆಗಳಲ್ಕೆ, ತಕ್ಕುದೇ- ಯೋಗ್ಯವಾಗಿರುವದೇ ? ॥೬೧॥

ಮಗಳ್- ನನ್ನ ಮಗಳು, ಅತಿಮುಗ್ಧೆ- ಬಹು ಸುಂದರಿಯು, (ಏನನ್ನೂ ತಿಳಿಯದವಳು) ಮಾನಿನಿ- ಮಾನವಂತಳು, ಇವಳ್, ಪಣಮಂ, ಪಡೆದು, ಉಂಬಕಾಲದೊಳ್, ಎಲೆ ! ಮರ್ದುಮಾಯೆಯ- ಔಷಧಪ್ರಯೋಗಕಪಟೋದ್ಯೋಗವನ್ನು, ನೆಗಳ್ದು- ಮಾಡಿ, ಮರುಳ್ಚದೆ- ಮಂಕುಮಾಡಿದೆ, ನಿನ್ನಯ, ಮರ್ದು- ಮಾಯೆ, ನಿನ್ನ, ಒಗುಮಿಗೆವೆತ್ತ- ಅತಿಶಯವಾದ, ಸತ್ಕಳೆ, ಇವೆಂಬಿವುಎಲ್ಲಮಂ, ಎಯ್ದೆ- ಚೆನ್ನಾಗಿ, ತುಳ್ದು- ತುಳಿದು, ನೀಂ, ನಗೆಗೆ- ಹಾಸ್ಯಕೆ, ಎಡೆ- ಆಸ್ಪದವು, ಆಗೆ- ಆಗುವಂತೆ, ಈಕೆಯ, ಮಣಿಮಂಚದ, ಕಾಲೊಳ್, ಕಟ್ಟಿಸಿದಪೆಂ. ... ... ... ... ॥೬೨॥

ಆಂ, ಅರಿಯದ, ಕೌಟಿಲ್ಯಮೆ ? ಆಂ, ಅರಿಯದ, ಮರ್ದು, ಮಾಯೆಕಳೆಗಳೆ ? ಬಿಡು; ಈನಗರದೊಳ್, ಎನ್ನ, ಸೂಳೆತನದ, ಬೆಡಂಗಂ-ವಿಲಾಸವನ್ನು, ಅರಿವೆಯೋ- ತಿಳಿದಿರುವಿಯೋ ? ಇಲ್ಲವೋ ? ಪೇಳ್.

ಸುಳಿಸುತ್ತುಂಗಾರನಂ- ಸುಳಿಯುಂ ಸುತ್ತಿ ವಶಪಡಿಸಿಕೊಳ್ಳುವ ಮಾಯಾವಿಯನ್ನು, ಜಕ್ಕುಲಿಸಿ- ಚಕ್ಕಲಗುಳಿಯನ್ನಿಕ್ಕಿ, ಕಳೆವ- ಬಿಡುವ, ಬೆಳ್ಪಾಳಂ- ಮಂಕುಬೂದಿಯಂ ಹಾಕುವವನು, ಒಳ್ಪಿಂದೆ, ಬಂದಾಗಳೆ, ಕಾಯ್ಪಂ- ಕೋಪವನ್ನು, ತೋರುತಂ, ಪಾರಿಪ, ಪುರುಡಿಗನಂ- ಸ್ಪರ್ಧಿಸುವವನನ್ನು, ಪೂಣ್ದು- ಶಪಥವ ಮಾಡಿ, ಬೀರ್ಕೈವ- ಬೇರೆಮಾಡುವ, ಲೋಭೋಜ್ವಳನಂ- ಜಿಪುಣತನದಿಂದ ಪ್ರಕಾಶಿಸುವವನನ್ನು, ರೋಡಾಡಿ- ಪೀಡಿಸಿ, ಪೋಗಾಡುವ- ಹೋಗಲಾಡಿಸುವ, ವಿಗಡದ-ಸಂಕಟಕಾರಿಯಾದ, ಮಾಯಾವಿಯಂ- ಕಪಟಿಯನ್ನು, ಮಾಯೆಯಿಂ- ಕಪಟದಿಂದ, ಸೊರ್ಕು- ಗರ್ವವು, ಅಳಿವನ್ನಂ-ನಾಶವಾಗುವಹಾಗೆ, ತೂಳ್ದ

ತೊಳ್ವ ಚಾತುರ್ಯದ ಪೊಸಬಗೆ ಯೆನ್ನೊಳ್ನಿತಾಂತಂ ನಿಸರ್ಗಂ ॥ ... ॥೨೮॥

ಕಂ ॥ ಬರಿಬಿನ್ನಣಮಂ ತೋರದೆ । ಪೊರಮಡು ಪೊರಮಡು ಮದೀಯನಿಳಯಮ ನೀಗಳ್ ॥ ನೆರೆಬೊಜಗತನದಲಂಪಂ । ಮೆರೆ ಮತ್ತೊರ್ವಳೊಳೆ ಬಿಡುಬಿಡೆನ್ನಾತ್ಮಜೆಯಂ॥

ವ ॥ ಎಂದಿಂತು ಪಲವಂದದಿಂ ಗಜರಿ ಗರ್ಜಿಸಿ ಪುರುಡುಡೋರಿ ಬಾಯ್ಗೆ ಬಂದಂತೆ ಗಳಪಿ ಮಾನನಿಧಿಯಾದ ಮಲ್ಲಣನಂ ಮಲ್ಲಣಿಯ ಮಾತೆ ಮನೆಯಿಂ ಪೊರಮಡಿಸಿ ಬಿರಯಿಸುವ ಮಗಳ ನಂತಿಂತು ಸಂತವಿರಿಸಿ ರಾಜಪುತ್ರನ ನೋರ್ವನಂ ಕರೆದು ಧನಮಂ ಕೊಂಡ ವನೊಳತಿಪ್ರತಿಬಂಧದಿಂ ನೆರಪಿ ಮುದಂಬಡೆ ದಿರ್ಪನ ನಿತ್ತಲ್ ॥ * * * * *

ಕಂ ॥ ಕರಿಗಂದಿದಾನನಂ ರಸ ! ಮರೆತಧರಂ ಡಿಕ್ಕವಾರಿದೆರ್ದೆ ಬಿಸುಪಿಂದಂ ॥ ಪೊರ ಪಾಯ್ವ ಸುಯ್ಗಳಳುರ್ದಿರೆ । ಕಿರಿವಜ್ಜೆಯಿಡುತ್ತೆ ಮಲ್ಲಣಂ ನಡೆತಂದಂ ॥ ॥೨೬॥

ವ ॥ ಅಂತು ಚಂದ್ರಿಕೆ ಯಗಲ್ದ ಚಕೋರನಂತೆ ಕಾದಂಬಿನಿ ಪಿಂಗಿದ ಮಯೂರನಂತೆ ಕಳೆಗುಂದಿ ಕಾಂತೆಯಗಲ್ದುರಿ ಮನದೊಳೊಗೆದು ತನುವ ನಾವರಿಸೆ ತಲ್ಲಣಂಬೆತ್ತು ಮಲ್ಲಣಂ ಬಂದು ಮದನಕಾರಾಗೃಹಮಂ ಪುಗುವಂತೆ ತುಳಸುರಭಿರಸಭರಕುಸುಮವಿಸರದಳ

---

ಮೆಟ್ಟುವ, ಪೊಸಬಗೆ- ಹೊಸರೀತಿಯು, ಎನ್ನೊಳ್, ನಿತಾಂತಂ- ಅತ್ಯಂತವಾಗಿ, ನಿಸರ್ಗಂ- ಸ್ವಭಾವಸಿದ್ಧವಾದದ್ದು. ... ... ... ... ... ॥೨೮॥

ಬರಿಬಿನ್ನಣಮಂ- ವ್ಯರ್ಥವಾದ ಬಿಂಕವನ್ನು, ತೋರದೆ, ಈಗಳ್, ಮದೀಯನಿಳಯಮಂ- ಸನ್ನ ಮನೆಯಿಂದ, ಪೊರಮಡುಪೊರಮಡು- ಹೊರಬುಹೋಗುಹೊರಬುಹೋಗು; ಮತ್ತೊರ್ವಳೊಳೆ, ನೆರೆ- ಕೂಡು, ಬೊಜಗತನದ- ವಿಟತ್ವದ, ಅಲಂಪಂ- ಸೊಗಸನ್ನು, ಮೆರೆ- ತೋರ್ಪಡಿಸು, ಎನ್ನ, ಆತ್ಮಜೆಯಂ- ಮಗಳನ್ನು, ಬಿಡುಬಿಡು. ... ... ... ... ... ॥೭೫॥

ಎಂದು, ಇಂತು, ಮಲ್ಲಣಿಯ, ಮಾತೆ, ಪಲವಂದದಿಂ- ಅನೇಕಪ್ರಕಾರವಾಗಿ, ಗಜರಿ- ಗರ್ಜಿಸಿ, ಪುರುಡುದೋರಿ- ಸ್ಪರ್ಧಿಸಿ, ಬಾಯ್ಗೆ, ಬಂದಂತೆ, ಗಳಪಿ- ಕೂಗಾಡಿ, ಮಾನನಿಧಿ, ಆದ, ಮಲ್ಲಣನಂ, ಮನೆಯಿಂ, ಪೊರಮಡಿಸಿ, ಬಿರಯಿಸುವ- ವಿರಹವ್ಯಥೆಯಂ ಹೊಂದುವ, ಮಗಳಂ, ಅಂತು, ಇಂತು, ಸಂತಂಇರಿಸಿ- ಸಮಾಧಾನಗೊಳಿಸಿ, ಓರ್ವನುರಾಜಪುತ್ರನಂ, ಧನಮಂ, ಕೊಂಡು, ಅವನೊಳ್, ಅತಿಪ್ರತಿಬಂಧದಿಂ- ಬಹು ಬಲಾತ್ಕಾರದಿಂದ, ನೆರಪಿ- ಕೂಡಿಸಿ, ಮುದಂಬಡೆದು, ಇರ್ಪಿನಂ, ಇತ್ತಲ್. * * * * *

ಮಲ್ಲಣಂ, ಕರಿಗಂದಿದ- ಕರ್ರನೆ ಕಾಂತಿಹೀನವಾಗಿರುವ, ಆನನಂ, ರಸಂ- ದ್ರವವು, ಅರೆತ, ಇಲ್ಲವಾದ, ಅಧರಂ- ತುಟಿಯು, ಡಿಕ್ಕವಾರಿದ-ಧೈರ್ಯಹೀನವಾದ, ಎರ್ದೆ- ಹೃದಯವು, ಬಿಸುಪಿಂದಂ- ಔಷ್ಣ್ಯದಿಂದ, ಪೊರವಾಯ್ವ- ಹೊರಕ್ಕೆ ಹೊರಡುವ, ಸುಯ್ಗಳ್- ಉಸುರುಗಳು, ಅಳುರ್ದಿರೆ- ಹೆಚ್ಚಾಗಿ, ಇರೆ, ಕಿರಿವಜ್ಜೆಯಿಡುತ್ತೆ- ಚೆಕ್ಕಚೆಕ್ಕದಾಗಿ ಹೆಜ್ಜೆಯನ್ನಿಡುತ್ತ, ನಡೆತಂದು. ... ... ॥೭೬॥

ಅಂತು, ಚಂದ್ರಿಕೆಯಗಲ್ದ- ಬೆಳ್ದಿಂಗಳಿಂದಬಿಟ್ಟ, ಚಕೋರನಂತೆ, ಕಾದಂಬಿನಿ- ಮೇಘಪಙ್ಕ್ತಿಯು, ಪಿಂಗಿದ- ಬಿಟ್ಟುಹೋದ, ಮಯೂರನಂತೆ- ನವಿಲಿನಹಾಗೆ, ಕಳೆಗುಂದಿ, ಕಾಂತೆಯ, ಅಗಲ್ದುರಿ- ಅಗಲುವಿಕೆಯಿಂದುಂಟಾದಜ್ವಾಲೆಯು, ಮನದೊಳ್, ಒಗೆದು, ತನುವಂ, ಆವರಿಸೆ, ಮಲ್ಲಣಂ, ತಲ್ಲಣಂಬೆತ್ತು- ನಡುಗಿ, ಬಂದು, ಮದನಕಾರಾಗೃಹಮಂ- ಮನ್ಮಥನಿಂದಮಾಡಲ್ಪಟ್ಟಬಂದೀಖಾನೆಯನ್ನು, ಪುಗುವಂತೆ, ಅತುಳ........ನಿವಾಸಂ— ಅತುಳ-ಎಣೆಯಿಲ್ಲದ, ಸುರಭಿ- ಪರಿಮಳವಿಶಿಷ್ಟವಾದ, ರಸಭರ- ಮಕರಂದಾತಿಶಯವುಳ್ಳ, ಕುಸುಮ- ಹೂಗಳ, ವಿಸರ- ಗುಂಪೇನು, ದಳ- ಪತ್ರಗಳೇನು, ಫಲ-ಹಣ್ಣೇನು ಇವುಗಳಿಂದ, ಪರಿ

ಫಲವರಿಮಿಳಿತನಾನಾನವೀನಭೂಜರಾಜಿರಾಜಿತಲತಾವಿತಾನಸಂಕಲಿತಶುಕಪಿಕಪ್ರಕರರವಮಧುಕರನಿಕರಝುಂಕಾರಶೃಂಖಲಿತವಿಶೃಂಖಲವಸಂತಲಕ್ಷ್ಮೀವಿಳಾಸನಿವಾಸ ಮೆನಿಪ ಕೇಳೀವನಮಂ ಪೊಕ್ಕು ಮಾಮರದ ತಳದ ತಣ್ಣೆಳಲ ತಳಿರ್ವಸೆಯೊಳೊಯ್ಯನೆ ಮೆಯ್ಯಿಕ್ಕಿ ನಿಜಸಖಸಖೀಜನಕೃತಶಿಶಿರೋಪಚಾರಕ್ಕೆ ಪಕ್ಕಾಗಿರ್ದು ಮತ್ತೆ ಮತ್ತೆ ಪೆರ್ಚಿದ ಚಿತ್ತಜಾತಾನಲಸಂತಾಪಮಂ ಕಳೆಯಲಾರದೆ॥ * * * * * * * * * * *

ಕಂ ॥ ಪಾಡುವತುಂಬಿಗೆ ಮೆಲ್ಪಿಂ। ತೀಡುವತಂಗಾಳಿ ಗುಲಿವಕೋಗಿಲೆಗೆ ಪೊಡ ॥
ಳ್ಬಾಡುವ ನವಿಲ್ಗೆ ನಿಶೆಯೊ। ಳ್ಮೂಡುವಶಶಿ ಗಳ್ಕಿ ಬಳ್ಕಿ ಸಿಡಿಮಿಡಿಗೊಂಡಂ ॥ ॥೭೭॥

ವ॥ ಮತ್ತ ಮಲ್ಲಿ ॥ ಮತ್ತೇ ॥ ತಳಿರಂ ಮಲ್ಲಣಿಯಂಘ್ರಿಗೆತ್ತ ಮಣಿವಂ ಭೃಂಗಾಳಿಯಂ ಕಂಡು ತ। ನ್ನಳನೀಳಾಳಕ ಮೆಂದು ನೇವರಿಸಲೊಲ್ವಂ ವಲ್ಲಿಯಂ ಕಂಡು ಕೋ॥ ಮಳೆಯಂಗಂ ನಿಜಮೆಂದು ತಳ್ಕೆಗೆಸಪಂ ಪಂಕೇಜಮಂ ಕಂಡು ನ। ಲ್ಲಳವಕ್ತ್ರಾಂಬುಜ ಮೆಂದು ಚುಂಬನಕೆ ಪಾಯ್ವಂ ದರ್ಪಕಭ್ರಾಂತಿಯಿಂ ॥ ... ... ॥೭೮॥

ವ॥ ಮತ್ತಮಲ್ಲಿ ಶಶಿಶಿಲಾಸೋಪಾನರುಚಿನಿಚಯಚಂದ್ರಿಕಾವಿಕಸಿತೇಂದೀವರಮ ನಾ

---

ಮಿಳಿತ- ಕೂಡಿದ, ನಾನಾನವೀನಭೂಜರಾಜಿ-ಅನೇಕಹೊಸಮರಗಳಸಾಲಿನಿಂದ, ರಾಜಿತ- ಪ್ರಕಾಶಿಸುವ, ಲತಾವಿತಾನ- ಬಳ್ಳಿಗಳಗುಂಪಿನಿಂದ, ಸಂಕಲಿತ- ಕೂಡಿರುವ, ಶುಕ- ಗಿಳಿ, ಪಿಕ- ಕೋಗಿಲೆ ಇವುಗಳ, ಪ್ರಕರ- ಗುಂಪಿನ, ರವ-ಶಬ್ದ, ಮಧುಕರನಿಕರ-ತುಂಬಿಗಳಗುಂಪಿನ, ಝುಂಕಾರ-ಝುಣ್ ಎಂಬ ಶಬ್ದದಿಂದ, ಶೃಂಖಲಿತ- ಸಂಬಂಧಿಸಲ್ಪಟ್ಟಿರುವ, ವಿಶೃಂಖಲವಸಂತಲಕ್ಷ್ಮೀ ತಡೆಯಿಲ್ಲದ ವಸಂತಕಾಲಲಕ್ಷ್ಮಿಯ, ವಿಳಾಸ- ಲೀಲೆಗೆ, ನಿವಾಸಂ, ಎನಿಪ, ಕೇಳೀವನಮಂ- ಕ್ರೀಡಾರ್ಹವಾದ ಉಪವನವನ್ನು; ಪೊಕ್ಕು; ಮಾಮರದ- ಮಾವಿನಮರದ, ತಳದ- ಬುಡದಲ್ಲಿರುವ, ತಣ್ಣೆಳಲ- ತಂಪಾದ ನೆಳಲಿನಲ್ಲಿರುವ; ತಳಿರ್ವಸೆಯೊಳ್- ಚಿಗುರಿನ ಹಾಸಿಗೆಯಲ್ಲಿ, ಒಯ್ಯನೆ- ಮೆಲ್ಲಗೆ, ಮೆಯ್ಯಿಕ್ಕಿ- ಮಲಗಿ, ನಿಜಸಖಸಖೀಜನಕೃತಶಿಶಿರೋಪಚಾರಕ್ಕೆ ತನಗಾಪ್ತರಾದ ಸಖಿಯರಿಂದ ಮಾಡಲ್ಪಟ್ಟ ಶೈತ್ಯೋಪಚಾರಕ್ಕೆ, ಪಕ್ಕಾಗಿ- ಆಸ್ಪದನಾಗಿ, ಇರ್ದು, ಮತ್ತೆಮತ್ತೆ, ಪೆರ್ಚಿದ, ಚಿತ್ತಜಾತಾನಲಸಂತಾಪಮಂ- ಮನ್ಮಥಾಗ್ನಿಯಿಂದುಂಟಾದ ದಗೆಯನ್ನು, ಕಳೆಯಲಾರದೆ. * *

ಪಾಡುವ, ತುಂಬಿಗೆ, ಮೆಲ್ಪಿಂ- ಮಾಂದ್ಯದಿಂದ, ತೀಡುವ- ಬೀಸುವ, ತಂಗಾಳಿಗೆ, ಉಲಿವ- ಕೂಗುವ ಕೋಗಿಲೆಗೆ, ಪೊಂಪಳ್ದು, ಆಡುವ, ನವಿಲ್ಗೆ, ನಿಶೆಯೊಳ್- ರಾತ್ರಿಯಲ್ಲಿ, ಮೂಡುವ, ಶಶಿಗೆ, ಅಳ್ಕಿ- ಹೆದರಿ, ಬಳ್ಕಿ- ಆಯಾಸಪಟ್ಟು, ಸಿಡಿಮಿಡಿಗೊಂಡಂ- ವ್ಯಾಕುಲೀಕೃತನಾದನು. ... ... ॥೭೭॥

ದರ್ಪಕಭ್ರಾಂತಿಯಿಂ- ಮನ್ಮಥನಿಂದುಂಟಾಗಿರುವ ಭ್ರಮೆಯಿಂದ, ತಳಿರಂ- ಚಿಗುರನ್ನು, ಮಲ್ಲಣಿಯ, ಅಂಘ್ರಿಗೆತ್ತ-ಕಾಲೆಂದುತಿಳಿದು, ಮಣಿವಂ- ನಮಸ್ಕರಿಸುವನು; ಭೃಂಗಾಳಿಯಂ- ತುಂಬಿಗಳ ಸಾಲನ್ನು, ಕಂಡು, ತನ್ನಳ- ತನ್ನಸಂಬಂಧಿಯಾದ ಮಲ್ಲಣಿಯ, ನೀಲಾಳಕಂ- ಕಪ್ಪಾದ ಕೇಶವು, ಎಂದು, ನೇವರಿಸಲ್- ನೆಟ್ಟಗೆತಿದ್ದುವದಕ್ಕೆ, ಒಲ್ವಂ- ಪ್ರೀತಿಸುವನು; ವಲ್ಲಿಯಂ- ಬಳ್ಳಿಯನ್ನು, ಕಂಡು, ಕೋಮಳೆಯ- ಮೃದುಳೆಯಾದ ತನ್ನಕಾಂತೆಯ, ಅಂಗಂ, ನಿಜಂ, ಎಂದು, ತಳ್ಕೆಗೆ- ಆಲಿಂಗಿಸುವದಕ್ಕೆ; ಎಸಪಂ- ಉಜ್ಜುಗಿಸುವನು; ಪಂಕೇಜಮಂ- ಕಮಲವನ್ನು, ಕಂಡು, ನಲ್ಲಳ- ಪ್ರಿಯಳ, ವಕ್ತ್ರಾಂಬುಜಂ- ಮೊಗದಾವರೆಯು, ಎಂದು, ಚುಂಬನಕೆ, ಪಾಯ್ವಂ- ಮೇಲೆಬೀಳುವನು. ... ... ... ॥೭೮॥

ಮತ್ತಂ, ಅಲ್ಲಿ, ಶಶಿ......ಇಂದೀವರಮಂ— ಶಶಿಶಿಲಾ- ಚಂದ್ರಕಾಂತಶಿಲೆಯ, ಸೋಪಾನ- ಮೆಟ್ಟಿಲ? ಹಂತದ, ರುಚಿ- ಕಾಂತಿಯ, ನಿಚಯ- ಸಮೂಹವೆಂಬ, ಚಂದ್ರಿಕಾ- ಬೆಳ್ದಿಂಗಳಿಂದ, ವಿಕಸಿತ- ಅರಳಿದ, ಇಂದೀವ

ವಿಶಾಲನೇತ್ರೆಯ ನೇತ್ರಂಗಳೆಂದು ನಿರೀಕ್ಷಿಸಿಯುಂ ಮೆಣೆಯಗಲದ ಪೊಣರ್ವಕ್ಕಿಗಳ ನಾತುಂಗಸ್ತನೆಯ ನಿಬಿಡೋತ್ತುಂಗಕುಚಕಲಶಂಗಳ್ಗೆತ್ತು ಮನಂಪೆತ್ತು ನೋಡಿಯುಂ ಕನಕಕಮಲಪರಾಗಪುಂಜಪಿಂಜರಿತಪುಳಿನತಳಮನಾಘನನಿತಂಬೆಯ ಶಂಬರಾರಿಕುಂಭಿಕುಂಭಶುಂಭನ್ನಿತಂಬಬಿಂಬ ಮೆಂದು ಪರಿಭಾವಿಸಿಯುಂ ನಳನಳಿಸಿ ಕೆಲದೊಳ್ಬಳೆದಿರ್ದ ಸುವರ್ಣರಂಭಾಸ್ತಂಭಂಗಳ ನಾನುಣ್ದೊಡೆಯ ಬೆಡಂಗಿಯ ನಿಬಿಡೋರುಸ್ತಂಭಂಗಳೆಂದು ನಿಂದು ನಿಟ್ಟಿಸಿಯುಂ ಕಟ್ಟೆದಿರೊಳ್ಬಿರಿದು ಬೀಡೆವರಿದ ದಾಡಿಮದ ಬೀಜರಾಜಿಯ ನಾಕೆಂಬಲ್ಲಬಿಂಬಾಧರೆಯ ಕೆಂಬಲ್ಗಳೆಂದವಧರಿಸಿಯುಂ ತರುಣತಮಾಲಲತೆಯ ನಾಲತಾಂಗಿಯ ನುಣ್ಪಡರ್ದ ಬಾಸೆಯೆಂದಾಸೆವಟ್ಟು ಪಂಬಲಿಸಿಯುಂ ಕುಸುಮಪರಿಮಳಮಂ ಪೊತ್ತೆತ್ತಿ ಕುಸಿದು ಬರ್ಪ ಮಂದಾನಿಲನ ನಾಕುಸುಮಗಂಧಿಯ ನಿಶ್ವಾಸ ಮೆಂದಾಘ್ರಾಣಿಸಿಯುಂ ಮಳೆಗಿಳಿಯ ಮೆಲ್ನುಡಿಯ ನಾಮಧುರವಾಣಿಯ ಸವಿನುಡಿಯೆಂದಾಲಿಸಿಯುಂ ಕಲಕಂಠಕಲರವಮ ನಾಕಲರವೆಯ ತಾರಸ್ವರಮೆಂದು ಕಿವಿಗೊಟ್ಟು ಸಂಭಾವಿಸಿಯುಂ ಲತಾಗ್ರದೊಳ್ಕುಳ್ಳಿರ್ದ ಮಯೂರಿ

---

ರವಂ- ಕನ್ನವಿಲೆಯನ್ನು, ಆವಿಶಾಲನೇತ್ರೆಯ- ಆ ವಿಸ್ತಾರವಾದ ಕಣ್ಣುಳ್ಳ ಮಲ್ಲಣಿಯ, ನೇತ್ರಂಗಳ್, ಎಂದು, ನಿರೀಕ್ಷಿಸಿಯುಂ; ಎಣೆ- ಸಾಮ್ಯವು, ಅಗಲದ- ಶೂನ್ಯವಾಗದ, ಪೊಣರ್ವಕ್ಕಿಗಳಂ- ಚಕ್ರವಾಕಪಕ್ಷಿಗಳನ್ನು, ಆತುಂಗಸ್ತನೆಯ- ದಪ್ಪವಾದ ಮೊಲೆಯುಳ್ಳ ಆಮಲ್ಲಣಿಯ, ನಿಬಿಡೋತ್ತುಂಗಕುಚಕಲಶಂಗಳ್ಗೆತ್ತು- ದಟ್ಟವಾಗಿಯೂ ದಪ್ಪವಾಗಿಯೂ ಕಲಶದಂತಿರುವ ಮೊಲೆಗಳೆಂದು ತಿಳಿದು, ಮನಂಪೆತ್ತು- ಮನಸ್ಸನ್ನು ಕೊಟ್ಟು, ನೋಡಿಯುಂ; ಕನಕ..... ತಳಮಂ— ಕನಕಕಮಲ- ಪೊಂದಾವರೆಯ, ಪರಾಗ- ಧೂಳಿಯ, ಪುಂಜ- ಸಮೂಹದಿಂದ, ಪಿಂಜರಿತ- ಪೊಂಬಣ್ಣವಾಗಿ ಮಾಡಲ್ಪಟ್ಟ, ಪುಳಿನತಳಮಂ- ಮಳಲುಗುಡ್ಡೆಯನ್ನು, ಆಘನನಿತಂಬೆಯ- ದಪ್ಪವಾದ ಕಟಿಪಶ್ಚಾದ್ಭಾಗವುಳ್ಳ ಆ ಮಲ್ಲಣಿಯ, ಶಂಬ.....ಬಿಂಬಂ— ಶಂಬರಾರಿ- ಮನ್ಮಥನ, ಕುಂಭಿ- ಆನೆಯ, ಕುಂಭ- ಕುಂಭಸ್ಥಲದೋಪಾದಿಯಲ್ಲಿ, ಶುಂಭತ್- ಪ್ರಕಾಶಿಸುವ, ನಿತಂಬಬಿಂಬಂ- ಕಟಿಪಶ್ಚಾದ್ಭಾಗವು, ಎಂದು, ಪರಿಭಾವಿಸಿಯುಂ- ಯೋಚಿಸಿಯೂ; ನಳನಳಿಸಿ- ಕೋಮಲವಾಗಿ, ಕೆಲದೊಳ್- ಪಕ್ಕದಲ್ಲಿ, ಬಳೆದು, ಇರ್ದ, ಸುವರ್ಣರಂಭಾಸ್ತಂಭಂಗಳಂ- ಪೊಂಬಣ್ಣವಾದ ಬಾಳೆಯಕಂಬಗಳನ್ನು, ಆನುಣ್ದೊಡೆಯ, ಬೆಡಂಗಿನ- ವಿಲಾಸವುಳ್ಳ ಮಲ್ಲಣಿಯ, ನಿಬಿಡೋರುಸ್ತಂಭಂಗಳ್- ದಪ್ಪಗಳಾದ ಕಂಬಗಳಂತಿರುವ ತೊಡೆಗಳು, ಎಂದು, ನಿಂದು, ನಿಟ್ಟಿಸಿಯುಂ; ಕಟ್ಟೆದಿರೊಳ್- ಮುಂಗಡೆಯಲ್ಲಿ, ಬಿರಿದು- ಬಿರುಕುಬಿಟ್ಟು, ಬೀಡೆವರಿದ- ಸಂದುಸಂದಾಗಿರುವ, ಆದಾಡಿಮದ- ಆ ದಾಳಿಂಬದ, ಬೀಜರಾಜಿಯಂ. ಆಕೆಂಬಲ್ಲ- ಆ ಕೆಂಪಾದ ಹಲ್ಲುಗಳುಳ್ಳ, ಬಿಂಬಾಧರೆಯ- ತೊಂಡೆಯ ಹಣ್ಣಿನಂತಿರುವ ತುಟಿಯುಳ್ಳ ಮಲ್ಲಣಿಯ, ಕೆಂಬಲ್ಗಳ್, ಎಂದು, ಅವಧರಿಸಿಯುಂ- ನಿಶ್ಚೈಸಿಯೂ; ತರುಣತಮಾಲಲತೆಯಂ- ಯೌವನಸ್ಥವಾದ ಹೊಂಗೆಯ ಕೊಂಬೆಯನ್ನು, ಆಲತಾಂಗಿಯ- ಬಳ್ಳಿಯಂತಿರುವ ದೇಹವುಳ್ಳ ಆಮಲ್ಲಣಿಯ, ನುಣ್ಪು, ಅಡರ್ದ, ಬಾಸೆ- ರೋಮರಾಜಿಯು, ಎಂದು, ಆಸೆವಟ್ಟು, ಪಂಬಲಿಸಿಯುಂ; ಕುಸುಮಪರಿಮಳಮಂ, ಪೊತ್ತು, ಎತ್ತಿ, ಕುಸಿದು- ಕುಗ್ಗಿ, ಬರ್ಪ, ಮಂದಾನಿಲನಂ, ಆಕುಸುಮಗಂಧಿಯ, ನಿಶ್ವಾಸಂ- ಉಸುರು, ಎಂದು, ಆಘ್ರಾಣಿಸಿಯುಂ- ಮೂಸಿಯೂ, ಎಳೆಗಿಳಿಯ, ಮೆಲ್ನುಡಿಯಂ, ಆಮಧುರವಾಣಿಯ, ಸವಿನುಡಿ- ಇಂಪಾದ ಮಾತು, ಎಂದು, ಆಲಿಸಿಯುಂ; ಕಲಕಂಠಕಲರವಮಂ- ಕೋಗಿಲೆಯ ಅವ್ಯಕ್ತಮಧುರವಾದ ಧ್ವನಿಯನ್ನು, ಆಕಲರವೆಯ- ಆ ಅವ್ಯಕ್ತಮಧುರವಾದ ಶಬ್ದವುಳ್ಳ ಮಲ್ಲಣಿಯ, ತಾರಸ್ವರಂ- ಗಟ್ಟಿಯಾದ ಕೂಗು, ಎಂದು, ಕಿವಿಗೊಟ್ಟು, ಸಂಭಾವಿಸಿಯುಂ- ಯೋಚಿಸಿಯೂ, ಲತಾಗ್ರದೊಳ್, ಕುಳ್ಳಿ

ಯ, ನಾಘನಕಚಭರಿಯ ಕಬರೀಭರಮೆಂದನುವಿಸಿಯುಂ ಮಿಂತು ವಿಭ್ರಾಂತಿಯಿಂ ಮುಂದುಗೆಟ್ಟು ಮೋಹಿಸಿ ತೊಳಲ್ದು ಬಳಲ್ದು ಕೋಡಿ ಬಾಡಿ ಕಂಗೆಟ್ಟು ಮರವಟ್ಟು ನಂದನದೊಳಿರ್ಮಡಿಸಿದ ವಿರಹದುರಿಪಮಂ ಕಳೆಯಲಾರದೆ ಕಾಮಾಂಧತೆಯಿಂ ಕಂಗಾಣದೆ ಮಗುಳ್ದು ಮೆಲ್ಲನೈತರ್ಪಾಗಳ್ ॥ * * * * * * * * * * * * * *

ಮಹಾಸ್ರ ॥ ರಮಣೀದಿವ್ಯಾಂಗಚಂಚತ್ಪ್ರಬಳಸುರಭಿಯಂ ಕಾಣ್ಕೆಯೆಂಬಂತೆ ಕೊಂಡಾ । ದಮೆ ತನ್ನಿಶ್ವಾಸಸಂಪ್ರೇಷಿತಸಹಚರನೆಳ್ತರ್ಪವೋಲ್ ಬಂದುದುದ್ಯ ॥ ತ್ಪ್ರಮದಾತುಂಗಸ್ತನಾಲಿಂಗಿತಮೃಗಮದಕಾಶ್ಮೀರಕರ್ಪೂರಗಂಧಾಂ । ಧಿಮಮಾದ್ಯದ್ಭೃಂಗಝಂಕಾರರವಮುಖರಿತಂ ವೇಗದೂರಂ ಸಮೀರಂ ॥ .. ... ... ॥೭೯॥

ವ ॥ ಅಂತು ಬಂದಾ ಮಂದಾನಿಲಂಗೆ ಮೈಗೊಟ್ಟು ಮದನದಹನತಾಪತಪ್ತನಾಗಂಧವಾಹಂ ಬಂದ ಬಟ್ಟೆವಿಡಿದೆಯ್ತಂದು ಮಧ್ಯರಾತ್ರಿಯೊಳಾ ಮಲ್ಲಣಿಯ ಮಣಿಮಂದಿರದ ಮುಂದೆ ನಿಂದಿರ್ಪುದು ಮಾಗಳಾ ಮಲ್ಲಣಿ ಜನನಿಯ ನಿರ್ಬಂಧದಿ ನಾ ರಾಜಪುತ್ರನೊಳ್ವಿಷಮ

---

ರ್ದ, ಮಯೂರಿಯಂ- ಹೆಣ್ಣು ನವಿಲನ್ನು, ಆಘನಕಚಭರಿಯ- ಹೆಚ್ಚಾದ ಕೇಶಸಮುದಾಯವುಳ್ಳ ಆ ಮಲ್ಲಣಿಯ, ಕಬರೀಭರಂ, ಎಂದು, ಅನುಮಿಸಿಯುಂ- ಊಹಿಸಿಯೂ, ಇಂತು, ಕಂತುವಿಭ್ರಾಂತಿಯಿಂ- ಮನ್ಮಥನಿಂದುಂಟಾಗಿರುವ ಭ್ರಮೆಯಿಂದ, ಮುಂದುಗೆಟ್ಟು- ಬುದ್ಧಿತೋಚದೆ, ಮೋಹಿಸಿ- ಅನುರಾಗಿಸಿ, ತೊಳಲ್ದು- ಸಂಕಟಪಟ್ಟು, ಬಳಲ್ದು- ಆಯಾಸಗೊಂಡು, ಕೋಡಿ- ಭಯವಂ ಹೊಂದಿ, ಬಾಡಿ, ಕಂಗೆಟ್ಟು- ಕಾಂತಿಹೀನನಾಗಿ, ಮರವಟ್ಟು- ಜಡನಾಗಿ, ನಂದನದೊಳ್, ಇರ್ಮಡಿಸಿದ- ದ್ವಿಗುಣವಾದ, ವಿರಹದ, ಉರಿಪಮಂ- ತಾಪವನ್ನು, ಕಳೆಯಲ್, ಆರದೆ- ಸಮರ್ಥನಾಗದೆ, ಕಾಮಾಂಧತೆಯಿಂ, ಕಂಗಾಣದೆ, ಮಗುಳ್ದು- ಪುನಃ, ಮೆಲ್ಲನೆ, ಐತರ್ಪಾಗಳ್. * * * * * * * * * * * * * *

ಉದ್ಯತ್......ಮುಖರಿತಂ— ಉದ್ಯತ್- ಉತ್ಕೃಷ್ಟವಾದ, ಪ್ರಮದಾ- ಸ್ತ್ರೀಯರ, ತುಂಗ- ಉನ್ನತವಾದ, ಸ್ತನ- ಕೊಂಗಳಿಂದ, ಆಲಿಂಗಿತ- ಆಶ್ರಯಿಸಲ್ಪಟ್ಟ, ಮೃಗಮದ- ಕಸ್ತೂರಿ, ಕಾಶ್ಮೀರ- ಕುಂಕುಮಕೇಸರಿ, ಕರ್ಪೂರ- ಪಚ್ಚಕರ್ಪೂರ ಇವುಗಳ, ಗಂಧ- ಪರಿಮಳದಿಂದುಂಟಾದ, ಅಂಧಿಮ, ಕುರುಡುತನವುಳ್ಳ, ಮಾದ್ಯತ್- ಮದಪಡುತ್ತಿರುವ, ಭೃಂಗ- ತುಂಬಿಗಳ, ಝಂಕಾರಗಳ- ಝುಂ ಎಂಬ ಕೂಗಿನಿಂದ, ಮುಖರಿತಂ- ಶಬ್ದಾಯಮಾನವಾಗಿ ಮಾಡಲ್ಪಟ್ಟ, ವೇಗದೂರಂ- ವೇಗದಿಂ ದೂರವರ್ತಿಯಾದ ಅಂದರೆ (ಮೆಲ್ಲನೆ ಬೀಸುವ) ಸಮೀರಂ, ಆದಮೆ- ಅತ್ಯಂತವಾಗಿ, ತನ್ನಿಶ್ವಾಸಸಂಪ್ರೇಷಿತಸಹಚರಂ— ತತ್- ಆ ಸ್ತ್ರೀಯರ, ನಿಶ್ವಾಸ- ಉಸುರಿಂದ, ಸಂಪ್ರೇಷಿತ- ಕಳುಹಿಸಲ್ಪಟ್ಟ, ಸಹಚರಂ- ಭೃತ್ಯನುಳ್ಳದ್ದಾಗಿ, ಎಳ್ತರ್ಪವೋಲ್, ರಮಣೀ......ಸುರಭಿಯಂ— ರಮಣೀ- ಸ್ತ್ರೀಯರ, ದಿವ್ಯ- ಶ್ರೇಷ್ಠವಾದ, ಅಂಗ- ಶರೀರದ, ಚಂಚತ್- ಚಪಲವಾದ, ಪ್ರಬಳ- ಅಧಿಕವಾದ, ಸುರಭಿಯಂ- ಪರಿಮಳವನ್ನು, ಕಾಣ್ಕೆ, ಎಂಬಂತೆ, ಕೊಂಡು- ತೆಗೆದುಕೊಂಡು, ಬಂದುದು. ... ... ... ॥೭೯॥

ಅಂತು, ಬಂದ, ಆ ಮಂದಾನಿಲಂಗೆ, ಮದನದಹನತಾಪತಪ್ತಂ- ಮದನದಹನ- ಮನ್ಮಥಾಗ್ನಿಯು, ತಾಪ- ಕಾಯುವುದ, ತಪ್ತಂ- ಸಂತಾಪಪಡಿಸಲ್ಪಟ್ಟ ಮಲ್ಲಣನು, ಮೈಗೊಟ್ಟು, ಆ ಗಂಧವಾಹಂ, ಬಂದ, ಬಟ್ಟೆವಿಡಿದು- ಮಾರ್ಗವನ್ನನುಸರಿಸಿ, ಎಯ್ತಂದು, ಮಧ್ಯರಾತ್ರಿಯೊಳ್, ಆ ಮಲ್ಲಣಿಯ, ಮಣಿಮಂದಿರದ, ಮುಂದೆ, ನಿಂದು, ಇರ್ಪುದುಂ, ಆಗಳ್, ಆ ಮಲ್ಲಣಿ, ಜನನಿಯು, ನಿರ್ಬಂಧದಿಂ, ಆ ರಾಜಪುತ್ರನೊಳ್- ತಾಯಿಯು ತಂದು ಸೇರಿಸಿದ್ದ ದೊರೆಮಗನೊಡನೆ, ವಿಷಮರತಿಯೊಳ್, ಇರ್ಪ, ಶಯ್ಯಾಗೃಹಮಂ- ಮಲಗುವ

ರತಿಯೊಳಿರ್ದು ಶಯ್ಯಾಗೃಹಮನೊಯ್ಯನೆ ಪೊರಮಟ್ಟು ಗಂಡೂಷವಾರಿಯಿಂ ಬಾಹುಲ್ಲಿಮುಕ್ಕುಳಿಸಿ ಮಲ್ಲಣನಮೇಲುಗುಳಲೊಡನವಂ ಪೊಂಪುಳಿವೋಗಿ ಕಣ್ದೆರೆದು ಹಾಮಲ್ಲಣಿಯೆಂದು ಕಳವಳಿಸಿ ನುಡಿಯೆ ಕೇಳ್ದೆನ್ನ ಮನದನ್ನನ ನುಡಿ ಯಪ್ಪುದೆಂದು ಬೆದರಿ ಬೆಬ್ಬಳಿವೋಗಿ ಮರುಗಿ ಚಿಂತಿಸಿ ಸಾರ್ಕೈಗೆಯ್ದು ನಿರೀಕ್ಷಿಸಿಪಾಗಳ್ ನಿಜನೇತ್ರರುಚಿಯೊಡನೆ ಮಿಂಚು ಸಂಚಲಿಸೆ ಕಂಡು ಮಲ್ಲಣನೆಂದು ನಿರ್ಧರಿಸಿ ಕೈವಿಡಿದಪ್ಪಿ ವಿನಯೋಕ್ತಿಗಳಿಂ ದುಪಚರಿಸಿ ಮನ್ನಿಸಿ ಕೇಳೀಗೃಹದ ಪಿಂದಣೇಕಾಂತಭವನಕ್ಕೆ ಕರೆದೊಯ್ದಲ್ಲಿ ಚಂಚತ್ಕಾಂಚನಮಂಚಾಗ್ರದ ಮೃದುಳಶಯ್ಯಾತಳದೊಳವನೊಡನೆ ಕುಳ್ಳಿರ್ದು ಬಳ್ಳಿವರಿವ ನೇಹದಿಂ ಸುಸಿಲ ಸೆಸಗ ಲುಜ್ಜುಗಿಸೆ ವಿವೇಕನಿಧಿಯಾದ ಮಲ್ಲಣಂ ನೋಡಿ ॥ * * * * * * * * * * * *

ಕಂ ॥ ಬೆಲೆಗೊಟ್ಟ ರಮಣ ನಿರ್ದಪ । ನೆಲೆ ನಿನಗಿಂದಬಲೆ ಮನೆಯೊಳಿದರಿಂದವನಂ ॥ ಕೆಲಸಾರ್ಚಿ ನಿನ್ನೊಡನೆ ರತಿ । ಯೊಲವಾಂಪುದು ಕೂಡದೆಂದ ನೇಂ ಶುಚಿತೆಮನೋ ॥೩೦॥

ಕಂ ॥ ಹರಿಸುರಪವಿಧುವಿಧಾತ್ರರ । ಮರುಳ್ಚು ತನುಜಪರತಕ್ಕೆ ಮೆಯ್ಯಾನಿಸಿದ ॥ ತ್ಯುರುಭುಜಬಳಮದನನ ಕರ । ಶರಪಾತಕೆ ಸೆಡೆದ ನಲ್ತು ಮಲ್ಲಣನಗಳ್ ॥ ॥೩೧॥

ಕಂ ॥ ವಿರಹಾನಲನಿಂ ತನ್ನಯ । ಹರಣಂ ನಿಂದುರಿವ ಸಮಯದೊಳಗಾದೊಡಮಾ ॥ ತರುಣಿಯ ನುಚಿತರತಿಯ ನಾ । ದರಿಸಿದ ನಲ್ತವ ನತೀವಶುಚಿ ಶುಭಚರಿತಂ ॥೩೨॥

---

ಮನೆಯಿಂದ, ಒಯ್ಯನೆ-ಮೆಲ್ಲಗೆ, ಪೊರಮಟ್ಟು-ಹೊರಕ್ಕೆಹೊರಟು, ಗಂಡೂಷವಾರಿಯಿಂ-ಬಾಯಲ್ಲಿಮುಕ್ಕುಳಿಸಿದನೀರನ್ನು, ಆ ಮಲ್ಲಣನ, ಮೇಲೆ, ಉಗುಳಲ್, ಒಡನೆ, ಅವಂ, ಪೊಂಪುಳಿವೋಗಿ ರೋಮಾಂಚವಿಶಿಷ್ಟನಾಗಿ, ಕಣ್ದೆರೆದು, ಹಾ! ಮಲ್ಲಣಿ! ಎಂದು, ಕಳವಳಿಸಿ, ನುಡಿಯೆ, ಕೇಳ್ದು, ಎನ್ನ, ಮನದನ್ನನ, ನುಡಿ, ಅಪ್ಪುದು, ಎಂದು, ಬೆದರಿ, ಬೆಬ್ಬಳಿವೋಗಿ-ಬೆರಗಾಗಿ, ಮರುಗಿ ಚಿಂತಿಸಿ, ಸಾರ್ಕೈಗೆ-ಸಮೀಪಕ್ಕೆ, ಎಯ್ದು, ನಿರೀಕ್ಷಿಪಾಗಳ್, ನಿಜನೇತ್ರರುಚಿಯೊಡನೆ, ಮಿಂಚು, ಸಂಚಲಿಸೆ-ಚಪಲವಾಗಲು, ಕಂಡು, ಮಲ್ಲಣಂ, ಎಂದು, ಕೈವಿಡಿದು, ಅಪ್ಪಿ, ವಿನಯೋಕ್ತಿಗಳಿಂ, ಉಪಚರಿಸಿ, ಮನ್ನಿಸಿ, ಕೇಳೀಗೃಹದ-ರತಿಕ್ರೀಡೆಯಮನೆಯ, ಪಿಂದಣ-ಹಿಂದಿರುವ, ಏಕಾಂತಭವನಕ್ಕೆ, ಕರೆದು, ಒಯ್ದು, ಅಲ್ಲಿ, ಚಂಚತ್ಕಾಂಚನಮಂಚಾಗ್ರದ, ಮೃದುಳಶಯ್ಯಾತಳದೊಳ್, ಅವನೊಡನೆ, ಕುಳ್ಳಿರ್ದು, ಬಳ್ಳಿವರಿವ-ಅಭಿವೃದ್ಧವಾಗುವ, ನೇಹದಿಂ-ಪ್ರೀತಿಯಿಂದ, ಸುಸಿಲಸೆಸಗಲ್- ಸುರತವನ್ನು ಮಾಡುವದಕ್ಕೆ, ಉಜ್ಜುಗಿಸೆ- ಪ್ರಯತ್ನಿಸಲು, ವಿವೇಕನಿಧಿ, ಆದ, ಮಲ್ಲಣಂ, ನೋಡಿ.

ಎಲೆಅಬಲೆ ! ಇಂದು, ನಿನಗೆ, ಬೆಲೆಗೊಟ್ಟ- ಪಣದ್ರವ್ಯವನ್ನು ಕೊಟ್ಟಿರುವ, ರಮಣಂ, ಮನೆಯೊಳ್, ಇರ್ದಪಂ, ಅದರಿಂದೆ, ಅವನಂ, ಕೆಲಸಾರ್ಚಿ- ಒಂದುಕಡೆಗೆಬಿಟ್ಟು, ನಿನ್ನೊಡನೆ, ರತಿಯ, ಒಲವಾಂಪುದು- ಪ್ರೀತಿಯಂ ಹೊಂದುವದು, ಕೂಡದು, ಎಂದಂ, ಏಂಶುಚಿತೆಮನೋ- ಏನು ಪರಿಶುದ್ಧನೋ ! ॥೩೦॥

ಹರಿಸುರಪವಿಧುವಿಧಾತ್ರರ- ವಿಷ್ಣು ಇಂದ್ರ ಚಂದ್ರ ಬ್ರಹ್ಮರುಗಳನ್ನು, ಮರುಳ್ಚಿ- ಮರುಳುಮಾಡಿ, ಅನುಚಿತರತಕ್ಕೆ- ಅಯೋಗ್ಯವಾದ ಸುರತಕಾರ್ಯಕ್ಕೆ ಮೆಯ್ಯಾನಿಸಿದ, ಅತ್ಯುರುಭುಜಬಳಮದನನ- ಅತ್ಯಂತ ಬಾಹುಶಕ್ತಿಯುಳ್ಳ ಮನ್ಮಥನ, ಕರಶರಪಾತಕೆ- ಹಸ್ತದಲ್ಲಿರುವ ಬಾಣದ ಏಟಿಗೆ, ಮಲ್ಲಣಂ, ಆಗಳ್, ಸೆಡೆದಂ- ಭಯಪಟ್ಟವನು, ಅಲ್ತು. ... ... ... ... ॥೩೧॥

ಅತೀವಶುಚಿಶುಭಚರಿತಂ, ಅವಂ, ತನ್ನಯ, ಹರಣಂ- ಪ್ರಾಣವು, ವಿರಹಾನಲನಿಂ, ನಿಂದು, ಉರಿವ, ಸಮಯದೊಳಗಾದೊಡಂ, ಆತರುಣಿಯಂ, ಉಚಿತರತಿಯಂ, ಯೋಗ್ಯವಾದರತಿಕ್ರೀಡೆಯನ್ನು, ಆದರಿಸಿದಂ, ಪ್ರೀತಿಸಿದವನು, ಅಲ್ತು. ... ... ... ... ... ॥೩೨॥

ವ ॥ ಆಗಳಾಮಲ್ಲಣಿ ತನಗೊದಗಿದ ಕಾಮಾತಿರೇಕಮಂ ನಾಮಲ್ಲಣನ ನಯೋಕ್ತಿಪದ್ಧತಿಯೊಳಳವಡಿಸಿ ವಿಷಾದದಿಂ ಸುಯ್ದು ನಿಜಮಾತೆಯಂ ಬೈದು ॥ * * *

ಮತ್ತೇ ॥ ನಳಿನಮರಂದಮಂ ಸವಿವ ತುಂಬಿಗೆ ಸೇವ್ಯಮೆ ಕರ್ದಮಾಂಬು ನಿ । ರ್ಮಲಸುಧೆಗೊಂಬ ಹಂಸೆಗಿನಿದಪ್ಪುದೆ ಯಂಬಿಲದಂಬು ಚೂತಸ ॥ ತ್ಫಲಮ ನೊರಲ್ದು ಪೀರ್ವಗಿಳಿಗಿಂಪೆನಿಸಿರ್ಪುದೆ ಯಿಟ್ಟವಣ್ಣುಮಹೋ । ಜ್ವಲಗುಣಧಾಮ ನಿನ್ನ ನೆರೆವಳ್ಗೆನಗನ್ಯರತಂ ಮನೋಜ್ಞಮೆ ॥ ... ... .. ... ... ... ॥೩೩॥

ಕಂ ॥ ಮಾತೆಯ ಮಾತಿನ ಮಾಲೆಯ । ಬೂತಾಟದ ಬಲ್ದೊಡಂಕೆನಳಿದಾವೀರ್ವ ॥ ರ್ಪ್ರೀತಿ ಮಿಗೆ ಕೂಡಿ ಬಾಳ್ವೊಡ । ವೇತೆರದಿಂ ಶಂಭುಕೃಪೆಯೆ ಕಾರಣಮಲ್ತೆ ॥ ೩೪॥

ಕಂ॥ ಇದನರಿದೀಶ್ವರನಂ ನೀಂ । ಪದಪಿಂ ನುತಿಗೆಯ್ದು ಬೇಗಮುಚ್ಚೈಪುದೊಲವಿಂ ॥ ಮದನಾರಾತಿ ಮದಿಷ್ಟಮ ನೊದವಿಸಿ ಮದನಾಸ್ತ್ರಬಾಧೆಯಂ ಪರಿಹರಿಪಂ ॥ ॥೩೫॥

ಕಂ ॥ ಕನ್ನಡಿಯ ಮೇಲಣುರ್ದ್ದ ಕೆ । ಲಂನೆಲಕುರುಳ್ವನಿತುಕಾಲ ಮಾದೊಡ ಮೊಲವಿಂ ॥ ಸನ್ನುತಸಮಾಧಿವೆತ್ತು ಸ । ಮುನ್ನತಮತಿ ನುತಿಸು ಶಂಕರಂ ನಿನಗೊಲ್ವಂ ॥೩೬॥

ಕಂ ॥ ಅದರಿಂದೆ ಮುಕ್ತಿಭುಕ್ತಿಗ । ಳೊದವುಗುಮೆಮಗೆಂದ ರಮಣಿಯೊರೆಗೇಳ್ದು

---

ಆಗಳ್, ಆಮಲ್ಲಣಿ, ತನಗೆ,ಒದಗಿದ, ಕಾಮಾತಿರೇಕಮಂ, ಆಮಲ್ಲಣನ, ನಯೋಕ್ತಿಪದ್ಧತಿಯೊಳ್- ನೀತಿವಚನದಮಾರ್ಗದಲ್ಲಿ, ಅಳವಡಿಸಿ- ಸೇರಿಸಿ, ವಿಷಾದದಿಂ, ಸುಯ್ದು- ನಿಟ್ಟುಸುರಂಬಿಟ್ಟು, ನಿಜಮಾತೆಯಂ, ಬೈದು. * * * * * * * * * * * * * * * * *

ಮಹೋಜ್ವಲಗುಣಧಾಮ- ಅತಿ ಪ್ರಕಾಶಮಾನವಾದ ಸದ್ಗುಣಕ್ಕಾಶ್ರಯನಾದ ಮಲ್ಲಣನೇ! ನಳಿನಮಕರಂದಮಂ- ತಾವರೆಯ ಮಕರಂದವನ್ನು, ಸವಿವ, ತುಂಬಿಗೆ, ಕರ್ದಮಾಂಬು- ಕೆಸರಿನನೀರು, ಸೇವ್ಯಮೆ- ಸೇವಿಸಲ್ಪಡುವದಕ್ಕೆ ಯೋಗ್ಯವಾದದ್ದೆ ? ನಿರ್ಮಲಸುಧೆಗೊಂಬ- ಕೊಳಕಿಲ್ಲದಹಾಲನ್ನು ಸ್ವೀಕರಿಸುವ, ಹಂಸೆಗೆ- ಹೆಣ್ಣು ಹಂಸಪಕ್ಷಿಗೆ, ಅಂಬಿಲದ- ಅಂಬಲಿಯ, ಅಂಬು, ಇನಿದು- ಮಧುರವಾದದ್ದು, ಅಪ್ಪುದೆ ? ಚೂತಸತ್ಫಲಮಂ- ಒಳ್ಳೆಯಮಾವಿನಹಣ್ಣನ್ನು, ಒರಲ್ದು- ಪ್ರೀತಿಸಿ, ಪೀರ್ವ- ರಸವಂ ಕುಡಿಯುವ, ಗಿಳಿಗೆ, ಇಟ್ಟವಣ್- ಬೋರೆಯಹಣ್ಣು, ಇಂಪು, ಎನಿಸಿ, ಇರ್ಪುದೆ ? ನಿನ್ನ, ನೆರೆದಳ್ಗೆ, ಎನಗೆ, ಅನ್ಯರತಂ- ಮತ್ತೊಬ್ಬನೊಡನೆರತಿಕ್ರೀಡೆಯು, ಮನೋಜ್ಞಮೆ ? ... ... ... ... ॥೩೩॥

ಆವ್, ಈರ್ವರ್, ಮಾತೆಯ, ಮಾತಿನ, ಮಾಲೆಯ- ಪಙ್ತಿಯ, ಬೂತಾಟದ- ಬೂಟಾಟಿಕೆಯ, ಬಲ್ದೊಡಂಕೆ- ಬಲವಾದ ಪ್ರತಿಬಂಧನವನ್ನು, ಅಳಿದು, ಪ್ರೀತಿ, ಮಿಗೆ, ಕೂಡಿ, ಬಾಳ್ವೊಡಂ- ಬದುಕಬೇಕಾದರೆ, ಏತೆರದಿಂ- ಯಾವರೀತಿಯಿಂದಲಾದರೂ, ಶಂಭುಕೃಪೆಯೆ, ಕಾರಣಮಲ್ತೆ ? ... ॥೩೪॥

ನೀಂ, ಇದಂ, ಅರಿದು, ಪದಪಿಂ, ಈಶ್ವರನಂ, ನುತಿಗೆಯ್ದು, ಬೇಗ, ಒಲವಿಂ, ಮುಚ್ಚೈಪುದು, ಮದನಾರಾತಿ- ಮನ್ಮಥವೈರಿಯಾದ ಶಿವನು, ಮದಿಷ್ಟಮಂ, ಒದವಿಸಿ, ಮದನಾಸ್ತ್ರಬಾಧೆಯಂ- ಮನ್ಮಥನ ಬಾಣದ ಪೀಡನವನ್ನು, ಪರಿಹರಿಪಂ. ... ... ... ... ॥೩೫॥

ಸಮುನ್ನತಮತಿ ! ಕನ್ನಡಿಯಮೇಲಣ- ಕನ್ನಡಿಯ ಮೇಲಿರುವ, ಉರ್ದ್ದ- ಉದ್ದಿನಕಾಳು, ನೆಲಕೆ ಉರುಳ್ವನಿತುಕಾಲಂ ಆದೊಡಂ- ಉರುಳುವಷ್ಟು ಕಾಲವಾದರೂ, ಒಲವಿಂ, ಸನ್ನುತಸಮಾಧಿವೆತ್ತು- ಶ್ಲಾಘ್ಯವಾದ ಧ್ಯಾನವಂ ಹೊಂದಿ, ನುತಿಸು, ಶಂಕರಂ, ನಿನಗೆ, ಒಲ್ವಂ- ಪ್ರೀತಿಸುವನು. ... ॥೩೬॥

ಅದರಿಂದೆ, ಎಮಗೆ, ಮುಕ್ತಿಭುಕ್ತಿಗಳ್- ಮೋಕ್ಷವೂ ಸೌಖ್ಯವೂ, ಒದವುಗುಂ- ಪ್ರಾಪ್ತವಾಗುವದು.

ಮನಂ ॥ ಮುದವಾಳ್ದಿರೆ ತಾಂ ಮರುದಿನ । ದುದಯದೊಳವಳೊಡನೆ ಲಿಂಗಗೃಹಕೇ
ಳ್ತಂದಂ ॥ ... ... ... ... ... ... ॥೩೭॥

ವ ॥ ಅಂತೇಳ್ತಂದಾಪೊಳಲ ವಿಜಯೇಶ್ವರನೆಂಬ ಲಿಂಗದ ಸಮಕ್ಷದೊಳಾಮಲ್ಲಣಂ ನಿಂದು ಮಲ್ಲಣಿಯನಾಲಿಂಗದ ಪಿಂಗಡೆ ನಿಲವೇಳ್ದುದುಮಾವಿಜಯೇಶ್ವರನ ಪಿಂದೆ ಸೌಂದರ್ಯವತಿ ನಿಂದಿರಲೊಡನಾಮನೋರಮೆಯನಮಂದರಾಗರಸಭರಿತಕಟಾಕ್ಷದಿನವಲೋಕಿಸುತ್ತುಮನಿತರೊಳಾರಮಣಿಯಾಲಿಂಗದ ಮರೆಯೊಳೊಯ್ಯನೊಯ್ಯನೆ ಮೆಯ್ಗರೆವಾಗಳ್ಪರಿವಿಡಿಯಿನವಳ ಮಂಜುಳಾಕೃತಿಯನನಂತರಂ ಕಚನಿಚಯಮನಲ್ಲಿಂಬಳಿಯಿಂ ತುರುಂಬಿದಲರ ಪರಿಮಳಕ್ಕೆಳಸಿ ತಿರುಗುವಳಿಯನುಪಲಕ್ಷಿಸಿ ಕಾಂತಾಕಚಪ್ರಚಯಪುಷ್ಪಸುಗಂಧಿಗಂಧಲುಬ್ಧಭ್ರಮದ್ಭ್ರಮರೋಕ್ತಿಮುಖರಮುಖನಪ್ಪನಿತರೊಳಂ ಮೆಯ್ಗರೆಯೆ ತತ್ಕಾಂತೆಯೊಳಿಟ್ಟ ಕಟ್ಟಳ್ಕರಂ ಭೋಂಕನಾರಾಧ್ಯತಾನುಸಂಧಾನಂಮಿಗೆ ಶಿವನೊಳ್ಮೇಳಿಸಿ ಚಿತ್ತೈಕಾಗ್ರತೆಯಿಂ ಪೂರ್ವೋಕ್ತವಾಕ್ಯಾರ್ಥಂಬಿಡಿದು ಗಂಧರ್ವಯಕ್ಷಸುರಸಿದ್ಧಕಿರೀಟಕೋಟಿಸಂಘಟ್ಟಘೃಷ್ಟಚರಣಾಯ ನಮಃಶಿವಾಯೇತ್ಯಾದಿಸರಸತರಸದರ್ಥಷಟ್ತ್ರಿಂಶತ್ಪದ್ಯಂ

---

ದು, ಎಂದ, ರವ್ವಣಿಯು, ಒರೆಗೇಳ್ದು- ಮಾತನ್ನು ಕೇಳಿ, ಮನಂ, ಮುದವಾಳ್ದು, ಇರೆ, ತಾಂ, ಮರುದಿನದ, ಉದಯದೊಳ್, ಅವಳೊಡನೆ, ಲಿಂಗಗೃಹಕೆ, ಎಳ್ತಂದು. ... ... ... ॥೩೭॥

ಅಂತು, ಎಳ್ತಂದು, ಆಪೊಳಲ-ಆ ಪಟ್ಟಣದಲ್ಲಿರುವ, ವಿಜಯೇಶ್ವರಂ, ಎಂಬ, ಲಿಂಗದ, ಸಮಕ್ಷದೊಳ್- ಮುಂಗಡೆಯಲ್ಲಿ, ಆಮಲ್ಲಣಂ, ನಿಂದು, ಆಮಲ್ಲಣಿಯಂ, ಆಲಿಂಗದ, ಪಿಂಗಡೆ, ನಿಲವೇಳ್ದುದಂ- ನಿಂತುಕೊಳ್ಳುವಂತೆ ಹೇಳುತಲೂ, ಸೌಂದರ್ಯವತಿ, ಆವಿಜಯೇಶ್ವರನ, ಪಿಂದೆ, ನಿಂದಿರಲ್, ಒಡನೆ, ಆಮನೋರಮೆಯಂ- ಆ ಮನಃಕಾಂತೆಯನ್ನು, ಅಮಂದರಾಗರಸಭರಿತಕಟಾಕ್ಷದಿಂ- ಅಧಿಕವಾದ ಅನುರಾಗದಿಂ ತುಂಬಿದ ಕಡೆಗಣ್ಣೋಟದಿಂದ, ಅವಲೋಕಿಸುತ್ತಂ, ಅನಿತರೊಳ್, ಆರಮಣಿ, ಆಲಿಂಗದ, ಮರೆಯೊಳ್, ಒಯ್ಯನೊಯ್ಯನೆ- ಮೆಲ್ಲಮೆಲ್ಲನೆ, ಮೆಯ್ಗರೆವಾಗಳ್- ಅವಿತುಕೊಳ್ಳುವ ಕಾಲದಲ್ಲಿ, ಪರಿವಿಡಿಯಿಂ- ಕ್ರಮವಾಗಿ. ಅವಳ, ಮಂಜುಳಾಕೃತಿಯಂ- ಮನೋಹರವಾದ ಆಕಾರವನ್ನು, ಅನಂತರಂ- ಕಚನಿಚಯಮಂ- ಕೂದಲಿನ ಗುಂಪನ್ನು, ಅಲ್ಲಿಂಬಳಿಯಿಂ- ಅಲ್ಲಿಂದ ಮೇಲೆ, ತುರುಂಬಿದ- ತುಂಬಿರುವ, ಅಲರ- ಹೂವಿನ, ಪರಿಮಳಕ್ಕೆ, ಎಳಸಿ, ತಿರುಗುವ, ಅಳಿಯಂ, ಉಪಲಕ್ಷಿಸಿ- ಗುರಿಮಾಡಿಕೊಂಡು, ಕಾಂತಾ......ಮುಖಂ— "ಕಾಂತಾ- ಪ್ರಿಯೆಯ, ಕಚಪ್ರಚಯ- ಕೇಶಸಮುದಾಯದಲ್ಲಿರುವ, ಪುಷ್ಪ- ಹೂವಿನ, ಸುಗಂಧಿಗಂಧ- ಪರಿಮಳಯುಕ್ತವಾದ ವಾಸನೆಯಲ್ಲಿ, ಲುಬ್ಧ- ಆಸಕ್ತಗಳಾದ ಕಾರಣವೇ, ಭ್ರಮತ್- ಸುತ್ತುತ್ತಿರುವ, ಭ್ರಮರ- ತುಂಬಿಗಳ" ಎಂಬ, ಉಕ್ತಿ- ಮಾತಿನಿಂದ, ಮುಖರ- ಶಬ್ದಾಯಮಾನವಾದ, ಮುಖಂ- ಬಾಯುಳ್ಳವನು, ಅಪ್ಪ, ಅನಿತರೊಳಂ, ಮೆಯ್ಗರೆಯೆ- ದೇಹವಂ ಮರೆಮಾಡಿಕೊಳ್ಳಲು, ತತ್ಕಾಂತೆಯೊಳ್, ಇಟ್ಟ, ಕಟ್ಟಳ್ಕರಂ- ಅತಿಶಯವಾದ ಅನುರಾಗವನ್ನು, ಭೋಂಕನೆ- ಬೇಗನೆ, ಆರಾಧ್ಯತಾನುಸಂಧಾನಂ- ಗುರುತ್ವದ ಅನುಸಂಧಾನವು, ಮಿಗೆ- ಹೆಚ್ಚಾಗಲು, ಶಿವನೊಳ್, ಮೇಳಿಸಿ- ಸೇರಿಸಿ, ಚಿತ್ತೈಕಾಗ್ರತೆಯಿಂ, ಪೂರ್ವೋಕ್ತವಾಕ್ಯಾರ್ಥಂಬಿಡಿದು- ಮೊದಲುಹೇಳಿದ "ಕಾಂತಾಕಚಪ್ರಚಯ" ವೆಂಬಮಾತಿನ ಅರ್ಥವನ್ನನುಸರಿಸಿ, ಗಂಧರ್ವ......ಚರಣಾಯ— "ಗಂಧರ್ವ, ಯಕ್ಷ, ಸುರ, ಸಿದ್ಧ ಇವರುಗಳ, ಕಿರೀಟಕೋಟಿ- ಅನೇಕಕಿರೀಟಗಳಿಂದ, ಸಂಘಟ್ಟ- ಸೇರಿಸಲ್ಪಟ್ಟದ್ದಾದಕಾರಣವೇ ಘೃಷ್ಟ- ಪ್ರಕಾಶಿಸಲ್ಪಟ್ಟ, ಚರಣಾಯ- ಪಾದವುಳ್ಳ, ಶಿವಾಯ- ಶಿವನಿಗೋಸ್ಕರ, ನಮಃ," ಇತ್ಯಾದಿ......ಪದ್ಯಂಗಳಂ— ಇತ್ಯಾದಿ- ಹೀಗೆಯೆ ಮೊದಲಾಗು

೩೯

ಗಳಿಂ ಕವಿರಾಜಮೌಳಿಮಣಿ ರಾಜಮೌಳಿಮಣಿಯಂ ಪೊಗಳ್ವನಮಲ್ಲಿ ॥ * * * *

ಚಂ ॥ ಎಳೆವೆರೆ ದೇವಗಂಗೆ ಮಿಸುಪಗ್ಗದಕೆಂಜೆಡೆ ನಾಗಕುಂಡಲಂ । ತೊಳಪ ದಿನೇಶಚಂದ್ರಶಿಖಿನೇತ್ರವಿರಾಜಿತವಕ್ತ್ರಮಂಡಲಂ ॥ ಗಳದವಿಷಂ ಗಜಾಜಿನಪಟಂ ಮೃಗಶೂಲವರಾಭಯಂಗಳಂ । ತಳೆದ ಕರಂ ವಿರಾಜಿಸೆ ಶಿವಂ ನಿಜರೂಪನವಂಗೆ ತೋರಿದಂ ॥ ೩೮ ॥

ವ ॥ ಅಂತು ತೋರಿ ವಿಜಯೇಶ್ವರಂ ನಿಜಪ್ರಸಾದಮಂ ಕರುಣಿಸಿ ಸುರಿವ ಸುರಕುಜಸುಮನೋವರ್ಷದೊಳ್ ಮೊರೆವ ದಿವ್ಯಾನಕಧ್ವನಿಯೊಳ್ ಮಣಿಪುಷ್ಪಕಮಂ ಬರಿಸಿ ಮಲ್ಲಣನಂ ಮಲ್ಲಣಿಯುಮಾಕೆಯ ಕೈಗಿಳಿಯುಮವಳ ಜನನಿಯುಮಂ ನಡರೊಳ್ ಕುಳ್ಳಿರಿಸಿ ಪಿರಿಯ ಸಂಭ್ರಮದಿಂ ನಿಜಲೋಕಕ್ಕೆ ಕಳುಪಿ ಪರಮಸುಖದೊಳಿರಿಸಿದ ನದುಕಾರಣದಿಂ ॥

ಕಂ ॥ ಸುವಿವೇಕವಾಳ್ದ ರಮಣಿಯ । ಸವಿನುಡಿಯುಂ ಕೇಳ್ದು ಮಲ್ಲಣಂಪಡೆಯನೆ ಪೇಳ್ ಶಿವಪದಮನಾಪ್ತರಮಣೀ । ನಿವಹದ ನುಡಿಗೇಳ್ದವರ್ಗೆ ಕೊರತೆಗಳೊಳವೇ ॥ ೩೯ ॥

ವ ॥ ಅದಲ್ಲದೆಯುಮಿನ್ನುಂ ನಿಜಸತಿಯ ಕಟಕಿವಾತಂ ಹಿತೋಕ್ತಿಗೆತ್ತು ನೆಗಳ್ದ ಶರಣನ ಚರಿತ್ರಮಂ ಕೇಳ್ವುದೆಂತೆನೆ ॥ * * * * * * * * * *

---

ಳ್, ಸರಸತರ-ಅತಿರಸವಿಶಿಷ್ಟಗಳಾದ, ಸದರ್ಥ- ಒಳ್ಳೆಯ ಅರ್ಥವುಳ್ಳ, ಷಟ್ತ್ರಿಂಶತ್ಪದ್ಯಂಗಳಿಂ- ಮೂವತ್ತಾರುಪದ್ಯಗಳಿಂದ, ಕವಿರಾಜಮೌಳಿಮಣಿ- ಕವಿಶ್ರೇಷ್ಠರಲ್ಲಿ ಕಿರೀಟರತ್ನಪ್ರಾಯನಾದ ಮಲ್ಲಣನು, ರಾಜಮೌಳಿಮಣಿಯಂ- ಚಂದ್ರನೇ ಕಿರೀಟದ ರತ್ನವಾಗುಳ್ಳ ಪರಮೇಶ್ವರನನ್ನು, ಪೊಗಳ್ವನಂ, ಅಲ್ಲಿ. *

ಎಳೆವೆರೆ- ಬಾಲಚಂದ್ರ, ದೇವಗಂಗೆ, (ಇವುಗಳಿಂದ) ಮಿಸುಪ, ಅಗ್ಗದ- ಅಧಿಕವಾದ, ಕೆಂಜೆಡೆ, ನಾಗಕುಂಡಲಂ- ಸರ್ಪದ ಕರ್ಣಕುಂಡಲ, ತೊಳಪ, ದಿನೇಶಚಂದ್ರಶಿಖಿನೇತ್ರವಿರಾಜಿತವಕ್ತ್ರಮಂಡಲಂ- ಸೂರ್ಯಚಂದ್ರಾಗ್ನಿ ನೇತ್ರಗಳಿಂದ ಪ್ರಕಾಶಿಸುವ ಮುಖಮಂಡಲ, ಗಳದ- ಕತ್ತಿನಲ್ಲಿರುವ, ವಿಷಂ, ಗಜಾಜಿನಪಟಂ-ಆನೆಯಚರ್ಮದ ಬಟ್ಟೆ, ಮೃಗಶೂಲವರಾಭಯಂಗಳಂ, ತಳೆದ, ಕರಂ, ವಿರಾಜಿಸೆ, ಶಿವಂ, ಅವಂಗೆ, ನಿಜರೂಪಂ, ತೋರಿದಂ. ... ... ... ... ... ॥ ೩೮ ॥

ಅಂತು, ತೋರಿ, ವಿಜಯೇಶ್ವರಂ, ನಿಜಪ್ರಸಾದಮಂ- ತನ್ನ ಅನುಗ್ರಹವನ್ನು, ಕರುಣಿಸಿ, ಸುರಕುಜಸುಮನೋವರ್ಷದೊಳ್- ಕಲ್ಪವೃಕ್ಷದ ಹೂವಿನ ಮಳೆಯೊಡನೆ, ಮೊರೆವ- ಶಬ್ದಮಾಡುವ, ದಿವ್ಯಾನಕಧ್ವನಿಯೊಳ್- ದೇವತೆಗಳ ನಗಾರಿಯ ಶಬ್ದದೊಡನೆ, ಮಣಿಪುಷ್ಪಕಮಂ- ರತ್ನಖಚಿತವಾದ ದೇವಯಾನವನ್ನು, ಬರಿಸಿ, ಮಲ್ಲಣನಂ, ಮಲ್ಲಣಿಯುಂ, ಆಕೆಯ, ಕೈಗಿಳಿಯುಂ, ಅವಳ, ಜನನಿಯುಮಂ-ತಾಯನ್ನೂ, ಅದರೊಳ್, ಕುಳ್ಳಿರಿಸಿ, ಪಿರಿಯ- ಹೆಚ್ಚಾದ, ಸಂಭ್ರಮದಿಂ, ನಿಜಲೋಕಕ್ಕೆ, ಕಳುಪಿ, ಪರಮಸುಖದೊಳ್, ಇರಿಸಿದಂ, ಅದುಕಾರಣದಿಂ. * * * * * * * * * * * * * *

ಸುವಿವೇಕವಾಳ್ದ-ಒಳ್ಳೆಯ ತಿಳುವಳಿಕೆಯಂಪೊಂದಿದ, ರಮಣಿಯ, ಸವಿನುಡಿಯುಂ, ಕೇಳ್ದು, ಮಲ್ಲಣಂ, ಶಿವಪದಮಂ, ಪಡೆಯನೆ ? ಪೇಳ್, ಆಪ್ತರಮಣೀನಿವಹದ- ಹಿತರಾದ ಸ್ತ್ರೀಯರ ಗುಂಪಿನ, ನುಡಿಗೇಳ್ದವರ್ಗೆ, ಕೊರತೆಗಳ್, ಒಳವೆ ? ... ... ... ... ॥ ೩೯ ॥

## ಪಾಲಗುರ್ಜರ ಕಥೆ.

ಅದು, ಅಲ್ಲದೆಯುಂ, ಇನ್ನುಂ, ನಿಜಸತಿಯ- ತನ್ನಹೆಂಡತಿಯ, ಕಟಕಿವಾತಂ- ಮೂದಲೆಯಮಾತನ್ನು, ಹಿತೋಕ್ತಿಗೆತ್ತು- ಆಪ್ತವಚನವೆಂದು ತಿಳಿದು, ನೆಗಳ್ದ- ಪ್ರಸಿದ್ಧನಾದ, ಶರಣನ, ಚರಿತ್ರಮಂ, ಕೇಳ್ವುದು, ಎಂತು ? ಎನೆ. * * * * * * * * * * * * * * * *

ಮತ್ತೆ॥ ಉರಗೇಂದ್ರಪ್ರಮದಾವಿಹಾರಸರವೆಂಬಂತಿರ್ದಗಾಧಾಂಬುಸ । ತ್ಪರಿಖಾ
ಚಕ್ರದಿ ನಭ್ರಚುಂಬಕನಕಪ್ರಾಕಾರದಿಂ ರತ್ನಗೋ॥ ಪುರಲಿಂಗಾಲಯಹರ್ಮ್ಯಚಾರುತರಕೇ
ಳೀಗೇಹಸಂದೋಹದಿಂ । ಕರವೊಪ್ಪಿರ್ದುದು ಪಾಲಗುರ್ಜ್ಜರಪುರಂಭೂಲೋಕಶೋಭಾಕರಂ॥

ಚಂ॥ ಕವಿಗಳ ಕಾವ್ಯಶಿಕ್ಷಕರ ವೀರರ ಧೀರರ ಸತ್ಪುರಾಣಸು । ಶ್ರವಣಧುರೀಣ ರಾ
ಗಮವಿದರ್ಕ್ಕಳ ಶಂಭುಪದಾಂಬುಜಾರ್ಚ್ಚನೋ॥ ತ್ಸವರ ಕಳಾವಿಚಕ್ಷಣರ ಮಂತ್ರಿಗಳಾಪ್ತ
ರ ರಾಜಪುತ್ರರೊ ।ಪ್ಪುವಗಜವಾಜಿವಾಹಕರ ಮಂತಣವೊಪ್ಪುಗು ಮಲ್ಲಿ ಸಂತತಂ ॥೪೧॥

ಮತ್ತೇ॥ ಘುಸೃಣಂ ಕತ್ತುರಿ ಕರ್ಪ್ಪುರಂ ಮಲಯಜಂ ಪೂಮಾಲೆ ತಾಂಬೂಲಿಕಾ ।
ವಿಸರಂ ರತ್ನಚಯಂ ನವೀನಮೃದುವಾಸಶ್ರೇಣಿ ದಿವ್ಯೌಷಧಿ ॥ಪ್ರಸರಂ ತಳ್ತಿಡಿದಿರ್ಪ ಸದ್ವಿ
ಪಣಿಯಿಂ ಸೂರ್ಯೇಂದುವೀಧೀಸಮುಲ್ಲಸಿತಂ ಮಂಗಳತೂರ್ಯನಾದರುಚಿರಂ ಕಣ್ಗೊಪ್ಪುಗುಂ
ತತ್ಪುರಂ ॥ ... ... ... ... ... ... ॥೪೨॥

ಕಂ॥ ಆಪುರದಧಿಪತಿ ವಿಪುಳಧ । ರಾಪತಿಮಣಿಮೌಳಿಕಿರಣಪರಿವೃತಚರಣಂ ॥ ಗೋ
ಪಧ್ವಜಪದಭಜಕ ನಿ । ಳಾಪಾಲಂ ಪಾಲಗುರ್ಜ್ಜರಕ್ಷಿತಿನಾಥಂ ॥ ... ॥೪೩॥

---

ಉರಗೇಂದ್ರಪ್ರಮದಾವಿಹಾರಸರಂ- ಸರ್ಪಸ್ತ್ರೀಯರು ಕ್ರೀಡಿಸುವ ಕೊಳವು, ಎಂಬಂತೆ, ಇರ್ದ್ದ
ಅಗಾಧಾಂಬುಸತ್ಪರಿಖಾಚಕ್ರದಿಂ- ಆಳವಾದ ನೀರುಳ್ಳ ಗುಂಡಾದ ಕಂದಕದಿಂದ, ಅಭ್ರಚುಂಬಿಕನಕಪ್ರಾಕಾರ
ದಿಂ- ಆಕಾಶವನ್ನು ಸೋಂಕುತ್ತಿರುವ ಚಿನ್ನದ ಕೋಟೆಯಿಂದ, ರತ್ನಗೋಪುರಲಿಂಗಾಲಯಹರ್ಮ್ಯಚಾರುತರ
ಕೇಳೀಗೇಹಸಂದೋಹದಿಂ- ರತ್ನಖಚಿತವಾದ ಗೋಪುರಗಳುಳ್ಳ ಶಿವದೇವಸ್ಥಾನಗಳು ಉಪ್ಪರಿಗೆಗಳು ಮ
ನೋಹರವಾದ ಕ್ರೀಡಾಗೃಹಗಳು ಇವುಗಳ ಗುಂಪಿನಿಂದ, ಭೂಲೋಕಶೋಭಾಕರಂ, ಪಾಲಗುರ್ಜ್ಜರಪುರಂ,
ಕರಂ, ಒಪ್ಪಿ, ಇರ್ದ್ದುದು. ... ... ... ... ... ॥೪೦॥

ಕವಿಗಳ, ಕಾವ್ಯಶಿಕ್ಷಕರ- ಕಾವ್ಯಪಾಠವಂ ಹೇಳುವರ, ವೀರರ, ಧೀರರ– ವಿದ್ವಾಂಸರ, ಸತ್ಪುರಾಣ
ಸುಶ್ರವಣಧುರೀಣರ- ಒಳ್ಳೆಯ ಪುರಾಣವನ್ನು ಕೇಳುವದರಲ್ಲಿ ಸಮರ್ಥರಾದವರ, ಆಗಮವಿದರ್ಕ್ಕಳ- ಆಗ
ಮವನ್ನು ತಿಳಿದವರ, ಶಂಭುಪದಾಂಬುಜಾರ್ಚ್ಚನೋತ್ಸವರ- ಶಿವಪಾದಕಮಲವನ್ನು ಪೂಜಿಸುವದರಲ್ಲಿ ಸಂ
ತೋಷಪಡುತ್ತಿರುವರ, ಕಳಾವಿಚಕ್ಷಣರ– ಸಕಲ ವಿದ್ಯೆಗಳಲ್ಲೂ ಪ್ರೌಢರಾದವರ, ಮಂತ್ರಿಗಳ, ಆಪ್ತರ, ರಾಜಪು
ತ್ರರ, ಒಪ್ಪುವ, ಗಜವಾಜಿವಾಹಕರ- ಆನೆ ಕುದುರೆ ಸವಾರರ, ಮಂತಣಂ- ಗುಂಪು, ಅಲ್ಲಿ, ಸಂತತಂ, ಒ
ಪ್ಪುಗುಂ. ... ... ... ... ... ... ॥೪೧॥

ಸೂರ್ಯೇಂದುವೀಧೀಸಮುಲ್ಲಸಿತಂ-ಪೂರ್ವ ಪಶ್ಚಿಮ ಉತ್ತರ ದಕ್ಷಿಣವೀಧಿಗಳಿಂದ ಪ್ರಕಾಶಿಸುವ, ಮಂ
ಗಳತೂರ್ಯನಾದರುಚಿರಂ-ಶುಭಕರವಾದ ವಾದ್ಯಧ್ವನಿಯಿಂದ ಮನೋಹರವಾದ, ತತ್ಪುರಂ, ಘುಸೃಣಂ-ಕುಂ
ಕುಮಕೇಸರಿ, ಕತ್ತುರಿ, ಕರ್ಪ್ಪುರಂ, ಮಲಯಜಂ- ಶ್ರೀಗಂಧ, ಪೂಮಾಲೆ, ತಾಂಬೂಲಿಕಾವಿಸರಂ, ರತ್ನಚ
ಯಂ, ನವೀನಮೃದುವಾಸಶ್ರೇಣಿ- ಹೊಸದಾಗಿ ಕೋಮಲವಾದ ಬಟ್ಟೆಗಳ ಪಙ್ತಿ, ದಿವ್ಯೌಷಧಿಪ್ರಸರಂ-
ಶ್ರೇಷ್ಠಗಳಾದ ಔಷಧಿಗಳ ಸಮೂಹವು, ತಳ್ತು- ಸೇರಿ, ಇಡಿದು- ತುಂಬಿ, ಇರ್ಪ, ಸದ್ವಿಪಣಿಯಿಂ- ಒಳ್ಳೆ
ಯ ಅಂಗಡಿ ಬೀದಿಯಿಂದ, ಕಣ್ಗೆ, ಒಪ್ಪುಗುಂ. ... ... ... ॥೪೨

ಆಪುರದ, ಅಧಿಪತಿ, ವಿಪುಳ......ಚರಣಂ— ವಿಪುಳ- ವಿಸ್ತಾರವಾದ, ಧರಾಪತಿ- ರಾಜರ, ಮಣಿ
ಮೌಳಿ- ರತ್ನಖಚಿತವಾದ ಕಿರೀಟಗಳ, ಕಿರಣ- ಕಾಂತಿಯಿಂದ, ಪರಿವೃತ- ಆವರಿಸಲ್ಪಟ್ಟ, ಚರಣಂ, ಗೋ
ಪಧ್ವಜಪದಭಜಕಂ- ವೃಷಭಕೇತನನಾದ ಈಶ್ವರನ ಪಾದವಂ ಸೇವಿಸ್ತುವ, ಇಳಾಪಾಲಂ- ಭೂಮಿಯನ್ನು
ಸಂರಕ್ಷಿಸುವ, ಪಾಲಗುರ್ಜ್ಜರಕ್ಷಿತಿನಾಥಂ- ಪಾಲಗುರ್ಜ್ಜರನೆಂಬ ದೊರೆಯು. ... ... ॥೪೩॥

ಚಂ॥ ಅಗಣಿತಜಂಗಮಪ್ರಕರಪಾವನಪಾದಸರೋಜಷಟ್ಪದಂ । ಸುಗುಣಕಲಾಪನಾತ್ಮಸಕಲೇಪ್ಸಿತಸುಖಾರ್ಪಣತೋಷಿತೇಶ್ವರಂ ॥ ಜಗದಧಿರಕ್ಷಣಪ್ರಥಿತ ನಾಂಚಿತವೃತ್ತ ನರಾತಿದರ್ಪಪ । ನ್ನಗಖಗರಾಜ ನಾಜಿವಿಜಯಂ ಶಿವತತ್ವಕಳಾವಿಚಕ್ಷಣಂ ॥ ... ॥೪೪॥

ಕಂ॥ ಆನೃಪನ ಸುಪ್ರತಾಪನ । ವೀನಾರ್ಕಪ್ರಭೆಯು ಮುಂದೆ ಮಿಂಬುಳುವಿನವೊ॥ ಲ್ಭಾನು ನೆಸೆದಿರ್ಕು ಮಲ್ಲದೊಡೇನದು ಖದ್ಯೋತ ಮೆಂಬ ಪೆಸರಾಂತಪುದೆ ॥ ॥೪೫॥

ಮತ್ತೇ॥ ಘನಶೃಂಗಾರವಿಲಾಸಧಾರಿಣಿ ಕಲಾಕಲ್ಲೋಲಮಾಲಾತರಂ । ಗಿಣಿಸಾಹಿತ್ಯರಸಪ್ರಕಾಶಿನಿ ಲಸತ್ತಾರುಣ್ಯಸೌಭಾಗ್ಯದಾ ॥ ಯಿನಿ ಸೌಶೀಲ್ಯಪಥಪ್ರಚಾರಿಣಿ ಮಹಾಸೌಂದರ್ಯಮಾಧುರ್ಯಮೋ । ಹಿನಿ ತದ್ಭೂಭುಜಧರ್ಮಗೇಹಿನಿ ಸದಾಕಲ್ಯಾಣಿಕಣ್ಗೊಪ್ಪಿದಳ್॥

ಕಂ॥ ಆಕಾಂತೆಯೊಡನೆ ಕಂತುಕೆ । ಳಾಕೌಶಲಸುಖಮ ನೊಂದುತಂ ಮೆರೆದಿರ್ದಂ । ಭೂಕಾಂತಂ ತನಗೊದವಿದ । ನೇಕಸುಖಾನೀಕಮಂ ಶಿವಂಗರ್ಪಿಸುತಂ ॥ ... ॥೪೭॥

ಕಂ॥ ಆವಾವಕೇಳಿಯೊಳೆ ನಿಜ । ಭಾವಂ ಭವಹರನನಪ್ಪಿ ಬಿಡದಿರ್ಪುದರಿಂ ॥ ಭೂವರ

---

ಅಗಣಿತ......ಷಟ್ಪದಂ— ಅಗಣಿತ- ಎಣಿಸುವದಕ್ಕಾಗದ, ಜಂಗಮ- ಚರಮೂರ್ತಿಗಳ, ಪ್ರಕರ- ಗುಂಪಿನ, ಪಾವನ- ಪರಿಶುದ್ಧವಾದ, ಪಾದ- ಚರಣವೆಂಬ, ಸರೋಜ- ಕಮಲಕ್ಕೆ, ಷಟ್ಪದಂ- ತುಂಬಿಯಾದವನು, ಸುಗುಣಕಲಾಪಂ, ಆತ್ಮಸಕಲೇಪ್ಸಿತಸುಖಾರ್ಪಣತೋಷಿತೇಶ್ವರಂ-ತನಗೆ ಇಷ್ಟವಾದಸಕಲಸೌಖ್ಯವನ್ನು ಸಮರ್ಪಿಸುವದರಿಂದ ಸಂತೋಷಪಡಿಸಲ್ಪಟ್ಟ ಪರಮೇಶ್ವರನುಳ್ಳವನು, ಜಗದಧಿರಕ್ಷಣಪ್ರಥಿತಂ- ಜಗತ್ತನ್ನು ಸಂರಕ್ಷಿಸುವದರಲ್ಲಿ ಪ್ರಸಿದ್ಧನು, ಅಂಚಿತವೃತ್ತಂ- ಪೂಜ್ಯವಾದ ನಡತೆಯುಳ್ಳವನು, ಅರಾತಿದರ್ಪಪನ್ನಗಖಗರಾಜಂ- ಶತ್ರುಗಳ ಅಹಂಕಾರವೆಂಬ ಸರ್ಪಕ್ಕೆ ಗರುಡನಾದವನು, ಆಜಿವಿಜಯಂ- ಯುದ್ಧದಲ್ಲಿ ಜಯಶೀಲನು, ಶಿವತತ್ವಕಳಾವಿಚಕ್ಷಣಂ- ಪರತತ್ವವಿಚಾರವೆಂಬ ವಿದ್ಯೆಯಲ್ಲಿ ಕುಶಲನು. ॥೪೪॥

ಆ ನೃಪನ, ಸುಪ್ರತಾಪನವೀನಾರ್ಕಪ್ರಭೆಯು- ಒಳ್ಳೆಯ ಪರಾಕ್ರಮವೆಂಬ ಹೊಸಸೂರ್ಯನ ಕಾಂತಿಯು, ಮುಂದೆ, ಭಾನು- ಸೂರ್ಯನು, ಮಿಂಬುಳುವಿನವೋಲ್- ಮಿಂಚಿನ ಹುಳದಹಾಗೆ, ಎಸೆದು, ಇರ್ಕುಂ, ಅಲ್ಲದೊಡೆ, ಅದು- ಆ ಸೂರ್ಯಮಂಡಲವು, ಖದ್ಯೋತಂ- ಮಿಂಚಿನಹುಳುವು ( ಅಂತರಿಕ್ಷದಲ್ಲಿ ಪ್ರಕಾಶಿಸುವದು ) ಎಂಬ, ಪೆಸರಾಂತಪುದೆ ? ... ... ... ... ॥೪೫॥

ಘನಶೃಂಗಾರವಿಲಾಸಧಾರಿಣಿ- ಶ್ರೇಷ್ಠವಾದ ಶೃಂಗಾರಚೇಷ್ಟೆಯಂ ಧರಿಸಿರುವ, ಕಲಾಕಲ್ಲೋಲಮಾಲಾತರಂಗಿಣಿ- ವಿದ್ಯೆಯೆಂಬ ತೆರೆಗಳ ಸಾಲುಳ್ಳ ಹೊಳೆಯಾದ, ಸಾಹಿತ್ಯರಸಪ್ರಕಾಶಿನಿ- ಸಾಹಿತ್ಯರಸಗಳನ್ನು ಪ್ರಕಾಶಪಡಿಸುವ, ಲಸತ್ತಾರುಣ್ಯಸೌಭಾಗ್ಯದಾಯಿನಿ- ಪ್ರಕಾಶಿಸುವ ಯೌವನ ಐಶ್ವರ್ಯಗಳಿಗೆ ಪ್ರವಾಹರೂಪಳಾದ, ಸೌಶೀಲ್ಯಪಥಪ್ರಚಾರಿಣಿ- ಒಳ್ಳೆಯ ನಡತೆಯೆಂಬ ಮಾರ್ಗದಲ್ಲಿ ಸಂಚರಿಸುವ, ಮಹಾಸೌಂದರ್ಯಮಾಧುರ್ಯಮೋಹಿನಿ- ಹೆಚ್ಚಾದ ಸುಂದರತ್ವ ಮನೋಹರತ್ವಗಳಿಂದ ಪ್ರೀತಿಕರಳಾದ, ಸದಾಕಲ್ಯಾಣಿ- ಯಾವಾಗಲೂ ಮಂಗಳಸ್ವರೂಪಿಣಿಯಾದ, ತದ್ಭೂಭುಜಧರ್ಮಗೇಹಿನಿ— ಆ ರಾಜನ ಧರ್ಮಪತ್ನಿಯು, ಕಣ್ಗೆ, ಒಪ್ಪಿದಳ್. ... ... ... ... ... ॥೪೬॥

ಆ ಕಾಂತೆಯೊಡನೆ, ಭೂಕಾಂತಂ- ರಾಜನು, ಕಂತುಕಳಾಕೌಶಲಸುಖಮಂ- ಮದನವಿದ್ಯಾಪ್ರೌಢಿಮೆಯಿಂದುಂಟಾದ ಸೌಖ್ಯವನ್ನು, ಒಂದುತಂ. ತನಗೆ. ಒದವಿದ, ಅನೇಕಸುಖಾನೀಕಮಂ- ಸಕಲಸೌಖ್ಯಸಮುದಾಯವನ್ನು, ಶಿವಂಗೆ, ಅರ್ಪಿಸುತಂ, ಮೆರೆದು, ಇರ್ದಂ. ... ... ॥೪೭॥

ಆವಾವಕೇಳಿಯೊಳೆ-ಯಾವಯಾವ ಆಟದಲ್ಲೂ, ನಿಜಭಾವಂ- ತನ್ನಮನಸ್ಸು, ಭವಹರನಂ- ಶಿವನನ್ನು, ಅಪ್ಪಿ- ಆಶ್ರಯಿಸಿ, ಬಿಡದೆ, ಇರ್ಪುದರಿಂ, ಭೂವರನ- ರಾಜನ, ಬಿನದಮೆಲ್ಲಂ-ವಿನೋದವೆಲ್ಲವೂ, ಉಮಾವರನ

ನಬಿನದ ಮೆಲ್ಲ ಮು । ಮಾವರನಡಿದಳಿರ ಪೂಜೆಯೆನೆ ಸಂದಿರ್ಪ್ಪಂ ॥ ... ॥೪೮॥

ಕಂ॥ ಎರವಿಲ್ಲದ ದೊರೆಯಿಲ್ಲದ । ನಿರುಪಮನಿಜಭಕ್ತಿಯೊಲವ ನೀಕ್ಷಿಸುತಭವಂ ॥ ನರನಾಥನತನುಜೀವನೆ । ಕರಣಂಗಳೊಳೊಲ್ದು ಬೆರಸಿ ಬೆಚ್ಚಂತಿರ್ಪಂ ॥ ... ॥೪೯॥

ವ ॥ ಆರಾಜೇಂದ್ರ ನೊರ್ಮೆ ನಿಜಮನೋರಮೆಯೊಡನೆ ಮಣಿಮಯಪ್ರಾಸಾದದ ಮೇಲ್ನೆಲೆಯ ಕನಕಪರ್ಯಂಕಕಮಲಧವಲ ಶಯ್ಯಾತಲದೊಳ್ಗಾಡಿಯಿಂ ಕುಳ್ಳಿರ್ದು ಬಿತ್ತರಂ ಮಿಗೆ ನೆತ್ತಮ ನಾಡುತ್ತಮಿರ್ದು॥ * * * * * * * * * * * *

ಕಂ॥ ಹೃದಯಸರೋಜದೊಳೊಪ್ಪುವ । ಮದನಾರಿಯ ಮಕುಟದಗ್ರದೆಳೆವೆರೆಗದಿರು॥ ಣ್ಮಿದು ದೆಂಬ ಬಗೆಯ ನೊದವಿಸೆ । ರದನದ್ಯುತಿ ಪಾಲಗುರ್ಜ್ಜರಂ ನಸುನಕ್ಕಂ ॥ ॥೫೦॥

ಕಂ ॥ ಅರಸನ ದರಹಸನಾನನ । ಸರಸಿಜಮಂ ಕಂಡು ನಾಲ್ಕುದೆಸೆಯುಂ ನೋಡು ॥ ತ್ತರಸಿ ಪರರಾರು ಮಿಲ್ಲೀ । ರ್ವರೆ ಯಾ ನಿರ್ದಲ್ಲಿ ನಗೆಗೆ ಕಾರಣ ಮೇನೋ॥ ... ॥೫೧॥

ಕಂ॥ ಇದಕೆ ನೆವ ಮೊಂದು ಮಿಲ್ಲೀ । ಪದದೊಳಿವಂಗೇಕೆ ಬಂದುದೀನಗೆ ಯೆನುತಂ ॥ ಸುದತಿ ನಸುಲಜ್ಜೆ ಮನದೊಳ । ಗೊದವಿರೆ ಸಂಶಯರಸಕ್ಕೆ ಭಾಜನ ಮಾದಳ್ ॥ ॥೫೨॥

ವ ॥ ಅಂತು ಲಜ್ಜಾನತಾನನೆ ನೆತ್ತದಾಟಮ ನುಳಿದು ನೆತ್ತವಲಗೆಯ ಮೇಲೆ ಪಾಸಂಗಿಗಳ ನೊಯ್ಯನಿರಿಸಿ ॥ * * * * * * * * * * * *

---

ಪಾರ್ವತೀಪತಿಯ, ಅಡಿದಳಿರ- ಚಿಗುರಿನಂತಿರುವ ಪಾದದ, ಪೂಜೆ, ಎನೆ, ಸಂದು, ಇರ್ಪ್ಪಂ. ॥೪೮॥

ಅಭವಂ, ಎರವು- ಭೇದವು, ಇಲ್ಲದ, ದೊರೆ- ಸಾಮ್ಯವು, ಇಲ್ಲದ, ನಿರುಪಮನಿಜಭಕ್ತಿಯ- ಅಸದೃಶವಾದ ತನ್ನಭಕ್ತಿಯ, ಒಲವಂ- ಪ್ರೀತಿಯನ್ನು. ಈಕ್ಷಿಸುತೆ, ನರನಾಥನ, ತನುಜೀವನಕರಣಂಗಳೊಳ್- ದೇಹಪ್ರಾಣೇಂದ್ರಿಯಗಳಲ್ಲಿ, ಒಲ್ದು. ಬೆರಸಿ, ಬೆಚ್ಚಂತೆ- ಬೆಸೆದಹಾಗೆ, ಇರ್ಪಂ. ... ... ॥೪೯॥

ಆರಾಜೇಂದ್ರಂ, ಒರ್ಮೆ, ನಿಜಮನೋರಮೆಯೊಡನೆ- ತನ್ನ ಮನಃಕಾಂತೆಯೊಡನೆ, ಮಣಿಮಯಪ್ರಾಸಾದದ- ರತ್ನಖಚಿತವಾದ ಉಪ್ಪರಿಗೆಯ, ಮೇಲ್ನೆಲೆಯ-ಮೇಲಿನಂತಸ್ಥಿಯಲ್ಲಿರುವ, ಕನಕಪರ್ಯಂಕಕಮಲಧವಳಶಯ್ಯಾತಲದೊಳ್- ಚಿನ್ನದ ಮಂಚದಮೇಲಿರುವ ತಾವರೆಯಂತೆ ಶುಭ್ರವಾದ ಹಾಸಿಗೆಯಲ್ಲಿ, ಗಾಡಿಯಿಂ- ವಿಲಾಸದಿಂದ, ಕುಳ್ಳಿರ್ದು, ಬಿತ್ತರಂ, ಮಿಗೆ, ನೆತ್ತಮಂ- ಪಗಡೆಯನ್ನು, ಆಡುತ್ತಂ, ಇರ್ದು. * * *

ರದನದ್ಯುತಿ- ಹಲ್ಲಿನ ಕಾಂತಿಯು, ಹೃದಯಸರೋಜದೊಳ್, ಒಪ್ಪುವ, ಮದನಾರಿಯ, ಮಕುಟದ- ಕಿರೀಟದ, ಅಗ್ರದ- ತುದಿಯಲ್ಲಿರುವ, ಎಳೆವೆರೆಗದಿರ್- ಬಾಲಚಂದ್ರನಕಾಂತಿಯು, ಉಣ್ಮಿದುದು ಹೊರಕ್ಕೆ ಹೊರಟಿತು. ಎಂಬ, ಬಗೆಯಂ- ರೀತಿಯನ್ನು, ಒದವಿಸೆ, ಪಾಲಗುರ್ಜ್ಜರಂ, ನಸುನಕ್ಕಂ- ಸ್ವಲ್ಪನಕ್ಕನು.

ಅರಸಿ- ರಾಣಿಯು, ಅರಸನ, ದರಹಸನಾನನಸರಸಿಜಮಂ- ಮುಗುಳ್ನಗೆಯಿಂದ ಕೂಡಿರುವ ಮುಖಕಮಲವನ್ನು, ಕಂಡು, ನಾಲ್ಕುದೆಸೆಯುಂ- ನಾಲ್ಕುದಿಕ್ಕನ್ನು, ನೋಡುತ್ತೆ, ಪೆರರ್- ಮತ್ತೊಬ್ಬರು, ಆರುಂ, ಇಲ್ಲ, ಆವ್, ಈರ್ವರೆ, ಇರ್ಪಲ್ಲಿ- ಇರುವ ಸ್ಥಳದಲ್ಲಿ ನಗೆಗೆ, ಕಾರಣಂ, ಏನೋ ! ॥೫೧॥

ಇದಕೆ, ನೆವಂ- ವ್ಯಾಜವು, ಒಂದುಂ, ಇಲ್ಲ, ಈ ಪದದೊಳ್- ಈ ಸ್ಥಳದಲ್ಲಿ, ಇವಂಗೆ, ಈನಗೆ, ಏಕೆ ಬಂದುದು ? ಎನುತಂ, ಸುದತಿ- ಒಳ್ಳೆಯದಂತವುಳ್ಳರಾಣಿಯು, ಮನದೊಳಗೆ, ನಸುಲಜ್ಜೆ- ಸ್ವಲ್ಪನಾಚಿಕೆಯು, ಒದವಿ, ಇರೆ, ಸಂಶಯರಸಕ್ಕೆ- ಸಂದೇಹವೆಂಬ ನೀರಿಗೆ, ಭಾಜನಂ- ಪಾತ್ರೆಯು, ಆದಳ್. ॥೫೨॥

ಅಂತು, ಲಜ್ಜಾನತಾನನೆ- ನಾಚಿಕೆಯಿಂದ ಬಗ್ಗಿಸಿದ ತಲೆಯುಳ್ಳವಳಾಗಿ, ನೆತ್ತದ, ಆಟಮಂ, ಉಳಿದು- ಬಿಟ್ಟು, ನೆತ್ತವಲಗೆಯ– ಪಗಡೆಯನ್ನು ಆಡುವ ಹಲಗೆಯ, ಮೇಲೆ, ಪಾಸಂಗಿಗಳಂ- ಹಾಸಿಗೆಯ ಚೀಲಗಳನ್ನು, ಒಯ್ಯನೆ- ಇರಿಸಿ. * * * * * * * * * * * * * * *

ಮಲ್ಲಿಕಾಮಾಲಾವೃತ್ತಂ ॥ ನೆತ್ತದಾಟಮನಾಡುತಿರ್ದನಿಮಿತ್ತಹಾಸ್ಯಮಿದೇಕೆ ಮ । ಚ್ಚಿತ್ತವಲ್ಲಭ ನಿನ್ನ ವಕ್ತ್ರದೊಳುಣ್ಮಿದತ್ತಿದರಂದಮಂ ॥ ಬಿತ್ತರಂ ಮಿಗೆ ಪೇಳ್ದು ಮನ್ಮನಕಾದ ಸಂದೆಗಮಂ ಮಹೀ । ಮತ್ತಕಾಶಿನಿಯಾಣ್ಮ ನೀಂ ಪರಿದಿಕ್ಕವೇಳ್ವುದು ಚಚ್ಚರಂ ॥ ... ... ... ... ... ॥೫೩॥

ಮತ್ತೇ ॥ ಅಣುಮಾತ್ರಂ ಬಹಿರಂತರರ್ಪಣವಿಧಾನಂ ಜಾರಿತೆಂಬೆಂಬ ಬಿ । ನ್ನಣದಿಂದಾದುದೆ ನೆತ್ತದಾಟಮಿದಯುಕ್ತಂ ಶಂಭುಭಕ್ತರ್ಗೆ ಲ ॥ ಕ್ಷಣಮಲ್ತೆಂಬುದರಿಂದೆ ಪೊಣ್ಮಿದುದೋ ಮೇಣೆನ್ನೊಳ್ಸಮಂತೆಗ್ಗಮೋ । ರಣದಿಂ ಕಂಡುದರಿಂದೆ ಸಂಜನಿಸಿತೋ ಹಾಸಂ ತ್ವದೀಯಾಸ್ಯದೊಳ್ ॥ ... ... ... ... ... ॥೫೪॥

ಚಂ ॥ ಪೊಲೆಗಳ ಮೇಲುದೋಸರಿಸಿತೆಂಬುದರಿಂದೊಗೆದತ್ತೊ ಸಾರಮಂ । ಜುಲಸರಸೋಕ್ತಿಯೊಂದಿನಿತುತಪ್ಪಿದೊಡುದ್ಭವಿಸಿತ್ತೊ ಸಾರಿಯಂ ॥ ನಲಿದಿಡುವಂದು ಪಲ್ಲಟಿಸಿ ಪುಟ್ಟಿದುದೋ ಪೊಸಗೆಲ್ಲಮಾಂಪೆನೀ । ಲಲನೆಯೊಳೆಂಬ ಸಂಭ್ರಮದಿನುಣ್ಮಿದುದೋ ನಗೆ ನಿನ್ನ ವಕ್ತ್ರದೊಳ್ ॥ ... ... ... ... ... ॥೫೫॥

ಕಂ ॥ ಒಂದುಂ ಪಲಗೆಯ ನಾಡೊಡ । ಮಿಂದೀವಧು ಗೆಲ್ದುದಿಲ್ಲ ಮೆಂಬುದರಿಂದೇ । ಳ್ತಂದುದೊ ರಾತ್ರಿರತಿಯೊಳಾ । ನೆಂದುದು ನೆನಪಾಗೆ ನಿನಗೆ ನಗೆಯೊದವಿದುದೋ ॥೫೬॥

---

ಮಹೀಮತ್ತಕಾಶಿನಿಯ- ಭೂಕಾಂತೆಯ, ಆಣ್ಮ- ಪತಿಯಾದ, ಮಚ್ಚಿತ್ತವಲ್ಲಭ- ನನ್ನ ಮನಃಕಾಂತನೇ ! ನೀಂ, ನೆತ್ತದ, ಆಟಮಂ, ಆಡುತ್ತ, ಇರ್ದು, ಇದುಅನಿಮಿತ್ತಹಾಸಂ- ಈ ನಿಷ್ಕಾರಣವಾದ ನಗುವಿಕೆಯು, ನಿನ್ನ, ವಕ್ತ್ರದೊಳ್, ಏಕೆಉಣ್ಮಿದತ್ತು- ಯಾಕೆ ಉಂಟಾಯ್ತು ? ಇದರ, ಅಂದಮಂ, ಬಿತ್ತರಂ- ವಿಸ್ತಾರವು, ಮಿಗೆ, ಪೇಳ್ದು, ಮನ್ಮನಕೆ- ನನ್ನಮನಸ್ಸಿಗೆ, ಆದ, ಸಂದೆಗಮಂ- ಸಂಶಯವನ್ನು, ಚಚ್ಚರಂ- ಶೀಘ್ರವಾಗಿ, ಪರಿದಿಕ್ಕವೇಳ್ವುದು- ನಾಶಮಾಡಬೇಕು. ... ... ॥೫೩॥

ತ್ವದೀಯಾಸ್ಯದೊಳ್- ನಿನ್ನಮುಖದಲ್ಲಿ, ಹಾಸಂ- ನಗುವಿಕೆಯು, ಬಹಿರಂತರರ್ಪಣವಿಧಾನಂ- ಬಾಹ್ಯಪೂಜೆ ಅಂತರಪೂಜೆಗಳ ರೀತಿಯು, ಅಣುಮಾತ್ರಂ- ಸ್ವಲ್ಪ, ಜಾರಿತು- ತಪ್ಪಿತು, ಎಂಬ, ಬಿನ್ನಣದಿಂದೆ, ಆದುದೊ? ಇದುನೆತ್ತದಆಟವು, ಶಂಭುಭಕ್ತರ್ಗೆ, ಅಯುಕ್ತಂ- ಅಯೋಗ್ಯವಾದದ್ದು, ಲಕ್ಷಣಂ, ಅಲ್ತು ಎಂಬುದರಿಂದೆ, ಪೊಣ್ಮಿದುದೊ ? ಮೇಣ್, ಎನ್ನೊಳ್, ಸಮಂತು-ಚೆನ್ನಾಗಿ, ಎಗ್ಗಂ- ದಡ್ಡತನವನ್ನು, ಓರಣದಿಂ-ಅಂದವಾಗಿ, ಕಂಡುದರಿಂದೆ, ಸಂಜನಿಸಿತೊ ? ... ... ... ॥೫೪॥

ನಿನ್ನ, ವಕ್ತ್ರದೊಳ್, ನಗೆ, ಪೊಲೆಗಳ, ಮೇಲುದು- ಮೇಲ್ಮುಸುಗು, ಓಸರಿಸಿತು- ಓರೆಯಾಯ್ತು, ಎಂಬುದರಿಂದೆ, ಒಗೆದತ್ತೋ ? ಸಾರಮಂಜುಲಸರಸೋಕ್ತಿ, ಒಂದಿನಿತು, ತಪ್ಪಿದೊಡೆ, ಉದ್ಭವಿಸಿತ್ತೊ ? ಸಾರಿಯಂ- ಚಾರಿಯಮೇಲೆ ಕಾಯನ್ನು ; ನಲಿದು, ಇಡುವಂದು- ಮಡಗುವಾಗ, ಪಲ್ಲಟಿಸಿ- ವ್ಯತ್ಯಸ್ತವಾಗಿ, ಪುಟ್ಟಿದುದೋ ? ಈ ಲಲನೆಯೊಳ್, ಪೊಸಗೆಲ್ಲಂ- ಹೊಸದಾದ ಗೆಲುವಿಕೆಯನ್ನು, ಆಂಪೆಂ- ಹೊಂದುವೆನು, ಎಂಬ, ಸಂಭ್ರಮದಿಂ, ಉಣ್ಮಿದುದೋ ? ... ... ... ... ॥೫೫॥

ಇಂದು, ಈವಧು-ಈ ಸ್ತ್ರೀಯು, ಒಂದುಮುಂಪಲಗೆಯುಂಆಡೊಡಂ, ಗೆಲ್ದುದು, ಇಲ್ಲಂ, ಎಂಬುದರಿಂದೆ,ಏಳ್ತಂದುದೊ ? ರಾತ್ರಿರತಿಯೊಳ್- ನೆನ್ನೆಯ ರಾತ್ರಿಯ ಸುರತಕಾಲದಲ್ಲಿ, ಆಂ, ಎಂದುದು- ಆಡಿದ ಮಾತು, ನೆನಪು- ನೆನಸಿಕೊಳ್ಳಲ್ಪಟ್ಟದ್ದು, ಆಗೆ, ನಿನಗೆ, ನಗೆ, ಒದವಿದುದೊ ? ... ॥೫೬॥

ಕಂ॥ ಸ್ಮರಮೋಹ ಮೀಗಳೊಗೆದುದೊ। ದರೆ ದರಹಾಸಂ ಪೊದಳ್ದುದೋ ಮರೆಬೇ ಡೋಸರಿಸದೆ ಪೇಳೆನ್ನೊಳ್ಮ। ದ್ವರ ನಿನಗೆನ್ನಾಣೆ ನಿಜಮನೆನೆ ಕೇಳ್ದರಸಂ ॥೫೭॥

ಕಂ॥ ಮುಗುಳೆ ನಸುನಗುತೆ ಕೇಳೆಲೆ। ಮೃಗನೇತ್ರೆ ಯೆನುತ್ತೆ ನೆತ್ತದಾಟಮನುೞಿ ದಾ॥ ನಗೆ ನೆಗೆದ ಕಾರಣಮನಾ। ಜಗತೀಪತಿ ಬಲ್ದು ಪೇಳಲುದ್ಯತನಾದಂ॥೫೮॥

ವ॥ ಅಂತು ಪೇಳಲುಪಕ್ರಮಿಸಿ ॥ ಕಂದ॥ ಭಾಮಿನಿ ಕೇಳ್ಸೌರಾಷ್ಟ್ರದ। ಸೋಮೇಶನ ಭಕ್ತನಿರ್ಪನೊಹಿಲನವನು॥ ದ್ದಾಮಚರಿತ್ರಮನೊರೆವೊಡೆ। ಕಾಮಾಂತಕನಾದೊಡಂ ಪೆರಂನೆರೆದಪನೇ ॥ ... ... ... ... ... ॥೫೯॥

ಕಂ॥ ಹರನ ನಿರೂಪದಿನಿಳೆಗವ। ತರಿಸಿದ ಮಹಿಮಾಂಕನಮಳಗುಣಮಣಿಭರಣಂ॥ ಕರುಣಾನಿಧಿ ಸೌರಾಷ್ಟ್ರದ। ಪುರಪತಿಯುಂ ಸೋಮನಾಥನಂ ಕಂಡನಮಂ ॥೬೦॥

ಕಂ॥ ತೊರೆದಾನಂದಾಶ್ರುಜಲಂ। ಸುರಿಯುತ್ತಿರೆ ನಿಮಿರೆ ಗದ್ಗದಂ ಪುಳಕಮುದು॥ ಬ್ಬರಿಸೆ ತನು ಬೆಮರೆ ಸಾತ್ವಿಕ। ವರಭಕ್ತಿಯೊಳೀಶನಡಿಯನರ್ಚಿಸಿದಂ ॥ ॥೬೧॥

ಮತ್ತೇ॥ ವಿಳಸದ್ಭೂತಿವಿಭೂಷಿತಂ ವಿಪುಳರುದ್ರಾಕ್ಷಾನ್ವಿತಂ ತಾಂ ಗಾಂಗಮಂ। ಗಳಶೀತಾಂಬು ಸಹಸ್ರಕುಂಭವಭಿಷೇಕಂಗೆಯ್ದವಿಚ್ಛಿನ್ನಕೋ॥ ಮಳಬಿಲ್ವೀದಳಮಂ ಸಮ

---

ಈಗಳ್, ಸ್ಮರಮೋಹಂ- ಮನ್ಮಥನಿಂದುಂಟಾದ ಅನುರಾಗವು, ಒಗೆದು, ಬಂದಿ, ಇಗೆ, ದರಹಾಸಂ, ಪೊದಳ್ದುದೊ ? ಮರೆ- ವಂಚಿಸುವಿಕೆಯು, ಬೇಡ, ಓಸರಿಸದೆ- ಸಂಕೋಚಪಡದೆ, ಎನ್ನೊಳ್, ನಿಜಮಂ, ಪೇಳ್, ಮದ್ವರ- ನನ್ನ ಪತಿಯೇ ! ನಿನಗೆ, ಎನ್ನ, ಆಣೆ, ಎನೆ, ಅರಸಂ, ಕೇಳ್ದು. ... ॥೫೭॥

ಆಜಗತೀಪತಿ- ಆ ರಾಜನು, ಬಲ್ದು, ಮುಗುಳೆ- ಪುನಃ, ನಸುನಗುತೆ, ಎಲೆಮೃಗನೇತ್ರೆ- ಜಿಂಕೆಯ ಕಣ್ಣಿನಂತಿರುವ ಕಣ್ಣುಳ್ಳವಳೇ ! ಕೇಳ್, ಎನುತ್ತೆ, ನೆತ್ತದ, ಆಟಮಂ, ಉೞಿದು, ಆನಗೆ, ನಗೆದ- ಉಂಟಾದ, ಕಾರಣಮಂ, ಪೇಳಲ್, ಉದ್ಯತಂ- ಉಜ್ಜುಗಿಸಿದವನು, ಆದಂ. ... ... ॥೫೮॥

ಒಹಿಲಯ್ಯನ ಕಥೆ.

ಭಾಮಿನಿ ! ಕೇಳ್, ಸೌರಾಷ್ಟ್ರದ- ಸೌರಾಷ್ಟ್ರದೇಶದಲ್ಲಿರುವ, ಸೋಮೇಶನ, ಭಕ್ತಂ, ಒಹಿಲಂ, ಇರ್ಪಂ, ಅವನ, ಉದ್ದಾಮಚರಿತ್ರಮಂ, ಒರೆವೊಡೆ, ಕಾಮಾಂತಕಂ- ಶಿವನು, ಆದೊಡಂ, ಪೆರಂ- ಮತ್ತೊಬ್ಬನು, ನೆರೆದಪನೆ- ಸಮರ್ಥನಾಗುವನೇ ? ... ... ... ॥೫೯॥

ಹರನ, ನಿರೂಪದಿಂ- ಅಪ್ಪಣೆಯಿಂದ, ಇಳೆಗೆ, ಅವತರಿಸಿದ, ಮಹಿಮಾಂಕಂ, ಅಮಳಗುಣಮಣಿಭರಣಂ, ಕರುಣಾನಿಧಿ, ಅವಂ, ಸೌರಾಷ್ಟ್ರದ, ಪುರಪತಿಯುಂ, ಸೋಮನಾಥನಂ, ಕಂಡು. ॥೬೦॥

ಆನಂದಾಶ್ರುಜಲಂ- ಸಂತೋಷದಿಂದುಂಟಾದ ಕಣ್ಣೀರು, ತೊರೆದು- ಹೊರಟು, ಸುರಿಯುತ್ತೆ, ಇರೆ, ಗದ್ಗದಂ- ದೀನಧ್ವನಿಯು, ಅದುಪುಳಕಂ- ಆ ರೋಮಾಂಚವು, ಉಬ್ಬರಿಸೆ- ಉಂಟಾಗಲು, ತನು, ಬೆಮರೆ, ಸಾತ್ವಿಕವರಭಕ್ತಿಯೊಳ್, ಈಶನ, ಅಡಿಯಂ, ಅರ್ಚಿಸಿದಂ. ... ... ॥೬೧॥

ವಿಳಸದ್ಭೂತಿವಿಭೂಷಿತಂ-ಪ್ರಕಾಶಿಸುವ ಭಸ್ಮದಿಂದಲಂಕರಿಸಲ್ಪಟ್ಟ, ವಿಪುಳರುದ್ರಾಕ್ಷಾನ್ವಿತಂ, ತಾಂ, ಗಾಂಗಮಂಗಳಶೀತಾಂಬುಸಹಸ್ರಕುಂಭದ- ಗಂಗಾನದಿಯ ಶುಭಕರವಾದ ತಣ್ಣಗಿರುವ ನೀರಿನಿಂ ತುಂಬಿದ ಸಹಸ್ರಕಲಶಗಳಿಂದ, ಅಭಿಷೇಕಂಗೆಯ್ದು, ಅವಿಚ್ಛಿನ್ನಕೋಮಳಬಿಲ್ವೀದಳಮಂ- ಛಿದ್ರವಾಗದಿರುವ ಮೃದುವಾದ ಬಿಲ್ವಪತ್ರವನ್ನು, ಸಮರ್ಪಿಸಿ, ಯಥೇಚ್ಛಂ, ತನ್ನ, ತೂಕಕ್ಕಂ- ( ತನಗಿರುವಷ್ಟು ಭಾರಕ್ಕನುಗು

ರ್ಪಸಿಯುಘೇಳ್ಳುಂ ತನ್ನತ್ತೂಶಕ್ಕಮ । ರ್ಗ್ಗಳಮುಂ ಗುರ್ಗ್ಗುಳಮುಂ ಪೊರ್ದಳ್ದನಲನೊಳ್ತ್ತಿನಿಟ್ಟು ತದೂರ್ಧ್ವಪವಮಂ ॥ ... ... ... ... ... ...॥೬೨॥

ಸ್ರ ॥ ಬೀಸುತ್ತುಂ ಮಂಗಲಪ್ರಸ್ಫುರಿತವಿಮಲದೀಪಾರ್ಪ್ಪಣಂಗೆಯ್ದುವಿಶ್ವಾ । ವಾಸುಗಾನಂದದಿಂ ಷಡ್ರಸಯುತಶುಚಿಭಕ್ಷ್ಯಾದಿನೈವೇದ್ಯಮಂವಿ ॥ ಶ್ವಾಸು ಕೈಗಣ್ಮೆ ಮಾಡುತ್ತೆಳಸಿ ಬಳಸಿ ಪುಷ್ಪಾಳಿಯಂ ಸೂಸಿ ಪೂರ್ಣೋರ್ । ಲ್ಲಾಸಂಕೊಂಡಾಡಿ ಪಾಡುತ್ತೆರಗಿ ಮುಗುಳ್ದು ಕುಂಬಿಕ್ಕುತಂ ಭಕ್ತಿಯಿಂದಂ ॥ ... ... ... ... ॥೬೩॥

ಕಂ ॥ ಶ್ರೀಮದಮರಾಮರೇಂದ್ರಪಿ । ತಾಮಹತಾಮರಸನಯನಪೂಜಿತಪದ ಮಾ ॥ ಯಾಮಯಹರ ಖಲಕದಳೀ । ಸಾಮಜ ಸೋಮೇಶಲಿಂಗ ಜಯ ಭವಭಂಗ ॥ ॥೬೪॥

ಕಂ ॥ ವರವರದ ಶರದಮಳ ಹಿಮ । ಕರಕರಧವಲಾಂಗ ಪುಂಗವಧ್ವಜ ಭುಜಗಾ ॥ ಭರಣರಣಧೀರ ಧೀರೋ । ತ್ಕರನುತ ಸೋಮೇಶಲಿಂಗ ಜಯ ಭವಭಂಗ ॥ ... ॥೬೫॥

ಕಂ ॥ ಕುಖಲಾರ್ದ್ದನ ಮಖಮರ್ದ್ದನ । ಸುಖವರ್ದ್ಧನ ಭವ್ಯಭಕ್ತಭಾವಿತ ಬರ್ಹಿ ॥ ರ್ಮ್ಮ

---

ಣವಾಗಿ ) ಅರ್ಗ್ಗಳಮುಂ- ಅಧಿಕವಾದ, ಗುರ್ಗ್ಗುಳಮುಂ- ಧೂಪವನ್ನು, ಪೊರ್ದಳ್ದ, ಅನಲನೊಳ್- ಬೆಂಕಿಯಲ್ಲಿ, ಇಟ್ಟು, ತದೂರ್ಧ್ವಪವಮಂ. ... ... ... ... ॥೬೨॥

ಬೀಸುತ್ತುಂ, ಮಂಗಲಪ್ರಸ್ಫುರಿತವಿಮಳದೀಪಾರ್ಪಣಂಗೆಯ್ದು, ಶುಭಕರವಾಗಿ ಪ್ರಕಾಶಿಸುವ ನಿರ್ಮ್ಮಲವಾದ ದೀಪವನು ಸಮರ್ಪಿಸಿ, ವಿಶ್ವಾವಾಸಂಗೆ- ಪ್ರಪಂಚಕ್ಕೆ ಆಶ್ರಯನಾದ ಶಿವನಿಗೆ, ಆನಂದದಿಂ, ವಿಶ್ವಾಸಂ, ಕೈಗಣ್ಮೆ, ಷಡ್ರಸಯುತಶುಚಿಭಕ್ಷ್ಯಾದಿನೈವೇದ್ಯಮಂ- ಉಪ್ಪು ಹುಳಿ ಕಾರ ಕಹಿ ಸೀ ಒಗರು ಎಂಬ ಆರು ವಿಧಗಳಾದ ರುಚಿಯಿಂ ಕೂಡಿದ ಪರಿಶುದ್ಧವಾದ ಆಹಾರಗಳ ನೈವೇದ್ಯವನ್ನು, ಮಾಡುತ್ತೆ, ಎಳಸಿ- ಅಪೇಕ್ಷಿಸಿ, ಬಳಸಿ- ಪ್ರದಕ್ಷಿಣೆಯಂ ಮಾಡಿ, ಪುಷ್ಪಾಳಿಯಂ, ಸೂಸಿ- ಎರಚಿ, ಪೂರ್ಣೋಲ್ಲಾಸಂ- ಸಂಪೂರ್ಣವಾದ ಉತ್ಸಾಹವುಳ್ಳವನಾಗಿ, ಕೊಂಡಾಡಿ, ಪಾಡುತ್ತೆ, ಎರಗಿ, ಮುಗುಳ್ದು, ಭಕ್ತಿಯಿಂದಂ, ಕುಂಬಿಕ್ಕುತಂ- ನಮಸ್ಕರಿಸುತ್ತ. ... ... ... ... ... ॥೬೩॥

ಶ್ರೀಮತ್......ಪದ— ಶ್ರೀಮತ್- ಷಡ್ಗುಣೈಶ್ವರ್ಯಯುಕ್ತನಾದ, ಅಮರ- ದೇವತೆಗಳು, ಅಮರೇಂದ್ರ- ದೇವೇಂದ್ರ, ಪಿತಾಮಹ- ಬ್ರಹ್ಮ, ತಾಮರಸನಯನ- ವಿಷ್ಣು ಇವರುಗಳಿಂದ, ಪೂಜಿತ- ಅರ್ಚಿಸಲ್ಪಟ್ಟ. ಪದ- ಚರಣವುಳ್ಳ, ಮಾಯಾಮಯಹರ- ಮಾಯೆಯೆಂಬ ರೋಗವನ್ನು ನಾಶಮಾಡುವ, ಖಲಕದಳೀಸಾಮಜ- ನೀಚರೆಂಬ ಬಾಳೆಯಗಿಡಕ್ಕೆ ಆನೆಯಾದ, ಭವಭಂಗ- ಪಾಪವಂ ನಾಶಮಾಡುವ, ಸೋಮೇಶಲಿಂಗ ! ಜಯ. ... ... .. ... ... ॥೬೪॥

ವರವರದ- ಶ್ರೇಷ್ಠವಾದ ವರವನ್ನು ಕೊಡುವ, ಶರದಮಳಹಿಮಕರಕರಧವಲಾಂಗ— ಶರತ್- ಶರತ್ಕಾಲದಲ್ಲಿರುವ, ಅಮಳ- ನಿರ್ಮ್ಮಲವಾದ, ಹಿಮಕರ- ಚಂದ್ರನ, ಕರ- ಕಿರಣದೋಪಾದಿಯಲ್ಲಿ, ಧವಳ- ಶುಭ್ರವಾದ, ಅಂಗ- ಶರೀರವುಳ್ಳ, ಪುಂಗವಧ್ವಜ- ವೃಷಭೇಶ್ವರನೇ ಧ್ವಜದಲ್ಲುಳ್ಳ, ಭುಜಗಾಭರಣ, ರಣಧೀರ- ಯುದ್ಧದಲ್ಲಿ ಧೈರ್ಯಶಾಲಿಯಾದ, ಧೀರೋತ್ಕರನುತ- ವಿದ್ವಾಂಸರ ಗುಂಪಿನಿಂದ ಹೊಗಳಲ್ಪಟ್ಟ, ಭವಭಂಗ, ಸೋಮೇಶಲಿಂಗ ! ಜಯ. ... ... ... ... ॥೬೫॥

ಕುಖಲಾರ್ದ್ದನ- ಕೆಟ್ಟ ನೀಚರನ್ನು ಪೀಡಿಸಿದ, ಮಖಮರ್ದನ- ( ದಕ್ಷನ ) ಯಜ್ಞವನ್ನು ನಾಶಮಾಡಿದ, ಸುಖವರ್ಧನ- ಸೌಖ್ಯವಂ ಹೆಚ್ಚಿಸುವ, ಭವ್ಯಭಕ್ತಭಾವಿತ- ಸದ್ಭಕ್ತರಿಂದ ಧ್ಯಾನಿಸಲ್ಪಟ್ಟ, ಬರ್ಹಿರ್ಮ್ಮುಖಭಾಸ್ವರ- ದೇವತೆಗಳಲ್ಲಿ ಪ್ರಕಾಶಿಸುವ, ನಿಖಿಲೇಶ್ವರ- ಸಮಸ್ತಕ್ಕೂ ಸ್ವಾಮಿಯಾದ, ಶಿಖಿಧ

ಖಭಾಸ್ವರ ನಿಖಿಲೇಶ್ವರ । ಶಿಖಿಧರ ಸೋಮೇಶಲಿಂಗ ಜಯ ಭವಭಂಗ ॥ ... ॥೬೬॥

ಕಂ ॥ ದಂಡಧರದರ್ಪಖಂಡನ। ಪಂಡಿತಹೃತ್ಪುಂಡರೀಕಮಾರ್ತಾಂಡಮಹೋ। ದ್ದಂಡಫಣಿರಾಜಕುಂಡಲ । ಮಂಡಿತ ಸೋಮೇಶಲಿಂಗ ಜಯ ಭವಭಂಗ ॥ ... ॥೬೭॥

ಕಂ ॥ ಕರಿರಾಣ್ಮುಖವರಷಣ್ಮುಖ । ದರಹಸನಮುಖಾವಲೋಕನೋತ್ಸುಕ ವಿಸರ ॥ ದ್ಗರಳಾಶನ ಪುರಶಾಸನ ! ಪರತರಸೋಮೇಶಲಿಂಗ ಜಯ ಭವಭಂಗ ॥ ... ॥೬೮॥

ಕಂ ॥ ಕಂಧರಸಿತಿಕಂಧರ ವಿಧಿ । ಕಂಧರಧರ ಬಂಧರಹಿತ ಬಂಧುರಗುಣಸಂ ॥ ಬಂಧಭೃತಸಿಂಧು ಸಂಹೃತ । ಸಿಂಧುರ ಸೋಮೇಶಲಿಂಗ ಜಯ ಭವಭಂಗ ॥ ... ॥೬೯॥

ಕಂ ॥ ಶತಕರಹುತವಹಶಶಧರ । ನುತನಯನತ್ರಯವಿರಾಜಿತನಯನ ಸುಮನಃ॥ ಸ್ತುತಿನತಸದಮಲಪದತಳ । ಶತದಳ ಸೋಮೇಶಲಿಂಗ ಜಯ ಭವಭಂಗ ॥ ... ॥೭೦॥

ವ ॥ ಎಂದಮಂದಾನಂದದಿಂ ಕೀರ್ತಿಸಿ ಪೊಡಮಟ್ಟು ಕಡುನೇಹದಿ ಓಹಿಲ ನಗಲಾರದೆ ನಿಚ್ಚಮುಂ ತನ್ನ ತೂಕದ ಮಹಿಷಾಕ್ಷಿಗುಗ್ಗುಳಮಂ ಸಮರ್ಪಿಪ ಸೇವೆಯುಮಂ ಕೈಕೊಂಡು ಮಹಾಭಕ್ತಿಯಿಂ ಪೂಜಿಸುತ್ತಿರ್ಪಿನ ಮಾಗುಗ್ಗುಳಕ್ಕೆ ನಿಜದ್ರವ್ಯಮೆಲ್ಲಂ ಸವೆಯ ಲೊ

---

ರ- ಅಗ್ನಿಯು ಧರಿಸಿರುವ, ಭವಭಂಗ, ಸೋಮೇಶಲಿಂಗ ! ಜಯ. ... ... ॥೬೬॥

ದಂಡ.....ಮಾರ್ತಾಂಡ— ದಂಡಧರ- ಯಮನ, ದರ್ಪ- ಗರ್ವವನ್ನು, ಖಂಡನ ಕತ್ತರಿಸುವದರಲ್ಲಿ, ಪಂಡಿತ- ನಿಪುಣರಾದವರ, ಹೃತ್- ಹೃದಯವೆಂಬ, ಪುಂಡರೀಕ- ಬಿಳಿತಾವರೆಗೆ, ಮಾರ್ತಾಂಡ-ಸೂರ್ಯನಾದ, ಮಹೋದ್ದಂಡಫಣಿರಾಜಕುಂಡಲಮಂಡಿತ- ಅತಿ ದೊಡ್ಡವನಾದ ಆದಿಶೇಷನೆಂಬ ಕರ್ಣಕುಂಡಲದಿಂದಲಂಕರಿಸಲ್ಪಟ್ಟ, ಭವಭಂಗ, ಸೋಮೇಶಲಿಂಗ ! ಜಯ. ... ... ... ॥೬೭॥

ಕರಿ.....ಉತ್ಸುಕ— ಕರಿರಾಣ್ಮುಖ- ವಿಘ್ನೇಶ್ವರ, ವರಷಣ್ಮುಖ, ಇವರುಗಳ, ದರಹಸನಮುಖ- ಮುಗುಳ್ನಗೆಯಿಂದ ಕೂಡಿದ ಮುಖವನ್ನು, ಅವಲೋಕನ- ನೋಡುವದರಲ್ಲಿ, ಉತ್ಸುಕ- ಕುತೂಹಲವುಳ್ಳ, ವಿಸರದ್ಗರಳಾಶನ- ಹರಡಿಕೊಳ್ಳುತ್ತಿರುವ ವಿಷವೇ ಆಹಾರವಾಗುಳ್ಳ, ಪುರಶಾಸನ- ತ್ರಿಪುರವನ್ನು ನಾಶಪಡಿಸಿದ, ಭವಭಂಗ, ಪರತರಸೋಮೇಶಲಿಂಗ ! ಜಯ. ... ... ... ॥೬೮॥

ಕಂಧರಸಿತಿಕಂಧರ— ಕಂಧರ- ಜಲಸಹಿತವಾದಮೇಘದೋಪಾದಿಯಲ್ಲಿ, ಸಿತಿ- ಕಪ್ಪಾದ, ಕಂಧರ- ಕಂಠವುಳ್ಳ, ವಿಧಿಕಂಧರಧರ- ಬ್ರಹ್ಮನ ಶಿರಸ್ಸನ್ನು ಧರಿಸಿರುವ, ಬಂಧರಹಿತ— ಮಾಯಾಪಾಶಶೂನ್ಯನಾದ, ಬಂಧುರಗುಣಸಂಬಂಧ- ಮನೋಹರವಾದ ಸರ್ವಜ್ಞತ್ವಾದಿ ಸದ್ಗುಣಗಳ ಸಂಬಂಧವುಳ್ಳ, ಭೃತಸಿಂಧು- ಧರಿಸಲ್ಪಟ್ಟ ಗಂಗಾನದಿಯುಳ್ಳ, ಸಂಹೃತಸಿಂಧುರ- ನಾಶಮಾಡಲ್ಪಟ್ಟ ಆನೆಯುಳ್ಳ, ಭವಭಂಗ, ಸೋಮೇಶಲಿಂಗ ! ಜಯ. ... ... ... ... ... ... ॥೬೯॥

ಶತ.........ಆನನ— ಶತಕರ- ಸೂರ್ಯ, ಹುತವಹ- ಅಗ್ನಿ, ಶಶಧರ- ಚಂದ್ರ, ಇವರುಗಳೆಂಬ, ಸುತ- ಶ್ಲಾಘ್ಯಗಳಾದ, ನಯನತ್ರಯ- ಮೂರು ಕಣ್ಣುಗಳಿಂದ, ವಿರಾಜಿತ- ಪ್ರಕಾಶಿಸುವ, ಆನನ- ಮುಖವುಳ್ಳ, ಸುಮನಃಸ್ತುತಿನತಸದಮಲಪದತಳಶತದಳ- ದೇವತೆಗಳ ಗುಂಪಿನಿಂದ ನಮಸ್ಕರಿಸಲ್ಪಟ್ಟ ಪಾದಕಮಲವುಳ್ಳ, ಭವಭಂಗ, ಸೋಮೇಶಲಿಂಗ! ಜಯ. ... ... ... ... ॥೭೦॥

ಎಂದು, ಓಹಿಲಂ, ಅಮಂದಾನಂದದಿಂ- ಹೆಚ್ಚಾದ ಸಂತೋಷದಿಂದ, ಕೀರ್ತಿಸಿ, ಕಡುನೇಹದಿಂ- ಅತಿ ಪ್ರೀತಿಯಿಂದ, ಪೊಡಮಟ್ಟು- ನಮಸ್ಕರಿಸಿ, ಅಗಲಲಾರದೆ- ಬಿಟ್ಟುಹೋಗಲಾರದೆ, ನಿಚ್ಚಮುಂ, ತನ್ನ, ತೂಕದ, ಮಹಿಷಾಕ್ಷಿಗುಗ್ಗುಳಮಂ- ಕೋಣನ ಕಣ್ಣಿನಂತಿರುವ ಧೂಪವನ್ನು, ಸಮರ್ಪಿಪ, ಸೇವಾ

ಷು ಧೃತಿಗುಂದದೆ ದಕ್ಷಿಣಸಮುದ್ರಪರ್ಯಂತಮನಂತದುಷ್ಟಮೃಗವಿಸರವಿಹರಣಸ್ಥಾನಂಗಳೆ
ನಿಪ ಘೋರಾಟವಿಗಳೊಳ್ಪಗಲಿರುಳೆನ್ನದೆ ಕಾಯಕ್ಲೇಶಮಂ ಬಗೆಯದೆ ತೊಳಲ್ದು ಗುಗ್ಗುಳ
ಮೊಗೆವ ತಾಣಮನಲ್ಲಲ್ಲಿ ಪರೀಕ್ಷಿಸಿ ತೆಗೆದು ಶೋಧನಂಗೆಯ್ದೊದವಿಸಿ ತನ್ನ ತೊಳೆದ ಪರಿಮಿ
ತದ ಪರಿಮಳದ ಗುರ್ಗ್ಗುಳಮಂ ಕಂಬಿಯೊಳೆರಡುಂಕಡೆಯೊಳ್ಬಚ್ಚಿಕ್ಕಿ ಪೆಗಲೊಳ್ಪೊ
ತ್ತು ಮಲೆಯಗಿರಿಗೆಯ್ದಿ ನಪುಗಂಪ ನುಗುಳ್ವ ಚಂದನದ ಸೆಕ್ಕೆಗಳ ನಾಕೆಂಬಿಯ ಕೆಲವಲ
ದೊಳಳವಡಿಸಿ ಬಿಳಿಯವಸ್ತ್ರಮನಿಳಿವಿಟ್ಟು ಮುಸುಂಕಿ ಸುರಭಿಮಯಮಪ್ಪಖಂಡಿತ
ಮೃದುಲಬಿಲ್ವಪಲ್ಲವಪ್ರಸರಮಂ ತಿರಿದು ಕರಂಡಕಮಂ ತೀವಿ ಕೊಂಕುಳೊಳೊಡರ್ಚಿ ಮು
ನ್ನಮರ್ಚಿದ ಕಂಬಿಯಂ ತಳೆದು ಸರ್ವ್ವಜನಂ ಪೊಗಳೆ ಸಡಗರದಿನೆಳ್ತಂದು ಸೌರಾಷ್ಟ್ರಪ
ತಿಯ ಗುಡಿಯಂಪೊಕ್ಕು ನೋಡುತ್ತಮಲ್ಲಿಂ ಮುನ್ನಮ ಗೌಳತಪಸ್ವಿಗಳ್ಬಂದು ಸುಗಂ
ಧಚಂದನದಿನುದ್ವರ್ತ್ತನಂಗೆಯ್ದು ಬಕವಕುಳತಿಲಕಚಂಪಕಕರವೀರಕಲ್ಹಾರಕರ್ಣಿಕಾರಾದಿಕು
ಸುಮವಿಸರದ ದಿಂಡುದಂಡೆಗಳಿನಳುಂಬಮಲಂಕರಿಸಿ ಪೂಜಿಸಿ ರಾಜಿಸುತ್ತಿರ್ದ್ದ॥ * *

ಕಂ॥ ಪರಮಶಿವಲಿಂಗಮಂ ಕಂ। ಡಿರದೋಲಗಿಸಿರ್ದ್ದ ಸಕಲವಿನಿಯೋಗದರು॥ ಪರಿಕಿಸ
ದೆ ತನ್ನ ಪೂಜೆಯ। ವಿರಚಿಪ ಸಡಗರದ ತವಕಮಂ ತಳೆದಾಗಳ್॥ ... ॥೭೧॥

ಮಂ-ಶೀಲವನ್ನು, ಕೈಕೊಂಡು, ಮಹಾಭಕ್ತಿಯಿಂ, ಪೂಜಿಸುತ್ತ, ಇರ್ಪಿನಂ, ಆಗುಗ್ಗುಳಕ್ಕೆ, ಸಿಜದ್ರವ್ಯಂ ಎಲ್ಲಂ, ಸವೆಯಲ್- ಕರ್ಚಾಗಿಹೋಗಲು, ಒಡಂ, ಧೃತಿಗುಂದದೆ- ಧೈರ್ಯಗೆಡದೆ, ದಕ್ಷಿಣಸಮುದ್ರಪರ್ಯಂತಂ, ಅನಂತದುಷ್ಟಮೃಗವಿಸರವಿಹರಣಸ್ಥಾನಂಗಳ್- ಬಲು ಕೆಟ್ಟ ಮೃಗಗಳ ಗುಂಪಿಗೆ ಕ್ರೀಡಾಸ್ಥಲಗಳು, ಎನಿಪ, ಘೋರಾಟವಿಗಳೊಳ್-ಭಯಂಕರವಾದ ಕಾಡುಗಳಲ್ಲಿ, ಪಗಲ್, ಇರುಳ್, ಎನ್ನದೆ, ಕಾಯಕ್ಲೇಶಮಂ- ದೇಹಶ್ರಮವನ್ನು, ಬಗೆಯದೆ- ಯೋಚಿಸದೆ, ತೊಳಲ್ದು- ಸುತ್ತಿ, ಗುಗ್ಗುಳಂ, ಒಗೆವ, ತಾಣಮಂ- ಸ್ಥಾನವನ್ನು, ಅಲ್ಲಲ್ಲಿ, ಪರೀಕ್ಷಿಸಿ, ತೆಗೆದು, ಶೋಧನಂಗೆಯ್ದು- ಶೋಧಿಸಿಕೊಂಡು, ಒದವಿಸಿ- ಸೇರಿಸಿ, ತನ್ನ, ತೊಳೆದ, ಪರಿಮಿತದ- ಅಳತೆಯ, ಪರಿಮಳದ, ಗುರ್ಗ್ಗುಳಮಂ, ಕಂಬಿಯೊಳ್- ಹೆಗಲಿನ ಕಾಗಡಿಯಲ್ಲಿ, ಎರಡುಂಕಡೆಯೊಳ್, ಬಚ್ಚಿ- ಮುಚ್ಚಿ, ಇಕ್ಕಿ, ಪೆಗಲೊಳ್, ಪೊತ್ತು, ಮಲಯಗಿರಿಗೆ, ಎಯ್ದಿ, ನರುಗಂಪು- ಪರಿಮಳವನ್ನು, ಉಗುಳ್ವ, ಚಂದನದ- ಶ್ರೀಗಂಧದ, ಸೆಕ್ಕೆಗಳಂ- ಚೆಕ್ಕೆಗಳನ್ನು, ಆಕಂಬಿಯ, ಕೆಲವಲದೊಳ್- ಪಕ್ಕಗಳಲ್ಲಿ, ಅಳವಡಿಸಿ- ಸಿಕ್ಕಿಸಿ, ಬಿಳಿಯವಸ್ತ್ರಮಂ, ಇಳಿವಿಟ್ಟು- ಜೋಲುಬಿಟ್ಟು, ಮುಸುಂಕಿ- ಮುಚ್ಚಿ, ಸುರಭಿಮಯಂ-ಹೆಚ್ಚಾದ ಪರಿಮಳವುಳ್ಳದ್ದು, ಅಪ್ಪ, ಅಖಂಡಿತಮೃದುಲಬಿಲ್ವಪಲ್ಲವಪ್ರಸರಮಂ- ಅಚ್ಛಿದ್ರವಾಗಿಯೂ ಕೋಮಲವಾಗಿಯೂ ಇರುವ ಬಿಲ್ವದ ಚಿಗುರುಗಳ ಸಮೂಹವನ್ನು, ತಿರಿದು- ಎತ್ತಿ, ಕರಂಡಕಮಂ- ಹೂವಿನಕರಡಿಗೆಯನ್ನು, ತೀವಿ- ತುಂಬಿ, ಕೊಂಕುಳೊಳ್, ಒಡರ್ಚಿ-ಸೇರಿಸಿ, ಮುನ್ನ, ಅಮರ್ಚಿದ, ಕಂಬಿಯಂ, ತಳೆದು, ಸರ್ವ್ವಜನಂ, ಪೊಗಳೆ, ಸಡಗರದಿಂ, ಎಳ್ತಂದು, ಸೌರಾಷ್ಟ್ರಪತಿಯ- ಸೌರಾಷ್ಟ್ರೇಶ್ವರನ, ಗುಡಿಯಂ, ಪೊಕ್ಕು, ನೋಡುತ್ತಂ, ಅಲ್ಲಿಂಮುನ್ನಮೆ- ಅದಕ್ಕಿಂತಮೊದಲೇ, ಗೌಳತಪಸ್ವಿಗಳ್- ಗೌಡಸನ್ಯಾಸಿಗಳು, ಬಂದು, ಸುಗಂಧಚಂದನದಿಂ, ಉದ್ವರ್ತ್ತನಂಗೆಯ್ದು- ಲೇಪಿಸಿ, ಬಕ...... ವಿಸರದ, ದಿಂಡುದಂಡೆಗಳಿಂ, ಅಳುಂಬಂ-ಚೆನ್ನಾಗಿ, ಅಲಂಕರಿಸಿ, ಪೂಜಿಸಿ, ರಾಜಿಸುತ್ತೆ, ಇರ್ದ್ದ. * *

ಆಗಳ್, ಪರಮಶಿವಲಿಂಗಮಂ, ಕಂಡು, ಇರದೆ- ತಪ್ಪದೆ, ಓಲಗಿಸಿ- ಸೇವಿಸಿಕೊಂಡು, ಇರ್ದ್ದ, ಸಕಲವಿನಿಯೋಗದರಂ- ಎಲ್ಲಾ ಸೇವಕರನ್ನೂ, ಪರಿಕಿಸದೆ, ತನ್ನ ಪೂಜೆಯ, ವಿರಚಿಪ, ಸಡಗರದ, ತವಕಮಂ- ಚಿತ್ತೋತ್ಸಾಹವನ್ನು, ತಳೆದು, ... ... ... ... ... ॥೭೧॥

ಉ॥ ಕಂಬಿಯ ನಂಬಿಕಾಥವನ ಮುಂದಿಳುಪುತ್ತೆ ಸುಗಂಧವಾರಿಯಿಂ । ತುಂಬಿದ ಕುಂಭದಿಂದಭಿಷವಂಗುಡುತಂ ನವದಿವ್ಯವಸ್ತ್ರಮಂ ॥ ತಾಂ ಬಿಡದರ್ಪಿಸುತ್ತೆ ಮಲಯೋದ್ಭವದಣ್ಪನಮುರ್ಚಿ ಬಿಲ್ವದಂ । ದಂಬಡೆದಿರ್ದ ಪಲ್ಲವಮನೇರಿಸಿ ಸೋಮಧರಂಗೆ ಭಕ್ತಿಯಿಂ ॥೭೦॥

ಕಂ॥ ಪರಿಮಳಮೆಣ್ದೆಸೆಗಡರ್ವ । ವರಿಸುತ್ತಿರೆ ಧೂಪಮಿತ್ತು ಗುರ್ಗುಳದಿಂ ಪೇರ್ ॥ ಉರಿಯಾರತಿಯಂ ಬೆಳಗುತೆ । ಹರಹರರವದೊಡನೆ ಗಂಟೆಯಂ ಬಾಜಿಸುತಂ ॥೭೧॥

ಮಹಾಸ್ರ॥ ವಿಳಸನ್ನೈವೇದ್ಯಮಂ ವೀಟಿಕೆಯನೊಸಗೆಯಿಂದರ್ಪಿಸುತ್ತೊಲ್ದು ಪುಷ್ಪಾಂ । ಜಳಿಗೆಯ್ದೋರಂತು ಘೋಶಂಕರ ಶಿವಶಿವರಾವಂ ಕರಂ ಪೊಣ್ಮೆ ವಕ್ತ್ರೋ ॥ ಜ್ವಳಿತಂ ಸದ್ಭಕ್ತಿಯಿಂದಂ ಮಣಿದು ಕುಣಿದು ಮುಂಡಾಡಿ ಕೊಂಡಾಡಿ ಕೂರ್ಪ । ಗ್ಗಳಿಪನ್ನಂ ಕೈಗಳಂ ತಾಂ ಮುಗಿಯುತೆ ನಲವೆತ್ತಿರ್ದನಾಭಕ್ತವರ್ಯಂ ॥ ... ... ॥೭೨॥

ವ॥ ಇಂತು ಭಕ್ತಿಪಾರವಶ್ಯದಿಂ ನಿಂದರುಮಂ ನೆರೆದೆರುಮನರಿಯದೆ ನಿಚ್ಚನಿಚ್ಚಮುಂ ಬಿಡದೆ ಪೂಜಿಪ ಪ್ರೋಹಿಲಯ್ಯನಂ ಕಂಡು ಗೌಳತಪಸ್ವಿಗಳಸೂಯೆಗೊಂಡೆಲ್ಲರ್ನೆರೆದು ಗುಜುಗುಜುಗೊಳುತ್ತೆ ತಮ್ಮೊಳಿಂತೆಂದರ್ ॥ * * * * * * * * *

ಕಂ॥ ಎಲ್ಲಿಂದಂ ಬಂದನಿವಂ । ಖುಲ್ಲಂ ಮನ್ನಗರಿಗಿವನ ಪರಿ ವಿಪರೀತಂ ॥ ಬಲ್ಲಿದರಿರೆಯುಂ ಲೆಕ್ಕಿಸ । ಲೊಲ್ಲಂ ಮುಂಗಾಣನಧಿಕತತ ಮದಭರಿತಂ ॥ ... ॥೭೩॥

---

ತಾಂ, ಕಂಬಿಯಂ, ಅಂಬಿಕಾಥವನ, ಮುಂದೆ, ಇಳುಪುತ್ತೆ, ಸುಗಂಧವಾರಿಯಿಂ- ಪರಿಮಳಯುಕ್ತವಾದ ನೀರಿನಿಂದ, ಅಭಿಷವಂಗುಡುತಂ- ಅಭಿಷೇಕವಂ ಮಾಡುತ್ತ, ಬಿಡದೆ, ನವದಿವ್ಯವಸ್ತ್ರಮಂ, ಅರ್ಪಿಸುತ್ತೆ, ಮಲಯೋದ್ಭವದ- ಶ್ರೀಗಂಧದ, ಅಣ್ಪಂ- ಲೇಪನವನ್ನು, ಅಮರ್ಚಿ, ಬಿಲ್ವದ, ಅಂದಂಬಡೆದು, ಇರ್ದ, ಪಲ್ಲವಮಂ- ಚಿಗುರನ್ನು, ಸೋಮಧರಂಗೆ, ಭಕ್ತಿಯಿಂ, ಏರಿಸಿ- ಧರಿಸಿ. ... ... ॥೭೦॥

ಪರಿಮಳಂ, ಎಣ್ದೆಸೆಗೆ- ಎಂಟು ದಿಕ್ಕಿಗೆ, ಅಡರ್ವ- ಹತ್ತಿ, ಆವರಿಸುತ್ತಿರೆ, ಗುರ್ಗುಳದಿಂ, ಧೂಪಮಿತ್ತು, ಪೇರುರಿಯ- ಹೆಚ್ಚಾದ ಜ್ವಾಲೆಯುಳ್ಳ, ಆರತಿಯಂ, ಬೆಳಗುತೆ, ಹರಹರರವದೊಡನೆ- ಹರಹರವೆಂಬ ಶಬ್ದಸಹಿತವಾಗಿ, ಗಂಟೆಯಂ, ಬಾಜಿಸುತಂ. ... ... ... ॥೭೧॥

ಆಭಕ್ತವರ್ಯಂ, ವಿಳಸನ್ನೈವೇದ್ಯಮಂ, ವೀಟಿಕೆಯಂ-ವೀಳೆಯವನ್ನು, ಒಸಗೆಯಿಂದೆ- ಉತ್ಸವದಿಂದ, ಅರ್ಪಿಸುತ್ತೆ, ಒಲ್ದು, ಪುಷ್ಪಾಂಜಳಿಗೆಯ್ದು, ಓರಂತೆ- ಮನೋಹರವಾಗಿ, ವಕ್ತ್ರೋಚ್ಚಳಿತಂ- ಬಾಯಿಂದುಹೊರಟ, ಉಘೇಶಂಕರಶಿವಶಿವರಾವಂ, ಕರಂ- ಅತ್ಯಂತವಾಗಿ, ಪೊಣ್ಮೆ- ಹೆಚ್ಚಾಗಲು, ಸದ್ಭಕ್ತಿಯಿಂದಂ, ಮಣಿದು- ನಮಸ್ಕರಿಸಿ, ಕುಣಿದು, ಮುಂಡಾಡಿ- ಮುದ್ದಾಡಿ, ಕೊಂಡಾಡಿ, ಕೂರ್ಪು- ಪ್ರೀತಿಯು, ಅಗ್ಗಳಿಪನ್ನಂ- ಅತಿಶಯವಾಗುವಹಾಗೆ, ತಾಂ, ಕೈಗಳಂ, ಮುಗಿದು, ಉರೆ, ನಲವೆತ್ತು- ಇರ್ದಂ. ... ॥೭೨॥

ಇಂತು, ಭಕ್ತಿಪಾರವಶ್ಯದಿಂ- ಭಕ್ತಿಯಿಂದುಂಟಾಗಿದ್ದ ಮೂರ್ಛೆಯಿಂದ, ನಿಂದರುಮಂ- ನಿಂತಿರುವವರನ್ನೂ, ನೆರೆದರುಮಂ- ಕೂಡಿರುವವರನ್ನೂ, ಅರಿಯದೆ, ನಿಚ್ಚನಿಚ್ಚಮುಂ, ಬಿಡದೆ, ಪೂಜಿಪ, ಓಹಿಲಯ್ಯನಂ, ಗೌಳತಪಸ್ವಿಗಳ್, ಕಂಡು, ಅಸೂಯೆಗೊಂಡು, ಹೊಟ್ಟೆಯಕಿಚ್ಚುಳ್ಳವರಾಗಿ, ಎಲ್ಲರ್, ನೆರೆದು, ಗುಜುಗುಜುಗೊಳುತ್ತೆ- ಗುಟ್ಟಾಗಿ ಮಾತನಾಡಿಕೊಳ್ಳುತ್ತ, ತಮ್ಮೊಳ್, ಅಂದು, ಇಂತು, ಎಂದರ್. * *

ಇವಂ ಖುಲ್ಲಂ- ಈ ನೀಚನು, ಮನ್ನಗರಿಗೆ- ನಮ್ಮ ಪಟ್ಟಣಕ್ಕೆ. ಎಲ್ಲಿಂದಂ ಬಂದಂ ? ಇವನ, ಪರಿ- ರೀತಿಯು, ವಿಪರೀತಂ; ಅಧಿಕತತಮದಭರಿತಂ- ಹೆಚ್ಚಾದ ಅಹಂಕಾರದಿಂ ತುಂಬಿದ ಇವನು, ಬಲ್ಲಿದರ್- ಬಲಶಾಲಿಗಳ್, ಇರೆಯುಂ, ಲೆಕ್ಕಿಸಲೊಲ್ಲಂ- ಗಣನೆಮಾಡೊಲ್ಲನು, ಮುಂಗಾಣಂ- ಮುಂದಾಗುವದನ್ನರಿಯನು. ॥೭೩॥

ಕಂ ॥ ಅಡವಿಯ ಗಿಡುಗಳ ಸೊಪ್ಪಂ । ಕಡಿವಡೆದುಡಿದಿರ್ದ ಪಲವುಕೆಕ್ಕೆಗಳಂ ಪಿಂ ।
ಪಿಡಿದೆಸೆವ ಪಗಿನವುಂ ಪೊ । ತ್ತೊಡನೇಳ್ತಂದರರೆ ಪುಗುವ ವನೀವೇಗುಲಮಂ ॥ ... ॥೭೬॥

ಕಂ ॥ ತನಗಿನಿತು ಸೊರ್ಕ್ಕು ನೆರೆದಿ । ರ್ದನಿಬರುಮುಂ ನೋಡ ದಳ್ಕದೊತ್ತರಿಸುತ್ತೆ
ಭೋಂ ॥ ಕನೆ ಪುಗುತೋಹಿಲ ನಾಚೆ । ಲ್ವಿನ ಪೂಜೆಯ ನಳಿದು ತನ್ನಪೂಜೆಯ ನಸಪಂ ॥

ಕಂ ॥ ಹರಿಮುಖ ಸುರಕೃತ ಪೂಜೆಯು । ನರವರಿಸದೆ ಕಳೆದು ಪೂಜಿಸಿದ ಭೃಂಗಿಯ
ಸೋ ॥ ದರನೊ ಸೆಲುಂದಿಯ ಪೂಜೆಯು । ನಿರದಳಿದರ್ಚಿಸಿದ ಕರಿಯ ನಿಜಸಹಚರನೋ ॥ ॥೭೭॥

ತರಳವೃತ್ತಂ ॥ ಅಲದುರ್ಗ ತವ್ಮಡಿ ಮುನ್ನ ಮಾಡಿದ ಪೂಜೆಯಂ ಕಡೆನೂಂಕಿ ಕ ।
ಣ್ಮಲರ ಪೂಜೆಯ ನಾದು ಮಾಡಿದ ಕಣ್ಣಪಯ್ಯನ ಮಿತ್ರನೋ ॥ ನಲಿದು ಭೂಸುರ ರೊಲ್ದು
ಪೂಜಿಸಿದಚ್ಛಪೂಜೆಯ ನೊತ್ತಿ ಮಂ । ಜುಳಸಮರ್ಚನೆಯಂ ನಿಮಿರ್ಚಿದ ದಾಸಿದೇವನ
ನಂಟನೊ ॥ ... ... ... ... ... ... ॥೭೮॥

ಕಂ ॥ ಇವ ನೇಂ ವಿಚಕಿಲಪೂಜೆಯ । ನವದರಿಸದೆ ನೂಂಕಿ ಕಲ್ಲ ಪೂಜೆಯ ನಗಜಾ ॥
ಧವ ನೆಳಸೆ ನಗಲ್ದ ಸಾಂಖ್ಯನ । ಕುವರನೊ ಮುನ್ನೆಗಳ್ದ ಪೂಜೆಯಳಿವ ಸಘಾಗಳ್ ॥೭೯॥

ವ ॥ ಅಂತುಮಲ್ಲದೆಯುಂ ॥ ಕಂ ॥ ದೊರೆವೆತ್ತ ಸಲ್ಗೆಯಿಂ ಶಂ । ಕರಗೃಹದೊಳಗ

---

ಅಡವಿಯ, ಗಿಡುಗಳ, ಸೊಪ್ಪಂ, ಕಡಿವಡೆದು- ಕತ್ತರಿಸಲ್ಪಟ್ಟು, ಉಡಿದು- ಮುರಿದು, ಇರ್ದ, ಪಲ ಹುಸೆಕ್ಕೆಗಳಂ, ಪಿಡಿದು, ಎಸೆವ, ಪಗಿನವುಂ-ಧೂಪವನ್ನು, ಒಡನೆ- ತನ್ನ ಸಂಗಡ, ಪೊತ್ತು, ಏಳ್ತಂದು, ಈವೇಗುಲಮಂ, ಪುಗುವಂ, ಅರರೆ ! ... ... ... ... ।೭೬॥

ಓಹಿಲಂ, ತನಗೆ, ಇನಿತು, ಸೊರ್ಕ್ಕು- ಕೊಬ್ಬು, ನೆರೆದು, ಇರ್ಪ, ಅನಿಬರುಮಂ-ಅಷ್ಟುಜನಗಳನ್ನೂ, ನೋಡವೆ, ಅಳ್ಕದೆ- ಬೆದರದೆ, ಒತ್ತರಿಸುತ್ತೆ, ಭೋಂಕನೆ-ಬೇಗನೆ, ಪುಗುತ್ತೆ, ಆಚೆಲ್ವಿನ, ಪೂಜೆಯುಂ, ಅಳಿದು, ತನ್ನ, ಪೂಜೆಯಂ, ಎಸಪಂ. ... ... ... ... ।೭೭॥

ಹರಿಮುಖಸುರಕೃತಪೂಜೆಯಂ, ಅಗವರಿಸದೆ-ಲಕ್ಷಿಸದೆ, ಕಳೆದು- ಪೂಜಿಸಿದ, ಭೃಂಗಿಯ, ಸೋದರ ನೊ- ಸಹಜಾತನೋ ? ಸೆಲಂದಿಯ- ಜೇಡರಹುಳುವಿನ, ಪೂಜೆಯಂ, ಇರದೆ, ಅಳಿದು, ಅರ್ಚಿಸಿದ, ಕರಿಯ, ನಿಜಸಹಚರನೋ- ಒಡನಾಡಿಯೊ ? ... ... ... ।೭೮॥

ಅಂದು, ತವ್ಮಡಿ- ಪೂಜಾರಿಯು, ಅಲದುರ್ಗ- ಸಂತೋಷವಿಶಿಷ್ಟನಾಗಿ, ಮುನ್ನ, ಮಾಡಿದ, ಪೂಜೆಯಂ, ಕಡೆನೂಂಕಿ-ಒಂದುಕಡೆಗೆತೂಕಿ, ಕಣ್ಮಲರ-ಕಣ್ಣೆಂಬ ಹೂವಿನ, ಪೂಜೆಯಂ, ಮಾಡಿದ, ಕಣ್ಣಪಯ್ಯನ, ಮಿತ್ರನೋ ? ಭೂಸುರರ್- ಹಾರ್ವರು, ನಲಿದು- ಸಂತೋಷಪಟ್ಟು, ಒಲ್ದು, ಪೂಜಿಸಿದ, ಅಚ್ಛಪೂಜೆಯಂ- ನಿರ್ಮಲವಾದ ಅರ್ಚನೆಯನ್ನು, ಒತ್ತಿ- ಒಂದುಕಡೆಗೆ ತಳ್ಳಿ, ಮಂಜುಳಸಮರ್ಚನೆಯಂ, ನಿಮಿರ್ಚಿದ- ಮಾಡಿದ, ದಾಸಿದೇವನ, ನಂಟನೊ ? ... ... ... ... ।೭೯॥

ಮುನ್ನೆಗಳ್ದ- ಮೊದಲುಮಾಡಿದ್ದ, ಪೂಜೆಯಳಿದು- ಪೂಜೆಯನ್ನು ತೆಗೆದು, ಇವನು, ಎಸಘಾಗಳ್- ತಾನು ಪೂಜೆಯಂ ಮಾಡುವಲ್ಲಿ, ವಿಚಕಿಲಪೂಜೆಯಂ- ಮಲ್ಲಿಗೆಯ ಹೂವಿನ ಪೂಜೆಯನ್ನು, ಅವದರಿಸದೆ- ಮನಸ್ಸಿಗೆ ತಾರದೆ, ನೂಂಕಿ, ಅಗಜಾಧವಂ, ಎಳಸೆ, ಕಲ್ಲ, ಪೂಜೆಯಂ, ನೆಗಳ್ದ, ಸಾಂಖ್ಯನ, ಕುವರನೊ ? ... ... ... ... ... ... ।೮೦॥

ಈತಂ, ದೊರೆವೆತ್ತ- ಪ್ರಕಟವಾದ, ಸಲ್ಗೆಯಿಂ- ನಿಷ್ಪ್ರತಿಬಂಧಕತ್ವದಿಂದ, ಶಂಕರಗೃಹದ, ಒಳಗಣ್ಗೆ- ಒಳಗಡೆಗೆ, ಪುಗುವೊಲ್ಕೆ-ಪ್ರವೇಶಿಸಬೇಕಾದರೆ, ನಂದೀಶ್ವರನೊ ? ದಧೀಚಿಯೊ ? ಭೃಗುವೋ ? ಸರೋ

ಣ್ಗೆ ಪುಗುವನೀತಂ ಸುದೀ॥ಶ್ವರನೊ ದಧೀಚಿಯೊ ಭೃಗುವೋ । ವರೋಪಮನ್ಯುವೊ
ಶಿವಾಂಶಸಂಭವಮುನಿಯೊ ॥ ... ... ... ... ॥೮೧॥

ಚಂ॥ ಶಿವಗೃಹದಂತರಾಳಮಂ ನಣಂ ಪುಗಲಂಜಿ ಮುರಾರಿ ನಿಲ್ವನೊ । ಪ್ಪುವ
ಸುಕನಾಸಿಯೊಳ್ ಜಲಜಜಂ ಸಮಯಂಬಡೆವನ್ನಮಿರ್ಪನೀ॥ ಭವನದ ಬಾಹ್ಯದೇಶದೊಳೆ
ಕೈಮುಗಿದೋದುತ ರುದ್ರಸೂಕ್ತಮಂ । ತವೆ ಕಡೆವಾಗಿಲತ್ತ ಸುರಪಂ ನಿಲುತೀಕ್ಷಿಪನೀ
ಶವೇಳೆಯಂ ॥ ... ... ... ... ... ॥೮೨॥

ಕಂ॥ ಶಿವಭಜನೆಗವಸರವ ನಾ । ರವಿ ಕಾಣದೆ ಪಿಡಿದು ಕಮಲಮಂ ತಿರುಗುವ ನೊ॥
ಲ್ವವಿರತಮಿರ್ಪಂ ಶಿರದೊಳ್ । ನವೇಂದು ಸಲೆ ಕಾದು ಸಮಯಮಂ ಶಂಕರನ ॥ ॥೮೩॥

ಸ್ರ॥ ಇಂತಿಪ್ಪರ್ಗಿಂತುಟೆಂಬಂದಿವ ನೆನಿಸರವಂ ಪೋಗು ನೀನೆಂದೊಡಂ ದು । ರ್ದಾಂ
ತಂ ತಾಂ ಪೋಗ ನೀನೀಗಳವ ನೊಳಪುಗಲ್ಬೇಡ ನೀನೆಂದೊಡಂ ಗ ॥ ರ್ವಾಂತಳ್ದಾದಂ
ದುದಂ ಲೆಕ್ಕಿಸದೊಳಪುಗುವಂ ಭಿಕ್ಷುಕಂಗೇಕಿಮಿಗೀ । ವಂತಂ ಮುನ್ನಿರ್ದ ರೀತಂ ಬರೆ
ಪೆರೆದೆಗೆವರ್ಪೂಜೆಯಂ ಮಾಣದ ನಿಚ್ಚಂ ॥ ... ... ... ॥೮೪॥

ವ॥ ಎಂದು ಕಾಳ್ಗೆಡೆವಧೂರ್ತನ ನೀಲಿಂಗಾಲಯಮ ನೊಳಪುಗದಂತೆ ಮಾಳ್ಪ
ದೇ ಕಜ್ಜದುಜ್ಜವಣೆ ಯೆಂದು ಜಡತಪಸ್ವಿಗಳ್ನಿರ್ಧರಿಸಿ ಕವಾಟಬಂಧನಂಗೆಯ್ದು ಬಿಯ

---

ಪಮನ್ಯುವೊ- ಶ್ರೇಷ್ಠನಾದ ಉಪಮನ್ಯುಋಷಿಯೋ ? ಶಿವಾಂಶಸಂಭವಮುನಿಯೊ- ಪರಮೇಶ್ವರನ ಅಂಶದಿಂ ಹುಟ್ಟಿರುವ ಋಷಿಯೋ ? ... ... ... ... ॥೮೧॥

ಮುರಾರಿ- ವಿಷ್ಣುವು, ಶಿವಗೃಹದ, ಅಂತರಾಳಮಂ- ಒಳಭಾಗವನ್ನು, ಅಣಂ- ಸ್ವಲ್ಪವಾಗಿ, ಪುಗಲ್, ಅಂಜಿ, ಒಪ್ಪುವ, ಸುಕನಾಸಿಯೊಳ್-ದ್ವಾರಬಹಿಃಪ್ರದೇಶದಲ್ಲಿ, ನಿಲ್ವಂ; ಜಲಜಜಂ- ಬ್ರಹ್ಮನು, ಸಮಯಂಬಡೆವನ್ನಂ- ಅವಕಾಶವನ್ನು ಹೊಂದುವವರಿಗೂ, ಈಭವನದ- ಈ ದೇವಸ್ಥಾನದ, ಬಾಹ್ಯದೇಶದೊಳೆ- ಹೊರಗಡೆಯಲ್ಲಿ, ಕೈಮುಗಿದು, ರುದ್ರಸೂಕ್ತಮುಂ, ಓದುತೆ. ಇರ್ಪಂ; ಸುರಪಂ- ದೇವೇಂದ್ರನು, ತವೆ, ಕಡೆವಾಗಿಲತ್ತ, ನಿಲುತೆ, ಈಶವೇಳೆಯಂ- ಪರಮೇಶ್ವರನ ಸಮಯವನ್ನು, ಈಕ್ಷಿಪಂ. ... ॥೮೨॥

ಆರವಿ- ಸೂರ್ಯನು, ಶಿವಭಜನೆಗೆ- ಪರಮೇಶ್ವರನ ಸೇವೆಗೆ. ಅವಸರವುಂ- ಸಮಯವನ್ನು, ಕಾಣದೆ, ಕಮಲಮಂ, ಪಿಡಿದು, ಒಲ್ದು, ಅವಿರತಂ- ಯಾವಾಗಲೂ, ತಿರುಗುವಂ; ನವೇಂದು-ನೂತನನಾದ ಚಂದ್ರನು, (ಅಂದರೆ ಬಾಲಚಂದ್ರನು) ಶಂಕರನ, ಸಮಯಮಂ, ಕಾದು, ಸಲೆ, ಶಿರದೊಳ್, ಇರ್ಪಂ. ... ॥೮೩॥

ಇಂತಪ್ಪರ್ಗೆ- ಇಂತವರಿಗೆ, ಇಂತುಟು- ಹೀಗೆ, ಎಂಬಂದು- ಎನ್ನುವಲ್ಲಿ, ಇವಂ, ಎನಿಸರವಂ- ಎಷ್ಟರವನು ? ನೀಂ, ಪೋಗು, ಎಂದೊಡಂ, ದುರ್ದಾಂತಂ- ದುಷ್ಟನಾದ, ತಾಂ, ಪೋಗಂ, ನೀಂ, ಈದೇಗುಲಮಂ, ಒಳಪುಗಲ್ಬೇಡ- ಒಳಕ್ಕೆ ಪ್ರವೇಶಿಸಬೇಡ, ಎಂದೊಡಂ, ಗರ್ವಾಂತಳ್ತು, ಆನ್, ಎಂದುದಂ, ಲೆಕ್ಕಿಸದೆ, ಒಳಪುಗುವಂ, ಭಿಕ್ಷುಕಂಗೆ- ತಿರುಕನಾದ, ಇವನಿಗೆ, ಈಪಂತಂ, ಏಕೆ ? ನಿಚ್ಚಂ- ಯಾವಾಗಲೂ, ಮುನ್ನಿರ್ದರ್- ಮೊದಲಿದ್ದವರು, ಈತಂ, ಬರೆ, ಪೂಜೆಯಂ, ಮಾಣ್ದು-ಬಿಟ್ಟು, ಪೆರದೆಗೆವರ್- ಹಿಂದೆಗೆಯುವರು.

ಎಂದು, ಕಾಳ್ಗೆಡೆವ- ಕೂಗಿಸಿ, ಈಧೂರ್ತನಂ, ಈಲಿಂಗಾಲಯಮಂ, ಒಳಪುಗದಂತೆ, ಮಾಳ್ಪುದೇ, ಕಜ್ಜದ- ಕಾರ್ಯದ, ಉಜ್ಜವಣೆ- ಉದ್ಯೋಗವು, ಎಂದು, ಜಡತಪಸ್ವಿಗಳ್- ಮೂಢರಾದ ಋಷಿಗಳು, ನಿರ್ಧರಿಸಿ, ಕವಾಟಬಂಧನಂಗೆಯ್ದು- ಕದವ ಮುಚ್ಚಿ, ಬೀಗವುಂ-ಬೀಗವನ್ನು, ಇಕ್ಕಿ, ಕಾಪಿನ- ಕಾವಲಿನ, ಆಳ್ಗಳಂ, ನಿಯಾಮಿಸಿ, ನಿಚ್ಚಂ, ಗುಡಿಪುಗುವ- ಗುಡಿಯ ಪ್ರವೇಶಮಾಡುವ, ಭಕ್ತನ, ಪರಿಯಂ-ರೀತಿಯನ್ನು,

ಗಮ ಸಿಕ್ಕಿ ಕಾಪಿನಾಳ್ಗಳಂ॥ನಿಯಾಮಿಸಿ ಸಿಚ್ಚಂ ಗುಡಿಯುಗುವ ಭಕ್ತನೆ ಪರಿಯ ನಿನ್ನರಿಯಲಕ್ಕು ಮೆಂದು ಕೈವೊಯ್ದು ನಕ್ಕಾಡುತಂ ಪೊಳಲ್ಗೆ ತಳರ್ದ ರನ್ನೆವರ ಮಿತ್ತ ಮಧ್ಯರಾತ್ರಿಯಲ್ಲಿ ॥ * * * * * * * * * * * * *

ಮಲ್ಲಿಕಾ ಮಾಲಾವೃತ್ತಂ॥ಎಂದಿನಂತೆವೊಲಲ್ಲಿ ಗೆಯ್ದಿದನೋಹಿಲಂಸಕುತೂಹಲಂ। ನಂದಿವಾಹ ನವಂಗೆ ಕಳ್ಕನೆ ಪಿರ್ಚಿದಂ ಕದಮಂ ಮಹಾ॥ನಂದದಿಂ ದೊಳಪೊಕ್ಕು ಪೂಜಿಸಿ ಮುನ್ನಿನಂತತಿಭಕ್ತಿಯಿಂ।ದಿಂದುಮೌಲಿಯ ನಂತೆಪಂಬೆಳಗಪ್ಪುದುಂಬನಕೆಯ್ದಿದಂ॥೮೫॥

ವ॥ ಆಗ ಳಾಕಾಪಿನ ಚರ ರ್ಶಿವ ನವಂಗೆ ಪಡಿದೆರೆದುದ ಮವನವೃತ್ತಾಂತಮುಮ ನಾಪೊಳಲೊಳಿರ್ದ ಗೌಳತಪಸ್ವಿಗಳ್ಗೆತಳ್ವ ದವ ರರುಪ ಲೊಡನೆ ಕೇಳ್ದುಮುನ್ನ ಮು ನ್ನತಭಕ್ತ ನೆನಿಪ ಕಿನ್ನರಯ್ಯಂಗೆ ವರದತ್ರಿಪುರಾಂತಕೇಶ್ವರಂ ಸದಮಲಗುಣಮುದನೂ ರದಾಸಯ್ಯಂಗ ಮಾರಾಮೇಶ್ವರಂ ತಿರುಮಡಕಡೆಯೊ ಳ್ಮೃಡದೃಢಭಕ್ತ ನೆನಿಪೊಡೆಯಪಿ ಳ್ಳೆಯರ್ಗಾಬ್ರಹ್ಮೇಶ್ವರಂ ತ್ರ್ಯಂಬಕನಂ ನಂಬಿ ಭಜಿಪ ನಂಬಿಗೆ ಸಪ್ತದಿವಸಂಬರ ಮಾ ಪುರದಂಬಿಕೇಶ್ವರಂ ಕದಂತೆಗೆ ದೊಳಪುಗಿಸಿದ ವಾರ್ತೆಯಂ ಕೇಳ್ದು ಬಲ್ಲ ವವಂದಿರೊ ಳೀತ ನಾರಂ ಪೋಲ್ವ ನಿವಂಗೆ ಶಿವಂ ಪಡಿದೆರೆದ ನೆಂಬುದು ನನ್ನಿಯಲ್ತು ಕಾನನಚರಂ ಕಪಟೋಪಾಯದಿಂ ದೇಗುಲದ ಬಾಗಿಲಂ ಬಿರ್ಚುತ್ತೊಳಗಂ ಪೊಕ್ಕುತನ್ನಟಮಟದ ಪೂಜೆ ಯಂ ಬಿತ್ತರಿಸಿ ತಳರ್ದ ನಕ್ಕುಮೀಧೂರ್ತನ ನೀತಾಣದಿಂ ಪೊರಮಡಿಸಿ ಕಳೆಯುದೇ ನಿಶ್ಚಿತಕಾರ್ಯ ಮಕ್ಕುಮೆಂದು ನಿರ್ಧರಿಸುತಿವಂಗೆ ಭಿಕ್ಷೆಯ ನಿಕ್ಕದೊಡೆ ತಾನೆ ಪೊರಮಟ್ಟು ಪೊ

---

ಇನ್ನು, ಅರಿಯಲ್‌ಅಕ್ಕುಂ- ತಿಳಿಯಲಾಗುವದು, ಎಂದು, ಕೈವೊಯ್ದು- ತಪ್ಪಾಳೆಗುಟ್ಟಿ, ನಕ್ಕಾಡುತಂ ಪೊಳಲ್ಗೆ- ಪಟ್ಟಣಕ್ಕೆ, ತಳರ್ದರ್- ಹೊರಟರು, ಅನ್ನೆವರಂ- ಅಷ್ಟರಲ್ಲಿ, ಇತ್ತಲ್, ಮಧ್ಯರಾತ್ರಿಯಲ್ಲಿ.

ಸಕುತೂಹಲಂ, ಓಹಿಲಂ, ಎಂದಿನಂತೆವೋಲ್, ಅಲ್ಲಿಗೆ, ಎಯ್ದಿದಂ, ನಂದಿವಾಹಂ- ವೃಷಭವಾಹನನಾದ ಶಿವನು, ಅವಂಗೆ, ಕಳ್ಕನೆ- ಬೇಗನೆ, ಕದಮಂ, ಬಿರ್ಚಿದಂ- ತೆಗೆದನು, ಅವಂ- ಆ ಓಹಿಲನು, ಮಹಾನಂದದಿಂದೆ, ಒಳಪೊಕ್ಕು, ಮುನ್ನಿನಂತೆ, ಅತಿಭಕ್ತಿಯಿಂದೆ, ಇಂದುಮೌಲಿಯಂ, ಪೂಜಿಸಿ, ಅಂತು, ಬೆಳಗು, ಅಪ್ಪುದುಂ, ಬನಕೆ- ಕಾಡಿಗೆ, ಎಯ್ದಿದಂ. ... ... ... ... ॥೮೫॥

ಆಗಳ್, ಆಕಾಪಿನ- ಆ ಕಾವಲಿನ, ಅಚರ್ ಚರರ್-ಆ ಆಳುಗಳು, ಶಿವಂ, ಅವಂಗೆ, ಪಡಿದೆರೆದುದಂ- ಕದವಂ ಬಿಚ್ಚಿದುದನ್ನು, ಅವನ, ವೃತ್ತಾಂತಮುಮಂ, ಆಪೊಳಲೊಳ್, ಇರ್ದ, ಗೌಳತಪಸ್ವಿಗಳ್ಗೆ. ತಳ್ವದೆ- ತಪ್ಪದೆ, ಅರುಪಲ್- ಹೇಳಲು, ಒಡನೆ, ಕೇಳ್ದು, ಮುನ್ನಂ, ಉನ್ನತಭಕ್ತಂ, ಎನಿಪ, ಕಿನ್ನರಯ್ಯಂಗೆ; ವರದತ್ರಿಪುರಾಂತಕೇಶ್ವರಂ; ಸದಮಲಗುಣಮುದನೂರದಾಸಯ್ಯಂ, ಆರಾಮೇಶ್ವರಂ, ತಿರುಮಡಕಡೆಯೊಳ್, ಮೃಡದೃಢಭಕ್ತಂ, ಎನಿಪ, ಒಡೆಯಪಿಳ್ಳೆಯರ್ಗೆ, ಆಬ್ರಹ್ಮೇಶ್ವರಂ, ತ್ರ್ಯಂಬಕನಂ, ನಂಬಿ, ಭಜಿಪ, ನಂಬಿಗೆ, ಸಪ್ತದಿವಸಂಬರಂ- ಏಳು ದಿನಗಳತನಕ, ಆಪುರದ, ಅಂಬಿಕೇಶ್ವರಂ, ಕದವತೆಗೆದು, ಒಳಪುಗಿಸಿದ, ವಾರ್ತೆಯಂ, ಕೇಳ್ದು, ಬಲ್ಲವ್, ಅವಂದಿರೊಳ್- ಅವರುಗಳಲ್ಲಿ, ಈತಂ- ಈ ಓಹಿಲಯ್ಯನು, ಆರಂ, ಪೋಲ್ವಂ ? ಇವಂಗೆ, ಶಿವಂ, ಪಡಿದೆರೆದಂ- ಬಾಗಿಲಂ ತೆರೆದನು, ಎಂಬುದು, ನನ್ನಿ- ನಿಶ್ಚಯವು, ಅಲ್ತು; ಕಾನನಚರಂ- ಅಡವಿಯಲ್ಲಿ ತಿರುಗುವ ಆ ಓಹಿಲನು, ಕಪಟೋಪಾಯದಿಂ, ದೇಗುಲದ, ಬಾಗಿಲು, ಬಿರ್ಚುತ್ತೆ, ಒಳಗಂ, ಪೊಕ್ಕು, ತನ್ನ, ಅಟಮಟದ- ಕಾಟಾಚಾರದ, ಪೂಜೆಯಂ, ಬಿತ್ತರಿಸಿ, ತಳರ್ದಂ- ಹೋಗಿರುವನು, ಅಕ್ಕುಂ, ಈಧೂರ್ತನಂ, ಈತಾಣದಿಂ- ಈ ಸ್ಥಲದಿಂದ, ಪೊರಮಡಿಸಿ, ಕಳೆಯುದೇ, ನಿಶ್ಚಿತಕಾರ್ಯಂ, ಅ

ಪ ನೆಂದು ಭಿಕ್ಷಾನ್ನಂ ಪುಟ್ಟದಂತೆಸಗ ಲೊಡ ನೋಹಿಲಿಯ್ಯಂ ಧೈರ್ಯಂಗುಂಡದೆ .. ..

ಕಂ ॥ ದಳಗತಜಲಕಣಕಂದಾ । ನಿಳಫಳಮೂಲಾದಸಂಗಳಿಂ ಭಕ್ತಿರಸೋ ॥ ನ್ಮಿಳಿತ ತಪಮಾಂತು ಕರುಣಾ । ನಿಳಯನ ಸರ್ಚಿಸರೆಶಿವನ ನೆಮ್ಮಯ ಭಕ್ತರ್ ॥ ... ॥೮೬॥

ಕಂ ॥ ಭುಕ್ತಿಗೆಳಸುತ್ತೆ ತಿರುಗುವ । ಭಕ್ತನ ಶಿವ ನುದರಪೋಷಕಂ ನಿಜ ಮೆನು ತು ॥ ಮುಕ್ತಿಪ್ರದಾನಸತತೋ । ದ್ಯುಕ್ತಂ ಮೃಡ ನೆಂತು ನಗದೆ ಮಾಣ್ಬನೊ ಜಗದೊಳ್ ॥

ಕಂ ॥ ತನು ಪೆರ್ಚುಗು ಮನ್ನದಿ ನಾ । ತನುವಿಂದಂ ಕಾಮ ಮುರ್ಬುಗುಂ ಕಾಮದಿ ನಾ ॥ ಮನ ಮದುವಿ ಕರಿಪು ದಾದು । ರ್ಮನದಿಂ ನಿಜಭಕ್ತಿ ಯುಳಿಗು ಮವನೀತಳದೊಳ್ ॥

ಕಂ ॥ ಆಪರಮಭಕ್ತಿ ಯುಳಿದೊಡೆ । ಲೋಪಂ ತಗುಳ್ಗುಂ ಸಮಸ್ತಸತ್ಕ್ರಿಯೆ ಗ ದರಿಂ ॥ ದಾಪತ್ಕರಸಂಸಾರಾ । ಕೂಪಾರಾಪಾರವಾರಿಯೊ ಳ್ಮನ ನಾಳ್ಗುಂ ॥ ... ॥೯೦॥

ಕಂ ॥ ತಾ ನುಳಿಯಲ್ವೇಳ್ಕುಂ ವಿಷ । ಯಾನೀಕಮ ನವುಳಭಕ್ತಿ ವರ ನದು ತನಗೆ ॥ ತ್ತಾನುಂ ದೊರೆಯುದೊ ಡಿದು ಗಿರಿ । ಶಾನುಗ್ರಹ ಮೆಂಬ ಬಗೆಯ ನಾನಲ್ವೇಡಾ ॥೯೧॥

---

ಕೇವಲ, ಎಂದು, ನಿರ್ಧರಿಸುತ್ತೆ, ಇವಂಗೆ, ಭಿಕ್ಷೆಯಂ, ಇಕ್ಕದೊಡೆ, ತಾನೆ, ಸ್ಮೆರವುಟ್ಟು, ಪೋಪಂ, ಎಂದು ಭಿಕ್ಷಾನ್ನಂ, ಪುಟ್ಟದಂತೆ, ಎಸಗಲ್, ಓಹಿಲಯ್ಯಂ, ಧೈರ್ಯಂಗುಂಡದೆ. * * * * * * *

ಎಮ್ಮಯ, ಭಕ್ತರ್, ದಳ...... ಅಶನಂಗಳಿಂ— ದಳ- ಎಲೆಯುನ್ನು, ಗತ- ಹೋದಿದ, ಜಲಕಣ- ನೀರಿನ ಹನಿ, ಕಂದ- ಗೆಡ್ಡೆ, ಅನಿಳ- ವಾಯು, ಫಲ- ಹಣ್ಣು, ಮೂಲ- ಗೆಣಸು ಇವುಗಳನ್ನು, ಅದನಂಗಳಿಂ- ತಿನ್ನುವವರಿಂದ, ಭಕ್ತಿರಸೋನ್ಮಿಳಿತತಪವಮಾಂತು, ಕರುಣಾನಿಳಯನಂ- ದಯೆಗೆ ಆಶ್ರಯನಾದ ಶಿವನನ್ನು, ಅರ್ಚಿಸರೆ ? ... ... ... ... ... ॥೮೬॥

ಪರಮುಕ್ತಿಕಾಂಕ್ಷಿಗಳ್- ಉತ್ಕೃಷ್ಟವಾದ ಮೋಕ್ಷದಲ್ಲಪೇಕ್ಷೆಯುಳ್ಳವರು, ಭುಕ್ತಿಲಸಂ- ಅನ್ನ ನೀರು, ದೊರೆಯದೊಡೆ, ಅದೆಂತೊಕಳವಳಿಪರ್-ಅದುಹ್ಯಾಗೆ ವ್ಯಾಕುಲಪಟ್ಟಾರು ? ದುಸ್ತರಸಂಕಟಂ, ಎಯ್ದಯುಂ- ಪ್ರಾಪ್ತವಾಗಿದ್ದಾಗ್ಯೂ, ಈಶ್ವರಭಕ್ತರ್, ಸಡಿಲು- ಭಯಪಟ್ಟು, ಪಿಶ್ವರ್- ಬೇಗಾಡವರು, ಶಿ ದೆಂತುಅಪ್ಪರ್ ? ... ... ... ... ... ॥೮೭॥

ಜಗದೊಳ್, ಭುಕ್ತಿಗೆ- ಆಹಾರಕ್ಕೆ, ಎಳಸುತ್ತೆ- ಅಪೇಕ್ಷಿಸುತ್ತಾ, ತಿರುಗುವ, ಭಕ್ತನಂ, ಮುಕ್ತಿಪ್ರದಾನಸತತೋದ್ಯುಕ್ತಂ- ಮೋಕ್ಷವನು ಕೊಡುವದರಲ್ಲಿ ಯಾವಾಗಲೂ ಪ್ರಯತ್ನಶಾಲಿಯಾಗಿರುವ, ಮೃಡಂ, ಇವಂ, ಉದರಪೋಷಕಂ- ಹೊಟ್ಟೆಯನ್ನು ಸಾಕುವವನು, ನಿಜಂ; ಎನುತಂ, ನಗದೆ, ಎಂತು, ಮಾಣ್ಬನೋ- ಹ್ಯಾಗೆ ಬಿಡುವನೋ ! ... ... ... ... ... ॥೮೮॥

ಅವನೀತಳದೊಳ್, ಅನ್ನದಿಂ, ತನು- ದೇಹವು, ಪೆರ್ಚುಗುಂ, ಆತನುವಿಂದಂ, ಕಾಮಂ, ಉರ್ಬುಗುಂ, ಕಾಮದಿಂ, ಆಮನಂ, ಅದು, ವಿಕರಿಪುದು- ವಿಕೃತಿಯನ್ನೈದುವದು, ಆದುರ್ಮನದಿಂ, ನಿಜಭಕ್ತಿ, ಉಳಿಗುಂ.

ಆಪರಮಭಕ್ತಿ, ಉಳಿದೊಡೆ, ಸಮಸ್ತಸತ್ಕ್ರಿಯೆಗೆ- ಸಕಲ ಸದಾಚಾರಕ್ಕೂ, ಲೋಪಂ- ಭಂಗವು, ತಗುಳ್ಗುಂ- ಉಂಟಾಗುವದು, ಅದರಿಂದೆ, ನರಂ, ಆಪತ್ಕರಸಂಸಾರಾಕೂಪಾರಾಪಾರವಾರಿಯೊಳ್— ಆಪತ್ಕರ– ವಿಪತ್ತನ್ನುಂಟುಮಾಡುವ, ಸಂಸಾರ- ಜನನಮರಣಾತ್ಮಕ ಸಂಸೃತಿಯೆಂಬ, ಅಕೂಪಾರ- ಸಮುದ್ರದ, ಅಪಾರವಾರಿಯೊಳ್- ಅನಂತವಾದ ನೀರಿನಲ್ಲಿ, ಆಳ್ಗುಂ- ಮುಳುಗುವನು. ... ॥೯೦॥

ಅಮಳಭಕ್ತಿಪರಂ, ತಾಂ, ವಿಷಯಾನೀಕವಂ- ಸ್ರಕ್ಚಂದನವನಿತಾದಿವಿಷಯಗಳ ಗುಂಪನ್ನು, ಅಳಿಯಲ್ವೇಳ್ಕುಂ- ಬಿಡಬೇಕು, ಅದು, ತನಗೆ, ಎತ್ತಾನುಂ-ಯಾವಕಡೆಯಿಂದಲೂ, ದೊರೆಯದೊಡೆ, ಇದು, ಗಿರಿಶಾನುಗ್ರಹು ಶಿವಪ್ರಸಾದವು, ಎಂಬ, ಬಗೆಯಂ- ಯೋಚನೆಯನ್ನು, ಆನಲ್ವೇಡಾ-ಹೊಂದಬೇಡವೇ ? ॥೯೧॥

ವ ॥ ಎಂದಂಗದಿಚ್ಛೆಯ ನಂಗೀಕರಿಸದಭಂಗಧೈರ್ಯ್ಯನಾಗಿ ಮತ್ತಮಿರದೆ ॥ *

ಚಂ ॥ ಕಪಟಮನಸ್ಕರಿಂತೆಸಪ ಕೈತವ ಪೇನ ನೊಡರ್ಚಲಾರ್ಪ್ಪದೀ । ಕುಪರಿಗೆ ಬ
ಳ್ಕನಳ್ಕ ನಣಮಿಂದು ಕಪರ್ದ್ದಿಯ ಸತ್ಕೃಪಾಮರಾಂ ॥ ಘ್ರಿಪ ಮಿದು ಸತ್ಫಲಂಬಡೆದು
ದೆನ್ನ ಮನೋರಥ ಮಿಂದುಪೂರ್ಣ್ಣವಾ ।ಯ್ತಪರಿಮಿತಂ ಸುಖಂ ನೆರೆದು ದಾದೆ ನುಮಾಧವ
ಭಕ್ತಿಭಾಜನಂ ॥ ... ... ... ... ... ॥೯೨॥

ಕಂ ॥ ಪೊಡವಿಯೊಳೆ ಕೂರ್ದರ ನ್ನೀ ।ತೊಡೆ ಮದುವೆಯ ಕಾರ್ಯ್ಯ ಮಳಿದಪುದೆ ಯೆಂಬ
ವೊಲೀ ॥ ಜಡಮತಿಗಳು ಮುನಿದೊಡೆ ಮ । ನ್ಮೃಡಭಕ್ತಿಯ ಕಜ್ಜ ಮೆಂತು ಮೇನುಳಿ
ದಪುದೇ ॥ ... ... ... .. ... ... ॥೯೩॥

ಕಂ ॥ ಮುನಿದೇಗೆಯ್ವರೊ ತಮ್ಮಯ । ಮನೆಗೆಯ್ದುವ ಬಾಧೆ ಪಿಂಗಿದುದು ತಿರಿದು
ಣ್ಬೋ ॥ ದನಮಾತ್ರಂ ಪೋದುದು ಬಳಿ । ಕೆನಗೆನ್ನಯ ಭಕ್ತಿಭಾಗ್ಯಮಂ ಸೆಳೆದಪರೆ ॥

ಮ॥ ಸ್ರ॥ ಉದರಾರ್ಥಂ ಭಿಕ್ಷೆಯಂ ಕಾಂಕ್ಷಿಪುದು ಶಿವಪದಧ್ಯಾನಮೇನಪ್ಪುದೇ ತ ।
ಪ್ಪದೆ ತತ್ತದ್ಗೇಹಗೇಹಪ್ರಗಮನ ಮಭವಾವಾಸಮಂ ಸುತ್ತಿದಂತ ॥ ಪ್ಪುದೆ ನಿಚ್ಚಂ ಭಿ
ಕ್ಷೆಯಂ ಬೇಡುವುದು ಮೃಡನ ಸದ್ಭಕ್ತಿಯಂ ಬೇಡಿದಂತ । ಪ್ಪುದೆ ನಾನಾನ್ನಂಗಳಂ ಸಂ
ಗ್ರಹಿಪು ದಮಳಪುಷ್ಪೌಘಪತ್ರಾಳಿಯಂ ದಲ್ ॥ ... ... ॥೯೪॥

---

ಎಂದು, ಅಂಗದ– ದೇಹದ ಮೇಲಣ, ಇಚ್ಛೆಯಂ, ಅಂಗೀಕರಿಸದೆ, ಅಭಂಗಧೈರ್ಯಂ- ನಾಶವಾಗದ ಧೈ
ರ್ಯವುಳ್ಳವನು, ಆಗಿ, ಮತ್ತಂ, ಇರದೆ. * * * * * * * * * * * * *

ಕಪಟಮನಸ್ಕರ್- ಕೃತ್ರಿಮವಾದ ಮನಸ್ಸುಳ್ಳವರು, ಇಂತು, ಎಸಪ- ಮಾಡುವ, ಕೈತವಂ- ಕಪ
ಟೋದ್ಯೋಗವು, ಏನಂ, ಒಡರ್ಚಲ್- ಮಾಡುವದಕ್ಕೆ, ಆರ್ಪ್ಪದು- ಸಮರ್ಥವಾಗುವದು ? ಈಕುಪರಿಗೆ-
ಈ ಕೆಟ್ಟರೀತಿಗೆ, ಅಣು- ಸ್ವಲ್ಪವೂ, ಬಳ್ಕಂ- ಬಳುಕ್ಕಡುವದಿಲ್ಲ, ಅಳ್ಕಂ- ಹೆದರುವದಿಲ್ಲ, ಇಂದು- ಕಪರ್ದಿ
ಯ- ಶಿವನ, ಸತ್ಕೃಪಾಮರಾಂಘ್ರಿಪಂ- ಒಳ್ಳೆಯ ದಯೆ ಯೆಂಬ ಕಲ್ಪವೃಕ್ಷವು, ಸತ್ಫಲಂಬಡೆದುದು, ಇಂ
ದು, ಎನ್ನ, ಮನೋರಥಂ, ಪೂರ್ಣ್ಣಂ, ಆಯ್ತು; ಅಪರಿಮಿತಂ- ಎಣಿಸುವದಕ್ಕಾಗದ, ಸುಖಂ, ನೆರೆದುದು-
ಪ್ರಾಪ್ತವಾಯಿತು; ಉಮಾಧವಭಕ್ತಿಭಾಜನಂ- ಶಿವನ ಭಕ್ತಿಗೆ ಪಾತ್ರನು, ಆದೆಂ. ... ॥೯೨॥

ಪೊಡವಿಯೊಳೆ, ಕೂರದರ್- ಪ್ರೀತಿಸದವರು, ನೀತೊಡೆ, ಮದುವೆಯ, ಕಾರ್ಯಂ, ಅಳಿದಪುದೆ ? ಎಂಬ
ವೊಲ್, ಈಜಡಮತಿಗಳ್- ಈ ಮೂಢಬುದ್ಧಿಯುಳ್ಳವರು, ಮುನಿದೊಡೆ- ಕೋಪಿಸಿಕೊಂಡರೆ, ಮನ್ಮೃಡಭ
ಕ್ತಿಯ- ನನ್ನ ಶಿವಭಕ್ತಿಯ, ಕಜ್ಜಂ- ಕಾರ್ಯವು, ಎಂತುಂ- ಹ್ಯಾಗಾದರೂ, ಉಳಿದಪುದೇಂ ? ॥೯೩॥

ಮುನಿದು- ಕೋಪವ ಮಾಡಿಕೊಂಡು, ಏಗೆಯ್ವರೊ ? ಎನಗೆ, ತಮ್ಮಯ- ಅವರುಗಳ, ಮನೆಗೆ,
ಎಯ್ದುವ- ಹೋಗುವ, ಬಾಧೆ, ಪಿಂಗಿದುದು- ತಪ್ಪಿತು; ತಿರಿದು, ಉಣ್ಬ, ಓದನಮಾತ್ರಂ- ಅನ್ನವು ಮಾ
ತ್ರ, ಪೋದುದು; ಬಳಿಕೆ, ಎನ್ನಯ, ಭಕ್ತಿಭಾಗ್ಯಮಂ- ಭಕ್ತಿಯೆಂಬ ಐಶ್ವರ್ಯವನ್ನು, ಸೆಳೆದಪರೆ ? ॥೯೪॥

ಉದರಾರ್ಥಂ- ಹೊಟ್ಟೆಗೋಸ್ಕರ, ಭಿಕ್ಷೆಯಂ, ಕಾಂಕ್ಷಿಪುದು, ಶಿವಪದಧ್ಯಾನಂ, ಅಪ್ಪುದೇಂ ? ತಪ್ಪ
ದೆ, ತತ್ತದ್ಗೇಹಗೇಹಪ್ರಗಮನಂ– ಆಯಾಯ ಮನೆಗಳಿಗೆ ತಿರುಗುವಿಕೆಯು, ಅಭವಾವಾಸಮಂ- ಶಿವದೇವ
ಸ್ಥಾನವನ್ನು, ಸುತ್ತಿದಂತೆ, ಅಪ್ಪುದೆ ? ನಿಚ್ಚಂ, ಬಿಕ್ಷೆಯಂ, ಬೇಡುವುದು, ಮೃಡನ, ಸದ್ಭಕ್ತಿಯಂ ಬೇ
ಡಿದಂತೆ, ಅಪ್ಪುದೆ ? ನಾನಾನ್ನಂಗಳಂ- ಬೇರೆಬೇರೆ ಅನ್ನಗಳನ್ನು, ಸಂಗ್ರಹಿಪುದು- ಕೂಡಿಸುವದು, ಅಮಳ
ಪುಷ್ಪೌಘಪತ್ರಾಳಿಯಂ, ದಲ್- ನಿಶ್ಚಯವಾಗಿ, ... ... ... ॥೯೪॥

ಕಂ ‖ ತವೆ ತಿರಿದು ಸಂಗ್ರಹಂಗೆ । ಯ್ದುವ್ವೊಲಪ್ಪುದೆ ಭೋಜನಾಭಿರತಿ ಶಿವಪೂಜೋ ‖ ತ್ಸವರತಿ ಯಪ್ಪುದೆ ರಸಮಂ । ಸವಿಯುದು ಶಿವಭಾವನಾಮೃತಾಸ್ವಾದನಮೇ ‖

ಕಂ ‖ ಬಯಸಲ್ಪಡದಾವುದು ಶಿವ । ನಿಯಮಿತ ಮೇಳ್ತರ್ಪು ದದನೆ ಸಲೆ ಬಹಿರಂತ‖ರ್ನಿಯತಾರ್ಪಣಾವಧಾನದೆ । ನಯದಿಂ ನಿಜಲಿಂಗದೊತನೆ ಭೋಗಿಪ್ಪು ದುಚಿತಂ ‖ ‖೯೭‖

ಕಂ ‖ ತಲೆಯುರುಳೊಡ್ಡ ಮಸು ಪಳಿದೊಡ । ಮಲಘುತರಪ್ರಾಣಲಿಂಗನಿಷ್ಠಾನಿಧಿ ಸಂ ‖ ಛಲಮತಿಗಳಂತೆ ವಿಷಯಾ । ವಿಲಸುಖಮಂ ಬಗೆದು ಬಯಸಿ ಬೇಳಾದಪನೆ ‖೯೮‖

ವ ‖ ಎಂದು ವೈರಾಗ್ಯಭಾವಮ ನವಲಂಬಿಸಿ ಮಂದಸ್ಮಿತಾಸ್ಯಂ ಧೃತಿಗುಂದದೆ ‖ *

ಉ ‖ ಸೇವಿಸಿದಂಗೆ ಸನ್ಮತಿಯ ನೀಶ್ವರಭಕ್ತಿ ಯನಂಗಜೀವಚೇ । ತೋವಿಮಲತ್ವಮಂ ಕವಿತೆಯೊಳ್ಪ ನುಮಾಧಿಪಸುಪ್ರಸಾದಸೌ ‖ ಖ್ಯಾವರಣತ್ವಮಂ ಸಕಲಸಿದ್ಧಿಯನೊಲ್ದಜರಾಮರತ್ವಮಂ । ಪಾವನಮುಕ್ತಿಯಂ ಪಡೆದು ಸಾರ್ಚುಗು ಮೀಜಗದೊಳ್ನಿರಂತರಂ ‖ ... ... ... ... ... ... ‖೯೯‖

ಕಂ ‖ ಇದು ಶಿವನಿರ್ಮಾಲ್ಯಂ ದಿಟ । ಮಿದ ನೊಲ್ದಂ ಸೇವಿಸುತ್ತೆ ಪೂಜಿಪೆ ನನಿಶಂ ‖ ಮದನಾರಾತಿಯ ಸದಮಲ । ಪದಕಮಲಮ ನೆಂದು ಭಕ್ತ ನುತ್ಸವಿಸುತ್ತಂ ‖ ‖೧೦೦‖

---

ತವೆ- ಹೆಚ್ಚಾಗಿ, ತಿರಿದು- ಎತ್ತಿ, ಸಂಗ್ರಹಂಗೆಯ್ವವೊಲ್- ಕೂಡಿಸಿದಹಾಗೆ, ಅಪ್ಪುದೆ? ಭೋಜನಾಭಿರತಿ- ಊಟದಲ್ಲಿ ಆಸಕ್ತಿಯು, ಶಿವಪೂಜೋತ್ಸವರತಿ, ಅಪ್ಪುದೆ ? ರಸಮಂ- ರುಚಿಯನ್ನು, ಸವಿಯುದು- ಆಸ್ವಾದಿಸುವದು, ಶಿವಭಾವನಾಮೃತಾಸ್ವಾದನಮೇ- ಶಿವಧ್ಯಾನವೆಂಬಮೃತವನ್ನು ಕುಡಿಯುವಂತಿರುವದೇ ? ... ... ... ... ... ... ‖೯೬‖

ಬಯಸಲ್ಪಡದೆ- ಅಪೇಕ್ಷಿಸಲ್ಪಡದೆ, ಆವುದು, ಶಿವನಿಯಮಿತಂ- ಪರಮೇಶ್ವರಪ್ರೇರಿತವಾಗಿ, ಏಳ್ತರ್ಪುದು- ಬರುವದೋ, ಅದನೆ, ಸಲೆ, ಬಹಿರಂತರ್ನಿಯತಾರ್ಪಣಾವಧಾನದೆ- ಒಳಗೂ ಹೊರಗೂ ನಿಯಮದಿಂದ ಸಮರ್ಪಿಸುವ ಎಚ್ಚರಿಕೆಯಿಂದ, ನಯದಿಂ ನಿಜಲಿಂಗದೊಡನೆ, ಭೋಗಿಪುದು, ಉಚಿತಂ. ‖೯೭‖

ಅಲಘುತರಪ್ರಾಣಲಿಂಗನಿಷ್ಠಾನಿಧಿ- ಅತಿ ಮಹತ್ತರವಾದ ಪ್ರಾಣಲಿಂಗದಲ್ಲಿಡಲ್ಪಟ್ಟ ಶ್ರದ್ಧೆಗೆ ನಿಕ್ಷೇಪಸಾದವನು, ತಲೆ, ಉರುಳೊಡಂ- ಕತ್ತರಿಸಲ್ಪಟ್ಟು ಉರುಳಿದರೂ, ಅಸು- ಪ್ರಾಣವು, ಅಳಿದೊಡಂ, ಚಂಚಲಮತಿಗಳಂತೆ- ಚಪಲಬುದ್ಧಿಗಳಹಾಗೆ, ವಿಷಯಾವಿಲಸುಖಮಂ- ಸ್ರಕ್ಚಂದನವನಿತಾದಿ ವಿಷಯಗಳಿಂದ ಮಲಿನವಾದ ಸೌಖ್ಯವನ್ನು, ಬಗೆದು-ಯೋಚಿಸಿ, ಬಯಸಿ- ಅಪೇಕ್ಷಿಸಿ, ಬೇಳ್- ದಡ್ಡನು, ಆದಪನೆ? ‖೯೮‖

ಎಂದು, ವೈರಾಗ್ಯಭಾವಮಂ- ವಿರಕ್ತತೆಯನ್ನು, ಅವಲಂಬಿಸಿ, ಮಂದಸ್ಮಿತಾಸ್ಯಂ- ಮುಗುಳ್ನಗೆಯಿಂ ಕೂಡಿದ ಮುಖವುಳ್ಳವನಾಗಿ, ಧೃತಿಗುಂದದೆ-ಧೈರ್ಯದಿಂ ಕಡಮೆಯಾಗದೆ. * * * * * *

ಈಜಗದೊಳ್, ( ಶಿವನಿರ್ಮಾಲ್ಯಮಂ ) ಸೇವಿಸಿದಂಗೆ, ಒಲ್ದು, ಸನ್ಮತಿಯಂ. ಈಶ್ವರಭಕ್ತಿಯಂ, ಅಂಗಜೀವಚೇತೋವಿಮಲತ್ವಮಂ- ದೇಹ ಪ್ರಾಣ ಮನಸ್ಸುಗಳಿಗೆ ನೈರ್ಮಲ್ಯವನ್ನು, ಕವಿತೆಯ, ಒಳ್ಪಂ- ಸವಿಸಾಚೇನತ್ವವನ್ನು, ಉಮಾಧಿಪಸುಪ್ರಸಾದಸೌಖ್ಯಾವರಣತ್ವಮಂ- ಪರಮೇಶ್ವರನ ಅನುಗ್ರಹದಿಂದುಂಟಾದ ಸೌಖ್ಯದ ಆಚ್ಛಾದನವನ್ನು, ಸಕಲಸಿದ್ಧಿಯಂ, ಅಜರಾಮರತ್ವಮಂ- ಮುಪ್ಪು ಸಾವುಗಳಿಲ್ಲದಿರುವಿಕೆಯನ್ನು, ಪಾವನಮುಕ್ತಿಯಂ, ಪಡೆದು, ಸಾರ್ಚುಗುಂ- ಉಂಟುಮಾಡುವದು. ... ‖೯೯‖

ಇದು, ಶಿವನಿರ್ಮಾಲ್ಯಂ, ದಿಟಂ- ನಿಶ್ಚಯ, ಇದು, ಒಲ್ದು, ಆಂ, ಸೇವಿಸುತ್ತೆ- ತಿನ್ನುತ್ತ, ಅನಿಶಂ- ಯಾವಾಗಲೂ, ಮದನಾರಾತಿಯ, ಸದಮಲಪದಕಮಲಮಂ, ಪೂಜಿಪೆಂ, ಎಂದು, ಭಕ್ತಂ, ಉತ್ಸವಿಸುತ್ತಂ- ಸಂತೋಷಪಡುತ್ತ. ... ... ... ... ... ‖೧೦೦‖

ಕಂ ॥ ಇರುಳೊಳ್ ಶಿವಂಗೆ ಪೂಜೆಯ । ವಿರಚಿಸಿ ಕಡೆದೆಗೆದ ಕುಸುಮಪತ್ರಾಳಿಯ ನಾ ॥ ದರದಿಂ ಬಳಗಪ್ಪುದು ಮಾ । ಶರಣಂ ಸವಿ ಸವಿದು ಮುದಮನಾಳ್ದಿಪ್ಪರ್ದಂ ॥

ವ ॥ ಆಗಳಾಗೌಳತಪಸ್ವಿಗಳಾತನ ಬಗೆಗಂಡು ವಿಸ್ಮಯಂ ಮುತ್ತು ಮತ್ತಮಿರದೆ ಮರುಳನೀಯುಪಾಯದಿಂ ಬರ್ದುಂಕಿದಪನೀನಿರ್ಮಾಲ್ಯಮನೆಲ್ಲಮಂ ದಹಿಸೆ ಮೆಲ್ವೊಡಿಲ್ಲದೊಡೆ ತಾನೆ ಮೃತನಾದಪನೆಂದು ದುರ್ಜನರ್ನೆರೆದಾಪತ್ರಪುಷ್ಪಂಗಳಂ ತಮ್ಮ ವಿವೇಕಂಗಳಂ ಸುಡುವಂತೆ ಸುಟ್ಟು ಬೂದಿಯಂ ನೆಗಳ್ಚಲೊಡನಾಮರುದಿನದುದಯದೊಳಾಬೂದಿಯಂ ವೈರಾಗ್ಯಭಾಗ್ಯಧುರಂಧುರನೋಹಿಲಯ್ಯನೊಯ್ಯನಭೀಕ್ಷಿಸಿ ಪರಮಾನಂದಮಂ ತಾಳ್ದು ॥ * * * * * * * * * * * * * *

ಕಂ ॥ ಮೊದಲಿದು ಶಿವನಿರ್ಮಾಲ್ಯಂ । ಪದೆದೀಗಳ್ಭಸಿತಮಾದುದೆನ್ನಯ ಸುಕೃತಾ ॥ ಭ್ಯುದಯಕೆಣೆಯೊಳವೆ ಶಿವಕೃಪೆ । ಯೊದವಿದುದೆನಗಮಮ ಧನ್ಯನಾದೆಂ ಜಗದೊಳ್ ॥ ... ... ... ... ... ... ॥೧೧೨॥

ಕಂ ॥ ನವನೀತಂ ನವಘೃತಮಾ । ದವೊಲಿನಿವಾಲ್ಪಾಯಸಾನ್ನಮಾದಂತೆವೊಲೈ ॥ ಕ್ಷವರಸಮದು ಶರ್ಕರೆಯಾ । ದವೊಲೆಳೆಮುತ್ತಾದ ತೆರದೆ ವಿಮಲಾಂಬುಕಣಂ ॥

ಕಂ ॥ ಕನಕಮಪರಂಜಿಯಾದವೊ । ಲಿನಿಗಾಯ್ತನಿವಣ್ಗಳಾದ ತೆರದಿಂದೀಗಳ್ ॥ ಘನಶಿವನಿರ್ಮಾಲ್ಯಂ ಪಾ । ವನಭಸಿತಮಿದಾದುದರರೆ ಪುರಹರಕೃಪೆಯಿಂ ॥ ॥೧೧೪॥

---

ಆಶರಣಂ, ಇರುಳೊಳ್- ರಾತ್ರಿಯಲ್ಲಿ, ಶಿವಂಗೆ, ಪೂಜೆಯ, ವಿರಚಿಸಿ, ಬಳಗು, ಅಪ್ಪುದಂ, ಕಡೆದೆಗೆದ- ಒಂದು ಪಾರ್ಶ್ವಕ್ಕೆ ತೆಗೆದು ಹಾಕಿದ, ಕುಸುಮಪತ್ರಾಳಿಯಂ- ಹೂವು ಪತ್ರೆಗಳ ರಾಶಿಯನ್ನು, ಸವಿದು, ಮುದಮಂ,ಆಳ್ದು, ಒಪ್ಪಿ, ಇರ್ದಂ. ... ... ... ... ॥೧೧೧॥

ಆಗಳ್, ಆಗೌಳತಪಸ್ವಿಗಳ್, ಆತನ- ಓಹಿಲಯ್ಯನ, ಬಗೆಗಂಡು- ರೀತಿಯನ್ನು ನೋಡಿ, ವಿಸ್ಮಯಂಮುತ್ತು- ಆಶ್ಚರ್ಯದಿಂ ವ್ಯಾಪ್ತರಾಗಿ, ಮತ್ತಂ, ಇರದೆ, ಮರುಳಂ- ಹುಚ್ಚನು, ಈ ಉಪಾಯದಿಂ- ಈ ಹೂವು ಪತ್ರೆಗಳನ್ನು ತಿನ್ನುವ ಉಪಾಯದಿಂದ, ಬರ್ದುಂಕಿದಪಂ-ಬದುಕುವನು, ಈನಿರ್ಮಾಲ್ಯಮಂ, ಎಲ್ಲಮಂ, ದಹಿಸೆ- ಸುಟ್ಟುಬಿಟ್ಟರೆ, ಮೆಲ್ವೊಡೆ- ತಿನ್ನುವದಕ್ಕೆ, ಇಲ್ಲದೊಡೆ, ತಾನೆ, ಮೃತಂ, ಆದಪಂ, ಎಂದು ದುರ್ಜನರ್, ನೆರೆದು- ಕೂಡಿ, ತಮ್ಮ, ವಿವೇಕಂಗಳಂ- ಪ್ರಜ್ಞೆಯನ್ನು, ಸುಡುವಂತೆ, ಆಪತ್ರಪುಷ್ಪಂಗಳಂ, ಸುಟ್ಟು, ಬೂದಿಯಂ, ನೆಗಳ್ಚಲ್- ಮಾಡಲು, ಒಡನೆ, ಆಮರುದಿನದ, ಉದಯದೊಳ್, ಆಬೂದಿಯಂ, ವೈರಾಗ್ಯಧುರಂಧರಂ, ಓಹಿಲಯ್ಯಂ, ಅಭೀಕ್ಷಿಸಿ, ಪರಮಾನಂದಮಂ, ತಾಳ್ದು. * * * *

ಇದು, ಮೊದಲ್, ಶಿವನಿರ್ಮಾಲ್ಯಂ, ಈಗಳ್, ಪದೆದು, ಭಸಿತಂ, ಆದುದು, ಎನ್ನಯ, ಸುಕೃತಾಭ್ಯುದಯಕೆ, ಎಣೆ- ಸಾಟಿಯು, ಒಳವೆ ? ಎನಗೆ, ಶಿವಕೃಪೆ, ಒದವಿದುದು, ಅಮಮ ! ಜಗದೊಳ್, ಧನ್ಯಂ- ಕೃತಾರ್ಥನು, ಆದೆಂ. ... ... ... ... ... ॥೧೧೨॥

ನವನೀತಂ- ಬೆಣ್ಣೆಯು, ನವಘೃತಂ- ಹೊಸತುಪ್ಪವು, ಆದವೊಲ್, ಇನಿಪಾಲ್, ಪಾಯಸಾನ್ನಂ, ಆದಂತೆವೊಲ್, ಅದುಐಕ್ಷವರಸಂ- ಆ ಕಬ್ಬಿನ ಹಾಲು, ಶರ್ಕರೆ- ಸಕ್ಕರೆಯು, ಆದವೊಲ್, ವಿಮಲಾಂಬುಕಣಂ- ನಿರ್ಮಲವಾದ ನೀರಿನ ಹನಿಯು, ಎಳೆಮುತ್ತು, ಆದ, ತೆರದೆ. ... ... ॥೧೧೩॥

ಕನಕಂ, ಅಪರಂಜಿ, ಆದವೊಲ್, ಇನಿಗಾಯ್, ತನಿವಣ್ಗಳ್- ಪಕ್ವವಾದ ಹಣ್ಣುಗಳು, ಆದ, ತೆರದಿಂದೆ, ಈಗಳ್, ಘನಶಿವನಿರ್ಮಾಲ್ಯಂ, ಇದು, ಪುರಹರಕೃಪೆಯಿಂ, ಪಾವನಭಸಿತಂ, ಆದುದು, ಅರರೆ! ॥೧೧೪॥

ಕಂ ॥ ಅನಿಮಿತ್ತಬಂಧು ಕರುಣಾ । ವನನಿಧಿ ಸೋಮೇಶ ನೆನಗೆ ದಯೆಗೆಯ್ದಂ ಪಾ ॥
ವನಭಸಿತಭಕ್ಷಣಮು ನಿದ । ನನಾರತಂ ಸವಿದು ತನ್ನ ನೊಲ್ದರ್ಚಿಸುವೆಂ ॥ ॥೧೦೫॥
ಕಂ ॥ ಸತ್ಯಮಯಮಾದ ವೇದಂ । ಭೂತ್ಯೈನಃಪ್ರಮದಿತವ್ಯಮೆಂದ್ರುಂ ಭುವನ ॥
ಸ್ತುತ್ಯಂ ತ್ರಿಯಾಯುಷಾದಿವಿ । ನುತ್ಯಸ್ಫುಟಮಂತ್ರದಿಂದೆ ಬೋಧಿಪುದಲ್ತೆ ॥ ॥೧೦೬॥
ಕಂ ॥ ಮಾತೇಂ ಸವಿಷ ಭಸ್ಮ । ಜ್ಯೋತಿ ಯೆನುತ್ತಂ ದ್ವಿವಾರ ಮೀಶಾತ್ಮತೆಯಂ ॥
ಪ್ರೀತಿ ಮಿಗೆ ಪೇಳ್ಗು ಮನಿಶಂ । ಭೂತಾದಿಸಮಸ್ತವಸ್ತು ಪೂರ್ಣ್ಣತೆಯೊಳ್ಪಂ ॥೧೦೭॥
ಕಂ॥ ತವೆ ಬೋಧಿಸುಗುಂ ಸರ್ವಂ । ಹವಾಇದಂ ಭಸ್ಮವಚನ ಮಿಂತಖಿಲಬುಧ ॥ ಸ್ತ
ವನೀಯ ನಿಗಮಶಿರದಿಂ । ಪ್ರವಿದಿತ ಮಾಗಿರ್ಪ ವಿಮಲಭಸಿತ ಮಿದಲ್ತೆ ॥೧೦೮॥
ಕಂ ॥ ಪದಿನೆಂಟುಪುರಾಣಂಗ । ಳ್ವಿದಿತಸ್ಮೃತಿವೇದಶಾಸ್ತ್ರ ಮಾಗಮನಿವಹಂ ॥
ಪದೆ ದೀಭಸ್ಮದ ಮಹಿಮೆಯ । ಪದಮಂ ಸಲೆ ಪೊಗಳ್ದು ಪೊಗಳ್ದು ಕಡೆಗಂಡಪವೇ॥೧೦೯॥
ಕಂ ॥ ಎಂದೆಂಬ ಪೆಂಪು ತನ್ನೊ । ಳ್ಸಂದ ಮಹಾಭಸಿತ ಮೆನಗೆ ಸಿದ್ಧಿಸಿದತ್ತೆ ॥
ನ್ನಿಂ ದಧಿಕರಾರೊ ಧನ್ಯರೊ । ಳಿಂದೆನ್ನಯ ಪುಟ್ಟು ಸಫಲ ಮಾದುದು ಪೆರತೇಂ ॥೧೧೦॥

---

ಅನಿಮಿತ್ತಬಂಧು- ನಿಷ್ಕಾರಣವಾಗಿ ನೆಂಟನಾದ, ಕರುಣಾವನನಿಧಿ- ದಯಾಸಮುದ್ರನಾದ, ಸೋಮೇಶಂ, ಎನಗೆ, ಇದಂಪಾವನಭಸಿತಭಕ್ಷಣಮಂ- ಈ ಪರಿಶುದ್ಧವಾದ ಭಸ್ಮವಂ ತಿನ್ನುವದನ್ನು, ದಯೆಗೆಯ್ದಂ- ಕೃಪೆಮಾಡಿದನು, ಇದಂ, ಅನಾರತಂ- ನಿರಂತರದಲ್ಲೂ, ಸವಿದು- ತಿಂದು, ತನ್ನಂ- ಆ ಶಿವನನ್ನು, ಒಲ್ದು, ಅರ್ಚಿಸುವೆಂ. ... ... ... ... ... ॥೧೦೫॥

ಭುವನಸ್ತುತ್ಯಂ, ಸತ್ಯಮಯಂ, ಆದ, ವೇದಂ, ತ್ರಿಯಾಯುಷಾದಿವಿನುತ್ಯಸ್ಫುಟಮಂತ್ರದಿಂದೆ- "ತ್ರಿಯಾಯುಷಂಜಮದಗ್ನೇಃಕಶ್ಯಪಸ್ಯತ್ರಿಯಾಯುಷಂಅಗಸ್ತ್ಯಸ್ಯತ್ರಿಯಾಯುಷಂಯದ್ದೇವಾನಾಂತ್ರಿಯಾಯುಷಂತನ್ಮೇಅಸ್ತುತ್ರಿಯಾಯುಷಂ"ಎಂಬುವದೇಮೊದಲಾದಶ್ಲಾಘ್ಯವಾಗಿಯೂವ್ಯಕ್ತವಾಗಿಯೂ ಇರುವಮಂತ್ರಗಳಿಂದ,ಭೂತ್ಯೈ-ಭಸ್ಮಕ್ಕೋಸ್ಕರ,ನಪ್ರಮದಿತವ್ಯಂ-ಮದಿಸಲಾಗದು,ಎಂದುಂಬೋಧಿಪುದಲ್ತೆ?

ಮಾತು, ಏಂ, "ಸವಿಷಭಸ್ಮಜ್ಯೋತಿಃ"- ಆ ಈ ಭಸ್ಮವೇ ಪರಂಜ್ಯೋತಿಸ್ವರೂಪವಾದದ್ದು, ಎನುತ್ತಂ, ದ್ವಿವಾರಂ- ಎರಡಾವರ್ತಿ, ಈಶಾತ್ಮತೆಯಂ- ಶಿವಸ್ವರೂಪತ್ವವನ್ನು, ಭೂತಾದಿಸಮಸ್ತವಸ್ತುಪೂರ್ಣ್ಣತೆಯ- ಪೃಥಿವ್ಯಾದಿ ಭೂತಾತ್ಮಕವಾದ ಸಮಸ್ತ ವಸ್ತುಗಳಲ್ಲಿ ತುಂಬಿರುವಿಕೆಯ, ಒಳ್ಪಂ- ಸವಿಶೇಷತ್ವವನ್ನು, ಪ್ರೀತಿ, ಮಿಗೆ, ಅನಿಶಂ, ಪೇಳ್ಗುಂ. ... ... ॥೧೦೭॥

ಇದುಭಸ್ಮ- ಈ ವಿಭೂತಿಯು, ಸರ್ವಂಹವಾ- ಸಕಲವಸ್ತುಸ್ವರೂಪವಾದುದಲ್ಲವೇ ? ಇಂತು, ವಚನಂ- ಶ್ರುತಿವಾಕ್ಯವು, ತವೆ, ಬೋಧಿಸುಗುಂ, ಇದು, ಅಖಿಲಬುಧಸ್ತವನೀಯನಿಗಮಶಿರದಿಂ- ಸಕಲವಿದ್ವಾಂಸರಿಂದಲೂ ಸ್ತೋತ್ರಮಾಡಲ್ಪಡುವದಕ್ಕೆ ಯೋಗ್ಯವಾದ ಉಪನಿಷತ್ತಿನಿಂದ, ಪ್ರವಿದಿತಂ- ಪ್ರಸಿದ್ಧವು, ಆಗಿ, ಇರ್ಪ, ವಿಮಲಭಸಿತಮಲ್ತೆ ? ... ... ... ... ॥೧೦೮॥

ಪದಿನೆಂಟುಪುರಾಣಂಗಳ್, ವಿದಿತಸ್ಮೃತಿ, ವೇದಶಾಸ್ತ್ರಂ, ಆಗಮನಿವಹಂ, ಪದೆದು, ಈಭಸ್ಮದ ಮಹಿಮೆಯ, ಪದಮಂ- ಶಕ್ತಿಯನ್ನು, ಪೊಗಳ್ದು, ಪೊಗಳ್ದು, ಕಡೆಗಂಡಪವೆ ? ... ॥೧೦೯॥

ಎಂದು, ಎಂಬ, ಪೆಂಪು- ಅತಿಶಯವು, ತನ್ನೊಳ್, ಸಂದ, ಮಹಾಭಸಿತಂ, ಎನಗೆ, ಸಿದ್ಧಿಸಿದತ್ತು, ಧನ್ಯರೊಳ್, ಎನ್ನಿಂದೆ- ನನಗಿಂತಲೂ, ಅಧಿಕರ್, ಆರೊ ? ಇಂದು, ಎನ್ನಯ, ಪುಟ್ಟು- ಹುಟ್ಟುವಿಕೆಯು, ಸಫಲಂ, ಆದುದು, ಪೆರತೇಂ- ಮತ್ತೇನು ? ... ... ... ॥೧೧೦॥

ವ ‖ ಎಂದು ಸಂಮುದಂ ಬಡೆದಾಭಸಿತಮಂ ಕಣ್ದಣಿಯೆ ನೋಡಿ ಮನಂ ತಣಿಯೆ ಭಾವಿಸಿ ಮೆಯ್ಯಾರೆ ಪೂಸಿ ಪರಮೋತ್ಸಾಹದಿಂ ಸವಿದುಳಿದುದನೆ ಪಾಸುಗೆಯ್ದು ಪಟ್ಟಿರ್ದು ಪರಮಸುಖತರಂಗಿಣಿಯೊಳವಗಾಹಂಗೆಯ್ದು ‖ * * * * * * * *

ಕಂ ‖ ಪಿಂಗವೆ ಮದೀಯವೇಷಕೆ । ಸಂಗತವಾದ ತ್ತಿದೆನ್ನ ಸರ್ವಾಂಗಂ ಸ ‖ ನ್ಮಂಗಲಮಯಮಾದ ತ್ತೆನು । ತಂ ಗುಣನಿಧಿ ನಿಚ್ಚನಿಚ್ಚ ಮೀತೆರದಿಂದಂ ‖ ... ‖೧೧೧‖

ಕಂ ‖ ಬಿಡದಾಚರಿಸುತ್ತಿರೆ ತ । ಮ್ಮಡಿಗ ಳದಂ ಕಂಡು ಬೆಕ್ಕಸಂಬಡುತರಿದೀ ‖ ಪೊಡವಿಯೊಳದು ಭಸ್ಮಮ ನೆಡೆ । ಯುಡುಗಡೆ ಸವಿಸವಿದು ಮಳಯದಿರ್ದಪ ನೀಗಳ್ ‖

ಕಂ ‖ ತಿಂದಕಟಭೂತಿಯಂ ಮೃತಿ । ಯೊಂದದೆ ಜೀವಿಪ್ಪುದು ಮಾಯೆಯಿಂದಮೊಬ ಲ್ಮ ‖ ರ್ದಿಂದಮೊ ಬಲ್ಲವ ರಾರಿದ । ನೆಂದಲ್ಲಿ ಕೆಲಂಬ ರಾಗಳಾಳೋಚಿಸುತಂ ‖ ‖೧೧೩‖

ಕಂ ‖ ಅಂಗಜವಿಕಾರ ಮಶನದ । ಪಂಗು ಕನಲ್ಕೆಯ ಪೊಡರ್ಪು ನಿದ್ರಾಜಾಡ್ಯಂ ‖ ಲಿಂಗಾರ್ಚನಾಭಿರತಭ । ಕ್ತಂಗೆಂದುಂ ಪೊರ್ದ ವೆಂಬ ರಾರ್ಯರ್ದರೆಯೊಳ್ ‖ ... ‖೧೧೪‖

ವ ‖ ಅದರಿನೀಲಿಂಗಾರ್ಚಕ ಭಕ್ತಂಗಿದು ಯುಕ್ತ ಮೆಂದು ನಿರ್ಧರಿಸಿರ್ದ ರನ್ನೆವರಮಲ್ಲಿ ‖ * * * * * * * * * * * * * * * *

---

ಎಂದು, ಸಮ್ಮದಂಬಡೆದು-ಸಂತೋಷವಂ ಹೊಂದಿ, ಆಭಸಿತಮಂ,ಕಣ್ದಣಿಯೆ-ನೇತ್ರವು ತೃಪ್ತಿಯಂ ಪಡೆಯುವಂತೆ, ನೋಡಿ, ಮನಂ, ತಣಿಯೆ- ತೃಪ್ತಿಪಡುವಹಾಗೆ, ಭಾವಿಸಿ- ಧ್ಯಾನಿಸಿ, ಮೆಯ್ಯಾರೆ- ದೇಹವೆಲ್ಲಕ್ಕೂ, ಪೂಸಿ- ಧರಿಸಿ, ಪರಮೋತ್ಸಾಹದಿಂ, ಸವಿದು- ತಿಂದು, ಉಳಿದುದನೆ, ಪಾಸುಗೆಯ್ದು- ಹಾಸಿಗೆಯನ್ನು ಮಾಡಿಕೊಂಡು- ಪಟ್ಟು- ಮಲಗಿ, ಇರ್ದು, ಪರಮಸುಖತರಂಗಿಣಿಯೊಳ್- ಉತ್ಕೃಷ್ಟವಾದ ಸೌಖ್ಯವೆಂಬ ಹೊಳೆಯಲ್ಲಿ, ಅವಗಾಹಂಗೆಯ್ದು- ಮುಳುಗಿ. * * * * * * * * * *

ಇದು- ಈ ಭಸ್ಮಲೇಪನವು, ಮದೀಯವೇಷಕೆ, ನನ್ನ ಯಾಸಕ್ಕೆ, ಸಂಗತಂ- ಅನುಗುಣವಾದದ್ದು, ಆದತ್ತು ; ಎನ್ನ, ಸರ್ವಾಂಗಂ, ಸನ್ಮಂಗಲಮಯಂ, ಆದತ್ತು, ಎನುತಂ, ಗುಣನಿಧಿ, ನಿಚ್ಚನಿಚ್ಚಂ, ಈ ತೆರದಿಂದಂ. ... ... ... ... ... ... ‖೧೧೧‖

ಬಿಡದೆ, ಆಚರಿಸುತ್ತೆ, ಇರೆ, ಅದು, ತಮ್ಮಡಿಗಳ್, ಕಂಡು, ಬೆಕ್ಕಸಂಬಡುತ್ತೆ- ಆಶ್ಚರ್ಯಪಡುತ್ತ, ಇದು, ಪೊಡವಿಯೊಳ್, ಅರಿದು- ಅಸಾಧ್ಯ! ಈಗಳ್, ಎಡೆಯುಡುಗದೆ- ಸ್ವಲ್ಪವೂ ತಪ್ಪದೆ, ಭಸ್ಮಮಂ ಸವಿಸವಿದುಂ, ಅಳಿಯದೆ- ಸಾಯದೆ, ಇರ್ಪಪಂ ! ... ... ... ‖೧೧೨‖

ಅಕಟ ! ವಿಭೂತಿಯಂ, ತಿಂದು, ಮೃತಿಯೊಂದದೆ- ಮರಣವಂ ಹೊಂದದೆ, ಜೀವಿಪುದು, ಮಾಯೆಯಿಂದಮೊ-ಕಪಟದಿಂದಲೊ ? ಬಲ್ಮರ್ದಿಂದಮೊ- ಬಲವಾದ ಔಷಧದಿಂದಲೋ ? ಇದಂ, ಬಲ್ಲವರ್, ಆರ್ ? ಎಂದು, ಅಲ್ಲಿ, ಕೆಲಂಬರ್- ಕೆಲವರು, ಆಲೋಚಿಸುತಂ. ... ... ... ‖೧೧೩‖

ದರೆಯೊಳ್, ಆರ್ಯರ್- ಪೂಜ್ಯರು, ಲಿಂಗಾರ್ಚನಾಭಿರತಭಕ್ತಂಗೆ- ಶಿವಪೂಜೆಯಲ್ಲಿ ಆಸಕ್ತಿಯುಳ್ಳ ಭಕ್ತನಿಗೆ, ಅಂಗಜವಿಕಾರಂ- ಮನ್ಮಥನಿಂದುಂಟಾಗುವ ಮನೋವೈಕಲ್ಯವು, ಅನ್ನದ, ಪಂಗು- ಹಂಗು, ಕನಲ್ಕೆಯ- ಕೋಪದ, ಪೊಡರ್ಪು- ಆಧಿಕ್ಯವು, ನಿದ್ರಾಜಾಡ್ಯಂ- ನಿದ್ರೆಯ ರೋಗವು, ಎಂದುಂ- ಯಾವಾಗಲೂ, ಪೊರ್ದವ್- ಹೊಂದುವದಿಲ್ಲ, ಎಂಬರ್. ... ... ‖೧೧೪‖

ಅದರಿಂ, ಈಲಿಂಗಾರ್ಚಕಭಕ್ತಂಗೆ, ಇದು, ಯುಕ್ತಂ, ಎಂದು, ನಿರ್ಧರಿಸಿ, ಇರ್ದರ್, ಅನ್ನೆವರಂ- ಅಷ್ಟರಲ್ಲಿ, ಅಲ್ಲಿ. * * * * * * * * * * * * * * * *

ಮಹಾಸ್ರ॥ ತಳರ್ದಾಗಳ್ಕೊಂಡು ತತ್ಕಾನನದೊಳ್ ಮೃದುಬಿಲ್ವೀದಳಂ ಗುಗ್ಗುಳಂ
ಸ। ನ್ಮಳಯೋದ್ಭೂಕಾಷ್ಠ ಮೆಂದೆಂಬಿವ ನಸವಸದಿಂ ಕಂಪಿಯೊಳ್ತುಂಬಿ ಪೊತ್ತಗ್ಗಳಿ
ಸುತ್ತಾನಂದದಿಂ ಬೆಣ್ಪೊರೆಗೆ ಸೆಡೆಯ ದಾಘೋರಕಾಂತಾರದೊ ಳ್ನಿ। ಶ್ಚಲಶಂಭುಧ್ಯಾನ
ಸಾಂದ್ರಂ ಬರುತೆಸೆದ ನತಂದ್ರಂ ಸಮಂತೋಹಿಲೇಂದ್ರಂ ॥ ... ॥೧೧೫॥

ಕಂ॥ ಗಿಡುಗಳ ಸರುವಿನ ದರುವಿನ। ನಿಡುಗಲ್ಗಳ ಬೆಟ್ಟಗಟ್ಟದಿಟ್ಟಣದೊ ಳ್ಮು॥
ಳ್ಗಡಣದ ಮೆಳೆಗಳ ಪುಲ್ಪೊದ। ರೆಡೆಯೊ ಳ್ನಡೆತಂದ ನೋಹಿಲಂಜವದಿಂದಂ॥ ॥೧೧೬॥

ಕಂ॥ ಕರಿ ಹರಿ ಪುಲಿ ಪುಲ್ಲೆ ವೃಕಂ। ನರಿ ಶರಭಂ ಸಿಂಹ ಮುಗ್ರಶಿಖಿ ಫಣಿ ಸಾರ್ತ್ತಿ॥
ಇರದಾತ್ಮವೈರಮಂ ಮರೆ। ದುರುಶಾಂತಾತ್ಮಕನ ನೊಲ್ದು ನೋಡಿದು ವಾಗಳ್ ॥೧೧೭॥

ಕಂ॥ ಅಸವಸದೊ ಳೆಯ್ದುತಿರೆ ಕೂ। ರ್ದಸಿಯೊಂ ದಂಗಾಲೊ ಳೆಯ್ದೆ ಮೂಡಿದು
ದಾಸಾ॥ ಹಸಿ ಯಳ್ಕ ದದಕೆ ಮೆಲ್ಲನೆ। ಕುಸಿಕುಸಿ ದಡಿಯಿಟ್ಟು ನಡೆಯುತಿರ್ದಂ ಭಕ್ತಂ

ಕ॥ ಬಿಡದೊರೆವಜ್ಜೆಯಂ ಪಿಂ। ಮಡದಿಂ ಮುಂಬೆರಲ ಬಲ್ಪಿನಿಂ ಪರಿವಿಡಿಯಿಂ॥ ನಡೆ
ನಡೆದು ಕುಂಟುತಂ ಪೊರೆ। ಜಡಿಯುತ್ತಿರೆ ಪೊತ್ತು ಬಳ್ಕದೆಳ್ತರುತಿರ್ದಂ ॥ ॥೧೧೯॥

ವ॥ ಅಂತು ಕುನುಂಗಿ ಕುಂಟುತ್ತಂ ಬರುತ್ತಮಿರ್ಪನ್ನೆಗಂ ಭಕ್ತದೇಹಿಕ ದೇವ ನಿನ್ನಿರಲ್ಬಾರದೆಂದು ಕಾರುಣ್ಯಂದಂದು ॥ * * * * * * * * * *

---

ನಿಶ್ಚಲಶಂಭುಧ್ಯಾನಸಾಂದ್ರಂ- ಸ್ಥಿರವಾದ ಶಿವಧ್ಯಾನದಿಂ ತುಂಬಿದ, ಅತಂದ್ರಂ- ಆಲಸ್ಯರಹಿತನಾದ, ಓಹಿಲೇಂದ್ರಂ, ಆಗಳ್, ತಳರ್ದು- ಹೊರಟು, ತತ್ಕಾನನದೊಳ್- ಆ ಕಾಡಿನಲ್ಲಿ ಮೃದುಬಿಲ್ವೀದಳಂ- ಕೋಮಲವಾದ ಬಿಲ್ವಪತ್ರೆ, ಗುಗ್ಗುಳಂ- ಧೂಪ, ಸನ್ಮಳಯೋದ್ಭೂಕಾಷ್ಠಂ- ಒಳ್ಳೆಯ ಶ್ರೀಗಂಧದ ಕಟ್ಟಿಗೆ, ಎಂದೆಂಬ, ಇವಂ, ಅಸವಸದಿಂ- ಬೇಗನೆ, ಕಂಬಿಯೊಳ್, ತುಂಬಿ, ಪೊತ್ತು, ಆನಂದದಿಂ, ಅಗ್ಗಳಿಸುತ್ತೆ- ಉಬ್ಬುತ್ತ, ಬೆಣ್ಪೊರೆಗೆ- ದಪ್ಪವಾದ ಹೊರೆಯುನ್ನು ಹೊಗುವದಕ್ಕೆ, ಸೆಡೆಯದೆ- ಹೆದರದೆ, ಆಘೋರಕಾಂತಾರದೊಳ್- ಆ ಭಯಂಕರವಾದ ಕಾಡಿನಲ್ಲಿ, ಸಮಂತು- ಚೆನ್ನಾಗಿ, ಬರುತೆ, ಎಸೆದಂ. ॥೧೧೫॥

ಓಹಿಲಂ, ಗಿಡುಗಳ, ಸರುವಿನ- ಜೌಗುಪ್ರದೇಶದ, ದರುವಿನ- ಗುಹಾಪ್ರದೇಶದ, ನಿಡುಗಲ್ಗಳ, ಬೆಟ್ಟಗಟ್ಟದ- ಬೆಟ್ಟಗಳ ದಡಗಳ, ಇಟ್ಟಣದೊಳ್- ಕಣಿವೆಯುಲ್ಲಿ, ಮುಳ್ಗಡಣದ- ಮುಳ್ಳಿನ ಸಮೂಹವುಳ್ಳ, ಮೆಳೆಗಳ, ಪುಲ್ಪೊದರ, ಎಡೆಯೊಳ್, ಜವದಿಂದಂ, ನಡೆತಂದಂ. ... ... ॥೧೧೬॥

ಆಗಳ್, ಕರಿ- ಆನೆ, ಹರಿ- ಸಿಹ್ಮ; ಪುಲಿ, ಪುಲ್ಲೆ- ಜಿಂಕೆ; ವೃಕಂ- ತೋಳ; ನರಿ; ಶರಭಂ, ಸಿಹ್ಮಂ; ಉಗ್ರಶಿಖಿ- ಕ್ರೂರವಾದ ನವಿಲು, ಫಣಿ- ಸರ್ಪವು; ಸಾರ್ತ್ತುಂದು-ಇರದೆ, ಆತ್ಮವೈರವಂ- ತಮ್ಮತಮ್ಮ ಶತ್ರುತ್ವವನ್ನು, ಮರೆದು, ಉರುಶಾಂತಾತ್ಮನಂ-ಅತ್ಯಂತ ಶಾಂತಿಸ್ವರೂಪನಾದ ಓಹಿಲಯ್ಯನನ್ನು, ನೋಡಿದುವು.

ಭಕ್ತಂ, ಅಸವಸದೊಳೆ- ಬೇಗನೆ, ಎಯ್ದುತೆ, ಇರೆ, ಒಂದುಕೂರ್ದಸಿ- ಒಂದು ತೀಕ್ಷ್ಣವಾದ ಗೂಟವು, ಅಂಗಾಲೊಳ್, ಎಯ್ದೆ, ಮೂಡಿದುದು, ಆಸಾಹಸಿ, ಅದಕೆ, ಅಳ್ಕದೆ- ಹೆದರದೆ, ಮೆಲ್ಲನೆ, ಕುಸಿಕುಸಿದು- ಬಗ್ಗಿಬಗ್ಗಿ, ಅಡಿಯಿಟ್ಟು, ನಡೆಯುತೆ, ಇರ್ದಂ. ... ... ... ॥೧೧೮॥

ಬಿಡದೆ, ಓರೆವಜ್ಜೆಯಿಂ- ಒಂದುಕಡೆಗೆ ಬಗ್ಗಿದ ಹೆಜ್ಜೆಯಿಂದ, ಪಿಂಮಡದಿಂ-ಹಿಂಮಡಿಯಿಂದ, ಮುಂಬೆರಲ- ಬೆರಳಿನ ಮುಂಗಡೆಯ, ಬಲ್ಪಿನಿಂ- ಶಕ್ತಿಯಿಂದ, ಪರಿವಿಡಿಯಿಂ-ಕ್ರಮವಾಗಿ, ನಡೆನಡೆದು, ಕುಂಟುತಂ, ಪೊರೆ, ಜಡಿಯುತ್ತೆ, ಇರೆ, ಪೊತ್ತು, ಬಳ್ಕದೆ-ಅಳ್ಳಾಡದೆ, ಎಳ್ತರುತೆ, ಇರ್ದಂ. ... ॥೧೧೯॥

ಅಂತು, ಕುನುಂಗಿ- ಬಗ್ಗಿ, ಕುಂಟುತ್ತಂ, ಬರುತ್ತಂ, ಇರ್ಪನ್ನೆಗಂ-ಇರುವಷ್ಟರಲ್ಲಿ, ಭಕ್ತದೇಹಿಕದೇವಂ- ಭಕ್ತರೇ ದೇಹವಾಗುಳ್ಳ ಶಿವನು, ಇನ್ನು, ಇರಲ್ಬಾರದು, ಎಂದು, ಕಾರುಣ್ಯಂದಂದು- ದಯೆಗೊಂಡು. *

ಕಂ ॥ ಅಂತಿಂದ್ರಕೀಲದಲ್ಲಿ ಪು । ಳಿಂದಾಕೃತಿದಾಳ್ದ ಭಾವವಂ ಭಕ್ತಂಗೊ ॥ ಲ್ದಿಂದು
ಧರಂ ತೋರಲ್ಕೇ । ಳ್ತಂದವೊ ಲೆಯ್ತಂದ ನಲ್ಲಿ ಶಬರಮಹೇಶಂ ॥ ... ...

ಚಂ ॥ ತಲೆದಳಿರ್ಗಟ್ಟು ಕೆಂಜೆಡೆ ಜಟಾಫಣಿ ಸುತ್ತಿದಬಳ್ಳಿ ಸೂಡಿದು । ಜ್ವಲಶಶಿಲೇ
ಖೆ ತಾಳ್ದಗರಿವೂಗರಿ ಕುಂಜರಕೃತ್ತಿ ನೀಲಮಂ॥ ಜುಲವಸನಂ ಫಣೀಶ್ವರಫಣಾಮಣಿ ಗುಂ
ಜಿ ಚಮೂರುಚರ್ಮ ಮ । ರ್ಗಲಕಟಪತ್ರಪಾಳಿ ತನಗೊಪ್ಪಿರೆ ತಾಳ್ದು ವಿಳಾಸದೇಳ್ಗೆಯಂ॥

ಕಂ ॥ ಪದವಿಲ್ಪಿನಾಕ ಮಹಿಪೆದೆ । ಯೊದವಿದ ಶಿಖಿಯಂಬು ವಿಧಿನಿಷೇಧಂಗಳ್ಮೆ ॥
ಟ್ಟದಕೆರ್ಪು ನಿಟಲಲೋಚನ । ಮದು ನವಗೈರಿಕದ ಬೊಟ್ಟು ತನಗೆಮರ್ವಿನೆಗಂ ॥ ...

ಕಂ ॥ ಅಡಿವಜ್ಜೆಯನಾ ಘ್ರಾಣಿಸು । ತೊಡನೇಳ್ತರೆ ವೇದಕುಕ್ಕುರಂಗ ಳ್ಬಳಿಯೊ॥
ಳ್ಜಡಜಭವಮೃಗದ ಶಿರಮಂ। ಕೆಡೆಯೆಚ್ಚು ಕಿರಾತರೂಪ ನಾಳ್ದೆಯ್ತಂದಂ ॥ ॥೧೭೩॥

ಕಂ ॥ ಹರಚಿಹ್ನಂಗ ಳ್ತೋರು । ತ್ತಿರೆ ತನ್ನೊ ಳ್ಮುಗಿಲ ಮರೆಯ ರವಿಯಂ ತಾ
ಶ್ರೀ ॥ ಗಿರಿಯೊಳ್ಕಿರಾತವೇಷದೆ । ಚರಿಯಿಪ ಮಲ್ಲೇಶ ನೆಂಬವೋಲ್ಸಾರ್ತಂದಂ ॥೧೭೪॥

ಮಹಾಸ್ರ ॥ ಸಲೆ ತೊಂಭತ್ತಬ್ದ ಮೀಶಸ್ನಪನಮಸಗಿ ನದ್ಯಂಬುವಂ ಪೊತ್ತು ಮು

---

ಇಂದುಧರಂ, ಅಂದು- ಅರ್ಜುನನಿಗೆ ಪಾಶುಪತಾಸ್ತ್ರವನ್ನು ಕೊಡುವಾಗ, ಇಂದ್ರಕೀಲದಲ್ಲಿ, ಪುಳಿಂದಾಕೃತಿದಾಳ್ದ- ಬೇಡನ ವೇಷವನ್ನು ಧರಿಸಿದ, ಭಾವಮಂ- ರೀತಿಯನ್ನು, ಭಕ್ತಂಗೆ, ಒಲ್ದು, ತೋರಲ್ಕೆ, ಏಳ್ತಂದವೊಲ್, ಅಲ್ಲಿ, ಶಬರಮಹೇಶಂ- ಬೇಡನ ಆಕಾರವಂ ಧರಿಸಿದ ಶಿವನು, ಎಯ್ತಂದಂ. ॥೧೭೦॥

ಕೆಂಜೆಡೆ- ಕೆಂಪಾದ ಜಡೆಯು, ತಲೆದಳಿರ್ಗಟ್ಟು- ತಲೆಗೆ ಸುತ್ತಿದ ಚಿಗುರಿನ ಕಟ್ಟುವಿಕೆ, ಜಟಾಫಣಿ- ಜಡೆಯಲ್ಲಿರುವ ಸರ್ಪವು, ಸುತ್ತಿದ, ಬಳ್ಳಿ; ಸೂಡಿದ- ಧರಿಸಿದ, ಉಜ್ವಲಶಶಿಲೇಖೆ- ಪ್ರಕಾಶಿಸುವ ಚಂದ್ರರೇಖೆಯು, ತಾಳ್ದ, ಗರಿವೂಗರಿ- ತಾಳೆಯಗರಿಯು, ಕುಂಜರಕೃತ್ತಿ- ಆನೆಯ ಚರ್ಮವು, ನೀಲಮಂಜುಲವಸನಂ- ಮನೋಹರವಾದಕಪ್ಪುಬಟ್ಟೆ; ಫಣೀಶ್ವರಫಣಾಮಣಿ- ಆದಿಶೇಷನನ ಹೆಡೆಯಲ್ಲಿರುವ ರತ್ನವು, ಗುಂಜಿ- ಗುಲುಗಂಜಿ; ಚಮೂರುಚರ್ಮಂ- ಜಿಂಕೆಯ ಚರ್ಮವು, ಅರ್ಗಲಕಟಪತ್ರಪಾಳಿ- ಅಧಿಕವಾದ ನಡುವಿನಲ್ಲಿ ಧರಿಸುವ ಎಲೆಗಳ ಪಙ್ಕ್ತಿಯು; ತನಗೆ, ಒಪ್ಪ, ಇರೆ, ವಿಳಾಸದ, ಏಳ್ಗೆಯಂ, ತಾಳ್ದು. ... ॥೧೭೧॥

ಪಿನಾಕಂ- ಪಿನಾಕನಾಮಕನಾದ ಧನುಸ್ಸು, ಪದವಿಲ್- ಬೇಟೆಯ ಬಿಲ್ಲು, ಅಹಿ- ಆದಿಶೇಷನು, ಹೆದೆ- ಸಿಂಜಿನಿ; ಒದವಿದ, ಶಿಖಿ- ಅಗ್ನಿಯು, ಅಂಬು- ಬಾಣವು; ವಿಧಿನಿಷೇಧಂಗಳ್- (ಮಾಡಬೇಕು ಮಾಡಬಾರದೆಂಬುವದು ) ಮೆಟ್ಟಿದ, ಕೆರ್ಪು- ಕೆರ; ಅದುನಿಟಲಲೋಚನಂ- ಆ ಹಣೆಗಣ್ಣು, ನವಗೈರಿಕದ- ಹೊಸಗೈರಿಕಧಾತುವಿನ, ಬೊಟ್ಟು, ತನಗೆ, ಅಮರ್ವಿನೆಗಂ- ಒಪ್ಪುವಹಾಗೆ. ... ... ॥೧೭೨॥

ವೇದಕುಕ್ಕುರಂಗಳ್- ಶ್ರುತಿಗಳೆಂಬ ನಾಯ್ಗಳು, ಅಡಿವಜ್ಜೆಯಂ- ಕಾಲಹಜ್ಜೆಯನ್ನು, ಆಘ್ರಾಣಿಸುತೆ- ಮೂಸುತ್ತ, ಬಳಿಯೊಳ್- ಸಮೀಪದಲ್ಲಿ, ಒಡನೆ, ಏಳ್ತರೆ, ಜಡಜಭವಮೃಗದ- ಬ್ರಹ್ಮನೆಂಬ ಮೃಗದ, ಶಿರಮಂ, ಕೆಡೆಯೆಚ್ಚು- ಕತ್ತರಿಸಿ ಬೀಳುವಹಾಗೆ ಬಾಣಪ್ರಯೋಗವಂಮಾಡಿದ, ಕಿರಾತರೂಪಂ, ಆಳ್ದು, ಎಯ್ತಂದಂ. ... ... ... ... ... ॥೧೭೩॥

ಮುಗಿಲ- ಮೋಡದ, ಮರೆಯ- ಆಚ್ಛಾದನೆಯುಳ್ಳ, ರವಿಯಂತೆ- ಸೂರ್ಯನಹಾಗೆ, ತನ್ನೊಳ್, ಹರಚಿಹ್ನಂಗಳ್, ತೋರುತ್ತೆ, ಇರೆ, ಆಶ್ರೀಗಿರಿಯೊಳ್, ಚರಿಯಿಪ- ಸಂಚಾರಮಾಡುವ, ಮಲ್ಲೇಶಂ, ಎಂಬವೊಲ್, ಸಾರ್ತಂದಂ- ಬಂದನು. ... ... ... ... ॥೧೭೪॥

ಮುಂ- ಪೂರ್ವದಲ್ಲಿ, ಪೊನ್ನಯ್ಯಂ, ಸಲೆ, ತೊಂಭತ್ತಬ್ದಂ- ತೊಂಭತ್ತು ವರ್ಷಗಳು, ನದ್ಯಂಬುವಂ

ಪ್ಪಿಂ । ಬಲವಾದಂ ಕುಂದೆಮುಂಬಲ್ಲಲದೆ ಸಲಿಸುತಾನೇಮಮಂ ಪೊನ್ನಯಂ ಮೇ ॥ ಣ್ವಿಲಸದ್ವಾಃಪೂರ್ಣಕುಂಭಂದಳೆದು ನೆಗೆವಿನುಪಳ್ಳಮುಂ ನೆರ್ಗ್ಗೆ ಬನ್ನ । ಳ್ದೊದೀವಿಂ ದಾಕಂಬಿಯಂ ರಕ್ಷಿಸಿದ ಶಬರನೆಂಬಂತೆ ಕಣ್ಗೆಡ್ಡಮಾದಂ ॥ ... ... ... ॥೧೨೫॥

ವ ॥ ಅಂತೆಸೆವ ಕಿರಾತರುದ್ರ ಸೋಹಿಲಯ್ಯನ ಬೆನ್ನನೆ ಬಂದು ॥ * * * *

ಚಂ ॥ ಎಲೆಎಲೆ ಭಕ್ತ ಪೋಗದಿರು ನಿಲ್ದಸಿಮೂಡಿದುದಲ್ತೆ ಪಾದದೊ । ಳ್ಛಲಮಿನಿತೇಕೆ ಪೇಳ್ನನಗೆ ನೀಂ ಪಗೆಯಪ್ಪುದೆ ಬೇಡ ಪೋಪೊ ಕ ॥ ಲ್ನೆಲದೊಳೆ ಬಿಣ್ಪುವೆತ್ತ ಪೊರೆಯಂ ತಳೆದೀಬಡವಾದ ದೇಹದಿಂ । ನಲಿದಡಿಗೊಳ್ವೆಯೆಂತಿಳುಪುಕಂಬಿಯು ನಿಂಬಿನೊಳಾಮಹೀಜದ ॥ ... ... ... ... ... ... ॥೧೨೬॥

ಕಂ ॥ ಬಿಸುವಿಸಿಲ ಬೇಗೆಯೊಳ್ಬಿ । ಣ್ಪೊರೆವೊತ್ತಡಿಯುರ್ಚ್ಚಿ ಮೂಡಿ ದಸಿಕಳೆಯದೆ ॥ ನೀ ॥ ನುರೆ ತಳರ್ವೆಯಿಂತುಟಲ್ಲದೆ । ಪೆರೆದಲೆಯಂ ನಿನಗೆ ಮಚ್ಚನೇ ಬಿಡುಛಲಮಂ ॥೧೨೭॥

ವ ॥ ಎಂದು ಕಪಟಶಬರಂ ಕಾರುಣ್ಯದಿಂ ಸಾರ್ಕೆಗೆಯ್ದೀ ಕಾಲ ದಸಿಯಂ ನೀಂ ಕೀಳ್ತುಕೊಳ್ವೊಡಳ್ಕಿದೊಡಾಂ ಕೀಳ್ತು ಕಳ್ದಪೆಂ ಕಾಲಂ ನೀಡೆಂಬುದುಂ ಸೋಹಿಲಯ್ಯಂ ಸಾಹಸಾಭರಣಂ ಕೇಳ್ದು ॥ * * * * * * * * * * * * *

---

ಹೊಳೆಯ ನೀರನ್ನು, ಪೊತ್ತು, ಈಶಸ್ನಪನಮೆಸಗಿ- ಶಿವನಿಗಭಿಷೇಕವಂ ಮಾಡಿ, ಮುಪ್ಪಿಂ- ವಾರ್ಧಿಕ್ಯದಿಂದ, ಬಲಂ- ಶಕ್ತಿಯು, ಆದಂ- ಅತ್ಯಂತವಾಗಿ, ಕುಂದೆ- ಕಡಮೆಯಾಗಲು, ಬಲ್ಲಲದೆ, ಆನೇಮಮಂ- ಆ ಅಭಿಷೇಕವಂ ಮಾಡುವ ವ್ರತವನ್ನು, ಸಲಿಸುತೆ, ಮೇಣ್, ವಿಲಸದ್ವಾಃಪೂರ್ಣಕುಂಭಂದಳೆದು- ನೀರಿನಿಂದ ತುಂಬಿದ ಕಲಶವಂ ಹಿಡಿದುಕೊಂಡು, ಪಳ್ಳಮಂ, ನೆಗೆವಿನಂ- ಹಾರುವಲ್ಲಿ, ಬೆನ್, ನೆರ್ಗ್ಗೆ- ಮುರಿಯಲು, ಬಲವಿಂದೆ, ಆಕಂಬಿಯುಂ, ತಾಳ್ದು, ರಕ್ಷಿಸಿದ, ಶಬರಂ, ಎಂಬಂತೆ, ಕಣ್ಗೆ, ಎಡ್ಡಂ- ಮನೋಹರನು, ಆದಂ. ... ... ... ... ... ॥೧೨೫॥

ಅಂತು, ಎಸೆವ, ಕಿರಾತರುದ್ರಂ- ಬೇಡನ ವೇಷವಂ ಧರಿಸಿದ ಶಿವನು, ಓಹಿಲಯ್ಯನ, ಬೆನ್ನನೆ- ಹಿಂಗಡೆಯೇ, ಬಂದು. * * * * * * * * * * * * * * * *

ಎಲೆಎಲೆಭಕ್ತ ! ಪೋಗದಿರು- ಹೋಗಬೇಡ, ನಿಲ್, ಪಾದದೊಳ್, ದಸಿ, ಮೂಡಿದುದಲ್ತೆ- ನಟ್ಟು ಚೊರಕ್ಕೆ ಹೊರಟಿರುವದಲ್ಲವೇ ? ಇನಿತುಛಲಂ, ಏಕೆ ? ಕೇಳ್, ನಿನಗೆ, ನೀಂ, ಪಗೆ- ಶತ್ರುವು, ಅಪ್ಪುದೆ ? ಬೇಡ, ಓಪೊ, ಕಲ್ನೆಲದೊಳೆ- ಕಲ್ಲುಭೂಮಿಯಲ್ಲಿ, ಬಿಣ್ಪುವೆತ್ತ- ದಪ್ಪವಾದ, ಪೊರೆಯಂ, ತಳೆದು, ಈಬಡವಾದ, ದೇಹದಿಂ, ನಲಿದು- ಸಂತೋಷಗೊಂಡು, ಎಂತುಅಡಿಗೊಳ್ವೆ- ಹ್ಯಾಗೆ ನಡೆಯುವೆ ? ಆಮಹೀಜದ- ಆ ಮರದ, ಇಂಬಿನೊಳ್- ತಳವಲ್ಲಿ, ಕಂಬಿಯುಂ, ಇಳುಪು. ... ... ॥೧೨೬॥

ಬಿರುವಿಸಲ-ಹೆಚ್ಚಾದಬಿಸಿಲಿನ, ಬೇಗೆಯೊಳ್-ತಾಪದಲ್ಲಿ, ಬಿಣ್ಪೊರೆವೊತ್ತು- ದಪ್ಪ ಹೊರೆಯನ್ನುಹೊತ್ತುಕೊಂಡು, ದಸಿ, ಅಡಿಯುರ್ಚ್ಚಿ- ಕಾಲನ್ನು ಬೇಧಿಸಿ, ಮೂಡಿ, ನೀಂ, ಕಳೆಯದೆ- ತೆಗೆದುಹಾಕದೆ, ಉರೆ, ತಳರ್ವೆ- ಹೋಗುವೆ ! ಇಂತುಟಲ್ಲದೆ- ಹೀಗಲ್ಲದೆ, ಪೆರೆದಲೆಯಂ- ಶಿವನು, ನಿನಗೆ, ಮಚ್ಚನೇಂ- ಮೆಚ್ಚುವದಿಲ್ಲವೇ ? ಛಲಮಂ- ಪಂತವನ್ನು, ಬಿಡು. ... ... ... ॥೧೨೭॥

ಎಂದು, ಕಪಟಶಬರಂ- ವಂಚಕನಾದ ಬೇಡನು, ಕಾರುಣ್ಯದಿಂ, ಸಾರ್ಕೆಗೆ- ಸಮೀಪಕ್ಕೆ, ಎಯ್ದಿ, ಕಾಲ, ದಸಿಯುಂ, ನೀಂ, ಕೀಳ್ತುಕೊಳ್ವುದು, ಅಳ್ಕಿದೊಳೆ- ಭಯಪಟ್ಟರೆ, ಆಂ, ಕೀಳ್ತು, ಕಳೆದಪೆಂ, ಕಾಲಂ, ನೀಡು, ಎಂಬುದುಂ, ಸಾಹಸಾಭರಣಂ, ಓಹಿಲಯ್ಯಂ, ಕೇಳ್ದು. * * * * * * * *

ಕಂ ॥ ಎಲೆಶೈವಚಿನ್ಹಧರಶಬ | ರಲಲಾಮಮದೀಯಪದದದಸಿಗೀಳ್ದಪೆ ನೆಂ ॥ ದಲದುರ್ಸಿರ್ವನಿನ್ನ ನುಡಿದಸಿ | ಯಲೆದುರ್ಬಿದು ದೆನ್ನ ಕರ್ಣಕುಹರಮ ನೀಗಳ್ ॥ ॥೧೨೮॥

ಕಂ ॥ ಕಾಲಾರಿಭಕ್ತ ನಿನ್ನಿಂ | ಕಾಲಂ ಮುಟ್ಟಸಿದೆ ನಪ್ಪೊಡೀಶದ್ರೋಹ ॥ ಕ್ಕಾಲಯ ಮಾಗೆನೆ ಪೇಳೀ | ಕಾಲದೊ ಳೆನ್ನಿರವ ನರಿಯದೆಂತುಜ್ಜುಗಿಪ್ಪೈ ॥ ... ॥೧೨೯॥

ಕಂ ॥ ಕಂಬಿಯ ಮುಟ್ಟುವಶುಚಿಕರ | ದಿಂ ಬಳಿಕಾನೆಂತು ಕೀಳ್ವೆ ನೀಕಾಲ್ದಸಿಯಂ ॥ ಸಾಂಬನ ವಿಸಾಸಲ ವಸ್ತುಕ | ದಂಬದ ಕಂಬಿಯ ನದೆಂತು ನೆಲಕಿಳುಪುವೆನೋ ॥ ॥೧೩೦॥

ಕಂ ॥ ನಡೆದನಿತುದೂರ ಮಿಪರಿ | ನಡೆದಪೆನಲ್ಲದೆ ಕಡಂಗಿ ಕಂಬಿಯನಿಳುಪು ॥ ತ್ತೆಡೆವಟ್ಟೆಯೊ ಳಡಿನಾಂಟದ | ನಿಡುದಸಿಯ ನದೆಂತು ಕೀಳಲುಜ್ಜುಗಿಸುವೆನೊ ॥ ॥೧೩೧॥

ವ ॥ ಎನೆಕೇಳ್ದು ಬೆಕ್ಕಸಂಬಟ್ಟು ನಕ್ಕು ॥ * * * * * * * *

ಕಂ ॥ ಹರನಿಳಯಂಬೊಕ್ಕಲ್ಲದೆ | ಧರಣಿಯೊ ಳೀಕಂಬಿಯಂ ಸಮಂತಿಳುಪದ ಬ ॥ ಲ್ಬಿರುದಿನ ಭಕ್ತಿಯ ಬಿಂಕಂ | ದೊರೆವೆತ್ತುದು ನಿನ್ನೊ ಳರರೆ ನಿನಗೆಣೆಯಾವಂ ॥೧೩೨॥

ವ ॥ ಎಂದುಪುಳಿಂದಂ ಪೊಗಳ್ದು ನಿನ್ನಂಗಾಲೊ ಳ್ಮೂಡಿದ ದಸಿಯೆನ್ನಕಣ್ಬೊಣರೊಳ್ಮೂಡಿದಂತಿರ್ದಪುದಿದಂ ನೋಡಲ್ಕಾ ಮಾರೆನೀಗಳ್ನಿನ್ನಬಗೆಯೆಂತಿರ್ದಪುದಂತೆಗೆಯ್ದಪೆ

---

ಎಲೆಶೈವಚಿಹ್ನಧರಶಬರಲಲಾಮ- ಎಲೈ ಶಿವಲಾಂಛನವಂ ಧರಿಸಿದ ದೊಡ್ಡ ಬೇಡನೇ ! ಮದೀಯಪದದ- ನನ್ನ ಕಾಲಿನಲ್ಲಿರುವ, ದಸಿಗೀಳ್ದಪೆಂ- ದಸಿಯನ್ನು ಕೀಳುವೆನು, ಎಂದು, ಅಲದುರ್- ಉತ್ಸಾಹಾನ್ವಿತನಾಗಿ, ಉಸಿರ್ವ- ಹೇಳುವ, ನಿನ್ನ, ನುಡಿದಸಿ- ಮಾತೆಂಬ ಗೂಟವು, ಈಗಳ್, ಎನ್ನ, ಕರ್ಣಕುಹರವಂ- ಕಿವಿಯ ರಂಧ್ರವನ್ನು; ಉರ್ಚಿದುದು- ಭೇದಿಸಿತು. ... ... ... ॥೧೨೮॥

ಕಾಲಾರಿಭಕ್ತ-ಯಮವೈರಿಯಾದ ಶಿವನ ಭಕ್ತನೇ ! ನಿನ್ನಿಂ, ಕಾಲಂ, ಮುಟ್ಟಸಿದೆಂ, ಅಪ್ಪೊಡೆ- ಸೋಂಕಿಸುವೆನಾದರೆ, ಈಶದ್ರೋಹಕ್ಕೆ, ಆಲಯಂ, ಆಗೆನೆ ? ಪೇಳ್, ಈಕಾಲದೊಳ್, ಎನ್ನ, ಇರವಂ- ಇರುವಿಕೆಯನ್ನು, ಅರಿಯದೆ, ಎಂತುಉಜ್ಜುಗಿಪ್ಪೈ- ಹ್ಯಾಗೆ ಪ್ರಯತ್ನಪಡುವೆ ? ... ॥೧೨೯॥

ಕಂಬಿಯ, ಮುಟ್ಟುವ, ಶುಚಿಕರದಿಂ- ಪರಿಶುದ್ಧವಾದ ಹಸ್ತದಿಂದ, ಬಳಿಕೆ, ಆಂ, ಈ ಕಾಲ್ದಸಿಯಂ, ಎಂತು, ಕೀಳ್ವೆಂ ? ಸಾಂಬನ, ವಿಸಾಸಲ- ಅನ್ಯೋನ್ಯಯುಕ್ತವಾಗದ, ವಸ್ತುಕದಂಬದ- ಪದಾರ್ಥಗಳ ಸಮೂಹವುಳ್ಳ, ಕಂಬಿಯಂ, ನೆಲಕೆ, ಅದೆಂತುಇಳುಪುವೆನೊ ? ... ... ॥೧೩೦॥

ನಡೆದನಿತುದೂರಂ- ನಡೆದಷ್ಟುದೂರ, ಈಪರಿ- ಈರೀತಿಯಿಂದ, ನಡೆದಪೆಂ, ಅಲ್ಲದೆ- ಹಾಗಲ್ಲದೆ, ಕಡಂಗಿ- ಕುತೂಹಲಪಟ್ಟು, ಎಡೆವಟ್ಟೆಯೊಳ್-ಮಧ್ಯಮಾರ್ಗದಲ್ಲಿ, ಕಂಬಿಯಂ, ಇಳುಪುತ್ತೆ, ಅಡಿನಾಂಟಿದ- ಕಾಲಿನಲ್ಲಿ ಚುಚ್ಚಿಕೊಂಡಿರುವ, ದಸಿಯಂ, ಕೀಳಲ್, ಅದೆಂತುಉಜ್ಜುಗಿಸುವೆನೊ ! ... ॥೧೩೧॥

ಎನೆ, ಕೇಳ್ದು, ಬೆಕ್ಕಸಂಬಟ್ಟು- ಆಶ್ಚರ್ಯಪಟ್ಟು, ನಕ್ಕು. * * * * * * *

ಹರನಿಳಯಂಬೊಕ್ಕಲ್ಲದೆ- ಶಿವದೇವಸ್ಥಾನವನ್ನು ಪ್ರವೇಶಿಸಿದ ಹೊರ್ತು, ಈಕಂಬಿಯಂ, ಧರಣಿಯೊಳ್, ಸಮಂತು, ಇಳುಪದ, ಬಲ್ಬಿರುದಿನ, ಬಿಂಕಂ- ಗರ್ವವು, ನಿನ್ನೊಳ್, ದೊರೆವೆತ್ತುದು- ಪ್ರಖ್ಯಾತವಾಯ್ತು; ಅರರೆ! ನಿನಗೆ, ಎಣೆ- ಸಮಾನನು, ಆವಂ ? ... ... ... ॥೧೩೨॥

ಎಂದು, ಪುಳಿಂದಂ- ಬೇಡನು, ಪೊಗಳ್ದು, ನಿನ್ನ, ಅಂಗಾಲೊಳ್, ಮೂಡಿದ, ದಸಿ, ಎನ್ನ, ಕಣ್ಬೊಣರೊಳ್- ಕಣ್ಣಗುಡ್ಡೆಯಲ್ಲಿ, ಮೂಡಿದಂತೆ-ನೆಟ್ಟುಚೂರಕ್ಕೆ ಹೊರಟಹಾಗೆ, ಇರ್ದಪುದು, ಇದಂ, ನೋಡಲ್ಕಂ, ಆರೆಂ- ಸಮರ್ಥನಾಗಲಾರೆನು, ಈಗಳ್, ನಿನ್ನ, ಬಗೆ- ಮನಸ್ಸು,ಎಂತು, ಇರ್ದಪುದು, ಅಂತೆಗೆಯ್ದ

ನ್ನ ಪರಿಯ ನೊಂದಿನಿತು ನೋಳ್ಪುದೀಗಳ್ ॥ * * * * *

ಕಂ ॥ ಕಾಲಂಮುಟ್ಟದೆ ಕೀಳ್ವೊಡೆ । ಸಾಲದೆ ಕೂರ್ದಸಿಯ ನೆಂದು ಭೂಜದೊಳವ ನುಂ ॥ ಲೀಲೆಯಿಗೆ ನೆಮ್ಮಿರ್ದಳ್ಪುದ । ಯಾಲಸದೀಕ್ಷಣದೆ ನೋಡುತುಂ ತತ್ಪದಮಂ ॥ ೧೩೩॥

ಕಂ ॥ ಪೊಸತುಡಸದಿಂ ಕೀಳ್ತಂ । ದಸಿಯಂ ಚೀರ್ಗೊಳವೆ ಚಿಮ್ಮಿದಂತಿರೆ ಮುನ್ನುಂ ॥ ಡಸಮುಸಿತಭಸಿತಮುಡು ನಿ । ಪ್ಪಸರಂ ಬೆತ್ತಚ್ಚು ಪಾಯರ್ದು ದೇರಿಂದಾಗಳ್ ॥ ॥೧೩೪॥

ವ ॥ ಅದಂ ಕಂಡು ಪರಿತೋಷಮು ನಾಳ್ದು ಪುಳಿಂದ ನಾಭಸಿತಧಾರೆ ಪೊಣ್ಮುವ ರಂಧ್ರ ಮಂ ಭೋಂಕನೊಂದು ತೇಗಿನೆಳೆದಳಿರು ಕಟ್ಟಿ ಬಂಧಿಸುತ್ತೊಹಿಲಯ್ಯನ ನುಚಿತೋಕ್ತಿ ಯಿಂ ಸಂತೈಸಿ ಮನ್ನಿಸಿ ॥ * * * * * * *

ಕಂ ॥ ನಿನಗೆ ಕರುಣಿಸುವ ನಕ್ಕಗ । ಡೆನಸುಂ ಸೋಮೇಶ ನೆಂದು ಶಬರಂ ನುಡಿದೊ ॥ ಯ್ಯನೆ ಮಾಯವಾಗೆ ತದ್ಭ । ಕ್ತನ ಮನದೊಳ್ನಗಳ್ದ ದರರೆ ಕೌತುಕಮಾಗಳ್ ॥೧೩೫॥

ಕಂ ॥ ಸೌರಾಷ್ಟ್ರಪತಿ ಕೃಪಾಕೂ । ಪಾರಂ ನಣ್ಪಿಂದೆ ಬಂದು ಶಬರಾಕೃತಿಯಿಂ ॥ ದೋರಂತೆಸಗಿದ ನಂ । ದಾರುಚಿರಗುಣಾಂಕ ನುತ್ಸವಂಬಡೆದಾಗಳ್ ॥ ... ॥೧೩೬॥

ಮ ॥ಸ್ರ ॥ ಪೊಗಳುತ್ತಂ ಕೂರ್ಪಿನಿಂದೇಳ್ತರುತೆ ಶಿವಗೃಹಕ್ಕಾಕವಾಟಂಗಳಂ ಕೈ । ಮಿಗೆ ಕಾಮಧ್ವಂಸಿ ಬೇಗಂ ತೆಗೆಯೆ ಪುಗುತೆ ತಾಂ ತಂದ ತದ್ಬ್ಬರಮಂ ಮೆ ॥ ಲ್ಲಗೆ ರಂಗಸ್ಥ

---

ಪೆಂ-ಹಾಗೆಯೇ ಮಾಡುವೆನು, ಎನ್ನ, ಪರಿಯಂ, ಈಗಳ್, ಒಂದಿನಿತುಂ- ಒಂದಿಷ್ಟು, ನೋಳ್ಪುದು. *

ಕಾಲಂ, ಮುಟ್ಟದೆ, ಕೂರ್ದಸಿಯಂ- ತೀಕ್ಷ್ಣವಾದ ಗೂಟವನ್ನು, ಕೀಳ್ವೊಡೆ, ಸಾಲದೆ ? ಎಂದು, ಅವನು, ಭೂಜದೊಳ್-ಮರದಲ್ಲಿ, ಲೀಲೆ, ಯಿಗೆ, ನೆಮ್ಮಿರ್ದಳ್ಪು-ಒರಗಿಕೊಂಡಿರುವಹಾಗಿದ್ದೇ, ದಯಾಲಸ ದೀಕ್ಷಣದೆ-ಕೃಪೆಯಿಂದಪ್ರಕಾಶಿಸುವ ನೇತ್ರದಿಂದ, ತತ್ಪದಮಂ-ಆ ಒಹಿಲಯ್ಯನಚರಣವನ್ನು, ನೋಡುತಂ.

ದಸಿಯಂ, ಪೊಸತುಡಸದಿಂ- ಹೊಸದಾದ ಚಿಮುಟದಿಂದ, ಕೀಳ್ತಂ, ಆಗಳ್; ಮುನ್ನ, ಉಂಡ, ಅ ದುಅಸಮುಸಿತಭಸಿತಂ- ಅಸದೃಶವಾದ ಶುಭ್ರವಾದ ಆ ವಿಭೂತಿಯು, ಚೀರ್ಗೊಳವೆ-ಪಿಚಕಾರಿಯು, ಚಿಮ್ಮಿ ದಂತಿರೆ- ಹಾರಿದಹಾಗೆ, ನಿಪ್ಪಸರಂಬೆತ್ತು- ಅವಿಚ್ಛಿನ್ನವಾಗಿ, ಪೆರಿಂದೆ- ಗಾಯದಿಂದ, ಪಾಯ್ದುದು- ಹೊರ ಕ್ಕೆ ಹೊರಟಿತು. ... ... ... ... ... ॥೧೩೪॥

ಪುಳಿಂದಂ, ಅದಂ, ಕಂಡು, ಪರಿತೋಷಮಂ, ಆಳ್ದು, ಅಭಸಿತಧಾರೆ, ಪೊಣ್ಮುವ, ರಂಧ್ರಮಂ, ಭೋಂಕನೆ- ಬೇಗನೆ, ತೇಗಿನ– ತೇಗಿನ ಮರದ, ಒಂದುಎಳೆದಳಿರಂ- ಒಂದು ಎಳೆಯ ಚಿಗುರನ್ನು, ಕಟ್ಟಿ, ಬಂಧಿಸುತ್ತೆ- ತಡೆಯುತ್ತ, ಒಹಿಲಯ್ಯನಂ, ಉಚಿತೋಕ್ತಿಯಿಂ, ಸಂತೈಸಿ, ಮನ್ನಿಸಿ. * * * *

ಸೋಮೇಶಂ, ನಿನಗೆ, ಎನಸುಂ- ನಿಶ್ಚಯವಾಗಿ, ಕರುಣಿಸುವಂ, ಅಕ್ಕಗಡ, ಎಂದು, ಶಬರಂ, ನುಡಿ ದು, ಒಯ್ಯನೆ- ಮೆಲ್ಲಗೆ, ಮಾಯಂಆಗೆ- ಕಣ್ಣಿಗೆ ಕಾಣದಂತಾಗಲು, ಆಗಳ್, ತದ್ಭಕ್ತನ, ಮನದೊಳ್, ಕೌ ತುಕಂ- ಆಶ್ಚರ್ಯವು, ನೆಗಳ್ದುದು- ಉಂಟಾಯ್ತು; ಅರರೆ ! ... ... ॥೧೩೫॥

ಕೃಪಾಕೂಪಾರಂ-ದಯಾರಸಕ್ಕೆ ಸಮುದ್ರನಾದ, ಸೌರಾಷ್ಟ್ರಪತಿ-ಸೋಮೇಶ್ವರನು, ನಣ್ಪಿಂದೆ- ಪ್ರೀತಿಯಿಂದ, ಶಬರಾಕೃತಿಯಿಂದೆ, ಬಂದು, ಓರಂತೆ- ಮನೋಹರವಾಗಿ, ಇಂತು, ಎಸಗಿದಂ, ಎಂದು, ಆರು ಚಿರಗುಣಾಂಕಂ-ಆ ಮನೋಹರವಾದ ಗುಣಗಳೇಲಕ್ಷಣವಾಗುಳ್ಳ ಒಹಿಲಯ್ಯನು, ಉತ್ಸವಂಬಡೆದು, ಆಗಳ್.

ಪೊಗಳುತ್ತಂ, ಕೂರ್ಪಿನಿಂದೆ- ಪ್ರೀತಿಯಿಂದ, ಶಿವಗೃಹಕ್ಕೆ, ಏಳ್ತರುತ್ತೆ, ಕಾಮಧ್ವಂಸಿ- ಮದನಹರ ನಾದ ಶಿವನು, ಕೈಮಿಗೆ– ತನ್ನ ಕಯ್ಯಾರ, ಆಕವಾಟಂಗಳಂ- ಆ ಕದಗಳನ್ನು, ಬೇಗಂ, ತೆಗೆಯೆ, ಪುಗು

೩೩

ನದೊಳ್ನಿಂದಿಳುಪಿ ವಿಮಳಕುಂಭಾಂಬುವಿಂ ಮಜ್ಜನಂಗೆ । ಯ್ದಗಜಾಧೀಶಂಗೆಬಿಲ್ವೀಮೃ ದುಳದಳಮ ನಂದರ್ಪಿಸುತೊಲ್ಮೆಯಿಂದಂ ॥ ... ... ... ॥೧೩೭॥

ಉತ್ಸಾಹವೃತ್ತ॥ ಎಂದಿನಂತೆ ಸಾಂಗ ಮಾಗಿ ಪೂಜೆಗೆಯ್ದುಭಕ್ತಿಯಿಂ । ಚಂದನೇಂ ಧನಂಗಳಿಂ ನಿಮಿರ್ಚಿ ಕೆಂಡಮಂ ಮಹಾ॥ ನಂದದಿಂದೆ ಧೂಪಮಿಕ್ಕ ಲೆಂದು ಗಂಟೆಯಂತರ। ಲ್ಕೆಂದು ಪೋಗೆ ಕಳ್ದರಲ್ಲಿ ಗುರ್ಗುಳೌಘಮಂಖಳರ್ ॥ ... ... ॥೧೩೮॥

ವ ॥ ಅಂತಾಗ ಳಾತಾಪಸಿಗಳ್ ಗುರ್ಗುಳಮ ನಪಹರಿಸೆ ಧೂಪಮಿಲ್ಲದಾದುದಂ ಕಂಡು ಧೃತಿಗುಂದದೆ ಮನಂಕುಂದದೆ ಬಗೆವೊಡಿದು ಸೋಮೇಶ್ವರಕೃತಕ ಮಕ್ಕುಮಾದೊಡೀ ಸೀ ಸಮಯೌಚಿತ್ಯಕ್ಕೆನ್ನತನುವೆ ಗುರ್ಗುಳ ಮೆಂದೋಹಿಲಯ್ಯಂ ನಿರ್ಧರಿಸಿ ಘಂಟಾಘಣತ್ಕಾ ರಂಗೆಯ್ವುತ್ತೆಳ್ತಂದು ಲಿಂಗಸನ್ನಿಧಿಯೊಳ್ನಿಂದು ಮುಂದಿರ್ದಪಿರಿಯ ಧೂಪಪಾತ್ರೆಯೊಳ್ ತಳತಳಿಸಿ ಘುಳುಘುಳಿಪಾನಳನಂ ನೋಳ್ಪಾಗಳ್ ॥ * * * *

ಚಂ॥ ಧಗಧಗನಿಸ್ವನಂ ನಿಮಿರೆ ಕೆಂಗಿಡಿ ಸೂಸೆ ಪೊದಳ್ದು ಪೊಣ್ಮೆ ಕಾ। ರ್ಬೊಗೆ ತವಿ ಲಾಗೆ ದಳ್ಳುರಿವಿಜೃಂಭಿಸೆ ಪರ್ಬುಗೆವೆತ್ತು ಕೊರ್ಬಿಮಿಂ ॥ ಚೊಗೆಯೆ ಮಡಲ್ತುಭೀಮನಿಟ ಲಸ್ಫುಟವಹ್ನಿಯಗುರ್ವ ನಾಳ್ದು ಕೈ । ಮಿಗೆಬಿಸುಪೆತ್ತಲುಂಮಸಗೆದಳ್ಳಿಸುತಿರ್ದುದುದಗ್ರ ಪಾವಕಂ ॥ ... ... .. ... ... ... ॥೧೩೯॥

ತೆ, ತಾಂ, ತಂದ, ತದ್ಭಾರಮಂ, ಮೆಲ್ಲಗೆ, ರಂಗಸ್ಥಾನದೊಳ್, ನಿಂದು, ಇಳುಪಿ, ಅಗಜಾಧೀಶಂಗೆ, ವಿಮಳ ಕುಂಭಾಂಬುವಿಂ, ಮಜ್ಜನಂಗೆಯ್ದು- ಅಬಿಸೇಕವಂ ಮಾಡಿ, ಒಲ್ಮೆಯಿಂದೆ, ಬಿಲ್ವೀಮೃದುಳದಳಮಂ-ಕೋಮಲವಾದ ಬಿಲ್ವಪತ್ರೆಯನ್ನು, ಅರ್ಪಿಸುತ್ತೆ. ... ... ... ॥೧೩೭॥

ಎಂದಿನಂತೆ, ಸಾಂಗಂ ಆಗಿ- ಸಂಪೂರ್ಣವಾಗಿ, ಭಕ್ತಿಯಿಂ, ಪೂಜೆಗೆಯ್ದು, ಚಂದನೇಂಧನಂಗಳಿಂ- ಗಂಧದ ಸೌದೆಯಿಂದ, ಕೆಂಡಮಂ, ನಿಮಿರ್ಚಿ- ಮಾಡಿ, ಮಹಾನಂದದಿಂದೆ, ಧೂಪಮಿಕ್ಕಲೆಂದು- ಧೂಪವ ಹಾಕಬೇಕೆಂದು, ಗಂಟೆಯಂ, ತರಲ್ಕೆಂದು, ಪೋಗೆ, ಅಲ್ಲಿ, ಖಳರ್- ನೀಚರು, ಗುರ್ಗುಳೌಘಮಂ, ಕಳ್ದರ್- ಕದ್ದರು. ... ... ... ... ... ॥೧೩೮॥

ಆಗಳ್, ಅಂತು, ಆತಾಪಸಿಗಳ್, ಗುರ್ಗುಳಮಂ, ಅಪಹರಿಸೆ, ಓಹಿಲಯ್ಯಂ, ಧೂಪಂ, ಇಲ್ಲದಾದುದಂ, ಕಂಡು, ಧೃತಿಗುಂದದೆ- ಧೈರ್ಯಗೆಡದೆ, ಮನಂ, ಕುಂದದೆ, ಬಗೆವೊಡೆ, ಇದು, ಸೋಮೇಶ್ವರಕೃತಕಂ- ಸೋಮೇಶ್ವರನಿಂದ ಮಾಡಲ್ಪಟ್ಟಿರುವದು, ಅಕ್ಕುಂ, ಆದೊಡೆ, ಏಂ ? ಈಸಮಯೌಚಿತ್ಯಕ್ಕೆ- ಪ್ರಕೃತ ಕಾಲಕ್ಕುಚಿತವಾಗಿ, ಎನ್ನ, ತನುವೆ- ದೇಹವೇ, ಗುರ್ಗುಳಂ, ಎಂದು, ಓಹಿಲಯ್ಯಂ, ನಿರ್ಧರಿಸಿ, ಘಂಟಾಘಣತ್ಕಾರಂಗೆಯ್ವುತ್ತೆ, ಎಳ್ತಂದು, ಲಿಂಗಸನ್ನಿಧಿಯೊಳ್, ನಿಂದು, ಮುಂದೆ, ಇರ್ದ, ಪಿರಿಯ, ಧೂಪಪಾತ್ರೆಯೊಳ್, ತಳತಳಿಸಿ, ಘುಳುಘುಳಿಪ. ಅನಳನಂ, ನೋಳ್ಪಾಗಳ್. * * * * * * * *

ಧಗಧಗನಿಸ್ವನಂ- ಧಗಧಗವೆಂಬ ಶಬ್ದವು, ನಿಮಿರೆ- ಉಂಟಾಗಲು, ಕೆಂಗಿಡಿ, ಸೂಸೆ- ಸುರಿಯಲು, ಕಾರ್ಬೊಗೆ- ಕಪ್ಪಾದ ಹೊಗೆಯು, ಪೊದಳ್ದು- ಹೆಚ್ಚಾಗಿ, ಪೊಣ್ಮೆ- ಹೊರಕ್ಕೆ ಹೊರಟು, ತವಿಲ್ಆಗೆ- ಮುಸುಕಿಕೊಳ್ಳಲು, ದಳ್ಳುರಿ- ದೊಡ್ಡ ಜ್ವಾಲೆಯು, ವಿಜೃಂಭಿಸಿ- ಹೆಚ್ಚಿ, ಪರ್ಬುಗೆವೆತ್ತು- ಹಬ್ಬಿಕೊಂಡು, ಕೊರ್ಬಿ, ಮಿಂಚು- ಪ್ರಕಾಶವು, ಒಗೆಯೆ, ಮಡಲ್ತು- ವೃದ್ಧಿಯನ್ನೈದಿ, ಭೀಮನಿಟಿಲಸ್ಫುಟವಹ್ನಿಯ- ಪರಮೇಶ್ವರನ ಹಣೆಯಲ್ಲಿ ವ್ಯಕ್ತವಾಗಿರುವ ಬೆಂಕಿಯ, ಅಗುರ್ವಂ- ಅತಿಶಯವನ್ನು, ಆಳ್ದು, ಬಿಸುಪು- ಔಷ್ಣ್ಯವು, ಕೈಮಿಗೆ- ಹೆಚ್ಚಾಗಿ, ಎತ್ತಲುಂ, ಮಸಗೆ- ವ್ಯಾಪಿಸಲು, ಪಾತ್ರಪಾವಕಂ- ಧೂಪದ ಪಾತ್ರೆಯಲ್ಲಿರುವ ಅಗ್ನಿಯು, ದಳ್ಳಿಸಿದುದು- ಆವರಿಸಿತು. ... ... ... ॥೧೩೯॥

ವ|| ಅಂತು ವಿಲಯಶಿಖಿಯಂತೆ ಬಿಸುಪ ಶಿಖಿಯ ಸೆಕೆಗೆ ಶಿಖಿಲೋಚನಶರಣ ನಳ್ಕದೆ ನಿಶ್ಚಲಧೈರ್ಯಾವಷ್ಟಂಭನುಂ ನಿರರ್ಗಳಮಾನೋನ್ನತನುಂ ನಿರುಪಮಶಾಂತಿಸಂಪನ್ನನುಂ ನಿರಸ್ತನಿಜತನುವಿಮೋಹನುಮಾಗಿಯುಂ ಮುಂದಣ್ಗೆ ಸಜ್ಜೆಯಿಟ್ಟ ಕರಾಂಭೋಜಂಗಳಂ ಮುಗಿದು ಗಂಭೀರಧ್ವಾನದಿ ನೆಲೆದೇವದೇವ ಸೌರಾಷ್ಟ್ರಸೋಮನಾಥ ಮತ್ತನುಗುರ್ಗ್ಗಳವ ನವಧರಿಸವಧರಿಸೆಂದುದ್ಘೋಷಿಸಿ || * * * * * * *

ಕಂ|| ಮುನ್ನೀವಗುರ್ಗ್ಗಳದ ಪರಿ | ಯಿಂ ನಿಬಿಡಸುಗಂಧ ವಿಾಯದಿರ್ದೊಡೆ ಕೇ ಳೆಂ |
ದೆನ್ನ ತನು ದೇವ ಮದ್ದೃಢ|ಸನ್ನುತಸುವ್ರತಕೆ ಭಂಗ ಮಲ್ಲದೆ ಪೆರತೇಂ | ... ||೧೪೦||

ವ|| ಅಂತು ಮಲ್ಲದೆಯುಂ ಧೂಪದಬಾಚಯ್ಯ ನೆಂಬ ವೀರವ್ರತಧೀರೋದಾತ್ತಶರಣಂ ನಿಚ್ಚಂ ತ್ರಿಕಾಲಂದಪ್ಪದೆ ಒರ್ಪ್ಪಲಗುರ್ಗ್ಗಳಮಂ ಸಮರ್ಪ್ಪಿಪುದೆ ನೇಮ ಮಾಗಿರ್ದ್ದೊಡೊಂದುದಿನಂ ಗುರ್ಗ್ಗಳುಂ ದೊರೆಕದಿರೆ ತಳಮಳಗುಗೊಳ್ಳದೆ ನಿಜತನುಖಂಡಂಗಳಂ ಕೊರೆಕೊರೆದು ಗುರ್ಗ್ಗಳನಿಭಮನಿಸಿ ತನಿಗೆಂಡದೊ ಳಿಕ್ಕಿ ಧೂಪಮಂ ಬೀಸಿ ಹರನಂ ಮಚ್ಚಿಸಿದ ನವನ ತನುಖಂಡದಂತೆ || * * * * * * * * *

ಕಂ|| ಪರಿಮಳಮ ನೊಲ್ದು ಬೀರದೊ|ಡಿರದವಗಂಧಂ ಪೊದಳ್ದೊಡಂ ಸರಸತೆಯಾ ||

---

ಅಂತು, ವಿಲಯಶಿಖಿಯಂತೆ- ಪ್ರಳಯಕಾಲದ ಬೆಂಕಿಯಹಾಗೆ, ಬಿಸುಪ, ಶಿಖಿಯ- ಅಗ್ನಿಯ, ಸೆಕೆಗೆ, ಶಿಖಿಲೋಚನಶರಣಂ- ಅಗ್ನಿನೇತ್ರನಾದ ಶಿವನ ಶರಣನು, ( ಓಹಿಲಯ್ಯನು ), ಅಳ್ಕದೆ- ಹೆದರದೆ, ಬಳ್ಕದೆ- ಅಳ್ಳಾಡದೆ, ನಿಶ್ಚಲಧೈರ್ಯಾವಷ್ಟಂಭನುಂ- ನಿಶ್ಚಂಚಲವಾದ ಧೈರ್ಯಸ್ಥಿತಿಯುಳ್ಳವನೂ, ನಿರರ್ಗಳಮಾನೋನ್ನತನುಂ- ಅತಿಶಯವಾದ ಗೌರವದಿಂದ ಶ್ರೇಷ್ಠನೂ, ನಿರುಪಮಶಾಂತಿಸಂಪನ್ನನುಂ, ನಿರಸ್ತನಿಜತನುವಿಮೋಹನುಂ- ನಾಶಮಾಡಲ್ಪಟ್ಟ ದೇಹವು ತನ್ನದೆಂಬ ಅಜ್ಞಾನವುಳ್ಳವನೂ, ಆಗಿಯುಂ, ಮುಂದಣ್ಗೆ- ಮುಂಗಡೆಗೆ,ಸಜ್ಜೆಯಿಟ್ಟ, ಕರಾಂಭೋಜಂಗಳಂ, ಮುಗಿದು, ಗಂಭೀರಧ್ವಾನದಿಂ, ಎಲೆದೇವದೇವ ! ಸೌರಾಷ್ಟ್ರಸೋಮನಾಥ ! ಮತ್ತನುಗುರ್ಗ್ಗಳಮಂ- ನನ್ನ ದೇಹ ಧೂಪವನ್ನು, ಅವಧರಿಸುಅವಧರಿಸು-ಮನಸ್ಸಿಗೆ ತಂದುಕೊ ಮನಸ್ಸಿಗೆ ತಂದುಕೊ, ಎಂದು, ಉದ್ಘೋಷಿಸಿ-ಗಟ್ಟಿಯಾಗಿಕೂಗಿ. * * *

ದೇವ ! ಮುನ್ನ, ಈವ- ಪರಿಮಳವಂ ಕೊಡುವ, ಗುರ್ಗ್ಗಳದ, ಪರಿಯಿಂ, ಇದು, ಎನ್ನ, ತನು, ನಿಬಿಡಸುಗಂಧವಿಾಯದೆ, ಇರ್ದೊಡೆ, ಮದ್ದೃಢಸನ್ನುತಸುವ್ರತಕೆ- ನನ್ನ ಸ್ಥಿರವಾದ ಶ್ಲಾಘ್ಯವಾದ ನಿಯಮಕ್ಕೆ, ಭಂಗಂ, ಅಲ್ಲದೆ, ಪೆರತೇಂ ? ... ... ... ... ||೧೪೦||

ಅಂತುಂ, ಅಲ್ಲದೆಯುಂ, ಧೂಪದ, ಬಾಚಯ್ಯಂ, ಎಂಬ, ವೀರವ್ರತಧೀರೋದಾತ್ತಶರಣಂ— ವೀರವ್ರತ- ಶೂರನಿಯಮವುಳ್ಳ, ಧೀರೋದಾತ್ತಶರಣಂ- ( ಮಹಾಸತ್ತ್ವವುಳ್ಳವನಾಗಿಯೂ, ಅತಿ ಗಂಭೀರನಾಗಿಯೂ, ಕೃಪಾಶಾಲಿಯಾಗಿಯೂ, ಆತ್ಮಸ್ತುತಿಯಂ ಮಾಡಿಕೊಳ್ಳದವನಾಗಿಯೂ, ಧೈರ್ಯಶಾಲಿಯಾಗಿಯೂ, ಇರುವವನು ಧೀರೋದಾತ್ತನೆನಿಸಿಕೊಳ್ಳುತ್ತಾನೆ ) ನಿಚ್ಚಂ, ತ್ರಿಕಾಲಂದಪ್ಪದೆ, ಒರ್ಪ್ಪಲಗುರ್ಗ್ಗಳಮಂ- ೩೦ ಗುಲುಗಂಜಿ ಅಥವಾ ೧೦ ವರಹ ತೂಕದ ಗುಗ್ಗುಳವನ್ನು, ಸಮರ್ಪಿಪುದೆ, ನೇಮಂ, ಆಗಿ, ಇರ್ದ್ದೊಡೆ, ಒಂದುದಿನಂ, ಗುರ್ಗ್ಗಳುಂ, ದೊರೆಕದೆ, ಇರೆ, ತಳಮಳಗುಗೊಳ್ಳದೆ- ಮನಸ್ಸಿನಲ್ಲಿ ವ್ಯಾಕುಲಪಡದೆ, ನಿಜತನುಖಂಡಂಗಳಂ- ತನ್ನ ದೇಹದ ಮಾಂಸಗಳನ್ನು, ಕೊರೆಕೊರೆದು, ಗುರ್ಗ್ಗಳನಿಭಂ- ಗುಗ್ಗುಳಕ್ಕೆ ಸದೃಶವಾದದ್ದು, ಎನಿಸಿ, ತನಿಗೆಂಡದೊಳ್- ಚೆನ್ನಾಗಿ ಬೆಂದಿರುವ ಕೆಂಡದಲ್ಲಿ, ಇಕ್ಕಿ, ಧೂಪಮಂ, ಬೀಸಿ, ಹರನಂ, ಮಚ್ಚಿಸಿದಂ, ಅವನ, ತನುಖಂಡದಂತೆ. * * * * * * * * * * * * * * *

ಪರಿಮಳಮಂ, ಒಲ್ದು, ಬೀರದೊಡೆ, ಇರದೆ, ಅವಗಂಧಂ- ದುರ್ಗಂಧವು, ಪೊದಳ್ದೊಡಂ- ಹುಟ್ಟಿದ

ವರಿಸದೊಡೆ ನಡುಗಿದೊತೆ ತನು । ಹರಣಂಬೆರ್ಚಿದೊಡೆ ಖಿನ್ನ ಮಾಪೊಡೆ ವದನಂ ॥

ಚಂ ॥ ಕರಗದೊ ಡಸ್ಥಿ ಕರ್ಗಿದೊಡೆ ಕಾಯ ಮಳಲ್ದೊಡೆ ಚಿತ್ತ ಮಂತ್ರಪಂ । ಜಪ್ಪ ಮದು ಸುರ್ಕುವೆತ್ತೊಡೆ ಕಳಲ್ದೊಡೆ ಕಣ್ಬನಿ ದೇಹರಂಧ್ರದಿಂ ॥ ಸುರಿದೊಡೆ ಶೈತ್ಯಸಾರಕ ಫಲೋಹಿತ ಮಂಗದ ರೋಮರಾಜಿ ಪೇ । ರುರಿಗೊಳೆ ಕಾರುನಾರ್ದೊಡೆ ನಿಜೋನ್ನತಧೂ ಮದಕಾಂತಿ ಕೆಟ್ಟೊಡಂ॥ ... ... ... ... ... ॥೧೮೨॥

ಕಂ ॥ ಪಿರಿದುರಿದೊಡ ಮಿಂಗಳ ಮದು। ಕರಮಿಲ್ಲದೊ ಡಮಿತಧೂಪಧೂಮಂ ಪರಿದಾ। ವರಿಸದೊಡೆ ನಿನ್ನ ನೀಕ್ಷಿಸು । ವಿಪವಳಿದೊಡೆ ನಿನ್ನ ಭೃತ್ಯ ನಾನಲ್ತೆನುತಂ ॥ ॥೧೮೩॥

ಮಹಾಸ್ರ ॥ ಕಡುಪಿಂದಂ ಪೂಣ್ದು ಭಕ್ತಂ ಕಿಡಿಯಸುಗುಳ್ವ ತದ್ಧೂಪಪಾತ್ರಾಗ್ನಿ ಯೊಳ್ಸ । ನ್ಮೃಡಭಕ್ತವ್ರಾತಪಾದಾಂಬುಜಮ ನೆರ್ದೆಯೊಳೊ ಲ್ದಾಂತು ಕುಳ್ಳಿರ್ಪುದುಂ ತ ॥ ನ್ನೊಡಲುದ್ಯದ್ಧೂಪಧೂಮಪ್ರಬಳಪರಿಮಳಂ ಲಿಂಗಮಂ ಸುತ್ತಿ ಮುತ್ತು ।ತ್ತೊಡನೆ ತ್ತಂಪರ್ಬೆ ಸೋಮೇಶ್ವರ ಹರಹರ ಘೋಷಾಸ್ಯನೊಪ್ಪುತ್ತಮಿರ್ದಂ ॥ ॥೧೮೪॥

ಕಂ ॥ ಪೊಸತೊಂದು ಗಜಾಜಿನ ಮದು । ಮುಸುಂಕಿದತ್ತಭವ ನಂಗಮಂ ತಾ ನನೆ ರು ॥ ಜೆಸೆದ್ಧೂಪಧೂಮತತಿ ಮನ । ಮೊಸೆದೀಶನವಂಗೆ ರೂಪುದೋರಿದ ನಾಗಳ್ ॥ ॥೧೮೫॥

---

ರೂ, ಸರಸತೆ- ಮನೋಹರತ್ವವು, ಆವರಿಸದೊಡೆ, ತನು, ನಡುಗಿದೊಡೆ, ಹರಣಂ- ಪ್ರಾಣವು, ಬೆರ್ಚಿದೊಡೆ, ವದನಂ- ಮುಖವು, ಖಿನ್ನಂ- ಖೇದವಿಶಿಷ್ಟವಾದದ್ದು, ಆದೊಡೆ. ... ... ॥೧೮೧॥

ಅಸ್ಥಿ- ಮೂಳೆಯು, ಕರಗದೊಡೆ, ಕಾಯಂ- ದೇಹವು, ಕರ್ಗಿದೊಡೆ- ಕರಿತುಗೊಂಡರೆ, ಚಿತ್ತಂ- ಮನಸ್ಸು, ಅಳಲ್ದೊಡೆ- ದುಃಖಪಟ್ಟರೆ, ಅದುಅಂತ್ರಪಂಜರಂ- ಆ ನರಗಳ ಪಂಜರವು, ಸುರ್ಕುವೆತ್ತೊಡೆ- ಸುಕ್ಕುಹಿಡಿದರೆ, ಕಣ್ಬನಿ- ಕಣ್ಣೀರು, ಕಳಲ್ದೊಡೆ-ಜಾರಿಬಿದ್ದರೆ, ದೇಹರಂಧ್ರದಿಂ, ಶೈತ್ಯಸಾರಕಫಲೋಹಿತಂ— ಶೈತ್ಯ- ಸೀತದ, ಸಾರ- ಸ್ಥಿರಾಂಶದ, ಕಫ- ಶ್ಲೇಷ್ಮವು, ಲೋಹಿತಂ- ರಕ್ತವು, ಸುರಿದೊಡೆ, ಅಂಗದ, ರೋಮರಾಜಿ, ಪೇರುರಿಗೊಳೆ- ಉರಿದು ಹೋದರೆ, ಕಾರು- ನಾತವು, ನಾರ್ದೊಡೆ- ನಾರಿದರೆ, ನಿಜೋನ್ನತ ಧೂಮದ, ಕಾಂತಿ, ಕೆಟ್ಟೊಡಂ. ... ... ... ... ॥೧೮೨॥

ಅದುಅಂಗಳಂ- ಆ ಕೆಂಡವು, ಪಿರಿದು- ಹೆಚ್ಚಾಗಿ, ಉರಿದೊಡಂ, ಕರಂ- ಅತ್ಯಂತವಾಗಿ, ಇಲ್ಲದೊಡೆ, ಅಮಿತಧೂಪಧೂಮಂ- ಹೆಚ್ಚಾದ ಧೂಪದ ಹೊಗೆಯು, ಪರಿದು, ಆವರಿಸದೊಡೆ, ನಿನ್ನಂ, ಈಕ್ಷಿಸುವ, ಇರವು- ರೀತಿಯು, ಅಳಿದೊಡೆ, ಆಂ, ನಿನ್ನ, ಭೃತ್ಯಂ- ಸೇವಕನು, ಅಲ್ತು, ಎನುತಂ. ... ॥೧೮೩॥

ಭಕ್ತಂ, ಪೂಣ್ದು-ಶಪಥವಂಮಾಡಿ,ಸನ್ಮೃಡಭಕ್ತವ್ರಾತಪಾದಾಂಬುಜಮಂ, ಎರ್ದೆಯೊಳ್- ಮನಸ್ಸಿನಲ್ಲಿ, ಒಲ್ದು- ಆಂತು,ಕಿಡಿಯಂ, ಉಗುಳ್ವ, ತದ್ಧೂಪಪಾತ್ರಾಗ್ನಿಯೊಳ್, ಆ ಧೂಪದ ಪಾತ್ರೆಯಲ್ಲಿರುವ ಬೆಂಕಿಯಲ್ಲಿ, ಕಡುಪಿಂದಂ- ಶೌರ್ಯದಿಂದ, ಕುಳ್ಳಿರ್ಪುದುಂ, ತನ್ನ, ಒಡಲ- ಶರೀರದ, ಧೂಪಧೂಮಪ್ರಬಳಪರಿಮಳಂ- ಧೂಪದಹೊಗೆಯು ಹೆಚ್ಚಾದ ಸುಗಂಧವು, ಲಿಂಗಮಂ, ಸುತ್ತಿ, ಮುತ್ತುತ್ತೆ, ಒಡನೆ, ಎತ್ತಂ- ಎಲ್ಲಾ ಕಡೆಯಲ್ಲೂ, ಪರ್ಬೆ, ಸೋಮೇಶ್ವರಹರಹರಘೋಷಾಸ್ಯಂ- ಸೋಮೇಶ್ವರ ! ಹರಹರ ! ಎಂಬ ಶಬ್ದದಿಂ ಕೂಡಿದ ಬಾಯುಳ್ಳವನಾಗಿ, ಒಪ್ಪುತ್ತಂ, ಇರ್ದಂ. .... ... ॥೧೮೪॥

ಆಗಳ್, ಅದುಪೊಸತುಒಂದುಗಜಾಜಿನಂ- ಆ ಹೊಸದಾದ ಒಂದು ಆನೆಯ ಚರ್ಮವು, ತಾಂ, ಅಭವನು ಅಂಗಮಂ, ಮುಸುಂಕಿದತ್ತು- ಆಚ್ಛಾದಿಸಿತು, ಎನೆ, ಧೂಪಧೂಮತತಿ- ಧೂಪದ ಹೊಗೆಯ ಸಮೂಹವು ರಂಜಿಸೆ, ಈಶಂ, ಮನಮೊಸೆದು- ಮನಸ್ಸಿನಲ್ಲಿ ಪ್ರೀತಿಯು ಹುಟ್ಟಿ, ಅವಂಗೆ, ರೂಪುದೋರಿದಂ. ॥೧೮೫॥

ಕಂ ॥ ಎಳವೆರೆ ಬಾಂಬೊಳೆ ಜೆಡೆಮುಡಿ । ತೊಳಪಕ್ಷಿ ಕರೋಟಿ ತಿಸುಳ ಮುರಗಾಭರಣಂ ॥ ವಿಳರ್ವ ಫಣಿಕುಂಡಲಂ ಕರಿ । ಕಳಭಾಜಿನ ಮೆಸೆಯೆ ಮಿಸುಗಿದಂ ಗಿರಿಜೇಶಂ ॥೧೪೬॥

ಕಂ ॥ ಸುರಕುಜಕುಸುಮನೋವರ್ಷಂ । ಸುರಿಯೆ ಸುರಾನಕಕದಂಬ ಮದು ಮೊರೆಯೆ ದಿಶಾ ॥ ವರಹರಿವಿಧಿಗಳ್ಪದೆದೇ । ಳ್ತರೆ ವಿಬುಧ ರ್ಪೊಗಳೆ ಶಂಕರಂ ಸೊಗಯಿಸಿದಂ ॥೧೪೭॥

ವ ॥ ಮತ್ತಮಲ್ಲಿ ॥ ॥ ಫಣಿಮಣಿಕಾಂತಿ ಮಿಂಚು ಜೆಡೆ ನೀರ್ಗ್ಗದಿರಾದ್ರಿಜೆ ತೊಟ್ಟರತ್ನಭೂ । ಷಣಪವ ಯೂಖ ಮಿಂದ್ರಧನು ತಾಳ್ದ ಗಜಾಜಿನ ಮಂಬುದಂ ಕರ ॥ ಕ್ವಣದ ಜಮುಸ್ತವೇದರವ ಮಬ್ದರವಂ ತನಗಾಗೆ ಸತ್ಕೃಪೇ । ಕ್ಷಣ ರುಚಿವೃಷ್ಟಿಯಂ ಸುರಿದನಂ ಬುದಕಾಲದವೋಲ್ಮಹೇಶ್ವರಂ॥ ... ... ... ... ॥೧೪೮॥

ವ ॥ ಅಂತುಕೃಪಾರಸವರ್ಷದಿ ನಂಗಮ ನಳುರ್ದ ಶಿಖಿಯಂ ನಂದಿಪ್ಪೊ ಯ್ದೋಹಿಲಯ್ಯನಂ ತೆಗೆದುಬಿಗಿದಪ್ಪಿ ಮನ್ನಿಸಿ ಪೊಗಳ್ದು ಶೋಭನಾಂಗನಂ ಸಂಗಳ್ದು ಪರಶಿವಂ ಪ್ರಮೋದಂಮಿಗೆ ॥

* * * * * * * * *

ಕಂ ॥ ಪ್ರಮಥಪತಿಪಟ್ಟಮಂ ಕ । ಟ್ಟ ಮಹೋತ್ಸವಮೆಸಗಿ ಶಂಭು ತನ್ನಯ ಸಾ

ಎಳೆವೆರೆ- ಬಾಲಚಂದ್ರ, ಬಾಂಬೊಳೆ- ಆಕಾಶಗಂಗೆ, ಜೆಡೆಮುಡಿ- ಜೆಡೆಕಟ್ಟು, ತೊಳಪಕ್ಷಿ- ಅಗ್ನಿನೇತ್ರ, ಕರೋಟಿ- ಬ್ರಹ್ಮಕಪಾಲ, ತಿಸುಳಂ- ತ್ರಿಶೂಲ, ಉರಗಾಭರಣಂ- ಸರ್ಪಭೂಷಣ, ವಿಳರ್ವ- ಆಳ್ಳಾಡುವ, ಫಣಿಕುಂಡಲಂ- ಸರ್ಪದ ಕರ್ಣಭೂಷಣ, ಕರಿಕಳಭಾಜಿನಂ- ಮದಗಜದ ಚರ್ಮ, ಎಸೆಯೆ, ಗಿರಿಜೇಶಂ, ಮಿಸುಗಿದಂ. ... ... ... ... ... ॥೧೪೬॥

ಸುರಕುಜಕುಸುಮನೋವರ್ಷಂ- ಕಲ್ಪವೃಕ್ಷದ ಹೂವಿನ ಮಳೆಯು, ಸುರಿಯೆ, ಅದುಸುರಾನಕಕದಂಬಂ- ಆ ದೇವತೆಗಳ ನಗಾರಿಗಳ ಸಮುದಾಯವು, ಮೊರೆಯೆ- ಶಬ್ದವಂ ಮಾಡಲು, ದಿಶಾವರಹರಿವಿಧಿಗಳ್- ದಿಕ್ಪತಿಗಳು ವಿಷ್ಣು ಬ್ರಹ್ಮರುಗಳು, ಪದೆದು- ಪಳ್ತರೆ, ವಿಬುಧರ್- ವಿದ್ವಾಂಸರುಗಳು, ಪೊಗಳೆ, ಶಂಕರಂ, ಸೊಗಯಿಸಿದಂ. ... ... ... ... ... ॥೧೪೭॥

ಫಣಿಮಣಿಕಾಂತಿ- ಸರ್ಪದ ತಲೆಯ ರತ್ನದ ಪ್ರಕಾಶವು, ಮಿಂಚು, ಜಡೆನೀರ್- ಜೆಡೆಯಲ್ಲಿರುವ ಗಂಗಾಜಲವು, ಕದಿರ್- ಅದರ ಕಾಂತಿಯು, ಅದ್ರಿಜೆ- ಪಾರ್ವತಿಯು, ತೊಟ್ಟ- ಧರಿಸಿರುವ, ರತ್ನಭೂಷಣಮಯೂಖಂ- ರತ್ನಖಚಿತವಾದ ಆಭರಣಗಳ ಕಾಂತಿಯು, ಇಂದ್ರಧನು- ಇಂದ್ರನ ಬಿಲ್ಲು, ತಾಳ್ದ, ಗಜಾಜಿನಂ- ಆನೆಯ ಚರ್ಮವು, ಅಂಬುದಂ- ಮೇಘವು, ಕರಕ್ವಣದಜಮುಸ್ತವೇದರವಂ- ಹಸ್ತದಲ್ಲಿ ಶಬ್ದಮಾಡುತ್ತಿರುವ ಬ್ರಹ್ಮನ ಶಿರಸ್ಸಿನಿಂದುತ್ಪನ್ನವಾದ ವೇದಧ್ವನಿಯು, ಅಬ್ದರವಂ- ಗುಡುಗು, ತನಗೆ, ಆಗೆ, ಮಹೇಶ್ವರಂ, ಅಂಬುದಕಾಲದವೋಲ್-ವರ್ಷಾಕಾಲದ ಹಾಗೆ, ಸತ್ಕೃಪೇಕ್ಷಣರುಚಿವೃಷ್ಟಿಯಂ-ಒಳ್ಳೆಯ ದಯೆಯಿಂದ ಕೂಡಿದ ನೋಟದ ಕಾಂತಿಯೆಂಬ ಮಳೆಯನ್ನು, ಸುರಿದಂ. ... ... ॥೧೪೮॥

ಅಂತು, ಪರಶಿವಂ, ಕೃಪಾರಸವರ್ಷದಿಂ- ದಯೆ ಯೆಂಬ ನೀರಿನ ಮಳೆಯಿಂದ, ಅಂಗಮಂ- ಓಹಿಲಯ್ಯನ ದೇಹವನ್ನು, ಅಳುರ್ದ- ಆವರಿಸಿಕೊಂಡಿರುವ, ಶಿಖಿಯಂ-ಬೆಂಕಿಯನ್ನು, ನಂದಿಪೋಯ್ದು- ಆರುವಹಾಗೆ ಹುಯ್ದು, ಓಹಿಲಯ್ಯನಂ, ತೆಗೆದು, ಬಿಗಿದು, ಅಪ್ಪಿ, ಮನ್ನಿಸಿ, ಪೊಗಳ್ದು, ಶೋಭನಾಂಗನಂ- ಮಂಗಳಮಯವಾದ ದೇಹವುಳ್ಳವನನ್ನಾಗಿ, ನೆಗಳ್ದು- ಮಾಡಿ, ಪ್ರಮೋದಂ- ಸಂತೋಷವು, ಮಿಗೆ- ಹೆಚ್ಚಾಗಲು.

ಶಂಭು, ಪ್ರಮಥಪತಿಪಟ್ಟಮಂ- ಪ್ರಮಥರೆಲ್ಲರಿಗೂ ಶ್ರೇಷ್ಠನೆಂಬ ಪಟ್ಟವನ್ನು, ಕಟ್ಟಿ, ಮಹೋತ್ಸವಮೆಸಗಿ, ತನ್ನಯ, ಸಾರೂಪ್ಯಮಂ- ಸಮಾನವಾದ ಸ್ವರೂಪವನ್ನು, ಕವುತೆ, ಓಹಿಲಯ್ಯನಂ

ರೂ॥ಪ್ಪನು ನೀವ್ರುತೋಹಿಲಯ್ಯನ । ನಮರ್ದೊಳ್ಪಿಂ ರಜತಗಿರಿಗೆ ಕೊಂಡೊಯ್ವೆಡೆಯೊಳ್॥

ಮ॥ ಸ್ರ॥ ವರಘಂಟಾನಾದ ಮೆಂಟುಂದೆಸೆಯ ನಳುರೆಧೂಪಸ್ಫುರದ್ಧೂಮ ಮುರ್ವೀ । ಹರಲೋಕಕ್ಕಿಟ್ಟನಿಶ್ರೇಣಿಯವೊಲಿರೆ ಜಯಧ್ವಾನಸಂಸಕ್ತಭಕ್ತೋ ॥ ತ್ಕರ ಮೊಪ್ಪಂಬೆತ್ತು ಘೇ ಯೆಂದುಲಿಯೆ ಪುರದ ತೂರ್ಯತ್ರಯಂ ಪೊಣ್ಮೆ ಮೇಲ । ಚ್ಚರಿಯ ರ್ಮುಂಡಾಡೆ ದೇವಪ್ರತತಿ ಪೊಗಳೆ ತದ್ಭಕ್ತ ನೈದುತ್ತಮಿರ್ದಂ ॥ ... ... ... ॥೧೫೦॥

ವ॥ ಆಗಾಳತಪಸ್ವಿಗ ಳಾಮಹಾತ್ಮನ ಮಹಿಮೆಗಂ ಡಳ್ಕಿ ಬಳ್ಕಿ ದೈನ್ಯಂಬೆರಸಿ ಧರಣಿಯೊ ಳ್ಸೈಗೆಡೆದು ಶರಣ್ಬೊಕ್ಕುಮಿಕ್ಕು ॥ * * * * *

ಕಂ ॥ ವರಸುಗುಣಹಾರ ಕರುಣಾ । ಕರಕಲಿಮಲದೂರ ಸಾರವೈರಾಗ್ಯಪರಿ ॥ ಸುರಿತಶಿವಭಕ್ತಿಸದ್ದೃಢ । ಚರಿತ ಶಿವಾನಂದಸಾಂದ್ರ ಜಯ ಭವಹಿತ ॥ ... ॥೧೫೧॥

ವ ॥ ಎಂದು ಮತ್ತೆಮತ್ತೆ ಪೊಗಳ್ದೋಹಿಲಯ್ಯನಿ ನಭಯಂ ಬಡೆದಿರ್ದ ರಾಪ್ರಸ್ತಾವದೊಳ್॥ * * * * * * * * *

॥ ಸಡಗರದಿಂ ಪೋದಪ ನಾ । ಮೃಡಲೋಕಕ್ಕೋಹಿಲಯ್ಯ ನೆನಗವನಂ ಕಂ ॥ ಡೊಡನೆ ನಗೆ ನೆಗಳ್ದ ದೆಂತೆನೆ । ಜಡರುಹರಿಪುವದನೆ ಪೇಳ್ವೆ ನೆಂದಿಂತೆಂದಂ ॥ ॥೧೫೨॥

---

ಅನುರ್ದು- ಸೇರಿ, ಒಳ್ಪಿಂ- ಚೆನ್ನಾಗಿ, ರಜತಗಿರಿಗೆ, ಕೊಂಡು, ಒಯ್ವ- ಕರೆದುಕೊಂಡು ಹೋಗುವ, ಎಡೆಯೊಳ್- ಕಾಲದಲ್ಲಿ. ... ... ... ... ... ॥೧೪೯॥

ವರಘಂಟಾನಾದಂ, ಎಂಟುಂದೆಸೆಯಂ- ಎಂಟು ದಿಕ್ಕುಗಳನ್ನೂ, ಅಳುರೆ- ಆವರಿಸಲು, ಧೂಪಸ್ಫುರದ್ಧೂಮಂ- ಧೂಪದ ಹರಡುತ್ತಿರುವ ಹೊಗೆಯು, ಉರ್ವೀಹರಲೋಕಕ್ಕೆ- ಪ್ರಳಯಕಾಲದಲ್ಲಿ ಭೂಮಿಯನ್ನೆಲ್ಲಾ ನಾಶಮಾಡುವ ಶಿವನ ಲೋಕಕ್ಕೆ, ಇಟ್ಟ, ನಿಶ್ರೇಣಿಯವೊಲ್- ಏಣಿಯ ಹಾಗೆ, ಇರೆ, ಜಯಧ್ವಾನಸಂಸಕ್ತಭಕ್ತೋತ್ಕರಂ- ಜಯ ಎಂಬ ಶಬ್ದದಿಂದ ಕೂಡಿರುವ ಶಿವಭಕ್ತರ ಗುಂಪು, ಒಪ್ಪಂಬೆತ್ತು- ಮನೋಹರವಾಗಿ, ಉಘೇ, ಎಂದು, ಉಲಿಯೆ- ಕೂಗಲು, ಪುರದ- ಆ ಸೌರಾಷ್ಟ್ರಪಟ್ಟಣದ, ತೂರ್ಯತ್ರಯಂ- ನೃತ್ತಗೀತವಾದ್ಯಗಳು, ಪೊಣ್ಮೆ, ಮೇಲೆ- ಅಚ್ಚರಿಯರ್- ಅಪ್ಸರಸ್ತ್ರೀಯರು, ಮುಂಡಾಡೆ- ಪ್ರೀತಿಪಡಲು, ದೇವಪ್ರತತಿ, ಪೊಗಳೆ, ತದ್ಭಕ್ತಂ, ಐದುತ್ತಂ, ಇರ್ದಂ. ... ... ॥೧೫೦॥

ಆಗಾಳತಪಸ್ವಿಗಳ್, ಆಮಹಾತ್ಮನ, ಮಹಿಮೆಗಂಡು, ಅಳ್ಕಿ- ಹೆದರಿ, ಬಳ್ಕಿ-ನಡುಗಿ, ದೈನ್ಯಂಬೆರಸು- ದೀನತ್ವದಿಂ ಕೂಡಿ, ಧರಣಿಯೊಳ್, ಸೈಗೆಡೆದು- ಅಡ್ಡಬಿದ್ದು, ಶರಣ್ಬೊಕ್ಕು- ಸಂರಕ್ಷಕನನ್ನಾಗಿ ಹೊಂದಿ, ಮಿಕ್ಕು. * * * * * * * * * * * * * * * * *

ವರಸುಗುಣಹಾರ, ಕರುಣಾಕರ, ಕಲಿಮಲದೂರ- ಸಮರ್ಥಗಳಾದ ಆಣವಮಾಯಾಕಾರ್ಮಿಕಗಳೆಂಬ ಮಲಗಳಿಗೆ ದೂರನಾದ, ಸಾರವೈರಾಗ್ಯ- ಶ್ರೇಷ್ಠವಾದ ವಿರಕ್ತಿಯುಳ್ಳ, ಪರಿಸ್ಫುರಿತಶಿವಭಕ್ತಿ- ಚೆನ್ನಾಗಿ ಪ್ರಕಟವಾದ ಶಿವಭಕ್ತಿಯುಳ್ಳ, ಸದ್ದೃಢಚರಿತ- ಸ್ಥಿರವಾದ ಚರಿತ್ರವುಳ್ಳ, ಶಿವಾನಂದಸಾಂದ್ರ- ಬ್ರಹ್ಮಾನಂದದಿಂ ಪರಿಪೂರ್ಣನಾದ, ಭವಗಹಿತ ! ಜಯ. ... ... ... ॥೧೫೧॥

ಎಂದು, ಮತ್ತೆಮತ್ತೆ, ಪೊಗಳ್ದು, ಓಹಿಲಯ್ಯನಿಂ, ಅಭಯಂಬಡೆದು, ಇರ್ದರ್, ಆಪ್ರಸ್ತಾವದೊಳ್- ಆ ಸಮಯದಲ್ಲಿ. * * * * * * * * * * * * * * *

ಜಡರುಹರಿಪುವದನೆ- ಕಮಲಮುಖಿಯೇ ! ಓಹಿಲಯ್ಯಂ, ಸಡಗರದಿಂ, ಆಮೃಡಲೋಕಕ್ಕೆ, ಪೋದಪನ್, ಎನಗೆ, ಅವನಂ, ಕಂಡು, ಒಡನೆ, ನಗೆ, ನೆಗಳ್ದುದು, ಎಂತು, ಎನೆ, ಪೇಳ್ವೆಂ, ಎಂದು, ಇಂತು- ಈ ಮುಂದೆ ಹೇಳುವರೀತಿಯಾಗಿ, ಎಂದಂ. ... ... ... ... ॥೧೫೨॥

ಮ॥ ಸ್ರ॥ ಘನನಿಷ್ಠಾಭಾವದಿಂ ದುಷ್ಕರತರತಪಮಂ ತಾಳ್ದು ಮುಗ್ರವ್ರತಂಗೊಂ । ಡೆನಸುಂ ಸೋಮೇಶನಂ ಮೆಚ್ಚಿಸಿ ಹರಹರ ತಾನೊರ್ವನೇ ಪೋದಪಂ ಮ । ರ್ತ್ಯನಿಕಾಯಂ ಪಟ್ಟಣಂಗಳ್ವೆರಸಿ ತಳರದಿಂತೋರ್ವನೇ ಪೋಪ ಕಜ್ಜ । ಕ್ಕಿನಿತೊಂದಾಯಾಸ ಮೇಕೆಂದೆನುತೆ ಬಗೆ ದಣಂ ನಕ್ಕನಂಭೋಜನೇತ್ರೆ ॥ ... ... ... ॥೧೫೩॥

ವ॥ ಎಂದು ನಿಜರಮಣಂ ನಗೆಗೆ ಕಾರಣಮನರುಪೆ ರಮಣಿ ಕೇಳ್ದು ವಿಸ್ಮಯಂದಾಳ್ದು ವಿಯತ್ತಳದೊಳನಿಮಿಷೇಕ್ಷಣದಿ ನರಸಿ ನೋಡಿಯುಂ ಕಾಣದರಸನಡಿದಾವರೆಗೆರಗಿ ॥

ಕಂ॥ ಆವಕಡೆ ಯಾವಮುಗಿಲೆಡೆ । ಯಾವದಿಶಾಭಾಗ ಮಾವಪವಣೊಳ್ ಭಕ್ತಂ ॥ ಭೂವರ ತಳರ್ದಪನರುಪೆಂ । ದಾವಿಧುಮುಖಿ ಕೇಳೆ ನಗುತೆ ನೃಪನಿಂತೆಂದಂ ॥ ॥೧೫೪॥

ಮತ್ತೇಭ॥ ಘನಘಂಟಾರುತಿ ಕೇಳಲಾದಪುದದೆತ್ತಂ ಕಾಂತೆ ನೋಡುತ್ತೆ ನೀ । ನೆನೆ ತತ್ಕಾಮಿನಿ ಮೆಲ್ಲನಾಲಿಸೆ ತದೀಯಧ್ವಾನಮಂ ನೇರ್ಪುಗೊಂ ॥ ಡನುಸಂಧಾನದೆ ನೋಡಿ ಕಂಡಳಿನತೇಜೋವಿಸ್ಫುರತ್ಪಾವನಾಂ । ಗನ ನಭ್ರಾಂತರದೊಳ್ ಶಿವಾಧವದಯಾಸಂಪೃಕ್ತನಂ ಭಕ್ತನಂ ॥ ... ... ... ... ... ... ॥೧೫೫॥

ಕಂ॥ ಕಂಡಧಿಕಸಂಭ್ರಮಮನೊಳ । ಕೊಂಡಚ್ಚರಿವಟ್ಟು ಕಾಂತೆ ಮೈದುಕ್ಕಿ ಮ

---

ಅಂಭೋಜನೇತ್ರೆ- ತಾವರೆಯಂತಿರುವ ಕಣ್ಣುಳ್ಳವಳೇ ! ಘನನಿಷ್ಠಾಭಾವದಿಂ- ಶ್ರೇಷ್ಠವಾದ ಶ್ರದ್ಧೆಯಿಂ ಕೂಡಿದ ಮನಸ್ಸಿನಿಂದ, ದುಷ್ಕರತರತಪಮಂ- ಅತ್ಯಸಾಧ್ಯವಾದ ತಪಸ್ಸನ್ನು, ತಾಳ್ದುಂ, ಎನಸುಂ- ನಿಶ್ಚಯವಾಗಿ, ಉಗ್ರವ್ರತಂಗೊಂಡು, ಸೋಮೇಶನಂ, ಮೆಚ್ಚಿಸಿ, ತಾಂ, ಓರ್ವನೇ, ಪೋದಪಂ, ಹರಹರ ! ಮರ್ತ್ಯನಿಕಾಯಂ- ಮನುಷ್ಯರ ಗುಂಪು, ಪಟ್ಟಣಂಗಳ್ವೆರಸಿ, ತಳರದೆ- ಇಂತು, ಓರ್ವನೆ, ಪೋಪ, ಕಜ್ಜಕೆ, ಇನಿತು, ಒಂದು, ಆಯಾಸಂ, ಏಕೆ ? ಎಂದು, ಎನುತೆ, ಬಗೆದು- ಯೋಚಿಸಿ, ಅಣಂ- ಅತ್ಯಂತವಾಗಿ, ನಕ್ಕಳ. ... ... ... ... ... ॥೧೫೩॥

ಎಂದು, ಆನಿಜರಮಣಂ- ಆ ತನ್ನ ಗಂಡನು, ನಗೆಗೆ, ಕಾರಣಮಂ, ಅರುಪೆ, ರಮಣಿ, ಕೇಳ್ದು, ವಿಸ್ಮಯಂದಾಳ್ದು- ಆಶ್ಚರ್ಯವಂ ಹೊಂದಿ, ವಿಯತ್ತಳದೊಳ್- ಅಂತರಿಕ್ಷಪ್ರದೇಶದಲ್ಲಿ, ಅನಿಮಿಷೇಕ್ಷಣದಿಂ- ರೆಪ್ಪೆಯಂ ಮುಚ್ಚದೇ ಇರುವ ಕಣ್ಣಿನಿಂದ, ಅರಸಿ- ಹುಡುಕಿ, ನೋಡಿಯುಂ, ಕಾಣದೆ, ಅರಸನ, ಅಡಿದಾವರೆಗೆ- ಬೆಗುರಿನಂತಿರುವ ಪಾದಕ್ಕೆ, ಎರಗಿ- ನಮಸ್ಕರಿಸಿ- * * * * * * * * * *

ಭೂವರ ! ಆವಕಡೆ ? ಆವಮುಗಿಲ- ಯಾವಮೋಡದ, ಎಡೆ- ಸ್ಥಳ ! ಆವದಿಶಾಭಾಗಂ- ಯಾವ ದಿಕ್ಪ್ರದೇಶ, ಆವಪವಣೊಳ್- ಯಾವ ಅಳತೆಯಲ್ಲಿ, ಭಕ್ತಂ, ತಳರ್ದಪಂ ? ಅರುಪು- ಹೇಳು, ಎಂದು, ಆವಿಧುಮುಖಿ, ಕೇಳೆ, ನೃಪಂ, ನಗುತೆ, ಇಂತು, ಎಂದಂ. ... ... ... ॥೧೫೪॥

ಕಾಂತೆ ! ಅದುಘನಘಂಟಾರುತಿ- ಆ ಹೆಚ್ಚಾದ ಗಂಟೆಯ ಶಬ್ದವು, ಎತ್ತಂ- ಯಾವ ಕಡೆಯಲ್ಲಿ, ಕೇಳಲ್ಆದಪುದು- ಕೇಳಲ್ಪಡುವದೋ, ಅತ್ತ- ಆ ಕಡೆಗೆ, ನೀಂ, ನೋಡು, ಎನೆ, ತತ್ಕಾಮಿನಿ, ಮೆಲ್ಲಗೆ, ಆಲಿಸಿ- ಕೇಳಿ, ತದೀಯಧ್ವಾನಮಂ- ಆ ಗಂಟೆಯ ಶಬ್ದವನ್ನು, ನೇರ್ಪುಗೊಂಡು- ನೇರವಾಗಿ, ಅನುಸಂಧಾನದೆ- ದಿವ್ಯಜ್ಞಾನಸಂಬಂಧದಿಂದ, ನೋಡಿ, ಅಭ್ರಾಂತರದೊಳ್- ಅಂತರಿಕ್ಷಮಧ್ಯದಲ್ಲಿ, ಇನತೇಜೋವಿಸ್ಫುರತ್ಪಾವನಾಂಗನಂ- ಸೂರ್ಯನ ಪ್ರಕಾಶದಂತಿರುವ ತೇಜಸ್ಸಿನಿಂದ ಪ್ರಕಾಶಿಸುವ ಪರಿಶುದ್ಧವಾದ ದೇಹವುಳ್ಳ, ಶಿವಾಧವದಯಾಸಂಪೃಕ್ತನಂ- ಪರಮೇಶ್ವರನ ಕೃಪೆ ಯೆಂಬ ನೀರಿನಿಂದ ನೆನೆಸಲ್ಪಟ್ಟ, ಭಕ್ತನಂ, ಕಂಡಳ್.

ಕಾಂತೆ, ಕಂಡು, ಅಧಿಕಸಂಭ್ರಮಮಂ, ಒಳಕೊಂಡು- ಹೊಂದಿ, ಅಚ್ಚರಿವಟ್ಟು, ಮಹೀಮಂಡಲ

ದೊಳ್ ಮೆಯ್ಯಿಕ್ಕಿ ಒಹಿಲಯ್ಯನ | ಕೊಂಡಾಡುತೆತನ್ನ ಗಂಡನೊಡನಿಂತೆಂದಳ್ ॥೧೫೭॥

ಚ॥ ಭಸಿತಮ ನೊಲ್ದು ಮೆಲ್ದು ತಪವಾಂತು ನಿಜಾಂಗತುಲಾರ್ಹಗುಗ್ಗುಳ | ಪ್ರಸರದಧೂಪವಿತ್ತು ಮಗುಳ್ದಂಗಮ ನಗ್ನಿಯೊಳಿಟ್ಟು ತತ್ಸುಗಂಧಿಸರಸಧೂಪವಮಂ ಸಲಿಸಿಮಚ್ಚಿಸಿ ಶಂಭುವ ನಾಗಣಂಗಳೊ | ಲ್ದೊಸಗೆಯ ನಾಳ್ದಿದಿರ್ನಡೆಯೆ ಪೋದಪ ನೀಶ್ವರಲೋಕ ಕೋಹಿಲಂ ॥ ... ... ... ... ... ॥೧೫೮॥

ಕಂ॥ ನಿಜಕಾಯಸಹಿತ ಮಿವನಂ | ತೆಜಗತ್ತ್ರಯದಲ್ಲಿ ವಹ್ನಿಯಂ ಜಯಿಸುತ್ತಂ | ಭುಜಗಾಭರಣನ ಭಕ್ತ | ವ್ರಜದೊಳ್ಕೈಲಾಸ ಕಿಂತು ನಡೆದರುಮೊಳರೆ ॥ ॥೧೫೯॥

ಕಂ॥ ನುಡಿದಂತೆ ನಡೆದು ತೋರಿದ | ಬೆಡಂಗ ನೋಹಿಲ ನಿವಂಗೆ ದೊರೆಯಾರೆನುತಂ | ನುಡಿಯೆ ನಿಜರಮಣಿಗರಸಂ | ಜಡಮತಿ ಕೇಳೆಂದು ನಗುತೆ ಮಗುಳ್ದಿಂತೆಂದಂ ॥ ॥೧೬೦॥

ಕಂ॥ ಹರಭಕ್ತರ್ಗಿದು ಗಹನಮೆ | ತರಳೆ ಶಿವೈಕ್ಯರ್ಕಳಿಂದೆ ಶಿಖಿ ಘನಮೆ ಮಹಾ | ಧ್ವರದೊಳ್ ಶಿಖಿ ಜಿಹ್ವೆಗಳಂ | ಕರಮುಮನೇಂ ಕಡಿದು ಮೆರೆಯನೇ ಗಣನೋರ್ವಂ ॥೧೬೧॥

ವ॥ ಮತ್ತಂ ॥ ಚಂ॥ ಪ್ರಲಯೋಗ್ರಜ್ವಾಲೆಯಂ ತಾಳನೆ ಗಣವರ ನೋರ್ವಂ ಲಲಾಟಾಕ್ಷಿಯೊಳ್ಗ | ಲ್ಗಲನೋರ್ವಂ ಬಾಡಬೋಷರ್ಬುಧನನಳಿಕದೊಳ್ಬಟ್ಟುಗೆಯಾದ್ದಗನೇ

---

ದೊಳ್- ಭೂಪ್ರದೇಶದಲ್ಲಿ, ಮೆಯ್ಯಿಕ್ಕಿ- ನಮಸ್ಕರಿಸಿ, ಒಹಿಲಯ್ಯನ, ಕೊಂಡಾಡುತೆ, ತನ್ನ, ಗಂಡನೊಡನೆ, ಇಂತು, ಎಂದಳ್. ... ... ... ... ... ॥೧೫೭॥

ಒಹಿಲಂ, ಒಲ್ದು, ಭಸಿತಮಂ, ಮೆಲ್ದು- ತಿಂದು, ತಪವಾಂತು, ನಿಜಾಂಗತುಲಾರ್ಹಗುಗ್ಗುಳಪ್ರಸರದ- ತನ್ನ ತೂಕಕ್ಕೆ ಸರಿಯಾದ ಗುಗ್ಗುಳದ ಸಮೂಹದ, ಧೂಪಮಿತ್ತು, ಮಗುಳ್ದು- ಪುನಃ, ಅಗ್ನಿಯೊಳ್, ಅಂಗಮಂ- ತನ್ನ ದೇಹವನ್ನು, ಇಟ್ಟು, ತತ್ಸುಗಂಧಸರಸಧೂಪಮಂ- ಆ ದೇಹದ ಪರಿಮಳದಿಂ ಮನೋಹರವಾದ ಧೂಪವನ್ನು, ಸಲಿಸಿ- ಸಮರ್ಪಿಸಿ, ಶಂಭುವಂ, ಮೆಚ್ಚಿಸಿ, ಆಗಣಂಗಳ್, ಒಲ್ದು, ಒಸಗೆಯಂ-ಉತ್ಸವವನ್ನು, ಆಳ್ದು, ಇದಿರ್ನಡೆಯೆ-ಮುಂಗಡೆಯಲ್ಲಿಹೋಗುತ್ತಿರಲು, ಈಶ್ವರಲೋಕಕೆ, ಪೋದಪಂ.

ಜಗತ್ತ್ರಯದಲ್ಲಿ- ಸ್ವರ್ಗ ಮರ್ತ್ಯ ಪಾತಾಳಗಳಲ್ಲಿ, ಭುಜಗಾಭರಣನ, ಭಕ್ತವ್ರಜದೊಳ್, ಇವನಂತೆ, ವಹ್ನಿಯಂ- ಬೆಂಕಿಯನ್ನು, ಜಯಿಸುತ್ತಂ, ನಿಜಕಾಯಸಹಿತಂ- ತನ್ನ ದೇಹದೊಡನೆ, ಕೈಲಾಸಕ್ಕೆ, ಇಂತು, ನಡೆವರುಂ- ಹೋಗತಕ್ಕವರೂ, ಒಳರೆ- ಉಂಟೆ ? ... ... ... ॥೧೫೯॥

ಒಹಿಲಂ, ನುಡಿದಂತೆ- ಬಾಯಲ್ಲಿ ಹೇಳಿದಹಾಗೆ, ನಡೆದು, ಬೆಡಂಗುಂ- ವಿಲಾಸವನ್ನು, ತೋರಿದ; ಇವಂಗೆ, ದೊರೆ- ಸಮಾನನು, ಆರ್ ? ಎನುತಂ, ನುಡಿಯೆ, ಅರಸಂ, ಜಡಮತಿ- ಮೂಢಬುದ್ಧಿಯುಳ್ಳವಳೇ ! ಕೇಳ್, ಎಂದು, ನಗುತೆ, ನಿಜರಮಣಿಗೆ- ತನ್ನ ಹೆಂಡತಿಗೆ, ಮಗುಳ್ದು, ಇಂತು, ಎಂದಂ. ॥೧೬೦॥

ತರಳೆ ! ಹರಭಕ್ತರ್ಗೆ, ಇದು, ಗಹನಮೆ- ಅಸಾಧ್ಯವೇ ? ಶಿವೈಕ್ಯರ್ಕಳಿಂದೆ- ಪರಶಿವನೊಡನೆ ಸಾಮರಸ್ಯವಂ ಹೊಂದಿರುವವರಿಗಿಂತಲೂ, ಶಿಖಿ- ಬೆಂಕಿಯು, ಘನಮೆ- ದೊಡ್ಡದೆ ? ಮಹಾಧ್ವರದೊಳ್- ದೊಡ್ಡ ದಕ್ಷಬ್ರಹ್ಮನ ಯಜ್ಞದಲ್ಲಿ, ಓರ್ವಂಗಣಂ, ಶಿಖಿಜಿಹ್ವೆಗಳಂ- ಅಗ್ನಿಯ ನಾಲಿಗೆಗಳನ್ನು, ಕರಮುಮಂ- ಹಸ್ತವನ್ನೂ, ಕಡಿದು, ಮೆರೆಯನೇಂ ? ... ... ... ... ॥೧೬೧॥

ಓರ್ವಂಗಣವರಂ, ಲಲಾಟಾಕ್ಷಿಯೊಳ್- ಹಣೆಗಣ್ಣಿನಲ್ಲಿ, ಪ್ರಲಯೋಗ್ರಜ್ವಾಲೆಯಂ-ಪ್ರಳಯಕಾಲದಲ್ಲಿರುವಂತೆ ಭಯಂಕರವಾದ ಅಗ್ನಿಯನ್ನು, ತಾಳನೆ ? ಓರ್ವಂಗಲ್ಗಲಂ, ಬಾಡಬೋಷರ್ಬುಧನಂ- ಬಡಬಾಗ್ನಿಯನ್ನು, ಬೊಟ್ಟುಗೆಯ್ದು- ತಿಲಕವನ್ನಾಗಿ ಮಾಡಿ, ಅಳಿಕದೊಳ್- ಹಣೆಯಲ್ಲಿ, ಆಸನೆ- ಧರಿಸಲಿಲ್ಲವೇ ? ನಿಶ್ಚಳಬೆ

ನಿ ॥ ಶ್ಚಳಚಿತ್ತಂ ದಾಸಿಮಯ್ಯಂ ತಳೆಯನೆ ಪಣೆಗಣ್ಣೊಳ್ಮಹಾವಹ್ನಿಯಂಮಂ । ಜುಲವೃ ತ್ತಂವಾದದೊಳ್ಪಾವಕನ ವಸನದೊಳ್ಕಟ್ಟನೇಪಂಡಿತಾರ್ಯಂ॥ ... ॥೧೬೨॥

ಕಂ॥ ಏಗೆಯ್ದುದಾವರಿಸಿ ಶಿಖಿ । ಯೋಗೀಶ ವ್ಯಾಘ್ರಪಾದಸುತನಂ ಜ್ವಳನಂ ॥ ವಾ ಗೀಶಂಗೆ ಸರೋವರ । ಮಾಗದೆ ಶಿವಭಕ್ತವಿತತಿಗಂಜುಗುಮನಲಂ ॥ ... ॥೧೬೩॥

ವ ॥ ಅಂತುಮಲ್ಲದೆಯುಮವಂ ನಿಜಾಂಗಮಂ ಮಹಿಷಾಕ್ಷಿಗುಗ್ಗುಳಂಗೆಯ್ದನೆಂದು ಪೊಗಳ್ವ ಯಪ್ಪೊಡೆ ॥ * * * * * * * * * * * * *

ಉ ॥ ದಾಸಯ ನಾತ್ಮಜಾತಕರದಿಂದೆ ತುಡುಂಕಿಸಿ ಪುತ್ತಪಾವನು । ಲ್ಲಾಸದೆ ಪೊ ನ್ನನೇವಳಮ ನಾಗಿಸನೇ ಕೊರೆದಿಕ್ಕಿಖಂಡಮಂ ॥ ಸಾಸಿಗಮಾಚನಗ್ನಿಯೊಳೆ ಗುಗ್ಗುಳಮಂ ಮಿಗೆ ಮಾಡನೇ ಗಣಾ। ಗ್ರೇಸರನಿಂತುಮಪ್ಪರೊಳರೀ ಧರೆಯೊಳ್ಪಲರುನ್ನತವ್ರತರ್॥೧೬೪॥

ಮ ॥ ಮಿಸುಪೆಂಭತ್ತುಸಹಸ್ರವಾಜಿಗೆ ಲಸದ್ರುದ್ರಾಕ್ಷಿಯಿಂ ಪಕ್ಷರ। ಕ್ಷೆಸಮಂ ತೊ ಪ್ಪಿರೆಚೇರಮಕ್ಷಿತಿಪ ನಾಕಾಶಕ್ಕೆ ಧೀಂಕಿಟ್ಟು ವಾ ॥ ಜಿಸಮೇತಂ ಸುರರಳ್ಕೆ ನಿರ್ಭರದೆ ಕೈ ಲಾಸಕ್ಕೆಧಾಳಿಟ್ಟ ನಂ । ದು ಸತೀಬಂಧುಸಖಾಳಿಗೂಡಿ ಶಿವಲೋಕಂಬೊಕ್ಕ ನಾಸೌಂದರಃ॥

ಕಂ॥ ಮಗಳಳಿಯ ನಾತ್ಮವಲ್ಲಭೆ। ನೆಗಳ್ದೊಡವರೆ ಮಾನಕಂಡನೈದನೆತಾರಾ ॥ ನಗ

---

ತ್ತಂ, ದಾಸಿಮಯ್ಯಂ- ಶಂಕರದಾಸಾರ್ಯನು, ಪಣೆಗಣ್ಣೊಳ್, ಮಹಾವಹ್ನಿಯಂ, ತಳೆಯನೆ ? ಮಂಜುಲ ವೃತ್ತಂ- ಮನೋಹರವಾದ ನಡತೆಯುಳ್ಳ, ಪಂಡಿತಾರ್ಯಂ, ವಾದದೊಳ್- ಸಿದ್ಧಾಂತವಂ ಸ್ಥಾಪಿಸುವಕಾಲದ ಲ್ಲಿ, ಪಾವಕನ- ಅಗ್ನಿಯನ್ನು, ವಸನದೊಳ್- ಬಟ್ಟೆಯಲ್ಲಿ, ಕಟ್ಟನೇ ? ... ॥೧೬೨॥

ಯೋಗೀಶವ್ಯಾಘ್ರಪಾದಸುತನಂ- ಋಷಿಶ್ರೇಷ್ಠರಾದ ವ್ಯಾಘ್ರಪಾದರ ಕುಮಾರನನ್ನು, ಶಿಖಿ- ಬೆಂ ಕಿಯು, ಆವರಿಸಿ, ಏಗೆಯ್ದುದು- ಏನುಮಾಡಿತು ? ವಾಗೀಶಂಗೆ, ಜ್ವಳನಂ- ಬೆಂಕಿಯು, ಸರೋವರಂ ಆಗದೆ ? ಅನಲಂ, ಶಿವಭಕ್ತವಿತತಿಗೆ, ಅಂಜುಗುಂ. ... ... ... ॥೧೬೩॥

ಅಂತುಂ, ಅಲ್ಲದೆಯುಂ, ಅವಂ, ನಿಜಾಂಗಮಂ, ಮಹಿಷಾಕ್ಷಿಗುಗ್ಗುಳಂಗೆಯ್ದಂ, ಎಂದು, ಪೊಗಳ್ವ ಯಪ್ಪೊಡೆ- ಹೊಗಳುವೆಯಾದರೆ. * * * * * * * * * * * * *

ದಾಸಯುಂ, ಆತ್ಮಜಾತಕರದಿಂದೆ-ತನ್ನ ಮಗನ ಕೈಯ್ಯಿಂದ, ಪುತ್ತ- ಹುತ್ತದಲ್ಲಿದ್ದ, ಪಾವಂ, ತುಡುಂಕಿ ಸಿ- ಹಿಡಿಸಿ, ಉಲ್ಲಾಸದೆ, ಪೊನ್ನ- ಚಿನ್ನದ, ನೇವಳಮಂ- ಮಾಲಿಕೆಯನ್ನು, ಆಗಿಸನೆ- ಮಾಡಲಿಲ್ಲವೇ ? ಸಾಸಿಗಮಾಚಂ- ಸಾಹಸವಂತನಾದ ಮಾಚಯ್ಯನು, ಖಂಡಮಂ- ಮಾಂಸವನ್ನು, ಕೊರೆದು- ಕತ್ತರಿಸಿ, ಅ ಗ್ನಿಯೊಳೆ, ಇಕ್ಕಿ, ಮಿಗೆ, ಗುಗ್ಗುಳಮಂ, ಮಾಡನೇ ? ಈಧರೆಯೊಳ್, ಇಂತುಮಪ್ಪರ್- ಈಪ್ರಕಾರರಾದ, ಉನ್ನತವ್ರತರ್, ಪಲರ್- ಅನೇಕರು, ಒಳರ್. ... ... ... ॥೧೬೪॥

ಚೇರಮಕ್ಷಿತಿಪಂ- ಚೇರಮನೆಂಬ ರಾಜನು, ಮಿಸುಪ, ಎಂಭತ್ತುಸಹಸ್ರವಾಜಿಗೆ- ಎಂಭತ್ತು ಸಾವಿರ ಕುದುರೆಗಳಿಗೆ, ಲಸದ್ರುದ್ರಾಕ್ಷಿಯಿಂ, ಪಕ್ಷರಕ್ಷೆ- ಜೀನುಗಳು, ಸಮಂತು- ಚೆನ್ನಾಗಿ, ಒಪ್ಪಿ, ಇರೆ, ವಾಜಿಸ ಮೇತಂ, ಆಕಾಶಕ್ಕೆ, ಧೀಂಕಿಟ್ಟು- ನೆಗೆದು, ಸುರರ್, ಅಳ್ಕೆ- ಭಯಪಡಲು, ಅಂದು, ಕೈಲಾಸಕ್ಕೆ, ಧಾಳಿ ಟ್ಟಂ- ಲಗ್ಗೆಹತ್ತಿದನು, ಆಸೌಂದರಂ, ಅಂದು, ಸತೀಬಂಧುಸಖಾಳಿಗೂಡಿ- ಹೆಂಡತಿ ನೆಂಟರು ಆಪ್ತರುಗ ಳೊಡನೆ ಕೂಡಿ, ಶಿವಲೋಕಂಬೊಕ್ಕಂ. ... ... ... ... ॥೧೬೫॥

ಮಾನಕಂಜಂ, ಮಗಳ್, ಅಳಿಯಂ, ಆತ್ಮವಲ್ಲಭೆ- ತನ್ನ ಹೆಂಡತಿ, ನೆಗಳ್ದ, ಒಡವರೆ- ಜೊತೆಯಲ್ಲಿ ಬರಲು, ತಾರಾನಗಮಂ- ಕೈಲಾಸಪರ್ವತವನ್ನು, ಏದನೆ ? ಮಲಯರಾಜಂ, ಪರಿಜನಸಹಿತಂ, ಈಶ್ವರಪುರ

ವಾಪರಿ ಜನಸಹಿತಂ । ಪುಗನೆ ವಲಂ ಮಹಿಯರಾಜ ನೀಶ್ವರಪುರಮಂ ॥ ||೧೬೬||

ಮ ॥ ಸ್ರ ॥ ಹರನೊಳ್ ಪೌರಪ್ರಯುಕ್ತಂ ಪುಗನ ಘನತಿರುಜ್ಞಾನಸಂಬಂಧ ಸಿಂ ತಾ । ದ್ಯರ ನಂತರ್ಪೋದ ರೀಶ್ವರಪುರ ಕಿವನೇವಾಳ್ತೆ ತಾನೊರ್ವನೇ ಪೋ ॥ ಪಿರ ವಿಂಗೇ ರೀತುಟೀಸಂಭ್ರಮ ಮಮಮ ಮಹಾಘಂಟೆಯಂ ಬಾಜಿಸುತ್ತಂ । ಭರದಿಂ ಪೋದ ಪ್ಪನೆಂತೆಲ್ಲದೆ ಮರೆಯದೆ ಪೇಳ್ತನ್ನ ಪೆಂಪಂಬುಜಾಕ್ಷಿ ॥ ... ... ||೧೬೭||

ವ ॥ ಎಂದರಸ ನೋಹಿಲಯ್ಯಂಗೆ ಪೇರ್ಮೆಯಂ ತಗುಳ್ಚಿ ನೀಂ ಮಿಗೆ ಪೊಗಳ್ವುದ ನುಚಿತ ಮಕ್ಕುಂ ಮೆಂದೇಳಿದಂ ಗೆಯ್ವ ವಲ್ಲಭನ ನುಲ್ಲಂಘಿಸಿ ತಿರಸ್ಕರಣಂಗೆಯ್ದರಸಿ ಯಿಂ ತೆಂದಳ್ ॥ * * * * * * * * *

ಮತ್ತೇ ॥ ಅವನೆಂದುಂ ಜಿತಕಾಮ ನುರ್ವಿಪ ವಲಂ ನೀಂ ಕಾಮಿ ಸಂಸಾರಬಂ। ಧವಿಮು ಕ್ತಂ ನೆಗಳ್ದ ಮಹಾಸುಮತಿ ನೀಂ ಸಂಸಾರಯುಕ್ತಂ ಸದಾ ॥ ಶಿವಪೂಜಾಭಿರತಂಗಡಾ ತ ನೆಲೆ ನೀಂ ದ್ಯೂತಾನುರಕ್ತಂ ಗಣ । ಪ್ರವರಂ ಯೋಗಿಯವಂ ನರಾಧಿಪ ನಿತಾಂತಂ ಭೋಗಿ ನೀಂ ಧಾತ್ರಿಯೊಳ್ ॥ ... .. .. ... ... ||೧೬೮||

ಕಂ ॥ ಅಕ್ಕಟ ನಿನ್ನಿರ ವರಿಯದೆ । ಮುಕ್ಕಣ್ಣನಭಕ್ತವರ್ಯ ನೆನಿಪೋಹಿಲನಂ । ಟಿಕ್ಕರಿಗಳೆದಪೆ ನಿನಗೇಂ । ತಕ್ಕುದೆ ಪೇಳ್ನೃಪತಿ ನಿನ್ನ ನೇನಂದಪುದೋ ॥ ||೧೬೯||

---

ಹುಂ, ವಲಂ- ನಿಶ್ಚಯವಾಗಿ, ಪುಗನೆ ? ... ... ... ... ||೧೬೬||

ಅಂಬುಜಾಕ್ಷಿ ? ಘನತಿರುಜ್ಞಾನಸಂಬಂಧಂ, ಪೌರಪ್ರಯುಕ್ತಂ- ಪಟ್ಟಣದ ಜನಗಳೊಡನೆ ಕೂಡಿ, ಹರನೊಳ್, ಪುಗನೆ ? ಇಂತು, ಆದ್ಯರ್, ಅನಂತರ್- ಅನೇಕರು, ಈಶ್ವರಪುರಕೆ, ಪೋದರ್, ಉಂಟು, ಇವಂ, ಈವಾಳ್ತೆ- ಏನುವಾರ್ತೆ ? ತಾಂ, ಓರ್ವನೇ, ಪೋಪ, ಇರವಿಂಗೆ- ರೀತಿಗೆ, ಇಂತುಟು- ಹೀಗೆ, ಈ ಸಂಭ್ರಮಂ, ಏಕೆ ? ಅಮಮ ! ಮಹಾಘಂಟೆಯಂ, ಬಾಜಿಸುತ್ತಂ, ಭರದಿಂ, ಪೋದಪ್ಪಂ, ಅಂತುಅಲ್ಲದೆ, ತನ್ನ, ಪೆಂಪು-ಅತಿಶಯವು, ಮರೆಯದೆ ? ಪೇಳ್, ... ... ... ||೧೬೭||

ಎಂದು, ಅರಸಂ, ಓಹಿಲಯ್ಯಂಗೆ, ಪೇರ್ಮೆಯಂ- ಅತಿಶಯವನ್ನು, ತಗುಳ್ಚಿ- ಸಂಬಂಧಿಸಿ, ನೀಂ, ಮಿಗೆ, ಪೊಗಳ್ವುದು, ಅನುಚಿತಂ, ಅಕ್ಕುಂ, ಎಂದು, ಏಳ್ದಂಗೆಯ್ಯೆ- ತಿರಸ್ಕರಿಸಲು, ಅರಸಿ, ವಲ್ಲಭನ, ನುಡಿಯಂ, ಉಲ್ಲಂಘಿಸಿ- ಮೀರಿ, ತಿರಸ್ಕರಣಂಗೆಯ್ದು, ಇಂತು,ಎಂದಳ್ * * * * * * *

ಉರ್ವಿಪ ! ಧಾತ್ರಿಯೊಳ್, ಅವಂ- ಓಹಿಲಯ್ಯನು, ಎಂದುಂ, ಜಿತಕಾಮಂ- ಜೈಸಲ್ಪಟ್ಟ ವಿಷಯೇಚ್ಛೆಯುಳ್ಳವನು, ನೀಂ, ವಲಂ- ನಿಶ್ಚಯವಾಗಿ, ಕಾಮಿ, ನೆಗಳ್ದ, ಅಮಹಾಸುಮತಿ, ಸಂಸಾರಬಂಧವಿಮುಕ್ತಂ, ನೀಂ, ಸಂಸಾರಯುಕ್ತಂ, ಆತಂ, ಸದಾ, ಶಿವಪೂಜಾಭಿರತಂಗಡ- ಶಿವನ ಪೂಜೆಯಲ್ಲಿ ಆಸಕ್ತಿಯುಳ್ಳವನಲ್ಲವೇ ? ಎಲೆ ! ನೀಂ, ದ್ಯೂತಾನುರಕ್ತಂ- ಜೂಜಿನಲ್ಲಿ ಆಸೆಯುಳ್ಳವನು, ಗಣಪ್ರವರಂ- ಶಿವಗಣಂಗಳಲ್ಲಿ ಶ್ರೇಷ್ಠನಾದ, ಅವಂ- ಯೋಗಿ- ಸನ್ಯಾಸಿಯು, ನರಾಧಿಪ ! ನೀಂ, ಭೋಗಿ- ಸ್ವಚ್ಛಂದನವನಿತಾದಿಸೌಖ್ಯವುಳ್ಳವನು. ... ... ... ... ... ||೧೬೮||

ನೃಪತಿ ! ಅಕ್ಕಟ ! ನಿನ್ನ, ಇರವರಿಯದೆ- ರೀತಿಯನ್ನು ತಿಳಿಯದೆ, ಮುಕ್ಕಣ್ಣನ- ಮೂರುಕಣ್ಣುಳ್ಳ ಶಿವನ, ಭಕ್ತವರ್ಯಂ, ಎನಿಪ, ಓಹಿಲನಂ, ಟಿಕ್ಕರಿಗಳೆದಪೆ-ತಿರಸ್ಕಾರಮಾಡುವೆ, ನಿನಗೆ, ತಕ್ಕುದೇಂ-ಯೋಗ್ಯವೇ ? ಪೇಳ್, ನಿನ್ನಂ, ಏನೆಂದಪುದೋ- ಏನುಹೇಳುವೆದೋ ! ... ... ||೧೬೯||

ವ ॥ ಎಂದಾಮಹಾಮಹಿಮನಂ ಲಘುಮಾಡಿ ನುಡಿಯದಿರೆಂಬ ನಲ್ಲಳ ನುಡಿಗೆ ನರೇಂದ್ರಂ ಮುಗುಳ್ನಗೆನಕ್ಕು ॥ * * * * * * *

ಕಂ॥ ಆ ನೆಂದ ಭಕ್ತಿಮರ್ಮನ । ವೀನೋಕ್ತಿಯ ಪುರುಳ್ನವಮಳಭಕ್ತರ ಬಗೆಯಂ ॥
ನೀನರಿಯದುಲಿವೆ ಕೇಳೆಲೆ। ಮಾನಿನಿ ಹರಶರಣ ಬಳವದೇಂ ಕೇವಲಮೇ ॥ ... ॥೧೨೦॥

ಕಂ॥ ಕಾಮಿನಿಯ ಸಂಗಮಮರ್ದಿರೆ। ಕಾಮಿಯೆ ಶರಣಂ ವರಾಂಗಿ ಸೌಂದರ ನೆಂದುಂ॥
ಕಾಮಿನಿಯೊಡವೆರೆದಿರ್ದಂ । ಕಾಮಿಯೆ ಕಾಮಾರಿ ಕಾಮಿಗಂತೊಲ್ದಪನೋ ॥ ॥೧೨೧॥

ಕಂ ॥ ಲಲನಾರತಿಯುತನಂಬಿಯೊ । ಳಲದೊಡನಾಡಿದವ್ರೊ ಲಂಗಜಾಂತಕ ನೆಂದುಂ ॥
ಸಿಲೆಯುಂ ತರಗೆಲೆಯುಂ ಮೆ । ಲ್ದೊಲವಿಂ ತಪವಾಂತ ಜತಿಗಳೊಡನಾಡಿದನೇ ॥ ॥೧೨೨॥

ಕಂ॥ ತ್ರಿವಿಧಶಿವಪೂಜೆಗೆಯ್ವೊಡೆ । ಯುವತಿಧನಂ ಧಾನ್ಯ ಮಿಳೆಯುಂ ಮಿಲ್ಲದಡೇಂಸಂ॥
ಭವಿಪುದೆ ಭೂಪಾಲತ್ವಂ । ಶಿವಭಕ್ತಿಗೆ ಪೊರಗೆ ಪೇಳ್ಮೃಗಾಯುತನಯನೇ॥ ॥೧೨೩॥

ಕಂ ॥ ಕರಿಕಾಲಚೋಳ ನಾಭೂ । ವರಚೋಳಂ ವೀರಚೋಳ ವಿಕ್ರಮಚೋಳ ॥
ರ್ಮರವೂರಚೋಳ ನುತ್ತುಂ । ಗರಮಾಕರಚೋಳ ನವನಿಪಾಧಿಪಚೋಳಂ ॥ ॥೧೨೪॥

ಕಂ ॥ ಇವರಾದಿಯಾದ ಪಲಕೆಲ । ರವನೀಶರ್ಶಿವನೊಳೊಲ್ದು ಬೆರಸಿದ ರೊಳರೇ ॥

---

ಎಂದು, ಆ ಮಹಾ ಮಹಿಮನಂ, ಲಘುಮಾಡಿ- ಅಗೌರವವಾಗಿ, ನುಡಿಯದೆ, ಇರ್, ಎಂದ, ನಲ್ಲಳ- ಪ್ರಿಯೆಯ, ನುಡಿಗೆ, ನರೇಂದ್ರಂ, ಮುಗುಳ್ನಗೆನಕ್ಕು. * * * * * * * * * *

ಎಲೆ ಮಾನಿನಿ! ಆಂ ಎಂದ- ಆಡಿದ, ಭಕ್ತಿಮರ್ಮನವೀನೋಕ್ತಿಯ,-ಶಿವಭಕ್ತಿಯಗುಟ್ಟಿನ ಹೊಸಮಾತಿನ, ಪುರುಳಂ- ಸ್ಥಿರಾಂಶವನ್ನು, ಅಮಳಭಕ್ತರ- ಬಗೆಯಂ, ನೀಂ, ಅರಿಯದೆ, ಉಲಿವೆ- ಕೂಗುವೆ, ಹರಶರಣರ, ಬಳವು- ಶಕ್ತಿಯು ಅದು, ಕೇವಲಮೇಂ- ಸಾಮಾನ್ಯವೇ? ಪೇಳ್. ... ... ॥೧೨೦॥

ವರಾಂಗಿ- ಶ್ರೇಷ್ಠವಾದ ಅವಯವವುಳ್ಳವಳೇ! ಕಾಮಿನಿಯ, ಸ್ತ್ರೀಯ, ಸಂಗಂ- ಸಂಬಂಧವು, ಅಮರ್ದು- ಪ್ರಾಪ್ತವಾಗಿ, ಇರೆ, ಶರಣಂ, ಕಾಮಿಯೆ- ವಿಷಯೇಚ್ಛೆಯುಳ್ಳವನೇ? ಸೌಂದರಂ-ಸೌಂದರನಂಬ್ಯಣ್ಣನು, ಎಂದುಂ- ಯಾವಾಗಲೂ, ಕಾಮಿನಿಯ, ಒಡವೆರೆದು- ಜೊತೆಯಲ್ಲಿ ಸೇರಿ, ಇರ್ದಂ, ಕಾಮಿಯೆ? ಕಾಮಾರಿ- ಮನ್ಮಥನಿಗೆ ಶತ್ರುವಾದ ಶಿವನು, ಕಾಮಿಗೆ- ಕಾಮವುಳ್ಳವನಿಗೆ, ಎಂತು ಒಲ್ದನೋ? ॥೧೨೧॥

ಅಂಗಜಾಂತಕಂ- ಮದನನಾಶಕನಾದ ಶಿವನು, ಲಲನಾರತಿಯುತ ನಂಬಿಯೊಳ್- ಸ್ತ್ರೀಮೇಲಣ ಆಸಕ್ತಿಯಿಂ ಕೂಡಿದ ನಂಬ್ಯಣ್ಣನೊಡನೆ, ಅಲದು- ಸಂತೋಷದಿಂದುಬ್ಬಿ, ಒಡನೆ, ಆಡಿದವ್ರೊಲ್, ಎಂದುಂ-ಯಾವಾಗಲೂ, ಸಿಲೆಯಂ- ಕಲ್ಲನ್ನು, ತರಗೆಲೆಯುಂ, ಮೆಲ್ದು- ತಿಂದು, ಒಲವಿಂ- ತಪವಾಂತ, ಜತಿಗಳ- ತಪಸ್ವಿಗಳ, ಒಡನೆ, ಆಡಿದನೇ ? ... ... ... ॥೧೨೨॥

ಮೃಗಾಯುತನಯನೆ- ಜಿಂಕೆಯಕಣ್ಣಿನಂತೆದೀರ್ಘವಾದ ಕಣ್ಣುಳ್ಳವಳೇ! ತ್ರಿವಿಧಶಿವಪೂಜೆಗೆಯ್ವೊಡೆ- ಗುರುಲಿಂಗಜಂಗಮಾತ್ಮಕವಾದ ತ್ರಿಲಿಂಗಪೂಜೆಯಂಮಾಡಬೇಕಾದರೆ, ಯುವತಿ- ಸ್ತ್ರೀ, ಧನಂ, ಧಾನ್ಯಂ, ಇಳೆಯುಂ-ಭೂಮಿಯು, ಇಲ್ಲದೆ, ಅದು, ಸಂಭವಿಪುದೇಂ-ಪ್ರಾಪ್ತವಾಗುವದೇ? ಭೂಪಾಲತ್ವಂ-ದೊರೆತನವು, ಶಿವಭಕ್ತಿಗೆ, ಪೊರಗೇಂ- ಹೊರಗಾದದ್ದೇ? ಪೇಳ್. ... ... ॥೧೨೩॥

ಕರಿಕಾಲಚೋಳನು, ಆ ಭೂವರಚೋಳಂ, ವೀರಚೋಳ ವಿಕ್ರಮಚೋಳರ್, ಉತ್ತುಂಗರಮಾಕರಚೋಳಂ- ಉತ್ಕೃಷ್ಟವಾದ ಸಂಪತ್ತಿಗಗಾಶ್ರಯನಾದ ಚೋಳನು, ಅವನಿಪಾಧಿಪಚೋಳಂ. ॥೧೨೪॥

ಇವರ್, ಆದಿ, ಆದ, ಪಲಕೆಲರ್, ಶಿವನೊಳ್, ಒಲ್ದು, ಬೆರಸಿದರ್- ಐಕ್ಯರಾದ, ಅವನೀಶರ್.. ರಾಜ

ಭುವನದೊಳ್ ಜೂದು ನಿಂದ್ಯಮೆ । ಶಿವಾರ್ಪಿತಾಖಿಳವಿನೋದರಸಿಕರ್ಗ್ಗಬಲೆ ॥ ॥೧೩೫॥

ಮ ॥ ಸ್ರ ॥ ಧರೆಯೊಳ್ ದ್ಯೂತಾರ್ಜ್ಜಿತದ್ರವ್ಯದೆ ಸಲೆ ಚರಲಿಂಗಾರ್ಚ್ಚನಂಗೆಯ್ವುವ್ರತಂ

ಶಂ । ಕರ ನೋಳ್ಪಂದೋರ್ಮೆ ಜೂದಾಡುತೆ ಬಹುಧನಮಂ ಸೋಲ್ತು ತಾ ಸೀಯದಿರ್ದ್ದಂ ॥ ದ

ರಡುಂ ಕಾಲಂ ಶಿರೋವೇಷ್ಟ್ಯದೊಳ್ ಬಿಗಿದು ಕಟ್ಟುತ್ತೆ ಕೊಂಡಚ್ಚಪೊನ್ನಂ । ಹರಭಕ್ತ

ರ್ಗ್ಗಿತ್ತು ಕೂರ್ಪಿಂ ದೊಲಿಸಿ ಬೆರಸನೇ ಶಂಭುವಂ ಮೂರ್ಖನಾಥಂ॥ ... ॥೧೩೬॥

ಕಂ॥ ಸಲೆ ಜೂದಾಳಿ ಯೆನುತ್ತಂ । ಮಲಹರ ನಾಮೂರ್ಖನಾಥನಂ ತೊರೆದನೆ ಪೇಳ್॥

ಜಲಜಾಕ್ಷಿ ಭಕ್ತಿರಸನಿ । ಶ್ಚಲ ನಾವುದ ನೆಸಪ ನದೆ ಶಿವಂ ಗನುಕೂಲಂ॥ ... ॥೧೩೭॥

ಕಂ ॥ ವಿತತಶಿವಾನರ್ಪಿತಸುಖ । ರತಿ ಸುಸ್ಸೃತಿಬಂಧ ಮಬಲೆ ಸಂತತಲಿಂಗಾ ॥ ರ್ಪಿತ

ತತ್ಪ್ರಸಾದಸುಖದಭಿ । ರತಿ ಸಂಸ್ಸೃತಿಬಂಧಮುಕ್ತಿ ಯೆಂಬುದು ಸತ್ಯಂ ॥ ॥೧೩೮॥

ಕಂ ॥ ರಸನೆಯು ನೆ ಯ್ನವಕಜ್ಜ್ಜಳ । ರಸ ಮಕ್ಷಿಯು ಸಮದುರ್ಪ ಪತ್ತುಗುಮೆ ಪರಿ

ಕಿಪೊಡೀ ॥ ರಸೆಯೊಳ್ ಸುಸ್ಸೃತಿಬಂಧು । ಸಸಿದಲೆಯನ ಶರಣತತಿಯು ನೇನಂಟುಗುಮೇ ।

ಕಂ ॥ ತನುಕರಣಮನಃಪ್ರಾಣದಿ । ನನಿಶಂ ಪರಶಿವನ ನಪ್ಪಿ ಬೆರಸಿದ ನಬ್ಜಾ ॥ ನನೆ

---

ರು, ಒಳರ್- ಉಂಟು; ಅಬಲೆ? ಈ ಭುವನದೊಳ್, ಶಿವಾರ್ಪಿತಾಖಿಳವಿನೋದರಸಿಕರ್ಗೆ- ಪರಮೇಶ್ವರನಿಗೋ ಸ್ಕರ ಸಮರ್ಪಿಸಲ್ಪಟ್ಟಿರುವ ಸಕಲವಿನೋದಗಳ ಸೌಖ್ಯವುಳ್ಳವರಿಗೆ, ಜೂದು, ನಿಂದ್ಯಮೆ- ದೂಷ್ಯವೇ?

ಧರೆಯೊಳ್, ಮೂರ್ಖನಾಥಂ, ದ್ಯೂತಾರ್ಜಿತದ್ರವ್ಯದೆ-ಜೂದಿನಿಂದ ಸಂಪಾದಿಸಿದ ಹಣದಿಂದ, ಸಲೆ,ಚ ರಲಿಂಗಾರ್ಚನಂಗೆಯ್ವುವ್ರತಂ- ಜಂಗಮಪೂಜೆಯನ್ನು ಮಾಡುತ್ತ, ಒರ್ಮೆ- ಒಂದಾವರ್ತಿ, ಶಂಕರಂ, ಎಳ್ತಂದು, ಜೂದಾಡುತೆ, ಬಹುಧನಮಂ, ಸೋಲ್ತು, ತಾಂ- ಶಿವನು, ಈಯದೆ-ಕೊಡದೆ, ಇರ್ದಂದು-ಇದ್ದಾಗ, ಎರಡು ಕಾಲಂ, ಶಿರೋವೆಷ್ಟ್ಯದೊಳ್- ತಲೆಗೆಸುತ್ತುವ ಬಟ್ಟೆಯಿಂದ, ಕಟ್ಟುತ್ತೆ, ಅಚ್ಚಪೊನ್ನಂ- ನಿರ್ಮಲವಾದ ಹಣ ವನ್ನು, ಕೊಂಡು, ಹರಭಕ್ತರ್ಗೆ, ಇತ್ತು, ಕೂರ್ಪಿಂದೆ- ಪ್ರೀತಿಯಿಂದ, ಶಂಭುವಂ, ಒಲಿಸಿ, ಬೆರಸನೆ?

ಜಲಜಾಕ್ಷಿ- ಕಮಲನೇತ್ರೆಯೇ! ಮಲಹರಂ-ಶಿವನು, ಆಮೂರ್ಖನಾಥನಂ, ಸಲೆ-ಅಧಿಕವಾಗಿ, ಜೂದಾ ಳಿ- ಜೂಜಾಡುವವನು, ಎನುತ್ತಂ, ತೊರೆದನೆ- ಬಿಟ್ಟನೇ? ಪೇಳ್, ಭಕ್ತಿರಸನಿಶ್ಚಲಂ- ಭಕ್ತಿಗುಣದಿಂದ ಚಲಿ ಸದೇ ಇರುವವನು, ಆವುದಂ- ಯಾವಕಾರ್ಯವನ್ನು, ಎಸಪಂ? ಅದೆ, ಶಿವಂಗೆ, ಅನುಕೂಲಂ- ಹಿತವಾದದ್ದು.

ಅಬಲೆ! ವಿತತಶಿವಾನರ್ಪಿತಸುಖರತಿ- ಶಿವನಿಗೆ ಸಮರ್ಪಿಸಲ್ಪಡದೇಇರುವ ವಿಸ್ತಾರವಾದ ಸೌಖ್ಯದಲ್ಲಿ ಆಸಕ್ತಿಯು, ಸಂಸ್ಸೃತಿಬಂಧಂ- ಸಂಸಾರದ ತೊಡಕು, ಸಂತತಲಿಂಗಾರ್ಪಿತತತ್ಪ್ರಸಾದಸುಖದ- ಯಾವಾಗ ಲೂ ಶಿವನಿಗೆ ಸಮರ್ಪಿಸಲ್ಪಟ್ಟು ಅವನ ಪ್ರಸಾದರೂಪವಾದ ಸೌಖ್ಯದ, ಅಭಿರತಿ- ಆಸಕ್ತಿಯು, ಸಂಸ್ಸೃತಿ ಬಂಧಮುಕ್ತಿ- ಸಂಸಾರದತೊಡಕಿನಿಂದ ಬಿಡುಗಡೆಯು, ಎಂಬುದು, ಸತ್ಯಂ. ... ॥೧೩೮॥

ನೆಯ್- ತುಪ್ಪವು, ರಸನೆಯು- ನಾಲಗೆಯನ್ನು, ನವಕಜ್ಜಳರಸಂ- ಹೊಸಕಾಡಿಗೆಯು, ಅಕ್ಷಿಯಂ- ಕ ಣ್ಣನ್ನು, ಅಮರ್ದುರ್ಪ- ಸೇರಿ, ಪತ್ತುಗುಮೆ- ಹತ್ತಿಕೊಳ್ಳುವದೇ? ಈ ರಸೆಯೊಳ್- ಈ ಭೂಮಿಯಲ್ಲಿ,ಪ ರಿಕಿಪೊಡೆ- ವಿಚಾರಮಾಡಿದರೆ, ಸಂಸ್ಸೃತಿಬಂಧಂ, ಸಸಿದಲೆಯನ- ಚಂದ್ರನೇಶಿರಸ್ಸಿನಲ್ಲುಳ್ಳಶಿವನ, ಶರಣತತಿ ಯುಂ, ಅಂಟುಗುಮೇಂ? ... ... ... ॥೧೩೯॥

ಅಬ್ಜಾನನೆ- ಕಮಲಮುಖಿಯೇ! ಅನಿಶಂ- ಯಾವಾಗಲೂ, ತನುಕರಣಮನಃಪ್ರಾಣದಿಂ-ದೇಹೇಂದ್ರಿ ಯಪ್ರಾಣಗಳಿಂದ, ಪರಶಿವನಂ, ಅಪ್ಪಿ- ಆಶ್ರೈಸಿ, ಬೆರಸಿದಂ- ಸೇರಿಕೊಂಡಿರುವನು, ಸುಸ್ಸೃತಿಬದ್ಧನೆ- ಸಂ ಸಾರದಿಂದ ಕಟ್ಟಲ್ಪಟ್ಟಿರುವನೇ? ತುಹಿನಂ- ಹಿಮವು, ಸೂರ್ಯನ, ಕೈದಾವರೆಯಂ- ಹಸ್ತದಲ್ಲಿರುವ ಕಮಲ

ಸಂಸೃತಿಬದ್ಧನೆ ಸೂ । ರ್ಯನ ಕ್ಷ್ಮದಾವರೆಯು ತುಹಿನ ಮೇಂಪತ್ತುಗುಮೇ ॥ ॥೧೭೦॥

ಕಂ ॥ ಬಿಸಿಲಾಮರೀಚಿಕಾಜಲ । ವಿಸರದೆ ಸಲೆ ನಾಂದು ಕಿಡುಗುಮೇ ಶಿವಶರಣಂ ॥
ಮಸಗುವ ಮಾಯಾಬಂಧ । ಪ್ರಸರ ಕೆಯ್ಕೊಳಗಾಗಿ ಕಟ್ಟುವಡೆವನೆ ದರೆಯೊಳ್ ॥ ॥೧೭೧॥

ಕಂ ॥ ಪರಮಶಿವಭಕ್ತಿರಸಭರ । ಭರಿತಾಂತಃಕರಣಶರಣಸಂತತಿ ಗಿದು ಶಾಂ ॥ ಕರ
ಲೋಕ ಮಿದು ವಿಚಾರಿಸೆ । ನರಲೋಕಮಿದೆಂಬಸಂದೆಗಕ್ಕೆಡೆ ಯುಂಟೇ ॥ ॥೧೭೨॥

ಕಂ ॥ ಇಳೆಯೊಳ್ಮರ್ಬ್ಬನಿಸಿರ್ಕುಂ । ಬೆಳಗದು ಘೂಕೇಕ್ಷಣಕ್ಕೆ ಶಿವಭಕ್ತಮಹೋ ॥
ಜ್ವಳಮಾರ್ಗ್ಗ ಮಮಾರ್ಗ್ಗದವೋಲ್ । ಖಳಜನಜಡಮತಿಗೆ ತೋರ್ಕ್ಕು ಮೆಲೆತರಳಾಕ್ಷಿ ॥೧೭೩॥

ಕಂ ॥ ಹರಭಕ್ತರ ಪೇರ್ಮೆಯ ಪೊಸ । ಪರಿ ಯರಿಯದ ಮರುಳೆ ನಿನಗೆ ಪಲವುಂ
ಮಾತೇ ॥ ಕಿರು ಸುಮ್ಮನೆಂದ ರಮಣಂ । ಗರಸಿ ಕರಂ ನಗುತೆ ಚೆಲ್ಲದಿಂ ದಿಂತೆಂದಳ್ ॥೧೭೪॥

ಕಂ ॥ ಬಿಡುಬಿಡು ನಿನ್ನಯ ಮಾತಿನ । ಬೆಡಂಗ ನೆಲೆರಮಣ ಬಲ್ಲೆ ನೆಲ್ಲಮನೀಗಳ್ ॥
ಮೃಡನಗರಿ ಗೋಹಿಲನವೋಲ್ । ನಡೆ ನೋಡಿದಪೆಂ ತ್ವದೀಯಬಲಮುಂ ಛಲಮುಂ ॥೧೭೫॥

ಕಂ ॥ ಅರಿನೃಪರ ಪಡಲ್ವಡಿಸುವ । ಪರಿಯಕ್ಕುಮೊ ನೆತ್ತದಾಟ ಮಕ್ಕುಮೊ ಮ
ದನ ॥ ಸ್ಫುರಿತಕಳಾನಿಪುಣತೆ ಯೆಂ । ದಿರವಕ್ಕುಮೊ ಶಿವನ ಭವನ ಕೈದುವ ಕಜ್ಜಂ ॥

---

ವನ್ನು, ಪತ್ತುಗುಮೇ- ಹತ್ತುವದೇ? ... ... ... ॥೧೭೦॥

ದರೆಯೊಳ್, ಬಿಸಿಲ್- ಸೂರ್ಯಾತಪವು, ಆಮರೀಚಿಕಾಜಲವಿಸರದೆ- ಆ ಬಿಸಿಲ್ಗುದುರೆಯಿಂದ, ಸಲೆ- ಅಧಿಕವಾಗಿ, ನಾಂದು- ಅರ್ದ್ರವಾಗಿ, ಕಿಡುಗುಮೇ- ಆರಿಹೋಗುವದೇ ? ಶಿವಶರಣಂ, ಮಸಗುವ- ಆವರಿಸುವ, ಮಾಯಾಬಂಧಪ್ರಸರಕ್ಕೆ- ಮಾಯಾಪಾಶದ ಪ್ರಸರಿಸುವಿಕೆಗೆ, ಕಟ್ಟುವಡೆವನೆ- ಸಿಕ್ಕಿಬೀಳುವನೆ ?

ಇದು- ಈ ಭೂಲೋಗವು, ಪರಮ......ಸಂದೋಹಕೆ—ಪರಮ- ಉತ್ಕೃಷ್ಟವಾದ, ಶಿವಭಕ್ತಿರಸಭರ- ಅತಿಶಯವಾದ ಶಿವಭಕ್ತಿಯಿಂದ, ಭರಿತ- ತುಂಬಿದ, ಅಂತಃಕರಣ- ಮನಸ್ಸುಳ್ಳ, ಶರಣಸಂದೋಹಕೆ, ಶಾಂಕರಲೋಕಂ- ಕೈಲಾಸವು, ವಿಚಾರಿಸೆ, ಇದು, ನರಲೋಕಂ, ಎಂಬ, ಸಂದೆಗಕ್ಕೆ- ಸಂಶಯಕ್ಕೆ- ಎಡೆ- ಅವಕಾಶವು, ಉಂಟೇ ? ... ... ... ... ... ॥೧೭೨॥

ಎಲೆತರಳಾಕ್ಷಿ ! ಇಳೆಯೊಳ್, ಅದುಬೆಳಗು, ಘೂಕೇಕ್ಷಣಕ್ಕೆ- ಗೂಬೆಯ ಕಣ್ಣಿಗೆ, ಮರ್ಬ್ಬು- ಕತ್ತಲೆಯು, ಎನಿಸಿ, ಇರ್ಕ್ಕುಂ, ಶಿವಭಕ್ತಮಹೋಜ್ವಳಮಾರ್ಗ್ಗಂ- ಶಿವಭಕ್ತರ ಪ್ರಕಾಶಿಸುವ ಸನ್ಮಾರ್ಗವು, ಖಳನೀಚನ, ಜಡಮತಿಗೆ- ಮೂಢಬುದ್ಧಿಗೆ, ಅಮಾರ್ಗ್ಗದವೋಲ್-ದುರ್ಮಾರ್ಗದಹಾಗೆ, ತೋರ್ಕ್ಕುಂ. ॥೧೭೩॥

ಹರಭಕ್ತರ, ಪೇರ್ಮೆಯ- ಆಧಿಕ್ಯದ, ಪೊಸಪರಿಯರಿಯದ- ಹೊಸರೀತಿಯನ್ನು ತಿಳಿಯದೇ ಇರುವ, ಮರುಳೆ- ಹುಚ್ಚೆಯೇ ! ನಿನಗೆ, ಪಲವುಂಮಾತು- ಅನೇಕ ಮಾತುಗಳು, ಏಕೆ ? ಸುಮ್ಮನೆ, ಇರ್, ಎಂದ, ರಮಣಂಗೆ, ಅರಸಿ, ಕರಂ, ನಗುತೆ, ಚೆಲ್ಲದಿಂದೆ- ವಿಲಾಸದಿಂದ, ಇಂತು, ಎಂದಳ್. ॥೧೭೪॥

ಎಲೆರಮಣ ! ನಿನ್ನಯ, ಮಾತಿನ, ಬೆಡಂಗಂ- ಸೊಗಸನ್ನು, ಬಿಡು ಬಿಡು, ಎಲ್ಲಮಂ, ಬಲ್ಲೆಂ, ಈಗಳ್, ಓಹಿಲನವೋಲ್, ಮೃಡನಗರಿಗೆ- ಶಿವನ ಪಟ್ಟಣಕ್ಕೆ, ನಡೆ, ತ್ವದೀಯಬಲಮಂ- ನಿನ್ನ ಸಾಮರ್ಥ್ಯವನ್ನು, ಛಲಮಂ- ಶಪಥವನ್ನು, ನೋಡಿದಪೆಂ. ... ... ... ॥೧೭೫॥

ಶಿವನ, ಭವನಕೆ- ಆವಾಸಕ್ಕೆ, ಐದುವ, ಕಜ್ಜಂ- ಕಾರ್ಯವು, ಅರಿನೃಪರ- ಶತ್ರುರಾಜರನ್ನು, ಪಡಲ್ವಡಿಸುವ-ದುಃಖಪಡಿಸುವ, ಪರಿ- ರೀತಿಯು, ಅಕ್ಕುಮೆ ? ನೆತ್ತದ-ಪಗಡೆಯ, ಆಟಂ, ಅಕ್ಕುಮೆ ? ಮದನಸ್ಫುರಿತಕಳಾನಿಪುಣತೆಯು- ಮನ್ಮಥವಿದ್ಯಾಪ್ರೌಢಿಮೆಯು, ಒಂದು ಇರವು- ಒಂದುರೀತಿಯು, ಅಕ್ಕುಮೆ ?

ಕಂ || ನಿನಗಭವನಗರಿ ಕೇಳೀ | ವನವೊ ರಣಾಂಕಣವೊ ರಮ್ಯಮಣಿಹರ್ಮ್ಯವೊ
ಪಾ | ವನಗುರುಚರನಿಳಯವೊ ನೆ | ಟ್ಟನೆ ತಳರಲ್ ನೃಪತಿ ನಿನ್ನ ಪರಿಜನಸಹಿತಂ ||೧೪೭||

ಕಂ || ಓರ್ವನೆ ಪೋದಪನೆನುತಂ | ಗರ್ವದಿ ನೋಹಿಲನ ನಗುವ ಶಿವಭಕ್ತಿಪರಂ || ಸ
ರ್ವಜನಸಹಿತ ಮೆಲೆ ನೀಂ | ಶರ್ವಾಣೀರಮಣನಗರಿಗೆಂದಡಿಯಿಡುವೈ || ... ||೧೪೮||

ವ || ಎಂದ ರಮಣಿಯ ಕಟಕಿವಾತಂ ಕೇಳ್ದು ಮಂದಸ್ಮಿತಾಸ್ಯನಾಗಿ || * *

ಕಂ|| ನೀನೆಂದಂತೆವೊಲೆಲೆ ಕಂ | ಜಾನನೆ ಶಿವನಿಳಯಮೆನಗೆ ಗುರುಚರನಿಳಯಂ ||
ತಾನಕ್ಕುಮೈದಿದಪೆ ನೆ | ನ್ನೀನಿಖಿಳಜನಾಳಿವೆರಸು ನೋಡೆನ್ನಳವಂ || ... ೧೪೯||

ಕಂ || ಕಾದಲೆ ನೀಂ ಕಡುಪಿಂದಂ | ಮೂದಲಿಸುತ್ತೆಂದ ಮಾಳ್ಕೆಯಿಂ ಶಿವಪುರಿಗಾಂ ||
ಪೋದಪೆ ನೆಲೆ ಪೋಗದೊಡೆ ನಿ | ಜೋದಿತಶಿವಭಕ್ತಿಯುಕ್ತನಪ್ಪೆನೆ ದರೆಯೊಳ್ ||೧೫೦||

ವ || ಎಂದ ಮನದನ್ನನುಕ್ತಿಯುಂ ಮನೋರಮೆ ಮಾರ್ಕೊಂಡು || * *

ಕಂ || ಆವದಿನ ಮಾವವೇಳೆಯೊ | ಳಾವಂದದೆ ಪೋಪೆ ಯೆನೆ ಪೊದಳ್ದೀದಿನ ಮಿಂ |
ತೀವೇಳೆಯೊಳೀಯಂದದೆ | ಕೋವಿದೆ ಕೇಳ್ಪೋಪೆನೆಂದ ನಾಫಲದಂಕಂ || ||೧೫೧||

ವ || ಎಂದು ದೃಢಪ್ರತಿಜ್ಞಾರೂಢನಾಗಿ ದೌವಾರಿಕರಿಂ ದಂಡನಾಥನುಂಡಳೀಕಸಚಿ

---

ನೃಪತಿ ! ಪರಿಜನಸಹಿತಂ- ಪರಿವಾರಜನರೊಡನೆ ಕೂಡಿ, ನೆಟ್ಟನೆ, ತಳರಲ್- ಹೋಗುವದಕ್ಕೆ, ನಿನಗೆ, ಅಭವನ, ನಗರಿ, ಕೇಳೀವನವೊ-ಉಪವನವೊ ? ರಣಾಂಕಣವೊ- ಯುದ್ಧಸ್ಥಲವೊ ? ರಮ್ಯಮಣಿಹರ್ಮ್ಯವೊ- ಮನೋಹರವಾದ ರನ್ನದ ಉಪ್ಪರಿಗೆಯೊ ? ಪಾವನಗುರುಚರನಿಳಯವೊ- ಪರಿಶುದ್ಧವಾದ ಗುರುಜಂಗಮರಮಠವೊ ? ... ... ... ... ... ||೧೪೭||

ಎಲೆ ! ಓರ್ವನೆ, ಪೋದಪಂ, ಎನುತಂ, ಗರ್ವದಿಂ, ಓಹಿಲನನಂ, ನಗುವ- ಹಾಸ್ಯ ಮಾಡುವ, ಶಿವಭಕ್ತಿಪರಂ- ಶಿವಭಕ್ತಿಯಲ್ಲಿ ಆಸಕ್ತನಾದ, ನೀಂ, ಸರ್ವಜನಸಹಿತಂ, ಶರ್ವಾಣೀರಮಣನಗರಿಗೆ- ಶಿವನಪಟ್ಟಣಕ್ಕೆ, ಎಂದು, ಅಡಿಯಿಡುವೈ- ಕಾಲನ್ನಿಕ್ಕುವೆ ? ... ... ... ||೧೪೮||

ಎಂದ, ರಮಣಿಯ, ಕಟಕಿವಾತಂ- ಮೂದಲೆಯ ಮಾತನ್ನು, ಕೇಳ್ದು, ಮಂದಸ್ಮಿತಾಸ್ಯಂ, ಆಗಿ. *

ಎಲೆಕಂಜಾನನೆ- ಎಲೈ ಕಮಲಮುಖಿಯೇ ? ನೀಂ, ಎಂದಂತೆವೊಲ್- ಹೇಳಿದಹಾಗೆ, ಶಿವನಿಳಯಂ, ತಾಂ, ಎನಗೆ, ಗುರುಚರನಿಳಯಂ- ಗುರುಜಂಗಮರ ಮಠವು, ಅಕ್ಕುಂ, ಎನ್ನ, ಈನಿಖಿಳಜನಾಳಿವೆರಸು- ಈ ಸಕಲಜನ ಸಮೂಹದೊಡನೆ ಕೂಡಿ, ಐದಿದಪೆಂ- ಹೋಗುವೆನು, ಎನ್ನ, ಅಳವಂ- ಶಕ್ತಿಯನ್ನು, ನೋಡು.

ಎಲೆಕಾದಲೆ- ಎಲೈ ಪ್ರಿಯೆಯೇ ! ನೀಂ, ಕಡುಪಿಂದಂ- ಶೌರ್ಯದಿಂದ, ಮೂದಲಿಸುತ್ತೆ- ಹೀಯಾಳಿಸುತ್ತ, ಎಂದ, ಮಾಳ್ಕೆಯಿಂ-ರೀತಿಯಿಂದ, ಆಂ, ಶಿವಪುರಿಗೆ, ಪೋದಪೆಂ. ಪೋಗದೊಡೆ, ದರೆಯೊಳ್, ನಿಜೋದಿತಶಿವಭಕ್ತಿಯುಕ್ತಂ- ಯಥಾರ್ಥವಾಗಿ ಉತ್ಪನ್ನವಾದ ಶಿವಭಕ್ತಿಯಿಂ ಕೂಡಿದವನು, ಅಪ್ಪೆನೆ ? ||೧೫೦||

ಎಂದ, ಮನದನ್ನನ- ಮನಃಕಾಂತನ, ಉಕ್ತಿಯಂ- ಮಾತನ್ನು ಕುರಿತು, ಮನೋರಮೆ- ಪ್ರಾಣಕಾಂತೆಯು, ಮಾರ್ಕೊಂಡು- ಪ್ರತಿಯಾಗಿ. * * * * * * * * * * *

ಆವದಿನಂ? ಆವವೇಳೆಯೊಳ್- ಯಾವಹೊತ್ತಿನಲ್ಲಿ, ಆವಂದದೆ- ಯಾವರೀತಿಯಿಂದ, ಪೋಪೆ? ಎನೆ, ಆ ಫಲದಂಕಂ- ಆ ವ್ರತಗಾರನು, ಕೋವಿದೆ- ಪ್ರೌಢೆಯೇ ! ಕೇಳ್, ಈದಿನಂ, ಇಂತು, ಈವೇಳೆಯೊಳ್, ಈಯಂದದೆ, ಪೋಪೆಂ, ಎಂದಂ. ... ... ... ... ||೧೫೧||

ಎಂದು, ದೃಢಪ್ರತಿಜ್ಞಾರೂಢಂ- ಸ್ಥಿರವಾದ ಶಪಥವನ್ನೇರಿದವನು, ಆಗಿ, ದೌವಾರಿಕರಿಂ- ದ್ವಾರಪಾ

ವಸಾಮಂತಪ್ರಮುಖರು ಬರಿಸಿ ಪುರದೊಳೆಲ್ಲ ಸಾರಲ್ವೇಳ್ದು ಕಡುಪಿಂ ಕೈಲಾಸಪ್ರಸ್ಥಾನಭೇರಿಯಂ ಪೊಡೆಯಿಸಲೊಡನೆ ॥ * * * * * *

ಮತ್ತೇಭ ॥ ಕಡಲೇಳುಂ ಕದಡೆಳ್ದು ತುಳ್ಕೆ ದಿಗಿಭಂಗಳ್ಬಳ್ಕೆ ಭೋಗೀಂದ್ರನು । ರ್ಕುಡುಗುತ್ತಿರ್ಪ ಪೆಡೆ ತಗ್ಗೆ ದಿಗ್ವರರಳುಂಬಂ ಕುಗ್ಗೆ ವಿದ್ವಿಟ್ಕುಳಂ ॥ ಕಡುಪಿಂ ಕರ್ಚೆ ತೃಣಂಗಳಂ ರವಿರಥಾಶ್ವಂ ಬೆರ್ಚೆ ತುಂಬಿತ್ತು ಜಂ । ಬಡದಂಭೋಜಭವಾಂಡಮಂಡಳಮನಾಗಂಭೀರಭೇರೀರವಂ ॥ ... ... ... ... ... ॥೧೯೨॥

ವ ॥ ಆಗಳ್ ಪಿರಿದದ್ಭುತಂ ಮಸಗೆ ಸಸಂಭ್ರಮಂ ಸಕಳಪರಿಜನಂ ನೆರೆಯೆ ನರೇಂದ್ರಂ ನೈಪಥ್ಯಗೃಹಕ್ಕೆಳ್ತಂದು ನಿಜಾಂಗನೆಯಂ ಪುರ್ಬಿಂ ಜರ್ಬಿ ಮಣಿಮಯಾಂದೋಳನಮನೇರಲ್ನಿಯಾಮಿಸಿ ನಿಜತುರಂಗಮುಂ ಬೆಂಗೆವಾಯ್ದು ತಾನಾಳ್ವ ದೇಶಾಂತರಾಳದ ಸಮಸ್ತಜನಮೊಡವರೆ ಸಡಗರಂಬೆತ್ತು ॥ * * * * * *

ಮ ॥ ಸ್ರ ॥ ಬಿಡದೆತ್ತಂ ತೂರ್ಯಘೋಷಂ ಮಸಗೆ ಮಿಸುಗೆ ಮುಕ್ತಾತಪತ್ರಾಳಿ ಚೆಲ್ವಂ । ಪಡೆ ದುದ್ಯತ್ಕೇತನಂಗಳ್ಮಿಳಿರೆ ತಳರೆ ಸೈನ್ಯಂ ಚಳಚ್ಚಾಮರಂ ತೋ ॥ ರ್ಪಡೆ ದಿವ್ಯಂ ಪುಷ್ಪವರ್ಷಂ ಸುರಿಯೆ ಮೊರೆಯೆ ತದ್ದುಂದುಭಿಧ್ವಾನಮುಣ್ಮಿದ್ದು । ಗ್ಗಡಿಸುತ್ತಂ

---

ಲಕರಿಂದ, ದಂಡನಾಥಮಂಡಳೀಕಸಚಿವಸಾಮಂತಪ್ರಮುಖರಂ-ದಂಡನಾಥ- ಸೈನ್ಯಾಧಿಕಾರಿಗಳು, ಮಂಡಳಿಕ-ಸಭಿಕರು, ಸಚಿವ- ಮಂತ್ರಿ, ಸಾಮಂತ- ಆಶ್ರಿತರಾಜರು ಇವರುಗಳೇ, ಪ್ರಮುಖರಂ- ಮೊದಲಾದವರನ್ನು, ಬರಿಸಿ, ಪುರದೊಳ್, ಎಲ್ಲ, ಸಾರಲ್ವೇಳ್ದು- ಸಾರುವಂತೆ ಹೇಳಿ, ಕೈಲಾಸಪ್ರಸ್ಥಾನಭೇರಿಯಂ- ಕೈಲಾಸಕ್ಕೆ ಹೊರಡುವದಂ ಸೂಚಿಸುವ ನಗಾರಿಯನ್ನು, ಪೊಡೆಯಿಸಲ್, ಒಡನೆ. * * * * * * *

ಏಳ್ಕಡಲುಂ- ಸಪ್ತ ಸಮುದ್ರಗಳೂ, ಕದಡಿ, ಎಳ್ದು, ತುಳ್ಕೆ, ದಿಗಿಭಂಗಳ್- ದಿಗ್ಗಜಗಳು, ಬಳ್ಕೆ-ನಡುಗಲು, ಭೋಗೀಂದ್ರನ- ಆದಿಶೇಷನ, ಉರ್ಕು- ಗರ್ವವು, ಉಡುಗುತ್ತಂ- ಭಗ್ನವಾಗುತ್ತ, ಪೆಡೆ, ತಗ್ಗೆ, ದಿಗ್ವರರ್- ದಿಕ್ಪಾಲಕರು, ಅಳುಂಬಂ- ಅಧಿಕವಾಗಿ, ಕುಗ್ಗೆ- ಬಗ್ಗಿಹೋಗಲು, ವಿದ್ವಿಟ್ಕುಳಂ- ಶತ್ರುಸಮುದಾಯವು, ಕಡುಪಿಂ- ಶೌರ್ಯದಿಂದ, ತೃಣಂಗಳಂ- ಹುಲ್ಲನ್ನು, ಕರ್ಚೆ, ರವಿರಥಾಶ್ವಂ- ಸೂರ್ಯನ ತೇರಿನ ಕುದುರೆಯು, ಬೆರ್ಚೆ, ಆಗಂಭೀರಭೇರೀರವಂ, ಅಂಭೋಜಭವಾಂಡಮಂಡಲಮಂ- ಬ್ರಹ್ಮಾಂಡಪ್ರದೇಶವೆಲ್ಲವನ್ನು, ಬಿಡದೆ- ಅವಿಚ್ಛಿನ್ನವಾಗಿ, ತುಂಬಿತ್ತು. ... ... ... ॥೧೯೨॥

ಆಗಳ್, ಪಿರಿದು, ಅದ್ಭುತಂ, ಮಸಗೆ- ಆವರಿಸಲು, ಸಕಳಪರಿಜನಂ, ಸಸಂಭ್ರಮಂ- ಸಡಗರದಿಂಕೂಡಿ, ನೆರೆಯೆ- ಗುಂಪುಕೂಡಲು, ನರೇಂದ್ರಂ, ನೈಪಥ್ಯಗೃಹಕ್ಕೆ- ಅಲಂಕರಿಸಿಕೊಳ್ಳುವ ಮನೆಗೆ, ಎಳ್ತಂದು, ನಿಜಾಂಗನೆಯಂ- ತನ್ನ ಹೆಂಡತಿಯನ್ನು, ಪುರ್ಬಿಂ-ಹುಬ್ಬಿನಿಂದ, ಜರ್ಬಿ-ಸನ್ನೆಯಂಮಾಡಿ, ಮಣಿಮಯಾಂದೋಳನಮಂ- ರತ್ನವಿಕಾರವಾದ ಪಲ್ಲಕ್ಕಿಯನ್ನು, ಏರಲ್- ಹತ್ತುವದಕ್ಕೆ, ನಿಯಾಮಿಸಿ, ನಿಜತುರಂಗಮಂ, ಬೆಂಗೆವಾಯ್ದು-ಬೆನ್ನಿನಮೇಲೆ ಹತ್ತಿ, ತಾಂ, ಆಳ್ವ, ದೇಶಾಂತರಾಳದ, ಸಮಸ್ತಜನಂ, ಒಡವರೆ ಸಡಗರಂಬೆತ್ತು.

ತೂರ್ಯಘೋಷಂ- ನೃತ್ತಗೀತವಾದ್ಯಗಳ ಧ್ವನಿಯು, ಎತ್ತಂ- ಎಲ್ಲಾಕಡೆಯಲ್ಲೂ, ಬಿಡದೆ, ಮಸಗೆ, ಮುಕ್ತಾತಪತ್ರಾಳಿ-ಮುತ್ತಿನ ಛತ್ರಿಗಳಸಾಲು, ಮಿಸುಗೆ, ಉದ್ಯತ್ಕೇತನಂಗಳ್-ದೊಡ್ಡದಾದ ಧ್ವಜಗಳು, ಚೆಲ್ವಂ, ಪಡೆದು, ಮಿಳಿರೆ- ಅಲ್ಲಾಡಲು, ಸೈನ್ಯಂ, ತಳರೆ- ನಡೆಯುತ್ತಿರಲು, ಚಳಚ್ಚಾಮರಂ, ತೋರ್ಪಡೆ, ದಿವ್ಯಂಪುಷ್ಪವರ್ಷಂ-ದೇವಲೋಕದಲ್ಲಿ ಉತ್ಪನ್ನವಾದ ಹೂವಿನ ಮಳೆಯು, ಸುರಿಯೆ, ತದ್ದುಂದುಭಿಧ್ವಾನಂ-ಆ ದೇವಲೋಕದ ನಗಾರಿಯ ಶಬ್ದವು, ಮೊರೆಯೆ, ವಂದಿವೃಂದಂ- ಸ್ತುತಿಪಾಠಕರಗುಂಪು, ಒಲ್ದು, ಉಗ್ಗಡಿ

ವುದಿವೃಂದಂಪೊಗಳೆ ನೆಗಳೆ ಲಾಸ್ಯಂಗಳಂ ವೇಸಿಯರ್ಕಳ್॥ ... ... ॥೧೯೩॥

ಕಂ ॥ ಶರಣ ರುಘೇ ಜಯಜಯಬಂ । ಧುರರಾವ ಂಬುಧರ ಹರಹರಧ್ವಾನಂ ಸೈ ॥ ವ ರಿಯೆಸಕಳೋರ್ವಿಜನ ಮ । ಚ್ಚರಿವಡೆ ನಿಜರಮಣಿವೆರಸು ವೃಥುವೈಭವದಿಂ ॥ ॥೧೯೪॥

ಕಂ॥ ಧೀಂಕಿಟ್ಟು ಗಗನತಳಕೆ ವಿ । ಶಂಕಂ ನೆರೆಯೂರ್ಗೆ ತಳರ್ವ ತೆರದಿಂ ತಳರ್ದಂ॥ ಭೋಂಕನೆ ಕೈಲಾಸಕೆ ಗಣ । ಕಿಂಕರ ನಾಪಾಲಗುರ್ಜ್ಜರಕ್ಷಿತಿಪಾಲಂ ॥ ... ॥೧೯೫॥

ವಂ॥ ಸ್ರ॥ ತರುಣೀಸಂಯುಕ್ತ ನಾಗಳ್ ಶಿವಗಣಕೃಪೆಯಿಂ ಸೌಖ್ಯಮೊಂದಿರ್ದನಾ ಭೂ । ವರವರ್ಯಂ ತನ್ನ ಲೋಕಂಬೆರಸು ಶಶಿಧರಾವಾಸದೊ ಳ್ಮಾಣದೆಂದಾ ॥ ಗುರುಭಕ್ತಂ ಗೊಲ್ದು ಪೇಳ್ದ ಳ್ಪಣವಧು ವೆನುತಂ ಭಕ್ತಿಯಿಂ ಪೇಳುತಂ ಶಂ । ಕರಭಕ್ತಶ್ರೇಣಿ ಗಾ ಮೋದಮನೊದವಿಸಿ ಕಣ್ಗೊಪ್ಪುತಿರ್ದಂ ವೃಷೇಂದ್ರಂ॥ ... ... ॥೧೯೬॥

ಲಲಿತಪದವೃತ್ತಂ॥ ಸಾಧಕಜನಾಂತರ ವಿಶೋಧಕವಿಶುದ್ಧ ಮತಿಬೋಧಕದುರೀಷಣ ನಿಷೇಧಕಚರೌಘಾ । ರಾಧಕಮದಾಷ್ಟಕ ವಿರೋಧಕಮನೋಗತಿ ನಿರೋಧಕ ಸಚಿತ್ಸದ ವರೋಧಕಶುಭಾಂಗ ॥ ವ್ಯಾಧಿಕಲುಷ ಪ್ರಕರಬಾಧಕ ವಿಶಾಲತರಮೇಧಕ ನಿಕಾಮ ನಿರುಪಾ

---

ಸುತ್ತಂ- ಕೂಗುತ್ತ, ಪೊಗಳೆ, ವೇಸಿಯರ್ಕಳ್- ಸೂಳೆಯರು, ಲಾಸ್ಯಂಗಳಂ- ನರ್ತನಗಳನ್ನು, ನೆಗಳೆ- ಮಾಡಲು. ... ... ... ... ॥೧೯೩॥

ಶರಣರ, ಉಘೇಜಯಜಯಬಂಧುರರಾವಂ-ಉಘೇಜಯಜಯವೆಂಬ ಮನೋಹರವಾದಶಬ್ದವು, ಬುಧ ರ- ವಿದ್ವಾಂಸರ, ಹರಹರಧ್ವಾನಂ, ಸೈವರಿಯೆ- ಎಲ್ಲಾಕಡೆಯಲ್ಲೂಹರಡಿಕೊಳ್ಳಲು, ಸಕಳೋರ್ವೀಜನಂ, ಅ ಚ್ಚರಿವಡೆ, ನಿಜರಮಣಿವೆರಸು- ತನ್ನ ಹೆಂಡತಿಯೊಡನೆ ಕೂಡಿ, ವೃಥುವೈಭವದಿಂ-ವಿಸ್ತಾರವಾದವಿಭವದಿಂದ.

ಗಣಕಿಂಕರಂ- ಶಿವಗಣಂಗಳ ಸೇವಕನಾದ, ಆಪಾಲಗುರ್ಜ್ಜರರಕ್ಷಿತಿಪಾಲಂ, ನೆರೆಯೂರ್ಗೆ- ಮತ್ತೊಂದು ಊರಿಗೆ, ತಳರ್ವ- ಹೋಗುವ, ತೆರದಿಂ, ವಿಶಂಕಂ- ಭಯರಹಿತನಾಗಿ, ಗಗನತಳಕ್ಕೆ, ಧೀಂಕಿಟ್ಟು- ನೆಗೆದು, ಭೋಂಕನೆ- ಬೇಗನೆ, ಕೈಲಾಸಕೆ, ತಳರ್ದಂ. ... ... ... ॥೧೯೫॥

ಆಭೂವರವರ್ಯಂ- ಆ ರಾಜಶ್ರೇಷ್ಠನು, ತರುಣೀಸಂಯುಕ್ತಂ-ಹೆಂಡತಿಯೊಡನೆಕೂಡಿ, ತನ್ನ, ಲೋ ಕಂಬೆರಸು- ಪರಿಜನಸಹಿತವಾಗಿ, ಆಗಳ್, ಶಿವಗಣಕೃಪೆಯಿಂ, ಶಶಿಧರಾವಾಸದೊಳ್- ಕೈಲಾಸದಲ್ಲಿ, ಮಾಣ ದೆ- ತಪ್ಪದೆ, ಸೌಖ್ಯಮೊಂದಿ, ಇರ್ದಂ, ಎಂದು, ಪಣವಧು- ಸೂಳೆಯು, ಆಗುರುಭಕ್ತಂಗೆ, ಒಲ್ದು, ಪೇಳ್ದ ಳ್, ಎನುತಂ, ವೃಷೇಂದ್ರಂ, ಶಂಕರಭಕ್ತಶ್ರೇಣಿಗೆ, ಭಕ್ತಿಯಿಂ, ಪೇಳುತಂ, ಆಮೋದಮಂ- ಸಂತೋಷವ ನ್ನು, ಒದವಿಸಿ-ಉಂಟುಮಾಡಿ, ಕಣ್ಗೆ, ಒಪ್ಪುತೆ, ಇರ್ದಂ. ... ... ॥೧೯೬॥

ಸಾಧಕಜನಾಂತರ ವಿಶೋಧಕ—ಸಾಧಕಜನ- ಉಪಕಾರಿಜನಗಳ, ಅಂತರ-ಮನಸ್ಸನ್ನು, ವಿಶೋಧಕ- ಪರಿಶುದ್ಧಿಗೊಳಿಸುವ,ವಿಶುದ್ಧಮತಿಬೋಧಕ- ನಿರ್ಮಲವಾದ ಬುದ್ಧಿಯುಳ್ಳವರಿಗೆ ತತ್ತ್ವೋಪದೇಶವಂ ಮಾಡು ವ, ದುರೀಷಣನಿಷೇಧಕ- ಕೆಟ್ಟ ಪುತ್ರಾರ್ಥದಾರೇಷಣಗಳನ್ನು ತಡೆಯುವ, ಚರೌಘಾರಾಧಕ- ಜಂಗಮರ ಗುಂಪನ್ನು ಪೂಜಿಸುವ, ಮದಾಷ್ಟಕವಿರೋಧಕ-ಎಂಟು ಮದಗಳನ್ನು, ತಡೆಗಟ್ಟುವ, ಮನೋಗತಿನಿರೋ ಧಕ- ಮನಸ್ಸಿನ ಚಲನವನ್ನು ತಡೆಯುವ, ಸಚಿತ್ಸದವರೋಧಕ- ಬ್ರಹ್ಮಜ್ಞಾನಸಮನ್ವಿತರಾದವರಿಗೆ ಒಳ್ಳೆ ಯ ಅಂತಃಪುರಸಾದ, ಶುಭಾಂಗ, ವ್ಯಾಧಿಕಲುಷಪ್ರಕರಬಾಧಕ-ರೋಗಪಾಪಗಳ ಗುಂಪನ್ನು ಪೀಡಿಸುವ, ವಿಶಾಲತರಮೇಧಕ-ಅತಿವಿಸ್ತಾರವಾದ ಬುದ್ಧಿಯುಳ್ಳ, ನಿಕಾಮನಿರೂಪಾಧಿಕ- ಅತ್ಯಂತವಾಗಿ ನಿಷ್ಕಪಟನಾ ದ, ನಿರಸ್ತಕ್ರೋಧ- ನಾಶಮಾಡಲ್ಪಟ್ಟಕೋಪವುಳ್ಳ, ಕರುಣಾರಸಪಯೋಧಿ- ದಯೆಗೆ ಸಮುದ್ರನಾದ, ಕವಿ

ಧಿಕ ನಿರಪ್ತ । ಕೋ್ರಧಕರುಣಾರಸ ಪಯೋಧಿ ಕವಿನುತ್ಯ ಪೊರೆಸಾಧಿಕ ಗುಣಾನ್ವಿತಗಣಾಧಿಕವೃಷೇಂದ್ರ ॥ .. ... ... ... ... ॥೧೭॥

ಮ ॥ ಸ್ರ ॥ ತರುಣಾದಿತ್ಯಪ್ರಕಾಶಾವರಣೆ ವರದೆ ಕಲ್ಯಾಣಿ ಕಾಮಾಕ್ಷಿ ವಿದ್ಯಾ । ಕರೆ ವಿಶ್ವಾಧಾರೆ ಚಂದ್ರಾಭರಣೆ ಚತುರೆ ಚಿತ್ರಾಂಗಿ ಚಿದ್ರೂಪೆ ವೀಣಾ ।ಧರೆ ವಾಣೀಪಾಣಿಪದ್ಮಾರ್ಪಿತಮಧುಭರಮಂದಾರಮಾಲಾಂಚಿತಶ್ರೀ। ಚರಣಾಂಭೋಜಾತೆ ಯೆನ್ನಂಪೊರೆ ನಿರುಪಮಿತಾಮ್ನಾಯವಾಣೀ ಮೃಡಾಣೀ ॥ ... ... ... ... ॥೧೮॥

ಗದ್ಯಂ॥ ಇದುವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಿಯತರುಣಾರುಣಾತಪಪರಿಲಸಿತವರಪುಣಿಪಲಿಂಗಪಾದಾರವಿಂದಪರಾಗಭಸಿತಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಪಾಲಗುರ್ಜರಮಹೀಶಸ್ಯಶಿವಲೋಕಪ್ರಾಪ್ತಿರ್ನ್ನಾಮಕಥನಂಏಕೋನವಿಂಶತ್ಯಾಶ್ವಾಸಂ ಪಂಸಮಾಪ್ತಂ ॥ ... ...

ಏಕೋನತ್ರಿಂಶಾಶ್ವಾಸು ಸಂಪೂರ್ಣಂ.

ನುತ್ಯ- ಸಾಧಿಕಗುಣಾನ್ವಿತ- ಸಾಧಿಕಗುಣ- ಹೆಚ್ಚಾದ ಸದ್ಗುಣದಿಂ ಕೂಡಿದವರೊಡನೆ, ಅನ್ವಿತ- ಕೂಡಿರುವ, ಗಣಾಧಿಕ- ವೃಷೇಂದ್ರ! ಪೊರೆ. ... ... ... ॥೧೭॥

ತರುಣಾದಿತ್ಯಪ್ರಕಾಶಾವರಣೆ- ಬಾಲಸೂರ್ಯನ ತೇಜಸ್ಸಿನತಿರುವ ತೇಜಸ್ಸಿನ ಆಛಾದನೆಯುಳ್ಳ, ವರದೆ, ಕಲ್ಯಾಣಿ- ಮಂಗಳಸ್ವರೂಪಿಣಿಯಾದ, ಕಾಮಾಕ್ಷಿ- ಇಷ್ಟಾರ್ಥವನ್ನುಂಟುಮಾಡುವ ನೇತ್ರವುಳ್ಳ, ವಿದ್ಯಾಕರೆ- ಸಕಲ ವಿದ್ಯೆಗಳಿಗೂ ಆಶ್ರಯಳಾದ, ವಿಶ್ವಾಧಾರೆ- ಪ್ರಪಂಚಕ್ಕೆ ಆಶ್ರಯಳಾದ, ಚಂದ್ರಾಭರಣೆ, ಚತುರೆ, ಚಿತ್ರಾಂಗಿ- ಆಶ್ಚರ್ಯಕರವಾದ ದೇಹವುಳ್ಳ, ಚಿದ್ರೂಪೆ- ಜ್ಞಾನಸ್ವರೂಪಳಾದ, ವೀಣಾಧರೆ- ವೀಣೆಯುಹಿಡಿದಿರುವ, ವಾಣೀ......ಭೋಜಾತೆ— ವಾಣೀ- ಸರಸ್ವತಿಯ,ಪಾಣಿಪದ್ಮ- ಹಸ್ತಕಮಲದಿಂದ, ಅರ್ಪಿತ- ಸಮರ್ಪಣೆಮಾಡಲ್ಪಟ್ಟ, ಮಧುಭರ- ಮಕರಂದಾತಿಶಯವುಳ್ಳ,ಮಂದಾರ- ಕಲ್ಪವೃಕ್ಷದ ಹೂವ್ಗಳ, ಮಾಲಾ- ಸರದಿಂದ, ಅಂಚಿತ- ಪೂಜ್ಯವಾದ, ಶ್ರೀ- ಸಂಪತ್ಕರವಾದ,ಚರಣಾಂಭೋಜಾತೆ- ಪಾದಕಮಲವುಳ್ಳ, ನಿರುಪಮಿತಾಮ್ನಾಯವಾಣೀ- ಅಸದೃಶವಾದ ವೇದಸ್ವರೂಪವಾದ ವಾಕ್ಕುಳ್ಳ, ಮೃಡಾಣೀ- ಮೃಡನಪತ್ನಿಯೇ, ಎನ್ನಂ, ಪೊರೆ. ... ... ... ... ॥೧೮॥

ಪ್ರಕ್ಷೇ (ಈಕೆಳಗಣ ಪದ್ಯ ಪದಾರ್ಥಗಳನ್ನು ಇದೇಆಶ್ವಾಸದ ೬ನೇ ಪದ್ಯವೆಂದು ಭಾವಿಸುವದು)

ಮಂದರ ಗಿರಿಕಂದರ । ಚರ ಚಾರಣವಿನುತಚರಣ ರಣಧೀರ ಮಹಾ ॥

ಸುರಭಂಜನ ಸುರರಂಜನ । ಕರ ಪರಸೋಮೇಶಲಿಂಗ ಜಯಭವಭಂಗ ॥ ... ॥೬॥

ಪರಮಂದರಗಿರಿಕಂದರಚರ- ಶ್ರೇಷ್ಠವಾದ ಮಂದರಪರ್ವತದ ತಪ್ಪಲಿನಲ್ಲಿ ಸಂಚಾರಮಾಡುವ, ಚಾರಣವಿನುತಚರಣ-ಚಾರಣರೆಂಬ ದೇವಯೋನಿವಿಶೇಷರಿಂದ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ ಪಾದವುಳ್ಳ, ರಣಧೀರಮಹಾಸುರಭಂಜನ- ಯುದ್ಧದಲ್ಲಿ ಧೈರ್ಯಶಾಲಿಗಳಾದ ದೊಡ್ಡರಾಕ್ಷಸರನ್ನು ನಾಶಮಾಡಿದ, ಸುರರಂಜನಕರ-ದೇವತೆಗಳಿಗೆ ಸಂತೋಷವನ್ನುಂಟುಮಾಡುವ, ಭವಭಂಗ, ಪರಸೋಮೇಶಲಿಂಗ! ಜಯ. ॥೬॥

ಇಪ್ಪತ್ತೊಂಭತ್ತನೆಯ ಆಶ್ವಾಸವು ಸಂಪೂರ್ಣವು.

# ಶ್ರೀಃ

ಫಾಲಲೋಚನಾಯ ಪರಬ್ರಹ್ಮಣೇನಮಃ

## ತ್ರಿಂಶಾಶ್ವಾಸಂ.

### ಮಹೇಶಸ್ಯ ಶಿವಲೋಕಪ್ರಾಪ್ತಿರ್ನಾಮ ಕಥನಂ.

ಕಂ ॥ ಶ್ರೀಕುಧರಜಾತಿಮಧುರಾ । ಲೋಕನಮಲಯಜವಿಲಿಪ್ತವಕ್ಷಸ್ಥಳನ ॥ ಸ್ತೋ
ಕಮಹಿಮಾಂಕನಿಂದುಕ । ಲಾಕಂಪೊರೆಗೆಮ್ಮ ನಾವಗಂ ಶಿವಲಿಂಗಂ ॥ ... ॥೧॥

ಕಂ ॥ ಒಸಗೆ ಮಿಗೆ ಕೇಳುತಿರೆಶರ । ಣಸಮೂಹಂ ಮತ್ತಮಾಗಳುಸಿರ್ದಂ ಬಸವಂ ॥
ಮಿಸುಪಗುರುಭಕ್ತ ನೆಸಗಿದ । ಪೊಸಪರಿಯಂಭಕ್ತಜನಮನೋವನಚೈತ್ರಂ ॥ ॥೨॥

ಕಂ ॥ ಪ್ರಿಯರಮಣಿ ನುಡಿದ ಕಟುಕಿಯ । ನಯನಿಧಿತಾಂ ಕೇಳ್ದು ಲೇಸುವಡೆದಂಗಡ
ದು ॥ ರ್ಜ್ಜಯಪಾಲಗುರ್ಜ್ಜರನಿ । ಶ್ಚಯಮಿಷ್ಟವಧೂಕ್ತಿಗೇಳ್ದವ ಗೆಡರುಂಟೇ॥ ॥೩॥

ಕಂ॥ ಮೊದಲೊಳತಿವಿರಸ ಮಾದೊಡೆ । ಮೊದವಿಸುಗುಂ ಲೇಸ ನಗ್ರದೊಳ್ ಸುದತಿಯ
ರಾ ॥ ಡಿದನುಡಿಯದು ಕಾರಣ ಮೆ । ನ್ನುದಿತೋಕ್ತಿಯ ಕೇಳ್ವುದೆಂದವಂ ಗವಳೆಂದಳ್ ॥

---

ಶ್ರೀ......ವಕ್ಷಸ್ಥಳಂ— ಶ್ರೀ- ಷಡ್ಗುಣೈಶ್ವರ್ಯಯುಕ್ತಳಾದ, ಕುಧರಜಾ- ಪಾರ್ವತಿಯ, ಅತಿಮಧುರಾಲೋಕನ- ಬಹುಮನೋಹರವಾದ ನೋಟವೆಂಬ, ಮಲಯಜ- ಶ್ರೀಗಂಧದಿಂದ, ವಿಲಿಪ್ತ- ಲೇಪಿಸಲ್ಪಟ್ಟ, ವಕ್ಷಸ್ಥಳಂ- ಎದೆಯುಳ್ಳ, ಅಸ್ತೋಕಮಹಿಮಾಂಕಂ-ಹೆಚ್ಚಾದಮಹತ್ತ್ವವೇ ಲಕ್ಷಣವಾಗುಳ್ಳ, ಇಂದುಕಲಾಕಂ-ಚಂದ್ರನಕಿರಣಧರನಾದ, ಶಿವಲಿಂಗಂ, ಎಮ್ಮಂ, ಆವಗಂ, ಪೊರೆಗೆ. ... ... ॥೧॥

ಶರಣಸಮೂಹಂ, ಒಸಗೆ- ಉತ್ಸವವು, ಮಿಗೆ- ಹೆಚ್ಚಾಗಲು, ಕೇಳುತಿರೆ, ಆಗಳ್, ಭಕ್ತಜನಮನೋವನಚೈತ್ರಂ- ಶಿವಭಕ್ತರ ಮನಸ್ಸೆಂಬ ತೋಟಕ್ಕೆ ವಸಂತನಾದ, ಬಸವಂ, ಮತ್ತಂ, ಗುರುಭಕ್ತಂ, ಎಸಗಿದ, ಪೊಸಪರಿಯಂ, ಉಸಿರ್ದಂ. ... ... ... ॥೨॥

ನಯನಿಧಿ- ನೀತಿಗೆ ನಿಕ್ಷೇಪನಾದ, ದುರ್ಜ್ಜಯಪಾಲಗುರ್ಜ್ಜರಂ- ಇತರರಿಂದ ಜೈಸುವದಕ್ಕಸಾಧ್ಯನಾದ ಪಾಲಗುರ್ಜ್ಜರರಾಜನು, ಪ್ರಿಯರಮಣಿ, ನುಡಿದ, ಕಟುಕಿಯ- ಮೊದಲೆಯಮಾತನ್ನು, ಕೇಳ್ದು, ಲೇಸುವಡೆದಂಗಡ- ಒಳ್ಳೆಯುದಂ ಹೊಂದಿದನಲ್ಲವೇ? ನಿಶ್ಚಯಂ- ಯಥಾರ್ಥವಾಗಿ, ಇಷ್ಟವಧೂಕ್ತಿಗೇಳ್ದವಂಗೆ- ಆಪ್ತಳಾದ ಸ್ತ್ರೀಯುಮಾತನ್ನು ಕೇಳಿದವನಿಗೆ, ಎಡರ್- ವಿಘ್ನವು, ಉಂಟೇ? ... ... ॥೩॥

ಸುದತಿಯರ್, ಆಡಿದ, ನುಡಿ, ಮೊದಲೊಳ್, ಅತಿವಿರಸಂ, ಆದೊಡಂ, ಅಗ್ರದೊಳ್- ಕಡೆಯಲ್ಲಿ, ಲೇಸಂ- ಒಳ್ಳೆಯದನ್ನು, ಒದವಿಸುಗುಂ- ಉಂಟುಮಾಡುವವು, ಅದುಕಾರಣಂ, ಎನ್ನ, ಉದಿತೋಕ್ತಿಯಂ- ಉತ್ಪನ್ನವಾದ ಮಾತನ್ನು, ಕೇಳ್ವುದು, ಎಂದು, ಅವಂಗೆ- ಆ ಗುರುಭಕ್ತರಾಜಶಂಕರಿತು, ಅವಳ್- ಆಪ್ರಾಕಶಂತಿ ಎಂಬಸೂಳೆಯು, ಎಂದಳ್. ... ... ... ॥೪॥

ವ ॥ ಎಂದ ಪಣವಧೂಟಿಯ ವದನವಿಧುಬಿಂಬದಿ ನೊಗೆತಂದ ಸರಸತರಚತುರೋಕ್ತಿಚಂದ್ರಿಕೆಯಿಂ ಕಾಮಾಗ್ನಿ ಮತ್ತೆಮತ್ತೆ ಮೈವೆರ್ಚ್ಚಿ ಹೃದಯಕುಹರಮ ನಳುರ್ದು ಘುಳುಘುಳಿಸಿ ಕಾಯ್ದು ಮಸಗಿ ತನುವೆಲ್ಲಮ ನಾವರಿಸಿ ತೀವೆ ॥ * * * *

ಕಂ ॥ ಸೈರಿಸಲಾರದೆ ಮೇಲ್ವರಿ । ದೋರಂತೆ ತುಡುಂಕಲಾಟಪಾತನ ಬಗೆಯಂ ॥ ವಾರಾಂಗನೆ ನಡೆ ನೋಡುತ । ಪಾರಭಯಾಂಬುಧಿಯೊಳಾಳ್ದು ತಳವೆಳಗಾದಳ್ ॥ ॥೫॥

ಕಂ ॥ ತಿಳುಪಿದೊಡ ಮಾವಪರಿಯಿಂ । ತಿಳಿಯಂ ಕಾಮಾಂಧ ನಕ್ಕಟೇಗೈದಪೆ ನೆಂ ॥ ದಳವಳಿದು ಕಳವಳಿಸಿ ಮೊಕ್ಕಳ । ಮಳಲ್ದಳಲಾಂತು ಸುಯ್ದು ಸಿಡಿಮಿಡಿಗೊಂಡಳ್ ॥೬॥

ಕಂ ॥ ಮೇಲರಿಯದೆ ಕಾಮಾತುರ । ನಾಲಿಂಗಿಸ ಲೆಸಗು ತೆನ್ನ ಹರಣದಪಾಯ ॥ ಕ್ಕಾಲಂಬನ ಮಾದಪ ನೆಂ । ದಾಲಲನೆ ಮನೋವಿಷಾದದಿಂದಿಂತೆಂದಳ್ ॥ ... ॥೭॥

ಕಂ ॥ ಎಲೆ ಮೂರ್ಖರರಸ ನಿನಗಾಂ । ಪಲವಂದದಿ ನುಸಿರೆ ಕೇಳ್ದುದಿಲ್ಲಕಟ ನಿರ ॥ ರ್ಗಲವೀಶ್ವರಾಜ್ಞೆಯಿಂ ಗ । ಲ್ಗಲನೇಂಬಂದಪುದೊ ಮುಂದೆ ಕೊಲೆಯೆ ಬಲ್ಲಂ ॥ ॥೮॥

ಕಂ ॥ ಎನಿತೆನಿತು ಪಾಯದಿಂ ಮ । ಚೆನೆಗೈದೊಡ ಮೋಪ್ರೊ ಪೋಗದಿಡು ಪೇಳ್ದಪೆನಿಂ ॥ ದೆನಗಿಲ್ಲ ತಪ್ಪು ನಿನ್ನಂ । ಮನಮೊಲ್ಲದುದಕ್ಕೆ ಕಾರಣಮ ನೆಲೆ ನೃಪತಿ ॥ ॥೯॥

---

ಎಂದ, ಪಣವಧೂಟಿಯ- ಸೂಳೆಯ, ವದನವಿಧುಬಿಂಬದಿಂ- ಮುಖವೆಂಬ ಚಂದ್ರಮಂಡಳದಿಂದ, ಒಗೆತಂದ- ಹುಟ್ಟಿದ, ಸರಸತರಚತುರೋಕ್ತಿಚಂದ್ರಿಕೆಯಿಂ,- ಅತಿಮನೋಹರವಾದ ಕುಶಲವಾದ ಮಾತೆಂಬ ಬೆಳ್ದಿಂಗಳಿಂದ, ಕಾಮಾಗ್ನಿ, ಮತ್ತೆಮತ್ತೆ, ಮೈವೆರ್ಚಿ- ಅಧಿಕವಾಗಿ, ಹೃದಯಕುಹರಮಂ- ಮನೋರಂಧ್ರವನ್ನು, ಅಳುರ್ದು ವ್ಯಾಪಿಸಿ, ಘುಳುಘುಳಿಸಿ, ಕಾಯ್ದು, ಮಸಗಿ-ಹೆಚ್ಚಾಗಿ, ತನುವೆಲ್ಲಮಂ ಆವರಿಸಿ,ತೀವೆ.*

ಸೈರಿಸಲ್, ಆರದೆ- ಸಮರ್ಥನಾಗದೆ, ಮೇಲ್ವರಿದು- ಮೇಲೆಬಿದ್ದು, ಓರಂತೆ-ಚೆನ್ನಾಗಿ, ತುಡುಂಕಲ್ ಹಿಡಿದುಕೊಳ್ಳುವದಕ್ಕೆ, ಆಟಿಪ- ಚಲಿಸಾಡುವ, ಆತನ, ಬಗೆಯಂ, ರೀತಿಯನ್ನು, ವಾರಾಂಗನೆ, ಸುಳೆ, ನೋಡುತ್ತ,ಅಪಾರಭಯಾಂಬುಧಿಯೊಳ್, ಆಳ್ದು- ಮುಳುಗಿ, ತಳವೆಳಗಾದಳ್- ಬೆರಗಾದಳು. ... ॥೫॥

ಆವಪರಿಯಿಂ- ಯಾವರೀತಿಯಿಂದ, ತಿಳುಪಿದೊಡಂ- ತಿಳುವಳಿಕೆಯನ್ನುಂಟುಮಾಡಿದರೂ, ಕಾಮಾಂಧಂ, ತಿಳಿಯಂ, ಅಕ್ಕಟ! ಏಗೆಯ್ದಪೆಂ-ಏನುಮಾಡಲಿ? ಎಂದು ಅಳವಳಿದು- ಶಕ್ತಿಹೀನಳಾಗಿ, ಕಳವಳಿಸಿ-ವ್ಯಾಕುಲಪಟ್ಟು, ಮೊಕ್ಕಳಂ- ಹೆಚ್ಚಾಗಿ, ಅಳುರ್ದ- ಆವರಿಸಿದ, ಅಳಲಾಂತು- ದುಃಖಮಂ ಹೊಂದಿ, ಸುಯ್ದು- ನಿಟ್ಟುಸಿರಂಬಿಟ್ಟು, ಸಿಡಿಮಿಡಿಗೊಂಡಳ್- ಚಾಪಲ್ಯವಿಶಿಷ್ಟಳಾದಳು. ... ... ॥೬॥

ಕಾಮಾತುರಂ, ಮೇಲರಿಯದೆ- ಮುಂದಾಗುವದುತಿಳಿಯದೆ, ಆಲಿಂಗಿಸಲ್, ಎಸಗುತೆ- ಪ್ರಯತ್ನಪಡುತ್ತ, ಎನ್ನ, ಹರಣದ- ಪ್ರಾಣದ, ಅಪಾಯಕ್ಕೆ- ನಾಶಕ್ಕೆ, ಆಲಂಬನಂ- ಸಾಧಕನು, ಆದಪಂ, ಎಂದು, ಆಲಲನೆ, ಮನೋವಿಷಾದದಿಂದೆ- ಮನಸ್ಸಿನ ಕ್ಲೇಶದಿಂದ, ಇಂತು, ಎಂದಳ್. ... ... ॥೭॥

ಎಲೆ ಮೂರ್ಖರಅರಸ! ನಿನಗೆ, ಆಂ, ಪಲವಂದದಿಂ- ಅನೇಕರೀತಿಯಿಂದ, ಉಸಿರೆ- ಹೇಳಲು, ಕೇಳ್ದುದು, ಇಲ್ಲ, ಅಕಟ! ಮುಂದೆ, ಈಶ್ವರಾಜ್ಞೆಯಿಂ, ಗಲ್ಗಲನೆ- ಶೀಘ್ರವಾಗಿ, ನಿರಂಕುಶಂ- ತಡೆಯಿಲ್ಲದೆ, ಏಂ ಬಂದಪುದೋ! ಕೊಲೆಯೆ, ಬಲ್ಲಂ. ... ... ... ... ॥೮॥

ಎಲೆನೃಪತಿ ! ಎನಿತೆನಿತುಉಪಾಯದಿಂ- ಎಷ್ಟೆಷ್ಟುಯುಕ್ತಿಯಿಂದ, ಮಚ್ಚೆನೆಗೆಯ್ದೊಡಂ, ಓಪ್ರೊ ! ಪೋಗದ, ಇಡು, ಎನಗೆ, ತಪ್ಪು, ಇಲ್ಲ, ನಿನ್ನಂ, ಮನಂ, ಒಲ್ಲದುದಕ್ಕೆ, ಇಂದು, ಕಾರಣಮಂ, ಪೇಳ್ದಪೆಂ- ಹೇಳುವೆನು. ... ... ... ... ... ॥೯॥

ಕಂ ॥ ಗುರುಭಕ್ತನಲ್ಲಗಡ ನೀನು । ರ್ವರೆಯೊಳಿರುಳ್ಬಂದು ನಿನ್ನ ಗುರುವರ ನೆನ್ನೊ ॥
ಳ್ನೆರೆವಿರ್ದು ತೆಳರ್ದ ನದರಿಂ । ನರೇಂದ್ರ ನೀ ನೆಳಸೆ ಸುಸಿಲ ನಾಂ ಮೆಯ್ದುಗದೆಂ ॥೧೦॥

ವ ॥ ಎಂಬುದು ಮಾನುಡಿ ಕೂರಂಬಿನಂತೆ ಕರ್ಣಮುಂ ತಾಗೆ ಬಿಸಿಗೆಂಡಮುಂ ಮೆಟ್ಟಿದಂ
ತಿರಾಗಿ ಹೃದಯಮುಂ ಪವ್ವನೆ ಪಾರೆ ಭಯರಸದೊಳಾಳ್ದು ಹಾಹಾದೇಶಿಕೇಂದ್ರ ಕೆಟ್ಟೆಂ ಕೆಟ್ಟೆ
ನೆಂದು ಬಾಯ್ಬಿಟ್ಟು ಧರಣೀತಳದೊಳ್ ಧೊಪ್ಪನೆ ಬಿದ್ದು ॥ * * *

ಕಂ ॥ ನಡುಗುವೆರ್ದೆ ನಾಂಟಿದತಿಭಯ । ವೊಡನೊಡನುರಿದೇಳ್ವ ಶೋಕಶಿಖಿ ಬತ್ತಿದ
ಬಾ ॥ ಯ್ಗುಡುಗುಡನೆ ಸುರಿವಕಣ್ಬನಿ । ಕಡುವಿಸುಪಾಂ ತಿಳವಸುಯ್ಗಳಿರೆ ವಳಯಿಸಿದಂ ॥೧೧॥

ಕಂ ॥ ದವಶಿಖಿಯುಂ ಮಳ್ಗಿಸಿ ಮೇ । ಘವಹ್ನಿಯುಂ ಪೆರ್ಚುಗೈವ ಕಾರ್ಗಾಲದವೋಲ್ ॥
ಅವಳ ನುಡಿ ಕಾಮವಹ್ನಿಯು । ತವೆ ಮಳ್ಗಿಸಿ ಶೋಕಶಿಖಿಯ ನೇನುರ್ವಿಸಿತೋ ॥ ॥೧೨॥

ಕಂ ॥ ಗುರುನಾಥ ಹಾ ಮಹಾಗುರು । ವರ ಹಾಹಾ ಗುರುವರೇಣ್ಯ ಹಾಹಾ ಘನಪ ॥
ದ್ಮಗುರುಲಿಂಗ ಹಾ ಯೆನುತೆ ಕಾ । ಳ್ಪುರ ಮಾಗೆ ದೃಗಂಬು ಬಿಕ್ಕಿ ಬಿರಿದಳುತಾಗಳ್ ॥೧೩॥

ಮತ್ತೀ ॥ ನಡೆತಂದಾಪಣಕಾಂತೆ ಯಂಘ್ರಿಗೆರಗುತ್ತಂ ತಾಯೆ ಮೈಗೊಬ್ಬಿನಿಂ ॥
ತೊಡರ್ದಜ್ಞಾನದೆ ನಿನ್ನ ನರ್ಥಿಸಿದ ಪಾಪಂ ಪೋಪ್ಪುದೆಂತಕ್ಕ ನಿ ॥ ನ್ನೊಡ ನಾಂ ಕಾಮವಿ

---

ನರೇಂದ್ರ ! ನೀಂ, ಉರ್ವರೆಯೊಳ್, ಗುರುಭಕ್ತನಲ್ಲಗಡ ? ನಿನ್ನ, ಗುರುವರಂ, ಇರುಳ್- ರಾತ್ರಿಯ
ಲ್ಲಿ, ಬಂದು, ಎನ್ನೊಳ್, ನೆರೆದು- ಕೂಡಿ, ಇರ್ದು, ತೆಳರ್ದಂ- ಹೋದನು, ಅದರಿಂ, ನೀಂ, ಸುಸಿಲಂ- ಸುರ
ತವನ್ನು, ಎಳಸೆ, ಆಂ, ಮೆಯ್ದುಗೆದೆಂ- ದೇಹವಂ ಹಿಂತೆಗೆದೆನು. ... ... ॥೧೦॥

ಎಂಬುದುಂ, ಆನುಡಿ, ಕೂರಂಬಿನಂತೆ- ತೀಕ್ಷ್ಣವಾದ ಬಾಣದ ಹಾಗೆ, ಕರ್ಣಮುಂ- ಕಿವಿಯನ್ನು, ತಾ
ಗೆ- ಸೋಂಕಲು, ಬಿಸಿಗೆಂಡಮುಂ, ಮೆಟ್ಟಿದಂತಿರೆ, ಆಗಿ, ಹೃದಯಮುಂ, ಪವ್ವನೆ- ಬೇಗನೆ, ಪಾರೆ, ಭಯರಸದೊ
ಳ್, ಆಳ್ದು- ಮುಳುಗಿ, ಹಾಹಾ ! ದೇಶಿಕೇಂದ್ರ-ಗುರೂತ್ತಮನೇ ! ಕೆಟ್ಟೆಂ, ಕೆಟ್ಟೆಂ, ಎಂದು, ಬಾಯ್ಬಿ
ಟ್ಟು- ಕೂಗಿ, ಧರಣೀತಳದೊಳ್, ಧೊಪ್ಪನೆ, ಬಿದ್ದು. * * * * * * * * * *

ನಡುಗುವ, ಎರ್ದೆ- ಹೃದಯವು, ನಾಂಟಿದ- ನಟ್ಟುಕೊಂಡಿರುವ, ಅತಿಭಯಂ, ಒಡನೊಡನೆ, ಉರಿ
ದು, ಏಳ್ವ, ಶೋಕಶಿಖಿ- ದುಃಖಾಗ್ನಿಯು, ಬತ್ತಿದ- ರಸಹೀನವಾದ, ಬಾಯ್: ಗುಡುಗುಡನೆ, ಸುರಿವ, ಕ
ಣ್ಬನಿ, ಕಡುವಿಸುಪಾಂತು- ಬಹು ಬಿಸಿಯನ್ನು ಹೊಂದಿ, ಬೀಳುವ, ಸುಯ್ಗಳ್- ಉಸುರುಗಳು, ಇರೆ, ವಳಯಿ
ಸಿದಂ- ಪ್ರಲಾಪ ಮಾಡಿದನು. ... ... ... ... ॥೧೧॥

ದವಶಿಖಿಯುಂ- ಕಾಳ್ಕಿಚ್ಚನ್ನು, ಮಳ್ಗಿಸಿ- ಶಾಂತಿಪಡಿಸಿ, ಮೇಘವಹ್ನಿಯುಂ- ಸಿಡಿಲನ್ನು, ಪೆರ್ಚುಗೈ
ವ- ಹೆಚ್ಚು ಮಾಡುವ, ಕಾರ್ಗಾಲದವೋಲ್- ವರ್ಷಾಕಾಲದಹಾಗೆ, ಅವಳ, ನುಡಿ, ಕಾಮವಹ್ನಿಯ, ತವೆ, ಮ
ಳ್ಗಿಸಿ, ಶೋಕಶಿಖಿಯುಂ- ದುಃಖಾಗ್ನಿಯನ್ನು, ಏಂ, ಉರ್ವಿಸಿತೊ ! ... ... ॥೧೨॥

ಆಗಳ್, ಗುರುನಾಥ ! ಹಾ ! ಮಹಾಗುರುವರ ! ಹಾ ! ಹಾ !! ಗುರುವರೇಣ್ಯ ! ಹಾಹಾ !!
ಪದ್ಮಗುರುಲಿಂಗ ! ಹಾ ! ಎನುತೆ, ದೃಗಂಬು- ಕಣ್ಣೀರು, ಕಾಳ್ಪುರಂ- ಪ್ರವಾಹವು, ಆಗೆ, ಬಿಕ್ಕಿ- ಬಿರಿ
ದು, ಬಿಕ್ಕಡಿಸಿ, ಅಳುತೆ. ... ... ... ... ... ॥೧೩॥

ನಡೆತಂದು- ಬಂದು, ಆಪಣಕಾಂತೆಯ- ಆ ಸೂಳೆಯ, ಅಂಘ್ರಿಗೆ, ಎರಗುತ್ತಂ, ತಾಯೆ ! ಮೈಗೊ
ಬ್ಬಿನಿಂ- ದೇಹಮದದಿಂದ, ತೊಡರ್ದ-ಸಂಬಂಧಿಸಿದ, ಅಜ್ಞಾನದೆ, ನಿನ್ನಂ, ಅರ್ಥಿಸಿದ, ಪಾಪಂ, ಎಂತುಪೋ
ಪುದು ? ಅಕ್ಕ ! ನಿನ್ನೊಡನೆ, ಆಂ, ಕಾಮವಿಕಾರದಿಂ, ನುಡಿದ, ಅಘಕ್ಕೆ- ಪಾಪಕ್ಕೆ, ಏಗೆಯ್ವೆಂ- ಏನು



ಕಾಣದಿಂ ನುಡಿದವುಕ್ಕೇ ಗೈಕೊಂನಿನ್ನ ಸಂ । ಗಡ ಮಾಂ ನಕ್ಕ್ಪದರಾಧಮೆಂತಳಿಗು ಮಾನಿ ನ್ನಂಗಮಂ ಹೋಹದಿ । ... ... ... ... ... ॥೧೪॥

ಉ ॥ ನೋಡಿದ ದೋಷ ಮೆಂತು ಪರಿಗುಂ ಬೆಸೆಸಂಬಿಕೆ ನಿನ್ನೊಳಾಂ ಮನೆಂ । ಮಾ ಡಿದ ಘೋರದುಷ್ಕೃತಿಗೆ ನಿಷ್ಕೃತಿಯಾವುದೊ ನಿನ್ನ ನಳ್ಕರಿಂ ॥ ಕೂಡಲೊಡರ್ಚಿ ದೀದು ರಿತ ಮೇತೆರದಿಂ ತವಿಲಕ್ಕು ಮಿಂತು ರೋ । ಡಾಡುತೆ ನಿನ್ನ ನೋಯಿಸಿದ ಪಾತಕ ಮೆಂತು ವಿನಷ್ಟಮಪ್ಪುದೋ ॥ ... ... ... ... ... ॥೧೫॥

ಕಂ ॥ ಸ್ಮರಸರ್ಪಗರಳದುರಿಯಿಂ । ಉರಿದಂ ವ್ಯಾಮೋಹಮೆಂಬ ಬರಸಿಡಿಲೆರಗಿ । ತ್ತಿರಡಕ್ಕಟ ಮಾಯಾಭೀ । ಕರತರರಾಕ್ಷಸಿಯ ಬಾಯ್ಗೆ ಸವಿದುತ್ತಾದೆಂ ॥ ॥೧೬॥

ಕಂ ॥ ಎನಿತೆನಿತುಹಿತವ ನೀನೊ । ಲ್ದನುನಯದಿಂ ಪೇಳೆಕೇಳದಾಂ ಮರುಳಾದೆಂ ॥ ಜನನಿ ಮಿಗೆ ಮುನ್ನ ಮೆಂತ । ಪ್ಪನವಧಿಪಾಪಪ್ರಯುಕ್ತನೋ ಬಗೆಪಾಗಳ್ ॥ ॥೧೭॥

ಕಂ ॥ ಸಲೆ ಪೂರ್ವಜನ್ಮದೊಳ್ಗ । ಲ್ಗಲ ನದ್ವೈತಮನೆ ಪಿಡಿದು ಕಾಲತ್ರಯದೊಳ್ ॥ ನಲಿದರ್ಚಿಸಿದಾದೆನೊ ಮಂ । ಜುಳಶಿವನಂ ಷೋಡಶೋಪಚಾರಕ್ರಮದಿಂ ॥ ... ॥೧೮॥

ಕಂ ॥ ಹರನೆರೆಯು ನಾಳ್ದಲಾನೆಂ । ಬಿರವರಿದಾಚರಿಸದಾದೆನೋ ಫಲಕಾಂಕ್ಷಾ ॥ ತು ರನಾಗಿ ಪೂಜೆಗೆಯ್ದನೊ । ಪುರವೈರಿಯ ನನ್ಯಚಿತ್ತದೊಳ್ಭಜಿಸಿದೆನೋ ॥ ॥೧೯॥

---

ಮಾಡಲಿ ? ಈ ನಿನ್ನ, ಸಂಗಡಂ, ಆಂ, ನಕ್ಕ, ಅಪರಾಧಂ, ಎಂತುಅಳಿಗುಂ ? ಈ ನಿನ್ನ, ಅಂಗವಂ, ಮೋಹದಿಂ. ... ... ... ... ... ... ॥೧೪॥

ನೋಡಿದ, ದೋಷಂ, ಎಂತುಪರಿಗುಂ ? ಅಂಬಿಕೆ- ತಾಯೇ ! ಬೆಸಸು- ಅಪ್ಪಣೆಯಂ ಕೊಡು, ನಿನ್ನೊಳ್, ಆಂ, ಮನಂಮಾಡಿದ, ಘೋರದುಷ್ಕೃತಿಗೆ- ಭಯಂಕರವಾದ ಪಾಪಕ್ಕೆ, ನಿಷ್ಕೃತಿ-ಪ್ರತೀ ಕಾರವು, ಆವುದೋ ? ನಿನ್ನಂ, ಅಳ್ಕರಿಂ- ಪ್ರೀತಿಯಿಂದ, ಕೂಡಲ್, ಒಡರ್ಚಿದ- ಪ್ರಯತ್ನಪಟ್ಟ, ಈದುರಿ ತಂ, ಏತೆರದಿಂ- ಯಾವ ರೀತಿಯಿಂದ, ತವಿಲಕ್ಕುಂ- ನಾಶವಾಗುವದು ? ಇಂತು, ರೋದಿಸುತೆ- ಹೀಡಿಸು ತ್ತ, ನಿನ್ನ, ನೋಯಿಸಿದ, ಪಾತಕಂ, ಎಂತುವಿನಷ್ಟಂಅಪ್ಪುದು ! ಹ್ಯಾಗೆ ನಾಶವನ್ನೈದುವದು. ॥೧೫॥

ಸ್ಮರಸರ್ಪಗರಳದ-ಮನ್ಮಥನೆಂಬ ಸರ್ಪದ ವಿಷದ ಉರಿಯಿಂದೆ, ಉರಿದೆಂ, ವ್ಯಾಮೋಹಂ- ಅಜ್ಞಾನ ವು, ಎಂಬ, ಬರಸಿಡಿಲ್, ಎರಗಿತ್ತು- ಮೇಲೆಬಿದ್ದಿತು, ಅಕ್ಕಟ ! ಇರದೆ, ಮಾಯಾಭೀಕರರಾಕ್ಷಸಿಯ-ಮಾ ಯೆಯೆಂಬ ಭಯಂಕರಳಾದಹೆಣ್ಣುರಾಕ್ಷಸಿಯ, ಬಾಯ್ಗೆ ,ಸವಿದುತ್ತು-ರುಚಿಯಾದ ಕಬಳವು, ಆದೆಂ. ॥೧೬॥

ಜನನಿ ! ನೀಂ, ಒಲ್ದು, ಅನುನಯದಿಂ, ಎನಿತುಎನಿತುಹಿತವಂ, ಪೇಳೆ, ಆಂ, ಕೇಳದೆ, ಮರುಳ್-ಹು ಚ್ಚನು, ಆದೆಂ, ಬಗೆವಾಗಳ್- ಆಲೋಚಿಸುವಲ್ಲಿ, ಮುನ್ನಂ- ಪೂರ್ವಜನ್ಮದಲ್ಲಿ, ಮಿಗೆ, ಎಂತಪ್ಪಅನವಧಿಪಾ ಪಪ್ರಯುಕ್ತನೊ- ಎಂತಾ ಅಪಾರವಾದ ಪಾಪದಿಂ ಕೂಡಿದವನೋ ! ... ॥೧೭॥

ಸಲೆ, ಪೂರ್ವಜನ್ಮದೊಳ್, ಗಲ್ಗಲನೆ- ಬೇಗಬೇಗನೆ, ಅದ್ವೈತಮನೆ- ಜೀವಬ್ರಹ್ಮರಿಗಭೇದವನ್ನು, ಪಿಡಿದು, ಮಂಜುಳಶಿವನಂ, ಕಾಲತ್ರಯದೊಳ್- ಪ್ರಾತರ್ಮಧ್ಯಾಹ್ನಸಾಯಂಕಾಲಗಳಲ್ಲಿ, ಷೋಡಶೋಪಚಾ ರಕ್ರಮದಿಂ, ನಲಿದು, ಅರ್ಚಿಸದಾದೆನೊ- ಪೂಜಿಸದೇಹೋದೆನೊ ? ... ॥೧೮॥

ಆಂ, ಹರನುಎರೆಯನ- ಪರಮೇಶ್ವರನೆಂಬ ಸ್ವಾಮಿಯು, ಆಳ್- ಸೇವಕನು, ಎಂಬ, ಇರವರಿದು- ರೀತಿ ಯಂತಿಳಿದು, ಆಚರಿಸದಾದೆನೊ- ನಡೆಯದೇಹೋದೆನೋ ? ಪುರವೈರಿಯಂ, ಫಲಕಾಂಕ್ಷಾತುರಂ- ಪ್ರಯೋ ಜನದಾಸೆಯಲ್ಲಿ ಕುತೂಹಲವುಳ್ಳವನು, ಆಗಿ, ಪೂಜೆಗೆಯ್ದನೊ ? ಅನ್ಯಚಿತ್ತದೊಳ್- ಮತ್ತೊಂದುಕಡೆಯಲ್ಲಿ ದ್ದ ಮನಸ್ಸಿನಿಂದ, ಭಜಿಸಿದೆನೊ- ಸೇವಿಸಿದೆನೊ ? ... ... ... ॥೧೯॥

ಳಾನೆಸಗದಾದೆನೋ ಶಂಭುಗೆತ ॥
ಕಂ ॥ ರಾಜೋಪಚಾರಮಂ ನಿ । ರ್ವ್ಯಾಜದೊ
ತ್ಪೂಜೆಯ ನುಳಿದಾಹಾರಮ । ನೋಜೆಯ ನುಳಿದಳುಪಿಕೊಂಡೆನೋ ಮೂರ್ಖತೆಯಿಂ ॥
ಮತ್ತೇ ॥ ಪರಶಾಸ್ತ್ರಾವಳಿಯೊಳ್ಸದಾವಿಹರಣಂ ಬೆತ್ತಿರ್ದೆನೋ ಸತ್ಯಶಾಂ । ಕರ
ಶಾಸ್ತ್ರಾಳಿಯನವಜ್ಞೆಗೆಯ್ದೆನೊ ಬಳಲ್ದೈತಂದಮಾಹೇಶ್ವರೋ ॥ ತ್ಕರಮಂ ಮನ್ನಿಸದಾದೆ
ನೋ ಶರಣರಂ ಕಂಡಾಕ್ಷಣಂ ತನ್ನಮ । ಸ್ಕರಣಂ ಗೆಯ್ಯದೆ ಪೋದೆನೋ ಪಿರಿಯರಾಜ್ಞೋ
ಲ್ಲಂಘನಂ ಗೆಯ್ದೆನೋ ॥ ... ... ... ... ... ॥೨೧॥
ಮ ॥ ಸ್ರ ॥ ಘನಸದ್ಭಕ್ತವ್ರಾತಾನಂ ಕೆಳಗಿರೆ ಪರಿದಗ್ರಾಸನಂಗೊಂಡು ಕುಳ್ಳಿ । ರ್ದೆ
ನೊ ನೋಕಿರ್ಸಿಂ ಜಂಗಮೌಘಂಬರೆ ಸಮಯನಿಯುಕ್ತೋಪಚಾರಂಗಳಂ ಸ ॥ ಮ್ಮನದಿಂ
ದಾಂ ಮಾಡದೇಂ ಪೋದೆನೊ ಹರಚರಸತ್ಪೂಜೆಯಂಶಕ್ತಿಯಿರ್ದಂ । ತೆನೆಗಳ್ವಲ್ಲದೇನಾ
ದೆನೋಚರಚಯದೊಳ್ಪೂರ್ವಜಾತ್ಯಾದಿಯೊಳ್ಪಂ ॥ ... ... ॥೨೨॥
ಚಂ ॥ ಬಗೆದೆನೊ ಪಙ್ತಿಭೇದಮ ನೊಡರ್ಚಿದೆನೋಚರಲಿಂಗಪಙ್ತಿಯೊ । ಳ್ಮಿಗೆ ಭವಿ
ಮಾರ್ಗದೊಳ್ನಡೆದೆನೋ ಭವಿಪಾಕಮ ನುಂಡೆನೊ ಮೋಹದಿಂ ಶಿವೈ ॥ ಕ್ಯಗಣದೊಳ್ಬಗ್ಗನೇ

---

ಶಂಭುಗೆ, ನಿರ್ವ್ಯಾಜದೊಳ್- ನಿಷ್ಕಪಟದಿಂದ, ರಾಜೋಪಚಾರಮಂ, ಎಸಗದಾದೆನೊ- ಮಾಡದೇ ಹೋದೆನೊ ? ಮೂರ್ಖತೆಯಿಂ- ಮೂಢತ್ವದಿಂದ, ತತ್ಪೂಜೆಯಂ- ಆ ಶಿವನ ಪೂಜೆಯನ್ನು, ಉಳಿದು- ಬಿಟ್ಟು, ಓಜೆಯಂ-ಕ್ರಮವನ್ನು, ಅಳಿದು-ತ್ಯಜಿಸಿ, ಆಹಾರಮಂ, ಅಳುಪಿಗೊಂಡೆನೆ-ಆಸೆಗೊಂಡೆನೊ ? ॥೨೦॥

ಪರಶಾಸ್ತ್ರಾವಳಿಯೊಳ್- ಶಿವಭಕ್ತೇತರರ ಶಾಸ್ತ್ರಪಙ್ತಿಯಲ್ಲಿ, ಸದಾವಿಹರಣಂಬೆತ್ತು- ಯಾವಾಗಲೂ ಕ್ರೀಡಿಸುವವನಾಗಿ, ಇರ್ದೆನೊ ? ಸತ್ಯಶಾಂಕರಶಾಸ್ತ್ರಾಳಿಯ-ಯಥಾರ್ಥವಾದ ಶಿವಸಂಬಂಧವಾದ ಶಾಸ್ತ್ರಪಙ್ತಿಯನ್ನು, ಅವಜ್ಞೆಗೆಯ್ದೆನೊ- ತಿರಸ್ಕರಿಸಿದೆನೊ ? ಬಳಲ್ದು- ಆಯಾಸಪಟ್ಟು, ಐತಂದ- ಬಂದ, ಮಾಹೇಶ್ವರೋತ್ಕರಮಂ, ಮನ್ನಿಸದಾದೆನೊ- ಮರ್ಯಾದೆಯಿಂದ ಕಾಣದೇಹೋದೆನೊ ? ಶರಣರಂ, ಕಂಡ, ಆಕ್ಷಣಂ, ತನ್ನಮಸ್ಕರಣಂಗೆಯ್ಯದೆ, ಪೋದೆನೋ? ಪಿರಿಯರ, ಆಜ್ಞೋಲ್ಲಂಘನಂಗೆಯ್ದೆನೊ- ಅಪ್ಪಣೆಯನ್ನತಿಕ್ರಮಿಸಿದೆನೊ ? ... ... ... ... ... ॥೨೧॥

ಘನಸದ್ಭಕ್ತವ್ರಾತಾನಂ- ಶ್ರೇಷ್ಠರಾದ ಶಿವಭಕ್ತರ ಗುಂಪು, ಕೆಳಗೆ, ಇರೆ, ಪರಿದು- ಹೋಗಿ, ಅಗ್ರಾಸನಂಗೊಂಡು- ಎತ್ತರವಾದ ಪೀಠವಂಹೊಂದಿ, ಕುಳ್ಳಿರ್ದೆನೊ ? ಜಂಗಮೌಘಂ, ಬರೆ, ಆಂ, ನೋಕಿರ್ಸಿಂ- ಗರ್ವದಿಂದ, ಸಮಯನಿಯುಕ್ತೋಪಚಾರಂಗಳಂ- ಕಾಲೋಚಿತವಾದ ಉಪಚಾರಗಳನ್ನು, ಸಮ್ಮನದಿಂ- ಸಂತೋಷದಿಂದ, ಮಾಡದೆ, ಪೋದೆನೋಏಂ ? ಶಕ್ತಿ, ಇರ್ದಂತೆ, ಹರಚರಸತ್ಪೂಜೆಯಂ- ಲಿಂಗ ಜಂಗಮರ ಪೂಜೆಯನ್ನು, ನೆಗಳಲ್- ಮಾಡುವದಕ್ಕೆ, ಸಲ್ಲದಾದೆನೊಏಂ- ಅರ್ಹನಾಗದೇಹೋದೆನೋ ? ಚರಚಯದೊಳ್- ಜಂಗಮರ ಗುಂಪಿನಲ್ಲಿ, ಪೂರ್ವಜಾತ್ಯಾದಿಯ- ಮೊದಲಿನ ಜಾತಿ ಮುಂತಾದವುಗಳ, ಒಳ್ಪಂ- ಸಮೀಚೀನತ್ವವನ್ನು. ... ... ... ... ... ॥೨೨॥

ಬಗೆದೆನೊ- ಯೋಚಿಸಿದೆನೊ? ಚರಲಿಂಗಪಙ್ತಿಯೊಳ್- ಜಂಗಮರ ಪಙ್ತಿಯಲ್ಲಿ, ಪಙ್ತಿಭೇದಮಂ- ಒಬ್ಬರಿಗೆ ಹೆಚ್ಚು ಮತ್ತೊಬ್ಬರಿಗೆ ಕಡಮೆಮಾಡಿ ಭೇದವನ್ನು, ಒಡರ್ಚಿದೆನೊ- ಮಾಡಿದೆನೊ? ಭವಿಮಾರ್ಗದೊಳ್- ಲಿಂಗಹೀನರನಡತೆಯಲ್ಲಿ, ನಡೆದೆನೋ? ಭವಿಪಾಕಮಂ- ಲಿಂಗಹೀನರು ಮಾಡಿದ ಅಡಿಗೆಯನ್ನು, ಉಂಡೆನೊ? ಮೋಹದಿಂ- ಅಜ್ಞಾನದಿಂದ, ಶಿವೈಕ್ಯಗಣದೊಳ್- ಶಿವನೊಡನೆ ಏಕತ್ವವಂ ಹೊಂದಿರುವವರ ಗುಂಪಿನಲ್ಲಿ, ಎಗ್ಗಂ, ಮೌಢ್ಯವನ್ನು, ಪಿಡಿದೆನೊ ಏಂ? ಓರ್ಮೆ, ಶಿವಭಕ್ತರೊಳ್, ಸೋಲಮಂ- ಸೋಲುವಿ

ಪಿಡಿದೆನೋ ಶಿವಭಕ್ತರೊ ಳೋರ್ಮೆ ಸೋಲಮಂ । ನೆಗಳ್ದೆನೊ ಗರ್ವದಿಂ ಜರಿದೆನೋ ಶಿವ ತತ್ತ್ವಕಳಾಪ್ರಸಂಗಮಂ ॥ ... ... ... ... ... ॥೨೩॥

ಮತ್ತೇ ॥ ಶಿವವಿದ್ಯಾಗುರುಭೇದಬುದ್ಧಿಯ ನದೇಂ ಕೈಕೊಂಡೆನೋ ಗೌರವಾಂ । ಘ್ರಿವನೇಜಾತದ ಜಾನಮಂ ತೊರೆದೆನೋ ತತ್ಪಾದಪಾದಪೂಜಾಮಹೋ ॥ ತ್ಸವಕಾಲಸ್ಯಮನಾಳ್ದೆನೋ ಮರೆದೆನೋ ತದ್ದೇಶಿಕೇಂದ್ರಾತ್ಮಸಂ । ಭವರಂ ಮನ್ನಿಪುದಂ ಭವಿಪ್ರಜದ ಮೇಳಾಪಕ್ಕೆ ಪಕ್ಕಾದೆನೋ ॥ ... ... ... ... .. ॥೨೪

ಮ॥ ಸ್ರ॥ ಪರವಾದಿವ್ರಾತ ಕಾನಳ್ಕಿದೆನೊ ಪರಶಿವಾಚಾರವಂ ಮಾಣ್ದೆನೋ ಶಾಂ । ಕರಲೀಲಾಸತ್ಕಥಾಕರ್ಣನದೊ ಳಲಸನಾಗಿರ್ದೆನೋ ಶೈವಧರ್ಮೋ ॥ ದ್ಧರಣರ್ಗ್ಗಂವಿಘ್ನಮಂ ಚಿಂತಿಸಿದೆನೊ ವಿಷಯೋದ್ರೇಕದೊ ಳ್ಸಂದೆನೋ ಭ । ಕ್ತರ ಹಾಸ್ಯೋಕ್ತಂಗಳಂ ದೂರಿದೆನೊ ತೊರೆದೆನೋ ಶೀಲವಂ ಲೌಲ್ಯದಿಂದಂ ॥ ... ... ... ॥೨೫॥

ಮ ॥ ಸ್ರ॥ ಶಿವನಿಂದಾವಾಕ್ಯಮಂ ಕೇಳ್ದೆನೊ ಪರಧನಮಂ ಕೊಂಡೆನೋ ಮೋಹದಿಂದ । ನ್ಯವಧೂಟೀಸಂಗಮಂ ಮಾಡಿದೆನೊ ಪಳಿದೆನೋ ಶಿಷ್ಟರಂ ಶೀಲಮಂ ಮಾ ॥ ಣ್ದವರೊಳ್ಕೂಡಿರ್ದೆನೋ ಸೂಸಿದೆನೊ ಧರೆಗೆ ಲಿಂಗಪ್ರಸಾದಾಂಬುವಂ ಸಾ । ಧುವಿರೋಧಂಗೆಯ್ದೆ

ಳೆಯನ್ನು, ನೆಗಳ್ದೆನೊ- ಮಾಡಿದೆನೊ ? ಗರ್ವದಿಂ, ಶಿವತತ್ತ್ವಕಳಾಪ್ರಸಂಗಮಂ- ಲಿಂಗಾಂಗಸಾಮರಸ್ಯ ಬೋಧಕವಾದ ವಿದ್ಯೆಯ ಪ್ರಸ್ತಾಪವನ್ನು, ಜರಿದೆನೋ ? ... ... ॥೨೩॥

ಶಿವವಿದ್ಯಾಗುರುಭೇದಬುದ್ಧಿಯಂ- ಶೈವವಿದ್ಯೆಯನ್ನುಪದೇಶಮಾಡಿದ ಗುರುವಿನಲ್ಲಿಅನ್ಯವಿಧವಾದ ಭಾವವನ್ನು, ಅದೇಂ ಕೈಕೊಂಡೆನೋ? ಗೌರವಾಂಘ್ರಿವನೇಜಾತದ- ಗುರುಸಂಬಂಧವಾದ ಪಾದಕಮಲದ, ಜಾನಮಂ- ಧ್ಯಾನವನ್ನು, ತೊರೆದೆನೋ- ಬಿಟ್ಟೆನೋ? ತತ್ಪಾದಪೂಜಾಮಹೋತ್ಸವಕೆ- ಆಗುರುವಿನ ಪಾದ ಪೂಜೆಯಂ ಮಾಡುವ ದೊಡ್ಡಉತ್ಸವಕ್ಕೆ, ಆಲಸ್ಯಮಂ, ಆಳ್ದೆನೋ? ತದ್ದೇಶಿಕೇಂದ್ರಾತ್ಮಸಂಭವರಂ- ಆ ಗುರುವಿನಿಂದ ಹುಟ್ಟಿದ ಮಕ್ಕಳನ್ನು, ಮನ್ನಿಪುದಂ- ಮರ್ಯಾದೆಮಾಡುವದನ್ನು, ಮರೆದೆನೋ? ಭವಿಪ್ರಜದ- ಲಿಂಗಹೀನರ ಗುಂಪಿನ, ಮೇಳಾಪಕ್ಕೆ- ಸಂಭಾಷಣೆಗೆ, ಪಕ್ಕಾದೆನೋ- ಆಸ್ಪದನಾದೆನೋ? ... ॥೨೪॥

ಆಂ, ಪರವಾದಿವ್ರಾತಕೆ-ಅನ್ಯಮತವಾದವಂಮಾಡುವವರ ಗುಂಪಿಗೆ, ಅಳ್ಕಿದೆನೋ-ಭಯಪಟ್ಟೆನೋ ಪರಶಿವಾಚಾರಮಂ, ಮಾಣ್ದೆನೋ- ಬಿಟ್ಟೆನೋ? ಶಾಂಕರಲೀಲಾಸತ್ಕಥಾಕರ್ಣನದೊಳ್- ಶಿವನ ಲೀಲಾವಿಷಯಕಗಳಾದ ಕಥೆಗಳನ್ನು ಕೇಳುವದರಲ್ಲಿ, ಅಲಸಂ-ಮತ್ತನ್ನು, ಆಗಿ ಇರ್ದೆನೋ ? ಆಂ, ಶೈವಧರ್ಮೋದ್ಧರಣರ್ಗೆ- ಶಿವಧರ್ಮಗಳಂ ಕಾಪಾಡಿದವರಿಗೆ, ವಿಘ್ನಮಂ, ಚಿಂತಿಸಿದೆನೊ- ಯೋಚಿಸಿದೆನೋ? ವಿಷಯೋದ್ರೇಕದೊಳ್- ಸ್ರಕ್ಚಂದನವನಿತಾದಿವಿಷಯಾತಿಶಯದಲ್ಲಿ, ಸಂದೆನೊ- ಸೇರಿದೆನೋ ? ಭಕ್ತರ, ಹಾಸ್ಯೋಕ್ತಂಗಳಂ- ಪರಿಹಾಸವಚನಗಳಿಂದ, ದೂರಿದೆನೋ ? ಶೀಲಮಂ- ಸದಾಚಾರವನ್ನು, ಲೌಲ್ಯದಿಂದಂ- ಚಾಪಲ್ಯದಿಂದ, ತೊರೆದೆನೋ ? ... ... ... ... ... ॥೨೫॥

ಶಿವನಿಂದಾವಾಕ್ಯಮಂ-ಪರಮೇಶ್ವರನ ದೂಷಣೆಯುಳ್ಳಮಾತನ್ನು, ಕೇಳ್ದೆನೊ ? ಪರಧನಮಂ-ಮತ್ತೊಬ್ಬರ ಹಣವನ್ನು, ಕೊಂಡೆನೋ? ಮೋಹದಿಂದೆ. ಅಜ್ಞಾನದಿಂದ, ಅನ್ಯವಧೂಟೀಸಂಗಮಂ- ಇತರ ಸ್ತ್ರೀಯ ಸಂಬಂಧವನ್ನು, ಮಾಡಿದೆನೊ? ಶಿಷ್ಟರಂ- ಸತ್ಪುರುಷರನ್ನು, ಪಳಿದೆನೋ- ತಿರಸ್ಕರಿಸಿದೆನೊ? ಶೀಲಮಂ- ಸದಾಚಾರವನ್ನು, ಮಾಣ್ದವರೊಳ್- ಬಿಟ್ಟವರೊಡನೆ, ಕೂಡಿ, ಇರ್ದೆನೊ? ಧರೆಗೆ, ಲಿಂಗಪ್ರಸಾದಾಂಬುವಂ- ಲಿಂಗಪ್ರಸಾದತೀರ್ಥಗಳನ್ನು, ಸೂಸಿದೆನೊ- ಚೆಲ್ಲಿದೆನೋ? ಸಾಧುವಿರೋಧಂಗೆಯ್ದೆನೊ- ಸತ್ಪು

ನೋ ಮಾಡಿದೆನೊ ಕಪಟಮಂ ಮಾಣ್ದೆನೋ ಭಕ್ತಿಯೊಳ್ಪಂ ॥ ... ॥೧೬॥

ಕಂ ॥ ಪರಿಕಿಪ್ಪೊಡಿವರೊಳಗೊಂದಂ । ದುರಿತಮು ನೆಸಗದೊಡೆಮುನ್ನಿಮಿಂದೆನಗೀಗಳ್ ।
ಗುರುತಲ್ಪಗಮನದೋಷಂ । ದೊರಕೊಳ್ಗುಮೆ ಜನನಿ ಮಾಣದೀಧಾರುಣಿಯೊಳ್ ॥೧೭॥

ವ ॥ ಎಂದಾಕ್ರಂದನಂಗೈದು ಮತ್ತಮಿರದೆ ॥ * * * *

ತರಳವೃತ್ತಂ ॥ ಗುರುವಿನತ್ತಿಗೆ ತಳ್ತವಾದಿನಿ ಯೋರ್ಮೆ ಸೋಂಕಿದ ಕಾಂತೆ ತ । ದ್ಗುರುವಿನೋದಿಸಿದಾಕೆ ಯೊತ್ತೆಯ ನಿತ್ತ ಕಾಮಿನಿ ಮುನ್ನಮೊ । ಲ್ದಿರಿಸಿಕೊಂಡುಳಿದಿರ್ದ ನಾರಿ ಸಹಾನ್ನಭೋಕ್ತ್ರಿಯೆನಿಪ್ಪ ಸುಂದರಿಯು ರಾಗುರುಪತ್ನಿಯೊಳ್ತೊಣೆಯೆಂಬ ರಾಗಮಕೋವಿದರ್ ॥ ... ... ... ... ... ॥೧೮॥

ಕಂ ॥ ಅದುಕಾರಣದಿಂ ನೀಂ ಗುರು । ಸುದತಿಗಡೆಲೆ ತಾಯೆ ಗುರುವಿನೊಳ್ನೆರೆದುದ
ರಿಂ । ಮದನೋದ್ರೇಕದೆ ನಿನಗಳು । ಪಿದೆ ನೀಘನದೋಷಕಾವುದೋ ಪರಿಹಾರಂ ॥೧೯॥

ಕಂ ॥ ಗುರುವಧುಗೆ ಕೂರ್ತಪಾಪಕೆ । ಪರಿಹರಮ ನಕ್ಕ ಪೇಳ್ವುದೆನಗೀಗಳೆನು ।
ತ್ತುರವಣಿಸಿದಳಲ ನೊಳಕೊಂ । ಡಿರದವಳಡಿದಳಿರೊಳೆರಗಿ ಕಣ್ಬನಿವೊನಲಿಂ ॥ ॥೨೦॥

ಮ ॥ ಸ್ರ ॥ ಲಲನಾಪಾದಾಬ್ಜಮಂ ತಾಂ ತೊಳೆಯು ತೊರಸುತಂ ಖಾಳಮಂ ಬಳ್ಕು

---

ರುಷರೊಡನೆ ವೈರವನ್ನು ಮಾಡಿದೆನೊ? ಕಪಟಮುಂ- ಮೋಸವನ್ನು, ಮಾಡಿದೆನೊ? ಭಕ್ತಿಯ, ಒಳ್ಪಂ- ಸವಿಾಚೀನತ್ವವನ್ನು, ಮಾಣ್ದೆನೊ- ಬಿಟ್ಟೆನೊ? ... ... ... ॥೧೬॥

ಜನನಿ ! ಪರಿಕಿಪ್ಪೊಡೆ- ವಿಚಾರಮಾಡಿದರೆ, ಮುನ್ನಂ- ಪೂರ್ವಜನ್ಮದಲ್ಲಿ, ಇವರೊಳಗೆ- ಈ ಪೂರ್ವೋಕ್ತವಾದವುಗಳಲ್ಲಿ, ಒಂದಂದುರಿತಮುಂ- ಒಂದು ಪಾಪಕೃತ್ಯವನ್ನು, ಎಸಗದೊಡೆ- ಮಾಡದಿದ್ದಲ್ಲಿ, ಇಂದು- ಈ ಜನ್ಮದಲ್ಲಿ, ಈಧಾರುಣಿಯೊಳ್, ಮಾಣದೆ-ಬಿಡದೆ, ಈಗಳ್, ಗುರುತಲ್ಪಗಮನದೋಷಂ-ಗುರುವಿನ ಹಾಸಿಗೆಯನ್ನು ಹೊಂದುವದರಿಂದುಂಟಾದ ಪಾಪವು, ದೊರಕೊಳ್ಗುಮೆ-ಉಂಟಾಗುವದೇ ? ... ॥೧೭॥

ಎಂದು, ಆಕ್ರಂದನಂಗೈದು, ಅತ್ತು, ಮತ್ತಂ, ಇರದೆ. * * * * * * * * *

ಆಗಮಕೋವಿದರ್, ಗುರುವಿನ, ಅತ್ತಿಗೆ- ಅಣ್ಣನ ಹೆಂಡತಿ, ತಳ್ತ, ನಾದಿನಿ- ಗುರುವಿನ ತಮ್ಮನಹೆಂಡತಿ, ಓರ್ಮೆ, ಸೋಂಕಿದ- ಗುರುವು ಸ್ಪರ್ಶವಂ ಮಾಡಿದ, ಕಾಂತೆ, ತದ್ಗುರು, ವಿನೋದಿಸಿದಾಕೆ- ಕ್ರೀಡಿಸಿದ ಸ್ತ್ರೀ, (ಗುರುವು) ಒತ್ತೆಯುಂ- ಪಣದ್ರವ್ಯವನ್ನು, ಇತ್ತ, ಕಾಮಿನಿ, ಮುನ್ನಂ, ಒಲ್ದು, ಇರಿಸಿಕೊಂಡು, ಉಳಿದು- ಬಿಡ್ಟು, ಇರ್ದ, ನಾರಿ, ಸಹಾನ್ನಭೋಕ್ತ್ರಿ- ಗುರುವಿನೊಡನೆ ಊಟವಂ ಮಾಡುವವಳು, ಎನಿಪ್ಪ, ಸುಂದರಿಯರ್, ಆಗುರುಪತ್ನಿಯೊಳ್, ತೊಣೆ- ಸಮಾನವು, ಎಂಬರ್. ... ॥೧೮॥

ಎಲೆತಾಯೆ ! ನೀಂ, ಗುರುವಿನೊಳ್ ನೆರೆದುದರಿಂ- ಕೂಡಿದ್ದರಿಂದ, ಅದುಕಾರಣದಿಂ, ಗುರುಸುದತಿಗಡ- ಗುರುವಿನ ಪತ್ನಿಯಲ್ಲವೇ? ಮದನೋದ್ರೇಕದೆ- ಕಾಮಾತಿಶಯದಿಂದ, ನಿನಗೆ, ಅಳುಪಿದೆಂ- ಆಸೆಪಟ್ಟೆನು, ಈಘನದೋಷಕೆ, ಪರಿಹಾರಂ, ಆವುದೊ? ... ... ... ॥೧೯॥

ಅಕ್ಕ ! ಗುರುವಧುಗೆ, ಕೂರ್ತ- ಅಪೇಕ್ಷಿಸಿದುದರಿಂದುಂಟಾದ, ಪಾಪಕೆ, ಪರಿಹರಮಂ, ಈಗಳ್, ಎನಗೆ, ಪೇಳ್ವುದು, ಎನುತ್ತೆ, ಉರವಣಿಸಿದ- ಗುಂಪಾದ, ಅಳಲಂ- ದುಃಖವನ್ನು, ಒಳಕೊಂಡು- ಹೊಂದಿ, ಇರದೆ- ತಪ್ಪದೆ, ಅವಳ, ಅಡಿದಳಿರೊಳ್- ಚಿಗುರಿನಂತಿರುವ ಪಾದದಲ್ಲಿ, ಎರಗಿ- ನಮಸ್ಕರಿಸಿ, ಕಣ್ಬನಿವೊನಲಿಂ- ಕಣ್ಣೀರಿನ ಪ್ರವಾಹದಿಂದ. ... ... ... ... ... ॥೨೦॥

ಅಟಕ್ತವತ್ಸಂ, ತಾಂ, ಲಲನಾಪಾದಾಬ್ಜಮಂ- ಆ ಸ್ತ್ರೀಯ ಪಾದಕಮಲವನ್ನು, ತೊಳೆಯುತ್ತೆ, ಖಾ

ತು ಸು । ಯ್ದಲಸುತ್ತುಂ ನೋವುತುಂ ಬೇಯುತೆ ಪಳಯಿಸುತಂ ಕಂದುತಂ ಕುಂದುತಂ ಪಂ॥ ಬಲಿಸುತ್ತುಂ ಸುರ್ಕುತಂ ಕಂಪಿಸುತೆ ಕರಗುತಂ ಕೋಡುತಂ ಬಾಡುತಂ ಕೋ । ಟಲೆಗಿಂಬಾಗುತ್ತೆ ಬೀಳುತ್ತೆಳಲುತೆಳುತೆ ಜೀಳಾದೆ ನಾಭಿಕ್ತ್ಪರ್ವ್ಯಂ ॥ ... ॥೨೧॥

ವ ॥ ಮತ್ತಂ ॥ ಕಂ ॥ ಮರುಗವ ನಳವಳಿವಂ ಮ । ಯ್ಗರೆವಂ ಕಳವಳಿವ ನಂತೆ ಮೂರ್ಛೆಗೆ ಸಲ್ವಂ ॥ ಮರುಕಣಿಪ ಶೋಕದಿಂ ಸೈ । ಗರೆವಂ ಕಣ್ಣನಿಯ ನಿಳೆಯೊಳುರುಳ್ವಂ ಪೊರಳ್ವಂ ॥ ... ... ... .. ... ॥೨೨॥

ಚಂ ॥ ಬರಿದೊರೆವೋದು ದೆನ್ನಯವಿವೇಕ ಮಡಂಗಿದು ದೆನ್ನಸೈಪುಕ । ಟ್ಟರಕ ಶಿವೇಶಿಕೇಂದ್ರಪದಭಕ್ತಿಮಹಾನಿಧಿ ಮಾಯವಾದು ದೆ ॥ ನ್ನರಿ ವೊಳಸಾರ್ದು ದಿಂಗಿದುದು ಕೀರ್ತಿತರಂಗಿಣಿ ಕೆಟ್ಟೆ ನಕ್ಕಟ । ನ್ನರಿಕೆಯ ಶೈವಧರ್ಮ ಮಳಿವಾಂತುದು ನಿನ್ನಳವಾಂತ ದೂಸರಿಂ ॥ ... ... ... ... ... ... ॥೨೩॥

ಕಂ ॥ ಗುರುವಧು ಗಳುಪಿದದೋಷಾ । ಕರ ನಮೃತಕಳಾಕ್ಷಯಕ್ಕೆ ಪಕ್ಕಾದಂ ದಲ್ ॥ ಗುರುವಧು ಗಳುಪಿದ ದೋಷಾ । ಕರನಾದೆನಗಮೃತಭಾವ ಮೇಕ ಸಮನಿಕುಮೇ ॥೨೪॥

---

ಳನುಂ- ಹಣೆಯುನ್ನು, ಒರಸುತಂ- ತೀಡುತ್ತ, ಬಳ್ಲುತಂ, ಸುಯ್ದು- ಉಸುರಂ ಬಿಟ್ಟು, ಅಲಸುತ್ತಂ- ಆಲಸ್ಯಪಡುತ್ತ, ನೋವುತಂ, ಬೇಯುತಂ- ಸಂತಾಪವಂ ಹೊಂದುತ್ತ, ಪಳಯಿಸುತಂ- ಪ್ರಲಾಪವಾಡುತ್ತ, ಕಂದುತಂ- ಕಾಂತಿಹೀನನಾಗುತ್ತ, ಕುಂದುತಂ- ಕೃಶನಾಗುತ್ತ, ಪಂಬಲಿಸುತ್ತಂ, ಸುರ್ಕುತಂ- ಹ್ರಾಸವನ್ನೈದುತ್ತ, ಕಂಪಿಸುತೆ, ಕರಗುತಂ, ಕೋಡುತಂ- ಭಯಪಡುತ್ತ, ಬಾಡುತಂ- ರಸಹೀನನಾಗುತ್ತ, ಕೋಟಲೆಗೆ- ಕೊರತೆಗೆ, ಇಂಬಾಗುತ್ತೆ- ಆಸ್ಪದನಾಗುತ್ತ, ಬೀಳುತ್ತ ಅಳಲುತೆ- ಖೇದಪಡುತ್ತೆ, ಅಳುತೆ. ಬೇಳ್- ಪ್ರಜ್ಞಾಹೀನನು, ಆದಂ. ... ... ... ... ... ... ॥೨೧॥

ಮರುಗುವಂ- ದುಃಖಪಡುವನು, ಅಳವಳಿವಂ- ಶಕ್ತಿಹೀನನಾಗುವನು, ಮಯ್ಗರೆವಂ- ಅವಿತುಕೊಳ್ಳುವನು, ಕಳವಳಿಪಂ- ವ್ಯಾಕುಲಪಡುವನು, ಅಂತೆ- ಹಾಗೆಯೇ, ಮೂರ್ಛೆಗೆಸಲ್ವಂ- ಪರವಶನಾಗುವನು, ಮರುಕಣಿಪ- ಪುನಃಪುನಃಹೆಚ್ಚಾಗುವ, ಶೋಕದಿಂ, ಕಣ್ಣನಿಯಂ, ಸೈಗರೆವಂ, ಸುರಿಸುವನು, ಇಳೆಯೊಳ್, ಉರುಳ್ವಂ, ಪೊರಳ್ವಂ. ... ... ... ... ... ॥೨೨॥

ನಿನ್ನ, ಅಳವಾಂತ- ಆಸೆಯಂ ಹೊಂದಿದ, ದೂಸರಿಂ- ಕಷ್ಟದಿಂದ, ಎನ್ನಯ, ವಿವೇಕಂ ಬರಿದೊರೆವೋದುದು-ನೀರಿಲ್ಲದಹೊಳೆಯಾಯ್ತು, ಎನ್ನ, ಸೈಪು-ಪುಣ್ಯವು, ಅಡಂಗಿದುದು. ಕಟ್ಟರಕದ-ಅತಿಪ್ರೀತಿಯುಳ್ಳ, ದೇಶಿಕೇಂದ್ರಪದಭಕ್ತಿಮಹಾನಿಧಿ- ಗುರುವರನ ಪಾದದ ಭಕ್ತಿಯೆಂಬ ದೊಡ್ಡನಿಕ್ಷೇಪವು, ಮಾಯಂ, ಆದುದು, ಎನ್ನ, ಅರಿವು- ತಿಳುವಳಿಕೆಯು, ಒಳಸಾರ್ದುದು- ಒಳಕ್ಕೆ ಇಳಿದುಹೋಯ್ತು, ಕೀರ್ತಿತರಂಗಿಣಿ- ಸತ್ಕೀರ್ತಿಯೆಂಬ ಹೊಳೆಯು, ಇಂಗಿದುದು- ಬತ್ತಿತು, ಕೆಟ್ಟಂ, ಅಕ್ಕಟ ! ಎನ್ನ, ಅರಿಕೆಯ-ಸುಜ್ಞಾನದಿಂ ಪ್ರಾಪ್ತವಾಗಿದ್ದ, ಶೈವಧರ್ಮಂ, ಅಳಿವಾಂತುದು-ನಾಶವಾಯ್ತು. ... ... ... ॥೨೩॥

ಗುರುವಧುಗೆ- ಗುರುವಿನ, (ಬೃಹಸ್ಪತಿಯ) ಪತ್ನಿಯಲ್ಲಿ, ಅಳುಪಿದ-ಆಸೆಯಂ ಮಾಡಿದ, ದೋಷಾಕರಂ- ಪಾಪಾಸ್ಪದನು (ಚಂದ್ರನು) ಅಮೃತಕಳಾಕ್ಷಯಕ್ಕೆ-ಮೋಕ್ಷಸಾಧಕವಾದ ವಿದ್ಯೆಯನಾಶಕ್ಕೆ (ಅಮೃತಮಯವಾದ ಕಿರಣದ ನಾಶಕ್ಕೆ,) ಪಕ್ಕಾದಂ- ಆಸ್ಪದನಾದನು, ದಲ್- ನಿಶ್ಚಯ; ಗುರುವಧುಗೆ- ಗುರುವಿನಪತ್ನಿಯಲ್ಲಿ, ಅಳುಪಿದ- ಕೆಟ್ಟ ಆಸೆಯಂ ಮಾಡಿದ, ಎನಗೆ, ಅಮೃತಭಾವಂ-ಮರಣರಾಹಿತ್ಯವು, ಸಮನಿಕುಮೇ-ಪ್ರಾಪ್ತವಾಗುವದೇ ? ... ... ... ... ... ॥೨೪॥

ವ ‖ ಎಂದಿಂತು ನೊಂದುನುಡಿದಳವಿಗಳದಳಲಂ ಸೈರಿಸಲಾರದೆ ‖ * * * *

ಕಂ ‖ ಉರಿಯಂ ಪೊಕ್ಕಳಿವೆನೊ ಸಾ। ಗರದೊಳ್ಪೊಕ್ಕಾಳ್ದು ಮಡಿವೆನೋ ಕಡಿಕಡಿದೆ ‖ ಳ್ತರದಿಂ ದಿಗ್ಬಲಿ ಗುಡುವೆನೊ। ಶರೀರಮಂ ಪುಗುವೆನೋ ಪುರಾರಿಯ ಬಸಿರಂ ‖

ವ ‖ ಎಂದು ಪಲುಂಬಿ ತನ್ನಸುವಂ ವಿಸರ್ಜಿಸ ಲೆಳಸಿ ಮತ್ತ ಮಿರದಾಮಂದಗಮನೆಯ ಮಂದಿರಕ್ಕೆ ರಾಗದಿಂ ನಡೆಗೊಂಡ ಕಾಲ್ಗಳಂ ಕಡಿದುಕಂಡಂಗೆಯ್ದು ದೆಸೆದೆಸೆಗೀಡಾಡಲುಮಾಸುಂದರಿಯಸೌಂದರ್ಯಮ ನವಲೋಕನಂ ಗೆಯ್ದ ನಿಜನೇತ್ರಂಗಳ ನುತ್ಪಾಟನಂಗೆಯ್ದುರಿಯೊಳುರುಪಲು ಮಾಮೃದುಸ್ಮಿತಮುಖಿಯೊಡನೆ ನಕ್ಕು ನಲಿದನಿಜಾಸ್ಯವಿವರರದನಂಗಳಂ ಕೊಯ್ಯೊಗ್ಗಿಯ್ದು ನುರ್ಚುನುರಿಮಾಡಿ ಕಲ್ಲೊಳಿಟ್ಟರೆಯಲು ಮಾಮಧುರಾಧರೆಯಧರರಸಮಂ ಬಯಸಿ ಪಲವುಗಳಪಿದ ರಸನೆಯಂಕೀಳ್ತು ಸೀಳ್ದು ಬಿಸಿಗಾವಲಿಯೊಳಿಕ್ಕಿ ಪುರಿಯಲು ಮಾಲತಾಂಗಿಯಂಗಮ ನಾಲಿಂಗನಂ ಗೆಯ್ಯ ಲೆಳಸಿದ ತೋಳ್ಗಳಂ ತುಂಡಿಸಿ ಕಿರಿಕಿರಿದಾಗಿ ತರಿದು ತನಿಗೆಂಡದೊಳಿಕ್ಕಿ ಚುರ್ಚಲು ಮಾನಿಬಿಡೋತ್ತುಂಗಕುಚೆಯ ಕುಚಯುಗಳಮ ನಪ್ಪ ಲಳ್ತಿವಟ್ಟ ವಕ್ಷಸ್ಥಳಮ ನಿರಿದಿರಿದು ಖಂಡಂಗಳಂ ತೆಗೆದೊರಳೊಳಿಕ್ಕಿ ಮಿಡಿಯಲು ಮಟವಟಸಿ ಸಿಡಿಮಿಡಿಗೊಂಡಂತಿಂತೆಸಗಿದಲ್ಲದೀದೋಷಂ ಪರಿಪಡದೆಂದು ನೆನೆದುಮ

---

ಎಂದು, ಇಂತು, ನೊಂದು, ನುಡಿದು, ಅಳವಿಗೆಅಳ್ದ- ಗಣಿಸಲಶಕ್ಯವಾದ, ಅಳಲಂ- ದುಃಖವನ್ನು, ಸೈರಿಸಲ್, ಆರದೆ. * * * * * * * * * * * * * * * *

ಉರಿಯಂ- ಜ್ವಾಲೆಯನ್ನು, ಪೊಕ್ಕು, ಅಳಿವೆನೊ- ಸಾಯಲೋ? ಸಾಗರದೊಳ್, ಪೊಕ್ಕು, ಆಳ್ದು- ಮುಳುಗಿ, ಮಡಿವೆನೋ- ಸಾಯಲೋ ? ಶರೀರಮಂ, ಕಡಿಕಡಿದು, ಎಳ್ತರದಿಂ- ಆಧಿಕ್ಯದಿಂದ, ದಿಗ್ಬಲಿಗುಡುವೆನೋ- ದಿಕ್ಪೂಜೆಯಂಮಾಡಲೋ ? ಪುರಾರಿಯ- ಶಿವನ, ಬಸಿರಂ- ಹೊಟ್ಟೆಯನ್ನು, ಪುಗುವೆನೋ- ಪ್ರವೇಶಮಾಡಲೋ ? ... ... ... ... ... ‖೩೪‖

ಎಂದು, ಪಲುಂಬಿ, ತನ್ನ, ಅಸುವಂ, ವಿಸರ್ಜಿಸಲ್- ಬಿಡುವದಕ್ಕೋಸ್ಕರ, ಎಳಸಿ- ಅಪೇಕ್ಷಿಸಿ, ಮತ್ತಂ, ಇರದೆ, ಆ ಮಂದಗಮನೆಯ, ಮಂದಿರಕ್ಕೆ- ಮನೆಗೆ, ರಾಗದಿಂ- ಪ್ರೀತಿಯಿಂದ, ನಡೆಗೊಂಡ- ನಡೆದ, ಕಾಲ್ಗಳಂ, ಕಡಿದು, ಕಂಡಂಗೈದು- ತುಂಡುಮಾಡಿ, ದೆಸೆದೆಸೆಗೆ- ದಿಕ್ಕುದಿಕ್ಕಿಗೆ, ಈಡಾಡಲುಂ- ಬಿಸಾಡುವದಕ್ಕೂ, ಆ ಸುಂದರಿಯ, ಸೌಂದರ್ಯಮಂ, ಅವಲೋಕನಂಗೆಯ್ದ, ನಿಜನೇತ್ರಂಗಳಂ, ಉತ್ಪಾಟನಂಗೆಯ್ದು- ಕಿತ್ತು, ಉರಿಯೊಳ್- ಅಗ್ನಿಜ್ವಾಲೆಯಲ್ಲಿ, ಉರುಪಲುಂ- ಸುಡುವದಕ್ಕೂ, ಆಮೃದುಸ್ಮಿತಮುಖಿಯೊಡನೆ- ಆ ಮಂದಹಾಸ ವಿಶಿಷ್ಟವಾದ ಮುಖವುಳ್ಳ ಪ್ರೌಢಮತಿಯ ಸಂಗಡ, ನಕ್ಕು, ನಲಿದ- ಸಂತೋಷಪಟ್ಟ, ನಿಜಾಸ್ಯ ವಿವರದ- ತನ್ನಬಾಯ, ರದನಂಗಳಂ- ಹಲ್ಲುಗಳನ್ನು, ಕೊಯ್ಯೊಗ್ಗಿಯ್ದು, ನುರ್ಚುನುರಿ ಮಾಡಿ, ಕಲ್ಲೊಳ್, ಇಟ್ಟು, ಅರೆಯಲುಂ, ಆ ಮಧುರಾಧರೆಯ, ಅಧರರಸಮಂ, ಬಯಸಿ, ಪಲವು- ಅನೇಕ ಮಾತನ್ನು, ಗಳಪಿದ- ಹರಟಿದ, ರಸನೆಯಂ- ನಾಲಗೆಯನ್ನು, ಕೀಳ್ದು, ಸೀಳ್ದು, ಬಿಸಿಗಾವಲಿಯೊಳ್ ಇಕ್ಕಿ, ಪುರಿಯಲುಂ- ಹುರಿಯುವದಕ್ಕೂ, ಆ ಲತಾಂಗಿಯ, ಅಂಗಮಂ, ಆಲಿಂಗನಂಗೆಯ್ಯಲ್, ಎಳಸಿದ, ತೋಳ್ಗಳಂ, ತುಂಡಿಸಿ, ಕಿರಿಕಿರಿದಾಗಿ, ತರಿದು, ತನಿಗೆಂಡದೊಳ್, ಇಟ್ಟು, ಚುರ್ಚಲುಂ- ಸುಡುವದಕ್ಕೂ, ಆ ನಿಬಿಡೋತ್ತುಂಗಕುಚೆಯ- ದಟ್ಟವಾಗಿಯೂ ದಪ್ಪವಾಗಿಯೂ ಇರುವ ಸ್ತನಗಳುಳ್ಳ ಆ ಪ್ರೌಢಮತಿಯ, ಕುಚಯುಗಳಮಂ, ಅಪ್ಪಲ್- ತಬ್ಬುವದಕ್ಕೆ, ಅಳ್ತಿವಟ್ಟ- ಆಸೆಯಂ ಹೊಂದಿದ, ವಕ್ಷಸ್ಥಳಮಂ- ಎದೆಯನ್ನು, ಇರಿದು ಇರಿದು, ಖಂಡಂಗಳಂ, ತೆಗೆದು, ಒರಳೊಳ್- ಒರಳಕಲ್ಲಿನಲ್ಲಿ, ಇಕ್ಕಿ, ಮಿಡಿಯಲುಂ- ಕುಟ್ಟ

ಗುಳ್ದು ಮೆಯ್ಯಂ ಮರೆದು ಬಳಲ್ದು ಪಲವಂ ಪಲುಂಬು ತಲ್ಲಿಂದೇಳ್ದು ಪುರೋಪಕಂಠದು ಪವನಕ್ಕೇಳ್ತಂದು ನಿಂದು ವನಾಂತರಾಳದ ತರುನಿಕರಮಂ ಶಕುಂತಸಂತಾನಮುಮಂ ನಲ್ಲಲ್ಲಿ ಪರಿಪರಿದಭೀಕ್ಷಿಸಿ ॥ * * * * * * * *

ಮತ್ತೇ॥ ಎಲೆಮಾಕಂದಮೆ ಕಂದಿದೆಂ ನೆಗಳ್ದೆ ನಾಂ ಶ್ರೀಖಂಡಮೇ ಖಂಡಚಂ । ದ್ರಲಲಾಟಂಗಪರಾಧಮಂ ಬಸುರೆ ಕೇ ಳೆನ್ನೀಬಸಿ ರ್ಬೆಂದುದು ॥ ಜ್ವಾಲಶೋಕಾನಲನಿಂದೆ ಬೀರಮಳಿದೆಂ ಜಂಬೀರಮೇ ಮಲ್ಲಿಕಾ । ವಲಿ ಮಲ್ಲೀನವಿವೇಕಮಿಂಗಿದುದು ಬನ್ನಂಬೆತ್ತೆ ನಾಂ ಬನ್ನಿ ಕೇಳ್ ॥ ... ... ... ... ... ... ॥೩೭॥

ಕಂ ॥ ಮಾದಳಮೆ ಯೆನಗೆ ಮಿಗೆ ಸೊಂ। ಮಾದಳಪ್ವೊಳಸೋರ್ದುದ ಕ್ಕಟೇಗೆಯ್ದಪೆ ನಾಂ ॥ ಕಾದಳಮೆ ಯೆನ್ನ ಮಾನಸ।ಕಾದಳಲಂ ಪರಿವೆ ನೆಂತೊ ಶಿವಗಣಕೃಪೆಯಿಂ ॥೩೭॥

ಕಂ ॥ ಕುಂದಮೆ ಮುಕುಂದವಲ್ಲಭ । ನೆಂದೊಲ್ದಪನೆನಗೆ ಪೇಳ ಪಿಚುಮಂದಮೆ ನೇ॥ ಮಂದಪ್ಪಿದೆ ನಸುಗೆ ಯಸುಗೆ । ನಿಂದುರಿವ್ರೊಂದಂದವಮಾದುದೀದುಷ್ಕೃತದಿಂ ... ॥೩೮॥

ಕಂ ॥ ಸಂಪಗೆ ಕೇಳೆನ್ನಯಸಾ । ಸಂ ಪಗೆವ್ರೂಗೋಲನಿಂದೆ ಮಳ್ಗಿದುದು ಕೃತಾಂ ॥

---

ಪದಕ್ಕೊ, ಅಜವಟಿಸಿ- ಆತುರಪಟ್ಟು, ಸಿಡಿಮಿಡಿಗೊಂಡು- ಕೋಪವಂ ಹೊಂದಿ, ಇಂತು ಇಂತು, ಎಸಗಿದಲ್ಲದೆ, ಈ ದೋಷಂ, ಪರಿಪಡದು- ನಾಶವಾಗುವದಿಲ್ಲ, ಎಂದು, ನೆನೆದು- ಯೋಚಿಸಿ, ಮಗುಳ್ದು, ಪುನಃ, ಮೆಯ್ಯಂ, ಮರೆದು, ಬಳಲ್ದು, ಪಲವಂ- ಅನೇಕವಾತನ್ನು, ಪಲುಂಬುತೆ, ಅಲ್ಲಿಂದೆ, ಎಳ್ದು, ಪುರೋಪಕಂಠದ- ಪಟ್ಟಣದ ಸಮೀಪದಲ್ಲಿರುವ, ಉಪವನಕ್ಕೆ, ಎಳ್ತಂದು, ನಿಂದು, ವನಾಂತರಾಳದ- ತೋಟದ ಮಧ್ಯದಲ್ಲಿರುವ, ತರುನಿಕರಮಂ- ಮರಗಳ ಗುಂಪನ್ನು, ಶಕುಂತಸಂತಾನಮುಮಂ- ಪಕ್ಷಿಗಳ ಗುಂಪನ್ನೂ, ಅಲ್ಲಲ್ಲಿ, ಪರಿಪರಿದು- ಸಂಚರಿಸಿ ಸಂಚರಿಸಿ, ಅಭೀಕ್ಷಿಸಿ. * * * * * * * * * *

ಎಲೆ ಮಾಕಂದಮೆ- ಎಲೈ ಮಾವಿನ ಮರವೇ! ಆಂ, ಕಂದಿದೆಂ-ಕಾಂತಿಹೀನನಾದೆನು, ಶ್ರೀಖಂಡಮೇ! ಶ್ರೀಗಂಧವೇ ? ಖಂಡಚಂದ್ರಲಲಾಮಂಗೆ- ಚಂದ್ರನ ತುಣುಕೇ ಆಭರಣವಾಗುಳ್ಳ ಶಿವನಿಗೆ, ಅಪರಾಧಮಂ, ನೆಗಳ್ದೆಂ, ಬಸುರೆ, ಕೇಳ್, ಎನ್ನ, ಈ ಬಸಿರ್- ಈ ಹೊಟ್ಟೆಯು, ಉಜ್ವಳಶೋಕಾನಲನಿಂದೆ- ತೇಜೋ ವಿಶಿಷ್ಟವಾದ ದುಃಖಾಗ್ನಿಯಿಂದ, ಬೆಂದುದು, ಜಂಬೀರಮೆ- ನಿಂಬೆಯೇ ! ಬೀರಮಳಿದೆಂ- ಶೌರ್ಯಹೀನನಾದೆನು, ಮಲ್ಲಿಕಾವಲಿ- ಮಲ್ಲಿಗೆಯ ಬಳ್ಳಿಯಪಜ್ತಿಯೇ! ಮಲ್ಲೀನವಿವೇಕಂ- ನನ್ನಲ್ಲಿ ಅಡಗಿದ್ದ ತಿಳುವಳಿಕೆಯು, ಇಂಗಿದುದು- ನಾಶವಾಯಿತು, ಬನ್ನಿ! ಕೇಳ್, ಆಂ, ಬನ್ನಂಬೆತ್ತೆಂ-ಕಷ್ಟವಂ ಹೊಂದಿದೆನು. ... ॥೩೬॥

ಮಾದಳಮೆ! ಎನಗೆ, ಮಿಗೆ, ಸೊಮ್ಮು- ಭಾಗ್ಯವು, ಆದ, ಅಳವು- ಶಕ್ತಿಯು ,ಒಳಸೊರ್ದುದು, ಅಕ್ಕಟ! ಆಂ, ಏಗೈದಪೆಂ,– ಏನುಮಾಡಲಿ? ಕಾದಳಮೆ- ಬಾಳೆಯಗಿಡವೇ! ಎನ್ನ, ಮನಕೆ, ಆದ, ಅಳಲಂ- ದುಃಖವನ್ನು, ಶಿವಗಣಕೃಪೆಯಿಂ, ಎಂದು ಪರಿವೆನೋ? ... ... ... ॥೩೭॥

ಕುಂದಮೆ- ಮೊಲ್ಲೆಯಗಿಡವೇ! ಎನಗೆ, ಮುಕುಂದವಲ್ಲಭಂ- ಶಕ್ತಿರೂಪನಾಹ ವಿಷ್ಣುವಿಗೆ ಗಂಡನಾದ ಈಶ್ವರನು, ಎಂದು ಒಲ್ದಪಂ? ಪೇಳ- ಹೇಳು, ಪಿಚುಮಂದಮೆ- ನಿಂಬೆಯಮರವೇ!ನೇಮಂದಪ್ಪಿದೆಂ- ನಿಯಮವನ್ನತಿಕ್ರಮಿಸಿದೆನು, ಅಸುಗೆ- ಅಶೋಕವೃಕ್ಷವೇ, ಈದುಷ್ಕೃತದಿಂ- ಈ ಪಾಪದಿಂದ, ಅಸುಗೆ- ಪ್ರಾಣಕ್ಕೆ, ನಿಂದು, ಉರಿವ- ಸುಟ್ಟುಹೋಗುವ, ಒಂದು ಅಂದಂ, ಆದುದು. ... ॥೩೮॥

ಸಂಪಗೆ ? ಕೇಳ್,ಎನ್ನಯ್ಯ ಸಾಸಂ- ಸಾಹಸವು, ಪಗೆಪೂಗೋಲಿನಿಂದೆ- ಶತ್ರುವಾದ ಮನ್ಮಥನಿಂದ

ತೆ ಪಾಯ್ದರಿಯದ ಮುನ್ನೆ । ನ್ನಂ ಪಾದರಿ ಮದನವೈರಿಯೆಂತೊಲ್ದಪನೊ ॥ ॥೩೯॥

ಕಂ ॥ ಕುರವಕಮೆ ಯೆನ್ನ ಪುಣ್ಯಾಂ । ಕುರ ವಕಟ ಮುರುಂಟಿದತ್ತು ಶಿವಶಿವ ಘನಕಾ ॥
ಮರುಗವಿತಬಾಧೆಯಿಂದಂ । ಮರುಗವೆ ಮರುಳಾಗಿ ಪೊಲ್ಲವೆಸಗಿದೆ ನಲ್ತು ॥ ॥೪೦॥

ಕಂ ॥ ಆಮಳಕಮೆ ಮದ್ಗುರುವಿತ । ತಾಮಳಕರುಣಾಕಟಾಕ್ಷಮೆಂದಪ್ಪುದೊ ಪೇಳ್ ॥
ಶ್ರೀಮುಕ್ತಕ ಗುರುಭಕ್ತಿ । ಶ್ರೀಮುಕ್ತಕನಾಗಿ ಕೆಟ್ಟೆನಕಟಕಟೀಗಳ್ ॥ ... ॥೪೧॥

ಕಂ ॥ ಇರವಂತಿ ಯೆನ್ನ ಬೆಳ್ತನ । ದಿರವಂತಿಂತೆಂಬೊಡಸದಳಂಗಡ ಜಗದೊಳ್ ॥ ಕರ
ವೀರವೆ ಘನಕರುಣಾ । ಕರವೀರಪ್ರಮಥರೊಲ್ಮೆಯೆನಗೆಂತಕ್ಕುಂ ॥ ... ॥೪೨॥

ಕಂ ॥ ವರನಾರಿಕೇಳ ಕೇಳ್ಗುರು । ವರನಾರೀಕೇಳಿಗೊಲ್ದ ದುರಿತಾತ್ಮಕನಾಂ ॥ ಸರಳ
ತರುವೇಳ್ವುದೆನಗೆಲೆ । ಸರಳತರುಭಕ್ತಿವೃತ್ತಿಯೆಂತಾದಪ್ಪುದೊ ॥ ... ॥೪೩॥

ಕಂ ॥ ಜಾತಿಯೆ ಮಾಸಿದುದಿಂದುನಿ । ಜಾತಿಶಯಂ ಗುರುವಧೂಟಿಗಳುಪಿದಕತದಿಂ ॥
ಕೇತಕಿ ಸತ್ಕೃತ್ಯವನಂ । ಕೇತ ಕಿದರಿಯಾದುದೆನ್ನ ಮಾರವಿಕಾರಂ ॥ ... ॥೪೪॥

ಕಂ ॥ ಬಕಪಾದಪಮೆ ಲಲಾಟಾಂ । ಬಕಪಾದಪಯೋಜದೊಲ್ಮೆ ಯೆನಗೆಂತಕ್ಕುಂ ॥

---

ಮಳ್ಗಿದುದು- ನಾಶವಾಯ್ತು, ಪಾದರಿ! ಕೃಕಾಂತಂ- ಯಮನು, ಎನ್ನಂ, ಪಾಯ್ದು ಮೇಲೆಬಿದ್ದು, ಅರಿಯ
ದ, ಮುನ್ನ, ಮದನವೈರಿ, ಎಂತು, ಒಲ್ದಪನೊ ? ... ... ... ॥೩೯॥

ಕುರವಕಮೆ ? ಗೋರಂಟಿಯ ಮರವೇ ? ಎನ್ನ, ಪುಣ್ಯಾಂಕುರಂ, ಮುರುಂಟಿದತ್ತು- ಮುರಿದು
ಹೋಯಿತು, ಅಕಟ! ಶಿವಶಿವ ! ಮರುಗವೆ- ಮರುಗದಗಿಡವೇ ? ಘನಕಾಮರುಗವಿತಬಾಧೆಯಿಂದಂ- ಯ
ಚ್ಚಾಗ ವಿಷಯೇಚ್ಛೆಯೆಂಬ ರೋಗದಿಂದುಂಟಾದ ಎಣಿಸಲಾಗದ ನೋವಿನಿಂದ, ಮರುಳ್-ಹುಚ್ಚನು, ಆಗಿ,
ಪೊಲ್ಲದೆಸಗಿದೆನಲ್ತೆ- ಕೆಟ್ಟದ್ದನ್ನು ಮಾಡಿದ್ದೆನಲ್ಲವೇ ? ... ... ... ॥೪೦॥

ಆಮಳಕಮೆ- ನೆಲ್ಲಿಯಮರವೇ ? ಮದ್ಗುರುವಿತತಾಮಳಕರುಣಾಕಟಾಕ್ಷಂ-ಮದ್ಗುರು- ನನ್ನ ಗುರು
ವಿನ, ವಿತತ- ವಿಸ್ತಾರವಾದ, ಅಮಳ- ನಿರ್ಮಲವಾದ, ಕರುಣಾಕಟಾಕ್ಷಂ-ದಯೆಯಿಂದಕೂಡಿದ ಕಡೆಗಣ್ಣೋಟ
ವು, ಎಂದು, ಅಪ್ಪುದೊ ? ಪೇಳ್, ಶ್ರೀಮುಕ್ತಕ- ಮುತ್ತುಗದಮರವೇ ! ಈಗಳ್, ಗುರುಭಕ್ತಿಶ್ರೀಮುಕ್ತ
ಕಂ- ಗುರುಭಕ್ತಿಯೆಂಬ ಸಂಪತ್ತಿನಿಂದ ಬಿಡಲ್ಪಟ್ಟವನಾಗಿ, ಕೆಟ್ಟೆಂ, ಅಕಟ ಅಕಟ ! ... ॥೪೧॥

ಇರವಂತಿ ! ಎನ್ನ, ಬೆಳ್ತನದ- ಹುಚ್ಚುತನದ, ಇರವು- ರೀತಿಯು, ಜಗದೊಳ್, ಅಂತು, ಇಂ
ತು, ಎಂಬೊಡೆ, ಅಸದಳಂಗಡ- ಅಸಾಧ್ಯವಲ್ಲವೇ ? ಕರವೀರ- ಕಣಿಗಲೆಯಗಿಡವೇ ? ಘನಕರುಣಾಕರವೀರ
ಪ್ರಮಥರ, ಒಲ್ಮೆ, ಪ್ರೀತಿಯು, ಎಂತು, ಅಕ್ಕುಂ ? ... ... ... ॥೪೨॥

ವರನಾರಿಕೇಳ- ಶ್ರೇಷ್ಠವಾದ ತೆಂಗಿನಮರವೇ? ಕೇಳ್, ಆಂ, ಗುರುವರನಾರೀಕೇಳಿಗೆ- ಗುರುಶ್ರೇ
ಷ್ಠನ ಹೆಂಡತಿಯ ಸುರತಕ್ರೀಡೆಗೆ, ಒಲ್ದ, ದುರಿತಾತ್ಮಕಂ, ಎಲೆಸರಳತರು- ದೇವದಾರು ವೃಕ್ಷವೇ ? ಎನ
ಗೆ, ಸರಳತರಂ- ಅತಿ ಋಜುವಾದ, ಭಕ್ತಿವೃತ್ತಿ, ಎಂದು, ಆದಪುದೋ ? ಪೇಳ್ವುದು. ... ॥೪೩

ಜಾತಿಯೆ- ಜಾಜಿಯ ಗಿಡವೇ ! ಇಂದು, ಗುರುವಧೂಟಿಗೆ- ಗುರುವಿನ ಪತ್ನಿಗೆ, ಅಳುಪಿದ-
ದುರಾಸೆಪಟ್ಟ, ಕತದಿಂ- ಕಾರಣದಿಂದ, ನಿಜಾತಿಶಯಂ- ತನ್ನ ಆಧಿಕ್ಯವು, ಮಾಸಿದುದು- ಮಲಿನವಾಯ್ತು,
ಕೇತಕಿ- ತಾಳೆಯ ಮರವೇ? ಎನ್ನ, ಮಾರವಿಕಾರಂ, ಇದು, ಸತ್ಕೃತ್ಯದ-ಪುಣ್ಯಕಾರ್ಯದ, ಸಂಕೇತಕೆ, ಅರಿ-
ಶತ್ರುವು, ಆದುದು- ... ... ... ... ... ... ॥೪೪

ಬಕಪಾದಪಮೆ- ಬಕವೃಕ್ಷವೇ ? ಎನಗೆ, ಲಲಾಟಾಂಬಕಪಾದಪಯೋಜದ- ಹಣೆಯಲ್ಲಿ ಕಣ್ಣುಳ್ಳ ಶಿವ

ವಕುಳಮೆ ಪಳಿಯದೆ ಪೇಳ್ ಶೈ | ವಕುಳಮೆ ಗುರುತಲ್ಪಗಮುನಿಯುಂ ಪಿತವೆನ್ನಂ || ||೪೫||

ಕಂ || ಪಲಸೆ ಗುರುಪಾದುಕೆಯ ನಾಂ | ಪ ಲಸನ್ಮಸ್ತಕದೆ ಪಾಪಭಾರವೆ ನಾಂತೆಂ ||
ತಿಲಕಮಹೀಜಮೆ ಪೇಳ್ ಯಮಿ | ತಿಲಕಮದಾರ್ಯಾಂಘ್ರಿಸೇವೆಗಂತಳವಡುವೆಂ || ||೪೬||

ಕಂ || ಪೂಗಣೆಯನಲೆಗೆವುದೆಲೆ | ಪೂಗಮೆ ಸಚ್ಚರಿತಪೂಗಬಾಹಿರ ನಾದೆಂ || ನಾ
ಗಲತೆ ಗುರುಕರುಣ ವಿ | ನ್ನಾಗ ಲದೆಂತೆಸಪೆ ನುಸಿರುಪಾಯಮ ನೀಗಳ್ || ... ||೪೭||

ಕಂ || ಪುನ್ನಾಗಮೆ ಪರಿಪಟ್ಟುದು | ಪುನ್ನಾಗಸ್ತುತ್ಯ ಮೆನಿಪ ಮನ್ಮಹಿಮೆ ವಲಂ ||
ಚೆನ್ನಂಗಿಯೆ ಪೇಳ್ ತನ್ನಂ | ಚೆನ್ನಂಗಿತ್ತಭವ ನೆಂತುಕೃಪೆಗಯ್ದಪನೊ || ||೪೮||

ಕಂ || ತಾಳತಮಾಲವೆ ಘನಹಿಂ | ತಾಳತರುಪ್ರಕರಮೇ ಮನೋಗದವ ನಿದಂ ||
ತಾಳಲ್ಕಾರೆಂ ತತದುರಿ | ತಾಳಂಬನ ನಾದೆ ನೆಂದು ಬಿಸುಸುಯ್ವುತ್ತಂ || ... ||೪೯||

ಕಂ || ಗಿಳಿಯೆ ಧರೆಗಿಳಿದೆ ನಕ್ಕಟ | ಕಳಕಂಠಮೆ ಕಳವಳಕ್ಕೆ ಪಕ್ಕಾದೆಂ ಕೇ || ಳಳಿ
ಯೆಮುದಮುಳಿದೆ ನಿಂದು | ಜ್ವಳಶಿಖಿಶಿಖಿನಯನ ನೊಲ್ಮೆ ಗಾನೆರವಾದೆಂ || ... ||೫೦||

---

ಪಾದಕಮಲವ, ಒಲ್ಮೆ, ಎಂತು ಅಕ್ಕುಂ ? ವಕುಳಮೆ- ಪಗಡೆಯ ಮರವೇ ? ಶೈವಕುಳಂ-ಶಿವಭಕ್ತರ ಗುಂಪು, ಎನ್ನಂ, ಇವದೆ, ಗುರುತಲ್ಪಗಮುನಿ- ಗುರುವಿನ ಹಾಸಿಗೆಯಂ ಹೊಂದಿದವನು, ಎಂದು, ಪಳಿಯದೆ- ದೂಷಿಸು ವದಿಲ್ಲವೇ ? ಪೇಳ್. ... ... ... ... ||೪೫||

ಪಲಸೆ- ಹಲಸಿನ ಮರವೇ ? ಗುರುಪಾದುಕೆಯುಂ-ಗುರುವಿನ ಪಾದರಕ್ಷೆಯನ್ನು, ಆಂಪ- ಧರಿಸುವ, ಲಸನ್ಮಸ್ತಕದೆ- ಪ್ರಕಾಶಿಸುವ ಶಿರಸ್ಸಿನಲ್ಲಿ, ಪಾಪಭಾರಮಂ- ಆಂತೆಂ; ತಿಲಕಮಹೀಜಮೆ- ಯಮಿತಿಲಕಮದಾ ರ್ಯಾಂಘ್ರಿಸೇವೆಗೆ- ಋಷಿಶ್ರೇಷ್ಠನಾದ ನನ್ನ ಗುರುವಿನ ಪಾದಸೇವೆಯಂ ಮಾಡುವದಕ್ಕೆ, ಎಂತು, ಅಳವಡು ವೆಂ- ಯೋಗ್ಯನಾಗುವೆನು ? ಪೇಳ್. ... ... ... ... ||೪೬||

ಎಲೆಪೂಗಮೆ-ಎಲೈ ಅಡಕೆಯಮರವೇ ! ಪೂಗಣೆಯನ- ಮನ್ಮಥನ, ಅಲೆಗೆವಂದು-ಬಾಧೆಗಾಸ್ಪದನಾಗಿ, ಸಚ್ಚರಿತಪೂಗಬಾಹಿರಂ- ಒಳ್ಳೆಯ ನಡತೆಯ ಗುಂಪಿಗೆ ಹೊರಗಾದವನು, ಆದೆಂ, ನಾಗಲತೆ- ಎಲೆಯ ಬಳ್ಳಿ ಯೇ ? ಇನ್ನು, ಗುರುಕರುಣಂ, ಆಗಲ್, ಉಂಟಾಗುವದಕ್ಕೆ, ಅದುಎಂತುಎಸಪೆಂ-ಅದು ಹ್ಯಾಗೆಮಾಡಲಿ, ಈಗಳ್,ಉಪಾಯಮಂ, ಉಸಿರ್. ... ... ... ... ||೪೭||

ಪುನ್ನಾಗಮೆ- ಸುರಹೊನ್ನೆಯ ಮರವೇ! ಪುನ್ನಾಗಸ್ತುತ್ಯಂ- ಪುರುಷಶ್ರೇಷ್ಠರಿಂದ ಹೊಗಳಿಸಿಕೊ ಳ್ಳಲ್ಪಡುವದಕ್ಕೆ ಯೋಗ್ಯವಾದದ್ದು, ಎನಿಪ, ಮನ್ಮಹಿಮೆ- ನನ್ನ ಮಹತ್ವವು, ವಲಂ- ನಿಶ್ಚಯವಾಗಿ, ಪರಿಪ ಟ್ಟುದು-ನಾಶವಾಯ್ತು, ಚೆನ್ನಂಗಿಯೆ ! ತನ್ನಂ-ಚೆನ್ನಂಗೆ- ಮಾದರಚನ್ನಯ್ಯನಿಗೆ, ಇತ್ತ, ಅಭವಂ, ಎಂ ತುಕೃಪೆಗೆಯ್ದಪನೊ ? ಪೇಳ್. ... ... ... ... ||೪೮||

ತಾಳತಮಾಲವೆ- ತಾಳೆಯಮರ ಹೊಂಗೆಯ ಮರವೇ ? ಘನಹಿಂತಾಳತರುಪ್ರಕರಮೆ- ದೊಡ್ಡದಾದ ಶ್ರೀತಾಳೆಯಮರಗಳ ಸಮೂಹವೇ ! ಇದುಮನೋಗದಮಂ-ಈಮನೋರೋಗವನ್ನು,ತಾಳಲ್ಕೆ, ಆರೆಂ-ಸಮ ರ್ಥನಾಗಲಾರೆನು, ತತದುರಿತಾಳಂಬನಂ- ವಿಸ್ತಾರವಾದ ಪಾಪಕ್ಕಾಶ್ರಯನು, ಆದೆಂ, ಎಂದು, ಬಿಸುಸು ಯ್ವುತ್ತಂ-ಬಿಚ್ಚಗೆ ನಿಟ್ಟುಸುರಬಿಡುತ್ತ. ... ... ... ||೪೯||

ಗಿಳಿಯೆ, ಧರೆಗೆ, ಇಳಿದೆಂ, ಅಕ್ಕಟ! ಕಳಕಂಠಮೆ- ಕೋಗಿಲೆಯೇ! ಕಳವಳಕ್ಕೆ, ಪಕ್ಕ ಆಶ್ರಯನು,ಆ ದೆಂ, ಅಳಿಯೆ-ಭ್ರಮರವೇ!ಕೇಳ್, ಮುದಮುಳಿದೆಂ-ಸಂತೋಷಹೀನನಾದೆನು,ಇಂದು, ಆಂ, ಉಜ್ವಳಶಿಖಿಶಿಖಿನ ಯನನ- ಪ್ರಕಾಶಿಸುವ ಜ್ವಾಲೆಯುಳ್ಳ ಅಗ್ನಿಯೇ ಕಣ್ಣಾಗುಳ್ಳ ಶಿವನ, ಒಲ್ಮೆಗೆ, ಎರವು-ಅಗಲಿದವನು, ಆದೆಂ.

ಕಂ ॥ ಕಳಹಂಸ ಕಳೆದುದೆನ್ನಯ।ತಿಳಿ ವೆಲಿತಿಳಿಗೊಳಮೆ ನಳಿನಮೇ ನಲವಳಿದೆಂ॥ತಳ
ಮಳಗುಗೊಳುತೆಲಲಿತೋ।ತ್ಪಳಕುಳಮೆ ಬಳಲ್ದೆ ನಳವಿಗಳದಳಲಿಂದಂ ॥ ... ॥೫೧॥
ವ ॥ ಎಂದಮಂದಶೋಕೋದ್ರೇಕದಿಂ ಮಿಗೆ ಪಲವಾಡಿ ಪಲುಂಬಿ ಪಳಯಿಸಿ ॥ *
ಚಂ॥ ಬನದೊಳೆ ತತ್ತನೂದರಿಯ ಪೆರ್ಮೊಲೆಯೆಂದು ರಥಾಂಗಮಂ ದಳ। ದ್ವನಜಮ
ನಾಸ್ಯಮೆಂದು ತಳಿರಂ ಕರಮೆಂದು ಲತಾಂಗಮೆಂದು ಚಂ ॥ ದನತರುಶಾಖೆಯಂ ಚಿಕುರಮೆಂದ
ಳಿಮಾಲೆಯ ನಲ್ಲಿನೋಡಲುಂ । ನೆನೆಯಲು ಮಳ್ಕಿ ಬಳ್ಕಿ ಮಗುಳೆಯ್ದಿದ ನಾಪುರದತ್ತ
ಧಾತ್ರಿಪಂ ॥ ... ... ... ... ... ... ॥೫೨॥
ವ ॥ ಅಂತೆಳ್ತಂದೊಂದು ಶಿವನಿಳಯ ಮಿದಿರೊಳಿರೆ ಕಂಡಲ್ಲಿಗೆಯ್ದಿವಂದು ॥ *
ಉ ॥ ಸಾಲಮೆ ಸಾಲದೇ ನಿನಿತವಸ್ಥೆ ಕನತ್ಕಲಶಪ್ರಬದ್ಧಲಿಂ ।ಗಾಲಯದಗ್ರಗೋಪು
ರಮೆ ಪಾಪವಿಲೋಪಕೆ ಬುದ್ಧಿವೇಳ್ ಮಹಾ ॥ ಕಾಲಗಣೇಶ ಕಾಲಭಯಮಂ ಪರಿ ಮುಂದ
ಣನಂದಿ ನಂದಿಸೆ । ನ್ನೀಲಯಕಾರಿತಾಪಶಿಖಿಯಂ ಶಿಖಿವಾಹನ ಪಾರಿಸಳ್ಕರಿಂ ॥ ॥೫೩॥

---

ಕಳಹಂಸ, ಎಲಿತಿಳಿಗೊಳಮೆ ! ಎನ್ನಯ, ತಿಳಿವು-ಜ್ಞಾನವು, ಕಳೆದುದು-ಜಾರಿಹೋಯ್ತು, ನಳಿನಮೆ-ಕಮಲವೇ ! ತಳಮಳಗುಗೊಳುತೆ- ಸಂಕಟಪಡುತ್ತ, ನಲವಳಿದೆಂ- ಸಂತೋಷಹೀನನಾದೆನು, ಲಲಿತೋತ್ಪಳಕುಳಮೆ- ಮನೋಹರವಾದ ನೈದಿಲೆಯ ಗುಂಪೇ ! ಅಳವಿಗೆ ಅಳಿದ- ಎಣಿಸುವದಕ್ಕಾಗದ, ಅಳಲಿಂದಂ-ದುಃಖದಿಂದ, ಬಳಲ್ದೆಂ- ಆಯಾಸಪಟ್ಟೆನು. ... ... ... ॥೫೧॥

ಎಂದು, ಅಮಂದಶೋಕೋದ್ರೇಕದಿಂ, ಮಿಗೆ, ಪಲವಾಡಿ- ಅನೇಕ ಪ್ರಕಾರವಾಗಿ ಮಾತನಾಡಿ, ಪಲುಂಬಿ- ಹಂಬಲಿಸಿ, ಪಳಯಿಸಿ- ಪ್ರಳಾಪವಂಮಾಡಿ. * * * * * * * * * * *

ಧಾತ್ರಿಪಂ- ಗುರುಭಕ್ತರಾಜನು, ಬನದೊಳ್- ಅರಣ್ಯವಲ್ಲಿ, ರಥಾಂಗಮಂ- ಚಕ್ರವಾಕ ಪಕ್ಷಿಯನ್ನು, ತತ್ತನೂದರಿಯ- ಅಕೃಶವಾದ ಮಧ್ಯವುಳ್ಳ ಪ್ರೌಢಮತಿಯ, ಪೆರ್ಮೊಲೆ-ದಪ್ಪಮೊಲೆಯು, ಎಂದು ದಳದ್ವನಜಮಂ-ಅರಳುತ್ತಿರುವ ಕಮಲವನ್ನು, ಆಸ್ಯಂ, ಮುಖವು, ಎಂದು ತಳಿರಂ- ಚಿಗುರನ್ನು, ಕರಂ- ಹಸ್ತವು, ಎಂದು, ಚಂದನತರುಶಾಖೆಯಂ- ಶ್ರೀಗಂಧದ ಮರದ ಕೊಂಬೆಯನ್ನು, ಲತಾಂಗಂ- ಬಳ್ಳಿಯಂತಿರುವ ದೇಹವು, ಎಂದು ಅಳಿಮಾಲೆಯಂ- ಭ್ರಮರ ಪಙ್ಕ್ತಿಯನ್ನು, ಚಿಕುರಂ-ಕೇಶವು, ಎಂದು, ಅಲ್ಲಿ-ನೋಡಲುಂ, ನೆನೆಯಲುಂ, ಅಳ್ಕಿ- ಹೆದರಿ, ಬಳ್ಕಿ- ನಡುಗಿ, ಮಗುಳ್ ಪುನಃ, ಆಪುರದತ್ತ- ತನ್ನ ಆ ಪಟ್ಟಣದ ಕಡೆಗೆ, ಎಯ್ದಿದಂ-ಹೋದನು. ... ... ... ... ... ... ॥೫೨॥

ಅಂತು, ಎಳ್ತಂದು, ಒಂದುಶಿವನಿಳಯಂ, ಇದಿರೊಳ್-ಮುಂಗಡೆಯಲ್ಲಿ, ಇರೆ, ಕಂಡು, ಅಲ್ಲಿಗೆ, ಎಯ್ದೆವಂದು-ಹೊರಟುಬಂದು * * * * * * * * * * * * * * *

ಸಾಲಮೆ- ಪ್ರಾಕಾರವೇ ! ಇನಿತುಅವಸ್ಥೆಸಾಲದೇಂ ? ಕನತ್ಕಲಶಪ್ರಬದ್ಧಲಿಂಗಾಲಯದ- ಹೊಳೆಯುತ್ತಿರುವ ಚಿನ್ನದ ಕಲಶಗಳಿಂದ ಸಂಬಂಧಿಸಲ್ಪಟ್ಟ ಶಿವದೇವಸ್ಥಾನದ, ಅಗ್ರಗೋಪುರಮೆ- ತುದಿಯ ಗೋಪುರವೇ ! ಪಾಪವಿಲೋಪಕ- ಪಾಪದ ನಾಶಕ್ಕೆ, ಬುದ್ಧಿವೇಳ್, ಮಹಾಕಾಲಗಣೇಶ ! ಕಾಲಭಯಮಂ- ಯಮನ ದೆಸೆಯಿಂದುಂಟಾದ ಭೀತಿಯನ್ನು, ಪರಿ- ಹೋಗಲಾಡಿಸು, ಮುಂದಣನಂದಿ- ಮುಂಗಡೆಯಲ್ಲಿರುವ ನಂದೀಶ್ವರನೇ ! ಎನ್ನ, ಈಲಯಕಾರಿತಾಪಶಿಖಿಯಂ- ನಾಶಗೊಳಿಸುವ ಆಧ್ಯಾತ್ಮಿಕಾದಿತಾಪಗಳೆಂಬ ಈ ಬೆಂಕಿಯನ್ನು, ನಂದಿಸು- ಆರಿಸು; ಶಿಖಿವಾಹನ- ನವಿಲೇ ವಾಹನವಾಗುಳ್ಳ ಷಣ್ಮುಖನೇ ! ಅಳ್ಕರಿಂ, ಪಾಲಿಸು. ... ... ... ... ... ॥೫೩॥

ಕಂ ॥ ಎಲೆವೀರಭದ್ರ ಭದ್ರಮ। ನಲಸದೆ ನೀಂ ಮಾಡು ದೇವಿ ದೇವೇಶನ ನಿ॥ ಶ್ಚಲಭ ಕ್ತಿಗುಡು ದೃಢವ್ರತ । ದೊಲವಂ ಪ್ರಮಥರ್ಕಳಿತ್ತು ಪಾಲಿಪುದೆನ್ನಂ ॥ ... ॥೫೪॥

ಕಂ ॥ ಪೂತಪುರಾತನಗಣವಿ । ಖ್ಯಾತಾಸಂಖ್ಯಾತಭಕ್ತಗಣರುದ್ರಗಣ ॥ ವ್ರಾತಮೆ ಕೃಪೆಯಿಂ ಮತ್ಕೃತ । ಪಾತಕ ಮಳಿವಂದಮಂ ನಿರೂಪಿಪುದೀಗಳ್॥ ... ॥೫೫॥

ಕಂ ॥ ಪಲವಂದದಿ ನೀತೆರದಿಂ।ಪಲುಂಬಿ ಫಲಮೇಂ ಮಹೇಶ್ವರಾ-ಶಂಕರ ನಿ॥ಶ್ಚಲತೆ ಮಿ ಗೆ ಮತ್ತನುವ ನಿದ । ನಲಸದಣಂ ಬಿಟ್ಟು ಶುದ್ಧ ನಪ್ಪೆ ನಮೋಘಂ ॥ ... ॥೫೬॥

ವ ॥ ಎಂದು ದೃಢಪ್ರತಿಜ್ಞನಾಗಿ ತನ್ನಂ ಪರಿಛೇದಿಸ ಲ್ಸನ್ನದ್ಧನಾಗಿ ॥ * * *

ಕಂ ॥ ಎರಡುಂಕಣ್ಗಳ ನಾರ್ದು। ಬ್ಬರಿಸುತ್ತಂ ಮೀಂಟ ಕಳೆದು ಕರವಾಳಂದಂ ॥ ಕೊ ಕಳ ನರಿವೆಡೆಯೊಳರಸುತ । ಪರಿತಂ ದವನಗ್ರಜಾತಭಕ್ತಂ ಕಂಡಂ ॥ ... ॥೫೭॥

ಕಂ ॥ ವರಗುಣನಿಧಿ ಗುರುವರಕರ । ಸರಸಿಜಸಂಜಾತ ನಮಳಚರಿತಂ ಮಹಿಮಾ ॥ ಕ ರ ನೀಶಭಕ್ತನವ ನಾ । ದರದಿಂ ಬಳಿವಂದು ನೋಡಿ ವಿಸ್ಮಯಮಾಂತಂ॥ ... ॥೫೮॥

ಚಂ ॥ ಎಲೆಗುರುಭಕ್ತರಾಜ ಗುರುಭಕ್ತಿವಿಲಾಸ ವಿನೀತಸಾರ ನಿ । ಶ್ಚಲಗುರುಭಕ್ತಿ ವಾರಿಧಿಸುಧಾಕರ ಸದ್ಗುರುಭಕ್ತಿದಿವ್ಯಮಂ ॥ ಜುಲಮಣಿರೋಹಣಾಚಲ ಮಹಾಗುರುಭಕ್ತಿ

---

ಎಲೆವೀರಭದ್ರ ! ನೀಂ, ಅಲಸದೆ, ಭದ್ರಮಂ- ಮಂಗಳವನ್ನು, ಮಾಡು, ದೇವಿ- ಪಾರ್ವತಿಯೇ ! ದೇ ವೇಶನ- ಶಿವನ, ನಿಶ್ಚಲಭಕ್ತಿಗುಡು- ಸ್ಥಿರವಾದ ಭಕ್ತಿಯನ್ನು ಕೊಡು, ಪ್ರಮಥರ್ಕಳೆ ! ದೃಢವ್ರತದ, ಒಲ ವಂ- ಪ್ರೀತಿಯನ್ನು, ಇತ್ತು, ಎನ್ನಂ, ಪಾಲಿಪುದು. ... ... ... ॥೫೪॥

ಪೂತ......ವ್ರಾತಮೆ— ಪೂತ- ಪರಿಶುದ್ಧವಾದ, ಪುರಾತನಗಣ- ಪ್ರಾಚೀನರಾದ ಗಣಂಗಳೇನು, ವಿಖ್ಯಾತ- ಪ್ರಸಿದ್ಧರಾದ, ಅಸಂಖ್ಯಾತ- ಎಣಿಸುವದಕ್ಕಾಗದ, ಭಕ್ತಗಣ- ಭಕ್ತಗಣಂಗಳೇನು, ರುದ್ರಗಣ, ಇವರುಗಳ, ವ್ರಾತವೇ- ಸಮೂಹವೇ ! ಕೃಪೆಯಿಂ, ಈಗಳ್, ಮತ್ಕೃತಪಾತಕಂ- ನನ್ನಿಂದ ಮಾಡಲ್ಪ ಟ್ಟ ಪಾಪವು, ಅಳಿವ, ಅಂದಮಂ, ನಿರೂಪಿಪುದು- ಆಜ್ಞಾಪಿಸುವದು. ... ... ॥೫೫॥

ಮಹೇಶ್ವರಾ ! ಶಂಕರ ! ಈತೆರದಿಂ, ಪಲವಂದದಿಂ, ಪಲುಂಬಿ, ಫಲಮೇಂ? ನಿಶ್ಚಲತೆ- ಮನಶ್ಚಾಂ ಚಲ್ಯರಾಹಿತ್ಯವು, ಮಿಗೆ- ಹೆಚ್ಚಾಗಲು, ಅಲಸದೆ- ಆಲಸ್ಯಪಡದೆ, ಇದಂಮತ್ತನುವಂ-ಈ ನನ್ನ ದೇಹವನ್ನು, ಅಣಂ- ಅತ್ಯಂತವಾಗಿ, ಬಿಟ್ಟು, ಅಮೋಘಂ- ವ್ಯರ್ಥವಾಗದಹಾಗೆ, ಶುದ್ಧಂ, ಅಪ್ಪೆಂ. ॥೫೬॥

ಎಂದು, ದೃಢಪ್ರತಿಜ್ಞಂ, ಆಗಿ, ತನ್ನಂ, ಪರಿಛೇದಿಸಲ್- ಕತ್ತರಿಸುವದಕ್ಕೆ, ಸನ್ನದ್ಧಂ-ಸಿದ್ಧನು, ಆಗಿ.

ಆರ್ದು- ಗಟ್ಟಿಯಾಗಿ ಕೂಗಿ, ಎರಡುಂಕಣ್ಗಳಂ, ಉಬ್ಬರಿಸುತ್ತಂ, ಕರವಾಳಿಂದಂ- ಕತ್ತಿಯಿಂದ, ಮೀಂಟಿ, ಕಳೆದು- ತೆಗೆದು, ಕೊರಳಂ, ಅರಿವ, ಎಡೆಯೊಳ್, ಅವನ, ಅಗ್ರಜಾತಭಕ್ತಂ— ಅಣ್ಣನಾದ ಭಕ್ತ ನು, ಅರಸುತೆ- ಹುಡುಕುತ್ತ, ಪರಿತಂದು, ಕಂಡಂ. ... ... ... ॥೫೭॥

ವರಗುಣನಿಧಿ, ಗುರುವರಕರಸರಸಿಜಸಂಜಾತಂ- ಗುರುಶ್ರೇಷ್ಠನ ಹಸ್ತಕಮಲದಿಂದ ಹುಟ್ಟಿದ, ಅ ಮಳಚರಿತಂ- ನಿರ್ದುಷ್ಟವಾದ ನಡತೆಯುಳ್ಳ, ಮಹಿಮಾಕರಂ, ಈಶಭಕ್ತಂ, ಅವಂ, ಆದರದಿಂ, ಬಳಿವಂದು- ಸಮೀಪಕ್ಕೆ ಬಂದು, ನೋಡಿ, ವಿಸ್ಮಯಮಾಂತಂ- ಆಶ್ಚರ್ಯವಂ ಹೊಂದಿದನು. ... ॥೫೮॥

ಗುರುಭಕ್ತಿವಿಲಾಸ- ಗುರುಭಕ್ತಿಯೇ ಲೀಲೆಯಾಗುಳ್ಳ, ವಿನೀತಸಾರ-ಗುರು ಶಿಕ್ಷಿತರಲ್ಲಿ ಶ್ರೇಷ್ಠನಾದ, ನಿಶ್ಚಲಗುರುಭಕ್ತಿವಾರಿಧಿಸುಧಾಕರ-ಶಾಶ್ವತವಾದ ಗುರುಭಕ್ತಿಯೆಂಬ ಸಮುದ್ರಕ್ಕೆ ಚಂದ್ರನಾದ, ಸದ್ಗುರು ಭಕ್ತಿದಿವ್ಯಮಂಜುಲಮಣಿರೋಹಣಾಚಲ-ಒಳ್ಳೆಯ ಗುರುಭಕ್ತಿಯೆಂಬ ಶ್ರೇಷ್ಠವಾದಮನೋಹರವಾದ ರತ್ನ

ಸುಧಾಮರಾಳ ನಿ । ರ್ಮಳಗುರುಭಕ್ತಿಭೂಷಣ ಲಸದ್ಗುರುಭಕ್ತಿಸರೋಜಭಾಸ್ಕರ ॥೫೯॥

ಕಂ ॥ ನಿನ್ನಮತಿ ನಿನ್ನನಿಷ್ಠೆ ಸ । ಮುನ್ನತ ಮೆನಿಸಿರ್ದ ನಿನ್ನಗುರುಭಕ್ತಿಸುಖಾ ॥ ಸ
ನ್ನತಿ ಸಮಸ್ತಶಿವಗಣ । ಹೃನ್ನಳಿನಕ್ಕಿರದೆ ನೆಗಳ್ದ ದತಿಶಯಮುದಮಂ ॥ ॥೬೦॥

ಕಂ ॥ ಅಪರಾಧ ಮಿಲ್ಲ ನಿನ್ನೊಳ್ । ಸುಪವಿತ್ರಚರಿತ್ರ ಬಿಡುಬಿಡೀಕಜ್ಜಮನೆಂ ॥ ದು
ಪಚರಿಸಿ ನಿಲಿಸಿ ತನ್ನಂ । ಘ್ರಿಪಯೋರುಹ ಕೆರಗಿ ಮರುಗು ವನುಜನ ನಾಗಳ್ ॥೬೧॥

ಕಂ ॥ ತೆಗೆದು ಬಿಗಿಯುಪ್ಪಿಲೋಚನ । ಯುಗ ದರುಣೋದಕವಿಮಿಶ್ರಬಾಷ್ಪಮ ನೊರ
ಸು ॥ ತ್ತಗಲದೆ ಕರಪಲ್ಲವದಿಂ । ಸುಗುಣಾಂಕಂಗುರುಪದಾಬ್ಜಮಂ ಜಾನಿಸಿದಂ ॥ ॥೬೨॥

ಚಂ ॥ ಅನಿತರೊ ಳುಣ್ಮಿದತ್ತು ನಯನದ್ವಯ ಮಾಯತಮಾಗಿ ದೇಶಿಕೇಂ । ದ್ರನ ಕ
ರುಣಾಕಟಾಕ್ಷಬಲದಿಂ ಪಿರಿದದ್ಭುತಮಾಳ್ಪ ಭಕ್ತ ॥ ರೊಲ್ದನುನಯದಿಂದುಘೇಯೆನುತೆ
ಕೀರ್ತಿಸೆ ಸುಭ್ರಮದಿಂ ನಿಜಾಲಯ । ಕ್ಕನುಪಮ ನೆಯ್ದ ತಗ್ರಜಯುತಂ ಸುಖದಿಂ ಗುರುಭ
ಕ್ತನೊಪ್ಪಿದಂ ॥ ... ... ... ... ... ॥೬೩॥

ಮ ॥ ಸ್ರ ॥ ಗುರುಭಕ್ತಕ್ಷ್ಮಾವಧೂವಲ್ಲಭನ ಕಥೆಯ ನಿಂತೊಲ್ದು ಪೇಳ್ದಾ ಮಹಾಭ
ಕ್ತರಚೇತಃಪ್ರೀತಿಯಂತಾಂ ಸಲಿಸು ತೆರಗುತಿಂತಪ್ಪ ರಿನ್ನುಂಗುರುಶ್ರೀ ॥ ಚರಣಾಂಭೋಜಾ

---

ಗಳಿಗೆ ರೋಹಣಪರ್ವತನಾದ, ಮಹಾಗುರುಭಕ್ತಿಸುಧಾಮರಾಳ- ದೊಡ್ಡಗುರುಭಕ್ತಿಯೆಂಬ ಹಾಲಿಗೆ ಹಂಸಪ
ಕ್ಷಿಯಾದ,ನಿರ್ಮಳಗುರುಭಕ್ತಿಭೂಷಣ- ನಿಷ್ಕಳಂಕವಾದ ಗುರುಭಕ್ತಿಯೇ ಆಭರಣವಾಗುಳ್ಳ, ಲಸದ್ಗುರುಭ
ಕ್ತಿಸರೋಜಭಾಸ್ಕರ-ಪ್ರಕಾಶಿಸುವ ಗುರುಭಕ್ತಿಯೆಂಬ ಕಮಲಕ್ಕೆ ಸೂರ್ಯನಾದ, ಎಲೆಗುರುಭಕ್ತರಾಜ ! ॥೫೯॥

ನಿನ್ನ, ಮತಿ, ನಿನ್ನ, ನಿಷ್ಠೆ- ಶ್ರದ್ಧೆಯು, ಸಮುನ್ನತಂ, ಎನಿಸಿ, ಇರ್ದ, ನಿನ್ನ, ಗುರುಭಕ್ತಿಸುಖಾಸ
ನ್ನತಿ- ಗುರುಭಕ್ತಿಯಿಂದುಂಟಾದ ಸೌಖ್ಯದ ಸಾಮೀಪ್ಯವರ್ತನವು, ಸಮಸ್ತಶಿವಗಣಹೃನ್ನಳಿನಕ್ಕೆ- ಸಕಲಶಿವ
ಗಣಂಗಳ ಹೃದಯಕಮಲಕ್ಕೆ, ಅತಿಶಯಮುದಮಂ, ನೆಗಳ್ದುದು. ... ... ॥೬೦॥

ಸುಪವಿತ್ರಚರಿತ್ರ ! ನಿನ್ನೊಳ್, ಅಪರಾಧಂ, ಇಲ್ಲ, ಈ ಕಜ್ಜಮಂ, ಬಿಡುಬಿಡು, ಎಂದು, ಉಪಚರಿ
ಸಿ,ನಿಲಿಸಿ, ತನ್ನ, ಅಂಘ್ರಿಪಯೋರುಹಕೆ- ಪಾದಕಮಲಕ್ಕೆ, ಎರಗಿ, ಮರುಗುವ-ದುಃಖಪಡುವ, ಅನುಜನಂ,
ತಮ್ಮನನ್ನು,ಆಗಳ್. ... ... ... ... ... ॥೬೧॥

ಸುಗುಣಾಂಕಂ, ತೆಗೆದು, ಬಿಗಿಯುಪ್ಪಿ, ಲೋಚನಯುಗದ- ಎರಡು ಕಣ್ಣಿನ, ಅರುಣೋದಕವಿಮಿಶ್ರ
ಬಾಷ್ಪಮಂ- ರಕ್ತದಿಂದ ಕೂಡಿದ ಕಣ್ಣೀರನ್ನು, ಕರಪಲ್ಲವದಿಂ- ಚಿಗುರಿನಂತಿರುವ ಹಸ್ತದಿಂದ, ಅಗಲದೆ,
ಒರಸುತ್ತೆ, ಗುರುಪದಾಬ್ಜಮಂ, ಜಾನಿಸಿದಂ. ... ... ... ॥೬೨॥

ಅನಿತರೊಳ್, ದೇಶಿಕೇಂದ್ರನ- ಗುರೂತ್ತಮನ, ಕರುಣಾಕಟಾಕ್ಷಬಲದಿಂ, ನಯನದ್ವಯಂ- ಎರಡು
ಕಣ್ಗಳು, ಆಯತಂ- ದೀರ್ಘವು, ಆಗಿ, ಉಣ್ಮಿದತ್ತು- ಹುಟ್ಟಿತು; ಭಕ್ತರ್, ಪಿರಿದು- ಹೆಚ್ಚಾಗಿ, ಅದ್ಭುತ
ಮಾಳ್ಪ- ಆಶ್ಚರ್ಯವಂ ಹೊಂದಿ, ಒಲ್ದು, ಅನುನಯದಿಂದೆ, ಉಘೇ, ಎನುತೆ, ಕೀರ್ತಿಸೆ, ಅನುಪಮಂ- ಅಸ
ದೃಶನಾದ, ಗುರುಭಕ್ತಂ, ಅಗ್ರಜಯುತಂ- ಅಣ್ಣನೊಡನೆ ಕೂಡಿ, ನಿಜಾಲಯಕ್ಕೆ- ತನ್ನ ಮನೆಗೆ, ಎಯ್ದು
ತೆ, ಸುಖದಿಂ, ಒಪ್ಪಿದಂ. ... ... ... ... ... ॥೬೩॥

ಈಶಾರ್ಪಿತಮತಿ- ಶಿವನಲ್ಲಿ ಸಮರ್ಪಿಸಲ್ಪಟ್ಟ ಬುದ್ಧಿಯುಳ್ಳ, ಶಿವಸಿದ್ಧಾಂತದುಗ್ಧಾಬ್ಧಿಚಂದ್ರಂ- ಶೈವ
ಸಿದ್ಧಾಂತವೆಂಬ ಕ್ಷೀರಸಮುದ್ರಕ್ಕೆ ಚಂದ್ರನಾದ ಬಸವೇಶ್ವರನು, ಗುರುಭಕ್ತಕ್ಷ್ಮಾವಧೂವಲ್ಲಭನ- ಗುರುಭಕ್ತ
ರಾಜನ, ಕಥೆಯಂ, ಇಂತು, ಒಲ್ದು, ಪೇಳ್ದು, ಆಮಹಾಭಕ್ತರ, ಚೇತಃಪ್ರೀತಿಯಂ- ಮನಸ್ಸಿನ ಇಷ್ಟವ

ತಭಕ್ತರ್ಕೆಲರೊಳರೆನುತಂ ಬಿನ್ನಪಂಗೆಯ್ಯುತಂ ಸಾ | ದರ ಪೊಪ್ಪುತ್ತಿರ್ದನೀಶಾರ್ಪಿತ ಮತಿ ಶಿವಸಿದ್ಧಾಂತದುಗ್ಧಾಬ್ಧಿಚಂದ್ರಂ ‖ ... ... ... ‖೬೪‖

ಲಲಿತಪದವೃತ್ತ ‖ ಸಿಂಧುರಮಹಾಸುರಜಲಂಧರಮೃಗಾರಿಸಮದಾಂಧಕಮದಪ್ರಹರ ಸಿಂಧುಧರಲೀಲಾ|ಸಿಂಧುಹಿಮದೀಧಿತಿ ಕಬಂಧಜಮುಖೋದ್ಗಮಸುಗಂಧಭರಮಾಲ್ಯನಿಜಕಂಧರಶುಭಾಂಗ ‖ಬಂಧುರ ಜಗತ್ರಯಧುರಂಧರ ಪದಾನತಭವೇಂಧನಹುತಾಶ ವಿಧಿಕಂಧರಕರಾಶಾ|ಬಂಧಹರ ರಕ್ಷಿಸಘಕಂಧರಚಯಪ್ರಬಲಗಂಧವಹ ಭಕ್ತಗಣಬಂಧು ಬಸವೇಶ‖ ‖೬೫‖

ಮಾಲಿನೀವೃತ್ತಂ ‖ ಶತದಳದಳನೇತ್ರೇಶಂಕರಸ್ನೇಹಪಾತ್ರೇ| ದಿತಿಸುತರಣಭೀಮೇ ದಿವ್ಯತೇಜೋಭಿರಾಮೇ ‖ ತತಭುವನಕದಂಬೇ ತತ್ವಮಾಲಾವಲಂಬೇ | ಪ್ರತಿಹತನತದೈನ್ಯೇ ಪಾಹಿಮಾಂಶೈಲಕನ್ಯೇ ‖ ... ... ... ... ... ‖೬೬‖

---

ನ್ನು, ತಾಂ, ಸಲಿಸುತೆ, ಎರಗುತೆ, ಇಂತಪ್ಪರ್- ಇಂತಾ, ಗುರುಚರಣಾಂಭೋಜಾತಭಕ್ತರ್, ಇನ್ನುಂ, ಕೆಲರ್, ಒಳರ್- ಇರುವರು, ಎನುತಂ, ಬಿನ್ನಪಂಗೆಯ್ಯುತಂ- ವಿಜ್ಞಾಪಿಸಿಕೊಳ್ಳುತ್ತ, ಸಾದರಂ- ಪ್ರೀತಿಯಿಂ ಕೂಡಿದವನಾಗಿ,ಒಪ್ಪುತ್ತ, ಇರ್ದಂ. ... ... ... ... ||೬೪||

ಸಿಂಧುರ......ಹಿಮದೀಧಿತಿ— ಸಿಂಧುರಮಹಾಸುರ- ಗಜಾಸುರ, ಜಲಂಧರ, ಮೃಗಾರಿ-ವ್ಯಾಘ್ರಾಸುರ, ಮದಾಂಧಕ- ಕೊಬ್ಬಿದ ಅಂಧಕಾಸುರ ಇವರುಗಳ, ಮದ- ಗರ್ವವನ್ನು, ಪ್ರಹರ- ನಾಶಮಾಡಿದ, ಸಿಂಧುಧರ- ಗಂಗಾಧರನಾದ ಶಿವನ, ಲೀಲಾಸಿಂಧು- ಪಂಚವಿಂಶತಿಲೀಲೆಗಳೆಂಬ ಸಮುದ್ರಕ್ಕೆ, ಹಿಮಧೀದಿತಿ- ಚಂದ್ರನಾದ, ಕಬಂಧಜ......ಕಂಧರ— ಕಬಂಧಜ- ಕಮಲವೇ, ಮುಖ- ಮೊದಲಾದ, ಉದ್ಗಮ- ಹೂವ್ಗಳ, ಸುಗಂಧಭರ- ಪರಿಮಳಾತಿಶಯವುಳ್ಳ, ಮಾಲ್ಯ- ಮಾಲಿಕೆಯೇ, ನಿಜ- ತನ್ನ, ಕಂಧರ- ಕಂಠದಲ್ಲುಳ್ಳ, ಶುಭಾಂಗ ಬಂಧುರ- ಮಂಗಳಕರವಾದ ದೇಹದಿಂದ ಮನೋಹರನಾದ, ಜಗತ್ರಯಧುರಂಧರ- ಮೂರುಲೋಕದ ಭಾರವನ್ನೂ ವಹಿಸಿರುವ, ಪದಾನತಭವೇಂಧನಹುತಾಶ- ಪಾದಕ್ಕೆ ನಮಸ್ಕರಿಸಿದವರ ಉತ್ಪತ್ತಿಯೆಂಬ ಸೌದೆಗೆ ಬೆಂಕಿಯಾದ, ವಿಧಿಕಂಧರಧರ- ಬ್ರಹ್ಮನ ಶಿರಸ್ಸನ್ನು ಧರಿಸಿದ ಹಸ್ತವುಳ್ಳ, ಆಶಾಬಂಧಹರ- ಆಸೆಯ ತೊಡಕನ್ನು ನಾಶಮಾಡಿದ, ಅಘಕಂಧರಚಯಪ್ರಬಲಗಂಧವಹ—ಅಘ- ಪಾಪವೆಂಬ, ಕಂಧರಚಯ-ಮೋಡದ ಗುಂಪಿಗೆ, ಪ್ರಬಲಗಂಧವಹ- ಬಲವಾದ ಗಾಳಿಯಾದ, ಭಕ್ತಗಣಬಂಧು- ಶಿವಭಕ್ತರ ಸಮೂಹವೇ ನೆಂಟರಾಗುಳ್ಳ, ಬಸವೇಶಾ ! ರಕ್ಷಿಸು. ... ... ... ... ...||೬೫||

ಶತದಳದಳನೇತ್ರೇ- ಕಮಲದ ಎಸಳನಂತಿರುವ ಕಣ್ಣುಳ್ಳ, ಶಂಕರಸ್ನೇಹಪಾತ್ರೇ- ಈಶ್ವರನ ಪ್ರೇಮಕ್ಕೆ ಆಶ್ರಯಳಾದ, ದಿತಿಸುತರಣಭೀಮೇ- ರಾಕ್ಷಸರ ಯುದ್ಧದಲ್ಲಿ ಭಯಂಕರಳಾದ,ದಿವ್ಯತೇಜೋಭಿರಾಮೇ- ಶ್ರೇಷ್ಠವಾದ ಪ್ರಕಾಶದಿಂದ ಮನೋಹರಳಾದ, ತತಭುವನಕದಂಬೇ- ವಿಸ್ತರಿಸಲ್ಪಟ್ಟ ಲೋಕಸಮುದಾಯವುಳ್ಳ, ತತ್ವಮಾಲಾವಲಂಬೇ-ಜ್ಞಾನಕರ್ಮೇಂದ್ರಿಯಗಳು ೧೧, ಪ್ರಕೃತಿ ಮಹತ್ ಅಹಂಕಾರ ೩,ಪೃಥಿವ್ಯಾದಿ ಭೂತಗಳು ೫. ತನ್ಮಾತ್ರ ೫ ಅಂತು ೨೪ ತತ್ವಗಳಿಗೆ ಆಶ್ರಯಳಾದ, ಪ್ರತಿಹತನತದೈನ್ಯೇ-ಪ್ರತಿಹತ- ನಾಶಮಾಡಲ್ಪಟ್ಟ, ನತದೈನ್ಯೇ- ನಮಸ್ಕರಿಸಿದವರ ದಾರಿದ್ರ್ಯವುಳ್ಳ, ಶೈಲಕನ್ಯೆ! ಮಾಂ-ನನ್ನನ್ನು, ಪಾಹಿ-ರಕ್ಷಿಸು

ಮೂವತ್ತನೆಯ ಆಶ್ವಾಸವು ಸಂಪೂರ್ಣವು.

ಗದ್ಯಂ ॥ ಇದುವಿನಮದಖಿಳಸುರಾಸುರೇಂದ್ರಮಕುಟತಟಘುಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದವರಾಗಭಸಿತಭೂಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಗುರುಭಕ್ತರಾಜಗುರುಭಕ್ತಿವರ್ಣನಂತ್ರಿಂಶಾಶ್ವಾಸಂಪರಿಸಮಾಪ್ತಂ ॥ * * * * * * *

ತ್ರಿಂಶಾಶ್ವಾಸಂ ಸಂಪೂರ್ಣಂ.

---

## ಶ್ರೀಃ.

ಬ್ರಹ್ಮಾಂಡೋದರಾಯಪರಬ್ರಹ್ಮಣೇನಮಃ

## ಏಕತ್ರಿಂಶದಾಶ್ವಾಸಂ.

### ವೇಮನಾರ್ಯಕಥನಂ.

ಕಂ ॥ ಶ್ರೀಮದಮರೇಂದ್ರಸನ್ನುತ । ಹೈಮವತೀರಮಣನಮಿತಕಲ್ಯಾಣಗುಣ ॥ ಸ್ತೋಮಾಭಿರಾಮನತುಳೋದ್ದಾಮಂಪೊರೆಗೆಮ್ಮನಾವಗಂಶಿವಲಿಂಗಂ ॥ ... ॥೧॥

ಕಂ ॥ ಅತಿಶಯಸೌಭಾಗ್ಯಸಮ । ನ್ವಿತಮೆನಿಸಿವಿರಾಜಿಸಿರ್ಪಕಲ್ಯಾಣದೊಳು ॥ ನ್ನತಶುಭಚರಿತನಿಳಾವಿ । ಶ್ರುತನೆಸೆದಂವೇಮನಾರ್ಯನೆಂಬಮಹಾತ್ಮಂ ॥ ... ॥೨॥

ಚಂ ॥ ಅಮಿತಗುಣಾಕರಂ ಪ್ರಮಥಪುಂಗವಪಾದಪಯೋಜಭೃಂಗನ । ಸ್ತಮಿತದುರೀಷಣಂಸಕಲವೇದಶಿವಾಗಮವೇದಿಭಕ್ತಿಸಂ ॥ಕ್ರಮಿತಸುಮಾನಸಂಪ್ರಥಿತಪಾವನರೂಪನಮೇಯವೈಭವಂ । ಶಮಿತನತಾಮಯಂಪ್ರಬಲಶೈವಮತಾರ್ಯನಘಾರ್ತಿಭಂಜನಂ ॥ ... ॥೩॥

---

ಶ್ರೀಮದಮರೇಂದ್ರಸನ್ನುತಹೈಮವತೀರಮಣಂ- ಶ್ರೀಮತ್- ಸಂಪದ್ಯುಕ್ತನಾದ, ಅಮರೇಂದ್ರ-ದೇವೇಂದ್ರನಿಂದ, ಸನ್ನುತ-ಹೊಗಳಿಸಿಕೊಳ್ಳಲ್ಪಟ್ಟ, ಹೈಮವತೀ- ಪಾರ್ವತಿಗೆ, ರಮಣಂ-ಪತಿಯಾದ, ಅಮಿತಕಲ್ಯಾಣಗುಣಸ್ತೋಮಾಭಿರಾಮಂ-ಎಣಿಸಲಾಗದ ಮಂಗಳಕರಗುಣಗಳ ಸಮೂಹದಿಂದ ಮನೋಹರನಾದ, ಅತುಳೋದ್ದಾಮಂ- ಅಸದೃಶನಾಗಿಯೂ ಸ್ವತಂತ್ರನಾಗಿಯೂ ಇರುವ, ಶಿವಲಿಂಗಂ, ಎಮ್ಮಂ, ಆವಗಂ, ಪೊರೆಗೆ ... ... ... ... ... ... ॥೧॥

॥೨॥ ಪ್ರಮಥಪುಂಗವಪಾದಪಯೋಜಭೃಂಗನ- ಪ್ರಮಥಶ್ರೇಷ್ಠರ ಪಾದಕಮಲಕ್ಕೆ ಭ್ರಮರನಾದನು, ಅಮೇಯವೈಭವಂ-ಅಳೆಯುವದಕ್ಕೆ ಶಕ್ಯವಾದವಿಭವವುಳ್ಳವನು, ಶಮಿತನತಾಮಯಂ-ನಾಶಮಾಡಲ್ಪಟ್ಟನಸ್ಕರಿಸಿದವರಜನನ ಮರಣರೋಗವುಳ್ಳವನು, ಅಘಾರ್ತಿಭಂಜನಂ- ಪಾಪದಬಾಧೆಯನ್ನುನಿನಾಶಮಾಡಿದವನು.

ಮ ॥ ಸ್ರ॥ ಶರದಿಂದುದ್ಯೋತವಿದ್ಯೋತಿತವಿಶದಯಶಂ ಪಾಶಗಂಹಾರಿ ಪಂಚಾ। ಕ್ಷರ ಮಂತ್ರಪ್ರಾಣನಾರ್ಯಪ್ರಕರಪರಿನುತಂ ಧರ್ಮಕಾಮಾರ್ಥಮೋಕ್ಷಾ ॥ ಮರಭೂಜಂ ಸಾರವೀ ರವ್ರತವಿಹಿತಸದಾಚಾರಸಂಪನ್ನ ನುರ್ವೀ। ಶ್ವರಚೋರವ್ಯಾಘ್ರಸರ್ಪಾನಲಮುಖಭಯವಿ ಧ್ವಂಸಕಂ ಭಸ್ಮನಿಷ್ಠಂ ॥ ... ... ... ... ... ॥೪॥

ಕಂ ॥ ತಾಪಸನುತ ನವನತಜನ। ತಾಪದ್ಘನತಾಪಮೃತ್ಯುಹರ ನುರುತರವಿ ॥ ದ್ಯಾ ಪರಿಣತ ನತಿಸಿತಮತಿ । ಶಾಪಾನುಗ್ರಹಸಮರ್ಥ ನಚಲಿತಮಹಿಮಂ ॥ ... ॥೫॥

ವ ॥ ಎಂಬ ನೆಗಳ್ತೆಗಡರ್ಪೆನಿಸಿರುಜಿಸುತ್ತ ಮಿರ್ದೊಂದುದಿವಸ ಮಾವೇಮನಾರ್ಯಂ ಕತ್ಸ್ಪರದ ಬಹಿರ್ವನಳಯವಿಲಸದುಪವನಸವಿಧವಿವಿಧವರಿಮಳರಸಮಿಳಿತಮೃದುಳದಳದರದ ಳಿತಕುಸುಮವಿಸರಮನೋಹರ ಮೆನಿಪ ಕುಸುಮವನಕ್ಕೆ ಪ್ರೊದಿರಿಯ ಲೆಳಸಿಕರಂಡಕರಾಂ ಬುಜ ನೇಳ್ತಂದೊಳಗನೆ ಪೊಕ್ಕು ॥ * * * * * * * * * * *

ಚ ॥ ಸುರಯಿಯ ನಾಗಸಂಪಗೆಯ ಜಾಜಿಯ ಮೊಲ್ಲೆಯ ಕರ್ಣಿಕಾರ ದೆ । ಳ್ತ ರದವಸೇತದೂತಿಕೆಯ ಯೂಥಿಯ ಮಲ್ಲಿಗೆ ಯಚ್ಛಪ್ರೂಗಳಂ ॥ ಸುರುಚಿರಮಾದಬಿಲ್ವದ ಳಸುಕೆಳಮಂ ತಿರಿದಲ್ಲಿ ತೀವ್ರುತಂ । ಕರಡಿಗೆಯಂ ಕಡುಂಗಿ ಮುಗುಳೆಯ್ತರುತಿರ್ಪೆಡೆವಟ್ಟೆ ಯೊಳ್ಕರಂ ॥ ... ... ... ... ... ... ॥೬॥

ಉ ॥ ಎತ್ತಿದ ಮೇಘಡಂಬರದೆ ಮಿಳ್ಳಿರಿದಾಡುವ ಸಿಂಧದಿಂ ಪ್ರೊದ। ಳ್ದತ್ತರದಲ್ಲಿಪ ರ್ಪ ಗಜವಾಜಿರಥೌಘ ಪದಾತಿಬೃಂದದಿಂ ॥ ಬಿತ್ತರ ಮಾದ ವಾದ್ಯರವದಿಂ ಚಳಚಾಮರ ಪಟ್ಟೆಯಿಂ ಬೆಡಂ । ಗೆತ್ತಲು ಮುಣ್ಮೆ ನಾಡೆ ಬರುತಿರ್ದ ನದೋರ್ವ ನಿಳೇಶ್ವರಾತ್ಮಜಂ ॥

ವ ॥ ಅಂತು ವಿವಾಹಶೋಭನಂಬಡೆದು ನೆರೆಯೂರಿಂ ನಲ್ಲಳೊಡನೆ ಪೊನ್ನಂದಳಮ ನೇ ರಿ ತದ್ರಾಜಸುತ ನೇಳ್ತರುತ್ತ ಮಿರ್ದು ಕಟ್ಟೆವಿರೊಳ್ ಬರ್ಪ ಶೈವತೇಜೋಮೂರ್ತಿಗಳೆ ನಿಪ ಪೇತುನಾರಾಧ್ಯರಂ ಕಂಡು ಭೋಂಕನೆ ದಂಡಿಗೆಯ ನಿಳಿದು ಪೊಡಮಡಲೊಡ ನವಂ ಗಾ ಯುರಲ್ಪಮೆಂಬುದಂ ತಾಂ ತ್ರಿಕಾಲಜ್ಞಾನಿ ಯಪ್ಪುದರಿ ನರಿದು ಪರಸಲೊಲ್ಲ ದಾಚಾರ್ಯವ

---

ಶರದಿಂದುದ್ಯೋತವಿದ್ಯೋತಿತವಿಶದಯಶಂ- ಶರದಿಂದು- ಶರತ್ಕಾಲದಲ್ಲಿರುವ ಚಂದ್ರನ, ದ್ಯೋತ- ಕಾಂತಿಯೋಪಾದಿಯಲ್ಲಿ, ವಿದ್ಯೋತಿತ- ಪ್ರಕಾಶಿಸುತ್ತಿರುವ, ವಿಶದ, ನಿರ್ಮಲವಾದ, ಯಶಂ- ಕೀರ್ತಿ ಯುಳ್ಳವನು. ... ... ... ... ... ... ॥೪॥

ಅವನತಜನತಾಪದ್ಘನತಾಪಮೃತ್ಯುಹರಂ- ಅವನತ- ನಮಸ್ಕರಿಸಿದ, ಜನತಾ- ಜನಗಳ ಗುಂಪಿನ, ಆಪತ್- ವಿಪತ್ತು, ಘನ- ಹೆಚ್ಚಾದ, ತಾಪ- ಆಧ್ಯಾತ್ಮಿಕಾದಿ ತಾಪಗಳು, ಮೃತ್ಯು ಇವುಗಳನ್ನು, ಹರಂ- ನಾಶಪಡಿಸಿದವನು, ಅತಿಸಿತಮತಿ- ಬಹು ಶುಭ್ರವಾದ ಮನಸ್ಸುಳ್ಳವನು. ... ... ॥೫॥

ಕರ್ಣಿಕಾರದ- ಬೆಟ್ಟದಾವರೆಯ, ಯೂಥಿಯ- ನಂದುಬಟ್ಟಲಿನ, ತಿರಿದು- ಎತ್ತಿ, ಕಡಂಗಿ- ಕುತೂಹ ಲಪಟ್ಟು, ಎಡೆವಟ್ಟೆಯೊಳ್- ಮಧ್ಯಮಾರ್ಗದಲ್ಲಿ. ... ... ... ॥೬॥

ಮೇಘಡಂಬರದೆ- ಚತ್ರಿಯಿಂದ, ಮಿಳ್ಳಿರಿದು ಆಡುವ- ಹೊರಳಾಡುವ, ಸಿಂಧದಿಂ-ಬಾವುಟದಿಂದ ॥೭॥

ಪೊನ್ನ- ಚಿನ್ನದ, ಅಂದಳಮಂ ಪಲ್ಲಕ್ಕಿಯನ್ನು, ದಂಡಿಗೆಯಂ- ಪಲ್ಲಕ್ಕಿಯನ್ನು, (ಆಯುಃ, ಅಲ್ಪಂ- ಆಯುರಲ್ಪಂ-) ಆಯುಸ್ಸು ಸ್ವಲ್ಪವಾದದ್ದು, ತ್ರಿಕಾಲಜ್ಞಾನಿ- ಹಿಂದು ಮುಂದು ಈಗಿನ ಕಾಲಗಳಲ್ಲಿನ ವಿಷ

ರ್ಯಂ ಸುಮ್ಮನಿರೆ ತನ್ನರೇಂದ್ರಸುತಂ ನೋಡಿ॥ * * * * * * * * *

ಕಂ ॥ ಎರಗಿದೊಡೆನ್ನಂ ಪರಸದ । ತೆರನೇಂ ಕಾಣೆನೊ ಮಹಾತ್ಮ ನಿನ್ನೊಳ್ಪೆರ್ಪೊ ದ ॥ ಳ್ದಿರಗಿ ನಿರೀಕ್ಷಿಪೆ ನೆನುತಂ । ತರಿಸಂ ದೇವಿದೇವ ಶರಣನುತ್ತರಗ ಲೊಡಂ ॥ ...

ವ ॥ ಮತ್ತಮುವರ್ಪರಸ ದುಸಿಕೆ ನಿರೆ ॥ * * * * * * * *

ಕಂ ॥ ಪದಕೆರಗೆ ಪರಕೆಗುಡದು । ನ್ಮದಯುತಭಕ್ತಂಗೆ ಮುಳಿದ ನಿನಿಯ ನೆನುತೆ ಮ ॥ ತ್ತುಸದತಿ ಪರಿಹಾಸಕಂಗೆ । ಯ್ಯದ್ಬಮಾಣಿ ಳೆನುತ್ತೆ ನಾಣ್ಚಿದಂ ಜನಪಸುತಂ ॥ ॥೮॥

ವ ॥ ಅಂತು ನಾಣ್ಚಿ ತಲೆವಾಗಿ ಸಿಡಿಮಿಡಿಗೊಂಡು ಭಕ್ತಿಭಾವಂ ಜಾರೆ ಕಾಯ್ಪು ತೊಳಕೊಂಡು * * * * * * * * *

ಮತ್ತೇ ॥ ಪಿರಿಯ ಮಾನ್ಯ ರುದಾರವೃತ್ತ ರನಘ ಶೈವಾಗಮಾಚಾರ್ಯಸದ್ಗುರು ಗಳ್ನೀ ಮೆನುತಿಳ್ತುಮಚ್ಚು ವಿನಯುಂಬೆ ತೊತ್ತಲ್ದು ನಿಮ್ಮಂಘ್ರಿಪಂ ॥ಕರುಹ ಕ್ಕಾಂ ಪ್ರೊಡಮ ಟ್ಟೊಡಕ್ಕೆ ನಿನಗಾಯು ಶ್ರೀಯ ಮೆಂ ದೆನ್ನ ನೀಂ । ಪರಸಲ್ಸಲ್ಲದೆ ಸುಮ್ಮನಿರ್ದಪ ರಿದೇ ನಾಚಾರ್ಯನಾಚಾರಮೇ ॥ ... ... ... ... ... ॥೯॥

ಕಂ ॥ ಆಕ್ಕಟ ನಿನ್ನಯ ಸೌಜ । ನ್ಯಕ್ಕಮದರ್ಪ ಗುಣಕ್ಕೆ ಶೈವತೇಜಕೆ ಸಲೆಕ್ಕೈ ॥ ಮಿಕ್ಕ ಶುಭನಿನುಳವೃತ್ತಿಗೆ । ತಕ್ಕುದೆ ಕೂರ್ತರಗೆ ಪರಸ ಲೊಲ್ಲದ ಬಿಂಕಂ ॥ ॥೧೦

ಕಂ ॥ ಶುಕ ಮಿಡಿದು ಪೂತ ನವಕಿಂ । ಶುಕಕೆರಗಿದ ತೆರದಿ ನೆರಗಿದೆಂ ನಿಮಗಿಂದಾ ॥ ನ ಕಟಕಟ ಬಾಹ್ಯರಾಗ । ಪ್ರಕಟನಮಿದು ವಿಫಲ ಮೆಂಬುದಂ ಮುನ್ನರಿಯೆಂ ॥ ... ॥೧೧॥

ಕಂ ॥ ದ್ವಿಜಕುಲಸಂಜಾತರ್ಗೆಡ ! ನಿಜದಿಂ ನೀ ಪೂರ್ವಪುರುಷರುಂಗಡ ಪರೆಹಂ ॥ ಭ ಜಿಯಿಪ ಭಕ್ತರ್ಗ್ಗಡ ಭೂ । ಭುಜ ನೇಳ್ತಂದೆರಗೆ ಸುಮ್ಮನಿರ್ಪುದು ಮತಮೆ ॥೧೨॥

ತರಳನ್ಯತ್ತಂ ॥ ಪರಸಿ ನೀ ಮೆನಗಾಯುವಿತ್ತು ಪಿರೇ ಮದೋದ್ಧತವೃತ್ತಿಯಿಂ । ಪರ ಸ ಲೊಲ್ಲದೊ ಡಾಯು ತಗ್ಗುಗುಮೇ ವಿರಿಂಚಿ ಲಲಾಟದೊಳ್ ॥ ಒರೆದುದಂ ತೊಡೆಯಲ್ಕೆ ಪೆ ರ್ಚಿಸಲುಂ ಸಮರ್ಥರೆ ನೀಂ ಜಗ । ದ್ಗುರುಗಳೇ ಬಿಡದೆಮ್ಮ ತುಳ್ತುವ ಮಿಳ್ತು ನಿಮ್ಮ ಯದಾಸಿಯೆ ॥ ... ... ... ... ... ... ॥೧೩॥

---

ಯಾವಂ ತಿಳಿದಿರತಕ್ಕವನು, ಪರಸಲ್- ಆಶೀರ್ವದಿಸುವದಕ್ಕೆ, ಒಲ್ಲದೆ- ಮನಸ್ಸಂಮಾಡದೆ. * * *

ತಡಿಸಂದು- ಸವಿನಾಪಕ್ಕೆಬಂದು. ... ... ... ... ... ॥೮

ಉಸಿಕನೆ- ಸುಮ್ಮನೆ. * * * * * * * * * * * * * *

ಇನಿಯಂ- ಪತಿಯು, ಮಾಣಿಳ್- ಬಿಡುವದಿಲ್ಲ, ನಾಣ್ಚಿದಂ- ನಾಚಿಕೆಗೊಂಡನು. ... ॥೯॥

ಕಾಯ್ಪಂ- ಕೋಪವನ್ನು. * * * * * * * * * * * * * *

ಮಾನ್ಯರ್- ಪೂಜ್ಯರು, ಉದಾರವೃತ್ತರ್- ಉತ್ಕೃಷ್ಟವಾದ ಚರಿತ್ರೆಯುಳ್ಳವರು, ಅನಘರ್- ಪಾಪರಹಿತರು, ಅಳ್ತಿವಟ್ಟು- ಪ್ರೀತಿಸಿ, ... ... ... ... ॥೧೦॥

ಸೌಜನ್ಯಕ್ಕೆ- ಸತ್ಪುರುಷತ್ವಕ್ಕೆ, ತಕ್ಕುದೆ- ಯೋಗ್ಯವೇ ? ಬಿಂಕಂ– ಗರ್ವವು. ... ॥೧೧॥

ಇಡಿದು- ತುಂಬಿ, ಪೂತ- ಹೂವನ್ನುಬಿಟ್ಟ, ನವಕಿಂಶುಕಕೆ- ಹೊಸ ಮುತ್ತುಗದ ಮರಕ್ಕೆ, (ರಾಗ- ಕೆಂಪು. ಪ್ರೀತಿ.) ... ... ... ... ... ... ॥೧೨॥

॥೧೨॥ ... ತುಳ್ತುವ- ಹಿಡಿದುಕೊಂಡುಹೋಗುವ, ಮಿಳ್ತು- ಮೃತ್ಯುವು. ... ॥೧೩॥

ಕಂ ॥ ಪಸೆನಿಂದ ಪೇಳೆಯೊಳ್ ಸಂ । ತಸದಿಂ ಪಿತರರ್ಕಳ್ ಳಿತ್ತ ನಲವರಕೆಗಳಿಂ ॥
ದಸವಳಷು ನಿಮ್ಮ ಪರಕೆಯು । ಮಸಕಂ ಬರಿದೇಕೆ ಸುಮ್ಮನಂ ನಿಮಗಿಳೆಯೊಳ್ ॥ ॥೧೪॥

ಕಂ ॥ ಪರಸಿದೊಡಳಿಪಪ್ಪು ದೆಮ್ಮಯ । ಪಿರಿದುತನಂ ಮಾಣದೆಂದು ಪರಸದೆ ನೀಂ ಮಿ ॥
ರ್ಪ್ಪಿರವಂ ತಿಳಿದೆಂ ನಿಮ್ಮಾ । ತಿರೆ ಯೆಮ್ಮಂ ಪರಸಲಿಳೆಯೊಳಿಲ್ಲವೆ ವಿಬುಧರ್ ॥ ॥೧೫॥

ವ ॥ ಎಂದ ನೃಪಸುತನ ಸಗರ್ವೋಕ್ತಿಯ ನಾಪೀಮುನಾರ್ಯ ನಾಕರ್ಣಿಸಿ ॥ * *

ಕಂ ॥ ಜನಪಸುತ ನಾಳೆ ಮಧ್ಯಾ । ದಿನದೊಳ್ ನಿನಗಪ್ಪುದಲ್ತೆ ಮೃತಿಯದನರಿದುಂ ॥
ಮನವೊಲಾಶೀರ್ವಾದವ । ನೆನಸುಂ ನಿನಗೆಂತು ಮಾಡಲಾಂ ಬಗೆದಿರ್ಪೆಂ ॥ ॥೧೬॥

ಕಂ ॥ ಪರಸಿದೊಡೆ ಬರ್ಪ ಮರಣಮ । ನೊರಸಲ್ವೇಳ್ಕುಂ ಮಹಾತ್ಮರೆನ್ನದೆ ನಿ
ನ್ನೀ ॥ ದುರಿತಬಲಮೆಮ್ಮ ಜಿಹ್ವಾಂ । ಕುರಕ್ಕೆ ಕೇಳ್ ಬಾರದಾದುದಾಶೀರ್ವಾದಂ ॥ ॥೧೭॥

ಕಂ ॥ ತಪ್ಪದೆಲೆ ನಾಳೆ ಮೃತಿ ನಿನ । ಗಪ್ಪುದು ಪೋಗೆನೆ ನೃಪಾತ್ಮಜಂ ಕೇಳ್ದು ಮ
ನಂ ॥ ಸೊಪ್ಪುಸೊವಡಾಗೆ ಕೋಪಮ । ನಪ್ಪುಗೆಗೆಯ್ದೀಕ್ಷಿಸುತ್ತೆ ಮಗುಳ್ದಿಂತೆಂದಂ ॥

ಚಂ ॥ ಮದನನ ಸಾರ್ದು ಸುಟ್ಟಳುಪಿದಂ ತಲೆಗೊಯ್ದು ಸರೋಜಗರ್ಭನಂ । ಮು
ದಮಲ ದೋರ್ವಿದಂ ಜಲಜಲಂಧರದೈತ್ಯಸುರಾಹಿತರ್ಕಳಂ ॥ ಸದೆ ದೊಲವಿಂದೆ ರಕ್ಷಿಸಿದ ನೀ
ಶನವು ಪೊರತಾಗೆ ಮಿಕ್ಕ ಲೋ । ಕದ ಮನುಜರ್ಕಳ್ ವಧಿಸಲುಂ ಮಗುಳ್ದಿಂ ಪೊರೆಯ
ಲ್ಕಸಮರ್ಥರೆ ॥ ... ... ... ... ... ... ॥೧೯॥

ಕಂ ॥ ಮಾರಮದಹರಣಲಾಂಛನ । ಧಾರಣಮಾತ್ರದೆ ಮನೋಜಹರ ನಪ್ಪಿರೆ ನೀ ॥
ಮಾರಯೆ ನಿಮ್ಮನುಚಿತವಾ । ಗ್ದ್ವರದೆ ಬಂದಪ್ಪುದೆ ಮಿಳ್ತು ನಾಳೆನಗೆ ಪಲಂ ॥ ॥೨೦॥

ಕಂ ॥ ಬರಿದೇಕೆ ಬಿಂಕ ಮೆನುತಂ । ಗರಿಗಟ್ಟಿದ ಕೋಪದಿಂದೆ ಗಳಪುತೆ ಪಲವಂ ॥
ಸರೆ ಜುನ್ನವಾಡುತಂ ನೆಲ । ದೆರೆಯಂ ನಸೆತೆಂದು ಪ್ರೋಕ್ತನಾತ್ಮಾಲಯಮಂ ॥ ॥೨೧॥

---

ಪಸೆನಿಂದ- ಹಸೆಯುಲ್ಲಿ ನಿಂತಿದ್ದ, ಪಿತರರ್ಕಳ್-ತಾಯ್ತಂದೆಗಳು, ನಲವರಕೆಗಳಿಂ ಸಂತೋಷಾಶೀರ್ವಾದಗಳಿಗಿಂತ, ಮಸಕಂ- ಅತಿಶಯವು. ... ... ... ... ॥೧೪॥

॥೧೫॥ ... ಎನಸುಂ- ನಿಶ್ಚಯವಾಗಿ, ಬಗೆದಿರ್ಪೆಂ-ಮನಸ್ಸುಕೊಡುವೆನು? ... ॥೧೬॥

ಬರ್ಪ, ಮರಣಮಂ, ಮಹಾತ್ಮರ್, ಪರಸಿದೊಡೆ, ಒರಸಲ್ವೇಳ್ಕುಂ- ಹಾಳುಮಾಡಬೇಕು. ಎನ್ನದೆ- ಲೋಕವು ಹೇಳುವದಿಲ್ಲವೇ ? ಕೇಳ್, ಎಮ್ಮ, ಜಿಹ್ವಾಂಕುರಕ್ಕೆ- ನಾಲಗೆಯ ಮೊಳಕೆಗೆ, ಆಶೀರ್ವಾದಂ, ಬಾರದಾದುದು- ಬರದೇಇರುವಂತಾದದ್ದು, ನಿನ್ನ, ಈ ದುರಿತಬಲ- ಈ ಪಾಪದ ಶಕ್ತಿಯು ... ॥೧೮॥

ಸೊಪ್ಪುಸೊವಡಾಗೆ- ಸೊಪ್ಪಿನ ಹಾಗಾಗಿ ಕೆಟ್ಟವಾಸನೆಯುಳ್ಳದ್ದಾಗಲು (ಅಂದರೆ ಕಳ್ಮಲಯುಕ್ತವಾಗಲು) ... ... ... ... ... ... ॥೧೯॥

ಅಳುಪಿದು- ನಾಶಮಾಡಿದನು, ಓವಿದಂ- ಪಾಲಿಸಿದನು, ಸದೆದು- ಕೊಂದು. ... ॥೨೦॥

ಮಾರಮದಹರಣಲಾಂಛನಧಾರಣಮಾತ್ರದೆ- ಶಿವ ಚಿಹ್ನವಂ ಧರಿಸಿದ ಮಾತ್ರದಿಂದಲೇ, ಅರಯೆ- ವಿಚಾರಿಸಲು, ಅನುಚಿತವಾಗ್ದ್ವರದೆ- ಯೋಗ್ಯವಲ್ಲದ ಮಾತಿನ ಮೂಲಕವಾಗಿ, ... ॥೨೧॥

ಬರಿದೆ- ವ್ಯರ್ಥವಾಗಿ, ಬಿಂಕಂ- ಗರ್ವವು, ಗರಿಗಟ್ಟಿದ- ಅಭಿವೃದ್ಧವಾದ, ಜುನ್ನವಾಡುತಂ- ನಿಂದಾವಚನಮಾಡುತ್ತ, ಎರೆಯಂ- ಪತಿಯು. ... ... ... ... ॥೨೨॥

॥ ಅಂತು ಪ್ರೊಸ್ಕು ನಿಜರಮಣಿವೆಶಸು ಪರಿತುಳಿದಕದಿಂ ವಿಂದು ಪರವಾನ್ನ ಮುಂ ಸವಿದು ಕರ್ಪೂರತಾಂಬೂಲಮಂ ಕೊಂಡು ಮಣಿಮಂದಿರಾಂತರ್ವಿಳಸಿತಕನಕಪರ್ಯಂಕ ಮೃದುಳತಳ್ಪಸ್ಥಳದೊಳ್ ಸಮರಸರತಸಮರಸಂಜಾತಸುಖಾನುಭವಾನಂತರಂ ಸುಖನಿದ್ರೆಗೆಯ್ದಿರ್ದ ನಾಗಳ್ ॥ \ * * * * * * * *

ಕಂ ॥ ಫಣಿ ಯೊಂದು ಘೋರವಿಷಭೀ । ಷಣವದನಂ ಪಾಟಲಸ್ಫಟಂ ಪಟುತೆಯಿನಂ॥
ದಣಿಯುರ ಮಿಳಿತಂದುದು ಪೇ । ಗಳ ಿರಪಳಿನಿಡಿದು ತೀವ್ರಚಾಲಿತರಸನಂ ॥ ॥೭೩॥

ವ॥ ಅಂತು ಮಾತೂಗುಮುಂಚದ ಸರಪಳಿಯ ಬಳಿವಿಡಿದು ಗಲ್ಗಲನಿಳಿದು ನಿದ್ರೆಗೆಯ್ದಿರ್ದ ನೃಪಸುತನ ಕಯ್ಯ ಪಗರುಂ ಕಚ್ಚಿ ಮೊರೆದು ಫಣಿ ಪೊಡೆಮುಗುಳ್ದು ಪೊರಳ್ದ ನಿತರೊಳ್ ತ್ತಾಕ್ರಾಂತೆ ಯೆಳ್ಚತ್ತು ಕಂಡು ಬಿಗುರ್ತು ಬೆಬ್ಬಳಿಸಿ ನಡುಗಿ ಹಾಹಾರವಂ ಮಸಗೆ ಕೆಟ್ಟೆಂ ಕೆಟ್ಟೆನೆಂ ದಳುತ್ತ ಮಿರೆ ನರೇಂದ್ರ ನನಿತರೊಳ್ ಬಿಂಕ ನೇಳ್ದು ತೆಳಮಳಗುಗೊಂಡು ನೆತ್ತರುಗುವ ಕರಮುಮಂ ಕಡಿದ ಘೋರಫಣಿಯುಮಂ ಕಂಡು ಪೌವನೆ ಪಾರಿ ಕೆಡೆದು ಹಂಮುಪಂಬೋಗಿ ॥ * * * * * * *

ಕಂ॥ ಮುಡಿದಂ ಮಹಾತ್ಮ ರಾಡಿದ । ನುಡಿ ತಪ್ಪುಗುಮೆ ನೃಪಾತ್ಮಜಂ ಬರಿಸಿದಳಾ॥
ಮುಡದಿಮೊರೆಯಿಡುತೆ ಪೊಸಗಾ । ರುಡರಂ ನುತಶಸ್ತ್ರವೈದ್ಯರಂ ಜೋಗಿಗಳಂ॥ ॥೭೪॥

ವ॥ ಅಂತು ಬರಿಸುತವರ್ಗೆ ಬೇಡಿದುದ ನಿತ್ತಪೆ ನೆನ್ನ ಪತಿಯಂ ಬದುರ್ಕಿಪುದೆಂದು ಬಾಯಳಿ ದಳುತ್ತ ಮಿರೆ ಮಾ ಣೆಂದು ನಿಲಿಸುತ್ತ ಮವ ಮ ತಣಂಗೊಂಡು ಮಂತ್ರತಂತ್ರೌಷಧವಿಲೇಪನಾದಿಯಿಂ ನಿಮಿರ್ಚಿಯುಂ ಹರಣಂಬಡೆಯಲ್ಕ ಮಾರದೆ ಕೆಲಸಾರ್ದರವರೊಳ್ ಓರ್ವಂ ವಿಷಹರಣವಿಚಕ್ಷಣ ನಾ ಫಣಿದಷ್ಟನಂಗಮ ನಭೀಕ್ಷಿಸುತ್ತ ಮಿಂತೆಂದಂ॥ * * * * * * *

ಕಂ ॥ ಪಾ ಪೆತ್ತಣಿಂದೆ ಬಂದು ಮ । ಹೀವರನಂ ಕಚ್ಚಿದತ್ತೊ ಶಿವಶಿವ ಕಾಲಂ ॥
ತೀವಿದು ದಿವಂಗೆ ದೈವಮ। ನಾವು ಮಿಾರುವ ನೆನುತ್ತೆ ಮುಗುಳ್ದಿಂತೆಂದಂ॥ ... ॥೭೫॥

ಮತ್ತೇ ॥ ವಿಮುಳಂ ಬಾಸುಗಿ ಕಂಬಳಾಶ್ವತರ ನುನ್ಮತ್ತಂ ಪ್ರಚಂಡಂ ಗುಳಂ । ಸು

---

ಸಮರಸರತಸಮರಸಂಜಾತಸುಖಾನುಭವಾನಂತರಂ- ಸಮರತಿಯುದ್ಧದಲ್ಲುಂಟಾದ ಸೌಖ್ಯವನ್ನನುಭವಿಸಿದಮೇಲೆ * * * * * * * * * * * * * * * * *

ಪಾಟಲಸ್ಫಟಂ-ಬಿಳಿಪುಕೆಂಪುಬಣ್ಣದಿಂಕೂಡಿದಹೆಡೆಯುಳ್ಳ, ಪಟುತೆಯಿಂ- ಸಾಮರ್ಥ್ಯವಿಂದ, ಅಣಿಯರಂ- ದೊಡ್ಡದಾದ, ತೀವ್ರಚಾಲಿತರಸನಂ- ಬೇಗನೆಅಲ್ಲಾಡಿಸಲ್ಪಟ್ಟನಾಲಗೆಯುಳ್ಳ ... ॥೭೩॥

ಗಲ್ಗಲನೆ- ಬೇಗನೆ, ಪಗರಂ- ಪ್ರದೇಶವನ್ನು, ಮೊರೆದು- ಭುಸ್ಸೆಂದುಶಬ್ದಮಾಡಿ, ಪೊಡೆಮುಗುಳ್ದು- ಹೊಟ್ಟೆಯುಂಮಗುಚಿ, ಬಿಗುರ್ತು- ಭಯಪಟ್ಟು, ಬೆಬ್ಬಳಿಸಿ- ಬೆರಗಾಗಿ, ಪೌವನೆ- ಬೇಗನೆ, ಹಂಮುದಂಬೋಗಿ- ಅಹಂಕಾರನಡಗಿ, * * * * * * * * * * * * *

॥೭೪॥ ಮಾಣ್- ಬಿಡು, ಮುಂತಣಂಗೊಂಡು- ಗುಂಪಾಗಿ, ನಿಮಿರ್ಚಿಯುಂ- ಮಾಡಿಯೂ, ಹರಣಂಬಡೆಯಲ್ಕಂ- ಪ್ರಾಣವನ್ನುಪಡೆಯುವದಕ್ಕೂ, ಆಫಣಿದಷ್ಟನ- ಸರ್ಪದಿಂದಕಚ್ಚಲ್ಪಟ್ಟಆರಾಜನ, * *

ತೀವಿದುದು- ತುಂಬಿತು. ... ... ... ॥೭೩॥ ॥೭೬॥ ॥೭೭॥ ॥೭೮॥

ಮನಂ ತಕ್ಷಕ ಪುಷ್ಪದಂಷ್ಟ್ರಕ ಪುರಾಣಾಂಗ ಳ್ಬಳಾಕಂ ಕಲಾ ॥ ಳಮುಖೈರಾವತ ನೀ
ಲ ಪುಂಡ್ರಕ ಹವಿರ್ಕಾತ್ರಿಚಿ ಕಕ್ಕೋರ್ಟಕಂ । ಕುಮುದಂ ವಾಮನ ಮುದ್ಗ ಲಾಕ್ಷ್ಯಕ
ಕಳಿಂಗಂ ಶಂಖಪಾಲಂ ಶಲಂ ॥ ... .. ... ... ... ॥೧೬॥

ಕಂ ॥ ಕಾಲೀಯಂ ಸಂವರ್ತಕ । ಕಾಲಿಕ ಧೃತರಾಷ್ಟ್ರ ಕುಧರ ಮಣಿನಾಗಂಗ
ಳ್ ॥ ಜ್ವಾಲಿ ಪತಂಗ ವಿಭಾಕರ । ಕಾಳಿಕ ನಖ ಶಿಖಿ ಮಹೋದರಾಜಿತಕಂಗಳ್ ॥ ॥೧೭॥

ಕಂ ॥ ಪಿಂಜರಿ ಕಂಧರ ಕೋಟಿ ಧ । ನಂಜಯ ಪಾಂಡುರಕ ಶಾಲಿ ಪಿಂಡಾಂಶುಗ ಚಿ ॥
ತ್ರಾಂಜನ ಕುಹರ ಬಲಾಢ್ಯ ಮ । ಣಿಂಜಯ ಸಮುದಂಗ ಳಾಡಿಯಾ ದಹಿನಿವಹಂ ॥ ೧೮

ಕಂ ॥ ಸಾಸಿರವಿಭೇದ ಮದರೊಳ್ । ವಾಸಗಯಾಮಾಷ್ಟಕಕ್ಕೆ ಪತಿಗಳೆನಿಸಿ ಬ॥ ಲ್ಸಾ
ಸದುರ ಗಂಗಳೆಂಟೊಳ । ವಾಸಮುಯುದೆಪಿಡಿದುಕರ್ಚುಗುಂಮಾನವರಂ ॥ ॥೧೯॥

ವ ॥ ಅವರ ವಿಷಕ್ಕೆ ಮಂತ್ರತಂತ್ರಗಾರುಡಂಗಳಿಂ ಪರಿಹಾರ ಮೊಳವು ಮೇಣು ಗಜ
ನುಂ ದುರ್ಮುಖನುಂ ಮಿತ್ರಾರಿಯುಂ ರೇಣುಕನುಂ ಜಿನಕನುಂ ಸರ್ಗಕನುಂ ದುರ್ಧ
ರನುಂ ಕುಳಿಕನುಂ ದಂಡಪಾದಕನು ಮೆಂಬ ಫಣಿಗಳ್ ಮೊದಲಾದ ನಾಗಂಗಳ್ ಲಕ್ಷಸಂಖ್ಯೆ
ಯೊಳವವರ ಗರಳಂ ಕಾಲಮೃತ್ಯು ನುಂಗದೊಡೆನರನಂ ಗಾರುಡಕ್ರಿಯಾಮಂತ್ರೌಷಧಾದಿಯಿಂ
ಪರಿಹರಿಸಲ್ಪಡುಗು ಮಲ್ಲಿ ಕಾಲಮಂ ಯುಗಮುಮಂ ನಟ್ಟ ಪಲ್ಗಳಿನಿತೆಂಬುದಂ ತಿಳಿದು
ಘೋರಗರಳಾಸ್ಯಂಗಳೆನಿಪಷ್ಟಕುಲಪನ್ನಗಳಂಶಭವೋರಗಂಗಳಗಿಯೆ ಗಾರುಡಮಂತ್ರ
ಸಂಸ್ಕಾರದಿ ನಾಮಾನವಂ ಗಾವೇಶಂದುಂಬಿ ನುಡಿಯಿಸಲಕ್ಕು ಮವಂಗಂ ಕಾಲಮೃತ್ಯು ತಗು
ಳ್ದೊಂದು ಪಲ್ನಾಂಟೆ ಶಿರದೊಳ್ ಶಿಖಿಯ ನೆಕೆಯಿ ನುದಕಾಭಿಷೇಕದಿಂದಂ ವಿಷಮಿಳಿಗು ಮೆರ
ಡುವ ಲ್ನಾಂಟೆ ಸಾರತರಮಂತ್ರಗಾರುಡಮಂತ್ರವಿಧಿಯಿನಾಗರಳ ಮಳಿಗುಂ ಮೂರುಪಲ್ನಾಂಟೆ
ದಿವ್ಯೌಷಧಪ್ರಯೋಗದಿ ನಾಹಾಲಾಹಲಂ ಕಿಡುಗು ಮಾವಂಪದಿ ನಾದೊಡಂ ಪಲ್ನಾಲ್ಕು ನಾಂ
ಟೆ ಘೋರತರಕ್ಷ್ವೇಳ ಮಾವಾತಂಗಮಾದೊಡ ಮಸಾಧ್ಯ ಮಕ್ಕು ಮೆಂದಾನರೇಂದ್ರಸುತನಕ
ರದ ಫಣಿದಂತಕ್ಷತಮ ನಭೀಕ್ಷಿಸಿ ॥ * * * * * * *

ಕಂ ॥ ಇದು ಕರ್ಕೋಟಕಫಣಿ ಕ । ರ್ಚಿದು ದುರೆ ನಟ್ಟುಬರ್ಚಿ ನಾಂಟಿದುದು ನಾಲ್ಕುಂ
ಪ ॥ ಲ್ಲಿದರ ವಿಷಮುಂ ಮಹಾವಿಷ । ಪದಕಂಧರಶಂಭು ಮಾಡೂಡಂ ಪರಿಡಪನೆ ॥ ॥೨೦॥

ವ ॥ ಎಂದಾಜೋಗಿ ಕೆಲಂದೊಲಗ ಲೆಡ ನಾಸಮಯದೊಳಂತಃಪುರದ ಕಾಂತಾಜನ
ಮುರಸ್ಥಲತಾಡನಂಬೆರಸು ಹಾಹಾರವಂ ಮಸಗೆ ಘೋಳಿಡುತ್ತಳುತ್ತಮಿರೆ ಮತ್ತಮಲ್ಲಿ॥

ಕಂ ॥ ಪರಿಜನಮುಂ ಪುರಜನಮುಂ । ನೆರೆದಾಪ್ತರು ಮಿಷ್ಟಮಿತ್ರರುಂ ಕಣ್ಬನಿ
ಕಾ ॥ ಳ್ಪುರ ಮಾಗಿ ಸುರಿಯೆ ಶೋಕಾ । ತುರತೆಯನೊಳಕೊಂಡಳುತ್ತಮಿರೆ ಬಳಕಾಗಳ್॥

---

ವಾಸರಯಾಮಾಷ್ಟಕಕ್ಕೆ- ದಿನದಎಂಟುಜಾವಕ್ಕೆ, ಬಲ್ಸಾಸದ- ಬಹುಸಾಹಸವುಳ್ಳ, ... ॥೧೯॥
ಘೋರಗರಳಾಸ್ಯಂಗಳ್- ಭಯಂಕರವಾದ ವಿಷದಿಂ ಕೂಡಿದಬಾಯುಳ್ಳವುಗಳು, ಅಗಿಯೆ-ಕಚ್ಚಲು, *
ಮಹಾವಿಷಪದಕಂಧರಶಂಭು-ಅಧಿಕವಾದ ವಿಷದ ಬೆಸ್ನವೇ ಕಂಠದಲ್ಲುಳ್ಳ ಶಿವನು. ... ॥೨೦॥
ಉರಸ್ಥಲತಾಡನಂಬೆರಸು- ಎದೆಯನ್ನು ಬಡಿದುಕೊಳ್ಳುವಿಕೆಯಿಂದ ಕೂಡಿ. * * * * *
ಕಾಳ್ಪುರಂ- ಪ್ರವಾಹವು. ... ... ... ... ॥೨೧॥

ಚಂ ॥ ಅಳಿದ ನಿಜೇಶನಂ ನಮಣಿ ನೋಡಿ ನಿಜೋದರದಲ್ಲಿ ಬಾಸುಳಂ । ಬಳಯಿಸಿ ಕೋಮಲಾಂಗುಲಿಗ ಳೋವದೆ ಮೋದಿಕೊಳುತ್ತೆ ಕಾಂತ ಹಾ ॥ ವಿಳಸಿತರೂಪ ಹಾ ವಿನಯಮಂದಿರ ಹಾ ಯೆನುತಂ ದೃಗಂಬು ಪೂ । ಯ್ದಳಿ ಧಿಳೆಯೊ ಳ್ಪೊನಲ್ವರಿಯೆ ಬೀಳ್ದಳು ಆರ್ತತೆಯಿಂ ಪಲುಂಬಿದಳ್ ॥ ... ... ... ... ॥೩೦॥

ಕಂ ॥ ಪಳಯಿಸಿದಳ್ ಮಿಗೆ ಮರುಗಿದ । ಳೊಳಗಾರಿದ ಳೋವ ಕೆಟ್ಟೆ ನಕಟೆನುತಂ ಬಾ ॥ ಯಳಿ ವತ್ತ ಳ್ಕಳವಳಸಿದ।ಳಿಳೆಯೊಳ್ ಕೆಡೆ ದುರುಳ್ದು ಪೊರಳ್ದು ತಳವೆಳಗಾದಳ್॥

ವ ॥ ಅಂತಳವಿಗಳಿವಳಲ ನೊಳಕೊಂ ಡಾಕ್ರಂದನಂಗೆಯ್ದು ಗದ್ಗದೋದ್ಗಳಿತಶಿಥಿಲಾಕ್ಷರಂ ನಾಲಗೆಯೊ ಳ್ಪೊರಳುದ್ದುರುಳೆ ಮೊದಲ ಓನದೊ ಳಾವೇಮನಾರ್ಯ ರ್ವರಸಲೊಲ್ಲದೆಂದು ದನೆಲ್ಲಮಂ ಬಿತ್ತರಿಸೆ ಲೊಡ ನಾನ್ನೃಪನಂದನನ ನಾವ್ತಬಂಧುಗಳು ಮಂಪನತಾಯ್ತಂದೆಗಳುಂ ಕೇಳ್ದಳಿದಿರೆಂದವಳಂ ಸಂತೈಸುತಿಂತೆಂದರ್ ॥ * * * * * * *

ಮ॥ಸ್ರ॥ ಪರಮಾರಾಧ್ಯ ರ್ಪ್ರಪನ್ನಪ್ರಕರವಿಪದಘಧ್ವಂಸಕ ರ್ಸತ್ಕೃಪಾಭಾ । ಸುರಚೇತ ರ್ವೇಮನಾರ್ಯ ರ್ಕುಣಪಮ ನಿದ ನೊಯ್ದೆಂದು ಮುಂದಿಕ್ಕು ತಾಮೆ ॥ ಲ್ಲರುಮ ದೈನ್ಯಕ್ಕೆತ್ತಿಯಿಂ ದೀನತೆವೆರಸು ಶರಣ್ಬೊಕ್ಕೊ ಡೀಸತ್ತರಾಜಂ । ಗಿಳದೀವರ್ಪ್ರಾಣಮಂ ಮಾಣದೆ ಮೆರೆವಿನಮಾತ್ಮೀಯಶೈವಪ್ರಭಾವಂ ॥ ... ... ॥೩೪॥

ವ ॥ ಎಂದುಸಿ ರ್ದಿಪೇ ಕಪ್ಪು ವೆಂದು ನಿರ್ಧರಿಸಿ ॥ * * * * * *

ಮ॥ ಸ್ರ॥ ಜವದಿಂದೇಳ್ತಂದುತಾಮೆಲ್ಲರು ಮವರಪದಾಂಭೋಜದೊ ಳ್ಬೀಳ್ದು ಭೀತಿ । ಪ್ರವಣ ರ್ಮೈಯಿಕ್ಕಿ ಕೆಯ್ಯಂ ಮುಗಿ ದವಧರಿಸಲ್ವೇಳ್ಕುಮಾಚಾರ್ಯವಂಶಾ ॥ ರ್ಣವರಾಕಾಚಂದ್ರ ನೀಂಬಿನ್ನಪಮ ನಿದ ನಿಮ ನಿಮ್ಮ ಭೃತ್ಯಂ ಮಹಾಮ್ಯ । ತ್ಯುವಿ ನುಗ್ರಾಸ್ಯಾಂತರಂಬೊಕ್ಕಳಿದ ನಕಟಘೋರಾಹಿದಂತಾತಿದಷ್ಟಂ ॥ ... ... ॥೩೫॥

---

ಬಾಸುಳಂ- ಬಾಸುಂಡೆಯನ್ನು, ಮೋದಿಕೊಳುತ್ತೆ- ಹಿಸುಕಿಕೊಳುತ್ತ, ಪೊನಲ್ವರಿಯೆ- ಪ್ರವಾಹದಂತೆಹರಿಯಲು, ಆರ್ತತೆಯಿಂ- ಮನೋವ್ಯಥಾ ಸಹಿತತ್ವದಿಂದ. ... ... ॥೩೦॥

ಪಳಯಿಸಿದಳ್- ಪ್ರಲಾಪಮಾಡಿದಳು, ಮರುಗಿದಳ್- ದುಃಖಿಪಟ್ಟಳು, ಒಳಗೆ- ಎದೆಯಲ್ಲಿ ಆರಿದಳ್- ಒಣಗಿಕೊಂಡಳು, ಓವ- ಸತಿಯೇ ! ಬಾಯಳಿದು- ಬಾಯಂಬಿಟ್ಟು, ತಳವೆಳಗಾದಳ್- ಬೆರಗಾದಳು . ॥೩೩॥

ಅಳವಿಗಳಿದ- ಗಣನಾತೀತವಾದ, ಆಕ್ರಂದನಂಗೆಯ್ದು- ಅತ್ತು, ಗದ್ಗದೋದ್ಗಳಿತ ಶಿಥಿಲಾಕ್ಷರಂ- ಹೀನಸ್ವರದಿಂದ ಹೊರಟ ಸಡಿಲವಾದ ಅಕ್ಷರಗಳು. * *. * * * * * * * * *

ಪ್ರಪನ್ನಪ್ರಕರವಿಪದಘಧ್ವಂಸಕರ್- ಶರಣಾಗತರಾದ ಜನಗಳ ಆಪತ್ತುಗಳು ಪಾಪಗಳನ್ನು ನಾಶಮಾಡತಕ್ಕವರು, ಸತ್ಕೃಪಾಭಾಸುರಚೇತರ್- ಒಳ್ಳೆಯ ದಯೆಯಿಂದ ಪ್ರಕಾಶಿಸುವ ಮನಸ್ಸುಳ್ಳವರು, ಇದಂಕುಣಪಮಂ- ಈ ಹೆಣವನ್ನು, ದೀನತೆವೆರಸು- ದೈನ್ಯವಿಂಕೂಡಿ. ... ... ॥೩೪॥

ಭೀತಿಪ್ರವಣರ್- ಭಯತತ್ಪರರಾಗಿ, ಅವಧರಿಸಲ್ವೇಳ್ಕುಂ- ಲಾಲಿಸಬೇಕು. ಆಚಾರ್ಯವಂಶಾರ್ಣವರಾಕಾಚಂದ್ರ- ಗುರುಸಂತತಿಯೆಂಬ ಸಮುದ್ರಕ್ಕೆ ಪೂರ್ಣಚಂದ್ರನಾದಹನೇ ! ಉಗ್ರಾಸ್ಯಾಂತರಂಬೊಕ್ಕು- ಭಯಂಕರವಾದ ಬಾಯನ್ನುಪ್ರವೇಶಿಸಿ, ಘೋರಾಹಿದಂತಾತಿದಷ್ಟಂ- ಭಯಂಕರವಾದ ಸರ್ಪದ ಹಲ್ಲಿಂದ ಹೆಚ್ಚಾಗಿ ಕಚ್ಚಲ್ಪಟ್ಟವನಾಗಿ ... ... ... ... ॥೩೫॥

ಕಂ|| ಅಡಿಗೆರಗೆ ಪರಕೆಯಂಕುಡ । ದೊಡೆಯ ನಿರ್ವಿಸಿದ ತೆರದೆ ಫಣಿದಷ್ಟ ನಿವಂ||
ಮಡಿದಂ ಪಡುಗಡೆಯುದಯಿಸಿ । ದೊಡ ಮರ್ಕಂ ದೇವ ನಿಮ್ಮ ನುಡಿ ತಪ್ಪುಗುಮೇ ||೩೬

ಕಂ||ನಿಜಶಿಷ್ಯ ರಳಿಕದೊಳ್ಜಡ । ಜಜನುಂ ಲಿಖಿಸಿರ್ದ ಲಿಪಿಯ ನೊರಸುವೆ ಗಡ ನೀಂ||
ನಜನಿಂತು ನೆಗಳ್ದ ಜನಪಾ । ಲಜಮೃತಿಯಂ ಪರಿಯುದರಿದೆ ನಿಮಗತಿಮಹಿಮ || ೩೭

ಕಂ || ಕಾಲಹರಗರಳಕಂಠ । ವ್ಯಾಲಾಭರಣೈಕರೂಪ ಪಾಲಿಪುದೀಗಳ್ || ಕಾಲನ ಪೊ
ಳಲ್ಗೆ ಪಟುಫಣಿ । ಹಾಲಾಹಲ ಮಡಸೆ ತಳರ್ದ ಭೂಭುಜನಸುವಂ || ೩೮

ಕಂ || ಅಮಿತಗುಣಶಾಲಿ ಲೀಲಾ । ಶಮಿತೇಂದ್ರಿಯವರ್ಗ ಭರ್ಗಮಾರ್ಗಗವಿದ್ಯಾ ||
ಸಮುದಯ ಮುದಮಯಮಾನಸ । ವಿಮದಸ್ತುತ ವೇಮನಾರ್ಯ ಜಯಗಣವರ್ಯ || ೩೯

ಚಂ || ವಿತರಣಧೀರ ವಿಶ್ರುತವಿಚಾರ ವಿನಿರ್ಜಿತಮಾರ ಲಿಂಗಸಂ । ಗತನಿಜಕಾಯ ನಿರ್ಗಳದಪಾಯ ನಿರಾಕೃತಮಾಯ ಮಂಗಳಾ || ಯತನಸುವೃತ್ತ ಮಾನ್ಯ ಸಮುದಾತ್ತ ಮಹೇಶ್ವರಚಿತ್ತ ಪಾವನೋ । ನ್ನತಗುಣಧಾಮ ಪಾಲಿಪುದು ವೇಮಗುರೂತ್ತಮ ತಾಮ ಸಾತ್ಮರಂ || ೪೦

ಚಂ || ಗುರುಕುಲಚಕ್ರವರ್ತಿ ವಿಶದೋಜ್ವಲಕೀರ್ತಿ ನಿಜಾನತಾರ್ತಿಸಂ । ಹರ ಹರಧಿವ್ಯರೂಪಶಿವತತ್ವಕಳಾಪ ದುರಂತಪಾಪಕುಂ || ಜರಹರಿಣೇಂದ್ರ ಸದ್ವನಧಿಚಂದ್ರ ಸದಾ ಶಿವಭಕ್ತಿಸಾಂದ್ರನೀಂ । ಪೊರೆಯುದು ವೇಮನಾರ್ಯಬಿಡದೆಮ್ಮ ನವಾರ್ಯಸುಕಾರ್ಯಕೌಶಲ ||೪೧||

---

ನಿರವಿಸಿದ—ಆಜ್ಞಾಪಿಸಿದ, ಪಡುಗಡೆ—ಪಶ್ಚಿಮದಿಗ್ಭಾಗದಲ್ಲಿ .. .. ||೩೬||

ಅಳಿಕದೊಳ್—ಹಣೆಯಲ್ಲಿ, ಜಜಜಜಂ—ಬ್ರಹ್ಮನು, ಜನಪಾಲಜನ್ಮೃತಿಯಂ—ರಾಜಪುತ್ರನ ಮರಣವನ್ನು ೩೭

ಪೊಳಲ್ಗೆ— ಪಟ್ಟಣಕ್ಕೆ, ಪಟುಫಣಿಹಾಲಾಹಲಂ— ಸಮರ್ಥವಾದ ಸರ್ಪದ ವಿಷವು, ಅಡಸೆ—ವ್ಯಾಪಿಸಲು, ತಳರ್ದ— ಹೋದ .. .. .. .. ||೩೮||

ಲೀಲಾಶಮಿತೇಂದ್ರಿಯವರ್ಗ— ವಿಲಾಸದಿಂದ ನಾಶಮಾಡಲ್ಪಟ್ಟ ಇಂದ್ರಿಯಸಮೂಹವುಳ್ಳ, ಭರ್ಗಮಾರ್ಗಗ ವಿದ್ಯಾಸಮುದಯ— ಶೈವಮಾರ್ಗಾನುಗತವಾದ ವಿದ್ಯೆಗಳ ಸಮೂಹವುಳ್ಳ, ಮುದಮಯಮಾನಸ— ಬಹುಸಂತೋಷಚಿತ್ತನಾದ, ವಿಮದಸ್ತುತ—ಅಹಂಭಾವವಳಿದವರಿಂದ ಸ್ತೋತ್ರಮಾಡಿಸಿಕೊಳ್ಳಲ್ಪಟ್ಟ ||೩೯||

ವಿತರಣಧೀರ— ದಾನದಲ್ಲಿ ಗಟ್ಟಿಗನಾದ, ವಿಶ್ರುತವಿಚಾರ— ಪ್ರಸಿದ್ಧವಾದ ತತ್ವವಿಚಾರವುಳ್ಳ, ವಿನಿರ್ಜಿತಮಾರ— ಜೈಸಲ್ಪಟ್ಟ ಮನ್ಮಥನುಳ್ಳ, ಲಿಂಗಸಂಗತನಿಜಕಾಯ— ಲಿಂಗದಿಂ ಕೂಡಿದ ತನ್ನ ದೇಹವುಳ್ಳ, ನಿರ್ಗಳದಪಾಯ— ಜಾರಿಹೋದ ಹಾನಿಯುಳ್ಳ, ನಿರಾಕೃತಮಾಯ— ತಿರಸ್ಕರಿಸಲ್ಪಟ್ಟ ಮಾಯೆಯುಳ್ಳ, ಮಂಗಳಾಯತನಸುವೃತ್ತ— ಕಲ್ಯಾಣಕ್ಕಾಶ್ರಯವಾದ ಒಳ್ಳೆಯ ಚರಿತ್ರೆಯುಳ್ಳ, ಮಾನ್ಯಸಮುದಾತ್ತ— ಪೂಜ್ಯರಲ್ಲುತ್ಕೃಷ್ಟನಾದ, ಮಹೇಶ್ವರಚಿತ್ತ— ಪರಮೇಶ್ವರನೇ ಮನಸ್ಸಿನಲ್ಲುಳ್ಳ, .. .. .. ||೪೦||

ಗುರುಕುಲಚಕ್ರವರ್ತಿ— ಆಚಾರ್ಯಸಮೂಹದಲ್ಲಿ ಸಾರ್ವಭೌಮನಾದ, ವಿಶದೋಜ್ವಲಕೀರ್ತಿ— ನಿರ್ಮಲವಾಗಿ ಪ್ರಕಾಶಿಸುವ ಯಶಸ್ಸುಳ್ಳ, ನಿಜಾನತಾರ್ತಿಸಂಹರ— ತನಗೆ ನಮಸ್ಕರಿಸಿದವರ ಮನೋವ್ಯಥೆಯನ್ನು ನಾಶಮಾಡುವ, ಶಿವತತ್ವಕಳಾಪ—ಪರಶಿವತತ್ವವೇ ಆಭರಣವಾಗುಳ್ಳ, ದುರಂತಪಾಪಕುಂಜರ* ಹರಿಣೇಂದ್ರ—ಕೊನೆಯಿಲ್ಲದ ಪಾಪ ವೆಂಬ ಆನೆಗೆ ಸಿಂಹನಾದ, ಸದ್ವನಧಿಚಂದ್ರ— ಸತ್ಪುರುಷರೆಂಬ ಸಮುದ್ರಕ್ಕೆ ಚಂದ್ರನಾದ, ಅನಾರ್ಯಸುಕಾರ್ಯಕೌಶಲ— ಇತರರಿಂದ ತಡೆಯುವದಕ್ಕಾಗದ ಒಳ್ಳೆಯ ಕಾರ್ಯದಲ್ಲಿ ನಿಪುಣನಾದ, .. .. ||೪೧||

---

* ಹರಿಣಃ॥ ಹರಿಣಸ್ತೃಣಸಿಹ್ಮೇಚಕುರಂಗೇ ಸೂರ್ಯಹಂಸಯೋಃ ॥ ಎಂದು ನಿಘಂಟುವಚನಂ ||೪೧||

ಕಂ|| ಶರಣಾಗತ ಜನಪವಿಪಂ | ಜರ ರೆಂಬೀಬಿರುದು ನಿಮಗೆ ಶಾಶ್ವತ ಮದರಿಂ ||
ಕರುಣಾಕರ ನಿಮ್ಮಂಘ್ರಿಗೆ | ಶರಣಾಗತ ರಾದೆ ವೆಮ್ಮಪೊರೆ ಮಹಿಮಾಬ್ಧೀ || ೪೦

ಕಂ|| ಈಯುಗದೊ ಳಳಿದ ನರರ್ಗಸು | ವೀಯಲು ಮಂತಕನ ಬಾಧೆಯುಂ ಪರಿದೊ
ಲವಿಂ || ಕಾಯಲು ಮೆಲೆನೀನಲ್ಲದೆ | ಮಾಯಾಂತಕ ಪೇಳ್ ಸಮರ್ಥರಾರ್ಪರಿಳೆಯೊಳ್||

ಕಂ || ಮೊದಲೊ ಳ್ನಿಮ ಗಿವ ನೊಲ್ದಿರ | ಗದೊ. ಡಿವನದು ತಪ್ಪುಗಡ ವಿಚಾರಿಪೊಡೀ
ತಂ || ಮೊದಲೆರಗಿದ ನಿವನೊಳ್ತು | ಪ್ಪುದಯುಸುಗುಮೆ ದೇವ ದೇವನೀವರಿ ಯದುದೆ || ೪೪

ಕಂ || ಹರಮತಕೆ ಕೀರ್ತಿ ನಿಮ್ಮಯ ಚರಿತಕ್ಕೆ ನೆಗಳ್ತೆ ಯೆಮಗೆ ಪರಮಾನಂದಂ ||
ತರುಣಿಗೆ ಮುತ್ತೈದೆತನಂ | ಧರಣಿಗೆ ಮುದ ಮಲರ್ವ ತೆರದೆ ಪೊರೆ ಕರುಣಾಬ್ಧೀ || ೪೫

ಕಂ || ಅನಿಮಿತ್ತ ಬಂಧು ನಿಮ್ಮಯ | ವಿನುತ ಕೃಪಾಪಾಂಗ ಸಾರಸಂಜೀವನದಿಂ || ಘ
ನವಿಷಮುವಿಷಧರದ ವಿಷ | ಮನಿದಂ ಕಳೆ ದಸುವನಿತ್ತುಪೊರೆ ಗುರುತಿಲಕಾ || ೪೬

ಚಂ || ಮುಸುಟೆಯಚೌಡರಾಯ ನತಿಗೊಲ್ದೆರಗಿರ್ದ ಲತಾಂಗಿ ಗೆಯ್ದೆಸಂ | ತಸದೊ
ಳೆ ದೀರ್ಘಮಾಯು ನಿನಗೆಂದು ಮೊದಲ್ಪರ ಸುತ್ತ ಮೇ ಣವ || ಳ್ಗ ಸು ಪೆರಪಿಂಗೆ ಜೀವನ
ಮ ನಿತ್ತು ವಿರಾಜಿಸನೇ ಧರಿತ್ರಿಯೊ | ಳ್ಕುಸುಮಶರಾರಿ ಭಕ್ತತತಿ ಗಿಂತಿದು ಚೋದ್ಯಮೆ
ವೇಮಧೀಮಣೀ || ೪೭

ಕಂ|| ಪನ್ನಗಧರ ಸನ್ನಿಭ ಪಟು | ಪನ್ನಗದಷ್ಟಂಗೆ ಹರಣಮಿಾಯುದು ಭಜಕಾ || ಪನ್ನ
ಗಪವಿನಿಭಗುಣಸಂ | ಪನ್ನ ಗಣಪ್ರವರ ವೇಮ ವಿಬುಧಲಾಮಾ || ೪೮

ಕಂ || ಶರಣಾಗತರಕ್ಷಾಕರ | ಬಿರುದಾಂಕ ಭವತ್ಪದಾಬ್ಜಮಂ ಮರೆವೊಕ್ಕಾ || ವಿರೆ ಪೊ
ರೆಯದಭಯಮಂಕುಡ | ದಿರೆ ನಿಮ್ಮಯ ಬಿರುದಬಿಂಕ ಮೇನಪ್ಪುದೊ ಪೇಳ್ || ೪೯

ಕಂ || ಗತಿಯುಂ ಮತಿಯುಂ ಹಿತನುಂ | ಪಿತನುಂ ನೀ ಮೆಮಗೆ ದೇವ ಪೊರೆ ಪೊರೆಯ
ದೊಡು || ನ್ನತಧೀರ ನಿಮ್ಮ ವೀರ | ವ್ರತಕ್ಕೆ ಕುಂದಪ್ಪುದಲ್ತೆವಿಶ್ವಂಭರೆಯೊಳ್ || ೫೦

ಶರಣಾಗತ ಜನಪವಿಪಂಜರರ್— ತನ್ನನ್ನು ಸಂರಕ್ಷಕನನ್ನಾಗಿ ಹೊಂದಿದ ಜನಗಳಿಗೆ ವಜ್ರದ ಪಂಜರರು (ಅಂದರೆ ಇತರ ಸಕಲಭಯಗಳಿಂದಲೂ ತಪ್ಪಿಸುವರು) .. .. ||೪೦||

೪೩|| ೪೪|| ನೆಗಳ್ತೆ— ಪ್ರಸಿದ್ಧಿಯು, .. .. ||೪೫||

ಅನಿಮಿತ್ತಬಂಧು— ನಿಷ್ಕಾರಣವಾಗಿ ಮಿತ್ರನಾದವನೇ (ಅಂದರೆ ಯಾವದೊಂದು ಉಪಕೃತಿಯನ್ನೂ ಹೊಂದದೆ ಇತರರಿಗೆ ಹಿತವನ್ನುಂಟುಮಾಡುವವನೇ) ವಿನುತ ಕೃಪಾಪಾಂಗಸಾರ * ಸಂಜೀವನದಿಂ— ಶ್ಲಾಘ್ಯವಾದ ದಯೆಯಿಂದ ಕೂಡಿದ ಕಡೆಗಣ್ಣೋಟವೆಂಬ ಶ್ರೇಷ್ಠವಾದ ಸಂಜೀವನದಿಂದ, .. .. ||೪೬||

ಅಸು— ಪ್ರಾಣವು, ಪೆರಪಿಂಗೆ— ಬಿಟ್ಟುಹೋಗಲು .. .. ||೪೭||

ಪನ್ನಗಧರಸನ್ನಿಭ— ಶಿವಸದೃಶನಾದ, ಭಜಕಾಪನ್ನಗಪವಿನಿಭಗುಣಸಂಪನ್ನ— ಭಜಕ— ತನ್ನನ್ನು ಧ್ಯಾನಿಸುವರ, ಆಪತ್— ವಿಪತ್ತೆಂಬ, ನಗ— ಪರ್ವತಕ್ಕೆ, ಪವಿನಿಭ— ವಜ್ರಾಯುಧ ಸಮಾನವಾದ, ಗುಣ— ಸದ್ಗುಣದಿಂದ ಸಂಪನ್ನ— ಕೂಡಿದ, ವಿಬುಧಲಲಾಮ— ವಿದ್ವಾಂಸರಲ್ಲಿ ಶ್ರೇಷ್ಠನಾದ. .. .. ||೪೮||

||೪೯|| ವಿಶ್ವಂಭರೆಯೊಳ್— ಭೂಮಿಯಲ್ಲಿ .. .. .. ||೫೦||

* (ಅವ) ಸತ್ತವರನ್ನು ಬದುಕಿಸುವ ಮಣಿ .. .. ||೪೬||

ವ || ಎಂ ದವಂದಿರಡಿಗಡಿಗೆಮಣಿಯುತಂ ಪಲವಂದದಿಂ ನುತಿಯಿಸುತಂ ಪ್ರಾಣದಾನಮಂ ಪ್ರಾರ್ಥಿಸುತ್ತಂ ನಿಜಕೃಪಾಕಟಾಕ್ಷಸಾಮರ್ಥ್ಯಮಂ ಬಯಸುತಂ ಬಾಯಳಿದು ಬೇಡಿಕೊಳುತ್ತ ಮಿರ್ಪಾಸಮಯದಲ್ಲಿ ||

ಉ || ಅಪ್ರತಿಮಪ್ರತಾಪನಿಧಿ ಶಂಭುನಿಭಂ ಶಿವನಾಮಧಾಮವೇ | ಮಪ್ರಭು ನೋಡಿ ತನ್ನ ಕರುಣಾಮೃತಪೂರ್ಣಕಟಾಕ್ಷದಿಂ ಶಿವೈ || ಕ್ಯಪ್ರಸರಪ್ರಭಾವ ದಿರವಂ ಪರಿಭಾವಿಸಿ ಸಾರವೀರಶೈ | ವಪ್ರಭೆ ಕುಂದುಗುಂ ಮರೆಗೆವಂದರ ನೋವದೊ ಡಿಂದು ಚಚ್ಚರಂ ||     ೫೧

ಕಂ || ಮೂದಲಿಸಿ ನುಡಿಯೆ ಪಿಂದ | ಣ್ಗಾದೊ ಡೆಮಗೆ ಕೊರತೆಯಲ್ತೆ ನಿಜಭಕ್ತಿಯಮ || ರ್ಪೋದಿತವಚನಕೆ ಜಗುಳ್ದಂ | ಪೋದೊಡೆ ನಿಜಭಕ್ತಬಂಧು ನಗದೇಕಿರ್ಪಂ ||

ಚಂ || ಎರೆಯನ ದಂಡು ಮೇಲ್ವರಿಯೆ ಪಿಂದೆಗೆದೋಡುವು ದೊಂದು ಬೀರಮೇ | ಕೊರತೆಯ ನಾತ್ಮಭಕ್ತಮತಪದ್ಧತಿಗಾಗಿಪು ದೊಂದುಶೀಲಮೇ || ನೆರೆ ಯಸುವೀವುದೆಂದು ಮರೆವೊಕ್ಕೊಡು ಪೇಕ್ಷಿಪು ದೊಂದು ಶಕ್ತಿಯೇ | ಮೆರೆವಭವಾಂಘ್ರಿಭಕ್ತತತಿಯೊಲ್ವುದೆ ಮೂದಲೆಗಳ್ಕದಾತನಂ ||     ೫೩

ವ || ಎಂದು ದೃಢಪ್ರತಿಜ್ಞೆಯ ನಪ್ಪುಕೆಯ್ದು ಲಿಂಗಜಂಗಮಪದಭಕ್ತರಂ ಭಕ್ತಿಯಿಂ ಬಿಜಯಂಗೈಸಿ ತಂದು || ಲಲಿತರಗಳೆ || ಮಣಿಮಣಿದು ಮಣಿಮಯಾಸನದಲ್ಲಿ ಕುಳ್ಳಿರಿಸಿ| ಗಣನಿವಹಮಂ ಭಕ್ತಿಭರದಿಂದೆ ಸಡಗರಿಸಿ | ವಿಮಳೋದಕದಿ ನವರ ಪಾದತಳಮಂ ಕರ್ಚಿ | ಕಮನೀಯತತ್ಪಾದಸಲಿಲಮಂ ನಲವೆರ್ಚಿ | ಪೊಸಕಳಸದೊಳ್ತೀವಿ ಗಣಸಭಾಮಧ್ಯದೊಳ್| ಮಿಸುಗುವಂ ತದ ನಿರಿಸು ತವರ ಸಾನ್ನಿಧ್ಯದೊಳ್ | ಲೇಸೆನಿಪ ಸುರಭಿಕುಸುಮದೆ ಸುರಭಿತಂ ಮಾಡಿ | ಬಾಸಣಿಸಿ ವಸನದಿಂ ಮೃಡನಡಿಗಳಂ ಪಾಡಿ | ಮುಗುಳ್ದು ಶಿವಗಣಸಭೆಯ ನಾನಂದದಿಂ ನೋಡಿ | ಪೊಗಳ್ದು ಪೂಮಾಲೆಗಳ ನವರಮುಡಿಯೊಳ್ಸೂಡಿ | ಪರಿಮಳಕದಂಬದಿಂ ದನುಲೇಪನಂಗೊಳಿಸಿ | ಸುರುಚಿರಾಭರಣನಿಕುರುಂಬದಿ ನಲಂಕರಿಸಿ | ಸಾರತರಧೂಪಧೂಮಾಮೋದಮಂ ನೀಡಿ| ನೀರಾಜನಾದಿಯಂ ಬೆಳಗಿ ಮಿಗೆ ಕೊಂಡಾಡಿ | ಸರ್ಪಿರಮೃತಾತ್ತ ಮ

ಶಂಭುನಿಭಂ– ಶಿವಸದೃಶನಾದ. ಶಿವನಾಮಧಾಮವೇಮಪ್ರಭು–ಶಿವನ ಹೆಸರಿಗಾವಾಸನಾದ ವೇಮಸ್ವಾಮಿಯು, ಶಿವೈಕ್ಯಪ್ರಸರಪ್ರಭಾವದ– ಲಿಂಗಾಂಗ ಸಾಮರಸ್ಯವಂ ಹೊಂದಿದ ಶಿವಶರಣತಗುಂಪಿನ ಮಹಿಮೆಯು. ||೫೧||

ಪಿಂದಣ್ಗೆ —ಹಿಂದಕ್ಕೆ, ಆದೊಡೆ (ಅಂದರೆ ಹಿಂದೆಗೆದರೆ) ಜಗುಳ್ದು— ಜಾರಿ, ನಿಜಭಕ್ತಬಂಧು– ತನ್ನ ಭಕ್ತರಿಗೆ ಬಂಧು ಸ್ವರೂಪನಾದ ಈಶ್ವರನು. ||೫೨||

ಎರೆಯನ– ಸ್ವಾಮಿಯು, ಬೀರವೇ– ಪರಾಕ್ರಮವೇ ? ಆತ್ಮಭಕ್ತಮತ ಪದ್ಧತಿಗೆ– ತನ್ನ ಶಿವಭಕ್ತಮತದ ಮಾರ್ಗಕ್ಕೆ, ಅಸುವೀವುದು– ಪ್ರಾಣವಂ ಕೊಡಬೇಕು. ಮೂದಲೆಗೆ —ಹೀಯಾಳಿಸುವಿಕೆಗೆ. ||೫೩||

ಅಪ್ಪುಕೆಯ್ದು—ಅಂಗೀಕರಿಸಿ.

*   *   *   *   *   *

ಕರ್ಚಿ– ತೊಳೆದು, ಕಮನೀಯ ತತ್ಪಾದ ಸಲಿಲಮಂ– ಮನೋಹರವಾದ ಆ ಗಣಂಗಳ ಪಾದೋದಕವನ್ನು, ತೀವಿ– ತುಂಬಿ, ಸುರಭಿತಂಮಾಡಿ– ಪರಿಮಳವಿಶಿಷ್ಟವನ್ನಾಗಿಮಾಡಿ, ನೀರಾಜನಾದಿಯಂ– ಕರ್ಪೂರದಾರತಿ ಮೊದಲಾದವುಗಳನ್ನು, ಸರ್ಪಿರಮೃತಾತ್ತ ಮಧುರೋಪಹಾರವಮಂ– ತುಪ್ಪಹಾಲಿನಿಂದ ಹೊಂದಲ್ಪಟ್ಟ ಸೀಯಾದ ಅನ್ನವನ್ನು, ಕರ್ಪೂರವೀಟೀವಿಭೂತಿ ಗುಡುತೆ– ಪಚ್ಚಕರ್ಪೂರದಿಂ ಮಿಶ್ರವಾದ ವಿಭೂತಿಯು ವೀಳಯವನ್ನು ಕೊಡು

ಘುರೋಪಹಾರಮನು ನಿತ್ತು। ಕರ್ಪೂರವೀಟೀವಿಭೂತಿಗುಡು ತೊಲವೆತ್ತು। ಪಟುಪಟಹಡಿಂಡಿಮದ ಶಂಖದರವಂ ನೆಗಳೆ। ಚಟುಲಕಹಳಾರವದೊಡನೆ ವಂದಿಗಳ್ಪೊಗಳೆ। ಆಡೆ ನರ್ತಕಿಯ ರೀಕ್ಷಿಪ ರಲ್ಲಿ ಮೇಲ್ವರಿಯೆ। ಕೂಡೆ ನಾನಾವಾದ್ಯನಾದ ಮದು ಸ್ಯೈವರಿಯೆ। ನೆಗಳ್ದುಘೋ ಜಯಜಯಧ್ವಾನ ಮೆತ್ತಂಮಸಗೆ। ಸುಗುಣನಿಧಿ ನಿಂದು ನಿಜಭಕ್ತಿಭಾವಂ ಮಿಸುಗೆ। ಕುಸುಮಾಂಜಲಿಯ ನೆಸಗಿ ಬಲವಂದು ಮಗುಳ್ದೀಳ್ದು। ಮಿಸುಪ ಶರಣವ್ರಜದ ಬೆಸನ ಶಿರದೊಳ್ತಾಳ್ದು। ವಿತತಮಹಿಮಾಕರಂ ನತಜನದಮಾಕರಂ। ಭವಭಯವಿಭಂಜನಂ ಶಿವಸಮಯರಂಜನಂ। ಶರಣಪದಸೇವಕಂ ಪರಮಶಿವಭಾವಕಂ। ಯಮಭಯನಿವಾರಣಂ ಸ್ವಮತಶುಭಕಾರಣಂ। ಕಲಿಮಲವಿದಾರಣಂ ಖಲಸಮಯದಾರುಣಂ। ವಿರಹಿತದುರೀಷಣಂ ವರಗುಣವಿಭೂಷಣಂ। ಸೋಮಧರಬಂಧುರಂ ವೇಮಗುರುಸಿಂಧುರಂ। ರಾಜಿತಗುಣಾಕರಂ ಭಾಜಿತದಿವಾಕರಂ। ರಾಜಿಸುತೆ ನಲ್ಮೆಯಿಂ ಪೂಜೆಸಿದ ನೊಲ್ಮೆಯಿಂ॥

ವ॥ ಅಂತು ಶಿವಗಣಸಪರ್ಯೆಯಂನೆಗಳ್ದು ತದನುಜ್ಞೆಯಂ ಕೈಕೊಂ ಡಾನರೇಂದ್ರನ ಕಳೇವರಮಂ ತರ್ಪುದೆಂದು ಬೆಸಸೆ ತನ್ಮಿತ್ರಜನಂ ಜವದಿಂ ಪೋಗಿ ನಿಂದು ನಿರೀಕ್ಷಿಪಾಗಳ್॥

ಚಂ॥ ಬೆರೆತಮೊಗಂ ಬೆಳರ್ತ್ತನಸುದೇಲ್ದವಿಲೋಚನದಾಲಿ ಕುಗ್ಗಿ ಜೋ। ಲ್ದೊರಗಿದ ಮಸ್ತಕಂ ಕೆದರ್ದಮಿಾಸೆ ಸಡಿಲ್ದತುರುಂಬು ಸೈತುಗೆ॥ ಟ್ಟೊರಗಿದಕಂಧರಂ ನಿಮಿರ್ದಮೂಗು ಪಸುರ್ಪುಪಗಿಲ್ತಪಲ್ಗ ಳ। ರ್ಪುರೆತ ರದಚ್ಛದಂ ತೆರೆದಬಾಯ್ಮಿಗೆಸೂಸುವಲಾಳೆಯೆಳ್ತರಂ॥ ೫೪

ಮತ್ತಂ॥ ಉ॥ ಬಿಗಿದ ನರಂಗ ಳುಬ್ಬರಿಪ ಬಲ್ಪಸಿ ರಿಂಗಿದ ಸುಯ್ತೊಡಂಕಿ ಡೊಂ। ಕೊಗೆದ ಕರಾಂಘ್ರಿಗ ಳ್ತೆರೆದ ರಂಧ್ರ ಮಡಂಗಿದ ಕಾಯಕಾಂತಿ ಕೈ॥ ಮಿಗೆ ಪೊಸನೆತ್ತ ರಾರಿದತೊವ ಲ್ಪೊಲಸುಣ್ಮಿರೆ ಬಾತು ನಾತಮಂ। ನೆಗಳ್ವ ತದಂಗ ಕಾರ್ದೆರಗಿ ಝುಮ್ಮೆನು ತೋಡುವಮಕ್ಷಿಕಾಳಿಗಳ್॥ ೫೫

ತ್ತ, ಪಟುಪಟಹಡಿಂಡಿಮದ– ಸಮರ್ಥವಾದ ತಮಟೆ ಢಕ್ಕೆಗಳ, ಸ್ಯೈವರಿಯೆ– ಎಲ್ಲಾ ಕಡೆಯಲ್ಲೂ ವ್ಯಾಪಿಸಲು, ಬಲವಂದು– ಪ್ರದಕ್ಷಿಣೆಯಂ ಮಾಡಿ, ಬೆಸನ– ಅಪ್ಪಣೆಯನ್ನು, ಶಿವಸಮಯರಂಜನಂ– ಶೈವಮತವನ್ನು ಸಂತೋಷಪಡಿಸುವ, ಪರಮಶಿವಭಾವಕಂ– ಪರಶಿವಧ್ಯಾನವಂ ಮಾಡುವ, ಖಲಸಮಯದಾರುಣಂ– ನೀಚಮತಗಳಿಗೆ ಭಯಂಕರನಾದ, ವೇಮಗುರುಸಿಂಧುರಂ– ವೇಮನೆಂಬ ಆಚಾರ್ಯಶ್ರೇಷ್ಠನು, ಭಾಜಿತದಿವಾಕರಂ– ಕಾಂತಿಯಿಂದ ಜೈಸಲ್ಪಟ್ಟ ಸೂರ್ಯನುಳ್ಳ. *

ಶಿವಗಣಸಪರ್ಯೆಯಂ– ಶಿವಗಣಂಗಳ ಪೂಜೆಯನ್ನು, ತದನುಜ್ಞೆಯಂ–ಅವರಪ್ಪಣೆಯನ್ನು, ಕಳೇವರವಂ– ಶರೀರವನ್ನು. * * * * * *

ಬೆರೆತ– ಸುರುಟುಗೊಂಡಿರುವ, ಬೆಳರ್ತ– ಬೆಳ್ಳಗಾದ, ನಸುದೇಲ್ದ– ಸ್ವಲ್ಪತೇಲಿದ, ಆಲಿ– ಗುಡ್ಡೆ, ತುರುಂಬು– ಕೂದಲಗಂಟು, ಸೈತುಗೆಟ್ಟು– ನೆಟ್ಟಗಿರುವದು ಹೋಗಿ, ಕಂಧರಂ– ಕತ್ತು, ನಿಮಿರ್ದ– ಉದ್ದವಾದ, ಪಸುರ್ಪು– ಹಸುರುಬಣ್ಣವು, ಪಗಿಲ್ತ– ಹಬ್ಬಿದ, ಇರ್ಪು– ತನ್ನ ಪೂರ್ವದ ಸ್ಥಿತಿಯು, ಅರೆತ–ನಾಶವಾದ. ರದಚ್ಛದಂ– ತುಟಿಯು, ಲಾಳೆಯ, ಜೊಲ್ಲಿನ, ಎಳ್ತರಂ– ಅತಿಶಯವು ||೫೪||

ಬಲ್ಪಸಿರ್– ದೊಡ್ಡಹೊಟ್ಟೆಯು, ಇಂಗಿದ– ನಾಶವಾದ, ಸುಯ್– ಉಸುರು, ರಂಧ್ರಂ– ನವದ್ವಾರಗಳು, ತೊವಲ್—ಚರ್ಮವು, ಪೊಲಸು– ಹೊಲಸು, ಬಾತು– ಊದಿ, ಮಕ್ಷಿಕಾಳಿಗಳ್– ನೊಣಗಳ ಪಙ್ತಿಗಳು ||೫೫||

ಕಂ|| ಕಡುಪೆರ್ಬಡಿಕೆಯ ನಾತಂ । ತೊಡರ್ದಿರೆ ಭೀಕರ ಮೆನಿಪ್ಪ ಪೆಣನಂ ಕಾಣು||
ತ್ತೊಡನೊಡನೆ ಮುಚ್ಚಿ ಮೂಗಂ । ಪಿಡಿದುಗುಳುತ್ತೆಲ್ಲ ರಲ್ಲಿ ಪೇಸುತ್ತಾಗಳ್ ||   ೫೬

ಕಂ|| ಮನ ಮೊಲ್ಲದೆ ಸಲ್ಲದೆ ಮೆ । ಲ್ಲನೆ ಪೆಣನಂ ಕಟ್ಟಿಪೊತ್ತು ತಂದಾವೇಮಾ ||
ರ್ಯನ ಪುರದ ಬಹಿರ್ದೇಶದೊ । ಳನುವಿಂ ದಿಳಿಪುತ್ತೆ ಪೊಕ್ಕರಾಗಣಸಭೆಯಂ ||   ೫೭

ವ || ಅಂತು ಪೊಕ್ಕು ಮೆಯ್ಯಿಕ್ಕಿ ಶವಮಂ ತಂದೆ ವವಧರಿ ಸೆಂದವಂದಿ ಬಿನ್ನವಿಸೆ ವೇಮನಾರ್ಯ ರ್ಕೇಳ್ದು ಸಡಗರಂದಾಳ್ದು ಚರಚರಣಸಲಿಲದಿ ನಾನರೇಂದ್ರಕಳೇವರಮ ನಿನಿತುಂ ದುರ್ಗಂಧಮಿಲ್ಲದಂತೆ ನರೇಂದ್ರ ನನುಚರರಿಂ ತೊಳಯಿಸು ತನಂತರಮೊಳಗಣ್ಗೆ ತರಿಸಿ||

ಕಂ || ಹರಭಕ್ತರಪಾವನತರ । ಕರದತ್ತವಿಭೂತಿಯಂ ತದೀಯಪದಾಂಭೋ || ಜರ
ಜೋವಿಮಿಶ್ರಿತಂಗೆ । ಯ್ದಿರದವರ ಪದಾಂಬುವಿಂದೆ ಕಲಸುತ್ತಾಗಳ್ ||   ೫೮

ಚಂ || ಘನತರಭಕ್ತಿನಿಷ್ಠೆ ಮಿಗೆ ತನ್ನೃಪನಂಗದೊ ಳೊಲ್ದು ಪೂಸಿ ಲೇ । ಪನಮ
ನೊಡರ್ಚೆ ಭಾಳದೊ ಳುರಸ್ಥಲದೊ ಳ್ಭುಜದೊ ಳ್ತ್ರಿಪುಂಡ್ರಮಂ||ಮನದೊಲವಿಂದೆ ಬಿತ್ತರಿಸಿ
ಭಕ್ತಪದಾರ್ಪಿತಪುಷ್ಪಮಾಲೆಯಂ । ತನು ಗಮರ್ದಂತೆ ವೇಮವಿಭು ಸುತ್ತಿ ಗಣಾಭಿಮು
ಖಂ ಪ್ರಮೋದದಿಂ ||   ೫೯

ಕಂ|| ಗಣಸಭೆಗೆ ನೆಗಳ್ದು ದಂಡ । ಪ್ರಣಾಮಮಂ ಪ್ರಮಥರುದ್ರಗಣಭಕ್ತಮಹಾ ||
ಗಣದಂಘ್ರಿಕಮಲಮಂ ತಾ । ಳ್ದಣಿಯರ ಮಾತ್ಮೀಯಮಾನಸದೊ ಳೊಲವಿಂದಂ ||೬೦||

ಮ || ಸ್ರ|| ಪರಮಾನಂದಪ್ರಜಪ್ತಪ್ರಣವಸಹಿತಪಂಚಾಕ್ಷರೋದ್ಯತ್ಕಳಾವಿ । ಸ್ಫುರಿ
ತಾಂಗಂಭಕ್ತಹಸ್ತಾರ್ಪಿತಭಸಿತಲಸದ್ರೇಣುವಂ ಪಾಣಿಯಿಂ ಭೂ|| ವರನಾಸ್ಯಸ್ಥಾನದೊ ಳ್ತಾಂ
ತಳಿದಮಳಕೃಪಾಪಾಂಗದಿಂ ನೋಡಿ ಭದ್ರಾ । ಕರನೇಳೇಳೆಂಬುಪಂ ಸಂ । ಭ್ರಮದೆ ಬಳಿ
ಯೊಳೇನೆಂಬೆ ನಾಶ್ಚರ್ಯದುರ್ಬ್ಬಂ ||   ೬೧

ಕಂ || ಹರಣಂ ತೀವಿದು ದಾಗಳೆ । ಶರೀರದೊ ಳ್ಫಳಿಲ-ನೇಳ್ದು ನರಪತಿಸುತ ನಾ ||
ಗುರುವೇಮನಾರ್ಯರಂಘ್ರಿಗೆ । ಶರಣೆಂ ದತಿಭಕ್ತಿಯಿಂದೆ ಮೈಯಿಕ್ಕಿರ್ದಂ ।   |೬೨

ಕಡುಪೆರ್ಬಡಿಕೆಯ— ಬಹು ಅಸಹ್ಯತೆಯನ್ನುಂಟುಮಾಡುವ, .. .. ||೫೬||
ಆವಂದಿರ್—ಆವರುಗಳು, ಕಳೇವರವಂ— ದೇಹವನ್ನು. * * *
ಪಾವನತರ ಕರದತ್ತವಿಭೂತಿಯಂ— ಅತಿಪರಿಶುದ್ಧವಾದ ಹಸ್ತದಿಂದ ಕೊಡಲ್ಪಟ್ಟ ಭಸ್ಮವನ್ನು, ತದೀಯಪದಾಂಭೋಜರಜೋವಿಮಿಶ್ರಿತಂಗೆಯ್ದು— ಆ ಶಿವಭಕ್ತರ ಪಾದಕಮಲದ ಧೂಳಿಯೊಡನೆ ಬೆರಸಿ .. ||೫೮||
ನಿಷ್ಠೆ— ಶ್ರದ್ಧೆಯು, ಭಕ್ತಪದಾರ್ಪಿತಪುಷ್ಪಮಾಲೆಯಂ— ಶಿವಭಕ್ತರ ಪಾದಕ್ಕೆ ಸಮರ್ಪಿಸಲ್ಪಟ್ಟ ಹೂವಿನ ಸರವನ್ನು. .. .. .. .. ||೫೯||
ಅಣಿಯರಂ— ಅಧಿಕವಾಗಿ. .. .. .. ||೬೦||
ಪರ......ಅಂಗ—ಪರಮಾನಂದ— ಉತ್ಕೃಷ್ಟವಾದ ಸಂತೋಷದಿಂದ. ಪ್ರಜಪ್ತ— ಜಪಿಸಲ್ಪಟ್ಟ, ಪ್ರಣವಸಹಿತ— ಓಂಕಾರದಿಂ ಕೂಡಿದ, ಪಂಚಾಕ್ಷರ, ಮಂತ್ರದಿಂದುಂಟಾದ, ಉದ್ಯತ್— ಉತ್ಕೃಷ್ಟವಾದ, ಕಳಾ, ಕಾಂತಿಯಿಂದ, ವಿಸ್ಫುರಿತ— ಪ್ರಕಾಶಿಸುವ, ಅಂಗಂ— ದೇಹವುಳ್ಳವನಾಗಿ, ಭಕ್ತಹಸ್ತಾರ್ಪಿತ ಭಸಿತಲಸದ್ರೇಣುವಂ— ಶಿವಭಕ್ತರ ಕಯ್ಯಿಗೆ ಕೊಡಲ್ಪಟ್ಟಿದ್ದ ವಿಭೂತಿಯ ಧೂಳಿಯನ್ನು, ತಳಿದು— ಉದುರಿಸಿ, ಭದ್ರಾಕರಂ— ಮಂಗಳಾಸ್ಪದನಾದ ವೇಮಾರ್ಯನು, ಏಳ್ ಏಳ್— ಏಳು ಏಳು, ಬಳಿಯೊಳ್ ಕೂಡಲೇ. ಉರ್ಬಂ— ಆಧಿಕ್ಯವನ್ನು. ||೬೧|| ||೬೨

ವ || ಅಂತು ಸಾಷ್ಟಾಂಗಮೆರಗಿ ಸನ್ನುತಿಗೆಯ್ದು

ಕಂ || ಕಾಲಾಂತಕಸ್ವರೂಪ ಕ | ರಾಳಾನನಕಾಲ ಭಯಮ ನರ್ದಿಸು ತೆನ್ನಂ || ಪಾ
ಲಿಪು ದೆಂದಂ ತನ್ನರ | ಪಾಲಸುತಂ ಕಾಲಮೃತ್ಯುಭಯಭರಿತಮನಂ || ೬೩

ವ || ಎಂದವನ ನತ್ಯಂತದೈನ್ಯಂ ಮಿಗೆ ಬೇಡಿ ಕಾರುಣ್ಯದಿ ನಾವೇಮನಾರ್ಯ ರವಂಗ
ಮವನಂಗನೆಗಮವನ ಬಾಂಧವರ್ಗಂ ಶಿವದೀಕ್ಷೆಯಿತ್ತು ಪುನೀತರಂ ಮಾಡೆ ಗಣಸಭೆಗ ಮ
ವರೆಲ್ಲ ರವನತ ರಾಗಿ ರಾಗಿಸಿ ||

ಮ || ಸ್ರ || ಧರಣೀಭಾಗಕ್ಕಿದೊಂದಚ್ಚರಿ ಯೆನೆ ಪಟುಹಾಲಾಹಲಜ್ವಾಲಿಕೀಲಾ | ಕರ
ಕಾಲವ್ಯಾಲದಂತಾಹತಮೃತನೃಪಜಾತಾಂಗದೊ ಳ್ಪ್ರಾಣಮಂ ಸಾ || ದರ ಮಿಾಯು ತ್ತೋವು
ತೆಮ್ಮೆಲ್ಲರ ಭವಹರಣಂಗೆಯ್ದ ನೀದೇವ ನೀಶಂ | ಕರರೂಪಂಮಾಣದೀಶಾಂಭವವಿಮಳಕ
ಳಾಧುರ್ಯ ನೀವೇಮನಾರ್ಯಂ || ೬೪

ಕಂ || ಫಣಿವಿಷದಿ ನಳಿದ ಜನಪನ | ಪೆಣಕ್ಕೆ ಜೀವನಮ ನಿನಜನಂ ಸದೆ ದಿತ್ತಂ ||
ಪ್ರಣುತಗುಣ ಶಿವನ ಶಕ್ತಿಯ | ನೆಣಿಪೊಡೆ ಪೊಡೆಯಲರ ಬೊಮ್ಮರುಂ ನೆರೆದಪರೆ || ೬೫

ವ || ಎಂ ದವರ್ನಚ್ಚಿ ನಲಿದು ಪೊಗಳುತ್ತಮಿರೆ ಶರಣಗಣ ಮಾಪ್ರಸ್ತಾವದೊಳ್ ||

ಮತ್ತೇ || ಪ್ರಮಥೇಂದ್ರಾಂಘ್ರಿಸದಾಕೃತಪ್ರಣಮನಂತಳ್ತಿರ್ದ ವಿದ್ಯಾಪರಿ | ಶ್ರಮನಂ
ಶಾಂಭವಶರ್ಮಧರ್ಮರಮನಂ ನಿರ್ಧೂತನಿಶ್ಶೇಷದು||ರ್ದಮನಂ ದಂಡಿತದರ್ಪದೃಪ್ತಯಮ
ನಂ ವಿಜ್ಞಾತಶೈವಾಗಮ|ಕ್ರಮನಂ ವೇಮನಪಂಡಿತಾರ್ಯತಮನಂ ಕೊಂಡಾಡಿ ಸಂಪ್ರೀತಿಯಿಂ

ಕಂ || ತೆಗೆದು ಬಿಗಿದಪ್ಪಿ ನಲಿನಲಿ | ದೊಗುಮಿಗೆಯಿಂ ನೋಡಿ ಪಾಡಿ ಮುಂಡಾಡಿ ಮ

---

ಕಾಲಾಂತಕಸ್ವರೂಪ— ಯಮನಾಶಕಶಿವಸ್ವರೂಪನಾದವನೇ! ಕರಾಳಾನನಕಾಲಭಯಮಂ— ಭಯಂಕರ
ವಾದ ಮುಖವುಳ್ಳ ಯಮನ ದೆಸೆಯಿಂದುಂಟಾದ ಭೀತಿಯನ್ನು, ಅರ್ದಿಸುತೆ— ಹೋಗಲಾಡಿಸುತ್ತ.
ಪುನೀತರಂ— ಪರಿಶುದ್ಧರನ್ನು, ಅವನತರ್— ಬಗ್ಗಿದವರು, ರಾಗಿಸಿ— ಪ್ರೀತಿಸಿ. ||೬೩||
ಪಟು . . . . . ಅಂಗದೊಡನೆ— ಪಟು— ಸಮರ್ಥವಾದ, ಹಾಲಾಹಲಜ್ವಾಲಿ— ವಿಷಾಗ್ನಿಯ— ಕೀಲ— ಉರಿಗೆ
ಆಕರ— ಆಸ್ಪದನಾದ, ಕಾಲ— ಯಮನೆಂಬ, ವ್ಯಾಲ— ಸರ್ಪದ, ದಂತ— ಹಲ್ಲಿನಿಂದ, ಆಹತ— ಹೊಡೆಯಲ್ಪಟ್ಟವ
ನಾಗಿ, ಮೃತ— ಸತ್ತ, ನೃಪಜಾತರಾಜಪುತ್ರನ, ಅಂಗದೊಳ್— ದೇಹದಲ್ಲಿ, ಒಮ್ಮೆ— ಪಾಲಿಸುತ್ತ, ಶಾಂಭವವಿಮಳ
ಕಳಾಧುರ್ಯಂ— ನಿರ್ಮಲವಾದ ಶೈವವಿದ್ಯೆಯಲ್ಲಿ ಸಮರ್ಥನಾದ. * *
ಇನಜನಂ— ಯಮನನ್ನು, ಸದೆದು— ಕೊಂದು, * ಪೊಡೆಯಲರಬೊಮ್ಮರುಂ— ವಿಷ್ಣು ಬ್ರಹ್ಮರುಗಳೂ ||೬೪||
ಕೂಡ, ನೆರೆದಪರೆ— ಸಮರ್ಥರಾಗುವರೇ ?
ಪ್ರಮಥೇಂದ್ರಾಂಘ್ರಿಸದಾಕೃತಪ್ರಣಮನಂ— ಪ್ರಮಥರ ಪಾದಕ್ಕೆ ಯಾವಾಗಲೂ ಮಾಡಲ್ಪಟ್ಟ ನಮಸ್ಕಾರವು ||೬೫||
ಳ್ಳ, ತಳ್ತು— ಸೇರಿ, ಇರ್ದ, ವಿದ್ಯಾಪರಿಶ್ರಮನಂ— ವಿದ್ಯೆಗಳ ಪರಿಚಯವುಳ್ಳ, ಶಾಂಭವಶರ್ಮಧರ್ಮರಮನಂ— ಶಿವಸಂ
ಬಂಧಿಸೌಖ್ಯಪ್ರದಗಳಾದ ಧರ್ಮಗಳಲ್ಲಿ ಕ್ರೀಡಿಸುವ, ನಿರ್ಧೂತನಿಶ್ಶೇಷದುರ್ದಮನಂ— ನಾಶಮಾಡಲ್ಪಟ್ಟ ಸಕಲದು
ಷ್ಟರುಳ್ಳ, ದಂಡಿತದರ್ಪದೃಪ್ತಯಮನಂ— ಶಿಕ್ಷಿಸಲ್ಪಟ್ಟ ಅಹಂಕಾರದಿಂ ಕೊಬ್ಬಿದ ಯಮನುಳ್ಳ, ವಿಜ್ಞಾತಶೈವಾಗಮ
ಕ್ರಮನಂ— ತಿಳಿಯಲ್ಪಟ್ಟ ಶಿವೋತ್ಪನ್ನಗಳಾದ ಆಗಮಗಳ ರೀತಿಯುಳ್ಳ, ವೇಮನಪಂಡಿತಾರ್ಯತಮನಂ— ವಿದ್ವಾಂಸರಲ್ಲಿ

---

* (ಅವ) ಪೊಡೆ— ಹೊಟ್ಟೆಯಲ್ಲಿ, ಅಲರ— ಕಮಲದ ಹೂವುಳ್ಳವನು . . . . ||೬೫||

ನಂ || ಬುಗುವಳ್ಕರಿಂದೆ ಮನ್ನಿಸಿ । ನೆಗಳ್ದಕೃಪಾವಾರಿನಿಧಿಯೊ ಳೋಲಾಡಿಸುತಂ || ೬೭

ಮ || ಸ್ರ || ವಿತತಾತ್ಮೀಯಪ್ರಸಾದಾಮೃತಮನೊಸಗೆಯಿಂ ದೀಯೆ ಕೈಕೊಂಡಿಳಾಸ । ನ್ನುತ ನೊಪ್ಪಿರ್ಪ್ಪನ್ನಮಾವಾರ್ತೆಯ ನರಿದೊಲವಿಂ ಬಂದು ಕಂಡಂಘ್ರಿಪದ್ಮಾ || ನತಿಗೆ ಯಾ ನಂದದಿಂದಂ ಪೊಗಳ್ದವರಕೃಪಾಪಾತ್ರ ನಾಗುತ್ತೆ ವಿಶ್ವೋ । ನ್ನತ ನಿರ್ದಂ ತದ್ಗಣಾಸ್ಥಾನದ ನಡುವೆ ಮೃಡಸ್ವಾಂತಪದ್ಮಾಧಿರೂಢಂ || ೬೮

ಕಂ || ವೇಮಾರ್ಯ್ಯರ ಕಥೆಯ ನಿದಂ । ಪ್ರೇಮಂಕೈಮಿಕ್ಕು ಪಠಿಯಿಸಿಪಾಲಿಪ ಸುಜನ || ರ್ಭೀವಮಾಮಯಾಪಮೃತ್ಯುವ । ನೀಮಹಿಯೊ ಳ್ಪರಿದು ಪೂರ್ಣಸುಖಮಂ ಪಡೆವರ್ ೬೯

ಲಲಿತಪದವೃತ್ತಂ || ಸಿದ್ಧಪರಮಾಗಮನಿಬದ್ಧಶಿವತತ್ವರುಚಿ ವೃದ್ಧಮುನಿಸೇವ್ಯ ಜಿತ ಬೌದ್ಧಮುಖವಾದಾ । ಶ್ರದ್ಧಜನದುರ್ಲಭ ನಿರುದ್ಧಕರಣೇಂದ್ರಿಯ ನಿಷಿದ್ಧತನುವರ್ತನ ವಿವೃ ದ್ಧಶಿವಯೋಗಾ || ಚಿದ್ಧನಯಶೋರುಚಿ ಪಿನದ್ಧದಶದಿಕ್ತ್ತಟ ವಿಪದ್ಧರಣಿಭೃತ್ಕುಲಿಶ ಭೃದ್ಧರಪ ದಾಬ್ಜಾ । ನದ್ಧನಿಜಚಿತ್ತ ಜಗದುದ್ಧರಣಶೀಲ ಪೊರೆಯುದ್ಧಪರಭಂಜನ ವಿಶುದ್ಧ ಬಸವೇಶಾ ||

ಮಣಿಗಣವೃತ್ತಂ || ಇಂದುಕುಂದಹಿಮಹೀರಸುಧಾಭಯಶೋಯುತೇ । ಸ್ಕಂದಮಾ

---

ಶ್ರೇಷ್ಠನಾದ ವೇಮಾರ್ಯ್ಯನನ್ನು. .. .. .. ||೬೬|| ||೬೭||

• ಒಸಗೆಯಿಂದೆ– ಉತ್ಸವದಿಂದ, ಅಂಘ್ರಿಪದ್ಮಾನತಿಗೆಯ್ದು– ಪಾದಕಮಲಕ್ಕೆ ನಮಸ್ಕಾರವಂಮಾಡಿ, ವಿಶ್ವೋನ್ನತಂ– ಪ್ರಪಂಚವೆಲ್ಲಕ್ಕೂ ದೊಡ್ಡವನಾದ, ಮೃಡಸ್ವಾಂತಪದ್ಮಾಧಿರೂಢಂ– ಪರಮೇಶ್ವರನ ಹೃದಯಕಮಲವನ್ನು ಹತ್ತಿರುವ ಬಸವೇಶ್ವರನು. .. .. .. ||೬೮||

ಪಠಿಯಿಸಿ– ಓದಿಸುವ, ಆಲಿಸಿ– ಕೇಳುವ, ಭೀಮಾಮಯಾಪಮೃತ್ಯುವ– ಭಯಂಕರವಾದ ರೋಗಗಳೇನು ಅಪಮೃತ್ಯುಗಳೇನು ಇವುಗಳನ್ನು. .. .. .. ||೬೯||

ಸಿದ್ಧಪರಮಾಗಮ– ಆಯುತ್ತಗಳಾದ ಉತ್ಕೃಷ್ಟಾಗಮಗಳುಳ್ಳ, ನಿಬದ್ಧಶಿವತತ್ವರುಚಿ— ನಿಬದ್ಧ– ಕಟ್ಟಲ್ಪಟ್ಟ, ಶಿವತತ್ವ– ಪರತತ್ವದಲ್ಲಿ, ರುಚಿ–ಪ್ರೀತಿಯುಳ್ಳ, ವೃದ್ಧಮುನಿಸೇವ್ಯ— ವೃದ್ಧಮುನಿ– ಜ್ಞಾನದಿಂ ಮುದುಕರಾದ ಋಷಿಗಳಿಂದ, ಸೇವ್ಯ, ಜಿತಬೌದ್ಧಮುಖವಾದ–ಜೈಸಲ್ಪಟ್ಟ ಬೌದ್ಧಾದಿಗಳ ವಾದವುಳ್ಳ, ಅಶ್ರದ್ಧಜನದುರ್ಲಭ— ಅಪೇಕ್ಷೆಯಿಲ್ಲದ ಜನಗಳಿಗೆ ಸಿಕ್ಕದಿರುವ, ನಿರುದ್ಧಕರಣೇಂದ್ರಿಯ—ತಡೆಯಲ್ಪಟ್ಟ ಷಟ್ಕರಣಪಂಚೇಂದ್ರಿಯಗಳುಳ್ಳ, ನಿಷಿದ್ಧತನುವರ್ತನ– ನಿಲ್ಲಿಸಲ್ಪಟ್ಟ ದೇಹವ್ಯಾಪಾರವುಳ್ಳ, ವಿವೃದ್ಧಶಿವಯೋಗಾ– ಅಭಿವೃದ್ಧಿಗೊಳಿಸಲ್ಪಟ್ಟ ಶಿವಯೋಗವುಳ್ಳ, ಚಿದ್ಧನ– ಜ್ಞಾನವೇ ದ್ರವ್ಯವಾಗುಳ್ಳ, ಯಶೋರುಚಿಪಿನದ್ಧದಶದಿಕ್ತ್ತಟ– ಕೀರ್ತಿಯ ಕಾಂತಿಯಿಂದ ಮುಚ್ಚಲ್ಪಟ್ಟ ಹತ್ತು ದಿಕ್ಕುಗಳುಳ್ಳ, (ಇಂದ್ರಾದ್ಯಷ್ಟದಿಕ್ಕುಗಳು ಭೂಮಿ ಅಂತರಿಕ್ಷ ಇವೇ ಹತ್ತು ದಿಕ್ಕುಗಳು) ವಿಪದ್ಧರಣಿಭೃತ್ಕುಲಿಶಭೃತ್– ವಿಪತ್– ಆಪತ್ತುಗಳೆಂಬ, ಧರಣಿಭೃತ್– ಪರ್ವತಗಳಿಗೆ, ಕುಲಿಶಭೃತ್– ಇಂದ್ರನಾದ, ಹರಪದಾಬ್ಜಾನದ್ಧನಿಜಚಿತ್ತ– ಹರ– ಶಿವನ, ಪದಾಬ್ಜ– ಪಾದಕಮಲದಲ್ಲಿ, ಆನದ್ಧ– ಸೇರಿಸಲ್ಪಟ್ಟ, ನಿಜ– ತನ್ನ, ಚಿತ್ತ– ಮನಸ್ಸುಳ್ಳ, ಜಗದುದ್ಧರಣಶೀಲ– ಲೋಕವನ್ನು ಉದ್ಧರಿಸುವದೇ ಸ್ವಭಾವವಾಗುಳ್ಳ, ಉದ್ಧಪರಭಂಜನ– ಕೊಬ್ಬಿದ ಶತ್ರುಗಳನ್ನು ನಾಶಮಾಡಿದ, ವಿಶುದ್ಧ– ಪರಿಶುದ್ಧನಾದ, ಬಸವೇಶಾ! ಪೊರೆ. .. ||೭೦||

ಇಂದುಕುಂದಹಿಮಹೀರಸುಧಾಭಯಶೋಯುತೇ—ಇಂದು— ಚಂದ್ರ, ಕುಂದ– ಮೊಲ್ಲೆಯ ಹೂವು, ಹಿಮ—ಪಚ್ಚಕರ್ಪೂರ, ಹೀರ—ವಜ್ರ, ಸುಧಾ—ಅಮೃತ ಇವುಗಳ, ಆಭ— ಕಾಂತಿಯಂತಿರುವ ಕಾಂತಿಯುಳ್ಳ, ಯಶಃ—ಕೀರ್ತಿಯಿಂದ, ಯುತೇ—ಕೂಡಿದ, ಸ್ಕಂದಮಾತೆ—ಷಣ್ಮುಖನ ತಾಯಾದ, ಹರಿಧಾತೃಸುರೇಂದ್ರಸಂಸ್ತುತೇ—ಹರಿ— ವಿಷ್ಣು, ಧಾತೃ—ಬ್ರಹ್ಮ, ಸುರೇಂದ್ರ—ಇಂದ್ರ, ಇವರಿಂದ, ಪರಿಸ್ತುತೇ—ಹೊಗಳಲ್ಪಟ್ಟ, ಮಂದ

ತೆಹರಿಧಾತೃಸುರೇಂದ್ರಪರಿಸ್ತುತೇ || ಮಂದರಾದ್ರಿಮಣಿಮಂದಿರಮಧ್ಯವಿರಾಜಿತೇ | ಚಂದ ಮೊಂದೆ ಪೊರೆ ಯೆನ್ನ ನಪರ್ಣೆ ಕೃಪಾನ್ವಿತೇ || ೩೧

ಗದ್ಯಂ || ಇದುವಿನಮದಖಿಳಸುರಾಸುರೇಂದ್ರಮುಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತಭಾಸುರಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತ ಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ವೇಮನಾರಾಧ್ಯಕಥಾವರ್ಣನಂಏಕತ್ರಿಂಶಾಶ್ವಾಸಂ ಪರಿಸಮಾಪ್ತಂ || ... ... ... *

ಏಕತ್ರಿಂಶಾಶ್ವಾಸಂ ಸಂಪೂರ್ಣಂ.

———:o:———

ಶ್ರೀಃ.

———:o:———

ಪಿನಾಕಪಾಣಯೇಪರಬ್ರಹ್ಮಣೇನಮಃ

## ದ್ವಾತ್ರಿಂಶಾಶ್ವಾಸಂ

———

### ಸಕಳೇಶಮಾದರಸಕಥನಂ

ಕಂ || ಶ್ರೀಶಿಖರಿಜಾಕುಚಾಂಬುಜ | ಕೋಶಾರ್ಪಿತಪಾಣಿಪಲ್ಲವಂ ಶಿಖಿರವಿರಾ || ತ್ರೀಶ ನಯನತ್ರಯಂ ಜಗ | ದೀಶಂ ಪೊರೆಗೆಮ್ಮ ನಾವಗಂಶಿವಲಿಂಗಂ ೧

---

ರಾದ್ರಿಮಣಿಮಂದರಮಧ್ಯವಿರಾಜಿತೇ—ಮಂದರಪರ್ವತದ ರತ್ನಖಚಿತವಾದ ಮನೆಯ ಮಧ್ಯದಲ್ಲಿ ಪ್ರಕಾಶಿಸುವ, ಕೃಪಾನ್ವಿತೇ—ದಯಾವಿಶಿಷ್ಟಳಾದ * ಅಪರ್ಣೆ! ಚಂದಂ—ಸವಿಚೀನತ್ವವು, ಒಂದೆ, ಎನ್ನಂ, ಪೊರೆ. ||೩೧||

೩೧ನೆಯ ಆಶ್ವಾಸವು ಸಂಪೂರ್ಣವು.

———

೩೨ನೆಯ ಆಶ್ವಾಸಪ್ರಾರಂಭಂ.

ಶ್ರೀ.... ಪಾಣಿಪಲ್ಲವಂ—ಶ್ರೀ—ಷಡ್ಗುಣೈಶ್ವರ್ಯಯುಕ್ತಳಾದ, ಶಿಖರಿಜಾ—ಪಾರ್ವತಿಯ, ಕುಚ—ಸ್ತನವೆಂಬ, ಅಂಬುಜಕೋಶ—ಕಮಲದ ಮೊಗ್ಗಿನಲ್ಲಿ, ಅರ್ಪಿತ—ಇಡಲ್ಪಟ್ಟ, ಪಾಣಿಪಲ್ಲವಂ—ಚಿಗುರಿನಂತಿರುವ ಹಸ್ತವುಳ್ಳ, ಶಿಖಿರವಿರಾತ್ರೀಶನಯನತ್ರಯಂ—ಶಿಖಿ—ಅಗ್ನಿ, ರವಿ—ಸೂರ್ಯ, ರಾತ್ರೀಶ—ಚಂದ್ರ ಇವರುಗಳೇ, ನಯನತ್ರಯಂ—ಮೂರುಕಣ್ಣುಗುಳ್ಳ, ಜಗದೀಶಂ—ಲೋಕಕ್ಕೆ ಸ್ವಾಮಿಯಾದ, ಶಿವಲಿಂಗಂ, ಆವಗಂ, ಎಮ್ಮಂ,ಪೊರೆಗೆ. ||೧||

ಕಂ || ಕ್ಷೋಣಿಯೊಳ್ ಕಂಗೊಳಿಪ ಕ | ಲ್ಯಾಣಪುರಾಂತರದೊಳಲ್ಲಿ ಮತ್ತಂ ಲಿಂಗ||
ಪ್ರಾಣಕಳಾನಿಧಿ ಯೊಪ್ಪುವ | ನೇಣಾಂಕಧರಸ್ವರೂಪ ನನುಪಮಮಹಿಮಂ |

ಕಂ || ಧರೆಯಲ್ಲಿ ಶತಾಯುರ್ವೈ | ಪುರುಷಶ್ರುತಿವಾಕ್ಯಮಂ ವಿಭಂಗಿಸಿ ತನ್ನಾ|| ದರ
ಸಂ ಸಪ್ತಶತಂವ | ತ್ಸರ ಮಮರ್ದಿರೆ ತನಗೆ ಬಾಳ್ದ ನತಿವೈಭವದಿಂ | ೨

ಮ || ಸ್ರ || ಮುಳಿ ದುದ್ಯನ್ಮೃತ್ಯುದಂಷ್ಟ್ರಾಂಕುರಮ ನಧಟನಿಂ ಕೀಳ್ತು ಕಾಲೋಗ್ರ
ದಂತಂ | ಗಳ ನಾದಂ ಪೊಯ್ದು ದುಚ್ಚುರ್ತಿತ್ತವಧಿವಿಧಿಗಳಂ ಮೆಟ್ಟಿ ಪಂಕೇಜಗರ್ಭೋ || ಜ್ವಳ
ಗರ್ವಧ್ವಂಸನಂಗೆಯ್ದಿಳೆ ಯೊದರೆ ಮಾರಾರಿ ಮಾಯಾರಿ ಯೆಂಬ | ಗ್ಗರ್ಗಳಚಂಚತ್ಕಾಹಳೀಸಂ
ಕುಳ ಮೆಸೆದ ನವಂ ಮಾದಿರಾಜಾಭಿಧೇಯಂ || ೪

ಕಂ || ಸಾಂಗ ಮನೆ ರಚಿಸುತಂ ಶಿವ | ಲಿಂಗದ ಜಂಗಮದ ಪಾದಪೂಜೆಯ ನಮ
ಳೋ || ತ್ತುಂಗತರಭಕ್ತಿಯಿಂದೆ ಬೆ | ಡಂಗಮರೆ ಹರಂಗೆ ವೀಣೆಯಂ ಕೇಳಿಸುತಂ ೫

ಕಂ || ಇರುಳೆಲ್ಲಂ ನಾದಾಮೃತ | ಶರಧಿಯೊ ಳೋಲಾಡಿಸುತ್ತೆ ಶಿವನಂ ಶರಣೋ ||
ತ್ಕರಸಂಗದೆ ಚಿರಸುಖಿಯಾ | ಗಿರು ತಿರ್ದ್ದಂ ಸುಜನವನಜವನದಿನನಾಥಂ || ೬

ಉ || ಆತನ ಶಿಷ್ಯ ನೋರ್ವ ನಕಳಂಕಗುಣಾಂಕ ನನೂನಭಕ್ತಿವಿ | ಖ್ಯಾತವಿಲಾಸ
ನಾತ್ಮಸತಿಯುಂ ಸುತನುಂ ಸಹಿತಂ ಗುರೂತ್ತಮ || ಪ್ರೀತಿಯಿ ನಂಘ್ರಿಗಳ ನೋಲ್ದು ನಿಮಿ
ರ್ಚುತೆ ನಿಚ್ಚಮುಂ ಸುವೃ | ತ್ತಾತುಳಚಿಕ್ಕಮಾದ ನೆನಿಸಿರ್ದ ವಿದಗ್ಧವರೇಣ್ಯ ನೊಪ್ಪಿದಂ ೭

ಕಂ || ಗುರುಮಾದಿರಾಜಪಾದಾಂ | ಬುರುಹಮೆ ಗತಿ ಯೆಂದು ಸೇವಿಸುತೆ ಸಲೆ ನಿಜ
ಮಂ || ದಿರಕೃತ್ಯ ಕೇನುಮಂ ಭಾ | ಸುರಮತಿ ಚಿಂತಿಸದೆ ಸಂತಮಿರ್ದ್ದಂ ಭಕ್ತಂ || ೮

---

ಲಿಂಗಪ್ರಾಣಕಳಾನಿಧಿ—ಲಿಂಗಾಂಗಸಾಮರಸ್ಯವಂ ಬೋಧಿಸುವ ವಿದ್ಯೆಗೆ ನಿಕ್ಷೇಪನಾದ, ಏಣಾಂಕಧರಸ್ವರೂ
ಪಂ—ಚಂದ್ರಧರನಾದ ಈಶ್ವರನ ಸ್ವರೂಪನಾದ, ಅನುಪಮಮಹಿಮಂ—ಅಸದೃಶವಾದ ಮಹತ್ವವುಳ್ಳ. ||೧||

ಶತಾಯುರ್ವೈಪುರುಷಶ್ರುತಿವಾಕ್ಯಮಂ— ಮನುಷ್ಯನು ನೂರು ವರ್ಷಗಳ ವಯಸ್ಸುಳ್ಳವನು ಎಂಬ ವೇ
ದವಚನವನ್ನು, ವಿಭಂಗಿಸಿ—ನಾಶಮಾಡಿ, ಸಪ್ತಶತಂವತ್ಸರಂ—ಏಳ್ನೂರು ವರ್ಷಗಳು. .. ||೨||

ಉದ್ಯನ್ಮೃತ್ಯುದಂಷ್ಟ್ರಾಂಕುರವಂ— ಅಧಿಕವಾದ ಮೃತ್ಯುವಿನ ಕೋರೆದಾಡೆಯ ಮೂತಿಯನ್ನು, ಅಧಟ
ನಿಂ— ಶೌರ್ಯದಿಂದ, ಕಾಲೋಗ್ರದಂತಂಗಳಂ— ಯಮನಭಯಂಕರವಾದ ಹಲ್ಲುಗಳನ್ನು, ಅದಂ— ಅತ್ಯಂತವಾಗಿ. ಉ
ದುಚ್ಚುರ್ತಿತ್ತೆ—ಉದುರಿಸುತ್ತ, ಪಂಕೇಜಗರ್ಭೋಜ್ವಳಗರ್ವಧ್ವಂಸನಂಗೆಯ್ದು— ವಿಷ್ಣುವಿನ ಅಹಂಕಾರವಂ ನಾಶಮಾಡಿ,
ಅರ್ಗಳ ಚಂಚತ್ಕಾಹಳೀಸಂಕುಳಂ— ದೊಡ್ಡದಾಗಿ ಪ್ರಕಾಶಿಸುವ ಕೊಂಬುಗಳ ಸಮೂಹವು .. ||೪||

ಅಮಳೋತ್ತುಂಗತರ ಭಕ್ತಿಯಿಂ— ನಿರ್ಮಲವಾಗಿಯೂ ಅತ್ಯುತ್ಕೃಷ್ಟವಾಗಿಯೂ ಇರುವ ಭಕ್ತಿಯಿಂದ||೫||

ಇರುಳ್— ರಾತ್ರಿಯಲ್ಲಿ, ನಾದಾಮೃತಶರಧಿಯೊಳ್— ಶಬ್ದವೆಂಬ ಕ್ಷೀರಸಮುದ್ರದಲ್ಲಿ, ಸುಜನವನಜವನದಿನ
ನಾಥಂ— ಸತ್ಪುರುಷರೆಂಬ ಕಮಲವನಕ್ಕೆ ಸೂರ್ಯನಾದ .. .. .. ||೬||

ಅಕಳಂಕಗುಣಾಂಕಂ— ನಿರ್ದುಷ್ಟಗಳಾದ ಗುಣಗಳೇ ಲಕ್ಷಣವಾಗುಳ್ಳ, ಅನೂನಭಕ್ತಿವಿಖ್ಯಾತವಿಲಾಸಂ—
ಅಧಿಕವಾದ ಭಕ್ತಿಯ ಪ್ರಸಿದ್ಧವಾದ ಲೀಲೆಯುಳ್ಳ, ಸುವೃತ್ತಾತುಳಚಿಕ್ಕಮಾದಂ— ಒಳ್ಳೆಯ ಚರಿತ್ರೆಯಿಂದ ಅಸದೃ
ಶನಾದ ಚಿಕ್ಕಮಾದಣ್ಣನು, ವಿದಗ್ಧವರೇಣ್ಯಂ— ಪಂಡಿತರಲ್ಲಿ ಶ್ರೇಷ್ಠನಾದ .. .. ||೭||

ನಿಜಮಂದಿರಕೃತ್ಯಕೆ—ತನ್ನ ಮನೆಯ ಕೆಲಸಕ್ಕೆ, ಚಿಂತಿಸದೆ— ಆಲೋಚನೆ ಮಾಡದೆ, ಸಂತಂಇರ್ದ್ದಂ—
ಸುಖವಾಗಿದ್ದನು .. .. .. .. ||೮||

ವ || ಅಂತು ಪಲಕೆಲವತ್ಸರಂ ಬಾಳುತ್ತಮಿ ರ್ದೊಂದುದಿನ ದಿರುಳೊ ಳಿರ್ದಂತಿರಸು ಗಳೆವಿನಂ ತದ್ರಮಣಿ ಕಂಡು ಚರಪಾದೋದಕದಿಂ ತೊಳೆದೊರಸಿ ಸರ್ವಾಂಗದೊ ಳ್ಭಸಿತೋ ದ್ಧೂಳನಂಗೆಯ್ದು ರುದ್ರಾಕ್ಷೆಗಳ ನಲಂಕರಿಸುತ್ತ ಮಾಕಳೇವರಮ ನೊಂದುಕಂಬದೊ ಳ್ನಿ ರ್ಮಿಸಿ ನೆರೆಪೊರೆಯುವ ರಾರು ಮರಿಯದಂತದಂ ನಿಕ್ಷೇಪಿಸಲೊಂದುಗೋಪೆಯ ನವ ಳಗು ಳ್ವನಿತರೊ ಳಾಖನನನಿರ್ಘರಧ್ವನಿಗೆ ಪಟ್ಟಿರ್ದ ತರುಣಂ ನಿದ್ರೆತಿಳಿದೇ ಳ್ದಗುಳುತ್ತ ಮಿರ್ಪ ಮಾತೆಯಿರವಂ ಕಂಡು ಕೌತುಕಂಬಟ್ಟು ||

ಕಂ || ಎಲೆಜನನಿ ಲಿಂಗಪೂಜಾ | ರ್ಥಲಸದ್ವೇದಿಯ ನದೇಕೆ ನೀ ನಗುಳ್ದಪೆ ಗ || ಲ್ಲ ಲ ನಯ್ಯನಪೂಜೆಗೆ ಪೊಸ | ಸಲಿಲಂಗೊಳಲೆಂ ದೊರಂತೆಸುಂನೆಗಳ್ದಪೆಯೊ || ೯

ರಥೋದ್ಧತವೃತ್ತಂ || ಅಯ್ಯನೇಕೆ ಚರಬೃಂಪದೋಲಗ | ಕ್ಕೊಯ್ಯ್ಯ ನೆಂದಿನವೊ ಲಿಂದು ಪೋಗದೀ || ರಯ್ಯಮಾದಮನೆಗಂಬದೊತ್ತಿನೊ | ಳ್ಸುಯ್ಯಡಂಗಿದವನಂತಿ ರಿರ್ದಪಂ|| ೧೦

ಕಂ || ಎಂದುಂ ಮುಳಿಯಂ ನಿನ್ನೊಡ | ನಿಂದು ಕರಂ ಮುಳಿದು ಸುಮ್ಮನಿರ್ದಪನ ಕ್ಕುಂ || ತಂದೆ ನಿಜದಿಂದೆ ಮುಳಿಸಿಂ | ಗೊಂದಿದ ಕಾರಣಮದಾವು ದರುಪೆನಗೀಗಳ್ || ೧೧

ಕಂ || ಸಾಂಗನಿಜಶೀಲಮಂಸಿ | ಕ್ಕಂಗೊಳಿಸಿದೆಯೊ ಗೃಹಕ್ಕೆ ಪದೆದೇಳ್ತರೆ ನೀಂ|| ಜಂಗಮತತಿ ಸಮಯೋಚಿತ| ದಿಂಗಿತಪೂಜೆಯ ನೊಡರ್ಚದೇಂ ಪೋದೆಯೊ ಪೇಳ್ || ೧೨

ಉತ್ಪಲ || ಸಾರಣೆಯಲ್ಲಿ ಜಂತುತತಿ ನೊಂದುದೊ ಸೋದಿಸಿದಂಬುವಿಂದೆ ಸಂ | ಪೂ ರಿತಮಾದುದಿಲ್ಲವೊ ಕನತ್ಕಲಶಂ ತಡೆಗೆಯ್ದ ಸೂತ್ರಮೇ || ನೋರೆಯು ನಾಳ್ದುದೋ ಪಳೆಯು ಗಂಧಮ ನಿಟ್ಟೆಯೊ ಮಾಸಿಭಿನ್ನಮಾ | ದೋರಣಮಲ್ಲದಕ್ಷತೆಯ ನಿತ್ತೆಯೊ ಪಜ್ಜಳಿಪಂತೆ ನಲ್ಮೆಯಿಂ || ೧೩

---

ಇರುಳೊಳ್— ರಾತ್ರಿಯಲ್ಲಿ, ಇರ್ದಂತಿರೆ— ಇದ್ದಹಾಗೆ, ಅಸುಗಳೆವಿನಂ— ಪ್ರಾಣವು ಹೋಗಲು, ನಿರ್ಮಿಸಿ— ಒರಗಿಸಿ, ಗೋಪೆಯಂ— ಹಳ್ಳವನ್ನು, ಆಖನನನಿರ್ಘರಧ್ವನಿಗೆ—ಆ ಅಗೆಯುವ ರಭಸದ ಶಬ್ದಕ್ಕೆ, ಪಟ್ಟು— ಮಲಗಿ, ಅಗುಳುತ್ತಂ— ಅಗೆಯುತ್ತ, * * * * *

ಲಿಂಗಪೂಜಾರ್ಥಲಸದ್ವೇದಿಯಂ—ಶಿವಲಿಂಗಪೂಜೆಗೋಸ್ಕರವಾಗಿ ಪ್ರಕಾಶಿಸುವ ಜಗತಿಯನ್ನು, ಗಲ್ಲಲನೆ—ಬೇಗ ನೆ, ಪೊಸಸಲಿಲಂಗೊಳಲೆಂದು— ಹೊಸನೀರನ್ನು ಗ್ರಹಿಸಬೇಕೆಂದು .. .. ||೯||

ಓಲಗಕೆ— ಸೇವೆಗೆ, ರಯ್ಯಂ— ಮನೋಹರವು, ಸುಯ್— ಉಸುರು, ಅಡಂಗಿದವನಂತಿರೆ— ನಿಂತು ಹೋದ ವನ ಹಾಗೆ .. .. .. .. ||೧೦||

ಮುಳಿಯಂ— ಕೋಪಿಸಿಕೊಳ್ಳನು, ಅರುಪು— ತಿಳಿಯಿಸು .. .. ||೧೧||

ಸಿಕ್ಕಂಗೊಳಿಸಿದೆಯೊ— ತೊಡಕುಳ್ಳದ್ದನ್ನಾಗಿ ಮಾಡಿದೆಯೋ ? ಸಮಯೋಚಿತದ— ಆಯಾಯ ಕಾಲಕ್ಕೆ ಯೋಗ್ಯವಾದ, ಇಂಗಿತಪೂಜೆಯಂ— ಮನೋಭಿಪ್ರಾಯವನ್ನರಿತ ಅರ್ಚನೆಯನ್ನು .. .. ||೧೨||

ಸಾರಣೆಯಲ್ಲಿ— ಸಾರಿಸುವಲ್ಲಿ, ಜಂತುತತಿ—ಪ್ರಾಣಿಗಳ ಸಮೂಹವು, ಸೋದಿಸಿದ—ಶೋಧಿಸಿದ, ಸಂಪೂರಿತಂ— ತುಂಬಲ್ಪಟ್ಟದ್ದು, ತಡೆಗೈದ— ತಡೆಗಟ್ಟಲ್ಪಟ್ಟದ್ದು, ಸೂತ್ರಂ— ನೂಲು, ಭಿನ್ನಂ— ಒಡೆದಿರುವವು, ಓರಣಂ— ಮನೋ ಹರವು .. .. .. .. .. ||೧೩||

ಕಂ || ಬೆಳಗದೆ ಶಿವೋಪಕರಣಾ | ವಳಿಯಂ ಸಾರ್ಚಿದೆಯೊ ತೊಟ್ಟುಗಳೆದೊಣಗಿದ
ಪೂ || ಗಳ ನರ್ಪಿಸಿದೆಯೊ ಪ್ರೋಸಗು | ರ್ಗುಳರಸದಿಂ ದಗ್ನಿ ನಾಂದುಪೊಗೆ ತರ್ಗಿದುದೊ ||

ಕಂ || ಸಾರಪ್ರಭೆ ಮಸುಳ್ದುದೊ ಪೇ | ಳ್ನೀರಾಜನವೋಜೆದಪ್ಪಿ ಮನವಿತ್ತಯೊ
ಪೇ||ಳೋರಂತೆ ಗಡಣಿಸಿದುರ್ಪ | ಹಾರ ಕ್ಕಿದಿರಿಟ್ಟ ಸೊಡರು ಕಳೆಗುಂದಿದುದೋ || ೧೫

ಕಂ || ಲಿಂಗಾರ್ಪಿತಶೇಷದೊಳಭ | ವಂ ಗರ್ಪಿತವಾಗದುದನೆ ಬೆರಸಿದೆಯೊ ಮ
ಹಾ || ಲಿಂಗತ್ರಿವಿಧೋದಕಮಂ | ಪಿಂ ದೆ ನೀನೊಂದುಗೆಯ್ದ ಯೋ ಮರಪಿಂದಂ || ೧೬

ಕಂ || ಅಸಮಾಕ್ಷನಡಿಗಳಂ ಜಾ | ನಿಸುವಾಗ ಳ್ಮಾತ ನಾಡಿಸಿದೆಯೊ ನಿತಾಂತಂ || ಬೆ
ಸಕೈವೊ ಡಲಸಿದೆಯೊ ನೀ | ನುಸಿರಲ್ಲದೊ ಡೊಯ್ಯ ನಿಂತು ಮುನಿವನೆ ಜನನೀ || ೧೭

ಕಂ || ತಾಯೆ ಬಿಡು ನೆಲನ ನಗುಳ್ವುದ |ನೊಯ್ಯಾರದೆ ನೀನು ಮಾನು ಮಿವನಂಘ್ರಿ
ಲಸ || ತ್ತೋಯುರುಹಕೆರಗೆ ತಿಳಿದಪ | ನೀಯವಸರದಲ್ಲಿ ನೋಳ್ಪೊಡಿಂತಿದೆ ಕಜ್ಜಂ || ೧೮

ಕಂ || ಬಾರೆಂದು ಕರೆಯುತಂ ಕರ | ನೀರಜದಿಂ ಜನನಿಯುಟ್ಟ ಚೇಲಾಂಚಲಮಂ ||
ಭೀರುಮತಿ ಪಿಡಿದು ಸೆಳೆಯೆ ಕು | ಮಾರಂ ನಡೆ ನೋಡಿ ಮಾತೆ ನಸುನಗುತಾಗಳ್ || ೧೯

ಕಂ || ಎಲೆ ಮಗನೆ ಸತ್ತ ನುಡಿಗಳ | ನಲಸದೆ ಪಲವಂದದಿಂದೆ ನುಡಿವುದನುಳಕಾ||
ದಲನ ಮುಳಿಸಿಲ್ಲಿ ಕೂಪದ | ಜಲದಿಂ ದಳಿದಪ್ಪುದದರಿ ನಗುಳ್ದಪೆ ನೀಗಳ್ || ೨೦

ಕಂ || ಎಳೆಯ ನೆನಿಸಿರ್ದ ನಿನಗೀ | ಮುಳಿಸಿನ ಮಾತೇಕೆ ಪೋಗಿ ಪವಡಿಸು ಮುಳಿ
ಸಂ || ತಿಳುಪಿದಪೆ ನೀಯೊರಂತೆಯ | ಸಲಿಲಮ ನೊಸೆದಿತ್ತು ಮೆಲ್ಲ ನನುನಯದಿಂದಂ || ೨೧

ವ || ಎನೆ ನಿಜಜನನಿ ಗಸದಳವಾದ ಜನಕನ ಬಲ್ಮುಳಿ ಸೆನಗೆ ತಿಳುಪ ಲೆಂತಾನು
ಮಳ ವಲ್ಲೆಂದು ಗುರುವಾದಿರಾಜನಿನಲ್ಲದಿಂತಿದು ತಿಳಿವಡದೆಂದು ನೆನೆದು ತರುಣನಾಪ

---

ಶಿವೋಪಕರಣಾವಳಿಯಂ— ಶಿವಪೂಜಾಸಾಮಗ್ರಿಗಳನ್ನು, .. .. ||೧೪||

ಸಾರಪ್ರಭೆ— ಶ್ರೇಷ್ಠವಾದ ಕಾಂತಿಯುಳ್ಳ, ಮಸುಳ್ದುದೊ— ಆರಿಹೋಯಿತೋ ; ಗಡಣಿಸಿ— ಗುಂಪುಸೇರಿಸಿ, ಉಪಹಾರಕ್ಕೆ— ಆಹಾರಪದಾರ್ಥಕ್ಕೆ, ಇದಿರಿಟ್ಟ— ಮುಂಗಡೆಯಲ್ಲಿಟ್ಟದ್ದ, ಸೊಡರ—ದೀಪದ .. ||೧೫||

ಲಿಂಗಾರ್ಪಿತಶೇಷದೊಳ್, ಶಿವಲಿಂಗಕ್ಕೆ ಸಮರ್ಪಿಸಲ್ಪಟ್ಟ ಪ್ರಸಾದದೊಡನೆ, ಮಹಾಲಿಂಗತ್ರಿವಿಧೋದಕಮಂ— ಗುರುಲಿಂಗಜಂಗಮಪಾದೋದಕತ್ರಯವನ್ನು, .. .. .. ||೧೬||

ಬೆಸಕೈವೊಡೆ—ಅಪ್ಪಣೆ ಮಾಡಿದರೆ, ಅಲಸಿದೆಯೊ—ಆಲಸ್ಯಪಟ್ಟೆಯೋ ? .. .. ||೧೭||

ಅಂಘ್ರಿಲಸತ್ತೋಯರುಹಕೆ— ಪ್ರಕಾಶಿಸುವ ಕಮಲದಂತಿರುವ ಪಾದಕ್ಕೆ, ತಿಳಿದಪಂ—ಕೋಪವಂ ಬಿಡುವನು, ಈ ಯವಸರದಲ್ಲಿ— ಈ ಸಂದರ್ಭದಲ್ಲಿ, ಕಜ್ಜಂ— ಕಾರ್ಯವು .. ||೧೮|| ||೧೯||

ಚೇಲಾಂಚಲಮಂ— ಸೀರೆಯ ಸೆರಗನ್ನು, ಭೀರುಮತಿ— ಭಯಪಟ್ಟ ಬುದ್ಧಿಯುಳ್ಳವನಾಗಿ, ಕಾದಲನ—ಪತಿಯ, ಕೂಪದ— ಬಾವಿಯ .. .. .. ||೨೦||

ಎಳೆಯಂ— ಹುಡುಗನು, ಪವಡಿಸು— ಮಲಗು, ಈ ಬರಂತೆಯ— ಈ ಬಾವಿಯ ಒಸೆದು—ಪ್ರೀತಿಸಿ; ಅನುನಯದಿಂದಂ— ವಿನಯದಿಂದ .. .. .. ||೨೧||

ಅಸದಳಂ— ಅಸಾಧ್ಯವು, ಎಂತಾನುಂ— ಹ್ಯಾಗಾದಾಗ್ಯೂ, ಅಳವು— ಶಕ್ಯವು, ತಿಳಿವಡದು—ತಿದ್ದಲ್ಪಡಲಾರದು, ಮರ್ಬಿನೊಳ್—ಕತ್ತಲೆಯಲ್ಲಿ, ನಿಜಗೃಹಕವಾಟಮಂ—ತನ್ನ ಮನೆಯ ಕದವನ್ನು, ಸರಸಮಧುರತರ ವೀಣಾರಣಿತರಾ

ರ್ಭಿದ ಮರ್ಬಿನೊ ಳೋರ್ವನೆ ನಿಜಗೃಹಕವಾಟಮಂ ಗಿರ್ರನೆ ತೆಗೆದೇಳ್ತಂದು ಸಕಳೇಶದೇವ ನರಮನೆಯಂ ಪೊಕ್ಕು ಸರಸಮಧುರತರವೀಣಾರಣಿತರಾಗರಸಸುಧಾಸಾಗರದೊಳೀಶ್ವರನ ನವಗಾಹಂಗೆಯ್ಯುತ್ತಮಿರ್ದ ||

ಕಂ || ಸಕಳೇಷ್ಟದಾನಿ ಯೆನಿಸುವ | ಸಕಳೇಶ್ವರಮಾದಿರಾಜನಂ ಕಂಡೊಲವಿಂ || ಸುಕುಮಾರಮಾನಸಾಂಬುಜ | ಸುಕುಮಾರಂ ಪಾವಪದ್ಮಕವನತನಾದಂ || ೧೦

ವ || ಅಂತೆರಗಿ ಕರಾಂಬುಜಂಗಳಂ ಮುಗಿ ದುಮ್ಮಳಿಸು ತಿಂತೆಂದಂ ||

ಚಂ || ಅವಧರಿಸಯ್ಯಬಿನ್ನಪವ ನೆಮ್ಮಯ ತಂದೆ ನಿಮಿತ್ತಮಿಲ್ಲದಿಂ | ದವಿರಳಮಾದ ಪೆರ್ಮುಳಿಸ ನಾಳ್ದು ವಿಭೂತಿಯ ನೆಯ್ದೆ ಪೂಸಿ ತ || ನ್ನವಯವದಲ್ಲಿ ನಿಮ್ಮಡಿಗಳಿತ್ತ ನವಾಂಬರಮಂ ಮುಸುಂಕಿಕೊಂ|ಡವಿಚಳಿತಾಂಗ ನಾಗಿರುತಮಿರ್ದ್ದಪ ನೊಯ್ಯನೆನೆಮ್ಮಿಕಂಬಮಂ||

ಕಂ || ನುಡಿಯಂ ನೋಡಂ ಮಿಸುಕಂ | ಕಡುಮುಳಿಸಂ ತಾಳ್ದು ಮೂರ್ತಿಗೊಂಡಿರ್ದ್ದಪ ನಾ || ಮೃಡಪೂಜೆಯ ವೇದಿಕೆಯಂ| ಬಿಡದಗುಳ್ದಪ ಳೆನ್ನ ಜನನಿಯೋರ್ವಳೆಗೃಹದೊಳ್

ಕಂ || ಜನಕನಡಿಗೆರಗಿ ನಯದಿಂ | ಮುನಿಸಂ ಕಳೆಯೆಂದೊಡೆ ಹಗುಳ್ದೊರಂತೆಯ ಜಲಮಿ || ತ್ರಸುನಯದೆ ತಿಳುಪಿದಪೆ ನೆಲೆ| ತನುಭವ ನೀಂ ಪೋಗು ಪವಡಿಸಂ ದಸವಸದಿಂ||೧೫

ಕಂ || ಪಿಡಿದಸೆರಂಗಂ ಕರದಿಂ | ಬಿಡಿಸಿಕೊಳು ತ್ತೆನ್ನ ಮಾತೆ ತೊಲಗೆಂದೆನ್ನಂ | ಜಡಿದೊ ಡಿದನೆಲ್ಲಮಂ ನಿ | ಮ್ಮಡಿಗರುಪ ಲ್ಬಂದೆನಯ್ಯ ದೇಶಿಕತಿಲಕ || ೧೬

ಕಂ || ಇನಕರದಿಂ ಮರ್ಬ್ಬಳಿವಂ| ತೆ ನಿತಾಂತಂ ನಿಮ್ಮ ಪದದ ಸಂದರ್ಶನದಿಂ || ಜನಕನ ಮುಳಸಳಿದಪು ದೊ | ಯ್ಯನೆ ಬಿಜಯಂಗೆಯ್ದು ದೇವ ಪೊರೆಯಲ್ವೇಳ್ಕುಂ || ೧೭

---

ಗರಸ ಸುಧಾಸಾಗರದೊಳ್— ಸರಸ—ರಸವಿಶಿಷ್ಟವಾದ, ಮಧುರತರ— ಅತಿಮನೋಹರವಾದ, ವೀಣಾ— ವೀಣೆಯ, ರಣಿತ— ನಾದದ, ರಾಗರಸ— ರಾಗದಿಂದುಂಟಾದ ರಸವೆಂಬ, ಸುಧಾಸಾಗರದೊಳ್— ಕ್ಷೀರಸಮುದ್ರದಲ್ಲಿ, ಅವಗಾಹಂಗೈಸುತ್ತಂ— ಮುಳುಗಿಸುತ್ತ * * * * *

ಸಕಳೇಷ್ಟದಾನಿ— ಸರ್ವಮನೋರಥಗಳನ್ನು ಕೊಡತಕ್ಕವನು, ಸುಕುಮಾರ ಮಾನಸಾಂಬುಜಕುಮಾರಂ— ಸುಕುಮಾರ— ಕೋಮಲವಾದ, ಮಾನಸಾಂಬುಜ— ಮನಃ ಕಮಲವುಳ್ಳ, ಸುಕುಮಾರಂ— ಒಳ್ಳೆಯ ಪುತ್ರನು, ಅವನತಂ— ನಮಸ್ಕರಿಸಿದವನು .. .. .. ೧೦||

ಉಮ್ಮಳಿಸುತ— ದುಕ್ಕಿಸುತ್ತಾ * * * * *

ಅವಧರಿಸು—ಲಾಲಿಸು, ನಿಮಿತ್ತಂ— ಕಾರಣವು, ಪೆರ್ಮುಳಿಸಂ—ಹೆಚ್ಚಾದ ಕೋಪವನ್ನು, ನಿಮ್ಮ, ಅಡಿಗಳ್, ಇತ್ತ, ನವಾಂಬರಮಂ— ಹೊಸ ಬಟ್ಟೆಯನ್ನು (ಅಂದರೆ ದೀಕ್ಷಾಕಾಲದಲ್ಲಿ ಕೊಟ್ಟ ಕಾಷಾಯವಸ್ತ್ರವನ್ನು) ಅವಿಚಲಿತಾಂಗಂ— ಅಳ್ಳಾಡದೇ ಇರುವದೇಹವುಳ್ಳವನಾಗಿ .. .. ||೧೩||

ಮಿಸುಕಂ— ಅಳ್ಳಾಡನು, ಮೂರ್ತಿಗೊಂಡು— ಕುಳಿತುಕೊಂಡು .. .. ||೧೪||

ಬರಂತೆಯ— ಬಾವಿಯ, ಪವಡಿಸು—ಮಲಗು ಅಸವಸದಿಂ— ೯ಗನೆ .. .. ||೧೫||

ತೊಲಗು— ಹೋಗು, ಜಡಿದೊಡೆ—ಗದರಿಸಲಾಗಿ, ದೇಶಿಕತಿಲಕಾ— ಗುರುಶ್ರೇಷ್ಠನೇ .. .. ||೧೬||

ಇನಕರದಿಂ— ಸೂರ್ಯಕಿರಣದಿಂದ, ಬಿಜಯಂಗೈದು—ದಯಮಾಡಿಸಿ, ಪೊರೆಯಲ್ವೇಳ್ಕುಂ—ಸಂರಕ್ಷಿಸಬೇಕು.೧೭

ಕಂ || ಎಂದುಂ ಮುಳಿಸಿಲ್ಲೆಮ್ಮಯ | ತಂದೆಗೆ ಮುಳಿದಿರ್ಪ್ಪ ೯ ೀಗಳೇಕೆಂದರಿಯೆಂ || ಮುಂದೆರಗಿ ನುಡಿಯಿಸಿದೊಡೇ | ನೆಂದುಂ ತಾಂ ನುಡಿಯನೆನ್ನೊ ಳೇವೇಳ್ದಪನೊ || ೨೮

ಕಂ || ಜನಕಂ ಪ್ರಣಯದಿ ನೆನ್ನಯ | ಜನನಿಯೊಳೆ ಪೊದಳ್ದು ಮುನಿವೊಡಂ ಮುನಿಗೆಮಯೆ || ಳ್ಳನಿತುಂ ತಪ್ಪಿಲ್ಲದೆ ಸು | ಮ್ಮನೆ ತಾ ನೆನ್ನೊಡನೆ ಮುನಿದ ನಿದು ಚಿತ್ರತರಂ ||

ಕಂ || ಅರಿದರಿ ದಾತನ ನೇಹದ|ಪರಿ ಯೆನ್ನೊಳ್ದೀವ ಪೇಳ್ವೊಡಸದಳ ಮುಖಿಳೋ|| ರ್ವರೆಯೊ ಳಿದು ಪೊಸತು ನಿಮ್ಮಯ | ಚರಣಾಬ್ಜಮೆ ಬಲ್ಲುದದ ನದೇಂವಣ್ಣಿಪೆನೊ || ೩೦

ಚಂ || ಅಳವಿಯೊ ಳೆನ್ನನೀಕ್ಷಿಪುದು ಮಾಗಳೆ ಪೊಂಪುಳಿದಾಳೆ ಮೈಪೊದ | ಳ್ದಳಯೆ ಸುಖಾಶ್ರು ಬಾರೆಲೆ ತನೂಭವ ಬಾರೆಲೆ ತಂದೆ ಬಾರ ಮಂ || ಖುಳಗುಣಬಾಲ ಲಿಂಗವಿಭುಬಾರೆನುತಂ ಬಿಗಿಯಪ್ಪಿ ಕೊಂಡು ಕೋ | ಮಳಭುಜದಿಂದೆ ಮೆಯ್ದುಡಪಿ ಮುದ್ದಿಸಿ ನೋಡಿ ಮನೋನುರಾಗದಿಂ ||
೩೧

ಮತ್ತೇ || ತೆಗೆ ದುತ್ಸಂಗದೊ ಳಿಟ್ಟು ಚಂಡಿಕೆಯ ನೊಳ್ಪಿಂ ಕಟ್ಟಿ ಸಂಪ್ರೀತಿ ಕೈ | ಮಿಗೆ ಪೂಮಾಲೆಯ ಸುತ್ತಿ ಫಾಳತಳದೊ ಳ್ಭಸ್ಮತ್ರಿಪುಂಡ್ರಾಂಕಮಂ || ನೆಗ ಳ್ದಕ್ಷಿದ್ವಯಕೆಚ್ಚು ಕಜ್ಜಳಮ ನೆನ್ನೀಕರ್ಣದೊ ಳ್ಪೂದೊಡಂ | ಬೆಗಳಂ ಸಾರ್ಚ್ಚಿ ನಿರೀಕ್ಷಿಸುತ್ತೆ ನಲಿವಂ ಮುಂಡಾಡುವಂ ಮುದ್ದಿಪಂ ||
೩೨

ಕಂ || ಕೊನೆವೆರಲಿಂದಳ್ಳೆಯ ನೊ| ಯ್ಯನೆ ಜಕ್ಕುಲಿಸುತ್ತೆ ನಗಿಪ ನಂಗನೆ ನೋಡೆಂ || ದೆನುತಂ ಜರ್ಬ್ಬುಗೆತೆ ಪುರ್ಬ್ಬಿಂ | ದಿನಿಯಳ್ಗರುಪುತ್ತೆ ಬಿನದಿಪಂ ನಸುನಗುತಂ || ೩೩

ಚಂ || ಅಡಿಗಡಿ ಗಪ್ಪಿಕೊಳ್ವ ನನುರಾಗದಿ ನೋಂದಿಪ ನೀಶಮಂತ್ರಮಂ | ಮೃಡ ಶಿವ ಶಂಭು ಶಂಕರ ಹರಾಭವ ಭರ್ಗ ಭವಾದಿನಾಮಮಂ || ನುಡಿ ನುಡಿ ಯೆಂದು ತಾಂ ಕಲಿಪ

---

ಎಂದುಂ– ಯಾವಾಗಲೂ, ಎರಗಿ– ನಮಸ್ಕರಿಸಿ, ಏನೆಂದುಂ– ಏನೆಂಬುದಾಗಿಯೂ . . ||೨೮||

ಜನಕಂ– ತಂದೆಯು, ಪ್ರಣಯದಿಂ–ವಿಶ್ವಾಸದಿಂದ, ಜನನಿಯೊಳೆ–ತಾಯೊಡನೆ, ಮುನಿವೊಡಂ– ಕೋಪಿಸಿಗೊಳ್ಳಬೇಕಾದರೂ, ಮುನಿಗೆಮ–ಕೋಪಗೊಳ್ಳಲಿ, ಸುಮ್ಮನೆ–ನಿಷ್ಕಾರಣವಾಗಿ, ಚಿತ್ರತರಂ–ಅತ್ಯಾಶ್ಚರ್ಯವು||೨೯||

ಅರಿದು ಅರಿದು– ಅಸಾಧ್ಯ ಅಸಾಧ್ಯ; ನೇಹದ– ಪ್ರೀತಿಯು . . . . ||೩೦||

ಅಳವಿಯೊಳ್–ಶಕ್ತಿಯಿಂದ, ಪೊಂಪುಳಿದಾಳೆ—ರೋಮೋದ್ಗಮವಂ ಹೊಂದಲು, ಸುಖಾಶ್ರು–ಸಂತೋಷದಿಂದುಂಟಾದ ಕಣ್ಣೀರು, ಬಾಲಲಿಂಗವಿಭು– ಪ್ರಭುವಾದ ಲಿಂಗದ ಸ್ವರೂಪನಾದ ಎಲೈ ಬಾಲಕನೇ! ||೩೧||

ಉತ್ಸಂಗದೊಳ್– ತೊಡೆಯಲ್ಲಿ, ಚಂಡಿಕೆಯಂ– ಕೂದಲನ್ನು, ಫಾಳತಳದೊಳ್– ಹಣೆಯ ಪ್ರದೇಶದಲ್ಲಿ, ಕಜ್ಜಳವಂ– ಕಾಡಿಗೆಯನ್ನು, ಎಚ್ಚು– ಲೇಪಿಸಿ, ಪೂದೊಡಂಬೆಗಳಂ– ಹೂವಿನಗೊಂಚಲುಗಳನ್ನು, ಸಾರ್ಚಿ– ಸೇರಿಸಿ, ನಲಿವಿಂ– ಸಂತೋಷದಿಂದ, . . . ||೩೨||

ಅಳ್ಳೆಯ–ಹೊಟ್ಟೆಯ ಪಕ್ಕವನ್ನು, ಜಕ್ಕುಲಿಸುತ್ತೆ–ಚಕ್ಕುಲಗುಳಿಯನ್ನಿಕ್ಕುತ್ತ, ನಗಿಪಂ– ನಗಿಸುವನು, ಪುರ್ಬಿಂದೆ— ಹುಬ್ಬಿನಿಂದ, ಜರ್ಬುಗೆತೆ– ಸನ್ನೆ ಮಾಡುತ್ತ, ಇನಿಯಳ್ಗೆ–ಪತ್ನಿಗೆ, ಬಿನದಿಪಂ–ವಿನೋದಪಡುವನು||೩೩||

ಅಡಿಗಡಿಗೆ– ಹೆಜ್ಜೆಹೆಜ್ಜೆಗೆ, ಅಪ್ಪಿಕೊಳ್ವಂ– ಆಲಿಂಗಿಸುವನು, ಓದಿಪಂ– ಓದಿಸುವನು, ಬಳ್ಳೊಸಲೊಡ್ಡಿ– ಬಳ್ಳೆಯ ಹಣೆಯಂ ಚಾಚಿ, ಜೈಗುಡುತ್ತೆ– ಜೈಎಂದು ಕೂಗುತ್ತ. ಉರ್ಬಿ– ಉತ್ಸಾಹಪಟ್ಟು, ಅಲುಗುತ್ತೆ– ಅಳ್ಳಾ

ನಾಲಿಪನೊಳ್ಪೊಸಲೊಡ್ಡಿ ಪ್ಯೆಗುಡು | ತೊಡನೊಡ ನುರ್ಬ್ಬಿ ಮೇಣ್ಪಿಡಿದು ಗಲ್ಲಮನೊ ಲ್ದಲುಗುತ್ತೆ ರಾಗಿಪಂ || ೩೪

ವ || ಮತ್ತಂ || ಚಂ || ಬಸವನ ಬಂಟನೋ ಸುತನೊ ಕಿನ್ನರದೇವನ ಕೂರ್ಪ ಲೆಂಕನೋ | ಮುಸುಟೆಯ ಚಾಡರಾಜನ ಹಲಾಯುಧ ನಾಳೊ ತೆಲುಂಗಜೊಮ್ಮ ನಾ || ಳ್ವೆಸದ ಬೆಡಂಗನೋ ಮಸಣಿದೇವನ ದಾಸನೊ ದಾಸಿಮಯ್ಯನೊ | ಳ್ವೆಸಕದ ಭೃತ್ಯನೋ ದಸರದೇವನ ಚಾರನೊ ಮಾಚಿದೇವನಾ || ೩೫

ಚಂ || ಪಳೆಯನೊ ಸೇದಿರಾಜ ನಸಿಯಂ ಪಿಡಿವಾತನೊ ಪಂಡಿತಾರ್ಯ ನು | ಜ್ವಳಪದಪದ್ಮಸೇವಕನೊ ವೇಮರಸಾರ್ಯನ ಶಿಷ್ಯನೋ ವಿಶ್ವಂ || ಖಳಮತಿಬಂಕನಂಕದವನೋ ಸಿರಿಯಾಳ್ವನ ಸೂನುವಿಂಗೆ ನಲ್ಗೆಳೆಯನೊ ಸೌಂದರಾಧಿಪನ ದೂತನೊ ಚೆನ್ನಯನಾತ್ಮಜಾತನೊ ||

ಉ || ಚೇರಮ ನಶ್ವರಕ್ಷಕನೊ ಗೊಲ್ಲಳ ನೊಬ್ಬ ದುರುಗಾವನೋ ಬಹಿ | ರ್ದ್ವಾರಮ ನೊಲ್ದು ಕಾವ ಚರನೋ ಗಣನಾಥನ ಬಂಡಿಕಾರನೋ || ಬೀರದ ಬಿಬ್ಬಬಾಚಯನ ಹೊನ್ನಯನಗ್ಗದ ಕಂಬಿಕಾರನೋ | ಮಾರಯನಂಗಣಕ್ಕೆಚಳೆಯಂಗುಡುವಾತನೊ ಚೋಳರಾಯನ ||

ಚಂ || ಪಡಿಯರನೋ ಪಗಲ್ತೊಣೆಯ ರಾಳತಿಗೆಯ್ವನೊ ಕಕ್ಕಯಂ ಗಿವಂ| ಪಡಿಗಮ ನಾಂಪನೋ ಮಳೆಯರಾಜನ ಸತ್ತಿಗೆದಾಳ್ವನೋ ಬೆಡಂ || ಗಿಡಿ ದಿರಿವತ್ತನರ್ಭಕನೊ ಚೆನ್ನ ವೃಷಾಂಕನ ಸುಪ್ರಸಾದಿಯೋ | ನಿಡುಗುಡಿಮಾರನಂಗಣರಜಂದೆಗೆವಾತನೊ ಸಿದ್ಧರಾಮನಾ ||

ಉ || ಸೇವಿಪಗುಡ್ಡನೋ ಸುರಗಿಚಾಡನ ಕಿಂಕರನೋ ಪೊದಳ್ದಕೆಂ | ಬಾವಿಯಭೋಗನಾದರದಸಿಂಬಕನೋ ಕಲಿಕಾಮನಂಘ್ರಿರ || ಕ್ಷಾವಹನಕ್ರಿಯಾನ್ವಿತನೊ ಮಾದರಸಾರ್ಯರ ಮೊಮ್ಮಗನೋ ಮಹಾ | ದೇವಿಯ ಚಿಕ್ಕಮಾದಣನ ಕಂದನೊ ನೀನೆನುತೆನ್ನ ನಳ್ಕರಿಂ ||

---

ಡಿಸುತ್ತ, ರಾಗಿಪಂ— ಪ್ರೀತಿಸುವನು, ||೩೪||

ಬಂಟನೋ— ಆಳೋ? ಕೂರ್ಪ— ಪ್ರೀತಿಪಾತ್ರನಾದ, ಲೆಂಕನೋ— ಆಳೋ? ಆಳ್ವೆಸದ— ಅಪ್ಪಣೆಯ ನೇರನಡೆಯಿಸುವ, ಬೆಡಂಗನೋ— ವಿಲಾಸವುಳ್ಳವನೋ? ಬಳ್ವೆಸಕದ—ಬಳ್ಳಿಯ ಆಜ್ಞಾಪಾಲಕನಾದ, ಭೃತ್ಯನೋ— ಆಳೋ? ಚಾರನೋ— ಆಳೋ? ||೩೫||

ಪಳೆಯನೋ— ಹಳಬನೋ? ಅಸಿಯಂ— ಕತ್ತಿಯನ್ನು, ಅಂಕದವನೋ— ಬಿರುದನ್ನು ಹೊಗಳುವನೋ? ನಲ್ಗೆಳೆಯನೋ— ಒಳ್ಳೆಯ ಸ್ನೇಹಿತನೋ? ||೩೬||

ಅಶ್ವರಕ್ಷಕನೋ—ಕುದುರೆಯಂಸಾಕುವನೋ? ಬಲ್ದುರುಗಾವನೋ—ಒಳ್ಳೆಯದನವಂ ಕಾಯುವವನೋ? ಬಹಿರ್ದ್ವಾರವಂ—ಹೊರಬಾಗಿಲನ್ನು, ಬಂಡಿಕಾರನೋ—ಸಾರಥಿಯೋ, ಬೀರದ—ಶೌರ್ಯವುಳ್ಳ, ಕಂಬಿಕಾರನೋ—ಕಂಬಿಯಂ ಹೊರುವವನೋ? ಚಳೆಯಂಗುಡುವಾತನೊ—ನೀರನ್ನು ಚಿಮುಕಿಸುವವನೋ? ||೩೭||

ಪಡಿಯರನೋ—ಕಂಚುಕಿಯೋ? ಆಳತಿಗೆಯ್ವನೋ—ಅಪ್ಪಣೆಯಂತೆ ನಡೆಯುವವನೋ? ಪಡಿಗವಂ—ಪೀಕದಾನಿಯನ್ನು, ಆಂಪನೋ—ಧರಿಸುವನೋ? ಸತ್ತಿಗೆದಾಳ್ವನೋ—ಛತ್ರವಂ ಹಿಡಿಯುವವನೋ? ಅರ್ಭಕನೋ—ಶಿಶುವೊ? ಅಂಗಣರಜಂದೆಗೆವಾತನೊ—ಹಟ್ಟಿಯ ಕಸವಂ ಗುಡಿಸುವವನೋ? ||೩೮||

ಗುಡ್ಡನೋ—ಭೃತ್ಯನೋ? ಆದರದ—ಪ್ರೀತಿಪಾತ್ರನಾದ, ಸಿಂಬಕನೋ—ಆಳೋ? ಅಂಘ್ರಿರಕ್ಷಾವಹನಕ್ರಿಯಾನ್ವಿತನೋ—ಪಾದರಕ್ಷೆಯಂ ಹೊರುವ ಕೆಲಸದಿಂದ ಕೂಡಿದವನೋ? ||೩೯||

ಕಂ || ಕರೆಕರೆದು ಲಲ್ಲೆಗೆಯ್ದಾ | ದರಿಸುತೆ ಪೇರುರದೊಳಪ್ಪುವಂ ಸಡಗರಿಪಂ ||
ಕರತಳತಾಳಮನೊತ್ತುತೆ | ಪಿರಿದುತ್ಸವದಿಂದೆ ಕುಣಿಯಿಪಂ ಪಿತನೆನ್ನಂ || ೪೦

ಕಂ || ಪೆಗಲೇರಿಸಿಕೊಂಡೆನ್ನಂ | ಮಿಗೆ ನಿಮ್ಮೋಲಗಕೆ ಬರ್ಪ್ಪ ನತಿಸಂಭ್ರಮದಿಂ ||
ದಗಲದನುದಿನಮುಮಿಂತಿಂ | ತಗಣಿತಸಂಪ್ರೀತಿವೆತ್ತು ಮನ್ನಿಪನೆನ್ನಂ || ೪೧

ಕಂ || ಇಂದೆನ್ನೊಳ್ಮನಿದುಸಿರಂ | ತಂದೆ ಮಹಾಮಹಿಮ ನೀವೆ ಬಲ್ಲಿರಿದಂ ಮೇ ||
ಣೊಂದುಂ ತಪ್ಪೆನ್ನೊಳ್ಸಲೆ | ಸಂದಿರದಾನಾಡೆ ನನ್ನಶಿಟಗಳೊಳೆಂದುಂ || ೪೨

ಕಂ || ಶರಣರಡಿಗಂಡು ವಂದಿಸ | ದಿರೆ ನಥವಾನರ್ಪಿತಕ್ಕೆ ಬಾಯ್ದೆರೆಯೆಂ ಶಂ ||
ಕರಪೂಜೆಗೆಯ್ವ ಸಮಯದೆ | ಕರೆಯೆಂ ಕಂಡುದನೆ ಬಯಸಿ ಬೇಡೆ ನಜಸ್ರಂ || ೪೩

ಕಂ || ಪೊಲ್ಲದುವ ನೆಸಗೆ ನಯ್ಯನ | ಸೊಲ್ಲಂ ಸಲೆ ಮೀರೆ ನನ್ನರೊಸಗೆಯ ಗೃಹ
ಕಾ || ನಿಲ್ಲದೆ ಪೋಗೆಂ ಸಮಯಕೆ | ಸಲ್ಲದರೊಳ್ನುಡಿಯೆ ನೀಶಮಂತ್ರವ ಮರೆಯೆಂ ||

ಸ್ರ || ಇಂತಾನಿರ್ಪಂದಮಂ ಚಾನರಿಯನೆ ಮುಳಿದಂ ನೆರ್ನೆರಂ ತಾತ ನೆನ್ನೊ | ಳ್ಸಂ
ತಾಪಂಗೊಂಡು ಮೇಣಾಂತಿಳುಪೆ ತಿಳಿಯ ನೇನೆಂದಪೆಂ ಸತ್ಕೃಪಾರ್ದ್ರ || ಸ್ವಾಂತ ನೀ
ಮೆಯ್ದಿ ಬೇಗಂ ತಿಳುಪೆ ತಿಳಿದಪಂ ಬಲ್ಲೆ ನಾನೆಲ್ಲಮುಂ ದು | ಶ್ಚಿಂತಾಕಾಂತಾರದಾವಾನಳ ಗು
ರುವರ ನೀಂ ಬಂದು ರಕ್ಷಿಪ್ಪುದೆಮ್ಮಂ || ೪೫

ಕಂ || ಎಂದಿಂತು ಮುದ್ದುನುಡಿಗ | ಳ್ಸಂದಣಿಸಿರೆ ದೇವ ಬನ್ನಿ ಮೆಂದಡಿಗಡಿಗಾ || ಕ್ರಂ
ದಿಸುತೆರಗುತೆ ಕರೆಯುತೆ | ಕುಂದದೆ ದೈನ್ಯೋಕ್ತಿವೆರಸಿ ಪೊರಳುತ್ತಡಿಯೊಳ್ || ೪೬

ಕಂ || ಕರಕರಿಪ ತರುಣನಿರವಂ | ಕರುಣಾನಿಧಿ ನೋಡಿ ದಶನದೀಧಿತಿ ಮೊಗದೊ ||
ಳ್ಪರಕಲಿಸೆನಗುತೆಸಕಲೇ | ಶ್ವರದೇವಂ ವೀಣೆದೆಗೆದು ನೆಲಕಿಳುಪುತ್ತಂ || ೪೭

ಮಲ್ಲಿಕಾಮಾಲಾ || ಶೀಲವಂತ ರನಂತ ರುಂಟವಳಂತೊರಂತೆಯ ನೆಯ್ದೆ ತ | ವ್ಮಾ

---

ಪೇರುರದೊಳ್—ದೊಡ್ಡ ವಕ್ಷಸ್ಥಲದಿಂದ .. .. ||೪೦||

ಪೆಗಲೇರಿಸಿಕೊಂಡು—ಹೆಗಲಿನ ಮೇಲೆ ಹತ್ತಿಸಿಕೊಂಡು .. .. ||೪೧||

ಉಸಿರಂ—ಮಾತನ್ನಾಡನು, ಆಡೆಂ—ಆಟವಾಡುವದಿಲ್ಲ .. .. ||೪೨||

ವಂದಿಸದಿರೆಂ—ನಮಸ್ಕರಿಸದೇ ಇರುವದಿಲ್ಲ, ಅಥವಾನರ್ಪಿತಕ್ಕೆ — ಶಿವನಿಗೆ ಸಮರ್ಪಿಸದೇ ಇರುವ ವಸ್ತು
ವಿಗೆ, ಬಾಯ್ದೆರೆಯೆಂ—ಬಾಯನ್ನು ಬಿಡುವದಿಲ್ಲ, ಕರೆಯೆಂ—ಕೂಗುವದಿಲ್ಲ .. ||೪೩||

ಪೊಲ್ಲದುವಂ—ಕೆಟ್ಟಕೆಲಸವನ್ನು, ಎಸಗೆಂ—ಮಾಡುವದಿಲ್ಲ, ಸೊಲ್ಲಂ—ಮಾತನ್ನು, ಅನ್ಯರ—ಶಿವಭಕ್ತೇ
ತರರ, ಬಸಗೆಯ—ಉತ್ಸಾಹದ, ಸಮಯಕೆ—ವೀರಶೈವಮತಕ್ಕೆ, ಸಲ್ಲದರೊಳ್—ಯೋಗ್ಯರಾಗದವರೊಡನೆ ||೪೪||

ನೆರ್ನೆರಂ—ಸುಮ್ಮಸುಮ್ಮನೆ, ತಿಳುಪೆ—ಮುನಿಸಂಬಿಡಿಸಿದರೆ, ಸತ್ಕೃಪಾರ್ದ್ರಸ್ವಾಂತರ—ಒಳ್ಳೆಯ ದಯಾ
ರಸದಿಂ ನೆನೆದ ಮನಸ್ಸುಳ್ಳ, ದುಶ್ಚಿಂತಾಕಾಂತಾರದಾವಾನಳ—ಕೆಟ್ಟ ದುಃಖವೆಂಬ ಕಾಡಿಗೆ ಕಾಳ್ಕಿಚ್ಚಾದ ||೪೫||
ಆಕ್ರಂದಿಸುತೆ—ಅಳುತ್ತಾ .. .. .. ||೪೬||

ಕರಕರಿಪ—ಕಳವಳಪಡುವ, ತರುಣನ—ಹುಡುಗನ, ದಶನದೀಧಿತಿ—ಹಲ್ಲಿನ ಕಾಂತಿಯು, ಪರಕಲಿಸೆ—
ಹರಡಿಕೊಳ್ಳಲು, ಬೀಣೆದೆಗೆದು—ವೀಣೆಯಂತೆಗೆದು, ಕೆಲಕೆ—ಬಂದುಕಡೆಗೆ .. ==೪೭ ||

ಶೀಲವಂತರ್—ನಿಯಮವುಳ್ಳವರು, ಅನಂತರ್— ಅನೇಕರು, ಆಲಯಸ್ಥಳದೊಳ್—ಮನೆಯ ಪ್ರದೇಶದಲ್ಲಿ

ಲಯಸ್ಥಳದಲ್ಲಿ ತೋಡಿದರುಂಟೆ ಪೆರ್ಮುಳಸಾಗೆ ತ || ತ್ಕಾಲದೊಳ್ಜಡಿವಂದಮಂ ಬಿಸುಟೀ
ತನಂತೆ ಮುಸುಂಕುತಂ | ಚೇಲಮಂ ಮಿಗೆ ನೆಮ್ಮಿ ಕಂಬಮ ನಿರ್ದ್ದರುಂಟೆ ಗೃಹಾಧಿಪರ್ ||

ಕಂ|| ಚಿತ್ರ ಮಿದು ಚಿಕ್ಕಮಾದನ | ಪುತ್ರ ನಿವಂ ನುಡಿವ ಮಾತು ಪೊಸಪಗೆಯೆಮ್ಮಾ ||
ಶ್ರೋತ್ರಕಿನಿದಾಯ್ತು ಶಿವಶಿವ | ಧಾತ್ರಿಯೊಳಿವನನ್ನರೊಳರೆ ನುಡಿಯಬೆಡಂಗರ್ || ೪೯

ವ || ಎಂದು ಪೊಗಳ್ದು ತಲೆದಡವಿ ಮುದ್ದಿಸಿ ಮುಂಡಾಡಿ ನೋಡಿ ||

ಸ್ವಾಗತ || ಬಾಲಲಿಂಗ ನಡೆ ಪೋಪ ಮೆನುತ್ತಂ | ಲೀಲೆಯಿಂದೆ ಸಕಳೇಶ್ವರದೇವಂ ||
ಕಾಲವೈರಿಯ ನಿರೂಪಮಿದೆಂದಾ | ಕಾಲಕಂಠನಿಭ ನೇಳ್ತರುತಾಗಳ್ || ೫೦

ಮತ್ತೇ || ಸಕಳೇಷ್ಟಪ್ರದ ದೇವ ನೀ ನಿರೆ ವಲಂ ಬೇರೊಂದನಿಚ್ಛೈಸಿ ಬೇ|ಡಿ ಕರಂ
ಧಾವತಿಗೊಳ್ವ ನಲ್ಲುಬಿಡದಾನೆಂಬಿಂತಿದಂ ನೀನೆ ಬ || ಲ್ಲೆಕೃಪಾಸಾಗರ ಪೇಳ್ವುದೇಂ ಪೆರತ
ನೆನ್ನಂಗೇಂದ್ರಿಯಪ್ರಾಣಚಿ|ತ್ತ ಕಧೀಶಂ ಸಕಳೇಶ ನೀನೆ ನಿಜಮೆಂದಾನಂದದಿಂಗೀತಮಂ ||

ಕಂ || ಪಾಡುತ್ತೆ ಬಾಲಲಿಂಗಂ | ಕೂಡೈತರೆ ನಿಜದೃಗಂಚಲಪ್ರಭೆ ಜವದಿಂ || ದೋಡಿ
ಸೆ ತಮಮಂ ಗುರುಕುಲ | ಚೂಡಾಮಣಿ ಮಾದಿರಾಜ ನೊಸೆದೇಳ್ತಂದಂ || ೫೧

ವ || ಅಂತೇಳ್ತಂದು ತನ್ಮಂದಿರಮಂ ಪೊಕ್ಕು ನಿರೀಕ್ಷಿಸಿ ||

ಕಂ || ಏಗೈದಪೆ ಮಗಳೆ ಪೊದ | ಳ್ದೀಗ ಳ್ನನ್ನಿನಿಯ ನೇಕೆ ಮುನಿದನೊ ಪೊರಮ ||
ಟ್ಟೀಗುಣನಿಧಿ ನಟ್ಟಿರುಳೆ | ಮ್ಮಾಗಾರಕ್ಕೇಕೆ ಬಂದನೋ ಬಳಲುತ್ತಂ || ೫೨

ವ || ಎಂಬ ಗಂಭೀರಧ್ವನಿಯ ನಾಮಹಾದೇವಿ ಕೇಳ್ದು ಖನನಕ್ರಿಯೆಯ ನುಳಿದು ಭೀ
ತಿವೆರಸಿ ಭಕ್ತಿಭರದಿ ನೆರಗುವಂತೆ ತದಂಘ್ರಿಗೆರಗಿ ಮಗುಳ್ದು ಮಗುಳ್ದು ಪೊಡೆಮಡುತ್ತಮಿರೆ
ನಡುವನೆಗೆ ಬಂದು ಕಂಬಮಂ ನೆಮ್ಮಿರ್ದ ಚಿಕ್ಕಮಾದಣ್ಣನಂಗಮಂ ಮಾದಿರಾಜ ನಚ್ಚರಿವೆ
ತ್ತು ನಿಜಕೃಪಾಪೀಯೂಷಾರ್ದ್ರಕಟಾಕ್ಷದಿ ನಡರೆ ನೋಡಿ ಪೆಸರ್ಗೊಂಡು ಕರೆದು ||

---

ಬರಂತೆಯಂ– ಬಾವಿಯನ್ನು, ಜಡಿವ—ಗದರಿಸುವ, ಬಿಸುಟು—ಬಿಟ್ಟು, ಮುಸುಂಕುತಂ– ಮುಸುಗನ್ನು ಹಾಕಿ ಕೊಳ್ಳುತ್ತಾ, ಚೇಲಮಂ– ಬಟ್ಟೆಯನ್ನು, ಗೃಹಾಧಿಪರ್– ಮನೆಯ ಯಜಮಾನರು .. ||೪೮||

ಈ ಶ್ರೋತ್ರಕ್ಕೆ–ಈಕಿವಿಗೆ, ಇನಿದು– ಮಧುರವಾದದ್ದು, ಇವನನ್ನರ್–ಇವನಂತವರು ||೪೯||

ತಲೆದಡವಿ—ತಲೆಯಂ ಸವರಿ * * * * * *

ಪೋಪಂ—ಹೋಗೋಣ ; ನಿರೂಪಂ—ಅಪ್ಪಣೆಯು, ಕಾಲಕಂಠನಿಭಂ– ಶಿವಸ್ವರೂಪನಾದ ಮಾದಿರಾಜನು ೫೦ ವಲಂ– ನಿಜವಾಗಿ, ಧಾವತಿಗೊಳ್ವಂ– ಆತುರಗೊಳ್ಳುವನು, ಪೆರತಂ—ಮತ್ತೊಂದನ್ನು .. ||೫೦||

ನಿಜದೃಗಂಚಲಪ್ರಭೆ–ತನ್ನ (ಮಾದಿರಾಜನ) ಕಡೆಗಣ್ಣೋಟದ ಕಾಂತಿಯು, ತಮಮಂ–ಕತ್ತಲೆಯನ್ನು ೫೧

ಏಗೈದಪೆ—ಏನು ಮಾಡುತ್ತೀಯೆ? ಇನಿಯಂ—ಗಂಡನು, ನಟ್ಟಿರುಳೊಳ್—ಮಧ್ಯರಾತ್ರಿಯಲ್ಲಿ, ಈ ಗುಣ ನಿಧಿ—ಈ ಸದ್ಗುಣನಿಕ್ಷೇಪನಾದ ಬಾಲಕನು, ಆಗಾರಕ್ಕೆ—ಮನೆಗೆ, ಬಳಲುತ್ತಂ—ಆಯಾಸಪಡುತ್ತ, ||೫೨||

ಖನನಕ್ರಿಯೆಯಂ– ಅಗೆಯುವ ಕೆಲಸವನ್ನು, ಉಳಿದು– ಬಿಟ್ಟು, ಭಕ್ತಿಭರದಿಂ– ಭಕ್ತಿಯ ಭಾರದಿಂದ, ಎರಗುವಂತೆ— ಬಗ್ಗುವಹಾಗೆ, ಅಚ್ಚರಿವೆತ್ತು—ಆಶ್ಚರ್ಯವಂ ಹೊಂದಿ, ನಿಜಕೃಪಾಪೀಯೂಷಾರ್ದ್ರಕಟಾಕ್ಷದಿಂ— ತನ್ನ ದಯೆಯೆಂಬ ಅಮೃತದಿಂ ನೆನೆದ ಕಡೆಗಣ್ಣಿನಿಂದ, ಪೆಸರ್ಗೊಂಡು— ಹೆಸರಂ ಹಿಡಿದು * * *

ಕಂ || ಬಿಡು ನಿನ್ನ ಮುಳಿಸ ನೇ ಳೇ | ಲ್ತ್ರಡಮಿಲ್ಲದೆ ಚಿಕ್ಕಮಾದ ನೀ ನೆಂಬುದು ಮಾ || ಗಡೆ ತೀವೆ ಜೇವ ಮೇಳ್ದವ | ರಡಿಯೊ ಳ್ಸೈಗೆಡೆದು ದೇವ ಶರ ಣೆನುತಿರ್ದರ್ಗಂ ||

ಕಂ || ಮಕರಾಂಕಮಾನಹರಣ ಹಿ | ಮಕರಾಂಕಕಪರ್ದರೂಪ ಜಯಜಯ ಸತತಂ || ಸಕಳೇಪ್ಸಿತಪ್ರದಾಯಕ | ಸಕಳೇಶ್ವರ ಮಾದಿರಾಜ ನತಸುರಭೂಜ || ೫೫

ಕಂ || ದೇವೇಶ ದೇವ ನಿಮ್ಮಡಿ | ದಾವರೆಯಂ ಕಂಡು ಧನ್ಯ ನಾದೆಂ ಶಿವಧ || ರ್ಮಾವಾಸ ನಾದೆ ನನುಪಮ | ಪಾವನಪದ ನಾದೆನಾದೆ ನಾನತಿಮಾನ್ಯಂ || ೫೬

ವ || ಎಂದಿಂತು ನಿಜಭಕ್ತಿಯಿಂ ಪೊಗಳ್ದು ಪೊಡಮಟ್ಟು ತಚ್ಚರಣತಳಂಗಳಂ ಶಿರದೊಳ್ಪೊತ್ತು ಪೊರೆಯೇರಿ ಮನೋರಮಣಿಯುಂ ನಂದನನುಂ ಬೆರಸು ಚಿಕ್ಕಮಾದಣ್ಣ ನನುಪಮಾನಂದದಿ ನಿರ್ಜನ ಮಲ್ಲಿ ||

ಕಂ || ನೆರೆನೆರೆದು ಪರಮಭಕ್ತ | ರ್ಪರಮೋತ್ಸವ ಮಲರೆ ಮಾದಿರಾಜನ ಪಾದಾಂ || ಬುರುಹ ಕಭಿವಂದಿಸು ತ್ತ | ಚ್ಚರಿವಡುತಂ ನೋಡಿ ಸಂಭ್ರಮಂಗೊಳುತಾಗಳ್ || ೫೭

ಸ್ರ || ಕಾಲವ್ಯಾಲೇಭಪಂಚಾನನ ಕಲಿಕಲುಷಧ್ವಾಂತಮಾರ್ತಾಂಡದುರ್ದಾಂ | ತಾಲೀಕಾಲಾಪನಿರ್ವಾಪಕ ಪರತರಪಂಚಾಕ್ಷರಪ್ರಾಣ ಲಿಂಗ || ವ್ಯಾಲಗ್ನಸ್ವಾಂತ ಚಿಂತಾರಹಿತ ಚಿದಮಿತಾನಂದ ನಿರ್ದ್ವಂದ್ವ ಪೂರ್ಣ | ಪ್ರಾಲೇಯಾಂಶುಪ್ರಭಾಪ್ರಸ್ಫುರಿತನುತಯಶೋಭಾಸಿ ಮಾದಾರ್ಯವರ್ಯ ||
೫೮

---

ತೀವೆ– ತುಂಬಲು, ಸೈಗೆಡೆದು– ಅಡ್ಡಬಿದ್ದು || ೫೪ ||

ಮಕರಾಂಕಮಾನಹರಣ— ಮಕರ— ಮೊಸಳೆಯೇ, ಅಂಕ–ಚಿಹ್ನವಾಗುಳ್ಳ ಮನ್ಮಥನ, ಮಾನ—ಗರ್ವವನ್ನು, ಹರಣ—ನಾಶಮಾಡಿದ, ಹಿಮಕರಾಂಕಕಪರ್ದರೂಪ—ಹಿಮಕರ–ಚಂದ್ರನ, ಅಂಕ—ಗುರುತುಳ್ಳ ಕಪರ್ದ–ಜಡೆಯುಳ್ಳ ಪರ..ವನ, ರೂಪ–ಸ್ವರೂಪನಾದ, ನತಸುರಭೂಜ–ನಮಸ್ಕರಿಸಿದವರಿಗೆ ಕಲ್ಪವೃಕ್ಷನಾದ||೫೫||

ಶಿವಧರ್ಮಾವಾಸಂ– ಶೈವಧರ್ಮಗಳಿಗೆ ಆಶ್ರಯನಾದವನು, ಅನುಪಮಪಾವನಪದಂ– ಅಸದೃಶವಾದ ಪರಿಶುದ್ಧವಾದ ಪಾದವುಳ್ಳವನು, ಅತಿಮಾನ್ಯಂ– ಬಹು ಗೌರವ್ಯನು, ||೫೬||

ಪೊರೆಯೇರಿ– ಸಂತೋಷಾತಿಶಯವಂ ಹೊಂದಿ,

* * * *

ನೆರೆನೆರೆದು– ಕೂಡಿಕೂಡಿ, ಅಲರೆ– ಹೆಚ್ಚಾಗಲು, ||೫೭||

ಕಾಲವ್ಯಾಲೇಭಪಂಚಾನನ– ಯಮನೆಂಬ ಕ್ರೂರವಾದ ಆನೆಗೆ ಸಿಹ್ಮನಾದ, ಕಲಿಕಲುಷಧ್ವಾಂತಮಾರ್ತಾಂಡ– ಸಮರ್ಥವಾದ ಪಾಪವೆಂಬ ಕತ್ತಲೆಗೆ ಸೂರ್ಯನಾದ, ದುರ್ದಾಂತಾಲೀಕಾಲಾಪನಿರ್ವಾಪ– ದುರ್ದಾಂತ– ಇಂದ್ರಿಯನಿಗ್ರಹಶೂನ್ಯರಾದ, ಅಲೀಕ– ಅನೃತವಾದಿಗಳ, ಆಲಾಪ– ಮಾತನ್ನು, ನಿರ್ವಾಪಕ– ನಾಶಮಾಡುವ, ಪರತರಪಂಚಾಕ್ಷರಪ್ರಾಣ– ಅತ್ಯುತ್ಕೃಷ್ಟವಾದ ಪಂಚಾಕ್ಷರಿ ಮಂತ್ರವೇ ಪ್ರಾಣವಾಗುಳ್ಳ, ಲಿಂಗವ್ಯಾಲಗ್ನಸ್ವಾಂತ– ಶಿವಲಿಂಗದಲ್ಲಿ ವಿಶೇಷವಾಗಿ ಸಂಬಂಧಿಸಿದ ಮನಸ್ಸುಳ್ಳ, ಚಿದಮಿತಾನಂದ– ಅಪರಿಮಿತವಾದ ದಿವ್ಯಜ್ಞಾನಾನಂದವುಳ್ಳ, ನಿರ್ದ್ವಂದ್ವ—ಭಿನ್ನನಾಗದ, ಪೂರ್ಣಪ್ರಾಲೇಯಾಂಶುಪ್ರಭಾಪ್ರಸ್ಫುರಿತನುತಯಶೋಭಾಸಿ– ಪೂರ್ಣಚಂದ್ರನ ಕಾಂತಿಯೋಪಾದಿಯಲ್ಲಿ ಪ್ರಕಾಶಿಸುವ ಶ್ಲಾಘ್ಯವಾದ ಕೀರ್ತಿಯಿಂದ ಶೋಭಿಸುವ, ಮಾದಾರ್ಯವರ್ಯ–ಪೂಜ್ಯರಲ್ಲಿ ಶ್ರೇಷ್ಠನಾದ ಮಾದಿರಾಜನೇ ! ||೫೮||

ಮತ್ತೀ || ತರಳಂ ನಟ್ಟಿರುಳ್ಳೈದಿ ದೇವ ಮುನಿದಂ ಮತ್ತಾತ ನೀ ಕಾಯ್ವನೊ । ತ್ತರಿಸಲ್ನಿಮ್ಮಡಿಯ್ಯೆದುಗೆಂದ ನುಡಿಯಂ ಕೈಕೊಂಡು ಕಾರುಣ್ಯದೆ || ಳ್ತರದಿಂ ಬಂದಸುವಿತ್ತು ನಿದ್ರಿತನ ನೇಳೆಂಬಂತಿ ರೇಳ್ಳೇಳೆನು । ತ್ತಿರದೇಳ್ವಂತಿರೆ ಮಾಡಿದೈ ಮಝುಝರೆ ಶೈವಾಚಾರ್ಯ ಚೂಡಾಮಣೀ || ೫೯

ಕಂ || ಮುಗಿಲಿತ್ತೊಡೆ ಜೀವನಮಂ । ಮಿಗೆ ಪುರುಡಿಸಿ ನಿನ್ನಪಾಂಗರುಚಿ ಮಿಂಚುವಮಿಂ || ಚೊಗೆದಿತ್ತುದು ಜೀವನಮಂ । ಜಗದೊಳ್ಭಕ್ತಾಂಗಸಸ್ಯ ಕಮಳಚರಿತ್ರ || ೬೦

ಕಂ || ಗುರುಚರಹರಾಂಘ್ರಿಭಜನಮೆ । ನೆರೆದಪವರ್ಗಕ್ಕ ಮರ್ಗಳಂ ನಿಜ ಮೆಂಬೀ । ಪರಿಯರುಪುವಂತೆ ಭಕ್ತನ । ಹರಣಮ ನೊಲ್ದಿತ್ತೆ ಶಿಷ್ಟಜನಮಂದಾರಾ || ೬೧

ಕಂ || ತರಳನ ನುಡಿಯೆನ್ನದೆ ನ । ಟ್ಟಿರುಳ್ಳೈದುತೆ ಭಕ್ತನಸುವ ನಿತ್ತೈ ಮಝುಭಾ || ಪುರೆ ದಯೆಯದೆಂತೊ ಶಕ್ತಿಯ । ಪರಿಯೆನ್ನದೊ ಸೌಮ್ಯಗುಣಗಣಾಲಂಕರಣಾ || ೬೨

ವ || ಎಂದು ಕೀರ್ತಿಸಿ ತದ್ಭಕ್ತಸೂನುವಂ ನೋಡಿ ||

ಕಂ || ಹರಕೃಪೆವಡೆದಳದಣುಗನ । ಹರಣಮ ನೆಲೆ ಪಡೆದ ರೊಳ ರಿಳಾತಳದೊ ಳಿವಂ || ತರುಣಂ ನಿಮ್ಮಯ ಕೃಪೆವಡೆ । ದಿರದಸುವಳಿ ದಾತ್ಮಜನಕ ನಸುವಂ ಪಡೆದಂ || ೬೩

ಸ್ರಗ್ಧರಾ || ಎಂದಿಂ ತೆಲ್ಲಾಗಣಂಗ ಳ್ಪೊಗಳೆ ನೆಗಳ್ದಮಾದಾರ್ಯನಂ ಕಂಡು ಬಂದಾ । ನಂದಂ ಪೆಂಪೇರೆ ಭಕ್ತಂಗಸುವ ನೊಸೆದು ಕೊಟ್ಟಂಗಡೀದೇವ ನೆಂದೊ || ಳ್ಪಂದಂ ಕೊಂಡಾಡುತಂ ಪಾಡುತೆ ಪದಕೆರಗುತ್ತಲ್ಲಿ ಕಣ್ಗೊಪ್ಪುತಿರ್ದ್ದಂ । ಕಂದರ್ಪಾರಾತಿಭಕ್ತಪ್ರಕರಸುಖಕರಂ ಭಕ್ತಿಭಾವಾಭಿರಾಮಂ || ೬೪

---

ಈ ಕಾಯ್ವಂ—ಈ ಕೋಪವನ್ನು, ಉತ್ತರಿಸಲ್—ಪೇರೆಮಾಡುವದಕ್ಕೆ, ಐದುಗೆ-ಬರಲಿ, ಎಳ್ತರದಿಂ—ಆಧಿಕ್ಯದಿಂದ, ಅಸುವಿತ್ತು— ಪ್ರಾಣವಂಕೊಟ್ಟು, ನಿದ್ರಿತನಂ— ನಿದ್ರೆಯುಳ್ಳವನನ್ನು, ಮಝುಝರೆ— ಶಹಬಾಸ್, ಶೈವಾಚಾರ್ಯಚೂಡಾಮಣೀ— ಶಿವಾಚಾರ್ಯಶ್ರೇಷ್ಠನೇ ! .. .. .. ||೫೯||

ಜಗದೊಳ್, ಅಮಳಚರಿತ್ರ— ನಿರ್ಮಲವಾದ ನಡತೆಯುಳ್ಳವನೇ ಮುಗಿಲ್— ಮೋಡವು, ಜೀವನಮಂ— ಪ್ರಾಣವನ್ನು (ನೀರನ್ನು.) ಪುರುಡಿಸಿ— ಸ್ಪರ್ಧಿಸಿ, ಇತ್ತೊಡೆ— ಕೊಡಲು, ನಿನ್ನ ಅಪಾಂಗರುಚಿ—ಕಡೆಗಣ್ಣಿನ ಕಾಂತಿಯೆಂಬ ಮಿಂಚುವ, ಮಿಂಚು,ಒಗೆದು— ಹುಟ್ಟಿ, ಭಕ್ತಾಂಗಸಸ್ಯಕೆ— ಭಕ್ತನಾದ ಚಿಕ್ಕಮಾದಣ್ಣನ ದೇಹವೆಂಬ ಪೈರಿಗೆ, ಜೀವನವಂ— ನೀರನ್ನು(ಪ್ರಾಣವನ್ನು,) ಇತ್ತುದು, .. .. ||೬೦||

ಶಿಷ್ಟಜನಮಂದಾರಾ— ಸತ್ಪುರುಷರಿಗೆ ಕಲ್ಪವೃಕ್ಷನಾದವನೇ ! ಅಪವರ್ಗಕ್ಕಂ— ಮೋಕ್ಷಕ್ಕಿಂತಲೂ, ಅರ್ಗಳಂ—ಅತಿಶಯವು, .. .. .. ||೬೧||

ಸೌಮ್ಯಗುಣಗಣಾಲಂಕರಣಾ—ಶಾಂತಿಗುಣಸಮೂಹವೇ ಆಭರಣವಾಗುಳ್ಳವನೇ, ದಯೆಯು, ಶಕ್ತಿಯು, ಪರಿರೀತಿಯು, ಅದೆಂತೊ, ಎನ್ನದೊ ? .. .. .. ||೬೨||

ಅಣುಗನ— ಮಗನ, ಹರಣವಂ— ಪ್ರಾಣವನ್ನು, ಒಳರ್—ಉಂಟು, ಆತ್ಮಜನಕನ—ತಮ್ಮಪ್ಪನ, ||೬೩||

ಕಂದರ್ಪಾರಾತಿಭಕ್ತಪ್ರಕರಸುಖಕರಂ— ಶಿವಭಕ್ತರ ಗುಂಪಿಗೆ ಸೌಖ್ಯವಂಮಾಡುವ, ಭಕ್ತಿಭಾವಾಭಿರಾಮಂ— ಶಿವಭಕ್ತಿಯೆಂಬ ಕಾಂತೆಯಿಂದ ಮನೋಹರನಾದ ಬಸವೇಶ್ವರನು, .. .. ||೬೪||

ಕಂ || ಸಕಳೇಶಮಾದಿರಾಜ । ಪ್ರಕಟಮಹತ್ತ್ವಾಂಕಕಥೆಯ ನಿದ ನೋದುವ ಕೇ ||
ಳ್ವಕಳಂಕಚಿತ್ತ ರಹಿರಾ। ಜಕಟಕ ನೊಲವಿಂದೆ ಪಡೆವ ರಭಿಮತಸುಖಮಂ || ೬೫

ಲಲಿತಪದವೃತ್ತ || ಮಾನವಪತಿವ್ರಜಸಮಾನತಪದಾಬ್ಜ ಮುನಿಮಾನಸಮನೋಜ್ಞ ತರ
ಮಾನಸಮರಾಳಾ । ಮಾನಜನತಾಪ್ರಿಯ ವಿಮಾನಗಸುರಸ್ತುತ ಸಮಾನರಹಿತಾತ್ಮಮಹಿ
ಮಾನಘಚರಿತ್ರ || ಮಾನವವಚೋನಿಗಮಮಾನಗದಿತಾರ್ಥವಹಮಾನ ತತಭಾಸ್ವದನು
ಮಾನನಯ ಸತ್ಸ। ನ್ಮಾನಕರ ರಕ್ಷಿಸತಿಮಾನಫಣಿರಾಡ್ಭೃದುಪಮಾನ ಭವಮೇಘಪವಮಾ
ನ ಬಸವೇಶಾ || ೬೬

ಮಲ್ಲಿಕಾಮಾಲಾ || ವೀರಶೈವಮಹಾಮತಾಶ್ರಿತ ಭಕ್ತ ನಿರ್ಜರವಲ್ಲರೀ । ದಾರುಣಾಸು
ರರಾಜಿಭಂಜನ ಶಾತಬಾಣಧನುರ್ಧರೀ||ಮಾರಮರ್ದನಮಾನಸಾಂಬುಜರಾಜಹಂಸಿ ಶಿವಂಕ
ರೀ । ವಾರಣಾನನಮಾತೆ ರಕ್ಷಿಪು ದೆನ್ನ ನದ್ರಿಜೆ ಶಂಕರೀ || ೬೭

---

ಸಕಳೇಶಮಾದಿರಾಜಪ್ರಕಟಮಹತ್ತ್ವಾಂಕಕಥೆಯಂ—ಸಕಳೇಶಮಾದಿರಾಜ— ಮಾದಿರಾಜನ, ಪ್ರಕಟ— ಪ್ರಸಿದ್ಧವಾದ, ಮಹತ್ತ್ವ—ಮಹಿಮೆಯೇ, ಅಂಕ—ಗುರುತಾಗುಳ್ಳ, ಕಥೆಯಂ, ಅಕಳಂಕಚಿತ್ತರ್—ನಿರ್ದುಷ್ಟವಾದ ಮನಸ್ಸುಳ್ಳವರು, ಅಹಿರಾಜಕಟಕನ— ಆದಿಶೇಷನೇ ಕಂಕಣವಾಗುಳ್ಳ ಪರಶಿವನ, ಒಲವಿಂದೆ— ಪ್ರೀತಿಯಿಂದ, ಅಭಿಮತಸುಖಮಂ— ಇಷ್ಟವಾದ ಸೌಖ್ಯವನ್ನು, ಪಡೆವರ್, .. .. .. ||೬೫||

ಮಾನವಪತಿವ್ರಜಸಮಾನತಪದಾಬ್ಜ— ಮಾನವಪತಿ— ರಾಜರ, ವ್ರಜ— ಗುಂಪಿನಿಂದ, ಸಮಾನತ— ನಮಸ್ಕರಿಸಲ್ಪಟ್ಟ, ಪದಾಬ್ಜ— ಪಾದಕಮಲವುಳ್ಳ, ಮುನಿಮಾನಸಮನೋಜ್ಞತರಮಾನಸಮರಾಳ— ಮುನಿ— ಋಷಿಗಳ, ಮಾನಸ— ಮನಸ್ಸೆಂಬ, ಮನೋಜ್ಞತರ— ಅತಿಮನೋಹರವಾದ, ಮಾನಸ— ಮಾನಸಸರೋವರಕ್ಕೆ, ಮರಾಳ— ಹಂಸಪಕ್ಷಿಯಾದ, ಅಮಾನಜನತಾಪ್ರಿಯ— ಅಮಾನ— ಗರ್ವಹೀನರಾದ, ಜನತಾ— ಜನಗಳ ಗುಂಪಿನಲ್ಲಿ, ಪ್ರಿಯ— ಪ್ರೀತಿಯುಳ್ಳ, ವಿಮಾನಗಸುರಸ್ತುತ—ವಿಮಾನಗ—ಪುಷ್ಪಕದಿಂ ಸಂಚರಿಸುವ, ಸುರ—ದೇವತೆಗಳಿಂದ, ಸ್ತುತ—ಕೊಂಡಾಡಲ್ಪಟ್ಟ, ಸಮಾನರಹಿತಾತ್ಮಮಹಿಮ— ಸಮಾನರಹಿತ—ಎಣೆಯಿಲ್ಲದ, ಆತ್ಮ—ತನ್ನ, ಮಹಿಮ— ಮಹತ್ವವುಳ್ಳ, ಅನಘಚರಿತ್ರ—ಪಾಪರಹಿತವಾದ ನಡತೆಯುಳ್ಳ, ಮಾನವ . . . ವಹ—ಮಾನವ—ಮನುಚಕ್ರವರ್ತಿಯ ಸಂಬಂಧವಾದ, ವಚಃ—ಮಾತು (ಅಂದರೆ ಸ್ಮೃತಿ) ನಿಗಮ—ವೇದ ಇವುಗಳಿಂದ, ಮಾನ—ಪ್ರಮಾಣವಾಗಿ, ಗದಿತ —ಹೇಳಲ್ಪಟ್ಟ, ಅರ್ಥ—ತತ್ವಾರ್ಥವನ್ನು, ವಹ—ವಹಿಸಿಕೊಂಡಿರುವ, ಮಾನ—ಚಿತ್ತೌನ್ನತ್ಯವುಳ್ಳ, ತತಭಾಸ್ವದನುಮಾನನಯಸತ್ಸನ್ಮಾನಕರ—ತತ—ವಿಸ್ತಾರವಾಗಿ, ಭಾಸ್ವತ್—ಪ್ರಕಾಶಿಸುವ, ಅನುಮಾನ—ಅಲಂಕಾರವಾದ, ನಯ—ನೀತಿಯುಳ್ಳ(ಅಥವಾ ಅನುಮಾನ—ಪರಮಾತ್ಮವಿಷಯಕವಾದ ಊಹೆಯೇನು, ನಯ—ನೀತಿಯೇನು ಇವುಗಳುಳ್ಳ) ಸತ್—ಸತ್ಪುರುಷರಿಗೆ, ಸನ್ಮಾನಕರ—ಮರ್ಯಾದೆಮಾಡುವ, ಅತಿಮಾನಫಣಿರಾಡ್ಭೃದುಪಮಾನ—ಅತಿಮಾನ—ಉಪಮಾತೀತವಾದ, ಫಣಿರಾಟ್—ಆದಿಶೇಷನನ್ನು, ಭೃತ್—ಧರಿಸಿರುವ ಈಶ್ವರನ, ಉಪಮಾನ—ಸಾಮ್ಯವುಳ್ಳ, ಭವಮೇಘಪವಮಾನ—ಪಾಪವೆಂಬ ಮೋಡಕ್ಕೆ ಗಾಳಿಯಾದ, ಬಸವೇಶಾ!ರಕ್ಷಿಸು ||೬೬||

ವೀರಶೈವ . . . . . .ವಲ್ಲರೀ— ವೀರಶೈವಮಹಾಮತ— ವೀರಶೈವವೆಂಬ ದೊಡ್ಡ ಮತವನ್ನು, ಆಶ್ರಿತ—ಆಶ್ರೈಸಿದ, ಭಕ್ತ—ಭಕ್ತರಿಗೆ, ನಿರ್ಜರವಲ್ಲರೀ—ಕಲ್ಪಲತೆಯಾದ, ದಾರು . . . .ರ್ಧರೀ—ದಾರುಣ—ಭಯಂಕರವಾದ, ಅಸುರ—ರಾಕ್ಷಸರ, ರಾಜಿ— ಪಙ್ಕ್ತಿಯನ್ನು, ಭಂಜನ— ನಾಶಮಾಡುವ, ಶಾತ—ತೀಕ್ಷ್ಣವಾದ, ಬಾಣ—ಬಾಣವುಳ್ಳ, ಧನುः—ಬಿಲ್ಲನ್ನು, ಧರೀ—ಧರಿಸಿರುವ, ಮಾರ . . . .ಹಂಸಿ—ಮಾರಮರ್ದನ— ಈಶ್ವರನ, ಮಾನಸ— ಮನಸ್ಸೆಂಬ, ಅಂಬುಜ— ಕಮಲಕ್ಕೆ, ರಾಜಹಂಸಿ— ರಾಜಹಂಸಪಕ್ಷಿಯಾದ, ಶಿವಂಕರೀ—ಶುಭವನ್ನುಂಟುಮಾಡುವ, ವಾರಣಾನನಮಾತೆ—ವಿಘ್ನೇಶ್ವರನ ತಾಯಾದ, ಶಂಕರಿ—ಸುಖವನ್ನುಂಟುಮಾಡುವ, ಅದ್ರಿಜೆ ಎನ್ನ, ರಕ್ಷಿಪುದು ||೬೭||

ಗದ್ಯಂ || ಇದುವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತ ಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ಮಾದಿರಾಜಕೃತಚಿಕ್ಕಮಾದಣ್ಣಪ್ರಾಣದಾನ ಕಥನಂದ್ವಾತ್ರಿಂಶದಾಶ್ವಾಸಂಪರಿಸಮಾಪ್ತಂ || ... ... *

ದ್ವಾತ್ರಿಂಶದಾಶ್ವಾಸಂ ಸಂಪೂರ್ಣಂ.

———:o:———

ಶ್ರೀ:.

ಕೈಲಾಸವಾಸಿನೇ ಪರಬ್ರಹ್ಮಣೇನಮಃ

## ತ್ರಯಸ್ತ್ರಿಂಶದಾಶ್ವಾಸಂ

## ಕದಿರರೇಮಾರ್ಯಕಥನಂ

———:o:———

ಕಂ || ಶ್ರೀತುಹಿನಗಿರಿಸುತಾಮುಖ | ಶೀತಾಂಶುವಿಲೋಕನೋತ್ಸುಕಂ ಗುಣನಿಧಿ ವಿ||
ಖ್ಯಾತಹರಿಮುಖ್ಯಸುರಸಂ | ಜಾತಾರ್ಚಿತ ನೀಗೆ ಸೌಖ್ಯಮಂ ಶಿವಲಿಂಗಂ || ೧

ಕಂ || ಸುರುಚಿರಸುರಪುರದಿರವಂ | ಪರಿಭವಿಪ ನೆಗಳ್ತೆವೆತ್ತ ಕಲ್ಯಾಣದೊಳೊ|| ಪ್ಪಿರುತಿರ್ಪ್ಪ ನೋರ್ವ್ವ ನಭಿನವ | ಚರಿತಂ ಚರಲಿಂಗಚರಣ ಸಂಸಿಜಭೃಂಗಂ || ೨

ಮೂವತ್ತೆರಡನೆಯ ಆಶ್ವಾಸವು ಸಂಪೂರ್ಣವು,

ಶಿ೩ನೆಯ ಆಶ್ವಾಸಪ್ರಾರಂಭಂ.

ಶ್ರೀ. . . . ಉತ್ಸುಕಂ—ಶ್ರೀ * ತುಹಿನಗಿರಿಸುತಾ— ಷಡ್ಗುಣೈಶ್ವರ್ಯಯುಕ್ತಳಾದಪಾರ್ವತಿಯ, ಮುಖ—ವದನವೆಂಬ, ಶೀತಾಂಶು— ಚಂದ್ರನನ್ನು, ವಿಲೋಕನ— ನೋಡುವದಲ್ಲಿ, ಉತ್ಸುಕಂ— ಕುತೂಹಲವುಳ್ಳ, ಗುಣನಿಧಿ— ಸರ್ವಜ್ಞತ್ವಾದಿಗುಣಗಳಿಗೆ ನಿಕ್ಷೇಪನಾದ, ವಿಖ್ಯಾತಹರಿಮುಖ್ಯಸುರಸಂಜಾತಾರ್ಚಿತಂ— ವಿಖ್ಯಾತ— ಪ್ರಸಿದ್ಧರಾದ, ಹರಿ— ವಿಷ್ಣುವೇ, ಮುಖ್ಯ— ಮೊದಲಾದ, ಸುರ— ದೇವತೆಗಳ, ಸಂಜಾತ— ಸಮೂಹದಿಂದ, ಅರ್ಚಿತಂ— ಪೂಜಿಸಲ್ಪಟ್ಟ, ಶಿವಲಿಂಗಂ, ಎಮಗೆ, ಸೌಖ್ಯಮಂ, ಈಗೆ ||೧||

ಸುರುಚಿರಸುರಪುರದ— ಮನೋಹರವಾದ ಅಮರಾವತಿಯ, ಇರವಂ— ರೀತಿಯನ್ನು, ಪರಿಭವಿಪ— ತಿರಸ್ಕರಿಸುವ, ನೆಗಳ್ತೆವೆತ್ತ— ಪ್ರಸಿದ್ಧಿಯನ್ನುಹೊಂದಿದ, ಅಭಿನವಚರಿತಂ— ಹೊಸದಾದ ಚರಿತ್ರವುಳ್ಳ, ಚರಲಿಂಗಚರಣಸರಸಿಜಭೃಂಗಂ— ಚರಲಿಂಗ— ಜಂಗಮರ, ಚರಣಸರಸಿಜ—ಪಾದಕಮಲಕ್ಕೆ, ಭೃಂಗಂ— ಭ್ರಮರನಾದ . ||೨||

* (ಅವ) ತುಹಿನ—ಹಿಮದ, ಗಿರಿ— ಬೆಟ್ಟದ, ಸುತಾ— ಮಗಳು ||೧||

ಕಂ || ವಿತತಸಿತಕೀರ್ತಿವಿಶ್ರುತ | ಮತಿ ದಳಿತನತಾರ್ತಿ ದಾನನಿಧಿ ವಿದಿತಗುಣಾ || ನ್ವಿತ ನುರುಗುರುಚರಪೂಜಾ | ಚತುರಂ ಸಲೆ ಕದಿರರೇಮ ನೆಂಬ ಮಹಾತ್ಮಂ || ೩

ವ || ಆಮಹಾನುಹಿಮ ನಲ್ಲೊಂದುದಿನಂ ಗುರುಚರಣದರ್ಶನಕ್ಕೆಂದು ಸಡಗರಂ ಮಿಗೆ ಪೊಳಲಂ ಪೊರಮಟ್ಟು ಬರ್ಪಾಗ ಳೆಡೆವಟ್ಟೆಯೊಳೊಂದೂರಿರೆ ದೂರಾಂತರಾಳದೊಳ್ಕಂಡು ತನಗೆ ಹರಪೂಜಾಸಮಯ ಮಾದು ದಿದ ನುಲ್ಲಂಘಿಸಿ ಪೋಗೆ ಶಿವಾರ್ಚನಾತಿಕ್ರಮಣಂ ಮಹಾದೋಷಸ್ಯ ಕಾರಣ ಮೆಂದು ಶಿವಾಗಮೋಕ್ತಿ ಯೊಳವದರಿ ನಿಲ್ಲಿಮಹಾದೋಷಂ ತಗುಳ್ಗ ಮೆಂದವಧರಿಸಿ ನಡೆತಂದಾಪುರದೊಳಿರ್ದ ಸೋಮನಾಥನೆಂಬ ಭಕ್ತನಂಗಣಮಂ ಪೊಕ್ಕು ತದಂಗನೆಯುಪ್ಪಣ್ಣಲದೇವಿ ಪಾದಪ್ರಕ್ಷಾಳನಂಗೆಯ್ಯೆ ಸಾದರಂ ತನ್ಮಂದಿರದೊಳಗಂ ಪುಗುತಂದಿಕ್ಕಿದ ಮೆಲ್ವಸೆಯೊಳ್ ಕುಳ್ಳಿರ್ದಾಗಳ್ ||

ಕಂ || ಪಿರಿದುತ್ಸವದಿಂ ಕಂಡಾ | ದರದಿಂ ನಿಜತನಯಮಲ್ಲಿನಾಥಸಮೇತಂ || ಗುರುವರನ ವಿಮಳಪದಸರ | ಸಿರುಹ ಕ್ಕಾಸೋಮನಾಥಭಕ್ತಂ ಮಣಿದಂ || ೪

ವ || ಅಂತು ಮಣಿದೇಳ್ದು ನಿಂದು ಭಯಭಕ್ತಿಯಿಂ ಕರಾಂಜಲಿವೆರಸಿ ಕೀರ್ತಿಸುತ್ತ ಮಿರ್ಪಿನ ಮಲ್ಲಿ ಸಡಗರದಿ ನಣ್ಣಲದೇವಿ ಸಾಂಗಮೆನೆ ಲಿಂಗಾರ್ಚನಂಗೆಯ್ಸಿ ನೈವೇದ್ಯಮಂ ಭಕ್ತಿಮಿಗೆ ಗಡಣಿಸಲೊಡನೆ ||

ಕಂ || ನಲಿದರ್ಪಿಸಿ ರೇಮಾರ್ಯಂ | ಸ್ವಲಿಂಗದೇವಂಗೆ ಸವಿದು ತಾನುಳುಪಿದ ನಿ || ರ್ಮಲಸುಪ್ರಸಾದಮಂ ಮನ | ದೊಲವಿಂ ಕೈಕೊಂಡ ನೆರಗಿ ಮಗುಳ್ದವ ರಡಿಯೊಳ್ ೫

ವ || ಅಂತು ಮಾ ಮಹಾಪ್ರಸಾದಮಂ ಕೈಕೊಂಡು ತನ್ನರಸಿಯುಣುಗರ್ವೆರಸಿ ಸವಿದನಂತರ ಮಾಕದಿರರೇಮಯ್ಯನಿಂ ಶಿವತತ್ವಾನುಭಾವಮಂ ಬೆಸಗೊಂಡು ಕೇಳ್ದು ಕೃತಾರ್ಥಭಾವಮಂ ತಾಳ್ದಿರ್ದ ನಾಗಳ್ ||

---

ವಿತತಸಿತಕೀರ್ತಿ– ವಿತತ– ವಿಸ್ತಾರವಾದ, ಸಿತ– ಶುಭ್ರವಾದ. ಕೀರ್ತಿ– ಯಶಸ್ಸುಳ್ಳ, ವಿಶ್ರುತಮತಿ– ಪ್ರಸಿದ್ಧವಾದ ಬುದ್ಧಿಯುಳ್ಳ, ದಳಿತನತಾರ್ತಿ—ದಳಿತ– ಸೀಳಲ್ಪಟ್ಟ, ನತ—ನಮಸ್ಕರಿಸಿದವರ, ಆರ್ತಿ– ಮನೋವ್ಯಥೆಯುಳ್ಳ, ದಾನನಿಧಿ– ದಾನಗುಣಕ್ಕೆ ನಿಕ್ಷೇಪನಾದ, ವಿದಿತಗುಣಾನ್ವಿತಂ– ಪ್ರಸಿದ್ಧವಾದ ಗುಣಗಳಿಂದಕೂಡಿದ, ಉರುಗುರುಪೂಜಾಚತುರಂ– ಉತ್ಕೃಷ್ಟನಾದ ಗುರುವಿನ ಪೂಜೆಯಲ್ಲಿ ಕುಶಲನಾದ, ||೩||

ಪೊಳಲಂಪೊರಮಟ್ಟು– ಪಟ್ಟಣದಿಂದಹೊರಟು, ಎಡೆವಟ್ಟೆಯೊಳ್– ಮಧ್ಯಮಾರ್ಗದಲ್ಲಿ, ಉಲ್ಲಂಘಿಸಿ– ಅತಿಕ್ರಮಿಸಿ, "ಶಿವಾರ್ಚನಾತಿಕ್ರಮಣಂ–ಶಿವಪೂಜೆಯಂಮಿಾರುವದು, ಮಹಾದೋಷಸ್ಯ–ದೊಡ್ಡಪಾಪಕ್ಕೆ, ಕಾರಣಂ–ಹೇತುವು" ಬಳವು– ಉಂಟು, ಅವಧರಿಸಿ– ನಿಶ್ಚೈಸಿ, ಅಂಗಣಮಂ– ಮನೆಯುಪ್ರದೇಶವನ್ನು, ಮೆಲ್ವಸೆಯೊಳ್– ಮೃದುವಾದ ಗದ್ದುಗೆಯಲ್ಲಿ * * * * *

ನಿಜತನಯಮಲ್ಲಿನಾಥಸಮೇತಂ– ತನ್ನ ಮಗನಾದ ಮಲ್ಲಿನಾಥನೊಡನೆಕೂಡಿ ||೪||

ಕರಾಂಜಲಿವೆರಸಿ– ಕಯ್ಯಂಮುಗಿದು, * * * *

ಅರಸಿಯುಣುಗರ್ವೆರಸಿ–ಹೆಂಡತಿ ಮಗನೊಡನೆಕೂಡಿ, ಶಿವತತ್ವಾನುಭಾವಮಂ–ಪರತತ್ವ ವಿಷಯಕವಾದ ಅನುಭವವನ್ನು, * * * * *

ಕಂ || ಎಳೆಯಂ ರೇಮಯ್ಯನ ಪದ | ತಳಕೆರಗುವ ನೊಲ್ದು ನೋಡುವಂ ನಗುವಂ
ಕಂ || ಗಳ ಮುಗಿವ ನಲಚ್ಚರ್ಗವನ | ಪ್ವಳಿಪಂ ಸುಳಿಸುಳಿದು ಸುತ್ತುವಂ ಸಡಗರಿಪಂ || ೬

ಕಂ || ಅಂಗುಟವಮಂ ಪಿಡಿದಲುಗುವ| ನಂಗುಲಿಯಿಂ ಕರದಿ ನೊತ್ತುವಂ ಪದತಳಮಂ||
ಮುಂಗಡೆಯೊ ಳಾಡುವಂ ಮು | ದ್ದಿಂಗೆಡೆ ಯೆಂದೆನಿಸಿ ಬಿಸದಿಪಂ ಪುಟನೆಗೆವಂ || ೭

ಕಂ || ಎಲೆಬೊಪ್ಪ ನೋಳ್ಪುದಯ್ಯನ | ನಿಲವಂ ನೀನೆಂದು ತೋರುವಂ ಕರತಳದಿಂ||
ನಲವೇರ್ಚುವ ಸತ್ತಿತ್ತಂ | ತೊಲಗಂ ಪೆರತೊಂವ ನೆಳಸದಿಂತೆಸೆವಾಗಳ್ || ೮

ವ || ಕದಿರರೇಮಯ್ಯ ನಾಕುವರನ ನಚ್ಚಿನ ಬಿನದಕ್ಕೆ ಬಗೆವೆತ್ತು ನೋಡಿ ಮುದ್ದುಗೆಯ್ದು ಮುಂಡಾಡಿ ಮೆಯ್ಯಂ ತಡಪಿ ಮನ್ನಿಸಿ ||

ಕಂ || ಮುನ್ನೆಂದು ಮರಿಯದೀಮಗು| ವೆನ್ನೊಳ್ಬಿನದಿಪುದು ಚಿತ್ರ ಮೆನುತಂ ಗುಣಸಂ||
ಪನ್ನಂ ಮೆಚ್ಚುತೆ ಮನದೊಲ | ವಿಂ ನಗುತಂ ನಲಿಯುತಿರ್ಪಸಮನಂತರದೊಳ್ || ೯

ಉತ್ಪಲ || ಅಣ್ಣಲದೇವಿ ಲಿಂಗಯಜನೋಚಿತವಸ್ತುವ ನೀಯೆ ನಲ್ಮೆಯಿಂ | ಬಣ್ಣಿಸಿ ಪಾಡುತಂ ಶಿವಸಮರ್ಚನೆಗೆಯ್ದು ಶಿವಪ್ರಸಾದಮಂ || ಪಣ್ಣನೆಭಕ್ತಿಯಿಂ ಸವಿದು ಶೇಷಮ ನಿತ್ತ ನವರ್ಗೆರೇಮಯಂ | ಚಿಣ್ಣನು ಮಾತ್ಮಮಾತೆಯೊಡ ನಾಗುರುಶೇಷಮ ನುಂಡ ನಳ್ಕರಿಂ|

ವ || ಅಂತು ನಾಮೂವರುಂ ಗುರುಪ್ರಸಾದಮಂ ಸೇವಿಸಿ ದೈನ್ಯಭಾವಂಬಡೆದು ಮಗುಳ್ದು ಪೊಡಮಡ ಲೊ ಡನೆನಿಜಕಾರುಣ್ಯಮಂ ಬೀರಿ ||

ಕಂ || ಎಲೆಸೋಮನಾಥ ಗುರುಪುರಿ | ಗೊಲವಿಂದಾಂ ಪೋಗಿ ಬರ್ಪೆ ನಂತಿರು ನೀನೆಂ|| ದಲಘುಮತಿ ಸಂತಮಿರಿಸುತೆ | ವಿಲಾಸದಿಂ ದೇಶಿಕೇಂದ್ರಪುರಿಗೇಳ್ತಂದಂ || ೧೧

ಕಂ || ಪರಮಾನಂದದಿ ನಾಗುರು | ವರನಂ ಕಂಡಳ್ಕರಿಂದೆ ಮೆಯ್ಯಿಕ್ಕಿ ಕೃಪಾ || ಕರ ಜಯಜಯ ಶರಣಾಗೆನು | ತುರುತರನಿಜಭಕ್ತಿಭಾವದಿಂ ಕೀರ್ತಿಸಿದಂ || ೧೨

ಮತ್ತೇಭ || ಜಲಗಂಧಾಕ್ಷತೆ ಪುಷ್ಪಧೂಪ ವಿಳಸದ್ದೀಪಾರ್ಪಣಂಗೆಯ್ದು ಮಂ | ಜುಲ ನೈವೇದ್ಯಸುಗಂಧವೀಟಕೆಯ ನಿತ್ತೋರಂತೆ ಕೈಗೈಸು ತು || ಜ್ವಲರತ್ನಾಭರಣಂಗಳಂ ಗು

---

ಎಳೆಯಂ— ಹುಡುಗನು, ಅಪ್ಪಳಿಪಂ— ಆತುರಪಡುವನು .. .. ||೬||

ಅಂಗುಟವಮಂ—ಹೆಬ್ಬೆರಲನ್ನು, ಅಲುಗುವಂ—ಅಳ್ಳಾಡಿಸುವನು, ಅಂಗುಲಿಯಿಂ— ಬೆರಲಿನಿಂದ. ಮುದ್ದಿಂಗೆ— ಪ್ರೀತಿಗೆ, ಬಿನದಿಪಂ— ವಿನೋದಪಡುವನು, ಪುಟನೆಗೆವಂ— ಪುಟಹಾರುವನು, .. ||೭||

ಎಲೆಬೊಪ್ಪ— ಎಲೈ ಬೊಪ್ಪನೆಂಬುವನೇ, ನಲವೇರ್ಚುವಂ— ಸಂತೋಷವೇರುವನು, ತೊಲಗಂ— ಹೋಗನು, .. .. .. .. .. ||೮||

ನಚ್ಚಿನ— ಶ್ಲಾಘ್ಯವಾದ, ತಡಪಿ— ಸವರಿ, * * *

||೯|| ಲಿಂಗಯಜನೋಚಿತವಸ್ತುವಂ— ಶಿವಪೂಜೆಗೆ ಯೋಗ್ಯವಾದ ಪದಾರ್ಥವನ್ನು, ಪಣ್ಣನೆ— ಶೀಘ್ರವಾಗಿ, ಚಿಣ್ಣನುಂ— ಮಗನೂ, ಆಗುರುಶೇಷಮಂ— ಆ ಗುರುಪ್ರಸಾದವನ್ನು, ಅಳ್ಕರಿಂ— ಪ್ರೀತಿಯಿಂದ, ||೧೦||

ಸಂತಂಬಿರಿಸುತೆ—ಸಮಾಧಾನಪಡಿಸುತ್ತಾ, ದೇಶಿಕೇಂದ್ರಪುರಿಗೆ—ಗುರೂತ್ತಮನಪಟ್ಟಣಕ್ಕೆ ||೧೧|| ||೧೨||

ಶುಪದಾಂಭೋಜಾತಮಂ ಪೂಜಿಸು । ತ್ತೊಲವಿಂ ಸತ್ಕೃಪೆವೆತ್ತು ತನ್ಮಠದೊ ಳಿರ್ದ್ದಂ ಭಕ್ತಿ ಭಾಗ್ಯಾನ್ವಿತಂ || ೧೩

ವ || ಅನ್ನೆವರ ಮಿತ್ತಲ್ || ಮಲ್ಲಿಕಾಮಾಲಾ || ಮಲ್ಲಿನಾಥನ ಮಾತೆ ಜಂಗಮವೃಂದ ಮೇಳ್ತರೆ ಮಂದಿರ । ಕ್ಕಲ್ಲಿ ವಂದಿಸು ತಂಪ್ರಿಯಂ ತೊಳೆ ದೊಲ್ದು ಕುಳ್ಳಿರಿಸುತ್ತೆ ತ || ತ್ಪಲ್ಲವಾಧರೆ ಪಾಕಮಂ ಸಮೆಯಲ್ಕೆ ಕಾಷ್ಠಮ ನಾಯ್ದು ತಂ । ದಲ್ಲದಾಗದೆನುತ್ತೆ ನಂದನ ನೆಯ್ದಿ ಪಿಂದೆ ವಿಳಾಸದಿಂ || ೧೪

ಮಲ್ಲಿಕಾಮಾಲಾ || ಬಂದು ಪಿತ್ತಿಲ ನೆಯ್ದಿ ಪೊಕ್ಕಡುಗರ್ಬ್ಬ ನೀಕ್ಷಿಸು ತಾಯ್ವಪೊ । ಳ್ತೊಂದು ಚಂದನಕಾಷ್ಠಮಂ ಸುತನೆತ್ತೆ ತಾಂ ಕೆಳಗಿರ್ದ್ದ ಭು || ಸ್ಸೆಂದು ಪೆಲ್ಮೊರೆ ದೇಳ್ದು ಘೋರವಿಷಾತಿಭೀಷಣಸರ್ಪ ನಾ । ಕಂದನಂ ಪಿಡಿದೊತ್ತಿ ಕಚ್ಚಿರ್ದು ದುರ್ಚ್ಚಿ ಪಲ್ಮೊನೆ ಪಾಯ್ವಿನಂ ೧೫

ವ || ಅಂತು ತನ್ನನಗಿದ ಭೀಕರಾಹಿಯ ನಾಕುಮಾರಂ ಕಂ ಡಗಿದು ಜನನಿಯಂ ಬೆದರ್ದ ಕಂಗಳಿಂ ನೋಡಿ ||

ಕಂ || ತಾಯೆ ಕಡೆದೊಲಗು ಬಾರದಿ । ರೀಯೆಡೆ ಗಹ ಯಿರ್ದ್ದ ದಕಟಕ ಟೆನ್ನಂ || ನೋಯಿಸಿ ಕಡಿದು ದೆನುತ್ತಂ । ಬಾಯುಳಿ ದಾಬಾಲನುಸಿರ್ದ ಪಳಯಿಸು ತಿಳೆಯೊಳ್ ೧೬

ಕಂ || ಪಡಲಿಟ್ಟು ಫಣಿಯ ವಿಷದುರಿ । ಯಡರೆ ಕರಂ ಮುಗುಳೆ ಕಣ್ಗ ಳಳವಳಿದಸುವಂ|| ಬಿಡೆ ಮಲ್ಲಿನಾಥ ನವನಂ । ವ್ಯಥಭಕ್ತೆ ನಿರೀಕ್ಷಿಸುತ್ತೆ ಸಾರ್ಕೆಯೊ ಳಾಗಳ್ || ೧೭

ಚಂಪಕ || ಸುಗಿದಳೆ ಸುಯ್ದಳೇ ತನಯ ಹಾ ಸುತ ಹಾ ಸುಕುಮಾರ ಹಾ ಯೆನು । ತ್ತಗಿ ದಳಲಿಂದೆ ರೋದಿಸಿದಳೇ ಬಗೆಗುಂದಿದಳೇ ಬಳಲ್ದಳೇ || ಮಿಗೆ ಕಲಿಗಂದಿ ಕುಂದಿದಳೆ ಪೆರ್ಚಿದ ಬೇವಸದಿಂ ಬೆಳತ್ತುರ್ ಬೆಂ । ಡೊಗೆದಳೆ ಕಂದ ಕೆಟ್ಟೆ ನಕಟೆಂತೆನಗೆಂದು ವಿಷಾದಮಾಂತಳೇ || ೧೮

---

ಕೈಗೈಸುತೆ—ಅಲಂಕರಿಸುತ್ತ, ಭಕ್ತಿಭಾಗ್ಯಾನ್ವಿತಂ—ಗುರುಭಕ್ತಿಯೆಂಬಐಶ್ವರ್ಯದಿಂಕೂಡಿದ ||೧೩||

ಪಲ್ಲವಾಧರೆ—ಚಿಗುರಿನಂತಿರುವ ತುಟಿಯುಳ್ಳವಳು, ಪಾಕಮಂ—ಅಡಿಗೆಯನ್ನು, ಸಮೆಯಲ್ಕೆ—ಮಾಡುವದಕ್ಕೆ, ಕಾಷ್ಠಮಂ—ಕಟ್ಟಿಗೆಯನ್ನು . . . . ||೧೪||

ಅಡುಗರ್ಬಂ—ಸೌದೆಯನ್ನು, ಆಯ್ವಪೊಳ್ತು—ಆಯುವಕಾಲದಲ್ಲಿ, ಒಂದುಚಂದನಕಾಷ್ಠಮಂ—ಒಂದು ಶ್ರಿಗಂಧದ ಕಟ್ಟಿಗೆಯನ್ನು, ಪೆಲ್ಮೊರೆದು—ಹಲ್ಕಡಿದು ಶಬ್ದವಂಮಾಡಿ, ಘೋರವಿಷಾತಿಭೀಷಣಸರ್ಪಂ—ಭಯಂಕರವಾದ ವಿಷದಿಂದ ಬಹುಕ್ರೂರವಾದ ಸರ್ಪವು, ಉರ್ಚಿ—ಭೇದಿಸಿ, ಪಾಯ್ವಿನಂ—ಹೊರಕ್ಕೆ ಹೊರಡುವಹಾಗೆ ||೧೫||

ಅಗಿದು—ಭಯಪಟ್ಟು, ಬೆದರ್ದ—ಬೆಚ್ಚಿದ,

ಕಡೆದೊಲಗು—ಬಂದುಕಡೆಗೆ ಹೋಗು, ಪಳಪಿಸುತೆ—ಪ್ರಲಾಪ ಮಾಡುತ್ತಾ . . ||೧೬||

ಪಡಲಿಟ್ಟು—ಬಿದ್ದು, ಅಡರೆ—ಏರಲು, ಸಾರ್ಕೆಯೊಳ್—ಸಮೀಪದಲ್ಲಿ . . ||೧೭||

ಸುಗಿದಳೆ—ಭಯಪಟ್ಟಳೇ ? ಸುಯ್ದಳೇ— ನಿಟ್ಟುಸುರಂ ಬಿಟ್ಟಳೇ ? ಅಳಲಿಂದೆ—ದುಃಖದಿಂದ, ಕಲಿಗಂದಿ—ಸಾಮರ್ಥ್ಯವು ಕಡಮೆಯಾಗಿ, ಬೇವಸದಿಂ— ಸಂಕಟದಿಂದ, ಬೆಳತ್ತುರ್—ಬೆಳ್ಳಗಾಗಿ, ಬೆಂಡೊಗೆದಳೆ—ನಿಸ್ಸಾರವಾದಳೇ ? ವಿಷಾದಮಾಂತಳೇ— ಪುನಃಕ್ಲೇಶವನ್ನೈದಿದಳೇ ? . . . . ||೧೮||

ಕಂ || ಅಣುಗಂ ಫಣಿಯಿಂ ಮಡಿದಂ | ಗುಣನಿಧಿ ಯೇಗೆಯ್ವೆನೆಂದು ಪಳಯಿಸಿದಳೆ ತ್ತ||
ಲ್ಲಣಿಸಿ ಮರುಗಿದಳೆ ಧೈರ್ಯದ | ಕಣಿ ಕಣ್ಬನಿಗರೆದು ತಾಪಮಂ ತಾಳಿದಳೆ || ೧೯

ಕಂ || ಅಕಟಂತು ಮಡುಪಿದಂಗಡ |ಸುಕುಮಾರನ ನಭವ ನೆಂದು ನೊಂದಳೆ ಮಡಿದ||
ರ್ಭಕನಸುವ ನೀವುದೆಲೆ ಭ | ಕ್ತಕದಂಬಮೆ ತಳ್ವದೆಂದು ಪಂಬಲಿಸಿದಳೇ || ೨೦

ಮತ್ತೇಭ || ಹರ ನಿಮ್ಮಂಘ್ರಿಯ ಪೂಜೆಗೆಯ್ದು ಮಳಿವಂತಾಯ್ತಾತ್ಮಜಂಗೆಂ ದಳ | ಲ್ವಿರಿ
ದಾಗುತ್ತಿರೆ ಸುಯ್ದುಳೇ ಗುರುಗಳಿಂ ಮುಂ ಮಂತ್ರಿಸ ಲ್ಬಾಳ್ವ ನೀ || ತರುಣಂ ತಾನೆನುತಂ
ಪಲುಂಬಿದಳೆ ಪುತ್ರಂ ಬಾಳ್ವವೋಲ್ಮಾಡಿರೇ|ಶರಣ ತೇರ್ರಸಷೋಡಶ ರ್ಭಜಿಪೆ ನೆಂದಭ್ಯರ್ಥ
ನಂ ಗೆಯ್ದುಳೇ || ೨೧

ಕಂ || ಅನುನಯದಿ ನೀಕ್ಷಿಸುತೆ ನಿಜ | ತನಯ ನಿವಂ ಸಂದ ನಭವಗಣತತಿ ಗಿದು
ಲೇ || ಸೆನು ತೊಲವಿಂ ದೆಳೆನಗೆ ಯಾ| ನನನಳಿನದೊ ಳುಣ್ಮೆ ತನ್ನ ಪತಿಯೊಡ ನಾಗಳ್ ೨೨

ಮಹಾಸ್ರಗ್ಧರ || ಪೆರ ರಾರುಂ ಕಾಣದಂತಾಲಯಕೆ ಸುತನ ತತ್ಕಾಯಮಂ ತಂದು ಕಟ್ಟ|
ಳ್ಕರೊ ಳಾಲಿಂಗಾರ್ಚನಾವೇದಿಕೆಯ ನಗುಳ್ದು ರುದ್ರಾಕ್ಷೆಯಂ ಭಸ್ಮದಿಂ ದೊ || ಳ್ನರುಗಂಪಂ
ತಾಳ್ದ ಭಕ್ತಾರ್ಪಿತಕುಸುಮಲಸದ್ಬಿಲ್ವದಿಂ ಸಿಂಗರಂಗೆ | ಯ್ದೆರಕಂ ಕೈಗಣ್ಮೆ ನಿಕ್ಷೇಪಿಸಿದ ಳದ
ನದೇನೆಂಬೆ ನಾಶ್ಚರ್ಯದುರ್ಬ್ಬಂ || ೨೩

ವ || ಅಂತು ನಿಕ್ಷೇಪಿಸಿ ಸತಿಪತಿಗ ಳೀರ್ವರು ಮೇಕಚಿತ್ತ ರಾಗಿ ||

ಕಂ || ಮುನ್ನಿನ ಪರಿಯಿಂ ಶಿವಗಣ | ಪನ್ನಳಿನವು ನೋಜೆಯಿಂದೆ ಪೂಜಿಸುತಂ ಸ||
ತ್ವೋನ್ನತಮತಿಗ ಳ್ಸು ಖಮಿ | ರ್ಪನ್ನೆವರಂ ಕದಿರರೇವ ನಾಗುರುಪದಮಂ || ೨೪

ಕಂ || ಭಜೆಯಿಸು ತೇಳುಂದಿನ ಮಿ|ರ್ದ್ದಜಡಂ ಗುರುಚರಣಕೆರಗಿ ತತ್ಕರುಣಮ ನೊ||
ಟ್ಟಜೆಯಿಂ ಪಡೆ ದೇಳ್ತಂದಂ |ಸುಜನಸ್ತುತ ನಲ್ಲಿ ಮಗುಳ್ದು ಶಿವಗಣಸಹಿತಂ || ೨೫

---

ಕಣ್ಬನಿಗರೆದು– ಕಣ್ಣಿನಲ್ಲಿ ನೀರಿನ ಹನಿಯನ್ನು ಸುರಿಸಿ .. .. ||೧೯||

ಮಡುಪಿದಂಗಡ– ಸಾಯಿಸಿದನಲ್ಲವೇ ? ಅರ್ಭಕನ– ಮಗನ, ಅಸುವಂ– ಪ್ರಾಣವನ್ನು .. ||೨೦||

ಅಳಿವಂತೆ– ಸಾಯುವಹಾಗೆ, ಮಂತ್ರಿಸಲ್– ಮಂತ್ರವಂ ಹಾಕಿಸಿದರೆ, ತೇರಸಷೋಡಶರ್– ೧೩–೧೬ ಸಾವಿರದ, ಅಭ್ಯರ್ಥನಂಗೆಯ್ದುಳೆ—ಯಾಚಿಸಿದಳೇ? .. .. .. ||೨೧||

ಅನುನಯದಿಂ– ಪ್ರೀತಿಯಿಂದ, ಸಂದಂ– ಸೇರಿದನು, ಲೇಸು– ಒಳ್ಳೆಯದು, ಆನನನಳಿನದೊಳ್– ಕಮಲದಂತಿರುವ ಮುಖದಲ್ಲಿ .. .. .. .. ||೨೨||

ಕಟ್ಟಳ್ಕರೊಳ್—ಅತಿಪ್ರೀತಿಯಿಂದ, ಒಳ್ನರುಗಂಪಂ—ಒಳ್ಳೆಯಪರಿಮಳವನ್ನು, ಭಕ್ತಾರ್ಪಿತ ಕುಸುಮಲಸದ್ಬಿಲ್ವದಿಂ—ಭಕ್ತರಿಗೆ ಸಮರ್ಪಿಸಲ್ಪಟ್ಟ ಹೂವುಬಿಲ್ವ ಪತ್ರೆಗಳಿಂದ, ಸಿಂಗರಂಗೆಯ್ದು—ಶೃಂಗಾರವಂಮಾಡಿ, ಎರಕಂ—ಪ್ರೀತಿಯು, ಉರ್ಬಂ—ಅತಿಶಯವನ್ನು .. .. .. ||೨೩||

ಶಿವಗಣಪನ್ನಳಿನವಂ—ಶಿವಗಣಂಗಳ ಪಾದಕಮಲನ್ನು, ಸತ್ವೋನ್ನತಮತಿಗಳ್—ಶಾಂತಿಯಿಂದ ಉತ್ಕೃಷ್ಟವಾದ ಬುದ್ಧಿಯುಳ್ಳ, ಇರ್ಪನ್ನೆವರಂ—ಇರುತ್ತಿರುವಲ್ಲಿ .. .. .. ||೨೪||

ಅಜಡಂ—ಪ್ರಾಜ್ಞನಾದರೇವಾರ್ಯನು, .. .. .. ||೨೫||

ವ || ಅಂತೇಳ್ತ್ರಂದಾ ಸೋಮನಾಥ ನಿರ್ದ ಪೊಳಲಂ ಪೊಕ್ಕು ಸಂಭ್ರಮದಿಂ ತನ್ಮಂದಿರಕ್ಕೆ ನಡೆತರೆ || ಸ್ರಗ್ಧರ || ಕಂಡಷ್ಟಾಂಗಪ್ರಣಾಮಂಬೆರೆಸು ತೊಳೆದು ಪಾದಾಬ್ಜಮಂ ಪಾದತೀರ್ಥಂ | ಗೊಂಡಾಗಳ್ ದೈನ್ಯಭಾವಂದಳೆದು ಪಡೆದು ಲಿಂಗಾರ್ಚನಂಗೆಯ್ಸಿತಾನುಂ || ಪೆಂಡಿರ್ತಚ್ಛೇಷಮಂ ಸೇವಿಸುವ ಸಮಯದೊ ಳ್ನೋಡು ತೊಲ್ದೀರ್ವರಂ ಮಾ | ರ್ತಾಂಡಾಂಶುಸ್ಫುರತ್ತೇಜಂ ಚತುರಕದಿರರೇಮಾರ್ಯ ನಿಂತೆಂದ ನಾಗಳ್ || ೭೬

ಉತ್ಪಲ || ಅಣ್ಣಲದೇವಿ ನಿನ್ನ ಣುಗ ನಾವೆಡೆಗೆಯ್ದಿದ ನಿಲ್ಲಿ ಕಾಣೆ ವಾ | ಚೆಣ್ಣನನಾಡಲೆಯ್ದಿದನೊ ಮಕ್ಕಳೊ ಳಾರ್ಯಗೃಹಾಂತರಕ್ಕೆ ಮು || ಕ್ಕಣ್ಣನ ಪೂಜೆಯಂ ಪಡೆದು ನೋಳ್ಪೊಡೆ ಪೋದನೊ ಭಕ್ತರಿ ೯ಶನಂ|ಬಣ್ಣಿಸಿ ಪಾಡೆ ಕೇಳಲವರಂಗಣ ಕೇಂತಳರ್ದತ್ತನಿಂದನೋ

ಕಂ || ಚರಲಿಂಗದ ಮಠದತ್ತ | ಲ್ಪರಿದನೊ ಶಿವಲಿಂಗಯಜನ ಕೊಪ್ಪುವ ಪೊಸಕ || ಮ್ಮರಲಂತಿರಿಯ ಲ್ಪಿತ್ತಿಲ |ನಿರದೆಯ್ದಿ ವಿನೋದದಿಂದೆ ಪೂಗೊಯ್ದಪನೋ || ೭೮

ಕಂ || ಗಿರಿಶಪುರಾಣಮ ನೋದುವ |ಶರಣರ ಬಳಿಸಾರ್ದು ಚಾರದಿರ್ಪನೊ ನಿನ್ನೊ || ಳ್ತರುಣಂ ಮುನಿದೇಂಮೆಯ್ಗರೆ | ದಿರುತಿರ್ಪನೊ ಪೊರಗೆ ನಿದ್ರೆಗೆಯ್ದಿರ್ದಪನೋ || ೭೯

ಕಂ || ಅಂದಾವೈತರೆ ತಾಂ ಪಲ | ವಂದದೆ ಬಿನದಿಸುತ ಮಿರ್ದ್ದ ನೆಮ್ಮೊಡ ನೊಲವಿಂ|| ಕಂದ ನವ ನಾಡ ದಿರ್ಪ್ಪನೆ | ಮಂದಿರ ಮಿದು ಬಿನ್ನನಾಗಿ ಕಾಣಿಪುದಲ್ತೆ || ೮೦

ಕಂ || ಕರೆ ತಂಗಿ ನಿನ್ನ ತನಯನ | ನರವರಿಸದೆ ಬೇಗ ಮಿಾಗಳೆಂದಾಗುಣಸಾ || ಗರ ಕದಿರರೇಮ ನೆನೆ ತ. ತ್ತರುಣೀಮಣಿ ಮಣಿದು ಮುಗುಳ್ದು ನೆಗಳ್ದಂಜಲಿಯಂ || ೮೧

ಕಂ || ದೇವ ಕರೆಯಲ್ಕೆ ಚಂಗಳೆ | ದೇವಿಯೆ ಪೇ ಳ್ತನೂಜನಂ ಕರೆಯದ ಸ || ದ್ಭಾವಮ ನಾನ ಲ್ಕಿಂಬಿಯೆ | ಭಾವಿಸೆ ತದ್ಗೇಹದಾಸಿಯ ರ್ಗಾನೆಣೆಯೇ || ೮೨

ಮಹಾಸ್ರಗ್ಧರ || ಕರೆಯ ಲ್ಸಾಮರ್ಥ್ಯಮಿಲ್ಲಂ ಕರೆಯ ದುಸಿಕ ನಿರ್ದ್ದಂದು ನಿಮ್ಮುಕ್ತಿಯಂ ಸೈ | ತಿರದಾದಂ ಮಿಾರಿದಂತಾದಪು ದೆನಗಿದ ನೇನೆಂಬೆ ನಾಂ ದೇವ ನೀವೆ || ನ್ನಿರವಂ

---

ಮಾರ್ತಾಂಡಾಂಶುಸ್ಫುರತ್ತೇಜಂ—ಸೂರ್ಯನಕಾಂತಿಯಂತೆ ವಿಸ್ತಾರವಾದ ತೇಜಸ್ಸುಳ್ಳ, .. ||೭೬||

ಅಚೆಣ್ಣಂ—ಆಮಗನು, ಬಣ್ಣಿಸಿ—ವರ್ಣನೆಮಾಡಿ, ಪಾಡೆ— ಹಾಡಲು, ತಳರ್ದ—ಹೋಗಿ .. ||೭೭||

ಮಠದತ್ತಲ್— ಮಠದಕಡೆಗ, ಶಿವಲಿಂಗಯಜನಕ್ಕೆ— ಶಿವಪೂಜೆಗೆ, ಪೊಸಕಮ್ಮರಲಂ— ಹೊಸದಾದ ಪರಿಮಳಯುಕ್ತವಾದ ಹೂವನ್ನು, ತಿರಿಯಲ್— ಎತ್ತುವದಕ್ಕೆ .. .. ||೭೮||

ಬಳಿಸಾರ್ದು— ಸಮಿಾಪವಂ ಹೊಂದಿ, ಮಯ್ಗರೆದು— ಔತುಕೊಂಡು .. ||೭೯||

ಅಂದು— ಆವಾಗ, ಆವ್, ನಾವು, ಐತರೆ— ಬರಲು. ಪಲವಂದದೆ— ಅನೇಕಪ್ರಕಾರವಾಗಿ, ಬಿನ್ನಂ ಆಗಿ—ಬರಿಯದಾಗಿ, .. .. .. .. ||೮೦||

ಅರವರಿಸದೆ— ವ್ಯಾಕುಲಪಡದೆ .. .. ||೮೧||

ಭಾವಿಸೆ— ಆಲೋಚಿಸಿದರೆ, ತದ್ಗೇಹದಾಸಿಯರ್ಗೆ— ಅವರ ಮನೆಯ ಗಾಡಿಯರಿಗೆ, ಎಣೆಯೆ— ಸಮಾನವೇ ?

ಉಸಿಕನೆ— ಸುಮ್ಮನೆ, ಇರ್ದ್ದಂದು— ಇದ್ದಪಕ್ಷದಲ್ಲಿ, ಸೈತು— ಸುಮ್ಮನೆ, ಆದಂ— ಅತ್ಯಂತವಾಗಿ, ಈದುರ್ಘಟಮಂ— ಈ ಅಸಾಧ್ಯವಾದ ಕಾರ್ಯವನ್ನು, ಒರೆಯುದು— ಹೇಳುವದು .. .. ||೮೨||

ಮುನ್ನೋಡ ದೀದುರ್ಘಟವನು ನೊರೆಯುದೇಂತಕ್ಕುದೇ ಪೆಳ್ಕ್ರಪಾಸಾ । ಗರ ಕಾರ್ಯಾಕಾರ್ಯ
ಮಂ ನಿಮ್ಮಡಿಗಳರಿಗು ಮಂತಲ್ಲ ದಾನೆತ್ತ ಬಲ್ಲೆಂ ॥ ೩೨

ಕಂ ॥ ದೇವ ಭವದೀಯಪದರಾ । ಜೀವದೊಳೆನ್ನಣುಗ ನಿರ್ದ್ದಪಂ ಗಡ ಬೇರಿ ॥
ಸ್ನಾವೆಡೆಯೊಳರಸಿ ಕರೆವೆಂ । ನೀವಿವ ನರಿದಿರ್ದ್ದು ಮೆನಗೆ ಪೇಳ್ವುದು ಚಿತ್ರಂ ॥ ೩೩

ವ ॥ ಎಂದು ನುಡಿವ ಸದ್ಭಕ್ತೆಯ ಭಕ್ತಿಭಾವಕ್ಕೆ ಸಾಶ್ಚರ್ಯಚಿತ್ತಂ ಸಂತಸಂಬಟ್ಟು ಪೂ
ಳ್ದನಿಕ್ಷೇಪಮ ನಗುಳ್ಚುವಂತಿ ರಾವೇದಿಕಾಸವಾಧಿಯನಗುಳ್ಚಿ ಮುಸುಂಕಿ ತಳ್ತಬಿಲ್ವೀದಳ
ಭಸಿತರೇಣುಗಳ ನಗಲೆ ನೂಂಕಿ ಭೋಂಕನೆ ನಿಜಪ್ರಸನ್ನದೃಷ್ಟಿರುಚಿಸುಧಾಸೇಚನಮ ನೆಸ
ಗುವಂತಿ ರಭಿವೀಕ್ಷಿಸಿ ॥

ಕಂ ॥ ಪೆಸರ್ಗೊಂ ಡೇಳೇಳೆಂಬುದು । ಮಸವಸದಿಂ ತರೆದು ಕಂಗಳಂ ಜನನಿಗೆ ಸಂ॥
ತಸ ಮೊಗೆತರೆ ಮೊಲೆವಾಲ್ಪರಿ । ದೊಸರ್ದಿಳತರೆ ಕುವರ ನೇಳ್ದ ನತಿಸಂಭ್ರಮದಿಂ ॥ ೩೫

ವ ॥ ಅಂತೇಳ್ದು ಶರಣಾರ್ಥಿರವಂಬೆರಸು ಮುಗಿದ ಕೈಯಾಂತೇಳ್ದನಿಜಕುಮಾರಕನಂ
ಮಾತೆ ಬಿಗಿಯಪ್ಪಿ ತಗೆದೆತ್ತಿಕೊಂಡು ಕದಿರರೇಮವಿಭುವಿನಡಿದಾವರೆಗೆ ಪೊಡಮಡಿಸ ಲೊಡನೆ

ಕಂ ॥ ಕರುಣಾಸುಧೆ ತೆರೆಮಸಗು । ತ್ತಿರೆ ನೋಡಿ ನಿಜಪ್ರಸಾದದಿಂತಣಿಪುತೆ ತ ॥ ತ್ತ
ರುಣನ ನಾಪಿತರರನಾ । ದರಿಸಿ ಮಹಾಸುಖದೊಳಿರಿಸಿದಂ ಘನಮಹಿಮಂ ॥ ೩೬

ವ ॥ ಆಗ ಳಾಕದಿರರೇಮಯ್ಯ ನಿಂತೆಸಗಿದದ್ಭುತವಾರ್ತೆಯಂ ಬಸವರಾಜಂ ಕೇಳ್ದು
ಸಂಭ್ರಮಿಸಿ ಗಣಸಮಿತಿಸಮೇತಂ ಬಂದು ಕಂಡು ತದಂಘ್ರಿಯುಗಕ್ಕೆ ಭಕ್ತಿ ಮಿಗೆ ಪೂವಲಿ
ಗೆದರಿ ಸಾಷ್ಟಾಂಗ ಮೆರಗಿ ನಿಂದು ॥

ಮತ್ತೇಭ ॥ ಪರಮಾನಂದಸರೋಮರಾಳ ನಿಗಮಾಂಭೋಜಾತಬಾಲಪ್ರಭಾ । ಕರ
ಕಾರುಣ್ಯಕಳಾವಿಳಾಸನಿಧಿ ನಿರ್ಧೂತಾನತವ್ರಾತಸಂ । ಸರಣಧ್ವಾಂತ ಧರಾವನೋದ್ಯಮಸದಾ
ನಿರ್ನಿದ್ರಭೂರುದ್ರಭಾ । ಸುರವೀರವ್ರತ ಭಾಪುರೇ ಕದಿರರೇಮಾಚಾರ್ಯಚೂಡಾಮಣೀ ॥ ೩೭

---

ಭವದೀಯಪದರಾಜೀವದೊಳ್— ನಿಮ್ಮ ಪಾದಕಮಲದಲ್ಲಿ, ಅಣುಗಂ— ಮಗನು, ಅರಸಿ— ಹುಡುಕಿ, ಚಿ
ತ್ರಂ— ಆಶ್ಚರ್ಯವು .. .. .. .. ॥೩೩॥

ಪೂಳ್ದ— ಹೂಳಿದ, ನಿಕ್ಷೇಪಮಂ— ನಿಧಿಯನ್ನು, ಅಗುಳ್ಚುವಂತಿರೆ— ಅಗೆಯುವಹಾಗೆ, ಅಗಲೆ— ಬಂದು
ಕಡೆಗೆ ಹೋಗುವಹಾಗೆ, ಭೋಂಕನೆ— ಬೇಗನೆ, ನಿಜಪ್ರಸನ್ನದೃಷ್ಟಿರುಚಿ— ತನ್ನ ನಿರ್ಮಲವಾದ ನೇತ್ರಕಾಂತಿಯು,
ಸುಧಾಸೇಚನಮಂ— ಅಮೃತಪ್ರೋಕ್ಷಣೆಯನ್ನು, ಎಸಗುವಂತೆ— ಮಾಡುವಹಾಗೆ * * * *

ಅಸವಸದಿಂ— ಬೇಗನೆ, ತರೆದು— ಬಿಟ್ಟು, ಮೊಲೆವಾಲ್— ಸ್ತನ್ಯವು, ಬಸಿರ್ದು— ಸ್ರವಿಸಿ, ॥೩೫॥

ಶರಣಾರ್ಥಿರವಂಬೆರಸು— ಶರಣಾರ್ಥಿ (ಸಂರಕ್ಷಣೆಯಂ ಬೇಡುವೆನು) ಯೆಂಬ ಧ್ವನಿಯಿಂ ಕೂಡಿ * *

ತೆರೆಮಸಗುತ್ತಿರೆ— ಹೆಚ್ಚುತ್ತಿರಲು, ತಣಿಪುತೆ— ತೃಪ್ತಿಪಡಿಸುತ್ತ, ಆಪಿತರರಂ— ಆತಾಯಿತಂದೆಗಳನ್ನು ॥೩೬॥ *

ಗಣಸಮಿತಿಸಮೇತಂ— ಶಿವಗಣಸಮೂಹದೊಡನೆ, ಪೂವಲಿಗೆದರಿ— ಪುಷ್ಪಾಂಜಲಿಯಂ ಮಾಡಿ *

ಪರಮಾನಂದಸರೋಮರಾಳ— ಬ್ರಹ್ಮಾನಂದವೆಂಬ ಕೊಳಕ್ಕೆ ಹಂಸಪಕ್ಷಿಯಾದ, ನಿಗಮಾಂಭೋಜಾತಬಾಲ
ಪ್ರಭಾಕರ— ವೇದಗಳೆಂಬ ಕಮಲಗಳಿಗೆ ಎಳೆಯ ಸೂರ್ಯನಾದ, ಕಾರುಣ್ಯಕಳಾವಿಳಾಸನಿಧಿ— ದಯೆಯೆಂಬ ವಿದ್ಯೆ

ಚಂಪಕ ‖ ಶರಣಲಲಾಮ ಸತ್ಯಗುಣಧಾಮ ಸದಾಶಿವಭಕ್ತಿಸೀಮ ಶೈ । ವರುಚಿರನಾಮಜಾಪಕ ನಿಕಾಮನಿರಾಕೃತಮತ್ತಕಾಮ ದು ॥ ರ್ಧರಪರಭೀಮ ಸದ್ವನಧಿಸೋಮ ಸಮಸ್ತಕಳಾಭಿರಾಮ ಚಾ । ಗುರೆ ತತನಾಮ ಸಂನತಜನಾಮರಭೂರುಹ ರೇಮಧೀಮಣಿ ‖ ೩೮

ಸ್ರಗ್ಧರ ‖ ಎಂದಿಂತಾನಂದದಿಂ ಕೀರ್ತಿಸು ತಳಿದೆಳೆಯಂಗಿಂತು ಟೇಳುಂದಿನಂಗ । ಳ್ಸಂದಾಗ ಳ್ಪ್ರಾಣಮಂ ಪಾಲಿಸಿದಿ ರಮಮ ನೀ ವೆಂದುಕೊಂಡಾಡುತಂ ನ ‖ ಣ್ಪಿಂದಂ ತತ್ಸಾರಕಾರುಣ್ಯಮನೆ ಪಡೆದು ಕಣ್ಗೊಪ್ಪಿದಂ ಭಕ್ತಿವಲ್ಲೀ । ಕಂದಂ ಕಂದರ್ಪದರ್ಪಪ್ರಹರಗಣಘನಾಂಭೋಧಿಚಂದ್ರಂ ವೃಷೇಂದ್ರಂ ‖ ೩೯

ಸ್ವಾಗತ ‖ ಕದಿರರೇಮವಿಭುಸಚ್ಚರಿತ್ರಮಂ । ಪದೆದು ಕೇಳ್ವನಿದನಾವ ನೋದುವಂ ।
ಮದನವೈರಿ ನಿಜಭೋಗಮೋಕ್ಷಸಂ । ಪದಮ ನೀವ ನವಗೀರ್ಧರಿತ್ರಿಯೊಳ್ ‖ ೪೦

ಲಲಿತಪದವೃತ್ತ ‖ ದಾನವರಿಪುಪ್ರಿಯ ಸದಾನವಸುಭಕ್ತಿಯುತ ದಾನಗುಣಶೀಲ ವಿಮದಾನಘಚರಿತ್ರೇ । ಶಾನಪದಭಾವನವ ಶಾನತವರಪ್ರದ ದಶಾನನಸಮರ್ಚಿತ ದಿಶಾನಟಯುಶಸ್ಕ ‖ ಭಾನುಪವನಾಪ್ತಹಿಮಭಾನುನಯನತ್ರಯನಿಭಾನುಗತಸತ್ಪಥ ಶುಭಾನುಭನಯುಕ್ತ । ವೀನರಥಸುಪ್ರಭ ನವೀನಗುಣ ದುಷ್ಟಫಣಿವೀನ ಭೃತಶಾಂಭವಕವೀನ ಬಸವೇಶಾ ‖ ೪೧

---

ಯ ಲೀಲೆಗೆ ನಿಕ್ಷೇಪನಾದ, ನಿರ್ಧೂತಾನತವ್ರಾತಸಂಸರಣಧ್ವಾಂತ— ನಿರ್ಧೂತ— ನಾಶಮಾಡಲ್ಪಟ್ಟ, ಆನತ— ನಮಸ್ಕರಿಸಿದವರ, ವ್ರಾತ— ಸಮೂಹದ, ಸಂಸರಣಧ್ವಾಂತ— ಸಂಸಾರವೆಂಬ ಕತ್ತಲೆಯುಳ್ಳ, ಧರಾವನೋದ್ಯಮಸದಾನಿರ್ನಿದ್ರ— ಧರಾ— ಭೂಮಿಯನ್ನು, ಅವನ— ಪರಿಪಾಲಿಸುವ, ಉದ್ಯಮ— ಪ್ರಯತ್ನದಲ್ಲಿ, ಸದಾ— ಯಾವಾಗಲೂ, ನಿರ್ನಿದ್ರ— ಜಾಗರೂಕನಾದ, ವೀರವ್ರತ— ವೀರಶೈವನಿಯಮವುಳ್ಳ .. .. ‖೩೭‖

ಶರಣಲಲಾಮ, ಶಿವಶರಣರ ಭೂಷಣಸ್ವರೂಪನಾದ (ಅಂದರೆ ಶ್ರೇಷ್ಠನಾದ) ಸತ್ಯಗುಣಧಾಮ—ಸತ್ಯವೆಂಬ ಗುಣಕ್ಕೆ ಸ್ಥಾನನಾದ, ಸದಾಶಿವಭಕ್ತಿಸೀಮ—ಶಿವಭಕ್ತಿಗೆ ಎಲ್ಲೆಯಾದ, ಶೈವರುಚಿರನಾಮಜಾಪಕ— ಶಿವನ ಮನೋಹರವಾದ ಹೆಸರನ್ನು ಜಪಿಸುವ, ನಿಕಾಮನಿರಾಕೃತಮತ್ತಕಾಮ — ನಿಕಾಮ— ಅತ್ಯಂತವಾಗಿ, ನಿರಾಕೃತ—ತಿರಸ್ಕರಿಸಲ್ಪಟ್ಟ, ಮತ್ತ— ಮದಿಸಿದ, ಕಾಮ— ಮನ್ಮಥನುಳ್ಳ, ದುರ್ಧರಪರಭೀಮ—ಅಸಾಧ್ಯರಾದ ಶತ್ರುಗಳಿಗೆ ಭಯಂಕರನಾದ, ಸದ್ವನಧಿಸೋಮ— ಸತ್ಪುರುಷರೆಂಬ ಸಮುದ್ರಕ್ಕೆ ಚಂದ್ರನಾದ, ಸಮಸ್ತಕಳಾಭಿರಾಮ— ಸಕಲವಿದ್ಯೆಗಳಿಂದಲೂ ಮನೋಹರನಾದ, ತತನಾಮ— ಪ್ರಸಿದ್ಧವಾದ ಹೆಸರುಳ್ಳ, ಸಂನತಜನಾಮರಭೂರುಹ— ನಮಸ್ಕರಿಸಿದ ಜನಗಳಿಗೆ ಕಲ್ಪವೃಕ್ಷನಾದ, ರೇಮಧೀಮಣಿ— ಪಂಡಿತರೇಮಾರ್ಯನೇ ! ಚಾಗುರೇ— ಭಲಾ !! .. ‖೩೮‖

ಎಳೆಯಂಗೆ— ಹುಡುಗನಿಗೆ, ನಣ್ಪಿಂದಂ— ನಯದಿಂದ, ಭಕ್ತಿವಲ್ಲೀಕಂದಂ— ಭಕ್ತಿಯೆಂಬ ಬಳ್ಳಿಗೆ ಗಡ್ಡೆಯಾದ ಕಂದರ್ಪದರ್ಪಪ್ರಹರಗಣಘನಾಂಭೋಧಿಚಂದ್ರಂ— ಕಂದರ್ಪ— ಮನ್ಮಥನ, ದರ್ಪ— ಅಹಂಕಾರವನ್ನು, ಪ್ರಹರ— ನಾಶಮಾಡಿದ ಶಿವನ, ಗಣ—ಗಣಂಗಳೆಂಬ, ಘನಾಂಭೋಧಿ—ದೊಡ್ಡ ಸಮುದ್ರಕ್ಕೆ, ಚಂದ್ರಂ—ಚಂದ್ರನಾದ ‖೩೯‖೪೦‖

ದಾನವರಿಪುಪ್ರಿಯ— ದಾನವರಿಪು— ವಿಷ್ಣುವಿಗೆ, ಪ್ರಿಯ— ಆಪ್ತನಾದ, ಸದಾನವಸುಭಕ್ತಿಯುತ— ಸದಾ— ಯಾವಾಗಲೂ, ನವ— ನೂತನವಾದ, ಸುಭಕ್ತಿ— ಒಳ್ಳೆಯಭಕ್ತಿಯಿಂದ, ಯುತ— ಕೂಡಿದ, ದಾನಗುಣಶೀಲ— ವಿತರಣಗುಣವೇ ಸ್ವಭಾವವಾಗುಳ್ಳ, ವಿಮದ— ಗರ್ವಹೀನನಾದ, ಅನಘಚರಿತ್ರ— ಪಾಪರಹಿತವಾದ ಚರಿತ್ರವುಳ್ಳ, ಈಶಾನಪದಭಾವನವಶ— ಈಶಾನ— ಪರಮೇಶ್ವರನ, ಪದ— ಪಾದದ, ಭಾವನ— ಧ್ಯಾನವುಳ್ಳವರ, ವಶ— ಅಧೀನನಾದ, ಆನತವರಪ್ರದ— ನಮಸ್ಕರಿಸಿದವರಿಗೆ ಇಷ್ಟವರವನ್ನು ಕೊಡುವ, ದಶಾನನಸಮರ್ಚಿತ— ರಾವಣನಿಂದ ಪೂಜಿ

ಮಾನಿನೀ || ಮಂದರಭೂಧರಮಂದಿರಭಾಸುರೆ ಶಾಂಕರಿ ಶಂಭುಸುಖಂಕರಿ ಸಂ | ಕ್ರಂದನವಂದಿತೆ ಚಂದನಗಂಧಿ ಸುಧಾಕರಮೌಳಿ ಶುಭಾಕರಪೂ || ರ್ಣೇಂದುಮುಖಾನ್ವಿತೆ ಕುಂದದರಸ್ಮಿತರಾಜಿತೆ ನಿರ್ಜರಪೂಜಿತೆ ಸೈ | ಪೊಂದಿರೆ ರಕ್ಷಿಪು ದಿಂದಿರೆಗಾರ್ಯೆ ಜಗನ್ನುತೆ ಪರ್ವತರಾಜಸುತೆ || ೪೨

ಗದ್ಯಂ || ಇದುವಿನಮದಖಿಳಸುರಾಸುರೇಂದ್ರಮುಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತಭಾಸುರಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತ ಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಕದಿರರೇಮಾರ್ಯರಿಂ ಸೋಮನಾಥಸುತಮಲ್ಲಿನಾಥಸ್ಯಪ್ರಾಣದಾನಕಥನಂತ್ರಯಸ್ತ್ರಿಂಶಾಶ್ವಾಸಂ ಪರಿಸಮಾಪ್ತಂ . . . . . *

ತ್ರಯಸ್ತ್ರಿಂಶಾಶ್ವಾಸಂ ಸಂಪೂರ್ಣಂ.

——:o:——

ಸಲ್ಪಟ್ಟ, ದಿಶಾನಟಯಶಸ್ಕ– ದಿಕ್ಕುಗಳಲ್ಲಿ ಕುಣಿಯುತ್ತಿರುವ ಕೀರ್ತಿಯುಳ್ಳ. ಭಾನು . . . ನಿಭ– ಬಾನು–ಸೂರ್ಯ, ಪವನಾಪ್ತ– ಅಗ್ನಿ, ಹಿಮಭಾನು– ಚಂದ್ರ ಇವರುಗಳೇ. ನಯನತ್ರಯ– ಮೂರು ಕಣ್ಣುಗುಳ್ಳ ಶಿವನೊಡನೆ, ನಿಭ– ಸದೃಶನಾದ, ಅನುಗತಸತ್ಪಥ– ಹೊಂದಿದ ಸನ್ಮಾರ್ಗವುಳ್ಳ, ಶುಭಾನುಭವಯುಕ್ತ– ಮಂಗಳಕರವಾದ ಶಿವಾನುಭವದಿಂದ ಕೂಡಿದ, ವೀನರಥಸುಪ್ರಭ– ವಿಷ್ಣುವಿನಂತೆ ಸಮೀಚೀನವಾದ ಪ್ರಭಾವವುಳ್ಳ, ನವೀನಗುಣ– ಅಪೂರ್ವವಾದ ಸದ್ಗುಣವುಳ್ಳ, ದುಷ್ಟಫಣಿ * ವೀನ– ಕೆಟ್ಟವರೆಂಬ ಸರ್ಪಗಳಿಗೆ ಗರುಡನಾದ, ಭೃತಶಾಂಭವಕವೀನ– ಭೃತ– ಪೋಷಿಸಲ್ಪಟ್ಟ, ಶಾಂಭವಕವೀನ– ಶಿವಕವಿಶ್ರೇಷ್ಠರುಳ್ಳ ಬಸವೇಶಾ ? . . . . ||೪೧||

ಮಂದರಭೂಧರಮಂದಿರಭಾಸುರೆ– ಮಂದರ ಪರ್ವತದ ಮನೆಯಲ್ಲಿ ಪ್ರಕಾಶಿಸುವ, ಶಾಂಕರಿ– ಪತ್ನಿಯಾದ, ಶಂಭುಸುಖಂಕರಿ– ಈಶ್ವರನಿಗೆ ಸೌಖ್ಯವನ್ನುಂಟುಮಾಡುವ, ಸಂಕ್ರಂದನವಂದಿತೆ– ಇಂದ್ರನಿಂದ ನಮಸ್ಕರಿಸಲ್ಪಟ್ಟ, ಚಂದನ ಗಂಧಿ– ಶ್ರೀಗಂಧದ ಪರಿಮಳವುಳ್ಳ, ಸುಧಾಕರಮೌಳಿ– ಚಂದ್ರನೇ ಕಿರೀಟದಲ್ಲುಳ್ಳ, ಶುಭಾಕರಪೂರ್ಣೇಂದು ಮುಖಾನ್ವಿತೆ– ಮಂಗಳಾಸ್ಪದವಾದ ಪೂರ್ಣಚಂದ್ರನಂತಿರುವ ಮುಖದಿಂದ ಕೂಡಿದ, ಕುಂದದರಸ್ಮಿತರಾಜಿತೆ– ಮೊಲ್ಲೆಯ ಹೂವಿನಂತಿರುವ ಮುಗುಳ್ನಗೆಯಿಂದ ಪ್ರಕಾಶಿಸುವ, ನಿರ್ಜರಪೂಜಿತೆ– ದೇವತೆಗಳಿಂದ ಪೂಜಿಸಲ್ಪಟ್ಟ, ಇಂದಿರೆಗೆ ಆರ್ಯೆ–ಲಕ್ಷ್ಮಿಯಿಂದ ಪೂಜ್ಯಳಾದ, ಜಗನ್ನುತೆ– ಲೋಕದಿಂದ ಹೊಗಳಲ್ಪಟ್ಟ, ಪರ್ವತರಾಜಸುತೇ ! ಸೈಪು– ಪುಣ್ಯವು, ಒಂದಿ, ಇರೆ, ರಕ್ಷಿಪುದು . . . . . . ||೪೨||

(ಅವ) ವಿ– ಪಕ್ಷಿಗಳಿಗೆ, ಇನ– ಪತಿಯಾದದ್ದು ಗರುಡ . . . . ||೪೧||

೩೩ನೆಯ ಆಶ್ವಾಸವು ಸಂಪೂರ್ಣವು.

ಶ್ರೀ

—:o:—

ಮಹಾದೇವಾಯ ಪರಬ್ರಹ್ಮಣೇನಮಃ

ಚತುಸ್ತ್ರಿಂಶಾಶ್ವಾಸಪ್ರಾರಂಭಃ

ಏಕಾಂತರಾಮಾರ್ಯಕಥನಂ

ಕಂ ‖ ಶ್ರೀಕಾತ್ಯಾಯನಿಯರಸಂ । ಗೋಕಾಂತವಿರಿಂಚಿವಿಷ್ಣು ಪೂಜಿತಪದನ ‖ ಸ್ತೋ
ಕಮಹಿಮಾಂಕನತುಳಕೃ । ಪಾಕರ ನೆಮಗೀಗೆ ಸೌಖ್ಯಮಂ ಶಿವಲಿಂಗಂ ‖ ೧

ಶಾರ್ದೂಲ ‖ ಆಕಲ್ಯಾಣದೊಳಿರ್ಪ ನೋರ್ವ ನನಘಂ ಗಾಂಭೀರ್ಯವಾರಾಶಿ ಭ ।
ದ್ರಾಕಾರಂ ಪರವಾದಿಮತ್ತಗಜಪಂಚಾಸ್ಯಂ ಪರಿಭ್ರಾಜದ ‖ ಸ್ತೋಕಾತ್ಮೀಯಮಹತ್ವಮಂಡಿತ
ನುಮೇಶಧ್ಯಾನಸಂಧಾನವಿ । ದ್ಯಾಕಾಂತಂ ಗುಣಶಾಲಿ ಶೌರ್ಯನಿಧಿ ಸಂದೇಕಾಂತರಾಮಾಹ್ವಯಂ ೨

ಮತ್ತೇಭ ‖ ಶಿವಧರ್ಮಪ್ರತಿಪಾಲಕಂ ಶಿವಕಥಾಕರ್ಣಾವತಂಸಂ ಶಿವೋ । ತ್ಸವಧಾ
ಮಂ ಶಿವಮಂತ್ರವಾಣಿ ಶಿವಭಕ್ತಪ್ರೇಮಕೃದ್ವರ್ತನಂ ‖ ಶಿವಯೋಗಾಂಗಸಮನ್ವಿತಂ ಶಿವಮ
ತಾಚಾರಾಧ್ವದೀಪಾಂಕುರಂ । ಶಿವಲಿಂಗಾಂಘ್ರಿಸಮರ್ಚಕಂ ಶಿವಗಣಶ್ರೀಪಾದಪೂಜಾಪರಂ ೩

---

೩೪ನೆಯ ಆಶ್ವಾಸಪ್ರಾರಂಭಂ.

ಗೋಕಾಂತವಿರಿಂಚಿವಿಷ್ಣುಪೂಜಿತಪದಂ— ಗೋಕಾಂತ— ಇಂದ್ರ, ವಿರಿಂಚಿ— ಬ್ರಹ್ಮ, ವಿಷ್ಣು, ಇವರುಗಳಿಂದ, ಪೂಜಿತ— ಪೂಜಿಸಲ್ಪಟ್ಟ, ಪದಂ— ಪಾದವುಳ್ಳ, ಅಸ್ತೋಕಮಹಿಮಾಂಕಂ— ಅಸ್ತೋಕ— ಅಧಿಕವಾದ, ಮಹಿಮ— ಮಹತ್ವವೇ, ಅಂಕಂ— ಚಿಹ್ನವಾಗುಳ್ಳ, ಅತುಳಕೃಪಾಕರಂ— ಅಸದೃಶವಾದ ದಯೆಗೆ ಆಶ್ರಯನಾದ ‖೧‖

ಗಾಂಭೀರ್ಯವಾರಾಶಿ— ಗಂಭೀರತ್ವಕ್ಕೆ ಸಮುದ್ರನಾದ (ಗಾಂಭೀರ್ಯವೆಂದರೆ ಮುಖದಲ್ಲಿ ಸುಖದುಃಖಸೂಚಕ ವಾದ ವಿಕಾರಗಳಂ ತೋರ್ಪಡಿಸದಿರುವಿಕೆ) ಭದ್ರಾಕಾರಂ— ಮಂಗಳಕರಸ್ವರೂಪವುಳ್ಳ, ಪರವಾದಿಮತ್ತಗಜ ಪಂಚಾಸ್ಯಂ— ಇತರ ಮತವಾದಿಗಳೆಂಬ ಮದಿಸಿದ ಆನೆಗೆ ಸಿಂಹನಾದ, ಪರಿಭ್ರಾಜದಸ್ತೋಕಾತ್ಮೀಯಮಹತ್ತ್ವಮಂಡಿತಂ— ಪರಿಭ್ರಾಜತ್— ಪ್ರಕಾಶಿಸುವ, ಅಸ್ತೋಕ— ಅಧಿಕವಾದ, ಆತ್ಮೀಯ— ತನ್ನ, ಮಹತ್ವ— ಮಹಿಮೆಯಿಂದ, ಮಂಡಿತಂ— ಅಲಂಕರಿಸಲ್ಪಟ್ಟ, ಉಮೇಶಧ್ಯಾನಸಂಧಾನವಿದ್ಯಾಕಾಂತಂ— ಪರಮೇಶ್ವರನಂಧ್ಯಾನಿಸುವಿಕೆ ಮತ್ತು ಲಿಂಗಾಂಗಸಂಘಟನೆಯೆಂಬ ವಿದ್ಯೆಯಿಂದ ಮನೋಹರನಾದ . . . . ‖೨‖

ಶಿವಧರ್ಮಪ್ರತಿಪಾಲಕಂ— ಶೈವಧರ್ಮವಂ ಪರಿಪಾಲಿಸುವ, ಶಿವಕಥಾಕರ್ಣಾವತಂಸಂ— ಶಿವಸಂಬಂಧಿಗಳಾದ ಕಥೆಗಳೇ ಕರ್ಣಾಭರಣವಾಗುಳ್ಳ, ಶಿವೋತ್ಸವಧಾಮಂ— ಪರಮೇಶ್ವರವಿಷಯಕವಾದ ಸಂತೋಷಕ್ಕಾಶ್ರಯಸ್ಥಾನನಾದ, ಶಿವಮಂತ್ರವಾಣಿ— ಶಿವಮಂತ್ರವೇ ವಾಕ್ಕಾಗುಳ್ಳ, ಶಿವಭಕ್ತಪ್ರೇಮಕೃದ್ವರ್ತನಂ— ಶಿವಭಕ್ತರಿಗೆ ಪ್ರೀತಿಯನ್ನುಂಟುಮಾಡುವ ವ್ಯಾಪಾರವುಳ್ಳ, ಶಿವಯೋಗಾಂಗ ಸಮನ್ವಿತಂ— ಶಿವ— ಪರಮೇಶ್ವರನೊಡನೆ, ಯೋಗ— ಸಂಬಂಧವಂ ಹೊಂದಿದ, *ಅಂಗ— ಆತ್ಮನಿಂದ, ಸಮನ್ವಿತಂ— ಕೂಡಿದ, ಶಿವಮತಾಚಾರಾಧ್ವದೀಪಾಂಕುರಂ— ಶಿವಮತ— ವೀರಶೈವಮತದ, ಆಚಾರ— ಆಚಾರವೆಂಬ, ಅಧ್ವ— ಮಾರ್ಗಕ್ಕೆ, ದೀಪಾಂಕುರಂ— ದೀಪದ ಮೊನೆಯಾದ ‖೩‖

---

* (ಅವ) ಅಂಗ— ಅಂ— ಬ್ರಹ್ಮನನ್ನು, ಗಚ್ಛತಿ— ಹೊಂದುವದು, ಆದುದರಿಂದ, ಅಂಗವೆಂದರೆ:— ಜೀವಾತ್ಮನೆಂದರ್ಥ . . . . ‖೩‖

ಮತ್ತೇಭ || ಶಿವಲೋಲಂ ಶಿವದೂಷಕಪ್ರಕರದರ್ಪಾಂಭೋದಝಂಝಾನಿಲಂ | ಶಿವನಿ
ಷ್ಠಾನಿಧಿ ನೀತಿಶಾಲಿ ಶಿವತತ್ವಜ್ಞಾನರತ್ನಾಕರಂ || ಶಿವಭಕ್ತಿ ಪ್ರಮದಾಮುಖೈಕಮುಕುರಂ ಶೈ
ವಾಗಮಾಭಿಜ್ಞ ನೊ | ಪ್ಪುವ ನೆಂದುಂ ಶಿವದರ್ಶನಾಂಬುಜವನೀಬಾಲಪ್ರಭಾವಲ್ಲಭಂ || ೪
ವ || ಎಂಬ ನೆಗಳ್ತೆಗಡರ್ಪಾಗಿ ರಂಜಿಸುತ್ತ ಮಿರ್ದು ||

ಮಹಾಸ್ರಗ್ಧರ || ಶಿವಲೋಕಕ್ಕೆಯ್ದಿ ಲಿಂಗಾರ್ಚನೆಯ ಕಡೆಯೊ ಳಲ್ಲಿರ್ದ ವಿಖ್ಯಾತಲೀ
ಲೋ | ತ್ಸವರುದ್ರಶ್ರೇಣಿಭಾಸ್ವತ್ಪ್ರಮಥತತಿಗೆ ದಂಡ ಪ್ರಣಾಮೋತ್ಕರಂಗೆ || ಯ್ದು ವಿಳಾಸಂಬೆ
ತ್ತು ನಣ್ಪಿಂ ಪೊಗಳ್ದು ಶಿವರಹಸ್ಯಾರ್ಥದೇಕಾಂತಮಂ ಮಾ | ಡಿ ವಿಶಿಷ್ಟಾನಂದವಾರಾಶಿಯೊ
ಳ್ ಮುಳುಗಿಸು ತ್ತದ್ಭುತೋತ್ಸಾಹದಿಂದಂ || ೫

ಕಂ || ಮಗುಳ್ದೈತರುತಂ ಧಾತ್ರಿಗೆ | ಮಗುಳ್ದಾ ಲೋಕಕ್ಕೆ ಪೋಗು ತಂತೆಸಗುತ್ತಂ ||
ತೊಗುಮಿಗೆಯಿ ನನುದಿನಂ ತಾಂ | ನೆಗಳ್ದೆಸೆದಿರ್ದ್ದಂ ಶಿವೈಕ್ಯಜನಮಂದಾರಂ || ೬

ಕಂ || ಏಕಾಂತವಾಡುತಿಂತು ಪಿ | ನಾಕಿಯ ಗಣನಿವಹದೊಡನೆ ಶಿವನೊಡ ನೊಲವಿಂ ||
ದೇಕಾಂತರಾಮವಿಭು ವೆ | ಲ್ಲಾಕಾಲದೊ ಳಿಂತು ಮೆರೆಯುತಿರ್ದೊಂದುದಿನಂ || ೭

ಕಂ || ಜಿನದದಿ ನಾನಗರವ ಪಾ | ವನಶಿವನಿಳಯಕ್ಕೆ ಬಂದು ಕುಳ್ಳಿರ್ದಾಗ || ಜ್ಜಿನಭ
ಜಕ ನಾಗುಡಿಯ ನೊ | ಯ್ಯನೆ ಕೆರ್ಪಂ ತಾಳ್ದ ಕಾಲ್ಗಳಿಂ ದೊಳಪೊಕ್ಕಂ || ೮

ವಚನ || ಪುಗೆಕಂಡುಕಾಯ್ಪಂತಾಳ್ದು |

ಕಂ || ಎಲೆ ಸವಣಗುನ್ನಿ ಲಿಂಗದ | ನಿಲಯಮ ನಡಿಗೆರ್ಪುವೆರಸಿಪುಗಲಕ್ಕುಮೆ ದು ||
ಷ್ಫಲ ನೆಗಳ್ದ ನೀನಕೃತ್ಯಮ | ನಲಸದೆದುರ್ವಾರದುರಿತಭಾಜನ ನಾದೈ || ೯

ಕಂ || ಗುಡಿಯಂ ಪೊರಮಡುತಪ್ಪಿಂ | ದಡಿಗೆರ್ಪಂ ಕಳೆದು ಬಂದು ಲಿಂಗಕ್ಕೀಗಳ್ ||
ಪೊಡಮಡುಪೊಡಮಡದೊಡೆನಿ | ನ್ನೊಡಲಂ ಕಡಿದಿಕ್ಕಿದಲ್ಲ ದಾಂ ಬಿಟ್ಟಪೆನೆ || ೧೦

ವಚನ || ಏನೆ ಕೇಳ್ದು ಜೈನಂ ಸರೋಷಹಸಿತಾಸ್ಯ ನಾಗಿ ||

---

ಶಿವಲೋಲಂ— ಪರಮೇಶ್ವರನಲ್ಲಾಸಕ್ತಿಯುಳ್ಳ, ಶಿವದೂಷಕಪ್ರಕರದರ್ಪಾಂಭೋದಝಂಝಾನಿಲಂ— ಶಿವ—ಪರಮೇಶ್ವರನನ್ನು, ದೂಷಕ— ನಿಂದಿಸುವವರ, ಪ್ರಕರ— ಸಮೂಹದ, ದರ್ಪ— ಗರ್ವವೆಂಬ, ಅಂಭೋದ— ಮೇಘಕ್ಕೆ ಝಂಝಾನಿಲಂ— ಪ್ರಚಂಡಮಾರುತನಾದ, ಶಿವನಿಷ್ಠಾನಿಧಿ— ಪರಮೇಶ್ವರವಿಷಯಕವಾದ ಶ್ರದ್ಧೆಗೆ ನಿಕ್ಷೇಪನಾದ, ಶಿವತತ್ವಜ್ಞಾನರತ್ನಾಕರಂ— ಶಿವನೂ ಜೀವನೂ ಒಂದೇ ಯೆಂಬ ತಿಳುವಳಿಕೆಗೆ ಸಮುದ್ರನಾದ, ಶಿವಭಕ್ತಿಪ್ರಮದಾಮುಖೈಕಮುಕುರಂ— ಶಿವಭಕ್ತಿಯೆಂಬ ಸ್ತ್ರೀಯುಮುಖಕ್ಕೆ ಮುಖ್ಯದರ್ಪಣನಾದ, ಶೈವಾಗಮಾಭಿಜ್ಞಂ— ಆಗಮಗಳಂತಿಳಿದ, ಶಿವದರ್ಶನಾಂಬುಜವನೀಬಾಲಪ್ರಭಾವಲ್ಲಭಂ— ಶಿವದರ್ಶನ— ವೀರಶೈವಮತವೆಂಬ, ಅಂಬುಜವನೀ— ಕಮಲದ ಕಾಡಿಗೆ, ಬಾಲಪ್ರಭಾವಲ್ಲಭಂ— ಎಳೆಯಸೂರ್ಯನಾದ .. .. ||೪||

ಶಿವರಹಸ್ಯಾರ್ಥದ— ಪರಮಾತ್ಮವಿಷಯಕವಾದ ಗೂಢವಾದ ಅಭಿಪ್ರಾಯದ .. ||೫||

ಶಿವೈಕ್ಯಜನಮಂದಾರಂ— ಪರಶಿವನೊಡನೆ ಸಾಮರಸ್ಯವಂ ಹೊಂದಿರುವ ಜನಗಳಿಗೆ ಕಲ್ಪವೃಕ್ಷನಾದ ||೬||೭||

ಜಿನಭಜಕಂ— ಜಿನನನ್ನು ಸೇವಿಸುವ ಜೈನನು, ಕೆರ್ಪಂ— ಕೆರವನ್ನು, ಎಲೆಸವಣಗುನ್ನಿ— ಎಲೋ ಜೈನನೆಂಬ ನಾಯಿಯೇ ! ದುರ್ವಾರದುರಿತಭಾಜನಂ— ಹೋಗಲಾಡಿಸುವದಕ್ಕಶಕ್ಯವಾದ ಪಾಪಕ್ಕೆ ಪಾತ್ರನು ||೯||

ಪೊರಮಡು—ಹೊರಟು ಹೋಗು, ಒಡಲಂ—ಶರೀರವನ್ನು .. .. ||೧೦||

ಮತ್ತೇ || ಇನಿತೊಂದಾಗ್ರಹ ಮೇಕೆ ಶೈವ ನಿನಗೆನ್ನೊಳ್ಘೂರಿಭೂಭಾಗದ | ಲ್ಲಿನಿತಾಂತಂ ಶಿವಭಕ್ತಿ ನಿನ್ನ ಶಿರದೊಳ್ಪುಟ್ಟತ್ತೆ ನೀ ನೋರ್ವ ನಾ || ದೆ ನವೀನಂ ಶಿವದರ್ಶನಸ್ಥಿತಿಗೆ ಪೆಂಪಂ ಮಾಡ ಲಿಂತಪ್ಪ ಕೊ | ರ್ವ ನದೇಕೆನ್ನೊಳೆ ತೋರುವೈ ಬಿಡುಬಿಡೀ ದುರ್ವಾರಗರ್ವೋಕ್ತಿಯಂ || ೧೧

ಕಂ|| ಗುಡಿ ಬಸದಿಯೆ ಜಿನನೆ ಜಗ | ಕ್ಕೊಡೆಯಂ ಬೇರಿನ್ನು ದೈವಮುಂಗುಡಿಯುಂ ಪೇ|| ಳ್ವೊಡವಿಯೊ ಳೊಳವೆ ಯಿದೇನಂ | ನುಡಿವಪೆ ಮೇಣುಳ್ಳೊಡಿಂದು ನಿನ್ನಯ ಶಿರಮಂ ೧೨

ಕಂ ಪರಿದೇಳುಂ ದಿನಮುಂ ಕಳೆ | ದುರೆ ಪತ್ತಿಸಿಕೊಂಡೊ ಡಿಳೆಗೆ ಶಂಭುವೆ ದೈವಂ|| ನೆರೆಗಲಿ ನೀನೇ ಭಕ್ತಂ|ಮರುಮಾತೇಂ ನಿನ್ನ ಪೆಂಪ ನರಿದಪೆ ನೀಗಳ್ || ೧೩

ವ || ಎಂದಾಜೈನನ ವಚನಮ ನಾಜನನುತಚರಿತ್ರಂ ಕೇಳ್ದು || ಕ || ಇರಿವುದು ತಡಮಲ್ತೀತನ | ನಿರಿದೊಡೆ ಸತ್ತಪ ನದೇಕೆ ಮೂದಲಿಸಿದ ಕ || ಟ್ಟರಕದ ಕಜ್ಜಮ ನೀಗಳೆ | ನೆರೆತೋರ್ಪುದೆ ಪಂಥ ಮಂತೆ ಗೆಯ್ದಪೆ ನೆನುತಂ || ೧೪

ವ || ಎಂದು ವೀರಭಕ್ತಿ ವಿಜೃಂಭಿಸೆ ನಿರ್ಧಾರಣಂಗೆಯ್ದುಬ್ಬಿ ನಿಂದು || ಮತ್ತೇ || ಕಡುಪಿಂ ಪೂಣ್ದಲೆ ಜೈನ ಕೇ ಳ್ಜಿನನೆ ದೈವಂ ಲೋಕಕಂದೇಳ್ಗೆಯಂ | ನುಡಿಯುತ್ತಿರ್ದಪೆ ನಾಭಿರಾಜಮರುತಾದೇವ್ಯಾತ್ಮಜಂ ಲೋಕಕಂ || ತೊಡೆಯಂ ತಾ ನೆನಿಸಿರ್ದ ನೆಮ್ಮ ಶಿವಭಕ್ತವ್ರಾತದಿಂ ಬನ್ನಮಂ | ಪಡೆವಂ ತಾಂ ಮಗುಳ್ದಿಂತು ಕೇಳ್ದು ಮರಿದಿರ್ದುಂ ಕೆಮ್ಮನೇನೆಂದಪೈ || ೧೫

ಕಂ || ಶಿರ ಮರಿದು ಮಗುಳ್ದು ಪಡೆವು | ದರಿದೇ ಕೇ ಳ್ಕನ್ನ ಮೆಮ್ಮ ಶರಣ ರ್ಶಿರಮಂ || ಕರಮರಿದು ಮೇಣದಂ ಪಡೆ|ಯರೆ ನಿನಗಾ ನೊರೆವೆ ನವರ ಚರಿತಮ ನೀಗಳ್ ೧೬

ಸಾರತರಭಕ್ತಿಮಿಗೆ ಜಂ | ಬೂರಮಹಾಕಾಳ ನೆಂಬ ಭಕ್ತಂ ಶಿರಮಂ || ಮಾರಾರಿಗೆ ಕೊರೆದರ್ಪ್ಪಿಸಿ | ಪೌರಜನಂ ಪೊಗಳೆ ಮಗುಳೆ ಪಡೆ ದೊಪ್ಪಿರ್ದ್ದಂ || ೧೭

---

ಸರೋಷಹಸಿತಾಸ್ಯಂ—ಕೋಪದಿಂದ ಕೂಡಿದ ಮುಗುಳ್ನಗೆಯುಳ್ಳವನು, ಇನಿತು—ಇಷ್ಟು, ಆಗ್ರಹಂ—ಕೋಪವು, ಶಿವದರ್ಶನಸ್ಥಿತಿಗೆ— ಶೈವಧರ್ಮದ ಇರುವಿಕೆಗೆ, ಕೊರ್ವಂ— ಕೊಬ್ಬನ್ನು, .. ||೧೧||

ಗುಡಿ— ಶಿವಸ್ಥಾನವು, ಬಸದಿಯೆ— ಜಿನದೇವಾಲಯವೇ ? .. .. ||೧೨||

ನೆರೆಗಲಿ—ಬಹುಸಮರ್ಥನು, ಮರುಮಾತೇಂ— ಬದಲುಮಾತೇನು ? .. ||೧೩||

ಇರಿವುದು— ಕತ್ತರಿಸುವದು, ಮೂದಲಿಸಿದ— ಹೀಯಾಳಿಸಿದ, ಕಜ್ಜಮಂ—ಕಾರ್ಯವನ್ನು, ಪಂಥಂ—ಶಪಥವು, ನಿರ್ಧಾರಣಂಗೆಯ್ದು— ನಿಶ್ಚೈಸಿ, * * * *

ಕಡುಪಿಂ— ಶೌರ್ಯದಿಂದ, ಪೂಣ್ದು— ಪ್ರತಿಜ್ಞೆಯಂಮಾಡಿ, ಏಳ್ಗೆಯಂ— ಔನ್ನತ್ಯವನ್ನು, ನಾಭಿರಾಜಮರುತಾದೇವ್ಯಾತ್ಮಜಂ— ನಾಭಿರಾಜನಿಂದ ಮರುತಾ ದೇವಿಯಲ್ಲಿ ಹುಟ್ಟಿದವನು, ಬನ್ನಮಂ— ಕಷ್ಟವನ್ನು, ಕೆಮ್ಮನೆ— ಸುಮ್ಮನೆ .. .. .. .. ||೧೫||

ಅರಿದೇ—ಅಸಾಧ್ಯವೇ ? .. .. .. ||೧೬||

ಪೌರಜನಂ—ಪಟ್ಟಣದ ಜನವು, .. .. .. ||೧೭||

ಮ || ಸ್ರ || ಶರಣಂ ಗೋವಿಂದಭಟ್ಟಾರಕ ನನುಪಮ ನಾವಾರ್ತೆಗೇಳ್ದಲ್ಲಿ ಗೇಳ್ತಂ | ದಿರದೀಶಂಗಿತ್ತ ನಿರ್ಮಾಲ್ಯಶಿರಮ ನಿವ ನಿಂತಾಂತುದೇ ತಪ್ಪೆನುತ್ತೀ || ಶ್ವರಿಯಾಣ್ಮಂ ಗರ್ಪಿ ಸುತ್ತಂ ಕೊರೆದ ನಿಜಶಿರೋಂಭೋಜಮಂ ಬೇರದೊಂದಂ | ಶಿರಮಂ ಮೂರುಂದಿನಂಗ ಳ್ಳೆಯ ಪಡೆದ ನಾಲಿಂಗದಿಂ ಸಾಹಸಾಂಕಂ || ೧೮

ವ || ಅಂತವಂ ಪಡೆಯೆ ಕಂಡಲ್ಲಿ ಮೊರಟದಬಂಕಿದೇವ ನೆಂಬ ಚಲದಂಕಭಕ್ತಂ ಪರಿ ಹಾಸಂಗೆಯ್ದು ಸಂಭ್ರಮಿಸಿ ನಿಂದು ||

ಕಂ || ಅನಯದಿ ನಿವಂಗೆ ಮೂರುಂ | ದಿನಂಬರಂ ಶಿರಮನೀಯದಿರ್ಪ೯ಂ ದಭವಂ || ಘನದೀರ್ಘನಿದ್ರೆಯೊಳ್ಸಂ | ದನೊಮೆಯ್ಯಂ ಮರೆದು ನಿದ್ರೆಗೆಯ್ದನೊ ತಿಳಿಯೆಂ || ೧೯

ವ || ಎಂದೇಳದಂಗೆಯ್ದು ನಕ್ಕು ಪನ್ನತಿಕೆಯಿಂ ತನ್ನ ಕರತಳಕರಾಳಖಡ್ಗಮಂ ಜಡಿದ ಡಸಿಪಿಡಿದು ಸಾರತರವೀರಭಕ್ತಿಧುರಂಧರಂ ನಿಜಶಿರಮಂ ಗರಿಲ ನವ ನರಿದು ಮುಗುಳ್ದೊಗೆವ ಶಿರಮ ನಂತೆ ಕೊರೆದು ||

ಕಂ || ಕುಂದದೆ ನಿಜಭಕ್ತಿಯ ಬಲ | ದಿಂದಂ ತಲೆ ಮತ್ತೆ ಮತ್ತೆ ಮೊಳಯುತ್ತಿರೆ ಶೌ || ರ್ಯಂಧಳೆದು ಕೊರೆಕೊರೆದು ತರಿ | ಸಂದವ ನಭವಂಗೆ ಭಕ್ತ ನರ್ಪಿಸುವಾಗಳ್ || ೨೦

ಕಂ || ನಲಿವ ತಲೆ ನಗುವತಲೆ ಕ | ಣ್ಣಲರ್ಚಿನಿರೀಕ್ಷಿಸುವತಲೆ ಕಡಂಗುವ ತಲೆ ಯಾ| ರ್ದುಲಿವ ತಲೆ ಮಲೆವತಲೆ ಕೆಲ | ಕೊಲೆದುರ್ಬುವತಲೆ ಪೊದಳ್ದು ಪಾಡುವ ತಲೆಗಳ್ || ೨೧

ಕಂ || ಬೆರೆವ ತಲೆ ಮುರಿದು ನೋಡುವ | ಮುರುಕದ ತಲೆ ಪುರ್ಬ್ಬನೇರಿಸುವ ತಲೆ ಪಲ್ಲಂ | ಕಿರಿವತಲೆ ನಿಮಿರ್ವತಲೆ ಬಾ | ಯ್ದೆರೆವೊಳ್ದಲೆ ಜಯಜಯಪ್ರಸಾದದ ತಲೆಗಳ್ || ೨೨

---

ಗೋವಿಂದಭಟ್ಟಾರಕಂ— ಗೋವಿಂದ ಭಟ್ಟಾರಕನೆಂಬುವನು, ಸಾಹಸಾಂಕಂ— ಶೌರ್ಯವೇ ಲಕ್ಷಣ ವಾಗುಳ್ಳ .. .. .. .. .. ||೧೮||

ಮೊರಟದಬಂಕಿ ದೇವನಕಥೆ.

ಚಲದಂಕಭಕ್ತಂ— ಪಂತಗಾರನಾದ ಭಕ್ತನು, * * * *

ಅನಯದಿ— ದುರ್ನೀತಿಯಿಂದ, ಮೂರುದಿನಂಬರಂ— ಮೂರುದಿವಸಗಳವರಿಗೂ, ಇರ್ಪಂದು— ಇರುವಲ್ಲಿ ಘನದೀರ್ಘನಿದ್ರೆಯೊಳ್— ದೊಡ್ಡ ಮೃತಿಯಲ್ಲಿ, ಮೆಯ್ಯಂಮರೆದು— ದೇಹದಮೇಲೆ ಸ್ಮೃತಿದಪ್ಪಿ, ||೧೯||

ಏಳಿದಂಗೆಯ್ದು— ತಿರಸ್ಕರಿಸಿ, ಪನ್ನತಿಕೆಯಿಂ— ಶೌರ್ಯದಿಂದ, ಕರತಳಕರಾಳಖಡ್ಗಮಂ— ಹಸ್ತಪ್ರದೇಶ ದಲ್ಲಿರುವ ಭಯಂಕರವಾದ ಕತ್ತಿಯನ್ನು, ಜಡಿದು— ಜಳಪಿಸಿ, ಅಡಸಿ— ಸೇರಿಸಿ, ಗರಿಲನೆ— ಶೀಘ್ರವಾಗಿ, ಮು ಗುಳ್ದು— ಪುನಃ, ಒಗೆವ— ಹುಟ್ಟುವ, * * * *

||೨೦|| ನಲಿವ— ಸಂತೋಷಪಡುವ, ಕಣ್ಣಲರ್ಚಿ— ಕಣ್ಣಂ ದೊಡ್ಡದಾಗಿಬಿಟ್ಟು, ಕಡಂಗುವ— ಕುತೂ ಹಲಪಡುವ, ಆರ್ದು— ಗಟ್ಟಿಯಾಗಿ, ಉಲಿವ— ಕೂಗುವ, ಕೆಲಕೆ— ಬಂದುಕಡೆಗೆ, ಒಲೆದು — ಬಗ್ಗಿ, ಉರ್ಬುವ ಉತ್ಸಾಹಪಡುವ .. .. .. .. ||೨೧||

ಬೆರೆವ— ಬಿಗಿತುಗೊಳ್ಳುವ, ಮುರಿದು— ವಕ್ರವಾಗಿ, ಮುರುಕದ— ಬಂದುಕಡೆಗೆ ಒರೆಯಾಗಿರುವ, ಏರಿಸುವ— ಮೇಲಕ್ಕೆ ಗಂಟನಿಕ್ಕುವ, ಬಾಯ್ದೆರೆವ— ಬಾಯಂಬಿಡುವ .. .. ||೨೨||

ಕಂ|| ತೂಗುವತಲೆ ಕುಕಿಲಿರಿಯುತೆ | ಕೂಗುವತಲೆ ರಸನೆದೆರೆವತಲೆ ಶಿವ ಶರಣೆಂ || ದಾಗುಳಿಪತಲೆ ಪೊಡಳ್ದನು | ರಾಗಿಪ ತಲೆ ರಂಜಿಸಿರ್ಪ್ಪ ತಲೆ ಪೊಸದಲೆಗಳ್ || ೨೩

ಕಂ ಕರ ಮೆಸೆಯೆ ಶತಸಹಸ್ರಂ|ಶಿರಮವು ಶಿವಲಿಂಗಕರ್ಪಿತಂಗೆಯ್ವುತ್ತಂ || ತಿರೆಲಿಂಗದ ಗರ್ಭಗೃಹಾಂ | ತರಮಂ ನೆರೆ ತೀವಿ ಲಿಂಗದಂಗದೊಳೆತ್ತಂ || ೨೪

ಮತ್ತೇ || ಪಸರಂಬೆತ್ತಿರೆ ಕಂಡು ಬಂಕ ಚಲದಂಕಾ ನಿನ್ನ ಸದ್ಭಕ್ತಿಸಾ | ಹಸದುರ್ಬ್ಬಂ ನಡೆ ನೋಳ್ಪೊಡೆನ್ನಳವೆ ಹೋ ಹೋನಿಶ್ಶಿರಶ್ರೇಣಿ ಸಂ || ದೆಸಕಂಬೆತ್ತು ಮುಸುಂಕೆ ಸೈರಿಪೆ ನದೆಂ ತೀಭಾರಮಂ ಪೊಣ್ಮಿದು | ಬ್ಬಸ ಕಾನಾರ್ಪೆನೆ ಸೋಲ್ತೆ ನಾಂ ನಿನಗೆ ಗೆಲ್ಲಂ ನಿನ್ನದೆಲ್ಲಂದದಿಂ || ೨೫

ಕಂ || ಬಿಡುಬಿಡು ಕೊರಲಂ ಕೊರೆ ವೀ | ಕಡುಗಜ್ಜಮ ನಯ್ಯ ಸಾಲ್ಗುಮೆಂದಾಕ್ಷಣದೊಳ್|| ಮೃಡ ನವನ ಕಯ್ಯ ನೊಯ್ಯನೆ|ಪಿಡಿದು ನಿವಾರಿಸುತೆ ಮುದಮ ನೊದವಿಸುತಾಗಳ್ ೨೬

ಚಂ || ಮೊರಟದ ಮಲ್ಲಿಕಾರ್ಜುನ ನಿಳಾತಳ ಮಚ್ಚರಿವಟ್ಟು ಕೀರ್ತಿಸು | ತ್ತಿರೆ ನಿಜ ಮಸ್ತಕವ್ರಜದ ಪೂಜೆಯ ನಾಳ್ದರೆ ಬಂಕನಂಕಮಂ || ಹರನೊಡ ನೊಲ್ದು ಗೆಲ್ದ ನವನಂದದ ಭಕ್ತರನೇಕ ರುಂಟು ಕೇ|ಳ್ದರೆಯೊಳದಿರ್ಕೆ ನಿನ್ನಳವೆ ಕೇಳ್ವೊಡೆ ಮತ್ತ ಮನೂನಶೌರ್ಯದಿಂ-೨೭

ಕ. ನಿನ್ನತಥಾಗತಮತಮಂ | ಬನ್ನಂಬಡಿಸಿದ ಮದೀಯಶರಣರ ಪೆಂಪಂ || ಚೆನ್ನಲರೆ ಪೇಳ್ದಪೆಂ ಬುಧ | ಸನ್ನುತತಿರುವಾಕರೀಶನೆಂಬವ ನೋರ್ವ್ವಂ|| ೨೮

ಮತ್ತೇ || ತಿರುವಾರೂರೊಳಗೊಪ್ಪುವಂ ಜಿನಮತಾಚಾರ್ಯಂ ಕಳಾವೃಂದಬಂ | ಧುರ ನಿರ್ಪ್ಪನ್ನಮವಂಗೆ ಶೂಲರುಜೆ ಯಾದತ್ತಾತ ನಾರೋಗದಿಂ || ಮರಣಾವಸ್ಥೆಯ ನಾಳ್ದು ಬೀ

---

ಕುಕಿಲಿರಿಯುತೆ - ಕೇಕೆಹಾಕುತ್ತ, ರಸನೆದೆರೆವ—ನಾಲಿಗೆಯಂ ಚಾಚುವ, ಆಕುಳಿಪ—ಆಕುಳಿಸುವ||೨೩||

ಗರ್ಭಗೃಹಾಂತರವಮಂ—ಗರ್ಭಾಂಕಣದ ಒಳಭಾಗವನ್ನು, .. .. ||೨೪||

ಪಸರಂಬೆತ್ತು—ಹರಡಿಕೊಂಡು, ಚಲದಂಕ—ಪಂತಗಾರನಾದ, ಬಂಕ—ಬಂಕಿದೇವನೇ! ಸದ್ಭಕ್ತಿಸಾಹಸದ—ಒಳ್ಳೆಯ ವೀರಭಕ್ತಿಯು ಅಳವೆ—ಶಕ್ಯವೇ? ಶಿರಶ್ರೇಣಿ—ಶಿರಸ್ಸುಗಳ ಪಙ್ಕ್ತಿಯು, ಎಸಕಂಬೆತ್ತು—ಒತ್ತಾಗಿ, ಮುಸುಂಕೆ—ಆಚ್ಛಾದಿಸಲು, ಆರ್ಪೆನೆ—ಸಮರ್ಥನಾಗುವೆನೇ? ಸೋಲ್ತೆಂ—ಸೋತುಹೋದೆನು, ಎಲ್ಲಂದದಿಂ—ಎಲ್ಲಾ ವಿಧದಿಂದಲೂ, ಗೆಲ್ಲಂ—ಜಯವು .. .. .. ||೨೫||

ನಿವಾರಿಸುತೆ— ತಡೆಯುತ್ತ, ಒದವಿಸುತೆ—ಉಂಟುಮಾಡುತ್ತಾ .. .. ||೨೬||

ಮೊರಟದಮಲ್ಲಿಕಾರ್ಜುನಂ (ಎಂಬುವದು ಬಂಕಿದೇವನ ಪ್ರತಿನಾಮವು) ಅನೂನಶೌರ್ಯದಿಂ—ಅಧಿಕವಾದ ಪರಾಕ್ರಮದಿಂದ, .. .. .. ||೨೭||

## ತಿರುವಾಕರೀಶ್ವರನ ಕಥೆ.

ತಥಾಗತಮತಮಂ—ನೀನು ದೊಡ್ಡದೆಂದು ಹೇಳಿಕೊಳ್ಳುವ ಜಿನಮತವನ್ನು, ಬನ್ನಂಬಡಿಸಿದ—ಸಂಕಟಪಡಿಸಿದ, ಪೆಂಪಂ— ಅತಿಶಯವನ್ನು, ಬುಧಸನ್ನುತತಿರುವಾಕರೀಶ್ವರಂ—ವಿದ್ವಾಂಸರಿಂದ ಹೊಗಳಿಸಿಕೊಳ್ಳಲ್ಪಟ್ಟ ತಿರುವಾಕರೀಶ್ವರನು, ||೨೮||

ಕಳಾವೃಂದಬಂಧುರಂ—ವಿದ್ಯೆಗಳ ಸಮೂಹದಿಂದ ಮನೋಹರನಾದ, ಶೂಲರುಜೆ— ಹೊಟ್ಟೆಯ ಶೂಲೆರೋಗವು, ಬೀಳ್—ಶಕ್ತಿಹೀನನು, ||೨೯||

ಳ್ದು ದರೆಯೊಳ್ಪೇಳಪ್ಪಿನಂ ತತ್ಸಹೋ। ದರಿ ಕಂಡೆಂದ ಳವಂಗೆ ಶಂಕರಪದಾಂಭೋಜಾತಮಂ ಭಕ್ತಿಯಿಂ ೨೯

ಕಂ॥ ಮರೆವುಗೆ ನಿನ್ನೀರುಜೆಯುಂ। ಪರಿಗುಂ ಸುಖ ಮಕ್ಕು ಮಿದನೆ ನಂಬುಳ ನೀನಿ॥ ನ್ನೆರಕದ ಮಂತ್ರದ ತಂತ್ರದ। ಬರಿಬೆಜ್ಜದ ಕಜ್ಜದಿಂದೆ ಫಲ ಮಿನಿತಿಲ್ಲಂ ೩೦

ವ॥ ಎಂದ ನಿಜಾಗ್ರಜೆಯ ಹಿತೋಪದೇಶಮ ನವಂ ಮನದೆಗೊಂಡಂತೆಗೆಯ್ವೆಂ ತೊದಳಲ್ಲೆನ್ನ ನೇಪರಿಯಿನಾದೊಡಂ ಪೊರೆಯುದೆಂದು ದೈನ್ಯೋಕ್ತಿಯಿಂ ಮೆಯ್ಯಿಕ್ಕಿಮಣಿಯೇ

ಚಂ॥ ಹರಶರಣರ್ಕಳಂ ನೆನೆದು ನಿಷ್ಠೆ ಪೊದಳ್ದಿರೆ ಮೂಲಮಂತ್ರದಿಂ। ಪರಮವಿಭೂತಿಯಂ ಪಿಡಿದು ಮಂತ್ರಿಸಿ ತನ್ನಿಟಲಪ್ರದೇಶದೊ॥ ಳ್ಧರಿಸಿ ನಿರೀಕ್ಷೆಗೆಯ್ವುದುಮವ ಳ್ತವಿಲಾದುದು ಶೂಲೆ ಯಾಗ ಳ। ಚ್ಚರಿವಡು ತಕ್ಕ ರಕ್ಷಿಸಿದೆ ಯೆಂದೆರಗಿರ್ದ ನವಂತದಂಘ್ರಿಯೊಳ್

ವ॥ ಅಂತೆರಗಿ ತನ್ನಿರೂಪದಿ ನಭವನಂಶರಣ್ಬೊಕ್ಕು ಶಿವಾಜ್ಞೆಯಂ ಪೊತ್ತಾಪೊಳಲ ಪೊಳಗೇರಿಯೊಳೊಂದು ಜೀರ್ಣಕುಟೀರದೊಳ್ನೆಲಸಿರ್ದ ಸದ್ಗುರುವಂಕಂಡು ದಂಡಪ್ರಣಾಮಂಗೆಯ್ದು ವಿಧಿವದುಪಪನ್ನನಾಗಿ ... ... ...

ಕಂ॥ ಗುರುವರ ಪೆಳರ್ದೀಭವಭರ॥ ದುರವಣೆ ಗಾಂ ನಿಮ್ಮ ಚರಣಮಂ ಮರೆವೊಕ್ಕೆಂ। ಹರದೀಕ್ಷೆಯಿತ್ತು ಪೊರೆ ದು। ದ್ಧರಿಸೆನ್ನ ನೆನುತ್ತೆ ಬಿನ್ನಪಂಗೆಯ್ಯಲೊಡಂ॥ ೩೧

ಮತ್ತೇ॥ ಕರುಣಾಲೋಕನಮಾತ್ರದಿಂ ಮೊದಲ ದುಷ್ಕರ್ಮಂಗಳಂ ತೂಳ್ದು ಪು। ಳ್ಕರಿಸುತ್ತಂ ಕಲಶೋದಕಸ್ನಪನದಿಂ ಶುದ್ಧಾತ್ಮನಂ ಮಾಡಿ ತ। ಚ್ಛಿರದೊಳ್ಶ್ರೀಶಿವಹಸ್ತಮಂ ಮಡಗಿ ಭಸ್ಮಾಲೇಪನಂಗೆಯ್ದು ಭಾ।ಸುರಭಾಳಸ್ಥಳದಲ್ಲಿ ದುರ್ಲಿಪಿನಿರಾಸಂಗೆಯ್ದು ತದ್ದೇಶಿಕಂ೩೨

ಚಂ॥ ಕರುಣಿಸಿ ಲಿಂಗಮಂ ಕರದೊಳಾತನ ಕರ್ಣದೊಳೀಶಮಂತ್ರಮಂ। ನಿರವಿಸಿಚಿದ್ಘನಪ್ರಭೆಯ ನಾತ್ಮನೊಳೊಂದಿಸಿ ಮಾಯೆಯಂ ಸಮು॥ತ್ತರಿಸಿ ನಿಜಾಂಗಲಿಂಗದೃಢಯೋಗಮನಾಗಿಸಿ ತತ್ಸ್ವರೂಪಮಂ। ಪರಿವಿಡಿಗೆಯ್ದು ಬೋಧಿಸಿ ನಿಮಿರ್ಚ್ಚಿ ನಿರಾಕುಳಚಿತ್ತವೃತ್ತಿಯಂ೩೩

---

ಎರಕದ—ಪ್ರಿಯವಾದ, ಬರಿಬೆಜ್ಜದ—ವ್ಯರ್ಥವಾದ ವೈದ್ಯದ, ಕಜ್ಜದಿಂದ—ಕೆಲಸದಿಂದ, ||೩೦||

ಅಗ್ರಜೆಯ—ಅಕ್ಕನ, ಮನದೆಗೊಂಡು—ಮನಸ್ಸಿಗೆ ತಂದುಕೊಂಡು, ಅಂತೆಗೆಯ್ವೆಂ—ಹಾಗೆಯೇ ಮಾಡುವೆನು, ತೊದಳ್—ಸುಳ್ಳು, ಏಪರಿಯಿಂಆದೊಡಂ—ಯಾವ ರೀತಿಯಿಂದಲಾದರೂ, *

ನಿಷ್ಠೆ—ಶ್ರದ್ಧೆಯು, ತನ್ನಿಟಲಪ್ರದೇಶದೊಳ್—ಅವನಹಣೆಯ ಸ್ಥಲದಲ್ಲಿ, ತವಿಲ್—ಕಡಮೆಯು, ||೩೧||

ತನ್ನಿರೂಪದಿಂ—ಅವಳಾಜ್ಞೆಯಿಂದ, ಪೊತ್ತು—ಶಿರಸಾವಹಿಸಿ, ಆಪೊಳಲ—ಆ ಪಟ್ಟಣದ, ಜೀರ್ಣಕುಟೀರದೊಳ್—ಶಿಥಿಲವಾದ ಗುಡಿಸಲಿನಲ್ಲಿ, ವಿಧಿವದುಪಪನ್ನಂ—ಯಥಾಶಾಸ್ತ್ರೀಯವಾಗಿ ಶರಣಾಗತನು, *

ಈಭವಭರದ—ಈ ಪಾಪದಭಾರದ, ಉರವಣೆಗೆ—ಅತಿಶಯಕ್ಕೆ, ಪೆಳರ್ದು—ಭಯಪಟ್ಟು, ||೩೨||

ಕರುಣಾಲೋಕನಮಾತ್ರದಿಂ—ದಯಾಯುಕ್ತವಾದ ನೋಟದಿಂದಲೇ, ಮೊದಲ—ಪೂರ್ವದಲ್ಲಿ ಮಾಡಿದ್ದ, ದುಷ್ಕರ್ಮಂಗಳಂ—ಪಾಪಗಳನ್ನು, ತೂಳ್ದು—ಮೆಟ್ಟಿ, ಕಲಶೋದಕಸ್ನಪನದಿಂ—ಕುಂಭದಲ್ಲಿದ್ದ ನೀರಿನ ಅಭಿಷೇಕದಿಂದ, ಶುದ್ಧಾತ್ಮನಂ—ಪರಿಶುದ್ಧವಾದ ಜೀವವುಳ್ಳವನನ್ನಾಗಿ, ಶ್ರೀಶಿವಹಸ್ತಮಂ ಶಿವಾವಾಹಿತವಾದ ಕಯ್ಯನ್ನು, ||೩೩||

ದುರ್ಲಿಪಿನಿರಾಸಂಗೆಯ್ದು—ಕೆಟ್ಟಬರಹವಂ ಕೆಡಿಸಿ,

ಕಂ || ವಿತತಶಿವಜ್ಞಾನಸಮು | ನ್ನತಸತ್ಕ್ರಿಯೆಯುಂ ನೆಗಳ್ಗೆ ಗುರುಚರಲಿಂಗಾ || ರ್ಪಿತ ಸುಪ್ರಸಾದಸುಖಪರಿ | ಣತಿಯುಂ ಪದೆದಿತ್ತು ತಿಳುಪಿ ಚಿದ್ಘನದಿರವಂ ... ೩೫

ಶಾ|| ಜೀವನ್ಮುಕ್ತಿಗೆ ಮೂಲಕಾರಣ ಮೆನಿಪ್ಪಸ್ಪಂದಪೂರ್ಣಪ್ರಭಾ | ಭಾವೋದ್ಯತ್ಪ್ರಣವಾಂಗಲಿಂಗಮನೆ ಸಾಕ್ಷಾತ್ಕಾರಮಂ ಮಾಡಿ ವಿ || ದ್ಯಾವಾಸಂ ಗುರುದೀಕ್ಷೆಗೆಯ್ದೆದಯೆಯಿಂ ಕೈಕೊಂಡು ಸದ್ಭಕ್ತಿವೆ | ತ್ತಾ ವಾಗೀಶ್ವರ ನಿರ್ದ ನೀಶ್ವರಪದಾಂಭೋಜಾತಪೂಜೋತ್ಸವಂ ೩೬

ಮತ್ತೇ|| ಪರಮಾನಂದಮನಾಳ್ದು ಭಸ್ಮವಿಳಸದ್ರುದ್ರಾಕ್ಷೆಯಂ ತಾಳ್ದು ಭಾ | ಸುರಪಂಚಾಕ್ಷರಮಂತ್ರಮಂ ಜಪಿಯಿಸುತ್ತೀಶಾರ್ಚನಂಗೆಯ್ವುತಂ| ಚರಪಾದಾಂಬುಜಮಂ ಸಮರ್ಪಿಸುತೆ ಶೈವಾಚಾರಸಂಪತ್ತಿವೆ | ತ್ತಿರದರ್ಥಾಂಗನಿಜಾಸುಮುಖ್ಯಮ ನುಮೇಶಂಗರ್ಪಿಸುತ್ತಳ್ಕರಿಂ

ಕಂ || ಪರಮಶಿವಲಾಂಛನಪ್ರ | ಸ್ಫುರಿತಾಂಗಂ ಭಕ್ತಿಪಾರವಶ್ಯದಿ ನಿಂತೊ || ಪ್ಪಿರೆ ವಾಗೀಶಂಜೈನೋ | ತ್ಕರ ಮೀಕ್ಷಿಸಿ ಮುಳಿದು ಕೆಳರ್ದುಗಳಪುತೆಪಲವಂ|| ... ೩೮

ಕಂ || ಮೃಡದರ್ಶನಮುಂಪೊಕ್ಕಂ | ಜಡ ಮತಿಜಿನಮತಮುಸುಳಿದುಮುದ್ಗುರುವೆಸುತಂ|| ಪಿಡಿದಿಭದಮುಂದೆನೂಂಕಿದೊ | ಡೆಡೆಗೆಡದೆ ಗಜಾಸುರಾರಿ ಶರಣೆನುತಿರ್ದಂ .. ೩೯

ಕಂ || ಅಂಜಿದುದು ಮತ್ತಕುಂಜರ |ನಂಜದವ ಮರ್ಗುಳ್ದು ಫಣಿಗಳಂ ಬಾಧಿಸೆ ಮೃ|| ತ್ಯುಂಜಯ ಫಣಿಧರ ಶರಣೆನು | ತಂ ಜಯಿಸಿದ ನುಗ್ರಫಣಿಗಳಂ ವಾಗೀಶಂ ... ೪೦

---

ನಿರವಿಸಿ–ಬೋಧಿಸಿ, ಚಿದ್ಘನಪ್ರಭೆಯುಂ–ಸಾಂದ್ರವಾದ ಜ್ಞಾನಪ್ರಕಾಶವನ್ನು, ನಿಜಾಂಗಲಿಂಗದೃಢಯೋಗವಂ–ತನ್ನ ಜೀವಲಿಂಗಗಳಿಗೆ ಸ್ಥಿರವಾದ ಸಂಬಂಧವನ್ನು, ನಿರಾಕುಳಚಿತ್ತವೃತ್ತಿಯುಂ–ಚಂಚಲವಾಗದೇಇರುವಂತೆ ಮನೋವ್ಯಾಪಾರವನ್ನು, .. .. ||೩೪||

ವಿತತಶಿವಜ್ಞಾನ ಸಮುನ್ನತಸತ್ಕ್ರಿಯೆಯುಂ– ಪ್ರಸಿದ್ಧವಾದ ಪರಶಿವಜ್ಞಾನವೇನು ಉತ್ಕೃಷ್ಟವಾದ ಸದಾಚಾರವೇನು ಇವುಗಳನ್ನು, ಗುರುಚರಲಿಂಗಾರ್ಪಿತ ಸುಪ್ರಸಾದಸುಖಪರಿಣತಿಯುಂ– ಗುರು ಜಂಗಮಲಿಂಗಗಳಿಗೆ ಸಮರ್ಪಿಸಲ್ಪಟ್ಟಶೇಷದ ಸುಖ್ಯದ ವೈಶಾಲ್ಯವನ್ನು, ಚಿದ್ಘನದ– ಶ್ರೇಷ್ಠವಾದ ಪರಮಾತ್ಮಜ್ಞಾನದ ||೩೫||

ಜೀವನ್ಮುಕ್ತಿಗೆ— ವಿದೇಹಕೈವಲ್ಯಕ್ಕೆ, ಅಸ್ಪಂದಪೂರ್ಣಪ್ರಭಾಭಾವೋದ್ಯತ್ಪ್ರಣವಾಂಗಲಿಂಗಮನೆ—ಅಸ್ಪಂದ— ಚಲಿಸದೇಇರುವ, ಪೂರ್ಣ— ತುಂಬಿದ, ಪ್ರಭಾ— ತೇಜಸ್ಸಿನಿಂಕೂಡಿದ, ಭಾವ ಮನಸ್ಸಿನಿಂದ, ಉದ್ಯತ್ —ಉತ್ಕೃಷ್ಟವಾದ, ಪ್ರಣವ–ಓಂಕಾರವೇ, ಅಂಗ–ದೇಹವಾಗುಳ್ಳ, ಲಿಂಗವನೆ, ||೩೬||

ಅರ್ಥಾಂಗನಿಜಾಸುಮುಖ್ಯಮಂ–ಅರ್ಥ— ಹಣ, ಅಂಗ— ದೇಹ, ನಿಜ— ತನ್ನ, ಅಸು— ಪ್ರಾಣಇವುಗಳೇ, ಮುಖ್ಯವಮಂ— ಮೊದಲಾದವುಗಳನ್ನು ||೩೭||

ಪರಮಶಿವಲಾಂಛನ ಪ್ರಸ್ಫುರಿತಾಂಗಂ–ಉತ್ಕೃಷ್ಟವಾದ ಶಿವಚಿಹ್ನದಿಂದ ಪ್ರಕಾಶಿಸುವ ದೇಹವುಳ್ಳ, ಭಕ್ತಿಪಾರವಶ್ಯದಿಂ— ಶಿವಭಕ್ತಿಯಿಂದುಂಟಾದ ಮೈಮರೆಯುವಿಕೆಯಿಂದ, ಕೆಳರ್ದು–ರೇಗಿ, ||೩೮||

ಮೃಡದರ್ಶನಮಂ— ಶಿವಮತವನ್ನು, ಇಭದ— ಆನೆಯ, ಎಡೆಗೆಡದೆ–ಸ್ಥಾನವಂಬಿಟ್ಟು ಚಲಿಸದೆ, ಗಜಾಸುರಾರಿ–ಆನೆಯರೂಪನಾದ ರಾಕ್ಷಸನಿಗೆ ಶತ್ರುವಾದ ಈಶ್ವರನೇ ? . . . . ||೩೯||

ಮತ್ತಕುಂಜರಂ– ಮದಿಸಿದ ಆನೆಯು, ಅಂಜಿದುದು– ಹೆದರಿತು, . . ||೪೦

ಕಂ || ಸವಣ ರದ ನೀಕ್ಷಿಸುತೆ ಘೋ | ರವಿಷಂ ತೀವಿರ್ದ್ದ ಕೊಳದೊಳಿಡೆ ಸಾಗರಸಂ||
ಭವವಿಷಹರ ಶರ ಣೆನುತಂ | ಜವದಿಂ ಮೇಗೊಗೆದು ಜಯಿಸಿದಂ ವಿಷವ ನದಂ ೪೧

ಕಂ || ಅಳಿಯ ನಿವ ನಾವತೆರದಿಂ | ದಳಿವವ್ರೊಲೆಸಗುವೆ ವೆನುತ್ತೆ ಕಾಳ್ಕಿಚ್ಚಿನೊಳಾ |
ಖಳರಿಡೆ ಜಯಿಸಿದ ನದನು | ಜ್ವಾಳಶಿಖಿರಸನಾಪ್ರಹರಣ ಶರ ಣೆನುತಾಗಳ್ ... ೪೨

ವ|| ಮತ್ತಮಿಂತು ಕತಿಪಯಕಪಟೋಪಾಯದಿಂ ಕೊಲ್ಲಲ್ಬಗೆದೆಸಗಿದಂದವೆಲ್ಲಮಂ ತಿರುವಾಕರೀಶಂ ಗೆಲೆ ಕಂಡು ಭಯಂ ಗೊಂಡೀಮಹಾಮಹಿಮಂ ಬಳಿಯಿನೆಮ್ಮ ನೆಂತುಂ ಭಂಜಿಸದೆ ಮಾಣ ನೆಂದು ನೆನೆ ದಾಸವಣ ರೆಲ್ಲ ರವನತ ರಾಗಿ ಶರಣ್ಬುಗ ಲೊಡ ನನಿಬ ರೆಲ್ಲರ ಭವಿಮುದ್ರೆಯಂ ತೊಡೆದು ಶಿವಮುದ್ರಾಂಕಿತರಂ ಮಾಡಿ ಶಿವಭಕ್ತಿಭಾಗ್ಯಮ ನಿತ್ತು ಪೊರೆದು|

ಕಂ|| ಕಳ್ತಲೆಯಂ ಕಳೆವಂತಿರೆ | ಕೀಳ್ತು ಬಿಸುಟ್ಟಣ್ಮಿನಿಂ ಜಿನಪ್ರತಿಮೆಗಳಂ || ತಳ್ತ ಗು
ಡಿಗಳನೆ ಕೆಡಪಿ ನೆ | ಗಳ್ತೆಗೆ ನೆಲೆಯಾಗಿ ನೋಳ್ಪ ರರಿದೆನೆ ದರೆಯೊಳ್|| ... ೪೩

ಕಂ || ಜಿನಮತಮದನಗಕುಲಿಶಂ | ಜಿನಮತಘನಚಂಡಮಾರುತಂ ಜಿನಮತಕಾ ||
ನನಪರಶು ವೆಂಬ ಬಿರುದೆಸೆ | ಯೆ ನಿತಾಂತಂ ಮೆರೆದ ನಾಗನೇ ವಾಗೀಶಂ | ೪೪

ಕಂ || ಆರುಹತ ಕೇಳ್ವು ದೆಲೆ ತಿರು | ವಾರೂರೆನಿಸಿರ್ಪ್ಪ ಪೊಳಲೊಳೊಪ್ಪುವ ನೋ
ರ್ಪಂ|| ಮಾರಹರಭಕ್ತ ನಚಲಿತ | ಧೀರ ನಿರುತ್ತಾಂಡಿ ಯೆಂಬ ನನಘಚರಿತ್ರಂ ೪೫

ಕಂ || ಜಾತ್ಯಂಧಕ ನಖಿಳಬುಧ | ಸ್ತುತ್ಯ ನವಂ ಲಿಂಗಮಜ್ಜನಾರ್ಥದಕೊಳನಂ || ಸತ್ಯ
ನಿಧಿ ನೆಗಳ್ವ ಬಗೆವಿಡಿ | ದತ್ಯಧಿಕ ಮೆನಿಪ್ಪ ಲಿಂಗಗೇಹದ ಬಳಿಯೊಳ್ ... ೪೬

---

ಸಾಗರಸಂಭವವಿಷಹರ–ಸಮುದ್ರದಲ್ಲಿ ಹುಟ್ಟಿದವಿಷವಂ ಪರಿಹರಿಸಿದ ಪರಶಿವನೇ! ಜವದಿಂ– ಬೇಗನೆ, ಮೇಗೊಗೆದು– ಮೇಲಕ್ಕೆ ಹಾರಿ, .. .. .. .. ||೪೧||

ಅಳಿಯಂ–ಸಾಯುವದಿಲ್ಲವು, ಕಾಳ್ಕಿಚ್ಚಿನೊಳ್– ಕಾಡುಬೆಂಕಿಯಲ್ಲಿ, ಆಖಳರ್– ಆ ನೀಚರು, ಉಜ್ವಾಳಶಿಖಿರಸನಾಪ್ರಹರಣ– ಪ್ರಕಾಶಿಸುವ ಬೆಂಕಿಯನಾಲಿಗೆಯನ್ನು ಹಾಳುಮಾಡಿದವನೇ! .. ||೪೨||

ಕತಿಪಯಕಪಟೋಪಾಯದಿಂ–ಕೆಲವುಕೃತ್ರಿಮಗಳಾದ ಯುಕ್ತಿಗಳಿಂದ, ಕೊಲಲ್–ಕೊಲ್ಲುವದಕ್ಕೆ, ಬಗೆದು–ಯೋಚಿಸಿ, ಎಸಗಿದ–ಮಾಡಿದ, ಗೆಲೆ–ಗೆಲ್ಲಲು, ಬಳಿಯಿಂ–ಅನಂತರದಲ್ಲಿ, ಭಂಜಿಸದೆ–ನಾಶಮಾಡದೆ, ಮಾಣಂ–ಬಿಡುವದಿಲ್ಲ, ಭವಿಮುದ್ರೆಯಂ–ಲಿಂಗಹೀನ ಚಿಹ್ನವನ್ನು, ಕೆಡಿಸು–ಹೋಗಲಾಡಿಸಿ, ಶಿವಮುದ್ರಾಂಕಿತರಂ–ಶಿವಚಿಹ್ನೆಯಿಂದ ಲಾಂಛಿತರನ್ನಾಗಿ, ಶಿವಭಕ್ತಿಭಾಗ್ಯಮಂ–ಶಿವಭಕ್ತಿಯೆಂಬ ಐಶ್ವರ್ಯವನ್ನು, ಕಳ್ತಲೆಯುಂ–ಕತ್ತಲೆಯನ್ನು, ಅಣ್ಮಿನಿಂ–ಪರಾಕ್ರಮದಿಂದ, ನೆಗಳ್ತೆಗೆ–ಪ್ರಸಿದ್ಧಿಗೆ, ನೆಲೆ–ಆಶ್ರಯನು, ನೋಳ್ಪರ್–ನೋಡತಕ್ಕವರು, ಅರಿದು–ಅಸಾಧ್ಯವೆಂಬ

ಜಿನಮತ ಮದನಗಕುಲಿಶಂ– ಜೈನಮತದ ಗರ್ವವೆಂಬ ಪರ್ವತಕ್ಕೆ ವಜ್ರಾಯುಧನಾದವನು, ಜಿನಮತಘನಚಂಡಮಾರುತಂ– ಜೈನಮತವೆಂಬ ಮೇಘಕ್ಕೆ ದೊಡ್ಡಗಾಳಿಯಾದವನು, ಜಿನಮತಕಾನನಪರಶು– ಜೈನಮತವೆಂಬ ಕಾಡಿಗೆಕೊಡಲಿಯು, .. .. .. .. ||೪೪||

||೪೫||
ಆರುಹತ– ಜೈನಮತಸ್ಥನೇ, ಪೊಳಲೊಳ್– ಪಟ್ಟಣದಲ್ಲಿ, ..

ಜಾತ್ಯಂಧಕಂ–ಹುಟ್ಟುಕುರುಡನಾದ, ಅಖಿಳಬುಧಸ್ತುತ್ಯಂ–ವಿದ್ವಾಂಸರೆಲ್ಲರಿಂದಲೂ ಹೊಗಳಲ್ಪಡುವದಕ್ಕೆ ಯೋಗ್ಯನಾದ, ಲಿಂಗಮಜ್ಜನಾರ್ಥದ– ಲಿಂಗಾಭಿಷೇಕಕ್ಕೋಸ್ಕರವಾದ, ನೆಗಳ್ವ– ಮಾಡುವ, ಬಗೆವಿಡಿದು– ಯೋಚನೆಯಂಮಾಡಿ, ಲಿಂಗಗೇಹದ–ಶಿವದೇವಸ್ಥಾನದ, ಬಳಿಯೊಳ್–ಸಮೀಪದಲ್ಲಿ, .. .. ||೪೬||

ತರಳವೃತ್ತ ॥ ಪೆಡಗೆ ಗುದ್ದಲಿನೇಣ್ಗಳಂ ತಳೆ ದೊಳ್ಪನಿಂ ಶಿವಲಿಂಗದಾ|ಗುಡಿಯ ಮುಂಗಡೆ ಯೊಂದುಮಂ ಕೊಳ ದಗ್ರದೇಶದೊಳೊಂದುಮಂ ॥ ನಡುತೆ ಕಂಬಮ ನಲ್ಲಿ ಪೆರ್ಮಿಳಗಟ್ಟುತಂ ಪಿಡಿದೆಯ್ದಿ ಮ । ಣ್ಣಡಕು ತೊಂದೆಡೆ ನೇರ್ಪುಗೊಂ ಡಗುಳುತ್ತ ಮತ್ತವ ನಿರ್ಪ್ಪಿನಂ

ವ। ಜಿನಸಮಯಸ್ಥರಾದ ಕುಮತಿಗ ಳದಂ ಕಂಡಳ್ಕಜಂಗೊಂಡೇಳ್ತಂದು ನಟ್ಟ ಕಂಬಮಂ ಮುರಿದು ನೇಣಂ ಪರಿದು ಭಕ್ತಕೃತ್ಯಕ್ಕೆ ವಿಘ್ನಮಂ ನೆಗಳ್ಚಿ ಪಿರಿದುಪರಿಹಾಸಂಗೆಯ್ಯುತ್ತ ಮಿರ್ಪ್ಪಿನ ಮಲ್ಲಿ ॥ ... ... ... ...

ಕಂ॥ ಆಗಳೆ ಕಣ್ಬಡೆದಭವನಿ । ನಾಗುಣನಿಧಿ ಜಿನಮತಸ್ಥರಂ ಕುರುಡರ ನಂ। ದಾಗಿಸಿ ಭಂಗಿಸಿ ಕೆಡಪಿ ಜಿ । ನಾಗಾರನು ನಾತ್ಮಮಹಿಮೆಯಂ ಪ್ರಕಟಿಸನೇ ॥ ... ೪೮

ವ ॥ ಅಂತುಮಲ್ಲದೆಯುಂ। ಮತ್ತೀ ಧರಣೀಭಾಮಿನಿ ಯಾಸ್ಯಬಿಂಬ ಮೆನೆ ಚೆಲ್ವಾಗಿರ್ದ ತದ್ದ್ರಾವಿಡೋ । ರ್ವರೆಯೊಳ್ಕಂಗೊಳಸಿರ್ದ ಕಾಲಪುರದೊಳ್ಶೈವದ್ವಿಜಾಖ್ಯಾನಭೂ ಸುರವರ್ಯಂ ಗೊಗೆದೊಪ್ಪಿದಂ ಕುಮತವಿಧ್ವಂಸಾರ್ಥಮೀಶಾಜ್ಞೆಯಿಂ ।ಶರಜನ್ಮಂ ಜಿತತಾರಕಂಪ್ರಮುದಿತಸ್ವಾರಾಣ್ಮುಖಂ ಷಣ್ಮುಖಂ ... ... ... ೪೯

ವ। ಅಂತೊಗೆದು ಶೈಶವವಿಳಾಸಮ ನವಲಂಬಿಸಿರೆ ತಜ್ಜನಕ ನೊಂದುದಿನದ ಮಧ್ಯಂದಿನಸ್ನಾನಕ್ಕೆ ಬರುತ್ತ ಮಾಕುಮಾರನಂ ಪೆಗಲೊಳ್ತಳೆದು ಪೆಂಪಿಂ ದೇಳ್ತಂದೊಂದುಕುಸುಮಾರಾಮದ ವಿಮಳಸ್ಥಳದ ಕಮಳಕುಮುದಕಲ್ಹಾರಕಮನೀಯಸರಳತರಳತರಂಗಸಂಗತಮಧುರಶೀತಳವಿಮಳಜಳಕಲಿತಸರೋವರದ ಪರಿಸರದ ಪಸಲೆಯೊ ಳಿರಿಸಿ ನೀರ್ಮುಳುಗ ಲ್ಪೈದಿದನಿತರೊ ಳಾಕುಮಾರನಿರ್ದ ತಾಣಕ್ಕೆ ॥ ... ... ...

---

ಪೆಡಗೆ– ಹಡಗೆ, ನೇಣ್ಗಳಂ– ಹಗ್ಗಗಳನ್ನು, ಒಂದುಮಂ– ಒಂದನ್ನೂ, ಅಗ್ರದೇಶದೊಳ್– ಮುಂಗಡೆಯಲ್ಲಿ, ನಡುತೆ– ನಡುತ್ತ, ಪೆರ್ಮಿಳಗಟ್ಟುತಂ– ದೊಡ್ಡಹಗ್ಗವನ್ನು ಕಟ್ಟುತ್ತ, ನೇರ್ಪುಗೊಂಡು– ನೇರವಾಗಿ, ||೪೭||

ಕುಮತಿಗಳ್– ದುರ್ಬುದ್ಧಿಯುಳ್ಳವರು, ಅಳ್ಕಜಂಗೊಂಡು–ಹೊಟ್ಟೆಯುಕಿಚ್ಚಂ ಹೊಂದಿ, ಏಳ್ತಂದು–ಬಂದು ಪರಿದು– ಕಿತ್ತು, * * * * *

ಭಂಗಿಸಿ– ಹಾಳುಮಾಡಿ, ಜಿನಾಗಾರಮಂ– ಬಸದಿಯನ್ನು, . . . . ||೪೮||

ಧರಣೀಭಾಮಿಯ–ಭೂಮಿಯೆಂಬಸ್ತ್ರೀಯ, ಆಸ್ಯಬಿಂಬಂ– ಮುಖಮಂಡಲವು, ಶೈವದ್ವಿಜಾಖ್ಯಾನಭೂಸುರವರ್ಯಂಗೆ– ಶೈವದ್ವಿಜನೆಂಬಹೆಸರುಳ್ಳ ಬ್ರಾಹ್ಮಣಶ್ರೇಷ್ಠನಿಗೆ, ಕುಮತವಿಧ್ವಂಸಾರ್ಥಂ– ಕೆಟ್ಟಮತಗಳನ್ನು ನಾಶಮಾಡುವದಕ್ಕೆ, ಶರಜನ್ಮಂ– ಶರತೃಣದಲ್ಲಿ ಹುಟ್ಟಿದ, ಜಿತತಾರಕಂ– ಜೈಸಲ್ಪಟ್ಟ ತಾರಕಾಸುರನುಳ್ಳ, ಪ್ರಮುದಿತಸ್ವಾರಾಣ್ಮುಖಂ–ಪ್ರಮುದಿತ– ಸಂತೋಷಪಡಿಸಲ್ಪಟ್ಟ, ಸ್ವಾರಾಟ್– ಇಂದ್ರನೇ, ಮುಖಂ– ಮೊದಲಾದ ದೇವತೆಗಳುಳ್ಳ, . . . . . . ||೪೯ ||

ಶೈಶವವಿಳಾಸಮಂ– ಬಾಲಲೀಲೆಯನ್ನು, ಮಧ್ಯಂದಿನಸ್ನಾನಕ್ಕೆ– ಮಧ್ಯಾಹ್ನಕಾಲದಲ್ಲಿ ಮಾಡುವಸ್ನಾನಕ್ಕೋಸ್ಕರ. ಕುಸುಮಾರಾಮದ– ಹೂದೋಟದ, ಕಮಳ . . . ಸರೋವರದ–ಕಮಳ– ತಾವರೆ, ಕುಮುದ– ಬಿಳಿಯನೈದಿಲೆ. ಕಲ್ಹಾರ– ಸೌಗಂಧಿಕಕಮಲಗಳಿಂದ, ಕಮನೀಯ– ಮನೋಹರವಾದ, ಸರಳತರ– ಅತಿಮೃದುವಾದ, ತರಂಗ– ತೆರೆಗಳಿಂದ, ಸಂಗತ– ಕೂಡಿದ, ಮಧುರ– ಸಿಯಾದ. ಶೀತಳ– ತಂಪಾದ, ವಿಮಳ– ನಿರ್ಮಲವಾದ,

ಕಂ || ಜನನಿಜನಕರ್ಕಳೀರ್ವರ್ | ಮನಮೊಲ್ದೀಳ್ತಂದು ನಿಜಕುಮಾರನ ನಾಗಳ್ |
ನನೆಕೊನೆವೋಗುತೆ ರಾಗಿಸಿ | ಬಿನದದೆ ನಡೆ ನೋಡಿ ನೋಡಿ ನಲಿದ ರುಮೇಶರ್ || ೫೦

ಕಂ || ಮೃಡನಂಗದತ್ತಣಿಂ ದಿಳಿ | ದೊಡನೇಳ್ತಂದಗಜೆ ಬಿಗಿದು ಬಿಗಿಯಪ್ಪಿ ಮುದಂ |
ಬಡೆ ದೆಚ್ಚು ಪಾಯೆ ಮೊಲೆವಾ | ಲ್ತೊಡೆಯೊಳ್ಕುಳ್ಳಿರಿಸಿ ಕುವರನಂ ಮುದ್ದಿಸಿದಳ್ ೫೧

ವ || ಅಂತು ಮುದ್ದಿಸಿ ಮುಂಡಾಡಿ ಶಾಂಭವದೀಕ್ಷೆಯಂ ಕರುಣಿಸಿ ತೊರೆದ ಮೊಲೆವಾ
ಲಂ ತಣಿವಿನ ಮೂಡಿ ಮತ್ತ ಮಿರದೆ ... .. ...

ಮ || ಸ್ರ ಮೊಲೆವಾಲಂ ತೀವಿ ಪೊಂಬಟ್ಟಲೊಳೆ ಶಿಸುಕರಕ್ಕಂತದಂ ಕೊಟ್ಟು ಸಾರೋ |
ಜ್ವಲಸತ್ಯಾಲಾಪದಿಂದಂಪರಸಿ ಸರಸಿಜಾತಾಕ್ಷಿ ಮಾಣಿಕ್ಯಭೂಷಾ | ವಲಿಯಂ ಕೈಗೈದು ನೇಹಂ
ನಿಮಿರೆ ಬಿಗಿದು ತಳ್ಕೈಸುತಾತ್ಮೇಶ ನಂಕ | ಸ್ಥಳಮಂತಾ ನೈದೆ ತತ್ಕಾಲದೊಳೆ ಕೊಳದೆ ನೀ
ರ್ಮಿಂದು ಬಂದಂ ದ್ವಿಜೇಂದ್ರಂ .. ... ... ೫೨

ಕಂ || ಕುಡಿದ ಮೊಲೆವಾಲ ಧಾರೆಗ | ಳೊಡ ನಿಳಿತರೆ ಲಾಲೆವಿಡಿದು ಕಡೆವಾಯಿಂ ಚೆ |
ಲ್ವಡರ್ದ ಮಣಿಭರಣರುಚಿ ಪೆಂ | ಪಿಡಿದಿರೆ ಪೊಂಬಟ್ಟಲಾಂತು ಮಿಸುಗುವ ಶಿಶುವಂ ೫೩

ಮತ್ತೇ || ಜನಕಂ ವಿಸ್ಮಯಮುತ್ತು ನೋಡಿ ಕಿನಿಸಂ ತಾಳ್ದಿತ್ತಣಿಂ ಬಂದುದೀ |
ಕನಕಪ್ರೋಜ್ವಳಪಾತ್ರಪೂರ್ಣಸುಧೆ ಪೇ ಳೆಂದಾಗ್ರಹಂಗೈಯೆನಂ || ದನ ನಾತಾತನ ತರ್ಜನಂ
ಕ್ಕಳರು ತೆಂದಂ ತಂದೆ ಕೇ ಳ್ಬಂದರಿಂ | ದು ನಭೋಮಾರ್ಗದೆ ರತ್ನಪುಷ್ಪಕದೊ ಳೊಳಸ
ದಂಬಿಕಾಶಂಕರರ್ ... .. ... ... ೫೪

---

ಜಳ—ನೀರಿನಿಂದ, ಕಲಿತ— ಕೂಡಿದ, ಸರೋವರದ— ಕೊಳದ, ಪರಿಸರದ— ಸಮೀಪದಲ್ಲಿರುವ, ಪಸಲೆಯೊಳ್— ಪ್ರದೇಶದಲ್ಲಿ, * * * * *

ಜನನಿಜನಕರ್ಕಳ್—ತಾಯ್ತಂದೆಗಳಾದ, ಉಮೇಶರ್— ಪಾರ್ವತೀ ಪರಮೇಶ್ವರರು, ನನೆಕೊನೆ ವೋಗುತೆ— ಬಹುಸಂತೋಷಪಡುತ್ತಾ, ಬಿನದದೆ— ವಿನೋದದಿಂದ * * * ||೫೦||

ಅಂಗದತ್ತಣಿಂದೆ—ಶರೀರದ ದೆಸೆಯಿಂದ, ಎಚ್ಚು— ಚಿಮ್ಮಿ * * ||೫೧||

ತೊರೆದ— ಹೊರಕ್ಕೆ ಹೊರಟ, ತಣಿವಿನಂ— ತೃಪ್ತಿಪಡುವಹಾಗೆ, ಊಡಿ— ಕುಡಿಸಿ * *

ಪೊಂಬಟ್ಟಲೊಳೆ— ಚಿನ್ನದ ಬಟ್ಟಲಿನಲ್ಲಿ, ಶಿಶುಕರಕ್ಕೆ— ಮಗುವಿನ ಕಯ್ಗೆ, ಸಾರೋಜ್ವಲಸತ್ಯಾಲಾಪದಿಂ— ಶ್ರೇಷ್ಠವಾಗಿ ಪ್ರಕಾಶಿಸುವ ಯಥಾರ್ಥವಾದ ಮಾತಿನಿಂದ, ಪರಸಿ— ಆಶೀರ್ವಾದ ಮಾಡಿ, ಸರಸಿಜಾತಾಕ್ಷಿ— ಕಮಲದಂತಿರುವ ಕಣ್ಣುಳ್ಳ ಪಾರ್ವತಿಯು, ಮಾಣಿಕ್ಯಭೂಷಾವಲಿಯಿಂ— ರತ್ನಾಭರಣಪಜ್ತಿಯಿಂದ, ಕೈಗೈದು— ಅಲಂಕರಿಸಿ, ನೇಹಂ— ಪ್ರೀತಿಯು, ನಿಮಿರೆ ಹೆಚ್ಚಲು, ತಳ್ಕೈಸುತೆ— ಆಲಿಂಗಿಸುತ್ತ, ಆತ್ಮೇಶನ— ತನ್ನಗಂಡನ, ಅಂಕಸ್ಥಲಮಂ— ತೊಡೆಯ ಪ್ರದೇಶವನ್ನು .. : .. ||೫೨||

ಲಾಲೆವಿಡಿದು— ಜೊಲ್ಲನ್ನು ಅನುಸರಿಸಿ, .. .. .. ||೫೩||

ವಿಸ್ಮಯಮುತ್ತು— ಆಶ್ಚರ್ಯವಂ ಹೊಂದಿ, ಕಿನಿಸಂ— ಕೋಪವನ್ನು, ಈ ಕನಕಪ್ರೋಜ್ವಳಪಾತ್ರಪೂರ್ಣಸುಧೆ— ಈ ಚಿನ್ನದ ಪ್ರಕಾಶಿಸುವ ಪಾತ್ರೆಯಲ್ಲಿ ತುಂಬಿರುವ ಹಾಲು, ತರ್ಜನಕ್ಕೆ— ಭಯಪಡಿಸುವಿಕೆಗೆ, ಅಳರುತೆ— ಭಯವಿಕಾರವಂ ಹೊಂದುತ್ತ, ನಭೋಮಾರ್ಗದೆ ಅಂತರಿಕ್ಷಮಾರ್ಗದಿಂದ, ರತ್ನಪುಷ್ಪಕದೊಳ್— ರತ್ನಖಚಿತವಾದ ವಿಮಾನದಲ್ಲಿ, ಅಂಬಿಕಾಶಂಕರರ್— ಪಾರ್ವತೀಪರಮೇಶ್ವರರು .. .. ||೫೪||

ಚಂ || ಪ್ರಕಟಜಟಾಕಿರೀಟಿಯ ಫಣೀಂದ್ರವಿಭೂಷನ ಶೂಲಪಾಣಿ ಯು | ದ್ಧಕರಟಕೃತ್ತಿವಾಸನ ಶಿಖಾವಹಲೋಚನ ನಂಕದಿಂ ಮಣಿ || ಪ್ರಕರಕಿರೀಟಧಾರಿಣಿ ಸುರತ್ನವಿಭೂಷಣೆ ಪದ್ಮಪಾಣಿ ದಿ | ವ್ಯಕನಕವಾಸೆ ಸಾರಕರುಣಾರ್ದ್ರವಿಲೋಚನೆ ಬಂದ ಳಿಳ್ಕರಿಂ ೫೫

ಕಂ || ಕುಸುಮದೊಳ್ ಕಂಪು ಕರ್ಬಿನ | ರಸದೊಳ್ಮಸುಪಿಂಪು ಜೊನ್ನದೊಳ್ತಂಪುವಿರಾ || ಜಿಸುವವೊ ಲಭವನೊಳೊಡವೆರೆ | ದೆಸೆವ ಜಗನ್ಮಾತೆ ಕೃಪಯಿನಿಂದೇಳ್ತಂದಳ್ ೫೬

ವ || ಅಂತೇಳ್ತಂದು ಜಗಜ್ಜನನಿ ಜನನಿ ತನಯನಂ ಮುದ್ದಿಪಂ ತೆನ್ನಂ ತನ್ನಂಕಪರ್ಯಂಕದೊಳ್ ತೆಗೆದು ಬಿಗಿದಪ್ಪಿ ಕುಳ್ಳಿರಿಸಿ ಕೃಪಾರಸಂ ತೆರೆಮಸಪ ಕಟಾಕ್ಷದಿ ನಿಱೀಕ್ಷಿಸಿ ತೊರೆದೆಜ್ಜು ಪಾಯ್ವ ಮೊಲೆಪಾಲ ನೂಡಿ ಮಣಿದೊಡವ ನಿಟ್ಟು ಮುಗುಳ್ದ ಕುಚಕನಕಕಲಶವ ಧುರರಸಮಂ ಪೊಂಬಟ್ಟಲೊ ಳ್ಕರೆದು ಶೀವಿ ಮತ್ಕರದೊ ಳಿತ್ತು ಕರುಣಿಸಿ ನಿಜರಮಣನೊಡನೆ ಮಣಿಪುಷ್ಪಕಮ ನಡರ್ದು ... ... ...

ಕಂ || ತೊಳತೊಳಗುತೆ ಸುರಪಥದೊ | ಳ್ತಳರ್ದಪ ಳೆಲೆನೋಳ್ಪುದೆಂದು ಜನಕಂಗೆನೆ ಕೇ || ಳ್ದಳೆಗಿದು ಪೊಸತೆಸುತಂ ಬಾಂ | ದಳದೊ ಳ್ನಡೆ ನೋಡಿ ಕಂಡ ನವನದ್ರಿಜೆಯಂ ೫೭

ಮ || ಸ್ರ || ಗಿರಿಶಾಂಕಾರೂಢೆಯಂಗೀ|ರ್ವರಮುರಹರಭಾವಾಸಮಾಚಾಲಿತೋಚ್ಚಾ | ಮರಚಂಚತ್ಪಾರ್ಶ್ವೆಯಂ ನಿರ್ಜರಪರಿವೃತಪಾದಾಬ್ಜೆಯಂ ದಿವ್ಯದೇಹಾ || ಭರಣಪ್ರದ್ಯೋತಿತಾಶಾಕುಳೆಯ ನಮಿತಸೌಂದರ್ಯಸಂಪನ್ನೆಯಂ ಕಾಂ | ಕರಿಯಂ ಕಂಡಲ್ಲಿ ದಂಡಪ್ರಣತಿಯನಗಿದಂ ಭೂಸುರಂ ಭಕ್ತಿಯಿಂದಂ ... ... ... ೫೮

ಪ್ರಕಟಜಟಾಕಿರೀಟಿಯ—ಪ್ರಸಿದ್ಧವಾದ ಜಡೆಯೆಂಬ ಕಿರೀಟವುಳ್ಳ, ಉದ್ಧ ಕರಟ ಕೃತ್ತಿವಾಸನ—ಉದ್ಧ—ಉತ್ಕೃಷ್ಟವಾದ, ಕರಟ—ಆನೆಯ, ಕೃತ್ತಿ—ಚರ್ಮವೇ, ವಾಸನ—ವಸ್ತ್ರವಾಗುಳ್ಳ, ಶಿಖಾವಹಲೋಚನನ—ಅಗ್ನಿನೇತ್ರನಾದ ಶಿವನ, ಅಂಕದಿಂ—ತೊಡೆಯಿಂದ, ಮಣಿಪ್ರಕರಕಿರೀಟಧಾರಿಣಿ—ರತ್ನಗಳ ಸಮೂಹವುಳ್ಳ ಕಿರೀಟವನ್ನು ಧರಿಸಿದ, ಪದ್ಮಪಾಣಿ—ಕಮಲವೇ ಹಸ್ತದಲ್ಲುಳ್ಳ, ದಿವ್ಯಕನಕವಾಸೆ—ಶ್ರೇಷ್ಠವಾದ ಸುವರ್ಣವಿಕಾರವಾದ ವಸ್ತ್ರವುಳ್ಳ, ಸಾರಕರುಣಾರ್ದ್ರವಿಲೋಚನೆ—ಶ್ರೇಷ್ಠವಾದ ದಯಾರಸದಿಂದ ನೆನದ ನೇತ್ರವುಳ್ಳ ||೫೫||

ಕಂಪು—ಪರಿಮಳವು, ಇಂಪು—ಮಾಧುರ್ಯವು, ಜೊನ್ನದೊಳ್—ಬೆಳ್ದಿಂಗಳಿನಲ್ಲಿ, ||೫೬||

ಅಂಕಪರ್ಯಂಕದೊಳ್—ತೊಡೆಯೆಂಬ ಮಂಚದಲ್ಲಿ, ಕುಚಕನಕಕಲಶದ—ಚಿನ್ನದ ಕಲಶದಂತಿರುವ ಸ್ತನದ, ಅಮೃತರಸಮಂ—ಹಾಲನ್ನು, * * * * *

ತಳರ್ದಪಳ್—ಹೋಗುವಳು, ಬಾಂದಳದೊಳ್—ಆಕಾಶಪ್ರದೇಶದಲ್ಲಿ .. ||೫೭||

ಗಿರಿಶಾಂಕಾರೂಢೆಯಂ— ಪರಮೇಶ್ವರನ ತೊಡೆಯಂ ಹತ್ತಿದ, ಗೀರ್ವರ . . . . . . ಪಾರ್ಶ್ವೆಯಂ— ಗೀರ್ವರ—ಬ್ರಹ್ಮ, ಮುರಹರ— ವಿಷ್ಣು ಇವರುಗಳ, ಭಾಮಾ ಸ್ತ್ರೀಯರಿಂದ, ಸಮಾಚಾಲಿತ— ಚಲಿಸಲ್ಪಟ್ಟ, ಉಚ್ಚಾಮರ—ಉತ್ಕೃಷ್ಟವಾದ ಚಾಮರಗಳಿಂದ, ಚಂಚತ್—ಹೊಳೆಯುತ್ತಿರುವ, ಪಾರ್ಶ್ವೆಯಂ— ಪಕ್ಕಗಳುಳ್ಳ, ನಿರ್ಜರಪರಿವೃತಪಾದಾಬ್ಜೆಯಂ— ದೇವತೆಗಳಿಂದ ಸುತ್ತುವರಿಯಲ್ಪಟ್ಟ ಪಾದಕಮಲವುಳ್ಳ, ದಿವ್ಯದೇಹಾಭರಣಪ್ರದ್ಯೋತಿತಾಶಾಕುಳೆಯಂ—ದಿವ್ಯ—ಶ್ರೇಷ್ಠಗಳಾದ, ದೇಹ—ಶರೀರದಲ್ಲಿರುವ, ಆಭರಣ—ಅಲಂಕಾರವಸ್ತುಗಳಿಂದ, ಪ್ರದ್ಯೋತಿತ—ಪ್ರಕಾಶಗೊಳಿಸಲ್ಪಟ್ಟ, ಆಶಾ—ದಿಕ್ಕುಗಳ, ಕುಳೆಯಂ—ಸಮೂಹವುಳ್ಳ, ಅಮಿತಸೌಂದರ್ಯಸಂಪನ್ನೆಯಂ—ಗಣನಾತೀತವಾದ ಸುಂದರತ್ವದಿಂದ ಕೂಡಿದ, ದಂಡಪ್ರಣತಿಯೆನಗಿದಂ— ದೊಣ್ಣೆಯಂತೆ ನಮಸ್ಕಾರವಂ ಮಾಡಿದನು ||೫೮||

ವ || ಅಂತು ದಂಡಪ್ರಣಾಮುಂಗೆಯ್ದು ಪುತ್ರನಂ ವಿಸ್ಮಯಮುತ್ತು ನೋಡಿ ...

ಕಂ || ತನುಜ ನೆನೆಸಗಲ್ತಿವಂ ಮ | ಜ್ಜನಕಂ ಮಜ್ಗುರು ಮದಿಷ್ಟದೈವ ಮೆನುತ್ತಂ || ಮನದೊ ಳ್ನಮಿಸುತಿ ಪೆಗಲೊ | ಳ್ಪನದದೆತಳೆದವನ ನಾತ್ಮಗೃಹ ಕೇಳ್ತಂದಂ ... ೫೯

ವ || ಅಂತೇಳ್ತಂದು ನಿಜರಮಣಿಯೊಡ ನದೆಲ್ಲಮ ನರುಪಿ ತನ್ಮನಕ್ಕೆ ಸಾಶ್ಚರ್ಯಸಂತೋಷಮಂ ಪಡೆದು ಸುಖಮಿರ್ದ್ದನನ್ನೆಗಂ .. ... ... ...

ಕಂ || ಪಡೆದಂ ಸರ್ವಜ್ಞತೆಯಂ | ಪಡೆದಂ ವಾಕ್ಸಿದ್ಧಿವೃದ್ಧಿಯಂ ತೇಜಮುಮಂ || ಪಡೆದಂ ಗಿರಿಶನ ಕುವರನ | ಮಡದಿಯು ಮೊಲೆವಾಲಮಹಿಮೆ ಸಾಧಾರಣಮೇ ೬೦

ಕಂ || ತರುಣಿಂ ಮರುದಿನದುದಯದೊ | ಳರದೇಳ್ದು ಪುರದ ಗಿರಿಶಗೃಹಕ್ಕೇಳ್ತಂದಾ || ದರದಿಂ ಕಂಡಂ ಗಿರಿಜೆಯ | ಚರಣಮ ನೊಲ್ದೆರಗಿ ಪೊಗಳ್ದ ನತಿಸಂಭ್ರಮದಿಂ ೬೧

ಅಕ್ಕರಿಕೆವೃತ್ತಂ || ಸುರನುತಚರಣೇ ವರಗುಣಭರಣೇ ಖರರುಚಿಬಿಂಬಗತೇ | ಸರಸಿಜವದನೇ ಸುರುಚಿರರದನೇ ಪುರಹರಣಾಂಗಯುತೇ || ಕರಧೃತನಳಿನೇ ಪರಿಹೃತಮಳಿನೇ ಹರಿವಿಧಿಶಕ್ರನತೇ | ಕರಿರಿಪುಗಮನೇ ಹರಿರಿಪುಶಮನೇ ಪೊರೆ ಗಿರಿರಾಜಸುತೇ ೬೨

ವ || ಎಂದಭಿವಂದಿಸಿದ ನಂದನನ ನಂಬಿಕೆ ದಯಾವಲೋಕನದಿ ನಭೀಕ್ಷಿಸಿ ...

ಉ || ಚೆಂಡಿಕೆ ಗಾತ್ಮಕಂಧರದ ಮಾಲೆಯ ನೊಪ್ಪಿರೆಸೂಡಿ ಸತ್ಪ್ರಭಾ | ಮಂಡಿತಮಂಡನಂದೊಡಿಸಿ ಸಾರ್ಚಿ ಸುವರ್ಣದುಕೂಲಮಂ ಮನಂ || ಗೊಂಡೆಸವಾನಕಪ್ರಕರಮಂ ಮಣಿಚಾಮರವೀಜನಂಗಳಂ | ದಂಡಿಗೆಕಾಹಳೀಧವಳಶಂಖಮ ನಿತ್ತಳಪರ್ಣೆಕೂರ್ಮೆಯಿಂ ೬೩

ಕಂ || ಚೆಂದಂಮಿಗೆ ಶಂಕರನಂ | ನಂದೀಶಾದೀಶಗಣಮ ನೆನ್ನಂ ಪಾಡೆಂ || ದಿಂದುರವಿಬಿಂಬನಿಭಮಂ | ಪೊಂದಾಳಮ ನಿತ್ತ ಳಗಜೆ ಕುವರಂ ಗೊಲವಿಂ ... ೬೪

---

ಅಲ್ತು— ಅಲ್ಲವು, ಮಜ್ಜನಕಂ— ನನ್ನ ತಂದೆಯು, ಆತ್ಮಗೃಹಕೆ— ತನ್ನ ಮನೆಗೆ ||೫೯||

ವಾಕ್ಸಿದ್ಧಿವೃದ್ಧಿಯಂ— ಬಾಯಲ್ಲಿ ಹೇಳಿದಂತೆ ನಡೆಯುವ ವಿದ್ಯೆಯ ಹೆಚ್ಚಿಗೆಯನ್ನು ||೬೦||

||೬೧|| ಖರರುಚಿಬಿಂಬಗತೇ— ಸೂರ್ಯಮಂಡಲವಂ ಹೊಂದಿದ, ಸುರುಚಿರರದನೇ—ಮನೋಹರವಾದ ಹಲ್ಲುಗಳುಳ್ಳ. ಪುರಹರಣಾಂಗಯುತೇ—ತ್ರಿಪುರವಂ ನಾಶಮಾಡಿದ ಶಿವನದೇಹದೊಡನೆ ಕೂಡಿಡ, ಕರಧೃತನಳಿನೇ—ಕಯ್ಯಲ್ಲಿ ಧರಿಸಲ್ಪಟ್ಟ ಕಮಲವುಳ್ಳ, ಪರಿಹೃತಮಳಿನೇ— ನಾಶಮಾಡಲ್ಪಟ್ಟ ಪಾಪವುಳ್ಳ, ಹರಿವಿಧಿಶಕ್ರನತೇ— ವಿಷ್ಣು ಬ್ರಹ್ಮೇಂದ್ರರಿಂದ ನಮಸ್ಕರಿಸಲ್ಪಟ್ಟ, ಕರಿರಿಪುಗಮನೇ—ಕರಿರಿಪು— ಸಿಹ್ಮದಿಂದ, ಗಮನೇ—ಸಂಚಾರವುಳ್ಳ (ಅಂದರೆ ಸಿಹ್ಮವಾಹಿನಿಯಾದ,) ಹರಿರಿಪುಶಮನೇ—ಇಂದ್ರವೈರಿಗಳಾದ ರಾಕ್ಷಸರನ್ನು ಹಾಳುಮಾಡಿದ .. ||೬೨||

ಅಭಿವಂದಿಸಿದ— ನಮಸ್ಕರಿಸಿದ * * * *

ಚೆಂಡಿಕೆಗೆ ಕೇಶಕ್ಕೆ, ಆತ್ಮಕಂಧರದ— ತನ್ನ ಕತ್ತಿನ, ಸೂಡಿ— ಧರಿಸಿ, ಸತ್ಪ್ರಭಾಮಂಡಿತಮಂಡನಂದೊಡಿಸಿ— ಒಳ್ಳೆಯ ಕಾಂತಿಯಿಂದಲಂಕರಿಸಲ್ಪಟ್ಟ ಆಭರಣಗಳನ್ನಿಟ್ಟು, ಸುವರ್ಣದುಕೂಲಮಂ— ಭಂಗಾರದ ಜರಿಯುಳ್ಳ ಪಟ್ಟೆವಸ್ತ್ರವನ್ನು, ಆನಕಪ್ರಕರಮಂ— ತಮಟೆಗಳ ಸಮೂಹವನ್ನು, ಮಣಿಚಾಮರವೀಜನಂಗಳಂ— ರತ್ನಖಚಿತಗಳಾದ ಚಾಮರಬೀಸಣಿಗೆಗಳನ್ನು, ದಂಡಿಗೆ—ಪಲ್ಲಕ್ಕಿ, ಕಾಹಳೀಧವಳಂಖಮಂ—ಕೊಂಬು ಬಿಳಿಯ ಶಂಖವನ್ನು, ಕೂರ್ಮೆಯಿಂ— ಪ್ರೀತಿಯಿಂದ .. .. .. ||೬೩||

ನಂದೀಶಾದೀಶಗಣಮಂ— ನಂದೀಶ್ವರನೇ ಮೊದಲಾದ ಶಿವಗಣವನ್ನು, ಇಂದುರವಿಬಿಂಬನಿಭಮಂ— ಚಂದ್ರ ಸೂರ್ಯಂಗೆ ಸದೃಶವಾದ, ಪೊಂದಾಳಮಂ— ಚಿನ್ನದ ತಾಳವನ್ನು, ಒಲವಿಂ— ಪ್ರೀತಿಯಿಂದ ||೬೪||

ವ ದುಂದುಭಿಯು ಪೊರೈಸಶಂಖದ ಡಮಡಮೆಂಬ ಡಿಂಡಿಮದ ಜತಿಗುಡುವ ಮೃದಂಗದ ಬೆಂಬಳಿವಿಡಿದ ಬೊಂಬುಳಿಯ ಕುಣಿವ ನಚ್ಚಣಿಯರ ಬಿರುದೆತ್ತಿ ಪೊಗಳ್ವ ವಂದಿವೃಂದದ ನೆರೆದು ನೋೞ್ಪ ಪುರಜನದ ಕಳಕಳದ ಪಿರಿಯಸಂಭ್ರಮ ಮಿಂಬುವಡೆಯೆ ... ...

ಮ ಸ್ರ॥ ತತಜೈನ ವ್ರಾತಗರ್ವಾಚಳಪವಿಧರ ನೀಬಂದನೀಬಂದ ನತ್ಯು। ದ್ಧತಬೌದ್ಧಧ್ವಾಂತವಿಧ್ವಂಸನಖರಕರ ನೀಬಂದನೀಬಂದನತ್ಯೂ। ರ್ಜಿತಚಾರ್ವಾಕೋಗ್ರದರ್ವೀಕರಖಗಪತಿಯೀ ಬಂದನೀಬಂದನೆಂದ। ದ್ಭುತನಾದಂ ಕರ್ಣವುಂ ಜಕ್ಕುಲಿಸೆ ಕಹಳೆಗಳ್ಮೊಂದೆ ವಿಸ್ತಾರದಿಂದಂ ೬೬

ಕಂ ॥ ಕರೆಯೆ ಬಿರುದೆತ್ತಿ ಜೈನ। ರ್ಜರಿಯೆ ಖಳಸರಿಯೆ ಬೌದ್ಧರೆರ್ದೆ ಬಿರಿಯೆಬುಧ ॥ ಪೊರೆಯೇರಿ ಪೊಗಳೆ ನೋೞ್ಪ। ಕ್ಕಿರಿದಚ್ಚರಿವೆರೆಯೆ ತಳರ್ದ ನತಿಸಂಭ್ರಮದಿಂ ॥ ೬೭

ಮತ್ತೇ ಶಿವಲಿಂಗಂಗಳನಲ್ಲಿಗಲ್ಲಿ ಗೊಲವಿಂದಂ ನೋಡುತಂ ಪಾಡುತಂ। ಶಿವಭಕ್ತಗೋ

---

ಪೊಂಗಿ— ಬಗ್ಗಿ, * * * * *

ಧೃತಶಶಿಕಲಂ— ಧರಿಸಲ್ಪಟ್ಟ ಚಂದ್ರಖಂಡವುಳ್ಳ, ಕೃತಭುವನಕುಲಂ— ನಿರ್ಮಿಸಲ್ಪಟ್ಟ ಲೋಕಸಮುದಾಯವುಳ್ಳ, ಶತದಳನೇತ್ರನತಂ— ಕಮಲವೇ ನೇತ್ರವಾಗುಳ್ಳ ವಿಷ್ಣುವಿನಿಂದ ನಮಸ್ಕರಿಸಲ್ಪಟ್ಟ, ತತಗುಣಾಭರಣಂ— ಪ್ರಸಿದ್ಧವಾದ ಗುಣಗಳೇ ಆಭರಣವಾಗುಳ್ಳ, ಜಿತದನುಜರಣಂ— ಜೈಸಲ್ಪಟ್ಟ ರಾಕ್ಷಸಯುದ್ಧವುಳ್ಳ, ಶ್ರುತಿಗಣಾವಂದ್ಯಪದಂ— ವೇದಸಮೂಹದಿಂದ ನಮಸ್ಕರಿಸಲ್ಪಡುವದಕ್ಕೆ ಯೋಗ್ಯವಾದ ಪಾದವುಳ್ಳ, ವಿತರಣನಿಳಯಂ— ದಾನಗುಣಕ್ಕಾಶ್ರಯನಾದ, ಧೃತಫಣಿವಳಯಂ— ಧರಿಸಲ್ಪಟ್ಟ ಸರ್ಪಕಂಕಣವುಳ್ಳ, ಕ್ರತುಗತನಾಕಿಹರಂ— ದಕ್ಷಬ್ರಹ್ಮನ ಯಜ್ಞಕ್ಕೋಸ್ಕರ ಬಂದಿದ್ದ ದೇವತೆಗಳಂ ಭಂಗಪಡಿಸಿದ, ರತಿಪತಿಹರಣಂ—ಮನ್ಮಥನನ್ನು ನಾಶಮಾಡಿದ, ಪ್ರತಿಭಜಶರಣಂ—ತನ್ನನ್ನು ಧ್ಯಾನಮಾಡುವವರ ಸಂರಕ್ಷಕನಾದ, ನುತಗಿರಿಜಾರಮಣಂ—ಶ್ಲಾಘ್ಯಳಾದ ಪಾರ್ವತಿಗೆಪತಿಯಾದ ೬೫

ಪಳಿಕ್ಕೈದು— ತಿರಸ್ಕರಿಸಿ, ಸರ್ವಸಿದ್ಧಿಪ್ರದಭಸ್ಮಘುಟಿಕೆಯುಮಂ— ಸಕಲಸಿದ್ಧಿಗಳನ್ನು ಉಂಟುಮಾಡುವ ವಿಭೂತಿಯ ಗುಳಿಗೆಯನ್ನೂ, ಗಗನಗಮನಮಣಿಮಯಮಂಟಪಮುಮಂ— ಅಂತರಿಕ್ಷಸಂಚಾರವುಳ್ಳ ರತ್ನವಿಕಾರವಾದ ವಿಮಾನವನ್ನೂ, ಪೊನ್ನ— ಚಿನ್ನದ, ಅಂದಣಮುಂ— ಪಲ್ಲಕ್ಕಿಯನ್ನು, ಮೌಕ್ತಿಕಾತಪತ್ರಮುಮಂ— ಮುತ್ತಿನ ಛತ್ರವನ್ನೂ, ಧವಳಾತಪತ್ರದ— ಶ್ವೇತಛತ್ರದ, ಸೂಸುವ—ಹಾಕುವ, ಸೀಗುರಿಯ—ಮಾರ್ಛಾಲಿನ, ಮಿಳಿರ್ಪ— ಅಳ್ಳಾಡುವ, ವಿಬುಧಕದಂಬದ— ವಿದ್ವತ್ಸಮೂಹದ, ಪೊರೈಪ— ಊದುವ, ಜತಿಗುಡುವ—ಲಯಸ್ಥಾನವಂ ತೋರಿಸುವ, ಬೆಂಬವಿಡಿದ— ಬೆನ್ನಂಟಬರುವ, ಬೊಂಬುಳಿಯ— ಗುಂಪಾದ, ನಚ್ಚಣಿಯರ— ನಾಟ್ಯಗಾತಿಯರ, ವಂದಿವೃಂದದ— ಸ್ತುತಿಪಾಠಕರಸಮೂಹದ, ಕಳಕಳದ— ಕೋಲಾಹಲಧ್ವನಿಯ * * *

ತತಜೈನವ್ರಾತಗರ್ವಾಚಳಪವಿಧರಂ— ತತ— ವಿಸ್ತಾರವಾದ, ಜೈನ— ಜೈನರುಗಳ, ವ್ರಾತ— ಗುಂಪಿನ, ಗರ್ವ— ಅಹಂಕಾರವೆಂಬ, ಅಚಳ—ಪರ್ವತಕ್ಕೆ, ಪವಿಧರಂ— ಇಂದ್ರನಾದವನು, ಈ ಬಂದಂ ಈ ಬಂದಂ—ಇಗೋ ಬಂದನು ಇಗೋ ಬಂದನು, ಅತ್ಯುದ್ಧತಬೌದ್ಧಧ್ವಾಂತವಿಧ್ವಂಸನಖರಕರಂ— ಬಹು ಕೊಬ್ಬಿದ ಬೌದ್ಧರೆಂಬ ಕತ್ತಲೆಯನ್ನು ನಾಶಮಾಡುವದರಲ್ಲಿ ಸೂರ್ಯನಾದವನು, ಅತ್ಯೂರ್ಜಿತಚಾರ್ವಾಕೋಗ್ರದರ್ವೀಕರಖಗಪತಿ— ಬಹು ಪ್ರಬಲರಾದ ಚಾರ್ವಾಕರೆಂಬ ಸರ್ಪಗಳಿಗೆ ಗರುಡನಾದವನು. ಜಕ್ಕುಲಿಸೆ ಚಕ್ಕಲಗುಲಿಯನ್ನಿಕ್ಕಲು, .. ೬೬

ಜರಿಯೆ— ಜಾರಲು, ಸರಿಯೆ— ಕಳೆದುಹೋಗಲು, ಎರ್ದೆ— ಹೃದಯವು, ಪೊರೆಯೇರಿ— ಸಂತೋಷಾತಿಶಯವಂಹೊಂದಿ .. .. .. .. ||೬೭||

ಮಾರಾಂತ— ಪ್ರತಿಭಟಿಸಿದ, ಬೌದ್ಧವರೇಣ್ಯದ್ವಿಸಹಸ್ರಮಂ— ಎರಡು ಸಾವಿರ ಬೌದ್ಧಶ್ರೇಷ್ಠರನ್ನು, ವಿಕ್ರಾಂತದಿಂ— ಪರಾಕ್ರಮದಿಂದ .. .. .. ||೬೮||

ಲವೀವುತಂಪ್ರಣುತನಾಮತ್ತುಂಗಚೋಳಂಗೆ ಪೂ॥ರ್ಣವಿಳಾಸಂ"ಶಿವದೀಕ್ಷೆಯಂಕರುಣಿಸುತ್ತಾ
ರ್ಪಿಂದೆ ಮಾರಾಂತಬೌ।ದ್ಧವರೇಣ್ಯಂ ದ್ವಿಸಹಸ್ರಮಂ ಜಯಿಸಿ ವಾದಂಗೆಯ್ದು ವಿಕ್ರಾಂತದಿ ೬೮

ಚಂ ॥ ಮರೆವುಗೆ ಮೇಣವರ್ಗೆ ಶಿವದೀಕ್ಷೆಯ ನಿತ್ತು ಶಿವೈಕನಿಷ್ಠೆಯಿಂ।ತೆರೆಯಿಸಿ ಕೆತ್ತು
ದಂತಿರುಮರಕ್ಕಡಮೆಂಬ ಪುರಾಂತರಾಳದೊ ॥ಳ್ಮರುಗುವ ಲಿಂಗದಾಗರದ ಬಲ್ಗದವಂ ತಿರು
ವಾಲಪಟ್ಟಣ।ಕ್ಕುರೆನಡೆತಂದು ಜೈನಕುಲಮಂ ಸಲೆ ಸೋಲಿಸಿ ವಾದದೇಳ್ಗೆಯಿಂ ೬೯

ಕಂ ॥ ಫಣಿಯುಗಿಯೆ ಮಡಿದ ಶೂದ್ರನ। ಪೆಣಕ್ಕೆ ಜೀವನವ ನಿತ್ತು ಮಧುರಾಸ್ಥಾಯ
ಪ ॥ ಟ್ಟಣ ಕೇಳ್ತಂದಂ ಪದಪಿಂ। ಗುಣನಿಧಿ ತದ್ಭೂಪ ನರಸಿಯನುಮತದಿಂದಂ ೭೦

ವ ॥ ಆಗಳಾಪುರದ ಜೈನಬೌದ್ಧಾದಿಗ ಳಸೂಯೆಯಿಂ ದರಸ ನೆಡೆ ಗೇಳ್ತಂದು

ಮ ॥ ಸ್ರ ॥ ಜಿನಧರ್ಮಾವಾಸ ಮಪ್ಪೀನಗರಿ ಗೆಲೆ ಧರಾಧೀಶ ನೀಂ ಜೈನ ನೆಂದೆಂ। ಬನಿ
ಮಿತ್ತಂಭೀತಿ ಮುನ್ನಿಲ್ಲದೆ ಜಿನಮತಕಾಂತಾರದಾವಾಗ್ನಿ ತಾನೆಂ॥ದು ನಿತಾಂತಂ ಬಿಂಕದಿಂ
ದಂ ಬಿರುದ ಪೊಗಳಿಸುತ್ತಿಯ್ದಿದಂ ಬಾಲ ನೋರ್ವಂ। ಘನಶೈವಂ ತಳ್ವದಿಲ್ಲಿಂ ಪೊರಮಡಿ ಸ
ವನಂ ಧೂರ್ತನಂ ದೂತರಿಂದಂ ... ... .. ೭೧

ವ ॥ ಎಂದುಪಿಸುಣ್ಗೆಡೆದ ಸವಣ ರ್ಗ್ಗರಸ ನಿಂತೆಂದಂ ...

ಮ ॥ ಸ್ರ ॥ ಅವ ನುತ್ತುಂಗಾಖ್ಯಚೋಳೇಂದ್ರನ ಗುರು ವವನಂ ಸರ್ವಶಾಸ್ತ್ರಜ್ಞನಂಬ।
ಲ್ಲವರಲ್ತಂಬಂತ ದೆಂತಾಂಪೊರಮಡಿಸಿದಪೆಂ ನೀಮೆ ತರ್ಕಂಗಳಂ ಸೋ ॥ಲ್ವವೊಲಾತಂ ವಾ
ದದೊಳ್ಗೆಲ್ದೊಡೆ ತಳರ್ಗುಮಿದೇಕಜ್ಜಮೆಂದಾಡೆ ಕೇಳ್ದಾ। ಸವಣ ರ್ಕೈಕೊಂಡು ಪಾಂಡ್ಯಕ್ಷಿತಿ
ಪವಚನಮಂಕಾಯ್ದುವೆತ್ತುರ್ಕಿನಿಂದಂ ... ... ... ೭೨

ಕಂ ॥ ಪದಿನೆಂಟುಸಾಸಿರಂದು। ರ್ಮದಜೈನ ರ್ನೆರೆದುಬಂದು ವಾದಿಸಿಜಯಮಾ ॥ ಗದೆ
ಸೋಲ್ತುಕುವರನೊಳ್ಕೂ। ಳ್ಗುದಿಗೊಂಡಿರದೊಂದು ಕುಹಕಮಂಚಿಂತಿಸಿದರ್ ೭೩

ವ ॥ ಅಂತು ಚಿಂತಿಸುತ್ತಮಹಿಂಸಾಪರಮೋಧರ್ಮಮೆಂಬ ನಿಜೋಕ್ತಿಯಂ ನಿರ್ಮೂಲ
ನಂಗೆಯ್ದು ತಿರುಜ್ಞಾನಸಂಬಂಧರ್ಪಟ್ಟದ್ದ ಗೃಹಕ್ಕೆ ನಟ್ಟರು ಳ್ಕರ್ಚ್ಚಿಕ್ಕೆ ಚುರ್ಚ್ಚಲಾರ ದದು
ರೂಪುದಾಳ್ದೆರಗಿ ಕೈಮುಗಿದು ನಿಲ ಲೊಡನೆ ಕಂಡು .. ... ...

ಚಂ ॥ ಎಲವೊ ಕೃಶಾನು ದಕ್ಷನಮಖಕ್ಕರಿತಂಗಿಡು ತೈದಿ ನೀಂ ಸಮು। ಜ್ವಲರುಚಿಸ

---

ಮರೆವುಗೆ–ಶರಣಾಗತರಾದರ, ಕೆತ್ತುದಂ– ಕೀಲಿಸಿದ, ಬಲ್ಗದವಂ–ಬಲವಾದ ಕದವನ್ನು ॥೬೯॥
॥೭೦॥ಜಿನಧರ್ಮಾವಾಸಂ– ಜೈನಧರ್ಮಗಳಿಗಾಶ್ರಯವಾದ, ತಳ್ವದೆ– ತಪ್ಪದೆ. ಪಿಸುಣ್ಗೆಡೆದ–ಚಾಡಿಯಂ ಹೇಳಿದ
ನೀಮೆ–ನೀವೇ, ತಳರ್ಗುಂ–ಹೋಗುವನು, ಕಾಯ್ದುವೆತ್ತು –ಕೋಪವಂ ಹೊಂದಿ, ಉರ್ಕಿನಿಂದಂ–ಗರ್ವದಿಂದ
ಕೂಳ್ಗುದಿಗೊಂಡು– ಅನ್ನವು ಬೇಯುವಹಾಗೆ ಹೊಟ್ಟೆಯಲ್ಲಿ ತಳಮಳಗುಗೊಂಡು, * *
ನಿರ್ಮೂಲನಂಗೆಯ್ದು– ಬುಡಸಹಿತಕಿತ್ತುಹಾಕಿ, ಪಟ್ಟದ್ದ– ಮಲಗಿದ್ದ, ನಟ್ಟಿರುಳ್– ಅರ್ಧರಾತ್ರಿಯಲ್ಲಿ,
ಕಿರ್ಚ್ಚಂ– ಬೆಂಕಿಯನ್ನು, ಚುರ್ಚ್ಚಲಾರದೆ–ಸುಡಲಾರದೆ, ರೂಪುದಾಳ್ದು– ಆಕಾರವಂ ಧರಿಸಿ * *
ಎಲವೊಕೃಶಾನು–ಎಲೋ ಅಗ್ನಿಯೋ ! ಅರಿತಂಗಿಡುತ–ತಿಳುವಳಿಕೆಯಿಲ್ಲದೆ, ಸಮುಜ್ವಲರುಚಿಸಪ್ತಜಿಹ್ವೆಗ

ಪ್ತ ಜಿಹ್ವೆಗಳ ನಂದೊಡನೀಗಿದೆ ವೀರಭದ್ರನಿಂ || ಖಲರ ಬೆಸಕ್ಕೆ ಬಂದೆಗಡ ಮದ್ಗ್ರಹಕಿಂದೆ
ಲೆ ನಿನ್ನಮೂಗನ | ಸ್ಖಲಿತಕೃಪಾಣದಿಂದಿರಿವೆ ನಿಲ್ಲಿರೆ ತಳ್ವದೆ ಪೋಗಿ ಪಾಂಡ್ಯನ ೭೪

ಕಂ || ಒಡಲಂ ಪುಗು ಖಲಜೈನರ | ಕಡುಬಿಂಕಮ ನಿಂದು ಕಾಣ್ಬೆ ನೆಂದಟ್ಟಲೊಡಂ ||
ಮೃಡಸುತ ನೇಳ್ತಂ ದನಲಂ | ತೊಡರ್ನರಸನ ತನುವಿನೊಳ್ಪ್ರವೇಶಿಸಿ ತಾಗಳ್ ೭೫

ಕಂ || ಬಿಡದುಗ್ರಜ್ವರರೂಪಿಂ | ದಿಡಿ ದಡಸಿ ಕವಲ್ತು ಕವಿದು ಕಾಯ್ದುವ ನೊಡಲಂ |
ಕಡುಪಿಂ ಜ್ವಾಲಾವಲಿಯಿಂ | ಸುಡೆ ಸಿಡಿಮಿಡಿಗೊಂಡು ತಾಪವಿಹ್ವಳ ನಾದಂ ... ೭೬

ಕಂ || ಕರಿಗಂದಿ ದಾನಸಂ ರಸ | ಮರೆತಧರಂ ಕಿಡಿಯ ನುಗುಳ್ವ ಸುಯ್ಬತ್ತಿದ ಬಾ|
ಯ್ಪೊರಪಾಯ್ವ ಮೆಯ್ಯ ಬಿಸುಪೆ | ಚ್ಚರನಳ್ಗಿಪ ತಾಪಮುಬ್ಬಸಂಬಡೆ ವಸುಗಳ್ ೭೭

ಕಂ || ಇರೆ ಕಂದಿ ಕುಂದಿ ಸಂಜ್ವರ | ದುರಿಯಿಂ ಕಾಳ್ಕಿಚ್ಚು ತಗುಳ್ದಮಿಗದಂತೆ ನೃಪಂ.
ಕೊರಗಿ ಕಳವಳಿಸಿ ಪೊರಳು | ತ್ತುರುಳುತ್ತಂ ಬೇಗೆವಟ್ಟು ಬೇವಸಗೊಂಡಂ ೭೮

ಉ || ಪಾಸಿದ ಪಲ್ಲವಪ್ರತತಿ ಪೊತ್ತೆ ವಿಳಾಸಿನಿಯರ್ಕಳಂಗದೊಳ್ಪೂಸಿದ ಚಂದನಂ
ಪೊಗೆಯೆ ಸೂಸುವ ಶೀತಳವಾರಿ ಬತ್ತವೇ || ಬ್ಬೀಸುವ ಬಾಳೆಯೊಳ್ದಳಿರ ವೀಜನಮುಂ
ಕರಿಗಂದೆ ಕಣ್ಗೆಕ | ಟ್ಟುಸುರವಾಗಿ ಪರ್ಬಿದುದು ಭೂಭುಜ ಸಂಗದೊಳಾಮಹಾಜ್ವರಂ ೭೯

ಕಂ || ನೋಡಿದೊಡೆ ಕಣ್ಗಳವೆಂ | ಳ್ಕಾಡುಗು ಮವನಂಗದಲ್ಲಿ ಕೈಸಾರ್ಚೆ ಪುಗು ||
ಳ್ಮೂಡುಗುಮುಪನಿದಿರೊಳ್ನಿಲೆ | ಬಾಡುಗು ಮಂಗಂಗಳಂದೊ ಡೇಂ ವಣ್ಣಿಪುದೋ ೮೦

ವ || ಇಂತಳವಿಗಳದು ವಿಲಯಾನಳನಂತೆ ಕವಿದಳುರ್ದ ಶಿಖಿಯ ಸೆಕೆಯಿಂ ಕೂಳ್ಗುದಿಗೊಂ
ಡು ಹಂಮುದಂಬೋದರಸ ಸಿರವಂ ಕೇಳ್ದು ತದ್ಗುರುಗಳಪ್ಪ ಪಿಂಛೈಕಲಾಂಛನರಾದ ಶವಣ
ರೇಳ್ತಂದು ಸಂದಣಿಸಿ ಕುಳ್ಳಿರ್ದು || ... ... ... ...

---

ಳಂ— ಪ್ರಕಾಶಿಸುವ ಕಾಂತಿಯುಳ್ಳ ಏಳು ನಾಲಿಗೆಗಳನ್ನು, ಈಗಿದೆ— ಹಾಳುಮಾಡಿಕೊಂಡೆ, ಖಳರ— ನೀಚರ, ಬಸ
ಕ್ಕೆ— ಆಜ್ಞೆಗೆ, ಅಸ್ಖಲಿತಕೃಪಾಣದಿಂದೆ— ಜಾರದಿರುವ ಕತ್ತಿಯಿಂದ, ಇರಿವೆಂ— ಕತ್ತರಿಸುವೆನು ||೭೪||

ಒಡಲಂ— ಶರೀರವನ್ನು, ಪುಗು— ಪ್ರವೇಶಿಸು, ಕಡುಬಿಂಕವಂ— ಬಲುಗರ್ವವನ್ನು, ಮೃಡಸುತಂ— ಶಿವನ
ಮಗನಾದ ಷಣ್ಮುಖನು .. .. .. .. ||೭೫||

ಕವಲ್ತು— ಅಭಿವೃದ್ಧವಾಗಿ, ಕವಿದು— ಆಭಾದಿಸಿ, ತಾಪವಿಹ್ವಳಂ— ಬೇಗೆಯಿಂದ ವಿಚೇತನನು ||೭೬||

ಎಚ್ಚರಂ— ಜಾಗರೂಕತೆಯನ್ನು, ಅಸುಗಳ್— ಪ್ರಾಣಗಳು .. .. ||೭೭||

ತಗುಳ್ದ— ಸಂಬಂಧಿಸಿದ, ಬೇವಸಗೊಂಡಂ— ಸಂಕಟಪಟ್ಟನು .. .. ||೭೮||

ಪಲ್ಲವಪ್ರತತಿ— ಚಿಗುರಿನ ಸಮೂಹವು, ಪೊತ್ತೆ— ಉರಿಯಲು, ಪೊಗೆಯೆ— ಹೊಗೆಯಾಡಲು, ಸೂಸುವ—
ಮೇಲೆಚೆಲ್ಲುವ, ಬಳ್ದಳಿರ—ಬಳ್ಳಿಯ ಚಿಗುರಿನ, ವೀಜನಮುಂ—ಬೀಸಣಿಗೆಯನ್ನು, ಕಟ್ಟುಸುರವಾಗಿ—ಅತ್ಯಧಿಕವಾಗಿ ||೭೯||

ಎವೆ— ರಪ್ಪೆಯು, ಪುಗುಳ್— ಗುಳ್ಳೆಯು .. .. ||೮೦||

ವಿಲಯಾನಳನಂತೆ— ಪ್ರಲಯಕಾಲದ ಬೆಂಕಿಯಹಾಗೆ, ಕೂಳ್ಗುದಿಗೊಂಡು— ಹೊಟ್ಟೆಯಲ್ಲಿ ತಾಪದಿಂ ತಳಮ
ಳಗೊಂಡು, ಪಿಂಛೈಕಲಾಂಛನರ್— ಪಿಂಛ— ನವಿಲಗರಿಯೇ, ಏಕ— ಮುಖ್ಯವಾದ, ಲಾಂಛನರ್— ಚಿಹ್ನವಾಗುಳ್ಳ

ಕಂ || ಅವನಿಪನಂ ತಾಪದುರಿಪತ್ತೆ ಜಿನೇಂದ್ರನ ಜಾನ ಮೆಂಬ ಬ | ಲ್ಲೆವದೊಳ ಮುಚ್ಚು ತಕ್ಷಿಗಳ ನಂಜಳಿಯೊಳ್ಘನಸಾರವಾರಿಯಂ || ತನೆ ತಳೆದಲ್ಲಿಮಂತ್ರಿಸಿ ತದಂಗದೊಳೊಯ್ಯನೆ ಸೂಸೆ ಚೊಯ್ಯೆನು|ತ್ತವಿರಳತಪ್ತಲೋಹಕೆರೆದಂಬುವಿನಂತೆವೊಲಾಪುದಪ್ಪುತಂ

ವ || ಅಂತದರಿ ನುರಿ ಗಾಜ್ಯ ಮೆರೆದಂತೆ ಮತ್ತೆ ಮತ್ತೆ ಮಗುಳ್ದು ಪೆರ್ಚೆ ಜಿನಮುನಿಗಳ್ಕೆಲಂಬಜ್ವಾಲಾಮಾಲಿನಿಯಂ ಕುಕ್ಕುಟನಾಥಾದಿಗಳಂ ನಿಷ್ಠೆಯಿಂ ನೆನೆದು ತನ್ಮಂತ್ರಂ ಬಿಡಿದು ಕುಂಚದಿಂ ಬೀಸ ಲೊಡ ನದು ಗರಿಗರಿಲನುರಿಯೆ ಮಂಗಾಣದೆ ಕಂಗೆಟ್ಟು ಮುಂಗಾಯ್ಕರಸಿ ಯೆಂಬ ತನ್ನ ನೃಪನರಸಿ ಯೊರುಜೆಯಂ ತೀರ್ಚ ಲಿವ ರೆಂತುಂ ನೆರೆಯ ರೇಗೆಯ್ವೆ ನೆಂದು ಚಿಂತಿಸಿ ನೆನೆ ದಾತಿರುಜ್ಞಾನಸಂಬಂಧರಂ ಬರಿಸಿ .. ...

ತರಳವೃತ್ತ || ತೊಳಪ ರಮ್ಯದರಸ್ಮಿತಾನನ ಮಾಯತಾಕ್ಷಿ ಲಲಾಟದೊ | ಳ್ಪೊಳವ ಭೂತಿಯ ಮೂರುರೇಖೆಗ ಳಕ್ಷಮಾಲಿಕೆ ಮಿಂಚ ನು || ಜ್ಜಳಿಪ ದಂತ ಮರೀಚಿ ರತ್ನಕಿರೀಟ ಮುಜ್ವಳಭೂಷಣಾ | ವಳಿ ಸುವರ್ಣದುಕೂಲ ಮೊಪ್ಪೆ ವಿರಾಜಿಸಿರ್ದ್ದಕುಮಾರನಂ ೬೨

ವ || ನೋಡಿ ಪಾಂಡ್ಯರಾಜ ನರಸಿ ವಿಶ್ವಾಸಭಾವಂಬಿಡಿದು - ... ..

ಕಂ || ಜ್ವರದುರಿಪದಿ ಸಳಿದಪನೆ | ಮ್ಮರಸಂ ಪರಿಹರಿಪು ದಿಂದು ನೀ ಮಿದ ನತಿಭಾಸುರಮಹಿಮೆ ಶೈವಮಂತ್ರಾ | ಭರಣಾನನ ತಳ್ವದೆಂದು ಕೈಮುಗಿದೆಂದಳ್ ೬೩

ವ|| ಆಗಳ್ಜೈನಮುನಿಗ ಳವಳಂದುದಂ ಕೇಳ್ದೀರ್ಷೆಯಿಂ ತಾಳ್ದುಸರೋಷಮುಖರಮುಖರಾಗಿ ... ... ... ...

ಕಂ || ಕಾಮಿ ಶಿವ ನೆಮ್ಮದೇವಂ | ಕಾಮವಿದೂರಂಗ ಡಂತರಿಂದೆನ್ಮಯ ಮುಂ || ದೇಮಾತೊಶೈವಮಹಿಮೆ ಯ | ದೀಮಹಿಯೊ ಳ್ಜೈನಮಹಿಮೆಗೇಂ ಪಾಸಟಯೇ ೬೪

ಕಂ || ಅತಿಕೃತಮಹಾತಪ ರ್ಜೈ | ನತಪೋಧನ ರಿವರಿ ನಳಯದೀಜ್ವರಮೆಂತುಂ | ಕೃತಕ ಮತಿಶೈವವಟು ವಿಗ | ಳತ ಮಪ್ಪುದೆ ಬರಿದೆ ದೈನ್ಯ ಮೇಕೆ ಲತಾಂಗೀ ೬೫

---

ಜಾನಂ— ಧ್ಯಾನವು, ಅಂಜಳಿಯೊಳ್— ಬೊಗಸೆಯಲ್ಲಿ, ಘನಸಾರವಾರಿಯಂ— ಪಚ್ಚಕರ್ಪೂರಮಿಶ್ರಿತವಾದ ನೀರನ್ನು, ಸೂಸೆ— ಚೆಲ್ಲಲು, ಅವಿರಳತಪ್ತಲೋಹಕೆ— ವಿಚ್ಛಿತ್ತಿಯಿಲ್ಲದೆ ಕಾಯಿಸಿದ ಕಬ್ಬಿನಕ್ಕೆ ||೬೧||

ಆಜ್ಯಮೆರೆದಂತೆ—ತುಪ್ಪವಂ ಸುರಿದಹಾಗೆ, ಕುಂಚದಿಂ — ನವಿಲಗರಿಯಹೊದೆಯಿಂದ, ನೆರೆಯರ್—ಸಮರ್ಥರಾಗಲಾರರು * * * * * *

ದರಸ್ಮಿತಾನನಂ—ಮುಗುಳ್ನಗೆಯಿಂ ಕೂಡಿದ ಮುಖವು, ಆಯತಾಕ್ಷಿ— ದೀರ್ಘವಾದ ಕಣ್ಣು, ಅಕ್ಷಮಾಲಿಕೆ— ಜಪಮಾಲಿಕೆಯು, .. .. .. .. ||೬೨||

ಉರಿಪದಿಂ— ಉರಿಯಿಂದ, ಅಳಿದಪಂ— ಸಾಯುವನು, ಶೈವಮಂತ್ರಾಭರಣಾನನ— ಶಿವಮಂತ್ರವೇ ಭೂಷಣವಾಗುಳ್ಳ ಮುಖವುಳ್ಳ .. .. .. .. ||೬೩||

ಈರ್ಷೆಯಿಂ— ಅಸೂಯೆಯನ್ನು, ಸರೋಷಮುಖರಮುಖರ್— ಸರೋಷ— ಕೋಪದಿಂ ಕೂಡಿದುದಾದ ಕಾರಣವೇ, ಮುಖರ— ಶಬ್ದಾಯಮಾನವಾದ, ಮುಖರ್— ಬಾಯುಳ್ಳವರು, ಕಾಮಿ—ಕಾಮವುಳ್ಳವನು, ಪಾಸಟಯೇ— ಸಮಾನವೇ ? .. ||೬೪||

ಅತಿಕೃತಮಹಾತಪರ್— ಬಹಳವಾಗಿ ಮಾಡಲ್ಪಟ್ಟ ತಪಸ್ಸುಳ್ಳ, ಜೈನತಪೋಧನರ್— ಜೈನರ್ಷಿಗಳು, ಕೃತಕಮತಿಶೈವವಟುವಿಗಳಿತಂ— ಕಪಟಬುದ್ಧಿಯುಳ್ಳ ಶಿವಭಕ್ತಬ್ರಹ್ಮಚಾರಿಯಿಂದ ಜಾರಿಹೋದದ್ದು. ||೬೫||

ವ || ಎಂದ ದುರುಕ್ತಿಗೆ ಕುಮಾರಂ ಕುಪಿತನಾಗಿ .. ...

ಮ || ಸ್ರ || ಎಲೆ ದುಷ್ಪಾಂಡಿತ್ಯಪಾಷಂಡರಿರ ಹರ ನದೇಂ ಕೇಮಿಯೇ ಕಾಮನಂ ಗ | ಲ್ಗಲ ನುದ್ಯದ್ಭಾಳನೇತ್ರಸ್ಫುಟಪಟುಶಿಖಿಯಿಂ ಸುಟ್ಟು ಬೊಟ್ಟಿಟ್ಟು ಕಾಮಾ || ರಿಲಸನ್ನಾಮಕ್ಕೆ ಪಕ್ಕಾದಭವ ನನಘ ನಾದ್ಯಂ ತಪಂಗೆಯ್ದು ತನ್ನು | ಜ್ವಲವಿದ್ಯಾಶಕ್ತಿ ಗೊಲ್ದಂಕದೊಳೆತ್ತಿಳಿದ ಕಾರುಣ್ಯಪೂರ್ಣಾಂತರಂಗಂ .. ... ... ೮೬

ಕಂ || ತರುಣಿಮು ಸುಳಿ ದಸಿತಕ್ಕೀ | ಶ್ವರ ನಪ್ಪನೆ ಜಗಕೆ ನಿಮ್ಮ ಜಿಸ ನಮುಮ ಮ ಹೇ || ಶ್ವರನಂತೆ ಭೀಷ್ಮನುಂ ವಾ | ನರಪತಿಯುಂ ನಘುವ ಸುಳಿಯರೇ ವಸುಮತಿಯೊಳ್ ೮೭

ಕಂ || ಜಿನಭಕ್ತ ರಳವು ವಿಾಶನ | ಘನಭಕ್ತರ ಮಹಿಮೆ ಯರಿಯಲಕ್ಕುಂ ನಿವಿಾ || ಜನಪನೆಡೆದರೆಯೊಡಲ ರುಜೆ | ಯನೆ ಪರಿಯಿರಿ ಪರಿವೆ ಸುಳಿದ ದೇಹಜ್ವರಮಂ ೮೮

ವ || ಎಂದು ದೂಷಕಜನಜಲದಜಂಝಾಪ್ರಭಂಜನನಂಗಂಭೀರನಾದದಿಂ ಪೂಣ್ದು ರಸನ ವಾಮಾರ್ಧಾಂಗಮು ನವರ್ಗಿತ್ತು ದಕ್ಷಿಣಾರ್ಧಾಂಗಮುಂ ತಾಂ ಕೈಕೊಂಡು ...

ಮತ್ತೇ || ಅಮರ್ದಂ ಸಿಂಪಿಸುವಂತೆ ಮಂತ್ರಿತಮಹಾಶ್ರೀಭಸ್ಮಮುಂ ಸಿಂಪಿಸು | ತ್ತೆ ಮ ಹೀಪಾಲನ ದಕ್ಷಿಣಾರ್ಧತನು ಗೊಲ್ದಾಲೇಪನಂಗೆಯ್ವುದುಂ || ಶಮನಂಬೆತ್ತು ತದಂಗದರ್ಧದೆ ಡೆಯುಂ ಬಿಟ್ಟಿಯಿದ್ದಿ ವಾಮಾಂಗದ | ರ್ಧಮು ನಾಕಾಯ್ಪಿನೊ ಳೊಂದುತಿರ್ಮಡಿಸಿ ತಾಪಂಗೆಯ್ದು ದಾಪಾವಕಂ ... ... .. ... ೮೯

ವ || ಅರೆಯೊಡಲೊಳ್ ಶೀತಳತೆಯ | ನರೆಯೊಡಲೊಳ್ ತೀವ್ರತಾಪಮುಂ ತಳೆದ ಮಹೀ || ಶ್ವರ ನಂಗಂ ತಾಳ್ದುದು ನಿ | ರ್ಝರದಾವಪರೀತಪಾರ್ಶ್ವಭೂಧರದಿರವಂ ೯೦

---

ಎಲೆದುಷ್ಪಾಂಡಿತ್ಯಪಾಷಂಡರಿರ– ಕೆಟ್ಟಪಂಡಿತತನವುಳ್ಳ ಎಲೈ * ಪಾಷಂಡರಿರಾ ! ಗಲ್ಗಲನೆ– ಶೀಘ್ರವಾಗಿ, ಉದ್ಯದ್ಭಾಳನೇತ್ರಸ್ಫುಟಪಟು ಶಿಖಿಯಿಂ– ಉದ್ಯತ್– ಉತ್ಕೃಷ್ಟವಾದ, ಭಾಳನೇತ್ರ– ಹಣೆಗಣ್ಣಿನ, ಸ್ಫುಟ– ವ್ಯಕ್ತವಾದ, ಪಟು– ಸಮರ್ಥವಾದ, ಶಿಖಿಯಿಂ– ಬೆಂಕಿಯಿಂದ, ಕಾಮಾರಿಲಸನ್ನಾಮಕ್ಕೆ– ಮದನನಿಗೆ ಶತ್ರುವೆಂಬ ಪ್ರಕಾಶಿಸುವ ಹೆಸರಿಗೆ, ಪಕ್ಕು– ಆಸ್ಪದನು, ಆದ್ಯಂ– ಮೊದಲಿಗನು, ಉಜ್ವಲವಿದ್ಯಾಶಕ್ತಿ–ಬ್ರಹ್ಮವಿದ್ಯಾರೂಪವಾದ ಶಕ್ತಿಗೆ, ಒಲ್ದು– ಪ್ರೀತಿಸಿ, ಅಂಕದೊಳ್– ತೊಡೆಯಲ್ಲಿ .. .. ||೮೬||

ಉಳಿದನಿತಕ್ಕೆ– ಬಿಟ್ಟಮಾತ್ರದಿಂದಲೇ, ವಾನರಪತಿಯುಂ– ಹನುಮಂತನೂ . ||೮೭||

ಅಳವುಂ–ಶಕ್ತಿಯೂ, ಎಡದ–ವಾಮಭಾಗದ, ಅರೆಯೊಡಲ–ಶರೀರಾರ್ಧದ, ರುಜೆಯನೆ–ರೋಗವನ್ನು ೮೮

ದೂಷಕಜನಜಲದಜಂಝಾಪ್ರಭಂಜನಂ–ನಿಂದಿಸುವ ಜನಗಳೆಂಬಮೇಘಕ್ಕೆ ದೊಡ್ಡ ಗಾಳಿಯಾದ, ಪೂಣ್ದು– ಪ್ರತಿಜ್ಞೆಯಂಮಾಡಿ, * * * * *

ಅಮರ್ದಂ– ಅಮೃತವನ್ನು, ಸಿಂಪಿಸುವಂತೆ– ಚಿಮುಕಿಸುವಹಾಗೆ, ಮಂತ್ರಿತಮಹಾಶ್ರೀಭಸ್ಮಮುಂ— ಮಂತ್ರಿಸಲ್ಪಟ್ಟ ಮಹೈಶ್ವರ್ಯಕರವಾದ ಭಸ್ಮವನ್ನು, ಶಮನಂಬೆತ್ತು– ಶಾಂತವಾಗಿ, ಇರ್ಮಡಿಸಿ– ದ್ವಿಗುಣಿತವಾಗಿ, ಶೀತಳತೆಯುಂ– ತಂಪನ್ನು, ತೀವ್ರತಾಪಮುಂ– ವೇಗಶೀಲವಾದ ದಗೆಯನ್ನು, ನಿರ್ಝರದಾವಪರೀತಪಾರ್ಶ್ವಭೂಧರದ– ನಿರ್ಝರ– ಗಿರಿನದಿ, ದಾವ– ಕಾಳ್ಗಿಚ್ಚು ಇವುಗಳಿಂದ, ಪರೀತ– ಆವರಿಸಲ್ಪಟ್ಟ, ಪಾರ್ಶ್ವ– ಪಕ್ಕಗಳುಳ್ಳ, ಭೂಧರದ– ಪರ್ವತದ, .. .. .. ||೯೦||

---

* (ಅವ) ಪಾಷಂಡ, ಅಣಾಂತಿ– ಸಂಸಾರಬಂಧಹೇತುಭೂತಗಳಾದ ಅಸಚ್ಛಾಸ್ತ್ರಗಳನ್ನು ಹೇಳುವರು. ೮೬

ಕಂ || ಸಸಿ ಬಿಸುಪ ನುಗುಳ್ದ ದಾರವಿ | ಸಸಿಯಂತಿರೆ ತಣ್ಪನುಗುಳ್ದ ದೆಡಗ ಣ್ಬೆನ್ನೀ ||
ರ್ಮಸಗುತ್ತಿರ್ದುದು ಬಲಗ | ಣ್ಮಿಸುಗುತ್ತ ಲರ್ದುದು ನರೇಂದ್ರ ಸಂಗದೊ ಳಾಗಳ್ ೯೧

ವ || ಇಡಿ ದಡಸಿ ಕವಿದು ಕಡಲಂ | ಕುಡಿ ದಳುರ್ವೌರ್ವಾಗ್ನಿಯಂತೆ ತನ್ನರೆಯೊಡಲಂ ||
ಕಡುಪಿಂ ಸುಡೆ ಶಿಖಿ ಮಿಟ್ಟನೆ | ಮಿಡುಕುತೆಬಾಯ್ವಿಡುತೆ ನೃಪತಿ ಸಿಡಿಮಿಡಿಗೊಂಡಂ ೯೨

ವ || ಅಂತು ಬಳಲ್ದರಸನವಸ್ಥೆಯಂ ಕಂಡು ಜೈನಮುನಿಗ ಳ್ಸಭಾಗಗತದೇಹಾರ್ಧರಕ್ಷೆಯಂ ಬಹುವಿಧದಿಂ ನೆಗಳ್ಚೆ ತದ್ದೇಹದಾಹ ಮಚ್ಚಳಿಯದೆ ಮತ್ತೆಯುಂ ಪೆರ್ಚಿ ನಿಜಮಂತ್ರತಂತ್ರಗಳೆಲ್ಲಂ ವ್ಯರ್ಥ ಮಾಗ ಲೊಡ ನವ ರೇನು ಮೆನಲರಿಯದೆ ಖಿನ್ನಮುಖರಾಗಿ ಬಿನ್ನ ಮಿರೆ ನಿಜಾರ್ಧಪ್ರಾಣಮಿತ್ರ ಶೈವಮುನಿಯಂ ದೈನ್ಯದೃಷ್ಟಿಯಿನರಸ ನೀಕ್ಷಿಸುತ್ತೆ ಕರಮಂ ಮುಗಿದು

ಮ || ಸ್ರ || ತಿಳಿದೆಂ ದೇವೇಶ ನಿಮ್ಮಿಮತದ ಮಹಿಮೆಯುಂ ನಿಮ್ಮ ಸಾಮರ್ಥ್ಯಮಂ
ದು | ರ್ಬಳಜೈನಾಚಾರ್ಯರಿಂಮಳ್ಗದ ರುಜೆಯು ನಿದಂ ಪೂಣ್ದು ಪೋಗಾಡಿದಿ ರ್ನಿ || ಮ್ಮಳವಂ ಬ
ಣ್ಣಿಪ್ಪ ನಾವಂ ಬಿಡದರೆಯೊಡ ಲೀವನ್ನಿಯಂ ನೂಂಕಿ ನಿತ್ಯೋ | ಜ್ವಳಕಾರುಣ್ಯಾಬ್ಧಿ ನೀನೇ
ಪೊರೆ ನಿನಗೆ ಶರಣ್ಬೊಕ್ಕೆ ನೆಂದಂ ನರೇಂದ್ರಂ ... ... ೯೩

ವ || ಎಂಬುದು ಮಾಗಳಂತೆ ಜಿನಮತವನಜಗಜೇಂದ್ರಂ ಶಿವಮಂತ್ರಮನುಚ್ಚರಿಸುತ್ತ ಮಾತಪ್ತಾರ್ಧಶರೀರದೊಳ್ ಶ್ರೀಭಸ್ಮಮಂ ತಳಿಯೆ ... ... ...

ಕಂ || ಪರೆದು ದವ ನಂಗದುಗ್ರ | ಜ್ವರಮಾಗಳೆ ಶಿವಕುಮಾರಶಶಿಭಸಿತಲಸ || ತ್ಕರಪಾ
ತದಿಂ ಸುಧಾಸಾ | ಗರದೊಳ್ಮಗೆ ಮುಳುಗಿದಂತಿ ರಾದಂ ಭೂಪಂ ... ೯೪

ಕಂ || ಮಿಗೆ ಕಾಸಿ ತಿರ್ದಿದಂತೆವೊ | ಲಗಲದ ಬೆಂಗೂನು ಮಳಿಯೆ ಸಸಿನಂದಳೆದಾ ||
ಜಗತೀಪತಿ ಯಂಗಂ ಪೊಗ | ರುಗೆ ಸೌಂದರ್ಯಮನೆ ತಾಳ್ದು ಕಂಗೊಳಿಸ ಲೊಡಂ ೯೫

---

ಸಸಿ–ಚಂದ್ರನಾಡಿಯು, ಬಿಸುಪಂ–ಔಷ್ಣ್ಯವನ್ನು, ಆರವಿ– ಆ ಸೂರ್ಯನಾಡಿಯು, ಸಸಿಯಂತಿರೆ–ಚಂದ್ರನ ಹಾಗೆ, ತಣ್ಪಂ–ಶೀತವನ್ನು ಬೆನ್ನೀರ್ಮಸಗುತ್ತೆ–ಬಿಸಿನೀರಿನಿಂದ ವ್ಯಾಪ್ತವಾಗುತ್ತ, ಅಲರ್ದುದು– ವಿಕಸಿತವಾಯ್ತು ||೯೧||

ಅಳುರ್ವ– ಆವರಿಸುವ, ಔರ್ವಾಗ್ನಿಯಂತೆ– ಬಡಬಾಗ್ನಿಯಹಾಗೆ, ಮಿಡುಕುತೆ– ಚಲಿಸುತ್ತ, ||೯೨||

ಸಭಾಗಗತದೇಹಾರ್ಧರಕ್ಷೆಯಂ–ಸರಿಪಾಲಾಗಿಬಂದಶರೀರದಅರ್ಧಭಾಗದ ಸಂರಕ್ಷಣೆಯನ್ನು, ತದ್ದೇಹದಾಹಂ– ಆಶರೀರದ ಸುಡುವಿಕೆಯು, ಅಚ್ಚಳಿಯದೆ– ಸ್ವಲ್ಪವೂ ಕಡಮೆಯಾಗದೆ, ಏನುಮೆನಲ್–ಏನೆಂದುಹೇಳುವದಕ್ಕೂ, ಬಿನ್ನಂ– ಮಾತಿಲ್ಲದೆ, * * * * *

ಮಳ್ಗದ– ನಾಶವಾಗದ, ಅಳವಂ– ಶಕ್ತಿಯನ್ನು, ಬಣ್ಣಿಪಂ– ವರ್ಣಿಸುವನು? .. ||೯೩||

ಶಿವಕುಮಾರಶಶಿಭಸಿತಲಸತ್ಕರಪಾತದಿಂ– ಶಿವ–ಪರಶಿವನ, ಕುಮಾರ– ಮಗನಾದ ಜ್ಞಾನಸಂಬಂಧಿಯ, ಶಶಿ– ಚಂದ್ರನೋಪಾದಿಯಲ್ಲಿರುವ, ಭಸಿತ– ಭಸ್ಮದಿಂದ, ಲಸತ್– ಪ್ರಕಾಶಿಸುವ, ಕರ– ಹಸ್ತದ, ಪಾತದಿಂ– ಬೀಳುವಿಕೆಯಿಂದ, ಸುಧಾಸಾಗರದೊಳ್– ಅಮೃತದ ಸಮುದ್ರದಲ್ಲಿ, .. .. ||೯೪||

ತಿರ್ದಿದಂತೆವೊಲ್— ನೇರವಾಡಿದಹಾಗೆ, ಅಗಲದ– ಹೋಗದೇಇದ್ದ, ಬೆಂಗೂನುಂ—ಬೆನ್ನಿನಕೂನೂಕೂಡ, ಸಸಿನಂದಳೆದು— ಸಮಾಚೀನತ್ವವಂಧರಿಸಿ, ಪೊಗರ್– ಕಾಂತಿಯು, ಉಗೆ–ಪ್ರವೇಶಿಸಲು, .. ||೯೫||

ವ || ಅಂದು ಮೊದಲ್ಕೂನಪಾಂಡ್ಯನಾಮಂ ಪೋಗಿ ಸುಂದರ ಪಾಂಡ್ಯನೆಂಬ ನಾಮಂ ಪ್ರಸಿದ್ಧಮಾಗಿರ್ದು ದಾಭೂಕಾಂತಂ ಕಾಂತೆಯೊಡನೆ ಸಾಶ್ಚರ್ಯಮುದಮನಾಳ್ದು ಸಾಷ್ಟಾಂಗಮೆರಗಿ ಕೂರ್ಮೆಯಿಂ ಕೊಂಡಾಡಿ ತಚ್ಚರಣಮಂ ಶರಣ್ಬೊಕ್ಕವರ್ಗೆ ಮಣಿಮಕುಟಸುವರ್ಣಾಭರಣಸುವಸನಾದಿಗಳಂ ಸಮರ್ಪಿಸಿ ಪಾದಪೂಜೆಯಂ ರಚಿಸಿ ಪದುಳ ಮಿರ್ಪಿಸಂ ಜ್ಞಾನಸಂಬಂಧರ ಶಿಷ್ಯನೋರ್ವಂ ಪರಾಜಯಮಂಬಡೆದು ಸವಿಷಾದಕುಪಿತರಾಗಿರ್ದ ಜಿನಮುನಿಗಳಂ ನೋಡುತಿಂತೆಂದಂ ... .. ... ... ...

ಕಂ || ಜಿನನೆ ಘನಮೆಂದು ಗಳಪಿದ | ಮುನಿಗಳೆ ನಿಮಗಾಯ್ತು ಸೋಲ ಮೆಮಗಾಯ್ತುಜಯಂ || ಜನಪರುಜೆ ನಿಮಗಸಾಧ್ಯ ಮಿ | ದೆನಿಸುತ್ತೆಮ್ಮಿಂದೆ ಪರಿದ ಕಾರಣದಿಂದರ್ ೬

ವ || ಎನೆ ಜೈನರ್ಮಾರ್ಕೊಂಡುವೈದ್ಯಸಾಧ್ಯನೃಪತನುತಾಪಹರಣಮಾತ್ರದಿಂ ನಿಮಗೆ ಜಯ ಮೆಂತಕ್ಕು ಮೀಗ ಳೆರಡುಪತ್ರಿಕೆಯೊಳೆಜಿನಶಿವಶಾಸನಂಗಳಂ ಬರೆ ದುರಿವಗ್ನಿಯೊಳಿಟ್ಟೊಡಾವಪತ್ರಿಕೆ ಬೇಯದುಳವುದದರಿ ನಾಮತಕ್ಕೆ ಗೆಲ್ಲಂ ಬೆಂದುದರಿಂ ಸೋಲ ಮಕ್ಕುಮಿದು ನಿಮಗೆ ಸಂಮತಮಾದೊಡಂತೆಗೆಯ್ವುದು ಮೆಂಬುದು ಮಾನುಡಿಯಂ ಜ್ಞಾನಸಂಬಂಧರೊಡಂಬಟ್ಟೆರಡುಂಪತ್ರದೊಳ್ ಶಿವನಾಮಜಿನನಾಮಂಗಳಂ ಬರೆದವರುಂ ತಾನು ಮರಸನಕಯ್ಯೊಳೀವಾಗಳೆಲ್ಲರುಂಕೇಳ್ವನಮಲ್ಲಿ * * * *

ಚಂ || ಘುನಕನದಂತಮಂಕನಕಮಂ ಸರಿತೂಗಿದೊಡಾಸುವರ್ಣ ಕಾ | ಘುನಕನದಂತಮೇಂ ಸರಿಯೆ ಮುತ್ತಿನೊಳೊಂದುವರಾಟಮಂ ತುಲಾ || ವಿನಿಹಿತಪಾತ್ರೆಯಲ್ಲಿರಿಸಿ ತೂಗೆ ಸಮಾನಮೆ ತದ್ವರಾಟಮಾ | ಘುನರುಚಿಮೌಕ್ತಿಕಕ್ಕೆ ಜಿನಮಂತ್ರದಪತ್ರಿಕೆ ಶೈವಮಂತ್ರದ ೯೭

ಕಂ || ಘುನಪತ್ರಿಕೆಗೆಣೆವರ್ಕುಮೆ| ಜನಮಧ್ಯದೆಕೂಡಿಗಣನೆದಾಳ್ದೊಡಮಿಾಲೇ || ಖನದತಿಶಯಮಂ ಕಾಣ್ಬೈ | ಜನಪತಿನೀನೆಂದುಪೂಣ್ದವಂಗಿತ್ತನದಂ ... ೯೮

ವ || ಅರಸ ನಾಲೇಖನದ್ವಯಮುಮಂ ಕೈಕೊಂಡುರಿವಗ್ನಿಯೊಳೋರ್ಮೆಯೆ ತಳ್ವದಿಡಲೊಡನೆ ಜೈನಪತ್ರಂ ತನ್ಮನೋರಥದೊಡನೆ ಗರಿಗರಿಲ ನುರಿದು ಗಳಿಲನೆ ಭಸ್ಮ ಮಾದುದಲಿ

ಕಂ || ಪ್ರಕಟಶಿವಪತ್ರ ಮದು ರವಿ | ವಿಕಸಿತಶತಪತ್ರದಂತಿ ರೆಸೆದುದು ಶೈವ || ಪ್ರಕರಮುಖ ಮುಖರೆ ಜಿನಮುನಿ | ನಿಕರಮುಖಂಕೊರಗೆ ನೃಪತಿ ಯುರಿ ದೆಂಬಿನೆಗಂ ೯೯

---

ಪದುಳಂ— ಸೌಖ್ಯವಾಗಿ, ಪರಾಜಯಮಂಬಡೆದು—ಸೋತು, ಸವಿಷಾದಕುಪಿತರ್—ಮನಃಕ್ಲೇಶದಿಂಕೂಡಿ ಕೋಪವುಳ್ಳವರು, * * * * *

||೯೬|| ಮಾರ್ಕೊಂಡು— ಪ್ರತಿಯಾಗಿ, ವೈದ್ಯಸಾಧ್ಯನೃಪತನುತಾಪಹರಣಮಾತ್ರದಿಂ— ವೈದ್ಯನಿಂಪರಿಹರಿಸಲ್ಪಡುವದಕ್ಕೆ ಸಾಧ್ಯವಾದ ದೇಹದ ಬೇಗೆಯುನ್ನು ಹೋಗಲಾಡಿಸಿದ ಮಾತ್ರದಿಂದ, ಜಿನಶಿವಶಾಸನಂಗಳಂ— ಜಿನಶಿವರುಗಳ ಹೆಸರಿನಕ್ಷರವನ್ನು, ಅಂತೆಗೆಯ್ವುದು— ಹಾಗೆಮಾಡುವದು, * * *

ಘುನಕನ— ನಾಯಿ, ದಂತವಂಂ— ಹಲ್ಲನ್ನು, ಒಂದುವರಾಟಮಂ— ಒಂದುಕವಡೆಯನ್ನು, ತುಲಾವಿನಿಹಿತಪಾತ್ರೆಯಲ್ಲಿ— ತಕ್ಕಡಿಯಾಬಟ್ಟಲಿನಲ್ಲಿ, . . .. .. ||೯೭||

||೯೮|| ರವಿವಿಕಸಿತಶತಪತ್ರದಂತೆ— ಸೂರ್ಯನಿಂದ ಅರಳಿದ ಕಮಲದಹಾಗೆ ಅಲದೆ—ಅಸಾಧ್ಯವು ||೯೯||

ವ || ಆಗ ಆರಸಂ ಶೈವರ್ಗೆ ಜಯಮುಂ ನಿಮಗೆ ಪರಾಜಯಮು ಮಾದು ದೆನೆ ಕೇಳ್ದು ಸವಣ ರಿದಿರ್ಗೆ ವಂದಾವುದ ನಾದೊಡಂ ಮೂರುಂ ಸೂ ಳ್ನೋಡಲ್ವೇಳ್ಕು ಮಿನ್ನೋರ್ಮೆ ಪತ್ರಿ ಕಾದ್ವಯಮಂ ಪರಿವ ತೊರೆಯೊ ಳಿಕ್ಕ ಲೊಡ ನಾವುದಿದಿರೇರುಗು ಮದೇ ಜಯಪತ್ರಿಕೆ ಯಕ್ಕು ಮಂತೆ ನೆಗಳ್ಚಿ ಮೆನೆ ನರೇಂದ್ರಂ ಜ್ಞಾನಸಂಬಂಧ ರಾನನಮಂ ನೋಡ ಲೊಡ ನವ ನಿಂತೆಂದಂ ... ... ... ... ...

ಮತ್ತೇ || ಇವರಂ ಸುಮ್ಮನೆ ಪೋಗಲಿತ್ತಪುದೆ ಶೈವದ್ವೇಷತಮ್ದೂ ಷಣೋ | ದ್ಭವದೋ ಷಂಜನದೂಷ್ಯಜೈನ ರಿವರೆಂದಂತಕ್ಕೆ ಸೋಲ್ತರ್ಗೆ ಭೂ || ಧವತೀಕ್ಷ್ಣಾಗ್ರಮಹೋಗ್ರಲೋಹ ಮಯಶೂಲಾರೋಹಣಂದಂಡ ಮಾ | ಗೆ ವಲಂ ತೋರುವೆ ನೆನ್ನ ಪೆಂಪ ನೆನೆ ಪಾಂಡ್ಯಂ ಕೇಳ್ದುಜೈನರ್ಕಳ .. ... ... ೧೧೦

ವ || ನೋಡಿ ನಿಮ್ಮಭಿಪ್ರಾಯಮಂ ಬೇಗಂ ಪೇಳಿ ಮೆಂಬುದು ಮಿವ ರೆಂದುದ ನೊ ಡಂಬಟ್ಟ ವೆಂದಾಜೈನ ರೆನೆ ಕುಮತಕುಜ ಕುಠಾರಂ ಕೇಳ್ದರಸನುಮುಸವರುಮ ನೊಡಗೊಂ ಡು ಸಮುತ್ಸಾಹದಿಂಕಾವೇರೀತಟಕ್ಕೆಳ್ತಂದು ನಿಂದೆರಡುಪತ್ರಂಗಳಂ ಪರಿವ ತತ್ಸಲಿಲದೊಳ್ ಜನಪನಿಂ ಬಿಡಿಸಲೊಡನೆ ಹರಹರಧ್ಯಾನದಿ ನುಘೋರವಂ ಗುಡುತ್ತೆ ಶೈವನಿಕರಂ ಸಂಭ್ರಮಿಸೆ

ಕಂ || ನದಿ ಗಿದಿರೇರಿದು ದಘಹರ | ಪದಪತ್ರಂಜೈನಪತ್ರ ಮದು ಕೀಳ್ಗಡೆಗೋ || ಡಿದು ದದ ನೀಕ್ಷಿಸಿ ನೃಪ ನು | ರ್ಕಿನ ಜೈನರ ಸುಭಟರಿಂದೆ ಪಿಡಿತರಿಸುತ್ತಂ ... ೧೧೧

ಕಂ || ಶರಣೆಂಣ ಶೈವಲಾಂಛನ | ಧರರಂ ಬಿಟ್ಟುಳಿದ ಸಮುದಜೈನರ ನರಸಂ || ಶರಣ ಕುಲಂ ನಲಿಯಲ್ಸಮೆ | ದಿರಿಸಿದ ಶೂಲಂಗಳಲ್ಲಿ ಕೆಡಪಿದನಾಗಳ್ ... ೧೧೨

ವ || ಆಗ ಆಂತು ಶಿವದ್ರೋಹಿಗಳುಮ ನೆಲ್ಲರುಮಂ ಪೂಣ್ದಂತೆ ಶೂಲಾರೋಹಣಂಗೆ ಯ್ಸಿ ಜಸಂಬೆತ್ತು || ಭುಜಂಗಪ್ರಯಾತವೃತ್ತ || ಸ್ಫುರದ್ದೀಕ್ಷೆಯಂ ಭೂಭುಜಂಗಿತ್ತು ಸಣ್ಪಿಂ | ಪುರದ್ವಿಟ್ಸದಾಚಾರದೊಳ್ನೇಮಿಸುತ್ತಂ || ಪರಪ್ರಾಢವಾದಂಗಳಂ ಗೆಲ್ವುತೊಳ್ಪಂ | ತಿರುಜ್ಞಾನ ಸಂಬಂಧಯೋಗೀಶ ನಿರ್ದಂ ... ... ... ೧೧೩

---

ಮೂರುಂಸೂಳ್—ಮೂರಾವರ್ತಿ, ಪರಿದೊರೆಯೊಳ್— ಹರಿಯುವಪ್ರವಾಹದಲ್ಲಿ, ಇದಿರೇರುಗುಂ— ಮೇಲ್ಗಡೆಗೆ ಹತ್ತುವದೋ, ನೆಗಳ್ಚಿಂ— ಮಾಡಿರಿ, * * * *

ಶೈವದ್ವೇಷತದ್ದೂಷಣೋದ್ಭವದೋಷ:— ಶಿವಭಕ್ತರೊಡನೆ ವೈರ ಮತ್ತು ಅವರನ್ನು ನಿಂದಿಸುವಿಕೆಗಳಿಂದ ಉಂಟಾದ ಪಾಪವು, ಪೋಗಲ್ಇತ್ತಪುದೆ—ಹೋಗಗೊಡಿಸುವದೇ? ತೀಕ್ಷ್ಣಾಗ್ರಮಹೋಗ್ರಲೋಹಮಯಶೂಲಾರೋ ಹಣಂ—ತೀಕ್ಷ್ಣ—ಶೀಘ್ರಭೇದಕವಾದ, ಅಗ್ರ—ಮೊನೆಯಿಂದ,ಮಹೋಗ್ರ—ಬಹು ಭಯಂಕರವಾದ, ಲೋಹಮಯ— ಕಬ್ಬಿಣದವಿಕಾರವಾದ, ಶೂಲ—ಶೂಲವನ್ನು, ಆರೋಹಣಂ—ಹತ್ತುವಿಕೆಯು, ದಂಡಂ—ಶಿಕ್ಷೆಯು,ವಲಂ—ನಿಜವಾಗಿ, *

ಕುಮತಕುಜಕುಠಾರಂ —ದುಷ್ಟಮತಗಳೆಂಬ ಮರಕ್ಕೆ ಕೊಡಲಿಯಾದ ತಿರುಜ್ಞಾನಸಂಬಂಧಿಯು,

ಅಘಹರಪದಪತ್ರಂ—ಶಿವಲಾಂಛನವುಳ್ಳ ಪತ್ರವು, ಕೀಳ್ಗಡೆಗೆ—ಕೆಳಗಡೆಗೆ, ಉರ್ಕಿನ—ಗರ್ವವುಳ್ಳ, ||೧೧೧||

ಸಮೆದು —ಮಾಡಿ, ||೧೧೨||

ಪುರದ್ವಿಟ್ಸದಾಚಾರದೊಳ್—ತ್ರಿಪುರವೈರಿಯಾದ ಪರಶಿವನ ವಿಷಯಕವಾದ ಆಚಾರದಲ್ಲಿ, ಪರಪ್ರಾಢವಾದಂ ಗಳಂ—ಇತರರ ಕುಶಲವಾಗ್ವಾದಗಳನ್ನು, .. .. .. ||೧೧೩||

ವ ॥ ಇಂತಿರ್ಪಿನನಿಮಿತ್ತಲ್ ॥ ಕಂ॥ ವೀರವ್ರತನಿಷ್ಠಂನಿಡು । ಮಾರ ನೆನಿಪ್ಪೊರ್ವ ನಭವವಭಕ್ತನಿಳಾ ॥ ಸೂರಿಜನವಿನುತಕೀರ್ತಿ । ಮ ಹೀರಮಣಂರಂಜಿಸಿರ್ದನತಿವೈಭವದಿಂ॥

ವ॥ ಆಮಹೀರಮಣಂ ತನ್ನದೇಶಮೆಲ್ಲಂ ಜೈನಮಯ ಮಾಗೆ ಮರ್ದಿಂಗೊರ್ವಂ ಶಿವ ಭಕ್ತ ರಿಲ್ಲದುದು ಕಂಡೆಂದಿಂಗೆನ್ನ ರಾಜ್ಯಮೆಲ್ಲಂ ಪೂಜ್ಯಮೆನೆ ಶಿವಭಕ್ತಮಯ ಮಕ್ಕು ಮೆಂದು ಚಿಂತೆಗೆಯ್ವುತ್ತ ಮಿರ್ಪಿನ ಮಲ್ಲಿಗೆ ॥ * * * * *

ಮ ॥ಸ್ರ॥ ಪದೆದೇಳ್ತಂ ದೋರ್ವನಾಗ ಳ್ಯನಪದಭಜಕಂ ಪಾಂಡ್ಯದೇಶೀಯಜೈನಾ। ಘುದಸೊರ್ಕಂ ವಾದದೊಳ್ಮಳ್ಗಿಸಿ ಮದಯುತರಂ ಶೂಲದೊಳ್ಕೊಂದು ಶೈವಾ ॥ ಭ್ಯುದಿತಶ್ರೀ ದೀಕ್ಷೆಯಂ ಭೂಪತಿಗೆ ನೆಗಳ್ದು ಪಂಚಾಬ್ದದೊಳ್ಪೀರ್ವವೆತ್ತ । ಗ್ಗದ ಸನ್ಯ್ಯಜ್ಞಾನಸಂ ಬಂಧರ ಜಸದಿರವಂ ಪೇಳೆ ಕೇಳ್ದಾಮಹೀಶಂ ॥ ... ... ... ॥೧೦೫॥

ಮ॥ಸ್ರ॥ ಮುದಮಂ ತಾಳ್ದವರಿರ್ದ ತಾಣ ಕೊಲವಿಂತಾನೆಯ್ದಿ ಕಂಡಲ್ಲಿ ತತ್ಪದಮಂ ಪೂಜಿಸಿ ಭಕ್ತಿಯಿಂ ನಮಿಸಿ ಕೊಂಡಾಡುತ್ತೆ ತನ್ನೂರ್ಗೆ ಪೆ ॥ ರ್ಚಿದಸದ್ವೈಭವದಿಂ ಕಡಂ ಗಿ ಬಿಜಯಂಗೆಯ್ಸುತ್ತೆ ತನ್ನಿಷ್ಟಸಂ । ಪದ ಮೇಳ್ತಂದು ದೆನುತ್ತೆ ಕುಳ್ಳಿರಿಸುತಂ ಭದ್ರಾ ಸನಸ್ಥಾನದೊಳ್ ॥ ... ... ... ೧೦೬

ಮ॥ಸ್ರ॥ ಬರಿಸಿದ ನಲ್ಲಿಗಾಜನಪದಸ್ಥಿತಜೈನಗುರುಪ್ರತಾನಮಂ । ನರಪತಿ ಪೇಳ್ದ ನೀಶ್ವರಕುಮಾರನ ಜೈನಜಯಪ್ರಸಂಗಮಂ ॥ ಪರಶಿವಸನ್ಮಹತ್ವಮನೆಬೋಧಿಸಿ ಶೈವಮತ ಸ್ಥ ರಾಗೆ ನೀ । ಮೆರೆದುದ ನೀವೆನಲ್ಲದೊಡೆ ಶೂಲದೊಳಕ್ಕುವೆ ನೆಂದ ನಾರ್ಪಿನಿಂ॥ ೧೦೭

ವ ॥ ಎಂದಾಗ್ರಹಿಸಿ ನರಪಶುವಂ ದೇವನೆಂದು ಭಜಿಯಿಪುದಂ ಬಿಡಿಸಿ ಪಶುಪತಿಯಂ ಶರಣ್ಬುಗಿಸಿ ಶವಣಗುರುಗಳಂ ಶಿವಭಕ್ತರಂ ಮಾಡಿ ಕೇಳದ ಮದಾಂಧರಂ ತಲೆಕೆಳಗಾಗೆ ನಿ ಶಿತಶೂಲಾಗ್ರದೊಳಕ್ಕಿ ಕಳೆದು ॥ * * * * * * *

ಕಂ ॥ ನಿಜದೇಶಮೆಲ್ಲಮಂ ಶಿವ ।ಭಜನಾನ್ವಿತಮಯಮ ನೆಸಗಿ ಮೆರೆಯನೆ ಧಾತ್ರೀ ॥ ಭುಜಪತಿ ನಿಡುಮಾರಂ ಕೇ । ಳ್ವೃಜಿನಾತ್ಮಕ ಪೇಳ್ವೆ ನಿನ್ನು ಮೆನುತಿಂತೆಂದಂ॥ ೧೦೮

ವ ॥ ನೆಗಳ್ತೆವೆತ್ತ ತಿಗುಳ್ನಾಡೊಳ್ಚೆಲ್ಲತಿರುವದೂರೆಂಬ ಪೊಳಲೊಳಗೆ * *

ಕಂ ॥ ನಮಿನಂದಿ ಯೆಂಬ ಭಕ್ತಂ । ವಿಮಳಾಜ್ಯಸಹಸ್ರದೀಪಮಂ ಬೆಳಗುವನೇ॥ ಮ

---

ನಿಡುಮಾರನ ಕಥೆ.

ಇಳಾಸೂರಿಜನವಿನುತಕೀರ್ತಿ-ಭೂಮಿಯಲ್ಲಿರುವವಿದ್ವಜ್ಜನರಿಂದ ಹೊಗಳಲ್ಪಟ್ಟ ಯಶಸ್ಸುಳ್ಳ.॥೧೦೪॥

ಮರ್ದಿಂಗೆ- ಔಷಧಕ್ಕೆ, ಎಂದಿಂಗೆ- ಯಾವಾಗ್ಯೆ. * * * *

ಪಂಚಾಬ್ದದೊಳ್- ಐದುವರ್ಷದಲ್ಲಿ. ... ... ... ॥೧೦೫॥

ಕಡಂಗಿ- ಕುತೂಹಲಪಟ್ಟು, ಇಷ್ಟಸಂಪದಂ- ಬಯಸಿದ ಐಶ್ವರ್ಯವು. ... ॥೧೦೬॥

ಆಜನಪದಸ್ಥಿತಜೈನಗುರುಪ್ರತಾನಮಂ- ಆ ದೇಶದಲ್ಲಿರುವ ಜೈನಸನ್ಯಾಸಿಗಳ ಗುಂಪನ್ನು, ಎರೆದುದಂ- ಬೇಡಿದುದನ್ನು. ... ... ... ... ... ॥೧೦೭॥

ವೃಜಿನಾತ್ಮಕ- ಪಾಪಸ್ವರೂಪನೇ ! ... ... ... ॥೧೦೮॥

ಮ ನಾಳ್ದು ನಿಜ್ಜ್ಬಮುಂ ಸಂ । ಭ್ರಮದಿಂ ದಂತುಂತೆ ಬೆಳಗುತುಂ ಶಿವಗೃಹದೊಳ್ ॥ ೧೦೯

ಕಂ ॥ ಧನಮೆಲ್ಲಂ ಸವೆಯೆ ಶಿವಾ । ರ್ಚ್ಬನೆಗಾಪ್ರೊಳಲಲ್ಲಿ ಘೃತದಭಿಕ್ಷೆಯ ನೆರೆಯುಂ ॥
ತ್ತನುದಿನ ಮಾರ್ಜ್ಜಿಸಿದಾಜ್ಯದಿ । ನನಘಂ ಬೆಳಗುತ್ತೆ ದೀಪಮಂ ಮೃಡ ನಿದಿರೊಳ್॥ ೧೧೦

ಮ ॥ ಸ್ರ ॥ಘನಭಕ್ತಂ ಮಾಣ ದಿಂತೊಪ್ಪಿರೆ ಪ್ರೊಳಲ ಶಿವದ್ರೋಹಿಗಳ್ಕಂಡದಾಭ।
ಕ್ತನ ಕೃತ್ಯಂಗಂಡಿವಂ ಮತ್ಪುರದೊಳಿರಲದೇಂ ತಕ್ಕನೇ ಶೈವನೀತಂ ॥ ಗಿನಿತುಂಗೇಹಂಗ
ಳೊಳ್ಗೋಘೃತಮ ನೆರೆಯದಂ ತಾಜ್ಞೆಯಂ ಮಾಡೆ ತಾನೇ ।ಮುನಿದಿಲ್ಲಿಂ ಪೋಪ ನೆಂದಂ
ತೆಸಗೆ ಘೃತದ ಭಿಕ್ಷಾಟನಂಗೆಯ್ದು ಭಕ್ತಂ॥ ... ... ... ೧೧೧

ತರಳವೃತ್ತಂ ॥ ಪಡೆಯದಾಜ್ಯಮ ನಾಪ್ರರಾಂತರದೊಳ್ವಿಷಾದದಿ ನೆಯ್ದಿ ತ । ನ್ಮೃ
ಡನ ಮಂದಿರಕೆಯ್ದಿ ನಂದುವ ದೀಪಮಂ ನಡೆ ನೋಡಿ ನಿಂ ॥ ದುಡುಗ ದಾತ್ಮಶಿಗಕ್ಕೆ ಖಡ್ಗಮ
ನಿಕ್ಕಿ ಗೋಣ್ಗೊರೆವಾಗಳಾ । ಕಡುಗಮಂ ಕಡೆನೂಂಕಿ ಶಂಕರ ನೊಲ್ದುನೋಡಿ ಕೃಪಾಕರಂ॥

ಮ॥ ಸ್ರ॥ ಪದದಿಂದಂ ವೀರಸೋಮಾಂಬಕೆ ಜಳಮೆರೆದೋರಂದದಿಂ ದೀಪಮಂ ಲಿ।
ಗದ ಮುಂದಂದೆತ್ತಿದಂತೀ ತಿಳಿಗೊಳದಜಲಂಗೊಂಡು ತತ್ಪಾತ್ರೆಯೊಳ್ಕಂ ॥ ಡದೆ ನೀಂನೀ
ರ್ದೀವಿ ದೀಪಂಗಳನೆ ಬೆಳ ಗಿದೇನೇಮ ಮೆನ್ನಗೃಹದೊಳ್ಜ್ವಾ । ನದುರಾತ್ಮರ್ತತ್ಪುರೀಗೋ
ಕುಲಜನ ಮಳಿಗುಂ ನಾಳೆ ಕೇಳ್ಬಕ್ತವರ್ಯಾ ॥ ... ... ... ೧೧೨

ವ ॥ ಎಂದೀಶಂ ಬೆಸಸೆ ಮಹಾಪ್ರಸಾದ ಮೆಂದಾಪರಿಯಿಂ ತೀರ್ಥಜಲಮ ನೆರೆದು ದೀ
ಪಂಗಳಂ ಬೆಳಗುತ್ತ ಮಿರ್ದಂ ಪ್ರೊಳಲೊಳ್ ಘೃತಭಿಕ್ಷೆಗುಡದರ ಗೃಹಂಗಳೊಳಂ ಪಿಶುನಶ
ವಣಭವನಂಗಳೊಳಮರ್ದಿರ್ದಂತೆ ಖಲಪ್ರಸರಮುಂ ಪಶುವಿಸರಮುಂ ಮಡಿಯೆ ಜೈನ ರ್ಕ
ಲಂಬರ್ತ್ತಮ್ಮೊಳಿದೇನೆಂದು ಭಯಂಬಡೆ ದನುವಿಸಿ॥ * * * * *

ಕಂ ॥ ಜಿನಧರ್ಮದೊಳೊಂದುಂ ಕೊರ । ತೆ ನಾಂಟದೆಮ್ಮಿಂದೆ ಜೀವತತಿ ನೊಂದುದು

---

ನಮಿನಂದಿಯಕಥೆ.

ವಿಮಳಾಜ್ಯಸಹಸ್ರದೀಪಮಂ- ನಿರ್ಮಲವಾದ ತುಪ್ಪದ ಸಾವಿರ ದೀವಿಗೆಗಳನ್ನು. ... ||೧೦೯||

ಘೃತದ- ತುಪ್ಪದ, ಎರೆಯುತ್ತೆ- ಬೇಡುತ್ತಾ. ... ... ... ||೧೧೦||

ಇನಿತುಂಗೇಹಂಗಳೊಳ್- ಇಷ್ಟು ಮನೆಗಳಲ್ಲೂ, ಗೋಘೃತಮಂ- ಹಸುವಿನ ತುಪ್ಪವನ್ನು, ಮುನಿದು- ಕೋಪಿಸಿ. ... ... ... ... ... ||೧೧೧||

ನಂದುವ- ಆರಿಹೋಗುವ, ಉಡುಗದೆ- ಸಂಕೋಚಪಡದೆ, ಗೋಣ್ಗೊರೆವಾಗಳ್- ಕತ್ತಂ ಕತ್ತರಿಸುವಾಗ. ... ... ... ... ... ||೧೧೨||

ನೀರ್ದೀವಿ- ನೀರನ್ನು ತುಂಬಿ, ಬೆಳಗು- ಆರತಿಯೆತ್ತು, ನೇಮಂ- ವ್ರತವು, ತತ್ಪುರೀಗೋಕುಲಜನಂ- ಆ ಪಟ್ಟಣದಲ್ಲಿ ಹಸುವಿನ ಸಮೂಹವುಳ್ಳ ಜನವು. ... ... ||೧೧೩||

ಎರೆದು- ಹೊಯ್ದು, ಘೃತಭಿಕ್ಷೆಗುಡದರ- ತುಪ್ಪದ ಭಿಕ್ಷವನ್ನಿಕ್ಕದವರ, ಪಿಶುನಶವಣಭವನಂಗಳೊಳ್- ಚಾಡಿಕೋರರಾದ ಜೈನರ ಮನೆಗಳಲ್ಲಿ, ಇರ್ದಿರ್ದಂತೆ- ಇದ್ದಕ್ಕಿದ್ದಹಾಗೆ, ಖಲಪ್ರಸರಮುಂ- ನೀಚರ ಸಮುದಾಯವೂ, ಪಶುವಿಸರಮುಂ- ಹಸುಗಳ ಗುಂಪೂ, ಅನುವಿಸಿ- ಊಹಿಸಿ. *

ಮಿಗಿಲ್ಲನಿತುಂ ಪುಸಿಪೊರ್ದದು ಕೆ। ಮ್ಮನಿದೇಂಕಾರಣಮೊ ಮಿಳ್ತು ಪೊಕ್ಕುದು ಪೊಳಲಂ॥

ವ॥ ಎಂದು ದೋಷಾವಿಲರ್ತಮ್ಮಂ ದೋಷರಹಿತರೆಂದು ಬಗೆದು ನುಡಿವಿನಮಲ್ಲಿ ಕೆಲಂಬರ್॥ * * * * *

ಉತ್ಸಾಹವೃತ್ತ॥ ಶೈವಭಕ್ತನಾಜ್ಯಭಿಷ್ಟೆ ಪುಟ್ಟದಂತೆಮಾಡೆ ನೀ। ವಿಪಾವಿಪತ್ತಿ ಬಂದು ದಾತನಿಂದೆ ನನ್ನಿಯೆಂದೊಡಾ॥ ಶಾವಕರ್ಕಳಿಕ್ಕೆ ಸತ್ಯಮಿಂತಿದೆಂದು ಬಂದುದಂ। ತಾವಳಾಜಿನಾಂಬರಾಲಯಕ್ಕೆ ಕಂಡರಾತನಂ॥ ... ೧೧೫

ವ॥ ಅಂತು ಕಂಡು ನೀರೆರೆದು ದೀಪಮನವಂ ಬೆಳಗುವಳವಂ ನೋಡಿ ಮಹಾತ್ಮ ನಕ್ಕು ನೊಂದು ಮೆಯ್ಯಿಕ್ಕಿ ಜಿನಮುನಿಗಳ್ಕಯ್ಯಂ ಮುಗಿದು॥ * *

ಕಂ॥ ಸಾವಂ ಮಾಜಿಸು ಜೀವರ। ನೋವಂ ಪರಿಹರಿಸು ಮಡಿದ ಪಶುಗಳ್ಗಸುವಿ॥ ತೋರ್ಪವೆವೆಮ್ಮೊಳಗೆವ ತಪ್ಪಂ। ಭಾವಿಸದಿರು ನಿನ್ನಗುಣವಮೆರೆ ಕರುಣಾಬ್ಧೀ॥ ೧೧೬

ವ॥ ಎಂದು ಬಾಯ್ವಿಟ್ಟು ಶರಣ್ಬುಗೆ ಶವಣರ್ಗುಪದೇಶಮಿತ್ತು ಭಕ್ತರಂ ಮಾಡಿ॥

ಕಂ॥ ಮಡಿದ ಪಶುಗಳ್ಗೆ ಪೊಳಲೊ। ಳ್ಕೆಡವಳದರ್ಗಸುವ ನಿತ್ತು ನಮಿನಂದಿ ಮುದಂ॥ ಬಡಿಸಿ ಜನಮುಂ ಮೆ ಪೊರೆಯನೆ। ಕಡುಪಿಂ ದೆಲೆಜೈನ ಕೇಳ್ವುದಿನ್ನುಂಧರೆಯೊಳ್॥

ಚಂ॥ ಸುಲಲಿತಚೋಳಮಂಡಲಕೆ ಮಂಡನಮೆಂದೆನಿಸಿರ್ದ್ದ ಶಾಂತಮಂ। ಡಲಮೆನೆ ತೋರ್ಪ ಪಟ್ಟಣದೊಳೊಪ್ಪುವ ಬೌದ್ಧನಪುತ್ರನಾಗಿ ನಿ॥ಶ್ಚಲಮತಿ ಸಾಂಖ್ಯತೊಂಡವೆಸರಾಂತೆಸೆದಿರ್ದ್ದ ಮಹಾತ್ಮ ನೋರ್ವ್ವನ। ಸ್ಖಲಿತಶಿವೈಕಭಕ್ತಿತಲೆದೋರೆ ಪುರಾತನಪುಣ್ಯದೇಳ್ಗೆಯಿಂ॥ .. ... ... ೧೧೮

ಕಂ॥ ಎಲೆಶಿವ ಮಹೇಶ ಶಂಕರ। ಪೊಲೆಯರ ತೋಕುಳಯಕೊಳದೊಳಂಬುಜಮುಂ ನೀ॥ ನಲಸದೆ ಪುಟ್ಟಸಿದುತಿರೆ। ಖಲಬೌದ್ಧನಬಸಿರೊಳೆನ್ನನೇಂಪುಟ್ಟಪುದೇಂ॥ ೧೧೯

ವ॥ ಎಂದು ನೊಂದು ನುಡಿದೊಂದು ಶಿವಲಿಂಗಮುಂ ಕಾಣ್ಬೆನೆಂದರಸುತ್ತಂ ಬಂದಾಪೊಳಲಪೊರವಳಯದೊಳ್ಪಾಳ್ದೇಗುಲದಂತಿರ್ದ್ದ ಶಿವಾಲಯಮಂ ಕಂಡೊಳಪೊಕ್ಕಲ್ಲಿ ಶಿವಲಿಂಗಮಿರೆ ನಿಷ್ಠೆಯಿಂ ನಿರೀಕ್ಷಿಸಿ ವಂದನಂಗೆಯ್ದು॥ * * * * *

---

ಇನಿತುಂಪುಸಿ– ಇಷ್ಟು ಸುಳ್ಳಾದರೂ, ಕೆಮ್ಮನೆ- ನಿಷ್ಕಾರಣವಾಗಿ, ಮಿಳ್ತು- ಮೃತ್ಯುವು. ॥೧೧೪॥

ದೋಷಾವಿಲರ್- ಪಾಪದಿಂ ವ್ಯಾಪ್ತರಾದವರು. * * *

ನನ್ನಿ- ನಿಜವು, ಶ್ರಾವಕರ್ಕಳ್- ಜೈನರುಗಳು, ದಂತಾವಳಾಜಿನಾಂಬರಾಲಯಕ್ಕೆ- ಗಜಚರ್ಮವಸ್ತ್ರನಾದ ಶಿವನ ದೇವಸ್ಥಾನಕ್ಕೆ. ... ... ... ॥೧೧೫॥

ಮಾಜಿಸು- ಹೋಗಲಾಡಿಸು, ಜೀವರ- ಜೀವಾತ್ಮರ, ನೋವಂ- ಬಾಧೆಯನ್ನು. ॥೧೧೬॥

ಕಡುಪಿಂದೆ- ಶೌರ್ಯದಿಂದ. ... ... ... ॥೧೧೭॥

ಸಾಂಖ್ಯತೊಂಡರ ಕಥೆ.

ಅಸ್ಖಲಿತಶಿವೈಕಭಕ್ತಿ-ಜಾರದೇಇರುವ ಶಿವನೊಬ್ಬನಲ್ಲೇ ಭಕ್ತಿಯು. ... ॥೧೧೮॥

ತೋಕೆಳಿಯು- ಸಂಸರ್ಗವುಳ್ಳ, ಬಸಿರೊಳ್- ಹೊಟ್ಟೆಯಲ್ಲಿ. ... ॥೧೧೯॥

ನಿಷ್ಠೆಯಿಂ- ಶ್ರದ್ಧೆಯಿಂದ. * * * * *

ಕಂ ॥ ಮಾರಹರ ನಿನ್ನ ಪೂಜೆಯ । ನೋರುತಿರೆ ಮೂರುಕಾಲಮುಂ ನೆಗಳ್ವೆ ನಿಚ್ಚಃ ॥ ವಿರವ್ರತಮಿದನುಳಿದಾ । ಹಾರಂಗೊಳೆ ನೇದುನೇಮಮುಂಕೈಕೊಂಡಂ ॥ ೧೨೦

ವ ॥ ಅಂತು ಕೈಕೊಂಡು ನಿಚ್ಚಮುಂ ತ್ರಿಕಾಲಂದಪ್ಪದೆ ॥ * * *

ಕಂ ॥ ಫುಲ್ಲೋತ್ಪಲಭಾವನೆಯಿಂ । ನಿಲ್ಲದೆ ಕೈಕೊಳ್ವ ದೆಂದು ಸೊಂಕ್ಯಾಮೂರುಂ ॥ ಕಲ್ಲಿಂದಿಡುತಂಗೌರೀ । ವಲ್ಲಭನಂ ನಚ್ಚಿ ಮಚ್ಚಿ ಪೂಜಿಸುತಿರ್ದಂ ॥ ॥೧೨೧॥

ವ ॥ ಅನ್ನೆವರಮಲ್ಲಿ ॥ ಚಂ॥ ಪೊಳೆವಳೆಮಿಂಚು ಸುಚಲಿಸೆ ಕಾರ್ಮುಗಿಲೇಳೆ ಮಹೇಂದ್ರಚಾಪಮು । ಜ್ವಳಿಸೆ ಕಳಾಪಿ ತಾಂಡವಮ ನಾಡೆ ಮುಗುಳ್ತು ಕದಂಬರಾಜಿ ಕಂಗೊಳಿಸೆ ಚಿಳಿಲ್ಪಿಟಲ್ಧ್ವನಿ ಘನಾಘನದೊಳ್ನೆಲೆವೆರ್ಚೆ ಚಾತಕಾ । ವಳಿ ನೇವೇರೆ ಕಟ್ಟಕರೆದ ತ್ತಿಳೆಯೊಳ್ಕಳೆ ಕಾರ ಕಾಲದೊಳ್ ॥ ... .. ॥೧೨೨॥

ವ ॥ ಅಂತೆಡವಿಡದೆ ಕರೆವ ಪೆರ್ಮಳೆಯೊಳೊತ್ತರೆಯುರ್ಕಿ ವರಿಯೆ ತನಗೆ ದಾಂಟಲಳವಲ್ಲದೆ ಲಿಂಗಾರ್ಚನೆಯುಳಿಯೆ ಮೂರುಂದಿನ ಮುಪವಾಸ ಮಿರ್ದನಂತರಂ ತೊರೆ ತೆಗೆಯೆ ದೇಗುಲಕ್ಕೆ ಭಕ್ತಂ ಬಂದು ॥ * * * * * * *

ಚಂ ॥ ಉಳಿದನಿತುಂದಿನಂಗಳ ಶಿವಾರ್ಚನೆಗೆಯ್ದಪೆನೀಗ ಳೆಂದು ಕ । ಲ್ಗಳ ನರಸುತ್ತೆ ಕಾಣದರಸುತ್ತೆ ಮಹಾಶಿಲೆಯೊಂದ ನೆತ್ತಿ ತಂ ॥ ದೊಳ ವಿವರಲ್ಲಿ ಮಿಕ್ಕ ಶಿಲೆಗಳ್ಯವ ಕೊಳ್ವುದೆನುತ್ತೆ ಮೇಲೆ ನಿ । ಶ್ಚಳಮತಿ ನೂಂಕೆ ಭೋಂಕನದ ನೊತ್ತರಿಸುತ್ತೆ ನಗುತ್ತೆ ಶಂಕರಂ ॥ ... ... ... ॥೧೨೩॥

ಕಂ ॥ ಎರೆ ವರಮ ನವುಳಸುಗುಣಾ । ಭರಣ ಭವನ್ನಿಷ್ಠೆಗೊಲ್ದೆ ನೆನೆ ವಿಪುಳಕೃಪಾ ॥ ಕರ ನೀಕ್ಷಿಸಿ ಭಕ್ತಂ ಪುರ । ಹರಂಗೆ ಪೊಡಮಟ್ಟು ಪೊಗಳ್ದನತುಳೋತ್ಸವದಿಂ॥

ಚಂ ॥ ಪರಮಕೃಪಾಸಮುದ್ರ ಫಣಿರಾಜವಿಭೂಷಣ ಭವ್ಯ ಭಾ । ಸ್ಕರಶತಕೋಟತೇಜ ಭಜಕಾಮರಭೂರುಹ ಭೂರಿದೈತ್ಯಸಂ ॥ ಹರ ಹರಿಣಾಂಕಜೂಟ ಶಮನಸ್ಮರಘಸ್ಮರ

---

ಓರುತಿರೆ- ಮನೋಹರವಾಗಿ, ಆಹಾರಂಗೊಳೆ- ಭೋಜನವಂ ಮಾಡೆನು. ... ॥೧೨೦॥

ಫುಲ್ಲೋತ್ಪಲಭಾವನೆಯಿಂ- ವಿಕಸಿತವಾದ ನೈದಿಲೆ ಯೆಂಬ ಯೋಚನೆಯಿಂದ. ... ॥೧೨೧॥

ಕಾರ್ಮುಗಿಲ್- ಕಪ್ಪುಮೋಡವು, ಮಹೇಂದ್ರಚಾಪಂ- ಇಂದ್ರಧನುಸ್ಸು, ಕಳಾಪಿ- ನವಿಲು, ತಾಂಡವಮಂ- ನಾಟ್ಯವನ್ನು, ಕದಂಬರಾಜಿ- ಈಚಲುಮರಗಳ ಪಙ್ತಿಯು, ಘನಾಘನದೊಳ್-ಮಳೆಯಂ ಹೊಯುವಮೋಡದಲ್ಲಿ, ಕಾರ- ಮಳೆಯ. ... ... ... ॥೧೨೨॥

ತೊರೆ- ಪ್ರವಾಹವು, ತೆಗೆಯೆ- ಇಳಿದುಹೋಗಲು. * * * *

ಅರಸುತ್ತೆ- ಹುಡುಕುತ್ತ, ಒತ್ತಿ- ಒಂದುಕಡೆಗೆ ನೂಕಿ. ... ... ॥೧೨೩॥

ಎರೆ- ಬೇಡು, ಭವನ್ನಿಷ್ಠೆಗೆ- ನಿನ್ನ ಶ್ರದ್ಧೆಗೆ, ಪೊಡಮಟ್ಟು- ನಮಸ್ಕರಿಸಿ. ... ॥೧೨೪॥

ಭವ್ಯಭಾಸ್ಕರ- ಮಂಗಳಸ್ವರೂಪರಿಂ ಧ್ಯಾನಿಸಲ್ಪಡುವದಕ್ಕೆ ಯೋಗ್ಯನಾದ, ಭಾಸ್ಕರಶತಕೋಟಿತೇಜ- ನೂರು ಕೋಟಿ ಸೂರ್ಯರ ಕಾಂತಿಯಂತಿರುವ ಕಾಂತಿಯುಳ್ಳ, ಭಜಕಾಮರಭೂರುಹ- ಸೇವಕರಿಗೆ ಕಲ್ಪವೃಕ್ಷನಾದ, ಭೂರಿದೈತ್ಯಸಂಹರ- ಬಹು ರಾಕ್ಷಸರನ್ನು ನಾಶಮಾಡಿದ. ಹರಿಣಾಂಕಜೂಟ- ಚಂದ್ರನೇ ಲಾಂಛನವಾಗುಳ್ಳ ಜಡೆಯುಳ್ಳ, ಶಮನಸ್ಮರಘಸ್ಮರಭಾಳನೇತ್ರ— ಶಮನ- ಯಮ, ಸ್ಮರ- ಮನ್ಮಥ ಇವರುಗಳ

ಭಾಳನೇತ್ರ ಶಂ । ಕರ ಜಯ ದೇವದೇವ ನಿಗಮಾಗಮಸನ್ನುತ ನೀಲಕಂಧರಾ ೧೨೫

ಚಂ ॥ ಪುರಹರ ನಿನ್ನ ನಿತ್ಯತೆಗೆ ಮೃತ್ಯುಹಗತ್ವಮೆ ಸಾಕ್ಷಿ ನಿನ್ನಧೀ । ಶ್ವರತೆಗೆ ಪಾದದಲ್ಲಿ ತಳೆದಚ್ಯುತನಕ್ಷಿಯೆ ಸಾಕ್ಷಿ ನೀಂ ಜಗ ॥ ದ್ಗುರುವೆನಿಸಿರ್ಪುದಕ್ಕೆ ನಿಗಮಂಗಳ ಪೆತ್ತುದೆಸಾಕ್ಷಿ ನಿನ್ನಸ । ತ್ಪುರುಷತೆ ಗಾಡಿವಿಷ್ಣು ವಧುವಾದುದೆ ಸಾಕ್ಷಿ ಸಮಸ್ತಲೋಕದೊಳ್ ॥ ... ... ... ... ೧೨೬

ಮ॥ ಸ್ರ॥ ಹರ ನಿನ್ನಾದ್ಯಂತಶೂನ್ಯತ್ವಕೆ ನುಡಿದಘದಿಂ ಪಂದಿಪದ್ದೂರ್ದ ಪದ್ಮೋ । ದರಬ್ರಹ್ಮರ್ಸಾಕ್ಷಿ ನಿನ್ನುಜ್ಜ್ವಳಮಹಿಮೆಗೆ ವೇದಂಗಳೇ ಸಾಕ್ಷಿ ಲೋಕೋ ॥ ತ್ಕರರಕ್ಷಾಶಾಲಿ ನೀನೆಂಬುದಕೆ ಗಳವಿಷಂ ಸಾಕ್ಷಿ ಕೇಳ್ದೇವ ಕಾರು । ಣ್ಯರಸಾಂಭೋರಾಶಿ ನೀನಾದುದ ಕೆನಗಣ ಮೊಲ್ಪಂದಮೇ ಸಾಕ್ಷಿಯಲ್ತೆ ॥ ... ೧೨೭

ಮ॥ ಸ್ರ॥ ಹರಿ ನಿನ್ನಂ ಪೂಜೆಗೆಯ್ದಂ ಧವಳನಳಿನದಿಂ ಪದ್ಮಜಂ ಪದ್ಮದಿಂದಂ। ಸುರಪಂ ಮಂದಾರದಿಂ ಚಂದ್ರಮ ನಸಿತಸರೋಜಾತದಿಂ ಸೂರ್ಯ ನರ್ಕೋ ॥ ತ್ಕರದಿಂ ವಾಣಿಕ್ಯದಿಂದಂ ಫಣಿಪತಿ ದಶಕಂಠಂ ಶಿರೋಬೃಂದದಿಂದಂ । ಭರದಿಂ ದಾ ನಿಲ್ಲಿ ಕಲ್ಲಿಂ ಪೊಸತೆನೆ ನೆಗಳ್ದಂ ಪೂಜೆಯಂ ಚಂದ್ರಮೌಳೀ ॥ ... ... ೧೨೮

ಕಂ ॥ ಎಲ್ಲ ಪೂರ್ವಿಂ ಕ್ಪೂಜಿಪ । ರಿಲ್ಲಿ ಕರಂ ಕಲ್ಗಳಿಂದೆ ಪೂಜಿಸಿದ ಶಿವಂ ॥ ಖುಲ್ಲ ನೆನುತಂ ವಿಡಂಬಿಸ । ಲೊಲ್ಲದೆ ನೀ ನೊಲ್ದೆಗಡ ದಯಾಳುಗಳರಸಾ ॥ ೧೨೯

ಕಂ ॥ ವರದಾನಶೀಲ ಸುಗುಣಾ । ಭರಣ ದಯಾವಾರ್ಧಿ ನಿನ್ನ ಮಹಿಮೋನ್ನತಿಯಿಂ॥ ಹರಿವಿಧಿಮುನಿನಿಗಮೋ । ತ್ಕರ ಮರಿಗುಮೆ ಬಲ್ಲೆ ನೆಂತೊ ನಿನ್ನತಿಶಯಮಂ॥ ೧೩೦

ಕಂ ॥ ಬಲ್ಲ ಪ್ರಮಥಾಧೀಶ । ರ್ಬಲ್ಲಂ ವೃಷಭೇಂದ್ರ ನಮಳಶರಣ ರ್ಬಲ್ಲ ॥ ರ್ಕಲ್ಲಿಡುವ ಕಜ್ಜ ವೊಂದುಂ । ಬಲ್ಲೆಂ ನಿನ್ನಿರವ ನೆಂತು ಮಾನರಿಪಪೆನೇ ॥ ... ೧೩೧

ವ ॥ ಎಂದಿಂತು ಪರಮಾನಂದದಿಂ ಪೊರೆಯೇರಿ ಪೊಗಳ್ದು ॥ * * *

---

ನ್ನು, ಘಸ್ಮರ- ಬಹಳವಾಗಿತಿಂದ, ಭಾಳನೇತ್ರ- ಹಣೆಗಣ್ಣುಳ್ಳ. ... ... ||೧೨೫||

ಅಧೀಶ್ವರತೆಗೆ- ಸ್ವಾಮಿತ್ವಕ್ಕೆ, ವಧು- ಹೆಂಡತಿಯು. ... ... ||೧೨೬||

ಆದ್ಯಂತಶೂನ್ಯತ್ವಕೆ- ಮೊದಲು ಕೊನೆ ಯಿಲ್ಲದಿರುವದಕ್ಕೆ, ಅಘದಿಂ- ಪಾಪದಿಂದ, ಪಂದಿ- ಹಂದಿ, ಪದ್ದೂರ್ದ- ಹದ್ದು, ಪದ್ಮೋದರಬ್ರಹ್ಮರ್- ವಿಷ್ಣುಬ್ರಹ್ಮರು, ಲೋಕೋತ್ಕರರಕ್ಷಾಶಾಲಿ- ಜಗತ್ಸಮೂಹವನ್ನು ಸಂರಕ್ಷಿಸುವದರಿಂದೊಪ್ಪುವನು, ಗಳವಿಷಂ- ಕತ್ತಿನಲ್ಲಿರುವ ವಿಷವು, ಎನಗೆ, ಅಣಂ- ಅತ್ಯಂತವಾಗಿ.

ಧವಳನಳಿನದಿಂ- ಬೆಳ್ದಾವರೆಯಿಂದ, ಪದ್ಮಜಂ- ಬ್ರಹ್ಮನು, ಸುರಪಂ- ದೇವೇಂದ್ರನು, ಮಂದಾರದಿಂ- ಕಲ್ಪವೃಕ್ಷದ ಹೂವಿನಿಂದ, ಅಸಿತಸರೋಜಾತದಿಂ- ಕನ್ನೈದಿಲೆಯಿಂದ, ಅರ್ಕೋತ್ಕರದಿಂ- ಎಕ್ಕದ ಹೂವಿನ ಗುಂಪಿನಿಂದ, ಫಣಿಪತಿ- ಆದಿಶೇಷನು, ದಶಕಂಠಂ-ರಾವಣನು, ಶಿರೋಬೃಂದದಿಂದಂ-ತಲೆಗಳಸಮೂಹದಿಂದ.

ಖುಲ್ಲಂ- ನೀಚನು, ವಿಡಂಬಿಸಲೊಲ್ಲದೆ- ತಿರಸ್ಕರಿಸದೆ. ... ... ||೧೨೯||

ಮಹಿಮೋನ್ನತಿಯಿಂ- ಮಹತ್ತ್ವಾತಿಶಯದಿಂದ. ... ... ||೧೩೦||

ಇರವಂ- ರೀತಿಯನ್ನು, ಎಂತುಂ- ಹ್ಯಾಗಾದಾಗ್ಯೂ. ... ... ||೧೩೧||

ಪೊರೆಯೇರಿ- ಸಂತೋಷಾತಿಶಯವಂ ಹೊಂದಿ. * * * *

ಮ॥ ಸ್ರ॥ ವರಮುಂ ಬೇರೊಂದುಮಂ ಪ್ರಾರ್ಥಿಸೆ ನನುದಿನ ಮಾನಿರ್ದ್ದ ಭೂಮಂಡಲಂ
ಬೌ । ದ್ಧರಿ ನಾಚಾರ್ವ್ಯಾಕರಿಂ ಜೈನರ ಸಮುದಯದಿಂ ಶೂನ್ಯ ಮಪ್ಪಂತೆಗೆಯ್ದಾ ॥ ಶ್ವರ
ಭ ಕ್ತಿಶ್ರೇಣಿಯಿಂ ತೀವ್ರವವೊ ಲೆಸ ಗಿದೆನ್ನಿಪ ಟ್ಟ ಮೆಂಡದ್ರಿಜಾಧೀ । ಶ್ವರ ನಿಂತಾನೆಂಡವ್ರೋ
ಲಾಗಿಸಿ ಮೆರೆಯನೆ ಕೇಳ್ದಾತ್ರಿಯೊ ಳ್ಸಾಂಖ್ಯತೊಂಡಂ ॥ ... ೧೩೭

ಕಂ ॥ ವಾಗೀಶನ ಕಥೆಯಂ ಚೆ । ಲ್ವಾ ಗೀಶನ ಭಕ್ತ ರೆಡೆಯೊ ಳೋದುವ ನವ ನಾ॥
ವಾಗೀಶಮುಖ್ಯಸುರಗುರು । ವಾ ಗೀಶಕೃಪಾವಿಶೇಷದಿಂ ಸುಖಮಿರ್ಪ್ಪಂ ॥ ೧೩೩

ಕಂ ॥ ಹರಸುತ ವಿಮಳಕಥನಮ । ನೊರೆವರ್ಗಂ ಕೇಳ್ವವರ್ಗೆ ಮಿಾಮ ದೇವ ॥
ವರಮುಂ ಪರಮುಂ ಗಿರಿಮಂ । ದಿರಮುಂಗಳರೂಪ ನೋಪನಗಪತಿಸುತೆಯ॥ ೧೩೮

ಕಂ ॥ ನಿಡುಮಾರದೇವಕಥನಮ । ನೊಡ ನುತ್ಸವದಿಂದೆ ಪಠಿಯಿಪಾಲಿಪ ಮನುಜ॥
ರ್ಗ್ಗಡೆವಿಡದೆ ಪೂರ್ಣಸುಖಮಂ । ಮೃಡ ನೀವಂ ದೇವದೇವ ನೀವಸುಮತಿಯೊಳ್ ॥ ೧೩೫

ರಥೋದ್ಧತವೃತ್ತಂ ॥ ನಮಿನಂದಿನಾಥವಿಳಸಚ್ಚರಿತ್ರಮಂ । ಕ್ರಮದಿಂದೆ ಪೇಳ್ವ
ಮಿಗೆ ಕೇಳ್ವ ಮರ್ತ್ಯರಂ ॥ ಸು ಮಹಾಗಣೇಂದ್ರಪದ ವಿತ್ತು ರಕ್ಷಿಪಂ । ಹಿಮಶೈಲಪುತ್ರಿ
ಯರಸಂ ವಿಳಾಸದಿಂ ॥ ... ... ... ೧೩೬

ಕಂ ॥ ಕಲಿಸಾಂಖ್ಯಚರಿತಮಂ ನಿ । ಶ್ಚಲಮತಿಯಿಂ ಪೇಳ್ವ ಕೇಳ್ವ ವಿಬುಧರ್ಗ
ಮರಾ ॥ ಚಲಚಾಪನೀವ ನತಿಮಂ । ಜುಲಸುಖಮಂ ಶತಮುಖಾದಿನುತಗಣಪದಮಂ॥ ೧೩೭

ಮ ತ್ತೇ ॥ ವಿಳಸತ್ಕಲ್ಯಾಣಕಲ್ಪದ್ರುಮ ನಖಿಳಕಲಾಶಾಲಿ ಶೈವಪ್ರಭಾವೋ । ಜ್ವ
ಳಧಾಮಂ ಭಕ್ತಿಭಾಮಾರಮಣ ನಮಳಕೀರ್ತಿಪ್ರಭಾಪೂರಿತಾಶಾ ॥ ವಳಯಂ ದುರ್ದಾಂತ

---

ಬೇರೊಂದುಮಂ-ಮತ್ತೊಂದಾದ, ಅನುದಿನಂ-ಯಾವಾಗಲೂ, ತೀವ್ರವವೋಲ್-ತುಂಬುವಹಾಗೆ ॥೧೩೦॥

ಚೆಲ್ವಾಗಿ- ಮನೋಹರವಾಗಿ, ಆವಾಗೀಶಮುಖ್ಯಸುರಗುರು— ಆವಾಗೀಶ- ಬ್ರಹ್ಮನೇ, ಮುಖ್ಯ-
ಮೊದಲಾದ, ಸುರ ದೇವತೆಗಳಿಗೆ, ಗುರು- ಆಚಾರ್ಯನು, ಆಗಿ. ... ... ॥೧೩೩॥

ಹರಸುತನ-ತಿರುಜ್ಞಾನಸಂಬಂಧಿಯ, ಒರೆವರ್ಗಂ- ಹೇಳುವವರಿಗೂ, ಪರಮುಂ- ಉತ್ಕೃಷ್ಟನಾದ,
ಗಿರಿಮಂದಿರಮಂಗಳರೂಪಂ- ಪರ್ವತವೇ ಮನೆಯಾಗುಳ್ಳ ಮಂಗಳಾಕಾರನಾದ, ಅಗಪತಿಸುತೆಯ- ಪರ್ವತ
ರಾಜಪುತ್ರಿಯ, ಒಪಂ- ಪತಿಯು. ... ... ... ॥೧೩೮॥

ಆಲಿಪ- ಕೇಳುವ. ... ... ... ॥೧೩೫॥

॥೧೩೭॥ * ಅಮರಾಚಲಚಾಪಂ-ಮೇರುಪರ್ವತವೇ ಧನುಸ್ಸಾಗುಳ್ಳ ಶಿವನು, † ಶತಮುಖಾದಿ
ನುತಗಣಪದಮಂ— ಶತಮುಖ- ದೇವೇಂದ್ರನೇ, ಆದಿ- ಮೊದಲಾದವರಿಂದ, ನುತ- ಹೊಗಳಲ್ಪಟ್ಟ, ಗಣ
ಪದಮಂ- ಶಿವಗಣಸ್ಥಾನವನ್ನು. ... ... ... ॥೧೩೭॥

* (ಅವ) ಅಮರ- ದೇವತೆಗಳ, ಅಚಲ- ಬೆಟ್ಟ. † (ಅವ) ಶತ- ನೂರಾದ, ಮುಖ- ಯಜ್ಞ
ವುಳ್ಳವನು. ... ... ... ... ॥೧೩೭॥

ಶೈವಪ್ರಭಾವೋಜ್ವಳಧಾಮಂ— ಶೈವ- ಶಿವಸಂಬಂಧವಾದ, ಪ್ರಭಾವ- ಮಹಿಮೆಗೆ, ಉಜ್ವಳಧಾ
ಮಂ- ಪ್ರಕಾಶಿಸುವ ಸ್ಥಾನನಾದ, ಭಕ್ತಿಭಾಮಾರಮಣಂ- ಶಿವಭಕ್ತಿ ಯೆಂಬ ಸ್ತ್ರೀಗೆ ಪತಿಯಾದ, ಅಮಳ
ಕೀರ್ತಿಪ್ರಭಾಪೂರಿತಾಶಾವಳಯಂ- ನಿರ್ಮಲವಾದ ಯಶಃಕಾಂತಿಯಿಂದ ತುಂಬಲ್ಪಟ್ಟ ದಿಕ್ಸಮೂಹವುಳ್ಳ, ದು

ವಾಗ್ಭಂಜನ ನಧಿಗತಸರ್ವಾರ್ಥ ನಿಂತಿಂತವಂ ಮಂ । ಜುಳವೃತ್ತಂ ಪೇಳ್ವುದಂ ತಾಂ ತಿಳಿದು ಮುದಮು ನಾಳ್ದೊಪ್ಪುತಿರ್ದ್ದಂ ವೃಷೇಂದ್ರಂ ॥ ... ೧೩೮

ಲಲಿತಪದವೃತ್ತಂ ॥ ಕಿನ್ನರಗಣಾಧಿಪತಿ ಚೆನ್ನವೃಷಮಾಚವಿಭುಕನ್ನದ ಗಣೇಶ ಮುಖಸನ್ನುತಶಿವೈಕ್ಯೋ । ತ್ಪನ್ನಸುಖಭಾವ ಭವಪನ್ನಗಖಗಾಧಿಪತಿ ಪನ್ನತಪಯೋಜಪರಿಷನ್ನವದಿನೇಶಾ ॥ ಪ್ರೋನ್ನತಗುಣಾಕರ ವಿಪನ್ನಿವಹಸಹ್ಮರ ಜಗನ್ನಿಕರರಕ್ಷಕಲಸನ್ನಿಗಮಸಾರಾ।ಸನ್ನಮತಿನಿತ್ಯಪೊರೆಯೆನ್ನನೆಲೆದೇವಕೃಪೆಯಿಂನಲವನಿತ್ತುಚೆದಭಿನ್ನಬಸವೇಶಾ॥

ಪ್ರಮಾಣಿಕವೃತ್ತಂ ॥ ಮುರಾರಿಶಂಬರಾರಿವಾ । ಗ್ವರಾರಿನಿರ್ಜರಾರ್ಚಿತೇ ॥ ಧರಾಧರೇಶ್ವರಾತ್ಮಜೇ । ಹರಪ್ರಿಯೇಜಯಾಂಬಿಕೇ ॥ ... ... ೧೪೦

ಗದ್ಯಂ ॥ ಇದುವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತ ಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ವೀರಭಕ್ತಿವಿಳಾಸಂ ಚತುಸ್ತ್ರಿಂಶಾಶ್ವಾಸಂ ಪರಿಸಮಾಪ್ತಂ ॥ ... ... ... ... ... ...

ಚತುಸ್ತ್ರಿಂಶಾಶ್ವಾಸಂ ಸಂಪೂರ್ಣಂ.

---

ಭ್ರಾಂತವಾಗ್ಭಂಜನಂ- ದುಷ್ಟರ ಮಾತನ್ನು ಹಾಳ್ಮಾಡುವ, ಅಧಿಗತಸರ್ವಾರ್ಥಂ- ಹೊಂದಿದ ಸಕಲೇಷ್ಟಾರ್ಥಗಳುಳ್ಳ, ಅವಂ ಮಂಜುಳವೃತ್ತಂ- ಆ ಮನೋಹರವಾದ ನಡತೆಯುಳ್ಳ ಏಕಾಂತರಾಮಯ್ಯನು. ॥೧೩೮॥

ಕಿನ್ನರ......ಸನ್ನುತ— ಕಿನ್ನರಗಣಾಧಿಪತಿ- ಕಿನ್ನರಗಣೇಶ್ವರ, ಚೆನ್ನವೃಷ- ಚೆನ್ನಬಸವೇಶ್ವರ, ಮಾಚವಿಭು- ಕನ್ನದ ಗಣೇಶ ಇವರುಗಳೇ, ಮುಖ- ಮೊದಲಾದವರಿಂದ, ಸನ್ನುತ- ಹೊಗಳಲ್ಪಟ್ಟ, ಶಿವೈಕ್ಯೋತ್ಪನ್ನಸುಖ- ಪರಮೇಶ್ವರನೊಡನೆ ಸಾಮರಸ್ಯವಂ ಹೊಂದುವದರಿಂದುಂಟಾದ ಸೌಖ್ಯವುಳ್ಳ, ಭಾವಭವಪನ್ನಗಖಗಾಧಿಪತಿ— ಭಾವಭವ- ಮನ್ಮಥನೆಂಬ, ಪನ್ನಗ- ಸರ್ಪಕ್ಕೆ, ಖಗಾಧಿಪತಿ- ಗರುಡನಾದ, ಪತ್- ಪಾದದಲ್ಲಿ, ನತ- ನಮಸ್ಕರಿಸಿದವರೆಂಬ, ಪಯೋಜ- ಕಮಲಗಳ, ಪರಿಷತ್- ಸಭೆಗೆ, ನವದಿನೇಶಾ- ಹೊಸಸೂರ್ಯನಾದ, ಪ್ರೋನ್ನತಗುಣಾಕರ- ಉತ್ಕೃಷ್ಟಗಳಾದ ಗುಣಗಳಿಗಾಶ್ರಯನಾದ, ವಿಪನ್ನಿವಹಸಹ್ಮರ- ಆಪತ್ತುಗಳ ಸಮೂಹವನ್ನು ನಾಶಪಡಿಸುವ, ಜಗನ್ನಿಕರರಕ್ಷಕ- ಜಗತ್ತುಗಳ ಸಮೂಹವನ್ನು ಪರಿಪಾಲಿಸುವ, ಲಸನ್ನಿಗಮಸಾರಾಸನ್ನಮತಿ— ಲಸತ್- ಪ್ರಕಾಶಿಸುವ, ನಿಗಮ- ವೇದಗಳಲ್ಲಿ, ಸಾರ- ಶ್ರೇಷ್ಠನಾದ ಪರಮೇಶ್ವರನಿಗೆ, ಆಸನ್ನ- ಸಮೀಪವರ್ತಿಯಾದ, ಮತಿ- ಬುದ್ಧಿಯುಳ್ಳ, ನಿತ್ಯ- ಶಾಶ್ವತನಾದ, ಚೆದಭಿನ್ನ- ಚಿತ್ತಿಗಿಂತಲೂ ಬೇರೆಯಾಗದ, ದೇವ- ಸ್ವಾಮಿಯಾದ, ಎಲೆ ಬಸವೇಶ ! ಎನ್ನಂ, ಕೃಪೆಯಿಂ, ನಲವಂ- ಸಂತೋಷವನ್ನು, ಇತ್ತು, ಪೊರೆ. ... ... ... ॥೧೩೯॥

ಮುರಾರಿಶಂಬರಾರಿವಾಗ್ವರಾದಿನಿರ್ಜರಾರ್ಚಿತೆ— ಮುರಾರಿ- ವಿಷ್ಣು, ಶಂಬರಾರಿ-ಮನ್ಮಥ, ವಾಗ್ವರ- ಬ್ರಹ್ಮ, ಇವರೇ, ಆದಿ- ಮೊದಲಾದ, ನಿರ್ಜರ- ದೇವತೆಗಳಿಂದ, ಅರ್ಚಿತೇ- ಪೂಜಿಸಲ್ಪಟ್ಟ, ಧರಾಧರೇಶ್ವರಾತ್ಮಜೇ— ಧರಾಧರ- ಪರ್ವತಗಳಿಗೆ, ಈಶ್ವರ-ಸ್ವಾಮಿಯಾದ ಹಿಮವಂತನ, ಆತ್ಮಜೇ- ಪುತ್ರಿಯಾದ, ಹರಪ್ರಿಯೇ- ಪರಶಿವನಿಗೆ ಪ್ರೀತಿಪಾತ್ರಳಾದ, ಅಂಬಿಕೇ ! ಜಯ. ... ॥೧೪೦॥

ಶ್ರೀಃ

ವಾಸುದೇವಾಯ ಪರಬ್ರಹ್ಮಣೇನಮಃ.

# ಪಂಚತ್ರಿಂಶಾಶ್ವಾಸಂ

## ಕೋಹೂರ ಬ್ರಹ್ಮಾರ್ಯ ಕಥನಂ.

ಕಂ॥ ಶ್ರೀಹಿಮಗಿರೀಂದ್ರಕನ್ಯಾ ಬಾಹಾ ಚಂಪಕಸುಮಾಲಿಕಾಕಲಿತಗಳಂ॥ ಮೋಹವಿದೂರಂ ಸುಗುಣಸ। ಮೂಹಾನ್ವಿತ ನೀಗೆ ಸೌಖ್ಯಮಂ ಶಿವಲಿಂಗಂ ... ... ೧

ವ॥ ಮತ್ತಂ॥ ॥ಮತ್ತೇ॥ ಧರಣೀಭಾಗದೊಳೆಳ್ಗೆವೆತ್ತು ಮಿಸುಪಾ ಕೋಹೂರಬೊಮ್ಮಯ್ಯ ನೀ। ಶ್ವರಭಕ್ತಂ ಗೆಲೆ ಜೈನತಾಪಸರ ನಾರ್ಪಿಂ ವಾದದೊಳ್ಸೋಲ್ತವ॥ ರ್ಕರ ವೆಂಡುನೆನೆದಾವೆ ಬಾಳಿಪೆ ನಿದಂ ಪೇರಾಲಮಂ ನೀನೆ ಸು। ಟ್ಟುರುಪಂತಲ್ಲದೊಡಾವೆ ಸುಟ್ಟಪೆನಿವಂ ನೀಂ ಬಾಳಿಸೈಮಂತ್ರದಿ ... ... ೨

ವ॥ ಎರಡರೊಳಂದಭಿಮತಮನಪ್ಪುಗೈದು ನೆಗಳ್ವುದಿದೇ ದೃಷ್ಟಾಂತಮೆಮ್ಮ ಮಹಿಮೆಗಂ ನಿಮ್ಮ ಪೇರ್ಮೆಗ ವೆಂದು ಕುಮಂತ್ರತಂತ್ರನಿಪುಣಶವಣನುಡಿಯೆ ಬೊಮ್ಮಿದೇವಂ ಮಾರ್ಕೊಂಡು॥ * * * * * * * *

ವ॥ ಸ್ರ॥ ಪಸಿಪಿದಿರ್ದುಂ ಪಣ್ಗಳಿಂ ತಾಂ ಪಸಿವ ನುಡುಗಿಕುಂ ಪ್ರಾಣಿವರ್ಗಕ್ಕೆ ನಿಚ್ಚಂ। ಬಿಸಿಲೊಳ್ತಾನಿರ್ದು ಮನ್ಸ್ಯರ್ಬರೆ ಬಳಿನೆಳಲಂ ಸಾರ್ಚುಗುಂ ನೆರ್ನೆರಂ ಪ॥ ಕ್ಷಿಸಹಸ್ರಾಲಂಬನಂ ತಾ ನೆನಿಕುವಿದ ನದೆಂತುಂ ಸುಡಲ್ತಕ್ಕುದೇ ಭ। ಕ್ತಸಮೂಹಕ್ಕೆಂದು ನೀವೇ ಸುಡೆ ಪಡೆದಪೆ ನೀಯಾಲಮಂ ಲೀಲೆಯಿಂದಂ॥ ... ... ... ೩

---

ಶ್ರೀ......ಗಳಂ— ಶ್ರೀಹಿಮಗಿರೀಂದ್ರಕನ್ಯಾ- ಷಡ್ಗುಣೈಶ್ವರ್ಯಯುಕ್ತಳಾದ ಹಿಮವತ್ಪರ್ವತ ಪುತ್ರಿಯ, ಬಾಹಾ- ತೋಳೆಂಬ, ಚಂಪಕಸುಮಾಲಿಕಾ- ಸಂಪಿಗೆಯ ಹೂವಿನ ಸರದಿಂದ, ಕಲಿತ- ಕೂಡಿದ, ಗಳಂ- ಕಂಠವುಳ್ಳ, ಮೋಹವಿದೂರಂ- ಅಜ್ಞಾನಕ್ಕೆ ದೂರಸ್ಥನಾದ. ... ॥೧॥

ಗೆಲೆ- ಜೈಸಲು, ಜೈನತಾಪಸರಂ- ಜಿನಮುನಿಗಳನ್ನು, ಆರ್ಪಿಂ- ಪರಾಕ್ರಮದಿಂದ, ವಾದದೊಳ್- ಶಾಸ್ತ್ರಾರ್ಥವಾದದಲ್ಲಿ, ಪೇರಾಲಮಂ- ದೊಡ್ಡಆಲದಮರವನ್ನು, ಉರುಪು- ಉರಿಯಿಸು, ಬಾಳಿಸೈ- ಬದುಕಿಸಯ್ಯ. ... ... ... ... ॥೨॥

ಅಭಿಮತಮಂ- ಇಷ್ಟವಾದುದನ್ನು, ಅಪ್ಪುಗೈದು- ಅಂಗೀಕರಿಸಿ, ನೆಗಳ್ವುದು- ಮಾಡುವದು, ಪೇರ್ಮೆಗಂ- ಅತಿಶಯಕ್ಕೂ, ಮಾರ್ಕೊಂಡು- ಪ್ರತಿಯಾಗಿ. * * * * * *

ಉಡುಗಿಕುಂ- ಹೋಗಲಾಡಿಸುವದು, ಬಳಿನೆಳಲಂ- ನೆಳಲಿನ ಪ್ರದೇಶವನ್ನು, ನೆರ್ನೆರಂ- ಸುಮ್ಮನೆ, ಪಕ್ಷಿಸಹಸ್ರಾಲಂಬನಂ- ಅನೇಕ ಹಕ್ಕಿಗಳಿಗಾಶ್ರಯವಾದದ್ದು, ತಕ್ಕುದೇ- ಯೋಗ್ಯವಾದದ್ದೇ? ॥೩॥

ಮ॥ ಸ್ರ॥ ಎನೆ ಕೇಳ್ದಾ ಜೈನ ರಾಗ ಳ್ಗಳಪುತಣಕವಾತಂ ತಪೋವನ್ನಿ ಮಿಂಭೋಂ। ಕನೆ ಸುಟ್ಟ ರ್ಭಸ್ಮಮಪ್ಪಂತಿರೆ ವಟತರುವ ಕಂಡು ತದ್ಭಸ್ಮಸಂ ಜೀ। ವನಮಂ ತಾಂಸೂಸುತಂ ಪ್ರುಟ್ಟಸುತೆ ಜಯಿಸಿ ತಜ್ಜೈನರಂ ಭಂಗಿಸುತ್ತಂ। ಜಿನಗೇಹವ್ರಾತಮಂ ಕೀಳ್ತಿಡಿಸಿ ಮೆರೆಯುನೇ ಶೌರ್ಯಮಂ ಬೊವ್ಮಿದೇವಂ॥ ... .. ೪

ಕಂ॥ ಪೊಟ್ಟಳಕೆರೆವೆಸರೊಪ್ಪುವ । ಪಟ್ಟಣದರಸಂ ಯಶಸ್ವಿ ಜಿನಧರ್ಮಪರಂ॥ ಧಿಟ್ಟಂ ರಿಪುಗೋಧೂಮಘು। ರಟ್ಟಂ ಜಯಸಿಹ್ಮನೆಂಬ ನವನೀಪಾಲಂ॥ ... ೫

ತರಳವೃತ್ತಂ॥ ಕ್ಷಿತಿಯೊಳೊಪ್ಪುವ ತನ್ನೃಪಾಲನ ದೇಶಿಕಂ ಜಿನಭಕ್ತನಾ। ನುತಪುರಾಂತರದೊಳ್ವಿರಾಜಿಪ ನುದ್ಘವಾದವಿಚಕ್ಷಣಂ॥ ಕೃತಕಶಾಸ್ತ್ರಧುರಂಧರಂ ಸಲೆ ಪುಷ್ಪಸೇನಕ ನೊಲ್ಪುವಿಂ। ಶತಿಸಹಸ್ರಸಮಾನಶಿಷ್ಯಸಮೇತ ನುದ್ಧತವೃತ್ತಿಯಿಂ ೬

ವ॥ ಅಪುಷ್ಪಸೇನಪಂಡಿತ ನಾಪೊಳಲ ಮನುಜರ್ಗೆ ಜಿನಧರ್ಮಮಂ ಬೋಧಿಸುತ್ತುಮವರಂಜಿನಭಕ್ತರು ಮಾಡುತ್ತಂ ನೆಗಳ್ತೆವೆತ್ತಿರೆ ಜಯಸಿಹ್ಮನೃಪನರಸಿ ಸುಗ್ಗಲದೇವಿಯೆಂಬವಳ್ತಾಂ ಶಿವಭಕ್ತೆಯಪ್ಪುದರಿಂದಂ ಸೈರಿಸಲಾಗದೆ ತನ್ಮದಮ ನಳಸಲೆಳಸಿ ನಿಜಗುರುವಪ್ಪದಾಸಿಮಯ್ಯನಂ ಶರಣಗಣಸಮಾವೃತನ ನಾಪ್ತಜನದಿಂ ಭಕ್ತಿವಿಜ್ಞಾಪನ ಪೂರ್ವಕಂ ಬರಿಸಿ ತನ್ನಮನೆಗೆ ಬಿಜಯಂಗೈಸಿ ಸಾಷ್ಟಾಂಗಮೆರಗಿ ಕೇಳೀವನಧ ಮಣಿಮಾಡಮಂ ಬಿಡುದಾಣಂಗೆಯ್ದಿರಿಸಿ ಸಮುಚಿತಸಾಮಗ್ರಿಗಳಂ ನಿಯೋಜಿಸಿ ಸಂತಸಂಬಡೆ ಧಿದ್ದಗಳವಂ ಕಂಡಾಜಿನಮುನಿಗ ಳ್ಮನಿ ದರಸನೆಡೆಗೇಳ್ತಂದು॥ * * * * *

ಮಲ್ಲಿಕಾಮಾಲಾವೃತ್ತಂ॥ ನಿನ್ನ ವಲ್ಲಭೆ ಶೈವಸೋರ್ವನ ನಿಂದು ಮದ್ಗುರು ವೆಂದು

---

ಗಳಪುತೆ- ಪೊಗಳುತ್ತ, ಅಣಕವಾತಂ- ಅಣಕಿಸುವ ಮಾತನ್ನು, ಭೋಂಕನೆ- ಬೇಗನೆ, ವಟತರುವಂ- ಆಲದ ಮರವನ್ನು, ಭಸ್ಮಸಂಜೀವನಮಂ- ಭಸ್ಮವೆಂಬ ಸಂಜೀವನೌಷಧವನ್ನು,ಸೂಸುತಂ- ಚೆಲ್ಲುತ್ತ, ಜಿನಗೇಹವ್ರಾತಮಂ- ಬಸದಿಗಳ ಸಮೂಹವನ್ನು. ... ॥೪॥

ಧಿಟ್ಟಂ- ಧೈರ್ಯಶಾಲಿಯಾದ, ರಿಪುಗೋಧೂಮಘುರಟ್ಟಂ— ರಿಪು- ಶತ್ರುಗಳೆಂಬ, ಗೋಧೂಮ- ಗೋದುವೆಗೆ, ಘುರಟ್ಟಂ- ಬೀಸುವ ಕಲ್ಲಾದ, (ಅಂದರೆ ಗೋದುವೆಯನ್ನು ರಾಗಿಯ ಕಲ್ಲು ಪುಡಿಮಾಡುವಂತೆ ಶತ್ರುಗಳನ್ನು ಛೇದಿಸುವ) ... ... ... ॥೫॥

ದೇಶಿಕಂ- ಗುರುವರ್ಯನು, ಉದ್ಘವಾದವಿಚಕ್ಷಣಂ- ಪ್ರಶಸ್ತವಾದ ಶಾಸ್ತ್ರಾರ್ಥದಲ್ಲಿ ಕುಶಲನಾದ, ಕೃತಕಶಾಸ್ತ್ರಧುರಂಧರಂ- ಕಪಟಶಾಸ್ತ್ರಗಳಲ್ಲಿ ಸಮರ್ಥನಾದ, ವಿಂಶತಿಸಹಸ್ರಸಮಾನಶಿಷ್ಯಸಮೇತಂ- ತನಗೆ ಸಮಾನರಾದ ಇಪ್ಪತ್ತುಸಾವಿರ ಶಿಷ್ಯರೊಡನೆ ಕೂಡಿ, ಉದ್ಧತವೃತ್ತಿಯಿಂ- ಕೊಬ್ಬಿದ ನಡತೆಯಿಂದ.

ಆಪೊಳಲ- ಆ ಪಟ್ಟಣದ, ನೆಗಳ್ತೆವೆತ್ತು- ಪ್ರಸಿದ್ಧಿಯಂಹೊಂದಿ, ತನ್ಮದಮಂ-ಆ ಪುಷ್ಪಸೇನನಗರ್ವವನ್ನು, ಅಳಿಸಲ್- ನಾಶಮಾಡುವದಕ್ಕೆ, ಎಳಸಿ- ಅಪೇಕ್ಷಿಸಿ, ಶರಣಗಣಪರಿವೃತನಂ- ಶಿವಶರಣರ ಗುಂಪಿನಿಂದ ಆವರಿಸಲ್ಪಟ್ಟ, ಭಕ್ತಿವಿಜ್ಞಾಪನಪೂರ್ವಕಂ- ಭಕ್ತಿಸಹಿತವಾದ ಬಿನ್ನಹಪುರಸ್ಸರವಾಗಿ, ಬಿಜಯಂಗೈಸಿ- ದಯಮಾಡಿಸಿ, ಕೇಳೀವನದ- ಉಪವನದಲ್ಲಿರುವ, ಮಣಿಮಾಡಮಂ- ರತ್ನಖಚಿತವಾದ ಮಹಡಿಯನ್ನು, ಬಿಡುದಾಣಂಗೆಯ್ದು- ಇಳಿಯುವ ಸ್ಥಲವನ್ನುಮಾಡಿ, ಸಮುಚಿತಸಾಮಗ್ರಿಗಳಂ- ಯೋಗ್ಯವಾದ ಪದಾರ್ಥಗಳನ್ನು, ನಿಯೋಜಿಸಿ- ಜೋತೆಗೊಳಿಸಿ, ಮುನಿದು- ಕೋಪಿಸಿಕೊಂಡು. * * * *

ವಲ್ಲಭೆ- ಪತ್ನಿಯು, ಮೇಲಂ- ಮುಂದಾಗುವದನ್ನು, ಅನ್ನಿಯಂ— ಅನ್ಯಾಯವು, ಜಿನಶುದ್ಧಧರ್ಮವಿ

ಮೇ । ಲುನಿರೀಕ್ಷಿಸ ಡಿಲ್ಲಿಗೈದಿಸಿ ಪೂಜೆಗೆಯ್ದಪ ಳಿಂತಿದೊಂ ॥ ದನ್ನೆಯಂ ಜಿನಶುದ್ಧಧರ್ಮ ವಿರುದ್ಧ ಮಾತನ ನೀಗಳಿ । ಲ್ಲಿಂನಿವಾರಿಪ್ರ ದೆಂದೊಡಂಬಡೆ ಪೇಳೆ ಕೇಳ್ದು ನರೇಶ್ವರಂ ॥ ೭

ಕಂ॥ ಅಂತಪ್ರುರಕ್ಕೈದಿತನ್ನಯ । ಕಾಂತೆಯ ನೇಕಾಂತದೆಡೆಗೆ ಕರೆದೆಂದಂ ಭೂ ॥ ಕಾಂತ ನೆಲೆರಮಣಿ ಯೆನ್ನಿರ। ವಂ ತಿಳಿಯದೆ ಶೈವನಂಭ್ರಿಯಂ ಪೂಜಿಪುದೇ ॥ ೮

ಕಂ ॥ ಸತಿಗು ಪತಿಗಂ ಗುರುವ್ರಂ । ಮತದೈವಮು ಮೆಂಬಿ ವಬಲೆ ಪೆರತೊಳವೆ ವಲಂ ॥ ಪತಿರೇವ ಗುರು ವೆನುತ್ತಿರೆ । ಹಿತೋಕ್ತಿ ನೀ ನನ್ಯಗುರುವ ನಾರಾಧಿಪುದೇ ॥ ೯

ಕಂ ॥ ಇದ ನರಿದೊಡೆ ವಿಪರೀತವು । ನೊದವಿಸಪಿರ ರೆಮ್ಮ ಜಿನತಪಸ್ವಿಗ ಳದಿಂ॥ ಸುದತಿ ಭವದ್ಗುರುವು ತ। ಳ್ವದೆ ಕಳುಪೆನೆ ಕಾಂತೆ ಕೇಳ್ದು ಖತಿಗೊಳುತೆಂದಳ್ ॥ ೧೦

ಕಂ॥ ಮತಿ ಮಿಗೆ ಸತಿಗು ಪತಿಗು । ಮತಮದು ಬೇರಿಲ್ಲವೆಂದು ನುಡಿದಪೆ ನಯಮಂ ॥ ನುತಗುರುಗಂ ಶಿಷ್ಯರ್ಗಂ । ಮತ ಮದು ಪೆರತುಂಟೆ ಧರ್ಮಶಾಸ್ತ್ರಕ್ರಮದೊಳ್ ॥

ಚಂ ॥ ಇಡಿದಖಿಳಾವನೀತಳದೊ ಳುರ್ಬ್ಬಿದ ಪರ್ಬ್ಬಿದ ಮರ್ಬ್ಬಿನೇಳ್ಗೆಯುಂ । ಕಿಡಿಸಲೆ ಬುದ ತಿಗ್ಮರುಚಿ ಸುಮ್ಮನೆ ಪೋಪನೆ ಮಿಕ್ಕು ಸೂರ್ಕಿನು ॥ ರ್ಕ್ಕುಡುಗದಜೈನತಾಪಸರ ದುರ್ಮ್ಮದಮಂ ಮುರಿದಿಕ್ಕಲೆಂದು ಬಂ । ದೆಡೆಯೊ ಳಡೆಂತು ಸುಮ್ಮನೆ ಜಗದ್ಗುರು ಪೋಗಲಾರ್ಪನೇ ॥ ... ... ... ೧೨

ಚಂ ॥ ಇನರುಚಿಯಂ ಮುಸುಂಕು ತಳಿವಿಂಚಿನ ಮಿಂಚನೆ ತೋರ್ಪ ಮೇಘಮುಂ। ಘನಪವನು ಪಳಂಚಿ ಕೆಲನೂಂಕಿ ರವಿದ್ಯುತಿದೋರ್ಪವೋಲ್ಮಹೇ ॥ ಶನ ಮತದೇಳ್ಗೆಯಂ ಮರಸು ತಾತ್ಮಮತಸ್ಥಿತಿದೋರ್ಪ ನಿನ್ನನ । ಚ್ಚಿನ ಜಿನವರ್ಗಮಂ ತವಿಸಿ ಮದ್ಗುರು ತನ್ಮತದೇಳ್ಗದೋರುವಂ ॥ ... ... ... ೧೩

---

ರುದ್ಧಂ- ಪರಿಶುದ್ಧವಾದ ಜೈನರ ಧರ್ಮಕ್ಕೆ ಪ್ರತಿಷಿದ್ಧವಾದದ್ದು, ನಿವಾರಿಪ್ರುದು- ಆಚೆಗೆ ಕಳುಹಿಸುವದು, ಒಡಂಬಡೆ- ಸಮ್ಮತಿಸುವಹಾಗೆ. ... ... ... ||೭||

ಅಂತಪುರಕೆ- ರಾಣಿವಾಸಕ್ಕೆ, ಏಕಾಂತದ- ರಹಸ್ಯದ, ಎಡೆಗೆ-ಸ್ಥಲಕ್ಕೆ. ... ||೮||

ವಲಂ- ನಿಜವಾಗಿ, ಪತಿರೇವ- ಗಂಡನೇ. ... ... ||೯||

ವಿಪರೀತವಂ- ವ್ಯತ್ಯಾಸವನ್ನು, ತಳ್ವದೆ-ಸಾವಕಾಶಮಾಡದೆ, ಖತಿಗೊಳುತೆ-ಕೋಪವಂಹೊಂದುತ್ತ ||೧೦||

ನಯಮಂ-ನೀತಿಯನ್ನು, ... ... ... ||೧೧||

ಇಡಿದು- ತುಂಬಿ, ಉರ್ಬ್ಬಿದ- ಹೆಚ್ಚಿದ, ಮರ್ಬ್ಬಿನ- ಕತ್ತಲೆಯ, ಏಳ್ಗೆಯಂ- ಅತಿಶಯವನ್ನು, ಕಿಡಿಸಲೆ- ನಾಶಮಾಡುವದಕ್ಕೋಸ್ಕರ, ತಿಗ್ಮರುಚಿ- ಸೂರ್ಯನು, ಉರ್ಕ್ಕು- ಗರ್ವವು, ಉಡುಗದ- ಕಡಮೆಯಾಗದಿರುವ, ... ... ... ... ||೧೨||

ಇನರುಚಿಯಂ- ಸೂರ್ಯನ ಕಾಂತಿಯನ್ನು, ಮುಸುಂಕುತೆ- ಆಛಾದಿಸುತ್ತ, ಅಳಿವಿಂಚಿನ- ನಷ್ಟವಾಗುವ ವಿದ್ಯುತ್ತಿನ, ಮಿಂಚನೆ- ಪ್ರಕಾಶವನ್ನು, ಘನಪವನಂ- ದೊಡ್ಡಗಾಳಿಯು, ಪಳಂಚಿ- ಸಂಘಟಿಸಿ, ಕೆಲನೂಂಕಿ- ಒಂದುಕಡೆಗೆ ದಬ್ಬಿ, ಮರಸುತೆ- ಆಛಾದಿಸುತ್ತ, ಆತ್ಮಮತಸ್ಥಿತಿದೋರ್ಪ-ತಮ್ಮ ಜೈನಮತದ ಸ್ವರೂಪವನ್ನು ತೋರಿಸುವ, ನಚ್ಚಿನ- ಶ್ಲಾಘ್ಯರಾದ, ತವಿಸಿ- ಹಾಳುಮಾಡಿ, ತನ್ಮತದ- ಆ ಶಿವಮತದ, ಏಳ್ಗೆದೋರುವಂ- ಅಭಿವೃದ್ಧಿಯನ್ನು ತೋರಿಸುವನು. ... ... ||೧೩||

ಚಂ ॥ ನಿನಗೆ ಹಿತೋಪದೇಶ ಮಿದು ಕೇ ಳ್ನೃಪ ಮದ್ಗುರುಸನ್ನಿಧಾನ ಕಾ । ಜಿನ ಮುನಿವೃಂದಮಂ ಬರಿಸು ಮಾಡಿಸು ವಾದಮ ನಾಗಮೌಘಶಾ ॥ ಸ್ತ್ರನಿವಹಸಲ್ಪ್ರಮಾಣದೊಳ್ ಮದ್ಗುರು ಗೆಲ್ದೊಡೆ ತತ್ಪದಾಬ್ಜಮಂ । ಮನದೊಲವಿಂದೆ ನೀಂ ಪಿಡಿದು ಶೈವಮತಸ್ಥಿತ ನಾಗು ಬೇಗದಿಂ ॥ ... ... ... ೧೪

ಕಂ॥ ಇನಿತ ನನುಕರಿಸೆ ಮತ ಮೊಂ । ದನುವಕ್ಕುಂ ನಿನಗಮೆನಗ ಮಂತಲ್ಲದೊಡಂ॥ ದಿನಪರಿಣಯೋಕ್ತಿಯಂ ನೀಂ । ನೆನೆ ದೆನ್ನಂ ಬಿಟ್ಟು ಕಳೆದು ನೆರೆದಿರು ಪೆರಳೊಳ್ ॥ ೧೫

ವ ॥ ಎಂದಿನಿಯಳುಕ್ತಿಯುಂ ಮನದೆಗೊಂ ಡರಸನಲ್ಲಿಂದೆಳ್ತಂದು ಸಭಾಸ್ಥಳಕ್ಕೆ ನಿಜಗುರುಗಳಂ ಬರಿಸಿ ತಾನು ಮವರುಂ ಕುಳ್ಳಿರ್ದಿನ ಮಾಸುಗ್ಗಲೆದೇವಿ ತದ್ದಕ್ಷಿಣಭಾಗದೊ ಳ್ಕನಕಮಯಸಮುನ್ನತಪೀಠ್ಯಸಿಂಹಾಸನಮ ನಮರ್ಚೆ ದಾಸಿದೇವಂಗೆ ಕೈಗೊಟ್ಟು ಬಿಜಯಂಗೆಯ್ಸಿ ಮೂರ್ತಿಗೊಳಿಸಿ ವಿದಗ್ಧಸಖೀಜನಸಮೇತಂ ತಚ್ಚರಣಕಮಲಮ ನೋಲಗಿಸುತ್ತ ಮಿರ್ದ್ದಳಾಪ್ರಸ್ತಾವದೊ ಳಾಜಿನಮುನಿಗ ಳ್ತಮ್ಮ ಕುಹಕಮಂತ್ರತಂತ್ರಮಾಯಾವಿದ್ಯಾವಿಲಾಸವೈಚಿತ್ರ್ಯಗರ್ಭಿತವಚೋವೈಭವಂಗಳಂ ವಾದಮಂ ನೆಗಳ ಲೊಡ ನದೆಲ್ಲಮಂ ನಿಜಮಹತ್ವದಿಂ ಜಯಿಸಿ॥ * * * * * * *

ಕಂ ॥ ವೇದಾಗಮಮೀಮಾಂಸಾ । ವೇದಾಂತಪುರಾಣತರ್ಕವೈಶೇಷಿಕಸಂ ॥ ಪಾದಿತ ತತ್ವಾರ್ಥಮ ನಾ । ವಾದದೊ ಳವಲಂಬಿಸು ತ್ತಮವರ್ಗಿಂತೆಂದಂ ॥ ... ೧೬

ಕಂ ॥ ಸಕಲಜಗದಾದಿಕಾರಣ । ನಕಳಂಕಂ ರಾಮನಾಥ ನೋರ್ವನೆ ವಿಶ್ವಾ ॥ ಧಿಕ ನದ್ವಿತೀಯನೆಂಬುದೆ । ಸುಕರಾರ್ಥ ಮಿವಂಗೆ ಸರಿ ಮಿಗಿ ಲ್ಪೆರತಿಲ್ಲಂ ॥ ೧೭

ಶಾ ॥ ಸರ್ವಂ ಲಿಂಗದ ಮಧ್ಯದೊ ಳ್ನೆಲಸಿ ತೋರ್ಕ್ಕುಂ ,ಲಿಂಗಮಧ್ಯೇ ಜಗ । ತ್ಸರ್ವಂ

---

ಹಿತೋಪದೇಶಂ- ಆಪ್ತವಾದ ಬೋಧೆಯು, ಮದ್ಗುರುಸನ್ನಿಧಾನಕೆ- ನನ್ನ ಗುರುವಿನ ಸಮೀಪಕ್ಕೆ, ಬರಿಸು- ಬರಮಾಡು, ಒಲವಿಂದೆ- ಪ್ರೀತಿಯಿಂದ. ... ... ॥೧೪॥

ಇನಿತಂ— ಇಷ್ಟನ್ನು, ಅನುಕರಿಸೆ- ಅಂಗೀಕರಿಸಿದರೆ, ಅನು- ನೇರವು, ಅಂದಿನಪರಿಣಯೋಕ್ತಿಯಂ-ಮದುವೆಯಾದ ಕಾಲದ ಮಾತನ್ನು, ನೆನೆದು- ಸ್ಮರಿಸಿ, ಪೆರಳೊಳ್- ಮತ್ತೊಬ್ಬಳೊಡನೆ. ... ॥೧೫॥

ಇನಿಯಳ- ಪ್ರಿಯಳ, ತದ್ದಕ್ಷಿಣಭಾಗದೊಳ್- ಅವರ ಬಲಗಡೆಯಲ್ಲಿ, ಅಮರ್ಚೆ- ಸೇರಿಸಿ, ಮೂರ್ತಿಗೊಳಿಸಿ- ಕುಳ್ಳಿರಿಸಿ, ವಿದಗ್ಧಸಖೀಜನಸಮೇತಂ- ಪ್ರೌಢೆಯರಾದ ಸಖಿಯರೊಡನೆ ಕೂಡಿ, ಓಲಗಿಸುತ್ತಂ- ಸೇವಿಸುತ್ತ, ಆಪ್ರಸ್ತಾವದೊಳ್- ಆಕಾಲದಲ್ಲಿ, ಕುಹಕ.....ವೈಭವಂಗಳಂ— ಕುಹಕ- ಕಪಟದ, ಮಂತ್ರ, ತಂತ್ರ- ವಿಧಾನ, ಮಾಯಾವಿದ್ಯಾ- ಕಪಟವಿದ್ಯೆಯ, ವಿಲಾಸ- ಚೇಷ್ಟೆಗಳ, ವೈಚಿತ್ರ್ಯ- ನಾನಾತರದಿಂದ, ಗರ್ಭಿತ- ತುಂಬಿದ, ವಚೋವೈಭವಂಗಳಿಂ- ವಾಗ್ವಿಲಾಸಗಳಿಂದ. * * * *

ವೇದಾಗಮ.....ತತ್ವಾರ್ಥಮಂ— ವೇದ, ಆಗಮ, ಮೀಮಾಂಸೆ, ವೇದಾಂತ, ಪುರಾಣ, ತರ್ಕ, ವೈಶೇಷಿಕ- ಷೋಡಶಪದಾರ್ಥಗಳ ವಿಷಯಕವಾದ ತರ್ಕಶಾಸ್ತ್ರ ಇವುಗಳಿಂದ, ಸಂಪಾದಿತ- ಆರ್ಜಿಸಲ್ಪಟ್ಟ, ತತ್ವಾರ್ಥಮಂ- ಪರಮಾತ್ಮವಿಷಯಕವಾದ ಅಭಿಪ್ರಾಯವನ್ನು, ಅವಲಂಬಿಸುತ್ತಂ-ಆಶ್ರಯಿಸುತ್ತ.

ಅದ್ವಿತೀಯಂ- ತನ್ನ ಸಜಾತೀಯವಾದ ವಸ್ತು ಮತ್ತೊಂದಿಲ್ಲದವನು, ಸುಕರಾರ್ಥಂ- ಸಮೀಚೀನವಾದಭಿಪ್ರಾಯವು, ಸರಿ- ಸಮಾನವಾದದ್ದು, ಮಿಗಿಲ್- ಅಧಿಕವಾದದ್ದು, ಪೆರತು- ಮತ್ತೊಂದು. ॥೧೭॥

ನೆಲಸಿ- ವಾಸವಾಗಿ, ಲಿಂಗಮಧ್ಯೇ- ಲಿಂಗದೊಳಭಾಗದಲ್ಲಿ, ಸರ್ವಂಜಗತ್-ಪ್ರಪಂಚವೆಲ್ಲವೂ, (ಅಸ್ತಿ-

ಪೂರ್ವ್ವಕವಾಕ್ಯ ನಿಶ್ಚಿತ ಮಿದೇಕೋರುದ್ರಮುಖ್ಯಾಗಮಾ ॥ ಖ್ಯೋಕ್ತಿಪ್ರಥಿತಂ ದಲೋರ್ವನೆ ಶಿವಂ ಕರ್ತಾರ ಮೆಂಬರ್ಥ ಮಿ ॥ ತರ್ವ್ವಾಚೀನಪದಂ ಯಥಾಮುಖವಚಸ್ಸಿದ್ಧಂ ಮಹಾದೇವನಾ ॥ ... .. ... ೧೮

ಕಂ ॥ ಪರಿಪೂರ್ಣತೆಯುಮ ನಭವನ । ನಿರತಿಶಯೈಶ್ವರ್ಯಮುನಿರರ್ಗಳಮಹಿಮಾ ॥ ಕರತೆಯ ನೊರೆದೊರೆದುಂ ಬಿ । ತ್ತರಿಪುದು ನಿಗಮಾಂತಚಯಮು ಮಾಗಮತತಿಯುಂ ॥ ... ... ... ೧೯

ವ ॥ ಎಂದಿಂತು ನಿಖಿಳಪುರಾಣೋಪಬೃಂಹಿತೋಪನಿಷದಾದಿವಚನನಿಚಯದಿಂ ಸಹಜಶಿವಾಧಿಕ್ಯಸ್ಥಾಪನಂಗೆಯ್ದು ವಾದಿಜನಮದಭಂಜನಂ ಲಿಂಗಬಾಹ್ಯಾತ್ಪರಂನಾಸ್ತಿ ಯೆಂಬುದರಿಂ ಶಿವನೋರ್ವ್ವನೇ ಸರ್ವ್ವಪೂರ್ಣ ನಕ್ಕು ಮಿದೆ ಸತ್ಯ ಮೆಂದು ವಿಜೃಂಭಿಸಿ ನುಡಿಯೆ ಶವಣ ರ್ತಮ್ಮೊ ಳೋರೋರ್ವ್ವರ ಮುಖಮ ನೋರೆಯರ್ವ್ವರ್ನೋಡಿ ॥ * *

ಕಂ ॥ ಎಲ್ಲಂಶಿವಮಯ ಮೆಂದಪೆ । ಸಲ್ಲದು ಭವಮುಕ್ತಿ ಯಂತುಟಾದೊಡೆ ಗುಡಿಯಿ ॥ ರ್ದಲ್ಲಿ ಗೆಡೆಯಾಡಲೇಕೆ । ರ್ದ್ದಲ್ಲಿಯೆ ಶಿವನಿಪ್ಪ ಕಳದಿ ನೆರಗುಗೆ ಭಕ್ತಂ ॥ ೨೦

ಕಂ ॥ ಅಮಮ ಶಿವನೆಲ್ಲ ರಮರ್ದಂ । ಗಮೊ ಜೀವಮೊ ಮಿಸುಗುವಾತ್ಮನೋ ಪೇಳ ದರಂ ॥ ದಮ ನೆನೆ ಪೂರ್ವಪ್ರಶ್ನೆಗೆ । ಸಮಸುದುತ್ತರಮ ನೀವೆ ನಖಿಳಾಪನಿಯುಂ ॥ ೨೧

ಕಂ ॥ ನೃಪ ನಾವರಿಸಿರ್ದಪ ನೆನೆ । ನೃಪನಪ್ಪನೆ ಮಾಣದಲ್ಲಿ ವಿಪ್ರವ್ಯಾಧ ॥ ಶ್ವಪಚಾ

---

ಇದೆ) ಪೂರ್ವಕವಾಕ್ಯನಿಶ್ಚಿತಂ- ಪ್ರಾಚೀನವಾದ ವಚನದಿಂದ ನಿಶ್ಚೈಸಲ್ಪಟ್ಟದ್ದು, ಏಕೋರುದ್ರಮುಖ್ಯಾಗಮಾಖ್ಯೋಕ್ತಿಪ್ರಥಿತಂ- ರುದ್ರನೊಬ್ಬನೇ ಪರಬ್ರಹ್ಮನು ಎಂಬುವದೇ ಮೊದಲಾದ ವೇದದ ಅಧಿಕವಾದ ಮಾತಿನಿಂದ ಪ್ರಸಿದ್ಧವಾದದ್ದು, ದಲ್- ನಿಶ್ಚಯ; ಕರ್ತಾರಂ- ಸ್ವಾಮಿಯು, ಅರ್ವ್ವಾಚೀನಪದಂ- ಪುರಾತನ ಶಬ್ದವು, (ಅಂದರೆ ವೇದವಾಕ್ಯವು) ಯಥಾಮುಖವಚಸ್ಸಿದ್ಧಂ- ತನ್ನಷ್ಟಿಗೆತಾನೇ ಬಾಯಿಂದ ವಚನರೂಪವಾಗಿ ಹೊರಟು ಸಿದ್ಧವಾಗಿರುವದು. ... ... ... ॥೧೮॥

ಪರಿಪೂರ್ಣತೆಯುಮಂ- ಸಕಲ ವಸ್ತುಗಳಲ್ಲಿ ತುಂಬಿರುವಿಕೆಯುನ್ನೂ, ನಿರರ್ಗಳಮಹಿಮಾಕರತೆಯುಂ- ತಡೆಯಿಲ್ಲದ ಮಹತ್ತ್ವಕ್ಕೆ ಆಶ್ರಯನಾಗಿರುವಿಕೆಯುನ್ನೂ, ಬಿತ್ತರಿಪುದು- ವಿಸ್ತರಿಸುವದು, ನಿಗಮಾಂತಚಯಮುಂ- ಉಪನಿಷತ್ಸಮೂಹವೂ. ... ... ॥೧೯॥

ಪುರಾಣೋಪಬೃಂಹಿತೋಪನಿಷದಾದಿವಚನನಿಚಯದಿಂ— ಪುರಾಣೋಪಬೃಂಹಿತ- ವೇದಾರ್ಥಸ್ಫುಟೀಕರಗಳಾದ ಪುರಾಣಗಳು, ಉಪನಿಷತ್, ಇವುಗಳೇ, ಆದಿ- ಮೊದಲಾದವುಗಳ, ವಚನ- ವಾಕ್ಯದ, ನಿಚಯದಿಂ- ಸಮೂಹದಿಂದ. ಸಹಜಶಿವಾಧಿಕ್ಯಸ್ಥಾಪನಂಗೆಯ್ದು- ಸ್ವಭಾವಸಿದ್ಧವಾದ ಪರಶಿವನ ಹೆಚ್ಚುಗೆಯನ್ನು ಸ್ಥಿರೀಕರಿಸಿ, ವಾದಿಜನಮದಭಂಜನಂ-ಪರಮತವಂ ವಾದಿಸುವವರ ಗರ್ವವನ್ನು ನಾಶಮಾಡುವ, ಲಿಂಗಬಾಹ್ಯಾತ್- ಲಿಂಗದ ಹೊರಗೆ, ಪರಂ— ಅನ್ಯವಾದದ್ದು, ನಾಸ್ತಿ-ಇಲ್ಲವು, ವಿಜೃಂಭಿಸಿ- ಉಬ್ಬಿ. * *

ಸಲ್ಲದು- ಯೋಗ್ಯವಾದುದಲ್ಲ, ಅಂತುಟಾದೊಡೆ- ಹಾಗಾದರೆ, ಎಡೆಯಾಡಲ್‌ಏಕೆ- ಸಂಚರಿಸುವದೇಕೆ ? ಕತದಿಂ-ಕಾರಣದಿಂದ, ಎರಗುಗೆ- ನಮಸ್ಕರಿಸಲಿ. ... ... ॥೨೦॥

ಅಮರ್ದ- ಸೇರಿದ, ಜೀವನೊ- ಪ್ರಾಣನೋ ? ಸಮಸೆದ- ಸರಿಯಾಗಿ ಯೋಗ್ಯವಾದ. ॥೨೧॥

ಆವರಿಸಿ- ವ್ಯಾಪಿಸಿ, ವಿಪ್ರವ್ಯಾಧಶ್ವಪಚಾದಿರೂಪಂ— ವಿಪ್ರ- ಬ್ರಾಹ್ಮಣ, ವ್ಯಾಧ- ಬೇಡ, ಶ್ವಪಚ- ಹೊಲೆಯ, ಇವರುಗಳೇ, ಆದಿ- ಮೊದಲಾದವರ, ರೂಪಂ- ಆಕಾರವನ್ನು, ಅಜ್ಞಾನ್ವ್ಯಪದೇಶಂಬೆತ್ತು-

ದಿರೂಪ ನಾಜ್ಞಾ । ವ್ಯಪದೇಶಂಬೆತ್ತು ನೆಲವ ನಾವರಿಸಿರ್ಪ್ಪಂ ॥ ... ೨೧

ಕಂ ॥ ಆವರಿಯಿಂ ಶಂಭು ಜಗ । ದ್ವ್ಯಾಪಕ ನೆನಿಸಿರ್ಪ ನಲ್ತೆ ನಿಜಭಕ್ತಿಯಿನಾ ॥ ವ್ಯಾಪಿಸಿದ ಶಂಭು ಭುವನದ । ರೂಪವು ನಾಳ್ದಸೆವ ನೆಂಬುವಪಸಿದ್ಧಾಂತಂ ॥ ೨೨

ಕಂ ॥ ಘಟದಲಬಿಂಬಿತರವಿ ತ । ದ್ಘಟಜಲಬಿಂಬಂಗಳಿಂದೆ ಪೆರ ನಲ್ತೆ ವಲಂ ॥ ಪಟು ತನುಜೀವಾತ್ಮಾಂತರ । ಘಟತನಿಜಜ್ಯೋತಿಪರಶಿವಂ ಪರ ನಲ್ತೇ ॥ ೨೪

ಕಂ ॥ ಸರ್ವೋವೈ ರುದ್ರನು । ತ್ತುರ್ವ್ವತೆ ವಿಶ್ವಾಧಿಕಃ ಪಶೂನಾಂ ಪತಿ ಯೆಂ ॥ ದೋರ್ವ್ವಂ ಗೆರಡುಂಬಗೆಯಂ । ನಿರ್ವ್ವಹಿಪಾಗಮದ ನುಡಿಗಿಡೇ ತಾತ್ಪರ್ಯಂ ॥ ೨೫

ಚಂ ॥ ಹರನೆ ಚರಾಚರಪ್ರಚಯರೂಪದೊ ಳೊಂಡಿರೆ ಬೇರೆ ಲಿಂಗಮಂ । ದಿರ ಕೆಡೆ ಯಾಡಲೇಕೆನುತೆ ಮಾಡಿದಶಂಕೆಗೆ ಕೊಟ್ಟಪೆಂ ಸದು॥ ತ್ತರಮು ನಶೇಷಲೋಕವಿಭುವಾದೊಡ ಮೊಂದೆಡೆಯಲ್ಲಿ ಸತ್ಕಳಾ । ಪರಿಣತೆವೆತ್ತು ಕಾಣಿಪ ನುಮಾಧಿಪ ನೆಂತೆನೆನ್ನೃಕಟ್ಟ ಮು ರ್ತ್ತಿಯೊಳ್ ॥ ... ... ... ೨೬

ಮತ್ತೇ ॥ ಸುರಿಗುಂ ಸ್ವಾತಿಯ ವೃಷ್ಟಿ ಯೆಲ್ಲೆಡೆಯೊಳಂ ಮುತ್ತಕ್ಕುಮೇ ಬಿಂದು ಸಾ । ಗರತೀರಸ್ಥಿತಶುಕ್ತಿಯೊ ಳ್ಬಲಿದು ಮುತ್ತಾದಪ್ಪುದೆಂತನ್ತೆ ಶಂ ॥ ಕರತೇಜಂಜಗದ ಲ್ಲಿ ತುಂಬಿ ಮೆರೆದಿರ್ಪ್ಪಂ ಮೇ ಣದಂತಾಪೊಡಂ । ವರಲಿಂಗಾಮಳಭಕ್ತಸಂತತಿಯೊ ಳೊಪ್ಪಂ ಬೆತ್ತು ಕಣ್ಗೊಪ್ಪುಗುಂ ॥ ... ... ... ೨೭

ಚಂ ॥ ಹಿಮರುಚಿರೋಚಿ ಯೆಲ್ಲೆಡೆಯ ಕಲ್ಗಳೊಳಂ ಪುದಿದಿರ್ದ್ದಡಂ ಮೃಗಾಂ।

---

ಅಪ್ಪಣೆಸು ನೆನವಂಗ ಪೊಂದಿ, ನೆಲವಂ- ಭೂಮಿಯನ್ನು. ... ... ॥೨೧॥

ಅಪಸಿದ್ಧಾಂತಂ- ಸಿದ್ಧಾಂತವಲ್ಲವು ... ... ... ॥೨೨॥

ಘಟಜಲಬಿಂಬಿತರವಿ- ಕೊಡದ ನೀರಿನಲ್ಲಿಪ್ರತಿಫಲಿಸಿದ ಸೂರ್ಯನು, ತದ್ಘಟಜಲಬಿಂಬಂಗಳಿಂದೆ- ಆ ಕೊಡದನೀರು ಪ್ರತಿ ಬಿಂಬಗಳಿಗಿಂತಲೂ, ಪರಂ- ಭಿನ್ನನಾದವನು, ಪಟುತನು- ಜೀವಾತ್ಮಾಂತರಘಟಿತನಿಜ ಜ್ಯೋತಿ—ಪಟು- ಸಮರ್ಥವಾದ, ತನು- ದೇಹದಲ್ಲಿರುವ, ಜೀವಾತ್ಮ- ಜೀವನ, ಅಂತರ- ಮಧ್ಯದಲ್ಲಿ ಘಟಿತ- ಸೇರಿಸಲ್ಪಟ್ಟ, ನಿಜ- ತನ್ನ, ಜ್ಯೋತಿ- ತೇಜಸ್ಸುಳ್ಳ. ... ... ॥೨೪॥

ರುದ್ರಃ- ಪರಶಿವನು, ಸರ್ವೋವೈ- ಸಕಲವಸ್ತುಸ್ವರೂಪನಾದವನಲ್ಲವೇ ? ಉರ್ವ್ವತೆ- ಉತ್ಸಾಹಪಡುತ್ತಾ, ಪಶೂನಾಂ- ವಿಷ್ಣುಬ್ರಹ್ಮಾದಿಗಳಿಗೆ, ಪತಿಃ- ಸ್ವಾಮಿಯಾದ ಶಿವನು, ವಿಶ್ವಾಧಿಕಃ-ಪ್ರಪಂಚಕ್ಕಿಂ ತಲೂದೊಡ್ಡವನು, ಎರಡುಂಬಗೆಯಂ- (ಅಂದರೆ ಮೊದಲು ಸಕಲಜಗತ್ಸ್ವರೂಪನೂ ಅವನೇ ಎಂದು ಹೇಳಿ ಅನಂತರ ಜಗತ್ತೆಲ್ಲಕ್ಕೂ ಅವನು ದೊಡ್ಡವನೆಂಬುದರಿಂ ಜಗತ್ತಿನಿಂದ ಭಿನ್ನನೆಂದು ಹೇಳಿರುವ ಈ ಎರಡು ರೀತಿಯನ್ನು) ಆಗಮದ- ವೇದದ. ... ... ... ... ॥೨೫॥

ಚರಾಚರಪ್ರಚಯರೂಪದೊಳ್- ಸ್ಥಾವರಜಂಗಮಸಮೂಹಾಕಾರದಿಂದ, ಶಂಕೆಗೆ- ಆಕ್ಷೇಪಕ್ಕೆ, ಅಶೇಷಲೋಕವಿಭು- ಸಕಲ ಜಗತ್ತುಗಳಲ್ಲೂ ವ್ಯಾಪಿಸಿದವನು, ಒಂದೆಡೆಯಲ್ಲಿ- ಒಂದು ಸ್ಥಳದಲ್ಲಿ, ಸತ್ಕಳಾಪ ರಿಣತಿವೆತ್ತು- ಸವಿಾಚೀನವಾದ ತನ್ನಅಂಶದ ವೈಶಾಲ್ಯವಂ ಹೊಂದಿ. ... ॥೨೬॥

ಎಲ್ಲೆಡೆಯೊಳಂ- ಎಲ್ಲಾಸ್ಥಳದಲ್ಲೂ, ವರಲಿಂಗಾಮಳಭಕ್ತಸಂತತಿಯೊಳ್-ಶ್ರೇಷ್ಠಗಳಾದ ಲಿಂಗ ನಿರ್ಮಲರಾದ ಭಕ್ತರ ಸಮೂಹದಲ್ಲಿ. ... ... ... ॥೨೭॥

ಹಿಮರುಚಿರೋಚಿ- ಚಂದ್ರನ ಕಿರಣವು, ಪುದಿದು- ವ್ಯಾಪಿಸಿ, ಮೃಗಾಂಕಮಣಿಯೆ- ಚಂದ್ರಕಾಂತಶಿ

ಕಮಣಿಯ ಮಾಣಿ ದೊಳೊದ್ದಸರ್ಗ ಮೀಶಲಸತ್ಕಳೆ ಸರ್ವಲೋಕಸಂ ॥ ಕ್ರಮಣತೆವೆ ತ್ತೊತಂ ಪರಮಭಕ್ತನ ಚಿತ್ತಮೆ ಸದ್ರಸಾರ್ದ್ರಭಾ । ವಮ ನೊತ ನಾಳ್ಗ ಮುಲ್ಲದುಳಿ ದನ್ಯಶಿಲಾತ್ಮಚಯ ಕ್ಕಿದಕ್ಕುಮೇ ॥ ... ... ೨೮

॥ ಉತ್ಸಾಹವೃತ್ತ ॥ ಇಂದುಗಿಂದುಕಾಂತೆ ಮಿಂದುಕಾಂತ ಕಿಂದು ಕೂರ್ಪವೋಲ್ । ಲಿಂದುಮೌಳಿ ಗೆಯ್ದೆ ಭಕ್ತ ನೆಯ್ದೆ ಭಕ್ತಿಶಾಲಿ ಗೊ ॥ ಲ್ದಿಂದುಮೌಳಿ ಕೂರ್ಪ ನಾತ್ತ ಸಾರಸಾರವಸ್ತುಗ । ಳ್ಗೊಂದೆ ಭಾವ ಮಕ್ಕು ಮಲ್ಲದನ್ಯವಸ್ತುಗಪ್ಪುದೇ ॥ ... ೨೯

ಕಂ॥ ಭಕ್ತಾರ್ಥಂ ಶಿವಲೀಲೆ ಭಕ್ತನಿಜಭಾವಂ ಶಂಕರಾರ್ಥಂ ಲಸ । ದ್ಭಕ್ತೇಶರ್ಗೆಪ ರಸ್ಪರಾತಿಶಯಸೌಹಾರ್ದ್ರಂ ಜಗಂ ವರ್ಧಿಕುಂ ॥ ಭಕ್ತೇಶದ್ವಯಸಾಮರಸ್ಯದೆ ಜಗದ್ವ್ಯಾ ಮುಖ್ಯಮಾ ಳ್ದೀರ್ವರುಂ । ಭಕ್ತೇಶ ರ್ಬ್ಬರೆದೊಂದುಗೂಡಿ ಸಲೆ ಸತ್ಯಸ್ನೇಹದಿಂ ದೊಪ್ಪುವರ್ ॥ ... ... ... ೩೦

ಕಂ॥ ಉಳಿದ ಮಳೆಪನಿಯ ನುಳಿ ದೊಳ । ಕೊಳತಿರ್ಕುಂ ಸ್ವಾತಿಯುದಕಮಂ ಶುಕ್ತಿ ನಿರಾ ॥ ಕುಳ ಮನ್ಯರ ನುಳಿದ ಭವನ । ನೊಳಕೊಳ್ಗುಂ ಭಕ್ತಚಿತ್ತ ಮದರಂತೆವೊಲಂ ॥

ಉ॥ ಆಕಳಜೀವನಂ ಕರು ವದ ಕ್ಕಸು ವಾಕ ಳೆನಿಕ್ಕು ಮಲ್ಲಿ ನಿ । ರ್ವ್ಯಾಕುಳ ಮುರ್ವುಗುಂ ಸುಧೆ ಸುಧಾರಸದಿಂ ತಣಿಗುಂ ಜನಂಶಿವ ॥ ಸ್ವೀಕೃತಜೀವಮಾಶರಣ ನೀಶ ನವಂಗಸು ವಲ್ಲಿ ಸತ್ಕೃಪಾ । ಲೋಕನ ಮುಣ್ಮುಗುಂ ಪ್ರಣಯದಿಂ ಜಗಮಂತದರಿಂದೆ ಜೀವಿಕುಂ॥

ಕಂ॥ ಮೃಡಮಹಿಮೆ ಯೆಂಬ ಚೆಂಬಿಸಿ । ಲಿಡಿದಿರೆಯುಂ ಧರೆಯೊಳತರಜನಘೂಕ

---

ಲೆಯೋ, ಒಸರ್ಗಂ- ಸ್ರವಿಸುವದು, ಈಶಲಸತ್ಕಳೆ- ಪರಮೇಶ್ವರನ ಪ್ರಕಾಶಿಸುವ ಅಂಶವು, ಸರ್ವಲೋಕಸಂಕ್ರಮಣತೆವೆತ್ತೊಡಂ- ಸಮಸ್ತ ಲೋಕದಲ್ಲೂ ಸಂಬಂಧಿಸಿದಾಗ್ಯೂ, ಸದ್ರಸಾರ್ದ್ರಭಾವಮಂ- ಒಳ್ಳೆಯ ಅನುರಾಗವೆಂಬ ನೀರಿನಿಂ ನೆನೆದಿರುವಿಕೆಯನ್ನು, ಅನ್ಯಶಿಲಾತ್ಮಚಯಕ್ಕೆ- ಉಳಿದ ಕಲ್ಲುಗಳು ಜೀವಗಳ ಸಮೂಹಕ್ಕೆ. ... ... ... ... ||೨೮||

ಇಂದುಗೆ- ಚಂದ್ರನಿಗೆ, ಇಂದುಕಾಂತಂ- ಚಂದ್ರಕಾಂತಶಿಲೆಯು, ಕೂರ್ಪವೋಲ್- ಪ್ರೀತಿಸುವಹಾಗೆ, ಆತ್ತಸಾರಸಾರವಸ್ತುಗಳ್ಗೆ- ಪಡೆಯಲ್ಪಟ್ಟ ಶ್ರೇಷ್ಠಶ್ರೇಷ್ಠಪದಾರ್ಥಗಳಿಗೆ. ... ||೨೯||

ಶಿವಲೀಲೆ- ಪರಶಿವನ ವಿಲಾಸವು, ಭಕ್ತಾರ್ಥಂ- ಭಕ್ತನಿಗೋಸ್ಕರವಾದದ್ದು, ಪರಸ್ಪರಾತಿಶಯಸೌಹಾರ್ದ್ರಂ- ಒಬ್ಬರೊಬ್ಬರಿಗೆ ಅಧಿಕವಾದ ಮಿತ್ರತ್ವವು, ವರ್ಧಿಕುಂ- ವೃದ್ಧಿಹೊಂದುವದು, ಭಕ್ತೇಶದ್ವಯಸಾಮರಸ್ಯದೆ- ಭಕ್ತನೂ ಶಿವನೂ ಇಬ್ಬರೂ ಏಕತ್ವವನ್ನೈದುವದರಿಂದ, ಜಗದ್ವ್ಯಾಮುಖ್ಯಮಾಳ್ದು- ಲೌಕಿಕವಿಷಯದಿಂ ಹಿಂದಿರುಗಿದವರಾಗಿ. ... ... ... ||೩೦||

ಒಳಕೊಳ್ಗುಂತೆ- ತನ್ನೊಳಗೆ ಧರಿಸಿಕೊಳ್ಳುತ್ತ. ... ... ||೩೧||

ಆಕಳ- ಹಸುವಿನ, ಜೀವನಂ- ಪ್ರಾಣವು, ಉರ್ವುಗುಂ- ಹೆಚ್ಚುವದು, ಸುಧಾರಸದಿಂ- ಹಾಲಿನಿಂದ, ತಣಿಗುಂ- ತೃಪ್ತಿಪಡುವದು, ಶಿವಸ್ವೀಕೃತಜೀವಂ- ಪರಮೇಶ್ವರನಿಂದಂಗೀಕರಿಸಲ್ಪಟ್ಟ ಜೀವನು, ಸತ್ಕೃಪಾಲೋಕನಂ- ಒಳ್ಳೆಯ ದಯೆಯಿಂದಕೂಡಿದ ನೋಟವು. ... ||೩೨||

ಚೆಂಬಿಸಲ್- ಕೆಂಪಾದ ಬಿಸಲು, ಇಡಿದು-ವ್ಯಾಪಿಸಿ, ಇತರಜನಘೂಕಕುಳಂ- ಶಿವಭಕ್ತೇತರರಾದ ಜನಗಳೆಂಬ ಗೂಬೆಗಳ ಗುಂಪು, ತದ್ದರ್ಶನಮಂ- ಆ ಮೃಡನ ಮಹಿಮೆಯು ನೋಡುವಿಕೆಯನ್ನ, ಅದಂ- ಆ

ಕುಳಂ ‖ ಪಡೆಯದು ತದ್ದರ್ಶನಮಂ । ತಡೆಯದ ದಡಂಕಂಡು ಭಕ್ತಚಕ್ರಂ ನಲಿಗುಂ ‖ ೩೩

ಉ ‖ ಅಂಗವೊ ಜೀವನೆ ಮಿಸುಗುವಾತ್ಮನೊ ಶಂಕರ ನೆಂದ ಶಂಕೆ ಗಾಂ । ಪಿಂಗದೆವೇಳ್ವೆ ನುತ್ತರಮ ನಂಗವೆ ಪೂರ್ವಕೃತಾತ್ಮಕರ್ಮಶೇ ‖ ಷಂಗಳ ನಾಡು ದಾತ್ಮ ಸುಖದುಃಖದಪುಣ್ಯದ ಪಾಪಡಿಕ್ಕೆ ಮಾ । ರಾಂಗಹರಂ ವಿಲಕ್ಷಣ ನಿದಕ್ಕೆ ವಿಚಾರಿಪೊಡಾಗವಪ್ಪನೇ ‖ ... ... ... ೩೪

ಕಂ‖ ಅತಿಮಲಿನ ನಸ್ವತಂತ್ರಂ । ಸತತಂ ಸಂಸಾರಿ ಜನ್ಮಿ ಸಕಲ ನನಿತ್ಯಂ ‖ ತತದುಷ್ಕರ್ಮಂ ಪಾಶಾ । ನ್ವಿತಪಶು ವಾಜೀವ ನೆಂಬು ದಾಗಮುಸಿದ್ಧಂ ‖ ... ೩೫

ಕಂ‖ ಪ್ರವಿಮಳ ನತಿಸ್ವತಂತ್ರಂ । ಭವಮೃತಿಸಂಸಾರಕರ್ಮರಹಿತಂ ಪತಿ ಪಾ ‖ ಶವಿಮುಕ್ತನಿಷ್ಕಳಂ ಪರ । ಶಿವ ನೆಂತುಂ ಜೀವ ನಪ್ಪನೇ ಬಗೆವಾಗಳ್ ‖ ೩೬

ಕಂ‖ ಪಂಚಮುಖ ನಾತ್ಮ ನಕ್ಕುಮೆ । ಪಂಚೇಂದ್ರಿಯಭೂತಪಂಚಕಾತ್ಮಕ ನಾತ್ಮಂ‖ ಪಂಚಮುಖಂ ಪರಮಾತ್ಮಂ । ಪಂಚೇಂದ್ರಿಯಭೂತಪಂಚಕಾತ್ಮಾಧಾರಂ ‖೩೭‖

ವ ‖ಅಂತುಮಲ್ಲದೆಯುಂ ‖ ಕಂ ‖ ಅಂದದಿನಣೋರಣೀಯಾ । ನೆಂದೆನೆ ನಿಗಮೋಕ್ತಿ ತಾನೆ ಸಚರಾಚರದೊ ‖ ಳ್ಸಂದಿಲ್ಲ ದಣುಪದಾರ್ಥದೊ । ಳೊಂದುತ್ತಣಿಯಸ್ತ್ವದಿಂ ಪ್ರವೇಶಿಸುತದರೊಳ್ ‖ ... ... ೩೮

ಮಃ‖ ಸ್ರ‖ ತಿಲದೊಳ್ತೈಲಂ ನಭಂ ಕುಂಭದೊಳ ಶಿಖಿಸಮಿದ್ಗರ್ಭದೊ ಳ್ನೇತ್ರದೊಳ್ನಿರ್ಮಲತೇಜಂ ಬೀಜದೊಳ್ಭೂರುಹ ಮಮರ್ದಿನೊ ಳಾಜ್ಯಂ ನೆಳಲ್ದರ್ಪಣಾಂತ ‖ ಸ್ಥಲದೊಳ್ಚಂದ್ರಂ ಘಟಾಂತರ್ಜಲದೊ ಳಗದೊಳುದ್ಯತ್ಪ್ರತಿಧ್ವಾನ ಮತ್ಯು । ಜ್ವಲಹೇಮಂ ಗ್ರಾವ

---

ಬಿಸಿಲನ್ನು, ಭಕ್ತಚಕ್ರಂ- ಭಕ್ತನೆಂಬ ಚಕ್ರವಾಕಪಕ್ಷಿಯು. ... ... ‖೩೩‖

ಪೂರ್ವಕೃತಾತ್ಮಕರ್ಮಶೇಷಂಗಳಿಂ- ಪೂರ್ವದಲ್ಲಿ ಮಾಡಲ್ಪಟ್ಟ ತನ್ನ ಕರ್ಮದ ಉಳಿಯುವಿಕೆಯಿಂದ, ಇಕ್ಕೆ- ಆಶ್ರಯವು, ಮಾರಾಂಗಹರಂ- ಮನ್ಮಥನ ದೇಹವನ್ನು ನಾಶಮಾಡಿದ ಶಿವನು. ‖೩೪‖

ಜನ್ಮಿ- ಉತ್ಪತ್ತಿಯುಳ್ಳವನು, ಸಕಲಂ- ಸಾಕಾರನು, ತತದುಷ್ಕರ್ಮಂ- ವಿಸ್ತಾರವಾದ ಪಾಪವುಳ್ಳವನು, ಪಾಶಾನ್ವಿತಪಶು- ಮಾಯಾಪಾಶದಿಂದ ಕೂಡಿದ ಪಶುವು. ... ‖೩೫‖

ಭವಮೃತಿಸಂಸಾರಕರ್ಮರಹಿತಂ— ಭವ- ಉತ್ಪತ್ತಿ, ಮೃತಿ- ಸಾವೆಂಬ, ಸಂಸಾರಕರ್ಮ- ಸಂಸಾರಸಂಬಂಧವಾದ ಕರ್ಮದಿಂದ, ರಹಿತಂ- ಬಿಡಲ್ಪಟ್ಟವನು, ಪಾಶವಿಮುಕ್ತನಿಷ್ಕಳಂ- ಮಾಯಾಪಾಶದಿಂದ ಬಿಡಲ್ಪಟ್ಟ ನಿರಾಕಾರನು. ... ... ... ... ‖೩೬‖

ಪಂಚೇಂದ್ರಿಯಭೂತಪಂಚಕಾತ್ಮಕಂ- ತ್ವಕ್ಚಕ್ಷುಶ್ಶ್ರೋತ್ರಜಿಹ್ವಾಘ್ರಾಣಗಳೆಂಬ ಪಂಚೇಂದ್ರಿಯ, ಪೃಥ್ವಿ ಅಪ್ಪು ತೇಜಸ್ಸು ವಾಯು ಆಕಾಶವೆಂಬ ಪಂಚಭೂತಗಳ ಸ್ವರೂಪನಾದವನು , ಪಂಚೇಂದ್ರಿಯಭೂತಪಂಚಕಾತ್ಮಾಧಾರಂ- ಆ ಇಂದ್ರಿಯಗಳು ಆ ಭೂತಸ್ವರೂಪಿಗಾಶ್ರಯನು. ‖೩೭‖

ಅಣೋಃ- ಅಣುವಿಗಿಂತಲೂ, ಅಣೀಯಾನ್-ಚಿಕ್ಕವನು, ಅಣಿಯಸ್ತ್ವದಿಂ- ಸೂಕ್ಷ್ಮತ್ವದಿಂದ‖೩೮‖

ತಿಲದೊಳ್- ಎಳ್ಳಿನಲ್ಲಿ, ತೈಲಂ- ಎಣ್ಣೆಯು, ಕುಂಭದೊಳ್- ಕಲಶದಲ್ಲಿ, ಶಿಖಿ- ಅಗ್ನಿಯು, ಸಮಿದ್ಗರ್ಭದೊಳ್- ಸಾದೆಗಳ ಮಧ್ಯದಲ್ಲಿ, ಭೂರುಹಂ- ವೃಕ್ಷವು, ಅಮರ್ದಿನೊಳ್- ಹಾಲಿನಲ್ಲಿ, ಆಜ್ಯಂ- ತುಪ್ಪವು, ದರ್ಪಣಾಂತಸ್ಥಲದೊಳ್- ಕನ್ನಡಿಯ ಒಳಗಡೆಯಲ್ಲಿ, ನೆಳಲ್- ಪ್ರತಿಛಾಯೆಯು, ಅಗದೊಳ್- ಬೆಟ್ಟದಲ್ಲಿ, ಉದ್ಯತ್ಪ್ರತಿಧ್ವಾನಂ- ಹೆಚ್ಚಾದ ಬದಲು ಕೂಗು, ಗ್ರಾವದೊಳ್- ಕಲ್ಲಿನಲ್ಲಿ, ಸೂತ್ರಂ- ದಾರವು, ಪುಂಖ

ದೊಳ್ಸೂತ್ರಮುಮಳಮಣಿಯೊಳ್ಬದ್ಧದೊಳ್ಮಂಜುಳಾರ್ಥಂ ॥ ೩೯

ಕಂ॥ ಪಳುಕಿನೊಳತಿನೀರಂಧ್ರೋ । ಜ್ವಳಭಾವಂ ಮಿಸುಪ ತೆರದೆ ರಂಜಿಪನಭವಂ॥
ವಿಳಸಿತಸಮಸ್ತಭುವನಾ । ವಳಿಗಳನೊಳಕೊಂಡು ಸರ್ವಗತನಾಗಿರ್ಪಂ ॥ ೪೦

ಕಂ॥ ವಿಶ್ವವಿಭು ವಿಶ್ವಜನಕಂ । ವಿಶ್ವಾಂತರ್ಯಾಮಿ ವಿಶ್ವರಕ್ಷಣಶೀಲಂ ॥ ವಿಶ್ವಹರಂ ವಿಶ್ವ
ಪರಂ । ವಿಶ್ವಾಧಿಕ ನೆಮ್ಮ ರಾಮನಾಥನೆ ಸತ್ಯಂ ... ೪೧

ವ॥ ಎಂದು ದಾಸಿದೇವಂ ನುಡಿಗುಡೆ ಜೈನಮುನಿಗಳ್ಮಾರ್ಕೊಂಡು * *

ಉ॥ ಮಾಡಿದ ಶಂಕೆಗುತ್ತರಮನೊಳ್ಳಿತನೆಂದಪೆಲೇಸು ಲೇಸು ನೀ । ನಾಡಿದೆ ಜೀವ
ರೆಲ್ಲ ಪಶುಗಳ್ಪತಿಯೇ ಶಿವ ನಾಮಹೇಶ್ವರಂ॥ಕೂಡಿ ಪಶುಪ್ರತಾನದೊಳಗೊಪ್ಪುವನೆಂದಿ
ದು ನನ್ನಿಯಾಗೆಪೇಳ್ । ಮಾಡೆ ಪಶುಪ್ರತಾನದೊಳೆ ತದ್ಗುಣವೊಂದುಮದೇಕೆ ತೋರದೋ॥

ಕಂ॥ ಸುಡುವಗ್ನಿಯ ಸಂಪರ್ಕದೆ । ಸುಡುಗುಂ ಜಲಮಂತು ಟೀಶಸಂಪರ್ಕದಿನಾ ॥
ಜಡಜೀವರುಮವನಂತಿರೆ । ತಡೆಯದೆ ಸರ್ವಜ್ಞಭಾವಮಾಳ್ದಿರವೇಡಾ ॥ ೪೨

ವ॥ ಎನೆ ದಾಸಿದೇವಂ ಕೇಳ್ದು ನಗೆನಕ್ಕು ॥ * *

ಕಂ॥ ಹರನೆಲ್ಲರೊಳಿರ್ದಪನೆನೆ । ಹರನಗುಣಂ ಜೀವರಲ್ಲಿ ತೋರ್ಕುಮೆ ಮಣಿಸಾ॥
ಗರದೊಳ್ಶಿಖಿ ಮರದೊಳ್ತೋ । ರ್ತ್ತಿರೆ ಮಣಿಶಿಖಿಗುಣಮುಮಬ್ಧಿತರುಗಳೊಳೊಳವೇ ॥

ಕಂ॥ ಬಿಸಿಯುಪ್ಪನಿತೆಗಡಗ್ನಿಯ । ಪಸುಗೆಯಿನುದಕಂ ತದಗ್ನಿಯಂತಿರೆ ಮರ್ಬಂ॥
ಪೊಸೆದಿಕ್ಕುವತೇಜಮನಾ । ಳ್ದಿಸೆಗುಮೆ ಹರನಿರ್ಕೆ ಕತದಿನೊಳಗೀಪಶುಗಳ್ ॥ ೪೫

ಕಂ॥ ಚೈತನ್ಯದಾರ್ಢ್ಯಮಂ ಪಡೆ । ದೋತಿರ್ಕುಮದಲ್ಲ ದಾಮಹೇಶನ ಸುಗುಣ ॥
ವ್ರಾತಮನೇಂತಳೆಗುಮೆ ಪೇಳ್ । ಳ್ದೀತೆರದಿಂ ಮುನ್ನ ಮೊರೆದ ದೃಷ್ಟಾಂತದವೊಲ್ ॥ ೪೬

ಚಂ॥ ತಿಲದೊಳೆ ತೈಲಮೇನಿರದೆ ದೀಪಮನುರ್ವಿಪ ತೈಲಸಾರದು।ಜ್ವಲಗುಣ

---

ಳಾರ್ಥಂ- ಮನೋಹರವಾದ ಅಭಿಪ್ರಾಯವು. ... ... ||೩೯||

ಪಳುಕಿನೊಳ್- ಸ್ಫಟಿಕದಲ್ಲಿ, ಅತಿನೀರಂಧ್ರೋಜ್ವಳಭಾವಂ- ಬಲು ದಟ್ಟವಾಗಿರುವಿಕೆಯಿಂ ಪ್ರಕಾ
ಶಿಸೋಣವು. ... ... ... ... ||೪೦||

ವಿಶ್ವವಿಭು- ಪ್ರಪಂಚಕ್ಕೆ ಸ್ವಾಮಿಯಾದ, ವಿಶ್ವಜನಕಂ- ಪ್ರಪಂಚಕ್ಕೆ ತಂದೆಯಾದ, ವಿಶ್ವಾಂತರ್ಯಾ
ಮಿ- ಪ್ರಪಂಚದೊಳಗೆಲ್ಲಾ ವ್ಯಾಪಿಸಿದ, ವಿಶ್ವರಕ್ಷಣಶೀಲಂ- ಪ್ರಪಂಚವನ್ನು ಸಾಕುವದೇ ಸ್ವಭಾವವಾಗು
ಳ್ಳ, ವಿಶ್ವಹರಂ- ಪ್ರಪಂಚವನ್ನು ನಾಶಮಾಡಿದ, ವಿಶ್ವಪರಂ- ಪ್ರಪಂಚವಲ್ಲಾಸಕ್ತನಾದ. ||೪೧||

ನನ್ನಿ- ನಿಜವು, ತದ್ಗುಣಂ- ಆ ಪತಿಯ ಗುಣವು. ... ... ||೪೨||

ಅಂತುಟು- ಹಾಗೆ. ... ... ... ... ||೪೩||

ಮಣಿಶಿಖಿಗುಣಂ- ರತ್ನ ಬೆಂಕಿ ಇವುಗಳ ಗುಣವು, ಅಬ್ಧಿತರುಗಳೊಳ್- ಸಮುದ್ರ ಮರ ಇವುಗಳಲ್ಲಿ.

ಬಿಸಿಯುಪ್ಪು-ಬೆಚ್ಚನೆ ಆಗುವ, ಅನಿತೆಗಡ- ಅಷ್ಟೇಯಲ್ಲವೇ ? ಬಸುಗೆಯಿಂ-ಸಂಬಂಧದಿಂದ, ಕತದಿಂ-
ಕಾರಣದಿಂದ. ... ... ... ... ||೪೫||

ಚೈತನ್ಯದಾರ್ಢ್ಯಮಂ- ಜೀವನದೃಢತ್ವವನ್ನು, ಓತು- ಸುಮ್ಮನೆ ... ||೪೬||

ಅನಿತರ್ಕೆ- ಅಷ್ಟಕ್ಕೆ, ತದೀಯಜಗದ್ವಿವರ್ಧನಾದ್ಯಲಘುಗುಣಾವಳಿ— ತದೀಯ- ಆ ಪರಶಿವನ

ಮುಟ್ಟಿ ತತ್ತಿಲದೊಳಂತು ಶಿವಂ ಸಕಳಾತ್ಮವರ್ಗದೊಳ್ ನೆಲಸಿ ವಿರಾಜಿಸಿರ್ಪ ನನಿತಕ್ಕೆ ತದೀಯಜಗದ್ವಿವರ್ಧನಾ । ದ್ಯಲಘುಗುಣಾಳಿಯಾತ್ಮತತಿಗುಂಟೆ ವಿರಾಜಿಪುದಿಂತುಟೆಲ್ಲಮಂ॥

ಕಂ ॥ ತಿಲದೊಳ್ತೈಲಮದಿರ್ಪಂ । ತಿಲಮೆಲ್ಲಂ ತೈಲರಸದೊಳೆಂತಂತೆ ಶಿವಂ ॥ ನೆಲಸಿರ್ಕುಮಖಿಳಜಗದೊ । ಳ್ನೆಲಸದು ಶಿವನಲ್ಲಿ ಮಾಯಿಕಂ ಜಗಮನಿಶಂ ॥ ೪೮

ಕಂ॥ ಒಗೆದಿರ್ದಳಗುಂ ಮುಗಿಲಾ । ಗಗನದೊಳಾಗಗನದಲ್ಲಿ ನಿರ್ಲೇಪಕಮಂ॥ ತೊಗೆದಿರ್ದಳಗುಂ ಜಗಮಾ । ಜಗದೀಶನೊಳೀಶನವಿರತಂ ನಿರ್ಲೇಪಂ ॥ ... ೪೯

ಕಂ॥ ಮಲಿನಮತಿ ಕಾಣ್ಬ ನೆಂದೊಡೆ । ಸಲೆ ಸಿಲ್ಕಂ ನಿರ್ಮಳೈಕಮತಿ ಭಾವಿಸೆ ಬಂ॥ ದೊಲವಿತ್ತು ರಕ್ಷಿಪಂ ನಿ । ಶ್ಚಲನನಘಂ ನಿತ್ಯನಪ್ರಮೇಯನಜೇಯಂ ॥ ೫೦

ವ॥ಮತ್ತಮಾಪರಶಿವನನಾದ್ಯಂತನುಮವಿದ್ಯಾರಹಿತನುಂ ನಿರಸ್ತಸಮಸ್ತದೋಷಕಳಂಕನುಂ ಸತ್ಯಜ್ಞಾನಾನಂದಮಯನುಂ ಸರ್ವಜ್ಞನುಂ ನಿತ್ಯತೃಪ್ತನುಂ ಸ್ವತಂತ್ರನುಂ ಅನಾದಿಪ್ರಕಾಶಪ್ರಭಾವನುಂ ಅನಂತಾಲುಪ್ತಶಕ್ತಿಸಮೇತನುಂ ಅದ್ವಿತೀಯಾಖಂಡಪರಮೈಶ್ವರ್ಯವಿಭ್ರಾಜಿತನುಂ ಅನುಭವೈಕವಿಷಯಪರಮಾಮೃತಸ್ವರೂಪಕನುಂ ಅಜಾಚ್ಯುತಮೃ

---

ಬಂಧವಾದ, ಜಗದ್ವಿವರ್ಧನಾದಿ- ಲೋಕವನ್ನು ಅಭಿವೃದ್ಧಿಗೊಳಿಸುವದೇಮೊದಲಾದ, ಅಲಘು- ದೊಡ್ಡವುಗಳಾದ, ಗುಣ- ಸದ್ಗುಣಗಳ, ಆಳಿ- ಪಙ್ತಿಯು. ... ... ॥೪೭॥

ಮಾಯಿಕಂ- ಮಾಯಾ ಸ್ವರೂಪವಾದ. ... ... ॥೪೮॥

ಮುಗಿಲ್- ಮೋಡವು, ನಿರ್ಲೇಪಕಂ- ಅಂಟದೇಇರುವದು, ಜಗಂ- ಲೋಕವು, ಅವಿರತಂ- ಯಾವಾಗಲೂ. ... ... ... ... ॥೪೯॥

ಮಲಿನಮತಿ- ದುಷ್ಟಬುದ್ಧಿಯುಳ್ಳವನು, ಕಾಣ್ಬಂ ಕಾಣುವನು, ಸಿಲ್ಕಂ- ಸಿಕ್ಕುವದಿಲ್ಲವು, ನಿರ್ಮಳೈಕಮತಿ- ಕೇವಲ ಸ್ವಚ್ಛವಾದ ಬುದ್ಧಿಯುಳ್ಳವನು, ಭಾವಿಸೆ- ಧ್ಯಾನಿಸಿದರೆ, ನಿಶ್ಚಲಂ- ಅಳ್ಳಾಡದಿರುವ, ಅನಘಂ- ಪಾಪರಹಿತನಾದ, ಅಪ್ರಮೇಯಂ- ಅಳೆಯುವದಕ್ಕಶಕ್ಯನಾದ, ಅಜೇಯಂ- ಜೈಸುವದಕ್ಕಶಕ್ಯನಾದ, ನಿತ್ಯಂ- ಶಾಶ್ವತನಾದ ಪರಶಿವನು. ... ... ... ॥೫೦॥

ಅನಾದ್ಯಂತನುಂ- ಮೊದಲುಕಡೆಗಳಿಲ್ಲದವನು, ಅವಿದ್ಯಾರಹಿತನುಂ- ಅಜ್ಞಾನಹೀನನು, ನಿರಸ್ತಸಮಸ್ತದೋಷಕಳಂಕನುಂ- ನಾಶಮಾಡಲ್ಪಟ್ಟ ಸಕಲ ಪಾಪವೆಂಬ ಕೊಳೆಯುಳ್ಳವನು, ಸತ್ಯಜ್ಞಾನಾನಂದಮಯನುಂ- ಯಥಾರ್ಥವಾದ ದಿವ್ಯಜ್ಞಾನದಿಂದುಂಟಾದ ಸಂತೋಷದ ಸ್ವರೂಪನಾದವನು, ನಿತ್ಯತೃಪ್ತನುಂ- ಯಾವಾಗಲೂ ಸಂತೃಪ್ತಿಯುಳ್ಳವನು, ಸ್ವತಂತ್ರನುಂ- ಅನ್ಯಾಧೀನನಲ್ಲದವನು, ಅನಾದಿಪ್ರಕಾಶಪ್ರಭಾವನುಂ- ತನಗೆ ಮೊದಲಾದುದೊಂದಿಲ್ಲದಿರುವ ಕಾಂತಿಯುಳ್ಳ ಮಹತ್ತ್ವವುಳ್ಳವನು, ಅನಂತಾಲುಪ್ತಶಕ್ತಿಸಮೇತನುಂ— ಅನಂತ- ಅಪಾರವಾದ, ಅಲುಪ್ತ- ನಾಶವಾಗದೇಇರುವ, ಶಕ್ತಿ- ಇಚ್ಛಾಶಕ್ತಿ ಜ್ಞಾನಶಕ್ತಿ ಕ್ರಿಯಾಶಕ್ತಿಗಳಿಂದ, ಸಮೇತನುಂ- ಕೂಡಿದವನು, ಅದ್ವಿತೀಯಾಖಂಡಪರಮೈಶ್ವರ್ಯವಿಭ್ರಾಜಿತನುಂ— ಅದ್ವಿತೀಯ- ತನಗೆರಡನೆಯದಿಲ್ಲದೇಇರುವ, ಅಖಂಡ- ಅವಿಚ್ಛಿನ್ನವಾದ, ಪರಮ- ಉತ್ಕೃಷ್ಟವಾದ, ಐಶ್ವರ್ಯ- ಷಡ್ಗುಣೈಶ್ವರ್ಯದಿಂದ, ವಿಭ್ರಾಜಿತನುಂ- ಪ್ರಕಾಶಿಸುವನು, ಅನುಭವೈಕವಿಷಯಪರಮಾಮೃತಸ್ವರೂಪಕನುಂ— ಅನುಭವೈಕ- ಜ್ಞಾನವೊಂದಕ್ಕೇ, ವಿಷಯ- ಗೋಚರವಾಗುವ, ಪರಮ- ಉತ್ಕೃಷ್ಟವಾದ, ಅಮೃತ- ಮೋಕ್ಷದ, ಸ್ವರೂಪಕನುಂ- ಆಕಾರನಾದವನು, ಅಜಾಚ್ಯುತಮೃಗ್ಯನುಂ- ಬ್ರಹ್ಮವಿಷ್ಣುಗಳಿಂದ ಹುಡಕಲ್ಪಡುವದಕ್ಕೆ ಯೋಗ್ಯನಾದವನು, ಪರಾತ್ಪರನುಂ- ಉತ್ಕೃಷ್ಟವಾದ ವಸ್ತುಗಳಿಗಿಂತ ಉ

ಗ್ಯನುಂ ಪರಾತ್ಪರನುಂ ಪರಮುಕ್ತಿಪ್ರದನುಂ ವಿಶ್ವಮಯನುಂ ವಿಶ್ವಪ್ರೇರಕನುಂ ಸ್ವಭಕ್ತಸುಲಭನು ಮಭಕ್ತದುರ್ಲಭನು ಮನುಪಮಕಲ್ಯಾಣಗುಣಗಣಾಲಂಕರಣನು ಮಖಿಳಬ್ರಹ್ಮಾಂಡಮಂಡಲಾಧೀಶ್ವರನುಂ ತಾ ನೋರ್ವನೆ ಯಾಗಿ॥ * * * *

ಕಂ ॥ ಎಲ್ಲರೊಳಹೊರಗೆ ಪೂರ್ಣನು । ಮೆಲ್ಲವ ನರಿವವನು ಮೆಲ್ಲರಂತಿರದವ ನೊ ॥ ಲ್ದಿಲ್ಲರ ಪೊರೆವನು ಮೆಲ್ಲವ । ನುಲ್ಲಂಘಿಸಿದವನು ಮಭವ ನಲ್ಲದೆ ಪೆರರಾರ್ ॥ ೫೧

ಕಂ ॥ ಶ್ರೀರಾಮನಾಥ ನೋರ್ವನೆ । ಭೂರಿಜಗಜ್ಜಾಲಪತಿ ವಲಂ ಪರ ಮಿಲ್ಲೆಂ ॥ ದೋರಂತೆ ನಿಗಮನಿಗಮಶಿ । ರೋರಾಜಿ ಪುರಾಣವಾಣಿ ಯುಲಿಗು ಮಜಸ್ರಂ ॥ ... ೫೨

ವ ॥ ಎಂದಿಂತು ಶಿವದಾಸಂ ನುಡಿಯೆ ಮಲಧಾರಿಗ ಳ್ಕೇಳ್ದನಿತರ್ಥ ಮೆಲ್ಲಮಂ ನಿಗಮವಾಕ್ಯದಿಂ ಸಾಧಿಸುವೆ ಯಪ್ಪೊಡಾಗಿಗಮಂ ವ್ಯಾಘಾತಪುನರುಕ್ತ್ಯಾದಿಸಂಕಲಿತ ಮಪ್ಪುದರಿ ನಪ್ರಮಾಣ ಮದರಿ ನುಕ್ತಾರ್ಥಮ ನೆಂತು ಸಮರ್ಥಿಪೆಯೆನೆ ಜಿನಮತಮರ್ದನಂಮಾರ್ಕೊಂಡು ॥ * * * * * * * *

ಕಂ॥ ವೇದದಿ ನೊಗೆದತ್ತಾಯುಂ । ರ್ವೇದಂ ಭೈಷಜ್ಯಮೆಸಗೆ ತಕ್ಸವಮ್ಮತದಿಂ ॥ ಮೇದಿನಿಯೊ ಳಖಿಳರುಜೆ ಗಳ । ವಾದವು ದದರಿಂ ಪ್ರಮಾಣ ಮಾಗಮ ಮಲ್ತೆ ॥ ೫೩

ಮ॥ ಸ್ರ ॥ ಶ್ರುತಿ ಗಂಗಂ ಜ್ಯೋತಿಷಂ ಪೇಳ್ದಪುದು ಗಗನದೊಳ್ಚಂದ್ರಸೂರ್ಯರ್ಕಳಂ ದೂ । ರತರಂ ತದ್ರಾಹುಕೊಳ್ವಾಸಮಯಮ ನಿನಿಸುಂ ತಪ್ಪದಂ ತೈದೆ ವೇದ ॥ ಪ್ರತ

---

ತ್ಯ್ರಮಷ್ಟನಾದವನು, ಪರಮುಕ್ತಿಪ್ರದನುಂ- ಶ್ರೇಷ್ಠವಾದ ಮೋಕ್ಷವನ್ನು ಕೊಡುವವನು, ವಿಶ್ವಮಯನುಂ-ಪ್ರಪಂಚಸ್ವರೂಪನು, ವಿಶ್ವಪ್ರೇರಕನುಂ-ಪ್ರಪಂಚವನ್ನು ಉದ್ಬೋಧನೆಗೊಳಿಸುವವನು, ಸ್ವಭಕ್ತಸುಲಭನುಂ- ತನ್ನ ಭಕ್ತರಿಂದ ಸುಖವಾಗಿ ಹೊಂದಲ್ಪಡುವವನು, ಅಭಕ್ತದುರ್ಲಭನುಂ- ತನ್ನ ಭಕ್ತರಲ್ಲದವರಿಂದ ಹೊಂದಲ್ಪಡದೇಇರುವನು, ಅನುಪಮಕಲ್ಯಾಣಗುಣಾಲಂಕರಣನುಂ- ಅಸದೃಶಗಳಾದ ಮಂಗಳಕರಗಳಾದ ಗುಣಗಳೇ ಆಭರಣವಾಗುಳ್ಳವನು, ಅಖಿಳಬ್ರಹ್ಮಾಂಡಮಂಡಲಾಧೀಶ್ವರನುಂ- ಸಮಸ್ತ ಪ್ರಪಂಚವಲಯಕ್ಕೂ ಸ್ವಾಮಿಯಾದವನು. * * * * * * * * *

ಒಳಹೊರಗೆ-ಒಳಗುಹೊರಗೂ, ಅರಿವವನುಂ- ತಿಳಿಯುವವನೂ, ಎಲ್ಲರಂತೆ, ಇರದವಂ. ॥೫೧॥

ಭೂರಿಜಗಜ್ಜಾಲಪತಿ- ಬಹಳವಾದ ಜಗತ್ತಿನ ಸಮೂಹಕ್ಕೆ ಸ್ವಾಮಿಯು, ನಿಗಮನಿಗಮಶಿರೋರಾಜಿ- ನಿಗಮ- ವೇದಗಳು, ನಿಗಮಶಿರಃ- ಉಪನಿಷತ್ತುಗಳು ಇವುಗಳ, ರಾಜಿ- ಪಙ್ತಿಯು, ಪುರಾಣವಾಣಿ- ಪುರಾಣವಚನವು. ... ... ... ... ॥೫೨॥

ಮಲಧಾರಿಗಳ್- ಕೊಳೆಯನ್ನು ಧರಿಸಿರುವ ಜೈನರು, ವ್ಯಾಘಾತಪುನರುಕ್ತ್ಯಾದಿಸಂಕಲಿತಂ— ವ್ಯಾಘಾತ- ಪರಸ್ಪರವಿರೋಧ, ಪುನರುಕ್ತಿ- ಹೇಳಿದುದನ್ನೇ ಹೇಳುವದು ಇವುಗಳೇ, ಆದಿ- ಮೊದಲಾದದೋಷಗಳಿಂದ, ಸಂಕಲಿತಂ- ಕೂಡಿರುವದು, ಸಮರ್ಥಿಪೆ- ಸಾಧಿಸುವೆ ? * * * *

ಆಯುರ್ವೇದಂ- ರೋಗಚಿಕಿತ್ಸೆಯಂ ಹೇಳುವ ವೇದವು, ಭೈಷಜ್ಯಮೆಸಗೆ- ಔಷಧವಂ ಮಾಡಿದರೆ, ಅಖಿಳರುಜೆಗಳ್- ಎಲ್ಲಾರೋಗಳು, ಆಗಮಂ- ವೇದವು. ... ... ॥೫೩॥

ದೂರತರಂ- ಬಹುದೂರವರ್ತಿಯಾದ, ಕೊಳ್ವ- ಗ್ರಹಿಸುವ, ಇನಿಸುಂ- ಇಷ್ಟಾದರೂ, ಅರಿಯಿರಿ- ತಿಳಿಯಿರಿ ? ಗಾಂಪಂ- ಮೌಢ್ಯವನ್ನು. ... ... ... ॥೫೪॥

ತಿಪ್ರಾಮಾಣ್ಯ ಕಿಂತಪ್ಪುದ ನೊರೆದ ತದಂಗೋಕ್ತಿ ದೃಷ್ಟಾಂತ ಮೆಂಬಾ । ಮತಿಯಂ ನೀ
ವೇಕೆ ಜೈನಾಧಮರಿ ರರಿಯಿರೇನೆಂಬೆ ನೀನಿಮ್ಮ ಗಾಂಪಂ ॥ ... ... ೫೪

ಮ॥ ಸ್ರ॥ ಪಲವಾಳಾಪದಿ ನೇಂಫಲಂ ಶಿವನೆ ಕರ್ತಾರಂ ಜಗನ್ಮಂಡಲೀ । ಕುಲ ಕೆಂದುಂ
ಪೆರ ನಿಲ್ಲ ದೇವ ನೆನುತುಂ ದೃಷ್ಟಾಂತಮಂ ತೋರ್ಪೆ ನಿಂ ॥ ದೆಲೆ ನೀಮೆಂದುದ ನೀಗ ಳಂತೆ
ಜಿನಗೇಹವ್ರಾತಮಂ ಕೀಳ್ತು ನೀ । ವೊಲವಿಂ ಪೂಜಿಪ ತಜ್ಜಿನಪ್ರಚಯಮಂ ನುಗ್ಗೊ
ತ್ತಿ ಪಾಳ್ಮಾಡುವೆಂ ॥ .. ... ೫೫

ವ ॥ ಎಂದು ವಿಜೃಂಭಿಸಿ ದೃಢಪ್ರತಿಜ್ಞಾರೂಢ ನಾದ ಜೈನಜನಭಂಜನನ ಪಟುಕಟೂ
ಕ್ತಿಯಂ ಕೇಳ್ದು ಮುಳಿಸು ತಾಳ್ದು ಪೇರೊಡಲಪೆಂಕುಳಿಗಳುಂ ತರಂಟುದಲೆಯೊರಂಟರುಂ
ಪೆರ್ಬ್ಬಡಿಕೆಮೆಯ್ಯದುರ್ಬೋಧರುಂ ನೊಳವೆರಪಕೋಳೆವಾಯಖಳರುಂ ಪುಳುಚೆಲ್ದಳ್ದಕಿಣಿವ
ಲ್ಲಪುರುಷಾಧಮರುಂ ಪಾಳ್ಮೊಗದಕಾಳ್ಮಾನಿಸರುಂ ಪೊಲಸುನಾರುವಂಗದಪಂಚಮಲದ ಪಾ
ಷಂಡರುಂ ಬತ್ತಲೆಯೊಡಲಬಾಹಿರರುಂ ಮಿಂಚುದಲೆಯವಂಚಕರುಂ ಕುತರ್ಕದಕುತ್ಸಿತರುಂ
ಕುಮಂತ್ರದಕುಟಿಲರುಂ ಪತಿಯಂಪಳಿವಪಾಪಕರ್ಮ್ಮರುಂ ನಿಗಮಮಂತೆಗಳ್ವನೀಚರುಂ ನಗೆ
ಗಂಜದನಾಣಿಲಿಗಳುಂ ಕುಂಚದಕೂಳರುಂ ತಟ್ಟನತಾಮಸರುಂ ಗುಂಡಿಗೆಯಭಂಡರುಂ ಪು
ಸಿನುಡಿಯಪೊಲೆಯರು ಮೆನಿಪ ಮಲಧಾರಿಗ ಳ್ಮಸಣವಟ್ಟೆಯ ಮರುಳ್ಗಳಂತೆ ಮಸಕಂ

---

ಪಲವಾಳಾಪದಿಂ- ಬಲುಮಾತಿನಿಂದ, ಪೆರಂ- ಮತ್ತೊಬ್ಬನು, ನುಗ್ಗೊತ್ತಿ-ನುಚ್ಚುಮಾಡಿ, ಪಾಳ್ಮಾ
ಡುವೆಂ- ನಾಶಗೊಳಿಸುವೆನು. ... ... ... ॥೫೫॥

ಪಟುಕಟೂಕ್ತಿಯಂ- ಸಮರ್ಥವಾಗಿಯೂ ಕಠಿಣವಾಗಿಯೂ ಇರುವ ಮಾತನ್ನು, ಪೇರೊಡಲ- ದಪ್ಪ
ಹೊಟ್ಟೆಯುಳ್ಳ, ಪೆಂಕುಳಿಗಳುಂ- ಹುಚ್ಚರುಗಳೂ, ತರಂಟುದಲೆಯ- ತರಕುದಲೆಗಳುಳ್ಳ, ಒರಂಟರುಂ- ಕಠಿ
ಣರೂ, ಪೆರ್ಬಡಿಕೆಮೆಯ್ಯ- ಹೇಸಿಕೆಯನ್ನುಂಟುಮಾಡುವ ದೇಹವುಳ್ಳ, ದುರ್ಬೋಧರುಂ- ಅಜ್ಞಾನವುಳ್ಳ
ವರೂ, ನೊಳವೆರಪ- ನೊಣಗಳು ಎರಗುತ್ತಿರುವ, ಕೋಳೆವಾಯ ಕೊಳೆಯಿಂದ ಕೂಡಿದ ಬಾಯುಳ್ಳ, ಖಳ
ರುಂ- ನೀಚರೂ, ಪುಳುಚಲ್ದಳ್ದ-ಕಿವುಚುಗಟ್ಟಿದ, ಕಿಣಿವಲ್ಲ- ಗಾಯದಗಂಟಿನಿಂ ಕೂಡಿದ ಹಲ್ಲುಳ್ಳ, ಪುರುಷಾ
ಧಮರುಂ- ನೀಚಮಾನುಷರೂ, ಪಾಳ್ಮೊಗದ- ಭಸ್ಮಾದಿತಿಲಕಶೂನ್ಯವಾದ ಮುಖವುಳ್ಳ, ಕಾಳ್ಮಾನಿಸರುಂ-
ಕಾಡಿನ ಮನುಷ್ಯರೂ, ಪೊಲಸುನಾರುವ- ದುರ್ಗಂಧವಂ ಬೀರುವ, ಅಂಗದ- ದೇಹವುಳ್ಳ, ಪಂಚಮಲದ-
ಐದು ವಿಧವಾದ ಕೊಳೆಯುಳ್ಳ, (ಅಂದರೆ ಮೂಗಿನ ಮ್ಯುಸುರೆ, ಕಣ್ಣಿನ ಜಿಬುರು, ಹಲ್ಲಿನ ಕೀಚು, ಕಿವಿಯ
ಗುಗ್ಗೆ, ಮಯ್ಯಕೊಳೆ) ಪಾಷಂಡರುಂ, ಬತ್ತಲೆಯೊಡಲ-ವಸ್ತ್ರಶೂನ್ಯವಾದ ದೇಹವುಳ್ಳ, ಬಾಹಿರರುಂ- ವೇ
ದಬಾಹ್ಯರೂ, ಮಿಂಚುದಲೆಯ- ಕೂದಲನ್ನು ಕೀಳಿಸಿಕೊಂಡು ಮಿಂಚುತ್ತಿರುವ ತಲೆಯುಳ್ಳ, ವಂಚಕರುಂ-
ಮೋಸಗಾರರೂ, ಕುತರ್ಕದ- ಕೆಟ್ಟಊಹೆಯುಳ್ಳ, ಕುತ್ಸಿತರುಂ- ನೀಚರೂ- ಕುಮಂತ್ರದ- ಕೆಟ್ಟಆಲೋಚ
ನೆಯುಳ್ಳ, ಕುಟಿಲರುಂ- ಕಪಟಿಗಳೂ, ಪತಿಯಂ- ಈಶ್ವರನನ್ನು, ಪಳಿವ- ತಿರಸ್ಕರಿಸುವ, ಪಾಪಕರ್ಮ್ಮರುಂ,
ನಿಗಮಮಂ- ವೇದವನ್ನು, ತೆಗಳ್ವ- ನಿಂದಿಸುವ, ನೀಚರುಂ, ನಗೆಗೆ, ಹಾಸ್ಯಮಾಡುವಿಕೆಗೆ, ಅಂಜದ- ಹೆದ
ರದೇಇರುವ, ನಾಣಿಲಿಗಳುಂ- ನಾಚಿಕೆಯಿಲ್ಲದವರೂ, ಕುಂಚದ- ನವಿಲಗರಿಯ ಹೊದೆಯುಳ್ಳ, ಕೂಳರುಂ-
ನೀಚರೂ, ತಟ್ಟನ- ಗುಂಪಾದ, ತಾಮಸರುಂ- ತಮೋಗುಣವುಳ್ಳವರೂ, ಗುಂಡಿಗೆಯಂ- ಎದೆಗೆಚ್ಚುಳ್ಳ, ಭಂ
ಡರುಂ- ಯಾತಕ್ಕೂ ಹೇಸದವರೂ, ಪುಸಿನುಡಿಯ- ಸುಳ್ಳುಮಾತುಳ್ಳ, ಪೊಲೆಯರುಂ, ಮಸಣವಟ್ಟೆಯ-
ಸ್ಮಶಾನದ ಮಾರ್ಗದಲ್ಲಿರುವ, ಮರುಳ್ಗಳಂತೆ- ಪಿಶಾಚಗಳ ಹಾಗೆ, ಮಸಕಂಗೊಂಡು- ಕೋಪಾತಿಶಯವಂ

ಗೊಂಡು ಮಂತ್ರಕ್ಕೆ ಮಲಿವ ಭೇತಾಳರಂತೆ ಪಲ್ಲೊರೆದು ತುಪ್ಪುಳ್ದರೆದಕೋಳಿಗಳಂತೆ ಮಿಳ್ಮಿಳನೆನೋಡುತ್ತಂ ಕೂಳಂಕಂಡಕೊತ್ತಳಿಯಂತೆ ಕಳಕಳಂಗೆಯ್ದು ಬಸದಿಯೊಳೂಳ್ವ ಬಳ್ಳುಗಳಂತೆಕೂಗಿಡುತ್ತಂ ಮೊಲೆನಾಗು ಪಿಡಿದಮರ್ಕಟಂಗಳಂತೆ ನಾನಾವಿಕಾರಂದೋರ್ಕ ಳ್ಳಸೊರ್ಕ್ಕ ತಲೆಗೇರಿದ ತಳವಾರರಂತೆ ಬಾಯ್ಗೆಬಂದುದಂ ಗಳಪುತ್ತಂ ತಮ್ಮೊಳೆಲ್ಲ ರಾ ಮಂತ್ರಣಂಗೆಯ್ದೊಂದುಕಪಟೋಪಾಯಮ ನಾಳೋಚಿಸಿ ॥ * * * *

ಕಂ ॥ ಕಡುದುರುಳಂ ಶೈವ ನಿವಂ। ಮಡಿಪದೆ ಮಾಣ್ದಪನೆ ಬಳಿಯಿನೆಮ್ಮಂ ಮುನ್ನಂ॥
ಬಿಡದೀತಂ ಮಡಿವಪ್ರೊ ಲೆಡೆ । ಯುಡಗದೆ ನೆಗಳಲ್ಕೆವೇಳ್ಕು ಮೆಂದಾಸವಣರ್ ೫೬

ಕಂ ॥ ಪಟುಗರಳ ಪಾವಕಪ್ರ । ಸ್ಫುಟಚಲರಸನಾಗ್ರಪಾಟಲಸ್ಫಟಚಟುಲೋ ॥ ತ್ಕಟ
ಭೀಕರಮುಖಫಣಿಯಂ । ಕುಟಲಾಶ್ಮ ಘಟದೊಳಿಟ್ಟು ಮುಂದಿಳುಪುತ್ತಂ ॥ ೫೭

ಚಂ॥ ಗಡಬಡಿಸುತ್ತೆ ನೀಂ ಗಳಪಡಿ ಪರ್ಜಲವು ಶಿವ ಸರ್ಪ ನಿರ್ಪ ನೆ, ಲ್ಲೆಡೆಯೊಳ
ಮೆಂದು ಪೂಣ್ದೆಗಡ ಕಾಡಪೆ ವೀಘಟಮಂ ತುಡುಂಕಿ ತೆ ॥ ನ್ಮೃಡನಿದರಲ್ಲಿ ತಳ್ತಿಸೆವ ನೆಂ
ಬುದ ನೀಂಗಳೆ ತೋರಿಸಾಗಡಿ। ದೊಡೆ ಬಿಡು ನಿನ್ನ ಬಿನ್ನಣಮ ನೆಂದೆನೆ ಕೇಳ್ದು ಕನಲ್ದು
ನೋಡಿದಂ ॥ ... ... ... ೫೮

ವ ॥ ಅಂತು ನೋಡಿ ರಾಜಾಮಾತ್ಯದಂಡನಾಥಮಂಡಳಿಕಸಾಮಂತಭೂಮೀಶ್ವರಾದಿಗ ಳ್ನೆರೆ ದಚ್ಚರಿ ಮಿಗೆ ನಿರೀಕ್ಷಿಸುತ್ತ ಮಿರೆ ತದಾಸ್ಥಾನಮಧ್ಯದಲ್ಲಿ * * *

ಮಲ್ಲಿಕಾಮಾಲಾವೃತ್ತಂ ॥ ರಾಮನಾಥನೆ ವಿಶ್ವದೊಳ್ಪರಿಪೂರ್ಣ ನೆಂಬುದೆ ಸತ್ಯ

---

ಹೊಂದಿ, ಮಲಿವ-ತೂಗಾಡುವ, ಭೇತಾಳರಂತೆ- ಪಿಶಾಚಭೇದಗಳಹಾಗೆ, ಪಲ್ಲೊರೆದು- ಹಲ್ಲಂ ಕಡಿದು ಶಬ್ದ ವಂ ಮಾಡಿ, ತುಪ್ಪುಳ್ದರೆದ- ರೋಮಗಳನ್ನು ತರೆದ, ಕೋಳಿಗಳಂತೆ- ಕುಕ್ಕುಟಗಳ ಹಾಗೆ, ಕೂಳಂ- ಅನ್ನ ವನ್ನು, ಕೊತ್ತಳಿಯಂತೆ- ಕಾಗೆಗಳ ಗುಂಪಿನಹಾಗೆ, ಬಸದಿಯೊಳ್- ಊರಿನಲ್ಲಿ, ಊಳ್ವ- ಕೂಗುವ, ಬಳ್ಳುಗ ಳಂತೆ-ನರಿಗಳಹಾಗೆ, ಮೊಲೆನಾಗಂ- ಮೊಲೆನಾಗರ ರೋಗವು, ಮರ್ಕಟಂಗಳಂತೆ- ಕಪಿಗಳಹಾಗೆ, ಕಳ್ಳಸೊ ರ್ಕ್ಕ- ಕಳ್ಳರುಂಟುಮಾಡಿದ ಮತ್ತತೆಯು, ತಳವಾರರಂತೆ-ಪುರದ ಗಸ್ತನ್ನು ಮಾಡುವರಹಾಗೆ, ಗಳಪುತ್ತಂ- ಕೂಗುತ್ತ, ಆಮಂತ್ರಣಂಗೆಯ್ದು- ಕರೆದು. * * * * * * *

ಬಳಿಯಿಂ- ಅನಂತರ, ಮಡಿಪದೆ- ಸಾಯಿಸದೆ, ಮಾಣ್ದಪನೆ- ಬಿಡುವನೇ ? ಎಡೆಯುಡುಗದೆ-ಸ್ಥಾನ ವಂ ಬಿಡದೆ. ... ... ... ॥೫೬॥

ಪಟು......ಫಣಿಯಂ— ಪಟು- ಸಮರ್ಥವಾದ, ಗರಳಪಾವಕ-ವಿಷಾಗ್ನಿಯಿಂದ, ಪ್ರಸ್ಫುಟ- ವ್ಯ ಕ್ತವಾದ, ಚಲ- ಚಂಚಲವಾದ, ರಸನಾ- ನಾಲಿಗೆಯು, ಅಗ್ರ- ತುದಿಯುಳ್ಳ, ಪಾಟಲ- ಕೆಂಪಾದ, ಸ್ಫಟ- ಹೆಡೆಯುಳ್ಳ, ಚಟುಲ- ಚಂಚಲವಾದ, ಉತ್ಕಟ- ಬಲಶಾಲಿಯಾದ, ಭೀಕರ- ಭಯಂಕರವಾದ, ಮುಖ-ಮೋ ರೆಯುಳ್ಳ, ಫಣಿಯಂ- ಸರ್ಪವನ್ನು, ಘಟದೊಳ್- ಕಲಶದಲ್ಲಿ. ... ॥೫೭॥

ಗಡಬಡಿಸುತ್ತೆ- ಗಾಬರಿಯಂ ಮಾಡುತ್ತ, ಎಲ್ಲೆಡೆಯೊಳಂ- ಎಲ್ಲಾಸ್ಥಳದಲ್ಲೂ, ಪೂಣ್ದೆಗಡ- ಪ್ರತಿ ಜ್ಞೆಯಂ ಮಾಡಿದೆಯಲ್ಲವೇ ? ತುಡುಂಕಿ- ಗ್ರಹಿಸಿ, ತಳ್ತು- ಸೇರಿ. ... ॥೫೮॥

ರಾಜಾ......ದಿಗಳ್— ರಾಜ, ಅಮಾತ್ಯ- ಮಂತ್ರಿ, ದಂಡನಾಥ-ಶಿಕ್ಷಾಧಿಕಾರಿ, ಮಂಡಳಿಕ- ಸಭಾ ಸದರು, ಸಾಮಂತಭೂಮೀಶ್ವರ- ಆಶ್ರಿತರಾಜರು ಇವರುಗಳೇ, ಆದಿಗಳ್, ತದಾಸ್ಥಾನಮಧ್ಯದಲ್ಲಿ-ಆ ಸಭೆ ಯ ಮಧ್ಯದಲ್ಲಿ. * * * * * * * * * *

ವಾ । ರಾಮನಾಥನ ಭಕ್ತರೇ ಭುವನತ್ರಯಾಧಿಕ ರಾವಗಂ ॥ ರಾಮನಾಥನ ನೊಲ್ವು ಪ್ರೊಜೆಸ ದಾತ್ಮರೇ ದುರಿತಾತ್ಮರೀ।ರಾಮನಾಥನೆ ದೇವ ನೆಂದಿಳೆ ಮಚ್ಚೆ ದೃಷ್ಟವು ನೀಕ್ಷಣಂ॥೭೦॥

ಕಂ॥ ತೋರುವೆ ನೀಜಿನಮುಕ್ತಮು । ಪಾರಿಪೆ ನೆಂದಣ್ಮು ತಾದ್ಯನವಭಕ್ತರ ಪೆಂ ॥ ಪೇರಿದ ಪದನಳಿನಂಗಳ । ಜಾರದೆ ನೆರೆ ನಿಂದು ಜಾನಿಸುತ್ತಧಟಿಂದಂ ॥ ... ೬೧

ವ ॥ ಶಂಭುಸನ್ನಿಭಂ ಕುಂಭಿನೀಪತಿಯಿದಿರೊಳ್ಕುಂಭಕುಂಭೀನಸಮಂ ನೀಡು ನಿರೀಕ್ಷಿಪಾಗಳ್ * * * * *

ಮ ॥ ಸ್ರ ॥ ಸ್ಫುಟಕೋಪಾಟೋಪನಿರ್ಯದ್ಗರಳಶಿಖಿಶಿಖಾವಿಸ್ಫುರದ್ವಿಸ್ಫುಲಿಂಗೋತ್ಕಟಧೂಮಶ್ವಾಸಭೀಷ್ಮಾನನ ಮತಿಚಳಪುಚ್ಛಘಟಾಗ್ರಸ್ಫಟಾತ ॥ ದ್ಘಟಗರ್ಭಾಸ್ಫಾಲನಾಪ್ರಕ್ರಿಯ ಮಧಿಗತಫೂತ್ಕಾರಸಂಚಾಲಿತೋದ್ಯ । ತ್ಪಟುಜಿಹ್ವಂ ಪೂರ್ಣಕಾಯಂ ನಿಜಬಲಜಿತಕರ್ಕೋಟಕಂ ಕ್ರೂರಸರ್ಪಂ॥ ... ... ೬೦

ಮ ॥ ಸ್ರ ॥ ಕೊಪದೊಳ್ಕಣ್ಗೊಪ್ಪೆ ಕೈಯಿಟ್ಟಡಸಿ ತುಡುಕಿದಂ ಭೋಗಿಭೂಷೋಪಮಂ ಪೆಂ । ಬಿಡಿದಾಘೋರಾಹಿಶಿಷ್ಯಂ ಗುರುಕರಕಮಲಸ್ಪರ್ಶದಿಂ ದೀಕ್ಷಭಾವಂ ॥ ಬಡೆದಂ ತಾದಾಸದೇವಸ್ಫುಟಕರಕಮಲಸ್ಪರ್ಶದಿಂ ಪೂರ್ವಭಾವಂ । ಕಿಡೆ ಭಾಸ್ವಲ್ಲಿಂಗರೂಪಂತಳೆದು ಪೊಳೆದು ಕಣ್ಗೆಡ್ಡ ಮಾಗಿರ್ದು ದಾಗಳ್ ॥ ... ... ೬೦

---

ದೃಷ್ಟವಮಂ- ಪ್ರತ್ಯಕ್ಷಪ್ರಮಾಣವನ್ನು. ... ... ॥೫೯॥

ಪಾರಿಪೆಂ- ಓಡಿಸುವೆನು, ಆದ್ಯನವಭಕ್ತರ- ಮೊದಲಿಗರಾದ ಅಪೂರ್ವರಾದ ಶಿವಭಕ್ತರ, ಪದನಳಿನಂಗಳ- ಪಾದಕಮಲಗಳನ್ನು, ಅಧಟಿಂದಂ- ಶೌರ್ಯದಿಂದ, ಜಾನಿಸುತ್ತೆ- ಧ್ಯಾನಮಾಡುತ್ತ. ॥೬೦॥

ಶಂಭುಸನ್ನಿಭಂ- ಶಿವಸದೃಶನಾದ ಬೊಮ್ಮಾರ್ಯನು, ಕುಂಭಿನೀಪತಿಯ- ರಾಜನ, ಕುಂಭಕುಂಭೀನಸಮಂ- ಘಟದಲ್ಲಿರುವ ಸರ್ಪವನ್ನು. ... ... ... ॥೬೧॥

ಸ್ಫುಟ......ಆನನಂ— ಸ್ಫುಟ- ವ್ಯಕ್ತವಾದ, ಕೋಪಾಟೋಪ-ಕೋಪಾತಿಶಯದಿಂದ, ನೀರ್ಯತ್- ಹೊರಕ್ಕೆ ಹೊರಡುತ್ತಿರುವ, ಗರಳಶಿಖಿ- ವಿಷಾಗ್ನಿಯ, ಶಿಖಾ- ಜ್ವಾಲೆಯಿಂದ, ವಿಸ್ಫುರತ್- ಪ್ರಕಾಶಿಸುವ, ವಿಸ್ಫುಲಿಂಗ- ಕಿಡಿಗಳ, ಉತ್ಕಟ- ಸಮೂಹವುಳ್ಳ, ಧೂಮ- ಹೊಗೆಯುಳ್ಳ, ಶ್ವಾಸ- ಉಸುರಿನಿಂದ, ಭೀಷ್ಮ- ಭಯಂಕರವಾದ, ಆನನಂ- ಮುಖವುಳ್ಳ, ಅತಿ......ಪ್ರಕ್ರಿಯಂ— ಅತಿಚಳ- ಬಹಳವಾಗಿ ಚಲಿಸುತ್ತಿರುವ, ಪುಚ್ಛ- ಬಾಲದ, ಘಟಾಗ್ರ- ಗುಂಪಾದ ತುದಿಯೇನು, ಸ್ಫಟಾ- ಹೆಡೆಯೇನು ಇವುಗಳಿಂದ, ತದ್ಘಟ- ಆ ಕುಂಭದ, ಗರ್ಭ- ಒಳಭಾಗದಲ್ಲಿ, ಆಸ್ಫಾಲನ- ಹೊಡೆಯುವ, ಪ್ರಕ್ರಿಯಂ- ಕಾರ್ಯವುಳ್ಳ, ಅಧಿ......ಜಿಹ್ವಂ— ಅಧಿಗತ- ಪ್ರಾಪ್ತವಾದ, ಫೂತ್ಕಾರ ಫೂ ಎಂದು ಶಬ್ದಮಾಡುವದರಿಂದ, ಸಂಚಾಲಿತ- ಅಳ್ಳಾಡಿಸಲ್ಪಟ್ಟ, ಉದ್ಯತ್- ದೊಡ್ಡದಾದ, ಪಟು- ಸಮರ್ಥವಾದ, ಜಿಹ್ವಂ-ನಾಲಿಗೆಯುಳ್ಳ, ಪೂರ್ಣಕಾಯಂ- ತುಂಬಿದ ದೇಹವುಳ್ಳ, ನಿಜಬಲಜಿತಕರ್ಕೋಟಕಂ- ತನ್ನ ಶಕ್ತಿಯಿಂದ ಜೈಸಲ್ಪಟ್ಟ ಕರ್ಕೋಟಕವೆಂಬ ಮಹಾಸರ್ಪವುಳ್ಳ. ... ... ... ॥೬೧॥

ಅಡಸಿ- ಸೇರಿಸಿ, ತುಡುಕಿದಂ- ಗ್ರಹಿಸಿದನು, ಭೋಗಿಭೂಷೋಪಮಂ- ಸರ್ಪಭೂಷಣಶಿವಸದೃಶನಾದ ಬೊಮ್ಮಾರ್ಯನು, ಗುರುಕರಕಮಲಸ್ಪರ್ಶದಿಂದೆ- ಗುರುವಿನ ತಾವರೆಯಂತಿರುವ ಕೈಯ್ಯಮುಟ್ಟುವಿಕೆಯಿಂದ, ಆದಾಸದೇವಸ್ಫುಟಕರಕಮಲಸ್ಪರ್ಶದಿಂ- ಆ ಬೊಮ್ಮದಾಸಸ್ವಾಮಿಯ ವ್ಯಕ್ತವಾದ ಕೈದಾವರೆಯ ಸೋಂಕುವಿಕೆಯಿಂದ, ಪೂರ್ವಭಾವಂ- ಮೊದಲಿದ್ದ ಸರ್ಪತ್ವವು, ಕಿಡೆ- ನಾಶವಾಗಲು, ಎಡ್ಡಂ- ಮನೋಹರವು. ... ... ... ॥೬೨॥

ಮ ॥ ಸ್ರ ॥ ಪಳಿ ದರ್ಕಪ್ರಾಂಶುವಂ ಪ್ರಜ್ವಳಿಪ ಶಶಿಮಯೂಖಾಳಿಯಂ ತೂಳ್ದು ಲೋಕಾ । ವಳಿಯಂ ಪ್ರಕ್ಷಾಳನಂಗೆಯ್ದೆಸೆವ ವಿಮಳಲಿಂಗಪ್ರಭಾಮಂಡಲಂ ಕಂ ॥ ಡಿಳೆ ಯಾಣ್ಮಂಗೂಡಿ ಸರ್ವತ್ರ್ಯಾಲೆಯ ನೊಲೆದು ಕೊಂಡಾಡಿದ ದೇವಿ ತನ್ಮಂ । ಜುಳಪಾದಾಂ ಭೋಜ ಕುರ್ವುತ್ತೆರಗಿ ರಮಣವಕ್ತ್ರಾಬ್ಜಮಂ ನೋಡು ತಿಂದೆಳ್ ... ॥೬೩॥

ಕಂ ॥ ಇನ್ನಾಡೊಡತ ಮೆಲಿಮದ್ಗುರು । ವಂ ನಂಬೆರಡಿಲ್ಲ ದೆಂದ ರಮಣಿಂತು ನುಡಿ ಗಾ ॥ ತು ನಲಿದು ದಾಸಿಮಯ್ಯನ । ಪನ್ನಳನಕ್ಕೆರಗಿ ಪಾವನಾತ್ಮಕ ನಾದಂ ... ॥೬೪॥

ಕಂ ॥ ಕರುಣಂಗೆಯ್ದೆರಗಿರ್ದ ತದ್ವಿಭುಗ ಮಂಜುತ್ತಂ ಶರಣ್ಬೊಕ್ಕ ತ । ದ್ಗುರುಜೈ ನಾಳಿಗ ಮೊಲ್ದು ದೀಕ್ಷೆಗುಡುತಂ ಸದ್ಭಕ್ತರಂ ಮಾಡಿ ಮಿ ॥ ಕ್ಕರ ನೇಳ್ಬಟ್ಟೆ ನೆಗಳ್ಬ ಸು ಗ್ಗಲೆಗೆ ಪ್ರೋರ್ಣೋತ್ಸಾಹಮಂ ತಜ್ಜನೋ । ತ್ಕರಗೇಹಂಗಳ ನೊತ್ತಿ ಕೀಳ್ತಡಿಸಿ ದಾ ಸಂ ತನ್ನ ಶಿಷ್ಯರ್ಕಳಿಂ ॥ ... ... ॥೬೫॥

ಮ ॥ ಸ್ರ ॥ ಧರಣಿಪ ನಾಳ್ದ ಭೂಸತಿಗೆ ದೀಕ್ಷೆಯ ನೀವಪ್ರೊಲಾತ್ಮಪಾಣಿಪಂ । ಕರುಹ ದೊಳುದ್ಭವಂಬಡೆದ ತದ್ವಿಮಳಸ್ಫಟಿಕಾಂಗಲಿಂಗಮಂ ॥ ಭರದೆ ನಿಜೋತ್ತರಂಜಯಿಸೆ ತಾ ನೊಗೆತಂದುದರಿಂದ ಮುತ್ತರೇ । ಶ್ವರ ನೆನಿಪಾಖ್ಯೆಯಂ ರಚಿಸಿ ತತ್ಸುರಮಧ್ಯದ ಹೇಮಗೇ ಹದೊಳ್ ॥ ... ... ... ॥೬೬॥

ಕಂ ॥ ದಾಸಂ ಪ್ರತಿಷ್ಠೆಗೆಯ್ದ ವಿ । ಲಾಸಂ ಮಿಗೆ ರಾಜಪೂಜೆಯಂ ಕೈಕೊಂಡಾ ॥ ಭೂಸತಿಯರಸನ ನರಸಿಯ । ಲೇಸೆನೆ ಸುಖಮಿರಿಸಿ ನಿಜಪುರಕ್ಕೇಳ್ತಂದಂ ॥ ... ॥೬೭॥

ವ ॥ ಅಂತೇಳ್ತಂದು ಶಿವಗಣಸಪರ್ಯೋತ್ಸವದಿಂ ಸುಖಮಿರ್ದನೆಂದು * *

---

ವಿಮಳಲಿಂಗಪ್ರಭಾಮಂಡಲಂ- ನಿರ್ಮಲವಾದ ಲಿಂಗದ ಕಾಂತಿಯ ಸಮೂಹವು, ಅರ್ಕಪ್ರಾಂಶುವಂ- ಸೂರ್ಯನ ಅಧಿಕವಾದ ಕಾಂತಿಯನ್ನು, ಶಶಿಮಯೂಖಾಳಿಯಂ- ಚಂದ್ರನ ಕಿರಣಗಳ ಪಙ್ತಿಯನ್ನು. ತೂ ಳ್ದು- ಮೆಟ್ಟಿ, ಪ್ರಕ್ಷಾಳನಂಗೆಯ್ದು- ತೊಳೆದು, ಒಲೆದು- ತೂಗಿ, ದೇವಿ- ಪಟ್ಟದ ರಾಣಿಯು, ಉರ್ವುತ್ತೆ- ಉತ್ಸಾಹಪಡುತ್ತ, ರಮಣವಕ್ತ್ರಾಬ್ಜಮಂ- ಗಂಡನ ಮುಖಕಮಲವನ್ನು. ... ॥೬೩॥

ನಂಬು- ಆಶ್ರೈಸು, ಎರಡು- ಭೇದವು, ಪನ್ನಳನಕ್ಕೆ- ಪಾದಕಮಲಕ್ಕೆ, ಪಾವನಾತ್ಮಕಂ- ಪರಿಶುದ್ಧ ವಾದ ಜೀವನುಳ್ಳವನು. ... ... ... ॥೬೪॥

ಎರಗಿ- ನಮಸ್ಕರಿಸಿ, ತದ್ವಿಭುಗಂ- ಆ ರಾಜನಿಗೂ, ಅಂಜುತ್ತಂ- ಹೆದರುತ್ತಾ, ತದ್ಗುರುಜೈನಾಳಿ ಗಂ-ಆ ರಾಜನ ಗುರುಗಳಾದ ಜೈನರ ಪಙ್ತಿಗೂ, ಏಳ್ಬಟ್ಟೆನೆಗಳ್ಬ-ದಾರಿಹಿಡಿದುಓಡಿಹೋಗುವಿಕೆಯಂಮಾಡಿ

ಆಳ್ದ- ಕಾಪಾಡಿದ, ಭೂಸತಿಗೆ- ಭೂಮಿಯೆಂಬ ಸ್ತ್ರೀಗೆ, ಆತ್ಮಪಾಣಿಪಂಕರುಹದೊಳ್- ತನ್ನಕರಕ ಮಲದಿಂದ, ತದ್ವಿಮಳಸ್ಫಟಿಕಾಂಗಲಿಂಗಮಂ- ಆ ನಿರ್ಮಲವಾದ ಸ್ಫಟಿಕಮಯವಾದ ದೇಹವುಳ್ಳ ಶಿವಲಿಂಗವ ನ್ನು, ಭರದೆ- ಬೇಗನೆ, ನಿಜೋತ್ತರಂ-ತನ್ನ ಉತ್ತರವು, ಒಗೆತಂದುದರಿಂದಂ- ಹುಟ್ಟಿದುದರಿಂದ, ಆಖ್ಯೆಯಂ- ಹೆಸರನ್ನು, ಹೇಮಗೇಹದೊಳ್- ಚಿನ್ನದ ಮನೆಯಲ್ಲಿ. ... ... ॥೬೬॥

ರಾಜಪೂಜೆಯಂ- ರಾಜನಿಂದ ಮಾಡಲ್ಪಟ್ಟ ಅರ್ಚನೆಯನ್ನು, ಕೈಕೊಂಡು- ಸ್ವೀಕರಿಸಿ, ಆಭೂಸತಿ ಯುಅರಸನಂ- ರಾಜನನ್ನೂ, ಅರಸಿಯಂ- ರಾಣಿಯನ್ನೂ, ಲೇಸು- ಒಳ್ಳೆಯದು. ... ॥೬೭॥

ಶಿವಗಣಸಪರ್ಯೋತ್ಸವದಿಂ- ಶಿವಗಣಂಗಳನ್ನು ಪೂಜೆಮಾಡುವ ಸಂತೋಷದಿಂದ. * *

ಮ॥ ಸ್ರ॥ ಪೇಳುತ್ತೇಕಾಂತರಾಮಂ ಜಿನಪದಭಜಕಂ ಗಿಂತು ಜೈನವ್ರತಾನ।ಪ್ರಾಳೇ ಯೋದ್ದಂಡಚಂಡಪ್ರಭನಿಭ ಶರಣಾಲಾಪಮಂ ಮತ್ತ ಮೊಂದಂ ॥ ಪೇಳಲ್ಕೆಂಪಿರ್ದ ಪಾಂಗಂ ತಿಳಿದು ತಳೆದು ಸಾಶ್ಚರ್ಯಸಂತೋಷಮಂ ಸ । ತ್ಯಾಳಾಪಂ ಭಕ್ತರೊಳ್ಪೇಳುತೆ ಸುಖಮೆ ಸೆದಂ ವೀರಶೈವಾಬ್ಧಿಚಂದ್ರಂ॥ ... ... ೩೮

ಕಂ ॥ ಘನತರಕೋಹೂರಾಚೊ । ಮ್ಮನಕಥೆಯಂ ಭಕ್ತಿಯಿಂದೆ ಪೇಳ್ದಾಲಿಪ ಸ ॥ ಜ್ಜನ ರೈಹಿಕಮಾಮುಷ್ಮಿಕ । ವಿನುತಸುಖಂಬಡೆವ ರೀಶಭಕ್ತರ ಕೃಪೆಯಿಂ॥ ೩೯

ರತೋದ್ಧತವೃತ್ತಂ ॥ ದಾಸಿಮಯ್ಯನ ಕಥಾಪ್ರಸಂಗಮಂ । ಲೇಸೆನಿಪ್ಪ ನಿಜಭಕ್ತಿಯಿಂದೆ ಕೇ ॥ ಳ್ದಾಸಮಸ್ತಮನುಜರ್ಗೆ ಮಾಳ್ಪ ನುಂ ।ಲ್ಲಾಸ ಮುನ್ನತಸುಖಂಗಳಂಶಿವಂ॥

ಲಲಿತಪದವೃತ್ತಂ॥ ಮಾಪಕೃತರೋಪಗಿರಿಚಾಪಪುರಲೋಪರಜನೀಪಸುಕಲಾಪಮತದೀಪ ನಿಹತಾನ್ಯಾಕ್ಷೇಪ ಹೃತಪಾಪ ಜಿತತಾಪ ಗತಲೇಪ ತತಚಾಪಲಮದೋಪಯುತಗೋಪರಿಪುನಾಶಾ ॥ ಭೂಪನಿವಹೋಪನತ ತಾಪಸಭವಾಪಹ ಸುಲಾಪ ಸುಜನೋಪಕರಣೋಪಹಿತ ವಿಶ್ವ ।ವ್ಯಾಪಕ ದಯಾಪರ ಸುಧೀಪದದುರಾಪ ಜಯ ಕೋಪಹೃತಭಾಪಸುತರೂಪ ಬಸವೇಶಾ ॥ ... ... ... ॥೪೧॥

---

ಜೈನ......ಲಾಪಮಂ— ಜೈನ- ಜಿನಭಕ್ತರ, ವ್ರತಾನ- ಸಮೂಹವೆಂಬ ; ಪ್ರಾಳೇಯ- ಹಿಮಕ್ಕೆ, ಉದ್ದಂಡ- ಕ್ರೂರನಾದ, ಚಂಡಪ್ರಭನಿಭ-ಸೂರ್ಯನಸದೃಶರಾದ, ಶರಣ- ಶಿವಶರಣರ, ಆಲಾಪಮಂ- ಮಾತನ್ನು,ಪಾಂಗಂ- ರೀತಿಯನ್ನು, ಸತ್ಯಾಳಾಪಂ- ಯಥಾರ್ಥವಚನವುಳ್ಳ. ... ॥೩೮॥

ಐಹಿಕಂ ಆಮುಷ್ಮಿಕವಿನುತಸುಖಂಬಡೆವರ್– ಇಹಪರವೆರಡರಲ್ಲೂ ಸೌಖ್ಯವನ್ನು ಪಡೆಯುವರು।೩೯॥

ಮಾಪ......ದೀಪ— ಮಾಪ- ವಿಷ್ಣುವೇ, ಕೃತ- ಮಾಡಲ್ಪಟ್ಟ, ರೋಪ- ಬಾಣವಾಗುಳ್ಳ, ಗಿರಿ- ಮೇರುಪರ್ವತವೇ, ಚಾಪ- ಧನುಸ್ಸಾಗುಳ್ಳ, ಪುರ- ತ್ರಿಪುರವನ್ನು, ಲೋಪ- ನಾಶಮಾಡಿದ, ರಜನೀಪ- ಚಂದ್ರನೇ, ಸುಕಲಾಪ- ಒಳ್ಳೆಯ ಆಭರಣವಾಗುಳ್ಳ ಶಿವನ, ಮತ- ಮತವನ್ನು, ದೀಪ- ಪ್ರಕಾಶಗೊಳಿಸುವ, ನಿಹತಾನ್ಯಾಕ್ಷೇಪ— ನಿಹತ- ನಾಶಮಾಡಲ್ಪಟ್ಟ, ಅನ್ಯ- ಶಿವಮತೇತರರ, ಆಕ್ಷೇಪ- ಕೋಟಿಗಳುಳ್ಳ, ಹೃತಪಾಪ- ಅಪಹರಿಸಲ್ಪಟ್ಟ ಪಾಪವುಳ್ಳ, ಜಿತತಾಪ- ಜಯಿಸಲ್ಪಟ್ಟ ಆಧ್ಯಾತ್ಮಿಕಾದಿತಾಪಗಳುಳ್ಳ, ಗತಲೇಪ-ಹೋದ ಮಾಯಾಲೇಪನವುಳ್ಳ, ತತ......ನಾಶಾ—ತತ- ವಿಸ್ತರಿಸಲ್ಪಟ್ಟ, ಚಾಪಲ- ಮನಶ್ಚಾಂಚಲ್ಯವುಳ್ಳ, ಮದ- ಗರ್ವದಿಂದ, ಉಪಯುತ-ಕೂಡಿದ, * ಗೋಪರಿಪು- ರಾಕ್ಷಸರ, ನಾಶ-ಹಾಳುಮಾಡುವಿಕೆಯುಳ್ಳ, ಭೂಪನಿವಹೋಪನತ- ರಾಜರ ಗುಂಪಿನಿಂದ ನಮಸ್ಕರಿಸಲ್ಪಟ್ಟ, ತಾಪಸಭವಾಪಹ- ಋಷಿಗಳ ಪುನರುತ್ಪತ್ತಿಯನ್ನು ನಾಶಮಾಡುವ, ಸುಲಾಪ- ಸವಿಮಾತಿನವಾದ ಮಾತುಳ್ಳ, ಸುಜನೋಪಕರಣೋಪಹಿತ- ಸತ್ಪುರುಷರಿಗೆ ಉಪಕಾರವಂ ಮಾಡುವದರಿಂದ ಆಪ್ತನಾದ, ವಿಶ್ವವ್ಯಾಪಕ- ಪ್ರಪಂಚವನ್ನಾವರಿಸಿದ, ದಯಾಪರ- ಕರುಣಾಸಕ್ತನಾದ, ಸುಧೀಪದದುರಾಪ-ವಿದ್ವಾಂಸರ ವಾಕ್ಯಕ್ಕೆ ಸಿಲುಕದೇಇರುವ, ಕೋಪ......ರೂಪ— ಕೋಪ- ಕ್ರೋಧದಿಂದ, ಹೃತ- ನಾಶಮಾಡಲ್ಪಟ್ಟ, † ಭಾಪಸುತ- ಯಮನುಳ್ಳ ಪರಶಿವನ, ರೂಪ- ಆಕಾರನಾದ, ಬಸವೇಶಾ ! ಜಯ. ... ... ... ॥೪೧॥

---

* (ಅವ) ಗೋಪ- ಸ್ವರ್ಗವನ್ನು ಪಾಲಿಸುವ ದೇವೇಂದ್ರನ, ರಿಪು- ಶತ್ರುಗಳಾದವರು ರಾಕ್ಷಸರು.

† ಭಾಪ- ಕಾಂತಿಗಳ್ಗಧಿಪತಿಯಾದ ಸೂರ್ಯನ, ಸುತ- ಮಗನು. ... ॥೪೧॥

ವಿಭ್ರಮನೃತ್ತೆ ॥ ಹರಿವಿರಿಂಚಿಸುರರಾಜಪೂಜಿತೇ । ಸುರುಚಿರಾರ್ಕರುಚಿರಾಜಿರಾಜಿತೇ ॥ ಸುರಪರಪ್ರಹರೆ ಪಾಶವರ್ಜಿತೇ । ಗಿರಿತನೂಜೆ ಜಯ ಶಂಕರಾನ್ವಿತೇ ೨೦

ಗದ್ಯ ॥ ಇದು ನಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗ ಪಾದಾರವಿಂದಪರಾಗಭಸಿತಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವ ಭಕ್ತಿವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಕೋಹೂರುಬೊಮ್ಮದಾಸದೇವವಾದವಿಜಯಕಥನಂ ಪಂಚತ್ರಿಂಶಾಶ್ವಾಸಂ ಪರಿಸಮಾಪ್ತಂ॥ ... ... *

ಪಂಚತ್ರಿಂಶಾಶ್ವಾಸಂ ಸಂಪೂರ್ಣಂ.

---

## ಶ್ರೀಃ

ಕೃಶಾನುರೇತಸೇ ಪರಬ್ರಹ್ಮಣೇ ನಮಃ.

## ಷಟ್ತ್ರಿಂಶಾಶ್ವಾಸಂ

### ಮಾರುಡಿಗೆನಾಚಾರ್ಯಕಥನಂ.

ಕಂ ॥ ಶ್ರೀಮಂಗಳಮಯಗೌರೀ । ಹೇಮಾಂಭೋಜಾಸ್ಯಸೌರಭಾಸ್ವಾದನಸು ॥ಪ್ರೇ

---

ಹರಿವಿರಿಂಚಿಸುರರಾಜಪೂಜಿತೇ— ಹರಿ- ವಿಷ್ಣು, ವಿರಿಂಚಿ- ಬ್ರಹ್ಮ, ಸುರರಾಜ- ದೇವೇಂದ್ರ; ಇವರುಗಳಿಂದ, ಪೂಜಿತೇ, ಸುರುಚಿರಾರ್ಕರುಚಿರಾಜಿರಾಜಿತೇ— ಸುರುಚಿರ- ಅತಿ ಮನೋಹರವಾದ, ಅರ್ಕ- ಸೂರ್ಯನ, ರುಚಿ- ಕಾಂತಿಯೋಪಾದಿಯಲ್ಲಿರುವ ಕಾಂತಿಗಳ, ರಾಜಿ- ಪಙ್ಕ್ತಿಯಿಂದ, ರಾಜಿತೇ- ಪ್ರಕಾಶಿಸುವ, ಸುರಪರಪ್ರಹರೆ— * ಸುರಪರ- ರಾಕ್ಷಸರನ್ನು, ಪ್ರಹರೆ- ಸಂಹರಿಸಿದ, ಪಾಶವರ್ಜಿತೇ-ತೃಷೆ ಶಂಕೆ ಭೀತಿ ಲಜ್ಜೆ ಜಿಗುಪ್ಸೆ ಕುಲ ಶೀಲ ಗರ್ವವೆಂಬ ಪಾಶದಿಂದ ಬಿಡಲ್ಪಟ್ಟ, ಶಂಕರಾನ್ವಿತೇ- ಶಿವನೊಡನೆ ಕೂಡಿದ, ಗಿರಿತನೂಜೆ-ಪರ್ವತಪುತ್ರಿಯೇ! ಜಯ. ... ... ॥೨೦॥

ಮೂವತ್ತೈದನೆಯ ಆಶ್ವಾಸವು ಸಂಪೂರ್ಣವು.

---

ಮೂವತ್ತಾರನೆಯ ಆಶ್ವಾಸಪ್ರಾರಂಭಃ

ಶ್ರೀ.....ಪ್ರೇಮಂ— ಶ್ರೀ- ಷಡ್ಗುಣೈಶ್ವರ್ಯಯುಕ್ತಳಾದ, ಮಂಗಳಮಯ- ಶುಭಸ್ವರೂಪಳಾದ, ಗೌರೀ- ಪಾರ್ವತಿಯ, ಹೇಮಾಂಭೋಜಾಸ್ಯ- ಮುಖವೆಂಬ ಚೆನ್ನದ ಕಮಲದ, ಸೌರಭ- ಪರಿಮಳವನ್ನು,

---

* (ಅವ) ಸುರ- ದೇವತೆಗಳ, ಪರ- ಶತ್ರುಗಳು. ... ... ॥೨೦॥

ಮಂ ಪ್ರೀಣಿತಶರಣ | ಸ್ತೋಮಮಂ ಪೊರೆಗೆಮ್ಮ ನೊಲ್ಮೆಯಿಂ ಶಿವಲಿಂಗಂ ೧

ಕಂ ॥ ಎಲೆಸವಣ ಕೇಳ್ವು ದಿನ್ನುಂ | ಖಲಜೈನರಭಂಗಮಂಸಮಂತೆಸಗಿದ ನಿ ॥ ಶ್ಚಲ ಭಕ್ತರಕಥೆಗಳನೆಂ | ದಲಘುತರಂ ರಾಮನಾಥವಿಭು ವಿಂತೆಂದಂ ... ೨

ಕಂ ॥ ಪೊಡವಿಯೊಳ್ ಪೆಸರ್ವಡೆದಮಾ | ರುಡಿಗೆಯೆನಿಪ್ಪೊಂದುಪ್ಪೊಳಲೊಳೊಪ್ಪುವ ನೋರ್ವಂ॥ ಕಡುಗಲಿನಾಚಯ್ಯಂ ದೃಢ। ಮೃಡಭಕ್ತಂ ಗುಪ್ತಭಕ್ತಿಯಿಂ ವರ್ತಿಸುತಂ॥

ಕಂ ॥ ಅನಗರದೊಳೆಸೆದಿರ್ಪ | ಜೈನ ರಸಂಖ್ಯಾತ ರವರ ಮಧ್ಯದೊಳಿರ್ಪಂ ॥ತಾನೋರ್ವನಲ್ಲಿ ಘೂಕವಿ| ತಾನದನಡುವೆಸೆವ ರಾಜಹಂಸನ ತೆರದಿಂ ॥ ... ೪

ವ ॥ ಅಘನಮನಿಮಾ ನಿಂತೆಸೆವಿನ ಮಾಪ್ಪೊಳಲ ಸಾಸಿರದೇಳ್ನೂರುಬಸದಿಗಳೆಂಬ ಸಿಹ್ಮಗುಹೆಗಳ್ಗೆ ಶರಭಗುಹೆಯಿರ್ಪಂತೊಂದುಶಿವಗೃಹ ಮಿರ್ದುದದಂ ಕಂಡು ಜೈನ ರಸೂಯೆಗೊಂಡೀಜಿನಭವನಂಗಳ ನಡುವೆ ಶಿವಭವನ ಮಿರಲ್ಸಲ್ಲದೆಂದಾಗುಡಿಯ ಗೋಪುರಮಂ ಕೆಡಪಿ ತಮ್ಮಡಿಯುಂ ಜಡಿಯ ಲೊಡ ನದೆಲ್ಲಮಂ ನಾಚಯ್ಯಂ ಗರುಪೆ ಮುಳಿಸೇರಿ ಮಾರಿ ಪತ್ತು ಜಿನಮೊಳಗೀಶಿವಾಪರಾಧಿಗಳೆನಿಪ ಜೈನರೆಲ್ಲರುಮಂ ತಕ್ಕುಗೆಡಿಸಿ ಸೊರ್ಕಂ ಮುರಿದು ವಿಶಸನಂಗೆಯ್ದಲ್ಲದಾಹಾರಂಗೊಳ್ಳೆ ನಂತೆಗೆಯ್ವ ನನ್ನೆವರಂ ಶಿವಂ ಗುಡಿನಂತೆ ಪೂಜೆಗೆಯ್ಯದಿರೆಂದಾಜ್ಞಾಪಿಸಿ ಪೊಳಲಂ ಪೊರಮಟ್ಟು ಪತ್ತುದಿನದೊಳಗೆ ಪನ್ನಿರ್ಛಾಸಿರಂ ವೀರಭಕ್ತರು ನೆರಪಿ ಮುಗು ಳ್ದುಪುರಮ ನವಗೂಡಿ ಪುಗುತಪ್ಪಾಗಳ್॥ * * *

ಚಂ॥ ಮೊಳಗುವಬೀರಮದ್ದಳೆಯ ಭೇರಿಯ ಶಂಖದ ಡಿಂಡಿಮಾಘಕಾ। ಹಳಿಯಘನಸ್ವನಂ ದಶದಿಗಂತಕೆ ಧೀಂಕಿಡೆ ನೂಂಕಿ ವೀರರೊ॥ಬ್ಬುಳಿ ಕರವಾಳ ಕಾಂತಿ ಖರರೋಚಿಯನಾಣ್ಚಿಸೆ ಜೈನ ರೆಂಬ ಪೆ| ರ್ಮೆಳೆಗೆ ದವಾಗ್ನಿಯುಂತೆಸೆದು ಕೂಡೊಡನೇಳ್ತರೆ ವೀರನಾಚಯಂ॥

---

ಆಸ್ವಾದನ- ಸ್ವೀಕರಿಸುವದರಲ್ಲಿ, ಸುಪ್ರೇಮಂ- ಒಳ್ಳೆಯ ಅನುರಾಗವುಳ್ಳ, ಪ್ರೀಣಿತಶರಣಸ್ತೋಮಮಂ- ಸಂತೋಷಪಡಿಸಲ್ಪಟ್ಟ ಶಿವಶರಣರ ಗುಂಪುಳ್ಳ, ಶಿವಲಿಂಗಂ, ಎಮ್ಮಂ, ಒಲ್ಮೆಯಿಂ, ಪೊರೆಗೆ. ... ॥೧॥

ಸಮಂತು- ಚೆನ್ನಾಗಿ, ಅಲಘುತರಂ- ಅತ್ಯಧಿಕನಾದ. ... ... ॥೨॥

ಕಡುಗಲಿ- ಬಹು ಸಮರ್ಥನಾದ, ದೃಢಮೃಡಭಕ್ತಂ- ನಿಶ್ಚಂಚಲವಾಗಿ ಶಿವಭಕ್ತನಾದ, ಗುಪ್ತಭಕ್ತಿಯಿಂ- ಗುಟ್ಟಾದ ಭಕ್ತಿಯಿಂದ. ... ... ... ॥೩॥

ಅಸಂಖ್ಯಾತರ್- ಎಣಿಸಲಾಗದೇ ಇರುವವರು, ಘೂಕವಿತಾನದ- ಗೂಬೆಗಳ ಗುಂಪಿನ. ॥೪॥

ಎಸೆವಿನಂ- ಪ್ರಕಾಶಿಸುತ್ತಿರುವಲ್ಲಿ, ಬಸದಿಗಳ್- ಜಿನಸ್ಥಾನಗಳು, ಸಿಹ್ಮಗುಹೆಗಳ್ಗೆ- ಸಿಹ್ಮದ ಗವಿಗಳಿಗೆ ಶರಭಗುಹೆ-ಎಂಟುಕಾಲುಗಳುಳ್ಳ ಮೃಗದ ಗವಿಯು, ತಮ್ಮಡಿಯುಂ- ಪೂಜಾರಿಯನ್ನು, ಜಡಿಯಲ್-ಭಯಪಡಿಸಲು, ತಕ್ಕುಗೆಡಿಸಿ- ಶೌರ್ಯವಂ ಹಾಳುಮಾಡಿ, ಸೊರ್ಕಂ- ಗರ್ವವನ್ನು, ವಿಶಸನಂಗೆಯ್ದಲ್ಲದೆ- ನಾಶಮಾಡಿಧಹೊರ್ತು, ಅನ್ನೆವರಂ- ಅದುವರಿವಿಗೂ, ಪೂಜೆಗೆಯ್ಯದೆ- ಅರ್ಚನೆಯಂಮಾಡದೆ, ಪನ್ನಿರ್ಛಾಸಿರಂ- ಹನ್ನೆರಡುಸಾವಿರ, ಮಗುಳ್ದು- ಪುನಃ. * * * * * * * *

ಬೀರಮದ್ದಳೆಯ- ವೀರತ್ವಸೂಚಕವಾದ ತಮಟೆಯ, ಡಿಂಡಿಮಾಘಕಾಹಳೆಯ—ಡಿಂಡಿಮ-ಡಮರುಗಳ, ಓಘ- ಸಮೂಹದ, ಕಾಹಳೆಯ- ಕೊಂಬಿನ, ಘನಸ್ವನಂ- ದೊಡ್ಡದನಿ, ದಶದಿಗಂತಕೆ-ಹತ್ತು ದಿಕ್ಕುಗಳ ಕೊನೆಗೆ, ಧೀಂಕಿಡೆ-ದುಮುಕಲು, ಒಬ್ಬುಳಿ-ಗುಂಪು, ಕರವಾಳ-ಕತ್ತಿಯ, ಖರರೋಚಿಯ-ಸೂರ್ಯನನ್ನು, ನಾಣ್ಚಿಸೆ-ಲಜ್ಜೆಗೊಳ್ಳುವಂತೆ ಮಾಡಲು, ಪೆರ್ಮೆಳೆಗೆ-ದೊಡ್ಡಪೊದರೆಗೆ, ದವಾಗ್ನಿಯಂತೆ-ಕಾಳ್ಕಿಚ್ಚಿನಹಾಗೆ. ॥೫॥

ಮತ್ತೀ ॥ ಪುಗುತಂದು ಪೊಳಲಂ ಪರಾಕ್ರಮದೆ ಮೇಣಾ ವಾರ್ತೆಗೇಳ್ದಲ್ಲಿ ದೋ, ಷಿಗಳಾದಾಸವಣರ್ಕಳಳ್ಕದೆ ತಾವುಂ ಯುದ್ಧಸನ್ನದ್ಧರಾ ॥ ಗಿ ಗಜಾಶ್ವೋರುವರೂಢ ವೀರಭಟಸೈನ್ಯಂಗೂಡಿ ಕುಂತಾಸಿಚ | ಕ್ರಗದಾದ್ಯಾಯುಧಮಾಂತು ಮಾರ್ನಡೆದು ಬೀಡಂಬಿಟ್ಟರಾಟೋಪದಿಂ ... ... ... ೬

ವ ॥ ಅಂತು ಬಿಟ್ಟ ಮಾರ್ಬಲಮಂ ಕಂಡು ವೀರಭಕ್ತಬಲದೊಳ್ಪದಿಮೂವರ್ಧೀರ ನಿಶ್ಶಂಕಭಕ್ತರ್ಗೆರಗಿ ಕೃತಾಂಜಲಿಗಳಾಗಿ ... ... ೭

ಚಂ ॥ ಬಡಸವಣರ್ಕಳಂ ಸದೆಯುದಕ್ಕಿನಿತೇಕೆ ನೆಗಳ್ತೆ ತೊಟ್ಟನೊ | ರ್ಪಿಡಿತೃಣಮಂ ಸುಡಲ್ಕೆ ವಿಲಯಾನಲನೊಟ್ಟಜೆ ವೇಳ್ಕುಮೇ ಕರು ॥ ತ್ತೊಡನೆ ಪಳಂಚಿಪೊಯ್ಯುದ್ಧರಣಭೂತಗಣಂ ತಣಿವಂತೆ ಕೊಲ್ವೆವೀ | ಪಡೆಯನೊರಲ್ದು ನಿಮ್ಮಡಿಗಳೀಕ್ಷಿಸುತಿರ್ಕೆ ಮದೀಯಶೌರ್ಯಮಂ ॥ ... ... ... ೭

ವ॥ ಎಂದು ನಾಚಯ್ಯಂಬೆರಸು ತೇರಸವೀರಭಕ್ತರ್ಮಿಗುಳ್ದು ಮಣಿದವರನುಜ್ಞೆಗೊಂಡು ಇದಿರೊಡ್ಡಿ ಮಾಮಸಕಂ ಮಸಗಿ ತಾಗಿದ ಮಾರ್ಪಡೆಯಾಟೋಪಮಂ ಕಂಡು ಕೃಪಾಣಮಂ ಜಡಿದು ಕುರುಳ್ಚಿ ನಿಜಭುಜಸ್ಫಾಲನಂಗೆಯ್ದಬ್ಬರಿಸಿ ಬೊಬ್ಬೆಗೊಟ್ಟೊಳಪೊಕ್ಕು ಮಿಕ್ಕು ಸಮರಸಮುತ್ಸಾಹಂದಳೆದು ॥ * * * * * * *

ಚಂ ॥ ಇರಿದರಿದಿರ್ಚಿದರ್ಕಡಿದರಿಕ್ಕಿದರಣ್ಮಿದರೆಚ್ಚರಾರ್ದರ್ಬೊ | ಬ್ಬಿರಿದರಡ

---

ಪುಗುತಂದಂ- ಪ್ರವೇಶಿಸಿದನು, ಅಳ್ಕದೆ- ಅಸೂಯೆಯಿಂದ, ತಾವುಂ-ತಾವೂಕೂಡ, ಗಜಾಶ್ವೋರುವರೂಢವೀರಭಟಸೈನ್ಯಂಗೂಡಿ— ಗಜ- ಆನೆ, ಅಶ್ವ- ಕುದುರೆ, ಉರುವರೂಢ- ಉತ್ಕೃಷ್ಟವಾದ ತೇರು, ವೀರಭಟ- ಪರಾಕ್ರಮಶಾಲಿಗಳಾದ ಕಾಲಾಳುಗಳೆಂಬ, ಸೈನ್ಯಂಗೂಡಿ-ಸೇನಾಸಮೇತರಾಗಿ, ಕುಂತಾಸಿಚಕ್ರಗದಾದ್ಯಾಯುಧಮಾಂತು—ಕುಂತ, ಅಸಿ- ಕತ್ತಿ, ಚಕ್ರ, ಗದಾ, ಇವುಗಳೇ, ಆದಿ- ಮೊದಲಾದ, ಆಯುಧಮಾಂತು- ಆಯುಧಗಳಂ ಧರಿಸಿ, ಮಾರ್ನಡೆದು- ಪ್ರತಿಯಾಗಿ ಹೋಗಿ, ಆಟೋಪದಿಂ- ಅತಿಶಯದಿಂದ, ಬೀಡಂಬಿಟ್ಟರ್- ಸೈನ್ಯವಂ ನಿಲ್ಲಿಸಿದರು. ... ... ... ||೬||

ಮಾರ್ಬಲಮಂ- ಪ್ರತಿಸೈನ್ಯವನ್ನು, ಪದಿಮೂವರ್- ಹದಿಮೂರುಮಂದಿ. * * *

ಸದೆಯುದಕ್ಕೆ- ಕೊಲ್ಲುವದಕ್ಕೆ, ಇನಿತುನೆಗಳ್ತೆ- ಇಷ್ಟು ಉಜ್ಜುಗವು, ತೊಟ್ಟನೆ- ಜಾಗ್ರತೆಯಾಗಿ, ಒರ್ಪಿಡಿತೃಣಮಂ- ಒಂದುಹಿಡಿಯ ಹುಲ್ಲನ್ನು, ವಿ[illegible]ಯಾನಲನ- ಪ್ರಳಯಕಾಲದ ಬೆಂಕಿಯ, ಒಟ್ಟಜೆವೇಳ್ಕುಮೇ- ಪರಾಕ್ರಮವು ಬೇಕೆ ? ಕರುತ್ತು- ಕೋಪಗೊಂಡು, ಪಳಂಚಿ- ಸಂಘಟಿಸಿ, ರಣಭೂತಗಣಂ- ಯುದ್ಧಕಾಲದಲ್ಲಿ ಬರುವ ಪಿಶಾಚಗಳ ಸಮೂಹವು, ತಣಿವಂತೆ- ತೃಪ್ತಿಪಡುವಹಾಗೆ, ಈಪಡೆಯಂ- ಈ ಸೈನ್ಯವನ್ನು, ಒರಲ್ದು- ಪ್ರೀತಿಸಿ, ಮದೀಯಶೌರ್ಯಮಂ- ನನ್ನ ಪರಾಕ್ರಮವನ್ನು, ಅಡಿಗಳ್- ಪಾದಗಳು, ಈಕ್ಷಿಸುತೆ- ನೋಡುತ್ತಾ, ಇರ್ಕೆ-ಇರಲಿ. ... ... ... ... ||೭||

ನಾಚಯ್ಯಂಬೆರಸು- ನಾಚಯ್ಯನೊಡನೆಕೂಡಿ, ತೇರಸವೀರಭಕ್ತರ್- ಹದಿಮೂರುಮಂದಿ ಶೂರಭಕ್ತರು, ಇದಿರೊಡ್ಡಿ- ಇದಿರಾಗಿಬಂದಿ, ಮಾಮಸಕಂಮಸಗಿ- ಕೋಪಾತಿಶಯವಂ ಹೊಂದಿ, ತಾಗಿದ- ಸಂಘಟಿಸಿದ, ಮಾರ್ಪಡೆಯ- ಪ್ರತಿಸೈನ್ಯದ, ಕೃಪಾಣಮಂ- ಕತ್ತಿಯನ್ನು, ಕುರುಳ್ಚಿ- ಅಳ್ಳಾಡಿಸಿ, ಅಬ್ಬರಿಸಿ- ಗಟ್ಟಿಯಾಗಿ, ಬೊಬ್ಬೆಗೊಟ್ಟು- ಕೂಗಿ, ಸಮರಸಮುತ್ಸಾಹಂದಳೆದು-ಯುದ್ಧದಲ್ಲಿ ಕುತೂಹಲವಂಹೊಂದಿ.

ಆಹವದೊಳ್- ಯುದ್ಧದಲ್ಲಿ, ಇರಿದರ್- ಕತ್ತರಿಸಿದರು, ಇದಿರ್ಚಿದರ್- ಎದುರಾದರು, ಇಕ್ಕಿದರ್-

ರ್ತು ಸೀಳ್ದ ರರೆಯುಟ್ಟದ ರೊಟ್ಟದ ರಟ್ಟೆಯಂ ಕೊರ ॥ ಲ್ದರಿದ ರಿದಿರ್ಚಿದ ಸ್ರದೆದ ರಿ ಟ್ಟ ರುರುಳ್ಚಿದ ರೊತ್ತಿ ತತ್ತರಂ । ದರಿದ ರಡುಂಗೆ ಪೊಯ್ದರರಿಸೈನ್ಯಮ ನಾಹವದೊಳ್ಮ ಹಾಭಟರ್ ॥ ... .. ... ೮

ಕಂ ॥ ಇಡಿ ದಡಸಿ ಕವಿದ ಜೈನರ । ಪಡೆಯುಂ ಕಡಿಕಡಿದು ಸೀಳ್ದು ಪಡಲಿಡಿಸಿ ಜ ಯಂ ॥ ಬತೆ ದುಳದರ ನೋಡಿಸಿ ತಳಿ । ವಿಡಿ ದೆಡೆಗಯ್ಯೊಳ್ಪುರುಳ್ಚುತಂ ಕರವಾಳಂ ॥ ೯

ಕಂ ॥ ನತೆತಂದಂ ನಾಚಯ್ಯಂ । ನಡೆತರೆ ತೇರಸಗಣಂಗ ಳರಿಗಳ ಶಿರಮಂ ॥ ಪಿಡಿ ದೊಡನೆ ವೀರರಸ ಮೊ । ಗ್ಗುಡಿಸಿದವೋಲ್ ನೋಳ್ಪ ಶರಣರೆಡೆ ಗುತ್ತನೆವಡಿಂ ... ೧೦

ವ ॥ ಅಂತೇಳ್ತಂ ದವರ್ಗೂಡಿ ಕರಚರಣಂಗಳ್ಗೆ ಪೊಡಮಟ್ಟು ತತ್ಕರುಣಾರಸಕ್ಕೆ ಪಾತ್ರ ನಾಗಿ ಸಡಗರದಿಂ ಗಣಂಗ ಳೊಡವರೆ ಮಾರುಡಿಗೆಪೊಳಲಂ ಪೊಕ್ಕು ಬಸದಿಗಳ ನೊ ಳಪೊಕ್ಕು ಜಿನಪ್ರತಿಮೆಗಳಂ ಕೀಳ್ತು ಬಿಸುಟು ಮುನ್ನಮೆ ತಾಂ ಬಂಡಿಯೊಳ್ತಂದ ಸಾ ಸಿರದೇಳ್ನೂರುಲಿಂಗಂಗಳ ನಲ್ಲಲ್ಲಿಗೊಂದೊಂದಂ ಪ್ರತಿಷ್ಠೆಗೆಯ್ದು ಪೂಜಾವಿಧಿಗಳಂ ನಿ ಯೋಜಿಸಿ ಪೂರ್ವಶಿವಾಗಾರಕ್ಕೆ ತಳ ರ್ದಂದಿನಂತೆ ಗುಡಿಗೋಪುರಮಂ ನೆಗಳ್ಚಿ ಪೂಜೆಗೆ ಯ್ದು ಸತ್ಯಸಂಗರಂ ನಿಜಗೃಹಕ್ಕೆಯ್ತಂದು ಬಂದ ಗಣಸಂದೋಹಮ ನರ್ಚಿಸಿ ತತ್ಪ್ರ ಸಾದಸಂತುಷ್ಟ ನಾಗಿರ್ಪಾಗಳ್ ॥ * * * * * * *

ಮತ್ತಂ ॥ ಮೃಡನಾಗಾರಮ ನೊತ್ತಿ ನೂಂಕೆ ಸವಣ ರ್ಜೈನರಂ ಸೀಳ್ದು ತ । ಮ್ಮಡಿಗೆಂದಂತೆ ನಿಜಪ್ರತಿಜ್ಞೆ ಸಲೆ ಜೈನಾಗಾರಮಂ ಕೀಳ್ತು ನು ॥ ಗ್ಗೊಡೆ ದಾರ್ಪಿಂ ಜಿ ನರಂ ಪ್ರತಿಷ್ಠಿಸಿ ಮಹಾಲಿಂಗಂಗಳಂ ಬಿಜ್ಜಸಂ । ಬಡೆದಂ ಧಾತ್ರಿಯೊ ಳೆಂದೊ ಡೇಪೊಗ ಳ್ವುದೋ ನಾಚಯ್ಯ ನಾಚಾರಮಂ ... ... ೧೧

ಕಂ ॥ ಎಂದೆಲ್ಲ ಪೊಗಳುತ್ತಿರೆ । ಮುಂದಿರ್ದಾ ವೀರತೇರಸರ್ಗೂಡಿ ಮಹಾ ॥ ನಂದಂ ಮಿಗೆ ನಾಚಯ್ಯಂ । ಕುಂದದತಿಪ್ರಕಟಭಕ್ತಿಯಿಂ ದೆಸೆದಿರ್ದ್ದಂ ॥ ... ೧೨

---

ಹೊಡೆವರು, ಅಣ್ಮಿದರ್- ಪರಾಕ್ರಮವಿಶಿಷ್ಟರಾದರು, ಎಚ್ಚರ್- ಬಾಣಪ್ರಯೋಗವಂ ಮಾಡಿದರು, ಆ ರ್ದು- ಗಟ್ಟಿಯಾಗಿಕೂಗಿ, ಅಡರ್ತು- ಹತ್ತಿ, ಅರೆಯುಟ್ಟದರ್- ಅರ್ಧಭಾಗ ಹಿಂದಕ್ಕೆ ಓಡಿಸಿದರು, ಅಟ್ಟೆ ಯಂ- ಮುಂಡಗಳನ್ನು, ಒಟ್ಟಿದರ್- ರಾಸಿಹಾಕಿದರು, ಕೊರಲ್ದರಿದರ್- ಕತ್ತನ್ನು ಕತ್ತರಿಸಿದರು, ಸದೆದ ರ್- ಚೂರ್ಣಮಾಡಿದರು, ಉರುಳ್ಚಿದರ್- ಉರುಳಿಸಿದರು, ತತ್ತರಂದರಿದರ್- ನಾನಾವಿಧವಾಗಿ ಕತ್ತರಿಸಿದ ರು, ಅಡಂಗೆ- ಔತುಕೊಳ್ಳುವಹಾಗೆ, ಪೊಯ್ದರ್- ಹೊಡೆದರು. ... ... ॥೮॥

ಇಡಿದು- ತುಂಬಿ, ಅಡಸಿ- ಸೇರಿ, ಕವಿದ- ಆಭಾದಿಸಿದ, ಪಡೆಯಂ- ಸೈನ್ಯವನ್ನು, ಪಡಲಿಡಿಸಿ-ಬೀಳಿಸಿ. ವೀರರಸಂ- ಶೌರ್ಯವು, ಬ್ಗುಡಿಸಿದವೋಲ್- ಗುಂಪಾದಹಾಗೆ. ... ॥೯॥

ಕರಚರಣಂಗಳ್ಗೆ-ಹಸ್ತಪಾದಗಳಿಗೆ, ಪೊಡಮಟ್ಟು ನಮಸ್ಕರಿಸಿ, ಒಡವರೆ- ಸಂಗಡಬರಲು, ತಳರ್ದು- ಹೊರಟು, ಸತ್ಯಸಂಗರಂ- ಯಥಾರ್ಥಪ್ರತಿಜ್ಞೆಯುಳ್ಳ ನಾಚಯ್ಯನು. * * * *

ಆಗಾರಮಂ- ಮನೆಯನ್ನು, ಸಲೆ- ಸಲ್ಲಲು, ನುಗ್ಗೊಡೆದು- ನುಚ್ಚುಮಾಡಿ, ಆರ್ಪಿಂ- ಶೌರ್ಯದಿಂ ದ, ಬೆಳ್ಪುಗಂಬಡೆದಂ- ಶುಭ್ರವಾದ ಕೀರ್ತಿಯನ್ನು ಹೊಂದಿದನು. ... ॥೧೧॥

ಆವೀರತೇರಸರ್ಗೂಡಿ- ಆ ಪರಾಕ್ರಮಶಾಲಿಗಳಾದ ಹದಿಮೂರುಮಂದಿಯೊಡನೆ ಸೇರಿ, ಅತಿಪ್ರಕಟಭ ಕ್ತಿಯಿಂದೆ- ಬಹು ಪ್ರಸಿದ್ಧವಾದ ಭಕ್ತಿಯಿಂದ. ... ... ... ॥೧೨॥

ಕಂ ‖ ಇದು ಸಾರೆ ದೂರ ಮಲ್ತು । ರ್ವಿದ ಜಿನಪುರಿಯಂ ನೆಗಳ್ಚನೇ ಶಿವಪುರಿಯಂ ‖ ವದೆದಾನಾಚಯ್ಯಂ ಜಸ । ದೊದವಾಳ್ದಿ ಸದಿರರೆ ವೀರಶೇರಸ ರಿಳೆಯೊಳ್ ‖ ೧೩

ಕಂ ‖ ನೀಂ ದೇವ ನೆಂದು ಭಜಿಪ ಜಿ । ನಂ ದೇವನೆ ದೇವ ನಾದೊ ಡಿಂತಕ್ಕುಮೆ ಪೇ ‖ ಳ್ಮಂದಮತಿ ಕೇಳ್ವುದಿನ್ನುಂ । ಕುಂದದೆ ಭವದಿಷ್ಟದೈವ ಕಾದು ಪಟಳಮಂ ‖ ೧೪

ಕಂ ‖ ನೆಲವೆಣ್ಣ ಭಾಗ್ಯಲಕ್ಷ್ಮೀ । ನಿಲಯ ಮಿದೆಂಬಂತೆ ಸಂಪದಂಬಡೆ ದೆಸೆಗುಂ ‖ ಪುಲಿಗೆರೆಪೊಳಲದರೊಳ್ನಿ । ಳ್ಚಲಭಕ್ತಂ ಸೋಮನಾಥ ನೆಂಬವ ನಿರ್ಪ್ಪಂ ‖ ... ೧೫

ವ ‖ ಆಭಕ್ತಂ ದಿನದಿನದ ಮೂರುಂಪೊತ್ತಿನೊಳ್ ಲಿಂಗಸ್ಪರ್ಶನಪೂರ್ವಕನಮಸ್ಕಾರಮಂ ತನಗೆ ನಿಯತವ್ರತ ಮಾಗೆ ತಳೆದೆಸಗುತ್ತ ಮಿರ್ದ್ದೊಂದು ದಿವಸಂ ‖ * * *

ಮ ‖ ಸ್ರ ‖ ಕಡುಪಿಂ ಕಣ್ಬೇನೆತಿಬ್ಬಂ ಮಸಗೆ ತಡಕುತಂ ಕಾಣ ದೇನೊಂದುಮಂ ಕೋ । ಲ್ವಿಡಿ ದೋರಂತೂರುತಂ ಮೆಲ್ಲನೆ ಶಿವನಿಳಯಕ್ಕೆಂದು ಬರ್ಪಲ್ಲಿ ಜೈನ ‖ ಮೃಡಗೇಹಂ ದೋರ್ಪೆ ವಿತ್ತಲ್ ನಡೆ ಯೆನುತಣಕಂಗೆಯ್ದು ಕೊಂಡೊಯ್ದು ಬೇಗಾ । ಗಡೆ ಚೈತ್ಯಾಗಾರಗರ್ಭಂಬುಗಿಸಿ ಜಿನಶಿರೋಭಾಗಮಂ ಮುಟ್ಟಿಸುತ್ತಂ ‖ ... ೧೬

ಕಂ ‖ ಪೊಡಮಡು ನೀನೆಂಬುದು ಮಾ । ಮೃಡಭಕ್ತಂ ನಂಬಿ ಲಿಂಗಮೆಂದೆರಗೆ ಖಲ ‖ ರ್ಕಡುನಗುತೆ ನಿನ್ನಭೀಷ್ಟಂ । ಗುಡು ಗೀಜಿನನಾಥ ನೆಂದವ ರ್ದರಸ ಲೊಡಂ ‖ ... ೧೭

ಚಂ ‖ ಗುಡುಗುಡಿಸುತ್ತೆ ಮೀಸೆ ಕುಣಿಯುತ್ತಿರೆ ಗುಟಡೆ ಪುರ್ಬ್ಬ ಕಾಯ್ಪಿನಿಂ । ಪಡಪಡ ಶಂಭುಗೆತ್ತಿದ ಕರಾಂಬುಜಮುಂ ಜಿನ ನೆಂಬ ಸಿನ್ನ ಪೆ ‖ ರ್ಬಡಿಕೆಯ ಜೊಂಪಗೆತ್ತ ವೆನೆ ಸರ್ವಜಗತ್ಪತಿಯುಪ್ಪ ಶಂಕರಂ । ಗೊಡ ನೆರಗಿರ್ದ ನಲ್ಲಿ ಶಿವಮೂರ್ತಿಯ ನಿಲ್ಲಿಯೆ ತೋರ್ಪೆ ನೀಕ್ಷಣಂ ‖ ... ... ... ೧೮

---

ಸಾರೆ- ಹೋದರೆ, ಜಸದ- ಕೀರ್ತಿಯ, ಒದವಾಳ್ದು- ಪ್ರಾಪ್ತಿಯುಂಹೊಂದಿ. ... ‖೧೩‖

ಭವದಿಷ್ಟದೈವಕೆ-ನಿನಗೆ ಪ್ರಿಯವಾಗಿರುವ ಜಿನದೇವರಿಗೆ, ಉಪಟಳಮಂ-ತೊಂದರೆಯನ್ನು. ‖೧೪‖

ಪುಲಿಗೆರೆ ಸೋಮನಾಥನ ಕಥೆ.

ನೆಲವೆಣ್ಣ- ಭೂಕಾಂತೆಯ, ಭಾಗ್ಯಲಕ್ಷ್ಮೀನಿಲಯಂ-ಸೌಭಾಗ್ಯಸಂಪತ್ತಿಗಾಶ್ರಯವಾದದ್ದು. ‖೧೫‖

ನಿಯತವ್ರತಂ- ನಿಶ್ಚಿತವಾದ ನಿಯಮವು, ಲಿಂಗಸ್ಪರ್ಶನಪೂರ್ವಕನಮಸ್ಕಾರಮಂ- ಲಿಂಗವನ್ನು ಮುಟ್ಟಿ ಅಡ್ಡಬೀಳುವದನ್ನು, * * * * * * *

ಕಣ್ಬೇನೆ- ಕಣ್ಣಿನ ರೋಗವು, ತಿಬ್ಬಂ-ಶೀಘ್ರವಾಗಿ, ಮಸಗೆ- ಅತಿಶಯವಾಗಲು, ತಡಕುತೆ- ಹುಡುಕುತ್ತಾ, ಓರಂತೆ- ಚೆನ್ನಾಗಿ, ಮೃಡಗೇಹಂದೋರ್ಪೆವ್- ಶಿವದೇವಸ್ಥಾನವನ್ನು ತೋರಿಸುವೆವು, ಅಣಕಂಗೆಯ್ದು- ಪರಿಹಾಸವಮಾಡಿ, ಆಗಡೆ- ಕೂಡಲೇ, ಚೈತ್ಯಾಗಾರಗರ್ಭಂಬುಗಿಸಿ— ಚೈತ್ಯಾಗಾರ- ಜೈನಸನ್ಯಾಸಿಗಳ ಮನೆಯ, ಗರ್ಭಂಬುಗಿಸಿ- ಒಳಭಾಗವಂ ಪ್ರವೇಶಮಾಡಿಸಿ, ಜಿನಶಿರೋಭಾಗಮಂ— ಜಿನದೇವರ ತಲೆಯ ಪ್ರದೇಶವನ್ನು. ... ... ... ‖೧೬‖

ಪೊಡಮಡು— ನಮಸ್ಕರಿಸು, ಖಲರ್- ನೀಚರಾದ ಜೈನರು, ಕಡುನಗುತೆ- ಬಹಳವಾಗಿ ನಗುತ್ತಾ, ಅಭೀಷ್ಟಂಗುಡುಗೆ- ಇಷ್ಟಫಲವನ್ನುಂಟುಮಾಡಲಿ, ಹರಸಲ್- ಆಶೀರ್ವಾದಮಾಡಲು. ‖೧೭‖

ಗುಡುಗುಡಿಸುತ್ತೆ- ಕೋಪೋದ್ರೇಕವಂ ಹೊಂದುತ್ತಾ, ಕಾಯ್ಪಿನಿಂ- ಕೋಪದಿಂದ, ಪಡಪಡ- ಎಲಲಾ ! ಪೆರ್ಬಡಿಕೆಯ- ಹೇಸಿಗೆಯ. ... ... ‖೧೮‖

ವ॥ ಎಂದಣ್ಕಿ ನುಡಿದು ಮುಂಬರಿದು ಮುಸುಂಕ ನುಗಿದು ಕೋಪಾರುಣನಿಜನೇತ್ರಂಗಳಂ ಬಿರ್‍ನನೆ ಬಿಟ್ಟು ನೋಡಲೊಡನೆ * * * * * *

ಚಂ॥ ಛಟಛಟನಿಸ್ವನಂ ನಿಮಿರೆ ಸಿಕ್ಕನೆ ಸೀಳ್ದು ಜಿನಾಂಗ ಮೆಲ್ಲಮುಂ। ಪಟಪಟರಾವದಿಂ ಸಿಡಿದು ಬೀಳ್ವಿನ ಮಾಜಿಸ ನಾಂಗಮಧ್ಯದೊ॥ ಳ್ಪಟುನಿಟಲಾಂಬಕಂ ನೆಲಸಿ ನಿಂದ ನುದಗ್ರವೃಷೇಂದ್ರವಾಹನಂ। ಕುಟಿಲಜಟಾಧರಂ ತಿಸುಳಿ ಸೋಮ ನಮಾಯ ನಮೇಯವೈಭವಂ॥ ... ... ... ॥೯೯॥

ವ॥ ಇಂತು ನಿಜಭಕ್ತಕೃತಪ್ರತಿಜ್ಞಾಪಾಲಕಂ ಸೋಮನಾಥ ನಾಪುಲಿಗೆರೆಪೊಳಲ ಸುರಹೊನ್ನೆಬಸದಿಯೊಳ್ನೆಗಳ್ತೆವೆತ್ತು ನಿಂದು॥ * * * * *

ಕಂ॥ ಅಣಕಮ ನುಡುಗಿಸಿ ಜಿನನುಂ। ಕ್ಷಣದೊಳ್ಸೀಳ್ದಲ್ಲಿ ನೆಲಸಿ ಭಕ್ತನ ಪೊರೆದಂ॥ ಗುಣವಾರಿಧಿ ಮುಂಗೈಳಂ। ಕಣಕೇಂ ಕನ್ನಡಿಯೆ ಸಾಕ್ಷಿ ಯಾಗಿದೆ ಧರೆಯೊಳ್॥ ॥೧೦॥

ವ॥ ಇನ್ನುಂ ಕೇಳ್ವು ದೆಂತೆನೆ॥ * * * * *

ಕಂ॥ ಪರಿವಳಿಗೆ ಯೆಂಬ ವಿಳಸ। ತ್ಪುರದೊ ಳ್ವೈಜಾಂಬೆ ಯೆಂಬ ಪೆಸರಾಂತು ಕರಂ॥ ಪರಿರಂಜಿಸಿರ್ಪ ಳಭವನ। ವರಭಕ್ತೆ ಶಿವಾಂಘ್ರಿಗುಪ್ತಭಜನದಿ ನೋರ್ವಳ್॥೧೧॥

ಕಂ॥ ಜಿನಭಕ್ತನೇಮಿಸೆಟ್ಟಿಯೆ। ತನಗಧಿಪತಿ ಯೆನಿಪ ನಲ್ಲಿ ಬಾಂಧವ ರೆಲ್ಲರ್॥ ಜಿನಭಕ್ತರಾಗೆ ಪಿರಿದುಂ। ಮನದುಮ್ಮಳದಿಂದೆ ವೈಜಕಾಂಬಿಕೆ ಯಿರ್ದ್ದಳ್॥ ... ॥೧೨॥

ವ॥ ಆಗ ಳೊಂದುದಿನ ನಾನೇಮಿಸೆಟ್ಟಿ ನಿಜಗುರುಗ ಳಪ್ಪ ಪಿರಿಯ ಮಲಧಾರಿಗ

---

ಅಣ್ಕಿ- ಪರಾಕ್ರಮವಿಶಿಷ್ಟನಾಗಿ, ಮುಸುಂಕಂ-ಮೇಲುಹೊದಿಕೆಯನ್ನು, ಉಗಿದು- ತೆಗೆದು, ಕೋಪಾರುಣನಿಜನೇತ್ರಂಗಳಂ- ಕೋಪದಿಂ ಕೆಂಪಾದ ತನ್ನ ಕಣ್ಣುಗಳನ್ನು, ಬಿರ್‍ನನೆ- ಬೇಗನೆ. * *

ಛಟಛಟನಿಸ್ವನಂ- ಛಟಛಟವೆಂಬ ಶಬ್ದವು, ನಿಮಿರೆ- ಹೆಚ್ಚಾಗಲು, ಪಟಪಟರಾವದಿಂ- ಪಟಪಟವೆಂಬ ಶಬ್ದದಿಂದ, ಬೀಳ್ವಿನಂ- ಬೀಳುವಹಾಗೆ, ಪಟುನಿಟಿಲಾಂಬಕಂ- ಸಮರ್ಥವಾದ ಹಣೆಗಣ್ಣುಳ್ಳ ಪರಶಿವನು, ನೆಲಸಿ- ಸ್ಥಿರವಾಗಿ, ಕುಟಿಲಜಟಾಧರಂ- ವಕ್ರಗಳಾದ ಜಡೆಗಳನ್ನು ಧರಿಸಿದ, ತಿಸುಳಿ- ತ್ರಿಶೂಲಧಾರಿಯಾದ, ಸೋಮಂ- ಪಾರ್ವತೀಸಮೇತನಾದ, ಅಮಾಯಂ- ಮಾಯಾರಹಿತನಾದ, ಅಮೇಯವೈಭವಂ- ಎಣಿಸಲಾಗದ ವಿಲಾಸಗಳುಳ್ಳ. ... ... ... ॥೯೯॥

ನಿಜಭಕ್ತಕೃತಪ್ರತಿಜ್ಞಾಪಾಲಕಂ- ತನ್ನ ಭಕ್ತನಾದ ಸೋಮನಾಥನಿಂದ ಮಾಡಲ್ಪಟ್ಟ ಶಪಥವನ್ನು ಪರಿಪಾಲಿಸಿದ, ಸುರಹೊನ್ನೆಬಸದಿಯೊಳ್- ಸುರಹೊನ್ನೆಯೆಂಬ ಹೆಸರುಳ್ಳ ಜೈನಬಸ್ತಿಯಲ್ಲಿ. * *

ಅಣಕಮಂ- ಪರಿಹಾಸ್ಯವನ್ನು, ಉಡುಗಿಸಿ- ಹಾಳುಮಾಡಿ. ... ॥೧೦॥

ವೈಜಾಂಬೆಯ ಕಥೆ.

ಶಿವಾಂಘ್ರಿಗುಪ್ತಭಜನದಿಂ- ಗುಟ್ಟಾಗಿ ಶಿವಪಾದವನ್ನು ಸೇವಿಸುವದರಿಂದ. ॥೧೧॥

ಜಿನಭಕ್ತನೇಮಿಸೆಟ್ಟಿಯೆ- ಜೈನನಾದ ನೇಮಿಯೆಂಬ ಸೆಟ್ಟಿಯೇ, ಅಧಿಪತಿ- ಗಂಡನು, ಉಮ್ಮಳದಿಂ- ಸಂಕಟದಿಂದ. ... ... ... ॥೧೨॥

ಪಿರಿಯ- ದೊಡ್ಡ, * ಮಲಧಾರಿಗಳ್- ಪಂಚಮಲವಂ ಧರಿಸಿರುವ ಸನ್ಯಾಸಿಗಳು, ಪಿತ್ತರೆ- ಬರ

---

* ಜೈನರಿಗೆ ಅಹಿಂಸಾಪರಮೋಧರ್ಮಃ- ಅಂದರೆ ಪ್ರಾಣಿಗಳನ್ನು ಹಿಂಸಿಸದಿರುವದೇ ಉತ್ಕೃಷ್ಟವಾದ ನಡತೆಯಾಗಿರುವದು. ತಮ್ಮ ದೇಹದಲ್ಲಿ ಬಹು ಸೂಕ್ಷ್ಮಪ್ರಾಣಿಗಳು ಜೀವಿಸುತ್ತಿರುವದರಿಂದ ದೇಹದ ಕೊಳೆ

ಳೇಳ್ತರೆ ಕಾಂತವರ್ಗರಗಿ ಭೋಜನಕ್ಕೆವೇಳ್ದು ಭೋಂಕನೆ ಮನಗೇಳ್ತಂದು ಮಡದಿ ಯುಂ ಕರೆ ಮುಚಿತಸಾಧನವಂ ನೆರಪಿ ರುಚಿರತರ ಮಪ್ಪಂತೆ ಭೋಜನವುಂ ಸಮಯು ದೆಂದು ಪೇಳೆ ಕೇಳ್ದು ॥ * * * * * * * *

ಕಂ ॥ ಗಾರಿಗೆ ಚಕ್ಕುಲಿ ಮಂಡಿಗೆ। ಪೂರಿಗೆ ಯೊಡೆ ಪೇಣಿಯೆಂಬಿವಂ ಪಾಯಸವಂ ॥ ಸಾರತರಶಾಕಪಾಕವು । ಹಾರುಚಿಯುತಭಕ್ಷ್ಯಭೋಜ್ಯಮಂ ಸತಿ ಸಮೆದಳ್ ॥ ॥೬೩॥

ವ ॥ ಅಂತು ಸಮೆ ದಿಂತ ಪ್ಪಾಹಾರವ ನೋರ್ವಂಗ ಮಾದೊತಂ ಮಾಹೇಶ್ವರು ಗು ಣಲಿತ್ತನ ಲ್ಲಿನ್ನಜನ್ಮಂ ನಿರರ್ಥಕ ಮಿಂದಾದೊಡ ಮೋರ್ವಂ ಮಾಹೇಶ್ವರ ನೆತ್ತಲಾನುಂ ಬಂದೊ ಡಾಂಬರ್ದುಂಕುವೆ ನೆಂದುಮ್ಮಳಿಸಿ ನೆನೆಯುದು ಮಾವೇಳೆಯೊಳ್॥ * *

ಚಂ ॥ ಜೆಡೆಮುಡಿ ಬಾಳದೊಳ್ತೊಳಪಭೂತಿ ಶಿವಾಕ್ಷಿಜಮಾಲೆ ಮುಯ್ಯೊಳ । ಣ್ಪಿಡಿ ದ ವಿಭೂತಿ ಭಾಸ್ವದುರದೊ ಳ್ಶಿವಸಜ್ಜಿಕೆ ಕಂಥೆ ಲಾಕುಳಂ ॥ ಕಡುಸೊಬಗಾಗೆ ಕಾಮರಿಪು ಜಂಗಮರೂಪವ ನಾಳ್ದು ಬಂದು ನಿಂ । ದೊಡೆ ನಿಜಭಕ್ತೆ ಕಂಡೆರಗಿ ಕಾಲ್ತೊಳೆ ದೀಂಟ ದ ಳಾಪದಾಂಬುವಂ ॥ ... ... ೬೪

ಕಂ ॥ ಕರೆ ದೊಳಗಣ್ಗೆಯ್ದಿಸಿದಳ್ । ಹರಣಂ ಬಂದಂತೆ ನಲಿದು ಮೃದುತಳ್ಪದೊ ಳಾ ॥ ದರದಿಂ ಕುಳ್ಳಿರಿಸಿದ ಳೊ । ಪ್ಪಿರೆ ಬಾಳೆಲೆಯಲ್ಲಿ ಭಕ್ಷ್ಯಭೋಜ್ಯಾದಿಗಳಂ ॥ ೬೫

ಕಂ ॥ ಗಡಣಿಸಿ ತುಪ್ಪಮ ನೆರೆದು । ಗ್ಗಡಮೆನೆ ಮಣಿ ದೆ ಳ್ದು ದೇವ ದಾರೋಗಿಪ್ಪು ದೆಂ ॥ ದೊಡನುಸಿರ್ದು ಕೈಮುಗಿದ ಳೊ । ಲ್ದುಡುಪತಿಮುಖಿ ತಾಪಸೇಂದ್ರ ನಾ ರೋಗಿಸಿದಂ ॥ ... ... ೬೬

---

ಲು, ಭೋಂಕನೆ- ಬೇಗನೆ, ಮಡದಿಯುಂ- ಹೆಂಡತಿಯನ್ನು, ಉಚಿತಸಾಧನವುಂ- ಯೋಗ್ಯವಾದ ಸಾಮಗ್ರಿ ಗಳನ್ನು, ರುಚಿರತರಂ- ಅತಿ ಮನೋಹರವಾದದ್ದು, ಭೋಜನವುಂ- ಭೋಜನಾರ್ಥವಾದ ಆಹಾರವನ್ನು, ಸಮೆ- ಮಾಡು. * * * * * * *

॥೬೩॥ ಉಣಲ್- ಊಟವಂ ಮಾಡುವದಕ್ಕೆ, ಇತ್ತನಲ್ತು- ಕೊಟ್ಟವಳಲ್ಲ, ಎತ್ತಲಾನುಂ- ಯಾವಕ ಡೆಯಿಂದಲಾದರೂ, ಬರ್ದುಂಕುವೆಂ- ಜೀವಿಸುವೆನು, ಉಮ್ಮಳಿಸಿ- ಸಂಕಟಪಟ್ಟು. * * *

ಬಾಳದೊಳ್- ಹಣೆಯಲ್ಲಿ, ಶಿವಾಕ್ಷಿಜಮಾಲೆ- ರುದ್ರಾಕ್ಷಿಯಮಾಳಿಕೆ, ಅಣ್ಪಿಡಿದ- ಲೇಪಿಸಲ್ಪಟ್ಟ, ಭಾ ಸ್ವದುರದೊಳ್- ಪ್ರಕಾಶಿಸುವ ವಕ್ಷಸ್ಥಲದಲ್ಲಿ, ಶಿವಸಜ್ಜಿಕೆ-ಶಿವಲಿಂಗದ ಕರಡಿಗೆ, ಕಂಥೆ- ಕಂತೆ, ಲಾಕುಳಂ- ಯೋಗದಂಡ, ಕಡುಸೊಬಗು- ಬಹು ಸೊಗಸಾದದ್ದು, ಈಂಟಿದಳ್- ಕುಡಿದಳು. ... ॥೬೪॥

ಒಳಗಣ್ಗೆ- ಮನೆಯೊಳಕ್ಕೆ, ಹರಣಂ- ಪ್ರಾಣವು, ನಲಿದು- ಸಂತೋಷಪಟ್ಟು, ಮೃದುತಳ್ಪದೊಳ್- ಮೆತ್ತಗಿರುವ ಹಾಸಿಗೆಯಲ್ಲಿ. ... ... ॥೬೫॥

ಗಡಣಿಸಿ- ಗುಂಪುಗೂಡಿ, ಉಗ್ಗಡಂ- ಉತ್ಕೃಷ್ಟವು, ಆರೋಗಿಪುದು-ಭುಂಜಿಸುವದು, ಉಸಿರ್ದು- ಹೇಳಿ, ಉಡುಪತಿಮುಖಿ- ಚಂದ್ರವದನೆಯು. ... ... ॥೬೬॥

---

ಯುವನ್ನುಚ್ಚಲು ಆ ಪ್ರಾಣಿಗಳು ಸಾಯುವವೆಂಬ ಶಂಕೆಯಿಂದ ಈ ಜಾತಿಯ ಗುರುಗಳಾದಸನ್ಯಾಸಿಮುಂ ತಾದವರು ಹಲ್ಲನ್ನುಜ್ಜದಿರುವದು ಮುಯ್ಯಂ ತಿಕ್ಕದಿರುವದು ಮೂಗಿನ ಮುಸುರೆಯುಂ ತೆಗೆಯದಿರುವದು ತ ಲೆಯ ಕೂದಲಂ ಬೋಳಿಸದೆ ಬೆಮಟದಿಂ ಕೀಳಿಸುವದು ಮುಂತಾದವುಗಳಂ ಪರಿಗ್ರಹಿಸಿ ಯಾವಾಗಲೂ ಕೊಳಕರಾಗಿರುವದರಿಂದ ಇವರಿಗೆ ಮಲಧಾರಿಗಳೆಂದು ಹೆಸರು. * * * * *

ಚಂ ॥ ಅನಿತರೊಳೆಯ್ದಿದ ಜಂಗಮತಪಸ್ವಿಗಳಾಗೃಹಕಲ್ಲಿ ಕಂಡು ಪಾ । ವನಚರಮೂರ್ತಿಯಂ ಮುಳಿದು ನೆಟ್ಟಗೆ ಶಾಪಮನಿತ್ತು ಬೈವುತಂ ॥ ಗನೆಯ ನಳಲ್ಕೆಯಿಂತಳರ್ದದಾ ಚರಮೂರ್ತಿ ಯದೃಶ್ಯನಾದನಾ । ಮನೆಯೆರೆಯಂ ನಿರೀಕ್ಷಿಸಿ ನಿತಂಬಿನಿಯುಂ ಘನರೋಷದೇಳ್ಗೆಯಿಂ ॥ ... ... ೨೩

ಚಂ ॥ ಎಲೆಎಲೆಧೂರ್ತೆ ದುಷ್ಟೆ ಗುರುಗಳ್ಗೊಲವಿಂ ಸಮೆದನ್ನಮೆಲ್ಲಮಂ । ನಲಿದುಣಲಿಕ್ಕಿ ಶೈವಮುನಿಗಳ್ಕದೆ ಪೊಲ್ಲದುಗೆಯ್ದು ಮಪ್ಪು ತ ॥ ಕ್ಕಲಸದೆ ಭಂಗಮಂ ನೆಗಳ್ದ ಪಾತಕಿ ಯುಂಪ ತಪಸ್ವಿಯೆಲ್ಲಿದಂ । ತೊಲಗಿಸು ತತ್ತಡಂಗಿಸಿದೆ ಪೇಳ್ ಪನು ಭವನಾಂತರಾಳದೊಳ್ ॥ ... ... ... ೨೮

ಕಂ॥ ಗೊರವನ ರೂಪಿಂ ಗಾತನ । ಪರಿಜಿಂಗಂ ಕೂರ್ತು ಕೂಡಲೆಳಸಿದೆಯಕ್ಕುಂ ॥ ಕರೆದೊಡ ನುಣಲಿತ್ತಡಗಿಸು । ತಿರುತಿರ್ದಪೆ ನಿನ್ನ ಮಾಯೆ ಯಾರರಿಯದುದೇ ॥ ೨೯

ಕಂ ॥ ಪತಿಯಾಣತಿಯಂ ಮೀರಿದೆ । ಮತಗುರುಗಳನುಳಿದು ಗೊರವನಡಿವಿಡಿದೆ ಮಹಾ ॥ ಪತಿತೆ ನಿನಗಕ್ಕುಮೇ ಪರ । ಗತಿ ತೋರೆಂದವನನೆಂದು ಘೂರ್ಮಿಸುತಾಗಳ್ ॥

ಕಂ ॥ ಅತಿಮಾನವತಿಯ ನತಿಶಯ । ಧೃತಿಯಂ ಶಿವಭಕ್ತಿರತಿಯ ನಾನಿಜಸತಿಯಂ ॥ ಹತಮತಿ ಪತಿ ಕಳೆಗೊಂಡೊಡ । ನತಿನಿರ್ಭರದಿಂದೆ ಪಾಪಿ ಪೊಡೆದಂ ಬಡಿದಂ ॥ ೩೦

ಕಂ ॥ ಮೃಡನಾಜ್ಞೆಯೆಂಬ ಕವಚಮ । ನೊಡಲಂ ತಳ್ತಿರೆ ಲತಾಂಗಿ ಗಾಪತಿಮುಳಿಸಿಂ ॥ ಬಡಿವ ಕಳೆ ಕುಸುಮಮಾಲೆಯ । ಪೊಡರ್ಪ ನನುಕರಿಸಿ ತಕ್ಷತಾಂಗದೊಳವಳ ॥

ತರಳವೃತ್ತ ॥ ಎಳೆಯುಳಂ ಪೊಡೆವಾಕಶಾಗ್ರದ ಪೊಯ್ಗಳಾಜಿನತಾಪಸಾ । ವಳಯತಾಗಿದ ವೇಳೆ ಬಾಸುಳೊರಲ್ದು ಭಕ್ತೆಗೆ ಮಣ್ಗಳಂ ॥ ತಳೆದು ಕಟ್ಟೆಯ ಬಟ್ಟೆಯಿಪ್ಪ ಕ

---

ಪಾವನಚರಮೂರ್ತಿಯಂ- ಪರಿಶುದ್ಧವಾದ ಜಂಗಮಸ್ವರೂಪವನ್ನು. ಮುಳಿದು- ಕೋಪಿಸಿ, ಅಳಲ್ಕೆಯಿಂ- ಸಂಕಟದಿಂದ, ಅದೃಶ್ಯಂ- ಕಣ್ಣಿಗೆ ಕಾಣಿಸದವನು, ಆ ಮನೆಯ, ಎರೆಯಂ-ಸ್ವಾಮಿಯು, ಘನರೋಷದ- ಹೆಚ್ಚಾದ ಕೋಪದ. ... ... ॥೨೩॥

ಧೂರ್ತೆ- ನೀಚೆಯೇ ! ಅಳ್ಕದೆ- ಹೆದರದೆ, ಪೊಲ್ಲದುಗೆಯ್ದು- ಕೆಟ್ಟಕೆಲಸನಂ ಮಾಡಿದೆ, ಅಲಸದೆ- ಆಲಸ್ಯಪಡದೆ, ಪಾತಕಿ- ಪಾಪಿಷ್ಠೆಯೇ ! ಎಲ್ಲಿದಂ- ಎಲ್ಲಿರುವನು ? ತೊಲಗಿಸುತೆ- ಕಳುಹಿಸಿ, ಅಡಂಗಿಸಿದೆ- ಬಚ್ಚಿಟ್ಟಿರುವೆ ? ... ... ... ॥೨೮॥

ಗೊರವನ- ಜಂಗಮಯ್ಯನ, ಪರಿಜಿಂಗಂ- ಆಕಾರಕ್ಕೂ, ಕೂರ್ತು- ಪ್ರೀತಿಸಿ, ಕೂಡಲ್- ಸಂಭೋಗಮಾಡುವದಕ್ಕೆ, ಎಳಸಿದೆಯಕ್ಕುಂ- ಅಪೇಕ್ಷಿಸಿರಬಹುದು, ಅಡಗಿಸುತೆ- ಮರೆಮಾಡುತ್ತಾ. ॥೨೯॥

ಆಣತಿಯಂ- ಆಜ್ಞೆಯನ್ನು, ಮತಗುರುಗಳಂ- ಮತಕ್ಕೆ ಗುರುವಾದವರನ್ನು, ಉಳಿದು- ಬಿಟ್ಟು, ಅಡಿವಿಡಿದೆ- ಪಾದವನ್ನು ಗ್ರಹಿಸಿದೆ, ಪರಗತಿ-ಉತ್ಕೃಷ್ಟಪ್ರಾಪ್ಯಸ್ಥಾನವು, ಘೂರ್ಮಿಸುತೆ-ಮಚ್ಚರಿಸುತ್ತ.

ಅತಿಶಯಧೃತಿಯಂ- ಹೆಚ್ಚಾದ ಧೈರ್ಯವುಳ್ಳ, ಶಿವಭಕ್ತಿರತಿಯಂ- ಈಶ್ವರಭಕ್ತಿಯಲ್ಲಿ ಆಸಕ್ತಿಯುಳ್ಳ, ಹತಮತಿ- ನಷ್ಟವಾದ ಬುದ್ಧಿಯುಳ್ಳ, ಪತಿ- ಗಂಡನು, ಕಳೆಗೊಂಡು- ಚಾವಟಿಯಂ ತೆಗೆದುಕೊಂಡು, ಅತಿನಿರ್ಭರದಿಂದೆ- ಬಲಂಗಟ್ಟಿಯಾಗಿ. ... ... ... ॥೩೦॥

ಒಡಲಂ- ಶರೀರವನ್ನು, ಪೊಡರ್ಪಂ- ವೈಭವವನ್ನು, ಅಕ್ಷತಾಂಗದೊಳ್- ಗಾಯವಿಲ್ಲದ ದೇಹದಲ್ಲಿ. ಎಳೆಯುಳಂ- ಪ್ರಿಯೆಯನ್ನು, ಪೊಯ್ಗಳ್- ಹೊಡೆತಗಳು, ತಾಗಿದವ್- ತಗಳಿದವು, ಬಾಸುಳ್- ಬಾ

ಪರ್ದಿಯುಂ ನೃಪ ನಾಳ್ಗಳ । ವ್ವಳಿಸಿ ಪ್ರೊಯ್ದೊಡೆ ಪ್ರೊಯ್ಗೆಲ್ಲರ ನಲ್ಲಿತಾಗಿದ ಮಾ
ಳ್ಕೆಯಿಂ ‖ ... ... ... ... ೩೩

ವ‖ ಅಂತು ಕಂಡು ಕೈದೆಗೆದು ಪ್ರೊಡೆವ ಕಶಾಘಾತಂ ಜಿನತಪಸ್ವಿಗಳಂಗವನರ್ಜು
ನಾಸ್ತ್ರದಂತೆ ಶತಗುಣೋತ್ತರವಾಗಿ ತಾಗೆ ತಾಳಲಾರದೆ ತಲ್ಲಣಿಸಿ ಮಲ್ಲಳಿಗೊಂಡು ‖ *

ಚಂ ‖ ವಿತತಕಶಾಭಿಘಾತಗಳಿತಕ್ಷತಜಘುರಿತಾಂಗರಾಗಿ ಸು । ಯ್ಯುತಳುತೆ ಬಾ
ಯ್ವಿಡುತ್ತೆ ಮೊರೆಯಿಕ್ಕುತೆ ಮೋರೆಯನೆತ್ತಿ ನೋಡುತೋ ‖ ಡುತೆ ನಡುಗುತ್ತೆ ಕೆಟ್ಟ
ವೆನು ತೇಳುತೆ ಬೀಳುತೆ ಹಾ ಜಿನಾ ಎನು । ತ್ತತುಳವಿಷಾದದಿಂ ಮರುಗಿ ಪಲ್ಗಿರಿಯು
ತ್ತೊರಗುತ್ತೆ ಧಾತ್ರಿಯೊಳ್ ‖ ... ... ೩೪

ಚಂ ‖ ಪೊರಳುತ್ತಂ ಪುಣ್ಗಳಂ ಮುಟ್ಟುತೆ ಕರತಳದಿಂ ನೋವುತೋವೋವೊ
ಕಾವಂ । ನರನಾರಂ ಕಾಣೆ ವೆಂದಳ್ಕುತೆ ಪರಿ ದಡದುತ್ತೆಯ್ದೆ ಮಾಡಂಗಳಂ ಪೆ ‖ ರ್ಮರನಂ
ಪತ್ತುತ್ತೆ ಗೇಹಂಬುಗುತೆ ಪಡಿಗಳಂ ಕೆತ್ತು ಪದ್ಮಾವತೀಮಂ । ದಿರಜೈನಾಗಾರದೊಳ್ಮೈ
ಗರೆಯು ತಗಿದು ಜೈನಾಧಮರ್ಸೇದೆವಟ್ಟರ್ ‖ ... ... ೩೫

ಕಂ ‖ ಜಿನ ನಿನ್ನ ಪ್ರೂಜೆಗೆಯ್ದುದ । ಕಿನಿತುಫಲಂ ಸಾಲ್ಗುಮೆಂದು ನೊಂದಾಜಿನನಂ ‖
ಮುನಿ ದೇಳಿಸುತಂ ತಮ್ಮೊಳ । ಗನುವಿಂತೆಂದು ತಿಳಿದ ರಾದುಪಟಳಮಂ ‖ ೩೬

ಕಂ ‖ ಇದು ನಿನ್ನ ನೇಮಿಸೆಟ್ಟಿಯ । ಸದನಮೊಳೊಲ್ದುಂಡ ಗೌರವನಿಂದಾದುದು ತ ‖
ಪ್ಪದು ನಿಜ ವೆಂದೋರ್ವನ ನಾ । ಪದದೊಳ್ತದ್ಗೃಹಕೆ ನೋಳ್ಪ ಮೆಂದಟ್ಟಲೊಪಂ ‖

---

ಸುಂಡೆಯು, ಒರಲ್ದು- ಪ್ರೀತಿಸಿ, ತಳೆದು- ಹೊತ್ತು, ಕಟ್ಟೆಯ- ಊರಿನ ಮುಂದಣ ಹಳ್ಳದ, ಬಿಟ್ಟಿಗೆಯ್ವ- ಕೂಲಿಯಿಲ್ಲದೆ ಚಾಕರಿಯಂ ಮಾಡುವ, ಅವ್ವಳಿಸಿ-ಅಪ್ಪಳಿಸಿ, ಅಲ್ಲಿ-ಆ ಚೋಳರಾಯನ ಪಟ್ಟಣದಲ್ಲಿ. ‖೩೩‖

ಕೈದೆಗೆದು- ಕಯ್ಯನ್ನೆತ್ತಿ, ಕಶಾಘಾತಂ- ಚಾವಟಿಯ ಏಟು, ಅರ್ಜುನಾಸ್ತ್ರದಂತೆ- ಅರ್ಜುನನಬಾಣದಹಾಗೆ, ಶತಗುಣೋತ್ತರಂಆಗಿ- ಒಂದಕ್ಕೆ ನೂರರಷ್ಟು ಹೆಚ್ಚಾಗಿ, ತಲ್ಲಣಿಸಿ-ಭಯಪಟ್ಟು, ಮಲ್ಲಳಿಗೊಂಡು- ಬೆರಗಾಗಿ. * * * * * * * * * *

ವಿತತ......ಅಂಗರ್— ವಿತತ- ವಿಸ್ತಾರವಾದ, ಕಶಾ- ಕೊರಡೆಯ, ಅಭಿಘಾತ- ಏಟಿನಿಂದ, ಗಳಿತ- ಜಾರಿದ, ಕ್ಷತಜ- ರಕ್ತದಿಂದ, ಘುರಿತ- ವ್ಯಾಪ್ತವಾದ, ಅಂಗರ್- ದೇಹವುಳ್ಳವರು, ಸುಯ್ಯುತೆ- ಉಸುರಂಬಿಡುತ್ತಾ, ಮೊರೆಯಿಕ್ಕುತೆ- ಕೂಗಿಕೊಳ್ಳುತ್ತಾ, ಮೋರೆಯಂ- ಮುಖವನ್ನು, ಅತುಳವಿಷಾದದಿಂ- ಅಸದೃಶವಾದ ಕ್ಲೇಶದಿಂದ, ಮರುಗಿ- ದುಃಖಪಡುತ್ತ, ಒರಗುತ್ತೆ- ಮಲಗಿಕೊಳ್ಳುತ್ತಾ. ... ‖೩೪‖

ಜೈನಾಧಮರ್- ನೀಚರಾದ ಜೈನರು, ಪೊರಳುತ್ತಂ- ಹೊರಳಾಡುತ್ತಾ, ಪುಣ್ಗಳಂ- ಹುಣ್ಣುಗಳನ್ನು, ನೋವುತೆ- ಬಾಧೆಗೊಳ್ಳುತ್ತಾ, ಕಾವಂ- ಸಂರಕ್ಷಿಸುವ, ನರನಾರಂ- ಯಾವ ಮನುಷ್ಯನನ್ನೂ, ಅಳ್ಕುತೆ- ಹೆದರುತ್ತಾ, ಮಾಡಂಗಳಂ- ಉಪ್ಪರಿಗೆಗಳನ್ನು, ಅಡರುತ್ತೆ- ಹತ್ತುತ್ತಾ, ಪೆರ್ಮರನಂ- ದೊಡ್ಡಮರವನ್ನು, ಗೇಹಂಬುಗುತೆ- ಮನೆಯನ್ನು ಪ್ರವೇಶಿಸುತ್ತಾ, ಪಡಿಗಳಂ- ಕದಗಳನ್ನು, ಕೆತ್ತು- ಮುಚ್ಚಿ, ಪದ್ಮಾವತೀಮಂದಿರಜೈನಾಗಾರದೊಳ್- ಪದ್ಮಾವತೀದೇವಸ್ಥಾನ ಜಿನದೇವಸ್ಥಾನಗಳಲ್ಲಿ, ಮೈಗರೆಯುತೆ- ಅಡಗಿಕೊಳ್ಳುತ್ತಾ, ಅಗಿದು- ಭಯಪಟ್ಟು, ಸೇದೆವಟ್ಟರ್- ಶ್ರಮವಂಹೊಂದಿದರು. ... ‖೩೫‖

ಸಾಲ್ಗುಂ- ಸಾಕು, ಏಳಿಸುತಂ-ತಿರಸ್ಕರಿಸುತ್ತಾ, ಅನು-ಅಭಿಪ್ರಾಯವು, ಉಪಳಟಮಂ-ಸಂಕಟವನ್ನು, ಸದನದೊಳ್- ಮನೆಯಲ್ಲಿ, ಆಪದದೊಳ್- ಆ ಕಾಲದಲ್ಲಿ, ತದ್ಗೃಹಕೆ- ಆ ನೇಮಿಸೆಟ್ಟಿಯ ಮನೆಗೆ, ನೋಳ್ಪಂ- ನೋಡೋಣ. ... ... ‖೩೭‖

ವ॥ ಬಂದಾಸವಣಂ ನಿಂದು ಕಟ್ಟದಿರೊಳ್ ಸೆಟ್ಟ ತದ್ವ್ಯಕ್ತಿಯಂ ಕಳೆಗೊಂಡು ಪೊಡೆವ ಪೊಯ್ಗಳ್ತನ್ನಬೆನ್ನಂ ಸೂಳ್ವಡಿದು ತಾಗೆ ನೊಂದು ಪೊಡೆಯದಿರ್ಮಾಣ್ಮಾಣೆಂದು ನಿವಾರಿಸುತ್ತಿಂತೆಂದಂ॥

* * * *

ಚಂ॥ ಭರದೊಳೆ ಪುಷ್ಪಸೇನಮುನಿ ಯೋಡಿದನನ್ಯಪುರಕ್ಕೆ ಗಹ್ವರೋ | ದರದೊಳೆ ವೀರಸೇನಮುನಿ ಮೆಯ್ಗರೆದಂ ಪಡಲಿಟ್ಟ ನಂಬುಜಾ ॥ ಕರದೊಳೆ ಪದ್ಮಸೇನಮುನಿ ಘೋರಮಹಾವಿಪಿನಾಂತರಕ್ಕೆ ಸ್ವೈ/ವರಿಯುತೆ ಚಂದ್ರಸೇನಮುನಿ ಪ್ರೋಕ್ತನನಲ್ಪಕಶಾಭಿಘಾತದಿಂ॥

ಮ॥ ಸ್ರ॥ ಜಿನಮಂತ್ರಂ ಕಾದು ದಿಲ್ಲಕ್ಕಟ! ಜಿನಮುನಿಗಳ್ಮಾಳ್ಪ ಸಮ್ಯಕ್ತಪಂಗಳ್ | ಘನಮಪ್ಪೀಬಾಧೆಯಂ ಪಿಂಗಿಸಲಿ ನೆರೆಯು ವೆತ್ತೋಡಿದಳ್ ಜ್ವಾಲಿಕಾಮಾ ॥ ಲಿನಿ ತಾನೇನಾದಳೋ ಯಕ್ಷಿಣಿ ಜಿನಮತಧರ್ಮಂ ದಲೇಂ ಮಾಯಮಾದ | ತ್ತೊ ನಿತಾಂತಂ ಮಜ್ಜಿನೇಂದ್ರಂ ಮಡಿದನೊ ಮಸಣಂಬೊಕ್ಕರೋ ತೀರ್ಥಕರ್ಕಳ್ ॥ ... ೩೯

ವ॥ ಎಂದು ನೊಂದು ಪಳಯಿಸಿ॥ * * * * * *

ಕಂ॥ ಅರೆಬರ್ಕೆರೆಯಲ್ಲಿ ಕೆಲ | ರ್ಪರಿಕಾಲ್ಗಳೊಳಲ್ಲಿ ಕೆಲಬರಬ್ಜಾಕರದೊಳ್ ॥ ಪಿರಿಯಗಳೊಳನ್ಯ ರಪರ | ರ್ಪುರಾಣಕೂಪಂಗಳಲ್ಲಿ ಕೆಡೆದರ್ಮಡಿದರ್ ॥ ... ೪೦

ಕಂ॥ ಮತ್ತೆ ಕೆಲಂಬರ್ಕಾನನ | ದತ್ತಲ್ ಪರಿದೋಡಿದರ್ಜಿನೇಂದ್ರಾಲಯಮಂ ॥ ಪತ್ತಿ ಪೆರರ್ಕೆಡೆದರ್ಪೆರರ | ರತ್ತಿತ್ತಲ್ಬೀಳ್ದು ಹಮ್ಮದಂಬೋಗಿರ್ದರ್ ॥ ... ೪೧

ಕಂ॥ ಇವಳೇಂಮಾಯಾವಿಯೊ ನೀ | ನಿವಳಂ ಕಳೆಗೊಂಡು ಪೊಯ್ವ ಪೊಯ್ಗಳ್ಮ

---

ಕಟ್ಟೆದಿರೊಳ್- ಮುಂಗಡೆಯಲ್ಲಿ, ಪೊಯ್ಗಳ್- ಹೊಡೆತಗಳು, ಸೂಳ್ವಡಿದು- ಅಲ್ಲಿ ಹೊಡೆದ ಕಾಲವನ್ನನುಸರಿಸಿ, ಪೊಡೆಯದಿರ್- ಹೊಡೆಯಬೇಡ, ಮಾಣ್ಮಾಣ್-ಬಿಡುಬಿಡು; ನಿವಾರಿಸುತ್ತೆ-ತಡೆಯುತ್ತ.

ಭರದೊಳ್- ಬೇಗನೆ, ಪುಷ್ಪಸೇನಮುನಿ- ಪುಷ್ಪಸೇನನೆಂಬ ಯತಿಯು, ಅನ್ಯಪುರಕ್ಕೆ- ಮತ್ತೊಂದು ಪಟ್ಟಣಕ್ಕೆ, ಗಹ್ವರೋದರದೊಳ್- ಗವಿಯ ಮಧ್ಯದಲ್ಲಿ, ಮೆಯ್ಗರೆದಂ- ಔತುಗೊಂಡನು, ಪಡಲಿಟ್ಟಂ- ಬಿದ್ದನು, ಘೋರಮಹಾವಿಪಿನಾಂತರಕ್ಕೆ-ಭಯಂಕರವಾದ ದೊಡ್ಡಕಾಡಿನೊಳಕ್ಕೆ, ಸ್ವೈವರಿಯುತೆ- ಓಡುತ್ತಾ.

ಕಾದುದಿಲ್ಲ- ಸಂರಕ್ಷಿಸಲಿಲ್ಲ, ಸಮ್ಯಕ್ತಪಂಗಳ್- ಒಳ್ಳೆಯ ತಪಸ್ಸುಗಳು, ಘನಂಅಪ್ಪ- ದೊಡ್ಡದಾದ, ಪಿಂಗಿಸಲ್- ಹೋಗಲಾಡಿಸುವದಕ್ಕೆ, ನೆರೆಯವ್- ಸಮರ್ಥವಾಗಲಾರವು, ಜ್ವಾಲಿಕಾಮಾಲಿನಿ- ಜೈನದೇವತೆಯು, ದಲ್- ನಿಜವಾಗಿ, ಮಾಯಂ-ಕಾಣಿಸದೇಇರುವದು, ಮಡಿದನೊ-ಸತ್ತನೋ ? ತೀರ್ಥಕರ್ಕಳ್-ಚತುರ್ದಶತೀರ್ಥಂಕರರು, ಮಸಣಂಬೊಕ್ಕರೊ- ಸ್ಮಶಾನವಂ ಪ್ರವೇಶಿಸಿದರೋ ? ... ॥೩೯॥

ಪಳಯಿಸಿ- ಪ್ರಲಾಪಮಾಡಿ. * * * * * * *

ಅರೆಬರ್- ಕೆಲವರು, ಪರಿಕಾಲ್ಗಳೊಳ್- ಹರಿಯುವಕಾಲುವೆಗಳಲ್ಲಿ, ಅಬ್ಜಾಕರದೊಳ್- ಕೊಳದಲ್ಲಿ, ಪಿರಿಯಗಳೊಳ್- ದೊಡ್ಡಕೆಂದಕದಲ್ಲಿ, ಅಪರರ್- ಉಳಿದವರು, ಪುರಾಣಕೂಪಂಗಳಲ್ಲಿ- ಹಳೆಯ ಬಾವಿಗಳಲ್ಲಿ, ಕೆಡೆದರ್- ಬಿದ್ದರು, ಮಡಿದರ್- ಸತ್ತರು. ... ... ॥೪೦॥

ಕಾನನದತ್ತಲ್- ಕಾಡಿನ ಕಡೆಗೆ, ಜಿನೇಂದ್ರಾಲಯಮಂ- ಜಿನದೇವಸ್ಥಾನವನ್ನು, ಕೆಡೆದರ್- ಹಮ್ಮದಂಬೋಗಿ- ಮೂರ್ಛಾಗತರಾಗಿ. ... ... ॥೪೧॥

ಮಾಯಾವಿಯೊ- ಕಪಟಗಾತಿಯೋ ? ಮೆಯ್ಗಳ್- ದೇಹಗಳು, ಬಿರಿಯೆ- ಸೀಳುವಹಾಗೆ, ಉಪಹ

ಯ್ಗ ॥ ಳ್ತ ವೆಬಿರಿಯೆ ತಾಗಿದವ್ರುಗಡ । ಸವಣರ ನೇವೇಳ್ವೆ ನವರ್ಗೆ ನೆಗಳ್ದಪಹತಿಯಂ॥
ವ ॥ ಎಂದುಸಿರ್ದು ಕಶಾಘಾತಮಹೋತ್ಪಾತಮಂ ಮಾಣಿಪುದು ಮಾಜಿನಮುನಿಗ
ಳಂ ತಾಗುವ ಪೊಯ್ಗಳ್ತವಿ ಲಾಗೆ ಸೆಟ್ಟ ಕಂಡುಸಾಶ್ಚರ್ಯಮಾನಸ ನಾಗಿ ॥ * *
ಕಂ ॥ ನಿನ್ನಿಂ ದಪಾಯಮುಂ ಟೆಮ । ಗಿನ್ನುಂ ನೀಂ ಪೋಗು ಮನೆಯೊ ಳಿರದಿ ರೆ
ನುತ್ತಂ ॥ ಕನ್ನೆಯ ನಾತಂ ನೂಂಕಿದ । ನನ್ನೆಯ ಮನೆ ನೆರೆದು ನೋಳ್ಪ ಸುಜನವಿತಾನಂ॥
ಕಂ ॥ ಸೆರೆವಿಟ್ಟಂತಿರೆ ಮನೆಯಂ । ಪೊರಮಟ್ಟ ಳ್ಬಸದಿ ಯಿರೆ ಶಿವಾಗಾರ ಮೆನು ॥
ತ್ತರಿಯ ದೊಳಪೊಕ್ಕು ಭಕ್ತಿಯೊ । ಳೆರಗಿದ ಳೆಲಶಂಭು ಶರ ಣೆನುತ್ತಸವಸದಿಂ ೪೪
ವ ॥ ಅಂತೆರಗಿರ್ದಾಗ ಳ್ಭಕ್ತಾಭಿಮಾನಪರಿಪಾಲಕಂ ಭವಾನಿಯರಸಂ ತದ್ಭಕ್ತಿಯ
ಸದ್ಭಾವದಿ ನದ್ಭುತಂಮಸಗೆ ಸದ್ಯೋಜಾತನಾಮಕಿದುಚಿತಮೆನಿಸಿ॥ * * *
ತರಳವೃತ್ತಂ॥ ಪದೆದು ಮೂಡಿದ ನಲ್ಲಿತಜ್ಜಿನನಂಗಮಿಬ್ಬಗಿಯಾಗೆ ಮ । ಧ್ಯದೊ
ಳುಮಾರಮಣಂ ಪ್ರಸನ್ನಮುಖಂ ಪ್ರಪನ್ನಪರಾಯಣಂ ॥ ಸದಮಳಾಂಗಮರೀಚಿ ಪೊಣ್ಮಿ
ಪಳಂಚೆ ದಿಕ್ತಟಮಂ ಕರಂ । ಸುದತಿ ಸಂಮುದಮಾನೆ ಮಂಗಳಲಿಂಗರೂಪದಿ ನೀಶ್ವರಂ॥ ೪೫
ಕಂ ॥ ಎರಡುಂಕಡೆಯೊಳ ಮಾಜಿನ । ನೆರಡುಂ ಕಡೆ ಕೆಡೆಯೆ ನಡುವೆ ಮೂಡಿರ್ದಭ
ವಂ ॥ ಶರಧಿಯ ನಿಬ್ಬಗಿಗೆಯ್ದುಂ । ದುರುಲಿಂಗಾಕೃತಿಯ ನಾಳ್ದಂತೆರಡಿಂ ಮೆರೆದಂ ॥ ೪೬
ಕಂ ॥ ಹರಭಕ್ತಿರಹಿತಪುರುಷನ । ನಿರವಳಿ ದಭವಾಂಘ್ರಿ ಪಿಡಿದ ರಮಣಿಗೆ ಲೇಸ ॥
ಪ್ಪುರುಗತಿ ಯಕ್ಕುಂ ಮುನ್ನಂ । ಧರೆಯೊಳ್ತಿಲಕಾಂಬೆ ಯೆಂಬ ಸತಿ ನಿಜಪತಿಯಂ ॥ ೪೭
ಕಂ ॥ ಶಿವಭಕ್ತಿರಹಿತನಂ ತೊರೆ । ದವಿಕಲಮತಿ ಯಿರೆ ಕನಲ್ದು ಪತಿಕೊಂದಪ ನೆಂ॥
ದವಗಡಿಸಿ ಪೋಗಿ ಪುಗುತಂ । ಭವಭವನಮ ನಭವನಂಘ್ರಿಯಂ ಮರೆವೊಕ್ಕಳ್ ॥ ೪೮

---

ತಿಯಂ- ತೋಂದರೆಯನ್ನು. ... ... ||೪೨||

ಕಶಾಘಾತಮಹೋತ್ಪಾತಮಂ- ಚಾವಟಿಯೇಟನಿಂದುಂಟಾಗಿರುವ ದೊಡ್ಡ ಕೆಡಕನ್ನು, ಮಾಣಿಪುದುಂ- ತಪ್ಪಿಸುತಲೂ, ತವಿಲ್ಲಾಗೆ- ನಿಲ್ಲಲು. * * * * * * *

ಅಪಾಯಂ- ತೊಂದರೆಯು, ಅನ್ನೆಯಂ- ಅನ್ಯಾಯವು. ... ||೪೩||

ಸೆರೆವಿಟ್ಟಂತಿರೆ- ಬಂಧನದಿಂ ಬಿಟ್ಟಹಾಗೆ, ಮನೆಯಂಪೊರಮಟ್ಟಳ್- ಮನೆಯಿಂದ ಹೊರಟಳು, ಬಸದಿ- ಜಿನದೇವಸ್ಥಾನವು, ಶಿವಾಗಾರಂ- ಶಿವದೇವಸ್ಥಾನವು, ಅಸವಸದಿಂ- ಬೇಗನೆ. ... ||೪೪||

ಭಕ್ತಾಭಿಮಾನಪರಿಪಾಲಕಂ- ಭಕ್ತರ ಮಾನವನ್ನು ಕಾಪಾಡುವ, ಸದ್ಭಾವದಿಂ- ಒಳ್ಳೆಯ ಅಭಿಪ್ರಾಯದಿಂದ, ಸದ್ಯೋಜಾತನಾಮಕೆ-ಕೂಡಲೇ ಹುಟ್ಟಿದವನೆಂಬ ಹೆಸರಿಗೆ. * * *

ಮೂಡಿದಂ- ಹುಟ್ಟಿದನು, ಇಬ್ಬಗಿ- ಎರಡುಭಾಗವು, ಪ್ರಸನ್ನಮುಖಂ- ನಿರ್ಮಲವಾದ ಮುಖವುಳ್ಳ, ಪ್ರಪನ್ನಪರಾಯಣಂ- ಶರಣಾಗತರಾದವರಲ್ಲಾಸಕ್ತಿಯುಳ್ಳ, ಸದಮಳಾಂಗಮರೀಚಿ- ಒಳ್ಳೆಯ ನಿರ್ಮಲವಾದ ದೇಹದ ಕಾಂತಿಯು, ಪಳಂಚೆ- ಸಂಘಟಿಸಲು, ಸಂಮುದಮಾನೆ- ಸಂತೋಷವನ್ನು ಹೊಂದಲು. ||೪೫||

ಎರಡುಂಕಡೆ- ಎರಡುಶರೀರದ ಭಾಗವೂ, ಅಂದು- ಆ ವಿಷ್ಣುಬ್ರಹ್ಮರ ವಾದವನ್ನಡಗಿಸುವಾಗ, ಇಬ್ಬಗಿಗೆಯ್ದು- ಎರಡು ಭಾಗವಂ ಮಾಡಿ. ... ... ||೪೬||

ಲೇಸಪ್ಪ- ಒಳ್ಳೆಯದಾದ. ... ... ||೪೭||

ಅವಿಕಲಮತಿ- ವ್ಯಾಕುಲರಹಿತವಾದ ಬುದ್ಧಿಯುಳ್ಳವನಾಗಿ, ಕನಲ್ದು- ಕೋಪಿಸಿ, ಅವಗಡಿಸಿ- ತ್ವರೆಪಟ್ಟು, ಭವಭವನಮಂ- ಶಿವದೇವಸ್ಥಾನವನ್ನು. ... ... ||೪೮||

ಕಂ ॥ ಅನಿತರೊಳಾವತಿ ಮುನಿದು।ಗನೆಯ ಸೆರಂಗಂ ಕರಾಗ್ರದಿಂ ಸೆಳೆಯೆ ಮಹೇ॥ಶನ ಕೃಪೆಯಿಂ ಗಂಡಂದಮು। ನನುಕರಿಸಿದ ಳೆಂಬ ಕಥೆಯು ನಾಲಿಪೆ ವಿನ್ನುಂ॥ ೪೯

ಕಂ ॥ ಪರಿವಳಿಗೆಯ ವೈಜಾಂಬಿಕೆ। ಹರಭಕ್ತಿವಿಹೀನ ನಾದಪತಿಯಂ ತೊರೆ ಧೀ॥ಶ್ವರನನುಘ್ರವಿಡಿದು ಲೋಕೋ। ತ್ತರನಿಜಭಕ್ತಿಪ್ರಭಾವಮಂ ಪ್ರಕಟಸಿದಳ್ ॥ ೫೦

ಕಂ ॥ ಪಡೆದಳ್ ಘನಸೌಖ್ಯಮ ನೆಂ। ದಡಿಗಡಿಗೊಲವಿಂದೆ ನುತಿಸೆ ಭಕ್ತವಿತಾನಂ॥ಪೊಡಮಡೆ ಜಿನಮುನಿತತಿಪತಿ। ನಡುಗುತೆ ಕೈಮುಗಿಯೆ ಪೊಗಳೆ ಪೌರಕದಂಬಂ॥ ೫೧

ಕಂ॥ ಸ್ಫುರಿತನಿಜಭಾವದಿಂ ದೊಗೆ। ದುರುಲಿಂಗಂ ವೈಜನಾಥನಾಮಂಬೆತ್ತೊ॥ಪ್ಪಿರೆ ಪರಿವಳಿಗೆಯೊಳಾಶು। ಕರನಂ ಮಚ್ಚಿಸುತೆ ವೈಜಕಾಂಬಿಕೆ ಮೆರೆದಳ್॥ ೫೦

ಕಂ ॥ ವೈಜಾಂಬೆಯ ಪೆಸರ ಮಹಾ। ತೇಜೋಮಯಲಿಂಗ ಮೀಗಳುಂ ಮೆರೆದಪ್ಪುದೆ॥ಲ್ಲಾಜನ ನೆಱರಿಗುಂ ಕೇಳಘು। ಭಾಜನಜಿನಭೃತ್ಯ ಕೇಳ್ದು ನೀನರಿಯದುದೇ॥ ೫೩

ಚಂ ॥ ಜಿನಮತಮಂ ವಿದಾರಿಸಿದ ಶಂಕರಭಕ್ತರ ಸನ್ಮಹತ್ತ್ವವ। ರ್ತನಮು ಮನಂತಮಿಂತೊಳವು ತತ್ಕಥನಾವಳಿ ಮಾಣ್ಗೆ ಭಕ್ತಸ॥ ತ್ವನಿಯತಿಗಂದು ಮಿಂದು ಮೆನಲುಂಟೆ ವಿಚಾರಿಪೊಡೊಂದೆ ಕೇಳ್ವುದಂ। ತೆನೆಮೆರೆವಬ್ಬಲೂರೊಳಗೆ ಕೊರ್ಬಿದಜೈನತಪಸ್ವಿಸಂಕುಳಂ॥ ... ... ... ೫೪

ಮತ್ತೇ ॥ ಬಿಡದೆಮ್ಮೊಳ್ಪ್ರತಿವಾದಮುಂ ನೆಗಳ್ದೊಡಾವಾದಂಗಳಂ ಯುಕ್ತಿ ನೇ। ರ್ಪಡೆ ಶಾಸ್ತ್ರೋಕ್ತಿಯಿನಾವದಂ ಜಯಿಸೆ ಸೋಲ್ಪಾಜೈನ ರಿಂತಾಗದೀ॥ಯೆಡೆ ದೃಷ್ಟಾಂತಮ ನೆಯ್ದೆ ತೋರಿ ಮೆಮಗಾದೃಷ್ಟಾಂತಮಂಕಂಡು ಸಂ। ಗಡ ಮೆಲ್ಲ ಮೃಡಭಕ್ತರಪ್ಪೆ ವೆನೆ ಕೇಳ್ದಾಮಾತೆ ನುತ್ಸಾಹದಿಂ॥ ... ... ॥೫೫॥

ಕಂ॥ಈಪೊಳಲ ಹಿರಿಯ ಬಸದಿಯ।ಗೋಪುರಮುಂ ಗುಡಿಯು ಮೊಡೆದು ಜಿನನೊಡಲನಿತುಂ॥ ರೂಪಳಿದುಘೇಳ್ಗ ಮೆಮ್ಮಾ। ಲಾಪಂ ದಿಟ ಮಾಗೆ ನೇಸರುದಯಕೆ ಮುನ್ನಂ॥

---

ಗಂಡ- ಗಂಡುಸಿನ, ಅಂದಮಂ- ಆಕಾರವನ್ನು. ... ... ॥೪೯॥

॥೫೦॥ ಅಡಿಗಡಿಗೆ- ಬಾರಿಬಾರಿಗೆ, ಪೌರಕದಂಬಂ- ಪಟ್ಟಣದ ಜನಗಳ ಸಮೂಹವು. ॥೫೧॥

ಸ್ಫುರಿತನಿಜಭಾವದಿಂದೆ- ಪ್ರಕಾಶಿಸುವ ತನ್ನ ಮನಸ್ಸ್ಮರಣೆಯಿಂದ, ವೈಜನಾಥನಾಮಂಬೆತ್ತು- ವೈಜನಾಥನೆಂಬ ಹೆಸರನ್ನು ಹೊಂದಿ. ... ... ॥೫೦॥

ಅಘುಭಾಜನಜಿನಭೃತ್ಯ- ಪಾಪಕ್ಕೆ ಆಶ್ರಯನಾದ ಜಿನಸೇವಕನೇ ! ... ॥೫೩॥

ವಿದಾರಿಸಿದ- ಸೀಳಿದ, ಸನ್ಮಹತ್ತ್ವವರ್ತನಮುಂ- ಒಳ್ಳೆಯ ಮಹಿಮೆಯ ಸ್ಥಿತಿಯೂ, ಅನಂತಂ- ಕೊನೆಯಿಲ್ಲದೇಇರುವದಾಗಿ, ಒಳವು- ಉಂಟು, ಮಾಣ್ಗೆ- ಹಾಗಿರಲಿ, ಭಕ್ತಸತ್ವನಿಯತಿಗೆ- ಭಕ್ತರ ಶಕ್ತಿಯ ನಿಶ್ಚಯಕ್ಕೆ, ಅಂದುಂ- ಆವಾಗಲೂ. ... ... ॥೫೪॥

ನೇರ್ಪಡೆ- ನೇರವಾಗುವಹಾಗೆ, ಆವ್- ನಾವು, ಇಂತು, ಆಗದು, ಈಯೆಡೆ-ಈ ಸ್ಥಳದಲ್ಲಿ, ದೃಷ್ಟಾಂತಮಂ- ಉದಾಹರಣೆಯನ್ನು. ... ... ॥೫೫॥

ಈಪೊಳಲ- ಈ ಪಟ್ಟಣದ, ಹಿರಿಯ- ದೊಡ್ಡದಾದ, ಅನಿತುಒಡಲುಂ- ಅಷ್ಟುಶರೀರವೂ, ರೂಪು- ಆಕಾರವು, ಅಳಿದು- ನಾಶವಾಗಿ, ದಿಟಂ- ನಿಜವು, ನೇಸರ- ಸೂರ್ಯನ, ಮುನ್ನಂ- ಮೊದಲು. ॥೫೬

ವ॥ ಎಂದು ಪ್ರೊಣ್ಕೆಮ್ಮ ಪ್ರೊಣ್ಕೆಯಂ ಜಿನಮುನಿಗಳೊಡಂಬಟ್ಟಂತೆಗೆಯ್ಯಿಮೆಂದು ಸೋರ್ಮೆ ನೋಳ್ಪೆನೆ ಮರುದಿನದುದಯಕಾಲದೊಳ್ಮೊದಲಿಸಿದಂತೆ ತೋರ್ಪೆ ವೀಗಳೆ ಬರ್ಪುದೆಂದಾಜೈನತಾಪಸರ ನೊಡಗೊಂಡು ಜಿನಾಲಯಮಂ ಸಾರ್ತಂದು ನೋಳ್ಪುದುಮಲ್ಲಿ॥

ಕಂ ॥ ಪುಡಿಯಡರೆ ಜಿನನ ತಲೆ ಸೀ । ಳ್ದೊಡಲುರುಳೆ ಧರಾತಳಕ್ಕೆ ಸರಿಯಪ್ಪಿನೆಗಂ ॥ ಕೆಡೆದ ಗುಡಿಗೋಡೆಯುಂ ಮುಂ । ಗಡೆಯೊಳ್ಪಡಲಿಟ್ಟ ಗೋಪುರಂ ತೋರಲುಡಂ॥

ಕ ॥ ಕುಡಲ್ಲಿ ಸವಣರೆಲ್ಲ । ಗಂಡುಡುಗಿ ಬಗುರ್ತು ಮಣಿದ ರಾದ್ಯರ ಕಥೆಯಂ ॥ ಕೊಂಡು ಕೊನೆಮುತುಟೇಂ ಮುಂ । ಕೊಂಡೀಗಳೆ ತೋರ್ಪೆ ನೆನ್ನ ಸಾಹಸದಿರವು॥ ೫೮

ಕಂ ॥ ಬಿಂಕದ ಮೊರಟದ ಬಂಕನ । ಲೆಂಕಂಗನ ಗಚಳವೀರಭಕ್ತಂಗೆ ಬಡಾ ॥ ತಂಕಮೆ ಮದೀಯಶಿರಮಂ । ಭೋಂಕನೆ ಕೊರೆ ದಿಳುಪಿ ಸಪ್ತದಿವಸಂಬರೆಗಂ ॥ ॥೫೯॥

ಚಂ ॥ ಪೊಡವಿಯೊಳಾರ್ಪಿನಿಂ ಮೆರೆಯಿಸುತ್ತಿಳೆ ಗದ್ಭುತಮಾಗೆ ಮೇಣದಂ । ಪಡೆದಪೆ ನೀಂ ಜಿನಾಲಯಸಮುತ್ಕರಮಂ ಬಳಿಕೊಂದು ಮಿಲ್ಲದಂ ॥ ತೊಡೆದಪೆ ನುರ್ಕಿ ಸೊರ್ಕಿದ ಜಿನವ್ರತನಿಷ್ಠರ ಬಾಳದಕ್ಕರಂ । ದೊಡೆದಪೆ ನಿಂತಿದೇ ಬತ ಮಿದೇ ಮತ ಮಿಂತಿದೆ ಕಜ್ಜದುಜ್ಜುಗಂ ॥ ... ... ॥೬೦॥

ವ ॥ ಎಂದು ವಿಜೃಂಭಿಸಿ ಪ್ರೊಣ್ಕೆಗೆಯ್ದ ಜಿನಮತತೃಣಧಾಮಧೂಮಧ್ವಜನ ನುಡಿಯ ನೊಡಂಬಟ್ಟು ಶ್ರವಣಮುಖ್ಯಂ ತನ್ನ ಗುರುಗಳ್ಮೊದಲಾದರೆಲ್ಲರುಮಂ ಬರಿಸು ತವರ್ಗೂಡಿ ಗೊಂದಣಿಸಿ ನಿಂದು ಶೈವನ ಪಂತ ದಳವಂ ಕಾಣ್ಬೆ ನೆಂದು ನೋಡುತ್ತು ಮಿರ್ದನಾವಾರ್ತೆಗೇಳ್ದು ॥ * * *

ಪ್ರೊಣ್ಕೆಯಂ- ಪ್ರತಿಜ್ಞೆಯನ್ನು, ಅಂತೆಗೆಯ್ಯಿಂ- ಹಾಗೆಯೇಮಾಡಿರಿ, ಮೊದಲಿಸಿದಂತೆ- ಹಾಸ್ಯ ಮಾಡಿದಹಾಗೆ, ಸಾರ್ತಂದು- ಸಮೀಪಕ್ಕೆ ಬಂದು. * * * * * *

ಪುಡಿಯಡರೆ- ಹುಡಿಯೇರುವಹಾಗೆ, ಒಡಲ್- ದೇಹವು, ಸರಿ- ನೆಲಸಮವು, ಅಪ್ಪಿನೆಗಂ- ಆಗುವಹಾಗೆ, ಪಡಲಿಟ್ಟ- ಬಿದ್ದ. ... ... ॥೫೭॥

ಗಂಡುಡುಗಿ- ಪೌರುಷವು ನಾಶವಾಗಿ, ಬಿಗುರ್ತು- ಭಯಪಟ್ಟು, ಮಣಿದರ್- ನಮಸ್ಕರಿಸಿದರು, ಆದ್ಯರ- ಮೊದಲಿಗರ, ಕೊಂಡು- ಪರಿಗ್ರಹಿಸಿ, ಕೊನೆಮುತುಟೇಂ-ಹಿಡಿದರ್ಥವನ್ನು ಸಾಧಿಸುವದಷ್ಟೇನೆಯೇ?

ಬಿಂಕದ- ವಿಲಾಸವುಳ್ಳ, ಲೆಂಕಂಗೆ- ಸೇವಕನಾದ, ಅಚಳವೀರಭಕ್ತಂಗೆ- ಸ್ಥಿರವಾದ ಶೌರ್ಯವುಳ್ಳ ಭಕ್ತನಾದ, ಆತಂಕಮೆ- ಪ್ರತಿಬಂಧಕವೇ? ಕೊರೆದು-ಕತ್ತರಿಸಿ, ಸಪ್ತದಿವಸಂಬರೆಗಂ-ಏಳುದಿನಗಳತನಕ. ॥೫೯

ಆರ್ಪಿನಿಂ- ಶೌರ್ಯದಿಂದ, ಅದಂ- ಆ ಶಿರಸ್ಸನ್ನು, ಉರ್ಕಿ- ಗರ್ವವಿಶಿಷ್ಟರಾಗಿ, ಸೊರ್ಕಿದ-ಪ್ರಜ್ಞಾಹೀನರಾದ, ಜಿನವ್ರತನಿಷ್ಠರ- ಜಿನನಿಯಮದಲ್ಲಿ ಶ್ರದ್ಧೆಯುಳ್ಳವರ, (ಅಂದರೆ ಜೈನರ) ಬಾಳದ- ಹಣೆಯ, ಅಕ್ಕರಂದೊಡೆದಪೆಂ- ಅಕ್ಷರಗಳನ್ನು ಕೆಡಿಸುವೆನು, ಬತಂ- ವ್ರತವು, ಮತಂ- ಸಮ್ಮತವು, ಕಜ್ಜದ- ಕಾರ್ಯದ, ಉಜ್ಜುಗಂ- ಉದ್ಯೋಗವು. ... ... ॥೬೦॥

ಜಿನಮತತೃಣಧಾಮಧೂಮಧ್ವಜನ— ಜಿನಮತ- ಜೈನರ ಮತವೆಂಬ, ತೃಣಧಾಮ- ಹುಲ್ಲಿನ ಮನೆಗೆ, * ಧೂಮಧ್ವಜನ- ಅಗ್ನಿಯಾದ ಏಕಾಂತರಾಮಯ್ಯನ, ಗೊಂದಣಿಸಿ, ಗುಂಪಾಗಿ, ಪಂತದ- ಶಪಥದ, ಅಳವಂ- ಸಾಮರ್ಥ್ಯವನ್ನು. * * * * * *

* (ಅವ) ಧೂಮ- ಹೊಗೆಯೇ, ಧ್ವಜ- ಕೇತನವಾಗುಳ್ಳವನು. * *

ಮ ॥ ಸ್ರ ॥ ಧರಣೀಶಂಬಿಜ್ಜಳಂ ತನ್ನಖಿಳಸಚಿವಸಾಮಂತಸೇನಾಧನಾಥಾ । ದ್ಯಾನಾಗಳ್ಕೂಡಿ ಬಂದಾಸವಣ ನಿಡರೊಳೊಪ್ಪಿರ್ದ ನಂತಲ್ಲ ಗತ್ಯಾ ॥ ಡರಡಂ ಡೇಳ್ತಂದು ಸತ್ಯಾನ್ವಿತ ನಿರುಪಮಸಾಮರ್ಥ್ಯಸಂಪನ್ನ ಮಾಹೇ । ಶ್ವರಯುಕ್ತಂ ಭಕ್ತ ರೊಡ್ಡೋಲಗದೊ ಳೆಸೆದು ನೋಡುತ್ತಮಿರ್ದ್ದಂ ವೃಷೇಂದ್ರಂ ॥ ... ... ೬೧

ಕಂ ॥ ಪೌರಜನ ವೀಕ್ಷಿಸುತ್ತಿರೆ । ಧೀರಂ ಗಣಸಭೆಗೆ ಮಣಿದು ಪೊಡಮಟ್ಟು ದರ ॥ ಸ್ಮೇರರುಚಿ ತುಳ್ಕೆ ವದನಾಂ । ಘೋರಾಹದೊಳ್ ಜಡಿದು ಖಡ್ಗಮಂ ಕರತಳದೊಳ್ ॥

ಚಂ ॥ ಪಟುರವದಿಂದೆ ಬೊಬ್ಬೆಗುಡು ತಬ್ಬರಿಸು ತ್ತಡಗಯ್ಯೊಳೊತ್ತಿ ಸಂ । ಘಟಸಿ ಕಚೌಘಮಂ ಪಿಡಿದು ಖಡ್ಗಮ ನಾತ್ಮಗಳಕ್ಕೆ ಸಾಚರ್ಚ ತು ॥ ತ್ಕಟಸಿ ಕಡಂಗಿ ಮಸ್ತಕಮ ನಾರ್ದರಿದಾಕ್ಷಣ ಮಾಶಿರಂ ಪರಿ । ಸ್ಫುಟರವದಿಂದೆ ಬೊಬ್ಬರಿದುಕೀರ್ತಿಸು ತಿರ್ದ್ದುದು ವಾಮಹಸ್ತದೊಳ್ ॥ ... ... ... ೬೩

ಕಂ ॥ ಮುರಿದ ಕುಡಿಮೀಸೆ ಕುಣಿಯೆ । ತ್ತಿರೆ ಕೆಂಪಡರ್ದಕ್ಷಿ ತೊಳಗೆ ಬಿರುನಗೆ ದಶನ ॥ ಸ್ಫುರಿತರುಚಿ ನಿಟಲಭಸಿತ । ತ್ರಿರೇಖೆಗ ಳ್ಭ್ರುಕುಟ ಯೆಸೆಯೆಮಿಸುವಾಶಿರಮಂ ॥

ಶಾ ॥ ಕಂಡಾಶ್ಚರ್ಯಮ ನಾಳ್ದು ಕೈಮುಗಿದ ನಾಭೂಪಾಲ ನಾನಂದದಿಂ । ಕೊಂಡಾಡುತ್ತಸೆದಿರ್ದ್ದ ನಲ್ಲಿ ವೃಷಭೇಂದ್ರಂ ಭಕ್ತ ರುತ್ಸಾಹದಿಂ ॥ ತಂಡಂಬ ತ್ತರರೇ ಉಘೇ ಎನುತಮಿರ್ದ್ದ ಪೌರವೃಂದಂ ಮನಂ । ಗೊಂ ಡತ್ಯದ್ಭುತ ಮಿಂತಿದೆಂದು ಪೊಗಳುತ್ತಿರ್ದತ್ತು ಸುಪ್ರೀತಿಯಿಂ ॥ ... ... .. ... ೬೫

---

ಅಖಿಳಸಚಿವಸಾಮಂತಸೇನಾಧಿನಾಥಾದ್ಯರಿಂ— ಅಖಿಳಸಚಿವ- ಎಲ್ಲಾಮಂತ್ರಿಗಳು, ಸಾಮಂತ- ಆಶ್ರಿತರಾಜರು, ಸೇನಾಧಿನಾಥ- ದಳವಾಯಿ ಇವರುಗಳೇ, ಆದ್ಯರಿಂ- ಮೊದಲಾದವರೊಡನೆ, ಸತ್ಯಾನ್ವಿತನಿರುಪಮಸಾಮರ್ಥ್ಯಸಂಪನ್ನಮಾಹೇಶ್ವರಯುಕ್ತಂ— ಸತ್ಯ-ಯಾಥಾರ್ಥ್ಯದಿಂದ, ಅನ್ವಿತ-ಕೂಡಿದ, ನಿರುಪಮ- ಅಸದೃಶವಾದ, ಸಾಮರ್ಥ್ಯ- ಶಕ್ತಿಯಿಂದ, ಸಂಪನ್ನ- ಕೂಡಿದ, ಮಾಹೇಶ್ವರ- ಮಾಹೇಶ್ವರರಿಂದ, ಯುಕ್ತಂ- ಕೂಡಿದ, ವೃಷೇಂದ್ರಂ, ಒಡ್ಡೋಲಗದೊಳ್- ಸಭೆಯಲ್ಲಿ. ... ॥೬೧॥

ಧೀರಂ- ಧೈರ್ಯಶಾಲಿಯಾದ ಏಕಾಂತರಾಮಯ್ಯನು, ದರಸ್ಮೇರರುಚಿ- ಮೆಲ್ನಗೆಯ ಕಾಂತಿಯು, ಜಡಿದು- ಜಳಪಿಸಿ. ... ... ॥೬೨॥

ಪಟುರವದಿಂದೆ- ಸಮರ್ಥವಾದ ಶಬ್ದದಿಂದ, ಬೊಬ್ಬೆಗುಡುತೆ- ಗಟ್ಟಿಯಾಗಿ ಕೂಗುತ್ತ, ಅಬ್ಬರಿಸುತ್ತ- ಆರ್ಭಟಮಾಡುತ್ತ, ಒತ್ತಿ- ಅದಿಮಿ, ಸಂಘಟಿಸಿ- ಸೇರಿಸಿ, ಕಚೌಘಮಂ- ಕೂದಲಿನಸಮೂಹವನ್ನು, ಖಡ್ಗಮಂ- ಕತ್ತಿಯನ್ನು, ಆತ್ಮಗಳಕ್ಕೆ- ತನ್ನ ಕತ್ತಿಗೆ, ಸಾಚರ್ಚತೆ- ಸೇರಿಸುತ್ತ, ಉತ್ಕಟಿಸಿ-ಬಲಶಾಲಿಯಾಗಿ, ಕಡಂಗಿ- ಕುತೂಹಲಪಟ್ಟು, ಆರ್ದು- ಗಟ್ಟಿಯಾಗಿ ಕೂಗಿ, ಅರಿದು- ಕತ್ತರಿಸಿ, ಪರಿಸ್ಫುಟರವದಿಂದೆ- ವ್ಯಕ್ತವಾದ ಶಬ್ದದಿಂದ, ವಾಮಹಸ್ತದೊಳ್- ಎಡಗಯ್ಯಲ್ಲಿ. ... ॥೬೩॥

ಮುರಿದ-ತಿರುವಿದ, ಕುಡಿಮೀಸೆ- ಡೊಂಕಾದ ಮೀಸೆಯು, ದಶನಸ್ಫುರಿತರುಚಿ- ಹಲ್ಲುಗಳ ಹೊಳೆಯುವ ಕಾಂತಿಯು, ನಿಟಲಭಸಿತತ್ರಿರೇಖೆಗಳ್- ಹಣೆಯಲ್ಲಿರುವ ಭಸ್ಮದ ಮೂರು ಗೆರೆಗಳು, ಭ್ರುಕುಟಿ- ಹುಬ್ಬುಗಂಟು. ... ... ... ॥೬೪॥

ತಂಡಂಬೆತ್ತು- ಗುಂಪಾಗಿ, ... ... ॥೬೫॥

ಮಂದಾನಿಲಗಗಳೆ ॥ ಆಸಮಯದೊಳಖಿಳರ್ಜಯ ಜೀಯೆನೆ । ಭೂಸುರಶರಣಾವಳಿ
ಭಲರೇಯೆನೆ । ನೆರೆದು ಗಣಂಗಳ್ಕಡುನಲಿಯುತ್ತಿರೆ । ಬಿರುದಿನ ಕಹಳೆಗಳೂಡನುಲಿಯು
ತ್ತಿರೆ । ಪಟುಪಟಹಧ್ವನಿ ಶಂಖನಿನಾದಂ । ಚಟುಲಮೃದಂಗದ ತಾಳದ ನಾದಂ । ಬೀಸುವ
ಚಾಮರವೀಜನತತಿಗಳ್ । ಸೂಸುವ ಸೀಗುರಿಲಾಸ್ಯದಗತಿಗಳ್ । ಪೊಸರನ್ನದ ನಡೆತೋರ
ಣದೋರಣ । ಮಸೆದಿರೆ ಶರಣಮಹೋತ್ಸವಕಾರಣ । ವೊಸಗೆಯ ಪೂವಲಿ ಕಳಸಂ ಕನ್ನ
ಡಿ । ಮಿಸುನಿಯ ನಂದಿಯ ಪಳಯಿಗೆ ನಡೆಮಡಿ । ಬಿರುದಂ ಪೊಗಳ್ವ ಮಹಾಮಾಗಧತತಿ
ತರದಿಂ ಕೈವಾರಿಪ ಬುಧಸಂತತಿ । ಸೊಗಯಿಪ ವೀರಗಣಂಗಳ ಕಳಕಳ । ಮಗಲದ ನಾನಾ
ಸಂಭ್ರಮಸಂಕುಳ । ಮಲರ್ದಿರೆ ತೊಳತೊಳಸಕ್ಷಿಗಳಿಂದಂ । ಸುಲಲಿತನಿಟಿಲಚಳಾಳಕದಂ
ದಂ । ಬಡೆದೊಪ್ಪುತೆ ಕೆತ್ತುವಮಿಸೆಗಳಿಂ । ಮಿಡುಕೊಡೆದಾಪ್ರುರ್ಬಿನಡೇಸಿಗಳಿಂ । ಪೊ
ಗರುಗುವಮಳಕಪೋಲದ್ವಯುದಿಂ । ಸೊಗಯಿಪಸಸ್ಮಿತರವದತಿಶಯದಿಂ । ಮೆರೆವಶಿರಂ ತ
ನ್ನೆಡಗೈಗಮರ್ದಿರೆ । ಕರೆಗೊರಲನ ನುತಿಯಿಪರುತಿ ನಿಮಿರ್ದಿರೆ । ಬಲಗಯ್ಯೊಳ್ಕರವಾ
ಳಂ ಜಡಿಯುತೆ । ನೆಲೆವೆರ್ಚಿದಸಡಗರದಿಂ ನಡೆಯುತೆ । ಪರವಾದಿಗಳೆದೆಗೊಳ್ಮೊನೆದೋ
ರುತೆ । ಕರಖಡ್ಗವ ಚಿಮ್ಮುತೆ ನಲವೇರುತೆ । ಗಣಸಂಕುಳಮಂ ಬಲವರು ತೋಲವಿಂ । ಕುಣಿ
ಕುಣಿದಾಡುತೆ ಮಾಡುತೆ ಪಲವಂ । ಸಲೆ ನೇಮಿಸಿದಭಿನಯುಮಂ ಪಿಡಿಯುತೆ । ತಲೆ ಜತಿಗು
ಡೆ ವರ್ತಿಸುತಂ ನಡೆಯುತೆ । ಪುಬನೆಗೆಯುತೆ ನಿಲು ತಡ್ಡಂಬಾರುತೆ । ನಟಸುತ್ತಂ ಭ್ರಮ

---

ಜೀಯ- ಸ್ವಾಮಿಯೇ ! ಜಯ- ಸರ್ವೋತ್ಕೃಷ್ಟನಾಗು, ಕಡುನಲಿಯುತ್ತೆ- ಬಹು ಸಂತೋಷ
ಪಡುತ್ತಾ, ಉಲಿಯುತ್ತಿರೆ- ಶಬ್ದಮಾಡುತ್ತಿರಲು, ಪಟುಪಟಹಧ್ವನಿ- ಸಮರ್ಥವಾದ ತಮಟೆಯ ಶಬ್ದವು,
ಚಟುಲಮೃದಂಗದ- ಚಂಚಲವಾದ ಮದ್ದಲೆಯು, ವೀಜನ- ಬೀಸಣಿಗೆ, ಸೀಗುರಿ- ಮಯೂರ್ಭಾಲಿನ, ಲಾಸ್ಯ
ದ- ನರ್ತನದ, ಓರಣಂ- ಸಾಲು, ಒಸಗೆಯ- ಉತ್ಸವದ, ಪೂವಲಿ- ಪುಷ್ಪಾಂಜಲಿಯು, ಮಿಸುನಿಯ- ಚಿನ್ನ
ದ, ಪಳಯಿಗೆ- ಧ್ವಜವು, ನಡೆಮಡಿ- ನಡೆಯುವದಕ್ಕೆ ಹಾಸಿರುವ ಮಡಿಯಾದ ಬಟ್ಟೆಯು, ಮಾಗಧತತಿ-
ಸ್ತುತಿಪಾಠಕರ ಸಮೂಹವು, ತರದಿಂ- ಸಾಲಾಗಿ, ಕೈವಾರಿಪ- ಕೆಯ್ಯೆತ್ತಿ ಹೊಗಳುವ, ಅಗಲದ- ಬಿಟ್ಟು
ಹೋಗದೇ ಇರುವ, ಸುಲಲಿತನಿಟಿಲಚಳಾಳಕದ- ಶ್ಲಾಘ್ಯವಾದ ಹಣೆಯಲ್ಲಿ ಚಂಚಲವಾಗಿರುವ ಮುಂಗುರುಳಿ
ನ, ಕೆತ್ತುವ- ಚಲಿಸುತ್ತಿರುವ, ಮಿಡುಕೊಡೆದ-ಚಲಿಸದೇ ಇರುವ, ಪೊಗರುಗುವ-ಕಾಂತಿಯು ಸುರಿಯುತ್ತಿರು
ವ, ಅಮಳಕಪೋಲದ್ವಯದಿಂ- ನಿರ್ಮಲವಾದ ಎರಡುಕೆನ್ನೆಗಳಿಂದ, ಸಸ್ಮಿತರವದ- ಮುಗುಳ್ನಗೆಯಿಂ ಕೂಡಿದ
ಶಬ್ದದ, ಕರೆಗೊರಲನ- ಸಿತಿಕಂಠನಾದ ಪರಮೇಶ್ವರನನ್ನು, ರುತಿ- ಶಬ್ದವು, ನಿಮಿರ್ದಿರೆ- ಉಂಟಾಗಿರಲು, ಕ
ರವಾಳಂ- ಕತ್ತಿಯನ್ನು. ಮೊನೆದೋರುತೆ- ಶೌರ್ಯವನ್ನು ತೋರ್ಪಡಿಸುತ್ತ, ನಲವೇರುತೆ- ಸಂತೋಷವಂ
ಹೊಂದುತ್ತಾ, ಬಲವರುತೆ- ಪ್ರದಕ್ಷಿಣೆ ಮಾಡುತ್ತಾ, ನೇಮಿಸಿದ- ಆಜ್ಞಾಪಿಸಿದ, ಅಭಿನಯುಮಂ- ಅನುಕರ
ಣವನ್ನು, ಜತಿಗುಡೆ- ತಾಳಗತಿಯಂ ಕೊಟ್ಟರೆ, ಅಡ್ಡಂಬಾರುತೆ- ಅಡ್ಡಲಾಗಿ ಬರುತ್ತಾ, ಭ್ರಮರಿಗಳಂ- ಗಿ
ರ್ರನೆ ಸುತ್ತುವಿಕೆಯನ್ನು, ಬೀರುತೆ- ಪ್ರಸರಿಸುತ್ತಾ, ಸುಳಿಸುಳಿದು- ಸಂಚರಿಸಿ ಸಂಚರಿಸಿ, ಪರಿವರಿಯುತೆ-
ಓಡುತ್ತಾ, ಅಂಜುತ್ತಿರೆ- ಹೆದರುತ್ತಿರಲು, ಜಿನಮತಜೈತ್ರಂ- ಜೈನಮತವನ್ನು ಜೈಸಿದ, ಜನನುತಿಪಾತ್ರಂ-
ಜನಗಳ ಸ್ತೋತ್ರಕ್ಕೆ ಆಶ್ರಯನಾದ, ಭುವನಪವಿತ್ರಂ- ಲೋಕದಲ್ಲಿ ಪರಿಶುದ್ಧನಾದ, ಗುಣಮಣಿಸೂತ್ರಂ-
ಸದ್ಗುಣಗಳೆಂಬ ರತ್ನಗಳಿಗೆ ತಂತುವಾದ, ಪ್ರಣುತಚರಿತ್ರಂ- ಶ್ಲಾಘ್ಯವಾದ ನಡತೆಯುಳ್ಳ, ಸುಮತಿಸುಧಾ
ಮಂ- ಒಳ್ಳೆಯ ಬುದ್ಧಿಗೆ ಸ್ಥಾನನಾದ, ಪ್ರಮಥಲಲಾಮಂ- ಪ್ರಮಥಶ್ರೇಷ್ಠನಾದ, ಪರಮತಭೀಮಂ-

ರಿಗಳಂ ಬೀರುತೆ । ಸುಳಸುಳಿ ಬತ್ತಿತ್ತುಂ ಪರಿವರಿಯುತೆ । ಖಳಜನರಂಜುತ್ತಿರೆ ಪಲ್ಮೊರೆ ಯುತೆ । ಜಿನಮತಜೈತ್ರಂ ಜನನುತಿಪಾತ್ರಂ । ಶಿವಗಣಮಿತ್ರಂ ಭುವನಪವಿತ್ರಂ । ಗುಣಮ ಣಿಸೂತ್ರಂ ಪ್ರಣುತಚರಿತ್ರಂ । ಸುಮತಿಸುಧಾಮಂ ಪ್ರಮಥಲಲಾಮಂ । ಪರಮತಭೀಮಂ ಪರಿಹೃತಕಾಮಂ । ಮಹಿಮಸಮುದ್ರಂ ಮಹಿತಳರುದ್ರಂ।ಸಡಗರದಿಂದಂ ನಡೆತರುತಿರ್ದಂ॥

ವ ॥ ಇಂತು ಪಿರಿಯ ಸಂಭ್ರಮದಿಂ ಲೋಕೈಕವೀರ ನೇಕಾಂತರಾಮವಿಭು ಕಲ್ಯಾಣ ಕಟಕದ ಸೋಮಸೂರ್ಯವೀಧಿಗಳೊಳ್ಮೆರೆಪಿಂತೇಳ್ತರುತ್ತ ಮೇಳುಂ ದಿನಂಗಳಂ ಕಳೆದು ಮೊದಲಶಿವಮಂದಿರಕ್ಕೆ ಮಗುಳ್ದು ಬಂದಲ್ಲಿಪನ್ನತಿಕೆಯಿಂ ನಿಂದು ಜೈನಮುನಿಗಳಂನೋಡಿ

ಕಂ ॥ ಎಲೆಜೈನಾಥಮರಿರ ನಿಮು । ಗೊಲವಿಂದಾನಿತ್ತ ಭಾಷೆ ಸಂದು ದೆನುತ್ತಂ ॥ ತಲೆದೂಗಿಸುತಖಿಳರ ನು । ಜ್ವಳಮತಿ ನುಡಿದಾರ್ದು ಚಿಮ್ಮಿತಂ ಕರವಾಳಂ ॥ ೭೬

ಕಂ॥ ಎಡಗಯ್ಯೊಳಾಂತಶಿರಮಂ । ಮುಡಿವಿಡಿದು ಕಬಂಧಕಂಧರಕ್ಕಂಟಿಸೆ ತ ॥ ಳ್ತೊ ಡ ನೆಂದಿನಂತೆ ಪತ್ತಿದು । ಇಡಿದತಿಮುದದಿಂದೆ ಪೊಗಳ್ದ ರಾಶಿವಶರಣರ್ ॥ ೭೭

ಕಂ ॥ ಕೊರಗೆ ಪರವಾದಿವದನಾಂ । ಬುರುಹಂ ನಲವೆಯ್ದೆ ಭಕ್ತನಯನೋತ್ಪಲ ವಿಾ ॥ ಶ್ವರಮತಸುಧಾಬ್ಧಿ ವರ್ಧಿಸೆ । ಕರ ಮೆಸೆದುದು ತನ್ಮುಖೇಂದು ನಗೆವೆಳ್ಗದಿರಿಂ ॥ ೭೮

ಕಂ ॥ ಶರಣಾರ್ಥಿರವಂ ಗುಡುತಂ । ಶರಣರ್ಗಸೆಪಿರ್ವ ರಾಮನಾಥನ ಚರಣಾಂ ॥ ಬು ರುಹಕ್ಕೆ ಸೋಲ್ತ ಜಿನಮತ । ಗುರುಗಳ್ಮಣಿದಿತ್ತ ರಲ್ಲಿ ಜಯಪತ್ರಿಕೆಯಂ ॥ ೭೯

ವ ॥ ಆಜಯಪತ್ರಿಕೆಯ ನಾನರೇಂದ್ರನ ಕಯ್ಯೊಳಿತ್ತು ತನಗೆ ಪ್ರೊತಮಟ್ಟರ್ದ ಜಿ ನತಾಪಸರ ಪಣೆಗಳೊಳ್ನಂದಿಮುದ್ರೆಯ ನೊತ್ತಿ ಮತ್ತ ಮಿರದೆ ॥ * *

ಮತ್ತೇ ॥ ಪೆಸರ್ಗೊಂದುಂ ಜಿನಗೇಹ ಮಿಲ್ಲದವೊ ಲಾಕಲ್ಯಾಣದೊಳ್ಜೈನಗೇ । ಹಸಮೂಹಂ ಬಯಲಾಗೆ ನುರ್ಗಿಸಿ ಜಿನಾನೀಕಂ ಪಡಲ್ವಿಟ್ಟುವು ॥ ಣ್ಮಸಿಯಪ್ಪಂತಿರೆ

---

ವೀರಶೈವೇತರಮತಗಳಿಗೆ ಭಯಂಕರನಾದ, ಪರಿಹೃತಕಾಮಂ-ನಾಶಮಾಡಲ್ಪಟ್ಟ ವಿಷಯಾಭಿಲಾಷೆಯುಳ್ಳ, ಮಹಿಮಸಮುದ್ರಂ- ಮಹತ್ತ್ವಕ್ಕೆ ಸಮುದ್ರನಾದ, ಮಹಿತಳರುದ್ರಂ- ಭೂಭಾಗಕ್ಕೆ ರುದ್ರಸ್ವರೂಪನಾದ ಏಕಾಂತರಾಮಯ್ಯನು, ಲೋಕೈಕವೀರಂ- ಜಗತ್ತೆಲ್ಲಕ್ಕೂ ತಾನೊಬ್ಬನೇ ಪರಾಕ್ರಮಶಾಲಿಯಾದ, ಕಲ್ಯಾ ಣಕಟಕದ- ಕಲ್ಯಾಣಪಟ್ಟಣದ, ಮಗುಳ್ದು- ಪುನಃ, ಪನ್ನತಿಕೆಯಿಂ- ಶೌರ್ಯದಿಂದ. ... *

ಸಂದುದು- ನೆರವೇರಿತು. ... ... ॥೭೬॥

ಕಬಂಧಕಂಧರಕ್ಕೆ- ಮುಂಡಕ್ಕೂ ಕತ್ತಿಗೂ, ತಳ್ತು- ಸೇರಿ, ಇಡಿದ- ತುಂಬಿದ. ॥೭೭॥

ಕೊರಗೆ- ಬಾಡಲು, ನಲವೆಯ್ದೆ- ಸಂತೋಷವಂ ಹೊಂದಲು, ಈಶ್ವರಮತಸುಧಾಬ್ಧಿ- ಶಿವಮತವೆಂ ಬ ಕ್ಷೀರಸಮುದ್ರವು, ನಗೆವೆಳ್ಗದಿರಿಂ- ನಗುವಿಕೆಯ ಬಿಳಿಯ ಕಾಂತಿಯಿಂದ. ... ॥೭೮॥

ಮಣಿದು- ನಮಸ್ಕರಿಸಿ, ಜಯಪತ್ರಿಕೆಯಂ- ಏಕಾಂತರಾಮಯ್ಯನವರು ತಮ್ಮನ್ನು ಜೈಸಿದರೆಂದು ಬ ರೆದಿರುವ ಪತ್ರವನ್ನು. ... ... ॥೭೯॥

ನಂದಿಮುದ್ರೆಯಂ- ನಂದೀಶ್ವರನ ಚಿಹ್ನವನ್ನು. * * * *

ಪೆಸರ್ಗೆ- ಹೆಸರಿಗೆ, ನುರ್ಗಿಸಿ- ನುಚ್ಚುಮಾಡಿಸಿ, ಜಿನಾನೀಕಂ- ಜಿನವಿಗ್ರಹಗಳ ಸಮೂಹವು, ಪಡ ಲ್ವಿಟ್ಟು- ಬಿದ್ದು, ಪೋಳ್ದು- ಹೋಳುಮಾಡಿ, ಉರುಪಿ- ಸುಟ್ಟು, ತೇಜಸ್ಸ್ಫೂರ್ತಿಸತ್ಕೀರ್ತಿವೆತ್ತು- ಕಾಂತಿ

ಪ್ರೊಳ್ದು ಸೀಳ್ದುರುಪಿ ತೇಜಸ್ಸ್ಫೂರ್ತಿಸತ್ಕೀರ್ತಿವೆ । ತ್ತೆಸೆ ದೇಕಾಂತದ ರಾಮದೇವವಿಭು ವಿದ್ರ್ಸ್ ಭಕ್ತವೃಂದಾನ್ವಿತಂ ॥ ... ... ೨೦

ಮತ್ತೀ ॥ ಇಂತೊಲ್ದೇಕಾಂತರಾಮಪ್ರಭು ನೆಗಳ್ದ ಮಹಾಕಾರ್ಯದಾಶ್ಚರ್ಯಮುಂಕಂಡಂತಿಂತೆಂಬೂಹೆ ಗಿಂಬಾಗದ ಮುದದೊದವಂ ತಾಳ್ದು ಸದ್ಭಕ್ತಿಯುಕ್ತ ॥ ಸ್ವಾಂತಂ ತತ್ಪಾದಪದ್ಮಕ್ಕೆರಗಿ ಪೊಗಳ್ದವರ್ಗೂಡಿ ಸುಪ್ರೀತಿಯಿಂ ಶು । ದ್ಧಾಂತಕ್ಕೇಳ್ತಂದು ಪೂಜಾರತಿಯೊಳೆಸೆದ ನುದ್ವೀತತಂದ್ರಂ ವೃಷೇಂದ್ರಂ ॥ ... ... ೨೧

ಕಂ ॥ ಮಾರಡಿಗೆ ನಾಚಿದೇವಂ । ತೀರಸರೊಡಗೂಡಿ ಮೆರೆದ ಸತ್ಕಥೆಯ ನಿದಂ ॥ ಧಾರುಣಿಯೊಳಾಲಿಪರ್ಗೆ ಪು । ರಾರಿ ಜಯಶ್ರೀಯ ನಮಿತಸುಖಮಂ ಮಾಳ್ಪಂ ॥ ೨೨

ರಥೋದ್ಧತವೃತ್ತಂ ॥ ಸೋಮನಾಥಸುಕಥಾಸುರದ್ರುಮಂ । ಭೂಮಿಯಲ್ಲಿ ಸಲೆ ಕೇಳ್ವಸದ್ಬುಧ ॥ ಸ್ತೋಮದಿಷ್ಟಫಲಮೀಯೆ ನಾಣ್ಚಿದಿ । ವ್ಯಾಮರದ್ರುಮರವಟ್ಟುದೆನ್ನಿರೆ ॥

ಕಂ ॥ ಮೈಚಕಾಂಜೆಯ ಮಹಾಚರಿತ್ರಮಂ । ವ್ಯಾಜಮಿಲ್ಲ ದೊಲವಿಂದೆ ಕೇಳ್ದವರ್ಗೋಜೆವೆತ್ತು ಸಕಲೇಪ್ಸಿತಂಗಳಂ । ರಾಜರಾಜಸಖ ನೀವ ನೀಶ್ವರು ॥ ೨೪

ಕಂ ॥ ಏಕಾಂತರಾಮದೇವಮ । ಹಾಕಥನಮ ನಾವನೋದುವಂ ಭಕ್ತಿಯೊಳೊಲ್ದಾಕರ್ಣಿಪ ನಾವ ನವಂ । ಲೋಕೋತ್ತರಸುಖಮ ನತುಳಯಶಮುಂ ಪಡೆವಂ ॥ ೨೫

ಲಲಿತಪದವೃತ್ತ ॥ ಕಂಬುಕಳಹಂಸ ಶರದಂಬುಧರಹಾರವಿಧುಬಿಂಬ ವಿಶದಚ್ಛವಿವಿಡಂಬಕಯಶಸ್ಕ । ಶಾಂಬರಜಗತ್ರಯ ಕುಟುಂಬಸುರಭೂಧರ ನಿತಂಬಚರಮಾಧವಕಳಂ

---

ಸ್ಫುರಣವುಳ್ಳ ಒಳ್ಳೆಯಯಶಸ್ಸಂ ಹೊಂದಿ. ... ... ||೨೦||

ಒದವಂ- ಪ್ರಾಪ್ತಿಯನ್ನು, ಸದ್ಭಕ್ತಿಯುಕ್ತಸ್ವಾಂತಂ- ಒಳ್ಳೆಯ ಭಕ್ತಿಯಿಂ ಕೂಡಿದ ಮನಸ್ಸುಳ್ಳ, ಉದ್ವೀತತಂದ್ರಂ- ಹೋದ ಆಲಸ್ಯವುಳ್ಳ, ವೃಷೇಂದ್ರಂ, ಶುದ್ಧಾಂತಕ್ಕೆ- ಅಂತಃಪುರಕ್ಕೆ, ಪೂಜಾರತಿಯೊಳ್- ಶಿವಶರಣಪೂಜೆಯ ಆಸಕ್ತಿಯಿಂದ. ... ... ||೨೧||

||೨೩|| ಸೋಮನಾಥಸುಕಥಾಸುರದ್ರುಮಂ- ಪುಲಿಗೆರೆ ಸೋಮನಾಥನ ಕಥೆಯೆಂಬ ಕಲ್ಪವೃಕ್ಷವು, ಇಷ್ಟಫಲಮೀಯೆ- ಅಪೇಕ್ಷಿಸಿದ ಫಲವನ್ನು ಕೊಡಲು, ದಿವ್ಯಾಮರದ್ರು- ಸ್ವರ್ಗಲೋಕದಲ್ಲಿ ಹುಟ್ಟಿದ ಕಲ್ಪವೃಕ್ಷವು, ನಾಣ್ಚಿ- ನಾಚಿಕೆಗೊಂಡು, ಮರವಟ್ಟುದು- ಮರವಾಯ್ತು, ಎನ್ನಿರೆ- ಹೀಗೆಂದು ಹೇಳಿರಿ.

ವ್ಯಾಜಂ-ಕಪಟವು, ಓಜೆವೆತ್ತು-ಪ್ರಕಾಶವಾಗಿ, ರಾಜರಾಜಸಖಂ-ಕುಬೇರಮಿತ್ರನಾದ ||೨೪||೨೫||

ಕಂಬು......ಯಶಸ್ಕ— ಕಂಬು- ಶಂಖ, ಕಳಹಂಸ- ಅವ್ಯಕ್ತಮಧುರಧ್ವನಿಯುಳ್ಳ ಹಂಸಪಕ್ಷಿ, ಶರದಂಬುಧರ- ಶರತ್ಕಾಲದಮೇಘ, ಹಾರ- ಮುಕ್ತಾಹಾರ, ವಿಧುಬಿಂಬ- ಚಂದ್ರಮಂಡಲ ಇವುಗಳ, ವಿಶದ- ನಿರ್ಮಲವಾದ, ಛವಿ- ಕಾಂತಿಯನ್ನು, ವಿಡಂಬಕ- ತಿರಸ್ಕರಿಸುವ, ಯಶಸ್ಕ- ಕೀರ್ತಿಯುಳ್ಳ, ಆಶಾಂಬರ- ದಿಕ್ಕುಗಳೇ ವಸ್ತ್ರವಾಗುಳ್ಳ, ಜಗತ್ರಯಕುಟುಂಬ- ಮೂರುಲೋಕವೇ ಸಂಸಾರವಾಗುಳ್ಳ, ಸುರಭೂಧರನಿತಂಬಚರ— ಸುರಭೂಧರ- ಮೇರುಪರ್ವತದ, ನಿತಂಬ- ತಪ್ಪಲಿನಲ್ಲಿ, ಚರ- ಸಂಚರಿಸುವ, ಮಾಧವಕಳಂಬಶಿವಯುಕ್ತ— ಮಾಧವ- ವಿಷ್ಣುವೇ, ಕಳಂಬ— ಬಾಣವಾಗುಳ್ಳ, ಶಿವ- ಪರಮೇಶ್ವರನಿಂದ, ಯುಕ್ತ- ಕೂಡಿದ, ಸಾಂಬ......ರಹಿತ— ಸಾಂಬ- ಈಶ್ವರನನ್ನು, ಶರಣಾಗತ- ಸುರಕ್ಷಕನನ್ನಾಗಿ ಹೊಂದಿದವರ, ಕದಂಬ- ಸಮೂಹವನ್ನು, ಪರಿಪಾಲನ- ಸಂರಕ್ಷಿಸುವದರಲ್ಲಿ, ವಿಳಂಬರಹಿತ- ಜಾಗರೂಕನಾದ, ಅಶ್ವತರ......ಹಿತ—ಅಶ್ವತರ, ಕಂಬಲರೆಂಬ ಗಂಧರ್ವರೇ, ಸು- ಸಮೀಚೀನವಾದ, ಕರ್ಣ- ಕಿವಿಯ, ಆಲಂಬನ- ಆಶ್ರಯ.

ಬ ಶಿವಯುಕ್ತ ॥ ಸಾಂಬಶರಣಾಗತಕದಂಬಪರಿಪಾಲನವಿಳಂಬರಹಿ ತಾಶ್ವಕರಕಂಬಲಸುಕ ರ್ಣ್ಣ । ಲಂಬನ ಗಣೇಂದ್ರನಿಕುರುಂಬಹಿತರಕ್ಷಿಸಘಡಂಬರಮಹಾಕುಧರಶಂಬ ಬಸವೇಶಾ ॥

ಅಕ್ಕರಿಕೆವೃತ್ತ ॥ ಕರಿವರಗಮನೇ ಸುರಪರಶಮನೇ ನಿರವಧಿಕೀರ್ತಿಯುತೇ । ಹರಿ ನತಚರಣೇ ಸುರುಚಿರಭರಣೇ ಪರಮಶಿವಾನುಗತೇ ॥ ವಿರಚಿತಭುವನೇ ಪರಿಹೃತಸವನೇ ಮುರರಿಪುಮುಖ್ಯನತೇ । ವರಗುಣಸರಸೀ ಪುರಹರನರಸೀ ಪೊರೆ ಗಿರಿರಾಜಸುತೇ ॥ ೨೬

ಗದ್ಯ ॥ ಇದು ವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳೇಕಾಂತರಾಮದೇವವಿಜಯವರ್ಣನಂಷಟ್ತ್ರಿಂಶಾಶ್ವಾಸಂ ಪರಿಸಮಾಪ್ತಂ ॥ ... ... ... *

ಷಟ್ತ್ರಿಂಶಾಶ್ವಾಸಂ ಸಂಪೂರ್ಣಂ.

---

ದಲ್ಲುಳ್ಳ ಪರಮೇಶ್ವರನ, ಗಣೇಂದ್ರ- ಗಣಶ್ರೇಷ್ಠರ, ನಿಕುರುಂಬ- ಸಮೂಹಕ್ಕೆ, ಹಿತ- ಆಪ್ತನಾದ, ಅಘಡಂಬರಮಹಾಕುಧರಶಂಬ— ಅಘಡಂಬರ- ಅಧಿಕವಾದ ಪಾಪವೆಂಬ, ಮಹಾಕುಧರ- ದೊಡ್ಡಬೆಟ್ಟಕ್ಕೆ, ಶಂಬ- ವಜ್ರಾಯುಧನಾದ, ಬಸವೇಶಾ! ರಕ್ಷಿಸು. ... ... ||೨೬||

ಕರಿವರಗಮನೇ- ಗಜಶ್ರೇಷ್ಠದ ನಡಗೆಯಂತಿರುವ ನಡಗೆಯುಳ್ಳ, ಸುರಪರಶಮನೇ—ಸುರ- ದೇವತೆಗಳ, ಪರ- ಶತ್ರುಗಳಾದ ರಾಕ್ಷಸರನ್ನು, ಶಮನೇ- ನಾಶಮಾಡಿದ, ನಿರವಧಿಕೀರ್ತಿಯುತೇ- ಅಪಾರವಾದಯಶಸ್ಸಿನಿಂದ ಕೂಡಿದ, ಹರಿನತಚರಣೇ— ಹರಿ- ಇಂದ್ರನಿಂದ, ನತ- ನಮಸ್ಕರಿಸಲ್ಪಟ್ಟ, ಚರಣೇ- ಪಾದವುಳ್ಳ, ಸುರುಚಿರಭರಣೇ—ಸುರುಚಿರ- ಮನೋಹರವಾದ, ಭರಣೇ-ಆಭರಣಗಳುಳ್ಳ, ಪರಶಿವಾನುಗತೇ- ಪರಮೇಶ್ವರನೊಡನೆ ಕೂಡಿದ, ವಿರಚಿತಭುವನೇ- ನಿರ್ಮಿಸಲ್ಪಟ್ಟ ಲೋಕಗಳುಳ್ಳ, ಪರಿಹೃತಸವನೇ— * ನಾಶಮಾಡಲ್ಪಟ್ಟ ಯಜ್ಞವುಳ್ಳ, ಮುರರಿಪುಮುಖ್ಯನತೇ- ವಿಷ್ಣು ಮೊದಲಾದವರಿಂದ ನಮಸ್ಕರಿಸಲ್ಪಟ್ಟ, ವರಗುಣಸರಸೀ- ಶ್ರೇಷ್ಠಗಳಾದ ಗುಣಗಳಿಗೆ ಸರೋವರಸ್ವರೂಪಳಾದ, ಪುರಹರನ- ಶಿವನ, ಅರಸೀ-ಪತ್ನಿಯಾದ, ಗಿರಿರಾಜಸುತೇ ! ಪೊರೆ. ... ... ... ||೨೨||

---

* ದಾಕ್ಷಾಯಣಿಯು ದಕ್ಷಬ್ರಹ್ಮನ ಯಾಗಶಾಲೆಗೆ ಹೋಗಿ ಅವನಿಂದ ಮಾಡಲ್ಪಟ್ಟ ಶಿವದೂಷಣೆಯಂ ಕೇಳಲಾರದೆ ಹೋಮಕುಂಡಲದಲ್ಲಿ ಬಿದ್ದುದರಿಂದಲೇ ಆಪಾರ್ವತಿಯು ಶಿವನಿಗೆ ತಿಳಿಯ ಕೋಪಾವೇಶಮುಂಟಾಗಲು ವೀರಭದ್ರನುದಿಸಿ ಆದಕ್ಷಯಜ್ಞವಂ ನಾಶಗೊಳಿಸಿದುದರಿಂದ ಆ ಯಜ್ಞನಾಶವಂ ಕುರಿತು ದಾಕ್ಷಾಯಣಿಯೇ ಕಾರಣಭೂತಳು. ... ... ... ||೨೮||

ಮೂವತ್ತಾರನೆಯ ಆಶ್ವಾಸವು ಸಂಪೂರ್ಣವು.

श्रीः

ಸರ್ವಜ್ಞಾಯ ಪರಬ್ರಹ್ಮಣೇನಮಃ.

# ಸಪ್ತತ್ರಿಂಶಾಶ್ವಾಸಂ

## ಸೊಡ್ಡಳಭಾಸ್ಕರದೇವಕಥನಂ.

ಕಂ ॥ ಶ್ರೀವಿಮಳಹಿಮನಗೇಂದ್ರಸು । ತಾವಿಳಸಿತಹಸಿತರುಚಿಸುಧಾಧವಳಿತದಂ ॥
ತಾವಳಚರ್ಮಾಂಬರನಖಿ । ಳಾವನನೆಮಗೀಗೆ ಸೌಖ್ಯಮಂ ಶಿವಲಿಂಗಂ ॥ ೧

ವ ॥ ಮತ್ತಮಾಕಲ್ಯಾಣಕಟಕದಲ್ಲಿ ॥ * * * * *

ಶಾ ॥ ಧೀರಂ ದಿವ್ಯಮಹತ್ವಸತ್ವಮಹಿತಂ ಭರ್ಗೋಪಮಂ ಭಾಸುರಾ । ಕಾರಂ ಕಾಮಹರಾಂಘ್ರಿಪದ್ಮಯುಗಳಧ್ಯಾನೈಕನಿಷ್ಠಂ ಶಿವಾ ॥ ಚಾರಾಂಭೋರುಹಭಾಸ್ಕರಂ ಭವಹರಂ ಪ್ರಧ್ವಸ್ತಪಾಪಂ ಗುಣಾ।ಧಾರಂ ಶ್ರೀಗುರುಲಿಂಗಜಂಗಮಸಮಾನಪ್ರೇಮಪೂಜಾಪರಂ॥

ಕಂ ॥ ಅಪುನರ್ಭವತಾಭವ್ಯಂ । ರಿಪುಷಡ್ವರ್ಗಪ್ರಹಾರಿ ಶಮದಮಸಾಂದ್ರಂ ॥ ವ್ಯಪ

---

ಶ್ರೀ......ಅಂಬರಂ— ಶ್ರೀ- ಷಡ್ಗುಣೈಶ್ವರ್ಯಯುಕ್ತಳಾದ, ವಿಮಳಹಿಮನಗೇಂದ್ರ- ನಿರ್ಮಲನಾದ ಪರ್ವತಶ್ರೇಷ್ಠನಾದ ಹಿಮವಂತನ, ಸುತಾ- ಮಗಳಾದ ಪಾರ್ವತಿಯ, ವಿಳಸಿತ- ಪ್ರಕಾಶಿಸುವ, ಹಸಿತ- ನಗುವಿಕೆಯ, ರುಚಿಸುಧಾ- ಸುಣ್ಣದಂತಿರುವ ಕಾಂತಿಯಿಂದ, ಧವಳಿತ- ಶುಭ್ರವಾಗಿ ಮಾಡಲ್ಪಟ್ಟ, ದಂತಾವಳಚರ್ಮ- ಆನೆಯ ತೊವಲಿನ, ಅಂಬರಂ- ವಸ್ತ್ರವುಳ್ಳ, ಅಖಿಳಾವನಂ- ಎಲ್ಲರನ್ನೂ ಪಾಲಿಸುವ, ಶಿವಲಿಂಗಂ, ಎಮಗೆ, ಸೌಖ್ಯಮಂ, ಈಗೆ. ... ... ... ॥೧॥

ಧೀರಂ- ಧೈರ್ಯಶಾಲಿಯಾದ, ದಿವ್ಯಮಹತ್ವಸತ್ವಮಹಿತಂ—ದಿವ್ಯ- ಶ್ರೇಷ್ಠವಾದ, ಮಹತ್ವ- ಮಹಿಮೆ, ಸತ್ವ- ಬಲ, ಇವುಗಳಿಂದ, ಮಹಿತಂ- ಪೂಜ್ಯನಾದ, ಭರ್ಗೋಪಮಂ- ಶಿವಸದೃಶನಾದ, ಭಾಸುರಾಕಾರಂ- ಮನೋಹರವಾದ ರೂಪುಳ್ಳ, ಕಾಮಹರಾಂಘ್ರಿಪದ್ಮಯುಗಳಧ್ಯಾನೈಕನಿಷ್ಠಂ— ಕಾಮಹರ- ಶಿವನ, ಅಂಘ್ರಿಪದ್ಮಯುಗಳ- ತಾವರೆಯಂತಿರುವ ಎರಡುಪಾದಗಳ, ಧ್ಯಾನೈಕ- ಧ್ಯಾನವೊಂದರಲ್ಲೇ, ನಿಷ್ಠಂ- ಶ್ರದ್ಧೆಯುಳ್ಳ, ಶಿವಾಚಾರಾಂಭೋರುಹಭಾಸ್ಕರಂ- ಶಿವಪ್ರಯುಕ್ತಗಳಾದ ಆಚಾರಗಳೆಂಬ ಕಮಲಕ್ಕೆ ಸೂರ್ಯನಾದ, ಭವಹರಂ- ಪುನರುತ್ಪತ್ತಿಯಂ ನಾಶಮಾಡಿದ, ಪ್ರಧ್ವಸ್ತಪಾಪಂ- ನಾಶಮಾಡಲ್ಪಟ್ಟ ಪಾಪವುಳ್ಳ, ಗುಣಾಧಾರಂ- ಸದ್ಗುಣಗಳಿಗಾಶ್ರಯನಾದ, ಶ್ರೀಗುರುಲಿಂಗಜಂಗಮಸಮಾನಪ್ರೇಮಪೂಜಾಪರಂ— ಶ್ರೀ- ಮೋಕ್ಷಸಂಪತ್ಪ್ರದರಾದ, ಗುರು, ಲಿಂಗ, ಜಂಗಮ ಗಳಲ್ಲಿ, ಸಮಾನ- ಒಂದೇಸಮನಾದ, ಪ್ರೇಮಪೂಜಾ- ಅನುರಾಗಪುರಸ್ಸರವಾದ ಪೂಜೆಯಲ್ಲಿ, ಪರಂ- ಆಸಕ್ತನಾದ. ... ॥೨॥

ಅಪುನರ್ಭವತಾಭವ್ಯಂ— ಅಪುನರ್ಭವತಾ- ಪುನಃ ಹುಟ್ಟದೇಇರುವಿಕೆಯಿಂದ, ಭವ್ಯಂ- ಮಂಗಳಸ್ವರೂಪನಾದ, ರಿಪುಷಡ್ವರ್ಗಪ್ರಹಾರಿ- ಕಾಮಾದ್ಯರಿಷಡ್ವರ್ಗಗಳಂ ನಾಶಮಾಡಿದ, ಶಮದಮಸಾಂದ್ರಂ- ಅಂತರಿಂದ್ರಿಯ ಬಹಿರಿಂದ್ರಿಯನಿಗ್ರಹಗಳಿಂದ ಸಂಪೂರ್ಣನಾದ, ವ್ಯಪಗತತಂದ್ರಂ- ಹೋದ ಆಲಸ್ಯಗಳುಳ್ಳ,

ಗತತಂದ್ರಾ ಪರಮತ । ವಿಪಿನೋಗ್ರಕುಠಾರ ನತುಳಭುಜಬಲವಿಭವಂ ॥ ... ೩

ಉ ॥ ಉಗ್ರವಿಲೋಚನಂ ಭುವನಪೂರ್ಣಯಶಂ ಖಲಸಾಧುನಿಗ್ರಹಾ । ನುಗ್ರಹದ ಕ್ಷ ನಕ್ಷರ ನನಾಮಯಕಾಯ ನಜೇಯ ನೀಶಭ ॥ ಕ್ತಾಗ್ರಣಿ ಯನ್ಯದೈವಪರಿಷಜ್ಜಳಭೃತ್ಕುಳಚಂಡಮಾರುತಂ । ವಾಗ್ರಮಣಾತಿದುರ್ಲಭಕಳಾನಿಧಿ ಸೊಡ್ಡಳಭಾಸ್ಕರಾಹ್ವಯಂ ॥

ಕಂ ॥ ನುತನಂ ದೀಕ್ಷನ ಸರ್ವ । ಜ್ಞಾತೆ ಭೃಂಗಿಯ ಲಿಂಗನಿಷ್ಠೆ ವೀರನ ಶೌರ್ಯೋ ॥ ನ್ನತಿ ಗೌತಮನ ದಧೀಚಿಯ । ತತತರ್ಕದ ಶಕ್ತಿ ಶಾಪದಧಟಂಬಿನಿತಂ ॥ ೫

ಕಂ ॥ ಗುರು ಸಂಪಾದಿಸಿ ನಿಜಕರ । ಸರಸಿರುಹದೊಳೊಂದುಗೂಡಿ ಪಡೆದಂ ನಿಜ ಮಿಾ ॥ ಶರಣವರೇಣ್ಯನ ನೆಂದು । ರ್ವರೆ ಪೊಗಳೆ ವಿರಾಜಿಸಿರ್ದ್ದ ನತುಳತನುಹಿಮಂ ॥ ೬

ಪೃಥ್ವೀವೃತ್ತ ॥ ಶ್ರುತಿಸ್ಮೃತಿಪುರಾಣದೊಳ್ಶ್ರುತಿಷಡಂಗಶಾಸ್ತ್ರಂಗಳೊ । ಳ್ವಿತನ್ವದಿತಿಹಾಸದೊಳ್ ಪತಿ ಯುಮೇಶನೇ ನೋಳ್ಪೊಡ ॥ ಚ್ಯುತಾಜಮುಖರೆಲ್ಲರುಂ ಪಶುಗಳೆಂತಿದೇಸತ್ಯ ಮೆಂ । ದತರ್ಕ್ಯಮತಿ ವಾದದೊಳ್ಜಯಿಸಿ ವಾದಿಸಂದೋಹಮಂ ॥ ೭

ಕಂ ॥ ಸರಿಯಿಲ್ಲಭವಂಗೆಂದುಂ । ಚರಾಚರೌಘಪ್ರಪಂಚದೊಳ್ಮಿಗಿಲಿಲ್ಲಂ ॥ ಕರ ಮಿದೆ ನನ್ನಿ ಯೆನುತ್ತಂ । ಬಿರುದಿನ ಪಳಯಿಗೆಯ ನೆತ್ತಿಸು ತ್ತಸೆದಿರ್ದ್ದಂ ॥ ೮

ವ ॥ ಮತ್ತಂ ॥ ಮತ್ತೇ ॥ ಮದವದ್ವೈಷ್ಣವಕುಂಭಿಕುಂಭಭಿರಿವು ಮಾಯಾವಾ

---

ಪರಮತವಿಪಿನೋಗ್ರಕುಠಾರಂ- ಅನ್ಯಮತವೆಂಬ ಕಾಡಿಗೆ ಕ್ರೂರವಾದ ಕೊಡಲಿಯಾದ, ಅತುಳಭುಜಬಲವಿಭವಂ- ಅಸದೃಶವಾದ ತೋಳಿನ ಶಕ್ತಿಯ ವಿಲಾಸವುಳ್ಳ. ... ... ॥೩॥

ಉಗ್ರವಿಲೋಚನಂ- ಭಯಂಕರವಾದ ಕಣ್ಣುಳ್ಳ, ಭುವನಪೂರ್ಣಯಶಂ- ಲೋಕದಲ್ಲಿ ತುಂಬಿದ ಕೀರ್ತಿಯುಳ್ಳ, ಖಲಸಾಧುನಿಗ್ರಹಾನುಗ್ರಹದಕ್ಷಂ— ಖಲ- ನೀಚರು, ಸಾಧು- ಸತ್ಪುರುಷರು ಇವರುಗಳನ್ನು, ನಿಗ್ರಹ- ಶಿಕ್ಷಿಸುವದು, ಅನುಗ್ರಹ- ಪ್ರೀತಿಪೂರ್ವಕವಾಗಿ ಸ್ವೀಕರಿಸುವದರಲ್ಲಿ, ದಕ್ಷಂ- ಸಮರ್ಥನಾದ, ಅಕ್ಷರಂ- ನಾಶರಹಿತನಾದ, ಅನಾಮಯಕಾಯಂ- ರೋಗರಹಿತವಾದ ದೇಹವುಳ್ಳ, ಅಜೇಯಂ- ಮತ್ತೊಬ್ಬರಿಂದ ಜೈಸುವದಕ್ಕಸಾಧ್ಯನಾದ, ಈಶಭಕ್ತಾಗ್ರಣಿ- ಶಿವಭಕ್ತರಲ್ಲಿ ಅಗ್ರೇಸರನಾದ, ಅನ್ಯ......ಮಾರುತಂ— ಅನ್ಯದೈವ- ಶಿವೇತರದೇವತೆಗಳ, ಪರಿಷತ್- ಸಭೆಯೆಂಬ, ಜಳಭೃತ್- ಮೇಘಗಳ, ಕುಳ- ಸಮೂಹಕ್ಕೆ, ಚಂಡಮಾರುತಂ- ಸಮರ್ಥವಾದ ಗಾಳಿಯಾದ, ವಾಗ್ರಮಣಾತಿದುರ್ಲಭಕಳಾನಿಧಿ—ವಾಗ್ರಮಣ- ಬ್ರಹ್ಮನಿಗೂ, ಅತಿದುರ್ಲಭ- ಹೊಂದುವದಕ್ಕಸಾಧ್ಯವಾದ, ಕಳಾ- ವಿದ್ಯೆಗಳಿಗೆ ನಿಧಿ- ನಿಕ್ಷೇಪನಾದ, ಸೊಡ್ಡಳಭಾಸ್ಕರಾಹ್ವಯಂ- ಸೊಡ್ಡಳಬಾಚಯ್ಯನೆಂಬ ಹೆಸರುಳ್ಳವನು. ... ... ॥೪॥

ವೀರನ-ವೀರಭದ್ರೇಶ್ವರನ, ತತತರ್ಕದ-ವಿಸ್ತಾರವಾದಶಾಸ್ತ್ರಾರ್ಥವಾದದ, ಅಧಟು-ಶೌರ್ಯವು. ॥೫॥

ಒಂದುಗೂಡಿ— ಜೊತೆಗೊಳಿಸಿ, ಉರ್ವರೆ- ಭೂಮಿಯು. ... ॥೬॥

ಶ್ರುತಿಷಡಂಗಶಾಸ್ತ್ರಂಗಳೊಳ್-ವೇದಕ್ಕೆ ಅಂಗಗಳಾದ ಶಿಕ್ಷೆ ವ್ಯಾಕರಣ ಛಂದಸ್ಸು ನಿರುಕ್ತ ಜ್ಯೋತಿಷ ಕಲ್ಪವೆಂಬ ಆರುಶಾಸ್ತ್ರಗಳಲ್ಲಿ, ವಿತನ್ವದಿತಿಹಾಸದೊಳ್- ಪ್ರಸಿದ್ಧಗಳಾದ ಪೂರ್ವಚರಿತ್ರಗಳಲ್ಲಿ, ನೋಳ್ಪೊಡೆ- ವಿಚಾರಮಾಡಿ ನೋಡಿದರೆ, ಅಚ್ಯುತಾಜಮುಖರ್- ವಿಷ್ಣುಬ್ರಹ್ಮಾದಿಗಳು, ಅತರ್ಕ್ಯಮತಿ- ಊಹಿಸುವದಕ್ಕಶಕ್ಯವಾದ ಬುದ್ಧಿಯುಳ್ಳ ಬಾಚಯ್ಯನು. ... ... ॥೭॥

ಮಿಗಿಲ್- ಅಧಿಕವಾದದ್ದು, ನನ್ನಿ- ನಿಜವು, ಪಳಯಿಗೆಯಂ- ಧ್ವಜವನ್ನು. ... ॥೮॥

ಮದವ......ರಿಪು— ಮದವತ್- ಗರ್ವವುಳ್ಳ, ವೈಷ್ಣವ- ವಿಷ್ಣುಭಕ್ತರೆಂಬ, ಕುಂಭಿ- ಆನೆಗಳಿಗೆ,

ದಸರ್ಪೋರಗಾ । ರಿ ದುರಂತಭ್ರಮಬೌದ್ಧವಾರ್ಧಿಬಡಬಂ ಚಾರ್ವಾಕಗರ್ವೋರ್ವಿಭೃ ॥
ದ್ಭಿದುರಂ ಜೈನವನೋಗ್ರದಾವಶಿಖಿ ಪಾಷಂಡಾಬ್ಜಕುಂಜೇಭ ನೆಂ । ಬಧಟಂ ತಾಳ್ದು ವಿ
ಜೃಂಭಿಸಿರ್ದ್ದ ನನಿಶಂ ವಿಕ್ರಾಂತವಿಶ್ವಾಧಿಕಂ ॥ ... ... ೯

ಮತ್ತಂ॥ ಪ್ರತ್ಯಬ್ದಂ ಶಿವರಾತ್ರಿಗೆಯ್ದಿ ಘನಸೌರಾಷ್ಟ್ರಕ್ಕೆ ಸಂಪ್ರೀತಿಯಿಂ । ದ
ತ್ಯಂತೋತ್ಸವಶಾಲಿ ಜಾಗರಣ ಮಿರ್ದೀಶಾರ್ಚನಂಗೆಯ್ದು ನಿ ॥ ಷ್ಪ್ರತ್ಯೂಹಂ ಮಿಗೆ
ಬರ್ಪ ನೀತೆಸೆಯು ತಿರ್ದ್ದಂತೋರ್ಮೆ ತಾಂ ಬಂದೊ ಡಾ । ನುತ್ಯಶ್ರೀಶಿವರಾತ್ರಿ ಯಾನಗ
ರಿ ಗೆಯ್ದ ಲ್ಕುಜ್ಜುಗಂಗೆಯ್ವುತಂ ॥ ... ... ೧೦

ವ ॥ ಧರಣಿಪಂಗೆ ತಾಂ ಪೋಪುಜ್ಜುಗಮ ನರುಪೆ ಪಿರಿಯ ಕಣಜದ ಬತ್ತಮ ನಳಿ
ವ ಕಜ್ಜ ಮುಂಟಿಮ್ಮ ಮಣಿಹಮ ನುಳಿದು ಪೋಗಲಾಗ ದೆರಡೆಡೆಯೋಲಗ ಮೆಂತಳವಡು
ಗುಂ ಬಿಲ್ಲಂ ಬಿಳುಗಾಯುಮ ನೊರ್ಕಯ್ಯೊಳಾಂಪಂತಿ ರೆಮ್ಮೋಲಗಮುಂ ಶಿವಭಕ್ತಿಯುಂ
ನಿನ ಗೆರಡೂರ ಬಿರ್ದ್ದಂ ಪಾರ್ದ ಪಾರ್ವ ನೆಡೆಯಾಟದಂತೆ ನಗೆಗೆಡೆಯಕ್ಕು ಮೆಂದು ಬ
ಜ್ಜಳಂ ಮಿಾರಿ ನುಡಿದು ॥ * * * * * * * *

ಕಂ॥ ನೀಂ ಪರಮಭಕ್ತ ನಾದೊ ಡಿ । ದೇಂ ಪಿರಿದೆ ಮಹೇಶ ನಲ್ಲಿ ಗೆಯ್ತರ್ಪುದು
ಕೇ ॥ ಳಾಂ ಪರಿಕಿಪೆ ನಂತೆಸ ಗಿ । ಲ್ಲಿಂ ಪೊರಮಡ ಲೇಕೆ ಭಕ್ತ ನಿನ್ನಯ ಪೆಂಪಂ ॥ ೧೧

ಕಂ॥ ಸೌರಾಷ್ಟ್ರಪತಿಯ ನೀಪುರಿ । ಗೋರಂತಿರೆ ಬರಿಸ ಲಾರಪಿರ್ದೊಡೆ ಸೈತಿ॥

---

ಕುಂಭಿರಿಪು- ಸಿಂಹನಾದಪನು, ಮಾಯಾವಾದಸರ್ಪೋರಗಾರಿ— ಮಾಯಾವಾದ- ಕಪಟವಾದವುಳ್ಳವರೆಂಬ, ಸರ್ಪ- ಹಾವುಗಳಿಗೆ, ಉರಗಾರಿ- ಗರುಡನಾದವನು, ದುರಂತಭ್ರಮಬೌದ್ಧವಾರ್ಧಿಬಡಬಂ— ದುರಂತ ಭ್ರಮ- ದುಷ್ಟವಾದ ಭ್ರಾಂತಿಯುಳ್ಳ, ಬೌದ್ಧ- ಬೌದ್ಧರೆಂಬ, ವಾರ್ಧಿ- ಸಮುದ್ರಕ್ಕೆ, ಬಡಬಂ- ಬಡಬಾಗ್ನಿ ಯಾದವನು, ಚಾರ್ವಾಕಗರ್ವೋರ್ವಿಭೃದ್ಭಿದುರಂ— ಚಾರ್ವಾಕ- ಚಾರ್ವಾಕರ, ಗರ್ವ- ಅಹಂಕಾರವೆಂಬ, ಉರ್ವಿಭೃತ್- ಪರ್ವತಕ್ಕೆ, ಭಿದುರಂ- ವಜ್ರಾಯುಧನಾದವನು, ಜೈನವನೋಗ್ರದಾವಶಿಖಿ— ಜೈನ- ಜೈನರೆಂಬ, ವನ- ಕಾಡಿಗೆ, ಉಗ್ರ- ಭಯಂಕರವಾದ, ದಾವಶಿಖಿ- ಕಾಳ್ಗಿಚ್ಚಾದವನು, ಪಾಷಂಡಾಬ್ಜಕುಂಜೇಭಂ— ಪಾಷಂಡ- ಸರ್ವದೇವತಾಚಿಹ್ನವುಳ್ಳವರೆಂಬ, ಅಬ್ಜ- ಕಮಲಗಳ, ಕುಂಜ- ಸಮೂಹಕ್ಕೆ, ಇಭಂ- ಆನೆಯಾದವನು, ಅಧಟು- ಶೌರ್ಯವನ್ನು, ವಿಕ್ರಾಂತವಿಶ್ವಾಧಿಕಂ- ಪರಾಕ್ರಮವಿಷಯದಲ್ಲಿ ಪ್ರಪಂಚವೆಲ್ಲಕ್ಕೂ ದೊಡ್ಡವನಾದ. ... ... ... ॥೯॥

ಪ್ರತ್ಯಬ್ದಂ- ಪ್ರತಿಸಂವತ್ಸರದಲ್ಲಿಯೂ, ಶಿವರಾತ್ರಿಗೆ- ಶಿವರಾತ್ರಿಯ ಹಬ್ಬಕ್ಕೆ, ಘನಸೌರಾಷ್ಟ್ರಕ್ಕೆ- ದೊಡ್ಡಸೌರಾಷ್ಟ್ರದೇಶಕ್ಕೆ, ಜಾಗರಣಂ- ನಿದ್ರೆಮಾಡದೆ ಜಾಗರೂಕನಾಗಿ, ನಿಷ್ಪ್ರತ್ಯೂಹಂ- ನಿರ್ವಿಘ್ನವಾಗಿ, ಆನುತ್ಯಶ್ರೀಶಿವರಾತ್ರಿ- ಆ ಶ್ಲಾಘ್ಯವಾದ ಶಿವರಾತ್ರಿಯ ಹಬ್ಬವು, ಉಜ್ಜುಗಂಗೆಯ್ವುತಂ- ಪ್ರಯತ್ನಗೊಳ್ಳುತ್ತಾ. ... ... ... ॥೧೦॥

ಅರುಪೆ- ತಿಳಿಸಲು, ಕಣಜದ- ಧಾನ್ಯವಂ ತುಂಬುವ ಹಳ್ಳದ, ಕಜ್ಜಂ- ಕಾರ್ಯವು, ಮಣಿಹಮಂ- ಉದ್ಯೋಗವನ್ನು, ಓಲಗಂ-ಸೇವೆಯು, ಬಿಲ್ಲಂ- ಧನುಸ್ಸನ್ನು, ಬಿಳುಗಾಯುಮಂ- ಬಿಲ್ಲಿಗೆ ಸೇರಿಸಿ ಹೊಡೆಯುವ ಗುಂಡನ್ನೂ, ಒರ್ಕಯ್ಯೊಳ್- ಒಂದೇಕಯ್ಯಲ್ಲಿ, ಪಾರ್ದ- ಅಪೇಕ್ಷಿಸಿದ, ಎಡೆಯಾಟದಂತೆ- ಸಂಚಾರದಹಾಗೆ, ನಗೆಗೆ- ಹಾಸ್ಯಕ್ಕೆ, ಎಡೆ-ಆಸ್ಪದವು. * * * * * * *

ಎಯ್ತರ್ಪುದು- ಬರುವದು, ಪರಿಕಿಪೆಂ-ಪರೀಕ್ಷಿಸುವೆನು, ಪೊರಮಡಲೇಕೆ- ಹೊರಡುವದೇಕೆ. ॥೧೧॥

ಓರಂತಿರೆ- ಮನೋಹರವಾಗಿ, ಸೌರಾಷ್ಟ್ರಪತಿಯಂ- ಸೌರಾಷ್ಟ್ರೇಶ್ವರನನ್ನು, ಸೈತಂ- ಸು

ದರ್ಗಳೊಳ ಗೆಮ್ಮರಿಯ ಕಜ್ಜವು । ನೋರಣದಿಂದೆಸಗುಬಿಡುಬಿಡೆಯುದ್ದವಬಗೆಯಂ ॥ ೧೨

ವ ॥ ಎಂದರಸ ನಾಕ್ಷೇಪೋಕ್ತಿಯಂ ಕೇಳ್ದು ಮುಗುಳ್ನಗೆನಕ್ಕು ॥ * *

ಮತ್ತೇ॥ ಅರಸಂ ಪೋಗಬಿರಿಂದು ನುಣ್ಣಗೆಟಕಿಯಾಡುತ್ತಿರ್ದ ನೀಂಪರ್ವಕೆ । ನಿರ
ದೆಂತೆಯುದ್ದವೆ ನುತಬಿರ್ಕೆ ಕರುಣಾವಾರಾಶಿ ಸೌರಾಷ್ಟ್ರಮಂ ॥ ಬಿರವಾಸಂ ಬಡದೆನ್ನನೇ
ವರಿಯೊಳಂ ಕೊಂಡೊಯ್ವನಂತಲ್ಲದಂ । ದೆರವಂ ನೂಡವೆ ತಾನೆ ಬರ್ಪ ನಣ ಮಾನಿರ್ದ
ಲ್ಲಿ ಗೀರಾತ್ರಿಯೊಳ್ ॥ ... ... ... ೧೩

ಕಂ ॥ ಆನಂದದಿ ನಾದೊತ ಮಾ । ವೇವಂ ಮದ್ವ್ರತಮ ನೊಲ್ದು ಸಲಿಸುಗು ಮಣ
ಮೆಂ ॥ ಬಾವಿಭು ನಚ್ಚಿರೆ ಮನದೊಳು । ಮಾವರ ನವನಿರ್ದ ಮಂದಿರಕ್ಕೋಲವಿಂದಂ ॥ ೧೪

ಕಂ ॥ ಮಿಳಿರ್ಪ ವೃಷಭಧ್ವಜಂ ಕಂ । ಗೊಳಸಿರೆ ಬಳಗಯ್ಯೊ ಳೆಡಪಕಯ್ಯೊಳ್ಪಿಡಿ
ದು ॥ ಜ್ವಳಲೇಖನಮಂ ಸಂದಣಿ । ಗೊಳುತಂ ಬೆಮರುತ್ತ ಬಂದು ನಿಂದವನಿಬಿರೊಳ್ ॥ ೧೫

ಕಂ ॥ ಪಳುಕುವಣಿವೆರೆದ ಕಂಠದ । ವಿಳಸದ್ರುದ್ರಾಕ್ಷಮಾಲೆ ಪಳಿಯುಡೆ ಸುಲಿಪ ॥
ಲ್ತೊಳಪ ಲಲಾಟದ ಭಸಿತದ । ವಿಲೇಪನಂ ಮಿಸುಗೆ ನಿಂದು ನಗುತಿಂತೆಂದಂ ॥ ೧೬

ಉ ॥ ಕೇಳೆಲೆ ಭಕ್ತ ಬಂದಪ ನುಮಾಧಿಪನೀಶಿವರಾತ್ರಿ ಗೀಪೊಳ । ಲ್ಗೀಳೊಲವಿಂದೆ
ಸಂವರಿಸುಧಾನ್ಯನಿಕೇತನಮಂ ನಿಜಾಪ್ತಭೃ । ತ್ಯಾಳಿಗೆ ಪೇಳ್ದು ಸಿಂಗರಿಸು ವೀಧಿಗಳಂ
ಗುಡಿಗಟ್ಟು ನಿನ್ನ ಸ। ಮ್ಮೇಳನ ಮೆಂತೂ ಬರ್ಪ ನೆನುತೋಲೆಯ ನಿನ್ನೆಡೆ ಗೀಶನಟ್ಟಿದಂ ॥

ವ॥ ಎಂಬು ತಂದೋಲೆಯಂ ಕರತಳದೊಳೀಯೆ ಮಹಾಪ್ರಸಾದ ಮೆಂದು ಕೈಕೊಂ
ಡೆರಗಿ ತಲೆಯೊಳಟ್ಟೋದಿ ನೋಳ್ಪನಿತರೊಳಾತನಸ್ಯಿ ಯದೃಶ್ಯ ನಾಗೆ ಮತ್ಪ್ರಾಣೇಶ
ನಿರೂಪದಿ ನೇಳ್ತಂದ ನೆಂದರಿ ದಮಂದಾನಂದಕಂದಳಿತಹೃದಯಾರವಿಂದನಾಗಿ ಭಕ್ತವರ್ಯ
ಭವಾನಿಯರಸಂ ಬರ್ಪ ನೆಂಬ ಲೇಖನದರ್ಥಮ ನಲ್ಲಿ ಪೇಳೆ ಶಿವಕಿಂಕರ ಕೇಳ್ದು ಸಡಗರಂ

---

||೧೨||
ಮ್ಮನೆ, ಓರಣದಿಂ- ನೇರವಾಗಿ. ... ... ...

ನುಣ್ಣಗೆಟಕಿಯಾಡುತ್ತೆ- ನಯವಾದ ಮೂದಲೆಮಾತನ್ನಾಡುತ್ತ, ಈಪರ್ವಕೆ- ಈ ಹಬ್ಬಕ್ಕೆ, ಇರ್ಕೆ- ಇರಲಿ, ಕರುಣಾವಾರಾಶಿ- ದಯಾರಸಕ್ಕೆ ಸಮುದ್ರನಾದ, ಸೌರಾಷ್ಟ್ರಮಂಬಿರವಾಸಂ- ಸೌರಾಷ್ಟ್ರ ದೇಶದಲ್ಲಿರುವ ದೇವಸ್ಥಾನದಲ್ಲಿ ನೆಲಸಿರುವ, ಏಪರಿಯೊಳಂ- ಯಾವರೀತಿಯಿಂದಲೂ, ಎರವಂ- ಭೇದವನ್ನು, ||೧೩||
ಅಣಂ- ಅತ್ಯಂತವಾಗಿ, ... ... ...

||೧೪||
ಸಲಿಸುಗುಂ- ನೆರವೇರಿಸುವನು, ನಚ್ಚಿ- ನಂಬಿ. ... ...

||೧೫||
ಉಜ್ವಳಲೇಖನಮಂ- ಪ್ರಕಾಶಿಸುವ ಪತ್ರವನ್ನು, ಸಂದಣಿಗೊಳುತಂ- ಸನ್ನದ್ಧನಾಗುತ್ತ.

ಪಳುಕುವಣಿವೆರೆದ-ಸ್ಫಟಿಕದ ಮಣಿಯೊಡನೆ ಕೂಡಿದ, ಪಳಿಯುಡೆ- ಉಟ್ಟುಗೊಳ್ಳುವ ವಸ್ತ್ರ, ಸುಲಿಪ ||೧೬||
ಲ್- ಶುಭ್ರವಾದ ಹಲ್ಲು. ... ... ...

ಸಂವರಿಸು- ಸಿದ್ಧಪಡಿಸು, ಗುಡಿಗಟ್ಟು- ತೋರಣವಂ ಕಟ್ಟು, ಸಮ್ಮೇಳನಂ- ಜೊತೆಯು, ಓಲೆ ||೧೭||
ಯಂ- ಪತ್ರವನ್ನು. ... ... ...

ಅದೃಶ್ಯಂ- ಕಣ್ಣಿಗೆ ಕಾಣಿಸದವನು, ಮತ್ಪ್ರಾಣೇಶನಿರೂಪದಿಂ- ನನ್ನ ಪ್ರಾಣಕ್ಕೆ ಸ್ವಾಮಿಯಾದ ಶಿವನ ಅಪ್ಪಣೆಯಿಂದ, ಅಮಂದಾನಂದಕಂದಳಿತಹೃದಯಾರವಿಂದಂ- ಅಧಿಕವಾದ ಸಂತೋಷದಿಂದ ವಿಕಸಿತ

ಜೆಸುತ್ತ ಬಸವರಸಂ ಗರುವ ಲೊಡನೆ ॥ * * * * * *

ಮತ್ತೇ ॥ ಪರಮಾನಂದಮ ನಾಳ್ದು ಬಂದು ಬಸವಂ ಕಂಡುರ್ವಿ ಕೊಂಡಾಡಿ ಭೂ। ಸ್ವರದೇವು ಗರಗುತ್ತ ಭಕ್ತಸಭೆಯೊ ಳ್ಕುಳ್ಳಿರ್ದು ನಣ್ಪಿಂದೆ ತ ॥ ತ್ಪುರಮಂ ಸಿಂಗರಿಸ ಲ್ಕೆ ಪೇಳ್ದು ನಗರಾಧ್ಯಕ್ಷರ್ಗೆ ಸಲ್ಲೀಲೆವೆ । ತ್ತರೆ ನಾನಾವಿಧನಾಟಕಂ ನೆಗಳ್ದು ದಾಸದ್ಭ ಕ್ತಸಂತಾನದೊಳ್ ॥ ... ... ... ೧೮

ಮತ್ತೇ ॥ ಕೆಲ ರುತ್ಸಾಹದಿ ನೊಲ್ದು ಪಾಡೆ ಕೆಲ ರುದ್ಯದ್ವಾದ್ಯಸಂದೋಹಮಂ । ನಲವಿಂ ಬಾಜಿಸೆ ನಾಟ್ಯಮಂ ಕೆಲ ರುದಾರಪ್ರೌಢಿಯಿಂ ದಾಡೆ ಭೃಂ ॥ ಗಿಲಸದ್ವೇಷಮ ನಾಂ ತು ನರ್ತಿಸೆ ಕೆಲರ್ ಸೋಮೇಶಸಂಕೀರ್ತನಾ। ವಲಿಯಂ ಮತ್ತೆ ಕೆಲಂಬ ರುಗ್ಗಡಿಸೆ ಪಂಪಂ ತಾಳ್ದು ದಾಸಂಭ್ರಮಂ ॥ ... ... ... ೧೯

ವ॥ ಶಿವವಾಸರದೊಳಾಗ ಳ್ಭಾನುಬಿಂಬಂ ಮಧ್ಯಾಂಬರಮಂ ಕಳೆದಿಳಿವಪ್ರೊತ್ತಿನೊಳ್॥

ಕಂ॥ ಮುಂಬರಿ ದಿಳಿದುದು ಘೋರೆಂ । ದುಬರದಿಂ ಕುಸುಮವೃಷ್ಟಿ ಸುರಭೇರಿರವಂ॥ ಬೆಂಬಿಡ ದೊಗೆದುದು ಭಕ್ತಕ । ದಂಬಂ ಮುದಮಾಳ್ದು ದಾಗ ಳತಿಸಂಭ್ರಮದಿಂ ॥ ೨೦

ಚಂ ॥ ತೊಳತೊಳಪಂಗಕಾಂತಿ ರವಿರೋಚಿಯ ನೊತ್ತಿ ಪಳಂಚೆ ದಿವ್ಯಮಂ। ಗ ಳದಿವಿಜಾನಕಧ್ವನಿ ವಿಜೃಂಭಿಸೆ ಮುಂದೆ ವೃಷೇಂದ್ರಕೇತನಂ ॥ ಮಿಳಿರೆ ಮಹೋತ್ಸವಂಬೆರ ಸು ಭಕ್ತರುಘೋ ಯೆನೆ ಬಂದು ನಂದಿಯಿಂ । ದಿಳಿ ದಿಳೆ ಗದ್ಬುತಂ ಮಸಗೆ ಧಾನ್ಯಗೃಹಸ್ಥಿ ತನಾದ ಸೀಶ್ವರಂ ॥ ... ... ... ೨೧

ವ ॥ ಅಂತು ಸೌರಾಷ್ಟ್ರಸೋಮೇಶ್ವರಂ ಭಕ್ತವ್ರತಪಾಲನನಿಮಿತ್ತಂ ಮೇಳ್ತಂ ದು ಪಿರಿಯ ಕಣಜಮ ನೊಡೆದು ಲಿಂಗಾಕೃತಿಯಿಂ ಧರೆಯೊಳ್ ನೆಲಸಿ ನಿಲ್ವಿನ ಮಲ್ಲಿ ಬಜ್ಜ ಳಂ ಕಂಡು ಕೌತುಕಂಬಟ್ಟು ಬಾಚರಸಂಗೆ ಪೊಡಮಟ್ಟು ಪರಿಜನಸಹಿತಂ ಪೊಗಳುತ್ತಿ ರ್ದ ನಾಗಳ್ ॥ * * * * * * * * *

ಕಂ ॥ ಪುಲಿಗೆರೆ ಗುಂದ್ಯೈಡಿಸಿದಂ। ನಲವಿಂ ಸೌರಾಷ್ಟ್ರಪತಿಯ ನಾಡಯ್ಯಂ ನೊ॥ ನ್ನಲಿಗೆಗಿರವೈದಿಸಿದ ನು । ಜ್ವಲಮತಿಯಿಂಮಲ್ಲಿನಾಥನಂ ಸಿದ್ಧೇಂದ್ರಂ ॥ ೨೨

ಕಂ ॥ ಎಂದೆಂಬ ಕಥೆಯ ನಾಲಿಪೆ। ನಿಂದೀಸೌರಾಷ್ಟ್ರನಾಥಸೋಮೇಶ್ವರನಂ ॥ ತಂ

---

ಪಾದ ಮನಸ್ಸೆಂಬ ಕಮಲವುಳ್ಳವನು. * * * * * * * *

ಉರ್ವಿ- ಉತ್ಸಾಹಪಟ್ಟು, ನಾನಾವಿಧನಾಟಕಂ- ಅನೇಕ ಪ್ರಕಾರವಾದ ಆಟವು. ॥೧೮॥

ಉಗ್ಗಡಿಸೆ- ಕೂಗಲು. ... ... ... ॥೧೯॥

ಭಾನುಬಿಂಬಂ- ಸೂರ್ಯಮಂಡಲವು, ಮಧ್ಯಾಂಬರಮಂ- ಅಂತರಿಕ್ಷಮಧ್ಯವನ್ನು. * *

ಕುಸುಮವೃಷ್ಟಿ- ಹೂವಿನ ಮಳೆಯು, ಸುರಭೇರಿರವಂ- ದೇವತೆಗಳ ನಗಾರಿಯ ಶಬ್ದವು, ಬೆಂಬಿಡದೆ- ನಿರವಚ್ಛಿನ್ನವಾಗಿ. ... ... ... ॥೨೦॥

ದಿವ್ಯಮಂಗಳದಿವಿಜಾನಕಧ್ವನಿ— ದಿವ್ಯ- ಶ್ರೇಷ್ಠವಾದ, ಮಂಗಳ- ಶುಭಸೂಚಕವಾದ, ದಿವಿಜ- ದೇವತೆಗಳ, ಆನಕ- ತಮಟೆಯ, ಧ್ವನಿ, ಮಸಗೆ- ಹೆಚ್ಚಾಗಲು. ... ॥೨೧॥

ಭಕ್ತವ್ರತಪಾಲನನಿಮಿತ್ತಂ- ಭಕ್ತನ ನಿಯಮವನ್ನು ಸಂರಕ್ಷಿಸುವದಕ್ಕಾಗಿ. * * *

ದುತಾ ನಿರ್ದೆಡೆ ಗೊಲ | ವಿಂದು ಭವಭಕ್ತವರ್ಯಭಾಸ್ಕರದೇವಂ ‖ ... ೨೩

ಕಂ ‖ ಹರ ನೇಳ್ತಂದಂಗಡ ಭಾ | ಸ್ಕರದೇವಂ ನೆನೆಯೆ ಲಂಕೆ ಗಾದಶಕಂಠಂ ‖ ಬರ ವೇಳ್ದೊಡ ಮೇಂ ಬಾದನೆ | ನಿರುಪಾಧಿಕಭಕ್ತಿ ಗಲ್ಲ ದೀಶ್ವರ ನೊಲಿಯಂ ‖ ೨೪

ಮತ್ತಂ ‖ ಹರ ನಿರ್ಪಲ್ಲಿಗೆ ಕಾಸಿಗೆಯ್ದ ಹರಿಮುಖ್ಯಾಮರ್ತ್ಯರುಂ ಸಂತತೋ | ಗ್ರರುಚಿಸ್ಫೂರ್ತಿತಪಸ್ತಪಸ್ವಿಗಳು ಮತ್ಯಾಯಾಸದಿಂ ಪೂಜೆಯಂ ‖ ಚಿರಕಾಲಂ ಸಮೆ ದಿ ಷ್ಟಸಿದ್ಧಿವಡೆದ ರ್ಭಕ್ತಾರ್ಯ ನಿರ್ದಲ್ಲಿ ಗೀ | ಶ್ವರನಂ ದಲ್ಬರಿಸಿದ್ದ‍್ರ್ಸಿಶರಣನು ಪೋಲ್ವ ನ್ನರಾರ್ಧರಾತ್ರಿಯೊಳ್ ‖ ... ... ... ೨೫

ಮತ್ತಂ ‖ ಎಂದು ವೃಷೇಂದ್ರ ನುಗ್ಗಡಿಸಿ ಕೀರ್ತಿಸು ತೊಪ್ಪಿರೆ ಹೇಮರತ್ನದಿಂ ‖ ದಿಂದುಧರಂಗೆ ಬಲ್ಗುಡಿಯ ನಾಗಿಸಿ ಗೋಪುರವಪ್ರಮುಖ್ಯಮಂ ‖ ಕುಂದದ ಸರ್ವಭೋಗ ವಿ ಭವಂಗಳುಮಂ ಶಿವರಾತ್ರಿಯರ್ಚನಾ | ನಂದಮ ನಾಳ್ದ ಭಕ್ತಿನಿಧಿ ಭಾಸುರಭಾಸ್ಕರದೇ ವ ನಿರ್ಪನಂ ‖ ... ... ... ೨೬

ಕಂ ‖ ಸೌರಾಷ್ಟ್ರವಲ್ಲಭಂ ಕೊ | ಟ್ಟಾರದ ಸೋಮೇಶ ನೆಂದು ಪೆಸರ್ವಡೆ ದೆಸೆ ದಂ ‖ ಭೂರಿಜನಮರಿಯೆ ಕೀರ್ತಿಸೆ | ಸೂರಿಜನಂ ಭಕ್ತಕೀರ್ತಿ ಪಸರಿಸೆ ದರೆಯೊಳ್‖ ೨೭

ವ ‖ ಇಂತು ನಿಜಮಹತ್ವಮಂ ಮೆರೆದು ಪರಮತಕೋಲಾಹಲ ನೆಂಬ ಬಲ್ಬಿರುದಾಂ ತು ಮೆರೆವ ಭಾಸ್ಕರದೇವನ ಶೈವತೇಜಸ್ಸ್ಫೂರ್ತಿಯಂ ಸೈರಿಸಲಾರದೆ ರಾಜಕೌಶಿಕ ನೆನಿ ಪ ಬಿಜ್ಜಳಂ ಪರಸಮಯಜನಪರಿವೃತಂ ಪ್ರತಾಪನಾರಾಯಣ ನೆಂಬ ಪೆಸರಿಂ ದೊಂದುವಿ ಷ್ಣುವಿಗ್ರಹಮ ನರಮನೆಯ ಮುಂದೆ ವಿಚಿತ್ರಮಪ್ಪಭಿನವದೇವಾಲಯಮಂ ರಚಿಸಿ ಸುಮು ಹೂರ್ತದೊ ಳ್ಪ್ರತಿಷ್ಠೆಗೆಯ್ದು ಗುಡಿಯ ರಂಗಮಂಟಪದೊ ಳೋಲಗಂಗೊಟ್ಟು ಸಕಲ

---

‖೨೨‖ ಶಿವಭಕ್ತವರ್ಯಭಾಸ್ಕರದೇವಂ- ಶಿವಭಕ್ತರಲ್ಲಿ ಶ್ರೇಷ್ಠನಾದ ಬಾಚಯ್ಯನು. ‖೨೩‖

ಆದಶಕಂಠಂ- ರಾವಣನು, ಬರನೇಳ್ದೊಡಂ- ಬರಬೇಕೆಂದು ಹೇಳಿಕೊಂಡಾಗ್ಯೂ, ನಿರುಪಾಧಿಕಭಕ್ತಿ ಗಲ್ಲದೆ- ನಿಷ್ಕಪಟವಾದ ಭಕ್ತಿಗೆ ಹೊರತು. ... ... ‖೨೪‖

ಇರ್ಪಲ್ಲಿಗೆ- ಇರುವಸ್ಥಾನವಾದ, ಹರಿಮುಖ್ಯಾಮರ್ತ್ಯರುಂ- ವಿಷ್ಣುವೇ ಮೊದಲಾದ ದೇವತೆಗಳೂ, ಸಂತತೋಗ್ರರುಚಿಸ್ಫೂರ್ತಿತಪಸ್ತಪಸ್ವಿಗಳುಂ— ಸಂತತ- ನಿರಂತರವಾದ, ಉಗ್ರ- ಇತರರಿಗೆ ಭಯಂಕರ ವಾದ, ರುಚಿಸ್ಫೂರ್ತಿ- ತೇಜಸ್ಸ್ಫುರಣವುಳ್ಳ, ತಪಃ- ತಪಸ್ಸುಳ್ಳ, ತಪಸ್ವಿಗಳುಂ- ಯತಿಗಳೂ, ಸಮೆದು- ಮಾ ಡಿ, ದಲ್- ನಿಜವಾಗಿ, ಪೋಲ್ವನ್ನರ್- ಸರಿಹೋಲುವವರು. ... ‖೨೫‖

ಹೇಮರತ್ನದಿಂದೆ- ಚಿನ್ನದಿಂದಲೂ ರತ್ನಗಳಿಂದಲೂ, ಬಲ್ಗುಡಿಯಂ- ಬಲವಾದ ದೇವಸ್ಥಾನವನ್ನು, ಗೋಪುರವಪ್ರಮುಖ್ಯಮಂ- ಗೋಪುರ ಪ್ರಾಕಾರ ಮೊದಲಾದವುಗಳನ್ನು, ಸರ್ವಭೋಗವಿಭವಂಗಳುಮಂ- ಸಕಲ ಸೌಖ್ಯವಿಲಾಸಗಳನ್ನೂ, ಅರ್ಚನಾನಂದಮಂ- ಪೂಜೆಯಿಂದುಂಟಾಗುವ ಸಂತೋಷವನ್ನೂ. ‖೨೬‖

ಕೊಟ್ಟಾರದಸೋಮೇಶಂ- ಧಾನ್ಯದ ಮನೆಯ ಸೋಮೇಶ್ವರನು, ಭೂರಿಜನಂ- ಬಹುಜನವು, ಸೂರಿ ಜನಂ- ವಿದ್ವಾಂಸರು. ... ... ... ‖೨೭‖

ಮೆರೆದು- ಪ್ರಕಾಶಪಡಿಸಿ, ರಾಜಕೌಶಿಕಂ- ದೊಡ್ಡಗೂಬೆಯು, ಪರಸಮಯಜನಪರಿವೃತಂ- ಶಿವೇತರ ಮತದ ಜನಗಳಿಂದಾವರಿಸಲ್ಪಟ್ಟವನಾಗಿ, ರಂಗಮಂಟಪದೊಳ್- ಹಜಾರದಲ್ಲಿ, ಸಕಲವಿನಿಯೋಗದವರ್- ಎ

ವಿನಿಯೋಗದವ ರೋಲಗಿಸೆ ಗಾಡಿಯಿಂ ಕುಳ್ಳಿರ್ದುರ್ ಬಂದರೆಲ್ಲರಂನಿರೀಕ್ಷಿಸಿ ಭಾಸ್ಕರದೇವಂ ಬಾರದುದ ನರಿದು ಬಸವರಾಜನಂ ನೋಡಿ ॥ * * * * *

ಕಂ ॥ ಎಲ್ಲರ್ಬಂದರ್ಭಾಸ್ಕರ । ನಿಲ್ಲಿ ಗದೇಂ ಬಂದ ನಲ್ತು ಶಿವಭಕ್ತಿಮದಂ ॥ ನಿಲ್ಲದೆ ತಲೆಗೇರಿತೊ ಬಳ । ಕೊಲ್ಲನೊ ಮತ್ಸಭೆಯ ನೆನುಗೆ ಬೆಸಕೈವುದುಮಂ ॥ ೨೮

ವ॥ ಎಂದರಸಂ ರೋಷೋನ್ಮಿಷಿತಹೃದಯಂ ನುಡಿಯೆ ಬಸವರಾಜಂ ಮಾರ್ಕೊಂಡು ॥

ಕಂ ॥ ಸಲ್ಲದು ಕೋಪಂ ತಪ್ಪೆನಿ । ಸಿಲ್ಲದನೊಳ್ಕಾವ ನಿನ್ನ ನುಳಿ ದಾಹವದೊ ॥ ಳ್ನಿಲ್ಲದೆ ಜಗುಳ್ದು ನೆಗಳ್ದನೆ । ಪೊಲ್ಲದುದಂ ನಿನ್ನ ಬೆಸನ ನೇಂ ಮೀರಿದನೆ ॥ ೨೯

ಕಂ ॥ ಅರಸಂಗೆ ಬರಿದೆ ಮುಳಿ ಸು । ಬ್ಬರಿಸಿದೊಡಳಿಜಸಕೆ ಕಾರಣಂಗಡ ನಿನ್ನೊ ॥ ಳ್ಪರಿಭಾವಿಪ್ಪುದೆಮ್ಮಯ ಭಾ । ಸ್ಕರದೇವನೊಳಾವ ಕೊರತೆಯುಂ ಪುಗ ದೆಂದುಂ ॥ ೩೦

ಕಂ ॥ ಶರಣರ್ಶಿವೈಕನಿಷ್ಠಾ । ಭರಣರ್ಪರದೈವನಿಳಯಮುಂ ಪುಗ ರೆಂತುಂ ॥ ಪರಮವ್ರತಯುತ ರಜಪುರಿ । ಸುರಪಾದ್ಯರ ನಲ್ಪಕಾಷ್ಠದಿಂ ಕಡೆಗಾಣ್ಬರ್ ॥ ೩೧

ಕಂ॥ಲಿಂಗೈಕನಿಷ್ಠ ನೆನಿಸುವ । ಭೃಂಗೀಶಂ ಶಕ್ತಿಯುಕ್ತ ಮನಿ ಪೀಶನ ವಾ ॥ ಮಾಂಗಮನೆ ಪಿಂಗುತುಂ ಬಲ । ದಂಗಕೆ ಬಲಗಯ್ಯೊಳೆರಗಿ ಭಜಿಸಿದ ನಲ್ತೆ ॥ ೩೨

ಕಂ ॥ ಹರ ನಾಶಿಶಕ್ತಿ ಗಿರಿಶನ । ಪರಮಪ್ರಿಯೆ ಯೆನಿಪ ದೇವಿಯುಮ ನಾದೊಡ ಮೀ । ಶ್ವರಭಕ್ತರ್ಮನ್ನಿಸ ರೆನೆ । ಹರಿವಿಧಿಮುಖಸುರರ ನೆಂತುಮೇಂ ಲೆಕ್ಕಿಪರೆ ॥ ೩೩

ಕಂ॥ ಅಸನುಗುಣ ನೋರ್ವ ನನ್ಯರ । ಪೆಸರೆಂದುಂ ಕಿವಿಯ ನಂಟಲಾಗ ದೆನುತ್ತಂ ॥ ಮಿಸುಗುವ ಗಂಟೆಗಳಂ ತಳೆ । ದೆಸೆಯನೆ ಕಿವಿಯಲ್ಲಿ ನೆಗಳ್ದ ಘಂಟಾಕರ್ಣಂ ॥ ೩೪

---

ಲ್ಲಾ ಉಳ್ಳಿಗದವರೂ, ಓಲಗಿಸೆ- ಸೇವೆಯಂ ಮಾಡಲು, ಗಾಡಿಯಿಂ- ವಿಲಾಸದಿಂದ, ಬಾರದುದಂ-ಬರದೇಇರುವದನ್ನು. * * * * * * * * * *

ಬೆಸಕೈವುದುಮಂ- ವಿಜ್ಞಾಪಿಸುವದನ್ನೂ. ... ... ॥೨೮॥

ರೋಷೋನ್ಮಿಷಿತಹೃದಯಂ-ಕೋಪದಿಂದುಬ್ಬಿದ ಮನಸ್ಸುಳ್ಳವನಾಗಿ, ಮಾರ್ಕೊಂಡು-ಪ್ರತಿಯಾಗಿ. *

ಸಲ್ಲದು- ಯೋಗ್ಯವಾದುದಲ್ಲ, ಇನಿಸು- ಇಷ್ಟು, ಆಹವದೊಳ್- ಯುದ್ಧದಲ್ಲಿ, ಜಗುಳ್ದು- ಸುರಿದು, ಪೊಲ್ಲದುದಂ- ಉಚಿತವಲ್ಲದ ಕಾರ್ಯವನ್ನು, ಬೆಸನಂ- ಆಜ್ಞೆಯನ್ನು. ... ॥೨೯॥

ಬರಿದೆ- ವ್ಯರ್ಥವಾಗಿ, ಉಬ್ಬರಿಸಿದೊಡೆ- ಆವಿರ್ಭವಿಸಿದರೆ, ಅಳಿಜಸಕೆ- ಅಪಕೀರ್ತಿಗೆ, ಪರಿಭಾವಿಪುದು- ಆಲೋಚಿಸುವದು, ಪುಗದು- ಪ್ರವೇಶಿಸಿಲ್ಲ. ... ... ॥೩೦॥

ಶಿವೈಕನಿಷ್ಠಾಭರಣರ್- ಪರಮೇಶ್ವರನೊಬ್ಬನಲ್ಲೇ ಇರುವ ಶ್ರದ್ಧೆಯೇ ಭೂಷಣವಾಗುಳ್ಳ, ಪರದೈವನಿಳಯಮಂ- ಶಿವೇತರದೇವತೆಗಳಿರುವ ಮನೆಯನ್ನು, ಪರಮವ್ರತಯುತರ್- ಉತ್ಕೃಷ್ಟವಾದ ಶಿವಪೂಜಾನಿಯಮದಿಂದ ಕೂಡಿದ, ಅಲ್ಪಕಾಷ್ಠದಿಂ- ಚಿಕ್ಕ ಕಡ್ಡಿಗಿಂತಲೂ, ಕಡೆಗಾಣ್ಬರ್- ಕಡಮೆಯಾದವರನ್ನಾಗಿ ನೋಡುವರು. ... ... ... ॥೩೧॥

ಶಕ್ತಿಯುಕ್ತಂ- ಆದಿಶಕ್ತಿಯಿಂದ ಕೂಡಿದವನು, ವಾಮಾಂಗಮನೆ- ಎಡದ ದೇಹವನ್ನು, ಪಿಂಗುತಲ- ಬಿಡುತ್ತಾ ... ... ॥೩೨॥

ಮನ್ನಿಸರ್- ಮರ್ಯಾದಿಸುವದಿಲ್ಲ, ಲೆಕ್ಕಿಪರೇಂ-ಗಣನೆಮಾಡುವರೇ ? ... ॥೩೩॥

ವ॥ ಮತ್ತಂ ಮಹೇಂದ್ರಮಂಗಳ ಮೆಂಬ ಪೆಸರ ನಗರದೊಳಾರ್ಯಮ ನೆಂಬ ಭಕ್ತಂ ಪರದೈವನರ್ಗ್ನಳಂ ಗಣಿಸದೆ ಶಿವೈಕಭಕ್ತಿಯಿಂ ನೆಗಳುತ್ತಮಿರ್ದು॥ * * *

ಕಂ॥ ಹರನಾಮ ಮಲ್ಲದಿತರಾ । ಮರನಾಮಮ ನೆನ್ನ ಮುಂದೆ ನುಡಿದನ ತಲೆಯಂ॥ ಕರವಾಳಿಂ ತರಿದಪೆ ನೆಂ । ದೆರಡಿಲ್ಲದೆ ಪ್ರೂಣ್ಕೆಗೆಯ್ದು ತಾ ನಿರ್ಪನೆಗಂ॥ ೩೫

ಚ॥ ಸುರುಚಿರರುದ್ರಸೂಕ್ತಮನೆ ಬೇಡಿಯೊಳೋದುತೆ ಪಾರ್ವ ನೋರ್ವ ನಾ । ಗರ ಕಿರದೆಯ್ದಿ ಭಿಕ್ಷೆಗೆ ನಿರೀಕ್ಷಿಸಿ ಭೈಕ್ಷಮ ನಿಕ್ಕೆ ಭಕ್ತನಾ॥ ದರದೊಳೆ ತಾನೆ ಕೊಳ್ವೆ ಡೆಯೊಳೊದಗುಳೊಕ್ಕೊಡೆ ಕಾಡು ತದ್ದ್ವಿಜಂ । ಹರಿಹರಿ ಯೆಂಬಿನಂ ಪೊಡೆದು ಪುಟ್ಟ ನೊಳಿಕ್ಕಿದ ನಗ್ರಜನ್ಮನಂ॥ ... .. ... ೩೬

ವ॥ ಅಂತು ತನ್ನಿದಿರೊಳನ್ಯಶಬ್ದಮ ನುಚ್ಚರಿಸಿದ ಪಾರ್ವನಂ ಮಡಿಪ ಲೊಡ ನದಂ ಕಂಡು ನೆರೆಯ ಭೂಸುರರೆಲ್ಲ ನೆರೆದು ಕಪುಮುಳಿಸೇರಿ ಮಿಾರಿ॥ * *

ಕಂ॥ ತವಗುಳ್ಳೊಡನ್ನಮಿಕ್ಕುಗೆ । ಮನೆಗೇಳ್ತರೆ ಭಿಕ್ಷು ಭೈಕ್ಷಮಂ ತನಗಿಲ್ಲಾ॥ ಗೆ ನಿತಾಂತ ಮಿಲ್ಲ ನಡೆಯಂ । ದೆನೆ ಸಾಲದೆ ಸದೆಯಲಕ್ಕುಮೇ ಭೂಸುರನಂ॥ ೩೭

ಕಂ॥ ಧರೆ ಪಳಗುಂ ಮುಳಿಗುಂ ಭೂ । ವರ ನೆಂಬುದ ನಿಂಬುಕೆಯ್ಯದ ಪಳ್ಕದೆ ನೆಗ ಳ್ದಂ॥ ಮರುಳ ನಿವಂ ಬೊಮ್ಮೆತಿಯ । ನರಸಂ ಗರುಪಲ್ಕೆವೇಳ್ಕು ಮೆಂದಾಪಾರ್ವರ್॥

ವ॥ ಎಂದು ನರೇಂದ್ರನೊಡ ನೆಲ್ಲಮಂ ಪೇಳೆ ಕೇಳ್ದು ನೃಪಂ ಕುಪಿತನಾಗಿ॥ *

ಚ॥ ಬರಿಸಿದ ನಲ್ಲಿ ಗಾರ್ಯಮನ ನಾರ್ಯಮನೋಜ್ಞಚರಿತ್ರನಂ ಧರಾ । ಮರನ ನದೇಕೆ ಕೊಂದೆ ನೆಗಳ್ದಾತರ ತಪ್ಪಿನ ತಿ ತು ಟಂ ಮ ಬಿ॥ ತ್ತರಿ ಸಪ ನಿಕ್ಷಿಪೆಂ ನಿರಪರಾಧಿ

---

ಅಸಮಗುಣಂ- ಅಸದೃಶವಾದ ಸದ್ಗುಣಗಳುಳ್ಳ, ಅನ್ಯರ- ಇತರದೇವತೆಗಳ, ಲೆಕ್ಕಿಸಲಾಗದು-ಸೋಂ ಕಗೊಡದು, ನೆಗಳ್ದ- ಪ್ರಸಿದ್ಧನಾದ. ... ... ||೩೦||

ಆರ್ಯಮನ ಕಥೆ.

ಕರವಾಳಿಂ- ಕತ್ತಿಯಿಂದ, ಎರಡು- ಭೇದವು, ಪ್ರೂಣ್ಕೆಗೆಯ್ದು- ಪ್ರತಿಜ್ಞೆಯಂ ಮಾಡಿ. ||೩೫||

ಸುರುಚಿರರುದ್ರಸೂಕ್ತಮನೆ- ಮನೋಹರನಾದ ರುದ್ರೈಕಾದಶವನ್ನು, ಪಾರ್ವ- ಹಾರುವನು, ಭೈ ಕ್ಷಮಂ- ಭಿಕ್ಷುಕನಿಗೆ ಕೊಡುವ ಪದಾರ್ಥವನ್ನು, ಕೊಳ್ವ- ಸ್ವೀಕರಿಸುವ, ಒಕ್ಕೊಡೆ- ಸುರಿದುಬೀಳಲು, ಎಂ ಬಿನಂ- ಎನ್ನುವಷ್ಟರೊಳಗಾಗಿ, ಅಗ್ರಜನ್ಮನಂ- ಹಾರ್ವನನ್ನು, ಪುಟ್ಟನೊಳ್- ಸೊಪ್ಪುಗವಿಂದ. ||೩೬||

ಮಡಿಪಲ್- ಸಾಯಿಸಲು, ಭೂಸುರರ್- ಬ್ರಾಹ್ಮಣರು. * * * * *

ಅನ್ನಮಿಕ್ಕುಗೆ- ಅನ್ನವನ್ನಿಕ್ಕಲಿ, ಭಿಕ್ಷು- ಯಾಚಕನು, ಇಲ್ಲಾಗೆ-ಇಲ್ಲದೇಹೋದರೆ, ನಡೆ- ಹೋಗು, ಸದೆಯಲ್‌ಅಕ್ಕುಮೇ-ಕೊಲ್ಲಬಹುದೇ ? ... ... ||೩೭||

ಪಳಗುಂ- ನಿಂದಿಸುವದು, ಭೂವರಂ- ರಾಜನು, ಮುಳಿಗುಂ- ಕೋಪಗೊಳ್ಳುವನು, ಇಂಬುಕೆಯ್ಯದೆ- ಚೆತ್ತಾಶ್ರಯವಮ ಮಾಡದೆ, (ಅಂದರೆ ಆಲೋಚಿಸದೆ) ಅಳ್ಕದೆ- ಹೆದರದೆ, ಇವಂಮರುಳಂ- ಈ ಹುಚ್ಚನು, ಬೊಮ್ಮೆತಿಯಂ- ಬ್ರಹ್ಮಹತ್ಯವನ್ನು, ಅರುಪಲ್ವೇಳ್ಕುಂ- ತಿಳಿಸಬೇಕು. ... ||೩೮||

ಆರ್ಯಮನೋಜ್ಞಚರಿತ್ರಂ- ಶ್ರೇಷ್ಠಪುರುಷರಿಗೆ ಮನೋಹರವಾದ ನಡತೆಯುಳ್ಳ, ಧರಾಮರನಂ- ಬ್ರಾಹ್ಮಣನನ್ನು, ಇನಿತು- ಇಷ್ಟು, ಇಂತುಟು- ಇಂತೆಸುವು, ಬಿತ್ತರಿಸು- ಹೇಳು, ನಿರಪರಾಧಿಯಂ- ತ

ಯನೋವದೆ ಕೊಂದೆ ಯಪ್ಪೊಡೀ । ಧರಣಿಯು ನೋರ್ಕೈ ನೀಂ ಬಗಿದು ಪೊಕ್ಕೊಡ ಮಿಕ್ಕ
ದೆ ನಿನ್ನ ನಾಂ ಬಿಡೆಂ ॥ ... ... ... ೩೯

ಕಂ ॥ ಸದ್ವಂಶಜನಂ ಮಡಿಪಿದೆ । ವಿದ್ವಾಂಸನ ನಖಿಳವೇದವಿದನಂ ಮದನ ॥ ಪ್ರದ್ವೇ
ಷಿಭಕ್ತಜನ ಕಿದು । ಸದ್ವರ್ತನ ಮಕ್ಕುಮೇ ವಿಚಾರಿಪೊಡಿಳೆಯೊಳ್ ॥ ೪೦

ಮತ್ತೇ ॥ ಎನೆ ಕೇಳ್ದಾರ್ಯಮ ನೆಂದ ನಂದು ನಗುತಂ ಭೂಪಾಲ ತಪ್ಪಿಲ್ಲದಾ । ತನ
ನೇಂ ಕೊಂದೆನೆ ತಪ್ಪ ನೀಶ್ವರನೆ ಬಲ್ಲಂ ನಿನ್ನೊಳಾಂ ಪೇಳ್ವು ದೇ ॥ ನನಿಮಿತ್ತಂ ಸಲೆಕಾ
ಯಲುಂ ಕೊಲಲು ಮೆನ್ನಂ ಶಂಭುವೇ ಶಕ್ತನು । ರ್ಕಿನ ಮಾತೆಂ ಬಿಡು ಭರ್ಗಭೃತ್ಯನ ನ
ದೇಂ ನೀಂ ದಂಡಿಸ ಲ್ದಕ್ಷನೇ ॥ ... ... ... ೪೧

ವ ॥ ಎಂಬುದು ಮರಸ ನತ್ಯಂತಕೋಪೋದ್ರೇಕಮಂ ತಾಳ್ದಿತನ ನೀಗಳೇ ಕೊ
ಲ್ವೆ ದೆಂದು ಭಟರ್ಗೆ ನಿಯಾಮಿಸಿಕಳುಹಿಸ ಲೊಡ ನವರೊಡನೆ ಭಕ್ತಂ ಬರುತ್ತ ಮಿದಿ
ರೊಳೊಂದು ಶಿವಾಲಯ ಮಿರೆ ಕಂಡೊಳಪೊಕ್ಕು ಲಿಂಗಾಲಿಂಗನಂಗೈದು ಲಿಂಗಗರ್ಭದೊ
ಳಗನೆ ಪೊಕ್ಕ ನಾಗಳ್ ಭಟ ರ್ಬೆನ್ನ ನೀಳ್ತಂದು ಪುಗದಿ ರೆಂದು ಸೆರಂಗ ನುಗಿದು ಸೆಳೆಯೆ॥

ಕಂ॥ ಸುಲಲಿತಚೇಲಾಂಚಲ ಮದು । ಕೆಲ ಕೊರ್ಮ್ಮರ್ನ್ನೀಳ್ದು ಭಕ್ತಿಕೇತನಪಟದಂ॥
ತಲರ್ದಿರೆ ಧರೆ ಪೊಗಳೆ ಮಹೋ । ಜ್ವಲಲಿಂಗದೊಳಾರ್ದ್ಯಮಾಂಕ ನೊಡವೆರೆ ದಿರ್ದ್ದಂ॥ ೪೨

ಕಂ ॥ ಹರ ನಾಭಕ್ತನ ಬಗೆಯಂ । ಧರೆ ಗರುಪ ಲ್ಸಲೆ ತಪೀಯಚೇಲಾಂಚಲಮಂ ॥
ಕರ ಮಲ್ಲಿ ತೋರ್ಪ ನೀಗಳು । ಮರಿದೆನೆ ಸದ್ಭಕ್ತ ರೇಳ್ಗೆ ಸಾಧಾರಣಮೇ ॥ ೪೩

ವ ॥ ಮತ್ತಂ ಕೇಳ್ವು ದೆಂತೆನೆ ॥ * * * * * *

ಮಲ್ಲಿಕಾಮಾಲಾ ॥ ವೀರಶಂಕರದಾಸ ನೆಂಬ ಶಿವೈಕ್ಯ ನೋರ್ವ ನಪೂರ್ವವಿ । ಸ್ತಾ
ರಭಕ್ತಿಸಮೇತ ನನ್ಯಮತಸ್ಥರಂ ಪರದೈವಮಂ ।ಸಾರೆ ನೀಕ್ಷಿಸೆ ನಂಟೆ ನಾಂ ಸದನಂಗಳಲ್ಲಿ

---

ಪ್ಪಿಲ್ಲದವನನ್ನು, ಓವದೆ- ಪಾಲಿಸದೆ, ಕೊಂದೆಯಪ್ಪೊಡೆ- ಸಾಯಿಸಿದ್ದೆಯಾದರೆ, ಇಕ್ಕದೆ- ಕೊಲ್ಲದೆ. ||೩೯||

ಮಡಿಪಿದೆ- ಸಾಯಿಸಿದೆ, ಅಖಿಳವೇದವಿದನಂ- ಎಲ್ಲಾ ವೇದಗಳನ್ನೂ ತಿಳಿದ, ಮದನಪ್ರದ್ವೇಷಿಭಕ್ತಜನ
ಕೆ- ಶಿವಭಕ್ತಜನಕ್ಕೆ, ಸದ್ವರ್ತನಂ- ಒಳ್ಳೆಯ ನಡತೆಯು. ... ... ||೪೦||

ಅನಿಮಿತ್ತಂ- ನಿಷ್ಕಾರಣವಾಗಿ, ಕಾಯಲುಂ- ಸಂರಕ್ಷಿಸುವದಕ್ಕೂ, ಉರ್ಕಿನ- ಗರ್ವದ, ಭರ್ಗಭೃತ್ಯ
ನಂ- ಶಿವಸೇವಕನನ್ನು, ದಂಡಿಸಲ್- ಶಿಕ್ಷಿಸುವದಕ್ಕೆ, ದಕ್ಷನೇ- ಸಮರ್ಥನೇ ? ... ||೪೧||

ಲಿಂಗಗರ್ಭದ- ಲಿಂಗದ ಹೊಟ್ಟೆಯ, ಒಳಗನೆ- ಒಳಗಡೆಯನ್ನು, ಬೆನ್ನನೆ- ಬೇಗನೆ, ಪುಗದಿರ್- ಪ್ರ
ವೇಶಿಸಬೇಡ, ಉಗಿದು- ಹಸ್ತದಿಂದಾಕರ್ಷಿಸಿ. * * * * * * *

ಸುಲಲಿತಚೇಲಾಂಚಲಮಂ- ಮನೋಹರವಾದ ವಸ್ತ್ರದ ಸೆರಗನ್ನು, ಒರ್ಮ್ಮರ್- ಒಂದುಮಾರುದ್ದ,
ನೀಳ್ದು- ಉದ್ದವಾಗಿ, ಭಕ್ತಿಕೇತನಪಟದಂತೆ-ಶಿವಭಕ್ತಿಧ್ವಜದ ವಸ್ತ್ರದಹಾಗೆ, ಅಲರ್ದು- ವಿಕಾಸವನ್ನೈದಿ. ||೪೨||

ಬಗೆಯಂ- ರೀತಿಯನ್ನು, ಅರಿದು- ಅಸಾಧ್ಯವು, ಏಳ್ಗೆ- ಅತಿಶಯವು, ...

ವೀರಶಂಕರದಾಸನಕಥೆ.

ಅಪೂರ್ವವಿಸ್ತಾರಭಕ್ತಿಸಮೇತಂ- ನೂತನವಾಗಿಯೂ ವಿಶಾಲವಾಗಿಯೂ ಇರುವ ಶಿವಭಕ್ತಿಯಿಂದ
ಕೂಡಿದವನಾಗಿ, ಸಾರೆಂ- ಹೊಂದುವದಿಲ್ಲ, ಈಕ್ಷಿಸೆಂ- ನೋಡುವದಿಲ್ಲ, ಅಂಟೆಂ- ಸೋಂಕುವದಿಲ್ಲ, ಸದನಂಗ

ಯು ಮಾದುರಾ | ಚಾರಕೊಳ್ಳುಡಿಯಾತೆ ನೆಂದು ದೃಢಪ್ರತಿಜ್ಞೆಯಿ ನೊಪ್ಪಿದಂ ‖ ೪೫

ವ ‖ ಅಂತು ವೀರಭಕ್ತಿಸಮುಗ್ರಂ ತ್ರಿವಿಧಲಿಂಗಾರ್ಚನೆಯಿಂ ಕೆಲವಾನುಂದೆವಸಂಗಳೆದಿರ್ಪಿನ ಮೊಂದಿರುಳಕನಸಿನೊಳೋರ್ವಂ ಬೌದ್ಧಂ ಬಂದು ನಿಜಾಂಗಮಂ ಮುಟ್ಟಲೊಡನೆ ತೊಟ್ಟನೆಳ್ಚತ್ತು ಶುದ್ಧನಲ್ಲದ ಜೌದ್ಧನೆಂಟದ ನಿದಕ್ಕೆ ಶುದ್ಧಿ ಯಾವುದೆಂದಾಳೋಚಿಸಿ ‖ * * * * * * * * *

ಕ ‖ ಮಡಕೆಗೆವಿಶುದ್ಧಿ ಯುಕ್ಕ್ಯಂ | ಸುಡೆ ವಹ್ನಿಯಿ ನದರ ತೆರದೆ ಸುಡೆ ಭವಿ ಯಂಟ ‖ ಳೊಡಲ ನಿದು ಶುದ್ಧಭಾವಮ | ಬಡೆಗುಂ ದಿಟ ಮೆಂದು ಭಕ್ತ ನವಧರಿಸುತ್ತಂ ‖

ಮ ‖ ಸ್ರ ‖ ಪಟುಶೌರ್ಯಂ ಧೈರ್ಯದಿಂ ಶ್ರೀಗಿರಿಗೆ ತಳರ್ದು ಭರ್ಮೇಶ್ವರಾಖ್ಯಾದಿಲಿಂಗ | ಸ್ಫುಟಗೇಹಂ ಬೊಕ್ಕು ಮಿಕ್ಕುಜ್ವಳಿಸಿ ದುರಿಗಳಿಂ ತಳ್ತ ಘೋರಾಗ್ನಿಯಿಂ ದು ‖ ತ್ಕಟ ಮೆತ್ತಂ ಕಾವ ಪೆರ್ಗಾವಲಿಯ ನಡುವೆ ಕುಳ್ಳಿರ್ದು ವಿಕ್ರಾಂತದಿಂ ಧೂ | ರ್ಜಟಿಯಂ ದಲ್ಮಚ್ಚಿಸುತ್ತಂ ಪಡೆದ ನಭವಸಾಯುಜ್ಯಮಂ ಭಕ್ತವರ್ಯಂ ‖ ‖ ೪೭ ‖

ಕಂ ‖ ಅಲಿಪ್ಪ ದಿನ್ನುಂ ಶಿವವದ | ಲೋಲಂ ಶಿವಲೆಂಕಮಂಚಣಾರ್ಯ ನೆನಿಪ್ಪಂ ‖ ಭೂಲೋಕವಿನುತಘನಮಹಿ | ಮಾಲಂಬನ ನಭವಗಣಪದಾಂಬುಜಭೃಂಗಂ ‖ ೪೮

ಕಂ ‖ ಶ್ರೀಕರವಿಳಸಿತವಿಪುಳಕ | ಳಾಕರ ನಕಳಂಕಗುಣಗಣಾಮಳಮಣಿರ ‖ ತ್ನಾಕರ ನಹಿತಾಂಬುರುಹಸು | ಧಾಕರ ನಘತುಹಿನಘನವಿಭಾಕರ ನೆಸೆದಂ ‖ ೪೯

---

ಳಲ್ಲಿಯುಂ- ಮನೆಗಳಲ್ಲೂ,ನುಡಿಸುಂ- ಮಾತನಾಡುವದಿಲ್ಲ. ... ... ‖೪೫‖

ತ್ರಿವಿಧಲಿಂಗಾರ್ಚನೆಯಿಂ- ಗುರುಲಿಂಗಜಂಗಮಪೂಜೆಯಿಂದ, ಕೆಲವಾನುಂದೆವಸಂಗಳೆದು- ಕೆಲವು ದಿನಗಳನ್ನು ಕಳೆದು, ಇರುಳ- ರಾತ್ರಿಯ, ತೊಟ್ಟನೆ- ಬೇಗನೆ, ಎಳ್ಚತ್ತು- ಎಚ್ಚರವಾಗಿ, ಶುದ್ಧಂ- ಪರಿಶುದ್ಧನು, ಅಂಟಿದಂ- ಸೋಂಕಿದನು. * * * * * * * *

ಮಡಕೆಗೆ-ಭಾಂಡಕ್ಕೆ, ಭವಿ-ಲಿಂಗಹೀನನು, ಒಡಲಂ-ಶರೀರವನ್ನು, ಅವಧರಿಸುತ್ತಂ-ನಿಶ್ಚೈಸುತಾ.

ಭರ್ಮೇಶ್ವರಾಖ್ಯಾದಿಲಿಂಗಸ್ಫುಟಗೇಹಂಬೊಕ್ಕು- ಭರ್ಮೇಶ್ವರನೆಂಬ ಹೆಸರುಳ್ಳ ಲಿಂಗವೇ ಮೊದಲಾದ ದೇವಸ್ಥಾನಗಳನ್ನು ಪ್ರವೇಶಿಸಿ, ಪೆರ್ಗಾವಳಿಯ- ದೊಡ್ಡಲೋಹಪಾತ್ರೆಯ, ವಿಕ್ರಾಂತದಿಂ- ಪರಾಕ್ರಮದಿಂದ, ಧೂರ್ಜಟಿಯಂ- ಶಿವನನ್ನು, ಅಭವಸಾಯುಜ್ಯಮಂ- ಪರಮೇಶ್ವರನಲ್ಲಿ ಬೆರೆಯುವಿಕೆಯನ್ನು. ‖೪೭‖

## ಮಂಚಣಾರ್ಯನಕಥೆ.

ಶಿವಲೆಂಕಮಂಚಣಾರ್ಯಂ- ಪರಮೇಶ್ವರನ ಸೇವಕನಾದ ಮಂಚಣಾರ್ಯನು, ಭೂಲೋಕವಿನುತಘನಮಹಿಮಾಲಂಬನಂ— ಭೂಲೋಕ- ಭೂಮಿಯಲ್ಲಿರುವ ಜನಗಳಿಂದ, ವಿನುತ- ಹೊಗಳಲ್ಪಟ್ಟ, ಘನ- ಶ್ರೇಷ್ಠವಾದ, ಮಹಿಮ- ಮಹತ್ತ್ವಕ್ಕೆ, ಆಲಂಬನಂ- ಆಶ್ರಯನಾಗಿ, ಅಭವಗಣಪದಾಂಬುಜಭೃಂಗಂ- ಶಿವಗಣಂಗಳ ಪಾದಕಮಲಕ್ಕೆ ಭ್ರಮರನಾಗಿ. ... ... ... ‖೪೮‖

ಶ್ರೀ......ಕರಂ— ಶ್ರೀಕರ- ಮೋಕ್ಷಸಂಪತ್ತನ್ನುಂಟುಮಾಡುವ, ವಿಳಸಿತ- ಪ್ರಕಾಶಿಸುವ, ವಿಪುಳ- ವಿಸ್ತಾರವಾದ, ಕಳಾ- ಶಿವಜೀವೈಕ್ಯಬೋಧಿನೀವಿದ್ಯೆಗೆ, ಆಕರಂ- ಆಶ್ರಯನಾಗಿ, ಅಕ......ಕರಂ— ಅಕಳಂಕ- ನಿರ್ದುಷ್ಟಗಳಾದ, ಗುಣ- ಸದ್ಗುಣಗಳ, ಗಣ- ಸಮೂಹಗಳೆಂಬ, ಅಮಳ-ನಿರ್ಮಲಗಳಾದ, ಮಣಿ- ರತ್ನಗಳಿಗೆ, ರತ್ನಾಕರಂ- ಸಮುದ್ರನಾಗಿ, ಅಹಿತಾಂಬುರುಹಸುಧಾಕರಂ- ಶತ್ರುಗಳೆಂಬ ಕಮಲಗಳಿಗೆ ಚಂದ್ರನಾಗಿ, ಅಘತುಹಿನವಿಭಾಕರಂ- ಪಾಪವೆಂಬ ಹಿಮಕ್ಕೆ ಸೂರ್ಯನಾಗಿ. ... ‖೪೯‖

ಮಲ್ಲಿಕಾಮಾಲಾವೃತ್ತ ॥ ಶ್ರೀಮಹೋತ್ತಮಕಾಶಿಯೊಳ್ಮರೆವಂ ತ್ರಿಕಾಲಮುಮಾ ಪುರ। ಸ್ವಾಮಿಗರ್ಚಿಸಿ ವಿಶ್ವನಾಥಶಿವಂಗೆ ಪತ್ತು ಜರಲ್ಗಳಿಂ ॥ ಪ್ರೇಮದಿಂ ಪಡೆದಂತೆ ತಾಂ ಮಗುಳ್ದೀವ ನಾತ್ಮಕರಾಂಗುಲಿ । ಸ್ತೋಮಮಂ ಪಡೆ ಧೀಂತುಗೆಯ್ವುದೆ ನೇಮಮಾಗೆ ವಿರಾಜಿಪಂ ॥ ... ... ... ೫೦

ಚಂ॥ ಪರಶಿವ ನೋರ್ವನಲ್ಲದಖಿಳಾಂಡಕದಂಬಕೆ ಚೇರಧೀಶರೆಂ । ಬರಾಮಣಿಮಿಲ್ಲೆನುತ್ತೆ ನಿಗಮಾಗಮಶಾಸ್ತ್ರವಿನುತ್ತರಂಗುಡು ॥ ತ್ತಿರ ದಧಟಿಂದೆ ಗೆಲ್ದು ಸಲೆ ಸೋಲಿಸು ತನ್ಯಮತಾಭಿಮಾನನಿ । ಪ್ಕರ ನಕಳಂಕಪೂರ್ಣಸಿತಕೀರ್ತಿ ವಿಜೃಂಭಿಸೆ ಭೂತಳಾಗ್ರದೊಳ್ ॥ ... ... .. ೫೧

ಕಂ॥ ಸಕಳಪರವಾದಿಜನನಾ । ಸಿಕಾಗ್ರಖಂಡನಕರಾಳಖಡ್ಗಂ ತಾನೆಂ ॥ ದಕಳಂಕಮಹಿಮ ನೆತ್ತಿಸಿ । ಸುಕರಧ್ವಜಮಂ ವಿರಾಜಿಸುತ್ತಿರೆ ಪುರದೊಳ್ ॥ ೫೨

ವ॥ ಆಗಳ್ಪರಸಮಯಸ್ಥರೆಲ್ಲಂ ಗೆಲ್ಲಂಗೊಳಲೆಂದು ಕೃತಸಂಕೇತರಾಗಿ ಮಂತಣಂಗೊಂಡು ಪಂಟಪದೊಳಕ್ಕಳ್ಕರ್ದು ಮಂಚಣಪಂಡಿತರಂ ಬರಿಸಿ ತಂತಮ್ಮ ಶಾಸ್ತ್ರೋಕ್ತಿಯುಕ್ತಿಯುಮರೆ ಬೇರೆಬೇರೆ ಮಸಗಿ ಮಥಿಯಿಸೆ ॥ * * *

ಕಂ॥ ಶ್ರುತಿಸೂತ್ರನ್ಯಾಯಸಮು । ಸ್ಥಿತಶಾಸ್ತ್ರಸ್ಮೃತಿಪುರಾಣತರ್ಕಾದಿಗಳಿಂ ॥ ಪಶಿ ಶಿವ ನೋರ್ವನೆ ಭುವನ। ಪ್ರತತಿಗೆ ಪೆರರಿಲ್ಲೆನುತ್ತ ಪಟುಯುಕ್ತಿಗಳಿಂ ॥ ೫೩

ಕಂ॥ ಬಾಯೆತ್ತದಂತೆ ನುಡಿಯುತೆ। ಕಾಯಜಪಾಪುಭಕ್ತನೆಲ್ಲರಂ ಗೆಲೆ ಸೋಲ್ತಾ ॥ ಮಾಯಾಜಡರೆಲ್ಲ ಗೆಲ । ಲಾಯಂಗಾಣದೆ ಬಳಲ್ಕೆಯಿಂ ದುತ್ತೆದರ್ ॥ ೫೪

ಕಂ॥ ಎಲೆಶೈವ ಕಲ್ಪವಿದ್ಯಾ । ಕಲಾಪದಿಂ ಗೆಲ್ವುದಕ್ಕೆಮೇ ಸೋಲ ದಗುಂ ॥ ದಲ

---

ಆ ಪುರಸ್ವಾಮಿಗೆ- ಆ ಪಟ್ಟಣದಧಿಪತಿಯಾದ, ಪತ್ತುಜರಲ್ಗಳಿಂ- ಹತ್ತುಬೆಟ್ಟುಗಳನ್ನು, ಅಂತೆ- ಹಾಗೆಯೇ, ಆತ್ಮಕರಾಂಗುಲಿಸ್ತೋಮಮಂ- ತನ್ನಕೆಯ್ಯಬೆರಳುಗಳ ಸಮೂಹವನ್ನು, ನೇಮಂ- ವ್ರತವು.

ಅಖಿಳಾಂಡಕದಂಬಕ್ಕೆ- ಸಕಲ ಬ್ರಹ್ಮಾಂಡಸಮುದಾಯಕ್ಕೂ, ಅಧಟಿಂದೆ- ಶೌರ್ಯದಿಂದ, ಅಕಳಂಕಪೂರ್ಣಸಿತಕೀರ್ತಿ- ನಿರ್ದುಷ್ಟವಾಗಿಯೂ ಸಂಪೂರ್ಣವಾಗಿಯೂ ಶುಭ್ರವಾಗಿಯೂ ಇರುವ ಯಶಸ್ಸು.

ಸಕಳ........ಖಡ್ಗಂ— ಸಕಳಪರವಾದಿಜನ- ಪರಮತವಾದಿಜನಗಳೆಲ್ಲರ, ನಾಸಿಕಾಗ್ರ- ಮೂಗಿನ ತುದಿಯನ್ನು, ಖಂಡನ- ಕತ್ತರಿಸುವದರಲ್ಲಿ, ಕರಾಳಖಡ್ಗಂ- ಭಯಂಕರವಾದ ಕತ್ತಿಯಾದವನು, ಸುಕರಧ್ವಜಮಂ- ಸಮಿಾಚೀನವಾದ ಧ್ವಜಸ್ತಂಭವನ್ನು. ... ... ... ॥೫೨॥

ಗೆಲ್ಲಂಗೊಳಲೆಂದು- ಜಯವಂಹೊಂದಬೇಕೆಂದು, ಕೃತಸಂಕೇತರ್- ಮಾಡಲ್ಪಟ್ಟ ನಿಷ್ಕರ್ಷೆಯುಳ್ಳವರು, ಮಂತಣಂಗೊಂಡು- ಗುಂಪಾಗಿ, ತಂತಮ್ಮಶಾಸ್ತ್ರೋಕ್ತಿಯುಕ್ತಿ- ತಮ್ಮತಮ್ಮಗಳ ಶಾಸ್ತ್ರವಚನದ ಯುಕ್ತಿಯು, ಮಥಿಯಿಸೆ- ಚರ್ಚೆಮಾಡಲು. * * * *

ಸೂತ್ರ- ಬ್ರಹ್ಮಸೂತ್ರಗಳು, ಭುವನಪ್ರತತಿಗೆ- ಲೋಕಸಮುದಾಯಕ್ಕೆ, ಪೆರಂ- ಮತ್ತೊಬ್ಬನು, ಪಟುಯುಕ್ತಿಗಳಿಂ- ಸಮರ್ಥಗಳಾದ ಉಪಾಯಗಳಿಂದ. ... ... ॥೫೩॥

ಆ ಮಾಯಾಜಡರ್- ಆ ಮಾಯೆಯಿಂದ ಮೂಢರಾಗಿರುವವರುಗಳು, ಆಯಂಗಾಣದೆ- ಉಪಾಯವಂ ತಿಳಿಯದೆ. ... ... ... ... ... ... ... ॥೫೪॥

ಅಗುಂದಲೆ- ಅತಿಶಯವು, ನಿದರ್ಶನಮಂ- ದೃಷ್ಟಾಂತವನ್ನು. ... ...

ಯೆಮಗೆ ನಿದರ್ಶನಮುಂ । ಪಲವಾತೇಂ ನೀನೆ ತೋರಿ ಸೋಲಿಪ್ಪ ದೆಪ್ಪಂ ॥ ೫೫

ವ ॥ ಎಂದವನೆರ್ದೆಯು ಕೇಳ್ದಂತೆಗೆಯ್ವ ನಿದಾನ ಗಹನಂ ನಿಮ್ಮಡಿಯ ನಪ್ಪ ಪೊಡೆಯುಲಿಗನು ಮೃಡ ನಡಿಗಳ್ಗೆ ಪೊಡಮಡಿಪಂ ನೋಡಿ ಮೊದಲ್ಗಿದೇಳ್ದ ಚಕ್ರಧರ ನಾವಾಸದತ್ತಲ್ ನೋಡಿ ಶಿವಗಣಚರಣಾರವಿಂದಂಗಳಂ ಮನದೊಳ್ನೆನೆದು ॥ * *

ಉ ॥ ಬಾರೆಲೆ ಚಕ್ರಿ ನಿನ್ನ ಪತಿ ಯೆಂದೆನಿ ಪಗ್ಗದ ಸರ್ವದೇವತಾ । ಧಾರಪದಂಗೆ ವಿಶ್ವಪತಿ ಗಿಂದೆರಗ ಲ್ಕನೆ ಕೇಳ್ದನಾಡೆ ಕ । ಸಾರಿ ಮುದಂಬಡುತ್ತೆ ಪೊರಮ ಟ್ಟೊಲವಿಂ ಪೊಡಮಟ್ಟು ಭಕ್ತವೃಂ । ದಾರಕ ಬಾಳ್ದೆನಂದು ನಡೆತಂದ ನವಂದಿರೊಳಾಗ ಕೌತುಕಂ ॥

ವ ॥ ಅಂತು ಶಿವಭಕ್ತಿಃ ಪ್ರಭುರ್ಮಮ ಎಂಬ ನಿಜೋಕ್ತಿಯ ನೆಲ್ಲರ್ಗರುಪಿ ಭಕ್ತವರ್ಯನ ಬೆನ್ನನೇಳ್ತಂದು ಬೇಗು ವಿಶ್ವಪತಿಗೆ ಪೊಡಮಡ ಲೊಡನೆ ಕೇಡು ಮಂಚಣಾರ್ಯಂಗೆ ॥ * * * * * * * *

ಕಂ ॥ ಪರವಾದಿಗ ಳೆರ್ದೆ ಕಂಪಿಸು । ತಿರೆ ಭಯದಿಂ ಬಳ್ಕಿ ಮಣಿದ ರಾಪೌರದನಂ ॥ ಪಿರಿದಚ್ಚರಿವ ಟ್ಟರಗಿದು । ದರಸುವಿ ಸ್ಮಯದೆ ನಮಿಸಿ ಕೀರ್ತಿಸು ತಿರ್ದ್ದಂ ॥ ೫೭

ಕಂ ॥ ಹರಿಯ ನಭವಂಗೆ ಮಣಿಯಿಸಿ । ಹರಿಭಕ್ತ ರೆನಿಪ್ಪ ವಾದಿಗಳ ಮದಮುಂ ಸಂ ॥ ಹರಿಸಿದ ನಹಿತಮದದ್ವಿಪ । ಹರಿ ಮಂಚಣಪಂಡಿತಾರ್ಯ ನಚಳಿತಶೌರ್ಯಂ ॥ ೫೮

ಕಂ ॥ ಈಗಳು ಮಾವಿಶ್ವೇಶನ । ಬಾಗಿಲಮುಂಗಡೆಯೊ ಳಡ್ಡಬೀಳ್ದರ್ದಪ ನಾ ॥ ನಾಗರಿಪುಕೇತು ಹರನ ಮ । ಹಾಗರಿಮೆಗೆ ತಾನೆ ಸಾಕ್ಷಿ ಯೆನಿಸು ತ್ತಿೀಗಳ್ ॥ ೫೯

ಕಂ ॥ ಹರಿ ವಿಶ್ವಾಧಿಕ ನೆಂದು । ಪರಿಯೊಳ್ಜರುಜುವ ಜಡರ್ಕ ಳಾಹರಿಯ ನದೇ ॥ ನಿರದೇಳಿಸ ಲಾರ್ತರೆದು । ರ್ನರ ರಿಪ ನರಿದಿರ್ದ ಮೇಕೆ ಪಾಡಿಸ ಲೊಲ್ವರ್ ॥ ೬೦

---

ಆವಗಹನಂ- ಯಾವದೊಡ್ಡಕಾರ್ಯ ? * ಪೊಡೆಯುಲಿಗನಂ- ವಿಷ್ಣುವನ್ನು, ಪೊಡಮಡಿಪಂ- ನಮಸ್ಕಾರಮಾಡಿಸುವೆನು, ಆವಾಸದ- ಗುಡಿಯ. * * * * * * *

ಎಲೆಚಕ್ರಿ- ಎಲೈವಿಷ್ಣುವೇ ! ಅಗ್ಗದ- ಶ್ರೇಷ್ಠನಾದ, ಸರ್ವದೇವತಾಧಾರಪದಂಗೆ- ಸಕಲದೇವತೆಗಳಿಗೂ ಆಶ್ರಯವಾದ ಪಾದವುಳ್ಳ, ಕಂಸಾರಿ- ವಿಷ್ಣುವು, ಪೊರಮಟ್ಟು- ಹೊರಟು, ಒಲವಿಂ-ಪ್ರೀತಿಯಿಂದ, ಭಕ್ತವೃಂದಾರಕ- ಭಕ್ತಶ್ರೇಷ್ಠನೇ ! ಬಾಳ್ದಂ- ಬದುಕಿದೆನು, ಅವಂದಿರೊಳ್- ಆ ಪರವಾದಿಗಳೊಡನೆ.

ಶಿವಭಕ್ತಿಃಪ್ರಭುರ್ಮಮ— ಶಿವಭಕ್ತ- ಈಶ್ವರನಲ್ಲಿ ಭಕ್ತಿಯುಳ್ಳವನು, ಮಮ- ನನ್ನ, ಪ್ರಭುಃ- ಸ್ವಾಮಿಯು, ಬೆನ್ನನೆ- ಹಿಂಬಾಲಿಸಿ, ವಿಶ್ವಪತಿಗೆ- ಪ್ರಪಂಚಕ್ಕೆ ಸ್ವಾಮಿಯಾದ ಶಿವನಿಗೆ. * *

ಎರ್ದೆ- ಹೃದಯವು, ಕಂಪಿಸುತೆ- ನಡುಗುತ್ತಾ, ವಿಸ್ಮಯದೆ- ಆಶ್ಚರ್ಯದಿಂದ. ||೫೭||

ಮಣಿಯಿಸಿ- ನಮಸ್ಕಾರಮಾಡಿಸಿ, ಅಹಿತಮದದ್ವಿಪಹರಿ- ಶತ್ರುಗಳ ಗರ್ವವೆಂಬ ಆನೆಗೆ ಸಿಂಹನಾದ, ಅಚಳಿತಶೌರ್ಯಂ- ಸ್ಥಿರವಾದಪರಾಕ್ರಮವುಳ್ಳ. ... ... ... ||೫೮||

ಆನಾಗರಿಪುಕೇತು- ಆಗರುಡಧ್ವಜನಾದ ವಿಷ್ಣುವು, ಮಹಾಗರಿಮೆಗೆ- ದೊಡ್ಡತನಕ್ಕೆ. ||೫೯||

ಜರುಜುವ- ಕೂಗುವ, ಜಡರ್ಕಳ್- ಮೂಢರು, ಏಳಿಸಲ್- ತಿರಸ್ಕರಿಸುವದಕ್ಕೆ, ಒಲ್ವರ್- ಪ್ರೀತಿಸುವರು ? ... ... ... ... ... ... ||೬೦||

---

* (ಅವ) ಪೊಡೆ- ಹೊಟ್ಟೆಯಲ್ಲಿ, ಅಲರ- ಹೂವುಳ್ಳವನು; ಅಂದರೆ ಕಮಲನಾಭ. * *

ಸಂ॥ ವರನು ಶಿವಭಕ್ತರೊಲಿದೊಡೆ। ಹರಿ ಬಾಳ್ವಂ ಮುಳಿದೊಡಳಿವ ನೆಂತೆನೆ ಕೇ। ಳ್ಬುಧ॥ ವರಮುನ್ನ ಮೆರಡನೆಯ ಶಂ। ಕರ ನೆನೆ ಪೆಸರ್ವೆತ್ತು ಮಿಸುಪ ಶಂಕರದಾಸಂ।

ಮ॥ ಸ್ರ॥ ಪರದೈವವ್ರಾತಮಂ ಭಂಗಿಸಿ ಮೆರೆದಿರೆ ಮಾತ್ಸರ್ಯದಿಂ ವೈಷ್ಣವಪ್ರೋ। ತ್ಕರಯುಕ್ತಂ ವಿಷ್ಣುಭಕ್ತಂ ಬರಿಸುತೆ ಜಗದೇಕಾದ್ಯಮಲ್ಲೋರ್ವಿಪಂ ಭೀ॥ ಕರದೈತ್ಯಾ ರಾತಿಯಂ ನೋಡೆನೆ ಮುಳಿದಳಿಕಾಭೀಳನೇತ್ರಾಗ್ನಿಯಿಂ ಸು। ಟ್ಟುರುಪುತ್ತಂ ವಿಷ್ಣುವಂ ಭಂಗಿಸಿದ ನದರ ಶೂನ್ಯಾಲಯಂ ಸಾಕ್ಷಿಯಲ್ತೆ॥ ... ... ೬೨

ಕಂ॥ ಹರಭಕ್ತರಳವ ನೆಣಿಸುವ್ರೊ। ಉರಗೇಂದ್ರಚತುರ್ಮುಖಾದ್ಯರುಂ ನೆರೆವರೆ ಭೂ॥ ವರ ನಿನ್ನ ಕಟಕಿಯಂ ಕೇ। ಳ್ದುರುತರಮಹಿಮಾಂಕ ನೆಮ್ಮ ಭಾಸ್ಕರದೇವಂ॥ ೬೩

ಕಂ॥ ಬರಿಸಿವ ನಾಸೌರಾಷ್ಟ್ರದ। ಪುರದರಸನ ನೆಮ್ಮ ಪುರಿಗೆ ಸರ್ವರ್ ಪೆರ್ಚಿರಿದ॥ ಚ್ಚರಿವಡೆ ಕಂಡರಿದಿರ್ದುಂ। ನರೇಂದ್ರ ತದ್ಘನಮಹತ್ವಮಂ ಮರುಳಪ್ಪೈ॥ ೬೪

ಮತ್ತೇ॥ ಅಳಿದೀವಂ ಘನಧಾನ್ಯಕೋಶವಿಳಸದ್ಧಾನ್ಯಂಗಳಂ ಕೋಟಿಗ। ಗ್ಗಳಲೆಕ್ಕಂ ಬಡೆದಿರ್ದ ನಿನ್ನ ಭಟಸಂದೋಹಕ್ಕೆ ತನ್ನಾಮಸಂ॥ ಕುಳಮಂ ಸಂಪುಟದಲ್ಲಿ ತಾಂ ಬರೆಯ ನಾಪಂಚಾಕ್ಷರೀಮಂತ್ರಮಂ। ಬಳವಂತು ಬರೆವಂ ಬಳಿಕ್ಕೆ ಸರಿಲೆಕ್ಕಂಗಾಣಿಸುತ್ತೋದುವಂ॥ ... ... ... ... ೬೫

ಕಂ॥ ಇಂತಪ್ಪ ಮಹಿಮೆಯಿಂದೆ ನಿ। ತಾಂತಂ ಬಗೆಗೊಳಿಪ ಭಾಸ್ಕರಾರ್ಯ ನಪೆಂಪಂ॥ ನೀಂ ತಿಳಿದು ಮನ್ನಿಸುತೆಂ। ತಂತಿರೆ ಕಂಡಿಂತು ನುಡಿಯು ದನುಚಿತಮಲ್ತೆ॥ ೬೬

ವ॥ ಎಂದಿಂತು ಸಿದ್ಧಾಂತವಿದ್ಯಾಧರಂ ನುಡಿದಲ್ಲಿ ಚತುರಭಕ್ತರಂ ಕಳುಪಿ ವಿಜ್ಞಾಪನಪೂರ್ವಕ ಮಾಸಭೆಗೆ ಭಾಸ್ಕರದೇವನಂ ಕರೆಯಿಸೆ॥ * * * *

ಕಂ॥ ವಾದಕ್ಕೆಂಪುಜ್ಜುಗಿಸಿದ। ವಾದಿಗಳಂ ಜಯಿಸಲೆಂದು ಬಸವಾಧಿಪ ನಾ॥ ಮೋ

---

ಒಲಿದೊಡೆ- ಪ್ರೀತಿಸಿದರೆ, ಅಳಿವಂ- ಸಾಯುವನು. ... ... ||೬೧||

ಮಾತ್ಸರ್ಯದಿಂ- ಇತರರ ಶುಭವನ್ನು ನೋಡಿ ಸಹಿಸದಿರುವದರಿಂದ, ವೈಷ್ಣವಪ್ರೋತ್ಕರಯುಕ್ತಂ- ವಿಷ್ಣುಭಕ್ತರ ಗುಂಪಿನಿಂದ ಕೂಡಿದ, ಜಗದೇಕಾದ್ಯಮಲ್ಲೋರ್ವಿಪಂ- ಜಗದೇಕಶಬ್ದವೇ ಮೊದಲಲ್ಲುಳ್ಳ ಮಲ್ಲರಾಜನು ( ಅಂದರೆ ಜಗದೇಕಮಲ್ಲನೆಂಬರಾಜನು ) ಭೀಕರದೈತ್ಯಾರಾತಿಯಂ- ಭಯಂಕರನಾದ ವಿಷ್ಣುವನ್ನು, ಮುಳಿದು- ಕೋಪಿಸಿ, ಅಳಿಕಾಭೀಳನೇತ್ರಾಗ್ನಿಯಿಂ- ಹಣೆಯಲ್ಲಿರುವ ಅಧಿಕವಾದ ಕಣ್ಣಿನ ಬೆಂಕಿಯಿಂದ, ಶೂನ್ಯಾಲಯಂ- ಪಾಳುಗುಡಿಯು. ... ... ... ... ||೬೨||

ಅಳವಂ- ಶಕ್ತಿಯನ್ನು, ಉರಗೇಂದ್ರಚತುರ್ಮುಖಾದ್ಯರುಂ— ಉರಗೇಂದ್ರ- ಆದಿಶೇಷ, ಚತುರ್ಮುಖ- ಬ್ರಹ್ಮ ಇವರುಗಳೇ, ಆದ್ಯರುಂ- ಮೊದಲಾದವರುಗಳೂ, ನೆರೆವರೆ- ಸಮರ್ಥರಾಗುವರೇ ? ಕಟಕಿಯಂ- ಮೂದಲೆಯುಮಾತನ್ನು. ... ... ... ... ... ||೬೩||

ಮರುಳ್- ಹುಚ್ಚನು. ... ... ... ... ||೬೪||

ಅಗ್ಗಳಲೆಕ್ಕಂಬಡೆದು- ಅಧಿಕವಾದ ಗಣನೆಯುಂಹೊಂದಿ, ಭಟಸಂದೋಹಕ್ಕೆ- ಸೇವಕರಗುಂಪಿಗೆ, ಸಂಪುಟದಲ್ಲಿ- ಪತ್ರದಲ್ಲಿ. ... ... ... ... ||೬೫||

ಬಗೆಗೊಳಿಪ- ಮನಸ್ಸನ್ನಾಕರ್ಷಿಸುವ. ... ... ... ||೬೬||

ಉಜ್ಜುಗಿಸಿದ- ಪ್ರಯತ್ನಪಟ್ಟ, ಅಟ್ಟಿದಂ- ಕಳುಹಿಸಿದನು, ಪೋಗಲ್ಕೆವೇಳ್ಕುಂ- ಹೋಗಬೇಕೆಂ,

ದಂವಿಂಗೆ ಬರಲಿಟ್ಟದ | ನಾದು ಪೋಗಲ್ಕೆ ವೇಳ್ಕು ಮೆಂದಾಕ್ಷಣದೊಳ್ ‖ ೬೭

ವ ‖ ಪರವಾದಿಜನಭಂಜನನೆಂಬ ಬಿರುದಿನ ತೊಡ ರ್ಝಣಝಣಿಸ ಲೀಳ್ದು ವೀರಭಕ್ತವರಿವೃತಂ ಸಂಪೂರ್ಣಸಂಭ್ರಮದಿಂ ತದಾಸ್ಥಾನಕ್ಕೆ ಬಂದಲ್ಲಿರ್ದ ಶಿವಗಣಾಂಘ್ರಿಗವನತನಾಗಿ ಬಿಜ್ಜಳನತ್ತಲಭೀಕ್ಷಿಪುದು ಮಾಗಳ್ ‖ * * * * *

ಕಂ ‖ ಖಲಜನದುರುಕ್ತಿಮರುದು | ಜ್ವಲಕೋಪಕೃಶಾನುಧೂಮದೂಷಿತಮುಖಮಂ ‖ ಡಲ ನಪಗತಮತಿ ಮದವಿ | ಹ್ವಲ ನರುಣಿತನೇತ್ರ ನೀಕ್ಷಿಸು ತ್ತಿಂತೆಂದಂ ‖ ೬೮

ಚಂ ‖ ಪುರಹರಭಕ್ತಿ ನಿನ್ನ ಶಿರದೊಳ್ಮೊಳೆದೋರಿತೆ ಶೈವಸಾರಸ | ಚ್ಚರಿತಕೆ ನೀನೆ ಭಾಜನನೆ ಬಾರದೆ ಪೋದೆ ಸಮಸ್ತರೆಲ್ಲರಂ ‖ ಬರೆ ನರೆ ಕಂಡು ನಿೞಭುವನಪಾಲಕನಿಜ್ಜಳನ ಸುಪ್ರತಿಷ್ಠೆಯುಂ | ವಿರಚಿಪ ಕಾಲದೊಳ್ಸಭೆಗೆ ಕೇಳ್ನಿನಗೆನ್ನದೊ ಮಾನದೆಳ್ತರಂ ‖ ... ... ... ... ೬೯

ವ ‖ ಎಂದರಸನ ವಿರಸೋಕ್ತಿಗೇಳ್ದು ಭಾಸ್ಕರಂ ನಿದಾಘಭಾಸ್ಕರನಂತೆ ಕಾಯ್ಪೇರಿ ಮಸಗಿ

ಚಂ ‖ ಭುವನಮ ನೆಲ್ಲಮಂ ಪಡೆದು ಪಾಲಿಪ ನೀಹರಿ ಯೆಂದಪೈ ಧರಾ | ಧವ ಭವಭಾಳನೇತ್ರಶಿಖಿಯಿಂ ದುರಿವಂದು ನಿಜಾತ್ಮಜಾತ ನೊ | ಪ್ಪುವ ನಿಜಶಕ್ತಿಯೆತ್ತ ಸರಿದತ್ತೊ ಜಗತ್ತ್ರಯಪಾಲನಾದವಂ | ಭವದೊಳೆ ಬಂದು ತಾ ನಳಿವನೇ ಶಿವ ನೋರ್ವನೆ ನಿಶ್ವಪಾಲಕಂ ‖ .. ... ... ... ೭೦

ಕಂ ‖ ಅಜ ನಖಿಳಚರಾಚರಮಂ | ಸೃಜಿಸುವ ನೆಂಬೊಡೆ ನಿಜೋತ್ತಮಾಂಗವ ಮುಳಿದಂ ‖ ಗಜರಿಪು ವರಿದೊಡವಂ ತಾಂ | ಸೃಜಿಸಿಕೊಳಲ್ಕಾರ ನೇಕೆ ನೋಡವನಿರವಂ ‖

---

ತೊಡರ್- ಪೆಂಡೆಯು, ಅಭೀಕ್ಷಿಪುದುಂ- ನೋಡುವದೂ. * * * *

ಖಲ.........ಮಂಡಲಂ— ಖಲಜನ- ನೀಚರ, ದುರುಕ್ತಿ- ಕೆಟ್ಟಮಾತೆಂಬ; ಮರುತ್- ವಾಯುವಿನಿಂದ, ಉಜ್ವಲ- ತೇಜೋವಿಶಿಷ್ಟವಾದ, ಕೋಪಕೃಶಾನು- ಕ್ರೋಧಾಗ್ನಿಯ, ಧೂಮ- ಹೊಗೆಯಿಂದ, ದೂಷಿತ- ನಿಂದಿತವಾದ, ಮುಖಮಂಡಲಂ- ವದನವಲಯವುಳ್ಳವನಾಗಿ, ಅಪಗತಮತಿ- ಬುದ್ಧಿಹೀನನಾಗಿ, ಮದವಿಹ್ವಲಂ- ಗರ್ವದಿಂ ವಿಚೇತನನಾಗಿ, ಅರುಣಿತನೇತ್ರಂ- ಕೆಂಪಾಗಿಮಾಡಲ್ಪಟ್ಟ ಕಣ್ಣುಳ್ಳವನಾಗಿ. ||೬೮||

ಶೈವಸಾರಸಚ್ಚರಿತಕೆ- ಶಿವಸಂಬಂಧವಾದ ಶ್ರೇಷ್ಠವಾದ ನಡತೆಗೆ, ಭಾಜನನೆ- ಆಶ್ರಯನೇ ? ಮಾನದ- ಗರ್ವದ, ಎಳ್ತರಂ- ಅತಿಶಯವು, ಎನ್ನದೊ- ಎನ್ನುವದಿಲ್ಲವೇ. ... ... ||೬೯||

ವಿರಸೋಕ್ತಿಗೇಳ್ದು- ಅನುರಾಗಶೂನ್ಯವಾದ ಮಾತನ್ನುಕೇಳಿ, ನಿದಾಘಭಾಸ್ಕರನಂತೆ- ಬೇಸಿಗೆಗಾಲದ ಸೂರ್ಯನಹಾಗೆ, ಕಾಯ್ಪೇರಿ- ತೈಕ್ಷ್ಣ್ಯವನ್ನು ( ಕೋಪವನ್ನು ) ಹೊಂದಿ. * * *

ಧರಾಧವ- ಭೂಪತಿಯೇ !ನಿಜಾತ್ಮಜಾತಂ- ತನ್ನಮಗನಾದ ಮನ್ಮಥನು, ಭವಭಾಳನೇತ್ರದ- ಪರಶಿವನ ಹಣೆಗಣ್ಣಿನ, ಸರಿದತ್ತೊ- ಹೋಯಿತೋ ! ಅಳಿವನೇ- ಸಾಯುವನೇ ? ||೭೦||

ಅಜಂ- ಬ್ರಹ್ಮನು, ಸೃಜಿಸುವಂ- ಹುಟ್ಟಿಸುವನು, ನಿಜೋತ್ತಮಾಂಗವ- ತನ್ನ ಶಿರಸ್ಸನ್ನು, ಮುಳಿದು- ಕೋಪಿಸಿ, ಅಂಗಜರಿಪು- ಮದನವೈರಿಯಾದ ಶಿವನು, ಅರಿದೊಡೆ- ಕತ್ತರಿಸಲು, ಏಕೆಅರಂ- ಯಾಕೆ ಸಮರ್ಥನಾಗಲಾರನು ? ... ... ... ... ||೭೧||

ಮತ್ತೀ ॥ ಜಿನಬುದ್ಧರ್ಕಳ ನೇತು ದೇವ ನನಲಕ್ಕುಂ ವೇದಬಾಹ್ಯರ್ಕಳಿಂ । ಮನು ಜಾಕಾರದೊಳಿರ್ಪರಂ ಮಹಿಮೆಗೆಂದುಂ ದೂರ ಮಾಗಿರ್ದ್ದರಂ ॥ ತನುಲೋಕಾಕೃತಿವೆತ್ತ ಮಾಯೆ ಜಡ ಮೆಂದುಂ ಮಾಯೆ ತಾಂ ದೈವ ಮ । ಲ್ತು ನಿತಾಂತಂ ಶ್ರುತಿ ಸೋಮುಕಾಪಹೃತ ಮೆಂತುಂ ದೈವ ಮೇನಪ್ಪುದೇ ॥ ... ... ೭೨

ಮತ್ತೀ ॥ ಬಗೆವೊಡೆ ಕರ್ಮ್ಮಮೇ ಧರೆಗೆ ದೈವ ಮದೆಂಬೊಡೆ ದಕ್ಷಚಂಡರೊ । ಳ್ನಿಗಳ್ದ ಸುಕರ್ಮ್ಮದುಷ್ಕೃತರಕರ್ಮ್ಮಯುಗಂ ಫಲ ವೈಪರೀತ್ಯದಿಂ ॥ ಜಗದೊಳಗೆಂತು ತೋರಿದುದೊ ಶಂಕರ ನಿಚ್ಛೆಯಿ ನಚ್ಯುತಾಜವ । ಪ್ರಿಗಳಭವಾಜ್ಞೆಯಿಂ ಶಿರದೊಳಾಂತಸಪರ್ಸಲೆ ನೈಜಕರ್ಮ್ಮಮಂ ॥ ... ... ... ೭೩

ಉತ್ಸಾಹವೃತ್ತ ॥ ಏಕಏವರುದ್ರನೆಂಬ ನದ್ವಿತೀಯ ನೆಂಬ ಸು । ಶ್ಲೋಕವೇದವಾಕ್ಯದಿಂ ದಜಾಚ್ಯುತಾದಿನಿರ್ಜರಾ ॥ ನೀಕಸರ್ವಜೀವಯುಕ್ತವಿಷ್ಟಪತ್ರಯಕ್ಕೆ ಗೌ । ರೀಕಳತ್ರ ನೆಮ್ಮಶಂಭು ಪ್ರೋರ್ವನಲ್ತೆ ವಲ್ಲಭಂ ॥ ... .. ೭೪

ಶಾ ॥ ಯಸ್ಮಾನ್ನಾಪರ ಮಸ್ತಿ ಕಿಂಚಿ ದೆನುತಂ ವಿಶ್ವಾಧಿಕೋ ರುದ್ರನೆಂ । ದಸ್ಮದ್ದೇವನ ನೇಳ್ಗೆಯಿಂದೆ ಶಿವಏಕೋಧ್ಯೇಯ ಎಂದುರ್ವ್ವರ್ತಂ ॥ ತಸ್ಮಾತ್ಸರ್ವಗತಶ್ಶಿವ ಶ್ಶ್ರುತಿಯುತಂ ವೇದಾಂತವಾಕ್ಯಾಳಿ ಸ । ರ್ವಸ್ಮೃತ್ಯುಕ್ತ್ಯುಪಬೃಂಹಿತಂ । ಮೊರೆಗು ಮೆಲ್ಲಾ

---

ವೇದಬಾಹ್ಯರ್ಕಳಿಂ- ವೇದವಚನಪ್ರಮಾಣಬದ್ಧರಾಗದವರನ್ನು, ತನುಲೋಕಾಕೃತಿವೆತ್ತ- ದೇಹಪ್ರಪಂಚಗಳ ಆಕಾರವನ್ನೈದಿದ, ಎಂದುಂ- ಯಾವಾಗಲೂ, ಜಡಂ- ಅಜ್ಞವಾದದ್ದು; ಶ್ರುತಿ- ವೇದವು, ಸೋಮುಕಾಪಹೃತಂ- ಸೋಮುಕನೆಂಬ ರಾಕ್ಷಸನಿಂದಕದಿಯಲ್ಪಟ್ಟದ್ದು; ||೭೨||

ಕರ್ಮ್ಮಮೇ- ಯಜ್ಞಾದಿಗಳೇ, ದಕ್ಷಚಂಡರೊಳ್- ದಕ್ಷಬ್ರಹ್ಮಚಂಡರಲ್ಲಿ, ಸುಕರ್ಮ್ಮದುಷ್ಕೃತರಕರ್ಮ್ಮಯುಗಂ— ಸುಕರ್ಮ್ಮ- ಯಜ್ಞ, ದುಷ್ಕೃತರಕರ್ಮ್ಮ- ಮಳಲಗುಡ್ಡೆಯಂ ಪೂಜಿಸಿ ತಂದೆಯಕಾಲಂತರಿದ ಕೆಟ್ಟಕೆಲಸ, ಇವೆರಡೂ, ಫಲವೈಪರೀತ್ಯದಿಂ- ವ್ಯಸ್ತವಾದ ಪ್ರಯೋಜನವನ್ನಿತ್ತುದರಿಂದ, ( ಅಂದರೆ ದಕ್ಷನ ಶಿರಶ್ಛೇದನವಾಯಿತು; ಚಂಡನಿಗೆ ಶಿವಪದವು ಪ್ರಾಪ್ತವಾಯಿತು ) ಅಚ್ಯುತಾಜವಪ್ರಿಗಳ್- ವಿಷ್ಣುಬ್ರಹ್ಮೇಂದ್ರರುಗಳು, ನೈಜಕರ್ಮ್ಮಮಂ- ತಮ್ಮ ಕೆಲಸವನ್ನು. ... ... ... ||೭೩||

ಏಕಏವರುದ್ರಃ- ರುದ್ರನೊಬ್ಬನೇ ಪರಬ್ರಹ್ಮನು, ನದ್ವಿತೀಯಂ- ಅವನಿಗೆಣೆಯುವನಿಲ್ಲವು, ಸುಶ್ಲೋಕವೇದವಾಕ್ಯದಿಂದೆ- ಪರಿಶುದ್ಧವಾದ ಶ್ರುತಿವಚನದಿಂದ, ಅಜಾ ....... ತ್ರಯಕ್ಕೆ— ಅಜ- ಬ್ರಹ್ಮ ಅಚ್ಯುತ- ವಿಷ್ಣು ಇವರುಗಳೇ, ಅದಿ- ಮೊದಲಾದ, ನಿರ್ಜರ- ದೇವತೆಗಳ, ಅನೀಕ- ಸಮೂಹವೇನು, ಸರ್ವಜೀವಯುಕ್ತ- ಸಕಲಪ್ರಾಣಿಗಳಿಂದಕೂಡಿದ, ವಿಷ್ಟಪತ್ರಯಕ್ಕೆ- ಮೂರುಲೋಕಕ್ಕೆ, ಗೌರೀಕಳತ್ರಂ- ಪಾರ್ವತಿಯೇ ಹೆಂಡತಿಯಾಗುಳ್ಳ. ... ... ... ... ||೭೪||

ಯಸ್ಮಾನ್ನಾಪರಮಸ್ತಿಕಿಂಚಿತ್— ಯಸ್ಮಾತ್- ಯಾವನಿವನಿಗಿಂತಲೂ, ಅಪರಂ- ಭಿನ್ನವಾದ, ಕಿಂಚಿತ್- ಸ್ವಲ್ಪವೂ, ನಾಸ್ತಿ- ಇಲ್ಲ, ವಿಶ್ವಾಧಿಕೋರುದ್ರಃ— ರುದ್ರಃ- ರುದ್ರನು, ವಿಶ್ವಾಧಿಕಃ- ಪ್ರಪಂಚಕ್ಕೆ ದೊಡ್ಡವನು, ಅಸ್ಮದ್ದೇವನಂ- ನಮ್ಮಸ್ವಾಮಿಯನ್ನು, ಶಿವಏಕೋಧ್ಯೇಯಃ- ಪರಶಿವನೇ ಧ್ಯಾನಿಸಲ್ಪಡುವದಕ್ಕೆ ಯೋಗ್ಯನಾದವನು, ತಸ್ಮಾತ್- ಆ ಕಾರಣದದೆಸೆಯಿಂದ, ಶಿವಃ, ಸರ್ವಗತಃ- ಸಕಲಪ್ರಾಣಿಗಳಲ್ಲೂ ಸೇರಿರುವನು, ಎಂಬ, ಶ್ರುತಿಯುತಂ- ವೇದದಲ್ಲಿಕೂಡಿರುವ, ವೇದಾಂತವಾಕ್ಯಾಳಿ- ಉಪನಿಷದ್ವಾಕ್ಯಶ್ರೇಣಿಯು, ಸರ್ವಸ್ಮೃತ್ಯುಕ್ತ್ಯುಪಬೃಂಹಿತಂ- ಸಕಲಸ್ಮೃತಿಸಂಬಂಧವಾದ ವಚನವೇನು, ಉಪಬೃಂಹಿತಂ- ಉ

ಲೋಕದೊಳ್ಸಂತತಂ ॥ ... ... ... ೩೬

ಕಂ॥ ಅದರಿಂ ಶಿವನೊರ್ವನೆ ಜಗ । ದುದಯಸ್ಥಿತಿಲಯಕೆ ತಾನೆ ಕರ್ತಾರಂ ಕೇ ॥ ಳ್ವದಿತ ಮಿದು ಸರ್ವಶಾಸ್ತ್ರ । ಘದೊ ಳೀಶಂಗೆಣೆ ಯೆನಿಪ್ಪ ದೇವನುವೊಳನೆ ॥ ೩೬

ಕಂ ॥ ಹರಿಮುಖ ರೀಶನ ಪಂಚಾ । ವರಣದೆ ಗುಡಿಯಲ್ಲಿ ನಿಂದು ಸೇವಿಪ ಭೃತ್ಯ ॥ ರ್ಧರೆ ಯೆಲ್ಲಂ ಬಲ್ಲುದಿದಂ । ಕರಕಂಕಣವೀಕ್ಷಣಕ್ಕೆ ವೇಳ್ಕುಮೆ ಮುಕುರಂ॥ ೩೭

ಕಂ ॥ ಸಲೆ ನಿತ್ಯಕರ್ಮ ರಹಿತಾ । ಮಲಿನಾಂಗಮಹೇಶ್ವರಂಗೆ ಸರಿವರ್ಪರೆ ಪೇ ॥ ಳಲೆ ನಶ್ವರಕರ್ಮಾವಿಲ । ಮಲಿನಾಂಗಸಮೇತಶೌರಿಮುಖದಿವಿಜರ್ಕಳ್ ॥ ೩೮

ಕಂ ॥ ಭವಮರಣರಹಿತಪಶುಪಾ । ಶವಿಮೋಚಕಶಂಕರಂಗೆ ತೋಡಪ್ಪರೆ ಪೇ ॥ ಳ್ಭವಮರಣಯುಕ್ತಪಾಶ । ಪ್ರವಿಬದ್ಧರ್ಪಶುಗ ಳೆಣೆಯೆ ಪಶುಪತಿ ಗನಿಶು ॥ ೩೯

ಮತ್ತೇ ॥ ಲಯದೂರಂಗೆ ಲಯಾನ್ವಿತ ರ್ಸತತಪೂಜ್ಯಂ ಗೆಯ್ದೆ ತತ್ಪೂಜಕ । ರ್ಜಯಯುಕ್ತಂಗೆ ಪರಾಜಿತತ್ರಿಪುರದೈತ್ಯಧ್ವಂಸಕಂ ಗಾಪುರ ॥ ತ್ರಯದೈತ್ಯಾಹತಶೌರ್ಯರು ಗ್ರಗರಭಕ್ಷಂ ಗದ್ಭುತಕ್ಷ್ವೇಡಜ । ಕ್ಷಯಭೀತ ರ್ಸರಿಯಕ್ಕುಮೇ ತೊಣೆಯೆ ಪೇ ಳ್ಕಾಮಾರಿ ಗಾಕಾಮುಕರ್ ॥ ... ... ... ೪೦

ಕಂ ॥ ಅಂಧಕಜಲಂಧರಾಸುರ । ಸಿಂಧುರಪಂಚಾನನಂಗೆ ದೊರೆ ಯಕ್ಕುಮೆ ಪೇ ॥

---

ಪಬ್ರಹ್ಮಣವಚನವೇನು ಇವುಗಳು. ... ... ... ||೩೫||

ಜಗದುದಯಸ್ಥಿತಿಲಯಕೆ- ಲೋಕದ ಉತ್ಪತ್ತಿ ಸಂರಕ್ಷಣೆನಾಶಕ್ಕೆ, ಒಳನೆ- ಇರ್ಪಾನೆಯೋ ? ||೩೬||

ಪಂಚಾವರಣದೆ- ವಿಸ್ತಾರವಾದ ಪ್ರಾಕಾರದೊಳಭಾಗದಲ್ಲಿ. ... ... ||೩೭||

ನಿತ್ಯಕರ್ಮರಹಿತಾಮಲಿನಾಂಗಮಹೇಶ್ವರಂಗೆ- ದೇವತೋಪಾಸನಾದಿ ನಿತ್ಯಕರ್ಮಗಳಿಲ್ಲದ ನಿರ್ಮಲವಾದ ದೇಹವುಳ್ಳ ಶಿವನಿಗೆ, ನಶ್ವರಕರ್ಮಾವಿಲಮಲಿನಾಂಗಸಮೇತಶೌರಿಮುಖದಿವಿಜರ್- ಸ್ಥಿರವಲ್ಲದ ಕಾರ್ಯಗಳಿಂವ್ಯಾಪ್ತರಾದ ಅಣವಾದಿಮಲಸಹಿತವಾದ ದೇಹದಿಂಕೂಡಿದ ವಿಷ್ಣು ಮುಂತಾದ ದೇವತೆಗಳು. ||೩೮||

ಭವಮರಣರಹಿತಪಶುಪಾಶವಿಮೋಚಕಶಂಕರಂಗೆ- ಹುಟ್ಟುವದು ಸಾಯುವದಿಲ್ಲದೇ ಇರುವ ಮಾಯೋಪಾಧಿಕಗಳಾದ ಪಶುಗಳ ಮಾಯಾಪಾಶವನ್ನು ಹೋಗಲಾಡಿಸುವ ಶಿವನಿಗೆ, ಭವಮರಣಯುಕ್ತಪಾಶಪ್ರವಿಬದ್ಧರ್- ಹುಟ್ಟುವದು ಸಾಯುವಿಕೆಗಳಿಂ ಕೂಡಿದ ಮಾಯಾಪಾಶದಿಂ ಕಟ್ಟಲ್ಪಟ್ಟ, ತೋಡು- ಸಾಮ್ಯವು. ... ... ... ... ||೩೯||

ಲಯದೂರಂಗೆ- ನಾಶವಿಲ್ಲದವನಿಗೆ, ಲಯಾನ್ವಿತರ್- ನಾಶದಿಂಕೂಡಿದವರು, ಸತತಪೂಜ್ಯಂಗೆ- ಯಾವಾಗಲೂ ಪೂಜಿಸಲ್ಪಡುವದಕ್ಕೆ ಯೋಗ್ಯನಾದವನಿಗೆ, ತತ್ಪೂಜಕರ್- ಅವನನ್ನು ಪೂಜಿಸುವವರು, ತ್ರಿಪುರದೈತ್ಯಧ್ವಂಸಕಂಗೆ— ತ್ರಿಪುರದೈತ್ಯ- ಆಕಾಶದಲ್ಲಿ ಮೂರು ಪಟ್ಟಣಗಳು ಕಟ್ಟಿಕೊಂಡಿದ್ದ ರಾಕ್ಷಸರನ್ನು, ಧ್ವಂಸಕಂಗೆ- ನಾಶಮಾಡಿದ ಶಿವನಿಗೆ, ಆ ಪುರತ್ರಯದೈತ್ಯಾಹತಶೌರ್ಯರ್- ಮೂರುಪಟ್ಟಣಗಳ ರಾಕ್ಷಸರಿಂದ ಹಾಳುಮಾಡಲ್ಪಟ್ಟ ಪರಾಕ್ರಮವುಳ್ಳವರು, ಗರಭಕ್ಷಂಗೆ- ವಿಷವನ್ನು ತಿಂದವನಿಗೆ, ಅದ್ಭುತಕ್ಷ್ವೇಡಜಕ್ಷಯಭೀತರ್- ಆಶ್ಚರ್ಯಕರವಾದ ವಿಷದಿಂ ಹುಟ್ಟಿದ ನಾಶದಿಂದ ಭಯಪಟ್ಟವರು, ಕಾಮಾರಿಗೆ- ಮದನವೈರಿಗೆ- ಆ ಕಾಮುಕರ್- ಆ ವಿಷಯಾಭಿಲಾಷೆಯುಳ್ಳ ವಿಷ್ಣುಬ್ರಹ್ಮಾದಿಗಳು. ||೪೦||

ಅಂಧಕ........ನನಂಗೆ— ಅಂಧಕ, ಜಲಂಧರರೆಂಬ, ಅಸುರ- ರಾಕ್ಷಸರೆಂಬ, ಸಿಂಧುರ- ಆನೆಗಳಿಗೆ,

ಳಂಧಕಜಲಂಧರಾಸುರ । ಬಂಧನಸಂಪ್ರಾಪ್ತಭೀತಸುರಸಂಜಾತಂ ॥ ... ೮೧
ಕಂ ॥ ಕಾಲಾರಿ ಗೆಣೆಯೆ ಕಾಲಕ । ರಾಲಾನನಮಗ್ನ ಅಜಕಪಾಲಾಚ್ಯುತಕಂ ॥ ಕಾ
ಲಧರಂ ಗಾವಿಧಿವನ । ಮಾಲಿಮುಖ ರ್ಸರಿಯೆ ಕಲ್ಪಕಾಲಾಂತಗತರ್‍ ॥ ... ೮೨
ಕಂ॥ ಸರ್ವಜ್ಞನ ನಲ್ಪಜ್ಞ । ರ್ಸರ್ವಾಧೀಶನ ನನೀಶರುಪಗತವಿಲಸ ॥ ತ್ಸರ್ವೈಶ್ವ
ರ್ಯನ ನಪಗತ । ಸರ್ವೈಶ್ವರ್ಯರ್ಕಳೆಂತು ಮೇಂ ಪೋಲ್ವರೆ ಪೇಳ್ ॥ ೮೩
ಶಾ ॥ ಶ್ರೀಲಿಂಗಾಮಳಮೂರ್ತಿಗೆಮ್ಮಯ ಮಹಾಸೊಡ್ಡಾಳದೇವ ಗಸ ।
ಡ್ಡಾಳಾಮರ್ತ್ಯ ರದೇಂ ಸಮಾನರೆ ತದಂಗಾಂತಸ್ಥಿತ ರ್ಸ್ಯರ್ಘವಾ ॥ ದಾಳಾಪಂ ಸಲೆ ಸಾ
ಲ್ಗ ಮಚ್ಯುತನ ಕಣ್ಪಾದಾಬ್ಜದೊಳ್ ಬ್ರಮ್ಮನಾ । ಭೀಳಂ ಪಂದಲೆ ಪಾಣಿಯೊಳ್ ತ
ಳಗೆ ತಾಳ್ದಂ ಗಂತೆವರ್ ಸಾಟಿಯೆ ॥ ... ... ೮೪
ಕಂ ॥ ಹರ ನುಗ್ರಂ ಪಶುಪತಿ ಶಂ । ಕರ ನಭವಂ ಕಾಮರಿಪು ಮಹಾದೇವನು ಮಾ॥
ಶ್ವರ ನಮೃತಂ ಶಂಭು ಶಿವಂ । ಪರಮೇಶ್ವರ ನೆಂಬ ನಾಮ ಮನ್ಯ ರ್ಗೊಳವೆ ॥ ೮೫
ಕಂ ॥ ವಿಶ್ವಪತಿ ವಿಶ್ವನಾಥಂ । ವಿಶ್ವಾಧಿಕ ನೆಂಬ ನಾಮ ಮಭವಂ ಗೆಂದುಂ ॥ ಶಾಶ್ವ
ತ ಮಿದ ನರಿದಿರ್ದುಂ । ವಿಶ್ವಾಸವಿಹೀನ ರನ್ಯರಂ ಸರಿಗಾಣ್ಬರ್ ॥ ... ೮೬
ಕಂ ॥ ಪಶುಪತಿ ಯಪ್ಪನೆ ಪತಿ ತಾಂ । ಪಶು ವಪ್ಪನ್ ಪಶುಗಳಜಹರಿಪ್ರಮುಖ
ರಣಂ ॥ ಪಶುಪತಿಯೆ ಶಿವಂ ಶಿವನೇ । ವಿಶದಪರಬ್ರಹ್ಮ ಮೆಂಬ ವಾಕ್ಯಮೆ ಸತ್ಯಂ ॥ ೮೭

---

ಪಂಚಾನನಂಗೆ- ಸಿಹ್ಮನಾದ ಪರಶಿವನಿಗೆ, ಅಂಧಕ.........ಸಂಜಾತಂ— ಅಂಧಕ, ಜಲಂಧರಾಸುರ ಇವರು ಗಳ, ಬಂಧನ- ಸೆರೆಹಾಕುವದರಿಂದ, ಸಂಪ್ರಾಪ್ತ- ಉಂಟಾದ, ಭೀತಿ- ಭಯವುಳ್ಳ, ಸುರಸಂಜಾತಂ ದೇವತೆಗಳಗುಂಪು, ದೊರೆ- ಸದೃಶವು. ... ... ... ... ||೮೧||

ಕಾಲಾರಿಗೆ- ಯಮವೈರಿಯಾದ ಶಿವನಿಗೆ, ಕಾಲಕರಾಲಾನನಮಗ್ನರ್- ಯಮನ ಭಯಂಕರವಾದ ಮುಖದಲ್ಲಿ ಮುಳುಗಿದವರು, ಅಜ..... ...ಧರಂಗೆ— ಅಜ- ಬ್ರಹ್ಮನ, ಕಪಾಲ- ತಲೆಯೋಡು, ಅಚ್ಯುತ- ವಿಷ್ಣುವಿನ, ಕಂಕಾಲ- ಬೆನ್ನಿನಮೂಳೆಗಳನ್ನು, ಧರಂಗೆ- ಧರಿಸಿರುವ ಶಿವನಿಗೆ, ಕಲ್ಪಕಾಲಾಂತಗತರ್- ಪ್ರಳಯಕಾಲದಲ್ಲಿ ನಾಶವನ್ನುಹೊಂದಿದ, ಆ ವಿಧಿವನಮಾಲಿಮುಖರ್- ಆ ಬ್ರಹ್ಮವಿಷ್ಣುಮುಂತಾದವರು.

ಸರ್ವಜ್ಞನಂ- ಎಲ್ಲವನ್ನೂ ತಿಳಿದವನನ್ನು, ಅಲ್ಪಜ್ಞರ್- ಸ್ವಲ್ಪವನ್ನು ತಿಳಿದವರು, ಸರ್ವಾಧೀಶನಂ- ಸಕಲಕ್ಕೂ ಒಡೆಯನಾದವನನ್ನು, ಅನೀಶರ್- ಸ್ವಾಮಿಗಳಲ್ಲದವರು, ಉಪಗತವಿಲಸತ್ಸರ್ವೈಶ್ವರ್ಯನಂ- ಪ್ರಾಪ್ತವಾದ ಪ್ರಕಾಶಿಸುವ ಸಮಸ್ತ ಸಂಪತ್ತುಳ್ಳವನನ್ನು, ಅಪಗತಸರ್ವೈಶ್ವರ್ಯರ್ಕಳ್- ಹೋದ ಸಮಸ್ತಸಂಪತ್ತುಳ್ಳವರು. ... ... ... ||೮೩||

ಶ್ರೀಲಿಂಗಾಮಳಮೂರ್ತಿಗೆ- ಮೋಕ್ಷಸಂಪತ್ಕರವಾದ ಶಿವಲಿಂಗರೂಪವಾದ ನಿರ್ಮಲವಾದ ದೇಹವುಳ್ಳ, ತದಂಗಾಂತಸ್ಥಿತರ್- ಅವನ ದೇಹದೊಳಗಿರುವ, ಅಸಡ್ಡಾಳಾಮರ್ತ್ಯರ್- ಅಲಕ್ಷ್ಯರಾದ ದೇವತೆಗಳು, ಸಾಲ್ಗಂ- ಸಾಕು; ಅಭೀಳಂ- ಅಧಿಕವಾದ, ಪಂದಲೆ- ರುಂಡವು, ತಾಳ್ದಂಗೆ- ಧರಿಸಿದವನಿಗೆ. ||೮೪||

ಅಮೃತಂ- ಸಾಯದಿರುವವನು, ಶಂಭು- ಸುಖವನ್ನುಂಟುಮಾಡುವವನು. ||೮೫||

ಅನ್ಯರಂ- ವಿಷ್ಣುಬ್ರಹ್ಮಾದಿಗಳನ್ನು. ... ... ... ||೮೬||

ಪಶುಪತಿಯಪ್ಪನೆ- ವಿಷ್ಣುಬ್ರಹ್ಮಾದಿಪಶುಗಳಿಗೆ ಸ್ವಾಮಿಯಾದವನೇ, ಪತಿ- ಸ್ವಾಮಿಯು, ತಾಂ- ಆ ಪಶುಪತಿಯು, ಪಶು, ಅಪ್ಪನೆ ? ... ... ... ||೮೭||

ಕಂ ॥ ವರಸುಮತಿಸೂರಿಗಳ್ಸಲೆ । ಹರಪದಮಂ ವಿಷ್ಣುಪದದಿ ನಗ್ಗಳಗಾಣ್ಬ ॥
ರ್ಪರಮಾರ್ಥಂ ತದ್ವಿಷ್ಣೋಃ । ಪರಮಂ ಪದ ಮೆಂಬ ವೇದ ಮಿದರೊಳ್ಪವಣಂ ॥ ೮೮

ಉ ॥ ಕುಂತುಹರಂ ಸುರ ಗ್ರಧಿಕ ನೆಂದೆರ್ದೆಯೊಳ್ಸಲೆ ತಾಳ್ದ ರುಣ್ಬುದೇ । ಸಂತ
ತಸಾರ ಮಪ್ಪಮರ್ದುಗೂಳದ ನೊಲ್ಲದ ಶಾಪದಗ್ಧದು ॥ ರ್ಭ್ರಾಂತನರರ್ಕಳುಣ್ಬುದೆ ಪು
ರೀಷ ಮನುತ್ತಮ ವೇದ ಮಂತರಿ । ಚ್ಛಂತಿ ಮುಖೋಕ್ತಿಯಿಂ ದೊರೆಗು ಮಿಂತಿದು
ಸಾಲದೆ ಪೇರ್ಮೆಗೀಶನ ॥ ... ... ... ೮೯

ಕಂ ॥ ಪೆಂಕುಳಿವಾಲೀಂಟಿದರೊ ತ । ಮಂ ಕವಿಯೆ ಮರುಳ್ತನಕ್ಕೆ ಪಕ್ಕಾದರೊ ನಿ ॥
ಶ್ಶಂಕೆ ಮಿಗೆ ಮರ್ದುಗುಳಿಗೆಯ । ನೇಂ ಕೊಂಡರೊ ಶಂಭು ಗಮರ ರೆಣೆ ಯೆಂಬಧಮರ್ ॥

ಕಂ ॥ ಜಾತೋಽಬೃಹನ್ನಪಿಶ್ರುತಿ । ಮಾತೇಂ ಹರಿಜನಿಯನುಸಿರ್ಗು ಮಜ ನುದ್ಭ
ವಮಂ ॥ ಭೂತಸ್ಯ ಜಾತವಾಕ್ಯ ಮ । ಜಾತಶ್ರುತಿ ಯಭವ ನೊಗೆಯ ನೆಂಬುದ ನೊರೆಗುಂ ॥

ಕಂ ॥ ಭೃಗುಮುನಿಯ ಶಾಪದಿಂ ಪ । ನ್ನಗಶಯನಂ ಪತ್ತುಯೋನಿಯೊಳ್ಪುಟ್ಟದ
ನಾ ॥ ನೆಗಳ್ದಜನ್ಪಾಯುವೊಳ್ಪದೆ । ದೊಗೆದಾಂತ ನಧೋಕ್ಷಜಾಖ್ಯೆಯಂ ಕಮಲಾಕ್ಷಂ ॥

ವ ॥ ಅಂತು ಮಲ್ಲದೆಯುಂ ॥ * * * * * *

ಕಂ ॥ ಕುಡಿವಾಗಳಮೃತಶರಧಿಯ । ನೆಡೆಸಿಲ್ಕಿರೆ ಸೆದಗೆಯಂತೆ ಕೊರಲೊಳ್ಕಲ

---

ವರಸುಮತಿಸೂರಿಗಳ್- ಶ್ರೇಷ್ಠವಾದ ಒಳ್ಳೆಯ ಬುದ್ಧಿಯುಳ್ಳ ವಿದ್ವಾಂಸರು, ಹರಪದಮಂ- ಶಿವಸ್ಥಾನವನ್ನು, ವಿಷ್ಣುಪದದಿಂ- ವಿಷ್ಣುಸ್ಥಾನಕ್ಕಿಂತಲೂ, ಅಗ್ಗಳಗಾಣ್ಬರ್- ಅತಿಶಯವಾದುದನ್ನಾಗಿ ತಿಳಿಯುವರು, ತದ್ವಿಷ್ಣೋಃಪರಮಂಪದಂ— ತತ್- ಆ ಶಿವಸ್ಥಾನವು, ವಿಷ್ಣೋಃ- ವಿಷ್ಣುವಿಗಿಂತಲೂ, ಪರಮಂ- ಉತ್ಕೃಷ್ಟವಾದ, ಪದಂ- ಸ್ಥಾನವು, ಎಂಬ, ಪರಮಾರ್ಥಂ- ಉತ್ಕೃಷ್ಟವಾದ ಅಭಿಪ್ರಾಯವುಳ್ಳ, ವೇದಂ ಪವಣಂ- ಪ್ರಮಾಣವು. ... ... ... ... ... ॥೮೮॥

ಎರ್ದೆಯೊಳ್- ವಕ್ಷಸ್ಥಲದಲ್ಲಿ, ಸಂತತಸಾರಂ- ಯಾವಾಗಲೂ ಶ್ರೇಷ್ಠವಾದದ್ದು, ಅಮರ್ದುಗೂಳ್- ಅಮೃತಾನ್ನವು, ಶಾಪದಗ್ಧದುರ್ಭ್ರಾಂತನರರ್ಕಳ್- ಗೌತಮಾದಿ ಶಾಪದಿಂ ಸುಡಲ್ಪಟ್ಟವರಾಗಿಯೂ ಕೆಟ್ಟ ಭ್ರಮೆಯುಳ್ಳವರಾಗಿಯೂ ಇರುವ ಮನುಷ್ಯರುಗಳು, ಪುರೀಷಂ- ಅಮೇಧ್ಯವು, ಅಂತರಿಚ್ಛಂತಿಮುಖೋಕ್ತಿಯಿಂದೆ- ಅಂತರಿಚ್ಛಂತಿಯೆಂಬುವದೇ ಮೊದಲಾದ ವಚನಗಳಿಂದ, ಪೇರ್ಮೆಗೆ- ಅತಿಶಯಕ್ಕೆ. ॥೮೯॥

ಪೆಂಕುಳಿವಾಲೀಂಟಿದರೊ- ಹುಚ್ಚೆಯ ಹಾಲನ್ನು ಕುಡಿದರೋ ? ತಮಂ- ಅಜ್ಞಾನವು, ಕವಿಯೆ- ಆಛಾದಿಸಲು, ಮರುಳ್ತನಕ್ಕೆ- ಪಿಶಾಚತ್ವಕ್ಕೆ, ಮರ್ದುಗುಳಿಗೆಯಂ- ಮದ್ದಿನಗುಳಿಗೆಯನ್ನು, ಅಧಮರ್- ನೀಚರು. ... ... ... ... ... ॥೯೦॥

ಮಾತೇಂ- ಬಲುಮಾತಿನಿಂದೇನುಪ್ರಯೋಜನ ? ಜಾತೋಽಬೃಹನ್ನಪಿಶ್ರುತಿ, ಹರಿಜನಿಯಂ- ವಿಷ್ಣುವಿನ ಉತ್ಪತ್ತಿಯನ್ನು, ಉಸಿರ್ಗುಂ- ಹೇಳುವದು, ಭೂತಸ್ಯಜಾತವಾಕ್ಯಂ, ಅಜನ, ಉದ್ಭವಮಂ, ಅಜಾತಶ್ರುತಿ, ಅಭವಂ, ಒಗೆಯಂ- ಹುಟ್ಟುವದಿಲ್ಲವು. ... ... ... ॥೯೧॥

ಪನ್ನಗಶಯನಂ- ಸರ್ಪದಲ್ಲಿ ಮಲಗಿರುವ ವಿಷ್ಣುವು, ಪತ್ತುಯೋನಿಯೊಳ್- ಹತ್ತುಪ್ರಾಣಿಗಳ ಭಗದಲ್ಲಿ, ಆ ನೆಗಳ್ದ- ಆ ಪ್ರಸಿದ್ಧನಾದ, ಅಜನ- ಬ್ರಹ್ಮನ, ಪಾಯುವೊಳ್- ಗುದಸ್ಥಾನದಲ್ಲಿ, ಅಧೋಕ್ಷಜಾಖ್ಯೆಯಂ- ಕೆಳಗಡೆಯ ದೇಹದಲ್ಲಿ ಹುಟ್ಟಿದವನೆಂಬ ಹೆಸರನ್ನು. ... ... ॥೯೨॥

ಎಡೆಸಿಲ್ಕಿದ- ಮಧ್ಯದಲ್ಲಿ ಸಿಕ್ಕಿದ, ಸೆದೆಗೆಯಂತೆ- ಸೆತ್ತೆಯ ಹಾಗೆ, ಜಡರುಹಲೋಚನಂ- ಕಮಲಾಕ್ಷ

ಷ್ಣಂ ॥ ತಡೆಯ ದುಪಮನ್ಯುಮುನಿ ತಾಂ । ಜಲರುಹಲೋಚನನ ನುಗುಳನೇ ವಸುಮ
ತಿಯೊಳ್ ॥ ... ... .. ೯೩

ಜಂ ॥ ನರಹರಿರೂಪವಿಷ್ಣು ಮಡಿದಂ ಶರಭಾಕೃತಿವೀರಭದ್ರನಿಂ ॥ ಪರಮುದಧೀಚಿ
ಯೊ ಳ್ಸೆಣಸಿ ಚಕ್ರಮ ನಕ್ರಮದಿಂದೆ ನೀಗಿ ತ ॥ ನ್ನುರದೊಳೆ ತತ್ಪದಾಹತಿಯ ನಾಂ ತ
ಗಿದೋಡಿದ ನಚ್ಯುತಂ ಮಹೇ । ಶ್ವರಮುನಿ ಯಂಘ್ರಿಯಿಂ ದೊಡೆಯ ಭಂಗಮ ನಾಂತ ನ
ದೋರ್ವೆ ಮಾಧವ ॥ ... ... ... ೯೪

ಉ ॥ ಅಂದು ಜಲಂಧರಾಸುರ ನಹೀಶ್ವರಪಾಶದಿ ನೊತ್ತಿ ಕಟ್ಟಿ ಗೋ । ವಿಂದನ ನಿ
ಟ್ಟ ನಾಗಸಕೆ ತಾರಕ ನೋಡಿಸಿದಂ ರಣಾಗ್ರದೊ ॥ ಳ್ಕುಂದದೆ ದಂತಿದಾನವಮೃಗಾರಿ ಸು
ರಾರಿಮುಖಾಸುರ ಪ್ರೌಢ । ಪ್ರೌಢರೆ ತಕ್ಕುಗುಂದಿಸಿ ಪ್ರಣಕರ್ಕಯೊ ಳಂಜಿಸುತಂ ಮ
ಗುಳ್ಚಿದರ್ ॥ ... ... ... ೯೫

ಉ ॥ ಸೀತೆಯ ನಾತ್ಮ ವಲ್ಲಭೆಯ ನೊಯ್ದ ದಶಾಸ್ಯನ ನುದು ಕೊಂದ ಬೊ । ಮ್ಮೇ
ತಿಯ ನೀಗ ಲೆಂದು ಶಿವಲಿಂಗವ ನೊಲ್ದು ನಿಜಾಭಿಧಾನದಿಂ ॥ ಸೇತುಗ ಮುಂಪ್ರತಿಷ್ಠಿಸಿ
ಸಮರ್ಚಿಸಿದಂ ರಘುರಾಮರೂಪಿನಿಂ । ಪ್ರೀತಿಯೊ ಳಂಬುಜೇಕ್ಷಣ ನಿದಂ ಸಲೆಬಲ್ಲುದು
ಭೂರಿಭೂಜನಂ ॥ ... ... ... ೯೬

ಕಂ ॥ ಹರಿ ಮತ್ಸ್ಯರೂಪಮಂ ತಾ । ಳ್ದುರುಲಂಕೆಯೊ ಳೊಲ್ದು ಮತ್ಸ್ಯಕೇಶ್ವರ
ನಂ ತಾ ॥ ನಿರದರ್ಚಿಸಿ ಸುಖದಿಂ ನಿ । ರ್ಜರರಿಪುವಂ ಸದೆದು ವೇದಮಂ ತೆಗೆತಂದಂ ॥ ೯೭

ಕಂ ॥ ಕಮಠಾವತಾರದೊಳ್ ಹರಿ । ವಿಮಳಹರಿದ್ವಾರದಲ್ಲಿ ಕಮಠೇಶ್ವರನಂ ॥ ಪ್ರ
ಮುದದಿ ನರ್ಚಿಸಿ ಪಡೆಯನೆ । ಸುಮನೋರಥಮಂ ಮುರಾರಿ ಕೃಷ್ಣೇಶ್ವರನಂ ॥ ೯೮

ಕಂ ॥ ದ್ವಾರವತಿಯಲ್ಲಿ ಭಜಿಸಿ ಕು । ಮಾರಾದ್ಯಭಿಮತಫಲಂಗಳಂ ಪಡೆದಂ ತಾ ॥

---

ನಾದ ವಿಷ್ಣುವು. ... ... ... ... ... ||೯೩||

ಸೆಣಸಿ- ಯುದ್ಧವಂಮಾಡಿ, ನೀಗಿ- ಹಾಳುಮಾಡಿಕೊಂಡು, ತನ್ನುರದೊಳೆ- ತನ್ನಎದೆಯಲ್ಲಿ, ತತ್ಪ
ದಾಹತಿಯಂ- ಆದಧೀಚಿಋಷಿಯ ಪಾದದ ಏಟನ್ನು, ಅಗಿದು- ಭಯಪಟ್ಟು. ... ||೯೪||

ಅಹೀಶ್ವರಪಾಶದಿಂ- ಆದಿಶೇಷನೆಂಬ ಹಗ್ಗದಿಂದ, ಆಗಸಕೆ- ಅಂತರಿಕ್ಷಕ್ಕೆ, ತಾರಕಂ- ತಾರಕಾಸುರ
ನು, ದಂತಿದಾನವಮೃಗಾರಿಸುರಾರಿಮುಖಾಸುರರ್— ದಂತಿದಾನವ- ಗಜಾಸುರ, ಮೃಗಾರಿಸುರಾರಿ- ವ್ಯಾ
ಘ್ರಾಸುರ ಇವರುಗಳೇ, ಮುಖ- ಮೊದಲಾದ, ಅಸುರರ್- ತಕ್ಕುಗುಂದಿಸಿ- ಶೌರ್ಯವಂ ಕಡಮೆಮಾಡಿ,
ಪ್ರಣಕರ್ಕಯೊಳ್- ಯುದ್ಧದಲ್ಲಿ, ಮಗುಳ್ಚಿದರ್- ಹಿಂದಿರುಗಿದರು. ... ||೯೫||

ಆತ್ಮವಲ್ಲಭೆಯಂ- ತನ್ನ ಹೆಂಡತಿಯಾದ, ಒಯ್ದು- ತೆಗದುಕೊಂಡುಹೋದ, ದಶಾಸ್ಯನಂ- ರಾವಣನ
ನ್ನು, ಬೊಮ್ಮೇತಿಯಂ- ಬ್ರಹ್ಮಹತ್ಯವನ್ನು, ನೀಗಲೆಂದು- ಹೋಗಲಾಡಿಸಿಕೊಳ್ಳಬೇಕೆಂದು, ನಿಜಾಭಿಧಾನ
ದಿಂ- ತನ್ನ ಹೆಸರಿನಿಂದ, ಮುಂ- ಮೊದಲಿನಲ್ಲಿ. ... ... ||೯೬||

ಮತ್ಸ್ಯರೂಪಮಂ- ಮೀನಿನ ಆಕಾರವನ್ನು, ಉರುಲಂಕೆಯೊಳ್- ವಿಸ್ತಾರವಾದ ಲಂಕಾಪಟ್ಟಣದ
ಲ್ಲಿ, ನಿರ್ಜರರಿಪುವಂ- ಸೋಮುಕಾಸುರನನ್ನು, ಸದೆದು- ಕೊಂದು. ... ||೯೭||

ಕಮಠಾವತಾರದೊಳ್- ಆಮೆಯ ಅವತಾರದಲ್ಲಿ. ... ... ||೯೮||

ಕುಮಾರಾದ್ಯಭಿಮತಫಲಂಗಳಂ- ಪುತ್ರನೇ ಮೊದಲಾದ ಇಷ್ಟಾರ್ಥಗಳನ್ನು. ... ||೯೯||

ನೋಂತೆ ಕೃಷ್ಣವರ್ಣರೂಪಿಂ । ನಾರಬ್ರಹ್ಮೇಶಲಿಂಗಮಂ ಧಾರುಣಿಯೊಳ್ ॥ ೯೯

ಕಂ ॥ ಮಿಸುಗುವಲಂಪುರದೊಳ್ಪಿ । ಜಿಸಿ ಪಡೆದಂ ಬ್ರಹ್ಮನಿಪಟ್ಟಮಂ ಹರಿವಿಧಮು ॥ ಖ್ಯಸುರ ಮುನಿಗಳ್ವಾರಾ । ಣಸಿಯೊಳ್ನಿಜನಾಮಲಿಂಗಮಂ ಪೂಜಿಸಿದರ್ ॥ ೧೦೦

ಕಂ ॥ ಹರಿ ಮೇಘರೂಪದಿಂ ದೀ । ಶ್ವರನ ಸಲೆ ಪೊತ್ತು ಸೇವಿಸಿದನೊಂದುಯುಗಾಂ ॥ ತರದೊಳ್ಮೋಹಿನಿವೇಷರಿಂ । ತರುಣಿತ್ವಮನಾಳ್ದು ಹರನನೋಲಗಿಸಿದರ್ ॥

ಮ ॥ ಸ್ರ ॥ ಧರೆ ಗಾವೇಂ ದೇವ ರೆಂದಾಡಿದ ನುಡಿಯಘದಿಂ ಪಂದಿಪರ್ವಾಗಿ ಪದ್ಮೋ । ದರನುಂ ವಾಣೀಶನುಂ ವಾದಿಸು ತಡಿಮುಡಿಯಂ ಕಾಣದೇಳ್ತುದು ಲಜ್ಜಾ॥ ಭರದಿಂ ಜ್ವಾಲಾಂಗಲಿಂಗಕ್ಕೆರಗಿ ಪೊಗಳ್ದು ದೈನ್ಯೋಕ್ತಿಯಿಂ ಮಚ್ಚಿಸುತ್ತೀ । ಶ್ವರನಂ ತನ್ನಿಷ್ಟಮಂ ಪೇಣ್ಪಡೆದರಿದು ವಲಂ ಲೋಕವೇದಪ್ರಸಿದ್ಧಂ ॥ ... ೧೦೨

ಚಂ ॥ ಮದಯುತಮತ್ಸ್ಯರೂಪಹರಿಯಂ ಹರನರ್ದಿಸಿ ಸುತ್ತಿದಂ ಜಟಾ । ಪದದೊಳೆ ವೇಷ್ಟಿಯಂ ತೆಸೆವ ಬೆನ್ನ ನಚ್ಯುತಕೂರ್ಮಕರ್ಪರಂ ॥ ವಿದಿತಸುರಾರಿ ಮಸ್ತಕದಮಾಲೆಯ ಮಧ್ಯದೊಳೀಶವಕ್ಷದೊ । ಳ್ಪುದಿ ದೆಸೆದಿರ್ಕೆ ಮಿಕ್ಕ ನರಸಿಹ್ಮನ ಚರ್ಮವನುಟ್ಟ ನೀಶ್ವರಂ ॥ ... ... ... ॥೧೦೩॥

ಮತ್ತೇ ॥ ಹರಹಸ್ತಾಗ್ರದೊಳಿರ್ಕೆ ಮಾದ್ಯಕಟದಂಷ್ಟ್ರಂ ಮತ್ತಮಾಲೋಕಭೀ । ಕರನು ವಕ್ರಮತಿತ್ರಿವಿಕ್ರಮನ ನಾರ್ಪಿಂ ಸೀಳ್ದು ಕಂಕಾಳಮಂ ॥ ಕರದಿಂ ತಾಳ್ದನನುಂಗವೈರಿ ಖಳವಿಷ್ವಕ್ಸೇನನಂ ಶೂಲದಿಂ । ಭರದಿಂ ದಾರ್ದಿರಿದೆತ್ತಿ ತನ್ನ ಹೆಗಲೊಳ್ಪೊತ್ತಂ ಕೃತಾಂತಾಂತಕಂ. ... ... ... ೧೦೪

ಚಂ ॥ ಜಡಮತಿ ದಕ್ಷ ನಧ್ವರದ ಶಾಲೆಯೊಳೋಡುವ ಯಜ್ಞವಿಷ್ಣುವಂ । ತಡೆ

---

ವಾರಾಣಸಿಯೊಳ್- ಕಾಸಿಯಲ್ಲಿ. ... ... ॥೧೦೦॥

ತರುಣಿತ್ವಮಂ- ಹೆಂಗಸಿನತನವನ್ನು, ಓಲಗಿಸಿ-ಸೇವಿಸಿ. ... ॥೧೦೧

ಆವೇ- ನಾವೆ, ನುಡಿಯ- ಮಾತಿನಿಂದುಂಟಾದ, ಅಘದಿಂ- ಪಾಪದಿಂದ, ಪದ್ಮೋದರನುಂ-ವಿಷ್ಣುವೂ, ವಾಣೀಶನುಂ- ಬ್ರಹ್ಮನೂ, ಅಡಿಮುಡಿಯಂ- ಪಾದವನ್ನು ಶಿರಸ್ಸನ್ನೂ, ಲಜ್ಜಾಭರದಿಂ- ಹೆಚ್ಚಾದ ನಾಚಿಕೆಯಿಂದ, ಜ್ವಾಲಾಂಗಲಿಂಗಕ್ಕೆ- ಉರಿಲಿಂಗಕ್ಕೆ. ... ... ॥೧೦೨॥

ಮತ್ಸ್ಯರೂಪಹರಿಯಂ- ಮೀನಿನ ಆಕಾರವುಳ್ಳವನಾಗಿದ್ದ ವಿಷ್ಣುವನ್ನು, ಅರ್ದಿಸಿ- ನಾಶಮಾಡಿ, ಜಟಾಪದದೊಳೆ- ಜಡೆಯ ಸ್ಥಾನದಲ್ಲಿ, ವೇಷ್ಟಿಯಂತೆ- ತಲೆಗೆ ಸುತ್ತುವ ರುಮಾಲಿನಹಾಗೆ, ಅಚ್ಯುತಕೂರ್ಮಕರ್ಪರಂ- ಆಮೆಯ ಅವತಾರವಂ ಮಾಡಿದ್ದ ವಿಷ್ಣುವಿನ ಬೆನ್ನಿನ ಓಟೆಯು, ವಿದಿತಸುರಾರಿಮಸ್ತಕದ- ಪ್ರಸಿದ್ಧರಾದ ರಾಕ್ಷಸರ ತಲೆಯ, ಮಾಲೆಯ ಸರದ, ಪುದಿದು- ವ್ಯಾಪಿಸಿ. ... ॥೧೦೩॥

ಆದ್ಯಕಟದಂಷ್ಟ್ರಂ- ಆದಿವರಾಹರೂಪವಂ ಮಾಡಿದ ವಿಷ್ಣುವಿನ ಕೋರೆದಾಡೆಯು, ಆಲೋಕಭೀಕರನಂ-ನೋಡುವದಕ್ಕೆ ಭಯಂಕರನಾದ, ವಕ್ರಮತಿತ್ರಿವಿಕ್ರಮನಂ-ಕುಟಿಲಬುದ್ಧಿಯುಳ್ಳ ವಾಮನನನ್ನು, ಕಂಕಾಳಮಂ- ಅಸ್ಥಿಪಂಜರವನ್ನು, ಖಳವಿಷ್ವಕ್ಸೇನನಂ- ನೀಚನಾದ ವಿಷ್ವಕ್ಸೇನನೆಂಬ ವೈಕುಂಠದ್ವಾರಪಾಲಕನನ್ನು. ... ... ... ॥೧೦೪॥

ಯಜ್ಞವಿಷ್ಣುವಂ- ಯಜ್ಞಾರ್ಥವಾಗಿಬಂದಿದ್ದ ಹರಿಯನ್ನು, ವೀರಭದ್ರವಪುವಿಂ- ವೀರಭದ್ರಸ್ವರೂಪಿ

ಕೆಡಪಿದ ನೀತಿದೆಲ್ಲ ನಿಗಮಾ
ಯದೆ ವೀರಭದ್ರವಪುವಿಂ ತಲೆ ಕತ್ತರಿಪಂತಿ ಲೆಚ್ಚುತಾಂ ॥ ಪಿಡಿದ ಕಪಾಲದೊಳ್ಸುರಿದ ನಚ್ಯುತ ನಾತ್ಮಶಿರೋರು
ಗಮುಸಿದ್ದ ಮಹೋರ್ವಿಗೆ ಶಂಕರು । ... ... ... ೧೦೫
ಣಾಂಬುವಂ ॥ ... ಹರ ಸಂಗಜಹರ ನರಾತಿಹರ ನಧ್ವರಸ ॥ ಹ್ಮ
ಕಂ ॥ ಪುರಹರ ನಂತಕಹರ ನಘ । ತಿರೆ ಹರಿಹರನೆಂಬ ನಾಮ ಮಭವಂಗೆಸೆಗುಂ ॥ ೧೦೬
ರ ನಂಧಕಹರ ನೆಂಬಂ । ತ್ತರದಿಂದೆ ಹರಿಂಹರಂತ ಮನುಯಾಂತಿ ಎನು ॥
ಕಂ ॥ ನೆರೆ ದೀನಿಜಾರ್ಥಮಂ ಬಿ । ನರವರಿಸದೆ ಬಾಯ್ಗೆಬಂದ ತೆರದಿಂ ಡುಲಿವರ್ ॥ ೧೦೭
ತ್ತೊರೆಗುಂ ಶ್ರುತಿ ಕುಮತಿಗ ಳಿದ । ಪಂಕಜೇಕ್ಷಣಪಂಕಜಾಸನಪಾಕಶಾಸನಮುಖ್ಯರಾ । ಬಿಂಕಮಂ ತೃಣ
ಮಲ್ಲಿಕಾ ॥ ಶಂ ಕರಂ ಮಡಿಸಿರ್ದ ಬೊಮ್ಮನ ಪಂಚ
ಮಿಟ್ಟುಯಕ್ಷನರೂಪಿನಿಂ ಮುರಿದಂ ಮಹೇ ॥ ನಾಂಕವೈರಿ ನಖಾಗ್ರದಿಂದೆ ಚಿವುಂಟಿದಂ ಧರಣೀಪತಿ ॥ ೧೦೮
ಮಾಸ್ಯಮ ನಣ್ಮಿ ಮಿಾ । ಮೃಗರೂಪಿಂ ನೆರೆಯಲೆಳಸಿ ಬಳಿವರಿ ವಜ
ಕಂ ॥ ಮೃಗಿಯಾಗಿ ಪರಿವ ಸುತೆಯಂ । ಮಿಗೆ ತಚ್ಛರ ಮುರುಳೆ ಬಾಣದಿಂ ಪದೆ ದೆಚ್ಚಂ ॥
ನಂ ॥ ಸೊಗಯಿಪ ಕಿರಾತರುದ್ರಂ । ನ್ನಗ ದಡಿ
ಚಂ ॥ ನೆಗಪೆ ನಿಜಾದ್ರಿಯಂ ದಶಶಿರಂ ಪದೆ ದುಂಗುಟದಿಂ ದವುಂಕಿ ತ । ದಗಲದ ಕೊರ್ವಿನಿಂ ನೆಣಸಿ ದಂ
ಸಿಲ್ಕಿ ಬೆಳ್ಗರೆವಿನಂ ನೆಗಳ್ದಂ ಧರೆ ಗಾನೆ ಧನ್ವಿಯೆಂ ॥ ರ್ವಿಗ ಘನಮೃತ್ಯು ವಾ ನೆನು ತಿಡಿರ್ಚಿದ ಕಾಲನ
ಗಳ ಸಂಗಮ ನಾದುರ್ ಸುಟ್ಟನು । ... ... ... ..೧೦
ನಿಕ್ಕಿ ಮೆಟ್ಟಿದಂ ॥ ಸಗರ್ವಶೌರಿಯಂ । ಭರ
ಚಂ ॥ ಧರಣಿಯೊಳಾನೆ ದಿವ್ಯಪುರುಷೋತ್ತಮ ನೆಂಬ

ಆತ್ಮಶಿರೋರು
ನಿಂದ, ಎಚ್ಚು- ಬಾಣಪ್ರಯೋಗವಂಮಾಡಿ, ಕಪಾಲದೊಳ್- ಬ್ರಹ್ಮನ ತಲೆಯೋಡಿನಲ್ಲಿ, ||೧೦೫||
ಣಾಂಬುವಂ- ತನ್ನತಲೆಯ ರಕ್ತವನ್ನು. ... ... ...

ಅರಾತಿಹರಂ- ಶತ್ರುಗಳಂ ನಾಶಮಾಡಿದವನು, ಅಧ್ವರಸಹೃರಂ- ಯಾಗವಂನಾಶಮಾಡಿದವನು, ಹರಿ ||೧೦೬||
ಹರು- ವಿಷ್ಣುವನ್ನು ಸಂಹರಿಸಿದವನು. ... ... ...

ಹರಿಂಹರಂತಮನುಯಾಂತಿ- (ದೇವಾಃ- ದೇವತೆಗಳು) ಹರಿಂ- ವಿಷ್ಣುವನ್ನು, ಹರಂತಂ- ನಾಶಮಾ ||೧೦೭||
ಡಿದ ಶಿವನನ್ನು. ಅನುಯಾಂತಿ, ಅನುಸರಿಸಿ ಹೋಗುತ್ತಾರೆ. ... ...

ಪಂಕ........ಮುಖ್ಯರಾ— ಪಂಕಜೇಕ್ಷಣ ವಿಷ್ಣು, ಪಂಕಜಾಸನ- ಬ್ರಹ್ಮ, ಪಾಕಶಾಸನ- ದೇ
ವೇಂದ್ರ ಇವರುಗಳೇ, ಮುಖ್ಯರ- ಮೊದಲಾದವರ, ಬಿಂಕಮಂ- ಗರ್ವವನ್ನು, ತೃಣಮಿಟ್ಟು- ಹುಲ್ಲನ್ನಿರಿಸಿ,
ಪಂಚಮಾಸ್ಯಮಂ- ಐದನೆಯ ಮುಖವನ್ನು, * ಮಿಾನಾಂಕವೈರಿ- ಈಶ್ವರನು, ನಖಾಗ್ರದಿಂದ ಉಗುರಿ ||೧೦೮||
ನ ತುದಿಯಿಂದ, ಚಿವುಂಟಿದಂ- ಚಿಗುಟಿದನು. ... ...

ಮೃಗಿಯಾಗಿ- ಹೆಣ್ಣುಜಿಂಕೆಯಾಗಿ, ಪರಿವ- ಓಡುವ, ಸುತೆಯಂ- ಮಗಳಾದ ಸರಸ್ವತಿಯನ್ನು,
ಮೃಗರೂಪಿಂ- ಗಂಡುಜಿಂಕೆಯಾಕಾರದಿಂದ, ನೆರೆಯಲ್- ಕೂಡುವದಕ್ಕೆ, ಬಳಿವರಿವ- ಸಮಿಾಪವನ್ನೈದುವ,
ಅಜನಂ- ಬ್ರಹ್ಮನನ್ನು, ಕಿರಾತರುದ್ರಂ— ಬೇಡನಾಕಾರವಂಧರಿಸಿದ ಶಿವನು, ಉರುಳೆ- ಬೀಳುವಹಾಗೆ.

ದಶಶಿರಂ- ರಾವಣನು- ನಿಜಾದ್ರಿಯಂ- ತನ್ನ ಕೈಲಾಸಪರ್ವತವನ್ನು, ನೆಗಪೆ- ಎತ್ತಲು, ಉಂಗುಟದಿಂ ||೧೦೮||

* (ಅವ) ಮಿಾನ- ಮತ್ಸ್ಯವೇ, ಅಂಕ- ಚಿಹ್ನವಾಗುಳ್ಳ ಮನ್ಮಥನಿಗೆ, ವೈರಿ- ಶತ್ರುವು.

ದೊಳ್ ಪೆಣ್ತನಂಗೊಳಿಸಿದಂ ಕ್ರತುದಕ್ಷನೆನು ... ಹೋಮಮುಮಂ ‖ ವಿಗಡಿಪದಕ್ಷನಂ ತರಿ ದು ರುಳ್ಚಿದ ನೆಲ್ಲಮ ನುಣ್ಬ ಶಕ್ತಿವ । ತ್ತರಿ ದೆನಿ ಪುರ್ಕ ನಾಂತ ಶಿಖಿಯುಜ್ವಳಜಿಹ್ವೆಯ ಕೀ ಳ್ತುದರ್ಚಿದಂ ‖ ... .. ... ... ... ೧೧೧

ಮತ್ತೆ ‖ ಭುವನಾಕ್ಷಿತ್ವದ ಬಿಂಕಮಾಳ್ದ ಭಗನಕ್ಷ್ಯುತ್ಪಾಟನಂಗೆಯ್ದು ಕೈ । ರವ ಮಿತ್ರಾಂಗಮ ನಂಘ್ರಿಯಿಂ ಪೊಸೆದು ಪೂಷಾದಿತ್ಯದಂತಂಗಳಂ ‖ ಜವದಿಂ ಬಿಲ್ಗೊಳಿಯಿಂ ದುಡಿರ್ಚಿ ಕೊರೆ ದಾವಾಣೀಲಸದ್ಘ್ರಾಣಮಂ । ಪವನೋರುದ್ವಯಮಂ ಸುರೇಂದ್ರಭುಜ ಮುಂ ತಾಂ ಖಂಡಿಸುತ್ತಣ್ಮಿನಿಂ ‖ ... ... ೧೧೨

ಕಂ ‖ ಪರಮಸ್ವತಂತ್ರದಿಂ ದ । ಧ್ವರಕೇಳ್ತಂಪಮರನಿವಹಮಂ ಭಂಜಿಸಿದಂ ‖ ಶರ ಣೆಂದೊಡೆ ರಕ್ಷಿಸಿದಂ । ಪೊರೆಯಲ್ಕೊಲ ಲೀಶ ನೀಶ ನಲ್ಲದೆ ಪೆರದಾರ್ ‖ ೧೧೩

ಮ ‖ ಸ್ರ ‖ ಗಗನಗ್ರಾಮಂಗಳಂ ಸುಟ್ಟುರುಪಿದ ನತುಳದ್ವೀಪಿದೈತ್ಯದ್ವಿಪೇಂದ್ರಾ । ರಿಗಳಂ ಸೀಳ್ದಿಕ್ಕಿದಂ ಮೆಟ್ಟಿದ ನಡಿಯಿ ನಪಸ್ಮಾರಮಂ ಕೊಂದ ನು ‖ ನ್ಮಾರ್ಗದ ದೈತೇ ಯರ್ಕಳಂ ನುಂಗಿದ ನವಹೃತಲೋಕವ್ರಜಕ್ಷ್ವೇಡಮಂ ಕೈ । ಮಿಗೆ ತಾಳ್ದಂ ಭೂರಿಭೂ ಭಾರಮನೆ ತಳೆದ ಭೋಗೀಂದ್ರನಂ ಭೂತನಾಥಂ ‖ ... ... ೧೧೪

ಚಂ ‖ ಭುವನಮ ನೆಲ್ಲಮಂ ಸುಳಿಯೊಳ್ ತಿತ್ತು ಮುಳುಂಗಿಪ ದೇವ ಗಂಗೆಯಂ । ತ ವೆ ತಳೆದಂ ಜಟಾಗ್ರದೊಳ್ ಮಲ್ಲಿಗೆಯಂ ತಳೆವಂತೆ ರಂಘ್ರಸಂ ‖ ಭುವನವಚಕ್ರದಿಂ ಹೇಜ

---

ದೆ- ಹೆಬ್ಬೆರಳಿನಿಂದ, ಅವುಂಕಿ- ಅದಿಮಿ, ತನ್ನಗದ- ಆ ಬೆಟ್ಟದ, ಅಡಿಸಿಲ್ಕಿ- ಕೆಳಗೆ ಸಿಕ್ಕಿಕೊಂಡು, ಬೆಳ್ಗರೆ ವಿನಂ- ಗೋಳಾಡುವಹಾಗೆ, ಧನ್ವಿ- ಧನುರ್ಧಾರಿಯು, ಅಗಲದ- ಭಿನ್ನವಾಗದೇ ಇರುವ, ಕೊರ್ವಿನಿಂ- ಕೊ ಬ್ಬಿನಿಂದ. ... ... ... ... ||೧೧೦||

ಸಗರ್ವಶೌರಿಯುಮಂ- ಅಹಂಕಾರದಿಂ ಕೂಡಿದ ವಿಷ್ಣುವನ್ನು, ಭರದೊಳ್- ಬೇಗನೆ, ಪೆಣ್ತನಂಗೊಳಿಸಿ ದಂ- ಸ್ತ್ರೀತ್ವವನ್ನುಂಟುಮಾಡಿದನು, ಉಣ್ಬೆಂ- ತಿನ್ನುವೆನು, ಉರ್ಕಂ- ಗರ್ವವನ್ನು, ಶಿಖಿಯ- ಅಗ್ನಿಯ, ಉಜ್ವಳಜಿಹ್ವೆಯಂ- ಪ್ರಕಾಶಿಸುವನಾಲಿಗೆಯನ್ನು. ... ... ||೧೧೧||

ಭುವನಾಕ್ಷಿತ್ವದ- ಲೋಕಕ್ಕೆ ಕಣ್ಣಾಗಿರುವೆನೆಂಬುವಿಕೆಯ, ಬಿಂಕಮಾಳ್ದ- ಗರ್ವವಂ ಹೊಂದಿದ, ಭಗನ- ಭಗನೆಂಬ ಸೂರ್ಯನ, ಅಕ್ಷ್ಯುತ್ಪಾಟನಂಗೆಯ್ದು- ಕಣ್ಣನ್ನು ಕಿತ್ತು, ಕೈರವಮಿತ್ರಾಂಗಮಂ- ಚಂದ್ರ ನ ದೇಹವನ್ನು, ಅಂಘ್ರಿಯಿಂ- ಕಾಲಿನಿಂದ. ಪೊಸೆದು- ತಿಕ್ಕಿ, ಪೂಷಾದಿತ್ಯದಂತಂಗಳಂ- ಪೂಷ ಆದಿತ್ಯ ನೆಂ ಬವರ ಹಲ್ಲುಗಳನ್ನು, ಬಿಲ್ಗೊಳಿಯಿಂ- ಬಿಲ್ಲಿನೇಟಿನಿಂದ, ಆವಾಣೀಲಸದ್ಘ್ರಾಣಮಂ- ಆ ಪ್ರಕಾಶಿಸುವ ಸರ ಸ್ವತಿಯ ಮೂಗನ್ನು, ಕೊರೆದು- ಕತ್ತರಿಸಿ, ಪವನೋರುದ್ವಯಮುಂ- ವಾಯುವಿನ ತೊಡೆಗಳೆರಡನ್ನು, ಸು ರೇಂದ್ರಭುಜಮಂ- ಇಂದ್ರನ ತೋಳನ್ನು. ... ... ||೧೧೨||

ಈಶಂ- ಸ್ವಾಮಿಯು, ಈಶಂ- ಪರಮೇಶ್ವರನು. ... ... ||೧೧೩||

ಗಗನಗ್ರಾಮಂಗಳಂ- ಅಂತರಿಕ್ಷದಲ್ಲಿದ್ದ ಪಟ್ಟಣಗಳನ್ನು, ಅತುಳ......ಅರಿಗಳಂ— ಅತುಳ- ಅಸ ದೃಶನಾದ, ದ್ವೀಪಿದೈತ್ಯ- ವ್ಯಾಘ್ರಾಸುರ, ದ್ವಿಪೇಂದ್ರಾದಿಗಳಂ- ಗಜಾಸುರ ಇವರುಗಳನ್ನು, ಅಪಸ್ಮಾರ ಮಂ- ಮೂಲನಾಗರನ್ನು, ಉನ್ಮಾರ್ಗದ- ಸನ್ಮಾರ್ಗವಂ ಮೀರಿ ನಡೆಯುವ, ದೈತೇಯರ್ಕಳಂ- ರಾಕ್ಷಸರ ನ್ನು, ಅವಹೃತಲೋಕವ್ರಜಕ್ಷ್ವೇಡಮಂ-ನಾಶಮಾಡಲ್ಪಟ್ಟ ಲೋಕಸಮುದಾಯವುಳ್ಳ ವಿಷವನ್ನು. ||೧೧೪||

ಸುಳಿಯೊಳ್- ನೀರಿನ ಸುಳಿಯಿಂದ, ಮಲ್ಲಿಗೆಯಂ- ಮಲ್ಲಿಕಾ ಪುಷ್ಪವನ್ನು, ಅಂಘ್ರಿಸಂಭವಚಕ್ರ

ಲಂಧರಮಸ್ತಕಮುಂ ಕಳಲ್ಚಿ ಶಾಂ । ಭನಿಯರಸಂ ಸುರದ್ದೊಗಳೆ ತಾಳ್ದ ನುರಸ್ಥಿತರುಂಡ ಮಾಲೆಯೊಳ್ ॥ ... ... ... ೧೧೫

ಮತ್ತೇ ॥ ಸುರನಾರೀಜನದೈರದಾಳಿಗೆ ಚಿರಸ್ಥಾಯಿತ್ವಮುಂ ಮಾಳ್ಪ ಶಂ । ಕರಪಾದಾಂಬುಜಜಾತಚಕ್ರಮ ನದಃ ತಾ ನರ್ಥಿಸು ತ್ತಂಬುಜೋ ॥ ದರ ನುಂಭೋಜಸಹಸ್ರದಿಂ ಭಜಿಸುತಿರ್ದಂದೊಂದರ ಲ್ಕುಂದೆ ತ । ನ್ನುರುನೇತ್ರಾಬ್ಜಮ ನೀಯೆಮೆಚ್ಚಿ ಮೃಡ ನಿತ್ತಂ ಚಕ್ರಿ ಗಾಚಕ್ರಮುಂ ॥ ... ... ... ೧೧೬

ಕಂ ॥ ವಿಲಸದುಪಮನ್ಯುಮುನಿಯಿಂ । ಜಲಜಾಕ್ಷಂ ದೀಕ್ಷೆವಡೆದು ಹರಿ ನೀಲಮಯೋ ॥ ಜ್ವಲಲಿಂಗಮ ನುರದೊಳ್ತಳೆ । ದೋಲವಿಂದಂ ಪೂಜೆಗೆಯ್ದ ನಾಗಮಮತದಿಂ ॥

ಕಂ ॥ ರಾಮಂ ಘಟಸಂಭವನಿಂ । ಪ್ರೇಮಂ ಮಿಗೆ ದೀಕ್ಷೆ ವಡೆದು ಶಿವಲಿಂಗಮ ನಾ ॥ ರಾಮಗಿರಿಯಲ್ಲಿ ಪೂಜಿಸಿ । ಕಾಮಾರಿಯ ಕಯ್ಯ ಪಾಶುಪತಮುಂ ಪಡೆದಂ ॥ ೧೧೮

ಕಂ ॥ ಪರಿಪೂರ್ಣ ನನಘ ನದ್ವಯ । ನುರುತರಮಹಿಮಾಂಕ ನಭವನೇ ಪತಿ ಲಕ್ಷ್ಮೀ ॥ ವರ ನೆಂದುಂ ಭೃತ್ಯಂ ಭೂ । ವರಭುವನಕೆ ಶಂಭು ವಲ್ಲ ದಾಣ್ಮರು ಮೊಳರೆ ॥

ಮಲ್ಲಿಕಾಮಾಲಾವೃತ್ತ ॥ ಇಂದುಮೌಳಿಯ ನೋಲ್ದು ಮನ್ನಿಸ ದೊಟ್ಟಿಯಾಗಿ ತೊಳಲ್ದನೋ । ರಂದದಿಂದೆ ಸನತ್ಕುಮಾರಕ ನಜ್ಞಭಾವದೆ ಕಾಸಿಯೊಳ್ ॥ ಕುಂದ ದಚ್ಯುತನೇ ಜಗತ್ಪತಿ ಯೆಂದು ಬಾಹುವನೆತ್ತುತಂ । ನಂದಿಯಿಂದಲೆ ಬಾದರಾಯಣ ನಂದು ತೋಳ್ಗಳ ನೀಗಿದಂ ॥ ... ... ... ೧೨೦

ಕಂ ॥ ಉಮಾನಿವರರುಂ ತಿಳಿಯ ರು । ಮಾಮಾನಿನಿಯರಸ ನಧಿಕಮಹಿಮೆಯ ನೆನೆ ಹೋ ॥ ಭೂಮಿಯೊ ಳೊಗೆ ದಡಗುವ ಮಾಯಾಮಯವಿಭ್ರಾಂತಚಿತ್ತ ರೇನರಿದಪರೆ॥

ದಿಂ- ಕಾಲಿನಲ್ಲಿ ಬರೆದುದರಿಂದುಂಟಾದ ಹೊಸಚಕ್ರದಿಂದ, ಕಳಲ್ಚಿ- ಬೀಳಿಸಿ, ಉರಸ್ಥಿತರುಂಡಮಾಲೆಯೊಳ್- ಎದೆಯಲ್ಲಿರುವ ಶಿರೋಮಾಲಿಕೆಯಲ್ಲಿ. ... ... ॥೧೧೫॥

ಐರದಾಳಿಗೆ- ಮಾಂಗಲ್ಯಕ್ಕೆ, ಚಿರಸ್ಥಾಯಿತ್ವಮುಂ- ಬಹುಕಾಲವಿರುವಿಕೆಯನ್ನು, ಅದಂಶಂಕರಪಾದಾಂಬುಜಜಾತಚಕ್ರಮುಂ- ಆ ಜಲಂಧರಾಸುರನನ್ನು ಸಂಹರಿಸುವದಕ್ಕೆ ಪಾದದಿಂ ಬರೆದುಮಾಡಿದ ಚಕ್ರಾಯುಧವನ್ನು, ಅರ್ಥಿಸುತ್ತೆ- ಬೇಡುತ್ತಾ, ಅಂಬುಜೋದರಂ- ವಿಷ್ಣುವು, ಒಂದರಲ್- ಒಂದುಹೂವು, ಕುಂದೆ- ಕಡಿಮೆಯಾಗಲು, ಉರುನೇತ್ರಾಬ್ಜಮುಂ- ಶ್ರೇಷ್ಠವಾದ ನಯನಕಮಲವನ್ನು, ಚಕ್ರಿಗೆ- ವಿಷ್ಣುವಿಗೆ. ॥೧೧೬॥

ದೀಕ್ಷೆವಡೆದು- ಶಿವದೀಕ್ಷೆಯಂ ಹೊಂದಿ, ನೀಲಮಯೋಜ್ವಲಲಿಂಗಮುಂ- ಇಂದ್ರನೀಲರತ್ನವಿಕಾರವಾದ ಪ್ರಕಾಶಿಸುವ ಶಿವಲಿಂಗವನ್ನು. ... ... ॥೧೧೭॥

ಘಟಸಂಭವನಿಂ- ಅಗಸ್ತ್ಯರ್ಷಿಯಿಂದ, ಪಾಶುಪತಮುಂ- ಪಾಶುಪತವೆಂಬ ಅಸ್ತ್ರವನ್ನು. ॥೧೧೮॥

ಪರಿಪೂರ್ಣಂ- ದಿಕ್ಕಾಲಾದಿಗಳಲ್ಲಿ ತುಂಬಿರುವವನು, ಅನಘಂ- ಪಾಪರಹಿತನು, ಅದ್ವಯಂ- ತನಗೆರಡನೆಯದಿಲ್ಲದೇ ಇರುವವನು, ಲಕ್ಷ್ಮೀವರಂ- ವಿಷ್ಣುವು, ಭೃತ್ಯಂ- ಸೇವಕನು, ಆಣ್ಮರುಂ- ಪತಿಗಳೂ.

ಒಟ್ಟಿ- ಒಂಟಿಯು, ಅಜ್ಞಭಾವದೆ- ಮೂಢತ್ವದಿಂದ, ಬಾದರಾಯಣಂ- ವ್ಯಾಸನು. ॥೧೨೦॥

ಉಮಾಮಾನಿನಿಯ- ಪಾರ್ವತಿಯ, ಅರಸನ- ಪತಿಯಾದ ಶಿವನ, ಮಾಯಾಮಯವಿಭ್ರಾಂತಚಿತ್ತರ್- ಮಾಯಾಸ್ವರೂಪರಾದ ಭ್ರಾಂತಿಸಹಿತವಾದ ಮನಸ್ಸುಳ್ಳವರು. ... ॥೧೨೧॥

ಕಂ ॥ ಎಣಿಸಲ್ಕೆ ಗೋಚರಮೆ ಕಾ । ರಣಾಧಿಪತಿಗಳ್ಗೆ ಕಾರಣನ ಫಣಿರಾಡ್ಭೂ ॥ ಷಣನಘನಮಹಿಮೆಯುಂ ಗುಣ । ಗಣಮುಂ ಪ್ರಥಿತಪ್ರತಾಪಮುಂ ಪೌರುಷಮುಂ॥

ವ ॥ ಅಭವನ ನನ್ಯಸಾಮಾನ್ಯಗುಣಂಗಳಂ ಪೇಳ್ವೊಡಾರ್ಗ ಮಜಕಲ್ಪಮುಂ ತೀರದಂತಿರ್ಕೆ ಶಿವನಂಘ್ರಿಯುಂ ಭಜಿಸಿ ಭಾವಿಸಿ ಪೂಜಿಸಿ ನಮಿಸಿ ನುತಿಯಿಸಿ ಮಚ್ಚಿಸಿ ನಿಜೇಷ್ಟಸಿದ್ಧಿಯಂ ಪಡೆದ ರೊಳ ರದೆಂತೆನೆ ॥ * * * * *

ಚಂ ॥ ಕರ ಮರಿದಿತ್ತು ಬಾಣಕವಿ ಪೂಜಿಸಿ ಕೀರ್ತಿಸಿ ಶಂಭುವಿಂದೆ ತ । ನ್ನೆರಡು ಕರಂಗಳಂ ಪಡೆದ ನಂದಹಿಮದ್ಯುತಿಯಿಂದೆ ಪೋಗ ದಾಂ ॥ ತರನಿಜಕುಷ್ಠಮಂ ಪರಿದ ನೀಶ್ವರನು ಪೊಗಳ್ದಲ್ಲಿ ಸಾರವಾ । ಗ್ವಿರಚನೆಯಿಂ ಮಯೂರ ನಭವಂಗೆ ಸಮರ್ಪಿಸಿ ತನ್ನ ಕಣ್ಗಳಂ ॥ ... ... ... ... ೧೩

ಚಂ ॥ ವಿಳಸಿತಕಾಳಿದಾಸಕವಿ ಮೆಲ್ನುಡಿಯಿಂ ನುತಿಗೆಯ್ದು ದಿವ್ಯಮಂ । ಜುಳನಯನಗಳಂ ಪಡೆದ ನಕ್ಷಿಗಳಂ ಶಿವನಾಗದೇವ ನು ॥ ಜ್ವಳಮತಿ ಸೋಮವಾರದೊಳೆ ತಾಂ ಕಳೆ ದರ್ಚಿಸಿ ಶಂಕರಂಗೆ ನಿ । ರ್ಮಳನಿಜನೇತ್ರಮಂ ಪರಮನಿಂ ಪಡೆ ದೊಪ್ಪಿರೆ ತಾಳ್ದ ನುರ್ವಿಯೊಳ್ ॥ ... ... ... ... ೧೪

ಮತ್ತೇ॥ ಹರಿಯಿಂ ಪೋಗದ ಕುಷ್ಠದುಷ್ಟಗದಮಂ ಕಂಡಳ್ಕುತಂ ದಂಡಿ ಶಂ। ಕರನಂ ತಾಂ ಮರೆವೊಕ್ಕು ಕೀರ್ತಿಸು ತವಂ ಪೋಗಾಡಿದಂ ಮಲ್ಹಣಂ ॥ ಸರಸಾಲಾಪದಿ ನೊಲ್ದು ಬಣ್ಣಿಸೆ ಭವಾನೀವಲ್ಲಭಂ ವಾರಸುಂ । ದರಿಯಂ ಮುಕ್ತಿವಧೂಟಗೂಡಿ ಪದೆ ದಿತ್ತಂ ತಾ ನವಂ ಗಳ್ಕರಿಂ ॥ ... ... ... ೧೫

ಚಂ ॥ ಪುರರಿಪು ಸಾಮವೇದಿಯ ಪೊಳಲ್ವೆರ ಸೊಯ್ವನೆ ತನ್ನ ಲೋಕ ಕ । ಚ್ಚರಿ ಯೆನೆ ಗಂಟೆಗೂಡಿ ಮಿಸುಪೋಹಿಲನಂ ರಜತಾಚಲಕ್ಕೆ ಬಿ । ತ್ತರದೊಳೆ ಕೊಂಡು ಪೋ

---

( ಪೂರ್ವೋಕ್ತಮಾದ ಚರಿತ್ರಗಳು ಚನ್ನಬಸವಪುರಾಣದಲ್ಲಿ ಸ್ಪಷ್ಟವಾಗಿ ತಿಳಿಸಲ್ಪಟ್ಟಿವೆ. ಗ್ರಂಥವಿಸ್ತಾರ ಭೀತಿಯಿಂದಿಲ್ಲಿ ತಿಳಿಸಲಿಲ್ಲವು. )

ಕಾರಣಾಧಿಪತಿಗಳ್ಗೆ- ಮೂಲಕಾರಣಗಳಿಗೆ, ಕಾರಣನ- ಹೇತುವಾದ, ಫಣಿರಾಡ್ಭೂಷಣನ- ಶೇಷಾಭರಣನಾದ ಶಿವನ, ಪ್ರಥಿತಪ್ರತಾಪಮುಂ- ಪ್ರಸಿದ್ಧವಾದ ಪರಾಕ್ರಮವೂ. ||೧೨||

ಅನನ್ಯಸಾಮಾನ್ಯಗುಣಂಗಳಂ- ಇತರರಿಗೆ ಸಾಧಾರಣವಲ್ಲದ ಗುಣಗಳನ್ನು, ಅಜಕಲ್ಪಮುಂ- ಬ್ರಹ್ಮನ ಕಲ್ಪವೂ, ಅಂತು- ಹಾಗೆ, ಇರ್ಕೆ- ಇರಲಿ. * * * * * * *

ಕರಮರಿದು- ಹಸ್ತವಂಕತ್ತರಿಸಿ, ಅಹಿಮದ್ಯುತಿಯಿಂದೆ- ಸೂರ್ಯನಿಂದ, ಆಂತರನಿಜಕುಷ್ಠಮಂ- ತನ್ನೊಳಗಿದ್ದ ಕುಷ್ಠರೋಗವನ್ನು. ... ... ... ... ||೧೩||

ಮೆಲ್ನುಡಿಯಿಂ- ಮೃದುವಾದ ಮಾತಿನಿಂದ. ... ... ||೧೪||

ಕುಷ್ಠದುಷ್ಟಗದಮಂ- ಕುಷ್ಠವೆಂಬ ಕೆಟ್ಟರೋಗವನ್ನು, ಅಳ್ಕುತಂ- ಹೆದರುತ್ತಾ, ದಂಡಿ- ದಂಡಿಯೆಂಬಕವಿಯು, ಅದಂ- ಆರೋಗವನ್ನು, ಮುಕ್ತಿವಧೂಟಗೂಡಿ- ಮುಕ್ತಿಯೆಂಬ ಸ್ತ್ರೀಯೊಡನೆ, ವಾರಸುಂದರಿಯಂ- ಸೂಳೆಯನ್ನು. ... ... ... ... ||೧೫||

ಪೊಳಲ್ವೆರಸು- ಪಟ್ಟಣದೊಡನೆಕೂಡಿ, ಗಂಟೆಗೂಡಿ- ಗಂಟೆಯು ಸಮೇತವಾಗಿ, ರಜತಾಚಲಕ್ಕೆ-

ಗನೆ ಗುಹಾಪರಮೂರ್ತಿಯು ನಂಗ ವೊಂದುಗೂ । ಡಿರೆ ಶಿವಲಿಂಗದೊ ಳ್ಪುಗಿಸನೇ ಧರೆ
ಯೊಳ್ಕಲಿಕಾಲಚೋಳನ ॥ ... ... ... ೧೨೬

ಮತ್ತೇ ॥ ವಿಳಸದ್ಭಕ್ತಿಗೆ ಕೂರ್ತು ಸಪ್ತದಿನಪರ್ಯಂತಂ ನೆಲಂದೀವಿ ಪೊ । ಮ್ಮಳೆ
ಯಂಪೂಮಳೆಗೂಡಿ ತಾಂ ಕರೆಯಿಸು ತ್ತಾನಂದಮಂ ಬೀರಸೇ ॥ ಕಳೆವೆತ್ತೊಪ್ಪುವ
ಯೌವನಸ್ಥಿತಿಯ ನಾಶ್ರೀನೀಲಕಂಠಂಗ ಮು । ಜ್ವಳತದ್ಭಾರ್ಯೆಗ ಮಾಯು ತುನ್ನತರತಿ
ಶ್ರೀಭೋಗಮಂ ಸಾರ್ಚನೆ ॥ ... ... ... ೧೨೭

ಚಂ ॥ ನಲಿದು ತೆಲುಂಗಜೇಮ್ಮನ ಶರಾಹತಿಯಿಂ ಮೃತಿವೆತ್ತ ಭಲ್ಲಸಂ । ಕುಲಮ
ನಗೇಂದ್ರ ಕೊಯ್ಯನೆ ನಿಜೋನ್ನತವಿಷ್ಟರಮಾಯನೇ ಮಹಾ ॥ ಬಲಯುತಚೇರಮಂಗೆ
ಪುರಮಂ ಮಿಗೆ ನಂಬಿಗೆ ಸೂರೆಗೊಟ್ಟು ನಿ । ಶ್ಚಲಸುಖಮಿತ್ತು ಮನ್ನಿಸನೆ ದಾನಗುಣಾ
ರ್ಣವ ನದ್ರಿಜಾಧವಂ ॥ ... ... ... ೧೨೮

ಕಂ ॥ ಅಕ್ಷಯನಿಧಿಯಂ ತಾ ನೊ । ಲ್ದಾಕ್ಷಣದೊ ಳ್ಕುಡನೆದಾಸದೇವಂಗೆ ಮೃಡಂ ॥
ರಕ್ಷಿಸನೆ ಕದಿರರೇಮಸ । ಮಕ್ಷದೊ ಳಳಿದಿರ್ದ್ದ ಸಪ್ತದಿವಸದ ಪೆಣನಂ ॥ ೧೨೯

ಮ ॥ ಸ್ರ ॥ ಮಲಯೋರ್ವೀನಾಥನಂ ಪುಷ್ಪಕದೊ ಳಿರಿಸಿ ಕೊಂಡೊಯ್ಯನೇ ಮು
ಕ್ತಿಯಂ ಗ । ಲ್ಗಲ ನಾಪೇರ್ಮಾಡಿ ಗೊಲ್ದೀಯನೆ ಗಣಪದಮಂ ಸಾರ್ಚನೇ ಶಂಕರಯ್ಯಂ ॥
ಗಲಘುಸ್ವಾತಂತ್ರ್ಯದಿಂ ಗೂರ್ಜರವಿಭು ನಿಜಸೇನಾನ್ವಿತಂ ಪೋಗಸೇ ನಿ । ಶ್ಚಲಗಾಣಾಪ
ತ್ಯಕಾಷೋಡಶರ ಬಗೆಗೆ ತಾಂ ಮಚ್ಚನೇ ಬ್ರಹ್ಮನಾಥಂ ॥ ... ೧೩೦

ಮಲ್ಲಿಕಾಮಾಲಾ ॥ ವೀರತೇರಸ ರುಗ್ರಶೌರ್ಯಕೆ ಮಚ್ಚಿ ಮನ್ನಿಸನೇ ಮನೋ । ಜಾ
ರಿ ಬೇಂಟೆಯ ಕಜ್ಜದುಜ್ಜುಗ ಕೊಲ್ದು ಜಾಗರಮಿರ್ದ ಕಾಂ ॥ ತಾಂಚಾರಿಗೆ ಶೈವರಾತ್ರಿ
ಯು ಸತ್ಫಲಂಗುಡು ತೋವಿ ತನ್ನೂರ ನೆಯ್ದಿಸನೇ ಮಹೇಶ್ವರನಂತೆ ದಾಸಿಯದಾವನೋ ॥

ಕಂ ॥ ಹರ ನಿಂತುಟತ್ತು ವರಮುಮ । ನಿರದೀವರಿಯಿಂದೆ ಶಿವನ ಮಚ್ಚಿಸಿ ಸಂ
ಪಾ॥ ದ್ಯರ ಬಹುವಿಧದಚರಿತಮಂ । ಧರಣಿಯೊಳನಿತೆಂದು ಬಗೆದು ಬಣ್ಣಿಪ ರೊಳರೆ ॥ ೧೩೨

---

ಕೈಲಾಸಪರ್ವತಕ್ಕೆ. ... ... ... ... ... ||೧೨೬||

ನೆಲಂದೀವಿ- ಭೂಮಿಯುನ್ನೆಲ್ಲಾತುಂಬಿ, ಪೊಮ್ಮಳೆಯಂ- ಚಿನ್ನದ ಮಳೆಯನ್ನು, ಪೂಮಳೆಗೂಡಿ-
ಕುಸುಮವೃಷ್ಟಿಯೊಡನೆಸೇರಿ, ಉನ್ನತರತಿಶ್ರೀಭೋಗಮಂ- ಉತ್ಕೃಷ್ಟವಾದ ಸುರತಸಂಪತ್ತಿನ ಸೌ
ಖ್ಯವನ್ನು. ... ... ... ... ... ||೧೨೭||

ಶರಾಹತಿಯಿಂ- ಬಾಣದ ಪೆಟ್ಟಿನಿಂದ, ಮೃತಿವೆತ್ತ- ಸತ್ತ, ಭಲ್ಲಸಂಕುಲಮಂ- ಕರಡಿಗಳ ಗುಂಪನ್ನು,
ಅಗೇಂದ್ರಕೆ- ಕೈಲಾಸಪರ್ವತಕ್ಕೆ, ಒಯ್ಯನೆ- ಕರೆದುಕೊಂಡು ಹೋಗಲಿಲ್ಲವೇ ? ನಿಜೋನ್ನತವಿಷ್ಟರಮಾ
ಯನೇ- ತನ್ನದೊಡ್ಡ ಪೀಠವನ್ನು ಕೊಡಲಿಲ್ಲವೇ ? ... ... ... ||೧೨೮||

ದಾಸದೇವಂಗೆ- ಜೇಡರದಾಸಯ್ಯನಿಗೆ. ... ... ... ||೧೨೯||

ಪುಷ್ಪಕದೊಳ್- ದೇವಯಾನದಲ್ಲಿ, ಗಲ್ಗಲನೆ- ಬೇಗನೆ. ... ... ||೧೩೦||

ಕಜ್ಜದ- ಕಾರ್ಯದ, ಉಜ್ಜುಗಕೆ- ಪ್ರಯತ್ನಕ್ಕೆ, ಓವಿ- ಪಾಲಿಸಿ. ... ||೧೩೧||

ಸಂದ- ಕೈಲಾಸವಂಸೇರಿದ. ... ... ... ||೧೩೨||

ಉ ॥ ಈಗಳು ಮಿಲ್ಲಿ ಭಾಳನಯ ನಪ್ರತಿಮಾನ ನೆನಿಪ್ಪ ಶೈವವಿ । ದ್ಯಾಗುರು ಮಾಚಿದೇವವಿಭು ಕಿನ್ನರನಾಯಕಮುಖ್ಯಸಾರತೇ ॥ ಜೋಗರಿಮಾಂಕಭಕ್ತತತಿ ಗಿಷ್ಟಮ ನಿತ್ತಪನಲ್ತೆ ದಾನಲೀ । ಲಾಗುಣಶಾಲಿ ಕಿಂಕರಸುಖಂಕರ ನೆಮ್ಮಯ ದಿವ್ಯಶಂಕರು ॥ ೧೩೩

ವ॥ ಎಂದಿಂತು ನಿಗಮಾಗಮಪುರಾಣವಾಣಿಗಳಿಂ ಸಹಜಸಿದ್ಧಶಿವಾಧಿಕ್ಯಮಂ ಬಿಚ್ಚಳಿಸುತ್ತ ಮಿದು ಕಾರಣ ಮೆಮ್ಮ ಶಿವಂಗೆ ಸದೃಶ ರೊಳ ರೆಂಬ ಪುಸಿನುಡಿಗಳುಮಂ ಸರ್ವಮುಂ ಬೊಮ್ಮಮೆಂಬದ್ವೈತವಾದಮುಮಂ ಯಥಾಶಿವಮಯೋವಿಷ್ಣುಸ್ತಥಾವಿಷ್ಣುಮಯಶ್ಶಿವಃ ಎ ಬಬಿಳವಾಕ್ಯದಿಂ ತ್ರಿಮೂರ್ತಿಗಳ್ಗಭೇದಮ ನುಸಿರ್ವ ದುರುಕ್ತಿಗಳುಮ ನಷ್ಟಮೂರ್ತಿಗಳೆಲ್ಲಂ ಶಿವ ನಪ್ಪು ವೆಂಬ ಕಾಳ್ಮಾತುಗಳುಮಂ ಶಿವಭಕ್ತರ್ಗೆ ಭವಿಗಳ್ ಸಮಾನರೆಂದು ಗಳಪು ವಸಂಬದ್ಧಾಲಾಪಂಗಳುಮಂ ಬಗೆದುದು ಕೇಳ್ದವರ್ಗೆ ದುರ್ಗತಿ ಯಕ್ಕುಮೆಂದು ಭಾಸ್ಕಗದೇವ ನುಪೊಕ್ಷಿಸಿ ॥ * * * * * *

ಕಂ॥ ಧರಣಿಪ ನೀ ನಿಂದೆನ್ನಂ । ಬರಿಸಿದ ಕಡುಗಜ್ಜ ಮಾವು ದದ ನೊರೆ ಮಾಳ್ಪಂ॥ ಪುರಹರ ನಲ್ಲದ ದೇವಾ । ತರಮಂ ನಡೆ ನೋಳ್ಪ ದೆಮಗೆ ಸಲ್ಲದು ನಿಜದಿಂ ॥ ೧೩೪

ವ॥ ಅಂತಾದೊಡು ನೋಡಲ್ವೇಳ್ಕು ಮೆಂಬೆ ಯಪ್ಪೊಡೆ ನಿನ್ನಾದೇಶಂಬಿಡಿದು ನೋಳ್ಪೆ ನೆಂದಣಕಂ ಮಿಗೆ ನಿಂದು ಕಟಾಕ್ಷದಿ ನುತ್ಕಟಿಸಿ ನೋಡ ಲೊಡನೆ ॥ * *

ಕಂ॥ ಸಿಡಿದೊಡೆದು ಸೀಳ್ದು ಪೊಡವಿಯೊ । ಳಡೆಗೆಡೆದುದು ಜಡಜಲೋಚನಪ್ರತಿಮೆ ನೃಪಂ ॥ ಬಿಡ ದದ ನೀಕ್ಷಿಸುತೆ ಭಯಂ । ಬಡೆದಂ ವಾದಿಗಳು ಮಳ್ಕಿ ತಲೆವಾಗಿರ್ದರ್ ॥

ವ ॥ ಅನಂತರ ಮರಸ ನಾಘನಮಹಿಮರ ಮಹಿಮೆಯುಂ ಪೊಗ ಳ್ದೋಲಗಮಂ ವಿಸರ್ಜಿಸಿ ನಿಜಾಲಯಕ್ಕೆ ತಳರ್ದ ನಾಪ್ರಸ್ತಾವದೊಳ್ ॥ * * * *

---

ಭಾಳನಯನಪ್ರತಿಮಾನಂ- ಶಿವಸದೃಶನು, ಕಿನ್ನರ........ತತಿಗೆ— ಕಿನ್ನರನಾಯಕ- ಕಿನ್ನರೇಶ್ವರನೇ, ಮುಖ್ಯ- ಮೊದಲಾದ, ಸಾರ- ಶ್ರೇಷ್ಠವಾದ, ತೇಜಃ- ವೀರಶೈವತೇಜಸ್ಸಿನ, ಗರಿಮಾ- ಮಹತ್ತ್ವವೇ, ಅಂಕ- ಚಿಹ್ನವಾಗುಳ್ಳ, ಭಕ್ತತತಿಗೆ- ಶಿವಭಕ್ತರ ಗುಂಪಿಗೆ, ಕಿಂಕರಸುಖಂಕರಂ- ತನ್ನ ಸೇವಕರಿಗೆ ಸುಖವನ್ನುಂಟುಮಾಡುವ. ... ... ... ... ||೧೩೩||

ಸಹಜಸಿದ್ಧಶಿವಾಧಿಕ್ಯಮಂ- ಸ್ವಭಾವಸಿದ್ಧವಾಗಿರುವ ಪರಶಿವನ ಅತಿಶಯವನ್ನು, ಬಿಚ್ಚಳಿಸುತ್ತಂ- ವಿಸ್ತರಿಸುತ್ತ, ಇದುಕಾರಣಂ- ಈ ಕಾರಣದಿಂದ,ಪುಸಿನುಡಿಗಳುಮಂ- ಸುಳ್ಳುಮಾತುಗಳನ್ನೂ, ಬೊಮ್ಮಂ- ಪರಬ್ರಹ್ಮವು, ಅದ್ವೈತವಾದಮುಮಂ- ಅಭೇದವಾದವನ್ನೂ, ಯಥಾ- ಹ್ಯಾಗೆ, ವಿಷ್ಣುಃ- ಹರಿಯು, ಶಿವಮಯಃ- ಈಶ್ವರಸ್ವರೂಪನೋ, ತಥಾ- ಹಾಗೆ, ಶಿವಃ- ಈಶ್ವರನು, ವಿಷ್ಣುಮಯಃ- ಹರಿಸ್ವರೂಪನು, ತ್ರಿಮೂರ್ತಿಗಳ್ಗೆ- ಶಿವ, ವಿಷ್ಣು, ಬ್ರಹ್ಮರುಗಳಿಗೆ, ಅಷ್ಟಮೂರ್ತಿಗಳ್- ಪೃಥುವ್ಯಾದಿ ಎಂಟುಶರೀರಗಳು, ಕಾಳ್ಮಾತುಗಳಂ- ಹರಟೆಗಳನ್ನು, ಭವಿಗಳ್- ಲಿಂಗಹೀನರು, ಅಸಂಬದ್ಧಾಲಾಪಂಗಳುಮಂ- ಒಂದಕ್ಕೊಂದಕ್ಕೆ ಸಂಬಂಧವಿಲ್ಲದ ಮಾತುಗಳನ್ನೂ ? ಬಗೆದಂದು- ಮನಸ್ಸಿನಗೆತಂದುಕೊಂಡು. * * *

ಕಡುಗಜ್ಜಂ- ದೊಡ್ಡಕೆಲಸವು, ಒರೆ- ಹೇಳು, ಸಲ್ಲದು- ಉಚಿತವಲ್ಲ. ||೧೩೪||

ಆದೇಶಂಬಿಡಿದು- ಆಜ್ಞೆಯನ್ನನುಸರಿಸಿ, ಅಣಕಂ- ಪರಿಹಾಸವು. * * * *

ಅಡೆಗೆಡೆದುದು- ಬಿದ್ದಿತು, ಜಡಜಲೋಚನಪ್ರತಿಮೆ- ವಿಷ್ಣುವಿಗ್ರಹವು, ತಲೆವಾಗಿ- ತಲೆಯಂಬಗ್ಗಿಸಿ.

ಓಲಗಮಂ- ಸಭೆಯನ್ನು, ವಿಸರ್ಜಿಸಿ- ಬಿಟ್ಟು, ತಳರ್ದಂ- ಹೊರಟನು. * * *

ಚ ॥ ವಿತತಾನಂದಾಂತರಂಗಂ ವಿಮಳಮತಿ ಮಹಾಭಕ್ತಿಯಿಂ ಭಕ್ತವೃಂದಾ । ವೃತ ನಾಗಳ್ ಭಾಸ್ಕರಾರ್ಯಂಗೆರಗಿ ಪೊದಳ್ದ ತನ್ಮಂದಿರ ಕ್ಕೊಲ್ದು ಬೀಳ್ಕೊ ॥ ಟ್ಟತುಳೋತ್ಸಾಹಪ್ರಭಾವಂ ಪಸರಿಸೆ ಮಿಗೆ ಕೊಂಡಾಡುತಂ ತನ್ಮಹತ್ವ । ಸ್ಥಿತಿಯಂ ತಾಂ ಬಂದುಪೊಕ್ಕಂ ನಿಜಗೃಹಮನು ಮಾಕಾಂತಹೃತ್ಪದ್ಮಸದ್ಮಂ ॥ ... ೧೩೬

ಕಂ ॥ ಗುಣನಿಧಿಭಾಸ್ಕರಚರಿತಮು । ನಣೆಯರ ಮಿದ ನಾವ ನೋದುವ ಕೇಳ್ವ ನವಂ ॥ ವ್ರಣುತಸುಖಭೋಗಸಂಪದ । ಗಣಪದವಂ ಪಡೆವ ನಭವಭಕ್ತರ ಕೃಪೆಯಿಂ ॥

ಲಲಿತಪದವೃತ್ತ ॥ ಸ್ವರ್ಭವವರಾಂಬುರುಹಗರ್ಭಮುಖವಿಶ್ರುತ ಹವಿರ್ಭುಗಿನವಂದಿತಯಜುರ್ಭವಸುಮಂತ್ರಾಂ । ತರ್ಭರಿತ ಚಂದ್ರಸಿತವಾರ್ಭೃದಮಳಛವಿವಪುರ್ಭಸಿತಭಾಸುರ ಚತುರ್ಭುಜವಿನುತ್ಯಾ ॥ ದುರ್ಭರಜಗದ್ಭರಣನಿರ್ಭರ ಹೃತಾಸುರ ಪುನರ್ಭವಹರಾದ್ರಿಪಧನುರ್ಭೃದಖಿಳೇಶಾ । ವಿರ್ಭವದನೂನಗುಣ ಗೀರ್ಭರಣವಕ್ತ್ರ ಮೃಡಪೂರ್ಭವನ ರಕ್ಷಿ ಸಭವಾರ್ಭಕ ವೃಷೇಂದ್ರಾ ॥ ... ... ೧೩೮

ಮಲ್ಲಿಕಾಮಾಲಾ ॥ ಚಂಡದೀಧಿತಿಮಂಡಲಾಂತರಮಂದಿರೇ ಮುದಿತೇಂದಿರೇ । ಕುಂಡ

---

ವಿತತಾನಂದಾಂತರಂಗಂ- ವಿಸ್ತಾರವಾದ ಸಂತೋಷವೇ ಮನಸ್ಸಿನಲ್ಲುಳ್ಳ, ಭಕ್ತವೃಂದಾವೃತಂ- ಶಿವಭಕ್ತರ ಗುಂಪಿನಿಂದಾವರಿಸಲ್ಪಟ್ಟ, ಉಮಾಕಾಂತಹೃತ್ಪದ್ಮಸದ್ಮಂ- ಶಿವನಮನಃಕಮಲವೇ ಮನೆಯಾಗುಳ್ಳ ಬಸವೇಶ್ವರನು, ತನ್ಮಂದಿರಕ್ಕೆ- ಆ ಭಾಸ್ಕರಾರ್ಯನ ಮನೆಗೆ, ಬೀಳ್ಕೊಟ್ಟು- ಕಳುಹಿಸಿಕೊಟ್ಟು, ಅತುಳೋತ್ಸಾಹಪ್ರಭಾವಂ- ಅಸದೃಶವಾದ ಸಂತೋಷದಿಂದುಂಟಾದ ತೇಜಸ್ಸು. ... ||೧೩೬||

ಅಣೆಯರಂ- ಅತ್ಯಂತವಾಗಿ. ... ... ... ||೧೩೭||

ಸ್ವರ್ಭವ...ವಂದಿತ— * ಸ್ವರ್ಭವವರ- ಬ್ರಹ್ಮ, ಅಂಬುರುಹಗರ್ಭ- ವಿಷ್ಣು ಇವರುಗಳೇ, ಮುಖ- ಮೊದಲಾದ, ವಿಶ್ರುತ- ಪ್ರಸಿದ್ಧರಾದ, ಹವಿರ್ಭುಗಿನ- ದೇವಶ್ರೇಷ್ಠರಿಂದ, ವಂದಿತ- ನಮಸ್ಕರಿಸಲ್ಪಟ್ಟ. ಯಜುರ್ಭವಸುಮಂತ್ರಾಂತರ್ಭರಿತ—ಯಜುರ್ಭವ- ಯಜುರ್ವೇದದಲ್ಲಿ ಹುಟ್ಟಿದ, ಸುಮಂತ್ರ- ಶಿವಮಂತ್ರದ, ಅಂತಃ- ಒಳಗಡೆಯಲ್ಲಿ, ಭರಿತ- ತುಂಬಿದ, ಚಂದ್ರ.........ಭಾಸುರ— ಚಂದ್ರ; ಸಿತವಾರ್ಭೃತ್- ಶುಭ್ರವಾದ ಮೇಘ ಇವುಗಳೋಪಾದಿಯಲ್ಲಿ, ಅಮಳ- ನಿರ್ಮಲವಾದ, ಛವಿ- ಕಾಂತಿಯುಳ್ಳ, ವಪುಃ- ಶರೀರವುಳ್ಳ, ಭಸಿತ- ಭಸ್ಮದಿಂದ, ಭಾಸುರ- ಪ್ರಕಾಶಿಸುವ, ಚತುರ್ಭುಜವಿನುತ್ಯಾ— ಚತುರ್ಭುಜ- ವಿಷ್ಣುವಿನಿಂದ, ವಿನುತ್ಯಾ- ಹೊಗಳಲ್ಪಡುವದಕ್ಕೆ ಯೋಗ್ಯನಾದ, ದುರ್ಭರಜಗದ್ಭರಣನಿರ್ಭರ— ದುರ್ಭರ- ಪೋಷಿಸಲಶಕ್ಯವಾದ, ಜಗತ್- ಲೋಕವನ್ನು, ಭರಣ- ಸಂರಕ್ಷಿಸುವದರಲ್ಲಿ, ನಿರ್ಭರ- ಜಾಗರೂಕನಾದ, ಹೃತಾಸುರ- ನಾಶಮಾಡಲ್ಪಟ್ಟ ರಾಕ್ಷಸರುಳ್ಳ, ಪುನರ್ಭವಹರ- ಪುನರುತ್ಪತ್ತಿಯನ್ನು ನಾಶಮಾಡುವ, ಅದ್ರಿಪಧನುರ್ಭೃತ್- ಮೇರುಪರ್ವತವೆಂಬ ಧನುಸ್ಸನ್ನುಧರಿಸಿದ ( ಎಂದುದರಿಂದ ಶಿವನಿಗೂ ಬಸವೇಶ್ವರನಿಗೂ ಅಭೇದವಂ ಹೇಳಿದಂತಾಯ್ತು ) ಅಖಿಳೇಶಾ- ಸಕಲಕ್ಕೂ ಒಡೆಯನಾದ, ಆವಿರ್ಭವದನೂನಗುಣ- ಅಭಿವೃದ್ಧಿಯನ್ನೈದುತ್ತಿರುವ ಅಧಿಕವಾದ ಸದ್ಗುಣಗಳುಳ್ಳ, ಗೀರ್ಭರಣವಕ್ತ್ರ— ಗೀಃ- ಸರಸ್ವತಿಯೇ, ಭರಣ- ಆಭರಣವಾಗುಳ್ಳ, ವಕ್ತ್ರ-ಮುಖವುಳ್ಳ, ಮೃಡಪೂರ್ಭವನ— ಮೃಡ- ಶಿವನ, ಪೂಃ- ಪಟ್ಟಣವೇ ( ಕೈಲಾಸವೇ ) ಭವನ- ಮನೆಯಾಗುಳ್ಳ, ಅಭವಾರ್ಭಕ- ಶಿವಪುತ್ರನಾದ, ವೃಷೇಂದ್ರಾ- ರಕ್ಷಿಸು. ||೧೩೮||

ಚಂಡದೀಧಿತಿಮಂಡಲಾಂತರಮಂದಿರೇ— ಚಂಡದೀಧಿತಿ- ಸೂರ್ಯನ, ಮಂಡಲ- ಬಿಂಬದ, ಅಂತರ-

---

* (ಅವ) ಸ್ವಃ- ಸ್ವರ್ಗದಲ್ಲಿ, ಭವ- ಹುಟ್ಟಿದ ದೇವತೆಗಳಲ್ಲಿ, ವರ- ಶ್ರೇಷ್ಠನು. ||೧೩೮||

ಲೀಶ್ವರಮಂಡನೇಶ್ವರವಲ್ಲಭೇ ಶ್ರುತಿದುರ್ಲಭೇ ॥ ಕುಂಡಲದ್ಯುತಿಮಂಡಿತಾನನಭಾಸುರೇ ವಿಜಿತಾಸುರೇ । ಚಂಡಿನೀ ಪೊರೆ ಖಂಡಚಂದ್ರವಿಭೂಷಣೇ ಖಲಭೀಷಣೇ ॥ ... ೭೩೯

ಗದ್ಯ ॥ ಇದು ವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತತರುಣಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದ ರವಿಂದವರಾಗಭಸಿತ ಭಾಸುರ ಲಲಾಟಪಟ್ಟ ಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಸೊಡ್ಡಳಭಾಸ್ಕರಾರ್ಯವಾದಿವಿಜಯಕಥನಂ ಸಪ್ತತ್ರಿಂಶಾಶ್ವಾಸಂ ಪರಿಸಮಾಪ್ತಂ ॥ ... ... ... .. *

ಸಪ್ತತ್ರಿಂಶಾಶ್ವಾಸಂ ಸಂಪೂರ್ಣಂ.

---

ಶ್ರೀಃ

ಉಗ್ರಾಯ ಪರಬ್ರಹ್ಮಣೇನಮಃ.

## ಅಷ್ಟತ್ರಿಂಶಾಶ್ವಾಸಂ

### ಶಿವನಾಗಾರ್ಯಕಥನಂ.

ಕಂ ॥ ಶ್ರೀಧರಪರತನಯಾಮಧು । ರಾಧರಪರಿಪಕ್ವಬಿಂಬಫಲರಾಜಶುಕಂ ॥ ಸಾಧುಜ

---

ಮಧ್ವಪೇ, ಮಂದಿರೇ- ಮನೆಯಾಗುಳ್ಳ, ಮುದಿತೇಂದಿರೇ- ಸಂತೋಷಪಡಿಸಲ್ಪಟ್ಟ ಲಕ್ಷ್ಮಿಯುಳ್ಳ, ಕುಂಡಲೀಶ್ವರಮಂಡನೇಶ್ವರವಲ್ಲಭೇ— ಕುಂಡಲೀಶ್ವರ- ಆದಿಶೇಷನೇ, ಮಂಡನ- ಆಭರಣವಾಗುಳ್ಳ, ಈಶ್ವರ- ಪರಶಿವನ, ವಲ್ಲಭೇ- ಪತ್ನಿಯಾದ, ಶ್ರುತಿದುರ್ಲಭೇ- ವೇದದಿಂದಲೂ ಹೊಂದಲಸಾಧ್ಯಳಾದ, ಕುಂಡಲದ್ಯುತಿಮಂಡಿತಾನನಭಾಸುರೆ- ಕುಂಡಲ- ಕರ್ಣಕುಂಡಲದ, ದ್ಯುತಿ- ಕಾಂತಿಯಿಂದ, ಮಂಡಿತ- ಅಲಂಕರಿಸಲ್ಪಟ್ಟ, ಆನನ- ಮುಖದಿಂದ, ಭಾಸುರೇ- ಪ್ರಕಾಶಿಸುವ, ವಿಜಿತಾಸುರೇ- ಜೈಸಲ್ಪಟ್ಟ ರಾಕ್ಷಸರುಳ್ಳ, ಖಂಡಚಂದ್ರವಿಭೂಷಣೇ- ಚಂದ್ರಶಕಲವೇ ಆಭರಣವಾಗುಳ್ಳ, ಖಲಭೀಷಣೇ- ನೀಚರಿಗೆ ಭಯಂಕರಳಾದ, ಚಂಡಿ- ಸಮರ್ಥಳಾದ ಪಾರ್ವತಿಯೇ ! ... ... ... ... ||೭೩೯||

ಮುವ್ವತ್ತೇಳನೆಯ ಆಶ್ವಾಸವು ಸಂಪೂರ್ಣವು.

ಮುವ್ವತ್ತೆಂಟನೆಯ ಆಶ್ವಾಸಪ್ರಾರಂಭವು

ಶ್ರೀ.........ಶುಕಂ— ಶ್ರೀ- ಷಡ್ಗುಣೈಶ್ವರ್ಯಯುಕ್ತಳಾದ, ಧರಪರ- ಪರ್ವತರಾಜನ, ತನಯಾ- ಮಗಳಾದ ಪಾರ್ವತಿಯ, ಮಧುರ- ಇಂಪಾದ, ಅಧರ- ತುಟಿಯೆಂಬ, ಪರಿಪಕ್ವ- ಮಾಗಿದ, ಬಿಂಬಫಲ-

ನವರದ ನಮರನ | ಬೀಧರ ನೆನುಗೀಗೆ ಸೌಖ್ಯಮಂ ಶಿವಲಿಂಗಂ ‖ ... ೧

ವ ‖ ಮತ್ತನುಲ್ಲಿ ‖ ಮತ್ತೇ ‖ ಕುಸುಮಾಸ್ತ್ರರಿಪದೈಕಭಕ್ತಿನಿರತಂ ಸುಜ್ಞಾನವಿಸ್ತಾರ ಸಾ | ರಸದಾಚಾರಸಮನ್ವಿತಂ ಗುಣಗಣಾಲಂಕಾರ ನುದ್ಧೂತತಾ ‖ ಮಸನತ್ಯಂತವಿಶುದ್ಧಚಿತ್ತ ನಭವಾಂಘ್ರಿಧ್ಯಾನಜಾತೋತ್ಸವಂ | ಮಿಸುಗಿರ್ದಂ ಶಿವನಾಗಯೋಗಿಯನಿಪ್ಪೋರ್ವಂ ಭಕ್ತಿರತ್ನಾಕರಂ ‖ ... ... ... ೨

ಕಂ ‖ ಬಸವರಸ ನನುದಿನಂ ಸೆಂ | ತಸದಿಂ ಶಿವನಾಗದೇವಯೋಗೀಂದ್ರನ ಪೆಂ ‖ ಪೆಸೆವ ಪದನಳಿನಮಂ ಪೂ | ಜಿಸುತಂ ಸುಖ ಮೊಪ್ಪುತಿರ್ದ್ದ ನಿರ್ಪ್ಪನ್ನೆವರಂ ‖ ೩

ಉ ‖ ಕಂ ಡದನಲ್ಲಿ ಮಟ್ಟಿಯ ಮರುಳ್ಗ ಳೆನಿಪ್ಪ ಮದಾಂಧವಿಪ್ರ ರು | ದ್ದಂಡತೆಯಿಂದೆ ಸೈರಿಸದೆ ಬಿಜ್ಜಳ ನಿರ್ದ್ದ ಸಭಾಂತರಕ್ಕೆ ಮುಂ ‖ ಕೊಂ ಡೊಡನೆಯ್ದಿ ಸಿಂದು ಪಿಸುಣಾಡಿದ ರುರ್ವಿಪ ನಿನ್ನ ಮಂತ್ರಿ ಭೂ | ಮಂಡಲವಿಶ್ರುತಂ ಬಸವ ನಳ್ಕದೆ ಪೊಲ್ಲದುಗೆಯ್ದ ನದ್ಭುತಂ ‖ ... ... ... ... ೪

ತರಳವೃತ್ತ ‖ ಪಿರಿಯಭಕ್ತನೆನುತ್ತೆ ವಂದಿಸು ತಂತ್ಯಜಾತನ ಕಾಲ್ಗಳಂ | ಭರದೆ ತಾಂ ತೊಳೆ ದಂಘ್ರಿವಾರಿಯ ನೀಂಟಿ ಮಸ್ತಕದಲ್ಲಿ ತಾ ‖ ಳ್ದರದೆ ತತ್ಪದಸೇವೆಗೆಯ್ದಪನಳ್ಕರಿಂಸಭೆಗೆಯ್ದುವಂ | ಪರಮಸಜ್ಜನನಂತೆ ಯಂತವರುರಕ್ಕೆಪೋಕ್ಕೆಡೆಯಾಡುವಂ‖ ೫

ಮತ್ತೇ ‖ ಕುಲಜಂ ಗಂತ್ಯಜ ನಂಗ ದುರ್ವಿಧ ನೆಳಲ್ಮೈಸೋಂಕೆ ತದ್ದೋಷಮಂ | ಕೆಲನೂಂಕಲ್ ಶ್ರುತಿ ಪೇಳ್ದು ಮಗ್ಗದ ಸಚೇಲಸ್ನಾನಮಂ ಮಾಡೆ ಸ ‖ ತ್ಕುಲಜಂ ತಾ ನೆನಿಸಿರ್ದ್ದುಮಂತ್ಯಜನ ಕಾಲಂ ಕರ್ಚಿ ತದ್ವಾರಿಯಂ | ನಲವೆ ತ್ತೀಂಟಿದ ನಾದೊ ಡೀಬಸವ ನಿನ್ನೇನೆಂಬೆ ವೀದೋಷಮಂ ‖ ... ... ... ೬

---

ತೊಂಡೆಯಹಣ್ಣಿಗೆ, ರಾಜಶುಕಂ- ಅರಗಿಳಿಯಾದ, ಸಾಧುಜನವರದಂ- ಸತ್ಪುರುಷರಿಗೆ ವರವಂಕೊಡುವ, ಅಮರನದೀಧರಂ- ದೇವಗಂಗೆಯನ್ನು ಧರಿಸಿದ. ... ... ... ||೧||

ಕುಸುಮಾ.........ನಿರತಂ— ಕುಸುಮಾಸ್ತ್ರರಿ- ಶಿವನ, ಪದೈಕ- ಪಾದವೊಂದರಲ್ಲೇ ಇರುವ, ಭಕ್ತಿ— ಭಕ್ತಿಯಲ್ಲಿ, ನಿರತಂ- ಆಸಕ್ತನಾದ, ಸು......ಸಮನ್ವಿತಂ— ಸುಜ್ಞಾನ ವಿಸ್ತಾರ- ವಿಶಾಲವಾದ ತಿಳುವಳಿಕೆಯೇನು, ಸಾರಸದಾಚಾರ- ಶ್ರೇಷ್ಠವಾದ ಒಳ್ಳೆಯನಡತೆಯೇನು ಇವುಗಳಿಂದ, ಸಮನ್ವಿತಂ- ಕೂಡಿದ, ಉದ್ಧೂತತಾಮಸಂ- ಬಿಡಲ್ಪಟ್ಟ ತಮೋಗುಣಸಂಬಂಧವುಳ್ಳ, ಅತ್ಯಂತವಿಶುದ್ಧಚಿತ್ತಂ- ಬಹುಪರಿಶುದ್ಧವಾದ ಮನಸ್ಸುಳ್ಳ, ಅಭವಾಂಘ್ರಿಧ್ಯಾನಜಾತೋತ್ಸವಂ- ಶಿವಪಾದವಂ ಧ್ಯಾನಿಸುವದರಿಂದ ಉತ್ಪನ್ನವಾದ ಸಂತೋಷವುಳ್ಳ, ಭಕ್ತಿರತ್ನಾಕರಂ- ಶಿವಭಕ್ತಿಗೆ ಸಮುದ್ರನಾದ. ... ||೨||

ಇರ್ಪ್ಪನ್ನೆವರಂ- ಇರುವಷ್ಟರಲ್ಲಿ. ... ... ... ||೩||

ಮಟ್ಟಿಯಮರುಳ್ಗಳ್- ಹಣೆಗೆಮಣ್ಣನ್ನಿಕ್ಕುವ ಪಿಶಾಚಿಗಳು,ಉದ್ದಂಡತೆಯಿಂ- ಔದ್ಧತ್ಯದಿಂದ, ಮುಂಕೊಂಡು- ಆತುರಪಟ್ಟು, ಪೊಲ್ಲದುಗೆಯ್ದಂ- ಕೆಟ್ಟಕೆಲಸವಂ ಮಾಡಿದನು. ... ||೪||

ಅಂತ್ಯಜಾತನ- ನೀಚಜಾತಿಯವನ, ಎಡೆಯಾಡುವಂ- ಸಂಚರಿಸುವನು. ... ||೫||

ಕುಲಜಂಗೆ- ಸತ್ಕುಲಪ್ರಸೂತನಿಗೆ, ಅಂತ್ಯಜನ- ಹೊಲೆಯನ, ಕೆಲನೂಂಕಲ್- ಹೋಗಲಾಡಿಸುವದಕ್ಕೆ, ಸಚೇಲಸ್ನಾನಮಂ- ಬಟ್ಟೆಯೊಡನೆ ಕೂಡಿ ಸ್ನಾನಮಾಡುವಿಕೆಯನ್ನು. ||೬||

ಕಂ ॥ ದಾರಿವಿಡಿ ದೇಳ್ತರುತ ಕೆಲ । ಸಾರಂ ದ್ವಿಜರಿದಿರೊಳಯ್ದೆಯುಂ ಲೆಕ್ಕಿಸನೀ ॥ ಪೌರರ ನಂತ್ಯಜಭಕ್ತಂ । ಭೀರುತ್ವಮನುಳಿದು ಗರ್ವದೊಳ್ಬರ್ಪರ್ ॥ ೭

ಕಂ ॥ ಇನ್ನೆಲ್ಲಿಯ ವರ್ಣಾಶ್ರಮ । ಮಿನ್ನೆಲ್ಲಿಯ ಧರ್ಮಕರ್ಮಗತಿ ಭೂವರ ಕೇಳ್ ॥ ಇನ್ನೆಲ್ಲಿಯ ವೈದಿಕಪಥ । ದುನ್ನತಿ ಪೊಲೆಗಲಸಿ ಕೆಟ್ಟು ದೀಕಲ್ಯಾಣಂ ॥ ... ೮

ಕಂ ॥ ವುಳಿಯೊಳ್ಪುಲ್ಬಿಸದೊಳ್ಮಧು । ಕಳೆಯೊಳ್ಬೆಳೆ ಖಳನೊಳುತ್ತಮಂ ದುಷ್ಕುಲನೊಳ್ ॥ ಳ್ವಿಳಸತ್ಕುಲಜಂ ಬೆರೆದೊಡೆ । ಪಳಿವೊರ್ದುಗುಮಳಿಗುಮವರ ಸಹಜಗುಣಂಗಳ್ ॥ ... ... ... ... ೯

ಉ ॥ ನಾಡೊಳಗಾದ ದುರ್ಣಯಮನಾಲಿಸು ತಾಜ್ಞೆಯ ನಾತ್ಮಶಕ್ತಿಯಿಂ । ಮಾಡದ ಮೂಢಭೂಪತಿಗೆ ನಾಡಣು ಮಕ್ಕುಮದಂ ನೃಪಂಗೆ ಕಂ ॥ ಡಾಡದ ತತ್ಪುರೋಹಿತನ ನಾನೃಪದೋಷಮುಮಂತೆ ಸಾರ್ಗುಮೆಂ । ದಾಡಿದವಲ್ತೆ ದೋಷಮೆಮಗಿನ್ನಣಮಿಲ್ಲೆನೆ ಕೇಳ್ದು ಭೂಭುಜಂ ॥ ... ... ... ೧೦

ವ ॥ ಕುಪಿತನಾಗಿ ಬಸವರಸನಂ ಕರೆಯೆಂಬುದು ಮರಸನನುಚರರ್ಬಂದು ಕರೆಯ ಲೊಡನದೆಲ್ಲಮಂ ಸರ್ವಜ್ಞನರಿ ದಾಶಿವನಾಗದೇವನಂ ಮಣಿಮಯಾಂದೋಳನಮನೇರಿಸಿ ಕೆಲದೊಳೋಲಗಿಸುತ್ತಂ ಸಡಗರದಿ ನಾನೃಪಸಭೆಗೆ ಬಸವಂ ಬರ್ಪಾಗಳ್ಕಟ್ಟದಿರೊಳ್ದುಷ್ಟಭೂಸುರರ್ಕಂ ಡರಸಂಗೆ ಬೆರಲೆತ್ತಿ ತೋರಿ ॥ ... ೧೧

ಕಂ ॥ ಜನಪತಿ ನಿನ್ನತ್ತಣಿನೆ । ಳ್ಳನಿತುಂ ಭಯಮಿಲ್ಲ ದಂತ್ಯಜಾತನ ನಧಟಂ ॥ ಕನಕಾಂದೋಳಮನೇರಿಸಿ । ಬಿನದದಿ ನೀಯೆಡೆಗೆ ತಂದಪಂಗಡ ಬಸವಂ ॥ ೧೧

ವ ॥ ಪೊಳಲಂ ಪೊಲೆಗಲಸಿ ದನಿತೈದದೀಸಭೆಯುಮಂ ಪೊಲೆಗಲಸಲೆಯ್ದಿದಪನೆನೆ ಬಿಜ್ಜಳನತ್ತಲ್ನೋಡಿ ಕಾಯ್ಪು ಮಸಗಿ ಶುದ್ಧಾಂತದೋಲಗಮನಿವಂ ಪುಗಲಾಗದೆಂ ದಲ್ಲಿಂದೇಳ್ದು ಪೊರಗಣ ಮೊಗಸಾಲೆಯೊಳೋಲಗಂಗೊಟ್ಟು ಕುಳ್ಳಿರ್ಪುದು ಮಲ್ಲಿಗೇಳ್ತಂದು ನೃಪನ ಕುಹಕಮನರಿದು ಕುಜನಮದಭಂಜನಂ ತನ್ನುತ್ತರಾಂಶುಕದಿ ನುನ್ನತಾ

---

ಕೆಲಸಾರಂ- ಓರೆಯಾಗಿ ಹೋಗನು, ಲೆಕ್ಕಿಸಂ- ಗಣನೆಮಾಡುವದಿಲ್ಲವು, ಭೀರುತ್ವಮಂ- ಭಯವಂ, ಹೊಂದಿರುವಿಕೆಯನ್ನು, ಉಳಿದು- ಬಿಟ್ಟು. ... ... ... ||೭||

ಪೊಲೆಗಲಸಿ- ಸಾಂಕರ್ಯವಂಮಾಡಿ. ... ... ... ||೮||

ಬಿಳದೊಳ್- ವಿಷದೊಡನೆ, ಮಧು- ಜೇನುತುಪ್ಪ, ಕಳೆಯೊಳ್- ಕೊಳೆಯೊಡನೆ, ಬೆಳೆ- ಪೈರು, ದುಷ್ಕುಲನೊಳ್- ನೀಚಕುಲೋತ್ಪನ್ನನೊಡನೆ, ಪಳಿ- ನಿಂದೆಯು. ... ... ||೯||

ನಾಡೊಳಗೆ- ದೇಶದಲ್ಲಿ, ದುರ್ಣಯಮಂ- ಕೆಟ್ಟನ್ಯಾಯವನ್ನು, ನಾಡ- ದೇಶದ, ಅಣಂ- ಸ್ವಲ್ಪವೂ.

ಮಣಿಮಯಾಂದೋಳನಮಂ- ರತ್ನವಿಕಾರವಾದ ಪಲ್ಲಕ್ಕಿಯನ್ನು, ದುಷ್ಟಭೂಸುರರ್- ಕೆಟ್ಟಬ್ರಾಹ್ಮಣರು. * * * * * * * *

ಅಧಟಂ- ಶೌರ್ಯದಿಂದ, ಬಿನದದಿಂ- ವಿನೋದದಿಂದ. ... ... ||೧೧||

ಅನಿತೈದದೆ- ಅಷ್ಟಕ್ಕೇ ಹೋಗದೆ, ಕಾಯ್ಪು- ಕೋಪವು, ಮಸಗಿ- ಅತಿಶಯವಾಗಿ, ಶುದ್ಧಾಂತದ- ಅಂತಃಪುರದ, ಓಲಗಮಂ- ಸೇವೆಯನ್ನು, ಮೊಗಸಾಲೆಯೊಳ್- ಮುಖಶಾಲೆಯಲ್ಲಿ (ಅಂದರೆ ಮುಂದಣ ಹ

ಸನವು, ರಚಿಸಿ ತಾಪಸೇಂದ್ರನಂ ಮೂರ್ತಿಗೊಳಿಸಿ ತತ್ಪಾದಸಮೀಪದೊಳ್ನೆಲಸಿರ್ದನ, ಬಿಜ್ಜಳಂ ನೋಡಿ ॥ * * * * * * * *

ಚಂ ॥ ಶ್ರುತಿಮತಧರ್ಮದೊಳ್ನಡೆಯ ದಿಂತು ಮಹೋದ್ಧತವೃತ್ತಿಯಿಂ ಪೊದ । ಳ್ದತಿಶಯವರ್ಣದಾಶ್ರಮದ ಪದ್ಧತಿಯಂ ತೊರೆ ದಂತ್ಯಜಾತಿಸು ॥ ಗತಿವಡೆದೈ ಮದೀಯನಗರಕ್ಕಮಮಂಗಳಮಂ ನೆಗಳ್ಚಿದೈ।ಶಿತಿಗಳಭಕ್ತಿ ನಿನ್ನಶಿರದಲ್ಲಿಯೆ ಪುಟ್ಟುತೆಪೇಳ್ವೃಷಾಧಿಪಾ॥

ಕಂ ॥ ಮಳೆ ಸುರಿಗುಮೆ ನೀ ನಿರ್ದಿಳೆ। ಬೆಳೆಗುಮೆ ಪೂಜೆಗೊಳ್ಗುಮೇ ದೇವತೆಗಳ್ ॥ ಪಳಿಗಂಜದ ನಿನಗಂಜುವೆ। ವಳುಕೆಯಿಂ ನೀನೆ ಸುಖದೊಳಿರ್ಪುದು ಪೊಳಲೊಳ್ ॥

ವ ॥ ಎಂದ ನರೇಂದ್ರನ ಕಟೂಕ್ತಿಗೇಳ್ದು ಮಹಿಮಾಕರಂ ಸರೋಷಪಹಸನಮುಖನಾಗಿ ॥ * * * * * * * * *

ಉ॥ ಕೇಳೆಲೆ ಭೂಪ ನಿನ್ನಭಿಮತದ್ವಿಜ ರಂತ್ಯಜಕೃತ್ಯದಂಡಮಂ । ಪಾಳಿಯಿ ನೆಲ್ಲರುಂ ಬಡಗಿಮಾಚಲದೇವಿಯ ನಿಂದುಸತ್ಕುಲಂ ॥ ದಾಳಿಪೆವೆಂದು ಹೇಮಮಯಧೇನುವ ನೊಂದನೊಡರ್ಚಿ ವಿತ್ತಸ । ಮ್ಮೇಳನದಿಂದೆ ತೀವಿಸುಧೆಯಂಬಸಿರೊಳ್ಪುಗಿಸುತ್ತೆ ಬಾಲೆಯಂ ॥

ಮತ್ತೆ॥ ತೆಗೆ ದೀಗ ಳ್ಕುಲಯುಕ್ತೆಯಾದ ಳೆನುತಂ ಮೈಯಿಕ್ಕಿ ಪಾರ್ವರ್ ವಧೂ। ಟಿಗೆ ನಣ್ಪಿಂ ದವಳಂಗ ದೊಜಲಮರ್ದಂ ತಾವಿಂಟುತಂ ಮೇಣ್ಮನಂ ॥ ಬುಗುವಾಕಾನಕಧೇನುವಂ ಕಡಿದು ಖಂಡಂಗೆಯ್ವುತಂ ತೃಷ್ಣೆ ಕೈ। ಮಿಗೆ ತಮ್ಮೊಳ್ಪರಿಕಲ್ಪಿಸುತ್ತುಮಿರಿಸುತ್ತುಂ ಜೀರೆ ಭಾಗಂಗಳಂ ॥ ... ... ... ... ೧೫

ಮತ್ತೆ ॥ ಕಡೆವಟ್ಟೇವಣೆ ಸೋಮಯಾಜಿಗೆ ಮೊಗಂ ವೇದಾಂತಿಗ ಳ್ಗೀಕೊರಲ್।

---

ಜಾರದಲ್ಲಿ ) ಕುಹಕಮಂ- ಕಪಟವನ್ನು, ಉತ್ತರಾಂಶುಕದಿಂ- ಹೊದ್ದಿದ್ದ ಬಟ್ಟೆಯಿಂದ, ಮೂರ್ತಿಗೊಳಿಸಿ- ಕುಳ್ಳಿರಿಸಿ, ನೆಲಸಿ- ಕುಳಿತುಕೊಂಡು. * * * * * * * *

ಶ್ರುತಿಮತಧರ್ಮದೊಳ್- ವೇದಸಮ್ಮತವಾದ ವ್ಯಾಪಾರದಲ್ಲಿ. ... ... ॥೧೨॥

ಪೂಜೆಗೊಳ್ಗುಮೇ- ಮಾಡಿದ ಪೂಜೆಯನ್ನು ಸ್ವೀಕರಿಸುವವೇ ? ಪಳಗೆ- ದೂಷಣೆಗೆ, ಅಳುಕೆಯೊಳ್- ಸ್ವೇಚ್ಛೆಯಿಂದ. ... ... ... ... ॥೧೩॥

ಕಟೂಕ್ತಿಗೇಳ್ದು- ಕಠಿಣವಾದ ಮಾತನ್ನು ಕೇಳಿ. * * * * *

ಅಭಿಮತದ್ವಿಜರ- ಅಭಿಮಾನವಿಶಿಷ್ಟರಾದ ಬ್ರಾಹ್ಮಣರ, ಅಂತ್ಯಜಕೃತ್ಯದ- ಹೊಲೆಗೆಲಸದ, ಪಾಳಿಯಿಂ- ಪಙ್ತಿಯಾಗಿ, ಬಡಗಿಮಾಚಲದೇವಿಯುಂ- ಬಡಗಿಮಾಚಲದೇವಿಯೆಂಬ ಚಂಡಾಲಸ್ತ್ರೀಯನ್ನು, ಸತ್ಕುಲಂದಾಳಿಪೆವ್- ಒಳ್ಳೆಯ ಕುಲವಂ ಧರಿಸುವಂತೆ ಮಾಡುವೆವು, ಹೇಮಮಯಧೇನುವಂ- ಚಿನ್ನದ ಹಸುವನ್ನು, ವಿತ್ತಸಮ್ಮೇಳನದಿಂದೆ- ಹಣವಂ ಜೊತೆಗೊಳಿಸುವದರಿಂದ, ಸುಧೆಯುಂ- ಹಾಲನ್ನು, ಬಾಲೆಯಂ- ಆ ಚಂಡಾಲಸ್ತ್ರೀಯನ್ನು, ಬಸಿರೊಳ್- ಹಸುವಿನ ಹೊಟ್ಟೆಯಲ್ಲಿ, ಪುಗಿಸುತ್ತೆ-ಪ್ರವೇಶಮಾಡಿಸುತ್ತಾ. ॥೧೪॥

ತೆಗೆದು- ಈಚೆಗೆಳೆದು, ಮೈಯಿಕ್ಕಿ- ನಮಸ್ಕರಿಸಿ, ವಧೂಟಿಗೆ- ಸ್ತ್ರೀಗೆ, ನಣ್ಪಿಂದೆ- ಪ್ರೀತಿಯಿಂದ, ಅಮರ್ದಂ- ಹಾಲನ್ನು, ಮನಂಬುಗುವ- ಮನೋಹರವಾದ, ಆಕಾನಕಧೇನುವಂ- ಆ ಚಿನ್ನದ ಹಸುವನ್ನು, ಖಂಡಂಗೆಯ್ವುತಂ- ತುಂಡುಮಾಡುತ್ತಾ, ತೃಷ್ಣೆ- ಆಸೆಯು, ಕೈಮಿಗೆ- ಅಧಿಕವಾಗಲು, ಪರಿಕಲ್ಪಿಸುತ್ತುಂ- ಮಾಡಿಕೊಳ್ಳುತ್ತಾ. ... ... ... ॥೧೫॥

ಕಡೆವಟ್ಟ- ಕೊನೆಯದಾದ, ಕಡುಪಾಂತ- ಶಾರ್ಯವನ್ನುಹೊಂದಿದ, ತಾರ್ಕಿಕರ್ಗೆ- ತರ್ಕಶಾಸ್ತ್ರಜ್ಞರಿ

ಕಡುಪೊಂತೊಪ್ಪುವ ತಾರ್ಕಿಕರ್ಗೆ ಬಲವಕ್ಕಂ ಪಂಡಿತ ರ್ಗಕ್ಕೆ ತೋ ॥ ರ್ಪಡಪಕ್ಕಂ ನೆಗ ಳ್ದಶ್ವಮೇಧಿಗೆ ಬಸಿ ವೈಶೇಷಿಕ ರ್ಗಿತ್ತಲೀ । ನಡುವೆ ಸ್ವೇದಷಡಂಗವೇದಿಗ ಮುಪಾಧ್ಯಾಯರ್ಗೆಶೃಂಗದ್ವಯಂ ॥ ... ... ... ... ... ೧೬

ಕಂ ॥ ತುಂಗಾಧ್ವರಿ ಗೆರ್ದೆ ಬಾಲಂ । ಪಿಂಗದ ಋಗ್ವೇದಿಗಳ್ಗೆ ತೊಡೆಗಳ್ಸಾಂಗೋ ॥ ಪಾಂಗತ್ರಿವೇದಿಗ ಳ್ಗಗಳ । ದಂಗಂ ವಿದ್ಯಾರ್ಥಿಗ ಳ್ಗೆನುತ್ತಸವಸದಿಂ ॥ ... ೧೭

ಕಂ ॥ ಮೊದಲೊಳ್ಧೇನುತ್ವಮು ನದ । ಕೊದವಿಸಿ ಸಂಕಲ್ಪದಿಂದೆ ಪೂಜಿಸಿ ವ ಗು ಳ್ದಂ ॥ ತದನೆ ಕಡಿ ದೊಯ್ದು ಪಾರ್ವ । ರ್ವದಿತಂ ಗೋಹತ್ಯೆಗಳ್ಕ ದತಿಪಾಪಯುತರ್ ॥ ೧೮

ಕಂ ॥ ಇಂತಪ್ಪ ಪಾಪ ಕರ್ಮುರೊ । ಳೆಂತುಂ ಸರಿಗಟ್ಟ ಲಕ್ಕುಮೇ ಶಿವದೀಕ್ಷಾ ॥ ವಂತ ರೆನಿಸಿರ್ದ ಸುಚರಿತ । ಮತರ ನಘಹರನ ಭಕ್ತರುಂ ಧಾರುಣಿಯೊಳ್ ॥ ೧೯

ಚಂ ॥ ಸರಿಯಿಡ ಲಕ್ಕುಮೇ ಸುರಮಹೀರುಹರಾಜಿಗೆ ಮಿಕ್ಕ ಕಾಡುಮು । ಳ್ಮರಗಳ ನಂಬುಜಾಕರಕದಂಬಕೆ ಜೆಂಬೆಗಳಂ ಪೊದಲ್ದ ಕೇ ॥ ಸರಿನಿವಹಕ್ಕೆ ಕಾಳ್ನರಿಗಳಂ ಘನರಾಜಮರಾಳವೃಂದ ಕು । ವರರಿಯಬ್ಬಕಂಗಳಂ ಶರಣಸಂತತಿ ಗೀಪಳವೆತ್ತ ಪಾರ್ವರಂ ॥ ೨೦

ಕಂ ॥ ಕುಲಜಾತಿ ಯೆಂಬಿವೆಲ್ಲಂ । ಸಲೆ ಮಾಯಾಬೀಜಜನಿತ ಮೆಮ್ಮಯ ಶರಣಾ ॥ ವಲಿಯ ಕುಲ ಮೀಶಜನಿತಂ । ಕಲುಷಿತ ಮದು ನಿಷ್ಕಲಂಕ ಮಿದು ನಿಜದಿಂದಂ ॥ ೨೧

ಕಂ ॥ ಪುಣ್ಯವಿಹೀನರ ಕಣ್ಗೆ ಹಿ । ರಣ್ಯಂ ಕಲ್ಲೆನಿಪ ತೆರದೆ ಭವಚಕ್ರಮಹಾ ॥ ರ

---

ಗೆ, ಬಲವಕ್ಕಂ- ಬಲಗಡೆಯಪಕ್ಕವು, ಅಶ್ವಮೇಧಿಗೆ- ಅಶ್ವಮೇಧವಂ ಮಾಡಿದವನಿಗೆ, ವೇದಷಡಂಗವೇದಿಗಂ- ವೇದಾಂಗಗಳಾದ ಶಿಕ್ಷಾದಿಗಳನ್ನು ತಿಳಿದವನಿಗೂ, ಶೃಂಗದ್ವಯಂ- ಎರಡುಕೊಂಬುಗಳು. ॥೧೬॥

ತುಂಗಾಧ್ವರಿಗೆ- ಉನ್ನತವಾದ ಯಜ್ಞವಂಮಾಡಿದವನಿಗೆ, ಎರ್ದೆ- ವಕ್ಷಸ್ಥಲವು, ಸಾಂಗೋಪಾಂಗ ತ್ರಿವೇದಿಗಳ್ಗೆ-ಋಗ್ಯಜುಸ್ಸಾಮವೇದಗಳನ್ನು ಸಂಪೂರ್ಣವಾಗಿ ಅಧ್ಯಯನ ಮಾಡಿರುವವರಿಗೆ, ಅಸವಸದಿಂ- ಬೇಗಬೇಗನೆ. ... ... ... ... ... ॥೧೭॥

ಧೇನುತ್ವಮಂ- ಹಸುವಿನತನವನ್ನು, ಸಂಕಲ್ಪದಿಂದೆ- ಮನೋನಿಶ್ಚಯದಿಂದ, ಗೋಹತ್ಯೆಕ್ಕೆ- ಹಸುವನ್ನು ಕೊಲ್ಲುವದರಿಂದುಂಟಾಗುವ ಪಾಪಕ್ಕೆ. ... ... ॥೧೮॥೧೯॥

ಸುರಮಹೀರುಹರಾಜಿಗೆ- ಕಲ್ಪವೃಕ್ಷಗಳ ಪಙ್ಕ್ತಿಗೆ, ಅಂಬುಜಾಕರದಂಬಕೆ-ಸರೋವರದ ಸಮೂಹಕ್ಕೆ, ಜೆಂಬೆಗಳಂ- ಕುಂಟೆಗಳನ್ನು, ಕೇಸರಿನಿವಹಕ್ಕೆ- ಸಿಹ್ಮಗಳ ಗುಂಪಿಗೆ, ಕಾಳ್ನರಿಗಳಂ- ಕಾಡುನರಿಗಳನ್ನು, ಘನರಾಜಮರಾಳವೃಂದಕೆ- ಶ್ರೇಷ್ಠಗಳಾದ ರಾಜಹಂಸಪಕ್ಷಿಗಳ ಗುಂಪಿಗೆ, ಬಕಂಗಳಂ- ಕೊಕ್ಕರೆಗಳನ್ನು, ಈಪಳಿವೆತ್ತ- ಈದೂಷಣೆಯಂಹೊಂದಿದ. ... ... ॥೨೦॥

ಮಾಯಾಬೀಜಜನಿತಂ- ಮಾಯೆಯು ಬೀಜದಿಂದ ಹುಟ್ಟಿದುದು, ಈಶಜನಿತಂ- ಪರಮೇಶ್ವರನಿಂದ ಹುಟ್ಟಿದುದು, ( ಅಂದರೆ ವಿಶುದ್ಧಾಃಪ್ರಾಕೃತಾಶ್ಚೇತಿದ್ವಿವಿಧಾಮಾನುಷಾಸ್ಮೃತಾಃ । ಶಿವಸಂಸ್ಕಾರಿಣಶ್ಶುದ್ಧಾಃಪ್ರಾಕೃತಾಇತರೇಮತಾಃ । ಎಂಬ ವಚನಪ್ರಮಾಣದಿಂದ ವೀರಶೈವರ ಪಾರಂಪರ್ಯವೇ ಪ್ರತ್ಯೇಕವಾದುದಾದುದರಿಂದ ಅವರ ಕುಲಭೇದವೂ ಬೇರೆಯಾದದ್ದು. ) ... ... ॥೨೧॥

ಹಿರಣ್ಯಂ- ಚಿನ್ನವು, ಭವಚಕ್ರಮಹಾರಣ್ಯಚರನರರ— ಭವ- ಸಂಸಾರವೆಂಬ, ಚಕ್ರ- ಮಂಡಲವೆಂಬ, ಮಹಾರಣ್ಯ-ದೊಡ್ಡಕಾಡಿನಲ್ಲಿ, ಚರ-ಸಂಚರಿಸುವ. ನರರ-ಮನುಷ್ಯರ, ವರೇಣ್ಯಂ-ಶ್ರೇಷ್ಠನಾದವನು. ಅಧಮಧರಾಮರರ್- ನೀಚರಾದ ಹಾರ್ವರು. ... ... ॥೨೨॥

ಣ್ಯಚರನರರ ಕಣ್ಗೆ ವ । ರೇಣ್ಯಂ ನರರಂತಿ ರಭವಭಕ್ತ್ರಂ ತೋರ್ಕುಂ ॥ ೨೨

ಕಂ ॥ ಪರಮಶಿವನಾಗದೇವಂ । ಗುರುತರಶಿವಯೋಗಭಾಸುರಂ ಗಧಮಧರಾ ॥ ಮರ
ರೆಣೆ ಯಲ್ತ್ತಲ್ತ್ತೆಲೆಭೂ । ವರ ಕೇಳದರಿಂದ ಮೆಮ್ಮ ಶರಣರ ಪೆಂಪಂ ॥ ೨೩

ಉ ॥ ಶ್ರೀಪತಿಪಂಡಿತರ್ಪರಮಶೈವದೃಢವ್ರತನಿಷ್ಠರೋರ್ಮ್ಮೆ ಧಾ । ತ್ರೀಪ ನನಂತಪಾ
ಲನ ಸಭಾಂತರದೊಳ್ ದ್ವಿಜಕೋಟಿಯುಂ ಶಿವ ॥ ಶ್ರೀಪದಭಕ್ತ ನೋರ್ವ ನೆಣೆ ಯಲ್ತೆ
ನು ತಣ್ಮ್ಮತೆ ಪೂಣ್ದು ಸತ್ಯಸ । ಲ್ಲಾಪ ನಮರ್ಚೆ ಕಟ್ಟಿದನೆ ವಸ್ತ್ರದೊಳುಜ್ವಲಿಪಗ್ನಿ
ಯಂ ನೃಪ ॥ ... ... ... ... ೨೪

ಮತ್ತೇ ॥ ಕ್ರತುನಾಥಂ ಹರಿ ಯೆಂದು ವಹ್ನಿಗುರು ಪೆಂದಾದಿತ್ಯನಂ ರುದ್ರಸಂ । ಗ
ತಗಾಯತ್ರಿಗೆ ದೈವಮೆಂ ದಜನೆ ವೇದಕ್ಕಾಣ್ಮ ನೆಂದುಂ ಜಗ ॥ ತ್ಪತಿ ಚಕ್ರಾಯುಧ ನೆಂದು
ಸೋಮಲತೆ ವಿಶ್ವೋತ್ಪತ್ತಿಬೀಜಂ ದಲೆಂ । ದತುಳಬ್ರಹ್ಮಮೆ ಶೂನ್ಯ ಮೆಂ ದುಲಿಗು
ಮೀಚಂಡಾಲ ರೀಭೂಸುರರ್ ॥ ... ... ... ೨೫

ಕಂ ॥ ಇಂತಪ್ಪ ಶಿವದ್ರೋಹಿ ಗ । ಳೆಂತುಂ ಪಶುಹತ್ಯೆ ಕಳ್ಕ ದಂತ್ಯಜಕರ್ಮ ॥ ಭ್ರಾಂ
ತ ಶ್ಶಠರೀಬಾರ್ವ । ರ್ಕ್ರತುಹರಾರ್ಚಕರ ಮನೆಯ ಸುನಿಗಳ್ಗೆಣೆಯೆ ॥ ೨೬

ವ ॥ ಮತ್ತಂ ॥ ಉ ॥ ಹಾವಿನ್ಹಾಳೆನಿಪ್ಪ ಪುರ ಮೊಪ್ಪುವಗು ಮಲ್ಲಿ ಧರಾಮರವ್ರ
ಜಂ । ತೀವಿ ವಿರಾಜಿಸಿರ್ಕು ಮನಿಶಂ ಪಡ ದಾಪೊಳಲಲ್ಲಿ ಮೇ ಣ್ಮಹೀ ॥ ಭಾವಜವೈರಿ ಯೆಂ
ದೆನಿಸಿ ಕಂಗೊಳಿಸಿರ್ಪ ನತಿಪ್ರಭಾವದಿಂ । ಪಾವನಕಲ್ಲಿನಾಥ ನೆನಿಪ್ಪೋರ್ವ್ವ ನಖರ್ವಶಿವೈಕ
ತತ್ಪರಂ ॥ ... ... ... ೨೭

ಉ ॥ ಆ ಪುರದಲ್ಲಿ ಘೋರಫಣಿ ನಟ್ಟಿರುಳೊಳ್ಮಗೆ ನಿದ್ರೆಗೆಯ್ದ್ದರಂ । ಕೋಪ
ದೆ ಕಚ್ಚಿಕೊಲ್ವುದು ಪರಾಶ್ರಯದಿಂ ನಡೆತುಪಗಂ ಪೊದ ॥ ಳ್ಪಾಪಟುಸರ್ಪ ನೋರ್ವ

---

ವೀರಶೈವದೃಢವ್ರತನಿಷ್ಠರ್- ಉತ್ಕೃಷ್ಟವಾದ ಶಿವಸಂಬಂಧವಾದ ಸ್ಥಿರವಾದ ನಿಯಮದಲ್ಲಿ ಶ್ರದ್ಧೆಯುಳ್ಳ, ಅನಂತಪಾಲನಧಾತ್ರೀಪನ- ಅನಂತಪಾಲನೆಂಬ ರಾಜನ, ದ್ವಿಜಕೋಟಿಯುಂ- ಕೋಟಿ ಜನ ಹಾರ್ವರೂ. ... ... ... ||೨೩||

ಕ್ರತುನಾಥಂ- ಯಜ್ಞಕ್ಕಧಿಪತಿಯು, ಆದಿತ್ಯನಂ- ಸೂರ್ಯನನ್ನು, ರುದ್ರಸಂಗತಗಾಯತ್ರಿಗೆ- ಶಿವನಿಂ ಕೂಡಿದ ಗಾಯತ್ರಿಮಂತ್ರಕ್ಕೆ, ಆಣ್ಮಂ- ಪತಿಯು, ಚಕ್ರಾಯುಧಂ- ವಿಷ್ಣುವು, ಸೋಮಲತೆ- ಅಮೃತವಲ್ಲಿಯು, ವಿಶ್ವೋತ್ಪತ್ತಿಬೀಜಂ- ಪ್ರಪಂಚದ ಹುಟ್ಟುವಿಕೆಗೆ ಕಾರಣವು, ಅತುಳಬ್ರಹ್ಮಮೆ- ಅಸದೃಶವಾದ ಪರಬ್ರಹ್ಮವೇ, ಶೂನ್ಯಂ- ತನ್ನೊಡನೆ ಯಾವ ವಸ್ತುವೂ ಸೇರದೆ ತಾನೊಂದೇಬಯಲಾಗಿರುವದು. ||೨೫||

ಅಂತ್ಯಜಕರ್ಮಭ್ರಾಂತರ್- ಚಂಡಾಲಕೃತ್ಯವೆಂಬ ಭ್ರಮೆಯುಳ್ಳವರು, ಶಠರ್- ದುರಾಚಾರವುಳ್ಳವರು, ಸುನಿಗಳ್ಗೆ- ನಾಯ್ಗಳಿಗೆ. ... ... ||೨೬||

## ಕಲ್ಲಿನಾಥನ ಕಥೆ.

ಧರಾಮರವ್ರಜಂ- ಹಾರ್ವರ ಗುಂಪು, ಮಹೀಭಾವಜವೈರಿ— ಮಹೀ- ಭೂಮಿಗೆ, ಭಾವಜವೈರಿ-ಮದನಾರಿಯಾದ ಶಿವಸ್ವರೂಪನು. ... ... ||೨೭||

ಘೋರಫಣಿ- ಭಯಂಕರವಾದ ಸರ್ಪವು, ನಟ್ಟಿರುಳೊಳ್- ಮಧ್ಯರಾತ್ರಿಯಲ್ಲಿ, ಪರಾಶ್ರಯದಿಂ- ಇ

ಸುಖನಿದ್ರೆಯು ಸಾಳ್ದಸೆದಿರ್ಪ ಶೈವವಿ। ದ್ಯಾವರಕಲ್ಲಿದೇವನನೆ ಕಚ್ಚಿ ಕರಂ ಮಡಿದತ್ತು ಬೇಗದಿಂ ॥ .. ... ... ... ೨೮

ಕಂ ॥ ಕರುಣಾಕರ ನೀಕ್ಷಿಸಿ ಮಡಿ। ದುರಗನ ನೇ ಳೇ ಳೆನುತ್ತೆ ಹರಣಮ ನಿತ್ತಾ। ದರದಿಂ ಕಳುಪುತೆ ಪುರಜನ। ಮರಿಕ್ಷಿದೆಂದಡಿಗೆರಗಿ ಕೀರ್ತಿಸುತ್ತಿರೆ ಮೆರೆದಂ ॥ ೨೯

ವ ॥ ಅಂತು ಕೆಲವಾನುಂ ದಿವಸ ಮಲ್ಲಿ ಕಲ್ಲಿನಾಥಂ ಸಲ್ಲಲಿತಶಿವಯೋಗದಿನೊಪ್ಪುತ್ತ ಮಿರೆ ಪೆರತೊಂದುದಿವಸಂ ॥ * * * * * * *

ಮಲ್ಲಿಕಾ ॥ ಕಲ್ಲಿನಾಥನಚೇಟಿ ಯರ್ಘ್ಯನವಾಂಬುವಂ ತರ ಲೆಂದು ಪೋ। ಪಲ್ಲಿ ಬೀದಿಯೊ ಳಂಟಿ ತದ್ಘಟಮಂ ದ್ವಿಜಂ ಬಳಿ ಕೋರ್ವ ನಾ ॥ ಪಲ್ಲವಾಧರೆ ಮುಟ್ಟದಂ ಭವಿ ಯೆಂದು ಕಂಡದ ಸುರ್ವಿಯೊಳ್। ನಿಲ್ಲ ದುದೊಡೆಯಿಕ್ಕು ತೋಡುಗಳಂ ಶುಚಿಸ್ಥಲ ಡಿಂಬಿನೊಳ್ ॥

ಕಂ ॥ ಮರೆಗೆಯ್ದು ತದ್ವಿಷಾದದಿ। ಸುರೆ ಭಸಿತಸ್ನಾನಮೆಸಗಿ ಶಿವಶಿವರವದಿಂ ॥ ಪೆರತೊಂದುಘಟಮ ನಾಂತೆ। ಳ್ಚರೊ ಳ್ಬರುತ್ತಿರೆ ನಿರೀಕ್ಷಿಸು ತ್ತವಳರವಂ ॥ ೩೧

ಉ ॥ ನೋಡಿರೆ ತೊಳ್ತ ನುರ್ಬ್ಬಟೆಯ ಕೊಬ್ಬಿನ ಪಬ್ಬುಗೆಯಂ ದ್ವಿಜನ್ಮ ನ। ತ್ತೋಡದೆ ನೋಂಕಿದು ಘಟಮ ನಿಂ ದೊಡೆದಳ್ ಶುಚಿವಿಪ್ರ ನನ್ಯರಂ ॥ ಪಾಡಳಿ ದಂಟಲಾಗದೆನುತಾಗಮಸಂತತಿ ಪೇಳ್ಗು ಮಲ್ಲದೀ। ನಾಡ ಜನಾಳಿಗಗ್ರಜನ ಸೋಂ ಕಘಕಾರಣ ಮೆಂದು ಪೇಳ್ವುದೇ ॥ ... ... ... ೩೨

ಕಂ ॥ ಘಟಚೇಟಿ ಮೇರೆಗೆಟ್ಟಂ। ತಟಮಟಮಂ ನೆಗಳ್ದ ಳವಳ ಪಿಡಿತರಿಸಿ ಸಮು। ತ್ಕಟದಂಡಮೆಸಗಿದಲ್ಲದೆ। ಪಟು ತರಮತ್ಕೋಪ ಮೆಂತುಮೇಂ ತೀರ್ದಪುದೆ ॥ ೩೩

ವ ॥ ಎಂದು ಪಾರ್ವ ರೆಲ್ಲರ್ ಮುಳಿದು ಗಳಪುತ್ತಂ ತಾವಿರ್ದಲ್ಲಿ ಗಾ ಕಲ್ಲಿನಾಥನಂ ಬರಿಸಿ ॥ * * * * * * * * * *

ಕಂ ॥ ಅಳಿದುರಗಂ ಗಸುವಿತ್ತ। ಜ್ವಳಮಹಿಮ ಪಿರಿಯ ರೆಂದು ಮನ್ನಿಪೆ ವೆಂ

---

ತರ ಸ್ಥಲದಿಂದ. ... ... ... ॥೨೮॥

ಮಡಿದ- ಸತ್ತ, ಉರಗನಂ-ಸರ್ಪವನ್ನು, ಹರಣಮಂ-ಪ್ರಾಣವನ್ನು, ಅರಿದು- ಅಸಾಧ್ಯವು. ॥೨೯॥

ಚೇಟಿ- ದಾಸಿಯು, ಅರ್ಘ್ಯನವಾಂಬುವಂ- ಪೂಜಾರ್ಹವಾದ ಹೊಸನೀರನ್ನು, ಅಂಟಿ- ಸೋಂಕಲು, ಆಪಲ್ಲವಾಧರೆ- ಆ ಚಿಗುರಿನಂತಿರುವ ತುಟಿಯುಳ್ಳ ಗೌಡಿಯು, ಅದಂ- ಆ ಕೊಡವನ್ನು, ಒಡೆಯಿಕ್ಕುತೆ- ಒಡೆದುಹಾಕುತ್ತಾ, ಶುಚಿಸ್ಥಲದ- ಪರಿಶುದ್ಧವಾದ ಪ್ರದೇಶದ, ಇಂಬಿನೊಳ್- ಆಶ್ರಯದಲ್ಲಿ. ॥೩೦॥

ಮರೆಗೆಯ್ದು- ಮುಚ್ಚಿ, ತದ್ವಿಷಾದದಿಂ- ಆ ಹಾರ್ವನು ಮುಟ್ಟಿದನೆಂಬ ಮನಃಕ್ಲೇಶದಿಂದ, ಶಿವಶಿವರವದಿಂ-ಶಿವಶಿವನೆಂಬ ಶಬ್ದದಿಂದ, ಎಳ್ಚರೊಳ್-ಜಾಗರೂಕತೆಯಿಂದ. ... ॥೩೧॥

ತೊಳ್ತನ- ಗೌಡಿಯ, ಉಬ್ಬಟೆಯ- ಶೌರ್ಯವಿಶಿಷ್ಟವಾದ, ಕೊಬ್ಬಿನ- ಗರ್ವದ, ಪಬ್ಬುಗೆಯಂ- ಅಭಿವೃದ್ಧಿಯನ್ನು, ದ್ವಿಜನ್ಮಂ- ಹಾರ್ವನು, ಶುಚಿವಿಪ್ರಂ- ಪರಿಶುದ್ಧನಾದ ಹಾರ್ವನು, ಪಾಡು- ಸಮೀಚೀನತ್ವವು, ಈನಾಡ- ಈ ದೇಶದ. ... ... ... ॥೩೨॥

ಘಟಚೇಟಿ- ನೀರಿನ ಗಡಿಗೆಯಂ ಹೊರುವ ಗೌಡಿಯು, ಮೇರೆಗೆಟ್ಟು- ಎಲ್ಲೆಯಂ ಮೀರಿ, ಅಟಮಟಮಂ- ಅವಾಂತರವನ್ನು, ಸಮುತ್ಕಟದಂಡಮೆಸಗಿದಲ್ಲದೆ-ಹೆಚ್ಚಾದಶಿಕ್ಷೆಯಂ ಮಾಡಿದಹೊರತು. ॥೩೩॥

ದುಂ ॥ ಪ್ರೊಳಲೊಳ್ನಮ್ಮಂ ಸದ್ಗುಣ । ಕಳಾಪ ನಿಮ್ಮಂತೆ ಸುಜನರುಂ ಪೆರರೊಳರೆ ॥

ಕಂ ॥ ಎಲ್ಲರು ಮೆಲ್ಲ ಗಂಬಳ್ಳಿದ । ರಿಲ್ಲ ವಲಂ ನಿಮ್ಮ ದಾಸ ರೀ ದಾಸಿ ಕರಂ ॥ ಖುಲ್ಲ
ಯಿವಳಗಿಯ ದೆಸೆಗಿದ । ಪ್ರೊಲ್ಲಮೆಯಂ ಕೇಳ್ದ ರಲ್ತೆ ಪೇಳ್ದಪೆ ವೀಗಳ್ ॥ ೩೫

ಕಂ ॥ ಜಾವಳನೆ ವೇದಶಾಸ್ತ್ರಕ । ಳಾವಿದ ನತುಳಾಗ್ನಿಹೋತ್ರಿ ದಾಮೋದರ
ಭೂ ॥ ದೇವಸುತಂ ಸುಚರಿತ ನೆ । ಯೀವಾಮನಸೋಮಯಾಜಿ ಪಡೆದೇಳ್ತ್ತಗುತ್ತಂ ॥

ಕಂ॥ ಕೊಡವೀಡಿಯಲ್ಲಿ ತನ್ನಯ । ಕೊಡನಂ ಸೋಂಕಿದೊಡೆ ದೋಷವಾಯ್ತೆನುತ
ಳಳಿಂ ॥ ಕಡುಮುಳಿದು ಬೈದು ವಿಪ್ರನ । ನೊಡೆಬಡಿದಳ್ಕೊಡನ ನಿಳೆಗಿ ದಚ್ಚರಿಯಲ್ತೆ ॥

ಕಂ ॥ ಪ್ರೊಡವಿಯೊಳಾವಾಗಮುಮುಂ । ನುಡಿವವೆ ಸೋಂಕಿದೊಡೆ ವಿಪ್ರ ನಘ ಮ
ಕ್ಕು ಮೆನು ॥ ತ್ತೊಡ ನಿದ ನರಿಯುಳೆ ಕೋರ್ಬಿಂ । ದೊಡೆದಗ್ಗಡ ಘಟಮ ನುಂತೊ ತೊ
ಳ್ತನಬಿಂಕಂ ॥ ... .. ... ... ೩೮

ಕಂ ॥ ಹರವಿಯ ನೊಡೆ ದಾಕ್ಷೊಳ್ತನ । ಶಿರಮಂ ಬಿಡ ದೊಪೆಯ ಲೆಳಸಿ ಮದ್ಬಾಲ
ಕ ರಾ ॥ ದುರ್ರವಣಿಸುತ್ತಿರೆ ನಿಮ್ಮಂ । ನಿರೀಕ್ಷಿಸಲ್ಕೇಳ್ಕುಮೆಂದು ನಿಲಿಸಿದೆ ವಲ್ತೆ ॥

ವ ॥ ಎಂಬುದು ಮಲ್ಲಿ ಕಲ್ಲಿದೇವಂ ಕಡುಕನಲ್ದು ॥ * * * *

ಮತ್ತೀ ॥ ಫಣಿರಾಡ್ಭೂಷಣಭಕ್ತಮಂದಿರದ ಕೀಳಲ್ಗೊಂಡು ಪಟ್ಟುರ್ವ ಬ । ಲ್ಸೊ
ಣಗಂ ಗಾದೊಡ ಮಾಗ ದಾಗ ದೆಲೆ ನಿಮ್ಮಂ ಸಾರ್ದು ಮುಟ್ಟಲ್ಕ ಮೇ ॥ ಗಣ ಮಾತ್ರೇಂ
ವೃಡದೀಕ್ಷೆಯಾಂತ ಶಿವಭಕ್ತಾವಾಸದಾಸೀಜನಂ । ಗುಣಶೂನ್ಯಸ್ಥಿತಿವೆತ್ತು ನಿಮ್ಮ ಸಿರ
ದೆಂತುಂ ಮುಟ್ಟಲೇನಕ್ಕುಮೆ ॥ ... ... ... ೪೦

ವ ॥ ಅದೇಂಕಾರಣ ಮೆಂಬಿ ರಪ್ಪೊಡೆ ॥ * * * * *

---

ಅಸುವಿತ್ತ- ಪ್ರಾಣವನ್ನು ಕೊಟ್ಟ, ಮನ್ನಿಪವ್- ಮರ್ಯಾದೆಯಂ ಮಾಡುವವು. ||೩೪||

ಬಳ್ಳಿದರ್- ಒಳ್ಳೆಯವರು, ದಾಸರ್- ಸೇವಕರು, ಅಗಿಯದೆ- ಹೆದರದೆ, ಪೊಲ್ಲಮೆಯುಂ- ಕೆಟ್ಟಕೆಲಸವನ್ನು, ಕೇಳ್ದರಲ್ತೆ- ಕೇಳಿಲ್ಲವು. ... ... ... ||೩೫||

ಜಾವಳನೆ- ಸಾಮಾನ್ಯನೇ ? ಅತುಳಾಗ್ನಿಹೋತ್ರಿ- ಅಸದೃಶವಾದ ಅಗ್ನಿಹೋತ್ರವಂ ಮಾಡಿರುವವನು, ದಾಮೋದರಭೂದೇವಸುತಂ- ದಾಮೋದರನೆಂಬ ಬ್ರಾಹ್ಮಣನ ಮಗನು, ಈವಾಮನಸೋಮಯಾಜಿ- ವಾಮನನೆಂಬ ಸೋಮಯಾಜಿಯು. ... ... ... ||೩೬||

ಕೊಡವೀದಿಯಲ್ಲಿ- ಕೊಳದ ಬೀದಿಯಲ್ಲಿ, ಅಳಲಿಂ- ಸಂಕಟದಿಂದ, ಒಡೆಬಡಿದಳ್- ಒಡೆದುಹಾಕಿದಳು.

ತೊಳ್ತನ- ಗೌಡಿಯು, ಬಿಂಕಂ- ಗರ್ವವು. ... ... ||೩೮||

ಹರವಿಯುಂ- ಗಡಿಗೆಯನ್ನು, ಮದ್ಬಾಲಕರ್-ನಮ್ಮ ಹುಡುಗರು, ಉರವಣಿಸುತ್ತೆ-ಸನ್ನದ್ಧರಾಗುತ್ತೆ.

ಕಡುಕನಲ್ದು- ಬಹು ಕೋಪಿಸಿ. * * * * * * *

ಫಣಿರಾಡ್ಭೂಷಣಭಕ್ತಮಂದಿರದ- ಶಿವಭಕ್ತರ ಮನೆಯ, ಕೀಳಲ್ಗೊಂಡು- ಆಶ್ರಯವಂ ಹೊಂದಿ, ಪಟ್ಟು- ಮಲಗಿ, ಬಲ್ಸೊಣಗಂಗಾದೊಡಂ- ಬಲವಾದ ನಾಯಿಗಾದರೂ, ಸಾರ್ದು- ಸಮೀಪವಂ ಹೊಂದಿ, ಮೇಗಣ- ಇದರ ಮುಂದಣ, ಗುಣಶೂನ್ಯಸ್ಥಿತಿವೆತ್ತು- ಸ್ವಲ್ಪವಾದರೂ ಗುಣವಿಲ್ಲದಿರುವಿಕೆಯಂ ಹೊಂದಿದ. ... ... ... ||೪೦||

ಉ ॥ ವೇದಶಿರೋನಿರೂಪಿತ ಮೆನಿಪ್ಪ ವಿಭೂತಿಯ ನಕ್ಷಮಾಲೆಯುಂ । ಸಾದರಮಾನ ಲೊಲ್ಲದೆ ಗೋಪಿಯು ದುರ್ಮಲಮಂ ಸರೋಜಬೀ ॥ ಜಾದಿಮಣಿಸ್ರಜ ಗಳನೆ ತಾಳ್ದಿಪಿ ರಾಶ್ರುತಿಸಿದ್ಧಶಂಭುಪಾ । ದೋದಕಸುಪ್ರಸಾದಮ ನಿಂ ತೊರೆ ದುಂಡಪಿ ರನ್ಯಶೇಷಮುಂ ॥ ... ... ... ... ೪೧

ಕಂ ॥ ಶಿವಪಿಕೋಥ್ಯೇಯ ಎನು । ತ್ತವಿಕಲವೇದೋಕ್ತಿ ಯುಲಿಗು ಮುಭವನ ನುಳಿದೀ ॥ ಭವಭಾರಿದೇವತತಿಯಂ । ಲವೆ ಜಾನಿಪಿ ರೇಕೆ ನಿಮಗೆ ವೈದಿಕನಾಮಂ ॥ ೪೨

ಕಂ ॥ ಬ್ರಾಹ್ಮಣ ನಪ್ಪಂ ಜಗದೊಳ್ । ಬ್ರಹ್ಮಮನರಿದಾತ ನಭವನೇ ಜಗೆಯೆ ಪರಾ ॥ ಬ್ರಹ್ಮಂ ಬ್ರಹ್ಮಾಚರತಿ । ಬ್ರಾಹ್ಮಣ ಎಂಬಾಗಮೋಕ್ತಿಯಿಂ ದಿದು ಸತ್ಯಂ ॥ ೪೩

---

* ವೇದಶಿರೋನಿರೂಪಿತಂ- ಜಾಬಾಲಾದ್ಯುಪನಿಷತ್ತುಗಳಿಂದ ಹೇಳಲ್ಪಟ್ಟಿರುವದು, ಆನಲೊಲ್ಲದೆ- ಧರಿಸುವದಕ್ಕೆ ಇಚ್ಛೈಪಡದೆ, ಗೋಪಿಯು- ಗೋಪಿಕಾಂಗನೆಯ, ದುರ್ಮಲಮಂ- ಕೆಟ್ಟಮಲವನ್ನು, ಸರೋಜಬೀಜಾದಿಮಣಿಸ್ರಜಂಗಳನೆ- ತಾವರೆಯ ಬಿತ್ತವೇ ಮೊದಲಾದ ಮಣಿಗಳ ಮಾಲಿಕೆಗಳನ್ನು, ತಾಳ್ದಿಪಿರ್- ಧರಿಸುವಿರಿ, † ಆಶ್ರುತಿಸಿದ್ಧಶಂಭುಪಾದೋದಕಸುಪ್ರಸಾದಮಂ- ಆ ವೇದವಚನ ಸಿದ್ಧವಾದ ಶಿವನ ಪಾದತೀರ್ಥಪ್ರಸಾದಗಳನ್ನು, ತೊರೆದು-ಬಿಟ್ಟು, ಅನ್ಯಶೇಷಮಂ-ಇತರ ದೇವತೆಗಳ ಉಚ್ಛಿಷ್ಟವನ್ನು. ॥೪೧॥

* ಶಿವಪಿಕೋಥ್ಯೇಯಃ, ಅವಿಕಲವೇದೋಕ್ತಿ- ವ್ಯತ್ಯಸ್ತವಾಗದೇಇರುವ ಶ್ರುತಿವಚನವು, ಭವಭಾರಿದೇವತತಿಯಂ-ಜನನಮರಣಾತ್ಮಕವಾದ ಸಂಸಾರದ ಭಾರವುಳ್ಳ ವಿಷ್ಣುಬ್ರಹ್ಮಾದಿದೇವತೆಗಳಗುಂಪನ್ನು. ॥೪೨॥

* ಬ್ರಹ್ಮಮಂ- ಪರಬ್ರಹ್ಮವನ್ನು, ಅರಿದಾತಂ- ತಿಳಿದವನು, ಬ್ರಹ್ಮಾಚರತಿಬ್ರಾಹ್ಮಣಃ- ಬ್ರಾಹ್ಮಣನು ಬ್ರಹ್ಮನನ್ನನುಸರಿಸುವನು. ... ... ... ॥೪೩॥

---

* ಭೂತ್ಯೈನಪ್ರಮದಿತವ್ಯಂ॥ ಸರ್ವಂಹವಾಇದಂಭಸ್ಮ ॥ ಸಪಿಷಭಸ್ಮಜ್ಯೋತಿಃ ॥ ತಿರ್ಯಕ್ತಿಸ್ರೋರೇಖಾಃಪ್ರಕುರ್ವೀತವ್ರತಮೇತಚ್ಛಾಂಭವಂ ॥ ಮೊದಲಾದ ವಾಕ್ಯಗಳು ಭಸ್ಮಪ್ರಾಶಸ್ತ್ಯತದ್ಧಾರಣಾದಿಬೋಧಕಗಳು. ರುದ್ರಸ್ಯನಯನಾ ದುತ್ಪನ್ನಾ ರುದ್ರಾಕ್ಷಾಇತಿಲೋಕೇಖ್ಯಾಯಂತೇ ಸದಾಶಿವಸ್ಸಂಹಾರಕಾಲೇ ಸಂಹಾರಂ ಕೃತ್ವಾ ಸಂಹಾರಾಕ್ಷಂ ಮುಕುಳೀಕರೋತಿ ತನ್ನಯನಾಜ್ಜಾತಾರುದ್ರಾಕ್ಷಾ ಇತಿ ಹೋವಾಚತಸ್ಮಾದ್ರುದ್ರಾಕ್ಷತ್ವಮಿತಿರುದ್ರಾಕ್ಷೇ ವಾಗ್ವಿಷಯೇ ಕೃತೇ ದಶಗೋಪ್ರದಾನೇನ ಯತ್ಫಲಮವಾಪ್ನೋತಿತತ್ಫಲಮಶ್ನುತೇತ್ಯಾದಿಬೃಹಜ್ಜಾಬಾಲಾದ್ಯುಪನಿಷದ್ವಾಕ್ಯಗಳು ರುದ್ರಾಕ್ಷಪ್ರಾಶಸ್ತ್ಯಾದಿಬೋಧಕಗಳು.

† ರುದ್ರೇಣಾತ್ತಮಶ್ನಂತಿರುದ್ರೇಣಪೀತಂಪಿಬಂತಿ ರುದ್ರೇಣಾಘ್ರಾತಂ ಜಿಘ್ರಂತಿ । ತಸ್ಮಾದ್ಬ್ರಹ್ಮಣಾಃ ಪ್ರಶಾಂತಮನಸೋ ವಿದ್ವಾಂಸೋ ನಿರ್ಮಾಲ್ಯಮೇವ ಭಕ್ಷಯಂತಿ ನಿರ್ಮಾಲ್ಯಮೇವಾಶ್ನೀಯಾತ್ ಎಂಬ ಜಾಬಾಲೋಪನಿಷದ್ವಾಕ್ಯವೂ, ತ್ರಿಗುಣಾನ್ನತಮಶ್ನೀಯಾದ್ಯದಿಪಾಪಾಚ್ಛಿವಾನರ್ಪಿತಂ ಭುಂಕ್ಷ್ವೇತದೇನೋಭುಂಕ್ಷ್ವೇ ವಕ್ರಿಮಿಂ ಭುಂಕ್ಷ್ವೇ ಮಲಂ ಭುಂಕ್ಷ್ವ ಅಘಂ ಭುಂಕ್ಷ್ವಾಧೋಗಚ್ಛ ತ್ಯಧೋಗಚ್ಛತಿ ಎಂಬ ಕಠವಲ್ಲ್ಯುಪನಿಷದಾದಿವಚನಗಳು ಶಿವಪ್ರಸಾದಪಾದೋದಕಪ್ರಾಶಸ್ತ್ಯಬೋಧಕಗಳು. ... ॥೪೧॥

* ಕಾರಣಂತುಧ್ಯೇಯಸ್ಸರ್ವೈಶ್ವರ್ಯಸಂಪನ್ನಶ್ಶಂಭುರಾಕಾಶಮಧ್ಯೇಧ್ರುವಂ । ಶಿವಪಿಕೋಥ್ಯೇಯಶ್ಶಿವಂಕರಸ್ಸರ್ವಮನ್ಯತ್ಪರಿತ್ಯಜ್ಯ ಎಂದು ಅಥರ್ವಶಿಖಾವಚನಂ. ... ॥೪೨॥

* ಯೋವಿದುರ್ಬ್ರಹ್ಮವಾಚ್ಯಂ ಶ್ರೀರುದ್ರಂತೇ ಬ್ರಾಹ್ಮಣಾಃ ॥ ಎಂಬುವದು ಬ್ರಹ್ಮವನರಿದವಂ ಬ್ರಾಹ್ಮಣನೆಂಬುದರೊಳ್ಪ್ರಮಾಣಂ. ... ... ... ॥೪೩॥

ಮತ್ತಂ ॥ ಉಪನಿಷದ್ವಾಕ್ಯಂ ಪರಜೊಮ್ಮಮೆಂಬುದು ಋತಂಸತ್ಯಂಪರಂಬ್ರಹ್ಮಮುಂ। ತ್ರ ಮಿದುಂ ವೇದಶಿರಸ್ಸಹಾಯ ಬಲದಿಂ ತತ್ಕಾರಣಂ ಬ್ರಹ್ಮವಿ ॥ ಷಣ್ಮುಖ ಜೀವ ರು ಮೇಶ ನೋರ್ವನೆ ಪರಬ್ರಹ್ಮಂ ದ ಲೆಂಬೀವಿವೇ । ಕ ಮದೆಂದುಂ ನಿಮಗಿಲ್ಲದಿರ್ಪ ಕತದಿಂ ಬ್ರಾಹ್ಮಣ್ಯ ಮೆಂತಕ್ಕುಮೋ ॥ ... ... ... ೪೪

ಕಂ ॥ ಪರಮಾತ್ಮಂ ಪರ ಜೊಮ್ಮಂ । ಪರಮೇಶ ನೆನಿ ಪ್ಪನನ್ಯಸಾಧಾರಣಭಾ ॥ ಸು ರವರಮನಾಮ ಮಖಿಳಾ । ಮರಪಶುಪತಿಶಂಭು ಗಲ್ಲ ದನ್ಯರ್ಗೊಳವೆ ॥ ೪೫

ಕಂ ॥ ಭಾವಿಪ್ಪೊಡೆ ವೇದತತ್ವಂ । ದೇವೇಷು ಬ್ರಾಹ್ಮಣೋಽಹಿ ಎ ಬುದರಿಂ ಗೌ ॥ ರೀವರ ನಾದಿಬ್ರಾಹ್ಮಣ । ನಾವಿಭುವಂ ಬ್ರಾಹ್ಮಣಂಗೆ ಸೇವಿಪ್ಪು ದುಚಿತಂ ॥ ೪೬

ಕಂ॥ ಇಪ ನುಳಿ ದಧಮಾಮರರಂ । ಪದೆ ದರ್ಚಿಪ ಶಂಭುನಿಪ್ಪ ಗಾಯತ್ರಿಯ ನೋ॥ ರ್ಕ್ಕ ದ ಲರ್ಕಪರಮ ನೆಸಗುವ । ತುದುಕುಳಿಗ ಳ್ನಿಮಗೆ ಸಲ್ವುದೇ ಬ್ರಾಹ್ಮಣ್ಯಂ ॥ ೪೭

ವ ॥ ತತ್ಕಾರಣಂ (ಶಿವಭಕ್ತಚರಾಗಾರದಾಸೀಭುಕ್ತೋಜ್ಝಿತಾಶನಾಃ । ಶುನಕಾ

---

ವೇದಶಿರಸ್ಸಹಾಯಬಲದಿಂ- ಉಪನಿಷತ್ತಿನ ಸಹಾಯಶಕ್ತಿಯಿಂದ, ಜೀವರ್- ಜೀವಾತ್ಮರು, ವಿವೇಕಂ- ತಿಳುವಳಿಕೆಯು, ಕತದಿಂ- ಕಾರಣದಿಂದ. ... ... ।೪೪॥

ಅಖಿಳಾಮರಪಶುಪತಿಗೆ— ಅಖಿಳಾಮರ- ಸಕಲ ದೇವತೆಗಳೆಂಬ, ಪಶು- ಪಶುಗಳಿಗೆ, ಪತಿಗೆ- ಸ್ವಾಮಿಯಾದ ಶಿವನಿಗೆ. ... ... ... ... ।೪೫॥

* ತ್ವಂದೇವೇಷುಬ್ರಾಹ್ಮಣೋಽಸಿ- ನೀನು ದೇವತೆಗಳಲ್ಲಿ ಬ್ರಾಹ್ಮಣನಾಗಿದ್ದೀಯೆ, ಆವಿಭುವಂ- ಬ್ರಾಹ್ಮಣನಾದ ಆ ಶಿವನನ್ನು. ... .. .. ।೪೬॥

ಅಧಮಾಮರರಂ- ನೀಚರಾದ ದೇವತೆಗಳನ್ನು, ಅರ್ಚಿಪ, ಅಂದರೆ (ಪರಾಶರಪುರಾಣದಲ್ಲಿ ತತೋವಿಪ್ರಸ್ಯಸಂಬಂಧಶ್ಚ ವಸ್ಯೈವಹಿಯುಜ್ಯತೆ । ಸಂಕರಾಸ್ಸರ್ವದೇವಾಶ್ಚ ವೃಷಲಸ್ತುಪುರಂದರಃ । ಪಿತಾಮಹಸ್ತುವೈಶ್ಯಸ್ಸ್ಯಾತ್ ಕ್ಷತ್ರಿಯಃ ಪರಮೋಹರಿಃ । ಬ್ರಾಹ್ಮಣೋಭಗವಾನ್‌ರುದ್ರಸ್ಸರ್ವೇಷಾಮುತ್ತಮೋತ್ತಮಃ । ಎಂಬುವದರಿಂದ ವಿಷ್ಣುಬ್ರಹ್ಮಾದಿಗಳು ಬ್ರಾಹ್ಮಣೇತರ ವರ್ಣದವರಾಗಿರುವರು, ಬ್ರಾಹ್ಮಣನಾದವನು ವಿಷ್ಣುಬ್ರಹ್ಮಾದಿಗಳಂ ಪೂಜಿಸೆ ವದರಿಂ ತಮಗಿಂತಲೂ ನೀಚವರ್ಣದವರಂ ಪೂಜಿಸಿದಂತಾಗುವದರಿಂದ ಮೇಲ್ಕಂಡ "ಬ್ರಾಹ್ಮಣೋವೈಬ್ರಾಹ್ಮಣಮುಪಧಾವತಿ" ಎಂಬ ಸಾಮಶ್ರುತಿ ವಚನದಂತೆ ವಿಷ್ಣ್ವಾದಿಗಳಂ ಪೂಜಿಸುವವರಲ್ಲ ಬ್ರಾಹ್ಮಣ್ಯವಿಲ್ಲವೆಂತಲೇ ಭಾವವು) ತುದುಕುಳಿಗಳ್- ನೀಚರು. ।೪೭॥

ಶಿವಭಕ್ತಚರಾಗಾರದಾಸೀಭುಕ್ತೋಜ್ಝಿತಾಶನಾಃ— ಶಿವಭಕ್ತಚರ- ವೀರಶೈವನಾದ ಜಂಗಮನ, ಅಗಾರ- ಮನೆಯಲ್ಲಿರುವ, ದಾಸೀ- ಗೌಡಿಯಿಂದ, ಭುಕ್ತ- ಊಟಮಾಡಲ್ಪಟ್ಟು, ಉಜ್ಝಿತ- ಬಿಡಲ್ಪಟ್ಟ ಶೇಷವೇ, ಅಶನಾಃ- ಆಹಾರವಾಗುಳ್ಳ, ಶುನಕಾಃ- ನಾಯ್ಗಳು, ಸೂಕರಾಃ- ಹಂದಿಗಳು, ಯಾಂಯಜೂಕಸ್ಯಯಾಗತಿಂ- ಯಜ್ಞವಂ ಮಾಡಿದವನಿಗೆ ಉಂಟಾಗುವ ಗತಿಯನ್ನು, ಯಾಂತಿ- ಹೋಂದುತ್ತವೆ, ಅದರಿಂ- ಆ ಪ್ರಸಾದವನ್ನುಣ್ಣುವದರಿಂದ, ಶುದ್ಧಬುದ್ಧಿಯಂ- ಪರಿಶುದ್ಧವಾದ ಮತಿಯನ್ನು, ಶಾಪಾಗ್ನಿದಗ್ಧರ್- ಗೌತ

---

* ಋತಂಸತ್ಯಂಪರಂಬ್ರಹ್ಮ ಪುರುಷಂಕೃಷ್ಣಪಿಂಗಳಂ । ಊರ್ಧ್ವರೇತಂವಿರೂಪಾಕ್ಷಂ ವಿಶ್ವರೂಪಾಯವೈನಮಃ ಎಂಬುವದು ಶಿವನೇಪರಬ್ರಹ್ಮನೆಂಬುದರೊಳ್ಪ್ರಮಾಣಂ. ... ।೪೪॥

* ಸಾಮವೇದದಲ್ಲಿ ॥ ತ್ವಂದೇವೇಷುಬ್ರಾಹ್ಮಣೋಸ್ಯಹಂಮನುಷ್ಯೇಷುಬ್ರಾಹ್ಮಣಃ । ಬ್ರಾಹ್ಮಣೋವೈಬ್ರಾಹ್ಮಣಮುಪಧಾವತ್ಯುಪಧಾವಾಮಿ ಎಂದು ಪ್ರಮಾಣಂ. ... ... ।೪೬॥

ಸ್ಸೂನ್ಕರಾಯಾಂತಿಯಾಯುಜೂಕಕ್ರಿಯಾಗತಿಂ ) ಎಂಬ ಮಕುಟಾಗಮಶಿವವಚನಪ್ರಮಾಣದಿಂ ಶಿವಭಕ್ತ್ತಗೃಹದಾಸೀಜನಮುಂಡುಳುಪಿದುದು ಕೊಂಡದರಿ ನೋಡದ ಶುದ್ಧಬುದ್ಧಿಯ ನಾಳ್ದ ಶುನಕ ನೆಂತು ನಿಮ್ಮಂ ಮುಟ್ಟುವುಗು ಮೆನೆ ಕೇಳ್ದು ಶಾಪಾಗ್ನಿವಿದಗ್ಧ ಕ್ಮಗುಳ್ದ ಕೋಪಾಗ್ನಿದಗ್ಧರಾಗಿ ॥ * * * * * * *

ಉ ॥ ಆಡಿದೆ ಲೇಸ ನಿಂ ದಮುವ ಮೂರ್ಖಶಿಖಾಮಣಿ ನಾಯ್ಗಳಿಂದೆ ಕೀ । ಳ್ಮಾಡಿದೆ ಯೆಮ್ಮನಾಗಮವಿದಗ್ರುಜರಂ ನೆರೆ ನಿನ್ನ ತೊಳ್ತ್ತು ಮುಂ ॥ ಮಾಡಿದ ತಪ್ಪ ನೋಸರಿಸಿ ನಿನ್ನೊಡವೇಳ್ದೊಡೆ ತತ್ಕಟೂಕ್ತಿಯಿಂ । ನೀಡೆನೆ ನಿಷ್ಠುರೋಕ್ತಿಗಳ ನೆಂದೆಗ ಡೆಲ್ಲರ ಮುಂದೆ ಕೋರ್ವಿನಿಂ ॥ ... ... ... ... ೪೮

ಕಂ ॥ ಬಿಸಿಲುಪಟಳಮಂ ಕಳೆಯ । ಲ್ಪೊಸಬನಮಂ ಪುಗೆ ದವಾಗ್ನಿ ಕೊಂಡವ್ರೊ

---

ಮಾದಿಗಳ ಶಾಪವೆಂಬ ಬೆಂಕಿಯಿಂದ ಸುಡಲ್ಪಟ್ಟವರು. (ಅಂದರೆ ಒಂದಾನೊಂದಾವರ್ತಿ ೧೨ ವರ್ಷಕಾಲಿಕ ಮಹಾ ದೊಡ್ಡಕ್ಷಾಮವು ಪ್ರಾಪ್ತವಾಗಿ ಮಳೆ ಬೆಳೆಗಳಾಗುವದಿಲ್ಲವೆಂಬುದಂ ದಿವ್ಯಜ್ಞಾನಿಗಳಾದ ಗೌತಮರ್ಷಿಗಳು ತಿಳಿದು ತತ್ಪೂರ್ವದಲ್ಲೇ ಈಶ್ವರನಂ ಕುರಿತು ತಪಸ್ಸಂ ಮಾಡಿ ತಮ್ಮಾಶ್ರಮದ ಸುತ್ತಲೂ ಮಳೆ ಬೆಳೆಯು ಸಮೃದ್ಧಿಯಾಗಿರುವಂತೆ ಪರಮೇಶ್ವರನಿಂ ವರವಂ ಪಡೆದಿರಲು, ಆ ಬರಗಾಲದಲ್ಲಿ ಅನೇಕ ಮುನುಷ್ಯಾದಿಪ್ರಾಣಿಗಳು ಅವರ ಆಶ್ರಮದಲ್ಲಿ ಬಂದು ಸೇರಿಕೊಂಡು ಸುಖವಾಗಿ ಜೀವಿಸುತ್ತಾ ಆ ಬರಕ್ಷಾಮವಂ ಕಳೆದರು. ಅನಂತರ ರಾಜ್ಯವೆಲ್ಲವೂ ಸುಭಿಕ್ಷವಾದಮೇಲವರು ತಮ್ಮತಮ್ಮ ಪೂರ್ವಸ್ಥಾನವಂ ಸೇರಿಕೊಳ್ಳುವದಕ್ಕೆ ಪ್ರಯತ್ನಪಡುವಾಗ್ಯೆ ಹಾರ್ವರು ಕೇವಲ ಶಿವವ್ರತನಿಷ್ಠರಾದ ಆ ಗೌತಮರ ಆಚಾರಪ್ರಭಾವಾದಿಗಳಿಗಸೂಯೆಗೊಂಡು ಅವರಲ್ಲಿ ಯಾವದಾದರೊಂದು ದೋಷವನ್ನಾರೋಪಿಸಿ ಹೋಗಬೇಕೆಂದು ಯೋಚಿಸಿ ಒಂದು ಮಾಯಾಗೋವನ್ನು ನಿರ್ಮಿಸಿ ಅವರ ಬಳಿಯಲ್ಲಿ ನಿಲ್ಲಿಸಿರಲು, ಬಹು ಕೃಶವಾಗಿ ಬಳಲಿ ನಿಂತಿರುವ ಆ ಹಸುವಂ ನೋಡಿ ಗೌತಮರು ತಮ್ಮ ಹಸ್ತದಿಂ ಸವರಲು ಕೂಡಲೇ ಅದು ನೆಲದಮೇಲೆ ಬಿದ್ದು ಪ್ರಾಣವಂ ಬಿಟ್ಟಿತು. ಆಗಾಪಾರ್ವರು ಅವರಂ ಗೋಹತ್ಯಾದೋಷವಂ ಮಾಡಿದವನೆಂದು ಒದೆದು ಕೂಡಲೇ ಆ ಆಶ್ರಮವಂಬಿಟ್ಟು ಹೊರಡುವದಕ್ಕಾರಂಭಿಸಲು. ಗೌತಮರ್ಷಿಗಳು ಅದನ್ನೆಲ್ಲವನ್ನೂ ಜ್ಞಾನದೃಷ್ಟಿಯಿಂ ತಿಳಿದು ಮಾಡಿದುಪಕಾರಕ್ಕೆ ಬದಲಾಗಿ ಅಪಕಾರವಂ ಮಾಡಿ ಲೋಕಾಪವಾದಾರೋಪಕರಾದ ಆ ನೀಚರಂ ಕುರಿತು ಶಾಪವನ್ನಿತ್ತರು. ಏನೆಂದರೆ:— ಸೂತಸಂಹಿತೆಯಲ್ಲಿ ॥ ವಿಷ್ಣ್ವಾದಿದೇವತಾಸ್ಸರ್ವಾವಿಶಿಷ್ಟಾಶ್ಶಂಕರಾದಿತಿ । ಭ್ರಾಂತಿವಿಜ್ಞಾನಸಂಪನ್ನಾಭವೇತಬ್ರಾಹ್ಮಣಾಧಮಾಃ ॥ ವರ್ತುಲಾಶ್ವೇತ್ಥಪತ್ರಾರ್ಧ ಚಂದ್ರಾದೀಪಾದಲಿಂಗಿನಃ । ಭವೇತಶ್ರದ್ಧಯಾಸಾರ್ಧಲಲಾಟೇ ಬ್ರಾಹ್ಮಣಾಧಮಾಃ । ವೇದಬಾಹ್ಯೇಷುತಂತ್ರೇಷು ಪಾಂಚರಾತ್ರಾದಿಷುದ್ವಿಜಾಃ । ಭವೇತದೀಕ್ಷಿತಾಯೂಯಂಯುಷ್ಮಾಕಂವಂಶಜಾಸ್ತಥಾ । ಮಹಾದೇವಸ್ಯ ಚೋತ್ತಮೈಸ್ತ್ರಿಪುಂಡ್ರೋದ್ಧೂಳನಾದಿಷು । ರುದ್ರಾಕ್ಷಧಾರಣೇರುದ್ರಲಿಂಗಸ್ಯೈವತುಪೂಜನೇ ॥ ರುದ್ರಾಲಯದಿದೃಕ್ಷಾಯಾಂರುದ್ರಯಾತ್ರಾದಿಕರ್ಮಸು । ಯದ್ಯತ್ತುರುದ್ರಸಂಬಂಧಿತತ್ರತತ್ರಾಪಿದುರ್ಜನಾಃ । ಭವೇತವಿಮುಖಾಯೂಯಂಸರ್ವದಾಬ್ರಾಹ್ಮಣಾಧಮಾಃ ॥ ಇತ್ಯಾದಿ.

ಕೀಳ್ಮಾಡಿದೆ- ಕಡಮೆಮಾಡಿದೆ, ಆಗಮವಿದಗ್ರುಜರಂ- ವೇದಪ್ರಜ್ಞರಲ್ಲಿ ಶ್ರೇಷ್ಠರಾದವರನ್ನು, ತೊಳ್ತು- ದಾಸಿಯು, ಓಸರಿಸಿ- ಒಂದುಕಡೆಗಿಕ್ಕಿ, ತತ್ಕಟೂಕ್ತಿಯಿಂ- ಆ ಕಠಿಣವಾದ ಮಾತಿಗಿಂತಲೂ, ನೀಡೆನೆ- ಅಧಿಕವೆನ್ನುವಹಾಗೆ. ... ... ... ... ॥೪೮॥

ಉಪಟಳಮಂ- ಉಪದ್ರವನ್ನು, ದವಾಗ್ನಿ- ಕಾಳ್ಕಿಚ್ಚು, ಕೊಂಡವೊಲ್- ಗ್ರಹಿಸಿದಹಾಗೆ, ಬಿರುವಾತಿ

ಲಾವ ॥ ತ್ರುಸಿರ ಬದೇಃ ಬಿರ.ವಾಃತಿನ । ಪಸರಂ ಮಾಣ್ಗೆಮ ಸಮಸ್ತರುಂ ಕೇಳ್ವನೆಗಂ ॥

ಕಂ ॥ ಓದಿಸು ನಿನ್ನಯ ಸೊಣಗನಿ । ನಾದಂ ಪದಪಾಳಿ ಜಟೆಗ ಳಮರ್ದಿರೆ ಮಿಸುಪಾ ॥ ವೇಡನು ಸೀಕ್ಷಿಪೆ ವೆನೆ ಸೊ । ವೋದಂ ಮಿಗೆ ನಗುತೆ ಶರಣ ನುಡಿಂಶಿದಂ ॥ ೩೦

ಕಂ ॥ ಇದು ಗಹನಮೆ ಮದ್ವಕ್ತ್ರ । ಸದನಮ ನೆಡೆವಿಡದೆ ಕಾವ ಕುರ್ಕುರತತಿಗು ॥ ರ್ವಿದ ವೇದ ವೊನಕೆ ವಾಡ । ಪ್ಪುದರಿಂ ಧೀಸುನಿಗೆ ವೇದ ವೋದುವ ಕಜ್ಜಂ ॥ ೩೧

ವ ॥ ಎಂದು ಗುರುಧ್ಯಾನಪರಾಯಣ ನಾಗಿ ನಿಜಗೃಹದ್ವಾರದೊ ಳ್ಪಟ್ಟಿರ್ದ ಜಾಮಿಲನಂ ಪ್ರಸನ್ನದೃಷ್ಟಿಯಿಂ ನೋಡೆ ವೇದಪಿತಾಮಹ ನೆಂಬಪೆಸರಿ ನಂಗುಲಿಯಿಂ ಚಿಟುಂಕನಿಟ್ಟು ಕರೆದು ॥ * * * * * * * *

ಉ ॥ ಉಚ್ಛ್ರಿಶಿವಪ್ರಸಾದಪರಿಲಬ್ಧಜಪಾವನಭಾವನಪ್ರೂರ್ಣಭಾ । ಸ್ವಚ್ಛಿದಖಂಡ ಸುಪ್ರಣವಮಂಗಳವಿಗ್ರಹಲಿಂಗಭಾವನಾ ॥ ಸಚ್ಚರಿತಪ್ರಸನ್ನ ಸಕಲಶ್ರುತಿರತ್ನಸಮುದ್ರ ಬರ್ಪುದು । ಚ್ಛುಚ್ಛೆರೆ ಯೆಂದು ತಾಂ ಕರೆದ ನಂತಪ ನಾಮದನಾರಿಸನ್ನಿಭಂ ॥ ೩೨

ವ ॥ ಎಂದು ಕರೆಯುದು ಮಾಸೊಣಗ ನೇಳ್ತಂದು ಪರಪಾಜಿಜನಮಂ ಬಡಿಯ ಲ್ಕಸೆಯಂ ಚಾಲಿಪಂತೆ ಬಾಲಮ ನಾಡಿಸುತ್ತಂ ಭಕ್ತಿಭರದಿ ನಡಿಗೆರಗಿ ನಿಲ್ವಿನ ಮದರ ವೊಗಮ ನಾಮಹಿಮಾಕರು ನೋಡಿ ನಿಜಕೃಪಾತರಂಗಿಣಿಯೊ ಳೋಲಾಡಿಸುತ್ತ ಮಾವವೇದದೊಳಾದೊಡ ವೊಂದೆಡೆಯೊ ಳೋಂದುವಾಕ್ಯಮ ನೆತ್ತಿ ತಳ್ವ ದೋದೆಂಬುದು ಮಾಗ ಳಾರುದ್ರಾಂ

---

ನ- ಕಠಿಣವಾದ ಮಾತಿನ, ಪಸರಂ ಸಮೂಹವು, ಮಾಣ್ಗೆಮ-ಹಾಗಿರಲಿ, ಕೇಳ್ವನೆಗಂ-ಕೇಳುವಹಾಗೆ. ।೪೯॥

ಆದಂ- ಅತ್ಯಂತವಾಗಿ, ಪದಪಾಳಿಜಟೆಗಳ್- ಉದಾತ್ತಾದಿಸ್ವರಕರಣಪೂರ್ವಕವಾದ ಅಧ್ಯಯನಕ್ರಮಗಳು. ... ... ... ... ... ... ।।೫೦।।

ಗಹನಮೆ- ದೊಡ್ಡದೇ ? ಸದನಮಂ- ಮನೆಯನ್ನು, ಕಾವ- ಕಾದುಕೊಂಡಿರುವ, ಕುರ್ಕುರತತಿಗೆ- ನಾಯ್ಗಳಸಮೂಹಕ್ಕೆ, ಒನಕೆವಾಡು- ಒನಕೆಯಿಂದ ಧಾನ್ಯವಂ ಕುಟ್ಟುವಾಗ ಹೇಳುವ ಸುವ್ವಿಯ ಹಾಡು, ಈಸುನಿಗೆ- ಈ ನಾಯ್ಗೆ. ... ... ... ।೫೧॥

ಪಟ್ಟು- ಮಲಗಿ, ಜಾಮಿಲನಂ- ನಾಯನ್ನು, ಪ್ರಸನ್ನದೃಷ್ಟಿಯಿಂ- ನಿರ್ಮಲವಾದ ನೋಟದಿಂದ, ಚಿಟುಂಕಂ- ಚಿಟುಕಿಯನ್ನು. * * * * * * * * *

ಉಚ್ಚಶಿವಪ್ರಸಾದಪರಿಲಬ್ಧಜಪಾವನಭಾವಪೂರ್ಣ- ಉಚ್ಚ- ಉನ್ನತವಾದ, ಶಿವಪ್ರಸಾದ- ಶಿವಾನುಗ್ರಹದಿಂದ, ಪರಿಲಬ್ಧ- ಪಡೆಯಲ್ಪಟ್ಟ, ಜಪ- ಶಿವಮಂತ್ರಾನುಷ್ಠಾನವನ್ನು, ಅವನ- ಪೋಷಿಸುವ, ಭಾವ- ಮನೋಭಿಪ್ರಾಯದಿಂದ, ಪೂರ್ಣ- ತುಂಬಿರುವವನೇ ! ಭಾಸ್ವಚ್ಛಿದಖಂಡಸುಪ್ರಣವಮಂಗಳವಿಗ್ರಹಲಿಂಗಭಾವನಾಸಚ್ಚರಿತ- ಭಾಸ್ವತ್- ಪ್ರಕಾಶಿಸುವ, ಚಿದಖಂಡ- ಅವಿಚ್ಛಿನ್ನವಾದ ಜ್ಞಾನವುಳ್ಳ, ಸುಪ್ರಣವ- ಸವಿಶೇಷವಾದ ಓಂಕಾರವೇ, ಮಂಗಳ- ಶುಭಕರವಾದ, ವಿಗ್ರಹ- ಶರೀರವಾಗುಳ್ಳ- ಲಿಂಗ- ಶಿವಲಿಂಗದ, ಭಾವನಾ- ಧ್ಯಾನದಿಂದ, ಸಚ್ಚರಿತ- ಒಳ್ಳೆಯದಾದ ನಡತೆಯುಳ್ಳವನೇ, ಪ್ರಸನ್ನ ಸಕಲಶ್ರುತಿ- ... - ನಿರ್ಮಲಗಳಾದ ಸಮಸ್ತ ವೇದಗಳೆಂಬ ರತ್ನಗಳಿಗೆ ಸಮುದ್ರನಾದವನೇ ! ಉಚ್ಚುಚ್ಚೆರೇ ! (ನಾಯನ್ನು ಕರೆಯುವ ಧ್ವನಿ) ಅಮದನಾರಿಸನ್ನಿಭಂ- ಶಿವಸದೃಶನಾದ ಆ ಕಲ್ಲಿನಾಥನು. ... ... ।೫೨॥

ಆಸೊಣಗಂ- ಆ ನಾಯು, ಬಡಿಯಲ್- ಹೊಡೆಯುವವಕ್ಕೆ, ಕಸೆಯಂ- ಚಾವಟಿಯನ್ನು, ಚಾಲಿಪಂತೆ- ಅಲ್ಲಾಡಿಸುವಹಾಗೆ, ನಿಜಕೃಪಾತರಂಗಿಣಿಯೊಳ್- ತನ್ನ ದಯೆ ಯೆಂಬ ಹೊಳೆಯಲ್ಲಿ, ಆರುದ್ರಾಂಶೆ

ಶಸಂಭೂತಂ ಪದ್ಮಾಸನಮ ನವಷ್ಟಂಭಿಸಿ ಋಜುಭಾವದಿಂ ಕುಳ್ಳಿರ್ದು ಹೃದಯಕಮಳಕರ್ಣಿಕಾಗ್ರದೊಳ್ಗುರುಸ್ವರೂಪಪರಶಿವನಂ ಜಾನಿಸಿ ಮೂಲಾಧಾರಾಕುಂಚನಂಗೆಯ್ದು ॥

ಕಂ ॥ ರವಿಶಶಿಗತಿಯಂ ತಡೆ ದಾ । ಪವನನ ನಾಮಧ್ಯಮಾರ್ಗದೊಳ್ಪತ್ತಿಸಿ ಬಿಂ ॥ ದುವಿಮಳನಾದಲಯಾನ್ವಿತ । ಸವಿಶೇಷಪ್ರಣವಮಂ ಸಮುಚ್ಚರಿಸುತ್ತಂ ॥ ೫೩

ಕಂ ॥ ಪಿರಿದಾಶ್ಚರ್ಯದೆ ಪೊಗಳು । ತ್ತಿರೆ ಭೂಸುರತತಿ ಯುದಾತ್ತ ಮನುದಾತ್ತಮು ಮಾ ॥ ಸ್ವರಿತಂ ಪ್ರಚಯಸ್ವರ ಮಮು । ರ್ದಿರೆ ಪದಪಾಳಕ್ರಮಂಗಳಂ ಪರಿವಿಡಿಯಿಂ॥

ಕಂ ॥ ತಿಳಿ ದನುಯೋಗಿಸಿ ರಾಗಿಸಿ । ವಿಳಾಸದಿಂ ತಪ್ಪದಂತೆ ನಾಲ್ಕುಂವೇದಂ ॥ ಗಳೊಳೋರೊಂದೆಡೆಯ ಸಮು । ಜ್ವಳವಾಕ್ಯಮ ನೆತ್ತಿ ಸೊಣಗ ನೋದಿದು ದಾಗಳ್ ॥

ವ ॥ ಅದಂ ಕೇಳ್ದು ವಿಪ್ರರೆಲ್ಲರುಂ ತಲೆದೂಗಿ ॥ * * * *

ಕಂ ॥ ನುತಮಹಿಮ ನಿಮ್ಮ ಮಹಿಮೋ । ನ್ನತಿಯಂ ಶಿವ ನೋರ್ವನರಿವ ನಾರ್ಬಲ್ಲರೆನು ॥ ತ್ತತಿಶಯಭಯಚಕಿತರ್ವಿ । ಸ್ಮಿತಚಿತ್ತ ರ್ಕಲ್ಲಿನಾಥನಡಿ ಗೆರಗಿರ್ದರ್ ॥ ೫೬

ವ ॥ ಆಗಳ್ಮಂದಸ್ಮಿತಾಸ್ಯನಾಗಿ ವಾದಿವಾಗ್ಭಂಜನನಾಜಾಮಿಲನಂ ನೋಡಿ ॥ *

ಕಂ ॥ ಹೋ ಮಾಣ್ನಾಲ್ಗುಂ ವೇದಪಿ । ತಾಮಹ ವೇದಂಗ ಳೋದೆನುತ್ತಂ ನಿಲಿಸು ॥ ತ್ತಾಮಹಿಮಾಕರ ನದನಾ । ಭೂಮಿಸುರರಾಸ್ಯಮಂ ನಿರೀಕ್ಷಿಸು ತೆಂದಂ ॥ ೫೭

ಉ ॥ ಭೂಸುರರೆಲ್ಲ ರೀಕ್ಷಿಸಿದಿರೇ ಶಿವಭಕ್ತರ ಪೇರ್ಮೆಯಂಬಳಿ । ಕ್ಕೀಸೊಣಗಂ ಸುವರ್ಣಪುರ ದಗ್ಗದ ಸದ್ಗುರುಸಿದ್ಧರಾಮನಾ ॥ ವಾಸದ ವೇದದೇಶಿಕ ನೆನಿಪ್ಪಭಿದಾನಮ ನಾಳ್ದುಘೇರಪೋ । ದ್ಭಾಸಿತವಕ್ತ್ರ ನಪ್ಪಸುನಿ ಗಳ್ಕರ ಶಿಷ್ಯ ನೆನಿಪ್ಪ ದುರ್ವಿಯೊಳ್ ॥

ವ ॥ ಎಂದು ಪೇಳ್ದು ಮತ್ತ ಮಿಂತೆಂದಂ ॥

---

ಸಂಭೂತಂ- ಶಿವಾಂಶದಿಂ ಹುಟ್ಟಿರುವ ಆ ನಾಯು, ಪದ್ಮಾಸನಮಂ ಅವಷ್ಟಂಭಿಸಿ- ಪದ್ಮಾಸನವಂ ಹಾಕಿ ಕುಳಿತುಕೊಂಡು, ರುಜುಭಾವದಿಂ- ನೇರವಾಗಿ, ಹೃದಯಕಮಲಕರ್ಣಿಕಾಗ್ರದೊಳ್- ಮನಃಕಮಲದ ಮಧ್ಯದ ಗೆಡ್ಡೆಯ ಮೇಲ್ಗಡೆಯಲ್ಲಿ, ಮೂಲಾಧಾರಾಕುಂಚನಂಗೆಯ್ದು-ಕೆಳಗಡೆಯಲ್ಲಿರುವಆಧಾರಚಕ್ರವಂಬಿಗ್ಗಿಸಿ.

ರವಿಶಶಿಗತಿಯಂ- ಸೂರ್ಯನಾಡಿ ಚಂದ್ರನಾಡಿಯ ಗಮನವನ್ನು, ಆಮಧ್ಯಮಾರ್ಗದೊಳ್- ಆ ನಡು ನಾಡಿಯಲ್ಲಿ, ಬಿಂದುವಿಮಳನಾದಲಯಾನ್ವಿತಸವಿಶೇಷಪ್ರಣವಮಂ-ಬಿಂದುನಿರ್ಮಲವಾದ ನಾದದಗತಿಗಳಿಂ ಕೂಡಿದ ಹೆಚ್ಚಿಗೆಯ ಓಂಕಾರವನ್ನು. ... ... ... ॥೫೩॥

ಪರಿವಿಡಿಯಿಂ- ಕ್ರಮವಾಗಿ. ... ... ॥೫೪॥

ಅನುಯೋಗಿಸಿ- ಸೇರಿಸಿ, ರಾಗಿಸಿ- ಪ್ರೀತಿಸಿ, ಓರೊಂದೆಡೆಯ-ಒಂದೊಂದುಸ್ಥಳದ. ॥೫೫॥

ಅತಿಶಯಭಯಚಕಿತರ್- ಬಹು ಭೀತಿಯಿಂದ ಬೆರಗಾಗಿ. ... ॥೫೬॥

ವಾದಿವಾಗ್ಭಂಜನಂ- ಪರಮತವಾದಿಗಳ ಮಾತನ್ನು ಹಾಳುಮಾಡುವ ಕಲ್ಲಿನಾಥನು, ಮಾಣ್- ಬಿಡು, ಓದು- ಓದುವಿಕೆಯು, ಸಾಲ್ಗುಂ- ಸಾಕು. ... ... ॥೫೭॥

ಈಕ್ಷಿಸಿದಿರೇ- ನೋಡಿದಿರಾ ? ಪೇರ್ಮೆಯಂ- ಆಧಿಕ್ಯವನ್ನು, ಆವಾಸದ- ಮನೆಯ, ಅಭಿಧಾನವಂ- ಹೆಸರನ್ನು, ಉಘೇರವೋದ್ಭಾಸಿತವಕ್ತ್ರಂ- ಉಘೇ ಎಂಬ ಶಬ್ದದಿಂದ ಪ್ರಕಾಶಿಸುವ ಬಾಯುಳ್ಳದ್ದಾಗಿ, ಸುನಿಗೆ- ನಾಯಿಗೆ, ಅಳ್ಕರ- ಪ್ರೀತಿಪಾತ್ರವಾದ. ... ... ॥೫೮॥

ಮತ್ತೇ ॥ ಧರಣೀದೇವರ್ಕಳೊ ಳ್ವಾದಿಸಿ ನಿಗಮಮ ನಾರ್ಪಿಂದೆ ಡಂಬೂರೊಳಂ
ಕು । ಕುರ್ನರನಿಂದಂ ಮಾಣ ದುಂದೋದಿಸನೆ ಸಭೆಯೊಳಾದಂ ಮಹಾಕಾಳದೇವಂ ॥ ಹರ
ಭಕ್ತಾವಾಸಮಂ ಸೇವಿಪ ಶುನಕನಿಕಾಯಕ್ಕೆ ಮೇಣಂತರಿಂದಂ । ಸರಿಯಲ್ತೀವಿಪ್ರವೃಂ
ದಂ ಶರಣಮಹಿಮೆಯಂ ಕೇಳ್ವು ದಿನ್ನುಂ ನಿತಾಂತಂ ॥ ... ... ೫೯

ಮತ್ತೇ ॥ ಶಿವಚಿತ್ತಯ್ಯ ನೆನಿಪ್ಪ ನಿರ್ಪ ನಭವಶ್ರೀಪಾದಭಕ್ತಂ ಮಹೋ । ತ್ಸವ
ದಿಂ ಧಾತ್ರಿಯೊ ಳಾತ ನೋರ್ಮೆ ಸರಿಯಲ್ತೋರ್ವಂಗೆ ಕೋಟದ್ವಿಜರ್ ॥ ಶಿವಭಕ್ತಂ ಗೆ
ನು ತಣ್ಮೆ ಪಾರ್ವರೊಳೆ ವಾದಂಗೆಯ್ದು ವೇದಾಗಮಾ ; ದಿವಿಶೇಷೋಕ್ತಿಗಳಿಂದೆ ತಾಂ ಜ
ಯಿಸೆ ಸೋಲ್ತಂತೆಂದ ರಾಭೂಸುರರ್ ॥ ... ... ೬೦

ಕಂ ॥ ನುಡಿಜಾಣ್ಮೆಯಿಂದೆ ಜಯಮಂ । ಪಡೆ ವಳ ವಂತಿರ್ಕೆ ದೃಷ್ಟಮಂ ತೋ
ರ್ಪ ಧಟು ॥ ಳ್ಪೊಡೆ ತೋರಿ ಗೆಲ್ವು ದೆನೆ ಕಡು । ಸಡಗರದಿಂ ಪ್ರೊಣ್ಬು ತೋರ್ಪ ನೆಂದಾ
ಕ್ಷಣದೊಳ್ ॥ ... ... ... ... ೬೧

ತರಳವೃತ್ತಂ ॥ ಪಿರಿಯಭಕ್ತರ ಪಾದರಕ್ಷೆಯ ನೇಕಪಾತ್ರೆಯೊ ಳಿಟ್ಟು ಪಾ । ರ್ವ
ರ ನನೇಕರ ನೇಕಪಾತ್ರೆಯೊ ಳಿಟ್ಟು ತಾಂ ತೊಲೆದೂಗೆ ಸ ॥ ರ್ವರು ಮುಣಂ ತಲೆದೂಗೆ
ಚಿತ್ರ ಮಧಸ್ಥಿತಂ ಗುರು ವಾದುದಾ । ಚರಣರಕ್ಷೆ ಸಮುನ್ನತಂ ಲಘುವಾಯ್ತು ಭೂಸುರ
ಸಂಕುಳಂ ॥ ... ... ... ... ೬೨

ಕಂ ॥ ಅದರಿಂ ದಭವನ ಭಕ್ತರ । ಪದರಕ್ಷೆಗೆ ಸರಿಯೆ ಪಾರ್ವರೆಂ ದವರಂ ತ ॥ ಳ್ವ
ದೆ ತಲೆವಾಗಿಸಿ ಮೆರೆದಂ । ಪದಪಿಂದಂ ಕಲ್ಲಿದೇವ ನಮಳಿನಭಾವಂ ॥ ... ೬೩

ಮತ್ತಂ ॥ ಮತ್ತೇ ॥ ಪದಪಿಂ ಧಾರಿಣಿಯಲ್ಲಿ ಕಂಗೊಳಿಪ ಗೊಬ್ಬೂರೆಂಬ ಸಾರಾ
ಗ್ರಹಾ ರದೊಳೊಪ್ಪಂಬಡೆದಿರ್ಪ ನದ್ಭುತಚರಿತ್ರಂ ವೀರಶೈವವ್ರತಾ ॥ ಸ್ಪದ ನತ್ಯೂರ್ಜಿ
ತಭಕ್ತಿಭಾಸುರನದೀರತ್ನಾಕರಂ ವಾದಿವಾ । ರಿದಜಂಝಾನಿಲ ನಪ್ರತರ್ಕ್ಯಮಹಿಮಶ್ರೀಬಿ
ಬ್ಬಬಾಚಾಹ್ವಯಂ ॥ ... ... ... ೬೪

---

ಧರಣೀದೇವರ್ಕಳೊಳ್- ಹಾರ್ವರಲ್ಲಿ, ನಿಗಮಮಂ- ವೇದವನ್ನು, ಮಾಣದೆ- ಬಿಡದೆ, ಆದಂ- ಅತ್ಯಂತವಾಗಿ. ... ... ... ॥೫೯॥

ಓರ್ವಂಗೆಶಿವಭಕ್ತಂಗೆ, ಕೋಟದ್ವಿಜರ್, ಸರಿಅಲ್ತು ; ಅಣ್ಮೆ- ಪರಾಕ್ರಮವಿಶಿಷ್ಟನಾಗಿ. ॥೬೦॥

ನುಡಿಜಾಣ್ಮೆಯಿಂದೆ-ವಚನಕೌಶಲ್ಯದಿಂದ, ಅಳವು-ಶಕ್ತಿಯು,ದೃಷ್ಟಮಂ- ಪ್ರತ್ಯಕ್ಷಪ್ರಮಾಣವನ್ನು.

ಏಕಪಾತ್ರೆಯೊಳ್- ತಕ್ಕಡಿಯ ಒಂದುಬಟ್ಟಲಿನಲ್ಲಿ,ತೊಲೆದೂಗೆ- ಅಳತೆಯಂ ತೂಗಲು, ಆಚರಣರಕ್ಷೆ- ಆ ಪಾದರಕ್ಷೆಯು, ಅಧಸ್ಥಿತಂ- ಕೆಳಗಡೆಯಿರುವದಾಗಿ, ಗುರು- ಭಾರವುಳ್ಳದ್ದು,ಲಘು- ಭಾರರಹಿತವಾದದ್ದು.

ಅಮಳಿನಭಾವಂ- ನಿರ್ಮಲವಾದ ಮನಸ್ಸುಳ್ಳ. ... ... ॥೬೩॥

## ಬಿಬ್ಬಬಾಚಯ್ಯನ ಕಥೆ.

ಅತ್ಯೂರ್ಜಿತಭಕ್ತಿಭಾಸುರನದೀರತ್ನಾಕರಂ- ಅತಿ ಪ್ರಬಲವಾದ ಶಿವಭಕ್ತಿ ಯೆಂಬ ಪ್ರಕಾಶಿಸುವಹೊಳೆಗಳಿಗೆ ಸಮುದ್ರನಾದ, ವಾದಿವಾರಿದಜಂಝಾನಿಲಂ- ಪರಸಮಯವಾದಿಗಳೆಂಬ ಮೇಘಗಳಿಗೆ ಪ್ರಚಂಡಮಾರುತನಾದ, ಅಪ್ರತರ್ಕ್ಯಮಹಿಮಶ್ರೀಬಿಬ್ಬಬಾಚಾಹ್ವಯಂ- ಊಹಿಸಲಶಕ್ಯವಾದ ಮಹತ್ತ್ವವುಳ್ಳ ಬಿಬ್ಬಬಾಚಯ್ಯನೆಂಬ ಹೆಸರುಳ್ಳವನು. ... ... ... ॥೬೪॥

ಕಂ ॥ ನುತಜಂಗಮಪ್ರಸಾದಾ । ಮೃತಸಂವರ್ಧಿತನಿಜಾಸುಲಿಂಗಂ ಲಿಂಗೋ ॥ ನ್ನತ
ಭಾವನೆಯಿಂ ಜಂಗಮ । ತತಿಯಂ ಕಂಡೆರಗಿ ಪೂಜೆಗೆಯ್ವ ನಜಸ್ರಂ ॥ ೬೫

ವ ॥ ಅಂತು ಶುದ್ಧಸಿದ್ಧಪ್ರಸಿದ್ಧಪ್ರಸಾದತ್ರಯಮಂ ನಿಜಪ್ರಾಣ ಮಾಗೆ ಕೈಕೊಂಡು
ಪರಮಾನಂದಂಬೆರಸು ॥ * * * * * * *

ಚಂ ॥ ಶರಣರ ಪಾದುಕಾಶಕಲದಿಂ ಸಮೆ ದಾಭರಣಂಗಳಂ ಕರೋ । ದರಭುಜಕಂಠ
ಕರ್ಣಯುಗಮಸ್ತಕಕಕ್ಷ ಮೆನಿಪ್ಪ ತಾಣದೊ ॥ ಳ್ಧರಿಯಿಸಿ ಜಂಗಮಾಂಘ್ರಿಯ ರಜಂಗ
ಳ ನುಂಗದೊ ಳಂಗರಾಗಮಂ । ವಿರಚಿಸುತಂ ಚರಾವಳಿಯ ಬೀಳುಡೆಯಂ ಪೊದೆದೊಲ್ದು
ಗಾಡಿಯಿಂ ॥ ... ... ... ... ೬೬

ಚಂ ॥ ಮಿಳಿರ್ವ ಪಟಂಗಳಿಂ ಮೆರೆವ ನಂದಿಪತಾಕೆಯ ಕಟ್ಟ ಬಿಟ್ಟ ಪೊ । ಗಳ
ಪೊಸಬಾಸಿಗಂಗಳ ವಿಚಿತ್ರವಿತಾನದ ಚಾರುಚಾಮರಾ ॥ ವಳಿ ಮಣಿದರ್ಪಣಪ್ರಕರತೋರ
ಣ ಮಾತಪವಾರಣಂಗ ಳಂ । ಜ್ವಳತೆಯ ನಾಳ್ದ ಪೊಂಗಳಸ ದಂದ ಮೊಡಂಬಡೆ ಲಿಂಗಮು
ದ್ರೆಯಂ ॥ ... ... ... ... ೬೭

ಕಂ ॥ ತಳೆ ದರ್ಕಚಂದ್ರಬಿಂಬಂ । ಗಳನಣಕಿಪ ಕಾಂತಿವೆತ್ತ ನಾಲ್ಕುಂಚಕ್ರಂ ॥ ಗಳ
ಸೊಬಗು ಮಿಸುಗೆ ವೃಷಭೋ । ಜ್ವಳತೆಯ ನೊಳಕೆಯ್ದು ಮೆರೆವ ಪೊನ್ನಂದುಗೆಯಿಂ ॥
ಮತ್ತಂ ॥ ವಿಲಸದ್ರುದ್ರಾಕ್ಷಮಾಲಾಭರಣದೆ ಕೊರಲೊಳ್ತೊಳ್ತೊಂಗಂಟೆಯಿಂ ಕಂ।
ಗೊಳಿಪ್ರದ್ಯೋತ್ಪುಷ್ಪಮಾಲ್ಯಾಘುದೆ ಝಣಝಣರಾವಸ್ಫುರತ್ಕಿಂಕಿಣೀಮಂ ॥ ಜುಳಮಾ

ನುತ......ಲಿಂಗ— ನುತ- ಶ್ಲಾಘ್ಯವಾದ, ಜಂಗಮ- ಚರಮೂರ್ತಿಗಳ, ಪ್ರಸಾದಾಮೃತ- ಪ್ರಸಾದತೀರ್ಥಗಳಿಂದ, ಸಂವರ್ಧಿತ- ಬೆಳಸಲ್ಪಟ್ಟ, ನಿಜ- ತನ್ನ, ಅಸುಲಿಂಗಂ- ಪ್ರಾಣಲಿಂಗವುಳ್ಳವನಾಗಿ, ಲಿಂಗೋನ್ನತಭಾವನೆಯಿಂ- ಲಿಂಗಕ್ಕಿಂತಲೂ ದೊಡ್ಡವರೆಂಬ ಮನೋನಿಶ್ಚಯದಿಂದ, ಅಜಸ್ರಂ-ಯಾವಾಗಲೂ.

ಶುದ್ಧಸಿದ್ಧಪ್ರಸಿದ್ಧಪ್ರಸಾದತ್ರಯಮಂ— ಶುದ್ಧ- ಗುರುಭುಕ್ತಶೇಷ, ಸಿದ್ಧ- ಲಿಂಗಭುಕ್ತಶೇಷ,ಪ್ರಸಿದ್ಧ- ಜಂಗಮಭುಕ್ತಶೇಷವೆಂಬ, ಪ್ರಸಾದತ್ರಯಮಂ- ಮೂರುವಿಧವಾದ ಪ್ರಸಾದವೇ. * *

ಪಾದುಕಾಶಕಲದಿಂ- ಪಾದರಕ್ಷೆಗಳ ತುಂಡುಗಳಿಂದ, ಸಮೆದ- ಮಾಡಿದ, ಕರೋ......ಕಕ್ಷಂ—ಕರ- ಹಸ್ತ, ಉದರ- ಹೊಟ್ಟೆ, ಭುಜ- ತೋಳು, ಕಂಠ- ಕತ್ತು, ಕರ್ಣಯುಗ–ಎರಡುಕಿವಿಗಳು, ಮಸ್ತಕ- ತಲೆ- ಕಕ್ಷಂ- ಕಂಕುಳು, ತಾಣದೊಳ್- ಸ್ಥಾನದಲ್ಲಿ, ಅಂಗರಾಗಮಂ- ಅನುಲೇಪನದ್ರವ್ಯವನ್ನು, ಚರಾವಳಿಯ- ಜಂಗಮದಪಙ್ತಿಯ, ಬೀಳುಡೆಯಂ- ಬಿಸಾಡಿದ ಬಟ್ಟೆಯನ್ನು, ಪೊದೆದು- ಹೊದ್ದು. ||೬೬||

ಪಟಂಗಳಿಂ- ವಸ್ತ್ರಗಳಿಂದ, ನಂದಿಪತಾಕೆಯ- ನಂದಿಯ ಧ್ವಜವನ್ನು, ಬಿಟ್ಟ- ಜೋಲುಬಿಟ್ಟಿರುವ, ಪೊಸಬಾಸಿಗಂಗಳ ಹೊಸದಾದ ಬಾಸಿಂಗಗಳ, ವಿಚಿತ್ರವಿತಾನದ– ನಾನಾಬಣ್ಣವಾದ ಮೇಲುಕಟ್ಟಿನ, ಮಣಿದರ್ಪಣಪ್ರಕರತೋರಣಂ- ರತ್ನಖಚಿತಗಳಾದ ಕನ್ನಡಿಗಳ ಸಮೂಹವುಳ್ಳ ತೋರಣ, ಆತಪವಾರಣಂಗಳ- ಛತ್ರಗಳ, ಪೊಂಗಳಸದ- ಚಿನ್ನದಕಲಶದ. ... ... ||೬೭||

ಅಣಕಿಪ– ಹಾಸ್ಯಮಾಡುವ, ವೃಷಭೋಜ್ವಳತೆಯಂ– ಬಸವೇಶ್ವರನೋಪಾದಿಯಲ್ಲಿ ಮನೋಹರತ್ವವನ್ನು, ಪೊನ್ನಂದುಗೆಯಿಂ- ಚಿನ್ನದ ಕಾಲ್ಗಗ್ಗರದಿಂದ. ... ||೬೮||

ಝಣಝಣರಾವಸ್ಫುರತ್ಕಿಂಕಿಣೀಮಂಜುಳಮಾಲಾಜಾಲದಿಂ- ಝಣಝಣ ವೆಂಬ ಶಬ್ದದಿಂದ ಪ್ರಕಾಶಿಸುವ ಸಣ್ಣಗೆಜ್ಜೆಗಳ ಮನೋಹರವಾದ ಸರಗಳ ಸಮೂಹದಿಂದ, ಶೃಂಗಂಗಳಿಂ- ಕೊಂಬುಗಳಿಂದ, ಭಾಸಮ

ಲಾಜಾಲದಿಂ ಚಾಮರದಿ ನಮರ್ದಶೃಂಗಂಗಳಂ ಭಾಳಮಧ್ಯ । ಸ್ಥಳಬದ್ಧಸ್ವರ್ಣಪಟ್ಟಾಂ
ಕನದಿ ನೆಸೆವ ಪೇರೆಳ್ತುಗ ಳ್ಪೇರ್ಮೆಯಿಂದಂ ॥ ... ... ೬೯

ಕಂ॥ ಪೆಗಲಿತ್ತು ಪೊತ್ತು ಜವದಿಂ।ಮಿಗೆ ಪರಿಯೆ ವಿರಾಜಿಸಿರ್ದ ಗೋರಥಮಂಪೆಂ॥
ಪಗಲ ದೊಡನೇರಿ ಸಂಭ್ರಮ । ದೊಗುಮಿಗೆಯಿ ನುಘೇಯುಘೇಯೆನುತಾದ್ರೋಳಮಿ ॥

ಕಂ॥ ಅರುಗಾವುದ ದಳವಿಯೊ ಳುಮೆ । ಯೆರೆಯನ ಭಕ್ತರ್ಕಳೆಸಗೆ ಗಣಪರ್ವಮ
ನ ॥ ಳ್ಕರೊ ಳಲ್ಲಿಗ ತದ್ರಥಮಂ । ನೆರೆ ಪರಿಯಿಸುತೆಯ್ದಿ ಕಂಡು ಭಕ್ತಾವಳಿಯಂ ॥ ೭೧

ಕಂ ॥ ದಂಡಪ್ರಣಾಮ ಮೆಸಗು ತ । ಖಂಡಸುಖಂಬಡೆದು ತತ್ಪದಾಂಬುಜರಜದೊ ॥
ಳ್ಬಂಡುಣಿಯವೊಲ್ ಲೋಲಾಡುತೆ । ಮಂಡೆಯೊ ಳಾಂತವರ ಚರಣವಿಮಳೋದಕಮಂ॥ ೭೨

ಚಂ ॥ ಘನರುಚಿತನ್ಮುಖೋದಿತವಚಸ್ಸುಧೆಯಿಂ ತಣಿವೇರಿ ಮೀರಿ ಮ । ತ್ತನಿತ
ರೊ ಳಲ್ಲಿ ಭಕ್ತಚರಸಂತತಿಯುಂ ಡುಳುಪಿರ್ದ ಸಿದ್ಧಪಾ ॥ ವನತರಸುಪ್ರಸಾದಮ ನದಂ
ಮೊಗೆ ದೆತ್ತಿ ಶಿವಾಯ ತೇ ನಮೋ । ಎನು ತೆರಗುತ್ತೆ ತೀವಿ ಶಕಟಾಂತರದೊ ಳ್ನಿರೆ ತಂ
ದುಲೀಲೆಯಿಂ ॥ ... ... ... ... ೭೩

ಕಂ॥ ಅನುಭವಿಸು ತ್ತನುದಿನ ಮಿಂ । ತನುನಯದಿಂ ಬಿಬ್ಬಭಾಸ್ಕರಂ ಸುಖಮಿರೆ ॥
ಕಂ ॥ ಡನವದ್ಯ ನಿರವ ನಾವ್ಪುರ । ಜನಮೆಲ್ಲಂ ನೆರೆ ಕನಲ್ದು ಗುಜುಗುಜಿಸುತ್ತಂ ॥ ೭೪

ಕಂ ॥ ಪಲವಂದದೆ ನಿಂದಿಸುತಿರೆ । ಜಲರುಹರಿಪುಮೌಳಿಭಕ್ತ ನಾಗೊಬ್ಬರೊ ॥
ಳ್ನಲವೇರಿ ಪಿರಿಯ ಭಕ್ತನ । ನಿಲಯದ ಪರ್ವಕ್ಕೆ ತಳರ್ದ ನತಿಸಂಭ್ರಮದಿಂ ॥ ೭೫

ಮತ್ತೇ ॥ ಚರಲಿಂಗಶ್ರೇಣಿಯಂ ಕಂಡೆರಗಿ ಚರಣದೊ ಳ್ಮೀರಿದಾನಂದದಿಂ ಭ । ಕ್ತಿ

---

ಧ್ಯಸ್ಥಳಬದ್ಧಸ್ವರ್ಣಪಟ್ಟಾಂಕನದಿಂ- ಹಣೆಯ ನಡುಗಡೆಯಲ್ಲಿ ಕಟ್ಟಲ್ಪಟ್ಟ ಚಿನ್ನದ ಹಣೆಗೆಯ ಚಿಹ್ನೆಯಿಂದ, ಪೇರೆಳ್ತುಗಳ್- ದೊಡ್ಡಎತ್ತುಗಳು. ... ... ... ॥೬೯॥

ಪೆಗಲಿತ್ತು- ಹೆಗಲನ್ನುಕೊಟ್ಟು, ಗೋರಥಮಂ- ಎತ್ತಿನ ಗಾಡಿಯನ್ನು. ... ॥೭೦॥

ಅರುಗಾವುದದ- ಆರುಗಾವುದದ, ಅಳವಿಯೊಳ್- ಅಳತೆಯಲ್ಲಿ, ಉಮೆಯೆರೆಯ ನ- ಪಾರ್ವತೀ ಪತಿಯ, ಗಣಪರ್ವಮಂ- ಗಣಂಗಳ ಹಬ್ಬವನ್ನು, ಪರಿಯಿಸುತೆ- ಓಡಿಸುತ್ತಾ. ... ॥೭೧॥

ಬಂಡುಣಿಯವೊಲ್- ಭ್ರಮರದಹಾಗೆ, ಮಂಡೆಯೊಳ್- ತಲೆಯಲ್ಲಿ. ... ॥೭೨॥

ಘನರುಚಿತನ್ಮುಖೋದಿತವಚಸ್ಸುಧೆಯಿಂ- ಹೆಚ್ಚಾದ ಪ್ರೀತಿಯಿಂದ ಆ ಶಿವಗಣಂಗಳ ಮುಖದಿಂದ ಹುಟ್ಟಿದ ಮಾತೆಂಬ ಅಮೃತದಿಂದ, ತಣಿವೇರಿ- ತೃಪ್ತಿಯಂ ಹೊಂದಿ, ಭಕ್ತಚರಸಂತತಿ- ಭಕ್ತರು ಜಂಗಮರುಗಳ ಸಮೂಹವು, ಸಿದ್ಧಪಾವನತರಸುಪ್ರಸಾದಮಂ- ಗುರುಮೂರ್ತಿಗಳ ಪರಿಶುದ್ಧವಾದ ಭುಕ್ತಶೇಷವನ್ನು, ಮೊಗೆದು- ತುಂಬಿ, ಶಿವಾಯ- ಮಂಗಳಸ್ವರೂಪನಾದ, ತೇ- ನಿನಗೋಸ್ಕರ, ನಮಃ, ಶಕಟಾಂತರದೊಳ್- ಗಾಡಿಯೊಳಕ್ಕೆ. ... ... ... ॥೭೩॥

ಅನವದ್ಯನ- ನಿರ್ದುಷ್ಟನಾದ ಬಾಚಯ್ಯನ, ಇರವಂ- ರೀತಿಯನ್ನು, ಗುಜುಗುಜಿಸುತ್ತಂ- ಗುಂಪುಗೂಡಿ ಮಾತನಾಡುತ್ತ. ... ... ... ॥೭೪॥

ಜಲರುಹರಿಪುಮೌಳಿಭಕ್ತಂ— ಜಲರುಹರಿಪು- ಚಂದ್ರನೇ, ಮೌಳಿ- ಕಿರೀಟದಲ್ಲುಳ್ಳ ಶಿವನ, ಭಕ್ತಂ-ಭಕ್ತನಾದ ಬಾಚಯ್ಯನು. ... ... ... ॥೭೫॥

ಭಕ್ತಿರಸಂ- ಭಕ್ತಿ ಯೆಂಬ ನೀರು, ಮೈದುಂಬಿ- ದೇಹದಲ್ಲಿ ತುಂಬಿ, ತುಳ್ಕಿತ್ತು- ಹೆಚ್ಚಾಗಿ ಚೆಲ್ಲಿತು,

ರಸಂ ಮೈದುಂಬ ತುಳ್ಕೆ ತ್ತೆ ಸೆ ಸುಖಜಲಂ ನೇತ್ರದೊ ಳ್ತತ್ಪ್ರಸಾದೋ ॥ ತ್ಕರಮಂ
ಕೈಕೊಂಡು ತೀವ್ರ ತ್ತೆಸೆವಶಕಟದೊ ಳ್ಮುಂದೆ ಮಾಹೇಶ್ವರ ರ್ಬಿ । ತ್ತರದಿಂದಂ ಪಾಡು
ತಾಡು ತ್ತೆಸೆಯೆ ಹರಹರಧ್ಯಾನಮಂ ಬೀರು ತಾಗಳ್ ॥ ... ೭೬

ಕಂ ॥ ಮಿಳಿರುತ್ತಿರೆ ಪಳಯಿಗೆಗ । ಳೊತ್ತಳಗುತ್ತಿರೆ ಮೇಲೆ ಸತ್ತಿಗೆಗಳುಂ ಮ
ತ್ತಂ ॥ ಕಳತೂರ್ಯತ್ರಯರವ ಮ । ಗ್ಗಳಿಸುತ್ತಿರೆ ಬಿಡದುಘೋಷವೃಘೋ ಯೆನುತೊಲವಿಂ ॥

ಕಂ ॥ ರಥಮಂ ತನ್ನಯ ಸುಮನೋ । ರಥಮಂ ತರ್ಪಂತೆ ತರುತ ಮಿರೆವ್ರುರದೊ
ಳ್ತ ॥ ತ್ಪಥಮಂ ತಡೆ ದಿಡಿರೊ ಳ್ತ । ತ್ಪೃಥುವಾಗ್ಬಳವಿಪ್ರ ರಣ್ಮಿನಿಂ ಡಿಂಶೆಂಡರ್ ॥ ೭೮

ಕಂ ॥ ಪುಗದಿರ್ಪುಗದಿ ರ್ನಿಲ್ನಿಲ್ । ನಗರಮ ನಿದ ಸೇನಿದದ್ಭುತಂ ಪೇ ಳ್ವೇ ಳ್ಕೆ ॥
ಮ್ಮಗೆ ಸಡಗರಮಂ ನೆಗಳ್ದಪೆ । ಮಿಗೆ ನೀಂ ಕಡುಗೂರ್ತಧೂರ್ತಸಖಸಂಕುಲದೊಳ್ ॥ ೭೯

ಕಂ ॥ ಪಳಯಿಗೆ ಯೇನಿದು ಕೆಲವಲ । ದೊಳೆ ಕೈವಾರಿಪ ವಿಡಾಯ ಮೇನಿದು ಮೇ
ಲು ॥ ಜ್ವಳಿಪಾತಪತ್ರ ಮೇನಿದು । ಕಳಕಳ ಮೇನಿದು ಪೊದಳ್ದ ತೂರ್ಯತ್ರಯದ ॥ ೮೦

ಕಂ ॥ ಮದುವೆಯ ಪೇರೊಸಗೆಯೊ ಪೆಂ । ಪೊದವಿದ ಹರಭಕ್ತ ನಳಿದನೋ ಬಲ್ವ
ಗೆಯಂ ॥ ಸದೆ ದತಿಶಯಶೌರ್ಯವೊ ತ । ಳ್ವದೆ ಚೇರಮನಂತೆ ಶಿವನಪುರಿಗೈದುವೆಯೋ ॥

ಕಂ ॥ ಅಲಸದೆ ಶೂದ್ರಾಂತ್ಯಜರೆಂ । ಜಲ ನುಂಡದರೊ ಳ್ಮುಳುಂಗಿ ದನಿತ್ಯೈದದೆ ಗ ॥
ಲ್ಗಲ ನೀನ್ಪಾರ್ವರ ಪೊಳಲಂ । ಪೊಲೆಗಲಸ ಲ್ತರ್ಪೆ ಶಕಟದೊ ಳ್ಸಡಗರದಿಂ ॥ ೮೨

ಕಂ ॥ ನೆಲನಾಳ್ವ ಭೂಪ ನೆರ್ದೆಯೊ । ಳ್ಮೊಲೆಗಂಡೆಯೊ ಬಳ್ಕ ದಳ್ಕ ದೋಸರಿಸದೆ

---

ಸುಖಜಲಂ- ಸಂತೋಷದಿಂದುಂಟಾದ ಕಣ್ಣೀರು. ... ... ॥೭೬॥

ಕಳತೂರ್ಯತ್ರಯರವಂ- ಅವ್ಯಕ್ತಮಧುರವಾದ ನೃತ್ತಗೀತವಾದ್ಯಗಳ ಶಬ್ದವು. ॥೭೭॥

ಸುಮನೋರಥಮಂ- ಅಭೀಷ್ಟಸ್ವರೂಪವಾದ, ರಥಮಂ- ಗಾಡಿಯನ್ನು, ತತ್ಪಥಮಂ- ಅವನು ಹೋಗುವ ಮಾರ್ಗವನ್ನು, ಪೃಥುವಾಗ್ಬಳವಿಪ್ರರ್- ವಿಸ್ತಾರವಾದ ಮಾತಿನ ಶಕ್ತಿಯುಳ್ಳ ಹಾರ್ವರು, ಅಣ್ಮಿನಿಂದೆ- ಶೌರ್ಯದಿಂದ. ... ... ... ॥೭೮॥

ಪುಗದಿರ್- ಪ್ರವೇಶಿಸಬೇಡ, ಕೆಮ್ಮಗೆ- ಸುಮ್ಮನೆ, ಕಡುಗೂರ್ತ- ಬಹಳವಾಗಿ ಪ್ರೀತಿಸಿದ, ಧೂರ್ತಸಖಸಂಕುಲದೊಳ್- ನೀಚಸ್ನೇಹಿತರ ಗುಂಪಿನಲ್ಲಿ. ... ... ॥೭೯॥

ಕೈವಾರಿಪ- ಕಯ್ಯನ್ನೆತ್ತಿ ಹೊಗಳುವ, ವಿಡಾಯಂ- ಗರ್ವವು. ... ॥೮೦॥

ಪೇರೊಸಗೆಯೊ- ದೊಡ್ಡಉತ್ಸವವೋ ? ಅಳಿದನೊ- ಸತ್ತನೋ ? ಬಲ್ವಗೆಯಂ- ದೊಡ್ಡಶತ್ರುವನ್ನು, ಸದೆದ- ಕೊಂದ. ... ... ... ॥೮೧॥

ಶೂದ್ರಾಂತ್ಯಜರ- ಶೂದ್ರರು ಹೊಲೆಯರುಗಳ, ಮುಳುಂಗಿದಅನಿತ್ಯೈದದೆ- ಮುಳುಗಿದಷ್ಟಕ್ಕೇ ಹೋಗದೆ, ಗಲ್ಗಲನೆ- ಬೇಗನೆ, ಪೊಳಲಂ- ಪಟ್ಟಣವನ್ನು, ಪೊಲೆಗಲಸಲ್- ಸಾಂಕರ್ಯವನ್ನುಂಟುಮಾಡುವದಕ್ಕೆ, ತರ್ಪೆ- ತೆಗೆದುಕೊಂಡುಬರುತ್ತೀಯೆ. ... ... ॥೮೨॥

ನೆಲನಾಳ್ವ- ಭೂಮಿಯನ್ನು ಪಾಲಿಸುವ, ಎರ್ದೆಯೊಳ್- ವಕ್ಷಸ್ಥಲದಲ್ಲಿ ಮೊಲೆಗಂಡೆಯೊ- ಸ್ತನವಂ ಕಂಡೆಯೋ ? ( ಅಂದರೆ ರಾಜನನ್ನು ಹೆಂಗುಸೆಂದು ತಿಳಿದಿದ್ದೀಯೋ ? ಎಂದು ಭಾವ ) ಬಳ್ಕದೆ- ಕಂಪಿಸದೆ, ಅಳ್ಕದೆ- ಹೆದರದೆ, ಓಸರಿಸದೆ- ಓರೆಯಾಗದೆ, ಈಸದ್ದ್ವಿಜನಿಲಯಂಗಳ್- ಈ ಶ್ರೇಷ್ಠರಾದ ಬ್ರಾಹ್ಮಣ

ಮ ‖ ಷ್ಕುಲರೆಂಜಲ ನೀಂಸನ್ನಿಜ । ನಿಲಯಂಗಳ ಮುಂದೆ ತರ್ಪೆ ಯೆನ್ನದೊ ಬಿಂಕಂ‖ ೮೩

ಕಂ ‖ ಮಾನ ಗೆಡ ದೆಮ್ಮಿಂದಂ । ನೀಂ ನತಿಶಯಬುದ್ಧಿಶಾಲಿ ಯಾದೊಡೆ ತೊಲ ಗಂ ‖
ದ ನೆರೆದ ಪರ್ವ ರೆನೆ ಕೇ । ಳ್ದಾನುತಮುಹಿಮಾಬ್ಧಿ ರೋಷಭೀಷಣ ನಾದಂ ‖ ೮೪

ಚಂ ‖ ಎಲೆಯೆಲೆ ಪಾಪಕರ್ಮರಿರ ದುರ್ಮದದುಷ್ಟರಿರಾ ದುರಂತದು । ರ್ಮಲಮಲಿನಾ ತ್ಮಧೂರ್ತರಿರ ಶಾಂಭವಭಕ್ತಿಯ ಬಟ್ಟೆದಪ್ಪಿ ಕೋಂ ‖ ಟಲೆಗೊಳಗಾದ ಖೂಳರಿರ ಮೇಲರಿದಾಡಪೆ ಕೊಬ್ಬಿನುಬ್ಬಿನಿಂ । ದುಲಿದಪಿ ರೇಕೆ ಜಾವಳರೆ ಭರ್ಗನ ಭಕ್ತರಿಳಾತಳಾಗ್ರದೊಳ್ ‖ ... ... ... ೮೫

ಕಂ ‖ ಕುಲಹೀನ ರೆಂಬ ರಗ್ಗದ । ಮಲಹರಚರಣಾಬ್ಜಭಕ್ತರಂ ನೀವೀಗ ‖ ಳ್ಕುಲ
ಹೀನೆಯಾದ ಗೋಪಿಯ । ಮಲವಂ ಪಣೆಯಲ್ಲಿ ತಾಳ್ವ ರಚ್ಚರಿಯಲ್ತೆ ‖ ೮೬

ಕಂ ‖ ಗುರುಕರಜಾತರೊ ಳೆಂದುಂ । ಹರಭಕ್ತರೊ ಳಿಲ್ಲ ಪೂರ್ವಕುಲಜಾತಿ ಭವ ‖
ದ್ಗುರುವಾದ ಬಾದರಾಯಣ । ವರಮುನಿ ಯಕುಲೀನ ನೆಂದೊ ಡೇವೇಳ್ದಪಿರೊ ‖ ೮೭

ಕಂ ‖ ಅಪಿವಾಯಶ್ಚಂಡಾಲೋ । ಲ್ಲಪಿತಶ್ರುತಿ ಶಿವನ ಭಕ್ತರೊ ಳ್ಕುಲ ಮಿಲ್ಲೆಂ ‖
ದುಪದೇಶಿಪ್ಪುದಿದ ನರಿದುಂ । ಚಪಳತೆಯಿಂ ಬಾಯ್ಗೆ ಬಂದವೋ ಲ್ಗಳಪ್ಪುವುದೇಂ ‖ ೮೮

ಕಂ ‖ ಗುರುಚರಹರಪ್ರಸಾದಮ । ನಿರ ದೆಂಜಲೆನುತ್ತೆ ತೆಗಳ್ವ ನರ ನಾವ ನವಂ ‖
ನರಕಾಗ್ನಿಯೊ ಳಜಕಲ್ಪಂ । ಬರೆಗಂ ಬೇವಂ ದಲೆಂಬು ದಾಗಮವಚನಂ ‖ ೮೯

---

ರ ಮನೆಗಳ, ಬಿಂಕಂ- ಗರ್ವವು, ಎನ್ನದೊ- ಎಂದು ಹೇಳುವದಿಲ್ಲವೇ ? ... ‖೮೩‖

ಮಾನಂಗೆಡಪೆ- ಗೌರವವಂ ಹೋಗಲಾಡಿಸಕೊಳ್ಳದೆ, ತೊಲಗು- ಹೋಗು, ರೋಷಭೀಷಣಂ- ಕೋಪದಿಂದ ಭಯಂಕರನು. ... ... ... ... ‖೮೪‖

ದುರಂತದುರ್ಮಲಮಲಿನಾತ್ಮಧೂರ್ತರಿರ- ಅಪಾರವಾದ ಕೆಟ್ಟಪಾಪದಿಂದ ಕಲುಷಿತವಾದ ಜೀವಾತ್ಮರಾದ ನೀಚರಿರಾ ! ಬಟ್ಟೆದಪ್ಪಿ- ಮಾರ್ಗವಂ ತಪ್ಪಿ, ಕೋಟಳೆಗೆ- ತೊಂದರೆಗೆ, ಮೇಲರಿದು- ಮುಂದಾಲೋಚಿಸಿ, ಕೊಬ್ಬಿನ- ಗರ್ವದ, ಉಬ್ಬಿನಿಂದೆ- ಅತಿಶಯದಿಂದ, ಉಲಿದಪಿರಿ- ಕೂಗುವಿರಿ, ಜಾವಳರೆ- ಸಾಮಾನ್ಯರೇ ? ... ... ... ‖೮೫‖

ಗೋಪಿಯ- ಗೋಪಿಕಾಂಗನೆಯ. ... ... ... ‖೮೬‖

ಗುರುಕರಜಾತರೊಳ್- ( ಅಂದರೆ:— ಶಿವವೇದಕರೇಜ್ಞಾನೇದತ್ತೇಯೇನಸುನಿರ್ಮಲೇ । ಜೀವನ್ಮುಕ್ತೋಭವೇಚ್ಛಿಷ್ಯಸ್ಸಗುರುಜ್ಞಾನಸಾಗರಃ ‖ ಯಾವ ಗುರುವು ಸ್ವಾತ್ಮಶಿವತ್ವಸ್ಫುಟೀಕಾರಕವಾದ ನಿರ್ಮಲವಾದ ಜ್ಞಾನವನ್ನುಂಟುಮಾಡಲು ಶಿಷ್ಯನು ಬದುಕಿದ್ದಾಗ್ಯೂ ಮುಕ್ತನಾಗಿರುವನೋ ಅಂತಾ ಗುರುವು ಜ್ಞಾನಸಾಗರನೆನ್ನಿಸಿಕೊಳ್ಳುತ್ತಾನೆ. ಅಂತಾ ಗುರುವಿನಿಂದ ಯಥೋಕ್ತಸಂಸ್ಕಾರವಂ ಪಡೆದು ಶಿಷ್ಯನೆನಿಸಿಕೊಂಡಿರುವರಲ್ಲಿ ಅಂದರೆ ಜೀವನ್ಮುಕ್ತರಾದವರಲ್ಲಿ ) ಬಾದರಾಯಣವರಮುನಿ- ವ್ಯಾಸರ್ಷಿಯು, ಅಕುಲೀನಂ- ದುಷ್ಕುಲಪ್ರಸೂತನು. ... ... ... ‖೮೭‖

ಅಪಿವಾಯಶ್ಚಂಡಾಲೋಲ್ಲಪಿತಶ್ರುತಿ- ಅಪಿವಾಯಶ್ಚಂಡಾಲಶ್ಶಿವೇತಿವಾಚಂವದೇತ್ತೇನ ಸಹಸಂವದೇತ್ತೇನ ಸಹಸಂವಸೇತ್ತೇನ ಸಹಸಂವಿಶೇತ್ತೇನ ಸಹಭುಂಜೀತ ಎಂಬ ಸಾಮವೇದವಾಕ್ಯವು. ‖೮೮‖

ತೆಗಳ್ವಂ- ನಿಂದಿಸುವವನು, ಅಜಕಲ್ಪಂಬರೆಗಂ- ಬ್ರಹ್ಮಕಲ್ಪಪರ್ಯಂತರವಾಗಿ, ಬೇವಂ- ಬೇಯುವನು, ದಲ್- ನಿಜವು. ... ... ... ‖೮೯‖

ಕಂ॥ ಹರಭಕ್ತಿ ಯುಳ್ಳವ ರ್ಗಿದು । ಪರಮಪ್ರಸಾದ ಮಲ್ಲದರ್ಗೆ ಲಯವಹ್ನಿ ಯೆಂ॥
ಕರ ಮೀಂತು ತೆಗಳ್ವ ಬಡವಾ । ರ್ವರೆ ನಿಮ್ಮಂ ಕೊಲ್ವು ದೆಮಗಿದೇಂ ಪೌರುಷಮೆ ॥ ೯೦

ಕಂ ॥ ತುಂಗಪ್ರಸಾದದೀಪಪ । ತುಗತ್ವಮ ನಾಳದತ್ತು ತೊಲಗಿಮೆನುತ್ತಂ ॥ ಜಂ
ಗಮಲಿಂಗಪದಾಂಬುಜ । ಭೃಂಗಂ ಘನಬಿಬ್ಬ ಭಾಸ್ಕರಂ ನುಡಿಯ ಲೊಡಂ ॥ ೯೧

ವ ॥ ಕೇಳ್ದಾಪೂರ್ವ ರ್ಕಡುಕನಲ್ದು ಮಾಮಸಕಂ ಮಸಗಿ ॥

ಚಂ ॥ ಬಿಡುಬಿ ಡದೇನ ನೆಂದಪೆ ವಿಡಾಯದ ಭೀತಿಯ ನಿಂತು ಬೀರಿ ನಿ । ನ್ನೊಡೆ
ಯ ರೆನಿಪ್ಪ ಕೀಳ್ಗೊರವ ರೆಂಜ ಲಿದೇಂ ಫಣಿಯೋ ಮದೇಭಮೋ ॥ ಸುಡುಗರವೋ ಗಜಾ
ರಿಯೊ ಮೃಗಾರಿಯೊ ಕಾಲನೊ ಕಾಲಕೂಟಮೋ । ಸಿಡಿಲೊ ಮೃಗೇಂದ್ರವೈರಿಯೊ ದವಾ
ನಲನೋ ಲಯಕಾಲವಹ್ನಿಯೋ ॥ ... ... ... ೯೨

ವ ॥ ಎಂದು ಗಳಪುತು ತಮ್ಮಿದಿರ್ವರಿವ ನಿರ್ಭಯಭಕ್ತ ರಾಟೋಪಮಂ ಕಂಡು ಕ
ನಲ್ದು ಕೈಗಡಗಗಳುಮಂ ದರ್ಭೆವೆರ ಸೊಂದೆಡೆಯಲ್ಲಿಳುಪಿ ಜನ್ನಿವಾರಮ ನೇರಗಟ್ಟಿ ದೋವ
ರಿಯಿಂ ಮಲ್ಲಗಾಸೆಯ ನುಟ್ಟು ಯಷ್ಟಿಗಳಂ ಕೈಕೊಂಡು ಕದನಕ್ಕೆ ಕಡಂಗಿ ನಿಂದು ॥ *

ಚಂ ॥ ಪಿಡಿಪಿಡಿ ಯೆಳ್ತು ನಚ್ಯುತ ಗದಾಧರ ಜೊತ್ತಗೆಗೀಳ್ತು ಪೋರಿಯಂ ಬಿ ।
ಡುಬಿಡು ದುಷ್ಟಕೇಶವ ಕೊರಲ್ಗೊಗನುಂ ಕಡಿ ಯಷ್ಟಿಗೊಂಡುನೀಂ ॥ ಬಡಿಬಡಿ ಬಂಡಿ
ಯಂ ಕರಿಯರಾಘವ ಮಾಧವ ಮುಂದೆಬರ್ಪರಂ । ತಡೆತಡೆ ಕೊಬಿಗಾ ಮಿಳಿರ್ಪ ಕೇತನ
ಮಂ ಪರಿದಿಕ್ಕು ಬೇಗಹಿಂ ॥ ... ... ... ೯೩

ಕಂ ॥ ಎಲೆದಾಮೋದರ ಪೊಡೆಪೊಡೆ । ಕಲಶಮ ನೆಲೆ ಜನ್ನಜಂತ್ರಮುಂ ಪರಿಪರಿ ವಿ॥
ಠ್ಠಲ ಕಟ್ಟದಶೋರಣಮಂ । ತೊಲಗದೆ ಕೀಳ್ತುಡು ಮುರಾರಿ ಮುರಿ ಸತ್ತಿಗೆಯಂ ॥ ೯೪

---

ಇದು- ಈ ಪ್ರಸಾದವು, ಲಯವಹ್ನಿ- ಪ್ರಳಯಕಾಲದ ಬೆಂಕಿ. ... ||೯೦||

ತುಂಗಪ್ರಸಾದದೀಪಪತಂಗತ್ವಮಂ— ತುಂಗ- ಉನ್ನತವಾದ, ಪ್ರಸಾದ- ಶೇಷವೆಂಬ, ದೀಪ-ದೀ
ಪಕ್ಕೆ, ಪತಂಗತ್ವಮಂ- ಪತಂಗದ ಹುಳದತನವನ್ನು, ಆಳದೆ- ಹೊಂದದೆ, ತೊಲಗಿಂ-ಹೋಗಿರಿ. ||೯೧||

ಮಾಮಸಕಂಮಸಗಿ- ಕೋಪಾತಿರೇಕವಂಹೊಂದಿ. * * * *

ಕೀಳ್ಗೊರವರ್- ನೀಚಜಂಗಮರು, ಸುಡುಗರವೋ- ಸುಡುವ ವಿಷವೋ ? ಗಜಾರಿಯೊ- ಸಿಂಹ
ವೋ ? ಮೃಗಾರಿಯೊ- ಹುಲಿಯೋ ? ಕಾಲನೊ- ಯಮನೋ ? ಕಾಲಕೂಟಮೋ- ಮಹಾವಿಷವೋ?
ಮೃಗೇಂದ್ರವೈರಿಯೊ- ಶರಭವೋ ? ದವಾನಲನೋ- ಕಾಳ್ಗಿಚ್ಚೋ ? ಕಾಲವಹ್ನಿಯೋ- ಪ್ರಳಯಕಾಲ
ದ ಬೆಂಕಿಯೋ ? ... ... ... ||೯೨||

ಇದಿರ್ವರಿವ- ಎದುರಾಗಿ ಬರುವ, ಆಟೋಪಮಂ- ಆಡಂಬರವನ್ನು, ಕೈಗಡಗಗಳುಮಂ- ಹಸ್ತದಲ್ಲಿ
ರುವ ಕಂಕಣಗಳನ್ನೂ, ದರ್ಭೆವೆರಸು- ದರ್ಭೆಯೊಡನೆ ಕೂಡಿ, ಏರಗಟ್ಟಿದು- ಎತ್ತಿ ಕಟ್ಟಿ, ಓವರಿಯಿಂ- ತೊ
ಡೆಯಸಂದಿನಿಂದ, ಮಲ್ಲಗಾಸೆಯಂ- ಜಟ್ಟಿಗಚ್ಚೆಯನ್ನು, ಯಷ್ಟಿಗಳಂ- ದೊಣ್ಣೆಗಳನ್ನು, ಕದನಕ್ಕೆ- ಜಗಳ
ಕ್ಕೆ, ಕಡಂಗಿ- ಕುತೂಹಲಪಟ್ಟು. * * * * * *

ಎಳ್ತಂ- ಎತ್ತನ್ನು, ಅಚ್ಯುತ- ಅಚ್ಯುತನೆಂಬುವನೇ ! ಜೊತ್ತಗೆಗೀಳ್ತು- ಕತ್ತಿಗೆ ಕಟ್ಟಿರುವ ಹಗ್ಗವನ್ನು
ಕಿತ್ತು, ಪೋರಿಯಂ- ಹೋರಿಯನ್ನು, ಕೊಬಿಗಾ- ( ಎಂಬುವನೇ ! ) ಪರಿದಿಕ್ಕು-ಹರಿದುಹಾಕು ||೯೩||

ಜನ್ನಜಂತ್ರಮುಂ-ಮೂಕಿಗೆಕಟ್ಟಿದ ಹಗ್ಗವನ್ನು, ಸತ್ತಿಗೆಯಂ-ಛತ್ರವನ್ನು. ... ||೯೪||

ವ || ಎಂದು ಗಜರಿ ಗರ್ಜಿಸಿ ಮೇಲ್ವರಿವ ದುಷ್ಟದ್ವಿಜರಂ ಕಂಡು ಬಿಬ್ಬಭಾಸ್ಕರು ನಕ್ಕು ನಿಜಕರಂಗಳಿಂ ಸಿದ್ಧಪ್ರಸಾದಮಂ ಮೊಗೆದೆತ್ತುತ್ತ ವಿೂಪ್ರೊಳಲಂ ದಹಿಪ್ಪು ದೆಂದು ಗಳಲನೆ ಕೆವರ ಲೊಡನೆ || * * * * * * * *

ಚಂ | ಗುಳುಗುಳಸುತ್ತೆ ಚಂಡರುಚಿರೋಚಿಯ ನಾಳ್ದು ಪೊದಳ್ದು ಪೊಣ್ಮಿ ಬಾಂ| ದಳ ಕೊಗೆದುರ್ಬಿ ಪರ್ಬಿ ಕಿಡಿ ಸೂಸೆ ಚಿಳಿಚ್ಚಿಟಲೆಂದು ವಿೂರಿ ಪ || ಜ್ವಳಿಪುರಿಮಾಲೆ ದಳ್ಳಿಸೆ ಪುರತ್ರಯಮಂ ಮಿಗೆ ಮುತ್ತಿ ದುಗ್ರ ನು | ಜ್ವಳನಯನಾಗ್ನಿಯಂ ತೆಸೆದು ಮುತ್ತಿದು ದಾಪ್ರೊಳಲಂ ಕ್ಷಣಾರ್ಧದೊಳ್ || ... ... ೯೫

ವ || ಅಂತು ಮುತ್ತಿ ಮುಂಬರಿದು ಕಾಲಾಗ್ನಿಯಂತೆ ಕವಿತರ್ಪ ತದಗ್ನಿಯಂ ಕಂಡು

ಚಂ || ಎಲೆಯೆಲೆ ಕಿರ್ಚುಕಿರ್ಚು ಪರಿಯಿಟ್ಟುದು ಸುಟ್ಟುದು ಕೆಟ್ಟೆ ವಕ್ಕಟಾ | ನಿಲಯಮು ನುರ್ಬಿ ಪರ್ಬಿದು ದಕಾಲಲಯಂ ಮುಸಗಿತ್ತು ಮಿಳ್ತು ಬಂ || ದಲೆದುದು ಪೋಗು ಪೋಗು ಪರಿದೋ ಡಿರದೋಡು ಜಲಾಶಯಂಗಳ | ತ್ತಲೆ ತೆಗೆ ಮಕ್ಕಳಿಂ ಜವದಿ ನೆಂಬ ರವಂ ಪಿರಿದಾಯ್ತು ಪಾರ್ವರೊಳ್ || ... ... ೯೬

ಕಂ | ಪ್ರಮಥರ್ಜಗಮಂ ಕಲ್ಪಾಂ | ತಮುಹಾಶಿಖಿ ಯಳುರೆ ನೋಡಿ ನಲಿವವ್ರೊಲಾ ಣಂ || ಗಮುಸುಪ್ರಸಾದಶಿಖಿ ದು | ರ್ದಮರೂರು ಮುತ್ತೆ ಭಕ್ತ ರುತ್ಸವನಾಂತರ್ || ೯೭

ವ || ಆಗಳ್ || ಕಂ || ಶ್ರುತಿಯೆ ಪುರಾಣೌಘಮೆ ಭಾ | ರತಮೇ ರವಿಯೇ ವಿಧಾತ್ರನೇ ವಿಷ್ಣುವೆ ಭಾ || ರತಿಯೆ ಶತಮುಖನೆ ಮುಖಸಂ | ತತಿಯೇ ಮಾಣಿಪುದು ಸುಡುವ ಶಿಖಿಯುಪಟಳಮಂ || ... ... ... ೯೮

ವ || ಎಂದು ಪುಯ್ಯಲ್ಚಿ ಮೊರೆಯಿಟ್ಟು ಮರುಗುತ್ತಂ ಪರಿವ ಪುರೋಹಿತರುಂ ನಿಚ್ಚಮುಂ ನಿನ್ನ ನಾಶ್ರೈಸಿದೆಮ್ಮಂ ದಹಿಸುತ್ತ ಮಾಶ್ರಯಾಶನನಾಮಮಂ ಸಾರ್ಥಕಂಮಾಡಿ ರೆಂದನಲಂಗೆ ಬಾಯ್ವಿಟ್ಟುಬಿಗುತರ್ೊೞುವ ಸೋಮಯಾಜಿಗಳುಂ ಪೊತ್ತಗೆಯ ನಿರುಂಕಿ ಮಕ್ಕಳಂ ಪೆಗಲೊ ಳಾಂತುಳ್ದು ಪೆಂಡಿಗರ್ೂಡಿ ನಡುಗುತ್ತಂ ಪಾರುವ ಪಂಡಿತರುಂ ಬೊ

---

ಗಳಲನೆ- ಬೇಗನೆ, ಕೆವರಲ್-ಎರಚಲು. * * * * *

ಚಂಡರುಚಿರೋಚಿಯಂ- ಸೂರ್ಯನಂತಿರುವ ಕಾಂತಿಯನ್ನು, ಬಾಂದಳಕೆ- ಆಕಾಶಪ್ರದೇಶಕ್ಕೆ, ಪಜ್ಜಳಿಪ- ಪ್ರಜ್ವಲಿಸುವ, ದಳ್ಳಿಸೆ- ಆವರಿಸಲು. ... ... ||೯೫||

ಕಿರ್ಚುಕಿರ್ಚು- ಬೆಂಕಿಬೆಂಕಿ, ಪರಿಯಿಟ್ಟುದು- ಹರಿದುಬಂದಿತು, ಅಕಾಲಲಯಂ- ಅಕಸ್ಮಾತ್ತಾದ ನಾಶವು, ಮುಸಗಿತ್ತು- ಹಬ್ಬಿತು, ಮಿಳ್ತು- ಮೃತ್ಯುವು, ಅಲೆದುದು- ಪೀಡಿಸಿತು. ||೯೬||

ಅಳುರೆ- ಆವರಿಸಲು, ದುರ್ದಮರ- ದುಷ್ಟರ. ... ... ||೯೭||

ಮುಖಸಂತತಿಯೇ- ಯಜ್ಞಸಮೂಹವೇ ! ಮಾಣಿಪುದು- ತಪ್ಪಿಸುವದು, ಉಪಟಳಮಂ- ತೊಂದರೆಯನ್ನು. ... ... ... ... ||೯೮||

ಪುಯ್ಯಲ್ಚಿ- ಕೂಗಿ, ಆಶ್ರಯಾಶನನಾಮಮಂ- ಆಧಾರವಾದ ವಸ್ತುವನ್ನೇ ತಿನ್ನುವದು ಎಂಬ ಹೆಸರನ್ನು, ಬಿಗುತರ್- ಭಯಪಟ್ಟು, ಪೊತ್ತಗೆಯಂ- ಪುಸ್ತಕವನ್ನು, ಪೆಂಡಿಗರ್ೂಡಿ- ಹೆಂಡತಿಯರೊಡನೆಕೂಡಿ, ಬೊಮ್ಮಂ- ಪರಬ್ರಹ್ಮವು, ಏಗೆಯ್ವೆವ್- ಏನುಮಾಡುವೆವು, ಮಡುವೊಳ್- ಅಗಾಧಜಲದಲ್ಲಿ, ಆಳ್ವ- ಮು

ಮ್ಮ ನೆಮ್ಮ ನಗ್ನಿರೂಪಿಂ ಕೊಲ ಲೇಳ್ತಂದು ದೇಗೆಯ್ವೆ ವೆಂದಟ್ಟ ಸುಡುವಗ್ನಿ ಗಗಿದು ಮ ಡುವ್ರೊ ಳಾಳ್ವ ವೇದಾಂತಿಗಳುಂ ಕಟ್ಟದಿರೊ ಳ್ನಿಂದಕ್ಷತೆಯ ಸಭಿಮಂತ್ರಿಸು ತಿಟ್ಟು ವಾರ ಣಜಪಂಗೆಯ್ವಾಗ ಳುಟ್ಟುದುಮಂ ಸುಟ್ಟು ಶಿಖಾಶ್ಮಶ್ರುಗಳ ನಗ್ನಿಯುರುಪೆ ನಗ್ನಾಂಗರಾ ಗಿ ಜೈನದೀಕ್ಷೆವೆತ್ತರಂತೆ ಬಗುರ್ತು ದೆಸೆದೆಸೆಗೆ ಪಾಯ್ವ ಮಂತ್ರವಾದಿಗಳುಂ ಪಾಲುದ್ದವ್ವ ನುಂ ಪಾತ್ರಿಯೊ ಳ್ತೀವಿ ತಮ್ಮಂಗ ದಾಹುತಿ ಗಾಪೋಶನಮ ನೆರೆವಂತೆರೆದು ನಂದಿಪ ಲ್ನೆರೆ ಯ ದುರಿಯ ಕೋಳ್ಗೆ ಸೈರಿಸಲಾರದೆ ಸೈವರಿವ ಶಾಸ್ತ್ರವೇದಿಗಳುಂ ಗರಿಗರಿಲ ನಾಲ ಯ ಮುರಿಯೆ ನೆರಪಿದ ಭಕ್ಷ್ಯಭೋಜ್ಯಾಜ್ಯವೆಲ್ಲ ಮಸಕಳಿದು ದೆಂದೊಡಲುರಿಗೊಂಡು ಬಿ ಕ್ಕಿ ಬಿರಿದಳುತು ತಳರ್ವ ತರುಣದ್ವಿಜರು ಮಲ್ಲದಪ್ರೊಳ್ತನೊ ಳ್ಬವರಕ್ಕೆ ಪ್ರೊರಮಟ್ಟ ಫಲಂ ಸಿದ್ಧಿಸಿದು ದೆಂದು ಶಿಖಿಯ ಸಕೆಯಿಂ ಕುಂದಿ ಕುಂದಿ ಮೊರೆಯಿಡುತ್ತಂ ಗಳಿಗೆವಟ್ಟಲೊ ಡೆಯೆ ಗಳಲನೆ ಕೆಡೆವ ಜೋಯಿಸರುಂ ಶಿರೋವೇಷ್ಟಯನುರುಪುತ್ತೆ ಭೋಂಕನೆ ಕಳೆದು ಬಿಸುಟು ತಲ್ಲಣಿಸಿ ತಲೆದಡಪುತ್ತೇಳ್ತಂದು ಶಿವಾಗಂಗದ ಪಿಂದಣ ಜಲಕುಂಡದೊಳ್ಪಡಲಿ ಡುವುಪಾಧ್ಯಾಯರು ನಿಂತಂತೆಲ್ಲರು ಮಾಗೊಬಿಟ್ಟರೊಳ್ ಶಿವದೂತಕರ್ಬನ್ನಂಬಟ್ಟು ಗೋ ಳುಂಡೆಗೊಂಡಳ್ಕಿ ಬಳ್ಕಿ ಪೆಬ್ಬ ಭಾಸ್ಕರದೇವ ನಂಘ್ರಿಗಳೆಡೆಗೆ ಪರಿತಂದುವಲ್ಗಿರ್ದು ಶರಣ್ಬೊ ಕ್ಕು ಸಾಷ್ಟಾಂಗವೆರಗಿ ॥ * * * * * *

ಚಂ ॥ ಶರಣಗಣಾಗ್ರಗಣ್ಯ ಕರುಣಾಮೃತಪೂರ್ಣಕಟಾಕ್ಷ ಕಾಲಸ । ಹ್ಮರನವತಾರ ನಿಮ್ಮಯಮಹತ್ವ ಮದೇಂ ಜಡಬುದ್ಧಿಗಳ್ಗೆ ಗೋ ॥ ಚರಿಕುಮೆ ಮುನ್ನ ಮಾಮರಿಯ ದುದೆಸಗಿರ್ದಪರಾಧಮೆಲ್ಲಮಂ । ಪರಗುಣಶಾಲಿ ಸೈರಿಪುದು ನುಡಿಪು ದಿಂದೆಮಗಾದ ತಾ ಪಮಂ ॥ ... ... ... ... ೯೯

ಕಂ ॥ ಪರಮಪ್ರಸಾದಶಿಖಿ ಸು । ಟ್ಟುರುಪಿದು ದೆಮ್ಮಗ್ರಹಾರಮಂ ದ್ವಿಜ ರೆಲ್ಲಂ ॥ ಕ ರಮೆ ದವಾಗ್ನಿಗೆಸಿಲ್ಕಿದ । ತರುಣದ್ವಿಜವೃಂದದಂತೆ ಕರಿಮುರಿವೋದರ್ ॥ ೧೦೦

---

ಳುಗುವ, ಕಟ್ಟದಿರೊಳ್- ಮುಂಗಡೆಯಲ್ಲಿ, ವಾರಣಜಪಂಗೆಯ್ವ- ಅಗ್ನಿಯ ಪ್ರಾಬಲ್ಯವಂತೆಡೆಯುವ ಜಪ ವನ್ನು ಮಾಡುವ, ಶಿಖಾಶ್ಮಶ್ರುಗಳಂ-ಜುಟ್ಟು ಮೀಸೆಗಳನ್ನು, ಉರುಪೆ- ಸುಡಲು, ನಗ್ನಾಂಗರ್- ಬೆತ್ತಲೆಗ ಳು, ಜೈನದೀಕ್ಷೆವೆತ್ತರಂತೆ- ದಿಗಂಬರತ್ವವಂ ಹೊಂದಿದಹಾಗೆ, ಪಾಯ್ವ- ಓಡುವ, ಆಪೋಶನಮಂ- ನೀ ರಿನ ಆಹಾರವನ್ನು ( ಅಂದರೆ ಭೋಜನಾರ್ಥವಾಗಿ ಆಹಾರವನ್ನಿಕ್ಕಿ ಕಡೆಗೆ ಕೊಡುವ ಜಲೋಪಹಾರವು ) ಎರೆವಂತೆ- ಹೊಯುವಹಾಗೆ, ನಂದಿಪಲ್- ಆರಿಸುವದಕ್ಕೆ, ನೆರೆಯದೆ-ಸಮರ್ಥರಾಗದೆ, ಕೋಳ್ಗೆ- ಬಾಧೆಗೆ, ಸೈವರಿವ- ಓಡುವ,ಅಸಕಳಿದುದು- ಅಧೀನದಪ್ಪಿತು,ಒಡಲುರಿಗೊಂಡು- ಹೊಟ್ಟೆಯಲ್ಲಿ ತಾಪವಂಹೊಂದಿ, ಬಿ ಕ್ಕಿ- ಬಿಕ್ಕಳಿಸಿ, ಬವರಕ್ಕೆ- ಯುದ್ಧಕ್ಕೆ, ಗಳಿಗೆವಟ್ಟಲ್- ಕಾಲವಂತಿಳಿಯಪಡಿಸುವ ಯಂತ್ರದ ಬಟ್ಟಲು, ಕೆ ಡೆವ- ಬೀಳುವ, ಶಿರೋವೇಷ್ಟಯಂ- ತಲೆಯ ಪಾಗನ್ನು, ತಲೆದಡಪುತ್ತೆ- ತಲೆಯನ್ನು ಸವರಿಕೊಳ್ಳುತ್ತಾ, ಜಲಕುಂಡದೊಳ್- ನೀರಿನಹಳ್ಳದಲ್ಲಿ, ಪಡಲಿಡುವ- ಬೀಳುವ, ಬನ್ನಂಬಟ್ಟು- ಕಷ್ಟಪಟ್ಟು, ಗೋಳುಂಡೆ ಗೊಂಡು- ಗೋಳಾಟದ ಪುಂಜವಂಹೊಂದಿ, ಶರಣ್ಬೊಕ್ಕು- ಸಂರಕ್ಷಕನನ್ನಾಗಿ ಹೊಂದಿ. * * *

ನಂದಿಪುದು- ಆರಿಸುವದು. ... ... ... ... ॥೯೯॥

ಪರಮಪ್ರಸಾದಶಿಖಿ- ಉತ್ಕೃಷ್ಟವಾದ ಪ್ರಸಾದವೆಂಬ ಬೆಂಕಿಯು, ಕರಮೆ- ಅತ್ಯಂತವಾಗಿ, ತರು ಣದ್ವಿಜವೃಂದದಂತೆ- ಹಕ್ಕಿಮರಿಗಳ ಗುಂಪಿನಹಾಗೆ, ಕರಿಮುರಿವೋದರ್- ಕರಿತುಗೊಂಡರು. ॥೧೦೦॥

ಉ ‖ ಬೆಂದುದು ದೇವ ಮಾಧವನ ಪೆರ್ಮನೆ ರಾಘವ ನಾಲಯಾಳಿ ಗೋ | ವಿಂದನ ಗೇಹ ಮಚ್ಯುತನ ಸದ್ಮ ಮನಂತನ ಬೀಡು ದೇವಕೀ ‖ ನಂದನ ನಾಗರಂ ಹರಿಪುರೋಹಿ ತನಾಶ್ರಯ ಮರ್ಕಭಟ್ಟನಾ | ಮಂದಿರ ಮಾದಿವಿಷ್ಣುಲನ ಚೌರಿಗೆ ಕೂಚಯ ಸನ್ನಿಕೇತನಂ‖

ವ ‖ ಎಂದು ಗರಳದುರಿಯಿಂ ನೊಂದಸುರ ರಭವನಿದಿರೊಳ್ | ದೈನ್ಯಂಬಡುವ ತನಲನುರಿಯಿಂ ನೊಂದ ಭೂಸುರ ರ್ಘನಮಹಿಮ ನಿದಿರೊಳ್ ಬ್ಬಯಿಪ್ಪಟ್ಟು ದೈನ್ಯಂಬಟ್ಟು ಕಾರುಣ್ಯಮಂ ಪಾರ್ದು ಸಾರ್ದು ‖ * * * * * *

ಕಂ ‖ ಅಳಿಪ ರಭಿಮಾನಹೀನ | ರ್ಖಲ ರೆನಿಪೆಮ್ಮಲ್ಲಿ ಗುಣಮ ನರಸದೆ ನಿಮ್ಮ ‖ ಜ್ವಲಗುಣಮಂ ಮೆರೆದೆಮ್ಮಂ | ವಿಳಾಸದಿಂ ಪೊರೆಯು ದೆಂದು ಮುಗು ಳ್ದರಗಲೊಡಂ ‖ ೧೦೨

ಚಂ ‖ ಅಭಯಮ ನಿತ್ತು ವಿಪ್ರತತಿ ಗಾಕ್ಷಣದೊಳ್ಕರಕಂಜಯುಗ್ಮಮಂ | ಶುಭ ಮತಿ ನೀಡಿ ತಾಂ ಬರಿಸಿ ಪಾವಕರೂಪಿನ ಸುಪ್ರಸಾದಮಂ ‖ ವಿಭವದೆ ತಾಳ್ದು ತತ್ಪುರಮ ನೆಂದಿನವೋಲ್ನಿಗಳುತ್ತು ಶಂಭುಸ | ನ್ನಿಭ ನಳದರ್ಗೆ ಕೊಟ್ಟಸುವ ನಾದ್ವಿಜರಂ ಪೊರೆದಂ ಗುಣಾಧಿಕಂ ‖ ... ... ... ೧೦೩

ಕಂ ‖ ಮದದಿಂ ದಿವಿಜರ್ ಮುನ್ನಂ | ಸದೆದಂ ಮದಮಳಿದು ತನ್ನ ಮರೆವುಗೆ ಕಾದಂ‖ ವಿದಿತಸ್ವತಂತ್ರ ನಾದ್ವಿಜ | ಕದಂಬಮಂ ನೃಪತಿ ಬಿಬ್ಬ ಭಾಸ್ಕರದೇವಂ ‖ ೧೦೪

ಕಂ ‖ ಹರಭಕ್ತಿ ಯಿಲ್ಲದೊಡೆ ಭೂ | ಸುರ ನಧಮಂ ಶ್ವಪಚನಿಂ ಶ್ವಪಾಕಂ ಸಲೆ ಕಂ ‖ ಕರಭಕ್ತಿಯುಳ್ಳಡಾತನೆ | ಪಿರಿಯಂ ದ್ವಿಜರಿಂದೆ ಸತ್ಯ ಮಿದು ಮನುಜೇಂದ್ರ ‖

ಕಂ ‖ ಹರಭಕ್ತಿಗೆಟ್ಟದಕ್ಷನ | ಶಿರಮಂ ತರಿ ದಿತ್ತನಲ್ತೆ ಕುರಿದಲೆಯಂ ಮಾ ‖ ದರಚನ್ನಯ ನೊಡನುಂಡಂ | ಪರಮೇಶಂ ನೃಪತಿ ಕೇಳ್ದು ನೀ ನರಿಯದುದೇ ‖ ೧೦೬

ಕಂ ‖ ಗುರುದೇವತೆ ನಿಗಮಾಗಮ | ವರಮಂತ್ರಂ ಮಿಥ್ಯೆಯೆಂದು ಪುಸಿಯುದರಿಂ ಪಾ ‖ ರ್ವರೆ ಪೊಲೆಯ ರಲ್ತೆ ಧಾತ್ರೀ | ವರ ಪುಸಿವನೆ ಪೊಲೆಯ ನೆಂಬ ವಚನವಿ ನಿಳೆಯೊಳ್ ‖ ... ... ... ... ೧೦೭

ಕಂ ‖ ಶಿವಭಕ್ತನಾದ ಪೊಲೆಯಂ | ಗವನೀಸುರ ರೆಣೆಯೆ ಭಕ್ತಿರಹಿತರ್ಕೀಳ್ಗಳ್ ‖ ಧವ ಮತ್ತಂ ದೊಡೆಯನೆಂ | ಬವಿಕಲಮೃಡಭಕ್ತ ನಿರ್ವ ನೀಧಾರುಣಿಯೊಳ್ ‖ ೧೦೮

---

ಪೆರ್ಮನೆ- ದೊಡ್ಡಮನೆಯು, ಆಲಯಾಳಿ-ಮನೆಯ ಪಜ್ತಿಯು, ಗೇಹಂ, ಸದ್ಮಂ, ಬೀಡು, ಆಗರಂ, ಆಶ್ರಯಂ, ಮಂದಿರಂ, ಚೌರಿಗೆ, ಸನ್ನಿಕೇತನಂಎಂಬ ಶಬ್ದಗಳೆಲ್ಲವೂಮನೆಯೆಂಬ ಅರ್ಥವುಳ್ಳವುಗಳು.||೧೦೧||

ಗರಳದ- ವಿಷದ, ಅನಲನ-ಬೆಂಕಿಯ, ಪಾರ್ದು- ಅಪೇಕ್ಷಿಸಿ, ಸಾರ್ದು-ಸಮೀಪವಂ ಹೊಂದಿ. *

ಅಳಿಪರ್- ದುಷ್ಟರು, ಖಲರ್- ನೀಚರು, ಅರಸದೆ- ಹುಡುಕದೆ. ... ||೧೦೨||

ಕರಕಂಜಯುಗ್ಮಮಂ- ತಾವರೆಯಂತಿರುವ ಎರಡುಕೈಗಳನ್ನು, ಅಸುವಂ- ಪ್ರಾಣವನ್ನು. ||೧೦೩||

ಸದೆದಂ- ಕೊಂದನು, ಮರೆವುಗೆ- ಶರಣಾಗತರಾಗಿ ಬರಲು, ಕಾದಂ- ಕಾಪಾಡಿದನು. ||೧೦೪||

ಅಧಮಂ- ನೀಚನು, ಶ್ವಪಚನಿಂ- ಆಚಾರಹೀನನಿಗಿಂತಲೂ, ಶ್ವಪಾಕಂ- ನಾಯಿಮುಟ್ಟಿದ ಅಡಿಗೆಯಂತೆ ಹೇಯನು. ... ... ... ||೧೦೫||೧೦೬||

ಮಿಥ್ಯೆ- ಸುಳ್ಳು, ಪುಸಿಯುದರಿಂ ಸುಳ್ಳಾಡುವದರಿಂದ, ಧಾತ್ರೀವರ- ರಾಜನೇ ! ||೧೦೭||

ಕಂ ॥ ಆಮಾದರದಡೆಯ್ಯಾನ । ಸೀಮಾತೀತಪ್ರಭಾವ ಮೆಂತೆನೆ ಪೇಳ್ವೆಂ ॥ ಭೂ ಮೀಸುರ ನೋಪ್ಪಂ ಕು । ಷ್ಮಾಮಯಮಯಕಾಯ ನಿರುಳೊಳುರ್ಬಿದ ತಮದೊಳ್ ॥

ಮ ॥ ಸ್ರ ॥ ಅರಸುತ್ತಂ ಧೇನುವಂ ಭಕ್ತನ ಗೃಹನಿಕಟಸ್ಥಾನ ಕೇಳ್ತಂದು ಮುಂ ತೆ। ಳ್ಚರ ದಾತಂ ಮಿಂದ ನೀರ್ದುಂಬಿದ ಕುಳಿಯೊಳ್ ಕಾಲಿಟ್ಟು ಡಾಜಾನುಪಂಕಂ ॥ ನೆ ರೆ ತೀವಿತ್ತಂತದಂ ತಾಂ ತೊಳೆದು ಜವದಿ ನಾತ್ಮಾಲಯಕ್ಕೈದುತಂ ನೇ । ಸರ ಬಿಂಬಂ ಮೂಡುವಂದೀಕ್ಷಿಸೆ ಪದ ಮೆಸೆದತ್ತುಜ್ವಳಸ್ವರ್ಣತೇಜಂ ॥ ೧೧೦

ಮತ್ತೇ ॥ ಅದ ನೊಲ್ದೀಕ್ಷಿಸಿ ವಿಸ್ಮಯಂಬಡೆದು ವಿಪ್ರಂ ಬಂದು ತದ್ವಾರಿ ತೀ । ವಿ ದ ತತ್ಕೂಪದೊಳಾಳ್ದು ಕುಷ್ಠರುಜೆಯಂ ಪೋಗಾಡಿ ದಿವ್ಯಾಂಗನಾ ॥ ಗಿ ದಯಾವಾರಿಧಿ ದೊಡದೇವ ನಡಿಯೊಳ್ಮೆಯ್ಯಿಕ್ಕಿ ಕೊಂಡಾಡಿ ತ । ಳ್ವದೆ ತತ್ಸಾರಕೃಪಾರಸಂಬಡೆದು ಗೇಹಂಬೊಕ್ಕ ನಾನಂದದಿಂ ॥ ... ... ... ೧೧೧

ಕಂ ॥ ಅದು ದೊಡದೇವನುಜ್ಜನ । ದುದಕಂ ಜಳ ಮುಟ್ಟೆ ಸಿದ್ಧರಸ ಮಥಿನವಮು॥ ಪ್ಪುದು ತಪ್ಪದು ಮೇ ಣಲ್ಲದೊ । ಡೊದವಿಕುಮೆ ವಿವರ್ಣತನು ಸುವರ್ಣತೆಯುನಣಂ ॥

ಕಂ ॥ ಶಿವದಾಸಭೀಮಯಂ ಭೂ । ದಿವಿಜರ ಕುಷ್ಠಮನ್ನೆ ಪರಿದ ನೆಂಬರ್ ಮುನ್ನಂ॥ ಜವದಿಂ ದೊಡಯ ನೀವಿ । ಪ್ರವರನ ಕುಷ್ಠಮನ ಪರಿದ ನೀಗ ಳ್ದರೆಯೊಳ್ ॥ ೧೧೩

ವ ॥ ಎಂದಿಂತು ಸರ್ವರುಂ ಕೀರ್ತಿಸುತ್ತೆ ಮಿರ್ಪಿ ನಮುಲ್ಲಿ ತದ್ವಾರ್ತೆಯಂ ಕೇಳ್ದಾ ದೇಶದೊಳರ್ಪೀಳ್ವರುಕುಷ್ಠರೋಗ ಳಾದ ಪಾರ್ವರೇಳ್ತಂದು ತನ್ಮಜ್ಜನಜಲಪೂರ್ಣಕುಂ ಡವೊಳ್ಮುಳುಂಗಿ ॥ * * * * * * * *

ಕಂ ॥ ಪರಿಶುದ್ಧಕಾಯ ರಾಗು । ತ್ತಿರ ದಾಗ ಳ್ದೊಡದೇವ ನಂಘ್ರಿಗೆ ಪೊಡಮ ॥ ಟ್ಟುರುತರತತ್ಕರುಣಾಮೃತ । ಶರಧಿಯೊ ಳೋಲಾಡಿ ಬಾಳ್ದರಿಳೆ ಯರಿವಿನೆಗಂ ॥ ೧೧೪

---

## ಮಾದರದಡೆಯ್ಯಾನ ಕಥೆ.

॥೧೦೮॥ ಸೀಮಾತೀತಪ್ರಭಾವಂ- ಎಲ್ಲೆಯಂ ಮೀರಿದ ಮಹಿಮೆಯುಳ್ಳ, ಕುಷ್ಮಾಮಯಮಯಕಾಯಂ- ಅಧಿಕವಾದ ಕುಷ್ಠರೋಗವುಳ್ಳ ಶರೀರವುಳ್ಳವನಾಗಿ, ಇರುಳೊಳ್- ರಾತ್ರಿಯಲ್ಲಿ, ಉರ್ಬಿದ- ಅತಿಶಯವಾದ, ತಮದೊಳ್- ಕತ್ತಲೆಯಲ್ಲಿ. ... ... ॥೧೦೯॥

ಧೇನುವಂ- ಹಸುವನ್ನು, ಭಕ್ತಗೃಹನಿಕಟಸ್ಥಾನಕೆ- ಶಿವಭಕ್ತನಾದ ಮಾದರಚನ್ನಯ್ಯನ ಮನೆಯ ಬಳಿಗೆ, ಎಳ್ಚರದೆ- ಜಾಗರೂಕನಾಗಿರದೆ, ಆತಂ- ಆ ಮಾದರಚನ್ನಯ್ಯನು, ಮಿಂದ- ಸ್ನಾನವಂ ಮಾಡಿದ, ಕುಳಿಯೊಳ್- ಹಳ್ಳದಲ್ಲಿ, ಆಜಾನು- ಮಂಡಿಯವರಿಗೂ, ಪಂಕಂ- ಕೆಸರು, ನೇಸರ- ಸೂರ್ಯನ, ಉಜ್ವಳಸ್ವರ್ಣತೇಜಂ- ಪ್ರಕಾಶಿಸುವ ಚಿನ್ನದಹಾಗೆ ತೇಜಸ್ಸುಳ್ಳದ್ದಾಗಿ. ... ॥೧೧೦॥

ತದ್ವಾರಿ- ಆ ಚನ್ನಯ್ಯನು ಸ್ನಾನಮಾಡಿದ ನೀರು, ತತ್ಕೂಪದೊಳ್- ಆ ಹಳ್ಳದಲ್ಲಿ, ಆಳ್ದು- ಮುಳುಗಿ, ಪೋಗಾಡಿ- ಹೋಗಲಾಡಿಸಿಕೊಂಡು, ಮೆಯ್ಯಿಕ್ಕಿ- ನಮಸ್ಕಾರವಂ ಮಾಡಿ. ॥೧೧೧॥

ಮಜ್ಜನದ- ಸ್ನಾನದ, ಸಿದ್ಧರಸಂ- ಕಬ್ಬಿಣವಂ ಚಿನ್ನವಂ ಮಾಡುವ ನೀರು, ವಿವರ್ಣತನು- ಬಣ್ಣವಿಲ್ಲದೇಇದ್ದ ದೇಹವು, ಅಣಂ- ಅತ್ಯಂತವಾಗಿ. ... ... ॥೧೧೨॥

॥೧೧೩॥ ಅರಿವಿನೆಗಂ- ತಿಳಿಯುವವರೆಗೆ. ... ... ॥೧೧೪॥

ವ|| ಮತ್ತಂ || ಕಂ || ಪುರಹರವಿದ್ವೇಷಿದ್ವಿಜ | ಶಿರೋಬ್ಜಕುಂಜರ ನೆನಿಪ್ಪ ಬಿರುದಾಂತೆಸೆವಂ || ವರಡೋಹರಕಕ್ಕಯ್ಯಂ | ಚರಗುರುಶಿವಲಿಂಗಭಕ್ತ ನೀವಸುಮತಿಯೊಳ್ || ... ... ... ೧೧೫

ವ|| ಆ ಘನಮಹಿಮ ನವನಿಪ ನೊಲ್ವಗ್ರಹಾರದೊಳೋರ್ವಂ ಪುರಾಣಭಟ್ಟ ನೆಂಬಪಾರ್ವಂ ದುಷ್ಟದ್ವಿಜರ್ಗೆ ಪುರಾಣಮ ನುಸಿರ್ವುದಂ ಕೇಳುತ್ತ ವಿಪ್ರಿನ ಮಾಪುರಾಣಭಟ್ಟಂ ಸಡಗರಂ ಮಿಕ್ಕು || * * * * * * *

ಕಂ || ಮೃಡ ನಬ್ಜಭವನಶಿರಮಂ | ಪಿಡಿಯುತೆ ತಿರಿದುಂಡ ನೆಂಬ ನಧಟಿಂದೀಶಂ || ತಡೆಯದೆ ವಿಷ್ವಕ್ಸೇನನ | ಜಡಿದಿರಿದಂ ತಿಸುಳದಿಂದಮೆಂಬುದ ನುಸಿರು || ೧೧೬

ಚಂ || ನರಹರಿ ಯಾಹಿರಣ್ಯಕಸುರಾರಿಯ ನಿಕ್ಕಿದ ನೆಂದುಪೇಳ್ವನಾ | ನರಹರಿಯಂಗಮಂ ಶರಭರೂಪಿನ ರುದ್ರ ನಡರ್ತುಸೀಳ್ದನಂ || ಉರದು ಸಿರಂ ತ್ರಿವಿಕ್ರಮನ ಕಾಲ್ನಭಮಂಟಿದು ದೆಂಬ ನಲ್ಲದೀ | ಶ್ವರ ನವನಸ್ಥಿಯಂ ಮುರಿದು ತಾಳ್ದ ನೆನುತ್ತರೆಯಂ ದ್ವಿಜಾಧಮಂ || ... ... ... ... ೧೧೭

ಚಂ || ಹರಿಮತ್ಸ್ಯಾಕೃತಿದಾಳ್ದು ಸೋಮುಕನ ಕೊಂದಾಮ್ನಾಯಮಂ ತಂದನೆಂ | ದೊರೆವಂ ವಾಲಮ ನೊತ್ತಿ ಸುತ್ತಿದ ನದಂ ಕೊಂಡುತ್ತಮಾಂಗಕ್ಕೆ ಶಂ || ಕರ ನೆನ್ನಂ ಕಿಟರೂಪಿನಿಂ ನೆಗಪಿದಂ ದೈತ್ಯಾರಿ ತಾ ನೆಂಬ ನೀ | ಧರೆಯಂ ತತ್ಕಿಟಿಯಂ ಗುಹಂ ಸದೆದುದಂ ಪೇಳಂ ಪುರಾಣಾರ್ಥಮಂ || ... ... ೧೧೮

ಮಲ್ಲಿಕಾಮಾಲಾವೃತ್ತಂ || ದಕ್ಷ ನಧ್ವರದಗ್ರಪೂಜೆಯ ನಾಳ್ದ ನಚ್ಯುತ ನೆಂಬನಾ | ತ್ರ್ಯಕ್ಷ ನಾಹರಿಮಸ್ತಕಂಗಡಿ ದಂದಮಂ ಬಿಡದೋದ ನ || ಬ್ಜಾಕ್ಷನೇ ಜಗದಾದಿಶಕ್ತಿಯ

---

## ಡೋಹರಕಕ್ಕಯ್ಯನ ಕಥೆ.

ಪುರಹರ......ಕುಂಜರಂ— ಪುರಹರ- ಶಿವನಲ್ಲಿ, ವಿದ್ವೇಷಿ- ವೈರವುಳ್ಳ, ದ್ವಿಜ- ಹಾರ್ವರ, ಶಿರಃ- ತಲೆಯೆಂಬ, ಅಬ್ಜ- ಕಮಲಗಳಿಗೆ, ಕುಂಜರಂ- ಆನೆಯು. ... ... ||೧೧೫||

ಒಲ್ವ- ಪ್ರೀತಿಸುವ, ಮಿಕ್ಕು- ಅಧಿಕವಾಗಿ. * * * * *

ಅಬ್ಜಭವನ- ಬ್ರಹ್ಮನ, ತಿರಿದು- ಭಿಕ್ಷೆಯನ್ನೆತ್ತಿ, ಅಧಟಿಂದೆ- ಶೌರ್ಯದಿಂದ, ವಿಷ್ವಕ್ಸೇನನ- ವಿಷ್ವಕ್ಸೇನನೆಂಬ ವೈಕುಂಠದ್ವಾರಪಾಲಕನನ್ನು, ಇರಿದಂ- ಕತ್ತರಿಸಿದನು, ತಿಸುಳದಿಂದಂ- ತ್ರಿಶೂಲದಿಂದ, ಉಸಿರಂ- ಹೇಳನು. ... ... ... ||೧೧೬||

ನರಹರಿ- ನೃಸಿಹ್ಮನು, ಆಹಿರಣ್ಯಕಸುರಾರಿಯಂ- ಹಿರಣ್ಯಕಶಿಪುವೆಂಬ ರಾಕ್ಷಸನನ್ನು, ಇಕ್ಕಿದಂ-ಕೊಂದನು, ತ್ರಿವಿಕ್ರಮನ-ವಾಮನನ, ನಭಮಂಟಿದುದು- ಆಕಾಶವಂ ಸೋಂಕಿತು, ಅಸ್ಥಿಯಂ- ಮೂಳೆಯನ್ನು, ಒರೆಯಂ- ಹೇಳನು. ... ... ... ||೧೧೭||

ಆಮ್ನಾಯಮಂ- ವೇದವನ್ನು, ವಾಲಮಂ- ಬಾಲವನ್ನು, ಕಿಟರೂಪಿನಿಂ- ಹಂದಿಯ ಆಕಾರದಿಂದ, ದೈತ್ಯಾರಿ- ವಿಷ್ಣುವು, ಗುಹಂ- ಷಣ್ಮುಖನು. ... ... ||೧೧೮||

ಅಧ್ವರದ- ಯಜ್ಞದ, ಆತ್ರ್ಯಕ್ಷಂ— ಆ ಮುಕ್ಕಣ್ಣನು, ಆಹರಿಮಸ್ತಕಂಗಡಿದ- ಆ ವಿಷ್ಣುವಿನ ತಲೆಯನ್ನು ಭೇದಿಸಿದ, ಓದಂ- ಓದುವದಿಲ್ಲವು, ದಿವ್ಯೋಕ್ಷರಾಡ್ಧ್ವಜಂ- ಶ್ರೇಷ್ಠವಾದ ವೃಷಭೇಶ್ವರನೇ

ನುತ್ತಪೇಳ್ವ ನವಂಗೆ ದಿ । ಪ್ಯೋಕ್ಷರಾಡ್ಧ್ವಜ ನಾಳ್ದ ನೆಂದುಸಿರು ವೃಷಾಪರಭೂ
ಷಣಂ ॥ ... ... ... ... ೧೧೯

ಶಾ ॥ ಸರ್ವಂ ವಿಷ್ಣುಮುಖಂ ದ ಲೆಂದು ನುಡಿವಂ ಕಲ್ಪಾಂತದೊ ಳ್ವಿಷ್ಣುವಂ । ಶ
ರ್ವಂ ಮರ್ದಿಪ ನೆಂಬುದಂ ನುಡಿಯ ನಾವ್ಯಾಸಂ ಮಹಾಕಾಶಿಯೊಳ್ ॥ ಸರ್ವ ಸ್ಸರ್ವಡೆ
ಮುಕುಂದನೇ ಪರ ಮೆನು ತ್ತಂದೆತ್ತಿದಂ ತೋಳಸಂ । ದುರ್ವೃತ್ತಂಬ ನದಂ ಕರಂ ಮುರಿ
ದ ನಾನಂದೀಶ ನೆಂಬರ್ಥಮಂ ॥ ... ... ೧೨೦

ಕಂ ॥ ಒರೆಯಂ ಹರಿಯಂ ತವೆ ಸುಂ । ಹರಿಸಿದ ಕತದಿಂದೆ ಪುರಹರಂ ಸ್ಮರಹರ ನ ॥
ಧ್ವರಹರ ನೆಂಬಂತಿರೆ ಹರಿ । ಹರ ನೆನಿಸುಗು ಮೆಂಬ ನೈಗಮಾರ್ಥಮನುಸಿರಂ ॥ ೧೨೧

ವ ॥ ಇಂತೆಂ ದೊರೆವ ದುರ್ದಾಂತನ ದುರ್ಭಾಷಣಮಂ ಕೇಳ್ದು ಕಕ್ಕಯ್ಯಂ ಕಾಲಾ
ಗ್ನಿರುದ್ರನಂತೆ ಕಾಯ್ಪು ನೊಳಕೊಂಡು॥ * * * * * *

ಚಂ ॥ ಪುಸಿಕ ನಿವಂ ಪುರಾಣಸಹಜಾರ್ಥಮ ನೆನ್ನದೆ ವಂಚಿಸುತ್ತ ಪೆ । ರ್ಬುಸಿ
ಯನೆ ಪೇಳ್ದಪಂ ಶಿವನ ಪೇರ್ಮೆಗೆ ಸೈರಿಸ ಲೊಲ್ಲದಾತನು ॥ ಮಸೆ ದಲಗಿಂ ಕರುತ್ತಿರಿವು
ದಾತನ ಪೊತ್ತುಗೆಗೀಳ್ವು ಸುಟ್ಟಡಂ । ಪೊಸೆವುದು ವೀರಭಕ್ತವಿಹಿತಂಗಡ ಧಾತ್ರಿಯೊಳೀ
ದುರಾತ್ಮನಂ ॥ ... ... ... ೧೨೨

ಕಂ ॥ ತರಿಸಂದು ಕೊಲ್ವೆ ನೆನುತಂ । ನೆರೆ ಗುಡುಗುಡಿಸುತ್ತೆ ಸಬಳದಿಂ ದವ ನೆರ್ದೆ
ಯಂ ॥ ಮರುಮೊನೆ ಪಾಯ್ತರೆ ಮುಳಿಸಿಂ । ಇರಿದಂ ತಲೆದರಿದು ಕೆಡಪಿದಂ ದೂಷಕನಂ ॥

ವ ॥ ಆಗ ಳೆಲ್ಲರುಂ ಪಾರ್ವನ ಸಿರಿಯಿ ಲಕ್ಕ್ಯಮೆ ಯೆನೆ ಪಾರ್ವ ನಳ್ತಿವಂ ಪರಮಪಾ
ತಕ ನಂತದಕ್ಕೆ ದೃಷ್ಟಾಂತಮಂ ನೋಡಿ ಮೆನೆ ನೆರ ದಖಿಳರುಂ ನೋಳ್ಪಾಗಳ್ ॥ * *

ಕಂ ॥ ಜುರುಜುರಿಪಕೀವ್ರ ನೆತ್ತ । ರ್ಗರಗುತೆ ರ್ಝುಮ್ಮೆಂದು ಮೊರೆವ ನೊಳವಿರೆ ಜ
ವಪಿಂ ॥ ನೆರೆ ವಿಲಿವಿಲಿಸುವ ಪುಳುಗ । ಳ್ಪೊರಗೊಳ ಗಾಪೆಣದೊ ಳಿಡಿದು ತೀವಿದು ವೆತ್ತಂ॥

ಮ ॥ ಸ್ರ ॥ ಇದ ನೆಲ್ಲ ರ್ಕೇಳ್ದು ವಿಪ್ರಾಭೂಸುರ ರರಿಯುತೆ ಧಾತ್ರೀಶ ಮೇಣಿಂತುಗೆ

---

ಧ್ವಜದಲ್ಲುಳ್ಳ ಶಿವನು, ವೃಷಾಪಗಭೂಷಣಂ- ಸುಳ್ಳುಮಾತುಳ್ಳವನು. ... ॥೧೧೯॥

ಕಲ್ಪಾಂತದೊಳ್- ಪ್ರಳಯಕಾಲದಲ್ಲಿ, ಪರಂ- ಉತ್ಕೃಷ್ಟನು, ಉರ್ವುತ್ತೆ- ಉತ್ಸಾಹಪಡುತ್ತ.

ಕತದಿಂದೆ- ಕಾರಣದಿಂದ, ನೈಗಮಾರ್ಥಮಂ- ವೇದಾರ್ಥವನ್ನು. ... ॥೧೨೧॥

ಕಾಯ್ಪಂ-ಕೋಪವನ್ನು. * * * * * *

ಪುಸಿಕಂ- ಸುಳ್ಳಾಡುವವನು, ಪೆರ್ಬುಸಿಯನೆ- ದೊಡ್ಡಸುಳ್ಳನ್ನು, ಅಲಗಿಂ-ಚೂರಿಯಿಂದ, ಕರುತ್ತು-
ಕೋಪಗೊಂಡು, ಪೊತ್ತುಗೆಗೀಳ್ದು- ಪುಸ್ತಕವಂಕಿತ್ತು, ಪೊಸೆವುದು- ಕಾಲಿನಲ್ಲಿ ತಿಕ್ಕುವದು, ವೀರಭಕ್ತವಿ
ಹಿತಂಗಡ- ಶೂರನಾದ ಶಿವಭಕ್ತನಿಗೆ ಉಚಿತವಾದುದಲ್ಲವೇ ? ... ... ॥೧೨೨॥

ಸಬಳದಿಂದೆ- ಸುರಗಿಯಿಂದ, ಮರುಮೊನೆ- ಈಕಡೆಯಿಂ ನುಗ್ಗಿ ಆ ಕಡೆಗೆ ಹೊರಟ ಮೊನೆಯು,
ಪಾಯ್ತರೆ- ಭೇದಿಸಿಕೊಂಡುಬರುವಹಾಗೆ. ... ... ॥೧೨೩॥

ನೆತ್ತರ್ಗೆ- ರಕ್ತಕ್ಕೆ, ನೊಳಂ- ನೊಣವು, ವಿಲಿವಿಲಿಸುವ- ವಿಲಿವಿಲಿ ಯೆಂದು ಶಬ್ದಮಾಡುವ, ಇಡಿ
ದು- ತುಂಬಿ. ... ... ... ॥೧೨೪॥

ಯ್ಯ । ಗ್ಗದ ವೇಷಂ ತಾಳ್ದ ಕಕ್ಕಯ್ಯನನ್ಸಧಮಕುಲೋದ್ಭೂತ ಸಂದಾಡಲ್ಕಂತೆ ॥ ಕ್ಕುವೆ
ಪೇಳ್ದನೆಂಮ ಸುಂದಪ್ರಕಿಮಶರಣಚಾರಿತ್ರಮಂ ಪೇಳುತಂ ಸಂ । ಮುದದಿಂ ದಾಪ್ಪರ್ವ
ನಾಸ್ಥಾನದೊಳ್ ಕುಮಾರಭೂಭೃನ್ಮಹೇಂದ್ರಾ ವೃಷೇಂದ್ರಾ ॥ .. ೧೧೫೫
ಕಂ ॥ ಶ್ರೀಕಲ್ಲಿನಾಥಚರಿತಮು । ನಾಕರ್ಣಿಸಿ ಪೇಳ್ದ ಸುಜನ ರಿಳೆಯೊಳಗಸ್ರಾ ॥
ಲೋಕೋತ್ತರಪ್ರೂರ್ಣಸುಖಾ । ನೀಕಮ ನಗಜಾಧಿನಾಥ ನೋಲವಿಂ ಪಡೆವರ್ ॥ ೧೧೫೬
ಕಂ ॥ ವರಬಿಬ್ಬಭಾಸ್ಕರಾರ್ಯ್ಯನ । ಚರಿತಮ ನಾಕರ್ಣಿಪರ್ಗ ಪೇಳ್ವರ್ಗೆ ಸುಧೀ ॥ ಕ
ರಧರ ನೀವಂ ನಿಜಭಾ । ಸುರಸುಖಕರುಣಪ್ರಸಾದಸಿದ್ಧಿಯ ನಿಳೆಯೊಳ್ ॥ ೧೧೫೭
ಕಂ ॥ ಘನತರಮಾಪರದೂಡ । ಯ್ಯನ ಪರಮತಮಾದವಿದಳನಡೋಪರಕಕ್ಕ ॥ ಯ್ಯ
ನ ಪುಣ್ಯಚರಿತವ್ಲುಂ ಕೇ । ಳ್ವನಘಾ ರ್ಗಭಿಮತಸಮಸ್ತಸಂಪದ ಮುಕ್ಕುಂ ॥ ೧೧೫೮
ಲಲಿತಪದವೃತ್ತ ॥ ತಾಮರಸಲೋಚನಪಿತಾಮಹನಿಷೇವ್ಯ ವಿತತಾಮಲಚರಿತ್ರ
ಸತತಾಮಯವಿದೂರಾ । ತಾಮಸಜನಪ್ರಿಯ ನತಾಮರಮಹೀಜ ಮೃದುತಾಮಧುರಭಾಷ
ಜನತಾಮತವಿನೋದಾ ॥ ಸಾಮಜಪಸಂಯುತ ರಸಾಮರಪರಿಸ್ತುತ ಸಸಾಮಹಿತಕಾರ್ಯ
ಗುಹಸಾಮಜಮುಖಾರ್ಚ್ಯಾ । ಕಾಮಶರಣಪ್ರಿಯ ನಿಕಾಮ ಶುಭಶೀಲ ಜಯಕಾಮರಿಪು
ರೂಪ ಜಿತಕಾಮ ಬಸವೇಶ ॥ ... .... ... ೧೧೫೯
ಲಲಿತಪದವೃತ್ತ ॥ ಭರ್ಮಗಿರಿಮಂದಿರೆ ಹವಿರ್ಮುಖವರಾರ್ಚಿತೆ ಯಜುರ್ವಿಳಸ
ಮಂತ್ರಮಯೆ ಗೀರ್ಮಹಿತವಾಣೀ । ನಿರ್ಮಿತಜಗತ್ತ್ರಯೆ ಷಡೂರ್ಮಿಗಣವರ್ಜಿತೆ ಸುಶ

॥೧೧೫೬॥೧೧೫೭॥೧೧೫೮॥ ತಾಮರಸಲೋಚನಪಿತಾಮಹನಿಷೇವ್ಯ— ತಾಮರಸಲೋಚನ- ವಿಷ್ಣು, ಪಿತಾಮಹ- ಬ್ರಹ್ಮ, ಇವರುಗಳಿಂದ, ನಿಷೇವ್ಯ- ಸೇವಿಸಲ್ಪಡುವುದಕ್ಕೆ ಯೋಗ್ಯನಾದ, ವಿತತಾಮಲಚರಿತ್ರ- ವಿಸ್ತಾರವಾದ ನಿರ್ಮಲವಾದ ಚರಿತ್ರೆಯುಳ್ಳ, ಸತತಾಮಯವಿದೂರ- ಯಾವಾಗಲೂ ಭವರೋಗಕ್ಕೆ ದೂರವರ್ತಿಯಾದ, ಅತಾಮಸಜನಪ್ರಿಯ- ತಮೋಗುಣಹೀನರಾದ ಜನಗಳಲ್ಲಿ ಪ್ರೀತಿಯುಳ್ಳ, ನತಾಮರಮಹೀಜ- ನಮಸ್ಕರಿಸದವರಿಗೆ ಕಲ್ಪವೃಕ್ಷನಾದ, ಮೃದು...... ವಿನೋದಾ— ಮೃದುತಾ- ಕೋಮಲತ್ವವಿಶಿಷ್ಟವಾದ, ಮಧುರ- ಇಂಪಾದ, ಭಾಷ- ಮಾತುಳ್ಳ, ಜನತಾ- ಜನಗಳ ಸಮೂಹಕ್ಕೆ, ಮತ- ಅಭಿಮತವಾದ, ವಿನೋದಾ- ಸಂತೋಷವುಳ್ಳ, ಸಾಮಜಪಸಂಯುತರಸಾಮರಪರಿಸ್ತುತ- ಸಾಮವೇದದನುಷ್ಠಾನದಿಂದ ಕೂಡಿದ ಬ್ರಾಹ್ಮಣರಿಂದ ಹೊಗಳಲ್ಪಟ್ಟ, ಸಸಾಮಹಿತಕಾರ್ಯ— ಸಸಾಮ- ಶಾಂತಿಯಿಂದ ಅಥವಾ ಇಂದ್ರಿಯನಿಗ್ರಹದಿಂದ ಕೂಡಿದವರಿಗೆ, ಹಿತ- ಆಪ್ತವಾದ, ಕಾರ್ಯ- ಕೆಲಸವುಳ್ಳ, ಗುಹಸಾಮಜಮುಖಾರ್ಚ್ಯ— ಗುಹ- ಷಣ್ಮುಖ, ಸಾಮಜಮುಖ- ವಿಘ್ನೇಶ್ವರ ಇವರುಗಳಿಂದ, ಅರ್ಚ್ಯ- ಪೂಜಿಸಲ್ಪಡುವದಕ್ಕೆ ಯೋಗ್ಯನಾದ, ಅಕಾಮಶರಣಪ್ರಿಯ- ವಿಷಯಾಭಿಲಾಷೆಯಿಲ್ಲದ ಶಿವಶರಣರಲ್ಲಿ ಪ್ರೀತಿಯುಳ್ಳ, ನಿಕಾಮಶುಭಶೀಲ- ಅತ್ಯಂತವಾಗಿ ಮಂಗಳಕರವಾದ ನಡತೆಯುಳ್ಳ, ಕಾಮರಿಪುರೂಪ- ಶಿವಸ್ವರೂಪನಾದ, ಜಿತಕಾಮ- ಜೈಸಲ್ಪಟ್ಟ ಮನ್ಮಥನುಳ್ಳ, ಬಸವೇಶಾ ! ಜಯ. ... ... ॥೧೧೫೯॥

ಭರ್ಮಗಿರಿಮಂದಿರೆ— ಭರ್ಮಗಿರಿ- ಮೇರುಪರ್ವತವೇ, ಮಂದಿರೆ- ಮನೆಯಾಗುಳ್ಳ, ಹವಿರ್ಮುಖವರಾರ್ಚಿತೆ— ಹವಿರ್ಮುಖವರ- ದೇವಶ್ರೇಷ್ಠರಿಂದ, ಅರ್ಚಿತೆ- ಪೂಜಿಸಲ್ಪಟ್ಟ, ಯಜುರ್ಮಿಳಿತಮಂತ್ರಮಯೆ- ಯಜುರ್ವೇದದಲ್ಲಿ ಕೂಡಿದ ಮಂತ್ರಗಳ ಸ್ವರೂಪಿಣಿಯಾದ, ಗೀರ್ಮಹಿತವಾಣಿ— ಗೀಃ- ಮಾತಿನಲ್ಲಿ, ಮಹಿತ- ಪೂಜ್ಯಳಾದ, ವಾಣಿ- ಸರಸ್ವತಿಯುಳ್ಳ, ನಿರ್ಮಿತಜಗತ್ತ್ರಯೆ- ಸೃಷ್ಟಿಸಲ್ಪಟ್ಟ ಮೂರುಲೋಕವುಳ್ಳ, ಷಡೂರ್ಮಿ

ರ್ಮ್ಯಯಮಿವಂದ್ಯೆ ಶಿವಧರ್ಮಹೃದಯಾಬ್ಜೇ ॥ ಕೂರ್ಮನಿಭಪಾದೆ ಯಮಧರ್ಮಮದಮರ್ದಿನಿ ಸುಘರ್ಮಕರಸದ್ರುಚಿವಪುರ್ಮೃಡಮನೋಜ್ಞೇ । ನಿರ್ಮದೆ ನಿರಸ್ತತತದುರ್ಮತೆ ಗಿರೀಂದ್ರಸುತೆ ಪೇರ್ಮೆ ಮಿಗೆ ಪಾಲಿಪುದು ಶರ್ಮದೆ ಭವಾನೀ ॥ ... ... ೧೩೦

ಗದ್ಯ ॥ ಇದು ವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತ ಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಕಲ್ಲಿನಾಥ ಬಬ್ಬಭಾಸ್ಕರಾದಿಕಥಾವಿವರಣಮಷ್ಟತ್ರಿಂಶಾಶ್ವಾಸಮಪರಿಸಮಾಪ್ತಂ ॥ ... ... ... .. *

ಅಷ್ಟತ್ರಿಂಶಾಶ್ವಾಸಂ ಸಂಪೂರ್ಣಂ.

---

ಶ್ರೀಃ

ಶಿವಾಯ ಪರಬ್ರಹ್ಮಣೇನಮಃ.

## ಏಕೋನಚತ್ವಾರಿಂಶಾಶ್ವಾಸಂ.

### ಕೆಂಬಾವಿ ಭೋಗಾರ್ಯಕಥನಂ.

ಕಂ ॥ ಶ್ರೀರಮಣೀಯನಗೇಂದ್ರಸು । ತಾರಮಣಂ ತಾರಕಾರಿಗಜಮುಖಜನಕಂ ॥

---

ಗಣವರ್ಜಿತೆ- ಕ್ಷುತ್ತೃಷ್ಣಾದಿಷಡೂರ್ಮಿಗಳ ಸಮೂಹದಿಂದ ಬಿಡಲ್ಪಟ್ಟ, ಸುಕರ್ಮಯಮಿವಂದ್ಯೆ- ಒಳ್ಳೆಯ ಕೆಲಸವುಳ್ಳ ಋಷಿಗಳಿಂದ ನಮಸ್ಕರಿಸಲ್ಪಡುವದಕ್ಕೆ ಯೋಗ್ಯಳಾದ, ಶಿವಧರ್ಮಹೃದಯಾಬ್ಜೇ- ಶಿವನ ಧರ್ಮವೇ ಮಾನಸಿಕಕಮಲವಳ್ಳುಳ್ಳ, ಕೂರ್ಮನಿಭಪಾದೆ- ಆಮೆಗೆ ಸದೃಶವಾದ ಚರಣವುಳ್ಳ, ಯಮಧರ್ಮಮದಮರ್ದಿನಿ- ಯಮನ ಗರ್ವವನ್ನು ಹಾಳುಮಾಡಿದ, ಸುಘರ್ಮಕರಸದ್ರುಚಿವಪುಃ— ಸುಘರ್ಮಕರ- ಸೂರ್ಯನ, ಸದ್ರುಚಿ- ಒಳ್ಳೆಯ ಕಾಂತಿಯಂತಿರುವ ಕಾಂತಿಯುಳ್ಳ, ವಪುಃ- ದೇಹವುಳ್ಳ, ಮೃಡಮನೋಜ್ಞೇ- ಶಿವಕಾಂತೆಯಾದ, ನಿರ್ಮದೆ- ಗರ್ವಹೀನಳಾದ, ನಿರಸ್ತತತದುರ್ಮತೆ- ನಾಶಮಾಡಲ್ಪಟ್ಟ ವಿಸ್ತಾರವಾದ ಕೆಟ್ಟ ಮತಗಳುಳ್ಳ, ಶರ್ಮದೆ- ಸೌಖ್ಯವನ್ನುಂಟುಮಾಡುವ, ಗಿರೀಂದ್ರಸುತೆ- ಪರ್ವತರಾಜಪುತ್ರಿಯಾದ, ಭವಾನೀ ! ॥೧೩೦॥

ಮುವ್ವತ್ತೆಂಟನೆಯ ಆಶ್ವಾಸವು ಸಂಪೂರ್ಣವು.

---

ಮುವ್ವತ್ತೊಂಭತ್ತನೆಯ ಆಶ್ವಾಸ ಪ್ರಾರಂಭವು.

ಶ್ರೀ......ರಮಣಂ— ಶ್ರೀ- ಷಡ್ಗುಣೈಶ್ವರ್ಯಯುಕ್ತಳಾದ, ರಮಣೀಯ- ಮನೋಹರಳಾದ, ನಗೇಂದ್ರಸುತಾ- ಪಾರ್ವತಿಯ, ರಮಣಃ- ಪತಿಯಾದ, ತಾರಕಾರಿಗಜಮುಖಜನಕಂ— ತಾರಕಾರಿ- ಷಣ್ಮು

ತಾರಾದ್ರಿಮಂದಿರಂ ಜಿತ । ಮಾರಂ ಮಾಳ್ಕೆಮಗೆ ಸೌಖ್ಯಮಂ ಶಿವಲಿಂಗಂ ॥ ೧

ವ ॥ ಮತ್ತಂ ॥ ಕಂ ॥ ಭುವನಳಯದೊಳೊಪ್ಪುವ ಕಂ । ಬಾವಿಯೆನಿಪ್ಪ ಗ್ರಹಾರದೊಳ್ಸಂಗೊಳಿಸಂ ॥ ಭಾವಜಹರಭಕ್ತಂ ಚರ । ಸೇವಾಪರ ನರರೆ ಭೋಗ ನೆಂಬ ಮಹಾತ್ಮಂ ॥ ... ... ... ೨

ವ । ಅಂತು ಚರಚರಣಸಪರ್ಯಾಪರಾಯಣ ನೊಪ್ಪಿರೆ ಶಂಕರಂತಪ್ಪಭಕ್ತಿಯೇಳ್ಗೆಯ ನಿಳೆಯೊಳ್ಮೆರೆಯ ಲೆಳಸಿ ॥ * * * * * * *

ಕಂ ॥ ಪೆಗಲಲ್ಲಿ ಸತ್ತಕರುವಂ । ಮಿಗೆ ಪ್ರೋಕ್ತಂತ್ಯಜನ ಪರಿಜ ನಾಳ್ದಳಿಕಗ್ರೀ ॥ ವೆಗಳೊಳ್ಪಸಿತು ಲಿಂಗಂ । ಸೊಗದಿಸೆ ರುದ್ರಾಕ್ಷಿ ಯವನ ಗೃಹಕೇಳ್ತಂದಂ ॥ ೩

ಕಂ ॥ ಕಂ ಡಧಿಕಭಕ್ತಿಯಿಂ ಮುಂ । ಕೊಂಡೆರಗು ತ್ತವನ ಪೆಗಲ ಕರುವಂ ತಾಂ ಕೈ ॥ ಕೊಂಡಾಂತು ತನ್ನ ಪೆಗಲೊ । ಳ್ಮಂಡಿತಮತಿತಂದ ನಾತ್ಮಮಂದಿರ ಕವನಂ ॥ ೪

ಚಂ ॥ ತೊಳೆ ದವನುಭ್ರಯಂ ತಳೆದು ತತ್ಪದವಾರಿಯ ನುತ್ತಮಾಂಗದೊಳ್ । ಬಳೆ ದನುರಾಗದಿಂ ಮಣಿದ ಭಕ್ತನ ನೀಕ್ಷಿಸಿ ತನ್ನ ವಕ್ತ್ರದೊ ॥ ಳ್ಮೊಳೆನಗೆ ಯುಣ್ಮೆ ಕೇಳಿಮಗೆ ವತ್ಸದ ಮಾಂಸಮ ನುಣ್ಬ ನೇಮ ಮಿಾ । ಗಳಕರುವಂ ಕರಂ ಕೊರೆದು ಮಾಂಸಮ ನಟ್ಟುಣಲಿಕ್ಕು ಬೇಗದಿಂ ॥ ... ... ... ೫

ಮಲ್ಲಿಕಾಮಾಲಾವೃತ್ತಂ ॥ ಎನ್ನ ನೇಮಮ ನಾಗಿಸಲ್ಕರುವಾಂಕು ಜೇಡರ ದಾಸನಂ। ನಿನ್ನೆ ಪೋಗಿ ಕಡಂಗಿ ಬೇಡಿದೊ ಡಾತ ನಾತ್ಮವಧೂಟಯಂ ॥ ಮುನ್ನ ಕೇಳ್ದಪೆ ನೆಂದು ತಾಂ ಮನೆಗೆಯ್ದೆ ಬಾರದೆ ತಳ್ವಿದಂ । ನಿನ್ನ ಗೇಹಕೆ ಬಂದೆ ನಿಂದೆಲೆ ಭಕ್ತ ಮಾಡು ಮದಿಷ್ಟಮಂ ॥ ... ... ... ... ೬

ವ ॥ ಎನೆ ಮಹಾಪ್ರಸಾದ ಮಂತೆಗೆಯ್ವೆ ನೆಂದು ॥ * * * * *

ಕಂ ॥ ಕ್ಷಾರಾಮ್ಲಲವಣಮುಖಸಂ । ಭಾರಂಗಳ್ವೆರಸಿ ಮಾಂಸಮಂ ಪಚಿಯಿಸಿ ತ ॥ ತ್ಸೌರಭ ಮೆಸೆನಡಗಂ ಗುಣ । ವಾರಿಧಿಯುಣಲಿಕ್ಕಿ ತಣಿಪಿದಂ ತಾಪಸನಂ ॥ ೭

---

ಖ, ಗಜಮುಖ- ವಿಘ್ನೇಶ್ವರ ಇವರುಗಳಿಗೆ, ಜನಕಂ- ತಂದೆಯಾದ, ತಾರಾದ್ರಿಮಂದಿರಂ- ಕೈಲಾಸಪರ್ವತವೇ ಮನೆಯಾಗುಳ್ಳ, ಜಿತಕಾಮಮಂ- ಜೈಸಲ್ಪಟ್ಟ ಮನ್ಮಥನುಳ್ಳ. ... ॥೧॥

ಚರಸೇವಾಪರಂ- ಜಂಗಮರಂ ಸೇವಿಸುವದರಲ್ಲಾಸಕ್ತನಾದ. ... ॥೨॥

ಅಂತ್ಯಜನ- ಚಂಡಾಲನ, ಪರಿಜಂ- ಆಕಾರವನ್ನು, ಅಳಿಕಗ್ರೀವೆಗಳೊಳ್- ಹಣೆತಲೆಗಳಲ್ಲಿ. ॥೩॥

ತಂದಂ- ಕರೆದುಕೊಂಡುಬಂದನು. ... ... ॥೪॥

ಬಳೆದ- ಅಭಿವೃದ್ಧಿಯಂ ಹೊಂದಿದ, ಮಣಿದ- ನಮಸ್ಕರಿಸಿದ, ವತ್ಸದ- ಕರುವಿನ, ಉಣ್ಬ- ಊಟವಂ ಮಾಡುವ, ಅಟ್ಟು- ಅಡಿಗೆಯಂ ಮಾಡಿ. ... ... ॥೫॥

ಕಡಂಗಿ- ಕುತೂಹಲಪಟ್ಟು, ಆತ್ಮವಧೂಟಿಯಂ- ತನ್ನ ಹೆಂಡತಿಯನ್ನು, ತಳ್ವಿದಂ- ಸಾವಕಾಶಮಾಡಿದನು. ... ... ... ॥೬॥

ಅಂತೆಗೆಯ್ವೆಂ- ಹಾಗೆಯೇಮಾಡುವೆನು. * * * * *

ತತ್ಸೌರಭಂ- ಆ ಪರಿಮಳವು, ಅಡಗಂ- ಮಾಂಸವನ್ನು, ತಣಿಪಿದಂ- ತೃಪ್ತಿಪಡಿಸಿದನು. ॥೭॥

ವ ॥ ಆಗ ಳಾಗ್ರಾಮವಾಸಿಗಳಾದ ಪಾರ್ವ ರದಂ ಕಂಡು ಕುಪಿತ ರಾಗಿ ॥ * *

ಚಂ ॥ ಗುಡುಗುಡಿಸುತ್ತೆ ಕಲ್ದಡಿಗಳಂ ತಳೆ ದಾರ್ದಿಳಿವೀಳ್ದು ಪಾಳಿಯಂ । ನಡೆ ನಡೆ ಕೇರ್ಗಳಂ ಕೆಡಪು ಬಲ್ವಡಿಯಂಮುರಿ ಪೊಕ್ಕು ಗೇಹದೊ ॥ ಳ್ಪುಡುಕು ನಿರೀಕ್ಷಿ ಸಂ ತ್ಯಜನ ಪೆರ್ವಡಿಯಿಂ ಪೊಡೆ ಪೋಗ ಲೀಯದಿ । ರ್ಕಡೆ ಗೆನುತುರ್ಬಿ ಬೊಬ್ಬರಿದು ಮು ತ್ತಿದ ರಾಗೃಹಮಂ ದ್ವಿಜಾಧಮರ್ ॥ ... ... ೮

ವ ॥ ಅಂತು ಮುತ್ತಿ ಮುಂಬರಿದು ನೋಳ್ಪಾಗಳಾತಪಸ್ವಿ ಯದೃಶ್ಯ ನಪ್ಪುದು ಮನಿತರೊ ಳಾಕುಮತಿಗಳ ಕಳಕಳವಂ ಭೋಗಯ್ಯಂ ಕಂಡು ಕನಲ್ದು ॥ * *

ಚಂ ॥ ಎಲೆಯೆಲೆ ಭೂಸುರಾಧಮರಿರಾ ಹರಭಕ್ತ ನಿವೇಶಮಪ್ಪ ಮ । ನ್ನಿಲಯಮ ಶಕ್ಯ ಮೋರ್ಮೆ ನಿಮಗಂ ಪುಗ ಲಗ್ರಜರಾದವರ್ಗೆ ನಿ ॥ ಶ್ಚಲಧೃತಿಯಿಂದ ಮೆಂದೆನೆ ದ ಲಂತ್ಯಜ ನಂತೊಳಪೊಕ್ಕಪಂ ಮಹೋ । ಜ್ವಲಶಿವಮೂರ್ತಿ ಪೊಕ್ಕ ನವನು ತಿಳಿವಿಲ್ಲದೆ ನಿಂದೆಗೆಯ್ವುದೇಂ ॥ ... ... ... ೯

ಚಂ ॥ ಪುರಹರಭಕ್ತದೂಷಣಪರಾಯಣ ರೆಂದೆನಿಸಿರ್ದ ನಿಮ್ಮನಾ । ದರದೊಳೆ ನೋಡಲುಂ ನುಡಿಯಿಸ ಲ್ಕಮಗಕ್ಕುಮೆ ಸಾಲ್ಗು ಮಿಾಪುರಾಂ ॥ ತರದೊಳ ಗಿರ್ಪು ದಿನ್ನೆ ಮಗೆ ಮದ್ಗೃಹವೃತ್ತಿಯ ನಿಲ್ಲಿ ನೀಮೆ ಕೊಂ । ಡಿರಿ ಮಿರದೆಮ್ಮಸಾಮಿಗಳ ಪಿಂದನೆ ಪೋದಪೆ ಮಿಂದು ಬೇಗಪಿಂ ॥ ... ... ... ೧೦

ಕಂ ॥ ಭೋಗಯ್ಯಂ ನಿಶ್ಚಲಮತಿ । ಯಾಗಳೆ ಪೊರಮಟ್ಟು ಪೊಳಲ ನೆಯ್ದುವ ಪ ಥದೊ ॥ ಳ್ದೇಗುಲದೊಳ್ಕೃಪಮಿಜ । ರಾಗರದೊ ಳ್ನಲಸಿ ನಿಂದ ಘನಲಿಂಗಂಗಳ್ ॥ ೧೧

ಮ ॥ ಸ ॥ ಉಳ ದುದ್ಯತ್ಪ್ರೀತಮಂಕೆತ್ತೆಸೆವ ಪೃಥುಕವಾಟಂಗಳಂ ನುರ್ಗುತಂ ಕೇ। ರ್ಗಳ ನಾಗ ಳ್ಬೀಳ್ವನಂ ಪಾಯ್ದೊಡೆಯುತಿದಿರ ಪೂಗಲ್ಗಳಂ ನೂಂಕುತಂ ಮಂ ॥ ಜುಳಪ ಕ್ಷದ್ವಾರದಿಂದಂ ನುಸುಳುತೆ ಪೊರಮಟ್ಟುರ್ವಿಗತ್ಯದ್ಭುತಂ ಸಂ । ಗಳಿಪನ್ನಂ ಭಕ್ತಮಾ ರ್ಗಂಬಿಡಿದು ಬಳಿಯಿ ನೇಳ್ತಂದ ವಾನಂದದಿಂದಂ ॥ ... ೧೨

ವ ॥ ಮತ್ತಮಲ್ಲಿ ॥ ಮ ॥ ಸ್ರ ॥ ನಲಿಯುತ್ತಂ ಪೋಪ ಲಿಂಗಪ್ರತತಿ ಯುರುಳ್ವ

---

ಕಲ್ದಡಿಗಳಂ- ಕಲ್ಲನ್ನೂ ದೊಣ್ಣೆಗಳನ್ನೂ, ಇಳಿವೀಳ್ದು- ಇಳಿಬಿದ್ದು, ಕೇರ್ಗಳಂ- ಗೋಡೆಗಳನ್ನು, ಬಲ್ವಡಿಯಂ- ಬಲವಾದ ಕದವನ್ನು. ... ... ॥೮॥

ಹರಭಕ್ತನಿವೇಶಂ- ಶಿವಭಕ್ತನ ಮನೆಯು, ಅಂತ್ಯಜಂ- ಚಂಡಾಲನು, ತಿಳಿವು- ಜ್ಞಾನವು. ॥೯॥

ಮದ್ಗೃಹವೃತ್ತಿಯಂ- ನಮ್ಮ ಮನೆಯಲ್ಲಿರುವಿಕೆಯನ್ನು, ಕೊಂಡಿರಿಂ- ಸ್ವೀಕರಿಸಿರಿ, ಪಿಂದನೆ- ಹಿಂಗಡೆಯೇ. ... ... ... ... ॥೧೦॥

ಪಥದೊಳ್- ಮಾರ್ಗದಲ್ಲಿ, ದೇಗುಲದೊಳ್- ದೇವಸ್ಥಾನದಲ್ಲಿ. ... ॥೧೧॥

ಕೆತ್ತು- ಮುಚ್ಚಿ, ಪೃಥುಕವಾಟಂಗಳಂ- ವಿಶಾಲವಾದ ಕದಗಳನ್ನು, ನುರ್ಗುತಂ- ನುಚ್ಚುಮಾಡುತ್ತಾ, ಕೇರ್ಗಳಂ- ಗೋಡೆಗಳನ್ನು, ಪಾಯ್ದು- ಮೇಲೆಬಿದ್ದು, ಪೂಗಲ್ಗಳಂ- ಹೂವನ್ನು ಕೆತ್ತಿ ತಡೆಗಟ್ಟಿರುವ ಕಲ್ಲುಗಳನ್ನು, ಮಂಜುಳಪಕ್ಷದ್ವಾರದಿಂದಂ- ಮನೋಹರವಾದ ಪಕ್ಕದ ಬಾಗಿಲಿನಿಂದ, ನುಸುಳುತೆ- ನುಗ್ಗುತ್ತಾ, ಭಕ್ತಮಾರ್ಗಂಬಿಡಿದು- ಭೋಗಯ್ಯನು ಹೋದ ಮಾರ್ಗವನ್ನನುಸರಿಸಿ. ॥೧೨॥

ಲಿಂಗಪ್ರತಾನಂ ನಭೋಮಂ | ಡಲದೊಳ್ಪಯ್ತರ್ಪ ಲಿಂಗಪ್ರಕರ ಮಿಳೆಯೊಳಲ್ಲಲ್ಲಿ ನಿಂ
ದೆಯ್ದುತಿರ್ಪ್ಪು॥ ಜ್ವಾಲಲಿಂಗಶ್ರೇಣಿ ಬೇಗಂ ಪರಿವ ವಿಮಳಲಿಂಗವ್ರಜಂ ನೋಂಕೆ ದೊಳ್ಪಿಂ|
ನೆಲನಂ ಚೋಂಟುದ್ದದೊಳ್ಕುಪ್ಪಳಿಸಿ ಕುಣಿವ ಲಿಂಗೋತ್ಕರಂ ಮಾಣದಾಗಳ್ ॥ ೧೩

ಕಂ ॥ ಒಲಿದೊಲಿದು ನಡೆವ ಲಿಂಗಾ | ವಳಿ ಮುಂದಣ್ಗೋಡಿ ನಿಲ್ವ ಲಿಂಗಸಮೂಹಂ॥
ಕೆಲಬಲಕೆ ನಿಮಿರ್ದುರ್ಬ ತಳರ್ವ್ವ | ದ್ವಾಲಲಿಂಗಪ್ರಸರ ಮೋಂ ಮನಂಗೊಳಿಸಿದುದೊ ॥ ೧೪

ಕಂ ॥ ಭೋಗಯ್ಯನೊಳೊದವಿರ್ದನು | ರಾಗದಿ ನೊಡವೋಪ ಲಿಂಗತತಿಯೊಡಗೂ
ಡು ॥ ತಾಂಗಳ್ ಪೊಳಲ ಸುಭಕ್ತರ | ಪೂಗಂ ಪೊರಮಟ್ಟು ತಳರ್ದು ದತಿಸಂಭ್ರಮದಿಂ॥

ಕಂ ॥ ಆಡುತ್ತಂ ಕೇಳಿಕೆಯೊಡ | ಗೂಡುತ್ತಂ ತಳರ್ವ ಲಿಂಗತತಿಯ ನಲಂಪಿಂ ॥
ನೋಡುತ್ತಂ ಮೃಡನಂಘ್ರಿಯ | ಪಾಡುತ್ತಂ ನಡೆದು ದಲ್ಲಿ ಶರಣಸಮೂಹಂ ॥ ೧೬

ವ ॥ ಇಂತು ಕಡುಸಡಗರಂಮಿಗೆ ಭೋಗಿದೇವಂ ಗಮಿಯಿಸುತ್ತಮಿರ್ಪನಮಿತ್ತಲ್॥

ಕೆರೆ ಬಾವಿ ತೊರೆಯ ನೀರ್ಗ | ಳ್ಬರೆತವು ನಳಿನೋತ್ಪಲಾಳಿ ಕೊರಗಿದು ದತ್ತಂ ॥
ಬಿರುಗಾಳ್ಬೀಸಿದುದು ಪಶು | ವರುಚಿದವು ಬಳಲ್ದು ಬಾಡಿದವು ಸಸ್ಯಂಗಳ್ ॥ ೧೭

ಚಂ ॥ ಮೊಳಗಿದು ದಂಬರಂ ಪಗಲೊಳಂಧತಮಂ ಕವಿದತ್ತು ಕಂಪಿಸಿ | ತ್ತಿಳೆ ನ
ರಿಯೂಳ್ದ ವಾಗಸದೊಳೇಳ್ದವು ಭೋಂಕನೆ ಧೂಮಕೇತುಗ ॥ ಳ್ಪುಳಿತುದು ಭಕ್ಷ್ಯ
ಭೋಜ್ಯತತಿ | ಬೊಬ್ಬಿರಿದಾರ್ದುದು ಕಂಬಮುಲ್ಲಿಸೂ | ರ್ಗಳೊಳೊಗೆದತ್ತು ಪೆರ್ವೊಗೆ
ಪುರಾಧ್ವದೊಳುರ್ವಿದು ದುಜ್ವಳಾನಲಂ ॥ .. ... ೧೮

ವ॥ ಇಂತುನೆಗಳ್ದುತ್ಪಾತಶತಮನಾವಿಪ್ರರ್ಕಂಡು ಕಡುಭೀತರಾಗಿ ಕಂಪಿಸಿಭೋಗಯ್ಯನವಜ್ಞಾನಿಮಿತ್ತ ಮೀವಿಪರೀತ ಮೊಗೆದು ದಾತನಂ ಶರಣ್ಬುಕ್ಕೊಡಲ್ಲ ದೆಮಗೆ ಬಾಳ್ತೆಮಿಲ್ಲೆಂದೆಲ್ಲರ್ನೆರೆದಾಲಿಂಗಸಂಘಸಮಾವೃತ ನಿರ್ದೆಡೆಗೆ ಪರಿತಂದು ಸಾಷ್ಟಾಂಗ ಮೆರಗಿ ಪಲ್ಗಿರಿದು ಪುಲ್ಗಚ್ಚಿ ಕಾರ್ಪಣ್ಯಂದೋರಿ ಕೈಮುಗಿದು ನಿಂದು ॥ * *

ಚಂ ॥ ಎಲೆಕರುಣಾಬ್ಧಿ ಕಾವುದು ಮದಾಂಧರ ನಮ್ಮರ ನವಜ್ಞಭಾವಸಂ | ಕಲಿತರ ನ

---

ನಲಿಯುತ್ತಂ- ಸಂತೋಷಪಡುತ್ತ, ಪರಿವ- ಓಡುವ. ... ॥೧೩॥

ಒಲಿದುಒಲಿದು- ತೂಗಾಡಿ ತೂಗಾಡಿ, ನಿಮಿರ್ದು- ದೇಹವಂ ಚಾಚಿ. ... ॥೧೪॥

ಒಡವೋಪ- ಸಂಗಡಹೋಗುವ. ... ... ... ॥೧೫॥

ಕೇಳಿಕೆಯ-ಆಟದ. ... ... ... ... ॥೧೬॥

ತೊರೆಯ- ಹೊಳೆಯ, ಬರೆತವು- ಬತ್ತಿಹೋದವು, ನಳಿನೋತ್ಪಲಾಳಿ- ತಾವರೆ ನೈದಿಲೆಗಳ ಪಙ್ಕ್ತಿಯು, ಅರುಚಿದವು, ಸಸ್ಯಂಗಳ್- ಪೈರುಗಳು. ... ... ॥೧೭॥

ಮೊಳಗಿದುದು- ಗುಡುಗಿತು, ಅಂಧತಮಂ- ಕತ್ತಲೆಯು, ಕವಿದತ್ತು- ಆಚ್ಛಾದಿಸಿತು, ಊಳ್ದವು- ಕೂಗಿದವು, ಆಗಸದೊಳ್- ಆಕಾಶದಲ್ಲಿ, ಪುಳಿತುದು- ಹುಳಿತುಗೊಂಡಿತು, ಕಂಬಂ- ಮನೆಯ ಕಂಬವು, ಸೂರ್ಗಳೊಳ್- ಹಂದರದಸೂರುಗಳಲ್ಲಿ. ... ... ॥೧೮॥

ಅವಜ್ಞಾನಿಮಿತ್ತಂ- ನಿಂದಿಸಿದ ಕಾರಣದಿಂದ, ಬಾಳ್ತೆ- ಬದುಕುವಿಕೆಯು, ಪುಲ್ಗಚ್ಚಿ- ಹುಲ್ಲಂಕಚ್ಚಿ, ಕಾರ್ಪಣ್ಯಂದೋರಿ- ದೀನತ್ವವಂ ತೋರ್ಪಡಿಸಿ. * * * * *

ನ್ಯಥಾಗತಿವಿಹೀನರ ನೆಮ್ಮ ನೆನುತ್ತೆ ನೋಡದಿ ॥ ೫೮ಲರೆನಿಪೆಮ್ಮ ತಪ್ಪುಗಳ ನಿಂದಭ ಯಂಗುಡು ದೇವ ನೀಂ ನೆನು । ತ್ತುಲರ್ದತಿದೈನ್ಯದಿಂ ಪೊಗಳ್ದು ಕೇಳ್ದು ಮುಗುಳ್ನಗೆನಕ್ಕು ಭೋಗಯ್ಯಂ ॥ ... ... ... ... ೧೯

ಕಂ ॥ ಕರುಣಾನಿಧಿ ಯಭಯಂಗುಡು । ತಿರದೆ ಧರಾಮರಕದಂಬ ಕೊಡವರೆ ಲಿಂಗೋ॥ ತ್ಕರ ಮರಿದೆನೆ ಸರಭಸ ಮಾ । ಪುರಿಗಯ್ದಿದ ನಪ್ರತರ್ಕ್ಯಮಹಿಮಾಧಾರಂ ॥ ೨೦

ವ ॥ ಅಂತೆಯ್ದಿ ನಿಜಭವನಮಂ ಪುಗುವಾಗಳಾ ಕೆಂಬಾವಿ ವೊಳಲ ಲಿಂಗಂಗಳಸವ ಸದಿಂ ತಂತಮ್ಮ ಗುಡಿಗಳುಮಂ ಪೀಠಂಗಳುಮಂ ಪಲ್ಲಟಿಸಿ ॥ * * *

ಕಂ ॥ ಭೀಮೇಶ್ವರಲಿಂಗಂ ಘನ । ರಾಮೇಶ್ವರಲಿಂಗಪೀಠದೊಳ್ನೆಲಸಿದು ದಾ ॥ ರಾ ಮೇಶ್ವರಲಿಂಗಂ ಘನ । ಭೀಮೇಶ್ವರಲಿಂಗಪೀಠದೊಳ ಮತಿರಯದಿಂ ॥ ೨೧

ಪುಷ್ಪಲತಾಗ್ರವೃತ್ತ ॥ ಸುರಪೂಜ್ಯಲಿಂಗತತಿ ಸಿದ್ಧಪೂಜ್ಯಭೂ । ಸುರಲಿಂಗಪೀಠ ದೊಳೆ ದೇವಪೂಜ್ಯಬಂ ॥ ಧುರಲಿಂಗಪೀಠದೊಳೆ ಸಿದ್ಧ ಪೂಜ್ಯಸುಂ । ದರಲಿಂಗರಾಜಿ ನೆಲ ಸಿದುದದ್ಭುತಂ ॥ ... ... ... ೨೨

ಕಂ ॥ ಲಿಂಗಂಗಳ್ಭೋಗಯ್ಯನ । ಪಿಂಗಡೆಯೊಳ್ತಳರ್ದ ತಮ್ಮ ಪರಿಯರುಪಲ್ಕೆಂ ॥ ದಂಗವಿಸಿ ಜಗಕೆ ನಿಜ । ಪೀಠಂಗಳ ಪಲ್ಲಟಿಸಿ ನೆಲಸು ತೀಗಳು ಮೆಸೆಗುಂ ॥ ೨೩

ಕಂ ॥ ಪುರ ಮೆಂಬಿನಂತೆ ಮಂಗಳ । ತರ ಮಾದುದು ಜಂಗಮಾಂಘ್ರಿಪೂಜಾಸುಖ ದಿಂ ॥ ಕರ ಮೆಸೆದಂ ಭೋಗಯ್ಯಂ । ಪರಿದೆಣ್ದೆಸೆದೀವೆ ತನ್ನ ಜಸ ಮಾಪೊಳಲೊಳ್ ॥ ೨೪

ಕಂ ॥ ಹರಭಕ್ತನಾವಜಾತಿಯೊ । ಳಿರುತಿರ್ದೊಡಮವನೆ ಪೂಜ್ಯನಖಿಳರ್ಗಂದೀ॥ ಶ್ವರ ನರುಪಿದ ನಂತದರಿಂ । ನರೇಂದ್ರ ಕೇಳ್ಭಕ್ತರಲ್ಲಿ ಕುಲಮರಸುವುದೇಂ ॥ ೨೫

---

ಕಾವುದು- ರಕ್ಷಿಸುವದು, ಅಜ್ಞಭಾವಸಂಕಲಿತರಂ- ಮೂಢತ್ವದಿಂ ಕೂಡಿದ, ಅನ್ಯಥಾಗತಿವಿಹೀನರಂ- ನೀನುಹೊರತು ಮತ್ತೊಂದು ಪ್ರಾಪ್ಯಸ್ಥಾನವಿಲ್ಲದಿರುವ. ... ... ॥೧೯॥

ಧರಾಮರಕದಂಬಕೆ- ಹಾರ್ವರ ಗುಂಪಿಗೆ, ಅರಿದು- ಅಸಾಧ್ಯವು, ಸರಭಸಂ- ಬೇಗನೆ, ಅಪ್ರತರ್ಕ್ಯಮ ಹಿಮಾಧಾರಂ- ಊಹಿಸುವದಕ್ಕಶಕ್ಯವಾದ ಮಹತ್ತ್ವಕ್ಕೆ ಆಶ್ರಯನಾದ ಭೋಗಯ್ಯನು. ॥೨೦॥

ನಿಜಭವನಮಂ- ತನ್ನ ಮನೆಯನ್ನು, ಆಕೆಂಬಾವಿವೊಳಲ- ಆ ಕೆಂಬಾವಿಪಟ್ಟಣದ, ಅಸವಸದಿಂ- ಅವ ಸರದಿಂದ, ಪಲ್ಲಟಿಸಿ- ವ್ಯತ್ಯಸ್ತವಾಗಿ. * * * * * *

ಅತಿರಯದಿಂ- ಬಹುಬೇಗನೆ, ... ... ॥೨೧॥

ಸುರಪೂಜ್ಯಲಿಂಗತತಿ- ದೇವತೆಗಳಿಂ ಪೂಜಿಸಲ್ಪಡುವವಕ್ಕೆ ಯೋಗ್ಯಗಳಾದ ಲಿಂಗಗಳ ಸಮೂಹವು, ಸಿದ್ಧಪೂಜ್ಯಭೂಸುರಲಿಂಗಪೀಠದೊಳೆ- ಸಿದ್ಧರಿಂದ ಪೂಜಿಸಲ್ಪಡುವದಕ್ಕೆ ಯೋಗ್ಯಗಳಾದ ಲಿಂಗಗಳಪೀಠದಲ್ಲಿ.

ಅಂಗವಿಸಿ- ವಿಸ್ತರಿಸಿ, ಪರಿಯರುಪಲ್ಕೆಂದು- ರೀತಿಯಂ ತಿಳಿಸಬೇಕೆಂದು, ... ॥೨೩॥

ಜಸಂ-ಕೀರ್ತಿಯು, ಎಣ್ದೆಸೆದೀವೆ-ಎಂಟುದಿಕ್ಕುಗಳಂ ತುಂಬಿಕೊಳ್ಳಲು. ... ॥೨೪॥

ಬ್ರಾಹ್ಮಣಃಕ್ಷತ್ರಿಯೋವೈಶ್ಯಶ್ಶೂದ್ರೋವಾಪ್ಯಂತ್ಯಜಾತಿಜಃ । ಶಿವಭಕ್ತಸ್ಸದಾಪೂಜ್ಯಸ್ಸರ್ವಬ್ರಾ ಹ್ಮಣೋತ್ತಮಃ ॥ ಎಂಬುವದರಿಂದ ಶಿವಭಕ್ತಿಸಂಪನ್ನನು ಯಾವ ಜಾತಿಯವನಾದಾಗ್ಯೂ ಶ್ರೇಷ್ಠನೆಂ ದು ಭಾವವು. ... ... ... ... ॥೨೫॥

ವ ॥ ಮತ್ತಂ ॥   ಕಂ ॥ ಶ್ವಪಚಯ್ಯನೆಂಬ ಭಕ್ತಂ । ವಿಪಿನಾಂತರಶುದ್ಧದೇಶದೊ
ಳ್ಶಂಭುಗೆ ತಾ ॥ ನುಪಹಾರಮ ನೆಸಗುತ್ತಂ । ಸುಪವಿತ್ರಚರಿತ್ರ ನಿರ್ದ ನಿರ್ಪನ್ನೆವರಂ ॥
ಮಲ್ಲಿಕಾಮಾಲಾವೃತ್ತಂ ॥ ಸಾಮವೇದಿಯೆನಿಪ್ಪ ಭೂಸುರವರ್ಯನಾಪವನದೇಶದೊ ।
ಳ್ವ್ಯೋಮಮಾರ್ಗದೊಳೇಳ್ತರುತ್ತಿರೆ ಲೀಲೆಯಿಂ ದವನಂಗುಣಾ ॥ ರಾಮ ನೀಕ್ಷಿಸಿ
ಬೋನಮಂ ಭವಿ ಕಾಣ್ಗುಮೆಂದತಿವೇಗದಿಂ । ವಾಮಪಾದುಕೆಯಿಂದೆ ಮುಚ್ಚಿದನಾಗಳಂ
ತದ ನಾದ್ವಿಜಂ ॥ ... ... .. ೨೭

ಕಂ ॥ ಕಂಡು ನಗೆನಗುತ ಮಿವನು । ದ್ದಂಡತೆಯಿಂ ಶ್ವಪಚನಡುವ ಬೋನದ ವಿಳ
ಸ ॥ ದ್ಭಾಂಡಮ ನೆನ್ನೀಕ್ಷಣರುಚಿ । ಕೊಂಡಪ್ಪುದೆಂದಲ್ತೆ ಮುಚ್ಚಿದಂ ಪಾದುಕೆಯಿಂ ॥ ೨೮

ಕಂ ॥ ಕಡುದುರುಳ ನೆನ್ನ ಮಹಿಮೆಯ । ಪ್ರೌಢರ್ಪ ನಿವ ನರಿಯ ದಿಂತು ನೆಗಳ್ದಂ
ಧರೆಯೊಳ್ ॥ ನುಡಿಯ ಲದೇಂ ದುಷ್ಕುಲಜರ । ನಪವಳಿ ಬೇರೆಂದು ಗರ್ವದಿಂ ನುಡಿಯಲೊಡಂ ॥

ಚಂ ॥ ಅಳಿದುದು ಮಂತ್ರಶಕ್ತಿ ಬಿಸಿಲೊಂದದಪ್ಪೋಲ್ನಿಜವಕ್ತ್ರಕಲ್ಲಿ ಬಾಂ । ದ
ಳದೊಳೆ ಬರ್ಪ ವಸ್ತ್ರ ಮದು ಧಾತ್ರಿಗೆ ಬೀಳ್ದುದದಂ ನಿರೀಕ್ಷಿಸು ॥ ತ್ತಿಳಿ ದತಿಭೀತಿ
ಯಿಂ ದೆರಗಿದಂ ಶ್ವಪಚಾರ್ಯನ ಪಾದಪದ್ಮಕಂ । ಜ್ವಳಮತಿ ಸಾಮವೇದಿ ವಿತತಾತಪತಪ್ತನಿ
ಜಾನನಾಂಬುಜಂ ॥ ... ... .. ೩೦

ವ ॥ ಅಂತೆರಗಿ ಕೈಮುಗಿದು ಕೊಂಡಾಡಿ ತತ್ಕಾರುಣ್ಯದಿಂ ಶಿವದೀಕ್ಷೆವಡೆದು ಶಿವಾಚಾ
ರದೊಳ್ಸಂದು ಕೆಲವಾನುಂ ದಿವಸಮಿರ್ದನಂತರ ಮದ್ಭುತಭಕ್ತಿಯಿನಭವನನು ಮಚ್ಚಿಸಿ
ಮನ್ನಣೆವೆತ್ತು ॥ * * * * * * * *

ಕಂ ॥ ಮುವ್ವತ್ತಾರುಂಪ್ರೊಳಲ ಜ । ನಾವಳಿವೆರಸುತ್ತೆ ಶಿವನ ಪುರಿಗೆಯ್ದಿದನಂ ॥

---

## ಶ್ವಪಚಯ್ಯನ ಕಥೆ.

ವಿಪಿನಾಂತರಶುದ್ಧದೇಶದೊಳ್- ಕಾಡಿನ ಮಧ್ಯದಲ್ಲಿ ಪರಿಶುದ್ಧವಾದ ಸ್ಥಳದಲ್ಲಿ, ಉಪಹಾರಮಂ- ಆಹಾರದ್ರವ್ಯವನ್ನು. ... ... ... ... ॥೨೬॥

ವ್ಯೋಮಮಾರ್ಗದೊಳ್- ಆಕಾಶಮಾರ್ಗದಲ್ಲಿ, ಗುಣಾರಾಮಂ-ಸದ್ಗುಣಾಶ್ರಯನಾದ ಶ್ವಪಚಯ್ಯನು, ಬೋನಮಂ- ಅನ್ನವನ್ನು, ಭವಿ- ಲಿಂಗವಿಲ್ಲದವನು, ವಾಮಪಾದುಕೆಯಿಂದೆ- ಎಡಗಡೆಯ ಹಾವಿಗೆಯಿಂದ.

ಅಡುವ- ಅಡಿಗೆಯಂ ಮಾಡುವ, ವಿಳಸದ್ಭಾಂಡಮಂ- ಪ್ರಕಾಶಿಸುವ ಮಡಕೆಯನ್ನು, ಈಕ್ಷಣರುಚಿ- ನೇತ್ರಕಾಂತಿಯು. ... ... ... ... ॥೨೮॥

ಕಡುದುರುಳಂ- ಬಹು ನೀಚನು, ಪ್ರೌಢರ್ಪಂ- ಅತಿಶಯವನ್ನು. ... ॥೨೯॥

ನಿಜವಕ್ತ್ರಕೆ- ತನ್ನ ಮುಖಕ್ಕೆ, ಒಂದದವೋಲ್- ಸಂಬಂಧಿಸದಹಾಗೆ, ಬಾಂದಳದೊಳೆ- ಆಕಾಶಪ್ರದೇಶದಲ್ಲಿ, ಧಾತ್ರಿಗೆ- ಭೂಮಿಗೆ, ಎರಗಿದಂ- ನಮಸ್ಕರಿಸಿದನು, ವಿತತಾತಪತಪ್ತನಿಜಾನನಾಂಬುಜಂ- ವಿಸ್ತಾರವಾದ ಬಿಸಿಲಿನಿಂದ ಸಂತಾಪಪಡಿಸಲ್ಪಟ್ಟ ಮುಖಕಮಲವುಳ್ಳವನಾಗಿ, (ಸಾಮವೇದಿಯೆಂಬ ಹಾರ್ವನು ತನ್ನ ಮುಖಕ್ಕೆ ಬಿಸಿಲು ಬೀಳದಹಾಗೆ ಛತ್ರದೋಪಾದಿಯಲ್ಲಿ ಬಟ್ಟೆಯು, ಅಂತರಿಕ್ಷದಲ್ಲಿ ಅವನ ತಲೆಗೆ ಮರೆಯಾಗಿ ಬರುವಂತೆ ತನ್ನ ಮಂತ್ರಶಕ್ತಿಯಿಂ ಮಾಡಿಕೊಂಡಿದ್ದನು. ಆ ಶಕ್ತಿಯು ಶ್ವಪಚಯ್ಯನವರಂ ತಿರಸ್ಕರಿಸಿದುದರಿಂದ ನಷ್ಟವಾಗಿ ಆಕಾಶದಲ್ಲಿ ನಿರಾಶ್ರಯವಾಗಿ ಬರುತ್ತಿದ್ದ ಬಟ್ಟೆಯು ನೆಲಕ್ಕೆ ಬಿದ್ದಿತೆಂದು ತಾತ್ಪರ್ಯವು)

ದಾವಿಭು ಪಸರಿಂ ಕೇಳೆಲೆ | ಭೂಪರ ಶಿವಭಕ್ತರೊರೆಗೆ ಬರ್ಪರೆ ಪಾರ್ವರ್ || ೩೧

ಕಂ || ಅಲಿವು ದಿನಸ್ತ್ರಂ ಭೋಜನ್ಯ | ಪಾಲಂ ಏಪೆದಾಳ್ವ ಪಲ್ಲಕೀಪುರದೊಳ್ಸ್ನ || ಲೀ ಲೆಯೊಳೆಸೆವಂ ಸದ್ಗುಣ | ಶೀಲಕಳಾಶಾಲಿ ಶರಣ ಸುದ್ಭಟದೇವಂ || ೩೨

ಕಂ || ಶಿವದೀಕ್ಷೆಯಿತ್ತು ತಿಳಿಪುತೆ | ಶಿವತತ್ತ್ವಮ ನಾನೃಪಂಗೆ ಗುರುವಾಗಿ ಮ ಹಾ || ಶಿವಯೋಗಿ ನೃಪಸಪರ್ಯೋ | ತ್ಸವವಮಂ ಕೈಕೊಂಡು ವೇದಶಾಸ್ತ್ರಾಗಮದಿಂ ||

ಕಂ || ವಾದಾಗೆಯ್ದಣ್ಮಿದ ಪರ | ವಾದಿಗಳಂ ಗೆಲ್ದು ಜಸಮ ನಾಳ್ದಿರುತಂ ಸಂ || ಮೋದದೆ ಪಸೆನಿಂದಾಮಹಿ | ಮೋದಧಿ ಜೊಮ್ಮಬ್ಬೆ ಯೆಂಬ ಕಾಂತಾಮಣಿಯೊಳ್ || ೩೪

ವ|| ಅಂತು ಪರಮಶಿವಭಕ್ತೆಯಾದ ಗಾನವಿದ್ಯಾವಿಶಾರದೆ ಯೆನಿಪ ಜೊಮ್ಮಬ್ಬೆಯಂ ವಿವಾಹವಾಗಿ ಬೆರಸಿರ್ಪಿನ ಮುದಂ ಕಂಡು ಪೌರಜನ ಮಚ್ಚರಿವಡೆ ಪರಸಮಯಿಗಳರಸ ನೆಡೆಗೇಳ್ತಂದು ಸಂದಣಿಸಿ ನಿಂದು || * * * * * *

ಚಂ || ಎಲೆನರಪಾಲ ನಿನ್ನ ಗುರು ಮೆಚ್ಚೆನಿಪುದ್ಭಟದೇವ ನಜ್ಞಾನ | ಲ್ತಲಘುಕ ಲಾವಿದಂ ಪಿರಿಯ ನಗ್ರಜ ನಂತ್ಯಜೆಯಾದ ಕಾಂತೆಯೊ || ಳ್ನಲಿ ದೊಡಗೂಡಿ ತನ್ನ ಕುಲಧ ರ್ಮಮ ನಿರ್ಕಡಿಗೆಯ್ದ ನದ್ಭುತಂ | ಸಲೆ ಮರುಳಾದ ನೆಂದು ಪಿಸುಣಾಡಿದ ರಾಪ್ಪಿಯ ರಾನ ರೇಂದ್ರನೊಳ್ || ... ... ... ೩೫

ವ || ಆಮಾತ ನರಸ ಕೇಳದಂಗೆಯ್ದೆಂದಿನಂತೆ ನಿಜಗುರುವಂ ಭಕ್ತಿಭಾವದಿಂ ಸೇವಿಸು ತ್ತಿರೆ ಪಿಶುನ ರೆಲ್ಲರುಂ ನಾಣ್ಚಿ ಸರಿಯೆ ಕೆಲವಾನುಂ ದಿವಸಂ ಕಳಿಯೆ || * *

ಕಂ || ನಿಜಭಟ ನಾದುದ್ಭಟ ನಂ | ತ್ಯಜೆಯೊಡಗೂಡಿರ್ದ ನೆಂಬರಂ ನಾಣ್ಚಿಸ ಲಂ || ಗಜರಿಪು ತನ್ಮಹಿಮೆಯ ನೆ | ಯ್ದೆ ಜಗಕ್ಕರುಪಲ್ಕೆ ನೆನೆದು ಬರಿಸಿದ ನವನಂ || ೩೬

ವ || ಅಂತು ಶಿವ, ನಿಜಲೋಕಕ್ಕೆ ತರಿಸಂದುದ್ಭಟನಂ ಬರಿಸೆ ತತ್ಕಳೇವರಮ ನಾ

---

ಒರೆಗೆ- ಸಾದೃಶ್ಯಕ್ಕೆ. ... ... ... ||೩೧||

ಉದ್ಭಟದೇವನ ಕಥೆ.

||೩೦|| ಶಿವತತ್ತ್ವಮಂ- ಪರಮಾತ್ಮನೇ ನೀನಾಗಿದ್ದೀಯೆಂಬ ತತ್ತ್ವಾರ್ಥವನ್ನು, ನೃಪಸಪರ್ಯೋತ್ಸವಮಂ- ರಾಜನಿಂದ ಮಾಡಲ್ಪಟ್ಟ ಪೂಜೆಯ ಉತ್ಸವವನ್ನು. ... ||೩೩||

ಅಣ್ಮಿದ- ಪರಾಕ್ರಮವಿಶಿಷ್ಟರಾದ, ಆಮಹಿಮೋದಧಿ- ಮಹತ್ತ್ವಕ್ಕೆ ಸಮುದ್ರನಾದ ಆ ಉದ್ಭಟ ದೇವನು, ಪಸೆನಿಂದು- ಮದುವೆಗೆ ಹಸೆಯಮೇಲೆ ನಿಂತುಕೊಂಡು. ... ||೩೪||

ಅಲಘುಕಲಾವಿದಂ- ಅಧಿಕವಾಗಿ ವಿದ್ಯೆಯಂ ತಿಳಿದವನು, ಅಗ್ರಜಂ- ಬ್ರಾಹ್ಮಣನು, ಅಂತ್ಯಜೆ- ಚಂಡಾಲಸ್ತ್ರೀಯು, ಇರ್ಕಡಿಗೆಯ್ದಂ- ಭೇದಿಸಿದನು, ಮರುಳ್- ಹುಚ್ಚನು, ಪಿಸುಣಾಡಿದರ್- ಚಾಡಿಯಂ ಹೇಳಿದರು. ... ... ... ... ||೩೫||

ಎಳಿದಂಗೆಯ್ದು- ತಿರಸ್ಕರಿಸಿ, ಪಿಶುನರ್- ಚಾಡಿಕೋರರು, ಸರಿಯೆ- ಹೋಗಲು. * *

ನಿಜಭಟಂ- ತನ್ನ ಸೇವಕನು, ಬರಿಸಿದಂ- ತನ್ನಬಳಿಗೆ ಬರಮಾಡಿಕೊಂಡನು. ||೩೬||

ತತ್ಕಳೇವರಮಂ- ಅವನ ದೇಹವನ್ನು, ವಟವಿಟಪಿಯ- ಆಲದಮರದ. * * *

ಷ್ಟ ರೊಂದುಮುವಿಚುಪಿಯಕೆಳಗೆ ಸುಡ ಲೊಡನೆ ॥ * * * *

ಕಂ॥ ಮುಂಗಳಮುಯು ಸಂಗದಹೊಗೆ । ಪಿಂಗದೆ ತನುಸೋಂಕೆ ತದ್ವಟಸ್ಥಿತಬಹುಭೂ॥ ತ ಗಳ್ಕೈಲಾಸಕ್ಕೆ ಕ । ಡಂಗುತ್ತಂ ಪೋದ ವಿತ್ತ ಲುಳಿದೊಂದುಮರುಳ್ ॥ ೩೭

ಮತ್ತೇ ॥ ನಡೆ ನೋಡುತ್ತೆ ವಟಾವನೀರುಹಮ ನಾಭೂತಂಗಳಂ ಕಾಣ ದಿ । ಟ್ಟೆಡೆ ಯೊಳ್ಸಿಕ್ಕಿದ ದಂತಿಯಂತೆ ಪಿರಿದುಂ ಘೀಳಟ್ಟು ಧಾತ್ರೀತಳಂ ॥ ಬಿಡದಲ್ಲಾಡೆ ಗಜಾಶ್ವ ರಾಜಿ ಪೆಳರ್ದೆತ್ತಂ ಹಮ್ಮುದಂಬೋಗೆ ಗೋ । ಳಿಡುತಂ ಪೆರ್ದನಿ ಮಾರೆ ಸಿಂಹಳೆ ನೃಪಾ ಲಂ ಕೇಳ್ದು ನಾಘೋಷಮಂ ॥ ... ... ... ೩೮

ವ ॥ ಅಂತು ಕೇಳ್ದೀಯದ್ಭುತರೋದನಮ ನಾನೇ ಪರೀಕ್ಷಿಪೆ ನೆಂದಾಸ್ಥಾನದಿ ನೇ ಳ್ದು ಸಮಸ್ತಸಾಮಂತಮಂತ್ರಿಮಂಡಳಿಕದಂಡನಾಥರ್ವೆರಸು ಪೊಳಲ ಪೊರವಳಯದವ ಟಭೂರುಹದ ಬಳಿ ಗೇಳ್ತಂದು ಘೋಜರಾಬಿಂನಿಂದು ನೋಳ್ಪನ ಮಲ್ಲಿ ॥

ಚಂ ॥ ಕಡುನಿಡಿದಾದ ಕಾರೊಡಲ ಕೇಸುರಿದೊಂಗಲ ಪೋಲ್ವ ಕೇಶ ದೊ । ಳ್ಗಡಿಸು ರಿತೆರ್ದ ಕೆಂಡದವೊ ಲೊಪ್ಪುವಕಂಗಳ ನೀಳ್ದು ಬಾಗಿ ಮುಂ ॥ ಗಡೆ ಗುರುಗಿರ್ದ ಪಲ್ಗಳ ಮಹಾಗುಹೆಯಂದದ ಬಾಯು ಬತ್ತಿ ಜೆಂ । ಗಡರ್ದು ನರಂ ಪಗಿಲ್ತ ಬಸಿ ರೊಂದಿರ ವಾಸು ರಮಾಗೆ ನಿಂದುದಂ ॥ ... ... ... ೩೯

ಕಂ ॥ ಗುಡುಗುಡನೆ ಸುರಿಯೆ ಕಣ್ಬನಿ । ನಿಡುದನಿಯಿಂ ದಳ್ವಭೂತಮಂ ಕಂಡರಸಂ॥ ಕಡುಚೋದ್ಯಮ ನಾಳ್ದಾಗ । ಳ್ನುಡಿಯಿಸಿದಂ ನೀ ನಿದೇಕೆ ಪಳಯಿಪೆ ಯೆನುತಂ ॥ ೪೦

ವ ॥ ಎನೆ ಪಿಶಾಚ ಮರಸ ನಿಬಿರ್ಗೆ ಮಿಂದು ॥

ಕಂ ॥ ಎಲೆನೃಪತಿ ಕೇಳ್ವ ದೊಂದು । ಜ್ವಲಕಥೆಯಂ ಕೇಳ್ದು ಮುಂದೆ ನೀನೆಸಗೆ ನಿರ ॥ ರ್ಗಲಪರಹಿತಮಂ ನಿನ ಗ । ತ್ಯಲಘುತರಂಪದವಿ ಸಾರ್ಗು ಮಂತೆನೆ ಪೇಳ್ವಂ ॥ ೪೧

ಮ ॥ ಸ್ರ ॥ ವಿಲಸತ್ಕೈಲಾಸಭೂಭೃತ್ಕಟಕದೊ ಳೆಸೆಗುಂ ಸಾರಮಂದ್ರೋದಮಂ

---

ತನುಸೋಂಕೆ- ದೇಹವಂ ಸೋಂಕಲು, ತದ್ವಟಸ್ಥಿತಬಹುಭೂತಂಗಳ್- ಆ ಆಲದ ಮರದಲ್ಲಿದ್ದ ಪಿಶಾಚಗಳು, ಕಡಂಗುತ್ತಂ- ಕುತೂಹಲಪಡುತ್ತ, ಒಂದುಮರುಳ್ ಒಂದು ಪಿಶಾಚವು. ||೩೭||

ವಟಾವನೀರುಹಮಂ- ಆ ಆಲದಮರವನ್ನು, ಇಟ್ಟೆಡೆಯೊಳ್- ಇಕ್ಕಟ್ಟಿನಲ್ಲಿ, ದಂತಿಯಂತೆ- ಆನೆಯ ಹಾಗೆ, ಘೀಳಟ್ಟು- ಕೂಗಿಕೊಂಡು, ಗಜಾಶ್ವರಾಜಿ- ಆನೆಕುದುರೆಗಳ ಪಙ್ಕ್ತಿಯು, ಪೆಳರ್ದು- ಭಯಪಟ್ಟು, ಎತ್ತಂ- ಎಲ್ಲಾಕಡೆಯಲ್ಲೂ, ಹಮ್ಮುದಂಬೋಗೆ- ಮೂರ್ಛಾಗತವಾಗಲು, ಪೆರ್ದನಿ- ಹೆಚ್ಚಾದಕೂಗು, ಅಳಿರೋದಿಸಲು, ಆಘೋಷಮಂ- ಆ ಶಬ್ದವನ್ನು. ... ... ||೩೮||

ಆಸ್ಥಾನದಿಂ- ಸಭೆಯಿಂದ, ಪೊರವಳಯದ- ಹೊರಗಡೆಯಲ್ಲಿರುವ. * * *

ಕಡುನಿಡಿದು- ಬಹು ಉದ್ದವು, ಕಾರೊಡಲ- ಕಪ್ಪಾದ ಶರೀರದ, ಕೇಸುರಿದೊಂಗಲ- ಕೆಂಪಾದ ಅಗ್ನಿಜ್ವಾಲೆಯ ಸಮೂಹವನ್ನು, ಕೇಶದ- ಕೂದಲಿನ, ಬಗ್ಗಿಡಿ- ಬಳ್ಳಿಯ ಕಿಡಿಯು, ಉರುಗಿ- ಓರೆಯಾಗಿ, ಗುಹೆಯು- ಗವಿಯು, ಜೆಂಗು- ಔಷ್ಣ್ಯದಿಂದುಂಟಾದ ಮಚ್ಚೆ, ಪಗಿಲ್ತ- ಹಬ್ಬಿದ. ... ||೩೯||

ಪಳಯಿಪೆ- ಪ್ರಲಾಪಮಾಡುತ್ತೀಯೆ. ... ... ||೪೦||

ನಿರರ್ಗಳಪರಹಿತಮಂ- ತಡೆಯಿಲ್ಲದ ಪರೋಪಕಾರವನ್ನು. ... ||೪೧||

ಬು । ಜ್ವಳಕಾಸಾರಂ ತದಬ್ಜಾಕರದ ತಟದೊಳಿರ್ಪಂ ತಪಂಗೆಯ್ವುತಂ ನಿ ॥ ರ್ಮಳಮಾರ್ಕಂಡೇಯು ನೆಂಬಂ ಮುನಿ ಯುದರೊಳೆ ಗಂಧರ್ವ ರೇಳ್ನೂರ್ಬದು ತಾರಾ । ಚಳನಾಥಾಸ್ಥಾನದಿಂ ದುಟ್ಟುದನೆ ಕಳೆದು ಪ್ರೊಕ್ಕಲ್ಲಿ ನೀಸಾಡುತಿರ್ದರ್ ॥ ... ೪೨

ವ ॥ ಅಂತು ಜಲಕೇಳಿಯಂ ತೀರ್ಚೆ ॥

ಕಂ ॥ ಪರಿಮಳಿಸುವ ಕೆಂದಾವರೆ । ಯರಲ ನವ ಮರ್ುರಿಯೆ ಕ ಡು ಮುನಿ ಮುನಿದರುಣ ॥ ಸ್ಫುರಿತೇಕ್ಷಣದಿಂ ನಗ್ನಾಂ । ಗರ ನಾಗಂಧರ್ವರಂ ಸಮಂ ತೀಕ್ಷಿಸಿದಂ ॥ ೪೩

ವ ॥ ಅಂತು ಕಾಯ್ದೀಕ್ಷಿಸಿ ಸಪ್ತಶತಸಂಖ್ಯಾಕರುಜಡಿದು ಜಂಕಿಸಿ ನುಡಿದು ॥ *

ಕಂ ॥ ಸತತಶಿವಸ್ನಾನೋಚಿತ । ನುತಜಲಮಂ ಕದಡಿ ಶಂಭುಪೂಜೋಚಿತಮಂ ॥ ಶತದಳಮಂ ಪರಿದುದರಿಂ ! ಕ್ಷಿತಿಯಲ್ಲಿಪಿಶಾಚ ರಾಗಿ ಮೆಂದಂ ಮುನಿಪಂ ॥ ೪೪

ಕಂ ॥ ಎನೆ ಕೇಳ್ದು ತಳರ್ದು ತತ್ಪದ । ವನರುಹದೊಳ್ಕೆಡೆದು ಜವದೆ ಶಾಪವಿಮೋಕ್ಷಂ॥ ಜನಿಯಿಪುದಂ ದಯೆಯಿಂದೆಲೆ । ಮುನೀಂದ್ರ ಪೇಳೆಂದು ಬೇಡಿಕೊಂಡ ಮರ್ುನಿಯಂ॥

ವ ॥ ಎನೆ ಕೇಳ್ದು ॥ ತರಳವೃತ್ತ ॥ ನಿಟಲಲೋಚನಭಕ್ತ ನುದ್ಭಟಯೋಗಿ ತತ್ವವಿಶಾರದಂ । ಕುಟಿಲವಾದಿವಿಭಂಜನು ಶಿವಮೂರ್ತಿ ತಾಂ ಚಿರಕಾಲ ಮುಂ ॥ ನಟಿಮಿಸಿ ರ್ದಿಳೆಯೊಳ್ವಿಮುಕ್ತಿಯ ನೆಯ್ದೆ ತತ್ತನುದಾಹಸಂ । ಘುಟಿತಧೂಮದ ಸೋಂಕಿನಿಂ ನಿಮ ಗಕ್ಕೆ ಶಾಪವಿಮೋಚನು ॥ ... ... ... ೪೫

ವ ॥ ಎಂದು ಋಷಿ ಪೇಳ್ದನಿತರೊಳಾವೆಲ್ಲರುಂ ಪಿಶಾಚರೂಪಮಂ ತಾಳ್ದೀ ವಟವಿಟಪಿಯ ನಾಶ್ರಯಿಸಿಗೆಯ್ದು ಪನ್ನಿರ್ಛಾಸಿರಬರಿಸಂಬರ ಮೆತ್ತಲುಂ ತೊಲಗ ದವನಳಿವಂಪಾ

---

ವಿಲಸತ್ಕೈಲಾಸಭೂಭೃತ್ಕಟಕದೊಳ್- ಪ್ರಕಾಶಿಸುವ ಕೈಲಾಸಪರ್ವತದ ತಪ್ಪಲಿನಲ್ಲಿ, ಉಜ್ವಳಕಾಸಾರಂ- ಪ್ರಕಾಶಿಸುವ ಸರೋವರವು, ತಟದೊಳ್- ದಡದಲ್ಲಿ, ತಾರಾಚಳನಾಥಾಸ್ಥಾನದಿಂದೆ— ತಾರಾಚಳ-ಕೈಲಾಸಪರ್ವತಕ್ಕೆ, ನಾಥ- ಸ್ವಾಮಿಯಾದ ಶಿವನ, ಆಸ್ಥಾನದಿಂದೆ- ಸಭೆಯಿಂದ, ಈಸಾಡುತ್ತೆ- ಈಜುತ್ತಾ.

ಅರುಣಸ್ಫುರಿತೇಕ್ಷಣದಿಂ- ಕೆಂಪಾಗಿ ಪ್ರಕಾಶಿಸುವ ಕಣ್ಣಿನಿಂದ, ನಗ್ನಾಂಗರಂ- ಬೆತ್ತಲೆಯಾದ ದೇಹವುಳ್ಳ, ಸಮಂತು- ಚೆನ್ನಾಗಿ. ... ... ... ॥೪೩॥

ಕಾಯ್ದು- ಕೋಪಿಸಿ, ಸಪ್ತಶತಸಂಖ್ಯಾಕರಂ- ಏಳ್ನೂರು ಜನ ಗಂಧರ್ವರನ್ನು, ಜಡಿದು- ಭಯಪಡಿಸಿ, ಜಂಕಿಸಿ- ಗದರಿಸಿ. * * * * * *

ಸತತಶಿವಸ್ನಾನೋಚಿತನುತಜಲಮಂ- ಯಾವಾಗಲೂ ಪರಮೇಶ್ವರನ ಅಭಿಷೇಕಕ್ಕೆ ಯೋಗ್ಯವಾದ ಶ್ಲಾಘ್ಯವಾದ ನೀರನ್ನು, ಶಂಭುಪೂಜೋಚಿತಮಂ- ಶಿವಪೂಜೆಗೆ ಯೋಗ್ಯವಾದ, ಶತದಳಮಂ- ತಾವರೆಯನ್ನು, ಪರಿದುದರಿಂ- ಕಿತ್ತುದರಿಂದ. ... ... ॥೪೪॥

ತಳರ್ದು- ಭಯಪಟ್ಟು, ತತ್ಪದವನರುಹದೊಳ್- ಆ ಮಾರ್ಕಂಡೇಯಮುನಿಯ ಪಾದಕಮಲದಲ್ಲಿ, ಕೆಡೆದು- ಬಿದ್ದು, ಜವದೆ- ಬೇಗನೆ, ಶಾಪವಿಮೋಕ್ಷಂ- ಶಾಪದಬಿಡುಗಡೆಯು, ಜನಿಯಿಪುದಂ-ಹುಟ್ಟುವದನ್ನು.

ಉನ್ನಟಿಯಿಸಿರ್ದು- ಉತ್ಕೃಷ್ಟವಾದ ನಡತೆಯಲ್ಲಿದ್ದು, ತತ್ತನುದಾಹಸಂಘಟಿತಧೂಮದ- ಅವನ ದೇಹವಂ ಸುಡುವಕಾಲದಲ್ಲಿ ಸೇರಿದ ಹೊಗೆಯು. ... ... ॥೪೫॥

ಪನ್ನಿರ್ಛಾಸಿರಬರಿಸಂಬರಂ- ಹನ್ನೆರಡು ಸಾವಿರ ವರ್ಷಗಳತನಕ, ಅಳಿವಂ- ಸಾಯುವಿಕೆಯನ್ನು, ಪಾ

ತಾಳ ಲಾರ ದಾಹಾರಂಗೊಳ
ದುರ್ ನೆಲಸಿರ್ದ ವಿಂಧಿ ನುದಯದೊಳಾನೊರ್ವನೆ ಪಸಿವಂ
ಲಿಂದೆಲ್ಲರು ಬಿಟ್ಟು ಪೊರಮಟ್ಟು ಪೋದೆ ನಾಂಬರ್ಪ್ಪದರಿಂ ಮುನ್ನಮೆ ॥
ಕಂ ॥ ಪೋದರ್ಗಡ ಪುಣ್ಯಾಧಿಕ । ರಾದೇವನ ದೇಹದಾಹಧೂಮದ ನೋಂಕಿಂ ॥
ದಾದ ಮುಳಿದಿರ್ದೆ ನಾ ನೆ । ನ್ನೀದೌರ್ಭಾಗ್ಯಪ್ರಭಾವ ಮೆನ್ನದೊ ನೃಪತೀ ॥ ೪೭
ಕಂ ॥ ಒಡನಾಡಿಗ ಳೆಲ್ಲರ ಸಂ । ಗಡ ಮಿರ ದೀಪ್ಪೊಳ್ತು ಪಸಿವಿ ನುರವಣೆಯಿಂ ಜಂ ॥
ದೊಡಲಂ ಪೊರೆಯ ಲ್ಪೋಪೆಂ । ಕಡೆಸಿಲ್ಕಿದೆ ನದರಿ ನಿಂತು ಪಳಯಿಪೆ ನರಸ ॥ ೪೮
ಕಂ॥ ಅರೆ ಬೆಂದ ಕೊಳ್ಳಿಗಳುಮಂ । ಪರೆದಿದರ್ ತದಸ್ಥಿಶಕಲಮುಮ ನೊಡನಿಟ್ಟೊ॥
ಲ್ದುರಿಪೊತ್ತಿ ಸೆನ್ನಮೇಲಣ । ಕರುಣದಿ ನೆಲೆನೃಪತಿ ಪೋಪೆ ನಾಪೊಗೆಯಿಂದಂ ॥ ೪೯
ಕಂ ॥ ಕುಱು ಪಾವುದು ನೀಂ ಪೋದುದ । ಕರುಪಿಂ ದೆಮಗೆಂಬೆ ಯಪ್ಪೊಡೀ
ಮಟತರುವ ॥ ನೆರೆ ಕೀಳ್ತು ಬೇರ್ವೆರಸಿ ನೆಲ । ನರಿಯುತ್ತಿರೆ ರಜತಗಿರಿಗೆ ಕೊಂಡಾಂ
ಪೋಪೆಂ ॥ ... ... ... ... ೫೦
ವ ॥ ಎಂದ ಮರುಳ ಮಾತಂ ಮನದೆಗೊಂಡರಸ ನಾಶ್ಚರ್ಯಮಾನಸ ನಂತೆಗೆಯ್ವೆ
ನೆಂದು ಕಡೆಗೊಳ್ಳಿಗಳುಮ ನಸ್ಥಿಶಕಲಮುಮಂ ಪುಂಜಿಸಿ ಚಂದನೇಂಧನಂಗಳ ನಾಜ್ಯದೊ
ಳ್ನಾಂದ ದಿವ್ಯಾಂಬರಗಳುಮ ನಮರ್ಚೆ ಚಿತಾಗ್ನಿಯಂ ಪೊತ್ತಿಸೆ ಪೊಗೆ ನೆಗೆದು ನಿಜಾಂಗ
ಮಂ ನೋಂಕ ಲೊಡನೆ ॥ * * * * * * *
ಚಂ ॥ ತೊಳಪ ಕಿರೀಟ ಮುಜ್ವಲಲಸನ್ಮಣಿಕುಂಡಲ ಮುಟ್ಟ ದಿವ್ಯಮಂ । ಜುಳವಸ
ನಂ ಮನೋಜ್ಞತರಹಾರ ಮುದಂಚಿತರತ್ನಕಂಕಣಂ ॥ ಪೊಳೆವ ಮುಖೇಂದು ಮಂದಹಸ
ನಂ ನಿಡುಗಣ್ಮಲ ರೊಪ್ಪೆ ಮೆಯ್ಯನು । ಣ್ಬಳ ಗೆಳೆಮಿಂಚ ನೇಳಿಸೆ ಪಿಶಾಚತೆ ಪಿಂಗಿದನೊ
ಪ್ಪಿ ತೋರಿದಂ ॥ ... ... ... ... ೫೧

---

ದುರ್- ಅಪೇಕ್ಷಿಸಿ, ಇಂದಿನ- ಈ ದಿವಸದ. * * * * *
ಪುಣ್ಯಾಧಿಕರ್- ಹೆಚ್ಚಾದ ಪುಣ್ಯವುಳ್ಳವರು, ಈ ದೌರ್ಭಾಗ್ಯಪ್ರಭಾವಂ- ಈ ಅದೃಷ್ಟಹೀನತೆಯ ಮಹಿಮೆಯು. ... ... ... ॥೪೭॥
ಒಡನಾಡಿಗಳ್- ಜೊತೆಗಾರರಾದ, ಈಪ್ಪೊಳ್ತು- ಈಹೊತ್ತೇ, ಉರವಣೆಯಿಂ- ಸಂಬಂಧದಿಂದ. ॥೪೮॥
ಅರೆಬೆಂದ- ಅರ್ಧಭಾಗ ಬೆಂದಿರುವ, ಕೊಳ್ಳಿಗಳುಮಂ- ಬೆಂಕಿ ಹತ್ತಿದ ಸೌದೆಗಳನ್ನು, ಪರೆದು- ಹರಡಿಕೊಂಡು, ತದಸ್ಥಿಶಕಲಮುಮಂ-ಅವನ ಮೂಳೆಯ ತುಂಡನ್ನೂ. ... ॥೪೯॥
ಕುರುಪು- ಗುರುತು, ಅರುಪು- ತಿಳಿಸು, ಬೇರ್ವೆರಸಿ- ಬೇರುಸಹಿತವಾಗಿ. ... ॥೫೦॥
ಮರುಳ- ಪಿಶಾಚದ, ಕಡೆಗೊಳ್ಳಿಗಳುಮಂ- ಕಡೆಕಡೆಯಲ್ಲಿ ಬಿದ್ದಿರುವ ಕೊಳ್ಳಿಗಳನ್ನೂ, ಚಂದನೇಂಧನಂಗಳಂ- ಶ್ರೀಗಂಧದ ಸೌದೆಗಳನ್ನು, ಆಜ್ಯದೊಳ್- ತುಪ್ಪದಲ್ಲಿ, ನಾಂದ- ನೆನೆದ, ಅಮರ್ಚೆ- ಸೇರಿಸಿ, ಚಿತಾಗ್ನಿಯಂ- ದೇಹವಂ ಸುಡುವದಕ್ಕೆ ಹಾಕಿದ್ದ ಬೆಂಕಿಯನ್ನು, ನೆಗೆದು- ಎದ್ದು. * *
ಉಜ್ವಲಲಸನ್ಮಣಿಕುಂಡಲಂ- ಮನೋಹರವಾಗಿ ಪ್ರಕಾಶಿಸುವ ರತ್ನದ ಹತ್ತಕಡಕು, ನಿಡುಗಣ್ಮಲರ್- ತಾವರೆಯ ಹೂವಿನಂತೆ ಉದ್ದವಾದ ಕಣ್ಣು, ಏಳಿಸೆ- ತಿರಸ್ಕರಿಸಲು, ಪಿಶಾಚತೆಪಿಂಗಿದಂ- ಪಿಶಾಚತನದಿಂ ಬಿಡಲ್ಪಟ್ಟನು. ... ... ... ॥೫೧॥

ವ ॥ ಆಗಳ್ ॥ ಮತ್ತೀ ॥ ಅರಸಂ ಬೇಗದೆ ಮಂತ್ರಿಮಂಡಳಿಕಸಾಮಂತಾಪ್ತಪು ತ್ರಾಂಗನೋ । ತ್ಕರಯುಕ್ತಂ ವದೆ ದೇರುತಂ ಭಟಭಟಪ್ರಧ್ವಾನ ಮಿಂಬಾಗೆ ಬೇ ॥ ರ್ವಿರ ಸುತ್ತಂ ಸುರ ನೊತ್ತಿ ಕೀಳ್ತ ವಟಮಂ ತತ್ಸಂಯುತಂ ಭೂಮಿಗ । ಚ್ಚರಿ ಯಪ್ಪಂತಿ ರುಘೀರವಮಗುಡುತೆ ಪೊಕ್ಕಂ ಬಂದು ಕೈಲಾಸಮಂ ॥ ... ... ೫೦

ವ ॥ ಇನ್ನುಂ ಪೇಳ್ವೆ ನೆಂತೆನೆ ॥ * * * * * *

ಕಂ ॥ ನಾಮಿಂದ ಮೆಂಬ ಪೊಳಲೊ । ಳ್ಭಾವಜಹರಭಕ್ತಚನ್ನಯಾನ್ವಯಭವೆ ಕು॥ ಷ್ಠಾಮೇಷ್ಟಿತತನು ಗುಡ್ಡಾ । ದೇವಿ ಯೆನಿ ಪ್ಪೋರ್ವ ಳಿರ್ಪ ಳೆಲಿಮನುಜೇಂದ್ರ ॥ ೫೩

ವ ॥ ಆ ಪೊಳಲ ಪೂರ್ವ ಪುರವೀಥಿಯೊ ಳ್ಬರ್ವ ವಿಶೀರ್ಣನಾಸಾಕರಚರಣನ ಖಾಗ್ರವ್ರಣಾವೃತಶರೀರಿಣಿ ಯಪ್ಪ ಗುಡ್ಡಾಂಬೆಯಂ ಕಂಡು ಮೆಯ್ಗೆಟ್ಟಂತ್ಯಜೆ ಯಾದ ನಿನ್ನಂ ನೋಳ್ಪ ದೆಮ ಗತ್ಯಂತಾನುಚಿತಮಿಾಗಳೆ ಪೊರಮ ಡೆಂದಾಪೊಳಲಿಂ ಪೊರಮ ಡಿಸೆ ದೃಢವ್ರತೆ ಭಕ್ತಿ ಧೃತಿಗೆಡ ದಾನಗರಮ ನುಳಿದು ಮನ್ನಾಥ ನಿಪ್ಪ ಸೌರಾಷ್ಟ್ರವ ತಿಯಿಂ ಸಾರತೇಜೋಮಯಶರೀರಂಬಡೆದಪೆ ನೆಂದು ತರಿಸಂದು ತತ್ಪುರಾಭಿಮುಖಿ ಯಾಗಿ

ಮತ್ತೀ ॥ ನಡೆತಂದಳ್ ಧೃತಿಯಿಂದೆ ಕಾಲ್ನಡೆಯೊ ಳೆತ್ತಂ ಸೂಸೆ ರಕ್ತಾಂಬು ತ । ನ್ನಡಿಯಿಂ ಪೂಯಸಮನ್ವಿತಂ ಕಿರಿದುದೂರು ಕಾಲ್ಗ ಳಾಮಾರ್ಗದೊ ॥ ಳ್ಕಡಿವೋಗುತ್ತಿರೆ ಜಾನುವಿಂ ತಳರ್ದ ಳಾಜಾನುದ್ವಯಂ ಬೀಳೆ । ಕೀಲುಡಿದಾಗ ಳ್ಪೊರಳುತ್ತೆ ನೆತ್ತರುಗೆ ಮೆಯ್ಯಿಂ ಭಕ್ತಿಯುದ್ವೇಗದಿಂ ॥ ... ... ... ೫೪

ಕಂ ॥ ಬರುತಿರ್ದ್ದ ಳಲ್ಲಿಸಿರುಪಮ । ವರದಂ ಸೌರಾಷ್ಟ್ರಸೋಮನಾಥಂ ತಾ ನಿ॥ ನ್ನಿರಲಾಗ ದೆಂದು ಬಂದಾ । ದರದಿಂ ನಿಜರೂಪುದೋರು ತಿದಿರೊಳ್ನಂದಂ ॥ ೫೫

ಕಂ॥ ಜೆಡೆ ಮುಡಿ ಶಶಿಕಳೆ ಬಾಂಬೊಳೆ । ಕಿಡಿಗ ಣ್ಫಣಿಭರಣ ಮಸಿತಕಂಠಂ ಮೆಯ್ಯೊ॥ ಳೊತ್ತೆದ ಭಸಿತಂ ದ್ವಿಪಾಜಿನ । ದುಡೆ ತಿಸುಳಂ ಮಿಸುಗೆ ಮೆರೆದ ನಗಸುತೆ ಯರಸಂ ॥

ಸುರಂ- ಆ ದೇವತೆಯು, ವಟಮಂ- ಆಲದಮರವನ್ನು, ಎರುತಲ- ಹತ್ತುತ್ತಾ. ॥೫೦॥

## ಗುಡ್ಡಾದೇವಿಯ ಕಥೆ.

ಭಾವಜಹರಭಕ್ತಚನ್ನಯಾನ್ವಯಭವೆ- ಶಿವಭಕ್ತನಾದ ಮಾದರಚನ್ನಯ್ಯನ ವಂಶದಲ್ಲಿ ಹುಟ್ಟಿದ, ಕು ಷ್ಠಾಮೇಷ್ಟಿತತನು- ಕುಷ್ಠರೋಗದಿಂದ ಸುತ್ತಲ್ಪಟ್ಟ ದೇಹವುಳ್ಳ. ... ॥೫೩॥

ವಿಶೀರ್ಣ......ಶರೀರಿಣಿ— ವಿಶೀರ್ಣ- ಶಿಥಿಲವಾದ, ನಾಸಾ- ಮೂಗು, ಕರ- ಹಸ್ತ, ಚರಣ- ಕಾ ಲು, ನಖಾಗ್ರ- ಉಗುರಿನ ತುದಿ ಇವುಗಳಲ್ಲಿರುವ, ವ್ರಣ- ಗಾಯದಿಂದ, ಆವೃತ- ಆವರಿಸಲ್ಪಟ್ಟ, ಶರೀ ರಿಣಿ- ದೇಹವುಳ್ಳವಳು, ಮೆಯ್ಗೆಟ್ಟ- ದೇಹವು ಕೆಟ್ಟುಹೋಗಿರುವ, ಧೃತಿಗೆಡದೆ- ಧೈರ್ಯಗುಂದದೆ, ಸಾರತೇ ಜೋಮಯಶರೀರಂಬಡೆದಪೆಂ-ಶ್ರೇಷ್ಠವಾದ ಕಾಂತಿಯ ಹೆಚ್ಚಿಗೆಯುಳ್ಳ ದೇಹವಂ ಹೊಂದುವೆನು. *

ಪೂಯಸಮನ್ವಿತಂ- ಕೊಳೆತ ರಕ್ತದಿಂ ಕೂಡಿದ, ಕಡಿವೋಗುತ್ತಿರೆ- ಕತ್ತರಿಸಿ ಬೀಳುತ್ತಿರಲು, ಜಾ ನುವಿಂ- ಮೊಣಕಾಲಿನಿಂದ, ಕೀಲುಡಿದಾಗಳ್- ಮಂಡಿಯ ಕೀಲುಮುರಿದಾಗ. ॥೫೪॥

॥೫೫॥ ಬಾಂಬೊಳೆ- ಆಕಾಶಗಂಗೆ, ಕಿಡಿಗಣ್- ಅಗ್ನಿನೇತ್ರ, ಫಣಿಭರಣಂ- ಸರ್ಪದ ಆಭರಣ, ಅ ಸಿತಕಂಠಂ- ಕಪ್ಪಾದ ಕತ್ತು, ತೊಡೆದ- ಲೇಪಿಸಿದ, ದ್ವಿಪಾಜಿನದ- ಆನೆಯ ಚರ್ಮದ, ಉಡೆ- ಉಟ್ಟುಕೊಳ್ಳು ವ ವಸ್ತ್ರ, ತಿಸುಳಂ- ತ್ರಿಶೂಲ. ... ... ॥೫೬॥

ವ || ಅಂತೆಸೆದು ಭವರೋಗವೈದ್ಯಂ ನಿಜಭಕ್ತೆಯಂ ಕರುಣಾರ್ದ್ರಕಟಾಕ್ಷದೆ ನಿರೀಕ್ಷಿಪುದು ಮಾಗಳೆ ಸರ್ವಾಂಗ ಮನಿತುಂ ಸಂಪೂರ್ಣ ಮಾಗಿ ತಪ್ತಸುವರ್ಣವರ್ಣಮಂ ತಳೆಯೆ ನಿರುಪಮಸೌಂದರ್ಯಮ ನಾಳ್ದು ತನ್ನಡಿಗೆ ಪರಮಾನಂದದಿ ನೆರಗಿರ್ದ ಭಕ್ತೆಗೆ ಮಚ್ಚಿ ನೀಂ ವರಮಂ ಬೇಳ್ಪುದೆನೆ ಕರಾರವಿಂದಮಂ ಮುಗಿದು || * * *

ಕಂ || ಪರಮಕೃಪಾನಿಧಿ ನಿಮ್ಮಯ | ಚರಣಾಬ್ಜಮ ನಿಂದುಕಂಡೆ ನದರಿಂ ದನ್ಯಂ||
ವರಮಾವುದೊ ಬೇಳ್ಪೊಡೆ ಸಲೆ | ಕರುಣಿಸು ನಿಮ್ಮಂಘ್ರಿಭಜನ ಮೊಂದನೆ ಮುದದಿಂ ||

ವ || ಎನೆ ಶಿವಂ ಮಚ್ಚಿ ನಿಜಭಕ್ತಿಸುಖಮ ನಮರ್ಚಿ ಗುಡ್ಡಾದೇವಿಯಂ ಪೊರೆದು||

ಕಂ || ಅವಳಂ ದೂಷಿಸಿ ದವನೀ | ದಿವಿಜರ ತನುವೆಲ್ಲ ಕುಷ್ಠಮಯ ಮಪ್ಪವೊ
ಲಾ || ಭವಹರ ನೊಡರ್ಚಿದಂ ಭೂ | ಧವ ಜನ ಮಚ್ಚರಿಯ ನಾಳ್ವಿನಂ ವಸುಮತಿಯೊಳ್||

ಕಂ || ವಾರ್ತೆ ಯಿದು ಜಗದೊ ಳಿನ್ನುಂ | ವರ್ತಿಪು ದೆಲೆನೃಪತಿ ಪರಮಶಿವಭಕ್ತಿ
ಲಸ || ದ್ವರ್ತನರ ಪೂರ್ವಜಾತಿಯ | ನಾ ರ್ತಡೆಯದೆ ನುಡಿವ ರವ ಗಘು ಕೈಕೊಳಗಪ್ಪರ್||

ಕಂ || ಸಾಂಗಕ್ರಿಯಾಪ್ರತಿಷ್ಠಿತ | ಲಿಂಗದೊಳೆ ಶಿಲಾತ್ವ ಮೊಳವೆ ಪರಶಿವದೀಕ್ಷಾ ||
ಸಂಗತನೊ ಳಂತ್ಯಜತೆಯನು | ಷಂಗಂ ಸಮನಿಪುದೆ ಪೇ ಳ್ಧರಾಧಿಪ ನಿಜಮಂ || ೬೦

ಕಂ || ಶರಧಿಯೊಡೆವೆರೆದ ನದಿಗ | ಳ್ಶರಧಿಯ ರೂಪಪ್ಪ ತೆರದಿ ನಪನಿಪ ವಿಲಸ|| ದ್ಗು
ರುಕರಕಮಲಸ್ಪರ್ಶನ | ದಿರವಿಂ ನರ ರಕ್ಕು ಮಲ್ತೆ ಗುರುರೂಪಧರರ್ || ೬೧

ಕಂ || ಭ್ರಮರಾವಲಂಬಕೀಟಂ | ಭ್ರಮರಂ ತಾ ನೆನಿಸಿ ಕೀಟ ಮಪ್ಪುದೆ ಶಿವಲಿಂ ||
ಗಮ ನಪ್ಪಿ ಲಿಂಗಭಾವಂ | ಸಮನಿಸಿದ ನರಂ ನರೇಂದ್ರ ನರನಕ್ಕುಮೆ ಪೇಳ್ || ೬೨

ಕಂ || ಜಲಧರದ ಮರೆಯ ದಿನಮಣಿ | ಮಲಿನಾಂಬರಬದ್ಧಮಣಿ ಧರಿತ್ರಿಯ ಮರೆ
ಯೊ || ಳ್ನೆಲಸಿದ ನಿಧಿ ಯೆನಿಪಂ ದು | ಷ್ಕುಲಸಂಭವನ್ನಂ ಪುರಾರಿಭಕ್ತಂ ಧರೆಯೊಳ್ || ೬೩

---

ತಪ್ತಸುವರ್ಣವರ್ಣಮಂ- ಪುಟಪಾಕಶೋಧಿತವಾದ ಚಿನ್ನದ ಬಣ್ಣವನ್ನು. * * ||೫೮||

||೫೭|| ಅವನೀದಿವಿಜರ- ಹಾರ್ವರ, ತನುವೆಲ್ಲಮುಂ- ದೇಹವೆಲ್ಲವೂ. ... ||೫೯||

ಪರಶಿವಭಕ್ತಿಲಸದ್ವರ್ತನರ- ಉತ್ಕೃಷ್ಟವಾದ ಶಿವಭಕ್ತಿಯೇ ನಡತೆಯಾಗುಳ್ಳವರ, ಅಘುಕ್ಕೆ- ಪಾಪಕ್ಕೆ, (ಶಿವಸಂಸ್ಕಾರಸಂಪನ್ನೆ ಹ್ಯಯಂಶೂದ್ರೋಽಪ್ಯಯಂದ್ವಿಜಃ| ಲಿಂಗಭೇದಃಕೃತೋಯೇನರೌರವಂನರಕಂವ್ರಜೇತ್ || ಎಂದು ಶಿವರಹಸ್ಯಪ್ರಮಾಣಂ) ... ... ||೬೦||

ಸಾಂಗಕ್ರಿಯಾಪ್ರತಿಷ್ಠಿತಲಿಂಗದೊಳೆ- ಸಂಪೂರ್ಣವಾದ ವಿಧ್ಯುಕ್ತಕರ್ಮದಿಂದ ಸ್ಥಾಪಿಸಲ್ಪಟ್ಟ ಲಿಂಗದಲ್ಲಿ, ಶಿಲಾತ್ವಂ- ಕಲ್ಲಿನ ತನವು, ಒಳವೆ- ಇರುವದೇ ? ಅಂತ್ಯಜತೆಯ- ಚಂಡಾಲತ್ವದ, ಅನುಷಂಗಂ- ಸಂಬಂಧವು, (ಶಿವದೀಕ್ಷಾಭಿಜಾತಸ್ಯಪೂರ್ವಜಾತಿಂನಚಿಂತಯೇತ್ | ಸುಪ್ರತಿಷ್ಠಿತಲಿಂಗೇತುನಯಥಾಪೂರ್ವಭಾವನಾ || ಎಂದು ಶಿವಪುರಾಣಪ್ರಮಾಣಂ. ) ... ... ||೬೦||

ಶರಧಿಯ- ಸಮುದ್ರದ, ಇರವಿಂ- ರೀತಿಯಿಂದ. ... ... ||೬೧||

ಭ್ರಮರಾವಲಂಬಕೀಟಂ- ಕಡಜದ ಆಶ್ರಯವುಳ್ಳ ಹುಳವು, ಸಮನಿಸಿದ- ಪ್ರಾಪ್ತವಾದ. ||೬೨||

ಜಲಧರದ- ಮೋಡದ, ದಿನಮಣಿ- ಸೂರ್ಯನು, ಮಲಿನಾಂಬರಬದ್ಧಮಣಿ- ಕೊಳಕುಬಟ್ಟೆಯಲ್ಲಿಕಟ್ಟಲ್ಪಟ್ಟ ರತ್ನವು, ದುಷ್ಕುಲಸಂಭವನ್ನಂ- ಕೆಟ್ಟಜಾತಿಯಿಂದ ಆಛಾದಿಸಲ್ಪಟ್ಟ. ... ||೬೩||

ಉ ॥ ಪುಟ್ಟದೆ ಮುತ್ತು ಶುಕ್ತಿಯೊಳೆ ಪುಟ್ಟದೆ ಪಂಕದೊಳಂಬುಜಾತ ಮೇಂ । ಪುಟ್ಟದೆ ಕಲ್ಲೊಳೇಂ ಮಿಸುನಿ ಪುಟ್ಟದೆ ಕಾಷ್ಠದೊಳಗ್ನಿ ಪಟ್ಟೆ ತಾಂ॥ ಪುಟ್ಟದೆ ಕೀಟದೊಳ್ಧರೆಗೆ ಪೂಜ್ಯತೆದಾಳದೆ ಮೇಣಿವಂತೆ ದಲ್ । ಪುಟ್ಟದೊಡೇನೊ ದುಷ್ಕುಲದೊಳೀಶ್ವರಭಕ್ತನೆ ಪೂಜ್ಯನುರ್ವಿಯೊಳ್ ॥ ... ... ೬೪

ರಥೋದ್ಧತವೃತ್ತ ॥ ಮಾತೆ ಗೌರಿ ಪಿತ ನಲ್ತ ರುದ್ರ ನೀ । ಖ್ಯಾತಮಾದ ಭುವನತ್ರಯಕ್ಕೆ ತ ॥ ಜ್ಜಾತಸರ್ವಜಗತೀಜನಂಗಳೊ । ಳ್ಜಾತಿಭೇದ ಮೇಣ ಮುಂಟೆ ಧಾತ್ರಿಪ ॥ ... ... ... ... ೬೫

ವ ॥ ಅಂತು ಮಲ್ಲಪೆಯುಂ ॥ * * * * * *

ಕಂ ॥ ಭೂಸುರಕುಲಗುರು ವೇದ । ವ್ಯಾಸಂ ಕಬ್ಬಿಲಿತಿಯಲ್ಲಿ ಪುಟ್ಟಿದ ನಧಿಕೋ ॥ ಲ್ಲಾಸಂ ಮಾತಂಗಿಯೊ ಳಾ । ಭಾಸುರಮಾತಂಗಮುನಿವರು ಜನಿಯಿಸಿದಂ ॥ ೬೬

ಕಂ ॥ ಒಗೆದಂ ವಸಿಷ್ಠಮುನಿ ವೇ । ಶ್ಯೆಗೆ ಸೂತು ಜನನಮಾಂತ ನಂತ್ಯಜನಿಂ ಪ॥ ನ್ನಗಧರಭಕ್ತಿಸ್ಥಿತಿಯು । ಜ್ಜುಗದಿಂ ದ್ವಿಜಮುಖ್ಯ ರಾದ ರಿವ ರೀವರೆಯೊಳ್ ॥ ೬೭

ಕಂ ॥ ವಿದಿತ ಮಿದು ಸಕಲಭುವನದೊ । ಳಿದನರಿದುಂ ನುಡಿಯ ಲೇಕೆ ದುಷ್ಕುಲಭವ ರೆ ॥ ದೊಪವಿದ ಮದದಿಂ ಕುಲ ಮಿ । ಲ್ಲದ ಶಿವಭಕ್ತರ್ಕಳಲ್ಲಿ ಕುಲಜಾತಿಗಳಂ ॥ ೬೮

ವ ॥ ಎಂದಿಂತು ನುಡಿದ ಮಹಿಮಾಕರನ ಮಾತ ನೇಳದಂಗೆ ಯ್ದುರಸು ಕುಪಿತನಾಗಿ॥

ಕಂ ॥ ಬಸವರಸ ಪೂರ್ವಕಥೆಗಳ । ವಿಸರಮ ನುಳಿ ಸರ್ವಜನವಿರೋಧೋಕ್ತಿಗಳಂ॥ ಪಸರಿಸದಿ ರೆಮ್ಮೊ ಳೋದಿನ । ಗಸಣಿಗ ಳೇಕೆನಿತು ಸೊಲ್ಲು ಮೊಪ್ಪದು ಬಿಂಕಂ ॥ ೬೯

ಕಂ ॥ ಹರಭಕ್ತ ರಧಿಕ ರೆಂದೆಂ । ಡೊರೆದಪೆ ತತ್ಕಾಯಮಂ ಚಿವುಂಟಿದೊಡ ಮದೇಂ॥ ಸುರಿತಪ್ಪುದೆ ಸುಧೆ ಪಾರ್ವರ । ಶರೀರದಿಂ ರಕ್ತ ಮೊಕ್ಕಪುದೆ ಪೇಳ್ದಿಟಮಂ ॥ ೭೦

---

ಶುಕ್ತಿಯೊಳೆ- ಮುತ್ತಿನಚಿಪ್ಪಿನಲ್ಲಿ, ಪಂಕದೊಳ್- ಕೆಸರಿನಲ್ಲಿ, ಮಿಸುನಿ- ಚಿನ್ನವು, ಕಾಷ್ಠದೊಳ್- ಕಟ್ಟಿಗೆಯಲ್ಲಿ, ಪಟ್ಟೆ- ರೇಷ್ಮೆಯು, ಕೀಟದೊಳ್- ಹುಳದಲ್ಲಿ, (ಯಥಾಪಂಕೇಸರೋಜಂಸ್ಯಾದ್ಯಥಾಕಾಷ್ಠೇ ಹುತಾಶನಃ । ಯಥಾಸುವರ್ಣಂಪಾಷಾಣೇ ಭಕ್ತಶ್ಚಂಡಾಲವಂಶಜಃ । ಸ್ತ್ರೀವಾಥಪುರುಷಷ್ಷಂಡಶ್ಚಂಡಾಲೋದ್ವಿಜವಂಶಜಃ । ನಜಾತಿಭೇದೋಲಿಂಗಾರ್ಚಾಸ್ಸರ್ವೇರುದ್ರಗಣಾಸ್ಸ್ಮೃತಾಃ ॥ ಎಂದು ಶಿವಪುರಾಣ ಪ್ರಮಾಣಂ) ... ... ... ॥೬೪॥

ಮಾತೆ- ತಾಯಿ, ತಜ್ಜಾತಸರ್ವಜಗತೀಜನಂಗಳೊಳ್- ಆ ಪಾರ್ವತೀಪರಮೇಶ್ವರರಿಂ ಹುಟ್ಟಿದ ಸಮಸ್ತ ಭೂಜನಗಳಲ್ಲಿ. ... ... ... ॥೬೫॥

ಭೂಸುರಕುಲಗುರು- ಹಾರ್ವರ ಜಾತಿಗೆ ಗುರುವಾದ, ಕಬ್ಬಿಲಿತಿಯಲ್ಲಿ- ಕರಿಯ ವ್ಯಾಧಸ್ತ್ರೀಯಲ್ಲಿ, ಮಾತಂಗಿಯೊಳ್- ಮಾದಗಗಿತ್ತಿಯಲ್ಲಿ. ... ... ... ॥೬೬॥

ವೇಶ್ಯೆಗೆ- ದೇವತೆಯರ ಸೂಳೆಯಾದ ಊರ್ವಶಿಯಲ್ಲಿ, ಸೂತಂ- ಸೂತರ್ಷಿಯು, ಅಂತ್ಯಜನಿಂ- ಚಂಡಾಲನಿಂದ, ಪನ್ನಗಧರಭಕ್ತಿಸ್ಥಿತಿಯು- ಶಿವಭಕ್ತಿಯಿರುವಿಕೆಯು, ಉಜ್ಜುಗದಿಂ- ಪ್ರಯತ್ನದಿಂದ. ॥೬೭॥

॥೬೮॥ ಗಸಣಿಗಳ್- ಚಾತುರ್ಯಗಳು, ಬಿಂಕಂ- ಗರ್ವವು. ... ॥೬೯॥

ಚಿವುಂಟಿದೊಡಂ- ಜಿಗುಟಿದರೆ, ಸುಧೆ- ಹಾಲು, ಒಕ್ಕಪುದೆ- ಸುರಿಯುವದೇ. ... ॥೭೦॥

ವ ॥ ಎಂಬುದುಂ ಭಕ್ತಿರತ್ನಾಕರಂ ಕನಲ್ದು ಗಳಿಲನೇಳ್ದು ನಿಂದು ॥ * *

ಕಂ ॥ ವಿಮಳಶಿವಭಕ್ತಮಾರ್ಗಮೆ । ಸುಮಾರ್ಗ ಮುಳಿದವರ ಮಾರ್ಗ ಮದುವೆ ಕುಮಾರ್ಗಂ ॥ ಕುಮತಿಜನ ಮೆಂತು ಮೇನರಿ। ಗುಮೆ ಪೇಳಿದ ನತುಳದುರಿತಪೂರಿತ ಹೃದಯಂ ॥ ... ... ... ... ೭೧

ಮ ॥ ಸ್ರ ॥ ಖಳ ರಾಶಾಪಾಶಯುಕ್ತ ರ್ದುರುಳ ರತಿದುರಾತ್ಮ ರ್ಶಿವದ್ರೋಹಿಗ ಳ್ಬಂ । ಚಲಚಿತ್ತ ರ್ಸೋಮಪಾನಚ್ಛಲರಚಿತಸುರಾಪಾನ ರಾನೀತಗೋಪೀ ॥ ಮಲಘಾಲ ರ್ವೇದಭಾರೋದ್ವಹನಖರ ರುಪಾತ್ತಾನ್ಯದೋಷ ರ್ಸಜೀವ್ರೋ । ಜ್ವಲಪಶ್ವೌಘಪ್ರಹಿಂ ಸಾಪರ ರಮರಪುರೀಚೇಟಿಕಾಭೋಗಲೋಲರ್ ॥ ... ೭೨

ಮತ್ತೀ ॥ ಹರಭಕ್ತದ್ವೇಷಿಗ ಳ್ಭಕ್ಷಿತಪಶುಪಲಲ ರ್ಕರ್ಮಚಂಡಾಲ ರನ್ಯಾ । ಯ ರತ ರ್ವಿತ್ತೌಘದಾತಾರ್ಜಿತನಿಜಸುಕೃತ ರ್ದಂಭಮಾತ್ಸರ್ಯಮಾಯಾ ॥ ಪರಿಣದ್ಧ ರ್ಪಾ ಶಬದ್ಧ ರ್ಪರಮಮುನಿದಧೀಚಾದಿ ಶಾಪಾಗ್ನಿದಗ್ಧ । ರ್ಗುರುದೀಕ್ಷಾಶೈವಪಂಚಾಕ್ಷರಜಪರ ಹಿತ ರ್ಭೂದಿವೌಕೋವರಾಕರ್ ॥ ... ... ೭೩

ಕಂ ॥ ಎನಿಪೀದುರ್ದ್ವಿಜರೊಡನೆ ಮ । ಗನುಪ ಉತ್ತರವು ನೀವು ದಂತಾದೊಡ ಮಾ ॥ ಘನಶಿವಮಹತ್ವಮತದಾ । ರ್ಢ್ಯನಿಮಿತ್ತಂ ತೋರುವೆಂ ನಿದರ್ಶನಮ ನಣಂ ॥

---

ಕನಲ್ದು- ಕೋಪಿಸಿ, ಗಳಿಲನೆ- ಬೇಗನೆ. * * * * * *

ಕುಮಾರ್ಗಂ- ಕೆಟ್ಟದಾರಿಯು, ಅತುಳದುರಿತಪೂರಿತಹೃದಯಂ- ಅಸದೃಶವಾದ ಪಾಪದಿಂ ತುಂಬಲ್ಪಟ್ಟ ಮನಸ್ಸುಳ್ಳ, ಕುಮತಿಜನಂ- ದುರ್ಬುದ್ಧಿಯುಳ್ಳ ಜನವು. ... ... ॥೭೧॥

ಆಶಾಪಾಶಯುಕ್ತರ್- ಆಸೆ ಯೆಂಬ ಹಗ್ಗದಿಂದ ಕೂಡಿದವರು, ದುರುಳರ್- ನೀಚರು, ಸೋಮಪಾನಛಲರಚಿತಸುರಾಪಾನರ್- ಸೋಮಲತೆಯ ರಸವಂ ಕುಡಿಯುವೆವೆಂಬ ನೆವದಿಂದ ಮಾಡಲ್ಪಟ್ಟ ಮದ್ಯಪಾನವುಳ್ಳವರು, ಆನೀತಗೋಪೀಮಲಘಾಲರ್- ತರಲ್ಪಟ್ಟ ಗೋಪಿಕಾಂಗನೆಯ ಕೊಳೆಯಿಂದ ಕೂಡಿದ ಹಣೆಯುಳ್ಳವರು, ವೇದಭಾರೋದ್ವಹನಖರರ್- ವೇದದ ಹೊರೆಯನ್ನು ಹೊರುವ ಕತ್ತೆಗಳು, ಉಪಾತ್ತಾನ್ಯದೋಷರ್- ಪಡೆಯಲ್ಪಟ್ಟ ಇತರರ ಪಾಪವುಳ್ಳವರು, ಸಜೀವೋಜ್ಜ್ವಲಪಶ್ವೌಘಪ್ರಹಿಂಸಾಪರರ್- ಪ್ರಾಣವೆರಸಿ ಪ್ರಕಾಶಿಸುವ ಹಸುಗಳ ಗುಂಪನ್ನು ಕೊಲ್ಲುವದರಲ್ಲಿ ಆಸಕ್ತರು, ಅಮರಪುರೀಚೇಟಿಕಾಭೋಗಲೋಲರ್- ದೇವಲೋಕದಲ್ಲಿರುವ ಗೌಡಿಯರ ಸೌಖ್ಯದಲ್ಲಿ ಆಸಕ್ತರು. ... ... ... ॥೭೨॥

ಭಕ್ಷಿತಪಶುಪಲಲರ್- ತಿನ್ನಲ್ಪಟ್ಟ ಗೋಮಾಂಸವುಳ್ಳವರು, ಕರ್ಮಚಂಡಾಲರ್- ಅಸ್ಥಿರಫಲಪ್ರದಗಳಾದ ಯಜ್ಞಾದಿಕರ್ಮಗಳಂ ಮಾಡುವದಕ್ಕೋಸ್ಕರ ಗೋವುಗಳಂ ಕೊಲ್ಲುವ ಚಂಡಾಲರು, ವಿತ್ತೌಘದಾತಾರ್ಜಿತನಿಜಸುಕೃತರ್— ವಿತ್ತ- ಹಣದ, ಓಘ- ಸಮೂಹವನ್ನು, ದಾತಾ- ಕೊಡುವವರಿಗೋಸ್ಕರ, ಅರ್ಜಿತ- ಸಂಪಾದಿಸಲ್ಪಟ್ಟ, ನಿಜ- ತಮ್ಮ, ಸುಕೃತರ್- ಪುಣ್ಯವುಳ್ಳವರು, ( ಅಂದರೆ ಹಣವು ಕೊಟ್ಟವರಿಗೆ ತಮ್ಮ ಪುಣ್ಯವನ್ನೇ ಧಾರೆಯೆರೆದು ಕೊಡತಕ್ಕವರೆಂದು ಭಾವ ) ದಂಭಮಾತ್ಸರ್ಯಮಾಯಾಪರಿಣದ್ಧರ್- ದಂಭ- ಕಪಟ, ಮಾತ್ಸರ್ಯ- ಅನ್ಯರ ಶುಭವಂನೋಡಿ ಸಹಿಸದಿರುವದು, ಮಾಯಾ- ಭ್ರಮೆ ಇವುಗಳಿಂದ, ಪರಿಣದ್ಧರ್- ವಿಸ್ತೃತರಾದವರು, ಭೂದಿವೌಕೋವರಾಕರ್- ಹಾರ್ವರೆಂಬ ನೀಚರು. ... ॥೭೩॥

ಅನು- ಉಚಿತವು, ಆ ಘನಶಿವಮಹತ್ವಮತದಾರ್ಢ್ಯನಿಮಿತ್ತಂ- ಆ ಉತ್ಕೃಷ್ಟವಾದ ಈಶ್ವರನ ಮಹಿಮೆಯಿಂ ಕೂಡಿದ ವೀರಶೈವಸಿದ್ಧಾಂತವಂ ದೃಢಪಡಿಸುವದಕ್ಕಾಗಿ, ನಿದರ್ಶನಮಂ- ದೃಷ್ಟಾಂತವನ್ನು.

ವ ॥ ಎಂದು ಸತ್ಯಶೌರ್ಯಸಮಗ್ರಂ ಪೂಣ್ದು ನುಡಿದು ನೀ ನೆಂದಂತೆ ಶಿವನಾಗಯೋಗಿ ಯುಂಗದೊಳಮರ್ದಂ ತೋರ್ಪ ನೀನಿನ್ನ ನಚ್ಚಿನ ಸೋಮಯಾಜಿ ಯುಂಗದೊಳ್ಸಲಿಲಮ ನಾದೊಡಂ ಸೀಳ್ದು ತೋರ್ಪುದಿದಕ್ಕೆ ನಿಂದು ಸೋಲೊಡೀ ಪಾರ್ಶ್ವರಂಗದೊಳ್ಶುನಕಾಂಘ್ರಿಮುದ್ರೆಯುಮನೊತ್ತಿಸಿ ಶಿಖೋಪವೀತಂಗಳ ನಿಳುಪಿ ನಿಜಮತಕ್ಕೆ ಪೊರಗಾಗಿ ಪೋಪಂತೆ ಮಾಳ್ಪುದೆಂಬುದನಪ್ಪುಗೆಯ್ಸಿ ॥ * * * *

ಮತ್ತೇ ॥ ಮನುಜೇಂದ್ರಂ ಸಭೆಗೂಡಿ ನೋಡುತಿರೆ ನಣ್ಪಿಂ ತನ್ಮಹಾಯೋಗಿಪ । ದ್ವನಜಕ್ಕಾನತನಾಗಿ ತನ್ನ ಕರದಿಂ ತತ್ಪಾಣಿಪಂಕೇಜಮಂ ॥ ಬಿನದಂ ಕೈಮಿಗೆ ಮೆಲ್ಲನೊತ್ತಿ ಪಿಡಿದಾಗಳ್ನೀವಿದಂ ಭಕ್ತಿಪಾ । ವನಧೇನುಸ್ತನಸನ್ನಿಭಾಂಗುಲಿಗಳಂ ದುರ್ದಾಂತವಾಗ್ವಂಜನಂ ॥ ... ... ... ೨೫

ವ ॥ ಅಂತು ನೀವಿದಾಗಳ್ ॥

ಕಂ ॥ ಇಡಿ ದಡಸಿ ಪಾರೆ ಪಾಲ್ವನಿ । ಯುಡುರಾಜಿಯ ತೆರದಿ ನಿಂದುವಿಂ ಜೊನ್ನಂ ಮುಂ ॥ ಗಡೆ ಗುರ್ವುವಂತೆ ಪಸರಿಸು । ತೊಡ ನಿಳಿದುದು ದುಗ್ಧಧಾರೆ ತತ್ಕರದಿಂದಂ ॥ ೨೬

ಕಂ ॥ ಉಗುರ್ವೆಳಗು ಬಳ್ಳಿವರಿದಂ ॥ ತೊಗುಮಿಗೆ ತತ್ಕರದ ಸುಧೆಯ ಧಾರೆಗಳೆತ್ತಂ ॥ ಮಿಗೆ ಭೋರ್ಭೋರೆನು ತಿಳಿದಂ । ದಗಲದೆ ಪೊನಲಾಗಿ ಪರಿದು ದಾಸ್ಥಾಯಿಕೆಯೊಳ್ ॥ ... ... ... ... ೨೭

ವ ॥ ಅಂತಪ್ಪ ಭಕ್ತಮಹತ್ತ್ವಮಂ ಕಣ್ಣಾರೆಕಂಡು ॥ * * *

ಮಲ್ಲಿಕಾಮಾಲಾವೃತ್ತಂ ॥ ಆ ಸಭಾಸದರೆಲ್ಲ ರಚ್ಚರಿವಟ್ಟು ವಂದಿಸುತಿರ್ದರಾ । ಭೂಸತೀಪತಿಯುಂ ವಿಚಿತ್ರ ಮಿದೆಂದು ಭೀತಿಸಮನ್ವಿತಂ ॥ ದಾಸಭಾವಮ ನಾಳುತಂ ಶಿವನಾಗಯೋಗಿವರೇಣ್ಯ ನು । ದ್ಭಾಸಿತಾಂಘ್ರಿಸರೋಜಯುಗ್ಮಕೆ ಮೆಯ್ಯನಿಕ್ಕಿದ ನಳ್ಕರಿಂ ॥ ೨೮

---

ಪೂಣ್ದು- ಪ್ರತಿಜ್ಞೆಯಂಮಾಡಿ, ಅಮರ್ದಂ- ಹಾಲನ್ನು, ನಚ್ಚಿನ- ಶ್ಲಾಘ್ಯನಾದ, ಸಲಿಲಮಂ- ನೀರನ್ನು, ಇದಕ್ಕೆ- ಈಶಪಥಕ್ಕೆ, ನಿಂದು- ನಿಂತು, ಶುನಕಾಂಘ್ರಿಮುದ್ರೆಯುಮಂ- ನಾಯಕಾಲಿನಚಿಹ್ನವನ್ನೂ, ಶಿಖೋಪವೀತಂಗಳಂ- ಜುಟ್ಟು ಜನ್ನಿವಾರಗಳನ್ನು, ಅಪ್ಪುಗೆಯ್ಸಿ- ಅಂಗೀಕಾರಗೊಳಿಸಿ. * *

ತನ್ಮಹಾಯೋಗಿಪದ್ವನಜಕ್ಕೆ- ಆ ದೊಡ್ಡಶಿವನಾಗ ಯೋಗಿಯಪಾದಕಮಲಕ್ಕೆ, ತತ್ಪಾಣಿಪಂಕೇಜಮಂ- ಆ ಯೋಗೀಶ್ವರನ ತಾವರೆಯಂತಿರುವ ಕಯ್ಯನ್ನು, ಬಿನದಂ- ವಿನೋದವು, ಕೈಮಿಗೆ- ಅಧಿಕವಾಗಲು, ಭಕ್ತಿಪಾವನಧೇನುಸ್ತನಸನ್ನಿಭಾಂಗುಲಿಗಳಂ- ಶಿವಭಕ್ತಿಯೆಂಬ ಪರಿಶುದ್ಧವಾದ ಹಸುವಿನ ಮೊಲೆಗೆ ಸದೃಶವಾದ ಬೆರಲುಗಳನ್ನು, ದುರ್ದಾಂತವಾಗ್ವಂಜನಂ- ದುಷ್ಟರ ಮಾತನ್ನು ಹಾಳ್ಮಾಡುವ ಬಸವೇಶ್ವರನು.

ಇಡಿದು- ತುಂಬಿ, ಪಾಲ್ವನಿ- ಹಾಲಿನ ಹನಿಯು, ಉಡುರಾಜಿಯ- ನಕ್ಷತ್ರಪಙ್ಕ್ತಿಯ, ಜೊನ್ನಂ- ಚಂದ್ರಿಕೆಯು, ಉರ್ವುವಂತೆ- ಉಬ್ಬುವಹಾಗೆ, ದುಗ್ಧಧಾರೆ- ಹಾಲಿನ ಧಾರೆಯು. ... ॥೨೬॥

ಉಗುರ್ವೆಳಗು- ಉಗುರಿನ ಕಾಂತಿಯು, ಬಳ್ಳಿವರಿದಂತೆ- ಬಳ್ಳಿಯಹಾಗೆ ಬೆಳೆದುಕೊಂಡುಹೋದಂತೆ, ಅಗಲದೆ- ವಿಚ್ಛಿತ್ತಿಯಿಲ್ಲದೆ, ಪೊನಲ್- ಪ್ರವಾಹವು, ಆಸ್ಥಾಯಿಕೆಯೊಳ್- ಸಭೆಯಲ್ಲಿ. ॥೨೭॥

ದಾಸಭಾವಮಂ- ಆಳಿನತನವನ್ನು, ಮೆಯ್ಯಂಣಿಕ್ಕಿದಂ- ನಮಸ್ಕರಿಸಿದನು. ॥೨೮॥

ಕಂ ॥ ಕರಿಕಾಲಚೋಳನೃಪತಿಗೆ । ಪುರರಿಪು ಪೊಮ್ಮಳೆಯ ನಂದು ಕರೆಯಿಸಿದಂ
ಮೇ । ಣಿರದಿಂದು ಬಸವರಾಜಂ । ಗುರುತರಪೀಯೂಷವರ್ಷಮಂ ಕರೆಯಿಸಿದಂ ॥ ೭೯

ವ ॥ ಎಂದು ಮತ್ತಮಿರದೆ ॥ * * * * * *

ಕಂ ॥ ಮಲರಹಿತದಿವ್ಯಶಿವಮಯ । ವಿಲಸಿತಶುಭಕಾಯ ನೀಮಹಾಮಹಿಮ ನೆನು ॥
ತ್ತುಲರ್ದು ಶಿವನಾಗದೇವನ । ನಂಘುಬುಧ ವರ್ಣಿಸಿದು ಭಕ್ತಿಯಿಂ ಕೀರ್ತಿಸಿದರ್ ॥ ೮೦

ಕಂ ॥ ಜಸದಿಂ ಸೊದೆಯಿಂ ಸೋಲದಿ । ನೆಸೆವೆಣ್ದೆಸೆಯಂ ಧರಿತ್ರಿಯಂ ವಾದಿಮುಖ ॥
ಪ್ರಸರಮುಮ ನೊರ್ಮೆ ಬೆಳ್ಪೇ । ರಿಸಿದಂಗಡ ಬಸವನೆಸಕ ಮೇನತಿಶಯಮೊ ॥ ೮೧

ವ ॥ ಎಂದು ಬಿಜ್ಜಳಂ ಬಗೆದಂದು ಪೊಗಳುತ್ತ ಮಿರ್ದನಲ್ಲಿ ಪರವಾದಿಗಳೆಲ್ಲ ನಾರ್ಣ್ಚಿ ತಲೆವಾಗಿ ಕಾರ್ಪಣ್ಯದೋರಿ ಕೈಗಳಂ ಮುಗಿದು ॥ * * *

ಚಂ ॥ ಪರಮರಹಸ್ಯ ಮೀಮತಮಹತ್ತ್ವ ಮಿದೆಮ್ಮ ಕುಬುದ್ಧಿಗಳ್ಗಗೋ । ಚರಿ
ಕುಮೆ ದೇವ ಮುನ್ನರಿಯ ದೆಂದನರಾಧಮ ನೋರ್ವರ್ಸೈರಿ ಸ ॥ ಜ್ಜನರ ನಭಿಮಾನಹೀನರ
ನಿಳಾಜನದೂಷ್ಯರ ನೆಮ್ಮ ನೊಲ್ಮೆಯಿಂ । ಪೊರೆ ಭವದೀಯದಿವ್ಯಗುಣಮಂ ಮೆರೆ ಭವ್ಯ
ದಯಾಸುಧಾಂಬುಧಿ ॥ ... ... ... ॥೮೨॥

ವ ॥ ಎಂದು ಶಿವನಾಗದೇವ ನಿದಿರೊಳ್ ಪೊಡಮಟ್ಟು ಸೊರ್ಕಳಿದು ಶರಣ್ಬೊಕ್ಕಭಯಂಬೇಡುವ ಧರಾಮರರ್ಗಭಯಮುಮಂ ದಯೆಗೆಯ್ದು ಪೊರೆದು ॥ * * *

ಮ । ಸ್ರ ॥ ವಿಳಸದ್ದಂತಾವಳಸ್ಕಂಧದ ಮಣಿಮಯಪೀಠಾಗ್ರದೊಳ್ತನ್ನ ಪೆಂಪ ।
ಗ್ಗಳವನ್ನಂ ಮೂರ್ತಿಗೊಳ್ವಂತೆಸಗಿ ಮಿಸುಪ ನಾಗಾರ್ಯನಂ ಪಿಂತೆ ತಾನುಂ ॥ ಕಳೆವೆತ್ತೋ
ಲಂತೆ ಕುಳ್ಳಿರ್ದತುಳವಿಭವದಿಂ ಮಂದಿರಂಬೊಕ್ಕು ತನ್ನಂ । ಜುಳಪಾದಾಂಭೋಜಪೂಜೋ
ತ್ಸವದಿ ನೆಸೆದ ನಾನಂದಸಾಂದ್ರಂ ವೃಷೇಂದ್ರಂ ॥ ... ೮೩

---

ಪೊಮ್ಮಳೆಯಂ- ಚಿನ್ನದ ಮಳೆಯನ್ನು, ಗುರುತರಪೀಯೂಷವರ್ಷಮಂ- ಅತ್ಯಧಿಕವಾದ ಹಾಲಿನ ಮಳೆಯನ್ನು. ... ... ... ... ... ॥೭೯॥

ಮಲ........ಕಾಯಂ—ಮಲರಹಿತ- ಪಾಪವಿಲ್ಲದೇಇರುವ, ದಿವ್ಯ- ಶ್ರೇಷ್ಠವಾದ, ಶಿವಮಯ- ಈಶ್ವರಸ್ವರೂಪವಾದ, ವಿಲಸಿತ- ಪ್ರಕಾಶಿಸುವ, ಶುಭಕಾಯಂ- ಮಂಗಳಕರವಾದ ಶರೀರವುಳ್ಳವನು. ॥೮೦॥

ಜಸದಿಂ- ಕೀರ್ತಿಯಿಂದ, ಎಣ್ದೆಸೆಯಂ- ಎಂಟುದಿಕ್ಕನ್ನು, ಸೊದೆಯಿಂ- ಅಮೃತದಿಂದ, ಧರಿತ್ರಿಯಂ- ಭೂಮಿಯನ್ನು, ಸೋಲದಿಂ- ಸೋಲಿಸುವಿಕೆಯಿಂದ, ವಾದಿಮುಖಪ್ರಸರಮುಮಂ- ಪರವಾದಿಗಳ ಮುಖದ ಸಮೂಹವನ್ನೂ, ಬೆಳ್ಪೇರಿಸಿದಂಗಡ- ಬೆಳ್ಳಗೆಮಾಡಿದನಲ್ಲವೇ ? ಎಸಕಂ- ಉಜ್ಜುಗವು. ॥೮೧॥

ಬಗೆದಂದು- ಯೋಚಿಸಿ. * * * * * * * *

ಪರಮರಹಸ್ಯಂ- ಬಹುಗುಟ್ಟಾದದ್ದು, ಎಂದ- ಆಡಿದ, ಇಳಾಜನದೂಷ್ಯರಂ- ಭೂಮಿಯಲ್ಲಿರುವ ಜನಗಳಿಂದ ನಿಂದಿಸಲ್ಪಡುವದಕ್ಕೆ ಯೋಗ್ಯರಾದ, ಮೆರೆ- ಪ್ರಕಾಶಪಡಿಸು, ಭವ್ಯದಯಾಸುಧಾಂಬುಧಿ- ಮಂಗಳಕರವಾದಕೃಪೆಗೆ ಕ್ಷೀರಸಮುದ್ರನಾದವನೇ ! ... ... ... ॥೮೨॥

ವಿಲಸದ್ದಂತಾವಳಸ್ಕಂಧದ- ಪ್ರಕಾಶಿಸುವ ಆನೆಯ ಹೆಗಲಿನ, ಮೂರ್ತಿಗೊಳ್ವಂತೆ- ಕುಳಿತುಗೊಳ್ಳುವ ಹಾಗೆ, ಕಳೆವೆತ್ತು- ಕಾಂತಿಯಂಹೊಂದಿ. ... ... ... ॥೮೩॥

ಕಂ ‖ ಕೆಂಬಾವಿಭೋಗಚರಿತಮ । ನಿಂಬಾಗಿರೆ ಪೇಳ್ವ ಕೇಳ್ವ ಸುಜನ ರ್ಗಿಳೆಯೊಳ್ ‖
ಸೊಂಬಶಿನ ನೀವ ನತಿಕೃಪೆ । ಯಿಂ ಬಹುಸುಖಮಂ ಗಣೇಂದ್ರಪದಸಂಪದಮಂ ‖ ೮೪

ಕಂ ‖ ಶ್ವಪಚೋದ್ಭಟಗುಡ್ಡಾಂಬಾ । ವಿಪ್ರುಳಚರಿತ್ರಮ ನೊರೆಲ್ದು ಕೇಳ್ವ ನರರ್ಗೋ ‖
ಲ್ದಪರಿಮಿತಸುಖಮ ನೀವಂ । ಕಪರ್ದಿ ಕರುಣಾಳು ವೈಹಿಕಾಮುಷ್ಮಿಕಮಂ ‖ ೮೫

ರಥೋದ್ಧತವೃತ್ತ ‖ ಶಿವನಾಗಯೋಗಿಸುಕಥಾಸುಧಾರಸಂ । ಸವಿದರ್ಗೆ ಮಾಳ್ಕು ಮಜರಾಮರತ್ವಮಂ ‖ ಕಿವಿಯಿಂದ ಮೊಂದು ಮಿಗೆ ನಾಣ್ಚು ನಾಕಮಂ । ತವೆ ಪೊಕ್ಕಡಂಗಿದುದು ನಿರ್ಜರಾಮೃತಂ ‖ ... ... ... ೮೬

ಲಲಿತಪದವೃತ್ತ ‖ ಸೋಮಗುರುವರ್ಯವರಭೀಮಕವಿರಾಜಗುಣಧಾಮಘನಶಂಕರಸುನಾಮಕೃತಕಾವ್ಯ । ಸ್ತೋಮನುತವೈಭವ ನಿರಾಮಯ ನಿರರ್ಗಳಮಹಾಮಹಿಮ ಸಾರವಿಬುಧಾಮರಮಹೀಜ ‖ ವ್ಯೋಮಕಚಸಂಗತ ಕೃಪಾಮಹಿತಚಿತ್ತ ವಿಭುವೇಮನಲಸತ್ಕದಿರರೇಮಹಿತಚರ್ಯೋ । ದ್ದಾಮ ಹೃತಬಿಜ್ಜಳಮನೋಮದಸುವಾಕ್ಯ ಪೊರೆ ಕಾಮದಪುರಾತನಲಲಾಮ ಬಸವೇಶಾ ‖ ... ... ... ೮೭

ಮಣಿಗಣಮಾಲಾವೃತ್ತ ‖ ಹರಿವಿಧಿಸುರಪತಿನತಪವವನಜೇ । ಕರತಳಚಳದಸಿಹೃ

---

‖೮೪‖ ಐಹಿಕಾಮುಷ್ಮಿಕಮಂ- ಇಹಪರವೆರಡರಲ್ಲೂ ಉಂಟಾಗುವ. ... ‖೮೫‖

ಶಿವನಾಗಯೋಗಿಸುಕಥಾಸುಧಾರಸಂ- ಶಿವನಾಗಯೋಗಿಯ ಒಳ್ಳೆಯ ಕಥೆಯೆಂಬ ಅಮೃತವು, ಸವಿದರ್ಗೆ- ಪಾನಮಾಡಿದವರಿಗೆ, ಅಜರಾಮರತ್ವಮಂ- ಮುಪ್ಪುಸಾವುಗಳಿಲ್ಲದೇ ಇರುವಿಕೆಯನ್ನು, ನಾಕಮಂ- ಸ್ವರ್ಗವನ್ನು, ನಿರ್ಜರಾಮೃತಂ- ದೇವತೆಗಳ ಅಮೃತವು. ... ... ‖೮೬‖

ಸೋಮ........ವೈಭವ— ಸೋಮಗುಗುವರ್ಯ- ಸೋಮನಾರಾಧ್ಯರು, ವರಭೀಮಕವಿರಾಜ- ಕವಿಶ್ರೇಷ್ಠರಾದ ಭೀಮಕವಿಗಳು, ಗುಣಧಾಮ- ಸದ್ಗುಣಗಳಿಗಾಶ್ರಯರಾದ, ಘನ- ಉತ್ಕೃಷ್ಟರಾದ, ಶಂಕರನಾಮ- ಶಂಕರನೆಂಬ ಹೆಸರುಳ್ಳವರು ಇವರುಗಳಿಂದ, ಕೃತ- ಮಾಡಲ್ಪಟ್ಟ, ಕಾವ್ಯ- ಕವಿತ್ವಗಳ, ಸ್ತೋಮ- ಗುಂಪಿನಿಂದ, ನುತ- ಹೊಗಳಲ್ಪಟ್ಟ, ವೈಭವ- ವಿಲಾಸವುಳ್ಳ, ನಿರಾಮಯ- ಭವರೋಗರಹಿತನಾದ, ನಿರರ್ಗಳಮಹಾಮಹಿಮ- ತಡೆಯಿಲ್ಲದ ಅಧಿಕವಾದ ಮಹತ್ವವುಳ್ಳ, ಸಾರವಿಬುಧಾಮರಮಹೀಜ- ಶ್ರೇಷ್ಠರಾದ ವಿದ್ವಾಂಸರಿಗೆ ಕಲ್ಪವೃಕ್ಷನಾದ, ವ್ಯೋಮಕಚಸಂಗತ— ವ್ಯೋಮ- ಆಕಾಶವೇ, ಕಚ- ಕೇಶವಾಗುಳ್ಳ ಶಿವನಿಂದ, ಸಂಗತ- ಕೂಡಿದ, ಕೃಪಾಮಹಿತಚಿತ್ತ- ದಯೆಯಿಂದ ಪೂಜ್ಯವಾದ ಮನಸ್ಸುಳ್ಳ, ವಿಭು- ಸ್ವಾಮಿಯಾದ, ವೇಮನ........ದ್ದಾಮ— ವೇಮನ- ವೇಮನಾರ್ಯ, ಲಸತ್- ಪ್ರಕಾಶಿಸುವ, ಕದಿರರೇಮ- ಕದಿರರೇಮಾರ್ಯ ಇವರುಗಳಿಗೆ, ಹಿತ- ಆಪ್ತವಾದ, ಚರ್ಯೋದ್ದಾಮ- ಉತ್ಕೃಷ್ಟವಾದ ನಡತೆಯುಳ್ಳ, ಹೃತಬಿಜ್ಜಳಮನೋಮದಸುವಾಕ್ಯ — ಹೃತ- ಅಪಹರಿಸಲ್ಪಟ್ಟ, ಬಿಜ್ಜಳ- ಬಿಜ್ಜಳರಾಜನ, ಮನಃ- ಮನಸ್ಸಿನ, ಮದ— ಗರ್ವವುಳ್ಳ, ಸುವಾಕ್ಯ- ಒಳ್ಳೆಯಮಾತುಳ್ಳ, ಕಾಮದ- ಇಷ್ಟಾರ್ಥವನ್ನು ಕೊಡುವ, ಪುರಾತನಲಲಾಮ— ಅರವತ್ತುಮೂರು ಪುರಾತನರಿಗೆ ಭೂಷಣನಾದ, ಬಸವೇಶಾ ! ಪೊರೆ. ‖೮೭‖

ಹರಿ........ವನಜೇ—ಹರಿ- ವಿಷ್ಣು, ವಿಧಿ- ಬ್ರಹ್ಮ, ಸುರಪತಿ- ದೇವೇಂದ್ರ ಇವರುಗಳಿಂದ, ನತ- ನಮಸ್ಕರಿಸಲ್ಪಟ್ಟ, ಪದವನಜೇ- ಪಾದಕಮಲವುಳ್ಳ, ಕರ........ದನುಜೇ— ಕರತಳ- ಹಸ್ತಪ್ರದೇಶದಲ್ಲಿ,

ತಖಲದನುಜೇ॥ ವರವಿತರಣಜಿತದಿವಿಷದವನಿಜೇ । ಪೊರೆ ಶರಣಜನರ ನಗವರತನುಜೇ॥ ೮೮

ಗದ್ಯ ॥ ಇದು ವಿನಮದಖಿಳಸುರಾಸುರೇಂದ್ರಮುಕುಟತಟಘಟಿತಮಣಿಗಣಾಗಣಿತರುಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತ ಭಾಸುರ ಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಶಿವನಾಗದೇವಮಹತ್ತ್ವಕಥನ ಮೇಕೋನ ಚತ್ವಾರಿಂಶಾಶ್ವಾಸಂ ಪರಿಸಮಾಪ್ತಂ ॥ ... ... ... .. *

ಏಕೋನಚತ್ವಾರಿಂಶಾಶ್ವಾಸಂ ಸಂಪೂರ್ಣಂ.

ಶ್ರೀಃ

ಅಣೋರಣೀಯಸೇ ಪರಬ್ರಹ್ಮಣೇನಮಃ.

ಚತ್ವಾರಿಂಶಾಶ್ವಾಸಂ.

ವಿ ಷ ವಿ ಹ ರ ಣ ಕ ಥ ನಂ.

ಕಂ ॥ ಶ್ರೀರುಚಿರಗಿರಿಸುತಾಕಚ । ಭಾರಪಯೋಧರಮಯೂರನನುಪಮಸುಗುಣಾ॥
ಧಾರ ನಘದೂರ ನತಿಗಂ । ಧೀರಂ ಪೊರೆಗೆಮ್ಮ ನಾವಗಂ ಶಿವಲಿಂಗಂ ॥ ೧

---

ಚಳತ್- ಚಲಿಸುತ್ತಿರುವ, ಅಸಿ- ಕತ್ತಿಯಿಂದ, ಹೃತ- ನಾಶಮಾಡಲ್ಪಟ್ಟ, ಖಲ- ನೀಚರಾದ, ದನುಜೇ- ರಾಕ್ಷಸರುಳ್ಳ, ವರ........ ಅವನಿಜೇ- ವರ- ಶ್ರೇಷ್ಠವಾದ, ವಿತರಣ- ದಾನಗುಣದಿಂದ, ಜಿತ- ಜೈಸಲ್ಪಟ್ಟ, ದಿವಿಷದವನಿಜೇ- ಕಲ್ಪವೃಕ್ಷವುಳ್ಳ, ಅಗವರತನುಜೇ- ಪರ್ವತರಾಜಪುತ್ರಿಯೇ ! ಶರಣಜನರಂ,ಪೊರೆ.

ಮುವ್ವತ್ತೊಂಭತ್ತನೆಯ ಆಶ್ವಾಸವು ಸಂಪೂರ್ಣವು.

---

ನಲ್ವತ್ತನೆಯ ಆಶ್ವಾಸ ಪ್ರಾರಂಭವು.

ಶ್ರೀ........ಮಯೂರಂ—ಶ್ರೀ- ಷಡ್ಗುಣೈಶ್ವರ್ಯಯುಕ್ತಳಾದ, ರುಚಿರ- ಮನೋಹರಳಾದ, ಗಿರಿಸುತಾ- ಪಾರ್ವತಿಯ, ಕಚಭಾರ- ಕೇಶಸಮುದಾಯವೆಂಬ, ಪಯೋಧರ- ಮೇಘಕ್ಕೆ, ಮಯೂರಂ- ನವಿಲಾದ, (ಅಂದರೆ ಮೋಡವಕಂಡ ನವಿಲಿನಂತೆ, ಪಾರ್ವತಿಯ ಕೇಶವಂನೋಡಿದಕೂಡಲೇ ಈಶ್ವರನಿಗೆ ಉತ್ಸಾಹವುಂಟಾಗುವದೆಂದು ಭಾವ.) ... ... ... ... ॥೧॥

ಮ ॥ ಸ್ರ ॥ ಘನಮಾಧ್ವಧ್ವಾಂತವಿಧ್ವಂಸನಖರಕಿರಣಂ ಪಾಂಚರಾತ್ರೋರ್ವಿಭೃದ್ಭೇ । ದನಶಂಬಂ ಚಂಡಜೈನಪ್ರಕಟಕರಟಕಂಠೀರವಂ ದುಷ್ಟಚಾರ್ವಾ ॥ ಕನಗಪ್ರೋದ್ಯತ್ಕುಠಾರಂ ಕುಟಿಲಮತಿಯುತಾಬದ್ಧಬೌದ್ಧಾವಳೀಕಾ । ನನದಾವಂ ದೃಪ್ಯದದ್ವೈತಮತಜಲದಜಂಝಾನಿಲಂ ಶ್ರೀವೃಷೇಂದ್ರಂ ॥ ... ... ೧

ಲಲಿತಪದವೃತ್ತ ॥ ಓರ್ವರ್ ಚರಪೂಜನದಿ ನೋರ್ವರ್ ಹರನರ್ಚನೆಯಿ ನೋರ್ವ ಶಿವಮಂತ್ರಜಪದುಜ್ಜುಗದ ನಣ್ಪಿಂ । ದೋರ್ವ ಗಣಸೇವನೆಯಿ ನೋರ್ವರ್ ಚರಪಾದಜಲಸೇಚನೆಯಲಂಪಿಂ ॥ ದೋರ್ವರ್ ಪರಭಂಜನದಿ ನೋರ್ವರ್ ಗಣರಂಜನದಿ ನೋರ್ವರ್ ಶಿವಸತ್ಕಥೆಯ ನಾಲಿಸುವ ಪೆಂಪಿಂ । ದೋರ್ವರ್ ಚರತುಷ್ಟಿಗಳಿ ನೋರ್ವರ್ ಗಣಗೋಷ್ಠಿಗಳಿ ನೋರ್ವರ್ ಶಿವಗೀತರಸದಿಂ ಮೆರೆಯುತಿರ್ದಂ ॥ ... ... ೨

ಕಂ ॥ ಅನುದಿನ ಮಿಂತೆಸೆಯುತೆ ಜನ । ವನ ಸಭೆಯೊಳ್ಗೆಲ್ದು ವಾದಿಸುವ ವಾದಿಗಳಂ ॥ ಘನದೃಷ್ಟಪ್ರತ್ಯಯಮಂ । ಮನದೊಲವಿಂ ತೋರಿ ಜಯಮ ನಾಳ್ದೊಪ್ಪಿರ್ದಂ ॥ ೩

ಕಂ ॥ ಶರಣರ ಚಿಂತಾಮಣಿ ಸ । ತ್ಪುರುಷರ ಸುರಧೇನು ಬುಧರ ಭಾಗ್ಯೋದಯಮು ॥ ರ್ವರೆಯ ಪೊಸಸೈಪು ಭಕ್ತರ । ವರನಿಧಿ ಭಾವಕರ ಮುಕುರ ಮಾವೃಷಭೇಂದ್ರಂ ॥ ೪

ಚಂ ॥ ನೆನೆದನೆ ದೇವ ನೀಕ್ಷಿಸಿದನೇ ದಿವಿಷತ್ಪತಿ ತತ್ಪದಾಂಬುಜ । ಕ್ಕನುನಯದಿಂದೆ ಬಂದೆರಗಿದಾತನೆ ಸಿದ್ಧ ನಲಂಪುವೆತ್ತು ಕೇ ॥ ರ್ತನೆಯ ನೊಡರ್ಚಿದಾತನೆ ಗಣಾಗ್ರಣಿ

---

ಘನ.........ಕಿರಣಂ— ಘನ- ಸಾಂದ್ರವಾದ, ಮಾಧ್ವ- ಮಧ್ವಮತಾನುಗಾಮಿಗಳೆಂಬ, ಧ್ವಾಂತ- ಕತ್ತಲೆಯನ್ನು, ವಿಧ್ವಂಸನ- ನಾಶಮಾಡುವದರಲ್ಲಿ, ಖರಕಿರಣಂ- ಸೂರ್ಯನಾದ, ಪಾಂಚ......ಶಂಬಂ- ಪಾಂಚರಾತ್ರ- ರಾಮಾನುಜಮತಸ್ಥರೆಂಬ, ಉರ್ವಿಭೃತ್- ಪರ್ವತಗಳನ್ನು, ಭೇದನ- ಸೀಳುವದರಲ್ಲಿ, ಶಂಬಂ- ವಜ್ರಾಯುಧನಾದ, ಚಂಡ ........ಕಂಠೀರವಂ— ಚಂಡ- ಸಮರ್ಥರಾದ, ಜೈನ- ಜಿನಮತಸ್ಥರೆಂಬ, ಪ್ರಕಟ-ಪ್ರಸಿದ್ಧವಾದ, ಕರಟ- ಆನೆಗಳಿಗೆ, ಕಂಠೀರವಂ- ಸಿಂಹನಾದ, ದುಷ್ಟ.........ಕುಠಾರಂ— ದುಷ್ಟ- ಕೆಟ್ಟವರಾದ, ಚಾರ್ವಾಕ- ಚಾರ್ವಾಕಮತಸ್ಥರೆಂಬ, ನಗ- ಮರಗಳಿಗೆ, ಪ್ರೋದ್ಯತ್- ದೊಡ್ಡ, ಕುಠಾರಂ- ಕೊಡಲಿಯಾದ, ಕುಟಿಲ......ದಾವಂ— ಕುಟಿಲಮತಿ- ವಕ್ರವಾದ ಬುದ್ಧಿಯಿಂದ, ಯುತ- ಕೂಡಿದ, ಅಬದ್ಧ- ಶಾಸ್ತ್ರಬದ್ಧರಲ್ಲದ, ಬೌದ್ಧ- ಬುದ್ಧಮತಸ್ಥರ, ಆವಳೀ- ಪಜ್ತಿಯೆಂಬ, ಕಾನನ- ಕಾಡಿಗೆ, ದಾವಂ- ಕಾಳ್ಕಿಚ್ಚಾದ, ದೃಪ್ಯ.. .......ನಿಲಂ— ದೃಪ್ಯತ್- ಕೊಬ್ಬಿದ, ಅದ್ವೈತಮತ- ಶಂಕರಾಚಾರ್ಯಮತವೆಂಬ, ಜಲದ- ಮೋಡಕ್ಕೆ, ಜಂಝಾನಿಲಂ- ಪ್ರಚಂಡಮಾರುತನಾದ. ॥೧॥

ಚರಪೂಜನದಿಂ- ಜಂಗಮರಂ ಪೂಜಿಸುವದರಿಂದ, ಮೃಡಭಾವನೆಯಿಂ- ಶಿವಧ್ಯಾನದಿಂದ, ಪರಭಂಜನದಿಂ- ಇತರಮತಸ್ಥರನ್ನು ಭಂಗಪಡಿಸುವದರಿಂದ, ಗಣರಂಜನದಿಂ- ಶಿವಗಣಂಗಳನ್ನು ಸಂತೋಷಪಡಿಸುವದರಿಂದ, ಚರತುಷ್ಟಿಗಳಿಂ- ಜಂಗಮರನ್ನು ಸಂತೋಷಪಡಿಸುವದರಿಂದ, ಗಣಗೋಷ್ಠಿಗಳಿಂ- ಶಿವಗಣಂಗಳೊಡನೆ ಸಲ್ಲಾಪದಿಂದ. ... ... ... ... ... ॥೨॥

ದೃಷ್ಟಪ್ರತ್ಯಯಮಂ- ದೃಷ್ಟಾಂತಕ್ಕೋಸ್ಕರವಾದ ಶಪಥವನ್ನು. ... ... ॥೩॥

ಪೊಸಸೈಪು- ಹೊಸದಾದ ಪುಣ್ಯವು, ಭಾವಕರ- ಧ್ಯಾನಿಸುವರ. ... ... ॥೪॥

ದಿವಿಷತ್ಪತಿ- ದೇವೇಂದ್ರನು, ಗಣಾಗ್ರಣಿ- ಗಣಶ್ರೇಷ್ಠನು, ತತ್ಕರುಣಾರ್ದ್ರನೇತ್ರಪಾವನರುಚಿ

ತತ್ಕರುಣಾರ್ದ್ರನೇತ್ರಪ್ರಭಾ । ವನರುಚಿಯಂ ಕರಂ ಪಡೆದನೇ ನಿಜಮುಕ್ತಿ ನಶೇಷಲೋಕ
ದೊಳ್ ॥ ... ... ... ... ೬

ವ ॥ ಎಂಬಸದೃಶಪ್ರಶಸ್ತಿ ಗಡರ್ಪಾಗಿ ಮಹಿಮಾಕರಂ ರಂಜಿಸಿರೆ ಮತ್ತಂ ಮಾಕ
ಲ್ಯಾಣಕಟಕದಲ್ಲಿ ॥ * * * * * * *

ಕಂ ॥ ಕರುಣಾಳುಗ ಳನಘ ಗುರ್ಗರು । ಚರಶಿವಲಿಂಗೈಕನಿಷ್ಠ ರಮಳಿನಭಾವ ॥
ರ್ಪರಮಶ್ರಜಯಶೀಲ ಭರ್ಗ । ಸುರಗಣ ರವಪ್ರತಿಮವಿಭವ ರಭವನ ಶರಣರ್ ॥ ೭

ಮತ್ತಮಲ್ಲಿ ॥ ಮಾಚಯ್ಯಂ ಕೇಶಿರಾಜಂ ಮೊರಟದ ಕಲಿಬಂಕಯ್ಯ ನಾರುದ್ರದೇವಂ।
ಕಾಚಯ್ಯಂ ಮಾಯಿಭಟ್ಟಂ ವಿಮಳಕದಿರರೇಮಯ್ಯನುಂ ಕಿನ್ನರಯ್ಯಂ ॥ ಬಾಚಯ್ಯಂ
ಮಲ್ಲಿನಾಥಂ ಮಧುವರಸನು ಮಾದಯ್ಯನುಂ ಗೋಣಿಮಾರಂ । ಬಿಜ್ಜಯ್ಯಂ ಭೋಗಿದೇವಂ
ಕಲಿಗೆಲಸದ ಸೋಮಣ್ಣ ನಾಮಾಪಿರಾಜಂ ॥ ... ... ೮

ಮಲ್ಲಿಕಾಮಾಲಾವೃತ್ತ॥ ಗುಂಡುಗತ್ತರಿನಾಚ ನಲ್ಲಮದೇವ ನರ್ಘ್ಯದ ಹೊನ್ನಯಂ।
ಮುಂಡುಬೊಮ್ಮಯ ನಪ್ಪಿದೇವ ನಮಾತ್ಯಮಲ್ಲಯ ನೈಚಯಂ ॥ ಮಿಂಡಬೊಮ್ಮಯ ನ
ಬ್ಬದಾಸಯ ನಾರ್ಯಮಂ ಕಲಕೇತಯಂ । ಪಂಡಿತಯ್ಯನು ಮುತ್ತಮಾಂಗದ ಕೇಸಿಜೇಡರ
ದಾಸಯಂ ॥ ... ... ... ... ೯

ಕಂ ॥ ಲಕ್ಕಯ್ಯಂ ಕಲಿದೋಹರ । ಕಕ್ಕಯ್ಯಂ ಕಲ್ಲಿದೇವ ನುದರದರಾಮಂ ॥ ಚಿಕ್ಕ
ಯ್ಯಂ ಧೂರ್ಜಟಿಯಾ । ಯ್ದಕ್ಕಿಯ ಮಾರಯ್ಯ ನುರಗರಾಯಂ ಧವಳಂ ॥ ೧೦

ಕಂ ॥ ಸುರಗಿಯ ಚೌಡಯ್ಯಂ ಮಾ । ದರ ದೂಡಯ್ಯಂ ತೆಲುಂಗಜೊಂಮಯ್ಯಂ
ಡಿಂ ॥ ಗರಿಮಲ್ಲಯ್ಯಂ ಕಾಲಾ । ಗ್ನಿರುದ್ರ ನೇಕಾಂತರಾಮಯಂ ಕಪಿಲೇಶಂ ॥ ೧೧

ಕಂ ॥ ಶಿವರಾತ್ರಿಯ ಸಂಕಣ್ಣಂ । ಕವಿಲೆಯ ಬೊಮ್ಮಯ್ಯ ನನುರ ಗುಂಡದ ದೇವಂ॥
ಚವರದ ಚಿಕ್ಕಯ್ಯಂ ಪ । ಲ್ಲವರಾಯಂ ಸಿಂಗಿಬೊಪ್ಪಯಂ ಶಿವದೇವಂ ॥ ೧೨

ಚಂ ॥ ವಡಿಯರ ರುತ್ತಯಂ ಮೊರನ ವೇಮಯ ನುಕದ ವೀರಸಂಗಯಂ । ಜಡವ
ರ ಬೊಮ್ಮಯಂ ನಗೆಯ ಮಾರಯನುಂ ಗಣದಾಸಭೀಮಯಂ ॥ ನಿಡುಗುಡಿಮಾರ ನಂಬಿ
ಗರ ಚೌಡಯ ನಿಂಡೆಯ ಬೊಮ್ಮ ನಪ್ಪಯಂ । ಗೊಡಲಪಮಲ್ಲಯಂ ಬೆರಲಮಾರಯ ನೆ
ಳ್ಚರಮುಕ್ತಯಾಹ್ವಯಂ ॥ ... ... ... ೧೩

ಕಂ ॥ ಮುಸುಡಿಯಚೌಡಯ್ಯಂ ಬಾ । ಣಸಭೀಮಯ್ಯಂ ನಿರಾಳದೇವಂ ಶಾಂತಂ ॥
ದಸರಯ್ಯಂ ಗೊಗ್ಗಯ್ಯಂ । ಮಸಣಯ್ಯಂ ಮಲ್ಲಿನಾಥ ನಿಂಡೆಯಶಾಂತಂ ॥ ೧೪

ಕಂ ॥ ಕೂಗಿನಮಾರಯ್ಯಂ ಶಿವ । ನಾಗಯ್ಯಂ ಶಂಕರಯ್ಯ ನತಪದರೇಚಂ ॥ ರಾಗದ
ಮಾರಂ ವೀರಂ । ಯೋಗದ ಶಾಂತಯ್ಯ ನಮೃತನಾಥಂ ಸಕಳಂ ॥ ೧೫

---

ಯಂ- ಆ ಬಸವೇಶ್ವರನ ದಯೆಯಿಂದ ನೆನೆದಕಣ್ಣಿನ ಪರಿಶುದ್ಧವಾದ ಕಾಂತಿಯನ್ನು. ... ॥೬॥
ಅಸದೃಶಪ್ರಶಸ್ತಿಗೆ- ಎಣೆಯಿಲ್ಲದ ಪ್ರಸಿದ್ಧಿಗೆ, ಅಡರ್ಪು- ಆಶ್ರಯನು. * * *
೭ ॥ ೮ ॥ ೯ ॥ ೧೦ ॥ ೧೧ ॥ ೧೨ ॥ ೧೩ ॥ ೧೪ ॥ ೧೫ ॥ ೧೬ ॥ ೧೭ ॥ ೧೮ ॥ ೧೯ ॥ ೨೦ ॥

ಕಂ॥ ಶಂಕರದಾಸಂ ಸುಂಕದ। ಬಂಕಯ್ಯಂ ಕನ್ನಬೊಮ್ಮ ನೇಲೇಶ್ವರಕೇ॥ ತಂ ಕಾ
ಳಿಮರಸನುಂ ಶಿವ। ಲೆಂಕಯ್ಯಂ ನುಲಿಯಚಂದಯ್ಯಂ ಗಣನಾಥಂ॥ ೧೬

ಮ॥ ಸ್ರ॥ ಗುರುಭಕ್ತಂ ಗೋಡೆಮಲ್ಲಂ ಧರಣಿಯರಸನುಂ ಮಂಚಣಂ ಪ್ರೋತಿದೇ
ವಂ। ಕರವಾಳಬ್ರಹ್ಮದೇವಂ ಸಗರದಕಲಿನಾಚಯ್ಯನುಂ ರೇಮಯ್ಯಂ ಭಾ॥ ಸ್ಕರದೇವಂ
ಜಟ್ಟವಾರಂ ಸುಗುಣಿಸಿಗುರುಚಂದಯ್ಯನುಂ ರಾಮಯ್ಯಂ ಶ್ರೀ। ಗಿರಿನಾಥಂ ವಿಶ್ವನಾಥಂ ಶಿ
ಖರದರಸಮಲ್ಲಯ್ಯ ನಾರಾಚಮಲ್ಲಂ॥ ... ... ೧೭

ಕಂ॥ ವರಮರುಳಶಂಕರಂ ಜೋ। ದರಮಾಯಣ್ಣಂ ದಯಾಳು ಮೋಳಿಗೆಮಾರಂ॥
ಗುರುಲಿಂಗಯ್ಯಂ ಮದ್ದಯ। ನುರುಲಿಂಗಂ ಪೆದ್ದಿವೀರಸೊಡ್ಡಳ ಬಾಚಂ॥ ೧೮

ಕಂ॥ ಅನಘರಿವ ಮೊದಲಾದತಿ। ಘನಮಹಿಮ ಭಕ್ತಚರಿತ ದೆಳ್ತರ ಡಿರ
ವಂ॥ ಜಿನದಿನವು ವೀಕ್ಷಿಸುತೆ ಪೆಂ। ಪಿನ ಮುದಮಂ ತಾಳ್ದು ಸುಖದಿ ನೊಪ್ಪುತ್ತಿ
ರ್ದರ್॥ ... ... ... ... ೧೯

ಕಂ॥ ಪರಮಶಿವಲೋಕಸುಖದಿಂ। ಪಿರಿದೀಸುಖ ಮೆಂದು ಮಾಣದಾಶರಣಸಮೂ॥
ತ್ಕರ ದೊಡನಾಡುತೆ ಪಾಡುತೆ। ವರಭಕ್ತಿಸುಧಾಬ್ಧಿರಂಜಿಸಿರ್ದಂಬಸವಂ॥ ೨೦

ವ॥ ಇಂತು ಶರಣ ಸುಖದಿನಿರ್ಪಿನ ಮಲ್ಲಿ ಪೆರತೊಂದುದಿವಸಂ॥ * *

ಕಂ॥ ಪಂಡಿತವರ್ಯ ಭೂಸಿತಸು। ಮಂಡಿತರುದ್ರಾಕ್ಷಭೂಷಿತಾಂಗ ಗಿರಿಕೋ॥ ದಂ
ಡಸ್ತುತಿಪಾಠಕ ರು। ದ್ದಂಡ ಚಂಡೇಶ್ವರಾಜಸ ವಾಕ್ಪಟುಗಳ್॥ ೨೧

ಕಂ॥ ಪರಮಶ್ರೀಕಂಠಶಿವ। ಗುರುಲಿಂಗಶಿವ ಮಹೇಶಶಿವ ರತಿಬಳಶಂ॥ ಕರಶಿವ
ರೀಶಾನಶಿವ। ಗಿರೀಶಶಿವ ಲೋಕನಾಥಶಿವ ರೀಶಶಿವರ್॥ ... ... ೨೨

ಕಂ॥ ವರಪಶುಪತಿಶಿವ ರುಗಜ। ಹರಶಿವ ರಾಸೀಲಕಂಠಶಿವರುಂ ಗಂಗಾ॥ ಧರಶಿವ
ರುಗ್ರಾಂಬಕಶಿವ। ರುರುಸದ್ಯೋಜಾತಮೂರ್ತಿಶಿವ ರಭವಶಿವರ್॥ ೨೩

ಚಂ॥ ಹರಶಿವರುಂ ತ್ರಿಲೋಚನಶಿವ ಪರಮಾತ್ಮಶಿವ ಶಶಾಂಕಶೇ।ಖರಶಿವ ರ
ಧ್ವರಾರಿಶಿವ ರುಚಿತಶಂಭುಶಿವ ಗಜಾಜಿನಾ॥ ಬರಶಿವ ರಧ್ವನಾಥಶಿವ ರುದ್ಯದಘೋರಶಿವ
ಕೃತಾಂತಸಂ। ಹರಶಿವ ರುಗ್ರಭೂತಿಶಿವ ರಂಧಕವೈರಿಶಿವ ಮಹಾಶಿವರ್॥ ೨೪

ಕಂ॥ ಪರಮಾನಂದಶಿವ ರ್ತ। ತ್ಪುರುಷಶಿವ ವಾಮದೇವಶಿವ ರಮಳಶಿವ॥ ಪುರ
ರರಿಪುಶಿವ ರಘಹರಶಿವ। ರುರುನಿಷ್ಕಳಶಿವ ರಜಾತಶಿವ ರಮೃತಶಿವರ್॥ ೨೫

ವ॥ ಎಂಬಿವ ಮೊದಲಾದ ಶೈವಶಾಸನಧರರೆಲ್ಲ ನೆರೆದು ಬಿಜ್ಜಳೇಂದ್ರ ನೆಡೆಗೇ
ಳ್ತಂದು ಸಂದಣಿಸಿ ನಿಂದು॥ * * * * * * *

---

ಗಿರಿಕೋದಂಡಸ್ತುತಿಪಾಠಕರ್— ಗಿರಿ- ಮೇರುಪರ್ವತವೇ, ಕೋದಂಡ- ಧನುಸ್ಸಾಗುಳ್ಳಶಿವನ, ಸ್ತುತಿಪಾಠಕರ್- ಸ್ತೋತ್ರಪದ್ಯವನ್ನೋದುವ, ಚಂಡೇಶ್ವರರಾಜಸರ್- ಚಂಡೇಶ್ವರನೋಪಾದಿಯಲ್ಲಿ ಪರಾಕ್ರಮವುಳ್ಳ, ವಾಕ್ಪಟುಗಳ್- ಮಾತನಾಡುವವರಲ್ಲಿ ಸಮರ್ಥರಾದ. ... ... ॥೨೧॥

॥ ೨೨ ॥ ೨೩ ॥ ೨೪ ॥ ೨೫ ॥ ಶೈವಶಾಸನಧರರ್- ಶಿವಸಂಬಂಧವಾದ ಆಜ್ಞೆಯನ್ನುಧರಿಸಿರುವ. *

ಕಂ ॥ ಮಾನವಪತಿ ಕೇಳ್ಧರ್ಮ್ಮಯ । ಶೋನಿಧಿ ನೀನರಸುಗೆಯ್ವ ಕಾಲದೊ ಳೊದ
ವಿ ॥ ತ್ತೀನಗರದೊಳನ್ಯಾಯ ಮ । ನೂನಮಿದಂ ನೀನೆ ನೆರೆ ವಿಚಾರಿಪುದೀಗಳ್ ॥ ೨೬

ಕಂ ॥ ಧರೆಯೊಳಗೆ ಸಲ್ವ ದೆಮಗೀ । ಪುರಹರನ ಘನಪ್ರಸಾದ ಮೆಮ್ಮಯ ಚಂ
ಡೇ ॥ ಶ್ವರ ನಿದ ನೀಶ್ವರನಿಕಟದೊ । ಳರದಂ ದೆಮಗಿತ್ತ ನೆಮ್ಮ ಸೊಮ್ಮಿದು ನೃಪತೀ ॥

ಮತ್ತೇ ॥ ಪರಮಬ್ರಾಹ್ಮಣನಿಂದೆ ಪುಟ್ಟಿದ ನವಂ ಚಂಡೇಶ್ವರಂ ಚಂಡಭಾ । ಸ್ಕರ
ತೇಜಂ ಜನಕಾಜ್ಞೆಯಿಂ ಪಶುಗಳಂ ತಾಂ ಕಾಯ್ವುತಿ ರ್ದಳ್ಕರೊಂ ॥ ಪಿರೆ ಭಾಸ್ವತ್ತಟ
ನೀತಟಂಬಿಡಿದು ಬಂದೋರಂತೆ ತದ್ವಾಲುಕೋ । ತ್ಕರದಿಂ ನಿರ್ಮ್ಮಿಸಿ ಲಿಂಗಮಂ ಕರೆದ ನಾ
ಗೋವೃಂದದೊಳ್ಪಾಲ್ಗಳಂ ॥ ... ... .. ೨೮

ವ ॥ ಅಂತೆ ಕರೆ ದಾಲಿಂಗಕ್ಕಭಿಷೇಕಂಗೆಯ್ದು ಪೂಜಿಸುತ್ತ ಮಿರ್ಪಿನ ಮೊಂದುದಿ
ನಂ ಜನಕ ನಲ್ಲಿಗೇಳ್ತಂದು ಕಂಡು ಸೈರಿಸ ಲಾರದೆ ॥ * * * *

ಕಂ ॥ ಮದದಿಂ ದ್ವಿಜನಾಲಿಂಗವ । ನೊದೆಯೆ ಕರಂ ಕಂಡು ಕಾಯ್ದು ಕೈಗೊಡಲಿ
ಯಿ ನಾ ॥ ದೊದರುತ್ತಂ ಕೆಡೆ ಕೆಡೆ ಯೆನು । ತದಟಂ ತಲೆಗಡಿ ದುರುಳ್ಚಿದಂ ನಿಜಪಿತನಂ॥

ಕಂ ॥ ಸುರಿದುದು ಪೂಮಳೆ ಸುರಪಟ । ಹರವಂ ಪೊಣ್ಮಿದುದು ಮಚ್ಚಿ ಮನವೊ
ಲ್ದು ಮಹೇ ॥ ಶ್ವರ ನಾಗಳ್ನಿಜರೂಪಂ । ಧರಿಯಿಸಿ ಗಿರಿಜಾಸಮೇತ ನೀಕ್ಷಿಸಿ ದಯೆಯಿಂ॥

ಕಂ ॥ ದಂಡಪ್ರಣಾಮಮೆಸಗಿದ । ಚಂಡೇಶಂ ಗಿಂದಿರೇಂದ್ರವಾಣೀರಮಣಾ ॥ ಖಂಡಲ
ದುರ್ಲ್ಲಭ ಮೆನಿಸು ವ । ಖಂಡರುಚಿನಿಜಪ್ರಸಾದಮಂ ಕರುಣಿಸಿದಂ ॥ ೩೧

ವ ॥ ತತ್ಪ್ರಸಾದಾಸ್ವಾದನ ಜನಿತಘನಮಹತ್ವದಿಂ ಹರಿಚತುರ್ಮ್ಮುಖಮುಖ್ಯಹ
ವಿರ್ಮ್ಮುಖರಿಂ ವಂದ್ಯಮಾನನಾದ ಚಂಡೇಶ್ವರನ ರೋಮಾಂಚಕಂಚುಕಿತಾಂಗದ ರೋ

---

ಅರಸುಗೆಯ್ವ- ದೊರೆತನವಂ ಮಾಡುವ. ... ... ... ॥೨೬॥

ಈಶ್ವರನಿಕಟದೊಳ್- ಶಿವನ ಸಮೀಪದಲ್ಲಿ, ಸೊಮ್ಮು- ಸ್ವತ್ತು. ... ॥೨೭॥

ಚಂಡಭಾಸ್ಕರತೇಜಂ- ಸಮರ್ಥನಾದ ಸೂರ್ಯನಂತಿರುವ ತೇಜಸ್ಸುಳ್ಳ, ಜನಕಾಜ್ಞೆಯಿಂ- ತಂದೆಯ ಅಪ್ಪಣೆಯಿಂದ, ಭಾಸ್ವತ್ತಟಿನೀತಟಂಬಿಡಿದು- ಪ್ರಕಾಶಿಸುವ ಹೊಳೆಯ ದಡವನ್ನನುಸರಿಸಿ, ತದ್ವಾಲುಕೋತ್ಕರದಿಂ- ಆ ಹೊಳೆಯ ಮಳಲಿನರಾಸಿಯಿಂದ. ... ... ... ॥೨೮॥

ಒದರುತ್ತಂ- ಕೂಗುತ್ತ. ... ... ... ... ॥೨೯॥

ಸುರಪಟಹರವಂ- ದೇವತೆಗಳ ತಮಟೆಯ ಶಬ್ದವು. ... ... ॥೩೦॥

ಇಂದಿ.........ದುರ್ಲ್ಲಭಂ— ಇಂದಿರೇಂದ್ರ- ಲಕ್ಷ್ಮೀಪತಿ, ವಾಣೀರಮಣ- ಸರಸ್ವತೀಪತಿ, ಆಖಂಡಲ- ಇಂದ್ರ ಇವರುಗಳಿಂದ, ದುರ್ಲ್ಲಭಂ- ಹೊಂದುವದಕ್ಕಸಾಧ್ಯವಾದದ್ದು, ಅಖಂಡರುಚಿನಿಜಪ್ರಸಾದಮಂ- ಅವಿಚ್ಛಿನ್ನವಾದ ಸ್ವಾದವುಳ್ಳ ತನ್ನ ಪ್ರಸಾದವನ್ನು. ... ... ... ॥೩೧॥

ಹರಿ.........ಮುಖರಿಂ— ಹರಿ- ವಿಷ್ಣು, ಚತುರ್ಮ್ಮುಖ- ಬ್ರಹ್ಮ ಇವರುಗಳೇ, ಮುಖ್ಯ- ಮೊದಲಾದ, ಹವಿರ್ಮ್ಮುಖರಿಂ- ದೇವತೆಗಳಿಂದ, ರೋಮಾಂಚಕಂಚುಕಿತಾಂಗದ- ರೋಮೊದ್ಗಮದಿಂದ ಕವಚವಿಕ್ಕಿದಂತಾಗಿರುವ ದೇಹದ, ರೋಮಕೂಪಂಗಳಿಂ- ಕೂದಲುಹುಟ್ಟಿರುವ ರಂಧ್ರಗಳಿಂದ, ಲಲಿತ.........ಪದ್ಯಂಗಳಿಂ— ಲಲಿತ- ಮನೋಹರಗಳಾದ, ಪದ- ಶಬ್ದಗಳ, ಪ್ರಸನ್ನ- ನೈರ್ಮ್ಮಲ್ಯದಿಂ ಕೂಡಿದ, ಸಂದರ್ಭ- ಪ್ರಕೆ

ಮಕೂಪಂಗಳಿ ನದ್ಭುತ ಮಾಗೆ ಕೆಲಂಬ ರ್ಗಣಂಗ ಳೊಗೆದು ಲಲಿತಪದಪ್ರಸನ್ನಸಂದ ರ್ಭಪ್ರೌಢಚಿತ್ರಾರ್ಥಗರ್ಭಗದ್ಯಪದ್ಯಂಗಳಿಂ ಪೊಗಳೆ ಸಂತುಷ್ಟ ನಾಗಿ ಹರದತ್ತನಿಜಪ್ರಸಾದಮು ನವರ್ಗೆ ಚಂಡೇಶ ನಿತ್ತನಂತರಂ ॥ * * * * * *

ಕಂ ॥ ತನ್ನಂ ಪೊಗ ಳ್ವನಿತರೊ ಳವ । ರುನ್ನತವಾಕ್ಪಟುತೆಗೊಲ್ದು ನಿಜವಂದಿತೆ ಯಂ ॥ ಪನ್ನಗಭರಣಂ ಕರುಣಿಸಿ । ದಂ ನಿಜ ಮುಂಡಿಂದೆ ಶಿವನ ವಂದಿಗ ಳಾದರ್ । ೩೦

ಕಂ ॥ ಶಿವ ನವರ್ಗೆ ಮತ್ತ ಮಿತ್ತಂ । ಜವದಿಂ ಪುರಗೇಹಲಿಂಗಭಜಕತ್ವಮ ನೊ॥ ಪ್ಪುವ ಕಾಳೀಗಣಪತಿಭೈ । ರವರುಂ ಪೂಜಿಸುವ ಕಜ್ಜಮುಮ ನೆಲ್ಲೆಡೆಯೊಳ್ ॥ ೩೩

ಕಂ ॥ ಜನಿಯಿಸಿದೆ ವವರ ಮಹಿಮೆ । ನೆನಸುಂ ಕೇಳದರಿ ನೆಮ್ಮ ಸೊಮ್ಮಪ್ಪುದು ಪಾ ॥ ವನತರಶಿವಪ್ರಸಾದಂ । ಮನುಜಾಧಿಪ ವೀರಶೈವ ರೀಪುರವರದೊಳ್ ॥ ೩೪

ಕಂ ॥ ಕುಡ ದೆಮಗೆ ತಾವೆ ಭುಂಜಿಪ । ರೆಡೆಯುಡುಗದೆ ಬಜ್ಜಳೇಂದ್ರ ಬಸವನ ಬ ಲದಿಂ ॥ ನುಡಿಯ ಲರಿ ದೆಮಗೆ ಭಕ್ತರ । ಕಡುಬಂಕವ ನಿಂದು ನೀನೆ ಕುಡಿಸೆನೆ ಜನಪಂ॥

ವ ॥ ಇಂತೆನ ಲರಸಂ ಬಸವರಸ ನಾನನಮಂ ನಿರೀಕ್ಷಿಸುತ್ತ ಮಿವರ ಸೊಮ್ಮಪ್ಪ ಶಿವಪ್ರಸಾದಮ ನಿವರ್ಗೀಯದೆ ನೀವೆ ಭುಂಜಿಪ್ಪು ದನ್ಯಾಯ ಮೆಂಬುದು ಮಾವೃಷಭೇಂದ್ರ ನಾಚಂಡಪುತ್ರ ರ್ಗಭಿಮುಖ ನಾಗಿ ॥ * * * * * *

ಉ ॥ ಚಂಡಕುಲಪ್ರಭೂತರಿರ ಕೇಳಿರೆ ನಿಮ್ಮಯ ಶೌರ್ಯ ಮಿರ್ಕೆ ಭೂ । ಮಂಡಲ ದೊ ಳ್ನರಾಮರಮುನಿಪ್ರವರಾಬ್ಜಭವಪ್ರತಿಷ್ಠಿತೋ ॥ ದ್ದಂಡಗಿರೀಶಲಿಂಗತತಿಯೊ ಳ್ಸ ಲೆ ಸಲ್ವುದು ತತ್ಪ್ರಸಾದ ಮಾ । ಚಂಡಗಣೇಶ್ವರಂ ಗ೦ಳದಲಿಂಗಸಮೂಹದೊ ಳೆಂತು ಸಲ್ವುದೋ ॥ ... ... ... ೩೬

ಕಂ ॥ ಚರಲಿಂಗಬಾಣಲಿಂಗ । ಸ್ಫುರಿತಸುವರ್ಣಾದಿಲಿಂಗಮಣಿಲಿಂಗಸಮು ॥ ತ್ಕರ

---

ರಣಗಳುಳ್ಳ, ಪ್ರೌಢ- ಕುಶಲವಾದ, ಚಿತ್ರ- ನಾನಾವಿಧಗಳಾದ, ಅರ್ಥ- ಅಭಿಪ್ರಾಯಗಳಿಂದ, ಗರ್ಭಿತ- ತುಂಬಲ್ಪಟ್ಟ, ಗದ್ಯ- ಯತಿಗಣಪ್ರಾಸುಗಳಿಲ್ಲದ ವಾಕ್ಯಸಮೂಹ, ಪದ್ಯಂಗಳಿಂ- ಯತಿಗಣಾದಿಬದ್ಧವಾಕ್ಯಗಳಿಂದ, ಹರದತ್ತನಿಜಪ್ರಸಾದಮಂ- ಪರಮೇಶ್ವರನಿಂದ ಕೊಡಲ್ಪಟ್ಟು ತನ್ನಲ್ಲಿದ್ದ ಪ್ರಸಾದವನ್ನು. * *

ಉನ್ನತವಾಕ್ಪಟುತೆಗೆ- ಉತ್ಕೃಷ್ಟವಾದ ವಚನಸಾಮರ್ಥ್ಯಕ್ಕೆ, ನಿಜವಂದಿತೆಯ- ತನ್ನ ಸ್ತುತಿಪಾಠಕತ್ವವನ್ನು, ವಂದಿಗಳ್- ಸ್ತುತಿಪಾಠಕರು. ... ... ... ||೩೦||

ಪುರಗೇಹಲಿಂಗಭಜಕತ್ವಮಂ- ಪಟ್ಟಣಮನೆಗಳಲ್ಲಿರುವ ಲಿಂಗಗಳಂ ಸೇವಿಸುವಿಕೆಯನ್ನು, ಎಲ್ಲೆಡೆಯೊಳ್- ಎಲ್ಲಾಸ್ಥಲದಲ್ಲಿ, ಕಜ್ಜಮುಮಂ- ಕಾರ್ಯವನ್ನೂ ... ... ... ||೩೩||

ಅವರ- ಆಗಣಂಗಳ, ಎನಸುಂ- ನಿಜವಾಗಿ. ... ... ... ||೩೪||

ಅರಿದು- ಅಸಾಧ್ಯವು, ಕುಡಿಸು- ಕೊಡುವಂತೆಮಾಡು. ... ... ||೩೫||

ನರಾ.........ತತಿಯೊಳ್— ನರ- ಮನುಷ್ಯರು, ಅಮರ- ದೇವತೆಗಳು, ಮುನಿಪ್ರವರ- ಋಷಿಶ್ರೇಷ್ಠರು, ಅಬ್ಜಭವ- ಬ್ರಹ್ಮ ಇವರುಗಳಿಂದ, ಪ್ರತಿಷ್ಠಿತ- ಸ್ಥಾಪಿಸಲ್ಪಟ್ಟ, ಉದ್ದಂಡ- ಉತ್ಕೃಷ್ಟವಾದ, ಗಿರೀಶಲಿಂಗತತಿಯೊಳ್- ಶಿವಲಿಂಗಗಳ ಸಮೂಹದಲ್ಲಿ. ... ... ||೩೬||

ಚರ.........ತ್ಕರದೊಳ್— ಚರಲಿಂಗ- ಜಂಗಮಲಿಂಗ, ಬಾಣಲಿಂಗ- ಸ್ಫುರಿತ- ಪ್ರಕಾಶಿಸುವ,

ದೊಳ್ ಸ್ವಯಂಭುವಿನೊಳಂ । ದೊರೆಯುವ ಚಂಡಂಗೆ ತತ್ಪ್ರಸಾದವಿಭುತ್ವಂ ॥ ೩೭

ಶ್ಲೊ ॥ ಬಾಣಲಿಂಗೇ ಚಲೇ ಲೋಹೇ ರತ್ನಲಿಂಗೇ ಸ್ವಯಂಭುವಿ । ಪ್ರತಿಮಾಸು ಚ ಸರ್ವಾಸು ನ ಚಂಡೋಧಿಕೃತೋ ಭವೇತ್ ॥

ವ ॥ ಇಂತೆಂಬ ಶೈವಾಗಮವಚನವಿದರೊಳ್ ಪವಣವಿದು ಕಾರಣ ಮಾವೆಡೆಯೊಳ್ ಚಂಡಂಗಧಿಕಾರ ಮಾಯೆಡೆಯೊಳ್ ನಿಮಗೆ ಶಿವಪ್ರಸಾದಂ ಸಲ್ಗುಮುಳಿದೆಡೆಯೊಳೆಂತುಂ ಸಲ್ಲದೆನೆ ಚಂಡಪುತ್ರರದಕ್ಕೆ ಮಾರ್ಕೊಂಡು ॥

ಕಂ ॥ ದ್ರಾಕ್ಷಾರಾಮಶ್ರೀಗಿರಿ । ಲಕ್ಷಿತಕಾಂಚೀಲಸಚ್ಚಿದಂಬರಪುರಮುಖ್ಯಕ್ಷೇತ್ರಂಗಳೊಳೆಮಗ । ಧ್ಯಕ್ಷತೆಯೊಳವೀಶಶೇಷಭೋಜನವಿಧಿಯೊಳ್ ॥ ೩೮

ವ ॥ ಸ್ರ ॥ ಅದರಿಂ ಸಲ್ಗುಂ ಪೊದಳ್ದಲ್ಲಿಡೆಯೊಳೆಮಗೆ ಲಿಂಗಪ್ರಸಾದಂ ಭವಲ್ಲಿಂ
ಗದ ಶೇಷಂ ಸಲ್ಲದೇಂ ಪೋಕುಮೆ ಬಸವ ಬಲಾತ್ಕಾರದಿಂ ದೆಮ್ಮ ಸೊಮ್ಮಂ ಪ್ಪದ ನಿಂ
ದೋರಂತೆ ನೀಂ ನೀಯದೊಡೆ ಬಿಡುವೆವೇ ಪ್ರಾಣಮಂ ಮಾಣದೆಂದಾ । ಡಿದ ರಾಮಾತಿಂ
ಗೆ ತಾಂ ಮಾರ್ನುಡಿದ ನಭವಸಿದ್ಧಾಂತವಿದ್ಯಾಂತರಂಗಂ ॥ ೩೯

ಕಂ ॥ ನ್ಯಾಯಮದಿಲ್ಲದೆ ಬಿಚ್ಚಟಿ । ರಾಯುವ ನೆತಮಮ ನಿಮ್ಮ ಬಿರುನುಡಿಗಳ್ಕಂ ॥ ಮಾಯಾರಿಶರಣನುಚಿತ । ನ್ಯಾಯಪರಂ ಗಾಳಿಯಲೆಯೆ ಗಿರಿ ಚಲಿಯಿಕುಮೇ ॥

ಕಂ ॥ ನಯಮಿದು ಶಾಸ್ತ್ರಾನುಭವ । ದ್ವಯದೊಳವೊಂದರೊಳೆ ಸಿದ್ಧಮಾದರ್ಥದೊಳಾ ॥ ರಯೆ ವರ್ತಿಸ ಬಗೆಯದನುಳಿ । ದಯಥಾರ್ಥಂಬಿಡಿದೊಡವನೆ ನಿಂದ್ಯಂ ಧರಿಯೊಳ್ ॥ ... ... ... ... ೪೧

---

ಸುವರ್ಣ- ಚಿನ್ನವೇ, ಆದಿ- ಮೊದಲಾದಲೋಹಗಳ, ಲಿಂಗ, ಮಣಿಲಿಂಗ- ರತ್ನಗಳಲಿಂಗಗಳ, ಸಮುತ್ಕರದೊಳ್- ಸಮೂಹದಲ್ಲಿ, ಸ್ವಯಂಭುವಿನೊಳಂ- ತಾನಾಗಿ ಹುಟ್ಟಿದ ಲಿಂಗದಲ್ಲೂ, ತತ್ಪ್ರಸಾದವಿಭುತ್ವಂ- ಆಶಿವಪ್ರಸಾದಾಧಿಕಾರವು. ... ... ... ... ||೩೭||

ಸರ್ವಾಸುಪ್ರತಿಮಾಸುಚ- ಈ ಪೂರ್ವೋಕ್ತಗಳಾದ ಎಲ್ಲಾ ವಿಗ್ರಹಗಳಲ್ಲೂ, ಚಂಡಃ- ಚಂಡೇಶ್ವರನು, ಅಧಿಕೃತಃ- ಅಧಿಕಾರವಂ ಹೊಂದಿದವನು, ನಭವೇತ್- ಆಗಲಾರನು. * * * *

ಪವಣಂ- ಪ್ರಮಾಣವು, ಮಾರ್ಕೊಂಡು- ಪ್ರತಿಯಾಗಿ. * * * * *

ಈಶಶೇಷಭೋಜನವಿಧಿಯೊಳ್- ಶಿವಪ್ರಸಾದವಂ ಭುಂಜಿಸುವ ವಿಧಾನದಲ್ಲಿ, ಅಧ್ಯಕ್ಷತೆ ಅಧಿಕಾರವು, ಒಳವು- ಉಂಟು. ... ... ... ... ||೩೮||

ಸಲ್ಗುಂ- ಸಲ್ಲುವದು, ಭವಲ್ಲಿಂಗದ- ನಿಮ್ಮಗಳಲಿಂಗದ, ಪೋಕುಮೆ- ಹೋಗುವದೇ ? ಓರಂತೆ- ಸುಮ್ಮನೆ, ಮಾಣದೆ- ತಪ್ಪದೆ, ಅಭವಸಿದ್ಧಾಂತವಿದ್ಯಾಂತರಂಗಂ- ಶಿವಸಿದ್ಧಾಂತವಿದ್ಯೆಯೇ ಮನಸ್ಸಿನಲ್ಲುಳ್ಳ ಬಸವೇಶ್ವರನು. ... ... ... ... ||೩೯||

ಬಿರುನುಡಿಗೆ- ಕಠಿಣವಾದ ಮಾತಿಗೆ, ಉಚಿತನ್ಯಾಯಪರಂ- ಯೋಗ್ಯವಾದ ನ್ಯಾಯದಲ್ಲಾಸಕ್ತನಾದ ಮಾಯಾರಿಶರಣಂ- ಶಿವಶರಣನು, ಅಳ್ಕಂ- ಹೆದರುವದಿಲ್ಲ, ಅಲೆಯೆ- ಪೀಡಿಸಲು, ಚಲಿಯಿಕುಮೇ- ಅಳ್ಳಾಡುವದೇ ? ... ... ... ... ||೪೦||

ನಯಮ್- ನ್ಯಾಯವು, ಅರಯೆ- ವಿಚಾರಿಸಲು, ಬಗೆ- ರೀತಿಯು, ಅಯಥಾರ್ಥಂಬಿಡಿದೊಡೆ- ಸುಳ್ಳನ್ನು ಹಿಡಿದರೆ. ... ... ... ... ... ... ||೪೧||

ಕಂ ॥ ಪೇಳಿರೆ ಶಾಸ್ತ್ರ ಮದುಳ್ಳೊಡೆ । ಪಾಳಿಯಿನನುಭವಮ ಪವಣ ಮಂಟೊಡೆ ನಿಮಗಾ ॥ ಭಾಳೇಕ್ಷಣಪ್ರಸಾದಮ । ನಾಳೋಚಿಸ ದತ್ತ ವೀರಮಾಹೇಶ್ವರರ್ ॥ ೪೧

ಕಂ ॥ ನಯ ಮಮರೆ ತೋರಿ ಶಾಸ್ತ್ರೋ । ಕ್ತಿಯೊ ಳಾದೊಡ ಮನುಭವಾಪ್ತಿಯಿಂದಾದೊಡ ಮ ॥ ನ್ನೆಯಮಿಲ್ಲದೆ ಕೊಳ್ವುದು ಸಂ । ಶಯಮುಳದು ಮಹೀಯಲಿಂಗಶೇಷಮ ನೀಗಳ್ ॥ ... ... ... ೪೨

ಕಂ ॥ ಸುಮ್ಮನೆ ಕೊಂಡಪೆ ವೆನೆ ಕುಡೆ । ವೆಮ್ಮಯ ಲಿಂಗಪ್ರಸಾದಮಂ ನಿಮಗೆ ವಲಂ ॥ ತಿಮ್ಮಸವ ರಸನೆ ಯೆಸಕ ಮ । ದೆಮ್ಮೊಡ ನೇಕಿನಿತು ಬಿಡಿ ಮಿದೇತರ ಬಿಂಕಂ ॥ ೪೩

ಉ ॥ ಏತರದಿಂದ ಮಾದೊಡ ಮುಮಾಧಿಪಲಿಂಗದ ಸುಪ್ರಸಾದಮಂ । ನೀತಿ ಯದಿಲ್ಲಮಣ್ಬೆ ವೆನುತಾಗ್ರಹಮಂ ಪಿಡಿ ದಪ್ಪಿ ರಪ್ಪೊಡೇಂ ॥ ಮಾತೊ ಪುರಾರಿ ಗುಗ್ರಗರಮಂ ಪವೆ ದರ್ಪಿಪೆ ನಂತದಂ ಮನಃ । ಪ್ರೀತಿಯೊ ಳುಣ್ಬು ದೀಗ ಳೆನೆ ಕೇಳ್ದತಿರೋಷಮ ನಾಳ್ದ ರಾದ್ವಿಜರ್ ॥ ... ... .. ೪೪

ವ ॥ ಅಂತು ರೋಷಾನ್ವಿತಹೃದಯ ರಾಗಿ ॥ * * * * *

ಕಂ ॥ ಅರಿದರಿದು ನಿನ್ನ ನುಡಿಗಳ । ಪರಿ ಯೆಮ್ಮೊಳ್ಬಸವ ಲೇಸ ನಾಡಿದೆ ನೀಂ ದಿ॥ ವ್ಯರಸಾಮೃತಾನ್ನಮಂ ಕೊಂ । ಡಿರ ದೆಮಗಿಂಪೆರೆವಗಡ ಮೃಡಾರ್ಪಿತವಿಷಮಂ ॥ ೪೫

ಕಂ ॥ ಪರಮೇಶ್ವರಪ್ರಸಾದಮ । ನೆರೆದಪ ರಿವ ರೆಂದುಪಾಯದಿಂ ದೆಮ್ಮಂ ನಿ॥ಷ್ಠುರವಿಷಮ ನಿಕ್ಕಿ ಕೊಲ ಲೋ । ಸರಿಸದೆ ನೀಂ ನೆನೆದೆ ನಿನ್ನ ಬಗೆ ಪೊಸತಲ್ತೆ ॥ ೪೬

ಕಂ ॥ ಎಮಗೆರೆವ ಶಿವಾರ್ಪಿತಗರ । ಳಮ ನೀಗಳ್ನೀಮೆ ಕೊಂಡು ಬಾಳ್ದೊಡೆ ಗೆಲ್ಲಂ ॥ ನಿಮ ಗಕ್ಕು ಮೆಮಗೆ ಸೋಲಂ । ಸಮನಿಪ್ಪು ದಿದೇ ಪ್ರಮಾಣ ಮೆಮಗಂ ನಿಮಗಂ ॥

ವ ॥ ಎನೆ ಕೇಳ್ದು ಮಹಿಮಾಕರ ನಂತೆಮಾಳ್ಪೆ ನಿದಾವ ಗಹನ ಮೆಂದರಸನಂ ಸಾಕ್ಷಿಗೆ ಯ್ದಲ್ಲಿಂದೇಳ್ದು ಸಡಗರಂ ಮಿಗೆ ಭಕ್ತಗಣಪರಿವೃತಂ ಸಂಗಮೇಶ್ವರನ ಮಂದಿರದ ಬಹಿರ್ದ್ವಾರಮಂಟಪಕ್ಕೇಳ್ತಂದಾಗಳ್ ॥ * * * * * *

ಕಂ ॥ ಶರಣರ ಬಿರುದಂ ಪಾಡಿಸು । ತುರುತರವೈಭವದೆ ತಮ್ಮ ಚರಲಿಂಗಸಮು ॥ ತ್ಕರದೊಡನೆ ಬಂದ ರಂದೆ । ಳ್ತರದಿ ನಸಂಖ್ಯಾತಭಕ್ತ ರತಿಸಂಭ್ರಮದಿಂ ॥ ೪೮

---

ಪಾಳಿಯಿಂ- ಕ್ರಮವಾಗಿ. ... ... ... ||೪೧||

ಅನುಭವಾಪ್ತಿಯಿಂದಾದೊಡಂ- ಅನುಭವಿಸಿರುವಿಕೆಯಿಂದಲಾದರೂ, ಅನ್ನೆಯಂ- ಅನ್ಯಾಯವು. ||೪೨

ತಿಮ್ಮಸಪ- ತೀಂಟವುಸಗುವ, ರಸನೆಯ- ನಾಲಗೆಯು, ಎಸಕಂ- ಉಜ್ಜುಗವು. ||೪೩||

ಏತರದಿಂದಂಆದೊಡಂ- ಯಾವರೀತಿಯಿಂದಲಾದರೂ, ಉಗ್ರಗರಪಂ- ಭಯಂಕರವಾದ ವಿಷವನ್ನು.

ಅರಿದುಅರಿದು- ಅಸಾಧ್ಯಅಸಾಧ್ಯ; ಪರಿ- ರೀತಿಯು, ದಿವ್ಯರಸಾಮೃತಾನ್ನಮಂ- ಶ್ರೇಷ್ಠವಾದರುಚಿಯುಳ್ಳ ಹಾಲುಅನ್ನವನ್ನು, ಕೊಂಡು- ಸ್ವೀಕರಿಸಿ. ... ... ||೪೫||

ಎರೆದಪರ್- ಬೇಡುವರು, ಕೊಲಲ್- ಸಾಯಿಸುವದಕ್ಕೆ, ಓಸರಿಸದೆ- ಸಂಕೋಚಪಡದೆ. ||೪೬||

ಬಾಳ್ದೊಡೆ- ಬದುಕಿದರೆ, ಗೆಲ್ಲಂ- ಜಯವು. ... ... ... ||೪೭||

ಬಹಿರ್ದ್ವಾರಮಂಟಪಕ್ಕೆ- ಗೋಪುರದ ಮಂಟಪಕ್ಕೆ. * * * *

ಮೂರ್ತಿಗೊಳಿಸಿ ಸತ್ಕ್ರಿಯೆಗಳಂ ಸೆಗಳ್ದು ಬಸವರಸಂ ಪರಮೋತ್ಸವ
ವ ॥ ಅಂತೇಳ್ತಂದ ಭಕ್ತರ್ಗೆ ಭಕ್ತಿಯಿಂ ಮಣಿದು ತಿರ್ಪಿನ ಮಲ್ಲಿ ॥
ಡಿಂ ಮೂರ್ತಿಗೊಳಿಸಿ ಸತ್ಕ್ರಿಯೆಗಳಂ ಸೆಗಳ್ದು ತಿರ್ಪಿನ ಮಲ್ಲಿ ॥
ಕಂ ॥ ವಿತತಾದ್ಭುತಮತಿ ಬಿಜ್ಜಳ । ನತಿಶಯಸಾಮಂತರಾಜಸುತಸಚಿವಪುರೋ ॥
ಹಿತಯುತ ನೇಳ್ತಂದಿರ್ದಂ । ಪ್ರತಿವಾದಿಕದಂಬ ಮೆಯ್ದೆವಂದ ತಾ್ರಗಳ್ ॥ ೫೦
ಉ ॥ ವೀರಕವೀರಭದ್ರಕಮುಖಪ್ರಮಥಪ್ರಕರಾನ್ವಿತಂ ಮನೋ । ಜಾರಿನಗೇಂದ್ರ
ಪುತ್ರಿಯೊಡನುಬರದೊಳ್ಬಗೆಗೊಂಡು ಸಾರತೇ ॥ ಜೋರಮಣೀಯಡಿವ್ಯಮಣಿಪುಷ್ಪ
ಕದೊಳ್ನೆಲಸಿರ್ದು ಭಕ್ತವಿ । ಸ್ತಾರಮಹತ್ತ್ವವೀಕ್ಷಣಸಮುತ್ಸುಕ ನೊಪ್ಪಿರೆ ದೇ
ವಸೇವಿತಂ ॥ ... ... ... ... ೫೧
ಕಂ ॥ ಪರಿಜನಮುಂ ಪುರಜನಮುಂ । ನೆರೆ ಡೀಕ್ಷಿಸೆ ಕನಕರೌಪ್ಯತಾಮ್ರಾದಿಯ
ಕೊ ॥ ಪ್ಪರಿಗೆಗಳ ನಗಣಿತಂಗಳ । ನಿರದಲ್ಲಿಗೆ ತರಿಸಿ ಬಸವ ನನುಚರರಿಂದಂ ॥ ೫೨
ಕಂ॥ ಕುಳಿಕನ ತಕ್ಷಕನ ಮಹಾ । ಖಳಕರ್ಕೋಟಕನ ಘೋರತರವಿಷದಿಂ ದ ॥ ಗ್ಗ
ಳ ಮೆನಿಪಕಾಲಕೂಟಂ । ಗಳ ನಧಟಂ ನೆನೆದು ಬರಿಸಿ ಜಿರಸುತ್ತದರೊಳ್ ॥ ೫೩
ಮ ॥ ಸ್ರ ॥ ಭರದಿಂದಂ ವತ್ಸನಾಭಪ್ರಮುಖಬಹುವಿಷವ್ರಾತಮಂ ಕೂಡಿ ಸರ್ವೋ।
ರ್ವರೆ ಗತ್ಯಾಶ್ಚರ್ಯಮಂ ತಾ ನೆಸಗು ತರೆಯಿಸುತ್ತಿರ್ದ ನಾವೇಳೆಯೊಳ್ತ ॥ ದ್ಗರಳಾಭೀಳ
ಸ್ಫುರತ್ಸೌರಭ ಮಲೆಯೆ ಧರಾಜೀವಿಗಳ್ಜೀವಮಂ ಬಿ । ಟ್ಟರಡೆತ್ತಂ ಪಕ್ಷಿವೃಂದು ಕೆಡೆ
ದಸುಗಳೆದ ತ್ತಭ್ರದಿಂ ಪೇಳ್ವ ನೇನಂ ॥ ... ... ೫೪
ಕಂ ॥ ಗರಳಮ ನರೆವ ನರರ್ಕಳ । ಕರು ಳದು ಕಡಿಕಂಡ ಮಾಗಿ ಪಡಲಿಡೆ ಪಿರಿ ದ ॥
ಚ್ಚರಿವಟ್ಟದ ನಾಂಪರದಾ । ಧರೆಯೊಳೆನುತ್ತಗಿದು ಕೇಳಕೆ ಜಗುಳ್ದ ಶ್ಯೆರ್ವರ್॥ ೫೫

* * * *

||೪೯|| ಸತ್ಕ್ರಿಯೆಗಳಂ- ಉಪಚಾರಗಳನ್ನು.

ವಿತತಾದ್ಭುತಮತಿ- ವಿಸ್ತಾರವಾದ ಆಶ್ಚರ್ಯಕರವಾದ ಬುದ್ಧಿಯುಳ್ಳ. ... ||೫೦||

ಬಗೆಗೊಂಡು- ಮನೋಹರವಾಗಿ, ನೆಲಸಿ- ಕುಳಿತುಕೊಂಡು, ಭಕ್ತವಿಸ್ತಾರಮಹತ್ತ್ವವೀಕ್ಷಣಸಮುತ್ಸುಕಂ- ತನ್ನ ಭಕ್ತರ ವಿಶಾಲವಾದ ಮಹಿಮೆಯನ್ನು ನೋಡಬೇಕೆಂಬ ಕುತೂಹಲವುಳ್ಳವನಾಗಿ. ||೫೧||

ಪರಿಜನಮುಂ- ಸೇವಕಜನವೂ, ಕನಕರೌಪ್ಯತಾಮ್ರಾದಿಯ- ಚಿನ್ನ ಬೆಳ್ಳಿ ತಾಮ್ರ ಮೊದಲಾದಲೋಹಗಳ, ಕೊಪ್ಪರಿಗೆಗಳಂ- ಕಡಾಯಿಗಳನ್ನು, ಅಗಣಿತಂಗಳಂ- ಎಣಿಸುವದಕ್ಕಾಗದ, ಅನುಚರರಿಂದಂ- ಆಳುಗಳಿಂದ. ... ... ... ... ... ||೫೨||

ಕಾಲಕೂಟಂಗಳಂ- ಮಹಾವಿಷಗಳನ್ನು, ನೆನೆದು- ಸ್ಮರಿಸಿ, ಬರಿಸಿ- ಬರಮಾಡಿ. ||೫೩||

ವತ್ಸ......ವಿಷಮಂ— ವತ್ಸನಾಭ- ಕೃಷ್ಣಸರ್ಪದ ವಿಷವೇ, ಪ್ರಮುಖ- ಮೊದಲಾದ, ಬಹು- ಅನೇಕಗಳಾದ,ವಿಷವ್ರಾತಮಂ- ವಿಷಗಳ ಸಮೂಹವನ್ನು, ಸರ್ವೋರ್ವರೆಗೆ- ಸಕಲಭೂಮಿಗೆ, ತದ್ಗರಳಾಭೀಳಸ್ಫುರತ್ಸೌರಭಂ- ಆ ವಿಷದ ಅಧಿಕವಾದ ಪ್ರಕಾಶಿಸುವ ಗಂಧವು, ಅಲೆಯೆ- ಪೀಡಿಸಲು, ಧರಾಜೀವಿಗಳ್- ಭೂಮಿಯಲ್ಲಿರುವ ಪ್ರಾಣಿಗಳು, ಅಭ್ರದಿಂ- ಆಕಾಶದಿಂದ. ... ... ||೫೪||

ಕಡಿಕಂಡಂ- ಕತ್ತರಿಸಲ್ಪಟ್ಟ ಮಾಂಸವುಳ್ಳದ್ದು, ಪಡಲಿಡೆ- ಬೀಳಲು, ಆಂಪರ್- ಧರಿಸುವವರು, ಜಗುಳ್ದರ್- ಜಾರಿದರು. ... ... ... ... ... ||೫೫||

ವ ॥ ಆಗ ಳಾಭೀಕರಾಕಾರವಿಷಮುಂ ಬಸವಂ ತೈಲರಸದೊಳ್ಪಿರಿದುಂ ಮರ್ದಿಸಿ ಕೂಷ್ಮಾಂಡಪರಿಮಾಣಕಬಳಂಗೆಯ್ದು ಕಟಾಹಂಗಳೊಳ್ಪ್ರತ್ಯೇಕಮಿರಿಸಿ ಮುಗುಳ್ದು ತೈಲಂಬೊಯ್ದು ಕಲಸಿ ದರ್ವೀಕರನಿಭದರ್ವಿಯಿಂದೊತ್ತಿ ತೊಳಸ ಲೊಡನೆ ಕಡುಕಾಯ್ಪು ಮಸಗಿ॥

ಕಂ ॥ ಬಡಬಾಗ್ನಿ ದಾವಶಿಖಿ ಬರ । ಸಿಡಿಲುರಿ ಕಲ್ಪಾಂತವಹ್ನಿಮಸಕಂಗೊಂಡೊಂ ॥ ದೆಡೆನಿಂದ ವೆಂಬ ಭಾವಮ । ನೊಡರ್ಚೆ ಘುಳುಘುಳಿಪ ಗರಳಪಟುಪಾವಕನಿಂ ॥ ೫೬

ಚಂ ॥ ಪೊಗೆ ನೆಗೆದೊತ್ತಿ ಪೊಯ್ಯೆ ಗಗನಾಗಮುದುದ್ಗಮರಾಜಿ ಸೂಸಿದಂ । ತೊಗುಮಿಗೆ ಕಳ್ಕ ನೊಕ್ಕು ದುಡುರಾಜಿ ಕುಲಾಚಲವೃಂದ ಮಂಜನಾ ॥ದ್ರಿಗಣದ ಮಾಳ್ಕೆಯಂ ತಳೆದು ದರ್ಕವರೂಥದ ವಾಜಿ ಬೆರ್ಚಿದ । ತ್ತಗಲದೆ ನೀಲನೀರಮಯ ಮಾದವು ಸಿಂಧುತಟಾಕವಾರಿಗಳ್ ॥ ... ... ... ೫೭

ಕಂ ॥ ಕುದಿ ದುರ್ಕಿದ ವಖಿಳನದೀ । ನದಂಗ ಳುರಿದತ್ತು ತರುಕುಲಂ ಗಿರಿತತಿ ಸೀ॥ ಳ್ದುದು ಗರಳಶಿಖಿಯ ಸೆಕೆಸೋಂ । ಕಿದಗಾಳಿಯ ಕೋಳ್ಗೆ ಬಳ್ಕಿದ ದಿಕ್ಪತಿಗಳ್ ॥ ೫೮

ಕಂ ॥ ಭೂತಳದೊಳ್ಪುಟ್ಟಿದುದು । ತ್ಪಾತಲಯಾನಲ ನಿದಾವಕಾಲ ಮೆನುತ್ತ ॥ ಬ್ಜಾತಭವಂ ಲಯಕಾಲ । ವ್ರಾತಮ ನೆಣಿಸುತ್ತ ಮಿರ್ದ್ದ ನತಿಚಕಿತಮನಂ ॥ ೫೯

ಕಂ ॥ ಜಲಧಿಯೊ ಳಂದೊಗೆದ ಹಲಾ । ಹಲದಿಂ ದಸಿತಾಂಗ ನಾದೆ ನಿಂದೊಗೆದತ್ತು ॥ ವ್ಯಾಲವಿಷ ಮದರಿಂದೇಂ ಕೋ । ಟಲೆ ಬರ್ಪುದೊ ಮಾಣ ದೆಂದು ಹರಿ ಚಿಂತಿಸಿದಂ ॥ ೬೦

---

ತೈಲರಸದೊಳ್- ಎಣ್ಣೆಯಲ್ಲಿ, ಕೂಷ್ಮಾಂಡಪರಿಮಾಣಕಬಳಂಗೆಯ್ದು-ಕುಂಬಳಕಾಯಿನ ಅಳತೆಯು ಕೃತುತ್ತನ್ನು ಮಾಡಿ, ಕಟಾಹಂಗಳೊಳ್- ಕಡಾಯಿಗಳಲ್ಲಿ, ತೈಲಂಬೊಯ್ದು-ಎಣ್ಣೆಯನ್ನು ಸುರಿದು, ದರ್ವೀಕರನಿಭದರ್ವಿಯಿಂದೆ- ಸರ್ಪಕ್ಕೆ ಸದೃಶವಾದ ಸೌಟಿನಿಂದ, ತೊಳಸಲ್- ಕೆಳಗುಮೇಲುಮಾಡಿ ತಿರುವಲು, ಕಡುಕಾಯ್ಪು- ಬಹು ತೈಕ್ಷ್ಣ್ಯವು. * * * * * * * *

ಬಡಬಾಗ್ನಿ- ಸಮುದ್ರದಲ್ಲಿರುವ ಬೆಂಕಿ, ದಾವಶಿಖಿ- ಕಾಳ್ಕಿಚ್ಚು, ಬರಸಿಡಿಲ- ಮಳೆಯಿಲ್ಲದೆ ಬರುವ ಸಿಡಿಲಿನ, ಉರಿ- ಜ್ವಾಲೆಯು, ಕಲ್ಪಾಂತವಹ್ನಿ- ಪ್ರಳಯಕಾಲದ ಬೆಂಕಿ, ಒಂದೆಡೆನಿಂದವು- ಒಂದೇ ಸ್ಥಲದಲ್ಲಿ ನಿಂತುಕೊಂಡವು. ... ... ... ॥೫೬॥

ನೆಗೆದು- ಮೇಲಕ್ಕೆದ್ದು, ಪೊಯ್ಯೆ- ಹೊಡೆಯಲು, ಗಗನಾಗಮದ- ಆಕಾಶವೆಂಬ ಮರದ, ಉದ್ಗಮರಾಜಿ- ಹೂವುಗಳ ಪಙ್ತಿಯು, ಸೂಸಿದಂತೆ– ಸುರಿದಹಾಗೆ, ಒಗುಮಿಗೆ- ಅಧಿಕವಾಗಿ, ಕಳ್ಕನೆ- ಬೇಗನೆ, ಒಕ್ಕುದು- ಸುರಿದಿತು, ಉಡುರಾಜಿ- ನಕ್ಷತ್ರಗಳ ಪಙ್ತಿಯು, ಕುಲಾಚಲವೃಂದಂ- ಕುಲಪರ್ವತಗಳ ಗುಂಪು, ಅಂಜನಾದ್ರಿಗಣದ- ನೀಲಗಿರಿಯ ಸಮೂಹದ, ಮಾಳ್ಕೆಯಂ- ರೀತಿಯನ್ನು, ಅರ್ಕವರೂಥದ- ಸೂರ್ಯನ ರಥದ, ವಾಜಿ- ಕುದುರೆಯು, ಬೆಚ್ಚಿದತ್ತು- ಬೆಚ್ಚಿತು, ಸಿಂಧುತಟಾಕವಾರಿಗಳ್- ಸಮುದ್ರಕೆರೆಗಳ ನೀರುಗಳು, ನೀಲನೀರಮಯಂ- ಬಹು ಕಪ್ಪಾದ ನೀರುಳ್ಳದ್ದು. ... ... ॥೫೭॥

ನದೀನದಂಗಳ್- ಹೆಣ್ಣುಹೊಳೆ ಗಂಡುಹೊಳೆಗಳು, ಕೋಳ್ಗೆ- ಬಾಧೆಗೆ. ... ॥೫೮॥

ಅಬ್ಜಾತಭವಂ- ಬ್ರಹ್ಮನು, ಲಯಕಾಲವ್ರಾತಮಂ- ಪ್ರಳಯಕಾಲದ ಸಮೂಹವನ್ನು, ಅತಿಚಕಿತಮನಂ- ಬಹು ಭಯಪಟ್ಟ ಮನಸ್ಸುಳ್ಳವನಾಗಿ. ... ... ॥೫೯॥

ಅಂದು-ಆಮಥನಮಾಡಿದಕಾಲದಲ್ಲಿ, ಅಸಿತಾಂಗು-ಕಪ್ಪಾದದೇಹವುಳ್ಳವನು, ಕೋಟಲೆ-ತೊಂದರೆಯು.

ಕಂ ॥ ಕೊರಲ ಗರಲಾಗ್ನಿ ಕಡೆ ಗೋ । ಸರಿಸಿದು ದೆಂದೆಂಬ ಶಂಕೆಯಿಂ ದರ್ಪಣಮಂ॥
ತರಿಸಿ ನಿಜರಮಣಿಯಿಂ ಕಂ । ಧರಮಂ ನಡೆ ನೋಡುತಿರ್ದ್ದ ನಗಜಾರಮಣಂ ॥ ೬೧
ಕಂ ॥ ವಾಣಿಯು ಮಾಲಕುಮಿಯು ಮಿಂ । ದ್ರಾಣಿಯು ಮೆಮ್ಮೈರದಾಳಿಯಂ ಕಾ
ವ್ಪುದು ಶ ॥ ರ್ವಾಣೀಶ ಶರ ಣೆನುತ್ತಂ । ಮಾಣದೆ ನಿಷ ಕಳ್ಕಿ ಶಂಭುವಂ ಮರೆವೊಕ್ಕರ್ ॥
ವ ॥ ಇಂತು ಮಹಾಭಯಾದ್ಭುತಂ ಮಸಗ ಲೊಡನೆ ಸಂಭ್ರಮದಿಂ ಬಸವಂ ಗಣನಿವ
ಹಮಂ ತರಂಬಿಡಿದು ಮೂರ್ತಿಗೊಳಿಸಿ ಸಾಂಗ ಮೆನೆ ಲಿಂಗಾರ್ಚನಂಗೆಯ್ಸಿ ಸಾಷ್ಟಾಂಗ
ಮೆರಗಿ ಜಯಜಯಧ್ವಾನದಿ ನುಘೋರವಂ ತಡಂಗಲಿಸಿ ವಿಜೃಂಭಿಸಿ ನಲವೆರ್ಚಿ ಪೊಗಳ್ದು
ಸೆರ್ವರು ಮಚ್ಚರಿ ಮಿಗೆ ನಿರೀಕ್ಷಿಸುತ್ತ ಮಿರೆ ಬಹುಕಟಾಹಸ್ಥಿತವಿಷರಸವಂ ಕರತಳ
ದಿಂ ತುಳುಂಕೆ ಪೊಂಗಳಸಂಗಳಿಂ ಮೊಗೆಮೊಗೆದು ಶಿವಗಣಾವಳಿ ಕೈಕೊಳ್ವುದೆಂದು ಮುಂ
ದೆ ಗಡಣಿಸಿರ್ದ ಪರಿಯಣಂಗಳೊಳ್ ವಿಸಟಂಬರಿ ದೆರೆಯೆ ಭಕ್ತಗಣ ಮಿಾಕ್ಷಿಸಿ ಪೊರೆಯೇ
ರಿ ರಾಗಿಸಿ ಗರಳರಸಮಂ ಗರಳಧರಂಗೆ ಸಮರ್ಪಿಸಿ ತತ್ಪ್ರಸಾದಮಂ ಸವಿವಾಗ ಳ್ಯರಣ
ಗಣದ ಸಂಭ್ರಮೋಕ್ತಿಗ ಳ್ನಿಗಳ್ದ ವೆಂತೆನೆ ॥ * * * * *
ಉ ॥ ಮೆಲ್ಲನೆ ಕುಳ್ಳಿ ರಿಲ್ಲಿ ಕಲಿದೇವ ಸದಾಶಿವದೇವ ಬಂದೆ ನೀಂ । ಗೆಲ್ಲಮು ನಾನ
ಲಿಂ ದರರೆ ಶಂಕರದೇವ ಸಮರ್ಥ ನಕ್ಕು ಮಿಂ ॥ ತಿಲ್ಲಿಗೆ ನೀನೆ ಲಿಂಗಸುಖಿದೇವ ಕಡಂಗಿ
ಶಿವಪ್ರಸಾದಮಂ । ನಿಲ್ಲದೆ ಕೊಳ್ವ ಯಿಂದಮುಮ ಭುಂಜಿಪು ದಲ್ಲಮದೇವ ರಾಗದಿಂ॥ ೬೩
ಉ ॥ ತ್ರ್ಯಂಬಕದೇವ ನುಂಡಪನೆ ಭಾಪುರೆ ಸಾಲದುಮಾಯಿದೇವ ನಾ । ಡುಂಬರ
ಮಾಳ್ದ ಕುಕ್ಷಿಗೆ ಮಹೇಶ್ವರದೇವನ ಪೊಟ್ಟೆ ಸತ್ವರಂ ॥ ತುಂಬದು ದಾಸಿದೇವ ನುದರಂ
ತನಿವೆರ್ಚದು ಶಂಭುದೇವ ನೇ । ಸುಂಬನೊ ಮೆಲ್ಲ ನುಂಡಪ ನಳುಂಬ ಮಿದುದ್ಭಟದೇವ
ನುಜ್ಜುಗಂ ॥ ... ... ... ... ೬೪
ಉ ॥ ಪಿಡಿಪಿಡಿ ಪಾತ್ರೆಯುಂ ಸಸಿನೆ ಸಂಗಮದೇವ ಗಜೇಶದೇವ ಕೈ । ಗುಡಿತೆಯೊ

---

ಕೊರಲ- ಕತ್ತಿನಲ್ಲಿರುವ, ಕಡೆಗೆ- ಈಚೆಗೆ, ಶಂಕೆಯಿಂ- ಊಹೆಯಿಂದ, ದರ್ಪಣಮಂ-ಕನ್ನಡಿಯನ್ನು, ನಿಜರಮಣಿಯಿಂ- ತನ್ನ ಹೆಂಡತಿಯಿಂದ, ಅಗಜಾರಮಣಂ- ಶಿವನು. ... ||೬೧||

ಆಲಕುಮಿಯುಂ- ಆ ಲಕ್ಷ್ಮಿಯೂ, ಇಂದ್ರಾಣಿಯುಂ- ಶಚೀದೇವಿಯೂ, ಐರದಾಳಿಯಂ- ಮಾಂಗಲ್ಯವನ್ನು, ಕಾವುದು- ಸಂರಕ್ಷಿಸುವದು, ಶರ್ವಾಣೀಶ- ಶಿವನೇ. ... ... ||೬೨||

ತರಂಬಿಡಿದು- ಸಾಲಾಗಿ, ತಡಂಗಲಿಸಿ- ಸಂಬಂಧಿಸಿ, ಬಹುಕಟಾಹಸ್ಥಿತವಿಷರಸವಂ- ಅನೇಕ ಕಡಾಯಿಗಳಲ್ಲಿರುವ ವಿಷವನ್ನು, ಪೊಂಗಳಸಂಗಳಿಂ- ಚಿನ್ನದ ಕುಂಭಗಳಿಂದ, ತುಳುಂಕೆ ತುಳುಕುವಹಾಗೆ, ಪರಿಯಣಂಗಳೊಳ್- ಬಟ್ಟಲುಗಳಲ್ಲಿ, ವಿಸಟಂಬರಿದು- ಯಥೇಷ್ಟವಾಗಿ, ಎರೆಯೆ- ಹೊಯಲು, ಪೊರೆಯೇರಿ- ಸಂತೋಷಾತಿಶಯವಂ ಹೊಂದಿ, ರಾಗಿಸಿ- ಪ್ರೀತಿಸಿ, ಗರಳಧರಂಗೆ- ಶಿವನಿಗೆ. * * *

ಅನಲ್- ಹೊಂದುವದಕ್ಕೆ, ಅರರೆ- ಆಶ್ಚರ್ಯ ! ಲಿಂಗಸುಖಿ- ಲಿಂಗದಿಂದುಂಟಾದ ಸೌಖ್ಯವನ್ನನುಭವಿಸುವವನು. ... ... ... |೬೩||

ಆಡಂಬರಮಾಳ್ದ- ಅತಿಶಯುವಂ ಹೊಂದಿದ, ಕುಕ್ಷಿಗೆ- ಹೊಟ್ಟೆಗೆ, ಸತ್ವರಂ- ಬೇಗನೆ, ತನಿವೆರ್ಚದು- ಮೇಲಕ್ಕತಿಯಾಗಿ ಉಬ್ಬುವದಿಲ್ಲ, ಏಸುಂಬನೊ-ಎಷ್ಟುಣ್ಣುವನೋ ? ... ||೬೪||

ಳೀಂಟುವೈ ವಸವಿದೇವ ಜವಂಗೆಡ ದುಂಡಪ್ಪೈ ಬಸಿ ॥ ಕರ್ಡುಪಿರಿದಲ್ತೆ ಕೇಳ್ವನಗೆ ಪರ್ವ್ವತದೇವ ಪಯೋರಸಕ್ಕೆದಿ । ಮರ್ಡಿಗಡ ಬಂಕಿದೇವ ಸುರಿವೈ ಸುರುಕೆನ್ನದೆ ಮಲ್ಲಿ ದೇವ ನೀಂ ॥ ... ... ... ... ೬೫

ಕಂ ॥ ತಲೆಯಂ ತೊನೆಯದಿ ರಿನ್ನುಂ । ನೆಲೆವೆರ್ಚದು ಪ್ರೊಡೆ ಕುಮಾರದೇವಯ್ಯ ಸಡಿ ॥ ಲ್ಕೆಲೆ ಜಘನಸೂತ್ರವ ಂಸಿಂ । ಮಲಿಗೆಯ ಚಂದಯ್ಯ ಭೋಗ ಭುಂಜಿಸು ಜವದಿಂ॥

ಕಂ॥ ಪುರುಡಿಂ ಪಿರಿದುಂಡಪ ನೀ । ವಿರುಪಯ್ಯಂ ಭಲರೆ ಬೊಮ್ಮಿದೇವಂ ಪೀರ್ದಂ॥ ಕರಗಮೆರಡರೊಳೆ ತುಂಬುದ । ನರರೆ ಕರಂ ತಣಿದ ನಲ್ತು ಕಲಕೇತಾರ್ಯಂ ॥ ೬೭

ಕಂ ॥ ಪದೆಮ ಕೊರಲ್ವರೆಗಂ ತುಂ । ಬಿದ ನುದರವ ರಾಮ ನಪ್ಪಿದೇವಂ ಮೆಯ್ಯಾ॥ ಡದೆ ಪಿರಿದುಂ ಪೀರ್ದಂ ಸಗ । ರದ ಬೊಮ್ಮಂ ಸವಿವ ನಳ್ಕರಿಂ ತಣಿವನ್ನಂ ॥ ೬೮

ಕಂ ॥ ಸವಿ ಯೆಂತುಟೊ ಸುರಿದಪ ನೀ । ಶಿವದೇವಂ ಪೀರ್ದು ತಣಿದು ತೇಗಿದ ನೀಗ ॥ ಳ್ಕವಿಲೆಯ ಬೊಮ್ಮಂ ಕೆಲವಲ । ದವರೊ ಳ್ಪುರುಡಿಸುತೆ ಪೀರ್ದಪಂ ಕಾಶೀಶಂ॥ ೬೯

ಕಂ ॥ ಮುನ್ನೆರೆದುದ ನೀಂಟದ ನೀ । ಕನ್ನದಬೊಮ್ಮಯ್ಯ ನಿನ್ನು ಮೆರೆ ಬರಿದಾಯ್ತೀ ॥ ಚೆನ್ನಯ್ಯನ ಪರಿಯಣ ಮಿ । ತ್ತಂ ನೋಡಂಪಗರ ಚೌಡ ನಾರೋಗಿಸಿದಂ॥

ಕಂ ॥ ಸಾಲದು ತನ ಗೆನುತಿರ್ದ್ದಪ । ಸೀಲಿಂಗಣದೇವ ನೊಲ್ದುಮಗೆರೆ ಜವದಿಂ ॥ ದಾಲೋಕಿಪ್ಪು ಧಿತ್ತ ಮಹಾ । ಕಾಯ್ಯಂ ಬರಿಯ ಬಟ್ಟಲಂ ಪಿಡಿದಿರ್ಪ್ಪಂ ॥ ೭೧

ಮತ್ತೇ ॥ ನಿನಗೇಂ ಸಾಲ್ಗುಮೆ ಶಾಂತದೇವ ತಲೆದೂಗುತ್ತಿರ್ಪೆ ಮಾಧುರ್ಯ್ಯ ಮಂ ॥ ತೊ ನಿತಾಂತಂ ಗಣದಾಸಭೀಮ ಧವಳೇಶಂ ಗಾದುದೈ ತೃಪ್ತಿ ನೀ ॥ ನಿನಿತಂ ಕೊಳ್ಳಕಳೇಶ ಸಾಲ್ಗ ಮೆನುತಿರ್ಪೀಸುಮ್ಮ ನಾದಯ್ಯ ನಿ । ನ್ನನುವಂ ಬಲ್ಲೆ ನಿಳೇಶಬೊಮ್ಮ ನಗದಿ ಮಾರ್ದಾರ್ಯ ನೀನೀಂಟಿದಂ॥ ... ... ... ೭೨

ಮ॥ ಸ್ರ॥ ಎನ ಗಿನ್ನುಂ ತಪ್ಪು ದೀತಂ ಗೆರೆ ಮೊರಬುದಬಂಕಂಗೆ ಲಿಂಗಾರ್ಪಣಂಗೆ । ಯ್ಯುದ್ದ ನಿತಾಂತಂ ಶ್ರೀಗುರುಧ್ಯಾನದ ನರೆ ದಸಿತಂ ಪೀರ್ದಪಂ ಬೊಮ್ಮಿದೇವಂ ॥ ಬನದಂಗೆಯ್ಯುವತ್ತೆ ಪೂಣ್ದಂತಿರೆ ಸವಿದಪ ಸೀಡಕ್ಕೆಮಾರಯ್ಯ ನೀಗೋ । ವಿನಮಾರಂ ಸಾಲ ದೆಂ

---

ಸಸಿನೆ- ಸುಮ್ಮನೆ, ಕೈಗುಡಿತೆಯೊಳ್- ಕೈ ಬಗಸೆಯಲ್ಲಿ, ಜವಂಗೆಡದೆ- ಜಾಗ್ರತೆ ದಪ್ಪದೆ, ಬಸಿರ್- ಹೊಟ್ಟೆಯು, ಪಯೋರಸಕ್ಕೆ- ಹಾಲಿನ ರುಚಿಗೆ, ಇರ್ಮಡಿಗಡ- ಒಂದಕ್ಕೆರಡರಷ್ಟಲ್ಲವೇ ? ಸುರುಕ್‌ಎನ್ನದೆ- ಸುರುಕ್ ಎಂದು ಶಬ್ದವಂ ಮಾಡದೆ. ... ... ||೬೫||

ತೊನೆಯದಿರ್-ಅಳ್ಳಾಡಿಸಬೇಡ, ಜಘನಸೂತ್ರಮಂ- ಉಡಿದಾರವನ್ನು, ಸಡಿಲ್ಚು-ಸಡಿಲವಂಮಾಡು.

ಪುರುಡಿಂ- ಸ್ಪರ್ಧೆಯಿಂದ, ಕರಗಂಎರಡರೊಳ್ -ಎರಡು ಪಾನಪಾತ್ರೆಗಳಲ್ಲಿ, (ಅಂದರೆ ದೊನ್ನೆಗಳಲ್ಲಿ).

ತಣಿವನ್ನಂ- ತೃಪ್ತಿಪಡುವಹಾಗೆ. ... ... ||೬೮||

ಸುರಿದಪಂ- ಸೊರೆಯುವನು. ... ... ||೬೯||

||೭೦|| ||೭೧|| ಮಾಧುರ್ಯಂ- ಸೀಯು, ಇನಿತಂ- ಇಷ್ಟನ್ನು, ಅನುವಂ- ಮನೋಭಿಪ್ರಾಯವನ್ನು, ಇದಂ, ಈಂಟು. ... ... ... ||೭೨||

ಪೂಣ್ದಂತಿರೆ-ಪ್ರತಿಜ್ಞೆಯಂ ಮಾಡಿದಹಾಗೆ, ಅಮರ್ದುಗೊಳ್ವಂತಿರೆ-ಅಮೃತವಂಸ್ವೀಕರಿಸುವಹಾಗೆ.

ಹೀಂಟದವ ನಮರ್ದುಗೊಳ್ವಂತಿ ರಾನಂದದಿಂದಂ॥ ... ... ೭೩

ಕಂ॥ ಪ್ರಮಥರಕೃಪೆಯಿಂ ದೆನ್ನು । ತ್ತಮಾಂಗ ಮಿದಂ ಬಹುಳರಸನೆವಡದೊಡೆ ಪೀ
ರ್ವೆಂ ॥ ಸುಮಹತ್ಕಟಾಹವಿಷ ಮನಿ । ತುಮ ನೀಬಂ ಮಿಂಡಸಂಗ ನೇಂ ಕಡುಗಲಿಯೊ॥೭೪

ಕಂ॥ ಚೊಕ್ಕಳತನದಿಂ ಸವಿದು । ಮೊಕ್ಕಳ ಮೇಕಾಂತರಾಮ ನೀಂಟದಪಂ ಕ ॥
ಯ್ಯಿಕ್ಕಿ ಮೊಗೆಮೊಗೆದು ಬಗನೆಯೊ । ಳೊಕ್ಕಲಿಗರ ಮುಗ್ಧ ನೋರ್ವ ನೊಲ್ದಸವಸದಿಂ॥

ಕಂ॥ ಚಿಕ್ಕಯ್ಯನು ಮೀಡೋಹರ । ಕಕ್ಕಯ್ಯನು ಮೊಡನೆ ಪೀರ್ದ ರರಿದೆನೆ ಪದ
ಪಿಂ ॥ ಒಕ್ಕುದು ಮಿಕ್ಕುದು ಬಸವಂ । ಗಕ್ಕುಂ ಸವಿಯಲ್ಕೆ ಚೆನ್ನಬಸವಸಮೇತಂ॥೭೬

ವ ॥ ಎಂಬ ಸಂಭ್ರಮೋಕ್ತಿಗ ಳಂಬುವಡೆಯೆ ಮತ್ತಮಲ್ಲಿ * * *

ಕಂ॥ ಗೊಗ್ಗಾಂಬೆ ಚಾಕಮಾಂಬಿಕೆ । ದುಗ್ಗಳೆ ಕಮಳಾಂಬೆ ಕಾಳಿ ಶಿವದೇವಿ ಲಸ ॥
ತ್ಸುಗ್ಗಲೆ ಶಾಂಭವಿ ನಿಂಬಿಯುಂ । ಮುಗ್ಧದ ಮಾದೇವಿ ವಿಮಳೆ ರೇಚಾಂಬಿಕೆಯರ್ ॥ ೭೭

ಕಂ॥ ಸೋಮಾಂಬಿಕೆ ಮಾದಾಂಬಿಕೆ । ಭೀಮಾಂಬಿಕೆ ಬೀಚಿದೇವಿ ಬಿಲಿದೇವಿ ಮಹಾ ॥
ಕಾಮಾಂಬಿಕೆ ನಾಗಾಂಬಿಕೆ । ರೇಮಾಂಬಿಕೆ ರೆಚಿದೇವಿ ವೀರಾಂಬಿಕೆಯರ್॥ ೭೮

ಕಂ॥ ಲಿಂಗಾಂಬೆ ಶೂರಸೇನಿ ಸು । ವಂಗಳೆ ಸತ್ಯಕ್ಕ ನಲ್ಲಮಾಂಬಿಕೆ ವಿಳಸ ॥ ದ್ಗಂ
ಗಾಂಬೆ ಗೌರಿ ಶಾಂಕರಿ । ಸಂಗಾಂಬಿಕೆ ಚಂಡಿ ಯರಸಿ ಯಾದಾಂಬಿಕೆಯರ್॥ ... ೭೯

ವ ॥ ಇವರ್ಮೊದಲಾದ ಶಿವಯೋಗಿಣಿಯ ರ್ಮೇಲಣ ಪಙ್ತಿಗೊಂಡು ಕುಳ್ಳಿರ್ದು ಪರ
ಮಾನುರಾಗದಿಂ ಶಿವಪ್ರಸಾದಿತವಿಷಾಮೃತಪಾನಲೀಲೆಯಂ ನಾಳ್ದು ತಣಿದು ತೇಗಿ ಬೀಗು
ತ್ತಮಿರೆ * * * * * * * * *

ಕಂ॥ ಒರ್ಬೋರ್ವರ ಪೆರಿಯಣಮುಮ । ನೋರ್ವೋರ್ವ ರ್ಕೊಂಡು ಶೇಷಮುಂ ಸವಿವು॥
ತ್ತೋರ್ವೋರ್ವ ರೊಡನೆ ಕುಳ್ಳಿ । ರ್ದೋರ್ವೋರ್ವರ್ ಕೆಪ್ಪುಮ್ರಳೆಂಬುತಂ ಬಿಸದಿಸುತಂ ॥

ಕಂ॥ ಅರೆಮುಚ್ಚಿ ತೆರೆಯುತಂ ಕ । ಣ್ಮಲರಂ ಕಾಲ್ನೀಡಿ ನಿಗುರುತಂ ಪಾತ್ರೆಗಳಂ ॥
ಕರತಳದೊಳಾಂತು ನರ್ತಿಸು । ತಿರ ದಾರ್ದುಪ್ಪರಿಸಿ ನೆಗೆಯುತಂ ನಗೆನಗುತುಂ ॥ ೮೦

ಮ ॥ ಸ್ರ ॥ ತಣಿಯುತ್ತಂ ತೇಗುತಂ ಬೀಗುತೆ ಪೊಡವಡುತಂ ಪೊಂಗುತಂ ಕೂಗಿ
ಡುತ್ತಂ । ಕುಣಿಯುತ್ತಂ ಬಣ್ಣಿಸುತ್ತಂ ಬಲವರುತ ಮರುತ್ತುಪ್ಪುತಂ ಪರ್ಚುತಂ ಸಂ॥

---

ಉತ್ತಮಾಂಗಂ- ಶಿರಸ್ಸು, ಬಹುಳರಸನೆವಡೆದೊಡೆ- ಬಹು ನಾಲಗೆಯಂ ಹೊಂದಿದರೆ, ಸುಮಹತ್ಕಟಾಹವಿಷಂಅನಿತುಮಂ- ದೊಡ್ಡಕಡಾಯಿನಲ್ಲಿರುವ ಅಷ್ಟು ವಿಷವನ್ನೂ. ... ॥೭೪॥

ಚೊಕ್ಕಳತನದಿಂ- ಪ್ರೀತಿಯಿಂದ, ಮೊಕ್ಕಳಂ- ಅಧಿಕವಾಗಿ. ... ॥೭೫॥

ಒಕ್ಕುದು- ಸುರಿದಿತ್ತು, ಮಿಕ್ಕುದು- ಉಳಿದದ್ದು. ... ... ॥೭೬॥

॥೭೭॥೭೮॥೭೯॥ ಶಿವಪ್ರಸಾದಿತವಿಷಾಮೃತಪಾನಲೀಲೆಯಂ- ಶಿವನ ಪ್ರಸಾದವಾಗಿ ಮಾಡಲ್ಪಟ್ಟ ಅಮೃತದಂತಿರುವ ವಿಷವಂ ಕುಡಿಯುವ ವಿಲಾಸವನ್ನು, ತಣಿದು-ತೃಪ್ತಿಪಟ್ಟು. * * *

।೮೦॥ ಕಣ್ಮಲರಂ- ತಾವರೆಹೂವಿನಂತಿರುವ ಕಣ್ಣನ್ನು, ನಿಗುರುತಂ-ಉದ್ದಮಾಡುತ್ತಾ. ।೮೧॥

ಪೊಂಗುತಂ-ಬಗ್ಗುತ್ತಾ, ಬಲವರುತ್ತಂ-ಪ್ರದಕ್ಷಿಣೆಮಾಡುತ್ತ, ಅರುತ್ತು-ಪ್ರೀತಿಸಿ, ಸಂದಣಿಸುತ್ತಂ-

ದಣಿಸುತ್ತಂ ಸಾರುತಂ ಪೈಮುರಿಯು ತೊಲೆಯು ತೊಲ್ದಾಡುತಂ ಪಾಡುತು ಬಿ । ನ್ನಣಮಂ ತೋರುತ್ತೆ ಬೀರುತ್ತಭಿನವರಸಮಂ ನೋಡುತಂ ಗಾಡಿಯಿಂದಂ ॥ ೪೦

ಚಂ ॥ ಬಸವನ ನೋರ್ಪ್ಪ ಲಿಂಗಮುಮ ನೋರ್ಪ್ಪ ನಿರೀಕ್ಷಿಸುತಂ ಬೆಮರುತ್ತ ಕಂ। ಪಿಸುತೆ ಸುಖಾಶ್ರುವಿಂ ನನೆಯುತಂ ನೆನೆಯುತ್ತೆ ಶಿವಾಂಘ್ರಿಪದ್ಮಮಂ । ಪೊಸಬಗೆವೆತ್ತು ಘೋಯೆನುತೆ ಗದ್ಗದ ಮೊಪ್ಪಿರೆ ತತ್ಪುರಾತನ । ಪ್ರಸರಮ ನುರ್ವಿ ಕೀರ್ತಿಸುತೆ ಕೈಮುಗಿಯುತ್ತೆ ಪೊದಳ್ದಭಕ್ತಿಯಿಂ ॥ ... ... ೪೩

ಕಂ ॥ ನರಪತಿಮುಖ್ಯ ನ್ನೋಡು । ತ್ತಿರೆ ಸಾದ್ಭುತಹೃದಯ ರಿಂತು ಗಣವರ ರಾಗ ॥ ಳ್ಗರಳರಸಮಾನಕೇಳಿಯು । ನಿಗ ದಾಳ್ದೊದ್ದಲಾಡಿದ ರ್ಸುಖಾಂಭೋನಿಧಿಯೊಳ್ ॥ ೪೪

ಕಂ॥ ಗುಣನಿಧಿಬಸವಂ ಕಂಡಾ । ಗಣನಿವಹಸಮುತ್ಸವಂಗಳಂ ನಲಿ ದೊಲವಿಂ । ಮಣಿದಾಂತು ತತ್ಪ್ರಸಾದಮ । ನಣಿಯರ ಮಾರೋಗಿಸುತ್ತೆ ತಣಿ ದೊಪ್ಪಿರ್ದಂ ॥ ೪೫

ಕಂ॥ ಗರಳಧರ ನೀಂಟಿದಮೃತಂ । ಗರಳಂ ತಾನಾದು ದಮೃತಮಯ ರೀಂಟಿದ ತ। ದ್ಗರ ಮಮೃತಮಾದು ದೆಂದೆನೆ । ಧರೆಯೊ ಳ್ಖಲಸಾಧುಸಂಗಮೇಗೆಯ್ಯದೊ ಪೇಳ್ ॥ ೪೬

ವ ॥ ಎಂದು ಬಲ್ಲನ ಬಣ್ಣಿಸುತ್ತು ಮಿರೆ ಮತ್ತ ಮಲ್ಲಿ ವೇತ್ರಧರರ್ಗ್ಗೆ ನಿಯಮಿಸಿ॥

ಚಂ ॥ ಬರಿಸಿದ ನಳ್ತಿಮುಟ್ಟ ಗಣಕಾವಳಿಯುಂ ಸಚಿವಪ್ರತಾನಮಂ । ಧರಣಿಪಪುತ್ರರಂ ಜನಪಬಾಂಧವರಂ ನೃಪನಾಪ್ತಮಿತ್ರರಂ ॥ ಬರಿಸಿಭಟರ್ಕ್ಕಳಂ ಗುರುಪುರೋಹಿತರಂ ಪುರರಕ್ಷಕೌಘಮುಂ । ಸುರುಚಿರವಿಪ್ರರಂಸುಕರದಾಸಿಯರಂ ಸುನಟೀವಿತಾನಮಂ ॥ ೪೭

ಶಾ ॥ ಕ್ಷೋಣೀಂದ್ರಪ್ರಮದಾಳಿಯಂ ವ್ಯಜನಭೃಂಗಾರಾತಪತ್ರೋಲ್ಲಸ । ನ್ಮಾಣಿಕ್ಯಾಂಚಿತದರ್ಪ್ಪಣಾಭರಣಚಂಚಚ್ಚಾಮರಾಂದೋಳಕಾ ॥ ಶ್ರೇಣೀಧಾರಕರಂ ಸುಗಂಧಹಿ

---

ಸನ್ನದ್ಧನಾಗುತ್ತ, ಗಾಡಿಯಿಂದಂ- ವಿಲಾಸದಿಂದ. ... ... ||೪೦||

ಗದ್ಗದಂ- ದೀನಧ್ವನಿಯು. ... ... ... ||೪೩||

||೪೪||೪೫|| ಗರಳಧರ- ವಿಷವಂ ಧರಿಸಿದ ಶಿವನು, ಅಮೃತಂ- ಹಾಲು, ಗರಳಂ- ವಿಷವು, ಅಮೃತಮಯರ್- ಅಮೃತಸ್ವರೂಪಿಗಳಾದ ಶಿವಗಣಂಗಳು, ತದ್ಗರಂ- ಆ ವಿಷವು, ಖಲಸಾಧುಸಂಗಂ- ನೀಚರು ಸತ್ಪುರುಷರ ಸಂಬಂಧವು. ... ... ... ||೪೬||

ವೇತ್ರಧರರ್ಗೆ- ಚಡಿಯುಮರಿಗಂಗೆ. * * * * * * *

ಗಣಕಾವಳಿಯುಂ-ಲೆಕ್ಕವಂ ಬರೆಯುವವರು (ಮುತ್ಸದ್ದಿ) ಗಳ ಪಙ್ತಿಯನ್ನು, ಸಚಿವಪ್ರತಾನಮಂ- ಮಂತ್ರಿಗಳ ಸಮೂಹವನ್ನು, ಜನಪಬಾಂಧವರಂ- ರಾಜರ ನಂಟರನ್ನು, ಪುರರಕ್ಷಕೌಘಮುಂ- ಪಟ್ಟಣವಂ ಕಾಪಾಡುವವರು, (ಪೋಲೀಸ್‌ನವರು) ಗಳ ಸಮೂಹವನ್ನು, ಸುಕರದಾಸಿಯರಂ- ಸಮೀಪಾಧೀನರಾದ ಗಾಡಿಯರನ್ನು, ಸುನಟೀವಿತಾನಮಂ- ಒಳ್ಳೆಯ ಸೂಳೆಯರ ಗುಂಪನ್ನು. ... ||೪೭||

ಕ್ಷೋಣೀಂದ್ರಪ್ರಮದಾಳಿಯಂ- ರಾಜಸ್ತ್ರೀಯರ ಪಙ್ತಿಯನ್ನು, ವ್ಯಜನ.........ಧಾರಕರಂ— ವ್ಯಜನ- ಬೀಸಣಿಗೆ, ಭೃಂಗಾರ- ಕೊಜ, ಆತಪತ್ರ- ಬೀಸಣಿಗೆ, ಉಲ್ಲಸತ್- ಪ್ರಕಾಶಿಸುವ, ಮಾಣಿಕ್ಯ- ರತ್ನದ, ಅಂಚಿತ- ಪೂಜ್ಯವಾದ, ದರ್ಪ್ಪಣ- ಕನ್ನಡಿ, ಆಭರಣ, ಚಂಚತ್- ಪ್ರಕಾಶಿಸುವ, ಚಾಮರ, ಆಂದೋಳಿಕಾ- ಪಲ್ಲಕ್ಕಿಗಳ, ಶ್ರೇಣೀ- ಪಙ್ತಿಯನ್ನು, ಧಾರಕರಂ-ಧರಿಸುವ ಜನಗಳನ್ನು, ಸುಗಂಧ......ಯುರಂ—

ಮನೀಟೀದಾನಧೌರೇಯರಂ । ವೀಣಾವೇಣುಮೃದಂಗತಾಳಕಹಳಾವಾದ್ಯಪ್ರವೀಣರ್ಕಳ ॥ ದ್ಧಂ
ಕಂ ॥ ಮಂಡಿತರಂ ಲಾಸ್ಯಕಳಾ । ಮಂಡಿತರಂ ಗಾಯಕರ್ಕಳಂ ಕವೀಶ್ವಳನು ॥ ದ್ಧಂ
ಡನಿಗಮಾಗಮಜ್ಞರ । ತಂಡಮನುರುತರಪುರಾಣಪರಿಣತಬುಧರಂ ॥ ... ೮೯
ಕಂ ॥ ವರವಾದಿವಂದಿಮಾಗಧ । ಪರಿಹಾಸಕಸುವಿಟವಾಗ್ಮಿಪಾಠಕಚಯಮಂ ॥ ತರ
ಮರಿದು ಕುಳ್ಳಿರಿಸಿ ಘನ । ಗರಳಾಮೃತಮರೆದು ತಣಿಪಿದಂ ವೃಷಭೇಂದ್ರಂ ॥ ೯೦
ಕಂ॥ ಅವ ರನಿಬರು ಪಿಾಂಬದ ರು । ತ್ಸವದಿಂ ಸುಧೆಯಂತಿ ರಾದಪಿಷಮಂ ತಣಿದ ॥
ವಿವಿಧೋಕ್ತಿಗಳಿಂ ಪೊಗಳ್ದ । ರ್ನವೀನಸುಖಮಾಳ್ದು ಭಕ್ತಿರತ್ನಾಕರನಂ ॥ ೯೧
ವ ॥ ಮತ್ತಂ ಸಾಂಕುಶಬದ್ಧಾಂಜಲಿಗಳಾಗಿ ನಿಂದಿರ್ದ ಗಜಾರೋಹಕರು ಮಹಿಮಾ
ಕರನಭೀಕ್ಷಿಸಿ॥ * * * * *

ಮತ್ತೇ ॥ ರಣಕೋಲಾಹಲನಂ ಕರಾಳರದನಂ ನೀಲಾಚಲಸ್ಪರ್ಧಿಯಂ । ಗಣನಾ
ಥಪ್ರಿಯನಂ ಸುಭದ್ರಗಜಮಂ ದಂತಾವಳೋತ್ತಂಸನಂ ॥ ಗುಣರತ್ನಾಕರನಂ ಗಜೇಂದ್ರ
ಮಣಿಯಂ ಗಂಭೀರನಾದಾಂಕವಾ । ರಣರಾಜೇಂದ್ರನ ನಿಂದ್ರದಂತಿಸಭನಂ ವಿಂಧ್ಯಾದ್ರಿ
ಸಂಕಾಶನಂ ॥ ... ... ... ೯೨

ಚಂ ॥ ಕಳಭವರೇಣ್ಯನಂ ಕರಟಪುಂಗವನಂ ಕರಿಸಾರ್ವಭೌಮನಂ । ಮಳಯವಿ
ಹಾರಿಯಂ ಮಹಿತವಿಭ್ರಮನಂ ಮದಗಂಧಭಾಸಿಯ ॥ ಜಳಧರಘೋಷನಂ ಜನಪವಲ್ಲಭ
ನ್ಯಜಗವೇಕಶೂರನಂ । ವಿಳಸಿತಸತ್ವನಂ ವಿಪುಳವಿಗ್ರಹನಂ ವಿಜಯಾಭಿರಾಮನಂ ॥ ೯೩
ಕಂ ॥ ಸಮರಪಟುವಿಕ್ರಮನನ । ಭ್ರಮೂಪನಿಭ್ರಮನ ನಭ್ರಕಾಯನ ನಹಿತೋ ॥
ಗ್ರಮತಂಗಪಮದಹನನಂ । ಚಮೂವಿಭೂಷಣನ ನಿಭಕುಲಪ್ರಭುಕರಿಯಂ ॥ ೯೪

---

ಸುಗಂಧ, ಹಿಮ- ಪಚ್ಚಕರ್ಪೂರದಿಂದ ಕೂಡಿದ, ವೀಟೀ- ವೀಳಯವನ್ನು, ದಾನ- ಕೊಡುವದರಲ್ಲಿ, ಧೌರೇ
ಯರಂ- ಸಮರ್ಥರಾದವರನ್ನು, ವೇಣು- ಕೊಳಲು. ... ... ||೮೮||

ಲಾಸ್ಯಕಳಾಮಂಡಿತರಂ- ನರ್ತನವಿದ್ಯೆಯಿಂದಲಂಕರಿಸಲ್ಪಟ್ಟವರನ್ನು, (ಭರತಾಚಾರ್ಯರನ್ನು) ಗಾಯ
ಕರ್ಕಳಂ- ಸಂಗೀತಗಾರರನ್ನು, ತಂಡಮಂ- ಗುಂಪನ್ನು, ಉರುತರಪುರಾಣಪರಿಣತಬುಧರಂ- ಬಹು ವಿಸ್ತಾ
ರವಾದ ಪುರಾಣಗಳಲ್ಲಿ ಕುಶಲರಾದ ವಿದ್ವಾಂಸರನ್ನು. ... ... ||೮೯||

ವರ......ಚಯಮಂ—ವರ- ಶ್ರೇಷ್ಠರಾದ, ವಾದಿ- ಪರಮತವಾದಿಗಳು, ವಂದಿ- ಸ್ತುತಿಪಾಠಕ
ರು, ಮಾಗಧ- ಭಟರಾಜರುಗಳು, ಪರಿಹಾಸಕ- ಹಾಸ್ಯಗಾರರು, ಸುವಿಟ- ಒಳ್ಳೆಯ ನಟವರು, ವಾಗ್ಮಿ-ವಾ
ಚಾಲಕರು, ಪಾಠಕ- ವಿದ್ಯಾರ್ಥಿಗಳು ಇವರ, ಚಯಮಂ- ಸಮೂಹವನ್ನು, ತರಮರಿದು- ಯೋಗ್ಯತಾ ಭೇ
ದವಂ ತಿಳಿದು. ... ... ... ||೯೦||

ಅನಿಬರುಂ- ಅಷ್ಟು ಜನವೂ, ಸುಧೆಯಂತಿರೆ- ಅಮೃತದ ಹಾಗೆ. ... ||೯೧||

ಸಾಂಕುಶನಿಬದ್ಧಾಂಜಲಿಗಳ್- ಅಂಕುಶ (ಆನೆಯಂ ಚುಚ್ಚುವ ಆಯುಧ) ದಿಂದ ಕೂಡಿದ ಜೋಡಿ
ಸಲ್ಪಟ್ಟ ಕೈಯುಳ್ಳವರು. * * * * * * * *

ರಣಕೋಲಾಹಲ ಮೊದಲಾದವು ಆನೆಗಳ ಹೆಸರು, ||೯೨||೯೩||೯೪||೯೫||೯೬|| ದ್ವಿರದಂಗಳಂ-
ಆನೆಗಳನ್ನು. ... ... ... ||೯೭||

ಕಂ ॥ ಕುಂಜರವರನಂ ಭೂಧರ । ಭಂಜನನಂ ಕಾಲರುದ್ರನಂ ರಿಪುದಳನೀ ॥ ರಂಜನನಂ ಮದಸುರಭಿಸ । ಮಂಜಸನಂ ಶಂಕರಪ್ರಿಯಾಖ್ಯಯಗಜಮಂ ॥ ... ೯೫

ಕಂ ॥ ರಿಪುರಾಜಭಯಂಕರನಂ । ತ್ರಿಪುರಾಂತಕನಂ ಪ್ರಮತ್ತನಂ ಜಂಗಮದಾ ॥ ಸ್ಯಪರಾಯಣನಂ ಸಬಳ । ದ್ವಿಪೇಂದ್ರಮಂ ತನ್ನಿ ಮೆಂದು ತಾಂ ಬೆಸಸುತ್ತಂ ॥ ೯೬

ಕಂ॥ ಬರಿಸಿ ಘುನಕರಿಗಳಂ ಬಸೆ । ವರಸುಂ ಸಾಲ್ಗೊಳಿಸು ತೆರೆದು ಗರಳಾಮೃತಮಂ॥ ದ್ವಿರದಂಗಳ ನುರೆ ತಣಿಪಿದ । ನರಿ ದೊದಚ್ಚರಿಯ ಸಾಳ್ದು ಪೊಗಳೆ ನರೇಂದ್ರಂ ॥ ೯೭

ವ ॥ ಮತ್ತಂ ಕಶಾಗರ್ಭಿತಕರಸಂಪುಟಘುಟಿತನಿಟಲತಟರಾಗಿ ನಿಂದಿರ್ದ ತುಂಗತುರಂಗಿಗಳಂ ಮಂಗಳಮಯಂ ಪಿಂಗದೆ ನೋಡಿ ॥ * * * * *

ಮ॥ ಸ್ರ॥ ಭರದಿಂದಂ ತನ್ನಿ ಮಶ್ವೇಶ್ವರನ ನತುಳಭದ್ರಾಂಗನಂ ಸೌಮ್ಯನಂ ಸೌಂ। ದರನಂ ಚಿತ್ರಾಂಗನಂ ಮಂಗಳಮಯನ ನಜೇಯಾಖ್ಯನಂ ಸಂಗರಶ್ರೀ ॥ ಧರನಂ ತತ್ವಜ್ಞನಂ ಮಂಜುಳಗಮನನ ನುದ್ದಂಡನಂ ಚಂಡವೇಗೋ । ದ್ಧರನಂ ಚಂಡಾಂಶುವಾಜಿಪ್ರಭನ ನಭಯನಂ ತುಂಗನಂ ಮಾಣದೀಗಳ್ ॥ ... ... ೯೮

ಚಂ ॥ ಸುಲಲಿತಕಾಯನಂ ಸುಭಗವಾಜಿಯು ನಾಜಿವಿಹಾರಧೀರನಂ । ವಿಲಸಿತಸತ್ವನಂ ವಿಪುಳವಿಕ್ರಮನಂ ಜಯಶೀಲನಂ ಮಹೋ ॥ ಜ್ವಲಪಯಃರಾಜನಂ ಕುಸುಮಬಾಣನನುನ್ನತಚಂದ್ರಹಾಸನಂ । ಬಲಿಮದಮರ್ದಿಯಂ ಬಹುಳವಿಭ್ರಮನಂ ಜಿತವೈನತೇಯನಂ ॥

ಕಂ ॥ ಜವಗನ ನಿಂದ್ರಾಯುಧನಂ । ದಿವಿಜಾಶ್ವಸ್ಪರ್ಧಿಯಂ ತುರಂಗಮವಿಭುವಂ ॥ ಶಿವಸೇವಾಭೂಷಣನಂ । ರವಿಹಾಸನ ನತುಳಚೇರಮಪ್ರಿಯಹಯನಂ ॥ ೧೦೦

ವ॥ ಎಂಬಿವು ಮೊದಲಾದವಂ ತರಿಸು ತಸಮವಿಷಸುಧಾರಸಮ ನಾವಾಜಿರಾಜಿಗೋಜೆಯಿ ನೆರೆದು ತಣಿಪಿ ವಿಶ್ವರಕ್ಷಣವಿಚಕ್ಷಣ ನಚ್ಚರಿಯೇರಿ ವಿರಾಜಿಸುತ್ತಮಿರ್ಪಿನಮಾಗಳ್ ॥

ಚಂ ॥ ಮೊಳಗಿದು ದಭ್ರದೊಳ್ ದಿವಿಜದುಂದುಭಿ ದಾಂಧಳಮೆಂದು ಭೋರೆನಲ್ । ತ್ತಿಳಿದುದು ಪುಷ್ಪವೃಷ್ಟಿ ಸುರಕಿನ್ನರಸಿದ್ಧಕದಂಬಯುಕ್ತ ಮಂ ॥ ಜ್ವಳಮತಿಯಿಂದೆ ಬಣ್ಣಿಸಿದು ದಗ್ಗದರುದ್ರಗಣಂ ಕೃಪಾಸುಧಾ । ವಿಳಸಿತವರ್ಷಮಂ ಕರೆದು ದೇಳ್ಗೆಯ ಭಕ್ತಗಣಂ ವಿಳಾಸದಿಂ ॥ ... ... ... ೧೦೧

ಕಂ॥ ಪೊಗಳ್ದಂ ಬಿಜ್ಜಳಭೂಪತಿ । ನೆಗಳ್ದತಿಶಯಕೌತುಕಕ್ಕೆ ಬಗೆಮಚ್ಚಿ ಧರಿ ॥

---

ಕಶಾಗರ್ಭಿತಕರಸಂಪುಟಘುಟಿತನಿಟಿಲತಟರ್- ಚಾವಟಿಯನ್ನೊಳಗೆ ಸೇರಿಸಲ್ಪಟ್ಟ ಹಸ್ತಯುಗ್ಮದಿಂದ ಸೇರಿಸಲ್ಪಟ್ಟ ಹಣೆಯ ಪ್ರದೇಶವುಳ್ಳವರು, ತುಂಗತುರಂಗಿಗಳಂ- ಉನ್ನತರಾದ ಕುದುರೆ ಸವಾರರನ್ನು. ತನ್ನಿಂ-ತೆಗೆದುಕೊಂಡು ಬನ್ನಿರಿ, ಅಶ್ವೇಶ್ವರಮುಂತಾದವುಗಳು ಕುದುರೆಗಳಹೆಸರು.॥೯೮-೯೯॥೧೦೦॥ ಆವಾಜಿರಾಜಿಗೆ- ಆ ಕುದುರೆಗಳ ಪಙ್ತಿಗೆ, ವಿಶ್ವರಕ್ಷಣವಿಚಕ್ಷಣಂ- ಪ್ರಪಂಚವನ್ನು ಪರಿಪಾಲಿಸುವದರಲ್ಲಿ ಕುಶಲನಾದ ಬಸವೇಶ್ವರನು. * * * * * * * *

ದಿವಿಜದುಂದುಭಿ- ದೇವತೆಗಳ ನಗಾರಿಯು, ಮೊಳಗಿದುದು- ಶಬ್ದವಂ ಮಾಡಿತು. ॥೧೦೧॥

॥೧೦೨॥ ಭಕ್ತಿಸುಖಸಾರ- ಭಕ್ತಿಯಿಂದುಂಟಾದ ಶ್ರೇಷ್ಠವಾದ ಸೌಖ್ಯವುಳ್ಳ, ಭವಾಂಬುಧಿಕರ್ಣಧಾ

ಮನೀಪದಾನಧೌರೇಯರಂ । ವೀಣಾವೇಣುಮೃದಂಗತಾಳಕಹಳಾವಾದ್ಯಪ್ರವೀಣರ್ಕಳ ॥

ಕಂ ॥ ಮಂಡಿತರಂ ಲಾಸ್ಯಕಳಾ । ಮಂಡಿತರಂ ಗಾಯಕರ್ಕಳಂ ಕವಿಗಳನು ॥ ದ್ದಂ
ಡನಿಗಮಾಗಮಜ್ಞರ । ತಂಡಮನುರುತರಪುರಾಣಪರಿಣತಬುಧರಂ ॥ ... ೮೯

ಕಂ ॥ ವರವಾದಿವಂದಿಮಾಗಧ । ಪರಿಹಾಸಕಸುವಿಟವಾಗ್ಮಿಪಾಠಕಚಯಮಂ ॥ ತರ
ಮರಿದು ಕುಳ್ಳಿರಿಸಿ ಘನ । ಗರಳಾಮೃತವೆರೆದು ತಣಿಪಿದಂ ವೃಷಭೇಂದ್ರಂ ॥ ೯೦

ಕಂ ॥ ಅವರನಿಬರುಂ ಪಿಡಂಟದರು । ತ್ಸವದಿಂ ಸುಧೆಯಂತಿರಾದಪಿಷ್ಟಮಂ ತಣಿದ ॥
ವಿವಿಧೋಕ್ತಿಗಳಿಂ ಪೊಗಳ್ದ । ರ್ನವೀನಸುಖಮಾಳ್ದು ಭಕ್ತಿರತ್ನಾಕರನಂ ॥ ೯೧

ವ ॥ ಮತ್ತಂ ಸಾಂಕುಶಬದ್ಧಾಂಜಲಿಗಳಾಗಿ ನಿಂದಿರ್ದ ಗಜಾರೋಹಕರು ಮಹಿಮಾ
ಕರನಂ ವೀಕ್ಷಿಸಿ ॥ * * * * *

ಮತ್ತೇ ॥ ರಣಕೋಲಾಹಲನಂ ಕರಾಳರದನಂ ನೀಲಾಚಲಸ್ಪರ್ಧಿಯಂ । ಗಣನಾ
ಥಪ್ರಿಯನಂ ಸುಭದ್ರಗಜಮಂ ದಂತಾವಳೋತ್ತಂಸನಂ ॥ ಗುಣರತ್ನಾಕರನಂ ಗಜೇಂದ್ರ
ಮಣಿಯಂ ಗಂಭೀರನಾದಾಂಕಮಾ । ರಣರಾಜೇಂದ್ರನ ನಿಂದ್ರದಂತಿಸಭನಂ ವಿಂಧ್ಯಾದ್ರಿ
ಸಂಕಾಶನಂ ॥ ... ... ... ೯೨

ಚಂ ॥ ಕಳಭವರೇಣ್ಯನಂ ಕರಟಪುಂಗವನಂ ಕರಿಸಾರ್ವಭೌಮನಂ । ಮಳಯವಿ
ಹಾರಿಯಂ ಮಹಿತವಿಭ್ರಮನಂ ಮದಗಂಧಭಾಸಿಯಂ ॥ ಜಳಧರಘೋಷನಂ ಜನಪವಲ್ಲಭ
ನಂ ಜಗದೇಕಶೂರನಂ । ವಿಳಸಿತಸತ್ವನಂ ವಿಪುಳವಿಗ್ರಹನಂ ವಿಜಯಾಭಿರಾಮನಂ ॥ ೯೩

ಕಂ ॥ ಸಮರಪಟುವಿಕ್ರಮನನ । ಭ್ರಮೂಪವಿಭ್ರಮನ ನಭ್ರಕಾಯನ ನಹಿತೋ ॥
ಗ್ರಮತಂಗಜಮದಹನಂ । ಜಮೂವಿಭೂಷಣನ ನಿಭಕುಲಪ್ರಭುಕರಿಯಂ ॥ ೯೪

---

ಸುಗಂಧ, ಹಿಮ- ಪಚ್ಚಕರ್ಪೂರದಿಂದ ಕೂಡಿದ, ವೀಟೀ- ವೀಳೆಯವನ್ನು, ದಾನ- ಕೊಡುವದರಲ್ಲಿ, ಧೌರೇಯರಂ- ಸಮರ್ಥರಾದವರನ್ನು, ವೇಣು- ಕೊಳಲು. ... ... ||೮೮||

ಲಾಸ್ಯಕಳಾಮಂಡಿತರಂ- ನರ್ತನವಿದ್ಯೆಯಿಂದಲಂಕರಿಸಲ್ಪಟ್ಟವರನ್ನು, (ಭರತಾಚಾರ್ಯರನ್ನು) ಗಾಯಕರ್ಕಳಂ- ಸಂಗೀತಗಾರರನ್ನು, ತಂಡಮಂ- ಗುಂಪನ್ನು, ಉರುತರಪುರಾಣಪರಿಣತಬುಧರಂ- ಬಹು ವಿಸ್ತಾರವಾದ ಪುರಾಣಗಳಲ್ಲಿ ಕುಶಲರಾದ ವಿದ್ವಾಂಸರನ್ನು. ... ... ||೮೯||

ವರ......ಚಯಮಂ—ವರ- ಶ್ರೇಷ್ಠರಾದ, ವಾದಿ- ಪರಮತವಾದಿಗಳು, ವಂದಿ- ಸ್ತುತಿಪಾಠಕರು, ಮಾಗಧ- ಭಟರಾಜರುಗಳು, ಪರಿಹಾಸಕ- ಹಾಸ್ಯಗಾರರು, ಸುವಿಟ- ಒಳ್ಳೆಯ ನಟವರು, ವಾಗ್ಮಿ-ವಾಚಾಲಕರು, ಪಾಠಕ- ವಿದ್ಯಾರ್ಥಿಗಳು ಇವರ, ಚಯಮಂ- ಸಮೂಹವನ್ನು, ತರಮರಿದು- ಯೋಗ್ಯತಾ ಭೇದವಂ ತಿಳಿದು. ... ... ... ||೯೦||

ಅನಿಬರುಂ- ಅಷ್ಟು ಜನವೂ, ಸುಧೆಯಂತಿರೆ- ಅಮೃತದ ಹಾಗೆ. ... ||೯೧||

ಸಾಂಕುಶನಿಬದ್ಧಾಂಜಲಿಗಳ್- ಅಂಕುಶ (ಆನೆಯಂ ಚುಚ್ಚುವ ಆಯುಧ) ದಿಂದ ಕೂಡಿದ ಜೋಡಿಸಲ್ಪಟ್ಟ ಕೆಯ್ಯುಳ್ಳವರು. * * * * * * * * *

ರಣಕೋಲಾಹಲ ಮುಂತಾದವು ಆನೆಗಳ ಹೆಸರು, ||೯೨||೯೩||೯೪||೯೫||೯೬|| ದ್ವಿರದಂಗಳಂ- ಆನೆಗಳನ್ನು. ... ... ... ||೯೭||

ಕಂ ॥ ಕುಂಜರವರನಂ ಭೂಧರ । ಭಂಜನನಂ ಕಾಲರುದ್ರನಂ ರಬದಳನೀ ॥ ರಂಜನನಂ ಮದಸುರಭಿಸ । ಮಂಜಸನಂ ಶಂಕರಪ್ರಿಯಾಖ್ಯಯುಗಜವಮಂ ॥ ... ೯೫

ಕಂ ॥ ರಿಪುರಾಜಭಯಂಕರನಂ । ತ್ರಿಪುರಾಂತಕನಂ ಪ್ರಮತ್ತನಂ ಜಂಗವ ಡಾ ॥ ಸ್ವಪರಾಯಣನಂ ಸಬಳ । ದ್ವಿಪೇಂದ್ರಮಂ ತನ್ನಿ ಮೆಂದು ತಾಂ ಬೆಸಸುತ್ತಂ ॥ ೯೬

ಕಂ ॥ ಬರಿಸಿ ಘನಕರಿಗಳಂ ಬಸ । ವರಸಂ ಸಾಲ್ಗೊಳಿಸು ಕೆರೆದು ಗರಳಾಮೃತಮಂ ॥ ದ್ವಿರದಂಗಳ ನುರೆ ತಣಿಪಿದ । ನರಿ ದೊದಚ್ಚರಿಯ ನಾಳ್ದು ಪೊಗಳೆ ನರೇಂದ್ರಂ ॥ ೯೭

ವ ॥ ಮತ್ತಂ ಕಶಾಗರ್ಭಿತಕರಸಂಪುಟಘಟಿತನಿಟಲತಟರಾಗಿ ನಿಂದಿರ್ದ ತುಂಗತುರಂಗಿಗಳಂ ಮಂಗಳಮಯಂ ಪಿಂಗದೆ ನೋಡಿ ॥ * * * * *

ಮ॥ ಸ್ರ॥ ಭರದಿಂದಂ ತನ್ನಿ ಮಶ್ವೇಶ್ವರನ ನತುಳಭದ್ರಾಂಗನಂ ಸೌಮ್ಯನಂ ಸೌಂದರನಂ ಚಿತ್ರಾಂಗನಂ ಮಂಗಳಮಯನ ನಜೇಯಾಖ್ಯನಂ ಸಂಗರಶ್ರೀ ॥ ಧರನಂ ತತ್ವಜ್ಞನಂ ಮಂಜುಳಗಮನನ ನುದ್ದಂಡನಂ ಚಂಡವೇಗೋ । ದ್ಧುರನಂ ಚಂಡಾಂಶುವಾಜಿಪ್ರಭನನಭಯನಂ ತುಂಗನಂ ಮಾಣ ದೀಗಳ್ ॥ ... ... ೯೮

ಚಂ ॥ ಸುಲಲಿತಕಾಯನಂ ಸುಭಗವಾಜಿಯ ನಾಜಿವಿಹಾರಧೀರನಂ । ವಿಲಸಿತಸತ್ವನಂ ವಿಪುಳವಿಕ್ರಮನಂ ಜಯಶೀಲನಂ ಮಹೋ ॥ ಜ್ವಲಹಯರಾಜನಂ ಕುಸುಮಬಾಣನನುನ್ನತಚಂದ್ರಹಾಸನಂ । ಬಲಿಮದಮರ್ದಿಯಂ ಬಹುಳವಿಭ್ರಮನಂ ಜಿತವೈನತೇಯನಂ ॥

ಕಂ ॥ ಜವಗನ ನಿಂದಾಪ್ರಯುಧನಂ । ದಿವಿಜಾಶ್ವಸ್ಪರ್ಧಿಯಂ ತುರಂಗಮವಿಭುವಂ ॥ ಶಿವಸೇವಾಭೂಷಣನಂ । ರವಿಹಾಸನ ನತುಳಚೇರಮಪ್ರಿಯಹಯನಂ ॥ ೧೦೦

ವ॥ ಎಂಬಿವುಮೊದಲಾದವಂ ತರಿಸು ತಸಮವಿಷಸುಧಾರಸಮ ನಾವಾಜಿರಾಜಿಗೋಜೆಯಿ ನೆರೆದು ತಣಿಪಿ ವಿಶ್ವರಕ್ಷಣವಿಚಕ್ಷಣ ನಚ್ಚರಿಯೇರಿವಿರಾಜಿಸುತ್ತಮಿರ್ಪಿನಮಾಗಳ್ ॥

ಚಂ ॥ ಮೊಳಗಿದು ದಭ್ರದೊಳ್ದಿವಿಜದುಂದುಭಿ ದಾಂಧಳಮೆಂದು ಘೋರೆನು । ತ್ತಿಳಿದುದು ಪುಷ್ಪವೃಷ್ಟಿ ಸುರಕಿನ್ನರಸಿದ್ಧಕದಂಬಯುಕ್ತ ಮು ॥ ಜ್ವಳಮತಿಯಿಂದೆ ಬಣ್ಣಿಸಿದು ದಗ್ಗದರುದ್ರಗಣಂ ಕೃಪಾಸುಧಾ । ವಿಳಸಿತವರ್ಷಮಂ ಕರೆದು ದೇಳ್ಗೆಯ ಭಕ್ತಗಣಂ ವಿಳಾಸದಿಂ ॥ ... ... ... ೧೦೧

ಕಂ॥ ಪೊಗಳ್ದಂ ಬಿಜ್ಜಳಭೂಪತಿ । ನೆಗಳ್ದತಿಶಯಕೌತುಕಕ್ಕೆ ಬಗೆಮಚ್ಚಿ ಧರಿ ॥

---

ಕಶಾಗರ್ಭಿತಕರಸಂಪುಟಘಟಿತನಿಟಲತಟರ್- ಚಾವಟಿಯನ್ನೊಳಗೆ ಸೇರಿಸಲ್ಪಟ್ಟ ಹಸ್ತಯುಗ್ಮದಿಂದ ಸೇರಿಸಲ್ಪಟ್ಟ ಹಣೆಯ ಪ್ರದೇಶವುಳ್ಳವಗು, ತುಂಗತುರಂಗಿಗಳಂ- ಉನ್ನತರಾದ ಕುದುರೆ ಸವಾರರನ್ನು. ತನ್ನಿಂ—ತೆಗೆದುಕೊಂಡು ಬನ್ನಿರಿ, ಅಶ್ವೇಶ್ವರಮುಂತಾದವುಗಳು ಕುದುರೆಗಳಹೆಸರು. ॥೯೮।೯೯॥೧೦೦॥

ಆವಾಜಿರಾಜಿಗೆ- ಆ ಕುದುರೆಗಳ ಪಙ್ತಿಗೆ, ವಿಶ್ವರಕ್ಷಣವಿಚಕ್ಷಣಂ- ಪ್ರಪಂಚವನ್ನು ಪರಿಪಾಲಿಸುವದರಲ್ಲಿ ಕುಶಲನಾದ ಬಸವೇಶ್ವರನು. * * * * * * * *

ದಿವಿಜದುಂದುಭಿ- ದೇವತೆಗಳ ನಗಾರಿಯು, ಮೊಳಗಿದುದು- ಶಬ್ದವಂ ಮಾಡಿತು. ॥೧೦೧॥

॥೧೦೨॥ ಭಕ್ತಿಸುಖಸಾರ- ಭಕ್ತಿಯಿಂದುಂಟಾದ ಶ್ರೇಷ್ಠವಾದ ಸೌಖ್ಯವುಳ್ಳ, ಭವಾಂಬುಧಿಕರ್ಣಧಾ

ಬುಗೆ ಕೊಂಡಾಡಿದುದು ವಿವಿಧವಿಬುಧನಿತಾನ ॥ ೧೦೨
ತ್ರಿಗೆ ಮುದವೊದವಿದುದು ಮನಂ । ಬುಗೆ ಕೊಂಡಾಡಿದುದು ವಿವಿಧವಿಬುಧನಿತಾನಂ ॥
ವ ॥ ಮತ್ತಂ ಭಕ್ತಗಣಂ ನಲವೆಚ್ಚಿ ಮೆಚ್ಚಿ ॥
ಚಂ ॥ ಬಸವಕುಮಾರ ಭಕ್ತಿಸುಖಸಾರ ಭವಾಂಬುಧಿಕರ್ಣಧಾರ ಸ । ಜ್ವಿಸರಲ
ಲಾಮ ಸತ್ಯಗುಣಧಾಮ ಸಮುನ್ನತಪುಣ್ಯನಾಮ ಚಿ ॥ ದ್ರಸಭರಿತಾಂಗ ಚಿತ್ತಜವಿಭಂಗ
ಚಿರಂತನಶಿಷ್ಟಸಂಗ ತಾ । ಮಸವನದಾವ ತತ್ತ್ವಮಯಭಾವ ತತಾಖಿಲದೇವಸೇವಿತ ॥
ಚಂ ॥ ಶರಣಜನಾನುಕೂಲ ಜಿತಕಾಲ ಜಗತ್ತ್ರಯಪಾಲ ಜಂಗಮ । ಸ್ಥಿರಭಜನಾ
ತಿಲೋಲ ಶುಭಶೀಲ ಸುರಾಸುರಜಾಲವಂದ್ಯ ಭಾ ॥ ಸುರಭಸಿತಾಂಕಫಾಲ ಸುವಿಶಾಲಸುಖ
ದ್ರುಮಮೂಲ ಭಕ್ತಿಭಾ । ಸುರಸರಸೀಮರಾಲ ಘನಲೀಲ ಗಣಾಂಬುಜಬಾಲಭಾಸ್ಕರ ॥
ಪಂಚಚಾಮರವೃತ್ತ ॥ ಭವಾಪಹಾರಿ ಭವ್ಯಭಕ್ತಭಾವ್ಯ ಭದ್ರಮೂರ್ತಿ ಸ । ದ್ಭ
ವೋಪಯುಕ್ತಚಿತ್ತಮತ್ತವಾದಿಭಂಜನಾ ಲಸ ॥ ಚ್ಛಿವೋಪರಮ್ಯಪಾದಪದ್ಮಭೃಂಗ ಚಿನ್ಮ
ಯಾಂಗ ಸ । ಚ್ಛಿವಾಪರಾವತಾರ ಧೀರಸಾರನುತ್ಯವೈಭವ ॥ ... ೧೦೫
ಕಂ ॥ ಶುಭಶೀಲ ವಿಶ್ವಪತಿಸ । ನ್ನಿಭ ನಿಗಮಾತೀತಮಹಿಮ ನಿನಗೆ ವಲಂ ದು ॥ ರ್ಲ
ಭಮಾವುದೊ ಬಗೆವೊಡೆ ಘನ । ವಿಭವೋನ್ನತ ವಿಶ್ವಭುವನದೊಳ್ ವೃಷಭೇಂದ್ರ ॥ ೧೦೬
ಉ ॥ ಅಂಗಜವೈರಿ ನುಂಗ ಲಗಿ ದೊಯ್ಯನೆ ಭೀಕರಕಾಲಕೂಟಮಂ । ತುಂಗಗಳಸ್ಥ
ಳಾಂತರದೊ ಳಾಂತ ನದಂ ಜವದಿಂ ಕೊರಲ್ವರಂ ॥ ಪಿಂಗದೆ ಪೀರ್ದ ನಿನ್ನಯ ಮಹತ್ವ ಮಿ ದ

---

ರ- ಸಂಸಾರವೆಂಬ ಸಮುದ್ರಕ್ಕೆ ನಾವಿಕನಾದ, ಚಿದ್ರಸಭರಿತಾಂಗ- ಜ್ಞಾನವೆಂಬ ರಸದಿಂದ ತುಂಬಿದ ದೇಹವುಳ್ಳ, ಚಿತ್ತಜವಿಭಂಗ- ಕಾಮನಂ ನಾಶಮಾಡಿದ, ಚಿರಂತನಶಿಷ್ಟಸಂಗ- ಪುರಾತನರಾದ ಸತ್ಪುರುಷರ ಸಹವಾಸವುಳ್ಳ, ತಾಮಸವನದಾವ- ತಮೋಗುಣಸಂಬಂಧವುಳ್ಳವರೆಂಬುವರ ಕಾಡಿಗೆ ಕಾಳ್ಗಿಚ್ಚಾದ, ತತಾಖಿಲದೇವಸೇವಿತ- ಪ್ರಸಿದ್ಧರಾದ ಸಕಲ ದೇವತೆಗಳಿಂದ ಸೇವಿಸಲ್ಪಟ್ಟ. ... ... ॥೧೦೩॥

ಜಿತಕಾಲ- ಜೈಸಲ್ಪಟ್ಟ ಯಮನುಳ್ಳ, ಜಂಗಮಸ್ಥಿರಭಜನಾತಿಲೋಲ- ಜಂಗಮರ ದೃಢವಾದ ಸೇವೆಯಲ್ಲಿ ಬಹು ಆಸಕ್ತನಾದ, ಸುರಾಸುರಜಾಲವಂದ್ಯ- ದೇವತೆಗಳು ರಾಕ್ಷಸರ ಸಮೂಹದಿಂದ ನಮಸ್ಕರಿಸಲ್ಪಡುವದಕ್ಕೆ ಯೋಗ್ಯನಾದ, ಸುವಿಶಾಲಸುಖದ್ರುಮಮೂಲ- ಬಹು ವಿಸ್ತಾರವಾದ ಸೌಖ್ಯವೆಂಬ ಮರಕ್ಕೆ ಬುಡವಾದ, ಭಕ್ತಿಭಾಸುರಸರಸೀಮರಾಲ- ಶಿವಭಕ್ತಿಯೆಂಬ ಪ್ರಕಾಶಿಸುವ ಸರೋವರಕ್ಕೆ ಹಂಸಪಕ್ಷಿಯಾದ, ಗಣಾಂಬುಜಬಾಲಭಾಸ್ಕರ- ಶಿವಗಣಂಗಳೆಂಬ ಕಮಲಕ್ಕೆ ಎಳೆಯ ಸೂರ್ಯನಾದ. ... ॥೧೦೪॥

ಭವ್ಯಭಕ್ತಭಾವ್ಯ- ಮಂಗಳಸ್ವರೂಪರಾದ ಶಿವಭಕ್ತರಿಂದ ಧ್ಯಾನಿಸಲ್ಪಡುವದಕ್ಕೆ ಯೋಗ್ಯನಾದ, ಭದ್ರಮೂರ್ತಿ- ಮಂಗಳಮಯವಾದ ಶರೀರವುಳ್ಳ, ಸದ್ಭವೋಪಯುಕ್ತ- ಸಮೀಚೀನನಾದ ಶಿವನಿಂ ಕೂಡಿದ, ಲಸಚ್ಛಿವೋಪರಮ್ಯಪಾದಪದ್ಮಭೃಂಗ- ಪ್ರಕಾಶಿಸುವ ಪರಶಿವನ ಮನೋಹರವಾದ ಪಾದವೆಂಬ ಕಮಲಕ್ಕೆ ಭ್ರಮರನಾದ, ಸಚ್ಛಿವಾಪರಾವತಾರ- ಒಳ್ಳೆಯ ಪರಶಿವನ ಮತ್ತೊಂದು ಆಕಾರನಾದ, ಧೀರಸಾರನುತ್ಯವೈಭವ- ವಿದ್ವಾಂಸರಲ್ಲಿ ಶ್ರೇಷ್ಠರಾದವರಿಂದ ಹೊಗಳಲ್ಪಡುವದಕ್ಕೆ ಯೋಗ್ಯವಾದ ವಿಲಾಸವುಳ್ಳ. ॥೧೦೫॥

ವಿಶ್ವಪತಿಸನ್ನಿಭ- ಪ್ರಪಂಚಾಧಿಪತಿಯಾದ ಶಿವನ ಸದೃಶನಾದ, ವಲಂ- ನಿಜವಾಗಿ, ದುರ್ಲಭಂ- ಪಡೆಯುವದಕ್ಕಸಾಧ್ಯವಾದದ್ದು. ... ... ॥೧೦೬॥

ಅವಿಕಳಶಿವಭಕ್ತಿಭಾಮಿನೀಮಣಿಮುಕುರ- ನಿಶ್ಚಂಚಲವಾದ ಶಿವಭಕ್ತಿಯೆಂಬ ಸ್ತ್ರೀಗೆ ರತ್ನದ ಕನ್ನಡಿಯಾದವನೇ ! ... ... ... ॥೧೦೭॥

ದ್ಭುತ ಮದ್ಭುತಮ ಕೃಪಾ । ಸಂಗತಚಿತ್ತ ನಿನ್ನಳವ ನಾರ್ತಿಳಿವ ರ್ಮಹಿಯೊಳ್ ವೃಷಾಧಿಪ ॥

ಕಂ ॥ ಅಮರ್ದಿಂಟಿಯು ಮಮರ ರ್ಮಿರ । ಣಮ ನಾಂಪರ್ಗಡ ಜಗದ್ಭಯಂಕರಮೃ ತ್ಯೋ ॥ ಪಮವಿಷಮ ನೀಂಟಿ ನಿತ್ಯ । ತ್ವಮ ನಾಳ್ದೆ ವೃಷೇಂದ್ರ ನಿನ್ನ ಬಗೆ ಚಿತ್ರತರಂ ॥ ೧೦೯

ವ ॥ ಎಂದಖಿಳರುಂ ಕೀರ್ತಿಸುತ್ತ ಮಿರ್ದ ರಾಪ್ರಸ್ತಾವದೊಳ್ ॥ * *

ಮ ॥ ಸ್ರ ॥ ಭಯದಿಂದಂ ಚೌಡಪುತ್ರ ರ್ನಡುಗಿ ಸೆಡೆದು ಬಾಯ್ವಿಟ್ಟು ತತ್ಪಾದಪದ್ಮ ॥ ದ್ವಯ ಕತ್ಯಂತಾರ್ತಭಾವಂಬಡೆ ದೆರಗಿ ಶರಣ್ಬೊಕ್ಕು ದುಷ್ಟಾತ್ಮರಂ ದು ॥ ರ್ನಯರಂ ರಕ್ಷಿಪ್ಪ ದೆಮ್ಮಂ ಬಸವವಿಭುವೆ ಕಾರುಣ್ಯದಿಂ ದೆಂದು ಕೊಂಡಾ।ಡಿ ಯಶೋವಾರಾಶಿಯಿಂ ದಂ ಪಡೆ ದಭಯಮ ನೊಲ್ದಿಯ್ದಿದ ರ್ಭಕ್ತಿಯುಕ್ತರ್ ॥ ... ೧೧೦

ಕಂ ॥ ಮದನರಿಪುಭಕ್ತಿಭಾವಾ । ಸ್ಪದಶರಣರ್ಗೆಲ್ಲ ದೀಶಶೇಷಂ ಸಲೆ ಸ ॥ ಲ್ಲದು ಪೆರ ರ್ಗೆಂದೀಬಗೆಯಂ । ಪದಪಿಂದಂ ತೋರಿ ಬೀರಿ ಮೆರೆದಂ ಬಸವಂ ॥ ೧೧೧

ಕಂ ॥ ಪರವಾದಿಗಳಂ ಸೋಲಿಸಿ । ಹರಸಮಯಮ ನಿಂತು ಗೆಲಿಸಿ ಪಾಲಿಸಿದಂ ಮ ॥ ದ್ವರಬಸವ ನೆಂದು ಶರಣ । ರ್ಪೆರಿದುಂ ಸಂಭ್ರಮದೆ ಕೀರ್ತಿಸು ತ್ತಿಸೆದಿರ್ದರ್ ॥ ೧೧೨

ಮ ॥ ಸ್ರ ॥ ಅರಸಂ ಪೌರಪ್ರಧಾನಾದ್ಯರಿ ನರಿ ದೆನುತಂ ನಾಡೆ ಕೊಂಡಾಡಿ ದಿವ್ಯಾಂ। ಬರಭೂಷಾಶ್ರೇಣಿಯಿಂ ಪೂಜಿಸಿ ಮುಗಿದು ಕರಾಂಭೋಜಮಂ ತನ್ನ ಮಾದ್ಯ ॥ ತ್ಕರಿಯಂ ಕೈಗೆಯ್ಸಿ ತಂದೇರಿಸಿ ಕಳುಪೆ ಮಹಾಸಂಭ್ರಮಂಬೆತ್ತು ಬಂದೀ । ಶ್ವರಭಕ್ತವ್ರಾತಮಂ ಮನ್ನಿಸು ತೆಸೆದ ನುಮಾಕಾಂತಹೃತ್ಪದ್ಮಸದ್ಮಂ ॥ ... ೧೧೩

ಕಂ ॥ ಬಸವಂ ಬಿಸವಂದ ಮಿದೆನೆ । ಬಿಸವಂ ಸುಧೆಗೆಯ್ದ ಸೆವಿದ ಕಥೆಯ ನಿದಂ ಸಂ ॥ ತಸ ಮಲರೆ ಕೇಳ್ದ ನರ ರೀ । ರಸೆಯೊಳ್ಘನಭುಕ್ತಿಮುಕ್ತಿಸುಖಮಂ ಪಡೆವರ್ ॥ ೧೧೪

ಲಲಿತಪದವೃತ್ತ ॥ ಕಾಯಗುಣವರ್ಜಿತ ವಿಮಾಯಗಣಸಂಚಯಸಹಾಯ ನಿಗಮಾ

---

ಅಗಿದು- ಭಯಪಟ್ಟು, ತುಂಗಗಳಸ್ಥಳಾಂತರದೊಳ್- ಉನ್ನತವಾದ ಕತ್ತಿನ ಮಧ್ಯಪ್ರದೇಶದಲ್ಲಿ, ಕೊರಲ್ವರಂ- ಕತ್ತಿನತನಕ, ಅಳವಂ- ಶಕ್ತಿಯನ್ನು. ... ... ॥೧೦೮॥

ಅಮರ್ದಿಂಟಿಯುಂ- ಅಮೃತವನ್ನು ಕುಡಿದೂ. ... ... ॥೧೦೯॥

ಸೆಡೆದು- ಭಯಪಟ್ಟು, ಆರ್ತಭಾವಂಬಡೆದು- ದೀನತ್ವವಂ ಹೊಂದಿ, ಯಶೋವಾರಾಶಿಯಿಂದಂ- ಕೀರ್ತಿಗೆ ಸಮುದ್ರನಾದ ಬಸವೇಶ್ವರನಿಂದ. ... ... ॥೧೧೦॥

ಮದನರಿಪುಭಕ್ತಿಭಾವಾಸ್ಪದಶರಣರ್ಗೆ- ಶಿವಭಕ್ತಿಯಿಂದ ಕೂಡಿದ ಮನಸ್ಸಿಗೆ ಆಶ್ರಯರಾದ ಶರಣರಿಗೆ, ಈಶಶೇಷಂ- ಶಿವಪ್ರಸಾದವು, ಬೀರಿ- ವಿಸ್ತರಿಸಿ. ... ... ॥೧೧೧॥

॥೧೧೨॥ ಮಾದ್ಯತ್ಕರಿಯಂ- ಮದವೇರಿದ ಆನೆಯನ್ನು, ಕೈಗೆಯ್ಸಿ- ಅಲಂಕರಿಸಿ, ಉಮಾಕಾಂತಹೃತ್ಪದ್ಮಸದ್ಮಂ- ಈಶ್ವರನ ಹೃದಯಕಮಲವೇ ಮನೆಯಾಗುಳ್ಳ ಬಸವೇಶನು. ... ॥೧೧೩॥

ಬಿಸವಂದಂ- ಕೌತುಕವು, ಬಿಸವಂ- ವಿಷವನ್ನು, ಘನಭುಕ್ತಿಮುಕ್ತಿಸುಖಮಂ- ಶ್ರೇಷ್ಠವಾದಭೋಜನ ಮೋಕ್ಷಗಳ ಸೌಖ್ಯವನ್ನು. ... ... ... ॥೧೧೪॥

ಕಾಯಗುಣವರ್ಜಿತ- ದೇಹಸಂಬಂಧವಾದ ಕ್ಷುತ್ತೃಷ್ಣಾದಿಗುಣಗಳಿಂದ ಬಿಡಲ್ಪಟ್ಟ, ವಿಮಾಯಗಣಸಂಚಯಸಹಾಯ- ಮಾಯಾರಹಿತರಾದ ಗಣಂಗಳ ಸಮೂಹಕ್ಕೆ ಸಹಾಯಕನಾದ, ನಿಗಮಾ........ಉ

ಗಮನಿಕಾಯಸರಳೋಕ್ತ । ನ್ಯಾಯಜಿತವಾದಿಸಮುದಾಯ ಶಿವಭಕ್ತಸಮವಾಯ ಜಯ
ದಾನಸದುಪಾಯ ಮಹನೀಯ ॥ ಧ್ಯೇಯ ಖಚರೇಂದ್ರಚಯಗೇಯ ಚರಶಂಕರವಿಧೇಯ
ಬುಧನುತ್ಯರುಚಿರಾಯ ಪರಬೃಂದಾ । ಜೇಯ ಪೊರೆ ಪೂರ್ಣಗುಣಜಾಯ ಸಕಳೇಷ್ಟಫ
ಲದಾಯಕ ಗಿರೀಶಗಣನಾಯಕ ವೃಷೇಂದ್ರ ॥ ... ... ೧೧೫

ವನಮಯೂರವೃತ್ತ ॥ ಮಂಗಳಮಯಾಂಗಿ ಸುಭುಜಂಗಪತಿವೇಣೀ । ಭೃಂಗಕಚ
ಭಾಸುರೆ ಸದಂಗಶುಕಪಾಣೀ ॥ ತುಂಗಕುಚೆ ಭಾಜಿತಪತಂಗೆ ಮೃದುವಾಣೀ । ಸಾಂಗಶಿವಭ
ಕ್ತಿಸುಪಥಂಗುಡು ಮೃಡಾಣೀ ॥ ... ... ೧೧೬

ಗದ್ಯ ॥ ಇದುವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತತರು
ಚಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತ ಭಾಸುರ
ಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀ
ಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ವಿಷವಿಹರಣಕಥನಂ ಚತ್ವಾರಿಂಶಾಶ್ವಾಸಂಪ
ರಿಸಮಾಪ್ತಂ ॥ ... ... ... .. ... ... *

ಚತ್ವಾರಿಂಶಾಶ್ವಾಸಂ ಸಂಪೂರ್ಣಂ.

---

ಕ್ತ—ನಿಗಮ- ವೇದ, ಆಗಮ, ಇವುಗಳ, ನಿಕಾಯ- ಸಮೂಹದಿಂದ, ಸರಳ- ಋಜುವಾಗಿ, ಉಕ್ತ ಹೇಳ ಲ್ಪಟ್ಟ, ನ್ಯಾಯಜಿತವಾದಿಸಮುದಾಯ- ತರ್ಕಶಾಸ್ತ್ರದಿಂದ ಜೈಸಲ್ಪಟ್ಟ ಪರಮತವಾದಿಗಳ ಸಮೂಹ ವುಳ್ಳ, ಶಿವ........ಸದುಪಾಯ—ಶಿವಭಕ್ತ- ವೀರಶೈವರ, ಸಮವಾಯ- ಸಮೂಹಕ್ಕೆ, ಜಯ- ಗೆಲ್ಲು ವಿಕೆಯನ್ನು, ದಾನ- ಕೊಡುವದೇ, ಸದುಪಾಯ- ಒಳ್ಳೆಯ ಯುಕ್ತಿಯಾಗುಳ್ಳ, ಮಹನೀಯಧ್ಯೇಯ- ಮಹಾತ್ಮರಿಂದ ಧ್ಯಾನಿಸಲ್ಪಡುವದಕ್ಕೆಯೋಗ್ಯನಾದ, ಖಚರೇಂದ್ರಚಯಗೇಯ— ಖಚರೇಂದ್ರ- ದೇವಶ್ರೇ ಷ್ಠರ, ಚಯ- ಗುಂಪಿನಿಂದ, ಗೇಯ- ಗಾನಮಾಡುವದಕ್ಕೆ ಯೋಗ್ಯನಾದ, ಚರಶಂಕರವಿಧೇಯ, ಜಂಗಮ ರು ಈಶ್ವರ ಇವರುಗಳಿಗೆ ವಿಧೇಯನಾದ, ಬುಧನುತ್ಯ- ವಿದ್ವಾಂಸರಿಂದ ಹೊಗಳಲ್ಪಡುವದಕ್ಕೆ ಯೋಗ್ಯ ನಾದ, ರುಚಿರಾಯ- ರುಚಿರ- ಮನೋಹರವಾದ, ಅಯ- ಮಂಗಳಕರವಾದ ಕರ್ಮವುಳ್ಳ, ಪರಬೃಂದಾಜೇ ಯ- ಅನ್ಯಮತಸ್ಥರ ಸಮೂಹದಿಂದ ಜೈಸಲ್ಪಡುವದಕ್ಕಸಾಧ್ಯನಾದ, ಪೂರ್ಣಗುಣಜಾಯ— ಪೂರ್ಣ- ತುಂಬಿದ, ಗುಣ- ಸದ್ಗುಣಗಳುಳ್ಳ, ಜಾಯ- ಹೆಂಡತಿಯುಳ್ಳ, ಸಕಲೇಷ್ಟಫಲದಾಯಕ- ಇಷ್ಟೈಸಿದಫಲಗಳ ನ್ನೆಲ್ಲಾ ಕೊಡುವ, ಗಿರೀಶಗಣನಾಯಕ- ಶಿವಗಣಂಗಳಿಗೆ ಸ್ವಾಮಿಯಾದ, ವೃಷೇಂದ್ರಾ ! ಪೊರೆ. ।೧೧೫॥

ಮಂಗಳಮಯಾಂಗಿ- ಶುಭಸ್ವರೂಪವಾದ ದೇಹವುಳ್ಳ, ಸುಭುಜಂಗಪತಿವೇಣೀ- ಒಳ್ಳೆಯ ಆದಿಶೇಷ ನಂತಿರುವ ಜಡೆಯುಳ್ಳ, ಭೃಂಗಕಚಭಾಸುರೆ- ಭ್ರಮರದಂತಿರುವ ಕೇಶದಿಂದ ಮನೋಹರಳಾದ, ಸದಂ ಗಶುಕಪಾಣೀ—ಸದಂಗ- ಒಳ್ಳೆಯ ದೇಹವುಳ್ಳ, ಶುಕ- ಗಿಳಿಯೇ, ಪಾಣೀ- ಹಸ್ತದಲ್ಲುಳ್ಳ, ತುಂಗಕುಚೆ- ಉ ನ್ನತವಾದ ಸ್ತನವುಳ್ಳ, ಭಾಜಿತಪತಂಗೆ- ತನ್ನ ಕಾಂತಿಯಿಂದ ಜೈಸಲ್ಪಟ್ಟಸೂರ್ಯನುಳ್ಳ, ಮೃದುವಾಣೀ-ಕೋ ಮಲವಾದ ಮಾತುಳ್ಳ, ಮೃಡಾಣೀ- ಶಿವಪತ್ನಿಯೇ ! ಸಾಂಗಶಿವಭಕ್ತಿಸುಪಥಂಗುಡು- ಸಂಪೂರ್ಣವಾದ ಶಿ ವಭಕ್ತಿ ಮಾರ್ಗವನ್ನು, ಕೊಡು. ... ... ೧೧೬

ನಲವತ್ತನೆಯ ಆಶ್ವಾಸವು ಸಂಪೂರ್ಣವು.

# ಶ್ರೀಃ

ಮಹತೋಮಹೀಯಸೇ ಪರಬ್ರಹ್ಮಣೇನಮಃ.

## ಏಕಚತ್ವಾರಿಂಶಾಶ್ವಾಸಂ.



### ಜ ಗ ದೇ ವ ಕ ಥ ನಂ .

ಕಂ ॥ ಶ್ರೀಮದಜಭಾಮಿನೀನುತ । ಹೈಮವತೀಮಧುರಗಾನನವರಸಲೋಲಂ ॥
ಸೋಮಕಳಾಧರ ನತುಳಕ । ಳಾಮಂದಿರ ನೀಗೆ ಸೌಖ್ಯಮಂ ಶಿವಲಿಂಗಂ ॥ ೧

ವ ॥ ಮತ್ತ ಮೊಂದು ಶುಭವಾಸರದೊಳ್ ॥ * * * *

ಕಂ ॥ ಜಗದೇವ ನೆಂಬ ವಿಪ್ರಂ । ನಿಗಮಾಗಮವೇದಿ ಶಿವಪದಾಂಬುಜಭೃಂಗಂ ॥ ಸು
ಗುಣನಿಧಿ ತನ್ನ ಗೃಹದೊಳ್ । ಮಿಗೆ ಭುಂಜಿಸಲೆಂದು ಬಸವನು ಪ್ರಾರ್ಥಿಸಿದಂ ॥ ೨

ವ ॥ ಅಂತವಂ ಭಕ್ತಿಯಿಂ ಪ್ರಾರ್ಥಿಸೆ ಬಸವರಾಜಂ ನೋಡಿ ॥ * *

ಕಂ ॥ ಜಗದೇವ ನೀಂದ್ವಿಜಂಗಡ । ಮಿಗೆ ಮಜ್ಜಂಗಮಕದಂಬಸಮ್ಮರ್ದಮ ನೆಂ ॥
ತಗಲದೆ ಸೈರಿಪೆ ಯೆನೆ ಕೈ । ಮುಗಿದೆಂದಂ ನಿಮ್ಮ ಚಿತ್ತ ಮೊಲ್ವಂತೀಗಳ್ ॥ ೩

ವ ॥ ಎಲ್ಲಮುಂ ಸಾಂಗ ಮಾದಪು ದೀಗ ಳೆನ್ನ ಮೇಲಣ ದಯೆಯಿಂ ಬಿಜಯಂಗೆಯ್ವು ದೆಂದು ಭೂತಿದಾನಪುರಸ್ಸರಂ ಬಿನ್ನಪಂಗೆಯ್ದು ನಿಜಗೃಹಕ್ಕೇಳ್ತಂದು ಸಂಭ್ರಮಂ ಮಿಗೆ ಸಕಲಪಾಕಸಾಮಗ್ರಿಯಂ ನೆರಪಿ ಪಂಚಪ್ರಕಾರದಾಹಾರಂಗಳ ನಳುಂಬ ಮೊಡರ್ಚಿ ಬಸವಾಗಮನದಿಂ ಮುನ್ನಮೆ ॥ * * * * * * *

---

ಶ್ರೀಮ......ಲೋಲಂ— ಶ್ರೀಮತ್- ಷಡ್ಗುಣೈಶ್ವರ್ಯಯುಕ್ತಳಾದ, ಅಜಭಾಮಿನೀ- ಸರಸ್ವತಿಯಿಂದ, ನುತ- ಹೊಗಳಲ್ಪಟ್ಟ, ಹೈಮವತೀ- ಪಾರ್ವತಿಯ, ಮಧುರ- ಇಂಪಾದ, ಗಾನ- ಸಂಗೀತದ, ನವರಸ- ನೂತನವಾದ ರಸದಲ್ಲಿ, ಲೋಲಂ- ಆಸಕ್ತಿಯುಳ್ಳ, ಸೋಮಕಳಾಧರಂ- ಚಂದ್ರನ ಹದಿನಾರನೇ ಒಂದು ಭಾಗವನ್ನು ಧರಿಸಿರುವ, ಅತುಳಕಳಾಮಂದಿರಂ- ಅಸದೃಶವಾದ ವಿದ್ಯೆಗೆ ಆಶ್ರಯನಾದ, ಶಿವಲಿಂಗಂ, ಸೌಖ್ಯಮಂ, ಈಗೆ. ... ... ... ... ... ॥೧॥

ಭುಂಜಿಸಲ್‌ಎಂದು- ಊಟವಂ ಮಾಡುವದಕ್ಕೋಸ್ಕರವೆಂದು. ... ॥೨॥

ಜಂಗಮಕದಂಬಸಂಮರ್ದಮಂ- ಜಂಗಮಸಮೂಹದ (ಗಲಾಟೆಯನ್ನು) ಸೈರಿಪೆ-ಸಹಿಸುವೆ? ಒಲ್ವಂತೆ- ಪ್ರೀತಿಸುವಹಾಗೆ. ... ... ... ॥೩॥

ಸಾಂಗಂ- ಸಂಪೂರ್ಣವು, ಬಿಜಯಂಗೆಯ್ವುದು- ದಯಮಾಡುವದು, ಭೂತಿದಾನಪುರಸ್ಸರಂ- ವಿಭೂತಿಯಂ ಕೊಡುವದು ಮುಂದಾಗಿ, (ಅಂದರೆ ವಿಭೂತಿವೀಳೆಯವಂ ಕೊಟ್ಟು) ಬಿನ್ನಪಂಗೆಯ್ದು- ವಿಜ್ಞಾಪಿಸಿ, ಪಂಚಪ್ರಕಾರದ- (ಭಕ್ಷ್ಯ, ಭೋಜ್ಯ, ಲೇಹ್ಯ, ಚೋಹ್ಯ, ಖಾದ್ಯ) ಎಂಬ ಐದು ಬಗೆಯ, ಬಸವಾಗಮನದಿಂ- ಬಸವೇಶ್ವರನು ಬರುವದಕ್ಕಿಂತ. * * * * * * *

ಕಂ ॥ ಕರೆ ದಾತ್ಮ ಮಂದಿರಕೆ ಪೂ । ರ್ವರ ನಾದರಿಸುತ್ತೆ ಪೂಜೆಗೆಯ್ದಂ ಜಗದೇ ॥
ವರಸಂ ತದ್ವಾರ್ತೆಯ ನನು । ಚರರಿಂ ಕೇಳ್ದು ಬಸವರಾಜಂ ಮುಳಿದಂ ॥ ೪

ವ ॥ ಅಂತು ಮುಳಿ ದಿವಂ ದುರಾಚಾರಮಂ ನೆಗಳ್ದ ನೆಂದೇಳಿದಂಗೆ ಯಿದ್ದಿರ್ಪ್ಪೂದು ಮಾಗಳ್ ॥ * * * * * * * *

ಕಂ ॥ ಕಳುಪಿ ಧರಾಮರರ ನವಂ । ಬಳಿ ಕೇಳ್ತಂದಂ ವೃಷೇಂದ್ರನು ಕರೆಯಲ್ಕಂ ॥
ದೆಳಸಿ ತೆರೆಗೆಯ್ಸಿ ಬಸವಂ । ಖಳನೀಕ್ಷಣ ಕಲಸು ತದರ ಮರೆಯೊಳ ಗಿರ್ದಂ ॥ ೫

ವ ॥ ಅಂತಿರ್ದು ತನ್ನಂ ಕರೆಯ ಲೆಳಸಿರ್ದ ಜಗದೇವಂ ಗಿಂತೆಂದಂ ॥ * *

ಕಂ ॥ ಭವಿಸಂಗಪಂಕಜಲಮ । ಗ್ನ ವಿಚಾರಿಪ್ಪೊ ಡೆಲವ್ಪೊ ನಿನಗೆ ಶಿವಭಕ್ತಿಸುಧಾ ॥
ರ್ಣವಕೇಳಿ ಯೊಪ್ಪುಗುಮೆ ನಿ । ನ್ನವ್ರೊಲಾವಂ ಗಾಂಪ ನೆಳಸಿ ಬರ್ಪ್ಪುದೆ ಮರುಳೆ ॥ ೬

ಕಂ ॥ ಕುಲದೈವ ಮಿರೆ ಮಹೇಶ್ವರ । ನೆಲೆ ನೀಂ ಬಹುಮಾರ್ಗದಲ್ಲಿ ನಡೆದಪೆ ಗಿರಿಶೋ ॥
ಜ್ವಲಭಕ್ತಿ ಯೆತ್ತ ನಿನ ಗೀ । ಮಲಿನಾತ್ಮರ ಸಂಗ ಮೆತ್ತ ಪೇಳ್ಜಗದೇವ ॥ ೭

ಕಂ ॥ ಹರಭಕ್ತಪಾದಸೇವಾ । ಪರಕರಯುಗಳಕ್ಕಿದುಚಿತಮೇ ಹರಭಕ್ತೋ ॥ ತ್ಕರದೂಷಣಪರವಿಪ್ರರ । ಚರಣಾರ್ಚನಕರ್ಮ ಮಧಿಕದುರ್ಮತಿನಿಳಯ ॥ ೮

ಕಂ ॥ ಶರಣಜನಚರಣಜಲಮಂ । ಶಿರದೊಳ್ತಳೆದೆಯ್ದೆ ಧನ್ಯ ನೆನಿಸಿದ ನಿನಗೀ ॥ ದು
ರಿತಕುಲಭರಿತಭೂಸುರ । ಚರಣಜಲಂ ದಾಳ್ವು ದುಚಿತಮೇ ವಸುಮತಿಯೊಳ್ ॥ ೯

ಕಂ ॥ ವಿಳಸಿತಶಿವಪ್ರಸಾದಾ । ಮಳತನು ವೆನಿಸಿರ್ದ ಲಿಂಗಭಕ್ತಂಗೆ ಶಿವೋ ॥ ಜ್ವ
ಳಭಕ್ತಿರಹಿತಭೂಸುರ । ಕುಳಪಜ್ತಿಯೊ ಳುಣ್ಬ ಕಜ್ಜ ಮೆಂತಳವಡುಗುಂ ॥ ೧೦

---

ಆದರಿಸುತ್ತೆ- ಪ್ರೀತಿಸುತ್ತಾ, ಅನುಚರರಿಂ- ಸೇವಕರಿಂದ. ... ॥೪॥

ಧರಾಮರರಂ- ಹಾರ್ವರನ್ನು, ತೆರೆಗೆಯ್ಸಿ- ತೆರೆಯಂ ಹಾಕಿಸಿ, ಖಲವೀಕ್ಷಣಕೆ- ನೀಚನನ್ನು ನೋಡುವದಕ್ಕೆ, ಅಲಸುತೆ- ಆಲಸ್ಯಪಡುತ್ತಾ, ಅದರ- ಆ ತೆರೆಯ. ... ... ॥೫॥

ಭವಿಸಂಗಪಂಕಜಲಮಗ್ನ- ಲಿಂಗಹೀನರ ಸಹವಾಸವೆಂಬ ಕೆಸರಿನ ನೀರಿನಲ್ಲಿ ಮುಳುಗಿದವನೇ ? ಶಿವಭಕ್ತಿಸುಧಾರ್ಣವಕೇಳಿ- ಶಿವಭಕ್ತಿ ಯೆಂಬ ಕ್ಷೀರಸಮುದ್ರದಲ್ಲಿ ಕ್ರೀಡಿಸುವಿಕೆಯು, ಗಾಂಪಂ- ಮೂಢನು, ಆವಂ ? ಎಳಸಿ- ಅಪೇಕ್ಷಿಸಿ. ... ... ॥೬॥

ಕುಲದೈವಂ- ವಂಶಕ್ಕಧಿದೇವತೆಯಾದ, ಬಹುಮಾರ್ಗದಲ್ಲಿ- ಅನೇಕ ದೇವತಾಭಕ್ತಿಮಾರ್ಗದಲ್ಲಿ. ॥೭॥

ಅಧಿಕದುರ್ಮತಿನಿಳಯ- ಬಹು ಕೆಟ್ಟಬುದ್ಧಿಗೆ ಆಶ್ರಯನಾದವನೇ ! ಹರಭಕ್ತಪಾದಸೇವಾಪರಕರಯುಗಳಕ್ಕೆ- ಶಿವಭಕ್ತರ ಚರಣವನ್ನು ಸೇವಿಸುವದರಲ್ಲಾಸಕ್ತವಾದ ಎರಡು ಕಯ್ಗಳಿಗೆ, ಹರಭಕ್ತೋತ್ಕರದೂಷಣಪರವಿಪ್ರರ- ಶಿವಭಕ್ತರ ಗುಂಪನ್ನು ನಿಂದಿಸುವದರಲ್ಲಿ ಆಸಕ್ತರಾದ ಬ್ರಾಹ್ಮಣರ, ಚರಣಾರ್ಚನಕರ್ಮ- ಕಾಲಂ ಪೂಜಿಸುವ ಕೆಲಸವು. ... ... ॥೮॥

ಶರಣಜನಚರಣಜಲಮಂ- ಶಿವಶರಣರ ಪಾದೋದಕವನ್ನು, ಈದುರಿತಕುಲಭರಿತಭೂಸುರಚರಣಜಲಂ ದಾಳ್ವುದು- ಈ ಪಾಪದ ಸಮೂಹದಿಂ ತುಂಬಿದ ಹಾರ್ವರ ಕಾಲಿನ ನೀರಂ ಧರಿಸುವದು. ॥೯॥

ವಿಳಸಿತಶಿವಪ್ರಸಾದಾಮಳತನು- ನಿರ್ಮಲವಾದ ಶಿವನ ಪ್ರಸಾದವಂ ಸೇವಿಸುವದರಿಂದ ನಿರ್ಮಲವಾದ ದೇಹವುಳ್ಳವನು, ಶಿವೋಜ್ವಳಭಕ್ತಿರಹಿತಭೂಸುರಕುಳಪಜ್ತಿಯೊಳ್- ಪರಮೇಶ್ವರನ ಪ್ರಕಾಶಿಸುವ ಭಕ್ತಿಯಿಂದ ಹೀನರಾದ ಹಾರ್ವರ ಸಮೂಹದ ಸಾಲಿನಲ್ಲಿ, ಉಣ್ಬ- ಊಟವಂ ಮಾಡುವ. ... ॥೧೦॥

ಕಂ ॥ ನಡೆ ನುಡಿ ನೋಟಂ ನಗೆ ಸಂ। ಗಡಿಗತನಂ ವಜ್ರ ಭೋಜನಮು ಮೊದಲಿನಿತಂ।
ಜಡಭವಿಗಳೊಡನೆ ನೆಗಳ್ವನೆ। ವೃಢಭಕ್ತಂ ಭವವಿದೂರ ನಮಳಚರಿತ್ರಂ ॥ ೧೧

ಕಂ ॥ ಶೂಲಿಪದಭಕ್ತ ನನುಪಮ। ಶೀಲವ್ರತಯುಕ್ತ ನತುಳಚಿತ್ರಚರಿತ್ರಂ ॥ ಭೂ
ಲೋಕದೊಳೊಪ್ಪುವ ನೊಸೆ। ದೇಲೇಶಕ್ಷೇತ್ರಪಾಲ ನೆಂಬ ಮಹಾತ್ಮಂ ॥ ೧೨

ಚಂ ॥ ಅವನಚರಿತ್ರಮಂ ಪೊಗಳ್ವ ಡರ್ಗಳ ವಪ್ಪುದೊ ನೈಜಪುತ್ರಮಿ। ತ್ರ
ವನಿತೆಯರ್ಕಳಂ ಸಕಳಗೋತ್ರಜಬಾಂಧವ ಚೇಟಿಯರ್ಕಳಂ ॥ ಭವನದೊಳಿರ್ಪ ಸರ್ವ
ರುಮ ನೊಪ್ಪಿರೆ ಲಿಂಗಸಮನ್ವಿತಾಂಗರಂ। ಜವದೆ ನೆಗಳ್ಚ ರಂಜಿಸುತೆ ಲಿಂಗವಿಹೀನರೊ
ಳಾಡ ನೋರ್ಮೆಯುಂ॥ ... ... ... ೧೩

ಮತ್ತೇ॥ ನಡೆ ನೋಡಂ ನುಡಿಯಾಡ ನೀಯ ನವರಿಂ ದೇನೊಂದ ನೆಂತಾದೊಡಂ। ಪಿ
ಡಿಯಂ ಸೋಂಕ ನವಂದಿ ರಾಳ್ವ ನೆಲನಂ ತಾಂ ಮೆಟ್ಟ ನಾಮುಪ್ಪಟ್ಟರೊ॥ಳ್ತೊಡರಂ ಸಾಲವು
ನೊಲ್ಲ ನಂತವರ ಕಯ್ಯಿಂದಂ ಕುಡು ಕೂರ್ಮೆಯಿಂ । ಕಡವಂ ತತ್ಕಥೆಗೇಳ ನಿಂತೆಸೆಯುತಿ
ರ್ದ್ದಂ ಭಕ್ತಿರತ್ನಾಕರು ॥ ... ... ... ೧೪

ವ ॥ ಆಗ ಆಮಹಾತ್ಮ ನಿರವಂ ಕಂಡು ನೈರಿಸಲಾರ ದಸೂಯೆಯಿಂ ದುಷ್ಟಮತ
ಸ್ಥರೆಲ್ಲ ರೊಂದುಗೂಡಿ ॥ * * * * * * *

ಕಂ ॥ ಪಿಡಿಯಂ ಸಾಲಮನೆಂದುಂ। ಕಡಂಗೊಡಂ ಭವಿಗ ಳೆಂದು ತೆಗಳುತ್ತೆ ಮ್ಮೊ॥
ಳ್ನುಡಿಯಂ ಲೆಕ್ಕಿಸ ನೀತನ। ಪೊಡವರ್ಪ್ ಪೊಸತೆಂದಸೂಯೆಮಿಗೆ ಕುಟಿಲಾತ್ಮರ್ ॥ ೧೫

ಕಂ ॥ ಇವನ ಪೊಸಧಾನ್ಯಬೀಜದ। ಭವನಮ ನುರುಪುತ್ತೆ ಬಳಯೊಳೀತನ ಚಲ
ದಂ ॥ ದವ ನರಿವೆ ವೆಂದು ಬಗೆ ದಾ। ಭವಿಗಳ್ತದ್ಧಾನ್ಯಗೃಹಮ ನುರುಪಿದ ರಾಗಳ್॥ ೧೬

ವ ॥ ಆತುರುಪೆ ಮೂಡೆಗಟ್ಟರ್ದ ಬೀಜಧಾನ್ಯರಾಶಿ ಯೆಲ್ಲಂ ಭಸ್ಮರಾಶಿ ಯಾಗೆ ಕಂ
ಡು ಮುಗುಳ್ನಗೆನಕ್ಕು ತದ್ಭಸ್ಮರಾಶಿಯನೆ ಒಂಡಿಯೊಳ್ಕೊಂಡು ಪೋಗಿ ಪೊಲದೊಳ್ಬಿ
ಳ್ತು ನೆಂತುತ ಬಿಳ್ತು ॥ * * * * * * * *

---

ಸಂಗಡಿಗತನಂ- ಸ್ನೇಹಿತತ್ವವು ನೆಗಳ್ವನೆ- ಮಾಡುವನೇ ?॥ ಶಿವಭಕ್ತೋ ಮಹಾತೇಜಾಶ್ಶಿವಭಕ್ತಿ ಪ
ರಾಙ್ಮುಖಾರ್ । ನಸ್ಪೃಶೇನ್ನೈವವೀಕ್ಷೇತನತೈಸ್ಸಹವಸೇತ್ಕ್ವಚಿತ್ ॥ ಎಂಬ ಶ್ರೀರೇಣುಕಾಚಾರ್ಯಚರಣವ
ಚನಪ್ರಮಾಣದಿಂದ ಶಿವಭಕ್ತಂ ಭವಿಗಳೊಡನೆ ಸಹವಾಸಾದಿಗಳಂ ಮಾಡಲಾಗದೆಂದು ಭಾವ. ॥೧೧॥

ಅನುಪಮಶೀಲವ್ರತಯುಕ್ತಂ- ಅಸದೃಶವಾದ ವೀರಶೈವಾಚಾರವ್ರತಗಳಿಂದ ಕೂಡಿದ. ॥೧೨॥

ನೈಜಪುತ್ರಮಿತ್ರವನಿತೆಯರ್ಕಳಂ- ತನ್ನ ಸಂಬಂಧಿಗಳಾದ ಮಕ್ಕಳು ಆಪ್ತರು ಹೆಂಡತಿಯರುಗಳನ್ನು,
ಸಕಳಗೋತ್ರಜಬಾಂಧವಚೇಟಿಯರ್ಕಳಂ- ತನ್ನ ವಂಶದಲ್ಲಿ ಹುಟ್ಟಿದ ನಂಟರು ಗಾಡಿಯರುಗಳೆಲ್ಲರನ್ನು, ಭ
ವನದೊಳ್- ಮನೆಯಲ್ಲಿ, ಲಿಂಗಸಮನ್ವಿತಾಂಗರಂ- ಶಿವಲಿಂಗದಿಂ ಕೂಡಿದ ದೇಹವುಳ್ಳವರನ್ನಾಗಿ. ॥೧೩॥

ಅವರಿಂದೆ-ಆ ಭವಿಗಳಿಂದ, ಆಳ್ವ-ಪಾಲಿಸುವ, ತೊಡರಂ-ಸಂಬಂಧಿಸನು, ಸಾಲವುಂ- ಋಣವನ್ನು,
ತೆಗಳುತ್ತ- ನಿಂದಿಸುತ್ತ, ಲೆಕ್ಕಿಸಂ- ಗಣನೆಮಾಡೊಲ್ಲನು, ಪೊಡರ್ಪು- ಅತಿಶಯವು. ॥೧೫॥

ಉರುಪುತ್ತೆ- ಸುಟ್ಟು, ಬಳಿಯೊಳ್- ಅನಂತರ, ಚಲದ- ಶಪಥದ. ... ॥೧೬॥

ಬೀಜಧಾನ್ಯರಾಶಿ- ಬೀಜಕ್ಕೋಸ್ಕರವಿಟ್ಟಿದ್ದ ಧನರಧ ರಾಸಿಯು, ಬಿಳ್ತಂ- ಬಿತ್ತುವನನ್ನು, ಎಂತು-

ಕಂ ॥ ಬೆಳೆ ಮೆಂಬನ ಜಳಸಿಂ ಪೆ । ರ್ಬೆಳಸಂ ಬಹುಧಾನ್ಯರಾಶಿವಡೆದೆಂಗಡ ನಿ ॥ ರ್ಮಳಮತಿ ಮಣ್ಣಿಂ ಪಿಡಿದೊಪೆ । ಗಳಲನೆ ಪೊನ್ನಪ್ಪುದಲ್ತೆ ತಪ್ಪದೆ ಧರೆಯೊಳ್ ॥ ೧೩

ಉ ॥ ಅಂದಿಳೆಯಾಳ್ವ ಬೊಮ್ಮವಿಭು ಬಿಳ್ತದೆಯುಂ ಬೆಳೆದಂ ಧರಿತ್ರಿಯೊ । ಳ್ಸಂದಿರೆ ತನ್ನ ಪೆಂಪು ಪೊಸಧಾನ್ಯಮ ನೆಂದಿಳೆ ಪೇಳ್ಗು ಮಂತದಂ ॥ ಕುಂದದೆ ಕೇಳ್ವೆ ವಿಂದಮನು ಕಂಡೆ.ನಿದು ಘನಕೇತಿರಾಜ ನೋ । ರುದದೆ ಬಿಳ್ತ ಬೂಡಿಯನೆ ಪೆರ್ಜೆಳಸಂ ಪಡೆದಂ ವಿಳಾಸದಿಂ ॥ ... ... ... ... ೧೪

ವ ॥ ಎಂದು ಕೂರ್ಮೆ ಮಿಗೆ ಪಲರ್ಮೆಯಿಂ ತನ್ನ ಪೇರ್ಮೆಯಂ ಭಕ್ತಜನಂ ಪೊಗಳುತ್ತ ಮಿರ್ಪುದಲ್ಲಿ ಪೆರತೊಂದುದಿವಸು ದುರಾತ್ಮಕರಾದ ಜೈನ ರಾಷ್ಟ್ರೇತ್ರಪಾಲದೇವನ ತುರುಗಳಂ ತಸ್ಕರರಿಂ ಕೊಳಿಸೆ ತುರುಪಟ್ಟಿಯಿ ನಾಚೋರ ರೆಲ್ಲಾಧೇನುಗಳ ನಿರುಳೊಳ್ಬಟ್ಟುಕಡುದೂರಂಜತ್ತ ಪರದೇಶಕ್ಕೆ ಕಡಂಗಿ ಪೋಪೆ ವಾಗಳ್ ॥ *

ಉ ॥ ಮೇಯದೆ ಪುಲ್ಗಳಂ ಪಥದೊ ಳಾದೊಡ ಮಿಾಂಟದೆ ಸತ್ಸರೋಜನದೀ । ತೋಯಮ ನಿಂತು ನೆಪ್ತದಿವಸಂಬರೆಗಂ ತುರುಗಳ್ಬಳಲ್ವಿನಂ ॥ ವಾಯಕೆ ತಂದೆ ವಿಂದಿವ ನಿವಕ್ಕಟ ಸತ್ತೊಡೆ ದೋಷ ಮಕ್ಕು ಮು । ನ್ಯಾಯ ಮಿದೆಂದು ಮುನ್ನಿನೆಡೆಗಟ್ಟಿದ ರಾಕಳ ಪಿಂಡ ನಾಖಳರ್ ॥ ... ... ... ... ೧೯

ಕಂ ॥ ಎರೆಯ ನೆಡೆಗಾವುಗಳ್ಬಡ । ದರುಚು ತ್ತಂಬಾಎನುತ್ತೆ ಹುಂಕರಿಸುತ್ತಂ ॥ ಮರುಕಂ ಮಿಗೆ ನೆಗೆನೆಗೆ ದ । ಳ್ಕರಿ ನೋಡಿ ಬರುತ್ತ ಮಿರ್ದ ವತಿಭರದಿಂದಂ ॥ ೨೦

ವ ॥ ಅಂತೇಳುಂದಿನಂ ನಡೆದ ಬಟ್ಟೆಯ ನೇಳುಂಜಾವದೊ.ಳ್ಕಳೆದು ಜವದಿಂ ಪರಿತಂದ ಪಶುಗಳ ನಾಷ್ಟೇತ್ರಪಾಲದೇವಂ ವ್ರತಹೀನಂಗಳಾದ ತುರುಗ ಳೀಕೊಟ್ಟಗೆಯಂ ಪುಗಲಾಗದೆಂ ದವಧರಿಸು ತ್ತದರ ಗುಹೆಯ ಬಾಗಿಲಂ ಬಂಧಿಸೆ ಪಸಿದು ಬಳಲ್ದವಿವೆಂದು ಪಾರಜನಂ ಮರುಗಿ ಸಾರತರಮಪ್ಪ ತೃಣಜಲಮಂ ಮುಂದಿಡೆ ಮುಟ್ಟ ಲೊಲ್ಲದೆ ॥

ಕಂ ॥ ಕೊಟ್ಟಗೆಯಂ ಬಲವರುತಂ । ನೆಟ್ಟನೆನಿಜಲಿಂಗದರ್ಶನಂಗೆಯ್ದಪೆ ವೆಂ ॥ ದಿ

---

ಪ್ಯಾಗೋ ! ಅಂತೆ- ಹಾಗೆ, ಬಿಳ್ತ- ಬಿತ್ತಿ. * * * * * * *

ಎಂದಿನ- ಯಾವಾಗಲೂ ಆಗುತ್ತಿದ್ದ, ಪೆರ್ಬೆಳಸಂ- ಹೆಚ್ಚಾದ ಪೈರನ್ನು. ... ||೧೩||

ಬಿಳ್ತದೆಯುಂ- ಬೀಜವನ್ನು ಬಿತ್ತದೇನೆಯೂ, ಪೆಂಪು- ಆಧಿಕ್ಯವು. ... ||೧೪||

ಪಲರ್ಮೆಯಿಂ- ಅನೇಕ ಪ್ರಕಾರದಿಂದ, ತುರುಗಳಂ- ಹಸುಗಳನ್ನು, ತಸ್ಕರರಿಂ- ಕಳ್ಳರಿಂದ, ಕೊಳಿಸೆ- ತೆಗೆದುಕೊಂಡುಹೋಗಿಸಲು, ತುರುಪಟ್ಟಿಯಿಂ- ದನದ ಕೊಟ್ಟಿಗೆಯಿಂದ, ಇರುಳೊಳ್- ರಾತ್ರಿಯಲ್ಲಿ, ಕಡಂಗಿ- ಔತ್ಸುಕ್ಯಪಟ್ಟು. * * * * * * * * *

ಪಥದೊಳ್- ಮಾರ್ಗದಲ್ಲಿ, ಸತ್ಸರೋಜನದೀತೋಯಮಂ- ಒಳ್ಳೆಯ ಕೊಳ ಹೊಳೆಗಳ ನೀರನ್ನು, ವಾಯಕೆ- ಅಪಾಯಕ್ಕೆ, ದೋಷಂ- ಪಾಪವು, ಆಕಳ- ಹಸುವಿನ, ಪಿಂಡಂ- ಗುಂಪನ್ನು. ||೧೯||

ಅವುಗಳ್- ಹಸುಗಳು, ಅಂಬಾ ! ಎನುತ್ತೆ, ಮರುಕಂ- ದುಃಖವು. ... ||೨೦||

ಬಟ್ಟೆಯಂ- ಮಾರ್ಗವನ್ನು, ವ್ರತಹೀನಂಗಳ್- ಲಿಂಗದರ್ಶನಸ್ಪರ್ಶನವಿಲ್ಲದೆ ಹುಲ್ಲುನೀರನ್ನು ತಿಂದಿರ ಬಹುದಾದುದರಿಂದ ನೇಮದಪ್ಪಿದವು, ಅವಧರಿಸುತ್ತೆ- ನಿಶ್ಚೈಸುತ್ತಾ. * * * *

ಟ್ಟಣಿಸಿ ನಿಳ್ಕಿ ನೀಕ್ಷಿಸು । ತೊಟ್ಟಜೆಯಿಂದರುಚಿ ಕರೆಯುತಿರ್ದವು ಪಶುಗಳ್ ॥ ೨೧

ಕಂ ॥ ಒಳಗೆ ಕಡುಪಸಿದು ಬಡವಾ । ದೆಳೆಗರುಗ ಳ್ಕೇಳ್ದು ಮವರ ದನಿಯಂ ಬತ ಮಿಂ ॥ ದಳಿದು ಶಿವ ಕೆಂದು ಮರುಕವು।ಸುಳ ದರುಚದೆ ಸುಮ್ಮಿರ್ದ ವೆಳಸದೆಸುಧೆಯಂ॥

ವ ॥ ಅನಿತರೊ ಳೇಲೇಶ್ವರ ಕೇತಯ್ಯಂ ತುರುಗ ಳಾಹಾರಂಗೊಳದ ಬಗೆಯಂ ಬಗೆ ದಂತೆ ಕಂಡು ನಿಜವ್ರತಮಂ ಬಿಟ್ಟ ವಲ್ಲೆಂದು ತಿಳಿದು ಗೋಷ್ಠಕವಾಟಪುಟಮಂ ಭೋಂ ಕನೆ ಬಿರ್ಚ ಲೊಡನೆ ॥

ಕಂ॥ ಸಂದಣಿಸಿ ಪೊಕ್ಕು ಲಿಂಗದ । ಮುಂದ ಣ್ಗಿರದೆಯ್ದಿ ಕರುಗಳಂ ಬಗೆಯದೆ ನ॥ ಣ್ಪಿಂ ದೀಕ್ಷಿಸಿ ತುರುಗ ಳ್ಬಲ । ಮುದೆರಗುತೆ ಮುಟ್ಟಿ ಲಿಂಗಮಂ ಮಸ್ತಕದಿಂ ॥ ೨೩

ಕಂ॥ ಪರಿಸನನೇಮಮ ನೆಸಗು । ತ್ತುರುತರಮುದಮಾಳ್ದು ಶರಣನಡಿದಾವರೆ ಗಾ॥ ದರದಿಂ ನಸುಬಾಗುತೆ ನಿಂ । ದಿರೆ ಕಂಡಾಕೇತಿರಾಜ ನತಿಕೃಪೆಯಿಂದಂ ॥ ೨೪

ಕಂ ॥ ಎಳೆವುಲ್ಲಂ ತಿಳಿನೀರಂ । ಗಳಲನೆ ಮುಂದಿಟ್ಟ ನಾಗ ಳಾಕಳ ತಂಡಂ ॥ ಕೆಳೆ ಗೊಂಡು ಮೇವುತಂ ಪು । ಲ್ಗಳ ನಂಬುಗೊಳುತ್ತ ಕಳೆದು ದಧ್ವಶ್ರಮಮಂ ॥ ೨೫

ವ ॥ ಅಂತು ಕಳೆದು ಸಂತಸಂದಳೆ ದಿರ್ಪಾಗ ಳ್ಕರುಗ ಳಂತಾದುದೆಲ್ಲಮಂ ಕಂಡು ॥

ಕಂ ॥ ವ್ರತಭಂಗ ಮಿಲ್ಲ ಮಿವ ಕೆಂ । ದತಿಶಯಮುದಮಾಳ್ದು ತೊರೆದ ಪಶುಗಳ ಮೊಲೆಯಂ ॥ ಮತಿ ಮಿಗೆ ನಲಿದುಂಡವು ಜನ । ತತಿ ಯಚ್ಚರಿವಡೆದು ಕೀರ್ತಿಸುತ್ತಿರೆ ಧರೆಯೊಳ್ ॥ ... ... ... ... ೨೬

ಕಂ ॥ ಬಿಡದಾದವಲ್ತೆ ಪಶುಗಳು । ಮೊದನಾತ್ಮವ್ರತಮ ನಧಿಕಸಂಕಟದೊಳ ಮೆಂ॥ ದೊಡೆ ಬಿಟ್ಟ ಮನುಜ ನವರಿಂ । ಕಡೆ ನಿಜಸುವ್ರತಮ ನವನಿಯೊ ಳ್ಜಗದೇವಾ ॥ ೨೭

ಕಂ ॥ ಧರೆಯೊಳಗ್ಕೇತಿರಾಜನ । ಪರಿಯಂ ಮುನ್ನರಿದೆ ಯಪ್ಪೊಡೀಭವಿಸಂಗಂ॥ ದೊರಕೊಳ್ಳುಗೆ ನಿನ ಗೇಂದಾ । ಶರಣಾಗ್ರಣಿ ಯೊರೆದ ಮತ್ತ ಮಂದಿಂತೆಂದಂ ॥ ೨೮

---

ಬಲವರುತಂ- ಪ್ರದಕ್ಷಿಣೆ ಮಾಡುತ್ತಾ, ಇಟ್ಟಣಿಸಿ- ಸಾಂದ್ರವಾಗಿ, ನಿಳ್ಕಿಂ- ಮುಂದಕ್ಕೆ ನಿಗುರುವದ ರಿಂದ, ಈಕ್ಷಿಸುತೆ-ನೋಡುತ್ತಾ. ... ... ... ||೨೧||

ಅವರ- ಆ ಹಸುಗಳ, ದನಿಯಂ- ಶಬ್ದವನ್ನು, ಬತಂ- ವ್ರತವು, ಸುಧೆಯಂ- ಹಾಲನ್ನು, ಎಳಸದೆ- ಅಪೇಕ್ಷಿಸದೆ. ... ... ... ... ||೨೨||

ಬಗೆದು- ಆಲೋಚಿಸಿ, ಗೋಷ್ಠಕವಾಟಪುಟಮಂ-ಕೊಟ್ಟಗೆಯ ಕದಗಳೆರಡನ್ನು. * *

ಸಂದಣಿಸಿ- ಗುಂಪಾಗಿ, ನಣ್ಪಿಂದೆ- ನಂಟುದಿಂದ. ... ... ||೨೩||

ಪರಿಸನನೇಮಮಂ- ಲಿಂಗವಂ ಸ್ಪರ್ಶನೆಮಾಡುವ ನಿಯಮವನ್ನು, ನಸುಬಾಗುತೆ- ಸ್ವಲ್ಪಬ ಗ್ಗುತ್ತ. ... ... ... ... ||೨೪||

ತಂಡಂ- ಗುಂಪು, ಕೆಳೆಗೊಂಡು- ಜೊತೆಯಾಗಿ, ಅಂಬುಗೊಳುತ್ತೆ- ನೀರನ್ನು ಸ್ವೀಕರಿಸುತ್ತ, ಅ ಧ್ವಶ್ರಮಮಂ- ಮಾರ್ಗಾಯಾಸವನ್ನು, ... ... ... ||೨೫||

||೨೬|| ಬಿಡದಾದವಲ್ತೆ- ಬಿಡದೇಹೋದವಲ್ಲವೇ ? ಅವರಿಂ- ಆ ದನಗಳಿಗಿಂತಲೂ, ||೨೭||

ಅರಿದೆಯಪ್ಪೊಡೆ- ತಿಳಿದಿದ್ದೆಯಾಗಿದ್ದರೆ, ... ... ||೨೮||

ಚಂ ॥ ಧರೆಯೊಳ್ ನಾಚಿದೇವ ನೆನಿಪ್ಪೋರ್ವ ನುಮಾಧವಭಕ್ತ ನಾತ್ಮಸುಂ । ದರಿ ತ
ರುಣದ್ವಯಂಬುಧಿದ ಗರ್ಭಮ ನಾಳ್ದಿರುತಿರ್ದು ಪೆತ್ತೊ ಡೀ ॥ ರ್ವರ ನವರೊ ಳ್ಮೊದ ಲ್ಜ
ನಿಯಿಪಂಗೆ ದೃಢವ್ರತ ನೊಂದುಲಿಂಗಮಂ । ಧರಿಯಿಸಿ ಮತ್ತೆ ಪುಟ್ಟದುದ ನೀಕ್ಷಿಸಿ ಕಾಲ
ಮತೀತ ಮಪ್ಪುದುಂ ॥ ... ... ... ೨೯

ಕಂ ॥ ಲಿಂಗಮ ನದಕೆಳವಡಿಸದೆ । ಪಿಂಗಿರೆ ಕಂಡಬಲೆ ನುಡಿದ ಳೀಶಿಶು ಗೀಗಳ್ ॥ ಸಂ
ಗತ ಮಪ್ಪಂತಿರೆ ಶಿವ । ಲಿಂಗಮ ನಳವಡಿಸ ದಿರ್ಪಿ ರೇಂಕಾರಣದಿಂ ॥ ೩೦

ಕಂ ॥ ಎನೆ ನಾಚಿರಾಜ ನೆಂದಂ । ವನಿತೆಗೆ ಕೇ ಳ್ತರುಣಿ ತರುಣ ನರ್ಧೋದಯದೊ
ಳ್ ॥ ಘನಲಿಂಗಮ ನಳವಡಿಪ್ಪುದು । ವಿನುತಾಗಮವಿಹಿತವೀರಶೈವಾಚರಣಂ ॥ ೩೧

ಕಂ ॥ ಅಳವಡ ಲೀಶಿಶುವಿಂ ಗಾ । ವಿಳಸತ್ಕ್ರಿಯೆ ಬಿಸುಟು ಕಳೆಯು ದದರಿಂ ದಿದ
ನೆಂ ॥ ದಿಳೆ ಯರಿಯೆ ಬಿಸುಡಿಸಿದ ನಾ । ಗಳೆ ಮಗುವಂ ಭಕ್ತ ನೆಂದೊಡೇಂವಣ್ಣಿಪುದೊ ॥

ಕಂ ॥ ಇಂತೆಸೆವ ವೀರಶೈವಮ । ಹಾಂತರ ಸನ್ಮಾರ್ಗ ವೊಪ್ಪುವಂತಿರೆ ಬಿಟ್ಟದ ನೋ॥
ರಂತೆ ಕುಮಾರ್ಗ್ಗದೊ ಳಡಿಯಿಡ । ಲಂತೊಲ್ದೆ ದುರಾತ್ಮಬೋಧೆ ಯೇಗೆಯ್ಯದೊ ಪೇಳ್ ॥

ಕಂ ॥ ಅಲ್ಲದುದ ನಪ್ಪುಗೆಯ್ಸುವ । ರಿಲ್ಲದುದಂ ತೋರ್ಪ ರುಳ್ಳುದಂ ಮಾಚಿಪ ರೆ ॥
ಲ್ಲೆಲ್ಲಿಯು ಮೀಖಳ ರವನೀ । ವಲ್ಲಭರ ಮರುಳ್ಚಿ ಸೆಳೆವ ರೀಪ್ಸಿತವಸುವಂ ॥ ೩೪

ಕಂ ॥ ವಿಮಳನಿಗಮಾಂತಗದಿತೋ । ತ್ತಮಶಿವಧರ್ಮಮ ನಗಲ್ದು ಮುನಿಶಾಪಹತ॥
ರ್ಕುಮತಮ ನವಲಂಬಿಸಿ ದು । ರ್ದಮರೀದ್ವಿಜ ರಭವಭಕ್ತರಂ ನಿಂದಿಸುವರ್ ॥ ೩೫

---

ಆತ್ಮಸುಂದರಿ- ತನ್ನ ಹೆಂಡತಿಯು, ತರುಣದ್ವಯಾಂಬುಧಿದ ಎರಡು ಮಕ್ಕಳು ತುಂಬಿದ, ಜನಿಯಿಪಂ
ಗೆ- ಹುಟ್ಟುತಿರುವವನಿಗೆ, ದೃಢವ್ರತಂ- ಸ್ಥಿರವಾದ ವೀರಶೈವ ನಿಯಮವುಳ್ಳ ನಾಚಿದೇವನು, ಅತೀತಂ- ಕ
ಳೆದುಹೋದದ್ದು, ... ... ... ||೨೯||

ಅದಕೆ- ಆ ಕಡೆಯಲ್ಲಿ ಹುಟ್ಟಿದ ಮಗುವಿಗೆ, ಅಳವಡಿಸದೆ- ಧರಿಸದೆ, ಪಿಂಗಿ- ಬಂದುಕಡೆಗೆಹೋಗಿ, ಅ
ಬಲೆ- ಹೆಂಡತಿಯು, ಇರ್ಪಿರ್- ಇರುವಿರಿ ? ... ... ||೩೦||

ಅರ್ಧೋದಯದೊಳ್- ಗರ್ಭದಿಂದರ್ಧಭಾಗವೀಚೆಗೆಹುಟ್ಟಿರುವಲ್ಲಿ, ವಿನುತಾಗಮವಿಹಿತವೀರಶೈವಾ
ಚರಣಂ-ಶ್ಲಾಘ್ಯಗಳಾದ ಆಗಮಗಳಲ್ಲಿ ಹೇಳಲ್ಪಟ್ಟ ವೀರಶೈವನಡತೆಯು. ... ||೩೧||

ಆವಿಳಸತ್ಕ್ರಿಯೆ- ಆ ಪ್ರಕಾಶಿಸುವ ಲಿಂಗಧಾರಣಕರ್ಮವು. ... ... ||೩೨||

ವೀರಶೈವಮಹಾಂತರ- ದೊಡ್ಡವರಾದ ವೀರಶೈವರ, ಅಡಿಯಿಡಲ್- ಹೆಜ್ಜೆಯನ್ನಿಡುವದಕ್ಕೆ, ಒಲ್ದೆ-
ಪ್ರೀತಿಸಿದೆ ? ದುರಾತ್ಮಬೋಧೆ- ಕೆಟ್ಟವರ ಉಪದೇಶವು, ಏಗೆಯ್ಯದೊ- ಏನನ್ನುತಾನೇ ಮಾಡುವದಿಲ್ಲ ?

ಅಪ್ಪುಗೆಯ್ಸುವರ್- ಅಂಗೀಕರಿಸಿಸುವರು, ಉಳ್ಳುದಂ- ಇರುವದನ್ನು, ಮಾಚಿಪರ್- ಮರೆಮಾಚುವ
ರು, ಈಖಳರ್- ಈ ನೀಚರಾದ ಬ್ರಾಹ್ಮಣರು, ಅವನೀವಲ್ಲಭರ- ರಾಜರನ್ನು, ಮರುಳ್ಚಿ- ಮಂಕುಮಾಡಿ,
ಈಪ್ಸಿತವಸುವಂ- ಇಷ್ಟಾರ್ಥವನ್ನು, ಸೆಳೆವರ್- ಆಕರ್ಷಿಸುವರು, ... ||೩೪||

ವಿಮಳನಿಗಮಾಂತಗದಿತೋತ್ತಮಶಿವಧರ್ಮಮಂ- ನಿರ್ಮಲವಾದ ಉಪನಿಷತ್ತಿನಲ್ಲಿ ಹೇಳಲ್ಪಟ್ಟ ಉತ್ಕೃ
ಷ್ಟವಾದ ವೀರಶೈವಧರ್ಮವನ್ನು, (ಅಂದರೆ ತೈತ್ತರೀಯಾದ್ಯುಪನಿಷದುಕ್ತವಾದ "ಸರ್ವಲಿಂಗಂಸ್ಥಾಪಯ
ತಿ" ಇತ್ಯಾದಿ ವಾಕ್ಯಗಳಿಂ ಸಿದ್ಧವಾಗುವ ಲಿಂಗಧಾರಣಾದಿವೀರಶೈವಧರ್ಮವನ್ನು) ಅಗಲ್ದು- ಬಿಟ್ಟು, ಮುನಿ
ಶಾಪಹತರ್- ಗೌತಮಋಷಿಶಾಪದಿಂದ ಹೊಡೆಯಲ್ಪಟ್ಟವರು) ... ||೩೫||

ಕಂ ॥ ಹರಚರಣ ದ್ರೋಹಿಂಗ ಳೀ । ಶ್ವರವಿಮುಖರೆನಿಪ್ಪ ಪರಮಪಾಷಂಡ ರಿವ॥ ರಿ
ರ ಸಂಸರ್ಗಂ ಶ್ರೇಯ । ಸ್ಕರ ಮಕ್ಕುಮೆ ಲಿಂಗಭಕ್ತಸಂತತಿ ಗಿಳೆಯೊಳ್ ॥ ೩೬

ಚಂ ॥ ಪಶುಕುಲಪಾಶಹಾರಿ ಪರಮೇಶ್ವರ ನೊಪ್ಪಿರೆ ಬಿಟ್ಟು ನಲ್ಮೆಯಿಂ । ಪಶುಗಳ
ನಾವ ನೊಂದಿ ನಿಜಪಾಶವಿಮುಕ್ತಿಗೆ ಸೇವೆಗೆಯ್ವ ನಾ ॥ ಪಶುನರ ನಾಸ್ಯದೊ ಳ್ಮಸುವ
ಮೂಗರಿ ದಿಟ್ಟಿಗೆಯುರ್ಚಿ ಬೇಗಡಿಂ । ಪಶುಪತಿ ಯಾವೊಗಕ್ಕೆ ಮುಕುರಂಬಿಡಿ ದಾಗಳೆ
ತೋರದರ್ಪನ ॥ ... ... ... ೩೭

ಕಂ ॥ ವಿಮಳಾಂಬುವಿನೊ ಳ್ಬಿಂಬಿಪ । ಕಮಲಸಖು ಪಂಕದಲ್ಲಿ ಬಿಂಬಿಸುಗುಮೆ ಜಂ॥
ಗಮಲಿಂಗಭಕ್ತರೊಳೆ ತ । ಳ್ತಮಹೇಶ್ವರ ನನ್ಯಭವಿಗಳೊ ಳ್ಬೆರಸುಗುಮೆ ॥ ೩೮

ಉ ॥ ಬಲ್ಲನೆ ಗಾನಮಂ ಬಧಿರ ನಂಧಕ ನಗ್ಗದ ರತ್ನದೀಪಮಂ । ಬಲ್ಲನೆ ತತ್ಸುಧಾರ
ಸದ ಬಲ್ಪವಿಯಂ ಜ್ವರಿತಾಂಗಮಾನವಂ ॥ ಬಲ್ಲನೆ ಪುಚ್ಚುಗೊಂಡ ಮನುಜಂ ಶಿವತತ್ತ್ವ
ಸದರ್ಥ ಸಾರಮಂ । ಬಲ್ಲನೆ ಬಲ್ಲನೇ ಕುಕವಿ ಸತ್ಕವಿಕಾವ್ಯಕಲಾಕಲಾಪಮಂ ॥ ೩೯

ಮತ್ತೇ ॥ ಖರ ಮೇಂ ಬಲ್ಲುದೆ ನಾಕಲೋಕಸುಖಮಂ ಮಾಣಿಕ್ಯಮಂ ಧೂರ್ತವಾ ।
ನರಮೇಂ ಬಲ್ಲುದೆ ಗೂಗೆ ಬಲ್ಲುದೆ ಲಸನ್ಮಾರ್ತಾಂಡನಂ ಗಂಧಬಂ ॥ ಧುರಕಂಜಾತಮರಂದ
ಮಂ ನೊಳ ವದೆಂತುಂ ಬಲ್ಲುದೇ ಕರ್ದಮ । ಸ್ಥಿರಮಂಡೂಕ ಮೊರಲ್ದು ಬಲ್ಲುದೆ ಮಹಾಂ
ಭೋರಾಶಿಗಾಂಭೀರ್ಯಮಂ ॥ ... ... ... ೪೦

---

ಇವಂದಿರ-ಇವರ, ಸಂಸರ್ಗಂ- ಸಂಬಂಧವು, ಲಿಂಗಭಕ್ತಸಂತತಿಗೆ-ಶಿವಲಿಂಗಭಕ್ತಿಯುಳ್ಳವರ ಗುಂಪಿಗೆ,

ಪಶುಕುಲಪಾಶಹಾರಿ- ವಿಷ್ಣುಬ್ರಹ್ಮಾದಿಪಶುಗಳ ಮಾಯಾಪಾಶವನ್ನು ನಾಶಮಾಡುವ, ನಿಜಪಾಶ ವಿಮುಕ್ತಿಗೆ- ತಮ್ಮ ಮಾಯಾಪಾಶದ ಬಿಡುಗಡೆಗೋಸ್ಕರ, ಆಪಶುನರನ- ಆ ಮನುಷ್ಯಸ್ವರೂಪವಾದ ದನದ, ಆಸ್ಯದೊಳ್- ಮುಖದಲ್ಲಿ, ಮೂಗರಿದು- ಮೂಗನ್ನು ಕತ್ತರಿಸಿ, ದಿಟ್ಟಿಗೆಯುರ್ದ್ದಿ- ಇಟ್ಟಿಗೆಯಿಂದ ಉಜ್ಜಿ, ಪಶುಪತಿ- ಶಿವನು, ಆವೊಗಕ್ಕೆ- ಆ ಮೂಗನ್ನು ಕುಯ್ದಿರುವ ಮುಖಕ್ಕೆ, ಮುಕುರಂಬಿಡಿದು- ಕನ್ನಡಿಯಂ ಹಿಡಿದು, ... ... ... ॥೩೭॥

ವಿಮಳಾಂಬುವಿನೊಳ್- ನಿರ್ಮಲವಾದ ನೀರಿನಲ್ಲಿ, ಕಮಲಸಖಂ- ಸೂರ್ಯನು, ಪಂಕದಲ್ಲಿ- ಕೆಸರಿನಲ್ಲಿ, ಜಂಗಮಲಿಂಗಭಕ್ತರೊಳ್- ಜಂಗಮರು ಲಿಂಗಗಳು ಭಕ್ತರುಗಳಲ್ಲಿ, ತಳ್ತ- ಸೇರಿದ, ಅನ್ಯಭವಿಗಳ್- (ಮದ್ಯಪಾಯಿ, ಮಾಂಸಭಕ್ಷಕ, ಶಿವೇತರದೇವಪೂಜಕ, ಶಿವೇತರಮತವಾದಿ, ಶಿವಮತದೂಷಕ, ಈ ಐದು ಜನಗಳೂ ಭವಿಗಳು) ... ... ... ॥೩೮॥

ಬಧಿರಂ- ಕಿವುಡನು, ಅಂಧಕಂ- ಕುರುಡನು, ರತ್ನದೀಪಮಂ- ದೀಪದಂತಿರುವರನ್ನವನ್ನು, ಜ್ವರಿತಾಂಗ ಮಾನವಂ- ಜ್ವರರೋಗವಿಶಿಷ್ಟನಾದ ಮನುಷ್ಯನು, ತತ್ಸುಧಾರಸದ- ಆ ಹಾಲಿನ, ಬಲ್ಪವಿಯಂ- ಬಹಳವಾದ ರುಚಿಯನ್ನು, ಪುಚ್ಚುಗೊಂಡ- ಹುಚ್ಚು ಹಿಡಿದ, ಶಿವತತ್ತ್ವಸದರ್ಥಸಾರಮಂ- ಲಿಂಗಾಂಗಸಾಮರಸ್ಯವಂ ಬೋಧಿಸುವ ಶ್ರೇಷ್ಠವಾದ ಅಭಿಪ್ರಾಯವನ್ನು. ... ... ॥೩೯॥

ಖರಂ- ಕತ್ತೆಯು, ನಾಕಲೋಕಸುಖಮಂ- ಸ್ವರ್ಗದ ಸೌಖ್ಯವನ್ನು, ಧೂರ್ತವಾನರಂ- ನೀಚವಾದ ಕಪಿಯು, ಗಂಧಬಂಧುರಕಂಜಾತಮರಂದಮಂ- ಪರಿಮಳದಿಂದ ಮನೋಹರವಾದ ಕಮಲದ ಮಕರಂದವನ್ನು, ನೊಳಂ- ನೊಣವು, ಕರ್ದಮಸ್ಥಿರಮಂಡೂಕಂ- ಕೆಸರಿನಲ್ಲಿ ನೆಲಸಿರುವ ಕಪ್ಪೆಯು, ಮಹಾಂಭೋರಾಶಿಗಾಂಭೀರ್ಯಮಂ- ದೊಡ್ಡಸಮುದ್ರದಆಳವನ್ನು. ... ... ... ॥೪೦॥

ಕಂ ॥ ನಿನ್ನಾತ್ಮ ನದೇಂಬಲ್ಲುದೆ । ಪನ್ನಗಧರಶರಣಚರಣಸರಸಿಜಸೇವಾ ॥ ಸನ್ನುತ ಸುಖಮಂ ಭವಮದ । ಮನ್ನಾಗಮತಂಗಜಾರಿಯಂ ಜಗದೇವ ॥ ... ೪೧

ಚಂ॥ ಸುರಮಣಿ ಪಾಣಿಯಲ್ಲಿರೆ ಬಿಸು ಟ್ಟಳಿಗಾಜ ನಪೇಕ್ಷಿಪಂತೆ ನಿ । ರ್ಜರತರು ಪಿತ್ತಲ್ಲಿರೆ ತದರ್ಥನೆಗೆಯ್ಯದೆ ಬೂರಮಂ ಸವಂ ॥ ತೆರೆವವನಂತೆ ದೇವಪಶು ವಂಗಣದಲ್ಲಿರೆ ಮಾಣ್ದು ಕಳ್ತೆಯಂ । ಪಿರಿದಮರ್ದಿಂಟಲಾದರಿವವ್ರೋಲ್ನಿಧಿ ಮುಂದಿರೆ ನೂಂಕೆ ವಾರಿಯಿಂ ಮತ್ತೇ ॥ ಜರಗಂ ಕರ್ಚುವವ್ರೋಲ್ಸುಧಾಸುರಸ ಮಿಂಬಾಗುತ್ತೆ ಕೈವಟ್ಟಲ । ಲ್ಲಿರೆ ಕೂರ್ತಿಂಟದೆ ಗಂಜಿಯಿಂಟಲೆಸಪಂ ತಾವೋದ ದಾವೋದತಾ ॥ ಮರಸಂ ತಳ್ತಿರೆ ಬಿಟ್ಟು ಗೋರಟೆಯ ಪ್ರೊಗೊಲ್ವಂತೆವ್ರೋಲ್ಖಂಡಶ । ರ್ಕರೆ ಕೈಸಾರ್ದಿರೆ ಮೆಲ್ಲದಂ ತಿರಿಸಿ ಬೇವಂ ಮೆಲ್ವವ್ರೋಲ್ಭ್ರಾಂತಿಯೊಳ್ ॥ .. ... ೪೪

ಕಂ ॥ ವಿಮಳಶಿವಂಕರಶಿವಭ । ಕ್ತಿಮಾರ್ಗ ಮಿರೆ ವರ್ಜಿಸುತ್ತೆ ಭವಿಕರ್ಮವಿಧಾ ॥ ನಮ ನೊಲ್ದಿಸಗಿದೆ ಕೇಳೆಲೆ । ಕುಮತಿಕುಲೋತ್ತಂಸ ನಿನ್ನ ನೇಸಂದಪ್ಪುದೊ ॥ ೪೪

ಕಂ ॥ ಭವಸಾಗರಮಂ ದಾಂಟಿಪ । ಶಿವಭಕ್ತಿ ಯೆನಿಪ್ಪ ತೆಪ್ಪಮಂ ಸಾರದೆ ದು ॥ ರ್ಭವಿಭಜನ ಮೆಂಬ ತುಂಬೀ । ನವಫಲದೊಡೆದೋಡ ನೇಕೆಪಿಡಿದೆ ಮದಾಂಧ ॥ ೪೫

---

ಆತ್ಮಂ- ಚೇತನವು, ಭವಮದಮನ್ನಾಗಮತಂಗಜಾರಿಯಂ— ಭವ- ಸಂಸಾರವೆಂಬ, ಮದಮತ್- ಗರ್ವಯುಕ್ತವಾದ, ನಾಗ- ಆನೆಗೆ, ಮತಂಗಜಾರಿಯಂ- ಸಿಂಹವಾದ, ಪನ್ನಗ......ಸುಖಮಂ— ಪನ್ನಗಧರಶರಣ- ಶಿವಶರಣರ, ಚರಣಸರಸಿಜ- ಪಾದಕಮಲದ, ಸೇವಾ-ಸೇವಿಸುವಿಕೆಯಿಂದುಂಟಾಗುವ, ಸನ್ನುತ- ಶ್ಲಾಘ್ಯವಾದ, ಸುಖಮಂ- ಸೌಖ್ಯವನ್ನು. ... ... ... ॥೪೧॥

ಸುರಮಣಿ- ಚಿಂತಾರತ್ನವು, ಪಾಣಿಯಲ್ಲಿ- ಕಯ್ಯಲ್ಲಿ, ಅಳಿಗಾಜಂ- ಕೆಟ್ಟಗಾಜನ್ನು, ನಿರ್ಜರತರು- ಕಲ್ಪವೃಕ್ಷವು, ತದರ್ಥನೆಗೆಯ್ಯದೆ- ಅದನ್ನು ಬೇಡದೆ, ಬೂರಮಂ- ಬೂರುಗದ ಮರವನ್ನು, ಎರೆವವನಂತೆ- ಬೇಡುವವನಹಾಗೆ, ದೇವಪಶು- ಕಾಮಧೇನುವು, ಕಳ್ತೆಯಂ- ಕತ್ತೆಯನ್ನು, ಅಮರ್ದಿಂಟಲ್- ಹಾಲನ್ನು ಕುಡಿಯುವದಕ್ಕೆ. ... ... ... ... ... ॥೪೩॥

* ಜರಗಂ, ಕರ್ಚುವವೊಲ್- ತೊಳೆಯುವಹಾಗೆ, ಕೈವಟ್ಟಲಲ್ಲಿ- ಕಯ್ಯಲ್ಲಿರುವ ಬಟ್ಟಲಿನಲ್ಲಿ, ಗಂಜಿಯಿಂಟಲ್- ಗಂಜಿಯನ್ನು ಕುಡಿಯುವದಕ್ಕೆ, ಎಸಪಂತೆ- ಪ್ರಯತ್ನಪಡುವಹಾಗೆ, ಆಮೋದದಾಮೋದ ತಾಮರಸಂ— ಆಮೋದದ- ಸಂತೋಷವನ್ನೀಯುವ, ಆಮೋದ- ಪರಿಮಳಯುಕ್ತವಾದ, ತಾಮರಸಂ- ಕಮಲವು, ಗೋರಟೆಯ- ತ್ಯಾರಣೆಯ, ಖಂಡಶರ್ಕರೆ- ಕಲ್ಲುಸಕ್ಕರೆಯು, ಮೆಲ್ಲದೆ- ತಿನ್ನದೆ, ಬೇವಂ- ಬೇವಿನ ಹಣ್ಣನ್ನು. ... ... ... ... ॥೪೨॥

ವಿಮಳಶಿವಂಕರಶಿವಭಕ್ತಿಮಾರ್ಗಂ- ನಿರ್ಮಲವಾದ ಶುಭವನ್ನುಂಟುಮಾಡುವ ಶಿವಭಕ್ತಿಸರಣಿಯು, ಭವಿಕರ್ಮವಿಧಾನಮಂ- ಲಿಂಗಧಾರಿಗಳಲ್ಲದವರು ಮಾಡುವ ಕೆಲಸದ ರೀತಿಯನ್ನು, ಕುಮತಿಕುಲೋತ್ತಂಸ- ಮೂಢಬುದ್ಧಿಯುಳ್ಳವರಲ್ಲಿ ದೊಡ್ಡವನಾದವನೇ ! ... ... ... ॥೪೪॥

ಭವಿಭಜನಂ- ಲಿಂಗಹೀನರ ಸೇವೆಯು, ತುಂಬೀನವಫಲದ— ಹೊಸಸೋರೆಯ ಕಾಯಿಯ, ಒಡೆದ- ಒಡೆದುಹೋದ, ಓಡಂ- ಖಂಡವನ್ನು. ... ... ... ॥೪೫॥

---

* ಜಲಗಾರರು ಸ್ವರ್ಣಾದಿಪದಾರ್ಥವು ಸಿಕ್ಕೀತೆಂದು ನೀರಿನಲ್ಲಿ ಶೋಧಿಸುವದಕ್ಕೆ ತುಂಬಿಕೊಂಡಿರುವ ಮರಳು ಮಣ್ಣು ಮುಂತಾದ ಕಸ. ... ... ... ॥೪೩॥

ಕಂ॥ ಅಂಗುಳಮದೊರ್ೞವರಿಯ ಜೇಂ । ನಂಗಳದ ನಿಧಾನ ಮಾದ ಶಿವಭಕ್ತಿಯನೀಂ॥
ಪಿಂಗಿಭವಿವೃತ್ತಿದಾಳ್ದಿ ಕ । ಡುಂಗುತೆ ನಿನ್ನನ್ನ ನನ್ಯ ನಾವನೊ ಗಾಂಪಂ ॥ ೪೬

ಮತ್ತೇ ॥ ಜಲದೊಳ್ನಾಂದೆ ಶಿಲಾಚಯಕ್ಕೆ ಮೃದುಭಾವಂ ಬರ್ಪುದೇ ನೀರ್ಗಳಿಂ। ತೊಳೆಯುತ್ತಂ ಪಿಳಿದೆತ್ತೆ ಕಂಬಳಿ ಬೆಳರ್ಪಂ ತಾಳ್ವುದೇ ಪಾಲನು ॥ ವ್ಯಾಳಸರ್ಪಂ ಗೆರೆ ಡೋವೆ ನಿರ್ವಿಷತೆಯಂ ಕೈಕೊಳ್ವುದೇ ಕಟ್ಟನೇ । ರ್ಪಳವ ಟ್ಟೊಪ್ಪಿರೆ ನೀವೆ ಜಾಡಿಲನ ಬಾಲಂ ನೇರಿ ತೇನಪ್ಪುದೆ ॥ ... ... ... ೪೭

ಕಂ ॥ ನಿಂಬ ಮಿನಿದಪ್ಪುದೇಮಧು । ಮ ಬೆರಸುತೆ ಪಾಲ ನೆರೆಯೆ ಮೂಢಂ ಗೆನಿಪುಂ ॥ ಬೆಂಬಿಡದೆ ಜೋಧಿಸಿದೊಡಂ । ತ್ರ್ಯಂಬಕಪದಭಕ್ತಿಸೌಖ್ಯವಾಂಪನೆ ಧರೆಯೊಳ್ ॥

ಕಂ ॥ ಭವನದ ಮುಂಗಡೆಯೊಪ್ಪುವ । ಕವಿಲೆಯ ನುಳಿ ದಧಮಶುನಕನಂ ಪೂಜಿಪವೋಂ ॥ ಲ್ಶಿವನ ನುಳಿ ದಧಮದೈವವ । ನವಿವೇಕದಿ ನರ್ಚಿಪಾತನೇಂ ಜಡಮತಿಯೊ ॥

ಕಂ ॥ ಹರನಂ ಪೂಜಿಸ ದುಳಿ ದ । ಧ್ವರಮಂ ಖಲದಕ್ಷನೆಸಗಿ ಪರದೇವತೆಯಂ ॥ ಪಿರಿದರ್ಚಿಸಿ ದುರ್ಮತಿ ನಿಜ । ಶಿರಮಂ ಪೋಗಾಡಿ ನಗಿಸಿ ಕೊಂಡಂ ಧರೆಯೊಳ್ ॥ ೫೦

ಕಂ ॥ ಭೂತಳದೊಳಂದು ಭೂಸುರ । ಜಾತಮ ನರ್ಚಿಸಿದಗೌತಮಂ ಗೋಹತ್ಯಾ॥ ಪಾತಕ ಕೊಳಗಾದಂಗಡ । ಮಾತೇಂ ದ್ವಿಜಭಜನವೊಳ್ಪ ನೇಂಸಾರ್ಚುಗುಮೆ ॥ ೫೧

ಕಂ ॥ ತರುಣಿಗೆ ಕಿಡುವುದು ಗಡ ಪಾ । ದರದಿಂ ಚಿರಕಾಲರಚಿತಪತಿಭಕ್ತಿ ಮಹೇ ॥ ಶ್ವರಭಕ್ತಿ ಯಳಿಗು ಮನ್ಯಾಮರಭಜನದಿ ನೀಶಭಕ್ತನಾದಂ ಗಿಳೆಯೊಳ್ ॥ ೫೨

ಕಂ ॥ ಪರದೈವಭಜನದಿಂ ಭ । ಕ್ತಿರಸಂ ಬರಿದಪ್ಪುದೊಡೆದ ಕುಂಭದ ಜಲದಂ ॥

---

ಅಂಗುಳ- ಗುಟುಕಿನಲ್ಲಿರುವ, ಅಮರ್ದು- ಅಮೃತವು, ಓವರಿಯ-ಸಮೀಪದಲ್ಲಿರುವ, ಜೇನ್- ಜೇನುತುಪ್ಪವು, ಅಂಗಳದ- ಮನೆಯ ಪ್ರದೇಶದಲ್ಲಿರುವ, ನಿಧಾನಂ-ನಿಕ್ಷೇಪವು, ಪಿಂಗಿ-ಬಿಟ್ಟು, ಭವಿವೃತ್ತಿದಾಳ್ದಿ- ಭವಿಗಳ ನಡತೆಯನ್ನು ಧರಿಸಿದ, ನಿನ್ನನ್ನಂ- ನಿನ್ನಂಥಾವನು, ಗಾಂಪಂ- ಮೂಢನು. ... ॥೪೬॥

ಶಿಲಾಚಯಕ್ಕೆ- ಕಲ್ಲುಗಳ ಗುಂಪಿಗೆ, ಮೃದುಭಾವಂ- ಮೆತ್ತಗಾಗುವಿಕೆಯು, ಪಿಳಿದು- ಹಿಂಡಿ, ಬೆಳರ್ಪಂ- ಧಾವಳ್ಯವನ್ನು, ಓವಿ- ಸಾಕಲು, ನಿರ್ವಿಷತೆಯಂ- ವಿಷವಿಲ್ಲದೇಇರುವಿಕೆಯನ್ನು, ನೇರ್ಪು- ನೆಟ್ಟಗಿರುವಿಕೆಯು, ನೀವೆ- ತಿಕ್ಕಲು, ಜಾಡಿಲನ- ನಾಯಿ, ನೇರಿತು- ನೆಟ್ಟಗಾದದ್ದು. ... ॥೪೭॥

ನಿಂಬಂ- ಬೇವಿನ ಮರವು, ಇನಿದು- ಮಧುರವಾದದ್ದು, ಮಧುವಂ- ಜೇನುತುಪ್ಪವನ್ನು, ಬೆಂಬಿಡದೆ- ಅವಿಚ್ಛಿನ್ನವಾಗಿ. ... ... ... ... ... ॥೪೮॥

ಕವಿಲೆಯಂ- ಕರಿಹಸುವನ್ನು, ಅಧಮಶುನಕನಂ- ನೀಚವಾದ ನಾಯನ್ನು. ... ॥೪೯॥

ಅಧ್ವರಮಂ- ಯಜ್ಞವನ್ನು, ನಗಿಸಿಕೊಂಡಂ- ಹಾಸ್ಯಮಾಡಿಸಿಕೊಂಡನು. ... ॥೫೦॥

ಅಂದು- ಆ ದ್ವಾದಶವರ್ಷಕ್ಷಾಮದಲ್ಲಿ, ಭೂಸುರಜಾತಮಂ- ಬ್ರಾಹ್ಮಣರ ಸಮೂಹವನ್ನು, ದ್ವಿಜಭಜನಂ- ಹಾರ್ವರನ್ನು ಸೇವಿಸುವಿಕೆಯು, ಒಳ್ಪಂ- ಸಮೀಚೀನತ್ವವನ್ನು. ... ॥೫೧॥

ಪಾದರದಿಂ- ವ್ಯಭಿಚಾರದಿಂದ, ಚಿರಕಾಲರಚಿತಪತಿಭಕ್ತಿ- ಬಹುಕಾಲದಿಂದ ಮಾಡಲ್ಪಟ್ಟ ಗಂಡನಲ್ಲಿ ಭಕ್ತಿಯು, ಕಿಡುವುದುಗಡ- ಕೆಟ್ಟುಹೋಗುವದಲ್ಲವೇ ? ಅನ್ಯಾಮರಭಜನದಿಂ- ಶಿವೇತರದೇವತೆಗಳನ್ನು ಸೇವಿಸುವದರಿಂದ. ... ... ... ... ... ॥೫೨॥

ತಿರೆ ಶೀಲಂ ತುಹಿನಂ ಬೊ । ಯ್ದರವಿಂದದವೋಲ್ವಿನಷ್ಟಮಪ್ಪುದು ನಿಜದಿಂ ॥ ೫೩

ಕಂ ॥ ಹರಭಕ್ತಂ ಗೋರ್ವಂ ಗಾ । ದರದಿಂ ದುಣಲಿತ್ತ ಸುಕೃತಕಣೆಯಲ್ತಮ
ಹೀ ॥ ಸುರಕೋಟಿ ಗುಣಲ್ಬಡಿಸುತೆ ॥ ನೆರಪಿದ ಸುಕೃತಂ ದಲೆಂಬು ದಾಗಮವಚನಂ ॥ ೫೪

ಕಂ ॥ ಸುವಿವೇಕಚಂದ್ರಜಲಧರ । ಮವಿವೇಕಮಹೀಜಬೀಜ ಮಘಘೂಕಸಮು ॥
ತ್ಸವಕರತಿಮಿರಂ ಭವಘೋ । ರವಿಷೋರಗದಂತ ಮಲ್ತೆ ಭವಿಸಂಸರ್ಗಂ ॥ ೫೫

ವ ॥ ಎಂದಿಂತು ಭಕ್ತಿರತ್ನಾಕರಂ ನುಡಿ ದಾಕ್ಷೇಪೋಕ್ತಿಗೇಳ್ದು ಜಗದೇವಂ ಬೆರ್ಚಿ ಬೆಗಡುಗೊಂಡು ನಿಜಾಪರಾಧವನು ನೆನೆದುಬೆಮರ್ತು ಕಂಪಿಸಿ ಶೋಕಾಕುಲೀಕೃತಚಿತ್ತನಾಗಿ ಸಾಷ್ಟಾಂಗವೆರಗಿ ಗಣಸಭೆಗೆ ಕೈಗಳಂ ಮುಗಿದು ನಿಂದು ॥ * * *

ಮತ್ತೇ ॥ ಅತಿಪಾಪಾತುರನಂ ವಿನಷ್ಟಮತಿಯಂ ದುಷ್ಟಾತ್ಮನಂ ಧೂರ್ತಸಂ । ಗ
ತನಂ ದುರ್ಮುಖನಂ ದುರುಕ್ತಿಪರನಂ ದುರ್ಭಾಗ್ಯನಂ ಸದ್ವ್ರತ ॥ ಚ್ಯುತನಂ ಸತ್ಯವಿಹೀ
ನನಂ ಖಲನ ನಾತ್ಮದ್ರೋಹಿಯಂ ದುರ್ಗುಣಾ । ನ್ವಿತನಂ ನಿತ್ಯಕೃತಾಪರಾಧಶತನಂ ನಿ
ರ್ಲಜ್ಜನಂ ನೀಚನಂ ॥ ... ... ... ೫೬

ಕಂ ॥ ಶಿವಭಕ್ತಿದೂರನಂ ಶಾಂ । ಭವಮಹಿಮೆಯ ನರಿಯದಜ್ಞನಂ ತಾಮಸನಂ ॥
ಭವಪಂಕಮಗ್ನಪಶುವಂ । ತವೆ ರಕ್ಷಿಪ್ಪು ದೆನ್ನ ನೆಲೆ ಕೃಪಾರಸಜಲಧಿ ॥ ೫೭

ವ ॥ ಎಂದತಿದೈನ್ಯಂ ಮಿಗೆ ಬಿನ್ನವಿಸಿ ಮತ್ಕೃತಾಪರಾಧೋಚಿತಪ್ರಾಯಶ್ಚಿತ್ತವೊಂದಂ ದಯೆದಿಂ ನಿರೂಪಿಸಲ್ವೇಳ್ಕು ಮೆನೆ ಶರಣಗಣಾಜ್ಞೆಯಿಂ ಶಿವಜ್ಞಾನಧುರೀಣನಿಂತೆಂದಂ ॥ * * * * * * * * *

ಕಂ ॥ ಜಗದೇವ ಕೇಳ್ವು ದೆಸೆನೀ । ನಗರದೊಳೊಗೆಯುದು ವಲಂ ಶಿವದ್ರೋಹ
ಮದಂ ॥ ನೆಗಳ್ದನ ನಂತಕಪುರವಂ । ಪುಗಿ ನೆಲೆ ನೀಂ ನೆಗಳ್ದ ದೋಷ ಕಿದ ಪರಿಹಾರಂ ॥

---

ಶೀಲಂ- ಸದಾಚಾರವು, ತುಹಿನಂಬೊಯ್ದು-ಹಿಮವನ್ನು ಸುರಿದ, ಅರವಿಂದದವೋಲ್-ಕಮಲದಹಾಗೆ. ನೆರಪಿದ- ಸಂಪಾದಿಸಿದ, ದಲ್- ನಿಜವು. ... ... ... ॥೫೪॥

ಭವಿಸಂಸರ್ಗಂ- ಲಿಂಗಹೀನರ ಸಂಗವು, ಸುವಿವೇಕಚಂದ್ರಜಲಧರಂ- ಒಳ್ಳೆಯ ತಿಳುವಳಿಕೆಯೆಂಬ ಚಂದ್ರನಿಗೆ ಮೋಡವು, ಅವಿವೇಕಮಹೀಜಬೀಜಂ- ಅಜ್ಞಾನವೆಂಬ ಮರಕ್ಕೆ ಬಿತ್ತವು, ಅಘಘೂಕಸಮುತ್ಸವಕರತಿಮಿರಂ- ಪಾಪವೆಂಬ ಗೂಬೆಗೆ ಸಂತೋಷವನ್ನುಂಟುಮಾಡುವ ಕತ್ತಲೆಯು, ಭವಘೋರವಿಷೋರಗದಂತಂ- ಸಂಸಾರವೆಂಬ ಭಯಂಕರವಾದ ವಿಷವುಳ್ಳ ಸರ್ಪದ ಹಲ್ಲು. ... ... ॥೫೫॥

ಬೆಗಡುಗೊಂಡು- ಬೆರಗಾಗಿ, ಶೋಕಾಕುಲೀಕೃತಚಿತ್ತಂ-ದುಃಖದಿಂದ ಕದಡಲ್ಪಟ್ಟ ಮನಸ್ಸುಳ್ಳವನು.

ಅತಿಪಾಪಾತುರನಂ- ಬಹು ಪಾಪಕರ್ಮದಲ್ಲಿ ಕುತೂಹಲವುಳ್ಳ, ವಿನಷ್ಟಮತಿಯಂ-ಹಾಳಾದ ಬುದ್ಧಿಯುಳ್ಳ, ಧೂರ್ತಸಂಗತನಂ- ನೀಚರೊಡನೆ ಕೂಡಿದ, ಸದ್ವ್ರತಚ್ಯುತನಂ- ಒಳ್ಳೆಯ ನಡತೆಯಿಂದ ಜಾರಿದ, ಆತ್ಮದ್ರೋಹಿಯಂ- ತನಗೆ ತಾನೇ ದ್ರೋಹವ ಮಾಡಿದ, ನಿತ್ಯಕೃತಾಪರಾಧಶತನಂ- ಪ್ರತಿದಿನದಲ್ಲೂ ಮಾಡಲ್ಪಟ್ಟ ಅನೇಕ ತಪ್ಪುಗಳುಳ್ಳ, ನಿರ್ಲಜ್ಜನಂ- ನಾಚಿಕೆಯಿಲ್ಲದ. ... ... ॥೫೬॥

ತಾಮಸನಂ- ಅಧಿಕವಾದ ತಮೋಗುಣವುಳ್ಳ, ಭವಪಂಕಮಗ್ನಪಶುವಂ- ಜನನಮರಣಾತ್ಮಕವಾದ ಸಂಸಾರವೆಂಬ ಕೆಸರಿನಲ್ಲಿ ಮುಳುಗಿದ ದನವಾದ. ... ... ... ॥೫೭॥

ವಲಂ- ನಿಜವಾಗಿ, ಒಗೆಯುದು- ಹುಟ್ಟುವದು, ಅಂತಕಪುರವಂ- ಯಮನಪಟ್ಟಣವನ್ನು. ॥೫೮॥

ವ॥ ಎನೆ ದೇವ ಮಹಾಪ್ರಸಾದಮೆಂತೆ ಮಾಳ್ಪೆನೆಂದೆರಗಿ ತದ್ದತ್ತವೀರತಾಂಬೂಲಮಂ ಕೊಂಡು ವಿಜಯೋದ್ಧತಂ ಬಸವಪ್ರಮುಖಶಿವಗಣಂಗಳ್ಗೆ ದಯೆಪುಟ್ಟುವಂತೆ ದಾಸಭಾವಂದೋರಿ ಮಗುಳ್ದು ಮೆಯ್ಯಿಕ್ಕಿ ನಿಜಗೃಹಕ್ಕೆ ಬಿಜಯಂಗೆಯ್ಸಿ ತಂದು ಸಾದರಂಮಿಗೆ ಪಾದಪ್ರಕ್ಷಾಳನಂಗೆಯ್ದು ಪಾದೋದಕಂದಳೆದು ಸಾಂಗಮೆನೆ ತತ್ಪೂಜೆಯ ನೋಜೆಯಿಂ ವಿರಚಿಸಿದಾಗಳ್ ॥ * * * * * * * *

ಕಂ ॥ ಫಣಿರಾಡ್ಭೂಷಣನ ಮಹಾ । ಗಣತತಿ ಜಗದೇವರಚಿತಪೂಜೋತ್ಸವದಿಂ ॥
ತಣಿವೇರಿ ಶಿವಸುಖದಸಂ । ದಣಿವಡೆ ದೊಪ್ಪಿದುರ್ದ ದತುಳಸಂಭ್ರಮದಿಂದಂ ॥ ೫೯

ವ॥ ಆಪ್ರಸ್ತಾವದೊಳ್॥ * * * * * * *

ಮ ॥ ಸ್ರ॥ ಶರಣಾನಂದಾಬ್ಧಿಚಂದ್ರಂ ಶಿವಗಣಚರಣಾಂಭೋಜಪೂಜಾವಿತಂದ್ರಂ । ಕರುಣಾಪೂರ್ಣಾಂತರಂಗಂ ಕಲಿತನಿಜಶಿವಾದ್ವೈತವಿದ್ಯಾಪ್ರಸಂಗಂ ॥ ಪರಮಾರ್ಥಜ್ಞಾನದೀಪಂ ಪ್ರಬಳಜಗದುಪಾರೂಢಮಾಯಾವಿಲೋಪಂ । ಗುರುರೂಪಂ ರಂಜಿಸಿರ್ದಂ ಗುಣನಿಧಿವಿತತಾನಂದಸಾಂದ್ರಂ ವೃಷೇಂದ್ರಂ ॥ ... ... ೬೦

ಲಲಿತಪದವೃತ್ತ ॥ ಸತ್ಯಮಯವಾಕ್ಯ ಶುಭಕೃತ್ಯ ಚರಲಿಂಗಪದಭೃತ್ಯ ನಿಗಮಾಗಮವಿನುತ್ಯಮಹಿಮಾಂಕಾ । ಮಾತ್ಯಕುಲಶೇಖರ ವಿಭೂತ್ಯಧಿಕ ಭಕ್ತಹಿತ ಧೃತ್ಯತುಳವಿ

---

ತದ್ದತ್ತವೀರತಾಂಬೂಲಮಂ- ಆ ಬಸವೇಶ್ವರನಿಂದ ಕೊಡಲ್ಪಟ್ಟ ವೀರನಿಗೋಸ್ಕರ ಕೊಡುವ ಜಯಾರ್ಥವಾದ ವೀಳೆಯವನ್ನು, ವಿಜಯೋದ್ಧತಂ- ಜಯಿಸುವಿಕೆಯಿಂದ ಕೊಬ್ಬಿದವನಾಗಿ, ದಾಸಭಾವಂದೋರಿ- ಆಳ್ತನವಂ ತೋರ್ಪಡಿಸಿ, ಮೆಯ್ಯಿಕ್ಕಿ- ನಮಸ್ಕರಿಸಿ. * * * * *

ತಣಿವೇರಿ- ತೃಪ್ತಿಯಂ ಹೊಂದಿ, ಸಂದಣಿವಡೆದು- ಸಮೂಹವಂ ಪಡೆದು. ॥೫೯॥

ಈ ಮೇಲ್ಕಂಡ ಚರಿತ್ರಶ್ರುತನಾದ ಜಗದೇವನು ಮೊದಲು ಪ್ರಾಕೃತದ್ವಿಜನಾಗಿದ್ದು ವೀರಶೈವ ಮತದಲ್ಲಿ ಶ್ರದ್ಧೆಯುಂಟಾಗಿ ಲಿಂಗಧಾರಣವಂ ಮಾಡಿಸಿಕೊಂಡು ತನ್ನಮನೆಯ ಭೋಜನಕ್ಕೆ ಬಸವೇಶ್ವರಾದಿಯಾಗಿ ಶಿವಶರಣರೆಲ್ಲರಿಗೂ ಬಿನ್ನೈಸಿ ಅದೇ ದಿನವೇ ತನ್ನ ಪೂರ್ವಾನುಷಂಗಿಗಳ ಸಂಸರ್ಗವಂ ಬಿಡಲಾರದ ಭ್ರಮೆಯಿಂದ ಭವಿಗಳನ್ನು ಊಟಕ್ಕೆ ಬರಹೇಳಿ, ಇದಂ ತಿಳಿದ ಬಸವೇಶ್ವರನಿಂದ ಭವಿಸಂಗವಂ ಮಾಡಲಾಗದೆಂದುಪದೇಶಿಸಲ್ಪಟ್ಟವನಾಗಿ ಅನಂತರ ಕೇವಲ ಶಿವಭಕ್ತನಾದನೆಂದು ವಿದಿತವಾಗುತ್ತೆ. ... ... *

ವಿತಂದ್ರಂ- ಆಲಸ್ಯರಹಿತನಾದ, ಕಲಿತನಿಜಶಿವಾದ್ವೈತವಿದ್ಯಾಪ್ರಸಂಗಂ- ಈಶ್ವರ ಪಾರ್ವತಿಯರಿಗೆ ಅಭೇದವಂ ತಿಳಿಸುವ ಸ್ಥಿರವಾದ ವಿದ್ಯೆಯ ಪ್ರಸ್ತಾಪದಿಂ ಕೂಡಿದ, ಪರಮಾರ್ಥಜ್ಞಾನದೀಪಂ— ಪರಮಾರ್ಥಜ್ಞಾನ- ಉತ್ಕೃಷ್ಟವಾದ ಚತುರ್ವಿಧಪುರುಷಾರ್ಥಸಾಧಕವಾದ ಜ್ಞಾನಕ್ಕೆ, ದೀಪಂ- ಪ್ರಕಾಶಕನಾದ, ಪ್ರಬಳಜಗದುಪಾರೂಢಮಾಯಾವಿಲೋಪಂ- ಬಲವತ್ತರವಾದ ಜಗತ್ತನ್ನೇರಿರುವ ಮಾಯೆಯನ್ನು ನಾಶಮಾಡಿದ. ... ... ... ... ... ॥೬೦॥

ಸತ್ಯಮಯವಾಕ್ಯ- ಅಧಿಕವಾದ ಯಾಥಾರ್ಥ್ಯವುಳ್ಳ ಮಾತುಳ್ಳ, ಶುಭಕೃತ್ಯ- ಮಂಗಳಕರವಾದ ಕಾರ್ಯವುಳ್ಳ, ಚರಲಿಂಗಪದಭೃತ್ಯ- ಜಂಗಮಲಿಂಗದ ಪಾದಸೇವಕನಾದ, ನಿಗಮಾಗಮವಿನುತ್ಯಮಹಿಮಾಂಕ- ವೇದಗಳು ಆಗಮಗಳಿಂದ ಹೊಗಳಲ್ಪಡುವದಕ್ಕೆ ಯೋಗ್ಯವಾದ ಮಹತ್ವವೇ ಚಿಹ್ನವಾಗುಳ್ಳ, ಅಮಾತ್ಯಕುಲಶೇಖರ- ಮಂತ್ರಿಸಮುದಾಯಕ್ಕೆ ಶಿರೋಭೂಷಣನಾದ, (ಶ್ರೇಷ್ಠನಾದ) ವಿಭೂತ್ಯಧಿಕ- ಐಶ್ವರ್ಯದಿಂದಧಿಕನಾದ, ಭಕ್ತಹಿತ- ಶಿವಭಕ್ತರಿಗೆ ಆಪ್ತನಾದ, ಧೃತ್ಯತುಳವಿಸ್ಫುಟಿತಚೈತ್ಯಗೃಹವೃಂದಾ— ಧೃತ್ಯತುಳ- ಅಸ

ಸ್ಫುಟಿತಚೈತ್ಯಗೃಹವೃಂದಾ ॥ ಶ್ವೈತ್ಯರುಚಿರಾಂಗ ಸಿತಮತ್ಯನಘಪದ್ಮಭವಸೂತ್ಯನಿಶಗೇಯ ತತದೈತ್ಯಮದಭಂಗಾ । ಆದಿತ್ಯಶತದೀಪ್ತಿಯುತ ಯತ್ಯಮಳಚಿತ್ತಮಣಿಭಿತ್ತ್ಯನುಗಬಿಂಬ ಪೂರೆ ನಿತ್ಯ ಬಸವೇಶಾ ॥ ... ... ... ೬೧

ಮಂದಾಕ್ರಾಂತವೃತ್ತ ॥ ವಿದ್ಯಾರೂಪೇ ವಿಧಿವಿಧುವಧೂವಂದ್ಯಮಾನಾಂಘ್ರಿಪದ್ಮೇ । ವಿದ್ಯುದ್ವಲ್ಲೀ ಪ್ರತಿಭಕಟಾಕ್ಷಚ್ಛಟಾಭಾಸಮಾನೇ ॥ ಹೃದ್ಯಾಮರ್ತ್ಯಸ್ತುತಗುಣಗಣೇ ವಿಶ್ವಲೋಕೈಕಮಾತೇ । ಸದ್ಯೋಗೀಂದ್ರಪ್ರಕರವರದೇ ಪಾಲಿ ನೆನ್ನಂ ಭವಾನೀ ॥ ೬೨

ಗದ್ಯ ॥ ಇದು ವಿನಮದಖಿಳಸುರಾಸುರೇಂದ್ರಮಕುಟತಟಘಟಿತಮಣಿಗಣಾಗಣಿತತರುಣಿನಿಚಯತರುಣಾರುಣಾತಪಪರಿಲಸಿತಪರಮಶಿವಲಿಂಗಪಾದಾರವಿಂದಪರಾಗಭಸಿತಭಾಸುರಲಲಾಟಪಟ್ಟಸರಸಜನಮಾನಿತೋಭಯಕವಿತಾವಿಶಾರದಶ್ರೀಷಡಕ್ಷರಿದೇವಭಕ್ತಿವಿರಚಿತಶ್ರೀಮದ್ವೃಷಭೇಂದ್ರವಿಜಯಮಹಾಪುರಾಣದೊಳ್ ಜಗದೇವಕಥನಮೇಕಚತ್ವಾರಿಂಶಾಶ್ವಾಸಂ ಪರಿಸಮಾಪ್ತಂ ॥ ... ... ... .. ... ... *

ಏಕಚತ್ವಾರಿಂಶಾಶ್ವಾಸಂ ಸಂಪೂರ್ಣಂ.

---

ದೃಶವಾದ ಧೈರ್ಯದಿಂದ, ವಿಸ್ಫುಟಿತ- ಸೀಳಲ್ಪಟ್ಟ, ಚೈತ್ಯಗೃಹವೃಂದಾ- ಜಿನಬಸ್ತಿಗಳ ಸಮೂಹವುಳ್ಳ, ಶ್ವೈತ್ಯರುಚಿರಾಂಗ— ಶ್ವೈತ್ಯ- ಧಾವಳ್ಯದಿಂದ, ರುಚಿರ- ಮನೋಹರವಾದ, ಅಂಗ- ಶರೀರವುಳ್ಳ, ಸಿತಮತಿ-ಶುಭ್ರವಾದ ಬುದ್ಧಿಯುಳ್ಳ, ಅನಘಪದ್ಮಭವಸೂತ್ಯನಿಶಗೇಯ— ಅನಘ- ಪಾಪರಹಿತನಾದ, * ಪದ್ಮಭವಸೂತಿ- ನಾರದರ್ಷಿಯಿಂದ, ಗೇಯ- ಗಾನಮಾಡಲ್ಪಡುವದಕ್ಕೆ ಯೋಗ್ಯನಾದ, ತತದೈತ್ಯಮದಭಂಗ- ವಿಸ್ತಾರವಾದ ರಾಕ್ಷಸರ ಗರ್ವವನ್ನು ನಾಶಮಾಡಿದ, ಆದಿತ್ಯಶತದೀಪ್ತಿಯುತ- ಅನೇಕ ಸೂರ್ಯರ ಕಾಂತಿಯಂತಿರುವ ಕಾಂತಿಯಿಂದ ಕೂಡಿದ, ಯತ್ಯಮಳಚಿತ್ತಮಣಿಭಿತ್ತ್ಯನುಗಬಿಂಬ— ಯತಿ- ಋಷಿಗಳ, ಅಮಳ- ನಿರ್ಮಲವಾದ, ಚಿತ್ತ- ಮನಸ್ಸೆಂಬ, ಮಣಿಭಿತ್ತಿ- ರತ್ನದ ಗೋಡೆಯನ್ನು, ಅನುಗ- ಹೊಂದಿದ, ಬಿಂಬ- ಪ್ರತಿಛಾಯೆಯಾದ, ನಿತ್ಯ- ಶಾಶ್ವತನಾದ, ಬಸವೇಶಾ ! ಪೊರೆ. ... ... ॥೬೧॥

ವಿದ್ಯಾರೂಪೇ- ಚತುರ್ದಶವಿದ್ಯಾಸ್ವರೂಪಳಾದ, ವಿಧಿವಿಧುವಧೂವಂದ್ಯಮಾನಾಂಘ್ರಿಪದ್ಮೇ—ವಿಧಿ- ಬ್ರಹ್ಮ, ವಿಧು- ವಿಷ್ಣು, ಇವರುಗಳ, ವಧೂ- ಪತ್ನಿಯರಿಂದ, ವಂದ್ಯಮಾನ- ನಮಸ್ಕರಿಸಲ್ಪಡುವ, ಅಂಘ್ರಿಪದ್ಮೇ- ಕಮಲದಂತಿರುವ ಪಾದವುಳ್ಳ, ವಿದ್ಯು.....ಮಾನೇ— ವಿದ್ಯುದ್ವಲ್ಲೀ- ಬಳ್ಳಿಯಂತಿರುವ ಮಿಂಚೆಗೆ, ಪ್ರತಿಭ- ಸಧೃಶವಾದ, ಕಟಾಕ್ಷ- ಕಡೆಗಣ್ಣಿನ, ಛಟಾ- ಕಾಂತಿಮಂಜರಿಯಿಂದ, ಭಾಸಮಾನೇ- ಪ್ರಕಾಶಿಸುವ, ಹೃದ್ಯಾಮರ್ತ್ಯಸ್ತುತಗುಣಗಣೇ-ಮನೋಹರರಾದ ದೇವತೆಗಳಿಂದ ಹೊಗಳಲ್ಪಟ್ಟ ಸದ್ಗುಣಸಮುದಾಯವುಳ್ಳ, ವಿಶ್ವಲೋಕೈಕಮಾತೇ— ವಿಶ್ವ- ಸಮಸ್ತವಾದ, ಲೋಕ- ಲೋಕಗಳಿಗೆ, ಏಕಮಾತೇ- ಒಬ್ಬಳೇತಾಯಾದ, ಸದ್ಯೋಗೀಂದ್ರಪ್ರಕರವರದೇ- ಒಳ್ಳೆಯ ಋಷಿಶ್ರೇಷ್ಠರ ಗುಂಪಿಗೆ ಇಷ್ಟಾರ್ಥವನ್ನು ಕೊಡುವ, ಭವಾನೀ ! ಎನ್ನಂ, ಪಾಲಿಸು. ... ... ... ... ॥೬೨॥

---

* (ಅವ) ಪದ್ಮ- ಕಮಲದಿಂದ, ಭವ- ಹುಟ್ಟಿದ ಬ್ರಹ್ಮನದೆಸೆಯಿಂದ, ಸೂತಿ- ಉತ್ಪತ್ತಿಯುಳ್ಳವನು, (ಅಂದರೆ ಬ್ರಹ್ಮನ ಮಗ) ... ... ... ... ॥೬೧॥

ನಲ್ವತ್ತೊಂದನೆಯ ಆಶ್ವಾಸವು ಸಂಪೂರ್ಣವು.

## ಶ್ರೀಃ

ಸಚ್ಚಿದಾನಂದಸ್ವರೂಪಾಯ ಪರಬ್ರಹ್ಮಣೇನಮಃ.

## ದ್ವಿಚತ್ವಾರಿಂಶಾಶ್ವಾಸಂ.

### ಅಲ್ಲಯ್ಯಮಧುವಯ್ಯಕಥನಂ.

ಕಂ ॥ ಶ್ರೀಶಾಂಭವೀಶುಭಾಂಗನಿ । ವೇಶಿತವಾಮಾಂಗನಂಗಜಾಹಿತನುರಗಾ ॥ ಧೀಶ
ಧರನಮಳಗುಣನಿಧಿ । ಕೋಶಂ ಕುಡುಗೆಮಗೆ ಭಕ್ತಿಯಂ ಶಿವಲಿಂಗಂ ॥ ೧

ವ ॥ ಇಂತು ನಿಜಾಂತಃಪುರದೊಳ್ ಶೈವಗಣಾನುಭವಗೋಷ್ಠಿಯೊಳ್ ನೆಲಸಿ ಮಹಿಮಾಕರಂ ಸುಖಮಿರ್ಪನ್ನೆಗ ಮಾನಗರಿಯೊಳಲ್ಲಯ್ಯನುಂ ಮಧುವಯ್ಯನು ಮನೆ ಪೆಸರ್ವಡೆದು ॥ * * * * * * * * *

ಕಂ ॥ ಗುರುಚರಲಿಂಗಾರಾಧಕ । ರುರುತರಶೀಲವ್ರತಾನ್ವಿತರ್ಜಿತಮಾಯರ್ ॥ ಪರಮ
ಶಿವತತ್ತ್ವವಿದರೀ । ಶ್ವರಭಕ್ತವರೇಣ್ಯರೆಸೆವರಮಳಚರಿತ್ರರ್ ॥ ... ೨

ವ ॥ ಅಂತವರೀರ್ವರುಮನ್ಯೋನ್ಯಸಮಾರೂಢಸೌಹಾರ್ದದಿಂ ಕೆಲವಾನುಂದಿವಸಂ ಶಿವಭಕ್ತಿಸೌಖ್ಯದಿನೊಪ್ಪುತ್ತಮಿರ್ಪಿನಮಲ್ಲಿ ತಚ್ಚರಿತ್ರವೈಭವಮಂ ಕಂಡಸೂಯೆಯಿಂ ಸೈರಿಸಲಾರದೆ ಪಿಸುಣ್ಗೆಡೆದ ಪರಸಮಯಿಗಳ ಕುಹಕೋಕ್ತಿಯಂ ಕೇಳ್ದು ॥ *

ಕಂ ॥ ತಿಳಿದಿರ್ದುಂ ವೃಷಭೇಂದ್ರನ । ಬಳವನ್ಮಹಿಮೆಯನಘಾಗ್ನಿಶೋಷಿತಸಂವಿ ॥
ಜ್ಜಳಬಿಜ್ಜಳನಾಭಕ್ತರ । ವಿಳಸದ್ರುಚಿಲೋಚನಂಗಳಂ ತೆಗೆಯಿಸಿದಂ ॥ ೩

---

ಶ್ರೀ.....ವಾಮಾಂಗಂ— ಶ್ರೀಶಾಂಭವೀ- ಷಡ್ಗುಣೈಶ್ವರ್ಯಯುಕ್ತಳಾದ ಪಾರ್ವತಿಯು, ಶುಭಾಂಗ- ಮಂಗಳಕರವಾದ ಶರೀರಕ್ಕೆ, ನಿವೇಶಿತ- ಆಶ್ರಯವಾಗಿಮಾಡಲ್ಪಟ್ಟ, ವಾಮಾಂಗಂ- ಎಡಗಡೆಯದೇಹವುಳ್ಳ, ಅಂಗಜಾಹಿತಂ- ಮನ್ಮಥನಿಗೆ ಶತ್ರುವಾದ, ಉರಗಾಧೀಶಧರಂ- ಆದಿಶೇಷನನ್ನು ಧರಿಸಿರುವ, ಅಮಳಗುಣನಿಧಿಕೋಶಂ- ನಿರ್ಮಲವಾದ ಗುಣಗಳೆಂಬ ನಿಧಿಗೆ ಬೊಕ್ಕಸನಾದ. ... ... ॥೧॥

॥೨॥ ಅನ್ಯೋನ್ಯಸಮಾರೂಢಸೌಹಾರ್ದದಿಂ-ಒಬ್ಬರೊಬ್ಬರಲ್ಲಿ ಒಂದೇಸಮನಾಗಿ ಹತ್ತಿರುವ ಸ್ನೇಹದಿಂದ, ಪಿಸುಣ್ಗೆಡೆದ- ಚಾಡಿಯಂಹೇಳಿದ, ಪರಸಮಯಿಗಳ- ಇತರ ಮತಸ್ಥರ, ಕುಹಕೋಕ್ತಿಯಂ- ಕಪಟವಚನವನ್ನು. * * * * * * * * * *

ಅಘಾಗ್ನಿಶೋಷಿತಸಂವಿಜ್ಜಳಬಿಜ್ಜಳಂ— ಅಘ- ಪಾಪವೆಂಬ, ಅಗ್ನಿ- ಬೆಂಕಿಯಿಂದ, ಶೋಷಿತ- ಒಣಗಿಸಲ್ಪಟ್ಟ, ಸಂವಿತ್- ತಿಳುವಳಿಕೆಯೆಂಬ, ಜಳ- ನೀರುಳ್ಳ, ಬಿಜ್ಜಳಂ- ಬಿಜ್ಜಳರಾಜನು, ವಿಳಸದ್ರುಚಿಲೋಚನಂಗಳಂ- ಪ್ರಕಾಶಿಸುವ ಕಾಂತಿಯುಳ್ಳ ಕಣ್ಣುಗಳನ್ನು. ... ... ॥೩॥

ವ || ಅಗ ಳಾವಾಶ್ಚ ಗೇಳ್ದು ಕನಲ್ದು ವೃಷಭೇಂದ್ರಾದಿಗಣಂಗಳೊಂಡೆಯೊಳೊಂದುಗೂಡಿ ನಿಜಾನುಚರರಿಂ ತದ್ಭಕ್ತರುಂ ಬರಿಸಿ ಯಥೋಚಿತಸನ್ಮಾನಂಗೆಯ್ದು || *

ಕಂ || ಪರಮಶಿವಗಣ ದನುಜ್ಞೆಯ | ನಿರದಾಂತು ನಿರೀಕ್ಷಿಸುತ್ತೆ ತದ್ಭಕ್ತರ್ಗ್ || ದರದಿಂ ಕಣ್ಗಳ ನಿತ್ತುಂ | ಕರುಣಾನಿಧಿ ಬಸವ ನಸಮ ನನುಪಮಮಹಿಮಂ || ೪

ವ || ಅಂತಿತ್ತು ಜಗನ್ನುತ ನೊಪ್ಪಿರೆ ತತ್ಪುರದ ಪೌರಜನಂ ಗುಜುಗುಜುಂಗೊಂಡಲ್ಲಲ್ಲಿ ನೆರೆದು || * * * * * * * * *

ಕಂ || ಯಮಪುರಿಗೆಯ್ದುವ ಸಮಯಂ | ಸಮನಿಸಿದು ದಿಮಗೆ ನೃಪತಿ ಗಲ್ಲದೊಡೀದ್ರೋ || ಹಮ ನಳ್ಕದೆ ಮಾಳ್ಪನೆ ಮುಳ | ಯೆ ಮಹೇಶ್ವರಭಕ್ತರುಳಿವ ರಾ ರ್ಥ್ಗಾಣಿಯೊಳ್ || .. ... ... ೫

ಕಂ || ಹರಶರಣ ರಳವ ನವ ರುರು | ತರಮಹಿಮೆಯ ನೆಯ್ದೆ ಮುನ್ನ ಕಂಡರಿಯನೆ ಭೂ || ವರ ನಿಂತು ಶಿವದ್ರೋಹಮ | ನಿರದೆಸಗಿದ ನಕಟ ಕುಮತಿ ಯಿನ್ನುಳಿದಪನೇ || ೬

ವ || ಎಂದಲ್ಲಿ ನುಡಿಯುತ್ತ ಮಿರ್ಪಿನ ಮಾಹಶರಣಾವರೇಣ್ಯ ರೆಲ್ಲರ್ ಕೋಪ್ರೋದ್ದೀಪಿತಹೃದಯ ರೀಪೊಳಲೊ ಳನ್ನಿರಲ್ತಕ್ಕುದಲ್ಲೆಂದು ನಿರ್ಧರಿಸಿ ಜಗದೇವನಂ ಬಳಿಯಟ್ಟಿ ಬರಿಸಿ ಬಿಜ್ಜಳ ನೆಸಗಿ ದಪರಾಧಮ ನಮಗೊರೆದು || * * * *

ಕಂ || ಅಂದಿತ್ತ ನಿನ್ನ ಭಾಷೆಗೆ | ಬಂದುದು ದಿನ ವಿಾಮಹೇಶ್ವರದ್ರೋಹಿಯ ನೋ|| ರುದದೆ ಸಮ್ಹರಿಪುದು ನೀ | ನೆಂದಾಗ ಳ್ಬಸನ ನಿತ್ತು ಕಳುಪಿದ ರವನಂ || ೭

ವ | ಅಂತು ಕಳುಪಿ ಮಾಚಿದೇವನುಂ ಮಾಮಿರಾಜನುಂ ಸುರಗಿಯಚೌಡಯ್ಯನುಂ ಮುಸುಡೆಯಚೌಡಯ್ಯನುಂಕಿನ್ನರಬೊಮ್ಮಯ್ಯನುಂ ಕನ್ನದಬೊಮ್ಮಯ್ಯನುಂ ಕಲಕೇತಯ್ಯನುಂ ಕರುಳಕೇತಯ್ಯನುಂ ದಸರಯ್ಯನುಂ ಮುಖ್ಯರಾದಶಗಣ ಚರ್ಚರಲಿಂಗಸಂದೋಹದೊಡನೆ ಬಿಜ್ಜಳನಂ ಶಪಿಯಿಸಿ ಬಸವರಸನೊಡನೆ ಸಂಗಮಸ್ಥಾನ ಮೆನಿಪ್ಪ ಕಪ್ಪಡಿಗೇಳ್ತರುತ್ತ ಮಿರ್ದರಿತ್ತಲ್ || * * * * * * *

ಕಂ || ಪೊಳಲ ಸಿರಿ ತನ್ಮಹಾತ್ಮರ | ಬಳವಿಡಿ ದೆಯ್ದುದುದು ಪೊಳಲೊ ಳುತ್ಪಾತಶತಂ || ಮೊಳೆತು ಬಳೆದುರ್ಬಿ ಪರ್ಬಿದು | ದಿಳೆಕಂಪಿಸಿದತ್ತು ಪೆಳರ್ದು ದಾಪೌರಜನಂ|| ೮

ಕಂ || ಇರಲಾಗ ದಿನ್ನೆನುತ್ತುಂ | ಪುರವಂ ಪೊರಮಟ್ಟು ಪೋದ ರರೆಬ ಭೂಮಿಾ||

---

||೪|| ಅಳ್ಕದೆ- ಹೆದರದೆ. ... ... ... ||೫||

ಅಳವಂ- ಶಕ್ತಿಯನ್ನು, ಉರುತರಮಹಿಮೆಯಂ- ಉತ್ಕೃಷ್ಟವಾದ ಮಹತ್ವವನ್ನು, ||೬||

ತಕ್ಕುದು- ಯೋಗ್ಯವಾದದ್ದು, ಬಳಿಯಟ್ಟಿ- ಸಮಿಾಪಕ್ಕೆ ಕಳುಹಿಸಿ, * * *

ಬೆಸನಂ- ಆಜ್ಞೆಯನ್ನು, ... ... ... ||೭||

ಸಿರಿ- ಸಂಪತ್ತು, ಬಳವಿಡಿದು- ಸಾಮಿಪ್ಯವನ್ನನುಸರಿಸಿ, ಉತ್ಪಾತಶತಂ- ಅನೇಕ ದುಶ್ಶಕುನಗಳು, ಮೊಳೆತು- ತಲೆದೋರಿ, ಪೆಳರ್ದುದು- ಭಯಪಟ್ಟಿತು, ... ... ||೮||

ಅರೆಬರ್- ಕೆಲವರು, ಶಾಂತಿಹೋಮೋತ್ಕರಮಂ- ಮುಂದಾಗುವ ಕೆಡಕನ್ನು ಅಡಗಿಸುವದಕ್ಕಾಗಿ ಅಗ್ನಿಯಲ್ಲಾಹುತಿಕೊಡುವಿಕೆಗಳ ಸಮೂಹವನ್ನು, ... ... ||೯||

ಸುರ ರಲ್ಲಿ ಶಾಂತಿಹೋಽವೋಽ । ತ್ಕರವಮುಂ ನೆಗಳುತ್ತ ಮಿರ್ದ ರತಿಭಯಚಕಿತರ್ ॥ ೯

ಕಂ ॥ ಅಡರ್ದ ಮೃಗರಾಜಪೀಠಂ । ನಡುಗಿದುದು ನಿಜೋತ್ತಮಾಂಗಮುಂ ಜನಪಂ
ಕ ॥ ನ್ನಡಿಯಲ್ಲಿ ನೋಡಿ ಕಾಣದೆ । ಸಿಡಿಮಿಡಿಗೊಳುತಿರ್ದ ನಸ್ತಧೈರ್ಯೋದ್ರೇಕಂ ॥ ೧೦

ಕಂ॥ ಜಗದೇವಂ ಮನೆಗೇಳ್ತರೆ । ನೆಗಳ್ದಾತನ ಜನನಿ ವೀರಭಕ್ತಿರಸಂ ಕೈ ॥ ಮಿಗೆ
ನೋಡಿ ನುಡಿದ ಳಿಂತೆಂ । ದಗಲದೆ ನಿಜತನುಜನೊಡನೆ ಕನಲುತ್ತಾಗಳ್ ॥ ೧೧

ಕಂ ॥ ವಸುಧೆಯೊಳೆ ಶಿವದ್ರೋಹಮ । ನೆಸಗಿದನಂ ಕಂಡು ಸೈರಿಸುವ ನಾವ ನವಂ॥
ಮಸಕಂಗುಂದದ ಪಾಪ । ಪ್ರಸರಕೆ ಪಕ್ಕಾಗಿ ಭವಸರೋಧಿಯೊ ಳಾಳ್ಗುಂ ॥ ೧೨

ಮತ್ತೇ ॥ ಗಿರಿಶದ್ರೋಹಿಯ ನಿಕ್ಕಿ ಕೊಲ್ವುದು ಸಮರ್ಥಂಮಾಣ ದಾದಂದು ತಾಂ ।
ಮರಣಂಬೊಂದುವು ದಣ್ಮಿ ಶಕ್ತಿ ತನಗಿಲ್ಲಾದಂದು ಭಕ್ತಂಗೆ ಸ ॥ ಚ್ಚರಿತಂ ಮೋಽಣಿದು
ಯುಕ್ತ ಮಾತ್ಮಲಲನಾಪುತ್ರಾಪ್ತಮಿತ್ರರ್ಕಳೊ । ಳ್ಪುರಭಿದ್ದ್ರೋಹಮ ನಾಳ್ದರಂ ತರಿ
ದುರುಳ್ಬಲ್ವೇಳ್ಕು ಮಿಾಶಾಜ್ಞೆಯಿಂ ॥ ... ... ೧೩

ಕಂ ॥ ಹರನಿಂದೆಗೇಳ್ದು ತನ್ನಯ । ಹರಣಮ ನೇಂಬಡಳೆ ದೇವಿ ಯುಪಮನ್ಯು
ಮುನೀ ॥ ಶ್ವರ ನುರಿದು ಭಸ್ಮಮಾಗನೆ । ಗುರುತರನಿಜಕೋಽಪಶಿಖಿಯಿ ನೊಲ್ವಿನ ಮಭವಂ॥

ಕಂ ॥ ಅಸುವಂ ಶಿವಕಾರ್ಯಕೆ ಮಾ । ಡಿಸುವಧಮಂ ಗಲ್ಪಮತಿಗೆ ಕುಟಿಲಾತ್ಮಂಗೀ ॥
ರಸೆಯೊ ಳ್ಯಾವ ನೊಪ್ಪನೆ ಮ । ನ್ನಿಸುವರೆ ಗಣವರ್ಯ ರಕ್ಕುಮೇ ಮುಕ್ತಿಸುಖಂ ॥ ೧೫

ಮ ॥ ಸ್ರ॥ ಹರಭಕ್ತದ್ರೋಹಮುಂ ಮಾಡಿದ ನರಪತಿಯುಂ ಕೊಲ್ವುದುಂ ಕಾಯ್ವು
ದುಂ ಶಂ ! ಕರಭಕ್ತಪ್ರೋತ್ಕರ ಕ್ಕೇನರಿದೆ ಪಿರಿದೆ ತದ್ಭಕ್ತ ನೋರ್ವಂಗೆ ಕಾಯ್ಪಂ ॥
ನೆರಪುತ್ತಂ ಬಾಳ್ವ ನಾವಂ ಭುವನತತಿಯೊ ಳಿಂದ್ರಾಚ್ಯುತಾದ್ಯರ್ಕಳೊ ಳ್ನಿ । ನ್ನಿರವಂ
ನೋಡಲ್ಕೆ ಬೇಗಂ ಬೆಸಸಿ ತಳರ್ದ ರೀಕಜ್ಜಮಂ ಭಕ್ತವರ್ಯರ್ ॥ ೧೬

ಕಂ ॥ ಇದು ನಿನಗೆ ಸಮುಚಿತಂಗಡ । ಮೊದಲೊ ಳ್ನೀ ನಿತ್ತ ಭಾಷೆ ಸಲ್ವುದು ಖಳ

---

ಅಡರ್ದ- ಹತ್ತಿದ, ಮೃಗರಾಜಪೀಠಂ- ಸಿಹ್ಮಾಸನವು, ನಿಜೋತ್ತಮಾಂಗಮುಂ- ತನ್ನ ಶಿರಸ್ಸನ್ನು, ಸಿಡಿಮಿಡಿಗೊಳುತ್ತೆ-ಕಳವಳಪಡುತ್ತಾ, ಅಸ್ತಧೈರ್ಯೋದ್ರೇಕಂ- ಹಾಳಾದ ಧೈರ್ಯಾತಿಶಯವುಳ್ಳವನಾಗಿ. ॥೧೦॥

ನೆಗಳ್ದ- ಪ್ರಸಿದ್ಧಳಾದ, ಕೈಮಿಗೆ- ಅಧಿಕವಾಗಿ, ಕನಲುತ್ತೆ- ಕೋಪಿಸುತ್ತಾ ॥ ॥೧೧॥

ಮಸಕಂಗುಂದದ- ಆಧಿಕ್ಯವು ತಗ್ಗದ, ಪಕ್ಕು- ಆಸ್ಪದವು, ಭವಸರೋಧಿಯೊಳ್- ಸಂಸಾರಸಮುದ್ರದಲ್ಲಿ, ಆಳ್ಗುಂ-ಮುಳುಗುವನು. ... ... ... ... ॥೧೨॥

ಮಾಣದೆ- ತಪ್ಪದೆ, ಆದಂದು- ಆದಪಕ್ಷದಲ್ಲಿ, ಇಕ್ಕಿ- ಹೊಡೆದು, ಪುರಭಿದ್ದ್ರೋಹಮಂ- ಶಿವನಿಗೆ ಮೋಸವನ್ನು, ತರಿದು- ಕತ್ತರಿಸಿ ... ... ... ... ॥೧೩॥

ದೇವಿ- ಪಾರ್ವತಿಯು, ಗುರುತರನಿಜಕೋಪಶಿಖಿಯಿಂ- ಅತ್ಯಧಿಕವಾದ ತನ್ನ ಕೋಪವೆಂಬ ಬೆಂಕಿಯಿಂದ ... ... ... ... ... ... ॥೧೪॥

ಅಸುವಂ- ಪ್ರಾಣವನ್ನು, ... ... ... ... ॥೧೫॥

ಅರಿದೇಂ- ಅಸಾಧ್ಯವೇ ? ಕಾಯ್ಪಂ- ಕೋಪವನ್ನು, ನೆರಪುತ್ತಂ- ಉಂಟುಮಾಡುತ್ತಾ, ತಳರ್ದರ್- ಹೋದರು, ಈ ಕಜ್ಜಮಂ- ಈ ಕೆಲಸವನ್ನು, ... ... ... ॥೧೬॥

ನು ॥ ಸಡೆಯೆ ಸಡೆಯಲ್ಕಿ ನೀಂ ತ। ಳ್ವಿದೆ ದುರ್ಮತಿ ನಿನ್ನವೋಲ್ ಉದ್ದರಾತ್ಮರುವೊಳರೇ ॥

ಕಂ ॥ ನೆರೆ ಪೂಣ್ದು ಪೂಣ್ಕೆಯಂ ನೀಂ । ಮರೆದೆಯೊ ದೃಢವೀರಭಕ್ತಿಯುಜ್ಜುಗ ದೊಲವಂ ॥ ತೊರೆದೆಯೊ ನಿಜಾಸುಭಯದಿಂ । ಪೆರದೆಗೆದೆಯೊ ಪೇಳು ನನ್ನಿಯಂ ಜಗದೇವಾ ॥

ಮತ್ತೇ ॥ ಪ್ರಮಥದ್ರೋಹಿಯ ನಿಕ್ಕ ದಿಂತು ಮನೆ ಗೇಳ್ತೆಂದೈ ಮಹೇಶಪ್ರಸಾ। ದವ ನಾರೋಗಿಸ ಲೆಂದು ಛೀ ಖಳ ಗಣಾಜ್ಞೋಲ್ಲಂಘನಂಗೆಯ್ದ ದು ॥ ರ್ದಮ ನೀಂ ಕುರ್ಕುರ ನಪ್ಪೆ ಯೆಂದುರೆ ಚಿಟುಂಕಿಂ ದುಚ್ಛಿರೇ ಯೆಂ ದನು । ತ್ಕ್ರಮದಿಂದಾ ಕರೆಯುತ್ತೆ ಮಂದಿರಬಹಿರ್ದ್ವಾರಾಂತಭೂಭಾಗದೊಳ್ ॥ ... .. ೯೯

ಕಂ ॥ ಸುರಿದ ಳ್ಯವಪ್ರಸಾದಮ । ನಿರ ದಾಂ ಸೊಣಗಂ ದಲಪ್ಪೆ ನೆನು ತವ ನುಣ ಲೊ ॥ ಲ್ದಿರೆ ಬಂದ ರಲ್ಲಿ ಗತಿನಿ । ರ್ಭರದಿಂದಂ ಮಲ್ಲಬೊಮ್ಮ ರೆಂಬ ಮಹಾತ್ಮರ್ ॥ ೨೦

ಕಂ ॥ ಅವ ನೊಡ ನುಂಡ ಮರ್ಗದಿಂ । ಶಿವಪ್ರಸಾದಮ ನುದಗ್ರಶೌರ್ಯಾಭರಣ ॥ ರ್ಭವಭಕ್ತಿಭಾಸುರ ಶರ್ । ತ್ರುವಸಂಹರಣಪ್ರಸನ್ನಮಾನಸಮಹಿತರ್ ॥ ೨೧

ವ ॥ ಅನಂತರಂ ಜಗದೇವಸಮೇತಂ ತನ್ಮಾತೆಯ ಪದತಳಕ್ಕೆರಗಿ ನಲವರಕೆಗಳಂ ಗಲ್ಲಸೇಸೆಗಳಂ ಪಡೆದು ವೀರತಾಂಬೂಲಮಂ ಕೈಕೊಂಡು ದೇವಾಂಗಮಂ ಬಿಗಿದುಟ್ಟು ಬೀರ ಗಚ್ಚೆಯನನುರ್ಚಿ ಬಂಕುಡಿಯಂ ಕಟ್ಟಿ ಭಸಿತಮ ನಂಗದೊಳುದ್ಧೂಳಿಸಿ ರುದ್ರಾಕ್ಷಿಯ ತೊಡವಂ ತೊಟ್ಟು ಕಾಲ್ದರುಪ್ರ ನುಗ್ರಾವಾಂಗದಂತಿರ್ದ ಕರಾಳಖಡ್ಗಂಗಳಂ ಕರತಳದೊ ಳ್ಪಿಡಿದು ಝಡಿದು ವೀರಪ್ರಮಥರಂಘ್ರಿಗಳಂ ನೆನೆದು ಪಟುಶೌರ್ಯಾಟೋಪಮಂ ತಾಳ್ದು ಮಾಮುಪ್ಪರುಂ ಗೃಹಮಂಪೊರಮಟ್ಟು ರಾಜವೀಧಿಯೊ ಳ್ಸರಭಸಂ ಬರ್ಪಾಗ ಳ್ಮಟ್ಟೆಡರಲ್ಲಿ॥

ಕಂ ॥ ಮುಂಗಡೆಯೊ ಳೊಂದುವೃಷಭಂ । ಶೃಂಗಮ ನಾಡಿಸುತೆ ಮಂದಿಯಂ ತೊಲಗಿಸುತಂ ॥ ಮಂಗಳರವದಿಂ ಕೆಲೆಯುತೆ । ಕಂಗೊಳಿಸುತೆ ನಡೆಯೆ ಕಂಡು ಮುಂದಮಂ ತಳೆದರ್ ॥ ... ... ... ... ೨೨

---

ಸಡೆಯೆ- ಕೊಂದರೆ, ತಳ್ವಿದೆ- ಸಾವಕಾಶಮಾಡಿದೆ, ... ... ॥೧೭॥

ಪೂಣ್ದು- ಪ್ರತಿಜ್ಞೆಯಂಮಾಡಿದ, ಪೂಣ್ಕೆಯಂ- ಶಪಥವನ್ನು, ನಿಜಾಸುಭಯದಿಂ- ತನ್ನ ಪ್ರಾಣದ ಭೀತಿಯಿಂದ, ಪೆರದೆಗೆದೆಯೊ- ಹಿಂದೆಗೆದೆಯೋ ? ನನ್ನಿಯಂ- ನಿಜವನ್ನು. ... ॥೧೮॥

ಕುರ್ಕುರಂ- ನಾಯಿ, ಚಿಟುಂಕಿಂದೆ- ಚುಟುಕಿಯನ್ನುಹಾಕುವದರಿಂದ, ಅನುತ್ಕ್ರಮದಿಂ-ನೀಚತ್ವದಿಂದ, ಮಂದಿರಬಹಿರ್ದ್ವಾರಾಂತಭೂಭಾಗದೊಳ್-ಮನೆಯಹೊರಬಾಗಿಲ ಸಮೀಪದ ಭೂಪ್ರದೇಶದಲ್ಲಿ.

ಸೊಣಗಂ- ನಾಯಿ, ಒಲ್ದು- ಪ್ರೀತಿಸಿ, ಮಲ್ಲಬೊಮ್ಮರ್-ಮಲ್ಲಯ್ಯ ಬೊಮ್ಮಯ್ಯನೆಂಬವರಿಬ್ಬರು.

ಶಾತ್ರವಸಂಹರಣಪ್ರಸನ್ನಮಾನಸಮಹಿತರ್- ವೈರಿಗಳನ್ನು ಸಂಹರಿಸುವದರಲ್ಲಿ ನಿರ್ಮಲವಾದ ಮನಸ್ಸಿನಿಂದ ಪೂಜ್ಯರಾದ. ... ... ... ॥೨೧॥

ನಲವರಕೆಗಳಂ- ಸಂತೋಷಾಶೀರ್ವಾದಗಳನ್ನು, ಗೆಲ್ಲಸೇಸೆಗಳಂ- ಜಯಾರ್ಥವಾದ ಅಕ್ಷತಾರೋಪಣವನ್ನು, ದೇವಾಂಗಮಂ- ಮಡಿಯಬಟ್ಟೆಯನ್ನು, ಬೀರಗಚ್ಚೆಯಂ- ವೀರಗಾಸೆಯನ್ನು, ಬಂಕುಡಿಯಂ- ನಡುಕಟ್ಟನ್ನು, ಉಗ್ರಾವಾಂಗದಂತೆ, ಭಯಂಕರವಾದ ಕಡೆಗಣ್ಣಿನನೋಟದಹಾಗೆ. * *

ಶೃಂಗಮಂ- ಕೊಂಬನ್ನು, ತೊಲಗಿಸುತಂ- ದಾರಿಯಂ ಬಿಟ್ಟು ಅತ್ತಿತ್ತ ಕಳೆ ಹಿಸುತ್ತಾ. ಕೆಲೆಯುತೆ- ಶಬ್ದವಂ ಮಾಡುತ್ತಾ. ... ... ... ॥೨೨॥

ಕಂ ॥ ಬಂದರರಮನೆಯ ಬಾಗಿಲ । ಮುಂದಣ್ಗೆದಿರಲ್ಲಿ ಕಂಡರರಸೊಳ್ಗಳನೋ ॥ ರಂ
ದದ ಕರಿತುರಗಂಗಳ । ಸಂದಣಿಯಂ ಮಂತ್ರಿಮಾಂಡಳಿಕಪಟುಭಟರಂ ॥ ೨೩

ವ ॥ ಆತವರೆಲ್ಲರು ಮಿದಿರೊಳ್ಕಂ ಡಗಿದು ಕೆಲಂದೊಳಗೆ ರೌದ್ರರಸಂ ಮಸಗಿ ರು ದ್ರಾವತಾರ ರುತ್ಪಾತನಿಶಿತಾಸಿಗಳಂ ಕುರುಳ್ಚುತಂ ಬಂದು ಪಜ್ಜಳಿಪ ಬಿಜ್ಜಳನ ಸಭಾ ಸ್ಥಳಮಂ ಭೋಂಕನೆ ಪೊಕ್ಕು॥ * * * * * * *

ಮತ್ತೇ ॥ ಬಳಿಗೊಂಡಿರ್ದನುಯಾಯಿಗಳ್ಪಟುಭಟರ್ ಧಾತ್ರೀಶಪುತ್ರರ್ಕಳುಂ । ಜ್ವಳಖಡ್ಗಂಗಳ ನಾಂತಿದಿರ್ಚಲೆಸವಂದಂಗಂಡು ಮುಂಕೊಂಡು ತ ॥ ತ್ಫಳಕಾಸ್ಫೋಟನ ಮಾತ್ರದಿಂ ಬಿಡ ದದಿರ್ಚುತ್ತೋಡಿಸುತ್ತಂ ಕ್ರಂ । ಬಜ್ಜಳನಂ ಪೊಕ್ಕಿರಿದ ಕೃಪಾಣದಿ ನವರ್ವಿಕ್ರಾಂತವಿಶ್ವಾಧಿಕರ್ ॥ ... ... ... ೨೪

ಕಂ ॥ ಹರಭಕ್ತಕರಸ್ಪರ್ಶನ । ಪರಿಪೂತನಿಶಾತಖಡ್ಗದಿಂ ಮಡಿದ ಮಹೇ ॥ ಶ್ವರ
ನೈಂದ್ರಪದಮಂಬಡೆದಂ । ಪಿರಿದುತ್ಸವವಾಳ್ದು ಶರಣ ರುರ್ಬಿದ ರಾಗಳ್ ॥ ೨೫

ಮತ್ತೇ॥ ಹರಭಕ್ತರ್ಗೆ ಜಯಂ ಜಯಂ ಜಯ ಮೆನುತ್ತುದ್ಘೋಷಿಸುತ್ತಾರ್ದು ನಿ । ರ್ಭರದಿಂ ಸೀಳ್ದವನುನ್ನತೋದರಮ ನಲ್ಲಿ ಟ್ಟಾರ್ಪಿನಿಂ ಕೊಯ್ದು ತ ॥ ಚ್ಛಿರಮಂ ಭಕ್ತಗಣಾಜ್ಞೆಯಿಂ ನೆಗಳ್ದೆ ವಾವೀಕಜ್ಜಮಂ ಮಾಣದೆಂ । ದಿರದಾರ್ದೆತ್ತಿ ಕೃಪಾಣಮಂ ಜಡಿದು ಚಿಮ್ಮುತ್ತುಯ್ದ ವಿಕ್ರಾಂತದಿಂ ॥ ... ... ೨೬

ಕಂ ॥ ಹರಭಕ್ತದ್ರೋಹಮ ನಾ । ವಿರಚಿಪ ರವ ಗಿನ್ನೃಪಾಲಗತಿ ತಪ್ಪದೆನು ॥
ತ್ತಿರದೊಂದೋಲೆಯ ನೊಳ್ಪಿಂ । ಬರೆ ದಾತನ ಕೈಗೆ ಕಟ್ಟದ ರ್ಕಡುಗಲಿಗಳ್ ॥ ೨೭

ಕಂ ॥ ನಲಿನಲಿದು ನರ್ತಿಸುತೆ ಕರ । ಫಲಕಾಸ್ಫೋಟನಮ ನೆಸಗುತಂ ಕರವಾಳಂ ॥

---

ಅರಸೊಳ್ಗಳ- ರಾಜಭಟರನ್ನು, ಒರಂದದ- ಸಾಲಾದ. ... ॥೨೩॥

ಕೆಲಂದೊಳಗೆ- ಒಂದುಕಡೆಗೆ ಹೋಗಲು, ಉತ್ಪಾತನಿಶಿತಾಸಿಗಳಂ— ಉತ್ಪಾತ- ಕೊಲ್ಲುವದರಲ್ಲಿ, ನಿಶಿತ- ತೀಕ್ಷ್ಣವಾದ, ಅಸಿಗಳಂ- ಕತ್ತಿಗಳನ್ನು, ಕುರುಳ್ಚುತಂ- ಬಳಿಪಿಸುತ್ತಾ, ಭೋಂಕನೆ- ಬೇಗನೆ. *

ಬಳಿಗೊಂಡಿರ್ದ- ಸಮೀಪದಲ್ಲಿದ್ದ, ಅನುಯಾಯಿಗಳ್- ಸಹಚರರು, ಇದಿರ್ಚಲ್- ಎದರು ಬೀಳುವದಕ್ಕೆ, ಎಸಪ- ಪ್ರಯತ್ನಪಡುವ, ಅಂದಂಗಂಡು- ರೀತಿಯನ್ನು ನೋಡಿ, ಮುಂಕೊಂಡು- ಆತುರಪಟ್ಟು, ತತ್ಫಳಕಾಸ್ಫೋಟನಮಾತ್ರದಿಂ- ಆ ಗುರಾಣಿಯನ್ನು ಅಪ್ಪಳಿಸುವದರಿಂದಲೇ, ಅದಿರ್ಚುತ್ತೆ- ಅಟ್ಟಿ, ಕೃಪಾಣದಿಂ- ಕತ್ತಿಯಿಂದ, ಇಗಿದರ್- ಕತ್ತರಿಸಿದರು, ವಿಕ್ರಾಂತವಿಶ್ವಾಧಿಕರ್- ಪರಾಕ್ರಮವಿಷಯದಲ್ಲಿ ಪ್ರಪಂಚಕ್ಕೆಲ್ಲಾ ದೊಡ್ಡವರಾದ. ... ... ... ... ॥೨೪॥

ಹರಭಕ್ತಕರಸ್ಪರ್ಶನಪರಿಪೂತನಿಶಾತಖಡ್ಗದಿಂ- ಶಿವಭಕ್ತರ ಕೈಯ್ಯ ಸೋಂಕುವಿಕೆಯಿಂದ ಪರಿಶುದ್ಧವಾದ ತೀಕ್ಷ್ಣವಾದ ಕತ್ತಿಯಿಂದ, ಮಹೇಶ್ವರಂ- ಬಿಜ್ಜಳರಾಜನು, ಐಂದ್ರಪದಂಬಡೆದಂ- ಇಂದ್ರನ ಪದವಿಯನ್ನು ಹೊಂದಿದನು. ... ... ... ... ॥೨೫॥

ಉನ್ನತೋದರಮಂ- ದೊಡ್ಡಹೊಟ್ಟೆಯನ್ನು, ಆವ್- ನಾವು, ನೆಗಳ್ದೆವ್- ಮಾಡಿದೆವು, ಆರ್ದು- ಗಟ್ಟಿಯಾಗಿ ಕೂಗಿ, ಚಿಮ್ಮುತೆ- ನೆಗೆಯುತ್ತಾ. ... ... ॥೨೬॥

ಓಲೆಯಂ- ಪತ್ರವನ್ನು, ಒಳ್ಪಿಂ- ಚೆನ್ನಾಗಿ, ಕಡುಗಲಿಗಳ್- ಬಹು ಸಮರ್ಥರು. ॥೨೭॥

ಬಲಿದೆತ್ತಿ ಚಿಮ್ಮುತ್ತಂ ಕಲ | ಕಲರವದಿಂ ನಗುತೆ ಪಾಡುತಂ ಗಣತತಿಯಂ ‖ ೨೮

ಕಂ ‖ ಚಂಡಬಲ ರಿವರೊಡನೆ ಭೂ | ಮಂಡಲದೊಳ್ಸೆಣಸಲಾರ್ಪ ಕಲಿ ಯಾರೆನುತಂ ‖ ಮಂಡಳಿಕರಳ್ಕುತಿರೆ ನಡೆ | ಗೊಂಡ ಪ್ರೋರಮಟ್ಟು ಸಭೆಯಿ ನಭವನ ಸುಭಟರ್‖ ೨೯

ಕಂ ‖ ನಿಡುಸರದಿಂ ವಂದಿಗಳು | ಗ್ಗಡಿಸುತ್ತಿರೆ ಮುಂದೆ ನಿಂದು ಬಿರುದಾವಳಿಯಂ‖ ನಡೆತಂದು ಪೊಕ್ಕ ನೊಡವರೆ | ಕಡುಗಲಿಗಳ್ತನ್ನ ಭವನಮಂ ಜಗದೇವಂ ‖ ೩೦

ವ ‖ ಅಂತು ಪೊಕ್ಕು ಜನನಿಯಡಿದಾವರೆ ಗವರ್ಗೆರಸು ಮಣಿದು ‖ *

ಮಲ್ಲಿಕಾಮಾಲಾವೃತ್ತ ‖ ಮಾತೆ ನಿಮ್ಮಯ ಮನಕೆ ಸಂತಸ ಮಪ್ಪ ಮಾಳ್ಕೆಯೊಳಿಂದು ನಿ | ರ್ಭೀತಿಯಿಂದೆ ಶಿವಾಪರಾಧಿಯ ನಿಕ್ಕಿ ಬಂದೆ ವೆನುತ್ತೆ ಸಂ ‖ ಪ್ರೀತಿಯಿಂ ದೆರಗಿರ್ದ್ದ ಪುತ್ರನ ನಳ್ಕರಿಂ ಪರಸುತ್ತೆ ಸಂ | ಜಾತಸಂಭ್ರಮೆ ಮಚ್ಚುತಂ ಪೊಗಳುತ್ತೆ ತಳ್ತಮರ್ದಪ್ಪಿದಳ್ ‖ ... ... ... ೩೧

ಕಂ ‖ ಸಮುದಿತಗುಣಕೀರ್ತನದಿಂ | ಸಮಿಯಿಸೆ ಮಲ್ಲಯ್ಯಬೊಮ್ಮಯ ರ್ಪದಪಿಂದಂ ‖ ಪ್ರಮುದಮ ನೊತರ್ಚಿ ಮನ್ನಿಸಿ | ಸಮುಚಿತಸತ್ಕಾರವಮಂ ಕರಂ ರಚಿಯಿಸಿವಳ್ ‖

ವ ‖ ಆಗ ಳಾಜಗದೇವ ನುತ್ಕಟಿಸಿ ‖

ಮ ‖ ಸ್ರ ‖ ವಿಹಿತಂ ಭಕ್ತಂಗೆ ತಾನೇ ತವಿಪ್ಪು ದಘಹರದ್ರೋಹಿಯಂ ಮಾಣ್ದದಂಮೇ | ಣ್ಮಹಿಯೊಳ್ಭಕ್ತವ್ರತಾನಂ ಜಸಸೆ ಬಳಯಿನಾದ್ರೋಹಿಯಂ ಕೊಂದೆ ನಾಂ ದು ‖ ರ್ವಹಪಾಪಂಬೆತ್ತೆ ನೀಪಾಪಮ ನಳಿಪೊಡೆ ಮತ್ಪ್ರಾಣಮಂ ಬಿಟ್ಟಪೆಂ ನಿ | ಸ್ಪೃಹೆಯಿಂದಾನೆಂದು ಖಡ್ಗಾಗ್ರದೆ ನಿಜಶಿರಮಂ ಕೊಯ್ದ ನಾಭಕ್ತವರ್ಯ್ಯಂ ‖ ೩೩

ವ‖ ಅಂತು ಕಳ್ಕನೆ ಕೊರ್ಕಿಕ್ಕುವುದು ಮುಮಾರಮಣಂ ಪ್ರಸನ್ನನಾಗಿ ‖ *

ತೋಟಕವೃತ್ತ ‖ ಸುರನಿಮ್ನಗೆ ನಲ್ವೆರೆ ಕೆಂಜೆಡೆ ತ | ಳ್ತಿರೆ ಗಣ್ತಿಸುಳಂ ಗರಳಂ ಭಸಿತಂ ‖ ಕರಿಕೃತ್ತಿ ಧರಾಧರಪುತ್ರಿ ಫಣಾ | ಧರ ನೊಪ್ಪಿರೆ ರಂಜಿಸಿದಂ ಗಿರಿಶಂ ‖ ೩೪

ವ ‖ ಅಂತು ರಂಜಿಸಿ ನಿಜಭಕ್ತನ ಶಿರಮಂ ಪತ್ತಿಸಿ ಹರಣಮ ನಲರ್ಚಿ ತನ ಗೆರಗಿ

---

‖೨೮‖ ಮಂಡಳಿಕರ್- ಸಭಾಸದರು. ... ... ... ‖೨೯‖

ನಿಡುಸರದಿಂ-ದೀರ್ಘಧ್ವನಿಯಿಂದ, ಕಡುಗಲಿಗಳ್-ಬಹು ಸಮರ್ಥರಾದ ಮಲ್ಲಯ್ಯಬೊಮ್ಮಯ್ಯಗಳು.

ಸಂಜಾತಸಂಭ್ರಮೆ- ಉತ್ಪನ್ನವಾದ ಸಡಗರವುಳ್ಳವಳಾಗಿ. ... ‖೩೧

ಸಮುದಿತಗುಣಕೀರ್ತನದಿಂ- ಸಮೀಚೀನವಾದುದೆಂದು ಹೇಳಲ್ಪಟ್ಟ ಅವಳ ಸದ್ಗುಣವನ್ನು ಹಾಡುವದರಿಂದ, ಸಮುಚಿತಸತ್ಕಾರವಮಂ- ಯೋಗ್ಯವಾದ ಉಪಚಾರವನ್ನು. ... ‖೩೨‖

ಉತ್ಕಟಿಸಿ- ಕುತೂಹಲಪಟ್ಟು. * * * * * * * *

ತವಿಪುದು- ನಾಶಮಾಡುವದು, ಮಾಣ್ದು- ಬಿಟ್ಟು, ದುರ್ವಹಪಾಪಂಬೆತ್ತೆಂ- ಹೊರುವದಕ್ಕಾಗದ ಪಾಪವನ್ನು ಹೊಂದಿದೆನು, ಅಳಿಪೊಡೆ- ಕಳೆಯಬೇಕಾದರೆ, ನಿಸ್ಪೃಹೆಯಿಂದೆ- ನಿರಾಶೆಯಿಂದ, ಕಳ್ಕನೆ- ಬೇಗನೆ

ಸುರನಿಮ್ನಗೆ- ದೇವಗಂಗೆ, ನಲ್ವೆರೆ- ಒಳ್ಳೆಯಚಂದ್ರ, ತಿಸುಳಂ- ತ್ರಿಶೂಲ, ಕರಿಕೃತ್ತಿ- ಆನೆಯಚರ್ಮ, ಧರಾಧರಪುತ್ರಿ- ಪಾರ್ವತಿ, ಫಣಾಧರಂ- ಸರ್ಪ. ... ... ‖೩೪‖

ಪತ್ತಿಸಿ- ಸೇರಿಸಿ, ಹರಣಮಂ- ಪ್ರಾಣವನ್ನು, ಅಲರ್ಚಿ- ವಿಕಾಸಗೊಳಿಸಿ, ಮಣಿಪುಷ್ಪಕಮಂ- ರತ್ನ

ರ್ದನಂ ತೆಗೆ ದೆತ್ತಿ ಬಿಗಿಯಪ್ಪಿ ಪೊಗಳ್ದು ಮನ್ನಿಸಿ ಮಾತೃಮಿತ್ರ ಸಮೇತ ನವಸಂ ಮ ಣಿಪುಷ್ಪಕಮ ನೇರಿಸಿ ॥

ಕಂ ॥ ಅರಲ ಸರಿ ಸುರಿಯೆ ಭೋರೆಂ । ದಿರದಮರಾನಕರವಂಗ ಳುಲಿಯುತ್ತಿರೆ ಶಂ ॥
ಕರ ನವಸಂ ನಿಜಪುರಿ ಗೊ । ಯ್ದಿರಿಸಿದ ನತುಳಪ್ರಸನ್ನಸುಖಸಂಪದದೊಳ್ ॥ ೩೫

ವ ॥ ಆಗ ಳಿಂತು ಜಗದೇವ ನೆಸಗಿದ ಕಡುಕಜ್ಜದಾದ್ಯಂತಮ ನೆಲ್ಲಮ ನಿತ್ತ ಲ್ಬಸವರಸಂ ಕೇಳ್ದು ಪಿರಿದುಂ ಸಂತಸಂದಾಳ್ದು ನಿಜಗುರುವಪ್ಪ ಕೂಡಲ ಸಂಗಮೇಶ್ವರನಂ ಕಾಣ್ಬ ಸಡಗರದಿಂ ಭಕ್ತಗಣಸಂಯುಕ್ತ ನಾಕಪ್ಪಡಿಗೇಸ್ತಂ ದಾಲಿಂಗಮಂದಿರಂಬುಗುವಾಗಳ್ ॥

ಕಂ ॥ ಮೊದಲ ಗುರುರೂಪ ನಾಳ್ದೊ । ಪ್ಪಿದ ನಿಡಿರೊ ಳ್ಸಂಗಮೇಶ್ವರಂ ಬಸವಂ
ಕಂ ॥ ಡುದಿತೋತ್ಸವ ಮಲರುತ್ತಿರೆ । ಸದಮಳಸದ್ಭಕ್ತಿಭಾವಸಂಭ್ರಮದಿಂದು ॥ ೩೬

ಮತ್ತೇ ॥ ತನು ರೋಮಾಂಚಮ ನಾಳೆ ನೇತ್ರಯುಗದಿಂ ದಾನಂದಬಾಷ್ಪಾಂಬುಸೂ । ಸೆ ನಿತಾಂತಂ ತನಿವೆರ್ಚೆ ಗದ್ಗದಸಮಾಲಾಪಂ ಕೊರಲ್ಗೊಂಡುಕಂ ॥ ವನಮಂ ತಾಳ್ದೊಡಲಾನೆ ಬಲ್ಬಿಮರ ನಾನಂದಾಬ್ಧಿ ನೀರೇರೆ ಪಾ । ವನವೃತ್ತಂ ನೆಗಳ್ದಂ ತದಂಘ್ರಿಗೊಲವಿಂ ದಂಡಪ್ರಣಾಮಂಗಳಂ ॥ ... ... ... ೩೭

ವ ॥ ಅಂತು ನೆಗಳ್ದು ಕೃತಾಂಜಲಿಪುಟಮಂ ಪ್ರೊತ್ತು ನಿಂದು ॥

ಉ ॥ ಸ್ವಾಮಿ ಮದೀಯಮಾನಸವನೇಜದಿನೇಶ್ವರ ಮಾಧವಾಜಸು । ತ್ರಾಮಕಿರೀಟಮಂಡಿತಪದಾಂಬುಜ ವಿಶ್ವಕುಟುಂಬರಕ್ಷಣೋ ॥ ದ್ದಾಮ ದಯಾಸುಧಾರಸಸಮಗ್ರಕಟಾಕ್ಷ ಕಲಂಕದೂರ ನಿ । ಷ್ಕಾಮ ಚಿದಂಗನಾರಮಣ ದೇಶಿಕ ಕೂಡಲಸಂಗಮೇಶ್ವರ ॥ ೩೮

ಚಂ ॥ ನಿರುಪಮ ನಿತ್ಯ ನಿಷ್ಕಳ ನಿರಾಕುಳ ನಿರ್ಭಯ ನೀಲಕಂಠ ನಿ । ರ್ಜರನುತ ನಿಷ್ಪ್ರಪಂಚ ನಿಗಮಾಗಮವಂದ್ಯ ನಿರೀಹ ನಿರ್ನುತ ॥ ಸ್ಮರ ನಿರವದ್ಯ ನಿರ್ಮದ

---

ಖಚಿತವಾದವಿಮಾನವನ್ನು. * * * * * * * * *

ಅಲರ- ಹೂವಿನ, ಸರಿ- ಮಳೆಯು, ಅಮರಾನಕರವಂಗಳ್- ದೇವತೆಗಳ ನಗಾರಿಯಶಬ್ದಗಳು. ॥೩೫॥

ಆಲಿಂಗಮಂದಿರಂಬುಗುವಾಗಳ್-ಆ ಶಿವಲಿಂಗದೇವಸ್ಥಾನವನ್ನು ಪ್ರವೇಶಿಸುವಾಗ. * *

ಉದಿತೋತ್ಸವಂ- ಉತ್ಪನ್ನವಾದ ಸಂತೋಷವು. ... ... ॥೩೬॥

ಗದ್ಗದಸಮಾಲಾಪಂ- ದೀನಧ್ವನಿಯಿಂದ ಕೂಡಿದ ಮಾತು, ಕೊರಲ್ಗೊಂಡು- ಕತ್ತನ್ನಾಶ್ರೈಸಿ, ಒಡಲ್- ಶರೀರವು, ನೀರೇರೆ- ವೃದ್ಧಿಯಾಗಲು, ಪಾವನವೃತ್ತಂ- ಪರಿಶುದ್ಧವಾದ ನಡತೆಯುಳ್ಳ ಬಸವೇಶ್ವರನು. ... ... ... ... ॥೩೭॥

ಮದೀಯಮಾನಸವನೇಜದಿನೇಶ್ವರ-ನನ್ನ ಮನಸ್ಸೆಂಬ ಕಮಲಕ್ಕೆ ಸೂರ್ಯನಾದ, ಮಾಧವಾಜಸುತ್ರಾಮಕಿರೀಟಮಂಡಿತಪದಾಂಬುಜ— ಮಾಧವ- ವಿಷ್ಣು, ಅಜ- ಬ್ರಹ್ಮ, ಸುತ್ರಾಮ- ದೇವೇಂದ್ರ, ಇವರುಗಳ, ಕಿರೀಟ- ಮಾಳಿಯಲ್ಲಿ, ಮಂಡಿತ- ಅಲಂಕರಿಸಲ್ಪಟ್ಟ, ಪದಾಂಬುಜ- ಪಾದಕಮಲವುಳ್ಳ, ವಿಶ್ವಕುಟುಂಬರಕ್ಷಣೋದ್ದಾಮ- ಪ್ರಪಂಚವೆಂಬ ಬಂಧುಬಳಗವನ್ನು ಪಾಲಿಸುವದರಲ್ಲಿ ಸ್ವತಂತ್ರನಾದ, ಚಿದಂಗನಾರಮಣ- ಜ್ಞಾನಾಂಗನೆಗೆ ಪತಿಯಾದ. ... ... ... ॥೩೮॥

ನಿರರ್ಗಳ ನಿಶ್ಚಳ ನಿಸ್ತುಲಪ್ರಭಾ । ಪರ ನಿರುಪಾಧಿ ನಿರ್ಗುಣ ನಿರಾಮಯ ಕೂಡಲಸಂಗಮೇಶ್ವರ ॥ ... ... ... ... ೩೯

ಉ ॥ ಜಂಗಮಲಿಂಗಸಂಗತ ನಿರಂಗ ಕುರಂಗಧರೋತ್ತಮಾಂಗ ನಿ । ರ್ಭಂಗಪತಂಗಜಾಂಗಜಮತಂಗಜತುಂಗಮೃಗೇಂದ್ರ ಸದ್ದಯಾ ॥ ಪಾಂಗ ತರಂಗಿಣೀಧರ ಪಿಶಂಗಜಟಾಭರ ಸರ್ವಮಂಗಳಾ । ಲಿಂಗಿತಮಂಗಳಾಂಗ ಮಹಿಮೋನ್ನತ ಕೂಡಲಸಂಗಮೇಶ್ವರ ॥ ೪೦

ಚಂ ॥ ಮನುತತಿಪೂಜ್ಯ ಮಾನ್ಯ ಮಿಹಿರದ್ಯುತಿ ಮೀನವಿಮರ್ದಿ ಮುಗ್ಧಮೂ । ರ್ತಿ ನಿಯುತಮೇರುಧನ್ವಕರ ಮೈಹಿರಭಂಜನ ಮೋಹದೂರಮು ॥ ಲಿನಿಹಿತಚಂದ್ರ ಮಂಗಳಗುಣಾಕರ ಮಸ್ತಕಮಾಲಿಕಾಂಕಮ । ಜ್ಜನಕ ಮಹೀಶ ಮದ್ಗುರು ಕೃಪಾಕರ ಕೂಡಲಸಂಗಮೇಶ್ವರ ॥ ... ... ... ೪೧

ಚಂ ॥ ಭವ ಭವಭಂಜನಾಂಜನವಿವರ್ಜಿತ ನಿರ್ಜಿತಮಿತ್ರಗಾತ್ರಸಂ । ಭವ ಭುವನೇಶ ಪಾಶಹರ ಕಿಂಕರಶಂಕರ ಚಂಡತಾಂಡವೋ ॥ ತ್ಸವ ಧವಳಾಂಗಪುಂಗವಗ ನಿರ್ಮದಶರ್ಮದ ಶರ್ವ ಪಾರ್ವತೀ । ಧವ ಶಿವಲಿಂಗ ಪಿಂಗಳಜಟಾಧರ ಕೂಡಲಸಂಗಮೇಶ್ವರ ॥ ೪೨

---

ನಿರೀಹ- ಇಚ್ಛಾರಹಿತನಾದ, ನಿಸ್ತುತಸ್ಮರ- ತಿರಸ್ಕರಿಸಲ್ಪಟ್ಟ ಮನ್ಮಥನುಳ್ಳ, ನಿರುಪಾಧಿ- ನಿಷ್ಕಪಟನಾದ. ... ... ... ॥೩೯॥

ಜಂಗಮಲಿಂಗಸಂಗತ- ಚರರೂಪದ ಲಿಂಗದಲ್ಲಿ ಕೂಡಿದ, ಕುರಂಗಧರೋತ್ತಮಾಂಗ— ಕುರಂಗಧರ- ಚಂದ್ರನೇ, ಉತ್ತಮಾಂಗ- ಶಿರಸ್ಸನ್ನುಳ್ಳ, ನಿರ್ಭಂಗ- ಹಾನಿರಹಿತನಾದ, ಪತಂಗಜಾಂಗಜಮತಂಗಜತುಂಗಮೃಗೇಂದ್ರ— ಪತಂಗಜ- ಯಮ, ಅಂಗಜ- ಮನ್ಮಥ ಇವರುಗಳೆಂಬ, ಮತಂಗಜ- ಆನೆಗಳಿಗೆ, ತುಂಗಮೃಗೇಂದ್ರ- ದೊಡ್ಡಸಿಂಹನಾದ, ತರಂಗಿಣೀ ಧರ- ದೇವನದಿಯನ್ನು ಧರಿಸಿದ, ಪಿಶಂಗಜಟಾಧರ- ಕೆಂಪು ಹಳದೀಬಣ್ಣದಿಂ ಮಿಶ್ರವಾದ ಅತಿಶಯವಾದ ಜಡೆಯುಳ್ಳ, ಸರ್ವಮಂಗಳಾಲಿಂಗಿತಮಂಗಳಾಂಗ- ಪಾರ್ವತಿಯಿಂದಾಲಿಂಗಿಸಲ್ಪಟ್ಟ ಶುಭಕರವಾದ ದೇಹವುಳ್ಳ. ... ... ... ॥೪೦॥

ಮನುತತಿಪೂಜ್ಯ- ಮನುಗಳೆಂಬ ಒಂದು ವಿಧವಾದ ದೇವತೆಗಳ ಗುಂಪಿನಿಂದ ಪೂಜಿಸಲ್ಪಡುವದಕ್ಕೆ ಯೋಗ್ಯನಾದ, ಮಾನ್ಯ- ಸಮಸ್ತಲೋಕದಿಂದಲೂ ಸನ್ಮಾನಮಾಡುವದಕ್ಕೆ ಯೋಗ್ಯನಾದ, ಮಿಹಿರದ್ಯುತಿ- ಸೂರ್ಯನಂತಿರುವ ಕಾಂತಿಯುಳ್ಳ, ಮೀನವಿಮರ್ದಿ- ಮತ್ಸ್ಯವನ್ನು ನಾಶಮಾಡಿದ, (ಅಂದರೆ ಮತ್ಸ್ಯಾವತಾರಮಾಡಿದ್ದ ವಿಷ್ಣುವನ್ನು ಬೇಧಿಸಿದವನು) ಮುಗ್ಧಮೂರ್ತಿ- ಸುಂದರವಾದ ದೇಹವುಳ್ಳ, ನಿಯುತಮೇರುಧನ್ವಕರ— ನಿಯುತ- ಕೂಡಿದ, ಮೇರುಧನ್ವ- ಧನುಸ್ಸ್ವರೂಪವಾದ ಮೇರುಪರ್ವತವುಳ್ಳ, ಕರ- ಹಸ್ತವುಳ್ಳ, ಮೈಹಿರಭಂಜನ- ಸೂರ್ಯಪುತ್ರನಾದ ಯಮನನ್ನು ನಾಶಮಾಡಿದ, ಮಸ್ತಕಮಾಲಿಕಾಂಕ- ರುಂಡಮಾಲೆಯೇ ಚಿಹ್ನವಾಗುಳ್ಳ, ಮಜ್ಜನಕ- ನನ್ನ ತಂದೆಯಾದ. ... ... ॥೪೧॥

ಭವ- ಸಕಲವೂ ತನ್ನಿಂದಹುಟ್ಟಿದ, ಭವಭಂಜನ- ಪಾಪವನ್ನು ನಾಶಮಾಡಿದ, ಅಂಜನವಿವರ್ಜಿತ- ಮಾಯೆಯಿಂದ ಬಿಡಲ್ಪಟ್ಟ, ನಿರ್ಜಿತಮಿತ್ರಗಾತ್ರಸಂಭವ— ನಿರ್ಜಿತ- ಜೈಸಲ್ಪಟ್ಟ, * ಮಿತ್ರಗಾತ್ರಸಂಭವ- ಯಮನುಳ್ಳ, ಕಿಂಕರಶಂಕರ- ತನ್ನ ಸೇವಕರಿಗೆ ಸುಖವನ್ನುಂಟುಮಾಡುವ, ಧವಳಾಂಗಪುಂಗವಗ- ಧವಳ- ಶುಭ್ರವಾದ, ಅಂಗ- ಶರೀರವುಳ್ಳ, ಪುಂಗವ- ವೃಷಭೇಶ್ವರನಿಂದ, ಗ- ಸಂಚಾರಮಾಡುವ, ನಿರ್ಮದಶರ್ಮದ — ನಿರ್ಮದ- ಗರ್ವರಹಿತರಾದವರಿಗೆ, ಶರ್ಮದ- ಸುಖವಂಕೊಡುವ, ಶರ್ವ- ಪ್ರಳಯಕಾಲದಲ್ಲಿ ಸಕಲ ಪ್ರಾಣಿಗಳನ್ನು ಹಿಂಸಿಸುವ, ... .. ... ... ॥೪೨॥

---

* (ಅವ) ಮಿತ್ರ- ಸೂರ್ಯನ, ಗಾತ್ರ- ಶರೀರದಿಂದ, ಸಂಭವ- ಜನಿಸಿದವನು. ॥೪೨॥

ಚಂ ‖ ಸುರತಟನೀಪಯಃಕಣಕಳಾಪಜಟಾಭರ ಪದ್ಮವೈರಿಶೇ । ಖರ ನಿಗಮಾಂತ ಮೃಗ್ಯಚರಣಾಂಬುಜ ಶಾಶ್ವತದಿವ್ಯರೂಪ ಶಾ ‖ ಶ್ವರವರವಾಹ ವಾರಿಧರಕರ್ಬುರಕಂಧರ ಕಾಲದರ್ಪಸ । ಹ್ಮರ ಹರಿವಂದ್ಯಪಾದ ಜಗದೀಶ್ವರ ಕೂಡಲಸಂಗಮೇಶ್ವರ ‖ ೪೩

ಚಂ ‖ ಶರಣಕದಂಬಶಂಬರಧಿಶಂಬರಜಾಹಿತ ಶಂಬರಾರಿಶಂ । ಬರದಪಟುಪ್ರಭಂಜನ ನಿರಂಜನ ರಂಜಿತಕುಂಜರೇಂದ್ರಸ ‖ ಹ್ಮರ ಹರಿಣಾಂಕಪಾಣಿ ಹರಿಣಾಂಕಹುತಾಶದಿನೇಶನೇ ತ್ರ ಶಂ । ಕರ ಕರುಣಾನಿವಾಸ ಗುಣಭೂಷಣ ಕೂಡಲಸಂಗಮೇಶ್ವರ ‖ ೪೪

ಚಂ ‖ ಪುರುಷ ವರೇಣ್ಯ ಪುಣ್ಯಮಯ ಪೂರ್ಣ ಪುರಂದರವಂದ್ಯ ವಿಶ್ವವಿ । ಸ್ತರ ಣವಿನೋದ ವಿಶ್ರುತವಿಹಾರವಿರಾಜಿತ ವೀರಶೈವಭೂ ‖ ಸುರ ಭವದೂರ ಭರ್ಗಭಜಕವ್ರಜ ಭದ್ರದ ಭಕ್ತವಶ್ಯ ವಾ । ಗ್ವರವರದ ಪ್ರಸನ್ನ ಜಯ ಚಿನ್ಮಯ ಕೂಡಲಸಂಗಮೇಶ್ವರ ‖

ಚಂ ‖ ತರುಣಾದಿತ್ಯಪ್ರಕಾಶಾವರಣ ಶರಣಸಂದೋಹಮಂದಾರ ಚಂದ್ರಾ । ಭರಣಾಂ ಚನಸ್ಮಾಳಿ ಚಂಚದ್ವಗ್ಗರಳಗಳ ಕಳಾಧುರ್ಯ ಗಾಂಭೀರ್ಯಶೌರ್ಯಾ ‖ ಕರ ಕಂದರ್ಪಾರಿ ಶೌರಿ

---

ಸುರತಟನೀಪಯಃಕಣಕಳಾಪಜಟಾಭರ— ಸುರತಟನೀ- ದೇವಗಂಗೆಯ, ಪಯಃ- ನೀರಿನ, ಕಣ- ಹನಿಯೇ, ಕಳಾಪ- ಆಭರಣವಾಗುಳ್ಳ, ಜಟಾಭರ- ಅತಿಶಯವಾದ ಜಡೆಯುಳ್ಳ, ಪದ್ಮವೈರಿಶೇಖರ— ಪದ್ಮ ವೈರಿ- ಚಂದ್ರನೇ, ಶೇಖರ- ಶಿರೋಭೂಷಣವಾಗುಳ್ಳ, ನಿಗಮಾಂತಮೃಗ್ಯಚರಣಾಂಬುಜ- ಉಪನಿಷತ್ತುಗ ಳಿಂದ ಹುಡುಕಲ್ಪಡುವದಕ್ಕೆ ಯೋಗ್ಯವಾದ ಪಾದಕಮಲವುಳ್ಳ, ಶಾಶ್ವರೇಶ್ವರವರವಾಹ- ವೃಷಭೇಶ್ವರನೇ ವಾಹನವಾಗುಳ್ಳ, ವಾರಿಧರಕರ್ಬುರಕಂಧರ— ವಾರಿಧರ- ಮೇಘದಹಾಗೆ, ಕರ್ಬುರ- ಕಪ್ಪಾದ, ಕಂಧರ- ಕಂಠವುಳ್ಳ; ಕಾಲದರ್ಪಸಹ್ಮರ- ಯಮನಗರ್ವವನ್ನು ನಾಶವಾಡಿದ, ಹರಿವಂದ್ಯಪಾದ- ವಿಷ್ಣುವಿನಿಂದ ನಮ ಸ್ಕರಿಸುವದಕ್ಕೆ ಯೋಗ್ಯವಾದ ಚರಣವುಳ್ಳ, ... ... ... ||೪೩||

ಶರಣ.........ಹಿತ — ಶರಣ- ನಿನ್ನನ್ನು ಸಂರಕ್ಷಕನನ್ನಾಗಿ ಹೊಂದಿದವರ, ಕದಂಬ- ಗುಂಪೆಂಬ, ಶಂಬರಧಿ- ಸಮುದ್ರಕ್ಕೆ * ಶಂಬರಜಾಹಿತ- ಚಂದ್ರನಾದ, ಶಂಬರಾರಿಶಂಬರದಪಟುಪ್ರಭಂಜನ— ಶಂಬರಾ ರಿ- ಮನ್ಮಥನೆಂಬ, ಶಂಬರದ- ಮೇಘಕ್ಕೆ, ಪಟುಪ್ರಭಂಜನ- ಸಮರ್ಥವಾದ ಬಿರುಗಾಳಿಯಾದ, ರಂಜಿತಕುಂ ಜರೇಂದ್ರಸಹ್ಮರಾ- ಪ್ರಕಾಶಿಸುವ ಗಜಾಸುರನನ್ನು ನಾಶಮಾಡಿದ, ಹರಿಣಾಂಕಪಾಣಿ—ಹರಿಣ- ಜಿಂಕೆಯೇ ಅಂಕ- ಚಿಹ್ನವಾಗುಳ್ಳ, ಪಾಣಿ- ಹಸ್ತವುಳ್ಳ. ಹರಿಣಾಂಕಹುತಾಶದಿನೇಶನೇತ್ರ— ಹರಿಣಾಂಕ- ಚಂದ್ರ, ಹುತಾಶ- ಅಗ್ನಿ, ದಿನೇಶ- ಸೂರ್ಯ ಇವರುಗಳೇ, ನೇತ್ರ- ಕಣ್ಣಾಗುಳ್ಳ, ... ||೪೪||

ಪುರುಷ- ಪರಮಾತ್ಮನಾದ, ವರೇಣ್ಯ- ಶ್ರೇಷ್ಠನಾದ, ಪೂರ್ಣ- ಸಕಲವಸ್ತುಗಳಲ್ಲೂ ತುಂಬಿದ, ಪುರಂದರವಂದ್ಯ- ದೇವೇಂದ್ರನಿಂದ ನಮಸ್ಕರಿಸಲ್ಪಡುವದಕ್ಕೆ ಯೋಗ್ಯನಾದ, ವಿಶ್ವವಿಸ್ತರಣವಿನೋದ- ಪ್ರ ಪಂಚವನ್ನು ವಿಸ್ತರಿಸುವದರಲ್ಲಿ ಸಂತೋಷವುಳ್ಳ, ವಿಶ್ರುತವಿಹಾರವಿರಾಜಿತ-ಪ್ರಸಿದ್ಧವಾದ ಕ್ರೀಡೆಯಿಂ ದ ಪ್ರಕಾಶಿಸುವ, ವೀರಶೈವಭೂಸುರ- ವೀರಶೈವರಲ್ಲಿ ಪ್ರಕಾಶಿಸುವ, ಭರ್ಗ- ಯಮಮನ್ಮಥಾದಿಗಳನ್ನು ಕಾ ಲಪಾಕವಂ ಹೊಂದಿಸಿದ, (ಅಂದರೆ ನಾಶವಮಾಡಿದ) ಭಜಕವ್ರಜಭದ್ರದ-ತನ್ನನ್ನು ಭಜಿಸಿದವರ ಗುಂಪಿಗೆ ಮಂ ಗಳವಂ ಕೊಡುವ, ಭಕ್ತವಶ್ಯ- ತನ್ನ ಭಕ್ತರ ಅಧೀನನಾದ, ವಾಗ್ವರವರದ- ಬ್ರಹ್ಮನಿಗೆ ವರವನ್ನು ಕೊಟ್ಟ.

ತರುಣಾದಿತ್ಯಪ್ರಕಾಶಾವರಣ- ಬಾಲಸೂರ್ಯನ ಕಾಂತಿಯಂತಿರುವ ಕಾಂತಿಯ ಹೊದಿಕೆಯುಳ್ಳ, ಶರಣ ಸಂದೋಹಮಂದಾರ- ನಿನ್ನ ಶರಣರ ಗುಂಪಿಗೆ ಕಲ್ಪವೃಕ್ಷನಾದ, ಚಂದ್ರಾಭರಣಾಂಚನಸ್ಮಾಳಿ- ಆಭರಣದಂತಿ

---

* (ಅವ) ಶಂಬರ- ನೀರಿನಿಂದ, ಜ- ಹುಟ್ಟಿದಕಮಲಕ್ಕೆ, ಅಹಿತ- ಶತ್ರು. ||೪೪||

ಸ್ತುತಗುಣಗಣ ರಂಗತ್ತರಂಗಾಂಗಗಂಗಾ | ಧರ ಮತ್ಪ್ರಾಣೇಶ ಸಂಗಪ್ರಭುವೆವಿಭುವೆ ರ
ಕ್ಷಿಪ್ಪುದೆಂದಂ ವೃಷೇಂದ್ರಂ ‖ ... ... ... ೪೬

ವ ‖ ಇಂತು ತನ್ನಂ ಕಟ್ಟಳ್ಕರಿಂ ಪೊಗಳ್ದ ನಿಜಕುಮಾರ ನಪ್ಪ ಗುಣಭೂಷಣನಂ ಫಣಿಭೂಷಣಂ ನಡೆ ನೋಡಿ ತೆಗೆದು ಬಿಗಿದಪ್ಪಿ ನಿಜಪ್ರಸಾದಮ ನಿತ್ತು ಮನ್ನಿಸಿ ನಿರುಪ ಮಾನವಾತ್ಸಲ್ಯಮಂ ಬೀರಿ ಗರ್ಭಗೃಹದಂತರಾಳಮ ನವಂಬೆರಸು ಪೊಕ್ಕಾಗಳ್ ‖ *

ಕಂ ‖ ಬೆಳಗಿನೊಳ್ ಬೆಳಗು ಬೆರೆದಂ | ತಳವಿಗೆ ಮಿಗಿಲಾದ ಸುಖಮ ನೊಳಕೊಂ ಡ
ತಿಮಂ‖ ಗಳಮಯಲಿಂಗದೊ ಳೊಡೆವೆರ | ದಳಕ್ಷ್ಯಭಾವಮನೆ ತಾಳ್ದು ಮೆರೆದಂ ಬಸವಂ ‖

ಕಂ‖ ಪ್ರಮಥ ಪ್ರರ್ೂಮಳೆಗರೆದ | ರ್ಪ್ರಮುದದೆ ಗಣಭೇರಿ ಧಾಂಧಳಧ್ವನಿಗುಡೆ ಸಂ‖
ಭ್ರಮದಿ ನುಘೋಎನಂತಿರ್ದ | ರ್ವಿಮಳಾಂತಃಕರಣಭರಣ ರಭವನ ಶರಣರ್ ‖ ೪೮

ಚಂ ‖ ಅನುಪಮ ನಪ್ರತರ್ಕ್ಯಮಹಿಮಂ ಶರಣಾಗತವಜ್ರಪಂಜರಂ | ವಿನಯಸು
ಧಾಸರೋಧಿ ಕರುಣಾಮೃತಪೂರ್ಣಕಟಾಕ್ಷ ನೀಶಹೃ ‖ ದ್ವನಜನಿವಾಸ ನೆಲ್ಲೆಡೆಯ ಭ
ಕ್ತರಮಾನಸಮಧ್ಯದಲ್ಲಿ ನೆ | ಟ್ಟನೆ ನೆಲೆಗೊಂಡು ರಂಜಿಸಿದ ನಲ್ಲದೊ ಡೆಲ್ಲಿಯ ಭಕ್ತಿಮು
ಕ್ತಿಗಳ್ ‖ ... ... ... ... ೪೯

ಕಂ ‖ ಗುಣಿಬಸವಚರಿತಮಣಿದ | ರ್ಪಣದೊಳ್ಪ್ರರ್ೂಳೆದುದಲ್ತೆ ಗಣನಿವಹದ ಸ‖
ದ್ಗುಣಗಣಚರಿತ್ರ ಮಹಿಭೂ | ಷಣ ನೆಸಕದಿ ನೆಸಗೆ ವಿಶ್ವವಿಶ್ವಂಭರೆಯೊಳ್ ‖ ೫೦

---

ರುವ ಚಂದ್ರನಿಂದ ಪೂಜ್ಯವಾದ ಕಿರೀಟವುಳ್ಳ, ಚಂಚದ್ಗರಳ- ಹೊಳೆಯುವ ವಿಷದಿಂದಕೂಡಿದ ಕಂಠವುಳ್ಳ, ಕಳಾಧುರ್ಯ- ಸಮಸ್ತ ವಿದ್ಯಾಸಮರ್ಥನಾದ, ಶೌರಿಸ್ತುತಗುಣಗಣ- ವಿಷ್ಣುವಿನಿಂದ ಹೊಗಳಲ್ಪಟ್ಟ ಗುಣಗಳ ಸಮುದಾಯವುಳ್ಳ; ರಂಗತ್ತರಂಗಾಂಗಗಂಗಾಧರ— ರಂಗತ್- ಚಲಿಸುವ, ತರಂಗ- ತೆರೆಗಳೇ, ಅಂಗ- ಅವಯವವಾಗುಳ್ಳ, ಗಂಗಾ- ಗಂಗಾದೇವಿಯನ್ನು, ಧರ- ಧರಿಸಿದ. ... ... ‖೪೬‖

ಗರ್ಭಗೃಹದ- ಒಳಗುಡಿಯ, ಅಂತರಾಳಮಂ- ಒಳಭಾಗವನ್ನು, ಅವಂಬೆರಸು- ಆ ಬಸವೇಶ್ವರನೊಡನೆ ಕೂಡಿ. * * * * * * * * * *

ಬೆಳಗಿನೊಳ್- ಪ್ರಕಾಶದೊಡನೆ, ಅಳವಿಗೆ- ಗಣನೆಗೆ, ಮಿಗಿಲ್- ಅಧಿಕವು, ಅಳಕ್ಷ್ಯಭಾವಮನೆ- ಕಣ್ಣಿಗೆ ಕಾಣಿಸದೇ ಇರುವಿಕೆಯನ್ನು. ... ... ... ‖೪೭‖

ಗಣಭೇರಿ- ಶಿವಗಣಂಗಳ ನಗಾರಿಯು. ... ... ... ‖೪೮‖

ಅಪ್ರತರ್ಕ್ಯಮಹಿಮಂ- ಊಹಿಸುವದಕ್ಕಶಕ್ಯವಾದ ಮಾಹಾತ್ಮ್ಯವುಳ್ಳ, ಶರಣಾಗತವಜ್ರಪಂಜರಂ- ತನ್ನನ್ನು ಸಂರಕ್ಷಕನನ್ನಾಗಿ ಹೊಂದಿದವರ ಗುಂಪಿಗೆ ವಜ್ರದ ಗೂಡಾದ, ವಿನಯಸುಧಾಸರೋಧಿ- ನಮ್ರತೆಯೆಂಬ ಕ್ಷೀರಕ್ಕೆ ಸಮುದ್ರನಾದ, ಈಶಹೃದ್ವನಜನಿವಾಸಂ- ಶಿವನ ಹೃದಯಕಮಲವೇ ವಾಸಸ್ಥಾನವಾಗುಳ್ಳ, ಎಲ್ಲೆಡೆಯ- ಎಲ್ಲಾ ಸ್ಥಲದಲ್ಲಿರುವ. ... ... ... ‖೪೯‖

ಗುಣಿಬಸವಚರಿತಮಣಿದರ್ಪಣದೊಳ್- ಸದ್ಗುಣಗಳುಳ್ಳ, (ತಂತುವುಳ್ಳ) ಬಸವೇಶ್ವರನ ಚರಿತ್ರವೆಂಬ ರತ್ನದ ಕನ್ನಡಿಯಲ್ಲಿ, ಸದ್ಗುಣಗಣಚರಿತ್ರಂ- ಒಳ್ಳೆಯ ಗುಣಗಳ ಸಮೂಹವುಳ್ಳ, "(ಒಳ್ಳೆಯತಂತುವೆಂಬ) ಚರಿತ್ರೆಯು, ಅಹಿಭೂಷಣನ- ಶಿವನ, ಎಸಕದಿಂ- ಪ್ರಯತ್ನದಿಂದ, ವಿಶ್ವವಿಶ್ವಂಭರೆಯೊಳ್- ಎಲ್ಲಾ ಭೂಮಿಯಲ್ಲೂ. ... ... ... ... ... ‖೫೦‖

ಕಂ ॥ ಬಸವ ನಸಮಾನಮಹಿಮ । ಪ್ರಸರಸುಧಾಂಬುಧಿಯೊಳೊಗೆದ ಸೀರ್ಪನಿಯ ನದೇಂ ॥ ನಿಸದಂ ಪೊಗಳ ಲ್ಬಲ್ಲರೆ । ಬಿಸರುಹಭವನುಂ ಫಣೀಂದ್ರನುಂ ಸುರಗುರುವುಂ ॥

ಮತ್ತೇ ॥ ಪ್ರಮಥೇಂದ್ರಪ್ರಥಮಪ್ರಧಾನಪುರುಷಂ ಚಿದ್ರೂಪ ನಾದ್ಯಂತಶೂ । ನ್ಯ ಮಹಾವೈಭವ ನಪ್ರತರ್ಕ್ಯಮಹಿಮಂ ವಿಶ್ವಾವನೀರಕ್ಷಣ ॥ ಕ್ಷಮ ನುಕ್ಷೇಂದ್ರಪರಾವತಾರ ನನಘಂ ಕಾರುಣ್ಯವಾರಾಶಿ ಭ । ದ್ರಮಯಂ ಭಕ್ತಿಪರಾಯಣಂ ಪರಶಿವ ಶ್ರೀಮನ್ಮನೋ ಮಂದಿರಂ ॥ ... ... .. ... ೫೨

ಮ ॥ ಸ್ರ ॥ ಗುರುರೂಪಂ ಲಿಂಗರೂಪಂ ಪರತರಚರರೂಪಂ ಪ್ರಸಾದಸ್ವರೂಪಂ । ಹರಪಾದಾಂಭಸ್ಸ್ವರೂಪಂ ಭಸಿತಲಸಿತರೂಪಂ ಸುರುದ್ರಾಕ್ಷರೂಪಂ ॥ ವರಪಡ್ವರ್ಣಸ್ವರೂ ಪಂ ಪರಮಶಿವಮಯಾನಾದಿಭಕ್ತಸ್ವರೂಪಂ । ಪರಚಿದ್ಭಕ್ತಿಸ್ವರೂಪಂ ಬಸವ ನಸದೃಶಾ ನಂದಸತ್ಯಸ್ವರೂಪಂ ॥ ... ... ... ೫೩

ವ ॥ ಎಂದಿಂತು ಪಲವಂದದಿಂ ಪೊಗಳುತ್ತಂ ಚೆನ್ನಬಸವನುಂ ಮಾದಿರಾಜನುಂ ಮಾ ಚಿದೇವನುಂ ಶರಣಗಣದೊಡನೆ ಸಂಭ್ರಮದಿಂ ದುಳುಮಗೇಳ್ತಂದು ಶಿವತತ್ವಾನುಭವಸಂಜ ನಿತಪರಮಾನಂದಸುಧಾಸಮುದ್ರದೊಳವಗಾಹಂಗೆಯ್ದು ॥ * * *

ಕಂ ॥ ಕರಮೆಸೆದಿರ್ದ ಕ್ಕಲ ರೀ । ಶ್ವರಭಕ್ತ ಶ್ರೀಗಿರೀಂದ್ರ ಕೆಯ್ದಿದ ರಿತ್ತು ॥ ಲ್ವ ರಗಂಗಾಂಬಿಕೆ ತನ್ನಯ । ಕರಸರಸಿಜಲಿಂಗದೊಡನೆ ಬೆರೆ ದೆಸೆದಿರ್ದಳ್ ॥ ೫೪

ಕಂ ॥ ಪ್ರಮಥಪತಿಬಸವರಾಜನ । ವಿಮಳಚಿದಂಗಸ್ವರೂಪ ಮಾಭಕ್ತರ ಹೃ ॥ ತ್ಕ ಮಲದೊಳೆ ತಳ್ತು ನೆಲೆಗೊಂ । ಡಮರ್ದೊಪ್ಪಿದು ದಧಿಕಮುದಮ ನೊದವಿಸುತಾಗಳ್ ॥

ಮ ॥ ಸ್ರ ॥ ಪರಮೇಶಪ್ರೇಮಧಾಮಂ ಪ್ರಮಥಪರಿಷದಾನಂದದುಗ್ಧಾಬ್ಧಿಚಂದ್ರಂ ।

---

ಅಸಮಾನಮಹಿಮಪ್ರಸರಸುಧಾಂಬುಧಿಯೊಳ್- ಅಸದೃಶವಾದ ಮಹತ್ತ್ವದ ಸಮೂಹವೆಂಬ ಕ್ಷೀರ ಸಮುದ್ರದಲ್ಲಿ, ಸೀರ್ಪನಿಯಂ- ಸಣ್ಣಹನಿಯನ್ನು, ನಿಸದಂ- ನಿಜವಾಗಿ, ಬಿಸರುಹಭವನುಂ- ಬ್ರಹ್ಮನೂ, ಫ ಣೀಂದ್ರನುಂ- ಆದಿಶೇಷನೂ, ಸುರಗುರುವುಂ- ಬೃಹಸ್ಪತಿಯೂ. ... ... ||೫೧||

ಪ್ರಮಥೇಂದ್ರಪ್ರಥಮಪ್ರಧಾನಪುರುಷಂ—ಪ್ರಮಥಶ್ರೇಷ್ಠರಲ್ಲಿ ಮೊದಲನೇ ಮುಖ್ಯಮನುಷ್ಯನಾ ದ, ವಿಶ್ವಾವನೀರಕ್ಷಣಕ್ಷಮಂ- ಸಕಲ ಭೂಮಿಯನ್ನೂ ಪರಿಪಾಲಿಸುವದರಲ್ಲಿ ಸಮರ್ಥನಾದ, ಉಕ್ಷೇಂದ್ರಪ ರಾವತಾರಂ- ವೃಷಭೇಶ್ವರನ ಮತ್ತೊಂದು ಅವತಾರನಾದ, ಭದ್ರಮಯಂ- ಮಂಗಳಸ್ವರೂಪನಾದ,ಭಕ್ತಿ ಪರಾಯಣಂ- ಶಿವಭಕ್ತಿಯೇ ಉತ್ಕೃಷ್ಟವಾದ ಮಾರ್ಗವಾಗುಳ್ಳ, ಪರಶಿವಶ್ರೀಮನ್ಮನೋಮಂದಿರಂ- ಪರ ಮೇಶ್ವರನ ಷಡ್ಗುಣೈಶ್ವರ್ಯಯುಕ್ತವಾದ ಮನಸ್ಸೇ ಮನೆಯಾಗುಳ್ಳ. ... ||೫೨||

ಪರತರಚರರೂಪಂ- ಅತ್ಯುತ್ಕೃಷ್ಟವಾದ ಜಂಗಮಸ್ವರೂಪನು, ಹರಪದಾಂಭಸ್ಸ್ವರೂಪಂ- ಶಿವ ಪಾದೋದಕಸ್ವರೂಪನು, ಪರಮಶಿವಮಯಾನಾದಿಭಕ್ತಸ್ವರೂಪಂ- ಪರಶಿವಸ್ವರೂಪನಾದ ತನಗಿಂತ ಮೊ ದಲನೆಯದಿಲ್ಲದ ಭಕ್ತನ ಸ್ವರೂಪನು. ... ... ... ... ||೫೩||

ಗಂಗಾಂಬಿಕೆ- ಬಸವೇಶ್ವರನ ಪತ್ನಿಯು. ... ... ... ||೫೪||

ಚಿದಂಗಸ್ವರೂಪಂ- ಜ್ಞಾನಾವಯವವಾಗಿರುವ ಆಕಾರವು. ... ||೫೫||

ಪರಮೇಶಪ್ರೇಮಧಾಮಂ-ಈಶ್ವರನ ಪ್ರೀತಿಗೆ ಆಸ್ಪದನಾದ, ಪ್ರಮಥಪರಿಷದಾನಂದದುಗ್ಧಾಬ್ಧಿಸೋ

ತರುಣಾದಿತ್ಯಪ್ರಕಾಶಂ ತತಕುಮತಮದೇಭೇಂದ್ರಕಂಠೀರವಂ ಭಾ ॥ ಸುರಭದ್ರಾಕಾರಸಾರಂ ಭವಭಯಹರಣಂ ಭಕ್ತಿಭಾಮಾಮನೋಜ್ಞಂ । ಕರುಣಾಂಭೋರಾಶಿ ವಿಶ್ವಪ್ರಭು ವಿಭು ವಿಬುಧಸ್ತೋತ್ರಪಾತ್ರಂ ವೃಷೇಂದ್ರಂ ॥ ... ... ೫೬

ಹರಿಣಪ್ಲುತವೃತ್ತ ॥ ಸಕಳಸುಕಳಾಧಾರಂ ಧೀರಂ ಸುಭಾಷಣಭೂಷಣಂ । ಶಕಲಿತಕಲಿಧ್ವಾಂತಂ ಶಾಂತಂ ಭವಾಂಬುಧಿಕುಂಭಜು ॥ ಪ್ರಕಟತಕೃಪಾಪಾಂಗಂ ತುಂಗಂ ಸ್ವಭಾವಶುಭಾವಹಂ । ನಿಕೃತನಿಕೃತಿವ್ರಾತಂ ಖ್ಯಾತಂ ವಿಮಾಯ ನನಾಮಯಂ ॥ ೫೭

ಉ ॥ ಪುಷ್ಕರಪುಷ್ಪಮಸ್ತಕಪದಾಂಬುಜಭೃಂಗ ನನಂತತಾತ್ವಿಕಾ । ವಿಷ್ಕರಣಪ್ರಮಾಣಪರಿಭಾಷಣ ನಾನತಲೋಕಸಂಕುಲಾ ॥ ಯುಷ್ಕರಣಪ್ರವೀಣ ನನವದ್ಯಚರಿತ್ರನಮೋಘವಿಕ್ರಮಂ । ದುಷ್ಕರವಾದವಾದಿವನದಾವ ನಮಾಯ ನಮೇಯವೈಭವಂ ॥ ೫೮

ಮತ್ತೇ ॥ ಅಕಳಂಕಂ ಗುರುಲಿಂಗಜಂಗಮಪದಾಂಭೋಜಾತಪೂಜಾಸಮು । ತ್ಸುಕ ನನ್ಯಾದ್ವೈತಮಃಪ್ರಚಂಡಕರ ನಂಭೋರಾಶಿಗಂಭೀರ ನು ॥ ದ್ಧಕಳಾಭಿಜ್ಞ ನಭಂಗತುಂಗ

---

ಮಂ- ಪ್ರಮಥರ ಸಮೂಹದ ಸಂತೋಷವೆಂಬ ಕ್ಷೀರಸಮುದ್ರಕ್ಕೆ ಚಂದ್ರನಾದ, ತತಕುಮತಮದೇಭೇಂದ್ರಕಂಠೀರವಂ- ವಿಸ್ತಾರವಾದ ಕೆಟ್ಟ ಮತಗಳೆಂಬ ಮದಿಸಿದಾನೆಗಳಿಗೆ ಸಿಂಹನಾದ, ಭಾಸುರಭದ್ರಾಕಾರಸಾರಂ- ಪ್ರಕಾಶಿಸುವ ಮಂಗಳಕರವಾದ ಶ್ರೇಷ್ಠವಾದ ಆಕೃತಿಯುಳ್ಳ, ಭಕ್ತಿಭಾಮಾಮನೋಜ್ಞಂ- ಶಿವಭಕ್ತಿಯೆಂಬ ಸ್ತ್ರೀಯ ಮನೋಹರನಾದ, ವಿಬುಧಸ್ತೋತ್ರಪಾತ್ರಂ- ವಿದ್ವಾಂಸರು ಮಾಡುವ ಸ್ತುತಿಗೆ ಆಶ್ರಯನಾದ. ... ... ... ... ... ॥೫೬॥

ಸಕಳಸುಕಳಾಧಾರಂ- ಒಳ್ಳೆಯ ವಿದ್ಯೆಗಳೆಲ್ಲಕ್ಕೂ ಆಶ್ರಯನಾದ, ಶಕಲಿತಕಲಿಧ್ವಾಂತಂ- ಖಂಡಿಸಲ್ಪಟ್ಟ ಕಲಿಪುರುಷನೆಂಬ ಕತ್ತಲೆಯುಳ್ಳ, ಭವಾಂಬುಧಿಕುಂಭಜಂ- ಪಾಪವೆಂಬ ಸಮುದ್ರಕ್ಕೆ ಅಗಸ್ತ್ಯನಾದ, ತುಂಗಂ- ಉನ್ನತನಾದ, ಸ್ವಭಾವಶುಭಾವಹಂ- ಅಕೃತ್ರಿಮವಾಗಿ ಮಂಗಳವನ್ನುಂಟುಮಾಡುವ, ನಿಕೃತನಿಕೃತಿವ್ರಾತಂ— ನಿಕೃತ- ಭಯಪಡಿಸಲ್ಪಟ್ಟ, ನಿಕೃತಿ- ಶಠರ, ವ್ರಾತಂ- ಸಮೂಹವುಳ್ಳ, ವಿಮಾಯಂ-ಮಾಯಾರಹಿತನಾದ, ಅನಾಮಯಂ- ಭವರೋಗರಹಿತನಾದ. ... ... ॥೫೭॥

ಪುಷ್ಕರಪುಷ್ಪಮಸ್ತಕಪದಾಂಬುಜಂ— ಪುಷ್ಕರ- ಆಕಾಶದಲ್ಲಿರುವ, ಪುಷ್ಪ- ನೀರೇ, ಮಸ್ತಕ- ಶಿರಸ್ಸಿನಲ್ಲುಳ್ಳ, ( ಅಂದರೆ ಆಕಾಶಗಂಗಾಧರನಾದ ) ಶಿವನ, ಪದಾಂಬುಜ- ಪಾದಕಮಲಕ್ಕೆ, ಭೃಂಗಂ- ಭ್ರಮರನಾದ, ಅನಂತತಾತ್ವಿಕಾವಿಷ್ಕರಣಪ್ರಮಾಣಪರಿಭಾಷಣಂ— ಅನಂತ- ಅಪಾರವಾದ, ತಾತ್ವಿಕ- ತತ್ತ್ವಾರ್ಥವನ್ನು, ಆವಿಷ್ಕರಣ- ವಿಸ್ತಾರಪಡಿಸುವ, ಪ್ರಮಾಣ- ಯಥಾರ್ಥವಾದ, ಪರಿಭಾಷಣಂ- ಮಾತುಳ್ಳ, ಆನತಲೋಕಸಂಕುಲಾಯುಷ್ಕರಣಪ್ರವೀಣಂ- ನಮಸ್ಕರಿಸಿದಜನಗಳ ಸಮೂಹಕ್ಕೆ ದೀರ್ಘಾಯುಸ್ಸನ್ನುಂಟುಮಾಡುವದರಲ್ಲಿ ಸಮರ್ಥನಾದ, ಅನವದ್ಯಚರಿತ್ರಂ- ನಿರ್ದುಷ್ಟವಾದ ನಡತೆಯುಳ್ಳ, ಅಮೋಘವಿಕ್ರಮಂ- ವ್ಯರ್ಥವಾಗದ ಪರಾಕ್ರಮವುಳ್ಳ, ದುಷ್ಕರವಾದಿವಾದವನದಾವಂ— ದುಷ್ಕರ- ಅಸಾಧ್ಯವಾದ, ವಾದಿ- ಶಿವೇತರಮತವಾದಿಗಳ, ವಾದ- ತರ್ಕವೆಂಬ, ವನ- ಕಾಡಿಗೆ, ದಾವಂ- ಕಾಳ್ಗಿಚ್ಚಾದ, ಅಮೇಯವೈಭವಂ- ಗಣಿಸುವದಕ್ಕಶಕ್ಯವಾದ ವಿಲಾಸಗಳುಳ್ಳ. ... ... ... ॥೫೮॥

ಅನ್ಯಾದ್ವೈತಮಃಪ್ರಚಂಡಕರಂ- ಶಿವೇತರಮತಮಾರ್ಗವೆಂಬ ಅಂಧಕಾರಕ್ಕೆ ಸೂರ್ಯನಾದ, ಅಂಭೋರಾಶಿಗಂಭೀರಂ- ಸಮುದ್ರದಂತೆಗಂಭೀರನಾದ, ಉದ್ಧುಕಳಾಭಿಜ್ಞಂ- ಉತ್ಕೃಷ್ಟವಾದ ವಿದ್ಯೆಯನ್ನು ತಿಳಿದ, ಅಭಂಗತುಂಗಯಶಂ- ಅವಿಚ್ಛಿನ್ನವಾದ ಉತ್ಕೃಷ್ಟವಾದ ಕೀರ್ತಿಯುಳ್ಳ, ಉದ್ಯದ್ಭಕ್ತಿಭಾಮಾಲಸ

ಶಯನುದ್ಯದ್ಭಕ್ತಿಭಾಮಾಲಸ | ನ್ಮುಕುರಂ ಶ್ರೀವೃಷಭೇಂದ್ರ ನೀಗೆಮಗಮಂದಾನಂದಸಂದೋಹಮಂ ‖ ... ... ... ... ೫೯

ನಿರೋಷ್ಠ್ಯಲಲಿತಪದವೃತ್ತ ‖ ಶೀತಕರಶೇಖರ ಸನಾತನನಿಜಾಂಗ ಜಗತೀತಳಜನಾನತ ನಿಶಾತಶರಧಾರಾ | ಘಾತಹೃತದೈತ್ಯ ಕರನೀತಸಕಳೇಷ್ಟ ಝಷಕೇತನಹರಾಂಕಧರ ಗೀತಸರಸೀಸಂ ‖ ಜಾತದಿನನಾಯಕ ಜಿತೇತರನಿತಾಂತಜಡಚೇತನ ಜಗನ್ನಿಚಯತಾತಘನನಂದಿ | ಖ್ಯಾತ ಗಣನಾಥ ಕಲಕೇತಸಖ ಕಿನ್ನರದಯಾತತರಸಾರ್ಥಿ ಹರಜಾತ ಜಯ ಧೀರಾ ‖ ... ... ... ... ೬೦

ಅಚಲಜಿಹ್ವಾವೃತ್ತ ‖ ಶಿವಮಯಕಾಯ ಭವ್ಯಮಹಿಮಾಂಗ ವಿಮಾಯ ಯಮೀಶಗಮ್ಯ ಶಾಂ | ಭವಸುಗಮಾಸಮಾಗಮಕುಶೇಶಯಹಂಸ ಖಗೇಶವಾಹವಾ ‖ ಸವಮುಖ

---

ನ್ಮುಕುರಂ- ಉತ್ಕೃಷ್ಟವಾದ ಶಿವಭಕ್ತಿಯೆಂಬ ಸ್ತ್ರೀಯುಪ್ರಕಾಶಿಸುವ ಕನ್ನಡಿಯಾದ, ಅಮಂದಾನಂದ ಸಂದೋಹಮಂ- ಅಧಿಕವಾದ ಸಂತೋಷದ ಸಮೂಹವನ್ನು. ... ... ‖೫೯‖

ಶೀತಕರಶೇಖರ- ಚಂದ್ರನೇ ಶಿರೋಭೂಷಣವಾಗುಳ್ಳ, ಸನಾತನನಿಜಾಂಗ—ಸನಾತನ- ಬಹು ಕಾಲದ್ದಾದ, ನಿಜ-ಸ್ಥಿರವಾದ, ಅಂಗ- ಶರೀರವುಳ್ಳ, ಜಗತೀತಳಜನಾನತ—ಜಗತೀತಳ- ಭೂಪ್ರದೇಶದಲ್ಲಿರುವ, ಜನ-ಜನಗಳಿಂದ, ಆನತ- ನಮಸ್ಕರಿಸಲ್ಪಟ್ಟ, ನಿಶಾತಶರಧಾರಾಘಾತಹೃತದೈತ್ಯ—ನಿಶಾತ-ತೀಕ್ಷ್ಣವಾದ, ಶರಧಾರಾ- ಬಾಣದ ಅಲಗಿನ, ಆಘಾತ- ಏಟಿನಿಂದ, ಹೃತ- ಸಂಹರಿಸಲ್ಪಟ್ಟ, ದೈತ್ಯ- ರಾಕ್ಷಸರುಳ್ಳ, ಕರನೀತಸಕಳೇಷ್ಟ— ಕರ- ಹಸ್ತದಲ್ಲಿ, ನೀತ- ಹೊಂದಿಸಲ್ಪಟ್ಟ, ಸಕಳೇಷ್ಟ- ಸಮಸ್ತ ಇಷ್ಟಾರ್ಥಗಳುಳ್ಳ, ಝಷ......ನಾಯಕ— ಝಷ- ಮೀನೇ, ಕೇತನ- ಧ್ವಜವಾಗುಳ್ಳ ಮನ್ಮಥನನ್ನು, ಹರ- ನಾಶ ಮಾಡಿದ ಶಿವನ, ಅಂಕ- ಚಿಹ್ನವನ್ನು, ಧರ- ಧರಿಸಿದ ಶಿವಭಕ್ತರ, ಗೀತ- ಗಾನವೆಂಬ, ಸರಸೀಸಂಜಾತ- ಕಮಲಗಳಿಗೆ, ದಿನನಾಯಕ- ಸೂರ್ಯನಾದ, ಜಿತೇತರನಿತಾಂತಜಡಚೇತನ—ಜಿತ- ಜೈಸಲ್ಪಟ್ಟ, ಇತರ- ಶಿವಮತಕ್ಕೆ ಭಿನ್ನರಾದವರೆಂಬ, ನಿತಾಂತ- ಅತ್ಯಂತವಾಗಿ, ಜಡ- ಮೂಢವಾದ, ಚೇತನ-ಬುದ್ಧಿಯುಳ್ಳವರುಳ್ಳ, ಜಗನ್ನಿಚಯತಾತ- ಲೋಕಸಮುದಾಯಕ್ಕೆ ತಂದೆಯಾದ, ಘನನಂದಿಖ್ಯಾತ- ಶ್ರೇಷ್ಠನಾದನಂದೀಶ್ವರನೆಂದು ಪ್ರಸಿದ್ಧನಾದ, ಗಣನಾಥ-ಗಣಂಗಳಲ್ಲಿ ಸ್ವಾಮಿಯಾದ, ಕಲಕೇತಸಖ- ಕಲಕೇತಾರ್ಯನ ಸ್ನೇಹಿತನಾದ, ಕಿನ್ನರದಯಾತತರಸಾರ್ಥಿ- ಕಿನ್ನರೇಶ್ವರನ ವಿಸ್ತಾರವಾದ ಕರುಣಾರಸವನ್ನು ಪ್ರಾರ್ಥಿಸಿದ, ಹರಜಾತ- ಶಿವನಿಂದ ಹುಟ್ಟಿದ, ಧೀರಾ- ಧೈರ್ಯಶಾಲಿಯಾದ. ... ... ... ... ... ‖೬೦‖

ಶಿವಮಯಕಾಯ- ಮಂಗಳಸ್ವರೂಪವಾದ ದೇಹವುಳ್ಳ, ಭವ್ಯಮಹಿಮಾಂಗ- ಕುಶಲಕಾರಿಯಾದಮಹತ್ತ್ವವೇ ಅವಯವವಾಗುಳ್ಳ, ವಿಮಾಯ -ಮಾಯಾರಹಿತನಾದ, ಯಮೀಶಗಮ್ಯ-ಋಷಿಶ್ರೇಷ್ಠರಿಂದಹೊಂದಲ್ಪಡುವದಕ್ಕೆ ಯೋಗ್ಯನಾದ, ಶಾಂಭವಸುಗಮಾಸಮಾಗಮಕುಶೇಶಯಹಂಸ- ಶಾಂಭವ- ಶಂಭುಭಕ್ತರಿಂದ, ಸುಗಮ- ಸುಖದಿಂದ ಹೊಂದಲ್ಪಡುವ, ಅಸಮಾಗಮ-ಅಸದೃಶಗಳಾದ ಆಗಮಂಗಳೆಂಬ, ಕುಶೇಶಯ-ಕಮಲಗಳಿಗೆ, ಹಂಸ- ಸೂರ್ಯನಾದ, ಖಗೇಶವಾಹವಾಸವಮುಖಭಾವ್ಯ— ಖಗೇಶವಾಹ- ವಿಷ್ಣು, ವಾಸವ- ದೇವೇಂದ್ರ ಇವರುಗಳೇ, ಮುಖ- ಮೊದಲಾದ ದೇವತೆಗಳಿಂದ, ಭಾವ್ಯ- ಧ್ಯಾನಿಸಲ್ಪಡುವದಕ್ಕೆ ಯೋಗ್ಯನಾದ, ವಿಶ್ವವಿಭು- ಪ್ರಪಂಚಕ್ಕೆ ಸ್ವಾಮಿಯಾದ, ಭಾವಭವಾಪಹಸಾಹಸಾಂಕ— ಭಾವಭವ- ಮನ್ಮಥನನ್ನು, ಅಪಹ- ನಾಶಮಾಡಿದ, ಸಾಹಸ- ಸಾಮರ್ಥ್ಯವೇ, ಅಂಕ- ಚಿಹ್ನವಾಗುಳ್ಳ, ಶಂಭುವಶಗಭಾವ- ಶಿವಾಧೀನವಾದ ಮನಸ್ಸುಳ್ಳ, ಶುಭಾವಹವಾಕ್ಯವೈಭವ- ಮಂಗಳವನ್ನುಂಟುಮಾಡುವ ಮಾತಿನ ವಿಲಾಸವುಳ್ಳ ಬಸ

ಭಾವ್ಯ ವಿಶ್ವವಿಭು ಭಾವಭವಾಪಹಸಾಹಸಾಂಕ ಶಂ । ಭುವಶಗಭಾವ ಪಾಹಿ ಬಸವೇಶ ಶು ಭಾವಹವಾಕ್ಯವೈಭವ ॥ ... ... ... ೬೧

ಮುಕ್ತಪದಗ್ರಸ್ತವೃತ್ತ॥ ಜಯ ಜಯ ಕಾಲಕಾಲ ತತವಿಭ್ರಮ ವಿಭ್ರಮಭಾನುಭಾನುಚಿ। ನ್ಮಯ ಮಯವಂದ್ಯ ವಂದ್ಯಪದನೀರಜ ನೀರಜಧೀರಧೀರ ಸ ॥ ನ್ನಯನಯಸಾನ್ವಿತಾನ್ವಿತನಿರಂಜನರಂಜನಸತ್ವ ಸತ್ವಗಾ । ಶಯಶಯಭಾಗ್ಯಭಾಗ್ಯಜನನಂದಿತ ನಂದಿತಸುಪ್ರಭುಪ್ರಿಯಾ॥ ... ... ... ... ೬೨

ಜಂ॥ ಸುರವರದಾನವೇನಪರಿಪೂಜಿತ ರಾಜಿತಲಿಂಗಸಂಗಬಂ। ಧುರ ನಿರಪೇಕ್ಷಮೋಕ್ಷಕೃದಪಾಂಗ ಕೃಪಾಂಗ ಕರಾಳಕಾಲಸಂ ॥ ಹರ ನಿರಪಾಯಕಾಯ ಗುಣಮಂಡಿತಪಂಡಿತನುತ್ಯ ಸತ್ಯಸಂ। ಗರ ಪೊರೆ ಯೆನ್ನನುನ್ನತವಿತಂದ್ರ ಗಣೇಂದ್ರ ವೃಷೇಂದ್ರ ಸಂತತಂ॥೬೩

ಕಂ॥ ನೀನೆ ಗುರು ನೀನೆ ಲಿಂಗಂ। ನೀನೆ ಚರಂ ನೀನೆ ಮಾತೆ ನೀನೆ ಪಿತಂ ಕೇ ॥ ಳ್ನೀನೆ ಗತಿ ನೀನೆ ಮತಿ ಪತಿ। ನೀನೆ ಸಮಂ ತೆನಗೆ ಬಸವ ಪಾಲಿಪು ದೆನ್ನಂ ॥ ೬೪

---

ವೇಶನೇ! ಪಾಹಿ- ರಕ್ಷಿಸು. ... ... ... ... ॥೬೧॥

ಕಾಲಕಾಲ- ಯಮನಿಗೆ ಯಮನಾದ, ತತವಿಭ್ರಮ- ವಿಸ್ತಾರವಾದ ವಿಲಾಸಗಳುಳ್ಳ, ವಿಭ್ರಮ- ಭ್ರಾಂತಿರಹಿತನಾದ, (ಅಥವಾ ವಿ- ಅಂತರಿಕ್ಷದಲ್ಲಿ, ಭ್ರಮ- ಸುತ್ತುವಿಕೆಯುಳ್ಳ) ಭಾನು- ಸೂರ್ಯನ- ಭಾನು- ಕಾಂತಿಯಂತಿರುವಕಾಂತಿಯುಳ್ಳ, ಚಿನ್ಮಯ- ಜ್ಞಾನಸ್ವರೂಪನಾದ, ಮಯವಂದ್ಯ- ಮಯನೆಂಬ ರಾಕ್ಷಸಶಿಲ್ಪಿಯಿಂದ ನಮಸ್ಕರಿಸಲ್ಪಡುವದಕ್ಕೆ ಯೋಗ್ಯನಾದ, ವಂದ್ಯಪದನೀರಜ— ವಂದ್ಯ- ಸಮಸ್ತಲೋಕದಿಂದ ನಮಸ್ಕರಿಸಲ್ಪಡುವದಕ್ಕೆ ಯೋಗ್ಯವಾದ, ಪದನೀರಜ- ಪಾದಕಮಲವುಳ್ಳ, ನೀರಜ- ರಜೋಗುಣರಹಿತನಾದ, ಧೀರಧೀರ- ವಿದ್ವಾಂಸರಲ್ಲಿ ವಿದ್ವಾಂಸನಾದ, ಸನ್ನಯನಯಸಾನ್ವಿತ— ಸತ್- ಸಮೀಚೀನವಾದ, ನಯ- ನೀತಿಯೆಂಬ, ನಯನ- ಕಣ್ಣಿನಿಂದ, ಅನ್ವಿತ- ಕೂಡಿದ, ಅನ್ವಿತನಿರಂಜನರಂಜನಸತ್ವ— ಅನ್ವಿತ- ತನ್ನೊಡನೆಕೂಡಿದ, ನಿರಂಜನ- ಮಾಯಾರಹಿತರನ್ನು, ರಂಜನ- ಅನುರಾಗಪಡಿಸುವ, ಸತ್ವ- ಸ್ವಭಾವವುಳ್ಳ, ಸತ್ವಗಾಶಯಶಯ—ಸತ್ವಗ- ಶಾಂತಿಗುಣವನ್ನು ಹೊಂದಿದ ಋಷಿಗಳ, ಆಶಯ- ಮನಸ್ಸಿನಲ್ಲಿ, ಶಯ- ಮಲಗುವ, ಭಾಗ್ಯಭಾಗ್ಯಜನನಂದಿತ— ಭಾಗ್ಯ- ಒಳ್ಳೆಯ ಅದೃಷ್ಟವನ್ನು, ಭಾಕ್- ಹೊಂದಿದಜನಗಳ, ಯಜನ- ಪೂಜೆಯಿಂದ, ನಂದಿತ- ಸಂತೋಷಪಡಿಸಲ್ಪಟ್ಟ, ನಂದಿತಸುಪ್ರಭುಪ್ರಿಯಾ— ನಂದಿತ- ಸಂತೋಷಪಡಿಸಲ್ಪಟ್ಟ, ಸುಪ್ರಭು-ಅಲ್ಲಮಪ್ರಭುವುಳ್ಳೋಣದರಿಂದ, ಪ್ರಿಯಾ-ಪ್ರೀತಿವಿಶಿಷ್ಟನಾದ. ॥೬೨॥

ಸುರವರದಾನವೇನಪರಿಪೂಜಿತ— ಸುರವರ- ದೇವಶ್ರೇಷ್ಠರು, ದಾನವ- ರಾಕ್ಷಸರಲ್ಲಿ, ಇನ- ಶ್ರೇಷ್ಠರಾದವರುಗಳಿಂದ, ಪರಿಪೂಜಿತ- ಪೂಜಿಸಲ್ಪಟ್ಟ, ರಾಜಿತಲಿಂಗಸಂಗಬಂಧುರ—ರಾಜಿತ- ಪ್ರಕಾಶಿಸುವ, ಲಿಂಗ- ಶಿವಲಿಂಗದ, ಸಂಗ- ಸಂಬಂಧದಿಂದ, ಬಂಧುರ- ಮನೋಹರನಾದ, ನಿರಪೇಕ್ಷಮೋಕ್ಷಕೃದಪಾಂಗ—ನಿರಪೇಕ್ಷ- ಆಶಾರಹಿತರಿಗೆ, ಮೋಕ್ಷಕೃತ್- ಮುಕ್ತಿಯನ್ನುಂಟುಮಾಡುವ, ಅಪಾಂಗ- ಕಡೆಗಣ್ಣನೋಟವುಳ್ಳ, ಕೃಪಾಂಗ- ದಯೆಯೇ ಅವಯವವಾಗುಳ್ಳ, ಕರಾಳಕಾಲಸಹ್ಮರ- ಭಯಂಕರನಾದ ಯಮನನ್ನು ನಾಶಮಾಡಿದ, ನಿರಪಾಯಕಾಯ- ಹಾನಿಯಿಲ್ಲದ ದೇಹವುಳ್ಳ, ಗುಣಮಂಡಿತಪಂಡಿತನುತ್ಯ—ಗುಣ- ಸದ್ಗುಣಗಳಿಂದ ಮಂಡಿತ- ಅಲಂಕರಿಸಲ್ಪಟ್ಟ, ಪಂಡಿತ- ವಿದ್ವಾಂಸರಿಂದ, ನುತ್ಯ- ಹೊಗಳಲ್ಪಡುವದಕ್ಕೆ ಯೋಗ್ಯನಾದ, ಸತ್ಯಸಂಗರ- ದೃಢಪ್ರತಿಜ್ಞೆಯುಳ್ಳ, ಉನ್ನತವಿತಂದ್ರ- ಉತ್ಕೃಷ್ಟವಾದ ಜಾಗರೂಕತೆಯುಳ್ಳ. ॥೬೩

ಗತಿ- ಪ್ರಾಪ್ಯಸ್ಥಾನವು, ಸಮಂತಂ- ಚೆನ್ನಾಗಿ. ... ... ॥೬೪॥

ಕಂ ॥ ಕ್ಷಿತಿರೇಣುವ ದಗಣಿತಭವ । ತತಿಯೊಳ್ಸಲೆ ಬಂದು ನೊಂದೆ ನಿನ್ನಾದೊಡ ಮುನ್ನತಕೃಪೆಯಿಂ ಭವಬಂಧ। ಸ್ಥಿತಿಯಂ ಪರಿ ದೆನ್ನ ಪೊರೆ ಕೃಪಾನಿಧಿ ಬಸವ ॥೧೫॥

ಉ ॥ ಮಾಡದ ಪಾಪ ಮಿಲ್ಲ ಮನಮುಟ್ಟದ ಮಾರವಿಕಾರ ಮಿಲ್ಲಕಂ । ಡಾಡದ ನಿಂದೆ ಯಿಲ್ಲ ಕೊರಚಾಡದ ಸಜ್ಜನರಿಲ್ಲ ಪಾಂಥೆಯಿಂ ॥ ಬೇಡದ ವಸ್ತುವಿಲ್ಲ ಬರಿದಾಗದ ಮಾನವರಿಲ್ಲ ದೇವ ನೀಂ। ನೋಡದಿ ರೆನ್ನದುರ್ಗುಣಶತಂಗಳ ನಯ್ಯ ವೃಷಾಧಿನಾಯಕ ॥೧೬॥

ಮತ್ತೇ ॥ ಕ್ರಿಯೆಯೊಳ್ಚರ್ಯೆಯೊಳೀಶ್ವರಾನುಗತಯೋಗಜ್ಞಾನಮಾರ್ಗಂಗಳೊ। ಳ್ನಿಯಮಂದಪ್ಪದ ಪಾಳ್ಕೆಯಿಂ ಚರಿಸಲುದ್ಯದ್ಭಕ್ತಿವೈರಾಗ್ಯನಿ ॥ ರ್ಣಯದೊಳ್ವರ್ತಿಸಲೆಂತುಮಾರದ ಜಡಾತ್ಮಂ ನೋಳ್ಪೊಡಾನೇ ಗುಣಾ। ಶ್ರಯ ನಿನ್ನಂ ಮರೆವೊಕ್ಕೆ ನಯ್ಯ ಪೊರೆ ನೀ ನೆನ್ನಂ ವೃಷಾಧೀಶ್ವರ ॥ ... ... ೧೭

ಮತ್ತೇ ॥ ಖಲನಂ ಕಾಮುಕನಂ ಕುಧೈರ್ಯವರನಂ ದುರ್ದಾಂತನಂ ಧೂರ್ತನಂ । ಕಲಹಾನಂದಿತನಂ ಕುಮಾರ್ಗರತನಂ ದುಸ್ಸ್ವಾಂತನಂ ದುರ್ಮದಾ ॥ ವಿಲನಂ ದುಃಖಸಮುದ್ರಮಧ್ಯಗತನಂ ಕಾರುಣ್ಯದಿಂ ದೆನ್ನ ನ । ಸ್ಖಲಿತಶ್ರೀಕರ ನೋಡಿ ರಕ್ಷಿಸು ನಿತಾಂತಂ ನೀಂ ವೃಷಾಧೀಶ್ವರ ॥ ... ... ... ೧೮

ಉ ॥ ನಿನ್ನಯ ದಿವ್ಯಮೂರ್ತಿ ಬಿಡ ದೆನ್ನ ಮನೋಂಬುಜಮಧ್ಯದೊಳ್ಸ್ಥಿರಂ । ನಿನ್ನಯ ದಿವ್ಯನಾಮ ಮಮದೀಯ ಸದ್ರಸನಾಗ್ರದಲ್ಲಿ ಕೇ ॥ ಳ್ನಿನ್ನಯ ಭಕ್ತ ರಂಘ್ರಿಯುಗ ಮೆನ್ನಯ ಮಸ್ತಕದಲ್ಲಿ ಮಾಣ ದಿಂ । ದುಂ ನಲಿಸಿರ್ಪ್ಪು ದೊಂದುವರಮಂ ಕುಡು ಬೇಳ್ಪೆ ನಿದಂ ವೃಷಾಧಿಪ ॥ ... ... ... ... ೧೯

ಚಂ ॥ ಬಸವ ಭವತ್ಪದಾಬ್ಜರಜ ಮೆನ್ನ ಲಲಾಟಲಲಾಮ ಮಾಗಿ ನಿ । ನ್ನಸಮವದಂಗ ಳೆನ್ನೆರ್ದೆಗೊಳಂ ತಳೆ ದಂಬುಜಮಾಗಿ ನಿನ್ನ ರೂ ॥ ಪೆಸೆವ ಮದೀಯಚಕ್ಷುಗಮೃತಾಂಜನ ಮಾಗಿ ಮದುತ್ತಮಾಂಗದೊ । ಳ್ಪಸರಿಸಿ ನಿಲ್ಕೆ ನಿನ್ನಪದಪಾದುಕೆ ಶೇಖರ ಮಾಗಿ ಸಂತತಂ ॥ .. ... ... ... ೨೦

---

ಕ್ಷಿತಿರೇಣುವತ್- ಭೂಮಿಯಲ್ಲಿರುವ ಧೂಳಿನಂತಾಗೆ, ಅಗಣಿತಭವತತಿಯೊಳ್- ಎಣಿಸುವದಕ್ಕಾಗದ ಜನ್ಮಸಮುದಾಯದಲ್ಲಿ, ಭವಬಂಧಸ್ಥಿತಿಯಂ- ಸಂಸಾರದ ಕಟ್ಟಿನ ಇರುವಿಕೆಯನ್ನು, ಪರಿದು- ಕಿತ್ತು. ॥೧೫॥

ಮಾಡದ- ನಾನು ಮಾಡದೇ ಇರುವ, ಮಾರವಿಕಾರಂ-ವಿಷಯಾಭಿಲಾಷೆಯಿಂದುಂಟಾದಚೇಷ್ಟೆಯು, ಕೊರಚಾಡದ- ಪರಿಹಾಸಮಾಡದೇ ಇರುವ, ಬರಿದು- ನಿಷ್ಪ್ರಯೋಜನಶ್ರಮವುಳ್ಳವರು. ॥೧೬॥

ಚರ್ಯೆಯೊಳ್- ನಡತೆಯಲ್ಲಿ, ಆರದ- ಸಮರ್ಥನಾಗದ, ಜಡಾತ್ಮಂ- ಮೂಢಬುದ್ಧಿಯುಳ್ಳವನು. ॥೧೭॥

ಕಾಮುಕನಂ- ವಿಷಯಾಭಿಲಾಷೆಯುಳ್ಳ, ಕಲಹಾನಂದಿತನಂ-ಜಗಳದಿಂದಸಂತೋಷಪಡಿಸಲ್ಪಟ್ಟ, ದುಸ್ಸ್ವಾಂತನಂ-ಕೆಟ್ಟಮನಸ್ಸುಳ್ಳ, ಅಸ್ಖಲಿತಶ್ರೀಕರ-ಚಂಚಲವಾಗದೇ ಇರುವ ಸಂಪತ್ತನ್ನುಂಟುಮಾಡುವ.

ದಿವ್ಯಮೂರ್ತಿ- ಶ್ರೇಷ್ಠವಾದ ಆಕಾರವು, ಸದ್ರಸನಾಗ್ರದಲ್ಲಿ- ಒಳ್ಳೆಯ ನಾಲಗೆಯ ತುದಿಯಲ್ಲಿ.

ಭವತ್ಪದಾಬ್ಜರಜಂ- ನಿನ್ನ ಚರಣಕಮಲದ ಧೂಳಿಯು, ಲಲಾಟಲಲಾಮಂ- ಹಣೆಯತಿಲಕವು, ಎರ್ದೆಗೊಳಂ ದಳೆದ- ಮನಸ್ಸೆಂಬಸರೋವರವು ಧರಿಸಿದ, ಅಮೃತಾಂಜನಂ- ಅಮೃತದಿಂದಮಾಡಿದ ಕಪ್ಪು, ಪದಪಾದುಕೆ- ಪಾದರಕ್ಷೆಯು, ಶೇಖರಂ- ಶಿರೋಭೂಷಣವು. ... ... ... ॥೨೦॥

ಪರಮಕೃಪಾಸಮುದ್ರ ಸತತಂ ಶರಣಾಗತವಜ್ರಪಂಜರ । ಸ್ಥಿರಬಿರು ದಾಂ
ಚಂ ॥ ಕ ಘೋರಭವದುಃಖದ ಕೋಟಲೆ ಗಳ್ಕೆ ಬಂದು ನಿ ॥ ನ್ನುರುತರಪಾದಪದ್ಮಯುಗಮಂ ಮ
ರೆವೊಕ್ಕೆ ನುದಾರವೃತ್ತಿಯಿಂ । ಪೊರೆ ಭವಬಂಧಮಂ ಪರಿದು ನಲ್ಮೆಯೊ ಳೆನ್ನ ವೃಷಾಧಿ
ನಾಯಕ ! ... ... ... ... ೨೧

ತರಿಸಂದಜ್ಞಾನದಿಂ ಧಾಂ ಬಿಡದೆ ನೆಗಳ್ದ ಸರ್ವಾಪರಾಧಂಗಳಂ ನೀಂ ।
ಮ॥ ಸ್ರ॥ ಮರೆ ದೆನ್ನಂ ನಿನ್ನ ಕಾರುಣ್ಯಮನೆ ಮೆರೆದು ರಕ್ಷಿಪ್ಪುದೆಲ್ಲಂದದಿಂ ಕ ॥ ಟ್ಟಿರಕಂಬೆ ತ್ತೀ
ವ್ರ ದುದ್ಯತ್ಪರಮಶಿವಪದಾಂಭೋಜಸದ್ಭಕ್ತಿಯೊಂ ದ । ಳ್ಕರನೊಳ್ಪಿಂ ದೇವ ನೀ ನೊ
ಲ್ದಿನಗೆ ಬಸವ ಭಕ್ತಾಬ್ಧಿಸಂಪೂರ್ಣಚಂದ್ರ ॥ ... ... ೨೨

ಆಶಾವಾರಿ ಸುತಾಚಲಾವಳಿ ಷಡೂರ್ಮ್ಯೂರ್ಮಿ ದ್ವಿಷದ್ಗ್ರಾಹಸಂ । ಕ್ಲೇಶಾ
ಶಾ ॥ ವರ್ತಕಳತ್ರಸಿಂಧು ಕರಣೋದ್ಯನ್ಮೀನ ಸಂಸಾರವಾ ॥ ರಾಶಿಪ್ರಚ್ಯುತ ನಾದೆ ನುದ್ಧರಿಸು
ತಂ ನೀಂ ರಕ್ಷಿಸೈ ಸತ್ಕೃಪಾ । ವೇಶ ತ್ವತ್ಪದನಾವೆಯಿಂ ಕೃಪಣ ನಾದೆನ್ನಂ ವೃಷಾ
ಧೀಶ್ವರ ॥ ... ... ... ... ೨೩

ವಿತತಾಯುರ್ವೃದ್ಧಿಯಂ ಸಿದ್ಧಿಯ ನನುಪಮಸೌಭಾಗ್ಯಮಂ ಭೋಗ್ಯ
ಮ । ಸ್ರ ॥ ಮಂ । ಸಂತತತೇಜಸ್ಸ್ಫೂರ್ತಿಯಂ ಕೀರ್ತಿಯ ನುರುತರಗಾಂಭೀರ್ಯಮಂ ಧೈರ್ಯಮಂ ವಿ ॥
ಶ್ರುತಶಂಭುಧ್ಯಾನಮಂ ಜ್ಞಾನಮ ನಭವಲಸದ್ಭಕ್ತಿಯಂ ಮುಕ್ತಿಯಂ ಶಾ । ಶ್ವತಪೂರ್ಣಾ
ನಂದಮಂ ಕುಂದದೆ ಕುಡು ಶರಣಶ್ರೇಣಿ ಗಂಧುಂ ವೃಷೇಂದ್ರ ॥ ... ೨೪

ಬಸವಪದಾಬ್ಜಡಾಸ ನೆನಿಸಿದ್ದ ಷಡಕ್ಷರಿದೇವ ನಿಂತು ನಿ । ರ್ಮಿಸಿದಪು
ಚಂ ॥ ರಾಣಮಂ ಪದೆ ದಿದಂ ಬರೆ ದೋದುವ ಕೇಳ್ವ ಮಾನವ ॥ ರ್ವಸುಧೆಯೊ ಳತ್ಯಪೂರ್ವಸುಖ

---

ಕೋಟಲೆಗೆ- ಬಾಧೆಗೆ. ... ... ... ... ||೨೧||

ತರಿಸಂದ- ಪ್ರಾಪ್ತವಾದ, ಕಟ್ಟಿರಕಂಬೆತ್ತು- ಅತಿಪ್ರೀತಿಯನ್ನುಹೊಂದಿ, ಉದ್ಯತ್ಪರಮಶಿವಪದಾಂಭೋಜಸದ್ಭಕ್ತಿಯ- ಉತ್ಕೃಷ್ಟವಾದಪರಮೇಶ್ವರನ ಪಾದಕಮಲದ ಭಕ್ತಿಯ, ಒಂದಳ್ಕರಂ- ಒಂದು ಪ್ರೀತಿಯನ್ನು, ಭಕ್ತಾಬ್ಧಿಸಂಪೂರ್ಣಚಂದ್ರ- ಶಿವಭಕ್ತರೆಂಬ ಸಮುದ್ರಕ್ಕೆ ತುಂಬಿದ ಚಂದ್ರನಾದ ಬಸವೇಶ್ವರನೇ ! ... ... ... ... ... ... ||೨೨||

ಆಶ.........ಪ್ರಚ್ಯುತಂ— ಆಶಾ- ಆಸೆಯೆಂಬ, ವಾರಿ- ನೀರುಳ್ಳ, ಸುತ- ಮಕ್ಕಳೆಂಬ, ಅಚಲ- ಪರ್ವತಗಳ, ಆವಳಿ- ಪಙ್ತಿಯುಳ್ಳ, ಷಡೂರ್ಮ್ಯೂರ್ಮಿ- ಕ್ಷುತ್ತೃಷ್ಣಾದಿಷಡೂರ್ಮಿಗಳೇ ತೆರೆಗಳಾಗುಳ್ಳ, ದ್ವಿಷದ್ಗ್ರಾಹ— ದ್ವಿಷತ್- ಕಾಮಾದ್ಯರಿಗಳೆಂಬ, ಗ್ರಾಹ- ಮೊಸಳೆಗಳುಳ್ಳ, ಸಂಕ್ಲೇಶ- ಪಂಚಕ್ಲೇಶಗಳೆಂಬ, ಆವರ್ತ- ಸುಳಿಯುಳ್ಳ, ಕಳತ್ರ- ಹೆಂಡತಿಯೆಂಬ, ಸಿಂಧು- ಹೊಳೆಯುಳ್ಳ, ಕರಣ- ಇಂದ್ರಿಯಗಳೆಂಬ, ಉದ್ಯನ್ಮೀನ- ದೊಡ್ಡಮೀನುಗಳುಳ್ಳ, ಸಂಸಾರವಾರಾಶಿ- ಸಂಸಾರವೆಂಬ ಸಮುದ್ರದಲ್ಲಿ, ಪ್ರಚ್ಯುತಂ- ಜಾರಿಬಿದ್ದವನು, ಉದ್ಧರಿಸುತಂ- ಮೇಲಕ್ಕೆತ್ತುತ್ತಾ, ತ್ವತ್ಪದನಾವೆಯಿಂ- ನಿನ್ನ ಚರಣವೆಂಬ ಹಡಗಿನಿಂದ, ಕೃಪಣಂ- ದೀನನು. ... ... ... ... ... ||೨೩||

ವಿತತಾಯುರ್ವೃದ್ಧಿಯಂ- ವಿಸ್ತಾರವಾದ ಆಯುಸ್ಸಿನ ಹೆಚ್ಚಿಗೆಯನ್ನು, ಅನುಪಮಸೌಭಾಗ್ಯಮಂ- ಎಣೆಯಿಲ್ಲದ ಐಶ್ವರ್ಯವನ್ನು. ... ... ... ... ||೨೪||

ಭೋಗಮಂ ನಾಳ್ದು ನಿರಾಮಯತ್ವದಿಂ । ದೆಸೆ ದಸವಾಕ್ಷಸಿಂ ಪರದೊಳ್ ಗರ್ಗಳಮೋಕ್ಷಮಂ ನಾಳ್ದು ರಂಜಿಪರ್ ॥ ... .. .. ೭೫

ಚಂ॥ ಸುರಪನ ಭೋಗಮುಂ ಧನದ ನೈಸಿರಿಯುಂ ಗನಿಯಚ್ಛತೇಜಮುಂ। ಗುರುವಿನ ಬುದ್ಧಿಯುಂ ಗುಹನ ಸಾಹಸಮುಂ ರತಿರಾಜ ನಂದಮುಂ ॥ ಮರುತನ ಸತ್ವಮುಂ ಬಿದಿಯ ವಿದ್ಯೆಯುಂ ಮಂಬುಜನಾಭ ನೇಳ್ಗೆಯುಂ । ದೊರೆವುದು ಕೇಳ್ವ ಮರ್ತ್ಯತತಿ ಗೀಬಸವೇಶ್ವರಸತ್ಪುರಾಣಮಂ ॥ ... ... ... ೭೬

ಚಂ ॥ ಪದೆದಿದ ನೋದು ವರ್ಥಮುಸಿ ವರ್ಾಲಿಪ ಪ್ರಾಜಿಪ ಮಾನವರ್ಗೆ ದು । ರ್ಗದ ಮಪಮೃತ್ಯುತಸ್ಕರವಿಷಗ್ರಹದುಷ್ಟಮೃಗಾದಿಭೀತಿ ಕುಂ ॥ ದದ ಜಡಭಾವದುಃಖಿತೆ ದರಿದ್ರತೆ ಕಂಟಕ ಮೆಂಬಿವೆಲ್ಲಮಂ ।ಸದಮಳಧರ್ಮರೂಪ ಪರಿದಿಕ್ಕಿಸುಕಂಗುಡು ನೀಂ ವೃಷಾಧಿಪ ॥ ... ... ... ... ೭೭

ಚಂ ॥ ಘನಶರಣಪ್ರತಾನದ ಮಹತ್ತ್ವಮ ನೀಶ್ವರ ನೋರ್ವ ನಲ್ಲದ। ಬ್ಜನಯನವಾಗ್ವರಾದಿದಿವಿಜ ರ್ಮನಿಗ ಳ್ತಳಿಯ ಲ್ಸಮರ್ಥ ರ ॥ ಲ್ಲೆನೆ ಜಡಬುದ್ಧಿ ಗೇನೆನಗೆ ಶಕ್ಯಮೆ ತನ್ಮಹಿಮಾಬ್ಧಿಯೊಂದು ಸೀ । ರ್ವನಿಯನಿತಂ ವೃಷೇಂದ್ರ ಪೊಗಳ್ದಂ ಕ್ಷಮಿಸೆನ್ನಯ ಸಾಸದೇಳ್ಗೆಯಂ ॥ ... ... ... ೭೮

ಕಂ ॥ ಗುರುಪಾಲ್ಕುರಿಕೆಯ ಸೋಮಾ। ರ್ಯರ ಭೀಮ ಕವೀಂದ್ರಶಂಕರಾರ್ಯರ ಪಾದಾಂ॥ ಬುರುಹಕ್ಕೆ ಮಣಿ ದಪಂದಿರ। ವರಕೃಪೆಯಿಂ ದೊರೆದೆ ನೀಪ್ಪುರಾಣಮ ನಿಳೆಯೊಳ್ ॥ ೭೯

ಮ ॥ ಸ್ರ ॥ ಜಪದಿಂದಂ ಜ್ಞಾನದಿಂದಂ ಸದಮಳಮತಿಯಿಂದಂ ಸದಾಚಾರದಿಂದಂ । ತಪದಿಂದಂ ಹೋಮದಿಂದಂ ಮುನಿಪಭಜನದಿಂ ಕ್ಷೇತ್ರಯಾತ್ರಾದಿಯಿಂದಂ ॥ ವ್ಯಪದೇಶಂಬೆ

---

ನಿರಾಮಯತ್ವದಿಂದೆ- ಭವರೋಗವಿಲ್ಲದೇ ಇರುವಿಕೆಯಿಂದ, ಪರದೊಳ್- ದೇಹಾಂತ್ಯದಲ್ಲಿ. ॥೭೫॥

ಸುರಪನ- ದೇವೇಂದ್ರನ, ಭೋಗಮುಂ- ಸೌಖ್ಯವೂ, ಧನದನ- ಕುಬೇರನ, ಐಸಿರಿಯುಂ- ಐಶ್ವರ್ಯವೂ, ಅಚ್ಛತೇಜಮುಂ- ನಿರ್ಮಲವಾದ ತೇಜಸ್ಸೂ, ಗುರುವಿನ- ಬೃಹಸ್ಪತಿಯ, ಗುಹನ- ಷಣ್ಮುಖನ, ಸಾಹಸಮುಂ- ಸಾಮರ್ಥ್ಯವೂ, ರತಿರಾಜನ- ಮನ್ಮಥನ, ಅಂದಮುಂ- ಸೌಂದರ್ಯವೂ, ಮರುತನ- ವಾಯುವಿನ, ಸತ್ವಮಂ- ಬಲವೂ, ಬಿದಿಯ- ಬ್ರಹ್ಮನ, ಅಂಬುಜನಾಭನ- ವಿಷ್ಣುವಿನ, ಏಳ್ಗೆಯುಂ- ಅಭಿವೃದ್ಧಿಯೂ. ॥೭೬॥

ದುರ್ಗದಂ- ಕೆಟ್ಟರೋಗವು, ಅಪ............ಭೀತಿ— ಅಪಮೃತ್ಯು- ಮಧ್ಯದಲ್ಲಿಸಂಭವಿಸುವ ಆಪತ್ತು, ತಸ್ಕರ- ಕಳ್ಳರು, ವಿಷ, ಗ್ರಹ- ಪಿಶಾಚ, ದುಷ್ಟಮೃಗ- ಕೆಟ್ಟಮೃಗಗಳು ಇವುಗಳಿಂದುಂಟಾಗುವ, ಭೀತಿ- ಭಯವು, ಜಡಭಾವದುಃಖಿತೆ- ಮೂಢತ್ವವೂ ಕ್ಲೇಶದಿಂದ ಕೂಡಿರುವಿಕೆಯೂ. ॥೭೭॥

ಅಬ್ಜನಯನವಾಗ್ವರಾದಿದಿವಿಜರ್- ವಿಷ್ಣುಬ್ರಹ್ಮಾದಿದೇವತೆಗಳು. ... ॥೭೮॥

* ಗುರುಪಾಲ್ಕುರಿಕೆಯಸೋಮಾರ್ಯರ, † ಭೀಮಕವೀಂದ್ರ ‡ ಶಂಕರಾರ್ಯರ, ಒಲಿದೆಂ- ಹೇಳಿದೆನು. ... ... ... ... ॥೭೯॥

ವ್ಯಪದೇಶಂಬೆತ್ತ- ನೆಪವಂ ಹೊಂದಿದ, ಈದಿವ್ಯಪುರಾಣಾರ್ಣವೋದ್ಯತ್ಸುಕೃತದ- ಈ ಶ್ರೇಷ್ಠ

---

* ಆಂಧ್ರಭಾಷೆಯಲ್ಲಿ ಬಸವಪುರಾಣವಂ ರಚಿಸಿದವರು. † ಕನ್ನಡದಲ್ಲಿ ಷಟ್ಪದಿರೂಪವಾಗಿ ಬಸವಪುರಾಣವಂ ರಚಿಸಿದವರು. ‡ ಸಂಸ್ಕೃತದಲ್ಲೀಪುರಾಣವಂ ರಚಿಸಿದವರು. ... ॥೭೯॥

ತ್ತ ದಾನಕ್ರಿಯೆಯಿ ನೊದವಿದತ್ಯಂತಪುಣ್ಯೌಘ ಮೀಡಿ । ವ್ಯಪುರಾಣಾಕರ್ಣನೋದ್ಯ ತ್ಸುಕೃತ ದೊರೆಗೆ ತಾಂ ಸಾಟಿಯಲ್ಲೆಲ್ಲ ಜಸ್ರಂ ॥ ... ... ೮೦

ಚಂ ॥ ಪ್ರಮಥಗಣಾಂಘ್ರಿ ಪಂಕಜಕೆ ರುದ್ರಗಣೇಂದ್ರಪದಾಂಬುಜಕ್ಕೆ ಸಂ । ಯಮಿ ನುತವೃತ್ತಿಯುಕ್ತ ಶಿವಭಕ್ತ ಮಹಾಗಣಪಾದವಾರಿಜ ॥ ಕ್ಕಮರ್ದತಿಭಕ್ತಿಯಿಂ ದಗಣಿತಪ್ರ ಣವಸ್ಕೃತಿಗೆಯ್ದು ದಾಸಭಾ । ವಮನೊಡ ನಾಳ್ದು ಜಾರೆ ಭವಮಾಲೆ ಕೃತಾರ್ಥತೆದಾಳ್ದು ಬಾಳ್ವನಾಂ ॥ ... ... .. ೮೧

ಚಂ॥ ದುರಿತಘನೌಘಚಂಡಪವನಂ ಗ್ರಹಸರ್ಪಸುಪರ್ಣ ಮಾರ್ತಿ ಸಿಂ । ಧುರಹರಿ ದುರ್ಗದೋಗ್ರಗಿರಿವಜ್ರ ಮರಾತಿಸರೋಧಿಬಾಡಬಂ ॥ ಪರಕೃತಕಕ್ಷಮಾರುಹಕುಠಾರ ಮ ಶೇಷವಿಷಾಬ್ಜಷಂಡಕುಂ । ಜರಮಿದು ಜಾಪಕರ್ಗೆ ಭವಕಕ್ಷದವಂ ಬಸವಾಕ್ಷರತ್ರಯಂ ॥

ಚಂ ॥ ವಿವಿಧವಿಪತ್ಕದಂಬಕುಜರಾಜಿಕುಠಾರ ಮರಾತಿವಾತಭುಕ್ । ಪ್ರವಿಜಿತಮೇಘ ವಹ್ನಿ ಯಮದರ್ಪಚಯೋತ್ಪಲಚಂಡಭಾನು ದು॥ ರ್ಭವನಲಿನಪ್ರತಾನತುಹಿನಂ ದುರಿತೌ ಘಘನಪ್ರಭಂಜನಂ । ಭುವನದ ಸಜ್ಜನಾಳಿಗೆ ವೃಷೇಂದ್ರಪದಸ್ಮೃತಿ ಸರ್ವಸೌಖ್ಯದಂ ॥

ಚಂ॥ ತಿರುನೀಲಾಂಗನೆಕನ್ಯೆ ಸಂಗವಿಭುಕಣ್ಣಪ್ಪಂ ಮಹಾದೇವಿ ಶಂ । ಕರನಿಮ್ಮ ರ್ಕ

---

ವಾದ ಪುರಾಣವನ್ನು ಕೇಳುವದರಿಂದುಂಟಾಗುವ ಉತ್ಕೃಷ್ಟವಾದ ಪುಣ್ಯದ, ಒರೆಗೆ- ಸಾದೃಶ್ಯಕ್ಕೆ. ॥೮೦॥

ಸಂಯಮಿ......ವಾರಿಜಕ್ಕೆ— ಸಂಯಮಿ- ಋಷಿಗಳಿಂದ, ನುತ- ಹೊಗಳಲ್ಪಟ್ಟ, ವೃತ್ತಿ- ವ್ಯಾಪಾರದಿಂದ, ಯುಕ್ತ- ಕೂಡಿದ, ಶಿವಭಕ್ತ, ಮಹಾಗಣ, ಇವರುಗಳ ಪಾದವಾರಿಜಕ್ಕೆ, ಅಗಣಿತಪ್ರಣಮಸ್ಕೃತಿಗೆಯ್ದು- ಎಣಿಸುವದಕ್ಕಾಗದಷ್ಟು ನಮಸ್ಕಾರವಂ ಮಾಡಿ, ಭವಮಾಲೆ- ಜನ್ಮಪಙ್ಕ್ತಿಯು, ಜಾರೆ- ಕಳೆದು ಹೋಗುವಹಾಗೆ. ... ... ... ... ॥೮೧॥

ಬಸವಾಕ್ಷರತ್ರಯಂ- ಬಸವ ಎಂಬ ಮೂರು ಅಕ್ಷರಗಳು, ದುರಿತಘನೌಘಚಂಡಪವನಂ- ಪಾಪವೆಂಬ ಮೋಡದ ಗುಂಪಿಗೆ ಬಿರುಗಾಳಿಯು, ಗ್ರಹಸರ್ಪಸುಪರ್ಣಂ- ಪಿಶಾಚವೆಂಬ ಹಾವಿಗೆ ಗರುಡಪಕ್ಷಿಯು, ಆರ್ತಿಸಿಂಧುರಹರಿ- ಮನೋವ್ಯಥೆ ಯೆಂಬ ಆನೆಗೆ ಸಿಹ್ಮವು, ದುರ್ಗದೋಗ್ರಗಿರಿವಜ್ರಂ- ಕೆಟ್ಟ ರೋಗವೆಂಬ ಭಯಂಕರವಾದ ಬೆಟ್ಟಕ್ಕೆ ವಜ್ರಾಯುಧವು, ಅರಾತಿಸರೋಧಿಬಾಡಬಂ- ಶತ್ರುಗಳೆಂಬ ಸಮುದ್ರಕ್ಕೆ ಬಡಬಾಗ್ನಿಯು, ಪರಕೃತಕಕ್ಷಮಾರುಹಕುಠಾರಂ— ಪರ- ಶತ್ರುಗಳಿಂದ ಮಾಡಲ್ಪಟ್ಟ, ಕೃತಕ- ಮೋಸಕುಟಿಲಗಳೆಂಬ, ಕ್ಷಮಾರುಹ- ಮರಕ್ಕೆ, ಕುಠಾರಂ- ಕೊಡಲಿಯು, ಅಶೇಷವಿಷಾಬ್ಜಷಂಡಕುಂಜರಂ- ಸಕಲ ವಿಷಗಳೆಂಬ ಕಮಲದ ಗುಂಪಿಗೆ ಆನೆಯು, ಜಾಪಕರ್ಗೆ ಜಪಿಸುವವರಿಗೆ, ಭವಕಕ್ಷದವಂ- ಪಾಪವೆಂಬ ಒಣಗಿದ ಕಾಡಿಗೆ ಕಾಳ್ಕಿಚ್ಚು. ... ... ... ... ... ॥೮೨॥

ವೃಷೇಂದ್ರಪದಸ್ಮೃತಿ- ಬಸವೇಶ್ವರನ ಪಾದಸ್ಮರಣೆಯು, ವಿವಿಧವಿಪತ್ಕದಂಬಕುಜರಾಜಿಕುಠಾರಂ- ನಾನಾಪ್ರಕಾರಗಳಿಂದ ಆಪತ್ತುಗಳ ಗುಂಪೆಂಬ ಮರಗಳ ಸಾಲಿಗೆ ಕೊಡಲಿಯು, ಅರಾತಿವಾತಭುಕ್ಪ್ರವಿಜಿತಮೇಘವಹ್ನಿ- ಶತ್ರುಗಳೆಂಬ ಸರ್ಪಗಳನ್ನು ಜಯಿಸುವ ಸಿಡಿಲು, ಯಮದರ್ಪಚಯೋತ್ಪಲಭಾನು- ಯಮನ ಅಹಂಕಾರದ ಸಮೂಹವೆಂಬ ನೈದಿಲೆಗೆ ಸಮರ್ಥನಾದ ಸೂರ್ಯ, ದುರ್ಭವನಲಿನಪ್ರತಾನತುಹಿನಂ- ಕೆಟ್ಟ ಸಂಸಾರವೆಂಬ ಕಮಲಗಳ ಗುಂಪಿಗೆ ಹಿಮವು, ದುರಿತೌಘಘನಪ್ರಭಂಜನಂ- ಪಾಪದ ಗುಂಪೆಂಬ ಮೋಡಕ್ಕೆ ಬಿರುಗಾಳಿಯು. ... ... ... ... ... ॥೮೩॥

ಮುಗ್ಧಮಹೇಶಭಕ್ತರ್-ಲೌಕಿಕಚಾಕಚಕ್ಯವಂ ತಿಳಿಯದ ಶಿವಭಕ್ತರು, ಭಾಸುರಚಂದ್ರಾತಪದಿಂ- ಪ್ರ

ಲಿನಾಥರುದ್ರಪಶುಪ ಭರ್ಗಸ್ವನ್ನಮಿತ್ತಂಡಿ ಯೆಂ | ಬಱಿವ ಮರ್ಗಗ್ಧಮಹೇಶಭಕ್ತರಿವರಂ ಧ್ರುಧ್ಯಾನ ಮೆಂದೆಂಬ ಭಾ | ಸುರಚಂದ್ರಾತಪದಿಂ ಮದೀಯಪರಿತಾಪಧ್ವಾಂತಮಂ ನೀಗುವೆಂ॥

ಮತ್ತಂ ॥ ಪರದಾಸಂ ಶಿವಲೆಂಕಮಂಚಣ ಸುವಾರಶ್ರೀಪತೀಶ ರ್ಗುಣಾ | ಕರನಾಡೋಪಹರಕಕ್ಕಯಂ ಶ್ವಪಚದೇವಂ ಜ್ಞಾನಸಂಬಂಧಬಾ ॥ ಚರಪ ರ್ವಂಡಿತಮಲ್ಲಿಕಾರ್ಜುನ ರಪಸ್ರಂ ಪಾಲಿಸುತ್ತಿರ್ಕೆ ಸಾ | ದರಮುಮ್ಮಂ ಪರಶಾಸ್ತ್ರವಿದ್ವಿಜಯಭಕ್ತ ರ್ಸತ್ಕಳಾಮಂಡಿತರ್ ॥ ... ... ... ... ೪೫

ಕಂ ॥ ಅಜಗಣ್ಣ ನನಿಮಿಷಯ್ಯಂ | ನಿಜಗುಣನುಂ ಸಿದ್ಧರಾಮ ನುರುಲಿಂಗಾರ್ಯಂ ॥ ವೃಜಿನಪರಪ್ರಾಸಲಯ್ಯನ | ಮಜಡಮಹಾಯೋಗಿಭಕ್ತರಿವರೆವಗಾಳ್ದರ್ ॥ ೪೬

ಕಂ ॥ ಪರಪಾಲಗುರ್ಜರಂ ನೆರೆ | ದರನಾಥಂ ವಲ್ಲಣಯ್ಯ ನುದ್ಭವದೇವಂ ॥ ಸುರುಚಿರಸತ್ಯಣ್ಣ ನಿವ | ರ್ಪರಶಿವಯುತಭೋಗಿಭಕ್ತರಿವರಂ ಪೊಗಳ್ವೆಂ ॥ ೪೭

ಕಂ ॥ ಅತಿಭಕ್ತಂ ಗೊಲ್ಲಳ ನು | ನ್ನತಕನ್ನದಜೊಮ್ಮಜೊಮ್ಮ ರಾನಿಂಬ ಜಗ ॥ ನ್ನುತವರ್ಕುನಾಥರಿವ ರ | ನ್ವಿತಶಿವನಿರ್ಲೇಪಭಕ್ತರೆಮ್ಮಯ ವಿಭುಗಳ್ ॥ ೪೮

ಕಂ ॥ ಪರವಾಗೀಶಂ ಸಕಳೇ | ಶ್ವರ ನೋಹಿಲ ಮೋಳಿಗಾರ್ಯ ಮಹಾದೇವಿ ಶುಭಂ ॥ ಕರಕೇಶಿರಾಜ ರಿವರುರು | ತರನಿಜವೈರಾಗ್ಯಭಕ್ತರಾ ನಿವ ರಣುಗಂ ॥ ೪೯

ಕಂ ॥ ತಿರುನೀಲಕಂಠ ರಘಪಸು | ಹರಪಸರು ಸೇಡಿರಾಜ ನೇಣಾಧಿಪ ನ ॥ ಚ್ಚರಿಯ ಮರನೀತಿ ಮೊಸೆಯಿಡು | ಪ ರಧಿಕತರಶಾಂತಭಕ್ತರಾ ನಿವರ ಸುತಂ ॥ ೫೦

ಕಂ ॥ ಉರುವೀರಶಂಕರಂ ನೆರೆ | ದರ ನಾಚೇರಮ ರೆಲೇಶಕೇತಯ್ಯಂ ಬಂ ॥ ಧುರ ಕಲ್ಲಿನಾಥಪೆರೀಮಾ | ರ್ಯರ ಶಿವಮತಶೀಲಭಕ್ತರನುಚರ ನಪ್ಪೆಂ ॥ ೫೧

ಕಂ ॥ ಅತಿದಾನಿಭಕ್ತರೆನಿಪ್ಪ | ನ್ನತಸಿಂಧುಮರಾಳಸಿಂಧುಬಲ್ಲಾಳರ ವಿ ॥ ಶ್ರುತ ಮಾನಕಂಜನ ಜನ | ನುತಸಿರಿಯಾಳ್ವನ ಪದಾಬ್ಜಸೇವಕ ನಪ್ಪೆಂ ॥ ೫೨

---

ಕಾಶಿಸುವ ಚಂದ್ರನ ಕಿರಣವಿಂದ, ಮದೀಯಪರಿತಾಪಧ್ವಾಂತಮಂ- ನನ್ನ ಆಧ್ಯಾತ್ಮಿಕಾದಿತಾಪಗಳೆಂಬ ಕತ್ತಲೆಯನ್ನು, ನೀಗುವೆಂ- ಹೋಗಲಾಡಿಸಿಕೊಳ್ಳುವೆನು. ... ... ॥೪೪॥

ಪರಶಾಸ್ತ್ರವಿದ್ವಿಜಯಭಕ್ತರ್- ಶಿವೇತರದೇವತಾಸಂಬಂಧಗಳಾದ ಶಾಸ್ತ್ರಗಳಂ ತಿಳಿದವರನ್ನು ಜೈಸಿದ ಭಕ್ತರು. ... ... ... ... ... ॥೪೫॥

ಅಜಡಮಹಾಯೋಗಿಭಕ್ತರ್- ಪ್ರಾಜ್ಞರಾದ ಶಿವಯೋಗಸಂಪನ್ನರಾದ ಶಿವಭಕ್ತರು, ಆಳ್ದರ್- ಪಾಲಿಸಿದವರು. ... ... ... ... ... ॥೪೬॥

ಪರಶಿವಯುತಭೋಗಿಭಕ್ತರ್- ಶಿವನೊಡನೆ ಕೂಡಿದ ಸೌಖ್ಯಾನುಭವವುಳ್ಳ ಭಕ್ತರು. ॥೪೭॥

ಅನ್ವಿತಶಿವನಿರ್ಲೇಪಭಕ್ತರ್- ಶಿವನೊಡನೆ ಸೇರಿದವರಾದುದರಿಂದ ಭವಲೇಪರಹಿತರಾದ ಭಕ್ತರು, ವಿಭುಗಳ್- ಸ್ವಾಮಿಗಳು. ... ... ... ॥೪೮॥

ನಿಜವೈರಾಗ್ಯಭಕ್ತರ್- ಸ್ಥಿರವಾದ ವಿರಕ್ತಿಯುಳ್ಳ ಭಕ್ತರು, ಅಣುಗಂ- ಮಗನು. ॥೪೯॥

॥೫೦॥ ಶಿವಮತಶೀಲಭಕ್ತರ- ವೀರಶೈವಮತಾಚರಣೆಯುಳ್ಳ ಭಕ್ತರ, ಅನುಚರಂ- ಸೇವಕನು. ॥೫೧॥

॥೫೨॥ ಪರಹಿತಕರರ್-ಇತರರಿಗೆ ಹಿತವಾದ ಕಾರ್ಯವಂ ಮಾಡುವ ಭಕ್ತರು, ತೊಳ್ತು-ದಾಸನು. ॥೫೩॥

ಕಂ ॥ ಕರಿಕಾಲಚೋಳ ನಿಂಬಿಗ । ಳುರುಮಲಯಾಧಿಪ ಹಲಾಯುಧ ರ್ಚಿಂಗಳೆಬಿಜ್ಜಿ ॥
ಧುರಸೋಮವೇಡಿಗ ಳವ । ರ್ಪರಹಿತಕರಭಕ್ತ ರಿವರ ತೊಳ್ತಾನಪ್ಪೆಂ ॥ ೯೩

ಕಂ ॥ ಮೊರಟುಡಬ್ಬಿಕಯ್ಯಂ ಶಂ । ಕರದಾಸಂ ಮಾಚಿದೇವ ನಿರಿವತ್ತಂ ರಾ ॥ ಮರ
ಸಂ ನಾಚಯ್ಯಂ ಭೂ । ಸ್ಕರದೇವಂ ವೀರಭಕ್ತ ರಿವರಡಿವಿಡಿವೆ ೯೪

ಕಂ ॥ ಭೂಮಿಯೊ ಳದ್ಭುತಭಕ್ತರು । ವೇಮಯ್ಯಂ ಮುಸುಟೆಚೌಡ ನಾಮಾದರ
ಸಂ ॥ ರೇಮಯ್ಯಂ ಕಿನ್ನರ ನಭಿ । ರಾಮಂ ಬಾಹೂರಬೊಮ್ಮ ನೆಮ ಗರೆಯ ರಿವರ್ ॥ ೯೫

ಕಂ ॥ ವಿಲಸತ್ಸ್ವತಂತ್ರಭಕ್ತ । ರ್ಕಲದುಕಂ ಘಟ್ಟಿವಳ್ಳ ನಾಮೆರೆವಿಂಡಂ ॥ ಕಲಿಗ
ಣನಾಥಂ ಚೆಂದಯ । ಹಲಾಯುಧ ಪ್ರಭುಗ ಳಿವರ ಕಿಂಕರ ನಪ್ಪೆಂ ॥ ೯೬

ಮತ್ತೇ ॥ ಗುರುಭಕ್ತಂ ಗುರುಭಕ್ತ ನಾತ್ಮಘನಲಿಂಗಪ್ರಾಣ ಸತ್ಯಣ್ಣ ನಾ । ಚರ
ಭಕ್ತಂ ಕಲಿಕಂಬಯಂ ಭಸಿತನಿಷ್ಠಜ್ಞಾನಸಂಬಂಧಿ ಸೌಂ ॥ ದರಮಿತ್ರಂ ಗಿರಿಶಾಕ್ಷನಿಷ್ಠ
ನುರುಮಾರಂ ಪಾದತೀರ್ಥಪ್ರಿಯಂ । ಚರಶೇಷಪ್ರಿಯ ನಪ್ಪ ಬಾಚರಸ ರೀಸದ್ಭಕ್ತರಂ
ವಂದಿಪೆಂ ॥ ... ... ... ... ೯೭

ಚಂ ॥ ಇಳೆಯೊಳೆ ಮಾಣದಿಂತು ಚಲದಿಂ ಬಲದಿಂ ದತಿನಿಷ್ಠೆಯಿಂ ಮನಂ । ಗೊಳಿ
ಸುವ ಭಕ್ತಿಯಿಂ ತನುಮನೋವನಿತಾಸುತಮುಖ್ಯವಸ್ತುಸಂ ॥ ಕುಳಮ ನವಂಚಕತ್ವದಿ
ನೊರಲ್ದಭವಂಗೆ ಸಮರ್ಪಿಸುತ್ತ ನಿ । ಶ್ಚಳಸುಖಮಾಳ್ದ ಸರ್ವಶಿವಭಕ್ತರ ಪಾದುಕೆಯಾಂ
ಪ ಭಕ್ತ ನಾಂ ॥ ... ... .. ೯೮

ಕಂ ॥ ಪಲವಂದದಾಚರಣೆಗಳಿ । ನಲಸದೆ ಪಡೆದಂದು ನಿಂದು ಮುಂದಭವನ ನೊ ॥
ಲ್ದೊಲಿಸಿದೊಲಿಸಲ್ಕೆ ನೆರೆದಿ । ರ್ದೊಲಿಯಿಪ ಶಿವಶರಣ ರೆಲ್ಲ ರಂಘ್ರಿಗೆ ಮಣಿವೆಂ ॥ ೯೯

ಮ ॥ ಸ್ರ ॥ ಪ್ರಣವಾರ್ಥಂ ನೀನೆ ಸಚ್ಚಿತ್ಸುಖರಸಮಯನುಂ ನೀನೆ ಲೀಲಾಕಟಾ
ಕ್ಷೇ । ಕ್ಷಣದಿಂ ಬ್ರಹ್ಮಾಂಡಮಂ ಮುಂಪಡೆದು ಪೊರೆವನುಂ ನೀನೆ ಸನ್ಮುಕ್ತಿಚಿಂತಾ ॥ ಮ
ಣಿರೂಪಂ ನೀನೆ ತತ್ವಾಳಿಗೆ ಮೊದಲಿಗನುಂ ನೀನೆ ಮದ್ದೇಶಿಕೇಂದ್ರಾ । ಗ್ರಣಿಯುಂ ಕೇ
ಳ್ನೀನೆ ಯೆನ್ನಂ ಪೊರೆ ಪೊರೆ ಸತತಂ ನಂಬಿದೆಂ ಶ್ರೀವೃಷೇಂದ್ರ ॥ ೧೦೦

---

ಅಡಿವಿಡಿವೆಂ- ಪಾದವಂ ಹಿಡಿಯುವೆನು. ... ... ... ॥೯೪॥

ಎರೆಯರ್- ಪತಿಗಳು. ... ... ... ... ॥೯೫॥

॥೯೬।೯೭॥ ಚಲದಿಂ- ಶಪಥದಿಂದ, ಅತಿನಿಷ್ಠೆಯಿಂ- ಬಹು ಶ್ರದ್ಧೆಯಿಂದ. ... ॥೯೮॥

ಪಲವಂದದ- ಅನೇಕಪ್ರಕಾರಗಳಾದ, ಆಚರಣೆಗಳಿಂ- ನಡತೆಗಳಿಂದ, ಅಂದು- ಪೂರ್ವದಲ್ಲಿ, ಇಂದು- ಈವಾಗ, ಮುಂದೆ, ಒಲಿಸಿದು- ಪ್ರೀತಿಪಡಿಸಿ, ಒಲಿಸಲ್ಕೆ- ಪ್ರೀತಿಪಡಿಸುವದಕ್ಕೆ, ನೆರೆದು- ಸೇರಿ, ಇರ್ದು, ಒಲಿಯಿಪ- ಪ್ರೀತಿಪಡಿಸುವ. ... ... ... ... ... ॥೯೯॥

ಪ್ರಣವಾರ್ಥಂ- ಓಂಕಾರವಾಚ್ಯನು, ಸಚ್ಚಿತ್ಸುಖರಸನುಂ- ಸಚ್ಚಿದಾನಂದಸ್ವರೂಪನೂ, ಲೀಲಾಕಟಾಕ್ಷೇಕ್ಷಣದಿಂ- ವಿಲಾಸವಿಶಿಷ್ಟವಾದ ಕಡೆಗಣ್ಣನೋಟದಿಂದ, ಸನ್ಮುಕ್ತಿಚಿಂತಾಮಣಿರೂಪಂ- ಶ್ರೇಷ್ಠವಾದ ಮುಕ್ತಿಯಂ ಕೊಡುವ ವಿಷಯದಲ್ಲಿ ಚಿಂತಾರತ್ನಸ್ವರೂಪನಾದವನು, ಮದ್ದೇಶಿಕೇಂದ್ರಾಗ್ರಣಿಯುಂ- ನನ್ನ ಉತ್ತಮನಾದ ಗುರುಶ್ರೇಷ್ಠನೂ. ... ... ... ॥೧೦೦॥

ಕವಿರಾಜವಿರಾಜಿತವೃತ್ತ || ಜಯಜಯದೇವ ಸುಧಾಮಯಧಾಮಯಶಸ್ಕ ಮಹಸ್ಕಲಿತಾಕ್ಷ ನಿರಾ | ಮಯ ಮಹಿತಾಂಗ ಸದಂಗನ ಪುಂಗವವಾಹ ವಿಮೋಹ ಕುಶೇ || ಶಯನಯನೇಕ್ಷಣಸಾರಸಸಾರಸಮರ್ಚಿತಪಾದಪಯೋಜ ಸದಾ | ಶ್ರಯ ಭಯದೂರ ಕುಮಾರ ಕುಮಾರ ಸುಧಾಕರಶೇಖರ ಶೂಲಧರ|| ... ... ೧೦೧

ಮತ್ತಕೋಕಿಲ || ಕುಂಡಲೀಶ್ವರಕುಂಡಲಾಂಚಿತಗಂಡಮಂಡಲ ಖಂಡಿತಾ | ಖಂಡಸಾಹಸದಂಡಭೃದ್ಭುಜದಂಡ ಚಂಡಕರಪ್ರಭಾ || ಮಂಡಿತಾಂಗ ಸದಂಡಜಧ್ವಜಕಾಂಡ ರಕ್ಷಿತಕಾಂಡ ದೋ | ರ್ದಂಡ ಪಾಲಯಚಂಡಿಕಾಮುಖಪುಂಡರೀಕದಿವಾಕರ || ೧೦೨

ಮ || ಸ್ರ || ಮತಿಯಿಂದಂ ಭಕ್ತಿಯಿಂದಂ ಛಲದಬಲದೆ ವೈರಾಗ್ಯದಿಂ ಧ್ಯಾನದಿಂ ಸ | ನ್ನುತಿಯಿಂದಂ ಶ್ರದ್ಧೆಯಿಂದಂ ಜಪದತಪದನುಷ್ಠಾನದಿಂ ದೇವ ನಿಮ್ಮಂ ||ಕ್ಷಿತಿಯೊಳ್ಭಕ್ತರ್ಸ್ಸಮರ್ಥ ರ್ಬಿಡ ದೊಲಿಸಿದ ರಾಂ ದೀನ ನೇಗೆಯ್ವೆ ನಸ್ಮ | ತ್ಪತಿಧರ್ಮಂ ನಿಮ್ಮ ದೆನ್ನಂ ಪೊರೆ ಪೊರೆ ಪುರುಳಂ ನೋಡದೆನ್ನೊಳ್ಪುರಾರೀ || ... ೧೦೩

ಮುಕ್ತಪದಗ್ರಸ್ತವೃತ್ತ || ಶಿವ ಶಿವ ದೇವದೇವ ಪರಮೇಶ ರಮೇಶಸುಬಾಣ ಬಾಣದಾ | ನವನವಸಂಪದಪ್ರದ ಸುಧಾಮಸುಧಾಮ ಭವಾರಿ ವಾರಿಜೋ || ದ್ಭವಭವವಂದ್ಯ

---

ಸುಧಾಮಯಧಾಮಯಶಸ್ಕ— ಸುಧಾಮಯ- ಅಮೃತಸ್ವರೂಪವಾದ, ಧಾಮ- ಕಿರಣವುಳ್ಳಚಂದ್ರನಂತಿರುವ, ಯಶಸ್ಕ- ಕೀರ್ತಿಯುಳ್ಳ, ಮಹಸ್ಕಲಿತಾಕ್ಷ— ಮಹಃ- ತೇಜಸ್ಸಿನಿಂದ, ಕಲಿತ- ಕೂಡಿದ, ಅಕ್ಷ- ಕಣ್ಣುಳ್ಳ, ಸದಂಗನ- ಸಮಿಾಚೀನಳಾದ ಪತ್ನಿಯುಳ್ಳ, ಪುಂಗವವಾಹ- ವೃಷಭೇಶ್ವರನೇ ವಾಹನವಾಗುಳ್ಳ, ವಿಮೋಹ- ಅಜ್ಞಾನರಹಿತನಾದ, ಕುಶೇ......ಪಯೋಜ— ಕುಶೇಶಯ- ಕಮಲವೇ, ನಯನ- ಕಣ್ಣಾಗುಳ್ಳ ವಿಷ್ಣುವಿನ, ಈಕ್ಷಣಸಾರಸಸಾರ- ಶ್ರೇಷ್ಠವಾದ ನೇತ್ರಕಮಲದಿಂದ, ಸಮರ್ಚಿತ- ಪೂಜಿಸಲ್ಪಟ್ಟ, ಪಾದಪಯೋಜ- ಪಾದಕಮಲವುಳ್ಳ, ಸದಾಶ್ರಯ- ಸತ್ಪುರುಷರಿಗೆ ಆಧಾರನಾದ, ಕುಮಾರಕುಮಾರ- ಷಣ್ಮುಖನೇ ಮಗನಾಗುಳ್ಳ. ... ... ... ... ||೧೦೧||

ಕುಂಡಲೀಶ್ವರಕುಂಡಲಾಂಚಿತಗಂಡಮಂಡಲ— ಕುಂಡಲೀಶ್ವರಕುಂಡಲ- ಕರ್ಣಾಭರಣನಾಗಿರುವ ಆದಿಶೇಷನಿಂದ, ಅಂಚಿತ- ಪೂಜ್ಯವಾದ, ಗಂಡಮಂಡಲ- ಕಪೋಲಪ್ರದೇಶವುಳ್ಳ, ಖಂಡಿ......ದಂಡ— ಖಂಡಿತ- ಕತ್ತರಿಸಲ್ಪಟ್ಟ, ಅಖಂಡ- ಅವಿಚ್ಛಿನ್ನವಾದ, ಸಾಹಸ- ಸಾಮರ್ಥ್ಯವುಳ್ಳ, ದಂಡಭೃತ್- ಯಮನ, ಭುಜದಂಡ- ದೊಣ್ಣೆಯಂತಿರುವ ಬಾಹುವುಳ್ಳ, ಚಂಡಕರಪ್ರಭಾಮಂಡಿತಾಂಗ- ಸೂರ್ಯನ ಕಾಂತಿಯಂತಿರುವ ಕಾಂತಿಯಿಂದಲಂಕರಿಸಲ್ಪಟ್ಟ ದೇಹವುಳ್ಳ, ಸದಂಡಜಧ್ವಜಕಾಂಡ—ಸತ್- ಸಮಿಾಚೀನವಾದ, ಅಂಡಜ-ಗರುಡನೇ, ಧ್ವಜ- ಧ್ವಜದಲ್ಲುಳ್ಳ ವಿಷ್ಣುವೇ, ಕಾಂಡ- ಬಾಣವಾಗುಳ್ಳ, ರಕ್ಷಿತಕಾಂಡ—ರಕ್ಷಿತ- ಸಂರಕ್ಷಿಸಲ್ಪಟ್ಟ, ಕ- ಬ್ರಹ್ಮನ, ಅಂಡ, (ಅಂದರೆ ಬ್ರಹ್ಮಾಂಡವುಳ್ಳ) ದೋರ್ದಂಡ- ದಂಡದಂತಿರುವ ಬಾಹುವುಳ್ಳ, ಚಂಡಿಕಾಮುಖಪುಂಡರೀಕದಿವಾಕರ- ಪಾರ್ವತಿಯ ಮುಖವೆಂಬ ತಾವರೆಗೆ ಸೂರ್ಯನಾದ. ... ||೧೦೨||

ಸನ್ನುತಿಯಿಂದಂ- ಒಳ್ಳೆಯ ನಮಸ್ಕಾರದಿಂದ, ಅಸ್ಮತ್ಪತಿಧರ್ಮಂ- ನನಗೆ ಒಡೆಯನಾಗಿರುವಿಕೆಯು, ಪುರುಳಂ- ಸ್ಥಿರಾಂಶವನ್ನು. ... ... ... ... ||೧೦೩||

ರಮೇಶಸುಬಾಣ— ರಮೇಶ- ಲಕ್ಷ್ಮೀಪತಿಯಾದ ವಿಷ್ಣುವೇ, ಸುಬಾಣ- ಒಳ್ಳೆಯ ಬಾಣವಾಗುಳ್ಳ, ಬಾಣದಾನವನವಸಂಪದಪ್ರದ-ಬಾಣಾಸುರನಿಗೆ ನೂತನವಾದ ಸಂಪತ್ತನ್ನು ಕೊಟ್ಟ, ಸುಧಾಮಸುಧಾಮ— ಸುಧಾಮ- ಅತಿಶಯವಾದ ತೇಜಸ್ಸುಳ್ಳ ಸೂರ್ಯನೇ, ಸುಧಾಮ- ಒಳ್ಳೆಯ ಸ್ಥಾನವಾಗುಳ್ಳ, (ಅಂದರೆ ಸೂ

ವಂದ್ಯ ಮೃಗಲಕ್ಷಣಲಕ್ಷಣ ಗೋಪ ಗೋಪಬಾಂ | ಧವ ಧವಳಾಂಗ ಕುಂಡಲಿಪಕುಂಡಲ ಪಾಲಿಸು ದೆನ್ನ ನೀಶ್ವರ ॥ ... ... ... ೧೦೪

ಮಲ್ಲಿಕಾಮಾಲಾವೃತ್ತ ॥ ಕಾಮಸಾಮಜಸಾಮಜಾರಿ ಜಿತಾಮಯಂ ಕರುಣಾಮಯಂ | ಸೋಮತಾಮರಸಾಪ್ತಸಪ್ತಶಿಖಾಕ್ಷ ನಂಧಕಬಂಧಕಂ ॥ ಹೇಮಧಾಮಜಟಾಧರಂ ಗಣಪೋಷಣಂ ಗುಣಭೂಷಣಂ | ಸ್ವಾಮಿ ಕಾಮಿತಮೀಗೆ ಭಕ್ತಜನಕ್ಕೆ ವೀತಭವಂ ಶಿವಂ॥

ಕಂ ॥ ಶುಭವಿಭವವನು ನಭವುಕುಡು | ಗೆ ಭವಾನಿ ಸುಸುಪದಂಗಳಂ ಮಾಳ್ಕೆ ಪ್ರೊ ದ॥ ಳ್ದಿಭನವದನ ನೀಗೆ ನಿರ್ವಿ | ಘ್ನಭಾವದಿಂ ಸುಜನವಿತತಿ ಗಿಳೆಯೊಳಜಸ್ರಂ ॥ ೧೦೬

ಚಂ ॥ ಪರಮಕೃಪಾಕರಂ ಪ್ರಬಳದೇಶಿಕವಂಶಸರೋಜಭಾಸ್ಕರಂ | ದುರಿತನಿವಾರಣಂ ದುರಭಿಮಾನಮತಾಂಬುಜಮತ್ತವಾರಣಂ ॥ ವರಗುಣಭೂಷಣಂ ವಿರಹಿತೇಷಣ ನಾಗಮವಿದ್ವರೇಣ್ಯಮ | ದ್ಗುರುಚಿಕವಿರದೇಶಿಕಶಿಖಾಮಣಿ ರಕ್ಷಿಸು ಗೆಮ್ಮ ನಾವಗಂ ॥ ೧೦೭

ಮತ್ತೇ ॥ ಕಲಿಕಾಲುಷ್ಯಕಠೋರಕಾನನಕುಠಾರಂ ಭಕ್ತಿಸಂಪತ್ತಿಮ | ದ್ವಿಲಸದ್ಭಾವಮಹಾನುಭಾವನಭವೋದ್ಯದ್ಧರ್ಮರೂಪಂ ಧರಾ ॥ ಲಂನಾಪಾವನಕೃತ್ಪದಂ ಪರಮಶ್ರೀ

---

ಗ್ಯಮಂಡಲಮಧ್ಯಸ್ಥನು) ಭವಾರಿ- ಪಾಪಕ್ಕೆ ಶತ್ರುವಾದ, ವಾರಿಜೋದ್ಭವಭವವಂದ್ಯ— ವಾರಿಜೋದ್ಭವ- ಕಮಲದಿಂದ ಹುಟ್ಟಿದ ಬ್ರಹ್ಮನಿಂದ, ಭವ- ಹುಟ್ಟಿದ ನಾರದರ್ಷಿಯಿಂದ, ವಂದ್ಯ- ನಮಸ್ಕರಿಸಲ್ಪಡುವದಕ್ಕೆ ಯೋಗ್ಯನಾದ, ವಂದ್ಯ- ಎಲ್ಲಾಲೋಕದಿಂದಲೂ ನಮಸ್ಕರಿಸಲ್ಪಡುವದಕ್ಕೆ ಯೋಗ್ಯನಾದ, ಮೃಗಲಕ್ಷಣ ಲಕ್ಷಣ— ಮೃಗಲಕ್ಷಣ- ಚಂದ್ರನೇ, ಲಕ್ಷಣ- ಚಿಹ್ನವಾಗುಳ್ಳ, ಗೋಪ ಯಜ್ಞಾಧಿಪತಿಯಾದ, ಗೋಪಬಾಂಧವ— ಗೋಪ- ವೃಷಭೇಶ್ವರನೇ, ಬಾಂಧವ- ಮಿತ್ರನಾಗುಳ್ಳ, ಧವಳಾಂಗ- ಶುಭ್ರವಾದ ದೇಹವುಳ್ಳ, ಕುಂಡಲಿಪಕುಂಡಲ- ಆದಿಶೇಷನೇ ಕರ್ಣಕುಂಡಲವಾಗುಳ್ಳ. ... ... ॥೧೦೪॥

ಕಾಮಸಾಮಜಸಾಮಜಾರಿ— ಕಾಮ- ಮನ್ಮಥನೆಂಬ, ಸಾಮಜ- ಆನೆಗೆ, ಸಾಮಜಾರಿ- ಸಿಹ್ಮನಾದ, ಜಿತಾಮಯಂ- ಭವರೋಗವನ್ನು ಜೈಸಿದ, ಕರುಣಾಮಯಂ- ದಯಾಪ್ರಚುರನಾದ, (ಅಂದರೆ ಅತಿಶಯವಾದ ದಯೆಯುಳ್ಳ) ಸೋಮತಾಮರಸಾಪ್ತಸಪ್ತಶಿಖಾಕ್ಷಃ— ಸೋಮ- ಚಂದ್ರ, ತಾಮರಸಾಪ್ತ- ಸೂರ್ಯ, ಸಪ್ತಶಿಖಿ-ಅಗ್ನಿ ಇವರುಗಳೇ, ಅಕ್ಷ- ಕಣ್ಣಾಗುಳ್ಳ, ಅಂಧಕಬಂಧಕಂ-ಅಂಧಕಾಸುರನನ್ನು ಕಟ್ಟಿಹಾಕಿದ, ಹೇಮಧಾಮಜಟಾಧರಂ- ಸುವರ್ಣದ ಕಾಂತಿಯುಂತಿರುವ ಕಾಂತಿಯುಳ್ಳ ಜಡೆಯನ್ನು ಧರಿಸಿದ, ಕಾಮಿತಮೀಗೆ- ಇಷ್ಟೈಸಿದವರನ್ನು ಕೊಡಲಿ, ವೀತಭವಂ- ಹೋದಭಾವವುಳ್ಳ. ... ... ॥೧೦೫॥

ಇಭವದನಂ- ವಿಘ್ನೇಶ್ವರನು. ... ... ... ॥೧೦೬॥

ಪ್ರಬಳದೇಶಿಕವಂಶಸರೋಜಭಾಸ್ಕರಂ- ಬಲವತ್ತರವಾದ ಗುರುಶ್ರೇಷ್ಠರ ವಂಶವೆಂಬ ಕಮಲಕ್ಕೆ ಸೂರ್ಯನಾದ, ದುರಭಿಮಾನಮತಾಂಬುಜಮತ್ತವಾರಣಂ- ಕೆಟ್ಟಜೀವಪರಭೇದಾದ್ಯಭಿಮಾನವುಳ್ಳ ಮತಗಳೆಂಬ ಕಮಲಗಳಿಗೆ ಮದಿಸಿದ ಆನೆಯಾದ, ವಿರಹಿತೇಷಣಂ- ಬಿಡಲ್ಪಟ್ಟ ಅರ್ಥೇಷಣ ಪುತ್ರೇಷಣದಾರೇಷಣಗಳುಳ್ಳ, ಆಗಮವಿದ್ವರೇಣ್ಯಮದ್ಗುರುಚಿಕವೀರದೇಶಿಕಶಿಖಾಮಣಿ- ಶಿವಾಗಮಗಳಂ ತಿಳಿದವರಲ್ಲಿ ಶ್ರೇಷ್ಠನಾದ ನನ್ನ ಗುರುವಾದ ಚಿಕ್ಕವೀರನೆಂಬ ಗುರೂತ್ತಮನು. ... ... ॥೧೦೭॥

ಕಲಿಕಾಲುಷ್ಯಕಠೋರಕಾನನಕುಠಾರಂ- ಬಲವತ್ತರವಾದ ಪಾಪವೆಂಬ ಕ್ರೂರವಾದ ಕಾಡಿಗೆ ಕೊಡಲಿಯಾದ, ಭಕ್ತಿಸಂಪತ್ತಿಮದ್ವಿಲಸದ್ಭಾವಮಹಾನುಭಾವಂ- ಶಿವಭಕ್ತಿಯೆಂಬ ಸಂಪತ್ತುಳ್ಳ ಪ್ರಕಾಶಿಸುವ ಮನಸ್ಸುಳ್ಳ ಮಹಾತ್ಮನಾದ, ಅಭವೋದ್ಯದ್ಧರ್ಮರೂಪಂ- ಉತ್ಕೃಷ್ಟವಾದ ಶಿವಧರ್ಮಸ್ವರೂಪನಾದ, ಧರಾತಲ

ವಾಂಭೋಧಿಚಂದ್ರಂ ಕೃಪಾ । ಕಲಿತಂ ಶ್ರೀಬಸವೇಶ್ವರಂ ಕುಡುಗೆ ಭಕ್ತವ್ರಾತಮಂ ಸಂತತಂ ॥ ... ... ... ... ೧೦೮

ಮತ್ತೇ ॥ ಬಸವಾಂಘ್ರಿತ್ರಯಕೊಳ್ಪನಿಂ ಸವೆದುಮೂರುಂಕಬ್ಬಮುಂಮಾಣದ । ಪ್ರಿಸಿದ ಸೋಮಕವೀಂದ್ರಭೀಮಕವಿಗಳ್ ಶ್ರೀಶಂಕರಾರಾಧ್ಯರಿಂ ॥ ಪೆಸವನ್ನಂ ನೆಗಳ್ದೊಂದು ಕಬ್ಬಮನಿದಂ ಮಿಕ್ಕಂಘ್ರಿಗಾಮುಸಮ । ಪ್ರಿಸಿದಂ ತತ್ಕೃಪೆಯಿಂ ಷಡಕ್ಷರಿ ಶಿವಾಚಾರ್ಯಂ ಮಹಾಭಕ್ತಿಯಿಂ ॥ ... ... ... ೧೦೯

ಜಂ ॥ ಒದವಿದಚಂದ್ರಬಾಣನಿಧಿಭೂಧರಸಂಖ್ಯೆಯನಾಳ್ದು ಸಂದಸಾ । ಮುದಕರ ಶಾಲಿವಾಹನಶಕಾಬ್ದದ ಸಾಧುನಳಾಬ್ದಮಾಘಮಾ ॥ ಸದಸಿತಪಕ್ಷಪಂಚಮಿಯ ಭಾರ್ಗವವಾರದೊಳೀಪುರಾಣ ಮಾ । ದುದು ಪರಿಪೂರ್ಣಮೀಶಕೃಪೆಯಿಂದೆ ಷಡಕ್ಷರಿದೇವನಿರ್ಮಿತಂ ॥ ... ... ... ೧೧೦

ಮತ್ತೇ ॥ ಧರಣೀಭಾಗದೊಳೀಪುರಾಣಮ ನಮಂದಾನಂದದಿಂ ಡೋದುವಾ । ದರದಿಂ ಕೇಳ್ವ ಸದರ್ಥಮಂ ಪಡೆದು ಪೇಳ್ವತ್ಯಂತಶಿಷ್ಟರ್ಗೆ ಶಾಂ ॥ ಕರಿಯಾಣ್ಮಂ ಸಲೆ ಮಾಳ್ಕೆ ಬೆಳ್ಪ ವರಮಂ ನಿತ್ಯಾಯುಮಂ ಶ್ರೀಯುಮಂ । ಪರಮಾನಂದಮ ನಾತ್ಮಭಕ್ತಿಯೊಲವಂ ವಿಶ್ವಾಧಿಪಂ ಶಂಕರಂ ॥ ... ... ... ೧೧೧

ಮತ್ತೇ ॥ ಶಿವಭಕ್ತರ್ಗೆ ಶಿವಾರ್ಚಕರ್ಗೆ ಶಿವಲಿಂಗಧ್ಯಾನಯುಕ್ತರ್ಗೆ ಶಾಂ । ಭವತತ್ವಾನುಭವಪ್ರಭಾವಭರಿತಸ್ವಾಂತರ್ಗೆ ಲಿಂಗಾಂಗಸಂ ॥ ಗಾಶಿಷ್ಟರ್ಗೆ ವೀರಶೈವಶರಣ

---

ನಾವರವಮನೃತ್ಯಮ- ಭೂಮಿಕಂತೆಯನ್ನು ಪರಿಶುದ್ಧಿಗೊಳಿಸುವ ಪಾದವುಳ್ಳ, ಪರಮಶೈವಾಂಭೋಧಿಚಂದ್ರಂ- ಉತ್ಕೃಷ್ಟವಾದ ಶಿವಮತವೆಂಬ ಸಮುದ್ರಕ್ಕೆ ಚಂದ್ರನಾದ, ಕೃಪಾಕಲಿತಂ-ದಯೆಯಿಂದ ಕೂಡಿದ. ॥೧೦೮॥

ಬಸವಾಂಘ್ರಿತ್ರಯ- ಬಸವೇಶ್ವರನ ಮೂರುಪಾದಗಳಿಗೆ, ಒಳ್ಪನಿಂ- ಚೆನ್ನಾಗಿ, ಮೂರುಂಕಬ್ಬಮಂ- ಮೂರು ಕಾವ್ಯವನ್ನು ಸವೆದು- ಮಾಡಿ, ಮಾಣದೆ- ಬಿಡದೆ, ಇಪು- ಮಾಧುರ್ಯವು, ಎಸೆವನ್ನಂ- ಪ್ರಕಾಶಿಸುವಹಾಗೆ, ಇದಂ ಕಬ್ಬಮಂ- ಈ ವೃಷಭೇಂದ್ರವಿಜಯವೆಂಬೊಂದುಕಾವ್ಯವನ್ನು, ನೆಗಳ್ಚಿ- ಮಾಡಿ, ಮಿಕ್ಕ- ಉಳಿದ, ಅಂಘ್ರಿಗೆ- ನಾಲ್ಕನೇಪಾದಕ್ಕೆ, ಷಡಕ್ಷರಿಶಿವಾಚಾರ್ಯಂ- ಷಡಕ್ಷರದೇವನೆಂಬ ವೀರಶೈವೋತ್ತಮನು. ... ... ... ... ॥೧೦೯॥

ಒದವಿದ- ಪ್ರಾಪ್ತವಾದ, ಚಂದ್ರಬಾಣನಿಧಿಭೂಧರಸಂಖ್ಯೆಯಂ—ಚಂದ್ರ- ೧, ಬಾಣ- ೫, ನಿಧಿ- ೯, ಭೂಧರ- ೭, (ಅಂದರೆ ೧೫೯೭) ನೇ, ಸಂಖ್ಯೆಯಂ, ಆಳ್ದು-ಹೊಂದಿ, ಸಾಧುನಳಾಬ್ದಮಾಘಮಾಸದ-ಒಳ್ಳೆಯ ನಳಸಂವತ್ಸರದ ಮಾಘಮಾಸದ, ಸಿತಪಕ್ಷಪಂಚಮಿಯ- ಶುಕ್ಲಪಕ್ಷದ ಪಂಚಮಿತಿಥಿಯ, ಭಾರ್ಗವವಾರದೊಳ್- ಶುಕ್ರವಾರದಲ್ಲಿ, ಪರಿಪೂರ್ಣಂ- ಮುಗಿದುದು ... ... ॥೧೧೦॥

ಅಮಂದಾನಂದದಿಂದೆ- ಅಧಿಕವಾದ ಸಂತೋಷದಿಂದ, ಅತ್ಯಂತಶಿಷ್ಟರ್ಗೆ- ಸತ್ಪುರುಷರಿಗೆ, ಬೇಳ್ಪ- ಪ್ರಾರ್ಥಿಸುವ, ನಿತ್ಯಾಯುಮಂ- ಶಾಶ್ವತವಾದ ಆಯುಸ್ಸನ್ನೂ, ಶ್ರೀಯುಮಂ- ಸಂಪತ್ತನ್ನೂ, ಆತ್ಮಭಕ್ತಿಯ- ತನ್ನ ಭಕ್ತಿಯ. ... ... ... ... ॥೧೧೧॥

ಶಿವಾರ್ಚಕರ್ಗೆ- ಶಿವನಂ ಪೂಜಿಸುವವರಿಗೆ, ಶಾಂಭವತತ್ವಾನುಭವಪ್ರಭಾವಭರಿತಸ್ವಾಂತರ್ಗೆ- ಶಿವಜೀವೈಕ್ಯಾನುಭವದ ಮಹಿಮೆಯಿಂದ ತುಂಬಿದ ಮನಸ್ಸುಳ್ಳವರಿಗೆ, ಲಿಂಗಾಂಗಸಂಗವಿಶಿಷ್ಟರ್ಗೆ- ಳವೀರಶೈವ

ರ್ಗಂಪು ವೃಷೇಂದ್ರಂ ಶುಭೋ । ತ್ಸವವಂ ಮಾಳ್ಕೆ ಕೃಪಾಸಮುದ್ರನನಘಂ ಕಲ್ಯಾಣಕ
ಲ್ಪದ್ರುಮಂ ॥ ... ... ... ೧೧೨

ಚಂ ॥ ಸೋಮಾಂಕಂ ಸೋಮ ನುದ್ಯದ್ವೃಷನಟಸಶಿವಂಭಿಕ್ಷುಕಾಮಾಂತಕಾಭ್ರ ।
ಗ್ರಾಮೇಂದ್ರಾರ್ಯಬ್ಜಜೇಷ್ಟ್ಯಚ್ಯುತರಿಪುವಪುರರ್ಧಾಂಗನಂ ವ್ಯಾಧಲೀಲೋ ॥ ದ್ಭಾವಂ
ಕಂಕಾಳಚಂಡೇಷ್ಟದ ವಿಷಪಹರೀಭಾಸ್ಯಷಡ್ವಕ್ತ್ರದಾತಂ । ವ್ಯೋಮೋತ್ಥೈಕಾಂಘ್ರಿ
ಯೆಮ್ಮಂ ಪೊರೆಗೆ ಸುಖಕರಂ ದಕ್ಷಿಣಾಮೂರ್ತಿಲಿಂಗಂ ॥ ... ೧೧೩

ಲಲಿತಪದವೃತ್ತ ॥ ಧೌಮ್ಯಶುಕಸೇವಿತ ನಿಯಮ್ಯಸಚರಾಚರ ಸುಸೌಮ್ಯಗುಣಹಾ
ರ ಮೃಡಸಾಮ್ಯಯುಗಮರ್ತ್ಯ । ನಮ್ಯಪದ ಸಂಸರಣತಾಮ್ಯದಭಿರಕ್ಷ ಮುನಿಗಮ್ಯ
ಜಿತದುಷ್ಟಮತಗಾಮ್ಯಖಿಲಧೀರ ॥ ಸ್ವಾಮ್ಯಧಿಕಭಕ್ತಿ ನಿಜಕಾಮ್ಯ ತಪನೇಂದು ಗುರು

---

ಶರಣರ್ಗೆ-ಲಿಂಗಜೀವೈಕ್ಯತೆಯಿಂ ಕೂಡಿದ ಅಧಿಕರಾದ ವೀರಶೈವಮತದ ಶರಣರಿಗೆ. ... ॥೧೧೨॥

ಸೋಮಾಂಕಂ-ಚಂದ್ರನೇ ಲಕ್ಷಣವಾಗುಳ್ಳ, ಸೋಮಂ- ಉಮಾಸಹಿತನಾದ, ಉದ್ಯದ್ವೃಷ- ಉತ್ಕೃಷ್ಟವಾದ ವೃಷಭೇಶ್ವರನುಳ್ಳ, ನಟ- ನಾಟ್ಯವಂ ಮಾಡಿದ, ಸಶಿವಂ- ಪಾರ್ವತೀಸಹಿತನಾದ, ಭಿಕ್ಷು- ಬಿಕ್ಷಾಟನವಂ ಮಾಡಿದ, ಕಾಮಾರಿ......ರಿಪು— ಕಾಮ- ಮನ್ಮಥ, ಅಂತಕ- ಯಮ, ಅಭ್ರಗ್ರಾಮ- ಅಂತರಿಕ್ಷದಲ್ಲಿದ್ದ ತ್ರಿಪುರ, ಇಂದ್ರಾರಿ-ಜಲಂಧರಾಸುರ, ಅಬ್ಜಜ-ಬ್ರಹ್ಮ, ಇಷ್ಟಿ- ದಕ್ಷಬ್ರಹ್ಮನ ಯಜ್ಞ, ಅಚ್ಯುತ- ನೃಸಿಹ್ಮರೂಪನಾದ ವಿಷ್ಣು ಇವರುಗಳಿಗೆ, ರಿಪು- ಶತ್ರುವಾದ, ವಪುರರ್ಧಾಂಗನಂ—ವಪುರರ್ಧ-ಶರೀರಾರ್ಧದಲ್ಲಿ, ಅಂಗನಂ- ಸ್ತ್ರೀಯುಳ್ಳ, (ಅಂದರೆ ಅರ್ಧನಾರೀಶ್ವರನಾದ) ವ್ಯಾಧಲೀಲೋದ್ಭಾವಂ-ಕಿರಾತಲೀಲೆಯಲ್ಲಿ ಉತ್ಕೃಷ್ಟನಾದ, ಕಂಕಾಳ- ತ್ರಿವಿಕ್ರಮನಂ ಜೈಸಿ ಅವನ ಬೆನ್ನಮೂಳೆಯಂ ಧರಿಸಿದ, ಚಂಡೇಷ್ಟದ- ಚಂಡನಿಗೆ ವರವನ್ನು ಕೊಟ್ಟ, ವಿಷಪ......ದಾತಂ— ವಿಷಪ- ವಿಷವಂ ಪಾನಮಾಡಿದ, ಹರಿ-ವಿಷ್ಣು, ಇಭಾಸ್ಯ- ಗಜಮುಖ, ಷಡ್ವಕ್ತ್ರ- ಷಣ್ಮುಖ ಇವರುಗಳಿಗೆ, ದಾತಂ- ಇಷ್ಟಾರ್ಥವನ್ನುಕೊಟ್ಟ, (ಅಂದರೆ ವಿಷ್ಣುವಿಗೆ ಚಕ್ರ, ಗಜಮುಖನಿಗೆ ಗಣಪತಿತ್ವ, ಷಣ್ಮುಖನಿಗೆ ಸೈನ್ಯಾಧಿಪತ್ಯವನ್ನು ಕೊಟ್ಟನೆಂದು ಭಾವ) ವ್ಯೋಮೋತ್ಥೈಕಾಂಘ್ರಿ- ಅಂತರಿಕ್ಷದಲ್ಲಿ ನಿಂತ ಒಂದೇಪಾದವುಳ್ಳ, ಸುಖಾಕರಂ- ಸುಖಾವಹನಾದ, ದಕ್ಷಿಣಾಮೂರ್ತಿ, ಲಿಂಗಂ- ಉರಿಲಿಂಗಾಕಾರನಾದ ಶಿವನು, ಎಮ್ಮಂ, ಪೊರೆಗೆ. (ಈ ಮೇಲ್ಕಂಡ ವಿಶೇಷಣಗಳಿಂದ ಕವಿಯು ಒಂದೇ ಪದ್ಯದಲ್ಲಿ ಶಿವನ ೨೫ ಲೀಲೆಗಳನ್ನು ವರ್ಣಿಸಿದಂತಾಯ್ತು) ... ॥೧೧೩॥

ಧೌಮ್ಯಶುಕಸೇವಿತ- ಧೌಮ್ಯರ್ಷಿ ಶುಕರ್ಷಿಗಳಿಂದ ಸೇವಿಸಲ್ಪಟ್ಟ, ನಿಯಮ್ಯಸಚರಾಚರ— ನಿಯಮ್ಯ- ಆಜ್ಞಾಪಿಸಲ್ಪಡುವದಕ್ಕೆ ಯೋಗ್ಯವಾದ, ಸಚರಾಚರ- ಸ್ಥಾವರಜಂಗಮಗಳುಳ್ಳ, ಸುಸೌಮ್ಯಗುಣಹಾರ- ಒಳ್ಳೆಯ ಶಾಂತಿಗುಣವೇ ಕಂಠಹಾರವಾಗುಳ್ಳ, ಮೃಡಸಾಮ್ಯಯುಕ್- ಪರಮೇಶ್ವರನ ಸಾದೃಶ್ಯವಂ ಹೊಂದಿದ, ಅಮರ್ತ್ಯನಮ್ಯಪದ- ದೇವತೆಗಳಿಂದ ನಮಸ್ಕರಿಸಲ್ಪಡುವದಕ್ಕೆ ಯೋಗ್ಯನಾದ ಪಾದವುಳ್ಳ, ಸಂಸರಣತಾಮ್ಯದಭಿರಕ್ಷ— ಸಂಸರಣ- ಸಂಸಾರದಿಂದ, ತಾಮ್ಯತ್- ಬಾಡುತ್ತಿರುವವರನ್ನು, ಅಭಿರಕ್ಷ- ಸಂರಕ್ಷಿಸುವ, ಮುನಿಗಮ್ಯ- ಋಷಿಗಳಿಂದ ಹೊಂದಲ್ಪಡುವದಕ್ಕೆ ಯೋಗ್ಯನಾದ, ಜಿತದುಷ್ಟಮತಗಾಮಿ- ಜೈಸಲ್ಪಟ್ಟ ಕೆಟ್ಟ ಮತವಂ ಹೊಂದಿದವರುಗಳುಳ್ಳ, ಅಖಿಲಧೀರಸ್ವಾಮಿ- ಸಕಲ ವಿದ್ವಾಂಸರಗಳಿಗೂ ಅಧಿಪತಿಯಾದ, ಅಧಿಕಭಕ್ತಿನಿಜಕಾಮ್ಯ- ಹೆಚ್ಚಾದ ಶಿವಭಕ್ತಿಯೇ ತನ್ನಿಂದ ಬಯಸಲ್ಪಡುವದಕ್ಕೆ ಯೋಗ್ಯವಾದ ಫಲವಾಗುಳ್ಳ, ತಪ......ಗುಣ—ತಪನ-ಸೂರ್ಯ, ಇಂದು-ಚಂದ್ರ, ಗುರು- ಬೃಹಸ್ಪತಿ, ಸೌಮ್ಯ- ಬುಧ ಇವರುಗಳಿಂದ, ನುತ- ಹೊಗಳಲ್ಪಟ್ಟ, ಸಾರಗುಣ- ಶ್ರೇಷ್ಠವಾದ ಗುಣಗಳುಳ್ಳ, ಭೂಮ್ಯಧಿಪನುತ್ಯ- ರಾ

ಸೌಮ್ಯನುತಸಾರಗುಣ ಭೂಮ್ಯಧಿಪನುತ್ಯ । ಭ್ರಾಮ್ಯದಸುರೋಧಕರ ಯಾಮ್ಯಧಿಕಚೈತ್ಯ ಜಯ ದಮ್ಯನಘ ದಿವ್ಯತನುರಮ್ಯ ಬಸವೇಶಾ ॥ ... ೧೧೪

ಶೌರ್ಯಜಸದಾಕೃತಸಪರ್ಯ ಭುವನಪ್ರಕರಧುರ್ಯ ಗಣನಾಥಹಿತಕಾರ್ಯ ಸುಜನಾಂಭೋಜಾರ್ಯಮ ಸುಕೀರ್ತಿನುತಭಾರ್ಯ ಮುನಿಹೃನ್ನಳಿನಧಾರ್ಯಪದ ಸತ್ಪದವಿಪರ್ಯಟನಶೀಲ ॥ ಸ್ಥೈರ್ಯಯುತ ನಿರ್ಜಿತಸುರಾರ್ಯಧಿಕಮೇರುನಿಭಧೈರ್ಯ ನಿಗಮಾಂತಪರಿಚರ್ಯಯುತ ಲೋಕಾ । ಚಾರ್ಯಪತಿ ಪಾಲಿಪು ದವಾರ್ಯಮಹಿಮಾಂಕ ಗಣವರ್ಯ ಸಕಳಾದಿಜಗದಾರ್ಯ ಬಸವೇಶಾ ॥ ... ... ... ... ೧೧೫

ಕಾವ್ಯಗುರುಮುಖ್ಯಸುರಸೇವ್ಯಪದಪದ್ಮ ಶಶಿರವ್ಯನಲನೇತ್ರ ಪಠಿತವ್ಯನಿಜನಾಮಾ । ಭವ್ಯಜನದೂರ ಹೃತಹವ್ಯವಹಜಿಹ್ವ ವಿಜಿತವ್ಯಸನ ಸದ್ಗುಣಪದವ್ಯಜನಲೋಲಾ ॥ ದ್ರವ್ಯ

---

ಜರುಗಳಿಂದ ಹೊಗಳಲ್ಪಡುವದಕ್ಕೆ ಯೋಗ್ಯನಾದ, ಭ್ರಾಮ್ಯದಸರೋಧಕರ-ಸುತ್ತುತ್ತಿರುವ ಪ್ರಾಣವಾಯುವನ್ನು ತಡೆಯುವ, ಯಾಮ್ಯಧಿಕಚೈತ್ಯ- ಯಮವೆಂಬ ಯೋಗಸಂಪನ್ನರಲ್ಲಿ ಶ್ರೇಷ್ಠರಾದವರಿಂದ ಧ್ಯಾನಿಸಲ್ಪಡುವದಕ್ಕೆ ಯೋಗ್ಯನಾದ, ದಮಿ- ಅಂತರಿಂದ್ರಿಯನಿಗ್ರಹವುಳ್ಳ, ಅನಘದಿವ್ಯತನುರಮ್ಯ- ನಿರ್ದುಷ್ಟವಾದ ಶ್ರೇಷ್ಠವಾದ ಶರೀರದಿಂದ ಮನೋಹರನಾದ, ಬಸವೇಶಾ! ಜಯ. ... ॥೧೧೪॥

ಶೌರ್ಯಜಸದಾಕೃತಸಪರ್ಯ— ಶೌರಿ- ವಿಷ್ಣು, ಅಜ- ಬ್ರಹ್ಮ, ಇವರುಗಳಿಂದ, ಸದಾ-ಯಾವಾಗಲೂ, ಕೃತ- ಮಾಡಲ್ಪಟ್ಟ, ಸಪರ್ಯ- ಪೂಜೆಯುಳ್ಳ, ಭುವನಪ್ರಕರಧುರ್ಯ- ಲೋಕಸಮುದಾಯದಭಾರವನ್ನು ವಹಿಸುವದರಲ್ಲಿ ಸಮರ್ಥನಾದ, (ಅಂದರೆ ಕುಕ್ಷಿಯಲ್ಲಿ ಎಲ್ಲಾ ಲೋಕಗಳನ್ನೂ ಧರಿಸಿರುವನೆಂದುಭಾವ) ಗಣನಾಥಹಿತಕಾರ್ಯ- ಗಣಶ್ರೇಷ್ಠರಿಗೆ ಹಿತಕರವಾದ ಕೆಲಸವುಳ್ಳ, ಸುಜನಾಂಭೋಜಾರ್ಯಮ- ಸತ್ಪುರುಷರೆಂಬ ಕಮಲಗಳಿಗೆ ಸೂರ್ಯನಾದ, ಸುಕೀರ್ತಿನುತಭಾರ್ಯ— ಸುಕೀರ್ತಿ- ಒಳ್ಳೆಯ ಯಶಸ್ಸೇ, ನುತ- ಶ್ಲಾಘ್ಯಳಾದ, ಭಾರ್ಯ- ಹೆಂಡತಿಯಾಗುಳ್ಳ, (ಅಂದರೆ ಸತ್ಕೀರ್ತಿಯನ್ನು ತನ್ನ ಪತ್ನಿಯಂತೆ ತಿಳಿದು ಆರ್ಜಿಸಿದವನೆಂದು ಭಾವ) ಮುನಿಹೃನ್ನಳಿನಧಾರ್ಯಪದ— ಮುನಿ- ಋಷಿಗಳ, ಹೃನ್ನಳಿನ- ಹೃದಯಕಮಲದಲ್ಲಿ, ಧಾರ್ಯ- ಧರಿಸಲ್ಪಡುವದಕ್ಕೆ ಯೋಗ್ಯವಾದ, ಪದ- ಪಾದವುಳ್ಳ, ಸತ್ಪದವಿಪರ್ಯಟನಶೀಲ- ಒಳ್ಳೆಯಮಾರ್ಗದಲ್ಲಿ ಸಂಚರಿಸುವದೇ ಸ್ವಭಾವವಾಗುಳ್ಳ, ಸ್ಥೈರ್ಯಯುತ-ಮನಸ್ಸ್ಥಿರತೆಯಿಂದ ಕೂಡಿದ, ನಿರ್ಜಿತಸುರಾರಿ- ಜೈಸಲ್ಪಟ್ಟ ರಾಕ್ಷಸರುಳ್ಳ, ಅಧಿಕಮೇರುನಿಭಧೈರ್ಯ- ಮೇರುಪರ್ವತಕ್ಕೆ ಸದೃಶವಾದ ಶ್ರೇಷ್ಠವಾದ ಧೈರ್ಯವುಳ್ಳ, ನಿಗಮಾಂತಪರಿಚರ್ಯಯುತ-ನಿಗಮಾಂತ- ಉಪನಿಷತ್ತುಗಳು ಮಾಡುವ, ಪರಿಚರ್ಯ- ಸೇವೆಯಿಂದ, ಯುತ- ಕೂಡಿದ, ಲೋಕಾಚಾರ್ಯಪತಿ- ಸಪ್ತಲೋಕಾಧಿಪತಿಗಳಿಗೆ ಸ್ವಾಮಿಯಾದ, ಅವಾರ್ಯಮಹಿಮಾಂಕ- ಇತರರಿಂದ ನಿವಾರಿಸಲ್ಪಡುವದಕ್ಕಶಕ್ಯವಾದಮಹತ್ತ್ವವೇ ಗುರುತಾಗುಳ್ಳ, ಗಣವರ್ಯ- ಗಣಶ್ರೇಷ್ಠನಾದ, ಸಕಳಾದಿ- ಸಕಲಕ್ಕೂ ಮೊದಲನೆಯವನಾದ, ಜಗದಾರ್ಯ-ಜಗದ್ಗುರುವಾದ, ಬಸವೇಶಾ! ಪಾಲಿಪುದು. ... ॥೧೧೫॥

ಕಾವ್ಯಗುರುಮುಖ್ಯಸುರಸೇವ್ಯ— ಕಾವ್ಯ- ಶುಕ್ರ, ಗುರು- ಬೃಹಸ್ಪತಿ ಇವರುಗಳೇ, ಮುಖ್ಯ- ಮೊದಲಾದ, ಸುರ- ದೇವತೆಗಳಿಂದ, ಸೇವ್ಯ- ಸೇವಿಸಲ್ಪಡುವದಕ್ಕೆ ಯೋಗ್ಯವಾದ, ಪದಪದ್ಮ- ಪಾದಕಮಲವುಳ್ಳ, ಶಶಿರವ್ಯನಲನೇತ್ರಪಠಿತವ್ಯನಿಜನಾಮ— ಶಶಿ- ಚಂದ್ರ, ರವಿ- ಸೂರ್ಯ, ಅನಲ- ಅಗ್ನಿ ಇವುಗಳೇ, ನೇತ್ರ- ಕಣ್ಣಾಗುಳ್ಳ ಈಶ್ವರನಿಂದ, ಪಠಿತವ್ಯ- ಹೇಳಲ್ಪಡುವದಕ್ಕೆಯೋಗ್ಯವಾದ, ನಿಜ- ತನ್ನ, ನಾಮ- ಹೆಸರುಳ್ಳ, ಅಭವ್ಯಜನದೂರ- ಅಮಂಗಳಜನಗಳಿಗೆ ದೂರದಲ್ಲಿರುವ, ಹೃತಹವ್ಯವಹಜಿಹ್ವ— ಹೃತ- ನಾಶಮಾಡಲ್ಪಟ್ಟ, ಹವ್ಯವಹ- ಅಗ್ನಿಯ, ಜಿಹ್ವ- ನಾಲಿಗೆಯುಳ್ಳ; ವಿಜಿತವ್ಯಸನ- ಜೈಸಲ್ಪಟ್ಟ ಸಪ್ತವ್ಯಸನಗ

ಪತಿಮಿತ್ರ ಸತತವ್ಯಪಗತಾಶ ಭವಿತವ್ಯಸಕಳಜ್ಞ ಲಸದವ್ಯಯಗುಣಾಂಕ । ಶ್ರಾವ್ಯಶುಭಕೀರ್ತಿಯುತ ನವ್ಯಮತಿಯುಕ್ತ ಪೊರೆದಿವ್ಯಮುನಿವೃಂದಪರಿಭಾವ್ಯ ಬಸವೇಶಾ ॥ ೧೧೬

ಹೀರಹಿಮತಾರಗಿರಿನಾರದಪಟೀರಘನಸಾರಸುರವಾರಣತುಷಾರಕರತಾರಾ । ಹಾರಸಿತನೀರಧರಪಾರದಸುಧಾರಸಸಮೀರಭುಗನಾರುಚಿರಗೌರಸುಯಶೋಂಕ ॥ ಘೋರಭವದೂರ ಜಿತಸೂರಭವಮಾರ ಶುಭಸಾರ ಯಮಿವಾರನುತ ವೀರಶಿವಭೃತ್ಯಾ । ಧಾರ ಸದುದಾರ ಸದವಾರಸುಖಪೂರ ಜಯ ಚಾರಪದಸಾರಸವಿಹಾರ ಬಸವೇಶಾ ॥ ೧೧೭

ವಾರಣಮುಖಸ್ತುತ ವಿಚಾರಣದುರೀಷಣನಿವಾರಣ ಗಣಾಬ್ಜತರುಣಾರುಣ ಕೃತಾತ್ಮ । ಪ್ರೇರಣ ಜಗನ್ನಿಕರಕಾರಣ ಭವಾಂಭುನಿಧಿತಾರಣ ತತಾತ್ಮಸುಖಪೂರಣಕಟಾಕ್ಷ ॥

---

ಳುಳ್ಳ, ಸದ್ಗುಣಪದವ್ಯಜನಲೋಲ— ಸದ್ಗುಣ- ಒಳ್ಳೆಯಗುಣಂಗಳ, ಪದವ್ಯ- ಮಾರ್ಗದಲ್ಲಿಸಂಚರಿಸುವ ಜನಗಳಲ್ಲಿ, ಲೋಲಾ- ಆಸಕ್ತನಾದ, ದ್ರವ್ಯಪತಿಮಿತ್ರ— ದ್ರವ್ಯಪತಿ- ಕುಬೇರನಿಗೆ, ಮಿತ್ರ- ಆಪ್ತನಾದ, ಸತತವ್ಯಪಗತಾಶ- ಯಾವಾಗಲೂ ಕಳೆದುಹೋದ ಆಸೆಯುಳ್ಳ, ಭವಿತವ್ಯಸಕಳಜ್ಞ—ಮುಂದಾಗುವ ಸಮಸ್ತ ವಿಷಯವನ್ನೂ ತಿಳಿದ, ಲಸದವ್ಯಯಗುಣಾಂಕ- ಪ್ರಕಾಶಿಸುವ ಸ್ಥಿರವಾದ ಸದ್ಗುಣಗಳೇ ಗುರುತಾಗುಳ್ಳ, ಶ್ರಾವ್ಯಶುಭಕೀರ್ತಿಯುತ- ಭೂಜನದಿಂದ ಕೇಳಲ್ಪಡುವದಕ್ಕೆ ಯೋಗ್ಯವಾದ ಮಂಗಳಕರವಾದ ಯಶಸ್ಸಿನಿಂದ ಕೂಡಿದ, ನವ್ಯಮತಿಯುಕ್ತ- ಅಪೂರ್ವವಾದ ಬುದ್ಧಿಯಿಂದಕೂಡಿದ, ದಿವ್ಯಮುನಿವೃಂದಪರಿಭಾವ್ಯ- ಶ್ರೇಷ್ಠರಾದ ಋಷಿಗಳ ಸಮೂಹದಿಂದ ಧ್ಯಾನಿಸಲ್ಪಡುವದಕ್ಕೆ ಯೋಗ್ಯನಾದ, ಬಸವೇಶಾ ! ಪೊರೆ ||೧೧೬||

ಹೀರ........ಯಶೋಂಕ— ಹೀರ- ವಜ್ರ, ಹಿಮ- ಮಂಜು, ತಾರಗಿರಿ- ಬೆಳ್ಳಿಯ ಬೆಟ್ಟ (ಕೈಲಾಸಪರ್ವತ) ನಾರದ, ಪಟೀರ- ಶ್ರೀಗಂಧ, ಘನಸಾರ- ಪಚ್ಚಕರ್ಪೂರ, ಸುರವಾರಣ- ಐರಾವತ, ತುಷಾರಕರ- ಚಂದ್ರ, ತಾರಾ- ನಕ್ಷತ್ರ, ಹಾರ- ಮುತ್ತಿನಹಾರ, ಸಿತನೀರಧರ- ಬಿಳಿಯಮೋಡ, ಪಾರದ- ಪಾದರಸ, ಸುಧಾರಸ- ಅಮೃತ- ಸಮೀರಭುಗಿನ- ಆದಿಶೇಷ ಇವುಗಳಹಾಗೆ, ಆರುಚಿರ- ಎಲ್ಲಾಕಡೆಯಲ್ಲೂ ಮನೋಹರವಾದ, ಗೌರ- ಶುಭ್ರವಾದ, ಸುಯಶಃ- ಒಳ್ಳೆಯ ಕೀರ್ತಿಯೇ, ಅಂಕ- ಗುರುತಾಗುಳ್ಳ, ಘೋರಭವದೂರ- ಭಯಂಕರವಾದ ಸಂಸಾರಕ್ಕೆ ದೂರಸ್ಥನಾದ, ಜಿತಸೂರಭವಮಾರ— ಜಿತ-ಜೈಸಲ್ಪಟ್ಟ, ಸೂರಭವ- ಯಮನೇನು, ಮಾರ- ಮನ್ಮಥನೇನು ಇವರುಗಳುಳ್ಳ, ಶುಭಸಾರಯಮಿವಾರನುತ— ಶುಭ–ಮಂಗಳಕರವಾದ, ಸಾರ- ಶ್ರೇಷ್ಠವಾದ, ಯಮಿ- ಋಷಿಗಳ, ವಾರ- ಸಮೂಹದಿಂದ, ನುತ- ಹೊಗಳಲ್ಪಟ್ಟ, ವೀರಶಿವಭೃತ್ಯಾಧಾರ- ವೀರಶೈವರಿಗಾಶ್ರಯನಾದ, ಸದುದಾರ- ಒಳ್ಳೆಯ ಔದಾರ್ಯಗುಣವುಳ್ಳ, ಸದವಾರಸುಖಪೂರ- ತಡೆಯಿಲ್ಲದ ಒಳ್ಳೆಯಸೌಖ್ಯದ ಪ್ರವಾಹನಾದ, ಚಾರಪದಸಾರಸವಿಹಾರ— ಚಾರ- ಜಂಗಮಸಂಬಂಧವಾದ, ಪದಸಾರಸ- ಪಾದಕಮಲಗಳಲ್ಲಿ, ವಿಹಾರ- ಕ್ರೀಡಿಸುವ, ಬಸವೇಶಾ ! ಜಯ. ||೧೧೭||

ವಾರಣಮುಖಸ್ತುತ- ವಿಘ್ನೇಶ್ವರನಿಂದ ಹೊಗಳಲ್ಪಟ್ಟ, ವಿಚಾರಣದುರೀಷಣನಿವಾರಣ- ಸದ್ವಿಚಾರದಿಂದ ಅರ್ಥಾದೀಷಣತ್ರಯವನ್ನು ಹೋಗಲಾಡಿಸಿದ, ಗಣಾಬ್ಜತರುಣಾರುಣ- ಶಿವಗಣಂಗಳೆಂಬ ಕಮಲಗಳಿಗೆ ಬಾಲಸೂರ್ಯನಾದ, ಕೃತಾ......ಕಾರಣ— ಕೃತ- ಮಾಡಲ್ಪಟ್ಟ, ಆತ್ಮ- ತನ್ನ, ಪ್ರೇರಣ- ಉದ್ಯೋಗಿಸುವಿಕೆಯೇ, ಜಗತ್- ಲೋಕದ, ನಿಕರ- ಸಮೂಹಕ್ಕೆ, ಕಾರಣ- ಹೇತುವಾದ, ಭವಾಂಬುನಿಧಿತಾರಣ- ಸಂಸಾರಸಮುದ್ರವನ್ನು ದಾಟಿಸುವ, ತತಾತ್ಮಸುಖಪೂರಣಕಟಾಕ್ಷ- ವಿಸ್ತಾರವಾದ ಪರಮಾತ್ಮಸೌಖ್ಯದಿಂದ ತುಂಬಿದ ಕಡೆಗಣ್ಣುಳ್ಳ, ದಾರುಣಸುರಾಹಿತವಿದಾರಣ- ಭಯಂಕರರಾದ ರಾಕ್ಷಸರನ್ನು ಸೀಳಿದ, ನತಾಪದವಧೀರಣ- ನಮಸ್ಕರಿಸಿದವರ ಆಪತ್ತನ್ನು ಹಾಳ್ಮಾಡುವ, ಕಳಾಕುಲವಿಸಾರಣ- ೬೪ ವಿದ್ಯೆಗಳ ಸಮೂಹವ

ದಾರುಣಸುರಾಹಿತವಿದಾರಣ ನತಾಪದವಧೀರಣ ಕಳಾಕಲಾವಿಸಾರಣ ನಿಯುಕ್ತೋತ್ | ಡ್ಧಾರಣ ಮದೀಶ ಜಯ ಧಾರಣಿಯಮಾಂಕ ನಗಚಾರಣ ಖಲಾಂಬುದಸಮೀರಣವೃಷೇಂದ್ರಾ ॥

ಚಿತ್ರತರಮಂಗಳಚರಿತ್ರ ಚರಲಿಂಗಸುಪವಿತ್ರಮಯಪಾದಶತಪತ್ರಮದಭೃಂಗಾ ! ಮಿತ್ರಜಯಭಂಜನ ಜಗತ್ತ್ರಯಧುರೀಣ ಜಿತವೃತ್ರವಿಧಿಪಂಕರುಹನೇತ್ರಸುರವಂದ್ಯಾ ॥ ಗೋತ್ರರಿಪುನಂದನಸುಪತ್ರದಮಹೇಶಮತಸತ್ರಪರಿವೃದ್ಧಿಕರಚೈತ್ರ ಬುಧವೃಂದ| ಸ್ತೋತ್ರ ನಿಕುರುಂಬಪರಪಾತ್ರ ಪೊರೆ ಯೆನ್ನ ನಘಜೈತ್ರ ಭವವಾರಿಧಿವಹಿತ್ರ ಬಸವೇಶಾ॥ ೧೧೮

ಚಿದ್ರಮಣ ಶೈವಶುಭಮುದ್ರ ಭುವನಾವನವಿನಿದ್ರ ಭವಭಕ್ತಪರಿಷದ್ರಸಮನೋಜೋ | ಪದ್ರವವಿದೂರ ತತಭದ್ರಬಹುಜನ್ಮಗದವಿದ್ರವಕರಾಮಿತದಯಾರ್ದ್ರಸುಕಟಾಕ್ಷ ॥ ಕ್ಷುದ್ರಮತಿಭಂಜನ ಲಸದ್ರವಿಶತಪ್ರಭ ಹರಿದ್ರುಹಿಣಕಾಮಿತಸುರದ್ರುನಿಭ ವಿದ್ಯಾ | ವಿದ್ರು

---

ನ್ನು ವಿಸ್ತಾರಪಡಿಸುವ, ನಿಯುಕ್ತೋದ್ಧಾರಣ— ನಿಯುಕ್ತ- ಕೂಡಿದ, ಉತ್- ಉತ್ಕೃಷ್ಟವಾದ, ಧಾರಣ- ರಾಜಾದಿಕೃತಮರ್ಯಾದೆಗಳುಳ್ಳ, ಧಾರಣಿಯಮಾಂಕ-ಧಾರಣ ಯಮಗಳೆಂಬ ಯೋಗಗಳೇ ಗುರುತಾಗುಳ್ಳ, ನಗಚಾರಣ- ಕೈಲಾಸಪರ್ವತದಲ್ಲಿ ಸಂಚಾರವುಳ್ಳ, ಖಲಾಂಬುದಸಮೀರಣ- ನೀಚರೆಂಬ ಮೋಡಕ್ಕೆ ಗಾಳಿಯಾದ, ಮದೀಶ- ನನ್ನ ಸ್ವಾಮಿಯಾದ, ವೃಷೇಂದ್ರಾ ! ಜಯ. ... ... ॥೧೧೭॥

ಚಿತ್ರತರಮಂಗಳಚರಿತ್ರ- ಅತ್ಯಾಶ್ಚರ್ಯಕರವಾದ ಶುಭಕರವಾದ ಚರಿತ್ರವುಳ್ಳ, ಚರ.....ಭೃಂಗ— ಚರಲಿಂಗ- ಜಂಗಮಲಿಂಗಗಳ, ಸುಪವಿತ್ರಮಯ- ಒಳ್ಳೆಯ ಅಧಿಕವಾಗಿ ಪಾರಿಶುದ್ಧ್ಯವುಳ್ಳ, ಪಾದಶತಪತ್ರ- ಚರಣವೆಂಬ ಕಮಲಗಳಿಗೆ, ಮದಭೃಂಗ- ಮದಿಸಿದ ಭ್ರಮರನಾದ, ಅಮಿತ್ರಜಯಭಂಜನ- ಶತ್ರುಗಳ ಸಮೂಹವನ್ನು ನಾಶಮಾಡಿದ, ಜಗತ್ತ್ರಯಧುರೀಣ- ಮೂರುಲೋಕದ ಭಾರವನ್ನು ವಹಿಸುವದರಲ್ಲಿ ಸಮರ್ಥನಾದ, ಜಿತವೃತ್ರವಿಧಿಪಂಕರುಹನೇತ್ರಸುರವಂದ್ಯಾ— ಜಿತವೃತ್ರ- ವೃತ್ರಾಸುರನನ್ನು ಜೈಸಿದ ದೇವೇಂದ್ರ, ವಿಧಿ- ಬ್ರಹ್ಮ, ಪಂಕರುಹನೇತ್ರ- ವಿಷ್ಣು ಇವರುಗಳೆಂಬ, ಸುರ- ದೇವತೆಗಳಿಂದ, ವಂದ್ಯ- ನಮಸ್ಕರಿಸಲ್ಪಡುವದಕ್ಕೆ ಯೋಗ್ಯನಾದ, ಗೋತ್ರ.....ಚೈತ್ರ— ಗೋತ್ರರಿಪು- ಪರ್ವತಗಳಿಗೆ ಶತ್ರುವಾದ ದೇವೇಂದ್ರನ, ನಂದನ- ಪುತ್ರನಾದ ಅರ್ಜುನನಿಗೆ, ಸುಪತ್ರದ- ಒಳ್ಳೆಯ ಬಾಣವನ್ನು ಕೊಟ್ಟ, ಮಹೇಶ- ಶಿವನ, ಮತಸತ್ರ- ಮತವೆಂಬ ಅರಣ್ಯವನ್ನು, ಪರಿವೃದ್ಧಿಕರ- ಅಭಿವೃದ್ಧಿಮಾಡುವ, ಚೈತ್ರ- ವಸಂತನಾದ, ಬುಧವೃಂದಸ್ತೋತ್ರನಿಕುರುಂಬಪರಪಾತ್ರ—ಬುಧ- ವಿದ್ವಾಂಸರ, ವೃಂದ- ಸಮೂಹದ, ಸ್ತೋತ್ರ- ಸ್ತುತಿಯ, ನಿಕುರುಂಬ- ಸಮೂಹಕ್ಕೆ, ಪರ- ಉತ್ಕೃಷ್ಟವಾದ, ಪಾತ್ರ- ಆಶ್ರಯನಾದ, ಅಘಜೈತ್ರ- ಪಾಪವಂ ಜೈಸಿದ, ಭವವಾರಿಧಿವಹಿತ್ರ- ಸಂಸಾರವೆಂಬ ಸಮುದ್ರಕ್ಕೆ ಹಡಗಾದ, ಬಸವೇಶಾ ! ಎನ್ನಂ, ಪೊರೆ. ॥೧೧೮॥

ಚಿದ್ರಮಣ- ಚಿತ್ತಿಗೆ ಅಧಿಪತಿಯಾದ, ಶೈವಶುಭಮುದ್ರ- ಶಿವಸಂಬಂಧಗಳಾದ ಮಂಗಳಕರಗಳಾದ ಚಿಹ್ನೆಯುಳ್ಳ, ಭುವನಾವನವಿನಿದ್ರ- ಲೋಕವಂ ಸಂರಕ್ಷಿಸುವದರಲ್ಲಿ ಜಾಗರೂಕನಾದ, ಭವಭಕ್ತಪರಿಷದ್ರಸ- ಶಿವಭಕ್ತರ ಸಭೆಯಲ್ಲಿ ಪ್ರೀತಿಯುಳ್ಳ, ಮನೋಜೋಪದ್ರವವಿದೂರ- ಮನ್ಮಥನ ಬಾಧೆಗೆ ದೂರಸ್ಥನಾದ, ತತಭದ್ರ- ವಿಸ್ತಾರವಾದ ಮಂಗಳವುಳ್ಳ, ಬಹುಜನ್ಮಗದವಿದ್ರವಕರ- ಅನೇಕ ಜನ್ಮಗಳೆಂಬ ರೋಗವನ್ನು ಓಣಗಿಸುವ, ಅಮಿತದಯಾರ್ದ್ರಸುಕಟಾಕ್ಷ- ಗಣನೆಯಿಲ್ಲದ ಕೃಪೆಯಿಂದ ನೆನೆದ ಒಳ್ಳೆಯ ಕಡೆಗಣ್ಣ ನೋಟವುಳ್ಳ, ಕ್ಷುದ್ರಮತಿಭಂಜನ- ನೀಚಬುದ್ಧಿಯುಳ್ಳವರನ್ನು ನಾಶಮಾಡಿದ, ಲಸದ್ರವಿಶತಪ್ರಭ- ಪ್ರಕಾಶಿಸುವ ಅನೇಕ ಸೂರ್ಯರ ಕಾಂತಿಯಂತಿರುವ ಕಾಂತಿಯುಳ್ಳ, ಹರಿದ್ರುಹಿಣಕಾಮಿತಸುರದ್ರುನಿಭ—ಹರಿ- ವಿಷ್ಣು, ದ್ರುಹಿಣ- ಬ್ರಹ್ಮ, ಇವರುಗಳ, ಕಾಮಿತ- ಇಷ್ಟಾರ್ಥಗಳಿಗೆ, ಸುರದ್ರು- ಕಲ್ಪವೃಕ್ಷದ, ನಿಭ-ಸದೃಶನಾದ, ವಿದ್ಯಾವಿದ್ರು

ಚಿರಸದ್ಗುಣಸಮುದ್ರ ಪೊರೆ ಯೆನ್ನ ನಘವದ್ರಹಿತ ಭೂಮಿಹಿತರುದ್ರ ಬಸವೇಶಾ ॥ ೧೦೦

ಬಾಲಶಶಿಮೌಲಿಕ ಕಪಾಲಧರಶೂಲಕರ ಕಾಲಹರ ಕೋಲಪರ ಲಾಲಸ ಮನೋಜ್ಞ ।
ವ್ಯಾಲಧರಲೀಲ ಶುಭಶೀಲ ಬುಧಜಾಲನುತಲೋಲ ಕರುಣಾಲಸಿತ ಫಾಲಶಿಖಿನೇತ್ರಾ ॥ ಶೈಲಗ
ವಿಶಾಲರುಚಿರಾಲಯಸುಖೇಲನ ಗಣಾಲಿಕೃತಮೇಲನ ಮರಾಲಗಮನಾರ್ಚ್ಯ । ಸ್ಥೂಲತನು
ಶಾಲಿ ವನಮಾಲಿವಿಧಿಮೂಲಕತಮಾಲದಳನೀಲಗಳ ಪಾಲಿಸು ವೃಷೇಂದ್ರಾ ॥ ೧೦೧

ಭಾವಭವಭಂಜನ ಸಭಾವಲಯಮಂಡನ ಶುಭಾವಹ ಮಹೇಶಕೃತಭಾವ ಪರವಿದ್ಯಾ ।
ಭಾವನ ಸದಾಸದನುಭಾವ ನತದತ್ತಗಣಭಾವ ಮುದಿತೋಗ್ರಶರಭಾವತರಣಾಂಕಾ ॥ ಪಾ
ವನಕಟಾಕ್ಷ ಸುರಪಾವನತ ತಾರಕಜಪಾವಗತವಕ್ತ್ರ ಮುನಿಪಾವನ ಶುಭಾಂಗಾ । ದೇವ

---

ಚಿರ— ವಿದ್ಯಾವಿತ್- ಬ್ರಹ್ಮವಿದ್ಯೆಯಂ ತಿಳಿದವರಲ್ಲಿ, ರುಚಿರ- ಮನೋಹರನಾದ, ಸದ್ಗುಣಸಮುದ್ರ- ಒಳ್ಳೆಯ ಗುಣಗಳಿಗೆ ಸಮುದ್ರನಾದ, ಅಘವದ್ರಹಿತ- ಪಾಪವುಳ್ಳವರಿಂದ ಬಿಡಲ್ಪಟ್ಟ, ಭೂಮಿಹಿತರುದ್ರ- ಭೂಮಿಗೆ ಹಿತವನ್ನುಂಟುಮಾಡುವ ರುದ್ರಸ್ವರೂಪನಾದ, ಬಸವೇಶಾ! ಎನ್ನಂ, ಪೊರೆ. ||೧೦೦||

ಬಾಲ......ಲಾಲಸ— ಬಾಲಶಶಿ- ಎಳೆಯ ಚಂದ್ರನೇ, ಮೌಳಿಕ- ಕಿರೀಟದಲ್ಲುಳ್ಳ, ಕಪಾಲಧರ- ಬ್ರಹ್ಮಕಪಾಲವಂ ಧರಿಸಿದ, ಶೂಲಕರ- ಶೂಲಾಯುಧವೇ ಕಯ್ಯಲ್ಲುಳ್ಳ, ಕಾಲಹರ- ಯಮನಂ ನಾಶಮಾಡಿದ, ಕೋಲಪರ- ವರಾಹಸ್ವರೂಪನಾದ ವಿಷ್ಣುವಿಗೆ ಶತ್ರುವಾದ ಈಶ್ವರನಲ್ಲಿ, ಲಾಲಸ- ಆಸಕ್ತನಾದ, ಮನೋಜ್ಞವ್ಯಾಲಧರಲೀಲ— ಮನೋಹರವಾದ ಸರ್ಪವಂ ಧರಿಸಿದ ಶಿವನ ವಿಲಾಸಸ್ವರೂಪನಾದ, ಶುಭಶೀಲ- ಮಂಗಳಕರವಾದ ಸದಾಚಾರವುಳ್ಳ, ಬುಧಜಾಲನುತಿಲೋಲ- ವಿದ್ವಾಂಸರ ಸಮೂಹವು ಮಾಡುವ ಸ್ತೋತ್ರದಲ್ಲಿ ಆಸಕ್ತನಾದ, ಕರುಣಾಲಸಿತ- ದಯೆಯಿಂದ ಮನೋಹರನಾದ, ಫಾಲಶಿಖಿನೇತ್ರಾ- ಹಣೆಯಲ್ಲಿ ಅಗ್ನಿನೇತ್ರವುಳ್ಳ, ಶೈಲಗ......ಖೇಲನ— ಶೈಲಗ- ಕೈಲಾಸಪರ್ವತವಂ ಹೊಂದಿರುವ, ವಿಶಾಲ- ವಿಸ್ತಾರವಾದ, ರುಚಿರ-ಮನೋಹರವಾದ, ಆಲಯ- ಮನೆಯಲ್ಲಿ, ಸುಖೇಲನ- ಒಳ್ಳೆಯ ಆಟವುಳ್ಳ, ಗಣಾಲಿಕೃತಮೇಲನ- ಶಿವಗಣಂಗಳ ಪಜ್ತಿಯೊಡನೆ ಮಾಡಲ್ಪಟ್ಟ ಸಂಗವುಳ್ಳ, ಮರಾಲಗಮನಾರ್ಚ್ಯ— ಮರಾಲಗಮನ- ಹಂಸಪಕ್ಷಿಯಿಂದ ಸಂಚರಿಸುವ ಬ್ರಹ್ಮನಿಂದ, ಅರ್ಚ್ಯ- ಪೂಜಿಸಲ್ಪಡುವದಕ್ಕೆ ಯೋಗ್ಯನಾದ, ಸ್ಥೂಲತನುಶಾಲಿ- ದಪ್ಪವಾದ ದೇಹದಿಂದೊಪ್ಪುವ, ವನಮಾಲಿವಿಧಿಮೂಲಕ— ವನಮಾಲಿ- ವಿಷ್ಣು, ವಿಧಿ- ಬ್ರಹ್ಮ ಇವರುಗಳಿಗೆ, ಮೂಲಕ-ಕಾರಣನಾದ, ತಮಾಲದಳನೀಲಗಳ- ಹೊಂಗೆಯೆಲೆಯಂತೆ ಕಪ್ಪಾದ ಕಂಠವುಳ್ಳ, ವೃಷೇಂದ್ರಾ ! ಪಾಲಿಸು. ... ... ... ... ... ... ||೧೦೧||

ಭಾವ......ಮಂಡನ— ಭಾವಭವ- ಮನ್ಮಥನನ್ನು, ಭಂಜನ- ನಾಶಮಾಡಿದ ಶಿವನ, ಸಭಾವಲಯ- ಸಭಾಮಂಡಲಕ್ಕೆ, ಮಂಡನ- ಅಲಂಕಾರನಾದ, ಶುಭಾವಹ- ಮಂಗಳವನ್ನುಂಟುಮಾಡುವ, ಮಹೇಶಕೃತಭಾವ- ಈಶ್ವರನಲ್ಲಿ ಮಾಡಲ್ಪಟ್ಟ ಮನಸ್ಸುಳ್ಳ, ಪರವಿದ್ಯಾಭಾವನ-ಉತ್ಕೃಷ್ಟವಾದ ಬ್ರಹ್ಮವಿದ್ಯೆಯಂಧ್ಯಾನಿಸುವ, ಸದಾಸದನುಭಾವ- ಯಾವಾಗಲೂ ಒಳ್ಳೆಯ ತತ್ತ್ವಾನುಭವವುಳ್ಳ, ನತದತ್ತಗುಣಭಾವ- ನಮಸ್ಕರಿಸಿದವರಿಗೆ ಕೊಡಲ್ಪಟ್ಟ ಶಿವಗಣತ್ವವುಳ್ಳ, ಮುದಿತೋಗ್ರಶರಭಾವತರಣಾಂಕಾ— ಮುದಿತ- ಸಂತೋಷಪಡಿಸಲ್ಪಟ್ಟ, ಉಗ್ರ- ಭಯಂಕರವಾದ, ಶರಭಾವತರಣ- ಶರಭಮೃಗದ ಅವತಾರವೇ, ಅಂಕಾ- ಚಿಹ್ನವಾಗುಳ್ಳ ವೀರಭದ್ರೇಶ್ವರನುಳ್ಳ, ಪಾವನಕಟಾಕ್ಷ- ಪರಿಶುದ್ಧಿಯನ್ನುಂಟುಮಾಡುವ ಕಡೆಗಣ್ಣೋಟವುಳ್ಳ, ಸುರಪಾವನತ- ದೇವೇಂದ್ರನಿಂದ ನಮಸ್ಕರಿಸಲ್ಪಟ್ಟ, ತಾರಕಜಪಾವಗತವಕ್ತ್ರ- ತಾರಕಮಂತ್ರಜಪದಿಂ ಕೂಡಿದ ಬಾಯುಳ್ಳ, ಮುನಿಪಾವನ— ಮುನಿಪ- ಋಷಿಶ್ರೇಷ್ಠರನ್ನು, ಅವನ ಪರಿಪಾಲಿಸುವ, ಶುಭಾಂಗಾ- ಮಂಗಕರ

ಕುಳಸೇವ್ಯ ವಸುದೇವಸುತಮುಖ್ಯ ನರದೇವನತ ರಕ್ಷಿಸೆಲೆ ದೇವ ಬಸವೇಶಾ ॥ ೧೨೨

ಶಶ್ವದನುನಿಸೃತನಿಜಶ್ವಸಿತಸಂಭವಪಟುಶ್ವಸನಚಾಲಿತಸುರೇಶ್ವರವಿಮಾನಾ । ನಶ್ವರಪದಸ್ಥ ಹರಿದಶ್ವಶತಕಾಂತಿಮಯ ಶಾಶ್ವತವಪುರ್ಧರ ಸಿತಾಶ್ವಶರದಾಂಕಾ ॥ ಪಶ್ವಧಿಕ ಸಾರ ನಿಗಮಾಶ್ವಭಜಕಪ್ರಿಯಕರ ಶ್ವಪತಿವಾಹನನತ ತ್ಯೈಶ್ವರಪದಸ್ಥ । ಶೇಶ್ವರಸಮರ್ಚ್ಯ ಪೊರೆ ವಿಶ್ವಪರಿಪಾಲಕ ರತೀಶ್ವರಮದಾಪಹ ಗಣೇಶ್ವರ ವೃಷೇಂದ್ರಾ ॥ ೧೨೩

ಕೇಶವಪರಿಸ್ತುತ ಕೃಪಾಶರಧಿ ಕೃತ್ತಭವಪಾಶ ಮೃಡಮಾನಸನಿವೇಶ ಪರಬಿಂದ್ವಾಕಾಶರವಿ ಸಂತತನಿರಾಶ ಶಿವತತ್ತ್ವನಿಧಿಕೋಶ ಕುಮತಸ್ಮಯವಿನಾಶ ಗಣಸೇವ್ಯ ॥ ಕ್ಲೇಶಘನಕಾನನಹುತಾಶ ಹೃದಯಾರ್ಚಿತಮಹೇಶ ನಿಜಕೀರ್ತಿಭರಿತಾಶ ಶಿವಲಿಂಗಾ । ವೇಶ ಪ್ರೊ

---

ರವಾದ ದೇಹವುಳ್ಳ, ದೇವಕುಲಸೇವ್ಯ- ದೇವತೆಗಳ ಗುಂಪಿನಿಂದ ಸೇವಿಸಲ್ಪಡುವದಕ್ಕೆ ಯೋಗ್ಯನಾದ, ವಸುದೇವಸುತಮುಖ್ಯನರದೇವನತ— ವಸುದೇವಸುತ- ಕೃಷ್ಣನೇ, ಮುಖ್ಯ- ಮೊದಲಾದ, ನರದೇವ- ಮನುಷ್ಯಾಧಿಪತಿಗಳಿಂದ, (ರಾಜರಿಂದ) ನತ- ನಮಸ್ಕರಿಸಲ್ಪಟ್ಟ, ದೇವ- ಸ್ವಾಮಿಯಾದ, ಎಲೆಬಸವೇಶಾ ! ರಕ್ಷಿಸು. ... ... ... ... ... ॥೧೨೨॥

ಶಶ್ವ......ವಿಮಾನ— ಶಶ್ವತ್- ಭಾರಿಭಾರಿಗೂ, ಅನುನಿಸೃತ- ಅನುಸರಿಸಿಹೊರಟ, ನಿಜಶ್ವಸಿತ- ತನ್ನ ಉಸುರಿನಿಂದ, ಸಂಭವ- ಹುಟ್ಟಿದ, ಪಟುಶ್ವಸನ- ಸಮರ್ಥವಾದ ಗಾಳಿಯಿಂದ, ಚಾಲಿತ- ಅಳ್ಳಾಡಿಸಲ್ಪಟ್ಟ, ಸುರೇಶ್ವರ- ಇಂದ್ರನ, ವಿಮಾನ- ಪುಷ್ಪಕವುಳ್ಳ, ಅನಶ್ವರಪದಸ್ಥ- ಸ್ಥಿರವಾದ ಸ್ಥಾನದಲ್ಲಿರುವ, ಹರಿದಶ್ವಶತಕಾಂತಿಮಯ— ಹರಿದಶ್ವಶತ- ಅನೇಕ ಸೂರ್ಯರ, ಕಾಂತಿಮಯ- ತೇಜಸ್ಸಿನಂತಿರುವ ತೇಜಸ್ಸಿನ ಸ್ವರೂಪನಾದ, ಶಾಶ್ವತವಪುರ್ಧರ- ಸ್ಥಿರವಾದ ದೇಹವನ್ನು ಧರಿಸಿದ, ಸಿತಾಶ್ವಶರದಾಂಕ— ಸಿತ- ಶುಭ್ರವಾದ, ಅಶ್ವ- ಕುದುರೆಗಳುಳ್ಳ ಅರ್ಜುನನಿಗೆ, ಶರದ- ಬಾಣವನ್ನುಕೊಟ್ಟ ಶಿವನ, ಅಂಕ- ಚಿಹ್ನವುಳ್ಳ, ಪಶ್ವಧಿಕ- ವೃಷಭೇಶ್ವರನಾದ, ಸಾರನಿಗಮಾಶ್ವಭಜಕಪ್ರಿಯಕರ— ಸಾರ- ಶ್ರೇಷ್ಠವಾದ, ನಿಗಮ- ವೇದಗಳೇ, ಅಶ್ವ- ಕುದುರೆಯಾಗುಳ್ಳ ಶಿವನನ್ನು, ಭಜಕ- ಧ್ಯಾನಿಸುವರಿಗೆ, ಪ್ರಿಯಕರ- ಹಿತವನ್ನುಂಟುಮಾಡುವ, ಶ್ವಪತಿವಾಹನನತ— ಶ್ವಪತಿ- ಶ್ರೇಷ್ಠವಾದ ನಾಯೇ, ವಾಹನ- ವಾಹನವಾಗುಳ್ಳ ಭೈರವನಿಂದ, ನತ- ನಮಸ್ಕರಿಸಲ್ಪಟ್ಟ, ಐಶ್ವರಪದಸ್ಥ- ಶಿವನಾಸ್ಥಾನದಲ್ಲಿರುವ, ಆಶೇಶ್ವರಸಮರ್ಚ್ಯ— ಆಶಾ- ದಿಕ್ಕುಗಳ, ಈಶ್ವರ- ಅಧಿಪತಿಗಳಿಂದ, ಸಮರ್ಚ್ಯ- ಪೂಜಿಸಲ್ಪಡುವದಕ್ಕೆ ಯೋಗ್ಯನಾದ, ವಿಶ್ವಪರಿಪಾಲಕ- ಪ್ರಪಂಚವನ್ನು ಸಂರಕ್ಷಿಸುವ, ರತೀಶ್ವರಮದಾಪಹ- ಮನ್ಮಥನ ಗರ್ವವನ್ನು ನಾಶಮಾಡಿದ, ಗಣೇಶ್ವರ- ಗಣಶ್ರೇಷ್ಠನಾದ, ವೃಷೇಂದ್ರಾ ! ಪೊರೆ. ... ... ... ।೧೨೩॥

ಕೇಶವಪರಿಸ್ತುತ- ವಿಷ್ಣುವಿನಿಂದ ಹೊಗಳಲ್ಪಟ್ಟ, ಕೃಪಾಶರಧಿ-ದಯೆಗೆ ಸಮುದ್ರನಾದ, ಕೃತ್ತಭವಪಾಶ- ಕತ್ತರಿಸಲ್ಪಟ್ಟ ಸಂಸಾರವೆಂಬ ಹಗ್ಗವುಳ್ಳ, ಮೃಡಮಾನಸನಿವೇಶ- ಪರಮೇಶ್ವರನ ಮನಸ್ಸೇ ಮನೆಯಾಗುಳ್ಳ, ಪರಬಿಂದ್ವಾಕಾಶರವಿ- ಉತ್ಕೃಷ್ಟವಾದ ಬಿಂದುಸ್ವರೂಪವಾದ ಆಕಾಶಕ್ಕೆ ಸೂರ್ಯನಾದ, ಸಂತತನಿರಾಶ- ಯಾವಾಗಲೂ ಆಸೆಯಿಲ್ಲದ, ಶಿವತತ್ತ್ವನಿಧಿಕೋಶ- ಪರಶಿವತತ್ತ್ವವಿದ್ಯೆಯೆಂಬ ನಿಕ್ಷೇಪಕ್ಕೆ ಬೊಕ್ಕಸನಾದ, ಕುಮತಸ್ಮಯವಿನಾಶ- ಕೆಟ್ಟಮತದ ಗರ್ವವನ್ನು ನಾಶಮಾಡಿದ, ಗಣಸೇವ್ಯ- ಶಿವಗಣಂಗಳಿಂದ ಸೇವಿಸಲ್ಪಡುವದಕ್ಕೆ ಯೋಗ್ಯನಾದ, ಕ್ಲೇಶಘನಕಾನನಹುತಾಶ- ಪಂಚಕ್ಲೇಶಗಳೆಂಬ ದಟ್ಟವಾದ ಕಾಡಿಗೆ ಬೆಂಕಿಯಾದ, ಹೃದಯಾರ್ಚಿತಮಹೇಶ- ಮನಸ್ಸಿನಲ್ಲಿ ಪೂಜಿಸಲ್ಪಟ್ಟ ಶಿವನುಳ್ಳ, ನಿಜಕೀರ್ತಿಭರಿತಾಶ- ತನ್ನಯಶಸ್ಸಿನಿಂದ ತುಂಬಲ್ಪಟ್ಟ ದಿಕ್ಕುಗಳುಳ್ಳ, ಶಿವಲಿಂಗಾವೇಶ- ಸಂಗಮೇಶ್ವರಲಿಂಗದಲ್ಲಿ ಪ್ರವೇಶವುಳ್ಳ, ಅ

ರೆ ಯೆನ್ನನಘನಾಶ ಯಮಿರಾಜದುಪದೇಶಕರ ವಿಶ್ವಜಗದೀಶ ಬಸವೇಶಾ ॥ ೧೨೪

ಈಷಣವಿವರ್ಜಿತ ಸರೋಷಪರಮರ್ದನ ಮನೀಷಿತಸುರದ್ರುಮ ಸುಭಾಷಿತಸು ವೃತ್ತಾ । ನ್ವೇಷಿತಪದಾಬ್ಜ ಪರಿತೋಷಿತಮಹೇಶ ಶುಭವೇಷಧರ ತತ್ವವಿದಶೇಷಬುಧವಂದ್ಯ ॥ ಭೀಷಣಪುನರ್ಭವಸದೋಷಗದಸಹ್ಮರಣಭೇಷಜನಿಜಾಖ್ಯ ನತಪೋಷ ಮೃಡಭಕ್ತ । ದ್ವೇಷಮದಪಂಕಪರಿಶೋಷಣ ಗಣೇಂದ್ರ ಪೊರೆ ಶೇಷಧರಭಕ್ತಿಮಣಿಭೂಷ ಬಸವೇಶಾ ॥ ... ... ... .. ೧೨೫

ವಾಸವಗುರುಸ್ತುತ ಮಹಾಸುರಮಹೀಧರಶರಾಸನಮನೋಂಬುಜನಿವಾಸಶಿವಯೋಗಾ । ಭ್ಯಾಸರತವತ್ಸಲ ಕೃಪಾಸದನ ರಮ್ಯವರಹಾಸರುಚಿರಾಸ್ಯ ಶಿವದಾಸಹಿತಕಾರ್ಯಾ ॥ ವಾಸರಕರಪ್ರಕರಭಾಸಹಿತ ದುರ್ಮತನಿರಾಸ ಕುಸುಮಾಯುಧದುರಾಸದನಿಜಾತ್ಮ । ವ್ಯಾ

---

ಘನಾಶ- ಪಾಪವಂ ನಾಶಮಾಡಿದ, ಯಮಿರಾಜದುಪದೇಶಕರ- ಋಷಿಗಳಿಗೆ ಪ್ರಕಾಶಿಸುವ ತತ್ವೋಪದೇಶವಂ ಮಾಡಿದ, ವಿಶ್ವಜಗದೀಶ- ಎಲ್ಲಾ ಲೋಕಗಳಿಗೂ ಸ್ವಾಮಿಯಾದ, ಬಸವೇಶಾ! ಎನ್ನಂ, ಪೊರೆ. ॥೧೨೪॥

ಈಷಣವಿವರ್ಜಿತ- ಅರ್ಥಾದಿ ಈಷಣತ್ರಯದಿಂದ ಬಿಡಲ್ಪಟ್ಟ, ಸರೋಷಪರಮರ್ದನ- ಕೋಪದಿಂದ ಕೊಡಿದವನಾಗಿ ಶತ್ರುಗಳಂನಾಶಮಾಡಿದ, ಮನೀಷಿತಸುರದ್ರುಮ- ಇಷ್ಟಾರ್ಥಗಳ ವಿಷಯದಲ್ಲಿ ಕಲ್ಪವೃಕ್ಷನಾದ, ಸುಭಾಷಿತ- ಒಳ್ಳೆಯಮಾತುಳ್ಳ, ಸುವೃತ್ತಾನ್ವೇಷಿತಪದಾಬ್ಜ- ಒಳ್ಳೆಯನಡತೆಯುಳ್ಳವರಿಂದ ಹುಡುಕಲ್ಪಟ್ಟ ಪಾದಕಮಲವುಳ್ಳ, ಪರಿತೋಷಿತಮಹೇಶ- ಸಂತೋಷಪಡಿಸಲ್ಪಟ್ಟ ಈಶ್ವರನುಳ್ಳ, ಶುಭವೇಷಧರ- ಮಂಗಳಕರವಾದ ಆಕಾರವನ್ನು ಧರಿಸಿದ, ತತ್ವವಿದಶೇಷಬುಧವಂದ್ಯ- ತತ್ವವಿದ್ಯೆಯನ್ನು ತಿಳಿದ ಸಕಲ ವಿದ್ವಾಂಸರಿಂದಲೂ ನಮಸ್ಕರಿಸಲ್ಪಡುವದಕ್ಕೆ ಯೋಗ್ಯನಾದ, ಭೀಷಣ.........ಆಖ್ಯ— ಭೀಷಣ- ಭಯಂಕರವಾದ, ಪುನರ್ಭವ- ಮತ್ತೆಮತ್ತೆಹುಟ್ಟುವಿಕೆಯೆಂಬ, ಸದೋಷ- ಮಾಲಿನ್ಯದಿಂದ ಕೂಡಿದ, ಗದ- ರೋಗವನ್ನು, ಸಹ್ಮರಣ- ನಾಶಪಡಿಸುವಲ್ಲಿ, ಭೇಷಜ ಔಷಧವಾದ, ನಿಜ- ತನ್ನ, ಆಖ್ಯ- ಹೆಸರುಳ್ಳ, ನತಪೋಷ- ನಮಸ್ಕರಿಸಿದವರನ್ನು ಸಂರಕ್ಷಿಸುವ, ಮೃಡ.........ಶೋಷಣ— ಮೃಡಭಕ್ತ- ಶಿವಭಕ್ತರಲ್ಲಿ, ದ್ವೇಷ- ವೈರವುಳ್ಳವರ, ಮದ- ಗರ್ವವೆಂಬ, ಪಂಕ- ಕೆಸರನ್ನು, ಪರಿಶೋಷಣ- ಒಣಗಿಸುವ, ಗಣೇಂದ್ರ- ಗಣಶ್ರೇಷ್ಠನಾದ, ಶೇಷಧರಭಕ್ತಿಮಣಿಭೂಷ- ಶಿವಭಕ್ತಿಯೆಂಬ ರತ್ನದ ಆಭರಣವುಳ್ಳ, ಬಸವೇಶಾ ! ಪೊರೆ.

ವಾಸವಗುರುಸ್ತುತ— ವಾಸವ- ದೇವೇಂದ್ರ, ಗುರು- ಬೃಹಸ್ಪತಿ ಇವರುಗಳಿಂದ, ಸ್ತುತ- ಹೊಗಳಲ್ಪಟ್ಟ, ಮಹಾ.........ನಿವಾಸ— ಮಹತ್- ದೊಡ್ಡ, ಸುರಮಹೀಧರ- ಮೇರುಪರ್ವತವೇ, ಶರಾಸನ- ಧನುಸ್ಸಾಗುಳ್ಳಶಿವನ, ಮನೋಂಬುಜ- ಹೃದಯಕಮಲವೇ, ನಿವಾಸ- ಮನೆಯಾಗುಳ್ಳ, ಶಿವಯೋಗಾಭ್ಯಾಸರತವತ್ಸಲ- ಶಿವಯೋಗದ ಅಭ್ಯಾಸದಲ್ಲಿ ಪ್ರೀತಿಯುಳ್ಳವರಲ್ಲಿ ಅನುರಾಗವುಳ್ಳ, ಕೃಪಾಸದನ- ದಯಾರಸಕ್ಕೆ ಮನೆಯಾದ, ರಮ್ಯದರಹಾಸರುಚಿರಾಸ್ಯ- ಮನೋಹರವಾದ ಮುಗುಳ್ನಗೆಯಿಂದ ಸುಂದರವಾದ ಮುಖವುಳ್ಳ, ಶಿವದಾಸಹಿತಕಾರ್ಯಾ- ಶಿವನನ್ನು ಸೇವಿಸುವವರಿಗೆ ಪ್ರಿಯವಾದ ಕೆಲಸವುಳ್ಳ, ವಾಸರಕರಪ್ರಕರಭಾಸಹಿತ- ವಾಸರಕರ- ಸೂರ್ಯರ, ಪ್ರಕರ- ಸಮೂಹದ, ಭಾ- ಕಾಂತಿಯಂತಿರುವ ಕಾಂತಿಯಿಂದ, ಸಹಿತ- ಕೂಡಿದ, ದುರ್ಮತನಿರಾಸ- ಕೆಟ್ಟ ಜೈನಚಾರ್ವಾಕಾದಿಮತಗಳನ್ನು ನಾಶಮಾಡಿದ, ಕುಸುಮಾಯುಧದುರಾಸದನಿಜಾತ್ಮ— ಕುಸುಮಾಯುಧ- ಮನ್ಮಥನಿಂದ, ದುರಾಸದ- ಹೊಂದುವದಕ್ಕಸಾಧ್ಯವಾದ, ನಿಜ- ತನ್ನ, ಆತ್ಮ- ದೇಹವುಳ್ಳ, ವ್ಯಾಸ.........ಚರಿತ್ರ— ವ್ಯಾಸ- ವ್ಯಾಸಋಷಿ, ಶುಕ- ಶುಕರ್ಷಿ ಇವರುಗಳೇ, ಮುಖ್ಯ- ಮೊದಲಾದವರಿಂದ, ನುತ- ಹೊಗಳಲ್ಪಟ್ಟ, ಭಾಸುರ- ಪ್ರಕಾಶಿಸುವ, ಚರಿತ್ರ- ನಡತೆಯುಳ್ಳ, ಉನ್ನತವಿಲಾ

ಸಶುಕಮುಖ್ಯನುತಭೂಸುರಚರಿತ್ರ ಕುಡು ಲೇಸ ನಮ ಗುನ್ನತವಿಲಾಸ ಬಸವೇಶಾ ॥ ೧೬೬

ಆಹವಸಮಾಗತಸಸಾಹಸಪರಪ್ರಹರಬಾಹ ಗಣನಾಯಕಸಮಾಹಿತಸುಕಾರ್ಯ ।
ವ್ಯೂಹ ಪರಿವರ್ಜಿತವಿಮೋಹ ಭುವನೋತ್ತರಕಟಾಹಬಹಿರಾತತಸುಗೇಹಕೃತವಾಸಾ ॥
ವ್ಯಾಹತಪರೋಕ್ತಿಪರಿವಾಹ ಬುಧಸನ್ನುತಸದೂಹ ಸಕಳೇಷ್ಟಕರಣೇಹ ಚರಭಕ್ತ ।
ಸ್ನೇಹ ಪರಿಪಾಲಿಸು ಸುದೇಹ ಪರಮೇಶ್ವರಮನೋಹರಗುಣಾಭರಣವಾಹ ಬಸವೇಶಾ ॥

ವ್ಯಾಳಪತಿಕಂಕಣ ಕರಾಳಖಳಸೂದನ ಮರಾಳರಥಮಾನಿತವಿಶಾಳಮತಿಯುಕ್ತ ।
ಕ್ಷ್ವೇಳಗಳ ಸದ್ಭಸಿತಫಾಳ ಫಣಿರಾಜನಿಭವಾಳ ಖುರನಿರ್ಮಥಿತಕಾಳದನುಜೇಂದ್ರಾ ॥ ಗಾ
ಳವದಧೀಚಿಮುನಿಪಾಳನಪರಾಯಣ ಸದೈಳಬಿಳಭಾಗ್ಯದ ಸುಖೇಳನ ಕಟಾಕ್ಷ । ಕ್ಷಾಳಿತ
ದಿಗಂತ ಗಣಮೇಳನವಿಲೋಳ ಪೊರೆ ಶೈಳನಿಭಕಾಯ ಕರುಣಾಳು ಬಸವೇಶಾ ॥ ೧೬೮।

ಪಕ್ಷಿಪರಥಾಕ್ಷಿಪದ ಖುಕ್ಷಸವಳಕ್ಷಕ ವಿದ್ರುಕ್ಷುವಿಜಿತಾಕ್ಷಸುಮುಮುಕ್ಷುಜನವೀಕ್ಷಾ

---

ಸ- ಉತ್ಕೃಷ್ಟವಾದ ಲೀಲೆಯುಳ್ಳ, ಬಸವೇಶಾ ! ಎಮಗೆ, ಲೇಸಂ- ಒಳ್ಳೆಯದನ್ನು, ಕುಡು. ॥೧೬೬॥

ಆಹವ........ಬಾಹ— ಆಹವ- ಯುದ್ಧಕ್ಕೆ, ಸಮಾಗತ- ಬಂದ, ಸಸಾಹಸ- ಸಾಮರ್ಥ್ಯದಿಂಕೂಡಿದ, ಪರ- ಶತ್ರುಗಳನ್ನು, ಪ್ರಹರ- ನಾಶಮಾಡುವ, ಬಾಹ- ತೋಳುಳ್ಳ, ಗಣನಾಯಕಸಮಾಹಿತಸುಕಾರ್ಯವ್ಯೂಹ- ಗಣಶ್ರೇಷ್ಠರಿಗೆ ಚೆನ್ನಾಗಿ ಪ್ರಿಯವಾದ ಒಳ್ಳೆಯ ಕೆಲಸಗಳ ಸಮೂಹವುಳ್ಳ, ಪರಿವರ್ಜಿತವಿಮೋಹ- ಬಿಡಲ್ಪಟ್ಟ ಅಜ್ಞಾನವುಳ್ಳ, ಭುವ........ವಾಸಾ— ಭುವನೋತ್ತರಕಟಾಹ- ಲೋಕವೆಂಬ ದೊಡ್ಡಕೊಪ್ಪರಿಗೆಯ, ಬಹಿಃ- ಹೊರಗಡೆಯಲ್ಲಿ, ಆತತ- ಎಲ್ಲಾಕಡೆಯಲ್ಲೂ ವಿಸ್ತಾರವಾದ, ಸುಗೇಹ- ಒಳ್ಳೆಯ ಮನೆಯಲ್ಲಿ, ಕೃತ- ಮಾಡಲ್ಪಟ್ಟ, ವಾಸ- ಇರುವಿಕೆಯುಳ್ಳ, ವ್ಯಾಹತಪರೋಕ್ತಿಪರಿವಾಹ— ವ್ಯಾಹತ- ವಿಶೇಷವಾಗಿ ನಾಶಮಾಡಲ್ಪಟ್ಟ, ಪರೋಕ್ತಿ- ಶಿವೇತರಮತಸ್ಥರ ವಚನದ, ಪರಿವಾಹ- ಪ್ರವಾಹವುಳ್ಳ, ಬುಧಸನ್ನುತಸದೂಹ- ವಿದ್ವಾಂಸರಿಂದ ಹೊಗಳಲ್ಪಟ್ಟ ಒಳ್ಳೆಯ ಊಹಿಸುವಿಕೆಯುಳ್ಳ, ಸಕಳೇಷ್ಟಕರಣೇಹ- ಸಮಸ್ತರಿಗೂ ಇಷ್ಟಾರ್ಥವನ್ನುಂಟುಮಾಡುವದರಲ್ಲಿ ಇಚ್ಛೆಯುಳ್ಳ, ಚರಭಕ್ತಸ್ನೇಹ- ಜಂಗಮಭಕ್ತರಲ್ಲಿ ಪ್ರೀತಿಯುಳ್ಳ, ಸುದೇಹ- ಒಳ್ಳೆಯಶರೀರವುಳ್ಳ, ಪರಮೇಶ್ವರಮನೋಹರಗುಣಾಭರಣವಾಹ- ಮನೋಹರವಾದ ಸದ್ಗುಣಗಳೇ ಆಭರಣವಾಗುಳ್ಳ ಪರಮೇಶ್ವರನ ವಾಹನನಾದ, ಬಸವೇಶಾ ! ಪರಿಪಾಲಿಸು. ॥೧೬೭॥

ವ್ಯಾಳಪತಿಕಂಕಣ- ಆದಿಶೇಷನೇ ಕಡಗವಾಗುಳ್ಳ, ಕರಾಳಖಳಸೂದನ- ಭಯಂಕರರಾದ ನೀಚರನ್ನು ನಾಶಮಾಡಿದ, ಮರಾಳರಥಮಾನಿತವಿಶಾಲಮತಿಯುಕ್ತ- ಬ್ರಹ್ಮನಿಂದ ಸನ್ಮಾನಮಾಡಲ್ಪಟ್ಟ ವಿಸ್ತಾರವಾದ ಬುದ್ಧಿಯಿಂದಕೂಡಿದ, ಕ್ಷ್ವೇಳಗಳ- ವಿಷಮೇಕಂಠವಾಗುಳ್ಳ, ಸದ್ಭಸಿತಫಾಳ— ಒಳ್ಳೆಯ ಭಸ್ಮವೇ ಹಣೆಯಲ್ಲುಳ್ಳ, ಫಣಿರಾಜನಿಭವಾಳ- ಆದಿಶೇಷನಿಗೆ ಸದೃಶವಾದ ಬಾಲವುಳ್ಳ, ಖುರನಿರ್ಮಥಿತಕಾಳದನುಜೇಂದ್ರಾ— ಖುರ— ಗೊರಸಿನಿಂದ, ನಿರ್ಮಥಿತ- ಭೇದಿಸಲ್ಪಟ್ಟ, ಕಾಳದನುಜೇಂದ್ರಾ- ಕಾಳನೆಂಬ ರಾಕ್ಷಸಶ್ರೇಷ್ಠನುಳ್ಳ, ಗಾಳವದಧೀಚಿಮುನಿಪಾಳನಪರಾಯಣ- ಗಾಳವದಧೀಚಿಗಳೆಂಬಋಷಿಗಳನ್ನು ಸಂರಕ್ಷಿಸುವದರಲ್ಲಿ ಆಸಕ್ತನಾದ, ಸದೈಳಬಿಳಭಾಗ್ಯದ- ಒಳ್ಳೆಯ ಕುಬೇರನಿಗೆ ಸಂಪತ್ತನ್ನುಕೊಟ್ಟ, ಸುಖೇಳನ- ಒಳ್ಳೆಯಕ್ರೀಡೆಯುಳ್ಳ, ಕಟಾಕ್ಷಕ್ಷಾಳಿತದಿಗಂತ— ಕಟಾಕ್ಷ- ಕಡೆಗಣ್ಣಿನ ನೋಟದಿಂದ, ಕ್ಷಾಳಿತ- ತೊಳೆಯಲ್ಪಟ್ಟ, ದಿಗಂತ- ದಿಕ್ಕುಗಳ ಕೊನೆಯುಳ್ಳ, ಗಣಮೇಳನವಿಲೋಳ- ಶಿವಗಣಂಗಳಸಂಗದಲ್ಲಿ ಆಸಕ್ತನಾದ, ಶೈಳನಿಭಕಾಯ- ಪರ್ವತಕ್ಕೆ ಸದೃಶವಾದ ದೇಹವುಳ್ಳ, ಕರುಣಾಳು- ದಯಾಶಾಲಿಯಾದ, ಬಸವೇಶಾ ! ಪೊರೆ. ॥೧೬೮॥

ಪಕ್ಷಿಪರಥಾಕ್ಷಿಪದ— ಪಕ್ಷಿಪರಥ- ವಿಷ್ಣುವಿನ, ಅಕ್ಷಿ- ಕಣ್ಣೇ, ಪದ- ಪಾದದಲ್ಲುಳ್ಳ, (ಕವಿಗೆ ಈಶ್ವರನ

ಲಕ್ಷಿತತರಕ್ಷುತನುರಾಕ್ಷಸವಿಪಕ್ಷ ಖಲದಕ್ಷಮಖಶೀಕ್ಷನಿಟಲಾಕ್ಷಗಮಹೋಕ್ಷಾ ॥ ಯಕ್ಷಪತಿಪಕ್ಷ ಮಿಳದಕ್ಷಯಗುಣಾಕ್ಷರ ದುರೀಕ್ಷಗರಭಕ್ಷಶುಭಲಕ್ಷಣ ಗಣೇಂದ್ರಾ । ಧ್ಯಕ್ಷರಿಪುಕಕ್ಷದವ ಸಾಕ್ಷರಕೃತೇಕ್ಷಣಕಟಾಕ್ಷ ಪೊರೆ ಸಕ್ಷಮ ವಿಚಕ್ಷಣ ವೃಷೇಂದ್ರಾ ॥ ೯೨೯

ಹಂಸಪದವೃತ್ತ ॥ ಮುರಹರಸುರವರಪರಿನುತಚರಣಾಂಭೋಜಯುತೇ ಯಮಿರಾಜಸುತೇ । ಸುರುಚಿರಕರಿವರಮುಖಜನನಿ ಗಣಾನಂದಕರೇ ತರುಣೇಂದುಧರೇ ॥ ಗುರುತರಗಿರಿವರತನುಭವೆ ತತವಿದ್ಯಾನಿಕರೇ ಜಿತಭಾನುಕರೇ । ಪೊರೆ ಪರತರಪುರಹರನರಸಿ ಜಗನ್ಮಾತೆ ಶಿವೇ ಪರಿಧೂತಭವೇ ॥ ... ... ೧೩೦

ಪೃಥ್ವೀವೃತ್ತ ॥ ಸುವರ್ಣರಥಪೂಜಿತೇಸುಕರಕೀರ್ತಿವಿಭ್ರಾಜಿತೇ । ಕೃಪಾರಸತ

---

ಲ್ಲೂ ಬಸವೇಶ್ವರನಲ್ಲೂ ಅಭೇದಬುದ್ಧಿಯಾದುದರಿಂದ ಶಿವನಿಷ್ಠಧರ್ಮಬೋಧಕವಾಕ್ಯಗಳು ಬಸವೇಶ್ವರನಲ್ಲಿಯೂ ಉಪಯೋಗಿಸಲ್ಪಟ್ಟಿವೆ) ಋಕ್ಷಪವಳಕ್ಷಕ— ಋಕ್ಷಪ- ಚಂದ್ರನಹಾಗೆ, ವಳಕ್ಷಕ- ಶುಭ್ರನಾದ, ವಿದೃಕ್ಷು......ಮಹೋಕ್ಷಾ— ವಿದೃಕ್ಷು- ದರ್ಶನಾಪೇಕ್ಷಿಗಳಾದ, ವಿಜಿತ- ಜೈಸಲ್ಪಟ್ಟ, ಅಕ್ಷ- ಇಂದ್ರಿಯಗಳುಳ್ಳ, ಸುಮುಮುಕ್ಷುಜನ- ಒಳ್ಳೆಯ ಮೋಕ್ಷಾಪೇಕ್ಷಿಗಳಾದ ಜನಗಳ, ವೀಕ್ಷ- ನೋಟಕ್ಕೆ, ಅಲಕ್ಷಿತ-ಗುರಿಯಾಗಿಮಾಡಲ್ಪಟ್ಟ, ತರಕ್ಷುತನುರಾಕ್ಷಸ- ಹುಲಿಯದೇಹವುಳ್ಳ ರಾಕ್ಷಸನಿಗೆ, ವಿಪಕ್ಷ- ಶತ್ರುವಾದ, ಖಲ- ನೀಚನಾದ, ದಕ್ಷ- ದಕ್ಷಬ್ರಹ್ಮನ, ಮಖ- ಯಜ್ಞವನ್ನು, ಶೀಕ್ಷ- ಶಿಕ್ಷೆಮಾಡಿದ, ನಿಟಲಾಕ್ಷ- ಪರಮೇಶ್ವರನನ್ನು, ಗ- ಹೊಂದಿದ, ಮಹೋಕ್ಷಾ- ದೊಡ್ಡವೃಷಭನಾದ, ಯಕ್ಷಪತಿಪಕ್ಷ— ಯಕ್ಷಪತಿ- ಕುಬೇರನಲ್ಲಿ, ಪಕ್ಷ- ವಿಶ್ವಾಸವುಳ್ಳ, ಮಿಳದಕ್ಷಯಗುಣ- ಕೂಡಿದ ನಾಶರಹಿತವಾದ ಸದ್ಗುಣಗಳುಳ್ಳ, ಅಕ್ಷರ- ನಾಶರಹಿತನಾದ,(ಅಥವಾ ಪರಮಾತ್ಮಸ್ವರೂಪನಾದ) ದುರೀಕ್ಷಗರಭಕ್ಷಶುಭಲಕ್ಷಣ— ದುರೀಕ್ಷ- ನೋಡುವದಕ್ಕಾಗದ, ಗರ- ವಿಷವನ್ನು, ಭಕ್ಷ ಭಕ್ಷಿಸಿದ ಶಿವನ, ಶುಭಲಕ್ಷಣ- ಮಂಗಳಕರವಾದ ಚಿಹ್ನವುಳ್ಳ, ಗಣೇಂದ್ರಾಧ್ಯಕ್ಷ- ಗಣಶ್ರೇಷ್ಠರಲ್ಲಿಅಧಿಪತಿಯಾದ, ರಿಪುಕಕ್ಷದವ- ಶತ್ರುಗಳೆಂಬ ಒಣಗಿದ ಕಾಡಿಗೆ ಕಾಳ್ಕಿಚ್ಚಾದ, ಸಾಕ್ಷರಕೃತೇಕ್ಷಣಕಟಾಕ್ಷ— ಸಾಕ್ಷರ- ಅಕ್ಷರಸಹಿತರಲ್ಲಿ, (ವಿದ್ಯಾವಂತರಲ್ಲಿ) ಕೃತ- ಮಾಡಲ್ಪಡ್ಡ, ಈಕ್ಷಣಕಟಾಕ್ಷ- ಕಡೆಗಣ್ಣನೋಟವುಳ್ಳ, ಸಕ್ಷಮವಿಚಕ್ಷಣ-ಸಹನೆಯಿಂದ ಕೂಡಿದವರಲ್ಲಿ ಕುಶಲನಾದ,ವೃಷೇಂದ್ರಾ ! ಪೊರೆ. ॥೯೨೯॥

ಮುರ......ಯುತೇ— ಮುರಹರ- ವಿಷ್ಣು, ಸುರವರ- ಬ್ರಹ್ಮ ಇವರಿಂದ, ಪರಿನುತ- ಹೊಗಳಲ್ಪಟ್ಟ, ಚರಣಾಂಭೋಜ- ಪಾದಕಮಲದಿಂದ, ಯುತೇ- ಕೂಡಿದ, ಯಮಿರಾಜಸುತೇ— ಯಮಿರಾಜ- ಋಷಿಶ್ರೇಷ್ಠನಾದ ದಕ್ಷನಮಗಳಾದ, ಸುರುಚಿರಕರಿವರಮುಖಜನನಿ- ಅತಿ ಮನೋಹರನಾದ ಗಣಪತಿಯ ತಾಯಾದ, ಗಣಾನಂದಕರೇ- ಶಿವಗಣಗಳಿಗೆ ಸಂತೋಷವನ್ನುಂಟುಮಾಡುವ, ತರುಣೇಂದುಧರೇ- ಬಾಲಚಂದ್ರನನ್ನು ಧರಿಸಿದ, ಗುರುತರಗಿರಿವರತನುಭವೆ- ಅತಿ ದೊಡ್ಡವನಾದ ಹಿಮವಂತನ ಮಗಳಾದ, ತತವಿದ್ಯಾನಿಕರೇ- ವಿಸ್ತರಿಸಲ್ಪಟ್ಟ ಚತುರ್ದಶವಿದ್ಯೆಗಳ ಸಮೂಹವುಳ್ಳ, ಜಿತಭಾನುಕರೇ- ಜೈಸಲ್ಪಟ್ಟ ಸೂರ್ಯನ ಕಾಂತಿಯುಳ್ಳ, ಜಗನ್ಮಾತೆ- ಲೋಕಕ್ಕೆ ತಾಯಾದ, ಶಿವೇ- ಮಂಗಳಸ್ವರೂಪಿಣಿಯಾದ, ಪರಿಧೂತಭವೇ- ತಿರಸ್ಕರಿಸಲ್ಪಟ್ಟ ಪಾಪವುಳ್ಳ, ಪರತರಪುರಹರನ, ಅತ್ಯುತ್ಕೃಷ್ಟನಾದ ಶಿವನ, ಅರಸೀ- ಪತ್ನಿಯೇ, ಪೊರೆ. ॥೧೩೦॥

ಸುವರ್ಣರಥಪೂಜಿತೇ- ವಿಷ್ಣುವಿನಿಂದ ಪೂಜಿಸಲ್ಪಟ್ಟ, ಸುಕರಕೀರ್ತಿವಿಭ್ರಾಜಿತೇ- ಒಳ್ಳೆಯ ಯಶಸ್ಸಿನಿಂದ ಪ್ರಕಾಶಿಸುವ, ಕೃಪಾರಸತರಂಗಿಣೀ- ದಯಾರಸಕ್ಕೆ ಹೊಳೆಯಾದ, ಕುಪಿತದೈತ್ಯಸಹ್ಮಾರಿಣೀ- ಕೋಪವಿಶಿಷ್ಟಳಾಗಿ ರಾಕ್ಷಸರನ್ನುನಾಶಮಾಡಿದ, ಕಪರ್ದಿಹೃದಯಪ್ರಿಯೇ- ಪರಮೇಶ್ವರನ ಮನಸ್ಸಿಗೆ ಪ್ರಿ

